12th Century's
Enlightenment Technic
and Evolution



# ಸಿದ್ಧರಾಮ ಶಿವಯೋಗಿಗಳ ವಚನಾನುಭಾವ

ಬಸವರಾಜ ಸ್ವಾಮಿ

*12th Century's*
*Enlightenment Technic*
*and Evolution*

# ಸಿದ್ಧರಾಮ ಶಿವಯೋಗಿಗಳ ವಚನಾನುಭಾವ

(ಭಾಗ - 2)

ಹನ್ನೆರಡನೆ ಶತಮಾನದ ಸ್ವಯಂಜ್ಞಾನ ಕ್ರಾಂತಿ ಮತ್ತು ತಂತ್ರಗಾರಿಕೆ

ಬಸವರಾಜ ಸ್ವಾಮಿ

ಪ್ರಕಾಶಕರು
ಶ್ರೀ ಬಸವ ಸೇವಾ ಪ್ರತಿಷ್ಠಾನ
ಬಸವನಗರ, ಬಸವನಬಾವಿ ವೃತ್ತ, ಗಂಜ್ ಏರಿಯಾ
ರಾಯಚೂರು - 584 102 ಕರ್ನಾಟಕ

*12th Century's*
*Enlightenment Technic*
*and Evolution*

Siddarama ShivaYogigala Vachananubhava - II
*by :* **Basavaraj Swamy**
*Editor, Suddimoola Kannada Daily*
*Siyatalab, Raichur - 584102*
*M. 9980553750*

**ಸಿದ್ಧರಾಮ ಶಿವಯೋಗಿಗಳ**
**ವಚನಾನುಭಾವ**
(ಭಾಗ - 2)


| | |
|---|---|
| ಹಕ್ಕುಗಳು | : ಲೇಖಕರವು |
| ಬೆಲೆ | : ರೂ.800/- |
| ಪ್ರತಿಗಳು | : 500 |
| ಮುದ್ರಣ | : 2022 |
| ಕಾಗದ ಬಳಕೆ | : 70 ಜಿಎಸ್‌ಎಂ. ಎನ್ ಎಸ್ ಮ್ಯಾಪಲಿತೋ (ಲೈಟ್‌ವೇಟ್) |
| ಆಕಾರ | : ಡೆಮಿ 1/8 7 |
| *Pages* | : 955 + xvii |
| *Price* | : Rs.800/- |
| *Copies* | : 500 |
| *Size* | : Demy 1/8 |
| ಮುಖಪುಟ | : ಮುರಳೀಧರ . ವಿ. ರಾಠೋಡ್, ಬೆಂಗಳೂರು |
| ಮುದ್ರಣ | : ಗೀತಾಂಜಲಿ ಗ್ರಾಫಿಕ್ಸ್, ಬೆಂಗಳೂರು |

ಪ್ರಕಾಶನ :
**ಶ್ರೀ ಬಸವ ಸೇವಾ ಪ್ರತಿಷ್ಠಾನ**
ಬಸವನಗರ, ಬಸವನಬಾವಿ ವೃತ್ತ, ಗಂಜ್ ಏರಿಯಾ
ರಾಯಚೂರು - 584 102 ಕರ್ನಾಟಕ

# ಓದುವ ಮುನ್ನ.....

ಭೂಮಿಯ ಗರ್ಭದಲ್ಲಿ, ಭೂಮಿಯ ಮೇಲೆ ಆಕಾಶದಲ್ಲಿ ಎಲ್ಲಿನೋಡಿದರೂ ಹರಿದಾಡುವ ಜಲಂಗಳು. ಜಲದೊಳಗೆ ಜಲದ ಜನನ. ಏನೀ ಆಶ್ಚರ್ಯ; ಏನೀ ರಹಸ್ಯ! ಮಾತನಾಡುವ ಜಲ, ಮಾತು ಕೇಳುವ ಜಲ; ಹೂ ಹಣ್ಣು ಕಾಯಿ ಬಿಟ್ಟು ನಳ ನಳಿಸುವ ಜಲ; ನಾಟ್ಯ ಮಾಡುವ ಜಲ. ಓದುವ ಬರೆಯುವ ಜಲ; ಕೂಗಿ ಕರೆಯುವ ಜಲ; ರಾಗಬದ್ಧವಾಗಿ ಸಪ್ತಸ್ವರಗಳ ಮೂಲಕ ಹಾಡುವ ಜಲ.

ಜಲವೇ ಜಲಕ್ಕೆ ನೆಲೆಯಾಗಿ, ಜಲವೇ ಜಲಕ್ಕೆ ಸೀಮೆಯಾಗಿದೆ. ತಿಳಿದರೆ ತನ್ನ ಸೀಮೆಯನ್ನು ತಾನೇ ಮೀರಿ ನಿಸ್ಸೀಮನಾಗಿದೆ. ಜಲವನ್ನೇ ನೆಲವನ್ನಾಗಿಸಿಕೊಂಡು, ಜಲದಿಂದ ಹುಟ್ಟಿದ ಹಾವನ್ನೆ ಹಾಸಿಗೆ ಮಾಡಿಕೊಂಡು, ಜಲವೇ ವಿಷ್ಣುವಾಗಿ ಜನನಕ್ಕೆ ಲಕ್ಷ್ಮೀ ದೇವಿಯಾಗಿ ಜಲದ ಮೇಲೆ ಜಲಗಳೆರಡು ವಾಸಮಾಡುತ್ತ ಹಲವು ಜಲಂಗಳಿಗೆ ಜನ್ಮ ನೀಡಿವೆ.

ಜಲ ತನ್ನ ಬಿಂದುವೊಂದರಿಂದಲೇ ಮತ್ಸ್ಯಕ್ಕೆ ಜನ್ಮ ನೀಡಿ, ಜಲದಲ್ಲಿಯೇ ಓಡಾಡುವಂತೆ ಮಾಡಿದೆ. ಜಲದಿಂದಲೇ ಅದರ ಮೂಗು ಕಿವಿ ಕಣ್ಣು ಬಾಯಿ ರೆಕ್ಕೆಗಳು ಹುಟ್ಟಿವೆ. ಮತ್ಸ್ಯ ಜಲದಲ್ಲಿ ಓಡಾಡುವಾಗ ಮೂಗು ಕಣ್ಣು ಕಿವಿ ಬಾಯಿಯಲ್ಲಿ ಜಲ ಹೊಕ್ಕರೂ ಮತ್ಸ್ಯಕ್ಕೆ ಬಾಧೆಯುಂಟಾಗದ ರಹಸ್ಯ ಮತ್ಸ್ಯದಲ್ಲಿಯೂ ಅಡಗಿದೆ; ಜಲದಲ್ಲಿಯೂ ಅಡಗಿದೆ.

ಜಲವೇ ಜಲದಲ್ಲಿ ಜಲವಾಗಿ ಓಡಾಡಿದಂತೆ! ಜಲದಲ್ಲಿಯೇ ಜಲ ಪ್ರತ್ಯೇಕವಾಗಿ, ಜೀವ ಜಲವಾಗಿ, ಅನೇಕ ರೂಪುಗಳನ್ನು ಹೊಂದಿ, ಬಣ್ಣ ಬಣ್ಣದ ಚಿತ್ತಾರಗಳೊಂದಿಗೆ ಮಿಂಚಿದಂತೆ! ಜಲಕ್ಕೆ ರೂಪು ಇಲ್ಲ. ಆದರೂ ಜಲದಲ್ಲಿಯೇ ಹುಟ್ಟಿದ ಮತ್ಸ್ಯಕ್ಕೆ ನಾನಾ ರೂಪುಗಳು. ನಾನಾ ಬಣ್ಣಗಳು. ಜಲಕ್ಕೆ ರುಚಿಯಿಲ್ಲ; ಜಲದಿಂದಾದ ಮತ್ಸ್ಯಕ್ಕೆ ರುಚಿಯಿದೆ.

ಜಲವೇ ಜಲದಲ್ಲಿ ಜಲವಾಗಿ, ಜಲವನ್ನು ಪ್ರತ್ಯೇಕಿಸುತ್ತಾ, ಜಲದಿಂದ ಹುಟ್ಟಿದ ಮತ್ಸ್ಯ ಜಲವನ್ನು ತಾಗಿಸಿಕೊಳ್ಳದೆ, ಆ ಜಲದಿಂದ ಬಾಧೆಗೊಳಗಾಗದೆ ಜಲವನ್ನು ಹೊದ್ದಲೀಯದ ಪರಿಯು ಬಲು ವಿಚಿತ್ರ.

ಮತ್ಸ್ಯದಂತೆ ತನು ಕೂಡಾ ಬಯಲ ಬೀಜದಿಂದ ಹುಟ್ಟಿದೆ. ಬಯಲನ್ನು ಒಳ ಹೊರಗೆನ್ನದಂತೆ ಹೊದ್ದಿದೆ. ತನುವನ್ನು ಆವರಿಸಿದ ಮನ ಕೂಡಾ ಬಯಲೇ ಆಗಿದೆ. ಅದು ತನುವನ್ನು ಹಿಡಿದಿರುವುದರಿಂದ ತನು ಬಯಲಾದರೂ ಕೂಡಾ ಸುಖ ದುಃಖಗಳ ಮೂಲಕ ನರಕಯಾತನೆ ಅನುಭವಿಸುತ್ತಲಿದೆ.

ತನುವನ್ನು ಮನ ಹೆಣ್ಣೆಂದು ನೋಡಿ, ತನುವಿನಲ್ಲಿ ಕಾಮದ ಸಿಹಿ ಸೃಷ್ಟಿ ಮಾಡಿದೆ. ತನು ತನುವನ್ನೇ ಹರಿದು ತಿನ್ನುವ ಸುಖವನ್ನು ಮನ ತನುವಿನಲ್ಲಿ ಸೃಷ್ಟಿಮಾಡಿದೆ. ಮನದ ಗೆಳೆತನವನ್ನು ಹರಿದು ಹಾಕಲು ತನುವಿಗೆ ಸಾಧ್ಯವಾಗುತ್ತಿಲ್ಲ. ಏಕೆಂದರೆ ಮನವೆಂಬ ಹಾವು ತನುವಿನ ಬುಟ್ಟಿಯಲ್ಲಿ ಸಿಹಿವಾಸನೆ ಬೀರುತ್ತ ತನುವಿನಲ್ಲಿ ತನ್ಮಯವಾಗಿ ಸುತ್ತಿಕೊಂಡಿದೆ. ಇಂತಹ ಘಟಸರ್ಪವನ್ನು ಅನುವಿನಿಂದ ತೆಗೆಯುವ ಕೌಶಲ್ಯದ ಶಿಕ್ಷಣ ತನು ಪಡೆಯದಿದ್ದರೆ ತನುವಿಗೆ ಉಳಿಗಾಲವಿಲ್ಲ.

ತನು ಯಾವ ವೇಷದಲ್ಲಿದ್ದರೇನು? ಆ ವೇಷ ತನುವಿಗೆ ಹಾಕಿದ್ದು ಕೂಡಾ ಮನವೇ ಆಗಿದೆ ಎಂದು ತನು ಅರಿಯದ ಮುಗ್ಧತೆಯಲ್ಲಿ ಮುಂದುವರಿಯುತ್ತಲಿದೆ. ಇದಕ್ಕೆ ಮನದ ಸಿಹಿಗುಳಿಗೆಯೇ ಕಾರಣ.

ತನುವನ್ನು ಹಡೆದು ಆ ತನುವಿನ ಆದಿಯನ್ನು ಇಲ್ಲ ಮಾಡಿ; ತಾನಿದ್ದ ತನುವನ್ನೇ ಕೈಲಾಸವನ್ನಾಗಿಸಿ, ತನ್ನಂತೆ ಅನಾದಿಯನ್ನಾಗಿ ಮಾಡಿಕೊಳ್ಳಲು ಬಂದ ದೇವರನ್ನೇ ಮರೆತ ಆದಿ ನಾನು. ಆದಿ ಪದವ ನುಂಗಲು ಬಂದ ಅನಾದಿಯಿಂದ ಅತ್ತತ್ತಲೂ ಇದ್ದ ಶಿವ ನೀನು.

ತನುವಿನಲ್ಲಿಯೇ ಇದ್ದು ತನುವನ್ನೇ ರಥ ಮಾಡಿಕೊಂಡು ಅದರ ಚಾಲಕನಾಗಲು ಬಂದ ಅರಿವೆಂಬ ಬೆಳಕಿನ ಶಿವ ನೀನು. ಆದರೆ ನಿನ್ನ ಬೆಳಕಿನಿಂದ ಹುಟ್ಟಿದ ನೆರಳೆಂಬ ಮನ ಶಿವನಿದ್ದ ತನುವಿನ ಗೆಳೆತನ ಮಾಡಿದೆ. ದೇವರ ಇರುವಿಕೆಯನ್ನೇ ಮರೆಸಿ ತನುವನ್ನು ಆವರಿಸಿ ತಾನೇ ತನುವಿನ ರಥದ ಚಾಲಕನಾಗಿದೆ.

ಕಾಯವಿರುವಾಗಲೇ ತಾನು ಹೇಗೆ ಕೈಲಾಸವೆಂದು ಕಾಯಕ್ಕೆ ಗೊತ್ತಾಗದಿದ್ದರೆ ಕಾಯದಲ್ಲಿರುವ ಅರಿವಿನ ಶಿವ ಕಾಯಕ್ಕೆ ಪರಿಚಯವಾಗದಿದ್ದರೆ ಅದನ್ನು ಕಾಯವೆನ್ನಲು ಸಾಧ್ಯವೆ? ಅರಸನಾದರೇನು, ಆಳಾದರೇನು? ತಾನು ಕಾಯದಲ್ಲಿರುವ ಅರಿವಿನ ಅರಸನಿಗೆ ಆಳಿನ ಆಳು ಎಂದು ಮನಕ್ಕೆ ಗೊತ್ತಾಗದಿದ್ದರೆ ಕಾಯ ತಾನು ಹಾಕಿಕೊಂಡ ಪಾತ್ರದಲ್ಲಿಯೇ ಅಸುನೀಗುತ್ತದೆ. ಕಾಯದ ನಿಜಸ್ಥಿತಿ ಕಾಯಕ್ಕೆ ಮತ್ತು ಮನಕ್ಕೆ ಗೊತ್ತಾಗುವುದಿಲ್ಲ.

ಸಾವಿರಾರು ಜನ ಶಿವಾಲಯಕ್ಕೆ ಭಕ್ತರಾಗುತ್ತಾರೆ. ತೇರು ಉಚ್ಛ್ರಾಯ ಉತ್ಸವಗಳು ಪಲ್ಲಕ್ಕಿ ಸೇವೆ ನಡೆಯುತ್ತವೆ. ಆದರೂ ಗುಟ್ಟು ರಟ್ಟಾಗಲಿಲ್ಲ. 'ಶಿವ' ಯಾರು ಎಂಬುದು ತಿಳಿಯಲೇ ಇಲ್ಲ. ಆರಾಧಿಸಿದವರು ಶುದ್ಧರಾಗಲಿಲ್ಲ, ಸಿದ್ಧರಾಗಲಿಲ್ಲ, ಪ್ರಸಿದ್ಧರಾಗಲಿಲ್ಲ.

ಕಲ್ಲಿನಲ್ಲಿ ಶಿವ, ಪಾರ್ವತಿ, ನಂದಿಯನ್ನು ಕೆತ್ತಿದರೆ ಕೆತ್ತಿದ ಮೂರ್ತಿಗಳಲ್ಲಿ ಕಲ್ಲು ಗುಟ್ಟಾಗಿ ಉಳಿಯಿತು. ಅದರ ತಾತ್ಪರ್ಯ ಓದಿ ತಿಳಿಯಬೇಕೆ? ಅಥವಾ ಪಂಡಿತನಾಗಬೇಕೆ?

ಮನವೆಂಬ ಈ ಹೆಣ್ಣೇ ಮಹಾಪುರುಷನ ತಲೆಯನೇರಿ ಗಂಗೆಯೆಂದು ಕರೆಯಿಸಿಕೊಳ್ಳುತ್ತಾಳೆ. ಮಹಾಪುರುಷನೆಂಬ ಗಂಗಾಧರನ ತೊಡೆಯನೇರಿ ಗೌರಿ ಎಂದು ಕರೆಯಿಸಿಕೊಳ್ಳುತ್ತಾಳೆ. ಮಹಾಪುರುಷನೆಂಬ ಬ್ರಹ್ಮನ ನಾಲಿಗೆಯನೇರಿ ಸರಸ್ವತಿ ಎಂದು ಕರೆಯಿಸಿಕೊಳ್ಳುತ್ತಾಳೆ. ಮಹಾಪುರುಷನೆಂಬ ನಾರಾಯಣನ ಎದೆಯನೇರಿ ಲಕ್ಷ್ಮೀದೇವಿ ಎಂದು ಕರೆಯಿಸಿಕೊಳ್ಳುತ್ತಾಳೆ.

ಮನಕ್ಕೆ ತಾನು ಹೆಣ್ಣು ಎನ್ನುವ ಅನುಭವ ಆಗದಿದ್ದರೆ ಮನವೇ ದೇಹವನ್ನು ಹೆಣ್ಣಾನ್ನಾಗಿಸುತ್ತದೆ; ಮನವೇ ದೇಹವನ್ನು ಗಂಡನ್ನಾಗಿಸುತ್ತದೆ. ಮನವೇ ದೇಹವನ್ನು ಗುರುವನ್ನಾಗಿಸುತ್ತದೆ; ಮನವೇ ದೇಹವನ್ನು ಶಿಷ್ಯನನ್ನಾಗಿಸುತ್ತದೆ. ಮನವೇ ದೇಹವನ್ನು ಜಗದ್ಗುರುವನ್ನಾಗಿಸುತ್ತದೆ; ಮನವೇ ದೇಹವನ್ನು ಭಕ್ತನನ್ನಾಗಿಸುತ್ತದೆ. ಮನವೇ ದೇಹವನ್ನು ಹಿಡಿದು ಕಲ್ಲನ್ನು ಕೆತ್ತಿ ದೇವರನ್ನಾಗಿಸಿ, ಆ ದೇವರಿಗೆ ದೇಹವನ್ನು ಹಿಡಿದು ಭಕ್ತನನ್ನಾಗಿಸುತ್ತದೆ. ಮನವೇ ದೇಹವನ್ನು ತನ್ನ ಅಜ್ಞಾನದ ಸಾಮ್ರಾಜ್ಯವನ್ನಾಗಿ ಮಾಡಿಕೊಂಡು ದೇಹಕ್ಕೆ ಶ್ರೀಮಂತ ಬಡವ ಭಿಕ್ಷುಕ ಅಧಿಕಾರಿ ಶಾಸಕ ಮಂತ್ರಿ ಪ್ರಧಾನಿ ಅಧ್ಯಕ್ಷನ ವೇಷ ಹಾಕುತ್ತದೆ.

ಕುರುಕ್ಷೇತ್ರ ಯುದ್ಧ ತಡೆಯಲು ಸಂಧಾನಕ್ಕೆಂದು ಸದನಕ್ಕೆ ಹೋದ ಶ್ರೀಕೃಷ್ಣನನ್ನು ನೋಡಲು ಸಾಧ್ಯವಾಗದ ಕುರುಡುತನಕ್ಕೆ ಏನೆನ್ನಬೇಕು? ಇಂತಹ ಕಣ್ಣು ಕಾಣದ ಕುರುಡರು ಲೋಕವನ್ನು ಆಳಲು ಸಾಧ್ಯವೆ? ಬ್ರಹ್ಮನನ್ನು ಅರಿಯದೇ ಬ್ರಹ್ಮಜ್ಞಾನಿಗಳು ನಾವೆಂದು ನಿರ್ಮಾಣ ಮಾಡಿಕೊಂಡ ಲೋಕವನ್ನು ಬ್ರಹ್ಮಲೋಕವೆನ್ನಲು ಸಾಧ್ಯವೆ. ಬ್ರಹ್ಮಲೋಕದ ಸೊಮ್ಮೆಂದರೆ ಕಾವಿ, ರುದ್ರಾಕ್ಷಿ, ಜಪಮಾಲೆ, ಕಮಂಡಲ, ತ್ರಿಶೂಲ, ಬೆತ್ತ, ಆವಿಗೆಗಳಲ್ಲ. ತನುವಿನಲ್ಲಿಯೇ ತನ್ಮಯವಾದ

ನಿರ್ಮಲಜ್ಞಾನ. ಅದು ಬ್ರಹ್ಮಾಂಡದಲ್ಲಿ ವಾಸ ಮಾಡುತ್ತಿರುವ ಸಕಲ ತನುಗಳಲ್ಲಿಯೂ ತನ್ಮಯವಾಗಿದೆ. ಆ ಮಹಾಜ್ಞಾನವು ತನುವಿಗೆ ಜನ್ಮ ನೀಡಿ ತನುವನ್ನು ಧಾರಣೆ ಮಾಡಿಕೊಂಡು ಬಂದಿದೆ. ತನುವಿನಲ್ಲಿಯೇ ಇದ್ದು ತನುವನ್ನು ಆವರಿಸಿದ ಮನಕ್ಕೆ ಸದಾ ಪಾಠ ಮಾಡುತ್ತಲಿದೆ.

ಮನ ಎಂಬುದು ಕಾಣುತ್ತಿಲ್ಲ, ಅರಿವು ಎಂಬುದು ಕಾಣುತ್ತಿಲ್ಲ. ಇವೆರಡೂ ಬಯಲು, ಈ ಬಯಲು ದೇವನೇ ಆಮ್ಲಜನಕ ಜಲಜನಕವನ್ನು ಒಂದು ಮಾಡಿ, ತಾನು ಅದರಲ್ಲಿ ಅಡಗಿ, ಜಲವನ್ನಾಗಿ ಮಾಡಿದ ಏಕೋದೇವನ ಮಹಿಮೆ ಇದು! ಆ ದೇವನು ಒಬ್ಬನೇ. ಆತನ ಧರ್ಮ ಕೂಡಾ ಒಂದೇ. ಆತನ ಗುಣವೂ ಒಂದೇ; ಅದು ನಿರ್ಗುಣ. ಆತನ ಪ್ರಕಾಶವೂ ಒಂದೇ; ಅದು ಅರಿವಿನ ಪ್ರಕಾಶ. ಕೋಟಿ ಸೂರ್ಯರನ್ನು ಬೆಳಗುವ ನಿರ್ಗುಣ ಪ್ರಕಾಶ.

ಆ ಅರಿವಿನ ಪ್ರಕಾಶದ ಜಲ ಬಿಂದುವೇ ಗರ್ಭದಲ್ಲಿ ಹೊಕ್ಕು, ದೇಹಧಾರಣೆ ಮಾಡಿ, ಏಕೋದೇವನಾಗಿ ದೇಹವನ್ನು ಅರಿವಿನ ಪ್ರಕಾಶದಿಂದ ಬೆಳಗುತ್ತಿದ್ದಾನೆ. ದೇಹವೂ ಆತನದೇ. ದೇಹದಲ್ಲಿರುವ ಪ್ರಾಣವೂ ಆತನದೇ. ದೇಹದಲ್ಲಿ ಬೆಳಗುವ ಅರಿವೂ ಆತನೇ ಆಗಿದ್ದಾನೆ.

ದೇಹವನ್ನು ಆವರಿಸಿದ ಮನವೇ, ದೇಹದಲ್ಲಿಯೇ ಇದ್ದ ದೇವನನ್ನು ಕಂಡು, ನಮೋ ನಮೋ ಎಂದು ಕೈ ಮುಗಿದು, ಆ ದೇವರಿಗೆ ಭಕ್ತಿ ಮಾಡಿ ಧನ್ಯನಾಗಬೇಕು. ತ್ರಾಹಿಮಾಂ ಪರಮೇಶ್ವರ ಎಂದು ಕೂಗಿ ಕರೆದು, ಬೇಡಿ ಬೇಡಿ ದಣಿದು, ಆ ಅರಿವಿನ ದೇವರಲ್ಲಿ ಒಂದಾಗಬೇಕು. ಇದು ದೇಹದ ಧರ್ಮ. ಈ ಅರಿವಿನ ಧರ್ಮವನ್ನು ದೇಹವನ್ನು ಆವರಿಸಿದ ಮನ ಪಾಲಿಸಬೇಕು. ಆದರೆ ಮನ ದೇಹವನ್ನು ಹಿಡಿದು ದೇಹದೊಂದಿಗೆ ಸಂಗ ಮಾಡಿ ತನ್ನದೇ ಆದ ಹಿಂದು ಮುಸಲ್ಮಾನ ಕ್ರೈಸ್ತ ಧರ್ಮವನ್ನು ದೇಹದ ಮೇಲೆ ಹೇರಿ ದೇಹದೊಂದಿಗೆ ಸವಾರಿ ಮಾಡುತ್ತಲಿದೆ. ದೇಹದ ಏಕೋಧರ್ಮವನ್ನು ಸಂಪೂರ್ಣವಾಗಿ ಮರೆತು ಹೋಗಿದೆ. ತನಗೆ ತಾನೇ ಮರೆತ ಮನ ಪುನಃ ತನಗೆ ತಾನೇ ಏಕೋದೇವನನ್ನು ತನುವಿನಲ್ಲಿಯೇ ಅರಿಯಬೇಕಾಗಿದೆ.

ಕಲ್ಲನ್ನು ಕಲ್ಲು ಎಂದು ನೋಡಿದ ದೃಶ್ಯವೇ, ಕೆತ್ತಿದ ಕಲ್ಲನ್ನು ಶಿವ ಎಂದು ನೋಡಿ ಭಕ್ತಿ ಮಾಡುತ್ತದೆ. ಇದು ಡಾಂಭಿಕ ಭಕ್ತಿ. ಮರೆವುಳ್ಳ ಆಚಾರ. ಕುರುಡು ಆಚಾರ. ಕಲ್ಲು ಎಂದು ನೋಡಿದ ತನ್ನ ನಿಜದೃಶ್ಯವನ್ನು ಕಣ್ಣಲ್ಲಿಯೇ ಬಚ್ಚಿಟ್ಟುಕೊಂಡು ಕೆತ್ತಿದ ಕಲ್ಲನ್ನು ಶಿವ ಎಂದು ನೋಡಿತು. 'ಶಿವ' ಎಂದರೆ ಸತ್ಯ. ಆ ಸತ್ಯಕ್ಕೆ ಭೀಮಬಲವಿದೆ. ಕಲ್ಲು ಕೆತ್ತಿದರೇನು ಕೆತ್ತದಿದ್ದರೇನು? ಅದು ಕಲ್ಲೇ ಆಗಿದೆ. ಕಲ್ಲನ್ನು ಕಲ್ಲು ಎಂದು ನೋಡುವುದಕ್ಕೆ ವೇದ ಆಗಮ ಉಪನಿಷತ್ತುಗಳನ್ನು ಓದಬೇಕೇ? ಓದಿದಂತೆಲ್ಲ ಕಲ್ಲನ್ನು ಆರಾಧಿಸುವ ಕುರುಡು ಆಚಾರಕ್ಕೆ ಬಲ ಬರುತ್ತದೆಯೇ ಹೊರತು ಕಲ್ಲನ್ನು ಕಲ್ಲು ಎಂದು ನೋಡಲು ಕಾಯ ಇರುವವರೆಗೆ ಸಾಧ್ಯವಾಗುವುದೇ ಇಲ್ಲ. ಕಲ್ಲನ್ನು ಕಲ್ಲು ಎಂದು, ಲೋಹವನ್ನು ಲೋಹ ಎಂದು ನೋಡುವ ಕಣ್ಣು ಮಾತ್ರ ಅರಿವಿನ ಕಣ್ಣು.

ಕೆತ್ತಿದ ಕಲ್ಲನ್ನು 'ಶಿವ' ಎಂದು ನೋಡಿ ಆರಾಧಿಸುವ ಅಜ್ಞಾನದ ಕಣ್ಣು, ಕಲ್ಲನ್ನು ನೋಡಿದ ಕಣ್ಣಿಗೆ ಭಕ್ತಿ ಮಾಡಿದರೆ ಕಣ್ಣಿನ ಕುರುಡುತನದ ಪೊರೆ ಹರಿದು ಮುಕ್ಕಣ್ಣನ ಕಣ್ಣು ಎಂದು ಕರೆಯಿಸಿಕೊಳ್ಳುತ್ತದೆ. ಅದು ಬಸವನಿಗೆ ಮಾತ್ರ ಸಾಧ್ಯವಾಯಿತು ಎಂದು ಸಿದ್ಧರಾಮ ಶಿವಯೋಗಿಗಳು ಬಸವನನ್ನು 'ಭೀಮ ಬಸವ' ಎಂದು ಸ್ತುತಿಸಿದ್ದಾರೆ. ಆತನನ್ನು ಗಮನ ಸುಮನ ನಿಯತ ಸಮಯ ಭಕ್ತರೂಪ ಬಸವ, ಪ್ರಾಣಕಾಯರೂಪ ತತ್ವಜ್ಞಾನ ವಿನಾಯಕ ಬಸವ, ಕಪಿಲಸಿದ್ಧ ಮಲ್ಲಿನಾಥಯ್ಯಾ, ಪ್ರಾಣಲಿಂಗ ಏಕ ಬಸವ ಎಂದು ಹಾಡಿ ಅರಿವೆಂಬ ಗುರುದೇವನಿಗೆ ಬಸವಣ್ಣನ ಹೆಸರನಿಟ್ಟು ಕಪಿಲಸಿದ್ಧ ಮಲ್ಲಿಕಾರ್ಜುನನು ನೀನೇ ಎಂದು ಭಕ್ತಿಯಿಂದ

ಹಾಡಿ ಸ್ತುತಿಸಿದ್ದಾರೆ.

ದಾನಿ ಮುನ್ನಾನಲ್ಲ, ಏನು ಗುಣವೆನ್ನಲ್ಲಿ? ನೀ ಕಾಡಲ್ಕೆ ಎನಗೆ ತೆರಹಿಲ್ಲವ್ವಾ:

ಲೋಕಕ್ಕೆ ದಾನಿ ಎಂದು ನೀಡುವುದೂ ಗೊತ್ತು; ಹಾಗೆಯೇ ಬೇಡುವುದೂ ಗೊತ್ತು. ಚಿನ್ನವನ್ನು ನೀಡಿದ್ದು ಭೂಮಿ. ಅನ್ನವನ್ನು ನೀಡಿದ್ದು ಕೂಡಾ ಭೂಮಿಯೇ ಆಗಿದೆ. ಅಂದ ಮೇಲೆ ಆತ ನೀಡುವ ದಾನಿ ಹೇಗಾಗುತ್ತಾನೆ? ನೀಡುವವನು ದಾನಿ ಎಂದು ಹೇಳಿದರೆ ಬೇಡುವವನು ಭಿಕ್ಷುಕ ಹೇಗಾಗುತ್ತಾನೆ?

ತನುವನ್ನು ಆವರಿಸಿದ ಮನವೆಂಬ ಮಾಯೆಗೆ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಭಕ್ತಿ ಮಾಡುವುದು ಗೊತ್ತಾಗಬೇಕು. ಆತ ಒಡಲೊಡೆಯ. ಬೇಡಿದರೆ ಒಡಲೊಡೆಯನನ್ನು ಬೇಡಬೇಕು. ಹಾಡಿದರೆ ಒಡಲೊಡೆಯನನ್ನೇ ಹಾಡಬೇಕು. ಆಗ....

ಒಡಲೊಡೆಯ ಒಡಲನ್ನು ಆವರಿಸಿದ ಮನವೆಂಬ ಮಾಯೆಯನ್ನು ತನ್ನ ಜಟೆಯಲ್ಲಿಟ್ಟು ಕೊಂಡು ಗಂಗೆಯನ್ನಾಗಿಸುತ್ತಾನೆ. ತೊಡೆಯ ಮೇಲೆ ಕೂಡಿಸಿಕೊಂಡು ಗೌರಿಯನ್ನಾಗಿಸುತ್ತಾನೆ. ತಾನು ಶಿವನಾಗುತ್ತಾನೆ; ಮನವನ್ನೇ ಪಾರ್ವತಿಯನ್ನಾಗಿಸುತ್ತಾನೆ. ಅವರಿಬ್ಬರ ವಾಸಕ್ಕೆ ಕಾಯವನ್ನು ಕೈಲಾಸವಾಗಿಸುತ್ತಾನೆ.

ಕಾಯದಲ್ಲಿ ಸಂಗಮವಾದ ಪರಮಾತ್ಮನ ಬೆಳಕಿನಿಂದ ಮನವೆಂಬ ಕತ್ತಲು ಹುಟ್ಟಿ, ಕಾಯವನ್ನು ಅಮರಿಕೊಂಡು, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಆರು ಬಣ್ಣಗಳನ್ನು ಕಾಯದಲ್ಲಿ ಸೃಷ್ಟಿ ಮಾಡಿದೆ. ಸಪ್ತವ್ಯಸನಗಳನ್ನು, ಅಷ್ಟಮದಗಳನ್ನು ಸೃಷ್ಟಿ ಮಾಡಿದೆ. ಇವು ಕಾಯದಲ್ಲಿ ಸೃಷ್ಟಿಯಾಗಿ ಕಾಯದ ಕತ್ತು ಸೀಳಿ ಜೀವ ತೆಗೆಯುವ ಬಣ್ಣಗಳು.

ನೋಡುವ ಕಣ್ಣಿಗೆ ಕಾಮದ ಬಣ್ಣ ಬಳೆದುಕೊಂಡು ನೋಡುವುದರಿಂದ ಕಾಯ ಕಾಮಿಯಾಗಿ ಕಾಣುತ್ತದೆ. ಕಾಯದ ಕತ್ತು ಸೀಳಿ ಜೀವಕಳೆಯುವ ಬಣ್ಣಗಳು ಕಾಯವನ್ನೇ ಮನೆ ಮಾಡಿಕೊಂಡು ಕಾಯದಲ್ಲಿಯೇ ಇವೆ.

ನೋಡುವುದೊಂದೇ ತಡ ಕಾಮದ ಬಣ್ಣ ಕಾಯವನ್ನು ಆವರಿಸಿ ಇಡೀ ಕಾಯ ಕಾಮಿಯಾಗುತ್ತದೆ. ಕಾಮಿಗೆ ಕಾಮಹರನ ಪರಿಚಯವಿಲ್ಲ. ಆತ ಸಾವಧಾನಿ. ನಿರಂತರ ಕಾಯದಲ್ಲಿಯೇ ವಾಸ ಮಾಡುವ ಸಮ್ಯಜ್ಞಾನಿ ನಿರೂಪರೂಪನು. ನಿರಂಜನನು. ಆತ ಗುರುದೇವನೂ ಹೌದು.

ಬಣ್ಣದ ಮಹಿಮಯೆಂದು ಕಣ್ಣಿಗೆ ಗೊತ್ತಾಗುವುದಿಲ್ಲ. ಬಣ್ಣಕ್ಕೂ ಗೊತ್ತಾಗುವುದಿಲ್ಲ. ಕಣ್ಣಲ್ಲಿಯೇ ಇದ್ದು ಬಣ್ಣವಿಲ್ಲದೆ ಬೆಳಗುವ ಮುಕ್ಕಣ್ಣನ ಕಣ್ಣಿಗೆ ಮಾತ್ರ ಗೊತ್ತಾಗುತ್ತದೆ. ರತಿ ಮನ್ಮಥರಿಬ್ಬರೂ ಬಣ್ಣ ಬಳಿದುಕೊಂಡು ಮುಕ್ಕಣ್ಣನ ಮುಂದೆ ನೃತ್ಯ ಮಾಡಿದರೆ ಸಾಕು ಬಣ್ಣವಿಲ್ಲದೆ ಬೆಳಗುವ ಬೆಳಕಿಗೆ ತುತ್ತಾಗಿ ಸುಟ್ಟು ಬೂದಿಯಾಗುತ್ತಾರೆ. ಆಗ ಕಣ್ಣಲ್ಲಿ ಬಣ್ಣವಿಲ್ಲದೆ ಬೆಳಗುವ ಬೆಳಕು ಮಾತ್ರ ಚಿಮ್ಮುತ್ತದೆ.

ದಾಯ ಎನ್ನುವ ಶಬ್ದ ಲಾಭ ಪಾಲು ಎನ್ನುವ ಅರ್ಥವನ್ನು ಸೂಚಿಸುತ್ತದೆ. ಬಣ್ಣಗಳು ಏಳು ಇಲ್ಲ. ಇರುವುದು ಒಂದೇ ಬಣ್ಣ. ಅದು ಬಿಳಿ. ಈ ಬಣ್ಣವೇ ತನ್ನ ಪಾಲುದಾರನನ್ನಾಗಿ ಕಪ್ಪು ಬಣ್ಣವನ್ನು ಸೃಷ್ಟಿ ಮಾಡಿದೆ. ಕಪ್ಪು ಬಣ್ಣ ಬಿಳಿಯನ್ನು ಆವರಿಸಿ ನೂರಾರು ಬಣ್ಣಗಳನ್ನು ಸೃಷ್ಟಿ ಮಾಡಿದೆ. ಇಂಗ್ಲೆಂಡಿನ ಒಬ್ಬ ಕಲಾವಿದ ಎರಡು ಸಾವಿರದ ಐದುನೂರು ಬಣ್ಣಗಳ ಹೆಸರುಗಳನ್ನು ಹೇಳುತ್ತಾ ಅವುಗಳನ್ನು ಗುರುತಿಸುತ್ತಿದ್ದನಂತೆ.

ಇದು ಸಾಧ್ಯವಾಗಬಹುದು. ಆದರೆ ಸಕಲ ಬಣ್ಣಗಳ ಮೂಲ ಬಿಳಿಬಣ್ಣ. ಆ ಬಿಳಿ ಬಣ್ಣದಿಂದಲೇ ಕಪ್ಪು ಬಣ್ಣ ಸೃಷ್ಟಿಯಾಯಿತು. ಬಿಳಿಬಣ್ಣದ ನೆರವನ್ನು ಪಡೆದ ಕಪ್ಪುಬಣ್ಣ, ಸಕಲ ಬಣ್ಣಗಳಿಗೆ ಜನ್ಮ ನೀಡಿತು. ಪುನಃ ತಾನು ಜನ್ಮ ಪಡೆದ ಮೂಲ ಬಿಳಿಬಣ್ಣವನ್ನೇ ಕಪ್ಪುಬಣ್ಣ ಮರೆತು ಹೋಯಿತು.

ದೇಹಕ್ಕೆ ಜನ್ಮಕೊಟ್ಟು, ಆ ದೇಹವನ್ನೇ ಮನೆಮಾಡಿಕೊಂಡು, ಆ ದೇಹದಲ್ಲಿಯೇ ಇದ್ದ ದೇವರು ನಿರಾಕಾರ! ಆ ನಿರಾಕಾರ ದೇವರ ಬೆಳಕಿನಿಂದಲೇ ಹುಟ್ಟಿ, ದೇಹವನ್ನು ಆವರಿಸಿದ ಮನ ಕೂಡಾ ನಿರಾಕಾರ!

ತನು ಎನ್ನುವ ಎರಡಕ್ಷರಗಳಲ್ಲಿ ಶಿವ ಎನ್ನುವ ಎರಡಕ್ಷರಗಳು ಸಂಗಮವಾಗಿವೆ. ಮನ ಎನ್ನುವ ಎರಡಕ್ಷರಗಳು ಎರಡಕ್ಷರಗಳ ತನುವನ್ನು ಆವರಿಸಿವೆ.

ಮನ ಎನ್ನುವ ಎರಡಕ್ಷರಗಳು ಶಿವ ಎನ್ನುವ ಎರಡಕ್ಷರಗಳ ಸಂಗವನ್ನು ಮಾಡದೆ, ತನು ಎನ್ನುವ ಎರಡಕ್ಷರಗಳ ಸಂಗ ಮಾಡಿ ಮೂವತ್ತಾರು ತತ್ವಗಳನ್ನು ಅಕ್ಷರಗಳಲ್ಲಿಯೇ ಸೃಷ್ಟಿ ಮಾಡಿ; ನನಗೆ ಶಿವ ಸಿಕ್ಕ ಎಂದು ಮರುಳಾಗಿ ಭ್ರಮೆಯಿಂದ ನುಡಿಸಲ್ಪಟ್ಟ ನಾದ, ನಾದವೇ ಹೊರತು ಮತ್ತೇನೂ ಅಲ್ಲ.

ಮನ ಇಲ್ಲದ್ದು. ಶಿವ ಇದ್ದಕ್ಕಿದ್ದಂತೆ ಇದ್ದವನು. ಈತ ತನುವಿನಲ್ಲಿಯೇ ಇದ್ದಾನೆ. ಇಲ್ಲದ ಮನ ಇದ್ದಕ್ಕಿದ್ದಂತೆ ಇದ್ದ ಶಿವನಲ್ಲಿ ಸಂಗಮವಾಗಲು ಅಕ್ಷರಗಳ ಅವಶ್ಯಕತೆಯಿಲ್ಲ. ಸಂಗೀತದ ಅವಶ್ಯಕತೆಯೂ ಇಲ್ಲ. ವೇದ ಆಗಮ ಉಪನಿಷತ್ತುಗಳ ಅವಶ್ಯಕತೆಯೂ ಇಲ್ಲ. ಇವುಗಳು 'ಶಿವ'ನ ವಿವರಗಳನ್ನು ಮನಕ್ಕೆ ವಿವರಿಸಿದರೂ ಕೂಡಾ ಮನ ಅವುಗಳಲ್ಲಿ ಅನಂತಕಾಲ ಮುಳುಗಿ ಶಿವನತ್ತ ಮುಖ ಮಾಡುವುದು ತಡವಾಗುತ್ತದೆ.

ಮನ ಎಂದರೆ ಇಲ್ಲದ್ದು. ಇಲ್ಲವಾಗುವ ವಸ್ತುಗಳನ್ನು ಇದ್ದಂತೆ ಇರುವ ಶಾಶ್ವತ ವಸ್ತುಗಳೆನ್ನುವಂತೆ ತನುವಿಗೆ ಆಸೆ ಹುಟ್ಟಿಸಿ, ತನು ಮನಗಳೆರಡೂ ಅನಂತಕಾಲ ತನುವಿನಲ್ಲಿಯೇ ತನ್ಮಯವಾದ ಶಿವನನ್ನು ಮರೆತು ಶಿವನ ಜಪ ಜಪಿಸುತ್ತವೆ!

ಸೀತೆಯನ್ನು ನೋಡಿದ ರಾವಣನ ಕಣ್ಣಲ್ಲಿ ಕುಳಿತ ಮನವೆಂಬ ಕ್ರೂರಮೃಗ, ರಾವಣನನ್ನೇ ಕೊಂದು ರಾವಣನನ್ನೇ ತಿಂದು ತೇಗಿತು. ರಾಮನ ಕಿವಿಯಲ್ಲಿ ಕುಳಿತು ಮಡಿವಾಳನ ಮಾತು ಕೇಳಿದ ಮನವೆಂಬ ಕ್ರೂರಮೃಗ ಶ್ರೀರಾಮನನ್ನು ಚಿತ್ರಹಿಂಸೆಗೆ ಗುರಿ ಮಾಡಿತು. ದ್ರೌಪದಿಯನ್ನು ಮುಟ್ಟಲು ಹೋದ ಕೀಚಕನ ಚರ್ಮದಲ್ಲಿ ಬಚ್ಚಿಟ್ಟುಕೊಂಡ ಮನವೆಂಬ ಕ್ರೂರಮೃಗ ಜಗಜಟ್ಟಿ ಕೀಚಕನನ್ನೇ ಕೊಂದು ತಿಂದು ಹಾಕಿತು.

ತನುವಿನಲ್ಲಿದ್ದ ಪಂಚೇಂದ್ರಿಯಗಳು ತನುವಿನ ಮೃತ್ಯುವಿಗಾಗಿ ತನುವಿನಲ್ಲಿಯೇ ಕಾದು ಕುಳಿತಿವೆ. ತನುವನ್ನು ಆವರಿಸಿದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಆರು ಮೃಗಗಳು ತನುವನ್ನು ಪೋಷಣೆ ಮಾಡುತ್ತಿಲ್ಲ. ಬದಲಾಗಿ ಆಶ್ರಯ ನೀಡಿದ ತನುವನ್ನೇ ನುಂಗಲು ತನುವಿನಲ್ಲಿಯೇ ಕಾದು ಕುಳಿತಿವೆ.

ತನುವಿನಲ್ಲಿಯೇ ಇದ್ದ ಸಪ್ತವ್ಯಸನಗಳು ತನುವ್ಯಸನ, ಮನವ್ಯಸನ, ಧನವ್ಯಸನ, ರಾಜ್ಯವ್ಯಸನ, ವಿಶ್ವವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನವೆಂಬ ಸಪ್ತವ್ಯಸನಗಳೆಂಬ ಕ್ರೂರಮೃಗಗಳು ತನುವಿನಲ್ಲಿಯೇ ಆಶ್ರಯ ಪಡೆದು ತನುವಿನ ಮೃತ್ಯುವಿಗಾಗಿ ಕಾದು ಕುಳಿತಿವೆ.

ತನುವಿನಲ್ಲಿಯೇ ಇದ್ದ ಕುಲಮದ, ಛಲಮದ, ಧನಮದ, ರೂಪಮದ, ಯೌವ್ವನಮದ,

ವಿದ್ಯಾಮದ, ರಾಜಮದ, ತಪೋಮದವೆಂಬ ಎಂಟು ಮೃಗಗಳು ತನುವಿನಲ್ಲಿಯೇ ಆಶ್ರಯಪಡೆದು ತನುವನ್ನು ಮೃತ್ಯುಕೂಪಕ್ಕೆ ಕರೆದುಕೊಂಡು ಹೋಗುವ ಕ್ರೂರಮೃಗಗಳಾಗಿ ಮಾರ್ಪಟ್ಟಿವೆ.

''ಶಿಷ್ಯನೆಂಬ ಪ್ರತಿಭಾವವಿಲ್ಲದ ಗುರು, ಗುರುವೆಂಬ ಪ್ರತಿಭಾವವಿಲ್ಲದ ಶಿಷ್ಯ, ಏನೆಂಬೆನಯ್ಯಾ ಎರಡಿಲ್ಲದ ಘನವ. ಏನೆಂಬೆನಯ್ಯ ಎರಡೊಂದಾದ ಘನವ. ಕೂಡಲ ಚೆನ್ನಸಂಗನಲ್ಲಿ ಗುರುಶಿಷ್ಯ ಸಂಬಂಧವಪೂರ್ವ''.

ಕಾಯ ಉಳ್ಳವನು ಗುರುವಲ್ಲ. ಪ್ರತಿ ಕಾಯದಲ್ಲಿ ಗುರುದೇವನಿದ್ದಾನೆ. ಕಾಯಕ್ಕೆ ಶಿಷ್ಯನಾಗಬಾರದು. ಶಿಷ್ಯನ ಕಾಯಕ್ಕೆ ಕಾಯ ಗುರುವಾಗಬಾರದು. ಶಿಷ್ಯನ ಪೂರ್ವಾಶ್ರಯ ನೋಡಲು ಹೋದರೆ ಆತ ಗುರುದೇವನೇ ಆಗಿದ್ದಾನೆ.

ಗುರುವಿನ ಪೂರ್ವಾಶ್ರಯ ಶಿಷ್ಯ ನೋಡಲು ಹೋದರೆ ಆತ ಕೂಡಾ ಗುರುದೇವನೇ ಆಗಿದ್ದಾನೆ. ಆಶೆ ನಿಮಿತ್ತವಾದ ಭಕ್ತಿ ಮುಕ್ತಿಗೆ ಸಾಧನವಲ್ಲ. ಪ್ರತಿ ಕಾಯವೂ ಗುರುದೇವನನ್ನು ಧಾರಣೆ ಮಾಡಿಕೊಂಡು ಧರೆಗೆ ಇಳಿದು ಬಂದಿದೆ. ಕಾಯವನ್ನು ಆವರಿಸಿದ ಮನವೇ ಕಾಯದಲ್ಲಿಯೇ ಇದ್ದ ಅರಿವೆಂಬ ಗುರುದೇವನನ್ನು ತಿಳಿದು ಆ ಗುರುದೇವನಿಗೆ ಶಿಷ್ಯನಾಗಬೇಕು. ಇದು ಶರಣರ ಶಿಕ್ಷಣ.

ನಾಯಿಗೂ ಮನುಷ್ಯನಿಗೂ ವ್ಯತ್ಯಾಸವಿದೆ. ನಾಯಿಗೆ ಮಾಲೀಕನು ಒಬ್ಬನೇ. ಹಾಗೆಯೇ ಮನವೆಂಬ ನಾಯಿಗೆ ಕೂಡಾ ಮಾಲೀಕನೊಬ್ಬನೆ ಆಗಬೇಕು. ನಾಯಿ ರೂಪ ವಾಸನೆ ನೋಡಿ ಮಾಲೀಕನನ್ನು ಕಂಡು ಹಿಡಿಯುತ್ತದೆ.

ಹಾಗೆಯೇ ಮನವೆಂಬ ನಾಯಿ ತನುವೆಂಬ ಲಾಂಛನ ನೋಡಿ ಆ ಲಾಂಛನದಲ್ಲಿದ್ದ ಅರಿವೆಂಬ ಮಾಲೀಕನನ್ನು ಕಂಡುಹಿಡಿದಾಗ ಮನದ ನಾಯಿತನ ಹೋಗಿ ಮಹಾದೇವಿಯೇ ತಾನಾಗುತ್ತಾಳೆ. ಪರುಷ ಮುಟ್ಟಲು ಕಬ್ಬಿಣ ಹೊನ್ನಾಗುತ್ತದೆ. ಮಹಾದೇವನನ್ನು ಮುಟ್ಟಿದ ಮನ ಮಹಾದೇವಿಯಾಗುತ್ತಾಳೆ.

ಬಸವಣ್ಣನವರು ''ನಾಸಿಕದೊಳಗೊಂದು ನಾಸಿಕವಿದ್ದು ಮೂಸಿಸಲೇಕರಿಯರಯ್ಯಾ'' ಎಂದು ನಾಸಿಕವುಳ್ಳವರನ್ನು ಪ್ರಶ್ನಿಸಿದ್ದಾರೆ. ಮೂಗು ಮೂಗಿನೊಳಗಿದ್ದ ಮೂಗನ್ನು ಎಲ್ಲಿಯವರೆಗೆ ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲವೊ ಅಲ್ಲಿಯವರೆಗೆ ಅದು ಮೂಗೇ ಅಲ್ಲ. ಏಕೆಂದರೆ ಅದಕ್ಕೆ ಮೂಸಿಸಲು ಬರುವುದಿಲ್ಲ.

ಮೂಗಿನೊಳಗೊಂದು ಮೂಗು ಇದೆ; ಆ ಮೂಗಿಗೆ ಸತ್ಯ ಮಾತ್ರ ಗೊತ್ತಿದೆ. ಹೀಗಾಗಿ ಸತ್ಯವಸ್ತುವನ್ನು ಮಾತ್ರ ಮೂಸಿಸಿ, ಅದಕ್ಕೆ ಪರಿಮಳ ಎಂದು ಹೆಸರಿಟ್ಟು ನುಡಿದಿದೆ.

ಉದಾಹರಣೆಗೆ ಬೆಳಿಗ್ಗೆ ತಿನ್ನುವ ಪದಾರ್ಥ ಸುಗಂಧ. ಅದನ್ನು ಮೂಸಿಸುವ ವಿಧಾನವೇ ಬೇರೆ. ಗರಿಗರಿಯಾಗಿರುವ ಪದಾರ್ಥವನ್ನು ಕಣ್ಣಿನಿಂದ ನೋಡುವ, ಅದನ್ನು ಕೈಗಳಿಂದ ಮುಟ್ಟುವ, ನಾಲಿಗೆಯ ಮೂಲಕ ಹೊರಬರುವ ರಸದ ರಸಾನುಭವ ಬಲು ಆನಂದ. ಆ ಪದಾರ್ಥವನ್ನು ಅವಸರದಿಂದ ಉಣ್ಣುವ ತವಕವನ್ನು ಮೂಗು ತನ್ನ ವಾಸನೆಯಿಂದಾಗಿ ತನುವಿನಲ್ಲಿ ಸೃಷ್ಟಿ ಮಾಡುತ್ತದೆ.

ತಾನು ಉಣ್ಣುವ ಬೆಳಗಿನ ಅನ್ನದ ತಟ್ಟೆಯನ್ನು ನಾಯಿ ಹಸು ಹಂದಿಯ ಮುಂದೆ ಇಟ್ಟರೆ ಸೊಗಸಾಗಿ ಉಣ್ಣುತ್ತವೆ. ತಾನು ಉಂಡು ತನ್ನಿಂದ ಹೊರಬಂದ ಮಲವನ್ನು ಕೂಡಾ ಅವು ಇನ್ನೂ ಸೊಗಸಾಗಿ ಉಣ್ಣುತ್ತವೆ. ಬೆಳಿಗ್ಗೆ ಊಟ ಮಾಡಿದ ಇಡ್ಲಿ ವಡೆ ದೋಸೆ ಉಪ್ಪಿಟ್ಟು ಪೂರಿ ಪಲ್ಲೆ

ಜೀರ್ಣವಾಗಿ ಗ್ರೈಂಡ್ ಆಗಿ ಹೊರಬಂದ ಪದಾರ್ಥವನ್ನು ಮೃಷ್ಟಾನ್ನವೆಂದು ಪ್ರಾಣಿಗಳು ಮೂಸಿಸಿ ತಿಳಿದವು. ಪ್ರಾಣಿಗಳಿಗೆ ಪದಾರ್ಥ ಪರಿಮಳವಾದರೆ. ಮನುಷ್ಯನಿಗೆ ಪದಾರ್ಥ ಸುಗಂಧವೂ ಹೌದು ದುರ್ಗಂಧವೂ ಹೌದು. ಏಕೆಂದರೆ ಮೂಗು ರೋಗದಿಂದ ಕೂಡಿದೆ. ಹೀಗಾಗಿ ಅದಕ್ಕೆ ಶಾಂತಿಯಿಲ್ಲ, ಮೂಗಿನೊಳಗೊಂದು ಮೂಗು ಇದೆ. ಅದಕ್ಕೆ ಪರಿಮಳ ಮಾತ್ರ ಗೊತ್ತು. ಅದು ಸದಾ ಪರಮಶಾಂತಿಯಿಂದ ಇದೆ.

ಮೂಗಿಗೆ ಮೂಗಿನೊಳಗಿದ್ದ ಮೂಗಿನ ಪರಿಚಯವಾಗಲೇಬೇಕು. ಅದಕ್ಕಾಗಿಯೇ ವಿಷ್ಣು 'ವರಹಾ' ಅವತಾರವನ್ನು ತಾಳಿದ. ಮೂಗಿಗೆ ವಸ್ತುವಿನ ಸತ್ಯ ಗೊತ್ತಿಲ್ಲ. ಮೂಗಿನೊಳಗಿದ್ದ ಮೂಗಿಗೆ ಮಾತ್ರ ವಸ್ತುವಿನ ಸತ್ಯ ಗೊತ್ತಿದೆ. ಅದೇ ಅವತಾರ. ದೇಹದಲ್ಲಿಯೇ ಇದ್ದ ಸತ್ಯದ ಅವತಾರ. ದೇವರ ಅವತಾರ. ದೇವರು ಎಂದರೆ ದೇಹದಲ್ಲಿಯೇ ಇರುವ ಸತ್ಯವೇ ಹೊರತು ಮತ್ತೇನೂ ಅಲ್ಲ. ಸಿದ್ಧರಾಮ ಶಿವಯೋಗಿ ಆತನನ್ನು ಕಪಿಲಸಿದ್ಧ ಮಲ್ಲಯ್ಯ ಎಂದು ಹೆಸರಿಟ್ಟು ಕರೆದಿದ್ದಾನೆ.

ಕಾಯ ಕಾಣುತ್ತದೆ. ಕಾಯವನ್ನು ಆವರಿಸಿದ ಮನವೆಂಬ ಕಾಯ ಕಾಣುವುದಿಲ್ಲ. ಕಾಯದಲ್ಲಿ ಸಂಗಮವಾದ ಘನವೆಂಬ ನಿಜಕಾಯ ಕೂಡಾ ಕಾಣುವುದಿಲ್ಲ. ಈ ಕಾಯದ ನಿಜದ ಪ್ರಭೆ ನಿತ್ಯ ಪ್ರಕಾಶ. ಈ ಪ್ರಕಾಶ, ಕಾಯವನ್ನು ಆವರಿಸಿದ ಮನೋ ಕಾಯಕ್ಕೆ ಮಾತ್ರ ಕಾಣುತ್ತದೆ. ಆದರೆ ಮನಕ್ಕೆ ನಿಜದ ಪ್ರಕಾಶದಲ್ಲಿ ಐಕ್ಯವಾಗಿ ಪ್ರಕಾಶವೇ ತಾನಾಗಬೇಕೆಂಬ ಸದಿಚ್ಛೆ ಹೊಂದಿದ ಮನೋಕಾಯಕ್ಕೆ ಮಾತ್ರ ಈ ಕಾಯಕ ಸಾಧ್ಯ.

ಸಿದ್ಧರಾಮ ಶಿವಯೋಗಿಗಳು ಅಕಾಯಗಳೆರಡೂ ಕೂಡಿ ಮೂರ್ತಿಯಾದ ಕಾಯವನ್ನು ಕಂಡು ಬೆರಗಾಗಿದ್ದಾರೆ. ಅದರ ಪ್ರಭೆಯ ಕಂಡು ಮೈಮರೆತು ಕುಣಿದಾಡಿದ್ದಾರೆ.

ಕಾಯದಲ್ಲಿ ಸಂಗಮವಾದ ಅರಿವೆಂಬ 'ಶಿವ'ನ ಕಾಯವೂ ಅಕಾಯ. ಕಾಯವನ್ನು ಆವರಿಸಿದ ಮನವೆಂಬ 'ಶಿವೆ'ಯ ಕಾಯವೂ ಅಕಾಯ. ಇವೆರಡೂ ಕಾಯಗಳಿಗೆ ಆಶ್ರಯ ನೀಡಿದ ಕಾಯದ ಪ್ರಭೆಯನ್ನು ಏನೆಂದು ಬಣ್ಣಿಸುವುದು! ಕಾಯಕ್ಕೆ ತಾನು ಹೀಗೆ ಎಂದು ಗೊತ್ತಾಗದಿದ್ದರೇನಂತೆ? ಗೊತ್ತಾದ ಕಾಯಕ್ಕೆ ಮಾತ್ರ ಪರಮ ಸುಖ.

ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ: ಎಲ್ಲಿನೋಡಿದರೂ ನಿಜದ ಪ್ರಭೆಯ ನಿನ್ನ ನಿತ್ಯ ಪ್ರಕಾಶ ಎನಗೆ ತೋರುತ್ತಲಿದೆ. ಆ ಪ್ರಭೆಯೇ ಮೂರ್ತಿಯಾಗಿ ಎನ್ನ ಕಣ್ಣ ಮುಂದೆ ನಿಂತಿದೆ. ಈ ನಿನ್ನ ಕಾಯದ ಪ್ರಭೆಯ ಕಂಡು ಬೆರಗಾದೆನಯ್ಯಾ.

ನಿಜವ ನಂಬಿದ ಬ್ರಹ್ಮ ಅಜಲೋಕದಲ್ಲಿಪ್ಪ:

ಬಸವಣ್ಣನವರು ಕಾಯವನ್ನು ಕೈಲಾಸ ಎಂದು ಕರೆದರೆ, ಸಿದ್ಧರಾಮ ಶಿವಯೋಗಿಗಳು ಕಾಯವನ್ನು ಅಜಲೋಕ ಎಂದು ಕರೆದಿದ್ದಾರೆ. ಕಾಯ, ಕಾಯವನ್ನು ಕೈಲಾಸದಂತೆ ನೋಡಲು ಕಾಯಕ್ಕೆ ಬರುವುದಿಲ್ಲ. ಪುಣ್ಯಕ್ಷೇತ್ರವನ್ನು ಕೈಲಾಸವೆಂದು ಹೆಸರಿಟ್ಟು ಕರೆದು, ಕಾಶಿ ರಾಮೇಶ್ವರ ಶ್ರೀಶೈಲ ಮೆಕ್ಕಾ, ವ್ಯಾಟಿಕನ್ ಮುಂತಾದ ಕ್ಷೇತ್ರಗಳಿಗೆ ಕಾಲ್ನಡಿಗೆಯಿಂದ ನಡೆಯುತ್ತ, ಕಾಯವನ್ನು ದಂಡಿಸಿ, ಕೈಲಾಸ ಕಂಡೆನೆಂದು ಕಾಯ ಭ್ರಮೆಯಿಂದ ಹಿಗ್ಗುತ್ತದೆ.

ಕಾಯದಿಂದಲೇ ಕಲ್ಲು ಕಟೆದು, ಆ ಕಲ್ಲನ್ನೇ ದೇವರನ್ನಾಗಿಸಿ, ಆ ಕಲ್ಲಿನಿಂದಲೇ ಆಲಯವನ್ನು ಕಟ್ಟಿ; ಕಾಯದಿಂದಲೇ ಕಟ್ಟಿದ ಆಲಯಕ್ಕೆ ಪುಣ್ಯಕ್ಷೇತ್ರವೆಂದು ಹೆಸರಿಸಿ, ಶಿವನಿದ್ದ ಕೈಲಾಸವೆಂದು ಬಣ್ಣಿಸುತ್ತಾ ; ಶಿವನಿದ್ದ ಕಾಯವನ್ನೇ ದಂಡಿಸುತ್ತದೆ.

ಇದು ಕಾಯವನ್ನು ಆವರಿಸಿದ ಮನದ ಕೆಲಸವೆಂದು ಕಾಯಕ್ಕೆ ತಿಳಿಯುವುದಿಲ್ಲ. ಶಿವನಿಗೆ

ಆಶ್ರಯ ನೀಡಿ, ಶಿವನೊಂದಿಗೆ ಇರಬೇಕಾದ ಕಾಯ, ಮನದೊಂದಿಗೆ ಗೆಳೆತನ ಮಾಡಿದೆ. 'ಮನ' ಅರಿವೆಂಬ ಶಿವನಿಗೆ ಅರ್ಪಣೆ ಮಾಡಿ 'ಶಿವೆ'ಯೇ ಆಗಬೇಕಾದ ಮನ, ಕಾಯದ ಗೆಳೆತನ ಮಾಡಿದೆ. ಹೀಗಾಗಿ ಕಾಯದಲ್ಲಿಯೇ ಸಂಗಮವಾದ 'ಶಿವ' ಮನಕ್ಕೆ ಸಿಕ್ಕುತ್ತಿಲ್ಲ. 'ಮನ' ಕಾಯವನ್ನು ದಂಡಿಸಿ ಶಿವನನ್ನು ಹುಡುಕುವ ಯತ್ನದಲ್ಲಿದೆ. ಮನದ ಈ ಯತ್ನವನ್ನು ಕಂಡ ಶಿವ ಕಾಯದಲ್ಲಿಯೇ ಗಹಿಗಹಿಸಿ ನಗುತ್ತಿದ್ದಾನೆ.

ಉಂಡ ಅನ್ನ ಜೀರ್ಣವಾಗದಿದ್ದರೆ ದೇಹಕ್ಕೆ ತೊಂದರೆಯಿಲ್ಲ. ತನಗೆ ತಾನೆ ಮೂಗು, ಬಾಯಿ, ಗುದದ್ವಾರದಿಂದ ಹೊರಬಂದು ದೇಹದ ತೊಂದರೆ ನಿವಾರಣೆಯಾಗುತ್ತದೆ. ಆದರೆ ಕೇಳಿದ ಶಬ್ದ, ನೋಡಿದ ದೃಶ್ಯ, ಮುಟ್ಟಿದ ಸ್ಪರ್ಶ, ರುಚಿಸಿದ ರುಚಿ, ಮೂಸಿಸಿದ ವಾಸನೆಯನ್ನು ಹೇಗೆ ಹೊರಗೆ ತಳ್ಳಬೇಕೆಂಬ ಉಪಾಯ ದೇಹಕ್ಕೂ ಗೊತ್ತಿಲ್ಲ ಆಯಾ ಇಂದ್ರಿಯಗಳಿಗೂ ಗೊತ್ತಿಲ್ಲ. ಗೊತ್ತು ಮಾಡಿಕೊಂಡು ತಾನು ಪರಮಸುಖಿಯಾಗಬೇಕೆಂಬ ಚಿಂತೆ ಕೂಡಾ ಯಾವ ದೇಹದಲ್ಲಿಯೂ ಕಂಡು ಬರುತ್ತಿಲ್ಲ.

ಬುದ್ಧ ಮಹಾವೀರ ಕ್ರಿಸ್ತ ಕ್ರಿಷ್ಣ ಪೈಗಂಬರ ಬಸವಾದಿ ಶರಣರು ದಾಸವರೇಣ್ಯರು ಈ ನಾಡಿನ ಜ್ಞಾನಿಗಳು ಮಾತ್ರ ಚಿಂತಿಸಿದರು. ಹಲವಾರು ಸೂತ್ರರೂಪದ ವಚನಗಳನ್ನು ಮುಂಡಿಗೆಗಳನ್ನು ಕೀರ್ತನ, ತತ್ವಪದಗಳನ್ನು ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಬರೆದರು. ಬರೆದದ್ದೆಲ್ಲಾ ತನುವಿನಲ್ಲಿ ಸಂಗ್ರಹವಾಯಿತೇ ಹೊರತು ಜ್ಞಾನವಾಗಿ ತನುವಿಗೆ ಜೀರ್ಣವಾಗಲಿಲ್ಲ.

ನೀರಬಿಂದುವಿನಲ್ಲಿಯೇ ತನುವನ್ನು ಸೃಷ್ಟಿ ಮಾಡಿದ ನಿರಾಮಯನು ಯಾರ ಕೈಗೂ ಸಿಗದ ಮನವನ್ನು ನೀರಲ್ಲಿಯೇ ಸೃಷ್ಟಿ ಮಾಡಿದ. ನೀರಲ್ಲಿಯೇ ಒಲೆಯ ಹೂಡಿ, ಆಶ್ರಯಕೊಟ್ಟ ತನುವನ್ನೇ ಶಬ್ದ ಸ್ಪರ್ಶ ರುಚಿ ದೃಶ್ಯ ವಾಸನೆಗಾಗಿ ಉರಿಯುವಂತೆ ಮಾಡಿದ್ದಾನೆ.

ನೀರೊಳಗಿದ್ದ ಯಂತ್ರ ನೀರ ತನುವನ್ನೇ ಓಡುವಂತೆ ಮಾಡಿದೆ. ನೋಡುವಂತೆ ಮಾಡಿದೆ. ಮುಟ್ಟಿ ರುಚಿಸಿ ಸುಖಿಸುವಂತೆ ಮಾಡಿದೆ. ಮೂಸಿಸುವಂತೆ ಮಾಡಿದೆ. ಕೇಳುವಂತೆ ಮಾಡಿದೆ.

ಇದೆಲ್ಲ ಬಯಲದೇವನ ಆಟ ಬಯಲು ದೇವನ ಲೀಲೆ ಅನಂತ. ಬಯಲಿಗೆ ಬಣ್ಣವಿಲ್ಲ ರೂಪವಿಲ್ಲ ವಾಸನೆಯಿಲ್ಲ ರುಚಿಯಿಲ್ಲ. ಆದರೂ ಅದು ತನ್ನ ಗರ್ಭದೊಳಗಿನ ಜಲಜನಕ ಆಮ್ಲಜನಕವನ್ನು ಕೂಡಿಸಿ ತಾನು ಅದರಲ್ಲಿ ಬೆರೆತು ಜಲವನ್ನಾಗಿ ಮಾಡಿತು. ಆ ಜಲವನ್ನೇ ಗಟ್ಟಿಗೊಳಿಸಿ ನೆಲವನ್ನಾಗಿ ಮಾಡಿತು. ಆ ನೆಲದ ಮೇಲೆ ಜೀವಜಲ ಹರಿದು, ಉಲಿದಾಡುವ ಹಲವಾರು ಬಣ್ಣಗಳ ರೂಪ ನಿರ್ಮಾಣ ಮಾಡಲು ಬಯಲು ಕಾರಣವಾಯಿತು.

ಬಯಲು ತನುವಿಗೆ ಜನ್ಮಕೊಟ್ಟು ಅದರಲ್ಲಿ ಸೂಕ್ಷ್ಮ ಸ್ಥೂಲವೆಂದು ಎರಡು ತನುಗಳನ್ನಿಟ್ಟು ಕಾರಣ ತನುವಾಗಿ ತಾನೇ ಉಳಿಯಿತು. ಆ ಸ್ಥೂಲ ತನುವಿಗೆ, ಸೂಕ್ಷ್ಮ ತನುವಿಗೆ ಅಂತ್ಯ ತಾನೇ ಆಯಿತು.

ಬಯಲಿಗೆ ಯಾವ ರೂಢಿಯೂ ಇಲ್ಲ. ಬಯಲು ಎಲ್ಲಾ ಆದರೂ ತಾನು ಏನೂ ಅಲ್ಲ. ಬೀಸುವ ಗಾಳಿ, ಹರಿಯುವ ಜಲ, ಉರಿಯುವ ಬೆಂಕಿ, ಸುರಿಯುವ ಮಳೆ, ತಿರುಗುವ ಭೂಮಿ, ಬೆಳೆಯುವ ಬೆಳೆ ಪಶು ಪಕ್ಷಿ ಪ್ರಾಣಿ ಉರಗ ಜಲಚರ ಆಕಾಶ ಕಾಯಗಳು ನಕ್ಷತ್ರಗಳು ಸೂರ್ಯ ಚಂದ್ರ ಮುಂತಾದವುಗಳಿಗೆ ಜನ್ಮ ನೀಡಿದ ಬಯಲು ಅದು ಆರೂಢ.

ಜನ್ಮ ನೀಡಿದ ಸಕಲ ವಸ್ತುಗಳಿಗೂ ಹಲವಾರು ರೂಢಿಯಿದೆ. ಆದರೆ ಜನ್ಮನೀಡಿದ ಬಯಲಿಗೆ ಮಾತ್ರ ಯಾವ ರೂಢಿಯೂ ಇಲ್ಲ.

ಪರಮಾತ್ಮನೆ, ನೀನು ಅಂದರೆ ಯಾರಿಗೆ ಗೊತ್ತು? ಆದರೂ ಎಲ್ಲರೂ ನಿನ್ನ ಆರಾಧಿಸುವವರೇ ಆಗಿದ್ದಾರೆ. ನಿನಗಾಗಿ ಭವ್ಯವಾದ ಆಲಯಗಳನ್ನು ಕಟ್ಟಿದ್ದಾರೆ. ಅಲ್ಲಿ ನೀನಿಲ್ಲವೆಂದು; ಆಲಯ ಕಟ್ಟಿದ ಪ್ರತಿ ಕಾಯದಲ್ಲಿ ನೀನೆ ಇರುವಿಯೆಂದು ಅವರಿಗೆ ಗೊತ್ತಿಲ್ಲ. ಆಲಯದಲ್ಲಿರುವ ದೇವರು ನೀನಲ್ಲವೆಂದು ನಿನ್ನನ್ನು ಆರಾಧಿಸುವವರಿಗೆ ಗೊತ್ತಿಲ್ಲ. ನಿನ್ನನ್ನು ಆರಾಧಿಸುವ ಸಕಲ ತನುಗಳಲ್ಲಿಯೂ ನೀನಿರುವಿಯೆಂದು ಕೂಡಾ ಅವರಿಗೆ ಗೊತ್ತಿಲ್ಲ.

ಗುರುದೇವನನ್ನು ತೋರುವ ಗುರುದೇವನೇ ನಿಜವಾದ ಗುರುದೇವ. ಶಿಷ್ಯನನ್ನಾಗಿ ಮಾಡಿಕೊಳ್ಳುವ ಗುರುವು ಗುರುವಲ್ಲ. ಇಡೀ ಲೋಕವೇ ಗುರುಲೋಕ. ಸಕಲರೂ ಗುರುಗಳೇ ಎನ್ನುವುದು ಲೋಕಕ್ಕೆ ಗೊತ್ತಿಲ್ಲ.

ಶಿಷ್ಯನ ಶಿಷ್ಯತನವನ್ನು ಕೆಡಿಸಿ, ಗುರುವಿನ ಗುರುತನವನ್ನು ಗುರುದೇವನೇ ಕೆಡಿಸಿಕೊಂಡ ಗುರುದೇವನು ಮಾತ್ರ ಗುರು. ಅಂತಹ ಗುರುದೇವನು ಬಸವಣ್ಣನಲ್ಲದೆ ಬೇರೆ ಯಾರೂ ಅಲ್ಲ.

ಬಸವಣ್ಣ ,ಈ ಭೂಮಂಡಲದಲ್ಲಿ ಮೊಟ್ಟ ಮೊದಲಿಗೆ ಗುರುದೇವ ಎನ್ನುವವನು ವ್ಯಕ್ತಿ ಅಲ್ಲ ಎಂದು ಸಾರಿದಾತ. ವ್ಯಕ್ತಿಯಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಮಾತ್ರ ಗುರು ಎಂದು ಇಡೀ ಲೋಕಕ್ಕೆ ಕೇಳುವಂತೆ ಖಚಿತವಾಗಿ ಹೇಳಿದಾತ.

ಹಾಗೆಯೇ ಶಿಷ್ಯನೆಂಬುವವನು ಕೂಡಾ ವ್ಯಕ್ತಿಯಲ್ಲ. ತನುವನ್ನು ಆವರಿಸಿದ ಮನವೇ ಶಿಷ್ಯ. ಈ ಶಿಷ್ಯ ಅರಿವೆಂಬ ಗುರುದೇವನಿಗೆ ಶಿಷ್ಯನಾಗಬೇಕು. ಇವರಿಬ್ಬರೂ ನಿರಾಕಾರರು. ನಿರೂಪರು.

ರೂಪು ಉಳ್ಳ ತನುವಿನಲ್ಲಿ ನಿರೂಪವಾಗಿ ಸಂಗಮವಾದ ಅರಿವೇ ಗುರು. ಈ ಗುರುದೇವನಿಗೆ ರೂಪು ಉಳ್ಳ ತನುವನ್ನು ಆವರಿಸಿದ ನಿರಾಕಾರ ಮನವೇ ಶಿಷ್ಯ. ಗುರುಶಿಷ್ಯರಿಬ್ಬರು ಈ ಭೂಮಿಯ ಮೇಲಿರುವ ಸಕಲ ತನುಗಳಲ್ಲಿಯೂ ತನ್ಮಯರಾಗಿದ್ದಾರೆ.

ಪುಣ್ಯಪಾಪವೆಂಬುದು ಮನದ ಇಚ್ಛೆ. ಮನ ತನುವಿನೊಂದಿಗೆ ಸಂಗ ಮಾಡಿ ಮತ್ತೊಂದು ತನುವಿಗೆ ಸಹಾಯ ಮಾಡುತ್ತದೆ. ತಾನು ಸಹಾಯ ಮಾಡಲು ಆ ತನುವೇನು ಅಸಹಾಯಕ ತನುವೆ? ಅದು ತನ್ನಂತೆ ಪರಿಪೂರ್ಣ ತನುವಲ್ಲವೆ ಹೇಗೆ? ಸಕಲ ತನುಗಳಲ್ಲಿ ಅರಿವು ಎನ್ನುವ ಗುರುದೇವನು ತನ್ಮಯವಾಗಿರುವಾಗ ಆತನಿಗೆ ಸಹಾಯ ಮಾಡುವ ಶಕ್ತಿ ಯಾರಿಗಾದರೂ ಇದೆಯೆ?

ಸಕಲ ತನುಗಳಲ್ಲಿಯೂ ತನ್ಮಯವಾದ ಮಹಾದೇವನು ಆತ. ತನುವಿನ ಒಡೆಯನು ಆತ. ತನುವಿನ ಒಡೆಯನಿಗೆ, ತನು, ತನುವನ್ನು ಆವರಿಸಿದ ಮನ ಇವೆರಡು ಪುಣ್ಯ ಮಾಡಲು ಸಾಧ್ಯವೆ?

ಸಕಲ ತನುಗಳಲ್ಲಿದ್ದ ತನುವಿನೊಡೆಯ ಮಹಾದೇವನಿಗೆ ತನುವನ್ನು ಸಲಹುವ ಜವಾಬ್ದಾರಿ ಇದೆ. ಮನ ತನುವಿನಲ್ಲಿ ತನ್ಮಯವಾದ ಒಡಲೊಡೆಯನಿಗೆ ಶರಣು ಹೋದರೆ ಸಾಕು; ಅದು ಶರಣ ತನುವಾಗುತ್ತದೆ. ಬುದ್ಧತನುವಾಗುತ್ತದೆ. ಬಸವಾದಿ ಶರಣರ ದಾಸವರೇಣ್ಯರ ತನುವೆಂದು ಕರೆಯಿಸಿಕೊಳ್ಳುತ್ತದೆ. ಆದರೆ ಮನ ಮಹಾದೇವನ ಸಂಗ ಮಾಡದೆ ತನುವಿನ ಸಂಗ ಮಾಡಿದೆ. ಹೀಗಾಗಿ ತನುವನ್ನು ಬೇಡುವ ಭಿಕ್ಷುಕನನ್ನಾಗಿ ಮಾಡಿದೆ; ಕೊಡುವ ಕೊಡುಗೈ ದಾನಿಯನ್ನಾಗಿ ಮಾಡಿದೆ.

ಬೇಡಿದ್ದನ್ನು ಕೊಡುವ ಧನಿಕನು ತನುವಿನಲ್ಲಿಯೇ ತನ್ಮಯವಾಗಿದ್ದರೂ ಜಿಪುಣ ಅವಿವೇಕಿ ಮನ ಅನ್ಯ ತನುವನ್ನೇ ಬೇಡುತ್ತದೆ.

ಪಾಪವ ಮಾಡದಿದ್ದಡೆ ಪುಣ್ಯದಿಟ. ಬೇರೆ ತೀರ್ಥ ಬೇಡ, ಸತ್ಯವ ನುಡಿವಲ್ಲಿ ಸಂದಿಲ್ಲದೆ

ಇಹನು, ಕಪಿಲಸಿದ್ಧ ಮಲ್ಲಿಕಾರ್ಜುನ:

ವೃಕ್ಷ, ಜ್ಞಾನಿ. ಅದು ಯಾರನ್ನೂ ಏನೂ ಬೇಡುವುದಿಲ್ಲ. ಹಾಗೆಯೇ ತನು ಕೂಡಾ ಬೋಧಿವೃಕ್ಷ. ಕಾಮಧೇನು! ಸಕಲ ಬ್ರಹ್ಮಾಂಡವೂ ತನುವಿನಲ್ಲಿಯೇ ಅಡಗಿದೆ. ಹೀಗಾಗಿ ಅದು ಇಡೀ ಬ್ರಹ್ಮಾಂಡವನ್ನೇ ನೋಡುತ್ತದೆ. ಅಂದರೆ ಬ್ರಹ್ಮಾಂಡವೇ ದೊಡ್ಡದೆಂದು ಅಲ್ಲ. ಅದನ್ನು ನೋಡುವ ತನುವಿನ ಶಕ್ತಿಯೇ ದೊಡ್ಡದು! ಆ ಶಕ್ತಿಯೇ ಕಪಿಲಸಿದ್ಧ ಮಲ್ಲಿಕಾರ್ಜುನ.

ಮನವೆಂಬ ಶಿಷ್ಯ, ತನುವನ್ನು ಹಿಡಿದು ಕಳುವಿಗೆ ಹೋಗಿ, ತನುವನ್ನು ಕೊಂದು, ಚಿನ್ನ ಪಡೆದರೂ, ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನೆ ನೀನು ನೋಡಿಯೂ ನೋಡದಂತೆ ಇರುವುದು ತರವಲ್ಲ ಪ್ರಭುವೆ! ಮನವೆಂಬ ಶಿಷ್ಯ ತನುವಿನೊಂದಿಗೆ ತನುವನ್ನು ನೋಡಿ ಮನದಲ್ಲಿ ಹಾದರ ಮಾಡುತ್ತಾ ಅಕ್ಕಾ ಎಂದು ಮಾತನಾಡುವುದನ್ನು ಕೇಳಿಯೂ ಕೇಳದಂತೆ ಇರುವ ಗುರುವಿನ ನಡತೆ ಸರಿಯಲ್ಲ ಪ್ರಭುವೆ.

ಚಿನ್ನವಿದ್ದರೂ, ಚಿನ್ನಕ್ಕಾಗಿ ರಾಜ ಮತ್ತೊಬ್ಬ ರಾಜನೊಂದಿಗೆ ಯುದ್ಧ ಮಾಡಿ, ಸಾವಿರಾರು ತನುಗಳನ್ನು ಕೊಂದು ಚಿನ್ನ ಪಡೆಯುವುದು ತನುವಿನಲ್ಲಿಯೇ ಇದ್ದ ಗುರುದೇವನಿಗೆ ಗೊತ್ತಿಲ್ಲವೆ? ಕೊಲ್ಲುವ ತನುವಿನಲ್ಲಿಯೂ ಇದ್ದು ಕೊಲ್ಲುವುದಕ್ಕೆ ಸಮ್ಮತಿಯಿತ್ತಿದ್ದಾನೆ. ಸಾಯುವ ತನುವಿನಲ್ಲಿಯೂ ಇದ್ದು ಸಾಯುವುದಕ್ಕೆ ಸಮ್ಮತಿಯಿತ್ತಿದ್ದಾನೆ. ಜಡವಸ್ತುವಿನ ಆಸೆಗಾಗಿ ಚೇತನ ಬಲಿಯಾಗುತ್ತಿರುವುದನ್ನು ತಡೆಯದೆ ಸುಮ್ಮನಿರುವುದು ಗುರುದೇವನಿಗೆ ಉಚಿತವಲ್ಲ ಪ್ರಭುವೆ ಎಂದು ಸಿದ್ಧರಾಮ ಶಿವಯೋಗಿಗಳು ಅಂತರಂಗದ ಅರಿವೆಂಬ ಗುರುದೇವನ ಬಗ್ಗೆ ಅಲ್ಲಮಪ್ರಭುಗಳ ಮುಂದೆ ದೂರಿದ್ದಾರೆ. ಇದೊಂದು ಅದ್ಭುತವಾದ ಸೂತ್ರದ ವಚನವಾಗಿದೆ. ಓದುವ ತನುಗಳು ತನುವಿನಲ್ಲಿಯೇ ತನ್ಮಯವಾದ ಶಕ್ತಿಯನ್ನು ಗಮನಿಸುತ್ತಲೇ ಓದಬೇಕು.

ತನುವೆಂದರೆ ಸಾಮಾನ್ಯವಲ್ಲ. ಅದು ಓಂಕಾರ! ಅದನ್ನು ಪ್ರಣವಾಕ್ಷರವೆಂದು ಶರಣರು ಕರೆದಿದ್ದಾರೆ. ತಿಳಿಯದ್ದಕ್ಕಾಗಿ ಓಂಕಾರವೆಂಬ ತನು ಹೆಣ್ಣು-ಗಂಡು ಎನ್ನುವ ಭೇದವನ್ನು ಹೊತ್ತುಕೊಂಡಿದೆ. ಧರ್ಮ, ಜಾತಿ, ಮತ, ಪಂಥಗಳ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಅಶುದ್ಧವಾಗಿದೆ. 'ಓಂ' ಎಂದರೆ ಎರಡಕ್ಷರಗಳ ಒಂದೆಸಳಿನ ಕಮಲ. ಅದರ ಅಧಿದೇವತೆ ನಿತ್ಯನೆಂಬ ಶುದ್ಧ ಸ್ಫಟಿಕ. 'ಅ'ಕಾರ, 'ಉ'ಕಾರ, 'ಮ'ಕಾರ ಎಂಬ ಮೂರಕ್ಷರಗಳ ಸಂಗಮ. ಹೀಗಾಗಿ ತನು ಒಂದೇ ಎಂದು ಗೊತ್ತಿದ್ದರೂ ಅದು ಹೆಣ್ಣು-ಗಂಡು ಎಂದು ಎರಡಾಗಿದೆ. ತನು ಜ್ಞಾನ ಕಮಲವೆಂದು ಗೊತ್ತಿದ್ದರು ಅದು ಸಾತ್ವಿಕ, ರಾಜಸ, ತಾಮಸ ಎಂದು ಮೂರಾಗಿದೆ. ತನು ಒಂದೇ ಎಂದು ಗೊತ್ತಿದ್ದರೂ ಸ್ಥೂಲತನು, ಸೂಕ್ಷ್ಮತನು, ಕಾರಣ(ಜ್ಞಾನ)ತನು ಎಂದು ಮೂರಾಗಿದೆ. ಹೀಗಿದ್ದರೂ ತ್ರಿಕೂಟ ಸಂಗಮವೆಂದು ತನು ತನುವಿನಿಂದಲೇ ಕರೆಯಿಸಿಕೊಂಡಿದೆ.

ತನು ನಿತ್ಯ ನಿರಂಜನವು, ಐಕ್ಯ ಪದವು. ಅದು ಕಪಿಲಸಿದ್ಧ ಮಲ್ಲಿನಾಥಯ್ಯನ ಕೂಟಸ್ಥಲವು ಆಗಿದೆ. ಆದರೂ, ತನುವಿಗೆ ರಂಜನೆಯೆಂದರೆ ಬಲು ಇಷ್ಟ. ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿಯೇ ತನ್ಮಯವಾದ ನಿರಂಜನನೆಂದರೆ ಅದಕ್ಕೆ ಬಲು ಕಷ್ಟ.

ರಂಜನೆಯುಳ್ಳ ಮನ ತನುವಿನೊಂದಿಗೆ ಸಂಗಮವಾದುದಕ್ಕಾಗಿ ತನು-ಮನಗಳೆರಡು ರಂಜನೆಯ ಕೂಟದಲ್ಲಿ ನಿರತವಾಗಿವೆ. ನಿರಂಜನನು ತನುವಿನಲ್ಲಿ ತನ್ಮಯವಾಗಿದ್ದರೂ, ತನುವಿಗೆ ಅಂಟಿಕೊಳ್ಳದೆ ತನುವನ್ನು ಬೆಳಗುತ್ತಿದ್ದಾನೆ. ತನುವಿನೊಂದಿಗೆ ಸಂಗ ಮಾಡದೆ ತನುವಿಗೆ ಆಧಾರವಾಗಿದ್ದಾನೆ. ಇದು ಜಗದಾಟ, ಭವದಾಟ ಇದರಿಂದ ಜನ್ಮನಾಶ.

ಅಜ್ಞಾನದ ಜನ್ಮವನ್ನು ನಾಶ ಮಾಡಿ ಜ್ಞಾನದ ಜನ್ಮಕ್ಕೆ ಸಕಲ ಶರಣರನ್ನು ಕರೆದುಕೊಂಡು ಹೋದ ಬಸವಣ್ಣನ ಅಗಲಿಕೆಯ ಸುದ್ದಿಯನ್ನು ಕೇಳಿದ ಸಿದ್ಧರಾಮ ಶಿವಯೋಗಿಗಳು ಭಕ್ತಿಯ ಕಣ್ಣೀರಿನ ದುಃಖವನ್ನು ಹರಿಸಿದ್ದಾರೆ. ನೀನು ಸೃಷ್ಟಿ ಮಾಡಿದ ಮುಕ್ತಿಬೀಜ ನಷ್ಟವಾಯಿತ್ತಲ್ಲಾ ಬಸವಣ್ಣಾ. ನೀನು ಸೃಷ್ಟಿ ಮಾಡಿದ ಸಹಜ ಮೋಕ್ಷದ ದಾರಿ ಹಾಳಾಯಿತ್ತಲ್ಲಾ ಬಸವಣ್ಣಾ.

ಯಾರಿಗೂ ನೀನು ಹೋಗುವ ಸುಳುಹು ತೋರದೆ ಬೀರದೆ ಶರಣಕುಲವನ್ನು ಅಗಲಿ ನೀನೆಲ್ಲಿ ಅಡಗಿದೆಯೋ ಬಸವಣ್ಣಾ! ಅಜ್ಞಾನದಿಂದ ದಣಿದು ಬಂದವರಿಗೆ ಭಕ್ತಿಯ ರಸವನ್ನು ಪಾನ ಮಾಡಿಸಿದ ಮಹಾಂತ ನೀನು! ದಣಿದು ಮುಕ್ತಿ ಬೇಡಲು ಬಂದವರಿಗೆ ಬ್ರಹ್ಮರಸವನು ಕುಡಿಸಿ ಅವರ ಭ್ರಮೆ ಕಳೆದ ಮಹಾವೀರ ನೀನು! ಮೋಕ್ಷ ಕೇಳಲು ಬಂದ ಸಾಧಕರಿಗೆ, ನೀನೆಂದು ಬಂಧನವಾಗಿರುವಿ ಎಂದು ಸಹಜ ಜ್ಞಾನದ ರಸಪಾಕ ಉಣಬಡಿಸಿ ಮುಕ್ತನನ್ನಾಗಿಸಿದ ಮಹಾಜ್ಞಾನಿ ಬಸವಣ್ಣ ನೀನು! ಬಸವಣ್ಣ ನೀನೆಲ್ಲಿ ಅಡಗಿದೆಯೋ! ಜ್ಞಾನಭಂಡಾರಿ! ಕಪಿಲಸಿದ್ಧ ಮಲ್ಲಿನಾಥನ ಬಸವಾ ಎಂದು ಸಿದ್ಧರಾಮ ಶಿವಯೋಗಿಗಳು ಬಸವಣ್ಣನ ಅಗಲಿಕೆಯ ದುಃಖವನ್ನು ಸಹಿಸಿಕೊಳ್ಳಲು ಸಾಧ್ಯವಾಗದೆ ಚರಮಗೀತೆಯನ್ನು ಹಾಡಿದ್ದಾರೆ.

ಬಾಲರಿಗೆ ತಾಯಿಯ ಮೊಲೆ ಹಾಲು ಅಮೃತವಿದ್ದಂತೆ. ಹೀಗಾಗಿ ಬಾಲರು ತಾಯಿಯ ಮೊಲೆ ಹಾಲನ್ನು ಮೆಚ್ಚುತ್ತಾರೆ. ತಾಯಿ ಎಂದರೆ ಮಗುವಿಗೆ ಬಲು ಇಷ್ಟ. ಮೆಚ್ಚಿದ ಮನಕ್ಕೆ ತುಚ್ಛ ಬಾರದಂತೆ ಮಾಡು ಕಂದ ಎಲೆ ಅಯ್ಯಾ ಅಯ್ಯಾ ನಿಮ್ಮ ಧರ್ಮ.

ಮೊಲೆಹಾಲ ಮೆಚ್ಚಿದ ಮಗು, ಯೌವ್ವನಕ್ಕೆ ಬಂದ ಮೇಲೆ ಅದು ಮೊಲೆಯನ್ನು ತುಚ್ಛದಂತೆ ನೋಡುತ್ತದೆ. ಉಂಡ ಮೊಲೆಯಲ್ಲಿಯೇ ವಿಕೃತ ಕಾಮವನ್ನು ಕಂಡು ಮನ ತುಚ್ಛವಾಗುತ್ತದೆ. ಉಂಡ ಅಮೃತ ಮರೆತು, ಕಂಡುಬರುವ ಕಾಮರಸವನ್ನು ಹೀರುತ್ತದೆ. ಬಾಲ್ಯದಲ್ಲಿ ಮೊಲೆಯನ್ನು ನೋಡಿ ಹೇಗೆ ಹಸಿವಿಗಾಗಿ ಆಸೆಯಾಯಿತೋ,ಹಾಗೆಯೇ ಮನ ಯೌವ್ವನದಲ್ಲಿ ಮೊಲೆಯನ್ನು ನೋಡಿ ಕಾಮದ ಹಸಿವು ಬಾಯದೆರೆಯುವಂತೆ ಮಾಡುತ್ತದೆ. ಇಂತಹ ತುಚ್ಛತನವನ್ನು ಎನ್ನಲ್ಲಿ ಮಾಣಿಸು ಪರಮಾತ್ಮನೇ ಅದು ನಿನ್ನ ಧರ್ಮ. ಎಂದು ಹಾಡುವ ಶರಣರ ವಚನದ ಸೂತ್ರ ಸಾಮಾನ್ಯವೇ? ಇದನ್ನು ಓದುಗ ಜೀರ್ಣಿಸಿಕೊಳ್ಳಲೇಬೇಕು.

ಕಾಯದಲ್ಲಿದ್ದ ಕಾಮದ ದ್ರವ್ಯ, ಕಾಯದಿಂದಲೇ ಹೊರಬಂದು, ಕಾಯಕ್ಕೆ ಸುಖಕೊಡುತ್ತದೆ. ಅದು ಸುಖವೂ ಅಲ್ಲ ದುಃಖವೂ ಅಲ್ಲ; ಮತ್ತೊಂದು ಕಾಯಕ್ಕೆ ಜನ್ಮ ನೀಡುವುದಕ್ಕಾಗಿ ಕಾಯದಿಂದಲೇ ಹೊರಬಂದ ಬಯಲ ಬೀಜಗಳು ಅವು ಎಂದು ಮನ ತಿಳಿದು ತನಗೆ ತಾನೇ ತನುವಿನಲ್ಲಿ ತನ್ಮಯವಾದ ಜ್ಞಾನರತ್ನವನ್ನು ಅಲಂಕರಿಸಿದಾಗ ಹೆಣ್ಣು ಮಣ್ಣು ಹೊನ್ನಿನ ಅಜ್ಞಾನ ಬತ್ತಲಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

ಮನ್ಮಥ ತನ್ನ ಕಾಮವಾಸನೆಯ ಗಾಳಿಯನ್ನು ಪರಮಾತ್ಮನ ಮೇಲೆ ಬೀರಲು ಹೂ ಬಾಣ ಹೂಡಿದನು. ಮನ್ಮಥನಿಗೆ ಪರಮಾತ್ಮನೊಂದಿಗೆ ಕಾಮಕೇಳಿಯಾಡುವ ಆಸೆಯಾಯಿತು.

ಕಾಯದಲ್ಲಿ ಕಾಮವಾಸನೆಯುಳ್ಳ ಮನ್ಮಥನ ಕಾಯವೊಂದು ಇದೆ. ಸ್ಥೂಲ ಕಾಯವನ್ನು ಮನ್ಮಥನ ಕಾಯ ಆವರಿಸಿದೆ. ಸ್ಥೂಲಕಾಯದಲ್ಲಿ ಜ್ಞಾನಕಾಯವೊಂದು ಇದೆ. ಅದೇ ಪರಮಾತ್ಮನಕಾಯ. ಆ ಕಾಯದ ಮೇಲೆ ಮನವೆಂಬ ಮನ್ಮಥನ ಮೋಹದ ಹೂ ಬಾಣ ತಾಗಿದ ಕೂಡಲೇ ಜ್ಞಾನಾಗ್ನಿಗೆ ತುತ್ತಾಗಿ ಮನ್ಮಥ ಸುಟ್ಟು ಹೋದ.

ಕರುಣಾಕರನೆ ನೀ ಕರುಣಿಸಿದವರಿಗಲ್ಲದೇ ಇಲ್ಲವೈ :

ಪರಮಾತ್ಮನ ಮೇಲೆ ಮದನನಿಗೆ ಮೋಹವುಂಟಾಗಿ ಮನವ ಸುಟ್ಟುಕೊಳ್ಳುವ ಬಯಕೆ ಸಕಲ ಮನಗಳಿಗೂ ಆಗಬೇಕಲ್ಲ? ಅದು ಕೂಡಾ ಅವನ ಕರುಣೆ ಇರಬೇಕು. ಅವನು ಕರುಣಿಸಿದವರಿಗಲ್ಲದೆ ಅವನ ಮೇಲೆ ಮನಕ್ಕೆ ಮೋಹವಾಗದು.

ಪರಮಾತ್ಮನ ಮೇಲೆ ಮೋಹ ಮಾಡಿದ ಮದನನೇ ಧನ್ಯ. ಅವನ ಮನ ಸುಟ್ಟು ಪರಮಾತ್ಮನಿಗೆ ಧರಿಸುವ ಭಸ್ಮವಾಗುತ್ತದೆ. ಅವರು ಪರಮ ಪಾವನರು. ಪರಮ ಮಾಹೇಶ್ವರರು ಇಚ್ಛಿಸಿದ ಓದುಗನಿಗೆ ಈ ಸೂತ್ರ ವರವಾಗುತ್ತದೆ.

ಅಂಗದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನೆ, ನೀನೆ ನನ್ನ ಗಂಡನು. ಸಜ್ಜನೆ ನಾನು, ನಿನ್ನ ಹೆಂಡತಿ. ನೀನು ಎನಗೆ ಗಂಡನೆಂದು ಗೊತ್ತಾಗದೆ ಇದ್ದಾಗ ನಾನು ಕಾಮಿಯಾಗಿದ್ದೆ, ಕ್ರೋಧಿಯಾಗಿದ್ದೆ, ಲೋಭಿಯಾಗಿದ್ದೆ, ಮೋಹಿಯಾಗಿದ್ದೆ. ಎನ್ನ ಆಮಿಷ, ತಾಮಸ ವಿಕಾರಂಗಳು ಅನಂತವಾಗಿ ನೀನಿದ್ದ ಕಾಯದಲ್ಲಿ ಸಪ್ತವ್ಯಸನಗಳು, ಅಷ್ಟಮದಗಳು ಹುಟ್ಟಿಕೊಂಡವು.

ನೀನಿದ್ದ ಕಾಯವನ್ನೇ ನಿನ್ನ ಪರಿಚಯವಿಲ್ಲದಿದ್ದಕ್ಕಾಗಿ ನಾನು ಕಾಯಕ್ಕೆ ಸಾತ್ವಿಕ ಪಾತ್ರ ಹಾಕಿ ನನಗೆ ಬೇಕಾದ ಆಸೆ ಆಮಿಷಗಳನ್ನು ನಿನ್ನ ಕಾಯದ ಮೂಲಕ ಉಂಡೆ. ಕಾಯಕ್ಕೆ ರಾಜಸ ಪಾತ್ರ ತೊಡಿಸಿ ನಾನಾ ಪದವಿಗಳ ಮೂಲಕ ರಾಜಭೋಗವನ್ನು ಉಂಡೆ. ಕಾಯಕ್ಕೆ ತಾಮಸ ಪಾತ್ರವನ್ನು ಹೊದಿಸಿ ಮಾಂಸ ಮದ್ಯಾದಿಗಳನ್ನು ಸೇವಿಸಿ ಸುಖಿಸಿದೆ.

ನನಗೆ ನೀನು ಯಾರು ಎಂದು ಗೊತ್ತಾಯಿತು! ನಿನ್ನ ನಿಜರೂಪವನ್ನು ಕಂಡು ನಾನು ನಿನ್ನನ್ನೇ ಗಂಡನನ್ನಾಗಿ ಮಾಡಿಕೊಂಡು ಸಜ್ಜನಳಾದೆ! ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೇ, ನಿನ್ನ ಅರ್ಧಾಂಗಿಯಾಗಿ ಅರ್ಧನಾರೀಶ್ವರಿ ಎಂದು ಕರೆಯಿಸಿಕೊಂಡೆ. ಇನ್ನು ಅನ್ಯಕ್ಕೆಳೆಸಲಾರೆ, ನೀನಿದ್ದ ಕಾಯವೇ ಎನಗೆ ಕೈಲಾಸವಾಯಿತು ಪರಮಾತ್ಮನೆ! ಎಂದು ಓದುಗ ಹಗಲಿರುಳೆನ್ನದೆ ಹಂಬಲಿಸಿದರೆ ಅದೇಕೆ ಸಾಧ್ಯವಾಗುವುದಿಲ್ಲ!

ಅರಿವೆಂಬ ಗುರುದೇವನೆ, ನೀನು ಇಡೀ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿ, ಅದನ್ನು ನೋಡಲು ಅಂಗ ಧರಿಸಿ ಸಜ್ಜನನಾಗಿ ಬಂದೆಯಾ? ಶಿವ ನೀನು, ಶಕ್ತಿ ನಾನು ಆಗಿ ಅಂಗ ಧರಿಸಿದ ಕಾರಣ, ನೀನು ನನ್ನೊಂದಿಗೆ ಪರಮಸಂತೋಷದಿಂದ ಬ್ರಹ್ಮಾಂಡವನ್ನು ನೋಡಲು ನೀನಿದ್ದ ತನುವಿನಲ್ಲಿಯೇ ನನ್ನನ್ನು ಮನವನ್ನಾಗಿ ಮಾಡಿದೆಯಾ? ನನ್ನ ಹಾದರತನ ನಿನಗೆ ಸರಿಬಾರದ ಕಾರಣ, ನನ್ನ ಕೂಡಲು ನಿನಗೆ ಇಚ್ಛೆ ಆಗಲಿಲ್ಲವೆ? ನನಗೆ ಮಿಂಡ ನೀನು. ನೀನೆ ನನ್ನನ್ನು ಬರಸೆಳೆದು ಅಪ್ಪಿಕೊಳ್ಳದೆ, ನನ್ನನ್ನು ಹಾದರಕ್ಕೆ ಹಚ್ಚಿ, ನನಗೆ ಮನವೆಂದು ಹೆಸರನಿಟ್ಟೆ! ನೀನಿದ್ದ ಅಂಗದಲಿ ಅರಿಷಡ್ವರ್ಗಗಳನು ನೀನೇ ತುಂಬಿ, ನನಗೆ ಹಾದರ ಮಾಡಲು ನೀನೇ ಹಚ್ಚಿದೆ! ನಿನ್ನನೆಂತು ನಂಬುವುದು ಮಿಂಡನೆ?

ಆಹಾ, ನೀನು ತಂದೆ-ತಾಯಂದಿರಿಗೆ ಹುಟ್ಟದವನು. ಅವರು ನಿನ್ನನ್ನು ನಡೆಸಲು ಸಾಧ್ಯವೆ? ಆಹಾ ತಂದೆ-ತಾಯಿಗಳು ನಿನಗೆ ಇಲ್ಲವೆಂದ ಮೇಲೆ ಅವರು ನಿನ್ನನ್ನು ನುಡಿಸಲು ಸಾಧ್ಯವೆ?

ಮಿಂಡಾ! ನಿನ್ನನೆಂತು ನಂಬುವುದು? ನೀನು ಯಾರಿಗೂ ಹುಟ್ಟದವನು! ಎಲ್ಲರ ಬಿಟ್ಟು ನನ್ನನ್ನು ಹೊದೆಯಲು ಅಂಗದಲ್ಲಿಯೇ ಸಂಗಮವಾದವನು! ನೀನು ಪರಿಪೂರ್ಣವಾಗಿ ಅಂಗದಲ್ಲಿಯೇ ಸಂಗಮವಾಗಿರುವಿ. ಅಂಗದ ಮನೆಯ ಮೊನೆಯ ಮೇಲೆ ನಿನಗಾಗಿ ಕಾದು ಕುಂತವಳು ನಾನು! ಪರಮಾತ್ಮನೇ, ನಂಬುಗೆ ಮಾಡು ದೇವಾ ನನ್ನನ್ನು! ಆ ಆ ಆ ಕಪಿಲಸಿದ್ಧ ಮಲ್ಲಿಕಾರ್ಜುನನೆ! ಎಂದು ಹಾಡಿದ ಶರಣರ ಈ ಆಲಾಪ ಓದುಗನಿಗೆ ಅನ್ವಹಿಸಬೇಕು.

ಸಹಜವಾದ ದೇಹ! ಅದರ ಒಡೆಯ ಕೂಡಾ ಸಹಜವಾದಾತ! ಒಡಲೊಡೆಯನೊಂದಿಗೆ

ಕೂಡಬೇಕಾದ ಒಡಲ ಒಡತಿ ಕೂಡಾ ಸಹಜವಾದಾಕೆ! ಆದರೆ ಒಡಲೊಡೆಯನೊಂದಿಗೆ ಸಂಗ ಮಾಡಬೇಕಾದ ಒಡತಿ, ಒಡಲಿನೊಂದಿಗೆ ಸಂಗ ಮಾಡಿದ್ದಾಳೆ. ಒಡಲೇ ತನ್ನ ಸರ್ವಸ್ವ ಎಂದು ತಿಳಿದುಕೊಂಡು ಒಡಲೊಡೆಯನನ್ನೇ ಮರೆತಿದ್ದಾಳೆ! ಹೀಗಾಗಿ ಸಹಜವಾಗಿಯೇ ಜ್ಞಾನದ ಮರದಂತೆ ಇರಬೇಕಾದ ಬೋಧಿವೃಕ್ಷ, ಅಸಹಜ ಒಡಲಾಗಿ ಒಡಲುಗಳಿಂದಲೇ ಸಾತ್ವಿಕ ರಾಜಸ ತಾಮಸ ಎಂದು ಕರೆಯಿಸಿಕೊಂಡಿದೆ. ಒಡಲು, ಸಹಜ ಒಡಲಿನಿಂದ ಬಹುದೂರ ಪಯಣಿಸಿದೆ.

ಒಡಲೇ, ಒಡಲಿನಿಂದ ಕಲಿಯಬೇಕಾದ ದುರ್ದೈವ, ಒಡಲನ್ನು ಆವರಿಸಿದೆ. ಪ್ರಪಂಚದಲ್ಲಿರುವ ಏಳುನೂರಾ ಮೂವತ್ತು ಕೋಟಿ ಒಡಲುಗಳೆಲ್ಲ ಸಹಜ. ಮತ್ತು ಪರಿಪೂರ್ಣ ಒಡಲುಗಳೇ ಆಗಿವೆ. ಹೀಗಿದ್ದೂ ಒಡಲು ಒಡಲಿಗೆ ತಂದೆ ತಾಯಿಯಾಗಿ ಬೋಧಿಸುತ್ತಲಿದೆ! ಗುರುವಾಗಿ ಬೋಧಿಸುತ್ತಲಿದೆ!

ಒಡಲು ಪರಿಪೂರ್ಣ ಒಡಲಾಗಿದ್ದರೂ, ಒಡಲನ್ನೇ ಗುರುವನ್ನಾಗಿಸಿಕೊಂಡು, ಒಡಲಿಗೆ ಒಡಲೇ ಶಿಷ್ಯನಾಗಿ, ಬೋಧೆ ಆಲಿಸುತ್ತಲಿದೆ. ಆಲಿಸಿದ ಬೋಧೆಯೆಲ್ಲ ಅರಿವಿಗೆ ಬಂದರೂ ತನ್ನಲ್ಲಿಯೂ ಆ ಶಕ್ತಿ ಇದೆ ಎನ್ನುವ ನೆನಪು ಒಡಲಿಗೆ ಬಾರದ ಕಾರಣ, ಅಜ್ಞಾನದ ಸುಖ ಮತ್ತು ದುಃಖದಲ್ಲಿ ಕೂಡಲೇ ಒಡಲು ಮೈಮರೆಯುತ್ತದೆ.

ತನು ಮನ ಘನ ಎಂಬ ಎರಡಕ್ಷರಗಳ ಘನವನ್ನು ತನು, ಮನದಿಂದಲೇ ಅರಿಯಬೇಕು. ಎರಡಕ್ಷರದ ಮನ, ಎರಡಕ್ಷರದ ತನುವಿನಲ್ಲಿಯೇ ತನ್ಮಯವಾದ, ಎರಡಕ್ಷರದ ಘನವನ್ನು ಅರಿಯಬೇಕು. ಅರಿತರಿತು ಅರಿಯುವ ಅರಿವೇ ತಾನಾಗಬೇಕು. ಇದು ಆನಂದದ ಪರಮಾನಂದದ ಸಂಗ, ತ್ರಿಕೂಟ ಸಂಗಮದ ಸಂಗ.

ಮನ ತನುವಿನೊಂದಿಗೆ ಸಂಗ ಮಾಡಿ, ನಾದ ಬಿಂದು ಕಲೆಗೆ ಮರುಳಾಗಿದೆ. ವಿಜ್ಞಾನಿಯ ಪಟ್ಟ ಅಲಂಕರಿಸುವ ಪ್ರಯತ್ನದಲ್ಲಿ ಸಫಲವಾಗುತ್ತಿದೆಯೇ ಹೊರತು ಜ್ಞಾನಿಯಾಗುವ ಪ್ರಯತ್ನ ಮನಕ್ಕೆ ಎಳ್ಳನಿತೂ ಇಲ್ಲವಾಗಿದೆ.

ಪರಮಸುಖವನ್ನು ಮನ, ತನುವಿನಲ್ಲಿಯೇ ಹುಡುಕಿ ಪಡೆಯಬೇಕು. ತನುವನ್ನು ಭೇದಿಸಿಯೇ ಪಡೆಯಬೇಕು. ತನುವಿನಲ್ಲಿಯೇ ಅರಿವು ತನ್ಮಯವಾಗಿದೆ. ತನುವಿನಿಂದಲೇ ನಾದ ಹೊರಬಂದಿದೆ. ತನುವಿನಿಂದಲೇ ಸಕಲ ಕಲೆಗಳು ಹೊರಬಂದಿವೆ. ತನುವಿನಿಂದಲೇ ಬಿಂದು ಹೊರಬಂದಿದೆ.

ತನುವಿಗೆ ತನುವಿನಿಂದಲೇ ಸುಖವಾಗಿದೆ. ತನುವಿಗೆ ತನುವಿನಿಂದಲೇ ದುಃಖವಾಗಿದೆ. ಸುಖದುಃಖಗಳೆರಡೂ ದುಃಖಗಳೇ ಎಂದು ಮನಕ್ಕೆ ಗೊತ್ತಾಗುತ್ತಿಲ್ಲ. ಮನ ತನುವಿನಲ್ಲಿಯೇ ತನುವನ್ನು ಭೇದಿಸಿ ಪರಮಸುಖವನ್ನು ಹುಡುಕಬೇಕು.

ಇದು ತನು ತನುವಿಗೆ ಹೇಳುವ ಬೋಧೆಯಲ್ಲ. ಮನ ತನುವಿನಲ್ಲಿಯೇ ಶೋಧನೆ ಮಾಡುವ ಕಲೆಯ ಚಾಕಚಕ್ಯತೆಯನ್ನು ಅರಿಯಬೇಕು. ಮನ ತನುವಿನಲ್ಲಿ ತನ್ಮಯವಾದ ಅರಿವನ್ನು ಭೇದ ಮಾಡಿ ಬಹುದೂರ ಪಯಣಿಸಿದೆ.

ದಣಿಯದೆ ಪಯಣಿಸುತ್ತಲೇ ಇದೆ. ಭೇದ ಬುದ್ಧಿಯ ಮನ ತನುವಿನಲ್ಲಿಯೇ ಭೇದಿಸಿ ಘನವನ್ನು ಹುಡುಕಬೇಕು. ಆ ಘನದಲ್ಲಿ ಸಂಗಮವಾಗಿ ಘನಮನವಾಗಬೇಕು. ಭೇದ ಭೇದಿಗೆ ಅಲ್ಲದೆ ವೇದ್ಯವಲ್ಲ.

ರಕ್ಷಣೆ ಮಾಡುವವನನ್ನು ವಿಷ್ಣು ಎಂದು ಕರೆಯುವರು. ಸೃಷ್ಟಿಕರ್ತನನ್ನು ಬ್ರಹ್ಮ ಎಂದು

ಕರೆಯುವರು. ಇವರಿಬ್ಬರು ಸಾರಗ್ರಾಹಿಗಳು. ಇವರಿಗೆ ಗೊತ್ತಿಲ್ಲದೇ ಇರುವುದು ಏನೂ ಇಲ್ಲ.

ತನುವನ್ನು ವಿಷ್ಣು ಎಂದು ಕರೆದರೆ ಮನವನ್ನು ಬ್ರಹ್ಮ ಎಂದು ಕರೆಯುವರು. ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ಮಹೇಶ್ವರ ಎಂದು ಕರೆಯುವರು.

ತನುವನ್ನು ಆವರಿಸಿದ ಮನಕ್ಕೆ ತಾನು ಬ್ರಹ್ಮ ಎನ್ನುವ ಪರಿಚಯವಿಲ್ಲ. ತನುವಿಗೆ ತಾನು ವಿಷ್ಣು ಜಗದ್ ರಕ್ಷಕ ಎನ್ನುವ ಪರಿಚಯವಿಲ್ಲ. ತನುವಿನಲ್ಲಿ ಮಹೇಶ್ವರ ತನ್ಮಯವಾಗಿದ್ದರೂ, ಮಹೇಶ್ವರನ ಪರಿಚಯ ಮನಕ್ಕೂ ಇಲ್ಲ; ತನುವಿಗೂ ಇಲ್ಲ.

ಮಹೇಶ್ವರ ಎನ್ನುವ ಮಹಾಜ್ಞಾನಿ ತನುವಿನಲ್ಲಿಯೇ ತನ್ಮಯವಾಗಿದ್ದರೂ ಆತ ತನುವಿನ ಬಳಿ ಬಳಿಯಿದ್ದರೂ ತನುವಿಗೆ ಆತನ ಪರಿಚಯವಿಲ್ಲ. ಆದರೂ ತನು ವಿಷ್ಣು! ವಿಷ್ಣು ಎಂಬುವವನು ಯಾರೆಂದು ಜಗದಲ್ಲಿರುವ ತನುಗಳಿಗೂ ಪರಿಚಯವಿಲ್ಲ. ಆದರೂ ವಿಷ್ಣುವನ್ನು ಇಡೀ ಜಗತ್ತು ಆರಾಧಿಸುತ್ತಲಿದೆ.

ಮಾಹೇಶ್ವರ ಬಹುದೂರ ಇಲ್ಲ. ಈತನ ದರುಶನ ತನುವಿಗೆ ಆಗದಿದ್ದರೆ ಹೇಗೆ? ತನುವನ್ನು ಆವರಿಸಿದ ಮನಕ್ಕೆ ಆಗದಿದ್ದರೆ ಹೇಗೆ? ಇದು ತನು ಮತ್ತು ಮನದ ದುರ್ದೈವ. ಬಳಿಬಳಿಯಲ್ಲಿಯೇ ಇದ್ದ ಮಾಹೇಶ್ವರನ ದರುಶನ ವಿಷ್ಣುವಿಗೂ ಆಗುತ್ತಿಲ್ಲ; ಬ್ರಹ್ಮನಿಗೂ ಆಗುತ್ತಿಲ್ಲ.

ಮಹಾಮಹಿಮರಿಬ್ಬರೂ ಈಶ್ವರನನ್ನು ಬ್ರಹ್ಮಾಂಡದಲ್ಲಿ, ಪಾತಾಳದಲ್ಲಿ ಹುಡುಕಿದರು. ಅವರಿಗೆ ಈಶ್ವರನ ದರುಶನವಾಗಲಿಲ್ಲ. ಹುಡುಕುವ ಕಾಯದಲ್ಲಿಯೇ ಆತನಿದ್ದಾನೆಂದು ಕಾಯದ ಅವತಾರ ತಾಳಿದ ವಿಷ್ಣುವಿಗೆ ಗೊತ್ತಾಗಲಿಲ್ಲ. ಮನದ ಅವತಾರ ತಾಳಿದ ಬ್ರಹ್ಮನಿಗೂ ಗೊತ್ತಾಗಲಿಲ್ಲ. ಬಳಿಬಳಿಯೇ ಇದ್ದ ಕಾಯ ಮತ್ತು ಮನಗಳೆರಡೂ ಸೇರಿ ಈಶ್ವರನಿಗಾಗಿ ಮಸೀದೆಗೆ ಹೋಗಿ ಐದುಬಾರಿ ನಮಾಜು ಮಾಡುತ್ತಲಿವೆ. ಚರ್ಚ್‌ಗೆ ಹೋಗಿ ಪ್ರಾರ್ಥಿಸುತ್ತಲಿವೆ. ಕಾಶಿ, ಶ್ರೀಶೈಲ, ತಿರುಪತಿ, ಜ್ಯೋತಿರ್ಲಿಂಗಗಳ ದರುಶನ ಮಾಡುತ್ತಾ ಪ್ರಾರ್ಥಿಸುತ್ತಲಿವೆ. ಇದು ಕಾಯದ ದುರ್ದೈವದ ಸಂಗತಿ.

ಗುರುದೇವನ ಕಾಯವಾದರೇನು? ಶಿಷ್ಯನ ಕಾಯವಾದರೇನು? ಕಾಯ ಕಾಯವೇ ಹೊರತು ಅನ್ಯವಲ್ಲ. ಗುರುದೇವ, ಶಿಷ್ಯನ ಕಾಯದಲ್ಲಿದ್ದ ಅರಿವಿನ ಸಂಪತ್ತನ್ನು ಶಿಷ್ಯನಿಗೆ ಪರಿಚಯ ಮಾಡಿಕೊಡುತ್ತಾನೆ. ಅದರಲ್ಲಿದ್ದ ಅರಿವನ್ನು ಬಳಕೆ ಮಾಡುವ ವಿಧಾನವನ್ನು ಆತನಿಗೆ ಹೇಳಿಕೊಡುತ್ತಾನೆ. ಗುರುದೇವ ಹೇಳಿದ ಸೂತ್ರವನ್ನು ಶಿಷ್ಯ ಮನದ ಮೂಲಕ ತನ್ನ ತನುವಿನಲ್ಲಿಯೇ ತನ್ಮಯವಾದ ಅರಿವನ್ನು ಬಳಕೆ ಮಾಡಬೇಕು. ಬದಲಾಗಿ ಗುರುದೇವ ಹೇಳಿದ್ದನ್ನೆಲ್ಲ ಮರೆತು ಗುರುದೇವನನ್ನೇ ಕೊಂಡಾಡಿದರೆ, ಆತನನ್ನೆ ಅರ್ಚಿಸಿ, ಪೂಜಿಸಿ, ಪ್ರಾರ್ಥಿಸಿ ಆತನ ಮೇಲೆ ಮೋಹಗೊಂಡರೆ ಗುರುದೇವನಾದರೂ ಏನು ಮಾಡಿಯಾನು? ಗುರುದೇವ ಸತ್ತ ಮೇಲೆ ಶಿಷ್ಯ ಗುರುವಿನ ಆಶ್ರಮಕ್ಕೆ ವಾರಸುದಾರ ಆಗುತ್ತಾನೆಯೆ ಹೊರತು, ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಮನವೆಂಬ ಶಿಷ್ಯ ವಾರಸುದಾರ ಆಗುವುದಿಲ್ಲ!

ಸಕಲ ತನುಗಳಲ್ಲಿಯೂ ಅರಿವು ತನ್ಮಯವಾಗಿದ್ದಾಗ ತನುವಿನಲ್ಲಿ ತನ್ಮಯವಾದ ಅರಿವಿನ ಸಂಪತ್ತನ್ನೇ ಮನ ಪಡೆದು ಘನಮನವಾಗಬೇಕು. ಸ್ವತಃ ಗುರುವಾಗಬೇಕು.

ಗುರು ಶಿಷ್ಯರಿಬ್ಬರೂ ಗುರುವಿನ ಪೂರ್ವಾಶ್ರಮವನ್ನು ಗುರುವೇ ಕಳೆದುಕೊಳ್ಳಬೇಕು. ಶಿಷ್ಯನ ಪೂರ್ವಾಶ್ರಮವನ್ನು ಶಿಷ್ಯನೇ ಕಳೆದುಕೊಳ್ಳಬೇಕು.

ಗುರು ಕಾಯ ಉಳ್ಳವನಲ್ಲ, ಕಾಯದಲ್ಲಿದ್ದವನು. ಶಿಷ್ಯ ಕೂಡಾ ಕಾಯ ಉಳ್ಳವನಲ್ಲ,

ಕಾಯದಲ್ಲಿದ್ದವನು. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಶರಣು ಹೋಗಿ ಶರಣಾಗತನಾಗಿ ಆ ಗುರುದೇವನೆ ತಾನಾಗಬೇಕು.

ಗುರುದೇವನದು ಒಂದು ವೇಷವಲ್ಲ. ಶಿಷ್ಯನದು ಕೂಡಾ ಒಂದು ವೇಷವಲ್ಲ. ಒಂದು ಕಾಯದಲ್ಲಿ ಗುರುದೇವನು ಇದ್ದಾನೆ, ಶಿಷ್ಯನೂ ಇದ್ದಾನೆ. ಇದು ಮನದ ಅನುಭವಕ್ಕೆ ಬಂದಾಗಲೇ ಮನ ತನಗೆ ತಾನೇ ಕಪಿಲಸಿದ್ಧ ಮಲ್ಲಿಕಾರ್ಜುನನೆ ಆಗುತ್ತದೆ.

ಸೂರ್ಯ ಇಡೀ ಭೂಮಂಡಲದಲ್ಲಿ ಕತ್ತಲನ್ನು ಸೃಷ್ಟಿ ಮಾಡಿದ. ತಾನು ಸೃಷ್ಟಿ ಮಾಡಿದ ಕತ್ತಲನ್ನು ಪುನಃ ತಾನೇ ಬೆಳಗಿ ತನ್ನಂತೆ ಮಾಡಿಕೊಂಡ. ಇದು ಪ್ರಭಾಕರನ ವಿಚಿತ್ರವಾದ ಗುಣ.

ಕಾಯದಲ್ಲಿ ಸಂಗಮವಾದ ಮಹಾಜ್ಞಾನಿ ಜ್ಞಾನದೇವನ ಪರಿಯೂ ಕೂಡಾ ಹೀಗೆ ಇದೆ. ಕಾಯವನ್ನು ಜ್ಞಾನದಿಂದ ಬೆಳಗುವವನು ಅವನೆ. ಅಂತಹ ಕಾಯದಲ್ಲಿ ಮನವನ್ನು ಸೃಷ್ಟಿ ಮಾಡಿ ಅಜ್ಞಾನದ ಕತ್ತಲನ್ನಾಗಿಸುವವನು ಅವನೆ. ಕಾಯದ ಅಜ್ಞಾನದ ಸೃಷ್ಟಿಗೆ ತಾನೇ ಕಾರಣ. ಕಾಯದಲ್ಲಿಯ ಅಜ್ಞಾನವನ್ನು ನುಂಗಿ ಬೆಳಗಿಂಗೆ ಬೆಳಗಾಗಿಸಿ ಕಾಯವನ್ನು ಕೈಲಾಸವನ್ನಾಗಿಸುವವನು ಅವನೆ.

ಜ್ಞಾನಿಗಳು ದೇವರನ್ನು ಪೂಜಿಸುವುದಿಲ್ಲ ಅವರು ಆರಾಧಿಸುವ ದೇವರು ಯಾರಿಗೂ ಕಾಣುವುದಿಲ್ಲ. ಅವರಿಗೆ ಮಾತ್ರ ಕಾಣುತ್ತಾನೆ. ಜ್ಞಾನಿಗಳು ಆರಾಧಿಸುವ ದೇವರು ಲೋಕದಿಂದ ನಿರ್ಮಾಣವಾದ ದೇವರುಗಳಲ್ಲ, ಲೋಕವನ್ನು ನಿರ್ಮಾಣ ಮಾಡಿದ ಅರಿವಿನ ದೇವರು. ಆತ ಪ್ರತಿ ದೇಹದಲ್ಲಿಯೂ ಇದ್ದಾನೆ. ದೇಹವನ್ನು ಆವರಿಸಿದ ಮನದಿಂದಲೇ ಆ ಅರಿವಿನ ದೇವರನ್ನು ಕಂಡುಕೊಳ್ಳಬೇಕು. ಇದನ್ನು ಓದುಗ ನಿರ್ಧರಿಸಲೇಬೇಕು.

**- ಬಸವರಾಜ ಸ್ವಾಮಿ**<br>
ಸಂಪಾದಕ<br>
ಸುದ್ದಿಮೂಲ ಕನ್ನಡ ದಿನಪತ್ರಿಕೆ,<br>
ರಾಯಚೂರು

**ಗುರುವೆ ಎನ್ನ ತನುವಿಂಗೆ ಲಿಂಗದೀಕ್ಷೆಯ ಮಾಡಿ**
**ಎನ್ನ ಜ್ಞಾನಕ್ಕೆ ಸ್ವಾನುಭಾವದೀಕ್ಷೆಯ ಮಾಡಿ**
**ಎನ್ನ ತನು ಮನ ಧನದಲ್ಲಿ ವಂಚನೆಯಿಲ್ಲದೆ**
**ಮಾಡಲೆಂದು ಜಂಗಮದೀಕ್ಷೆಯ ಮಾಡಿ ಎನ್ನ ಸರ್ವಾಂಗವು**
**ನಿನ್ನ ವಿಶ್ರಾಮಸ್ಥಾನ ಶುದ್ಧ ಮಂಟಪವಾದ ಕಾರಣ, ಲೋಕ ವ್ಯಾಪ್ತಿಯನು**
**ಅರಿದೆ ಲೋಕ ಎನ್ನೊಳಗಾಯಿತ್ತು, ಆ ಲೋಕಕ್ಕೆ ಹೊರಗಾದೆ.**
**ಅದೇನು ಕಾರಣ? ಜನನ ಮರಣ ಪ್ರಳಯಕ್ಕೆ ಹೊರಗಾದೆನಾಗಿ.**
**ಗುರುವೆ ಸದ್ಗುರುವೆ ಎನ್ನ ಭವದ ಬೇರ ಹರಿದೆ ಗುರುವೆ,**
**ಭವಪಾಶವಿಮೋಚನನೆ, ಅನ್ವಯ ಮನದ ಸರ್ವಾಂಗಲೋಲುಪ್ತ,**
**ಭುಕ್ತಿಮುಕ್ತಿ ಫಲಪ್ರದಾಯಕ ಗುರುವೆ ಬಸವಣ್ಣ,**
**ಕಪಿಲಸಿದ್ಧ ಮಲ್ಲಿಕಾರ್ಜುನ ಚೆನ್ನಬಸವಣ್ಣನಾಗಿ,**
**ಪ್ರಭು ಮೊದಲಾಗಿ ಅಸಂಖ್ಯಾತರನೆಲ್ಲರನು ತೋರಿದ ಗುರುವೆ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಬಯಕೆಯೇ ಹಾಗೆ. ತನಗೆ ಇಷ್ಟ ಬಂದಷ್ಟು ಕಾಲದವರೆಗೆ ತನುವಿಗೆ, ತನುವನ್ನು ಆವರಿಸಿದ ಮನಕ್ಕೆ, ತನ್ನ ಪರಿಚಯವನ್ನು ಮಾಡಗೊಡುವುದಿಲ್ಲ. ತನುವಿನಲ್ಲಿಯೇ ಗುರುದೇವ ತನ್ಮಯವಾಗಿದ್ದರೂ, ತೋರುವ ಈ ತನುವೇ ಗುರುವೆಂದು, ತನುವನ್ನು ಆವರಿಸಿದ ಮನ, ತನುವಿಗೆ ಗುರುದೇವನ ವೇಷ ಹಾಕುತ್ತದೆ.

ಒಂದು ತನುವಿಗೆ ಗುರುವಿನ ವೇಷ, ಮತ್ತೊಂದು ತನುವಿಗೆ ಶಿಷ್ಯನ ವೇಷ. ಒಂದು ತನುವಿಗೆ ರಾಜಕಾರಣಿಯ ವೇಷ, ಮತ್ತೊಂದು ತನುವಿಗೆ ಅಧಿಕಾರಿ ಕಾರಕೂನನ ವೇಷ. ಹೀಗೆ ತನುಗಳಿಗೆ ಭ್ರಷ್ಟ ಲಂಚಕೋರ ಕಳ್ಳ ಹಾದರಿಗ ವೇಶ್ಯೆ ವಿಟ ಭಿಕ್ಷುಕ ಶ್ರೀಮಂತ ಬಡವ ಭಿಕಾರಿ, ಹಿಂದು ಮುಸಲ್ಮಾನ ಕ್ರೈಸ್ತನ ವೇಷ ಧರಿಸಿ, ಮನ ತನ್ನ ಸಂತೋಷ ಮತ್ತು ದುಃಖಗಳನ್ನು ಅನುಭವಿಸುತ್ತಾ ತನುವಿನ ಆಯುಷ್ಯವನ್ನು ಮುಗಿಸುತ್ತದೆ.

ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವ ಮನದ ಈ ಕ್ರಿಯೆಗಳನ್ನು ನೋಡುತ್ತಾ ಅರಿವಿನ ಪಾಠ ಮಾಡುತ್ತಾ ತನು ಮತ್ತು ಮನಗಳ ಅವಧಿಯನ್ನು ಪೂರೈಸುತ್ತಾನೆ.

ತನು ಮತ್ತು ಮನದ ಜನನ ಮರಣಗಳ ಭವಬಾಧೆಯನ್ನು ಕಳೆಯಲೇಬೇಕೆಂಬ ಇಚ್ಛೆ ಗುರುದೇವನಿಗೆ ಆಗುವುದೊಂದೇ ತಡ, ಭವಬಾಧೆಯ ಬೇರನು ಅರೆದು ಕಿತ್ತೆಸೆಯಲು, ತನುವಿನ ಭವಪಾಶ ವಿಮೋಚನೆಗಾಗಿ, ಸರ್ವಾಂಗವನ್ನು ಗುತ್ತಿಗೆ ಹಿಡಿದು, ವಿಷಯ ಲೋಲುಪ್ತವಾದ ಮನದ ಮುಕ್ತಿಗಾಗಿ ಫಲಪ್ರದಾಯಕ ಗುರು ಬಸವಣ್ಣನನ್ನು ತೋರಿದೆ; ಚೆನ್ನಬಸವಣ್ಣನನ್ನು ತೋರಿದೆ; ಪ್ರಭು ಮೊದಲಾದ ಅಸಂಖ್ಯಾತ ಶರಣರನು ತೋರಿದೆ ಗುರುವೇ. ಸದ್ಗುರುವೆ, ಎನ್ನ ಭವದ ಬೇರ ಹರಿದ ಗುರುವೆ, ಭವಪಾಶ ವಿಮೋಚನನೆ ಎಂದು ಸಿದ್ಧರಾಮ ಶಿವಯೋಗಿ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಹೆಸರಿಟ್ಟು ಆತನೊಂದಿಗೆ ಮಾತನಾಡಿದ್ದಾರೆ. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಬಯಕೆಯಾದರೆ, ತಾನು ಇದ್ದ ತನುವಿಗೆ ತಾನೇ ಲಿಂಗ ದೀಕ್ಷೆ ಮಾಡುತ್ತಾನೆ. ತನುವಿನಲ್ಲಿದ್ದ ಜ್ಞಾನಕ್ಕೆ ಸ್ವಾನುಭವ ದೀಕ್ಷೆ

ಮಾಡುತ್ತಾನೆ. ತನು ಮನ ಧನ(ಜ್ಞಾನ)ದಲ್ಲಿ ವಂಚನೆಯನ್ನು ಕಳೆಯಲೆಂದು ಜಂಗಮ ದೀಕ್ಷೆಯನ್ನು ಮಾಡುತ್ತಾನೆ. ಆಗ ಸರ್ವಾಂಗವು ಗುರುದೇವನು ವಾಸ ಮಾಡಿದ ವಿಶ್ರಾಮ ಸ್ಥಾನವಾಗುತ್ತದೆ. ಸ್ವಾನುಭಾವವುಳ್ಳ ಕಲ್ಯಾಣ ಮಂಟಪವಾಗುತ್ತದೆ. ಲೋಕ ವ್ಯಾಪ್ತಿಯನು ಅರಿಯದೆ, ಇಡೀ ಲೋಕಾನು ಲೋಕವೇ ತನುವಿನೊಳಗೆ ಆಗುತ್ತದೆ. ಆ ಲೋಕಕ್ಕೆ ತನು ಹೊರಗಾಗುತ್ತದೆ. ಏಕೆಂದರೆ ಜನನಮರಣಗಳ ಬಾಧೆ ಲೋಕಕ್ಕೆ ಇದೆ. ಅರಿವೆಂಬ ಗುರುದೇವನಿಗೆ ಇಲ್ಲ. ಆತನಲ್ಲಿ ಸಂಗಮವಾದ ಮನಕ್ಕೂ ಇಲ್ಲ.

ಶಿದ್ಧರಾಮಶಿವಯೋಗಿಗಳ ವಚನರೂಪದ ಮಹಾಸೂತ್ರವನ್ನು ಆಸಕ್ತಿಯಿಂದ ಓದಿದ ಓದುಗರು, ಮನವನ್ನು ಅರಿವೆಂಬ ಗುರುದೇವನ ಸುತ್ತ ಅಲೆದಾಡಲು ಹಚ್ಚಿದರೆ ಇಂದಿಲ್ಲ ನಾಳೆ ತನುವಿನಲ್ಲಿಯೇ ತನ್ಮಯವಾದ ಗುರುದೇವನಿಗೆ, ತಾನೇ ವಾಸ ಮಾಡಿದ ತನು ಮತ್ತು ಮನದ ಮೇಲೆ ಬಯಕೆ ಆದರೂ ಆಗಬಹುದು!

ಮನ, ತನುವನ್ನು ಹಿಡಿದು ಉಪಜೀವನಕ್ಕಾಗಿ, ವಿಷಯ ಸುಖಕ್ಕಾಗಿ ಅದರ ಆಯುಷ್ಯ ಕಳೆಯತ್ತದೆಯೇ ಹೊರತು, ಗುರುದೇವನ ಸಾಕ್ಷಾತ್ಕಾರಕ್ಕಾಗಿ ತನುವಿನ ಆಯುಷ್ಯವನ್ನು ಮೀಸಲು ಇಡುವುದಿಲ್ಲ. ಇದು ತನು ಮತ್ತು ಮನದ ದುರ್ದೈವವೇ ಆಗಿದೆ.

ಸಿದ್ಧರಾಮ ಶಿವಯೋಗಿಗಳಿಗೆ ಪ್ರಭುದೇವರ ದರುಶನವಾಯಿತು. ಬಸವಣ್ಣ ಚೆನ್ನಬಸವಣ್ಣನ ದರುಶನವಾಯಿತು.

ಆ ಮಹಾಂತರು ಸಿದ್ಧರಾಮ ಶಿವಯೋಗಿಗಳಿಗೆ ತನುವಿನಲ್ಲಿಯೇ ಇದ್ದ ಗುರುದೇವನ ದರುಶನ ಮಾಡಿಸಿದರು.

ಸಿದ್ಧರಾಮ ಶಿವಯೋಗಿಗಳ ತನುವಿನಲ್ಲಿ ತನ್ಮಯವಾದ ಗುರುದೇವನೇ ಪ್ರಭುದೇವರನ್ನು ತನ್ನ ಹತ್ತಿರ ಬರ ಮಾಡಿಕೊಂಡ.

ಚೆನ್ನಬಸವಣ್ಣ ಮತ್ತು ಬಸವಣ್ಣನ ದರುಶನವನ್ನು ತಾನಿದ್ದ ತನು ಮನಕ್ಕೆ ಮಾಡಿಸಿದ. ಇದು ಶಿದ್ಧರಾಮ ಶಿವಯೋಗಿಗಳ ಅದೃಷ್ಟ. ಹಾಗೆಯೇ

ತನುವನ್ನು ಆವರಿಸಿಕೊಂಡ ಮನ ತನುವನ್ನು ತನಗೆ ಬೇಕಾದ ವಿಷಯಾದಿಗಳತ್ತ ಕರೆದುಕೊಂಡು ಹೋಗುವ ಬದಲು, ಶರಣರ ಸತ್ಸಂಗದತ್ತ ಕರೆದುಕೊಂಡು ಹೋಗಿ, ಶರಣರ ದರುಶನ ಮಾಡಿಕೊಂಡರೆ, ಗುರುದೇವನಿಗೆ ತಾನು ವಾಸ ಮಾಡಿದ ತನು ಮತ್ತು ಮನದ ಮೇಲೆ ಇಚ್ಛೆಯಾದರೂ ಆಗಬಹುದು. ಪ್ರತಿ ಮನ ಮತ್ತು ತನು ಈ ಕಾಯಕವನ್ನು ನಿರ್ಧರಿಸಲೇಬೇಕು.

**502**

**ಗುರುವೆ, ನಿಗಮಕ್ಕಭೇದ್ಯನೆ, ಅಕ್ಷರ ಮೂರರ ರೂಪನೆ,**
**ಅಕ್ಷರ ಎರಡರ ನಿತ್ಯನೆ, ಅಕ್ಷರ ನಾಲ್ಕಕ್ಕೆ ಸಿಕ್ಕದನೆ,**
**ಅಕ್ಷರ ಐದಕ್ಕಿಂದತ್ತಲಾದವನೆ, ಅಕ್ಷರ ಏಳ ಮೀರಿದವನೆ,**
**ಅಕ್ಷರವಾರ ನೀ ಜರಿದವನೆ, ಅಕ್ಷರವಾರರ ರೂಪನೆ,**
**ಆರರಕ್ಷರಕ್ಕೆ ಅನಾಮಯನೆ, ಅಕ್ಷರವೆಂಟರ ರೂಪನೆ,**
**ಹದಿನಾರಕ್ಷರಕ್ಕೆ ಸಂಪೂರ್ಣನೆ, ಇವು ಮೊದಲಾದ ಅಕ್ಷರ ಹಲವನು**
**ಏಕವ ಮಾಡಿ ತೋರಬಲ್ಲ ರೂಪನೆ, ಆನಂದಮಯನೆ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ತೋರಿದ ಪರುಮಗುರುವೆ.**

ಗುರುದೇವನನ್ನು ಅಕ್ಷರಗಳಿಂದ ಗುರುತಿಸಲು ಸಾಧ್ಯವಿಲ್ಲ. ಅಕ್ಷರಗಳ ಮೂಲಕ ಹಾಡಿ ಹೊಗುಳುವುದೂ ಸಾಧ್ಯವಿಲ್ಲ. ಆತ ಅಕ್ಷರೋತ್ತಮ. ಅಕ್ಷರೋತ್ತಮನನ್ನು ಅಕ್ಷರಗಳ ಮೂಲಕ ಸ್ತುತಿಸಲು ಸಾಧ್ಯವೆ?

ಅಕ್ಷರಗಳಿಗೆ ಜನ್ಮಕೊಟ್ಟವನನ್ನು ಅಕ್ಷರಗಳ ಮೂಲಕ ತಿಳಿಯಬಹುದೆ? ಆತ ನಿಗಮಕ್ಕೆ ಅಭೇದ್ಯನು.

ಅಂಗದಲ್ಲಿಯೇ ಹುಟ್ಟಿದ ಅಕ್ಷರಗಳ ಬಗ್ಗೆ ಅಲ್ಲಮಪ್ರಭುಗಳು ಹೇಳುತ್ತಾ ಆ ಎಲ್ಲ ಅಕ್ಷರಗಳನ್ನು ಏಕೀಕರಿಸಿ ತಾನೇ ಓಂಕಾರ ಸ್ವರೂಪವಾದುದನ್ನು ವಿವರಿಸುತ್ತಾರೆ.

ಗುದಸ್ಥಾನದಲ್ಲಿ ಆಧಾರಚಕ್ರ, ಪೃಥ್ವಿಯೆಂಬ ಮಹಾಭೂತ, ಚತುಃ ಕೋಣೆ ಚೌದಳ ಪದ್ಮ, ಅಲ್ಲಿ ಇಹ ಅಕ್ಷರ ನಾಲ್ಕು ವ, ಶ, ಷ, ಸ, ಅದರ ವರ್ಣ ಸುವರ್ಣ, ಅದಕ್ಕೆ ಅಧಿದೇವತೆ ದಾಕ್ಷಾಯಣಿ.

ಲಿಂಗಸ್ಥಾನದಲ್ಲಿ ಸ್ವಾಧಿಷ್ಠಾನ ಚಕ್ರ, ಅಪ್ಪುವೆಂಬ ಮಹಾಭೂತ, ಧನುರ್ಗತಿ, ಷಡುದಳ ಪದ್ಮ, ಅಲ್ಲಿ ಇಹ ಅಕ್ಷರವಾರು ಬ, ಭ, ಮ, ಯ, ರ, ಲ, ಅದರ ವರ್ಣ ಪಚ್ಚೆಯ ವರ್ಣ, ಅದಕ್ಕೆ ಅಧಿದೇವತೆ ಬ್ರಹ್ಮನು.

ನಾಭಿಸ್ಥಾನದಲ್ಲಿ ಮಣಿಪೂರಕವೆಂಬ ಚಕ್ರ , ತೇಜವೆಂಬ ಮಹಾಭೂತ, ತ್ರಿಕೋಣೆ, ದಶದಳ ಪದ್ಮ ಅಲ್ಲಿ ಇಹ ಅಕ್ಷರ ಹತ್ತು ಡ, ಢ, ಣ, ತ, ಥ, ದ, ಧ, ನ, ಪ, ಫ, ಅದರ ವರ್ಣ ಕೃಷ್ಣ ವರ್ಣ, ಅದಕ್ಕೆ ಅಧಿದೇವತೆ ವಿಷ್ಣು.

ಹೃದಯ ಸ್ಥಾನದಲ್ಲಿ ಅನಾಹತ ಚಕ್ರ, ವಾಯುವೆಂಬ ಮಹಾಭೂತ, ಷಟ್ಕೋಣೆ, ದ್ವಾದಶದಳ ಪದ್ಮ, ಅಲ್ಲಿ ಇಹ ಅಕ್ಷರ ಹನ್ನೆರಡು ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಅದರ ವರ್ಣ ಕುಂಕುಮ ವರ್ಣ, ಅದಕ್ಕೆ ಅಧಿದೇವತೆ ಮಹೇಶ್ವರನು.

ಕಂಠಸ್ಥಾನದಲ್ಲಿ ವಿಶುದ್ಧಿ ಚಕ್ರ, ಆಕಾಶವೆಂಬ ಮಹಾಭೂತ, ವರ್ತುಲಾಕಾರ, ಷೋಡಶದಳ ಪದ್ಮ, ಅಲ್ಲಿ ಇಹ ಅಕ್ಷರ ಹದಿನಾರು ಅ, ಆ, ಇ, ಈ, ಉ, ಊ, ಋ, ೠ, ಏ, ಐ, ಓ, ಔ, ಅಂ, ಅಃ, ಅದರ ವರ್ಣ ಶ್ವೇತವರ್ಣ, ಅದಕ್ಕೆ ಅಧಿದೇವತೆ ಸದಾಶಿವನು.

ಭ್ರೂಮಧ್ಯಸ್ಥಾನದಲ್ಲಿ ಆಜ್ಞಾಚಕ್ರ, ಮನವೆಂಬ ಮಹಾಭೂತ, ತಮಂಧಕಾರ, ದ್ವಿದಳ ಪದ್ಮ, ಅಲ್ಲಿ ಇಹ ಅಕ್ಷರವೆರಡು ಹಂ, ಕ್ಷಂ, ಅದರ ವರ್ಣ ಮಾಣಿಕ್ಯವರ್ಣ, ಅದಕ್ಕೆ ಅಧಿದೇವತೆ ಶ್ರೀಗುರು.

ಉನ್ಮನಿ ಜ್ಯೋತಿ ಬ್ರಹ್ಮ ರಂಧ್ರದ ಮೇಲೆ ಸಹಸ್ರದಳ ಪದ್ಮ, ಅಲ್ಲಿ ಅಮೃತವಿಹುದು, ಅಲ್ಲಿ 'ಓಂ' ಕಾರಸ್ವರೂಪವಾಗಿ ಗುಹೇಶ್ವರಲಿಂಗವು ಸದಾ ಸನ್ನಿಹಿತವು.

ಕೃಷಿ ಮಾಡಿ ಕಂಡು ಉಂಡ ಶರಣರ ಮಾತು ಅಕ್ಷರಗಳ ಮೂಲಕ ಅರಿಯಲು ಸಾಧ್ಯವಾಗುವುದಿಲ್ಲ. ಕಂಡು ಉಂಡವರನ್ನು ಹುಡುಕಿ ಅವರಿಂದ ಕಂಡುಕೊಳ್ಳುವ ಚತುರತನ ತನುವಿಗೆ ಬಂದಾಗಲೇ, ತನುವಿನಲ್ಲಿಯೇ ತನ್ಮಯವಾದ ಅಕ್ಷರೋತ್ತಮ ತನುವಿಗೆ ಗೋಚರಿಸುತ್ತಾನೆ.

**503**

**ಗುರು ಶಿಷ್ಯಾನಂದವ ಮನಸಿಗೆ ಬಂದಂತೆ**
**ಹೇಳುವೆನು ಎಲೆ ಅವ್ವಾ.**
**ಬಾಲನ ಮಾತೀಗ ಮಾತೆಪಿತರಿಗೆ ಪ್ರೀತಿಯಪ್ಪಂತೆ**
**ಎನ್ನ ಮಾತ ಆಲಿಸುವವರು ಶಿವಭಕ್ತರು,**
**ಎನ್ನ ಮಾತಾ ಪಿತರು ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಾಲನ ಮಾತು ಬಾಲನನ್ನು ಹಡೆದ ಮಾತಾಪಿತರಿಗೆ ಮಾತ್ರ ಆನಂದವನ್ನುಂಟು ಮಾಡುತ್ತದೆ. ಹಾಗೆಯೇ ಜ್ಞಾನಿಯ ಮಾತು ಜ್ಞಾನಕ್ಕೆ ಮರುಳಾದ ಜ್ಞಾನಾಸಾಕ್ತರಿಗೆ ಮಾತ್ರ ಹಿಡಿಸುತ್ತದೆ. ಅನ್ಯರಿಗೆ ಹಿಡಿಸುವುದಿಲ್ಲ. ಜ್ಞಾನಿಯ ಮಾತು ಇತರರಿಗೆ ತಿಳಿಯುವುದು ಕೂಡಾ ಕಷ್ಟವೇ.

ಜ್ಞಾನಿಗಳೆಂದರೆ ಶಿವಭಕ್ತರು. ಶಿವ ಎಂದರೆ ಜ್ಞಾನ. ಆ ಜ್ಞಾನಕ್ಕೆ ಮರುಳಾದವರು. ಆ ಜ್ಞಾನಕ್ಕೆ ಭಕ್ತಿ ಮಾಡುವವರು ಶಿವಭಕ್ತರು. ಶಿವಭಕ್ತನ ಮಾತು ಶಿವಭಕ್ತರಿಗೆ ಮಾತ್ರ ಹಿಡಿಸುತ್ತದೆ. ಜ್ಞಾನಿಯ ಮಾತಾಪಿತರೆಂದರೆ ಶಿವಭಕ್ತರು.

ಗುರುದೇವನ ಮತ್ತು ಶಿಷ್ಯನ ಆನಂದವನ್ನು ಮನಸ್ಸಿಗೆ ಬಂದಂತೆ ಹೇಳುವೆನು ಎಲೆ ಅವ್ವಾ:

ಗುರುದೇವನ ಆನಂದವನ್ನು ಶಿಷ್ಯನು ಮಾತ್ರ ಪರಮಾನಂದದಿಂದ ಆಲಿಸಬಲ್ಲ. ನೋಡಬಲ್ಲ. ಗುರುದೇವನ ಮಾತು ಶಿಷ್ಯನಿಗೆ ಕೇಳುತ್ತದೆ. ಶಿಷ್ಯನ ಮಾತು ಗುರುದೇವನಿಗೆ ಮಾತ್ರ ಕೇಳುತ್ತದೆ.

ಗುರುದೇವ ತನ್ನ ಮಾತನ್ನು ಆಲಿಸುವುದಕ್ಕಾಗಿಯೇ ಶಿಷ್ಯನನ್ನು ಸೃಷ್ಟಿ ಮಾಡುತ್ತಾನೆ. ಶಿಷ್ಯ ಕೂಡಾ ಗುರುದೇವನ ಮಾತನ್ನು ಆಲಿಸುವುದಕ್ಕಾಗಿಯೇ ಹುಟ್ಟಿದ್ದಾನೆ. ಗುರುಶಿಷ್ಯರಿಬ್ಬರಿಗೂ ಒಂದೇ ಮನ. ಒಂದೇ ಕಾಯ. ಕಾಯದಲ್ಲಿ ವಾಸ ಮಾಡುವ ಅವರಿಬ್ಬರೂ ಕಾಯಗೊಂಡು ಹುಟ್ಟಿದವರಲ್ಲ. ಕಾಯ ಅವರದಲ್ಲ. ಅವರು ವಾಸ ಮಾಡುವ ಸುಕ್ಷೇತ್ರ. ಕೈಲಾಸ. ಹೀಗಾಗಿ

ಬಸವಣ್ಣನವರು ಕಾಯಕವೇ ಕೈಲಾಸವೆಂದು ಹೇಳಿದರೆ, ''ಕಾಲೇ ಕಂಬಗಳಾದವೆನ್ನ, ದೇಹವೇ ದೇಗುಲವಾಯಿತ್ತಯ್ಯಾ ! ಎನ್ನ ನಾಲಗೆಯೆ ಗಂಟೆ, ಶಿರ ಸುವರ್ಣದ ಕಳಸ ಇದೇನಯ್ಯಾ! ಸರವೇ ಲಿಂಗಕ್ಕೆ ಸಿಂಹಾಸನವಾಗಿದ್ದಿತ್ತಯ್ಯಾ ಗುಹೇಶ್ವರಾ ನಿಮ್ಮ ಪ್ರಾಣಲಿಂಗಪ್ರತಿಷ್ಠೆ ಪಲ್ಲಟವಾಗದಂತಿದ್ದೆನಯ್ಯಾ'' ಎಂದು ಪ್ರಭುದೇವರು ಹೇಳುತ್ತಾರೆ.

ಗುರು ಶಿಷ್ಯರ ಆನಂದವನ್ನು ಅನುಭವಿಸಿದ ಶಿಷ್ಯ ಪುನಃ ಮನಕ್ಕೆ ಹೇಳಿ ಸಂತೋಷ ಪಡುತ್ತಾನೆ.

ಅಂಗವನ್ನು ಮನ ಆವರಿಸಿದೆ. ಅಂಗದಲ್ಲಿಯೇ ಸಂಗಮವಾದ ಗುರುದೇವನ ಪರಮಾಮೃತವನ್ನು ಅನುಭವಿಸುವ ಆಸೆ ಮನಕ್ಕೆ ಉಂಟಾಗಿದೆ. ಆ ಮನವೇ ಗುರುದೇವನಿಗೆ ಶಿಷ್ಯನಾಗಿದೆ. ಗುರುಶಿಷ್ಯರಿಬ್ಬರೂ ಪರಮಾನಂದವನ್ನು ಅನುಭವಿಸಿ ಪುನಃ ಮನಕ್ಕೆ ಒಪ್ಪುವಂತೆ ತಮ್ಮಿಬ್ಬರ ಮಾತನ್ನು ಹೇಳುವ ತವಕ ಶಿಷ್ಯನಿಗೆ ಉಂಟಾಗಿದೆ.

ಈ ಭಾಗ್ಯ ಯಾರಿಗುಂಟು ಯಾರಿಗಿಲ್ಲ. ಬಲ್ಲವನೇ ಬಲ್ಲ ಬೆಲ್ಲದ ಸವಿಯ ಎನ್ನುವಂತೆ ಬೆಲ್ಲದ ಸವಿಯನುಂಡು ಅನುಭವಿಸುವ ರುಚಿಯನ್ನು ಸಿಹಿಯೆಂದು ಮಾತಿನ ಮೂಲಕ ಹೇಳಬಹುದೇ ಹೊರತು, ಅನುಭವಿಸಿದ ರುಚಿಯನ್ನು ಸವಿವರವಾಗಿ ಮಾತಿನ ಮೂಲಕ ಹೇಳಲು ಸಾಧ್ಯವಾಗುವುದಿಲ್ಲ. ಸಿದ್ಧರಾಮ ಶಿವಯೋಗಿಗಳು ತಾನು ಗುರುದೇವನೊಂದಿಗೆ ಅನುಭವಿಸಿದ ಸುಖವನ್ನು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೊಂದಿಗೆ ಹಂಚಿಕೊಳ್ಳುತ್ತಿದ್ದಾನೆ.

ತನ್ನ ಪ್ರಸಾದವನ್ನು ಸಕಲ ಓದುಗರೂ ಅನುಭವಿಸಲೆಂದು ಅಕ್ಷರಗಳ ಮೂಲಕ ಹಂಚಿದ್ದಾನೆ. ಉಂಡವನೇ ಜಾಣ.

**504**

**ಗುರು ಸಮಾಧಿಯ ಸಮ ತನ್ನ ಸಮಾಧಿಯ ಮಾಡಲೆಂದು,**

**ವೀರವಿಕ್ರಮಚೋಳನ ದೇಹ ಬಯಲಿಗೆ ಬಾಯಿದೆರೆದು ಬರಲಿಲ್ಲವೆ?**
**ಗುರು ಸಮಾಧಿಯ ಮುಂದೆ ತನ್ನ ಸಮಾಧಿಯ ಮಾಡಲೆಂದು,**
**ರಾಜೇಂದ್ರಚೋಳನ ದೇಹ ಎದ್ದು ನಮಿಸಿ**
**ಸಮಾಧಿಯ ಹೊಗಲಿಲ್ಲವೆ? ಇದರ ಕೀಲ ಪ್ರಮಥರು ಅರಿಯರೆ?**
**ಇದರಂದವ ಗೌರಿ ನಾಗಾಯಿ ಅರಿಯಳೆ?**
**ಇದರ ಕೀಲ ಕಪಿಲಸಿದ್ಧ ಮಲ್ಲಿಕಾರ್ಜುನ ಶರಣನ ರಾಣಿ**
**ನೀಲಾಂಬಿಕೆಯರಿಯಳೆ ಸೊಡ್ಡಯ್ಯಾ?**

ಗುರುದೇವನ ಸಮ ಸಮ ಶಿಷ್ಯನೆಂದು ಗುರುದೇವನ ಸಮಾಧಿಯಂತೆಯೇ ಆ ಸಮಾಧಿಯ ಪಕ್ಕದಲ್ಲಿಯೇ ಶಿಷ್ಯನಾದ ವೀರವಿಕ್ರಮ ಚೋಳನ ಸಮಾಧಿ ಮಾಡಲು ಆತನ ದೇಹ ಬಯಲಿಗೆ ಬಂದು ಬಾಯಿ ತೆಗೆದು ನಿಂತಿತೆಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಗುರುದೇವನ ಸಮಾಧಿಯ ಮುಂದೆ ಶಿಷ್ಯನ ಸಮಾಧಿಯ ಮಾಡಲು ರಾಜೇಂದ್ರ ಚೋಳನ ದೇಹ ಎದ್ದು ಗುರುದೇವನಿಗೆ ನಮಿಸಿ ಪುನಃ ಸಮಾಧಿ ಹೊಗಲಿಲ್ಲವೆ? ಇದರ ಕೀಲ ಪ್ರಮಥರಿಗೆಲ್ಲ ಗೊತ್ತು, ಇದರಂದವ ಗೌರಿ ನಾಗಾಯಿಗೆ ಕೂಡಾ ಗೊತ್ತು. ಇದರ ಕೀಲ ಕಪಿಲಸಿದ್ಧ ಮಲ್ಲಿಕಾರ್ಜುನ ಶರಣನ ರಾಣಿ ನೀಲಾಂಬಿಕೆಗೆ ಕೂಡಾ ಗೊತ್ತು ಎಂದು ಸಿದ್ಧರಾಮ ಶಿವಯೋಗಿಗಳು ಸೊಡ್ಡಳಯ್ಯನಿಗೆ ಹೇಳಿದ್ದಾರೆ.

ಶರಣರ ಕಾಲದಲ್ಲಿ, ಗುರು ಶಿಷ್ಯ ಸಂಪ್ರದಾಯದಲ್ಲಿ ಜನಜನಿತವಾದ ಮಾತಿದು. ಗುರುದೇವನಿಗೆ ಶಿಷ್ಯನಾದವನು ಆತನನ್ನು ಭಕ್ತಿಯಿಂದ ಹಾಗೆಯೇ ಕಾಣುತ್ತಾನೆ. ಏಕೆಂದರೆ ಗುರುದೇವ ಸಾಮಾನ್ಯನಲ್ಲ.

ಶಿಷ್ಯನ ಅಂಗದಲ್ಲಿಯೇ ಸಂಗಮವಾದ ಮಹಾದೇವನಿಗೂ ಸಾಧ್ಯವಾಗದ ಕೆಲಸವನ್ನು ಗುರುದೇವನು ಮಾತ್ರ ಮಾಡಬಲ್ಲ. ಜನ್ಮ ಜನ್ಮಗಳಿಂದಲೂ ಮಹಾದೇವ ತಾನೇ ಸೃಷ್ಟಿ ಮಾಡಿದ ಮನವೆಂಬ ಮಾನಿನಿಯನ್ನು ತನ್ನಂತೆ ತನ್ನ ಪಟ್ಟದ ರಾಣಿಯನ್ನಾಗಿ ಮಾಡಿಕೊಳ್ಳಬೇಕೆಂದು ಹೆಣಗಾಡಿದರೂ ಅದು ಸಾಧ್ಯವಾಗುವುದಿಲ್ಲ.

ಕಲ್ಲಲ್ಲಿ ಮಹಾದೇವನನ್ನು ಕೆತ್ತಿ, ಆಲಯ ನಿರ್ಮಾಣ ಮಾಡಿ, ಬಗೆಬಗೆಯಿಂದ ದೇವನನ್ನು ಆರಾಧಿಸಿ, ಧನ್ಯನಾದೆನೆಂದು ಸಂಭ್ರಮಿಸಿದಳೆ ಹೊರತು ಮಹಾದೇವಿ ಮಹಾದೇವನಿಗೆ ಪಟ್ಟದ ರಾಣಿ ಆಗಲೇ ಇಲ್ಲ. ಪಟ್ಟದ ರಾಣಿಗೆ ಮಹಾದೇವ ಯಾರೆಂಬುದು ಗೊತ್ತಾಗಲೇ ಇಲ್ಲ.

ಶಿವನನ್ನು ತಿಳಿಯಬೇಕಾದರೆ ಮೊದಲು ಗುರುದೇವನನ್ನು ತಿಳಿಯಬೇಕು. ಶಿವಪಥವನು ಅರಿವೊಡೆ ಗುರುಪಥ ಮೊದಲು ಎನ್ನುವ ಸೂತ್ರವನ್ನು ಬಸವರಸರು ಹೇಳಲಾಗಿ, ಬಸವರಸನ ರಾಣಿ ನೀಲಾಂಬಿಕೆ ಅರಿತು ಧನ್ಯಳಾದಳು. ಬಸವರಸನಿಗೆ ನೆಚ್ಚಿನ ಮಹಾರಾಣಿಯಾದಳು.

ಸಿದ್ಧರಾಮ ಶಿವಯೋಗಿಗಳು ಸೊಡ್ಡಳಯ್ಯರಿಗೆ ಹೇಳುವ ನೆಪ ಮಾಡಿಕೊಂಡು ತಮ್ಮ ಸಕಲ ಓದುಗರಿಗೂ ಮನ ಮುಟ್ಟುವಂತೆ ಹೇಳಿದ್ದಾರೆ.

**505**

**ಗುರುಸಮ್ಮುಖದಲ್ಲಿ ಲಿಂಗಪೂಜೆಯ ಮಾಡಲಾಗದು.**
**ಗುರುಸಮ್ಮುಖದಲ್ಲಿ ತಾನೊಂದಾಸನದ ಮೇಲೆ ಇರಲಾಗದು.**

**ಗುರುಸಮ್ಮುಖದಲ್ಲಿ ವೀಳ್ಯವ ಭೋಗಿಸಲಾಗದು.**
**ಗುರುಸಮ್ಮುಖದಲ್ಲಿ ಸ್ವೇಚ್ಛಾಚಾರಿಯಾಗಿ ನಿದ್ರೆಗೈಯಲಾಗದು.**
**ಗುರುಸಮ್ಮುಖದಲ್ಲಿ ವಿದ್ಯೆಯ ಹೇಳಲಾಗದು.**
**ಗುರುಸಮ್ಮುಖದಲ್ಲಿ ಏನೊಂದೂ ನುಡಿಲಾಗದು.**
**ಗುರುಸಮ್ಮುಖದಲ್ಲಿ ಹಾಸ್ಯವ ಮಾಡಲಾಗದು.**
**ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು, ಮನದಿಂದ ಮಹಾಜ್ಞಾನದಿಂದ**
**ದೂರಾಗಲಿ ಕೇಳಾ ಪ್ರಭುವೆ.**

ಭಾರತ ಗುರು ಪ್ರಧಾನವಾದ ದೇಶ! ಪ್ರಪಂಚದ ಸಕಲ ದೇಹಗಳನ್ನು ಗುರುದೇವನಂತೆ ನೋಡುವ ದೇಶ! ಜ್ಞಾನದೇಹಕ್ಕೆ ಸಕಲ ದೇಹಗಳು ಗುರುವಾಗಿಯೇ ಕಾಣುತ್ತವೆ. ಆದರೆ ದೇಹ, ದೇಹವನ್ನು ಆವರಿಸಿದ ಮನೋ ದೇಹವನ್ನು ದೇಹವೇ ಕಳೆದುಕೊಳ್ಳಬೇಕು.

ಪ್ರತಿ ದೇಹದಲ್ಲಿ ಅರಿವಿನ ಗುರುದೇಹವೊಂದು ಇದೆ. ದೇಹವನ್ನು ಮನೋಮಯವಾದ ದೇಹವೊಂದು ಆವರಿಸಿದೆ. ಮನೋಮಯವಾದ ದೇಹ, ದೇಹದೊಂದಿಗೆ ಸಂಗ ಮಾಡಿದೆ. ಅದಕ್ಕೆ ಗುರುದೇವನೆಂದರೆ ಯಾರೆಂದು ಗೊತ್ತಿಲ್ಲ. ಹೀಗಾಗಿ ಮನೋಮಯವಾದ ದೇಹ, ತಾನು ವಾಸ ಮಾಡಿದ ದೇಹಕ್ಕೆ ಗುರುವಿನ ವೇಷ ಹಾಕುತ್ತದೆ; ಶಿಷ್ಯನ ವೇಷವೂ ಹಾಕುತ್ತದೆ. ಹೀಗಾಗಿ ಮನೋಮಯವಾದ ದೇಹವು, ಶಿಷ್ಯನ ವೇಷ ಹಾಕಿ, ಗುರುದೇವನ ಸಮ್ಮುಖದಲ್ಲಿ ಲಿಂಗಪೂಜೆಯ ಮಾಡುತ್ತದೆ.

ಗುರು ಸಮ್ಮುಖದಲ್ಲಿಯೇ ತಾನು ಮತ್ತೊಂದು ಆಸನದಲ್ಲಿ ಕೂಡುತ್ತದೆ. ಗುರು ಸಮ್ಮುಖದಲ್ಲಿಯೇ ಗುರುದೇವನೊಂದಿಗೆ ವೀಳ್ಯೆಯ ಭೋಗಿಸುತ್ತದೆ. ಗುರು ಸಮ್ಮುಖದಲ್ಲಿ ಸ್ವೇಚ್ಛಾಚಾರಿಯಾಗಿ ನಿದ್ರೆ ಮಾಡುತ್ತದೆ. ಗುರು ಸಮ್ಮುಖದಲ್ಲಿ ಗುರುದೇವನಂತೆ ನುಡಿಯುತ್ತದೆ. ಗುರು ಸಮ್ಮುಖದಲ್ಲಿಯೇ ಗುರುದೇವನೊಂದಿಗೆ ಹಾಸ್ಯ ಮಾಡುತ್ತದೆ. ಏಕೆಂದರೆ

ಗುರುದೇವನೂ ಗುರುವಲ್ಲ; ಶಿಷ್ಯನೂ ಶಿಷ್ಯನಲ್ಲ. ದೇಹವನ್ನು ಆವರಿಸಿದ ಮನ, ದೇಹಕ್ಕೆ ಗುರುದೇವನ ವೇಷ ಹಾಕಿದೆ. ಹಾಗೆಯೇ ಮನ, ದೇಹಕ್ಕೆ ಶಿಷ್ಯನ ವೇಷ ಹಾಕಿದೆ. ಇವರಿಬ್ಬರಿಗೂ ಗುರು ಶಿಷ್ಯರ ಪರಿಚಯವಿಲ್ಲ.

ಮನವೆಂದರೆ ಭವಿ! ಅದರ ಪಾತ್ರ ಸಾವಿರಾರು! ಶಿಷ್ಯನೆಂದರೆ ಭವಿತನವನ್ನು ಅದರ ಸಕಲ ಪಾತ್ರಗಳನ್ನು ಕಳಚಿಕೊಂಡು ಭಕ್ತನಾದವನು! ಶಿಷ್ಯನಾದವನು!

ದೇಹದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ದೇಹಕ್ಕೆ, ದೇಹವನ್ನು ಆವರಿಸಿದ ಮನವೆಂಬ ದೇಹ ಶಿಷ್ಯನಾಗುವುದು. ಈ ಸೂತ್ರವನ್ನು ಸೂಚಿಸಿದ ಗುರುದೇವ ಪಾತ್ರಧಾರಿಯಲ್ಲ. ಈ ಸೂತ್ರವನ್ನೆ ಅರಿತ ಶಿಷ್ಯನೂ ಪಾತ್ರಧಾರಿಯಲ್ಲ. ಇಂತಹ ಗುರುದೇವ ಶಿಷ್ಯನ ಮನೆಗೆ ಬಂದಾಗ, ಶಿಷ್ಯನಾದವನು ಗುರುದೇವನ ಪೂಜೆಯನ್ನು ಮಾಡುತ್ತಾನೆಯೇ ಹೊರತು ಲಿಂಗಪೂಜೆಯನ್ನು ಮಾಡಲಾರ! ಆಸನದ ಮೇಲೆ ಕೂಡಲಾರ! ಗುರುದೇವನ ಸಮ್ಮುಖದಲ್ಲಿ ವೀಳ್ಯೆವ ಭೋಗಿಸಲಾರ. ಸ್ವೇಚ್ಛಾಚಾರಿಯಾಗಿ ಹೆಂಡತಿಯ ಪಕ್ಕದಲ್ಲಿ ಮಲಗಿ ನಿದ್ರೆಗೈಯ್ಯಲಾರ! ಗುರುದೇವನ ಸೇವೆಯಲ್ಲಿ ನಿರತನಾಗಿ ಸದಾ ಆತನ ಮಾತುಗಳನ್ನು ಆಲಿಸುತ್ತಾನೆ.

ಗುರು ಸಮ್ಮುಖದಲ್ಲಿ ಹಾಸ್ಯವ ಮಾಡಿದರೆ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು,

ಮನದಿಂದ ಮಹಾಜ್ಞಾನದಿಂದ ದೂರಾಗಲಿ ಕೇಳಾ ಪ್ರಭುವೆ ಎಂದು ಸಿದ್ಧರಾಮ ಶಿವಯೋಗಿಗಳು ಗುರುದೇವನಾದ ಅಲ್ಲಮಪ್ರಭುದೇವರುಗಳ ಮುಂದೆ ಭಾಷೆಯನಿತ್ತಿದ್ದಾರೆ.

ಪ್ರಪಂಚದಲ್ಲಿ ಏಳುನೂರಾ ಮೂವತ್ತುಕೋಟಿ ಗುರುಗಳಿದ್ದಾರೆ. ಗುರುವಿಗೆ ಗುರುವಾಗುವುದೆಂದರೆ ಆಲೋಚನೆ ಮಾಡುವ ಮಾತೇ ಆಗಿದೆ. ಗುರುದೇವನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳುವುದಕ್ಕೆ ಬರುವುದಿಲ್ಲ. ಬದಲಾಗಿ ಗುರುದೇವನನ್ನು ಕಂಡುಕೊಂಡ ದೇಹ, ಸಕಲ ದೇಹಗಳಲ್ಲಿಯೂ ಗುರುದೇವನಿದ್ದಾನೆ ಎಂದು ದೇಹಗಳಿಗೆ ತೋರಿಸಲು ಬರುತ್ತದೆ. ಗುರುದೇವನನ್ನು ನೋಡಿಕೊಂಡ ದೇಹವೇ ಧನ್ಯ. ಅದನ್ನು ಜ್ಞಾನದೇಹವೆಂದು ಬುದ್ಧದೇಹವೆಂದು ಕರೆಯಬಹುದಾಗಿದೆ.

ಸಿದ್ಧಾರ್ಥನಿಗೆ ಬುದ್ಧನ ದರುಶನವಾಯಿತು. ಸಿದ್ಧಾರ್ಥ ಬುದ್ಧನಿಗೆ ಶಿಷ್ಯನಾದ. ಸಿದ್ಧಾರ್ಥ ಕಳೆದು ಹೋಗಿ ಬುದ್ಧನೇ ತಾನಾದ.

**506**

**ಗುರುಸ್ವಾಮಿ ಧರಿಸುವ ಮಡಿಯ ನಾ ಸುತ್ತಿದೆನಾದಡೆ,**
**ಶಿರವು ಬಿರಿದು ಬೀಳಾಗಲಿ ದೇವಾ.**
**ಗುರುಸ್ವಾಮಿ ಧರಿಸುವ ಕಂಠಮಾಲೆಯ ನಾ ಧರಿಸಿದೆನಾದಡೆ,**
**ಕಂಠ ಕತ್ತರಿಸಿ ಹೋಗಲಿ ದೇವಾ.**
**ಗುರುಸ್ವಾಮಿ ಪಾನವ ಮಾಡುವ ಗಿಂಡಿಯಲಿ ನಾ ಪಾನವ**
**ಮಾಡಿದೆನಾದಡೆ, ನಾಲಗೆ ಸೀಳಿಹೋಗಲಿ ದೇವಾ.**
**ಗುರುಸ್ವಾಮಿ ಶಯನಿಸುವ ಸುಪ್ಪತ್ತಿಗೆಯಲ್ಲಿ**
**ನಾ ಶಯನ ಮಾಡಿದೆನಾದಡೆ, ಎನ್ನಂಗದಲ್ಲಿ ಕ್ರಿಮಿಗಳು**
**ಬೀಳಲಿ ದೇವಾ, ಕಪಿಲಸಿದ್ಧ ಮಲ್ಲಿಕಾರ್ಜುನದೇವಾ.**

ಗುರುದೇವನೆಂದರೆ ಸಾಮಾನ್ಯನಲ್ಲ. ಶಿಷ್ಯನಿಗೆ ಗುರು ಲಿಂಗ ಜಂಗಮ ದರುಶನ ಮಾಡಿಸಿದಾತ ಗುರು. ಹೀಗಾಗಿ ಸಿದ್ಧರಾಮಶಿವಯೋಗಿಗಳು ಗುರುದೇವ ಬೇರಲ್ಲ; ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನದೇವರು ಕೂಡಾ ಬೇರಲ್ಲ. ಅವರಿಬ್ಬರೂ ಒಂದೇ ಎಂದು ಹಾಡಿದ್ದಾರೆ.

ಗುರುದೇವನನ್ನು ಕಪಿಲಸಿದ್ಧಮಲ್ಲಯ್ಯ ಎಂದು ಕರೆದಿದ್ದಾರೆ. ಗುರುದೇವನ ದರುಶನ ಶಿಷ್ಯನಿಗೆ ಆಗಬೇಕಾದರೆ, ಶಿಷ್ಯ ಅನಂತ ಜನ್ಮಗಳ ಪುಣ್ಯ ಮಾಡಿರಬೇಕು. ಅಂದರೆ ಮಾತ್ರ ಅನಂತ ಜನ್ಮಗಳವರೆಗೆ ಮಾಡಿದ ಶಿಷ್ಯನ ಕರ್ಮವನ್ನು ಕಳೆಯುವ ಗುರುದೇವ ಶಿಷ್ಯನಿಗೆ ದೊರೆಯುತ್ತಾನೆ.

ಅನಂತ ಜನ್ಮಗಳ ಶಿಷ್ಯನ ಕರ್ಮವನ್ನು ಏಕ ಕಾಲಕ್ಕೆ ತೊಡೆದು ಹಾಕಿದ ಗುರುಸ್ವಾಮಿಯು ಧರಿಸಿದ ವಸ್ತ್ರವನ್ನು ಶಿಷ್ಯ ಧರಿಸುವುದೆಂದರೇನು? ಅಂತಹ ಶಿಷ್ಯನ ಶಿರವು ಬಿರಿದು ಹಾಳಾಗಲಿ ದೇವಾ ಎಂದು ಶಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಹಾಗೆ ಅಪರಾಧ ಮಾಡಿದೆನೆಂದಾದರೆ ನನ್ನ ಶಿರವು ಬಿರಿದು ಬೀಳಾಗಲಿ ಎಂದಿದ್ದಾರೆ.

ಗುರುಸ್ವಾಮಿ ಧರಿಸಿದ ಕಂಠಮಾಲೆ ನಾ ಧರಿಸಿದೆನಾದಡೆ ಎನ್ನ ಕಂಠ ಕತ್ತರಿಸಿ ಹೋಗಲಿ ದೇವಾ. ಗುರು ಸ್ವಾಮಿ ಪಾನವ ಮಾಡುವ ಗಿಂಡಿಯಲಿ ನಾ ಪಾನವ ಮಾಡಿದೆ ನಾದಡೆ, ನಾಲಗೆ

ಸೀಳಿ ಹೋಗಲಿ ದೇವಾ. ಗುರುಸ್ವಾಮಿ ಪವಡಿಸುವ ಹಾಸಿಗೆಯಲ್ಲಿನಾ ಮಲಗಿದೆನಾದಡೆ ಎನ್ನಂಗದಲ್ಲಿ ಕ್ರಿಮಿಗಳು ಬೀಳಲಿ ದೇವಾ, ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾ.

**507**

**ಗ್ರಾಮಕ್ಕೊಬ್ಬರಸಿಲ್ಲದೆ ಗ್ರಾಮವಳುತ್ತಿದೆ ನೋಡಾ.**
**ಗ್ರಾಮವನಾಳುವ ಅರಸಿನ ಮನೆಯಲ್ಲಿ ಸದೆ ಬೆಳೆದಿದೆಯಯ್ಯಾ.**
**ಗ್ರಾಮಕ್ಕೆ ಬಂದ ಕಟ್ಟರಸಿಂಗೆ ಪಟ್ಟವ ಕಟ್ಟಿ,**
**ಅರಸಿನ ಮನೆಗಳನನುಗೆಯ್ದು, ಹರುಷದಿಂದ ಕಾಣಿಕೆಯಿಕ್ಕಿಸಿಕೊಳ್ಳಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಭಾರತ ಪುರುಷಪ್ರಧಾನವಾದ ರಾಷ್ಟ್ರ. ಅಲ್ಲಲ್ಲಿ ಸ್ತ್ರೀ ಪ್ರಧಾನವಾದ ರಾಷ್ಟ್ರಗಳು ಇದ್ದರೂ ಇರಬಹುದು. ಭಾರತ ದೇಶದಲ್ಲಿ ಕೂಡಾ ಕೆಲಜಿಲ್ಲೆಯ ಕೆಲಭಾಗಗಳಲ್ಲಿಸ್ತ್ರೀ ಪ್ರಧಾನವಾದ ಗ್ರಾಮ ಹೋಬಳಿಗಳು ಸಾಕಷ್ಟು ಸಿಕ್ಕುತ್ತವೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಆಶ್ಚರ್ಯಕರವಾದ ಒಂದು ಮಾತನ್ನು ಹೇಳಿದ್ದಾರೆ:

ಗ್ರಾಮಕ್ಕೆ ಒಬ್ಬ ಅರಸಿಯೂ ಇಲ್ಲದೆ ಗ್ರಾಮಕ್ಕೆ ಗ್ರಾಮವೇ ಅಳುತ್ತಿದೆ ನೋಡಾ. ಗ್ರಾಮವನಾಳುವ ಅರಸಿಯ ಮನೆಯಲ್ಲಿ ಸದೆ ಬೆಳೆದಿದೆಯಯ್ಯಾ:

ಶರಣರ ದೃಷ್ಟಿಯಲ್ಲಿ ಇಡೀ ಜಗತ್ತೇ ಸ್ತ್ರೀ ಪ್ರಧಾನವಾದದ್ದು. ಪ್ರತಿ ದೇಹವನ್ನು ಆಳುತ್ತಿರುವುದು ಮನವೆಂಬ ಸ್ತ್ರೀಯಳೇ ಹೊರತು ಪುರುಷನಲ್ಲ. ಪರಮ ಪುರುಷನೆಂಬ ಅರಿವಿನ ಮಲ್ಲಯ್ಯಹರುಷದಿಂದ ದೇಹವೆಂಬ ಗ್ರಾಮದಲ್ಲಿ ಪವಡಿಸಿದ್ದಾನೆ. ಅದರ ಸಂಸಾರದ ಭಾರವನ್ನು ಮನವೆಂಬ ತನ್ನ ಸತಿಗೆ ಒಪ್ಪಿಸಿ ಆನಂದದಿಂದ ಕಾಲ ಕಳೆಯುತ್ತಿದ್ದಾನೆ.

ಲೋಕದ ದೃಷ್ಟಿಯಲ್ಲಿ ಮೊಲೆ ಮುಡಿ ಬಂದ ದೇಹವನ್ನು ಹೆಣ್ಣು ಎಂದು ಕರೆಯುತ್ತಾರೆ. ಗಡ್ಡ ಮೀಸೆ ಬಂದ ದೇಹವನ್ನು ಗಂಡು ಎಂದು ಕರೆಯುತ್ತಾರೆ. ಆದರೆ ಜ್ಞಾನಿಗಳ ದೃಷ್ಟಿಯಲ್ಲಿ ಹಾಗಲ್ಲ. ಪ್ರತಿ ದೇಹದಲ್ಲಿ ಮನವೆಂಬ ಹೆಣ್ಣು ಇದ್ದಾಳೆ. ಜ್ಞಾನವೆಂಬ ಗಂಡು ಇದ್ದಾನೆ.

ಜ್ಞಾನವೆಂಬ ಗಂಡು ಎನ್ನುವಾತ ಅರಸನಾದರೆ ಮನವೆಂಬ ಹೆಣ್ಣು ಅನ್ನುವಾಕೆ ಅರಸಿ. ಇವರಿಬ್ಬರೂ ದೇಹವೆಂಬ ಗ್ರಾಮದಲ್ಲಿ ವಾಸ ಮಾಡಿದ್ದಾರೆ.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಅರಿಷಡ್ವರ್ಗಗಳು, ಸಪ್ತ ವ್ಯಸನಗಳು, ಅಷ್ಟಮದಗಳು ದೇಹವೆಂಬ ಗ್ರಾಮವನ್ನು ಆಳುತ್ತಿರುವುದರಿಂದ ಗ್ರಾಮದಲ್ಲಿ ಸದೆ ಬೆಳೆದಿದೆ.

ಅರಿಷಡ್ವರ್ಗಗಳೆಂಬ ಆರು ಜನ, ಸಪ್ತವ್ಯಸನಗಳೆಂಬ ಏಳು ಜನ, ಅಷ್ಟಮದಗಳೆಂಬ ಎಂಟು ಜನ ಮನವೆಂಬ ಅರಸಿಯ ಸಂಬಂಧಿಗಳೇ ಆಗಿದ್ದಾರೆ. ಅರಸಿಯೊಂದಿಗೆ ಕೂಡಿಕೊಂಡ ಈ ಇಪ್ಪತ್ತೊಂದು ಜನ ಗ್ರಾಮವನ್ನು ಆಳುತ್ತಿರುವುದರಿಂದ ಗ್ರಾಮದಲ್ಲಿ ಕಳೆ ಬೆಳೆದಿದೆ. ಮಹಾಜ್ಞಾನವೆಂಬ ಬೆಳೆ ಕಾಣದಂತೆ ಆಗಿದೆ.

ಮನೆಯೊಡತಿ ಅರಸಿ. ಅರಸಿಯದೇ ಸಂಸಾರ. ಸ್ತ್ರೀ ಪ್ರಧಾನವಾದ ಮನೆ; ಸ್ತ್ರೀ ಪ್ರಧಾನವಾದ ಗ್ರಾಮ. ಅರಸಿಯದೇ ಕಾರುಬಾರು ! ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ

ರಜ ತುಂಬಿದೆ. ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿದೆ. ಮನೆಯೊಳಗೆ ಮನೆಯೊಡೆಯನು ಇದ್ದಾನೋ ಇಲ್ಲವೊ ಎಂದು ಪ್ರಶ್ನಿಸುವಂತೆ ಆಗಿದೆ. ಹೊರಗಿನ ಜನಕ್ಕೆ ಮನೆಯೊಳಗೆ ಮನೆಯೊಡೆಯನಿಲ್ಲ ಕೂಡಲ ಸಂಗಮದೇವಾ. ಆ ಮನೆಯನ್ನು ನೀನೇ ರಕ್ಷಣೆ ಮಾಡು.

''ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ, ಇದ್ದಡೇನೋ ಶಿವ ಶಿವಾ ಹೋದಡೇನೊ?'' ಎಂದು ಬಸವಣ್ಣನವರು ಗ್ರಾಮದ ಅರಸಿಯನ್ನು ಪ್ರಶ್ನಿಸಿದ್ದಾರೆ.

ಗ್ರಾಮಕ್ಕೆ ಬಂದ ಪಟ್ಟದ ಅರಸಿಗೆ ಪಟ್ಟವ ಕಟ್ಟಿ, ಆಕೆಯನ್ನು ರಮಿಸಿ, ಹರುಷದಿಂದ ಪ್ರೇಮದ ಕಾಣಿಕೆಯನ್ನು ಇಕ್ಕಿ, ನಿನ್ನಂತೆ ಮಾಡಿಕೊಂಡು ಈ ಬಡಪಾಯಿ ಗ್ರಾಮಕ್ಕೆ, ನೀನೇ ಒಡೆಯನಾಗು ತಂದೆ ಎಂದು ಅರಿವಿನ ಮಲ್ಲಯನನ್ನು ಶಿದ್ಧರಾಮ ಶಿವಯೋಗಿಗಳು ಬೇಡಿಕೊಂಡಿದ್ದಾರೆ.

**508**

**ಗ್ರಾಮ ಚೌಗ್ರಾಮದಲಿ ಸೀಮೆಗೆಟ್ಟುತ್ತದು**
**ಸಿದ್ಧಗ್ರಾಮವ ಮುರಿದೊತ್ತುತ್ತೈದೂದೆ**
**ಗ್ರಾಮಬಲ ನಾಶವಾಗೆ ಸೀಮೆಗೆಡಲು, ಸಾನಂದದ ಆನಂದಕ್ಕೆ**
**ತನ್ನನು ಕಳೆದು, ನಾನಾ ಗುಣದಲ್ಲಿ**
**ಭಾನುವಿಕಸ ಪ್ರಬಲವನೆಯ್ದಿದೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಿದ್ಧರಸದ ಬುಗ್ಗೆಗಳಿದ್ದ ಸುಂದರವಾದ ಅಖಂಡ ಅರಿವಿನ ಗ್ರಾಮವನ್ನು ತಿಳಿಯದೆ, ನಾಲ್ಕು ಗ್ರಾಮಗಳು ತಮ್ಮ ಸೀಮೆಯನ್ನು ಕೆಡಿಸಿಕೊಳ್ಳ ಹತ್ತಿವೆ. ಗ್ರಾಮಬಲ ನಾಶವಾಗಿ ಸೀಮೆಗೆಡಲು, ಪರಮಾನಂದದ ಪರಮಹಂಸನ ಅರಿವಿನ ಪರಮ ಸುಖವನ್ನು ಹೊಂದದೆ, ತನ್ನ ಸುಖದ ವಸ್ತುವನ್ನು ತಾನೇ ತನ್ನ ಕೈಯ್ಯಾರೆ ಕಳೆದುಕೊಂಡು, ನಾನಾಗುಣಗಳಲ್ಲಿ ಸುಖದುಃಖವನ್ನು ಹೊಂದುತ್ತಾ ಅಂತ್ಯವಾಗುತ್ತದೆ.

ಸಿದ್ಧರಸದ ಬುಗ್ಗೆಗಳಿದ್ದ ಸುಂದರವಾದ ಅಖಂಡ ಅರಿವಿನ ಗ್ರಾಮ ಬಳಕೆಯಾಗದೆ ಹಾಗೇ ಉಳಿಯುತ್ತದೆ.

ಸಿದ್ಧರಾಮ ಶಿವಯೋಗಿಗಳು, ಪಂಚಭೂತಗಳಿಂದ ಸಂಗಮವಾದ ಸುಂದರವಾದ ಅರಿವಿನ ಅಂಗವನ್ನು ಐದು ಮಹಾ ಗ್ರಾಮಗಳಿಗೆ ಹೋಲಿಸಿದ್ದಾರೆ.

ಭೂಮಿ, ಜಲ, ಅಗ್ನಿ, ವಾಯು ಉಳ್ಳ ನಾಲ್ಕು ಗ್ರಾಮಗಳಿಗೆ ಸೀಮೆ ಇದೆ. ಸಿದ್ಧರಸದ ಬುಗ್ಗೆಗಳಿದ್ದ ಸುಂದರವಾರ ಅಖಂಡ ಅರಿವಿನ ಗ್ರಾಮವೆಂಬ ಮಹಾ ಬಯಲಿಗೆ ಸೀಮೆಯಿಲ್ಲ. ಇದು ಸೀಮೆಯೇ ಇಲ್ಲದ ನಿಸ್ಸೀಮ ಗ್ರಾಮ. ಇದರ ಒಡೆಯ ಮಹೇಶ್ವರ. ಈತ

ತನ್ನ ವಿನೋದಕ್ಕಾಗಿ ಮನವನ್ನು ಸೃಷ್ಟಿ ಮಾಡಿದ. ಆ ಮನ ಆವರಿಸಿದ ಬಿಂದುವೊಂದರಿಂದ ಅಂಗವನ್ನು ಸೃಷ್ಟಿ ಮಾಡಿದ. ಆ ಅಂಗದಲ್ಲಿ ತಾನು ಸಂಗಮವಾಗಿ, ಮನವನ್ನು ತನ್ನ ಅರ್ಧಾಂಗಿಯನ್ನಾಗಿಸಿಕೊಂಡು ಅರ್ಧನಾರೀಶ್ವರನೇ ತಾನೆಂದು ಕರೆಯಿಸಿಕೊಂಡ.

ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೇ ಪರಮಾನಂದದಿಂದ ನೋಡಲು ಅಣಿಯಾದ. ಬಯಲುದೇವನ ರಾಣಿಯಾಗಲು ಒಲ್ಲದ ಮನ, ಇಡೀ ಅಂಗವನ್ನು ತನ್ನಂತೆ

ಮಾಡಿಕೊಂಡು ನಾಲ್ಕು ಗ್ರಾಮಗಳಿಗೆ ಒಡೆಯಳಾದಳು.

ಸದಾ ಪರಮಾನಂದದಿಂದ ಇರಬೇಕಾದ ಅಂಗ, ಸುಳಿದು ಬೀಸುವ ಬಿರುಗಾಳಿಗೆ ತುತ್ತಾಯಿತು. ಅಗ್ನಿಗೆ ಕತಕತನೆ ಕುದಿಯಿತು. ಬರಸಿಡಿಲಿಗೆ ಬೆಂಡಾಯಿತು. ಜಲದ ರಭಸಕ್ಕೆ ಸುನಾಮಿಗಳ ಬಡಿತಕ್ಕೆ ತುತ್ತಾಯಿತು. ಭೂಮಿಯಿಂದ ಚಿಮ್ಮುವ ಲಾವಾರಸಕ್ಕೆ ತುತ್ತಾಗಿ ಒಂದು ದಿನ ಭೂಮಿಯ ಮಣ್ಣಲ್ಲಿ ಮಣ್ಣಾಯಿತು.

ನಾಲ್ಕು ಗ್ರಾಮಗಳು, ತನ್ನ ಲೀಲೆಗಾಗಿ ಸೃಷ್ಟಿ ಮಾಡಿದ ಸುಂದರವಾದ ಅಖಂಡ ಅರಿವಿನ ಬಯಲಗ್ರಾಮವನ್ನು ತಿಳಿಯಲೇ ಇಲ್ಲ. ಆ ಮಹಾ ಗ್ರಾಮದ ಒಡೆಯನಿಗೆ ಒಡತಿಯಾಗಿ ಮಹಾರಾಣಿಯಾಗಿ ಮಹಾದೇವನ ಅರಸಿಯಾಗಿ ಮನ ಮೆರೆಯಲೇ ಇಲ್ಲ.

ಮನದ ವಿಕಸನಕ್ಕೆ ಮನದ ಗುಣಗಳೇ ಅಡ್ಡಿಯಾದವು. ಸಾತ್ವಿಕ ರಾಜಸ ತಾಮಸ ಗುಣಗಳನ್ನು ಕಳೆದುಕೊಂಡು ನಿರ್ಗುಣನಾದ ನಿರಾಭರಣನಾದ ತ್ರಿಗುಣಾತೀತನಲ್ಲಿ ಮನ ಸಂಗಮವಾಗಲೇ ಇಲ್ಲ.

ಶರಣ ಸಿದ್ಧರಾಮ ಶಿವಯೋಗಿಗಳು ಸಿದ್ಧರಸದ ಬುಗ್ಗೆಗಳಿದ್ದ ಸುಂದರವಾದ ಅರಿವಿನ ಗ್ರಾಮದ ಒಡೆಯನಿಗೆ ಶರಣು ಹೋದರು. ಸಂಪೂರ್ಣ ಶರಣಾಗತರಾದರು. ತನಗೆ ತಾನೇ ಸತಿಯಾಗಿ ಆ ಒಡೆಯನನ್ನೇ ಪತಿಯನ್ನಾಗಿಸಿಕೊಂಡರು. ಐದು ಗ್ರಾಮಗಳುಳ್ಳ ಒಡಲೇ ಸತಿಪತಿಗಳಿಬ್ಬರಿಗೆ ಆಶ್ರಯದ ಮಹಾತಾಣವಾಯಿತು.

ಅಗ್ನಿ ಉರಿಯಲಿಲ್ಲ; ಉಂಡ ಅನ್ನವನ್ನು ಪಚನ ಮಾಡಿತು. ಜಲ, ವಾಯು, ಭೂಮಿ ಎಂಬ ಭೂತಗಳು ಅಂಗದಲ್ಲಿಯೇ ಸಂಗಮವಾದವು. ಅಂಗವೇ ಮಹಾಲಿಂಗವಾಯಿತು. ಬ್ರಹ್ಮಾಂಡವೇ ಸಂಗಮವಾದ ಸಂಗಮನಾಥನಾಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

ಬೆಳಗುವ ಸೂರ್ಯನನ್ನು ಬೆಳಗಿ, ಬೆಳಗಿಂಗೆ ಬೆಳಗಾಗಿ ಬೆಳಗುವ ಅರಿವಿನ ಬೆಳಕೇ ತಾನಾಯಿತು. ತನ್ನನ್ನು ತಾನೇ ಅವನಲ್ಲಿ ಕಳೆದುಕೊಂಡು ಅವನೇ ತಾನಾಯಿತು.

**509**

**ಗ್ರಾಮ ಪಟ್ಟಣವೈದು ಐದೈದ ನಾಯಕರು**
**ತೋರಿಪ್ಪರದ ಕಂಡು ಪ್ರತ್ಯಯವನು.**
**ಸೀಮೆ ಸಂಬಂಧವನು ಮೀರಿಪ್ಪ ನಾಯಕರು**
**ತಾವು ನಿಂದರು ಗಡಿಯ ಸಂಬಂಧವ**
**ಪರದಳವು ಬರಲಾಗಿ ಅರಿಯದೆ ಇದಿರಾಡಿ**
**ಅರಿತು ಬಿಟ್ಟರು ವೀರಧೀರರಾಗಿ.**
**ಅರಿವು ಮರಹನೆ ನುಂಗಿ ಕುರುಹುಗೆಟ್ಟಾ ಸೀಮೆ**
**ತೆರಹಿಲ್ಲದಾತ ತಾ ಪರಮಯೋಗಿ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ**
**ತೆರಹಿನ ಪಟ್ಟಣದ ಪ್ರಭೆಯಿಂತುಟು.**

ದೇಹವೆಂಬುದು ಒಂದು ದೇಶ. ಒಂದು ಗ್ರಾಮವೂ ಹೌದು. ಒಂದು ದೇಹದಲ್ಲಿ ಐದು ಪಟ್ಟಣಗಳಿವೆ. ಅದಕ್ಕೆ ಐದೈದು ನಾಯಕರೂ ಇದ್ದಾರೆ. ಇಲ್ಲಿರುವ ನಾಯಕರುಗಳಿಗೆ ಪರರ ತಪ್ಪುಗಳು ಕಂಡು ಬರುತ್ತವೆಯೇ ಹೊರತು ತನ್ನ ತಪ್ಪುಗಳು ತನಗೆ ಕಂಡು ಬರುವುದಿಲ್ಲ.

ತನ್ನ ತಪ್ಪು ತಾನೇ ಕಂಡುಹಿಡಿದು, ತನ್ನ ತಪ್ಪಿನೊಂದಿಗೆ ತಾನೇ ಹೋರಾಟ ಮಾಡುತ್ತಾ; ತನ್ನ ಅಜ್ಞಾನವನ್ನು ತನ್ನ ಜ್ಞಾನದಿಂದಲೇ ಜಯಿಸಿ, ಜಯದ ಧ್ವಜವನ್ನು ತಾನೇ ಹಾರಿಸಿಕೊಳ್ಳಬೇಕಾಗಿದೆ. ತನಗೆ ತಾನೆ ನಾಯಕನಾಗಬೇಕಾಗಿದೆ.

ವ್ಯಾಸಮಹರ್ಷಿಗಳು ಒಂದು ರಾಜ್ಯದಲ್ಲಿ ಐವರು ಪಾಂಡವರನ್ನು ಸೃಷ್ಟಿ ಮಾಡಿದರು. ನೂರಾ ಒಂದು ಕೌರವರನ್ನು ಸೃಷ್ಟಿ ಮಾಡಿದರು. ಐವರು ಪಾಂಡವರಿಗೆ ಒಬ್ಬ ದ್ರೌಪದಿಯನ್ನು ಸೃಷ್ಟಿ ಮಾಡಿದರು. ಒಬ್ಬ ಕೃಷ್ಣನನ್ನು ಸೃಷ್ಟಿ ಮಾಡಿದರು.

ರಾಜ್ಯ ಎಂದರೆ ದೇಹ. ಇದರಲ್ಲಿ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಎಂಬ ಐದು ಮಹಾಪಟ್ಟಣಗಳು. ಈ ಪಟ್ಟಣಗಳಿಗೆ ಐದೈದು ನಾಯಕರು. ಈ ನಾಯಕರು ತಮಗೆ ತಾವೇ ತಮ್ಮ ಅಜ್ಞಾನವನ್ನು ತಮ್ಮ ತಮ್ಮ ಪಟ್ಟಣಗಳ ಮೂಲಕ ಮೆರೆಯುತ್ತಾರೆ. ಅಜ್ಞಾನದ ಸುಖವೆಂದರೆ ಇವರಿಗೆ ಬಲು ಇಷ್ಟ. ಈ ಐದು ನಾಯಕರುಗಳಿಗೆ ಮನವೆಂಬ ದ್ರೌಪದಿ ಒಬ್ಬಳೆ ಹೆಂಡತಿಯಾಗಿದ್ದಾಳೆ.

ನೂರಾ ಒಂದು ಜನ ಕೌರವರಿಗೆ ತಮ್ಮ ಪಟ್ಟಣಕ್ಕೆ ಬರಲು ಆಮಂತ್ರಣ ಕೊಟ್ಟವರು ಈ ಐವರು ನಾಯಕರುಗಳೇ ಆಗಿದ್ದಾರೆ. ಅವರಿಗೆ ಆಮಂತ್ರಣ ಕೊಟ್ಟು, ಅವರನ್ನು ಭರ್ಜರಿ ಸ್ವಾಗತ ಮಾಡಿ, ಅವರ ಅಣ್ಣ ದುರ್ಯೋಧನನ್ನು ಕೆಸರ ಕುಣಿಯಲ್ಲಿ ಬೀಳುವಂತೆ ಮಾಡಿದ್ದು ಕೂಡಾ ದ್ರೌಪದಿಯೇ ಆಗಿದ್ದಾಳೆ. ಬಿದ್ದಾಗ ಎಬ್ಬಿಸುವುದು ಬಿಟ್ಟು ಸಖಿಯರೊಂದಿಗೆ ಗಹಗಹಿಸಿ ನಕ್ಕು ಅಪಮಾನ ಮಾಡಿದ್ದು ಕೂಡಾ ದ್ರೌಪದಿಯೇ ಆಗಿದ್ದಾಳೆ.

ಐವರು ನಾಯಕರಿಗೆ, ಈ ನಾಯಕರಿದ್ದ ರಾಜ್ಯಕ್ಕೆ ಆಪತ್ಕಾಲ ಕಟ್ಟಿಟ್ಟ ಬುತ್ತಿ ಎಂದು ಶ್ರೀಕೃಷ್ಣನಿಗೆ ಗೊತ್ತಾಯಿತು. ಪಾಂಡವರಾದ ಐದು ನಾಯಕರಿಗೆ ಅವರ ಹೆಂಡತಿ ದ್ರೌಪದಿಗೆ ಪರಮ ಸಂತೋಷ. ಕೌರವ ನಾಯಕನ ವಜ್ರ ಶರೀರ ದ್ರೌಪದಿಯ ಈ ಅಪಮಾನದಿಂದ ಕತಕತನೆ ಕುದಿಯಿತು. ಮುಂದೊಂದು ದಿನ ಅಜ್ಞಾನದ ಮಹಾಯುದ್ಧಕ್ಕೆ ನಾಂದಿ ಹಾಡಿತು. ತಮ್ಮ ಅಜ್ಞಾನದಿಂದ ತಾವೇ ವನವಾಸ ಅನುಭವಿಸಿದರು. ತಾವೇ ಪಗಡಿ ಆಡಿ ಸೋತು ಸುಣ್ಣವಾದರು.

ಶ್ರೀ ಕೃಷ್ಣನ ಸ್ವಗತದ ಮಾತು ಐದು ನಾಯಕರು ಕೇಳಲೇ ಇಲ್ಲ. ಐದು ನಾಯಕರಿಗೆ, ಹೆಂಡತಿ ದ್ರೌಪದಿಗೆ ಜ್ಞಾನಿ ಶ್ರೀಕೃಷ್ಣನೆಂಬ ಸಲಹೆಗಾರನು ಮಾತ್ರ ಒಬ್ಬನೇ ಆಗಿದ್ದಾನೆ. ಶ್ರೀಕೃಷ್ಣ ಏನು ಮಾಡಿಯಾನು? ತಪ್ಪು ಮಾಡಿದ ದ್ರೌಪದಿಯನ್ನು ಐವರು ಗಂಡಂದಿರನ್ನು ಶಿಕ್ಷಿಸಲು ಆತನಿಗೆ ಬರುವುದಿಲ್ಲ. ತಪ್ಪು ಮಾಡುವ ಮುನ್ನ, ತಪ್ಪು ಮಾಡಿದ ಮೇಲೆ ಸಲಹೆ ಕೊಡಬಹುದು. ಹೀಗೆ ಸಲಹೆ ಕೊಟ್ಟಾಗಲು ಕೂಡಾ ದ್ರೌಪದಿ ಗಂಡಂದಿರೊಂದಿಗೆ ಕೂಡಿ ತಪ್ಪು ಮಾಡಿದರೆ ಆ ತಪ್ಪಿನ ಫಲ ತಾನೇ ಅನುಭವಿಸಬೇಕು.

ದೇಶವೆಂಬ ದೇಹದಲ್ಲಿ ಕಣ್ಣು ಎಂಬ ಒಂದು ಪಟ್ಟಣ. ಅದಕ್ಕೆ ನಾಯಕನೊಬ್ಬನು ಇದ್ದಾನೆ. ನಾಯಕಿಯೊಬ್ಬಳು ಇದ್ದಾಳೆ. ನಾಯಕಿ ನಾಯಕನೊಂದಿಗೆ ಕೂಡಿ ಹಾದರದಿಂದ ನೋಡುತ್ತಾಳೆ. ಪುನಃ ಬಾಯಿ ಮೂಲಕ ಸೊಗಸಾಗಿ ಮಾತನಾಡುತ್ತಾಳೆ. ನೋಡುವ ಹಾದರದ ನೋಟಕ್ಕೂ ಮಾತನಾಡುವ ಮೃದು ಮಾತುಗಳಿಗೂ ಸಂಬಂಧವೇ ಇಲ್ಲ. ನಾಯಕ ನಾಯಕಿಯರಿಬ್ಬರೂ ಮಾಡುವ ಈ ಹಾದರವನ್ನು ಮಹಾಜ್ಞಾನಿ ಶ್ರೀಕೃಷ್ಣ ತನ್ನ ಕಣ್ಣಿನಿಂದ ನೋಡಿ ನೋಟವನ್ನು ಅವರು ಆಡುವ ಮಾತನ್ನೂ ಖಂಡಿಸುತ್ತಾನೆ. ನಾಯಕರಾದ ತಮಗೆ ಈ ನೋಟ ಈ ಮಾತು ತರವಲ್ಲ ಎಂದು ಬುದ್ಧಿ ಹೇಳುತ್ತಾನೆ; ಸಲಹೆ ನೀಡುತ್ತಾನೆ. ಕಣ್ಣಿನ ಹಾಗೆಯೇ ಕಿವಿ ಕೂಡಾ ಒಂದು ಪಟ್ಟಣ. ಮೂಗು ನಾಲಿಗೆ ಚರ್ಮ ಕೂಡಾ ಒಂದು ಪಟ್ಟಣಗಳೇ ಆಗಿವೆ. ಅಲ್ಲಿ ಶಬ್ದ ವಾಸನೆ ಸ್ಪರ್ಶ ರುಚಿಯದೇ

ಕಾರುಬಾರು.

ಐದು ನಾಯಕರುಗಳಿಗೆ ಮನವೆಂಬ ಹೆಂಡತಿ ಒಬ್ಬಳೆ. ಜ್ಞಾನಿ ಎಂಬ ಕೃಷ್ಣ ಕೂಡಾ ಒಬ್ಬನೇ. ನೋಟದ ಅಜ್ಞಾನವನ್ನು ಜ್ಞಾನದಿಂದ ಬೋಧಿಸುತ್ತಾನೆ. ಶಬ್ದದ ಅಜ್ಞಾನವನ್ನು ನಿಃಶಬ್ದದ ಸೂತ್ರದಿಂದ ಬೇಧಿಸಿ ಕೇಳಲು ಹೇಳುತ್ತಾನೆ. ಸುಗಂಧ ದುರ್ಗಂಧದ ಅಜ್ಞಾನವನ್ನು ಅರಿವಿನ ಪರಿಮಳ ಬೀರಿ ಕಳೆಯುತ್ತಾನೆ. ರುಚಿ ಅರುಚಿ ಕಳೆದು ಪ್ರಸಾದದ ಮಹಿಮೆಯನ್ನು ತಿಳಿಹೇಳುತ್ತಾನೆ. ತನ್ನನ್ನು ತಾನೇ ಮುಟ್ಟಿಕೊಂಡು ಸ್ಪರ್ಶ ಸುಖದ ಪರಮ ಸಂತೋಷವನ್ನು ತೆರೆದಿಡುತ್ತಾನೆ.

ತನ್ನ ಅಜ್ಞಾನದೊಂದಿಗೆ ತನ್ನ ಜ್ಞಾನದ ಮೂಲಕ ತಾನೇ ಹೋರಾಟ ಮಾಡಿ ಜಯ ಸಾಧಿಸಿದವನೇ ವೀರಾಧಿವೀರನಾಗುತ್ತಾನೆ. ಮಹಾವೀರನಾಗುತ್ತಾನೆ. ಪರಮಯೋಗಿಯಾಗುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ ಸ್ವಪ್ರಭೆಯುಳ್ಳ ಜ್ಞಾನಿಯಾಗುತ್ತಾನೆ. ಪಟ್ಟಣದ ಒಡೆಯನಾಗುತ್ತಾನೆ.

**510**

**ಗ್ರಾಮವೆಂಟರ ಒಳಗೆ ಆನಂದದಾಳಾಪ**
**ಸ್ವಾನುಭೂತ್ಯೈಕದಲಿ ಸೌಖ್ಯವಾಗಿ**
**ಭಾನುವಿನುದಯದ ಪ್ರಭೆಯ ನುಂಗಿದ ದೀಪ್ತಿ-**
**ಅಜಾತ ಗುರುವಿನ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗವೆಂಬುದು ಅಷ್ಟಮದಗಳಿಂದ ಭರಿತವಾದ ಗ್ರಾಮ. ಒಮ್ಮೆ ಸಾತ್ವಿಕ ಗುಣಕ್ಕೆ ವಶವಾಗಿ ಇಡೀ ಗ್ರಾಮವೇ ಓಲಾಡುತ್ತದೆ. ಮತ್ತೊಮ್ಮೆ ರಾಜಸಗುಣದಲ್ಲಿ ಮಿಂದು ತೊಡೆತಟ್ಟಿ ನಿಲ್ಲುತ್ತದೆ. ಮಗದೊಮ್ಮೆ ತಾಮಸಗುಣದಲ್ಲಿ ಕುಡಿದು ಕುಪ್ಪಳಿಸುತ್ತಾ ತನ್ನ ಸುಖದಲ್ಲಿಯೇ ಮೆರೆಯುತ್ತದೆ.

ಅಂಗಕ್ಕೆ ಸಾತ್ವಿಕ ರಾಜಸ ತಾಮಸ ಸುಖ ಮತ್ತು ಅದರಿಂದ ಉಂಟಾಗುವ ದುಃಖದ ಪರಿಚಯವಿದೆಯೇ ಹೊರತು ತನಗೆ ತಾನೇ ಬೆಳಗುವ ಸೂರ್ಯನನ್ನೂ ಬೆಳೆಗುವ, ಬೆಳಗಿಂಗೆ ಬೆಳಗಾಗಿ ಬೆಳಗುವ ಸ್ವಪ್ರಭೆಯಿದೆಯೆಂದು ಅನ್ನಿಸುವುದೇ ಇಲ್ಲ.

ದಿನದಿನಕ್ಕೂ ಹುಟ್ಟುತ್ತಾ ಸಾಯುತ್ತಾ, ಸುಖದುಃಖದ ಚಿಂತೆಯಲ್ಲಿ ಬೇಯುತ್ತಾ, ಭೌತಿಕ ಸುಖವನ್ನು ಅನುಭವಿಸುವ ತನುವನ್ನು ಆವರಿಸಿದ ಮನಕ್ಕೆ, ತನುವಿನೊಳಗೊಂದು ಪರಮ ಸುಖವನ್ನು ಅನುಭವಿಸುವ ಪರಮಾನಂದದಿಂದ ಓಲಾಡುವ ಮಹಾತನುವಿದೆಯೆಂದು ಮನಕ್ಕೆ ಗೊತ್ತಾಗುವುದೇ ಇಲ್ಲ.

ಮನಕ್ಕೆ ಭೌತಿಕ ತನುವೆಂದರೆ ಪ್ರಾಣ. ಅದನ್ನು ಬಿಟ್ಟು ಒಂದರಗಳಿಗೆಯೂ ಇರದು. ಪರಮಸುಖ ಆಂತರಿಕ ತನುವಿನಲ್ಲಿ ಮಾತ್ರ ಇದೆಯೆಂದು ಅಜಾತ ಗುರುದೇವನಿಂದ ಗೊತ್ತಾಗುವುದೊಂದೇ ತಡ, ಮನ ಆ ಘನ ತನುವಿನ ಸಂಗ ಮಾಡುತ್ತದೆ.

ಘನ ತನುವಿನ ಸಂಗ ಮಾಡಿದ ಮನ, ಘನ ಮನವೇ ಆಗಿ ಘನ ಗುರುವಿನ ಸಹಾಯದಿಂದಲೇ ಮನ ಅಜಾತ ಗುರುದೇವನ ಸಂಗ ಮಾಡುವ, ಆತನ ಚರಣ ಕಮಲಗಳಿಗೆ ಶರಣು ಹೋಗಿ ಶರಣಾಗತನಾಗುವ ಮಾರ್ಗವನ್ನು ಅದರ ರಹಸ್ಯಮಯವಾದ ಸೂತ್ರಗಳನ್ನು ಕಲಿತುಕೊಂಡು ಅತ್ತ ಪಯಣಿಸುತ್ತದೆ.

ಗುರುದೇವ ಅಜಾತ. ಆತ ಯಾರಿಗೂ ಹುಟ್ಟಿದವನಲ್ಲ. ಎಂಟು ಗ್ರಾಮಗಳುಳ್ಳ ತನುವನ್ನು ಸೃಷ್ಟಿ ಮಾಡಿ ಅದರ ಒಳಗೆ ಆನಂದದ ಆಲಾಪವನ್ನು ಗೈಯ್ಯುತ್ತ. ಸ್ವಾನುಭಾವದ ಪರಮ ಸುಖದಲ್ಲಿ ಸೌಖ್ಯನಾಗಿದ್ದಾನೆ. ಭಾನುವಿನುದಯದ ಪ್ರಭೆಯನ್ನು ನುಂಗಿ, ಭಾನುವನ್ನೇ ಬೆಳಗಿಂಗೆ ಬೆಳಗಾಗಿ, ಮಹಾಬೆಳಗಾಗಿ ಬೆಳಗುತ್ತಿದ್ದಾನೆ.

ಆತ ಸೃಷ್ಟಿ ಮಾಡಿದ ಎಂಟು ಗ್ರಾಮಗಳುಳ್ಳ ತನುವಿಗೆ ಜನನವಿದೆ; ಮರಣವೂ ಇದೆ. ಅದಕ್ಕೆ ಚರಿತ್ರೆಯೂ ಇದೆ; ಲೋಕದ ದೃಷ್ಟಿಯಲ್ಲಿ ಅದು ಭೌತಿಕ ತನುವೆಂದು ಲೋಕದಿಂದ ಕರೆಯಿಸಿಕೊಳ್ಳುತ್ತದೆ. ಆ ಭೌತಿಕ ತನುವನ್ನು ಆವರಿಸಿದ ಮನಕ್ಕೆ ಚರಿತ್ರೆ ಇಲ್ಲ; ಹುಟ್ಟಿಲ್ಲ ಸಾವಿಲ್ಲ.

ಮನವೆಂಬ ತನುವು ಭೌತಿಕ ತನುವಿನ ಸಂಗಮಾಡಿ ಆ ತನುವಿನಲ್ಲಿ ಅಷ್ಟಮದಗಳನ್ನು, ಅರಿಷಡ್ವರ್ಗಗಳನ್ನು, ಸಪ್ತವ್ಯಸನಗಳನ್ನೂ ಸೃಷ್ಟಿ ಮಾಡಿದೆ. ಭೌತಿಕ ತನು ಮನದ ಮಾತು ಕೇಳುತ್ತದೆ. ಪ್ರತಿಭಟಿಸುವುದಿಲ್ಲ. ತನ್ನನ್ನು ಸೃಷ್ಟಿಮಾಡಿ, ತನ್ನಲ್ಲಿಯೇ ಸಂಗಮವಾದ ಪರಮಾತ್ಮನ ವಾಹನ ತಾನೆಂದು ತನುವಿಗೆ ಗೊತ್ತಿಲ್ಲ. ಅದು ಮರೆತು ಹೋಗಿದೆ. ಹೀಗಾಗಿ ತನು ಮನಕ್ಕೆ ಸಹಕರಿಸುತ್ತಾ ಮನದ ಸಂಗ ಮಾಡಿದೆ.

ಮನಕ್ಕೆ ತನುವಿನ ಸಂಗ ಸಾಕಾಗಿ ಅರಿವೆಂಬ ಗುರುದೇವನ ತನುವಿನ ಸಂಗ ಮಾಡುವುದೊಂದೇ ತಡ, ತಾನು ವಾಸ ಮಾಡಿದ ಭೌತಿಕ ತನುವನ್ನು ಗುರುದೇವನಿಗೆ ಒಪ್ಪಿಸುತ್ತದೆ. ಆಗ ಆ ಭೌತಿಕ ತನುವೇ ಗುರುದೇವನ ತನುವಾಗುತ್ತದೆ. ಗುರುದೇವನೆಂದರೆ ಮಹಾದೇವನೇ ಆಗಿದ್ದಾನೆ. ಆತ ಸದಾಶಿವನೂ ಹೌದು. ಸಾಕ್ಷಾತ್ ಪರಬ್ರಹ್ಮನೂ ಆಗಿದ್ದಾನೆ. ಈತ ಅಜಾತ. ಹುಟ್ಟು ಸಾವುಗಳು ಇಲ್ಲದಾತ. ಈತ ಕಪಿಲಸಿದ್ಧ ಮಲ್ಲಿಕಾರ್ಜುನನೇ ಆಗಿದ್ದಾನೆ.

**511**

**ಘರ್ಜನೆಯಿಂ ಸಿಡಿಲು ಅಡಸಿ ಬಂದು ಪೊಯ್ವುತ್ತಿರಲಿ,**
**ಪೊಯ್ಯವೊಲ್ಲದೆ ವಾಯುವಿಮಾನಂಗಳಿಂದ ಎತ್ತಿಕೊಳ್ಗೆ**
**ಎತ್ತಿಕೊಂಡಡೆ, ಮನವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ**
**ನಿಮ್ಮದೊಂದು ಸಮತಾಗುಣ**
**ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನಿಂದ ಹೊರಬಂದ ಶಬ್ದ ಬರಸಿಡಿಲಾಗಿ ತನುವಿಗೆ ಬಡಿದು ತನುವನ್ನು ಘಾಸಿಗೊಳಿಸುತ್ತದೆ.

ಪಾಂಡವರು ಕೌರವರಿಗೆ ಆಮಂತ್ರಣ ನೀಡಿದರು. ತಾವು ಕಟ್ಟಿ ಶೃಂಗಾರಗೊಳಿಸಿದ ಅರಮನೆಯನ್ನು ಕೌರವರಿಗೆ ತೋರಿಸಿ ಹೊಟ್ಟೆ ಉರಿಯುವಂತೆ ಮಾಡಿದರು. ದ್ರೌಪದಿ ಬಿಡಿಸಿದ ರಂಗೋಲಿಯಲ್ಲಿ ನೆಲವೆಂದು ಕಾಲಿಟ್ಟ ದುರ್ಯೋಧನ ಕೆಸರಗುಂಡಿಯಲ್ಲಿ ಬಿದ್ದ. ಕೌರವರಾಜ ಇಡೀ ದೇಶಕ್ಕೆ ದೊಡ್ಡವನು; ಬಲಶಾಲಿ, ವಜ್ರಶರೀರಿಯಾದ ಅವನಿಗೆ ಬಿದ್ದ ಗಾಯದಿಂದಾಗಿ ಕಾದಸೀಸ ಮೈಮೇಲಿ ಚಲ್ಲಿದಂತಾಯಿತು.

ದುರ್ಯೋಧನ ಬಿದ್ದದ್ದನ್ನು ದ್ರೌಪದಿ ಸಖಿಯರೊಂದಿಗೆ ನೋಡಿದಳು. ಗಹಗಹಿಸಿ ನಕ್ಕಳು.

''ಕುರುಡನ ಮಗ ಕುರುಡ'' ಎನ್ನುವ ಶಬ್ದ ಆಕೆಯ ಬಾಯಿಂದ ಹೊರಬಂದು ದುರ್ಯೋಧನನ ಕಿವಿಗೆ ಬರಸಿಡಿಲಿನಂತೆ ಬಡಿದು ವಜ್ರ ಶರೀರವನ್ನು ಛಿದ್ರಛಿದ್ರ ಗೊಳಿಸಿತು. ಆತನ ನೂರು ಜನ ಸಹೋದರರು ಕೂಡಾ ಆ ಶಬ್ದ ಕೇಳಿ ಕತಕತನೆ ಕುದ್ದು ತಮ್ಮ ಅಣ್ಣನನ್ನು ಕೆಸರಿನಿಂದ ಮೇಲೆ ಎತ್ತಿದರು.

ಆಮಂತ್ರಣ ನೀಡಿ ಅಪಮಾನಕ್ಕೆ ಈಡುಮಾಡುವುದೆಂದರೇನು? ಪಾಂಚಾಲಿ ಎಂದು ಕರೆಯಿಸಿಕೊಂಡ ದ್ರೌಪದಿ ಪಾಂಡವರ ರಾಣಿ; ಕೌರವ ರಾಜನನ್ನು ಅಪಮಾನಕ್ಕೆ ಈಡುಮಾಡುವುದೆಂದರೇನು?.

ಸಿಡಿಲು ಬಡಿದರೆ ಅಲ್ಲಿದ್ದವರಿಗೆಲ್ಲ ಗಾಯವಾಗುತ್ತದೆ. ಒಬ್ಬರಿಗೆ ಸಂತೋಷ ಮತ್ತೊಬ್ಬರಿಗೆ ದುಃಖವಾಗುವುದಿಲ್ಲ. ದ್ರೌಪದಿಯಿಂದ ಹೊರಬಂದ ಸಿಡಿಲಿನಂತಹ ಶಬ್ದ ಆಕೆಯ ಸಖಿಯರಿಗೆ ಪಾಂಡವರಿಗೆ ಸಂತೋಷವಾಯಿತು. ಕೌರವರಾಜನಿಗೆ ಎದೆ ಸೀಳಿದಂತಹ ದುಃಖವಾಯಿತು. ಆತನ ತಮ್ಮಂದಿರಿಗೆ ಸಂಬಂಧಿಗಳಿಗೆ ಆತನ ಪಕ್ಷದವರಿಗೆ ದುಃಖವಾಯಿತು.

ಶಬ್ದವನ್ನು ಟಂಕಿಸಿದ ಮನುಷ್ಯ ಶಬ್ದದಿಂದಲೇ ಗಾಯಮಾಡುತ್ತಾನೆ. ಶಬ್ದದಿಂದಲೇ ಸುಖಿಸುತ್ತಾನೆ. ಶಬ್ದದಿಂದಲೇ ದುಃಖಿಸುತ್ತಾನೆ; ದುಃಖಕ್ಕೆ ಒಳಗಾಗುತ್ತಾನೆ. ದುಃಖಕ್ಕೆ ಒಳಗು ಮಾಡುತ್ತಾನೆ. ದ್ರೌಪದಿ ಎಸೆದ ಮಾತಿನ ಈ ಬ್ರಹ್ಮಾಸ್ತ್ರದಿಂದಾಗಿ ಕುರುಕ್ಷೇತ್ರ ಯುದ್ಧವಾಯಿತು. ಕೌರವರ ಹನ್ನೊಂದು ಅಕ್ಷೋಹಿಣಿ ಸೈನ್ಯ, ಪಾಂಡವರ ಏಳು ಅಕ್ಷೋಹಿಣಿ ಸೈನ್ಯ ಸತ್ತು ಹೋಯಿತು. ರಕ್ತದ ಕೆರೆಗಳು ನಿರ್ಮಾಣವಾದವು.

ಆದರೂ ಅಂದಿನಿಂದ ಇಂದಿನವರೆಗೂ ಮಾತನ್ನು ಕೇಳುವ, ಮಾತನ್ನು ಆಡುವ ಕಲೆಯನ್ನು ಕಲಿತುಕೊಳ್ಳಬೇಕೆಂದು ಮನುಷ್ಯನಿಗೆ ಹೊಳೆಯುತ್ತಿಲ್ಲ.

ಕೈಕೇಯಿ ತನ್ನ ಸುಖಕ್ಕಾಗಿ ಆಡಿದ ಎರಡು ಮಾತುಗಳು ರಾಮನಿಗೆ ಸೀತೆಗೆ ಲಕ್ಷ್ಮಣ ಭರತ ಶತ್ರುಘ್ನರಿಗೆ ತಂದೆ ದಶರಥನಿಗೆ ತಾಯಿ ಕೌಸಲ್ಯ ಸುಮಿತ್ರಳಿಗೆ ಇಡೀ ರಾಜ್ಯಕ್ಕೆ ದುಃಖ ತಂದಿತು. ರಾಮ ಹದಿನಾಲ್ಕು ವರ್ಷ ವನವಾಸ ಮುಗಿಸಿಕೊಂಡು ರಾಜ್ಯಕ್ಕೆ ಮರಳಿದಾಗ, ಇಡೀ ರಾಜ್ಯ ಸಂತೋಷ ವ್ಯಕ್ತಪಡಿಸಿತು. ಕೈಕೇಯಿ ಒಬ್ಬಳೇ ಹದಿನಾಲ್ಕು ವರ್ಷಗಳಿಂದ ಕತ್ತಲಕೋಣೆಯಿಂದ ಹೊರಬರಲೇ ಇಲ್ಲ. ತನ್ನ ಸುಖಕ್ಕಾಗಿ ಆಡಿದ ತನ್ನ ಮಾತುಗಳೇ ತನ್ನನ್ನು ಅನಂತಕಾಲದವರೆಗೆ ಬಾಧೆಗೆ ಈಡು ಮಾಡಿತು.

ಮನುಷ್ಯ ವಿಜ್ಞಾನಿಯಾಗಿ ಏನೆಲ್ಲಾ ಕಂಡು ಹಿಡಿಯುತ್ತಾನೆ. ತನ್ನ ಪರಮಸುಖವನ್ನು ಹುಡುಕುವುದರಲ್ಲಿ ತಾನೇ ಹಿಂದೆ ಬಿದ್ದಿದ್ದಾನೆ. ಸುಖ ಮತ್ತು ದುಃಖ ತರುವ ಮಾತುಗಳನ್ನು ಆಡುವುದರಲ್ಲಿ ಮನುಷ್ಯ ನಿಪುಣ. ಹಾಗೆ ಕೇಳುವುದರಲ್ಲಿಯೂ ನಿಪುಣ. ಕತೆ ಕವಿತೆಗಳನ್ನು ರಚಿಸಿ ನವರಸಗಳ ಮೂಲಕ ಸಂತೋಷ ಪಡುವುದರಲ್ಲಿ ಕೂಡಾ ನಿಪುಣನೆನ್ನಿಸಿಕೊಂಡಿದ್ದಾನೆ.

ಸಿಡಿಲಿನಂತೆ ಬಡಿಯುವ ಮಾತನ್ನು ಚೆಂಡಿನಂತೆ ಗುತ್ತಿಗೆ ಹಿಡಿದು ಅರಿವಿನಿಂದ ಕೇಳುವ ಕಲೆಯನ್ನು ಕರಗತ ಮಾಡಿಕೊಳ್ಳುವುದರಲ್ಲಿ ಮನುಷ್ಯ ಸಂಪೂರ್ಣ ಹಿಂದೆ ಬಿದ್ದಿದ್ದಾನೆ. ಆಸ್ತಿ, ಅಂತಸ್ತು, ವಿದ್ಯೆ, ಪದವಿ, ಹೊಲ, ಮನೆ, ಚಿನ್ನ, ವಜ್ರ, ವಾಹನಗಳನ್ನು ಖರೀದಿಸಿ ಸುಖಪಡುವುದರಲ್ಲಿ ಹಿಂದೆ ಬಿದ್ದಿಲ್ಲ. ಶಾಸಕ ಸಚಿವ ಮಂತ್ರಿ ಪ್ರಧಾನಿ ರಾಷ್ಟ್ರಪತಿಯಾಗುವುದರಲ್ಲಿಯೂ ಹಿಂದೆ ಬಿದ್ದಿಲ್ಲ. ಮಾತನ್ನು ಅರಿವಿನಿಂದ ಕೇಳುವುದರಲ್ಲಿ, ಅರಿವಿನಿಂದ ಮಾತನಾಡುವುದರಲ್ಲಿ ಮನುಷ್ಯ ಸಂಪೂರ್ಣ ನೆಲಕಚ್ಚಿದ್ದಾನೆ.

ಬರಸಿಡಿಲಿನಂತೆ ಬಡಿಯುವ ಶಬ್ದಗಳು ತನುವನ್ನು ಅಪ್ಪಳಿಸಲಿ ವಾಯು ಅದಕ್ಕೆ ಸಹಕರಿಸಿ

ವಿಮಾನದಂತೆ ತನ್ನನ್ನು ನೆಲಕ್ಕೆ ಉರುಳಿಸಲಿ, ಮನವಿಚ್ಛಂದವಾಗದಂತೆ ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಸಮತಾಗುಣ ತನ್ನನ್ನು ಹೊದ್ದುಕೊಳ್ಳಲಿ ಎಂದು ಸಿದ್ಧರಾಮ ಶಿವಯೋಗಿಗಳು ಹಾಡಿದ್ದಾರೆ.

**512**

**ಘಟಸರ್ಪನ ಫಣಾಮಣಿಯ ಬೆಳಗಿನ ಪ್ರಭೆ ಹಿರಿದು:**
**ಸ್ಥಿರವಾಗಿ ಇರಬಲ್ಲಡೆ.**
**ನಿಸ್ತಾರ, ನಿಸ್ತಾರ, ನಿಸ್ತಾರವು**
**ಸತ್ಯಪ್ರಭೆಯಿಂದಲು ವಿಚಿತ್ರಸ್ಥಾನವಾದಡೆ,**
**ಮತ್ತೆ ನಿತ್ಯ ತಪ್ಪದು,**
**ಕಪಿಲಸಿದ್ಧ ಮಲ್ಲಿನಾಥಯ್ಯನ.**

ಇಡೀ ಭೂಮಿಯನ್ನು ಸರ್ಪ ಹೊತ್ತುಕೊಂಡಿದೆ. ಸರ್ಪವೇ ಭೂಮಿಗೆ ಆಧಾರವೆಂದು ನಾವೆಲ್ಲರೂ ಕೇಳಿದ್ದುಂಟು. ಸರ್ಪದ ಹೆಡೆಯ ಮೇಲೆ ಮಣಿಯೊಂದಿದೆ. ಅದರ ಬೆಳಕಿನಲ್ಲಿ ಸರ್ಪ ತನ್ನ ಆಹಾರವನ್ನು ಪಡೆಯುತ್ತದೆ. ಹೀಗೆ ಜನ ಮಾತನಾಡುವುದನ್ನು ನಾವು ಕೇಳುತ್ತೇವೆ. ಮಣಿಯ ಆಸೆಗಾಗಿ ಸರ್ಪ ಬೇಟೆ ಆಡಲು ಕೆಲ ಜನ ಕಾಡಿಗೆ ಹೋಗುತ್ತಾರೆ ಎನ್ನುವುದನ್ನು ಕೇಳಿದ್ದೇವೆ.

ಅಮೃತ ಮಥನ ಮಾಡುವಾಗ, ಹಿಮಾಲಯ ಪರ್ವತವನ್ನೇ ಕಡಗೋಲನ್ನಾಗಿಸಿ, ಸರ್ಪವನ್ನೇ ಹಗ್ಗವನ್ನಾಗಿಸಿ, ಅದರ ಹೆಡೆಯತ್ತ ರಕ್ಕಸರು ಹಿಡಿದು, ಸರ್ಪದ ಬಾಲದತ್ತ ದೇವತೆಗಳು ಹಿಡಿದು, ಸಮುದ್ರ ಮಥನ ಮಾಡಿದಾಗ, ಅಲ್ಲಿ ಅಮೃತ ಮತ್ತು ಕಾಳಕೂಟ ವಿಷ ಉತ್ಪನ್ನವಾಯಿತು, ವಿಷವನ್ನು ಶಿವ ಸ್ವೀಕರಿಸಿದ. ಅಮೃತವನ್ನು ದೇವತೆಗಳಿಗೆ ಶ್ರೀಕೃಷ್ಣ ತನ್ನ ಜಾಣತನದಿಂದ ಹಂಚಿದನೆಂದು ಪುರಾಣ ಹೇಳುತ್ತದೆ. ಈ ಒಂದು ಕತೆ ಕೂಡಾ ಸರ್ವರಿಗೂ ಗೊತ್ತಿದೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಘಟಸರ್ಪನ ಫಣಾಮಣಿಯ ಬೆಳಗಿನ ಪ್ರಭೆ ಹಿರಿದು ಎಂದು ಹೇಳಿದ್ದಾರೆ. ಸರ್ಪ ವಿಷ ಸರ್ಪವೇ ಆಗಿದೆ. ಅದರ ಹೆಡೆಯ ಮೇಲೆ ಮಣಿಯೂ ಇಲ್ಲ. ಅದು ಭೂಮಿಯನ್ನು ಹೊತ್ತುಕೊಂಡಿಲ್ಲ. ಅದನ್ನು ಹಗ್ಗ ಮಾಡಿ ಕಡಿದು ಅಮೃತವನ್ನು ಹೊರಗೆ ತೆಗೆಯಲಿಲ್ಲ. ಇವೆಲ್ಲ ಜ್ಞಾನ ಪ್ರಧಾನವಾದ ಬೆಡಗಿನ ಕತೆಗಳು; ಸೂತ್ರಗಳು ಆಗಿವೆ. ಆಸಕ್ತರಿಗೆ ಮಾತ್ರ ಇದರ ಕೀಲು ಹೊಳೆಯುತ್ತವೆ.

ದೇಹವನ್ನು ಆವರಿಸಿ, ದೇಹದ ಸಂಗ ಮಾಡಿದ ಮನವೇ ಹಾವು. ದೇಹದಲ್ಲಿ ಸಂಗಮವಾದ ಜ್ಞಾನವೇ ಶಿವ. ಆತ ಬೆಳಗಿಂಗೆ ಬೆಳಕಾಗಿ ಬೆಳುಗುವ ಬೆಳಕು. ಶಿವ ದೇಹವನ್ನು ಮಣಿಯಂತೆ ಜ್ಞಾನದಿಂದ ಬೆಳಗಿದರೆ, ಮನವೆಂಬ ಹಾವು ದೇಹವನ್ನು ಸುತ್ತುವರಿದು, ದೇಹದ ಮೂಲಕ ತನಗೆ ಬೇಕಾದ ಅರಿಷಡ್ವರ್ಗಗಳನ್ನು, ಸಪ್ತವ್ಯಸನಗಳನ್ನು, ಅಷ್ಟಮದಗಳನ್ನು ಪ್ರದರ್ಶಿಸುವ ಮೂಲಕ ಬೇಟೆಯಾಡುತ್ತದೆ.

ಮನ, ದೇಹದಿಂದ ಮಾಡುವ ದುರ್ವಿಚಾರಗಳನ್ನು ದೇಹದಲ್ಲಿಯೇ ಸಂಗಮವಾದ ಶಿವ ಮನ ಮತ್ತು ದೇಹಕ್ಕೆ ಪಾಠ ಮಾಡುತ್ತಲೇ ಇರುತ್ತಾನೆ. ಮನಕ್ಕೆ ಅರಿವೆಂಬ ಶಿವನ ಪಾಠಗಳು ಇಷ್ಟವಾಗಿ ಆಸಕ್ತಿ ಹುಟ್ಟಿದಾಗ, ಮನವೆಂಬ ಹಾವನ್ನು ಹಿಡಿದು ಶಿವ ತನ್ನ ಕೊರಳಿಗೆ ಆಭರಣ ಮಾಡಿಕೊಳ್ಳುತ್ತಾನೆ.

ಆಗ ಶಿವಮಣಿ ಇಡೀ ದೇಹವನ್ನು ಅರಿವಿನಿಂದ ಬೆಳಗುತ್ತದೆ.

ದೇಹದಲ್ಲಿಯೇ ಸಂಗಮವಾದ ಶಿವ ದೇಹವನ್ನು ಆವರಿಸಿದ ಮನವೆಂಬ ಹಾವಿನ ವಿಷ ಉಂಡು ನಂಜುಂಡನೆಂದು, ನೀಲಕಂಠನೆಂದು ಕರೆಯಿಸಿಕೊಳ್ಳುತ್ತಾನೆ. ಸತ್ಯ ಪ್ರಭೆಯಿಂದ ಬೆಳಗಿಂಗೆ ಬೆಳಕಾಗಿ ಬೆಳಗುತ್ತಾನೆ. ಸತ್ಯಪ್ರಭೆಯಿಂದ ಸ್ಥಾನಪಲ್ಲಟವಾದಡೆ ಮತ್ತೆ ತನುವಿಗೆ ನಿತ್ಯ ತಪ್ಪದು ಎಂದು ಸಿದ್ಧರಾಮ ಶಿವಯೋಗಿಗಳು ಬೆಡಗಿನ ಭಾಷೆ ಬಳಸಿದ್ದಾರೆ.

ಮನ ಅರಿವಿಗೆ ಮರುಳಾಗಲೆಂದು ಶರಣರು, ಪುರಾಣಿಕರು, ಜ್ಞಾನಿಗಳು, ಉಪನಿಷತ್‌ಕಾರರು, ದಾಸರು, ಕ್ರಿಸ್ತ, ಕ್ರಿಷ್ಣ, ಪೈಗಂಬರರು, ಬುದ್ಧ ಮಹಾವೀರಾದಿ ಸಂತರು ಬೆಡಗಿನ ಭಾಷೆ ಬಳಸಿದ್ದಾರೆ. ಆದರೂ ಮನಸ್ಸು ತನುವಿನಲ್ಲಿಯೇ ತನ್ಮಯವಾದ ಅರಿವಿನತ್ತ ವಾಲಿ ಆ ಅರಿವಿನೊಂದಿಗೆ ಸ್ಥಿರವಾಗಿ ನಿಲ್ಲುತ್ತಿಲ್ಲ. ಶಿವಶಕ್ತಿ ಭರಿತವಾದ ಅರಿವಿನ ದೇಹ ಎಂದು ಕರೆಯಿಸಿಕೊಳ್ಳಲು ಮನವೆಂಬ ಹಾವಿಗೆ ಸಾಧ್ಯವಾಗುತ್ತಿಲ್ಲ.

ಅರಿವಿನ ಬೆಳಕುಳ್ಳ ಮಣಿಯೇ ಬೇರೆ ಇದೆ. ಹಾವು ಬೇರೆಯೇ ಇದೆ. ಮನವೆಂಬ ಹಾವು ಮತ್ತು ಅರಿವಿನ ಬೆಳಕನ್ನು ಹೊತ್ತ ದೇಹವೂ ಬೇರೆಯೇ ಇದೆ. ಮನವೆಂಬ ಘಟಸರ್ಪದಿಂದಾಗಿ ಒಂದಕ್ಕೊಂದು ಪರಿಚಯವಿಲ್ಲದಂತಾಗಿದೆ. ಅರಿವೆಂಬ ಶಿವ, ಸರ್ಪವನ್ನು ಹಿಡಿದು ತನ್ನ ಕೊರಳಿಗೆ ಆಭರಣವನ್ನಾಗಿಸಿಕೊಳ್ಳುತ್ತಿಲ್ಲ; ಹಾವೇ ಸ್ವತಃ ಅರಿವಿಗೆ ಶರಣು ಹೋಗಿ ಶಿವನ ಕೊರಳಿಗೆ ಆಭರಣವಾಗುತ್ತಿಲ್ಲ. ಇವೆರಡನ್ನೂ ಸಾಕ್ಷಿಯಾಗಿ ಅನುಭವಿಸುತ್ತಿರುವ ದೇಹ ಕೂಡಾ ಅರಿವಿಗೆ ಸ್ಪಂದಿಸುತ್ತಿಲ್ಲ. ದೇಹವೇ ದೇಹಕ್ಕೆ ಒಂದು ಬೆಡಗಾಗಿ ನಿಂತಿದೆ. ಹಾವು ಸಾಯುತ್ತಿಲ್ಲ; ಕೋಲು ಮುರಿಯುತ್ತಿಲ್ಲ; ಎಷ್ಟೊಂದು ಹುತ್ತ(ಕಾಯ)ಗಳು ನಾಪತ್ತೆಯಾದವು.

**513**

**ಘಟ್ಟಣೆಯ ಲೋಕದಲಿ**
**ಬೆಟ್ಟಗಳಾರಾಗಿ ಇಕ್ಕೆಲದಲೀರಾರು ಸೂರಿಯನನೂ**
**ಮತ್ತೆ ಪ್ರಭೆಯನು ಮಾಡಿ**
**ಹೊತ್ತಿಪ್ಪ ತತ್ವಕ್ಕೆ ಸೀಮೆ ತಾನೂ**
**ಒತ್ತೆರನು ಮುತ್ತೆರನು, ಮುತ್ತೆರನು, ಒತ್ತೆರನು**
**ಮತ್ತೆ ತ್ವಮಸಿಯ ರೂಪು ತಾನು ವಿಚಿತ್ರ**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ**
**ಭಕ್ತಿತಾತ್ಪರ್ಯದ ಪರಿಯಿಂತುಂಟು.**

ಕತ್ತಲೆಯ ಲೋಕದಲ್ಲಿ ನಿಜಸೂರ್ಯನನ್ನು ಹುಡುಕುವವರು ಒಬ್ಬರೂ ಇಲ್ಲ. ಸೂರ್ಯ ಎಲ್ಲರಿಗೂ ಬೇಕೇಬೇಕು. ಆದರೆ ಆತ ಆರು ಬೆಟ್ಟಗಳ ಮರೆಯಲ್ಲಿದ್ದಾನೆ. ಕಾಮ ಕ್ರೋಧ ಲೋಭ ಮೋಹ ಮದಮತ್ಸರಗಳೆಂಬ ಬೆಟ್ಟಗಳ ಮರೆಯಲ್ಲಿದ್ದಾನೆ.

ಕಾಮದ ಸುಖದಲ್ಲಿ ಸೂರ್ಯ ಬೀರುವ ಬೆಳಕು ಯಾರಿಗೂ ಬೇಡ. ಆ ಸುಖಕ್ಕೆ ಆ ಸುಖದ ದಾರಿಗೆ ಕತ್ತಲೆ ಬೇಕೇಬೇಕು. ಬೆಳಕು ಬಿದ್ದರೆ ಕಾಮದ ಆಟ ನಡೆಯುವುದಿಲ್ಲ. ಕತ್ತಲೆಯ ಸುಖ ಕಂಡುಕೊಳ್ಳುವುದಕ್ಕಾಗಿ ಮರೆವಿನ ಅರಿವು ಬೇಕು. ಕತ್ತಲೆಯ ಕಾಮದ ಸುಖ ಸಂಪೂರ್ಣ

ನಾಶಮಾಡಿಕೊಳ್ಳುವ ಅರಿವಿನ ಬೆಳಕು ಕಾಮಕ್ಕೆ ಬೇಡವೇ ಬೇಡ. ತನ್ನನ್ನು ನಾಶ ಮಾಡುವ ಬೆಳಕಿನತ್ತ ಕಾಮ ಸುಳಿಯುವುದೇ ಇಲ್ಲ. ಇದು ಕಾಮದ ನೀತಿಯೂ ಅಲ್ಲ. ಲೋಕ ಈ ನೀತಿಯನ್ನು ಪಾಲಿಸುತ್ತಲಿದೆ.

ಲೋಕವನ್ನು ಕಾಮದಿಂದ ಪಾರು ಮಾಡಬೇಕಾದ ಲೋಕದ ಗುರುಗಳು ಕೂಡಾ ಕತ್ತಲೆಯ ಸುಖಕ್ಕೆ ಮರುಳಾಗಿದ್ದಾರೆ. ಅವರು ಕೂಡಾ ಕತ್ತಲೆಯನ್ನು ಕಳೆದು ಅರಿವಿನ ಬೆಳಕು ಬೀರುವ ಸೂರ್ಯನನ್ನು ಹುಡುಕುತ್ತಿಲ್ಲ; ಹುಡುಕಲು ಅವರಿಗೆ ಸಾಧ್ಯವಾಗುತ್ತಿಲ್ಲ. ಕತ್ತಲೆಯನ್ನು ಹೊತ್ತುಕೊಂಡು ಕತ್ತಲೆಯ ಮೂಲಕ ಬೆಳಕಿನ ಮಾತನಾಡಿದರೆ ಕತ್ತಲೆ ಸರಿದು ಬೆಳಕಾಗುವುದಿಲ್ಲ. ಕತ್ತಲೆಗೆ ಬೆಳಕೇ ಮದ್ದು.

ಕಾಮ ಎಲ್ಲಿ ಹುಟ್ಟುತ್ತದೆಯೋ ಅದರ ಇಕ್ಕೆಲದಲ್ಲಿಯೇ ಅದರ ಪಕ್ಕದಲ್ಲಿಯೇ ಕಾಮವನ್ನು ಬೆಳಗುವ ಸೂರ್ಯ ಹುಟ್ಟುತ್ತಾನೆ. ಕ್ರೋಧ ಎಲ್ಲಿ ಹುಟ್ಟುತ್ತದೆಯೋ ಅದರ ಬೆನ್ನಿಗೆ ಅದನ್ನು ಬೆಳಗುವ ಸೂರ್ಯನಿದ್ದಾನೆ. ಲೋಭ ಎಲ್ಲಿ ಹುಟ್ಟುತ್ತದೆಯೋ ಅದಕ್ಕೆ ಹೊಂದಿಕೊಂಡು ಲೋಭವನ್ನು ಬೆಳಗುವ ಸೂರ್ಯನಿದ್ದಾನೆ.

ಮೋಹ ಎಲ್ಲಿ ಹುಟ್ಟುತ್ತದೆಯೋ ಅದಕ್ಕೆ ಅಂಟಿಕೊಂಡು ಮೋಹವನ್ನು ಬೆಳಗುವ ಸೂರ್ಯನಿದ್ದಾನೆ. ಮದ ಎಲ್ಲಿ ಹುಟ್ಟುತ್ತದೆಯೋ ಆ ಮದವೆಂಬ ಮದ್ದಾನೆಯನ್ನು ಪಳಗಿಸುವ ಅರಿವಿನ ಮಾವುತ ಅಲ್ಲಿಯೇ ವಾಸಮಾಡುತ್ತಿದ್ದಾನೆ. ಮತ್ಸರ ಹುಟ್ಟುವ ಜಾಗದಲ್ಲಿಯೇ ಅದನ್ನು ನಾಶಮಾಡಿ ಪ್ರಫುಲ್ಲತೆಯಿಂದ ಬೆಳಗುವ ಸೂರ್ಯ ಸಂಗಮವಾಗಿದ್ದಾನೆ.

ಕಾಮನನ್ನು ಬೆಳಗುವ ಸೂರ್ಯನನ್ನು ಕಾಮವೇ ಕಂಡುಕೊಳ್ಳಬೇಕು. ಅದು ಸಾಧ್ಯವಾಗದ ಮಾತು. ಮನ್ಮಥ ಸದಾ ರತಿಯೊಂದಿಗೆ ವಾಸಮಾಡುತ್ತಾನೆ. ರತಿಯೆಂದರೆ ಮನ್ಮಥನಿಗೆ ಬಲು ಇಷ್ಟ. ರತಿಯೊಂದಿಗೆ ಸುಖಿಸುವ ಮನ್ಮಥನಿಗೆ ಶಿವನೊಂದಿಗೆ ರತಿ ಸುಖದಿಂದ ಓಲಾಡಲು ಸಾಧ್ಯವೆ? ಆದರೂ ಅಂತಹ ಸುಖದ ಆಸೆ ಮನ್ಮಥನಿಗೆ ಒಮ್ಮೆ ಬಂದೇ ಬರುತ್ತದೆ. ಶಿವನೊಂದಿಗೆ ರತಿ ಸುಖದ ಆಸೆಯಿಂದ ಮನ್ಮಥ ಹೂಬಾಣ ಬಿಡುತ್ತಾನೆ. ತನ್ನ ಹಣೆಗಣ್ಣು ತೆಗೆದು ಶಿವ ಮನ್ಮಥನ ಕಾಮವನ್ನು ಸುಟ್ಟು ಹಾಕುತ್ತಾನೆ.

ಕಣ್ಣಲ್ಲಿ ಹುಟ್ಟಿದ ಕಾಮ, ಕಣ್ಣಲ್ಲಿ ಹುಟ್ಟಿದ ಅರಿವಿನ ಬೆಳಕಿನಿಂದಲೇ ನಾಷವಾಯಿತು. ಕಣ್ಣು ಹೆಣ್ಣೂ ಅಲ್ಲ; ಗಂಡು ಕೂಡಾ ಅಲ್ಲ. ಆದರೂ ಅದರಲ್ಲಿರುವ ದೃಶ್ಯ, ಅಜ್ಞಾನದಿಂದ ಹೆಣ್ಣಾಗಿ ಗಂಡನ್ನು ನೋಡಿ ಹಾದರ ಮಾಡುತ್ತದೆ. ಗಂಡಾಗಿ ಹೆಣ್ಣನ್ನು ನೋಡಿ ಹಾದರ ಮಾಡುತ್ತದೆ. ನೋಟಕ್ಕೆ ಗುರಿಯಾದ ಚರ್ಮ ಕೂಡಾ ಹೆಣ್ಣಲ್ಲ ಗಂಡು ಕೂಡಾ ಅಲ್ಲ. ಚರ್ಮದ ಒಳಗೆ ಹರಿಯುವ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಇವು ಯಾವು ಹೆಣ್ಣಲ್ಲ ಗಂಡಲ್ಲ. ಆದರೂ ಹೆಣ್ಣೆಂದು ಗಂಡನ್ನು ನೋಡಿ, ಗಂಡೆಂದು ಹೆಣ್ಣನ್ನು ನೋಡಿದ ಕಣ್ಣು ಕಾಯದಲ್ಲಿ ಕಾಮವನ್ನು ಸೃಷ್ಟಿ ಮಾಡಿದೆ.

ಕಾಮದಿಂದ ಉಂಟಾಗುವ ಸುಖ, ಮನಕ್ಕೆ ಮುದ ನೀಡುತ್ತದೆ. ಕಾಯದಲ್ಲಿ ಕಾಮ ಯಾಕೆ ಹುಟ್ಟಿತು? ಕಾಮ ಕಾಯಕ್ಕೆ ಯಾಕೆ ಬೇಕು? ಸಂತಾನದ ಆಪೇಕ್ಷೆಗಾಗಿ ಕಾಯದಲ್ಲಿ ಹುಟ್ಟುವ ದ್ರವ್ಯದಲ್ಲಿ ಸುಖವಿದೆಯೋ ಅಥವಾ ದುಃಖವಿದೆಯೋ? ಸಂತಾನದ ಬಯಕೆ ಕಾಯಕ್ಕೆ ಆಗಿದೆಯೇ ಹೇಗೆ? ಸಂತಾನವೇ ಬೇಡವಾದ ಮೇಲೆ ಕಾಯದಲ್ಲಿ ಕಾಮ ಹುಟ್ಟುವುದಾದರೂ ಯಾಕೆ?

ಹೊರಬರುವ ಕಾಮದ ದ್ರವ್ಯದಲ್ಲಿ ಸುಖವಿದೆಯೋ ಅಥವಾ ಕಾಯದಲ್ಲಿ ಸುಖವಿದೆಯೋ? ಕಾಯದಿಂದ ಕಾಮದ ದ್ರವ್ಯ ಹೊರಬಂದ ಮೇಲೆ ಮತ್ತೆ ಕಾಯಕ್ಕೆ ಕಾಮಕೇಳಿ

ಆಡಲು ಕಾಯಬೇಡ. ಪ್ರಾಣಿಗಳು ಸಂತಾನಕ್ಕಾಗಿ ಒಂದನ್ನು ಮತ್ತೊಂದು ಸೇರುತ್ತದೆ. ಗರ್ಭದಾನ ಮಾಡಿಕೊಂಡ ಪ್ರಾಣಿ, ಗರ್ಭದಾನ ಮಾಡಿದ ಪ್ರಾಣಿ ಮತ್ತೆ ಮತ್ತೆ ಒಂದನ್ನೊಂದು ಸೇರುವುದಿಲ್ಲ. ಪ್ರಾಣಿಗಳಿಗೆ ಸಹಜವಾಗಿ ತಿಳಿದ ವಿಚಾರ, ಕಾಯಕ್ಕೆ ಏಕೆ ಹೊಳೆಯುತ್ತಿಲ್ಲ? ಎಂದು ಮನಸ್ಸು ತನ್ನನ್ನು ತಾನು ಎಂದೂ ಪ್ರಶ್ನಿಸಿಕೊಂಡಿಲ್ಲ.

ಮನಸ್ಸೆಂದರೆ ಕತ್ತಲು. ಅರಿವೆಂದರೆ ಬೆಳಕು. ಇವೆರಡು ನೋಡುವ ಕಣ್ಣಲ್ಲಿಯೇ ಇವೆ. ಮನಸ್ಸು ಕಣ್ಣಿನ ದೃಶ್ಯದ ಮೂಲಕ ಹರಿದು ಕಾಯವನ್ನು ನೋಡಿ ಹಾದರಕ್ಕೆ ಒಳಗಾಗುತ್ತದೆ. ಅರಿವು ಅದೇ ಕಣ್ಣಿನ ದೃಶ್ಯದ ಮೂಲಕ ಹರಿದು ಕಾಯವನ್ನು ನೋಡಿ ನಿನ್ನ ನೋಟ ಸರಿ ಇಲ್ಲವೆಂದು ಮನೋದೃಶ್ಯವನ್ನು ಅರಿವಿನ ದೃಶ್ಯ ಖಂಡಿಸುತ್ತದೆ.

ಮನೋ ದೃಶ್ಯ, ತನ್ನ ಇಕ್ಕೆಲದಲ್ಲಿ ವಾಸ ಮಾಡಿದ ಅರಿವಿನ ದೃಶ್ಯದೊಂದಿಗೆ ಸಂಗಮವಾಗಿ, ಅರಿವಿನ ದೃಶ್ಯದಿಂದ ನೋಡಿದರೆ, ತನ್ನಂತೆಯೇ ಇರುವ ಅರಿವಿನ ಕಾಯ ಕಾಣುತ್ತದೆ. ಕಾಯದ ಇಕ್ಕೆಲಗಳಲ್ಲಿರುವ ಅರಿವಿನ ಕಾಯ, ಕಾಯಗಳಿಗೆ ಬಳಕೆಯಾದರೆ, ಸಕಲ ಕಾಯಗಳು ಅರಿವಿನ ಕಾಯಗಳೇ ಆಗುತ್ತವೆ. ಬೆಳಗುವ ಸೂರ್ಯನನ್ನೇ ಬೆಳಗುವ ಅರಿವಿನ ಕಾಯಗಳಾಗುತ್ತವೆ.

ಸಕಲ ಕಾಯಗಳಲ್ಲಿ ಅರಿವಿನ ತತ್ತ್ವಾಮೃತ ಭರಿತವಾಗಿದೆ. ಕಾಯವನ್ನು ಆವರಿಸಿದ ಮನ, ಕಾಯದಲ್ಲಿಯೇ ಸಂಗಮವಾದ ಅರಿವಿನ ಅಮೃತವನ್ನು ಉಂಡು ನೋಡಿದರೆ ಕೇಳಿದರೆ ಮುಟ್ಟಿ ಮೂಸಿಸಿ ರುಚಿಸಿದರೆ ಅದು ನಿರಂತರ ಅರಿವಿನ ಪರಮಸುಖವನ್ನು ಹೊಂದುವುದು. ತನುವಿನಲ್ಲಿ ತುಂಬಿಕೊಂಡ ತತ್ವದ ಅರಿವು, ತನುವಿಗೆ ಆಗುವುದು. ಇದು ತನ್ನದೇ ಆದ ಅರಿವೆಂಬ ಗುರುದೇವನಿಗೆ, ತನ್ನದೇ ಆದ ಮನದಿಂದ ಭಕ್ತಿ ಮಾಡುವ ವಿಧಾನ. ಭಕ್ತಿ ತಾತ್ಪರ್ಯದ ಪರಿಯಿಂತುಂಟು ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ತನ್ನ ಗುರುದೇವನೊಂದಿಗೆ ತಾನೇ ಮಾತನಾಡುತ್ತಾ, ಆ ಮಾತುಗಳನ್ನು ಸಕಲ ಓದುಗರು ಕೇಳಿಸಿಕೊಳ್ಳಲೆಂದು ಅವುಗಳಿಗೆ ಅಕ್ಷರ ರೂಪು ನೀಡಿ ಬೆಡಗಿನಿಂದ ಬರೆದಿದ್ದಾರೆ.

**514**

**ಘನಕ್ಕೆ ಘನವಾದ ಪರವಸ್ತು ಲಿಂಗಮೂರ್ತಿ ಬಂದಿತ್ತೆನ್ನ ಕರಸ್ಥಲಕ್ಕೆ.**
**ಬಂದ ಲಿಂಗಮೂರ್ತಿಯಂ ಕಂಡು ಮನ ಹಾರೈಸಿ ತನು ಕರಗಿತ್ತು.**
**ಆ ಲಿಂಗವಂ ಕಂಡು ಕಪಿಲಸಿದ್ಧ ಮಲ್ಲಿನಾಥನೆನ್ನ**
**ಅಂತರಂಗದಲ್ಲಿದ್ದನು.**

ಪ್ರತಿ ಅಂಗದಲ್ಲಿಯೂ ಲಿಂಗಯ್ಯನಿದ್ದಾನೆ. ಲಿಂಗಯ್ಯನು ಇಲ್ಲದ ಅಂಗ ಈ ಜಗತ್ತಿನಲ್ಲಿ ಇಲ್ಲವೇ ಇಲ್ಲ. ಅರಿವಿನ ಲಿಂಗಯ್ಯನು ಅಂಗದಲ್ಲಿ ಸಂಗಮವಾಗಿರುವುದು ಅಂಗವನ್ನು ಆವರಿಸಿದ ಮನಕ್ಕೆ ಗೊತ್ತಿಲ್ಲ.

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು, ಆತನನ್ನು ಕಂಡು ಆತನ ದರುಶನ ಪಡೆದ ಗುರುದೇವ, ಅಂಗದಲ್ಲಿಯೇ ಲಿಂಗಯ್ಯನಿರುವುದನ್ನು, ಅಂಗ ಮುಟ್ಟಿ, ಅಂಗವನ್ನು ಆವರಿಸಿದ ಮನ ಮುಟ್ಟುವಂತೆ ವಿವರಿಸಿ ಹೇಳಿದಾಗ, ಘನಕ್ಕೆ ಘನವಾದ ಪರವಸ್ತು ಲಿಂಗಮೂರ್ತಿ ಬಂದಿತ್ತೆನ್ನ ಕರಸ್ಥಲಕ್ಕೆ :

ಕರ ಅಂದರೆ ಅಂಗ. ಕರ ಅಂದರೆ ಕೈ. ಕರ ಅಂದರೆ ಅಂಗೈ. ಅಂಗದಲ್ಲಿ ಐದು ಭಾಗಗಳಿವೆ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ. ಪ್ರಮುಖವಾದ ಈ ಐದು ಭಾಗಗಳನ್ನು ಮತ್ತೆ ಮತ್ತೆ ಗಮನಿಸಿ ಜಾಗೃತನಾಗುವುದಕ್ಕಾಗಿ ಎರಡು ಕೈಗಳಿಗೆ ಐದೈದು ಬೆರಳುಗಳಿವೆ. ಎರಡು ಕಾಲುಗಳಿಗೆ ಐದೈದು ಬೆರಳುಗಳಿವೆ.

ಅಂಗವನ್ನು ಆವರಿಸಿದ ಮನ, ಕಣ್ಣಲ್ಲಿ ಹೋಗಿ, ಕಣ್ಣಿನ ಮೂಲಕ ತನಗೆ ಬೇಕಾದ ವಸ್ತುಗಳನ್ನು ನೋಡಿ, ಇಡೀ ಅಂಗವನ್ನು ಬೇಡುವಂತೆ ಖರೀದಿಸುವಂತೆ ಇಲ್ಲ ಕಳುವು ಮಾಡಲು ಆದೇಶ ನೀಡುತ್ತದೆ. ಮನಕ್ಕೆ ಮರುಳಾದ ಅಂಗ ಮಂಗನಂತೆ ಮನದ ಮಾತು ಕೇಳುತ್ತದೆ. ಅದು ತಪ್ಪು ಸರಿ ಎಂದು ತಾಳೆ ನೋಡುವುದನ್ನೂ ಅಂಗ ಮರೆತು ಹೋಗುತ್ತದೆ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯ ವಸ್ತುವಿನ ಸತ್ಯವನ್ನು ನೋಡಿ ವಸ್ತುವಿನಲ್ಲಿ ಹುರುಳಿಲ್ಲ ; ಆ ವಸ್ತುವಿನ ಅವಶ್ಯಕತೆಯೂ ನಿನಗಿಲ್ಲವೆಂದು ಅಂಗಕ್ಕೂ ಅಂಗವನ್ನು ಬೇಡುವಂತೆ ಮಾಡಿದ ಮನಕ್ಕೂ ಪಾಠ ಮಾಡುತ್ತಾನೆ.

ತನಗೆ ಪಾಠ ಮಾಡಿದಾತ ಲಿಂಗಯ್ಯ ಎನ್ನುವ ಅರಿವು ಮನಕ್ಕೆ ಆಗುವುದಿಲ್ಲ ; ಅಂಗಕ್ಕೂ ಆಗುವುದಿಲ್ಲ. ಹೀಗಾಗಿ ಮನದ ಮಾತು ಮಾತ್ರ ಕೇಳುವ ಅಂಗ ಸಾತ್ವಿಕ, ರಾಜಸ, ತಾಮಸ, ಗುಣಗಳುಳ್ಳ ಅಂಗವೆಂದು ಅಂಗದಿಂದಲೇ ಕರೆಯಿಸಿಕೊಳ್ಳುತ್ತದೆ.

ಗುರು, ಶಿಷ್ಯ, ರಾಜ, ನೌಕರ, ಕಳ್ಳ, ಭ್ರಷ್ಟ, ಹಾದರಿಗ, ವಿಟ, ವೇಶ್ಯೆ, ಶಾಸಕ, ಸಚಿವ, ಜಿಲ್ಲಾಧಿಕಾರಿ, ಮಂತ್ರಿ, ಪ್ರಧಾನಿ, ಸೈನಿಕ, ರಾಷ್ಟ್ರಾಧ್ಯಕ್ಷ, ಹೆಣ್ಣು, ಗಂಡು, ಹಿಂದು, ಮುಸಲ್ಮಾನ, ಕ್ರೈಸ್ತ, ಪಂಜಾಬಿ ಹಾಗೂ ನಾನಾ ಜಾತಿ ಮತ ಪಂಥಗಳ ಮೂಲಕ ಅಂಗ ಅಂಗದಿಂದಲೇ ಕರೆಯಿಸಿಕೊಳ್ಳುತ್ತದೆ.

ಅಂಗವನ್ನು ಅಂಗದಂತೆ, ಅರಿವಿನ ಲಿಂಗಯ್ಯನಿರುವ ಲಿಂಗಾಂಗದಂತೆ ನೋಡುವುದನ್ನು ಅಂಗ ಮರೆತು ಹೋಗುತ್ತದೆ. ಅಂಗದಲ್ಲಿಯೇ ಇರುವ ಲಿಂಗಯ್ಯ ವಾಸ ಮಾಡಿದ ಅಂಗವನ್ನು, ಅಂಗವನ್ನು ಆವರಿಸಿದ ಮನಕ್ಕೆ ಬಳಸಿಕೊಳ್ಳುವುದು ಗೊತ್ತಾಗುವುದೇ ಇಲ್ಲ. ಹೀಗಾಗಿ ಅಂಗವನ್ನು ಆವರಿಸಿದ ಮನ, ಅಂಗಕ್ಕೆ ಸಾತ್ವಿಕ ವೇಷ ಹಾಕಿ ಉತ್ತಮನೆನ್ನಿಸಿಕೊಳ್ಳುತ್ತದೆ. ರಾಜಸ ವೇಷ ಹಾಕಿ ಅಧಿಕಾರ ಹಿಡಿಯುತ್ತದೆ. ತಾಮಸ ವೇಷ ಧರಿಸಿ ಸದಾ ಸುಖದಲ್ಲಿ ಓಲಾಡುತ್ತದೆ.

ಜ್ಞಾನಿ ಹಾಗಲ್ಲ. ಇದೆಲ್ಲವನ್ನು ಅರಿವಿನಿಂದ ನೋಡುತ್ತಾನೆ. ಸದಾ ಮರೆವಿನ ಸುಖ ಅನುಭವಿಸುವ ಸಿದ್ಧಾರ್ಥ, ಅಂಗದಲ್ಲಿಯೇ ಸಂಗಮವಾದ ಬುದ್ಧನ ಅಂಗವೊಂದನ್ನು ನೋಡುತ್ತಾನೆ.

ಆ ಅಂಗಕ್ಕೆ ಶರಣು ಹೋಗಿ ಬುದ್ಧಂ ಶರಣಂ ಗಚ್ಛಾಮಿ ಎಂದು ಸಿದ್ಧಾರ್ಥ ಬುದ್ಧನ ಅಂಗದಲ್ಲಿ ಕಳೆದು ಹೋಗುತ್ತಾನೆ. ಬುದ್ಧನೇ ತಾನಾಗುತ್ತಾನೆ. ಬುದ್ಧಮೂರ್ತಿಯನ್ನು ಕಂಡ ಸಿದ್ಧಾರ್ಥನ ತನು ಬುದ್ಧ ತನುವಿನಲ್ಲಿ ಕರಗಿ ಹೋಗುತ್ತದೆ. ತನು ಬುದ್ಧ ತನುವೇ ತಾನಾಗುತ್ತದೆ.

ಅಂಗ ಕಾಣುತ್ತದೆ. ಕಾಣುವ ಅಂಗದ ಅಂತರಂಗದಲ್ಲಿ ಅರಿವಿನ ಅಂಗವೊಂದು ಇದೆ. ಆ ಅಂಗವನ್ನೇ ಸಿದ್ಧರಾಮ ಶರಣರು ಲಿಂಗಮೂರ್ತಿ ಎಂದು ಹೆಸರಿಸಿದ್ದಾರೆ. ಕಾಣುವ ಅಂಗವನ್ನು ಮನೋ ಅಂಗವೊಂದು ಆವರಿಸಿದೆ. ಈ ಅಂಗ ಲಿಂಗಮೂರ್ತಿಯ ಸಂಗ ಮಾಡಿ, ಆ ಲಿಂಗಯ್ಯನಿಗೆ ಶರಣು ಹೋದರೆ ಸಾಕು, ಲಿಂಗಮೂರ್ತಿಯೇ ತಾನಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**515**

**ಘನ ಸುಖದ ಸಂಪನ್ನನಾಗಿ**
**ನಿಮ್ಮ ಕರುಣಕಾವುದು ಕಡೆಯು,**
**ಮನಸಿಜನ ಮದವ ಮಾಯೆಯನೆಲ್ಲವ ಹರಿದು**
**ನಿಮ್ಮ ಪದದ ಹದುಳವಿರಿಸಿದಿರಯ್ಯಾ**
**ಕರುಣಾಕರನೆ ಕಪಿಲಸಿದ್ಧ ಮಲ್ಲೇಶ್ವರಾ.**

ಮನಸ್ಸು ಎಂದರೆ ಸಾಮಾನ್ಯವಲ್ಲ. ಅವನು ಬ್ರಹ್ಮನ ಮಗ. ಹೀಗಾಗಿ ಕಾಯವನ್ನು ತನ್ನ ಸ್ವಾಧೀನಪಡಿಸಿಕೊಂಡಿದ್ದಾನೆ. ಕಾಯವೆಂದರೂ ಸಾಮಾನ್ಯವಲ್ಲ. ಅದು ವಿಷ್ಣುವಿನ ಅವತಾರ. ಶಿವನ ಸುಕ್ಷೇತ್ರ; ಶಿವನ ವಾಸಸ್ಥಾನ; ಅದು ಕೈಲಾಸ.

ಬಯಲಲ್ಲಿ ಹರಿದಾಡುವ ಜಲಜನಕವನ್ನು ಆಮ್ಲಜನಕವನ್ನು ಹಿಡಿದು ಗಂಗೆಯನ್ನಾಗಿಸಿ, ಶಿವ ತನ್ನ ಜಟೆಯಲ್ಲಿ ಧರಿಸಿಕೊಂಡು ಗಂಗಾಧರನೆಂದು ಕರೆಯಿಸಿಕೊಂಡ. ಗಂಗೆಯ ಬಿಂದುವಿನಿಂದಲೇ ಬ್ರಹ್ಮನನ್ನು ವಿಷ್ಣುವನ್ನು ಸೃಷ್ಟಿ ಮಾಡಿದ.

ಸೃಷ್ಟಿ ಮಾಡಿದ ಗಂಗಾಧರನನ್ನು ತಿಳಿಯದಿದ್ದಕ್ಕಾಗಿ ವಿಷ್ಣು ಅಂಗವಾದ; ಬ್ರಹ್ಮ ಮನವಾದ. ಮನ ಅಂಗವನ್ನು ಆವರಿಸಿ, ಅಂಗದೊಂದಿಗೆ ಸಂಗ ಮಾಡಿತು. ಅಂಗದಲ್ಲಿಯೇ ಸಂಗಮವಾದ ಸೃಷ್ಟಿ ಮಾಡಿದ ಲಿಂಗಯ್ಯನನ್ನೇ ಮರೆತು, ಮನ ಮದ ತುಂಬಿದ ಮದ್ದಾನೆಯಂತೆ ಆಯಿತು.

ಭ್ರಮೆಯನ್ನು ಕಳೆದುಕೊಂಡು ಬ್ರಹ್ಮನೇ ಆಗಬೇಕಾದ ಮನ, ಇಡೀ ಅಂಗದಲ್ಲಿ ಭ್ರಮಾರಸವನ್ನೇ ತುಂಬಿತು. ಅರಿವಿನ ಅಂಗವನ್ನು ಭ್ರಮಾರಸದಿಂದ ತಲ್ಲಣಗೊಳ್ಳುವಂತೆ ಮಾಡಿತು. ಜಡವಸ್ತುಗಳನ್ನು ನೋಡಿ ಭ್ರಮಾರಸದಿಂದ ಜೊಲ್ಲು ಸುರಿಸಹತ್ತಿತು.

ಅಂಗ ಒಂದೇ ಆದರೂ ಮನ ಅಂಗದಲ್ಲಿ ಭೇದ ಬುದ್ಧಿಯನ್ನು ಸೃಷ್ಟಿ ಮಾಡಿತು. ಲೋಹವನ್ನು ನೋಡಿ ಚಿನ್ನ ಎಂದು ಹೆಸರಿಟ್ಟು ಕರೆದು ಅದರ ಮೇಲೆ ಮೋಹ ಮಾಡಿತು. ಚಿನ್ನವನ್ನು ಪಡೆಯಲು ಹಲವಾರು ಅಂಗಗಳನ್ನು ಕೊಂದು ಅಂಗವೇ ರಾಜನಾಯಿತು. ಕದ್ದು ಅಂಗಕ್ಕೆ ಕಳ್ಳನ ಹಣೆಪಟ್ಟಿ ಕಟ್ಟಿತು. ಚಿನ್ನ ಇಲ್ಲದ ಅಂಗ ದರಿದ್ರನೆಂದು, ಭಿಕ್ಷುಕನೆಂದು ಅಂಗದಿಂದಲೇ ಕರೆಯಿಸಿಕೊಂಡಿತು.

ರಾಜನ ಅಂಗಕ್ಕೆ ಸಹಕಾರಿಯಾಗಿ ಪ್ರಧಾನಿ, ಸೇನಾಧಿಪತಿ ಸೈನಿಕ ಕಾಲಾಳು ಎಂದು ಅಂಗ ಕರೆಯಿಸಿಕೊಂಡಿತು. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಭೇದ ಬುದ್ಧಿಯನ್ನು ಸೃಷ್ಟಿ ಮಾಡಿ ತನಗೆ ತಾನೇ ಎಡವಾಯಿತು; ತನಗೆ ತಾನೇ ಬಲವಾಯಿತು.

ಅಂಗ ಒಂದೇ; ಅದರಲ್ಲಿರುವ ಪದಾರ್ಥಗಳು ಕೂಡಾ ಒಂದೇ. ಆದರೂ ಅಂಗವೇ ಅಂಗಕ್ಕೆ ಹೆಣ್ಣಾಯಿತು; ಗಂಡಾಯಿತು. ತಂದೆ ತಾಯಿ ಬಂಧು ಬಳಗ ಅಣ್ಣ ತಮ್ಮ ಅಕ್ಕ ತಂಗಿ ಅತ್ತೆ ಮಾವ ಚಿಕ್ಕಪ್ಪ ದೊಡ್ಡಪ್ಪ ನಾನ ರೀತಿಯ ಪಾತ್ರಗಳನ್ನು ಧರಿಸಿತು. ಅಂಗ ಒಂದೇ ಆದರೂ ಅದು ಹಿಂದು ಮುಸಲ್ಮಾನ ಕ್ರೈಸ್ತ ಬೌದ್ಧ ಜೈನ ಫಾರ್ಸಿ ಪಂಜಾಬಿಯ ಪಾತ್ರದಲ್ಲಿ ಮಿಂಚಿತು. ಅಂಗವನ್ನು ಅಂಗ ಎಂದು ಗುರುತಿಸುವುದರಲ್ಲಿ ಅಂಗ ಹಿಂದೆ ಉಳಿಯಿತು.

ಜಾತಿ ಮತ ಪಂಥಗಳಿಲ್ಲ; ಹೆಣ್ಣು ಗಂಡು ಎನ್ನುವ ಭೇದವನ್ನು ಕೂಡಾ ಮಾಡುವುದಕ್ಕೆ ಅಂಗದಲ್ಲಿ ಆಸ್ಪದವೇ ಇಲ್ಲ. ಸಕಲ ಪ್ರಾಣಿಗಳಿಗಿಂತ ಅಂಗವೇ ಶ್ರೇಷ್ಠ. ಅಂಗ, ತನ್ನ ಕುಲವನ್ನು ತಾನು ಗೌರವಿಸುತ್ತಾ ಸಕಲ ಪ್ರಾಣಿಗಳಿಗೂ ಲೇಸನು ಬಯಸುವ ಶಕ್ತಿ ಅಂಗಕ್ಕೆ ಮಾತ್ರ ಇದೆ. ಅಂಗದಲ್ಲಿ

ಭರಿತವಾದ ಅರಿವಿನ ಶಕ್ತಿಯೇ ಅಲ್ಲಾನು ಆಗಿದ್ದಾನೆ ಎಂದು ಪೈಗಂಬರರು ಸಾರಿದರು. ಕ್ರಿಸ್ತ ಆ ಶಕ್ತಿಯನ್ನು ಗಾಡ್ ಎಂದು ಸಂಬೋಧಿಸಿದ. ಕ್ರಿಷ್ಣ ಆ ಶಕ್ತಿಯನ್ನು ವಿರಾಟಸ್ವರೂಪಿ ಎಂದ. ಅದು ನಾನೇ ಎಂದು ಹೇಳುತ್ತಾ ಸಕಲ ಅಂಗಗಳನ್ನು ಹಾಗೇ ಆಗಲು ಪ್ರೇರೇಪಿಸಿದ.

ಮದ ತುಂಬಿದ ಮನ ಕೇಳಬೇಕಲ್ಲ. ಅಂಗವೇ ಶ್ರೇಷ್ಠ ಎಂದು ಹೇಳಿದ ಸಂತ ಮಹಾಂತರನ್ನು ಆರಾಧಿಸಿತು. ಅವರಿಗೆ ಆಲಯ ಕಟ್ಟಿ, ಉತ್ಸವಗಳನ್ನು ಮಾಡಿ ಕುಣಿದು ಕುಪ್ಪಳಿಸಿತು. ಅಂಗದಲ್ಲಿಯೇ ಸಂಗಮವಾದ ಅರಿವಿನ ಘನಸುಖವನ್ನು ಉಂಡು ಅದು ಸಂಪನ್ನನಾಗಲಿಲ್ಲ.

ಇಲ್ಲದ ವಸ್ತುವಿನಲ್ಲಿ ಮನ ತನ್ನ ಭ್ರಮಾರಸವನ್ನು ಚೆಲ್ಲಿ ಸುಳ್ಳು ಸುಖ ಅನುಭವಿಸಿತು. ಚಿನ್ನ ಜಡ; ತನು ಚೇತನ ಎನ್ನುವ ಅರಿವು ತನುವಿಗಿಲ್ಲ. ಕೇಳಿದರೆ ಚಿನ್ನ ಜಡ; ನಾನು ಚೇತನ ಎಂದು ಹೇಳುತ್ತಾನೆ. ಆದರೂ ಚಿನ್ನಕ್ಕಾಗಿ ಗಂಡ ಹೆಂಡತಿಯನ್ನು, ತಂದೆ ಮಗನನ್ನು, ಮಗ ತಂದೆಯನ್ನು, ಕಳ್ಳ ಶ್ರೀಮಂತನನ್ನು, ಶ್ರೀಮಂತ ಬಡವನನ್ನು ಕೊಲ್ಲುವುದು ನಿಂತಿಲ್ಲ.

ಮನಕ್ಕೆ ಚಿನ್ನದ ಮೇಲೆ ಇರುವ ಆಸೆ, ತನ್ನ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಶಿವನ ಮೇಲೆ ಇಲ್ಲ. ಶಿವ ತನ್ನತ್ತ ಕರೆದರೆ, ಮನ ಚಿನ್ನದತ್ತ ವಾಲುತ್ತದೆ. ಮನ ತನ್ನ ಅರಿವಿಗೆ ಭಕ್ತನಾಗಿ ಶಿವನನ್ನು ನೆನೆದರೆ ಸಾಕು, ಮನದಲ್ಲಿ ತುಂಬಿದ ಮದದ ಮಾಯೆಯನ್ನೆಲ್ಲವನು ಹರಿದು ಹಾಕುತ್ತಾನೆ. ಆತನ ಅರಿವಿನ ಅಂಕುಶದಿಂದ ಮದತುಂಬಿದ ಮದ್ದಾನೆಯನ್ನು ಪಳಗಿಸುತ್ತಾನೆ. ನಿಮ್ಮ 'ಶಿವ' ಪದದಿಂದಾಗಿ ನಾನು ಹದುಳವಿರಲು ಸಾಧ್ಯವಾಯಿತು ತಂದೆ, ಕರುಣಾಕರನೆ ಕಪಿಲಸಿದ್ಧ ಮಲ್ಲೇಶ್ವರಾ ಎಂದು ಸಿದ್ಧರಾಮ ಶಿವಯೋಗಿಗಳು 'ಶಿವ' ಪದದ ಶಕ್ತಿ ಕುರಿತು ಹಾಡಿದ್ದಾರೆ.

**516**

**ಘಾತವಪ್ಪ ಶರಧಿ ಪ್ರೇತವಪ್ಪ ಅಡವಿ**
**ಪಾತಕ ಭವಕೆ ಬಹ ಕೂಪದೊಳಗೆ**
**ನೂಕಿದರೆ ಬೀಳೆ, ನಿನ್ನಾಧಾರವುಂಟು.**
**ಅನಾದಿಸಂಸಿದ್ಧ ಯೋಗಮೂರ್ತಿ**
**ನಿನ್ನ ಒಡನಾಡಿ ನಾ ನಿನ್ನ ಠಕ್ಕನರಿಯೆನೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಕಲ ಕಲಾವಲ್ಲಭನಾದ ಭಗವಂತನು ಸಕಲ ಕಲೆಯನ್ನು ತಿಳಿಸುತ್ತಾ ಅಂಗದಲ್ಲಿಯೇ ಜೊತೆ ಜೊತೆಗೆ ಇದ್ದರೂ ನನಗೆ ಆತ ಯಾರು ಎನ್ನುವುದು ಗೊತ್ತಿಲ್ಲದೆ ಹೋಗಿದೆ. ಭೌತಿಕವಾಗಿ ಕಲಿಯುವುದರಲ್ಲಿಯೇ ನನ್ನ ಮತ್ತು ತನುವಿನ ಆಯುಷ್ಯ ಸವೆಯುತ್ತಲೇ ಇದೆ.

ಏನೆಲ್ಲಾ ಭೌತಿಕ ಸಂಪತ್ತಿದ್ದರೂ ನನಗೆ ನೋಡಲು ಕೇಳಲು ಮುಟ್ಟಲು ಮೂಸಿಸಿ ರುಚಿಸಲು ಬರುತ್ತಿಲ್ಲ. ನಾನು ಕೇಳುವ ಮಾತು ನಾನು ಆಡುವ ಮಾತು ನನ್ನನ್ನು ಸುಖ ಮತ್ತು ದುಃಖಕ್ಕೆ ತಳ್ಳುತ್ತವೆ. ಅವು ನನ್ನಲ್ಲಿಯೇ ಉಳಿದು ಮತ್ತೆ ಮತ್ತೆ ನೆನಪಾಗಿ ನನ್ನನ್ನು ಬಾಧೆಗೆ ಈಡುಮಾಡುತ್ತವೆ.

ಮನುಷ್ಯ ಜಾಣನೆಂದು ಅನ್ನಿಸಿಕೊಂಡರೂ ಅವನಿಗೆ ಕಲಿತ ಜಾಣತನವಿದೆಯೇ ಹೊರತು ಜಾಣತನದ ಇರುವಿಕೆಯನ್ನು ತಿಳಿದು ಅದನ್ನು ಬಳಕೆ ಮಾಡುವ ಜಾಣತನ ಮರೆತು ಹೋಗಿದೆ.

ತಾನು ಆಡಿದ ಮಾತು, ತಾನು ಕೇಳಿದ ಮಾತು ತನಗೆ ಬಾಧೆಯುಂಟು ಮಾಡಿ, ತನ್ನನ್ನು

ಪ್ರಪಾತಕ್ಕೆ ತಳ್ಳುತ್ತಲಿದೆ; ಕತ್ತಲೆಯ ಕೂಪದಲ್ಲಿ ಬಿದ್ದಂತೆ ಭಾಸವಾಗುತ್ತದೆ. ಕಂದಕದಲ್ಲಿ ನೂಕಿದಂತಾಗುತ್ತದೆ. ಆದರೂ ಮತ್ತೆ ಬದುಕುವ ಆಸೆ ಮೂಡುತ್ತದೆ. ಏಕೆಂದರೆ ನನ್ನಲ್ಲಿಯೇ ಇದ್ದ ನನ್ನ ಜೊತೆ ಜೊತೆಗೆ ಇದ್ದ ಭಗವಂತನ ಪ್ರೇರಣೆಯೇ ನನಗೆ ಇದೆ.

ಭಗವಂತನೆಂದರೆ ಜ್ಞಾನ. ಆ ಜ್ಞಾನದ ಖಣಿ ಅವ್ಯಕ್ತ ವ್ಯಕ್ತಿಯಾಗಿ, ವ್ಯಕ್ತಿಯಾದ ನನ್ನನ್ನು ಕೈ ಹಿಡಿದು ತಡೆಯುತ್ತಾನೆ. ನೋಡುವಾಗ ನೋಟವಾಗಿ ತಾನು ನೋಡಿ ಹೀಗೆ ನೋಡಬೇಕೆಂದು ಅರಿವಿನ ನೋಟದಿಂದಲೇ ಮಾತನಾಡಿ ನೋಡುವ ನನ್ನ ನೋಟಕ್ಕೆ ಪಾಠ ಮಾಡುತ್ತಾನೆ. ನನಗೆ ತಿಳಿದಂತೆ ನಾನು ನೋಡಿದರೆ ನಿನ್ನ ನೋಟ ತಪ್ಪೆಂದು ಆ ನೋಟವನ್ನು ಮರೆಯದಂತೆ ಕಣ್ಣಲ್ಲೇ ದಾಖಲಿಸುತ್ತಾನೆ. ಮತ್ತೆ ಮತ್ತೆ ನನ್ನ ಅಜ್ಞಾನದ ನೋಟವನ್ನು ನನಗೆ ನೆನಪು ಮಾಡಿ ದುಃಖಕ್ಕೆ ಈಡು ಮಾಡುತ್ತಾನೆ.

ಸರಿದಾರಿ ತೋರುತ್ತಾನೆ; ನಡೆಯದಿದ್ದರೆ ಪ್ರಪಾತಕ್ಕೆ ತಳ್ಳುತ್ತಾನೆ. ಬೀಳದಂತೆ ಹಗ್ಗ ಹಿಡಿದು ಮತ್ತೆ ಮೇಲೆ ಎತ್ತುತ್ತಾನೆ. ನನ್ನ ಜೊತೆ ಜೊತೆಗೇ ಇದ್ದು, ನನಗೆ ಪಾಠ ಮಾಡುತ್ತಾ, ಆತನ ಪಾಠ ನಾನು ಕೇಳದಿದ್ದರೆ, ನನಗೆ ಘನಘೋರ ಶಿಕ್ಷೆ ಕೊಡುತ್ತಾನೆ.

ಕಪಟನಾಟಕ ಸೂತ್ರಧಾರಿ ಆತ. ಪಾಠ ಮಾಡುವವನೂ ಅವನೇ; ಪಾಠ ಮಾಡಿದರೂ ನನ್ನನ್ನು ಕೇಳದಂತೆ ಮಾಡಿದವನೂ ಅವನೇ. ನಿನ್ನ ಒಡನಾಡಿ ನಾನು. ಒಡಲನ್ನು ಸೃಷ್ಟಿ ಮಾಡಿ ಒಡಲಿಗೆ ಆಧಾರವಾಗಿ ಒಡಲನ್ನು ಸೋಂಕದೆ ಒಡಲನ್ನು ಬೆಳಗುವ ಒಡಲೊಡೆಯ ನೀನು. ನಾ ನಿನ್ನ ಠಕ್ಕನು ಎಂದು ನನ್ನನ್ನು ನೀನು ಅರಿತಿರಿವಿ. ಆದರೂ ಒಡನಾಡಿಯಾಗಿ ಒಡಲು ಇರುವವರೆಗೂ ನನ್ನನ್ನು ನೀನು ಅಪ್ಪಿಕೊಳ್ಳಲು ಯತ್ನ ಮಾಡುತ್ತಲೇ ಇರುವ ಕಪಿಲಸಿದ್ಧ ಮಲ್ಲಯ್ಯ ನೀನು.

**517**

**ಚರಣ ಲಿಂಗವಾಗಿ ಕರ ಜಿಹ್ವೆಯಾಗಿ**
**ಮಸ್ತಕದಲ್ಲಿ ಸಕಲ ಬ್ರಹ್ಮಾಂಡಗಳ ವ್ಯಾಪ್ತಿಯನು**
**ಅಕ್ಷರವೆಡರಲ್ಲಿ ಆಂದೋಳವಂ ಮಾಡಿ**
**ಹರಿಯಲೀಯ್ಯದೆ ಹದುಳ ಮಾಡಿದಾತ ಗುರು!**
**ಎನ್ನ ಶಬ್ದ-ಸ್ಪರ್ಶ-ರೂಪು-ರಸ-ಗಂಧ-**
**ಧ್ಯಾನ-ಧಾರಣ-ಸಮಾಧಿ ಸನ್ನಿಹಿತ ಗುರು!**
**ದೀಕ್ಷೆ ಶಿಕ್ಷೆ ಸ್ವಾನುಭಾವ ಸಂಪನ್ನತೆಯನುಳ್ಳಾತ ಗುರು!**
**ಆದ್ಯಂತರದಲ್ಲಿ ಸಹಸ್ರ ಕಮಲದೊಳಗಣ**
**ಕಂಜಕರ್ಣಿಕೆಯ ಮನ್ಮಸ್ತಕದಲ್ಲಿ ಒಪ್ಪಿಪ್ಪ**
**ಅಕ್ಷರದ್ವಯದ ಆಂದೋಳನವನುಳ್ಳಾತ ಗುರು!**
**ಅನಾಮಯಸ್ಥಾನದಲ್ಲಿ ಬಹುದಳದ ಕಮಲದೊಳಗೆ ಒಪ್ಪಿಪ್ಪ**
**ಹಮ್ಮೆಂಬ ಬಿಂದುವಿನ ಆನಂದ ಮಧ್ಯಸ್ಥಾನದ**
**ಶುದ್ಧ ಸಿಂಹಾಸವನಿಕ್ಕಿ ಅದೆ ಮನೆಯಾಗಿರಲುಳ್ಳಾತ ಗುರು!**
**ನಿತ್ಯ ನಿರಂಜನರೂಪೆ ತದ್ರೂಪಾಗಿ**
**ಶಕ್ತಿಪಂಚಕದ ಆಜ್ಞೆಯ ಹೊದ್ದದಿಪ್ಪಾತ ಗುರು!**

**ಅನಿಮಿಷಸ್ಥಾನದಲ್ಲಿ ಇಪ್ಪ ಶಕ್ತಿತ್ರಯದ**
**ಕ್ರಿಯಾಕಾರವ ನಡೆಸುವಾತ ಗುರು!**
**ತನುಗುಣಪ್ರಾಪಂಚಿಕವನತಿಗಳೆದು**
**ಸೀಮೆಯ ಮೀರಿದ ಸಂಬಂಧಿ ಪ್ರಮಾಣೆಲ್ಲದ ಪರಮಗುರುವೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

'ಗುರು' ಎನ್ನುವ ಎರಡಕ್ಷರಗಳು ಬರೀ ಅಕ್ಷರವಲ್ಲ; ಇಡೀ ಬ್ರಹ್ಮಾಂಡವನ್ನು ಸೃಷ್ಟಿಮಾಡಿ, ಅಕ್ಷರವೆರಡರಲ್ಲಿಯೇ ಸಂಗಮಗೊಂಡಾತ ಗುರು. ಅಂಗವನ್ನು ಸೃಷ್ಟಿಮಾಡಿ ಇಡೀ ಅಂಗದ ಚರಣ ಕಮಲಗಳನ್ನು ಲಿಂಗವಾಗಿಸಿ, ಅಂಗವನ್ನೆ ಜಿಹ್ವೆಯನ್ನಾಗಿಸಿದಾತ ಗುರು. ಮಸ್ತಕದಲ್ಲಿ ಸಕಲ ಬ್ರಹ್ಮಾಂಡಗಳ ವ್ಯಾಪ್ತಿಯನ್ನು ಇಟ್ಟು, ಎರಡು ಅಕ್ಷರಗಳ ಮೂಲಕ ಹೊಲಿದಾತ ಗುರು.

ಅಂಗವನ್ನು ಸೃಷ್ಟಿಮಾಡಿ, ಅಂಗದಲ್ಲಿಯೇ ಆತ ಸಂಗಮವಾಗಿ ಆತನ ಬೆಳಕಿನ ಕಿರಣಗಳಿಂದಾಗಿ ಮನವನ್ನು ಸೃಷ್ಟಿಮಾಡಿ, ಆ ಮನ ಅಂಗವನ್ನು ಆವರಿಸಿ ವಾಸಿಸಲು ಅನುವು ಮಾಡಿಕೊಟ್ಟಾತ ಗುರು. ಅಂಗವನ್ನು ಆವರಿಸಿದ ಎರಡಕ್ಷರದ ಮನಕ್ಕೆ 'ಶಿಷ್ಯ' ಎನ್ನುವ ಎರಡಕ್ಷರಗಳ ಮೂಲಕ ಮರುನಾಮಕರಣ ಮಾಡಿದಾತ ಗುರು.

ಅಂಗ ಎನ್ನುವ ಎರಡಕ್ಷರಗಳಲ್ಲಿ ಲಿಂಗ ಎನ್ನುವ ಎರಡಕ್ಷರಗಳ ಮೂಲಕ ಲಿಂಗಾಂಗವೆಂದು ಕರೆಯಿಸಿಕೊಂಡು, ಅಂಗ ಹರಿಯದಂತೆ ಅಂಗದಲ್ಲಿಯೇ ಹದುಳವಾಗಿದ್ದಾತ ಗುರು.

ಶಬ್ದ-ಸ್ಪರ್ಶ-ರೂಪು-ರಸ-ಗಂಧ-ಧ್ಯಾನ-ಧಾರಣ-ಸಮಾಧಿಗಳನ್ನು ಅಂಗದಲ್ಲಿಯೇ ಸೃಷ್ಟಿ ಮಾಡಿ ಅದರ ಮೂಲಕ ದೀಕ್ಷೆ ಶಿಕ್ಷೆ ಸ್ವಾನುಭಾವ ಸಂಪನ್ನತೆಯ ನಾಟಕವನ್ನು ಆಡಿಸುವ ಸೂತ್ರಧಾರಿ ಕೂಡ ಗುರುದೇವನೇ ಆಗಿದ್ದಾನೆ.

ಅಂಗದೊಳಗೆ ಆರು ಚಕ್ರಗಳ ಸಾಹಿತ್ಯವನ್ನು ಇಟ್ಟು, ಅಂಗವನ್ನು ಆವರಿಸಿದ ಮನಕ್ಕೆ ಶಿಕ್ಷಣ ನೀಡಿ, ಸಹಸ್ರ ಕಮಲದೊಳಗೆ ತಾನಿದ್ದು, ತನ್ನನ್ನು ತಿಳಿಯುವಂತೆ ತಿಳಿಯದಂತೆ ಮಾಡಿದಾತ ಗುರು!

ಎರಡಕ್ಷರಗಳ ಮೂಲಕ ಎರಡಕ್ಷರಗಳಿಂದ ತಿಳಿಯುವ ಅಕ್ಷರದ್ವಯದ ಆಂದೋಳನವನ್ನೇ ಮಾಡಿ, ಅನಾಮಯ ಸ್ಥಾನದ ಬಹುದಳದ ಕಮಲದೊಳಗೆ ಒಪ್ಪಿಪ್ಪ ಹಮ್ಮೆಂಬ ಬಿಂದುವನ್ನೇ ಆನಂದ ಸ್ಥಾನವನ್ನಾಗಿಸಿಕೊಂಡು ಶುದ್ಧ ಸಿಂಹಾಸನವನ್ನು ಇಕ್ಕಿ ಅದನ್ನೇ ಮನೆಯನ್ನಾಗಿಸಿಕೊಂಡು ಅದರಲ್ಲಿ ವಾಸ ಮಾಡಿದಾತ ಗುರು!

ರಂಜನೆಯ ರೂಪುಳ್ಳ ಅಂಗದಲ್ಲಿ ನಿತ್ಯನಿರಂಜನ ನಿರೂಪನೇ ತಾನಾಗಿ, ಅದಕ್ಕೆ ತದ್ರೂಪದ ಅರಿವಿನ ಸಿಕ್ಕ ಹಾಕಿ, ಶಕ್ತಿ ಪಂಚಕದ ಆಜ್ಞೆಯ ಹೊದ್ದುಕೊಂಡಾತನೆ ಗುರು! ಅನಿಮಿಷ ಸ್ಥಾನದಲ್ಲಿ ತಾನಿದ್ದು ಸಾತ್ವಿಕ ರಾಜಸ ತಾಮಸ ಗುಣಗಳ ಮೂಲಕ ಶಕ್ತಿತ್ರಯದ ಕ್ರಿಯೆಗಳಿಂದ ಅಂಗವನ್ನು ನಡೆಸುವಾತನೆ ಗುರುದೇವ!

ತನುಗುಣಗಳನ್ನು, ಅದರ ಪ್ರಾಪಂಚಿಕವನ್ನು ನಷ್ಟ ಮಾಡಿ, ಅಂಗದ ಸೀಮೆಯನ್ನು ನಿಸ್ಸೀಮಗೊಳಿಸಿ; ಲಿಂಗಾಂಗವೆಂದು ಅದಕ್ಕೆ ಹೆಸರಿಟ್ಟು, ತ್ರಿಗುಣಾತೀತನೆಂದು ಕರೆಯಿಸಿಕೊಂಡಾತನೇ ಗುರುದೇವ! ಆತ ಪ್ರಮಾಣಕ್ಕೆ ನಿಲುಕದ ಅಪ್ರಮಾಣನು. ಆತ ಜಗದಗಲ, ಮುಗಿಲಗಲ, ಪಾತಾಳದಿಂದಲೂ ಅತ್ತತ್ತ, ಬ್ರಹ್ಮಾಂಡದಿಂದಲೂ ಅತ್ತತ್ತ ವಿಸ್ತರಿಸಿಕೊಂಡಾತನು.

ಗುರುದೇವ ಗಮನಕ್ಕೆ ನಿಲುಕದ ಅಗಮ್ಯನು. ಗೋಚರಕ್ಕೆ ನಿಲುಕದ ಅಗೋಚರನು.

ಗುರುದೇವ ಅಗೋಚರ; ಶಿಷ್ಯನೂ ಅಗೋಚರ.

ಅಗೋಚರ ಗುರುದೇವ, ಗೋಚರಕ್ಕೆ ಬರುವ ಅಂಗವನ್ನು ಸೃಷ್ಟಿ ಮಾಡಿದ. ಆ ಅಂಗದಲ್ಲಿ ಗೋಚರಕ್ಕೆ ಬಾರದ ಮನವನ್ನು ಸೃಷ್ಟಿ ಮಾಡಿದ. ಆ ಮನವನ್ನೇ ಶಿಷ್ಯನನ್ನಾಗಿಸಿಕೊಂಡು, ಆ ಶಿಷ್ಯನಿಗೆ ತಾನು ಕಾಣಿಸಿಕೊಂಡು, ದರುಶನ ಭಾಗ್ಯ ಕಲ್ಪಿಸಿದ. ಕಾಣುವ ಅಂಗ ಕಾಣಬಾರದ ಗುರುಶಿಷ್ಯರಿಬ್ಬರಿಗೆ ವಾಸಸ್ಥಾನವಾಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**518**

**ಚಾತುಷ್ಟ ಬ್ರಹ್ಮದಲಿ**
**ಅನೇಕ ವಿಧ ಸಂಗಮದ**
**ಸಾಕಲ್ಯ ದೇಹವನು ಕಳೆದು,**
**ಸತ್ಯಾನಂದ ಏಕಮಯನೆನಿಪ ಭವದೂರನು.**
**ಆತನನು ತಂದು ಮನಮಧ್ಯದೊಳಿರಿಸಿದ**
**ಅಜಾತ ಗುರುವೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬ್ರಹ್ಮಮಾತ್ರ ಬ್ರಹ್ಮನಲ್ಲ. ಬ್ರಹ್ಮನೆಂಬುವವನು ಯಾರೂ ಇಲ್ಲ. ಏಳುನೂರಾ ಮೂವತ್ತುಕೋಟಿ ತನುಗಳೆಲ್ಲ ಬ್ರಹ್ಮಮಯ. ಅವೆಲ್ಲ ವಿಷ್ಣುಮಯ. ಆ ತನುಗಳೆಲ್ಲ ಸಾಕ್ಷಾತ್ ಮಹೇಶ್ವರ ಸ್ವರೂಪಿ; ಕಪಿಲಸಿದ್ಧ ಮಲ್ಲಿಕಾರ್ಜುನನೇ ಆಗಿವೆ.

ನಾಲ್ಕು ತಲೆಗಳುಳ್ಳ ಬ್ರಹ್ಮನೆನ್ನಿಸಿಕೊಂಡ ದೇಹ ಜ್ಞಾನದ ಸಂಗಮವೇ ಆಗಿತ್ತು. ಬ್ರಹ್ಮನ ಒಂದು ಸಣ್ಣ ತಪ್ಪಿಗಾಗಿ ಆತನ ಪರಿಪೂರ್ಣವಾದ ಒಂದು ದೇಹವನ್ನೇ ತರಿದು ಹಾಕಬೇಕೆ?

ಆ ದೇಹ ಸತ್ಯವೂ ನಿತ್ಯವೂ ಪರಿಪೂರ್ಣವೂ ಆಗಿತ್ತು. ಏಕಮಯವೆಂದು ಪ್ರಸಿದ್ಧಿ ಹೊಂದಿತ್ತು. ಸಕಲ ಭ್ರಮೆಗಳನ್ನು ಕಳೆದುಕೊಂಡ ಏಕಮೇವಾದ್ವಿತೀಯನೆನ್ನಿಸಿತ್ತು. ಜನನ ಮರಣಗಳಿಲ್ಲದ ಸರದಾರನೆಂದು ಕರೆಯಿಸಿಕೊಂಡಿತ್ತು. ಬ್ರಹ್ಮನ ಅರಿವಿನ ಒಂದು ತಲೆ ಉರುಳಿದ್ದಕ್ಕಾಗಿ ಸಾತ್ವಿಕ ರಾಜಸ ತಾಮಸ ಗುಣಗಳುಳ್ಳ ಮೂರು ಗುಣಗಳ ದೇಹಗಳು ಮಾತ್ರ ಉಳಿದವು.

ಒಂದು ಸಣ್ಣ ತಪ್ಪಿಗಾಗಿ ಪ್ರಮುಖವಾದ ಒಂದು ದೇಹವೇ ಕಳೆದು ಕೆಳಗುರುಳಿತು. ಬ್ರಹ್ಮನೆಂದು ಕರೆಯಿಸಿಕೊಂಡ ತನು ಭ್ರಮೆಯಿಂದ ಭರಿತವಾಯಿತು. ಮೂರು ದೇಹಗಳು ಸಂಗಮವಾಗಿದ್ದ ಪರಿಪೂರ್ಣವಾದ ದೇಹದಲ್ಲಿ ಬ್ರಹ್ಮ ಕಳೆದು ಹೋದ. ಭ್ರಮೆಯಿಂದ ಬ್ರಹ್ಮನೆನ್ನಿಸಿಕೊಂಡಿತು.

ಸತ್ಯಮಯವೂ ಆನಂದಮಯವೂ ಏಕಮಯವೂ ಜನನ ಮರಣಗಳಿಂದ ಬಹುದೂರ ಉಳಿದ ದೇಹಕ್ಕೆ ಮರಣದ ಬಾಧೆ ಉಂಟಾಯಿತು. ಜನನದ ಬಾಧೆ ಉಂಟಾಯಿತು. ಜನನ ಮರಣಗಳಿಂದ ಭರಿತವಾದ ಈ ದೇಹ, ಜನನ ಮರಣಗಳೇ ಇಲ್ಲದ ದೇಹವನ್ನು, ಮತ್ತೆ ದೇಹದಲ್ಲಿಯೇ ಹುಡುಕಬೇಕಾಯಿತು.

ಸಾತ್ವಿಕ ರಾಜಸ ತಾಮಸ ಗುಣಗಳಿಂದ ಭರಿತವಾದ ದೇಹ, ಬ್ರಹ್ಮನೆಂದು ಕರೆಯಿಸಿಕೊಂಡಿದ್ದರೂ ಕೂಡಾ ಮೂರು ಗುಣಗಳಿಂದ ಭರಿತವಾಗಿದೆ. ಇದ್ದ ಮೂರು ಗುಣಗಳನ್ನೂ ನಾಶಮಾಡುವ ಸರದಾರನನ್ನು ತ್ರಿಗುಣಗಳಿಂದ ಭರಿತವಾದ ದೇಹದಲ್ಲಿಯೇ ಹುಡುಕಬೇಕು. ಆತ

ತ್ರಿಗುಣಾತೀತ. ಅಜಾತ. ಜಾತಿ ಮತ ಪಂಥಗಳು ಇಲ್ಲದ, ಅಷ್ಟೇ ಏಕೆ ಹುಟ್ಟು ಸಾವುಗಳೇ ಇಲ್ಲದ ಹೆಣ್ಣು ಗಂಡು ಎಂದು ಕೂಡಾ ಕರೆಯಿಸಿಕೊಳ್ಳದ ಮಹಾಮಹಿಮ. ಅಜಾತ ಗುರುದೇವನು ಎಂದು ಕರೆಯಿಸಿಕೊಂಡ ಕಪಿಲಸಿದ್ಧ ಮಲ್ಲಿಕಾರ್ಜುನ.

ಗುರುದೇವನು ಇಲ್ಲದ ದೇಹಗಳೇ ಇಲ್ಲ. ಆದರೂ ಮೂರು ಗುಣಗಳುಳ್ಳ ಮೂರು ದೇಹಗಳಲ್ಲಿಯೇ ಸಂಗಮವಾಗಿದ್ದಾನೆ. ಈತ ಸಂಗಮವಾದ ಜಾಗದಲ್ಲಿಯೇ ಈತನನ್ನು ಹುಡುಕಿ ತೆಗೆಯುವ ಶಕ್ತಿ ಈ ಮೂರು ಗುಣಗಳುಳ್ಳ ಮೂರು ದೇಹಗಳಿಗೆ ಬರಬೇಕಿದೆ. ಹೀಗೆ ಹುಡುಕಿ ತೆಗೆದು ಆ ದೇಹದೊಂದಿಗೆ ಬದುಕುಳಿದ ದೇಹವೇ ನಿಜದೇಹ. ಬುದ್ಧದೇಹ. ಕಪಿಲಸಿದ್ಧ ಮಲ್ಲಿನಾಥನ ಸಿದ್ಧದೇಹ. ಕಳೆದುಹೋದ ಪರಿಪೂರ್ಣವಾದ ದೇಹ; ಪುನಃ ದೇಹಕ್ಕೆ ಸಿಕ್ಕ ದೇಹ!

**519**

**ಚಿಂತೆ ನಿಶ್ಚಿಂತವಾಗದಯ್ಯಾ,**
**ನಿಶ್ಚಿಂತ ನೆಲೆಮನೆಯಯ್ಯಾ, ಎನಗೆಂದಪ್ಪುದು ಹೇಳಾ.**
**ಆನಂದಸ್ಥಾನದಲ್ಲಿ ತಾತ್ಪರಿಯದಿಂದ**
**ನೀ ನಾನೆಂದಪ್ಪೆನು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಒಂದಂಗದಲ್ಲಿ ಎರಡು ಮನೆಗಳಿವೆ. ಒಂದು ಅಲೆಮನೆ ಮತ್ತೊಂದು ನೆಲೆಮನೆ. ಅಲೆಮನೆ ಸದಾ ಚಿಂತೆಯಲ್ಲಿರುವ ಮನೆ. ನೆಲೆಮನೆಗೆ ಯಾವ ಚಿಂತೆಯೂ ಇಲ್ಲ. ಅದು ಸದಾ ನಿಶ್ಚಿಂತ.

ಅಂಗ ಪರಿಚಯವಿದೆ. ಅಂಗವನ್ನು ಆವರಿಸಿದ ಮನವೆಂಬ ಅಲೆಮನೆ ಸರ್ವರಿಗೂ ಪರಿಚಯವಿದೆ. ಅಲೆಮನೆಗೆ, ಅಲೆ ಮನೆಯೆಂಬ ಮನ ಆವರಿಸಿದ ಅಂಗಕ್ಕೆ, ಅಂಗದಲ್ಲಿಯೇ ಸಂಗಮವಾದ ನೆಲೆಮನೆಯ ಪರಿಚಯವಿಲ್ಲ. ಪರಿಚಯ ಮಾಡಿಕೊಳ್ಳಬೇಕೆಂಬ ಆಸೆಯೂ ಅಲೆಮನೆಗೆ ಮತ್ತು ಅಂಗಕ್ಕೆ ಇಲ್ಲವೇ ಇಲ್ಲ.

ಅಲೆಮನೆಗೆ ಎಲ್ಲಿಯವರೆಗೆ ನೆಲೆಮನೆ ಪರಿಚಯವಾಗುವುದಿಲ್ಲವೋ ಅಲ್ಲಿಯವರೆಗೆ ಅಲೆಮನೆಗೆ ಚಿಂತೆ ತಪ್ಪಿದ್ದಲ್ಲ. ಅಂಗಕ್ಕೂ ಚಿಂತೆ ತಪ್ಪಿದ್ದಲ್ಲ. ಮನ ತಾನು ಎಲ್ಲೆಂದರಲ್ಲಿಗೆ ಅಲೆಯುತ್ತಲೇ ಇರುತ್ತದೆ. ಅದು ಅಲೆದಾಡದ ಜಾಗ ಒಂದೂ ಇಲ್ಲ. ಹೋಗಬಾರದ ಜಾಗಕ್ಕೆಲ್ಲ ಹೋಗಿ ಅಂಗದೊಂದಿಗೆ ಸುಖಿಸುತ್ತದೆ. ಮನಕ್ಕೆ ಸುಖವಾದರೆ ಅಂಗಕ್ಕೆ ದುಃಖ. ಸದಾ ಚಿಂತೆ. ಅಂಗಕ್ಕೆ ಸುಖವಾದರೂ ಮನಕ್ಕೆ ಸುಖ; ಅಂಗಕ್ಕೆ ದುಃಖವಾದರೂ ಮನಕ್ಕೆ ಸುಖವೇ ಆಗಿದೆ. ಆದರೂ ಅಂಗ ಮನಕ್ಕೆ ಸಹಕರಿಸುತ್ತಲೇ ಇದೆ. ಮನವನ್ನು ಪ್ರತಿಭಟಿಸಿ ಪ್ರಶಾಂತವಾಗಿ ಶಾಶ್ವತವಾಗಿ ನಿಶ್ಚಿಂತೆಯಿಂದ ಅರಿವಿನ ಲಿಂಗಯ್ಯನೊಂದಿಗೆ ಆತನ ನೆಲೆಮನೆಯಲ್ಲಿ ವಾಸ ಮಾಡುವ ಬಯಕೆ ಅಂಗಕ್ಕೆ ಇಲ್ಲ. ಅಂಗವನ್ನು ಆವರಿಸಿದ ಮನಕ್ಕೂ ಇಲ್ಲ.

ಮನವೆಂದರೆ ಅಲೆಮಾರಿ. ಅಲೆದಾಡುವುದೇ ಅದರ ಕೆಲಸ. ಅದೊಂದೇ ಅಲೆದಾಡುವುದಿಲ್ಲ; ಅಂಗದೊಂದಿಗೆ ಅಲೆದಾಡುತ್ತದೆ. ಅಂಗದೊಂದಿಗೆ ಗೆಳೆತನ ಮಾಡಿ ಅಂಗದೊಂದಿಗೆ ಸುಖಿಸಿ ಅಂಗವನ್ನೇ ದುಃಖಕ್ಕೆ ಒಡ್ಡುತ್ತದೆ. ಅಂಗವನ್ನು ಸದಾ ಚಿಂತೆಗೆ ಈಡು ಮಾಡುತ್ತದೆ.

ಮನದ ಅಲೆದಾಟ ನಿಲ್ಲುವುದು ಅಲ್ಲ. ಏಕೆಂದರೆ ಅದು ಗಾಳಿಯೊಂದಿಗೆ ಸಂಬಂಧ ಬೆಳೆಸಿದೆ. ಮನವನ್ನು ಪ್ರತಿಭಟಿಸಿ, ಅದಕ್ಕೆ ಸಹಕಾರ ಕೊಡದೆ, ಅಂಗದಲ್ಲಿಯೇ ಸಂಗಮವಾದ ಅರಿವಿನ

ಲಿಂಗಯ್ಯನ ಸಂಬಂಧ ಬೆಳೆಸುವ ಆಸಕ್ತಿ ಅಂಗಕ್ಕೆ ಇಲ್ಲ.

ನೆಲೆಮನೆಯೆಂದರೆ ಅರಿವೆಂಬ ಗುರುದೇವ ವಾಸ ಮಾಡಿದ ನಿಶ್ಚಿಂತ ಬಯಲು. ತನಗೆ ಬೇಕಾದ ವಸ್ತುಗಳನ್ನು ತನಗೆ ಬೇಕಾದಾಗ ಬಯಲು ತನ್ನಂತೆ ಮಾಡಿಕೊಳ್ಳುತ್ತದೆ. ಅಲ್ಲಿಯವರೆಗೂ ಮನವೆಂಬ ಗಾಳಿ, ಭೂಮಿ, ಅಗ್ನಿ, ಜಲ ಬಯಲಲ್ಲಿಯೇ ಬಯಲ ಸೂತ್ರ ಹಿಡಿದು ಸುತ್ತುತ್ತಲೇ ಇರುತ್ತವೆ. ಹೀಗೆ ಅಲೆದಾಡುವ ಯಾವ ಅಲೆಮಾರಿಗಳೂ ನಿಶ್ಚಿಂತೆಯಿಂದ ಇರಲು ಸಾಧ್ಯವಾಗುವುದೇ ಇಲ್ಲ. ಅಲೆದಾಡುವುದೇ ಅವುಗಳ ಕಾಯಕ.

ಅಂಗದೊಂದಿಗೆ ಗೆಳೆತನ ಮಾಡಿ ಶಾಂತಿಯಿಂದ ಇರುವ ವೇಷ ಹಾಕಬಹುದು. ವೇಷ ಸತ್ಯವಲ್ಲ. ಸತ್ಯದೊಂದಿಗೆ ಸಂಬಂಧ ಬೆಳೆಸುವುದೇ ಸತ್ಯ. ಕತ್ತಲು ಬೆಳಕಿನೊಂದಿಗೆ ಸಂಬಂಧ ಬೆಳೆಸಿದಂತೆ. ಕತ್ತಲನ್ನು ಕಳೆದುಕೊಂಡು ಬೆಳಕೇ ಆದಂತೆ.

ಅಲೆಮನೆ ನೆಲೆಮನೆಯೊಂದಿಗೆ ಸಂಬಂಧ ಬೆಳೆಸಿದರೆ ಸಾಕು ತನ್ನ ಅನಂತ ಜನ್ಮಗಳ ಅಲೆದಾಟವೆಲ್ಲ ಸಂಪೂರ್ಣ ನಿಂತು ಹೋಗುತ್ತದೆ. ಚಿಂತೆ ನಿಶ್ಚಿಂತವಾಗುತ್ತದೆ. ಅಲೆಮನೆ ನೆಲೆಮನೆಯಾಗಿ ಮಾರ್ಪಡುತ್ತದೆ. ಸದಾ ಅಲೆದಾಡುವ ಮನ ಘನದೊಂದಿಗೆ ಸಂಗಮವಾಗಿ ಅರಿವಿನ ಲಿಂಗಯ್ಯನೇ ತಾನಾಗುತ್ತದೆ. ಕಪಿಲಸಿದ್ಧ ಮಲ್ಲಯ್ಯನೇ ತಾನಾಗುತ್ತದೆ.

***(ಸೂಚನೆ : 520, 521 ನೇ ವಚನ ಮತ್ತು ಅನುಭಾವಕ್ಕಾಗಿ 518, 519 ನೇ ವಚನ ಮತ್ತು ಅನುಭಾವ ನೋಡಿ. ಇವೆರಡೂ ವಚನಗಳು ಮಹಾಸಂಪುಟದಲ್ಲಿ ಮರುಕಳಿಸಿವೆ.)***

**522**

**ಚಿರಂಜೀವಿ ಎಂದಡೆ ನಿರೋಗಿ, ಚಿರಂಜೀವಿ ಎಂದಡೆ ಸಶಕ್ತ;**
**ಚಿರಂಜೀವಿ ಎಂದಡೆ ಬಹುಕಾಲ ಬದುಕುವವನು.**
**ಚಿರಂಜೀವಿ ಎಂದಡೆ ಪ್ರಳಯವ ಮೀರುವವನಲ್ಲ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ಬ್ರಹ್ಮವೆಂಬ ಶಬ್ದ ಬೇರುಂಟೆ?**

ವಚನ ಸರಳವಾಗಿದೆ; ಸಹಜವಾಗಿಯೂ ಇದೆ. ತನುವಿನಲ್ಲಿ ಜ್ಞಾನಿ ಅಜ್ಞಾನಿ ಎಂದು ವಿಂಗಡಿಸುವಂತಿಲ್ಲ. ಹೆಣ್ಣು ಗಂಡು ಎಂದು ವಿಂಗಡಿಸುವಂತಿಲ್ಲ. ತನುಗಳೆಲ್ಲ ಒಂದೇ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇವುಗಳ ಕ್ರಿಯೆ ಕೂಡಾ ಒಂದೇ.

ತನುವಿನಲ್ಲಿಯ ಜ್ಞಾನ ಅಜ್ಞಾನದಿಂದಾಗಿ ಅದು ತನ್ನನ್ನು ತಾನೇ ವಿಂಗಡಿಸಿಕೊಂಡಿದೆ. ಚಿರಂಜೀವಿ ನಿರೋಗಿ ಸಶಕ್ತ ಅಶಕ್ತ ಜನನ ಮರಣಗಳ ಬಾಧೆಗೆ ತುತ್ತಾದವನು, ತುತ್ತಾಗದವನು ಪ್ರಳಯಕ್ಕೆ ತುತ್ತಾದವನು. ಪ್ರಳಯವನ್ನು ಮೀರಿದವನು ಎಂದು ವಿಂಗಡಿಸಿ ನೋಡುತ್ತದೆ.

ತನುವಿನಲ್ಲಿ ಸಂಗಮವಾದ ಮಹಾಜ್ಞಾನವನ್ನು ತನುವನ್ನು ಆವರಿಸಿದ ಮನದಿಂದ ಕಂಡುಕೊಂಡು ಆ ಮಹಾಜ್ಞಾನವಾದವನ ತನುವೇ ಬೇರೆ. ಆತ ಸಕಲ ತನುಗಳನ್ನು ತನ್ನಂತೆ ನೋಡುತ್ತಾನೆ. ಆತನ ಕಣ್ಣಲ್ಲಿ ಭೇದವಿಲ್ಲ. ಭೇದದಿಂದ ನೋಡುವ ಕಣ್ಣು ಕಣ್ಣಲ್ಲಿಯೇ ಇರುವ ಜ್ಞಾನದ ಕಣ್ಣಿಗೆ ತುತ್ತಾಗಿದೆ. ಇಂತಹ ಜ್ಞಾನಿಯನ್ನು ಸಿದ್ಧಾರ್ಥ ಬುದ್ಧ ಎಂದು ಕರೆದ. ತನ್ನನ್ನು ತಾನು ಹಾಗೆ ಕರೆದುಕೊಂಡ. ಸಕಲರನ್ನು ಹಾಗೆಯೇ ನೋಡಿದ.

ಬುದ್ಧನಿಗೆ ಯಾರೂ ಸಾಮಾನ್ಯರಾಗಿಯೇ ಕಾಣಲಿಲ್ಲ. ಶರಣರಿಗೆ ಕೂಡಾ ಯಾರೂ

ಸಾಮಾನ್ಯರಾಗಿ ಕಾಣಲಿಲ್ಲ. ಸಕಲ ಕಾಯಗಳಲ್ಲಿ ಸಂಗಮವಾದ ಜ್ಞಾನಕ್ಕೆ ಶರಣರು ಶರಣು ಶರಣಾರ್ಥಿ ಎಂದು ಶರಣು ಹೋದರು.

ಸಕಲ ತನುಗಳಲ್ಲಿ ಜ್ಞಾನ ಸಂಗಮವಾಗಿದೆ ಎಂದು ಶರಣರಿಗೆ ಗೊತ್ತಾಯಿತು. ಉಳಿದ ತನುಗಳಿಗೆ ಗೊತ್ತಾಗಲಿಲ್ಲ. ಗೊತ್ತಾಗದಿದ್ದರೇನಾಯಿತು? ಜ್ಞಾನವಿದೆ. ಅದನ್ನು ಕಂಡುಕೊಳ್ಳಲು ಮನಕ್ಕೆ ತಡವಾಗುತ್ತದೆ ಅಷ್ಟೇ. ಜ್ಞಾನ ಗೊತ್ತಾದ ತನುವಿಗೂ ಮರಣವಿದೆ; ಜ್ಞಾನ ಗೊತ್ತಾಗದ ತನುವಿಗೂ ಮರಣವಿದೆ. ಜ್ಞಾನವಿದೆಯೆಂದು ಗೊತ್ತಾದ ತನುವಿಗೆ ಮರಣದ ಬಾಧೆಯಿಲ್ಲ; ಜ್ಞಾನ ಗೊತ್ತಾಗದ ತನುವಿಗೆ ಮರಣದ ಬಾಧೆಯಿದೆ.

ಜ್ಞಾನಿ ತನುವಿಗೆ ಪ್ರಳಯದ ಬಾಧೆಯಿಲ್ಲ. ಜ್ಞಾನ ಗೊತ್ತಿಲ್ಲದ ತನುವಿಗೆ ಪ್ರಳಯದ ಬಾಧೆ ಉಂಟು. ಶಬ್ದ ಸ್ಪರ್ಶ ರುಚಿ ವಾಸನೆ ದೃಶ್ಯಗಳಲ್ಲಿ ಏರಿಳಿತಗಳಾಗಿ ತನುವಿನಲ್ಲಿ ಪ್ರಳಯ ಉಂಟಾಗುತ್ತದೆ. ಸದಾ ಅಜ್ಞಾನದ ರೋಗದಿಂದ ಬಳಲುತ್ತಾನೆ. ಅವನು ಸಶಕ್ತನಲ್ಲ. ಚಿರಂಜೀವಿಯೆಂದು ತನುಗಳ ಮೂಲಕ ಕರೆಯಿಸಿಕೊಳ್ಳುವುದಿಲ್ಲ. ಸದಾ ಭ್ರಮಾಜ್ಞಾನದಿಂದ ಕೂಡಿರುತ್ತಾನೆ.

ಭ್ರಮೆಯನು ಕಳೆದುಕೊಂಡಾಗ ಉಳಿಯುವ ಜ್ಞಾನವೇ ಬ್ರಹ್ಮಜ್ಞಾನ. 'ಬ್ರಹ್ಮ' ಎಂದರೆ ವ್ಯಕ್ತಿಯಲ್ಲ. ಸಕಲ ವ್ಯಕ್ತಿಗಳಲ್ಲಿಯೂ ಸಂಗಮವಾಗಿರುವ ಅವ್ಯಕ್ತ ಶಕ್ತಿ . ತನುವನ್ನು ಆವರಿಸಿದ ಮನ ತನ್ನ ಭ್ರಮೆಯನ್ನು ಕಳೆದುಕೊಂಡಾಗಲೇ ಬ್ರಹ್ಮನಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**523**

**ಚೌಗ್ರಾಮಕೊಳದಲ್ಲಿ ಎಸೆವ ಚಾದಗವಕ್ಕಿ**
**ಒಸರುವಮೃತವನ್ನು ಕೊಳ್ಳಾ.**
**ಸೀಮೆಗೆಟ್ಟ ಅಮೃತವನು ಆರೈದು ಕೊಳಬಲ್ಲಡೆ**
**ಇದ್ದೆಸೆಯ ಸೀಮೆಗೆಡುವೆ ನೀನು ಕಂಡಾ.**
**ಮರಾಳ ಮರಾಳನೆಂಬ ಹಕ್ಕಿ ಹಾರದ ಮುನ್ನ**
**ನೀನೆಯ್ದು ಅವ್ಯಯಪದವ**
**ಕಪಿಲಸಿದ್ಧ ಮಲ್ಲಿನಾಥನೆಂಬ ಸುಖಸಮುದ್ರದಲಾಳಾ.**

ಬ್ರಹ್ಮಾಂಡವೆಂಬ ಬಯಲ ಗ್ರಾಮದಲ್ಲಿ ಭರಿತವಾದ ಅಮೃತವನ್ನು ಹೊತ್ತು ತಂದ ಹಕ್ಕಿ ನಾಲ್ಕೂ ಗ್ರಾಮಗಳಲ್ಲಿ ಚೆಲ್ಲಿದೆ. ಹೀಗಾಗಿ ಐದು ಗ್ರಾಮಗಳು ಕೂಡಾ ಅಮೃತದಿಂದ ಭರಿತವಾಗಿವೆ.

ಅಂಗವೆಂದರೆ ಐದುಗ್ರಾಮಗಳಿಂದ ಭರಿತವಾದ ಬ್ರಹ್ಮಾಂಡ. ಬಯಲು ಎನ್ನುವ ಅಮೃತಮಯವಾದ ಒಂದು ಗ್ರಾಮ; ಭೂಮಿ, ಜಲ, ವಾಯು, ಅಗ್ನಿ ಎಂಬ ನಾಲ್ಕು ಗ್ರಾಮಗಳು. ಹೀಗೆ ಐದು ಗ್ರಾಮಗಳಿಂದ ಕೂಡಿದ ಅಂಗವನ್ನು ಅರಿವಿನ ಲಿಂಗಾಂಗವೆಂದು ಕರೆದಿದ್ದಾರೆ ಶರಣರು.

ಅಂಗವನ್ನು ಆವರಿಸಿದ ಮನಕ್ಕೆ ಅಮೃತಮಯವಾದ ಬಯಲ ಗ್ರಾಮವೊಂದು ಬಿಟ್ಟು ನಾಲ್ಕೂ ಗ್ರಾಮಗಳ ಮೂಲಕ ಅಲೆದಾಡುತ್ತದೆ. ತನಗೆ ಬೇಕಾದ ಆಹಾರವನ್ನು ಅಂಗದ ಮೂಲಕ ಉಂಡು ಸುಖಿಸುತ್ತದೆ. ಬಡಪಾಯಿ ಅಂಗಕ್ಕೆ ಒಮ್ಮೆ ಸುಖವನ್ನು ಮತ್ತೊಮ್ಮೆ ದುಃಖವನ್ನು ಕೊಡುತ್ತದೆ. ಹೀಗೆ ಉಣ್ಣುವ ಮನ ಕೂಡಾ ಒಂದು ಹಕ್ಕಿಯೇ ಆಗಿದೆ. ಅದು ಹಕ್ಕಿ ಹೌದು ಆದರೆ ರೆಕ್ಕೆಗಳಿಲ್ಲ.

ಅದಕ್ಕೆ ರುಂಡವಿಲ್ಲ; ಮುಂಡವೂ ಇಲ್ಲ. ಆದರೂ ಹಾರುವುದು ನಿಲ್ಲುವುದೇ ಇಲ್ಲ. ಸಕಲ ಹಕ್ಕಿಗಳಿಗೂ ಮೀರುವ ವೇಗ ಅದಕ್ಕೆ.

ಅಮೃತಭರಿತವಾದ ಬಯಲ ಬಿಂದುವಿನಿಂದಲೇ ಹುಟ್ಟಿ, ಒಸರುವ ಅಮೃತವನ್ನೇ ಮರೆತು ಹೋಗಿದೆ. ಚೌಗ್ರಾಮ ಸೀಮೆಗಳನ್ನು ಕೆಡಿಸಿ ಐಗ್ರಾಮಕ್ಕೆ ಹೋದರೆ ಸಾಕು ಅಮೃತವೇ ಅಮೃತ. ಮರಾಳ ಮರಾಳ ಎಂದು ಕೂಗಿ ಹಾರದ ಮುನ್ನ ಒಮ್ಮೆ ನೀನು ಆ ಅಮೃತಕೊಳದಲ್ಲಿ ಮಿಂದು ಪಾವನನಾಗು. ಅದು ಬರೀ ಕೊಳವಲ್ಲ; ಪಾಲ್ಗಡಲು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ವಾಸ ಮಾಡುವ ಸುಖಸಮುದ್ರ !

**524**

**ಜಗ ಜನಕ ಜನನಿಯರಿಬ್ಬರ ಇರವ ಕೇಳಾ ಅಯ್ಯಾ,**
**ಹಾ ಆಆ ಹೋ ಯೇ ಯೇ ಅಯ್ಯಾ,**
**ಸಸಿ ಬೀಜದಂತೆ ಶಿವನು ಶಿವ-ಶಕ್ತಿಯರಿರವ ಕಂಡಾ ಅಯ್ಯಾ,**
**ಇಲ್ಲಿ ಒಮ್ಮೆಯೂ ಭೇದವಿಲ್ಲ**
**ಕಪಿಲಸಿದ್ಧ ಮಲ್ಲಿನಾಥಯ್ಯನಾ.**

ಜಗತ್ತನ್ನು ಸೃಷ್ಟಿ ಮಾಡಿದ ಜನಕ ಜನನಿಯರಿಬ್ಬರ ಕತೆಯನ್ನು ಸಿದ್ಧರಾಮ ಶಿವಯೋಗಿಗಳು ಎರಡೇ ಎರಡು ಸಾಲುಗಳಲ್ಲಿ ಹೇಳಿದ್ದಾರೆ.

ಜನಕ-ಜನನಿಯರಿಬ್ಬರ ಸೃಷ್ಟಿ ಕ್ರಿಯೆಯನ್ನು ಸಾಕ್ಷಾತ್ ಸಿದ್ಧರಾಮ ಶಿವಯೋಗಿಗಳು ನೋಡುತ್ತಾ ಹಾ ಆಆ ಹೋ ಯೇಯೇ ಅಯ್ಯಾ , ಏನೀ ನಿನ್ನ ಸೃಷ್ಟಿಯ ಲೀಲೆ! ಎಂದು ಸಂತೋಷ ವ್ಯಕ್ತಪಡಿಸಿದ್ದಾರೆ. ನೀನು ಮಾಡಿದ ಈ ಸೃಷ್ಟಿಯ ಕ್ರಿಯೆಯಲ್ಲಿ ಎಳ್ಳನಿತು ಭೇದವಿಲ್ಲ ಎಂದು ಸೃಷ್ಟಿ ಮಾಡಿದ ಜನಕನೊಂದಿಗೆ ತಾನೇ ಜನನಿಯಾಗಿ ಮಾತನಾಡಿದ್ದಾರೆ.

ಸಸಿ ಬೀಜದಂತೆ ಶಿವನು ಶಿವಶಕ್ತಿಯರಿರವ ಕಂಡಾ ಅಯ್ಯಾ , ಇಲ್ಲಿ ಒಮ್ಮೆಯೂ ಭೇದವಿಲ್ಲ:

ಬೀಜದಲ್ಲಿ ಸಸಿಯಿದೆ. ಬೀಜದಲ್ಲಿದ್ದ ಸಸಿ ಅಂಕುರವಾಗಿ, ಬೀಜದೊಂದಿಗೆ ಹೊರ ಬಂದು ಸಸಿಯ ಬೇರು ಭೂಮಿಯೊಳಗೆ ತಂತಾನೆ ಹರಡಿ, ಮೇಲೆ ಹೆಮ್ಮರವಾಗಿ ಹೂವಾಗಿ ಕಾಯಾಗಿ ಹಣ್ಣಾಗಿ, ಬೀಜದಲ್ಲಿ ಪುನಃ ತನ್ನ ಶಕ್ತಿಯನ್ನು ತುಂಬಿ, ತೊಟ್ಟು ಕಳಚಿ ಮರದಿಂದ ಕೆಳಗೆ ಬೀಳಿಸುತ್ತದೆ. ಚೆನ್ನಬಸವಣ್ಣನವರು ಬೀಜದ ಶಕ್ತಿಯನ್ನು ಕೆಳಗಿನಂತೆ ಬಣ್ಣಿಸಿದ್ದಾರೆ.

''ಬಿತ್ತಿದ ಬೀಜದ ಫಲವು ವಿಪರೀತ ನೋಡಾ! ತನ್ನಲ್ಲಿ ತಾನೆಯಾಗಿ ಆಗಮವನರಿಯದು, ತಾನೆ ಸ್ವಯಂಕೃತ ಸಹಜ. ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣನು''.

ಹೇಗೆ ಬೀಜ-ವೃಕ್ಷದ ನ್ಯಾಯವೋ ಹಾಗೆಯೇ ತನುವು ಕೂಡಾ ಬಯಲ ಬೀಜವೇ ಆಗಿದೆ. ಬಯಲಲ್ಲಿ ಬಯಲಾಗಿದ್ದ ಜಲಜನಕ ಆಮ್ಲಜನಕಗಳೆರಡನ್ನು ಬಯಲು ಬಂಧಿಸಿ, ತಾನು ಅದರಲ್ಲಿ ಒಳಹೊರಗೆನ್ನದಂತೆ ಬೆರೆತು ಜಲಬಿಂದುವಾಗಿದೆ. ಜೀವ ಜಲಬಿಂದುವಾಗಿದೆ. ಈ ಜೀವ ಜಲಬಿಂದುವೇ ರಕ್ತವಾಗಿ; ಮಾಂಸವಾಗಿ, ಮೂಳೆ, ಮಜ್ಜೆ, ಮೇದಸ್ಸು ಆಗಿದೆ; ಸುಂದರವಾದ ಚರ್ಮವಾಗಿ ತನುವಾಗಿದೆ. ಜೀವ ಜಲಬಿಂದುವೇ ಕಣ್ಣು ಕಿವಿ ಮೂಗು ನಾಲಿಗೆಯಾಗಿದೆ.

ಬಯಲ ದೇವನೇ ಈ ಬೀಜಕ್ಕೆ ಜನಕನಾಗಿದ್ದಾನೆ. ಬೀಜದ ಗರ್ಭದಲ್ಲಿ ತಾನಿದ್ದು ಗರ್ಭಹೊಕ್ಕು ತನುವಾಗಿ ಹೊರಗೆ ಬಂದಿದ್ದಾನೆ. ಬಯಲುದೇವ ಬಿತ್ತಿದ ಬೀಜದ ಫಲವು ವಿಪರೀತ

ನೋಡಾ! ತನ್ನಲ್ಲಿ ತಾನೆಯಾಗಿ ಆತ ಯಾವ ಆಗಮವನ್ನೂ ಅರಿಯ. ಆತನಿಗೆ ಯಾವ ಆಗಮ ಉಪನಿಷತ್ತು ಬೈಬಲ್ ಭಗವದ್ಗೀತೆ ಕುರಾನ್‌ಗಳ ಅವಶ್ಯಕತೆಯೇ ಇಲ್ಲ. ಏಕೆಂದರೆ ಆ ತನುವಿನಿಂದಲೇ ಸಕಲ ಗ್ರಂಥಗಳೂ ಹೊರಗೆ ಬಂದಿವೆ. ತಾನು ಸ್ವಯಂಕೃತ ಸಹಜ. ತಂತಾನೇ ತನುವಿನಲ್ಲಿ ಬ್ರಹ್ಮಕಮಲ ಅರಳಿದೆ. ಅದರ ಅರಿವಿನ ಕಂಪು ಎಲ್ಲೆಡೆ ಬೀರುತ್ತಲಿದೆ. ಆದರೂ ಜನಕನ ಈ ಕಂಪು ಮನವೆಂಬ ಜನನಿ ಮಾತ್ರ ಅರಿಯಳು.

ಜನಕ ಎಂದರೆ ಬಯಲದೇವ. ಬೀಜವನ್ನು ಸೃಷ್ಟಿ ಮಾಡಿ, ಆ ಬೀಜದಲ್ಲಿ ತಾನು ಇದ್ದಾತ. ಮರದಲ್ಲಿಯೂ ತಾನಿದ್ದು ಹೂ ಆಗಿ ಅರಳಿ ಪರಿಮಳ ಬೀರಿದಾತ. ತನುವಿನಲ್ಲಿಯೂ ತಾನಿದ್ದು ಅರಿವಾಗಿ ಪರಿಮಳ ಬೀರಿದಾತ.

ಪಶು ಪಕ್ಷಿ ಪ್ರಾಣಿ ಉರುಗ ಜಲಚರಗಳು ಗಿಡ ಮರ ಬಳ್ಳಿ ಸಸ್ಯಕಾಶಿ ಸಹಜವಾಗಿಯೇ ಇವೆ. ಅಲ್ಲಿ ಜನಕ ಜನನಿಯರಿಬ್ಬರೂ ಸಹಜವಾಗಿಯೇ ಇದ್ದಾರೆ.

ತನುಲೋಕವೇ ಬೇರೆ. ಜನಕ ಜನನಿಯರಿಬ್ಬರೂ ತನುವಾಗಿ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದ್ದಾರೆ. ತಾವೇ ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾವೇ ಪರಮಾನಂದದಿಂದ ಸಹಜವಾಗಿ ನೋಡಲು ತನುವಿನ ಮೂಲಕ ಜನ್ಮ ತಳೆದಿದ್ದಾರೆ. ತನುವಿಗೆ ಜನ್ಮ ನೀಡಿದ ಜನಕ ತನುವಿನಲ್ಲಿ ಸಹಜವಾಗಿಯೇ ಇದ್ದಾನೆ. ಜನನಿ ಜನಕನೊಂದಿಗೆ ಸಂಗಮವಾಗಿ ಸಹಜವಾಗಿ ಇದ್ದು ಇಡೀ ಬ್ರಹ್ಮಾಂಡಕ್ಕೆ ಜನನಿಯಾಗಬೇಕಿತ್ತು. ಆದರೆ ಜನನಿ ಜನಕನೊಂದಿಗೆ ಸಂಗಮವಾಗದೆ ತನುವನ್ನು ಆವರಿಸಿದ್ದಾಳೆ. ಮನವೆಂದು ಹೊಸ ನಾಮದಿಂದ ಕರೆಯಿಸಿಕೊಂಡಿದ್ದಾಳೆ. ತನ್ನದೇ ಆದ ಸೃಷ್ಟಿ ಕ್ರಿಯೆಯನ್ನು ತನುವಿನ ಮೂಲಕ ನಡೆಯಿಸಿದ್ದಾಳೆ. ಜನನಿಗೆ ಬೇಕಾದುದು ಜನಕನಿಗೆ ಬೇಡ; ಜನಕನಿಗೆ ಬೇಕಾದುದು ಜನನಿಗೆ ಬೇಡ.

ಪಶು ಪಕ್ಷಿ ಪ್ರಾಣಿ ಉರುಗ ಜಲಚರಗಳು ಗಿಡ ಮರ ಬಳ್ಳಿ ಸಸ್ಯಕಾಶಿಗಳು ಸಹಜವಾಗಿಯೇ ಇವೆ. ಮನುಷ್ಯನಿಗೆ ಬೇಕಾದುದು ಇವುಗಳಿಗೆ ಯಾವುದಕ್ಕೂ ಬೇಡ. ಏಕೆಂದರೆ ತನು ಮಾತ್ರ ಸಹಜವಾಗಿಲ್ಲ. ಅದಕ್ಕೆ ಓದಲು ಪುಸ್ತಕ ಬೇಕು, ನೋಡಲು ಚಿತ್ರ ಬೇಕು, ಕೇಳಲು ಕತೆ ಬೇಕು. ಓದುವ ಪುಸ್ತಕ, ಬರೆದ ಚಿತ್ರ, ಕೇಳುವ ಕತೆ ತನುವಿನಿಂದಲೇ ಹೊರಗೆ ಬಂದಿವೆ. ತನುವಿನಿಂದ ಹೊರಬಂದುದನ್ನು ತನುವೇ ಕೇಳಿ ಭ್ರಮೆಯಿಂದ ಸುಖಿಸುತ್ತದೆ ಹಾಗೆಯೇ ದುಃಖಿಸುತ್ತದೆ. ಸಹಜತೆಯಿಂದ ಬಹುದೂರ ಉಳಿದಿದೆ.

ತನುವಿನ ಸಹಜತೆ ತನುವಿಗೆ ಜನ್ಮ ನೀಡಿದ ಜನಕನಿಂದ ಲಭಿಸಿದೆ. ಜನಕ ಸಹಜ. ಜನನಿಯೇ ತಾನಾಗಬೇಕಾದ ಮನ ಅಸಹಜ. ಹೀಗಾಗಿ ತನುವನ್ನು ತನು ಸಹಜತೆಯಿಂದ ನೋಡುತ್ತಿಲ್ಲ. ಅದಕ್ಕೆ ಜಾತಿ ಮತ ಪಂಥಗಳು ಕಾಣುತ್ತವೆ. ತನ್ನನ್ನು ತಾನು ಅನೇಕ ಧರ್ಮಗಳಿಂದ ವಿಂಗಡಿಸಿಕೊಂಡಿದೆ. ಧರ್ಮಗ್ರಂಥಗಳನ್ನು ಸೃಷ್ಟಿ ಮಾಡಿದೆ. ವೇದ ಆಗಮ ಉಪನಿಷತ್‌ಗಳನ್ನು ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಪಠಿಸುತ್ತದೆ. ತನುವಿನ ಕಣ್ಣು ಕಿವಿ ಮೂಗು ಚರ್ಮ ನಾಲಿಗೆಯಲ್ಲಿ ಸಹಜತೆ ಮಾಯವಾಗಿದೆ.

ತನು ತನುವನ್ನೇ ನೋಡಿ ಉದ್ರೇಕಗೊಳ್ಳುತ್ತದೆ. ತನುವಿನ ಮಾತು ತನುವೇ ಕೇಳಿ ಸುಖಿಸುತ್ತದೆ, ದುಃಖಿಸುತ್ತದೆ, ಕ್ರೋಧದ ಜ್ವಾಲೆಯಿಂದ ತನು ತನುವನ್ನೇ ಕೊಲ್ಲುತ್ತದೆ. ತನುವನ್ನು ಆವರಿಸಿದ ಮನ ತನುವಿನೊಂದಿಗೆ ಬೆರೆತು ಮಾಡಿದ ತಪ್ಪು ತನುವಿಗೆ ಅರಿವಾಗುತ್ತದೆ. ತನುವಿನೊಂದಿಗೆ ಮನ ಮಾಡಿದ ತಪ್ಪನ್ನು ಪುನಃ ಮನಕ್ಕೆ ಅರಿವಾಗವಂತೆ ಬೇಧಿಸಿದಾತನೇ ಜನಕ.

ಆತ ಸಹಜ. ಮನ ಅಸಹಜ.

ಜನಕನಿಗೆ ಓದು ಬೇಕಿಲ್ಲ. ಮನ ಓದಿದರೂ ಅದು ತನ್ನ ಹೀನಗುಣಗಳನ್ನು ಬಿಡುವುದಿಲ್ಲ. ಆಲಯ ನಿರ್ಮಿಸಿ ಅಡ್ಡಬಿದ್ದು ಬೇಡಿಕೊಂಡರೂ ತನುವಿನ ಹಾದರ ನಿಲ್ಲುವುದಿಲ್ಲ. ಕಾವಿಧರಿಸಿ, ನಿಲುವಂಗಿ ತೊಟ್ಟು, ಕೊರಳಲ್ಲಿ ಲಿಂಗ ಜನಿವಾರ ಶಿಲುಬೆ ಧರಿಸಿದರೂ ಅದರ ಹೀನ ಬುದ್ಧಿ ತೊಲಗುವುದಿಲ್ಲ. ಐದು ಬಾರಿ ನಮಾಜು ಮಾಡಿ ಮಕ್ಕಾ ಮದೀನ, ವ್ಯಾಟಿಕನ್, ಕಾಶಿ, ರಾಮೇಶ್ವರ, ಶ್ರೀಶೈಲಕ್ಕೆ ಹೋದರೂ ತನುವಿನ ಅಜ್ಞಾನ ತೊಲಗುವುದಿಲ್ಲ. ಏಕೆಂದರೆ,

ತನುವನ್ನು ಸೃಷ್ಟಿ ಮಾಡಿದ ದೇವರು ಅರಿವಾಗಿ ತನುವಿನಲ್ಲಿಯೇ ಇದ್ದು ತನುವಿಗೆ ಪಾಠ ಮಾಡುತ್ತಾನೆ. ಇಡೀ ಜಗತ್ತಿನಲ್ಲಿರುವ ತನುಗಳನ್ನು ಸೃಷ್ಟಿ ಮಾಡಿದ ಜನಕನು ಆತ. ತನುವನ್ನು ಆವರಿಸಿದ ಮನದ ಮಾತು ತನು ಕೇಳುತ್ತದೆ.

ಮನ ಶಕ್ತಿಯಾಗಿ ಶಿವನನ್ನು ಕೂಡಿದರೆ ಸಾಕು ತನು ತನಗೆ ತಾನೇ ಸಹಜನಾಗುತ್ತದೆ. ತನು ಜನಕ ಜನನಿಯರ ವಶವಾಗುತ್ತದೆ. ತನುವಿಗೆ ಅಂಟಿದ ಹಿಂದು ಮುಸಲ್ಮಾನ ಕ್ರಿಶ್ಚಿಯನ್ ಬೌದ್ಧ ಜೈನ ವೀರಶೈವ ಸಿಖ್‌ಧರ್ಮಗಳೆಲ್ಲ ಉದುರಿಬೀಳುತ್ತವೆ. ತನುವಿನ ಸಕಲ ಭ್ರಮೆಗಳೆಲ್ಲ ತೊಲಗಿ ತಂತಾನೆ ತನುವಿನಲ್ಲಿ ಬ್ರಹ್ಮಕಮಲ ಅರಳುತ್ತದೆ. ಮಠಮಂದಿರ ಮಸೀದೆ ಚರ್ಚ್ ಆಶ್ರಮ ಬಸದಿಗಳೆಲ್ಲ ಹಾಳುಬೀಳುತ್ತವೆ.

ಮನವೇ ಶಿಷ್ಯನಾಗುತ್ತದೆ; ಅರಿವೇ ಗುರುವಾಗುತ್ತದೆ; ತನುವೇ ವಿಶ್ವವಿದ್ಯಾಲಯವಾಗುತ್ತದೆ. ಆಗ ನೋಡುವುದೆಲ್ಲ ಬ್ರಹ್ಮಾಂಡ ಕೇಳುವುದೆಲ್ಲ ಬ್ರಹ್ಮ. ಎಲ್ಲೆಡೆಯಲ್ಲಿಯೂ ಅರಿವಿನ ಪರಿಮಳ ಬೀರುತ್ತ ತನು ತನಗೆ ತಾನೇ ಸಹಜನಾಗುತ್ತದೆ.

**525**

**ಜಗದಗಲದಲಿ ಹಬ್ಬಿ ಉಲಿವುತ್ತೈದುದೆ ಮಾಯೆ.**
**ಅದ ಕೆಡಿಸಿ ಎನ್ನ ಹರುಷಿತನ ಮಾಡಿ**
**ಉರುತರ ಕೈವಲ್ಯ ಪದವನಿತ್ತಾ ಗುರು ನೀನು**
**ಕಪಿಲಸಿದ್ಧ ಮಲ್ಲಿಕಾರ್ಜುನದೇವ ಗುರುವಾದಿರಲೈ.**

ಮಾಯೆಯನ್ನು ಕೆಡಿಸಿಕೊಳ್ಳುವುದು ಸುಲಭದ ಮಾತಲ್ಲ. ಅದು ಜಗದಲ್ಲಿ ವಾಸ ಮಾಡಿದ ಸಕಲ ತನುಗಳನ್ನು ಆವರಿಸಿದೆ. ತನುವಿನ ಕಣಕಣದಲ್ಲಿಯೂ ಮಾಯೆ ಹಬ್ಬಿದೆ. ತನುವನ್ನೇ ಮನೆಯನ್ನಾಗಿಸಿಕೊಂಡು ತನುವಿನಲ್ಲಿಯೇ ಆಶ್ರಯ ಪಡೆದು, ಆಶ್ರಯ ಪಡೆದ ತನುವನ್ನೇ ನರಕವನ್ನಾಗಿಸಿದೆ.

ಹಳದಿ ಲೋಹ ನೋಡಿ ಚಿನ್ನವೆಂದು ಅದನ್ನು ಪಡೆದು ಸುಖಿಸುವುದಕ್ಕಾಗಿ ತಾನು ವಾಸ ಮಾಡಿದ ಕಾಯವನ್ನು ಕಳ್ಳನನ್ನಾಗಿಸುತ್ತದೆ. ಶ್ರೀಮಂತನನ್ನಾಗಿಸುತ್ತದೆ. ರಾಜನನ್ನಾಗಿಸಿ ಯುದ್ಧ ಮಾಡಿ ಮತ್ತೊಬ್ಬ ರಾಜನನ್ನು ಕೊಂದು ಚಿನ್ನದ ಕಿರೀಟ ಪಡೆಯುತ್ತದೆ.

ಕಾಯವನ್ನು ಆವರಿಸಿ ಕಾಯದಲ್ಲಿಯೇ ವಾಸ ಮಾಡಿದ ಮಾಯೆ ಕಾಯಗಳ ಕುಲವನ್ನೇ ಸರ್ವನಾಶ ಮಾಡುತ್ತದೆ. ಕಾಯ ಒಂದೇ. ಕಾಯದಲ್ಲಿ ಹೆಣ್ಣು ಎನ್ನುವ ಅಜ್ಞಾನವನ್ನು ಸೃಷ್ಟಿ ಮಾಡಿ, ಗಂಡನ್ನು ನೋಡಿ ಕಾಯ ಕಾಯದೊಂದಿಗೆ ಕಾಮಕೇಳಿ ಆಡಿ, ಕಾಯ ಕಾಯವನ್ನೇ ಹರಿದು ತಿನ್ನುತ್ತದೆ. ಮಾಯೆ ಎಂಬ ರೋಗ ಜಗದ ಕಾಯಗಳಿಗೆಲ್ಲ ಹಬ್ಬಿದೆ.

ಆ ಮಾಯೆಯನ್ನು ಕೆಡಿಸಿ ಎನ್ನನು ಹರುಷಿತನನ್ನಾಗಿ ಮಾಡಿ ಕಾಯಕ್ಕೆ ಕೈವಲ್ಯ ಪದವನಿತ್ತ ಗುರುದೇವ ನೀನು ಎಂದು ಸಿದ್ಧರಾಮ ಶಿವಯೋಗಿಗಳು ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

ಕಾಯದಲ್ಲಿ ಅರಿವಿನ ಮಲ್ಲಯ್ಯ ಎಂಬ ಹೆಸರಿನೊಂದಿಗೆ ಗುರುದೇವ ಸಂಗಮವಾಗಿದ್ದಾನೆ. ಕಾಯವನ್ನು ಮಾಯೆ ಆವರಿಸಿದೆ.

''ಮಾಯೆಯ ಬಸುರಲ್ಲಿ ಬಂದಾತ ಮಹೇಶ, ದೇವಕಿಯ ಬಸುರಲ್ಲಿ ಬಂದಾತ ವಿಷ್ಣು, ಹೂವಿನ ಬಸುರಲ್ಲಿ ಬಂದಾತ ಬ್ರಹ್ಮ, ಮರುತ ದೇವಿಯ ಬಸುರಲ್ಲಿ ಬಂದಾತ ಅರುಹ. ಇವರು ದೇವರೆಂದು ನಂಬಿ ಪೂಜಿಸಿದಡೆ ಭವ ಅಳಿಯದು, ಮುಕ್ತಿಯಾಗದೆಂದಾತನು ಅಂಬಿಗ ಚೌಡಯ್ಯ'' ಎಂದು ಚೌಡಯ್ಯ ಶರಣರು ಹೇಳಿದ್ದಾರೆ.

ಅರಿವಿನ ಮಲ್ಲಯ್ಯನೊಬ್ಬನೆ ಯಾರ ಬಸುರಲ್ಲಿಯೂ ಬಂದಿಲ್ಲ. ಬಸುರಲ್ಲಿ ಬಂದ ಸಕಲ ಕಾಯಗಳಿಗೂ ಮಾಯೆ ತಪ್ಪಿದ್ದಲ್ಲ. ಮಾಯೆಯ ಬಸುರಲ್ಲಿ ಬಂದವರನ್ನು ದೇವರೆಂದು ಪೂಜಿಸಿ ಕಾಯಕ್ಕೆ ಅಂಟಿದ ಮಾಯೆಯನ್ನು ಕಳೆದುಕೊಳ್ಳಲು ಕಾಯಕ್ಕೆ ಸಾಧ್ಯವಾಗುವುದಿಲ್ಲ.

ಮಾಯೆ ಎಂದರೆ ಇಲ್ಲದ್ದು. ಅದು ಕತ್ತಲು. ಸೂರ್ಯನ ಬೆಳಕಿನಿಂದ ಕತ್ತಲು ಹುಟ್ಟಿದೆ. ಸೂರ್ಯನ ಬೆಳಕಿನಿಂದಲೇ ಕತ್ತಲು ಕಳೆಯುತ್ತದೆ. ಹಾಗೆಯೇ ಅರಿವಿನ ಬೆಳಕಿನ ಬಿಂದುವಿನಿಂದಲೇ ಕಾಯ ಹುಟ್ಟಿದೆ. ಅರಿವಿನ ಬೆಳಕಿನ ನೆರಳೇ ಮಾಯೆಯೆಂಬ ಕತ್ತಲಾಗಿ ಕಾಯವನ್ನು ಆವರಿಸಿದೆ.

ಅರಿವಿನ ಬೆಳಕು ಮಾಯೆಯೆಂಬ ಕತ್ತಲ ಮೇಲೆ ಬೀಳುವುದೊಂದೇ ತಡ ಮಾಯೆ ಬೆಳಕಾಗಿ ಕಾಯವನ್ನು ಬೆಳಗುತ್ತದೆ.

ಕಪಿಲಸಿದ್ಧ ಮಲ್ಲಿಕಾರ್ಜುನದೇವನೇ ಗುರುದೇವನಾಗಿ ಕಾಯವನ್ನು ಆವರಿಸಿದ ಮಾಯೆಯನ್ನು ಕೆಡಿಸಿ ಕಾಯವನ್ನು ಹರುಷಿತನನ್ನಾಗಿ ಮಾಡಿದ. ಕಾಯಕ್ಕೆ ಕೈವಲ್ಯ ಪದವನಿತ್ತು ಸಲುಹಿದ. ಎಂದು ಸಿದ್ಧರಾಮ ಶಿವಯೋಗಿಗಳು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಕುರಿತು ಎದೆ ತುಂಬಿ ಹಾಡಿದ್ದಾರೆ. ಆತನೊಂದಿಗೆ ಹರುಷತನದಿಂದ ಮಾತನಾಡಿದ್ದಾರೆ.

**526**

**ಜಗದೆರೆಯ ಮಾಡಿದನೊಂದು ಕುರಿಮರಿಯ.**
**ಆ ಕುರಿಮರಿ ಮೇಯುತ್ತಿದೆ.**
**ಸರ್ವಜಗದವರೆಲ್ಲ ಅನಂತರಕ್ಕಸರು ಹಿಂಸೆ ಮಾಡುತಲೈದಿದರು.**
**ಹೋದ ರಕ್ಕಸರು ಸತ್ತರು; ಇದ್ದ ಕುರಿಮರಿ ಇದ್ದಂತಿಪ್ಪುದು!**
**ಇದೇನು ಕೌತುಕ ಕಪಿಲಸಿದ್ಧ ಮಲ್ಲಿಕಾರ್ಜುನಾ.**

''ಹಬ್ಬಕ್ಕೆ ತಂದ ಹರಕೆಯ ಕುರಿ ಕೊರಳಿಗೆ ಕಟ್ಟಿದ ತಳಿರ ಮೇದಿತ್ತು. ಅಂದಂದೆ ಹುಟ್ಟಿತ್ತು ಅಂದಂದೆ ಸತ್ತಿತ್ತು ಕೊಂದವರುಳಿದರೆ ಕೂಡಲ ಸಂಗಮದೇವ'' ಇದು ಬಸವಣ್ಣನವರ ಸೂತ್ರ. ಸಿದ್ಧರಾಮ ಶಿವಯೋಗಿಗಳ ಸೂತ್ರ ಕೂಡಾ ಹಾಗೆಯೇ ಇದೆ.

ತನು ಒಂದು ಕುರಿ. ತನುವನ್ನು ಆವರಿಸಿದ ಮನವೇ ರಕ್ಕಸ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ತನುವಿನಲ್ಲಿ ಸೃಷ್ಟಿ ಮಾಡಿ, ತನುವಿನಲ್ಲಿ ಮನ ಆಶ್ರಯ ಪಡೆದು, ತನುವನ್ನೇ ಹಂತ ಹಂತವಾಗಿ ಕೊಲ್ಲುತ್ತದೆ. ಅರಿಷಡ್ವರ್ಗಗಳು ಸಪ್ತವ್ಯಸನಗಳು ಅಷ್ಟಮದಗಳು

ತನುವಿನಲ್ಲಿ ಮನದಿಂದ ಸೃಷ್ಟಿಯಾದ ಅನಂತ ರಕ್ಕಸರು.

ಮನ ತನುವಿನ ಕೊರಳಿಗೆ ಕಾಮದ ತಳಿರುಕಟ್ಟಿದೆ. ತನುವಿಗೇನು ಗೊತ್ತು ಅದು ತನಗಾಗಿ ಮೇಯಲು ಕಟ್ಟಿದ ತಳಿರೆಂದು ತಿಳಿಯುತ್ತದೆ. ತನುವನ್ನು ಆವರಿಸಿದ ಮನ ಸಾಮಾನ್ಯವಲ್ಲ. ಅದು ಮರ್ಕಟ. ''ಕೋತಿ ಮೊಸರನ್ನು ತಿಂದು ಮೇಕೆಯ ಮೂತಿಗೆ ಒರಿಸಿತು'' ಎನ್ನುವ ನಾಣ್ಣುಡಿಯಂತೆ. ಕೋತಿ ಮೊಸರನ್ನು ತಿಂದು ಮೇಕೆಯ ಮೂತಿಗೆ ಒರೆಸುತ್ತದೊ ಇಲ್ಲವೊ ಗೊತ್ತಿಲ್ಲ. ಆದರೆ ಮನ ಮಾತ್ರ ತನುವಿನಲ್ಲಿ ಆಶ್ರಯ ಪಡೆದು ಆಶ್ರಯ ಪಡೆದ ತನುವಿನ ಮೇಲೆಯೇ ಹಾದರದ ಆರೋಪ ಹೊರಿಸುತ್ತದೆ.

ಕಾಮದ ಬಯಕೆಯಾಗುವುದು ಮನಕ್ಕೆ, ಆದರೆ ಮನ ತನುವಿನ ಮೂಲಕ ಸುಖಿಸಿ ತನುವನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುತ್ತದೆ. ಸಕಲ ತನುಗಳು ತನುವನ್ನೇ ಅಪರಾಧಿಯಂತೆ ನೋಡಿ ನಿರಪರಾಧಿ ತನುವನ್ನು ರಕ್ಕಸರಂತೆ ಹಿಂಸೆ ಮಾಡುತ್ತವೆ. ಏಕೆಂದರೆ ಸಕಲ ತನುಗಳನ್ನು ಮನವೆಂಬ ರಕ್ಕಸ ಆವರಿಸಿದ್ದಾನೆ.

ಮನ ಒಂದು ತನುವಿನಲ್ಲಿ ಕಾಮ ಸೃಷ್ಟಿ ಮಾಡಿ, ತನುವಿನ ಮೂಲಕ ತಾನೇ ಸುಖಿಸಿ, ನೋಡಿದ ಸಕಲ ತನುಗಳನ್ನು ತಾನಿದ್ದ ತನುವನ್ನು ದಂಡಿಸಲು ಪ್ರೇರಣೆ ನೀಡುತ್ತದೆ. ಏಕೆಂದರೆ ತನು ಮನಕ್ಕೆ ಸಂಬಂಧಪಟ್ಟಿದ್ದಲ್ಲ. ತನುವಿನಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಗೆ ಸಂಬಂಧಪಟ್ಟಿದ್ದು.

ಜಗದೊಡೆಯ ಒಂದು ಕುರಿಮರಿಯನ್ನು ಮಾಡಿ ಆ ಕುರಿಮರಿಯಲ್ಲಿ ತಾನು ಸಂಗಮವಾಗಿದ್ದಾನೆ. ಆತನ ಬೆಳಕಿನ ಕಿರಣಗಳಿಂದ ಮನವೆಂಬ ರಕ್ಕಸ ಹುಟ್ಟಿ ಕುರಿಮರಿಯನ್ನು ಆವರಿಸಿದೆ. ಆ ರಕ್ಕಸ ಇಪ್ಪತ್ತೊಂದು ರಕ್ಕಸರನ್ನು ಸೃಷ್ಟಿ ಮಾಡಿ ತನಗೆ ಆಶ್ರಯ ನೀಡಿದ ಕುರಿಮರಿಯ ಮೂಲಕವೇ ಮೇಯಲು ಬಿಟ್ಟಿದೆ. ರಕ್ಕಸರು, ಕುರಿಮರಿಯೊಂದಿಗೆ ಮೇಯುತ್ತ ಕುರಿಮರಿಯನ್ನೇ ಹಿಂಸೆ ಮಾಡುತ್ತಲಿದ್ದಾರೆ.

ಹೋದ ರಕ್ಕಸರು ಸತ್ತರು; ಇದ್ದ ಕುರಿಮರಿ ಇದ್ದಂತಿಪ್ಪುದು ಇದೇನು ಕೌತುಕ ಕಪಿಲಸಿದ್ಧ ಮಲ್ಲಿಕಾರ್ಜುನಾ:

ತನು ಮನವನ್ನು ಆವರಿಸಿದೆ; ತನುವಿನಲ್ಲಿ ಅರಿವೆಂಬ ಗುರುದೇವ ಸಂಗಮವಾಗಿದ್ದಾನೆ. ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ಸಂಗಮವಾದ ಗುರುದೇವನ ಸಂಗ ಮಾಡಬೇಕಿತ್ತು. ಆದರೆ ಮನ ತನುವನ್ನು ಕುರಿಯನ್ನಾಗಿಸಿ ಕುರಿಯ ಸಂಗ ಮಾಡಿದೆ. ಕುರಿಯೊಂದಿಗೆ ಕಾಮದ ಸುಖ ಅನುಭವಿಸುತ್ತದೆ. ಮನ ಬಯಸಿದ ಕಾಯ ಮನಕ್ಕೆ ಸಿಕ್ಕದಿದ್ದಾಗ ತನುವಿನೊಂದಿಗೆ ಕ್ರೋಧಿತನಾಗಿ ಹಾವಿನಂತೆ ಬುಸುಗುಟ್ಟುತ್ತದೆ. ಲೋಭ ಮೋಹ ಮದ ಮತ್ಸರಗಳನ್ನು ತನುವಿನ ಮೂಲಕ ವ್ಯಕ್ತಪಡಿಸಿ, ತನುವನ್ನು ರಕ್ಕಸನಂತೆ ಪ್ರದರ್ಶಿಸುತ್ತದೆ. ತನುವಿನಲ್ಲಿ ಸಪ್ತವ್ಯಸನಗಳನ್ನು, ಅಷ್ಟಮದಗಳನ್ನು ಸೃಷ್ಟಿ ಮಾಡಿ ತನುವಿಗೆ ರಕ್ಕಸನ ಅವತಾರ ಹಾಕುತ್ತದೆ.

ಹಿಂಸೆ ಮಾಡುವ ರಕ್ಕಸರೆಷ್ಟೋ ಸತ್ತರು. ಆದರೆ ಜಗದ ತುಂಬಾ ಕುರಿಮರಿ ಇದ್ದಂತೆಯೇ ಇವೆ. ಇದೇನು ಕೌತುಕ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಗುರುದೇವನೇ ಕಪಿಲಸಿದ್ಧ ಮಲ್ಲಿಕಾರ್ಜುನನೇ ಇದೇನು ಕೌತುಕ. ನೀ ಮಾಡಿದ ಕುರಿಮರಿ ನಿನ್ನನ್ನು ಹೊತ್ತುಕೊಂಡು ಹಾಗೆಯೇ ಅನಂತಕಾಲದಿಂದಲೂ ಮೇಯುತ್ತಲೇ ಇದೆ. ಅದಕ್ಕೆ ನೀನು ತನ್ನಲ್ಲಿಯೇ ಇರುವಿಯೆಂದು ತನಗೆ ಗೊತ್ತಿಲ್ಲ. ನೀನೇ ಸೃಷ್ಟಿ ಮಾಡಿದ ಮನ ನಿನ್ನನ್ನು ಅರಿಯದೆ

ಅನಂತ ತನುಗಳನ್ನು ಕೊಂದು ಇಲ್ಲವಾಗಿದೆ. ಆದರೂ ಜಗದಲ್ಲಿರುವ ತನುಗಳು ಇದ್ದಂತೆಯೇ ಇವೆ. ಇದ್ದ ಕುರಿಮರಿಗಳು ಇದ್ದಂತೆಯೇ ಇವೆ. ಇದೇನು ಕೌತುಕ ಕಪಿಲಸಿದ್ಧ ಮಲ್ಲಿಕಾರ್ಜುನಾ.

527

**ಜಗದೊಳಹೊರಗೆ ನೀನಿಪ್ಪೆಯಯ್ಯಾ.**
**ಇಪ್ಪ ನೆಲೆಯ ಹೋಹ ಗತಿಯ ಕಾಣಲಾರಿಗೆ ಬಾರದಯ್ಯಾ.**
**ನೋಡ ನೋಡಲಿ ಅಡಗಿ ಹೋಹೆ**
**ಎನ್ನ ಕಪಿಲಸಿದ್ಧಮಲ್ಲಿನಾಥಾ, ನೀ ಶೂನ್ಯನಯ್ಯಾ.**

ಲಿಂಗ ಮಧ್ಯೆ ಜಗತ್‌ಸರ್ವಂ ಎನ್ನುವುದು ಅದ್ಭುತವಾದ ಸೂತ್ರ. ಪೂಜಿಸುವ, ಪೂಜೆಗೊಳಪಟ್ಟ ಲಿಂಗದ ಮಧ್ಯೆಯೇ ಜಗತ್ತು ಅಡಗಿದೆ ಎಂದು ಅರ್ಥಮಾಡಿಕೊಳ್ಳುವುದು ಬಾಲಿಷತನ. ಹೀಗೆಂದರೇನು ಎಂದು ಆಲೋಚನೆಗೆ ತೊಡಗಿದರೆ ಅದನ್ನು ಬಿಚ್ಚಿ ಹೇಳುವ ಗುರುದೇವ ಲಭ್ಯವಾಗುತ್ತಾನೆ.

ಕಂಡುಬರುವ ಭೂಮಿ ಗಿಡ ಮರ ಬಳ್ಳಿ ಪಶು ಪಕ್ಷಿಗಳು ಸಕಲ ಘನ ಪದಾರ್ಥಗಳು, ದ್ರವ ಪದಾರ್ಥಗಳು. ಬೀಸುವ ಗಾಳಿ ಉರಿಯುವ ಅಗ್ನಿ, ಕಂಡುಬರುವ ನಕ್ಷತ್ರಗಳು ಆಕಾಶಕಾಯಗಳು ಸೂರ್ಯ ಚಂದ್ರಾದಿ ಗ್ರಹಗಳ ಒಳ ಹೊರಗೆ ನೀನಿಪ್ಪೆಯಯ್ಯಾ.

ನೀನು ಇರುವ ನೆಲೆಯನು, ಅವುಗಳಿಂದ ನೀನು ಸರಿದು ಹೋಗುವ ಗತಿಯನು ಯಾರಿಗೂ ಕಾಣಲು ಬಾರದಯ್ಯಾ. ಒಳ ಹೊರಗೆ ಇರುವ ನೀನು ಸರಿದರೆ ಸಾಕು ಘನ ಪದಾರ್ಥಗಳೆಲ್ಲ ಬಯಲಾಗುತ್ತವೆ; ದ್ರವಪದಾರ್ಥಗಳೆಲ್ಲ ಬಯಲಾಗುತ್ತವೆ. ನೀನಿದ್ದು ಪದಾರ್ಥವನ್ನು ಘನವಾಗಿಸಿದೆ. ನೀನು ಒಳಹೊರಗಿದ್ದು ಪದಾರ್ಥವನ್ನು ದ್ರವವನ್ನಾಗಿಸಿದೆ. ನಿನ್ನ ಲೀಲೆ ಅನಂತ. ಏಕೆಂದರೆ ನೀನಿರುವ ಇರುವಿಕೆಯನ್ನು ನನಗೆ ತೋರಿ, ನನ್ನೊಂದಿಗೆ ನೀನು ಇದ್ದು; ನೀನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ನೀನು ನನ್ನೊಂದಿಗೆ ನೋಡಿ, ನನಗೆ ತೋರಿ ಸಂಭ್ರಮಿಸುವ ಆಸೆ ನಿನಗೆ.

ಜಗದ ಒಳ ಹೊರಗೆ ನೀನು ಇರುವ ನೆಲೆಯನ್ನು ನನ್ನ ಹೊರತಾಗಿ ಕಾಣಲು ಯಾರಿಗೂ ಬಾರದಯ್ಯಾ. ಹಾಗೆ ನಾನು ಕಾಣುವುದಕ್ಕಾಗಿಯೇ ನೀನು ನನ್ನನ್ನು ತನುವಾಗಿ ಸೃಷ್ಟಿ ಮಾಡಿದೆ. ಆ ತನುವಿನಲ್ಲಿ ಒಳ ಹೊರಗೆನ್ನದೆ ನೀನಿದ್ದು ನಿನ್ನ ದರುಶನವಾಗುವವರೆಗೂ ನೀನೇ ನನ್ನ ಕೈಹಿಡಿದು ನಡೆಸಿದೆ. ಅದೆಲ್ಲವನ್ನು ನಾನು ನನಗೆ ನಿನ್ನ ದರುಶನವಾದ ಮೇಲೆಯೇ ಕಂಡುಕೊಂಡೆ. ಅಪಾರ ಕರುಣಾಮಯಿ ನೀನು.

ತನುವನ್ನು ಸೃಷ್ಟಿ ಮಾಡಿ, ತನುವಿನೊಳಗೆ ನೀನಿದ್ದರೂ ನಿನ್ನನ್ನು ಮರೆತು ಹೋಗಿದ್ದಕ್ಕಾಗಿ ಒಳಗೆ ಕುಟಿಲತನ ಹೊರಗೆ ವಿನಯತನವನ್ನು ತೋರುವೆ ನಾನು. ನನ್ನೊಳಗಿದ್ದು ನನಗೆ ತಿಳಿ ಹೇಳುವ ದೇವರನ್ನು ಮರೆತು, ನನ್ನ ಕೈಹಿಡಿದು ನಡೆಸುವ ಅರಿವಿನ ದೇವರನ್ನು ಮರೆತು, ನನಗೆ ಬೇಕಾದ ದೇವರನ್ನು ನಾನೇ ಮಾಡಿಕೊಂಡಿದ್ದೇನೆ. ಆ ದೇವರಿಗೆ ಭವ್ಯವಾದ ಆಲಯಗಳನ್ನು ಕಟ್ಟಿದ್ದೇನೆ. ಭಕ್ತನ ವೇಶ ಹಾಕಿ ದೇವರನ್ನು ಆರಾಧಿಸುತ್ತಿದ್ದೇನೆ. ಅಂಥ ಹುಸಿಭಕ್ತನನ್ನು ಭಕ್ತನೊಳಗೆ ಇದ್ದ ದೇವರು ಬಲ್ಲನು. ಅಂಥ ಹುಸಿ ಭಕ್ತರನ್ನು ಒಲ್ಲನಯ್ಯಾ.

ತನ್ನನ್ನು ಮಾಡಿದ ಅರಿವಿನ ದೇವರನ್ನು ಬಿಟ್ಟು, ತಾನು ಮಾಡಿದ ದೇವರನ್ನು ಪೂಜಿಸುವ

ಹುಸಿ ಭಕ್ತನನ್ನು ಒಲ್ಲನು. ಆತನು ಅರಿವಿನ ಪಥಕ್ಕೆ ಸಲ್ಲನು. ''ಒಳ ಹೊರಗೆ ಒಂದಾದವರಿಗೆ ಅಳಿಯಾಸೆದೋರೆ ಬೀಸಾಡುವನವರ ಜಗದೀಶ'' ಎಂದು ಬಸವಣ್ಣ ಹೇಳಿದ್ದಾರೆ.

ತಾನು ನೋಡುವುದು ಸರಿ ಇಲ್ಲವೆಂದು, ನಾನು ನೋಡಿದ ಪದಾರ್ಥವನ್ನು ತನ್ನ ದೃಶ್ಯದ ಮೂಲಕ ನೋಡಿ, ತನ್ನ ದೃಶ್ಯದಿಂದಲೇ ನನ್ನ ದೃಶ್ಯಕ್ಕೆ ಪಾಠ ಮಾಡುವ ಪರಮಾತ್ಮ ನನ್ನ ಕಣ್ಣೊಳಗೂ ಇದ್ದಾನೆ; ನನ್ನ ಕಣ್ಣ ಹೊರಗೂ ಇದ್ದಾನೆ.

ಆತ ಇರುವ ನೆಲೆಯನ್ನು ನಾನು ಮತ್ತೊಬ್ಬರಿಂದ ಕಲಿಯಲು ಸಾಧ್ಯವೆ? ನಾನು ಒಳಹೊರಗೆ ಒಂದಾಗುವ ಪಾಠ ಕಲಿಯಲಿಲ್ಲವೆಂದು ಆತ ನನ್ನ ಮೇಲೆ ಮುನಿಸಿಕೊಂಡು ತಾನು ಹೊರ ಹೋಗುವ ಗತಿಯನ್ನು ನನ್ನ ಹೊರತಾಗಿ ಬೇರೆ ಮತ್ತೊಬ್ಬರಿಗೆ ಕಾಣಲು ಸಾಧ್ಯವೆ?

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ತಾನಿದ್ದು ಒಳಹೊರಗೆ ಒಂದಾಗುವುದಕ್ಕಾಗಿ ನನಗೆ ಸದಾ ಪಾಠ ಮಾಡುವ ಆತನ ನೆಲೆಯನ್ನು ನಾನೇ ಕಂಡುಕೊಂಡು ಆತನಿಗೆ ಭಕ್ತನಾಗಬೇಕು. ಆತನೇ ನನಗೆ ಗುರುವಾಗಬೇಕು.

ಅರಿವೆಂಬ ಗುರುದೇವ ಮತ್ತು ಮನವೆಂಬ ಶಿಷ್ಯನು ವಾಸ ಮಾಡಿದ ತನುವೇ ಅವರಿಗೆ ಮನೆಯಾಗಬೇಕು. ಅವರಿಗೆ ಬೇಕಾದಷ್ಟು ಕಾಲ ತನುವಿನಲ್ಲಿದ್ದು, ತನುವಿನ ಒಳಹೊರಗೆ ತಾನಿದ್ದು, ತನುವನ್ನು ಬಿಟ್ಟು ಹೋಗುವ ನೆಲೆಯನ್ನು ಯಾರಿಗಾದರೂ ಕಾಣಲು ಸಾಧ್ಯವೆ?

ನೋಡ ನೋಡಲಿ ಅಡಗಿ ಹೋಗುವರು : 'ಇದೀಗ ನಾನು ಮಾತನಾಡಿಸಿ ಬಂದೀನಿ ಆಗಲೇ ಹೋದ ಅಂತ ಸುದ್ದಿ ಬಂತು ನೋಡು ಎಂದು ಮಾತನಾಡುವರು' ಲೋಕದ ಜನ. 'ಹೋದ' ಎಂದು ಹೇಳುವ ಲೋಕಕ್ಕೆ ಆತ ಇದ್ದದ್ದು ಗೊತ್ತಿಲ್ಲ. ಆತ ಹೋದದ್ದು ಗೊತ್ತಿಲ್ಲ. ತನ್ನ ಪರಿಚಯ ಸಕಲ ತನುಗಳಿಗೂ ತನುವನ್ನು ಆವರಿಸಿದ ಮನಕ್ಕೂ ಆಗಲಿ ಎಂದು ತನುವಿನ ಒಳಹೊರಗೂ ಭರಿತವಾಗಿದ್ದಾನೆ.

**528**

**ಜಗವನಾಡಿಸುವನು, ಜಗವನೇಡಿಸುವನು.**
**ಜಗದ ನಟನಾಟಕನ ಪರಿಯ ನೋಡಯ್ಯಾ!**
**ಜಗವ ರಂಜಿಸುವನು, ಜಗವ ಭುಜಿಸುವನು.**
**ಜಗದೊಳಗಿಪ್ಪನು, ಜಗದ ಹೊರಗಿಪ್ಪನು.**
**ಜಗಕೆ ತೋರಿಯೂ ತೋರದಂತಿಪ್ಪನು.**
**ದರ್ಪಣದೊಳಗಣ ಪ್ರತಿಬಿಂಬದಂತಿಪ್ಪನು.**
**ಉದಕ-ಪದ್ಮಪತ್ರದಂತಿಪ್ಪನು.**
**ನಿಜಗುರುವೆ, ಸ್ವತಂತ್ರ ಕಪಿಲಸಿದ್ಧ ಮಲ್ಲೇಶ್ವರನೆ,**
**ನೋಟ ತೀರಲೊಡನೆ ಜಗದಾಟ ತೀರಿತು.**

ಜಗವನ್ನು ಸೃಷ್ಟಿ ಮಾಡಿ, ಆ ಜಗದೊಳಗೆ ಹೊರಗೆ ತಾನಿದ್ದು ಜಗಕ್ಕೆ ತೊರಿಯೂ ತೋರದಂತಿಪ್ಪನು. ಜಗವನ್ನು ರಂಜಿಸುವನು, ಜಗವನ್ನು ಭುಂಜಿಸುವನು. ಕನ್ನಡಿಯೊಳಗಣ ಪ್ರತಿಬಿಂಬದಂತೆ ಇಪ್ಪನು.

ಉದಕ-ಪದ್ಮಪತ್ರದಂತಿಪ್ಪನು: ಉದಕವೂ ತಾನೇ, ಪದ್ಮವೂ ತಾನೇ, ಪತ್ರವೂ ತಾನೇ.

ಅದು ನಿಂತ ಆಧಾರದ ಪಂಕವೂ ತಾನೇ.

ಉದಕವೇ ಗಟ್ಟಿಯಾಗಿ ಮಣ್ಣಾಗಿ, ಕೆಸರಾಗಿದೆ. ಉದಕವೇ ಕಮಲ ಸಸಿಯಾಗಿ, ಎಲೆಯಾಗಿದೆ. ಉದಕವೇ ಕಮಲದ ಹೂವಾಗಿ ಉದಕದ ಮೇಲೆ ಅರಳಿನಿಂತಿದೆ; ಉದಕವನ್ನು ತಾಗಿಸಿಕೊಳ್ಳದೆ ಉದಕದಲ್ಲಿಯೇ ಇದೆ. ಜಗವನ್ನು ಆಡಿಸುವ ಜಗನ್ನಾಥನ ಲೀಲೆಯಿದು.

ಜೀವಜಲಬಿಂದುವೇ ತನುವಾಗಿ, ತನುವಿನ ಕಣಕಣದಲ್ಲಿ ಅರಿವೆಂಬ ಗುರುದೇವ ತನ್ಮಯವಾಗಿ, ತನುವನ್ನು ಆವರಿಸಿದ ಮನದ ಮೂಲಕ ತನ್ನನ್ನು ತಿಳಿಯುವಂತೆ, ತಿಳಿಯದಂತೆ ಜಗದಗಲ ರಂಜಿಸುತ್ತ, ಜಗವನ್ನು ಭುಂಜಿಸುತ್ತಾ ಜಗಕೆ ತಾನು ತೋರಿಯೂ ತೋರದಂತಿಪ್ಪ ನಟನಾಚತುರನವನು.

ಜಗನ್ನಾಥನು ಆಡುವ ನಾಟಕವೇ ವಿಪರೀತ. ವಸ್ತುವನ್ನು ಸೃಷ್ಟಿ ಮಾಡಿ, ಸೃಷ್ಟಿ ಮಾಡಿದ ವಸ್ತುವನ್ನೇ ತಿಳಿಯದಂತೆ ನಾಟಕವಾಡುವ ನಟನಾಚತುರನಾತ.

ತನುವಿನಿಂದಲೇ ಚಿನ್ನ ಸೃಷ್ಟಿ ಮಾಡಿ, ಚಿನ್ನ ಪಡೆಯುವುದಕ್ಕಾಗಿ ತನುವಿಗೆ ಕಳ್ಳನ ಪಾತ್ರಹಾಕಿದ, ರಾಜನ ಪಾತ್ರ ಹಾಕಿದ, ಶ್ರೀಮಂತನ ಪಾತ್ರ ಹಾಕಿದ. ಭಿಕ್ಷುಕನ ಪಾತ್ರ ಹಾಕಿದ, ದರಿದ್ರನ ಪಾತ್ರ ಹಾಕಿದ, ಸೃಷ್ಟಿ ಮಾಡಿದ ಚಿನ್ನವನ್ನೇ ತಿಳಿಯದಂತೆ ಮಾಡಿದ. ತನುವನ್ನು ತನುವೆಂದು ತನುವಿನಲ್ಲಿದ್ದು ತನುವಿಗೆ ತಿಳಿಯದಂತೆ ಮಾಡಿದ.

ತನುವಿಗೆ ಅರಿವಾದರೆ ಚಿನ್ನ ಒಂದು ಹಳದಿ ಲೋಹ. ಲೋಹ ಹಳದಿಯಾದರೇನು? ಕಪ್ಪಾದರೇನು? ಲೋಹ ಲೋಹವೇ. ಆದರೂ ಲೋಹ ಲೋಹವಲ್ಲದೆ ಬೇರಲ್ಲವೆಂದು ರಾಜನಿಗೂ ತಿಳಿಯಲಿಲ್ಲ; ಗುರುವಿಗೂ ತಿಳಿಯಲಿಲ್ಲ. ಶಿಷ್ಯನಿಗೂ ತಿಳಿಯಲಿಲ್ಲ. ಶ್ರೀಮಂತ ಬಡವ ಕಳ್ಳನಿಗೂ ತಿಳಿಯಲಿಲ್ಲ. ಚಿನ್ನಕ್ಕಾಗಿ ತನುವೇ ತನುವನ್ನು ಸೀಳುತ್ತಾ ಹೋಯಿತು. ಚಿನ್ನಕ್ಕಾಗಿಯೇ ಯುದ್ಧಗಳಾದವು. ಅರಿವಿನ ತನು ತನುವಿನಲ್ಲಿಯೇ ಮರೆಯಾದುದಕ್ಕಾಗಿ ಅನೇಕ ತನುಗಳು ತನುಗಳಿಂದಲೇ ಸತ್ತು ಹೋದವು. ಅಜ್ಞಾನದ ಯುದ್ಧ ನಿಲ್ಲಲೇ ಇಲ್ಲ.

ಜಲಜನಕ ಆಮ್ಲಜನಕಗಳೆರಡರ ವಾಸ ಬಯಲಲ್ಲಿ. ಬಯಲು ಇವುಗಳಿಗೆ ಜನ್ಮಕೊಟ್ಟು ತನ್ನ ಗರ್ಭದಲ್ಲಿ ಇಟ್ಟುಕೊಂಡಿದೆ. ತನಗೆ ಬೇಕಾದಾಗ ಇವೆರಡನ್ನು ಒಂದು ಮಾಡಿತು. ಒಳಹೊರಗೆನ್ನದಂತೆ ಬಯಲು ಬೆರೆತು ಜಲಬಿಂದುವನ್ನಾಗಿ ಮಾಡಿತು. ಆ ಜಲಬಿಂದುವೇ ಗಟ್ಟಿಯಾಗಿ ಮಣ್ಣಾಯಿತು; ಹೊನ್ನಾಯಿತು. ಪ್ರಾಣಿ ಪಶು ಪಕ್ಷಿ ಜಲಚರವಾಯಿತು. ತನುವಾಯಿತು. ಬಯಲು, ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನೇ ತನುವಿನ ಮೂಲಕ ನೋಡಲು ತನುವಾಯಿತು. ತನುವನ್ನು ಆವರಿಸಿದ ಮನಕ್ಕೆ ಈ ಭಾಗ್ಯವಿಲ್ಲದ ನಿಮಿತ್ತ ಅದು ತನುವಿನಲ್ಲಿದ್ದು ತನುವಿನಲ್ಲಿಯೇ ಸಂಗಮವಾದ ಜಗನ್ನಾಥನ ದರುಶನ ಮನಕ್ಕೆ ಇಲ್ಲದಂತಾಯಿತು.

ತನುವನ್ನು ಸೃಷ್ಟಿ ಮಾಡಿ, ತನುವಿನಲ್ಲಿಯೇ ಇದ್ದ ಭಗವಂತನನ್ನು ಆರಾಧಿಸುವುದನ್ನು ಬಿಟ್ಟು, ಮನ ತನುವಿನೊಂದಿಗೆ ತನುವೇ ಮಾಡಿದ ದೇವರನ್ನು ಆರಾಧಿಸಿತು. ಇದು ಭಗವಂತನು ಆಡಿಸುವ ನಾಟಕ. ತನುವಿನಲ್ಲಿಯೇ ಇದ್ದು ತನು ಮತ್ತು ಮನವನ್ನು ಆಡಿಸುವ ನಾಟಕ. ನಟನಾ ಚತುರನು ಆತ. ಜಗವ ರಂಜಿಸುವನು, ಜಗವ ಭುಂಜಿಸುವನು.

ದೇವರಿದ್ದಾನೆ ಎಂದು ಜಗತ್ತಿಗೆಲ್ಲ ಗೊತ್ತು ಮಾಡಿದ. ಆದರೂ ದೇವರೆಂದರೆ ಯಾರು ಎನ್ನುವುದನ್ನು ಗೊತ್ತು ಮಾಡದೆ, ದೇವರನ್ನು ಆರಾಧಿಸುವಂತೆ ಮಾಡಿದ. ಜಗದೊಳಗೆ ಹೊರಗೆ ಇಪ್ಪನು. ಜನಕ್ಕೆ ತೋರಿಯೂ ತೋರದಂತೆ ಇಪ್ಪನು. ಉದಕ-ಪದ್ಮ ಪತ್ರದಂತಿಪ್ಪನು. ನೋಟ

ತೀರಲೊಡನೆ ಜಗದಾಟ ತೀರಿತು.

ಜಗದಲ್ಲಿರುವ ಅನಂತ ಕಾಯಗಳು ಕುಂಬಾರ ಮಾಡಿದ ಮಡಕೆಯಂತೆ ವ್ಯರ್ಥ ಒಡೆದುಹೋದವು. ಕಾಯವೇ ಕೈಲಾಸವೆನ್ನುವುದು ಕಾಯಕ್ಕೆ ಹೊಳೆಯಲಿಲ್ಲ. ಶಿವನ ದರುಶನ ಭಾಗ್ಯ ಕಾಯದಲ್ಲಿಯೇ ಸಂಗಮವಾದ ಕಾಯವನ್ನು ಆವರಿಸಿದ ಮನಕ್ಕೆ ಆಗುತ್ತಿಲ್ಲ. ಆತನ ನೋಟ ತೀರಲೊಡನೆ ಕಾಯದ ಆಟ ಮುಗಿದೇ ಹೋಗುವುದು.

**529**

**ಜನರ ಗೊತ್ತೆಂಬಲ್ಲಿ,**
**ಪಾಪವ ಕಳೆದು ಪುಣ್ಯರಾಗಬೇಕೆಂಬರುಹು ತಲೆದೋರ್ಪುದಲ್ಲದೆ,**
**ಭೋಗರಹಿತ ಪುಣ್ಯದಾಸೆಯಿಲ್ಲ.**
**ಪುಣ್ಯದಾಶೆ ಇದ್ದಡೆ, ನಿಮ್ಮ ಲಿಂಗದಾಶೆ ಎನಗೆ ಸತ್ಯ ಕಾಣಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನ ರಚನೆಯೇ ವಿಚಿತ್ರ. ತನುವನ್ನು ಆವರಿಸಿದ ಮನವೆಂಬ ಮನೋಮಯವಾದ ತನುವೊಂದು ಇದೆ; ಇದರ ರಚನೆಯೂ ವಿಚಿತ್ರವಾಗಿದೆ. ಒಂದು ಇದ್ದಂತೆ ಮತ್ತೊಂದು ಇಲ್ಲ. ತಾನು ಮಾಡುವ ಕುಟಿಲತೆ, ಮೋಸ, ವಂಚನೆ ಸರಿಯಿಲ್ಲವೆಂದು ತನಗೆ ಗೊತ್ತಾಗುತ್ತದೆ. ತನಗೆ ಹೇಗೆ ಸುಖವಾಗುತ್ತದೆಯೋ ಹಾಗೆಯೇ ಇದ್ದು; ಜನರಿಗೆ ಗೊತ್ತಾಗದಂತೆ ಜನರನ್ನೇ ಗುರಿಮಾಡಿಕೊಂಡು ಜನರಿಗೆ ಮೋಸ ಮಾಡುತ್ತದೆ.

ಜನರಿಗೆ ಪರೋಪಕಾರ ಮಾಡುವ ಸಾತ್ವಿಕ ವೇಷವನ್ನು ಮನೋಮಯವಾದ ತನುವು ಸ್ಥೂಲ ತನುವಿಗೆ ಹಾಕಿ ಪಾಪದ ಕಾಯಕದಲ್ಲಿ ಸ್ಥೂಲತನುವನ್ನು ತೊಡಗಿಸುತ್ತದೆ. ವೃತ್ತಿ ಮಾತ್ರ ಕಳುವು; ಭ್ರಷ್ಟಾಚಾರ; ವಂಚನೆ; ಮೋಸ. ತೋರಿಕೆ ಮಾತ್ರ ಸಾತ್ವಿಕತೆ.

ಸೂಕ್ಷ್ಮ ತನುವು ಸ್ಥೂಲತನುವಿಗೆ ಸ್ನಾನ ಮಾಡಿಸಿ, ಸುಗಂಧ ದ್ರವ್ಯಗಳನ್ನು ಬಳಿದು, ಹಣೆಗೆ ವಿಭೂತಿ ತಿಲಕ ಗಂಧಾದಿಗಳನ್ನು ಬಳಿದು ಕೊರಳಲ್ಲಿ ಲಿಂಗ ಜನಿವಾರ ರುದ್ರಾಕ್ಷಿ ಶಿಲುಬೆಗಳನ್ನು ಧರಿಸಿ ಕೈಯಲ್ಲಿ ಜಪಮಾಲೆ ಹಿಡಿದು ಮಡಿಯಿಂದ ದೇವಾಲಯ ಮಸೀದೆ ಚರ್ಚ್‌ಗಳಿಗೆ ಜನ ತನ್ನನ್ನೇ ನೋಡುವಂತೆ ಹೋಗುತ್ತದೆ.

ದಿನಕ್ಕೆ ಐದು ಬಾರಿ ಪ್ರಾರ್ಥನೆ ಮಾಡಿದರೂ ಕೂಡಾ ತನುವನ್ನು ಆವರಿಸಿದ ಮನೋಮಯ ತನುವಿನ ಕುಟಿಲತನ ಹೋಗುವುದಿಲ್ಲ. ಮಕ್ಕಾ ಮಸೀದೆ, ವ್ಯಾಟಿಕನ್, ಕಾಶಿ ಶ್ರೀಶೈಲ ವೈಷ್ಣವಿಗೆ ಹೋಗಿ ಪ್ರಾರ್ಥಿಸಿದರೂ ತನು ಮತ್ತು ಮನದ ಕುಟಿಲ ಬುದ್ಧಿ ತೊಲಗುವುದಿಲ್ಲ. ಜಪತಪಗಳನ್ನು ಮಾಡುತ್ತಾ ಹಿಮಾಲಯದಲ್ಲಿ ಧ್ಯಾನಾಸಕ್ತನಾದರೂ ಕೂಡ ತನು ಮತ್ತು ಮನದ ವಂಚನೆ ನಿಲ್ಲುವುದಿಲ್ಲ.

ಸಕಲ ಪಾಪಗಳನ್ನು ತೊಳೆದುಕೊಂಡು ಪುಣ್ಯವಂತನಾಗಬೇಕು ಎನ್ನುವ ಅರಿವು ತನುವಿನಲ್ಲಿ ಮತ್ತೆ ಮತ್ತೆ ತೋರುವುದಲ್ಲದೆ ಮನ ತನುವನ್ನು ಹಿಡಿದು ಮಾಡುವ ನೀಚ ಕೆಲಸಗಳು ನಿಲ್ಲುವುದಿಲ್ಲ. ಮನ ಮತ್ತು ತನುವಿಗೆ ಭೋಗರಹಿತ ಪುಣ್ಯದ ಕಾಯಕದಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳಬೇಕೆಂಬ ಬಯಕೆ ಹುಟ್ಟುವುದಿಲ್ಲ.

ತನುವನ್ನು ನೋಡಿ ತನುವಿಗೆ ಕನಿಕರ ಹುಟ್ಟುತ್ತದೆ, ಅದು ತೊಂದರೆಯಲ್ಲಿದೆ ಎಂದು

ತನುವಿಗೆ ಅನ್ನಿಸುತ್ತದೆ, ಸಕಲ ತನುಗಳು ನೋಡುವಂತೆ ತನು, ತನುವಿಗೆ ಸಹಾಯ ಮಾಡುತ್ತದೆ. ಹೀಗೆ ಮಾಡುವುದು ತನ್ನ ಕುಟಿಲತನವೆಂದು ತನುವಿಗೆ ಗೊತ್ತಾಗುವುದಿಲ್ಲ. ಮತ್ತೊಂದು ತನುವಿನ ಸಹಕಾರ ಕೋರುವುದು ಕೂಡಾ ತನುವಿನ ಕುಟಿಲತನ. ಎರಡು ತನುಗಳು ಆ ತನುಗಳನ್ನು ಆವರಿಸಿದ ಮನಗಳು ತನುವನ್ನು ತನುವೇ ವಂಚನೆ ಮಾಡಿಕೊಳ್ಳುವ ಕಾಯಕದಲ್ಲಿ ಭಾಗಿಯಾಗಿವೆ.

ಈ ಎರಡೂ ತನುಗಳ ನಾಟಕವನ್ನು ನೋಡಿ ತನುಗಳು ಕನಿಕರ ವ್ಯಕ್ತಪಡಿಸುತ್ತವೆ. ತನು, ತನುವನ್ನು ನೋಡಿ ಕನಿಕರ ಪಟ್ಟು ಸಹಕರಿಸಿ ದಾನಿಯೆಂದು ಬೀಗಿತು. ಮತ್ತೊಂದು ತನು ತನುವಿನಲ್ಲಿ ಕನಿಕರ ಸೃಷ್ಟಿಯಾಗುವಂತೆ ದೈನ್ಯತೆಯಿಂದ ನಟಿಸಿತು. ಸಕಲ ತನುಗಳು ಲೊಚಗಟ್ಟುತ್ತಾ ಈ ಎರಡೂ ದೃಶ್ಯಗಳನ್ನು ಸಾಕ್ಷೀಕರಿಸಿಕೊಂಡವು. ಇದೆಲ್ಲ ಮನ ತನುವಿಗೆ ಹಾಕಿದ ಪಾತ್ರವೆಂದು ಬಡಪಾಯಿ ತನುವಿಗೆ ತಿಳಿಯುವುದೇ ಇಲ್ಲ.

ತನುಗಳೆಲ್ಲ ಒಂದೇ; ತನುವನ್ನು ಆವರಿಸಿದ ಮನ ಒಂದೇ. ಆದರೂ ತನುವನ್ನು ತನು ಶ್ರೀಮಂತ ಬಡವ ಭಿಕ್ಷುಕ ದರಿದ್ರ ಹೆಣ್ಣು ಗಂಡು ಗುರು ಶಿಷ್ಯ ಅಧಿಕಾರಿ ಜವಾನ ಶಾಸಕ ಸಚಿವ ನ್ಯಾಯಾಧೀಶ ನ್ಯಾಯಮೂರ್ತಿ ಕಳ್ಳ ಭ್ರಷ್ಟ ಎಂದು ಮುಂತಾಗಿ ತನು ಮತ್ತು ತನುವನ್ನು ಆವರಿಸಿದ ಮನ ತನುವನ್ನೇ ವಿಂಗಡಿಸಿಕೊಂಡು ನೋಡುತ್ತದೆ. ಇವೆಲ್ಲವುಗಳಿಗೂ ಪುಣ್ಯಪಾಪದ ಕಲ್ಪನೆಗಳು ಇವೆ. ಹೀಗಾಗಿ ಹಿಂದು ಮುಸಲ್ಮಾನ ಕ್ರೈಸ್ತ ಬೌದ್ಧ ಜೈನ ಶಿಖ್ ಪಾರ್ಶಿ ಎಂದು ತನ್ನನ್ನು ವಿಂಗಡಿಸಿಕೊಂಡಿದೆ.

ಐದು ಬಾರಿ ನಮಾಜು ಮಾಡಿ, ದೇವಾಲಯಗಳಿಗೆ ಸುತ್ತಿ, ಪ್ರಾರ್ಥನಾ ಮಂದಿರಗಳಿಗೆ ಹೋಗಿ ನನ್ನ ಅಪರಾಧಗಳನ್ನು ಕ್ಷಮಿಸು ಎಂದು ಪ್ರಾರ್ಥಿಸಿದರೆ ಮನ ತನುವಿನೊಂದಿಗೆ ಮಾಡುವ ಪಾಪದ ಕೆಲಸಗಳು ನಿಲ್ಲುವುದಿಲ್ಲ. ನಿಲುವಂಗಿ ಕಾವಿ ಧರಿಸಿ ಗಡ್ಡಬಿಟ್ಟು ಕೊರಳಲ್ಲಿ ಶಿಲುಬೆ ಜನಿವಾರ ಲಿಂಗ ರುದ್ರಾಕ್ಷಿ ಹಾಕಿ ಪ್ರಾರ್ಥಿಸಿದರೂ ಕೂಡಾ ಮನ ತನುವಿನೊಂದಿಗೆ, ತನುಗಳಿಗೆ ಮಾಡುವ ಪಾಪದ ಕೆಲಸ ನಿಲ್ಲುವುದಿಲ್ಲ.

ಮನ ತನುವಿನೊಂದಿಗೆ ಮಾಡುವ ಅಜ್ಞಾನದ ಕೆಲಸಗಳು ಅರಿವಿಗೆ ಗೊತ್ತಾಗದೇ ಇರುವುದಿಲ್ಲ. ತನುವಿನ ಮೂಲಕ ಮಾಡುವ ಕೆಲಸಗಳು ಸರಿ ಎಂದು ತಪ್ಪೆಂದು ತಿಳಿಹೇಳುವ ಅರಿವಿನ ತನುವೊಂದು ತನುವಿನಲ್ಲಿಯೇ ಇದೆ. ಮನೋಮಯವಾದ ತನುವಿಗೆ ಸದಾ ಪುಣ್ಯದ ಕೆಲಸದಲ್ಲಿ ಭಾಗಿಯಾಗಬೇಕೆಂಬ ಆಸೆ ಇದ್ದರೆ ಸ್ಥೂಲ ತನುವಿನ ಸಂಗ ಬಿಟ್ಟು ಅರಿವೆಂಬ ಗುರುದೇವನ ತನುವಿಗೆ ಮೊರೆ ಹೋಗುವ ಆಸೆ ಮನೋಮಯವಾದ ತನುವಿಗೆ ಹುಟ್ಟಬೇಕು. ಇದೇ ತನು ಕಂಡುಕೊಳ್ಳುವ ಅಂತಿಮ ಸತ್ಯ.

ಮನೋಮಯವಾದ ಕಾಯ ಸ್ಥೂಲಕಾಯದ ಸಂಗ ಬಿಟ್ಟು ಅರಿವೆಂಬ ಗುರುದೇವನ ಕಾಯದಲ್ಲಿ ಪ್ರವೇಶ ಮಾಡುತ್ತದೆ. ಪರಕಾಯ ಪ್ರವೇಶದ ನೈಪುಣ್ಯತೆಯನ್ನು ಸಾಧಿಸಿಕೊಳ್ಳುತ್ತದೆ. ಪರಮಾತ್ಮನಿದ್ದ ಕಾಯವೆಂದು ಕಾಯಕ್ಕೆ ಗೊತ್ತಾಗುತ್ತದೆ. ಎಲ್ಲಿ ನೋಡಿದರೂ ಪರಮಾತ್ಮನ ಕಾಯಗಳೇ ಕಾಯಕ್ಕೆ ಕಾಣುತ್ತವೆ. ಕಾಯಕ್ಕೆ ಅಂಟಿದ ಪಾಪ ಪುಣ್ಯ ಕಳಚಿ ಬೀಳುತ್ತದೆ. ಸಕಲ ಅಜ್ಞಾನಗಳೂ ತನಗೆ ತಾನೇ ಕಳಚಿ ಬೀಳುತ್ತವೆ.

**530**

**ಜನಿತವಿಲ್ಲದ ನಿರ್ಜನಿತನಾದೆ**
**ಸ್ಥೂಲ ಸೂಕ್ಷ್ಮದಲ್ಲಿ ನಿತ್ಯನಾದೆ**

**ನಿಮ್ಮ ಘನವ ನೋಡಲ್ಕೆ ನಿಗಮಕ್ಕಭೇದ್ಯನು**
**ಗುರುಕರುಣದಿಂದ ಎನ್ನ ಕರಸ್ಥಲಕ್ಕೆ ಬಂದೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಕಲ ತನುಗಳಲ್ಲಿ ಸ್ಥೂಲ ಸೂಕ್ಷ್ಮ ಕಾರಣ ತನುಗಳು ಬಚ್ಚಿಟ್ಟುಕೊಂಡಿವೆ. ಹೀಗಾಗಿ ತನು ಪರಿಪೂರ್ಣ ತನುವೆಂದು ತನುಗಳಿಂದಲೇ ಕರೆಯಿಸಿಕೊಂಡಿದೆ. ಪರಿಪೂರ್ಣ ತನುವಿಗೆ ಸಾವಿಲ್ಲ ಕೇಡಿಲ್ಲ ರೂಹಿಲ್ಲ. ಅದು ಸದಾ ಚೆಲುವು. ಸಕಲ ತನುಗಳು ಕೂಡಾ ಪರಿಪೂರ್ಣ ತನುವಿಗೆ ತನ್ನ ಹಾಗೆಯೇ ಕಾಣುತ್ತವೆ.

ಸಕಲ ತನುಗಳಿಗೆ ತನು ಹಾಗೆ ಕಾಣದಿದ್ದರೂ ತನಗೆ ತಾನು ಪರಿಪೂರ್ಣವಾಗಿಯೇ ಕಾಣುತ್ತಾರೆ. ತನಗೆ ಇತರರು ಕೂಡಾ ಪರಿಪೂರ್ಣವಾಗಿಯೇ ಕಾಣುತ್ತಾರೆ. ಗುರುದೇವನ ಕರುಣೆಯಿಂದಾಗಿ ಸ್ಥೂಲ ತನು ಸೂಕ್ಷ್ಮ ತನು ಕಾರಣ ತನುಗಳು ಒಂದಾಗಿ ಮೂರೊಂದಾದ ಘನವಾಗುತ್ತದೆ. ಹೀಗಾಗಿ ಹುಟ್ಟು ಸಾವುಗಳು ತನುವಿನಿಂದ ದೂರವಾಗುತ್ತದೆ.

ಹುಟ್ಟುವ ಮುನ್ನವೂ ಇದೆ; ಇದ್ದಾಗಲೂ ಇದೆ; ಅದು ಇಲ್ಲವೆಂದ ಮೇಲೆಯೂ ಇದೆ. ಇದ್ದ ವಸ್ತುವೊಂದು ಸದಾ ಇದೆ. ತನಗೆ ಬೇಕಾದ ವಸ್ತುಗಳನ್ನು ಸೃಷ್ಟಿ ಮಾಡಿ; ತನಗೆ ಬೇಕಾದ ಕಾಲದವರೆಗೆ ಸೃಷ್ಟಿ ಮಾಡಿದ ಆ ವಸ್ತುವಿನಲ್ಲಿ ತಾನಿದ್ದು ; ತನಗೆ ಬೇಡವಾದಾಗ ತಾನಿದ್ದ ವಸ್ತುವನ್ನು ಬಿಟ್ಟು; ತಾನು ಇದ್ದ ಜಾಗದಲ್ಲಿಯೇ ತಾನಿರುತ್ತದೆ.

ತನುವೆನ್ನುವುದು ತನುವಿಗೆ ಗೊತ್ತಾಗುತ್ತದೆ. ಗುರುದೇವನ ಕರುಣೆಯಿಂದಾಗಿ ತನುವೆಂದರೆ ತನುವೊಂದೇ ಅಲ್ಲ; ಸ್ಥೂಲ ತನು. ಈ ಸ್ಥೂಲ ತನುವಿನ ಜನನಕ್ಕೆ ಕಾರಣವಾದ ಮಹಾತನುವೊಂದು ತನುವಿನಲ್ಲಿಯೇ ಇದೆ. ಇದನ್ನೇ ಕಾರಣ ತನುವೆಂದು ಕರೆಯುತ್ತಾರೆ.

ಸ್ಥೂಲ ತನುವನ್ನು, ಕಾರಣ ತನುವನ್ನು, ತಿಳಿಯುವ ಮನೋಮಯವಾದ ತನುವೊಂದು ಸ್ಥೂಲ ತನುವನ್ನು ಆವರಿಸಿಕೊಂಡಿದೆ. ಹೀಗೆ ತಿಳಿಯುವ ಶಕ್ತಿ ಮನೋಮಯವಾದ ತನುವಿಗೆ ಗುರುದೇವನ ಕರುಣೆಯಿಂದಾಗಿ ಲಭಿಸುತ್ತದೆ. ಆಗ ಮನೋಮಯವಾದ ತನು, ಸ್ಥೂಲ ತನುವಿನಲ್ಲಿಯೇ ಇದ್ದ ಮಹಾಜ್ಞಾನಮಯ ತನುವಿಗೆ ಭಕ್ತನಾಗುತ್ತದೆ; ಪರಮ ಶಿಷ್ಯನಾಗುತ್ತದೆ.

ಗುರುಶಿಷ್ಯರಿಬ್ಬರೂ ತನುವನ್ನೇ ಮಹಾಮನೆಯನ್ನಾಗಿಸಿಕೊಂಡು ಅನಂತಕಾಲ ಅಲ್ಲಿಯೇ ಇರುತ್ತಾರೆ. ತನಗೆ ತಾನೇ ಬ್ರಹ್ಮನಾಗಿ, ಬುದ್ಧನಾಗಿ, ವಿರಾಟಸ್ವರೂಪಿಯಾಗಿ, ಮಹಾಜ್ಞಾನಿಯಾಗಿ ಜನನ ಮರಣಗಳ ಭಯವಿಲ್ಲದೆ ನಿರ್ಭಯವಾಗಿ ಅಲೆದಾಡುತ್ತದೆ.

ಸ್ಥೂಲ ಸೂಕ್ಷ್ಮದಲ್ಲಿ ನಿತ್ಯನಾಗುತ್ತದೆ; ಸತ್ಯನಾಗುತ್ತದೆ. ಗುರುಕರುಣದಿಂದಾಗಿಯೇ ಕರಸ್ಥಲಕ್ಕೆ ಬಂದುದು ಕಾಯಕ್ಕೆ ಗೊತ್ತಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**531**

**ಜಪ ತಪವ ಮಾಡಿದಡೇನಯ್ಯಾ ತಾನು?**
**ನೇಮ ಸಮಾಧಿಯ ಮಾಡಿದಡೇನಯ್ಯಾ,**
**ನಿಮ್ಮ ಪಾದೋದಕ ಪ್ರಸಾದದ ವರ್ಮವನರಿಯದನ್ನಕ್ಕ?**
**ಮುಂಡೆಯ ಬದುಕಿಂಗೆ ಮೂಲಸ್ವಾಮಿಯ ಕುರುಹಿಡಬಹುದೆ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಪ ತಪ ಮಾಡಿದರೆ ತನುವಿನಲ್ಲಿರುವ ಅಜ್ಞಾನ ನಾಶವಾಗುವುದಿಲ್ಲ. ತನು ಜಪದಲ್ಲಿ ತಪದಲ್ಲಿ ನಿರತವಾಗಿದೆ ಎಂದು ಇತರ ತನುಗಳಿಗೆ ಜಪ ಮಾಡುವ ತನುವಿನಲ್ಲಿ ಗೌರವ ಆದರಗಳು ಉಂಟಾಗುತ್ತವೆ. ಭಕ್ತಿ ಉಂಟಾಗುತ್ತದೆ. ಜಪ ಮಾಡುವ ತನುವನ್ನು ಇತರ ತನುಗಳು ಆರಾಧಿಸುತ್ತವೆ.

ಜಪ ತಪಾದಿಗಳನ್ನು ಮಾಡುತ್ತ, ಧ್ಯಾನದಲ್ಲಿ ಮಗ್ನನಾಗುವ ಸೋಗು ಮನ ತನುವಿಗೆ ಹಾಕಿ, ಮನ ತನು ಕೂಡಿಯೇ ತನಗೆ ತಾನೇ ವಂಚನೆಗಳಿಗೆ ಒಳಗಾಗುತ್ತದೆ. ಅದು ತನಗೆ ತಾನೇ ಮಾಡಿಕೊಳ್ಳುವ ವಂಚನೆಯೆಂದು ತನಗೆ ತಿಳಿದರೂ ಕೂಡಾ ತಾನು ಸುಳ್ಳು ಸೋಗಿನಲ್ಲಿ ಭಾಗಿಯಾಗುವುದನ್ನು ಬಿಡುವುದಿಲ್ಲ.

ಮನ ತನುವಿಗೆ ಮಾಡುವ ಮೋಸವನ್ನು ತನು ಪ್ರತಿಭಟಿಸುವುದಿಲ್ಲ. ಇದು ಮನದ ಅಜ್ಞಾನದ ಕೆಲಸವೆಂದು ತನುವಿಗೆ ಅನ್ನಿಸುವುದೇ ಇಲ್ಲ. ಹೀಗೆ ಮಾಡುವುದರಿಂದ ತನು ಮನದೊಂದಿಗೆ ಮಾಡುವ ಹಾದರದ ಅಜ್ಞಾನ ನಿಲ್ಲುತ್ತದೆ. ತನುವಿನಲ್ಲಿಯೇ ಸಂಗಮವಾದ ಜ್ಞಾನದ ಮಾತುಗಳು ತನು ಮತ್ತು ಮನ ಪಾಲಿಸಲು ಸಾಧ್ಯವಾಗುತ್ತದೆಯೇ ಎಂದು ಯೋಚನೆಗೆ ಒಳಗಾದರೆ ಸಾಕು ತನು ಮತ್ತು ಮನಕ್ಕೆ ನಾಚಿಕೆಯಾಗುತ್ತದೆ.

ಮನ ತನುವನ್ನು ಧ್ಯಾನದಲ್ಲಿ ಜಪತಪದಲ್ಲಿ ಕೂಡಿಸಿದರೆ ಇಡೀ ದಿನ ಮನ ತನುವಿನಲ್ಲಿ ತನ್ನ ಮನಬಂದಂತೆ ಚಲಿಸುವುದು ನಿಲ್ಲುತ್ತದೆಯೇ? ಮನವೇ ರಕ್ಕಸ. ಅದು ತನುವಿನ ಮೂಲಕ ನೂರಾರು ಕಾಲದವರೆಗೆ ಕೂಡಾ ಅದರ ರಕ್ಕಸ ಗುಣ ಹೋಗುವುದಿಲ್ಲ ಎನ್ನುವ ಉದಾಹರಣೆ ನಮಗೆ ಪುರಾಣಗಳಿಂದ ತಿಳಿಯುತ್ತದೆ. ಅಂದ ಮೇಲೆ ಯಾರೋ ಹೇಳುತ್ತಾರೆ ಅಂದರೆ ಮನ ಅದನ್ನು ಕೇಳಿಸಿಕೊಂಡು ತನುವಿಗೆ ಹಿಂಸೆಕೊಡುವುದು ಸರಿಯಲ್ಲವೆಂದು ತನುವಿಗೆ ತಿಳಿಯಬೇಕು.

ಜಪತಪವ ಮಾಡಿದಡೇನಯ್ಯಾ ತಾನು? ನೇಮ ಸಮಾಧಿಯ ಮಾಡಿದಡೇನಯ್ಯಾ, ನಿಮ್ಮ ಪಾದೋದಕ ಪ್ರಸಾದದ ವರ್ಮವನು ಅರಿಯದನ್ನಕ್ಕ?

ತನುವೆಂದರೆ ಸಾಮಾನ್ಯವಲ್ಲ; ಅರಿವಿನ ಮೂಲಕ ತಿಳಿಹೇಳುವ ಅರಿವಿನ ತನುವೇ ತನುವಿನಲ್ಲಿ ಸಂಗಮವಾಗಿದೆ. ಜಪ ಮಾಡಿದರೆ ಯಾಕೆ ಜಪ ಮಾಡುವಿ, ಇದರಿಂದ ನಿನಗೆ ಉಪಯೋಗವಾದರೂ ಏನು? ನೀನು ಮಾಡುವ ಜಪ ತಪ ಸಮಾಧಿ ನೇಮವಾದರೂ ಸರಿಯಾಗಿದೆಯೆ? ಜಪ ಮಾಡುವೆನೆಂದು ಇತರ ತನುಗಳಿಗೆ ತೋರಿಸಿಕೊಳ್ಳುವ ಅವಶ್ಯಕತೆಯಾದರೂ ನಿನಗೆ ಇದೆಯೆ? ನೀನು ಇತರ ತನುಗಳಿಗೆ ಮೋಸ ಮಾಡುವುದು ಸರಿಯೇ? ಹಾಗೆಯೇ ನಿನ್ನನ್ನು ನೀನು ಮೋಸ ಮಾಡಿಕೊಳ್ಳುವುದು ಸರಿಯೆ?

ಮನ ಮತ್ತು ತನು ಇಬ್ಬರೂ ಸೇರಿ ನಿಮ್ಮಲ್ಲಿಯೇ ಇದ್ದ ನಿಮಗೆ ಪಾಠ ಮಾಡುವ ಗುರುದೇವನ ಮಾತುಗಳನ್ನು ತಿರಸ್ಕರಿಸುವುದು ನಿಮಗೆ ಯೋಗ್ಯವೇ? ನಿಮ್ಮ ಅಜ್ಞಾನದ ಸುಖಕ್ಕಾಗಿ ನಿಮ್ಮ ಗುರುದೇವನನ್ನೇ ಕಡೆಗಣಿಸುವುದು ನಿಮಗೆ ತಕ್ಕುದಲ್ಲ ಎಂದು ಮನ ಮತ್ತು ತನುವಿಗೆ ಯಾರು ಪಾಠ ಮಾಡಬೇಕು.

ಹಗಲಿರುಳೆನ್ನದೆ ಪಾಠ ಮಾಡುವ ಗುರುದೇವನನ್ನೇ ತಿರಸ್ಕರಿಸಿ, ಸದಾ ತನುವಿನಲ್ಲಿ ತನುವನ್ನು ಹಿಡಿದು ಅಜ್ಞಾನದ ಸುಖದಲ್ಲಿ ನಿರತವಾದ ಮನವನ್ನು, ತಾನು ಮಾಡುವ ಸುಳ್ಳು ಜಪತಪ ಧ್ಯಾನಾದಿಗಳು ಪಾರು ಮಾಡಲು ಸಾಧ್ಯವೆ ಎಂದು ಮನವೇ ಆಲೋಚನೆಗೆ ಒಳಗಾಗಬೇಕು.

**532**

**ಜಯಸಮುಯವನಪ್ಪಿದ ಕರ ಬಸವಾ,**

**ಕರುಣಗೃಹ, ವಿಮಲ ಶುದ್ಧಸಮಯ ಭಾವಭರಿತ,**
**ಭರಿತಪೂರ ಪರೋಪಜೀವ, ನಮೋ ಬಸವಾ,**
**ನಮೋ ಪ್ರಾಣಲಿಂಗಿ ಬಸವಾ,**
**ಕಪಿಲಸಿದ್ಧ ಮಲ್ಲಿನಾಥಾ, ನಮೋ ಬಸವಾ.**

ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಮಾಚಿದೇವರು ಮುಂತಾದ ಶರಣರು ತೋರಿದ ಜ್ಞಾನ, ಆ ಮಹಾಜ್ಞಾನವೇ ಬಸವಣ್ಣನಾಗಿ ತನುವನ್ನು ಅಪ್ಪಿಕೊಂಡಾಗ ಅದು ಪರಮಾನಂದ ಭರಿತವಾದ ಸಮಯ. ತನ್ನ ಅಜ್ಞಾನದ ಸೈನ್ಯವನ್ನು ತಾನೇ ಕೊಂದು ಹಾಕಿದ ತನ್ನ ವಿಜಯದ ಸಮಯ. ಕುರುಕ್ಷೇತ್ರದಂತಿದ್ದ ದೇಹವನ್ನು ಧರ್ಮಕ್ಷೇತ್ರವನ್ನಾಗಿ ಮಾಡಿಕೊಂಡ ಸಮಯ.

ಅಜ್ಞಾನದ ಮನೆ ಮಹಾಜ್ಞಾನದ ಮನೆಯೇ ತಾನಾದ ಸಮಯ. ಕರುಣಾರಸದ ಕೋಡಿಯೇ ಕಾರಂಜಿಯಂತೆ ಚಿಮ್ಮಿದ ಸಮಯ. ಭಾವಭರಿತವಾಗಿ ಪುನಃ ಅದು ನಿರ್ಭಾವವಾಗಿ ಹರಿದ ಶುದ್ಧ ಸಮಯ.

ಅನಂತಕಾಲದವರೆಗೆ ತನುವಿನಲ್ಲಿಯೇ ಮರೆಯಾಗಿದ್ದು, ತನುವನ್ನೇ ಮನೆಯನ್ನಾಗಿಸಿಕೊಂಡು, ತನು ಮತ್ತು ಮನವೆಂಬ ನನಗೆ ಪಾಠ ಮಾಡುತ್ತಾ ನನ್ನ ತನು ಮತ್ತು ಮನವನ್ನು ಬಿಗಿದಪ್ಪಿಕೊಂಡ ನನ್ನ ಬಸವಣ್ಣನ ಸಮಯ. ಆತ ಕರುಣಾಮಯಿ. ಬಸವಣ್ಣ ಅಪ್ಪಿಕೊಂಡಾಗ ಮನೆಯಲ್ಲಿ ಕರುಣಾರಸವೇ ತುಂಬಿತುಳುಕಿತು.

ತನುವೆಂಬುದು ಬಸವಣ್ಣನಿದ್ದ ಮನೆ. ಕಪಿಲಸಿದ್ಧ ಮಲ್ಲಿಕಾರ್ಜುನನಿದ್ದ ಮನೆ. ಬಸವಣ್ಣ ತನುವಿನ ಪ್ರಾಣವನ್ನು ಹಿಡಿದು ಪ್ರಾಣಲಿಂಗಿಯನ್ನಾಗಿ ಮಾಡಿದ. ಸಮಯ ನೋಡಿ ಜಯಭೇರಿ ಬಾರಿಸಿ ಅದನ್ನು ತಾನೇ ಬಿಗಿದಪ್ಪಿಕೊಂಡ. ನಮೋ ಬಸವಣ್ಣಾ, ನಮೋ ನಮೋ ಬಸವದೇವಾ. ನಮೋ ಬಸವರಸ, ಕಪಿಲಸಿದ್ಧ ಮಲ್ಲಿನಾಥಾ, ನಮೋ ನಮೋ.

**533**

**ಜಲದ ಸಿಂಹಾಸನದ ಕೆಲದಲಷ್ಟಮ ಬೆಟ್ಟ**
**ಕುಲಗಿರಿಗಳೆರಡು ಮತ್ತಿಕ್ಕೆಲದಲಿ.**
**ನೆಲೆಯನರಿಯರು ಬ್ರಹ್ಮಕುಲವನರಿಯರು**
**ಯೋಗ ಹೊಲಬುಗೆಟ್ಟರು ಯೋಗಸಿದ್ಧರೆಲ್ಲ.**
**ಈರಾರನೊಂದೆಂದು ಹಿಡಿದಾತ ನಿಷ್ಕಲಯೋಗಿ**
**ತಾ ಕಪಿಲಸಿದ್ಧ ಮಲ್ಲಿನಾಥ.**

ಎಲ್ಲಿ ನೋಡಿದರೂ ಜಲದ ಸಿಂಹಾಸನಗಳೇ ಕಾಣುತ್ತವೆ. ಅದರಲ್ಲಿ ಅಷ್ಟಮದಗಳಿಂದ ಭರಿತವಾದ ಬೆಟ್ಟವೂ ಇದೆ. ಜ್ಞಾನ ಅಜ್ಞಾನವನ್ನು ತುಂಬಿಕೊಂಡ ಅಧಿಕಾರಿಯೊಬ್ಬನು ಜಲದ ಸಿಂಹಾಸನದ ಮೇಲೆ ಕುಳಿತು ಅಧಿಕಾರ ನಡೆಸುತ್ತಿದ್ದಾನೆ.

ತನ್ನ ನಿಜಕುಲದ ನೆಲೆಯನ್ನು ಅರಿಯಲು ಹೋದರೆ ತಾನು ಬ್ರಹ್ಮಕುಲದವನು. ಬ್ರಹ್ಮಕುಲವನ್ನು ಅರಿಯದೆ ಭ್ರಮೆಯಿಂದಾಗಿ ತಾನು ಹೆಣ್ಣು ಗಂಡೆಂಬ ಅಜ್ಞಾನವನ್ನು ಹೇರಿಕೊಂಡಿದ್ದಾನೆ. ಶ್ರೀಮಂತ ಬಡವ ಭಿಕಾರಿ ಭಿಕ್ಷುಕ ರಾಜಕಾರಣಿ ಶಾಸಕ ಸಚಿವ ಅಧಿಕಾರಿ ಜವಾನ

ಎನ್ನುವ ಅಜ್ಞಾನದಿಂದ ತನ್ನನ್ನು ತಾನೇ ನೋಡಿಕೊಂಡು ಇತರರನ್ನೂ ಹಾಗೆಯೇ ನೋಡುತ್ತಾನೆ.

ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳನ್ನು ಸೃಷ್ಟಿಮಾಡಿ ತನ್ನನ್ನು ತಾನೇ ಹಿಂದು ಕ್ರಿಶ್ಚಿಯನ್ ಮುಸಲ್ಮಾನನೆಂದು ಸೀಳಿಕೊಂಡಿದ್ದಾನೆ. ತಾನು ಬ್ರಹ್ಮಕುಲದವನೆಂಬುದನ್ನೇ ಸಂಪೂರ್ಣವಾಗಿ ಮರೆತು ಹೋಗಿದ್ದಾನೆ.

ನೆಲನೊಂದೆ: ಹೊಲೆಗೇರಿ ಶಿವಾಲಯಕ್ಕೆ. ಜಲವೊಂದೆ: ಶೌಚಾಚ ಮನಕ್ಕೆ. ಕುಲವೊಂದೆ: ತನ್ನ ತಾನರಿದವಂಗೆ. ಫಲವೊಂದೆ: ಷಡುದರುಶನ ಮುಕ್ತಿಗೆ. ನಿಲವೊಂದೆ: ಕೂಡಲಸಂಗಮದೇವಾ, ನಿಮ್ಮನರಿದವಂಗೆ.

ಜಗದಲ್ಲಿರುವ ಸಕಲ ತನುಗಳೆಲ್ಲ ಒಂದೇ. ತನು ವಾಸ ಮಾಡುವ ನೆಲ ಕೂಡಾ ಒಂದೇ. ಕುಡಿಯುವುದಕ್ಕೆ ಶೌಚಕ್ಕೆ, ಪೂಜೆಗೆ ಬಳಸುವ ಜಲ ಕೂಡಾ ಒಂದೇ. ಮಕ್ಕಾ ಮದೀನ, ವ್ಯಾಟಿಕನ್, ಕಾಶಿ, ಶ್ರೀಶೈಲಗಳ ಪವಿತ್ರ ಕಟ್ಟಡಗಳು ನೆಲದ ಮೇಲೆಯೇ ನಿಂತಿವೆ. ಶೌಚಕ್ಕೆ ಬಳಸುವ ಕಟ್ಟಡಗಳೂ ನೆಲದ ಮೇಲೆಯೇ ಇವೆ.

ತನು ಬ್ರಹ್ಮಕುಲವೆಂಬುದನ್ನು ಮರೆತುದಕ್ಕಾಗಿ ಅದರಲ್ಲಿ ಅಷ್ಟಮದಗಳು ನೆಲೆಸಿವೆ. ಕಾಮ ಕ್ರೋಧಾದಿ ಅರಿಷಡ್ವರ್ಗಗಳು ನೆಲೆಸಿವೆ. ಸಪ್ತವ್ಯಸನಗಳು ನೆಲೆಸಿವೆ. ಹೀಗಾಗಿ ಕುಲದ ನೆಲೆಯನು ಅರಿಯರೀ ಮನುಜರು. ಎಂದು ದಾಸರು ಹಾಡಿದ್ದಾರೆ.

ಕುಲದ ನೆಲೆಯನು ಅರಿಯದಿದ್ದಕ್ಕಾಗಿ, ತಾನು ಬ್ರಹ್ಮಕುಲದವನು ಎಂಬುದನ್ನು ಅರಿಯದಿದ್ದಕ್ಕಾಗಿ ಎಲ್ಲಿ ನೋಡಿದರೂ ಯೋಗಸಿದ್ಧರೇ ಕಾಣುತ್ತಾರೆ. ಪೋಪ್ ಬಿಷಪ್ ಫಾದರ್ ಮೌಲ್ವಿ ಮುಲ್ಲಾ ಜಗದ್ಗುರು ಮಠಾಧೀಶ ಸ್ವಾಮಿ ಜಂಗಮ ಮುಂತಾದ ವೇಷಗಳನ್ನು ತನುವಿಗೆ ಹಾಕಿ, ತನುವೇ ತನುವಿಗೆ ಪಾಠ ಮಾಡುತ್ತಲಿದೆ. ತನುವೇ ತನುವಿನಿಂದ ಪಾಠ ಕೇಳುತ್ತಲಿದೆ.

ಗುರು-ಶಿಷ್ಯ ಎನ್ನುವ ಎರಡು ಕುಲಗಳು ಕೂಡಾ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ನೆಲೆಯನು ಅರಿಯವು. ತನುವಿನಲ್ಲಿಯೇ ಅರಿವೆಂಬ ಗುರುದೇವನು ಇದ್ದು, ತನುವಿನಲ್ಲಿಯೇ ಇರುವ ಮನವೆಂಬ ಶಿಷ್ಯನಿಗೆ ಬೋಧೆ ಮಾಡುತ್ತಿದ್ದಾನೆ; ಆ ಬೋಧೆಯನ್ನು ನಾನು ಕೂಡಾ ಆಲಿಸಬೇಕೆಂಬುದನ್ನು 'ಗುರು' ಎನ್ನುವ ವೇಷ ಧರಿಸಿದ ತನುವೂ ತಿಳಿಯುತ್ತಿಲ್ಲ; ಶಿಷ್ಯ ಎನ್ನುವ ವೇಷ ಧರಿಸಿದ ತನುವು ಕೂಡಾ ತಿಳಿಯುತ್ತಿಲ್ಲ.

ವೇಷಧರಿಸಿದ ಯೋಗಸಿದ್ಧರೆಲ್ಲ ಹೊಲಬುಗೆಟ್ಟರು. ಇವರು ಯಾರೂ ಜಲದ ಸಿಂಹಾಸನವನು ಅರಿಯರು. ಅರಿವಿನ ಸಿಂಹಾಸನದ ವಾರಸುದಾರರು ತಾವು ಎಂಬುದನ್ನು ಕೂಡಾ ಅರಿಯರು. ಅರಿವಿನ ನೆಲೆಯನರಿಯರು, ಬ್ರಹ್ಮಕುಲವನರಿಯರು.

534

**ಜಲದೊಳಗೆ ಭವಿಸಿತ್ತು ಜಲಕೆ ನಂದದ ಕಿಚ್ಚು.**
**ಆ ಜಲಂಗಳು ಹಲವು: ಮತ್ತೆ ತನ್ನೊಳಗೆ ಜನನವು ಆ ಸ್ಥಳ.**
**ಜಲಕೆ ನೆಲೆಯಾದ ಸೀಮೆ ತಾನೆ ಆ ಸ್ಥಳವು**
**ಸೀಮೆಯ ಮೀರಿ, ಒಲವೆ ಒಡಮನೆಯಾದ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲ ಜಲವಲ್ಲ. ಬಯಲಲ್ಲಿದ್ದ ಜಲಜನಕ, ಬಯಲಲ್ಲಿಯೇ ಇದ್ದ ಆಮ್ಲಜನಕ ಇವೆರಡನ್ನೂ

ಬಯಲು ಸೇರಿಸಿ ಒಳ ಹೊರಗೆನ್ನದೆ ಬಯಲು ಜಲದೊಳಗೆ ಬೆರೆತು ಜಲವನ್ನಾಗಿಸಿದೆ. ಜಲಜನಕಕ್ಕೆ ಉರಿಯುವ ಗುಣವಿದ್ದರೆ ಆಮ್ಲಜನಕಕ್ಕೆ ಉರಿಸುವ ಗುಣವಿದೆ.

ಉರಿಯುವ, ಉರಿಯಲು ಸಹಕರಿಸುವ ಎರಡು ಶಕ್ತಿಗಳು ಹುಟ್ಟಿದ್ದು ಬಯಲಲ್ಲಿಯೇ. ಜಲಕ್ಕೆ ತಂಪನಿತ್ತು ಜೀವಜಲವನ್ನಾಗಿಸಿ ಜೀವ ಜಲಬಿಂದುವಿಗೆ ಜನ್ಮವಿತ್ತದ್ದು ಬಯಲು. ಹೀಗಾಗಿ ಅಲ್ಲಮಪ್ರಭು ಬಯಲನ್ನು ಕುರಿತು ಹೀಗೆ ಹೇಳಿದ್ದಾರೆ:

ಬಯಲು ಬಯಲನೇ ಬಿತ್ತಿ, ಬಯಲು ಬಯಲನೇ ಬೆಳೆದು, ಬಯಲು ಬಯಲಾಗಿ ಬಯಲಾಯಿತ್ತಯ್ಯ. ಬಯುಲು ಜೀವನ ಬಯುಲು ಭಾವನೆ ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು. ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ.

ಬಯುಲು ಜಲಕ್ಕೆ ಜೀವಜಲಕ್ಕೆ ನೆಲೆಯಾಗಿದೆ. ಜಲಬಿಂದುವೇ ಗಟ್ಟಿಯಾಗಿ ಭೂಮಿಯಾಗಿದೆ; ಖನಿಜವೂ ಆಗಿದೆ. ಗಿಡ ಮರ ಬಳ್ಳಿ ಹೂ ಕಾಯಿ ಹಣ್ಣಾಗ್ಗಿದೆ. ಪಶು ಪಕ್ಷಿ ಪ್ರಾಣಿ ಉರಗವಾಗಿದೆ. ಜಲಚರವಾಗಿದೆ. ಜೀವ ಜಲಬಿಂದುವೇ ತನುವಾಗಿದೆ. ಇಡೀ ಬ್ರಹ್ಮಾಂಡವನ್ನು ತಿಳಿಯುವ ಸುಂದರವಾಗಿ ನೋಡುವ ಅನುಭವಿಸುವ ಶಕ್ತಿಯಾಗಿದೆ.

ಭೂಮಿಯ ಗರ್ಭದಲ್ಲಿ, ಭೂಮಿಯ ಮೇಲೆ ಆಕಾಶದಲ್ಲಿ ಎಲ್ಲಿ ನೋಡಿದರೂ ಹರಿದಾಡುವ ಜಲಂಗಳು. ಜಲದೊಳಗೆ ಜಲದ ಜನನ. ಏನೀ ಆಶ್ಚರ್ಯ; ಏನೀ ರಹಸ್ಯ. ಮಾತನಾಡುವ ಜಲ, ಮಾತು ಕೇಳುವ ಜಲ; ಹೂ ಹಣ್ಣು ಕಾಯಿ ಬಿಟ್ಟು ನಳ ನಳಿಸುವ ಜಲ; ನಾಟ್ಯ ಮಾಡುವ ಜಲ. ಓದುವ ಬರೆಯುವ ಜಲ; ಕೂಗಿ ಕರೆಯುವ ಜಲ; ರಾಗಬದ್ಧವಾಗಿ ಸಪ್ತಸ್ವರಗಳ ಮೂಲಕ ಹಾಡುವ ಜಲ.

ಜಲವೇ ಜಲಕ್ಕೆ ನೆಲೆಯಾಗಿ, ಜಲವೇ ಜಲಕ್ಕೆ ಸೀಮೆಯಾಗಿದೆ. ತಿಳಿದರೆ ತನ್ನ ಸೀಮೆಯನ್ನು ತಾನೇ ಮೀರಿ ನಿಸ್ಸೀಮನಾಗಿದೆ. ಜಲವನ್ನೇ ನೆಲವನ್ನಾಗಿಸಿಕೊಂಡು, ಜಲದಿಂದ ಹುಟ್ಟಿದ ಹಾವನ್ನೆ ಹಾಸಿಗೆ ಮಾಡಿಕೊಂಡು, ಜಲವೇ ವಿಷ್ಣುವಾಗಿ ಜನನಕ್ಕೆ ಲಕ್ಷ್ಮೀ ದೇವಿಯಾಗಿ ಜಲದ ಮೇಲೆ ಜಲಗಳೆರಡು ವಾಸಮಾಡುತ್ತ ಹಲವು ಜಲಂಗಳಿಗೆ ಜನ್ಮ ನೀಡಿವೆ.

ಜೀವ ಜಲಬಿಂದುವೇ ತನುವಾಗಿದೆ. ಈ ಜೀವಜಲದಲ್ಲಿಯೇ ನಂದದ ಕಿಚ್ಚು ಹುಟ್ಟಿದೆ. ''ಜಲಮೇ ಆಗ ಲಗೀ ಹೈ ; ಬುಜಾನೇ ವಾಲೆ ನಹೀ'' ಎಂದು ಕಬೀರರು ಹಾಡಿದ್ದಾರೆ. ಜಲ ಅಗ್ನಿ ಜ್ವಾಲೆಗಳನ್ನು ಚಿಮ್ಮುತ್ತ ಉರಿಯುತ್ತಲಿದೆ; ಅದನ್ನು ಆರಿಸುವವರಿಲ್ಲ. ಅದ್ಭುತವಾದ ಮಾತು! ರಹಸ್ಯಮಯವಾದ ಮಾತು!

ದ್ರೌಪದಿಯ ಮಾತಿನಿಂದ ಹೊತ್ತಿದ ಕಿಚ್ಚು, ದುರ್ಯೋಧನನ ವಜ್ರಶರೀರವನ್ನು ಕತಕತನೆ ಕುದಿಯುವಂತೆ ಮಾಡಿತು. ಕೌರವರು ಕೆಂಡಾಮಂಡಲರಾದರು. ಕೌರವ ಪಾಂಡವರ ಹದಿನೆಂಟು ಅಕ್ಷೋಹಿಣಿ ಸೈನ್ಯ ಸುಟ್ಟು ಬೂದಿಯಾಯಿತು. ಜಲದಲ್ಲಿ ಹೊತ್ತಿದ ಕಿಚ್ಚು ಇಡೀ ಜಲವನ್ನೇ ನಾಶ ಮಾಡಿತು. ಜಲದ ಕುಲವನ್ನೇ ನಾಶಮಾಡಿತು. ಶ್ರೀಕೃಷ್ಣನಿಂದಲೂ ನಂದಿಸಲು ಆಗಲಿಲ್ಲ.

ಜೀವ ಜಲಬಿಂದುವಿನಿಂದಲೇ ತನುವಾಗಿದೆ. ಹೀಗಾಗಿ ತನುವೆಲ್ಲಾ ಜಲಮಯ. ಅದು ಮಾತನಾಡುತ್ತದೆ, ಮಾತು ಕೇಳುತ್ತದೆ. ಆಡುವ ಕೇಳುವ ಮಾತಿನಿಂದಲೇ ತನುವಿನಲ್ಲಿ ಅಗ್ನಿಸ್ಪರ್ಶವಾಗಿ ಭಗಭಗನೆ ಉರಿಯುತ್ತದೆ. ತಣ್ಣನೆಯ ಜಲ ಕುಡಿದರೂ ತನುವಿನಲ್ಲಿ ಹೊತ್ತಿದ ಬೆಂಕಿ ಆರುವುದಿಲ್ಲ. ತಣ್ಣಗಾಗುವುದಿಲ್ಲ. ಮಾತಿನಿಂದ ಹುಟ್ಟಿದ ಬೆಂಕಿ ತನುವಿನಲ್ಲಿಯೇ ಉಳಿದು, ತನುವಿರುವವರೆಗೆ ನೆನಪಾದಾಗೊಮ್ಮೆ ತನುವನ್ನೇ ಸುಡುತ್ತದೆ.

ಜಲದೊಳಗೆ ಭವಿಸಿತ್ತು ಜಲಕೆ ನಂದದ ಕಿಚ್ಚು:

ಜಲದಲ್ಲಿ ಹುಟ್ಟಿದ ಕಿಚ್ಚು ಜಲವನ್ನೆರೆದರೂ ಅದು ತಣ್ಣಗಾಗುತ್ತಿಲ್ಲ. ಜಲದಲ್ಲಿ ಜಲಜನಕವಿದೆ ಅದು ಸದಾ ಉರಿಯುತ್ತದೆ. ಜಲದಲ್ಲಿ ಆಮ್ಲಜನಕವೂ ಇದೆ ಅದು ಉರಿಸುತ್ತದೆ. ಜಲಜನಕವನ್ನು ಆಮ್ಲಜನಕವನ್ನೂ ಒಂದು ಮಾಡಿ ಜಲವನ್ನಾಗಿಸಿದ ಬಯಲು ಕೂಡಾ ಅಲ್ಲಿಯೇ ಇದೆ. ಇದು ಜಲಕ್ಕೆ ನೆಲೆಯಾಗಿದೆ. ಬಯಲು ಜಲಕ್ಕೆ ತೊಯ್ಯುವುದಿಲ್ಲ, ಅಗ್ನಿಗೆ ಸುಡುವುದಿಲ್ಲ. ಭೂಮಿಗೆ ಬಿರಿಯುವುದಿಲ್ಲ, ಗಾಳಿಗೆ ಅಲುಗಾಡುವುದಿಲ್ಲ.

ಜಲಕ್ಕೆ ನೆಲೆಯಾದ ಬಯಲ ವಸ್ತುವನ್ನು ಜಲವೇ ಅರಿತಾಗ ಜಲದ ಮೇಲೆ ಬ್ರಹ್ಮಕಮಲವಾಗಿ ಜಲವೇ ಅರಳಿ ನಿಲ್ಲುತ್ತದೆ. ಗಂಗೆಯ ಬಿಂದುವಿನಿಂದಲೇ ಹುಟ್ಟಿದ ಗಂಗೆ, ಗಂಗೆಯನ್ನೇ ಧಾರಣೆ ಮಾಡಿಕೊಂಡು ಗಂಗಾಧರನೆಂದು ಕರೆಯಿಸಿಕೊಳ್ಳುತ್ತದೆ. ಜಲದ ಸೀಮೆಯನ್ನು ಮೀರಿ ನಿಸ್ಸೀಮನಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**535**

**ಜಲದೊಳಗೆ ಭವಿಸಿಪ್ಪ ಜಲದ ನಾದದ ಭೇದ**
**ಜಲಶಿಲೆಯೊಪ್ಪುದೊಂದಾನತದಲಿ**
**ಬಸವಾಕ್ಷರತ್ರಯದ ನೆನಹುವಿಡಿದಾತಂಗೆ**
**ನಿತ್ಯಪದವು ಕರುಣಾಕರನೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲವೇ ಬ್ರಹ್ಮಾಂಡವಾಗಿದೆ. ಪಿಂಡಾಂಡವೂ ಆಗಿದೆ. ಇಡೀ ಬ್ರಹ್ಮಾಂಡವನ್ನು ಸಾಕ್ಷಿಯಾಗಿ ನೋಡುತ್ತಲಿದೆ. ಪರಮ ಸಂತೋಷದಿಂದ ಸಪ್ತಸ್ವರಗಳ ಮೂಲಕ ನಾದ ಮಾಡುತ್ತಾ ಮಾಡಿದ ಆ ನಾದವನ್ನು ತಲೆದೂಗಿ ತಾನೇ ಆಲಿಸುತ್ತಲಿದೆ.

ಜಲದೊಳಗೆ ಹುಟ್ಟಿದೆ. ಜಲದಿಂದಲೇ ನಾದ ಮಾಡುತ್ತಲಿದೆ. ಜಲದ ನಾದದ ಭೇದವನ್ನು ಜಲದಿಂದಲೆ ಅರಿಯುವುದು, ಜಲಕ್ಕೆ ಸಾಧ್ಯವಾಗುತ್ತಿಲ್ಲ. ಏನೀ ಜಲದ ಮಹಿಮೆ.

ಜಲವೂ ತಾನೇ; ಶಿಲೆಯೂ ತಾನೇ. ಕೋಗಿಲೆಯಾಗಿ ಕೂಗುವ ಧ್ವನಿಯೂ ತಾನೇ. ಗಿಡ ಮರ ಬಳ್ಳಿ ಹೂ ಕಾಯಿ ಹಣ್ಣು ಕೂಡಾ ತಾನೇ. ಅದರೊಳಡಗಿದ ಬೀಜವೂ ತಾನೇ. ಇದಕ್ಕೆಲ್ಲ ಜನ್ಮ ನೀಡಿದ ಭೂಮಿಯೂ ತಾನೇ. ಆಯಾ ಕಾಯಕದಲ್ಲಿ ಜಲ ನಿರತವಾಗಿ ಜಲದಲ್ಲಿಯೇ ಮೊಳಗುವ ಜಲದ ನಾದದ ಭೇದವನ್ನು ಜಲವೇ ಅರಿಯದಂತಾಗಿದೆ.

ಜಲ ಎಂದರೆ ಪ್ರಕಾಶ; ಅದು ಕಾಂತಿಯೂ ಹೌದು. ಗರ್ಭದಲ್ಲಿ ಜೀವಜಲ ಬಿಂದುವಾಗಿ ಹೊಕ್ಕು, ತನುವಾಗಿ ಧ್ವನಿಮಾಡುತ್ತ ಬಂದದ್ದು ಕೂಡಾ ಜಲವೇ ಆಗಿದೆ. ಹೀಗಾಗಿ ಜಲ ಜಾಣನೆಂದು ಕರೆಯಿಸಿಕೊಂಡಿದೆ. ದಡ್ಡನೆಂದು ಕೂಡಾ ಕರೆಯಿಸಿಕೊಂಡಿದೆ. ಕಪಟ, ಮೋಸ, ಅಪರಾಧಿಯೆಂದು ಕರೆಯಿಸಿಕೊಂಡಿದೆ. ಜಲವನ್ನೇ ಹಾಸಿಗೆಯನ್ನಾಗಿಸಿಕೊಂಡು ಜಲವನ್ನೇ ಹಾವನ್ನಾಗಿಸಿಕೊಂಡು ಜಲದ ಮೇಲೆ ಜಲ ಮಲಗಿ ಜಲಜನಾಭನೆಂದು, ವಿಷ್ಣುವೆಂದು ಕರೆಯಿಸಿಕೊಂಡಿದೆ.

ಅಣು ರೇಣು ತೃಣ ಕಾಷ್ಠದಲ್ಲಿಯೂ ತಾನಿದ್ದು ತನ್ನನ್ನೇ ತಾನು ಮರೆತು ಹೋಗಿದೆ. ಜಲವೆಂದರೆ ಗಂಗೆ. ಗಂಗೆಗೆ ಜನ್ಮ ನೀಡಿ, ಗಂಗೆಯನ್ನೇ ಧರಿಸಿಕೊಂಡು, ಒಳಹೊರಗೆನ್ನದೆ ಗಂಗೆಯಲ್ಲಿಯೇ ಇದ್ದು, ಗಂಗೆಗೆ ನೋಡುವಂತೆ, ಮಾತಾಡುವಂತೆ, ಮುಟ್ಟುವಂತೆ, ಮೂಸಿಸುವಂತೆ, ರುಚಿಸುವಂತೆ ಇದೆಲ್ಲವನ್ನು ತಿಳಿಯುವಂತೆ ಮಾಡಿದ ಗಂಗಾಧರನನ್ನೇ ಗಂಗೆ

ಮರೆತು ಹೋಗಿದೆ.

ತನ್ನನ್ನು ತಾನು ಮರೆತು ಹೋದ ಗಂಗೆಗೆ, ತಾನು ಯಾರು ಎಂದು ತಿಳಿಸಲು ಬಸವಾಕ್ಷರತ್ರಯದ ಬಸವಣ್ಣ ಕಲ್ಯಾಣಕ್ಕೆ ಅವತರಿಸಿ ಬಂದ. ಕಾಯವನ್ನು ಹಿಡಿದು ಇದು ಕೈಲಾಸವೆಂದು, ಕಲ್ಯಾಣವೆಂದು ಸಾರಿದ. ಇದು ಗಂಗೆಯೆಂದು ಈ ಗಂಗೆಯಲ್ಲಿಯೇ ಗಂಗೆಯನ್ನು ಧಾರಣೆ ಮಾಡಿಕೊಂಡ ಗಂಗಾಧರನೂ ಇದರಲ್ಲಿದ್ದಾನೆ ಎಂದು ಕಾಯವನ್ನು ಮುಟ್ಟಿ ಮುಟ್ಟಿ ತೋರಿದ.

ಕಾಯವನ್ನೇ ಕೈಲಾಸಮಾಡಿಕೊಂಡು ಈ ಕಾಯದಲ್ಲಿಯೇ ಲಿಂಗಯ್ಯನಿದ್ದಾನೆ. ಕಾಯವನ್ನು ಆವರಿಸಿದ ಮನವೇ ಲಿಂಗಯ್ಯನಿಗೆ ಸತಿಯಾಗಿ ಶರಣು ಹೋಗಿ ಶರಣ ಸತಿಯಾಗಲು ಹೇಳಿದ. ಲಿಂಗಯ್ಯನನ್ನೇ ಪತಿಯನ್ನಾಗಿ ಮಾಡಿಕೊಂಡು; ಸತಿ ಪತಿಗಳಿದ್ದ ಕಾಯವೇ ಕೈಲಾಸವೆಂದು ಕಾಯವನ್ನು ಮುಟ್ಟಿ ಮುಟ್ಟಿ ಕಾಯಕ್ಕೆ ಕಾಯದಿಂದಲೇ ತಿಳಿ ಹೇಳಿದ.

ಕಾಯದ ಭೋಗಕ್ಕಾಗಿ ಮಾಡುವ ಕಾಯಕ ಕಾಯಕವಲ್ಲ. ಕಾಯವನ್ನೇ ಕೈಲಾಸವನ್ನಾಗಿಸುವ ಕಾಯಕವೇ ಕಾಯಕ. ಕಾಯದಲ್ಲಿ ಸಂಗಮವಾದ ಅರಿವಿನ ಸಂಗಯ್ಯನನ್ನು ಕಾಯವನ್ನು ಆವರಿಸಿದ ಮನದಿಂದಲೇ ತಿಳಿಯಬೇಕು. ತಿಳಿದು ಆತನಿಗೆ ಶರಣು ಹೋದವನೇ ಶರಣ ಎಂದು ಸಕಲ ಕಾಯಗಳಿಗೂ ನೆನಪು ಮಾಡಿದ.

ಬಸವಣ್ಣನು ನೆನಪಿಸಿದ ನೆನಹುವಿಡಿದಾತಂಗೆ ಮಾತ್ರ ನಿತ್ಯಪದವು ಕಟ್ಟಿಟ್ಟ ಬುತ್ತಿ. ಕರುಣಾಕರನೇ ಕಪಿಲಸಿದ್ಧ ಮಲ್ಲಿಕಾರ್ಜುನಾ ಕಾಯದಲ್ಲಿಯೇ ಇದ್ದು ಕಾಯಕ್ಕೆ ಗೋಚರಿಸದ ನಿನ್ನ ಲೀಲೆಯೇ ಅಪಾರ! ಅನಂತ!

**536**

**ಜಲದೊಳಗೆ ಮತ್ಸ್ಯ ಜಲವ ತನ್ನ ನಾಸಿಕದತ್ತ**
**ಹೊದ್ದಲೀಯದ ಪರಿಯ ನೋಡಾ ಅಯ್ಯಾ.**
**ಶರಣ ಸರ್ವ ಪ್ರಪಂಚಿನೊಳಗಿದ್ದು**
**ಆ ಪ್ರಪಂಚು ತನ್ನತ್ತ ಹೊದ್ದಲೀಯದ ಪರಿಯ ನೋಡಾ ಅಯ್ಯಾ.**
**ಮತ್ಸ್ಯಂಗಾ ಬುದ್ಧಿಯ, ಶರಣಂಗೀ ಬುದ್ಧಿಯ ಕರುಣಿಸಿದೆಯಲ್ಲಾ,**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲ ತನ್ನ ಬಿಂದುವೊಂದರಿಂದಲೇ ಮತ್ಸ್ಯಕ್ಕೆ ಜನ್ಮ ನೀಡಿ, ಜಲದಲ್ಲಿಯೇ ಓಡಾಡುವಂತೆ ಮಾಡಿದೆ. ಜಲದಿಂದಲೇ ಮೂಗು ಕಿವಿ ಕಣ್ಣು ಬಾಯಿ ರೆಕ್ಕೆಗಳು ಹುಟ್ಟಿವೆ. ಮತ್ಸ್ಯ ಜಲದಲ್ಲಿ ಓಡಾಡುವಾಗ ಮೂಗು ಕಣ್ಣು ಕಿವಿ ಬಾಯಿಯಲ್ಲಿ ಜಲ ಹೊಕ್ಕರೂ ಮತ್ಸ್ಯಕ್ಕೆ ಬಾಧೆಯುಂಟಾಗದ ರಹಸ್ಯ ಮತ್ಸ್ಯದಲ್ಲಿಯೂ ಅಡಗಿದೆ; ಜಲದಲ್ಲಿಯೂ ಅಡಗಿದೆ.

ಜಲವೇ ಜಲದಲ್ಲಿ ಜಲವಾಗಿ ಓಡಾಡಿದಂತೆ! ಜಲದಲ್ಲಿಯೇ ಜಲ ಪ್ರತ್ಯೇಕವಾಗಿ, ಜೀವ ಜಲವಾಗಿ, ಅನೇಕ ರೂಪುಗಳನ್ನು ಹೊಂದಿ, ಬಣ್ಣ ಬಣ್ಣದ ಚಿತ್ತಾರಗಳೊಂದಿಗೆ ಮಿಂಚಿದಂತೆ! ಜಲಕ್ಕೆ ರೂಪು ಇಲ್ಲ. ಆದರೂ ಜಲದಲ್ಲಿಯೇ ಹುಟ್ಟಿದ ಮತ್ಸ್ಯಕ್ಕೆ ನಾನಾ ರೂಪುಗಳು. ನಾನಾ ಬಣ್ಣಗಳು. ಜಲಕ್ಕೆ ರುಚಿಯಿಲ್ಲ; ಜಲದಿಂದಾದ ಮತ್ಸ್ಯಕ್ಕೆ ರುಚಿಯಿದೆ.

ಜಲವೇ ಜಲದಲ್ಲಿ ಜಲವಾಗಿ, ಜಲವನ್ನು ಪ್ರತ್ಯೇಕಿಸುತ್ತಾ , ಜಲದಿಂದ ಹುಟ್ಟಿದ ಮತ್ಸ್ಯ

ಜಲವನ್ನು ತಾಗಿಸಿಕೊಳ್ಳದೆ, ಆ ಜಲದಿಂದ ಬಾಧೆಗೊಳಗಾಗದೆ ಜಲವನ್ನು ಹೊದ್ದಲೀಯದ ಪರಿಯ ನೋಡಾ.

ಮತ್ಸ್ಯದಂತೆ ತನು ಕೂಡಾ ಬಯಲ ಬೀಜದಿಂದ ಹುಟ್ಟಿದೆ. ಬಯಲನ್ನು ಒಳ ಹೊರಗೆನ್ನದಂತೆ ಹೊದ್ದಿದೆ. ತನುವನ್ನು ಆವರಿಸಿದ ಮನ ಕೂಡಾ ಬಯಲೇ ಆಗಿದೆ. ಅದು ತನುವನ್ನು ಹಿಡಿದಿರುವುದರಿಂದ ತನು ಬಯಲಾದರೂ ಕೂಡಾ ಸುಖ ದುಃಖಗಳ ಮೂಲಕ ನರಕಯಾತನೆ ಅನುಭವಿಸುತ್ತಲಿದೆ.

ಶಬ್ದ ಸ್ಪರ್ಶ ರುಚಿ ವಾಸನೆ ದೃಶ್ಯಗಳು ತನುವನ್ನು ಉಸಿರುಗಟ್ಟಿಸಿ ಸಾಯುವಂತೆ ಮಾಡುತ್ತವೆ. ಇವು ಯಾವೂ ಜಲವಲ್ಲ; ವಸ್ತುಗಳು ಕೂಡಾ ಅಲ್ಲ. ತನುವಿನಲ್ಲಿಯೇ ಹುಟ್ಟಿವೆ; ತನುವನ್ನೇ ಬಾಧೆಗೆ ಈಡು ಮಾಡಿವೆ.

ಜಲದಲ್ಲಿ ಹುಟ್ಟಿದ ಮತ್ಸ್ಯ ಜಲವನ್ನು ಮರೆತಿಲ್ಲ. ಹೀಗಾಗಿ ಜಲದಿಂದ ಅದಕ್ಕೆ ಬಾಧೆಯಿಲ್ಲ. ಜಲ ಜಲದಲ್ಲಿ ಲೀನವಾದಂತೆ. ಪುನಃ ಜಲ ಬಯಲಲ್ಲಿ ಬಯಲಾಗಿ ಬಯಲೇ ಆದಂತೆ.

ಸಿದ್ಧರಾಮ ಶಿವಯೋಗಿಗಳ ಈ ಸೂತ್ರವನ್ನು ತನು ತಿಳಿಯದಿದ್ದಕ್ಕಾಗಿ, ಅಂದರೆ ಬಯಲಿಂದ ಹುಟ್ಟಿದ ತನು ತಾನು ಬಯಲೆಂದು ಬಲವಾಗಿ ಅರಿಯದಿದ್ದಕ್ಕಾಗಿ, ಶಬ್ದ ಸ್ಪರ್ಶ ರುಚಿ ವಾಸನೆ ದೃಶ್ಯಗಳಿಂದಲೇ ತನುವಿಗೆ ಸುಳ್ಳು ಸುಖವಾಗುತ್ತದೆ; ಸುಳ್ಳು ದುಃಖವಾಗುತ್ತದೆ.

ಪ್ರಪಂಚಿನೊಳಗಿದ್ದು ಪ್ರಪಂಚ ತನ್ನ ಹೊದ್ದಲೀಯದ ಪರಿಯ ನೋಡಾ ಅಯ್ಯಾ:

ಜಲದೊಳಗಿದ್ದರೂ ಮತ್ಸ್ಯದ ಮೂಗಿನಲ್ಲಿ ಜಲ ಹೊಕ್ಕು ಮತ್ಸ್ಯಕ್ಕೆ ಬಾಧೆಯಾಗುವುದಿಲ್ಲ. ಏಕೆಂದರೆ ಮತ್ಸ್ಯ ಕೂಡಾ ಜಲವೇ ಆಗಿದೆ. ಜಲ ಜಲಕ್ಕೆ ಬಾಧೆಕೊಡುವುದೆಂದರೇನು? ಜಲ ಜಲದಲ್ಲಿ ಬೆರೆತು ಜಲವೇ ಆದಂತೆ! ಅಂತೆಯೇ ತನು, ತಾನು ಬಯಲ ಬೀಜದಿಂದ ಹುಟ್ಟಿದ ಬಯಲ ವೃಕ್ಷವೆಂದು ತನುವಿಗೆ ತಿಳಿಯುತ್ತಿಲ್ಲ; ಹೀಗಾಗಿ ತನುವಿನ ಸಂಸಾರ ತನುಗಳನ್ನೇ ಕಾಡುತ್ತಲಿದೆ. ಸುಖವನ್ನು ಹುಡುಕುತ್ತಾ ದುಃಖವನ್ನು ಹೆಗಲ ಮೇಲೆ ಹೇರಿಕೊಂಡು ದುಃಖದ ಮಡುವಿನಲ್ಲಿ ತನಗರಿಯದಂತೆ ಬಿದ್ದಿದೆ.

ಶರಣ ಮಾತ್ರ ಸುಖ ದುಃಖಗಳಿಂದ ಹೊರಗಾದ. ತನುವನ್ನು ಆವರಿಸಿದ ಮನದ ಮೂಲಕ ತನುವಿನಲ್ಲಿಯೇ ಸಂಗಮವಾದ ಬಯಲದೇವನಿಗೆ ಶರಣು ಹೋದ; ಆ ಬಯಲನ್ನೇ ಲಿಂಗವನ್ನಾಗಿಸಿಕೊಂಡು ತಾನು ಆ ಲಿಂಗಕ್ಕೆ ಸತಿಯಾಗಿ ಆಲಿಂಗನ ಮಾಡಿಕೊಂಡ. ತನು ಬಯಲಾಯಿತು. ಅದರ ಜೀವನ ಅದರ ಭಾವನೆಯೂ ಬಯಲಾಯಿತು. ಬಯಲು ಬಯಲಲ್ಲಿ ಸೇರಿ ಬಯಲೇ ಆಯಿತು.

ಜಲದಲ್ಲಿ ಹುಟ್ಟಿದ ಮತ್ಸ್ಯ ಜಲದಲ್ಲಿಯೇ ಇದ್ದು ಜಲವನ್ನು ಭೇದಿಸಿ, ಜಲದೊಂದಿಗೆ ಆಡಿ, ಜಲದಲ್ಲಿಯೇ ಲೀನವಾಗಿ ಜಲವೇ ಆದಂತೆ. ಶರಣನನ್ನು ಸಂಸಾರ ಬಾಧಿಸದು. ಸಂಸಾರದ ಸುಖ ದುಃಖಗಳು ಶರಣನನ್ನು ಬಾಧೆಗೆ ಈಡು ಮಾಡುವುದಿಲ್ಲ.

ಏಕೆಂದರೆ ಶರಣ ಬಯಲು. ಬಯಲಿಗೆ ಶರಣು ಹೋದಾತ; ಬಯಲೇ ತಾನಾದಾತ. ಬಯಲನ್ನು ಗಾಳಿ ಮಳೆ ಗುಡುಗು ಮಿಂಚು ಸಿಡಿಲು ಬಾಧಿಸವು. ಭೂಮಿ ಬಿರಿದು ಲಾವಾರಸ ಚಿಮ್ಮಿದರೂ ಕೂಡಾ ಬಯಲಿಗೆ ಬಾಧೆಯಿಲ್ಲ.

ಬಯಲುದೇವನ ಆಟವೇ ವಿಚಿತ್ರ! ಮತ್ಸ್ಯಂಗಾಬುದ್ಧಿಯನು ಕರುಣಿಸಿದ; ಶರಣನಿಗೆ ಈ ಬುದ್ಧಿಯನು ಕರುಣಿಸಿದ!

537

**ಜಲದೊಳಗೆ ಹುಟ್ಟಿದ ಬುದ್ಬುದಂಗಳು ಜಲದೊಳಗಡಗುವಂತೆ**
**ನಿನ್ನೊಳಗಡಗಿಪ್ಪುದನಾರು ಬಲ್ಲರಯ್ಯಾ? ಶರಣ ದೇಹಿಕ ದೇವ**
**ಮಹವ ನೊಡಗೂಡಿಪ್ಪಭೇದವ ಬಲ್ಲವರಾರಯ್ಯಾ?**
**ಕೊಡನೊಳಗಣ ಚಂದ್ರ ಹಲವರೊಳಗೆ ವರ್ತಿಸುವಂತೆ**
**ನೀನವರೊಳಗೆ ಹೊದ್ದದಿಪ್ಪುದನು ನಿನ್ನವರಲ್ಲದರಿವರಾರೈ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲದೊಳಗೆ ಹುಟ್ಟಿದ ನೊರೆ ಜಲವೇ ಆಗಿದೆ. ನೊರೆ ಎನ್ನುವ ಹೆಸರ ಮೂಲಕ ಜಲ ಕರೆಯಿಸಿಕೊಳ್ಳುತ್ತದೆ. ಏಕೆಂದರೆ ಜಲದ ಮೇಲೆ ಜಲವೇ ನೊರೆಯ ರೂಪವಾಗಿ ಕಾಣಿಸಿಕೊಂಡಿದೆ. ಅದು ಜಲದಲ್ಲಿಯೇ ಹುಟ್ಟಿ ಜಲದಲ್ಲಿಯೇ ಲೀನವಾಗುತ್ತದೆ. ಆದರೂ ನೋಡುವ ಕಣ್ಣುಗಳಲ್ಲಿ ಜಲ ನೊರೆಯಾಗಿದೆ. ಜಲ ನೊರೆಯೂ ಹೌದು, ಅಲೆಯೂ ಹೌದು, ಗುರುಳೆಯೂ ಹೌದು. ಜಲದಲ್ಲಿ ಹುಟ್ಟಿದೆ; ಜಲವೇ ಆಗುತ್ತದೆ.

ನೋಡುವ ಕಣ್ಣಲ್ಲಿ ಹುಟ್ಟಿದ ಬುದ್ಬದಂಗಳು ಕಣ್ಣೊಳಗೆ ಅಡಗದೆ ಹಾಗೆಯೇ ಉಳಿದಿವೆ. ಜಲದಲ್ಲಿ ಹುಟ್ಟಿದ ಬುದ್ಬುದಂಗಳು ಜಲದಲ್ಲಿ ಅಡಗಿ ಜಲವೇ ಆಗಿವೆ. ಜಲದಲ್ಲಿ ಹುಟ್ಟಿದ ಬುದ್ಬುದಂಗಳು ಜಲದಲ್ಲಿ ಜಲವಾಗಿ ಅಡಗುವುದನ್ನು ಕಣ್ಣು ನೋಡಿಯೂ ನೋಡದಂತೆ ನಟಿಸಿದರೆ ಯಾರಾದರೂ ಏನು ಮಾಡಿಯಾರು? ಜಲದಲ್ಲಿ ಹುಟ್ಟಿದ ಗುರುಳೆ ನೊರೆ ತೊರೆಗಳು ಜಲವೇ ಎಂದು ನೋಡಿದ ಕಣ್ಣಿಗೆ ಗೊತ್ತಿದೆ. ಜಲವನ್ನು ಜಲವೆಂದು ನೋಡಿದ ಕಣ್ಣು ಕಣ್ಣಲ್ಲಿಯೇ ಇದೆ; ಜಲವನ್ನು ನೊರೆ ತೊರೆ ಗುರುಗಳೆಗಳೆಂದು ನೋಡಿದ ಕಣ್ಣು ಕಣ್ಣನ್ನು ಆವರಿಸಿದೆ.

ಕಣ್ಣೊಳಗೆ ಕಣ್ಣಿದ್ದು ಕಾಣಲರಿಯದ ಕಣ್ಣು ಕಣ್ಣಲ್ಲಿಯೇ ಇದೆ. ಅದು ನೋಡುವ ನೋಟವೆಲ್ಲ ತಪ್ಪು. ಸದಾ ತಪ್ಪು ಮಾಡುವ ತಪ್ಪು ನೋಡುವ ಸಾಮ್ರಾಜ್ಯವೇ ಕಣ್ಣಲ್ಲಿ ಅಡಗಿದೆ. ಕಣ್ಣಿನ ಭೇದವನ್ನು ಕಣ್ಣಲ್ಲಿಯೇ ಕೂಡಿ ಕಳೆದುಕೊಳ್ಳಬೇಕು. ಜಲದೊಳಗೆ ಹುಟ್ಟಿದ ಬುದ್ಬುದಂಗಳು ಜಲದೊಳಗಡಗುವಂತೆ. ಕಣ್ಣೊಳಗೆ ಹುಟ್ಟಿದ ಭೇದವನ್ನು ಆರು ಬಲ್ಲರಯ್ಯಾ?

ಕಣ್ಣೊಳಗೆ ಹುಟ್ಟಿದ ಭೇದವನ್ನು ಅರಿವಿನ ಕಣ್ಣಿಗೆ ಅರ್ಪಿಸಿದಾತ ಶರಣ! ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಅಂಗವನ್ನು ಆವರಿಸಿದ ಮನದಿಂದಲೇ ಶರಣ ಹೋಗಿ ಶರಣನೇ ತಾನಾದಾತ ಶರಣ!

ದೇಹವನ್ನು ಆವರಿಸಿದ ಮನ, ದೇಹದೊಂದಿಗೆ ಸಂಗ ಮಾಡಿ ಹಲವಾರು ತಪ್ಪುಗಳನ್ನು ಮಾಡುವ ಅಜ್ಞಾನದ ಈ ಭೇದವನ್ನು ಶರಣ ಮಾತ್ರ ನೋಡಬಲ್ಲ. ಏಕೆಂದರೆ ಆತ ಶರಣ ದೇಹಿಕ ದೇವ. ದೇಹದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ದೇಹವನ್ನು ಆವರಿಸಿದ ಮನದಿಂದಲೇ ಕಂಡು ಆ ಗುರುದೇವನಿಗೆ ಶರಣು ಹೋದಾತ.

ಸಕಲ ದೇಹಗಳಲ್ಲಿಯೂ ಅರಿವೆಂಬ ಗುರುದೇವ ಸಂಗಮವಾದುದನ್ನು ಶರಣ ಮಾತ್ರ ನೋಡಬಲ್ಲ. ಆ ಗುರುದೇವನಿದ್ದ ಲಾಂಛನ (ದೇಹ)ಕ್ಕೆ ಶರಣು ಹೋಗಿ ಶರಣು ಶರಣಾರ್ಥಿ ಎನ್ನಬಲ್ಲ. ದೇವರಿದ್ದ ದೇಹಗಳು ದೇವರನ್ನು ಅರಿಯಲಾರವು. ನೀನು ಯಾರೆಂಬುದು

ನಿನ್ನವರಲ್ಲದವರು. ನಿನ್ನನ್ನು ಅರಿಯಲಾರರು. ನಿನ್ನನ್ನು ಅರಿತ ಅರುಹಿರಿಯರು ನೀನಲ್ಲದೆ ಅನ್ಯದೈವವಿಲ್ಲವೆಂದು ಸಕಲ ದೇಹಗಳನ್ನು ದೇವರಿದ್ದ ದೇವಾಲಯವೆಂದು ಶರಣು ಹೋಗುವರು.

ಕಪಿಲಸಿದ್ಧಮಲ್ಲಿಕಾರ್ಜುನನೇ ನೀನು ಎಲ್ಲರೊಳಗಿದ್ದರೂ ಕೂಡಾ ನಿನ್ನವರು ಮಾತ್ರ ನಿನ್ನನ್ನು ಅರಿವರು ತಂದೆ.

**538**

**ಜಲವಿಡಿದು ಪರಿವಿಡಿದು ಪದವಿಡಿದು ಭವವಿಡಿಯ**
**ಒಲವನೊಲ್ಲೆನು ಅವನಕಾಂಕ್ಷೆ ಇಲ್ಲ.**
**ಗುರುಕರುಣದಾಜ್ಞೆಯಲಿ ಪರುಷಲಿಂಗವ ಪಡೆದು**
**ಒಳಹೊರಗೆನ್ನದೆ ಭೇದಿಸುವೆನು**
**ಶ್ರೀಗುರು ಚೆನ್ನಬಸವಣ್ಣ ಸಹರೂಪದ ಭಾವಶುದ್ಧನಪ್ಪೆ ಕಾಣಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲದಿಂದಾದ ತನುವಿಗೆ ಜಲದ ಇರುವಿಕೆ ತಿಳಿಯುತ್ತಿಲ್ಲ. ನೀರೊಳಗಿದ್ದೂ ನೀರಡಿಸಿ, ನೀರಿಗಾಗಿ ಹಪಹಪಿಸಿ ನೀರಿಲ್ಲದೆ ಸಾಯುತ್ತದೆ. ಜಲದೊಳಗೆ ಇದ್ದರೂ ಜಲದಬಾಧೆ ತಪ್ಪುತ್ತಿಲ್ಲ.

ಜಲದಿಂದಲೇ ಹುಟ್ಟಿದ ತನುವಿಗೆ ಜಲಹಿಡಿದ ಪರಿಯ ತಿಳಿಯುತ್ತಿಲ್ಲ. ಜಲ ಇಲ್ಲದೆ ಬದುಕುತ್ತಿಲ್ಲ. ತಿನ್ನುವ ಪದಾರ್ಥಗಳೆಲ್ಲ ಜಲವೇ; ಜಲಮಯವೇ ಆಗಿವೆ. ಜಲ ಹರಿದು ಕಬ್ಬಾಯಿತು, ಜಲ ಹರಿದು ನೆಲ್ಲಾಯಿತು, ಬೇಳೆ ಜೋಳ ರಾಗಿ ಸಾಮೆ ನವಣೆ ಮೆಣಸು ಕೂಡಾ ಜಲವಿಲ್ಲದೆ ಇಲ್ಲ. ಗಿಡ ಮರ ಬಳ್ಳಿ ಪಶು ಪಕ್ಷಿ ಕೀಟ ಉರಗ ಜಲವಲ್ಲದೆ ಇಲ್ಲ. ಆದರೂ ಜಲವಿಡಿದ ಪರಿಯ ಜಲಕ್ಕೆ ತಿಳಿಯಲೊಲ್ಲದು. ಜಲದಲ್ಲಿಯೇ ಪದ ಸೃಷ್ಟಿಯಾಗಿದೆ; ನಾದ ಸೃಷ್ಟಿಯಾಗಿದೆ. ಪದವಿ ಅಧಿಕಾರ ಸೃಷ್ಟಿಯಾಗಿದೆ. ಜಲದಲ್ಲಿಯೇ ಜನನ ಮರಣಗಳ ಬಾಧೆ ಸೃಷ್ಟಿಯಾಗಿದೆ. ಜಲದಲ್ಲಿಯೇ ಮಣ್ಣು ಹೊನ್ನು ಶಿಲೆ ನವರತ್ನಗಳು ಸೃಷ್ಟಿಯಾಗಿವೆ. ಆದರೂ ಅದೆಲ್ಲ ಜಲವಲ್ಲ! ಜಲವೇ ತಾನು ಆಗಿದ್ದರೂ ತನು ಜಲವೆಂಬುದನ್ನು ಮರೆತು ಹೋಗಿದೆ.

ಜಲದಿಂದಲೇ ಕಾಗದ, ಜಲದಿಂದಲೇ ಮಸಿ, ಜಲದಿಂದಲೇ ಬರೆಯುವ ಲೆಕ್ಕಣಿಕೆ, ಕಾಗದದಲ್ಲಿ ಬರೆಯುವ ಪದಗಳು ಕೂಡಾ ಜಲವೇ ಆಗಿದೆ. ಆದರೂ ಕೂಡಾ ಜಲ ತಾನು ಜಲವೆಂಬುದನ್ನೇ ಮರೆತು ಹೋಗಿದೆ. ಬೈಬಲ್ ಭಗವದ್ಗೀತೆ ಕುರಾನ್ ಎಂದು ಕರೆದಿದೆ. ತನುವಿನಿಂದ ಹೊರಬಂದ ನಾದ, ತನುವಿನಿಂದಲೇ ಹೊರ ಬಂದ ಪದ, ಅದು ತನುವಿನದೇ ಎನ್ನುವುದನ್ನು ತನು ಮರೆತು ಹೋಗಿದೆ.

ಜಲವಿಡಿದು ಪರಿವಿಡಿದು ಪದವಿಡಿದು ಭವವಿಡಿದು ಒಲವ ನೊಲ್ಲೆನು ಅವನಕಾಂಕ್ಷೆ ಇಲ್ಲ:

ಜಲ ಜಲವಲ್ಲ; ಹೀಗಾಗಿ ಅದಕ್ಕೆ ಜಲವೆನ್ನುವುದು ಗೊತ್ತಿಲ್ಲ. ಜಲಜನಕವನ್ನು ಆಮ್ಲಜನಕವನ್ನು ಹಿಡಿದು ಜಲವನ್ನಾಗಿಸಿದವನು ಜಲವಿಡಿದವನು. ಜಲವಿಡಿದು ಜಲದಲ್ಲಿಯೇ ಇದ್ದು ಜೀವಜಲವನ್ನಾಗಿಸಿ ಅದರಲ್ಲಿ ಪದವನ್ನು ಸೃಷ್ಟಿ ಮಾಡಿದ್ದಾನೆ. ಅದರಲ್ಲಿ ನಾದವನ್ನು ಸೃಷ್ಟಿ ಮಾಡಿದ್ದಾನೆ. ಅದಕ್ಕೆ ಜನನ ಮರಣಗಳನ್ನು ಸೃಷ್ಟಿ ಮಾಡಿದ್ದಾನೆ. ಸೃಷ್ಟಿ ಲಯಗಳಿಲ್ಲದ ಆತ ಜಲದಲ್ಲಿಯೇ ಅಡಗಿದ್ದಾನೆ. ಜಲವನ್ನು ಆವರಿಸಿದ ಮಾಯಾಮಯವಾದ ಮನವೆಂಬ ಮೃಗಜಲಕ್ಕೆ

ಅವನ ಮೇಲೆ ಒಲವೇ ಇಲ್ಲದ್ದರಿಂದ, ಅವನ ಮೇಲೆ ಅಕಾಂಕ್ಷೆಯೇ ಇಲ್ಲದ್ದರಿಂದ ಜಲವಿಡಿದೂ ಜಲವಿಡಿದ ಪರಿಯ ಪರಿಚಯವಿಲ್ಲ.

ಗುರುಕರುಣದಾಜ್ಞೆಯಲಿ ಪರುಷಲಿಂಗವ ಪಡೆದು ಒಳಹೊರಗೆನ್ನದೆ ಭೇದಿಸುವೆನು:

ಗುರುದೇವನೆಂದರೆ ಸಾಮಾನ್ಯನಲ್ಲ. ಜಲವಿಡಿದು, ಜಲದಲ್ಲಿಯೇ ಇದ್ದು, ಜಲಕ್ಕೆ ಸೋಂಕದಂತೆ, ಜಲವನ್ನು ಬೆಳಗುವ, ಬೆಳಗಿಂಗೆ ಬೆಳಗಾಗಿ ಬೆಳಗುವ ಅರಿವಿನ ಮಲ್ಲಯ್ಯನು ಆತ. ಆತನ ಪರಿಚಯ ಮಾಡಿಕೊಂಡ ಮಾಯಮಯವಾದ ಮನವೆಂಬ ಮೃಗಜಲವೇ ಶ್ರೀಗುರುವಾದ!

ಶ್ರೀಗುರು ಚೆನ್ನಬಸವಣ್ಣ ಸಹರೂಪದ ಭಾವ ಶುದ್ಧನಪ್ಪೆ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನ:

ಶ್ರೀಗುರು ಚೆನ್ನಬಸವಣ್ಣನಿಂದಾಗಿ ತನುವನ್ನು ಆವರಿಸಿದ ಮನವೆಂಬ ಮೃಗಜಲ ಜಲದಲ್ಲಿಯೇ ಅಡಗಿ ಜಲವಾಯಿತು. ಗಂಗೆಯನ್ನು ಹಿಡಿದು ಗಂಗೆಯನ್ನೇ ಧಾರಣೆಮಾಡಿಕೊಂಡ ಗಂಗಾಧರನ ದರುಶನವಾಯಿತು. ಭಾವ ಬತ್ತಲೆಯಾಗಿ ನಿರ್ಭಾವವಾಯಿತು. ಮನ ಘನದಲ್ಲಿ ಸಂಗಮವಾಗಿ ಘನಮನವಾಯಿತು!

**539**

**ಜಾತಿ ವಿಜಾತಿಯ ನೀರ್ಗುಡಿಯ ಹೋದರೆ**
**ಸುಡು ಹೋಗೆಂದು ನೂಂಕಿತ್ತೆ ಆ ಜಲವು!**
**ಆ ಜಲದಂತಾಗಬೇಡವೆ ಹಿರಿಯರಾದವರು.**
**ಎನ್ನ ಮನ ವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ**
**ನಿಮ್ಮದೊಂದು ಸಮತಾಬುದ್ಧಿ**
**ಎನ್ನನೆಂದು ಬಂದು ಪೊರ್ದಿಪ್ಪುದೊ ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನ ದೇವರದೇವಾ.**

ಹುಡುಕಲು ಹೋದರೆ ಯಾವ ದೇಹದಲ್ಲಿಯೂ ಜಾತಿ ಇಲ್ಲ; ಮತ ಪಂಗಡ ಧರ್ಮಗಳಿಲ್ಲ. ಭೂಮಿಯ ಮೇಲೆ ವಾಸ ಮಾಡುತ್ತಿರುವ ಸಕಲ ದೇಹಗಳ ಚರ್ಮ ಒಂದೇ; ಅದರ ಸ್ಪರ್ಶ ಒಂದೇ. ರಕ್ತ ಮೂಳೆ ಮಾಂಸ ಮೇದಸ್ಸು ಒಂದೇ. ಕಣ್ಣು ಒಂದೇ ಅದರ ದೃಶ್ಯ ಒಂದೇ. ಕಿವಿ ಒಂದೇ ಅದು ಆಲಿಸುವ ಶಬ್ದ ಒಂದೇ. ಮೂಗು ಒಂದೇ; ಅದು ಮೂಸಿಸುವ ಸುಗಂಧ ದುರ್ಗಂಧ ಒಂದೇ. ನಾಲಿಗೆ ಒಂದೇ; ಅದು ರುಚಿಸುವ ರುಚಿ ಒಂದೇ. ಸೇವಿಸುವ ಜಲ ಒಂದೇ; ಗಾಳಿ ಒಂದೇ; ಉಣ್ಣುವ ಅನ್ನ ಒಂದೇ. ಹೀಗಿದ್ದೂ ದೇಹದಲ್ಲಿ ಹೆಣ್ಣು ಗಂಡು ಎನ್ನುವ ಭೇದ ಹುಟ್ಟಿದೆ. ಜಾತಿ ಮತ ಪಂಥ ಪಂಗಡಗಳು ಹುಟ್ಟಿವೆ. ಹಿಂದು, ಮುಸಲ್ಮಾನ, ಕ್ರೈಸ್ತ, ಸಿಖ್ ಧರ್ಮಗಳು ಹುಟ್ಟಿವೆ.

ತನುವನ್ನು ಆವರಿಸಿದ ಮನ ತನುವನ್ನು ಹಿಡಿದು ಶ್ರೇಷ್ಠ ಕನಿಷ್ಠ ಎಂದು ತನ್ನನ್ನು ತಾನೇ ಸೀಳಿಕೊಂಡಿದೆ. ತನುವಿನಲ್ಲಿಯೇ ತನ್ಮಯವಾದ ಜ್ಞಾನ, ಭೇದ ಮಾಡುವ ಮನಕ್ಕೆ ಪ್ರಶ್ನೆ ಮಾಡುತ್ತದೆ. ನೀನು ಹೀಗೆ ಮಾಡುವುದು ಸರಿಯೇ ಎಂದು ಪಾಠ ಮಾಡುತ್ತದೆ.

ಮನ ತನುವಿನೊಂದಿಗೆ ಬೆರೆತು ಭೇದ ಬುದ್ಧಿಯೊಂದಿಗೆ ಮಾಡುವ ಸಕಲ ಕೆಲಸಕ್ಕೂ ತನುವಿನ ಒಪ್ಪಿಗೆಯಿದೆ; ಪ್ರತಿಭಟನೆಯಿಲ್ಲ. ಅಸಹಕಾರವನ್ನೂ ತೋರಿಸುತ್ತಿಲ್ಲ; ಬದಲಾಗಿ ಸಹಕರಿಸುತ್ತದೆ. ತನು, ಮನಗಳ ತಪ್ಪು ಕೆಲಸಗಳನ್ನು ಜ್ಞಾನ ತನುವಿನಲ್ಲಿಯೇ ದಾಖಲಿಸಿ ಮತ್ತೆ ನೆನಪಿಸಿ

ತನುವನ್ನೆ ಹಿಂಸಿಸುತ್ತದೆ. ತನ್ನದು ಘೋರ ಅಪರಾಧವೆಂದು ತನು ಇರುವವರೆಗೆ ತನು ಶಿಕ್ಷೆ ಅನುಭವಿಸುತ್ತದೆ. ಆದರೂ

ಮನದಿಂದಾಗಿ ತಾನು ಈ ಅಜ್ಞಾನದ ಕೆಲಸ ಮಾಡಿದೆನೆಂದು ತನುವಿಗೆ ಅನ್ನಿಸುವುದೇ ಇಲ್ಲ. ಮನದ ಅಜ್ಞಾನ, ತನುವಿನ ಮುಗ್ಧತೆ, ಜ್ಞಾನದ ಪಾಠ ಇವು ಮೂರೂ ತನುವಿನಲ್ಲಿಯೇ ಕ್ಷಣ ಕ್ಷಣಕ್ಕೂ ಘಟಿಸುತ್ತವೆ. ತನುವನ್ನು ಮನ ಕುರುಕ್ಷೇತ್ರವನ್ನಾಗಿ ಮಾಡಿದರೆ ತನುವಿನಲ್ಲಿಯೇ ಸಂಗಮವಾದ ಜ್ಞಾನ, ತನು ಮತ್ತು ಮನವನ್ನು ಜ್ಞಾನ ಕ್ಷೇತ್ರವನ್ನಾಗಿ ಮಾಡಲು ಪ್ರಯತ್ನಿಸುತ್ತದೆ. ತನ್ನಂತೆ ಮಹಾಜ್ಞಾನಿಯನ್ನಾಗಿ ಮಾಡಿಕೊಳ್ಳಲು ಹಗಲಿರುಳೆನ್ನದೆ ಪ್ರಯತ್ನಿಸುತ್ತದೆ.

ತನು, ಮತ್ತೊಂದು ತನುವನ್ನು ಹಿಂಬಾಲಿಸುವ ಅವಶ್ಯಕತೆಯಿಲ್ಲ. ಒಂದು ತನು ಮತ್ತೊಂದು ತನುವಿಗೆ ಏನನ್ನೂ ಕಲಿಸಲು ಸಾಧ್ಯವಿಲ್ಲ. ಜ್ಞಾನವೂ ತನುವಿನಲ್ಲಿಯೇ ಇದೆ; ಅಜ್ಞಾನವೂ ತನುವಿನಲ್ಲಿಯೇ ಇದೆ. ಜ್ಞಾನ ಅಜ್ಞಾನಕ್ಕೆ ತನು ಉಪಕರಣವಾಗಿದೆ. ಜ್ಞಾನವನ್ನು ಬಳಕೆ ಮಾಡಿದರೆ ಸದಾ ಪರಮ ಸುಖ. ಜಲವೊಂದೇ ಶೌಚಾಚಮನಕ್ಕೆ ಎಂದು ತನು ಬಹಿರಂಗವಾಗಿಯೇ ಘೋಷಿಸುತ್ತದೆ. ನೆಲವೊಂದೇ ಹೊಲೆಗೇರಿ ಶಿವಾಲಯಕ್ಕೆ ಎಂದು ಕುಣಿಕುಣಿದಾಡುತ್ತದೆ.

ಜಲ ಒಂದೇ ಆದರೂ ಅಜ್ಞಾನದಿಂದಾಗಿ ಊರೊಳಗೆ ಒಂದು ಬಾವಿ, ಊರ ಹೊರಗೆ ಒಂದು ಬಾವಿಯಾಯಿತು. ಜಲ ಒಂದೇ ಬಾವಿಗಳು ಎರಡು! ಹೊಲೆಗೇರಿಗೂ ಶಿವಾಲಯಕ್ಕೂ ನೆಲವೊಂದೇ ಆದರೂ ಅಜ್ಞಾನ ಕೇಳಬೇಕಲ್ಲ!

ಜಲಬಿಂದುವಿನಿಂದಲೇ ಹುಟ್ಟಿದ ತನು, ನೀರಡಿಸಿ ಜಲ ಕುಡಿಯಲು ಹೋದರೆ, ಆ ಜಲ, ನೀನು ನನ್ನ ಜಾತಿಯವನಲ್ಲವೆಂದು ನೂಕುವುದಿಲ್ಲ. ಆ ಜಲದಂತಾಗಬೇಡವೆ ಹಿರಿಯರಾದವರು.

ಮರದಲ್ಲಿದ್ದ ಶಕ್ತಿಯನ್ನು ಮರವೇ ಬಳಸಿಕೊಂಡು ಹೂ ಅರಳಿ ನಳ ನಳಿಸುತ್ತದೆ. ಕಾಯಿಯನ್ನಾಗಿಸಿ ಹಣ್ಣನ್ನಾಗಿಸಿ ಬೀಜದಲ್ಲಿ ಮರದ ಸಕಲ ಗುಣಗಳನ್ನೂ ತುಂಬುತ್ತದೆ. ಹೂ ಕಾಯಿ ಹಣ್ಣು ಮಾಡಲು ಮರ ಮತ್ತೊಂದು ಮರದ ಸಹಾಯ ಪಡೆಯಲಿಲ್ಲ! ಅದು ಭಗವದ್ಗೀತೆ ಕುರಾನ್ ಬೈಬಲ್‌ಗಳನ್ನು ಪಠಿಸಲಿಲ್ಲ. ಪ್ರಾರ್ಥಿಸಲಿಲ್ಲ; ಧ್ಯಾನಿಸಲಿಲ್ಲ. ಮರ ಮತ್ತೊಂದು ಮರದೊಂದಿಗೆ ಯುದ್ಧ ಮಾಡಲಿಲ್ಲ! ಮರದಲ್ಲಿಯೇ ಇದ್ದ ಶಕ್ತಿಯನ್ನು ಮರ ಬಳಸಿಕೊಂಡಿತು.

ತನುವಿನಲ್ಲಿಯೇ ಇದ್ದ ಜ್ಞಾನ ಶಕ್ತಿಯನ್ನು ತನು ಮತ್ತು ಮನ ಬಳಸಿಕೊಂಡರೆ ಸಾಕು ತನಗೆ ತಾನೇ ತನುವನ್ನು ಆವರಿಸಿಕೊಂಡ ಭ್ರಮೆ ಕಳಚಿ ಬೀಳುತ್ತದೆ. ತನುವಿನಲ್ಲಿಯೇ ತನ್ಮಯವಾದ ಬ್ರಹ್ಮಕಮಲ ತನಗೆ ತಾನೇ ಅರಳಿ ನಿಲ್ಲುತ್ತದೆ. ತನುವಿನಲ್ಲಿಯೇ ಇದ್ದ ತನುವಿನ ಸಮತಾಗುಣ ತನುವನ್ನು ಹೊದ್ದು ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**540**

**ಜಾಗ್ರ ಸ್ವಪ್ನ ಸುಷುಪ್ತಿ ತುರೀಯದೊಳು ಲೇಸಾಗಿ**
**ತನ್ನ ತಾಮಸವ ಹರಹಿತಯ್ಯಾ.**
**ಒಂದನರಿಯಲ್ಕೆ ಆ ಮೂರು ನಾಶವೈ.**
**ಮಾಯೆಯ ಗೆಲು ಬಳಿಕ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಾಗ್ರ ಸ್ವಪ್ನ ಸುಷುಪ್ತಿ ತುರೀಯ ಎನ್ನುವ ಶಬ್ದಗಳ ಪರಿಚಯ ಸಕಲರಿಗೂ ಇದೆ; ಅದರ ಅರ್ಥವೂ ಗೊತ್ತಿದೆ. ಆದರೂ ತನುವನ್ನು ಆವರಿಸಿದ ತಾಮಸ ಗುಣ ಹರಿದುಕೊಳ್ಳಲು ತನುವಿಗೆ

ಗೊತ್ತಾಗುತ್ತಿಲ್ಲ. ಸಾತ್ವಿಕ ರಾಜಸ ಗುಣಗಳಿಂದ ತನು ವಿಲವಿಲನೆ ಒದ್ದಾಡುತ್ತಲಿದೆ.

ನಾಲ್ಕರಲ್ಲಿ ಯಾವುದಾದರೂ ಒಂದು ತನುವಿನ ಅನುಭವಕ್ಕೆ ಬಂದರೆ ಸಾಕು ತನುವನ್ನು ಕಾಡುವ ಮೂರೂ ನಾಶವಾಗುತ್ತವೆ. ಸುಟ್ಟು ಭಸ್ಮವಾಗುತ್ತವೆ. ತನು ಜಾಗ್ರದಲ್ಲಿದ್ದರೂ ಜಾಗ್ರದ ಅವಸ್ಥೆ ತನುವಿನ ಅನುಭವಕ್ಕೆ ಬರುತ್ತಿಲ್ಲ. ಕತ್ತಲು ನುಂಗಿ ಸೂರ್ಯ ಬೆಳಗಿದಂತೆ; ಪುನಃ ಬೆಳಗುವ ಸೂರ್ಯನನ್ನು ನುಂಗಿ ಕತ್ತಲು ಆವರಿಸಿದಂತೆ!

ಬೆಳಕು ಎನ್ನಲು ಹೋದರೆ ಅದು ಬೆಳಕಲ್ಲ. ಬೆಳಗಲ್ಪಡುವ ವಸ್ತುಗಳೆಲ್ಲ ತನುವನ್ನು ಕತ್ತಲಿನಂತೆ ಕಾಡುತ್ತವೆ. ವಸ್ತುವನ್ನು ಸೂರ್ಯ ಬೆಳಗಿದರೇನಂತೆ ನೋಡುವ ಕಣ್ಣನ್ನು ಅಜ್ಞಾನದ ಕತ್ತಲೆ ಆವರಿಸಿದೆ. ತನ್ನಂತೆಯೇ ಇರುವ ತನುವನ್ನು ನೋಡಿದ ಕಣ್ಣುಗಳಲ್ಲಿ ಕಾಮ ಹುಟ್ಟಿ ತನುವನ್ನು ಉದ್ರೇಕಗೊಳಿಸುತ್ತದೆ. ದ್ವೇಷ ಅಸೂಯೆಗಳಿಂದ ಕಿಡಿಕಾರುತ್ತದೆ. ತನುವನ್ನು ತನುವಿನಂತೆ ತನುವಿಗೆ ನೋಡಲು ಬರುತ್ತಿಲ್ಲವೆಂದರೆ ಅದು ಜಾಗ್ರದಲ್ಲಿದೆಯೆಂದು ಹೇಳಲು ಸಾಧ್ಯವೆ?

ಸೂರ್ಯ ಸಕಲ ವಸ್ತುಗಳ ಮೇಲೆ ಬೆಳಕು ಚೆಲ್ಲಿ ಬೆಳಗಿದರೂ ಕೂಡಾ ಕಣ್ಣಲ್ಲಿರುವ ಕತ್ತಲನ್ನು ಬೆಳಗಲು ಸೂರ್ಯನಿಗೆ ಸಾಧ್ಯವಾಗುವುದಿಲ್ಲ. ಕಣ್ಣಲ್ಲಿಯೇ ಇರುವ ಮುಕ್ಕಣ್ಣನ ಕಣ್ಣು ಮಾತ್ರ ಕಣ್ಣಿನ ಕತ್ತಲನ್ನು ಕಳೆದು ಬೆಳಗಲು ಸಾಧ್ಯ.

ಮುಕ್ಕಣ್ಣನ ಕಣ್ಣು ಕಣ್ಣಲ್ಲಿಯೇ ಇದೆ. ಕಣ್ಣನ್ನು ಆವರಿಸಿಕೊಂಡ ಮನವೆಂಬ ಅಜ್ಞಾನದ ಕಣ್ಣು ಕೂಡಾ ಕಣ್ಣಲ್ಲಿಯೇ ಇದೆ. ಮನವೆಂಬ ಅಜ್ಞಾನದ ಕಣ್ಣಿಗೆ ಮುಕ್ಕಣ್ಣನ ಅರಿವಿನ ಕಣ್ಣು ಪರಿಚಯವಾದರೆ ಸಾಕು ತಾಮಸದ ಕಣ್ಣು ನಾಶವಾಗುತ್ತದೆ. ಕಣ್ಣನ್ನು ಆವರಿಸಿದ ಕಾಮ, ಮುಕ್ಕಣ್ಣನ ಕಿಡಿಗಣ್ಣಿಗೆ ಗುರಿಯಾಗಿ ಸುಟ್ಟು ಭಸ್ಮವಾಗುತ್ತದೆ. ಹೆಣ್ಣು ಗಂಡು ಎಂಬ ಅಜ್ಞಾನ ಇಲ್ಲವಾಗುತ್ತದೆ.

ಒಂದನು ಅರಿಯಲು ಹೋದರೆ, ಅರಿತರಿತು ಅನುಭವಿಸಿ ಸ್ವಾನುಭಾವಕ್ಕೆ ತೆಗೆದುಕೊಂಡರೆ ಸಾಕು ಮೂರೂ ನಾಶವಾಗುತ್ತವೆ. ಜಾಗ್ರ ಸ್ವಪ್ನ ಸುಷುಪ್ತಿಗಳು ಇಲ್ಲವಾಗುತ್ತವೆ. ತುರೀಯದೊಳು ಲೇಸಾಗಿ ಪರಮಾನಂದ ಹೊಂದುತ್ತಾನೆ. ಮಾಯೆಯನ್ನು ಗೆದ್ದ ಕಪಿಲಸಿದ್ಧ ಮಲ್ಲಯ್ಯನೇ ತಾನಾಗುತ್ತಾನೆ.

**541**

**ಜ್ಞಾನಕ್ರಿಯಾದಿಗಳಿಂದ ಲಿಂಗದಲ್ಲಿ ನಿಬ್ಬೆರಗಾದ ನೀಲಮ್ಮನ**
**ಪಾದದ ಕಂದ ನಾನು, ಪಾದದ ದಾಸ ನಾನು,**
**ಪಾದದ ಪಾದುಕೆ ನಾನು, ಪಾದುಕೆಯ ಧೂಳಿ ನಾನು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಿದ್ಧರಾಮ ಶಿವಯೋಗಿಗಳು ನೀಲಮ್ಮ ತಾಯಿಯವರ ಜ್ಞಾನಕ್ಕೆ ನಿಬ್ಬೆರಗಾಗಿ ಅವರ ಪಾದದ ಕಂದ ನಾನು ಎಂದು ಹಾಡಿದ್ದಾರೆ. ಅವರ ಶ್ರೀ ಪಾದದ ದಾಸಾನುದಾಸ ನಾನು; ಅವರ ಪಾದದ ಪಾದುಕೆ ನಾನು; ಆ ತಾಯಿ ಪಾದುಕೆಯ ಧೂಳಿ ನಾನು ಎಂದು ಹಾಡಿದ್ದಾರೆ.

ನೀಲಮ್ಮ ತಾಯಿಯವರು ಮಹಾಜ್ಞಾನಿ. ''ಸತಿ ಎನ್ನಬಹುದೆ ಬಸವನು ಎನಗೆ? ಪತಿ ಎನ್ನಬಹುದೆ ಬಸವನನು ನಾನು? ಆನು ಬಸವನಿಗೆ ಶಿಶುವಾದೆ; ಬಸವನು ಎನಗೆ ಶಿಶುವಾದ''. ಇದು ಸತಿ ಪತಿಗಳ ಹಿತವಾದ ಭಕ್ತಿ. ಸತಿ ಪತಿಗಳಿಬ್ಬರೂ ಕೂಡಿ ಪರಮಪಿತಾ ಪರಮೇಶ್ವರನೆಂಬ ಪತಿಯನ್ನು ಹುಡುಕಿದರು.

ಸತಿ ಎಂಬ ನೀಲಮ್ಮಳ ದೇಹದಲ್ಲಿ ಅರಿವೆಂಬ ಪತಿ ಇದ್ದಾನೆ. ಪತಿ ಎಂಬ ಬಸವಣ್ಣನ ದೇಹದಲ್ಲಿಯೂ ಅರಿವೆಂಬ ಪತಿಯಿದ್ದಾನೆ. ಅರಿವಿನ ಪತಿಯನ್ನು ಹುಡುಕುವುದಕ್ಕಾಗಿ ಸತಿ ಪತಿಗಳಾದರು. ಹಗಲಿರುಳೆನ್ನದೆ ಅವರವರ ಅಂಗಗಳಲ್ಲಿಯೇ ಅರಿವಿನ ಲಿಂಗಯ್ಯನನ್ನು ಹುಡುಕಿದರು. ಲಿಂಗಯ್ಯ ಅವರಿಬ್ಬರಿಗೂ ಅವರವರ ಅಂಗಗಳಲ್ಲಿಯೇ ಸಿಕ್ಕ. ಆ ಲಿಂಗಯ್ಯನಿಗೆ ಸತಿ ಪತಿಗಳಿಬ್ಬರೂ ಶಿಶುಗಳಾದರು.

ಅದ್ಭುತವಾದ ಜ್ಞಾನ ಪ್ರತಿಪಾದನೆ ಮಾಡಿದ ಕೀರ್ತಿ ನೀಲಮ್ಮ ತಾಯಿಗೆ ಮಾತ್ರ ಸಲ್ಲುತ್ತದೆ. ಅಂತಹ ತಂದೆ ತಾಯಿಯವರೊಡಗೂಡಿ ಆಡಿದ ಶಿಶುವೇ ಸಿದ್ಧರಾಮ ಶಿವಯೋಗಿ. ಹೀಗಾಗಿ ಅವರ ಮಹಾಜ್ಞಾನಕ್ಕೆ ನಿಬ್ಬೆರಗಾಗಿ ಅವರ ಪಾದದ ಕಂದ ನಾನು, ಅವರ ಪಾದದ ದಾಸ ನಾನು, ಅವರ ಪಾದದ ಪಾದುಕೆ ನಾನು, ಆ ತಾಯಿಯ ಪಾದುಕೆಯ ಧೂಳಿ ನಾನು ಎಂದು ಅರಿವೆಂಬ ಗುರುದೇವನಾದ ಕಪಿಲಸಿದ್ಧ ಮಲ್ಲಿಕಾರ್ಜುನನ್ನು ಸಾಕ್ಷಿಯನ್ನಾಗಿಸಿಕೊಂಡು ನುಡಿದಿದ್ದಾರೆ.

**542**

**ಜ್ಞಾನ ಜ್ಞಾನವೆಂದು ಕೇಳಿದೆವಯ್ಯಾ ಗುರುಹಿರಿಯರಿಂದ.**
**ಕೇಳಿದಲ್ಲಿ ಅಂಗವಾಗಲಿಲ್ಲ, ಕೇಳದೆ ಬಿಟ್ಟಲ್ಲಿ ಅಂಗವಾಯಿತ್ತು.**
**ಇದೇನು ಕೌತುಕ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರುಹಿರಿಯರಿಂದ ಕೇಳಿದ ಜ್ಞಾನ ಜ್ಞಾನವಲ್ಲ. ವೇದ ಆಗಮ ಉಪನಿಷತ್ತುಗಳ ಮೂಲಕ ಓದಿದ ಜ್ಞಾನ ಜ್ಞಾನವಲ್ಲ. ಭಗವದ್ಗೀತೆ ಬೈಬಲ್ ಕುರಾನ್ ಮೂಲಕ ಓದಿದ ಜ್ಞಾನವೂ ಜ್ಞಾನವಲ್ಲ. ಜ್ಞಾನವೆನ್ನುವುದು ಹೊರಗಿನಿಂದ ಬರುವ ವಸ್ತುವಲ್ಲ. ಅದು ಸಂಪಾದನೆ ಮಾಡುವ ವಸ್ತು ಕೂಡಾ ಅಲ್ಲ. ಹೀಗಾಗಿ ಓದಿದವನು ಪಂಡಿತನಾದ ಶಾಸ್ತ್ರಿಯಾದ; ಕೇಳಿದವನು ತಾರ್ಕಿಕನಾದ; ಜ್ಞಾನಿಯಾಗಲೇ ಇಲ್ಲ. ಕೇಳಿದ ಓದಿದ ಅಂಗ ವೇಷ ಹೊತ್ತು ಗುರುವಾಯಿತು. ಪಂಡಿತನಾಯಿತು, ಶಾಸ್ತ್ರಿಯಾಯಿತು; ತಾನು ಅಂಗವೆನ್ನುವುದನ್ನೇ ಮರೆತು ಹೋಯಿತು.

ಅಂಗವೆಂದರೆ ಸಾಮಾನ್ಯವಲ್ಲ; ಅದು ಅರಿವಿನ ಲಿಂಗ. ಈ ಲಿಂಗಾಂಗದಿಂದಲೇ ಸಕಲ ವೇದ ಆಗಮ ಉಪನಿಷತ್ತು ಭಗವದ್ಗೀತೆ ಬೈಬಲ್ ಕುರಾನ್‌ಗಳು ಜನ್ಮತಳೆದಿವೆ.

ಅಂಗದಿಂದ ಹುಟ್ಟಿದ ಪುಸ್ತಕಗಳು ಪುನಃ ಅಂಗಕ್ಕೆ ಬೋಧಿಸಲು ಸಾಧ್ಯವೇ? ಅಂಗದಲ್ಲಿ ಅರಿವೆಂಬ ಲಿಂಗಯ್ಯನೇ ವಾಸ ಮಾಡಿರುವಾಗ ಅಂತಹ ಅಂಗಕ್ಕೆ ಪುನಃ ಗುರುವಾಗಿ ಹಿರಿಯನಾಗಿ ಬೋಧಿಸುವುದೆಂದರೇನು? ಅಂಗವನ್ನು ಆವರಿಸಿದ ಮನಕ್ಕೆ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಇರುವಿಕೆ ಮರುವು ಆಗಿರುವುದರಿಂದ ಅಂಗ ಅಂಗವನ್ನೇ ಗುರುವನ್ನಾಗಿ ಮಾಡಿಕೊಂಡಿದೆ; ಹಿರಿಯನನ್ನಾಗಿ ಮಾಡಿಕೊಂಡಿದೆ.

ಗುರುದೇವನಿದ್ದ ಅಂಗಕ್ಕೆ ಅಂಗವೇ ಬೋಧಿಸುವುದೆಂದರೆ, ಬೋಧಿಸುವ ಅಂಗವೂ ಬೋಧೆಗೆ ಒಳಗಾದ ಅಂಗವು ಮರೆವಿಗೆ ಒಳಗಾಗಿವೆ. ಹೀಗಾಗಿ ಲಿಂಗಯ್ಯನಿದ್ದ ಅಂಗ ಅಂಗವಾಗಲಿಲ್ಲ.

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಯ್ಯನ ಬೋಧೆ ಅಂಗವನ್ನು ಆವರಿಸಿದ ಮನ ಆಲಿಸಿದಾಗ ಅಂಗ ಅಂಗವಾಯಿತು. ಹೀಗಾಗಿ ಗುರುಹಿರಿಯರಿಂದ ಜ್ಞಾನ ಜ್ಞಾನವೆಂದು ಕೇಳಿದಲ್ಲಿ ಅಂಗವಾಗಲಿಲ್ಲ. ಗುರುಹಿರಿಯರಿಂದ ಕೇಳದೆ ಬಿಟ್ಟು ಅಂಗದಲ್ಲಿಯೇ ಸಂಗಮವಾದ

ಅರಿವೆಂಬ ಗುರುದೇವನ ಉಪದೇಶ ಆಲಿಸಿದಲ್ಲಿ ಅಂಗವಾಯಿತು. ಮಹಾಜ್ಞಾನವೆಂಬ ಲಿಂಗವೇ ತಾನಾಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**543**

**ಜ್ಞಾನವೆ ಕಾರಣವಾಯಿತ್ತು ಭಕ್ತಿಯ ವ್ಯಕ್ತಿಗೆ.**
**ನಿಷ್ಕಾಭಾವವೆ ಕಾರಣವಾಯಿತ್ತು ನಿಮ್ಮ ಒಲುಮೆಗೆ,**
**ನಿಮ್ಮ ಸಮರಸಕ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ದಾಸವರೇಣ್ಯರು ಭಕ್ತಿ ಮಾಡಿದರು. ಬಸವಾದಿ ಶರಣರು ಭಕ್ತಿ ಮಾಡಿದರು. ವ್ಯಕ್ತಿಗೆ ಭಕ್ತಿ ಮಾಡುವ ವ್ಯಕ್ತಿಯನ್ನು ವ್ಯಕ್ತಿಗಳು ಹೊಗಳುವುದೂ ಉಂಟು; ತೆಗಳುವುದು ಕೂಡಾ ಉಂಟು.

ಭಕ್ತಿ ಮಾಡುವುದು ನಾಟಕೀಯವಲ್ಲ; ಪರಿಪೂರ್ಣವಾಗಿ ತನ್ನನ್ನು ತಾನು ತಿಳಿದುಕೊಂಡ ವ್ಯಕ್ತಿ ಮಾತ್ರ ಭಕ್ತಿ ಮಾಡುತ್ತಾನೆ. ಆಲಯಗಳಲ್ಲಿರುವ ದೇವರುಗಳಿಗೆ ಭಕ್ತಿ ಮಾಡುವಾತ ಭಕ್ತನಲ್ಲ. ತನುವಿನಲ್ಲಿಯೇ ತನ್ಮಯವಾದ ಅವ್ಯಕ್ತ ಜ್ಞಾನಕ್ಕೆ ಭಕ್ತಿ ಮಾಡುವಾತ ಭಕ್ತ.

ವ್ಯಕ್ತಿ ವ್ಯಕ್ತಿಗೆ ಭಕ್ತಿ ಮಾಡುವುದಕ್ಕೆ ಜ್ಞಾನವೇ ಕಾರಣವಾಯಿತ್ತು. ಜ್ಞಾನವೆಂದರೆ ತನುವಿನಲ್ಲಿರುವ ಒಂದು ವಸ್ತುವಲ್ಲ. ಸಕಲ ತನುಗಳಲ್ಲಿಯೂ ತನ್ಮಯವಾದ ಅವ್ಯಕ್ತ ವ್ಯಕ್ತಿ. ಜ್ಞಾನವೆಂಬ ಅವ್ಯಕ್ತ ವ್ಯಕ್ತಿಗೆ ಭಕ್ತಿ ಮಾಡುವಾತ ಕೂಡಾ ವ್ಯಕ್ತಿಯಲ್ಲ. ಸಕಲ ತನುಗಳನ್ನು ಆವರಿಸಿದ ಮನವೆಂಬ ಅವ್ಯಕ್ತ ವ್ಯಕ್ತಿಯೇ ಭಕ್ತ.

ಭಕ್ತಿ ಮಾಡುವ ವ್ಯಕ್ತಿಯೂ ಅವ್ಯಕ್ತ ; ತನುವಿನಲ್ಲಿ ತನ್ಮಯವಾದ ಜ್ಞಾನಿಯೂ ಅವ್ಯಕ್ತ. ಭಕ್ತ ಮತ್ತು ಜ್ಞಾನಿ ತನುವಿನಲ್ಲಿಯೇ ಸಂಗಮವಾಗಿದ್ದಾರೆ. ಜ್ಞಾನಿಗೆ ಭಕ್ತ ಭಕ್ತಿ ಮಾಡುತ್ತಾನೆ.

ಮಹಾಜ್ಞಾನಿಗೆ ಭಕ್ತ ಭಕ್ತಿ ಮಾಡಲು, ಜ್ಞಾನಿಯ ಮೇಲೆ ಇರುವ ಭಕ್ತನ ನಿಷ್ಕಾಭಾವವೆ ಭಕ್ತಿಗೆ ಕಾರಣವಾಯಿತ್ತು. ಜ್ಞಾನಿಯ ಒಲುಮೆಯೇ, ಆತನ ಸಮರಸಭಾವವೇ ಭಕ್ತನು ಭಕ್ತಿ ಮಾಡಲು ಕಾರಣವಾಯಿತ್ತು.

ಜ್ಞಾನಿ ಎಂದರೆ ದೇವರು; ಭಕ್ತನಿಗೆ ಮಾತ್ರ ಕಂಡುಬರುವ ದೇವರು. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಜ್ಞಾನಿಯನ್ನು ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಹೆಸರಿಟ್ಟು ಕರೆದಿದ್ದಾರೆ.

ಶರಣರ ಈ ಸೂತ್ರ ದೇವಾಲಯಗಳಿಗೆ ಹೋಗಿ ಭಕ್ತಿ ಮಾಡುವ ಭಕ್ತರಿಗೆ, ಪ್ರಾರ್ಥನಾ ಮಂದಿರಗಳಿಗೆ ಹೋಗಿ ಪ್ರಾರ್ಥಿಸುವ ಭಕ್ತರಿಗೆ ತಿಳಿಯುವುದಿಲ್ಲ.

**544**

**ಜ್ಞಾನಿಗಳಾದ ಬಳಿಕ ಪರಿಪೂರ್ಣ ಜಗತ್ತೆಂದರಿಯಬೇಕು.**
**ಜ್ಞಾನಿಗಳಾದ ಬಳಿಕ ಪಾಪವಾಸನೆ ತೊರೆದಿರಬೇಕು.**
**ಜ್ಞಾನಿಗಳಾದ ಬಳಿಕ ಅನ್ಯರ ನುಡಿಗೆ ಒಳಗಾಗಬಾರದು,**
**ಜ್ಞಾನಿಗಳಾದ ಬಳಿಕ ಅನ್ಯರ ನಿಂದೆಗೆ ಒಳಗಾಗಬಾರದು.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜ್ಞಾನಿಯೆಂದರೆ ವೇದ ಆಗಮ ಉಪನಿಷತ್‌ಗಳನ್ನು, ಬೈಬಲ್ ಭಗವದ್ಗೀತೆ ಕುರಾನ್‌ಗಳನ್ನು

ಓದಿಕೊಂಡವನಲ್ಲ. ಅದರಲ್ಲಿಯ ಸಕಲ ನೈಪುಣ್ಯತೆಗಳನ್ನು ಪಡೆದುಕೊಂಡವನು ಜ್ಞಾನಿಯಲ್ಲ. ತನ್ನದೇ ಆದ ಪರಿಪೂರ್ಣ ಜ್ಞಾನವನ್ನು ತಾನೇ ಪಡೆದುಕೊಂಡವನು. ಆ ಮಹಾಜ್ಞಾನವೇ ತಾನಾದವನು ಜ್ಞಾನಿ.

ಜಗದ ಸಕಲ ಜೀವಿಗಳಲ್ಲಿಯೂ ಪರಿಪೂರ್ಣ ಸತ್ಯ ಅಡಗಿರುವುದನ್ನು ಕಂಡುಕೊಂಡವನು. ಜಗದ ಸಕಲ ತನುಗಳಲ್ಲಿ ತನ್ಮಯವಾದ ಜ್ಞಾನಶಕ್ತಿಗೆ ಶರಣು ಹೋದವನು. ಸ್ಪರ್ಶ ವಾಸನೆ ಶಬ್ದ ರುಚಿ ದೃಶ್ಯಕ್ಕೆ ಮರುಳಾಗದವನು. ಅವುಗಳ ಸತ್ಯವನ್ನು ಅರಿತು ಆ ಸತ್ಯವೇ ತಾನಾದವನು.

ಪಾಪ ಪುಣ್ಯ ಎಂಬ ಭ್ರಮೆಗೆ ಒಳಗಾಗದವನು. ಸಕಲ ತನುಗಳಲ್ಲಿ ಜಾತಿ ಮತ ಪಂಥ ಧರ್ಮ ಹೆಣ್ಣು ಗಂಡುಗಳನ್ನು ಹುಡುಕದವನು. ತನುವನ್ನು ತನ್ನಂತೆಯೇ ಇರುವ ತನುವೆಂದು ನೋಡುವವನು ಜ್ಞಾನಿ.

ಹೊಗಳಿಕೆ ತೆಗಳಿಕೆಗಳಿಗೆ ಕುಗ್ಗದವನು ಜ್ಞಾನಿ. ಯಾರನ್ನೂ ಬಯ್ಯದವನು, ಯಾರ ಬೈಗಳಿಗೂ ನಿಂದೆಗಳಿಗೂ ಒಳಗಾಗದವನು. ಸಕಲ ಶಬ್ದಗಳನ್ನು ಅರಿವಿನ ಮೂಲಕ ಕೇಳಿ, ನಿಃಶಬ್ದಗೊಳಿಸಿ ಪ್ರಸಾದದಂತೆ ಸ್ವೀಕರಿಸುವವನು.

ಶಬ್ದದಲ್ಲಿ ಸು-ಶಬ್ದ, ಕು-ಶಬ್ದ ಎಂಬುದಿಲ್ಲ. ಹಾಗೆಂದು ತನಗೆ ಗೊತ್ತಿದ್ದರೂ ಕೂಡಾ ಅದನ್ನು ಕ್ಷಣಾರ್ಧದಲ್ಲಿಯೇ ಮರೆಯುತ್ತಾನೆ. ಶಬ್ದದ ಮೂಲಕ ನಿಂದಿಸುತ್ತಾನೆ; ಅದೇ ಶಬ್ದದ ಮೂಲಕ ಹೊಗಳುತ್ತಾನೆ. ಹೊಗಳುವಾಗ ತೆಗಳುವಾಗ ತನು ರಸಾಯನಿಕ ಕ್ರಿಯೆಗಳಿಗೆ ತುತ್ತಾಗುತ್ತದೆ. ತನುವಿಗೆ ಸುಖ ಮತ್ತು ದುಃಖದ ಗಾಯಗಳಾಗುತ್ತವೆ. ಆ ಗಾಯಗಳು ತನು ಇರುವವರೆಗೆ ತನುವನ್ನು ಬಾಧಿಸುತ್ತವೆ.

ನುಡಿದ ತನುವನ್ನು; ಕೇಳಿದ ತನುವನ್ನು ಶಬ್ದ ಆಯುಧದಂತೆ ಗಾಯ ಮಾಡುತ್ತಾ ಎರಡು ತನುಗಳಲ್ಲಿಯೂ ಶಬ್ದ ಉಳಿದು ತನು ಇರುವವರೆಗೆ ತನುಗಳನ್ನು ಸಂಕಟಕ್ಕೆ ಈಡುಮಾಡುತ್ತದೆ.

ಉದಾ: ಅವನು ನನ್ನನ್ನು 'ಕತ್ತೆ' ಎಂದು ಬೈದನು ಎಂದು ನೆನಪಾದಾಗೊಮ್ಮೆ ಶಬ್ದ ಕೇಳಿದ ತನು ದುಃಖಕ್ಕೆ ಒಳಗಾಗುತ್ತದೆ; ದ್ವೇಷದಿಂದ ಸೇಡು ತೀರಿಸಿಕೊಳ್ಳುವುದಕ್ಕಾಗಿ ಕತಕತನೆ ಕುದಿಯುತ್ತದೆ. ತನು ಇರುವವರೆಗೆ ಈ ಬಾಧೆ ತನುವಿಗೆ ತಪ್ಪಿದ್ದಲ್ಲ.

'ಕತ್ತೆ' ಎಂದು ನುಡಿದ ತನು ತಾನು ಹಾಗೆ ನುಡಿಯಬಾರದಾಗಿತ್ತು ಎಂದು ಪಶ್ಚಾತ್ತಾಪ ಪಡುತ್ತದೆ. ನೆನಪಾದಗೊಮ್ಮೆ ದುಃಖಕ್ಕೆ ಒಳಗಾಗುತ್ತದೆ. ತನು ಇರುವವರೆಗೂ ಹೀಗೆ ಮುಂದುವರೆಯುತ್ತದೆ.

ತನುವಿನಿಂದ ಹೊರಬಂದ ಶಬ್ದವನ್ನು ನುಡಿದ ತನು, ಕೇಳಿದ ತನುಗಳೆರಡೂ ಅರಿವಿನಿಂದ ನುಡಿಯಲಿಲ್ಲ, ಕೇಳಲಿಲ್ಲ; ತನುವಿನ ಜ್ಞಾನ ತನುವಿಗೆ ಬಳಕೆಯಾಗಲಿಲ್ಲ.

ತನುವಿನಿಂದ ಹೊರಬರುವ ಶಬ್ದ ತನುಗಳನ್ನೇ ವಿಧಿಯಾಗಿ ಕಾಡುತ್ತವೆ; ಸುಖ ದುಃಖಗಳಿಗೆ ಈಡು ಮಾಡುತ್ತವೆ.

'ಕತ್ತೆ' ಎನ್ನುವ ಶಬ್ದ ಒಂದು ಪ್ರಾಣಿಗೆ ಕರೆಯುವುದಕ್ಕಾಗಿ ಇಟ್ಟ ಹೆಸರು. ಅದು ಕತ್ತೆಯಲ್ಲ; ಅಂದ ಮೇಲೆ ತಾನು ಕತ್ತೆ ಹೇಗೆ ಎಂದು ಕೇಳುವ ಶಕ್ತಿ ತನುವಿನಲ್ಲಿ ಕಳೆದು ಹೋಗುತ್ತದೆ. ಹಾಗೆ ನುಡಿಯಬಾರದು ಎನ್ನುವ ಅರಿವು ಮರೆವಾಗುತ್ತದೆ. ತನುವಿನ ಅರಿವು ತನುವಿಗೆ ಮರೆವು ಆದುದಕ್ಕಾಗಿ ನುಡಿದ ತನು ಕೇಳಿದ ತನುಗಳೆರಡೂ ಬಾಧೆಗೆ ಒಳಗಾಗುತ್ತವೆ. ಜ್ಞಾನಿ ಮಾತ್ರ ನುಡಿಯಲಾರ; ನಿಂದೆಗೆ ಒಳಗಾಗಲಾರ.

ಜ್ಞಾನಿ ಸಕಲ ಶಬ್ದಗಳನ್ನು ಟಂಕಿಸಿದವನು. ಸಕಲ ಶಬ್ದಗಳಲ್ಲಿ ಅರಿವು ಇದೆ ಎಂದು ಕಂಡುಕೊಂಡವನು. 'ಕತ್ತೆ' ಎಂದು ಲೋಕ ನಿಂದಿಸಿ ನುಡಿದರೆ; ಜ್ಞಾನಿ ಆ ಶಬ್ದವನ್ನು ಅರಿವಿನಿಂದ ಕೇಳುತ್ತಾನೆ. ಹಸನ್ಮುಖಿಯಾಗುತ್ತಾನೆ. ಶಬ್ದ ಜ್ಞಾನಿಯನ್ನು ಸುಡುವುದಿಲ್ಲ. ನಿಂದಿಸುವ ಲೋಕದ ತನುಗಳನ್ನು ಸುಡದೆ ಬಿಡುವುದಿಲ್ಲ.

ನಿಂದಿಸುವವನು ಮೊದಲು ಸುಡುತ್ತಾನೆ. ಕೇಳಿದವನು ನಂತರ ಸುಡುತ್ತಾನೆ. ಇಬ್ಬರೂ ಒಬ್ಬರಿಗೆ ಒಬ್ಬರು ಶಬ್ದದಿಂದ ಸುಟ್ಟುಕೊಳ್ಳುವವರೆ ಆಗಿದ್ದಾರೆ.

ವೇದ ಆಗಮ ಉಪನಿಷತ್ತು ಭಗವದ್ಗೀತೆ ಬೈಬಲ್ ಕುರಾನ್ ಓದಿದವರು ಕೂಡಾ ಇದಕ್ಕೆ ಹೊರತಾಗಿಲ್ಲ. ಶಾಸಕಾಂಗ ನ್ಯಾಯಾಂಗ ಕಾರ್ಯಾಂಗದ ಪಾಲಕರು ಕೂಡಾ ಇದಕ್ಕೆ ಹೊರತಾಗಿಲ್ಲ. ಶಾಲಾ ಕಾಲೇಜು ವಿಶ್ವವಿದ್ಯಾಲಯಗಳ ಶಿಕ್ಷಕರು ಪ್ರಾಧ್ಯಾಪಕರು ಕೂಡಾ ಇದಕ್ಕೆ ಹೊರತಾಗಿಲ್ಲ. ಜಗದ್ಗುರುಗಳು ಪಾದ್ರಿಗಳು ಮೌಲ್ವಿಗಳು ಕೂಡಾ ಇದಕ್ಕೆ ಹೊರತಾಗಿಲ್ಲ. ಜ್ಞಾನಿಗೆ ಮಾತ್ರ ಈ ಅಜ್ಞಾನದ ಸೋಂಕು ತಾಕುವುದಿಲ್ಲ. ಆತ ಪರಿಪೂರ್ಣ! ಪಾಪವಾಸನೆ ತೊರೆದಾತ! ಅನ್ಯರ ನುಡಿಗೆ ಒಳಗಾಗದಾತ! ಅನ್ಯರ ನಿಂದೆಗೆ ಒಳಗಾಗದಾತ!

**545**

**ಜ್ಞಾನಿಗಳು ತಾವಾದ ಬಳಿಕ, ಅನ್ಯರ ಸ್ತೋತ್ರಕ್ಕೆ ಒಳಗಾಗಬಾರದು.**
**ಜ್ಞಾನಿಗಳು ತಾವಾದ ಬಳಿಕ, ಗುರುಹಿರಿಯರಿಗಂಜಿ ನಡೆಯಬೇಕು.**
**ಜ್ಞಾನಿಗಳು ತಾವಾದ ಬಳಿಕ, ಅನ್ಯಸ್ತ್ರೀ ತನ್ನ ಮಾತೆಯಂತಿರಬೇಕು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜ್ಞಾನಿ ಎನ್ನುವವನು ವ್ಯಕ್ತನಲ್ಲ; ಅವ್ಯಕ್ತ. ವ್ಯಕ್ತ ದೇಹವನ್ನು ಮನ ಬಳಕೆ ಮಾಡುತ್ತಿರುವುದರಿಂದಾಗಿ ದೇಹ ಜ್ಞಾನಿ ಅಜ್ಞಾನಿ ಎಂದು ದೇಹದ ಮೂಲಕವೇ ಕರೆಯಿಸಿಕೊಳ್ಳುತ್ತದೆ. ಹಾಗೆ ಗುರುತಿಸಲಾಗುತ್ತದೆ.

ವ್ಯಕ್ತ ದೇಹದಲ್ಲಿ ಜ್ಞಾನಿ ಎಂಬ ಅವ್ಯಕ್ತ ವ್ಯಕ್ತಿ ಇದ್ದಾನೆ. ಹಾಗೆಯೇ ವ್ಯಕ್ತ ದೇಹವನ್ನು ಮನವೆಂಬ ಅವ್ಯಕ್ತ ಆವರಿಸಿದ್ದಾನೆ. ಅವ್ಯಕ್ತ ಮನ ಅವ್ಯಕ್ತ ಜ್ಞಾನಿಯೊಂದಿಗೆ ಸಂಗ ಮಾಡಿದರೆ ದೇಹ ಪರಿಪೂರ್ಣ ಜ್ಞಾನಿಯಾಗುತ್ತದೆ. ಅವ್ಯಕ್ತ ಮನಕ್ಕೆ ಅವ್ಯಕ್ತ ಜ್ಞಾನಿಯೊಂದಿಗೆ ಸಂಗ ಮಾಡುವ ಉತ್ಕಟ ಇಚ್ಛೆಯಾಗಬೇಕು. ಇದು ತನಗೆ ತಾನೇ ಘಟಿಸಬೇಕು.

ಮುತ್ತು ಮಾಡುವ ಬಯಕೆಯನ್ನು ಹೊಂದಿ ಬಾಯಿ ತೆರೆದ ಚಿಪ್ಪಿನಲ್ಲಿ ಸ್ವಾತಿ ಹನಿ ಬಿದ್ದು ಮುತ್ತಾದಂತೆ. ಈ ಘಟನೆ ಕೂಡಾ ತನಗೆ ತಾನೇ ಘಟಿಸುತ್ತದೆ. ಇದನ್ನು ಯಾರೂ ಮಾಡುವುದಿಲ್ಲ. ಹಾಗೆಯೇ ಜ್ಞಾನಿಯನ್ನು ಯಾರೂ ಮಾಡುವುದಿಲ್ಲ. ಚಿಪ್ಪಿನಲ್ಲಿಯೇ ಮುತ್ತು ಮಾಡುವ ಶಕ್ತಿ ಸಂಗಮವಾಗಿದೆ. ಮುತ್ತಾಗುವ ಬಯಕೆ ಉಳ್ಳ ಸ್ವಾತಿ ಹನಿ ಬಾಯಿದೆಗೆದ ಚಿಪ್ಪಿನಲ್ಲಿ ಬೀಳುವುದೊಂದೇ ತಡ ಮುತ್ತಾಗುವ ಕ್ರಿಯೆ ತನಗೆ ತಾನೇ ಚಿಪ್ಪಿನಲ್ಲಿ ನಡೆಯುತ್ತದೆ.

ತನು ಕೂಡಾ ಒಂದು ಚಿಪ್ಪು. ಮಹಾಜ್ಞಾನವನ್ನು ಹೊಂದಿದ ಚಿಪ್ಪು. ಚಿಪ್ಪನ್ನು ಮಹಾಜ್ಞಾನ ಆಕಾಂಕ್ಷಿವುಳ್ಳ ಮನ ಆವರಿಸಿದೆ. ತಾನಿದ್ದ ಜಾಗದಲ್ಲಿಯೇ ಜ್ಞಾನವಿದೆಯೆಂಬು ಮರೆತುಹೋಗಿದೆ. ಹೀಗಾಗಿ ಮನ ತನುವಿನೊಂದಿಗೆ ಜ್ಞಾನಕ್ಕಾಗಿ ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಆಶ್ರಯಿಸಿದೆ.

ಈ ಎಲ್ಲ ಗ್ರಂಥಗಳು ತನುವಿನ ಜ್ಞಾನದಿಂದಲೇ ಬಂದದ್ದು ಎಂದು ಮನ ತಿಳಿಯುತ್ತಿಲ್ಲ. ತಿಳಿಯುವುದಕ್ಕೆ ತಡವಾಗಬಹುದು. ತಿಳಿಯುವುದೊಂದೇ ತಡ ಮನ ಜ್ಞಾನದೊಂದಿಗೆ ಸಂಗಮವಾಗಿ ಜ್ಞಾನಿಯೇ ತಾನಾಗುತ್ತದೆ.

ಜ್ಞಾನಿಯೇ ತಾನಾದ ಬಳಿಕ ತನುವಿನಿಂದ ಬಂದ ಶಬ್ದವನ್ನು ನಿಃಶಬ್ದಗೊಳಿಸಿ ಕೇಳುತ್ತದೆ. ಆಗ ಶಬ್ದ ನಪುಂಸಕವಾಗುತ್ತದೆ. ಅನ್ಯರ ಸ್ತೋತ್ರಕ್ಕೆ ಒಳಗಾಗುವುದಿಲ್ಲ; ಅನ್ಯರ ನಿಂದೆಗೆ ಗುರಿಯಾಗುವುದಿಲ್ಲ. 'ನಿಃಶಬ್ದಂ ಬ್ರಹ್ಮಮುಚ್ಚತೆ' ಶಬ್ದದಲ್ಲಿ ಬ್ರಹ್ಮ ಅಡಗಿದ್ದಾನೆ ಅಂದರೆ ಪ್ರತಿ ಶಬ್ದದಲ್ಲಿಯೂ ಅರಿವು ಇದೆ. ಶಬ್ದವನ್ನು ಮನ ತನುವಿನೊಂದಿಗೆ ತನ್ನ ಮೂಗಿನ ನೇರಕ್ಕೆ ಕೇಳುತ್ತದೆ. ಹೀಗಾಗಿ ಶಬ್ದದಿಂದ ತನುವಿನಲ್ಲಿ ಸುಖ ಮತ್ತು ದುಃಖಗಳ ರಸಾಯನ ಕ್ರಿಯೆ ಉಂಟಾಗುತ್ತದೆ.

ಕೈಕೇಯಿಯ ಎರಡು ಶಬ್ದಗಳು ರಾಮನನ್ನು ಕಾಡಿಗೆ ಅಟ್ಟಿದವು. ಸುಖಕ್ಕಾಗಿ ನುಡಿದ ಆ ಎರಡು ಶಬ್ದಗಳು ಕೈಕೇಯಿಯನ್ನು ದುಃಖದ ಮಡುವಿನಲ್ಲಿ ತಳ್ಳಿದವು. ಮಡಿವಾಳ ನುಡಿದ ಶಬ್ದ ಸೀತೆಯನ್ನು ಕಾಡಿಗೆ ಅಟ್ಟಿತು. ದ್ರೌಪದಿ ನುಡಿದ ಮೂರು ಶಬ್ದಗಳು ಪಾಂಡವರನ್ನು ಹದಿಮೂರು ವರ್ಷ ವನವಾಸಕ್ಕೆ ತಳ್ಳಿದವು. ಹದಿನೆಂಟು ಅಕ್ಷೋಹಿಣಿ ಸೈನ್ಯ ಸತ್ತುಹೋಯಿತು. ರಕ್ತದ ಕೆರೆಗಳು ತುಂಬಿ ತುಳುಕಾಡಿದವು.

ಶ್ರೀಕೃಷ್ಣನಿಗೆ ಮಾತ್ರ ಏನೂ ಆಗಲಿಲ್ಲ. ನಿಂದೆಗಳನ್ನು ಸ್ತೋತ್ರಗಳನ್ನು ನಗುನಗುತ್ತಾ ಸಹಜವಾಗಿ ಸ್ವೀಕರಿಸಿದನು.

ಶ್ರೀಕೃಷ್ಣ ಮಹಾಜ್ಞಾನಿ. ಆತನಿಗೆ ಪಾಂಡವರು ಒಂದೇ; ಕೌರವರು ಕೂಡಾ ಒಂದೇ. ಕಂಸನೂ ಒಂದೇ ಜರಾಸಂಧನೂ ಒಂದೇ. ಸಕಲ ಸ್ತ್ರೀಯರೂ ಒಂದೇ; ಸಕಲ ಪುರುಷರು ಕೂಡಾ ಒಂದೇ. ತನುವಿನಲ್ಲಿ ಜ್ಞಾನಿಗೆ ಭೇದ ಕಂಡು ಬರುವುದಿಲ್ಲ. ಏಕೆಂದರೆ ಚರ್ಮ ಕಣ್ಣು ಕಿವಿ ಮೂಗು ನಾಲಿಗೆ ರೋಮ ರಕ್ತ ಮೂಳೆ ಮಾಂಸ ಮಜ್ಜೆ ಈ ಎಲ್ಲ ಪದಾರ್ಥಗಳಲ್ಲಿ ಹೆಣ್ಣು ಗಂಡು ಎಂದು ಹುಡುಕಲು ಸಾಧ್ಯವಿಲ್ಲ.

ತನುವಿನಲ್ಲಿ ಸಂಗಮವಾದ ಜ್ಞಾನ ಗಂಡು. ತನುವನ್ನು ಆವರಿಸಿದ ಮನ ಹೆಣ್ಣು. ಇವೆರಡೂ ತನುವಿನಲ್ಲಿಯೇ ಇವೆ; ತನುವಿನಲ್ಲಿಯೇ ಒಂದಾದಾಗ ತನು ಎರಡೊಂದಾದ ಘನವಾಗುತ್ತದೆ. ಜ್ಞಾನಿ, ಬುದ್ಧ, ಮಹಾವೀರ, ಶರಣ, ಪೈಗಂಬರ, ಕ್ರಿಸ್ತ, ಕೃಷ್ಣ ಎಂದು ಕರೆಯಿಸಿಕೊಳ್ಳುತ್ತದೆ.

**546**

**ಜ್ಞಾನಿಗಳು ತಾವಾದ ಬಳಿಕ ಅನ್ಯರ ಹಂಗಿನೊಳಗಾಗಬಾರದು.**
**ಜ್ಞಾನಿಗಳು ತಾವಾದ ಬಳಿಕ ಅನ್ಯರ ಕುಲವ ಬೆರಸಬಾರದು.**
**ಜ್ಞಾನಿಗಳು ತಾವಾದ ಬಳಿಕ ಅಸತ್ಯವ ನುಡಿಯಬಾರದು.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜ್ಞಾನಿ ತಾನಾದ ಬಳಿಕ ಆ ಜ್ಞಾನವೇ ತಾನಲ್ಲದೆ ಬೇರಲ್ಲ. ಲೋಕಕ್ಕೆ ಸಂಬಂಧ ಬೇಕು. ಬಂಧು ಬಳಗಬೇಕು. ತಂದೆ ತಾಯಿ ಬೇಕು. ಚರಿತ್ರೆ ಬೇಕು. ಚರಿತ್ರೆ ನಿರ್ಮಾಣ ಮಾಡಲು ಹಗಲಿರುಳೆನ್ನದೆ ದುಡಿಯುತ್ತದೆ ಲೋಕ.

ಜ್ಞಾನಿಗೆ ಚರಿತ್ರೆಯ ಅವಶ್ಯಕತೆಯಿಲ್ಲ. ಲೋಕವನ್ನು ಜ್ಞಾನಿ ತನ್ನ ಜ್ಞಾನದಿಂದಲೇ

ನೋಡುತ್ತಾನೆ. ಹೀಗಾಗಿ ಆತ ಹಡೆದ ತಂದೆ ತಾಯಿಗಳಲ್ಲಿ ಬಂಧು ಬಳಗದಲ್ಲಿ ಸತ್ಯವನ್ನೇ ಕಾಣುತ್ತಾನೆ.

''ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು. ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವಾ ಹಾಲಲ್ಲಾದರೂ ಅದ್ದು, ನೀರಲ್ಲಾದರೂ ಅದ್ದು ನಿನ್ನ ಧರ್ಮ'' ಎಂದು ಹಾಡುತ್ತಾನೆ. ಆ ಮಹಾಜ್ಞಾನವನ್ನೇ ತಂದೆ ತಾಯಿ ಬಂಧು ಬಳಗವೆಂದು ಸ್ತುತಿಸುತ್ತಾನೆ.

ಜ್ಞಾನಿ ಮಹಾಜ್ಞಾನದ ಹಂಗಿನಲ್ಲಿ ಬದುಕುತ್ತಾನೆ. ಅದುವರೆಗೂ ಇದ್ದ ಚರಿತ್ರೆಯನ್ನು ತಾನೇ ಕಳೆದುಕೊಳ್ಳುತ್ತಾನೆ. ತನುವಿನ ಹುಟ್ಟಿನೊಂದಿಗೆ ಬಂದ ಜಾತಿ ಮತ ಪಂಥ ಧರ್ಮವನ್ನು ತಾನೇ ನಷ್ಟ ಮಾಡಿಕೊಳ್ಳುತ್ತಾನೆ. ತಂದೆ ತಾಯಿ ಬಂಧು ಬಳಗದ ವ್ಯಾಮೋಹವನ್ನು ತಾನೇ ಸುಟ್ಟು ಭಸ್ಮ ಮಾಡುತ್ತಾನೆ.

ಸತ್ಯ ನುಡಿದ ಸಾಕ್ರಟೀಸನಿಗೆ ವಿಷ ಪ್ರಾಸನ ಮಾಡಿಸಿ ಕೊಂದು ಹಾಕುವ ಶಿಕ್ಷೆಯನ್ನು ರಾಜ ಘೋಷಣೆ ಮಾಡಿದಾಗ. ಸಾಕ್ರಟೀಸನಿಗೆ ಒಂದಷ್ಟೂ ದುಃಖ ಆಗುವುದಿಲ್ಲ. ಬದಲಾಗಿ ವಿಷವನ್ನು ಬೇಗ ಕುಡಿಯಬೇಕೆಂಬ ಆಸೆಯಾಗುತ್ತದೆ.

ಅಮೃತ ಮತ್ತು ವಿಷ ಇವೆರಡೂ ಹುಟ್ಟಿದ್ದು ಜಲದಲ್ಲಿಯೇ. ಒಂದಕ್ಕೆ ಅಮೃತ ಎನ್ನುವ ಹೆಸರು, ಮತ್ತೊಂದಕ್ಕೆ ವಿಷ ಎನ್ನುವ ಹೆಸರು. ಬೇವಿನ ಮರದಲ್ಲಿ ಕಹಿ ಹುಟ್ಟಿದ್ದು ಜಲದಿಂದಲೇ, ಕಬ್ಬಿನ ಸಸಿಯಲ್ಲಿ ಸಿಹಿ ಹುಟ್ಟಿದ್ದು ಕೂಡಾ ಜಲದಿಂದಲೇ. ಈ ಸತ್ಯ ಜ್ಞಾನಿಗೆ ಮಾತ್ರ ಗೊತ್ತು. ತಿಳಿದು ಪಾಲಿಸಿದರೆ ಲೋಕಕ್ಕೆ ಕೂಡಾ ಗೊತ್ತಾಗುತ್ತದೆ. ಆದರೆ ಲೋಕ ರುಚಿಗೆ ಮಾತ್ರ ಆಸೆ ಪಡುತ್ತದೆ. ಜ್ಞಾನಿ ಸತ್ಯಕ್ಕೆ ಮಾತ್ರ ಆಸೆ ಪಡುತ್ತಾನೆ. ಹೀಗಾಗಿ ಸಿಹಿ ಕಹಿಗಳೆರಡನ್ನೂ ಪರಮಾನಂದದಿಂದ ಸ್ವೀಕರಿಸುತ್ತಾನೆ.

ಜಲಬಿಂದುವಿನಿಂದಲೇ ಹುಟ್ಟಿದ ಬೇವು, ಜಲಬಿಂದುವಿನಿಂದಲೇ ಹುಟ್ಟಿದ ಕಬ್ಬು. ಒಂದರಲ್ಲಿ ಸಿಹಿ ಮತ್ತೊಂದರಲ್ಲಿ ಕಹಿ ಅಡಗಿದೆ. ಹಾಗೆಯೇ ಸಿಹಿ ಮತ್ತು ಕಹಿಗಳೆರಡರಲ್ಲಿಯೂ ಒಸರುವ ಜಲವೂ ಅಲ್ಲಿಯೇ ಅಡಗಿದೆ!

ಜಲಕ್ಕೆ ರುಚಿಯಿಲ್ಲ, ಜಲಕ್ಕೆ ವಾಸನೆಯಿಲ್ಲ, ಜಲಕ್ಕೆ ಬಣ್ಣ ಇಲ್ಲ. ಜಲ ತನ್ನ ಮಟ್ಟವನ್ನು ತಾನು ಕಾಯ್ದುಕೊಳ್ಳುತ್ತದೆ. ಈ ಎಲ್ಲಾ ಜಲದ ಸಂಗತಿಗಳನ್ನು ತನು ಕಂಡುಕೊಂಡಿದೆ.

ಜಲದಿಂದಲೇ ಹುಟ್ಟಿದ ತನುವಿಗೆ ತಾನು ಜಲವೆಂದು ಕಂಡುಕೊಳ್ಳಲು ಸಾಧ್ಯವಾಗುತ್ತಿಲ್ಲ. ಜಲವು ಕೂಡಾ ಜಲವಲ್ಲ. ಬಯಲಲ್ಲಿದ್ದ ಜಲಜನಕ ಮತ್ತು ಆಮ್ಲಜನಕಗಳೆರಡನ್ನೂ ಬಯಲೇ ಬೆರಸಿ, ಒಳ ಹೊರಗೆನ್ನದೇ ತಾನು ಅದರೊಳಗೆ ಬೆರೆತು ಜೀವಜಲವನ್ನಾಗಿ ಮಾಡಿದೆ.

ಜೀವಜಲವೇ ಗಟ್ಟಿಗೊಂಡು ಭೂಮಿಯಾಗಿದೆ. ಗಿಡ ಮರ ಬಳ್ಳಿ ಸಸ್ಯಕಾಶಿಯಾಗಿದೆ. ಪಶು ಪಕ್ಷಿ ಪ್ರಾಣಿ ಉರಗ ಕೀಟವಾಗಿದೆ. ಜಲಚರವಾಗಿದೆ. ಇದೆಲ್ಲವನ್ನೂ ತಿಳಿಯುವ ಜೀವಜಲವು ತನುವು ಕೂಡಾ ಆಗಿದೆ. ಜಲ ತಾನು ಜೀವಜಲವೆಂದು ತಿಳಿಯುವ ಶಕ್ತಿ ಜಲದಲ್ಲಿ ಒಳಹೊರಗೆನ್ನದೆ ತನುವಿನಲ್ಲಿ ಸಂಗಮವಾದ ಬಯಲಿಗೆ ಮಾತ್ರ ಇದೆ.

ಬಯಲು ತನ್ನ ಗರ್ಭದಲ್ಲಿದ್ದ ಜಲಜಕನವನ್ನು ಆಮ್ಲಜನಕವನ್ನೂ ಹಿಡಿದು ತಾನು ಅದರಲ್ಲಿ ಸಂಗಮವಾಗಿ ಜಲವನ್ನಾಗಿಸಿತು, ಭೂಮಿಯನ್ನಾಗಿಸಿತು. ಇಡೀ ಬ್ರಹ್ಮಾಂಡವನ್ನೇ ಸೃಷ್ಟಿ ಮಾಡಿತು. ತಾನೇ ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೇ ತಿಳಿದು ಪರಮಸಂತೋಷ ಪಡುವುದಕ್ಕಾಗಿ ತನುವನ್ನು ಸೃಷ್ಟಿ ಮಾಡಿತು. ಮಹಾಜ್ಞಾನವಾಗಿ ಬಯಲು ತನುವಿನಲ್ಲಿಯೇ ಸಂಗಮವಾಯಿತು. ತನ್ನನ್ನು

ತಿಳಿಯುವುದಕ್ಕಾಗಿ ಬಯಲು ತನುವಿನಲ್ಲಿಯೇ ಮನವನ್ನು ಸೃಷ್ಟಿ ಮಾಡಿತು.

ಮನಕ್ಕೆ ಬಯಕೆಯಾದಾಗ ತನುವಿನಲ್ಲಿಯೇ ಸಂಗಮವಾದ ಮಹಾಜ್ಞಾನವನ್ನು ತಿಳಿದು ಮನ ಘನಮನವಾಗುತ್ತದೆ. ಮಹಾಜ್ಞಾನಿಯೇ ತಾನಾಗುತ್ತದೆ. ಹಿಂದು ಮುಸಲ್ಮಾನ ಕ್ರೈಸ್ತನೆಂಬ ಹಂಗಿನೊಳಗಾಗದೆ ಸಕಲ ಜಾತಿ ಮತ ಪಂಥಗಳನ್ನು ಹರಿದು ಹಾಕುತ್ತದೆ. ಸತ್ಯವನ್ನೇ ನುಡಿಯುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**547**

**ಜ್ಞಾನಿಗಳು ತಾವಾದ ಬಳಿಕ ತ್ರಿಕಾಲ ಲಿಂಗವ ಪೂಜಿಸಬೇಕು.**
**ಜ್ಞಾನಿಗಳು ತಾವಾದ ಬಳಿಕ ಜಂಗಮ ದಾಸೋಹದಲ್ಲಿರಬೇಕು.**
**ಜ್ಞಾನಿಗಳು ತಾವಾದ ಬಳಿಕ ನುಡಿಕೊಟ್ಟು ತಪ್ಪಬಾರದು.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದ ಮೇಲೆ ಲಿಂಗಧರಿಸಿಕೊಂಡು ಮೂರು ವೇಳೆ ಪೂಜಿಸಿದರೆ ಜ್ಞಾನಿಯಾಗಲು ಸಾಧ್ಯವಿಲ್ಲ. ಜಾಗ್ರತ್ ಕಾಲದಲ್ಲಿ ಲಿಂಗವ ಪೂಜಿಸಬೇಕು, ಸ್ವಪ್ನದಲ್ಲಿಯೂ ಲಿಂಗವ ಪೂಜಿಸಬೇಕು. ಸುಷುಪ್ತಿಯಲ್ಲಿಯೂ ಲಿಂಗವ ಪೂಜಿಸಬೇಕು.

ಜಾಗ್ರತ್ ಎಂದರೆ ಎಚ್ಚರ. ನಿದ್ರೆಯಿಂದ ಎಚ್ಚರವಾಗುವುದು ಎಚ್ಚರವಲ್ಲ. ಎಚ್ಚರವಾದಾಗ ಸದಾ ಎಚ್ಚರವಾಗಿರುವುದು ಎಚ್ಚರ. ನೋಡುವ ಕಂಗಳಲ್ಲಿ ಹಾದರವಿರಬಾರದು. ಹಾದರದಿಂದ ನೋಡಿ ಅತ್ಯಂತ ಆದರದಿಂದ ನುಡಿಯುವುದು ತನಗೆ ತಾನೇ ಮಾಡಿಕೊಳ್ಳುವ ಮೋಸ. ಇದು ಜ್ಞಾನಿಯ ಲಕ್ಷಣವಲ್ಲ.

ನೋಡಿ ಮನ ಹಾದರಕ್ಕೆ ಒಳಗಾಗಿ ಪುನಃ ಅಕ್ಕ ತಂಗಿ ತಮ್ಮ ಅಣ್ಣ ಎಂದು ನುಡಿಯುವ ದೇಹವು ಎಚ್ಚರದಲ್ಲಿದೆಯೆಂದು ಹೇಳಲು ಸಾಧ್ಯವೆ? ನೋಡಿದಂತೆ ನುಡಿಯಲು ಸಾಧ್ಯವಾಗಲಿಲ್ಲ; ನುಡಿದಂತೆ ನೋಡಲು ಸಾಧ್ಯವಾಗಲಿಲ್ಲ. ಆದರೂ ಆ ದೇಹ ಎಚ್ಚರದಲ್ಲಿ ಇದೆ; ಅರಿವಿನಿಂದ ಆಲೋಚನೆಗೆ ಒಳಗಾದರೆ ತಾನು ಎಚ್ಚರದಲ್ಲಿಲ್ಲ ಎಂದು ತನಗೇ ಅರಿವಾಗುತ್ತದೆ. ನುಡಿದಂತೆ ನೋಡಲು ಸಾಧ್ಯವಾಗಬೇಕಾದರೆ, ಅಂಗದ ಮೇಲೆ ಧರಿಸಿದ ಲಿಂಗ ಹಿಡಿದು ಮೂರು ವೇಳೆ ಪೂಜಿಸಿದರೆ ತಾನು ಜ್ಞಾನಿಯಾಗಲು ಸಾಧ್ಯವೆ? ಪೂಜಿಸಿದರಾಗದು.

ಐದು ವೇಳೆ ನಮಾಜು ಮಾಡಿ ಪ್ರಾರ್ಥಿಸಿದರೆ, ಮಠ ಮಂದಿರ ಆಲಯಗಳಿಗೆ ಪುಣ್ಯಕ್ಷೇತ್ರಗಳಿಗೆ ಹೋಗಿ ಪೂಜಿಸಿದರೆ ತಾನು ಜ್ಞಾನಿಯಾಗಲು ಸಾಧ್ಯವೆ? ಏನಾದರಾಗಬಹುದು, ಜ್ಞಾನಿಯಾಗುವುದು ಜಟಿಲ.

ನಿಲುವಂಗಿ ಧರಿಸಿ, ಸಿಲುಬೆ ಲಿಂಗ ಜನಿವಾರ ಹಾಕಿದವನು ಜ್ಞಾನಿಯಲ್ಲ. ಕಾವಿ ಹೊದ್ದವನೂ ಜ್ಞಾನಿಯಲ್ಲ. ಮಠ ಪೀಠ ಆಶ್ರಮಗಳ ಒಡೆಯ ಕೂಡಾ ಜ್ಞಾನಿಯಲ್ಲ. ನೋಡಲು ಮುಟ್ಟಲು ಮೂಸಿಸಿ ರುಚಿಸಲು ಬಂದವನು ಜ್ಞಾನಿ. ಸಕಲ ಶಬ್ದಗಳನ್ನು ನಪುಂಸಕಗೊಳಿಸಿ ಅರಿವಿನಿಂದ ಕೇಳಲು ಬಂದವನು ಜ್ಞಾನಿ.

ಇಂತಹ ಜ್ಞಾನಿ ತಾನಾದ ಬಳಿಕ ಅವನಿಗೆ ಜಾಗ್ರತ್‌ನಲ್ಲಿಯೂ ಪೂಜಿಸಲು ಬರುತ್ತದೆ. ಸ್ವಪ್ನದಲ್ಲಿಯೂ ಪೂಜಿಸಲು ಬರುತ್ತದೆ. ಸುಷುಪ್ತಿಯಲ್ಲಿಯೂ ಪೂಜಿಸಲು ಬರುತ್ತದೆ.

ತ್ರಿಕಾಲದಲ್ಲಿಯೂ ಲಿಂಗವ ಪೂಜಿಸುತ್ತಾನೆ.

ಲಿಂಗವೆಂದರೆ ಅಂಗದ ಮೇಲೆ ಹಾಕಿಕೊಂಡ ವಸ್ತುವಲ್ಲ. ಅದು ಅಂಗದಲ್ಲಿಯೇ ಸಂಗಮವಾದ ಜ್ಞಾನ. ಇಡೀ ಜಗದಲ್ಲಿರುವ ಸಕಲ ಅಂಗಗಳಲ್ಲಿಯೂ ಜ್ಞಾನ ಸಂಗಮವಾಗಿದೆ. ಅಂಗಕ್ಕೆ ಅಂಗವನ್ನು ಆವರಿಸಿದ ಮನಕ್ಕೆ ಜ್ಞಾನ ಸದಾ ಪಾಠ ಮಾಡುತ್ತದೆ. ಇಂತಹ ಜ್ಞಾನವನ್ನು ತ್ರಿಕಾಲದಲ್ಲಿ ಪೂಜಿಸಲು ಮನಕ್ಕೆ ಬಂದರೆ ಸಾಕು ಆ ಮನವೇ ಜ್ಞಾನಿ. ಮನ, ಜ್ಞಾನವನ್ನು ಪೂಜಿಸಿ ಜ್ಞಾನಿಯೇ ತಾನಾಗುತ್ತದೆ.

ನೋಡಿ ಮುಟ್ಟಿ ಹಾದರ ಮಾಡುವ ಅಜ್ಞಾನಿ ಮನದ ಜುಟ್ಟು ಹಿಡಿದು ಜ್ಞಾನದ ಚರಣಕಮಲಗಳಲ್ಲಿ ಅರ್ಪಿಸುವವನೇ ಜಂಗಮ. ಇದೇ ದಾಸೋಹ. ಈ ದಾಸೋಹವೇ ವಿಚಿತ್ರ! ಅಜ್ಞಾನ ಕಾಣುವುದಿಲ್ಲ. ಜ್ಞಾನವೂ ಕಾಣುವುದಿಲ್ಲ. ಇವೆರಡೂ ತನ್ನ ಅನುಭವಕ್ಕೆ ಬರುತ್ತದೆ.

ಅಪರಾಧ ಮಾಡಿದ್ದು ಮನವೆಂಬ ತನಗೆ ಗೊತ್ತಾಗುತ್ತದೆ ಎಂದರೆ ಎಂದೂ ಅಪರಾಧ ಮಾಡದವನು ತನಗೆ ''ನೀನು ಘೋರ ಅಪರಾಧ ಮಾಡುತ್ತಿರುವಿ'' ಎಂದು ಹೇಳಿದಂತೆ ಅಲ್ಲವೆ? ದೇಹ ಅಪರಾಧಿ ಅಲ್ಲ; ಅಪರಾಧ ಮಾಡುವ ಮನವೆಂಬ ನಾನು ದೇಹದಲ್ಲಿ ಇದ್ದೇನೆ. ಎಂದೂ ಅಪರಾಧ ಮಾಡದ ಜ್ಞಾನಿ ಕೂಡಾ ದೇಹದಲ್ಲಿಯೇ ಇದ್ದಾನೆ.

ಅಪರಾಧ ಮಾಡದವನು ಅಪರಾಧಿಗೆ ಬೋಧಿಸಿದ. ಇದು ದೇಹದಲ್ಲಿಯೇ, ದೇಹದ ಮೂಲಕವೇ ಜರುಗುತ್ತದೆ. ಹೀಗಾಗಿ ದಾಸರು ''ಅಪರಾಧಿ ನಾನಲ್ಲ, ಅಪರಾಧ ಎನಗಿಲ್ಲ; ಕಪಟ ನಾಟಕ ಸೂತ್ರಧಾರಿ ನೀನು'' ಎಂದು ಹಾಡಿದ್ದಾರೆ. ನನ್ನಲ್ಲಿಯೇ ಇದ್ದು ನನಗೆ ಬೋಧಿಸುವ ಜ್ಞಾನಿ ನನಗೆ ಗೊತ್ತಾಗಬೇಕು. ಆ ಜ್ಞಾನಿಯೇ ತಾನಾಗಬೇಕು.

ಜ್ಞಾನಿ ತಾನಾದವನಿಗೆ ಸಕಲ ದೇಹಗಳಲ್ಲಿಯೂ ಸಂಗಮವಾದ ಜ್ಞಾನದೇವನೇ ಕಾಣುತ್ತಾನೆ. ಜ್ಞಾನಿಯನ್ನು ಕಂಡ ಜ್ಞಾನಿ ಜ್ಞಾನಿಗೆ ಶರಣು ಶರಣಾರ್ಥಿ ಎಂದು ಹಣೆಮಣಿಯುತ್ತಾನೆ. ಆತ ಅನ್ಯವ ನುಡಿಯಲಾರ ನುಡಿಕೊಟ್ಟು ತಪ್ಪಲಾರ.

**548**

**ಜ್ಞಾನಿಗಳು ತಾವಾದ ಬಳಿಕ ಮುಕುರದ ಬಿಂಬದಂತಿರಬೇಕು.**
**ಜ್ಞಾನಿಗಳು ತಾವಾದ ಬಳಿಕ ಜ್ಞಾನದಲ್ಲಿ ಕದಲದಂತಿರಬೇಕು.**
**ಜ್ಞಾನಿಗಳು ತಾವಾದ ಬಳಿಕ ಸಂಶಯರಹಿತರಾಗಿರಬೇಕು.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜ್ಞಾನಿ ಎಂದರೆ ಬೇರೆ ಯಾರೂ ಅಲ್ಲ; ನಾನೇ! ನನ್ನನ್ನು ನಾನೇ ನೋಡಿಕೊಂಡು ಸರಿ ಮಾಡಿಕೊಳ್ಳಬೇಕು. ಕನ್ನಡಿಯಲ್ಲಿಯ ನನ್ನ ಬಿಂಬವನ್ನು ನಾನೇ ನೋಡಿಕೊಂಡು ಸರಿಮಾಡಿಕೊಂಡಂತೆ.

ದೇಹವೇ ಕನ್ನಡಿ. ದೇಹವನ್ನು ಆವರಿಸಿದ ಮನವೇ ನಾನು. ದೇಹದಲ್ಲಿ ಸಂಗಮವಾದ ಜ್ಞಾನಿಯೇ ಅವನು. ಜ್ಞಾನಿ ಕನ್ನಡಿಯೊಳಗಣ ಬಿಂಬದಂತೆ. ಬಿಂಬವನ್ನು ಸರಿ ಮಾಡಲು ಬರುವುದಿಲ್ಲ. ಅದು ಸರಿಯಾಗಿಯೇ ಇದೆ. ಹಾಗೆಯೇ ಕನ್ನಡಿಯನ್ನೂ ಸರಿ ಮಾಡಲು ಬರುವುದಿಲ್ಲ. ಅದು ಕೂಡಾ ಸರಿಯಾಗಿಯೇ ಇದೆ. ಕನ್ನಡಿಯನ್ನು ಬಳಕೆ ಮಾಡುವ ಮನವೆಂಬ

ನಾನು ಕನ್ನಡಿಯಲ್ಲಿ ಅಡಗಿದ ಬಿಂಬವನ್ನು ನೋಡಿ ಸರಿಹೋಗಲು ಬರುತ್ತದೆ.

ನಾನು ಅಣಕವಾಡಿದರೆ ಕನ್ನಡಿಯೊಳಗಣ ಬಿಂಬ ನೀನು ಹೀಗೆ ಅಣಕವಾಡಿದೆ ಎಂದು ನನ್ನಂತೆಯೇ ಅಣಕ ಮಾಡಿ ನನಗೆ ತೋರಿಸುತ್ತದೆ. ಕನ್ನಡಿಯಿಂದ ಸರಿದರೆ ಆ ಚಿತ್ರ ಕೂಡಾ ಸರಿಯುತ್ತದೆ; ಕನ್ನಡಿಯಲ್ಲಿ ಏನೂ ಉಳಿಯುವುದಿಲ್ಲ. ಆದರೆ ದೇಹವೆಂಬ ಕನ್ನಡಿಯೇ ಬೇರೆ. ಮನ ದೇಹದೊಂದಿಗೆ ಬಳಸಿದ ಸುಖ ದುಃಖಗಳನ್ನು ಸಿಟ್ಟು ಸೆಡವುಗಳನ್ನು ಕ್ರೌರ್ಯ ದ್ವೇಷ ಅಸೂಯೆಗಳನ್ನು ಕಪಟ ನಾಟಕಗಳನ್ನು ಪಾಪಪುಣ್ಯಗಳನ್ನು ದೇಹದಲ್ಲಿಯೇ ಉಳಿಸಿ ದೇಹ ಮತ್ತು ಮನಕ್ಕೆ, ಜ್ಞಾನ ಮತ್ತೆ ಮತ್ತೆ ನೆನಪು ಮಾಡುತ್ತಾ ದೇಹ ಇರುವವರೆಗೆ ದೇಹವನ್ನು ಬಾಧೆಗೆ ಈಡು ಮಾಡುತ್ತದೆ.

ದೇಹವನ್ನು ಬಳಸಿಕೊಂಡ ಮನಸ್ಸು ಸದಾ ಚಲನೆಯಲ್ಲಿದ್ದರೆ ಜ್ಞಾನಕ್ಕೆ ಚಲನೆಯಿಲ್ಲ; ಕದಲದಂತೆ ಸ್ಥಿರವಾಗಿದ್ದು ದೇಹ ಮತ್ತು ಮನಕ್ಕೆ ಅರಿವಿನ ಪಾಠ ಮಾಡುತ್ತದೆ. ಚಕ್ರ ತಿರುಗುತ್ತದೆ; ಚಕ್ರವನ್ನು ಹೊತ್ತ ವಾಹನಕ್ಕೂ ಚಲನೆಯಿದೆ. ಚಕ್ರ ಮತ್ತು ವಾಹನಕ್ಕೆ ಆಧಾರವಾದ ಎಕ್ಸೆಲ್‌ಗೆ ಚಲನೆಯಿಲ್ಲ. ಚಕ್ರದ ಸೂತ್ರ ಎಕ್ಸೆಲ್‌ನಲ್ಲಿ ಇದೆ. ಚಕ್ರ ಮತ್ತು ವಾಹನಕ್ಕೆ ಚಾಲನೆ ನೀಡುವ ಶಕ್ತಿ ಎಕ್ಸೆಲ್‌ನಲ್ಲಿದೆ. ಅದು ಚಲಿಸದೆ ಎರಡು ಶಕ್ತಿಗಳಿಗೆ ಚಾಲನೆ ನೀಡುತ್ತದೆ. ಹೀಗಾಗಿ ಅಲ್ಲಮಪ್ರಭುಗಳು ''ಒಡಲೊಳಗಿದ್ದು ಒಡಲಿಂಗೆ ಆಧಾರವಾಗಿ ಒಡಲ ಸೋಂಕದೆ ಒಡಲು ಬೆಳಗುವ ಪರಿಯ ನೋಡಾ. ಬೆಳಗಿಂಗೆ ಬೆಳಗಾಗಿ ಬೆಳಗುವ ಪರಿಯ ನೋಡಾ'' ಎನ್ನುವ ಸೂತ್ರವನ್ನು ದಾಖಲಿಸಿದ್ದಾರೆ.

ಜ್ಞಾನ, ದೇಹ ಮತ್ತು ಮನಕ್ಕೆ ಆಧಾರವಾಗಿದೆ. ಮನ ದೇಹದೊಂದಿಗೆ ಅಜ್ಞಾನದ ಕೆಲಸದಲ್ಲಿ ಭಾಗಿಯಾಗುವುದಕ್ಕಾಗಿ ಓಡಾಡಿದರೂ ಜ್ಞಾನ ಕದಲದಂತೆ ದೇಹದಲ್ಲಿಯೇ ಇದ್ದು ದೇಹಕ್ಕೆ ಮತ್ತು ಮನಕ್ಕೆ ಪಾಠ ಮಾಡುತ್ತಲಿದೆ.

ಓಡಾಡುವ ಮನ ಮತ್ತು ದೇಹಗಳೆರಡು ದೇಹದಲ್ಲಿಯೇ ಸಂಗಮವಾದ ನಿಶ್ಚಲ ಜ್ಞಾನದಲ್ಲಿ ಲೀನವಾದರೆ ಸಾಕು ಅವೆರಡೂ ಜ್ಞಾನಿ ಎಂದು ಕರೆಯಿಸಿಕೊಳ್ಳುತ್ತವೆ.

ಜ್ಞಾನ ಮನ ದೇಹ ಮೂರೊಂದಾದ ಘನವಾಗುತ್ತದೆ. ಬುದ್ಧ, ಮಹಾವೀರ, ಶರಣನೆಂದು ಕರೆಯಿಸಿಕೊಳ್ಳುತ್ತದೆ. ಕ್ರಿಸ್ತ ಕ್ರಿಷ್ಣ ಪೈಗಂಬರನೆಂದು ಕರೆಯಿಸಿಕೊಳ್ಳುತ್ತದೆ. ಸಕಲ ಸಂಶಯಗಳನ್ನು ಕಳೆದುಕೊಂಡು ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**549**

**ಜ್ಞಾನಿಗಳು ತಾವಾದ ಬಳಿಕ ವಿಶ್ವಾಸಘಾತವ ಮಾಡಬಾರದು.**
**ಜ್ಞಾನಿಗಳು ತಾವಾದ ಬಳಿಕ ಪರದೂಷಣೆ ಮಾಡಬಾರದು.**
**ಜ್ಞಾನಿಗಳು ತಾವಾದ ಬಳಿಕ ಪರದ್ರವ್ಯವನಪಹರಿಸಬಾರದು.**
**ಜ್ಞಾನಿಗಳು ತಾವಾದ ಬಳಿಕ ಗುರುಸೇವೆಯಲ್ಲಿರಬೇಕು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜ್ಞಾನಿ ತಾವಾದ ಬಳಿಕ ವಿಶ್ವಾಸಘಾತವ ಮಾಡಬಾರದು, ಪರದೂಷಣೆ ಮಾಡಬಾರದು, ಪರದ್ರವ್ಯವನ್ನು ಅಪಹರಿಸಬಾರದು, ಸದಾ ಗುರುಸೇವೆಯಲ್ಲಿರಬೇಕು ಎಂದು ಸಿದ್ಧರಾಮ ಶಿವಯೋಗಿಗಳು ಈ ನಾಲ್ಕು ಲಕ್ಷಣಗಳನ್ನು ಹೇಳಿದ್ದಾರೆ.

ಈ ನಾಲ್ಕೂ ಲಕ್ಷಣಗಳನ್ನು ಸದಾ ಪಾಲಿಸುವವನೇ ಜ್ಞಾನಿ. ಮಹಾಜ್ಞಾನಿಯ ದರುಶನಭಾಗ್ಯ

ದೊರೆತವನಿಗೆ ಮಾತ್ರ ಇದನ್ನು ಪಾಲಿಸಲು ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಜ್ಞಾನಿಯ ವೇಷ ಮಾತ್ರ ಹಾಕುತ್ತಾನೆ, ಜ್ಞಾನಿಯೇ ತಾನಾಗಲು ಸಾಧ್ಯವಾಗುವುದಿಲ್ಲ.

ಜ್ಞಾನಿಯ ಮೇಲೆ ಗುರುದೇವನ ಮೇಲೆ ವಿಶ್ವಾಸವಿಟ್ಟು ಸದಾ ಅವರ ಸೇವೆಯಲ್ಲಿ ನಿರತನಾದವನು ಮಾತ್ರ ಪರದೂಷಣೆ ಮಾಡಲಾರ, ಪರದ್ರವ್ಯವನ್ನು ಅಪಹರಿಸಲಾರ. ವಿಶ್ವಾಸಘಾತವನ್ನು ಮಾಡಲಾರ.

ಜ್ಞಾನಿ ತಾನಾಗುವುದು ಹೇಗೆ? ಜ್ಞಾನಿ ತಾನಾಗಲೇಬೇಕೆಂಬ ಆಸೆ ಉಳ್ಳವನು ಮಾತ್ರ ಜ್ಞಾನಿಯಾಗಲು ಸಾಧ್ಯ. ಹಗಲಿರುಳೆನ್ನದೆ ಭಗವದ್ಗೀತೆ ಬೈಬಲ್ ಕುರಾನ್ ವೇದ ಆಗಮ ಉಪನಿಷತ್‌ಗಳನ್ನು ಓದಿದವನು ಜ್ಞಾನಿಯಲ್ಲ. ಅವನು ಪಂಡಿತ, ಶಾಸ್ತ್ರಿ, ಪ್ರವಚನಪಟು ಎನ್ನುವ ಬಿರುದು ಪಡೆಯುತ್ತಾನೆ. ತಾನು ಪಡೆದ ಆ ಪದವಿ, ಬಿರುದುಗಳಿಂದಲೇ ವಿಶ್ವಾಸಘಾತ ಮಾಡುತ್ತಾನೆ. ಪರದೂಷಣೆ ಪರನಿಂದೆ ಮಾಡುತ್ತಾ ಪರದ್ರವ್ಯವನ್ನು ಅಪಹರಿಸುತ್ತಾನೆ. ಗುರುಸೇವೆ ಎನ್ನುವುದೇ ಈತನಿಗೆ ಗೊತ್ತಾಗುವುದಿಲ್ಲ. ಏಕೆಂದರೆ ಸಕಲ ಗ್ರಂಥಗಳನ್ನು ಓದಿ ಗುರುದೇವನೇ ತಾನಾಗಿರುತ್ತಾನೆ. ಗುರುವಾದವನು ಗುರುಸೇವೆ ಮಾಡುವುದೆಂದರೇನು? ಗುರುಸೇವೆ ವೇಷದ ಗುರುವಿಗೆ ಒಗ್ಗುವುದಿಲ್ಲ.

ಗುರುಸೇವೆ ಎಂದರೆ ಚರಿತ್ರೆವುಳ್ಳ ವ್ಯಕ್ತಿಯ ಸೇವೆ ಅಲ್ಲ. ಜ್ಞಾನಿಯ ಸೇವೆಯೇ ಗುರುಸೇವೆ. ಜ್ಞಾನಿಯೆಂದರೆ ಚರಿತ್ರೆವುಳ್ಳವನಲ್ಲ. ಅವನು ಅವ್ಯಕ್ತ. ಪ್ರತಿವ್ಯಕ್ತಿಯಲ್ಲಿಯೂ ಅವ್ಯಕ್ತ ಜ್ಞಾನ ಶಕ್ತಿಯನ್ನು ಹೊಂದಿ ವ್ಯಕ್ತಿಯಲ್ಲಿಯೇ ಸಂಗಮವಾಗಿದ್ದಾನೆ. ವ್ಯಕ್ತಿಗೆ ವ್ಯಕ್ತಿಯನ್ನು ಆವರಿಸಿದ ಮನಕ್ಕೆ ಬೋಧೆ ಮಾಡುತ್ತಾನೆ. ಇಂತಹ ಮಹಾಜ್ಞಾನಿ ಗುರುದೇವನನ್ನು ವ್ಯಕ್ತಿಯನ್ನು ಆವರಿಸಿದ ಅವ್ಯಕ್ತ ಮನದಿಂದಲೇ ಕಂಡುಕೊಳ್ಳಬೇಕು. ಸದಾ ಆ ಮಹಾಜ್ಞಾನಿ ಗುರುದೇವನ ಸೇವೆಯಲ್ಲಿ ನಿರತನಾಗಿರಬೇಕು. ಆತ ಗುರುದೇವನ ವಿಶ್ವಾಸವನ್ನು ಸಂಪಾದನೆ ಮಾಡಬೇಕು. ಆ ಗುರುದೇವನಿಗೆ ಅವ್ಯಕ್ತ ಮನವೆಂಬ ತಾನು ಶಿಷ್ಯನಾಗಬೇಕು.

ಗುರುದೇವನೂ ಅವ್ಯಕ್ತ. ಆತನ ಸೇವೆಯಲ್ಲಿ ನಿರತನಾದ ಶಿಷ್ಯನೂ ಅವ್ಯಕ್ತ. ಜ್ಞಾನಿಯೂ ಅವ್ಯಕ್ತ. ಜ್ಞಾನಿಯಾಗಬೇಕೆಂಬ ಬಯಕೆವುಳ್ಳ ಶಿಷ್ಯನೂ ಅವ್ಯಕ್ತ. ಅವ್ಯಕ್ತ ಜ್ಞಾನಿಯ ಸೇವೆ ಅವ್ಯಕ್ತ ಶಿಷ್ಯನು ಮಾಡುತ್ತಾ ಜ್ಞಾನಿಯೇ ತಾನಾಗುತ್ತಾನೆ; ಸಿದ್ಧಾರ್ಥ ಬುದ್ಧನಾದಂತೆ; ವರ್ಧಮಾನ ಮಹಾವೀರನಾದಂತೆ! ಆಗ

ದೇಹ, ದೇಹದಲ್ಲಿಯೇ ಇರುವ ಆ ಮಹಾಜ್ಞಾನಿಯಿಂದ ಪ್ರಕಾಶಿಸಲ್ಪಡುತ್ತಾನೆ. ಅಂತಹ ಮಹಾಜ್ಞಾನಿಯೇ ತಾನಾದ ಬಳಿಕ ಆತ ಯಾರಿಗೂ ವಿಶ್ವಾಸಘಾತವ ಮಾಡಲಾರ. ಪರದೂಷಣೆಯ ಮಾಡಲಾರ. ಪರದ್ರವ್ಯವನ್ನು ಅಪಹರಿಸಲಾರ. ಏಕೆಂದರೆ ಜ್ಞಾನಿಗೆ ಸಕಲರೂ ಜ್ಞಾನಿಗಳಾಗಿಯೇ ಕಾಣುತ್ತಾರೆ; ಗುರುಗಳಾಗಿಯೇ ಕಾಣುತ್ತಾರೆ. ಹೀಗಾಗಿ ಜ್ಞಾನಿ ತಾನಾದ ಬಳಿಕ ಸದಾ ಗುರುಸೇವೆ ಯಲ್ಲಿಯೇ ನಿರತನಾಗಿರುತ್ತಾನೆ.

**550**

**ಜ್ಞಾನಿಗಳು ನಾವೆಂದು ಕಂಡಂತಾಚರಿಸಿದಡೆ ಜ್ಞಾನಿಗಳಲ್ಲ.**
**ಆರೂಢ ನಾವೆಂದು ಕಂಡ ಕಂಡಂತಾಚರಿಸಿ**
**ಕಂಡಲ್ಲಿ ತಿಂದಡೆ ಆರೂಢರೆ ಅವರಲ್ಲ.**
**ಜ್ಞಾನಿಯ ಪರಿ ಬೇರೆ, ಆರೂಢನ ಪರಿ ಬೇರೆ,**

**ಪರಮಹಂಸನ ಪರಿ ಬೇರೆ.**
**ಅರಿತಡೆ ಹೇಳಾ, ಅರಿಯದಿರ್ದಡೆ ಕೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನನ ಸಾನ್ನಿಧ್ಯದಲ್ಲಿ ಕೇದಾರಯ್ಯಾ.**

ಸಿದ್ಧರಾಮ ಶಿವಯೋಗಿಗಳು ಶರಣ ಕೇದಾರಯ್ಯನವರಿಗೆ ಜ್ಞಾನಿ, ಆರೂಢ, ಪರಮಹಂಸರೆಂದರೆ ಯಾರು ಮತ್ತು ಅವರ ಇರುವಿಕೆಯನ್ನು ಹೇಳಿದ್ದಾರೆ. ಜ್ಞಾನಿ ಮಾತ್ರ ಜ್ಞಾನಿಯನ್ನು ಗುರುತಿಸಬಲ್ಲ. ಹಾಗೆಯೇ ಸಕಲ ತನುಗಳಲ್ಲಿ ತನ್ಮಯವಾದ ಮಹಾಜ್ಞಾನವನ್ನು ಕಂಡು ಆ ತನುಗಳನ್ನು ಗೌರವಿಸುತ್ತಾನೆ. ಆದರದಿಂದ ನಮಿಸುತ್ತಾನೆ. ಶರಣು ಶರಣಾರ್ಥಿ ಎಂದು ಹಣೆಮಣಿಯುತ್ತಾನೆ.

ತಾನು ಜ್ಞಾನಿಯೆಂದು ನಿಲುವಂಗಿ ಹಾಕಿಕೊಂಡು ಶಿಲುಬೆ ಧರಿಸಿದಾತ ಜ್ಞಾನಿಯಲ್ಲ. ಲಿಂಗ ಜನಿವಾರ ಧರಿಸಿಕೊಂಡು ತ್ರಿಕಾಲದಲ್ಲಿ ಸಂಧ್ಯಾವಂದನೆಗಳನ್ನು ಮಾಡುವಾತನೂ ಜ್ಞಾನಿ ಅಲ್ಲ. ಗಡ್ಡ ಬಿಟ್ಟು ಐದುಬಾರಿ ಪ್ರಾರ್ಥಿಸುವಾತನೂ ಜ್ಞಾನಿ ಅಲ್ಲ.

ತನುವಿನಲ್ಲಿಯೇ ತನ್ಮಯವಾದ ಜ್ಞಾನಿಯನ್ನು ತನುವನ್ನು ಆವರಿಸಿದ ಮನದಿಂದ ಕಂಡುಕೊಂಡು ಆ ಮನವನ್ನೇ ಭಕ್ತನನ್ನಾಗಿಸಿಕೊಂಡು ಭಕ್ತಿ ಮಾಡುವಾತ ಜ್ಞಾನಿ.

ಓದಿ ಜ್ಞಾನ ಪಡೆದಾತ ಜ್ಞಾನಿಯಲ್ಲ. ಓದಿನ ಓದು ತನುವನ್ನು ಉಗ್ರಾಣವನ್ನಾಗಿಸಿಕೊಂಡು ತನುವಿನಲ್ಲಿಯೇ ಸಂಗ್ರಹವಾಗುತ್ತದೆ. ತನು ಅಜ್ಞಾನದಿಂದ ಆಪತ್ಕಾಲಕ್ಕೆ ಈಡಾದಾಗ ಓದಿಕೊಂಡ ಓದು ತನುವಿನ ಬಳಕೆಗೆ ಬರುವುದಿಲ್ಲ. ಜಪ ತಪ ಪೂಜೆ ಪ್ರದಕ್ಷಿಣೆಗಳಿಂದ ಜ್ಞಾನಿಯಾಗುವುದಿಲ್ಲ. ಜ್ಞಾನವೆಂಬುದು ಆಚಾರದಿಂದ ಬರುವುದಿಲ್ಲ. ಅದು ಅಗೋಚರ ಆಚಾರದಿಂದ ಮಾತ್ರ ಬರುತ್ತದೆ.

ನೋಡುವಾಗ ಅಜ್ಞಾನದಿಂದ ನೋಡಿದೆನೆಂದು ತನುವಿಗೆ ಅರಿವಾಗುತ್ತದೆ. ಅಜ್ಞಾನದ ನೋಟಕ್ಕೆ ಜ್ಞಾನದ ನೋಟ ಬೋಧೆ ಮಾಡುತ್ತದೆ. ಬೋಧೆ ಮಾಡುವ ಆ ನೋಟದಿಂದಲೇ ನೋಡುವುದನ್ನು ಕಲಿತರೆ ಅಜ್ಞಾನದ ನೋಟ ತನಗೆ ತಾನೆ ಉದುರಿ ಬೀಳುತ್ತದೆ. ಹೀಗೆ ಮಾಡುವ ಕಣ್ಣಿನ ಕಾಯಕ ಯಾವ ಕಣ್ಣಿಗೂ ಕಾಣುವುದಿಲ್ಲ. ತನಗೆ ಮಾತ್ರ ಕಾಣುತ್ತದೆ. ಹೀಗಾಗಿ ಜಗದಲ್ಲಿರುವ ತನುಗಳ ಆಚಾರವೆಲ್ಲ ಗೋಚರದ ಆಚಾರಗಳು. ನಾವು ಜ್ಞಾನಿಗಳು ಎಂದು ಸಕಲ ಕಾಯಗಳಿಗೆ ತೋರುವ ಆಚಾರಗಳು. ಈ ಆಚಾರದಲ್ಲಿ ನಿರತವಾದ ಕಾಯಗಳೆಲ್ಲ ಜ್ಞಾನಿಗಳಲ್ಲವೆಂದು ಸಿದ್ಧರಾಮ ಶಿವಯೋಗಿಗಳು ಘೋಷಿಸಿದ್ದಾರೆ.

ಆಚಾರವಂತರೆಲ್ಲ ಆಚಾರದ ರೂಢಿಯಲ್ಲಿ ಇರುವವರು. ಜ್ಞಾನಿ ಪೂಜಿಸುವುದಿಲ್ಲ, ಆಲಯಗಳಿಗೆ ಹೋಗುವುದಿಲ್ಲ, ಲಿಂಗ ಜನಿವಾರ ಶಿಲುಬೆಗಳನ್ನು ಧರಿಸುವುದಿಲ್ಲ. ಕೊರಳಲ್ಲಿ ರುದ್ರಾಕ್ಷಿ ಹಾಕಿಕೊಂಡು ಜಪ ಮಾಡುವುದಿಲ್ಲ. ಧ್ಯಾನ ಮಾಡುವುದಿಲ್ಲ. ಜ್ಞಾನಿಗೆ ಯಾವ ರೂಢಿಯೂ ಇರುವುದಿಲ್ಲ. ಏಕೆಂದರೆ ಆತ ಆರೂಢ. ಕಂಡಕಂಡವರ ಆಚರಣೆಗಳು ಆತನಿಗೆ ವರ್ಜ್ಯ. ಜ್ಞಾನಿಯ ಆಚಾರ ಅಗೋಚರ ಆಚಾರ.

ಸಕಲರನ್ನು ತನ್ನಂತೆ ನೋಡುತ್ತಾನೆ. ಸಕಲ ಶಬ್ದಗಳನ್ನು ಅರಿವಿನಿಂದ ಕೇಳುತ್ತಾನೆ. ಅರಿವಿನಿಂದ ಮುಟ್ಟುತ್ತಾನೆ. ಅರಿವಿನಿಂದ ಮೂಸಿಸುತ್ತಾನೆ. ಅರಿವಿನಿಂದ ರುಚಿಸುತ್ತಾನೆ. ಬೈಗುಳನ್ನು ಹೊಗಳಿಕೆಯನ್ನು ಸಮರಸದಿಂದ ಆಲಿಸುತ್ತಾನೆ. ಬೈಗುಳಿಗೆ ಕುಗ್ಗುವುದಿಲ್ಲ; ಹೊಗಳಿಕೆಗೆ ಹಿಗ್ಗುವುದಿಲ್ಲ. ಏಕೆಂದರೆ ಆತ ಪರಮಹಂಸ! ಹಂಸ ಕ್ಷೀರ ನ್ಯಾಯ ಆತನದು.

ಕೇದಾರಯ್ಯಾ ಈ ವಿಷಯ ನಿನಗೆ ಗೊತ್ತಿದ್ದರೆ ಹೇಳು; ಗೊತ್ತಿಲ್ಲದಿದ್ದರೆ ಕೇಳು. ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು ಸಾಮಾನ್ಯನಲ್ಲ.

ಆತ ಸಕಲ ತನುಗಳಲ್ಲಿ ತನ್ಮಯವಾದ ಅರಿವಿನ ದೇವರು. ಆತನ ಸಾನ್ನಿಧ್ಯದಲ್ಲಿದ್ದ ನಾನು ಆ ಅರಿವೆಂಬ ಗುರುದೇವರ ವೃತ್ತಾಂತವನ್ನು ನಿನಗೆ ಹೇಳುವೆ ಎಂದು ಸಿದ್ಧರಾಮ ಶಿವಯೋಗಿಗಳು ನುಡಿದಿದ್ದಾರೆ. ಇದು ಕೇದಾರಯ್ಯನಿಗೆ ಮಾತ್ರ ಹೇಳುವ ಮಾತಲ್ಲ. ಸಕಲ ಓದುಗರಿಗೂ ಹೇಳುವ ಮಾತು!

**551**

**ತಂಡತಂಡದ ಅಜಾಂಡದ ಹಾಹೆಗಳ**
**ಒಂದೊಂದರ ಒಂದೊಂದರ ಕ್ರಿಯಾಳಾಪದಂದುಗ ಸಮನಿಸದೆ**
**ಹಿಂದುಮುಂದರ ಸಂದು ಹರಿದು ಎಂದಿಪ್ಪೆನಯ್ಯಾ.**
**ಶಿವಭಕ್ತಿಯಲ್ಲಿ ಅವ್ಯಯ ಆಲಯದಲ್ಲಿ ಆನಂದ ಕ್ರಿಯಾಳಾಪವ**
**ಹಾಡುತ್ತ ನಲಿನಲಿದಾಡುತ್ತ ಎಂದಿಪ್ಪೆನಯ್ಯಾ?**
**ನಿನ್ನ ನೆನಹಿನ ಸಂಯೋಗ ಸಂಗಸುಖದಲ್ಲಿ ಎಂದಿಪ್ಪೆನಯ್ಯಾ?**
**ಶುದ್ಧದ ಒಳಿತೆಯೆಂಬ ಮನೆಯಲ್ಲಿ**
**ತ್ವಂಪದ ಸೀಮೆಯ ಮೀರಿ ಎಂದಿಪ್ಪೆನಯ್ಯಾ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಒಂದೊಂದು ದೇಹ ಒಂದೊಂದು ತರಹ. ಒಂದು ಇದ್ದಂತೆ ಮತ್ತೊಂದು ಇಲ್ಲ. ವಿಧವಿಧದ ಬೊಂಬೆಗಳು ಈ ಬ್ರಹ್ಮಾಂಡದ ತುಂಬಾ ತಂಡ ತಂಡಗಳಾಗಿ ವ್ಯಾಪಿಸಿವೆ. ದೇಹ ಒಂದೇ ಆದರೂ ಹೆಣ್ಣೆಂದು ಗಂಡೆಂದು ಹೆಸರು ಪಡೆದಿವೆ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಅದರ ವ್ಯವಹಾರ ಒಂದೇ ಆದರೂ ಕೂಡಾ ಆಯಾ ಬೊಂಬೆಗಳ ಕ್ರಿಯಾ ಆಲಾಪವೇ ಬೇರೆಯಾಗಿದೆ. ಒಂದರಂತೆ ಒಂದಿಲ್ಲ. ಸಮರಸಭಾವ ಹುಡುಕಿದರೂ ಸಿಗದು.

ಜಾತಿ ಮತ ಪಂಥಗಳು, ಶ್ರೀಮಂತ ಬಡವ ಭಿಕ್ಷುಕ ಪಂಡಿತ ಪಾಮರ ರಾಜ ಮಂತ್ರಿ ಸೈನಿಕ ಕಾಲಾಳು ದಾಸಿ ಸೇವಕ ಎನ್ನುವ ಅಜ್ಞಾನದಿಂದ ಭರಿತವಾಗಿದೆ. ನಾ ಮುಂದು ನಾ ಹಿಂದು ಎನ್ನುವ ಅವಿವೇಕ ಕಣ ಕಣದಲ್ಲಿ ರಾರಾಜಿಸುತ್ತದೆ. ಅಜ್ಞಾನದ ಕಣಕಣದ ಹಿಂದೆ ಜ್ಞಾನವೂ ಭರಿತವಾಗಿ ಇಡೀ ತನುವನ್ನು ಬೆಳಗುತ್ತಲಿದೆ.

ಅಜ್ಞಾನದ ಕತ್ತಲನ್ನು ಹರಿದು ಜ್ಞಾನದ ಬೆಳಕಿನ ಮೂಲಕ ಇಡೀ ದೇಹವನ್ನು ಎಂದು ಬೆಳುಗುವೆಯಯ್ಯಾ? ಅಜ್ಞಾನದ ಕತ್ತಲೆಯನ್ನು ಕಳೆದುಕೊಂಡು ನಿನ್ನ ಜ್ಞಾನದ ಬೆಳಕಿನಲ್ಲಿದ್ದು ಬೆಳಗುವ ಭಾಗ್ಯ ನನಗೆ ಎಂದು ಕರುಣಿಸುವೆಯಯ್ಯಾ?

ಜ್ಞಾನದೇವನೇ, ಶಿವನೇ, ನಿನ್ನನ್ನು ಹೊತ್ತುಕೊಂಡು ನಿನ್ನನ್ನು ಹುಡುಕುತ್ತಾ ಪುಣ್ಯ ಕ್ಷೇತ್ರಗಳಿಗೆ ಅಲೆಯುತ್ತಿರುವ ಅಜ್ಞಾನಿ ನಾನು. ನನ್ನ ಅಂಗದಲ್ಲಿ ನೀನು ಸಂಗಮವಾಗಿ ನನಗೆ ಪಾಠ ಮಾಡುತ್ತಿದ್ದರೂ ಆ ಉಪದೇಶವನ್ನು ಆಲಿಸದ ದೌರ್ಭಾಗ್ಯನು ನಾನು. ನಿನ್ನ ನೆನಹಿನ ಸಂಯೋಗ ಸಂಗಸುಖದಲ್ಲಿ ಎಂದಿಪ್ಪೆನಯ್ಯಾ ?

ಕಾಯವನ್ನು ಕೈಲಾಸವನ್ನಾಗಿಸಿಕೊಂಡು ಆ ಕಾಯದಲ್ಲಿಯೇ ಪವಡಿಸಿರುವ ನಿನ್ನನ್ನು, ಕಾಯವನ್ನು ಆವರಿಸಿದ ಮನವೆಂಬ ನಾನು ಅರಿಯದೇ ಹೋದೆನಲ್ಲ ಶಿವನೆ, ತ್ವಂಪದ ಸೀಮೆಯ ಮೀರಿ ಎಂದಿಪ್ಪೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**552**

**ತಂದೆಯೊಡನುಂಡ ಶಿಶು ತಾಯಿಯೊಡನುಣ್ಣದೆ?**
**ಮನೆಯಲುಂಡ ಮಿತ್ರನು ತನ್ನ ಮಿತ್ರನಲ್ಲುಣ್ಣನೆ?**
**ಇದು ಕಾರಣ,**
**ಅಲ್ಲಮಯ್ಯನ ಬೋಧೆಯನು, ತಮ್ಮ ಬೋಧೆಯನು**
**ಕೇಳುವ ಬಾಲರಿಗೆ ಜನನೀಜನಕರ ಭೋಜನ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜನಾ.**

ತಂದೆ ತಾಯಿಗಳು ಮಾಂಸಪಿಂಡಕ್ಕೆ ಜನ್ಮ ಕೊಡುತ್ತಾರೆ. ಅವರ ಮೋಹದಿಂದಾಗಿ ಕಾಮಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಅರಿಷಡ್ವರ್ಗಗಳು, ಸಪ್ತ ವ್ಯಸನಗಳು ಅಷ್ಟಮದಗಳು ಸಾತ್ವಿಕ ರಾಜಸ ತಾಮಸ ಗುಣಗಳು ಮಾಂಸ ಪಿಂಡವೆಂಬ ತನುವಿನಲ್ಲಿ ಜಾಗ್ರತಗೊಂಡು ಮನದಿಂದ ಸೃಷ್ಠಿಯಾಗಿವೆ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಮನೆ ಮಾಡಿಕೊಂಡು ಅವುಗಳ ಮೂಲಕ ಒಳ ಹೊರಗೆನ್ನದೆ ಅಜ್ಞಾನ ವ್ಯಾಪಿಸಿ ಇಡೀ ತನುವನ್ನೇ ತಮ್ಮ ಸಾಮ್ರಾಜ್ಯವನ್ನಾಗಿಸಿಕೊಂಡಿವೆ. ತಂದೆ ತಾಯಿಗಳು ಉಣಬಡಿಸಿದ ಮೋಹದ ಭೋಜನದಿಂದ ಶಿಶುವಿನಲ್ಲಿ ಈ ಶಕ್ತಿಗೆ ಬಲ ಬಂದಿದೆ. ಇದರಿಂದ ತನುವಿನಲ್ಲಿ ಜನನ-ಮರಣಗಳ ಬಾಧೆಯೂ ಪ್ರಾಪ್ತವಾಗಿದೆ.

ತನುವಿಗೆ ಜನ್ಮ ನೀಡಿ ತನುವಿನ ಜನನ ಮರಣಗಳೆಂಬ ಅಜ್ಞಾನದ ರೋಗವನ್ನು ಕಳೆಯುವ ಸದಾ ಅರಿವಿನ ಭೋಜನವನ್ನು ಉಣಬಡಿಸುವ, ಅರಿವಿನ ತಂದೆ ತಾಯಿ ತನುವಿನಲ್ಲಿಯೇ ತನ್ಮಯವಾಗಿದ್ದಾನೆ. ಈ ತಂದೆಯೊಡನೆ ಅರಿವಿನ ಊಟ ಉಣ್ಣಬೇಕೆಂಬ ಬಯಕೆ ಶಿಶುವಿಗೆ ಇಲ್ಲ. ಮನವೆಂಬ ತಾಯಿಗೆ ಶಿಶುವಿನ ತಂದೆಯಪರಿಚಯವಿಲ್ಲ. ಶಿಶುವಿಗೆ ಅರಿವಿನ ತಂದೆಯ ಪರಿಚಯವಿಲ್ಲ.

ತಂದೆ ತಾಯಿಗಳಿಂದ ಜನ್ಮ ಪಡೆದ ಮಾಂಸ ಪಿಂಡವೆಂಬ ತನುವಿಗೆ, ಅರಿವಿಗೆ ಜನ್ಮ ನೀಡಿದ ತಂದೆಯ ಪರಿಚಯವಾಗದೆ ಅನಂತ ಕಾಲಗಳನ್ನು ವ್ಯರ್ಥವಾಗಿ ಕಳೆಯುತ್ತಾ ಒಮ್ಮೆ ಮೃತ್ಯುವಿಗೆ ತುತ್ತಾಗುತ್ತದೆ. ತನುವನ್ನು ಆವರಿಸಿದ ಮನವೆಂಬ ಸತಿಗೆ ಅರಿವಿನ ಪತಿಯ ಪರಿಚಯವಿಲ್ಲ. ಸತಿ ಪತಿಗಳಿಬ್ಬರ ಘರ್ಷಣೆಯಲ್ಲಿ ತನುವೆಂಬ ಶಿಶು ಬಡವಾಗುತ್ತಲಿದೆ. ಮಾಂಸಪಿಂಡಕ್ಕೆ ಜನ್ಮ ನೀಡಿದ ತಂದೆ ತಾಯಿಗಳಿಗೆ ಈ ವೃತ್ತಾಂತವೇ ಗೊತ್ತಿಲ್ಲ. ಇಂತಹ ಬಡಪಾಯಿ ಶಿಶುವಿಗೆ ನಿಜ ತಂದೆ ತಾಯಿಗಳನ್ನು ಗೊತ್ತು ಮಾಡಿಸುವ ಗುರುದೇವನ ದರುಶನವಾದರೆ ಸಾಕು ಆ ಶಿಶುವೇ ಧನ್ಯ.

ಅಲ್ಲಮಯ್ಯನ ಬೋಧೆಯನು, ತಮ್ಮ ಬೋಧೆಯನು ಕೇಳುವ ಬಾಲರಿಗೆ ಜನನೀ ಜನಕರ ಭೋಜನ ಕಾಣಾ, ಕಪಿಲಸಿದ್ಧ ಮಲ್ಲಿಕಾರ್ಜುನಾ:

ಜಗದಲ್ಲಿ ಜನ್ಮ ತಳೆದ, ಶಿಶುಗಳೆಲ್ಲ ನಿಜ ತಂದೆ ತಾಯಿಗಳನ್ನು ಕಾಣದೆ ಅನಾಥ ಶಿಶುಗಳಾಗಿ

ಅಜ್ಞಾನದಿಂದ ವಿಲವಿಲನೆ ಒದ್ದಾಡುತ್ತಲಿವೆ. ತನುವಿನಲ್ಲಿಯೇ ತನ್ಮಯವಾದ ಅರಿವಿನ ತಂದೆ ಹಗಲಿರುಳೆನ್ನದೆ ಕೈ ಮಾಡಿ ಕರೆದರೂ ತಂದೆಯೆನ್ನುವ ಪರಿಚಯವೇ ತನುವೆಂಬ ಶಿಶುವಿಗಿಲ್ಲ. ಏಕೆಂದರೆ ಮನವೆಂಬ ತಾಯಿಯ ಮೋಹದ ಸುಖ ದುಃಖಗಳನ್ನು ಉಣ್ಣುತ್ತಾ ತನು ವ್ಯರ್ಥ ಕಾಲ ಕಳೆಯುತ್ತಲಿದೆ. ಮನವೆಂಬ ತಾಯಿಗೆ ಶಿಶುವಿನ ತಂದೆಯ ಪರಿಚಯವಿಲ್ಲ.

''ಗಂಡ ಶಿವಲಿಂಗದೇವರ ಭಕ್ತ; ಹೆಂಡತಿ ಮಾರಿಮಸಣೆಯ ಭಕ್ತೆ, ಗಂಡ ಕೊಂಬುದು ಪಾದೋದಕ ಪ್ರಸಾದ, ಹೆಂಡತಿ ಕೊಂಬುದು ಸುರೆ ಮಾಂಸ, ಭಾಂಡ ಭಾಜನ ಶುದ್ಧವಿಲ್ಲದಿದ್ದರೆ ಹೆಂಡದ ಮಡಕೆಯ ಹೊರಗೆ ತೊಳೆದಂತೆ ಕೂಡಲ ಸಂಗಮದೇವಾ'' ತನುವೆಂಬ ಅನಾಥ ಶಿಶುವಿನ ಸ್ಥಿತಿ ಹೆಂಡದ ಮಡಕೆಯಂತೆ ಆಗಿದೆ ಎಂದು ಬಸವಣ್ಣ ಹಾಡಿದ್ದಾರೆ.

ಅಲ್ಲಮಪ್ರಭುಗಳು ಗುರುದೇವನಾಗಿ ಬಂದು ಎನಗೆ ಬೋಧಿಸಲಾಗಿ, ನಾನು ಬಾಲನಾಗಿ ಕೇಳಿದೆ. ಜನನೀ ಜನಕರ ಅರಿವಿನ ಭೋಜನ ಎನಗೆ ಲಭಿಸಿತು. ಅಲ್ಲಮರ ಬೋಧೆ, ಜನನೀ ಜನಕರ ಬೋಧೆಯಲ್ಲಿ ವ್ಯತ್ಯಾಸವನ್ನು ಅರಿಯದಾದೆ. ಇಬ್ಬರ ಭೋಜನವೂ ಒಂದೇ ಆಗಿದೆ.

ಅರಿವಿನ ಭೋಜನವನ್ನು ಉಂಡ ಬಸವಣ್ಣ ಹೀಗೆಂದು ಹಾಡಿದ್ದಾರೆ.

''ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು, ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ; ಕೂಡಲಸಂಗಮದೇವಾ ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ನಿಮ್ಮ ಧರ್ಮ''

ತನುವಿನಲ್ಲಿಯೇ ತನ್ಮಯವಾದ ಅರಿವಿನ ತಂದೆ ತನುವಿನಲ್ಲಿ ಇದ್ದರೂ ತನು ಅನಾಥವಾಗಿತ್ತು. ತನುವನ್ನು ಆವರಿಸಿದ ಮನವೆಂಬ ತಾಯಿಯ ವಶದಲ್ಲಿತ್ತು. ತಾಯಿಯ ಮೋಹದ ಭೋಜನದಿಂದಾಗಿ ತಂದೆಯ ಅರಿವಿನ ಭೋಜನ ಶಿಶುವಿಗೆ ದೂರವಾಗಿತ್ತು. ಗುರುವಿನ ಭೋಜನದಿಂದಾಗಿ ತಂದೆ ತಾಯಿಗಳ ಅರಿವಿನ ಭೋಜನವೂ ಶಿಶುವಿಗೆ ಲಭ್ಯವಾಯಿತು.

ಅಲ್ಲಮಯ್ಯನ ಬೋಧೆಯನು, ತಮ್ಮ ಬೋಧೆಯನು ಕೇಳುವ ಜಗದ ಸಕಲ ಬಾಲರಿಗೆ ಜನನೀ ಜನಕರ ಭೋಜನ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಜಗದ ಸಕಲ ಬಾಲರಿಗೆ ಅರಿವಿನ ಭೋಜನದ ಮಹಾಸೂತ್ರವನ್ನೇ ಕರುಣಿಸಿದ್ದಾರೆ.

**553**

**ತರ್ಕವನು ಮೀರಿಪ್ಪ ತತ್ವ ಕ್ರೀಯಾಗಿಪ್ಪ**
**ಮತ್ತೆತ್ವಮಸಿಯ ಸೀಮೆ ಒಡಲಪ್ಪನೈ.**
**ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿಯ**
**ಮುಟ್ಟಿದ ಆರರ ಪರಿಯಿಂತುಟೈ.**
**ಕಪಿಲಸಿದ್ಧ ಮಲ್ಲಿಕಾರ್ಜುನನ**
**ಭಕ್ತಿಕ್ರೀಯನು ಕೂಡಿದಾತ ನಾನು.**

ಸಕಲ ಅಜ್ಞಾನವನ್ನು ಕಳೆದುಕೊಂಡ ಜ್ಞಾನಿ ತರ್ಕ ಮಾಡುವದಿಲ್ಲ; ತತ್ವವೇ ತಾನಾಗಿರುತ್ತಾನೆ. ತತ್ವಭರಿತವಾದ ತನುವೇ ತಾನೆಂದು ತನ್ನನ್ನು ತಾನೇ ತನ್ನಿಂದಲೇ ತಿಳಿಯುತ್ತಾನೆ.

ಭವಿತನವನ್ನು ಕಳೆದುಕೊಂಡ ಭಕ್ತನು ತಾನೇ ಆಗುತ್ತಾನೆ. ತನುವಿನಲ್ಲಿಯೇ ತನ್ಮಯವಾದ

ತತ್ವಕ್ಕೆ ತನುವನ್ನು ಆವರಿಸಿದ ಮನವನ್ನೇ ಭಕ್ತನನ್ನಾಗಿಸಿ ಭಕ್ತಿ ಮಾಡುತ್ತಾನೆ. ಆ ತತ್ವವೇತ್ತ ಜ್ಞಾನದಿಂದಲೇ ಮಾಹೇಶ್ವರನಾಗಿ ನಿಲ್ಲುತ್ತಾನೆ. ತನುವನ್ನು ಅಡ್ಡಿಪಡಿಸುವ ಸಕಲ ಸುಖ ದುಃಖಗಳನ್ನು ಪ್ರಸಾದದಂತೆ ಸ್ವೀಕರಿಸಿ ಪ್ರಸಾದಿ ಎಂದು ಕರೆಯಿಸಿಕೊಳ್ಳುತ್ತಾನೆ. ಪ್ರಾಣಕ್ಕೆ ಪ್ರಾಣವಾದ ಜ್ಞಾನವನ್ನು ಅರಿತು ಪ್ರಾಣಲಿಂಗಿ ಎಂದು ಕರೆಯಿಸಿಕೊಳ್ಳುತ್ತಾನೆ.

ಆರನ್ನು ಮುಟ್ಟಿ ಅರಿಷಡ್ವರ್ಗಗಳೆಂಬ ಆರು ಅಜ್ಞಾನಗಳನ್ನು ಕಳೆದುಕೊಳ್ಳುತ್ತಾನೆ.

ಕಪಿಲಸಿದ್ಧ ಮಲ್ಲಿಕಾರ್ಜುನನ ಭಕ್ತಿ ಕ್ರೀಯನು ಕೂಡಿದಾತ ನಾನು:

ಕ್ರಿಯೆಯಲ್ಲಿ ತೊಡಗದಾತ ಭಕ್ತನಲ್ಲ ಎಂದು ಲೋಕ ಜರಿಯುವುದು. ಇದು ಲೋಕದ ವಾಡಿಕೆ. ಲೋಕಕ್ಕೆ ಜ್ಞಾನಿ ಎಂದರೆ ಯಾರು? ಆತ ಹೇಗಿರುತ್ತಾನೆ? ಎಂಬ ವಿಚಾರ ತಿಳಿಯದು. ಜ್ಞಾನಿ ಪರಿಚಯ ಜ್ಞಾನಿಗೆ ಮಾತ್ರ ಆಗುತ್ತದೆಯೇ ಹೊರತು ಲೋಕಕ್ಕೆ ಆಗುವುದಿಲ್ಲ. ಲೋಕಕ್ಕೆ ಜ್ಞಾನಿಯನ್ನು ಕಂಡುಕೊಳ್ಳಲು ಸಾಧ್ಯವಿಲ್ಲ.

ಜ್ಞಾನಿಯೆಂದರೆ ಜಪತಪಗಳನ್ನು ಮಾಡುವ ಸಾಧಕನಲ್ಲ. ತನ್ನನ್ನು ತಾನೇ ತಿಳಿದುಕೊಂಡವ. ತನುವಿನಲ್ಲಿಯೇ ತನ್ಮಯವಾದ ಜ್ಞಾನಿಯನ್ನು ತನುವನ್ನು ಆವರಿಸಿದ ಮನದಿಂದಲೇ ದರ್ಶನ ಮಾಡಿಕೊಂಡಾತ. ಆ ಮನವನ್ನೇ ಘನಮನವನ್ನಾಗಿಸಿಕೊಂಡು ಘನವನ್ನು ಘನದಲ್ಲಿ ಬೆರಸಿದಾತ. ಘನವೇ ತಾನಾದಾತ. ಸಕಲ ತರ್ಕಗಳನ್ನು ಮೀರಿದಾತ. ತತ್ವವೇ ಕ್ರಿಯಾದಾತ. ಒಡಲೊಳಗಿದ್ದ ತತ್ವವನ್ನು ಒಡಲನ್ನಾವರಿಸಿದ ಮನದಿಂದಲೇ ಅರಿತು ತತ್ವವೇತ್ತ ಒಡಲಾಗಿ ನಿಂತಾತ.

**554**

**ತಟ್ಟುವ ಮುಟ್ಟುವ ಭೇದವನು**
**ತಟ್ಟದೆ ಮುಟ್ಟದೆ ಅರ್ಪಿಸುವಾನಂದವನು,**
**ಅರ್ಪಿತವಿಲ್ಲದೆ ಎಯ್ದುವ ತೃಪ್ತಿಯನು,**
**ತೃಪ್ತಿಯಲಾದ ಪರಿಣಾಮವನು,**
**ಪರಿಣಾಮದಲಾದ ಪ್ರಸನ್ನತೆಯನು,**
**ಪ್ರಸನ್ನತೆಯಲಾದ ಪ್ರಸಾದವನು ಕೊಂಡು**
**ನಿತ್ಯರಾಗಿಪ್ಪವರ ಎನಗೆ ತೋರಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ನಿಮ್ಮ ಧರ್ಮ.**

ಕೀಚಕನಿಗೆ ದ್ರೌಪದಿಯನ್ನು ಮುಟ್ಟಿ ತಟ್ಟಿ ಆನಂದಪಡುವ ಬಯಕೆಯಾಯಿತು. ಭೀಮನಿಂದ ಪ್ರಾಣ ಕಳೆದುಕೊಂಡ. ಕೀಚಕನ ಮುಟ್ಟುವಿಕೆ ತಟ್ಟುವಿಕೆ ದ್ರೌಪದಿಗೆ, ಭೀಮನಿಗೆ ಹಾಗೂ ಲೋಕಕ್ಕೆ ಅಸಹ್ಯವೆನ್ನಿಸಿತು.

ಒಂದು ಚರ್ಮ ಮತ್ತೊಂದು ಚರ್ಮವನ್ನು ತಟ್ಟಿದರೆ ಮುಟ್ಟಿದರೆ ಸುಖವೂ ಇದೆ; ದುಃಖವೂ ಇದೆ. ಕೀಚಕ ಮುಟ್ಟಲು ಹೋದದ್ದಕ್ಕಾಗಿ ಆತನಿಗೆ ಸುಖವಾಯಿತು. ದ್ರೌಪದಿಗೆ ಭೀಮನಿಗೆ ದುಃಖವಾಯಿತು. ಲೋಕ ಕೂಡಾ ಈ ಸನ್ನಿವೇಶವನ್ನು ಖಂಡಿಸಿತು.

ರಾವಣ ಸೀತೆಯನ್ನು ಮುಟ್ಟಲು ಹೋಗಿ ಕೀಚಕನಂತೆ ಪ್ರಾಣ ಕಳೆದುಕೊಂಡ. ಸೀತೆಯನ್ನು ಮಡಿವಾಳ ಅಪವಿತ್ರೆ ಎಂದು ನುಡಿದ; ಲೋಕ ಮೌನದಿಂದ ಸಮ್ಮತಿಸಿತು. ಪುನಃ ಶ್ರೀರಾಮ ತುಂಬು ಗರ್ಭಿಣಿ ಸೀತೆಯನ್ನು ಅಪವಿತ್ರೆ ಎಂದು ಕಾಡಿಗೆ ಅಟ್ಟಿದ.

ಮುಟ್ಟುವಿಕೆ ತಟ್ಟುವಿಕೆ ಲೋಕದಲ್ಲಿ ಇತಿಹಾಸವನ್ನೇ ನಿರ್ಮಾಣ ಮಾಡಿತು. ಚರಿತ್ರೆಯನ್ನೇ ನಿರ್ಮಾಣ ಮಾಡಿತು.

ಕೌಶಿಕ ಮಹಾರಾಜ ಅಕ್ಕಮಹಾದೇವಿಯ ಪತಿ. ಲೋಕಕ್ಕೆ ಅಕ್ಕಮಹಾದೇವಿ ಸತಿ. ಆದರೆ ಅಕ್ಕ ಆಕೆಯ ಅಂತರಾಳದಲ್ಲಿಯೇ ಇದ್ದ ಚೆನ್ನ ಮಲ್ಲಿಕಾರ್ಜುನನನ್ನು ಅರಿವಿನ ಪತಿಯಾಗಿಸಿಕೊಂಡಿದ್ದಳು. ಲೋಕದ ಪತಿ ಕೌಶಿಕನನ್ನು ಮುಟ್ಟಲಿಲ್ಲ ತಟ್ಟಲಿಲ್ಲ. ಅಂತರಾಳದ ಅರಿವಿನ ಪತಿ ಚೆನ್ನಮಲ್ಲಿಕಾರ್ಜುನನಿಗೆ ತನುವನ್ನು ಆವರಿಸಿದ ಮನವನ್ನೇ ಸತಿಯಾಗಿಸಿದಳು. ತಟ್ಟದೆ ಮುಟ್ಟದೆ ಅವರಿಬ್ಬರೂ ಸತಿಪತಿಗಳಾದರು. ಅಕ್ಕ ತನುವನ್ನೇ ಮನೆಯನ್ನಾಗಿಸಿಕೊಂಡಳು. ಮಲ್ಲಿಕಾರ್ಜುನನಿಗೆ ತನ್ನನ್ನು ತಾನು ಅರ್ಪಿಸಿಕೊಂಡಳು.

ತಟ್ಟದೆ ಮುಟ್ಟದೆ ಅರ್ಪಿಸುವಾನಂದವನು, ಅರ್ಪಿತವಿಲ್ಲದೆ ಎಯ್ದುವ ತೃಪ್ತಿಯನು, ತೃಪ್ತಿಯಲಾದ ಪರಿಣಾಮವನು, ಪರಿಣಾಮದಲಾದ ಪ್ರಸನ್ನತೆಯನು, ಪ್ರಸನ್ನತೆಯಲ್ಲಿ ಉಂಟಾದ ಪ್ರಸಾದವನ್ನು ಕೊಂಡು ತನುವಿನ ಮನೆಯಲ್ಲಿಯೇ ನಿತ್ಯರಾದರು. ಸತ್ಯರಾದರು. ಪರಮ ಸತ್ಯದ ನಿತ್ಯತೃಪ್ತಿಯನ್ನು ಹೊಂದಿದರು. ಇದೇ ನಿಜವಾದ ಅರಿವಿನ ಧರ್ಮ. ಸಕಲ ತನುಗಳ ಧರ್ಮವೆಂದು ಸಾರಿದರು.

ಲೌಕಿಕ ಪತಿ ಕೌಶಿಕ ಅಕ್ಕಮಹಾದೇವಿಯ ಅಂತರಾಳದ ನಿಜಧರ್ಮವನ್ನು ಅರಿಯಲಿಲ್ಲ. ಕಾಮುಕನಂತೆ ಕಾಯವನ್ನು ತಟ್ಟಿ ಮುಟ್ಟಿ ಸುಖಿಸಲು ಹೋದ. ಅಕ್ಕ ಕೂಡಲೇ ಕಾಯಕ್ಕೆ ಸುತ್ತಿದ ವಸ್ತ್ರವನ್ನು ಕಳಚಿದಳು. ಈ ಕಾಯವನ್ನು ಸುಖಿಸಬೇಕೆಂಬ ಆಸೆ ನಿನಗೊಬ್ಬನಿಗೇ ಇಲ್ಲ. ಇಡೀ ಲೋಕಕ್ಕೆ ಇದೆ. ಕಾಯವನ್ನು ಕಾಯ ತಟ್ಟಿ ಮುಟ್ಟಿ ಸುಖಿಸುವ ಆಸೆ ಲೋಕದ ಧರ್ಮವಾಗಿದೆ.

ಕಾಯದಲ್ಲಿಯೇ ಸಂಗಮವಾದ ಜ್ಞಾನ ದೇವನನ್ನು ಕಾಯವನ್ನು ಆವರಿಸಿದ ಮನೋಕಾಯದ ಮೂಲಕ ಮುಟ್ಟಿ ತಟ್ಟಿ ಪರಮ ಸುಖವನ್ನು ಹೊಂದುತ್ತಾ ಆ ಜ್ಞಾನದೇವನಿಗೆ ಶರಣಾಗತನಾಗುವುದು ಶರಣನ ಕಾಯಕ.

ಬಸವಣ್ಣ ಮತ್ತು ನೀಲಾಂಬಿಕೆ ಲೋಕದ ದೃಷ್ಟಿಯಲ್ಲಿ ಸತಿಪತಿಗಳಾಗಿದ್ದರೂ ಕೂಡಾ ''ಸತಿ ಎನ್ನಬಹುದೆ ಬಸವನು ಎನಗೆ? ಪತಿ ಎನ್ನಬಹುದೆ ಬಸವನನು ಆನು? ಬಸವನು ಎನಗೆ ಶಿಶುವಾದ; ಆನು ಬಸವನಿಗೆ ಶಿಶುವಾದೆ'' ಎನ್ನುತ್ತಾಳೆ ನೀಲಾಂಬಿಕೆ.

''ಶರಣ ಸತಿ ಲಿಂಗ ಪತಿ'' ಇದು ಸುಂದರವಾದ ಸೂತ್ರ. ಅಂಗದ ಮೇಲೆ ಧರಿಸಿದ ಲಿಂಗ ಲಿಂಗವಲ್ಲ; ಅಂಗದಲ್ಲಿಯೇ ಸಂಗಮವಾದ ಅರಿವೇ ಲಿಂಗ. ಅಂಗವನ್ನು ಆವರಿಸಿದ ಮನವೇ ಸತಿ. ಲಿಂಗಯ್ಯನೆಂಬ ಪತಿದೇವನಿಗೆ ಸತಿಯಾಗಿ ಶರಣಾಗತನಾಗುವ ಮನವೇ ಶರಣ.

ಸತಿ ಪತಿಗಳಿಬ್ಬರೂ ಕಾಯವನ್ನೇ ಕೈಲಾಸವನ್ನಾಗಿಸಿಕೊಂಡು ಪ್ರಸನ್ನತೆಯಿಂದ ನಿತ್ಯ ತೃಪ್ತರಾಗಿರುವುದೇ ಕಾಯದ ಧರ್ಮ. ಸದಾ ಈ ಕಾಯಕದಲ್ಲಿ ನಿರತವಾದ ಕಾಯವೇ ಕೈಲಾಸ!

**555**

**ತಟ್ಟುವ ಮುಟ್ಟುವ ಭೇದವನೊಲ್ಲ; ಅದೇನು ಕಾರಣ?**
**ಐದಾರು ಪ್ರಸಾದದಲ್ಲಿ ಈರೈದು ಪಾದೋದಕದಲ್ಲಿ ಸಂಪನ್ನನಾಗಿ**
**ಅವನ ಲಿಂಗತನುವೆನ್ನದಿರಿ ಕಂಡಿರೆ, ಅದು ಪ್ರಸಾದತನು.**
**ಆತನ ಮಸ್ತಕದಲ್ಲಿ ಒಪ್ಪಿಪ್ಪ ಲಿಂಗದ ಗುಣದಿಂದ,**
**ಆತನು ಲಿಂಗತನುವಾದನ್ನೆಸಲ್ಲದೆ**

**ಆತನು ಸಾಕ್ಷಾತ್ ಪ್ರಸಾದತನು ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

'ಲಿಂಗತನು', 'ಪ್ರಸಾದತನು', ಲಿಂಗತನುವಿಗೆ ಭಕ್ತಿ ಮಾಡುವ 'ಭಕ್ತತನು'ವೆಂದು ತನುವಿನಲ್ಲಿಯೇ ಮೂರು ಭಾಗಗಳನ್ನು ಮಾಡಬಹುದಾಗಿದೆ. ಇದು ಶರಣರು ಕಂಡುಹಿಡಿದ ಸುಲಭದ ಜ್ಞಾನ ಶಿಕ್ಷಣ.

ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಪ್ರಸಾದತನು ಲಿಂಗತನುವನ್ನು ಮಾತ್ರ ತೆಗೆದುಕೊಂಡಿದ್ದಾರೆ. ತನುವನ್ನು ಆವರಿಸಿದ ಮನೋತನುವು ಇಲ್ಲಿ ಸಹಜವಾಗಿಯೇ ಲಿಂಗ ತನುವಿಗೆ ಭಕ್ತನಾಗಿದೆ. ಇಂತಹ ತನುವಿಗೆ ಯಾವ ಶಿಕ್ಷಣದ ಅವಶ್ಯಕತೆಯೂ ಇಲ್ಲ. ಬೇಕಾಗಿಯೂ ಇಲ್ಲ. ಏಕೆಂದರೆ ಮರದಂತೆ, ಲಿಂಗತನು ಪ್ರಸಾದತನು ಭಕ್ತತನುಗಳು ತನುವಿನಲ್ಲಿ ಒಂದಾಗಿವೆ. ಮೂರೊಂದಾದ ಘನವು ಆಗಿದೆ. ಅದು ತಂತಾನೆ ಇದೆ. ಆದರೆ ಕ್ರಮಶಿಕ್ಷಣವೆಂಬುದು ಆ ತನುವಿಗೆ ಇಲ್ಲ ಅಷ್ಟೆ. ತನು ಸಹಜವಾಗಿ ಜ್ಞಾನಿಯೇ ಆಗಿರುವಾಗ ಆ ತನುವಿಗೆ ಶಿಕ್ಷಣವಾದರೂ ಯಾಕೆ ಬೇಕು?

ಸಹಜ ತನುವಿಗೆ ಲಿಂಗತನುವೆಂಬುದು ಗೊತ್ತಿಲ್ಲ; ಪ್ರಸಾದ ತನುವೆಂಬುದು ಗೊತ್ತಿಲ್ಲ; ಭಕ್ತ ತನುವೆಂಬುದು ಗೊತ್ತಿಲ್ಲ. ಈ ಮೂರೂ ಗೊತ್ತುಮಾಡಿಕೊಂಡು ಸಹಜ ತನುವಾಗುವುದೊಂದು ಕ್ರಮಬದ್ಧ ಶಿಕ್ಷಣ. ಅದು ಜನ್ಮದಿಂದಲೂ ಸಹಜವಾಗಿಯೇ ಇದೆ.

ನೋಡುವ ಕಂಗಳಲ್ಲಿ ಭೇದವಿಲ್ಲ, ಕೇಳುವ ಕಿವಿಗಳಲ್ಲಿ ಭೇದವಿಲ್ಲ, ಮೂಸಿಸುವ ಮೂಗಿನಲ್ಲಿ ಭೇದವಿಲ್ಲ, ಮುಟ್ಟುವ ಚರ್ಮದಲ್ಲಿ ಭೇದವಿಲ್ಲ, ರುಚಿಸುವ ನಾಲಿಗೆಯಲ್ಲಿ ಭೇದವಿಲ್ಲ, ಭಾವಿಸುವ ಭಾವದಲ್ಲಿ ಭೇದವಿಲ್ಲ, ಪ್ರಸಾದ ಪಾದೋದಕವೆಂಬ ಪದಗಳ ಪರಿಚಯವೇ ಸಹಜ ತನುವಿಗೆ ಇಲ್ಲ; ಅದು ಬೇಕೂ ಆಗಿಲ್ಲ. ಹೀಗಾಗಿ ತಟ್ಟುವ ಮುಟ್ಟುವ ಭೇದವಿಲ್ಲದೆ ಅದು ಸಹಜವಾಗಿಯೇ ಇದೆ. ಸಂಪನ್ನನಾಗಿಯೇ ಇದೆ.

ಸಹಜ ತನುವಿಗೆ ಲಿಂಗದ ಅವಶ್ಯಕತೆಯಿಲ್ಲ. ಏಕೆಂದರೆ ಅದು ಪ್ರಸಾದ ತನು. ಸಹಜ ತನು. ಆ ತನುವಿನಲ್ಲಿ ಸಹಜವಾಗಿಯೇ ಲಿಂಗದ ಗುಣಗಳಿವೆ. ಆ ಗುಣಗಳೆಲ್ಲ ಕಲ್ಪಿತ ಗುಣಗಳಲ್ಲ. ನಿರ್ಗುಣದಿಂದ ಹೊರಹೊಮ್ಮುವ ಲಿಂಗ ನುಡಿಗಳು.

ತೋರಿಕೆಗಾಗಿ ಲಿಂಗ ತನುವೆಂದು ಕಂಡರೂ ಅದು ಸಹಜವಾಗಿ ಪ್ರಸಾದ ತನುವೇ ಆಗಿದೆ. ಇಂತಹ ತನುಗಳನ್ನು ಕಂಡ ಶರಣರು 'ಕೋಟಿಗೊಬ್ಬ ಶರಣ' ಎಂದು ಹಾಡಿದರು. ತನಗೆ ತಾನೇ ಅದು ಶರಣ ತನುವಾಗಿರುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿರುತ್ತದೆ.

**556**

**ತಟ್ಟುವ ಮುಟ್ಟುವ ಭೇದವುಳ್ಳನ್ನಬರ ಶರಣನಲ್ಲ.**
**ಅದೇನು ಕಾರಣವೆಂದಡೆ, ತಟ್ಟದೆ ಮುಟ್ಟದೆ ಕೊಂಬನಾಗಿ.**
**ತಟ್ಟುವ ಮುಟ್ಟುವ ಭೇದಂಗಳೆಲ್ಲಾ ತನುಗುಣಕ್ಕೆ ದಾರಿ.**
**ತಟ್ಟುವ ಮುಟ್ಟುವ ಬಟ್ಟಬಯಲಾಗಿ,**
**ಕೊಂಬಾತನೆ ತತ್ವಮಸಿಯಾದ ಕಾಣಾ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .**

ಭವಿ, ತನ್ನ ಅಜ್ಞಾನದ ತನುವಿನ ಮೂಲಕ ತನ್ನದೇ ಆದ ಜ್ಞಾನ ತನುವಿಗೆ ಶರಣು ಹೋಗಿ

ಸಂಪೂರ್ಣ ಶರಣಾಗತನಾಗಿರುತ್ತಾನೆ. ಹೀಗೆ ಶರಣಾಗತನಾದ ಅವ್ಯಕ್ತ ವ್ಯಕ್ತಿಯೇ ಶರಣ. ಈತನಿಗೆ ಮುಟ್ಟುವ ತಟ್ಟುವ ಆಸಕ್ತಿ ಇರುವುದಿಲ್ಲ. ಮುಟ್ಟಿ ತಟ್ಟಿ ಸುಖಿಸುವ ತನುವನ್ನು, ಮುಟ್ಟದೆ ತಟ್ಟದೆ ಪರಮ ಸುಖವನ್ನು ಅನುಭವಿಸುವ ಜ್ಞಾನ ತನುವಿನ ಚರಣ ಕಮಲಗಳಿಗೆ ಅರ್ಪಣೆ ಮಾಡಿರುತ್ತಾನೆ.

ಮುಟ್ಟಿ ತಟ್ಟಿ ಸುಖಿಸುವ ಅವ್ಯಕ್ತ ತನು ಸ್ಥೂಲ ತನುವಿನ ಮೂಲಕವೇ ವ್ಯವಹರಿಸುತ್ತದೆ. ಮನೋಮಯವಾದ ಅವ್ಯಕ್ತ ತನು ಸ್ಥೂಲ ತನುವನ್ನು ಉಪಕರಣವನ್ನಾಗಿ ಮಾಡಿಕೊಳ್ಳುತ್ತದೆ. ಸ್ಥೂಲ ತನುವಿನಲ್ಲಿಯೇ ತನ್ಮಯವಾದ ಜ್ಞಾನ ತನುವಿಗೆ ಮುಟ್ಟಿ ತಟ್ಟಿ ಸುಖಿಸುವ ಬಯಕೆಯೇ ಇಲ್ಲ. ಅದು ಹಾಗೆಯೇ ಪರಮಸಂತೋಷದಿಂದ ಅವ್ಯಕ್ತ ಮನೋಮಯ ತನುವಿಗೆ ಸದಾ ಪಾಠ ಮಾಡುತ್ತದೆ.

ಮುಟ್ಟುವ ತಟ್ಟುವ ತನುವು ಸ್ಥೂಲ ತನುವನ್ನು ಆವರಿಸಿ ತನುಗುಣಾದಿಗಳ ಭೇದದಿಂದ ತನ್ನನ್ನು ತಾನು ಪ್ರದರ್ಶಿಸಿಕೊಳ್ಳುತ್ತದೆ. ಮುಟ್ಟದೆ ತಟ್ಟದೆ ಸುಖಿಸುವ ತನುವು ನಿಜಸುಖ ಹೀಗಿದೆಯೆಂದು ಮುಟ್ಟಿ ತಟ್ಟಿ ಸುಖಿಸುವ ತನುವಿಗೆ ಸದಾ ಪಾಠ ಮಾಡುತ್ತದೆ.

ಈ ಎರಡೂ ಕಾಯಗಳ ಕಾಯಕಗಳು ಸ್ಥೂಲ ಕಾಯದಲ್ಲಿಯೇ ನಡೆಯುತ್ತವೆ. ಮುಟ್ಟಿ ತಟ್ಟಿ ಸುಖಿಸುವ ಸುಖ ಗೋಚರದ ಸುಖ. ಈ ಸುಖ ಸ್ಥೂಲ ಕಾಯದ ಮೂಲಕ ಇತರ ಕಾಯಗಳಿಗೆ ಕಂಡುಬರುತ್ತದೆ. ಮುಟ್ಟದೆ ತಟ್ಟದೆ ಸುಖಿಸುವ ಸುಖ ಅಗೋಚರ ಸುಖ; ಪರಮ ಸುಖ, ಇದು ಕಂಡುಬರುವುದಿಲ್ಲ. ಅನುಭವಿಸುವ ಕಾಯಕ್ಕೆ ಮಾತ್ರ ಈ ಕಾಯಕ ಕಂಡುಬರುತ್ತದೆ. ಇತರ ಕಾಯಗಳಿಗೆ ಕಂಡುಬರುವುದಿಲ್ಲ.

ತಟ್ಟುವ ಮುಟ್ಟುವ ಭೇದಂಗಳು ತನುಗುಣಕ್ಕೆ ದಾರಿ ಮಾಡಿಕೊಡುತ್ತವೆ. ಇದು ಸುಳ್ಳು ಸುಖ. ಈ ಸುಖದಲ್ಲಿ ಸುಳ್ಳು ಸುಖವೂ ಉಂಟು; ಸುಳ್ಳು ದುಃಖವೂ ಉಂಟು. ಇಂತಹ ಕಾಯವನ್ನು ಶರಣ ಕಾಯವೆಂದು ಕರೆಯುವುದಿಲ್ಲ. ಈ ಕಾಯ ಜನನ ಮರಣಗಳಿಗೆ ಸದಾ ಸುಖದುಃಖಗಳಿಗೆ ತುತ್ತಾಗುವ ಕಾಯ.

ಶರಣ ತಟ್ಟದೆ ಮುಟ್ಟದೆ ಪರಮ ಸುಖ ಅನುಭವಿಸುತ್ತಾನೆ. ತಟ್ಟುವ ಮುಟ್ಟುವ ಸಕಲ ಕೆಲಸಗಳನ್ನು ತನಗೆ ತಾನೇ ತನ್ನದೇ ಆದ ಜ್ಞಾನದಿಂದ ಬಯಲು ಮಾಡಿಕೊಳ್ಳುತ್ತಾನೆ. ಸ್ಥೂಲ ಸೂಕ್ಷ್ಮ ತನುವಿನ ಸಕಲ ಗುಣಗಳನ್ನು ಜ್ಞಾನ ತನುವಿನ ನಿರ್ಗುಣದ ಮೂಲಕ ಬಯಲು ಮಾಡಿಕೊಂಡು ತತ್ತ್ವವೇತ್ತ ತನುವನ್ನಾಗಿಸಿಕೊಳ್ಳುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೇ ತಾನಾಗುತ್ತಾನೆ.

557

**ತತ್ವ ತುರೀಯಂಗಳಿಂದತ್ತ ಮೀರಿದ ಸೀಮೆ**
**ಕತ್ತಲೆಯ ಒಳಗಿಪ್ಪ ಕರ ರೂಪಿನಾ,**
**ಎರಡು ಮತ್ತೊಂದಾಗಿ ಎರಡಿಲ್ಲದೊಂದಾಗಿ,**
**ಐದೆಯರು ಐವರಾ ಸಂಗಂಗಳಾ,**
**ಆರರಲ್ಲಿಯೆ ನಿಂದು, ತೋರಲೀಯದೆ ಸಂದ**
**ಕರ್ಮಂಗಳಾ ಮೀರಿ ಏಳರ ಒಳಗೆ**
**ತೋರಿ ಮತ್ತೊಪ್ಪಿಪ್ಪ ತೋರದಿಹ ಸಾರೂಪ್ಯ ಅಷ್ಟಮದಲಿ**
**ಆರು ಮೂರನು ಎಂಟು ಐದು ಆರನು ಹತ್ತ**

**ಹವಣಿಸಿದ ತತ್ವದಲಿ ಏಕ ಮಾಡಿದ**
**ಬ್ರಹ್ಮಲೋಕದಲಿ ಗುರುವಾಗಿ ಶಕ್ತಿಯ ಘನತರದ**
**ಮಸ್ತಕದ ಒದವಿಪ್ಪ ಅಕ್ಷರದ್ವಯರೂಪು**
**ನೀನೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸದಾ ಬೆಳಗಿಂಗೆ ಬೆಳಗಾಗಿ ಬೆಳಗಬೇಕಾದ ತತ್ವವೇತ್ತ ತನು ಕತ್ತಲೆ ಮತ್ತು ಬೆಳಗಿನ ಆಟಕ್ಕೆ ತುತ್ತಾಗಿದೆ. ತನು ಒಂದೇ ಆದರೆ ತನುವೇ ತನುವಿಗೆ ಹೆಣ್ಣಾಗಿ ಗಂಡಾಗಿ ಕಾಣುತ್ತದೆ. ಈ ಹೆಣ್ಣು ಗಂಡು ಎಂಬ ಅಜ್ಞಾನ ಕಳೆದು ಹೋದಾಗ ತನುವಿನ ನಿಜರೂಪ ತನುವಿಗೆ ಗೊತ್ತಾಗುತ್ತದೆ. ತನು ಹೆಣ್ಣು ಅಲ್ಲ ಗಂಡು ಕೂಡಾ ಅಲ್ಲ. ಭ್ರಮೆಯಿಂದಾಗಿ ತನುವು ತನಗೆ ತಾನೇ ಅಜ್ಞಾನ ಆಮಂತ್ರಣ ಮಾಡಿಕೊಂಡು ಹೆಣ್ಣೆಂದು ಭಾವಿಸಿ ಗಂಡನ್ನು ನೋಡುತ್ತದೆ; ಗಂಡೆಂದು ಭಾವಿಸಿ ಹೆಣ್ಣೆಂದು ನೋಡುತ್ತದೆ.

ತನುವಿನಲ್ಲಿ ಎರಡು ತನುಗಳಿವೆ. ಸೂಕ್ಷ್ಮತನು ಕಾರಣತನು, ಸ್ಥೂಲತನುವನ್ನು ಕೂಡಿ ಮೂರಾಗಿವೆ. ನೋಡಲು ಹೋದರೆ ಎರಡಿಲ್ಲ; ಒಂದೇ ಆಗಿದೆ.

ಒಂದು ತನುವಿನಲ್ಲಿಯೇ ಐವರು ಐದೆಯರು ಸಂಗ ಮಾಡಿದ್ದಾರೆ. ಅವರೆಲ್ಲ ಕತ್ತಲೆಯ ಲೋಕದ ಸುಂದರಿಯರು. ಬೆಳಗಿಂಗೆ ಬೆಳಗಾಗಿ ಬೆಳಗುವ ಮಹಾಪುರುಷರನ್ನು ಕಾಣದಂತೆ ಕತ್ತಲೆಯ ಹಚ್ಚಡವನ್ನೇ ಹೊದಿಸಿದ್ದಾರೆ. ಹಚ್ಚಡದ ಒಳಗೆ ಬೆಳಗುವ ಬೆಳಕು ಹೊರಗೆ ಕಾಣದು. ಅದನ್ನು ಕಿತ್ತೆಸೆದು ಬೆಳಗುವ ಛಲವೂ ಅವರಿಗೆ ಇಲ್ಲದೆ ಹೋಗಿದೆ.

ಬೆಳಕನ್ನು ಮುಚ್ಚಿ ಹಾಕಿದ ಹಚ್ಚಡ ಬೆಳಕಲ್ಲಿ ಲೀಯವಾಗಲು ಒಲ್ಲದು. ಹಚ್ಚಡವನ್ನು ಬೆಳಕನ್ನಾಗಿಸಲು ಬೆಳಕು ಒಲ್ಲದು. ಕತ್ತಲೆಯ ಒಳಗಿಪ್ಪ ತನುವಿನ ಕತ್ತಲ ಬೆಳಕಿನ ಆಟ ತನುವಿಗೆ ತಿಳಿಯದಂತೆ ಅನಂತ ಕಾಲದಿಂದಲೂ ಹೀಗೇ ನಡೆದಿದೆ.

ತನು ಒಂದೇ ಎಂದು ಗೋಚರಕ್ಕೆ ಬಂದರೂ ಅದು ಒಂದಲ್ಲ; ಮೂರಾಗಿದೆ. ಅದು ಮೂರು ಎಂದು ನೋಡಲು ಹೋದರೆ ಐದಾಗಿದೆ. ಅದು ಐದು ಎಂದು ನೋಡಲು ಹೋದರೆ ಆರಾಗಿದೆ. ಅದು ಆರು ಎಂದು ನೋಡಲು ಹೋದರೆ ಏಳಾಗಿದೆ. ಅದು ಏಳು ಎಂದು ನೋಡಲು ಹೋದರೆ ಎಂಟಾಗಿದೆ. ಅದು ಎಂಟು ಎಂದು ನೋಡಲು ಹೋದರೆ ಹತ್ತಾಗಿದೆ.

ತನುವಿನ ತತ್ವ ಮಾತ್ರ ಒಂದೇ ಇದೆ. ಅದು ಅರಿವಿನ ತತ್ವಭರಿತ ತನು. ಭ್ರಮೆ ಆವರಿಸಿರುವುದರಿಂದ ತಾನು ಬ್ರಹ್ಮ ಎಂಬುದು ತನುವಿಗೆ ಗೊತ್ತಾಗುತ್ತಿಲ್ಲ.

ಬ್ರಹ್ಮವೇತ್ತ ತನು ತನುವನ್ನು ಹಿಡಿದು, ತನುವನ್ನು ಮುಟ್ಟಿ, ನೀನು ಬ್ರಹ್ಮ. ನಿನ್ನನ್ನು ಆವರಿಸಿದ ಕತ್ತಲೆಯ ಭ್ರಮೆಯನ್ನು ನಿನ್ನದೇ ಆದ ಬ್ರಹ್ಮ ಬೆಳಕಿನಿಂದ ಬೆಳಗು ಎಂದು ಮಸ್ತಕವನ್ನು ಮುಟ್ಟಿ ನೀನೆ 'ಗುರು' ಎಂದು ಎರಡಕ್ಷರಗಳ ಮೂಲಕ ಗುರುದೇವ ಬೋಧಿಸಲು ತನಗೆ ತಾನೇ ತನ್ನ ಅಜ್ಞಾನದ ಕತ್ತಲೆಯನ್ನು ತನ್ನದೇ ಆದ ಅರಿವಿನ ಬೆಳಕಿನಿಂದ ಬೆಳಗಿಸಿಕೊಂಡು ಬೆಳಗಿಂಗೆ ಬೆಳಗಾಗಿ ನಿಂದ.

ಕತ್ತಲೆಯ ಒಳಗಿಪ್ಪ ಕರ(ತನು)ಗಳೆಲ್ಲ ಬೆಳಗಿಂಗೆ ಬೆಳಗಾಗಿ ಬೆಳಗಿದವು. ಸಕಲ ಕಾಯಗಳೆಲ್ಲ ಕೈಲಾಸವಾಗಿ ಕಂಡವು. ಎರಡು ಕಾಯಗಳು ಒಂದೇ ಆಗಿ ಬೆಳಗಿತು. ಎರಡಿಲ್ಲದೆ ಒಂದೇ ಆಗಿ ಬೆಳಗಿತು. ಏಳು ಎಂಟು ಆರು ಮೂರು ಐದು ಹತ್ತುಗಳೆಲ್ಲ ತತ್ವದಲ್ಲಿ ಏಕವಾದವು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿ ಬೆಳಗಿಂಗೆ ಬೆಳಗಾಗಿ ಬೆಳಗಿದ.

**558**

**ತತ್ವ ಪ್ರಾಪಂಚಿಕದ ಅತ್ತಲಾದ ಸೀಮೆಯನು**
**ಮತ್ತೆ ಸಂಗಮರೆಲ್ಲ ಅರೆವುತಿಪ್ಪರು.**
**ಭಕ್ತ್ಯಂಗನೆಯ ಕ್ರೀಯ, ಮುಕ್ತ್ಯಂಗನೆಯ ಕೂಟ,**
**ತತ್ವಮಸಿಯಲ್ಲರಿತೆ ಕಪಿಲಸಿದ್ಧಮಲ್ಲೇಶ್ವರ.**

ತತ್ವದ ವಿಸ್ತಾರ ಅದರ ಹರಹು ಗಮನಕ್ಕೆ ನಿಲುಕದ್ದು. ತನುವಿನಲ್ಲಿ ತನ್ಮಯವಾದ ತತ್ವ ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಸಂಗಮವಾಗಿ ಸುಖ ದುಃಖಗಳನ್ನು ಉಂಟು ಮಾಡುತ್ತ ಪ್ರಪಂಚವೆಂದು ಕರೆಯಿಸಿಕೊಂಡಿದೆ. ಇದರ ವಿಸ್ತಾರ ಹರಹು ಗಮನಕ್ಕೆ ನಿಲುಕುತ್ತದೆ. ಇದನ್ನು ಲೌಕಿಕ ಪ್ರಪಂಚವೆಂದು ಕರೆಯುತ್ತಾರೆ. ಇದು ತನುವಿನ ಸೀಮೆಯಲ್ಲಿ ಹೆಣೆದುಕೊಂಡಿದೆ.

ತತ್ವ ಪ್ರಪಂಚ ಅದು ಸೀಮಾತೀತ. ಸೀಮೆಯಿಂದತ್ತತ್ತ. ಜಗದಗಲ ಮುಗಿಲಗಲ. ಬ್ರಹ್ಮಾಂಡದಿಂದಲೂ ಅತ್ತತ್ತ, ಪಾತಾಳದಿಂದಲೂ ಅತ್ತತ್ತ. ಅಂತಹ ಆಗಮ್ಯವಾದ ಗಮನಕ್ಕೆ ನಿಲುಕದ ವಸ್ತು ತನುವಿನಲ್ಲಿಯೇ ಸಂಗಮವಾಗಿ ತತ್ವ ಪ್ರಪಂಚ ಎನ್ನಿಸಿಕೊಂಡಿದೆ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಸಂಗಮವಾಗಿ ಜ್ಞಾನೇಂದ್ರಿಯ ಎಂದು ಕರೆಯಿಸಿಕೊಂಡು ಇಡೀ ಕಾಯವನ್ನು ಕೈಲಾಸವನ್ನಾಗಿಸಿದೆ. ನೋಡುವ ಕಣ್ಣಿನಲ್ಲಿ ಸಂಗಮವಾಗಿ ದೃಶ್ಯದ ಗಮನಕ್ಕೆ ಬಾರದೆ ದೃಶ್ಯಕ್ಕೆ ದೃಶ್ಯವಾಗಿ ಅದೃಶ್ಯದಿಂದ ಪಾಠ ಮಾಡುತ್ತದೆ. ದೃಶ್ಯಕ್ಕೆ ಪಾಠ ಮಾಡುವ ಅದೃಶ್ಯದ ದೃಶ್ಯವನ್ನು ಅರಿತ ದೃಶ್ಯವನ್ನೇ ಭಕ್ತ ಎಂದು ಕರೆದಿದ್ದಾರೆ ಶರಣರು.

ಅಜ್ಞಾನದಿಂದ ನೋಡುವ ದೃಶ್ಯವನ್ನು ಅರಿವಿನ ದೃಶ್ಯಕ್ಕೆ ಭಕ್ತನನ್ನಾಗಿಸುವುದು ಭಕ್ತ್ಯಂಗನೆಯ ಕ್ರೀಯೆ. ಇದೇ ಮುಕ್ತ್ಯಂಗನೆಯ ಕೂಟ. ಕಾಯದಲ್ಲಿಯೇ ಸಂಗಮವಾದ ತತ್ವವನ್ನು ಕಾಯವನ್ನು ಆವರಿಸಿದ ಮನ ಅರಿತಲ್ಲದೆ ಈ ಮುಕ್ತ್ಯಂಗನೆಯ ಕೂಟ ನೆರವೇರದು.

ಕಾಯವೇ ಕೈಲಾಸವಾದ ಬಳಿಕ ಕಾಯದಿಂದಲೇ ನಿರ್ಮಾಣವಾದ ಮಂದಿರ ಮಸೀದೆ ಚರ್ಚ್‌ಗಳೆಲ್ಲ ಪಾಳುಬೀಳುವವು. ಸ್ಥೂಲ ಕಾಯುವನ್ನು ಆವರಿಸಿದ ಮನೋಕಾಯ ಸ್ಥೂಲಕಾಯದಲ್ಲಿಯೇ ಸಂಗಮವಾದ ತತ್ವವೇತ್ತ ಜ್ಞಾನ ಕಾಯಕ್ಕೆ ಹಣೆಮಣಿದು ಮುಕ್ತನಾಗುತ್ತದೆ. ಮುಕ್ತ್ಯಂಗನೆ ಎಂದು ಕರೆಯಿಸಿಕೊಳ್ಳುತ್ತದೆ.

**559**

**ತತ್ವಮಸಿಯಿಂದತ್ತ ಮಿಥ್ಯವಾಗಲು ಯೋಗ,**
**ತಥ್ಯವಾಯಿತು ನಿತ್ಯ ಭಕ್ತಿಯೋಗ,**
**ಮಿಥ್ಯವಪ್ಪೀ ದೇಹ ನಿತ್ಯಕಾಯವಪ್ಪುದ ಕಂಡು,**
**ಮತ್ತೆ ನಚ್ಚಿ ಒಚ್ಚತವೋದೆನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತತ್ವದ ಕಾಯವೇ ತಥ್ಯಕಾಯ; ಸತ್ಯಕಾಯ. ತತ್ವಕಾಯಕ್ಕೆ ಭಕ್ತಿ ಮಾಡಲು ಅರಿಯದ ಕಾಯವೇ ಮಿಥ್ಯಕಾಯ. ತತ್ವಕಾಯಕ್ಕೆ ಭಕ್ತಿ ಮಾಡಲು ಅರಿತ ಕಾಯವೇ ಭಕ್ತಿಕಾಯ. ಮಿಥ್ಯಕಾಯವೇ ಭಕ್ತಕಾಯವಾಗುತ್ತದೆ. ಭವಿಕಾಯವೇ ಭಕ್ತಕಾಯವಾಗುತ್ತದೆ.

ಅಕಾಯ ಅಕಾಯದೊಂದಿಗೆ ಸ್ಥೂಲಕಾಯದಲ್ಲಿ ಒಂದಾಗುವುದೇ ಯೋಗ. ಅಕಾಯ ಅಕಾಯದೊಂದಿಗೆ ಒಂದಾದಾಗ ಇದ್ದು ಇಲ್ಲವಾಗುವ ಸ್ಥೂಲಕಾಯವೇ ನಿತ್ಯಕಾಯವಾಗುವುದು. ಶರಣ ಜಾಣ! ಲೋಕಕ್ಕೆ ಅರಿವಾಗದ ಮಾತು ಶರಣನ ಅರಿವಿಗೆ ಬರುತ್ತದೆ. ಲೋಕ, ಕಾಯವನ್ನು ಕಾಯದ ಕಾಯಕವನ್ನು ಗಮನಿಸಿ ಕಾಯವನ್ನು ಗೌರವಿಸುತ್ತದೆ; ಹಾಗೆಯೇ ಕಾಯವನ್ನು ತೆಗಳುತ್ತದೆ. ಶರಣ ಹಾಗಲ್ಲ. ಕಾಯದೊಳಗೆ ನಡೆಯುವ ಅಕಾಯಗಳ ಕಾಯಕವನ್ನು ಗಮನಿಸುತ್ತಾನೆ. ಇದ್ದು ಇಲ್ಲವಾಗುವ ಸ್ಥೂಲ ಕಾಯವನ್ನು ಶರಣ ಗಮನಿಸುವುದಿಲ್ಲ. ಅದಕ್ಕೆ ಮಹತ್ವವನ್ನೂ ಕೊಡುವುದಿಲ್ಲ. ಏಕೆಂದರೆ ಅದು ಮಿಥ್ಯಕಾಯ. ಮನೋಕಾಯ ಮಿಥ್ಯಕಾಯದ ಸಂಗ ಮಾಡಿರುವುದರಿಂದ ಸ್ಥೂಲಕಾಯವೇ ಮಿಥ್ಯಕಾಯವೆಂದು ಕರೆಯಿಸಿಕೊಂಡಿದೆ.

ಸ್ಥೂಲಕಾಯ ಹಿಡಿದು ಯೋಗ ಮಾಡುವುದರಲ್ಲಿ ಲೋಕದ ಲೌಕಿಕ ಯೋಗಿಗಳು ತೊಡಗಿದ್ದಾರೆ. ಕಂಡು ಬರುವ ಕಾಯದಿಂದ ಸಕಲರಿಗೆ ಕಾಣುವಂತೆ ಮಾಡುವ ಯೋಗವನ್ನು ಯೋಗ ಎನ್ನಲು ಬರುವುದಿಲ್ಲ. ಅದು ಮಿಥ್ಯಯೋಗ. ಸ್ಥೂಲ ಕಾಯವನ್ನು ಮನೋಕಾಯ ಕೂಡಿ ಮಾಡುವ ಯೋಗ ಮಿಥ್ಯಯೋಗ.

ಸೂಕ್ಷ್ಮಕಾಯ ತತ್ವವೇತ್ತ ಕಾಯದೊಂದಿಗೆ ಲೀನವಾಗುವುದೇ ಯೋಗ. ಸೂಕ್ಷ್ಮಕಾಯವೂ ಕಾಣುವುದಿಲ್ಲ; ಕಾರಣ ಕಾಯವೂ ಕಾಣುವುದಿಲ್ಲ. ಕಂಡು ಬರುವ ಸ್ಥೂಲಕಾಯದಲ್ಲಿ ಇವೆರಡೂ ಕಾಯಗಳು ಒಂದರೊಳಗೊಂದು ಕೂಡಿ ಒಂದೇ ಆಗುತ್ತದೆ. ಇದು ಕಾಯಕ್ಕೆ ಮಾತ್ರ ಗೋಚರಕ್ಕೆ ಬರುವ ಅಗೋಚರ ಯೋಗ.

ತಲೆ ಕೆಳಗೆ ಮಾಡಿ ಕಾಲು ಮೇಲೆ ಮಾಡಿ ಬುಸು ಬುಸೆಂದು ಉಸಿರಾಡಿಸುವುದು ಸೊಂಟ ಮುರಿದು ಕೈಕಾಲು ಮಣಿಸುವುದನ್ನು ಶರಣರು ಯೋಗವೆಂದು ಕರೆಯಲಿಲ್ಲ. ಸ್ಥೂಲ ಕಾಯದಲ್ಲಿ ಅಕಾಯಗಳೆರಡೂ ಒಂದರಲ್ಲಿ ಮತ್ತೊಂದು ಕೂಡುವುದೇ ಯೋಗ.

ಸ್ಥೂಲ ಕಾಯದಲ್ಲಿ ಕಾಯಗಳೆರಡೂ ಕೂಡುವುದನ್ನು ಸ್ಥೂಲಕಾಯ ಸಾಕ್ಷಿಯಾಗಿ ನೋಡುತ್ತದೆ. ಆಗ ಆ ಮಿಥ್ಯಕಾಯವೇ ತಥ್ಯಕಾಯವೆಂದು ಕರೆಯಿಸಿಕೊಳ್ಳುತ್ತದೆ. ಅಲ್ಲಿ ನಿತ್ಯ ಭಕ್ತಿಯೋಗ ನಡೆಯುತ್ತದೆ. ಸ್ಥೂಲ ಕಾಯವನ್ನು ಆವರಿಸಿದ ಮನೋಮಯವಾದ ಕಾಯ ಕಾರಣ ಕಾಯವೆಂಬ ತತ್ವವೇತ್ತ ಕಾಯಕ್ಕೆ ಹಣೆಮಣಿದು ಕ್ಷಣಕ್ಷಣಕ್ಕೂ ಭಕ್ತಿ ಮಾಡುತ್ತದೆ. ಇದು ಸ್ಥೂಲ ಕಾಯದಲ್ಲಿಯೇ ಘಟಿಸುತ್ತದೆ.

ಮಿಥ್ಯವಪ್ಪೀ ದೇಹ ನಿತ್ಯಕಾಯವಪ್ಪುದು ಕಂಡು ಮತ್ತೆ ನಚ್ಚಿ ಒಚ್ಚತವೋದೆನಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಾ:

ಇದ್ದೂ ಇಲ್ಲವಾಗುವ ಮಿಥ್ಯದ ಈ ಕಾಯದೊಳಗೆ ನಡೆಯುವ ಅಕಾಯಗಳೆರಡರ ಸಂಗಮವನ್ನು ಕಂಡು ಮತ್ತೆ ನಚ್ಚಿ ಮೆಚ್ಚಿ ಒಚ್ಚತವೋದೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಹಾಡಿದ್ದಾರೆ.

**560**

**ತತ್ವಮಸಿಯೆಂಬ ವೃಕ್ಷದ ಕೆಳಗೆ ದ್ವಯವಿಲ್ಲವೆಂದು**
**ಏಕಏಕವೆಂದು ಆಡುತ್ತೈದಾನೆ.**
**ಅದು ನಿತ್ಯಮುಕ್ತಿ, ಅದೇ ವಿಸ್ತಾರವೆಂದು ಆಡುತ್ತೈದಾನೆ.**

**ಈಡಾ ದ್ವಾರಕ್ಕೆ ಹೋದಿರಾದಡೆ**
**ನಾಲ್ವರ ಮೂಲ ನಾಶವ ಮಾಡಿ**
**ಅವ್ವೆಯ ಸರ್ವಾಂಗವಂ ಸೂರೆಗೊಂಡು**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೊಡಗೂಡಿದರೆ**
**ಗಿರಿಯ ಮೇಲಣ ದುರ್ಗವಂ ಬಲ್ಲೆ.**

ತನುವೆಂಬುದು ಜ್ಞಾನದ ಮರ. ಬೋಧಿವೃಕ್ಷ. ಈ ವೃಕ್ಷದ ಕೆಳಗೆ ಎರಡೆಂಬುದು ಇಲ್ಲ. ಏಕವೇ ಏಕ. ಈ ವೃಕ್ಷಕ್ಕೆ ವೃಕ್ಷದ ನೆರಳು ಕೂಡಾ ಇಲ್ಲ. ಅದು ನಿತ್ಯಮುಕ್ತಿ. ಅದು ಸತ್ಯ.

ಬೋಧಿವೃಕ್ಷ ಅದು ಜಗದಗಲ ಮುಗಿಲಗಲ. ಅದರ ವಿಸ್ತಾರವು ಅಗಮ್ಯ. ಅದರ ಬೇರು ಪಾತಾಳದಿಂದಲೂ ಅತ್ತತ್ತ. ಅದರ ರೆಂಬೆಕೊಂಬೆಗಳು ಬ್ರಹ್ಮಾಂಡದಿಂದಲೂ ಅತ್ತತ್ತ. ನಾಲ್ವರ ಮೂಲ ನಾಶಮಾಡಿಕೊಂಡವರಿಗೆ ಮಾತ್ರ ಬೋಧಿವೃಕ್ಷ ಕಾಣುತ್ತದೆ.

ಬಯಲು ಬ್ರಹ್ಮಾಂಡವನ್ನು ಸೃಷ್ಟಿ ಮಾಡಿತು. ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೇ ನೋಡಬೇಕೆಂಬ ಬಯಕೆ ಬಯಲು ದೇವನಿಗೆ ಆಯಿತು. ತತ್ವಭರಿತ ನಡೆದಾಡುವ ವೃಕ್ಷವನ್ನು ಸೃಷ್ಟಿ ಮಾಡಿ ತಾನು ಆ ವೃಕ್ಷದಲ್ಲಿ ಸಂಗಮವಾದ. ಅದಕ್ಕೆ ಅಂಗ ಎಂದು ಹೆಸರಿಟ್ಟು ಕರೆದ. ಲಿಂಗಯ್ಯನಾಗಿ ತಾನು ಅದರಲ್ಲಿ ಸಂಗಮವಾದ. ಲಿಂಗಯ್ಯನ ಬೆಳಕಿನ ನೆರಳು ಅಂಗವನ್ನು ಆವರಿಸಿ ಮನವೆಂಬ ಅವ್ವೆಯಾದಳು. ಸರ್ವಾಂಗವನ್ನು ಸೂರೆಗೊಂಡಳು.

ಮನವೆಂಬ ಅವ್ವೆ ಲಿಂಗಯ್ಯನ ಸಂಗವಮಾಡದೆ ಅಂಗದ ಸಂಗ ಮಾಡಿದಳು. ಭೂಮಿ ಅದರ ಉತ್ಪನ್ನಗಳೇ ಅವ್ವೆಗೆ ದೊಡ್ಡದಾಯಿತು. ಜಲ ಅಗ್ನಿ ವಾಯುವಿನಿಂದಲೇ ಸರ್ವಸ್ವ ಎಂದು ಈ ನಾಲ್ವರನ್ನು ಅಪ್ಪಿಕೊಂಡಳು; ಈ ನಾಲ್ವರನ್ನು ಸೃಷ್ಟಿ ಮಾಡಿದ ಬಯಲದೇವನನ್ನೇ ಮರೆತಳು. ಈತ ಲಿಂಗಯ್ಯನಾಗಿ ಅಂಗದಲ್ಲಿಯೇ ಸಂಗಮವಾಗಿದ್ದರೂ ಈತನ ಪರಿಚಯ ಮನವೆಂಬ ಅವ್ವೆಗೆ ಇಲ್ಲದಾಯಿತು.

ತನುವಿನಲ್ಲಿ ಸಂಗಮವಾದ ಬಯಲು ಕಾಣುವುದಿಲ್ಲ. ಬಯಲಿಂದ ಸೃಷ್ಟಿಯಾದ ಮನವೆಂಬ ಅವ್ವೆಯೂ ಕಾಣುವುದಿಲ್ಲ. ಇವರಿಬ್ಬರೂ ವಾಸ ಮಾಡಿದ ಅಂಗ ಮಾತ್ರ ಕಾಣುತ್ತದೆ. ಶಬ್ದ ಸ್ಪರ್ಶ ರುಚಿ ದೃಶ್ಯ ವಾಸನೆಗೆ ಅಂಗ ಭೂಮಿಯಂತೆ ಬಿರಿಯುತ್ತದೆ. ಕೋಪದಿಂದ ಲಾವಾರಸ ಚಿಮ್ಮುತ್ತದೆ. ದ್ವೇಷ ಅಸೂಯೆಗಳಿಂದಾಗಿ ಅಂಗ ಕತಕತನೆ ಕುದಿಯುತ್ತದೆ. ಅಂಗವನ್ನು ಆವರಿಸಿದ ಅವ್ವೆ ಅಂಗದ ಸಂಗ ಮಾಡಿದ್ದಾಳೆ. ಲಿಂಗಯ್ಯನ ಸಂಗ ಮಾಡಿದರೆ ಸಾಕು ನಾಲ್ಕು ಭೂತಗಳ ಉಪಟಳ ಶಮನವಾಗುತ್ತದೆ. ಸರ್ವಾಂಗದಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಯ್ಯನ ಸಂಗ ಮಾಡಿ ಅವನೊಡನೆ ಸೂರೆಗೊಂಡು ಒಡಗೂಡಿದ ಅವ್ವೆ ನಿತ್ಯ ಮುಕ್ತಳಾಗುತ್ತಾಳೆ. ತತ್ವಮಸಿಯೆಂಬ ವೃಕ್ಷದೊಳಗೆ ದ್ವಯವಿಲ್ಲದೆ ಏಕವಾಗುತ್ತಾಳೆ.

**561**

**ತತ್ವಮಸಿಯೊಳಗೆ ನಿತ್ಯ ಹೊಕ್ಕಿಪ್ಪುದನು**
**ಮತ್ತೆ ಶೂನ್ಯಾಂಗರಿಗೆ ಅರಿಯಲಹುದೆ?**
**ಕಡಲ ಒಳಗಿಹ ಕಿಚ್ಚು ಕಡಲ ಸುಡದಿಹ ಭೇದ**
**ಒಡಗೂಡಿದಾ ಭೇದ, ಶರಣರಿಗಾ ಕಡಲ ದಾಂಟಿಯೇ ನಿಂದು**

**ತಡಿಯೊಳಗೆ ತಾ ಮಿಂದು ಒಡಗೂಡಿದನು**
**ಶುದ್ಧಧವಳಾಂಗನ ಹಲವು ಚಿತ್ತವು ಬಿಟ್ಟು**
**ಗುರುವಿನ ಅನುಮತ ಅನಿಮಿಷಲಿಂಗದ ಭೇದವನರಿದು**
**ತನುತ್ರಯದ ಮಲತ್ರಯದ ಅನುಭೇದವನು ಸುಟ್ಟು,**
**ತನುಜ್ಞಾನಿ ಸಂಬಂಧಿಲಿಂಗ ಮೂರರೊಳಗೆ**
**ಅಂಗಸುಖವನೆ ಬಿಟ್ಟು ಲಿಂಗಸುಖಿ ತಾನಾಗಿ**
**ಮಂಗಳಾಂಗನಾದಿ ಕಪಿಲಸಿದ್ಧ ಮಲ್ಲೇಶ್ವರ.**

ತತ್ವವೇ ತನುವನ್ನು ಸೃಷ್ಟಿ ಮಾಡಿ, ತತ್ವ ತನುವನ್ನು ಹೊಕ್ಕಿರುವುದನ್ನು ತತ್ವವನ್ನು ಆವರಿಸಿದ ಮನಕ್ಕೆ ತತ್ವವೇ ತಿಳಿಯದಾಗಿದೆ. ಅದು ಶೂನ್ಯವಾಗಿದ್ದು ಶೂನ್ಯವನ್ನು ಅರಿಯದಾಗಿದೆ. ಕಡಲ ಒಳಗಿರುವ ಕಿಚ್ಚು ಕಡಲನ್ನು ಹೇಗೆ ಸುಡುವುದಿಲ್ಲವೋ ಹಾಗೆಯೇ ತತ್ವವೇತ್ತ ತನುವನ್ನು ತನುವಿನಲ್ಲಿಯ ಕಿಚ್ಚು ಸುಡಲು ಅರಿಯದಾಗಿದೆ.

ಕಡಲೊಳಗಿರುವ ಅಗ್ನಿ ಕಡಲನ್ನು ಹೇಗೆ ಸುಡುವುದಿಲ್ಲವೋ ಹಾಗೆಯೇ ತನು ಜಲಬಿಂದುವಿನಿಂದ ಜನ್ಮ ತಳೆದು ಆ ಜಲಬಿಂದುವೇ ರಕ್ತ, ಮೂಳೆ, ಮಾಂಸ, ಮಜ್ಜೆ, ಮೇದಸ್ಸು ಆಗಿದೆ. ಅವು ಸೋರದಂತೆ ಸುಂದರವಾದ ಚರ್ಮ ಹೊಲಿದುಕೊಂಡು ತನುವೆಂದು ಕರೆಯಿಸಿಕೊಂಡಿದೆ.

ಜಲದಿಂದಾದ ತನುವನ್ನು ಆವರಿಸಿದ ಮನ ತನುವಿನಲ್ಲಿ ಸಂಗಮವಾದ ತತ್ವದೊಂದಿಗೆ ಸಂಗ ಮಾಡದೇ, ತನುವಿನೊಂದಿಗೆ ಸಂಗ ಮಾಡಿ, ತನುವಿನ ಶಬ್ದ ತನುವಿಗೆ ತಿಳಿಯದಂತಾಗಿದೆ. ತನುವಿನ ಸ್ಪರ್ಶ ತನುವಿನಿಂದ ಉಂಟಾಗುವ ರುಚಿ ಅರುಚಿಗಳು, ತನುವಿನ ದೃಶ್ಯದಿಂದ ಉಂಟಾಗುವ ಸುಖ ದುಃಖಗಳು, ತನುವಿನ ವಾಸನೆಯಿಂದ ಉಂಟಾಗುವ ಸುಗಂಧ ದುರ್ಗಂಧಗಳು, ತನುವನ್ನು ಕಿಚ್ಚಾಗಿ ಸುಡುತ್ತಲಿವೆ. ತನುವಿನ ಜಲದಲ್ಲಿ ಹುಟ್ಟಿದ ಕಿಚ್ಚು ತನುವನ್ನೇ ಸುಡುತ್ತಲಿದೆ. ಶರಣ ಮಾತ್ರ ಈ ಕಡಲ ಕಿಚ್ಚನ್ನು ದಾಟಿ ಅರಿವಿನೊಳಗೆ ತಾ ನಿಂದು ಅರಿವನ್ನು ಒಡಗೂಡಿ ಜ್ಞಾನಿಯೇ ತಾನಾಗಬಲ್ಲ.

ತನುವಿನಲ್ಲಿ ಹುಟ್ಟಿದ ತನುತ್ರಯ, ಮಲತ್ರಯಗಳ ಭೇದವನು ಗುರುವಿನ ಅನುಗ್ರಹದಿಂದ ಅರಿತು ಭೇದಿಸಬಲ್ಲ. ತನುವಿನಲ್ಲಿಯೇ ಹುಟ್ಟಿದ ಅಜ್ಞಾನವನ್ನು ತನುವಿನಲ್ಲಿಯೇ ಇರುವ ಜ್ಞಾನದಿಂದ ಸುಟ್ಟು ಬೂದಿ ಮಾಡಬಲ್ಲ.

ಅಂಗ ಸುಖವನ್ನು ಬಿಟ್ಟು, ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗದೊಂದಿಗೆ ಸುಖಿಸಿ ಪರಮಾನಂದವನ್ನು ಹೊಂದಬಲ್ಲ. ಅಂಗ ಅಂಗದೊಂದಿಗೆ ಸುಖಿಸುವ ಸುಖ ಲೌಕಿಕಸುಖ. ಅಜ್ಞಾನದ ಸುಖ. ಹೆಣ್ಣು ಹೆಣ್ಣಿನೊಂದಿಗೆ ಸುಖಿಸುವ ಮರೆವಿನ ಸುಖದಂತೆ. ಅರಿವಿನ ಸುಖ ಹಾಗಲ್ಲ. ತನುವನ್ನು ಆವರಿಸಿದ ಮನವೆಂಬ ತನು ತನುವಿನಲ್ಲಿಯೇ ಸಂಗಮವಾದ ಜ್ಞಾನ ತನುವಿನೊಂದಿಗೆ ಸುಖಿಸುವ ಸುಖ ಅದು ಅಂಗ ಸುಖವಲ್ಲ ಲಿಂಗಸುಖ. ಜ್ಞಾನವೆಂಬ ಪರಮ ಪುರುಷನೊಂದಿಗೆ ಮನವೆಂಬ ಹೆಣ್ಣು ಸತಿಯಾಗಿ ಸುಖಿಸುವ ಸುಖ. ಹೆಣ್ಣು ಗಂಡು ಸುಖಿಸುವ ಸುಖ. ಆ ಸುಖದಲ್ಲಿ ಏಕವಾಗಿ ಕಪಿಲಸಿದ್ಧ ಮಲ್ಲೇಶ್ವರನೇ ತಾನಾಗುವ ಸುಖ.

**ತತ್ವಾರಾರರಲಿ ಮುತ್ತಿಪ್ಪ ಸೀಮೆಯನು**
**ಹೊತ್ತಿಪ್ಪುದದು ಒಂದು ಬಿಂಬ ನೋಡಾ.**
**ಮೂರರಂ ಮುಕ್ತಿಯಲಿ ಆರರಂ ಸತ್ವದಲಿ**
**ಮೀರಿಪ್ಪುದದು ಭಕ್ತಿಶಕ್ತಿ ನೋಡಾ.**
**ಕ್ರಿಯೆ ಮೂರನು ಮೀರಿ ನಿಃಕ್ರಿಯೆ ಮನೆಯಾಗಿ**
**ಸರ್ವಾನುಭಾವವು ಶುದ್ಧಜ್ಯೋತಿಯಾಗಿ**
**ರಂಜನೆಯ ಭೇದದಲಿ ರಂಜಿಸುವ ಪ್ರಕಟದಲಿ**
**ಕಂಜಕನ್ನಿಕೆಯ ಸಮಧ್ಯದಲ್ಲಿ**
**ಅಂಜದೆ ಆನಂದ ಕುಂಜರನ ಮಸ್ತಕದ**
**ರಂಜಿಸುವ ಶುದ್ಧ ಪ್ರಭಾಕೋಟಿಯಲಿ**
**ಅಜಲೋಕದಾ ಸುದ್ದಿ ತ್ರಿಜಗವ ಮೂರರಲೊಪ್ಪಿ**
**ನಿಜದಿಂದ ಕಂಡೆ ಕಪಿಲಸಿದ್ಧ ಮಲ್ಲೇಶ್ವರನ.**

ತನುವಿನಲ್ಲಿ ತನ್ಮಯವಾದ ತತ್ವಗಳು ಆರು ಇದ್ದರು ತನುವನ್ನು ಭ್ರಮೆಯೇ ಆವರಿಸಿದೆ. ಮನವೆಂಬ ಭ್ರಮೆಯನ್ನು ತನು ಹೊತ್ತುಕೊಂಡಿದೆ. ತತ್ವ ಆರಕ್ಕೆ ಅಜ್ಞಾನದ ಭಾರವಿಲ್ಲ. ಅದು ಯಾವ ಅಜ್ಞಾನಕ್ಕೆ ತಾಕದೆ ತನುವಿನ ಮುಕ್ತಿಗಾಗಿ ತನುವನ್ನು ಮುತ್ತಿಕೊಂಡ ಅರಿಷಡ್ವರ್ಗಗಳಿಗೂ ಸಾತ್ವಿಕ, ರಾಜಸ, ತಾಮಸ ಗುಣಗಳುಳ್ಳ ಮೂರು ಅಜ್ಞಾನದ ಶಕ್ತಿಗೂ ತತ್ವ ಮೀರಿ ನಿಂತಿದೆ. ತನುವನ್ನು ಆವರಿಸಿದ ಮನವೇ ತನು ಮತ್ತು ಮನದ ಮುಕ್ತಿಗಾಗಿ ತನುವಿನಲ್ಲಿಯೇ ತನ್ಮಯವಾದ ಅರಿವಿನ ಶಕ್ತಿಗೆ ಭಕ್ತಿ ಮಾಡಬೇಕಾಗಿದೆ.

ಸಾತ್ವಿಕ, ರಾಜಸ, ತಾಮಸ ಗುಣಗಳನ್ನು ಮೀರಿ ನಿಃಕ್ರಿಯೆಯಾಗಿ ಸರ್ವಾನುಭಾವದಿಂದ ಶುದ್ಧ ಜ್ಯೋತಿಯಾಗಿ ತತ್ವದಲ್ಲಿಯೇ ಮನ ಸಂಗಮವಾದರೆ ಸಾಕು ಅದು ಘನಮನವಾಗುತ್ತದೆ. ಸಕಲ ರಂಜನೆಗಳನ್ನು ಜ್ಞಾನದ ಅಗ್ನಿಯಲ್ಲಿ ಸುಟ್ಟುಕೊಂಡು ನಿರಂಜನನಾಗುತ್ತದೆ. ಬ್ರಹ್ಮ ಕಮಲದ ಮಧ್ಯದಲ್ಲಿ ಅಂಜದೆ ಅಳುಕದೆ ಕುಂಜರನ ಭಯವಿಲ್ಲದೆ ಅದರ ರಂಜನೆಗೆ ಒಳಗಾಗದೆ ಶುದ್ಧ ಪ್ರಭಾ ಕೋಟಿಯಲ್ಲಿ ನಿರಂಜನನಾಗಿ ಓಲಾಡುತ್ತದೆ.

ತನು ಬ್ರಹ್ಮ ಲೋಕದಿಂದ ಬಂದುದು. ಇಂತಹ ತನುವನ್ನು ಮನ ಆವರಿಸಿರುವುದರಿಂದ ಮನಕ್ಕೆ ತನುವಿನಲ್ಲಿಯೇ ಸಂಗಮವಾದ ಮಾಹೇಶ್ವರನ ಪರಿಚಯ ಇಲ್ಲದ್ದರಿಂದ ಅದಕ್ಕೆ ತಾನು ಬ್ರಹ್ಮನೆಂಬುದು ತಿಳಿಯುತ್ತಿಲ್ಲ. ತಾನಿರುವ ತನುವಿನಲ್ಲಿಯೇ ಮಾಹೇಶ್ವರನು ಇರುವನೆಂಬುದು ಕೂಡಾ ತಿಳಿಯುತ್ತಿಲ್ಲ. ತಾನು ವಾಸ ಮಾಡಿದ ತನುವೇ ವಿಷ್ಣು ಲೋಕವೆಂದು ಅರಿಯುತ್ತಿಲ್ಲ.

ತನುವೇ ವಿಷ್ಣು. ತನುವನ್ನು ಆವರಿಸಿದ ಮನವೇ ಬ್ರಹ್ಮ. ತನುವಿನಲ್ಲಿಯೇ ಸಂಗಮವಾದ ಅರಿವೇ ಮಾಹೇಶ್ವರ ಹೀಗಾಗಿ ತನುವೆಂಬುದು ತ್ರಿಜಗವು ಹೌದು, ಬ್ರಹ್ಮ ಲೋಕವು ಹೌದು, ವಿಷ್ಣು ಲೋಕವು ಹೌದು, ಮಾಹೇಶ್ವರನು ವಾಸ ಮಾಡಿದ ಕೈಲಾಸವು ಹೌದು.

ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಅಜಲೋಕದ ಸುದ್ಧಿ ತ್ರಿಜಗವ ಮೂರರಲೊಪ್ಪಿ ನಿಜದಿಂದ ಕಂಡೆ ಕಪಿಲಸಿದ್ಧ ಮಲ್ಲೇಶ್ವರನ ಎಂದು ಹೇಳಿದ್ದಾರೆ.

ಶರಣರು ತನುವಿನಲ್ಲಿಯೇ ಮೂರು ಲೋಕಗಳನ್ನು ಕಂಡುಕೊಂಡರು. ಸಕಲರು ಸುಲಭವಾಗಿ ಕಂಡುಕೊಳ್ಳಲು ಬೆಡಗಿನ ಸೂತ್ರಗಳನ್ನು ಹೆಣೆದರು. ತಿಳಿಯುವ ಆಸಕ್ತಿವುಳ್ಳ ಓದುಗ ಮಾತ್ರ ಹುಡುಕಿ ಹುಡುಕಿ ಸೋತು ತನುವಿನಲ್ಲಿಯೇ ಆ ಸತ್ಯವನ್ನು ಕಂಡುಕೊಂಡು ತನುವಿನ ನಿಜವನ್ನು ತನುವಿನ ಮೂಲಕ ತಿಳಿಯ ತೊಡಗುತ್ತಾನೆ.

ಶರಣರ ವಚನಗಳನ್ನು ಓದಿದರೆ ಸಂತೋಷವಾಗುತ್ತದೆ. ಬರೆದ ಶರಣರನ್ನು ಹೊಗಳುತ್ತೇವೆ, ಅವರ ಸಾಹಿತ್ಯವನ್ನು ಕೊಂಡಾಡುತ್ತೇವೆ. ಅವರ ಚರಿತ್ರೆಯನ್ನು ಪುರಾಣಗಳ ಮೂಲಕ ಬರೆದು ಬರೆಯಿಸಿ ಉತ್ಸವಗಳನ್ನು ಮಾಡುತ್ತೇವೆ. ಹೀಗೆ ಮಾಡುವುದು ಶರಣರ ತತ್ವಕ್ಕೆ ವಿರೋಧವಾದದ್ದು. ಶರಣರ ವಚನಗಳನ್ನು ಅಧ್ಯಯನ ಮಾಡಿ ತನುವಿನಲ್ಲಿ ತನ್ಮಯವಾದ ಅರಿವಿಗೆ ತನುವನ್ನು ಆವರಿಸಿದ ಮನದ ಮೂಲಕ ಶರಣು ಹೋಗಿ ಶರಣನಾಗಬೇಕೆಂಬುದೆ ಶರಣರ ಆಶಯ. ಆದರೆ ಈ ನಾಡಿನ ಸಾರಸ್ವತ ಲೋಕ ಶರಣರ ವಿರೋಧ ಹೊರಟಿದೆ. ಶರಣರ ಚರಿತ್ರೆ ಬರೆಯುವುದರಲ್ಲಿಯೇ ಕಾಲ ಕಳೆಯುತ್ತದೆ. ಬೇಗ ಎಚ್ಚರವಾಗಿ ತನುವಿನಲ್ಲಿ ತನ್ಮಯವಾದ ಅರಿವಿನಿಂದ ಆಲೋಚನೆಗೆ ತೊಡಬೇಕೆಂಬುದನ್ನು ಮರೆತಿದೆ.

**563**

**ತತ್ತ್ವಸಾಂಗತ್ಯದಿಂದತ್ತಲಾಗಿಹ ಬ್ರಹ್ಮ**
**ಸುತ್ತಿಪ್ಪ ಕ್ರೀ ತಾನು ಭಕ್ತಿಯಾಗಿ**
**ತ್ವಮಸಿ ಸಂಗಮದಂಗಪಾಶದ ತದ್ರೂಪವಾದ**
**ಈಷಣ ತ್ರಯಗಳನು ಮೀರಿರ್ಪುದು**
**ಬಂದ ಬಟ್ಟೆಯ ಬಾರ, ಉಂಡ ಊಟವನುಣ್ಣ**
**ಹಿಂದುಮುಂದರಿದಾತ ಸಂದಿಲ್ಲದೆ**
**ಶಿವಭಕ್ತಿಯನರಿದು ನೀವಿಪ್ಪೆಡೆಗೆ ಬಂದ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತತ್ವದ ಸಂಗ ಮಾಡಿದವರೆಲ್ಲ ಬ್ರಹ್ಮ ಜ್ಞಾನಿಗಳಲ್ಲ. ಶಾಸ್ತ್ರಿಗಳ, ಪಂಡಿತರ ಸಂಗ ಮಾಡಿದವರು ಕೂಡಾ ಬ್ರಹ್ಮ ಜ್ಞಾನಿಗಳಲ್ಲ. ಮಸ್ತಕದಲ್ಲಿದ್ದ ತತ್ವವೇ ಪುಸ್ತಕಕ್ಕೆ ಬಂದಿರುವಾಗ ಮಸ್ತಕದಲ್ಲಿ ತತ್ವ ಇಟ್ಟುಕೊಂಡ ಮನ ತನುವಿನೊಂದಿಗೆ ಪುಸ್ತಕದ ಸಂಗ ಮಾಡುತ್ತದೆ; ಶಾಸ್ತ್ರಿಗಳ ಪಂಡಿತರ ಸಂಗ ಮಾಡುತ್ತದೆ.

ತನುವು ತನುವಿಗೆ ಪಾಠ ಮಾಡಲು ಸಾಧ್ಯವಿಲ್ಲ. ತನುವಿನಿಂದ ಹೊರಬಂದ ಪುಸ್ತಕವು ಕೂಡಾ ತನುವಿಗೆ ಪಾಠ ಮಾಡಲು ಸಾಧ್ಯವಾಗುವುದಿಲ್ಲ. ತನುವನ್ನು ಆವರಿಸಿದ ಮನ ತನುವಿನಲ್ಲೇ ತನ್ಮಯವಾದ ತತ್ವಕ್ಕೆ ಭಕ್ತಿಮಾಡಿ ಆ ತತ್ವವು ತಾನೇ ಎಂದು ಅರಿಯಬೇಕು.

ತತ್ವ ಈಷಣತ್ರಯಗಳನ್ನು ಮೀರಿಪ್ಪುದು. ಆದರೆ ತನುವನ್ನು ಆವರಿಸಿದ ಮನ ತನುವಿನೊಂದಿಗೆ ತನುಗಳ ಸಂಗ ಮಾಡುತ್ತದೆಯೇ ಹೊರತು ತನುವಿನಲ್ಲಿಯೇ ತನ್ಮಯವಾದ ತತ್ವವನ್ನು ಅರಿಯದು. ತಾನು ಆ ತತ್ವದಿಂದಲೇ ಹುಟ್ಟಿದವನು ಎಂಬುದನ್ನು ಕೂಡಾ ಅರಿಯದು. ಬಂದ ಬಟ್ಟೆಯನ್ನು ಅರಿಯದು, ಉಂಡ ಊಟವನ್ನು ಉಣ್ಣದು.

ಹಿಂದು ಮುಂದರಿದಾತ ಸಂದಿಲ್ಲದೆ ಶಿವಭಕ್ತಿಯನ್ನರಿದು ನೀವಿಪ್ಪೆಡೆಗೆ ಬಂದ ಕಪಿಲಸಿದ್ಧ ಮಲ್ಲಿಕಾರ್ಜುನಾ:

ತನುವನ್ನು ಶ್ರೇಷ್ಠತನು, ಭಕ್ತತನು, ಲಿಂಗತನು, ಭ್ರಷ್ಠತನುವೆಂದು ಗುರ್ತಿಸುವಂತಿಲ್ಲ. ಸಕಲ ತನುಗಳು ಒಂದೇ. ಹಾಗೆಯೇ ತನುವಿನಲ್ಲಿ ಹೆಣ್ಣು ಎಂಬುವುದು ಇಲ್ಲ. ಗಂಡು ಎಂಬುವುದು ಇಲ್ಲ. ತನುವನ್ನು ಆವರಿಸಿದ ಮನ ತನುವನ್ನು ಸಂದಿಲ್ಲದಂತೆ ಅರಿಯುತ್ತ ಹೋದರೆ ತನುವಿನಲ್ಲಿರುವ ಪದಾರ್ಥಗಳು ಒಂದೇ. ತನುವಿನಲ್ಲಿರುವ ಅರಿವು ಒಂದೇ. ತನುವು ಒಂದೇ.

ತನುವನ್ನು ಆವರಿಸಿದ ಮನವು ಒಂದೇ. ತನುವಿನಲ್ಲಿ ಸಂಗಮವಾದ ಅರಿವೇ ಗುರುದೇವನೆಂದು ಆ ಗುರುದೇವನೆ ಮಹಾದೇವನೆಂದು ಆ ಮಹಾದೇವನೇ ಸದಾಶಿವನೆಂದು ಮನದ ಗಮನಕ್ಕೆ ಬರುತ್ತದೆ. ಆಗ ಆ ಮನ ಸದಾಶಿವನಿಗೆ ಭಕ್ತಿ ಮಾಡಿದರೆ ಸಾಕು ತಾನೇ ಕಪಿಲಸಿದ್ಧ ಮಲ್ಲಿಕಾರ್ಜುನನಾಗುತ್ತದೆ.

**564**

**ತನ್ನ ಕಾರ್ಯಕ್ಕೆ ಹೋಗುತ್ತಲಿ ಅಡವಿಯಲಿ ಅಸ್ತಮಾನವಾಗೆ**
**ಹಸಿದು ನಿಲಲಾರದೆ ಉಣಲಿಕ್ಕಿರವ್ವಾಯೆಂದು ಬೇಡಿದರೆ,**
**ನೀನಾರಾತನಾರಾತನೆಂದರೆ**
**ರೋಮರುಷ್ಟಿಯರತ್ವಾತ್ರ(?) ನೋಡಯ್ಯ.**
**ಇತ್ತ ಬಾರಯ್ಯಾ ಬಾರಯ್ಯಾ ಎಂದು ಕರೆದು**
**ವೃಕ್ಷ ಭಿಕ್ಷವನಿಕ್ಕಿದುವು.**
**ಎನ್ನ ಕಪಿಲಸಿದ್ಧಮಲ್ಲಿನಾಥಯ್ಯನ ಶರಣರ ಹೆಸರು**
**ಕಲ್ಪವೃಕ್ಷ ನೋಡಯ್ಯಾ.**

ತನ್ನ ಕೆಲಸದ ನಿಮಿತ್ತ ಹೋಗುತ್ತಿರಲು, ಅಡವಿಯಲ್ಲಿ ಅಸ್ತಮಾನವಾಗೆ, ಹಸಿದು ನಿಲಲಾರದೆ ಉಣಲಿಕ್ಕಿರಿ ಅವ್ವಾ ಎಂದು ಬೇಡಿದರೆ, ಹಸಿದು ಬೇಡುವ ನೀನು ಯಾರು? ನಿನಗೆ ಹಸಿವಾದರೂ ಕೂಡಾ ನಿನ್ನಲ್ಲಿಯೇ ಇರುವ ಬೇಡದ ಆತ ಯಾರು? ಎಂದು ಕೇಳಲು ರೋಮಾಂಚನವಾಯಿತು.

ಇತ್ತ ಬಾರಯ್ಯ ಬಾರಯ್ಯ ಎಂದು ಕರೆದು ವೃಕ್ಷ ಭಿಕ್ಷವನು ಇಕ್ಕಿದವು. ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯನ ಶರಣರ ಹೆಸರು ಕಲ್ಪವೃಕ್ಷ ನೋಡಯ್ಯಾ .

ಇದು ಸುಂದರವಾದ ವಚನ. ಸದಾ ಹಸಿವಿನಿಂದ ತೊಳಲಾಡುವ ತನು ಎಂದೂ ಹಸಿವಾಗದಾತನನ್ನು ಹೊತ್ತುಕೊಂಡು ಹಸಿವು ಹಸಿವು ಎಂದು ಅನ್ನಕ್ಕಾಗಿ ಬೇಡುವ ಚಿತ್ರಣವನ್ನು ಸಿದ್ಧರಾಮ ಶಿವಯೋಗಿಗಳು ಸುಂದರವಾಗಿ ಚಿತ್ರಿಸಿದ್ದಾರೆ.

''ಅಂಗದ ಹಸಿವೆಗೆಂದು ತರೆತರೆದು ತಿಂದೆ ನಾನು; ಲಿಂಗಕ್ಕೆಂದು ಕೊಟ್ಟು ಧನ್ಯರಾದಿರಿ ನೀವು'' ಎಂದು ಅಕ್ಕಮಹಾದೇವಿ ತಾನು ಕಾಡಿನಲ್ಲಿ ಪಯಣಿಸುತ್ತಿರುವಾಗ ವೃಕ್ಷಗಳೊಂದಿಗೆ ಮಾತನಾಡುತ್ತಾ ಹೇಳಿದ ಮಾತಿದು.

ಅಕ್ಕಮಹಾದೇವಿಯ ಮಾತು, ಸಿದ್ಧರಾಮ ಶಿವಯೋಗಿಗಳ ಮಾತು ಒಂದೇ ಆಗಿದೆ. ಹಸಿವಿನಿಂದ ಬಳಲುವ ಅಂಗ ಹಸಿವೇ ಆಗದ ಲಿಂಗಯ್ಯನೊಂದಿಗೆ ಮಾತನಾಡುವ ಸನ್ನಿವೇಶವನ್ನು

ಇಬ್ಬರೂ ಚಿತ್ರಿಸಿದ್ದಾರೆ. ಅಂಗದ ಹಸಿವೆಗೆಂದು ಕಿತ್ತುಕೊಂಡು ತಿನ್ನುವ ಮನವೆತ್ತ? ಲಿಂಗಕ್ಕೆಂದು ನೀಡಿದ ಮರವೆತ್ತ?

ಯಾರನ್ನೂ ಬೇಡದೆ ತನ್ನ ಅನ್ನವನ್ನು ತಾನೇ ಸಿದ್ಧಪಡಿಸಿಕೊಳ್ಳುವ ವೃಕ್ಷ ಸಕಲರಿಗೂ ಅನ್ನ ನೀಡಿ ಧನ್ಯತೆಯನ್ನು ಮೆರೆಯುತ್ತದೆ. ಹಾಗೆಯೇ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಅನ್ನ ಬೇಕಾಗಿಲ್ಲ. ಆತ ಕಲ್ಪವೃಕ್ಷ. ಅಂಗವನ್ನು ಆವರಿಸಿದ ಮನ ಅಂಗದ ಮೂಲಕ ಉಣ್ಣುತ್ತದೆ. ಹೀಗಾಗಿ ಮನ ಅಂಗದೊಂದಿಗೆ ಬೇಡಿದರೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯ ಕಲ್ಪವೃಕ್ಷವಾಗಿ ನೀಡುತ್ತಾನೆ.

ಮನ ಅಂಗದೊಂದಿಗೆ ಸಂಗ ಮಾಡಿ ಬೇಡುವುದನ್ನು ಬಿಟ್ಟು ಅಂಗದಲ್ಲಿಯೇ ಸಂಗಮವಾದ ಒಡೆಯ ಅರಿವಿನ ಲಿಂಗಯ್ಯನನ್ನು ಬೇಡಿದರೆ ಸಾಕು ಬೇಡಿದ್ದನ್ನು ಕೊಡುತ್ತಾನೆ. ಆತ ಕಲ್ಪವೃಕ್ಷ. ಆತ ನೀಡಿದ ಅಮೃತವನ್ನು ಪಾನ ಮಾಡಿದ ಮನ ಬೇಡುವುದನ್ನೇ ಬಿಟ್ಟು ಕಲ್ಪವೃಕ್ಷವೇ ತಾನಾಗುತ್ತದೆ. ಹೀಗಾಗಿ

''ಬೇಡಿದರೆ ಎನ್ನೊಡೆಯನ ಬೇಡುವೆ'' ಎಂದು ಬಸವಣ್ಣನವರು ಕೂಡಾ ನುಡಿದರು. ಒಡೆಯಂಗೊಡಲ ತೋರಿ ಎನ್ನ ಬಡತನವ ಬಿನ್ನೈಸುವೆ ಎಂದರು.

ಒಡಲಿಗೆ ನಾನಾ ರೀತಿಯ ಹಸಿವು ಆಗುತ್ತದೆ. ಅನ್ನ ಕಾಮ ವಸ್ತ್ರ ಆಭರಣ ಆಸ್ತಿ ಹಣ ಪದವಿ ಅಧಿಕಾರ ಮುಂತಾದ ಹಸಿವಿನಿಂದ ಒದ್ದಾಡುತ್ತದೆ. ಆ ಹಸಿವು ತೀರಿಸಿಕೊಳ್ಳುವುದಕ್ಕಾಗಿ ಮನ ತನುವಿನ ಆಯುಷ್ಯವನ್ನು ವ್ಯರ್ಥ ಕಳೆಯುತ್ತದೆ. ಹಸಿವು ತೀರುವುದಿಲ್ಲ; ಆಯುಷ್ಯ ನಿಲ್ಲುವುದಿಲ್ಲ. ಸುಳ್ಳು ಹಸಿವಿನಿಂದ ಮನ ತನುವಿನೊಂದಿಗೆ ಬಳಲಿ ಬಳಲಿ ಒಮ್ಮೆ ಸತ್ತು ಹೋಗುತ್ತದೆ. ಹಸಿವೇ ಇಲ್ಲದ ಒಡಲು, ಒಡೆಯನ ಒಡಲು. ಒಡಲಿಗೆ; ಒಡಲನ್ನು ಆವರಿಸಿದ ಮನಕ್ಕೆ ಹಸಿವೇ ಇಲ್ಲದ ಒಡಲು ಪರಿಚಯವಾಗುವುದೇ ಇಲ್ಲ. ಆಹಾರ ನಿದ್ರೆ ಭಯ ಮೈಥುನಗಳೇ ಇಲ್ಲದ ಒಡಲು ಒಡಲಲ್ಲಿಯೇ ಇದೆ. ಆ ಒಡಲನ್ನು ಒಡಲು ಆವರಿಸಿದ ಮನವೆಂಬ ಒಡಲಿನಿಂದಲೇ ಕಂಡುಕೊಳ್ಳಬೇಕು. ಒಡಲೊಳಗಿದ್ದು ಒಡಲಿಂಗೆ ಆಧಾರವಾಗಿ ಒಡಲ ಸೋಂಕದೆ ಒಡಲನ್ನು ಬೆಳಗುತ್ತದೆ. ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ ಎಂದು ಅಲ್ಲಮ ಪ್ರಭು ಹೇಳಿದ್ದಾರೆ.

ಬೇಡುವ ನಾನು ಯಾರು? ಬೇಡಲು ಹೋದ ನನ್ನನ್ನು ಬೇಡ ಬೇಡ ಎಂದು ಅಡ್ಡಿ ಪಡಿಸುವ ಆತ ಯಾರು? ಒಡಲಿನೊಂದಿಗೆ ಬೇಡುವ ಮನ ಒಡಲೊಳಗೆ ಇದ್ದ ಬೇಡದ ಒಡಲಿಗೆ ಶರಣು ಹೋಗುವಾತನೇ ಶರಣ. ಆತ ಕಲ್ಪವೃಕ್ಷ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ.

**565**

**ತನ್ನನರಸಿ ಬಪ್ಪವರ ತಾನರಸಿ ಬಪ್ಪ ನೋಡಾ.**
**ಎನ್ನ ದೇವನೆಲ್ಲಿದ್ದನಲ್ಲಿಗೆ ಹೋಗಿ**
**'ಬಾರಾ' ಎಂದು ಮನದೊಳಗೆ ಅಚ್ಚೊತ್ತಿಕೊಂಬೆ.**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ.**

ಅಂಗದಲ್ಲಿಯೇ ಸಂಗಮವಾದ ಗುರುದೇವನಿಗೆ ಅಂಗವನ್ನು ಆವರಿಸಿದ ಮನ ಭಕ್ತನಾಗಿ ಶರಣು ಹೋದರೆ ಸಾಕು ಆ ಭಕ್ತನನ್ನು ಹುಡುಕಿಕೊಂಡು ಗುರುದೇವನೇ ಬರುವನು. ಆದರೆ

ಮನ ಅಂಗದೊಂದಿಗೆ ಸಂಗ ಮಾಡಿದೆ. ಅಂಗವನ್ನು ಹಿಡಿದು ತನಗೆ ಬೇಕಾದ ದೇವರನ್ನು ಕಲ್ಲಲ್ಲಿ ಕೆತ್ತಿ, ಆ ದೇವರಿಗೆ ಶರಣು ಹೋಗಿದೆ. ಅದು ದೇವರು ಅಲ್ಲವೆಂದು ಮನಕ್ಕೆ ಗೊತ್ತಾಗುತ್ತಿಲ್ಲ; ತನುವಿಗೂ ಗೊತ್ತಾಗುತ್ತಿಲ್ಲ. ತನುವಿನಲ್ಲಿಯೇ ಸಂಗಮವಾದ ದೇವರು ಮನ ಮತ್ತು ತನುವಿನ ಮಕ್ಕಳಾಟ ನೋಡಿ ಗಹಗಹಿಸಿ ನಗುವನು.

ಮನ ತನುವನ್ನು ಹಿಡಿದು ದೇವರಿದ್ದಲ್ಲಿಗೆ ಹೋಗುತ್ತದೆ, ದೇವರ ಸೇವೆಯನ್ನೂ ಮಾಡುತ್ತದೆ ಆದರೆ ತಾನು ಮಾಡಿದ ದೇವರು ದೇವರಲ್ಲ ಎಂದು ತನು ಮನಕ್ಕೆ ತಿಳಿಯುತ್ತಿಲ್ಲ. ತನ್ನನ್ನು ಮಾಡಿ, ತನ್ನ ತನುವಿನಲ್ಲಿಯೇ ಇದ್ದ ದೇವರು ದೇವರೆ ಹೊರತು ಅನ್ಯದೇವರು ದೇವರಲ್ಲ ಎಂದು ಮನಕ್ಕೆ ತಿಳಿಯುತ್ತಿಲ್ಲ.

ತನುವಿನಲ್ಲಿಯೇ ತನ್ಮಯವಾಗಿ ತನುವಿಗೂ ತನುವನ್ನು ಆವರಿಸಿದ ಮನಕ್ಕೂ ಪಾಠ ಮಾಡುವ ಅರಿವಿನ ದೇವರೇ ದೇವರೆಂದು ತಿಳಿದು ಆತನನ್ನು ಹುಡುಕಿಕೊಂಡು ಹೋದರೆ ಸಾಕು ಹುಡುಕುವ ಭಕ್ತನನ್ನೇ ಹುಡುಕಿಕೊಂಡು ಭಕ್ತನಿದ್ದಲ್ಲಿಗೆ ದೇವರೇ ಬರುತ್ತಾನೆ.

ಆಗ ಭಕ್ತ ಬಾರಾ ಎಂದು ಮನದಲ್ಲಿ ಅಚ್ಚೊತ್ತಿಕೊಂಡು ಆ ದೇವರಲ್ಲಿಯೇ ಸಂಗಮವಾಗುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ.

**566**

**ತನ್ನ ಬೆನ್ನಲಿ ಎನ್ನನೊಯ್ದು**
**ಮಾಯಾಪಟ್ಟಣವ ಹೊಕ್ಕೆ.**
**ಐದು ಮುಖಂಗಳ ಕಂಡೆನು**
**ಮುಖದೊಳಗೆ ಮುಖಂಗಳು ಅಗೆಯ ಹೊಯ್ದಂತಿದ್ದವಾತನ**
**ತೂರ್ಯಾವಸ್ಥೆ ವೇದದಿಂದ ಊರ್ಧ್ವಮುಖವಾಗಿ**
**ತುರಿಸುತ್ತಿದ್ದ ಕಾರಣ.**
**ವೇದಪುರದಿಂದತ್ತ ತಲಹಿಲ್ಲದ ಬಯಲಾದನವ್ವಾ,**
**ಎನ್ನ ಕಪಿಲಸಿದ್ಧಮಲ್ಲಿನಾಥದೇವರ ದೇವ.**

ತನುವೆಂಬುದು ಮಾಯಾಪಟ್ಟಣ. ಅದಕ್ಕೆ ಐದು ಮುಖಗಳು. ಆ ಮುಖಗಳೊಳಗೆ ಮತ್ತೈದು ಮುಖಗಳು. ಕಣ್ಣಿನಿಂದ ನೋಡಿ ಕೈ ಮಾಡಿ ಕರೆಯುತ್ತದೆ ಒಂದು ಮುಖ. ನೀನು ಕರೆದುದು ತಪ್ಪು ಎಂದು ಬೋಧೆ ಮಾಡುತ್ತದೆ ಮತ್ತೊಂದು ಮುಖ.

ಐದು ಮುಖಗಳನ್ನು ಏಕಮುಖವಾಗಿಸಿಕೊಂಡ ಪರಮಾತ್ಮನು ತನುವಿನೊಳಗೆ ತನ್ಮಯವಾಗಿದ್ದಾನೆ. ಪರಮಾತ್ಮನ ಬೆನ್ನಲ್ಲಿ ಬಂದವಳು ನಾನು. ಆತನಿದ್ದ ತನುವನ್ನೇ ಮಾಯಾಪಟ್ಟಣವಾಗಿಸಿಕೊಂಡು ಅದಕ್ಕೆ ಐದು ಮುಖಗಳನ್ನು ನಿರ್ಮಿಸಿಕೊಂಡು ಅದರ ಮೂಲಕ ಸುಖ ದುಃಖಗಳನ್ನು ಅನುಭವಿಸುತ್ತಲಿದ್ದೇನೆ. ನನಗೆ ತೂರ್ಯಾಥವಸ್ಥೆ ಎಂದರೇನೆಂದು ಗೊತ್ತಿಲ್ಲ. ವೇದ ಎಂದರೆ ಏನೆಂದು ನನಗೆ ಗೊತ್ತಿಲ್ಲ. ಪರಮಾತ್ಮನದು ಊರ್ಧ್ವ ಮುಖವಾದರೆ ಆತನಿರುವ ಮನೆಯನ್ನೇ ಮಾಯಾಪಟ್ಟಣವಾಗಿಸಿಕೊಂಡ ನನ್ನದು ಅಧೋಮುಖ.

ತನುವಿನ ಐದು ಮುಖಗಳಲ್ಲಿ ಮನವೆಂಬ ನಾನು ಇದ್ದೇನೆ. ಅದನ್ನೇ ವೇದ ಪಟ್ಟಣವಾಗಿಸಿಕೊಂಡು ಆತನೂ ಇದ್ದಾನೆ. ನನ್ನದು ದೃಶ್ಯವೇ; ಆತನದು ಕೂಡಾ ದೃಶ್ಯವೇ ಆಗಿದೆ.

ಇಬ್ಬರು ನೋಡುವ ದೃಶ್ಯಗಳು ದೃಶ್ಯಗಳೇ ಆದರೂ ಕೂಡಾ ಕಣ್ಣು ಒಂದೇ. ಆ ಕಣ್ಣಿನ ಮೂಲಕ ನೋಡುವ ನನ್ನ ದೃಶ್ಯವೇ ಬೇರೆ; ಅದೇ ಕಣ್ಣಿನ ಮೂಲಕ ನೋಡುವ ಭಗವಂತನ ದೃಶ್ಯವೇ ಬೇರೆ!

ನಾನು ತನುವನ್ನು ಹೆಣ್ಣು ಗಂಡು ಎಂದು ನನ್ನ ದೃಶ್ಯದಿಂದ ನೋಡಿದರೆ; ಆತ ಹೆಣ್ಣು ಗಂಡನ್ನು ಕಳೆದು ಪದಾರ್ಥವನ್ನು ಏಕೀಕರಿಸಿ ತನ್ನನ್ನೇ ನೋಡುತ್ತಾನೆ. ತನ್ನಂತೆಯೇ ಇರುವ ತನುವನ್ನು ನೋಡುತ್ತಾನೆ. ನನ್ನ ಮುಖವೇ ಬೇರೆ. ಭಗವಂತನ ಮುಖವೇ ಬೇರೆ. ಒಂದು ತನುವಿನಲ್ಲಿ ಎರಡು ಮುಖಗಳು.

ಭಗವಂತನ ಬೆನ್ನ ಬಳಿಯೇ ಬಂದ ನನ್ನನ್ನು ಆತ ಮಾಯಾಪಟ್ಟಣಕ್ಕೆ ನೂಕಿದ. ತಾನು ತತ್ತ್ವವೇತ್ತ ವೇದಪುರದಲ್ಲಿ ವಾಸ ಮಾಡಿದ. ಇದನ್ನು ಕಂಡು ಬಸವಣ್ಣನವರು ''ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯ? ಕಿವಿಯೊಳಗೆ ಕಿವಿಯಿದ್ದು ಕೇಳಲೇಕರಿಯರಯ್ಯ? ತ್ವಕ್ಕಿನೊಳಗೆ ತ್ವಕ್ಕಿದ್ದು ಸ್ಪರ್ಶಿಸಲೇಕರಿಯರಯ್ಯ? ಜಿಹ್ವೆಯೊಳಗೆ ಜಿಹ್ವೆಯಿದ್ದು ರುಚಿಸಲೇಕರಿಯರಯ್ಯ? ಘ್ರಾಣದೊಳಗೆ ಘ್ರಾಣವಿದ್ದು ಮೂಸಿಸಲೇಕರಿಯರಯ್ಯ?'' ಎಂದು ಅರಿವಿನ ಜೊತೆಗಿದ್ದು ಅರಿಯದ ಐದು ಮುಖಗಳನ್ನು ಪ್ರಶ್ನಿಸಿದ್ದಾರೆ.

ಭಗವಂತನ ಐದು ಮುಖಗಳು ವೇದಪುರವೆಂದು ಕರೆಯಿಸಿಕೊಂಡರೆ; ಆತನ ಬೆನ್ನ ಬಳಿಯೇ ಬಂದ ಮಾಯಾಮಯವಾದ ಮನವಿದ್ದ ಜಾಗ ಮಾಯಾಪಟ್ಟಣವೆಂದು ಕರೆಯಿಸಿಕೊಂಡಿದೆ. ವೇದಪುರ ಮತ್ತು ಮಾಯಾಪಟ್ಟಣ ಇವೆರಡೂ ತನುವಿನ ಆಶ್ರಯದಲ್ಲಿಯೇ ಇವೆ. ಹೀಗಾಗಿ ''ಬಸವಣ್ಣನವರು ಸ್ವರ್ಗಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಭೋ. ಸತ್ಯವ ನುಡಿವುದು ಸ್ವರ್ಗಲೋಕ, ಮಿಥ್ಯವ ನುಡಿವುದು ಮರ್ತ್ಯಲೋಕ'' ಎಂದಿದ್ದಾರೆ.

ಸತ್ಯಲೋಕದ ಬೆಂಬಳಿಯೇ ಬಂದ ವಸ್ತುವೊಂದು ಮಿಥ್ಯಲೋಕವನ್ನು ನಿರ್ಮಿಸಿಕೊಂಡು ಸತ್ಯಲೋಕದಲ್ಲಿಯೇ ವಾಸಿಸುತ್ತದೆ. ಆದರೆ ಅದಕ್ಕೆ ಸತ್ಯಲೋಕವೆಂಬುದು ಇದೆ ಎಂದು ಕೂಡಾ ತಿಳಿಯುತ್ತಿಲ್ಲ. ಆ ಸತ್ಯಲೋಕದಲ್ಲಿ ನಾನು ಹೇಗೆ ಪ್ರವೇಶ ಮಾಡಬೇಕೆಂಬುದು ಕೂಡಾ ಹೊಳೆಯುತ್ತಿಲ್ಲ.

ಸತ್ಯಲೋಕವೆಂಬುದು ಇದೆ ಎಂದು ಮನಕ್ಕೆ ಗೊತ್ತಾದರೆ ಸಾಕು. ಆ ಸತ್ಯಲೋಕದಲ್ಲಿಯೇ ಮಿಂದು ಬಯಲಾಗುತ್ತದೆ. ಕಪಿಲಸಿದ್ಧ ಮಲ್ಲಿನಾಥ ದೇವರ ದೇವನು ತಾನೆ ಆಗುತ್ತದೆ.

**567**

**ತನ್ನ ಮರೆದು ನಿನ್ನ ರೂಪಾದವರ**
**ನಿನ್ನವರೆ ಪ್ರಾಣವೆಂದೆಂಬವರ**
**ನಿನ್ನವರೆ ಮೂರ್ತಿಧ್ಯಾನದಲ್ಲಿ ಮೂರ್ಛೆವೋದವರ**
**ನಿನ್ನವರೆ ಕೀರ್ತಿಸುವವರ**
**ನೀನೆಂದೆ ನಿನ್ನವರನರ್ಚಿಸುವವರ ಸಂಗಸುಖದೊಳಗೆ**
**ಎನ್ನನಿರಿಸಯ್ಯಾ ನಿಮ್ಮ ಧರ್ಮ,**
**ಅನಂಗವಿದಾರಣ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನ್ನ ಮರೆದು ನಿನ್ನರೂಪಾದವರ ನಿನ್ನವರೆ ಪ್ರಾಣವೆಂಬವರ:
ಇದು ಸರಳವಾದ ಕೆಲಸ. ಆದರೆ ಬಲು ಜಟಿಲವಾದ ಕೆಲಸ. ತಾನು ತನ್ನ ಮರೆಯುವುದು

ಸುಲುಭವಾದುದಲ್ಲ. ತಾನು ಹಾಗೆ ಹೀಗೆ ಎಂದು ಸಾಯುವವರೆಗೆ ಗುಣಗಾನ ಮಾಡಿಕೊಳ್ಳಲು ಸಮಯವೇ ಕಡಿಮೆ ಬೀಳುತ್ತಿರುವಾಗ ತನ್ನ ಮರೆಯುವುದೆಂದರೆ ತನಗೆ ಅದ್ಹೇಗೆ ಸಾಧ್ಯ?

ದೇಹವೇ ತಾನೆಂದು ಬಲವಾಗಿ ತಿಳಿದುಕೊಂಡ ಮನ, ಬೆಂಬಿಡದೆ ಬೇತಾಳನಂತೆ ದೇಹವನ್ನು ಹಿಡಿದುಕೊಂಡ ಮನ, ತಾನು ದೇಹ ಅಲ್ಲ ಎನ್ನಲು ಸಾಧ್ಯವೆ? ತನಗೆ ತಾನೇ ತಿಳಿಯಲು ಹೋದರೆ ಅಥವಾ ತಿಳಿದವರಿಂದ ತಾನು ದೇಹವಲ್ಲ ಎಂಬುದು ತನಗೆ ಮನವರಿಕೆಯಾದರೆ ತನ್ನನ್ನು ಮರೆಯುತ್ತಾನೆ. ತಾನು ದೇಹವಲ್ಲ ಎಂಬುದನ್ನು ದೇಹವೇ ಇಲ್ಲದ ಅರಿವೆಂಬ ಗುರುದೇವನಿಂದ ಅರಿಯುತ್ತಾನೆ.

ದೇಹದಲ್ಲಿ ಅರಿವೆಂಬ ಗುರುದೇವನೂ ಇದ್ದಾನೆ; ಅವನಿಗೆ ದೇಹವಿಲ್ಲ; ಅನಂಗನವನು. ದೇಹವನ್ನು ಮನ ಆವರಿಸಿದೆ; ಆ ಮನಕ್ಕೂ ದೇಹವಿಲ್ಲ; ಅನಂಗನವನು. ಮನವೆಂಬ ಅನಂಗ ಅಂಗದ ಸಂಗ ಮಾಡಿರುವುದರಿಂದ ಅಂಗವೇ ತಾನೆಂದು ಅನಂತ ಜನ್ಮಗಳಿಂದ ತಿಳಿಯುತ್ತಾ ಬಂದಿದೆ. ಇದು ಅಜ್ಞಾನವೆಂದು ಅದಕ್ಕೆ ತಿಳಿಯುತ್ತಿಲ್ಲ.

ಅಂಗವನ್ನು ಆವರಿಸಿದ ಮನವೆಂಬ ಅನಂಗವು; ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಅನಂಗದೊಂದಿಗೆ ಸಂಗಮವಾದಾಗ ಮನವೆಂಬ ಅನಂಗಕ್ಕೆ ತಾನು ಅಂಗವಲ್ಲ ಘನಾಂಗವೆಂದು ಅರಿವಾಗುತ್ತದೆ.

ತನ್ನ ಅಂಗರೂಪದಿಂದ ಮೆರೆಯುತ್ತದೆ. ತನ್ನ ಅಂಗದಲ್ಲಿಯೇ ಇದ್ದ ರೂಪವನ್ನು ರೂಪವೆನ್ನಲು ಬರುವುದಿಲ್ಲ; ಅದು ನಿರೂಪ. ಆ ನಿರೂಪ ಕಂಡವರು ಮಾತ್ರ ನಿನ್ನವರು. ನಿನ್ನವರು ಮಾತ್ರ ನಿನ್ನನ್ನು ಪ್ರಾಣವೆನ್ನುತ್ತಾರೆ. ನಿನ್ನವರು ಮಾತ್ರ ನಿನ್ನ ನಿರೂಪವನ್ನೇ ರೂಪವೆಂದು ಆರಾಧಿಸುತ್ತಾರೆ. ನಿನ್ನ ನೋಡಿ ನಿನ್ನಲ್ಲಿಯೇ ಲೀನವಾಗುತ್ತಾರೆ. ನಿನ್ನವರು ಮಾತ್ರ ನಿನ್ನನ್ನು ಕೀರ್ತಿಸುತ್ತಾರೆ.

ನೀನೆಂದೆ ನಿನ್ನವರ ನರ್ಚಿಸುವವರ ಸಂಗಸುಖದೊಳಗೆ ಎನ್ನನ್ನು ಇರಿಸಯ್ಯಾ ಇದು ನಿಮ್ಮ ಧರ್ಮ. ನಿಮ್ಮ ಧರ್ಮವನ್ನು ಪರಿಪಾಲಿಸುವುದಕ್ಕಾಗಿ ನನ್ನನ್ನು ಸೃಷ್ಟಿ ಮಾಡಿ ನನ್ನನ್ನೇ ಮರೆತರೆ ಹೇಗೆ ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನನೇ ಅನಂಗವಿದಾರಣನೆ.

**568**

**ತನುಗುಣಗಳನತಿಗಳೆದ ಪ್ರಸಾದಿ;**
**ತಾಮಸಂಗಳ ಮೀರಿದ ಪ್ರಸಾದಿ;**
**ವರ್ಗಂಗಳ ದಾಂಟಿದ ಪ್ರಸಾದಿ;**
**ಇಂದ್ರಿಯಂಗಳು ಈಶನ ಮುಖವಾದ ಪ್ರಸಾದಿ;**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡಿದ ಪ್ರಸಾದಿ.**

ಪ್ರಸಾದಿ ಎಂದರೆ ಸಾಮಾನ್ಯನಲ್ಲ; ಮಹಾಜ್ಞಾನಿ. ತನುಗುಣಗಳನ್ನು ಉಂಡು ಜೀರ್ಣಿಸಿಕೊಂಡವನು ಪ್ರಸಾದಿ. ತನುವಿನಲ್ಲಿ ಹುಟ್ಟಿದ ತಾಮಸ ಗುಣಗಳನ್ನು ಉಂಡು ಜೀರ್ಣಿಸಿಕೊಂಡವನು ಪ್ರಸಾದಿ. ತನುವಿನಲ್ಲಿ ಹುಟ್ಟಿದ ಜಾತಿ ಮತ ಪಂಥ ವರ್ಗಂಗಳೆಂಬ ಅಜ್ಞಾನವನ್ನು ಉಂಡು ಜೀರ್ಣಿಸಿಕೊಂಡವನು ಪ್ರಸಾದಿ.

ಪಂಚೇಂದ್ರಿಯಗಳಲ್ಲಿ ಹುಟ್ಟಿದ ಅಜ್ಞಾನವನ್ನು ತನ್ನ ಜ್ಞಾನದಿಂದಲೇ ಉಂಡು

ಜೀರ್ಣಿಸಿಕೊಂಡವನು ಪ್ರಸಾದಿ. ಕಪಿಲಸಿದ್ಧ ಮಲ್ಲಿಕಾರ್ಜುನನೆಂದರೆ ಹೊರಗುಣ ದೇವರಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವರು. ಅಂಗದಲ್ಲಿಯೇ ಹುಟ್ಟಿದ ಅಜ್ಞಾನವನ್ನು ಅಂಗದಲ್ಲಿಯೇ ಸಂಗಮವಾದ ಜ್ಞಾನದಿಂದ ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಕಿನ ದೇವರು.

ಕಂದು ಬಣ್ಣದ ಕಪಿಲೆಯೆಂಬ ಕತ್ತಲೆ ತಂತಾನೇ ಸಿದ್ಧಳಾಗಿ ಬೆಳಕಿನತ್ತ ನಡೆದು ಆ ಬೆಳಕಿನಲ್ಲಿಯೇ ಕೂಡಿ ಬೆಳಕೇ ಆದ ಪ್ರಸಾದಿ.

ಪ್ರಸಾದಿ ಎಂದರೆ ತಟ್ಟೆಯಲ್ಲಿ ಒಂದಗಳೂ ಬಿಡದೆ ಸಂಪೂರ್ಣ ತೊಳೆದುಕೊಂಡು ಉಣ್ಣುವವನು ಪ್ರಸಾದಿ ಅಲ್ಲ. ಕಾಯ ತಂತಾನೆ ಪ್ರಸಾದ ರೂಪದಲ್ಲಿಯೇ ಇದೆ. ಅದು ಏನನ್ನೂ ಕಲಿಯಬೇಕಿಲ್ಲ.

ಕಾಯಕ್ಕೆ ಗಾಯವಾದರೆ ಅದು ಮಾಯುವವರೆಗೂ, ಚುಚ್ಚಿದ ಸಿಬುರು ಹೊರಬೀಳುವವರೆಗೂ ಅದಕ್ಕೆ ಸಮಾಧಾನವೇ ಇರುವುದಿಲ್ಲ. ಕಣ್ಣಲ್ಲಿ ಬಿದ್ದ ಧೂಳನ್ನು ಕಣ್ಣಲ್ಲಿಯೇ ಇರುವ ಕಣ್ಣೀರ ಮೂಲಕ ಹೊರಚೆಲ್ಲುತ್ತದೆ. ಕಿವಿ ಮತ್ತು ಮೂಗು ಕೂಡಾ ಏನನ್ನೂ ಇಟ್ಟುಕೊಳ್ಳುವುದಿಲ್ಲ. ಉಂಡ ಪದಾರ್ಥ ಕೂಡಾ ಜೀರ್ಣವಾಗುತ್ತದೆ. ಚರ್ಮದ ಮೇಲೆ ಬಿದ್ದ ಕೀಟಗಳನ್ನು ಹೊರಸಿಕೊಂಡು ತಳ್ಳುತ್ತದೆ. ಹೀಗಾಗಿ ಕಾಯ ಏನನ್ನೂ ಕಲಿಯಬೇಕಿಲ್ಲ. ಅದು ತಂತಾನೆ ಪ್ರಸಾದಿಯಾಗಿಯೇ ಜನ್ಮ ತಳೆದಿದೆ.

ಕಾಯವನ್ನು ಆವರಿಸಿದ ಮನ ಕಾಯದ ಸಂಗ ಮಾಡಿರುವುದರಿಂದ ಅದು ನೋಡಿದ ಅಜ್ಞಾನದ ವಸ್ತುವನ್ನು ಕಣ್ಣಲ್ಲಿ ಇಟ್ಟುಕೊಂಡು ಮತ್ತೆ ಮತ್ತೆ ಕಾಯಕ್ಕೆ ನೆನಪು ಮಾಡುತ್ತ ಕಾಯದಲ್ಲಿ ಸುಖ ದುಃಖಗಳನ್ನು ಸೃಷ್ಟಿ ಮಾಡುತ್ತಾ ಹಂತ ಹಂತವಾಗಿ ಕೊಲ್ಲುತ್ತದೆ. ಮನ ನೋಡಿದ ವಸ್ತು ಕಣ್ಣಲ್ಲಿ ಜೀರ್ಣವಾಗಿದೆ; ಕಾಯ ಇರುವವರೆಗೆ ಕಾಯದಲ್ಲಿಯೇ ಉಳಿಯುತ್ತದೆ. ಮನ ಇಟ್ಟ ಪದಾರ್ಥವನ್ನು ಜೀರ್ಣಿಸಿಕೊಳ್ಳುವ ಶಕ್ತಿ ಕಾಯಕ್ಕಿಲ್ಲ ಹೀಗಾಗಿ ಅದು ಪ್ರಸಾದಿಯಲ್ಲ.

ತನು ಗುಣಗಳನ್ನು ಅತಿಗಳೆಯುವಶಕ್ತಿ ಶರಣನಿಗೆ ಮಾತ್ರ ಇದೆ.

ಒಮ್ಮೆ ಗಟ್ಟಿವಾಳಯ್ಯ ಮಹಾಮನೆಯಲ್ಲಿ ಸತ್ಸಂಗ ಮುಗಿಸಿಕೊಂಡು ಮನೆಗೆ ಬಂದ. ಆತನ ಹೆಂಡತಿ ಪರಪುರುಷನೊಂದಿಗೆ ಕಾಮ ಕೇಳಿಯಲ್ಲಿ ತೊಡಗಿರುವುದನ್ನು ಕಂಡ. ಅವರ ಸಂತೋಷಕ್ಕೆ ಭಂಗತರಲಿಲ್ಲ. ಹೊರಗಡೆಯೇ ಕಾದು ಕುಳಿತ. ಪತಿಯನ್ನು ನೋಡಿದ ಸತಿ, ಪರಪುರುಷ ನೀರು ನೀರಾದರು. ಶರಣ ಗಟ್ಟಿವಾಳಯ್ಯ ಅವರನ್ನೇ ಸಮಾಧಾನಪಡಿಸಿದ. ಈ ಮನೆಯಲ್ಲಿಯೇ ಸುಖವಾಗಿ ಇರಲು ಅವರಿಬ್ಬರಿಗೂ ಹೇಳಿದ. ನಿಮಗೆ ಸಾಧ್ಯವಾಗದಿದ್ದರೆ ನಿಮ್ಮ ಇಚ್ಛೆಗನುಗುಣವಾಗಿ ಎಲ್ಲಿಯಾದರೂ ವಾಸಮಾಡಿ ಎಂದು ತಿಳಿಸಿದ.

ಶರಣ ಗಟ್ಟಿವಾಳಯ್ಯರ ತನುವಿನಲ್ಲಿ ತನುಗುಣಗಳು ಬಾಧೆ ಪಡಿಸಲಿಲ್ಲ. ಏಕೆಂದರೆ ತನುವಿನಲ್ಲಿ ಉಂಟಾಗುವ ಅಜ್ಞಾನವನ್ನು ತನುವಿನ ಜ್ಞಾನದಿಂದಲೇ ಉಂಡು ಜೀರ್ಣಿಸಿಕೊಂಡು ಪ್ರಸಾದಿಯಾಗಿದ್ದ. ಗಟ್ಟಿವಾಳಯ್ಯನ ತನುಗುಣಗಳು ತನುವಿನಲ್ಲಿ ಜೀರ್ಣವಾಗದಿದ್ದರೆ ತನ್ನ ಹೆಂಡತಿಯನ್ನು, ಪರಪುರುಷನನ್ನು, ಅವರ ಸಂತಾನವನ್ನೇ ಇಲ್ಲವಾಗಿಸುತ್ತಿದ್ದ. ಇಲ್ಲ ತಾನೇ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದ.

ಜಮದಗ್ನಿ ತಾನು ಋಷಿ ಎನ್ನಿಸಿಕೊಂಡರೂ ಸತಿಯ ಶೀಲ ಶಂಕಿಸಿದ. ತನ್ನ ಕೋಪಾಗ್ನಿಯಿಂದ ಸತಿಯ ರುಂಡವನ್ನೇ ತನ್ನ ಸುತನ ಮೂಲಕ ಚೆಂಡಾಡಲು ಹೇಳಿದ. ರಾಮ ಸೀತೆಯನ್ನು ಕಾಡಿಗೆ ಅಟ್ಟಿದ. ನಿರಪರಾಧಿ ಅರುಂಧತಿಯನ್ನು ಪತಿ ಕಲ್ಲಾಗಿಸಿದ. ಶರಣರು ಪ್ರಸಾದಿಗಳೆನ್ನಿಸಿಕೊಂಡು

ಪರಮ ಸಂತೋಷದಿಂದ ಬಾಳಿದರು. ಋಷಿಮುನಿಗಳು ಋಷಿಗಳೇ ಹೊರತು ಪ್ರಸಾದಿಗಳಲ್ಲ.

ಶರಣರು ಮಾತ್ರ ಪ್ರಸಾದಿಗಳು. ಅದು ತನಗೆ ತಾನೇ ಪಡೆಯುವ ಜ್ಞಾನ ಶಿಕ್ಷಣ. ಈ ಜ್ಞಾನ ಶಿಕ್ಷಣ ಯಜ್ಞದಲ್ಲಿ ಒಂದು ಲಕ್ಷ ತೊಂಬತ್ತಾರು ಸಾವಿರ ಜನ ಕಲ್ಯಾಣದಲ್ಲಿ ಪಾಲ್ಗೊಂಡಿದ್ದರು. ಏಳುನೂರಾ ಎಪ್ಪತ್ತು ಜನ ಮಹಾಜ್ಞಾನಿಗಳಾಗಿ ಪ್ರಸಾದಿಗಳಾಗಿ ಹೊರ ಬಂದರು. ಶಂಕರಾಚಾರ್ಯರು 'ಅಹಂ ಬ್ರಹ್ಮಾಸ್ಮಿ' ತಾನು ಎಂದು ಹೇಗೆ ಘೋಷಿಸಿಕೊಂಡರೋ ಹಾಗೆಯೇ ಶರಣರು ನಾನು 'ಶರಣ' ಎಂದು ಘೋಷಿಸಿಕೊಂಡರು.

ರೂಢಿಯಿಂದ ಪ್ರಸಾದಕಾಯ ಆಗುವುದಿಲ್ಲ. ಅದು ಆರೂಢಿ. ಪ್ರಸಾದ ಕಾಯ, ಸ್ಥೂಲಕಾಯ, ಸೂಕ್ಷ್ಮ ಕಾಯಗಳೆಂದು ಮೂರು ಕಾಯಗಳಿವೆ. ಪ್ರಸಾದ ಕಾಯಕ್ಕೆ ಯಾವ ಅಧ್ಯಯನ ಅಭ್ಯಾಸದ ಅವಶ್ಯಕತೆಯೂ ಇಲ್ಲ. ಸೂಕ್ಷ್ಮಕಾಯ ಸ್ಥೂಲ ಕಾಯವನ್ನು ಹಿಡಿದು ಯಾವ ಅಧ್ಯಯನ ಮಾಡಿದರೂ ಅದು ಪ್ರಸಾದಿ ಕಾಯವಾಗುವುದಿಲ್ಲ. ಜಪತಪಗಳನ್ನು ಮಾಡಿ ಹಿಮಾಲಯಕ್ಕೆ ಹೋದರೂ ಅದು ಪ್ರಸಾದಿ ಕಾಯ ಎನ್ನಿಸಿಕೊಳ್ಳುವುದಿಲ್ಲ. ಸೂಕ್ಷ್ಮ ಕಾಯ ಪ್ರಸಾದ ಕಾಯದಲ್ಲಿ ಸಂಗಮವಾಗಬೇಕು. ಪ್ರಸಾದ ಕಾಯಕ್ಕೆ ಶರಣು ಹೋಗಿ ಸಂಪೂರ್ಣ ಶರಣಾಗತನಾಗಬೇಕು; ಆಗ ಕಾಯದ ಗುಣಗಳೆಲ್ಲ ನಿರ್ಗುಣಗಳಾಗುತ್ತವೆ. ಪಂಚೇಂದ್ರಿಯಗಳು ಈಶನ ಮುಖವಾಗಿ ಪ್ರಸಾದಿಯಾಗಿ ಮಾರ್ಪಡುತ್ತವೆ. ಈ ಘಟನೆ ಸ್ಥೂಲ ಕಾಯದಲ್ಲಿಯೇ ಜರುಗುತ್ತದೆ. ಈ ಘಟನೆಗೆ ಸ್ಥೂಲಕಾಯ ಸಾಕ್ಷಿಯಾಗುತ್ತದೆ.

**569**

**ತನುಗುಣದ ಪಾತ್ರೆಯಲಿ ತವಕಿಸುವ ಭೇದವನು**
**ಅನುನಯದ ಮಲತ್ರಯದ ದುರ್ವಾಕ್ಯವನು**
**ಘನತರದ ಸುದ್ದಿಯನು ಐದೈದುವೊಂದಾಗಿ**
**ತನುಗುಣವನತಿಗಳೆದು ಪ್ರಾಪಂಚಿಕಾತತ್ವದಿಂದತ್ತ ಮತ್ತೆ**
**ತ್ವಮಸಿಯಾಗಿ ಭಕ್ತಿ ಕಾರಣ ಲೋಕರೂಪನಾಗಿ**
**ಏಕೈಕ ಸಂಬಂಧಿ ಆಕಾರ ನಿರ್ವಿಘ್ನ**
**ಆನಂದದವ್ಯಯದ ಅಂತ್ಯದಲ್ಲಿ**
**ಅವ್ವೆಯ ಮುಖಕಮಲ ಐಯನ ಜಾತಸ್ಯ**
**ಸಂಯೋಗಕದು ಶುದ್ಧ ಮುಗ್ಧನಾಗಿ**
**ಮೂರ ಮತ್ತೊಂದೆಂದು ಒಂದು ಮೂರರ ತೃಪ್ತಿ ಸಂದಳಿದೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನು ಎಂಬುದು ಹಲವಾರು ಗುಣಾವಗುಣಗಳ ಪಾತ್ರೆ. ಗುಣಾವಗುಣಗಳಿಗೆ ತವಕಿಸುವ ಪಾತ್ರೆ. ಈ ಪಾತ್ರೆಯಲ್ಲಿ ಅಮೃತವೂ ಭರಿತವಾಗಿದೆ. ಹಾಗೆಯೇ ಭ್ರಮಾರಸವೂ ಭರಿತವಾಗಿದೆ.

ಭ್ರಮಾರಸವನ್ನು ಸದಾ ಈಂಟುವ ತವಕ ಪಾತ್ರೆಗಿದೆ. ಅದು ದುರ್ವಾಸನೆಯಿಂದ ಕೂಡಿದ ರಸವೆಂದು ಪಾತ್ರೆಗೆ ಗೊತ್ತಿಲ್ಲ. ಐದೈದು ಮುಖಗಳು ಒಂದಾಗಿ ದುರ್ವಾಸನೆಯಿಂದ ಕೂಡಿದ ಭ್ರಮಾರಸವನ್ನು ಈಂಟುವದರಲ್ಲಿಯೇ ತನುವಿನ ಆಯುಷ್ಯ ಮುಗಿದೇ ಹೋಗುತ್ತದೆ.

ತನು ಗುಣಗಳನ್ನು ಅತಿಗಳೆದು ತನುವಿನಲ್ಲಿಯೇ ಭರಿತವಾದ ತತ್ವ ಮಸಿಯೆಂಬ ಭ್ರಮಾರಸವನ್ನು ಈಂಟಿದಾಗಲೇ ಹಲವು ಮುಖಗಳನ್ನು ಕಳೆದುಕೊಂಡು ಏಕಮುಖಿಯಾಗಿ ಲೋಕ ರೂಪನಾಗಿ ಏಕೈಕ ಶಿವ ಸಂಬಂಧಿಯಾಗಿ, ಆಕಾರವಿದ್ದು ನಿರುಪದ ನಿರಾಕಾರವಾಗಿ ನಿರ್ವಿಘ್ನದಿಂದ ಹೊರಹೊಮ್ಮುತ್ತದೆ.

ಭ್ರಮಾರಸಕ್ಕೆ ಕಾರಣರಾದ ಮನವೆಂಬ ಅವ್ವೆ ಮಹಾ ದೇವನೊಂದಿಗೆ ಬೆರೆತು ಮಹಾದೇವಿಯೆಂಬ ಅವ್ವೆಯಾಗುತ್ತಾಳೆ. ಅವ್ವೆಯ ಮುಖಕಮಲ ಬ್ರಹ್ಮ ಕಮಲವಾಗಿ ಆನಂದದಿಂದ ಅರಳುತ್ತದೆ. ಅಯ್ಯನ ಸಂಯೋಗದಿಂದ ಅವ್ವೆ ಶುದ್ಧ ಮುಗ್ಧಳಾಗಿ ಮೂರೊಂದಾದ ಘನವಾಗುತ್ತಾಳೆ. ಒಂದು ಮೂರರ ಸಂದಳಿದು ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾಳೆ.

**570**

**ತನುಗುಣ ಪ್ರಪಂಚಿಕವ ಹೊದ್ದ ಬಸವಣ್ಣ;**
**ಸೀಮಾ ಸಂಬಂಧಿಗಳಲ್ಲಿ ನಿಲ್ಲ ಬಸವಣ್ಣ;**
**ಎರಡೆಂಟೆಂದರಿಯ ಬಸವಣ್ಣ;**
**ಅಂಗಮುಖವೆಲ್ಲವು ಲಿಂಗಮುಖವಾಗಿಪ್ಪ ಬಸವಣ್ಣ;**
**ಪ್ರಾಣವೆಲ್ಲವು ಲಿಂಗಪ್ರಾಣವಾಗಿಯೆ ಸಮನಿಸುವ ಬಸವಣ್ಣ;**
**ಅನರ್ಪಿತವಧಾನಂಗಳ ಭೇದವನು ಕಾಯದ ಕರದಿಂದರ್ಪಿಸದೆ,**
**ಸ್ವಾನುಭಾವ ಸಮ್ಯಕ್‌ಜ್ಞಾನ ಕರಂಗಳಿಂದರ್ಪಿಸುವ ಬಸವಣ್ಣ;**
**ನಿತ್ಯ ಪ್ರಸಾದವ ಕೊಂಬ ಬಸವಣ್ಣ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ**
**ಪರಸಮಯವನೊಳಕೊಂಡಿಪ್ಪ**
**ಬಸವಣ್ಣನ ಪರಿ ಇಂತುಂಟು.**

ತನು ಅರಿಷಡ್ವರ್ಗಗಳೆಂಬ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರಗಳನ್ನು ಹೊದ್ದುಕೊಂಡೇ ಗರ್ಭದಿಂದ ಹೊರಬಂದಿದೆ. ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ಹೊದ್ದುಕೊಂಡು ಹೊರ ಬಂದಿದೆ. ಸಾತ್ವಿಕ ರಾಜಸ ತಾಮಸವೆಂಬ ಮೂರುಗುಣಗಳನ್ನು ಹೊದ್ದುಕೊಂಡು ಹೊರ ಬಂದಿದೆ. ಹೀಗೆ ಗರ್ಭದಿಂದಲೇ ಹೊದ್ದುಕೊಂಡು ಬಂದ ತನುಗುಣವೆಂಬ ಹಚ್ಚಡವನ್ನು ಬಸವಣ್ಣ ಅಂಗದಲ್ಲಿಯೇ ಸಂಗಮವಾದ ಕೂಡಲಸಂಗಯ್ಯನ ದಯದಿಂದ ಬೀಸಿ ಹೊಗೆದು ನಿಸ್ಸೀಮನಾದ ಬಸವಣ್ಣ.

ತಂದೆ ತಾಯಿ ಬಂಧು ಬಳಗವೆಂಬ ಸೀಮಾ ಸಂಬಂಧವನ್ನು ಕಳಚಿ ಅಂಗದಲ್ಲಿಯೇ ಸಂಗಮವಾದ ಸಂಗಯ್ಯನನ್ನೇ ತಂದೆ ತಾಯಿ ಬಂಧು ಬಳಗವನ್ನಾಗಿಸಿಕೊಂಡ ಬಸವಣ್ಣ.

ಕುಲಮದ, ಛಲಮದ, ಧನಮದ, ರೂಪಮದ, ಯೌವ್ವನಮದ, ವಿದ್ಯಾಮದ, ರಾಜಮದ, ತಪೋಮದವೆಂಬ ಅಷ್ಟಮದಗಳನ್ನು ಅರಿಯ ಬಸವಣ್ಣ. ಹೊನ್ನು, ಹೆಣ್ಣು, ಮಣ್ಣು, ಅನ್ನ, ನೀರು, ವಸ್ತ್ರ, ವಾಹನ, ಆಭರಣ, ಹೀಗೆ ಎಂಟು ಪ್ರಕಾರದ ಮಾಲಿನ್ಯಗಳು ತನಗರಿಯದಂತೆ ಅಂಗದಲ್ಲಿಯೇ ಸೇರಿಕೊಂಡವುಗಳನ್ನು ಕಿತ್ತೆಸೆದು ಅರಿವಿನ ಸಂಗಯ್ಯನಿಗೆ ಅರ್ಪಿಸಿದ ಬಸವಣ್ಣ.

ಅಂಗಕ್ಕೆ ಐದು ಮುಖಗಳು : ಕಣ್ಣು ಕಿವಿ ಮೂಗು ನಾಲಿಗೆ ಚರ್ಮ. ಈ ಐದು ಮುಖಗಳು ಜ್ಞಾನವೆಂಬ ಏಕಮುಖದಲ್ಲಿ ಅಡಗದಿದ್ದರೆ, ಅಂಗವನ್ನು ಅಜ್ಞಾನಕ್ಕೆ ಕರೆದುಕೊಂಡು ಹೋಗುತ್ತವೆ. ಈ ಐದೂ ಅಂಗಮುಖಗಳನ್ನು ಅಲ್ಲಲ್ಲಿಯೇ ಇರುವ ಲಿಂಗಮುಖಕ್ಕೆ ಅರ್ಪಿಸಿದಾತ ಬಸವಣ್ಣ.

ಕಣ್ಣನ್ನು ಆವರಿಸಿದ ಅಜ್ಞಾನದ ಕಣ್ಣನ್ನು ಕಣ್ಣೊಳಗಿರುವ ಜ್ಞಾನದ ಕಣ್ಣಿಗೆ ಅರ್ಪಿಸಿದ ಬಸವಣ್ಣ. ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯಾ ಎಂದು ಕಣ್ಣುಳ್ಳವರ ಕಣ್ಣನ್ನು ಪ್ರಶ್ನಿಸಿದ ಬಸವಣ್ಣ. ಕಿವಿಯೊಳಗೆ ಕಿವಿಯಿದ್ದು ಕೇಳಲೇಕರಿಯರಯ್ಯಾ? ಘ್ರಾಣದೊಳಗೆ ಘ್ರಾಣವಿದ್ದು ಮೂಸಿಸಲೇಕರಿಯರಯ್ಯಾ? ಜಿಹ್ವೆಯೊಳಗೆ ಜಿಹ್ವೆಯಿದ್ದು ರುಚಿಸಲೇಕರಿಯರಯ್ಯಾ? ತ್ವಕ್ಕಿನೊಳಗೆ ತ್ವಕ್ಕಿದ್ದು ಸ್ಪರ್ಶಿಸಲೇಕರಿಯರಯ್ಯಾ ಎಂದು ಪ್ರಶ್ನಿಸುತ್ತಾ ಅಲ್ಲಲ್ಲಿಯೇ ಇರುವ ಅಜ್ಞಾನವನ್ನು ಅಲ್ಲಲ್ಲಿಯೇ ಇರುವ ಅರಿವಿನ ಲಿಂಗಯ್ಯನಿಗೆ ಅರ್ಪಿಸಿ ಭಕ್ತಿಯಿಂದ ಕೈ ಮುಗಿದು ಭಕ್ತಿ ಭಂಡಾರಿ ಎಂದು ಕರೆಯಿಸಿಕೊಂಡ ಬಸವಣ್ಣ.

ಪ್ರಾಣವನ್ನು ಲಿಂಗಪ್ರಾಣವಾಗಿಯೇ ಸಮನಿಸಿದ ಬಸವಣ್ಣ. ಕಾಯದಲ್ಲಿರುವ ಅನರ್ಪಿತ ಅವಧಾನಂಗಳನ್ನು ಕಾಯದಿಂದ ಅರ್ಪಿಸದೆ, ಸ್ವಾನುಭಾವ ಸಮ್ಯಕ್‌ಜ್ಞಾನದ ಅಕಾಯದಿಂದ ಅರ್ಪಿಸಿದ ಬಸವಣ್ಣ.

ಕಾಯವನ್ನು ಆವರಿಸಿದ ಮನವೆಂಬ ಕಾಯವನ್ನು ಕಾಯದಲ್ಲಿಯೇ ಸಂಗಮವಾದ ಜ್ಞಾನಕಾಯಕ್ಕೆ ಅರ್ಪಿಸಿ ಆ ಜ್ಞಾನ ಕಾಯದ ನಿತ್ಯಪ್ರಸಾದವನ್ನು ಉಣ್ಣುತ್ತಾ ಸದಾ ಸಂತೃಪ್ತನಾದ ಬಸವಣ್ಣ. ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಪರಮಾತ್ಮನಲ್ಲಿ ಸಂಗಮವಾಗಿ ಪರಸಮಯವನೊಳಕೊಂಡಿಪ್ಪ ಬಸವಣ್ಣನ ಪರಿ ಇಂತುಂಟೆಂದು ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ಹೇಳಿದ್ದಾರೆ.

**571**

**ತನುಗುಣವನತಿಗಳೆದು ನಿನ್ನ ಕೂಡಿದಲ್ಲಿ ಅವ್ವೆ,**
**ತಾಮಸಿ ತಾಮಸಿಯಾದಳು ಅವ್ವೆ,**
**ಸೋಮಪ್ರಭೆಯ ಪ್ರಭೆಯಂ**
**ಒಳಗೆ ಕೂಡಿ ಅವ್ವೆ ನಿರ್ನಾಮವಾದಳು.**
**ಆನಂದದಾ ಆದಿಗೆ ತಾನೆ ಮೂಲಸ್ವಾಮಿಯಾದಳು**
**ಕಪಿಲಸಿದ್ಧ ಮಲ್ಲಿಕಾರ್ಜುನನ ಅವ್ವೆ.**

ಸ್ಥೂಲ ತನುವನ್ನು ಮನವೆಂಬ ಅವ್ವೆ ಆವರಿಸಿರುವುದರಿಂದ ತನುವಿನಲ್ಲಿ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಅರಿಷಡ್ವರ್ಗಗಳು ಎದ್ದು ಕಾಣುತ್ತವೆ.

ಹುಸಿ ಕಳವು ಹಾದರ ಪರದಾರ ಪರದ್ರವ್ಯ ಪರನಿಂದೆ ಪರ ದ್ವೇಷವೆಂಬ ಗುಣಗಳಿಂದ ತನು ಸುಖ ಹಾಗೂ ದುಃಖ ಪಡುತ್ತದೆ. ಇದು ಒಳ್ಳೆಯದಲ್ಲವೆಂದು ತನಗೆ ಗೊತ್ತಿದ್ದರೂ ಕೂಡಾ ಈ ಗುಣಗಳನ್ನು ಬಿಟ್ಟು ತನು ತನಗೆ ತಾನೆ ನಿರ್ಗುಣಿಯಾಗಲು ಬರುವುದಿಲ್ಲ. ಏಕೆಂದರೆ ತನುವಿನೊಂದಿಗೆ ಮನ ಸಂಗ ಮಾಡಿರುವುದರಿಂದ ಮನದ ಮಾತು ತನು ಕೇಳುತ್ತದೆ. ಹೀಗಾಗಿ ನಿರ್ಗುಣಿಯಾಗಲು ಸಾಧ್ಯವಾಗುತ್ತಿಲ್ಲ.

ಮನ ತನುವಿನ ಸಂಗ ಮಾಡಿರುವುದರಿಂದ ತನುವಿನಲ್ಲಿ ತನುವ್ಯಸನ ಸೃಷ್ಟಿಯಾಗುತ್ತದೆ.

ಈ ವ್ಯಸನದಿಂದಾಗಿ ತನು ವಸ್ತ್ರ ಆಭರಣ ವೀಳಯ ಲೇಪನಾದಿ ಸುಗಂಧ ದ್ರವ್ಯಗಳನ್ನು ಬಯಸುತ್ತದೆ.

ಮನವ್ಯಸನವೂ ಸೃಷ್ಟಿಯಾಗುತ್ತದೆ. ಈ ವ್ಯಸನದಿಂದಾಗಿ ಮನ ತನುವಿಗೆ ಹುಸಿಯನಾಡಲು ಪ್ರೇರಣೆ ನೀಡುತ್ತದೆ. ಮನ ಕಳುವು ಮಾಡಿ ತನುವಿಗೆ ಆ ಕಳುವಿನ ಪಟ್ಟ ಕಟ್ಟುತ್ತದೆ.

ತನುವಿನಲ್ಲಿ ಧನದ ವ್ಯಸನ ಸೃಷ್ಟಿಯಾಗುತ್ತದೆ. ಧನ ಧಾನ್ಯ ಬಯಸುತ್ತದೆ. ಧನ ಧಾನ್ಯಕ್ಕಾಗಿ ತನು ತನುವಿನೊಂದಿಗೆ ಯುದ್ಧ ಮಾಡುತ್ತದೆ; ಕಳುವು ಮಾಡಿ ಕಳ್ಳ ಎಂದು ಕರೆಯಿಸಿಕೊಳ್ಳುತ್ತದೆ.

ತನುವಿನಲ್ಲಿ ಮನದಿಂದಾಗಿ ರಾಜ್ಯವ್ಯಸನ ಸೃಷ್ಟಿಯಾಗುತ್ತದೆ. ಆನೆ ಕುದುರೆ ಸೇನೆಯನ್ನು ಬಯಸುತ್ತದೆ. ಹಾಗೆಯೇ ತನುವಿನಲ್ಲಿ ವಿಶ್ವವ್ಯಸನ ಸೃಷ್ಟಿಯಾಗಿ ಚತುರ್ವಿಧ ಕರ್ತವ್ಯವನ್ನು ಬಯಸುತ್ತದೆ.

ಉತ್ಸಾಹವ್ಯಸನ ಸೃಷ್ಟಿಯಾಗಿ ಪುತ್ರ ಮಿತ್ರ ಬಂಧು ಬಳಗಕ್ಕಾಗಿ ಹಪಹಪಿಸುತ್ತದೆ. ಸೇವಕ ವ್ಯಸನದಿಂದಾಗಿ ಗಳಿಸಲಾರೆ, ಗೆಯ್ಯಲಾರೆ, ಗೆತ್ತಲಾರೆ, ಕೊಡಲಾರೆ, ಕೊಳ್ಳಲಾರೆ ಎನ್ನುವ ವ್ಯಸನಗಳಲ್ಲದೆ ಬೇಟೆ, ಜೂಜು, ಹಗಲು ನಿದ್ರೆ, ಸ್ತ್ರೀಲಾಲಸೆ, ಮಧ್ಯಪಾನ, ನೃತ್ಯ, ಗಾನವಾದನಾಭಿರುಚಿಗಳು ಹೀಗೆ ಸಪ್ತವ್ಯಸನಗಳಾಗಿ ತನುವನ್ನು ಕಾಡುತ್ತವೆ. ಮನ ತನುವಿನ ಸಂಗ ಮಾಡಿದ್ದಕ್ಕಾಗಿ ತನು ಸಪ್ತವ್ಯಸನಗಳ ಮೂಲಕ ಕುದ್ದೂ ಕುದ್ದೂ ತನ್ನ ಆಯುಷ್ಯವನ್ನು ಪೂರ್ತಿಮಾಡಿಕೊಳ್ಳುತ್ತದೆ.

ಮನ ತನುವಿನ ಸಂಗ ಮಾಡಿರುವುದರಿಂದಾಗಿ ತನುವಿನಲ್ಲಿ ಅಷ್ಟಮದಗಳು ಕಾಣಿಸಿಕೊಂಡಿವೆ. ತನುಗಳೆಲ್ಲಾ ಒಂದೇ ಆದರೂ ತನುವಿನಲ್ಲಿ ತಾನು ಉತ್ತಮ ಕುಲದವನೆಂಬ ಕುಲಮದ ಕಾಣಿಸಿಕೊಂಡಿದೆ. ಹಾಗೆಯೇ ಛಲಮದ, ಧನಮದ, ರೂಪಮದ, ಯೌವ್ವನಮದ, ವಿದ್ಯಾಮದ, ರಾಜಮದ, ತಪೋಮದಗಳು ತನುವನ್ನು ಹಗಲಿರುಳು ಎನ್ನದೆ ಬಾಧೆಗೆ ಈಡು ಮಾಡುತ್ತವೆ.

ಹೊನ್ನು ಹೆಣ್ಣು ಮಣ್ಣು ಅನ್ನ ನೀರು ವಸ್ತ್ರ ವಾಹನ ಆಭರಣಗಳೆಂಬ ಅಷ್ಟಮಲಗಳ ಲೇಪನದಿಂದಾಗಿ ತನು ಮಲಿನಗೊಂಡಿದೆ.

ಮನ ತನುವಿಗೆ ಲೇಪನ ಮಾಡಿದ ಈ ಸಕಲಗುಣಗಳನ್ನು ಅತಿಗಳೆದು ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಶಿವನೊಂದಿಗೆ ಕೂಡಿದಾಗ ತಾಮಸಿ ತಾಮಸಿಯಾಗಿ ಸೋಮ ಪ್ರಭೆಯಿಂದ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ ಮನ. ಅಜ್ಞಾನದ ಕತ್ತಲೆ ಎಂಬ ಮನ ಮಹಾಜ್ಞಾನದ ಬೆಳಕಿನಲ್ಲಿ ಕೂಡಿ ಅವ್ವೆ ನಿರ್ನಾಮವಾಗುತ್ತಾಳೆ.

ಆನಂದದ ಆದಿಗೆ ತಾನೇ ಮೂಲ ಸ್ವಾಮಿಯಾಗುತ್ತಾಳೆ. ಅನಾದಿಯಿಂದ ಅತ್ತತ್ತಲಾದ ಜ್ಞಾನದಿಂದಲೇ ಹುಟ್ಟಿದ ಮನವೆಂಬ ಕತ್ತಲನ್ನು ಆದಿ ಎಂದು ಹೆಸರಿಸಿ ಕರೆದಿದ್ದಾರೆ ಶರಣರು.

ಅನಾದಿಯಿಂದತ್ತತ್ತಲಾದ ಮಹಾಜ್ಞಾನದೊಂದಿಗೆ ಮನವೆಂಬ ಅವ್ವೆ ಸಂಗಮವಾಗಿ ಆನಂದದ ಆದಿಗೆ ತಾನೇ ಮೂಲಸ್ವಾಮಿಯಾದಳು ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**572**

**ತನುಗುಣಾದಿಗಳೆಲ್ಲ ನೀ ಮಾಡಲಾದವು.**
**ಮನ ಪ್ರಾಣ ನೆನಹಿನ ಸಂಗಮದಲಿ ಸಮನಿಸಬಲ್ಲನೆ ಅಯ್ಯ?**
**ಸ್ಥೂಲ ಸೂಕ್ಷ್ಮ ಕಾರಣವೆಂಬವು**
**ನೀ ಮಾಡಲಾದುವಲ್ಲದೆ ನಿಮ್ಮ ಧರ್ಮ.**

**ನಿನ್ನ ಮೀರಿ ಅಧಿಕವುಂಟೆ? ಸರ್ವರಲ್ಲಿ ಸಿದ್ಧನು.**
**ಎನ್ನ ಹೊದ್ದಿಯೂ ಹೊದ್ದದಂತಿರೆ,**
**ಎನ್ನ ಸರ್ವಾಂಗದಲ್ಲಿ ನೀನೆಯಾಗಿ ತೋರಯ್ಯಾ!**
**ಅನಂಗ ವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ನಿಮ್ಮ ಧರ್ಮ! ನಿಮ್ಮ ಧರ್ಮ!**

ಬಯಲು ದೇವನೆ ನಿನ್ನ ಲೀಲೆ ಅನಂತ. ಜಲಜನಕ ಆಮ್ಲಜನಕಗಳನ್ನು ಸೃಷ್ಟಿ ಮಾಡಿದೆ. ಅವೆರಡನ್ನು ಒಂದು ಮಾಡಿ ನೀನು ಅದರೊಳಗೆ ಒಳಹೊರಗೆನ್ನದೆ ಬೆರೆತು ಜೀವಜಲವನ್ನಾಗಿಸಿದೆ. ಆ ಜಲವನ್ನು ಗಟ್ಟಿಗೊಳಿಸಿ ಭೂಮಿಯನ್ನಾಗಿಸಿದೆ. ಜೀವಜಲದಿಂದಲೇ ಸಸ್ಯ ಕಾಶಿಗಳನ್ನು ಜಲಚರಗಳನ್ನು ಸೃಷ್ಟಿ ಮಾಡಿದೆ. ಆಕಾಶಕಾಯಗಳನ್ನು ಸೂರ್ಯ ಚಂದ್ರಗ್ರಹವನ್ನು ಸೃಷ್ಟಿ ಮಾಡಿದೆ. ನಿನ್ನ ಲೀಲೆ ಅನಂತ.

ನೀನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ನೀನೇ ಕಣ್ತುಂಬಿಕೊಂಡು ನೋಡಬೇಕೆಂಬ ಆಸೆಯಿಂದಾಗಿ ತನುವನ್ನು ಸೃಷ್ಟಿ ಮಾಡಿದೆ. ಜೀವಜಲಬಿಂದುವೇ ಗರ್ಭಹೊಕ್ಕು ರಕ್ತ ಮೂಳೆ ಮಾಂಸ ಮಜ್ಜೆಯಾಗಿ ಸುಂದರವಾದ ಚರ್ಮ ಹೊಲಿದುಕೊಂಡು ತನುವಾಗಿ ಹೊರಬಂತು.

ಬಯಲು ದೇವನೆ, ನೀನು ಸೃಷ್ಟಿ ಮಾಡಿದ ತನುವಿನಲ್ಲಿ ನೀನು ಸಂಗಮವಾದೆ. ನೀನೇ ಸೃಷ್ಟಿ ಮಾಡಿದ ಈ ಬ್ರಹ್ಮಾಂಡವನ್ನು ನೋಡಲು ತನುವಿನಲ್ಲಿ ಮನವನ್ನು ಸೃಷ್ಟಿ ಮಾಡಿದೆ. ನಿನ್ನನ್ನು ಗುರುತಿಸಿ ನಿನ್ನೊಂದಿಗೆ ಬೆರೆತು ಪರಮ ಸಂತೋಷದಿಂದ ಬ್ರಹ್ಮಾಂಡವನ್ನು ನೋಡಬೇಕಾದ ಮನ, ಸೃಷ್ಟಿ ಮಾಡಿದ ನಿನ್ನನ್ನು ತಿಳಿಯದೇ ಹೋಯಿತು. ಮನ ತನುವಿನೊಂದಿಗೆ ಸಂಗ ಮಾಡಿ ತನುಗಳನ್ನು ಸೃಷ್ಟಿ ಮಾಡಿತು. ನೀನು ಸೃಷ್ಟಿ ಮಾಡಿದ ತನುವಿನಲ್ಲಿ ನೀನಿದ್ದರೂ ಮನ ನಿನ್ನನ್ನು ಅರಿಯದೆ ಹೋಯಿತು.

ತನು ನಿರಪರಾಧಿ; ಮನದ ಗುಣಗಳು ತನುವನ್ನು ಕಾಡುತ್ತವೆ. ತನುವನ್ನು ಮನವನ್ನು ಸೃಷ್ಟಿ ಮಾಡಿದವನು ನೀನು. ತನು, ಮನ, ತನುಗುಣಾದಿಗಳೆಲ್ಲ ನೀ ಮಾಡಲಾದವು. ಮನ ಪ್ರಾಣ ನೆನಹಿನ ಸಂಗಮದಲಿ ಸಮನಿಸಲು ಸಾಧ್ಯವೆ ಅಯ್ಯಾ?

ಸ್ಥೂಲ ಸೂಕ್ಷ್ಮ ಕಾರಣವೆಂಬವು ನೀ ಮಾಡಲಾದುವಲ್ಲದೆ ನಿಮ್ಮ ಧರ್ಮ:

ಸ್ಥೂಲ ಕಾಯವನ್ನು ನೀನೇ ಮಾಡಿದೆ. ಸ್ಥೂಲ ಕಾಯದಲ್ಲಿ ನೀನು ಸಂಗಮವಾಗಿ ಕಾರಣಕಾಯನಾದೆ. ನಿನ್ನ ಬೆಳಕಿನಿಂದ ಹೊರಹೊಮ್ಮಿದ ನೆರಳು ಸ್ಥೂಲ ಕಾಯವನ್ನು ಆವರಿಸಿ ಸೂಕ್ಷ್ಮಕಾಯವೆಂಬ ಹೆಸರು ಪಡೆಯಿತು. ಈ ಮೂರು ಕಾಯಗಳು ನೀ ಮಾಡಲಾದುವಲ್ಲದೆ ನಿಮ್ಮ ಧರ್ಮವಾಗಿ ಬೆಳಗಿದವು. ಕಾಯದ ಧರ್ಮ ಸಾಮಾನ್ಯವೆ? ಅದು ಕೈಲಾಸ. ಏಕೆಂದರೆ ಸಕಲ ಕಾಯಗಳಲ್ಲಿಯೂ ನೀನೇ ಸಂಗಮವಾಗಿರುವಿ.

ನಿನ್ನ ಮೀರಿ ಅಧಿಕ ಧರ್ಮವುಂಟೆ? ಸರ್ವಕಾಯಗಳಲ್ಲಿಯೂ ಸಿದ್ಧನು ನೀನು. ನಿನ್ನ ಹೊದ್ದಿಯೂ ಹೊದ್ದದಂತಿರುವ ಅವಿವೇಕಿ ನಾನು. ಹೀಗಾಗಿ ಕಾಯದಿಂದಲೇ ಮುಸಲ್ಮಾನನಾದೆ; ಕಾಯದಿಂದಲೇ ಹಿಂದು ಎನ್ನಿಸಿಕೊಂಡೆ; ಕಾಯದಿಂದಲೇ ಕ್ರೈಸ್ತ ಎನ್ನಿಸಿಕೊಂಡೆ. ಕಾಯದಿಂದಲೇ ಹೆಣ್ಣು ಗಂಡು ಎಂದು ಕರೆಯಿಸಿಕೊಂಡೆ. ಕಾಯದಿಂದಲೇ ಬಡವ ದರಿದ್ರ ಭಿಕ್ಷುಕ ಶ್ರೀಮಂತ ಎಂದು ಕರೆಯಿಸಿಕೊಂಡೆ. ಕಾಯದಿಂದಲೇ ಅಧಿಕಾರಿ ಜವಾನ ಶಾಸಕ ಮಂತ್ರಿ ಪ್ರಧಾನಿ ಅಧ್ಯಕ್ಷ ಎಂದು ಬೇರ್ಪಡಿಸಿಕೊಂಡು ಕಾಯ ಕಾಯವನ್ನೇ ಆಳುವ ಕಾಯದ ಗುಣಗಳನ್ನು ತಿಳಿಯದಾದೆ.

ಕಾಯದಲ್ಲಿ ನೀನಿದ್ದೂ ನೀನೇ ಮಾಡಲಾದವು ತಂದೆ ಕಾಯದ ಗುಣಗಳು.

ನೀನು ಸೃಷ್ಟಿ ಮಾಡಿದ ಧರ್ಮವೇ ಬೇರೆ. ನಾನೇ ಸೃಷ್ಟಿ ಮಾಡಿಕೊಂಡ ಧರ್ಮವೇ ಬೇರೆ. ಕಾಯದಲ್ಲಿಯೇ ಸಂಗಮವಾದ ನಿನ್ನನ್ನು ಅರಿತ ಪೈಗಂಬರರು ನಿನ್ನನ್ನು 'ಅಲ್ಲಾ' ಎಂದು ಹೆಸರಿಟ್ಟು ಕರೆದರು. ವರ್ಧಮಾನ ನಿನ್ನನ್ನು 'ಮಹಾವೀರ' ಎಂದು ಕರೆದ. ಸಿದ್ಧಾರ್ಥ ನಿನ್ನನ್ನು 'ಬುದ್ಧ' ಎಂದು ಕರೆದ. ಬಸವಾದಿ ಶರಣರು ನಿನ್ನನ್ನು 'ಲಿಂಗಯ್ಯ' ಎಂದು ಕರೆದು ನಿನಗೆ ಶರಣುಹೋಗಿ ಶರಣರಾದರು. ದಾಸರು ನಿನಗೆ ದಾಸಾನು ದಾಸರಾದರು. ಇವರೆಲ್ಲ ಕಾಯದಲ್ಲಿಯೇ ಇದ್ದ ನಿನ್ನನ್ನು ಕಾಯದಿಂದಲೇ ಗುರುತಿಸಿ ಧನ್ಯರಾದರು.

ನಿನ್ನನ್ನು ಅನುಸರಿಸಿದ ಕಾಯಗಳು ಶ್ರೀಮಂತ ಕಾಯಗಳು. ನೀನು ಯಾರು ಎಂದು ತಿಳಿಯದೆ ನಿನ್ನನ್ನು ಪ್ರಾರ್ಥಿಸಲು ನಿನಗಾಗಿ ಮಸೀದೆ ಮಂದಿರ ಚರ್ಚ್‌ಗಳನ್ನು ಕಟ್ಟಿದ ಕಾಯಗಳು, ಕಾಯದಲ್ಲಿ ನೀನಿದ್ದರೂ ನಿನ್ನನ್ನು ಅರಿಯದ ಕಾಯಗಳು.

ಕಾಯಕ್ಕೆ ಗಡ್ಡ ಬಿಟ್ಟು ಮುಸಲ್ಮಾನನಾದರೆ ಅರಿವಿನಿಂದ ನೋಡಲು ಬರುತ್ತದೆಯೆ? ಕಾಯಕ್ಕೆ ಜನಿವಾರ ಹಾಕಿ ಹಣೆಗೆ ನಾಮ ಬಳಿದು ಹಿಂದುವಾದರೆ ಅರಿವಿನಿಂದ ಮುಟ್ಟಲು ಬರುತ್ತದೆಯೆ? ಕಾಯಕ್ಕೆ ಲಿಂಗ ಶಿಲುಬೆ ರುದ್ರಾಕ್ಷಿ ಧರಿಸಿದರೆ ಅರಿವಿನಿಂದ ಮೂಸಿಸಿ ರುಚಿಸಲು ಬರುತ್ತದೆಯೆ?

ಅನಂಗವಿದಾರಣನಾಗಿ ಸರ್ವಾಂಗದಲ್ಲಿಯೂ ಅರಿವಿನ ದೇವರು ಸಂಗಮವಾಗಿದ್ದಾನೆ. ಆತನ ಧರ್ಮ ಅರಿವಿನ ಧರ್ಮ. ಅರಿವಿನಿಂದ ನೋಡಿದರೆ ಅಂಗ ಯಾವ ವೇಷ ಧರಿಸಿದರೇನು? ಯಾವ ಭಾಷೆಯಿಂದ ನುಡಿದರೇನು? ಅದು ಹೆಣ್ಣಾದರೇನು? ಗಂಡಾದರೇನು? ಅದು ಶ್ರೀಮಂತನಾದರೇನು? ಬಡವ ಭಿಕ್ಷುಕ ದರಿದ್ರನಾದರೇನು? ಅರಿವಿನ ಧರ್ಮವನ್ನು ಹೊತ್ತುಕೊಂಡ ಶ್ರೀಮಂತ ಅಂಗವೇ ಆಗಿದೆ.

ಸರ್ವ ತನುಗಳಲ್ಲಿಯೂ ಅರಿವಿನ ಧರ್ಮ ಸಂಗಮವಾಗಿದೆ. ಆ ಅರಿವಿನ ದೇವರು ತನುವಿನಲ್ಲಿ ತನುಗುಣಗಳನ್ನು ಕೂಡಾ ಬೆರೆಸಿದ್ದಾನೆ. ತನುವನ್ನು ಆವರಿಸಿದ ಮನದ ಮೂಲಕ ಅರಿವಿನ ದೇವರಿಗೆ ಭಕ್ತಿ ಮಾಡುತ್ತಾ ತನುಗುಣಗಳನ್ನು ಕಳೆದುಕೊಳ್ಳಲು ಸೂಕ್ಷ್ಮ ತನುವಿಗೆ ಮಾತ್ರ ಬರುತ್ತದೆ. ಅರಿವಿನ ಧರ್ಮವನ್ನು ಬಳಸಿ ಸಕಲ ತನುಗಳನ್ನು ಅರಿವಿನ ತನುವೆಂದು ನೋಡಲು ಬರುತ್ತದೆ. ತನುವಿಗಂಟಿದ ಸಕಲ ಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾಗಲು ಬರುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಲು ಸಕಲ ತನುಗಳಿಗೆ ಬರುತ್ತದೆ.

**573**

**ತನುತ್ರಯದ ಗುಣದಲ್ಲಿ ತಾಮಸಿಯಲ್ಲ ಬಸವಣ್ಣ;**
**ಮನತ್ರಯದಲ್ಲಿ ಮತ್ತನಲ್ಲ ಬಸವಣ್ಣ;**
**ಮಲತ್ರಯದಲ್ಲಿ ಮಗ್ನನಲ್ಲ ಬಸವಣ್ಣ;**
**ಲಿಂಗತ್ರಯದಲ್ಲಿ ನಿಪುಣ ಬಸವಣ್ಣ;**
**ಐದಾರು ಪ್ರಸಾದದಲ್ಲಿ ಪ್ರಸನ್ನ ಬಸವಣ್ಣ;**
**ಈರೈದು ಪಾದೋದಕದಲ್ಲಿ ಪ್ರಭಾವ ಬಸವಣ್ಣ;**
**ಎರಡು ಮೂರು ಭಕ್ತಿಯಲ್ಲಿ ಸಂಪನ್ನ ಬಸವಣ್ಣ;**
**ಮೂವತ್ತಾರು ತತ್ವದಿಂದತ್ತತ್ತ**

**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿ,**
**ಫಲಪದಕ್ಕೆ ದೂರವಾದನಯ್ಯಾ ನಮ್ಮ ಬಸವಣ್ಣ.**

ಸ್ಥೂಲತನು, ಸೂಕ್ಷ್ಮತನು, ಕಾರಣತನುಗಳೆಂದು ತನುವಿನಲ್ಲಿ ಮೂರು ತನುಗಳಿವೆ. ಸೂಕ್ಷ್ಮತನು ಸ್ಥೂಲತನುವನ್ನು ಆವರಿಸಿರುವುದರಿಂದ ಮನ ಸ್ಥೂಲತನುವಿಗೆ ತಾಮಸಿಯ ಪಾತ್ರವನ್ನು ಹಾಕಿ ಸುಖ ದುಃಖಗಳಿಗೆ ಒಳಗುಮಾಡುತ್ತದೆ. ರಾಜಸ ಸಾತ್ವಿಕ ಗುಣಗಳ ಪಾತ್ರವನ್ನು ಹಾಕಿ ಸುಖ ದುಃಖಗಳಿಗೆ ಒಳಗು ಮಾಡುತ್ತದೆ. ಬಸವಣ್ಣನವರು ಅರಿವಿನಿಂದ ತನುವನ್ನು ಗಮನಿಸಿದರು. ತನುವನ್ನು ಆವರಿಸಿದ ಮನವನ್ನು ಭಕ್ತನನ್ನಾಗಿಸಿ, ತನುವಿನಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಶರಣು ಹೋಗಿ ಸೂಕ್ಷ್ಮ ಮತ್ತು ಸ್ಥೂಲ ತನುವಿನ ತಾಮಸಗುಣವನ್ನು ಕಳೆದುಕೊಂಡರು ಬಸವಣ್ಣ.

ಮನತ್ರಯದಲ್ಲಿ ಮತ್ತನಲ್ಲ ಬಸವಣ್ಣ:

ಮನ, ಮನನ, ಮನನೀಯ ಎಂದು ಮನದಲ್ಲಿ ಮೂರು ಭಾಗಗಳನ್ನಾಗಿ ಮಾಡಬಹುದು. ಮನ ಹೇಳಿದಂತೆ ತನು ಕೇಳಿದರೆ ಅದು ತಾಮಸ, ರಾಜಸ, ಸಾತ್ವಿಕದ ಸುಳ್ಳು ಪಾತ್ರಗಳನ್ನು ಕಾಲಕಾಲಕ್ಕೆ ಹಾಕುತ್ತಾ ತನುವಿಗೆ ಹೌದು ಅಲ್ಲಗಳೆಂಬ ಅಜ್ಞಾನದ ಪಟ್ಟವನ್ನು ಕಟ್ಟುತ್ತದೆ. ತನು ಜ್ಞಾನಿಯಾಗಿ ಸಮಾಧಾನದಿಂದ ಇರಲು ಸಾಧ್ಯವಾಗುವುದಿಲ್ಲ. ಹೀಗಾಗಿ ಬಸವಣ್ಣನವರು ಮನದಿಂದಲೇ ಮನನ ಮಾಡಿ ಮನವನ್ನು ಭಕ್ತನಾಗಿಸುವ ಹೊಸಸೂತ್ರವನ್ನು ಕಂಡು ಹಿಡಿದರು. ಭಕ್ತಿ ಭಂಡಾರಿ ಬಸವಣ್ಣ ಎಂದು ಶರಣರಿಂದ ಕರೆಯಿಸಿಕೊಂಡರು.

ಮಲತ್ರಯದಲ್ಲಿ ಮಗ್ನನಲ್ಲ ಬಸವಣ್ಣ:

ಆಣವಮಲ, ಮಾಯಾಮಲ, ಕಾರ್ಮಿಕ ಮಲವೆಂದು ಮೂರು ಮಲಗಳು ತನುವಿಗೆ ಅಂಟಿಕೊಂಡಿವೆ. ಆಣವ ಮಲ ಹುಟ್ಟಿನೊಂದಿಗೆ ಬಂದು ತನುವನ್ನು ಬಾಧೆಗೆ ಈಡು ಮಾಡುತ್ತದೆ. ಮಾಯಾಮಯವಾದ ಮಲವನ್ನು ಮನಸೃಷ್ಟಿ ಮಾಡಿ ತನುವನ್ನು ಬಾಧೆಗೆ ಈಡು ಮಾಡುತ್ತದೆ. ಕಾರ್ಮಿಕಮಲ ಕಾಯ ಮಾಡಲ್ಪಡುವ ಕರ್ಮದಿಂದ ಹುಟ್ಟಿ ಕಾಯವನ್ನೇ ಬಾಧೆಗೆ ಈಡು ಮಾಡುತ್ತದೆ. ಅಂಗದಲ್ಲಿಸಂಗಮವಾದ ಅರಿವಿನ ಲಿಂಗಯ್ಯನ ದರುಶನವನ್ನು ಅಂಗವನ್ನು ಆವರಿಸಿದ ಮನದಿಂದ ಮಾಡಿಕೊಂಡು ಮಲತ್ರಯದಲ್ಲಿ ಮಗ್ನನಾಗಲಿಲ್ಲ ಬಸವಣ್ಣ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಲಿಂಗತ್ರಯದಲ್ಲಿ ನಿಪುಣ ಬಸವಣ್ಣ:

ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಎಂದು ಲಿಂಗವನ್ನು ಬಸವಣ್ಣ ಮೂರು ವಿಧವಾಗಿ ವಿಂಗಡಿಸಿದ್ದಾರೆ. ಸರ್ವಾಂಗದಲ್ಲಿ ಸಂಗಮವಾದುದೇ ಇಷ್ಟಲಿಂಗ. ಪ್ರಾಣಕ್ಕೆ ಪ್ರಾಣವಾದುದೇ ಪ್ರಾಣಲಿಂಗ. ಭಾವಕ್ಕೆ ಭಾವವಾಗಿ ನಿರ್ಭಾವವಾದುದೇ ಭಾವಲಿಂಗ. ಈ ಶಿಕ್ಷಣದಲ್ಲಿ ನೈಪುಣ್ಯತೆಯನ್ನು ಸಾಧಿಸಿದಾತ ಬಸವಣ್ಣ.

ಐದಾರು ಪ್ರಸಾದದಲ್ಲಿ ಪ್ರಸನ್ನ ಬಸವಣ್ಣ:

ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಎಂಬ ಪಂಚೇಂದ್ರಿಯಗಳಲ್ಲಿ ಹುಟ್ಟಿದ ಅಜ್ಞಾನವನ್ನು ಅಲ್ಲಲ್ಲಿಯೇ ಸಂಗಮವಾದ ಜ್ಞಾನದಿಂದ ಉಂಡು ಪ್ರಸಾದ ಮಾಡಿಕೊಂಡ ಬಸವಣ್ಣ. ಅಂಗದಲ್ಲಿಯೇ ಹುಟ್ಟಿದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಅರ್ಪಿಸಿ ಆ ಪ್ರಸಾದವನ್ನು ಉಂಡು ಪ್ರಸನ್ನನಾದ ಬಸವಣ್ಣ.

ಈರೈದು ಪಾದೋದಕದಲ್ಲಿ ಪ್ರಭಾವ ಬಸವಣ್ಣ:

ಪಾದೋದಕ ಎಂದರೆ ಜ್ಞಾನೋದಕ. ಉದಕದಿಂದಾದ ತನುವಿನಲ್ಲಿ ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಈ ಪಂಚೇಂದ್ರಿಯಗಳಲ್ಲಿ ಜ್ಞಾನವೂ ಇದೆ; ಅಜ್ಞಾನವೂ ಇದೆ. ಆ ಐದು ದ್ವಾರಗಳ ಮೂಲಕ ಅಜ್ಞಾನ ಪ್ರವಹಿಸಿದರೆ ಆ ಅಜ್ಞಾನಕ್ಕೆ ಅದೇ ಐದು ದ್ವಾರಗಳ ಮೂಲಕ ಜ್ಞಾನ ಬೋಧೆ ಮಾಡುತ್ತದೆ. ಇದು ಸಕಲ ತನುಗಳಲ್ಲಿ ಇದ್ದರೂ ಈ ಶಿಕ್ಷಣ ತಂತ್ರಜ್ಞಾನ ತಿಳಿದ ತನು ಮಾತ್ರ ಜ್ಞಾನದಿಂದ ಒಸರುವ ಬೋಧೆಯನ್ನು ಪಾದೋದಕ ಎಂದು ಸ್ವೀಕರಿಸುತ್ತದೆ. ಈ ಜ್ಞಾನೋದಕಕ್ಕೆ ಅಜ್ಞಾನವೆಂಬ ಕೆಸರನ್ನು ತೊಳೆಯುವ ಶಕ್ತಿ ಇದೆ. ಈ ಪ್ರಭಾವಕ್ಕೆ ಒಳಗಾದ ಬಸವಣ್ಣ ಸಕಲ ತನುಗಳಿಗೂ ತಿಳಿ ಹೇಳಿದ.

ಎರಡು ಮೂರು ಭಕ್ತಿಯಲ್ಲಿ ಸಂಪನ್ನ ಬಸವಣ್ಣ:

ಎರಡು ಮೂರು ಭಕ್ತಿ ಎಂದರೆ ಷಡ್ವಿಧಭಕ್ತಿ. ಆಚಾರಾಂಗ, ಗೌರವಾಂಗ, ಶಿವಾಂಗ, ಚರಾಂಗ, ಪ್ರಸಾದಾಂಗ, ಮಹದಂಗ. ಯಾವ ಅಂಗವು ಅಗೋಚರ ಆಚಾರದಲ್ಲಿ ನಿರತವಾಗಿದೆಯೊ ಅದು ಆಚಾರಲಿಂಗವೆಂದು ಕರೆಯಿಸಿಕೊಳ್ಳುತ್ತದೆ. ಗೌರವಾಂಗವೇ ಗುರುಲಿಂಗ, ಶಿವಾಂಗವೇ ಶಿವಲಿಂಗ, ಚರಾಂಗವೇ ಚರಲಿಂಗ, ಪ್ರಸಾದಾಂಗವೇ ಪ್ರಸಾದಲಿಂಗ, ಮಹದಂಗವೇ ಮಹಾಲಿಂಗ. ಇಂತಹ ಅಂಗವು ಷಡ್ವಿಧ ಭಕ್ತನೆಂದು ಕರೆಯಿಸಿಕೊಳ್ಳುತ್ತದೆ.

ಮೂವತ್ತಾರು ತತ್ವದಿಂದತ್ತತ್ತ:

ಇಪ್ಪತ್ತೈದು ಆತ್ಮತತ್ವಗಳು, ಹತ್ತು ವಿದ್ಯಾತತ್ವಗಳು, ಒಂದು ಶಿವತತ್ವ ಸೇರಿ ಮೂವತ್ತಾರು ತತ್ವಗಳಿಂದ ತನು ಭರಿತವಾಗಿದೆ. ಈ ತತ್ವಗಳ ಫಲಪದಕ್ಕೆ ದೂರುವಾದನಯ್ಯಾ ನಮ್ಮ ಬಸವಣ್ಣ ಎಂದು ಸಿದ್ಧರಾಮ ಶಿವಯೋಗಿಗಳು ಹಾಡಿದ್ದಾರೆ. ಏಕೆಂದರೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನನ್ನು ಕೂಡಿಕೊಂಡು ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾದ ಕಾರಣ ಫಲಪದಕ್ಕೆ ದೂರವಾದ ಎಂದು ಖಚಿತವಾಗಿ ನುಡಿದಿದ್ದಾರೆ.

ತನು ಮತ್ತು ತನುವನ್ನು ಆವರಿಸಿದ ಮನ ಬದುಕುವುದಕ್ಕಾಗಿ ಹೆಣಗಾಡುತ್ತಲಿದೆ. ತನುವಿನಲ್ಲಿಯೇ ತನ್ಮಯವಾದ ತತ್ವವನ್ನೇ ತನು ಮತ್ತು ಮನ ಮರೆತು ಹೋಗಿದೆ. ಹೀಗಾಗಿ ಸುಳ್ಳು ಸುಖ ಸುಳ್ಳು ದುಃಖಗಳನ್ನು ಅನುಭವಿಸುತ್ತಾ ತತ್ವ ತಿಳಿಯದೆ ತನು ಒಮ್ಮೆ ಸತ್ತು ಹೋಗುತ್ತದೆ.

**574**

**ತನುತ್ರಯದಲ್ಲಿ ಘನಲಿಂಗ ಪ್ರಾಣಸಂಬಂಧಿಯಾದವರ**
**ತೋರಯ್ಯಾ, ನಿಮ್ಮ ಧರ್ಮ.**
**ಅವಯವಂಗಳೆ ನಿಮ್ಮ ವದನಂಗಳಾಗಿ,**
**ಅರ್ಪಿತವಲ್ಲದ ಅನರ್ಪಿತವ ಕೊಳ್ಳರಾಗಿ.**
**ಐದಾರು ಪ್ರಸಾದದಲ್ಲಿ ಅನುಮಾನವಿಲ್ಲದೆ ನಿತ್ಯರಪ್ಪವರ,**
**ಈರೈದು ಪಾದೋದಕದಲ್ಲಿ ವಿರಳವಿಲ್ಲದೆ ವಿಮಲರಪ್ಪವರ,**
**ನೋಡಿ ಕಂಡೆಹೆನೆಂದಡೆ, ಎನಗೆ ಕಾಣಬಾರದು.**
**ಅವರಿಚ್ಛಾಮಾತ್ರದಲ್ಲಿ ನೀನಿಪ್ಪೆಯಾದಡೆ, ನಿನಗೆ ಕಾಣಬಹುದು.**
**ಅಲ್ಲದಿದ್ದಡೆ ನಿನಗೆಯೂ ಅಭೇದ್ಯಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸ್ಥೂಲ ಸೂಕ್ಷ್ಮ ಕಾರಣ ತನುಗಳನ್ನು ಒಂದು ಮಾಡಿಕೊಂಡು ಅರಿವೆಂಬ ಗುರುದೇವನೇ ತಾನಾದವರು ವಿರಳಾತಿ ವಿರಳ. ಈ ಭೂಮಿಯ ಮೇಲೆ ಸ್ಥೂಲ ಸೂಕ್ಷ್ಮ ಕಾರಣ ತನುಗಳುಳ್ಳ ತನುಗಳು ಮಾತ್ರ ಇವೆ. ಈ ಮೂರೂ ಇಲ್ಲದ ತನುಗಳೇ ಇಲ್ಲ. ಆದರೂ ಈ ಮೂರನ್ನೂ ಒಂದು ಮಾಡಿಕೊಳ್ಳಬೇಕೆಂಬ ಬಯಕೆ ತನುಗಳಿಗೆ ಇಲ್ಲ.

ಕಣ್ಣು ಇದೆ; ಕಣ್ಣಿನಲ್ಲಿ ಅರಿವಿನಕಣ್ಣು ಇದೆ; ಅದೇ ಕಣ್ಣಿನಲ್ಲಿ ಮನೋಮಯವಾದ ಮರೆವಿನ ಕಣ್ಣೂ ಇದೆ. ಅರಿವಿನ ದೃಶ್ಯ, ಮನೋಮಯವಾದ ಮರೆವಿನ ದೃಶ್ಯ ಇವೆರಡೂ ಕಣ್ಣಲ್ಲಿ ಇರದಿದ್ದರೆ ಅದು ಕುರುಡು ಕಣ್ಣು; ಅಂತಹ ಕಣ್ಣಿಗೆ ಯಾವ ವಸ್ತುವೂ ಕಾಣುವುದಿಲ್ಲ.

ಕಣ್ಣು ಮನೋಮಯವಾದ ದೃಶ್ಯದ ಸಂಗ ಮಾಡಿರುವುದರಿಂದ ಅದಕ್ಕೆ ಆಭರಣ ಕಾಣುತ್ತದೆ. ವಸ್ತುವಿನ ಸತ್ಯ ಕಣ್ಣಿಗೆ ಕಾಣುವುದಿಲ್ಲ. ಮನ ಆಭರಣದ ಆಸೆಗಾಗಿ ತನುವಿಗೆ ಶ್ರೀಮಂತ ಬಡವ ಕಳ್ಳ ರಾಜನ ಪಟ್ಟ ಕಟ್ಟುತ್ತದೆ.

ಅರಿವಿನ ದೃಶ್ಯಕ್ಕೆ ಲೋಹ ಮಾತ್ರ ಕಾಣುತ್ತದೆ. ಆಭರಣ ಕಾಣುವುದಿಲ್ಲ. ಹೀಗಾಗಿ ಕದಿಯುವುದಿಲ್ಲ, ಕೊಳ್ಳುವುದಿಲ್ಲ. ಆಭರಣದ ಆಸೆಗಾಗಿ ರಾಜ ರಾಜನನ್ನು ಕೊಲ್ಲುವುದಿಲ್ಲ. ಅರಿವಿನ ದೃಶ್ಯವೆಂದರೆ ಸಾಮಾನ್ಯವಲ್ಲ. ಅದು ಸದ್ಗುರುವಿನ ದೃಶ್ಯ. ಮನೋಮಯವಾದ ದೃಶ್ಯಕ್ಕೆ ಅರಿವಿನ ದೃಶ್ಯದ ಪರಿಚಯವೇ ಇಲ್ಲ. ಎರಡೂ ದೃಶ್ಯಗಳೂ ಕಣ್ಣನ್ನೇ ಆಶ್ರಯಿಸಿಕೊಂಡಿವೆ. ಆದರೂ ಮನಕ್ಕೆ ಅರಿವಿನ ಪರಿಚಯವಿಲ್ಲ. ಅರಿವಿನ ಪಾಠ ಮನಕ್ಕೆ ತಿಳಿಯುತ್ತಿಲ್ಲ. ಮನ ಅರಿವಿಗೆ ಶರಣು ಹೋಗುತ್ತಿಲ್ಲ. ಚರ್ಮ, ನಾಲಿಗೆ, ಮೂಗು, ಕಿವಿಯ ಪರಿಸ್ಥಿತಿ ಕೂಡಾ ಹೀಗೆಯೇ ಇದೆ. ಕಿವಿಯಲ್ಲಿ ಸೃಷ್ಟಿಯಾದ ಶಬ್ದ ಕಿವಿಗೆ ಕೇಳಲು ಬರುತ್ತಿಲ್ಲ. ಮೂಗಿನಲ್ಲಿ ಸೃಷ್ಟಿಯಾದ ವಾಸನೆ ಮೂಗಿಗೆ ಸುಗಂಧ ದುರ್ಗಂಧವಾಗಿ ರಾಚುತ್ತದೆ. ಅವೆರಡನ್ನೂ ಕಳೆದು ಮೂಸಿಸುವ ಅರಿವಿನ ಪರಿಮಳ ಮೂಗಿನಲ್ಲಿಯೇ ಇದೆ. ಮೂಗಿಗೆ ಈ ಪರಿಮಳ ಬಳಕೆಯಾಗುತ್ತಿಲ್ಲ.

ಚರ್ಮಕ್ಕೆ ಚರ್ಮದ ಸ್ಪರ್ಶ ಗೊತ್ತಿಲ್ಲದೆ ಉದ್ರಿಕ್ತನಾಗುತ್ತದೆ. ಇಡೀ ತನುವನ್ನು ಅಜ್ಞಾನದ ಕೂಪಕ್ಕೆ ತಳ್ಳುತ್ತದೆ. ನಾಲಿಗೆ ರುಚಿಗಾಗಿ ತನುವನ್ನು ಛಿದ್ರಛಿದ್ರಗೊಳಿಸುತ್ತದೆ. ಮನಕ್ಕೆ ಈ ಐದೂ ಜಾಗದ ಅಜ್ಞಾನ ಪ್ರಸಾದವಾಗುತ್ತಿಲ್ಲ. ಅಂತಹ ಮಹಾತ್ಮರನ್ನು ತೋರಯ್ಯಾ ಅದು ನಿಮ್ಮ ಧರ್ಮ ಎಂದು ಸಿದ್ಧರಾಮ ಶಿವಯೋಗಿಗಳು ಅರಿವೆಂಬ ಗುರುದೇವನನ್ನು ಬೇಡಿಕೊಂಡಿದ್ದಾರೆ.

ಅರಿವಿನ ಶಕ್ತಿ ಸಕಲ ತನುಗಳಲ್ಲಿಯೂ ಇದೆ; ಆದರೂ ಕಾಣುವುದಿಲ್ಲ. ಅರಿವಿನ ಆಚಾರದಲ್ಲಿದ್ದವನಿಗೆ ಮಾತ್ರ ಕಾಣದೆ ಇರುವುದಿಲ್ಲ. ಆ ಅರಿವಿನ ಇಚ್ಛಾ ಮಾತ್ರದಲ್ಲಿ ನೀನಿರುವಿ ಯಾದಡೆ ನಿನಗೆ ಕಾಣಬಹುದು. ಇಲ್ಲದಿದ್ದಡೆ ಅರಿವೆಂಬ ಗುರುದೇವನು ಭೇದಿಸಲು ಬಾರದ ಅಭೇದ್ಯನಾಗಿ ತನುವಿನಲ್ಲಿಯೇ ಉಳಿಯುತ್ತಾನೆ.

575

**ತನುತ್ರಯದಲ್ಲಿ ಪ್ರವೇಶಿಸುವಾತ,**
**ಮನತ್ರಯದಲ್ಲಿ ಸರ್ವಹಂತ,**
**ಲೋಕ ಲೋಕಂಗಳೆಂಬಂಥ ಸೀಮೆಯಲ್ಲಿ ದಾತ**
**ಸ್ವಾತಂತ್ರನೆ ತಾನೆ ಸಲೆಯಾರಾಧ್ಯವಾದಾತನೆಂದೆಂಬೆ.**
**ಆತನೆ ಶರಣನೆಂದೆಂಬೆ,**
**ಆತನೆ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬೆ.**

ಸ್ಥೂಲತನು ಸೂಕ್ಷ್ಮತನು ಇವೆರಡೂ ಒಂದರಲ್ಲಿ ಒಂದು ಕೂಡಿವೆ. ಇವುಗಳ ಕೂಟದಿಂದಾಗಿ ಲೋಕ ನಿರ್ಮಾಣವಾಗಿದೆ. ಸೂಕ್ಷ್ಮತನು ಸ್ಥೂಲ ತನುವಿನಲ್ಲಿ ಕೂಡಿದೆ ಎಂದು ಕೂಡಾ ಸೂಕ್ಷ್ಮ ತನುವಿಗೆ ಗೊತ್ತಿಲ್ಲ. ಹಾಗೆಯೇ ಸೂಕ್ಷ್ಮತನು ಸ್ಥೂಲ ತನುವಿನಲ್ಲಿ ಕೂಡಿದೆ ಎಂದು ಕೂಡಾ ಸ್ಥೂಲ ತನುವಿಗೆ ಗೊತ್ತಿಲ್ಲ. ಹೀಗಾಗಿ ತನು ಒಮ್ಮೆ ಸುಖ ಅನುಭವಿಸಿದರೆ ಮತ್ತೊಮ್ಮೆ ತಾನು ಅನುಭವಿಸಿದ ಸುಖವೇ ದುಃಖವಾಗಿ ಮಾರ್ಪಡುತ್ತದೆ.

ಸ್ಥೂಲತನು ಸೂಕ್ಷ್ಮ ತನುಗಳೆರಡೂ ಕಾರಣ ತನುವನ್ನು ಕಂಡುಕೊಳ್ಳಬೇಕಿದೆ. ಇವೆರಡರ ಇಕ್ಕೆಲಗಳಲ್ಲಿಯೇ ಕಾರಣತನುವಿದೆ. ಕಾರಣತನುವೆಂದರೆ ಮಹಾಜ್ಞಾನತನು. ಈ ತನುವನ್ನೇ ಉಪನಿಷತ್‌ಕಾರರು ಜ್ಞಾನಿಗಳು 'ಶಿವ' ಎಂದು ಕರೆದರು. 'ತತ್ವ' ಎಂದು ಕರೆದರು. 'ಸತ್ಯ', 'ಚೈತನ್ಯ' ಎಂದು ಕರೆದರು. ಸಿದ್ಧಾರ್ಥ ಈ ತನುವನ್ನು 'ಬುದ್ಧ' ಎಂದು ಕರೆದ. ಈ ದೇಶದ ದಾರ್ಶನಿಕರು ಶರಣರು ದಾಸರು ನಾನಾ ಹೆಸರಿನಿಂದ ಕರೆದರು. ಇವರೆಲ್ಲ ಆ ಸತ್ಯವನ್ನು ಕಂಡುಕೊಂಡವರು.

ತನು, ತನುವನ್ನು ಆವರಿಸಿದ ಮನ, ತನುವಿನಲ್ಲಿಯೇ ತನ್ಮಯವಾದ 'ಶಿವತನು'ವನ್ನು ಕಂಡುಕೊಳ್ಳದೆ ತನುವಿನಿಂದ ಶಿವನನ್ನು ಕಲ್ಲಲ್ಲಿ ಲೋಹದಲ್ಲಿ ಕಟ್ಟಿಗೆಯಲ್ಲಿ ಮಣ್ಣಲ್ಲಿ ನಿರ್ಮಾಣ ಮಾಡಿತು. ತಾನು ನಿರ್ಮಾಣ ಮಾಡಿದ ಶಿವನನ್ನೇ ಶಿವನೆಂದು ಆರಾಧಿಸಿತು. ತನುವನ್ನು ನಿರ್ಮಾಣ ಮಾಡಿ ತನುವಿನಲ್ಲಿಯೇ ತನ್ಮಯವಾದ ಶಿವನನ್ನು ತನು ಮತ್ತು ಮನ ಮರೆತು ಹೋಯಿತು.

ತನುತ್ರಯದಲ್ಲಿ ಪ್ರವೇಶಿಸುವಾತ, ಮನತ್ರಯದಲ್ಲಿ ಸರ್ವ ಹಂತ. ಆತ ಲೋಕ ಲೋಕಂಗಳೆಂಬಂಥ ಸೀಮೆಯಲ್ಲಿದಾತನು ಆತ. ಆತ ಸ್ವತಂತ್ರ ನಿರ್ಭಯ ಆರಾಧ್ಯದೈವ. ಸಾಕ್ಷಾತ್ ಭಗವಂತನಿಗೆ ಶರಣು ಹೋಗಿ ಶರಣನಾದಾತ. ಆತನೇ ಕಪಿಲಸಿದ್ಧ ಮಲ್ಲಿಕಾರ್ಜುನನು.

**576**

**ತನುತ್ರಯ ಮನತ್ರಯಂಗಳೆಂಬ ಶಂಕೆಯಲ್ಲಿ ಕೆಡದೆ,**
**ಹಮ್ಮಿನ ಬೊಮ್ಮನ ನೀನಾಡದೆ ಮಾಡಾ ಲಿಂಗಾರ್ಚನೆಯ,**
**ಶ್ರೋತ್ರಿಯ ಕೈಗಳಿಂದ ಇಷ್ಟಲಿಂಗಾರ್ಚನೆಯ,**
**ನೇತ್ರದ ಕೈಯಿಂದ ಗುರುಲಿಂಗಾರ್ಚನೆಯ.**
**ಇಂತು ತ್ರಿವಿಧ ಮುಟ್ಟಿ ಕರಕರಂಗಳಲ್ಲಿ**
**ಚರಲಿಂಗಾರ್ಚನೆಯ ಮಾಡಿರಯ್ಯಾ ಮನಮುಟ್ಟಿ.**
**ಚರಲಿಂಗಾರ್ಚನೆಯಿಂದ**
**ಭಕ್ತನೆನಿಸುವೆ, ಮಾಹೇಶ್ವರನೆನಿಸುವೆ,**
**ಪ್ರಾಣಲಿಂಗಿ, ಶರಣ, ಪ್ರಸಾದಿ, ಐಕ್ಯನೆನಿಸುವೆ,**
**ಜನನ ಮರಣಾದಿಗಳಿಗೆ ದೂರನೆನಿಸುವೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿ**
**ಶುದ್ಧಸಿದ್ಧ ಪ್ರಸಿದ್ಧ ಏಕ ಏಕ ಎನಿಸುವೆ.**

ತನುತ್ರಯ ಮನತ್ರಯಗಳೆಂಬ ಶಂಕೆಯಲ್ಲಿಯೇ ತನು ತನ್ನ ಆಯುಷ್ಯವನ್ನು ವ್ಯರ್ಥಮಾಡಿಕೊಂಡು ಇಹಲೋಕವನ್ನು ತ್ಯಜಿಸುತ್ತದೆ.

ನಿನ್ನ ಭ್ರಮೆಗಳನ್ನು ನೀನೇ ಕಳೆದುಕೊಂಡು ನಿನ್ನ ಅಹಂಕಾರವನ್ನು ತನುತ್ರಯದ ಮೇಲೆ ತೋರು, ಮನತ್ರಯದ ಮೇಲೆ ತೋರು. ನೀನೇ ಬ್ರಹ್ಮನಾಗಿ ಮನತ್ರಯದಲ್ಲಿ ತನುತ್ರಯದಲ್ಲಿ ಅರಿವಿನ ಲಿಂಗಯ್ಯನನ್ನು ಸ್ಥಾಪಿಸಿ ಲಿಂಗಾರ್ಚನೆಯನ್ನು ಮಾಡು.

ಶ್ರೋತ್ರಿಯ ಕೈಗಳಿಂದ ಇಷ್ಟಲಿಂಗಾರ್ಚನೆಯ:

ಕಿವಿಗಳು ಕಿವಿಗಳು ಮಾತ್ರವಲ್ಲ. ಅಲ್ಲಿ ಬ್ರಹ್ಮ ಬಚ್ಚಿಟ್ಟು ಕೊಂಡಿದ್ದಾನೆ. ಭ್ರಮೆ ಆವರಿಸಿರುವುದರಿಂದಾಗಿ ಕೇಳುವ ಶಬ್ದ ಕಿವಿಯಲ್ಲಿ ಕಾದ ಸೀಸ ಹೊಯ್ದಂತಾಗುತ್ತದೆ. ನರನಾಡಿಗಳು ಹರಿದು ರಕ್ತ ಚಿಮ್ಮುತ್ತದೆ. ಕಿವಿಯಲ್ಲಿದ್ದ ಭ್ರಮೆಯನ್ನು ಕಿವಿಯಲ್ಲಿಯೇ ಸಂಗಮವಾದ ಶ್ರೋತ್ರಿಯ ಬ್ರಹ್ಮನಿಂದ ಕಳೆದುಕೊಂಡು ಆ ಬ್ರಹ್ಮನಿಂದಲೇ ಅರಿವಿನ ಲಿಂಗಯ್ಯನನ್ನು ಆರಾಧಿಸು.

ನೇತ್ರದ ಕೈಯಿಂದ ಗುರುಲಿಂಗಾರ್ಚನೆಯ:

ನೇತ್ರವನ್ನು ಭ್ರಮೆ ಆವರಿಸಿದೆ; ನೇತ್ರದಲ್ಲಿ ಬ್ರಹ್ಮ ಸಂಗಮವಾಗಿದ್ದಾನೆ. ಒಂದೇ ನೇತ್ರದಲ್ಲಿ ಭ್ರಮಾದೃಶ್ಯವೂ ಇದೆ; ಬ್ರಹ್ಮದೃಶ್ಯವೂ ಇದೆ. ನೇತ್ರ ಈ ಎರಡೂ ದೃಶ್ಯಗಳಿಗೆ ಉಪಕರಣವಾಗಿದೆ. ನೇತ್ರದಲ್ಲಿಯೇ ಇದ್ದ ಭ್ರಮಾದೃಶ್ಯವನ್ನು ನೇತ್ರದಲ್ಲಿಯೇ ಸಂಗಮವಾದ ಬ್ರಹ್ಮನಿಂದ ಕಳೆದುಕೊಂಡು ಅರಿವಿನ ಲಿಂಗಯ್ಯನನ್ನು ಅರ್ಚನೆ ಮಾಡಬೇಕು.

ತನು ಮನದಲ್ಲಿ, ಶ್ರೋತ್ರದಲ್ಲಿ, ನೇತ್ರದಲ್ಲಿ ಹೀಗೆ ತ್ರಿವಿಧದಲ್ಲಿ ಸಂಗಮವಾದ ಬ್ರಹ್ಮನ ಮೂಲಕ ಭ್ರಮೆಯನ್ನು ಕಳೆದುಕೊಂಡು, ತ್ರಿವಿಧದಲ್ಲಿ ಅರಿವಿನ ಲಿಂಗಯ್ಯನ ಪೂಜಿಸಬೇಕು; ಅರ್ಚಿಸಬೇಕು. ಈ ತ್ರಿವಿಧಾರ್ಚನೆಯಿಂದಾಗಿಯೆ ಭಕ್ತನೆನಿಸುವೆ, ಮಹೇಶ್ವರನೆನಿಸುವೆ, ಪ್ರಾಣಲಿಂಗಿ, ಶರಣ, ಪ್ರಸಾದಿ ಎನಿಸುವೆ. ಐಕ್ಯನೆಂದೆನ್ನಿಸಿಕೊಂಡು ಜನನ ಮರಣಾದಿಗಳಿಗೆ ದೂರವೆನ್ನಿಸಿಕೊಳ್ಳುವೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನನ್ನು ಕೂಡಿ ಶುದ್ಧ ಸಿದ್ಧ ಪ್ರಸಿದ್ಧ ಏಕ ಏಕ ಎನಿಸುವೆ.

**577**

**ತನು ತುಂಬಿ ದಕ್ಷಿಣೆಯ ಮಾಡಿ**
**ಒಂದು ಕೋಟಿ ಮಾನವರಿಗೆ ಇಚ್ಛಾಭೋಜನವನಿಕ್ಕಿ**
**ನಿರ್ಮಳಮನಭಕ್ತಿಯಿಂದ ಒಂದು ಸಿಂಪುದಕದಿಂದ**
**ಅಯಿದೆರಡು ಪುಷ್ಪದಿಂದ ಲಿಂಗಪುರುಷನ ಮಿಗಿಲಿಂದ!**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ತನುವಿನಲ್ಲಿರುವ ಅರಿವಿನ ಶ್ರೀಮಂತಿಕೆ ತನುವಿಗೆ ಗೊತ್ತಾಗದ ನಿಮಿತ್ತ ತನು ತನಗರಿಯದಂತೆ ಭಿಕ್ಷುಕನಾಗಿದೆ ಬಡವನಾಗಿದೆ ದರಿದ್ರನಾಗಿದೆ ಶ್ರೀಮಂತನಾಗಿದೆ. ಶ್ರೀಮಂತನಾದರೇನು? ಅದು ಭಿಕ್ಷುಕ ತನುವೇ ಆಗಿದೆ.

ತನುವು ಪರಿಪೂರ್ಣ. ಅದು ತಾಯಿಗರ್ಭದಲ್ಲಿ ಮೂಡಿದಾಗಲೇ ಶ್ರೀಮಂತ ತನು. ಗರ್ಭದಿಂದ ಹೊರಬಂದಾಗಲೂ ಅದು ಶ್ರೀಮಂತ ತನುವೇ ಆಗಿದೆ.

ಬಾಲ್ಯದಲ್ಲಿ ಅದಕ್ಕೆ ಬಾಲ್ಯದ ಬಡತನವಿದೆ. ಪ್ರೌಢತ್ವಕ್ಕೆ ಬಂದಾಗ ಅದಕ್ಕೆ ಬಯಕೆಯ ಬಡತನ ಯೌವ್ವನದ ಬಡತನ. ಶ್ರೀಮಂತ ಭಿಕ್ಷುಕ ದರಿದ್ರ ಬಡವ ಹೆಣ್ಣು ಗಂಡು ಶಾಸಕ ಸಚಿವ ಮುಂತಾದ ತನುಗಳೆಲ್ಲ ಶ್ರೀಮಂತ ತನುಗಳೇ ಆಗಿವೆ. ಸಕಲ ತನುಗಳಲ್ಲಿ ಬಡತನವೆಂಬುದು ಇಲ್ಲವೇ ಇಲ್ಲ. ಆದರೂ ಅದು ತನುವಾಗಿ ತನ್ನಂತೆಯೇ ಇರುವ ತನುವನ್ನೇ ಬೇಡುತ್ತದೆ. ಬೇಡುವ ಛಾಳಿ ತನುವಿಗೆ ತಪ್ಪುತ್ತಿಲ್ಲ.

ಒಂದು ಮರ ಮತ್ತೊಂದು ಮರವನ್ನು ಬೇಡುವುದಿಲ್ಲ. ಅದಕ್ಕೆ ತಾನು ಶ್ರೀಮಂತ ಎಂಬ ಸಂಗತಿ ಗೊತ್ತಿದೆ. ಹಾಗೆಯೇ ತನು ಕೂಡಾ ಜ್ಞಾನದ ಮರ; ಬೇರಿಲ್ಲದ ಮರ; ತಾನು ಕುಬೇರ ಅನ್ನುವ ಸಂಗತಿ ತನು ಮರೆತು ಹೋಗಿದೆ.

ತನುವಿನ ಹಸಿವಿಗಾಗಿ ತನುವು ತನುವನ್ನೇ ಬೇಡುವ ದುರ್ಗಣ ಬೆಳೆಸಿಕೊಂಡಿದೆ. ಇದಕ್ಕೆ ಬೇಸತ್ತು ಬಸವಣ್ಣನವರು ಸಕಲ ತನುಗಳಿಗೂ ತನುಗುಣ ತಿಳಿಯಲೆಂದು ಹೀಗೆ ಹಾಡಿದ್ದಾರೆ. ''ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ, ಬೇಡು, ಬೇಡೆಲೆ ಹಂದೆ. ಕಣ್ಣ ಬೇಡಿದಡೀವೆ, ತಲೆಯ ಬೇಡಿದಡೀವೆ, ಕೂಡಲಸಂಗಮದೇವಾ, ನಿಮಗಿತ್ತು ಶುದ್ಧನಾಗಿಪ್ಪೆ, ನಿಮ್ಮ ಪುರಾತನ ಮನೆಯಲ್ಲಿ''.

ಅಂಗದಲ್ಲಿಯೇ ಸಂಗಮವಾದ ಸಂಗಯ್ಯನೇ, ನಿನ್ನ ಮನೆಯಲ್ಲಿ ಏನಿಲ್ಲ. ನೀನು ವಾಸ ಮಾಡಿದ ಅಂಗದಲ್ಲಿ ಪುರಾತರು ವಾಸ ಮಾಡಿ ಹೋಗಿದ್ದಾರೆ. ಅದು ಭಿಕ್ಷಾ ಪಾತ್ರೆಯಲ್ಲ; ಅಕ್ಷಯ ಪಾತ್ರೆ! ಬೇಡಿದ್ದನ್ನು ಕೊಡುವ ತವನಿಧಿ! ಆದರೆ ಈ ಪಾತ್ರೆಯನ್ನು ಸದ್ಬಳಕೆ ಮಾಡದ ಮನವೆಂಬ ಹೇಡಿಯೊಂದು ಇದರಲ್ಲಿ ವಾಸವಾಗಿದೆ. ಅಕ್ಷಯ ಪಾತ್ರೆಯನ್ನು ಹಿಡಿದು ಬೇಡುತ್ತಲಿದೆ. ಭಿಕ್ಷುಕನಿಗೆ ಅಕ್ಷಯ ಪಾತ್ರೆಯನ್ನು ಕೊಟ್ಟು ಭಿಕ್ಷಾಟನೆಗೆ ಕಳಿಸಿದಂತೆ ಆಗಿದೆ ನಿನ್ನ ಆಟ.

ತನು ಮನ ಧನವನ್ನು ಕೊಡಲೇ, ಕಣ್ಣು ತಲೆಯನ್ನು ಕೊಡಲೇ, ಬೇಡು ಬೇಡು ಎಲೆ ಹಂದೆ ಹೇಡಿಯೇ. ನಿಮ್ಮ ಸೊತ್ತು ನಿಮಗಿತ್ತು ಶುದ್ಧನಾಗಿಪ್ಪೆ ಎಂದಿದ್ದಾರೆ ಬಸವಣ್ಣ.

ಒಂದೆ ತನುವಿನಲ್ಲಿ ಬೇಡುವ ಎಷ್ಟೋ ಅಜ್ಞಾನಿಗಳು ಇದ್ದಾರೆ. ತನುವಿನಲ್ಲಿದ್ದು ತನುವನ್ನೇ ಹರಿದು ತಿನ್ನುತ್ತಿದ್ದಾರೆ. ಅವರಿಗೆ ಮನಸಾರೆ ದಕ್ಷಿಣೆಯನಿಕ್ಕಿ ಅರಿವಿನ ಇಚ್ಛಾ ಭೋಜನವನ್ನು ಉಣಬಡಿಸುವೆ.

ಒಂದು ಸಿಂಪುದಕದಿಂದ ಹುಟ್ಟಿದ ತನು ಐದೆರಡು ಪುಷ್ಪಗಳಿಂದ ಅರಳಿ ನಿಂತಿದೆ. ಅಲ್ಲಿಯೇ ಸಂಗಮವಾದ ಲಿಂಗಯ್ಯನೆಂಬ ಅರಿವಿನ ಪುರುಷನಿಗೂ ಮಿಗಿಲಾಗಿ ಪರಿಮಳ ಬೀರುತ್ತಲಿದೆ!

ಒಂದು ಬಿಂದುವಿನಿಂದ ಹೇಗೆ ಮುತ್ತು ಹುಟ್ಟಿದೆಯೋ ಹಾಗೆಯೇ ತನು ಕೂಡಾ ಒಂದು ಬಿಂದುವುನಿಂದಲೇ ಹುಟ್ಟಿ ಐದು ಕರ್ಮೇಂದ್ರಿಯಗಳು ಐದು ಜ್ಞಾನೇಂದ್ರಿಯಗಳ ಪುಷ್ಪವಾಗಿ ಅರಳಿ ಅರಿವಿನ ಪರಿಮಳ ಬೀರುತ್ತಲಿದೆ; ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಮೀರಿ ವಿರಾಟಸ್ವರೂಪವೇ ತಾನಾಗಿದೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ವಚನದಲ್ಲಿ ತನುವನ್ನು ಬೆಡಗಿನ ನುಡಿಮುತ್ತುಗಳಿಂದ ಬಣ್ಣಿಸಿ ಒಂದುಕೋಟಿ ಮಾನವರಿಗೆ ಇಚ್ಛಾ ಭೋಜನವನ್ನು ಇಕ್ಕಿದ್ದಾರೆ.

ವ್ಯಾಸಮಹರ್ಷಿಗಳು ಮಹಾಭಾರತದಲ್ಲಿ ಒಂದು ತನುವಿನಲ್ಲಿ ಐದು ಜನ ಪಾಂಡವರನ್ನು ಒಬ್ಬ ದ್ರೌಪದಿಯನ್ನು, ನೂರಾ ಒಂದು ಕೌರವರನ್ನು ಹದಿನೆಂಟು ಅಕ್ಷೋಹಿಣಿ ಸೈನ್ಯವನ್ನು ಸೃಷ್ಟಿ ಮಾಡಿದ್ದಾರೆ. ಇವರೆಲ್ಲರಿಗೆ ಅರಿವಿನ ಭೋಜನವನ್ನು ಉಣಬಡಿಸುವ ಶ್ರೀಕೃಷ್ಣನನ್ನೇ ತನುವಿನ ಅಧಿ ಪತಿಯನ್ನಾಗಿಸಿದ್ದಾರೆ.

ಭಾರತ ದೇಶದ ದರ್ಶನ ಶಾಸ್ತ್ರ ಸೂಕ್ಷ್ಮಾತಿ ಸೂಕ್ಷ್ಮ. ಒಬ್ಬರಿಗಿಂತಲೂ ಒಬ್ಬರು ಮಿಗಿಲಾಗಿ ಕೆಲಸ ಮಾಡಿದ್ದಾರೆ. ಆದರೂ ತನುವಿನಲ್ಲಿಯೇ ತನ್ಮಯವಾದ ಅರಿವಿನ ಶ್ರೀಮಂತಿಕೆ ಸಕಲ ತನುಗಳಿಗೂ ಬಳಕೆಯಾಗಲು ಸಾಧ್ಯವಾಗುತ್ತಿಲ್ಲ. ಧನವಿದ್ದೂ ದರಿದ್ರ ಬಯಸುವ ತನುಗಳಿಗೆ ಯಾವ ತನುವಾದರೂ ಆಶೀರ್ವದಿಸಲು ಸಾಧ್ಯವೆ? ಆದರೂ ಆಶೀರ್ವದಿಸುವ ನೆಪದಲ್ಲಿ ಗುರುವಾಗಿದೆ. ಗುರುವಿಗೆ ಶಿಷ್ಯನನ್ನು ಬೇಡುವುದು ತಪ್ಪಲಿಲ್ಲ.

**578**

**ತನು ನಿಮ್ಮದಾಗಿ ಮನ ನಿಮ್ಮದಾಗಿ ಧನ ನಿಮ್ಮದಾಗಿ**
**ಇನಿತೆಲ್ಲ ನೋಡಲು ಸರ್ವಸ್ವವೂ ನಿಮ್ಮದಾಗಿ**
**ನಿಮಗರ್ಪಿತವಯ್ಯಾ, ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಸಿದ್ಧರಾಮ ಶಿವಯೋಗಿಗಳು ತನುವಿನಲ್ಲಿಯೇ ತನ್ಮಯವಾದ ಅರಿವಿನ ಮಲ್ಲಯ್ಯನಿಗೆ ಭಕ್ತನಾಗಿ, ಆತನೊಂದಿಗೆ ಮಾತನಾಡಿದ ಚಿತ್ರಣವನ್ನು ಅಕ್ಷರಗಳ ಮೂಲಕ ಅವರೇ ಚಿತ್ರಿಸಿದ್ದಾರೆ.

ಅರಿವಿನ ಮಲ್ಲಯ್ಯ ತನುವನ್ನು ಸೃಷ್ಟಿ ಮಾಡಿ ಆ ತನುವಿನಲ್ಲಿ ತಾನು ಸಂಗಮವಾಗಿದ್ದಾನೆ. ತನ್ನನ್ನು ತಿಳಿದು ತನ್ನೊಂದಿಗೆ ಸಂಗ ಮಾಡಲು ತನುವಿನಲ್ಲಿ ಮನವನ್ನು ಸೃಷ್ಟಿ ಮಾಡಿದ್ದಾನೆ. ಎಲ್ಲಿಯವರೆಗೆ ಮನ ಅರಿವಿನ ಮಲ್ಲಯ್ಯನನ್ನು ತಿಳಿದು ಅರಿವಿನ ಸಂಗ ಮಾಡುವುದಿಲ್ಲವೊ ಅಲ್ಲಿಯವರೆಗೂ ತನುವಿದ್ದರೂ ಅದು ತನುವಲ್ಲ. ಮನವಿದ್ದರೂ ಅದು ಮನವಲ್ಲ. ತನುವಿನಲ್ಲಿ ಅರಿವಿದ್ದರೂ ತನು ಮತ್ತು ಮನಕ್ಕೆ ಆ ಅರಿವನ್ನು ಬಳಕೆ ಮಾಡಲು ಬರುವುದಿಲ್ಲ. ಹೀಗಾಗಿ ತನು ಬಾಹ್ಯ ಪದಾರ್ಥಗಳನ್ನು ಸಂಪತ್ತು ಎಂದು ಭ್ರಮಿಸಿ ಬಡವನಾಗಿ ಸತ್ತು ಹೋಗುತ್ತದೆ.

ತನುವಿನಲ್ಲಿಯೇ ತನ್ಮಯವಾದ ಅರಿವು ತನುವಿಗೆ ದಕ್ಕದಿದ್ದರೆ ತನು ಶ್ರೀಮಂತನಾಗಿದ್ದರೂ ಅದು ಭಿಕಾರಿಯೇ ಬಡವ ದರಿದ್ರನಾಗಿದ್ದರೂ ಅದು ಭಿಕಾರಿಯೇ ಆಗಿರುತ್ತದೆ. ಬೇಡುವ ದುರ್ಗುಣ ತನುವನ್ನು ಬಾಧಿಸದೆ ಬಿಡುವುದಿಲ್ಲ. ಬೇಡಿ ಬೇಡಿ ತನುವಿನ ಆಯುಷ್ಯವೇ ಮುಗಿದು ಹೋಗುತ್ತದೆ.

ತನು ನಿಮ್ಮದಾಗಿ ಮನ ನಿಮ್ಮದಾಗಿ ಧನ ನಿಮ್ಮದಾಗಿ ಇನಿತೆಲ್ಲ ನೋಡಲು ಸರ್ವಸ್ವವೂ ನಿಮ್ಮದಾಗಿ ನಿಮಗರ್ಪಿತವಯ್ಯಾ :

ಸಿದ್ಧರಾಮ ಶಿವಯೋಗಿಗಳು ಶ್ರೀಶೈಲಕ್ಕೆ ಹೋಗಿ ಆಲಯದಲ್ಲಿರುವ ಮಲ್ಲಯ್ಯನನ್ನು ಬೇಡಲಿಲ್ಲ. ಇಡೀ ಲೋಕ ಮಲ್ಲಯ್ಯನನ್ನು ವೆಂಕಟೇಶನನ್ನು ಬೇಡಿದರೆ ಸಿದ್ಧರಾಮ ಶಿವಯೋಗಿಗಳು ತನಗೆ ಜನ್ಮ ಕೊಟ್ಟ ಅರಿವಿನ ಮಲ್ಲಯ್ಯನನ್ನು ಬೇಡಿದ್ದಾರೆ. ಅವರೊಂದಿಗೆ ಮಾತನಾಡಿದ್ದಾರೆ. ಹಾಗೆ ಮಾತನಾಡಲು ಸಕಲ ತನುಗಳಿಗೂ ಬರುತ್ತದೆ ಎಂದು ಖಚಿತವಾಗಿ ನಿರೂಪಿಸಿದ್ದಾರೆ.

ದೇವಾದಿ ದೇವನೆ ಮಲ್ಲಯ್ಯನೆ, ತನುವಿಗೆ ಜನ್ಮಕೊಟ್ಟು, ತನುವಿನಲ್ಲಿ ನೀನಿದ್ದೂ, ತನು ಗುಣಾದಿಗಳನ್ನು ಸೃಷ್ಟಿ ಮಾಡಿದೆ. ತನುವನ್ನು ಅಜ್ಞಾನದಿಂದ ಬೇಡುವಂತೆ ಮಾಡಿದೆ. ನೀನು ಸೃಷ್ಟಿ ಮಾಡಿದ ತನುವನ್ನು ತನುಗುಣಾದಿಗಳನ್ನು ತನುವಿನಲ್ಲಿಯೇ ಇರುವ ನಿನಗೆ ಅರ್ಪಿಸುವೆ ತಂದೆ.

ತನುವಿನಲ್ಲಿ ನೀನಿದ್ದು ನಿನ್ನನ್ನು ತಿಳಿಯಲು ಮನವನ್ನು ಸೃಷ್ಟಿ ಮಾಡಿದೆ. ಆ ಮನಕ್ಕೆ ನಿನ್ನನ್ನು ತಿಳಿಯದಂತೆ ಮನಗುಣಾದಿಗಳನ್ನು ಸೃಷ್ಟಿ ಮಾಡಿದೆ. ಶ್ರೀಗುರುವಿನ ಕೃಪೆಯಿಂದ ನಾನು ನಿನ್ನನ್ನು ತಿಳಿದೆ. ನೀನೆ ನೀಡಿದ ಮನವನ್ನು ಮನಗುಣಾದಿಗಳ್ನು ನಿನಗೆ ಅರ್ಪಿಸುವೆ ತಂದೆ ಸ್ವೀಕರಿಸು ಎಂದು ಅಂಗಲಾಚಿ ಬೇಡಿದ್ದಾರೆ.

ತನುವನ್ನು ಮನವನ್ನು ಸೃಷ್ಟಿ ಮಾಡಿದ ನೀನು ಆ ತನುವಿನಲ್ಲಿಯೇ ಅರಿವಿನ ಶ್ರೀಮಂತಿಕೆಯೆಂಬ ಧನವನ್ನು ಇಟ್ಟೆ. ಆದರೂ ನಿನ್ನ ಶ್ರೀಮಂತಿಕೆಯ ಸವಿಯನ್ನು ಅರಿಯದ ನಾನು ನನ್ನ ಅರಿವಿಗಾಗಿ ಕುರಾನ್ ಬೈಬಲ್ ಭಗವದ್ಗೀತೆಗಳನ್ನು ಪಠಿಸಿದೆ. ವೇದ ಆಗಮ ಉಪನಿಷತ್‌ಗಳನ್ನು ಅಧ್ಯಯನ ಮಾಡಿದೆ. ಅವುಗಳನ್ನೆಲ್ಲ ತನುವಿನಲ್ಲಿ ತುರುಕಿಕೊಂಡು ನೀನಿರುವ ತನುವನ್ನೇ ಗೋದಾಮನ್ನಾಗಿ ಮಾಡಿ ನಿನ್ನನ್ನೇ ನೀ ಮರೆತೆ. ಪಂಡಿತನಾದೆ ಶಾಸ್ತ್ರಿಯಾದೆ ನಾನಾ ಬಿರುದುಗಳನ್ನು

ಪಡೆದೆ, ಆದರೂ ನನ್ನ ಅಜ್ಞಾನ ತೊಲಗಲೇ ಇಲ್ಲ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ನರ್ತನ ಮಾಡುವ ಅಜ್ಞಾನ ನಿಲ್ಲಲಿಲ್ಲ. ನಾನು ಓದಿದ ಪುಸ್ತಕಗಳು ಮಾತಿನ ಮೂಲಕ ಚಪಲ ತೀರಿಸಿಕೊಂಡವು. ಸಮಾಧಾನಿಯಾಗಿ ಇರಲು ನನಗೆ ಸಾಧ್ಯವಾಗಲಿಲ್ಲ. ಧನವಿದ್ದರೂ ದರಿದ್ರ ನಾನು. ಇಂತಹ ಧನ ನಿಮಗರ್ಪಿತವಯ್ಯಾ.

ಇನಿತೆಲ್ಲಾ ನೋಡಲು ಸರ್ವಸ್ವವೂ ನಿಮ್ಮದೇ. ನಿಮ್ಮದು ನಿಮಗರ್ಪಿಸಿ ಧನ್ಯನಾದೆ ಮಲ್ಲಿನಾಥಯ್ಯಾ.

**579**

**ತನು ಭ್ರೂಮಧ್ಯದಲ್ಲಿ, ಮನವನಾನಂದದಲ್ಲಿ,**
**ಲೋಕ ಲೋಕವೇಕವಾದವೈ.**
**ಅಯ್ಯಾ ನೀನು ತನು ಮನ ನೀನೆ ಅಪ್ಪಿ ಕಂಡಾ**
**ಆದಿಯಾಧಾರಕ್ಕೆ ಸ್ವಾಮಿ ನೀನೆ ನೀನೆ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನೆ ಸೃಷ್ಟಿ ಮಾಡಿದ ತನು ಮನಾದಿಗಳನ್ನು ನೀನೇ ಅಪ್ಪಿಕೊಳ್ಳಬೇಕು. ಇಲ್ಲವಾದರೆ ನಾನಾದರೂ ನಿನಗೆ ಅರ್ಪಣೆ ಮಾಡಬೇಕು. ನೀನು ಸೃಷ್ಟಿ ಮಾಡಿದ ತನುವಿಗೆ ನಿನಗೆ ಹೇಗೆ ಅರ್ಪಣೆ ಮಾಡಬೇಕೆಂದು ಅದಕ್ಕೆ ತಿಳಿಯುತ್ತಿಲ್ಲ. ನೀನು ತಿಳಿಸಿ ಹೇಳಿದರೂ ತಿಳಿಯದ ಅಜ್ಞಾನಿ ತನುವು ಅದು. ಹಾಗೆಯೇ ನೀನು ಸೃಷ್ಟಿ ಮಾಡಿದ ಮನವನ್ನು ಮತ್ತು ಅದರ ಗುಣಾದಿಗಳನ್ನು ನಿನಗೆ ಹೇಗೆ ಅರ್ಪಿಸಬೇಕೆಂಬುದು ಅದಕ್ಕೆ ತಿಳಿಯದು.

ತನುವಿನಲ್ಲಿದ್ದ ನೀನು ತನುವೇ ಆಗಿರುವಿ. ಮನದಲ್ಲಿದ್ದ ನೀನು ಮಹಾದೇವನೇ ಆಗಿರುವಿ. ನೀನು ಸೃಷ್ಟಿ ಮಾಡಿದ ತನು ಮನವನ್ನು ನೀನೆ ಅಪ್ಪಿಕೊಂಡು ಅದಕ್ಕೆ ಮುಕ್ತಿ ದಯಪಾಲಿಸು ತಂದೆ. ಲೋಕದಲ್ಲಿದ್ದ ಸಕಲ ತನುಗಳೆಲ್ಲ ತಮ್ಮ ತಮ್ಮ ಭ್ರಮೆಗಳನ್ನು ಕಳೆದುಕೊಂಡು ಏಕವಾಗುತ್ತವೆ. ಏಕೋಬ್ರಹ್ಮವಾಗುತ್ತವೆ. ಅರಿವಿನ ಲೋಕವನ್ನು ನಿರ್ಮಾಣ ಮಾಡುತ್ತವೆ.

ತನುವನ್ನು ಸೃಷ್ಟಿ ಮಾಡಿ ತನುವನ್ನು ಸೋಂಕದೆ ತನುವಿಗೆ ಆಧಾರವಾಗಿರುವಿ ನೀನು. ತನುವನ್ನು ಬೆಳಗಿಂಗೆ ಬೆಳಗಾಗಿ ಬೆಳಗುವ ನೀನು ಅದರ ಆಧಾರವೂ ನೀನೇ, ಅದರ ಆದಿಯೂ ನೀನೇ ಆಗಿರುವಿ ಕಪಿಲಸಿದ್ಧ ಮಲ್ಲಿನಾಥಯ್ಯಾ.

**580**

**ತನುಮಧ್ಯ ಮಂಟಪದ ಒಳಗೆ ದಾಯಂಗೊಳಿಸಿ**
**ತನು ಮಲತ್ರಯವ ದಹಿಸಿ,**
**ಜ್ಯೋತಿರ್ಮಯ ಲಿಂಗವನು ತನ್ನ ಮನದ ಕೊನೆಯಲ್ಲಿತ್ತ ಗುರು,**
**ಅದ ನಿಸ್ತಾರವೆಂದು ಹಿಡಿದ,**
**ಆದಿಯ ಇದಿರಲ್ಲಿ ಆಜ್ಞಾವಿಲೋಕನದ ಆನಂದ ಶಿಷ್ಯನು,**
**ಅಪ್ರಮಾಣನವ್ವಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನಲ್ಲಿ ತನುವಿದ್ದು ತನು ಮಧ್ಯದಲ್ಲಿ ಒಂದು ಜ್ಞಾನ ಮಂಟಪವಿದೆ. ಅದು ಪರಿಚಯವಾದರೆ ಸಾಕು ತನುತ್ರಯವನ್ನು ದಹಿಸಿ ಜ್ಯೋತಿರ್ಮಯ ಲಿಂಗವೆ ತಾನಾಗಿ ಮನದ ಮೊನೆಯ ಕೊನೆಯಲ್ಲಿ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ.

ತನುವಿದೆ. ತನುವಿನಲ್ಲಿ ತನುವೊಂದಿದೆ. ತನುವನ್ನು ಮನ ಆವರಿಸಿದೆ. ತನುವಿನಲ್ಲಿಯೇ ತನ್ಮಯವಾದ ಜ್ಞಾನ ತನುವಿನ ಪರಿಚಯ ಅದನ್ನು ಅವಿತಿಟ್ಟುಕೊಂಡ ಸ್ಥೂಲ ತನುವಿಗೆ ಇಲ್ಲ. ಸ್ಥೂಲ ತನುವನ್ನು ಆವರಿಸಿದ ಮನೋ ತನುವಿಗೂ ಜ್ಞಾನ ತನುವಿನ ಪರಿಚಯವಿಲ್ಲ. ತನು ಮಧ್ಯದಲ್ಲಿ ಜ್ಞಾನ ಮಂಟಪವಿದ್ದರೂ ತನುವನ್ನು ಆವರಿಸಿದ ಮನೋಮಯವಾದ ತನುವಿಗೂ ಆ ಮನವನ್ನು ಹೇರಿಕೊಂಡ ಸ್ಥೂಲ ತನುವಿಗೂ ಪರಿಚಯವಿಲ್ಲದ್ದಕ್ಕಾಗಿ ಸ್ಥೂಲತನು ಮಲತ್ರಯ ತನುವೆಂದು ತನುವಿನಿಂದಲೇ ಕರೆಯಿಸಿಕೊಂಡಿದೆ.

ಅಂಗದಲ್ಲಿ ಮಹಾ ಬೆಳಗಿಂಗೆ ಬೆಳಗಾಗಿ ಬೆಳಗುವ ಜ್ಯೋತಿರ್ಮಯ ಲಿಂಗವಿದ್ದು ಆ ಲಿಂಗವು ಸ್ಥೂಲಾಂಗವನ್ನು ಬೆಳಗದಂತೆ ಸೂಕ್ಷ್ಮಾಂಗದ ಕತ್ತಲು ಆವರಿಸಿಕೊಂಡಿದೆ. ತನುವಿನ ಬೆಳಕು ಅನ್ಯ ತನುಗಳಿಗೆ ಅವಶ್ಯಕತೆ ಇಲ್ಲ. ತನುವಿನ ಬೆಳಕು ತನುವಿಗೆ ಮಾತ್ರ ಅವಶ್ಯಕತೆ ಇದೆ. ಆದರೂ ತನು ಬೆಳಗುವುದಕ್ಕಾಗಿ ತನುವೇ ತನುವನ್ನು ಗುರುವೆಂದು ಮಾಡಿಕೊಂಡಿದೆ. ಗುರುತನುವಿಗೆ ತನುವು ಶಿಷ್ಯನಾಗಿದೆ. ತನುವನ್ನು ಆವರಿಸಿದ ಮನದ ನಾಟಕವಿದು.

ತನುವನ್ನು ಆವರಿಸಿದ ಮನೋ ತನುವು ತನುವಿನಲ್ಲಿಯೇ ತನ್ಮಯವಾದ ಗುರು ತನುವಿಗೆ ಪರಮಾನಂದದಿಂದ ಶಿಷ್ಯನಾಗಬೇಕಾಗಿತ್ತು. ಆ ಗುರುದೇವನ ಆಜ್ಞೆಯನ್ನು ಪಾಲಿಸಬೇಕಾಗಿತ್ತು. ಆತ ಅಪ್ರಮಾಣ, ಅಪ್ರತಿಮ, ಅಗಮ್ಯ. ಆತ ಜಗದಗಲ, ಮುಗಿಲಗಲ, ಮಿಗೆಯಗಲ, ವಿರಾಟಸ್ವರೂಪಿ. ಆತನನ್ನು ಆರಾಧಿಸುವ ತಾನು ಆದಿಯಾದರೆ ಆತ ಅನಾದಿ. ಆತನನ್ನು ಆರಾಧಿಸುತ್ತ ಆತನ ಆಜ್ಞೆ ಪಾಲಿಸುತ್ತ ಆತನ ಚರಣ ಕಮಲದಲ್ಲಿ ಮನೋಮಯವಾದ ಅಜ್ಞಾನದ ಶಿರವನ್ನು ಬಾಗಿಸಿದಾತನೇ ಪರಮ ಶಿಷ್ಯನು.

**581**

**ತನುಮನ ಮಧ್ಯದಲ್ಲಿ ಘನಸಿಂಹಾಸನವನಿಕ್ಕಿ**
**ದಿನವನೆಣಿಸುತ್ತಿರ್ಪೆನಯ್ಯಾ,**
**ಒಂದೊಂದು ಒಂದೊಂದೆನುತ್ತ,**
**ಆನಂದಪದವ ನೆನಸುತ್ತ ಅಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ನಿಮ್ಮ ಸಂದು ಸವೆದು ಬೆರಸುವೆನಯ್ಯಾ.**

ತನುವಿದೆ. ಮನವಿದೆ. ತನುವಿನ ಮಧ್ಯದಲ್ಲಿ ಜ್ಞಾನಘನತನುವೊಂದಿದೆ. ಅದು ಜ್ಞಾನಸಿಂಹಾಸನ. ಆ ಜ್ಞಾನಸಿಂಹಾಸನವನ್ನು ಅರಿಯದಿದ್ದರೆ ಮನ ತನುವಿನೊಂದಿಗೆ ಭೂಮಿ, ಹೇಮ, ವಿಷಯ ವಸ್ತುವಿನಲ್ಲಿ ಸಾಯುವವರೆಗೆ ಜಾರಿ ಬೀಳುತ್ತದೆ. ಹೀಗಾಗಿ ಅಲ್ಲಮಪ್ರಭುಗಳು ಈ ಕೆಳಗಿನಂತೆ ಹೇಳಿದ್ದಾರೆ.

''ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿಯೂ ನಿನ್ನವಳಲ್ಲ. ಇವು ಜಗಕ್ಕಿಕ್ಕಿದ ವಿಧಿ. ನಿನ್ನದೆಂಬುದು ಜ್ಞಾನರತ್ನ ಕಾಣಾ. ಅದನ್ನು ಕೆಡಗೊಡದೆ ಅಲಂಕರಿಸಿದೆಯಾದೊಡೆ ಗುಹೇಶ್ವರ

ಲಿಂಗದಲ್ಲಿ ನಿನ್ನಂತ ಸಿರಿವಂತರು ಯಾರು ಇಲ್ಲ ಎಲೆ ಮನವೇ'' ಎಂದಿದ್ದಾರೆ. ಮನ ತನುವಿನೊಂದಿಗೆ ಭೂಮಿ, ಹೇಮ, ವಿಷಯ ವಸ್ತುವಿಗಾಗಿ ಹಪಹಪಿಸುತ್ತದೆ. ಒಂದು ಸಾರಿಯಾದರೂ ತನ್ನದೇ ಆದ ತನುವಿನಲ್ಲಿ ತನ್ಮಯವಾದ ಜ್ಞಾನರತ್ನದೆಡೆಗೆ ಹೊರಳಿಯೂ ನೋಡುವುದಿಲ್ಲ. ಹೀಗಾಗಿ ಭೂಮಿ, ಹೇಮ, ವಿಷಯ ವಸ್ತುವಿಗಾಗಿಯೇ ಹಂಬಲಿಸುತ್ತ ಒಮ್ಮೆ ತನು ಕಣ್ಮುಚ್ಚುತ್ತದೆ.

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ಸಂಗಮವಾದ ಜ್ಞಾನರತ್ನಕ್ಕಾಗಿ ಹಗಲಿರುಳು ಎನ್ನದೆ ಬಯಕೆ ಮಾಡುತ್ತ ಅನುದಿನವ ನೆನೆಸಿದರೆ ಒಂದೊಂದು ದಿನ ಮುಗಿಯುವುದರ ಒಳಗಾಗಿ ಆನಂದದ ಮಹಾ ಪದವಿಯನ್ನು ಅನುಭವಿಸುತ್ತ ಮೇಲಮೇಲಕ್ಕೆ ಹಾರುತ್ತದೆ. ಭೂಮಿ, ಹೇಮ, ವಿಷಯ ವಸ್ತುಗಳು ತೃಣವಾಗಿ ಕಾಣುತ್ತವೆ. ತನ್ನದೇ ಆದ ಸ್ವಸ್ವರೂಪವಾಗಿ ಗೋಚರಿಸುತ್ತದೆ. ಹೀಗಾಗಿ ಮನ ತನು ಕೆಡುವುದರ ಒಳಗಾಗಿ ತನುವಿನಲ್ಲಿಯೇ ತನ್ಮಯವಾದ ಜ್ಞಾನರತ್ನವನ್ನು ಅಲಂಕರಿಸಲೇಬೇಕಾಗಿದೆ. ಅದು ತನ್ನ ಕರ್ತವ್ಯವೆಂದು ಮನಕ್ಕೆ ಅರಿವಾದಗಲೇ ಹಗಲಿರುಳು ಎನ್ನದೇ ಜ್ಞಾನರತ್ನಕ್ಕಾಗಿ ಜಪಮಾಡುತ್ತದೆ. ಎಂದಾದರೂ ಆ ಮಹಾಜ್ಞಾನದೊಂದಿಗೆ ಸಂಗಮವಾಗಿ ಆ ಜ್ಞಾನವೇ ನಾನಾಗುವೆನು ಎಂಬ ಕಾತುರದ ಬಯಕೆ ಮನದಲ್ಲಿ ಹುಟ್ಟುತ್ತದೆ.

ಸಿದ್ಧರಾಮ ಶಿವಯೋಗಿಗಳು ತನು ಮನ ಮಧ್ಯದಲ್ಲಿ ಇರುವ ಘನಸಿಂಹಾಸನವನಿಕ್ಕಿ ದಿನವನೆಣಿಸುತ್ತಿರ್ಪೆನಯ್ಯಾ ಎಂದರೆ, ಪ್ರಭುದೇವರು ''ನಿಮ್ಮದೆಂಬುದು ಜ್ಞಾನರತ್ನ ಕಾಣಾ ಅದನ್ನು ಕೆಡಗೊಡದೆ ಅಲಂಕರಿಸಿದೆಯಾದೊಡೆ ನಿನ್ನಂತ ಸಿರಿವಂತರು ಯಾರು ಇಲ್ಲ ಎಲೆ ಮನವೆ'' ಎಂದಿದ್ದಾರೆ.

ಬಸವಣ್ಣನವರು ''ಕಳಬೇಡ ಕೊಲ್ಲಬೇಡ'' ಎಂದು ನುಡಿದಿದ್ದಾರೆ. ಜ್ಞಾನವೆಂದರೆ ಪುಸ್ತಕಗಳಿಂದ ಕಳುವು ಮಾಡುವ ವಸ್ತುವಲ್ಲ. ಅದು ತನುವಿನ ಮಧ್ಯದಲ್ಲಿಯೇ ಇದ್ದು ತನು ಮತ್ತು ಮನಕ್ಕೆ ಬೋಧಿಸುವ ತನು ಎಂಬ ಜ್ಞಾನರತ್ನ. ಹೀಗಾಗಿ ಜ್ಞಾನವನ್ನು ಕಳುವು ಮಾಡಬೇಡ ಎಂದು ಹೇಳಿದ್ದಾರೆ. ಕಳುವು ಮಾಡಿದರೆ ತನುವಿನ ಮಧ್ಯದಲ್ಲಿಯೇ ಇದ್ದ ಜ್ಞಾನವನ್ನು ಮನ ಬಳಕೆ ಮಾಡದೇ ವ್ಯರ್ಥ ಕೊಂದಂತಾಗುತ್ತದೆ. ಏಕೆಂದರೆ ತನು ಕೆಟ್ಟರೆ ತನುವಿನ ಮಧ್ಯದಲ್ಲಿ ಇರುವ ಜ್ಞಾನವು ಇಲ್ಲವಾಗುತ್ತದೆ.

**582**

**ತನುಮಧ್ಯದಲ್ಲಿ ಲಿಂಗತ್ರಯವ ನೆಲೆಗೊಳಿಸಿದ ಶ್ರೀಗುರು.**
**ಪ್ರಸಾದಲಿಂಗತ್ರಯಕ್ಕೆ ಲೋಭವಿಲ್ಲದವರನೇನೆಂಬೆನಯ್ಯಾ?**
**ಲಿಂಗತ್ರಯ ನೆಲೆಗೊಂಡ ಹಾಗೆ**
**ಪ್ರಸಾದ ಲಿಂಗತ್ರಯ ನೆಲೆಗೊಳ್ಳದಿರ್ದಡೆ**
**ಅವರು ಗುರ್ವಾಜ್ಞೆಗೆ ದೂರವೆಂಬೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ಎನಗೆ ನಿಮ್ಮ ತೋರಿದ ಬಸವಣ್ಣನಾಣೆ.**

ಗುರುದೇವನೆಂದರೆ ಸಾಮಾನ್ಯನಲ್ಲ. ಸಕಲ ತನುಗಳನ್ನು ಗುರುವನ್ನಾಗಿಸಬೇಕೆನ್ನುವ ಹಿರಿಯ ಆಸೆವುಳ್ಳವನು. ಹೀಗಾಗಿ ಆತನನ್ನು ಲೋಕ ಶ್ರೀಗುರು ಎಂದು ಕರೆದಿದೆ. ಶ್ರೀಗುರುದೇವ ತನುವನ್ನು ಮುಟ್ಟಿ ತನುವಿನಲ್ಲಿಯೇ ಲಿಂಗತ್ರಯವನ್ನು ನೆಲೆಗೊಳಿಸಿದ. ಸ್ಥೂಲತನು, ಸೂಕ್ಷ್ಮತನು, ಕಾರಣತನು ಈ ಮೂರು ತನುಗಳಲ್ಲಿ ಲಿಂಗವನ್ನು ತೋರಿದ. ಈ ಮೂರು ತನುಗಳು ಪ್ರಸಾದ

ಲಿಂಗತನುಗಳೇ ಆಗಿವೆ. ಶ್ರೀಗುರು ತೋರದಿದ್ದರೆ ಈ ಮೂರು ಲೋಭತನುಗಳೇ. ಶಕ್ತಿಯಿದ್ದು ತನ್ನದೇ ಆದ ಶಕ್ತಿಯನ್ನು ತನಗಾಗಿ ಬಳಸದ ತನುಗಳನ್ನು ಲೋಭತನುಗಳೆಂದೆ ಕರೆದಿದ್ದಾನೆ ಶ್ರೀಗುರುದೇವ. ಎಲ್ಲಿ ನೋಡಿದರು ಲೋಭ ತನುಗಳೇ ಇವೆ. ವಸ್ತುವಿನ ಸತ್ಯ ಒಂದು ತನುವಿಗೆ ಗೋಚರಿಸುತ್ತದೆ ಮತ್ತೆರೆಡು ತನುಗಳಿಗೆ ಗೋಚರಿಸುವುದಿಲ್ಲವೆಂದರೆ ಅವೆರಡು ಲೋಭತನುಗಳಲ್ಲವೆ? ಒಂದು ತನುವಿನ ಶಕ್ತಿ ಇನ್ನೆರಡು ತನುಗಳು ಬಳಸಲೇ ಇಲ್ಲವೆಂದಾಗ ಇವೆರಡು ತನುಗಳು ತಾವು ಬಳಸಬೇಕಾದ ಶಕ್ತಿಯನ್ನು ಬಳಸದೇ ಆ ತನುವಿನಲ್ಲಿ ಬಚ್ಚಿಟ್ಟಂತಲ್ಲವೇ? ನನ್ನನ್ನು ಬಳಕೆ ಮಾಡು ಮಾಡು ಎಂದು ಶಕ್ತಿಯುಳ್ಳ ತನು, ಎರಡು ತನುಗಳನ್ನು ಕೈಮಾಡಿ ಕರೆಯುತ್ತಿದ್ದರೂ, ಬಳಸದೇ ಇರುವ ಜಿಪುಣತನ ಈ ತನುಗಳಿಗೆ. ಹೀಗಾಗಿ ಶ್ರೀಗುರುದೇವ ತನುಮಧ್ಯದಲ್ಲಿ ಲಿಂಗತ್ರಯವ ನೆಲೆಗೊಳಿಸಿದ.

ಪ್ರಸಾದ ಲಿಂಗತ್ರಯ ನೆಲೆಗೊಳ್ಳದಿದ್ದಡೆ ಅವರು ಗುರುವಾಜ್ಞೆಗೆ ದೂರವೆಂದೆ:

ಲಿಂಗತ್ರಯ ನೆಲೆಗೊಂಡ ಹಾಗೆ ಲಿಂಗತ್ರಯದಲ್ಲಿ ಪ್ರಸಾದ ನೆಲೆಗೊಳಿಸುವುದನ್ನು ಶ್ರೀಗುರುದೇವನೇ ವಿವರಿಸುತ್ತಾನೆ. ವಸ್ತುವಿನಲ್ಲಿ ಸತ್ಯವು ಇದೆ. ಅಸತ್ಯವು ಇದೆ. ವಸ್ತುವಿನ ಅಸತ್ಯ ತನುತ್ರಯಕ್ಕೆ ಪ್ರಸಾದವಾಗದಿದ್ದರೆ ವಸ್ತುವಿನ ಸತ್ಯ ಕಾಣುವುದಿಲ್ಲ. ಹೀಗಾಗಿ ಲೋಕ ವಸ್ತುವನ್ನು ಪ್ರೀತಿಸುತ್ತದೆ. ವಸ್ತುವಿನ ಅಸತ್ಯಕ್ಕಾಗಿ ಅದರ ಪ್ರೇಮಕ್ಕಾಗಿ ತನುತ್ರಯದಲ್ಲಿರುವ ಪ್ರಸಾದ ಲಿಂಗತ್ರಯವನ್ನು ಕಾಣದೇ ಹೋಗುತ್ತದೆ.

ಪ್ರಸಾದದಲ್ಲಿ ಅಸತ್ಯವನ್ನು ಜೀರ್ಣಿಸಿಕೊಳ್ಳುವ ಶಕ್ತಿ ಇದೆ. ಉದಾ: ಲೋಹಕ್ಕೆ ಹಳದಿ ಬಣ್ಣ ಮೆತ್ತಿಕೊಂಡದ್ದಕ್ಕಾಗಿ ಅದನ್ನು ಚಿನ್ನವೆಂದು ತನು ಪ್ರೀತಿಸುತ್ತದೆ. ಕಪ್ಪು ಬಣ್ಣದ ಲೋಹವನ್ನು ಕಣ್ಣೆತ್ತಿಯು ಕೂಡಾ ನೋಡುವುದಿಲ್ಲ. ಬಣ್ಣ ಹಳದಿಯಾದರೇನು ಕಪ್ಪಾದರೇನು ಎರಡು ಲೋಹಗಳಲ್ಲವೆ? ಬಣ್ಣವೆಂಬ ಅಜ್ಞಾನವನ್ನು ಜೀರ್ಣಿಸಿಕೊಂಡು ಲೋಹ ನೋಡುವ ಶಕ್ತಿ ಪ್ರಸಾದ ತನುವಿಗಿದೆ. ಸಕಲ ತನುಗಳಲ್ಲಿಯೂ ಇಂತಹ ಪ್ರಸಾದ ಶಕ್ತಿ ಇದ್ದರೂ ಬಳಕೆ ಮಾಡದ ತನುಗಳೆ ಜಿಪುಣ ತನುಗಳಾಗಿವೆ. ಪ್ರಸಾದ ಶಕ್ತಿಯನ್ನು ಬಳಕೆ ಮಾಡಿದ ತನುವೇ ಪ್ರಸಾದ ತನುವೆಂದು ಕರೆಯಿಸಿಕೊಂಡಿದೆ.

ಶ್ರೀಗುರುವು ಇದನ್ನು ಸೂಚಿಸಿದಾಗ ಗುರುವಾಜ್ಞೆಯೆಂದು ಅನುಷ್ಠಾನ ಮಾಡಿಕೊಂಡವನೆ ಶರಣ. ಪಾಲಿಸದವನು ಗುರುವಾಜ್ಞೆಗೆ ದೂರವೆಂಬೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಎನಗೆ ನಿಮ್ಮ ತೋರಿದ ಬಸವಣ್ಣ ನಾಣೆ. ಎಂದು ಸಿದ್ಧರಾಮ ಶಿವಯೋಗಿಗಳು ಶ್ರೀಗುರುದೇವ ತೋರಿದ ಸದ್ಗುರು ದೇವನೊಂದಿಗೆ ಮಾತನಾಡಿದ್ದಾರೆ.

**583**

**ತನುಮಧ್ಯ ವಿದಳಾಚಲದೊಳಗೆ**
**ಭಾಸ್ಕರಭವನ ಬೆಳಗುತಿಪ್ಪುದು**
**ಲೋಕ ಹದಿನಾಲ್ಕರಲಿ ಅಜಲೋಕದೊಳಗೆ**
**ಆತ ಬೆಳಗುವ ಪ್ರಜ್ವಲದ ಪ್ರಭೆಯ ಮಂಟಪವು**
**ತಾನೆರಡಾಗುತ ದಿವ ರಾತ್ರೆ ಒಡಗೂಡಿ ಭರಿತ ಪರಿಮಳವಾಗೆ**
**ವಳಯ ಹದಿನಾಲ್ಕುರೊಳು ಬೆರೆಸಿಪ್ಪ ಜ್ಯೋತಿಯನು**

**ತಿಳಿದು ನೋಡಿದಡತ್ಯಧಿಕ ಸರ್ವಜ್ಞನೆನಿಪ**
**ಲೋಕಾಲೋಕವ ಏಕವ ಮಾಡಲಿಕಾತ**
**ಆಕಾರ ಚತುಷ್ಟಯವ ಮೀರಿದಾತ**
**ವರ್ಣಾಶ್ರಮವ ಕಳೆದು ನಿರ್ಮಳಾನಂದದೊಳು**
**ಸೊಮ್ಮುಗೆಟ್ಟಾತ ಪರಶಿವ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಿದ್ಧರಾಮ ಶಿವಯೋಗಿಗಳು ತನುವನ್ನು ಅದ್ಭುತವಾಗಿ ವರ್ಣನೆ ಮಾಡಿದ್ದಾರೆ. ಅರ್ಜುನ ಶ್ರೀಕೃಷ್ಣನ ವಿರಾಟಸ್ವರೂಪವನ್ನು ನೋಡಿ ಪುಳಕಿತಗೊಂಡಂತೆ, ತನಗೆ ತಾನೇ ಪುಳಕಿತಗೊಂಡು ಏನೀ ತನುವಿನ ಮಹಿಮೆ! ತನುಮಧ್ಯದ ಎರಡು ಅಚಲ ದಳಗಳಲ್ಲಿ ಭಾಸ್ಕರಭವನ ಬೆಳಗುತ್ತಲಿದೆ! ಬೆಳಗಿಂಗೆ ಬೆಳಗಾಗಿ ಬೆಳಗುತ್ತಲಿದೆ!

ಲೋಕ ಹದಿನಾಲ್ಕರಲ್ಲಿ ಬ್ರಹ್ಮಲೋಕವೇ ಶ್ರೇಷ್ಠ! ಬ್ರಹ್ಮಲೋಕ ವಿಷ್ಣುಲೋಕ ಮಹೇಶ್ವರಲೋಕ ಮೂರು ಲೋಕಗಳೂ ಕೂಡಿ ಒಂದು ತನುವಾಗಿದೆ. ಈ ತನುವನ್ನೇ ಸಿದ್ಧರಾಮ ಶಿವಯೋಗಿಗಳು ಬ್ರಹ್ಮಲೋಕವೆಂದು ಕರೆದಿದ್ದಾರೆ.

ಈ ಬ್ರಹ್ಮ ಲೋಕದಲ್ಲಿಯೇ ಅರಿವೆಂಬ ಗುರುದೇವನ ಪ್ರಜ್ವಲಪ್ರಭೆಯ ಮಂಟಪವು ಬೆಳಗುತ್ತಲಿದೆ.

ತನು ಒಂದೇ. ತನುವಿನಲ್ಲಿಯೇ ತನುವೆರಡಾಗಿ ದಿನ ರಾತ್ರಿಗಳಾಗಿವೆ. ಮನವೆಂಬ ಕತ್ತಲೂ ಇದೆ. ಅರಿವೆಂಬ ಬೆಳಕೂ ಇದೆ. ಇವು ಎರಡೊಂದಾಗಲು ದಿನ ರಾತ್ರಿಗಳೆರಡೂ ಕಳೆದು ಹೋಗಿ ಬರೀ ಅರಿವಿನ ಪರಿಮಳ ಒಂದೇ ಉಳಿಯುತ್ತದೆ.

ವಲಯ ಹದಿನಾಲ್ಕರೊಳಗೆ ಬೆರೆಸಿಪ್ಪ ಜ್ಯೋತಿಯನ್ನು ತಿಳಿದು ನೋಡಿ ದೃಢಪಡಿಸಿಕೊಂಡಾತನೇ ಸರ್ವಜ್ಞನೆಂದು ಕರೆಯಿಸಿಕೊಳ್ಳುತ್ತಾನೆ. ವರ್ಣಾಶ್ರಮವ ಕಳೆದುಕೊಂಡು ನಿರ್ಮಲ ಆನಂದದೊಳು ಮುಳುಗುತ್ತಾನೆ.

ಲೋಕಾಲೋಕವ ಏಕವ ಮಾಡಿ ಆಕಾರ ಚತುಷ್ಟಯಗಳನ್ನು ಮೀರಿ ನಿಲ್ಲುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ.

**584**

**ತನುಮುಖ ತಾನೆ ಎಂಬ ಯೋಗದ ಹೊಲಬನರಿದವರು**
**ಅತ್ತಲೂ ಚರಿಸುವರು ಇತ್ತಲೂ ಚರಿಸುವರು**
**ಪರಮಾರ್ಥವ ಮಿಂಚಿನ ರವೆ ರವೆಯಂತೆ ಅಪ್ಪುವರಡಗುವರಯ್ಯಾ**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಗತ್ತಿನಲ್ಲಿರುವ ಸಕಲ ಜೀವಿಗಳೆಲ್ಲ ಸಹಜತೆಯಿಂದ ವಾಸಮಾಡುತ್ತಲಿವೆ; ಮನುಷ್ಯನೊಬ್ಬನನ್ನು ಹೊರತುಪಡಿಸಿ. ಸ್ವತಹ ಮನುಷ್ಯನಿಗೆ ಸಹಜತೆಯ ಪರಿಚಯವೇ ಇಲ್ಲ. ಅದನ್ನು ಪುಸ್ತಕಗಳಲ್ಲಿ ಇತರ ಮನುಷ್ಯರಲ್ಲಿ ಹುಡುಕುತ್ತಲಿದ್ದಾನೆ. ಹಿಮಾಲಯದಲ್ಲಿ ಪುಣ್ಯಕ್ಷೇತ್ರಗಳಲ್ಲಿ ಹುಡುಕುತ್ತಾ ಜಪತಪ ನಿಧಿಧ್ಯಾಸನ ಯೋಗಗಳನ್ನು ಮಾಡುತ್ತಾ ಕಾಲ ಕಳೆಯುತ್ತಿದ್ದಾನೆ.

ಸಹಜತೆ ಹುಡುಕಿ ಪಡೆಯುವ ವಸ್ತುವಲ್ಲ ಅದು ತನುವಿನಲ್ಲಿಯೇ ಸಂಗಮವಾದುದು.

ತನುವಿನ ಕಣಕಣದಲ್ಲಿದ್ದು ತನು ಮತ್ತು ಮನಕ್ಕೆ ತನ್ನನ್ನು ಬಳಕೆ ಮಾಡು ಎಂದು ಹಗಲಿರುಳು ಎನ್ನದೆ ಅಂಗಲಾಚಿ ಬೇಡುತ್ತಲಿದೆ. ಆದರೆ ಮನಕ್ಕೆ ಸಹಜತೆಯೊಂದಿಗೆ ಸಂಗ ಮಾಡುವ ಬಯಕೆಯಿಲ್ಲ. ಮನ ತನುವಿನೊಂದಿಗೆ ಗೆಳೆತನ ಮಾಡಿದೆ. ಹಗಲಿರುಳು ಎನ್ನದೆ ತನಗೆ ಇಚ್ಛೆಬಂದಂತೆ ತನುವನ್ನು ಬಳಸುತ್ತದೆ. ಮನಕ್ಕೆ ಇಚ್ಛೆಯಾದೆಡೆಗೆ ತನುವನ್ನು ಕೊಂಡೊಯ್ದು ತನುವಿನೊಂದಿಗೆ ಉಂಡು ಬಾಳೆಲೆಯಂತೆ ಮೆತ್ತಗೆ ಮಾಡುತ್ತದೆ; ಒಮ್ಮೆ ಬೀಸಿ ಒಗೆಯುತ್ತದೆ.

ಹೈದರಾಬಾದಿನಲ್ಲಿ ನಾಲ್ಕು ಯುವಕರು; ಒಬ್ಬ ಯುವತಿಯನ್ನು ಅತ್ಯಾಚಾರ ಮಾಡಿ, ಹತ್ಯೆ ಮಾಡಿದರು. ಇಡೀ ದೇಶದ ತುಂಬಾ ಸುದ್ದಿ ಹರಡಿತು. ಅವರೆಲ್ಲ ಘಟನೆ ನಡೆಯದ ಮುನ್ನ ಅಮಾಯಕರೇ ಆಗಿದ್ದರು. ನಾಲ್ಕು ಯುವಕರ ದೃಶ್ಯದ ಮೂಲಕ ಹರಿದ ಮನಸ್ಸು ಯುವತಿಯನ್ನು ನೋಡಿ ಯುವಕರನ್ನು ರಕ್ಕಸರನ್ನಾಗಿ ಮಾಡಿತು. ಹೊಂಚು ಹಾಕಿ ಯುವತಿಯನ್ನು ಹರಿದು ತಿನ್ನುವಂತೆ ಮಾಡಿತು. ನಂತರ ಪ್ರಾಣಭಯಕ್ಕಾಗಿ ಕೊಂದು ಹಾಕುವಂತೆ ಮಾಡಿತು. ನಿರಪರಾಧಿ ದೇಹಗಳು ಮನದ ಆದೇಶ ಪಾಲಿಸಿದವು. ದೇಹಗಳೇ ದೇಹವನ್ನು ಕೊಂದು ಹಾಕಿದವು. ದೇಹಗಳೇ ದೇಹವನ್ನು ಹರಿದು ತಿಂದವು. ದೇಹದಲ್ಲಿದ್ದ ಸಹಜತೆ ದೇಹದಲ್ಲಿಯೇ ಮರೆಯಾಯಿತು. ದೇಹಕ್ಕೆ ದೇಹವೆಂದು ತಿಳಿಯದ ಉದ್ರೇಕ ದೇಹದಲ್ಲಿಯೇ ಸೃಷ್ಟಿಯಾಗಿ, ದೇಹ ದೇಹದೊಂದಿಗೆ ಸುಖಿಸಿ, ಸುಖಿಸಿದ ದೇಹವನ್ನೇ ಕೊಂದು ಹಾಕಿತು.

ಮನ ದೇಹದೊಂದಿಗೆ ಗೆಳೆತನ ಮಾಡಿದ ಫಲವಿದು. ಸಕಲ ದೇಹಗಳನ್ನು ಮನ ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತದೆ. ಚಂದ್ರ ಗುರುಪತ್ನಿಯನ್ನು ಬಿಡಲಿಲ್ಲ. ದೇವೇಂದ್ರ ಋಷಿಪತ್ನಿಯನ್ನು ಬಿಡಲಿಲ್ಲ. ಕೀಚಕ ದ್ರೌಪದಿಯೊಂದಿಗೆ ಗೆಳೆತನ ಮಾಡಲು ಹೋಗಿ ಸತ್ತು ಹೋದ. ಅಪರಾಧ ಮಾಡಿದ್ದು ಮನ; ಸತ್ತದ್ದು ದೇಹ.

ಕೊಂದದ್ದು ಖಡ್ಗವಾದರೇನು? ಖಡ್ಗ ಹಿಡಿದವನಿಗೆ ಶಿಕ್ಷೆಯಲ್ಲವೆ? ಹಾಗೆಯೇ ಮನ ದೇಹವನ್ನು ಹಿಡಿದಿದೆ. ತನ್ನ ಸುಖಕ್ಕಾಗಿ ದೇಹವನ್ನು ಖಡ್ಗದಂತೆ ಬಳಸುತ್ತಲಿದೆ. ತಪ್ಪು ಮಾಡಿದ ಮನಕ್ಕೆ ಶಿಕ್ಷೆ ಕೊಡಬೇಕು. ಇದು ನ್ಯಾಯ. ಆದರೆ ಮನಕ್ಕೆ ಶಿಕ್ಷೆ ಕೊಡುವವರಾದರು ಯಾರು? ದೇಹಕ್ಕೆ ಶಿಕ್ಷೆ ಕೊಡುವುದು ಎಲ್ಲರಿಗೂ ಗೊತ್ತಿದೆ. ಏಕೆಂದರೆ ಸಕಲ ದೇಹಗಳು ಮನದ ಸಂಗ ಮಾಡಿವೆ. ಕೋತಿ ಮೊಸರನ್ನ ತಿಂದು ಮೇಕೆ ಮೋತಿಗೆ ಒರಿಸಿದಂತೆ! ಮೊಸರನ್ನ ತಿಂದದ್ದು ಕೋತಿ; ಸಿಕ್ಕದ್ದು ಮೇಕೆ! ಹೀಗೆ ಆಗಿದೆ ಸಕಲರ ಪರಿಸ್ಥಿತಿ. ಸಕಲ ದೇಹಗಳ ಪರಿಸ್ಥಿತಿ.

ತನುಮುಖ ತಾನೆ ಎಂಬ ಯೋಗದ ಹೊಲಬನರಿದವರು ಅತ್ತಲೂ ಚರಿಸುವರು ಇತ್ತಲೂ ಚರಿಸುವರು. ಪರಮಾರ್ಥವ ಮಿಂಚಿನ ರವೆರವೆಯಂತೆ ಅಪ್ಪುವರಡಗುವರಯ್ಯಾ ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ:

ದೇಹ ಮನ ಜ್ಞಾನ ಬುದ್ಧಿ ಚಿತ್ತ ಅಹಂಕಾರ ಅರಿಷಡ್ವರ್ಗಗಳು ಸಪ್ತವ್ಯಸನಗಳು ಅಷ್ಟಮದಗಳ ಬಗ್ಗೆ ಪಾಠ ಮಾಡುವ ಗುರುಗಳು ಕೂಡಾ ಮನದೊಂದಿಗೆ ತನುಗಳನ್ನೇ ಶೋಷಣೆ ಮಾಡುತ್ತಾ ದೊಡ್ಡ ದೊಡ್ಡ ರತ್ನಗಂಬಳಿ ಸಂಸ್ಥೆಗಳನ್ನೇ ಕಟ್ಟಿಕೊಂಡಿದ್ದಾರೆ. ಅವರಿಗೆ ಕೂಡಾ ಮನದ ಬಾಧೆ ತಪ್ಪಿಲ್ಲ. ಮನ ತನುವಿನೊಂದಿಗೆ ಒಮ್ಮೆ ಸುಖಿಸಿ ಮತ್ತೊಮ್ಮೆ ದುಃಖಿಸುವುದನ್ನು ತಪ್ಪಿಸಿಕೊಳ್ಳಲು ಅವರಿಗೆ ಸಾಧ್ಯವಾಗಿಲ್ಲ. ನಾನಾ ಹಗರಣಗಳಲ್ಲಿ ಸಿಲುಕಿಕೊಂಡಿದ್ದಾರೆ. ಇದು ಮನದ ಮಹಿಮೆ. ಸ್ವತಹ ಮನಕ್ಕೆ ತಾನು ಸಹಜನಾಗಬೇಕೆಂಬ ಬಯಕೆ ಹುಟ್ಟಿದಾಗಲೇ ಅದು ಸಹಜತೆಯಲ್ಲಿ ಸಂಗಮವಾಗಿ ಘನಮನವಾಗುತ್ತದೆ.

585

**ತನುವ ಗುರುವಿಂಗಿತ್ತು ಗುರುವಾದನಯ್ಯಾ ಬಸವಣ್ಣನು**
**ಮನವ ಲಿಂಗಕ್ಕಿತ್ತು ಲಿಂಗವಾದನಯ್ಯಾ ಬಸವಣ್ಣನು**
**ಧನವ ಜಂಗಮಕ್ಕಿತ್ತು ಜಂಗಮವಾದನಯ್ಯಾ ಬಸವಣ್ಣನು**
**ಇಂತೀ ತ್ರಿವಿಧವ ತ್ರಿವಿಧಕ್ಕಿತ್ತು ಸದ್ಗುರು**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನಿಮ್ಮ ಶರಣ**
**ಎಲ್ಲರಿಗೆ ಗುರುವಾದನಯ್ಯಾ ಬಸವಣ್ಣನು.**

ತನುವಿಗೆ ತನುವಿನಲ್ಲಿಯೇ ಇರುವ ಜ್ಞಾನವನ್ನು ಬಳಕೆ ಮಾಡಿಕೊಳ್ಳಬೇಕೆಂಬ ಆಸೆಯಾದರೆ ತನುವನ್ನು ಗುರುವಿಗೆ ಅರ್ಪಿಸಲೇಬೇಕು. ಗುರುದೇವ ಶಿಷ್ಯನ ತನುವನ್ನು ಹೇಗೆ ಸ್ವೀಕರಿಸುತ್ತಾನೆ? ಶಿಷ್ಯ ತನ್ನ ತನುವನ್ನು ಗುರುವಿಗೆ ಹೇಗೆ ಅರ್ಪಿಸುತ್ತಾನೆ? ತನುವನ್ನು ಸ್ವೀಕರಿಸುವ ಮತ್ತು ಅರ್ಪಿಸುವ ತಂತ್ರಗಾರಿಕೆ ಗುರುಶಿಷ್ಯರಿಬ್ಬರಿಗೂ ಗೊತ್ತಿರಬೇಕು. ಅಂದರೆ ಮಾತ್ರ ತನುವನ್ನು ಗುರುವಿಗೆ ಅರ್ಪಿಸಲು ಬರುತ್ತದೆ; ಹಾಗೆಯೇ ಗುರುದೇವನಿಗೆ ಸ್ವೀಕರಿಸಲು ಬರುತ್ತದೆ.

ಲೋಕದ ಗುರುಗಳಿಗೆ ಈ ಕಲೆ ಗೊತ್ತಿಲ್ಲ. ಹಾಗೆಯೇ ಶಿಷ್ಯರಿಗೆ ಕೂಡ ಗುರುದೇವನಿಗೆ ತನುವನ್ನು ಅರ್ಪಿಸುವ ಕಲೆ ಗೊತ್ತಿಲ್ಲ. ಸಿದ್ಧರಾಮ ಶಿವಯೋಗಿಗಳ ಈ ವಚನ ಓದಿಕೊಂಡು ಗುರು ಲಿಂಗ ಜಂಗಮಕ್ಕೆ ತನು ಮನ ಧನವನ್ನು ಅರ್ಪಿಸುವ ಬಗೆ ಹೇಗೆ? ಅರ್ಪಿಸಲಾಗಿ ಅವರು ಸ್ವೀಕರಿಸುವ ಬಗೆಯಾದರು ಹೇಗೆ ಎಂದು ಗುರುದೇವನನ್ನು ಕೇಳುವ ಎದೆಗಾರಿಕೆ ಶಿಷ್ಯರಿಗೆ ಇಲ್ಲ; ಹೇಳುವ ಶಕ್ತಿ ಗುರುಗಳಿಗೂ ಇಲ್ಲ.

ತನುವನ್ನು ಗುರುವಿಗೆ ಅರ್ಪಣೆ ಮಾಡಿ ಗುರುವಾಗುವ ಸೂತ್ರವನ್ನು ಸಿದ್ಧರಾಮ ಶಿವಯೋಗಿಗಳು ಬಸವಣ್ಣನವರಿಂದ ಕಲಿತು ಗುರುವಾಗಿದ್ದಾರೆ. ಸಕಲ ಓದುಗರು ಕೂಡಾ ಗುರುವಾಗಬೇಕೆಂಬ ಹಿರಿಯ ಉದ್ದೇಶವನ್ನು ಇಟ್ಟುಕೊಂಡು ಸೂತ್ರರೂಪದ ಈ ವಚನವನ್ನು ರಚಿಸಿದ್ದಾರೆ.

ಗುರು ಲಿಂಗ ಜಂಗಮ ಎಂದರೆ ವ್ಯಕ್ತಿಗಳಲ್ಲ. ಪ್ರತಿ ವ್ಯಕ್ತಿಯಲ್ಲಿ ಸಂಗಮವಾದ ಅವ್ಯಕ್ತ ಚೈತನ್ಯ. ಅವರನ್ನು ಅವ್ಯಕ್ತ ಎನ್ನಲು ಕೂಡ ಬರುವುದಿಲ್ಲ. ಏಕೆಂದರೆ ಹುಡುಕಲು ಹೋದ ವ್ಯಕ್ತಿಗೆ ಈ ಮೂರೂಜನ ತನುವಿನಲ್ಲಿಯೇ ಸಿಕ್ಕುತ್ತಾರೆ. ತನು ಮತ್ತು ಮನಕ್ಕೆ ಈ ಮೂರೂಜನ ಬೋಧೆ ಮಾಡುವುದನ್ನು ತನು ಮತ್ತು ಮನ ಸಾಕ್ಷಿಯಾಗಿ ಗಮನಿಸುತ್ತದೆ. ತನು ಮನ ಧನವನ್ನು ಗುರು ಲಿಂಗ ಜಂಗಮಕ್ಕೆ ಅರ್ಪಣೆ ಮಾಡಿ ಧನ್ಯನಾಗುತ್ತದೆ. ಗುರು ಲಿಂಗ ಜಂಗಮವೇ ತಾನಾಗುತ್ತದೆ.

ತನು ಉಳ್ಳವನು ಗುರುವಲ್ಲ. ತನು ಉಳ್ಳವನು ಶಿಷ್ಯನೂ ಅಲ್ಲ. ಏಕೆಂದರೆ ತನು ಮತ್ತೊಂದು ತನುವಿಗೆ ತನುವನ್ನು ಅರ್ಪಣೆ ಮಾಡಲು ಬರುವುದಿಲ್ಲ. ಸ್ವೀಕರಿಸಲೂ ಬರುವುದಿಲ್ಲ. ತನುವಿನಲ್ಲಿಯೇ ತನ್ಮಯವಾದ ಅರಿವಿನ ತನುವೊಂದು ತನುವಿನಲ್ಲಿಯೇ ಇದೆ.

ತನುವನ್ನು ಆವರಿಸಿದ ಮನೋಮಯವಾದ ಅಜ್ಞಾನದ ತನುವನ್ನು, ಅರಿವೆಂಬ ಗುರುದೇವನ ತನುವಿಗೆ ಅರ್ಪಿಸಲು ಬರುತ್ತದೆ. ಈ ಕೊಡುಕೊಳ್ಳುವಿಕೆಗಳೆರಡೂ ತನುವಿನಲ್ಲಿಯೇ ನಡೆಯುತ್ತವೆ. ತನು ಇದನ್ನು ಸಾಕ್ಷಿಯಾಗಿ ನೋಡುತ್ತದೆ. ಈ ಕಲೆ ಸಕಲ ಶರಣರಿಗೂ ಗೊತ್ತಿತ್ತು. ಅದನ್ನು ಬೆಡಗಿನ ಮಾತುಗಳಿಂದ ''ತನುವ ಗುರುವಿಂಗಿತ್ತು ಗುರುವಾದನಯ್ಯಾ ಬಸವಣ್ಣ'' ಎಂದು ಹೇಳಿದ್ದಾರೆ.

ಅಂಗದಲ್ಲಿ ಸಂಗಮವಾದ ಅರಿವೇ ಲಿಂಗ; ಅಂಗವನ್ನು ಆವರಿಸಿದ ಮನವನ್ನು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಯ್ಯನಿಗೆ ಇತ್ತಾಗ ಆ ಮನವೇ ಘನಮನವಾಗುತ್ತದೆ; ಲಿಂಗವಾಗುತ್ತದೆ. ಮನವ ಲಿಂಗಕ್ಕಿತ್ತು ಲಿಂಗವಾದನಯ್ಯಾ ಬಸವಣ್ಣ ಎಂದಿದ್ದಾರೆ.

ಧನವೆಂದರೆ ಸಂಪತ್ತು. ತನುವಿನಲ್ಲಿಯೇ ತನ್ಮಯವಾದ ಅರಿವಿನ ಸಂಪತ್ತು. ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಸರ್ವಾಂಗದಲ್ಲಿ ಅರಿವಿನ ಸಂಪತ್ತು ಸಂಗಮವಾಗಿದೆ. ಅಂಗದಲ್ಲಿರುವ ಸಂಪತ್ತು ಅಂಗಕ್ಕೆ ಅಂಗವನ್ನು ಆವರಿಸಿದ ಮನಕ್ಕೆ ಮರೆವು ಆಗಿದೆ. ಈ ಸಂಪತ್ತನ್ನು ಅಲಕ್ಷ್ಯ ಮಾಡಿಕೊಂಡು ತನ್ನದೇ ಆದ ಮರೆವಿನ ಸಂಪತ್ತನ್ನು ಕಣ್ಣು ಕಿವಿ ಮೂಗು ಚರ್ಮ ನಾಲಿಗೆಯಲ್ಲಿ ತುಂಬಿಕೊಂಡಿದೆ. ಹೀಗಾಗಿ ಹಳದಿ ಲೋಹ ನೋಡಿ ಚಿನ್ನ ಎಂದು ಭ್ರಮೆಗೊಂಡು ಚಿನ್ನದ ಸಂಗ್ರಹಕ್ಕಾಗಿ ರಾಜ; ಕಳ್ಳ, ಭ್ರಷ್ಟ, ಶ್ರೀಮಂತ, ಬಡವ, ಭಿಕ್ಷುಕ ಎಂದು ತನಗೆ ತಾನೇ ಹೆಸರಿಟ್ಟುಕೊಂಡು ರಾಜ ರಾಜನನ್ನು ಕೊಂದು ಚಿನ್ನ ಪಡೆಯುತ್ತದೆ. ಶ್ರೀಮಂತನನ್ನು ಕೊಂದು ಕಳ್ಳನಾಗಿ ಚಿನ್ನ ಪಡೆಯುತ್ತದೆ.

ತನು, ಸುಳ್ಳುಧನ ತುಂಬಿದ ಗೋದಾಮು ಆಗಿ ಮಾರ್ಪಟ್ಟಿದೆ. ಈ ಧನವನ್ನು ಅಂಗದಲ್ಲಿಯೇ ಸಂಗಮವಾದ ಅರಿವಿನ ಜಂಗಮನಿಗೆ ಅರ್ಪಿಸಿ ಜಂಗಮವಾದನಯ್ಯಾ ಬಸವಣ್ಣನು ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಇಂತೀ ತ್ರಿವಿಧವ ತ್ರಿವಿಧಕ್ಕಿತ್ತು ಅಂದರೆ ತನು ಮನ ಧನವನ್ನು ಗುರು ಲಿಂಗ ಜಂಗಮನಿಗಿಕ್ಕಿ ಸದ್ಗುರು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನಿಮ್ಮ ಶರಣ ಎಲ್ಲರಿಗೆ ಗುರುವಾದನಯ್ಯಾ ಬಸವಣ್ಣನು ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**586**

**ತನುಮುಖ ತಾನೆ**
**ನಿನ್ನಾದಿಯಾಧಾರವಯ್ಯಾ,**
**ನೆಲೆಗೆಟ್ಟ ಶೂನ್ಯ ನೀನೆ ಅಯ್ಯಾ,**
**ಫಲಪದವನತಿಗಳೆದ ಲೀಯ ಲೀಯಾ**
**ಸ್ಥಾನದಲಿ ನೆಲೆಮನೆ ನೀನು ಕಂಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ಉರುತರ ಸ್ವಾತಂತ್ರ ನೀನೆ ಅಯ್ಯಾ.**

ಶೂನ್ಯಕ್ಕೆ ಆದಿಯೂ ಇಲ್ಲ ಆಧಾರವೂ ಇಲ್ಲ. ಅದು ಅನಾದಿ; ಅನಾದಿಯಿಂದಲೂ ಅತ್ತತ್ತ. ಹೇಗೆ ಶೂನ್ಯಕ್ಕೆ ಫಲಪದದ ಅವಶ್ಯಕತೆಯಿಲ್ಲವೊ ಹಾಗೆಯೇ ತನುವಿಗೆ ಕೂಡಾ ಫಲಪದದ ಆವಶ್ಯಕತೆಯಿಲ್ಲ. ಏಕೆಂದರೆ ಶೂನ್ಯ ತನುವಾಗಿ ಅವತರಿಸಿದೆ. ಶೂನ್ಯ ತನುಮುಖವಾಗಿದೆ. ಸೃಷ್ಟಿಮಾಡಿದ ಬ್ರಹ್ಮಾಂಡವನ್ನು ನೋಡುವ ಶಕ್ತಿ ತನುವಿಗೆ ಶೂನ್ಯವೇ ದಯಪಾಲಿಸಿದೆ. ಹೀಗಾಗಿ...

ಬಸವಣ್ಣನವರು ಕಾಯವನ್ನು ಕೈಲಾಸ ಎಂದು ಕರೆದರು. ಕಾಯಕ್ಕೆ ಶೂನ್ಯ ಪೀಠದ ಒಡೆಯ ಎಂದು ಕೂಡಾ ಕೆಲ ಸಂತರು ಸಂಬೋಧಿಸಿದರು. ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಬಯಲುದೇವನೊಂದಿಗೆ ಮಾತನಾಡಿದ್ದಾರೆ:

ಹುಟ್ಟು ಸಾವುಗಳಿಲ್ಲದ ಸರದಾರ ನೀನು. ತನುವನ್ನು ಆಧಾರವನ್ನಾಗಿಸಿಕೊಂಡು ತನುಮುಖಿಯಾಗಿ ತನುಗಳಿಗೆ ದರುಶನವಿತ್ತೆ. ತನುವಿನಲ್ಲಿದ್ದು ತನುಗಳನ್ನೇ ಕೆಡೆಗಣಿಸಿದೆ. ತನುವನ್ನು ಆದರದಿಂದ ನೋಡಿದೆ. ನಿನ್ನನ್ನು ಕಂಡ ತನುವೇ ಧನ್ಯ. ಆದಿಗೆ ಆಧಾರವಾದ ಶೂನ್ಯದೇವ ನೀನು. ಫಲಪದವನ್ನು ಅತಿಗಳೆದವನು ನೀನು. ಸ್ವತಂತ್ರನು ನೀನು ಎಂದು ಸಿದ್ಧರಾಮ ಶಿವಯೋಗಿಗಳು ಹಾಡಿದರೆ ಬಸವಣ್ಣನವರು:

ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ? ಈ ಲೋಕದೊಳಗೆ ಮತ್ತೆ ಅನಂತಲೋಕ, ಶಿವಲೋಕ, ಶಿವಾಚಾರವಯ್ಯಾ. ಶಿವಭಕ್ತನಿದ್ದ ಠಾವೆ ದೇವಲೋಕ, ಭಕ್ತನಂಗಳವೇ ವಾರಣಾಸಿ, ಕಾಯವೇ ಕೈಲಾಸ, ಇದು ಸತ್ಯ, ಕೂಡಲಸಂಗಮದೇವ.

ಕಾಯ ಸಾಮಾನ್ಯವಲ್ಲ. ಕೈಲಾಸವೇ ಕಾಯವಾಗಿ ಅವತರಿಸಿದೆ. ಕಾಯದೊಳಗೆ ಕೈಲಾಸವೆಂಬ ಕಾಯವಿದೆ. ಕಾಯ ಬಿಡುವವರೆಗೆ ಕಾಯ ಕಾಣುವುದಿಲ್ಲ. ಕೂಡಲಸಂಗಮದೇವನು ಇಕ್ಕಿದ ಅಣಕದ ಭೇದವ ಭೇದಿಸಬಾರದಯಾ ಎಂದಿದ್ದಾರೆ ಬಸವಣ್ಣನವರು.

**587**

**ತನುವಿಡಿದು ದಾಸೋಹವ ಮಾಡಿ ಗುರುಪ್ರಸಾದಿಯಾದ ಬಸವಣ್ಣ.**
**ಮನವಿಡಿದು ದಾಸೋಹವ ಮಾಡಿ ಲಿಂಗಪ್ರಸಾದಿಯಾದ ಬಸವಣ್ಣ.**
**ಧನವಿಡಿದು ದಾಸೋಹವ ಮಾಡಿ ಜಂಗಮಪ್ರಸಾದಿಯಾದ ಬಸವಣ್ಣ.**
**ಇಂತೀ ತ್ರಿವಿಧವಿಡಿದು ದಾಸೋಹವ ಮಾಡಿ**
**ಸದ್ಗುರು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ನಿಮ್ಮ ಶರಣ ಸ್ವಯಪ್ರಸಾದಿಯಾದನಯ್ಯಾ ಬಸವಣ್ಣ.**

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು, ಸಪ್ತವ್ಯಸನಗಳು, ಅಷ್ಟಮದಗಳು, ರಾಜಸ ತಾಮಸ ಸಾತ್ವಿಕ ಗುಣಗಳು ತನುವಿನಲ್ಲಿಯೇ ಹುಟ್ಟಿ ತನುವನ್ನೇ ಹಿಂಸೆಗೆ ಒಳಗು ಮಾಡುತ್ತವೆ. ಇವೆಲ್ಲವುಗಳು ತನುವಿನಲ್ಲಿಯೇ ಇರುವಾಗ, ತನು ಬುದ್ಧ ಬಸವ ಮಹಾವೀರ ದಾಸವರೇಣ್ಯರನ್ನು ನೆನೆದರೆ, ಅವರ ಚರಿತ್ರೆಗಳನ್ನು ಓದಿದರೆ, ಅವರ ತತ್ವಗಳನ್ನು ಮನನ ಮಾಡಿದರೆ ತನು ಶುದ್ಧವಾಗಲು ಸಾಧ್ಯವೆ?

ಇಡೀ ಜಗದ ತನುಗಳೆಲ್ಲ ಒಂದಿಲ್ಲ ಒಂದು ಓದಿ ಉತ್ತಮನಾಗಲು ಹೊರಟಿದೆ. ತನುವಿನಲ್ಲಿರುವ ಗುಣಗಳನ್ನು ತನುವಿಡಿದು ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಅರ್ಪಿಸಿ ದಾಸೋಹಿಯಾಗದ ವಿನಹ ಕಾಯ ಕೈಲಾಸ ಎನ್ನಿಸಿಕೊಳ್ಳಲು ಸಾಧ್ಯವಿಲ್ಲ.

ಬಸವಣ್ಣನವರು ತಮ್ಮ ತನುವಿನಲ್ಲಿಯೇ ಇರುವ ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ಅರಿಷಡ್ವರ್ಗಗಳನ್ನು ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಅರ್ಪಣೆ ಮಾಡಿದರು. ತನುವಿನ ಸಕಲ ಅಜ್ಞಾನವನ್ನು ಉಂಡು ಜೀರ್ಣಿಸಿಕೊಳ್ಳುವ ಶಕ್ತಿ ಅರಿವೆಂಬ ಗುರುದೇವನಿಗೆ ಮಾತ್ರ ಇದೆ. ಆ ಗುರುದೇವ ಹೊರಗಿಲ್ಲ. ಹಾಗೆಯೇ ಅಜ್ಞಾನ ಕೂಡಾ ಹೊರಗಿಲ್ಲ. ತನುವಿನ ಅಜ್ಞಾನ ತನುವಿನಲ್ಲಿರುವ ಜ್ಞಾನಕ್ಕೆ ಅರ್ಪಣೆ ಮಾಡುವ ಕಲೆಯನ್ನು ದಾಸೋಹವೆಂದು ಕರೆದರು.

ಅಜ್ಞಾನವನ್ನು ಉಂಡ ಜ್ಞಾನಕಾಯ ಪ್ರಸಾದಿ ಕಾಯ ಎಂದು ಕರೆಯಿಸಿಕೊಳ್ಳುತ್ತದೆ. ಹೀಗೆ ಬಸವಣ್ಣ ತನುವಿಡಿದು ದಾಸೋಹವ ಮಾಡಿ ಗುರುಪ್ರಸಾದಿಯಾದ ಎಂದು ಸಿದ್ಧರಾಮ ಶಿವಯೋಗಿಗಳು ದಾಸೋಹ ಮತ್ತು ಪ್ರಸಾದಿ ಕಾಯದ ಬಗ್ಗೆ ಓದುಗರಿಗೆ ಮಾಹಿತಿಯನ್ನು ನೀಡಿದ್ದಾರೆ.

ಜ್ಞಾನವೆಂದರೆ ಓದಿ ಕೇಳಿ ಪಡೆಯುವ ವಸ್ತುವಲ್ಲ. ತನುಮನ ಧನವಿಡಿದು ಹುಡುಕುವುದು. ತನುವಿನ ಅಜ್ಞಾನವನ್ನು ತನುವಿನಲ್ಲಿರುವ ಗುರುವಿಗೆ ಅರ್ಪಿಸುವುದು. ಮನದ ಅಜ್ಞಾನವನ್ನು ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನಿಗೆ ಅರ್ಪಿಸುವುದು. ತನುವಿನಲ್ಲಿಯೇ ಸಂಗ್ರಹವಾದ ಪುಸ್ತಕದ ಜ್ಞಾನವೆಂಬ ಧನವನ್ನು ಅಂಗದಲ್ಲಿಯೇ ಸಂಗಮವಾದ ಜ್ಞಾನಿ ಜಂಗಮನಿಗೆ ಅರ್ಪಿಸುವುದು.

ಹೀಗೆ ತ್ರಿವಿಧವಿಡಿದು ದಾಸೋಹ ಮಾಡಿದಾತ ಬಸವಣ್ಣ. ಆತ ಸದ್ಗುರು ಕಪಿಲಸಿದ್ಧ ಮಲ್ಲಿಕಾರ್ಜುನನೂ ಹೌದು. ಸ್ವಯಂ ಪ್ರಸಾದಿ ಬಸವಣ್ಣ ಎಂದು ಸಕಲ ಶರಣರಿಂದಲೂ ಕರೆಯಿಸಿಕೊಂಡರು.

ತನು ಮತ್ತು ಮನದ ಮೂಲಕ ತನುವಿನಲ್ಲಿಯೇ ಇರುವ ಜ್ಞಾನವನ್ನು ಹೇಗೆ ಪಡೆದುಕೊಳ್ಳಬಹುದೆಂದು ಇಡೀ ಮನುಕುಲಕ್ಕೆ ಸರಳವಾಗಿ ತೋರಿಸಿಕೊಟ್ಟಾತ ಬಸವಣ್ಣ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಅದನ್ನು ಪಡೆದುಕೊಳ್ಳುವ ಸೂತ್ರ ಸಹಿತ ಜಗಜ್ಜಾಹೀರುಗೊಳಿಸಿದ್ದಾರೆ.

**588**

**ತನುವಿನ ಕ್ರಿಯಾಕಾರದಲ್ಲಿ ಒಡಲುಗೊಂಡಿಹವರು**
**ಉಣ್ಣೆನೆಂದಡೆ ಅವರ ವಶವೆ?**
**ತನುಗುಣ ನಾಸ್ತಿಯಾದವರು ಉಣ್ಣೆನೆಂದಡೆ ಸಲುವುದಲ್ಲದೆ**
**ಕಾಮವಿಕಾರಕ್ಕೆ ಸಂದು, ತಾಮಸಕ್ಕೆ ಮೈಗೊಟ್ಟು ಇಪ್ಪವರೆಲ್ಲರೂ**
**ಉಣ್ಣೆನೆಂದಡೆ ಹರಿವುದೆ?**
**ನಿಜಗುರು ನಿಜಲಿಂಗ ನಿಜಜಂಗಮ ನಿತ್ಯಪ್ರಸಾದವ**
**ಶ್ರೀಗುರು ಕರುಣದಿಂದ ಪಡೆದು ಅರಿದಾಚರಿಸಿದವರಿಗಲ್ಲದೆ**
**ಭವವ ತಪ್ಪಿಸಬಾರದು ಕಾಣಾ ಪ್ರಭುವೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನ ತನುವಿನೊಂದಿಗೆ ಸುಖದಿಂದ ಉಣ್ಣುವ ಕ್ರಿಯೆಯಲ್ಲಿ ತೊಡಗಿದಾಗ ಇದು ಸಮಾಜ ಬಾಹಿರ ಕೆಲಸವಾಗುತ್ತದೆ. ಈ ಕೆಲಸದಲ್ಲಿ ನಾನು ತೊಡಗುವುದಿಲ್ಲ ಎಂದು ಒಡಲು ಗೋಗರೆದು ಕೂಗಲು ಸಾಧ್ಯವೆ? ಒಡಲೇ ಈ ಕ್ರಿಯೆಯಲ್ಲಿ ತೊಡಗಿರುವಾಗ ಒಡಲನ್ನು ಈ ಕ್ರಿಯೆಯಿಂದ ಬಿಡಿಸುವವರಾದರು ಯಾರು?

ಒಡಲಿಗೆ ಯಾವ ವೇಷ ಧರಿಸಿದರೇನು? ಅದು ಕಾಮದ ಕ್ರಿಯೆಯಲ್ಲಿ ತೊಡಗಿದಾಗ ಒಡಲಿಗೆ ಹಾಕಿದ ವೇಷ ಒಡಲನ್ನು ತಡೆದು ನಿಲ್ಲಿಸಲು ಸಾಧ್ಯವಾಗುವುದಿಲ್ಲ. ಕ್ರೋಧ ಲೋಭ ಮೋಹ ಮದ ಮತ್ಸರಗಳ ಕ್ರಿಯೆಗಳು ಕೂಡಾ ಒಡಲ ಮೂಲಕ ಒಡಲು ಅರಿಯದಂತೆ ನಡೆದು ಹೋಗುತ್ತವೆ.

ನಂತರ ಒಡಲಿಗೆ ಒಡಲುಗಳಿಂದಲೇ ಶಿಕ್ಷೆಯಾಗುತ್ತದೆ.

ಶಿಕ್ಷೆಗೊಳಗಾದ ಒಡಲು, ಶಿಕ್ಷೆಕೊಡುವ ಒಡಲುಗಳೆರಡೂ ಇದು ಒಡಲಿನ ಕೆಲಸವಲ್ಲ ಒಡಲ ಮೂಲಕ ಮನ ಮಾಡಿದ ಕೆಲಸವೆಂದು ಒಡಲುಗಳು ತಿಳಿಯದೇ ಹೋಗುತ್ತವೆ.

ಹೈದರಾಬಾದಿನಲ್ಲಿ ಒಂದು ಒಡಲನ್ನು ನಾಲ್ಕು ಒಡಲುಗಳು ಉಂಡು ತೇಗಿದವು. ಕೊಂದು ಹಾಕಿದವು. ಇದು ತಪ್ಪೆಂದು ಐದೂ ಒಡಲುಗಳಿಗೆ ಗೊತ್ತಿದ್ದರೂ ಆ ಸಂದರ್ಭದಲ್ಲಿ ತಡೆದು ನಿಲ್ಲಿಸುವ ಶಕ್ತಿ ಐದೂ ಒಡಲುಗಳಿಂದ ಹೊರಬರಲೇ ಇಲ್ಲ. ಘಟನೆ ನಡೆದು ಉಣ್ಣುವ ಕ್ರಿಯೆ ಮುಗಿದ ಮೇಲೆ ನಾಲ್ಕು ಒಡಲುಗಳಿಗೆ ಎಚ್ಚರವಾಯಿತು. ಒಂದು ಒಡಲು ನಾಲ್ಕು ಒಡಲುಗಳಿಗೆ ಆಹಾರವಾಯಿತು. ಇಡೀ ದೇಶದ ಒಡಲುಗಳೆಲ್ಲ ನಾಲ್ಕು ಒಡಲುಗಳನ್ನು ಕೊಂದು ಹಾಕಲು ಆಕ್ರೋಶ ವ್ಯಕ್ತಪಡಿಸಿದವು. ಎನ್‌ಕೌಂಟರ್ ನೆಪದಲ್ಲಿ ಪೊಲೀಸರೆ ಆ ನಾಲ್ಕೂ ಒಡಲುಗಳನ್ನು ಕೊಂದು ಹಾಕಿದರು.

ತನುಗುಣ ನಾಸ್ತಿಯಾದವರು ಉಣ್ಣೆನೆಂದಡೆ ಸಲುವುದಲ್ಲದೆ, ಕಾಮ ವಿಕಾರಕ್ಕೆ ಸಂದು, ತಾಮಸಕ್ಕೆ ಮೈಗೊಟ್ಟು ಇಪ್ಪವರೆಲ್ಲರೂ ಉಣ್ಣೆನೆಂದಡೆ ಹರಿವುದೆ? ಇದು ಸಿದ್ಧರಾಮ ಶಿವಯೋಗಿಗಳ ಪ್ರಶ್ನೆ. ಕಾಮಕ್ಕೆ ತುತ್ತಾದ ಒಡಲುಗಳ ಮೇಲೆ ಆಕ್ರೋಶ ವ್ಯಕ್ತಪಡಿಸುವ ಒಡಲುಗಳು ಒಳ್ಳೆಯವೆ? ಒಡಲಗುಣ ನಾಸ್ತಿ ಮಾಡಿಕೊಂಡ ಒಡಲುಗಳಾದರೆ ಒಡಲಿಗೆ ಶಿಕ್ಷೆ ಕೊಡುವುದಿಲ್ಲ. ಏಕೆಂದರೆ ತಪ್ಪು ಒಡಲಿನದಲ್ಲ; ಒಡಲನ್ನು ಆವರಿಸಿದ ಮನದ ತಪ್ಪು. ಮನಕ್ಕೆ ಶಿಕ್ಷೆ ಕೊಡಲು ಬರುವುದಿಲ್ಲ ಏಕೆಂದರೆ ಮನ ಕಾಣುವುದಿಲ್ಲ; ತನು ಮಾತ್ರ ಕಾಣುತ್ತದೆ. ಹುತ್ತವ ಬಡಿದರೆ ಹಾವು ಸಾಯಬಲ್ಲುದೆ ಅಯ್ಯಾ ಎನ್ನುವ ಬಸವಣ್ಣನವರ ಸೂತ್ರ ಮನಕ್ಕೆ ಸರಿಹೊಂದುತ್ತದೆ.

ಮನವೆಂಬುದು ಹಾವು. ಅದು ಸಕಲ ತನುಗಳನ್ನೂ ಆವರಿಸಿದೆ. ಅದಕ್ಕೆ ಕಾಮದ ಹಸಿವು. ಕಾಮದ ಅನ್ನ ಸಿಕ್ಕಾಗ ತನುವನ್ನೇ ಹರಿದು ತಿನ್ನುವ ಕ್ರೋಧದ ಹಸಿವು. ಮನಕ್ಕೆ ಲೋಭದ ಹಸಿವು, ಮದ ಮತ್ಸರಗಳ ಹಸಿವು ಈ ಎಲ್ಲಾ ಹಸಿವುಗಳನ್ನು ಮನ ತನುವಿನ ಮೂಲಕ ಉಣ್ಣುತ್ತದೆ. ತನ್ನ ಹಸಿವಿನ ದಾಹವನ್ನು ತನುವಿನ ಮೂಲಕ ತೀರಿಸಿಕೊಳ್ಳುತ್ತದೆ.

ತನುವಿನ ಮೂಲಕ ಉಣ್ಣುವ ಮನದಿಂದ ಎಚ್ಚರಗೊಳ್ಳಬೇಕಾದುದು ತನುವೆ ಆಗಿದೆ. ತನು ಮನದಿಂದ ಹೇಗೆ ಜಾಗ್ರತಗೊಳ್ಳಬೇಕು ಎನ್ನುವ ಶಿಕ್ಷಣ ಭಾರತದಲ್ಲಿ ಮಾತ್ರ ಇದೆ. ಈ ಶಿಕ್ಷಣವನ್ನು ಜಾರಿಗೆ ತಂದ ಕ್ರಿಷ್ಣ ಕ್ರಿಸ್ತ ಪೈಗಂಬರ ಬುದ್ಧ ಮಹಾವೀರ ಬಸವಾದಿ ಶರಣರನ್ನು ದಾಸವರೇಣ್ಯರನ್ನು, ವೇದ ಆಗಮ ಉಪನಿಷತ್ ಪುರಾಣಗಳನ್ನು ರಚಿಸಿದ ತನುಗಳನ್ನು ಸಕಲ ತನುಗಳು ಆರಾಧಿಸುತ್ತವೆ. ಪೂಜಿಸುತ್ತವೆ. ಹಿಂದು ಕ್ರಿಶ್ಚಿಯನ್ ಇಸ್ಲಾಂ ಬೌದ್ಧ ಜೈನ ವೀರಶೈವ ಫಾರ್ಸಿ ಮುಂತಾದ ಧರ್ಮಗಳ ವೇಷ ಹಾಕಿಕೊಂಡು ಭವ್ಯವಾದ ಮಂದಿರಗಳನ್ನು ನಿರ್ಮಿಸಿವೆ. ಅವರು ರಚಿಸಿದ ಸೂತ್ರಗಳನ್ನು ಪಾಲಿಸಿ ತನುಗುಣಗಳನ್ನು ಕಳೆದುಕೊಳ್ಳಲು ತನುಗಳಿಗೆ ಇದುವರೆಗೂ ಸಾಧ್ಯವಾಗುತ್ತಿಲ್ಲ.

ತನುವಿನ ಧರ್ಮವೆಂದರೆ ಅರಿವಿನ ಧರ್ಮ. ತನು ಅರಿವಿನ ಧರ್ಮ ಪಾಲಿಸಿದರೆ ತನುವನ್ನು ಆವರಿಸಿದ ಅರಿಷಡ್ವರ್ಗಗಳು ಸಪ್ತವ್ಯಸನಗಳು ಅಷ್ಟಮದಗಳು ರಾಜಸ ತಾಮಸ ಸಾತ್ವಿಕ ಗುಣಗಳು ಹತ್ತಿರ ಬರುವುದಿಲ್ಲ. ತನು ಸಹಜ ತನುವಾಗಿ ತನುವಿನ ಸಕಲ ಗುಣಗಳು ತನುವಿನಿಂದಲೇ ಉದರಿಬೀಳುತ್ತವೆ. ಆಗ ತನು ಅರಿವಿನಿಂದ ನೋಡುತ್ತದೆ, ಅರಿವಿನಿಂದ ಕೇಳುತ್ತದೆ, ಅರಿವಿನಿಂದ ಮುಟ್ಟಿ, ಅರಿವಿನಿಂದ ಮೂಸಿಸುತ್ತದೆ. ಅರಿವಿನ ಮಾತುಗಳನ್ನು ಆಡುತ್ತಾ ಬೋಧೀ ವೃಕ್ಷವಾಗಿ ಅಲೆಯುತ್ತದೆ.

ತನ್ನ ತಾನು ಅರಿಯದ ಮುನ್ನ ತನ್ಮಯವಾದ ಅರಿವು. ತನ್ನ ತಾನು ಅರಿದ ಬಳಿಕ ಅರಿವು

ತನ್ಮಯವೆಂದು ಅರಿತ ಅರಿವು. ತನ್ನಲ್ಲಿರುವ ಆ ಅರಿವೇ ಕರಿಗೊಂಡ ಬಳಿಕ ತಾನೇ ಸೌರಾಷ್ಟ್ರ ಸೋಮೇಶ್ವರಾ. ಇದು ಆದಯ್ಯ ಶರಣರ ಸೂತ್ರ.

ಸಕಲ ತನುಗಳಲ್ಲಿ ಅರಿವು ಇದೆ. ಅರಿವು ಇಲ್ಲದ ತನುಗಳೇ ಇಲ್ಲ. ತನು ಆಪತ್ಕಾಲದಲ್ಲಿದ್ದಾಗ ತನುವಿನಲ್ಲಿದ್ದ ಅರಿವು ತನುವಿಗೆ ಬಳಕೆ ಆಗುವುದಿಲ್ಲ. ಮನ ತನುವಿನಲ್ಲಿ ಸಂಗ್ರಹ ಮಾಡಿದ ಅರಿವು ಮಾತ್ರ ಬಳಕೆ ಆಗುತ್ತದೆ. ಮನದ ಕೆಲಸ ಮುಗಿದ ಮೇಲೆ ತನುವಿನಲ್ಲಿದ್ದ ಅರಿವು ಜಾಗ್ರತವಾಗುತ್ತದೆ. ಘಟನೆ ನಂತರ ಜಾಗ್ರತವಾದ ಅರಿವು ತನುವಿನ ಶಿಕ್ಷೆ ತಪ್ಪಿಸುವುದಿಲ್ಲ.

ತನು, ತನುವಿನಲ್ಲಿಯೇ ಇರುವ ಅರಿವಿನ ಶಿಕ್ಷಣಕ್ಕೆ ಅಣಿಯಾಗದಿದ್ದರೆ ತನುವಿಗೆ ಜನನ ಮರಣಗಳ ಬಾಧೆ ತಪ್ಪಿದ್ದಲ್ಲ. ಅದು ಬದುಕಿರುವಾಗಲೇ ಸತ್ತು ಸತ್ತು ಬದುಕುತ್ತದೆ. ಸ್ವಾಮಿ ಮೌಲ್ವಿ ಗುರು ಜಗದ್ಗುರು ಬಿಷಪ್ ಪೋಪ್ ಶಾಸಕ ಸಚಿವ ಪ್ರಧಾನಿ ಅಧ್ಯಕ್ಷ ಯಾವ ವೇಷದ ತನುವಿಗೂ ತನುವಿನ ಬಾಧೆ ತಪ್ಪುವುದಿಲ್ಲ. ತನುಗುಣಗಳಿಂದ ತನುವೇ ಪಾರಾಗಬೇಕು ಎಂದು ಸಿದ್ಧರಾಮ ಶಿವಯೋಗಿಗಳು ಪ್ರಭುಗಳಿಗೆ ಹೇಳಿದ್ದಾರೆ.

**589**

**ತನುವಿನಲಿಪ್ಪ ಅವಸ್ಥೆಗಳೆನಿತೆನಿತುವಂ**
**ಬೇರೆಂದು ಮರೆದು**
**ನಿಮ್ಮ ಕೂಡಿ ಬೇರಾಗದೆಂದಿಪ್ಪೆನು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನಲ್ಲಿ ಅರಿವು ಒಂದೇ ಇದೆ. ಇದ್ದಕ್ಕಿದ್ದಂತೆಯೇ ಇರುವ ಅರಿವು ಮರೆವು ಆದುದಕ್ಕಾಗಿ ತನುಗಳೆಲ್ಲಾ ಒಂದೇ ಎಂದು ತನುವಿನಿಂದಲೇ ಕರೆಯಿಸಿಕೊಳ್ಳಲು ತನುವಿಗೆ ಸಾಧ್ಯವಾಗುತ್ತಿಲ್ಲ.

ಅರಿವು ಮರೆವು ಆದುದಕ್ಕಾಗಿ ತನು ಕಾಮಕ್ಕೆ ಬಲಿಯಾಗಿ ಕಾಮಿ ಎಂದು ತನುವಿನಿಂದಲೇ ಕರೆಯಿಸಿಕೊಳ್ಳುತ್ತದೆ. ಅರಿವು ಮರೆವು ಆದುದಕ್ಕಾಗಿ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ತನುವಿನಲ್ಲಿ ಸೃಷ್ಟಿಯಾಗಿವೆ. ಸಪ್ತವ್ಯಸನಗಳು, ಅಷ್ಟಮದಗಳು ಸೃಷ್ಟಿಯಾಗಿವೆ.

ತನುವಿನಿಂದಲೇ ತನುವು ರಾಜಸ ಗುಣವುಳ್ಳದ್ದು ತಾಮಸ ಗುಣವುಳ್ಳದ್ದು, ಸಾತ್ವಿಕ ಗುಣವುಳ್ಳದ್ದು ಎಂದು ಕರೆಯಿಸಿಕೊಳ್ಳುತ್ತದೆ.

ತನುವಿನಲ್ಲಿಯ ಅರಿವು ಮನಕ್ಕೆ, ತನುವಿಗೆ ಮರೆವು ಆದುದಕ್ಕಾಗಿ ಜಾತಿ ಮತ ಪಂಥಗಳು ಸೃಷ್ಟಿಯಾಗಿವೆ. ಧರ್ಮವನ್ನು ತನಗೆ ತಾನೇ ಹೇರಿಕೊಂಡು ಅರಿವಿನ ಮೂಲಧರ್ಮವನ್ನೇ ತನು ಮನ ಮರೆತು ಹೋಗಿದೆ.

ತನುವಿನಲ್ಲಿಯ ಅರಿವು ತನುವೇ ಮರೆತುದಕ್ಕಾಗಿ ತಾನು ಹೆಣ್ಣು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಗಂಡು ಎಂದು ನೋಡುತ್ತದೆ. ಗಂಡು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಹೆಣ್ಣು ಎಂದು ನೋಡುತ್ತದೆ. ಹೀಗಾಗಿ ತನು ಗಂಡು ಹೆಣ್ಣು ಎಂದು ತನುವಿನ ಮೂಲಕ ಕರೆಯಿಸಿಕೊಂಡಿದೆ.

ಅರಿವಿನ ಶ್ರೀಮಂತಿಕೆಯಿಂದ ಪರಿಪೂರ್ಣ ತನುವಾಗಿದ್ದರೂ ತನ್ನಂತೆಯೇ ಇರುವ ತನುವನ್ನು ತನು ಬಡವ ಭಿಕ್ಷುಕ ದರಿದ್ರ ಶ್ರೀಮಂತ ರಾಜ ಪ್ರಧಾನಿ ಸೈನಿಕ ಶಾಸಕ ಸಚಿವ ಅಧಿಕಾರಿ ಜವಾನ ಎಂದು ವಿಂಗಡಿಸಿ ನೋಡುತ್ತದೆ.

ದೇಶ ಗಡಿ ಭಾಷೆಗಳಿಂದ ತನು ತನ್ನನ್ನು ತಾನೇ ಭಾಗಮಾಡಿಕೊಂಡು ಅಜ್ಞಾನದಿಂದ ನೋಡುತ್ತದೆ. ಅಜ್ಞಾನದಿಂದಲೇ ತಾನು ಹೀಗೆ ಎಂದು ಭಾಗಮಾಡಿಕೊಂಡು ಕರೆಯಿಸಿಕೊಳ್ಳುತ್ತದೆ.

ತನು ಹೆಣ್ಣಾದರೇನು, ಗಂಡಾದರೇನು? ಕಣ್ಣು ಒಂದೇ, ಅದರ ಅರಿವಿನ ದೃಶ್ಯ ಒಂದೇ. ಕಣ್ಣಲ್ಲಿರುವ ಮರೆವಿನ ದೃಶ್ಯ ಒಂದೇ ಆಗಿದೆ. ಮೂಗು ಒಂದೇ ಅದು ಮೂಸಿಸುವ ಸುಗಂಧ ದುರ್ಗಂಧ ಒಂದೇ ಆಗಿದೆ. ಆ ಮೂಗಿನಲ್ಲಿ ಸಂಗಮವಾದ ಅರಿವಿನ ಪರಿಮಳವನ್ನು ಮೂಗು ಮರೆತು ಹೋಗಿದೆ.

ತನುವಿನ ನಾಲಿಗೆ ಒಂದೇ. ಅದು ಹೆಣ್ಣು ಅಲ್ಲ ಗಂಡು ಕೂಡಾ ಅಲ್ಲ. ಅದು ರುಚಿಸುವ ರುಚಿ ಕೂಡಾ ಒಂದೇ ಆಗಿದೆ. ನಾಲಿಗೆಯಲ್ಲಿ ಸಂಗಮವಾದ ಅರಿವಿನ ಪ್ರಸಾದರುಚಿಯನ್ನು ನಾಲಿಗೆ ಮರೆತು ಹೋಗಿದೆ.

ತನುವಿನಲ್ಲಿ ಅರಿವಿದ್ದು ಅರಿವನ್ನು ಮರೆತು ಹೋದ ಮನವೆಂಬ ಮರೆವು ತನುವನ್ನು ತನ್ನ ಸಾಮ್ರಾಜ್ಯ ಮಾಡಿಕೊಂಡು ಆಳುತ್ತಲಿದೆ. ತನುವಿನಲ್ಲಿಯೇ ಸಂಗಮವಾದ ಅರಿವಿನ ಅರಸ ಮರೆವಿನ ಮಂತ್ರಿಯ ಕೆಲಸ ನೋಡಿ ಗಹಗಹಿಸಿ ನಗುತ್ತಿದ್ದಾನೆ. ಮರೆವು ತನುವಿನೊಂದಿಗೆ ಸುಖಿಸಿದ ಅಜ್ಞಾನದ ಸುಖ ದುಃಖಗಳನ್ನು ಅರಿವಿನ ಅರಸ ತನ್ನ ಜ್ಞಾನದ ಮೂಲಕ ತನುವಿಗೆ ಮತ್ತೆ ಮತ್ತೆ ಪರಿಚಯಿಸುವ ಕಾಯಕದಲ್ಲಿ ಮಗ್ನನಾಗಿದ್ದಾನೆ.

ಅರಿವಿನ ಅರಸನೇ, ಕಪಿಲಸಿದ್ಧ ಮಲ್ಲಿಕಾರ್ಜುನನೇ ನಿಮ್ಮ ಕೂಡಿ ಮತ್ತೆ ಮರೆವಿನ ಕೆಲಸ ಮಾಡದೆ, ಅರಿವಿನಿಂದ ಬೇರಾಗದಂತೆ ಅರಿವಿನ ಶ್ರೀಮಂತನಾಗಿ ಎಂದಿಪ್ಪೆನೋ ಎಂದು ಸಿದ್ಧರಾಮ ಶಿವಯೋಗಿಗಳು ಅರಿವಿನ ಅರಸನೊಂದಿಗೆ ಮಾತನಾಡುವ ಕಲೆಯನ್ನು ಸಕಲ ಓದುಗರಿಗೆ ಈ ವಚನದ ಮೂಲಕ ಕಲಿಸುವ ಪ್ರಯತ್ನ ಮಾಡಿದ್ದಾರೆ.

**590**

**ತನುವೆಂಬ ಮಹಾಪರ್ವತದಲ್ಲಿ ಒಸರುತಿಪ್ಪ**
**ನಿರ್ಝರಿಗಳಿಂದ ಆ ಘನವನೊಡಗೂಡುವಿರ ಹೇಳಿರೆ?**
**ಸ್ಥೂಲಸಮುದ್ರ ಅರವತ್ತುನಾಲ್ಕು ಕೋಟಿಯು**
**ಮೂವತ್ತೆರಡು ಲಕ್ಷವು ಮೂವತ್ತೆರಡು ಸಾವಿರದ**
**ಪರಿಪೂರ್ಣವಾಗಿಪ್ಪುದಾಗಿ**
**ಅವು ತಮ್ಮ ತಮ್ಮ ಘನತೆಗೆ ತಾವೆ ಘನವೆಂದು ಮೊರೆವುತ್ತೈದಾವೆ.**
**ಅವು ನೀವು ಸಿಡಿದುಬೀಳುವ ತುಂತುರುಮಾತ್ರಕ್ಕೆ ಸಮವಪ್ಪುದೆ?**
**ಅಂತಪ್ಪ ಸಮುದ್ರಂಗಳು ಸವಾಲಕ್ಷ ಕೂಡಿ**
**ನೀನೆಯ್ದುವ ಮಹಾಸಮುದ್ರದ ಒಂದು ಬಿಂದುವಿಗೆ ಸರಿಯೆ?**
**ಅಯ್ಯಾ ನೀವೆಂಬ ಮಹಾಸುಧಾಸಮುದ್ರಕ್ಕೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವೇ ಸಮುದ್ರ. ಮಹಾಪರ್ವತವನ್ನೇ ಕಡಗೋಲು ಮಾಡಿ, ಮನವೆಂಬ ಹಾವನ್ನೇ ಹಗ್ಗಮಾಡಿ, ದೇವಾನು ದೇವತೆಗಳು ರಕ್ಕಸರೂ ಕೂಡಿ ಕಡೆದಾಗ ಆ ತನುವೆಂಬ ಸಮುದ್ರದಲ್ಲಿ ಕಾಳಕೂಟ ವಿಷವೂ ಬಂತು; ಅಮೃತವೂ ಬಂತು.

ತನುವೆಂಬ ಸಮುದ್ರದಿಂದ ಹೊರಬಂದ ವಿಷವೇನೋ ಅಪಾರ; ಆ ಮಹಾಸಮುದ್ರದಿಂದ ಹೊರಬಂದ ಅಮೃತದ ಒಂದು ಬಿಂದುವಿಗೆ ಅಪಾರ ವಿಷಯವನ್ನು ಸರಿಗಟ್ಟಲು ಸಾಧ್ಯವೆ? ಅಪಾರವಾದ ಕಾಳಕೂಟ ವಿಷವನ್ನು ಅಮೃತ ಬಿಂದುವಿನಿಂದ ಹುಟ್ಟಿದ ತನುವೊಂದು ತನ್ನ ಕಂಠದಲ್ಲಿ ಧರಿಸಿ ನೀಲಕಂಠ ಎಂದು ಹೆಸರು ಪಡೆಯಿತು.

ಮಹಾಭಾರತದಲ್ಲಿಯ ದ್ರೌಪದಿಯ ಒಂದು ಮಾತು ಕಾಳಕೂಟ ವಿಷವಾಗಿ ದುರ್ಯೋಧನನ ವಜ್ರ ಶರೀರವನ್ನು ಕಲಕಿ ಕುರುಕ್ಷೇತ್ರವನ್ನೇ ನಿರ್ಮಾಣ ಮಾಡಿತು. ಹದಿನೆಂಟು ಅಕ್ಷೋಹಿಣಿ ಸೈನ್ಯ ಬಿಂದುವಿನ ಒಂದು ಮಾತಿಗೆ ಬಲಿಯಾಯಿತು. ರಕ್ತದ ಕಾಲುವೆಯೇ ಹರಿಯಿತು. ಶ್ರೀಕೃಷ್ಣ ನಿಃಶಸ್ತ್ರಧಾರಿಯಾಗಿ ಅರಿವಿನ ಅಮೃತದ ಸುಧೆಯನ್ನು ಹರಿಸಿದ.

ಅಂತಪ್ಪ ಸಮುದ್ರಂಗಳು ಸವಾಲಕ್ಷ ಕೂಡಿ ನೀನೆಯ್ದುವ ಮಹಾಸಮುದ್ರದ ಒಂದು ಬಿಂದುವಿಗೆ ಸರಿಯೆ? ಅಯ್ಯಾ ನೀವೆಂಬ ಮಹಾಸುಧಾ ಸಮುದ್ರಕ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನನೇ ಒಡೆಯ. ಆತ ಜಗದಗಲ ಮುಗಿಲಗಲ.

ಬೆಟ್ಟದನಿತಪರಾಧವನ್ನು ಒಂದು ಬೊಟ್ಟಿಲೆ ತೊಡೆವ ಎನ್ನುವ ಮಹಾಸೂತ್ರದಂತಿದೆ ಸಿದ್ಧರಾಮ ಶಿವಯೋಗಿಗಳ ಈ ವಚನ.

**591**

**ತನುವೆಂಬ ಹೇಳಿಗೆಗೆ ಮನಸರ್ಪನಾವರಿಸಿ,**
**ಇನಿದು ಬಂದಡೆ ಅದಕ್ಕಿಂಬುಗೊಡದೆ,**
**ಇರುತಿರ್ಪ ಸರ್ಪನನು ತೆಗೆದು**
**ಶಿವಲಿಂಗವನು ನೆಲೆಗೊಳಿಸಿದ ಶ್ರೀಗುರುವೆ ಶರಣು ಶರಣೆಂಬ,**
**ವಾಕ್ಯಂಗಳಲ್ಲಿ ಆಕಾರ ಚತುಷ್ಟಯಮಾನಂದದಲ್ಲಿರಿಸಿದ**
**ಏಕೋ ರುದ್ರ ಶಿಷ್ಟ ಕಪಿಲಸಿದ್ದ ಮಲ್ಲಿಕಾರ್ಜುನಾ.**

ತನುವೆಂಬ ಬುಟ್ಟಿಯಲ್ಲಿ ಮನವೆಂಬ ಸರ್ಪ ವಾಸಮಾಡಿ ತನುವಿನ ಮೂಲಕ ಮನಕ್ಕೆ ಬೇಕಾದ ಸಿಹಿಪದಾರ್ಥಗಳನ್ನು ಉಣ್ಣಲು ತೊಡಗಿದೆ. ಪದಾರ್ಥಗಳೆಂದರೆ ಸರ್ಪಕ್ಕೆ ಬಲು ಇಷ್ಟ.

ತನುವನ್ನು ತನುವಿನಂತೆ ನೋಡಲು ಕಣ್ಣಿಗೆ ಸಾಧ್ಯವಾಗುತ್ತಿಲ್ಲ. ಕಣ್ಣು ಎಂಬ ದೃಶ್ಯ ಪೆಟ್ಟಿಗೆಯಲ್ಲಿ ಮನವೆಂಬ ಸರ್ಪಮಲಗಿ, ನೋಡುವ ಇಡೀ ಕಣ್ಣನ್ನು ತನ್ನ ಆಹಾರಕ್ಕಾಗಿ ಬಳಕೆ ಮಾಡಿಕೊಂಡಿದೆ. ಹಳದಿ ಲೋಹವನ್ನು ಚಿನ್ನವೆಂದು ಹೆಸರಿಸಿ ತನಗೆ ಬೇಕಾದಂತೆ ನೋಡಿ ಇಡೀ ತನುವಿನಲ್ಲಿ ಯುದ್ದವನ್ನು ಸೃಷ್ಟಿಮಾಡಿದೆ. ಲೋಹಕ್ಕಾಗಿ ಯುದ್ಧ, ಆಭರಣಕ್ಕಾಗಿ ಯುದ್ಧ, ಕಿರೀಟಕ್ಕಾಗಿ ಯುದ್ಧ, ಯುದ್ಧವೆಂದರೆ ಮನಕ್ಕೆ ಸಿಹಿ. ತನುವಿಗೆ ಬಾಧೆ.

ತನುವನ್ನು ಮನ ಹೆಣ್ಣೆಂದು ನೋಡಿ, ತನುವಿನಲ್ಲಿ ಕಾಮದ ಸಿಹಿ ಸೃಷ್ಟಿ ಮಾಡಿ, ತನು ತನುವನ್ನೇ ಹರಿದು ತಿನ್ನುವ ಸುಖವನ್ನು ಮನ ತನುವಿನಲ್ಲಿ ಸೃಷ್ಟಿಮಾಡಿದೆ. ಮನದ ಗೆಳೆತನವನ್ನು ಹರಿದು ಹಾಕಲು ತನುವಿಗೆ ಸಾಧ್ಯವಾಗುತ್ತಿಲ್ಲ. ಏಕೆಂದರೆ ಮನವೆಂಬ ಹಾವು ತನುವಿನ ಬುಟ್ಟಿಯಲ್ಲಿ ಸಿಹಿವಾಸನೆ ಬೀರುತ್ತ ತನುವಿನಲ್ಲಿ ತನ್ಮಯವಾಗಿ ಸುತ್ತಿಕೊಂಡಿದೆ. ಇಂತಹ ಘಟಸರ್ಪವನ್ನು ಅನುವಿನಿಂದ ತೆಗೆಯುವ ಕೌಶಲ್ಯದ ಶಿಕ್ಷಣ ತನು ಪಡೆಯದಿದ್ದರೆ ತನುವಿಗೆ ಉಳಿಗಾಲವಿಲ್ಲ.

ತನು ಯಾವ ವೇಷದಲ್ಲಿದ್ದರೇನು? ಆ ವೇಷ ತನುವಿಗೆ ಹಾಕಿದ್ದು ಕೂಡಾ ಮನವೇ ಆಗಿದೆ ಎಂದು ತನು ಅರಿಯದ ಮುಗ್ಧತೆಯಲ್ಲಿ ಮುಂದುವರಿಯುತ್ತಲಿದೆ. ಇದಕ್ಕೆ ಮನದ ಸಿಹಿಗುಳಿಗೆಯೇ ಕಾರಣ.

ಕಣ್ಣಲ್ಲಿದ್ದ ಕಣ್ಣನ್ನು ಮನವೆಂಬ ಸರ್ಪ ಆವರಿಸಿಕೊಂಡಿರುವುದರಿಂದ ಕಣ್ಣಿದ್ದೂ ಕಣ್ಣು ಕುರುಡು ಕಣ್ಣಾಗಿದೆ. ಏಕೆಂದರೆ ಕಣ್ಣು ಕಾಣುತ್ತದೆ; ನೋಡುವ ದೃಶ್ಯದಲ್ಲಿ ವಸ್ತುವಿನ ಸತ್ಯ ಮರೆಯಾಗಿದೆ. ಕೆತ್ತಿದ ಕಲ್ಲನ್ನು ನೋಡಿ ದೇವರು ಎಂದು ಕೈ ಮುಗಿಯುತ್ತದೆ. ಸತ್ಯ ಎನ್ನುವ ಕಲ್ಲು ಕಣ್ಣಲ್ಲಿಯೇ ಮರೆಯಾಗಿ, ಕಲ್ಲೇ ಕಣ್ಣಿಗೆ ದೇವರಾಗಿದೆ. ಇದು ಮನವೆಂಬ ಘಟಸರ್ಪದ ಕೆಲಸವೆಂದು ತನುವಿಗೆ ಗೊತ್ತಾಗಿ, ಮನವೆಂಬ ಸರ್ಪವನ್ನು ಹೊರಹಾಕಬೇಕಲ್ಲ. ಎಷ್ಟೋ ಯುಗಗಳು ಕಳೆದು ಹೋದರೂ ತನು ಮನವೆಂಬ ಘಟಸರ್ಪದ ಗೆಳೆತನ ಬಿಡುತ್ತಿಲ್ಲ.

ಕೇಳುವ ಕಿವಿಯಲ್ಲಿ ಮನವೆಂಬ ಹಾವು ಸುರುಳಿಸುತ್ತಿಕೊಂಡು ಕುಳಿತಿದೆ. ಮರ್ಯಾದಾ ಪುರುಷನೆನ್ನಿಸಿಕೊಂಡು ಶ್ರೀರಾಮನಿಗೆ ಮಡಿವಾಳನ ಮಾತು ಕೇಳಲು ಸಾಧ್ಯವಾಗಲಿಲ್ಲ. ವಜ್ರಶರೀರಿ ಎನಿಸಿಕೊಂಡ ದುರ್ಯೋಧನನಿಗೆ ಕೂಡಾ ದ್ರೌಪದಿಯ ಮಾತು ಕೇಳಲು ಸಾಧ್ಯವಾಗಲಿಲ್ಲ. ಇದು ಮನವೆಂಬ ಸರ್ಪದ ಮಾತು ಎಂದು ತನು ತಿಳಿಯದೇ ರಾಮಾಯಾಣ, ಮಹಾಭಾರತದ ಕುರುಕ್ಷೇತ್ರ ಯುದ್ಧ ಘಟಿಸಿಹೋಯಿತು. ಆದರೂ ತನು ಮನದ ಅಫೀಮಿನಿಂದ ಎಚ್ಚರಗೊಳ್ಳಲು ಸಾಧ್ಯವಾಗುತ್ತಿಲ್ಲ.

ಮೂಗಿನಲ್ಲಿ ಮಿಣಿನಾಗವೆಂಬ ಸರ್ಪ ಸುತ್ತಿಕೊಂಡು ಮೂಸಿಸಲು ಬಾರದಂತೆ ಮಾಡಿದೆ. ಮೂಸಿಸಲು ಹೋದ ಪರೀಕ್ಷಿತ ರಾಜನನ್ನು ಮಿಣಿನಾಗವೆಂಬ ಮನ ಕಚ್ಚಿತಿಂದು ತೃಪ್ತಿ ಪಡೆಯಿತು. ದ್ರೌಪದಿಯನ್ನು ಸ್ಪರ್ಶಿಸಲು ಹೋದ ಕೀಚಕನನ್ನು ಕೊಂದು ಹಾಕಿತು ಮನ. ನಾಲಿಗೆಯಲ್ಲಿ ರುಚಿಯ ನಾಟ್ಯವಾಡುವ ಮನವೆಂಬ ಸರ್ಪ ತನ್ನ ರುಚಿಗಾಗಿ ಜಗದ ಶೇಕಡಾ ಇಪ್ಪತ್ತು ತನುಗಳನ್ನು ಕೊಂದುತಿಂದು ತೃಪ್ತಿ ಹೊಂದುತ್ತದೆ. ಆದರೂ ತನು ಮನಕ್ಕೆ ತನ್ನ ಐದೂ ಜಾಗಗಳಲ್ಲಿ ಆಶ್ರಯಕೊಟ್ಟು ಮನವೆಂಬ ಐದೆಡೆ ಹಾವನ್ನು ಹಾಲೆರೆದು ಜೋಪಾನ ಮಾಡುತ್ತಲಿದೆ.

ಸರ್ವಾಂಗದಲ್ಲಿ ಹರಿದಾಡುವ ಐದೆಡೆ ಹಾವಿನ ಹಲ್ಲು ಕಿತ್ತಿ ಆಭರಣದಂತೆ ಕೊರಳಲ್ಲಿ ಧರಿಸಿಕೊಂಡ ತನುವನ್ನೇ ಪುರಾತನರು 'ಶಿವ' ಎಂದು ಹೆಸರಿಟ್ಟು ಕರೆದರು. ನಾಗಭೂಷಣ ನಾಗಾಭರಣ ಎಂದು ಕೂಡಾ ಕರೆದರು. ಸರ್ವಾಂಗದಲ್ಲಿ ಹರಿದಾಡುವ ಐದೆಡೆ ಹಾವನ್ನು ಪಳಗಿಸಿ ನೆತ್ತಿಯ ನೆರಳಾಗಿಸಿಕೊಂಡ ಅರುಹಿರಿಯರು ಕೂಡಾ ಈ ದೇಶದಲ್ಲಿ ಸಾಕಷ್ಟು ಇದ್ದಾರೆ.

ಭಾರತ ದೇಶದ ದೇವರುಗಳ ತಲೆಯ ಮೇಲೆ ಐದೆಡೆ ಹಾವಿನ ಚಿತ್ರವಿದೆ. ಓದಲು ಬಾರದ ತನುಗಳು ನೋಡಿ ಹಾವನ್ನು ಪಳಗಿಸುವ ಅರಿವಿನ ಸಂದೇಶವನ್ನು ಕಲಾವಿದ ಸುಂದರವಾಗಿಯೇ ಚಿತ್ರಿಸಿದ್ದಾನೆ. ಆದರೆ ಮನ ಕೇಳಬೇಕಲ್ಲ! ಅದು ರಂಗೋಲಿಯ ಸಂದಿನಲ್ಲಿಯೂ ತೂರಿ ಮತ್ತೆ ತನುವನ್ನು ತನ್ನಂತೆ ಮಾಡಿಕೊಂಡಿದೆ. ಚಿತ್ರವನ್ನೇ ದೇವರೆಂದು ಪೂಜಿಸಿ ತನುವನ್ನು ಹಾವು ಎಚ್ಚರಗೊಳ್ಳದಂತೆ ಮಾಡಿದೆ.

ಹಾವನ್ನೇ ಹಾಸಿಗೆ ಮಾಡಿಕೊಂಡ ತನುವೊಂದು ಇದೆ. ಕಲಾವಿದ ಸಕಲ ತನುಗಳಿಗೂ ಅರಿವಾಗಲೆಂದು ರಚಿಸಿದ ಅರಿವಿನ ಚಿತ್ರವಿದು. ಆದರೆ ಮನ ಬಲು ಜಾಣ. ಅರಿವಿನ ಆ ಚಿತ್ರವನ್ನು ವಿಷ್ಣುದೇವರೆಂದು ಪೂಜಿಸಿ ತನುವಿನ ಜ್ಞಾನವನ್ನು ಮರೆಮಾಚಿತು. ತನುವಿನ ಅಜ್ಞಾನದೊಂದಿಗೆ ಸುಖಿಸಿ ತನುವನ್ನೇ ತಿಂದು ತೇಗಿತು.

ತನುವಿನಲ್ಲಿರುವ ಘಟಸರ್ಪವನ್ನು ತೆಗೆದು ಅರಿವಿನ ಲಿಂಗಯ್ಯನನ್ನು ನೆಲೆಗೊಳಿಸುವ

ಶ್ರೀಗುರುವಿನ ಅವಶ್ಯಕತೆ ಸಕಲ ತನುಗಳಿಗೂ ಇದೆ. ಕ್ರಿಷ್ಣ ಕ್ರಿಸ್ತ ಪೈಗಂಬರ ಬುದ್ಧ ಮಹಾವೀರ ಬಸವಾದಿ ಶರಣರೂ ಈ ಕೆಲಸವನ್ನೇ ಮಾಡಿದರು. ಆದರೂ ಮನ ಕೇಳಬೇಕಲ್ಲ. ಅದು ಮತ್ತೆ ತನುವಿನ ಸಂಗಮಾಡಿ ಹಾವಿನ ಸಂಗ ಬಿಡಿಸಲು ಹೇಳಿದ ಮಹನೀಯರನ್ನೇ ದೇವರನ್ನಾಗಿಸಿ ತನುವಿನೊಂದಿಗೆ ಆರಾಧಿಸುತ್ತಲಿದೆ. ಇದು ತನುವಿನಲ್ಲಿದ್ದ ಮನವೆಂಬ ಘಟಸರ್ಪದ ಮಹಿಮೆ!

**592**

**ತನುವೈದು, ತನು ಮೂರು, ಕರಣ ನಾಲ್ಕು, ಭ್ರಮೆಯಾರು,**
**ಅನುನಯನ ಗುರುವಿನ ಕರುಣವಿಡಿದಾತಂಗೆ,**
**ತನು ಬ್ರಹ್ಮ ಕಾಣಾ, ಕಪಿಲಸಿದ್ದ ಮಲ್ಲಿಕಾರ್ಜುನಾ.**

ತನು ಒಂದೇ. ಆದರೆ ಅದು ಐದು ಮೂರು ನಾಲ್ಕು ಆರು ಪಾತ್ರಗಳನ್ನು ಮಾಡುತ್ತದೆ. ಆಯಾ ಪಾತ್ರದಲ್ಲಿ ತನು ನಿರತವಾದಾಗ ಅದು ತನು ಎಂಬುದನ್ನೇ ಮರೆತು ಪರಕಾಯ ಪ್ರವೇಶ ಮಾಡಿದಂತೆ ತೋರುತ್ತದೆ.

ನೋಡುವ, ಕೇಳುವ, ಮೂಸಿಸುವ, ರುಚಿಸುವ, ಸ್ಪರ್ಶಿಸುವ ಪಾತ್ರದಲ್ಲಿ ತನು ನಿಸ್ಸೀಮ. ಸತ್ಯ ಮರೆಮಾಚಿ ನೋಡುತ್ತದೆ. ಸತ್ಯ ಮರೆಮಾಚಿ ಕೇಳುತ್ತದೆ. ಸತ್ಯ ಮರೆಮಾಚಿ ಮೂಸಿಸುತ್ತದೆ. ಸತ್ಯ ಮರೆಮಾಚಿ ರುಚಿಸುತ್ತದೆ. ಸತ್ಯ ಮರೆಮಾಚಿ ಸ್ಪರ್ಶಿಸುತ್ತದೆ.

ತನು ಸಾತ್ವಿಕ ಪಾತ್ರದಲ್ಲಿದ್ದಾಗ ರಾಜಸ ತಾಮಸಗಳ ಪಾತ್ರ ಮರೆಯುತ್ತದೆ. ರಾಜಸ ಪಾತ್ರದಲ್ಲಿದ್ದಾಗ ಅದರ ಸಾತ್ವಿಕತನ ಮರೆತು ಹೋಗುತ್ತದೆ. ತಾಮಸ ತನು ಸಾತ್ವಿಕ ರಾಜಸಗಳೆರಡು ಪಾತ್ರಗಳನ್ನು ಮರೆತು ತಾಮಸದ ಸುಖ ಅನುಭವಿಸುತ್ತದೆ. ಮೂರು ಪಾತ್ರಗಳನ್ನು ನಿರ್ವಹಿಸುವುದರಲ್ಲಿಯೇ ಅದರ ಆಯುಷ್ಯ ಕಳೆದುಹೋಗುತ್ತದೆ. ತನುವಿನ ಸಹಜ ನೈಜಸುಖವನ್ನು ಅನುಭವಿಸದೆ ಬದುಕುತ್ತಾ ಸಾಯುತ್ತ ತನು ತನ್ನ ತನವನ್ನೇ ಕಳೆದುಕೊಳ್ಳುತ್ತದೆ.

ಚಿತ್ತ ಬುದ್ಧಿ ಅಹಂಕಾರ ಮನ ಇವು ತನುವಿನಲ್ಲಿದ್ದು ತನುವನ್ನೇ ಹರಿದು ತಿನ್ನುತ್ತವೆ. ವಸ್ತುವಿನ ಮೇಲೆ ಹರಿದ ಚಿತ್ತ ವಸ್ತುವನ್ನೇ ಮರೆಮಾಚುತ್ತದೆ. ವಸ್ತುವಿನ ಸತ್ಯ ತನುವಿಗೆ ಕಾಣದಂತೆ ಮಾಡುತ್ತದೆ. ವಸ್ತುವನ್ನು ಬೇಡುವ ಮೂಲಕ ತನುವಿನ ಮೂಲಕ್ಕೆ ಕೈಹಾಕಿ ತನುವನ್ನು ರಕ್ಕಸನನ್ನಾಗಿ ಮಾಡುತ್ತದೆ.

ಬುದ್ಧಿ ಅಹಂಕಾರ ಮನ ತನುವಿನ ಆಶ್ರಯ ಪಡೆದು ತನುವಿನಲ್ಲಿಯೇ ಇದ್ದು ಒಂದಕ್ಕೊಂದು ಪೂರಕವಾಗಿ ತನುವಿನ ಮೂಲಕ ಉಣ್ಣುತ್ತಾ ತನುವನ್ನೇ ನಾಶಮಾಡುತ್ತವೆ. ತನುವನ್ನು ಆಯುಧ ಮಾಡಿಕೊಂಡು ತನುವಿನ ಮೂಲಕ ಯುದ್ಧ ಮಾಡುತ್ತವೆ. ತನು ಬಡಪಶುವಾಗಿ ಚಿತ್ತ ಬುದ್ಧಿ ಅಹಂಕಾರ ಮನವೆಂಬ ಕೆಸರಲ್ಲಿ ಬಿದ್ದು ಮೇಲೆ ಏಳಲು ಆಗದೆ ಅಲ್ಲಿಯೇ ಒದ್ದಾಡುತ್ತದೆ.

ತನುವಿನಲ್ಲಿ ಐದು ಇಂದ್ರಿಯಗಳೂ ಇಲ್ಲ; ಅದು ಸಾತ್ವಿಕ ರಾಜಸ ತಾಮಸ ತನುವೂ ಅಲ್ಲ; ಚಿತ್ತ ಅಹಂಕಾರ ಬುದ್ಧಿ ಮನವೆಂಬ ನಾಲ್ಕು ಕರಣಂಗಳೂ ತನುವಿನಲ್ಲಿ ಇಲ್ಲ ; ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಆರು ಅರಿಷಡ್ವರ್ಗಗಳು ಕೂಡಾ ಅಲ್ಲಿ ಇಲ್ಲ. ಇದೆಲ್ಲಾ ಭ್ರಮೆ. ತನುವೆಂಬುದು ಏಕ ಮಾತ್ರ ಬ್ರಹ್ಮ.

ತನುವಿನಲ್ಲಿ ಸೃಷ್ಟಿಯಾಗುವ ನವರಸಗಳೆಲ್ಲ ಸುಳ್ಳು. ತನುವಿನಲ್ಲಿ ಸೃಷ್ಟಿಯಾಗಿ ತನುವನ್ನೇ ಇಲ್ಲವಾಗಿಸುವ ಭ್ರಮಾರಸಗಳು ಅವು. ತನುವಿನಲ್ಲಿ ಬ್ರಹ್ಮರಸ ಮಾತ್ರ ಇದೆ. ಬ್ರಹ್ಮರಸದ ಒಂದು ಬಿಂದುವಿನಿಂದಲೇ ತನು ಜನ್ಮತಳೆದಿದೆ. ಅದನ್ನು ತನು ಮರೆತಿರುವುದರಿಂದಾಗಿ ಭ್ರಮಾರಸಗಳು

ತನುವನ್ನು ಆಳುತ್ತಲಿವೆ. ಭ್ರಮಾರಸಗಳಿಗೆ ತನು ಉಪಕರಣವಾಗಿ ಬಳಕೆಯಾಗುತ್ತಲಿದೆ. ತನು ತಾನು ಬ್ರಹ್ಮ ಎಂಬುದನ್ನು ಅರಿತರೆ ಸಾಕು ತನುವಿನಲ್ಲಿದ್ದ ಭ್ರಮಾರಸಗಳೆಲ್ಲ ಉದುರಿಬೀಳುತ್ತವೆ. ತನುವಿನಲ್ಲಿಯೇ ತನ್ಮಯವಾದ ವಿರಾಟ ಸ್ವರೂಪ ಪುಟಿದೇಳುತ್ತದೆ.

**593**

**ತನುವೈದು ದಳವೈದು ಘನ ಮಂತ್ರವೈದನು**
**ಅನುವಿಂದಲವಕವಕೆ ದೀಕ್ಷೆ ಮಾಡಿ**
**ಒಳಗು ಹೊರಗೆನ್ನದೆ ಜ್ಯೋತಿರ್ಲಿಂಗವ ಪಡೆವ**
**ಪರಮ ಗುರುವಿನ ಪರಿಯು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವೆಂದರೆ ಐದು ದಳಗಳುಳ್ಳ ಅರಿವಿನ ಪುಷ್ಪ. ಅದರಿಂದ ಅರಿವಿನ ಪರಿಮಳ ಹೊರಸೂಸುತ್ತದೆ. ಬುದ್ಧ, ತನುವನ್ನು ಬೋಧೀ ವೃಕ್ಷವೆಂದು ಕರೆದ. ಶರಣರು, ನಡೆದಾಡುವ ಬೇರೇ ಇಲ್ಲದ ಜ್ಞಾನದ ಮರವೆಂದು ಕರೆದರು.

ತನುವಿನಲ್ಲಿ ನೋಡುವ ಅನುವುಳ್ಳ ತನುವೊಂದು ಇದೆ. ಅನುವಿನಿಂದ ಕೇಳುವ ತನುವೊಂದು ಇದೆ. ಅನುವಿನಿಂದ ಮುಟ್ಟುವ ತನುವೊಂದು ಇದೆ. ಅನುವಿನಿಂದ ರುಚಿಸುವ ತನುವೊಂದು ಇದೆ. ಅನುವಿನಿಂದ ಮೂಸಿಸುವ ತನುವೊಂದು ಇದೆ. ಹೀಗೆ ಒಂದು ತನುವಿನಲ್ಲಿ ಐದು ದಳಗಳು. ಆ ಐದು ದಳಗಳಿಗೆ ಒಂದೊಂದು ಮಂತ್ರದಂತೆ ಐದು ಮಂತ್ರಗಳಿವೆ.

'ನಮಃಶಿವಾಯ' ಎನ್ನುವ ಮಂತ್ರವೇ ತನುವಿನಲ್ಲಿ ಸಂಗಮವಾಗಿದೆ. ತನುವನ್ನು ಆವರಿಸಿದ ಮನಕ್ಕೆ ಮಂತ್ರದ ಬಯಕೆಯಾದರೆ ಸಾಕು ಅದು ಶಿಷ್ಯನಾಗುತ್ತದೆ. ತನುವಿನಲ್ಲಿ ಸಂಗಮವಾದ ಅರಿವನ್ನು ಗುರುದೇವನನ್ನಾಗಿಸಿಕೊಂಡು ಆ ಗುರುದೇವನಿಗೆ ಮನ ಶಿಷ್ಯನಾಗುತ್ತದೆ. ಅರಿವೆಂಬ ಗುರುದೇವನಿಂದ ಮಂತ್ರ, ದೀಕ್ಷೆ ಪಡೆದುಕೊಂಡು ಮಾಂಸಪಿಂಡವೆನ್ನಿಸಿಕೊಂಡ ತನು ಮಂತ್ರಪಿಂಡವೆಂದು ಕರೆಯಿಸಿಕೊಳ್ಳುತ್ತದೆ.

ಓಂ ನಮಃಶಿವಾಯವೆಂಬ ಷಡಕ್ಷರಿ ಮಂತ್ರವೇ ತಾನೆಂದು ತನು ಕರೆಯಿಸಿಕೊಳ್ಳುತ್ತದೆ. ಷಡಕ್ಷರಿ ಮಂತ್ರ ಸಾವಿರಾರು ಬಾರಿ ಸಾಯುವವರೆಗೆ ಪಠಿಸಿದರೂ, ತನು ಬೇರೆಯೇ ಮಂತ್ರ ಬೇರೆಯೇ ಆಗಿರುತ್ತದೆ. ಮಂತ್ರ ಪಠಿಸಿದರೆ ತನು ಜ್ಞಾನಿಯಾಗುವುದಿಲ್ಲ. ತಾನು ಹೇಗೆ ಆ ಮಂತ್ರ ಎಂದು ತಿಳಿದುಕೊಂಡರೆ ಸಾಕು ತನುವೇ ಷಡಕ್ಷರಿ ಮಂತ್ರ!

ತ್ವಙ್ಮಯವಾಗಿಹುದು 'ಓಂ'ಕಾರ. ರುಧಿರಮಯವಾಗಿಹುದು 'ನ'ಕಾರ, ಮಾಂಸಮಯವಾಗಿಹುದು 'ಮ'ಕಾರ, ಅಸ್ತಿಮಯವಾಗಿಹುದು 'ಶಿ'ಕಾರ, ಮಜ್ಜಾಮಯವಾಗಿಹುದು 'ವಾ'ಕಾರ, ಮೇದೋಮಯವಾಗಿಹುದು 'ಯ'ಕಾರ ಎಂದು ಚೆನ್ನಬಸವಣ್ಣನವರು ತನು ಮಂತ್ರಮಯವಾದುದು ಹೇಗೆ ಎಂಬುದನ್ನು ತಮ್ಮ ವಚನದ ಸೂತ್ರದ ಮೂಲಕ ವಿವರಿಸಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ಘನ ಮಂತ್ರವೈದನು ಅನುವಿಂದಲವಕವಕೆ ದೀಕ್ಷೆ ಮಾಡಿ ಒಳಗು ಹೊರಗೆನ್ನದೆ ಜ್ಯೋತಿರ್ಲಿಂಗವ ಪಡೆವ ಬಗೆಯನ್ನು ತಮ್ಮ ವಚನದ ಸೂತ್ರದ ಮೂಲಕ ವಿವರಿಸಿದ್ದಾರೆ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಅಜ್ಞಾನ ತಾಂಡವ ನೃತ್ಯ ಮಾಡುತ್ತಾ ತನುವನ್ನು ಹಿಂಸೆಗೆ ಒಳಗು ಮಾಡುತ್ತದೆ. ಈ ಐದೂ ಜಾಗದ ಪಕ್ಕಪಕ್ಕದಲ್ಲಿಯೇ ಅರಿವಿನ ಮಂತ್ರ ವಾಸ ಮಾಡಿದೆ. ಅಂದರೆ ಕಣ್ಣಲ್ಲಿಯೇ ವಾಸ ಮಾಡಿದ ಅಜ್ಞಾನಕ್ಕೆ ಕಣ್ಣಲ್ಲಿಯೇ ಸಂಗಮವಾದ ಜ್ಞಾನದಿಂದ ಬೋಧಿಸುವುದು ಹೇಗೆ ಎಂಬುದನ್ನು ತಮ್ಮ ವಚನದ ಮೂಲಕ ಓದುಗರಿಗೆ ಮನವರಿಕೆ ಮಾಡಿದ್ದಾರೆ.

ನಾನು ಅಜ್ಞಾನದಿಂದ ನೋಡಿದೆ ಎಂದು ಕಣ್ಣಿಗೆ ಕಣ್ಣಿನ ಜ್ಞಾನದಿಂದಲೇ ಗೊತ್ತಾಗುತ್ತದೆ. ಅಜ್ಞಾನದ ಕಣ್ಣು ಹಾದರದಿಂದ ನೋಡಿದರೆ ಜ್ಞಾನದ ಕಣ್ಣು ನೀನು ಹೀಗೆ ನೋಡುವುದು ಸರಿಯೆ ಎಂದು ಅಜ್ಞಾನದ ಕಣ್ಣಿಗೆ ಬೋಧೆ ಮಾಡುತ್ತದೆ. ಅಜ್ಞಾನದ ಕಣ್ಣು ಜ್ಞಾನದ ಕಣ್ಣಿಗೆ ಶಿಷ್ಯನಾದಾಗ ಜ್ಞಾನದ ಕಣ್ಣು ತನಗೆ ಬೋಧೆ ಮಾಡುವುದು ಅಜ್ಞಾನದ ಕಣ್ಣಿಗೆ ತಿಳಿಯುತ್ತದೆ. ಕತ್ತಲೆಯ ಕುರುಡು ಕಣ್ಣು ಬೆಳಕಿನ ಅರಿವಿನ ಕಣ್ಣಲ್ಲಿ ಲೀನವಾದರೆ ಸಾಕು ಒಳಹೊರಗೆನ್ನದೆ ಜ್ಯೋತಿರ್ಲಿಂಗವಾಗಿ ಬೆಳಗುತ್ತದೆ.

ಕಣ್ಣಿನ ದೃಶ್ಯದ ಮೂಲಕ ಬೆಳಗುವ ಪರಮ ಗುರುವಿನ ದರುಶನ ಮರೆವಿನ ಕಣ್ಣಿಗೆ ಆಗುತ್ತದೆ. ಸತ್ಯ ಕಾಣಲುಬಾರದ ಮರೆವಿನ ಕಣ್ಣನ್ನು ಅರಿವೆಂಬ ಗುರುದೇವನ ಕಣ್ಣಿಗೆ ಇತ್ತು ಧನ್ಯತೆಯನ್ನು ಮೆರೆಯುತ್ತದೆ.

ಹೀಗೆ ಕಿವಿ ಮೂಗು ಚರ್ಮ ನಾಲಿಗೆಯಲ್ಲಿ ಕೂಡಾ ಅಜ್ಞಾನವಿದೆ. ಆಯಾ ಅಜ್ಞಾನವನ್ನು ಅಲ್ಲಲ್ಲಿಯೇ ವಾಸ ಮಾಡಿದ ಜ್ಞಾನಕ್ಕೆ ಅರ್ಪಣೆ ಮಾಡಿ ಒಳಹೊರಗೆನ್ನದೆ ಬೆಳಗುವ ಸೂತ್ರವನ್ನು ಓದುಗರಿಗೆ ಸರಳವಾಗಿ ನೀಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**594**

**ತನ್ನೊಳಗೆನ್ನ ಗತವ ಮಾಡಿದ ಬಳಿಕ**
**ಆದಿಯ ಪದವ ತೋರಿದ ಬಳಿಕ ಮತ್ತಾವುದೂ ಇಲ್ಲಯ್ಯ.**
**ಆದಿಪದವ ನುಂಗಿದ ಬಳಿಕ ಇನ್ನಾವುದೂ ಇಲ್ಲಯ್ಯ.**
**ನೋಡಯ್ಯ, ಎನ್ನ ಹಡದೂ ಕೂಡದಿದ್ದಡೆ**
**ನಿನಗಾವುದು ನಡೆವುದು ಹೇಳಾ,**
**ಎನ್ನ ಕಪಿಲಸಿದ್ಧ ಮಲ್ಲೇಶ್ವರದೇವಾ.**

ದೇವರೆಂದರೆ ಹೀಗಿರಬೇಕು. ಸದಾ ತನ್ನೊಂದಿಗಿದ್ದು ತನ್ನೊಡನೆ ಮಾತನಾಡುವ ದೇವರೇ ದೇವರು. ತನ್ನೊಂದಿಗೆ ದೇವರಿದ್ದರೂ ಆ ದೇವರ ದರುಶನವನ್ನು ತನುವಿಗೆ ಮಾಡಿಸದಂತೆ ತಾನೇ ನಿರ್ಮಾಣ ಮಾಡಿದ ಕಲ್ಲು ದೇವರನ್ನು ಬೇಡಿಕೊಳ್ಳಲು ಹಚ್ಚಿದ್ದು ಮನ. ಅಂತಹ ಮನದ ಸಂಗ ಮಾಡಬಾರದೆಂಬ ಅರಿವು ಕಿಂಚಿತ್ತೂ ಇಲ್ಲದ ತನು ನಾನು.

ತನುವನ್ನು ಹಡೆದು ಆ ತನುವಿನ ಆದಿಯನ್ನು ಇಲ್ಲ ಮಾಡಿ; ತಾನಿದ್ದ ತನುವನ್ನೇ ಕೈಲಾಸವನ್ನಾಗಿಸಿ, ತನ್ನಂತೆ ಅನಾದಿಯನ್ನಾಗಿ ಮಾಡಿಕೊಳ್ಳಲು ಬಂದ ದೇವರನ್ನೇ ಮರೆತ ಆದಿ ನಾನು. ಆದಿ ಪದವ ನುಂಗಲು ಬಂದ ಅನಾದಿಯಿಂದ ಅತ್ತತ್ತಲೂ ಇದ್ದ ಶಿವ ನೀನು.

ತನುವಿನಲ್ಲಿಯೇ ಇದ್ದು ತನುವನ್ನೇ ರಥ ಮಾಡಿಕೊಂಡು ಅದರ ಚಾಲಕನಾಗಲು ಬಂದ ಶಿವ ನೀನು. ನಿನ್ನ ಬೆಳಕಿನಿಂದ ಹುಟ್ಟಿದ ನೆರಳೆಂಬ ಮನ ತನುವಿನ ಗೆಳೆತನ ಮಾಡಿ ದೇವರ

ಇರುವಿಕೆಯನ್ನೇ ಮರೆಸಿ ತನುವನ್ನು ಆವರಿಸಿ ತಾನೇ ತನುವಿನ ರಥದ ಚಾಲಕನಾಗಿದೆ.

ಶಿವನೇ, ನೀನು ನನ್ನೊಳಗಿದ್ದು ನೀನು ಬೇಡವೆಂದರೂ ಮನ ಓಡಿಸಿದತ್ತ ಓಡುವ ಅಜ್ಞಾನಿ ನಾನು ಆಗಿರುವೆ. ನೋಡಯ್ಯಾ ನನ್ನನ್ನು ಹಡೆದು ನನ್ನೊಳಗಿದ್ದೂ ನನ್ನನ್ನು ಕೂಡದಿರುವುದು ನಿನಗೆ ನ್ಯಾಯವೇ ತಂದೆ?

ತನುವಿನೊಳಗಿದ್ದೂ ತನುವನ್ನು ಹಡೆದ ನಿನ್ನ ಮಾತು ತನುವಿಗೆ ತಿಳಿಯದಂತೆ ಮಾಡಿದೆ. ಮನವನ್ನು ತಡೆದು ನಿಲ್ಲಿಸಿ ಕೊಡವದಂತೆ ಮಾಡಿದೆ. ಹಡದೂ ಕೂಡದಿದ್ದಡೆ ನಿನಗದು ನ್ಯಾಯವೇ ನನ್ನಯ್ಯಾ?

ತನ್ನೊಳಗೆ ಎನ್ನನ್ನು ಸಂಗಮ ಮಾಡಿಕೊಂಡ ಸಂಗಯ್ಯ ನೀನು. ಆದಿ ನಾನು ಅನಾದಿ ನೀನೆಂದು ತೋರಿದ ಬಳಿಕ ಮತ್ತಾವುದೂ ಇಲ್ಲವೆಂದು ಆದಿ ಪದವ ನುಂಗಿದ ಮಲ್ಲಯ್ಯ ನೀನು! ಎಂದು ಸಿದ್ಧರಾಮ ಶಿವಯೋಗಿಗಳು ಅರಿವೆಂಬ ಗುರುದೇವನೊಂದಿಗೆ ಮಾತನಾಡಿದ್ದಾರೆ.

**595**

**ತಮ್ಮ ನುಡಿಯಿಂದ ಅರಸು ಅರಸನಲ್ಲ;**
**ಆಳುಗಳಿಂದರಸನೆಂಬ ಬಿರುದು ತೋರ್ದಡೂ ತೋರಲಿ;**
**ಅಲ್ಲಿ ಅಧಿಕಾರದ ಕಲೆ ಅರಸಂಗಲ್ಲದೆ,**
**ಆಳಿಂಗಿಲ್ಲ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆಳಾದಡೂ ಆಳೇ; ಅರಸನಾದಡೂ ಆಳೇ. ಅರಸು ಅರಸನಲ್ಲ! ಹಲವಾರು ಆಳುಗಳನ್ನಿಟ್ಟುಕೊಂಡು ತನಗೆ ತಾನೇ ಅರಸು ಎನ್ನುವ ಬಿರುದು ಪಡೆದಿರಬಹುದು. ಆಳು ಅರಸನನ್ನು ಕುರಿತು ಉಘೇ ಉಘೇ ಎಂದು ಉಗ್ಗಡಿಸಬಹುದು. ಆದರೆ ಆಳಾದರೇನು ಆಳೇ ಆಗಿದ್ದಾನೆ; ಅರಸನಾದರೇನು ಆಳೇ ಆಗಿದ್ದಾನೆ.

ತಾನು ಅರಸನೆಂಬ ಅಹಂಕಾರದಿಂದ ಆಳುಗಳನ್ನು ಬಾಗುವಂತೆ ಮಾಡುತ್ತಾನೆ. ತಾನು ಆಳೆಂಬ ಅಜ್ಞಾನದಿಂದ ಅರಸನಿಗೆ ಬಾಗುತ್ತಾನೆ. ಅರಸನೆಂಬ ಅಹಂಕಾರಿಗೂ, ಅರಿವಿನ ಅರಸನಿಗೆ ತಾನು ಆಳೆಂಬುದು ಗೊತ್ತಿಲ್ಲ. ಆಳೆಂಬ ಅಜ್ಞಾನಿಗೂ ತನ್ನ ಅರಿವಿನ ಅರಸನಿಗೆ ಮಾತ್ರ ತಾನು ಆಳೆಂಬುದು ಗೊತ್ತಿಲ್ಲ.

ಸಿದ್ಧರಾಮ ಶಿವಯೋಗಿಗಳು ಅರಸ ಮತ್ತು ಆಳುಗಳಿಬ್ಬರಿಗೂ ಅರಿವಿನ ಛಾಟಿ ಬೀಸಿ ಎಚ್ಚರಿಸಿದ್ದಾರೆ. ಅರಸ ಎನ್ನುವುದು ಆಳಿನ ಒಂದು ಪಾತ್ರ. ಆಳು ಎಂಬುದು ಕೂಡಾ ಆಳಿನ ಒಂದು ಪಾತ್ರವೇ ಆಗಿದೆ. ತಾನು ಏನಿದ್ದರೂ ಪಾತ್ರಧಾರಿ ಎಂದು ಅರಸನಿಗೂ ಆಳಿಗೂ ತಿಳಿಯದಿದ್ದರೆ ಕಾಯ ಕಾಯವೆನ್ನಿಸಿಕೊಳ್ಳದೆ ವ್ಯರ್ಥವಾಗಿ ಸತ್ತು ಹೋಗುತ್ತದೆ. ಅದಕ್ಕೆ ಪರಕಾಯ ಪ್ರವೇಶದ ಶಿಕ್ಷಣ ಗೊತ್ತಾಗುವುದಿಲ್ಲ.

ಕಾಯವಿರುವಾಗಲೇ ತಾನು ಹೇಗೆ ಕೈಲಾಸವೆಂದು ಕಾಯಕ್ಕೆ ಗೊತ್ತಾಗದಿದ್ದರೆ ಅದನ್ನು ಕಾಯವೆನ್ನಲು ಸಾಧ್ಯವೆ? ಅರಸನಾದರೇನು, ಆಳಾದರೇನು? ತಾನು ಅರಿವಿನ ಅರಸನಿಗೆ ಆಳಿನ ಆಳು ಎಂದು ಗೊತ್ತಾಗದಿದ್ದರೆ ಕಾಯ ಹಾಕಿಕೊಂಡ ಪಾತ್ರದಲ್ಲಿಯೇ ಅಸುನೀಗುತ್ತದೆ. ಕಾಯದ ನಿಜಸ್ಥಿತಿ ಕಾಯಕ್ಕೆ ಗೊತ್ತಾಗುವುದಿಲ್ಲ.

ಕಾಯದ ನಿಜಸ್ಥಿತಿ ಎಂದರೆ ಕಾಯದಲ್ಲಿಯೇ ಇರುವ ಅರಿವಿನ ಸಂಪತ್ತು. ಅದು

ಜಡಸಂಪತ್ತಲ್ಲ; ಚೇತನ! ಅದು ಬರೀ ಚೇತನವಲ್ಲ ಅರಿವಿನ ಅರಸನು ಆತ! ಬೇಡಿದರೆ ಎನ್ನೊಡೆಯನ ಬೇಡುವೆ. ಹಾಡಿದರೆ ಎನ್ನೊಡೆಯನ ಹಾಡುವೆ. ಒಡೆಯಂಗೆ ಒಡಲ ತೋರಿ ಎನ್ನ ಬಡತನವ ಬಿನ್ನೈಸುವೆ ಎಂದು ಬಸವಣ್ಣ ಒಡಲೊಡೆಯನನ್ನು ಬೇಡುವ ಸೂತ್ರ ಹೇಳಿದ್ದಾರೆ.

ಕಾಯ ಕಾಯವನ್ನು ಬೇಡುವುದೆಂದರೇನು? ಕಾಯ ಕಾಯಕ್ಕೆ ಆಳಾಗುವುದೆಂದರೇನು, ಕಾಯ ಕಾಯಕ್ಕೆ ಅರಸನಾಗುವುದೆಂದರೇನು? ಕಾಯದ ಸಂಪತ್ತು ಕಾಯಕ್ಕೆ ಗೊತ್ತಿಲ್ಲದಿರುವುದರಿಂದ ಕಾಯ ಕಾಯವನ್ನು ಅಂಗಲಾಚಿ ಬೇಡುವುದು. ಇದು ಕಾಯದ ದುರ್ದೈವವೇ ಸರಿ.

ಕಾಯದಲ್ಲಿಯೇ ಸಂಗಮವಾದ ಅರಿವಿನ ಅರಸನು ಮಾತ್ರ ಅರಸನೇ ಹೊರತು ಕಾಯ ಅರಸನಲ್ಲ. ಅದು ಅರಸನ ಪಾತ್ರ. ಪಾತ್ರ ನಿಜವಲ್ಲ; ಅದು ಪಾತ್ರ ಮಾತ್ರ ಎಂದು ಕಾಯವನ್ನು ಆವರಿಸಿದ ಮನ ತಿಳಿಯದಿದ್ದರೆ ಕಾಯಕ್ಕೆ ಉಳಿಗಾಲವಿಲ್ಲ. ಕಾಯದಲ್ಲಿ ಸಂಗಮವಾದ ಅಧಿಕಾರದ ಕಲೆ ಅರಿವಿನ ಅರಸಂಗಲ್ಲದೆ ಆಳಿಂಗಿಲ್ಲ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ಕೇಳುವಂತೆ ಅರಿವಿನ ಅರಸ ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**596**

**ತಮ್ಮೊಲಿದತ್ತ ಹರಿಹಂಚಮಾಡಿ ಕಾಡುತ್ತಿಪ್ಪ**
**ಎನಿತೆನಿತಿಂದ್ರಿಯಂಗಳ ಒಡಗಡಣದಲು ಪೋಗದೆಂದಿಪ್ಪೆಯೆಂದು**
**ನಿಮ್ಮೊಡಗೂಡಿ ಬೇರಾಗದೆಂದಿಪ್ಪೆನೊ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬೆಳಗುತ್ತಿರುವ ಸೂರ್ಯನ ಬೆಳಕನ್ನು ಮೋಡಗಳು ಹೇಗೆ ಮರೆಮಾಡುತ್ತವೆಯೋ ಹಾಗೆಯೇ ಅರಿವು ಎಂಬ ಗುರುದೇವ ಇದ್ದ ಜಾಗದಲ್ಲಿಯೇ ಮರೆವು ಎಂಬ ಇಂದ್ರಿಯಗಳು ಅರಿವು ಎಂಬ ಗುರುದೇವನನ್ನು ಮರೆಮಾಡಿವೆ.

ತನುವಿಗೆ ಇಂದ್ರಿಯ ಸುಖವೆಂದರೆ ಬಲು ಇಷ್ಟ. ಮನವೆಂಬ ಮರೆವು ತನುವಿನ ಗೆಳೆತನ ಮಾಡಿ ಸುಳ್ಳು ಸುಖ ಅನುಭವಿಸುತ್ತದೆ.

ಸುಖವೆಂದರೆ ಒಂದಲ್ಲ ಎರಡಲ್ಲ; ಸಾವಿರಾರು ಸುಖ ಮನಕ್ಕೆ! ನೋಟ ಒಂದೇ; ಅದು ಅರಿವಿನ ನೋಟ. ಆದರೆ ಮನ ನೋಡುವ ಅರಿವಿನ ಕಣ್ಣಲ್ಲಿಯೇ ಮರೆವು ಮನೆ ಮಾಡಿ ಸಾವಿರಾರು ವಿಧದಲ್ಲಿ ನೋಡಿ ಸುಖಿಸುತ್ತದೆ. ಅರಿವಿನ ಮನೆಯಲ್ಲಿಯೇ ಮರೆವು ಮನೆಯ ಮಾಡಿ ಅರಿವಿನ ನೋಟವನ್ನೇ ಮರೆತು ಹೋಗಿದೆ.

ತನುವಿನ ಮನೆಯಲ್ಲಿ ಮನದ ಮರೆವಿನ ಆಶ್ರಯ ಹೊಂದಿ ತನುವನ್ನೇ ಹರಿಹಂಚ ಮಾಡಿ ನಾನಾಪರಿಯಿಂದ ಕಾಡುತ್ತಲಿದೆ. ಏನೀ ಇಂದ್ರಿಯಗಳ ಮಹಿಮೆ! ಮಹಾಮಹಿಮ ಜ್ಞಾನದೇವನ ಮನೆಗೆ ಅಜ್ಞಾನದ ಬೆಂಕಿ ಇಟ್ಟು ಅದರ ಸವಿಯನ್ನು ಸವಿಯುತ್ತಲಿದೆ! ಜ್ಞಾನ ಸುಡುವುದಿಲ್ಲ. ಜ್ಞಾನ ಬಾಧೆಗೆ ಒಳಗಾಗುವುದಿಲ್ಲ!

ಆದರೆ ತನುವನ್ನು ಸುಡದೇ ಬಿಡುವುದಿಲ್ಲ. ತನು ಮತ್ತು ಮನ ಜ್ಞಾನದ ಕಂದಗಳಾದರೂ, ಜ್ಞಾನವನ್ನು ನೋಡಿ ಅದರ ಅನುಭವ ಪಡೆದು ಆ ಜ್ಞಾನವೇ ನಮ್ಮ ತಂದೆಯೆಂದು ತನು ಮತ್ತು ಮನ ತಿಳಿಯದ ವಿನಹ, ತನುವಿಗೆ ಮನದ ಬಾಧೆ ತಪ್ಪುವುದಿಲ್ಲ. ಮನ ಜ್ಞಾನದಲ್ಲಿ ಸಂಗಮವಾಗಿ ಘನಮನವಾಗಿ ಪರಿವರ್ತನೆಯಾಗುವುದಿಲ್ಲ. ಹಾವು ಏಣಿಯ ಆಟ ತನುವಿನಲ್ಲಿ ತನು ಇರುವವರೆಗೆ

ಹಾಗೆಯೇ ನಡೆಯುತ್ತದೆ.

ಜ್ಞಾನದೇವನೆ, ಕಾಯವನ್ನು ಕಾಡುತ್ತಿರುವ ಎನಿತೆನಿತು ಇಂದ್ರಿಯಗಳನ್ನು ಹರಿಹಂಚ ಮಾಡಿ ಕಿತ್ತೆಸೆಯಲಾರೆಯಾ? ಅಥವಾ ಕತ್ತಲ ಕೂಪದಂತಿರುವ ಅಜ್ಞಾನವನ್ನು ನಿನ್ನ ಬೆಳಕಿನೊಳಗೆ ಬೆರೆಸಿಕೊಂಡು ಬೆಳಗಲಾರೆಯಾ? ಕತ್ತಲು ಬೆಳಕು ಕೂಡಿಯೇ ತನುವನ್ನು ತಟ್ಟೆ ಮಾಡಿಕೊಂಡು ಉಣ್ಣುವುದೆಂದರೇನು?

'ಆನೆಯೂ ಸಿಂಹವೂ ಒಂದೆಡೆ ಉಂಬುವಂತೆ' ಎಂದು ಪ್ರಭುದೇವರು ಹೇಳಿದಂತೆ ನಿನ್ನ ಆಟ ಆಗಿದೆಯಲ್ಲ ತಂದೆ. ಆನೆಯ ಸ್ವಪ್ನದಲ್ಲಿ ಸಿಂಹ ಕಂಡರೆ ಸಾಕು ಆನೆ ಬದುಕುವುದಿಲ್ಲ. ಹೀಗಿರುವಾಗ ಸಿಂಹಸ್ವರೂಪವೇ ಆದಂತಹ ಜ್ಞಾನಿಯಾದ ನಿನ್ನ ಪಕ್ಕದಲ್ಲಿ ಮದವೇರಿದ ಮದ್ದಾನೆಯೆಂಬ ಅಜ್ಞಾನ ವಾಸ ಮಾಡುವುದಕ್ಕೆ ಅವಕಾಶ ಮಾಡಿಕೊಟ್ಟಿರುವುದು ನಿನಗೆ ನ್ಯಾಯವೆ ತಂದೆಯೆ?

ಜ್ಞಾನದೇವನೇ, ನಿಮ್ಮೊಂದಿಗೆ ಕೂಡಿ ಅಜ್ಞಾನವನ್ನು ದೂಡುವ ಶಕ್ತಿಕೊಡು ತಂದೆಯೇ. ತನು ನಿಮ್ಮದು, ಮನ ನಿಮ್ಮದು, ತನುಮನಗಳಲ್ಲಿ ಸೃಷ್ಟಿಯಾದ ಧನವೂ (ಜ್ಞಾನ)ನಿಮ್ಮದೇ ಆಗಿದೆ. ಕಪಿಲಸಿದ್ಧ ಮಲ್ಲಯ್ಯನ ಕರುಣೆಯ ಕಂದ ನಾನು ಎಂದು ಎದೆ ತುಂಬಿ ಹಾಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**597**

**ತರುಗಳ ಮುರಿದು ಗಗನಕ್ಕೀಡಾಡುವ**
**ಅನಿಲರೂಪೋ ನಿರೂಪೋ? ಬಲ್ಲಡೆ ನೀವು ಹೇಳಿ ಭೋ!**
**ಗಜ ಸಿಂಹ ಶಾರ್ದೂಲವೆಂಬ ಅಧಿಕ ಮೃಗಂಗಳ**
**ಮುರಿದೊತ್ತಿ ಕೆಡಹುತಿಪ್ಪ**
**ವ್ಯಾಧಿರೂಪೋ ನಿರೂಪೋ? ಬಲ್ಲಡೆ ನೀವು ಹೇಳಿ ಭೋ!**
**ಕಾಣಲೀಯದೆ ಕೇಳಲೀಯದೆ ಅವಧಾನಂಗಳ ಕೆಡಿಸುತ್ತಿರ್ಪ**
**ನಿದ್ರೆ ರೂಪೋ ನಿರೂಪೋ? ಬಲ್ಲಡೆ ನೀವು ಹೇಳಿ ಭೋ!**
**ಇಂತು ಅಳಿನಾಳಿನ ಅಂತಸ್ಥವನಾರಿಗೂ ಅರಿಯಬಾರದು.**
**ಅನಾದಿಮೂಲದೊಡೆಯನ ಬಲ್ಲೆನೆಂಬ ಪರಿ ಎಂತೋ?**
**ರೂಪೆಂದಡೆ ಶಬ್ದ, ನಿರೂಪೆಂದಡೆ ಶೂನ್ಯ ;**
**ಈ ಎರಡರ ಆದಿಯಿಂದತ್ತತ್ತ ಕಾಣಾ.**
**ಎನ್ನ ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗವು**
**ಗುರುಕಾರುಣ್ಯವುಳ್ಳವರಿಗಲ್ಲದೆ ಅರಿಯಬಾರದು.**

ರೂಪಕ್ಕೆ ಕಾರಣವಾದ ನಿರೂಪವನ್ನು ಅರಿಯುವ ಶಕ್ತಿ ತನುವಿಗೊಂದೇ ಇದೆ. ಬ್ರಹ್ಮಾಂಡದ ಸೃಷ್ಟಿಗೆ ಕಾರಣವಾದದ್ದು ನಿರೂಪ ಶಕ್ತಿಯೇ ಆಗಿದೆ. ತಾನು ಸೃಷ್ಟಿ ಮಾಡಿದ ಇಡೀ ಬ್ರಹ್ಮಾಂಡವನ್ನು ಪರಮಸಂತೋಷದಿಂದ ಅನುಭವಿಸಲು ನಿರೂಪು ತನುವೆಂಬ ರೂಪವಾಗಿ ಅವತರಿಸಿದೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ಸಕಲ ಓದುಗರಿಗೂ ನಿರೂಪಶಕ್ತಿಯನ್ನು ತೋರಿಸುವ ಹಂಬಲ ಹೊಂದಿದ್ದಾರೆ. ಹೀಗಾಗಿ ಇಡೀ ವಚನದಲ್ಲಿ ನಿರೂಪಸ್ವರೂಪಿಯಾದ ಕಪಿಲಸಿದ್ಧ ಮಲ್ಲಿಕಾರ್ಜುನನ್ನು ಅರಿಯುವ ಸೂತ್ರರೂಪದ ವಚನವನ್ನು ಸರಳವಾಗಿ ವಿವರಿಸಿದ್ದಾರೆ.

ಗಾಳಿ ನಿರೂಪು; ಆದರೆ ಗಿಡಮರಗಳನ್ನು ಬೇರು ಸಮೇತ ಕಿತ್ತಿ ಗಗನಕ್ಕೆಸೆಯುವ ಶಕ್ತಿ ಅನಿಲಕ್ಕೆ ಇದೆ. ಹಾಗಾದರೆ ಅನಿಲ ರೂಪೋ, ನಿರೂಪೋ ಬಲ್ಲಡೆ ನೀವು ಹೇಳಿಭೋ ಎಂದು ಓದುಗರನ್ನು

ಪ್ರಶ್ನಿಸಿದ್ದಾರೆ. ಸದೃಢ ತನುಗಳಿಗೆ ಅಗಾಧವಾದ ಶಕ್ತಿ ಇರಬಹುದು ಆದರೆ ಆ ಶಕ್ತಿ ತನುವಿಗೆ ಬಂದದ್ದು ನಿರೂಪದಿಂದಲೇ ಎಂಬುದನ್ನು ಮರೆಯಬಾರದು.

ಆನೆ ಸಿಂಹ ಶಾರ್ದೂಲಗಳೆಂಬ ಬೃಹತ್ ಮೃಗಗಳನ್ನು ಮುರಿದೊತ್ತಿ ಕೆಡಹುತಿಪ್ಪ ವ್ಯಾಧಿ ರೂಪೋ ನಿರೂಪೋ ಬಲ್ಲಡೆ ನೀವು ಹೇಳಿಭೋ!

ಕಾಣಲೀಯದೇ ಕೇಳಲೀಯದೆ ಅವಧಾನಗಳ ಕೆಡಿಸುತ್ತಿರುವ ನಿದ್ರೆ ರೂಪೋ ನಿರೂಪೋ ಬಲ್ಲಡೆ ನೀವು ಹೇಳಿಭೋ!

ರೂಪುಳ್ಳ ತನುಗಳು ಈ ಜಗದ ತುಂಬಾ ಇದ್ದರೂ ಕೂಡಾ ರೂಪದಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ಅರಿಯುವ ತನು ಬೆರಳೆಣಿಕೆಯಲ್ಲಿ ಮಾತ್ರ ಗುರುತಿಸಬಹುದಾಗಿದೆ.

''ಬಯಲ ರೂಪಮಾಡಬಲ್ಲಾತನೆ ಶರಣನು, ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ. ಬಯಲರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ? ಆ ರೂಪ ಬಯಲು ಮಾಡಲರಿಯದಿದ್ದಡೆ ಎಂತು ಲಿಂಗಾನುಭಾವಿಯೆಂಬೆ? ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರಹುಂಟೆ ಕೂಡಲ ಸಂಗಮದೇವಾ?'' ಎಂಬ ಸೂತ್ರ ರೂಪದ ವಚನವನ್ನು ಬಸವಣ್ಣನವರು ರಚಿಸಿದ್ದಾರೆ.

ಆಳಿನಾಳಿನಾ ಅಂತಸ್ಥವನು ಯಾರಿಗೂ ಅರಿಯಬಾರದು. ಅನಾದಿ ಮೂಲದ ಒಡೆಯನನು ಬಲ್ಲೆನು ಎಂಬ ಪರಿಯೆಂತೊ? ರೂಪು ಎಂದರೆ ಶಬ್ದ; ನಿರೂಪು ಎಂದರೆ ಶೂನ್ಯ ; ಈ ಎರಡರ ಆದಿಯಿಂದತ್ತತ್ತ ಕಾಣಾ. ಎನ್ನ ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವು. ಗುರುಕಾರುಣ್ಯ ಉಳ್ಳವರಿಗಲ್ಲದೆ ಅರಿಯಬಾರದು.

ಬಯಲು, ತಾನು ಸೃಷ್ಟಿಮಾಡಿದ ಬ್ರಹ್ಮಾಂಡವನ್ನು ನೋಡಲು ರೂಪವಾಗಿದೆ. ಆ ರೂಪವೇ ತನ್ನ ಲೀಲೆಯನ್ನು ಮೆರೆಯಲು ಅಂಗದಲ್ಲಿ ಲಿಂಗವಾಗಿ ಸಂಗಮವಾಗಿದೆ. ಇಡೀ ತನುವನ್ನು ಲಿಂಗಾನುಭಾವಿಯನ್ನಾಗಿ ಮಾಡಿದೆ. ಲಿಂಗಾನುಭಾವಿಯಾದಾತ ಸಾಮಾನ್ಯನಲ್ಲ; ಶರಣನು ಆತ. ಬಯಲನ್ನು ರೂಪವನ್ನಾಗಿಸಿ ನೋಡುತ್ತಾನೆ; ಆ ರೂಪವನ್ನೇ ಬಯಲನ್ನಾಗಿಸಿ ಆ ಬಯಲಿನೊಂದಿಗೆ ಬಯಲ ಮಾತನಾಡುತ್ತಾನೆ.

ಶರಣನಿಗೆ ರೂಪು ಎಂದರೆ ಶಬ್ದ; ನಿರೂಪು ಎಂದರೆ ಶೂನ್ಯ ; ಈ ಎರಡರ ಆದಿಯಿಂದತ್ತತ್ತ ಕಾಣಾ ಎನ್ನ ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗವು. ಗುರುಕಾರುಣ್ಯ ಉಳ್ಳವರಿಗೆ ಮಾತ್ರ ಈ ಸೂತ್ರವನ್ನು ಅರಿತರಿತು ಲಿಂಗಾನುಭಾವಿಯಾಗಲು ಸಾಧ್ಯ.

**598**

**ತರುಣ ಬೆಟ್ಟದ ನಡುವೆ ತಪಸಿ ಕುಳ್ಳಿದ್ದಹನೆ,**
**ತರಗೆಲೆಗಳೂ ತನಗೆ ಆಧಾರವು.**
**ಆದಿ ಆಧಾರ ಆಧೇಯ ಮುನ್ನಿಲ್ಲ,**
**ಮೂದೇವರಿಗೆ ದೀಕ್ಷಾಗುರು ತಾನೆಯಾಗಿ,**
**ನಾನಾ ವಿಧದ ಗುಣದ ಸ್ವಾನುಭಾವದ ಮನೆಯ**
**ಭಾನುವಿನ ಉದಯದಲಿ ವಿಕಸವಾಗಿ,**
**ನಾನಾ ಗುಣರೂಪ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಕೂಡಿದಾ ಸುಖತರದ ಅರೂಪುವಾಗಿ.**

ಬಾಲ್ಯದಲ್ಲಿ ಏನೂ ತಿಳಿಯುವುದಿಲ್ಲ. ಪ್ರೌಢತ್ವದಲ್ಲಿಯೂ ಅದರ ಸುಖ ತನು ಅನುಭವಿಸುತ್ತದೆ. ತಾರುಣ್ಯ ಎನ್ನವುದು ಕೂಡಾ ತನುವಿಗೆ ಒಂದು ಅಜ್ಞಾನದ ಬೆಟ್ಟವೇ ಸರಿ. ಗೃಹಸ್ತ ಮುಪ್ಪು ತನುವನ್ನು ನುಂಗಿ ಹಾಕುತ್ತವೆ.

ತನುವಿನ ಈ ಅವಸ್ಥೆಯ ಎಲ್ಲದರ ಮಧ್ಯೆಯೇ ತಪಸ್ವಿಯೊಬ್ಬನು ಕುಳಿತುಕೊಂಡಿದ್ದಾನೆ. ಈ ಎಲ್ಲಾ ಅವಸ್ಥೆಯ ತರಗೆಲೆಗಳೇ ಆತನಿಗೆ ಆಧಾರವು.

ಆ ತಪಸ್ವಿಗೆ ಆದಿಯೂ ಇಲ್ಲ ಆಧಾರವೂ ಇಲ್ಲ. ಆದಿ ಅನಾದಿಯಿಂದಲೂ ಅತ್ತತ್ತಲಿರುವ ಆತ ಮುಕ್ಕೋಟಿ ದೇವರಿಗೆ ದೀಕ್ಷಾಗುರುವೂ ಆಗಿದ್ದಾನೆ.

ತನು ಯಾವ ದೇಶದ್ದಾದರೇನು? ಯಾವ ಭಾಷೆಯಾದ್ದಾದರೇನು? ಹೆಣ್ಣಾದರೇನು ಗಂಡಾದರೇನು? ಕಪ್ಪು ಬಿಳಿ ಕೆಂಪು ಬಣ್ಣದ ರೂಪು ಉಳ್ಳದ್ದಾದರೇನು? ತನು ಒಂದೇ ಆಗಿದೆ. ಅದು ನಾನಾ ವಿವಿಧ ಗುಣದ ಸ್ವಭಾವವನ್ನು ಹೊಂದಿದೆ. ತನುವಿನ ಭಾವ ಅರಳುವುದೂ ತಡವಿಲ್ಲ; ಕೆರಳುವುದೂ ತಡವಿಲ್ಲ. ಅರಳಿದಾಗ ತನುವಿನಿಂದ ಕರುಣೆ ಉಕ್ಕಿ ಹರಿಯುತ್ತದೆ. ಕೆರಳಿದಾಗ ಅದು ರಕ್ಕಸನೆಂದು ಕರೆಯಿಸಿಕೊಳ್ಳುತ್ತದೆ.

ತನುವಿನ ಈ ಎಲ್ಲ ಭಾವನೆಗಳ ಮಧ್ಯೆ ಕುಳಿತ ಅರಿವಿನ ತಪಸ್ವಿ ಮಾತ್ರ ನಿರ್ಭಾವಿ. ಜಗದ ಏಳುನೂರಾ ಮೂವತ್ತು ಕೋಟಿ ತನುಗಳಿಗೆ ದೀಕ್ಷಾಗುರುವೂ ಆಗಿದ್ದಾನೆ. ತನುವನ್ನು ಆವರಿಸಿದ ಮನ ಮತ್ತು ತನುವಿಗೆ ಈ ತಪಸ್ವಿಯ ಪರಿಚಯವಾದರೆ ಸಾಕು, ತನುವಿನಲ್ಲಿ ಉಂಟಾಗುವ ಭಾವ ದುರ್ಭಾವಗಳನ್ನು ತರಗೆಲೆಯಂತೆ ಹೊರಚೆಲ್ಲಿ ಇಡೀ ತನುವನ್ನು ನಿರ್ಭಾವಿಯನ್ನಾಗಿ ಮಾಡುತ್ತಾನೆ.

ಭಾನುವಿನ ಉದಯದಿಂದ ವಿಕಾಸವಾದ ಬೆಳಕು ಭೂಮಿಯನ್ನು ಆವರಿಸಿದ ಕತ್ತಲನ್ನು ನುಂಗಿ ಇಡೀ ಭೂಮಂಡಲವನ್ನೇ ಬೆಳಗಿದಂತೆ; ನಾನಾವಿಧದ ಗುಣದ ಸ್ವಾನುಭಾವದ ಮನೆಯ ತನುವಿನ ಅಜ್ಞಾನದ ಕತ್ತಲನ್ನು ನುಂಗುತ್ತಾನೆ. ಬೆಳಗಿಂಗೆ ಬೆಳಗಾಗಿ ಬೆಳಗುತ್ತಾನೆ.

ನಾನಾ ವಿಧದ ಗುಣರೂಪುಗಳು ತರಗೆಲೆಯಂತೆ ತೊಲಗಿ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕೂಡಿದ ಪರಮ ಸುಖದ ನಿರೂಪವಾಗುತ್ತದೆ. ರೂಪದಲ್ಲಿಯೇ ಇದ್ದ ನಿರೂಪದ ಬೋಧೆಯೇ ಹಾಗೆ.

ನಿರೂಪವನ್ನು ರೂಪ ಮರೆತದ್ದರಿಂದ ರೂಪವೆಂಬ ತನು ನಾನಾವಿಧದ ಗುಣಗಳ ಸುಳ್ಳು ಸುಖದುಃಖಗಳನ್ನು ಅನುಭವಿಸುತ್ತಾ ತನ್ನನ್ನು ತಾನೇ ಮರೆತಿತ್ತು. ತನುವಿನ ಸುಖ ದುಃಖಗಳ ಮಧ್ಯೆಯೇ ಕುಳಿತ ತಪಸ್ವಿಯ ಪರಿಚಯವಾಗಿ ತನು ತನ್ನನ್ನು ತಾನೇ ಎಚ್ಚರಿಸಿಕೊಂಡು ನಿರೂಪವೇ ತಾನಾಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿ ಬೆಳಗಿಂಗೆ ಬೆಳಗಾಗಿ ಬೆಳಗಿತು.

**599**

**ತಲೆಯನುರಸ್ಥಲಕ್ಕೆ ಬಚ್ಚಿಡುವಳೀ ಶಿಶು ಕಣ್ಣಲುಂಬಳು.**
**ಮಗಳ ಕಣ್ಣಲ್ಲಿ ದಹಿಸುವಳು**
**ಇವಳು ಬಾಯಲಾದರೆ ಹಿಡಿದುಂಡಹಳೆಂದು**
**ನಾಸಿಕದಲುಂಬಂತೆ ಮಾಡಿದ,**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ತಲೆಯನ್ನು ಹೃದಯದಲ್ಲಿ ಬಚ್ಚಿಟ್ಟುಕೊಂಡ ಶಿಶು, ಕಣ್ಣಲ್ಲಿಯೇ ಉಣ್ಣುವಳು. ಮಗಳ ಕಂಗಳ ಮೂಲಕ ದಹಿಸುವಳು. ಇವಳು ಬಾಯಿ ಮೂಲಕ ಹಿಡಿದುಂಡು, ತನ್ನ ಸಕಲ

ಅಪರಾಧಗಳನ್ನು ಮರೆಮಾಚುವಳೆಂದು ತಿಳಿದು ಮೂಗಿನ ಮೂಲಕ ಉಣ್ಣುವಂತೆ ಮಾಡಿದ ಕಪಿಲಸಿದ್ಧ ಮಲ್ಲಿನಾಥಯ್ಯ. ಇಷ್ಟು ವಚನದ ಸಾರ.

ತಲೆಯ ಭಾಗದಲ್ಲಿ ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇದೆ. ಹಾಗೆ ಬಾಯಿಯೂ ಇದೆ.

ಕಣ್ಣು ನೋಡುತ್ತದೆ ಅದಕ್ಕೆ ನುಡಿಯಲು ಬರುವುದಿಲ್ಲ. ನೋಡುವ ಕಣ್ಣ ಮೂಲಕ ಉಂಡು ಬಾಯಿ ಮೂಲಕ ನೋಡಿದೆನೆಂದು ಬೊಗಳುತ್ತದೆ; ಆ ನುಡಿಯಿಂದ ಅಗ್ನಿ ಜ್ವಾಲೆಯನ್ನು ಸೃಷ್ಟಿ ಮಾಡಿ, ನುಡಿಯುವ ಇಡೀ ದೇಹವನ್ನು , ಕೇಳುವ ದೇಹವನ್ನು ಸುಡುತ್ತದೆ. ಬಾಯಿಗೆ ನೋಡಲು ಬರುವುದಿಲ್ಲ; ಆದರೂ ಅದು ನಾನು ನೋಡಿದೆನೆಂದು ಹೇಳಿದರೆ, ಕೇಳಿದ ಕಿವಿ ನಂಬುತ್ತದೆ. ನೋಡಿ ಮಾತನಾಡಲು ಬಾರದ ಕಣ್ಣು ಕೂಡಾ ಸುಮ್ಮನಾಗುತ್ತದೆ. ಚರ್ಮ ಮೂಗು ನಾಲಿಗೆ ಸಾಕ್ಷಿಯಾಗಿ ಕಿಟ್ಟೆನ್ನದೆ ಸುಮ್ಮನಾಗುತ್ತದೆ. ನಿನಗೆ ನೋಡಲು ಬರುವುದಿಲ್ಲ; ಆದರೂ ನಾನು ನೋಡಿದೆನೆಂದು ಸುಳ್ಳು ಬೊಗಳುವಿಯಲ್ಲ ಎಂದು ಕಣ್ಣು ಕಿವಿ ಮೂಗು ಚರ್ಮ ನಾಲಿಗೆ ಮರುಮಾತನಾಡದೆ ಬಾಯಿಯ ಮಾರ್ಯಾದೆಯನ್ನು ಹೃದಯದಲ್ಲಿ ಬಚ್ಚಿಟ್ಟುಕೊಳ್ಳುತ್ತವೆ.

ಬಾಯಿಯಲ್ಲ ಅದು ಬಜಾರಿ. ಕಣ್ಣಿನಿಂದ ನೋಡಿದ್ದನ್ನು, ಬಾಯಿಯಿಂದ ನೋಡಿದೆನೆಂದು, ಕಿವಿಯಿಂದ ಕೇಳಿದ ಶಬ್ದವನ್ನು, ಬಾಯಿಯ ಮೂಲಕ ನಾನು ಕೇಳಿದೆನೆಂದು, ನಾಲಿಗೆಯಿಂದ ರುಚಿಸಿದ್ದನ್ನು ಬಾಯಿಯ ಮೂಲಕ ನಾನು ರುಚಿಸಿದೆನೆಂದು, ಚರ್ಮದ ಮೂಲಕ ಸ್ಪರ್ಶಿಸಿದ್ದನ್ನು ಬಾಯಿಯ ಮೂಲಕ ನಾನು ಮುಟ್ಟಿದೆನೆಂದು, ಮೂಗಿನ ಮೂಲಕ ಮೂಸಿಸಿದ್ದನ್ನು ಬಾಯಿಯ ಮೂಲಕ ನಾನು ಮೂಸಿಸಿದೆನೆಂದು ಸುಳ್ಳು ಹೇಳುತ್ತದೆ. ಈ ಸುಳ್ಳು ಗೊತ್ತಾಗಬಾರದೆಂದು ತನು ತನ್ನ ಹೃದಯದಲ್ಲಿ ಬಚ್ಚಿಟ್ಟುಕೊಂಡು ಪೋಷಣೆ ಮಾಡುತ್ತಲಿದೆ.

ತನುವನ್ನು ಆವರಿಸಿದ ಮನವೆಂಬ ಅಜ್ಞಾನದ ಶಿಶು ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಹರಿದಾಡಿ ಬಾಯಿ ಮೂಲಕ ತನಗೆ ಹಿತವಾದಂತೆ ಮಾತನಾಡುವುದು.

ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವ ಬಲು ಜಾಣ! ತನುವನ್ನು ಜಾಗ್ರತ ಮಾಡಿ ಬಾಯಿಗೆ ಬೀಗ ಹಾಕಲು ಹೇಳಿದ. ನೋಡಿದ ಕಣ್ಣು ಬೇಕಾದರೆ ನುಡಿಯಲಿ, ನೋಡಲು ಬಾರದ ಬಾಯಿ ನೋಡಿದೆನೆಂದು ಸುಳ್ಳು ನುಡಿಯುವುದು ಇಡೀ ತನು ಕುಲಕ್ಕೆ ಅಪಮಾನವಲ್ಲವೆ?

ಕೇಳಲು ಬಾರದ ಬಾಯಿ ನಾನು ಕೇಳಿದೆನೆಂದು ಕಿವಿಯ ಉಸಾಬರಿಯನ್ನು ಹೊರುವುದು ತಪ್ಪಲ್ಲವೆ? ಸ್ಪರ್ಶಿಸಲು ಬಾರದ ಚರ್ಮದ ಯಜಮಾನಿಕೆಯನ್ನು ಬಾಯಿ ಹೊತ್ತುಕೊಂಡಿರುವುದು ತಪ್ಪಲ್ಲವೆ? ರುಚಿಸಿದ್ದು ನಾಲಿಗೆ, ಮೂಸಿಸಿದ್ದು ಮೂಗು ಇವೆರಡನ್ನೂ ನಾನೇ ಮಾಡಿದೆನೆಂದು ಹೇಳುವ ಬಾಯಿಯ ಮಾತುಗಳು ಸುಳ್ಳಲ್ಲವೆ?

''ಹುಸಿಯ ನುಡಿಯಲು ಬೇಡ'' ಎಂದು ಬಸವಣ್ಣನವರು ಬಾಯಿಗೆ ಕಿವಿ ಮಾತು ಹೇಳಿದ ಸೂತ್ರ ಎಷ್ಟೊಂದು ಸಮಂಜಸವಾಗಿದೆಯಲ್ಲ! ಎಲೆ ಬಾಯಿಯೇ, ಹುಸಿಯ ನುಡಿದು, ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನನ್ನು ಕೊಲ್ಲಬೇಡ. ಆತ ಕಾಯದಲ್ಲಿಯೇ ಸಂಗಮವಾದ ಸಂಗಮನಾಥ. ಆತನ ನಾಮಸ್ಮರಣೆ ಮಾಡುತ್ತಾ ಆತನಿಗೇ ಶರಣು ಹೋಗು, ನಿನ್ನ ಅಂತರಂಗ ನಿನ್ನ ಬಹಿರಂಗಗಳೆರಡೂ ಶುದ್ಧವಾಗುವವು ಎಂದು ಹೇಳುವ ಶರಣರ ಸೂತ್ರದ ಒಳಗುಟ್ಟನ್ನು ಅರಿತ ಕಾಯವೇ ಕೈಲಾಸ.

ಮನವೆಂಬ ಅಜ್ಞಾನದ ಶಿಶು ಬಾಯಲ್ಲಾದರೆ ಹಿಡಿದುಣ್ಣುವಳು. ಎಂದು ಬಾಯಿಗಿ ಮಹಾಜ್ಞಾನದ ಮಂತ್ರದ ಬೀಗವನ್ನು ಜಡಿದು, ಮೂಗಿನಿಂದ ಉಂಬುವಂತೆ ಮಾಡಿದ ಕಪಿಲಸಿದ್ಧ ಮಲ್ಲಿನಾಥಯ್ಯ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ ಸೂತ್ರ ಕೂಡಾ ಬಲು

ಅಪರೂಪವಾಗಿದೆ. ಸವಿಸವಿಯಾದ ಸುಲಿದ ಬಾಳೆಹಣ್ಣಿನಂತೆ ಸಿಹಿ ಸಿಹಿಯಾಗಿದೆ.

**600**

**ತವಕಿಸುವಂತೆ ತಾಮಸಿಯೆ? ಕೂಡುವಡೆ ಭೇದಿಯೆ?**
**ಸಂದು ಸವೆದು ಒಂದಾದ ಬಳಿಕ ಕೂಡುವೆನೇನ?**
**ತವಕಿಸುವೆನೇನ?**
**ಉರುತರವಪ್ಪ ಲಿಂಗವ ಕರಸ್ಥಲದಲ್ಲಿ ಬಿಜಯಂಗೈಸಿಕೊಂಡು**
**ತವಕಿಸಿ ಕೂಡಿಹೆನೆಂಬ ಜಡಮತಿಗಳ ಎನ್ನತ್ತ ತೋರದಿರಯ್ಯ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯಕ್ಕೆ ಕಾಯದೊಂದಿಗೆ ಗೆಳೆತನ ಮಾಡುವ ಕಾತುರ. ಕಾಯಕ್ಕೆ ಕಾಯದೊಂದಿಗೆ ಕೂಡಿ ಕಾಮ ಕೇಳಿಯಾಡುವ ಕಾತುರ. ಕಾಯಕ್ಕೆ ಕಾಯದೊಂದಿಗೆ ಹಗೆತನ ಮಾಡುವ, ದ್ವೇಷಿಸುವ ಕಾತುರ. ಒಂದೇ ಎರಡೇ ಹಲವಾರು. ಅಜ್ಞಾನದ ತಾಮಸ ಗುಣಗಳು ಕಾಯದಲ್ಲಿ ಸುಳಿದು ಸುಖಿಸಿ ದುಃಖಿಸಿ ಮತ್ತೆ ಮತ್ತೆ ಕಾಯದಲ್ಲಿ ಹುಟ್ಟಿ, ಕಾಯವನ್ನು ಅವಸಾನದತ್ತ ಒಯ್ಯುತ್ತವೆ; ಕಾಯದಲ್ಲಿಯೇ ಹುಟ್ಟಿದ ಕಾಯದ ಗುಣಗಳು.

ಕಾಯದಲ್ಲಿಯೇ ಸಂಗಮವಾದ ಕಾಯದ ಅರಿವಿನ ಒಡೆಯನನ್ನು ಕೂಡುವ ಆಸೆ ಕಾಯಕ್ಕೆ ಇಲ್ಲ; ಕಾಯವನ್ನು ಆವರಿಸಿದ ಮನಕ್ಕೂ ಇಲ್ಲ. ಎಲೆ ಮನವೇ, ನಿನ್ನಂತೆ ತವಕಿಸಿ ಕೂಡಲು ಅರಿವೆಂಬ ಗುರುದೇವನೇನು ತಾಮಸಿಯೆ? ಏನು ನಿನ್ನಂತೆ ಆಸೆಯಿಂದ ಜೊಲ್ಲು ಸುರಿಸಿ ಕೂಡಲು ಭೇದ ಗುಣ ಉಳ್ಳವನೆ?

ಕಾಯದಲ್ಲಿಯೇ ಸಂಗಮವಾದ ಕಾಯದ ಅರಿವಿನ ಒಡೆಯ ತಾಮಸಿಯೂ ಅಲ್ಲ; ಭೇದ ಗುಣ ಉಳ್ಳವನೂ ಅಲ್ಲ. ಅವನು ತ್ರಿಗುಣಾತೀತನು; ನಿರ್ಗುಣನು. ಕಾಯದಲ್ಲಿ ಸಾತ್ವಿಕ ಗುಣಗಳೂ ಇವೆ, ತಾಮಸ ಗುಣಗಳೂ ಇವೆ, ರಾಜಸ ಗುಣಗಳು ಕೂಡಾ ಇವೆ.

ಕಾಯದ ಕೊರಳ ಮೂಲಕ ಎದೆಯ ಮೇಲೆ ಜೋತಾಡುವ ಲಿಂಗ ಧರಿಸಿದರೆ ಕಾಯ ಮೂರು ಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾಗಲು ಸಾಧ್ಯವಿಲ್ಲ. ಮೂರು ವೇಳೆ ಲಿಂಗಯ್ಯನನ್ನು ಆರಾಧಿಸಿ ಅಂಗದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನನ್ನು ಕೂಡುವೆನೆಂಬ ಜಡಮತಿಗಳನ್ನು ಎನ್ನತ್ತ ತೋರದಿರಯ್ಯ ಎಂದು ಸಿದ್ಧರಾಮ ಶಿವಯೋಗಿಗಳು ಅರಿವಿನ ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

ಅಂಗದ ಮೇಲೆ ಲಿಂಗ ಧರಿಸಿ ಆರಾಧಿಸಿದರೆ, ಕಾಯದಲ್ಲಿ ಉಂಟಾಗುವ ಸಾತ್ವಿಕದ ಡೋಂಗೀ ಗುಣಗಳು ತೊಲಗುವುದಿಲ್ಲ. ನಾನು ನಿಜವಾಗಿಯೂ ಸಾತ್ವಿಕನೇ ಹೇಗೆ ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಳ್ಳುವುದಿಲ್ಲ. ತನುವಿನಲ್ಲಿ ಉಂಟಾದ ಸಾತ್ವಿಕ ಸುಳ್ಳು ಗುಣದೊಂದಿಗೆ ತನುವಿನಲ್ಲಿಯೇ ಸಂಗಮವಾದ ಅರಿವಿನೊಂದಿಗೆ ಆಲೋಚಿಸಲು ಕೂಡಾ ಸಾಧ್ಯವಾಗುವುದಿಲ್ಲ, ಆ ಅರಿವಿನಿಂದಲೇ ಹೋರಾಟ ಮಾಡುವ ಕಲೆ ತನ್ನಿಂದ ತಾನೇ ಅರಿತಾಗಲೇ ಸಾತ್ವಿಕ ರಾಜಸ ತಾಮಸವೆಂಬ ಅಜ್ಞಾನದ ಗುಣಗಳು ತೊಲಗುತ್ತವೆ. ಕಾಯ ತನಗೆ ತಾನೇ ನಿರ್ಗುಣಿಯಾಗುತ್ತದೆ. ಅರಿವಿನ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**601**

**ತಾಗಿತ ತಪ್ಪಿಸಬಹುದೆ? ಬಂದುದನತಿಗಳೆಯಬಾರದು.**
**ಅಂದಂದಿಂಗೆ ಅಂದಂದಿಂಗೆ ಬಂದುದನುಂಬ ಕಾಲಕ್ಕೆ**
**ಒಲ್ಲೆನೆಂದರೆ ಮಾಬುದೆ?**
**ಒಡಲಿಗೊಂದು ವಿಧಿಯಾಗಿ ವಿಧಿಗೊಂದು ಒಡಲಾದ ಬಳಿಕ**
**ನಿಜಗುರುವೆ ಸ್ವತಂತ್ರ ಕಪಿಲಸಿದ್ಧ ಮಲ್ಲಿನಾಥಾ**
**ನಿನ್ನ ಕರಸ್ಥಲಕೆ ಒಡೇಕೆ!**

ತನುವಿಗೆ ಮರಣ ತಪ್ಪುವುದಿಲ್ಲ. ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಗೆ ಮರಣವಿಲ್ಲ. ಅರಿವೆಂಬ ಗುರುದೇವನಿಗೆ ಶರಣು ಹೋಗುವ ಮನಕ್ಕೂ ಮರಣವಿಲ್ಲ.

ಮನ ಅರಿವಿಗೆ ಶರಣು ಹೋಗದಿದ್ದರೆ ಅದು ತನುವಿನ ಗೆಳೆತನ ಮಾಡಿ, ತನುವನ್ನು ತನಗೆ ಇಷ್ಟವಾದ ರುಚಿಯತ್ತ ಕರೆದುಕೊಂಡು ಹೋಗಿ, ನಾನಾ ರೀತಿಯ ಗಾಯಗಳನ್ನು ಮಾಡುತ್ತದೆ. ಮನದ ಈ ಎಲ್ಲಾ ವೃತ್ತಾಂತವನ್ನು ಅರಿತ ಸಿದ್ಧರಾಮ ಶಿವಯೋಗಿಗಳು, ತನುವಿಗೆ ಬಂದ ತೊಂದರೆಗಳನ್ನು ತಪ್ಪಿಸಲು ಸಾಧ್ಯವಿಲ್ಲ. ಅಂದಂದಿಂಗೆ ಅಂದಂದಿಂಗೆ ಬಂದುದನುಂಬ ಕಾಲಕ್ಕೆ ಒಲ್ಲೆನೆಂದರೆ ಮಾಬುದೆ? ಎಂದಿದ್ದಾರೆ.

''ನಾಳೆ ಬಪ್ಪುದು ನಮಗಿಂದೆ ಬರಲಿ, ಇಂದು ಬಪ್ಪುದು ನಮಗೀಗಲೆ ಬರಲಿ, ಇದಕಾರಂಜುವರು, ಇದಕಾರಳುಕುವರು? 'ಜಾತಸ್ಯ ಮರಣಂ ಧ್ರುವಂ' ಎಂದುದಾಗಿ ನಮ್ಮ ಕೂಡಲ ಸಂಗಮದೇವರು ಬರೆದ ಬರೆಹವ ತಪ್ಪಿಸುವಡೆ ಹರಿಬ್ರಹ್ಮಾದಿಗಳಿಗಳವಲ್ಲ''. ಎನ್ನುವ ಬಸವಣ್ಣನವರ ಸೂತ್ರ, ಸಿದ್ಧರಾಮ ಶಿವಯೋಗಿಗಳ ಸೂತ್ರ, ಒಂದೇ ಆಗಿದೆ.

ಮನ ಒಡಲೊಡೆಯನಿಗೆ ಸಖಿಯಾಗದಿದ್ದರೆ, ಒಡಲನ್ನು ವಿಧಿಯಾಗಿ ಕಾಡುವುದು. ಮನವೆಂಬ ವಿಧಿಗೆ ಒಡಲು ಸಿಕ್ಕ ಮೇಲೆ, ಅದು ಅರಿವಿನ ಸಖನ ಸಮೀಪ ಸುಳಿಯುವುದೇ ಇಲ್ಲ. ಹೀಗಾಗಿ ಅರಿವಿನ ಮಲ್ಲಯ್ಯ ಇಂದು ಇದ್ದು ನಾಳೆ ಒಡೆದು ಹೋಗುವ ತನುವೆಂಬ ಮಣ್ಣಿನ ಮಡಿಕೆಯ ಮೇಲೆ, ಆತ ಆಸೆ ಮಾಡುವುದಿಲ್ಲ ಎಂದು ಖಚಿತವಾಗಿ ಹೇಳಿದ್ದಾರೆ.

**602**

**ತಾತನಿಂದ ತೌರುಮನೆಯೂಟ ಸವಿಯಾಯಿತ್ತೆಂದನಯ್ಯಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ ,**
**ನಿಮ್ಮ ತಂದೆ ಚೆನ್ನಬಸವಣ್ಣನೆಂಬ ಮಾವ ತೌರಿಗನಾದನು.**

ತೌರುಮನೆಯೆಂದರೆ ತಾನು ಹುಟ್ಟಿದ ಮನೆ; ಇದು ಲೋಕದ ದೃಷ್ಟಿ. ಶರಣರ ದೃಷ್ಟಿಕೋನವೇ ಬೇರೆ. ಅವರ ದೃಷ್ಟಿಯಲ್ಲಿ ತೌರುಮನೆಯೆಂದರೆ ತನುವಿನಲ್ಲಿಯೇ ತನ್ಮಯವಾದ ಅರಿವಿನ ಮನೆ. ಆ ಅರಿವಿನ ಬಿಂದುವೇ ಗರ್ಭಹೊಕ್ಕು, ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ, ಇದು ಚೆಲ್ಲದಂತೆ ಸುಂದರವಾದ ಚರ್ಮವನ್ನು ಹೊಲಿದುಕೊಂಡು, ತನುವಾಗಿ ತನುವಿನ ಗರ್ಭದಿಂಡ ಹೊರಬಂದಿದೆ. ಈ ತನುವಿನಲ್ಲಿಯೇ ಅರಿವಿನ ತನುವೊಂದಿದೆ. ಇದು ತನುವಿನ ತೌರೂ ಹೌದು.

ಇದು ತಾತನಿಂದ ತೌರುಮನೆಯೂಟ ಸವಿಯಾಗಿರಬಹುದು. ಆದರೆ ತನುವಿನಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನ ಅನುಭವದ ಊಟ ಇನ್ನೂ ಸವಿಸವಿಯಾಗಿರುತ್ತದೆ. ಇದನ್ನು ಶರಣರು ಉಣ್ಣದ ಊಟವೆಂದು ಕರೆದಿದ್ದಾರೆ. ಉಣ್ಣುವ ಊಟ ಉಣ್ಣುವಾಗಲೇ ರುಚಿ. ಒಂದೆರಡು ತುತ್ತಿನವರೆಗೆ ರುಚಿ ನಾಲಿಗೆಯ ಮೇಲಿದ್ದು ನಂತರ ರುಚಿ ಕಳೆದು ಹೋಗುತ್ತದೆ. ಈ ರುಚಿಯನ್ನು ಅರ್ಥಶಾಸ್ತ್ರಜ್ಞರು ತುಷ್ಟಿಗುಣ ಎಂದು ಕರೆದಿದ್ದಾರೆ. ಈ ರುಚಿ ಒಮ್ಮೆ ಇದ್ದು ಮತ್ತೊಮ್ಮೆ ಇಲ್ಲವಾಗುತ್ತದೆ. ಶರಣರು ಹೇಳಿದ ಊಟ ಹಾಗಲ್ಲ. ಅದರ ರುಚಿ ಅರಿವಿನ ಪರಿಮಳ. ಅದು ಸದಾ ಇರುತ್ತದೆ.

ನೋಡುವಾಗಲೂ ಸವಿ. ಮುಟ್ಟುವಾಗಲೂ ಸವಿ. ರುಚಿಸುವಾಗಲೂ ಸವಿ. ಕೇಳುವಾಗಲೂ ಸವಿ. ಮೂಸಿಸುವಾಗಲೂ ಸವಿ ಅರಿವಿನ ಪರಿಮಳ ಸವಿಸವಿಯಾಗಿರುತ್ತದೆ.

ದೃಶ್ಯದ ಸವಿ ಅನುಭವಿಸುವ ಶರಣನಿಗೆ ಮಾತ್ರ ಗೊತ್ತು. ವಸ್ತುವನ್ನು ನೋಡಿದರೆ ತನುವಿನಲ್ಲಿ ಸುಖ ದುಃಖಗಳು ಉಂಟಾಗುತ್ತವೆ. ಕ್ರೌರ್ಯ ದ್ವೇಷ ಅಸೂಯೆ ಕ್ರೋಧದ ರಸಾಯನ ಹುಟ್ಟುತ್ತದೆ ಎಂದರೆ ಇದನ್ನು ಸುಖ ಎನ್ನಲು ಸಾಧ್ಯವೆ? ಕಣ್ಣುಳ್ಳ ಕಾಯ ಅನುಭಾವಿಯಾದಾಗಲೇ ಕಣ್ಣಿನಲ್ಲಿಯೇ ಇದ್ದ ಕಣ್ಣಿನ ಅನುಭಾವದ ದೃಶ್ಯದ ಸವಿಯನ್ನು ಅನುಭವದಿಂದ ಸವಿಯಲು ಕಾಯಕ್ಕೆ ಸಾಧ್ಯವಾಗುತ್ತದೆ.

ಅನುಭಾವದ ಸವಿ ಸಿದ್ಧರಾಮ ಶಿವಯೋಗಿಗೆ ಅವರ ತಾತ ಬಸವಣ್ಣನಿಂದ ಬಳುವಳಿಯಾಗಿ ಬಂದದ್ದು. ಸಿದ್ಧರಾಮ ಶಿವಯೋಗಿಗಳ ತಂದೆ ಚೆನ್ನಬಸವಣ್ಣ. ಚೆನ್ನಬಸವಣ್ಣನ ತಂದೆ ಬಸವಣ್ಣ. ಅಂದ ಮೇಲೆ ಸಿದ್ಧರಾಮ ಶಿವಯೋಗಿಗಳು ಬಸವಣ್ಣನಿಗೆ ಮೊಮ್ಮಗನಾಗುತ್ತಾನೆ.

ಲೋಕದ ದೃಷ್ಟಿಯಲ್ಲಿ ಚೆನ್ನಬಸವಣ್ಣ ಬಸವಣ್ಣನಿಗೆ ಸೋದರಳಿಯ. ಬಸವಣ್ಣ ಚೆನ್ನಬಸವಣ್ಣನಿಗೆ ಮಾವನಾಗುತ್ತಾನೆ. ಚೆನ್ನಬಸವಣ್ಣನ ತಾಯಿ ಬಸವಣ್ಣನ ಸೋದರಿ ಅಕ್ಕಮ್ಮಳ ಮಗ.

ಶರಣರು ಲೋಕದ ದೃಷ್ಟಿಯ ಅಜ್ಞಾನವನ್ನು ಉದುರಿಸಿಕೊಂಡವರು. ಲೋಕ ಜನನ ಸಂಬಂಧವನ್ನು ನೋಡುತ್ತದೆ. ಪಾರಮಾರ್ಥದ ಜ್ಞಾನಿಗಳ ದೃಷ್ಟಿಕೋನವೇ ಬೇರೆ. ತಂದೆ ತಾಯಿ ಮಾಂಸ ಪಿಂಡಕ್ಕೆ ಜನ್ಮ ಕೊಡುತ್ತಾರೆ. ಇವರು ನಿಜವಾದ ತಂದೆ ತಾಯಿಗಳು ಅಲ್ಲ. ಜ್ಞಾನಕ್ಕೆ ಜನ್ಮಕೊಡುವಾತನೇ ನಿಜವಾದ ತಂದೆ.

ಲೋಕದ ದೃಷ್ಟಿಯಲ್ಲಿ ಬಸವಣ್ಣ ಚೆನ್ನಬಸವಣ್ಣನಿಗೆ ಮಾವನಾದರೂ ಚೆನ್ನಬಸವಣ್ಣನ ದೃಷ್ಟಿಯಲ್ಲಿ ಬಸವಣ್ಣ ಜನ್ಮಕೊಟ್ಟ ತಂದೆಯೇ ಆಗಿದ್ದಾನೆ. ಮಾಂಸಪಿಂಡವನ್ನು ಮಂತ್ರಪಿಂಡವನ್ನಾಗಿಸಿದಾತನೆ ನಿಜವಾದ ತಂದೆ ಎಂದು ಜ್ಞಾನಿಗಳು ದೃಢವಾಗಿ ನಂಬುತ್ತಾರೆ. ಹೀಗಾಗಿ ಯಾವ ಶರಣರೂ ಜನ್ಮ ನೀಡಿದ ತಂದೆ ತಾಯಿಗಳನ್ನು ನೆನೆಯಲಿಲ್ಲ. ಮಂತ್ರಪಿಂಡವನ್ನಾಗಿಸಿದ ತಂದೆಯನ್ನು ಹಗಲಿರುಳೆನ್ನದೆ ನೆನೆಯುವುದನ್ನು ಬಿಡಲಿಲ್ಲ.

ಚೆನ್ನಬಸವಣ್ಣನಿಗೆ ಬಸವಣ್ಣ ಲೋಕದ ದೃಷ್ಟಿಯಲ್ಲಿ ಮಾವನಾದರೂ ಚೆನ್ನಬಸವಣ್ಣನ ದೃಷ್ಟಿಯಲ್ಲಿ ತೌರಿಗ. ಸಿದ್ಧರಾಮ ಶಿವಯೋಗಿಗಳಿಗೆ ತಾತನಾಗಿದ್ದಾನೆ. ಚೆನ್ನಬಸವಣ್ಣನೇ ತಂದೆಯಾಗಿದ್ದಾನೆ.

ಶರಣರ ಮಾತುಗಳೇ ಬೇರೆ. ಸವಿಸವಿಯಾದ ಗರಿಗರಿಯಾದ ಮಾತುಗಳು! ಮಾತಲ್ಲದ ಮಾತುಗಳು! ಲೋಕದ ಮಾತುಗಳನ್ನು ಅಳಿಯುವ ಮಾತುಗಳು. ಅವು ಮುತ್ತಿನಂತೆ ಹೊಳೆಯುತ್ತವೆ. ಮಾಣಿಕ್ಯದಂತೆ ಬೆಳಗುತ್ತವೆ. ಸ್ಫಟಿಕದಂತೆ ಒಳಹೊರಗೆನ್ನದೆ ಪಾರದರ್ಶಕವಾಗಿ ಕಾಣುತ್ತವೆ. ಶರಣರು ಮಾತನಾಡಿದರೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯ ಹೌದೌದೆಂದು ತಲೆದೂಗುತ್ತಾನೆ.

**603**

**ತಾತ್ಪರಿಯ ವರ್ಮ ಕಳೆಯನರಿತು**
**ಶುದ್ಧ ಸಿದ್ಧ ಪ್ರಸಿದ್ಧದಲ್ಲಿ ಪ್ರಭಾವ ಮುಖದಲಿಪ್ಪವರ**
**ಅವರನೇನೆಂಬೆ? ಅವರ ಸಿದ್ಧರೆಂಬೆನೋ?**
**ಅವರ ಶುದ್ಧರೆಂಬೆನೋ? ಅವರ ಪ್ರಸಿದ್ಧರೆಂಬೆನೋ?**
**ಅವರ ಸರ್ವಾಂಗ ಸನುಮತರೆಂಬೆ ಕಾಣಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ವಸ್ತುವಿನ ಸತ್ಯ ತಿಳಿಯಲು ಓದು ಅವಶ್ಯಕತೆಯಿಲ್ಲ. ಕಲಿಕೆ ಕೂಡಾ ಅವಶ್ಯಕತೆಯಿಲ್ಲ. ಗುಟ್ಟಾದುದನ್ನು ತಿಳಿದು ಆನಂದ ಪಡುವ ಅಜ್ಞಾನ ಒಂದಷ್ಟು ದಿನಗಳವರೆಗೆ ತನುವಿನಲ್ಲಿ ಮನೆ ಮಾಡುತ್ತದೆ.

ಕಲಾವಿದ ಕಲ್ಲಿನಲ್ಲಿ ಶಿವನ ಮೂರ್ತಿಯನ್ನು ಕೆತ್ತಿದ. ಈ ಶಿವ ಮೂರ್ತಿಯ ಗುಟ್ಟನ್ನು ತಿಳಿಯಲು ಓದುವ ಅವಶ್ಯಕತೆಯಿಲ್ಲ. ಯಾರಿಂದಲಾದರೂ ಕೇಳಿ ತಿಳಿಯುವ ಅವಶ್ಯಕತೆಯೂ ಇಲ್ಲ. 'ಶಿವಮೂರ್ತಿ'ಯ ಗುಟ್ಟು ರಟ್ಟಾಗದಿದ್ದರೆ ಅದರ ತಾತ್ಪರ್ಯ ತಿಳಿಯದಿದ್ದರೆ ಅದಕ್ಕೊಂದು ಗರ್ಭಗುಡಿ, ಆಲಯ ಶಿಖರ ಹೊನ್ನ ಕಳಶ ಪೌಳಿ ಅಂಗಳ ಗರ್ಭಗುಡಿಯ ಎದುರುಗಡೆ ಒಂದು ನಂದಿಯನ್ನು ಕೂಡಿಸಿ, ಗುಟ್ಟು ಇನ್ನೂ ಗುಟ್ಟಾಗುತ್ತಲೇ ಹೋಗುತ್ತದೆ.

ಸಾವಿರಾರು ಜನ ಶಿವಾಲಯಕ್ಕೆ ಭಕ್ತರಾಗುತ್ತಾರೆ. ತೇರು ಉಚ್ಛ್ರಾಯ ಉತ್ಸವಗಳು ಪಲ್ಲಕ್ಕಿ ಸೇವೆ ನಡೆಯುತ್ತವೆ. ಆದರೂ ಗುಟ್ಟು ರಟ್ಟಾಗ್ಗಲಿಲ್ಲ. 'ಶಿವ' ಯಾರು ಎಂಬುದು ತಿಳಿಯಲೇ ಇಲ್ಲ. ಆರಾಧಿಸಿದವರು ಶುದ್ಧರಾಗಲಿಲ್ಲ, ಸಿದ್ಧರಾಗಲಿಲ್ಲ, ಪ್ರಸಿದ್ಧರಾಗಲಿಲ್ಲ.

ಕಲ್ಲಿನಲ್ಲಿ ಶಿವ, ಪಾರ್ವತಿ, ನಂದಿಯನ್ನು ಕೆತ್ತಿದರೆ ಕೆತ್ತಿದ ಮೂರ್ತಿಗಳಲ್ಲಿ ಕಲ್ಲು ಗುಟ್ಟಾಗಿ ಉಳಿಯಿತು. ಅದರ ಥಾತ್ಪರ್ಯ ಓದಿ ತಿಳಿಯಬೇಕೆ? ಅಥವಾ ಪಂಡಿತನಾಗಬೇಕೆ?

ಲೋಹದಲ್ಲಿ ಸಂಗಮವಾದ ಹಳದಿ ಬಣ್ಣ ತಿಳಿಯದಿದ್ದರೆ ಲೋಹ ಚಿನ್ನವಾಗುತ್ತದೆ. ಆಗ ತನು ಶ್ರೀಮಂತ ಬಡವ ರಾಜ ಭಿಕ್ಷುಕ ಕಳ್ಳ ಎಂದು ಕರೆಯಿಸಿಕೊಳ್ಳುತ್ತದೆ. ಚಿನ್ನ ಕದ್ದು ಕಳ್ಳನೆಂದು, ಕೊಂಡು ಶ್ರೀಮಂತನೆಂದು, ಯುದ್ಧ ಮಾಡಿ ಚಿನ್ನ ಪಡೆದು ಕಿರೀಟ ಧರಿಸಿದವನನ್ನು ರಾಜನೆಂದು, ಚಿನ್ನ ಇಲ್ಲದ ತನುವನ್ನು ಭಿಕ್ಷುಕ ಬಡವನೆಂದು ತನು ತನುವಿನಿಂದಲೇ ಕರೆಯಿಸಿಕೊಳ್ಳುತ್ತದೆ.

ಓದಿದರೇನು ಓದದಿದ್ದರೇನು? ಚಿನ್ನದ ಗುಟ್ಟು ಲೋಹದಲ್ಲಿ ಬಂದಿಯಾಗಿದೆ. ಚಿನ್ನ ಸಂಗ್ರಹ ಮಾಡಿದ ತನು ಶುದ್ಧನೆಂದು ಸಿದ್ಧನೆಂದು ಪ್ರಸಿದ್ಧನೆಂದು ಸದಾ ಪ್ರಸನ್ನ ಮುಖದಿಂದ ಅರಳಲು ಸಾಧ್ಯವೆ? ಸಾಧ್ಯವಿಲ್ಲ.

ಲೋಹದಲ್ಲಿ ಬಚ್ಚಿಟ್ಟುಕೊಂಡ ಹಳದಿ ಬಣ್ಣದ ಗುಟ್ಟು ರಟ್ಟಾದರೆ ಸಾಕು ಅದು ಚಿನ್ನವಲ್ಲ; ಬರಿ ಲೋಹ ! ಇದನ್ನು 'ಶಿವ' ಮಾತ್ರ ಅರಿಯಬಲ್ಲ.

ತನುವನ್ನು ಆವರಿಸಿದ ಮನವೆಂಬ ಹಾವು ತನುವನ್ನು ಕುಟುಕಿದರೆ ಸಾಕು ಕೆತ್ತಿದ ಕಲ್ಲು ದೇವರಾಗುತ್ತದೆ. ಹಳದಿ ಲೋಹ ಚಿನ್ನವಾಗುತ್ತದೆ. ತನುವಿನಲ್ಲಿ ತನ್ಮಯವಾದ ಅರಿವಿನ ಶ್ರೀಮಂತಿಕೆ ತನುವಿನಲ್ಲಿಯೇ ಗುಟ್ಟಾಗಿ ಉಳಿದು, ತನು ತನುವಿನಿಂದಲೇ ಶ್ರೀಮಂತ ಬಡವ ಭಿಕ್ಷುಕ ರಾಜ ಪ್ರಧಾನಿ ಸೈನಿಕ ಕಳ್ಳ ಭಕ್ತ ಗುರು ಶಿಷ್ಯ ಎಂದು ಕರೆಯಿಸಿಕೊಳ್ಳುತ್ತದೆ.

ತನುವನ್ನು ಆವರಿಸಿದ ಮನವೆಂಬ ಅಜ್ಞಾನದ ಹಾವನ್ನು, ತನುವಿನಲ್ಲಿಯೇ ಸಂಗಮವಾದ ಜ್ಞಾನದಿಂದ ಪಳಗಿಸಿ, ಕೊರಳಲ್ಲಿ ಧರಿಸಿಕೊಂಡವನೇ ಜ್ಞಾನೇಶ್ವರ; ಶಿವ ಎಂದು ಕರೆದಿದ್ದಾರೆ ಪುರಾತನರು; ಅರುಹಿರಿಯರು.

ವಸ್ತುವಿನ ಸತ್ಯವನ್ನು ಅದರ ತಾತ್ಪರ್ಯವನ್ನು ಅದರ ವರ್ಮವನ್ನು ಅರಿತು ಶುದ್ಧ ಸಿದ್ಧ ಪ್ರಸಿದ್ಧದಲ್ಲಿ ಪ್ರಭಾವ ಮುಖದಲ್ಲಿಪ್ಪವರನು ಏನೆಂಬೆ? ಅವರನ್ನು ಸಿದ್ಧರೆನ್ನಲೋ? ಶುದ್ಧರೆನ್ನಲೋ? ಪ್ರಸಿದ್ಧರೆನ್ನಲೋ? ಅಲ್ಲಲ್ಲ. ಅವರು ಸರ್ವಾಂಗದಲ್ಲೂ ಸನುಮತರೆಂದು ಕರೆಯುವೆನು ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಅರಿವಿನ ದೇವರೊಂದಿಗೆ ಸಿದ್ಧರಾಮ ಶಿವಯೋಗಿಗಳು ಮಾತನಾಡಿದ್ದಾರೆ.

ತನುವನ್ನು ಆವರಿಸಿದ ಮನ, ವಸ್ತುವನ್ನು ಮಾತ್ರ ನೇರವಾಗಿ ನೋಡದೆ, ತನುವಿನಲ್ಲಿಯೇ ಸಂಗಮವಾದ ಅರಿವಿನೊಂದಿಗೆ ಬೆರೆತು, ಆ ಅರಿವಿನಿಂದ ನೋಡಿದರೆ, ವಸ್ತುವಿನ ಸತ್ಯ ಮಾತ್ರ ಕಾಣುತ್ತದೆ; ವಸ್ತು ಕಾಣುವುದಿಲ್ಲ.

**604**

**ತಾನಿಟ್ಟ ಬೇತಾಳ ತನ್ನನಂಜಿಸಿತೆಂಬ**
**ನಾಣ್ನುಡಿಯ ನಿಮ್ಮಲ್ಲಿ ಕಂಡೆನು**
**ನಾಗೇಂದ್ರ ನೋಡಿ ನಗಲು ನಗಲು**
**ವಿಷದ ಸಿಡಿಕೆಗಳ ತಾಗಿ ಬೆಂದ ಕಾಮನು**
**ಎಸಲಟ್ಟಿದರೆಂಬ ಅವಗತಿಗಳ ತಂದು ತಂದು ಇಕ್ಕಿದಾರು ಕಾಣವ್ವಾ!**
**ಎಡೆಯಪಾತಕರು ನೆರೆದು ಮಾಡಿದರು ಕಾಣವ್ವಾ!**
**ಆನು ಮಾಡಿದೆನೆಂಬ ಚಿತ್ತಮಕ್ಕು,**
**ಕಪಿಲಸಿದ್ಧ ಮಲ್ಲಿನಾಥದೇವರ ದೇವನವ್ವಾ.**

ತಾನೇ ಇಟ್ಟ ಬೇತಾಳ, ದೃಷ್ಟಿ ತಾಗಬಾರದೆಂದು ತಾನೇ ಕಟ್ಟಿದ ಬೆದರು ಬೊಂಬೆ; ಅದು ನಾನೇ ಇಟ್ಟದ್ದೆಂದು ನಾನೇ ಮರೆತು ಹೋಗಿ, ನಾನೇ ಇಟ್ಟ ಬೇತಾಳಕ್ಕೆ ನಿಜಬೇತಾಳವೆಂದು ತಿಳಿದರೆ ಯಾರಾದರೂ ಏನು ಮಾಡಿಯಾರು?

ಬೇತಾಳ, ದೆವ್ವ ಎನ್ನುವುದು ಸತ್ಯವಲ್ಲ. ಅದು ತನ್ನಿಂದಲೇ ಹೊರಬಂದ ಭ್ರಮೆ. ತನ್ನನ್ನು ಆವರಿಸಿದ ಭ್ರಮೆ ತನ್ನನ್ನೇ ಅಂಜಿಸಿ ಸಾಯಿಸುತ್ತದೆ. ಅದು ಬರೀ ಭ್ರಮೆಯಲ್ಲ, ತನುವನ್ನು ಆವರಿಸಿದ ಭ್ರಮೆ, ತನುವಿನ ಆಶ್ರಯ ಪಡೆದು, ತನುವನ್ನೇ ಕಚ್ಚಿಕಚ್ಚಿ ತಿನ್ನುತ್ತದೆ. ಎಚ್ಚರವಾದಾಗ ಗಹಗಹಿಸಿ ನಗುತ್ತದೆ. ಅದರ ವಿಷದ ಸಿಡಿಕೆಗಳಿಂದಲೇ ಬೆಂದ ಕಾಮನು, ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನನ್ನೇ ಮರೆತು, ತನುವನ್ನು ಮುತ್ತಿಗೆ ಹಾಕಿ, ತನುವಿನ ಅವನತಿಗೆ ಕಾರಣವಾಗುವುದೆಂದರೇನು?

ಆಶ್ರಯ ಪಡೆದ ಭ್ರಮೆ, ಆಶ್ರಯಕೊಟ್ಟ ಕಾಯವನ್ನೇ ಕಾಮದಿಂದ ಕಾಡುವುದು ಸೋಜಿಗದ ಕೆಲಸವೇ ಆಗಿದೆ. ಅರಿವೆಂಬ ಗುರುದೇವನ ಬೆಳಕಿನಿಂದ ಹುಟ್ಟಿದ ಭ್ರಮೆಯಿಂದ ಬರೀ ಕಾಮ ಮಾತ್ರ ಹುಟ್ಟಲಿಲ್ಲ, ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಪಾತಕಿಗಳು ಹುಟ್ಟಿದರು. ಆಶ್ರಯಕೊಟ್ಟ ಕಾಯವನ್ನೇ ಮುತ್ತಿಗೆ ಹಾಕಿ ವಿಷದ ಸಿಡಿಕೆಗಳನ್ನು ಸಿಡಿಸಿ ಕಾಯವನ್ನು ಅವನತಿಯ

ಸ್ಥಿತಿಗೆ ತಂದು ತಂದು ಇಕ್ಕಿದರು ಕಾಣವ್ವಾ!

ಕಾಯದಲ್ಲಿ ಹುಟ್ಟಿದ ಚಿತ್ತ, ಕಾಯವನ್ನು ತನ್ನ ಬೆರಳಿನಿಂದ ಆಡಿಸುವುದೆಂದರೇನು? ಕಾಯ ಮಲ್ಲಿನಾಥ ದೇವರು ವಾಸ ಮಾಡಿದ ಕೈಲಾಸ. ಕಾಯವನ್ನು ಆವರಿಸಿದ ಮನ ಅರಿವಿನಿಂದ ಅರಿತರಿತು ಅರಿವಿನ ಮಲ್ಲಯ್ಯನಿಗೆ ಶರಣು ಹೋದರೆ ಸಾಕು. ಅದು ಘನಮನವಾಗುತ್ತದೆ.

**605**

**ತಾಮಸದಿಂದ ನಿನ್ನ ನೆನೆವವರಿಗೆ**
**ತಾಮಸಪದವನೀಯುವಿರಯ್ಯಾ.**
**ಆರೈದು ನಿನ್ನುವನು ಓರಂತ ನೆನೆವವರಿಗೆ**
**ಕಾರುಣ್ಯಪದವನೀವೆಯಯ್ಯಾ.**
**ಅನಾದಿ ಮೂರುತಿ ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಬೇಡಿದುದನ್ನು ಕೊಡುವವನನ್ನೇ ದೇವರು ಎಂದು ಕರೆಯುತ್ತಾರೆ. ರಾಜ ಮತ್ತೊಬ್ಬ ರಾಜನ ಮೇಲೆ ಯುದ್ಧಕ್ಕೆ ಹೋಗುವ ಮುನ್ನ 'ನನ್ನನ್ನು ಜಯಶಾಲಿಯನ್ನಾಗಿಸು ದೇವನೆ' ಎಂದು ದೇವರನ್ನು ಬೇಡಿಯೇ ಯುದ್ಧಕ್ಕೆ ಹೋಗುತ್ತಾನೆ. ದೇವರು ತಥಾಸ್ತು ಎನ್ನುತ್ತಾನೆ. ಬೇಡುವವನ ಭಾವನೆಗಳು ಹಾಗೆಯೇ ಇರುತ್ತವೆ. ಬೇಡುವವನಲ್ಲಿಯೇ ಸಂಗಮವಾದ ನೀಡುವವನು, ಬೇಡಿದ್ದನ್ನು ನೀಡಿಯೇ ನೀಡುತ್ತಾನೆ.

ಬೇಡುವವನು ಅವನೇ; ನೀಡುವವನು ಕೂಡಾ ಅವನೇ ಆಗಿದ್ದಾನೆ. ಆದರೂ ಬೇಡುವವನಿಗೆ ನೀಡುವವನ ಪರಿಚಯವಿಲ್ಲ. ಹೀಗಾಗಿ ಒಂದು ವಸ್ತುವನ್ನೇ ದೇವರನ್ನಾಗಿಸಿ ಬೇಡುತ್ತಾನೆ. ನೀಡುವವನು ಬೇಡುವವನಲ್ಲಿಯೇ ಪ್ರತ್ಯಕ್ಷವಾಗಿ ತಥಾಸ್ತು ಎಂದು ಬೇಡಿದ್ದನ್ನು ನೀಡುತ್ತಾನೆ.

ಬೇಡುವವನು ತಾಮಸಿಗನಾದರೆ ತನಗೆ ಸುಖ ಆಗುವ ಹಾಗೆ ಬೇಡುತ್ತಾನೆ. ಬೇಡುವವನು ರಾಜಸಿಗನಾದರೆ ತನಗೆ ಸುಖ ಆಗುವ ಹಾಗೆ ಬೇಡುತ್ತಾನೆ. ಬೇಡುವವನು ಸಾತ್ವಿಕನಾದರೆ ತನಗೆ ಬೇಕಾಗುವ ಹಾಗೆ ಬೇಡುತ್ತಾನೆ. ದೇವರು ಬೇಡುವವನ ಹಿತಕಾಯುತ್ತಾನೆಯೇ ಹೊರತು ಇದು ಒಳ್ಳೆಯದು ಇದು ಕೆಟ್ಟದ್ದು ಎಂದು ಹೇಳುವ ಹಾಗಿಲ್ಲ.

ಭಿಕ್ಷುಕ ವೃತ್ತಿಯಲ್ಲಿದ್ದವನು ಇಂದು ನಾನು ಬೇಡಿದ ಮನೆಗಳೆಲ್ಲಲ್ಲ ಭಿಕ್ಷೆ ನೀಡುವಂತೆ ಮಾಡು ಪರಮಾತ್ಮನೆ; ಯಾರೂ ಇಲ್ಲ ಮುಂದೆ ಹೋಗು ಎನ್ನದಿರುವಂತೆ ಮಾಡಿ, ನನ್ನನ್ನು ಸಲಹು ಪರಮಾತ್ಮನೆ ಎಂದು ದೇವರನ್ನು ಬೇಡಿಯೇ ಭಿಕ್ಷೆ ಬೇಡಲು ಹೋಗುತ್ತಾನೆ. ದೇವರು ತಥಾಸ್ತು ಎನ್ನುತ್ತಾನೆ. ದೇವರೆಂದರೆ ಕಾರುಣ್ಯ ಪದವನು ಕೊಡುವ ಕರುಣಾಮೂರ್ತಿ.

ಕಳುವು ಮಾಡಲು ಹೋಗುವ ಕಳ್ಳನಿಗೆ, ಯುದ್ಧ ಮಾಡಲು ಹೋಗುವ ರಾಜನಿಗೆ, ಕೊಲೆ ಮಾಡಲು ಹೋಗುವ ಕೊಲೆಗಡುಕನಿಗೆ, ಕಾಮುಕನಿಗೆ, ಕುಡುಕನಿಗೆ ಸಕಲ ತಾಮಸ ರಾಜಸ ಸಾತ್ವಿಕ ಗುಣಗಳುಳ್ಳವರಿಗೆ, ಅವರವರು ಆರೈದು ಬೇಡಿದ್ದನ್ನು ನೀಡುವ ದೇವರು, ಕರುಣಾಮೂರ್ತಿಯೇ ಆಗಿದ್ದಾನೆ.

ಕೆಲವರು ದುಃಖದಲ್ಲಿರುತ್ತಾರೆ; ದುಃಖವೆಂದರೆ ಅವರಿಗೆ ಬಲು ಇಷ್ಟವಾಗಿರುತ್ತದೆ. ಹೀಗಾಗಿ ಅವರಿಗೆ ದೇವರು ದುಃಖವನ್ನೇ ನೀಡುತ್ತಾನೆ.

ದೇವರೆಂದರೆ ಆಲಯದಲ್ಲಿರುತ್ತಾನೆ ಎಂದು ತಿಳಿದು ಬೇಡುವವನು ದೇವರನ್ನು ಹೊತ್ತುಕೊಂಡು ದೇವರಿಗೆ ಹೋಗಿ ದೇವರನ್ನು ಬೇಡುತ್ತಾನೆ. ಬೇಡುವವನ ದೇಹಲ್ಲಿಯೇ

ಬೇಡಿದ್ದನ್ನು ನೀಡುವ ದೇವರು ಅಡಗಿದ್ದಾನೆ. ದೇವರನ್ನು ಹೊತ್ತುಕೊಂಡು ಬೇಡಲು ಹೋದಾಗ, ಬೇಡುವವನಿಗೆ ನೀಡುವವನು ಕೂಡಾ ದೇವರೇ ಆಗಿದ್ದಾನೆ.

ದೇವರು ಬೇಡುವವನಿಗೆ ನೀಡುವಂತೆ ಮಾಡಿದ. ಬೇಡುವವನಿಗೆ ಬೇಡುವಂತೆ ಮಾಡಿದ. ತನುವಿನಲ್ಲಿಯೇ ತನ್ಮಯವಾದ ದೇವರನ್ನು ತನುವನ್ನು ಆವರಿಸಿದ ಮನಕ್ಕೆ ಏನು ಬೇಡಬೇಕೆಂಬ ಅರಿವಾದರೆ ಸಾಕು ಬೇಡಬೇಕಾದುದನ್ನೇ ಬೇಡುತ್ತದೆ.

ಸಾತ್ವಿಕ ರಾಜಸ ತಾಮಸ ಗುಣಗಳುಳ್ಳ ಕಾಯಗಳು ತಿಳಿಯಲೆಂದು ಬಸವಣ್ಣನವರು ''ಬೇಡಿದರೆ ಎನ್ನೊಡೆಯನ ಬೇಡುವೆ, ಹಾಡಿದರೆ ಎನ್ನೊಡೆಯನ ಹಾಡುವೆ. ಒಡೆಯನಿಗೆ ಒಡಲು ತೋರಿ ಎನ್ನ ಬಡತನವ ಬಿನ್ನೈಸುವೆ'' ಎಂಬ ಸೂತ್ರವನ್ನು ಸಕಲ ಕಾಯಗಳಿಗೂ ನೀಡಿದರು.

ಸಕಲ ಕಾಯಗಳು ಬಸವಣ್ಣ ಹಾಡಿದ ಹಾಡನ್ನೇ ಹಾಡಿ ಬಸವಣ್ಣನನ್ನು ಹೊಗಳುತ್ತವೆಯೇ ಹೊರತು ಬಸವಣ್ಣನಂತೆ ಆಗಲು ಇಚ್ಛೆಪಡುವುದಿಲ್ಲ. ಇದು ಒಡಲಿನ ದುರ್ದೈವವೇ ಸರಿ.

**606**

**ತಾಮಸದಲ್ಲಿ ತಾಮಸಿಯಾಗಿ,**
**ಸೀಮೆಗೆಟ್ಟಲ್ಲಿ ಸಂಬಂಧಿಯಾಗಿ,**
**ಅನಿಮಿಷ ಮೀರಿದಲ್ಲಿ ಆಂದೋಳವಾಗಿ,**
**ಸೀಮೆಗೆಟ್ಟಲ್ಲಿ ಕುರುಹು ತಾನಾಗಿ,**
**ಮಹಾರ್ಣವದಲ್ಲಿ ಮಧ್ಯ ತಾನಾಗಿ,**
**ಎಲ್ಲಾ ಭೂತಕ್ಕೆ ದಯವುಳ್ಳ ಮಹಾಭೂತಿ ತಾನಾಗಿ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಲ್ಲಿ**
**ನಿತ್ಯ ಲಿಂಗಾರ್ಚನೆಯ ಮಾಡುವ**
**ಶಿವಯೋಗಿಯ ಪರಿಯಿಂತುಟು.**

ಲೋಕ ವಿರೋಧಿ ಶರಣ; ಶರಣ ವಿರೋಧಿ ಲೋಕ, ಎನ್ನುವ ಮಾತು ಇದೆ. ಲೋಕದ ಆಚರಣೆಗಳನ್ನು ಶರಣ ಆಚರಿಸುವುದಿಲ್ಲ. ಲೋಕ ತೋರಿಕೆಗಾಗಿ ಆಚಾರಗಳನ್ನು ಮಾಡುತ್ತದೆ. ಶರಣನ ಆಚಾರ ಇತರರಿಗೆ ತೋರುವುದಿಲ್ಲ. ಆತನ ಆಚಾರ ಅಗೋಚರ ಆಚಾರ. ಆತನಿಗೆ ಮಾತ್ರ ಕಾಣುತ್ತದೆ.

ಶರಣ ತಾನು ನೋಡುವ ಆಚಾರದಲ್ಲಿ ತನಗೆ ವ್ಯತ್ಯಾಸ ಕಂಡರೆ ಸಾಕು ತನಗೆ ತಾನೇ ಉಗ್ರನಾಗುತ್ತಾನೆ. ಉದಾ: ಚಿನ್ನ ಒಂದು ಲೋಹ. ಅದು ಹಳದಿ ಬಣ್ಣ ಮಿಶ್ರಿತ ಲೋಹ. ಶರಣ ಅದನ್ನು ಲೋಹವೆಂದು ಖಚಿತವಾಗಿ ನೋಡುತ್ತಾನೆ. ಆತನಿಗೆ ಲೋಕದಂತೆ ಚಿನ್ನ ಕಂಡರೆ ಸಾಕು, ಅಜ್ಞಾನದ ಕಣ್ಣನ್ನು ಜ್ಞಾನದ ಕಣ್ಣಿಗೆ ಕೂಡಲೇ ಬಲಿಕೊಡುತ್ತಾನೆ. ಲೋಹ ಕಾಣುವವರೆಗೆ ತನ್ನ ಜ್ಞಾನದ ಪ್ರಯತ್ನ ರೂಢಿಯಲ್ಲಿಡುತ್ತಾನೆ.

ಶರಣ ಮಾಡುವ ಈ ಕೆಲಸ ಶರಣನಿಗೆ ಮಾತ್ರ ಕಾಣುತ್ತದೆ. ಲೋಕಕ್ಕೆ ಕಾಣುವುದಿಲ್ಲ. ಲೋಕ ಲೋಹವನ್ನು ಚಿನ್ನವೆಂದು ನೋಡಿ ಹಗಲಿರುಳು ದುಡಿದು ಚಿನ್ನ ಪಡೆದು ಶ್ರೀಮಂತನಾಗುತ್ತದೆ. ಕದ್ದು ಕಳ್ಳ ಎಂಬ ಹೆಸರು ಪಡೆಯುತ್ತದೆ. ಕೊಂದು ಪಡೆದು ರಾಜ ಎನ್ನಿಸಿಕೊಳ್ಳುತ್ತದೆ. ಚಿನ್ನ ಇಲ್ಲದವನನ್ನು ದರಿದ್ರನೆಂದು, ಭಿಕ್ಷುಕನೆಂದು ಲೋಕ ಕರೆಯುತ್ತದೆ. ಶರಣ ಮಾತ್ರ ಇದಾವುದೂ ಅಲ್ಲ.

ಶರಣನನ್ನು ಅನಿಮಿಷ ಎಂದು ಕರೆಯುತ್ತಾರೆ. ಆತನ ಅರಿವಿನ ಕಣ್ಣು ಸದಾಕಾಲ ಮೀನಿನಂತೆ ತೆರೆದೇ ಇರುತ್ತದೆ. ಅಜ್ಞಾನದ ಕಣ್ಣು ಅರಿವಿನ ಕಣ್ಣಿನೊಂದಿಗೆ ಸೆಣಸಾಡಿ ತನ್ನ ಸೀಮೆಯನ್ನು ತಾನೇ ಕೆಡಿಸಿಕೊಂಡು ನಿಸ್ಸೀಮನಾಗುತ್ತದೆ.

ಪಂಚಭೂತಗಳಲ್ಲಿ ಬಯಲು ಮಾತ್ರ ಚಲನೆಯಿಲ್ಲದ್ದು. ಅದು ಅಗ್ನಿಗೆ ಸುಡುವುದಿಲ್ಲ; ಬಿಸಿಲಿಗೆ ಒಣಗುವುದಿಲ್ಲ; ಮಳೆಗೆ ತೋಯುವುದಿಲ್ಲ; ಭೂಮಿಯಂತೆ ಬಿರಿದು ಲಾವಾರಸ ಚಿಮ್ಮುತ್ತದೆ. ಬಯಲು ನಾಲ್ಕು ಭೂತಗಳಿಗೆ ಜನ್ಮ ನೀಡಿ, ಆ ನಾಲ್ಕೂ ಭೂತಗಳನ್ನು ತನ್ನ ಗರ್ಭದಲ್ಲಿಟ್ಟುಕೊಂಡು, ಅವುಗಳ ಚೇಷ್ಟೆಯನ್ನು ಕಾಲುಬಡಿದು ಒದೆಯುವ ಮಕ್ಕಳನ್ನು ಗರ್ಭಧರಿಸಿದ ತಾಯಿ ಪೋಷಿಸಿದಂತೆ ಬಯನು ನಾಲ್ಕು ಭೂತಗಳನ್ನು ಪೋಷಿಸುತ್ತದೆ.

ಬಯಲಿನಂತೆಯೇ ಶರಣ ಬಯಲಾದಾತ. ತನ್ನ ಮೇಲೆ ಎರಗುವ ಲೋಕದ ಚೇಷ್ಟೆಯನ್ನು ಗರ್ಭಧರಿಸಿದ ತಾಯಿಯ ಕರುಣಾ ಹೃದಯದಿಂದ ಸ್ವೀಕರಿಸುತ್ತಾನೆ. ಎಲ್ಲಾ ಭೂತಗಳಿಗೆ ದಯವುಳ್ಳ ಭೂತ ತಾನಾಗುತ್ತಾನೆ.

ಬಯಲು ಬಯಲನ್ನೇ ಬಿತ್ತಿದೆ. ಬಯಲು ಬಯಲನ್ನೇ ಬೆಳೆದಿದೆ. ಬಯಲ ಬೀಜದಿಂದಲೇ ಭೂಮಿ ಅಗ್ನಿ ಜಲ ವಾಯು ಎಂಬ ಸಸಿಗಳು ಹೆಮ್ಮರವಾಗಿ ಬೆಳೆದಿವೆ. ಭೂಮಿಯ ಮೇಲೆ ಹುಟ್ಟಿದ ಗಿಡ ಮರ ಬಳ್ಳಿ ಪಶು ಪಕ್ಷಿ ಪ್ರಾಣಿ ಕೀಟ ಜಲಚರ ಉರುಗಗಳೆಲ್ಲ ಬಯಲ ಬೀಜದಿಂದಲೇ ಹುಟ್ಟಿವೆ. ಅವುಗಳೆಲ್ಲ ಬಯಲ ಸಂತಾನವಲ್ಲದೆ ಬೇರಲ್ಲ. ಈ ಎಲ್ಲದನ್ನು ತಿಳಿಯುವ ಶಕ್ತಿ ಅವುಗಳಿಗೆ ಇಲ್ಲ. ಏಕೆಂದರೆ ಅವೆಲ್ಲ ಸಹಜವಾಗಿಯೇ ಇವೆ. ಇದೆಲ್ಲವನ್ನೂ ತಿಳಿಯುವ ಬ್ರಹ್ಮಾಂಡದ ಸೃಷ್ಟಿಗೆ ಬಯಲೇ ಕಾರಣವೆಂದು ತಿಳಿಯುವ ಶಕ್ತಿಯುಳ್ಳ ಮನುಷ್ಯ ಅಸಹಜನಾಗಿರುವುದರಿಂದ ತಾನು ಬಯಲು ಸಂತಾನವೆಂದು ತಿಳಿಯಲು ಸಾಧ್ಯವಾಗುತ್ತಿಲ್ಲ. ತಿಳಿದ ಶರಣ ಮಾತ್ರ ಬಯಲಾಗುತ್ತಾನೆ.

ಬಯಲು ಬಯಲನೇ ಬಿತ್ತಿದೆ; ಬಯಲು ಬಯಲನೇ ಬೆಳೆದಿದೆ; ಅದರ ಜೀವನವೂ ಬಯಲು; ಅದರ ಭಾವನೆಯೂ ಬಯಲು; ಬಯಲು ಬಯಲಾಗಿ ಒಮ್ಮೆ ಬಯಲೇ ಆಗುತ್ತದೆ. ಬಯಲನ್ನು ಪೂಜಿಸಿದ ಪುರಾತನರು ಮುನ್ನವೇ ಬಯಲಾದರು. ನಾನು ನಿಮ್ಮ ಪೂಜಿಸಿ ಬಯಲಾದೆ ಗುಹೇಶ್ವರಾ ಎಂದು ಅಲ್ಲಮಪ್ರಭುಗಳು ಬಯಲು ತಾವೇ ಆಗಿ ಬಯಲ ಸೂತ್ರ ಬಯಲಿಂದ ಹುಟ್ಟಿದ ಮನುಕುಲ ತಿಳಿಯಲೆಂದು ಹಾಡಿದ್ದಾರೆ.

ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಎಂದು ಸಿದ್ಧರಾಮ ಶಿವಯೋಗಿಗಳು ಬಯಲುದೇವನಿಗೆ ಹೆಸರನಿಟ್ಟು ಕರೆದಿದ್ದಾರೆ. ಅಂಗದಲ್ಲಿ ಸಂಗಮವಾದ ಬಯಲುದೇವನನ್ನೇ ಲಿಂಗವನ್ನಾಗಿಸಿಕೊಂಡು ನಿತ್ಯ ಲಿಂಗಾರ್ಚನೆ ಮಾಡುವ ವಿಧಾನದ ಸೂತ್ರವನ್ನು ತನ್ನ ಸಕಲ ಓದುಗರಿಗೆ ಬಹಿರಂಗವಾಗಿಯೇ ನೀಡಿದ್ದಾರೆ. ತಿಳಿದು ಆರಾಧಿಸಿದವನೇ ಶರಣ.

**607**

**ತಾಮಸಿ ಎಲ್ಲೆಲ್ಲಿ ತಾಮಸಿ ಅಲ್ಲಲ್ಲಿ,**
**ಸೋಮ ಕಳೆಯಿಂದಲ್ಲಿ ಸುಖತರದಲ್ಲಿ,**
**ಕಾಮ್ಯಾರ್ಥವಂ ಬಿಟ್ಟು ಪದ ನಾಲ್ಕನುಂ ಮೀರಿ**
**ನಾ ನಿಮ್ಮನೆಯ್ದಿದೆ ಕಪಿಲಸಿದ್ಧ ಮಲ್ಲಿನಾಥಯ್ಯ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಅಂಗವನ್ನು ಆವರಿಸಿದ

ಮನದಿಂದಲೇ ಹುಡುಕಬೇಕು. ಆದರೆ ಗುರುದೇವನನ್ನು ಹುಡುಕುವ ಮನ ತಾಮಸ ಗುಣಗಳಿಂದ ಕೂಡಿದೆ. ಮನಕ್ಕೆ ಕಾಮವೆಂದರೆ ಬಲು ಇಷ್ಟ. ಅದು ತನಗೆ ದಕ್ಕದಿದ್ದರೆ ಕ್ರೋಧದಿಂದ ಕೆಂಡದ ಉಂಡೆಯಂತಾಗುತ್ತದೆ. ಕಾಮ ದಕ್ಕಿದರೆ ಆ ಸುಖದಿಂದ ಅದು ಲೋಭಿಯಾಗುತ್ತದೆ. ಅದನ್ನೇ ಸುಖದ ಸುಖವೆಂದು ತಿಳಿದು ಮೋಹದಲ್ಲಿ ಮುಳುಗುತ್ತದೆ. ಅಂತಹ ಸುಖ ಮತ್ತಾರಲ್ಲಿಯೂ ಇಲ್ಲವೆಂದು ಮದದಿಂದ ಬೀಗುತ್ತದೆ. ತನಗೆ ದಕ್ಕಿದ ವಸ್ತುವಿಗಿಂತ ಸುಂದರವಾದದ್ದು ಮತ್ತೊಂದು ತನುವಿನಲ್ಲಿ ಕಂಡರೆ ಸಾಕು ಮತ್ಸರದಿಂದ ತನ್ನನ್ನು ತಾನೇ ಸುಟ್ಟುಕೊಳ್ಳುತ್ತದೆ. ಇಂತಹ ತಾಮಸ ಗುಣವುಳ್ಳ ಮನದಿಂದ ಅರಿವೆಂಬ ಗುರುದೇವನನ್ನು ಹುಡುಕುವುದು ಮನಕ್ಕೆ ಸಾಧ್ಯವಾಗದ ಮಾತು.

ಸೋಮಕಳೆಯಿಂದ ಮಿರಿಮಿರಿ ಮಿಂಚುವ ಮನ, ಕಾಮ ಸುಖವನ್ನು ಉಂಡು ಕಾಮ ಸುಖದಲ್ಲಿಯೇ ಹಗಲಿರುಳೆನ್ನದೆ ತನ್ನನ್ನು, ತಾನು ಆವರಿಸಿದ ತನುವನ್ನು ಮುಳುಗಿಸಿಕೊಂಡ ಮನ, ಅಜ್ಞಾನದಿಂದ ಹೊರಬಂದು ಜ್ಞಾನದ ಸುಖವನ್ನು ಹುಡುಕಿ ಆ ಜ್ಞಾನಸುಖದಲ್ಲಿಯೇ ಸದಾ ಮುಳುಗಿ, ಪರಮಾನಂದವನ್ನು ಪಡಬೇಕೆಂಬ ಉತ್ಕಟ ಇಚ್ಛೆ ಆದರೆ, ಅರಿವೆಂಬ ಗುರುದೇವನು ವಾಸ ಮಾಡಿದ ಸ್ಥಾನವನ್ನು ಮನ ಹುಡುಕಿಯೇ ತೀರುತ್ತದೆ.

ಅರಿವೆಂಬ ಗುರುದೇವನನ್ನು ಅಂಗದಲ್ಲಿಯೇ ಹುಡುಕಬೇಕು. ಆತ ನಿಶ್ಚಲ ಬ್ರಹ್ಮ. ಚಲನೆಯಿಲ್ಲದಾತ. ಬಯಲ ಸಿಂಹಾಸನದ ಮೇಲೆ ಕುಳಿತು ಬಯಲೇ ತಾನಾದಾತ. ಕಾಮ್ಯಾರ್ಥ ಸುಖವನ್ನು ಬಿಟ್ಟು, ಪದ ನಾಲ್ಕು ಮೀರಿ ಹುಡುಕಿದಾಗಲೇ ಆತ ಮನವನ್ನು ಬರದಿಂದ ಸೆಳೆದುಕೊಂಡು ಘನಮನವನ್ನಾಗಿಸುತ್ತಾನೆ.

ಭೂಮಿಗೆ ಬಿರಿಯುವ ಗುಣವಿದೆ. ಜಲಕ್ಕೆ ಹರಿಯುವ ಗುಣವಿದೆ. ಅಗ್ನಿಗೆ ಸುಡುವ ಗುಣವಿದೆ. ವಾಯುವಿಗೆ ಬೀಸುವ ಗುಣವಿದೆ. ಈ ನಾಲ್ಕು ಪದಗಳನ್ನು ಮೀರಿದ ವಸ್ತುವೇ ಬಯಲು. ಅದು ಅಗ್ನಿಗೆ ಸುಡುವುದಿಲ್ಲ; ಭೂಮಿಯಂತೆ ಬಿರಿಯುವುದಿಲ್ಲ. ಗಾಳಿಗೆ ತರಗೆಲೆಯಂತೆ ಹಾರುವುದಿಲ್ಲ. ನೀರಿಗೆ ತೊಯ್ಯುವುದಿಲ್ಲ. ಅದು ನಿರ್ಗುಣ. ಯಾವ ಗುಣವನ್ನೂ ಹೊಂದಿಲ್ಲ.

ಬಯಲು, ಭೂಮಿಯನ್ನು ಸೃಷ್ಟಿ ಮಾಡಿದೆ. ಜಲವನ್ನು ಸೃಷ್ಟಿ ಮಾಡಿ ಸಕಲ ಜೀವಗಳಿಗೆ ಪೋಷಣೆ ನೀಡುತ್ತಲಿದೆ. ಅಗ್ನಿ, ವಾಯುವನ್ನು ಸೃಷ್ಟಿ ಮಾಡಿ ಇಡೀ ಬ್ರಹ್ಮಾಂಡವನ್ನೇ ನಿರ್ಮಾಣ ಮಾಡಿದೆ. ಸಕಲ ಬ್ರಹ್ಮಾಂಡವನ್ನೂ ತನುವಿನಲ್ಲಿ ಸಂಗಮಮಾಡಿ, ಬಯಲು ಆ ತನುವಿನಲ್ಲಿಯೇ ಸಂಗಮವಾಗಿದೆ.

ಆ ಬಯಲೇ ಅರಿವೆಂಬ ಗುರುದೇವನಾಗಿ ತನುವಿಗೆ ಬೋಧೆ ಮಾಡುತ್ತಲಿದ್ದಾನೆ. ಆ ಗುರುದೇವನ ಬೆಳಕಿನಿಂದ ಹುಟ್ಟಿದ ನೆರಳೇ ಮನವಾಗಿ ತನುವನ್ನು ಆವರಿಸಿದೆ. ಮನ ತನುವಿನ ಸಂಗಮಾಡಿ, ತನುವಿನಲ್ಲಿ ಅರಿಷಡ್ವರ್ಗಗಳನ್ನು, ಸಪ್ತವ್ಯಸನಗಳನ್ನು, ಅಷ್ಟಮದಗಳನ್ನು ಸೃಷ್ಟಿ ಮಾಡಿ ಅದರೊಂದಿಗೆ ತನುವಿನ ಮೂಲಕ ಸುಖಿಸುತ್ತದೆ. ಹೀಗೆ ಸುಖಿಸುವ ಮನ ಕಾಮ್ಯಾರ್ಥವನ್ನು ಬಿಟ್ಟು, ಪದ ನಾಲ್ಕನ್ನು ಮೀರಿ, ಅರಿವಿನ ಮಲ್ಲಯ್ಯನೊಂದಿಗೆ ಕೂಡಬೇಕಾಗಿದೆ.

**608**

**ತಾಮಸಿಯ ಕೂಟದಲ್ಲಿ ತಾಮಸಿ ನಾನಾದೆ**
**ಸಾಮಪ್ರಭೆಯಲ್ಲಿ ಶುದ್ಧ ಮುಗ್ಧನಾದೆ**
**ನಾನಾ ಕಳಾಭೇದ ತಾನು ನೀನಾಗಿ**
**ಊರು ಆರರ ಅತಿ ಸಂಬಂಧದ ಹಲವು ಮೂರನೆ ಬಿತ್ತಿ**

**ಫಲವು ಮತ್ತೊಂದಾಗಿ ಒದವಿತ್ತು.**
**ತುರಿಯದಾ ಸಂಯೋಗಕೆ ಸಾನಂದ ಜ್ಯೋತಿಯಲಿ**
**ತಾನು ತಾನೊಂದಾಗಿ ಭಾನುವಿನ ಉದಯದಲಿ**
**ಅನುಭವಿಸಿದ ಸಾಮು ಶುದ್ಧಾಂಗದಲಿ**
**ನಾನಾ ಧವಳ ಮನೆಯ ಕಾರಣದಲಿ**
**ಮುಕ್ತಿ ಮೂರ್ಛೆವೋಗಿ ಪರಮ ಹರುಷದಲೀಗ**
**ಉರುತರಂ ಕೈವಲ್ಯ ಒದವಿ ನಾ ನೀನಾದೆ.**
**ಸದುಹೃದಯದಾ ಕಪಿಲಸಿದ್ಧ ಮಲ್ಲಿಕಾರ್ಜುನ**
**ಗುರುವಾಗಿ ಬಂದೀಗ**
**ಭವದ ಬೇರನು ಹರಿದ ನಿಶ್ಚಯಾರ್ಥದಿಂ.**

ನಾನು ತಾಮಸಿ. ನೀನು ಸಾಮಪ್ರಭೆಯ ಬೆಳಕು. ನಾನು ನಿನ್ನ ಸಂಗ ಮಾಡುವ ಮುನ್ನ ನೀನು ವಾಸ ಮಾಡಿದ ತನುವಿನ ಸಂಗ ಮಾಡಿ ತಾಮಸಿಯಾದೆ. ತಾಮಸದಿಂದ ಸಂಗ ಮಾಡಿ ತಾಮಸದ ಕೂಟದ ಸವಿಯನುಂಡೆ. ನಿನ್ನ ಸಾಮಪ್ರಭೆಯ ಬೆಳಕಿನಿಂದ ನಾನು ಶುದ್ಧನಾದೆ; ಮುಗ್ದನಾದೆ.

ನಾನು ನಿನ್ನೊಳಗೆ ಕೂಡಿ ನೀನಾಗಲು ನಾನು ನಾನಾ ಅವಸ್ಥೆ ಪಡಬೇಕಾಯಿತು. ನಾನಾ ಕಲೆಗಳನ್ನು ಕಲಿತು ಪುನಃ ಅವುಗಳನ್ನು ಭೇದಿಸಬೇಕಾಯಿತು.

ತನುವಿನಲ್ಲಿ ನೀನು ತನ್ಮಯವಾಗಿದ್ದರೂ ತನುವನ್ನೇ ಅವಲಂಬಿಸಿ ತನುವನ್ನೇ ಆವರಿಸಿದ ನಾನು ತನುವೆಂಬುದನ್ನೇ ನನ್ನ ಊರಾಗಿಸಿಕೊಂಡೆ.

ನೀನು ವಾಸ ಮಾಡಿದ ಆ ಊರಿನಲ್ಲಿ ನನಗೆ ಬೇಕಾದ ಅರಿಷಡ್ವರ್ಗಗಳನ್ನು, ಸಪ್ತವ್ಯಸನಗಳನ್ನು, ಅಷ್ಟಮದಗಳನ್ನು ಸೃಷ್ಟಿಸಿದೆ. ಅದರ ಮೇಲೆ ಸಾತ್ವಿಕ ರಾಜಸ ತಾಮಸ ಗುಣಗಳೆಂಬ ಬೀಜವನ್ನು ಬಿತ್ತಿದೆ.

ನಿನ್ನ ದಯೆಯಿಂದಾಗಿ ಇವೆಲ್ಲವನ್ನೂ ಕೆಡಿಸಿ ಗೊಬ್ಬರ ಮಾಡಿಕೊಂಡೆ. ಆಗ ನೀನು ಅರಿವಿನ ಬಯಲ ಬೀಜವನ್ನು ಬಿತ್ತಿದೆ. ಆ ತೂರ್ಯಾತೀತ ಸಂಯೋಗದಿಂದಾಗಿ ಸಾನಂದದ ಜ್ಯೋತಿಯೊಂದು ಬೆಳಗಿಸಿದೆ. ಬೆಳಗುವ ಸೂರ್ಯನನ್ನು ನಾಚಿಸುವಂತೆ ಆ ಜ್ಯೋತಿ ಬೆಳಗಿತು. ಆ ಪರಮ ಸುಖವನ್ನು ಅನುಭವಿಸುತ್ತಾ ಕೈವಲ್ಯ ಕಲ್ಪವಲ್ಲರಿ ಎಂಬ ತನುವಿನ ಮನೆಯಲ್ಲಿ ನಾನು ನಿನ್ನೊಂದಿಗೆ ಕೂಡಿ ನಾನು ನೀನಾದೆ.

ಸದುಹೃದಯದ ಕಪಿಲಸಿದ್ಧ ಮಲ್ಲಿಕಾರ್ಜುನ ದೇವನು ಗುರುದೇವನಾಗಿ ಬಂದು ನಿಶ್ಚಯಿಸಿ ಭವದ ಬೇರನು ಹರಿದು ಹಾಕಿದ. ಜನನ ಮರಣಗಳೆಂಬ ಅಜ್ಞಾನವನ್ನು ಕಿತ್ತೆಸೆದ.

**609**

**ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು**
**ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು**
**ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು**
**ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು**
**ಅದು ಕಾರಣ ಹೆಣ್ಣು ಹೆಣ್ಣಲ್ಲ ಹೆಣ್ಣು ರಾಕ್ಷಸಿಯಲ್ಲ;**
**ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ!**

ತಾ ಮಾಡಿದ ಹೆಣ್ಣು ತನ್ನ ತಲೆಯನೇರಿ ಗಂಗೆ ಎಂದು ಕರೆಯಿಸಿಕೊಂಡಳು. ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿ ಗೌರಿ ಎಂದು ಕರೆಯಿಸಿಕೊಂಡಳು. ತಾ ಮಾಡಿದ ಹೆಣ್ಣು ತನ್ನ ನಾಲಿಗೆಯ ಮೇಲೆ ನಾಟ್ಯವಾಡುತ್ತಾ ಸರಸ್ವತಿ ಎಂದು ಕರೆಯಿಸಿಕೊಂಡಳು. ತಾ ಮಾಡಿದ ಹೆಣ್ಣು ತನ್ನ ಎದೆಯನೇರಿ ಲಕ್ಷ್ಮೀ ಎಂಬ ಹೆಸರಿನೊಂದಿಗೆ ಕರೆಯಿಸಿಕೊಂಡಳು. ಹೀಗಾಗಿ...

ಹೆಣ್ಣು ಹೆಣ್ಣಲ್ಲ ಹೆಣ್ಣು ರಾಕ್ಷಸಿಯಲ್ಲ ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ ಎಂದು ಸಿದ್ಧರಾಮ ಶಿವಯೋಗಿಗಳು ಹೆಣ್ಣನ್ನು ಹಾಡಿ ಹೊಗಳಿದ್ದಾರೆ.

ಹೆಣ್ಣು ಹೆಣ್ಣಲ್ಲ; ಗಂಡು ಕೂಡಾ ಅಲ್ಲ. ಗಂಡು ಗಂಡಲ್ಲ ಹೆಣ್ಣು ಕೂಡಾ ಅಲ್ಲ. ಹೆಣ್ಣು ಗಂಡು ಎಂದು ಕರೆಯಿಸಿಕೊಳ್ಳುವ ಎರಡು ದೇಹಗಳು ಬರೀ ದೇಹಗಳು; ಬರೀ ದೇಹ ಮಾತ್ರ !

ಹೆಣ್ಣು ಎನ್ನುವ ದೇಹದಲ್ಲಿ ಮಹಾಪುರುಷ ಸಂಗಮವಾಗಿದ್ದಾನೆ. ಹಾಗೆಯೇ ಗಂಡು ಎನ್ನುವ ದೇಹದಲ್ಲಿ ಮಹಾಪುರುಷ ಸಂಗಮವಾಗಿದ್ದಾನೆ. ಹೆಣ್ಣು ಗಂಡು ಎನ್ನುವ ದೇಹವನ್ನು ಮನ ಆವರಿಸಿದೆ. ಈ ಮನಕ್ಕೆ ದೇಹದಲ್ಲಿರುವ ಮಹಾಪುರುಷನ ಪರಿಚಯವಾದರೆ ಸಾಕು ಮನವೇ ಹೆಣ್ಣಾಗುತ್ತಾಳೆ.

ಈ ಹೆಣ್ಣೇ ಮಹಾಪುರುಷನ ತಲೆಯನೇರಿ ಗಂಗೆಯೆಂದು ಕರೆಯಿಸಿಕೊಳ್ಳುತ್ತಾಳೆ. ಮಹಾಪುರುಷನೆಂಬ ಗಂಗಾಧರನ ತೊಡೆಯನೇರಿ ಗೌರಿ ಎಂದು ಕರೆಯಿಸಿಕೊಳ್ಳುತ್ತಾಳೆ. ಮಹಾಪುರುಷನೆಂಬ ಬ್ರಹ್ಮನ ನಾಲಿಗೆಯನೇರಿ ಸರಸ್ವತಿ ಎಂದು ಕರೆಯಿಸಿಕೊಳ್ಳುತ್ತಾಳೆ. ಮಹಾಪುರುಷನೆಂಬ ನಾರಾಯಣನ ಎದೆಯನೇರಿ ಲಕ್ಷ್ಮೀದೇವಿ ಎಂದು ಕರೆಯಿಸಿಕೊಳ್ಳುತ್ತಾಳೆ.

ಮನಕ್ಕೆ ತಾನು ಹೆಣ್ಣು ಎನ್ನುವ ಅನುಭವ ಆಗದಿದ್ದರೆ ಮನವೇ ದೇಹವನ್ನು ಹೆಣ್ಣಾನ್ನಾಗಿಸುತ್ತದೆ. ಮನವೇ ದೇಹವನ್ನು ಗಂಡನ್ನಾಗಿಸುತ್ತದೆ. ಮನವೇ ದೇಹವನ್ನು ಗುರುವನ್ನಾಗಿಸುತ್ತದೆ; ಮನವೇ ದೇಹವನ್ನು ಶಿಷ್ಯನನ್ನಾಗಿಸುತ್ತದೆ. ಮನವೇ ದೇಹವನ್ನು ಜಗದ್ಗುರುವನ್ನಾಗಿಸುತ್ತದೆ; ಮನವೇ ದೇಹವನ್ನು ಭಕ್ತನನ್ನಾಗಿಸುತ್ತದೆ. ಮನವೇ ದೇಹವನ್ನು ಹಿಡಿದು ಕಲ್ಲನ್ನು ಕೆತ್ತಿ ದೇವರನ್ನಾಗಿಸಿ, ಆ ದೇವರಿಗೆ ದೇಹವನ್ನು ಹಿಡಿದು ಭಕ್ತನನ್ನಾಗಿಸುತ್ತದೆ. ಮನವೇ ದೇಹವನ್ನು ತನ್ನ ಅಜ್ಞಾನದ ಸಾಮ್ರಾಜ್ಯವನ್ನಾಗಿ ಮಾಡಿಕೊಂಡು ದೇಹಕ್ಕೆ ಶ್ರೀಮಂತ ಬಡವ ಭಿಕ್ಷುಕ ಅಧಿಕಾರಿ ಶಾಸಕ ಮಂತ್ರಿ ಪ್ರಧಾನಿ ಅಧ್ಯಕ್ಷನ ವೇಷ ಹಾಕುತ್ತದೆ.

ಮನವೇ ದೇಹವನ್ನು ಹಿಡಿದು ಹಿಂದು ಮುಸಲ್ಮಾನ ಕ್ರೈಸ್ತ ಸಿಖ್ ಫಾರ್ಸಿ ಎಂದು ಕರೆಯಿಸಿಕೊಂಡು, ದೇಹದಲ್ಲಿ ನಾನಾ ಜಾತಿಗಳನ್ನು ಸೃಷ್ಟಿ ಮಾಡುತ್ತದೆ. ದೇಹದಲ್ಲಿಯೇ ಸಂಗಮವಾದ ಅರಿವಿನ ಮಹಾಪುರುಷನನ್ನೇ ಮರೆತುಹೋಗುತ್ತದೆ. ಮನಕ್ಕೆ ಅರಿವಿನ ಮಹಾಪುರುಷನ ದರುಶನವಾದರೆ ಸಾಕು ತಾನು ಸ್ತ್ರೀಯಾಗುತ್ತಾಳೆ. ಈಶ್ವರನಿಗೆ ನಾರಿಯಾಗಿ 'ಅರ್ಧನಾರೀಶ್ವರ' ಎಂಬ ಹೆಸರಿನಿಂದ ಕರೆಯಿಸಿಕೊಳ್ಳುತ್ತಾಳೆ.

ಕಾಯವನ್ನೇ ಕೈಲಾಸ ಮಾಡಿಕೊಂಡು ಕಾಯದಲ್ಲಿಯೇ ಸಂಗಮವಾದ ಮಹಾಪುರುಷನೆಂಬ ಮಹೇಶ್ವರನ ತಲೆಯನೇರಿ ಗಂಗೆ ಎಂದು ಕರೆಯಿಸಿಕೊಳ್ಳುತ್ತಾಳೆ.

ಕಾಯದಲ್ಲಿಯೇ ಸಂಗಮವಾದ ಮಹಾಪುರುಷನೆಂಬ ಗಂಗಾಧರನ ತೊಡೆಯನೇರಿ ಗೌರಿ ಎಂದು ಕರೆಯಿಸಿಕೊಳ್ಳುತ್ತಾಳೆ. ಕಾಯದಲ್ಲಿಯೇ ಸಂಗಮವಾದ ಮಹಾಪುರುಷನೆಂಬ ಬ್ರಹ್ಮನ ನಾಲಿಗೆಯನೇರಿ ಸರಸ್ವತಿ ಎಂದು ಕರೆಯಿಸಿಕೊಳ್ಳುತ್ತಾಳೆ. ಕಾಯದಲ್ಲಿಯೇ ಸಂಗಮವಾದ ಮಹಾಪುರುಷನೆಂಬ ನಾರಾಯಣನ ಎದೆಯನೇರಿ ಲಕ್ಷ್ಮೀದೇವಿ ಎಂದು ಕರೆಯಿಸಿಕೊಳ್ಳುತ್ತಾಳೆ.

ಮಹೇಶ್ವರ ಮತ್ತು ಗಂಗೆ ಇಬ್ಬರೂ ವಾಸ ಮಾಡುವ ಕಾಯ ಕೈಲಾಸವಾಗುತ್ತದೆ. ಗಂಗಾಧರ ಗೌರಿ ವಾಸಮಾಡುವ ದೇಹವೇ ದೇವಾಲಯವಾಗುತ್ತದೆ. ಬ್ರಹ್ಮ ಸರಸ್ವತಿ ವಾಸಮಾಡುವ ದೇಹ

ಬ್ರಹ್ಮಲೋಕವಾಗುತ್ತದೆ. ನಾರಾಯಣ ಲಕ್ಷ್ಮೀ ವಾಸಮಾಡುವ ದೇಹ ವೈಕುಂಠವೆಂದು ಕರೆಯಿಸಿಕೊಳ್ಳುತ್ತದೆ.

ದೇಹವೆಂದರೆ ಹೆಣ್ಣು ಅಲ್ಲ ಗಂಡೂ ಅಲ್ಲ; ಮನವೆಂಬ ಹೆಣ್ಣು ಅರಿವೆಂಬ ಗಂಡು ವಾಸಮಾಡುವ ದೇವಾಲಯ. ಮನವೆಂಬ ಹೆಣ್ಣು ಸತಿಯಾಗಿ, ಅರಿವೆಂಬ ಲಿಂಗವೇ ಪತಿಯಾಗಿ, ಶರಣ ಸತಿ ಲಿಂಗ ಪತಿಯೆಂದು ಶರಣರಿಂದ ಹೆಸರಿಟ್ಟು ಕರೆಯಿಸಿಕೊಂಡಿದೆ.

ಮನಕ್ಕೆ ಅರಿವಾಗದಿದ್ದರೆ ದೇಹ ಏನೇನೋ ಆಗಿ ತನ್ನ ಆಯುಷ್ಯವನ್ನು ವ್ಯರ್ಥವಾಗಿ ಕಳೆದುಕೊಳ್ಳುತ್ತದೆ. ಮನಕ್ಕೆ ಅರಿವಾದರೆ ಸಾಕು ಅದು ಮಹೇಶ್ವರ ಗಂಗಾಧರ ಬ್ರಹ್ಮ ಹಾಗೂ ನಾರಾಯಣನಿಗೆ ಮಹಾರಾಣಿಯಾಗಿ ಅರಿವಿನಿಂದ ಬದುಕುತ್ತದೆ. ಅರಿವಿನ ದೇಹ, ಗುರುವಿನ ದೇಹವೆಂದು ಕರೆಯಿಸಿಕೊಳ್ಳುತ್ತದೆ.

**610**

**ತಾಯಮದಾಯಮನಾಗಳು ಹು! ಹೂ! ಹೊ! ಹಾ! ಅವ್ವೆ**
**ಆನು ತನ್ನ ಬಿಟ್ಟಡೆ ತಾನೆನ್ನ ಬಿಡಳು ನೋಡಾ!**
**ಬಿಟ್ಟಡೆ ಬಿಡದೆ ಒಪ್ಪಿಸುವೆ, ಕಪಿಲಸಿದ್ಧ ಮಲ್ಲಿನಾಥಯ್ಯಗೆ.**

ತಾಯ ಮದ ಆ ಯಮನಾಗಳು ಹು! ಹೂ! ಹೊ! ಹಾ! ಅವ್ವೆ ಆನು ತನ್ನನ್ನು ಬಿಟ್ಟರೂ ಕೂಡಾ ತಾನು ನನ್ನನ್ನು ಬಿಡಳು ನೋಡಾ! ಬಿಟ್ಟಡೆ ಬಿಡದೆ ಒಪ್ಪಿಸುವೆ, ಕಪಿಲಸಿದ್ಧ ಮಲ್ಲಿನಾಥಯ್ಯಗೆ.

ಮೂರು ಸಾಲಿನ ಈ ವಚನದಲ್ಲಿ ಭಾಷೆಯ ಚಮತ್ಕಾರವನ್ನೇ ಅಡಗಿಸಿದ್ದಾರೆ. ತಾಯ ಅಂದರೆ ಹೆಣ, ಮದ ಅಂದರೆ ಮತ್ತು ಎಂಬ ಅರ್ಥವೂ ಇದೆ. ಹೆಣ ಮತ್ತೆ ಯಮನಾಗಳು ಹು! ಹೂ! ಹೊ! ಹಾ! ಅವ್ವೆ ಎಂದು ಉಗ್ಗಡಿಸಿದ್ದಾರೆ.

ಆನು ತನ್ನ ಬಿಟ್ಟಡೆ ತಾನೆನ್ನ ಬಿಡಳು ನೋಡಾ! ಬಿಟ್ಟಡೆ ಬಿಡದೆ ಒಪ್ಪಿಸುವೆ, ಕಪಿಲಸಿದ್ಧ ಮಲ್ಲಿನಾಥಯ್ಯಗೆ.

ಸತ್ತ ಹೆಣ ಮತ್ತೆ ಕೂಗಿದುದು ನೋಡಾ ಎನ್ನುತ್ತಾರೆ ಅಲ್ಲಮಪ್ರಭುಗಳು. ಪ್ರಭುಗಳ ಈ ಮಾತಿಗೂ ಸಿದ್ಧರಾಮ ಶಿವಯೋಗಿಗಳ ವಚನದ ಈ ಸಾಲಿಗೂ ಸಾಮ್ಯವಿದೆ.

ಬಿಟ್ಟೆನೆಂದಡೆ ಬಿಡದೀ ಮಾಯೆ ಎನ್ನುವ ಶರಣರ ಮಾತೂ ಇದೆ. ದೇಹ ಹೆಣವಾಗಬಹುದು ಮತ್ತೆ ಯಮನಾಗುವುದಿಲ್ಲ. ಏಕೆಂದರೆ ದೇಹವನ್ನು ಅಮರಿಕೊಂಡ ಮನವೆಂಬ ಮಾರಿ ದೇಹದ ಸಂಗ ಬಿಟ್ಟು ಅರಿವೆಂಬ ಮಲ್ಲಿಕಾರ್ಜುನ ದೇವರ ಸಂಗ ಮಾಡಿದಾಗ ದೇಹ ನಿರಾಳ. ಅದು ಸತ್ತಂತೆಯೇ ಇರುತ್ತದೆ. ದೇಹ ಭಾವಗಳು ಸತ್ತು ಯಮನ ಪಾಲಾಗುತ್ತವೆ. ಯಮ ಮತ್ತೆ ಆ ದೇಹವನ್ನು ಬಾಧಿಸಲಾರ.

ದೇಹದ ಪ್ರಾಣವನ್ನು ಯಮ ಕಿತ್ತುಕೊಂಡರೆ ಸಾಕು ದೇಹ ಜಡವಾಗುತ್ತದೆ. ದೇಹದ ಸಂಬಂಧಿಗಳು ದೇಹವನ್ನು ಹಿಡಿದು ಅಲುಗಾಡಿಸಿ ಅಳುತ್ತಾರೆ. ದೇಹ ಪ್ರಾಣದೊಂದಿಗೆ ಇದ್ದಾಗ ಅದು ಮಾಡಿದ ಕೆಲಸಗಳನ್ನು ಕುರಿತು ಹೊಗಳುತ್ತಾರೆ; ಬಯ್ಯುತ್ತಾರೆ. ಆದರೂ ದೇಹ ಪ್ರತಿಕ್ರಿಯೆ ವ್ಯಕ್ತ ಪಡಿಸುವುದಿಲ್ಲ. ದೇಹವಿದೆ; ಪ್ರಾಣವಿಲ್ಲ. ಪ್ರಾಣವನ್ನು ಕದ್ದ ಯಮ, ಮತ್ತೆ ಆ ದೇಹದಲ್ಲಿ ಪ್ರವೇಶ ಮಾಡಿ ಪ್ರಾಣ ಹಿಂತಿರುಗಿಸುವುದಿಲ್ಲ. ಹೀಗಾಗಿ ಸಂಬಂಧಿಗಳು ಬಯ್ದರೂ ಹೊಗಳಿದರೂ ಅಲುಗಾಡಿಸಿದರೂ ದೇಹ ಜುಮ್ಮೆನ್ನುವುದಿಲ್ಲ. ಹಾಗೆಯೇ..

ದೇಹವನ್ನು ಆವರಿಸಿದ ಮಾರಿ ದೇಹವನ್ನು ಬಿಟ್ಟು ದೇಹದಲ್ಲಿಯೇ ಸಂಗಮವಾದ ಅರಿವಿನ

ದೇವರ ಸಂಗಮಾಡಿದಾಗ ದೇಹ ಅವರಿಬ್ಬರಿಗೂ ವಾಸಮಾಡಲು ದೇವಾಲಯವಾಗಿ ಮಾರ್ಪಡುತ್ತದೆ. ಮನ ಘನಮನವಾಗಿ ಶಿವೆಯಾಗುತ್ತಾಳೆ. ಅರಿವೇ ಗುರುವಾಗಿ, ಆ ಗುರುದೇವನೆ ಸದಾಶಿವನಾಗುತ್ತಾನೆ. ದೇಹ ಶಿವ ಶಿವೆಯರು ವಾಸಮಾಡುವ ದೇವಾಲಯವಾಗುತ್ತದೆ. ಇಂತಹ ದೇಹವನ್ನು ಯಮ ಮತ್ತೆ ಪ್ರವೇಶಿಸುವುದಿಲ್ಲ. ಏಕೆಂದರೆ ದೇಹದಲ್ಲಿ ಮೃತ್ಯುಂಜಯ ವಾಸಮಾಡಿದ್ದಾನೆ. ದೇಹಕ್ಕೆ ಮತ್ತೆ ಮತ್ತೆ ಮೃತ್ಯುತರುವ ಮನವೆಂಬ ಮಾರಿ ಮೃತ್ಯುಂಜಯನಿಗೆ ಮನಸೋತು ಆತನ ಮನದನ್ನೆಯಾಗಿದ್ದಾಳೆ.

ಆನು ತನ್ನ ಬಿಟ್ಟಡೆ ತಾನೆನ್ನ ಬಿಡಳು ನೋಡಾ: ದೇಹವನ್ನು ಯಮ ಕೊಂಡೊಯ್ಯುವ ಮುನ್ನ ದೇಹವನ್ನು ಆವರಿಸಿದ ಮನವೆಂಬ ಮಾರಿ ದೇಹದಲ್ಲಿಯೇ ಸಂಗಮವಾದ ಅರಿವಿನ ದೇವರ ಸಂಗಮಾಡಬೇಕು. ಆ ಸಂಗ ಸುಖದಲ್ಲಿ ನಿರತವಾದ ಮನ ದೇಹದ ಸಂಗ ತಂತಾನೆ ಬಿಡುತ್ತದೆ. ದೇಹದ ಸಂಗ ಮನ ಬಿಟ್ಟರು ಕೂಡಾ ದೇಹ ಮನದ ಸಂಗ ಬಿಡುವುದಿಲ್ಲ, ಹಾಗೆಯೇ ಅರಿವೆಂಬ ಗುರುದೇವರ ಸಂಗವನ್ನೂ ಬಿಡುವುದಿಲ್ಲ.

ದೇಹ ಅರಿವಿನ ದೇವರುಗಳಿದ್ದ ದೇಗುಲವಾಗುತ್ತದೆ. ಸುಖ ದುಃಖಗಳ ಬಾಧೆ ದೇಹಕ್ಕೆ ತಾಗುವುದಿಲ್ಲ. ದೇಹಕ್ಕೆ ಬಡಿದ ಸಕಲ ಸುಖ ದುಃಖಗಳು ಅರಿವಿನ ದೇವರಿಗೆ ಪ್ರಸಾದವಾಗುತ್ತವೆ.

ದೇಹವೆಂದರೆ ಸಾಮಾನ್ಯವಲ್ಲ. ಅದು ಬಯಲ ಬೀಜದಿಂದ ಹುಟ್ಟಿದ ಬಯಲ ವೃಕ್ಷ. ಬೋಧೆ ಮಾಡುತ್ತಾ ಅಲೆದಾಡುವ ಬೇರಿಲ್ಲದ ಬೋಧೀವೃಕ್ಷ. ವಿರಾಟಸ್ವರೂಪ! ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವ ಚೆಲುವೆಯರು ವಾಸಮಾಡಿದ ಆಲಯ!

**611**

**ತಾಯೆ, ತವರೆ, ಬಸವ ಬಸವಾ,**
**ಭಕ್ತಿಮುಕ್ತಿಯ ರೂಪು ಬಸವನ ಪ್ರಸಾದವಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಬಸವನೆಂದರೆ ತಾಯಿಯೂ ಹೌದು; ತವರೂ ಹೌದು. ಭಕ್ತಿಗೆ ಸೋಪಾನವೂ ಹೌದು. ಮುಕ್ತಿಯ ರೂಪೇ ಬಸವನ ಪ್ರಸಾದವು. ಭಕ್ತಿ ಎಂಬ ಪದ ಬೇರೆಯೇ ಅರ್ಥ ಪಡೆದು ಸವಕಲಾಗಿತ್ತು. ಭಕ್ತಿ ಎಂಬ ಪದವೇ ಮೂಲ ಎನ್ನುವುದು ಮರೆತು ಹೋಗಿತ್ತು. ಆ ಪದ ತಾಯಿ ಎಂಬುದು ಕೂಡಾ ಮರೆತು ಹೋಗಿತ್ತು. ಭಕ್ತಿ ಎನ್ನುವ ಪದವು ತವರು ಎಂದು ಲೋಕಕ್ಕೆ ಸಾರಿ ಬಸವಣ್ಣನವರನ್ನು ''ಭಕ್ತಿ ಭಂಡಾರಿ'' ಎಂದು ಕರೆಯಿತು.

ಅಂಗದ ಮೇಲೆ ನೇತು ಹಾಕಿಕೊಂಡ ಲಿಂಗಕ್ಕೆ ಭಕ್ತಿ ಮಾಡುವುದು ಭಕ್ತಿಯಲ್ಲ. ಅಂತಹ ಭಕ್ತಿ ಮಾಡುವಾತ ಎಂದೂ ತನ್ನ ಅಜ್ಞಾನದಿಂದ ಮುಕ್ತನಾಗುವುದಿಲ್ಲ. ಸರ್ವ ಅಂಗದಲ್ಲಿ ಅರಿವಿನ ಲಿಂಗಯ್ಯ ಸಂಗಮವಾಗಿದ್ದಾನೆ. ಅಂಗವನ್ನು ಮನ ಆವರಿಸಿದೆ. ಈ ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಕಾಣದಂತೆ ಮಾಡಿದೆ. ಇಂತಹ ಮನವನ್ನು ಭಕ್ತನನ್ನಾಗಿಸಿ, ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಆರಾಧಿಸುತ್ತಾ, ಆತನಿಗೆ ಭಕ್ತಿ ಮಾಡಿ ಮುಕ್ತನಾಗುವ ಸರಳ ವಿಧಾನವನ್ನು ಬಸವಣ್ಣನವರು ಸಾಧಕ ಲೋಕಕ್ಕೆ ಹೇಳಿಕೊಟ್ಟರು.

ಅಂಗದಲ್ಲಿ ಐದು ಮಹಾಜ್ಞಾನದ ಹೆಬ್ಬಾಗಿಲುಗಳಿವೆ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ. ಈ ಐದೂ ಜಾಗಗಳಲ್ಲಿ ಸದಾ ಬೆಳಗುವ ಜ್ಯೋತಿರ್ಲಿಂಗಗಳು ಇವೆ. ನೋಡಿದ ಪ್ರತಿ ದೃಶ್ಯವನ್ನು

ಕಣ್ಣು ಬೆಳಗಿ ನೋಡುತ್ತದೆ. ಕೇಳಿದ ಪ್ರತಿ ಶಬ್ದವನ್ನೂ ಕಿವಿ ಬೆಳಗಿ ಕೇಳುತ್ತದೆ. ಮೂಸಿಸುವ ಪ್ರತಿ ಗಂಧವನ್ನು ಮೂಗು ಬೆಳಗಿ ಮೂಸಿಸುತ್ತದೆ. ರುಚಿಸುವ ಪ್ರತಿ ಪದಾರ್ಥವನ್ನು ನಾಲಿಗೆ ಪ್ರಸಾದ ಮಾಡಿಕೊಳ್ಳುತ್ತದೆ. ಸ್ಪರ್ಶಿಸುವ ಪ್ರತಿ ವಸ್ತುವಿನ ಸ್ಪರ್ಶವನ್ನು ಬೆಳಗಿ ಜ್ಞಾನದಿಂದ ಸ್ವೀಕರಿಸುವ ಶಕ್ತಿ ಚರ್ಮದಲ್ಲಿ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಇದೆ. ಹೀಗೆ ಐದೂ ಜ್ಞಾನದ ಹೆಬ್ಬಾಗಿಲುಗಳಲ್ಲಿ ಅರಿವಿನ ಲಿಂಗಯ್ಯ ಮನೆ ಮಾಡಿಕೊಂಡಿದ್ದಾನೆ.

ಅಂಗದಲ್ಲಿ ಸಂಗಮವಾದ ಬೆಳಗುವ ಪಂಚ ಮಹಾಜ್ಯೋತಿರ್ಲಿಂಗಗಳು ಕಾಣದಂತೆ ಮನವೆಂಬ ಕರಿನೆರಳು ಆವರಿಸಿಕೊಂಡಿದೆ. ಹೀಗಾಗಿ ಕಣ್ಣಿಗೆ ನೋಡಲು ಬರುವುದಿಲ್ಲ; ಕಿವಿಗೆ ಕೇಳಲು ಬರುವುದಿಲ್ಲ; ಮೂಗಿಗೆ ಮೂಸಿಸಲು ಬರುವುದಿಲ್ಲ; ನಾಲಿಗೆಗೆ ರುಚಿಸಲು ಬರುವುದಿಲ್ಲ; ಚರ್ಮಕ್ಕೆ ಮುಟ್ಟಲು ಬರುವುದಿಲ್ಲ.

ಮನ ಜ್ಞಾನದ ಐದೂ ಜಾಗಗಳನ್ನು ತನ್ನ ಸ್ವಾಧೀನ ಮಾಡಿಕೊಂಡು ಆಯಾ ಜಾಗದ ಮೂಲಕ ಹಾದರ ಮಾಡುತ್ತದೆ. ಬಸವಣ್ಣ ಮಹಾಜ್ಞಾನಿ; ವಿಜ್ಞಾನಿ. ಆತ ತನಗೆ ತಾನೇ ತನ್ನ ಜ್ಞಾನವನ್ನು ಕಂಡುಕೊಂಡ. ಕಣ್ಣಲ್ಲಿಯೇ ಸಂಗಮವಾದ ಬೆಳಗಿಂಗೆ ಬೆಳಗಾಗಿ ಬೆಳಗುವ ಅರಿವಿನ ಲಿಂಗಯ್ಯನಿಗೆ ಕಣ್ಣನ್ನು ಆವರಿಸಿದ ಮನವನ್ನೇ ಭಕ್ತನನ್ನಾಗಿಸಿದ. ಆ ಭಕ್ತನಿಂದಲೇ ಲಿಂಗಯ್ಯನಿಗೆ ಭಕ್ತಿ ಮಾಡಿದ. ಶರಣು ಹೋಗಿ ಶರಣು ಶರಣಾರ್ಥಿ ಎಂದ. ಮನದ ಅಜ್ಞಾನ ಕಣ್ಣಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಅರ್ಪಣೆಯಾಯಿತು.

ಕಣ್ಣಲ್ಲಿ ಕಣ್ಣಿದ್ದು ಕಾಣಲೇಕರಿಯರಯ್ಯಾ ಎನ್ನುವ ಸೂತ್ರವನ್ನು ಸಾಧಕ ಲೋಕಕ್ಕೆ ನೀಡಿದ ಕೀರ್ತಿ ಬಸವಣ್ಣನವರಿಗೆ ಸಲ್ಲುತ್ತದೆ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಬಸವಣ್ಣನವರನ್ನು ತಾಯಿ ತವರು ಎಂದು ಸಂಬೋಧಿಸಿದ್ದಾರೆ.

ಬಸವಣ್ಣ ಚನ್ನಬಸವಣ್ಣನಿಗೆ ವರಸೆಯಲ್ಲಿ ಸೋದರಮಾವನಾದರೂ ಸಾಧಕಲೋಕಕ್ಕೆ ಬಸವಣ್ಣ ತಂದೆಯೂ ಹೌದು ತಾಯಿಯೂ ಹೌದು. ತವರೂ ಹೌದು. ಬಸವಣ್ಣನೇ ಜ್ಞಾನಕ್ಕೆ ಮೂಲನೂ ಆಗಿದ್ದಾನೆ. ಗುರು ಲಿಂಗ ಜಂಗಮ ಭಕ್ತ ಪ್ರಸಾದ ಐಕ್ಯ ಪದಗಳಿಗೆ ಮಹಾಜ್ಞಾನದ ಮೆರಗು ನೀಡಿ, ಇಡೀ ಸಾಧಕ ಲೋಕವನ್ನೇ ಬೆರಗುಗೊಳಿಸಿದ್ದಾನೆ. ಹೀಗಾಗಿ ಬಸವಣ್ಣ ತಾಯಿಯೂ ಹೌದು, ತವರೂ ಹೌದು.

**612**

**ಮೇಲಿಪ್ಪನಾನತದ ಸುಖತರದಲಿ,**
**ಆರಾರನೆ ನುಂಗಿ ಆರು ಮತ್ತತಿಶಯವ ಮೀರಿ**
**ಬ್ರಹ್ಮಾಂಡವನು ಸೂಕ್ಷ್ಮದಲ್ಲಿ**
**ಅತಿಶಯದ ಭೇದ ನಾನಾ ಗುಣದ ಸಂಬಂಧ**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕರತಳದಲ್ಲಿ.**

ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗ ಶರಣ ಐಕ್ಯ ಎಂಬ ಆರು ದಳಗಳುಳ್ಳ ಕಮಲದಲ್ಲಿ ಬ್ರಹ್ಮಾಂಡವೇ ಬಚ್ಚಿಟ್ಟುಕೊಂಡಿದೆ. ಎಷ್ಟೋ ಮಾತುಗಳುಳ್ಳ ತಾಳೋಲೆಗಳು ತನುವಿನಲ್ಲಿಯೇ ಸಿದ್ದಗೊಂಡಿವೆ.

ಅಂಗವನ್ನು ಆವರಿಸಿದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಆರು ವಿಧದ ಅಜ್ಞಾನವನ್ನು ಅಂಗದಲ್ಲಿಯೇ ಸಂಗಮವಾದ ಆರು ಅರಿವಿನ ತತ್ವಗಳ ಮೂಲಕ ಅರಿತರಿತು ನುಂಗಿ;

ಇಪ್ಪತ್ತೈದು ಆತ್ಮ ತತ್ವಗಳು ಹತ್ತು ವಿದ್ಯಾ ತತ್ವಗಳು ಒಂದು ಶಿವ ತತ್ವವುಳ್ಳ ಅಂಗದಲ್ಲಿಯೇ ಇವೆಲ್ಲವನ್ನು ಕಂಡುಕೊಂಡು; ಆರೆಸಳಿನ ಕರವೆಂಬ ಕಮಲದಲ್ಲಿ ಪರಮ ಸುಖದಿಂದ ವಾಸಮಾಡಿದಾತನೆ ಒಡಲೊಡೆಯ.

ಅಂಗವೆಂಬುದು ಸಾಮಾನ್ಯವಲ್ಲ. ಅದು ಸರಸ್ವತಿಯ ತಾಳೋಲೆಯ ಬ್ರಹ್ಮಾಂಡ. ಅಂಗವನ್ನು ಆವರಿಸಿದ ಮನದ ಅಜ್ಞಾನದಿಂದಾಗಿ ಅಂಗದಿಂದಲೇ ಬರೆದು ಪ್ರಕಟಿಸಿದ ಪುಸ್ತಕಗಳನ್ನು ಅಂಗವೇ ಓದಿ ಆನಂದ ಪಡುತ್ತಲಿದೆ.

ತನುವೆಂಬುದು ತಾಳೋಲೆಯ ಬ್ರಹ್ಮಾಂಡವೆಂಬುದನ್ನೇ ತನು ಮರೆತು ಹೋಗಿದೆ. ತನುವಿನಲ್ಲಿ ಭಕ್ತನಿದ್ದಾನೆ. ಈತನ ಪೂಜೆಗೆ ಬಳಗಾದ ಮಹೇಶ್ವರನೂ ಇದ್ದಾನೆ. ನೋಡಿ ಕೇಳಿ ಮೂಸಿಸಿ ಮುಟ್ಟಿ ರುಚಿಸಿದ ಸುಖ ದುಃಖಗಳನ್ನು ಪ್ರಸಾದದಂತೆ ಸ್ವೀಕರಿಸುವ ಪ್ರಸಾದಿಯೂ ತನುವಿನಲ್ಲಿಯೇ ಇದ್ದಾನೆ.

ತನುವಿನ ಪ್ರಾಣಕ್ಕೆ ಪ್ರಾಣವಾದ ಪ್ರಾಣಲಿಂಗಿಯೂ ಅಲ್ಲಿಯೇ ಇದ್ದಾನೆ. ತನುವಿನಲ್ಲಿಯೇ ತನ್ಮಯವಾದ ಮಹೇಶನಿಗೆ ಶರಣು ಹೋಗಿ ಶರಣಾಗತನಾದ ಶರಣನೂ ತನುವಿನಲ್ಲಿಯೇ ಇದ್ದಾನೆ. ಕಾಯುವನ್ನು ಶರಣರು ಕರಸ್ಥಲವೆಂದು ಕರೆದಿದ್ದಾರೆ. ಕಾಯವೆಂಬುದು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು ವಾಸಮಾಡಿದ ಪುಣ್ಯಕ್ಷೇತ್ರ ! ನಾನಾ ಗುಣ ಸಂಬಂಧಗಳನ್ನು ಕಳಚಿಕೊಂಡ ಬ್ರಹ್ಮಾಂಡ! ಸಾಕ್ಷಾತ್ ಬ್ರಹ್ಮ ವಾಸ ಮಾಡಿದ ಆರೆಸಳಿನ ಕಮಲ!

**613**

**ತಾತ್ಪರಿಯವೆಂಬ ಮನೆಯಲ್ಲಿ ಕರಣಂಗಳ ಬೆಳಗಿ**
**ಆನಂದವೆಂಬಾತಂಗೆ ಭಕ್ತಿಮುಕ್ತ್ಯಂಗನೆಯರು**
**ನಿಶ್ಚಲದಿಂದ ನಿತ್ಯಂಗೆ ಬೋನವ ಮಾಡುತೈದಾರೆ.**
**ಆ ಬೋನ ಧ್ಯಾನಸಮಾಧಿಯ ಮೀರಿತ್ತು.**
**ಅದೆ ನಿತ್ಯಚೊಕ್ಕರಸವುಂಬ ಯೋಗಿಗಳಿಗೆ ಯೋಗಕ್ಕೆ ನೆಲೆಯಾಗುತ್ತದೆ.**
**ಬೀಜವು ತಾನೆ, ಓಗರವು ತಾನೆ, ತೃಪ್ತಿಯು ತಾನೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡುವ ತತ್ವವು ತಾನೆ!**

ಸರ್ವಾಂಗದಲ್ಲಿಯೂ ಅರಿವಿನ ಲಿಂಗಯ್ಯ ವಾಸ ಮಾಡಿ, ಸಕಲ ಕರಣಂಗಳನ್ನು ತನ್ನ ಅರಿವಿನ ಬೆಳಕಿನಿಂದ ಬೆಳಗುತ್ತಿದ್ದಾನೆ. ಅಂತಹ ಲಿಂಗಯ್ಯನಿಗೆ ಹಗಲಿರುಳೆನ್ನದೆ ಮುಕ್ತಿಗಾಗಿ ಕಾಯುತ್ತಿರುವ ಮುಕ್ತ್ಯಂಗನೆಯರು ಬೋನವ ಮಾಡಿ ಉಣಬಡಿಸಲು ಕಾತುರರಾಗಿದ್ದಾರೆ.

ಎನ್ನಂಗದಲ್ಲಿ ಸಂಗಮವಾಗಿರುವ ಪರಮಾತ್ಮನೆ; ನಿನಗೆ ನಿತ್ಯ ಮಜ್ಜನ ಮಾಡುತ್ತೇನೆ; ಎಂದು ಒಬ್ಬ ಅಂಗನೆ ತನಗೆ ತಾನೇ ಸ್ನಾನ ಮಾಡಿದರೂ; ಸ್ನಾನ ನಾನು ಮಾಡುತ್ತಿಲ್ಲ. ನನ್ನ ಅಂಗದಲ್ಲಿ ಸಂಗಮವಾಗಿರುವ ನಿನಗೆ ನಿತ್ಯಸ್ನಾನ, ನಿತ್ಯ ಮಜ್ಜನ.

ತಾನು ಸ್ನಾನ ಮಾಡುವಾಗಲೂ ಈ ಸ್ನಾನ ನನಗಲ್ಲ ಪರಮಾತ್ಮನೆ ನಿನಗೆ! ಇದೆಂತಹ ಮಾತು. ಆನಂದದ ಮಾತು! ಪರಮಾನಂದದ ಮಾತು. ಇಡೀ ಲೋಕ ತಾನು ನಿರ್ಮಾಣ ಮಾಡಿದ ದೇವಾಲಯಗಳಲ್ಲಿದ್ದ ದೇವರಿಗೆ ಹೋಗಿ ರುದ್ರಾಭಿಷೇಕ, ನಾನಾ ರೀತಿಯ ಮಜ್ಜನಗಳನ್ನು ಮಾಡಿ, ತನಗೆ ತಾನೇ ಭ್ರಮೆಯಿಂದ ಆರಾಧಿಸುತ್ತದೆ. ಆದರೂ ಆ ದೇವರಿಗೆ ಸ್ಪರ್ಶದ ಆನಂದವೇ ಇಲ್ಲ. ತನ್ನಂಗಕ್ಕೆ ತಾನೇ ಸ್ನಾನ ಮಾಡಿದರೆ, ಅಂಗದಲ್ಲಿಯೇ ಸಂಗಮವಾದ ದೇವರು ತೊಪ್ಪನೆ ತೊಯ್ದು ಪರಮಾನಂದವನ್ನುಂಟು ಮಾಡುತ್ತಾನೆ. ರೋಮ ರೋಮಗಳು ನಿಮಿರಿ ನಿಲ್ಲುತ್ತವೆ. ಶರಣ ಇದನ್ನು ತನಗೆ ತಾನೇ ಕಂಡುಕೊಂಡ.

''ಎನ್ನಂಗದಲ್ಲಿ ನಿನಗೆ ನಿತ್ಯ ಮಜ್ಜನ'' ಎಂದು ಕುಣಿದಾಡಿ ಹಾಡಿದ.

''ತನ್ನ ಕಾಲು ತೊಳೆದ ಮೇಲೆ ಲಿಂಗಕ್ಕೆ ಮಜ್ಜನವ ಮಾಡುವರು. ತಾನು ಲಿಂಗವೋ? ಲಿಂಗ ಲಿಂಗವೋ? ಬಲ್ಲಡೆ ನೀವು ಹೇಳಿರೆ? ಎಂದು ಪ್ರಭುದೇವರು ಮಲಗಿದ ಲೋಕವನ್ನು ಎಚ್ಚರಿಸಿ ಮಾತನಾಡಿದ್ದಾರೆ.

ನೋಡುವ ದೃಶ್ಯದಿಂದ ಸಂತೋಷ, ಕೇಳುವ ಶಬ್ದದಿಂದ ಸಂತೋಷ, ಮುಟ್ಟುವ ಸ್ಪರ್ಶದಿಂದ ಸಂತೋಷ, ಮೂಸಿಸುವ ಸುಗಂಧದಿಂದ ಸಂತೋಷ, ರುಚಿಸುವ ನಾಲಿಗೆಯಿಂದ ಸಂತೋಷ. ಇದೆಲ್ಲ ತನಗೆ ತಾನೇ ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರಿಗೆ ನೀಡುವ ಬೋನ. ಆ ಬೋನದಿಂದಾಗಿ ಚೊಕ್ಕರಸ ಉತ್ಪನ್ನವಾಗಿ ಧ್ಯಾನ ಸಮಾಧಿ ಏರ್ಪಡುತ್ತದೆ.

ಯೋಗಿಗಳು ಶರಣರು ಈ ಚೊಕ್ಕರಸವನ್ನು ಉಣಿಸುತ್ತಾ ಉಣ್ಣುತ್ತಾ ತಮಗೆ ತಾವೇ ಮೈಮರೆಯುತ್ತಾರೆ. ''ಎನ್ನ ದೃಶ್ಯದಲ್ಲಿ ನಿನಗೆ ಸಕಲ ರೂಪುಗಳ ನೈವೇದ್ಯ ; ಎನ್ನ ಕಿವಿಯಲ್ಲಿ ನಿನಗೆ ನಾನಾ ಶಬ್ದ ವಾದ್ಯಗಳ ನೈವೇದ್ಯ; ಎನ್ನ ಚರ್ಮದಲ್ಲಿ ನಿನಗೆ ನಾನಾ ವಿಧದ ಸ್ಪರ್ಶನಂಗಳ ನೈವೇದ್ಯ ; ಎನ್ನ ಜಿಹ್ವೆಯಲ್ಲಿ ನಿನಗೆ ನಾನಾ ಪದಾರ್ಥಗಳ ನೈವೇದ್ಯ ; ಎನ್ನ ಮೂಗಿನಲ್ಲಿ ನಿನಗೆ ನಾನಾ ವಿಧದ ಪುಷ್ಪಂಗಳ ಪರಿಮಳದ ನೈವೇದ್ಯ.

ನಿತ್ಯವೂ ಇಂತಹ ಚೊಕ್ಕರಸವನುಂಬ ಯೋಗಿಗಳೇ ಧನ್ಯರು. ನಿತ್ಯವೂ ಆ ಪರಮಾತ್ಮನೊಂದಿಗೆ ಉಣ್ಣುತ್ತಾರೆ, ಆ ಪರಮಾತ್ಮನೊಂದಿಗೆ ನೋಡುತ್ತಾರೆ, ಆ ಪರಮಾತ್ಮ ನೊಂದಿಗೆ ಪರಮಾತ್ಮನನ್ನೇ ಮುಟ್ಟಿ ಆನಂದ ಪಡುತ್ತಾರೆ. ಆ ಪರಮಾತ್ಮನಿಗೆ ಸಕಲ ಶಬ್ದಗಳನ್ನೂ ಅ ರ್ಪಿಸಿ ನಿಃಶಬ್ದದ ಸವಿಯನುಣ್ಣುತ್ತಾರೆ. ಸುಗಂಧ ದುರ್ಗಂಧಗಳನ್ನು ಕಳೆದು ಮೂಗಿಗೆ ಅರಿವಿನ ಪರಿಮಳದ ಸುಖವನ್ನು ಉಂಟು ಮಾಡುವ ಆ ಪರಮಾತ್ಮನೊಂದಿಗೆ ಮೂಸಿಸಿ ಪರಮ ಸುಖವನ್ನು ಅನುಭವಿಸುತ್ತಾರೆ. ಇಂತಹ ಬೋನ ಧ್ಯಾನ ಸಮಾಧಿಯನ್ನು ಮೀರಿತ್ತು. ಇದೇ ಚೊಕ್ಕರಸವು ಇದೇ ಯೋಗಿಗಳ ಯೋಗಕ್ಕೆ ನೆಲೆ.

ಬೀಜವು ತಾನೇ, ಓಗರವು ತಾನೇ, ತೃಪ್ತಿಯೂ ತಾನೆ. ಅರಿವಿನ ದೇವರನ್ನು ಕೂಡುವ ತತ್ವವೂ ತಾನೆ! ತನಗೆ ತಾನೇ ತನುವಿನಲ್ಲಿಯೇ ತನ್ಮಯವಾದ ಅರಿವಿನ ಪರಮ ಸುಖವನ್ನು ತಾನೇ ತಿಳಿಯಬೇಕು. ತನುವಿನಲ್ಲಿಯೇ ಉತ್ಪತ್ತಿಯಾದ ಆ ಅರಿವಿನ ಸುಖವನ್ನು ತನಗೆ ತಾನೇ ಉಣ್ಣಬೇಕು. ಕಟ್ಟಿಕೊಟ್ಟ ಬುತ್ತಿ ಸಂಗ್ರಹಕ್ಕೆ ಯೋಗ್ಯವಲ್ಲ. ಅದು ಶಾಶ್ವತವೂ ಅಲ್ಲ.

ಬೀಜದಲ್ಲಿದ್ದ ವೃಕ್ಷ ನೆಲಕ್ಕೆ ಬೇರು ಚಿಮ್ಮಿ ಟಿಸಿಲೊಡೆದು, ಅಂಕುರವಾಗಿ ತಾನು ಬಚ್ಚಿಟ್ಟುಕೊಂಡ ಬೀಜವನ್ನು ಹೊರಗೆ ಚೆಲ್ಲಿ ವೃಕ್ಷವಾಗುತ್ತದೆ. ವೃಕ್ಷದ ತುಂಬಾ ಚಿಗುರೆಲೆಗಳನ್ನು ಬಿಟ್ಟು ಮೊಗ್ಗಾಗಿ ಹೂವಾಗಿ ಅರಳಿ ಸುಗಂಧವನ್ನು ಚೆಲ್ಲುತ್ತದೆ. ತನಗೆ ತಾನೇ ಕಾಯಾಗುತ್ತದೆ. ತನಗೆ ತಾನೇ ಹಣ್ಣಾಗುತ್ತದೆ. ತನಗೆ ತಾನೇ ಬೀಜವಾಗಿ ವೃಕ್ಷ ಆ ಬೀಜದಲ್ಲಿ ಬಚ್ಚಿಟ್ಟುಕೊಂಡು ತನಗೆ ತಾನೇ ತೊಟ್ಟು ಬಿಟ್ಟು ನೆಲಕ್ಕೆ ಉರುಳುತ್ತದೆ. ಇಲ್ಲಿ ತಾಯಿಯೂ ತಾನೇ ತಂದೆಯೂ ತಾನೇ ಬಂಧುವೂ ತಾನೇ ಬಳಗವೂ ತಾನೇ. ಬೀಜವೂ ತಾನೇ, ವೃಕ್ಷವೂ ತಾನೇ!

**614**

**ತುಂಬಿ ತುಳುಕಿ ಅಂಬರಕೆ**
**ಗಂಭೀರ ತೆರೆ ಹಾಯುತ್ತಿರಲು,**

**ಸಂಭ್ರಮದ ಶರಧಿ ಹೆಚ್ಚಿತ್ತೇ**
**ಕಾಡುತ್ತಿದ್ದೆ ನಾನೂ ಎಲೆ ಅಯ್ಯಾ,**
**ಆಕಾರವ ಮೀರಿದ ನಿರಾಕಾರ ಭಕ್ತಿ**
**ಏಕೋದೇವ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆಕಾಶದಿಂದ ಇಳಿದು ಬಂದ ಜಲಬಿಂದುಗಳು ಹಳ್ಳ ಕೊಳ್ಳ ಕೆರೆ ಸರೋವರ ನದಿಗಳ ಹಾದು ತುಂಬಿ ತುಳುಕಿ ಸಮುದ್ರವಾಗಿ ಅದರ ದೊಡ್ಡ ದೊಡ್ಡ ಅಲೆಗಳು ಗಂಭೀರದಿಂದ ಪುನಃ ಆಕಾಶಕ್ಕೆ ಸಂಭ್ರಮದಿಂದ ಹಾಯುತ್ತಿರಲು ಈ ಸೊಬಗನ್ನು ಏನೆಂದು ಬಣ್ಣಿಸಬೇಕು?

ಆಕಾಶದಿಂದ ಧರೆಗಿಳಿದ ನಿರಾಕಾರ ಆಕಾರವಾಗಿ ಮತ್ತೆ ಆಕಾರವ ಮೀರಿ ನಿರಾಕಾರದತ್ತ ಮುಖ ಮಾಡಿದ ನಿರಾಕಾರ ಭಕ್ತಿ ಅದು ಏಕೋಭಾವ.

ನಿರಾಕಾರವೇ ಆಕಾರವಾಗಿದೆ. ಪುನಃ ಆಕಾರ ಕರಗಿ ನಿರಾಕಾರಕ್ಕೆ ಅಲೆಯ ರೂಪದಲ್ಲಿ ಅಪ್ಪಳಿಸಿ ನಿರಾಕಾರ ನಿರಾಕಾರದಲ್ಲಿಯೇ ಲೀನವಾದಂತೆ. ಇಲ್ಲದ ವಸ್ತು ತೋರುತ್ತದೆ. ತೋರುವ ವಸ್ತು ಪುನಃ ಇಲ್ಲವಾಗಿ ಇಲ್ಲದ ವಸ್ತುವಿನಲ್ಲಿ ಲೀನವಾಗಿ ಇಲ್ಲವಾಗುತ್ತದೆ.

ಬಯಲು ಬಯಲನೇ ಬಿತ್ತಿ, ಬಯಲು ಬಯಲನೇ ಬೆಳೆದು, ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ಬಯಲು ಜೀವನ, ಬಯಲು ಭಾವನೆ, ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು; ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ.

ಅಲ್ಲಮ ಪ್ರಭುಗಳ ಈ ಸೂತ್ರ, ಸಿದ್ಧರಾಮ ಶಿವಯೋಗಿಗಳ ಸೂತ್ರ ಒಂದನ್ನು ಒಂದು ಹೋಲುತ್ತವೆ. ಆಕಾಶ ಸಕಲ ಜೀವಗಳಿಗೆ ಜನ್ಮ ನೀಡಿದೆ. ಸಕಲ ಜೀವಿಗಳು ಸಹಜವಾಗಿವೆ. ಆಕಾಶ ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ಹಾಗೂ ತನ್ನನ್ನು ತಿಳಿದು ಪರಮಾನಂದ ಪಡುವ ಜೀವವೊಂದನ್ನು ಸೃಷ್ಟಿ ಮಾಡಿತು; ಆ ಜೀವವೇ ಕಾಯ!

ನಿರಾಕಾರವೇ ತನ್ನನ್ನು ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಿಳಿಯುವ ಕಾಯವೆಂಬ ಆಕಾರವಾಯಿತು. ಈ ಆಕಾರದಲ್ಲಿ ಸಕಲ ಆಕಾರಗಳನ್ನು ಮೀರಿದ ನಿರಾಕಾರ ಭಕ್ತಿ ಇದೆ. ಈ ನಿರಾಕಾರದೇವನೇ ಸಕಲ ಆಕಾರಗಳಿಗೂ ಏಕೋದೇವನಾಗಿದ್ದಾನೆ. ಈತ ಸಾಕಾರದೇವನೂ, ನಿರಾಕಾರದೇವನೂ ಆಗಿದ್ದಾನೆ.

**615**

**ತುರಗವೆಪ್ಪತ್ತರ ಖುರಪುಟದ ಘಲ್ಲಣೆಗೆ**
**ಹರಿದು ಎಯ್ದಿತು ರೇಣು ಬ್ರಹ್ಮಾಂಡಕೆ**
**ಬ್ರಹ್ಮಾಂಡದವರೆಲ್ಲ ತಮ್ಮೊಳಗೆ ಧೃತಿಗೆಟ್ಟು**
**ತಮ್ಮ ಲೋಕದೊಳಿಪ್ಪ ಕೂಪ ಜಲದಾ,**
**ಸೊಮ್ಮಿನೊಳು ಮತಿಗೆಟ್ಟು**
**ನಿರ್ಮಳ ಜ್ಞಾನಿಯ ಸೊಮ್ಮು ತಾವಾದರೈ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ವಿರಾಟ ಸ್ವರೂಪದ ದಿವ್ಯ ಶಕ್ತಿಯನ್ನು ಬರೀ ಮಾತುಗಳಿಂದ ಬಣ್ಣಿಸಲು ಸಾಧ್ಯವಿಲ್ಲ. ಸಿದ್ಧರಾಮ ಶಿವಯೋಗಿಗಳ ಈ ಸೂತ್ರ ಬಣ್ಣನೆಗೆ ನಿಲುಕದ್ದು. ಹೀಗೆ ಎಂದು ಹೇಳಲು ಸಾಧ್ಯವಾಗದ್ದು. ಮಾತಿನಲ್ಲಿ ಹಿಡಿದಿಡಿಯಲು ಸಾಧ್ಯವಾಗದ್ದನ್ನು ಕಾವ್ಯಮಯವಾಗಿ ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಎಪ್ಪತ್ತು ಕುದುರೆಗಳ ಕಾಲಿಗೆ ಕಟ್ಟಿದ ಗೆಜ್ಜೆಗಳ ನಾದದಿಂದ ಹರಿದು ಚಿಮ್ಮಿತು ರೇಣು ಬ್ರಹ್ಮಾಂಡಕೆ. ಆ ರೇಣುವಿನ ವೇಗಕ್ಕೆ ಬ್ರಹ್ಮಾಂಡದವರೆಲ್ಲ ತಮ್ಮೊಳಗೆ ಧೃತಿಗೆಟ್ಟು ದಿಕ್ಕಾಪಾಲಾಗಿ ಓಡಿದರು. ತಮ್ಮೊಳಗೆ ತಾವೇ ನಿರ್ಮಾಣ ಮಾಡಿಕೊಂಡ ಕೂಪ ಮಂಡೂಕ ಅವರು. ತಮ್ಮ ಸೊಮ್ಮಿನೊಳು ತಾವೇ ಮುಳುಗಿ ತಮಗೆ ತಾವೇ ಮತಿಗೆಟ್ಟವರು.

ತಮಗೆ ತಾವೇ ನಿರ್ಮಿಸಿಕೊಂಡ ಬ್ರಹ್ಮಲೋಕವೇ ಹೀಗೆ. ಕೈಯಲ್ಲಿ ಜಪಮಣಿ, ಕೊರಳಲ್ಲಿ ರುದ್ರಾಕ್ಷಿ, ಹಣೆಗೆ ವಿಭೂತಿ, ತಲೆಯಲ್ಲಿ ಜಿಡ್ಡುಗಟ್ಟಿದ ಜಡೆ. ಲಂಗೋಟಿ ಕೌಪೀನ ಕಾವಿ ಧಾರಣೆಗಳ ಲೋಕ ಒಂದಿದೆ. ಅದು 'ನಾವು ಬ್ರಹ್ಮಜ್ಞಾನಿಗಳೆಂದು' ಲೋಕವನ್ನು ನಂಬಿಸುವ ಲೋಕ. ಅದು ಕೂಪ ಮಂಡೂಕ. ತಮ್ಮ ತಮ್ಮ ಭಾವನೆಗಳಲ್ಲಿ ಮತಿಗೆಟ್ಟು ತಾವೇ ಮುಳುಗಿದ ಲೋಕ. ಇಂತಹ ಲೋಕಕ್ಕೆ ಬ್ರಹ್ಮನ ಪರಿಚಯವಿಲ್ಲ.

ಕುರುಕ್ಷೇತ್ರ ಯುದ್ಧ ತಡೆಯಲು ಸಂಧಾನಕ್ಕೆಂದು ಸದನಕ್ಕೆ ಹೋದ ಶ್ರೀಕೃಷ್ಣನನ್ನು ನೋಡಲು ಸಾಧ್ಯವಾಗದ ಕುರುಡುತನಕ್ಕೆ ಏನೆನ್ನಬೇಕು? ಇಂತಹ ಕಣ್ಣು ಕಾಣದ ಕುರುಡರು ಲೋಕವನ್ನು ಆಳಲು ಸಾಧ್ಯವೆ? ಬ್ರಹ್ಮನನ್ನು ಅರಿಯದೇ ಬ್ರಹ್ಮಜ್ಞಾನಿಗಳು ನಾವೆಂದು ನಿರ್ಮಾಣ ಮಾಡಿಕೊಂಡ ಲೋಕವನ್ನು ಬ್ರಹ್ಮಲೋಕವೆನ್ನಲು ಸಾಧ್ಯವೆ. ಬ್ರಹ್ಮಲೋಕದ ಸೊಮ್ಮೆಂದರೆ ಕಾವಿ, ರುದ್ರಾಕ್ಷಿ, ಜಪಮಾಲೆ, ಕಮಂಡಲ, ತ್ರಿಶೂಲ, ಬೆತ್ತ, ಆವಿಗೆಗಳಲ್ಲ. ತನುವಿನಲ್ಲಿಯೇ ತನ್ಮಯವಾದ ನಿರ್ಮಲಜ್ಞಾನ. ಅದು ಬ್ರಹ್ಮಾಂಡದಲ್ಲಿ ವಾಸ ಮಾಡುತ್ತಿರುವ ಸಕಲ ತನುಗಳಲ್ಲಿಯೂ ತನ್ಮಯವಾಗಿದೆ. ಆ ಮಹಾಜ್ಞಾನವು ತನುವಿಗೆ ಜನ್ಮ ನೀಡಿ ತನುವನ್ನು ಧಾರಣೆ ಮಾಡಿಕೊಂಡು ಬಂದಿದೆ. ತನುವಿನಲ್ಲಿಯೇ ಇದ್ದು ತನುವನ್ನು ಆವರಿಸಿದ ಮನಕ್ಕೆ ಸದಾ ಪಾಠ ಮಾಡುತ್ತಲಿದೆ.

ಧೃತಿಗೆಟ್ಟ ಮನ ಬ್ರಹ್ಮನ ಬೋಧೆಯನ್ನು ಆಲಿಸಬೇಕು. ಆ ಮಹಾಜ್ಞಾನಿಯ ಬೋಧೆಯನ್ನು ಆಲಿಸಬೇಕು. ಆ ಬ್ರಹ್ಮನನ್ನೇ ಧಾರಣೆ ಮಾಡಿಕೊಂಡು ತನ್ನ ಸಕಲ ಭ್ರಮೆಗಳನ್ನು ಕಳೆದುಕೊಳ್ಳಬೇಕು. ಆ ಬ್ರಹ್ಮಜ್ಞಾನಿಯೇ ತಾನಾಗಬೇಕು.

**616**

**ತುರಿಯ ತುರಿಯದ ತವಕ ತವಕ, ಕರುಣಿ ಕರುಣಿ**
**ನಿನ್ನ ಮನದ ಕೊನೆಯಲ್ಲಿ ಎನ್ನುವನಿರಿಸಾ**
**ಸಂದು ಸವೆದು ಒಂದು ಮಾಡಾ ಅಯ್ಯ.**
**ಎನ್ನ ಹಿಂದು ಮುಂದುವ ಕೆಡಿಸಾ**
**ಆನಂದ ಶೂನ್ಯದಲ್ಲಿ ಆದಿ ಮಧ್ಯಾವಸಾನದಲ್ಲಿ**
**ಶೂನ್ಯನನ್ನು ಮಾಡಿಸು ಕಪಿಲಸಿದ್ಧ ಮಲ್ಲಿನಾಥಯ್ಯ.**

ಕಾಯ ಯಾವ ದೇಶದಲ್ಲಿದ್ದರೇನು; ಅದು ಯಾವ ಭಾಷೆ ಯಾವ ದೇಶದ್ದಾದರೇನು? ಆ ಕಾಯದಲ್ಲಿ ನಿನ್ನನ್ನು ಅರಿಯುವ ತವಕ ಇಟ್ಟು ಹೊಲಿದು ಭೂಮಿಗೆ ಕಳುಹಿಸಿರುವ ಕರುಣಿ ನೀನು.

ಆದರೆ ಕಾಯ ನಿನ್ನನ್ನು ಹೊರಗೆ ಹುಡುಕುತ್ತಲಿದೆ. ಹೊರಗೆ ಆರಾಧಿಸಿ ಆನಂದ ಪಡುತ್ತಲಿದೆ.

ಉರುಳು ಸೇವೆ, ಬರಿಗಾಲ ನಡಿಗೆ, ದೀಡ ನಮಸ್ಕಾರ, ಜ್ಯೋತಿ ಹೊತ್ತು ಆರಾಧಿಸುವುದು, ಉಪವಾಸ ಮಾಡಿ ಆರಾಧನೆ ಮಾಡುವುದು, ಭಜನೆ, ಡೊಳ್ಳುಕುಣಿತ, ಪಲ್ಲಕ್ಕಿ ಸೇವೆ, ರಥೋತ್ಸವ, ರುದ್ರಾಭಿಷೇಕ, ಮೆಕ್ಕಾ, ವ್ಯಾಟಿಕಾನ್, ಕಾಶಿ, ಶ್ರೀಶೈಲ ಕೇದಾರ ಪುಣ್ಯ ಕ್ಷೇತ್ರಗಳ ದರುಶನ. ಜಪ ತಪ ಧ್ಯಾನ. ಲಿಂಗ ಜನಿವಾರ ಶಿಲುಬೆ ರುದ್ರಾಕ್ಷಿ ಕಾವಿ ನಿಲುವಂಗಿ ಧಾರಣೆಗಳ ಮೂಲಕ ತುರಿಯ ತುರಿಯದ ತವಕ.

ಆದರೂ ನಿನ್ನ ದರುಶನ ಭಾಗ್ಯದಿಂದ ಕಾಯ ಬಹುದೂರ! ಕರುಣಿ ಕರುಣಿ ನಿನ್ನ ಮನದ ಕೊನೆಯಲ್ಲಿ ಎನ್ನನ್ನು ಇರಿಸಿ ಎನ್ನ ಮನದ ಸಂದು ಸವಿದು ಒಂದು ಮಾಡಾ ಅಯ್ಯಾ. ಎನ್ನ ಹಿಂದು ಮುಂದುವ ಕೆಡಿಸಾ ಅಯ್ಯಾ:

ತಂದೆ ತಾಯಿ ಬಂಧು ಬಳಗ ನೀನೇ ಆಗಿ; ನನ್ನಲ್ಲಿಯೇ ನೀನಿದ್ದರೂ, ನಿನ್ನನ್ನು ಹೊರಗಡೆಯ ದೇವರನ್ನಾಗಿಸಿ ಹುಡುಕುವ ಅವಿವೇಕಿ ಕಾಯ ನಾನು. ನನ್ನಲ್ಲಿಯೇ ನೀನಿದ್ದ ಮೇಲೆ ನಾನು ಬಹುದೊಡ್ಡ ಶ್ರೀಮಂತ! ನಿನ್ನನ್ನು ಅರಿಯದಿದ್ದಕ್ಕಾಗಿ ನನಗೆ ಭೌತಿಕ ಶ್ರೀಮಂತನಾಗುವ ತವಕ, ಅನ್ನಕ್ಕಾಗಿ ಹಪಹಪಿಸುವ ತವಕ, ರಾಜ್ಯ ಹೊನ್ನು ಹೆಣ್ಣು ಮಣ್ಣಿಗಾಗಿ ಹಪಹಪಿಸುವ ತವಕ.

ನನ್ನ ಹಿಂದು ಮುಂದು ಇರುವ ಈ ಅಜ್ಞಾನದ ಬೇಡಿಕೆಯ ಬಾಧೆಯನ್ನು ಕೆಡಿಸಿ ನನಗೆ ದರುಶನ ನೀಡು ತಂದೆ. ಹಿಂದು ಮುಂದು ಇಲ್ಲದ ತಂದೆ ನೀನು. ನಿನಗೆ ಹುಟ್ಟಿದ ಕಂದ ನಾನು. ನನ್ನನ್ನು ಹಡೆದು ನನ್ನ ಕಾಯದಲ್ಲಿಯೇ ನೀನಿದ್ದರೂ ನನಗೆ ನಾನಾ ಆಸೆಯನ್ನು ಸೃಷ್ಟಿ ಮಾಡಿದೆ. ನನ್ನ ಕಾಯದಲ್ಲಿಯೇ ಇದ್ದ ನಿನ್ನನ್ನು ನೆನೆಯುವುದನ್ನೇ ಮರೆಯಿಸಿದೆ ನೀನು. ಈ ನಿನ್ನ ಆಟ ನನಗೆ ಪರಿಚಯವಾಗಿದೆ. ನೀನು ಆಡಿಸುವ ಆಟ ನನಗೆ ಬೇಡವಾಗಿದೆ.

ಬ್ರಹ್ಮಾಂಡವನ್ನು ಸೃಷ್ಟಿ ಮಾಡಿ ಅದರ ಚೆನ್ನಾಟ ನೋಡುವ ಆನಂದಮಯಿ ನೀನು. ಆನಂದಶೂನ್ಯನು ನೀನು. ಆದಿ ಮಧ್ಯ ಅವಸಾನದಲ್ಲಿ ನಿನ್ನಂತೆಯೇ ನನ್ನನ್ನು ಶೂನ್ಯನನ್ನಾಗಿ ಮಾಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು. ನೀನಲ್ಲದೆ ಮತ್ತಾರೂ ಇಲ್ಲವಯ್ಯಾ. ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ಅದು ನಿಮ್ಮ ಧರ್ಮ, ಕೂಡಲಸಂಗಮದೇವಾ ನನ್ನನ್ನು ಹಡೆದ ನೀನು ಶೂನ್ಯ. ನಿನ್ನ ಕಂದ ನಾನು ಕೂಡಾ ಶೂನ್ಯ!

**617**

**ತೃಪ್ತವ ಮಾಡಿ ಮಾಡಿ ತನಗೆ ಬೇಕೆನ್ನ ಪ್ರಸಾದಿ,**
**ಬಂದುದನತಿಗಳೆದು ಅಲ್ಲವೊಲ್ಲೆನೆನ್ನ ಪ್ರಸಾದಿ,**
**ತಾನೆಂಬ ರೂಪ ಅಯ್ಯನೆಂಬ ರೂಪಿನಲ್ಲಿ ಬಪ್ಪನೆಂಬ ರೂಪಿನಲ್ಲಿ**
**ಲೋಪವ ಮಾಡಿದ ಪ್ರಸನ್ನ ಪ್ರಸಾದಿ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಬಸವಣ್ಣನು.**

ಸಿದ್ಧರಾಮ ಶಿವಯೋಗಿಗಳು ಬಸವಣ್ಣನನ್ನು ಪರಮಾತ್ಮನಿಗೆ ಹೋಲಿಸಿ ಪರಮಾತ್ಮ ಎಂದು ಕರೆದಿದ್ದಾರೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಎಂದು ಕರೆದಿದ್ದಾರೆ.

ತನುವಿನಲ್ಲಿ ತನ್ಮಯವಾಗಿ ತನುವಿಗೆ ಮತ್ತು ಮನಕ್ಕೆ ಹಗಲಿರುಳೆನ್ನದೆ ಬೋಧೆ ಮಾಡುವ

ದೇವರು ತನಗೆ ಬೇಕೆಂದು ತನುವನ್ನು, ತನುವನ್ನು ಆವರಿಸಿದ ಮನವನ್ನು ಏನನ್ನೂ ಕೇಳುವುದಿಲ್ಲ. ತನು ಮತ್ತು ಮನಕ್ಕೆ ಸದಾ ತೃಪ್ತಿ ಮಾಡುತ್ತಾನೆ.

ತನುವಿನಲ್ಲಿಯೇ ಇದ್ದು, ಮನ ತನುವಿಗೆ ತಂದೊಡ್ಡುವ ಸಂಕಟಗಳನ್ನು ಅಲ್ಲ ಎನ್ನದೆ ಒಲ್ಲೆ ಎನ್ನದೆ ಅತ್ಯಂತ ತೃಪ್ತಿಯಿಂದ ಸ್ವೀಕರಿಸುತ್ತಾನೆ. ಮನ ತನುವಿಗೆ ಸುಖ ತಂದೊಡ್ಡಿದಾಗ ತನಗೆ ಬೇಕು ಎಂದು ಕೇಳದೆ ತನುವಿಗೆ ತೃಪ್ತಿ ಪಡಿಸುವ ಪ್ರಸಾದಿಯಾತ.

ಬಸವಣ್ಣನು ಕೂಡಾ ಹಾಗೆಯೇ. ಈತ ಸಕಲರ ಕಣ್ಣಿಗೆ ಕಂಡು ಬರುವ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ ದೇವನೇ ಆಗಿದ್ದಾನೆ. ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೇ ಬರಲಿ ಎಂದು ಬಸವಣ್ಣ ಹೇಳಬೇಕಾದರೆ, ಆತನಿಗೆ ಬರುವ ತೊಂದರೆಗಳೆಲ್ಲ ಆತನಿಗೆ ಸುಖವನ್ನುಂಟು ಮಾಡುತ್ತಿರಬೇಕಲ್ಲ? ಇಲ್ಲದಿದ್ದರೆ ಹೀಗೆ ಹೇಳಲು ಯಾರಿಗಾದರೂ ಸಾಧ್ಯವಾಗುವುದೆ?

''ಇಂದೆನ್ನ ವಧುವ, ನಾಳೆನ್ನ ಧನವ, ನಾಡಿದ್ದೆನ್ನ ತನುವ ಬೇಡರೇಕಯ್ಯಾ?'' ''ಇಂದೆನ್ನ ಒಗತನ ಹೋದಡೆ ಹೋಗಲಿ'' ''ಇದಕಾರಂಜುವರು, ಇದಕಾರಳುಕುವರು? ಎಂದು ಸವಾಲು ಹಾಕುವ ದಿಟ್ಟತನದಲ್ಲಿ ಬಸವಣ್ಣನವರಿಗೆ ಪರಮ ಸುಖವಿರಬೇಕು! ಹೀಗಾಗಿಯೇ ಸಿದ್ಧರಾಮ ಶಿವಯೋಗಿಗಳು ಬಸವಣ್ಣನವರನ್ನು ಪ್ರಸನ್ನ ಪ್ರಸಾದಿ ಎಂದು ಕರೆದಿದ್ದಾರೆ.

ಬಸವಣ್ಣ ಮೂರು ರೂಪಗಳನ್ನು ಲೋಪ ಮಾಡಿದ ನಿರೂಪಿ. ತಾನೆಂಬ ಅಹಂಕಾರದ ರೂಪೂ ಆತನಿಗಿಲ್ಲ, ಅಯ್ಯನೆಂಬ ರೂಪೂ ಆತನಿಗಿಲ್ಲ, ಅಪ್ಪನೆಂಬ ರೂಪೂ ಕೂಡಾ ಆತನಿಗಿಲ್ಲ. ಈ ಮೂರೂ ರೂಪುಗಳನ್ನು ಲೋಪವ ಮಾಡಿದ ಪ್ರಸನ್ನ ಪ್ರಸಾದಿಯಾತ ಎಂದು ಬಸವಣ್ಣನಿಗೆ ಭಕ್ತಿಯಿಂದ ನಮಿಸಿದ್ದಾರೆ. ಆತ ಸಾಕ್ಷಾತ್ ಕಪಿಲಸಿದ್ಧ ಮಲ್ಲಯ್ಯನೆಂದು ಲೋಕಕ್ಕೆ ಸಾರಿ ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**618**

**ತ್ರಾಹಿ ತ್ರಾಹಿ, ಎನ್ನ ಭಾವಕ್ಕೆ ಮೂಲಿಗ ನೀನೆ ಅಯ್ಯಾ,**
**ತ್ರಾಹಿ ತ್ರಾಹಿ, ಎನ್ನ ಜ್ಞಾನಕ್ಕೆ ಮೂಲಿಗ ನೀನೆ ಅಯ್ಯಾ,**
**ತ್ರಾಹಿ ತ್ರಾಹಿ, ಎನ್ನ ಕಾಯಕ್ಕೆ ಮೂಲಿಗ ನೀನೆ ಅಯ್ಯಾ,**
**ಕಪಿಲಸಿದ್ಧಮಲ್ಲಿನಾಥಯ್ಯಾ.**

ಕಾಯದಲ್ಲಿ ಭಾವವಿದೆ. ಅದು ಯಾವ ದೇಶದ್ದಾದರೇನು? ಅದು ಯಾವ ಭಾಷೆಯದ್ದಾದರೇನು? ಭಾವ ಮಾತ್ರ ಒಂದೇ. ಅದಕ್ಕೆ ಭಾಷೆಯಿಲ್ಲ. ಕಾಯದಲ್ಲಿ ಉಂಟಾದ ಭಾವ ಕಾಯವನ್ನು ಉತ್ತುಂಗಕ್ಕೆ ಕೊಂಡೊಯ್ಯುವುದು; ಹಾಗೆಯೇ ಅದು ಕೂಡಲೇ ದುರ್ಭಾವಕ್ಕೆ ಪಲ್ಲಟಗೊಂಡು ಕಾಯವನ್ನು ಸಂಕಟಕ್ಕೆ ಗುರಿ ಮಾಡುವುದು.

ಲೋಕದ ಕಾಯಗಳು ಭವವನ್ನು ಮಾತ್ರ ಬಳಕೆ ಮಾಡುತ್ತವೆ. ಆಗ ಅವು ಅರಳುತ್ತವೆ. ಭಾವ ದುರ್ಭಾವಕ್ಕೆ ಪಲ್ಲಟಗೊಂಡಾಗ ಅರಳಿದ ಕಾಯ ಕೆರಳುತ್ತದೆ; ವಿಲವಿಲನೆ ಒದ್ದಾಡುತ್ತದೆ. ಭಾವದಿಂದ ಅರಳದೆ ದುರ್ಭಾವದಿಂದ ಕೆರಳದೆ ಇರುವ ಸ್ಥಿತ ಪ್ರಜ್ಞ ಸ್ಥಿತಿಯೊಂದು ಭಾವದ ಮೂಲದಲ್ಲಿದೆ. ಸಿದ್ಧರಾಮ ಶಿವಯೋಗಿಗಳು ಭಾವದ ಮೂಲವನ್ನು ಕಂಡು ಹಿಡಿದು ಆ ಮೂಲಕ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಎಂದು ಹೆಸರಿಟ್ಟು ಕರೆದರು. ಆತನೊಂದಿಗೆ ಅವರು

ಮಾತನಾಡಿದರು. ಭಾವದ ಮೂಲವನ್ನು ಶರಣರು ನಿರ್ಭಾವವೆಂದು ಕೂಡಾ ಕರೆದಿದ್ದಾರೆ.

ಉದಾ: 'ಕಲ್ಲು' ನೋಡಿದರೆ ಕಣ್ಣಲ್ಲಿ ಯಾವ ಭಾವನೆಗಳು ಅರಳುವುದಿಲ್ಲ. ಅದು ನಿರ್ಭಾವ! ಕಲಾವಿದ ತನ್ನ ಉಳಿಯಿಂದ ಕಲ್ಲಿನ ಕೆಲ ಪದರುಗಳನ್ನು ಸರಿಸಿ 'ಶಿವ ' ಮೂರ್ತಿಯನ್ನು ಮಾಡಿದಾಗ ಕಣ್ಣಲ್ಲಿ ದೇವರ ಮೇಲೆ ಭಾವ ಅರಳಿ, ಕಾಯದಲ್ಲಿ ಭಕ್ತಿ ಭಾವದ ಸಂಚಲನವಾಗುತ್ತದೆ. ಕಾಯ ತಂತಾನೆ ಕೈಮುಗಿಯುತ್ತದೆ. ಕಲ್ಲಲ್ಲಿ ಕೆತ್ತಿದ ಮಸೀದೆಯನ್ನು ನೋಡಿದಾಗ ಭಾವ ದುರ್ಭಾವಕ್ಕೆ ಪಲ್ಲಟವಾಗುತ್ತದೆ.

'ಶಿವ' ಮತ್ತು 'ಮಸೀದೆ'ಯ ಮೂಲ ಕಂಡುಹಿಡಿಯುವ ಶಕ್ತಿ ಕಾಯಕ್ಕೆ ಇದ್ದರೂ ಕೂಡಾ ಕಾಯವನ್ನು ಆವರಿಸಿದ ಮನ 'ಶಿವ'ನ ಮೂರ್ತಿ ನೋಡಿ ಆರಾಧಿಸಲು ಪ್ರೇರಣೆ ನೀಡುತ್ತದೆ. 'ಮಸೀದೆ' ನೋಡಿ ದ್ವೇಷಿಸಲು ಪ್ರೇರಣೆ ನೀಡುತ್ತದೆ.

'ಶಿವ' ಮೂರ್ತಿನೋಡಿ ಆಲಯ ನಿರ್ಮಿಸಿ ಕಳಶಾರೋಹಣ ಮಾಡಿ ನಾನಾರೀತಿಯ ಉತ್ಸವಗಳ ಮೂಲಕ ಶಿವನನ್ನು ಆರಾಧಿಸಿದರು ಕೂಡಾ 'ಭಾವ'ದ ಮೂಲವಾದ 'ನಿರ್ಭಾವ' ಪರಿಚಯವಾಗಲಿಲ್ಲ. 'ಮಸೀದೆ ' ನಿರ್ಮಾಣ ಮಾಡಿ ಐದು ಬಾರಿ ಪ್ರಾರ್ಥಿಸಿದರೂ ಕೂಡಾ 'ಭಾವ' 'ನಿರ್ಭಾವ'ವಾಗಲಿಲ್ಲ.

'ಕಲ್ಲು' ನೋಡಿದ ಕಣ್ಣಲ್ಲಿ ಭಾವವಿಲ್ಲ ದುರ್ಭಾವವೂ ಇಲ್ಲ. ಕಲ್ಲು 'ಶಿವ' ಮೂರ್ತಿಯಾದರೇನು? 'ಮಸೀದೆ'ಯಾದರೇನು? 'ಚರ್ಚ್' ಆದರೇನು? ಕಲ್ಲು ಬುದ್ಧ ಮಹಾವೀರ ಬಸವಣ್ಣ ಅಂಬೇಡ್ಕರ್ ಆದರೇನು? ಕಲ್ಲು ಕಲ್ಲಲ್ಲವೆ?

ಕಲ್ಲನ್ನು ಕಲ್ಲು ಎಂದು ನೋಡಿ ನಿರ್ಭಾವದಿಂದ ಮೆರೆದ ಕಣ್ಣು ಕಣ್ಣಲ್ಲಿಯೇ ಇದೆ. ಕೆತ್ತಿದ ಕಲ್ಲನ್ನು 'ಶಿವ' ಎಂದು 'ಮಸೀದೆ ' ಎಂದು 'ಚರ್ಚ್' ಎಂದು ಭಾವಿಸಿ ಭಾವ ಮತ್ತು ದುರ್ಭಾವಕ್ಕೆ ಬಳಗಾದ ಕಣ್ಣು ಕೂಡಾ ಕಣ್ಣಲ್ಲಿಯೇ ಇದೆ.

ಕಾಯ ಭಾವದಿಂದ ಅರಳಿ ಆರಾಧಿಸುವುದೂ ತಪ್ಪಲಿಲ್ಲ. ದುರ್ಭಾವಕ್ಕೆ ಪಲ್ಲಟಗೊಂಡು ಸಂಕಟ ಪಡುವುದೂ ತಪ್ಪಲಿಲ್ಲ. ಕಾಯದಲ್ಲಿಯೇ ಇದ್ದ ನಿರ್ಭಾವದ ಮೂಲವನ್ನು ಕಾಯಕ್ಕೆ ಬಳಕೆ ಮಾಡಲು ಬಾರದಿದ್ದರೆ ಅದನ್ನು ಕಾಯವೆನ್ನಲು ಸಾಧ್ಯವೇ? ಇಲ್ಲ. ಹೀಗಾಗಿ ಕಾಯ ಹಿಂದು ಮುಸಲ್ಮಾನ ಕ್ರೈಸ್ತ ಬೌದ್ಧ ಸಿಕ್ ಫಾರ್ಸಿ ಜೈನ ಎಂದು ಅಜ್ಞಾನದ ಭಾವದಿಂದ ಕರೆಯಿಸಿಕೊಳ್ಳಲು ಯತ್ನಿಸುತ್ತದೆಯೇ ಹೊರತು ಕಾಯದ ಮೂಲಕ್ಕೆ ಹೋಗಿ ತಾನು ಜ್ಞಾನಿ ಎಂದು ನಿರ್ಭಾವದಿಂದ ಕರೆಯಿಸಿಕೊಳ್ಳಲು ಕಾಯಕ್ಕೆ ಸಾಧ್ಯವಾಗುತ್ತಿಲ್ಲ.

ಕಾಯ ಮತ್ತೊಂದು ಕಾಯದ ಮೂಲಕ ಕಲಿಯುವ ಅವಶ್ಯಕತೆಯಿಲ್ಲ. ಕಾಯದಲ್ಲಿಯೇ ಜ್ಞಾನ ಶಿಕ್ಷಣ ಅಡಗಿದೆ. ಕಾಯವನ್ನು ಆವರಿಸಿದ ಮನದಿಂದ ಕಾಯದಲ್ಲಿಯೇ ಸಂಗಮವಾದ ಜ್ಞಾನ ಶಿಕ್ಷಣವನ್ನು ಕಲಿತು, ಮನ ಜ್ಞಾನಕ್ಕೆ ಪಲ್ಲಟಗೊಂಡಾಗ, ಮನ ಘನ ಮನವಾಗುತ್ತದೆ. ಅದು ನಿರ್ಭಾವವಾಗುತ್ತದೆ. ಸ್ವತಃ ತಾನೇ ಮೂಲಿಗನಾಗುತ್ತದೆ.

ತ್ರಾಹಿ ತ್ರಾಹಿ ಎಂದು ಬೇಡುವೆ, ಜ್ಞಾನದ ಮೂಲಿಗನನ್ನು ಮನ ಕಂಡುಹಿಡಿಯುವಂತೆ ಆಶೀರ್ವದಿಸು. ಕಾಯದ ಮೂಲಿಗನನ್ನು ಕಂಡುಹಿಡಿದು ಆ ಮೂಲಿಗನೇ ತಾನಾಗುವಂತೆ ಮಾಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ ದೇವನೆ ಎಂದು ಕಾಯದಲ್ಲಿಯೇ ಸಂಗಮವಾದ ಮಲ್ಲಯ್ಯನನ್ನು ಬೇಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

619

**ತ್ರಾಹಿ ತ್ರಾಹಿ ಬಸವಾ,**
**ತ್ರಾಹಿ ತ್ರಾಹಿ ಚೆನ್ನಬಸವಾ,**
**ತ್ರಾಹಿ ತ್ರಾಹಿ ಪ್ರಭುವೆ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಬ್ರಹ್ಮ ವಿಷ್ಣು ಮಹೇಶ್ವರ ಇವರು ದೇಹದಲ್ಲಿಯೇ ಇದ್ದ ದೇವರು. ದೇಹ ವಿಷ್ಣುವಾದರೆ, ದೇಹದಲ್ಲಿಯೇ ಸಂಗಮವಾದ ಜ್ಞಾನ ಮಹೇಶ್ವರ. ದೇಹವನ್ನು ಆವರಿಸಿದ ಮನ ಬ್ರಹ್ಮ.

ದೇಹದಲ್ಲಿರುವ ಅಹಂಕಾರವೇ ದೇವೇಂದ್ರ. ಅಷ್ಟದಿಕ್ಪಾಲಕರು, ದೇವಾನು ದೇವತೆಗಳು, ಅಗ್ನಿ ವಾಯು ವರುಣ ಮುಂತಾದವರು ದೇಹದಲ್ಲಿದ್ದವರೇ ಆಗಿದ್ದಾರೆ. ಅದೊಂದು ಕಾಲಘಟ್ಟ. ದೇಹದ ನಿಜ ಸ್ವರೂಪವನ್ನು ಸಾಕ್ಷಿಯಾಗಿ ದೇಹವೇ ಗುರುತಿಸಿ, ಮಹೇಶ್ವರ ಬ್ರಹ್ಮ ವಿಷ್ಣು ತಾನೇ ಆಗಿ ಸ್ವತಂತ್ರನಾಗಿ ನಿಲ್ಲುವ ಒಂದು ಉತ್ತಮವಾದ ಶಿಕ್ಷಣ.

ವ್ಯಾಸ ಮಹರ್ಷಿಗಳು ದೇಹದ ಈ ಶಿಕ್ಷಣವನ್ನು ಧರ್ಮಕ್ಷೇತ್ರ ಕುರುಕ್ಷೇತ್ರ ಎಂದು ವಿಂಗಡಿಸಿ ಕರೆದರು. ದೇಹದಲ್ಲಿಯೇ ಅಧರ್ಮದ ಕೌರವರನ್ನು ಸೃಷ್ಟಿ ಮಾಡಿದರು. ಅಲ್ಲಿಯೇ ಪಾಂಡವರನ್ನು ಸೃಷ್ಟಿ ಮಾಡಿದರು.

ಕೌರವರು ಪಾಂಡವರು ಬೇರೆ ಬೇರೆ ಅಲ್ಲ. ಒಂದೇ ದೇಹದಲ್ಲಿ ಪಾಂಡವರೂ ಇದ್ದಾರೆ ಕೌರವರೂ ಇದ್ದಾರೆ. ಹಾಗೆಯೇ ಶ್ರೀಕೃಷ್ಣನೂ ಇದ್ದಾನೆ. ಶ್ರೀಕೃಷ್ಣನಿಗೆ ಮಾತ್ರ ಕೌರವರನ್ನು ಪಾಂಡವರನ್ನು ನಿಷ್ಕ್ರಿಯಗೊಳಿಸುವ ಶಕ್ತಿಯಿದೆ. ಇದು ದೇಹದಲ್ಲಿಯೇ ಘಟಿಸಬೇಕು. ಅದಕ್ಕೆ ದೇಹ ಮತ್ತು ದೇಹವನ್ನು ಆವರಿಸಿದ ಮನ ಸಾಕ್ಷಿಯಾಗಬೇಕು.

ಸಿದ್ಧರಾಮ ಶಿವಯೋಗಿಗಳು ಬಹುಜಾಣರು. ಬ್ರಹ್ಮನನ್ನು ಬಸವನನ್ನಾಗಿಸಿದರು. ವಿಷ್ಣುವನ್ನು ಚೆನ್ನಬಸವಣ್ಣನನ್ನಾಗಿಸಿದರು. ಮಹೇಶ್ವರನನ್ನು ಪ್ರಭುವನ್ನಾಗಿಸಿದರು. ತಾವು ಸಾಕ್ಷಿಯಾಗಿ ತ್ರಾಹಿ ತ್ರಾಹಿ ಬಸವಾ, ತ್ರಾಹಿ ತ್ರಾಹಿ ಚೆನ್ನಬಸವ, ತ್ರಾಹಿ ತ್ರಾಹಿ ಪ್ರಭುವೆ ಎಂದು ಭಕ್ತಿಯಿಂದ ಬೇಡಿದರು, ಹಾಡಿದರು, ಕಪಿಲಸಿದ್ಧ ಮಲ್ಲಯ್ಯನನ್ನು ಕೊಂಡಾಡಿದರು. ಮಹಾಜ್ಞಾನಿಯಾಗಿ ಈ ಲೋಕವನ್ನು ಬೆಳಗಿದರು.

620

**ತ್ರಾಹಿಮಾಂ ಪರಮೇಶ್ವರ ಜಯ**
**ಭಕ್ತಿ ಜ್ಞಾನಮಾಕಾರ ನೀನೆಯಯ್ಯ ಚೆನ್ನಬಸವಣ್ಣ.**
**ಏಕೋದೇವ ದೇವಧರ್ಮ ಧರ್ಮಗುಣ ಗುಣಪ್ರಕಾಶ**
**ಪ್ರಕಾಶ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**
**ನಿಮ್ಮಿಂದ ಪ್ರಾಣಲಿಂಗ ಸಂಬಂಧವಾಗಿ**
**ನಿಮಗೆ ನಮೋ ನಮೋ ಎನುತಿರ್ದೆನಯ್ಯಾ ಚೆನ್ನಬಸವಣ್ಣಾ.**

ದೇಹವನ್ನೇ ದೇಗುಲ ಮಾಡಿಕೊಂಡು, ಆ ದೇಹದಲ್ಲಿಯೇ ಅರಿವೆಂಬ ಗುರುದೇವನು,

ಮನವೆಂಬ ಬ್ರಹ್ಮನು, ದೇಹವೆಂಬ ವಿಷ್ಣು ವಾಸ ಮಾಡಿದ್ದಾನೆ. ದೇಹವೇ ಮಹೇಶ್ವರನೆಂದು ದೇಹದಿಂದಲೇ ಕರೆಯಿಸಿಕೊಂಡು ಜ್ಞಾನದಿಂದ ರಾಜ್ಯಭಾರ ಮಾಡುವ ಏಕೋದೇವನು ಆಗಿದ್ದಾನೆ.

ದೇಹವನ್ನು ವಿಷ್ಣುವೆಂದು, ಮನವನ್ನು ಬ್ರಹ್ಮನೆಂದು, ಜ್ಞಾನವನ್ನು ಮಹೇಶ್ವರನೆಂದು ಪುರಾತನರು ಹೆಸರಿಟ್ಟು ಕರೆದರೆ, ಸಿದ್ಧರಾಮ ಶಿವಯೋಗಿಗಳು ಆ ಮೂವರನ್ನೂ ಒಂದು ಮಾಡಿ, ಸಾಕ್ಷಾತ್ ಚೆನ್ನಬಸವಣ್ಣನು ನೀನು ಎಂದು ದೇಹದಲ್ಲಿಯೇ ಇದ್ದ ದೇವರನ್ನು ಹೆಸರಿಟ್ಟು ಕರೆದಿದ್ದಾರೆ.

ದೇಹದ ಧರ್ಮ ಎಂದರೆ ಜ್ಞಾನ. ಅರಿವು. ದೇಹ ಭಾರತದೇಶದ್ದಾದರೇನು? ಅಮೇರಿಕಾ ಪಾಕಿಸ್ತಾನ ಇಂಗ್ಲೆಂಡ್ ಜಪಾನ ಜರ್ಮನ್‌ದೇಶದ್ದಾದರೇನು? ಅದು ದೇಹವೇ ಆಗಿದೆ. ಅದರ ಧರ್ಮ ಅರಿವಿನಿಂದ ನೋಡುವುದು, ಅರಿವಿನಿಂದ ಕೇಳುವುದು, ಅರಿವಿನಿಂದ ಮೂಸಿಸಿ, ಅರಿವಿನಿಂದಲೇ ರುಚಿಸುವುದು. ಅರಿವಿನಿಂದಲೇ ಮುಟ್ಟುವುದು ಆಗಿದೆ. ದೇಹದ ಭಾಷೆ ಯಾವುದಾದರೇನು? ಅದರ ಅರಿವಿನ ಧರ್ಮ ಒಂದೇ ಆಗಿದೆ. ಹೀಗಾಗಿ ಆತ ಜಗಕೆಲ್ಲ ಒಬ್ಬನೇ ಆಗಿದ್ದಾನೆ.

ದೇಹದಲ್ಲಿರುವ ದೇವನು ಒಬ್ಬನೇ. ದೇಹದ ನಾಮಗಳು ಹಲವು. ದೇಹದಲ್ಲಿ ಹರಿಯುವ ರಕ್ತ ಒಂದೇ. ಮೂಳೆ ಮಾಂಸ ಮಜ್ಜೆ ಮೇದಸ್ಸು ಒಂದೇ. ಇವು ಚೆಲ್ಲದಂತೆ ಸುಂದರವಾಗಿ ಪ್ಯಾಕ್ ಮಾಡಿಕೊಂಡ ಚರ್ಮ ಒಂದೇ.

ಬೀಜ ಮತ್ತು ಸಸ್ಯಕ್ಕೆ ಹರಿದ ಜಲವೇ ಮರವಾಯಿತು ಹೂವಾಯಿತು. ಕಾಯಿ ಆಗಿ ಹಣ್ಣಾಯಿತು. ಬೀಜದಲ್ಲಿ ಮರ ತನ್ನ ಸಕಲ ಗುಣಗಳನ್ನು ತುಂಬಿ, ತೊಟ್ಟು ಬಿಟ್ಟು ಕಳಚಿ ಕೆಳಗೆ ಬಿದ್ದು ಮತ್ತೆ ಸಸಿಯಾಯಿತು. ಮರಕ್ಕೆ ಹರಿದ ಜಲ, ಮರದಲ್ಲಿದ್ದ ಜಲ ಮರವೇ ಆದ ಜಲ ಏಕೋ ರುಚಿ! ಮರದಲ್ಲಿ ಆದ ಹಣ್ಣುಗಳು ನಾನಾ ರುಚಿ! ಹುಳಿ ಸಿಹಿ ಒಗರು!

ಆಮ್ಲಜನಕ ಜಲಜನಕವನ್ನು ಒಂದು ಮಾಡಿ, ತಾನು ಅದರಲ್ಲಿ ಅಡಗಿ, ಜಲವನ್ನಾಗಿ ಮಾಡಿದ ಏಕೋದೇವನ ಮಹಿಮೆ ಇದು! ಆ ದೇವನು ಒಬ್ಬನೇ. ಆತನ ಧರ್ಮ ಕೂಡಾ ಒಂದೇ. ಆತನ ಗುಣವೂ ಒಂದೇ; ಅದು ನಿರ್ಗುಣ. ಆತನ ಪ್ರಕಾಶವೂ ಒಂದೇ; ಅದು ಅರಿವಿನ ಪ್ರಕಾಶ. ಕೋಟಿ ಸೂರ್ಯರನ್ನು ಬೆಳಗುವ ನಿರ್ಗುಣ ಪ್ರಕಾಶ.

ಅರಿವಿನ ಪ್ರಕಾಶದ ಬಿಂದುವೇ ಗರ್ಭದಲ್ಲಿ ಹೊಕ್ಕು, ದೇಹಧಾರಣೆ ಮಾಡಿ, ಏಕೋದೇವನಾಗಿ ದೇಹವನ್ನು ಅರಿವಿನ ಪ್ರಕಾಶದಿಂದ ಬೆಳಗುತ್ತಿದ್ದಾನೆ. ದೇಹವೂ ಆತನದೇ. ದೇಹದಲ್ಲಿರುವ ಪ್ರಾಣವೂ ಆತನದೇ. ದೇಹದಲ್ಲಿ ಬೆಳಗುವ ಅರಿವೂ ಆತನೇ ಆಗಿದ್ದಾನೆ.

ದೇಹವನ್ನು ಆವರಿಸಿದ ಮನವೇ, ದೇಹದಲ್ಲಿಯೇ ಇದ್ದ ದೇವನನ್ನು ಕಂಡು, ನಮೋ ನಮೋ ಎಂದು ಕೈ ಮುಗಿದು, ಆ ದೇವರಿಗೆ ಭಕ್ತಿ ಮಾಡಿ ಧನ್ಯನಾಗಬೇಕು. ತ್ರಾಹಿಮಾಂ ಪರಮೇಶ್ವರ ಎಂದು ಕೂಗಿ ಕರೆದು, ಬೇಡಿ ಬೇಡಿ ದಣಿದು, ಆ ಅರಿವಿನ ದೇವರಲ್ಲಿ ಒಂದಾಗಬೇಕು. ಇದು ದೇಹದ ಧರ್ಮ. ಈ ಅರಿವಿನ ಧರ್ಮವನ್ನು ದೇಹವನ್ನು ಆವರಿಸಿದ ಮನ ಪಾಲಿಸಬೇಕು. ಆದರೆ ಮನ ದೇಹವನ್ನು ಹಿಡಿದು ದೇಹದೊಂದಿಗೆ ಸಂಗ ಮಾಡಿ ತನ್ನದೇ ಆದ ಹಿಂದು ಮುಸಲ್ಮಾನ ಕ್ರೈಸ್ತ ಧರ್ಮವನ್ನು ದೇಹದ ಮೇಲೆ ಹೇರಿ ದೇಹದೊಂದಿಗೆ ಸವಾರಿ ಮಾಡುತ್ತಲಿದೆ. ದೇಹದ ಏಕೋಧರ್ಮವನ್ನು ಸಂಪೂರ್ಣವಾಗಿ ಮರೆತು ಹೋಗಿದೆ. ತನಗೆ ತಾನೇ ಮರೆತ ಮನ ಪುನಃ ತನಗೆ ತಾನೇ ಏಕೋದೇವನನ್ನು ತನುವಿನಲ್ಲಿಯೇ ಅರಿಯಬೇಕಾಗಿದೆ.

621

**ತ್ರಿಣಯವಿನಯ ಇಷ್ಟದೃಷ್ಟ ಭಕ್ತಿಭೀಮಬಸವ,**
**ಗಮನಸುಮನನಿಯತಸಮಯಭಕ್ತರೂಪ ಬಸವ,**
**ಪ್ರಾಣಕಾಯರೂಪ ತತ್ವಜ್ಞಾನ ವಿನಾಯಕ ಬಸವ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ, ಪ್ರಾಣಲಿಂಗ ಏಕ ಬಸವ.**

ಸಾತ್ವಿಕ ರಾಜಸ ತಾಮಸ ಗುಣಗಳು, ಕಾಯವನ್ನು ಆವರಿಸಿರುವುದರಿಂದಾಗಿ, ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ಈ ಮೂರು ಗುಣಗಳಿಗೆ ಮಾತ್ರ ಪ್ರಾಧಾನ್ಯತೆ ಕೊಡುತ್ತದೆ. ಮನ ಕಾಯವನ್ನು ತನ್ನ ಇಚ್ಛೆಗೆ ಅನುಗುಣವಾಗಿ ಬಳಕೆ ಮಾಡದೆ, ಕಾಯ ಮತ್ತು ಕಾಯದಲ್ಲಿ ಸಂಗವುವಾದ ಅರಿವು ಎನ್ನುವ ಗುರುದೇವನನ್ನು ಗಮನಿಸಿದಾಗ, ಆತ ತ್ರಿಗುಣಗಳನ್ನು ನೆಲಸಮಮಾಡಿ ಕಾಯವನ್ನೇ ಕೈಲಾಸ ಮಾಡುತ್ತಾನೆ.

ಕಾಯದಲ್ಲಿ ಗುರುದೇವನ ಇಚ್ಛೆಗನುಗುಣವಾಗಿ ನಡೆಯುವ ದೃಶ್ಯಶಕ್ತಿಯಿದೆ. ಆ ದೃಶ್ಯ ಶಕ್ತಿಗೆ ಭಕ್ತಿ ಮಾಡುವ ವಿನಯವೂ ಇದೆ. ಹಾಗೆ ಭೀಮ ಬಲದ ಅರಿವಿನ ವಿನಯವೂ ಇದೆ. ಇದೇ ತ್ರಿಣಯ ವಿನಯ. ಹೀಗಾಗಿ ಕಾಯವನ್ನು ತ್ರಿಗುಣಾತೀತಂ, ತ್ರಿನೇತ್ರಂ ಎಂದು ಮೂರು ಕಣ್ಣುಳ್ಳ ಕಾಯವೆಂದು ಕರೆಯುತ್ತಾರೆ. ಮೂರು ಕಣ್ಣುಗಳನ್ನು ಕಾಯದಲ್ಲಿಯೇ ಕಂಡು ಹಿಡಿದು, ಆ ಕಣ್ಣುಗಳ ದೃಶ್ಯ ಶಕ್ತಿಯನ್ನು ಅತ್ಯಂತ ವಿನಯದಿಂದ ಬಳಸುವಾತನನ್ನು, ಭಾರತದ ಈ ಪುಣ್ಯಭೂಮಿ 'ಶಿವ' ಎಂದು ಕರೆದಿದೆ!

ಇಷ್ಟದೃಷ್ಟ ಭಕ್ತಿಯುಳ್ಳ ತ್ರಿನಯನಗಳುಳ್ಳವನನ್ನು ಸಿದ್ಧರಾಮ ಶಿವಯೋಗಿಗಳು ಭೀಮ ಬಸವ ಎಂದು ಕರೆದಿದ್ದಾರೆ. ಎರಡು ಕಣ್ಣುಗಳಲ್ಲಿ ಹರಿಯುವ ದೃಶ್ಯ ಒಂದೇ ಆಗಿರಬೇಕು. ಅದು ಅರಿವಿನ ದೃಶ್ಯವಾಗಿರಬೇಕು. ಅಂತಹ ಅರಿವಿನ ದೃಶ್ಯವನ್ನು, ಕಣ್ಣನ್ನು ಆವರಿಸಿದ ಮರೆವಿನ ದೃಶ್ಯವೇ ಪಡೆದುಕೊಳ್ಳಬೇಕು. ಅಂತಹ ಕಣ್ಣನ್ನು 'ಭೀಮಬಸವ' ಎಂದು ಕರೆದಿದ್ದಾರೆ.

ಕಲ್ಲನ್ನು ಕಲ್ಲು ಎಂದು ನೋಡಿದ ದೃಶ್ಯ, ಕೆತ್ತಿದ ಕಲ್ಲನ್ನು ಶಿವ ಎಂದು ನೋಡಿ ಭಕ್ತಿ ಮಾಡುತ್ತದೆ. ಇದು ಡಾಂಭಿಕ ಭಕ್ತಿ. ಮರೆವುಳ್ಳ ಆಚಾರ. ಕುರುಡು ಆಚಾರ. ಕಲ್ಲು ಎಂದು ನೋಡಿದ ತನ್ನ ನಿಜದೃಶ್ಯವನ್ನು ಕಣ್ಣಲ್ಲಿಯೇ ಬಚ್ಚಿಟ್ಟುಕೊಂಡು ಕೆತ್ತಿದ ಕಲ್ಲನ್ನು ಶಿವ ಎಂದು ನೋಡಿತು. 'ಶಿವ' ಎಂದರೆ ಸತ್ಯ. ಆ ಸತ್ಯಕ್ಕೆ ಭೀಮಬಲವಿದೆ. ಕಲ್ಲು ಕೆತ್ತಿದರೇನು ಕೆತ್ತದಿದ್ದರೇನು? ಅದು ಕಲ್ಲೇ ಆಗಿದೆ. ಕಲ್ಲನ್ನು ಕಲ್ಲು ಎಂದು ನೋಡುವುದಕ್ಕೆ ವೇದ ಆಗಮ ಉಪನಿಷತ್ತುಗಳನ್ನು ಓದಬೇಕೇ? ಓದಿದಂತೆಲ್ಲ ಕಲ್ಲನ್ನು ಆರಾಧಿಸುವ ಕುರುಡು ಆಚಾರಕ್ಕೆ ಬಲ ಬರುತ್ತದೆಯೇ ಹೊರತು ಕಲ್ಲನ್ನು ಕಲ್ಲು ಎಂದು ನೋಡಲು ಕಾಯ ಇರುವವರೆಗೆ ಸಾಧ್ಯವಾಗುವುದೇ ಇಲ್ಲ. ಕಲ್ಲನ್ನು ಕಲ್ಲು ಎಂದು, ಲೋಹವನ್ನು ಲೋಹ ಎಂದು ನೋಡುವ ಕಣ್ಣು ಮಾತ್ರ ಅರಿವಿನ ಕಣ್ಣು.

ಕೆತ್ತಿದ ಕಲ್ಲನ್ನು 'ಶಿವ' ಎಂದು ನೋಡಿ ಆರಾಧಿಸುವ ಅಜ್ಞಾನದ ಕಣ್ಣು, ಕಲ್ಲನ್ನು ನೋಡಿದ ಕ ಣ್ಣಿಗೆ ಭಕ್ತಿ ಮಾಡಿದರೆ ಕಣ್ಣಿನ ಕುರುಡುತನದ ಪೊರೆ ಹರಿದು ಮುಕ್ಕಣ್ಣನ ಕಣ್ಣು ಎಂದು ಕ ರೆಯಿಸಿಕೊಳ್ಳುತ್ತದೆ. ಅದು ಬಸವನಿಗೆ ಮಾತ್ರ ಸಾಧ್ಯವಾಯಿತು ಎಂದು ಸಿದ್ಧರಾಮ ಶಿ ವಯೋಗಿಗಳು ಬಸವನನ್ನು 'ಭೀಮ ಬಸವ' ಎಂದು ಸ್ತುತಿಸಿದ್ದಾರೆ. ಆತನನ್ನು ಗಮನ ಸುಮನ ನಿ ಯತ ಸಮಯ ಭಕ್ತರೂಪ ಬಸವ, ಪ್ರಾಣಕಾಯರೂಪ ತತ್ವಜ್ಞಾನ ವಿನಾಯಕ ಬಸವ, ಕ

ಪಿಲಸಿದ್ಧ ಮಲ್ಲಿನಾಥಯ್ಯಾ, ಪ್ರಾಣಲಿಂಗ ಏಕಬಸವ ಎಂದು ಹಾಡಿ ಅರಿವೆಂಬ ಗುರುದೇವನಿಗೆ ಬಸವಣ್ಣನ ಹೆಸರನಿಟ್ಟು ಕಪಿಲಸಿದ್ಧ ಮಲ್ಲಿಕಾರ್ಜುನನು ನೀನೇ ಎಂದು ಭಕ್ತಿಯಿಂದ ಹಾಡಿ ಸ್ತುತಿಸಿದ್ದಾರೆ.

**622**

**ತ್ರಿಭುವನದಲ್ಲಿ ನಿನ್ನ ಹೊಲಬು ನಿತ್ಯವಾಯಿತ್ತು,**
**ಭಕ್ತಿ ಗಂಭೀರವೆಂಬ ಹೊಳೆ ಹರಿಯಿತ್ತು,**
**ಸುಲಭವೆ ಎಲ್ಲರಿಗೆ ಲೋಕದವರು?**
**ಉಂಬಂತೆ ಉಂಬವರಿಗೆ**
**ಲೋಕದವರು ಬಹಂತೆ ಬಪ್ಪವರಿಗೆ**
**ಭಕ್ತಿ ಶರಧಿಯಲ್ಲಿ ಬಿದ್ದು ಮಜ್ಜನ ಮಾಡಬಹುದೆ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಾತ್ವಿಕ ಲೋಕ, ರಾಜಸ ಲೋಕ, ತಾಮಸಲೋಕವೆಂದು ತಾನೇ ನಿರ್ಮಾಣ ಮಾಡಿಕೊಂಡ ಕಾಯಕ್ಕೆ ನೀನು ಸೂಚಿಸಿದ ಸತ್ಯದ ದಾರಿ ನಿನ್ನಿಂದಲೇ ಸುಲಭವಾಯಿತ್ತು. ಭಕ್ತಿ ಗಂಭೀರವೆಂಬ ಹೊಳೆ ಹರಿಯಿತ್ತು.

ಅಂಗದಲ್ಲಿಯೇ ಅರಿವಿನ ಅಂಗವಾಗಿ ಸಂಗಮವಾದ ನೀನು, ಅಂಗವನ್ನು ಆವರಿಸಿದ ಮನವೆಂಬ ಅಜ್ಞಾನಿ ಅಂಗಕ್ಕೆ, ಭಕ್ತಿ ಮಾಡಲು ಹೇಳಿದ್ದಕ್ಕಾಗಿ, ಅಂಗದಲ್ಲಿ ಅರಿವಿನ ಹೊಳೆ ಹರಿಯಲು ಸಾಧ್ಯವಾಯಿತ್ತು. ಲೋಕದ ಮನುಜರೆಲ್ಲರಿಗೆ ನಿನ್ನ ಅರಿವಿನ ಮಾರ್ಗ ಸುಲಭವೆ?

ಸಾತ್ವಿಕ ಲೋಕದ ಮನುಜರು, ಅಜ್ಞಾನದ ಸಾತ್ವಿಕ ಭೋಜನದಲ್ಲಿ ಮುಳುಗುವರು. ರಾಜಸ ಲೋಕದ ಮನುಜರು, ಅಜ್ಞಾನದ ರಾಜಸ ಭೋಜನದಲ್ಲಿ ಮುಳುಗುವರು. ತಾಮಸ ಲೋಕದ ಮನುಜರು, ಅಜ್ಞಾನದ ತಾಮಸ ಲೋಕದ ಭೋಜನದಲ್ಲಿ ಮುಳುಗುವರು. ಈ ಭೋಜನ ಸಾಕಾದವನು ಮಾತ್ರ ನಿನ್ನ ಅರಿವಿನ ಭೋಜನದತ್ತ ನೋಡುವನು. ಅರಿವೆಂಬ ಗುರುದೇವನಾದ ನಿನಗೆ ಶರಣು ಹೋಗಿ ಶರಣು ಶರಣಾರ್ಥಿ ಎಂದು ಭಕ್ತಿ ಮಾಡುತ್ತಾ ನೀನು ಹರಿಸುವ ಅರಿವಿನ ಜಲಪಾನ ಮಾಡುವನು.

ಸಾತ್ವಿಕ ರಾಜಸ ತಾಮಸ ಲೋಕವೇ ಬೇರೆ. ನಿನ್ನ ಅರಿವಿನ ಲೋಕವೇ ಬೇರೆ. ಈ ಮೂರೂ ಲೋಕದಲ್ಲಿದ್ದವರಿಗೆ ನಿನ್ನ ಅರಿವಿನ ಲೋಕದ ಪರಿಚಯವಿಲ್ಲ. ನಿನ್ನ ಪರಿಚಯವೂ ಇಲ್ಲ. ಅದು ಸುಲಭವೂ ಅಲ್ಲ.

ಬರುವಂತೆ ಬರುವರು. ಸಾತ್ವಿಕ ರಾಜಸ ತಾಮಸ ಲೋಕದ ಸುಖವನುಂಡು ಹೋಗುವರು. ಈ ಮೂರೂ ಲೋಕಕ್ಕೆ ಮತ್ತೆ ಮತ್ತೆ ಬಂದು ಹೋಗುವುದೆಂದರೆ ಅವರಿಗೆ ಬಲು ಸುಖ.

ಅರಿವಿನ ನಿನ್ನ ಲೋಕ ಹಾಗಲ್ಲ; ಅದು ಭಕ್ತಿ ಶ್ರದ್ಧೆಯ ಹೊಳೆ. ಅಲ್ಲಿ ಮುಳುಗಿ ಮಜ್ಜನ ಮಾಡುವವರು ಪುನಃ ಹೋಗುವುದಿಲ್ಲ. ಮತ್ತೆ ಬರುವುದಿಲ್ಲ. ಮರಣವಿಲ್ಲದ ಮರುಜವಣಿಯ ಹಣ್ಣುಮೆದ್ದು, ನಿನ್ನ ಅರಿವಿನ ಹೊಳೆಯ ಅಮೃತಪಾನ ಮಾಡಿದವರಿಗೆ ಮರಣವೇ ಇಲ್ಲ. ಮೂರು ಲೋಕದ ಸುಖದುಃಖಗಳು ನಿನ್ನ ಭಕ್ತರಿಗೆ ಬಾಧಿಸುವುದಿಲ್ಲ.

ಲೋಕದವರು ಇರುವಂತೆ ಇರುವುದಿಲ್ಲ. ಅವರು ಮತ್ತೆ ಮತ್ತೆ ಬರುವಂತೆ ಬರುವುದಿಲ್ಲ. ಅವರು ಉಂಬುವಂತೆ ನಿನ್ನ ಭಕ್ತರು ಉಂಬುವುದಿಲ್ಲ. ಹೀಗಾಗಿ ಲೋಕದವರು ನಿನ್ನನ್ನು ನೋಡಲು ಬರುವುದಿಲ್ಲ. ಲೋಕದವರಿಗೆ ನಿನ್ನನ್ನು ಪೂಜಿಸಲು ಬರುವುದಿಲ್ಲ. ಲೋಕದವರು

ನಿರ್ಮಾಣ ಮಾಡಿದ ದೇವರನ್ನು ಲೋಕದವರೇ ಪೂಜಿಸುತ್ತಾರೆ. ಆ ದೇವರಿಗೆ ಭಕ್ತಿ ಮಾಡುತ್ತಾರೆ. ಲೋಕವನ್ನು ನಿರ್ಮಾಣ ಮಾಡಿದ ದೇವರನ್ನು ಮರೆಯುತ್ತಾರೆ. ಹೀಗಾಗಿ ಲೋಕಕ್ಕೆ ನಿನ್ನ ಅರಿವಿನ ಭೋಜನದ ರುಚಿ ಗೊತ್ತಿಲ್ಲ.

ನಿನ್ನ ಭಕ್ತರು ಹಾಗಲ್ಲ. ಅವರು ಲೋಕ ಮಾಡಿದ ದೇವರನ್ನು ದೇವಾಲಯವನ್ನು ಮರೆತವರು. ದೇಹದೊಳಗೆ ಇದ್ದ ದೇವರನ್ನು ಅರಿತವರು. ದೇಹವನ್ನೇ ದೇವರಿದ್ದ ದೇವಾಲಯವೆಂದು ಪೂಜಿಸುವವರು. ದೇಹವನ್ನು ನಿರ್ಮಾಣ ಮಾಡಿ, ದೇಹದಲ್ಲಿಯೇ ಇದ್ದ ದೇವರಿಗಿಂತ, ದೇಹದಿಂದ ಮಾಡಿದ ದೇವರು ದೊಡ್ಡದಲ್ಲ ಎಂದು ನಿನ್ನ ಅರಿವಿನಿಂದ ಅರಿತವರು. ಅರಿತು ಅರಿತು ಅರಿವಿನಿಂದ ನಿನಗೆ ಭಕ್ತಿ ಮಾಡಿ; ನೀನಿದ್ದ ದೇಹಕ್ಕೆ ಮಜ್ಜನ ಮಾಡಿದವರು. ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ನಿನಗೆ ಹೆಸರಿಟ್ಟು ನಿನ್ನನ್ನು ಪೂಜಿಸಿದವರು ನಿನ್ನ ಭಕ್ತರು.

ತ್ರಿಭುವನದಲ್ಲಿ ನಿನ್ನ ಹೊಲಬು ನಿತ್ಯವಾಯಿತ್ತು ನಿನ್ನ ಭಕ್ತರಿಗೆ. ಭಕ್ತಿ ಗಂಭೀರವೆಂಬ ಹೊಳೆ ಹರಿಯಿತ್ತು. ಲೋಕದ ಜನರಿಗೆ ಈ ಕೆಲಸ ಸುಲಭವೇ? ಉಂಬಂತೆ ಉಂಬರು ಬರುವಂತೆ ಬರುವರು. ಭಕ್ತಿ ಶ್ರದ್ಧೆಯಲ್ಲಿ ಬಿದ್ದು ಮಜ್ಜನ ಮಾಡಬಹುದೆ ಎಂದು ಅರಿವಿನ ದೇವರೊಂದಿಗೆ ಮಾತನಾಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**623**

**ತ್ರೈಲಿಂಗಕಾನಂದ ಬೀಜಮಾತ್ರವು ನೀನು**
**ತ್ರೈವಿದ್ಯ ಮೂರಾರುವಿದ್ಯ ನೀನೆ**
**ತ್ರೈಲಿಂಗ ಮೂಲಕ್ಕೆ ಮುನ್ನಾದ ಮೂರೊಂದು ಪ್ರಸಾದಲಿಂಗ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವೆಂಬ ಗುರುದೇವನೆ, ನೀನು ಗರ್ಭಕ್ಕೆ ಚಿಮ್ಮಿದ ಒಂದು ಬೀಜದಲ್ಲಿ ಅರಿವಿನ ಲಿಂಗದ ಮೂರು ಮೊಳಕೆಗಳು ಹುಟ್ಟಿದವು. ಆ ಮೂರೂ ಲಿಂಗಗಳ ಪರಮಾನಂದಕ್ಕೆ ಬೀಜ ಮಾತ್ರವು ನೀನೇ ಆಗಿರುವಿ.

ತನು ಮನ ಘನವೆಂಬ ಮೂರು ಮಹಾವೃಕ್ಷಗಳಾಗಿ ಒಂದರಲ್ಲಿಯೇ ಅಡಗಿವೆ. ಅದರಲ್ಲಿ ಹುಟ್ಟಿದ ಮೂರಾರು ವಿದ್ಯೆಗಳು ಕೂಡಾ ನೀನೇ ಆಗಿರುವಿ.

ತನುವೆಂಬ ಒಂದು ವೃಕ್ಷದಲ್ಲಿ ಸಾತ್ವಿಕ ರಾಜಸ ತಾಮಸವೆಂದು ಮೂರು ವಿಧದ ಸ್ವಭಾವಗಳನ್ನು ಸೃಷ್ಟಿಸಿದವನು ನೀನೇ ಆಗಿರುವಿ. ತನುವೆಂಬ ಒಂದೇ ವೃಕ್ಷದಲ್ಲಿ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ಸೃಷ್ಟಿಸಿದವನು ನೀನೇ ಆಗಿರುವಿ.

ಒಂದು ತನುವಿನಲ್ಲಿ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗ, ಶರಣ, ಐಕ್ಯ ಎಂಬ ಆರು ಸ್ಥಲಗಳನ್ನು ಸೃಷ್ಟಿ ಮಾಡಿ, ಅರಿಷಡ್ವರ್ಗಗಳನ್ನು, ಸಾತ್ವಿಕ ರಾಜಸ ತಾಮಸವೆಂಬ ತನುತ್ರಯಗಳನ್ನು ನಷ್ಟ ಮಾಡಿದಾತನು ಕೂಡಾ ನೀನೇ ಆಗಿರುವಿ. ತನುವಿನಲ್ಲಿ ತನ್ಮಯವಾದ ಅರಿವು ನೀನೇ. ತನುವು ನೀನೇ. ತನುವನ್ನು ಆವರಿಸಿದ ಮನ ಕೂಡಾ ನಿನ್ನಿಂದಲೇ ಸೃಷಿಯಾಗಿದೆ.

ನೀನು ಸೃಷ್ಟಿ ಮಾಡಿದ ಮನ ನಿನ್ನನ್ನು ಮರೆತುದಕ್ಕಾಗಿ ತನುವಿನಲ್ಲಿ ಅರಿಷಡ್ವರ್ಗಗಳು ಸೃಷ್ಟಿಯಾದವು. ಸಪ್ತವ್ಯಸನಗಳು ಸೃಷ್ಟಿಯಾದವು. ಅಷ್ಟಮದಗಳು ಸೃಷ್ಟಿಯಾದವು. ತನು ಒಂದೇ ಆದರೂ ಮನದಿಂದಾಗಿ ಅದು ಹೆಣ್ಣು ಆಯಿತು; ಗಂಡು ಆಯಿತು. ತನುವಿನಲ್ಲಿಯೇ ಸಾತ್ವಿಕ ರಾಜಸ ತಾಮಸವೆಂದು ತನ್ನನ್ನು ತಾನೇ ವಿಂಗಡಿಸಿಕೊಂಡು ತಾನು ಅರಿವಿನ ಲಿಂಗ ಎನ್ನುವುದನ್ನೇ

ಮರೆತು ಹೋಯಿತು. ಜಾತಿ ಮತ ಪಂಥ ಧರ್ಮ ಶ್ರೀಮಂತ ಬಡವ ಎಂದು, ಮನ ತನುವನ್ನು ವಿಂಗಡಿಸಿಕೊಂಡು; ತನು, ತನುವನ್ನೇ ದ್ವೇಷ ಅಸೂಯೆ ಕಾಮಾದಿ ಗುಣಗಳಿಂದ ನೋಡಿತು.

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಶರಣು ಹೋಗುವುದೊಂದೇ ತಡ, ತನುವನ್ನು ಆವರಿಸಿದ ಅರಿಷಡ್ವರ್ಗಗಳು ಸಪ್ತವ್ಯಸನಗಳು ಅಷ್ಟಮದಗಳು ಗುರುದೇವನಿಗೆ ಪ್ರಸಾದವಾದವು. ತನು ಮನ ಘನವೆಂಬ ತ್ರೈಲಿಂಗಗಳು ಮೂರೊಂದಾದ ಪ್ರಸಾದಲಿಂಗವಾಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**624**

**ತೋರಿಪ್ಪ ಒಳಗೊಂದು ಮೀರಿಹ ಎಂಟು,**
**ಗಾರು ಮಾಡುತ್ತವೆ ವರ್ಗವಾ ಮೀರಿ ಮೀರಿ,**
**ನೂರೆಂಟರ ಕಳಾಪ್ರವೇಶದಲ್ಲಿ**
**ತೋರಿಪ್ಪುದು ಧಾತುವೇಳು**
**ಅನಾದಿ ಮೂರುತಿ ಕಪಿಲಸಿದ್ಧ ಮಲ್ಲೇಶ್ವರಯ್ಯ**
**ನಿನ್ನ ನೆನಹಿನ ಮೂರುತಿಯ ಮೂಲ.**

ಕಾಯ ಇರುವುದು ಒಂದೇ. ಅದು ಅರಿವಿನ ಕಾಯ! ಕಾಯವನ್ನು ಆವರಿಸಿದ ಮನ, ಅರಿವೆಂಬ ಗುರುದೇವನನ್ನು ಮೀರಿ, ಅಷ್ಟಮದಗಳಿಂದ ತಲೆ ಎತ್ತಿ, ಕಾಯದ ಆಶ್ರಯ ಪಡೆದು, ಕಾಯದ ಮೇಲೆಯೇ ಸವಾರಿ ಮಾಡುತ್ತಲಿದೆ. ಕಾಯದಲ್ಲಿ ವಾಸ ಮಾಡಿದ ಅರಿಷಡ್ವರ್ಗಗಳನ್ನು ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ಉದುರಿಸಲು ಅರಿವೆಂಬ ಗುರುದೇವನೊಬ್ಬನೆ ಸಾಕು. ಆದರೆ ಮನ ಪುನಃ ಅರಿವಿನ ಆಚಾರದಲ್ಲಿ ತೊಡಗಿ; ನೂರೆಂಟು ವಿಧದಲ್ಲಿ ಅರಿವನ್ನು ಭಾಗಮಾಡಿ, ಅರಿವಿನಕಾಯ ಎಂದು ಕರೆಯಿಸಿಕೊಳ್ಳಲು ಹೋಗಿ ಪಂಡಿತನಾಗುತ್ತದೆ.

ತೋರುವ ಅಂಗ ಒಂದೇ. ಆದರೂ ಅಂಗಸ್ಥಲಗಳು ನಲವತ್ನಾಲ್ಕು, ಲಿಂಗಸ್ಥಲಗಳು ಐವತ್ತೇಳು. ಧಾತುಗಳು ಏಳು. ಹೀಗೆ ನೂರೆಂಟು ಸ್ಥಲಗಳನ್ನು ಅಂಗ ಒಂದರಲ್ಲಿಯೇ ನೋಡಿ, ಅದರ ಸ್ವಭಾವಗಳನ್ನು ಅರಿತರಿತು, ಅರಿವೆಂಬ ಗುರುದೇವನನ್ನು ಅಂಗದಲ್ಲಿಯೇ, ಅಂಗವನ್ನು ಆವರಿಸಿದ ಮನದಿಂದಲೇ ಕಂಡುಕೊಳ್ಳಬೇಕು. ಈ ವಿದ್ಯೆ ಎಷ್ಟೊಂದು ಜಟಿಲ. ಕಲಿಯುವುದರೊಳಗಾಗಿ ಕಾಯಕ್ಕೆ ಮುಪ್ಪು ಆವರಿಸುತ್ತದೆ. ಕಾಯದ ಆಯುಷ್ಯವೇ ಮುಗಿದು ಹೋಗುತ್ತದೆ.

ಸಾವಿಲ್ಲದ ಕೇಡಿಲ್ಲದ ರೂಹೇ ಇಲ್ಲದ ಅರಿವಿನ ಚೆಲುವನನ್ನು ರೂಪದಲ್ಲಿಯೇ ಕಂಡುಕೊಳ್ಳಬೇಕು. ಕಾಯಕ್ಕೆ ರೂಪು ಇದೆ. ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಗೆ ರೂಪು ಇಲ್ಲ. ಹಾಗೆಯೇ ಕಾಯವನ್ನು ಆವರಿಸಿದ ಮನಕ್ಕೂ ರೂಪು ಇಲ್ಲ; ಸಾವು ಕೂಡಾ ಇಲ್ಲ. ಸಾವಿಲ್ಲದ ಚೆಲುವೆ ಈಕೆ. ರೂಹಿಲ್ಲದ ಚೆಲುವೆಯಿಂದಲೇ ರೂಹಿಲ್ಲದ ಚೆಲುವನನ್ನು ಕಂಡುಕೊಂಡು ಚೆಲುವೆಯು ಚೆಲುವನೊಂದಿಗೆ ಸಂಗಮವಾಗಿ ಕಾಯದಲ್ಲಿ ಒಂದಾಗಬೇಕು. ಆಗ ಕಾಯ ಒಂದೇ ಆಗುವುದು.

ಸಾತ್ವಿಕ ರಾಜಸ ತಾಮಸ ಗುಣಗಳು, ಕಾಮ ಕ್ರೋಧ ಲೋಭ ಮೋಹ ಮದಮತ್ಸರಗಳು, ಸಪ್ತವ್ಯಸನಗಳು, ಅಷ್ಟಮದಗಳು ಉದುರಿ ಬೀಳುವವು. ಸಕಲ ಸ್ಥಲಗಳೆಲ್ಲ ನಿಃಸ್ಥಲವಾಗುವವು. ಸ್ಥಲ ನಿಃಸ್ಥಲವೆಂದು ಹೇಳಲು ಕೂಡಾ ಕಾಯಕ್ಕೆ ಸಾಧ್ಯವಾಗುವುದಿಲ್ಲ. ಏಕೆಂದರೆ ಕಾಯವನ್ನೇ ಕೈಲಾಸವನ್ನಾಗಿ ಮಾಡಿಕೊಂಡು ಕಾಯವನ್ನು ಆವರಿಸಿದ ಮನವೆಂಬ ನಲ್ಲೆ ಕಾಯದಲ್ಲಿಯೇ

ಸಂಗಮವಾದ ಅರಿವೆಂಬ ನಲ್ಲನೊಂದಿಗೆ ಬೆರೆತು ಒಂದಾಗಿದ್ದಾರೆ. ಅನಾದಿ ಮೂರುತಿ ಕಪಿಲಸಿದ್ಧ ಮಲ್ಲಯ್ಯನೇ ತಾವಾಗಿದ್ದಾರೆ. ಕಾಯದೊಳಗಿದ್ದ ಅವರಿಬ್ಬರೂ ಮೂಲಪುರುಷರು. ಅವರನ್ನು ಅರ್ಧನಾರೀಶ್ವರರೆಂದು ಕರೆದಿದ್ದಾರೆ ಪುರಾತನರು.

**625**

**ದರಿದ್ರಂಗೆ ಧನದಾಸೆ, ಶೂರಂಗೆ ರಣದಾಸೆ,**
**ಕಾಮಿಗೆ ಸ್ತ್ರೀಯಾಸೆ, ನೀಚಂಗೆ ಕಲಹದಾಸೆ,**
**ಪಂಡಿತಂಗೆ ಸಭೆಯಾಸೆ, ಕೋಗಿಲೆಗೆ ವಸಂತದಾಸೆ,**
**ಪತಿವ್ರತೆಗೆ ಗಂಡನು ಮುನಿದಿಹನು ಬಹನೆಂಬಾಸೆ,**
**ಎನಗೆ ಶ್ರೀಗುರು ಚೆನ್ನಬಸವಸ್ವಾಮಿಗಳ ಪಾದೋದಕದಾಸೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ದರಿದ್ರ, ಶೂರ, ಕಾಮಿ, ನೀಚ, ಪಂಡಿತ, ಸಂಗೀತಗಾರ, ಪತಿವ್ರತೆ ಎಂದು ದೇಹದ ಸ್ವಭಾವ ಮತ್ತು ಅದರ ರುಚಿ, ಕೆಲಸಗಳನ್ನು ನೋಡಿ ದೇಹವನ್ನು ದೇಹವೇ ಹಾಗೆಂದು ಹೆಸರಿಟ್ಟು ಗುರುತಿಸಿ ಕರೆಯುತ್ತದೆ. ಇದು ದೇಹದ ತಪ್ಪಲ್ಲ. ದೇಹವನ್ನು ಆವರಿಸಿದ ಮನದ ತಪ್ಪು!

ದೇಹ ಅರಿವಿನದೇವರ ಸಂಪತ್ತು. ಆದರೆ ದೇಹವನ್ನು ಆವರಿಸಿದ ಮನ, ದೇಹದ ಆಶ್ರಯ ಪಡೆದು, ಧನದಾಸೆ ಮಾಡುತ್ತದೆ. ಧನಕ್ಕಾಗಿ ಹಗಲಿರುಳೆನ್ನದೆ ದೇಹವನ್ನು ದುಡಿಯಲು ಹಚ್ಚುತ್ತದೆ. ಅದು ಸಾಧ್ಯವಾಗದಿದ್ದರೆ ಕಳುವು ಮಾಡಲು ದೇಹವನ್ನು ಪ್ರೇರೇಪಿಸುತ್ತದೆ. ದುಡಿಯದೆ, ಕಳುವೂ ಮಾಡದೆ, ದೇಹದ ಮೇಲೆ ದರಿದ್ರ ತನವನ್ನು ಹೇರಿ, ಹಗಲಿರುಳೆನ್ನದೆ ಧನದಾಸೆಯಿಂದ ಹಪಹಪಿಸುತ್ತದೆ. ಇದು ಮನದ ಕೆಲಸ.

ಜಗದ ತನುಗಳೆಲ್ಲ ಮನದ ಕಬಂದ ಬಾಹುಗಳಲ್ಲಿ ಬಂಧಿಯಾಗಿವೆ. ದೇಹದಲ್ಲಿಯೇ ಅರಿವೆಂಬ ಗುರುದೇವನು ಸಂಗಮವಾಗಿದ್ದರೂ ಅ ದೇವರೊಂದಿಗೆ ಬೆರೆಯುವ ಆಸೆಯನ್ನು ದೇಹ ವ್ಯಕ್ತಪಡಿಸುವುದಿಲ್ಲ. ಮನ ತನುವನ್ನು ಬಳಕೆ ಮಾಡಿ ತನ್ನಾಸೆಯನ್ನು ತೃಪ್ತಿ ಪಡಿಸಿಕೊಳ್ಳುವುದನ್ನು ತನು ಪ್ರತಿಭಟಿಸುವುದಿಲ್ಲ. ಮನ ತನ್ನ ಸುಖ ದುಃಖಗಳನ್ನು ತನುವಿನ ಮೂಲಕ ಪೂರೈಸಿಕೊಳ್ಳುತ್ತದೆ. ಹೀಗಾಗಿ ತನು ದರಿದ್ರ ಶೂರ ಕಾಮಿ ನೀಚ ಪಂಡಿತ ಸಂಗೀತಗಾರ ಪತಿವ್ರತೆ ಎಂಬ ಹಣೆಪಟ್ಟಿಯನ್ನು ಕಟ್ಟಿಕೊಂಡು ತನುವಿನ ಮೂಲಕ ಗುರುತಿಸಿಕೊಳ್ಳುತ್ತದೆ.

ಹೀಗೆ ಗುರುತಿಸುವ ಸಕಲ ತನುಗಳು ಮನದಿಂದಲೇ ಕೂಡಿವೆ. ತನು ನಿರಪರಾಧಿ; ಮನ ಅಪರಾಧಿ ಎಂದು ಗುರುತಿಸುವ ಶಕ್ತಿ ಜ್ಞಾನಿಗೆ ಮಾತ್ರ ಇದೆ. ಹೀಗಾಗಿ ದಾಸರು ''ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ ಕಪಟ ನಾಟಕ ಸೂತ್ರಧಾರನು ನೀನೆ'' ಎಂದು ಹಾಡಿದ್ದಾರೆ.

ತನುವಿನ ಕಣಕಣದಲ್ಲಿ ಸಂಗಮವಾದ ಅರಿವೆಂಬ ಗುರುದೇವನು ತನುವಿನ ಕಣಕಣವನ್ನು ಬೆಳಗುತ್ತಿದ್ದಾನೆ. ಬೆಳಗುವ ಆ ಕಿರಣಗಳಿಂದ ಮನವೆಂಬ ಕತ್ತಲು ಸೃಷ್ಟಿಯಾಗಿದೆ. ಅರಿವಿನ ಬೆಳಕನ್ನು ಮರೆಮಾಡಿ ಮನವೆಂಬ ಕತ್ತಲು ಇಡೀ ತನುವನ್ನು ತನ್ನ ಸ್ವಾಧೀನ ಪಡಿಸಿಕೊಂಡಿದೆ. ಮನದ ರುಚಿಗೆ ತನು ಮಾರುಹೋಗಿ ತನು ಮತ್ತು ಮನ ಒಂದಾಗಿದೆ. ಇಡೀ ಜಗತ್ತು ಇಂತಹ ತನುಗಳಿಂದ ತುಂಬಿದೆ. ತನುವಿನ ತಪ್ಪು ಮತ್ತೊಂದು ತನುವಿಗೆ ಗೊತ್ತಾಗುತ್ತದೆ. ಹೀಗಾಗಿ ತನು ತನುವನ್ನು ದರಿದ್ರ, ಶೂರ ಕಾಮಿ ನೀಚ ಪಂಡಿತ ಸಂಗೀತಗಾರ ಪತಿವ್ರತೆ ವೇಶ್ಯೆ ಎಂದು ಕೂಗಿ ಕರೆಯುತ್ತದೆ. ತಾನು ಕೂಡಾ

ಹಾಗೆಯೇ ಎನ್ನುವುದನ್ನು ಮರೆತು ಹೋಗುತ್ತದೆ.

ಒಂದು ಗುರುವಿಗೆ ಹನ್ನೆರಡು ಜನ ಬುದ್ಧಿವಂತ ಶಿಷ್ಯರಿದ್ದರು. ಅವರು ನದಿ ದಾಟಿ ಒಂದು ಸಮಾರಂಭಕ್ಕೆ ಹೋದರು. ದಡದಲ್ಲಿ ನಿಂತು ಒಬ್ಬ ಎಣಿಕೆ ಮಾಡಿದ. ಹನ್ನೊಂದು ಜನ ಮಾತ್ರ ಇದ್ದರು. ನದಿಯಲ್ಲಿ ಮುಳುಗಿ ಒಬ್ಬ ಕಾಣೆಯಾಗಿದ್ದಾನೆ ಎಂದು ಎಣಿಕೆ ಮಾಡಿದವನು ತೀರ್ಮಾನಿಸಿದ. ಎಲ್ಲರೂ ಎಣಿಕೆ ಮಾಡಿದರು; ಲೆಕ್ಕ ಸರಿ ಹೋಗಲಿಲ್ಲ. ದಾರಿ ಹೋಕ ಬಂದು ಎಲ್ಲರನ್ನೂ ಸಾಲಾಗಿ ನಿಲ್ಲಿಸಿ ಎಣಿಕೆ ಮಾಡಿದ. ಲೆಕ್ಕ ಸರಿಹೋಯಿತು. ದಡ್ಡ ಶಿಖಾಮಣಿಗಳು ಎಂದು ಗದರಿದ. ಹನ್ನೆರಡು ಜನ ಆಶ್ರಮಕ್ಕೆ ಬಂದು ಗುರುಗಳ ಮುಂದೆ ನಡೆದುದನ್ನು ಹೇಳಿದರು. ಗುರುಗಳೆ, ನಾವು ದಡ್ಡರೆ ಎಂದು ಪ್ರಶ್ನಿಸಿದರು. ನೀವು ದಡ್ಡರಲ್ಲ. ನಿಮ್ಮನ್ನು ಆವರಿಸಿದ ಮನ ಮಾತ್ರ ದಡ್ಡದು. ಅದಕ್ಕೆ ತನ್ನನ್ನು ಹಿಡಿದು ಎಣಿಕೆ ಮಾಡುವ ಶಕ್ತಿ ಇಲ್ಲ. ಜಗತ್ತಿನ ದಡ್ಡತನ ಮನಕ್ಕೆ ಕಾಣುತ್ತದೆ. ಮನದ ದಡ್ಡತನ ಮನಕ್ಕೆ ಕಾಣುವುದಿಲ್ಲ.

ಕತ್ತಲಲ್ಲಿ ಬಿದ್ದ ವಸ್ತುಗಳು ಕತ್ತಲ ಕಣ್ಣಿಗೆ ಕಾಣುವುದಿಲ್ಲ. ಕಣ್ಣಿನ ಅರಿವಿನ ಬೆಳಕು ಕಣ್ಣಿಗೆ ಬಳಕೆಯಾಗಲಿಲ್ಲ. ಮನ ಏನೇನೂ ಅರಿಯದ ತನುವಿನೊಂದಿಗೆ ಸಂಗ ಮಾಡಿದೆ. ತನುವಿನಲ್ಲಿಯೇ ತನ್ಮಯವಾದ ಅರಿವಿನೊಂದಿಗೆ ಸಂಗ ಮಾಡಿ ಆ ಅರಿವಿನಿಂದ ನೋಡಿದರೆ ಲೆಕ್ಕ ಸರಿಯಾಗುತ್ತದೆ. ತನು ಅರಿವಿನ ತನುವಾಗುತ್ತದೆ. ಅರಿವಿನಿಂದ ನೋಡಿದರೆ ಅರಿವಿನ ತನು. ಮರೆವಿನಿಂದ ನೋಡಿದರೆ ದರಿದ್ರ, ಶೂರ ಕಾಮಿ ನೀಚ ಪಂಡಿತ ಪತಿವ್ರತೆ ವೇಶ್ಯೆ ಎಂಬ ಅಜ್ಞಾನ ಕಾಣುತ್ತದೆ.

ಮರೆವಿನ ಕಣ್ಣಿಗೆ ಲೋಹ ಚಿನ್ನವಾಗಿ ಕಂಡರೆ, ಅರಿವಿನ ಕಣ್ಣಿಗೆ ಲೋಹ ಲೋಹವಾಗಿಯೇ ಕಾಣುತ್ತದೆ. ಬುದ್ಧನಿಗೆ ಈ ಶಕ್ತಿ ಇದೆಯೇ ಹೊರತು ಸಿದ್ಧಾರ್ಥನಿಗೆ ಇಲ್ಲ. ಸಿದ್ಧಾರ್ಥನಿಗೆ ಬುದ್ಧನಾಗುವ ಆಸೆ ಚಿಗುರಿದಾಗಲೇ ಬುದ್ಧ ಸಿದ್ಧಾರ್ಥನನ್ನು ಅಪ್ಪಿಕೊಂಡು ಬುದ್ಧನನ್ನಾಗಿಸುತ್ತಾನೆ.

ತನುವಿನಲ್ಲಿ ಬುದ್ಧ ತನ್ಮಯವಾಗಿದ್ದಾನೆ. ತನುವನ್ನು ಮನವೆಂಬ ದರಿದ್ರನು ಆವರಿಸಿ ತನುವಿನೊಂದಿಗೆ ಸದಾ ಧನದಾಸೆಯಲ್ಲಿ ತೊಡಗಿದ್ದಾನೆ. ಶೂರನೆಂದು ಮೀಸೆ ತಿರುವುತ್ತಾ ರಣದಾಸೆಯನ್ನು ಬಯಸುತ್ತಾನೆ. ಮನದಿಂದಾಗಿ ಕಾಯದಲ್ಲಿ ಕಾಮ ಹುಟ್ಟಿ, ಕಾಯ ಕಾಯದೊಂದಿಗೆ ಸುಖಿಸಿ, ಕಾಮಿ ಎಂದು ಕಾಯದಿಂದಲೇ ಕರೆಯಿಸಿಕೊಳ್ಳುತ್ತದೆ. ನೀಚ ಪಂಡಿತ ಪತಿವ್ರತೆ ವೇಶ್ಯೆ ಎಂಬ ಹಣೆಪಟ್ಟಿ ಕಟ್ಟುವ ಕಾಯಕ್ಕೆ ಕಾಯದಿಂದಲೇ ಎಂದು ಕಾಯಕ್ಕೆ ಗೊತ್ತಾಗುವುದೇ ಇಲ್ಲ. ಇದೆಲ್ಲ ಮನದ ಆಸೆ ಎಂದು ಮನವೇ ಸಾಕ್ಷಿಯಾಗಿ ನೋಡುವುದಿಲ್ಲ.

ಮನ ಇದೆಲ್ಲವನ್ನೂ ತನಗೆ ತಾನೇ ಸಾಕ್ಷಿಯಾಗಿ ನೋಡಿ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಬುದ್ಧನನ್ನು ಕೂಡಿ ಆತನೊಂದಿಗೆ ಸುಖಿಸಬೇಕೆಂಬ ಆಸೆಯಾದಾಗಲೇ ಸಿದ್ಧಾರ್ಥ ಬುದ್ಧನಾಗುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ.

**626**

**ದಾನಿಮುನ್ನಾನಲ್ಲ, ಏನು ಗುಣವೆನ್ನಲ್ಲಿ?**
**ನೀ ಕಾಡಲ್ಕೆ ಎನಗೆ ತೆರಹಿಲ್ಲವ್ವಾ.**
**ದಾನವನು ಬೇಡಿದೆನು ಭಕ್ತಿ ಭಿಕ್ಷವ ನೀಡಿ**
**ಅನಾದನಾದನು ಚೆನ್ನಬಸವಣ್ಣನು.**
**ಕೇಳೆಲೆಗೆ ಮಾಯೆ, ನೀ ನನ್ನತ್ತ ಹೊದ್ದದಿರು**
**ಗಾರುಮಾಡುವರು ನಿನ್ನನೆನ್ನ ನಿರ್ಮಾಯರು.**

**ಕಾರುಣ್ಯಕರ ಕಪಿಲಸಿದ್ಧ ಮಲ್ಲೇಶ್ವರನ**
**ಭಾವಶುದ್ಧದ ಸತ್ವವನು ವಿಡಿದು.**

ಸಿದ್ಧರಾಮ ಶಿವಯೋಗಿಗಳು ತನುವನ್ನು ಆವರಿಸಿದ ಮನವೆಂಬ ಮಾಯೆಯೊಂದಿಗೆ ಮಾತನಾಡಿದ್ದಾರೆ. ದಾನಿ ಭಿಕ್ಷುಕ ಎನ್ನುವ ಅಜ್ಞಾನದ ಗುಣ ನೀನು ನನ್ನನ್ನು ಹೊದ್ದಿರುವವರೆಗೆ ಇತ್ತು. ಅದು ನಿನ್ನ ಮಾಯೆ. ಈಗ ನಿನ್ನ ಭಯವೆನಗಿಲ್ಲ. ಇದು ಅರಿವೆಂಬ ಗುರುದೇವನು ವಾಸ ಮಾಡಿದ ಚೆನ್ನಬಸವಣ್ಣನ ಕಾಯ. ಆತ ನನಗೆ ಭಕ್ತಿ ಭಿಕ್ಷವನ್ನು ನೀಡಿ ಅನಾದನಾದನು.

ಭಕ್ತಿ ಭಿಕ್ಷವೆಂದರೆ ಸಾಮಾನ್ಯವೇ? ಇದನ್ನು ಶರಣರಿಗೆ ಮಾತ್ರ ನೀಡಲು ಬರುತ್ತದೆ. ಲೋಕದ ಜನ ಹೊನ್ನು ಹೆಣ್ಣು ಮಣ್ಣು ದಾನ ಮಾಡುತ್ತಾರೆ. ದಾನ ಮಾಡಿದವನು ದಾನಿ; ದಾನ ಪಡೆದವನು ಭಿಕ್ಷುಕ! ಇದು ದಾನಿಯ ಅಹಂಕಾರ. ಭಿಕ್ಷುಕನ ಅಜ್ಞಾನ. ಈ ಅಹಂಕಾರ ತನುವಿನಲ್ಲಿ ಸಾಯುವವರೆಗೆ ಮನೆ ಮಾಡುತ್ತದೆ.

ಶರಣ ಹಾಗಲ್ಲ. ತನುವಿನಲ್ಲಿಯೇ ತನ್ಮಯವಾದ ಅರಿವಿಗೆ ಶರಣು ಹೋಗಿ ಶರಣನಾದವನು. ಆ ಅರಿವನ್ನೇ ಗುರುದೇವನನ್ನಾಗಿಸಿಕೊಂಡು ಆತನಿಂದ ಭಕ್ತಿ ಭಿಕ್ಷವನ್ನು ಪಡೆದವನು. ಆ ಗುರುದೇವನಿಗೆ ಭಕ್ತಿ ಮಾಡಿದವನೇ ಶರಣ.

ಪ್ರತಿ ತನುವಿನಲ್ಲಿ ಅರಿವಿದೆ. ತನುವನ್ನು ಆವರಿಸಿದ ಮನಕ್ಕೆ ಅರಿವಿನ ಪರಿಚಯವಿಲ್ಲದ್ದಕ್ಕಾಗಿ ಭೂಮಿಗೆ, ಭೂಮಿಯಲ್ಲಿ ಹುಟ್ಟಿದ ಹೇಮಕ್ಕೆ, ಕಾಯದಲ್ಲಿ ಹುಟ್ಟಿದ ಕಾಮಕ್ಕೆ ಮನ ಮರುಳಾಗಿದೆ. ಅದನ್ನೇ ಹೇರಳವಾಗಿ ಭಿಕ್ಷೆಯಾಗಿ ಪಡೆಯುತ್ತದೆ, ಅದನ್ನೇ ದಾನ ರೂಪದಲ್ಲಿ ದಾನಿಯಾಗಿ ನೀಡುತ್ತದೆ. ತನ್ನದಲ್ಲದ ವಸ್ತುವನ್ನು ಬೇಡುವವನು ನೀಡುವವನು ಕೂಡಾ ಭಿಕ್ಷುಕನೇ ಆಗಿದ್ದಾನೆ.

ಬೇಡುವವನು ಜಂಗಮನೆ? ನೀಡುವವನು ಭಕ್ತನೆ? ಬೇಡುವವನಿಗೂ ಬೇಡಿಸಿಕೊಂಬುವವನಿಗೂ ಮುಕ್ತಿಯಿಲ್ಲ ಎಂದು ಸಾರಿದ್ದಾರೆ ಪ್ರಭುಗಳು. ಬೇಡುವವನು ಕೂಡಾ ಅರಿವಿನ ಶ್ರೀಮಂತ; ನೀಡುವವನು ಕೂಡಾ ಅರಿವಿನ ಶ್ರೀಮಂತ. ಅವರಿಬ್ಬರೂ ತಮ್ಮ ತಮ್ಮ ಅರಿವಿನ ಶ್ರೀಮಂತಿಕೆಯನ್ನು ಮರೆತುದಕ್ಕಾಗಿ ಅವರಿಬ್ಬರೂ ಬಡವರಾಗಿದ್ದಾರೆ.

ಬೇಡಿದರೆ ಎನ್ನೊಡೆಯನ ಬೇಡುವೆ, ಹಾಡಿದರೆ ಎನ್ನೊಡೆಯನ ಹಾಡುವೆ. ಒಡೆಯಂಗೊಡಲ ತೋರಿ ಎನ್ನ ಬಡತನವ ಬಿನ್ನೈಸುವೆ ಎಂದು ಬಸವಣ್ಣನವರು ಹಾಡಿದ್ದಾರೆ.

ನೋಡಲು ಅರಿವಿನ ಕಣ್ಣುಕೊಟ್ಟ ಮಹಾದಾನಿ ಆತ. ಆದರೂ ತನುವನ್ನು ಆವರಿಸಿದ ಮನವೆಂಬ ಮಾಯೆ ತನ್ನ ಅಜ್ಞಾನದ ಕಣ್ಣಿನ ಮೂಲಕ ಹಳದಿ ಲೋಹವನ್ನು ಚಿನ್ನವೆಂದು ನೋಡುತ್ತದೆ. ನೀಡಿ ದಾನಿಯೆಂದು ಮೆರೆಯುತ್ತದೆ; ಬೇಡಿ ಭಿಕ್ಷುಕನೆಂದು ಕುಗ್ಗುತ್ತದೆ. ಇದು ತನುವನ್ನು ಆವರಿಸಿದ ಮಾಯೆಯ ಕೆಲಸವೆಂದು ಸಿದ್ಧರಾಮ ಶಿವಯೋಗಿಗಳಿಗೆ ಗೊತ್ತಾಯಿತು. ಚೆನ್ನಬಸವಣ್ಣನನ್ನು ಬೇಡಿದರು. ಆತ ಅರಿವೆಂಬ ಗುರುದೇವನ ಸನ್ನಿಧಿಗೆ ಹೋಗುವ ಮಾರ್ಗದ ಸುಳುಹು ಎಂಬ ಭಕ್ತಿ ಭಿಕ್ಷೆಯ ನೀಡಿದರು.

ದಾನಿಮುನ್ನಾನಲ್ಲ, ಏನುಗುಣವೆನ್ನಲ್ಲಿ? ನೀ ಕಾಡಲ್ಕೆ ಎನಗೆ ತೆರಹಿಲ್ಲವ್ವಾ:

ಲೋಕಕ್ಕೆ ದಾನಿ ಎಂದು ನೀಡುವುದೂ ಗೊತ್ತು; ಹಾಗೆಯೇ ಬೇಡುವುದೂ ಗೊತ್ತು. ಚಿನ್ನವನ್ನು ನೀಡಿದ್ದು ಭೂಮಿ. ಅನ್ನವನ್ನು ನೀಡಿದ್ದು ಕೂಡಾ ಭೂಮಿಯೇ ಆಗಿದೆ. ಅಂದ ಮೇಲೆ ಆತ ನೀಡುವ ದಾನಿ ಹೇಗಾಗುತ್ತಾನೆ? ನೀಡುವವನು ದಾನಿ ಎಂದು ಹೇಳಿ ಬೇಡುವವನು ಭಿಕ್ಷುಕ ಹೇಗಾಗುತ್ತಾನೆ?

ತನುವನ್ನು ಆವರಿಸಿದ ಮನವೆಂಬ ಮಾಯೆಗೆ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಭಕ್ತಿ ಮಾಡುವುದು ಗೊತ್ತಾಗಬೇಕು. ಆತ ಒಡಲೊಡೆಯ. ಬೇಡಿದರೆ ಒಡಲೊಡೆಯನನ್ನು ಬೇಡಬೇಕು. ಹಾಡಿದರೆ ಒಡಲೊಡೆಯನನ್ನೇ ಹಾಡಬೇಕು. ಆಗ....

ಒಡಲೊಡೆಯ ಒಡಲನ್ನು ಆವರಿಸಿದ ಮನವೆಂಬ ಮಾಯೆಯನ್ನು ಜಟೆಯಲ್ಲಿಟ್ಟುಕೊಂಡು ಗಂಗೆಯನ್ನಾಗಿಸುತ್ತಾನೆ. ತೊಡೆಯ ಮೇಲೆ ಕೂಡಿಸಿಕೊಂಡು ಗೌರಿಯನ್ನಾಗಿಸುತ್ತಾನೆ. ತಾನು ಶಿವನಾಗುತ್ತಾನೆ; ಮನವನ್ನೇ ಪಾರ್ವತಿಯನ್ನಾಗಿಸುತ್ತಾನೆ. ಅವರಿಬ್ಬರ ವಾಸಕ್ಕೆ ಕಾಯವನ್ನು ಕೈಲಾಸವಾಗಿಸುತ್ತಾನೆ.

ಕೇಳೆಲಗೆ ಮಾಯೆ, ನೀನನ್ನತ್ತ ಹೊದ್ದದಿರು ಗಾರುಮಾಡುವರು ನಿನ್ನನೆನ್ನ ನಿರ್ಮಾಯರು. ಇದು ಕಾರುಣ್ಯಾಕರ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಒಲಿಸಿಕೊಳ್ಳುವ ಸೂತ್ರ ! ಲೋಕಕ್ಕೆ ನೀಡಿದ ಅರಿವಿನ ಸೂತ್ರ !

**627**

**ದಾಯ ಬಣ್ಣಗಳನು ಓರಂತೆ ಮನೆಮಾಡಿ**
**ಜೀವಗಳೆಗಳನವರ ಮನೆಯಲಿರಿಸಿ**
**ಸಾವಧಾನ ನಿರಂತರವೆಂಬ ಸಮ್ಯಜ್ಞಾನ ರೂಪನು**
**ಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವೇ ಕೈಲಾಸ! ಅದು ಪರಮಾತ್ಮನು ವಾಸ ಮಾಡಿದ ಸುಕ್ಷೇತ್ರ! ಮನೆ ಮಾಡಿ ಮನೆಯಲ್ಲಿದ್ದು ಥಳಥಳನೆ ಹೊಳೆಯುವ ಪರಮಾತ್ಮನ ಪರಿಚಯ ತನು ಎಂಬ ಮನೆಗೆ ಇಲ್ಲದಂತಾಗಿದೆ. ಇದು ಮನೆಯ ದುರ್ದೈವವೇ ಸರಿ.

ಕೈಲಾಸವೇ ಆಗಬೇಕಾದ ಕಾಯ ಕತ್ತು ಕೊಯ್ದು ಜೀವತೆಗೆಯುವ ಕೊಲೆಗಡುಕರನ್ನು ಮನೆಯಲ್ಲಿರಿಸಿಕೊಂಡಿದೆ.

ಕಾಯದಲ್ಲಿ ಸಂಗಮವಾದ ಪರಮಾತ್ಮನ ಬೆಳಕಿನಿಂದ ಮನವೆಂಬ ಕತ್ತಲು ಹುಟ್ಟಿ, ಕಾಯವನ್ನು ಅಮರಿಕೊಂಡು, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಆರು ಬಣ್ಣಗಳನ್ನು ಕಾಯದಲ್ಲಿ ಸೃಷ್ಟಿ ಮಾಡಿದೆ. ಸಪ್ತವ್ಯಸನಗಳನ್ನು, ಅಷ್ಟಮದಗಳನ್ನು ಸೃಷ್ಟಿ ಮಾಡಿದೆ. ಇವು ಕಾಯದಲ್ಲಿ ಸೃಷ್ಟಿಯಾಗಿ ಕಾಯದ ಕತ್ತು ಸೀಳಿ ಜೀವ ತೆಗೆಯುವ ಬಣ್ಣಗಳು.

ಕಾಯ ಕಾಮಿಯಲ್ಲ; ಕಾಯ ಕ್ರೋಧಿಯೂ ಅಲ್ಲ. ಕಾಯ ಲೋಭಿಯೂ ಅಲ್ಲ. ಕಾಯ ಮೋಹಿಯೂ ಅಲ್ಲ. ಕಾಯ ಮದವೂ ಅಲ್ಲ; ಕಾಯ ಮತ್ಸರಿಯೂ ಅಲ್ಲ. ಕಾಯದಲ್ಲಿ ಸೃಷ್ಟಿಯಾದ ಆಯಾ ಬಣ್ಣಗಳು ಕಾಯಕ್ಕೆ ಆಯಾ ವೇಷವನ್ನು ಹಾಕುತ್ತವೆ.

ನಿರೂಪು ನಿರಾಕಾರ ನೀಲಾಕಾರದ ಆಕಾಶದಲ್ಲಿ, ಏಳು ಬಣ್ಣಗಳು ಸೃಷ್ಟಿಯಾಗಿ, ಕಾಮನ ಬಿಲ್ಲು ಎಂದು ಹೇಗೆ ಹೆಸರು ಪಡೆದಿದೆಯೋ ಹಾಗೆಯೇ ಕಾಯವನ್ನು ಕಾಯವೇ ಕಾಮಿ ಎಂದು ನೋಡುತ್ತದೆ.

ನೋಡುವ ಕಣ್ಣಿಗೆ ಕಾಮದ ಬಣ್ಣ ಬಳೆದುಕೊಂಡು ನೋಡುವುದರಿಂದ ಕಾಯ ಕಾಮಿಯಾಗಿ ಕಾಣುತ್ತದೆ. ಕಾಯದ ಕತ್ತು ಸೀಳಿ ಜೀವಕಳೆಯುವ ಬಣ್ಣಗಳು ಕಾಯವನ್ನೇ ಮನೆ ಮಾಡಿಕೊಂಡು ಕಾಯದಲ್ಲಿಯೇ ಇವೆ.

ನೋಡುವುದೊಂದೇ ತಡ ಕಾಮದ ಬಣ್ಣ ಕಾಯವನ್ನು ಆವರಿಸಿ ಇಡೀ ಕಾಯ

ಕಾಮಿಯಾಗುತ್ತದೆ. ಕಾಮಿಗೆ ಕಾಮಹರನ ಪರಿಚಯವಿಲ್ಲ. ಆತ ಸಾವಧಾನಿ. ನಿರಂತರ ಕಾಯದಲ್ಲಿಯೇ ವಾಸ ಮಾಡುವ ಸಮ್ಯಜ್ಞಾನಿ ನಿರೂಪರೂಪನು. ನಿರಂಜನನು. ಆತ ಗುರುದೇವನೂ ಹೌದು.

ಕಾಯ ಮಾತ್ರ ಕಾಣುತ್ತದೆ. ಕಾಯವನ್ನು ಆವರಿಸಿದ ಮನ ಕಾಣುವುದಿಲ್ಲ. ಇದು ಚೆಲ್ಲುವ ಬಣ್ಣಗಳೂ ಕಾಣುವುದಿಲ್ಲ. ಹಾಗೆಯೇ ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನೂ ಕಾಣುವುದಿಲ್ಲ. ಈತನಿಗೆ ಬಣ್ಣವೇ ಇಲ್ಲ. ನಿರೂಪನು. ನಿರೂಪದಿಂದ ಹುಟ್ಟಿದ ಬಣ್ಣಗಳು ರೂಪವನ್ನು ಅಮರಿಕೊಂಡಿವೆ. ಕೂಡಲೇ ರೂಪಕ್ಕೆ ಆಯಾ ಬಣ್ಣ ಆವರಿಸಿ ಕಾಮಿಯೆಂದು ಕ್ರೋಧಿ ಲೋಭಿ ಮೋಹಿ ಮದ ಮತ್ಸರಿಯೆಂದು ಕಾಯವನ್ನು ಕಾಯವೇ ನಿರ್ಧರಿಸಿ ಕರೆಯುತ್ತದೆ.

ಬಣ್ಣದ ಮಹಿಮಯೆಂದು ಕಣ್ಣಿಗೆ ಗೊತ್ತಾಗುವುದಿಲ್ಲ. ಬಣ್ಣಕ್ಕೂ ಗೊತ್ತಾಗುವುದಿಲ್ಲ. ಕಣ್ಣಲ್ಲಿಯೇ ಇದ್ದು ಬಣ್ಣವಿಲ್ಲದೆ ಬೆಳಗುವ ಮುಕ್ಕಣ್ಣನ ಕಣ್ಣಿಗೆ ಮಾತ್ರ ಗೊತ್ತಾಗುತ್ತದೆ. ರತಿ ಮನ್ಮಥರಿಬ್ಬರೂ ಬಣ್ಣ ಬಳಿದುಕೊಂಡು ಮುಕ್ಕಣ್ಣನ ಮುಂದೆ ನೃತ್ಯ ಮಾಡಿದರೆ ಸಾಕು ಬಣ್ಣವಿಲ್ಲದೆ ಬೆಳಗುವ ಬೆಳಕಿಗೆ ತುತ್ತಾಗಿ ಸುಟ್ಟು ಬೂದಿಯಾಗುತ್ತಾರೆ. ಆಗ ಕಣ್ಣಲ್ಲಿ ಬಣ್ಣವಿಲ್ಲದೆ ಬೆಳಗುವ ಬೆಳಕು ಮಾತ್ರ ಚಿಮ್ಮುತ್ತದೆ.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರದಿಂದ, ಸಪ್ತವ್ಯಸನಗಳಿಂದ, ಅಷ್ಟಮದಗಳಿಂದ ತುಂಬಿದ ಬಣ್ಣದ ಕಾಯಗಳು ಕಾಣುವುದೇ ಇಲ್ಲ. ಬೆಳ್ಳನೆ ಬೆಳಗುವ ಬೆಳಕಿನ ದೃಶ್ಯದ ಕಿರಣಗಳು ಬಣ್ಣದ ಬೆಳಕನು ನುಂಗಿ ಅರಿವಿನ ಬೆಳಕಿನಿಂದ ನೋಡುತ್ತದೆ. ಆಗ ತನಗೆ ತಾನೇ ಸಾವಧಾನಿಯಾಗುತ್ತದೆ. ನಿರಂತರ ಸಮ್ಯಜ್ಞಾನಿಯಾಗಿ ನೋಡುತ್ತದೆ. ರೂಪದಿಂದ ಬೆಳಗುವ ನಿರೂಪದ ಬೆಳಕು ರೂಪದಲ್ಲಿರುವ ನಿರೂಪವನ್ನೇ ಕೂಡಿ ಕೂಡದ ಅಗಲದ ಕೂಟದ ಸುಖವನ್ನು ಅನುಭವಿಸುತ್ತದೆ.

ನೋಡೂದ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ ಎನ್ನುವ ಪ್ರಭುಗಳ ಸೂತ್ರ ಕಣ್ಣಿಗೆ ಪರಿಚಯವಾಗಿ; ಕಣ್ಣಲ್ಲಿಯೇ ಹುಟ್ಟಿದ ಬಣ್ಣಗಳನ್ನು ಕಣ್ಣಲ್ಲಿಯೇ ಇದ್ದ ಬೆಳಕಿನಿಂದ ಕಳೆದುಕೊಳ್ಳುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**628**

**ದಾಯ ಬಣ್ಣ ಲೀಯವಾಗಿ ಮೇಲೆ ಮುಗ್ಧೆಯ ಕೂಟ.**
**ಆರೂಢದಾಧಿಕ್ಯ ಸ್ಥಾನ ಆರಾರಲ್ಲಿ ಅನುಮಾನಿಸದೆ**
**ಮೀರಿ ಮೂವತ್ತಾರ ಕಳೆದು ತೋರಿದ**
**ಸಂಯೋಗಕ್ಕಾನು ಬೆರಗಾದೆನಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ದಾಯ ಎನ್ನುವ ಶಬ್ದ ಲಾಭ ಪಾಲು ಎನ್ನುವ ಅರ್ಥವನ್ನು ಸೂಚಿಸುತ್ತದೆ. ಬಣ್ಣಗಳು ಏಳು ಇಲ್ಲ. ಇರುವುದು ಒಂದೇ ಬಣ್ಣ. ಅದು ಬಿಳಿ. ಈ ಬಣ್ಣವೇ ತನ್ನ ಪಾಲುದಾರನನ್ನಾಗಿ ಕಪ್ಪು ಬಣ್ಣವನ್ನು ಸೃಷ್ಟಿ ಮಾಡಿದೆ. ಕಪ್ಪು ಬಣ್ಣ ಬಿಳಿಯನ್ನು ಆವರಿಸಿ ನೂರಾರು ಬಣ್ಣಗಳನ್ನು ಸೃಷ್ಟಿ ಮಾಡಿದೆ. ಇಂಗ್ಲೆಂಡಿನ ಒಬ್ಬ ಕಲಾವಿದ ಎರಡು ಸಾವಿರದ ಐದುನೂರು ಬಣ್ಣಗಳ ಹೆಸರುಗಳನ್ನು ಹೇಳುತ್ತಾ ಅವುಗಳನ್ನು ಗುರುತಿಸುತ್ತಿದ್ದನಂತೆ.

ಇದು ಸಾಧ್ಯವಾಗಬಹುದು. ಆದರೆ ಸಕಲ ಬಣ್ಣಗಳ ಮೂಲ ಬಿಳಿಬಣ್ಣ. ಆ ಬಿಳಿ ಬಣ್ಣದಿಂದಲೇ ಕಪ್ಪು ಬಣ್ಣ ಸೃಷ್ಟಿಯಾಯಿತು. ಬಿಳಿಬಣ್ಣದ ನೆರವನ್ನು ಪಡೆದ ಕಪ್ಪುಬಣ್ಣ, ಸಕಲ ಬಣ್ಣಗ

ಳಿಗೆ ಜನ್ಮ ನೀಡಿತು. ಪುನಃ ತಾನು ಜನ್ಮ ಪಡೆದ ಮೂಲ ಬಿಳಿಬಣ್ಣವನ್ನೇ ಕಪ್ಪುಬಣ್ಣ ಮರೆತು ಹೋಯಿತು.

ಆರೂಢದಾಧಿಕ್ಯ ಸ್ಥಾನ ಆರಾರಲ್ಲಿ ಅನುಮಾನಿಸದೆ ಮೀರಿ ಮೂವತ್ತಾರ ಕಳೆದು ತೋರಿದ ಸಂಯೋಗಕ್ಕಾನು ಬೆರಗಾದೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು. ಒಂದು ಜೀವ ಜಲಬಿಂದುವಿನಿಂದ ನಿರ್ಮಾಣವಾದ ತನು, ಮೂವತ್ತಾರು ತತ್ವಗಳಿಂದ ಭರಿತವಾಗಿದೆ. ಬಯಲು ಒಂದೇ. ಬಯಲು ಜಲಜನಕವನ್ನು ಆಮ್ಲಜನಕವನ್ನು ಸೃಷ್ಟಿ ಮಾಡಿ ತಾನು ಅದರಲ್ಲಿ ಬೆರೆತು ಜಲವಾಯಿತು; ಜೀವಜಲವಾಯಿತು. ಈ ಜೀವಜಲವೇ ಬ್ರಹ್ಮಾಂಡದ ಸೃಷ್ಟಿಗೆ ಕಾರಣವಾಯಿತು.

ಜಲಕ್ಕೆ ಬಣ್ಣವಿಲ್ಲ, ರೂಪವಿಲ್ಲ, ರುಚಿಯಿಲ್ಲ; ತನ್ನ ಮಟ್ಟವನ್ನು ತಾನು ಕಾಯ್ದುಕೊಳ್ಳುತ್ತದೆ. ಇದು ಜಲದ ಗುಣ. ಬಣ್ಣವಿಲ್ಲದ ಈ ಜಲವೇ ಜೀವಜಲವಾಗಿ ಹಲವಾರು ಬಣ್ಣಗಳಿಗೆ ಕಾರಣವಾಗಿದೆ. ರೂಪವಿಲ್ಲದ  ಜಲವೇ ಹಲವಾರು ರೂಪಗಳಿಗೆ ಕಾರಣವಾಗಿದೆ. ರುಚಿಯೇ ಇಲ್ಲದ ಜಲ ಹಲವಾರು ರುಚಿಗಳಿಗೆ ಜನ್ಮ ನೀಡಿದೆ. ತನ್ನ ಸಮತೋಲ ತಾನೇ ಕಳೆದುಕೊಂಡು ಪ್ರಳಯಕ್ಕೆ ಕಾರಣವಾಗಿದೆ.

ಬಯಲು ಎನ್ನುವ ಬೆಳಕು ಬಯಲನ್ನೇ ಬಿತ್ತಿ ಹಲವಾರು ಬಣ್ಣಗಳುಳ್ಳ ಬ್ರಹ್ಮಾಂಡವನ್ನೇ ಸೃಷ್ಟಿ ಮಾಡಿದೆ. ಬಯಲೇ ತನುವಾಗಿ ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೇ ನೋಡಿ ಆನಂದಪಡುವ ಶಕ್ತಿ ಅದಕ್ಕೆ ಬಂದಿದೆ. ತನುವನ್ನು ಆವರಿಸಿದ ಮನವೆಂಬ ಮುಗ್ಧೆಗೆ ತನುವಿನಲ್ಲಿಯೇ ಸಂಗಮವಾದ ಬಯಲುದೇವನ ಸಂಗ ಮಾಡಿ ಕೂಟಸ್ಥೆಯಾದಾಗ ಆಕೆಯ ಬಣ್ಣ ಬಯಲಾಗಿ ಬಯಲಲ್ಲಿಯೇ ಲೀಯವಾಗುತ್ತದೆ.

ಶರಣರು ವಿಜ್ಞಾನಿಗಳು. ಬಣ್ಣಗಳ ಮೂಲಬಣ್ಣವನ್ನು ಕಂಡು ಹಿಡಿದ ಮಹಾಜ್ಞಾನಿಗಳು.

**629**

**ದಾಯವ ನುಂಗಿದ ಬಣ್ಣ ಬಣ್ಣವ ನುಂಗಿದ ದಾಯ,**
**ಆನಂದ ಪ್ರವೇಶಿಸಿದಲ್ಲಿ ತಾನೆಯಾದಳವ್ವೆ**
**ಅನಾಹತ ಸ್ವರವನರ್ಪಿತವ ಮಾಡಿ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಲ್ಲಿ ನಿತ್ಯಳಾದಳವ್ವೆ.**

ಲೋಕ ಪರಮಾತ್ಮನ ಪೂಜೆಯಲ್ಲಿ ನಿರತವಾಗಿದೆ. ಆದರೂ ಪಾರ್ವತಿ ಯಾರು? ಪರಮಾತ್ಮನು ಯಾರು? ಎಂಬುದು ಗೊತ್ತಿಲ್ಲದಂತಾಗಿದೆ. ಅಲ್ಲಾ, ಜಗದೀಶ, ಗಾಡ್ ಎಂದು ಕೂಗಿ ಕರೆದರೂ, ಅವರು ಯಾರು, ಹೇಗಿದ್ದಾರೆ? ಅವರನ್ನು ಪೂಜಿಸಿ ಆರಾಧಿಸಿ ಅವರಲ್ಲಿಯೇ ನಾನು ಸೇರುವ ಬಗೆ ಹೇಗೆಂದು ಲೋಕಕ್ಕೆ ತಿಳಿಯದಾಗಿದೆ.

ದೇವರ ಹೆಸರು ಉಚ್ಚರಿಸುವುದೊಂದೇ ತಡ, ಮೇಲೆ ನೋಡಿ ಕೈ ಎತ್ತುತ್ತಾರೆ. ಇದು ದೇಹಕ್ಕೆ ರೂಢಿಯಾಗಿದೆ. ಭಾಷೆ ಯಾವುದಾದರೇನು? ಅನ್ನುವುದು ಮಾತ್ರ ಹೀಗೆಯೇ. ದೇವರನ್ನು ನೋಡಿಯೂ ಇಲ್ಲ; ಅಲ್ಲಾ, ಶಿವ, ಗಾಡ್ ಅನ್ನುವುದನ್ನೂ ಬಿಡುವುದಿಲ್ಲ. ಇದು ಲೋಕದ ಪದ್ಧತಿ.

ಲೋಕಕ್ಕೆ ಜನ್ಮ ನೀಡಿದ ದೇವರು, ಲೋಕಕ್ಕೆ ಕಾಣದಂತೆ, ಇಡೀ ಲೋಕವನ್ನೇ ನುಂಗಿದ್ದಾನೆ. ಎಚ್ಚರವಿದ್ದಾಗಲೂ ಲೋಕ ಮಲಗಿದೆ. ಮಲಗಿದಾಗಲೂ ಲೋಕ ಮಲಗಿದೆ. ಬೆಳಕನ್ನು ಬಿಳಿ ಬಣ್ಣ ನುಂಗಿದೆ; ಕತ್ತಲೆಯನ್ನು ಕಪ್ಪು ಬಣ್ಣ ನುಂಗಿದೆ.

ಕಲ್ಲನ್ನೇ ದೇವರೆಂದು ಆರಾಧಿಸುವ ಲೋಕವನ್ನು ಕಲ್ಲು ನುಂಗಿದೆ. ಕಲ್ಲು ಮಸೀದೆಯಾಗಿ ಪ್ರಾರ್ಥಿಸುವ ಲೋಕವನ್ನು ನುಂಗಿದೆ. ಕಲ್ಲು ಚರ್ಚ್ ಆಗಿ ಪ್ರಾರ್ಥಿಸಿ ಆರಾಧಿಸುವ ಲೋಕವನ್ನು ನುಂಗಿದೆ. ಕಲ್ಲೇ ದೇವರಾಗಿ ಆಲಯವಾಗಿ ಪೂಜಿಸುವ ಲೋಕವನ್ನು ನುಂಗಿದೆ. ಲೋಕ ಕಲ್ಲಿಗಾಗಿ ಮಣ್ಣಿಗಾಗಿ ಲೋಹಕ್ಕಾಗಿ ಮರುಳಾಗಿದೆ. ಬೆಳಕಿದ್ದರೂ ತನ್ನನ್ನು ತಾನು ಕತ್ತಲಿನಲ್ಲಿ ಬಂಧಿಸಿಕೊಂಡಿದೆ. ಇದು ಹಗಲಿನ ಕತೆ. ಬಿಳಿ ಬಣ್ಣದ ಕತೆ, ಮಸೀದೆ ಚರ್ಚ್ ದೇವಾಲಯಗಳನ್ನು, ಅವುಗಳನ್ನು ಪೂಜಿಸಿ ಪ್ರಾರ್ಥಿಸಿ ಆರಾಧಿಸುವ ಇಡೀ ಲೋಕವನ್ನು ಬೆಳಗಿದ ಬೆಳಕನ್ನು ಕಪ್ಪು ಬಣ್ಣ ನುಂಗಿದೆ. ಇದು ಕತ್ತಲೆಯ ಕತೆ.

ಬೆಳಕು ಕತ್ತಲೆಯನ್ನು ನುಂಗಿ ಬೆಳಕಾಗುತ್ತದೆ. ಪುನಃ ಕತ್ತಲೆ ಬೆಳಕನ್ನು ನುಂಗಿ ಬೆಳಕೇ ಇಲ್ಲದಂತೆ ಮಾಡುತ್ತದೆ. 'ಬೆಳಕೂ ಇದೆ ಕತ್ತಲೆಯೂ ಇದೆ ಇದೇನು ಚೋದ್ಯವೊ? ಆನೆಯೂ ಸಿಂಹವೂ ಒಂದೆಡೆ ಉಂಬುವಂತೆ, ಎಂದು ಹೇಳಿದ್ದಾರೆ ಕತ್ತಲೆಯನುಂಡು ಬೆಳಕೇ ಆದ ಮಹಾಜ್ಞಾನಿ ಅಲ್ಲಮ ಪ್ರಭುಗಳು.

ಬರೀ ಹೇಳಲಿಲ್ಲ ; ಕತ್ತಲು ಬೆಳಕನು ಉಂಡು ಬೆಳಕೇ ಆಗುವ ಸೂತ್ರವನ್ನು ಲೋಕಕ್ಕೆ ಅರುಹಿದ್ದಾರೆ. ಕತ್ತಲೆಯನುಂಡ ಸೂರ್ಯ ಪುನಃ ಕತ್ತಲೆಗೆ ತುತ್ತಾಗುತ್ತಾನೆ. ಪುನಃ ಕತ್ತಲೆಯ ನುಂಗಿ ಬೆಳಗುತ್ತಾನೆ. ಕತ್ತಲೆ ಬೆಳಕಿನ ಆಟ ಆಡುವ ಕೋಟಿ ಸೂರ್ಯರನ್ನು ನುಂಗಿ, ಬೆಳಕು ಮಾಡುವ ಸೂರ್ಯನನ್ನು ಪರಿಚಯಿಸಿದ್ದಾನೆ ಪ್ರಭುದೇವರು! ಆದರೂ ಕತ್ತಲೆಯ ಪ್ರಭಾವ ಬಲು ದೊಡ್ಡದು. ಕತ್ತಲು ಬೆಳಕಿನಿಂದಲೇ ಹುಟ್ಟಿದ್ದು. ಅದು ಬೆಳಕಿನ ಮಾತು ಕೇಳಲು ಸಾಧ್ಯವೆ? ಹೀಗಾಗಿ ಹಾವು ಏಣಿಯ ಆಟ ಮುಂದುವರಿದಿದೆ.

ದಾಯವ ನುಂಗಿದ ಬಣ್ಣ ಬಣ್ಣವ ನುಂಗಿದ ದಾಯ:

ತಂದೆಯ ಹೊಟ್ಟೆಯಲ್ಲಿ ಹುಟ್ಟಿದ ಮಗ ತಂದೆಯನ್ನು ಪಾಲು ಕೇಳಿದಂತೆ. ಪಾಲುಗಳು ಎರಡು: ಒಂದು ಭೌತಿಕ ಪಾಲು, ಮತ್ತೊಂದು ಆಂತರಿಕ ಪಾಲು. ಆಂತರಿಕ ಪಾಲು ಕೇಳಿದ ಮಗ ತಂದೆಯಾಗುತ್ತಾನೆ. ಬೆಳಕಿನಿಂದ ಹುಟ್ಟಿದ ಕತ್ತಲು ಬೆಳಕಿನ ಪಾಲು ಕೇಳಿ ಬೆಳಕ ನುಂಗಿದರೆ ಮತ್ತೆ ಕತ್ತಲಾಗುವುದೇ ಇಲ್ಲ. ಕತ್ತಲಿಗೆ ಬೆಳಕು ನುಂಗುವ ಆಸೆಯಾಗಬೇಕು.

ಅಸತೋಮಾ ಸದ್ಗಮಯ; ತಮಸೋಮಾ ಜ್ಯೋತಿರ್ಗಮಯ; ಮೃತ್ಯೋರ್ಮಾ ಅಮೃತಂಗಮಯ. ಇದು ಸಾವಿರಾರು ವರ್ಷಗಳ ಹಳೆಯ ಸೂತ್ರ. ಅಸತ್ಯವೇ ಸತ್ಯದೆಡೆಗೆ ಹೋಗಿ ಸತ್ಯವೇ ಆಗಬೇಕು. ಕತ್ತಲೇ ಬೆಳಕಿನೆಡೆಗೆ ಹೋಗಿ ಬೆಳಕೇ ತಾನಾಗಬೇಕು. ಮೃತ್ಯುವೇ ಅಮೃತದೆಡೆಗೆ ಹೋಗಿ ಅಮೃತದ ಪಾನ ಮಾಡಬೇಕು.

ಮಾತನ್ನು ಮೌನಿಗೆ ಅರ್ಪಣೆ ಮಾಡಿ ಮುನ್ನಡೆಯುವ ಅವಶ್ಯಕತೆಯಿದೆ. ಅಸತೋಮಾ ಸದ್ಗಮಯ ಎಂದು ಅಸತ್ಯ ಹುಟ್ಟಿದಾಗಿನಿಂದಲೂ ಲೋಕ ಬೊಗಳುತ್ತಲೇ ಇದೆ. ತಮಸೋಮಾ ಜ್ಯೋತಿರ್ಗಮಯ ಎಂದು ಕತ್ತಲೆ ಹುಟ್ಟಿದಾಗಿನಿಂದಲೂ ಬೊಗಳುತ್ತಲೇ ಇದೆ. ಕತ್ತಲೆ, ನಾನು ಬೆಳಕೆಂದು ಬೊಗಳಿದರೆ ಬೆಳಕಾಗಲು ಸಾಧ್ಯವೆ? ಕತ್ತಲು ಬೆಳಕನ್ನು ನುಂಗಲು ಬೆಳಕಿನತ್ತ ನಡೆಯಬೇಕು. ಕತ್ತಲು ಬೆಳಕಿನಿಂದಲೇ ಹುಟ್ಟಿದೆ; ಬೆಳಕು ನುಂಗುವ ಆಸೆಯಾದಾಗ ಪುನಃ ಬೆಳಕಾಗುತ್ತದೆ. ಬೆಳಗಿಂಗೆ ಬೆಳಗಾಗಿ ಬೆಳಗುವ ಸೂರ್ಯನನ್ನೂ ಬೆಳಗುತ್ತದೆ.

**630**

**ದಾಯವ ನುಂಗಿದ ಬಣ್ಣ , ಬಣ್ಣವ ನುಂಗಿದ ದಾಯ**
**ರಂಜನ ಪ್ರವೇಶವಾದಲ್ಲಿ ಲೀಯವಾದೆನಯ್ಯಾ.**

**ನಿನ್ನೊಡನೆ ಲೀಯವಾದೆ.**
**ಶುದ್ಧ ಸಿದ್ಧ ಪ್ರಸಿದ್ಧದಲ್ಲಿ ಪ್ರವೇಶಿಸಿದೆ.**
**ಸಂಯೋಗಸ್ಥಾನದಲ್ಲಿ ನೀ ಸಹಿತ ವಿಯೋಗಿಯಾದೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ಸೀಮೆಯ ಮೀರಿ ಸಂಬಂಧಿಯಾದೆನು.**

ಬಣ್ಣವೇ ಅಲ್ಲದ ಬಣ್ಣ, ಬಣ್ಣವನ್ನು ಸೃಷ್ಟಿ ಮಾಡಿತು. ಸೃಷ್ಟಿಯಾದ ಬಣ್ಣವೇ, ಬಣ್ಣವೇ ಅಲ್ಲದ ಬಣ್ಣವನ್ನು ನುಂಗಿ ಬಣ್ಣವಾಯಿತು. ಎಲ್ಲಿ ನೋಡಿದರೂ ಬಣ್ಣವೇ ಬಣ್ಣ. ಬಣ್ಣದ ಲೋಕವನ್ನೇ ಸೃಷ್ಟಿ ಮಾಡಿದ ಬಣ್ಣ ರಂಜನೆಗೆ ಒಳಗಾಯಿತು.

ನಿರಂಜನನಿಂದ ಸೃಷ್ಟಿಯಾದ ರಂಜನೆ, ನಿರಂಜನನನ್ನೇ ನುಂಗಿ, ತನ್ನ ರಂಜನೆಯನ್ನು ಮರೆಯಿತು. ಪುನಃ ತನ್ನ ರಂಜನೆಯನ್ನು ಕಳೆದುಕೊಂಡು ನಿರಂಜನನಲ್ಲಿ ಲೀಯವಾಗಿ ಶುದ್ಧವಾಯಿತು; ಸಿದ್ಧನಾಯಿತು; ಪ್ರಸಿದ್ಧನಾಯಿತು.

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಅರಿವಿನ ಚೆಂದುಳ್ಳ ಚೆಲುವ ಗಂಡನನ್ನು ಮನವೆಂಬ ಹೆಂಡತಿ ನುಂಗಿ, ಗಂಡನ ಅರಿವಿನ ಸಾಮ್ರಾಜ್ಯದಲ್ಲಿ ತನ್ನದೇ ಆದ ಅಜ್ಞಾನದ ಸಾಮ್ರಾಜ್ಯವನ್ನು ಸ್ಥಾಪಿಸುವುದೆಂದರೆ ಅದು ಸಣ್ಣ ಮಾತಲ್ಲ. ಗಂಡ ತಾನೇ ಸೃಷ್ಟಿ ಮಾಡಿಕೊಂಡ ತನ್ನ ಹೆಂಡತಿಯನ್ನು ಜಟೆಯಲ್ಲಿಯಾದರೂ ಧರಿಸಿಕೊಳ್ಳುತ್ತಾನೆ; ತೊಡೆಯಮೇಲಾದರೂ ಕೂಡಿಸಿಕೊಳ್ಳುತ್ತಾನೆ. ಅದು ಆತನ ಇಚ್ಛೆ; ಗಂಡ ಹೆಂಡತಿಯ ವಿನೋದ!

ಮನವೆಂಬ ಹೆಂಡತಿಗೆ ಅರಿವೆಂಬ ಗಂಡನ ಪರಿಚಯವಿಲ್ಲದ್ದಕ್ಕಾಗಿ, ಗಂಡ ವಾಸಮಾಡಿದ ಕಾಯವೆಂಬ ಕೈಲಾಸವನ್ನೇ ತನ್ನ ಸಾಮ್ರಾಜ್ಯವನ್ನಾಗಿ ಮಾಡಿಕೊಂಡು, ಹೆಂಡತಿ ರಾಜ್ಯಭಾರ ಮಾಡುತ್ತಿದ್ದಾಳೆ. ಎಲ್ಲಿ ನೋಡಿದರೂ ಪ್ರಮಿಳಾ ರಾಜ್ಯವೇ ಕಂಡು ಬರುತ್ತಲಿದೆ. ಗಂಡನಿಂದ ಜನ್ಮಪಡೆದ ಮನವೆಂಬ ಹೆಂಡತಿ ಗಂಡನನ್ನೇ ನುಂಗಿ ತನ್ನ ಸ್ತ್ರೀರಾಜ್ಯವನ್ನು ಸ್ಥಾಪಿಸಿದ್ದಾಳೆ. ಎಲ್ಲಿ ನೋಡಿದರೂ ಸ್ತ್ರೀಯರೇ ಇದ್ದಾರೆ. ಪುರುಷನನ್ನು ನುಂಗಿದ ಸ್ತ್ರೀಯರು! ರಂಜನೆಗೆ ಒಳಗಾದ ಸ್ತ್ರೀಯರ ಸಾಮ್ರಾಜ್ಯ!

ಗಡ್ಡ ಮೀಸೆ ಮೊಲೆ ಮುಡಿ ಮೂಡಿದ ಕಾಯವನ್ನು ನೋಡಿ ಸ್ತ್ರೀ ಎಂದು ಪುರುಷನೆಂದು ಹೇಳುವ ಸಕಲ ಕಾಯಗಳು ಸ್ತ್ರೀ ಕಾಯಗಳೇ ಹೊರತು ಪುರುಷ ಕಾಯಗಳಲ್ಲ! ಏಕೆಂದರೆ ಮನವೆಂಬ ಸ್ತ್ರೀ ಅರಿವೆಂಬ ಪುರುಷನನ್ನು ನುಂಗಿದುದಕ್ಕಾಗಿ ಸ್ತ್ರೀಗೆ ಪುರುಷ ಕಾಣುವುದೇ ಇಲ್ಲ. ಎಲ್ಲಿ ನೋಡಿದರೂ ಸ್ತ್ರೀ ಸಾಮ್ರಾಜ್ಯ!

ಗೋಕುಲದಲ್ಲಿ ಶ್ರೀಕೃಷ್ಣನೊಬ್ಬನೆ ಪುರುಷನಿದ್ದ. ದ್ವಾರಕೆಯ ಸಕಲ ಕಾಯಗಳು ಸ್ತ್ರೀ ಕಾಯಗಳಾಗಿ ಶ್ರೀಕೃಷ್ಣನನ್ನು ಗಂಡನೆಂದು ಒಪ್ಪಿಕೊಂಡವು. ಗಂಡನೆಂದರೆ ಗುರುವು; ಹೆಂಡತಿಯೆಂದರೆ ಶಿಷ್ಯ. ಅರ್ಜುನ ಗಂಡಾದರೂ ಶ್ರೀಕೃಷ್ಣನನ್ನು ಸಖ ಎಂದು ಕರೆಯುತ್ತಿದ್ದ. ಶ್ರೀಕೃಷ್ಣನಿಗೆ ತಾನು ಸಖಿಯಾಗಿದ್ದ.

ಅರ್ಜುನನೆಂದರೆ ಮನ; ಶ್ರೀಕೃಷ್ಣನೆಂದರೆ ಅರಿವು! ಕಾಯ, ಅರಿವು ಮತ್ತು ಮನಗಳ ಸಂಗಮ. ಅರಿವು ಎನ್ನುವುದು ಶುಭ್ರವಾದ ಬಿಳಿ ಬಣ್ಣ; ಮನ ಎನ್ನುವುದು ಕಂದು ಬಣ್ಣ. ಕಂದು ಬಣ್ಣವನ್ನು ಸೃಷ್ಟಿಮಾಡಿದ ಬಿಳಿ ಬಣ್ಣ; ಬಿಳಿ ಬಣ್ಣವನ್ನೇ ನುಂಗಿ ತನ್ನ ಬಣ್ಣದ ಸಾಮ್ರಾಜ್ಯವನ್ನು ಕಟ್ಟಿಕೊಂಡಿದೆ. ಕಾಯ ಒಂದೇ ಆದರೂ, ಕಾಯದ ಪಾತ್ರಗಳು ಅನೇಕ. ರಂಜನೆಗೆ ಒಳಗಾದ ಕಾಯ ಸ್ತ್ರೀ ಆಗಿದೆ, ಪುರುಷನೂ ಆಗಿದೆ. ಶ್ರೀಮಂತ ಬಡವ ದರಿದ್ರ ರಾಜ ಅಧಿಕಾರಿ ನೌಕರ ಜವಾನ ಹಿಂದು

ಮುಸಲ್ಮಾನ ಕ್ರೈಸ್ತ ಬೌದ್ಧ ಜೈನ ಫಾರ್ಸಿ ಎನ್ನುವ ಅಜ್ಞಾನವನ್ನು ಹೇರಿಕೊಂಡಿದೆ.

ಕಾಯದ ಅಜ್ಞಾನ ಕಾಯದಲ್ಲಿಯೇ ಇರುವ ಜ್ಞಾನಕ್ಕೆ ತುತ್ತಾದಾಗ ಕಾಯ ನಿರ್ಮಿಸಿಕೊಂಡ ಸಕಲ ಬಣ್ಣಗಳೂ ಉದುರಿ ಬಿದ್ದು ಶುಭ್ರವಾದ ಬಿಳಿ ಬಣ್ಣ ವೇ ತಾನಾಗುತ್ತದೆ. ಸೂರ್ಯನ ಬೆಳಕಿನಿಂದ ಸೃಷ್ಟಿಯಾದ ಕಾಮನ ಬಿಲ್ಲಿನ ಏಳು ಬಣ್ಣಗಳು ಪುನಃ ಸೂರ್ಯಬೆಳಕಿನಲ್ಲಿಯೇ ಮುಳುಗಿ ಇಲ್ಲವಾದಂತೆ!

ಅಜ್ಞಾನದ ಸೀಮೆಯ ಮೀರಿ ಮಹಾಜ್ಞಾನದ ಸಂಬಂಧಿಯಾಗಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೇ ತಾನಾದಂತೆ. ಕಪಿಲ ಎಂದರೆ ಕಂದು ಬಣ್ಣದ ಹಸು, ಪಶುಸಮಾನವಾದ ಅಜ್ಞಾನವೆಂಬ ಮನ. ಇದು ತನಗೆ ತಾನೇ ಸಿದ್ಧನಾಗಿ ಶುದ್ಧನಾಗಿ ಪ್ರಸಿದ್ಧನಾಗಿ ಮಲ್ಲಿಕಾರ್ಜುನಯ್ಯನೆಂಬ ಮಹಾಜ್ಞಾನವನ್ನೇ ನುಂಗಿ ಮಲ್ಲಿಕಾರ್ಜುನಯ್ಯನೇ ತಾನಾಯಿತು. ತನ್ನ ಅಜ್ಞಾನದ ಸೀಮೆಯನ್ನು ತಾನೇ ಮೀರಿ ಮಹಾಜ್ಞಾನದ ಸಂಬಂಧಿಯಾಗುವ ಸೂತ್ರವನ್ನು ಸಕಲ ಓದುಗರಿಗೆ ಬಹಿರಂಗವಾಗಿಯೇ ನೀಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**631**

**ದಾಯವೆಂಬ ಕುಳಿಯಲ್ಲಿ ಅದ್ದರು, ಅನಂತಕೋಟಿ ಜನರು,**
**ಆಳುತ್ತ ಮುಳುಗುತ್ತೈದಾರೆ, ಕೋಟಿ ಕೋಟಿ ಬ್ರಹ್ಮಾದಿಗಳು.**
**ಆಳುತ್ತೇಳುತ್ತೈದಾರೆ, ಅನೇಕಕೋಟಿ ವಿಶ್ವಾದಿಗಳು.**
**ಗುರುಕರುಣದಿಂದ ಅಯ್ಯನಾಜ್ಞೆವಿಡಿದು**
**ಅಕ್ಷರದ್ವಯದ ಆಧಾರವಿಡಿದವರೆಲ್ಲಾ**
**ಆ ಕುಳಿಗೆ ಹೊರಗಾದರು,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ**
**ಮಹಾಬೆಳಗಿನಲ್ಲಿ ಬಯಲಾದರು.**

ಅಮೃತ ಕುಂಡದಿಂದಲೇ ಹೊರ ಬಂದ ಲೋಕ, ಅಜ್ಞಾನದ ಹೊಂಡದಲ್ಲಿ ಬಿದ್ದು ಹೊರಳಾಡುತ್ತಲಿದೆ. ಪುನಃ ಅಮೃತಕುಂಡದಲ್ಲಿ ಅದ್ದಬೇಕೆಂಬುದನ್ನೇ ಅಜ್ಞಾನದ ಲೋಕ ಮರೆತು ಹೋಗಿದೆ.

ಬ್ರಹ್ಮ ಲೋಕವೇ ಆಗಬೇಕಾದದ್ದು ಭ್ರಮೆಯಿಂದ ಬಳಲುತ್ತಲಿದೆ. ಭ್ರಾಮಾಲೋಕಕ್ಕೆ ಸುಖವೇ ಮುಖ್ಯ. ಸುಖದಿಂದ ಸಿಗಬೇಕಾದ ಫಲಾಫಲಗಳು ದುಃಖ ಎಂಬುದನ್ನು ಅರಿಯುತ್ತಿಲ್ಲ. ಸುಖವೆಂಬುದು ಸುಖವಲ್ಲ; ದುಃಖವೆಂಬುದು ಕೂಡಾ ದುಃಖವಲ್ಲ; ಸುಖ ದುಃಖಗಳಿಗೆ ಮೀರಿದ ಪರಮಸುಖವನ್ನು ಪ್ರಾಪ್ತಿ ಮಾಡಿಕೊಳ್ಳಬೇಕೆಂಬುದು ಮಾತ್ರ ಹೊಳೆಯುತ್ತಿಲ್ಲ. ಹೀಗಾಗಿ ಬ್ರಹ್ಮರೇ ತಾವಾಗಬೇಕಾದ ಕೋಟಿ ಕೋಟಿ ಜನ ಭ್ರಮೆಗೆ ಒಳಗಾಗಿದೆ.

ಗುರುದೇವನ ಕರುಣೆಯಿಂದಾಗಿ ಅಂಗದಲ್ಲಿಯೇ ಸಂಗಮವಾದ ಹಡೆದಯ್ಯನ ದರುಶನ ವಾಯಿತು. ಆತನ ಆಜ್ಞೆಯಿಂದಾಗಿ ಅಕ್ಷರೋತ್ತಮನಾದೆ. ಆ ಗುರುದೇವನ ಆಧಾರವಿಡಿದವರೆಲ್ಲಾ ಅಜ್ಞಾನದ ಹೊಂಡದಿಂದ ಹೊರಗಾದರು. ಅಮೃತ ಕುಂಡದಲ್ಲಿ ಜಿಗಿದು ಪಾವನರಾದರು.

ಸದಾ ಅಜ್ಞಾನಕ್ಕೆ ಎಳೆದುಕೊಂಡು ಹೋಗುವ ಕಾಯವನ್ನು ಆವರಿಸಿದ ಮನ ಕಾಯದಲ್ಲಿ ಸಂಗಮವಾದ ಎರಡಕ್ಷರದ 'ಶಿವ'ನ ಮಡದಿಯಾದಳು. ಸತಿ ಪತಿಗಳು ಒಂದಾದರು. ಇವರಿಬ್ಬರು ಇದ್ದ ಕಾಯ ಕೈಲಾಸವೆಂದು ಕಾಯಗಳಿಂದಲೇ ಕರೆಯಿಸಿಕೊಂಡಿತು. ಕೋಟಿ ಸೂರ್ಯರನ್ನು ಬೆಳಗುವ ಬೆಳಗಾಯಿತು.

**ದಿಟ್ಟಲಿಂಗವ ತನ್ನ ಇಷ್ಟ ಕರಸ್ಥಲದಲ್ಲಿಟ್ಟು**
**ಬಟ್ಟೆಗಟ್ಟಿದನೆರಡು ದೆಸೆದೆಸೆಗಾಗಿ,**
**ಅವ್ವ ನೀನೊಳಗಾಗಿ ಸೀಮೆ ಸಾಯುಜ್ಯದಲ್ಲಿ**
**ಸೊಲ್ಲನಿಟ್ಟಾತ ಗುರುವವ್ವಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಮಹಾಲಿಂಗವನ್ನು ಅಂಗವನ್ನು ಆವರಿಸಿದ ಮನವೆಂಬ ಅಂಗದಲ್ಲಿಯೇ ಇಟ್ಟು ಕಟ್ಟುಕಟ್ಟಿದೆ. ಲಿಂಗವನ್ನು ಹೊತ್ತ ಅಂಗದ ಮೇಲೆ ಮತ್ತೊಂದು ಲಿಂಗವನ್ನು ಕಟ್ಟಿ ಬಟ್ಟೆಗೆಟ್ಟು ಅಂಗದ ದಾರಿಯನ್ನೆ ತಪ್ಪಿಸಿದೆ.

ಅಂಗದಲ್ಲಿ ಅರಿವು ಎನ್ನುವ ಲಿಂಗ ಅಂಗದ ಕಣಕಣದಲ್ಲಿ ಭರಿತವಾಗಿದೆ. ಅಂಗವೆಂದರೆ ಅದು ಲಿಂಗವಾಗಿ ಕಾಣುತ್ತದೆ; ಲಿಂಗವೆನ್ನಲು ಹೋದರೆ ಅದು ಲಿಂಗಾಂಗವಾಗಿ ಕಾಣುತ್ತದೆ. ಆದರೂ ಅಂಗವನ್ನು ಆವರಿಸಿದ ಮನವೆಂಬ ಅಜ್ಞಾನಿಗೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗ ಕಾಣುವುದಿಲ್ಲ. ಅಂಗದ ಮೇಲೆ ತಾನೇ ಧರಿಸಿದ ಬಟ್ಟೆಯಲ್ಲಿ ಕಟ್ಟಿದ ಲಿಂಗ ಮಾತ್ರ ಕಾಣುತ್ತದೆ. ಅಂಗವನ್ನು ಆವರಿಸಿದ ಮನ ಅಂಗದ ಮೇಲೆ ಧರಿಸಿದ ಲಿಂಗವನ್ನು ಪೂಜಿಸಿ ಪೂಜಿಸಿ ದಾರಿಕಾಣದೆ ದಾರಿಗೆಟ್ಟು ತಿರುಗುತ್ತಲಿದೆ. ಅಂಗದಲ್ಲಿಯೇ ಅರಿವಿನ ಲಿಂಗ ಸಂಗಮವಾಗಿರುವಾಗ ಅಂಗದ ಮೇಲೆ ಮತ್ತೊಂದು ಲಿಂಗ ಕಟ್ಟಿದರೆ, ಲಿಂಗದ ಮೇಲೆ ಲಿಂಗ ಕಟ್ಟಿದಂತಾಗುವುದು ಎಂದು ತಿಳಿದು ಗುರುದೇವ ಅಂಗವನ್ನು ಆವರಿಸಿದ ಮನವನ್ನು ಹಿಡಿದು ಉಪದೇಶ ನೀಡಿದಾಗ, ಮನಕ್ಕೆ ಗುರುದೇವನು ಹೇಳಿದ ಮಾತು ಅರಿವಿಗೆ ಬಂದಾಗ ಮನ ತನ್ನ ಸೀಮೆಯನ್ನು ಮೀರಿ ನಿಸ್ಸೀಮನಾಗುತ್ತದೆ.

ಗುರುದೇವನೆಂದರೆ ಕಾಯ ಉಳ್ಳಾತನಲ್ಲ. ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಕಾಯವನ್ನು ಆವರಿಸಿದ ಮನದಿಂದಲೇ ಕಂಡು ಕೊಂಡಾತ. ಆ ಮನಕ್ಕೆ ಅರಿವೆಂಬ ಗುರುದೇವನ ದರುಶನ ಮಾಡಿಸಿ ಘನಮನವನ್ನಾಗಿ ಮಾಡಿದಾತ. ಮನದ ಸೀಮೆಯನ್ನು ಮೀರಿಸಿ ನಿಸ್ಸೀಮುಗೊಳಿಸಿದಾತ. ಕಾಯವನ್ನು ಹಿಡಿದು ಕಾಯಕ್ಕೆ ತಾನು ಗುರುವಾಗದೆ; ಕಾಯವನ್ನು ತನ್ನ ಕಾಯಕ್ಕೆ ಶಿಷ್ಯನನ್ನಾಗಿಸಿಕೊಳ್ಳದೆ; ಕಾಯದಲ್ಲಿಯೇ ಸಂಗಮವಾದ ಗುರುದೇವನನ್ನು ಕಾಯವನ್ನು ಆವರಿಸಿದ ಮನಕ್ಕೆ ಪರಿಚಯ ಮಾಡಿಸಿದಾತ.

ಅರಿವಿನ ಬಟ್ಟೆಯಲ್ಲಿ ತನ್ನನ್ನು ಹೊಲಿದುಕೊಂಡು, ಅಂಗದ ಮೂಲಕ ಹೊರಬಂದ ಲಿಂಗಯ್ಯನನ್ನು ಅಂಗವನ್ನು ಆವರಿಸಿದ ಮನದ ಮೂಲಕವೇ ನೋಡಬೇಕು. ಮನ ತನ್ನ ಸೀಮೆ ಮೀರಿದಾಗಲೇ ಸೀಮೆಯೇ ಇಲ್ಲದ ನಿಸ್ಸೀಮನನ್ನು ಕಾಣಲು ಸಾಧ್ಯ.

ಕಾಯವನ್ನು ಆವರಿಸಿದ ಮನವೆಂಬ ಮಾಯೆ ಕಾಯದ ಗೆಳೆತನ ಮಾಡಿದೆ. ಕಾಯದಲ್ಲಿಯೇ ಇಟ್ಟು ತನ್ನನ್ನು ಕಟ್ಟಿಕೊಂಡು ದಿಟ್ಟಲಿಂಗಯ್ಯನನ್ನು ನೋಡಲು ಮನಕ್ಕೆ ಸಾಧ್ಯವಾಗುತ್ತಿಲ್ಲ. ಸಿದ್ಧರಾಮ ಶಿವಯೋಗಿಗಳು ಮನವೆಂಬ ಮಾಯೆಯ ಮೈದಡವಿ, ಅವ್ವಾ ಎಂದು ಕೂಗಿ ಕರೆದು ಮಾತನಾಡಿಸಿದ್ದಾರೆ:

ಲಿಂಗಯ್ಯ ಬಲು ಜಾಣ! ಅಂಗದ ಮೇಲೆ ಕಟ್ಟಿ ಪೂಜಿಸುವ ಲಿಂಗದಲ್ಲಿ ಆತನಿಲ್ಲ. ನಿನ್ನ ದಾರಿ ತಪ್ಪಿಸಲು ಮಾಡಿದ ಚಮತ್ಕಾರಿ ಕೆಲಸ ಆತನದು. ನೀನು ಹೊರಗಾಗಿ ಎಷ್ಟು ಕಾಲ ಪೂಜಿಸಿದರೂ ಆತನ ಕಲ್ಲು ಹೃದಯ ಕರಗುವುದಿಲ್ಲ. ಅವ್ವಾ, ನೀನು ಆತನ ಒಳಗಾಗಿ ಪೂಜಿಸು. ನೀನಿರುವ ಕಾಯದ

ಲ್ಲಿಯೇ ಆತ ತನ್ನನ್ನು ಇಟ್ಟುಕೊಂಡು ಹೊಲಿದು ಕೊಂಡಿದ್ದಾನೆ. ಬಿಚ್ಚಲು ಬಾರದ ಮಾಯದ ಹೊಲಿಗೆಯನ್ನು ಹೆಣೆದುಕೊಂಡ ಜಾಣ ಗುರುದೇವನು ಆತ. ಹೊಲಿಗೆ ಬಿಚ್ಚಿ ನೀನು ಆತನೊಳಗಾಗಿ ನಿಸ್ಸೀಮಳಾಗು ತಾಯಿ; ಎಂದು ಸಿದ್ಧರಾಮ ಶಿವಯೋಗಿಗಳು ಮನದೊಂದಿಗೆ ಮಾತನಾಡಿದ್ದಾರೆ.

**633**

**ದೀಕ್ಷಾತ್ರಯದಲ್ಲಿ ವ್ಯಕ್ತನಾದೆ**
**ಶಿಕ್ಷ ಸಂಬಂಧಿಸುವಲ್ಲಿ ಭೀತನಾದೆ**
**ಮುಗ್ಧೆಯ ಕನಸಿನಲ್ಲಿ ಮುಕ್ತನಾದೆ**
**ಧನ - ತನು - ಮನಂಗಳ ಮೂರ ಮರೆದವನ**
**ತಾಮಸಂಗಳು ಹಲವನಳಿದವನ**
**ರಜಂಗಳು ಕೆಲವನುಳಿದವನ ಭೇದಿಸಿ ಕಂಡೆ.**
**ಅದೇನು ಗುಣ ? ಅವ್ಯಯ ನಾನಾ ವಾಯಸ್ಥಾನದಲ್ಲಿ**
**ಶುದ್ಧ ಸಂಗಮ ಪ್ರಯೋಗಿಸಿದ ಕಾರಣ !**
**ದೀಕ್ಷೆಯಾಯಿತ್ತು ಕಾಯಕ್ಕೆ , ಶಿಕ್ಷೆಯಾಯಿತ್ತು ಸರ್ವಾಂಗಕ್ಕೆ**
**ಸ್ವಾನಭಾವವಾಯಿತ್ತು ಕರಣೇಂದ್ರಿಯ ಸರ್ವಕ್ಕೆ.**
**ದೀಕ್ಷಾತ್ರಯವು ಸಂಬಂಧಿಸಿದ ಕಾರಣ**
**ನೀ ನಾನಾದೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನು ಮನ ಧನ ಈ ಮೂರೂ ವಿಚಿತ್ರ ಕೆಲಸ ಮಾಡುತ್ತಲಿವೆ? ಮನ ಮತ್ತು ಧನ ಇವು ಎರಡು ಒಂದು ತನುವನ್ನು ಆಳುತ್ತಲಿವೆ. ಮನವೆಂದರೆ ತನುವನ್ನು ಆವರಿಸಿದ್ದು, ಅರಿವೆಂಬ ಗುರುದೇವನಿಂದ ಸೃಷ್ಟಿಯಾದದ್ದು. ಹೀಗಾಗಿ ಅರಿವಿನಂತೆ ಕೆಲಸ ಮಾಡಿದರು ಕೂಡಾ ಇದು ಶುದ್ಧ ಅರಿವಲ್ಲ. ಅರಿವಿನ ಹಾಗೆ ಮಾತನಾಡುವ ಅರಿವು. ಇದಕ್ಕೆ ಮಾತನಾಡಲು ಮಾತ್ರ ಬರುತ್ತದೆ; ಇರಲು ಬರುವುದಿಲ್ಲ. ಇಂತಹ ಅರಿವನ್ನು ಅರಿವೆನ್ನಲು ಬರುವುದಿಲ್ಲ. ಹೀಗಾಗಿ ತನುವಿಗೆ ದೀಕ್ಷೆ ಬೇಕು; ಮನಕ್ಕೆ ದೀಕ್ಷೆ ಬೇಕು; ಅರಿವು ಎಂದು ಹೇಳುವ ಧನಕ್ಕೂ ದೀಕ್ಷೆ ಬೇಕು.

ಗುರುದೇವ ತನುವಿನೊಂದಿಗೆ ಮಾತನಾಡುವಾಗ ಸಾಕ್ಷಾತ್ಕಾರವಾದಂತೆ ಭಾಸವಾಗುತ್ತದೆ. ಸತ್ಸಂಗದಿಂದ ಹೊರನಡೆದಾಗ ಪುನಃ ತನು ಅಜ್ಞಾನಕ್ಕೆ ಒಳಗಾಗುತ್ತದೆ. ಸತ್ಸಂಗದಲ್ಲಿ ಭಾಗಿಯಾದಾಗ ಮನದ ಚೇಷ್ಟೆ ನಿಂತು ಧನವೆಂಬ ಜ್ಞಾನ ವ್ಯಕ್ತವಾಗಿತ್ತು. ನಂತರ ತನು ಅಜ್ಞಾನದ ಆಪತ್ಕಾಲಕ್ಕೆ ತುತ್ತಾಗುತ್ತದೆ.

ಮನ ಇಲ್ಲದ್ದು. ಇಲ್ಲದ ಮನ ಇಲ್ಲವಾಗುವವರೆಗೆ ತನುವಿಗೆ ಉಪದೇಶ ಬೇಕೇ ಬೇಕು. ಮನಕ್ಕೂ ಉಪದೇಶ ಬೇಕೇಬೇಕು. ಮನದಿಂದಲೇ ಹುಟ್ಟಿ ತನುವಿನಲ್ಲಿ ಸಂಗ್ರಹವಾದ ಧನವೆಂಬ ಅರಿವಿಗೆ ಕೂಡಾ ಉಪದೇಶ ಬೇಕೇ ಬೇಕು.

ಮನ ಇಲ್ಲದ್ದು, ಮನದಿಂದ ಹುಟ್ಟಿದ ಧನವೆಂಬ ಅರಿವು ಕೂಡಾ ಇಲ್ಲದ್ದು. ಇಲ್ಲದ್ದು ಇಲ್ಲವಾದಾಗ ತನು ಮುಗ್ಧೆಯಾಗುತ್ತದೆ. ಕನಸಿನಲ್ಲಿ ನಗುವ ಮಗುವಿನಂತಾಗುತ್ತದೆ. ಏಕೆಂದರೆ ತನುವಿನಲ್ಲಿಯೇ ಸಂಗಮವಾದ ಜ್ಞಾನ ಮಾತ್ರ ತನುವಿಗೆ ಬಳಕೆಯಾಗುತ್ತದೆ . ತನುವನ್ನು ಆವರಿಸಿದ ಮನ, ಮನದಿಂದ ಹುಟ್ಟಿ ತನುವಿನಲ್ಲಿ ಸಂಗ್ರಹವಾದ ಧನ ಇವೆರಡು ಅರಿವೆಂಬ ಲಿಂಗಯ್ಯನಿಗೆ

ಅರ್ಪಣೆಯಾಗಿರುತ್ತವೆ. ತನುವಿನ ಅಜ್ಞಾನ ತನುವಿನ ಜ್ಞಾನಕ್ಕೆ ಅರ್ಪಣೆಯಾದಾಗ ಮಗುವಿನಂತೆ ಮುಗ್ಧೆಯಾಗುತ್ತದೆ. ಧನ-ತನು-ಮನ ಈ ಮೂರೂ ಮರೆತಾಗ ಅಂದರೆ ಇಲ್ಲವಾದಾಗ, ತನುವನ್ನು ಆವರಿಸಿದ ಹಲವಾರು ಗುಣ, ತಾಮಸಗುಣಗಳು ರಜೋಗುಣಗಳು ನಿರ್ಗುಣದಲ್ಲಿ ಸಂಗಮವಾಗಿ ನಿರ್ಗುಣಿಯೇ ಆಗುತ್ತವೆ. ಇದು ಶುದ್ಧ ಸಂಗಮ ಪ್ರಯೋಗಿಸಿದ ಕಾರಣ, ಈ ಶುದ್ಧ ಸಂಗಮದಲ್ಲಿ ಮಿಂದು, ಅಶುದ್ಧ ತನು ಮನ ಧನ ಪರಿಶುದ್ಧವಾಗುತ್ತವೆ. ಮೂರೊಂದಾದ ಘನವೇ ತಾನಾಗುತ್ತದೆ.

ದೀಕ್ಷೆಯಾಯಿತ್ತು ಕಾಯಕ್ಕೆ, ಶಿಕ್ಷೆಯಾಯಿತ್ತು ಸರ್ವಾಂಗಕ್ಕೆ: ಸ್ವಾನುಭಾವವಾಯಿತ್ತು ಕರಣೇಂದ್ರಿಯ ಸರ್ವಕ್ಕೆ :

ಕಾಯದಲ್ಲಿಯೇ ಸಂಗಮವಾದ ಜ್ಞಾನವೆಂಬ ಮಹಾ ಕಾಯದಿಂದ, ಕಾಯಕ್ಕೆ ದೀಕ್ಷೆಯಾದಾಗ, ಕಾಯವನ್ನು ಅವರಿಸಿದ ಮನೋಕಾಯಕ್ಕೆ ಶಿಕ್ಷೆಯಾಗಿ, ಮನೋಕಾಯ ಇಲ್ಲವಾಗುತ್ತದೆ. ಮನೋಕಾಯದಿಂದ ಹುಟ್ಟಿದ ಅರಿವೂ ಇಲ್ಲವಾಗುತ್ತದೆ. ಕಾಯದ ಅಜ್ಞಾನವೂ ಇಲ್ಲವಾಗುತ್ತದೆ. ಕಾಯದಲ್ಲಿಯೇ ಇರುವ ಸರ್ವ ಕರ್ಣೇಂದ್ರಿಯಗಳ ಅಜ್ಞಾನ ಅಲ್ಲಲ್ಲಿಯೇ ಇರುವ ಜ್ಞಾನಕ್ಕೆ ತುತ್ತಾಗಿ ಸ್ವಾನುಭಾವವಾಗುತ್ತದೆ.

ಕಣ್ಣಿಗೆ ವಸ್ತುವಿನ ಸತ್ಯ ಗೋಚರಕ್ಕೆ ಬರುತ್ತದೆ. ಕಿವಿಗೆ ಶಬ್ದದ ಸತ್ಯ ಅರಿವಾಗುತ್ತದೆ. ಚರ್ಮಕ್ಕೆ ಸ್ಪರ್ಶದ ಸತ್ಯ ಅರಿವಾಗುತ್ತದೆ. ನಾಲಿಗೆಗೆ ರುಚಿಯ ಸತ್ಯ ಅರಿವಾಗುತ್ತದೆ. ಮೂಗು ತನ್ನ ಸುಗಂಧ ದುರ್ಗಂಧಗಳನ್ನು ಅರಿವಿನ ಪರಿಮಳಕ್ಕೆ ಅರ್ಪಣೆ ಮಾಡಿ ಧನ್ಯನಾಗುತ್ತದೆ.

ಕಾಯಕ್ಕೆ ಕಾಯದಲ್ಲಿಯೇ ಇರುವ ಜ್ಞಾನಕಾಯದಿಂದ ದೀಕ್ಷೆಯಾದಾಗ, ಕಾಯದ ಸರ್ವಾಂಗಗಳಿಗೂ ಶಿಕ್ಷೆಯಾಗುತ್ತದೆ. ಕಾಯದಲ್ಲಿಯೇ ಸಂಗಮವಾದ ಜ್ಞಾನಕಾಯದಿಂದ ಕಾಯಕ್ಕೆ ಸರ್ವಕರಣೇಂದ್ರಿಯಗಳಿಗೆ ಸ್ವಾನುಭಾವವಾಗುತ್ತದೆ.

ದೀಕ್ಷಾತ್ರಯವು ಸಂಬಂಧಿಸಿದ ಕಾರಣ ನೀ ನಾನಾದೆ ಕಪಿಲಸಿದ್ಧ ಮಲ್ಲಿಕಾರ್ಜುನಾ:

ಕಾಯದಲ್ಲಿಯೇ ಸಂಗಮವಾದ ಜ್ಞಾನಕಾಯದಿಂದ ಕಾಯಕ್ಕೆ , ಕಾಯವನ್ನು ಆವರಿಸಿದ ಮನಕ್ಕೆ, ಮನದಿಂದಲೇ ಜನ್ಮ ತಳೆದ ಅರಿವಿಗೆ (ಧನ). ದೀಕ್ಷೆಯಾದ ಕಾರಣ ನೀ ನಾನಾದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ನಾನಾದೆ. ನಾನೇ ಸೃಷ್ಟಿಮಾಡಿಕೊಂಡ ನನ್ನ ಸಕಲ ಭ್ರಮೆಗಳನ್ನು ನಾನೇ ನನ್ನ ಸ್ವಾನುಭಾವದಿಂದ ಕಳೆದುಕೊಂಡು ಬ್ರಹ್ಮನೇ ನಾನಾದೆ.

**634**

**ದೀಕ್ಷಾತ್ರಯದಲ್ಲಿ ಸಂಪನ್ನರಾಗಿ,**
**ಪ್ರಸಾದದಲ್ಲಿ ಲೋಲುಪ್ತರಾಗಿ,**
**ಜಂಗಮವೆ ಲಿಂಗವೆಂಬವರ ಸಂಗದೊಳಿರಿಸೆನ್ನ**
**ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗ ನಿಮ್ಮ ಧರ್ಮ.**

ತನು ಮನ ಧನವನ್ನು ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಅರ್ಪಣೆ ಮಾಡಿ, ಮೂರನ್ನು ಒಂದನ್ನಾಗಿಸಿಕೊಂಡು ಸಂಪನ್ನರಾದ, ಶರಣರ ಸಂಗದೊಳಗೆ ಎನ್ನನ್ನು ಸದಾ ಇರಿಸು ತಂದೆ.

ಕಣ್ಣಿನ ಮೂಲಕ ಹರಿಯುವ ಅಜ್ಞಾನದ ದೃಶ್ಯವನ್ನು, ಕಣ್ಣಲ್ಲಿಯೇ ಇರುವ ಜ್ಞಾನದ ದೃಶ್ಯಕ್ಕೆ ಅರ್ಪಣೆ ಮಾಡಿ, ಅಜ್ಞಾನವನ್ನು ಪ್ರಸಾದ ಮಾಡಿಕೊಂಡು, ಸದಾ ಜ್ಞಾನದ ದೃಶ್ಯದಿಂದ ನೋಡುವ

ಶರಣರ ಸಂಗದಲ್ಲಿ ಎನ್ನನ್ನು ಇರಿಸು ತಂದೆ.

ಶಬ್ದವನ್ನು ನಿಃಶಬ್ದಗೊಳಿಸಿ ಅರಿವಿನಿಂದ ಆಲಿಸಿ, ಸ್ತುತಿ ನಿಂದೆಯೆಂದು ಕೇಳುವ ಅಜ್ಞಾನದ ಕಿವಿಯನ್ನು, ಅರಿವಿನ ಕಿವಿಗೆ ಅರ್ಪಣೆ ಮಾಡಿ, ಪ್ರಸಾದ ಮಾಡಿಕೊಂಡು, ಪರಮಾನಂದದಿಂದ ಓಲಾಡುವ ಶರಣರ ಸಂಗದಲ್ಲಿ ಸದಾ ಇರಿಸಿ ನನ್ನನ್ನು ಪಾರು ಮಾಡುತಂದೆ.

ಅಜ್ಞಾನದ ಚರ್ಮವನ್ನು ಜ್ಞಾನದ ಚರ್ಮಕ್ಕೆ ಅರ್ಪಣೆ ಮಾಡಿ ಪ್ರಸಾದ ಮಾಡಿಕೊಂಡ ಶರಣರ ಸಂಗದಲ್ಲಿ ಎನ್ನನ್ನು ಇರಿಸಿ ಕಾಪಾಡು ತಂದೆ. ರುಚಿ ಅರುಚಿಯೆಂದು ಸವಿದು ಸದಾ ದುಃಖಕ್ಕೆ ಈಡು ಮಾಡುವ ಅಜ್ಞಾನದ ನಾಲಿಗೆಯನ್ನು ಜ್ಞಾನದ ನಾಲಿಗೆಗೆ ಅರ್ಪಣೆ ಮಾಡಿ ಪ್ರಸಾದಿಯಾದ ಶರಣರ ಸಂಗದಲ್ಲಿ ನನ್ನನ್ನು ಸದಾ ಇರಿಸಿ, ಅಜ್ಞಾನದಿಂದ ಪಾರು ಮಾಡು ತಂದೆ.

ಸುಗಂಧ ದುರ್ಗಂಧವೆಂದು ಮೂಸಿಸಿ, ಅಜ್ಞಾನಕ್ಕೆ ತುತ್ತಾಗುವ ಮೂಗನ್ನು, ಮೂಗಿನಲ್ಲಿಯೇ ಇರುವ ಜ್ಞಾನದ ಪರಿಮಳ ಹೀರುವ ಮೂಗಿಗೆ ಅರ್ಪಣೆ ಮಾಡಿ, ಪ್ರಸಾದಿಯಾದ ಮಹಾನುಭಾವರ ಸಂಗದಲ್ಲಿ ಎನ್ನನ್ನಿರಿಸಿ ಆಶೀರ್ವದಿಸು ತಂದೆ.

ಜ್ಞಾನೇಂದ್ರಿಯಗಳನ್ನು ಆವರಿಸಿದ ಅಜ್ಞಾನವನ್ನು, ಜ್ಞಾನೇಂದ್ರಿಯಗಳಿಗೆ ಅರ್ಪಣೆ ಮಾಡಿದವನೇ ಜಂಗಮ. ಅಜ್ಞಾನವನ್ನು ಅರಿವಿನ ಮೂಲಕ ಕೊಂದು, ಜ್ಞಾನದಿಂದ ನೋಡಿ, ಜ್ಞಾನದಿಂದ ಕೇಳಿ, ಜ್ಞಾನದಿಂದ ರುಚಿಸಿ, ಜ್ಞಾನದಿಂದಲೇ ಮೂಸಿಸಿ, ಸ್ಪರ್ಶಿಸುವವನೇ ಜಂಗಮ. ಈತ ಸರ್ವಾಂಗದಲ್ಲಿ ಸಂಗಮವಾದ ಲಿಂಗಯ್ಯನೂ ಹೌದು.

ಅಂಗವನ್ನು ಆವರಿಸಿದ ಅಜ್ಞಾನಿ ಮನ, ಅಂಗದಲ್ಲಿಯೇ ಸಂಗಮವಾದ ಜ್ಞಾನಿ ಲಿಂಗ ಜಂಗಮನಿಗೆ ಶರಣು ಹೋಗಿ, ಶರಣಾಗತರಾಗಿ ಶರಣರಾದವರೇ ಶರಣರು. ಅಂತವರ ಸಂಗದೊಳಗೆ ಸದಾ ನನ್ನನ್ನಿರಿಸಿ ಕಾಪಾಡು ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನ, ಅದು ನಿನ್ನ ಧರ್ಮ. ಎಂದು ಸಿದ್ಧರಾಮ ಶಿವಯೋಗಿಗಳು ಅರಿವು ಎನ್ನುವ ಗುರುದೇವನೊಂದಿಗೆ ಮಾತನಾಡಿದ್ದಾರೆ. ಅವರನ್ನೇ ಬೇಡಿದ್ದಾರೆ.

**635**

**ದೀಪವಖಿಲಲೋಕದಲ್ಲಿ ಏಕವಾಗಿಪ್ಪಳೆ**
**ಏಕಯ್ಯಾ ಮರುಗುತಿಪ್ಪರು?**
**ಅಯ್ಯಾ, ಆಕಾರವನು ನಂಬದೆ**
**ಅಯ್ಯಾ, ನಿರಾಕಾರದೊಳಗೆ ಇಹರು,**
**ಏಕದೇವನೆಂದು ಹೊಗಳುವ**
**ಸ್ರುತಿಯ ಆದಿಯರಿದು ಜಪಿಸಿದೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆಕಾರ ಬೇರೆ ಬೇರೆಯಾದರೇನು? ದೇಹವೊಂದೇ. ದೇಹದಲ್ಲಿ ಇರುವ ನಿರಾಕಾರ ದೇವರು ಕೂಡಾ ಒಬ್ಬನೆ. ಆ ದೇವರಿಗೆ ಭಕ್ತಳಾಗಬೇಕಾದವಳು ಕೂಡಾ ಒಬ್ಬಳೆ. ಆಕೆ ಕೂಡಾ ನಿರಾಕಾರ!

ನಿರಾಕಾರ ದೇವರಿಗೆ ನಿರಾಕಾರ ಭಕ್ತಳು! ದೇವರು ನಿರಾಕಾರನೆಂದು ಹೇಳುವ ಭಕ್ತಳು ಕೂಡಾ ನಿರಾಕಾರವಾಗಿದ್ದರೂ ಆಕಾರವನ್ನು ನಂಬುತ್ತಿಲ್ಲ. ನಿರಾಕಾರ ದೇವರು ನಿರಾಕಾರ ಭಕ್ತಳು ಇವರಿಬ್ಬರು ಆಕಾರವೆಂಬ ದೇಹವನ್ನೇ ಮನೆಯನ್ನಾಗಿಸಿಕೊಂಡಿದ್ದಾರೆ.

ದೇವರು ತಾನು ವಾಸ ಮಾಡುವುದಕ್ಕಾಗಿ ನಿರಾಕಾರವೆಂಬ ಬಯಲನ್ನೇ ಬೀಜವನ್ನಾಗಿ ಮಾಡಿ, ಅದರಲ್ಲಿ ತಾನಿದ್ದು, ಆ ಬೀಜವನ್ನೇ ಬಿತ್ತಿದ್ದಾನೆ. ಆ ಬೀಜದಲ್ಲಿ ನಿರಾಕಾರದ ಕುಡಿಯೊಡೆದು ಆಕಾರವಾಗಿದೆ. ಆಕಾರವೆಂಬ ದೇಹವಾಗಿದೆ.

ದೇಹದಲ್ಲಿ ನಿರಾಕಾರವೆಂಬ ಏಕೋದೇವನಿದ್ದಾನೆ. ಆ ದೇವನು ಬೆಳಗುವ ಅರಿವಿನ ಬೆಳಕಿನಿಂದ ಮನವೆಂಬ ಕತ್ತಲು ಸೃಷ್ಟಿಯಾಗಿದೆ. ಕತ್ತಲು ಎನ್ನುವ ಮನ ದೇಹವನ್ನು ಹಿಡಿದು ದೇಹವನ್ನು ನೋಡುವುದರಿಂದ ದೇಹ ಆಕಾರವಾಗಿ ಕಾಣುತ್ತದೆ. ದೇಹದಲ್ಲಿದ್ದ ದೇವರನ್ನು ನೋಡಿದರೆ ಆ ಬೆಳಕಿನ ದೇವರಿಗೆ ಕತ್ತಲು ಎನ್ನುವ ಮನ ಭಕ್ತಳಾಗುತ್ತಾಳೆ. ಬೆಳಕನ್ನು ಪೂಜಿಸಿ ಬೆಳಕೇ ಆಗುತ್ತಾಳೆ.

ದೇಹವೂ ಒಂದೇ. ಆ ದೇಹದಲ್ಲಿದ್ದ ದೇವರು ಕೂಡಾ ಒಬ್ಬನೇ. ಆ ದೇವರನ್ನು ಆರಾಧಿಸುವ ಭಕ್ತಳು ಕೂಡಾ ಒಬ್ಬಳೇ. ದೇವರು ನಿರಾಕಾರನೆಂದು ಹೇಳುವವರು ಕೂಡ ಆಕಾರವುಳ್ಳವರೇ ಆಗಿದ್ದಾರೆ. ದೇವರು ಸಾಕಾರನೆಂದು ಹೇಳುವವರು ಕೂಡಾ ಆಕಾರವುಳ್ಳವರೇ ಆಗಿದ್ದಾರೆ. ಆಕಾರವುಳ್ಳ ಕಾಯಗಳೆಲ್ಲಾ ಒಂದೇ ಆಗಿದ್ದರೂ ಕೂಡಾ, ಅವು ನಿರಾಕಾರ ದೇವರಿಂದ ಸೃಷ್ಟಿಯಾದ ಕುಡಿಯೆಂದು ಅರಿಯವು.

ದೇಹಕ್ಕೆ ಜನ್ಮಕೊಟ್ಟು, ಆ ದೇಹವನ್ನೇ ಮನೆಮಾಡಿಕೊಂಡು, ಆ ದೇಹದಲ್ಲಿಯೇ ಇದ್ದ ದೇವರು ನಿರಾಕಾರ! ಆ ನಿರಾಕಾರ ದೇವರ ಬೆಳಕಿನಿಂದಲೇ ಹುಟ್ಟಿ, ದೇಹವನ್ನು ಆವರಿಸಿದ ಮನ ಕೂಡಾ ನಿರಾಕಾರ! ದೇಹವನ್ನು ಆವರಿಸಿದ ಮನ, ದೇಹದಲ್ಲಿಯೇ ಇದ್ದ ದೇವರನ್ನು ಆರಾಧಿಸಿದರೆ ಈಕೆ ಕೂಡಾ ದೇವತೆಯಾಗುತ್ತಾಳೆ. ಏಕೋ ದೇವತೆಯಾಗುತ್ತಾಳೆ. ದೇವ ದೇವತೆಗಳಿಬ್ಬರೂ ದೇಹದಲ್ಲಿಯೇ ಸಂಗಮವಾಗಿ ಅರ್ಧನಾರೀಶ್ವರರಾಗುತ್ತಾರೆ.

ಆಕಾರವೆಂಬ ದೇಹವನ್ನು ಹಿಡಿದು ನಿರಾಕಾರವೇ ಶ್ರೇಷ್ಠ ಎಂಬ ಅಜ್ಞಾನಿ ಮನಕ್ಕೆ ಏನೆನ್ನಬೇಕು? ಆಕಾರವನ್ನು ಹಿಡಿದು ಆಕಾರವನ್ನು ಪೂಜಿಸಿ ಆಕಾರವೇ ಶ್ರೇಷ್ಠ ಎಂದು ಹೇಳುವ ಅಜ್ಞಾನಿ ಮನಕ್ಕೆ ಏನೆನ್ನಬೇಕು? ಇದು ಮನದ ಚೇಷ್ಟೆ.

ಆಕಾರದೊಳಗೆ ಇದ್ದ ಮನ ನಿರಾಕಾರ. ಆಕಾರದೊಳಗೆ ಇದ್ದ ದೇವರು ಕೂಡಾ ನಿರಾಕಾರ. ಆದರೂ ಮನ ಆಕಾರವನ್ನು ನಂಬುತ್ತಿಲ್ಲ. ಆಕಾರದೊಳಗಿದ್ದೂ ಆಕಾರವನ್ನು ನಂಬದಿದ್ದ ನಿರಾಕಾರ ಮನವನ್ನು ಏನೆಂದು ಕರೆಯಬೇಕು?

ಆಕಾರವೆಂಬ ದೇಹದೊಳಗಿದ್ದ ನಿರಾಕಾರ ದೇವರನ್ನು ಪೂಜಿಸದೆ, ದೇಹದೊಂದಿಗೆ ನಿರಾಕಾರದತ್ತ ಮುಖಮಾಡಿ ಕೈಮುಗಿದು ಬೇಡುವ ನಿರಾಕಾರ ಮನವನ್ನು ಏನೆಂದು ಕರೆಯಬೇಕು?

ಆಕಾರದೊಳಗೆ ಇರುವ ನಿರಾಕಾರವನ್ನು ನಂಬುತ್ತಿಲ್ಲ; ಆಕಾರದೊಳಗಿದ್ದು ಆಕಾರವನ್ನೂ ನಂಬುತ್ತಿಲ್ಲ. ನಿರಾಕಾರವನ್ನು ಹೊತ್ತ ಆಕಾರವನ್ನು ಹಿಡಿದು ನಿರಾಕಾರವನ್ನು ಪೂಜಿಸುವ ನಿರಾಕಾರ ಮನದ ಕತೆಯೇ ಹೀಗೆ. ಅರಿಯಬೇಕಾದ ಅರಿವಿನ ದೇವರನ್ನು ಅರಿಯದೆ, ದೇವರಿದ್ದ ದೇಹವನ್ನು ಹೊತ್ತುಕೊಂಡು ಏಕೋದೇವನೆಂದು ಬೊಗಳುತ್ತಿದೆ.

ಸೂತ್ರವನ್ನು ಅರಿಯಲು ಸ್ತುತಿಯನ್ನು ರಚಿಸಿ ಪುನಃ ಸ್ತುತಿಯನ್ನು ಜಪಿಸಿದರೆ ದೇಹದೊಳಗಿದ್ದ ನಿರಾಕಾರ ದೇವರು ದೇಹವನ್ನು ಆವರಿಸಿದ ಏಕೋದೇವತೆಗೆ ಒಲಿಯಲು ಸಾಧ್ಯವೆ?

**636**

**ದೀಪ್ತಿ ಮೂರ್ತಿಗಳೊಳಗೆ ಮೂಲವಪ್ಪಡೆ ತಾನು**
**ರೀತಿ ಧಾತುಗಳನು ಅವಗ್ರಹಿಸಿತ್ತೈ**

**ಮಾತಿನ ಬ್ರಹ್ಮಾಂಡ ಮಾತೆಯಾಗಲಿಕಾನು**
**ನೀತಿ ನಿಜನೆಂದನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮಾತಿನ ಬಣಮೆಯ ಪಶು ಮೇದಂತೆ ಎಂದು ಅಲ್ಲಮ ಪ್ರಭುಗಳು ಹೇಳಿದರೆ, ಮಾತಿನ ಬ್ರಹ್ಮಾಂಡ ಮಾತೆಯಾಗಲಿಕಾನು ನೀತಿ ನಿಜನಿಂದನೈ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಸ್ತುತಿ ನಿಂದೆಗಳು ಬಂದಡೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು ಎಂದು ಅಕ್ಕಮಹಾದೇವಿ ಹೇಳಿದ್ದಾಳೆ.

ಎಲ್ಲಿ ನೋಡಿದರೂ ಬೆಳಗಿಂಗೆ ಬೆಳಗಾಗಿ ಬೆಳಗುವ ಅರಿವಿನ ದೇಹಗಳೇ ಕಾಣುತ್ತವೆ; ದೇಹದ ಮೂಲವನು ಅರಿತ ದೇಹಕ್ಕೆ!

ದೇಹದ ಮೂಲವೆಂದರೆ ಅರಿವು. ಅದು ಸದಾ ಬೆಳಗುವ ದೀಪ್ತಿ. ದೇಹವನ್ನು ಆವರಿಸಿದ ಮನದಿಂದಲೇ ದೇಹದ ಮೂಲವನ್ನು ಅರಿಯಬೇಕು. ಅರಿಯಲು ಹೋದ ಮನವೆಂಬ ಕತ್ತಲನ್ನು ದೇಹದ ಮೂಲವೆಂಬ ದೀಪ್ತಿ ತನ್ನಂತೆ ಮಾಡಿಕೊಂಡು ಬೆಳಗಿಂಗೆ ಬೆಳಗಾಗಿ ಬೆಳಗುವಂತೆ ಮಾಡುತ್ತದೆ.

ಮಾತಿನಲ್ಲಿ ಸ್ತುತಿಯೂ ಇದೆ; ನಿಂದೆಯೂ ಇದೆ. ದೇಹವನ್ನು ಆವರಿಸಿದ ಮನ ದೇಹದಿಂದ ಹೊರಬಂದ ಮಾತುಗಳನ್ನು ಸ್ತುತಿ ಮತ್ತು ನಿಂದೆಗಳಿಗಾಗಿ ಮಾತ್ರ ಬಳಸಿಕೊಳ್ಳುತ್ತದೆ. ಹೀಗಾಗಿ ಅಲ್ಲಮಪ್ರಭುಗಳು ಪಶುಮೇದ ಬಣಮೆಯಂತೆ ಎಂದು ಹೇಳಿದರು.

ಮಾತು ಮಾಣಿಕ್ಯದಂತೆ ಬೆಳಗುತ್ತದೆ; ಮಾತು ಸ್ಪಟಿಕದಂತೆ ಒಳಹೊರಗೆನ್ನದೆ ಹೊಳೆಯುತ್ತದೆ. ಹೀಗಾಗಿ ನುಡಿದರೆ ಮಾತು ಮುತ್ತಿನ ಹಾರದಂತಿರಬೇಕು ಎಂದರು ಬಸವಣ್ಣ.

ಮಾತು ಮುತ್ತು, ಮಾತು ಮಾಣಿಕ್ಯ, ಮಾತು ಸ್ಫಟಿಕ, ಮಾತು ಜ್ಯೋತಿರ್ಲಿಂಗವೂ ಹೌದು. ಮಾತು ತಿಳಿಯದ್ದಕ್ಕಾಗಿ ಮನ ದೇಹದೊಂದಿಗೆ ಪಶುವಿನಂತೆ ಮೇಯುತ್ತದೆ. ಏಕೆಂದರೆ ಮನ ಮಾತನ್ನು ಭ್ರಮೆಯಿಂದ ಕೇಳುತ್ತದೆ; ಭ್ರಮೆಯಿಂದ ನುಡಿಯುತ್ತದೆ. ಮಾತು ಸ್ಫಟಿಕದಂತೆ ಪಾರದರ್ಶಕವಾಗಿದೆ ಎಂದು ಮನಕ್ಕೆ ತಿಳಿಯುವುದಿಲ್ಲ.

ಮನ 'ಕತ್ತೆ' ಎನ್ನುವ ಶಬ್ದವನ್ನು ಟಂಕಿಸಿ ಒಂದು ಪ್ರಾಣಿಯನ್ನು ಗುರುತಿಸಲು ನಿರ್ಧರಿಸಿಯಾಗಿದೆ. ಒಂದು ಪ್ರಾಣಿಯನ್ನು ಗುರುತಿಸಲು ಇಟ್ಟ ಹೆಸರು ಮನ ಸ್ತುತಿಗೆ ಬಳಕೆ ಮಾಡುತ್ತದೆ; ಹಾಗೆಯೇ ನಿಂದೆಗೆ ಬಳಕೆ ಮಾಡುತ್ತದೆ.

ಉದಾಹರಣೆಗಾಗಿ ಅತ್ಯುತ್ತಮವಾದ ಕೆಲಸ ಮಾಡಿದ ಹುಡುಗನನ್ನು ಹೊಗಳುವುದಕ್ಕಾಗಿ ''ಹುಡುಗ ಹಗಲಿರುಳೆನ್ನದೆ ಕತ್ತೆ ದುಡಿದಂತೆ ದುಡಿಯುತ್ತಾನೆ'' ಎಂದು ''ಕತ್ತೆ'' ಶಬ್ದವನ್ನು ಬಳಸಿ ಮನುಷ್ಯ ಮನುಷ್ಯನನ್ನು 'ಸ್ತುತಿ' ಮಾಡುತ್ತಾನೆ. ''ಕತ್ತೆಯಂಥವನೆ'' ಎಂದು ''ಕತ್ತೆ'' ಶಬ್ದವನ್ನು ಬಳಸಿ ನಿಂದಿಸುತ್ತಾನೆ.

'ಕತ್ತೆ' ಎನ್ನುವ ಶಬ್ದ ಸ್ತುತಿ ಮತ್ತು ನಿಂದೆಗೆ ಬಳಕೆಯಾಯಿತು. ಶಬ್ದದ ಮೂಲವನ್ನು ಅರಿಯಲು ಹೋದರೆ ಕತ್ತೆ ಕತ್ತೆಯಲ್ಲ; ಅದೊಂದು ಪ್ರಾಣಿ! ಆ ಪ್ರಾಣಿಯನ್ನು ಗುರುತಿಸುವುದಕ್ಕಾಗಿ ಇಟ್ಟ ಹೆಸರು. ಮೂಲವನ್ನು ಅರಿಯಲು ಹೋದರೆ ಅದು ದೀಪ್ತಿಯಂತೆ ಬೆಳಗುತ್ತದೆ. ಮಾತು ಬ್ರಹ್ಮಾಂಡವಾಗುತ್ತದೆ. ಮಾತು ಮಾತೆಯಾಗುತ್ತದೆ.

ಮಾತಿನ ಮೂಲಕ್ಕೆ ಹೋಗಿ, ನುಡಿಯಲು ಬಾರದಿದ್ದರೆ ನುಡಿದ ಮಾತು ನುಡಿದ ದೇಹವನ್ನೇ ಸರ್ಪವಾಗಿ ಕಚ್ಚುತ್ತದೆ. ಕೇಳಿದ ದೇಹವನ್ನೂ ಸರ್ಪವಾಗಿ ಕಚ್ಚುತ್ತದೆ. ದೇಹ ಇರುವವರೆಗೆ ನುಡಿದ ಮಾತು, ಕೇಳಿದ ಮಾತು, ದೇಹದಲ್ಲಿಯೇ ಜೀರ್ಣವಾಗದಂತೆ ಇದ್ದು ಮತ್ತೆ ಮತ್ತೆ ಕಚ್ಚುತ್ತದೆ.

ಒಂದು ದೇಶದ ಪ್ರಧಾನಿ ಮತ್ತೊಂದು ದೇಶದ ಪ್ರಧಾನಿಗೆ 'ಕತ್ತೆ' ಎಂದರೆ ಎರಡೂ

ದೇಶಗಳು ಹೊತ್ತು ಉರಿಯುತ್ತವೆ. ಅಣುಬಾಂಬುಗಳು ಸುರಿಯುತ್ತವೆ. ಉಭಯ ದೇಶಗಳಲ್ಲಿದ್ದ ದೇಹಗಳೆಲ್ಲ ಭಸ್ಮವಾಗುತ್ತವೆ. ದೇಹದಿಂದ ಹುಟ್ಟಿದ ಮಾತು ದೇಹಕ್ಕೆ ತಿಳಿದರೆ ಅದು ಮುತ್ತು, ಮಾಣಿಕ್ಯ, ಸ್ಫಟಿಕವೂ ಹೌದು. ಮಾತು ಮಾತೆಯೂ ಹೌದು. ತಿಳಿಯದಿದ್ದರೆ ದೇಹದಿಂದ ಹೊರಬಂದ ಮಾತು ದೇಹಕ್ಕೆ ಮೃತ್ಯುವಾಗುತ್ತದೆ.

**637**

**ಧುರಿತಘುರಟ್ಟಂಗೆ ಧೂಪಾರತಿಯನು ಕೊಡುವ ಪುರಾತರು**
**ಕೇಳಿರಯ್ಯಾ; ಹೋಗು ಹೋಗೆಂಬ ಬೀಸಣಿಗೆ**
**ಅಡಗಡಗೆಂಬ ಘಂಟೆಯ ಸಬುದಕ್ಕೆ**
**ತೆರಳ್ದೋಡಿಹೋದವು ಪಾಪಂಗಳು.**
**ಪಾಪಿಯ ಪಾದ ಬಂದರಸಿ ಕೊಂಡೊಯ್ದವು**
**ಕಪಿಲಸಿದ್ಧ ಮಲ್ಲಿನಾಥನೊಲ್ಲದವರ.**

ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ತನುವನ್ನು ಹಿಂಸೆಗೆ ಈಡು ಮಾಡುವ ಪಾಪಿಗಳು. ತನುವನ್ನು ಆವರಿಸಿದ ಮನ, ತನುವಿನಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನ ಸಂಗ ಮಾಡದೆ, ತನುವಿನ ಸಂಗ ಮಾಡಿವೆ. ಸಂಗದ ಫಲದಿಂದಾಗಿ ತನುವಿನಲ್ಲಿ ಸಪ್ತವ್ಯಸನಗಳು ಹುಟ್ಟಿವೆ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಪಾಪಿಗಳು ಹುಟ್ಟಿವೆ. ಅಷ್ಟಮದಗಳೆಂಬ ಅಜ್ಞಾನಿಗಳು ಹುಟ್ಟಿವೆ.

ಪುರಾತರು ಬೀಸುವ ಅರಿವಿನ ಬೀಸಣಿಗೆಯ ಗಾಳಿಗೆ, ಅಡಗು ಅಡಗೆಂಬ ಗಂಟೆಯ ಶಬ್ದಕ್ಕೆ ತನುವನ್ನು ಆವರಿಸಿದ ಸಕಲ ಪಾಪಕರ್ಮಗಳು ಉದುರಿಬೀಳುತ್ತವೆ.

ಕಾಯದಲ್ಲಿ ಅರಿವಿನ ಬೆಳಕು ಬೆಳಗುತ್ತಿದ್ದರೂ, ಆ ಬೆಳಕಿನಿಂದಲೇ ಹುಟ್ಟಿದ ಕತ್ತಲು ಅಜ್ಞಾನವೆಂಬ ಪಾಪಿಗಳನ್ನು ಸೃಷ್ಟಿ ಮಾಡಿದೆ. ಕಾಯವನ್ನು ಹಿಡಿದು ಕಾಯದಲ್ಲಿ ಬೆಳಗುವ ಅರಿವಿನ ಬೆಳಕಿಗೆ ಕತ್ತಲ ಕಂಬಳಿಯನ್ನು ಹೊದಿಸಿ, ಆ ಕತ್ತಲಲ್ಲೇ ಪಾಪದ ಕೆಲಸಗಳನ್ನು ಮಾಡುತ್ತಲಿವೆ.

ಮನಕ್ಕೆ ಅರಿವಿನ ಬೆಳಕಿನಲ್ಲಿ ಲೀನವಾಗಲು ಇಷ್ಟವಾಗದಿದ್ದರೆ ಕಾಯದಲ್ಲಿಯೇ ಇದ್ದ ಅರಿವಿನ ಬೆಳಕು ಕಾಯವನ್ನು ಬೆಳಗದೆ ಇನ್ನು ಸಾಕು ಎಂದು ಕಾಯವನ್ನೇ ಕರೆದೊಯ್ಯುತ್ತದೆ.

ಕಾಯದಲ್ಲಿ ಅರಿವಿನ ಬೆಳಕಿದ್ದರೂ ಕಾಯವನ್ನು ಆವರಿಸಿದ ಕತ್ತಲ ಮನಕ್ಕೆ ಅರಿವಿನ ಬೆಳಕನುಣ್ಣುವ ಆಸೆಯಾಗದಿದ್ದರೆ ಕಾಯದ ಆಯುಷ್ಯ ಪೂರ್ತಿಯಾಗದಿದ್ದರೂ ಕಾಯವನ್ನು ಕರೆದೊಯ್ಯುತ್ತದೆ. ಅದು ಪಾಪದ ಕಾಯವೆಂದು ಕಾಯಗಳೇ ಕಾಯವನ್ನು ತೆಗಳುವಂತೆ ಮಾಡುತ್ತದೆ ಕಾಯದಲ್ಲಿದ್ದ ಬೆಳಕು!

ಪುರಾತರು ಅರಿವಿನ ಧೂಪಾರತಿಯನು ಬೆಳಗಿ ಬೆಳಕಿನ ಇರುವು ತೋರಿದರೂ; ಹೋಗು ಹೋಗೆಂದು, ಎಲೆ ಅಜ್ಞಾನವೇ ತೊಲಗು ತೊಲಗೆಂದು ಅರಿವಿನ ಬೀಸಣಿಗೆಯ ಬೀಸಿದರೂ ಅರಿವಿನ ಗಂಟೆಯ ಸಬುದವನ್ನು ಕೇಳಿಸಿದರೂ ಕೂಡಾ ಕತ್ತಲು, ಕಾಯದಲ್ಲಿಯೇ ಇದ್ದ ಬೆಳಕಿನ ಸಂಗ ಮಾಡದಿದ್ದರೆ ಯಾರಾದರೂ ಏನು ಮಾಡಿಯಾರು? ಅರಿವಿನ ಮಲ್ಲಯ್ಯ ಅಂತವರನು ಒಲ್ಲ ಒಲ್ಲ.

**ದೂರದ ಬಟ್ಟೆಯ ಹೋಗಿ ಪಥಶ್ರಾಂತನಾಗಿದ್ದು,**
**ಹಿಂದೆ ತಿರುಗಿ ನೋಡದಿರು ಕಂಡಾ, ಎಲೆ ಗಂಡನೆ.**
**ಹಿಂದೆ ತಿರುಗಿ ನೋಡಿದಲ್ಲಿ ಕೆಟ್ಟರು ಕೋಟಿ ಬ್ರಹ್ಮಜ್ಞರು,**
**ಹಿಂದೆ ತಿರುಗಿ ನೋಡಿದಡೆ ಮುಂದೆ ವಿಸ್ತಾರವೆಂದಿದ್ದೆಯಾದಡೆ**
**ತಂದೆ ಒಲಿವ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವಿನ ದಾರಿ ಸಹಜ; ಸರಳ. ಆದರೂ ಅದು ಬಲು ಕಠಿಣ. ಅರಿವು ತನುವಿನ ಸಹಜ ಗುಣ. ಆದರೂ ಅದು ಸಂಪೂರ್ಣ ನಿರ್ಗುಣವಾಗಿ ಜನ್ಮ ತಾಳುತ್ತಿಲ್ಲ. ನಿರ್ಗುಣದಿಂದ ಬದುಕಲು ತನುವಿಗೆ ಸಾಧ್ಯವಾಗುತ್ತಿಲ್ಲ.

ನಿರ್ಗುಣ ಎನ್ನುವುದು ತನುವಿನ ಸ್ವಭಾವವಾದರೂ ಅದು ಅನೇಕ ಗುಣಗಳನ್ನು ಹೇರಿಕೊಂಡಿದೆ. ಆ ಗುಣಗಳನ್ನು ಬಿಟ್ಟು ಬದುಕುವುದಕ್ಕಾಗಿ ಪ್ರಯತ್ನಿಸುತ್ತಲಿದೆ. ಅರಿಷಡ್ವರ್ಗ, ಸಪ್ತ ವ್ಯಸನಗಳು, ಅಷ್ಟಮದಗಳನ್ನು ತನು ಉದ್ದೇಶಪೂರ್ವಕವಾಗಿ ಬಳಕೆ ಮಾಡುತ್ತಲಿದೆ. ಇವುಗಳನ್ನು ಇಟ್ಟುಕೊಳ್ಳಲು ತನುವಿನಲ್ಲಿ ಜಾಗ ಇಲ್ಲ. ಇವುಗಳನ್ನು ಬಿಡುವುದು ತನುವಿಗೆ ಗೊತ್ತಾಗುತ್ತಿಲ್ಲ.

ತನುವಿನಲ್ಲಿ ಕಾಮ ಎನ್ನುವುದು ಇಲ್ಲ. ಅದು ಹೊರ ಬಂದು ಪ್ರಕಟವಾಗುವುದು ಸಂತಾನ ಕ್ರಿಯೆಗಾಗಿ ಮಾತ್ರ. ತನುವಿಗೆ ಅರಿವಿದೆ ಅಂದ ಮೇಲೆ ಸಂತಾನ ತನಗೆ ಬೇಕೋ ಬೇಡವೊ ಎಂದು ಆಲೋಚನೆ ಮಾಡುವ ಶಕ್ತಿಯೂ ತನುವಿಗೆ ಇದೆ. ಸಂತಾನ ಬೇಡವೆಂದರೆ ಕಾಮ ಅರ್ಥವಿಲ್ಲದ್ದು. ಈ ವಿಚಾರ ತನುವಿಗೆ ಹೊಳೆದರೆ ಸಾಕು ಕಾಮ ತಂತಾನೆ ನಿಲ್ಲುತ್ತದೆ. ತನುವಿನಿಂದ ಪುಟಿಯುವುದೇ ಇಲ್ಲ.

ಈ ಸೂತ್ರ ಶರಣರು ಮಾತ್ರ ಬಳಕೆ ಮಾಡಿದರು. ಸಾವಿರಾರು ವರ್ಷಗಳ ಹಿಂದೆ ಋಷಿಮುನಿ ಎನ್ನಿಸಿಕೊಂಡ ವಿಶ್ವಾಮಿತ್ರನಿಗೂ ಸಾಧ್ಯವಾಗಲಿಲ್ಲ. ದೇವತೆಗಳ ರಾಜ ದೇವೇಂದ್ರನಿಗೂ ಸಾಧ್ಯವಾಗಲಿಲ್ಲ. ಬ್ರುಹಸ್ಪತಿ ಶಿಷ್ಯ ಚಂದ್ರನಿಗೂ ಸಾಧ್ಯವಾಗಲಿಲ್ಲ. ಇವರೆಲ್ಲ ಬಲಶಾಲಿಗಳಾದರೂ ಹಿಂತಿರುಗಿ ನೋಡಿದರು. ತನುವಿನ ಅಜ್ಞಾನ ತನುವನ್ನು ಆವರಿಸಿ ತನ್ನ ಅಜ್ಞಾನದ ರಾಜ್ಯಭಾರ ಮಾಡಿತು.

ಹಿಂದೆ ತಿರುಗಿ ನೋಡದಿರು ಕಂಡಾ, ಎಲೆ ಗಂಡನೆ. ಹಿಂದೆ ತಿರುಗಿ ನೋಡಿದಲ್ಲಿ ಕೆಟ್ಟರು ಕೋಟಿ ಬ್ರಹ್ಮಜ್ಞರು: ವಿಶ್ವಾಮಿತ್ರ ತನ್ನ ಗುರುದೇವನಿಂದ ಬ್ರಹ್ಮಜ್ಞಾನಿ ಎಂದು ಕರೆಯಿಸಿಕೊಳ್ಳಲು ಸಾವಿರಾರು ವರುಷ ತಪವನ್ನು ಆಚರಿಸಿದ. ಆದರೂ ಮೇನಕೆಯ ನೃತ್ಯಕ್ಕೆ ಮನಸೋತ. ಸಾವಿರಾರು ವರುಷಗಳವರೆಗೆ ಪಾಲಿಸಿಕೊಂಡು ಬಂದ ತನ್ನ ಬ್ರಹ್ಮಚರ್ಯ ಹಾಳಾಯಿತು ಎಂದು ಮರುಗಿದ. ಇದು ಕತೆ.

ಬ್ರಹ್ಮಚರ್ಯ ಎನ್ನುವುದು ಪಾಲಿಸುವುದು ಅಲ್ಲ. ಅದು ಕಲಿಯುವುದೂ ಅಲ್ಲ. ಅದು ತನುವಿನಲ್ಲಿ ಇದೆ. ಇಡೀ ತನುವಿನಲ್ಲಿ ತನ್ಮಯವಾದ ಬ್ರಹ್ಮವನ್ನು ತನುವೇ ಕಲಿಯುವುದೆಂದರೇನು? ತನುವೇ ಪಾಲಿಸುವುದೆಂದರೇನು? ಬ್ರಹ್ಮವೇ ಭ್ರಮೆಯಾಗಿ ತನುವನ್ನು ಆವರಿಸಿದಾಗ ತನುವಿನಲ್ಲಿಯೇ ತನ್ಮಯವಾದ ಅರಿವಿನ ಗಂಡ ನಗಲಾರನೆ?

ಕಲ್ಲ ಮೇಲೆ ನಿಂತು ಕಲ್ಲನ್ನು ಕಲ್ಲು ಎಂದು ಕೂಗಿ ಕರೆಯುವುದಕ್ಕೆ ಶಾಸ್ತ್ರಗಳ ಮೂಲಕ ಅಧ್ಯಯನ ಮಾಡಿ ಕಲಿಯಬೇಕೆ? ಕಲ್ಲನ್ನು ಕಲ್ಲು ಎಂದು ಗುರುತಿಸುವ ಕಾಯ ಸಹಜ ಕಾಯ.

ಬ್ರಹ್ಮಕಾಯ. ಕೆತ್ತಿದ ಕಲ್ಲನ್ನು ದೇವರು ಎಂದು ಆರಾಧಿಸುವ ಕಾಯ ಭ್ರಮಾಕಾಯ!

ಕಲ್ಲು ಒಂದೇ. ಆದರೂ ಅದರಿಂದ ಮಸೀದೆ ಕಟ್ಟಿ, ಕಾಯ ಮುಸಲ್ಮಾನನಾಗಿದೆ. ಕ್ರಿಸ್ತನನ್ನು ಕೆತ್ತಿ ಕ್ರಿಶ್ಚಿಯನ್ನನಾಗಿದೆ. ಕ್ರಿಷ್ಣನನ್ನು ಕೆತ್ತಿ ಹಿಂದು ಆಗಿದೆ. ಮಹಾವೀರನನ್ನು ಕೆತ್ತಿ ಜೈನನಾಗಿದೆ. ಬುದ್ಧನನ್ನು ಕೆತ್ತಿ ಬೌದ್ಧನಾಗಿದೆ. ನಾನಕನನ್ನು ಕೆತ್ತಿ ಕಾಯ ಶಿಖ್ ಆಗಿದೆ. ಆದರೂ ನಾನು ಬ್ರಹ್ಮಜ್ಞಾನಿ ಎಂದು ಹೇಳುತ್ತದೆ.

ದೂರದ ಬಟ್ಟೆಯ ಹೋಗಿ ಪಥಶ್ರಾಂತನಾಗಿದ್ದು, ಹಿಂದೆ ತಿರುಗಿ ನೋಡದಿರು ಕಂಡಾ ಎಲೆ ಗಂಡನೆ. ಹಿಂದೆ ತಿರುಗಿ ನೋಡಿದಲ್ಲಿ ಕೆಟ್ಟರು ಕೋಟಿ ಬ್ರಹ್ಮಜ್ಞರು. ಹಿಂದೆ ತಿರುಗಿ ನೋಡಿದಡೆ ಮುಂದೆ ವಿಸ್ತಾರವೆಂದಿದ್ದೆಯಾದಡೆ ತಂದೆ ಒಲಿವ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನ.

ದೂರದ ದಾರಿ ನಡೆದು ನಡೆದು ಕಾಯಕ್ಕೆ ದಣಿವಾಗಿದೆ. ಒಮ್ಮೆಯಾದರೂ ಹಿಂದೆ ತಿರುಗಿ ನೋಡು ಎಲೆ ಗಂಡನೆ. ಹಿಂದೆ ತಿರುಗಿ ನೋಡಿದರೆ ಸಾಕು ಅದು ಬರೀ ಕಲ್ಲು. ಕಲ್ಲನ್ನು ಕಲ್ಲು ಎಂದು ಹೇಳದೆ ಕೆತ್ತಿದ ಕಲ್ಲ ಮುಂದೆ ಕುಳಿತು ಶಾಸ್ತ್ರ ಹೇಳುತ್ತಾ ನಾನು ಬ್ರಹ್ಮಜ್ಞಾನಿ ಎಂದು ಹೇಳಿ ಕೆಟ್ಟರು ಕೋಟಿ ಕೋಟಿ ಬ್ರಹ್ಮಜ್ಞರು. ಹಿಂದೆ ತಿರುಗಿ ನೋಡಿದಡೆ ಮುಂದೆ ವಿಸ್ತಾರ. ಎಲ್ಲಿ ನೋಡಿದಡೂ ಕಲ್ಲು. ಕೆತ್ತಿದಡೇನು, ಕೆತ್ತದಿದ್ದಡೇನು? ಕಲ್ಲನ್ನು ಕಲ್ಲು ಎಂದು ತಿಳಿಯುವ ಕಾಯವೇ ಬ್ರಹ್ಮಕಾಯ.

ಕಲ್ಲ ಮೇಲೆ ನಿಂತು ಕಲ್ಲಿಗೆ ಬಾಗುವ ಕಾಯ ಭ್ರಮೆಯನ್ನು ಆಮಂತ್ರಣ ಮಾಡಿಕೊಂಡಿದೆ. ಕಲ್ಲ ಮೇಲೆ ನಿಂತ ಕಾಯವೂ ತನ್ನದೇ ಆಗಿದೆ. ಕೆತ್ತಿದ ಕಲ್ಲಿಗೆ ಬಾಗುವ ಕಾಯವೂ ತನ್ನದೇ ಆಗಿದೆ. ಪಾದವನ್ನು ಕಲ್ಲ ಮೇಲೆ ನಿಲ್ಲಿಸಿ, ನೆತ್ತಿಯನ್ನು ಕಲ್ಲಿಗೆ ಬಾಗಿಸಿದ ಕಾಯವನ್ನು ಏನೆನ್ನಬೇಕು? ಹೀಗೆ ಎಷ್ಟೋ ಕಾಲ ಅಜ್ಞಾನದ ಹಾದಿಯನ್ನು ನಡೆದೂ ನಡೆದೂ ಕಾಯಕ್ಕೆ ದಣಿವಾಗಿದೆ. ಒಮ್ಮೆ ಹಿಂತಿರುಗಿ ನೋಡಲೇಬೇಕಾಗಿದೆ. ಇದು ಸಿದ್ಧರಾಮ ಶಿವಯೋಗಿಗಳ ಆಪೇಕ್ಷೆ.

**639**

**ದೂಷಣೆ ನಿಮಿತ್ತ ಲಿಂಗಧಾರಣ ಶಿಕ್ಷೆ ಎಂದಲ್ಲಿ,**
**ಬರಿಯ ಪ್ರಾಣಲಿಂಗಿಗಳೆಂದು ದೂಷಣೆಯಾದುದಿಲ್ಲವೆ,**
**ಪುರಾತರ ನುಡಿಯಲ್ಲಿ ?**
**ಇದು ಕಾರಣ, ಹಿರಿಯರಿಷ್ಟಲಿಂಗದ ಭಾವ ಧಾರಣಶಿಕ್ಷೆಯಾದಡೆ,**
**ನಿಮ್ಮ ಶರಣ ಲಿಂಗಧಾರಣಶಿಕ್ಷೆ ಮನಮಾಳ್ಪ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕ್ರೈಸ್ತರ ಆಚರಣೆಯನ್ನು ದೂಷಿಸಿದರೆ, ದೂಷಿಸಿದವನನ್ನು ಹಿಡಿದು ಅವನ ಕೊರಳಿಗೆ ಶಿಲುಬೆ ಧರಿಸಿದರೆ ಅವನು ಕ್ರಿಸ್ತನಾಗುವುದಿಲ್ಲ. ಕ್ರೈಸ್ತ ಫಾರ್ಸಿ ಹಿಂದು ಮುಸ್ಲಿಂ ಬೌದ್ಧ ಸಿಖ್ ಇವು ಯಾವೂ ಆಚರಣೆಯ ಧರ್ಮಗಳಲ್ಲ. ಆಯಾ ಜ್ಞಾನಿಗಳಿಗೆ ಫ್ಯಾನ್ ಆಗುವುದರ ಮೂಲಕ ಅಥವಾ ಬಲವಂತದಿಂದ ಅನುಯಾಯಿ ಆದರೆ ತನುವನ್ನು ಆವರಿಸಿದ ಮನ ಪರಿವರ್ತನೆಯಾಗುವುದಿಲ್ಲ. ತನುವಿನ ವೇಷ ಬದಲಿಯಾಗುತ್ತದೆ.

ತನು ಗಡ್ಡ ಬಿಟ್ಟು ಮುಸಲ್ಮಾನನಾದರೇನು? ಶಿಲುಬೆ ಧರಿಸಿ ಕ್ರೈಸ್ತನಾದರೇನ? ಲಿಂಗಧರಿಸಿ ವೀರಶೈವನಾದರೇನು? ಜುಟ್ಟು ಬಿಟ್ಟು ಜನಿವಾರ ಧರಿಸಿ ಬ್ರಾಹ್ಮಣನಾದರೇನು? ತನುವಿನ ಬಟ್ಟೆ ಕಳಚಿ ಜೈನನಾದರೇನು? ತನುವಿನ ವೇಷ ಮಾರ್ಪಟ್ಟಿತಲ್ಲದೆ ತನುವನ್ನು ಆವರಿಸಿದ ಅಜ್ಞಾನಿ ಮನ

ತನುವಿನಲ್ಲಿಯೇ ಸಂಗಮವಾದ ಜ್ಞಾನದೊಂದಿಗೆ ಬೆರೆಯಲಿಲ್ಲ. ಅದು ಜ್ಞಾನಿಯೇ ತಾನಾಗಲಿಲ್ಲ.

ತನು ತಾನು ಯಾವ ಧರ್ಮವೆಂದು ಕರೆಯಿಸಿಕೊಂಡರೂ ಕೂಡಾ ಅದು ಅಜ್ಞಾನವೇ ಆಗಿದೆ. ತನುವಿನ ಧರ್ಮ ಒಂದೇ; ಅದು ಜ್ಞಾನಧರ್ಮ. ಸಹಜ ಧರ್ಮ. ತನುವಿನ ಧರ್ಮವನ್ನು ತನು ಪಾಲಿಸಲು ಪೈಗಂಬರ, ಕ್ರಿಸ್ತ, ಕ್ರಿಷ್ಣ, ಬುದ್ಧ, ಮಹಾವೀರ, ಶಂಕರ, ರಾಮಾನುಜ, ಬಸವಾದಿ ಶರಣರು, ದಾಸರು, ತತ್ವಪದಕಾರರು ಈ ಭೂಮಿಯ ಮೇಲೆ ಪ್ರಯತ್ನಿಸುತ್ತಲೇ ಬಂದಿದ್ದಾರೆ. ಆದರೂ ಮನ ಆಯಾ ಜ್ಞಾನಿಗಳಿಗೆ ಫ್ಯಾನ್ ಆಗಿ, ಆಯಾಧರ್ಮದ ಹೆಸರಿಟ್ಟುಕೊಂಡು, ದೇಹವನ್ನು ಅಜ್ಞಾನಕ್ಕೆ ಗುರಿಮಾಡಿತೆ ಹೊರತು ಜ್ಞಾನಿಯಾಗಲಿಲ್ಲ.

ಆಯಾ ಜ್ಞಾನಿಗಳ ಭಾವ ಧಾರಣೆ ಮಾಡಿಕೊಂಡ ತನುಗಳು ಬೌದ್ಧರಾಗಿ ಶಿಕ್ಷೆಯನ್ನು ಅನುಭವಿಸಿದವೇ ಹೊರತು ಸ್ವತಹ ಬುದ್ಧರಾಗಲಿಲ್ಲ. ಕ್ರಿಸ್ತನ ಭಾವದಿಂದಾಗಿ ಕ್ರೈಸ್ತರಾದರೇ ಹೊರತು ಸ್ವತಃ ಕ್ರಿಸ್ತನಾಗಲಿಲ್ಲ. ಮಹಾವೀರನ ಭಾವದಿಂದಾಗಿ ಬತ್ತಲೆಯಾಗಿ ಜೈನರಾದರೇ ಹೊರತು ಸ್ವತಃ ಜಿನನಾಗಲಿಲ್ಲ. ಅಂಗದ ಮೇಲೆ ಲಿಂಗಧರಿಸಿ ಲಿಂಗಾಯತರು ಆದರೆ ಹೊರತು, ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಕ್ಕೆ ಅಂಗವನ್ನು ಆವರಿಸಿದ ಮನ ಶರಣು ಹೋಗಲಿಲ್ಲ. ಸ್ವಯಂ ಶರಣನಾಗಲಿಲ್ಲ.

ಹಿರಿಯರ ಭಾವ ಧಾರಣೆ ಮಾಡಿಕೊಂಡ ತನುಗಳು ಶಿಕ್ಷೆ ಅನುಭವಿಸುತ್ತಿವೆಯೇ ಹೊರತು ಪರಮಸುಖವನ್ನು ಅನುಭವಿಸಲು ಸಾಧ್ಯವಾಗುತ್ತಿಲ್ಲ. ಶರಣ ಮಾತ್ರ ದೇಹವನ್ನು ಆವರಿಸಿದ ಮನ ಪರಿವರ್ತನೆ ಮಾಡಿಕೊಂಡ. ದೇಹದಲ್ಲಿಯೇ ಸಂಗಮವಾದ ಅರಿವಿನ ದೇವರಿಗೆ ಶರಣು ಹೋದ ಮನ ಘನಮನವಾಯಿತು; ಶರಣನೇ ತಾನಾಯಿತು.

ಈ ಭೂಮಿಯ ಮೇಲೆ ಆಗಿಹೋದ ಸಕಲ ಪುರಾತರು ಮಹಾಜ್ಞಾನಿಗಳು. ತನು ಮನದೊಂದಿಗೆ ಸಂಗ ಮಾಡಿ, ಅಜ್ಞಾನದ ಯುದ್ಧದಲ್ಲಿ ಭಾಗಿಯಾಗಿದೆ. ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ಸಂಗಮವಾದ ಜ್ಞಾನದ ಸಂಗ ಮಾಡಲು ತನಗೆ ತಾನೇ ಹೋರಾಟ ಮಾಡಬೇಕಿದೆ. ಇದು ಸ್ವಯಂ ಜ್ಞಾನ ಕ್ರಾಂತಿ. ತನ್ನ ಅಜ್ಞಾನದ ವಿರುದ್ಧ ತಾನೇ ಹೋರಾಟ ಮಾಡಿ, ಜ್ಞಾನಿಯಾಗುವ ಕ್ರಾಂತಿ. ಈ ಹೋರಾಟವನ್ನು ತನಗೆ ತಾನೇ ಹೇಗೆ ಮಾಡಿಕೊಳ್ಳಬೇಕೆಂದು ಸಕಲ ಪುರಾತರು ಹೇಳಿದರು. ಸೂತ್ರ ರಚಿಸಿದರು. ಭಗವದ್ಗೀತೆ ಭಾಗವತ ಬೈಬಲ್ ಕುರಾನ್ ತ್ರಿಪಿಟಿಕ ಮುಂತಾದ ಸೂತ್ರ ಗ್ರಂಥಗಳು ಜ್ಞಾನಿಗಳ ತನುವಿನಿಂದ ಹೊರಬಂದವು.

ಸಕಲ ತನುಗಳು ಆಯಾ ಗ್ರಂಥಗಳನ್ನು ಆರಾಧಿಸಿದವು. ಬರೆದವರನ್ನು ಕೊಂಡಾಡಿದವು. ಗ್ರಂಥಗಳೇ ಧರ್ಮಗ್ರಂಥಗಳಾದವು. ತನುವಿನ ಅಜ್ಞಾನ ಹೆಚ್ಚಾಯಿತು. ಮಾನವ ಕುಲಂ ಒಂದೇ ವಲಂ ಎನ್ನುವುದು ತನುವಿಗೆ ಮರೆತು ಹೋಯಿತು. ತನಗೆ ತಾನೇ ಹಿಂದು ಮುಸಲ್ಮಾನ ಸಿಖ್ ಇಸಾಯಿ ಎಂದು ಕರೆದುಕೊಂಡು ಅಟ್ಟಹಾಸದಿಂದ ಮೆರೆಯಿತು. ತನುವಿನಲ್ಲಿಯೇ ತನ್ಮಯವಾದ ಜ್ಞಾನದ ಮಾತು ಅಜ್ಞಾನಿಮನದ ಕಿವಿಗೆ ಬೀಳಲೇ ಇಲ್ಲ.

ಹಿರಿಯ ಜ್ಞಾನಿಗಳ ಜ್ಞಾನ ಸೂತ್ರಗಳೆಲ್ಲ ತನುವಿಗೆ ಧರ್ಮಧಾರಣದ ಶಿಕ್ಷೆಯಾಯಿತು.

**640**

**ದೃಷ್ಟರಪ್ಪ ಗುರುಕರುಣದಲ್ಲಿ ಇಷ್ಟಲಿಂಗವ**
**ಸಂಬಂಧಿಸಿಕೊಟ್ಟ ಬಳಿಕ ಮರಳಿ ಯೋಗವುಂಟೆ?**
**ಸರ್ವಯೋಗಕ್ಕೆ ಶಿವಯೋಗ ಮಹಾಯೋಗವೆಂದರಿದ ಬಳಿಕ,**

**ಮತ್ತೆ ಕಿರಿದು ಯೋಗವೆಂದು ಪಾದೋದಕ ಪ್ರಸಾದಕ್ಕೆ ಹೊರಗಾಗಿ**
**ಗುರುವಾಜ್ಞೆಯ ಮೀರಿದ ಗುರುದ್ರೋಹಿಗಳ ಎನ್ನತ್ತ**
**ತೋರದಿರಯ್ಯ, ನಿಮ್ಮ ಧರ್ಮ.**
**ದೀಕ್ಷಾತ್ರಯದಲ್ಲಿ ಸಂಪನ್ನರಾಗಿ, ಪ್ರಸಾದಕ್ಕೆ ಲೋಲುಪ್ತರಾಗಿ,**
**ಜಂಗಮವೆ ಲಿಂಗವೆಂಬವರ ಎನಗೊಮ್ಮೆ ತೋರಯ್ಯ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನಿಮ್ಮ ಧರ್ಮ.**

ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ತನುವನ್ನು ಆವರಿಸಿದ ಮನವೆಂದರೆ ಬಲು ಇಷ್ಟ. ಹೀಗಾಗಿ ಮನ ತನುವನ್ನು ಹಿಡಿದು ಅನಂತ ಕೋಟಿ ಅಪರಾಧಗಳನ್ನು ಮಾಡಿದರೂ ಅಂಗದಲ್ಲಿಯೇ ಸಂಗಮವಾದ ಅರಿವಿನ ಇಷ್ಟಲಿಂಗಕ್ಕೆ ಅಷ್ಟೇ ಸೈರಣೆ.

ಎನ್ನ ತಪ್ಪು ಅನಂತಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲ ಎಂದು ಬಸವಣ್ಣನವರು ಹಾಡಿದ್ದಾರೆ. ಅಂತೆಯೇ ಸಿದ್ಧರಾಮ ಶಿವಯೋಗಿಗಳು, ಸದಾ ತನುವನ್ನು ಹಿಡಿದು ತಪ್ಪು ಮಾಡುವ ಮನವನ್ನು, ಮತ್ತೆ ತಪ್ಪು ಮಾಡಬೇಡವೆಂದು ಅರಿವೆಂಬ ಗುರುದೇವನನ್ನು ಅಂದರೆ ಇಷ್ಟಲಿಂಗವನ್ನು ಪರಿಚಯಿಸಿ ಸಂಬಂಧಿಸಿದ ಬಳಿಕ, ಮನಕ್ಕೆ ತನುವನ್ನು ಹಿಡಿದು ಮತ್ತೆ ತಪ್ಪು ಮಾಡಲು ಭಯವಾಗಬೇಕು. ಏಕೆಂದರೆ ಸರ್ವಯೋಗಗಳಲ್ಲಿ ಶಿವಯೋಗವೇ ಮಹಾಯೋಗ.

ಆಮ್ಲಜನಕ ಜಲಜನಕ ಕೂಡಿ ಜಲವಾಗಿದೆ. ಮತ್ತೆ ಆವಿಯಾಗಿ ಆಮ್ಲಜನಕವೇ ಬೇರೆ ಜಲಜನಕವೇ ಬೇರೆಯಾಗಿದೆ. ಒಂದರಲ್ಲಿ ಒಂದು ಕಾಣದಂತೆ ಕೂಡಿದರೂ ಮತ್ತೆ ಬೇರೆ ಬೇರೆ ಯಾಯಿತು. ಹಾಲು ನೀರು ಬೆರೆತು ಹಾಲೇ ಆದರೂ ಕಾಯಿಸಿದಾಗ ಮತ್ತೆ ಬೇರೆ ಬೇರೆಯಾಯಿತು. ಶಿವಯೋಗ ಹಾಗಲ್ಲ. ಶಿವನಿಂದ ಹುಟ್ಟಿದ ಮನ, ತನುವಿನಲ್ಲಿದ್ದ ಶಿವನನ್ನು ಮರೆತು ತನುವಿನ ಸಂಗ ಮಾಡಿತ್ತು.

ಶಿವಯೋಗವರಿತು ಶಿವನಲ್ಲಿಯೇ ಒಂದಾದ ಘನಮನದ ಗುರುದೇವನು ಮತ್ತೆ ಮನದ ಮೈದಡವಿ ಶಿವನ ಸಂಬಂಧವನ್ನು ಸಂಬಂಧಿಸಿದ ಬಳಿಕ, ಮನ ಘನದಲ್ಲಿ ಬೆರೆತು ಘನಮನವಾಯಿತು.

ಶಿವಯೋಗವೇ ಮಹಾಯೋಗವೆಂದು ಗುರುದೇವನಿಂದ ಅರಿತ ಬಳಿಕ, ಮತ್ತೆ ಕಿರಿದು ಯೋಗವೆಂದು ಕಿರಿಕಿರಿಮಾಡುವ ಯೋಗಕ್ಕೆ ತುತ್ತಾಗಿ, ಪಾದೋದಕ ಪ್ರಸಾದದಿಂದ ಹೊರಗಾಗಿ, ಗುರುವಾಜ್ಞೆಯ ಮೀರಿದ ಗುರುದ್ರೋಹಿಗಳ ಎನ್ನತ್ತ ತೋರದಿರಯ್ಯ, ಇದು ನಿಮ್ಮ ಧರ್ಮ ಎಂದು ಸಿದ್ಧರಾಮ ಶಿವಯೋಗಿಗಳು ಶಿವನನ್ನು ಬೇಡಿದ್ದಾರೆ. ಶಿವನೊಂದಿಗೆ ಮಾತನಾಡಿದ್ದಾರೆ.

ತನುಗುಣಗಳನ್ನು ಅಳಿದುಕೊಂಡು, ಮನದ ಗುಣಗಳನ್ನು ಅಳಿದುಕೊಂಡು, ಅಜ್ಞಾನದ ಅರಿವಿನ (ಧನ) ಗುಣಗಳನ್ನು ಅಳಿದುಕೊಂಡು ದೀಕ್ಷಾತ್ರಯದಲ್ಲಿ ಸಂಪನ್ನರಾದವರನ್ನು, ಪ್ರಸಾದದಲ್ಲಿ ಲೋಲುಪ್ತರಾದವರನ್ನು, ಜಂಗಮವೇ ಲಿಂಗವೆಂಬುವರನ್ನು ಎನಗೊಮ್ಮೆ ತೋರಿ ಎನ್ನನ್ನು ಧನ್ಯನನ್ನಾಗಿ ಮಾಡಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಅದು ನಿಮ್ಮ ಧರ್ಮ.

ವೇದ ಆಗಮ ಉಪನಿಷತ್‌ಗಳನ್ನು ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಬಲ್ಲವರು ಸಿಕ್ಕುತ್ತಾರೆ. ಶಿವನನ್ನು ಕೂಡಿ ಶಿವನೇ ತಾವಾಗಿ ಆ ಶಿವನೊಂದಿಗೆ ಸಂಗ ಮಾಡಿ ಸದಾ ಮಾತನಾಡುವವರು ಸಿಕ್ಕುವುದು ವಿರಳ. ಅಂತಹ ಶಿವಯೋಗಿಗಳನ್ನು ಎನಗೊಮ್ಮೆ ತೋರಯ್ಯಾ, ಅದು ನಿಮ್ಮ ಧರ್ಮ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

## 641

**ದೆಸೆದಿಕ್ಕು ವಲಯದಲಿ ಹೆಸರಿಡಬಾರದುದೊಂದು**
**ಪಸರಿ ಪರ್ಬಿತ್ತು ನೋಡಯ್ಯಾ.**
**ಮೂಲವೊಂದು, ಫಲಮೂರು, ಲೀಲೆಯಿಂದಾರಾಗಿ ತೋರಿದವು;**
**ಬೇರೆ ಬೇರೆ ಅನ್ಯವಾದರು.**
**ತೋರದ ಒಂದರಲ್ಲಿ ಬೇರುಮಾಡಿ ಕಂಡೆಹೆನೆಂದಡೆ,**
**ತೋರಿತ್ತು ಆ ಮೂಲಕ್ಕೆ ಮೂಲ ಕಂಡಯ್ಯಾ.**
**ವಿಚಿತ್ರಮೂಲ ಕಪಿಲಸಿದ್ಧ ಮಲ್ಲೇಶ್ವರನ**
**ಹತ್ತೆ ಸಾರಿದ ರೂಪು!**

ದೆಸೆದಿಕ್ಕುಗಳಲ್ಲಿ ಹೆಸರಿಡಬಾರದ ಹೆಸರೇ ಇಲ್ಲದ ವಸ್ತುವೊಂದು ಹಬ್ಬಿದೆ. ವಸ್ತು ಎನ್ನಲು ಹೋದರೆ ಅದು ವಸ್ತುವಲ್ಲ. ಕಾಣಬಾರದ ವಸ್ತುವಿಗೆ, ವಸ್ತುವೇ ಅಲ್ಲದ ವಸ್ತುವಿಗೆ ಹುಟ್ಟಿದ ವಸ್ತುವೊಂದು ವಸ್ತು. ಇದು ಕೂಡಾ ವಸ್ತುವಲ್ಲ. ಆದರೂ ಇಲ್ಲದ ವಸ್ತುವನ್ನು ಇಲ್ಲ ಎಂದು ಹೆಸರಿಟ್ಟು ಕರೆದಿದೆ. ಬಯಲು ಎಂದು ಹೆಸರಿಟ್ಟು ಕರೆದಿದೆ. ಅಲ್ಹಾ ಎಂದು, ದೇವರು ಎಂದು, ಗಾಡ್ ಎಂದು ಹೆಸರಿಟ್ಟು ಕರೆಯಲಾಗಿದೆ. ಸಿದ್ಧಾರ್ಥ ಬುದ್ಧ ಎಂದು ಕರೆದ.

ಹೀಗೆ ಕರೆದವರು ಕೂಡಾ ಇದ್ದಾಗಲೇ ಇಲ್ಲದಂತಾಗಿ ಇಲ್ಲದ ವಸ್ತುವನ್ನು ಇಲ್ಲ ಎಂದು ಅಲ್ಹಾ ಎಂದು ಬಯಲು ಎಂದು ಕರೆದರು.

ಇಲ್ಲದ ಈ ವಸ್ತುವಿನ ಮೂಲದಿಂದಲೇ ಹುಟ್ಟಿದ ವಸ್ತುವೊಂದು ಇದ್ದಂತೆ ಭಾಸವಾಗುವ ವಸ್ತುವೊಂದು ಹುಟ್ಟಿದೆ. ಹುಟ್ಟಿದ ಈ ವಸ್ತು ಮೂರು ಫಲಗಳನ್ನು ಬಿಟ್ಟಿದೆ! ಸಾತ್ವಿಕ ರಾಜಸ ತಾಮಸವೆಂದು ತನಗೆ ತಾನೇ ಕರೆದು ಕೊಂಡಿದೆ. ಮೂಲ ವಸ್ತುವಿನಿಂದ ಅನ್ಯವಾಗಿ ಮೂಲವಸ್ತುವನ್ನೇ ಮರೆತು ಹೋಗಿ, ಅರಿಷಡ್ವರ್ಗಗಳು ಎಂಬ ಆರುವಸ್ತುವಾಗಿ ತೋರಿದೆ.

ತೋರಲು ಬಾರದ ಆ ವಸ್ತುವಿನಲ್ಲಿ ಬೇರು ಮಾಡಿ ಕಂಡಿಹೆನು ಎನ್ನಲು ಹೋದರೆ, ತೋರುವ ಆ ವಸ್ತುವಿನ ಮೂಲಕ್ಕೆ ಮೂಲ ಕಂಡಯ್ಯಾ. ಇದೊಂದು ವಿಚಿತ್ರ ಮೂಲ. ಕಪಿಲಸಿದ್ಧ ಮಲ್ಲೇಶ್ವರನ ಹತ್ತೆ ಸಾರಿದವು.

ಬಯಲು ಎನ್ನುವ ವಸ್ತುವೊಂದು ವಸ್ತುವಲ್ಲ. ಈ ವಸ್ತುವಲ್ಲದ ವಸ್ತುವೇ ಬ್ರಹ್ಮಾಂಡಕ್ಕೆ ಜನ್ಮ ನೀಡಿ ಆ ಬ್ರಹ್ಮಾಂಡವನ್ನೆಲ್ಲ ತನ್ನ ಗರ್ಭದಲ್ಲಿಯೇ ಇಟ್ಟುಕೊಂಡಿದೆ.

ಬಯಲು ಎನ್ನುವುದು ಒಂದೇ. ಅದು ಆಮ್ಲಜನಕವನ್ನು ಜಲಜನಕವನ್ನು ಸೃಷ್ಟಿ ಮಾಡಿ ತನ್ನ ಗರ್ಭದಲ್ಲಿಟ್ಟುಕೊಂಡಿದೆ. ಅವೆರಡನ್ನೂ ಒಂದು ಮಾಡಿ ಜಲವನ್ನಾಗಿಸಿದೆ. ಆ ಜಲವನ್ನೇ ಗಟ್ಟಿ ಮಾಡಿ ಭೂಮಿಯನ್ನಾಗಿಸಿದೆ. ಭೂಮಿಯೊಳಗಿದ್ದ ಖನಿಜ ಭೂಮಿಯ ಮೇಲಿದ್ದ ಕಲ್ಲು ಮಣ್ಣಿನ ಮೂಲ ಬಯಲೇ ಆಗಿದೆ. ಭೂಮಿಯ ಮೇಲೆ ಹರಿಯುವ ಜಲ, ಜಲದೊಳಗಿದ್ದ ಜಲಚರಗಳು, ಜೀವಜಲದಿಂದ ಹುಟ್ಟಿದ ಗಿಡ ಮರ ಬಳ್ಳಿ ಪಶು ಪಕ್ಷಿ ಕೀಟ ಉರಗಗಳ ಮೂಲ ಕೂಡಾ ಬಯಲೇ ಆಗಿದೆ. ಬಯಲು ತಾನೆಂದು, ತಾನು ಬಯಲು ಒಂದೇ ಎಂದು ತಿಳಿಯದಂತೆ ಸಹಜವಾಗಿವೆ.

ಬಯಲು, ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೇ ತಿಳಿಯಲೆಂದು ತನುವಿಗೆ ಜನ್ಮಕೊಟ್ಟು, ಆ ತನುವಿನಲ್ಲಿಯೇ ತನ್ಮಯವಾಗಿದೆ. ತನುವಿನ ಮೂಲ ಒಂದೇ ಆದರೂ ತನು

ಸಾತ್ವಿಕ, ರಾಜಸ, ತಾಮಸ ಎಂದು ತನುವಿನಿಂದಲೇ ಕರೆಯಿಸಿಕೊಳ್ಳುವ, ಅಜ್ಞಾನವೆಂಬ ಮನ, ತನುವನ್ನು ಆವರಿಸಿಕೊಂಡಿದೆ. ಆಗ ತನು ಮನ ಎಂದು ಎರಡಾಯಿತು. ಈ ಎರಡನ್ನೂ ತಿಳಿಯುವ ಅರಿವು ತನುವಿನಲ್ಲಿಯೇ ತನ್ಮಯವಾಗಿದೆ. ಆಗ ತನು ಮನ ಅರಿವು ಎಂದು ಮೂರಾಯಿತು.

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಿವನ್ನು ಅರಿಯದಿದ್ದಕ್ಕಾಗಿ ಮನವೇ ಆರಾಯಿತು. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಹೆಸರು ಪಡೆದು ತನುವನ್ನು ಆವರಿಸಿ ತನುವಿನಲ್ಲಿಯೇ ಇದ್ದ ಮೂಲವನ್ನು ಅರಿಯದಾಯಿತು.

ಮೂಲವೊಂದು, ಫಲ ಮೂರು, ಲೀಲೆಯಿಂದಾಗಿ ತೋರಿದ ಫಲಗಳು ಮಾತ್ರ ಆರಾಗಿ ತೋರಿದವು; ಮೂಲ ಒಂದೇ ಆದರೂ ಬೇರೆ ಬೇರೆಯಾಗಿ ಅನ್ಯವಾದವು.

ನೋಡಲು ಹೋದರೆ ತನುವೊಂದೇ. ಆದರೆ ಅದು ಹೆಣ್ಣಾಗಿ ಗಂಡಾಗಿ ತೋರುತ್ತದೆ. ರಾಜನಾಗಿ ಪ್ರಧಾನಿಯಾಗಿ ಸೈನಿಕನಾಗಿ ಸೇನಾಧಿಪತಿಯಾಗಿ ತೋರುತ್ತದೆ. ಬಡವ ಶ್ರೀಮಂತ ದರಿದ್ರ ಭಿಕ್ಷುಕನಾಗಿ ತೋರುತ್ತದೆ. ಗುರುವಾಗಿ ತೋರುತ್ತದೆ; ಶಿಷ್ಯನಾಗಿ ತೋರುತ್ತದೆ.

ತನುವಿನಲ್ಲಿಯೇ ತನ್ಮಯವಾದ ತನುವಿನ ಮೂಲವೇ ವಿಚಿತ್ರ. ತಾನೇ ದೇವರು ಎಂಬುದನ್ನು ಮರೆತು, ತನುವಿನಿಂದ ದೇವರನ್ನು ಮಾಡಿ ತನುವೇ ಆರಾಧಿಸುತ್ತದೆ. ತನುವನ್ನುಆವರಿಸಿದ ಮನ ತನುವಿನ ಮೂಲ ಅರಿತಾಗಲೇ ಬಳಿಸಾರಿ ಕಪಿಲಸಿದ್ಧ ಮಲ್ಲಯ್ಯನೇ ತಾನಾಗುತ್ತದೆ.

**642**

**ದೆಸೆದಿಕ್ಕುವಳೆಯಕ್ಕೆ ಹೆಸರುಳ್ಳ ಗ್ರಾಮಕ್ಕೆ**
**ವಸುಧೆಯೆಂಟು ದ್ವಾರ ಒಂಬತ್ತು**
**ದ್ವಾರಪಾಲಕರೆಲ್ಲ ಅಯ್ಯ,**
**ನಿಮ್ಮ ಹೋಬಳಿಯ ಹೋರುತ್ತೈದಾರೆ.**
**ಕಾನನ ಕಂಬನಿಯೊಳಗಾಳುತ್ತೇಳುತ್ತೈದಾರೆ**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ದೇಹವನ್ನು ದೇಶ ಗ್ರಾಮ ಪುರ ಎಂದು ಕರೆದಿದ್ದಾರೆ; ಈ ದೇಶದ ತತ್ವಜ್ಞಾನಿಗಳು. ದೇಹವೆಂಬುದು ದೆಸೆದಿಕ್ಕುಗಳಲ್ಲಿಯೇ ಹೆಸರುವಾಸಿಯಾದ ಗ್ರಾಮ. ಈ ಗ್ರಾಮವೆಂಬ ದೇಹ ಕುಲ, ಛಲ, ಧನ, ಯೌವ್ವನ, ರೂಪ, ವಿದ್ಯಾ, ರಾಜ್ಯ, ತಪಸ್ಸು ಎಂಬ ಎಂಟು ಸಂಪತ್ತಿನಿಂದ ಭರಿತವಾಗಿದೆ.

ಸಂಪದ್ಭರಿತವಾದ ದೇಹಕ್ಕೆ ಒಂಬತ್ತು ದ್ವಾರಗಳು ಇವೆ. ಈ ದ್ವಾರಗಳಿಗೆ ಒಬ್ಬೊಬ್ಬ ದ್ವಾರಪಾಲಕನೂ ಇದ್ದಾನೆ. ಇವರೆಲ್ಲ ಒಡಲೊಡೆಯನ ಆಜ್ಞೆಯನ್ನು ಪಾಲಿಸಬೇಕಾಗಿತ್ತು. ಆದರೆ ತನುವನ್ನೇ ದಟ್ಟಡವಿಯನ್ನಾಗಿಸಿಕೊಂಡು ಆ ಅಡವಿಯಲ್ಲಿ ಕಂಬನಿಗೈಯುತ್ತಾ ಆಳುತ್ತಾ ಏಳುತ್ತೈದಾರೆ.

ಕುಲಮದದಿಂದ, ಛಲಮದದಿಂದ, ಧನಮದದಿಂದ, ಯೌವ್ವನದ ಮದದಿಂದ ಕಾಯ ಬಳಲುತ್ತಲಿದೆ. ಕೈಲಾಸವೇ ಆಗಬೇಕಾದ ಕಾಯ ರೂಪದ ಮದದಿಂದ ಮನ್ಮಥನಂತೆ ಮೆರೆಯುತ್ತಲಿದೆ. ಇಂದು ಇದ್ದು ನಾಳೆ ಹೋಗುತ್ತದೆಂಬ ಅರಿವು ಕೂಡಾ ಕಾಯಕ್ಕೆ ಇಲ್ಲದಂತೆ ಆಗಿದೆ.

ವೇದ ಆಗಮ ಉಪನಿಷತ್‌ಗಳು, ಭಗವದ್ಗೀತೆ ಬೈಬಲ್ ಕುರಾನ್ ಗ್ರಂಥಸಾಹೇಬ ತ್ರಿಪಿಟಿಕ ಮುಂತಾದ ಗ್ರಂಥಗಳು ಬಂದದ್ದೇ ಕಾಯದಿಂದ. ಆದರೂ ಕಾಯ ವಿದ್ಯಾಮದದಿಂದ

ಬಳಲುತ್ತಲಿದೆ.

ರಾಜನಾದರೇನು, ಸೈನಿಕನಾದರೇನು? ಇವರಿಬ್ಬರೂ ಕಾಯ ಉಳ್ಳವರೇ ಆಗಿದ್ದಾರೆ. ಕಾಯಕ್ಕೆ ಧರಿಸಿದ ವೇಷ ಕಳಚಿದರೆ ಕಾಯವನ್ನು ರಾಜನೆಂದು ಸೈನಿಕನೆಂದು ಗುರುತಿಸಲು ಸಾಧ್ಯವಿಲ್ಲ. ಆದರೂ ರಾಜ್ಯದ ಮದದಿಂದ, ತಪಸ್ಸಿನ ಮದದಿಂದ ಬಳಲುತ್ತದೆ. ತನ್ನನ್ನು ತಾನೇ ಸುಟ್ಟುಕೊಳ್ಳುತ್ತದೆ.

ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಕಾಯವನ್ನು ಆವರಿಸಿದ ಮನ ಅರಿತರೆ ಕಾಯವೇ ಕೈಲಾಸ. ಅರಿತ ಕಾಯಕ್ಕೆ ಸಕಲ ಕಾಯಗಳೂ ಕೈಲಾಸವಾಗಿ ಕಾಣುತ್ತವೆ. ದ್ವಾರಪಾಲಕರೆಲ್ಲ ಗುರುದೇವನ ಆಳಾಗುತ್ತಾರೆ.

**643**

**ದೆಸೆ ವೀರಭಕ್ತಿಯ ಎಸೆವ ಸುರಗಿಯ ಹಿಡಿದು**
**ದೆಸೆಗೆಡಿಸಿ ಕೊಲುವೆನೀ ಮಾಯೆಯನ್ನು.**
**ವಸುಧೀಶ ಕಪಿಲಸಿದ್ಧ ಮಲ್ಲಿಕಾರ್ಜುನನ ಮುಂದೆ**
**ಹಾಸ ಪರಿಯವ ಮಾಡುವೆನು ನೋಡು ಸಾಕು.**

ತನುವಿಗೆ ಅಂಟಿದ ಅಜ್ಞಾನ ತನುವಿಗೆ ತಿಳಿಯುತ್ತಿಲ್ಲವೆಂದೇನೂ ಅಲ್ಲ. ತಿಳಿಯುತ್ತದೆ; ಆದರೂ ತಪ್ಪು ಮಾಡುತ್ತದೆ. ಏಕೆಂದರೆ ತನುವನ್ನು ಆವರಿಸಿದ ಮನ ತಾನೇ ಸೃಷ್ಟಿ ಮಾಡಿದ ಮಾಯೆಯನ್ನು ತನುವನ್ನು ಹಿಡಿದು ಸುಖಿಸುವಂತೆ ಪ್ರೇರಣೆ ನೀಡಿದೆ.

ಮಾಯೆ ನೀಡುವ ಸುಖ ತನುವಿಗೆ ಬಲು ಇಷ್ಟ; ನಂತರ ಬಲು ಕಷ್ಟ. ಮಾಯೆ ತನುವಿನ ಮೂಲಕ ಅನುಭವಿಸುವ ಅಜ್ಞಾನದ ಸುಖ ಮತ್ತು ಸುಖದಿಂದ ಉಂಟಾಗುವ ದುಃಖವನ್ನು ತನು ಇರುವವರೆಗೆ ನಿರಂತರ ಅನುಭವಿಸುತ್ತದೆ.

ಮಾಯೆಯಿಂದಾದ ಸುಖ ದುಃಖಗಳು ತನುವಿನಲ್ಲಿಯೇ ಉಳಿದು ತನುವನ್ನು ಸದಾ ದುಃಖಕ್ಕೆ ಈಡು ಮಾಡುತ್ತದೆ. ತನುವಿಗೆ ತಾನು ಮಾಡುವುದು ತಪ್ಪು ಎಂದು ತಿಳಿದರೂ ತನು ಮಾಯೆಯ ಅಜ್ಞಾನ ಸುಖಕ್ಕೆ ಒಳಗಾಗಿದೆ.

ಈ ಮಾಯೆಯೆಂಬ ಅಜ್ಞಾನವನ್ನು ತನುವಿನಲ್ಲಿಯೇ ಸಂಗಮವಾದ ಜ್ಞಾನ ಖಡ್ಗವನ್ನು ಹಿಡಿದು ತುಂಡರಿಸಿದರೆ ಮಾತ್ರ ಮಾಯೆ ಇಲ್ಲವಾಗುತ್ತದೆ.

ದೆಸೆಗೆಡಿಸಿ ಕೊಲುವೆ ನೀ ಮಾಯೆಯನ್ನು ವಸುಧೀಶ ಕಪಿಲಸಿದ್ಧ ಮಲ್ಲಿಕಾರ್ಜುನನ ಮುಂದೆ ಹಾಸಪರಿಯವ ಮಾಡುವೆನು ನೋಡು ಸಾಕು:

ಎಲೆ ಮಾಯೆಯೆ, ಏನೀ ನಿನ್ನ ಉಪಟಳ. ಮಾಯೆ ಎಂದರೆ ಇಲ್ಲ. ಇಲ್ಲವಾದದ್ದಕ್ಕೆ ಮಾಯೆ ಎಂದು ಕರೆದಿದ್ದಾರೆ ಶರಣರು. ಕಲ್ಲು ಕಾಣುತ್ತದೆ. ಕಲಾವಿದ ಕಲ್ಲು ಕೆತ್ತಿದರೇನಾಯಿತು; ಅದು ಕಲ್ಲಲ್ಲವೆ? ಕಲ್ಲನ್ನು ನೋಡಿದ ಕಣ್ಣಿಗೆ ಕಲ್ಲು ಕೆತ್ತಿದ ಮೇಲೆ ಕಲ್ಲು ಕಾಣಲೇ ಇಲ್ಲ. ಇಡೀ ತನುವನ್ನು ಮಾಯೆ ಮುತ್ತಿಗೆ ಹಾಕಿ ತನ್ನ ಸ್ವಾಧೀನ ಪಡಿಸಿಕೊಂಡು ಸುಳ್ಳು ಭಕ್ತಿ ರಸವನ್ನು ಸೃಷ್ಟಿ ಮಾಡಿತು. ಕಾಯವನ್ನು ಕಲ್ಲಿಗೆ ಕೈ ಮುಗಿಯುವಂತೆ ಮಾಡಿತು. ಜಾತ್ರೆ ಉತ್ಸವ ಪಲ್ಲಕ್ಕಿ ಸೇವೆಗಳನ್ನು ಮಾಡುತ್ತಾ ಕಲ್ಲನ್ನು ಮರೆತು ಹೋಯಿತು.

ತನುವನ್ನು ಅಜ್ಞಾನಕ್ಕೆ ಕರೆದುಕೊಂಡು ಹೋದ ಮಾಯೆಯಿಂದ ತನುವೇ ಬಿಡುಗಡೆಗೊಳ್ಳಬೇಕು. ಲೋಹವನ್ನು ನೋಡಿ ಚಿನ್ನವೆಂದು ಹೆಸರಿಸಿತು. ಅದನ್ನು ಯುದ್ಧಮಾಡಿ

ಪಡೆಯಲು ಕಾಯವನ್ನು ರಾಜನನ್ನಾಗಿಸಿತು. ಕದ್ದು ಪಡೆಯಲು ಕಳ್ಳನನ್ನಾಗಿಸಿತು. ಮಾರಾಟ ಮಾಡುವ ವ್ಯಾಪಾರಿಯನ್ನಾಗಿಸಿತು. ಚಿನ್ನಕ್ಕಾಗಿ ರಾಜ ರಾಜನನ್ನು ಕೊಂದ. ಹಲವಾರು ಸೈನಿಕರು ಸತ್ತರು. ಕಳ್ಳ ಶ್ರೀಮಂತನನ್ನು, ರಾಜ ಕಳ್ಳನನ್ನು ಕೊಂದ. ಚಿನ್ನಕ್ಕಾಗಿ ನಡೆದ ಯುದ್ಧದಲ್ಲಿ ಎಷ್ಟೋ ಕಾಯಗಳು ಸತ್ತುಹೋದವು; ಮಾಯೆ ಸಾಯಲೇ ಇಲ್ಲ.

ಕಾಯದಲ್ಲಿಯೇ ಸಂಗಮವಾದ ಜ್ಞಾನ, ಕಾಯಕ್ಕೆ ಬಳಕೆಯಾದರೆ ಸಾಕು, ಆ ಜ್ಞಾನವೇ ಆಯುಧವಾಗಿ ಅಜ್ಞಾನವೆಂಬ ಮಾಯೆಯನ್ನು ಕೊಂದು ಹಾಕುತ್ತದೆ. ಕಾಯವನ್ನು ಆವರಿಸಿದ ಮನ, ಜ್ಞಾನಕ್ಕೆ ಭಕ್ತನಾಗಿ ತನಗೆ ತಾನೇ ಹಾಸ್ಯಭರಿತವಾದ ಉಲ್ಲಾಸದ ನಗೆಯನ್ನು ಬೀರುತ್ತದೆ. ಕಾಯದ ಅಜ್ಞಾನ ಕಾಯಕ್ಕೆ ಪರಿಚಯವಾಗಿ, ಕಾಯವನ್ನು ಆವರಿಸಿದ ಮಾಯೆ ತನಗೆ ತಾನೇ ಉದುರಿ ಬೀಳುತ್ತದೆ. ಕತ್ತಲಿಗೆ ಬೆಳಕಿನ ದರುಶನವಾದರೆ ಸಾಕು ತನಗೆ ತಾನೇ ಕತ್ತಲು ಉದುರಿ ಬೀಳುತ್ತದೆ. ಬೆಳಕೇ ತಾನಾಗುತ್ತದೆ.

**644**

**ದೇವನಾನಂದದ ಭಕ್ತರ ನಿಲವ ಕೇಳಿರಯ್ಯಾ**
**ಹರಿವ ನದಿಯ ತೆರನಂತೆ ಹರವಾಗಿಪ್ಪರಯ್ಯಾ**
**ತಾವು ಮಾಡುವರಲ್ಲದೆ ಮಾಟದೊಳಗಿರರು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆಹಾರ ನಿದ್ರೆ ಭಯ ಮೈಥುನಕ್ಕಾಗಿ ತನು ತನ್ನ ಆಯುಷ್ಯವನ್ನೆಲ್ಲ ಕಳೆದರೆ ಹೇಗೆ? ಇಂತಹ ತನುವನ್ನು ತನುವೆನ್ನಲು ಸಾಧ್ಯವೆ? ಸಕಲ ಪ್ರಾಣಿ ಪಶು ಪಕ್ಷಿ ಉರಗ ಜಲಚರಗಳು ಈ ನಾಲ್ಕೂ ವಿಷಯಗಳಲ್ಲಿ ಸಹಜವಾಗಿವೆ. ಆದರೆ ಮನುಷ್ಯ ಮಾತ್ರ ಇವುಗಳಿಗಾಗಿಯೇ ಬದುಕಿದ್ದಾನೆ. ಇವು ಇಲ್ಲದಿದ್ದರೆ ಜೀವನವೇ ವ್ಯರ್ಥವೆಂದು ಬಲವಾಗಿ ತಿಳಿದಿದ್ದಾನೆ.

ಆಹಾರ ನಿದ್ರೆ, ಭಯ ಮೈಥುನದ ಹೊರತಾಗಿ ಆಲೋಚನೆ ಮಾಡುವ ತನುವನ್ನು ಸಿದ್ಧರಾಮ ಶಿವಯೋಗಿಗಳು 'ಭಕ್ತ' ತನುವೆಂದು ಕರೆದಿದ್ದಾರೆ. ಅಂದರೆ ದೇಹದಲ್ಲಿಯೇ ಸಂಗಮವಾದ ಅರಿವಿನ ದೇವನಿಗೆ, ದೇಹವನ್ನು ಆವರಿಸಿದ ಮನ ಭಕ್ತಿ ಮಾಡಿ, ಭಕ್ತನೇ ತಾನಾಗುವ ಕಲೆಯ ಸೂತ್ರವನ್ನು, ತಮ್ಮ ಈ ವಚನದ ಮೂಲಕ ಹೇಳಿದ್ದಾರೆ.

ದೇವನಾನಂದದ ಭಕ್ತರ ನಿಲವ ಕೇಳಿರಯ್ಯಾ ಹರಿವ ನದಿಯ ತೆರನಂತೆ ಹರವಾಗಿಪ್ಪರಯ್ಯಾ. ತಾವು ಮಾಡರಲ್ಲದೆ ಮಾಟದೊಳಗಿರರು: ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದರೆ, ಇಂತಹದ್ದೇ ಸೂತ್ರವನ್ನು ಬಸವಣ್ಣನವರು ಈ ಕೆಳಗಿನಂತೆ ಹೇಳಿದ್ದಾರೆ.

''ನಾನು ಆರಂಭ ಮಾಡುವೆನು ಗುರುಪೂಜೆಗೆಂದು, ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು, ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು. ನಾನಾವಾವ ಕರ್ಮಂಗಳ ಮಾಡಿದಡೆಯು ಆ ಕರ್ಮ ಫಲಭೋಗವ ನೀ ಕೊಡುವೆ ಎಂಬುದ ನಾನು ಬಲ್ಲೆನು. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರೀಯ ಮಾಡೆನು''.

ತನ್ನನ್ನು ತಾನು ತಿಳಿಯಲು ಸಾಧ್ಯವಾಗದ ತನುಗಳು ತನುವಿನ ಸುಖಕ್ಕಾಗಿ ಮಾತ್ರ ಬದುಕುತ್ತವೆ. ಮನದ ಸುಖಕ್ಕಾಗಿ ಬದುಕುತ್ತವೆ. ಈ ಬದುಕಿನಲ್ಲಿ ಸುಳ್ಳು ಸುಖವಿದೆ; ಸುಳ್ಳು

ದುಃಖವಿದೆ. ತನ್ನನ್ನು ತಾನು ತಿಳಿಯಲು ಹೋದ ತನುಗಳು ತನುವಿನಲ್ಲಿಯೇ ತನ್ಮಯವಾದ ಅರಿವು ಹೇಳಿದಂತೆ ಬದುಕುತ್ತವೆ. ಅರಿವನ್ನೇ ಗುರುದೇವನನ್ನಾಗಿ ಮಾಡಿಕೊಂಡು, ಆ ಗುರುದೇವನಿಗೆ ಭಕ್ತಿ ಮಾಡುತ್ತಾ, ಪರಮ ಸುಖದಿಂದ ಬದುಕುತ್ತವೆ. ಪರಮ ಸುಖವೆಂದರೆ ಸುಖ ದುಃಖಗಳು ಇಲ್ಲದ ಸುಖವೇ ಪರಮಸುಖ. ನದಿಯಂತೆ ನಿರಂತರ ಹರಿಯುವ ಸುಖ.

ನಾನು ಆರಂಭ ಮಾಡುವೆನಯ್ಯಾ ಗುರುಪೂಜೆಗೆಂದು. ಶರಣ ಕೃಷಿ ಕಾಯಕದಲ್ಲಿ ತೊಡಗುವುದು, ಕಾಯದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನ ಪೂಜೆಗೆಂದು. ಸಕಲ ಕಾಯಗಳಲ್ಲಿ ಅರಿವು ತನ್ಮಯವಾಗಿದೆ. ಅರಿವಿಲ್ಲದ ಕಾಯಗಳೇ ಇಲ್ಲ. ಮನ ಕಾಯವನ್ನು ಆವರಿಸಿ ಕಾಯಕ್ಕಾಗಿ ಬಳಲುತ್ತದೆ. ಕಾಯದ ಮೂಲಕ ವಿಷಯ ಸುಖಗಳನ್ನುಣ್ಣುವುದಕ್ಕಾಗಿ ಕಾಯವನ್ನು ಬದುಕಿಸುತ್ತದೆ. ಇಂತಹ ಮನವನ್ನು ಅರಿವೆಂಬ ಗುರುದೇವನಿಗೆ ಭಕ್ತನನ್ನಾಗಿಸಿ ನದಿಯಂತೆ ನಿರಂತರ ಹರಿದು ಸಮುದ್ರ ಸೇರಿ ಸಮುದ್ರವೇ ತಾನಾಗುವ ಹಿರಿಯ ಆಸೆಯ ಕಿಡಿಯನ್ನು ತನಗೆ ತಾನೇ ಹೊತ್ತಿಸಿಕೊಳ್ಳುವವನೇ ಶರಣ.

ಗುರು ಲಿಂಗ ಜಂಗಮ ಎನ್ನುವವರು ವ್ಯಕ್ತಿಗಳಲ್ಲ. ಪ್ರತಿ ವ್ಯಕ್ತಿಯಲ್ಲಿ ಇರುವ ಅವ್ಯಕ್ತ ಶಕ್ತಿಗಳು. ಕಾಯವನ್ನು ಆವರಿಸಿದ ಮನ ಕಾಯಕ್ಕಾಗಿ ಚಿಂತಿಸುವುದನ್ನು ಬಿಡಿಸಿ, ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಸೇವೆಗಾಗಿ ಮಾಡುವ ಕಾಯಕ ತಾ ಮಾಡಿದಂತಲ್ಲ. ಮಾಡುವ ಮಾಟದೊಳಗೆ ತಾನು ಇದ್ದಂತೆಯೂ ಅಲ್ಲ. ''ಮಾಡಿದಂತಿರಬೇಕು ಮಾಡದಂತಿರಬೇಕು ಮಾಡಿದ ಮಾಟದೊಳಗೆ ತಾನಿಲ್ಲದಂತಿರಬೇಕು.

''ಕರ್ಮಣ್ಯೇವಾಧಿಕಾರಸ್ಯೆ ಮಾ ಫಲೇಶು ಕದಾಚನ''. ನಾನಾವಾವ ಕರ್ಮಂಗಳ ಮಾಡಿದಡೆಯು ಆ ಕರ್ಮಫಲಭೋಗವ ನೀ ಕೊಡುವೆ ಎಂಬುದು ನಾನು ಬಲ್ಲೆನು. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರೀಯ ಮಾಡೆನು.

ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೇಳಿದ ಮಾತು, ಅಣ್ಣ ಬಸವಣ್ಣನವರು ಹೇಳಿದ ಮಾತು ಒಂದೇ ಆಗಿದೆ. ತಿಳಿಯದಿದ್ದರೆ ಅವರು ಹೇಳಿದ ಮಾತು ಹೇಳಿ ಅವರನ್ನು ಹೊಗಳುತ್ತೇವೆ. ತಿಳಿದರೆ ಅವರು ಇದ್ದಂತೆ ಇದ್ದು ಅವರಲ್ಲಿ ಒಂದಾಗುತ್ತೇವೆ.

**645**

**ದೇವ ನಿನ್ನಯ ಪರಿಯನಾರಯ್ಯಲರಿದಯ್ಯ**
**ಆರೈದ ಶರಣರು ನಿನ್ನ ಪದದಲ್ಲಿ**
**ಓರಂತೆ ಆನಂದಸ್ಥಾನದಲ್ಲಿ ತಾವು**
**ನಿನ್ನಯ ರೂಪ ಭಾವ ತಪ್ಪದೆ ಇಪ್ಪರೈ ಗುರುವೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ದೇವನೇ, ಮಹಾದೇವನೇ, ನಿನ್ನನ್ನು ಕಲ್ಲಲ್ಲಿ ಮಣ್ಣಲ್ಲಿ ಲೋಹದಲ್ಲಿ ಕಟ್ಟಿಗೆಯಲ್ಲಿ ಸೃಷ್ಟಿಮಾಡಿ ಭಕ್ತಿಯಿಂದ ಆರಾಧನೆ ಮಾಡುವವರೇ ಅಧಿಕವಾಗಿದ್ದಾರೆ ಈ ಭೂಮಿಯ ಮೇಲೆ.

ಈ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದವನು ನೀನೇ. ದೇಹವನ್ನು ಸೃಷ್ಟಿ ಮಾಡಿ, ದೇಹದಲ್ಲಿಯೇ ಇದ್ದ ದೇವನೂ ನೀನೇ ಆಗಿರುವಿ. ಆದರೂ ದೇಹವೇ ನಿನ್ನನ್ನು ಸೃಷ್ಟಿ ಮಾಡಿದೆ.

ದೇಹದಲ್ಲಿಯೇ ಇದ್ದ ನಿನ್ನನ್ನೇ ಮರೆತು, ದೇಹದಿಂದ ಸೃಷ್ಟಿ ಮಾಡಿದ ದೇವರೇ ದೇವರು ಎಂದು ದೇಹದಿಂದಲೇ ಆರಾಧಿಸುತ್ತಲಿದೆ.

ನಿನಗೆ ಶರಣು ಹೋಗಿ ಶರಣರೇ ತಾವಾದ ಶರಣರ ಹೊರತು ನಿನ್ನನ್ನು ಅರಿಯುವವರು ಯಾರೂ ಇಲ್ಲ ಈ ಬ್ರಹ್ಮಾಂಡದಲ್ಲಿ. ರೂಪದಲ್ಲಿಯೇ ಇರುವ ನಿನ್ನನ್ನು ನಿರೂಪದಿಂದಲೇ ತಿಳಿದು ಆರಾಧಿಸಿದರು. ರೂಪದಲ್ಲಿ ಸಂಗಮವಾದ ನಿರೂಪ ನೀನೇ ಎಂದು ನಿರೂಪದಿಂದಲೇ ತಿಳಿದು ಆರಾಧಿಸಿದರು.

ದೇಹವನ್ನು ಸೃಷ್ಟಿ ಮಾಡಿ, ಆ ದೇಹದಲ್ಲಿಯೇ ನೀನಿದ್ದು, ನಿನ್ನನ್ನು ಕಾಣದಂತೆ ಆ ದೇಹಕ್ಕೆ ಮರೆವು ನೀಡಿದ್ದು ನೀನೇ. ಆ ದೇಹದಿಂದಲೇ, ನಿನ್ನನ್ನು ಕಲ್ಲು ಮಣ್ಣು ಲೋಹ ಕಟ್ಟಿಗೆಯಲ್ಲಿ ಸೃಷ್ಟಿ ಮಾಡಿ ಆರಾಧಿಸುವಂತೆ ಮರೆವು ಮಾಡಿದ್ದು ಕೂಡಾ ನೀನೆ. ಇದೆಲ್ಲ ನಿನ್ನ ಆನಂದವೆಂದು ಕಂಡು ಹಿಡಿದು ಪರಮಾನಂದದಲ್ಲಿರುವ ಶರಣನಿಗೆ ನೀನಿರುವ ಹಾದಿ ತೋರುವಂತೆ ಅರಿವು ನೀಡಿದ್ದು ಕೂಡಾ ನೀನೇ ಆಗಿರುವೆ.

ಅರಿವೇ ಗುರುದೇವನೆಂದು, ಆ ಗುರುದೇವನೇ ಮಾಹಾದೇವನೆಂದು, ಸದಾಶಿವನೆಂದು, ಸಾಕ್ಷಾತ್ ಪರಬ್ರಹ್ಮನೆಂದು ನಿನ್ನನ್ನು ನಿನ್ನ ಪದದಲ್ಲಿಯೇ ಕಂಡು, ನಿನ್ನಲ್ಲಿಯೇ ಇದ್ದು ನಿನ್ನನ್ನು ಆರಾಧಿಸುವ ಆಗೋಚರ ಪೂಜೆಯನ್ನು ನಿನ್ನ ಭಕ್ತರಿಗೆ ನೀಡಿದವನು ಕೂಡಾ ನೀನೇ ಆಗಿರುವಿ.

ಏಳುನೂರಾ ಮೂವತ್ತು ಕೋಟಿ ದೇಹಗಳಲ್ಲಿ ನಿನ್ನಯ ರೂಪ ಭಾವ ತಪ್ಪದೆ ನೋಡುತ್ತಾ, ನೀನೇ ಸಕಲ ಲೋಕಕ್ಕೆ ಗುರುವೆಂದು ನಿನ್ನನ್ನೇ ಆರಾಧಿಸುತ್ತಾ ಆನಂದ ಸ್ಥಾನದಲ್ಲಿರುವ ಶರಣರು ಮಾತ್ರ ನಿನ್ನಯ ಪರಿಯನು ಅರಿತರಿತು ಅರಿತ ಅರಿವೇ ತಾವಾದವರು. ಕಪಿಲಸಿದ್ಧ ಮಲ್ಲಿಕಾರ್ಜುನ ದೇವನ ಇರುವನ್ನು ತಿಳಿದವರು.

**646**

**ದೇವನೊಂದೆರಡು ಬದಿಗಳ ಮಾಡಿಟ್ಟನು**
**ಆ! ಹೋ! ವಾ! ಹಾ! ಅಯ್ಯಾ!**
**ಮೆಚ್ಚು ನಿಮ್ಮದೆನುತ್ತಿರಲು ಮತ್ತೆ ವಿಚಾರಿಸುತ್ತಿಹುದು**
**ನಿಮ್ಮದೆ ಮರುಳುತನವಯ್ಯಾ.**
**ಹೋ! ವಾ! ಅಯ್ಯಾ!**
**ಪರಿಣಾಮವುಳ್ಳಡೆ ಹಿಡಿವುದು**
**ಅಲ್ಲದಿದ್ದರೆ ಬಿಟ್ಟು ಹೋಹುದು, ಕಪಿಲಸಿದ್ಧ ಮಲ್ಲಿನಾಥನ.**

ದೇಹದಲ್ಲಿಯೇ ದೇವರು ಸಂಗಮವಾಗಿದ್ದಾನೆ. ದೇಹವನ್ನು ಮನ ಆವರಿಸಿದೆ. ದೇಹವೊಂದು ಬದಿ ಆದರೆ ಮನವೊಂದು ಬದಿಯಾಗಿದೆ. ಮನ ದೇವನೊಂದಿಗೆ ಸಂಗ ಮಾಡದು, ದೇಹ ಮನವನ್ನು ದೂರ ತಳ್ಳದು.

ಮನಕ್ಕೆ ದೇಹವೆಂದರೆ ಬಲು ಪ್ರೀತಿ. ದೇಹದಲ್ಲಿ ಕಾಮವನ್ನು ಸೃಷ್ಟಿ ಮಾಡಿ, ದೇಹ ದೇಹವನ್ನೇ ಮೋಹಿಸುತ್ತದೆ. ದೇಹದಲ್ಲಿರುವ ದೇವರನ್ನೇ ಮರೆತು ಹೋಗಿದೆ.

ದೇಹ ದೇಹದೊಂದಿಗೆ ಕ್ರೋಧ ಮಾಡುತ್ತದೆ. ದೇವರಿದ್ದ ದೇಹವೆಂದು ದೇಹವನ್ನು ಆವರಿಸಿದ ಮನ ಮರೆತು ಹೋಗಿದೆ.

ಅನ್ಯದೇಹವಾದರೇನು, ತಾನಿದ್ದ ದೇಹವಾದರೇನು? ದೇಹಗಳೆಲ್ಲ ಒಂದೇ! ದೇಹವನ್ನು ಆವರಿಸಿದ ಮನ ಒಂದೇ. ಸಕಲ ದೇಹಗಳಲ್ಲಿದ್ದ ದೇವರು ಕೂಡಾ ಒಬ್ಬನೆ. ಅವನೇ ಅರಿವಿನ

ದೇವರು. ಅವನ ಮರುಳತನದಿಂದಾಗಿ ಮನ ತನ್ನನ್ನು ಹಡೆದ ದೇವರನ್ನೇ ಮರೆತಿದೆ. ದೇಹಕ್ಕೆ ಹಡೆದ ತಂದೆಯ ಪರಿಚಯವಿಲ್ಲದಂತೆಯೇ ಆಗಿದೆ. ಹೀಗಾಗಿ

ಬಸವಣ್ಣನವರು ಸಕಲದೇಹಗಳಿಗೆ, ದೇಹವನ್ನು ಆವರಿಸಿದ ಮನಕ್ಕೆ ಗೊತ್ತಾಗಲಿ ಎಂದು 'ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು, ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವಾ ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ನಿಮ್ಮ ಧರ್ಮ' ಎಂದು ಸಕಲ ದೇಹಗಳು ಕೇಳುವಂತೆ ಕೂಗಿ ಹೇಳಿದರು.

ದೇಹಗಳು, ಬಸವಣ್ಣನವರ ಮಾತು ಕೇಳಬೇಕಲ್ಲ! ದೇಹದಲ್ಲಿದ್ದ ದೇವರ ಮಾತೇ ಕೇಳದ ದೇಹ ಒಂದು ಬದಿಯಾದರೆ; ದೇಹವನ್ನು ಆವರಿಸಿದ ಮನ ಮತ್ತೊಂದು ಬದಿ. ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ ಎಳೆಯುತ್ತದೆ.

ಓ ದೇವರೇ, ನೀವಿದ್ದ ದೇಹದಲ್ಲಿ ನಿಮ್ಮದೇ ಆದ ದೇಹದಲ್ಲಿ ನಿಮ್ಮಿಂದಲೇ ಹುಟ್ಟಿದ ಮನ ಲೋಭವನ್ನು ಸೃಷ್ಟಿ ಮಾಡಿದೆ. ಮೋಹವನ್ನು ಮದ ಮತ್ಸರಗಳನ್ನು ಸೃಷ್ಟಿ ಮಾಡಿ ದೇಹ ದೇಹದೊಂದಿಗೆ ಯುದ್ಧ ಮಾಡುತ್ತಲಿದೆ; ಇದೆಲ್ಲದಕ್ಕೂ ನಿಮ್ಮದೇ ಮರುಳುತನವಯ್ಯಾ. ಮನವೊಂದು ಬದಿ, ದೇಹವೊಂದು ಬದಿ ಇದ್ದ ದೇಹದಲ್ಲಿ ನೀವಿದ್ದರೂ ಸುಮ್ಮನಿರುವುದು ನಿಮ್ಮದೇ ಮರುಳುತನವಯ್ಯಾ !

ದೇವನೇ ನೀನಿದ್ದ ದೇಹ ನಿನ್ನದೆಂದು ಹೇಳದೆ ಅದು ಹೆಣ್ಣೆಂದು ಗಂಡೆಂದು ಹೇಳುತ್ತದೆ. ಮನ ದೇಹಕ್ಕೆ ವೇಷ ಹಾಕಿ ಮುಸಲ್ಮಾನ ಕ್ರಿಶ್ಚಿಯನ್ ಬೌದ್ಧ ಹಿಂದು ಸಿಖ್ ಫಾರ್ಸಿಯನ್ನಾಗಿ ಮಾಡಿದೆ. ಶ್ರೀಮಂತ ಬಡವ ಭಿಕ್ಷುಕ ದರಿದ್ರ ಅಧಿಕಾರಿ ಜವಾನ ಶಾಸಕ ಸಚಿವನನ್ನಾಗಿ ವಿಂಗಡಿಸಿದೆ.

ಅರಿವಿನ ದೇವರಿದ್ದ ದೇಹವೇ ಶ್ರೀಮಂತ ದೇಹ ಎಂಬುದನ್ನು ದೇಹ ಮತ್ತು ಮನ ಮರೆತು ಹೋಗಿದೆ. ಇವೆರಡನ್ನು ಸೃಷ್ಟಿ ಮಾಡಿದ ನೀನು ದೇಹದಲ್ಲಿದ್ದರೂ ದೇಹ ಮನಗಳೆರಡೂ ನಿನ್ನನ್ನು ಮರೆತು ಹೋಗಿವೆ.

ದೇಹ ತಾನು ಕಲ್ಲಲ್ಲಿ ಮಾಡಿದ ದೇವರನ್ನು ದೇವರೆಂದು ಹೇಳುತ್ತದೆ. ಉಣ್ಣದ ದೇವರಿಗೆ ಹಾಲು ಹಣ್ಣು ಮೃಷ್ಟಾನ್ನಗಳ ನೈವೇದ್ಯ ; ಉರುಳು ಸೇವೆ ದೀಡುನಮಸ್ಕಾರ. ಕಳಸಾರೋಹಣ ಉತ್ಸವ ಪಲ್ಲಕ್ಕಿ ಸೇವೆ. ದೇವರಿದ್ದ ದೇಹಕ್ಕೆ ಸಪ್ತವ್ಯಸನಗಳ ಶಿಕ್ಷೆ, ಅಷ್ಟಮದಗಳ ಅರಿಷಡ್ವರ್ಗಗಳ ಅಜ್ಞಾನದ ಯುದ್ಧ. ಇದೆಲ್ಲದಕ್ಕೆ ನಿಮ್ಮದೆ ಮರುಳುತನವಯ್ಯಾ.

ಪರಿಣಾಮವುಳ್ಳಡೆ ಹಿಡಿವುದು ಅಲ್ಲದಿದ್ದರೆ ಬಿಟ್ಟುಹೋಹುದು:

ದೇಹ ಮತ್ತು ಮನಕ್ಕೆ ಜನ್ಮಕೊಟ್ಟು ದೇಹದಲ್ಲಿಯೇ ಇದ್ದ ಅರಿವಿನ ದೇವರು ದೇಹಕ್ಕೆ ಮತ್ತು ಮನಕ್ಕೆ ದೇಹ ಇರುವವರೆಗೆ ಪಾಠ ಮಾಡುವನು. ಆದರೂ ದೇಹ ಒಂದು ಬದಿ ಮನ ಒಂದು ಬದಿಯಾಗಿ ಇದ್ದುದು ದೇಹ ಮತ್ತು ಮನಗಳ ದುರ್ದೈವ. ಜನ್ಮ ನೀಡಿದ ದೇವರನ್ನು ಮರೆತು, ಕಲ್ಲಲ್ಲಿ ಮಾಡಿದ ದೇವರನ್ನು ಆರಾಧಿಸುತ್ತಲಿವೆ. ಪರಿಣಾಮವುಳ್ಳಡೆ ದೇವರನ್ನು ಹಿಡಿದು ದೇಹ ಧನ್ಯತೆಯನ್ನು ಮರೆಯುತ್ತದೆ; ಸಾಧ್ಯವಾಗದಿದ್ದರೆ ದೇಹದಲ್ಲಿಯೇ ಇದ್ದ ದೇವರು ದೇಹವನ್ನು ಬಿಟ್ಟುಹೋಗುತ್ತಾನೆ. ದೇಹ ಮನಗಳೆರಡೂ ತಂತಾನೆ ಉದುರಿ ಬೀಳುತ್ತವೆ.

**647**

**ದೇವವದೇವನಾಣೆಯನೂ ರಾಣಿವಾಸದಾಣೆಯನೂ ಇಡದಿರಯ್ಯಾ.**
**ಹೋ! ಹಾ! ಅಯ್ಯಾ ಬೇಡಯ್ಯಾ , ಮೇಲೆ ಕರದಿಮ್ಮಿತ್ತು.**

**ಅವರ ಹಿಂಬಲ್ಲು ಮುಂಬಲ್ಲುಗಳನೆ ಕೂರಹದಲೆ ತರಿತರಿದು**
**ನರಕದಲ್ಲಿಕ್ಕುವರು ಕಪಿಲಸಿದ್ಧ ಮಲ್ಲಿನಾಥನಾಳುನೇಮಕರು.**

ದೇಹಕ್ಕೆ ಆಪತ್ಕಾಲ ಬಂದಾಗ, ದೇಹವನ್ನು ಆವರಿಸಿದ ಮನ ತನ್ನ ಮಾತು ನಡೆಯಲೇಬೇಕೆಂದು ದೇವರ ಮೇಲೆ ಆಣೆ ಇಟ್ಟು ಹೇಳುತ್ತದೆ. ''ದೇವರಾಣೆ, ನನ್ನಾಣೆ, ತಂದೆ ತಾಯಿ ಮೇಲೆ ಆಣೆ, ನಿಮ್ಮಾಣೆ'' ಹೀಗೆ ಆಣೆ ಇಡುವಾಗ ಎಚ್ಚರದಿಂದ ಇರಲು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ದೇಹದ ಮೇಲೆ ಆಣೆ ಇಡಲು ಅದೇನು ತನ್ನದೆ? ಒಡಲೊಡೆಯನ ಪಟ್ಟದರಸಿಯದು; ಒಡಲು ಒಡೆಯನ ರಾಣಿವಾಸ! ಯಾರದೋ ದೇಹದ ಮೇಲೆ ಆಣೆ ಇಟ್ಟು, ತನ್ನ ಮಾತನ್ನು ಸಾಧಿಸಬೇಕೆಂಬ ಛಲವೇಕೆ? ಮಾತನಾಡುವ ಅವಶ್ಯಕತೆಯಾದರೂ ಇದೆಯಾ ಎಂದು ಆಲೋಚನೆಗೆ ಒಳಗಾದರೆ ಮಾತನಾಡುವುದೆಲ್ಲ ಸುಳ್ಳು ಎಂದೆನಿಸುತ್ತದೆ.

ದೇವರಾಣೆ ಎಂದು ಹೇಳುವುದು ಕೂಡಾ ಅಪರಾಧ. ಲೋಕ ಆರಾಧಿಸುವ ದೇವರು ದೇವರಲ್ಲ. ಲೋಕಕ್ಕೆ ತಾನು ಪೂಜಿಸುವ ದೇವರ ಪರಿಚಯವಿದೆಯೇ ಹೊರತು ದೇವರ ಪರಿಚಯವಿಲ್ಲ.

ಅಂದ ಮೇಲೆ ದೇವವದೇವನಾಣೆಯನೂ ಇಡದಿರಯ್ಯಾ. ಹೋ! ಹಾ! ಅಯ್ಯಾ ಬೇಡಯ್ಯಾ, ಮೇಲೆ ಕರದಿಮ್ಮಿತ್ತು. ಅವರ ಹಿಂಬಲ್ಲು ಮುಂಬಲ್ಲುಗಳನೆ ಕೂರಹದಲೆ ತರಿತರಿದು ನರಕದಲ್ಲಿಕ್ಕುವರು ಕಪಿಲಸಿದ್ಧ ಮಲ್ಲಯ್ಯನು ನೇಮಿಸಿದ ಆಳುಗಳು:

ದೇವರಾಣೆ ಎಂದು ಮರೆತು ಮಾತನಾಡಿದರೆ ಸಾಕು ಹಿರಿಯರಾದವರು ಬಿಡ್ತು ಅನ್ನು 'ದೇವರಾಣೆ' ಅನ್ನಬೇಡ ಎಂದು ಕೂಡಲೇ ಬುದ್ಧಿಮಾತು ಹೇಳುವರು. ತಿಳಿದೊ ತಿಳಿಯದೆಯೋ ಹೇಳುವ ಹಿರಿಯರ ಮಾತನ್ನು ಸಿದ್ಧರಾಮ ಶಿವಯೋಗಿಗಳು ದಾಖಲಿಸಿ ಇಡೀ ಲೋಕಕ್ಕೆ ಬುದ್ಧಿಮಾತು ಹೇಳಿದ್ದಾರೆ. ಹಾಗೆಯೇ ದೇಹವನ್ನು ಆವರಿಸಿದ ಮನದ ಕಿವಿ ಹಿಂಡಿ ಇನ್ನು ಮೇಲೆ ದೇವರಾಣೆ ಇಡದಿರು ಎಂದು ಗಟ್ಟಿಯಾಗಿ ಹೇಳಿದ್ದಾರೆ.

ದೇವರೆಂದರೆ ಯಾರು ಎಂದು ಗೊತ್ತಿಲ್ಲದ ನಿನಗೆ ದೇವರ ಹೆಸರು ಹೇಳುವ ಶಕ್ತಿ ಎಲ್ಲಿಂದ ಬಂತು? ಎಲೆ ಮನವೆ, ನೀನು ಮಾಡಿದ ತಪ್ಪಿಗೆ ದೇವರನ್ನು ಸಾಕ್ಷಿಯಾಗಿಸುವುದು ತಪ್ಪಲ್ಲವೆ? ನೀನು ಮಾಡಿದ ತಪ್ಪು ಯಾರೂ ನೋಡದಿದ್ದರೇನಾಯಿತು; ದೇಹದಲ್ಲಿಯೇ ವಾಸ ಮಾಡಿದ ದೇವರು ನೋಡಿಲ್ಲವೆ? ನೀನು ಮತ್ತೊಮ್ಮೆ ತಪ್ಪು ಮಾಡಬೇಡವೆಂದು ನಿನ್ನ ತಪ್ಪನ್ನು ಮನ್ನಿಸಲಿಲ್ಲವೆ? ನೀನು ಮಾಡಿದ ತಪ್ಪನ್ನು ಮನ್ನಿಸಿದ ದೇವನ ಮೇಲೆ ಆಣೆ ಇಟ್ಟು ಪುನಃ ತಪ್ಪು ಮಾಡಿದರೆ ದೇಹದಲ್ಲಿಯೇ ಇದ್ದ ದೇವರು ನಿನ್ನನ್ನು ಸುಮ್ಮನೆ ಬಿಟ್ಟಾನೆಯೇ?

ಹರಿತವಾದ ಕತ್ತಿ ಹಿಡಿದು ಸುಳ್ಳು ಹೇಳಿದ ನಿನ್ನ ದವಡೆಯ (ಹಿಂದಿನ)ಹಲ್ಲು ಕೀಳುವರು; ನಿನ್ನ ಮುಂದಿನ ಹಲ್ಲು ಕಿತ್ತಿ ನಾಲಿಗೆಯನ್ನು ಸೀಳಿ ಮಾತನಾಡಲು ಬಾರದಂತೆ ಮಾಡುವರು; ನರಕದಲ್ಲಿಕ್ಕಿ ನಿನ್ನನ್ನು ಅದ್ದಿ ಅದ್ದಿ ತೆಗೆವರು; ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು ನಿಯಮಿಸಿದ ಆಳುಗಳು.

**648**

**ದೇವರ ದೇವ! ಮುನಿಗಳ ಉಮಾದೇವಿ ಕನ್ನಿಕೆಯರ**
**ನಿಜವನೊಡಹರಿದು ಕೇಳವ್ವ ಕೇಳವ್ವ!**
**ನಿನ್ನ ಭಾಗ್ಯದಳತೆಗಳ ಉಂಗುಟದಲಾಳುತ್ತಿರುವ ಜಗಜುಗವ**
**ನೀನಿನ್ನು ಮುನ್ನ ಹುಟ್ಟದವಂಗೆ ಭೋಗಿಯಾಗಿಪ್ಪೆಯವ್ವೆ**
**ಎನ್ನ ಕಪಿಲಸಿದ್ಧ ಮಲ್ಲಿನಾಥದೇವಗವ್ವ!**

ದೇಹದಲ್ಲಿ ದೇವರ ದೇವನೂ ಆದ ಒಡಲೊಡೆಯನು ಇದ್ದಾನೆ ; ಇಡೀ ಜಗತ್ತನ್ನು ತನ್ನ ಉಂಗುಟದಲ್ಲಿಟ್ಟುಕೊಂಡು ಆಳುತ್ತಿರುವ ಉಮಾದೇವಿಯೂ ಇದ್ದಾಳೆ.

ಮುನ್ನ ಹುಟ್ಟಿದ ಒಡಲೊಡೆಯನಿಗೆ ಭೋಗಿಯಾಗಬೇಕಾದ ಉಮೆ ಒಡಲನ್ನು ಆವರಿಸಿ; ಒಡಲೊಡೆಯನನ್ನೇ ಮರೆತಿದ್ದಾಳೆ. ಜಗ ಜುಗವನು ತನ್ನ ಉಂಗುಟದಲ್ಲಿಟ್ಟುಕೊಂಡು ಆಳುತ್ತಿದ್ದಾಳೆ.

ಒಡಲು ವಿಷ್ಣುವಿನ ಅವತಾರವೆಂದು ಇಡೀ ಜಗತ್ತು ಹೇಳುತ್ತಿದೆಯಾದರೂ ಒಡಲನ್ನು ಆವರಿಸಿದ ಮನವೆಂಬ ಉಮೆಯನ್ನು ಎದುರು ಹಾಕಿಕೊಂಡು ಪ್ರತಿಭಟಿಸಲು ಇದುವರೆಗೂ ಒಡಲಿಗೆ ಸಾಧ್ಯವಾಗಿಲ್ಲ.

ಕೌರವರಿಗೆ ಇಂದ್ರಪ್ರಸ್ಥಕ್ಕೆ ಆಮಂತ್ರಣ ನೀಡಿ, ದುರ್ಯೋಧನನನ್ನು ಅಪಮಾನಿಸಿ ಪಾಂಡವರನ್ನು ಕಾಡಿಗೆ ಅಟ್ಟಿದ್ದು ದ್ರೌಪದಿಯಲ್ಲವೆ?

ದ್ರೌಪದಿಯೆಂದರೆ ಹೆಣ್ಣಲ್ಲ; ಮನ! ಕೌರವರನ್ನು ಪಾಂಡವರನ್ನು ಹದಿನೆಂಟು ಅಕ್ಷೋಹಿಣಿ ಸೈನ್ಯವನ್ನು ಆಚಾರ್ಯರನ್ನು, ಪಂಡಿತರನ್ನು, ವೀರರನ್ನು ತನ್ನ ಉಂಗುಷ್ಟದಲ್ಲಿ ಇಟ್ಟುಕೊಂಡು ಚಂಡಿನಂತೆ ಆಟ ಆಡಿದ ದ್ರೌಪದಿ ಹೆಣ್ಣಲ್ಲ! ವ್ಯಾಸಮಹರ್ಷಿಗಳು ರಚಿಸಿದ ಒಡಲನ್ನು ಆವರಿಸಿದ ಮನದ ಪಾತ್ರ ಅದು!

ಮನಕ್ಕೆ ಒಡಲಿಲ್ಲ. ಇಡೀ ಜಗಜುಗದಲ್ಲಿರುವ ಒಡಲುಗಳನ್ನು ತನ್ನ ಉಂಗುಟದಲ್ಲಿಟ್ಟುಕೊಂಡು ಆಳುತ್ತಲಿದೆ. ಹಾಗೆಯೇ ದೇವರಿಗೂ ಒಡಲಿಲ್ಲ. ಒಡಲಿಲ್ಲದ ದೇವರಿಗೆ ವ್ಯಾಸರು ಕ್ರಿಷ್ಣನ ಪಾತ್ರ ಹಾಕಿದ್ದಾರೆ.

ಉಮೆ, ಉಮಾಪತಿಯ ಭೋಗದ ಭಾಗ್ಯದ ದೇವತೆ. ಅವರಿಬ್ಬರನ್ನೂ ಒಡಲಲ್ಲಿಟ್ಟುಕೊಂಡ ಒಡಲೇ ಧನ್ಯ! ಹೀಗಾಗಿ ಒಡಲು ಕೈಲಾಸವೆನ್ನಿಸಿಕೊಂಡಿದೆ; ವೈಕುಂಠವೆಂದು ಕರೆಯಿಸಿಕೊಂಡಿದೆ!

ಬಸವಣ್ಣನವರು ಕಾಯವನ್ನು ಕೈಲಾಸವೆಂದು ಕರೆದರು. ತ್ರಿಕೂಟ ಸಂಗಮವೆಂದು ಕರೆದರು. ಮನವೆಂಬ ಉಮೆ, ಉಮಾಪತಿಯೊಂದಿಗೆ ಕಾಯದಲ್ಲಿಯೇ ಕೂಡಿ ಒಂದಾದರೆ ಸಾಕು ಅದು ಕೈಲಾಸವಾಗುತ್ತದೆ.

ನಿನ್ನ ಭಾಗ್ಯದಳತೆಗಳ ಉಂಗುಟದಲಾಳುತ್ತಿರುವ ಜಗಜುಗವ ಬಿಟ್ಟು, ನೀನು ನಿನಗಿಂತ ಮುನ್ನ ಹುಟ್ಟಿದ ಉಮಾಪತಿಗೆ ಭೋಗಿಯಾಗುವೆ ಅವ್ವೆ. ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ರಾಣಿಯಾಗುವೆ ಎಂದು ಸಿದ್ಧರಾಮ ಶಿವಯೋಗಿಗಳು ಮನವೆಂಬ ಮಹಾದೇವಿಯೊಂದಿಗೆ ಮಾತನಾಡಿದ್ದಾರೆ.

ಒಡಲು, ಒಡಲಿನೊಂದಿಗೆ ಮಾತನಾಡಿದರೆ ಯುದ್ಧ. ಒಡಲು ಒಡಲೊಡೆಯನೊಂದಿಗೆ ಮಾತನಾಡುವ ಕಲೆ ಕಲಿತಾಗಲೇ ಅದು ತನಗೆ ತಾನೇ ಮೌನಿಯಾಗುತ್ತದೆ. ಒಡಲೊಡೆಯನೊಂದಿಗೆ ಮಾತನಾಡುವ ಮಾತುಗಳು ಇತರ ಒಡಲುಗಳಿಗೆ ಕೇಳುವುದಿಲ್ಲ. ಏಕೆಂದರೆ ಒಡಲೊಡೆಯ ಒಡಲು ಉಳ್ಳವನಲ್ಲ! ಹೀಗಾಗಿ ದಾಸೀಮಾರ್ಯರು ''ಒಡಲುಗೊಂಡವ ಹಸಿವ, ಒಡಲುಗೊಂಡವ ಹುಸಿವ ನೀನೊಮ್ಮೆ ಎನ್ನಂತೆ ಒಡಲುಗೊಂಡು ನೋಡಾ'' ಎಂದು ಒಡಲಿಲ್ಲದವನೊಂದಿಗೆ ಒಡಲ ಹಿಡಿದು ಸಾಕ್ಷಿಯಾಗಿ ಮಾತನಾಡಿದ್ದಾರೆ. ಶರಣರ ಮಾತುಗಳು ಮಾತಲ್ಲ; ಮಾತಲ್ಲದ ಮಾತು; ಮೌನದ ಮಾತು.

**649**

**ದೇವರು ಕೈವೀಸಲಿಕೆ ಅವರಿವರೆನ್ನ ಕಂಡಯ್ಯಾ!**
**ನೆಲೆಗೊಳ್ಳಲೀಯದು ಮೊಲೆಗಳಲೆಸೆವೆ ನೀ ಅಯ್ಯಾ!**

ಭಾಷೆಯಾಳು ಕಾಮನು.
ಕಪಿಲಸಿದ್ಧ ಮಲ್ಲಿನಾಥನೆಸರ ಹೇಳಿದವರನೆಸುವನಯ್ಯಾ.

ದೇಹದಲ್ಲಿಯೇ ಇದ್ದ ಅರಿವಿನ ದೇವರು ಕೈ ಬೀಸಿ ಕರೆಯಲಿಕೆ, ಸಕಲ ಪದವಿಗಳನ್ನು ತೊರೆದು ಕೂಡಲೇ ಶರಣಾಗತನಾಗಿ ಶರಣನೇ ತಾನಾಗುವನು. ಆ ದೇಹ, ಬ್ರಹ್ಮ ವಿಷ್ಣು ರುದ್ರ ಪದವಿಯಲ್ಲಿದ್ದರೇನು? ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾಪದವಿಯ ಕರುಣಿಸಯ್ಯಾ ಎಂದು ಅಂಗಲಾಚಿ ಕೇಳುತ್ತಾನೆ.

ಸಾತ್ವಿಕ ರಾಜಸ ತಾಮಸ ವೃತ್ತಿಯಲ್ಲಿದ್ದ ತನುಗಳನ್ನು, ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರು ತನಗೆ ಬೇಕಾದರೆ ಆ ಮೂರೂ ವೃತ್ತಿಗಳನ್ನು ಎಸೆದು ತನ್ನತ್ತ ಸೆಳೆದುಕೊಳ್ಳುತ್ತಾನೆ.

ಅರಿವೆಂಬ ಗುರುದೇವನ ಭಾಷೆಯೇ ಹಾಗೆ. ಹೂ ಬಾಣದಿಂದೆಸೆದ ಕಾಮನನ್ನು ಕಣ್ತೆರೆದು ಸುಟ್ಟು ಭಸ್ಮಮಾಡಿದನು. ಆ ಭಸ್ಮ ತಾಗಿ ಬ್ರಹ್ಮ ತನ್ನ ಕಪಾಲವಿಡಿದನು. ಗಣನಾಥನ ಐವತ್ತೆರಡು ಸರ ಹರಿದು ಬಿದ್ದವು. ಆ ಭಸ್ಮ ತಾಗಿ ಅಂಡಜ ಮುಗ್ಧೆಯ ಮೂರು ಮೊಲೆ ಹರಿದು ಬಿದ್ದವು. ನಾದಪ್ರಿಯ ನಂದಿಯನೇರಿಕೊಂಡು ಅತೀತನ ಮೇಲೆ ಆನಂದ ಸಿಂಹಾಸನವನಿಕ್ಕಿ ಕುಳಿತು ಕೂಡಲ ಸಂಗಮ ದೇವರ ದೇವತ್ವ ಕೆಟ್ಟಿತ್ತು''.

''ಲಿಂಗ ಜಂಗಮ ಒಂದೇ ಎಂದು ನಂಬಿದ ಬಳಿಕ ಅವರಂಗನೆಯರು ಲಿಂಗದ ರಾಣಿವಾಸ; ಅಲ್ಲಿಯೂ ಮೇಳ, ಇಲ್ಲಿಯೂ ಮೇಳ, ಚೌಡೇಶ್ವರಲ್ಲಿಯೂ ಮೇಳ! ಮೊಲೆಯುಂಬ ಭಾವ ತಪ್ಪಿ ಅಪ್ಪಿದವರ ತಲೆಯ ಕೊಂಬ ಕೂಡಲಸಂಗಮದೇವಾ''.

ಅಣ್ಣ ಬಸವಣ್ಣನವರ ಈ ಎರಡು ವಚನಗಳು ಸಿದ್ಧರಾಮ ಶಿವಯೋಗಿಗಳ ವಚನದ ಸಾರವೂ ಒಂದೇ ಆಗಿದೆ.

ದೇಹದಲ್ಲಿಯೇ ಸಂಗಮವಾದ ಕೈ ಬೀಸಿ ಕರೆಯುವ ಅರಿವಿನದೇವರ ಪರಿಚಯ ದೇಹವನ್ನು ಆವರಿಸಿದ ಮನಕ್ಕೆ ಆಗದಿದ್ದರೆ; ಮನ ದೇವರ ಭಾಷೆ ತಿರಸ್ಕರಿಸಿ ದೇಹವನ್ನು ಅರಿಷಡ್ವರ್ಗಗಳಿಗೆ ಸಪ್ತವ್ಯಸನಗಳಿಗೆ ಅಷ್ಟಮದಗಳಿಗೆ ಈಡು ಮಾಡುತ್ತದೆ. ಹಾಲುಂಡ ಮೊಲೆಯನ್ನು, ಬಂದ ಯೋನಿಯನ್ನೇ ಮರೆಯಿಸುತ್ತದೆ.

ದೇಹದಲ್ಲಿಯೇ ಇದ್ದ ಅರಿವಿನ ದೇವರು ದೇಹವನ್ನು ಆವರಿಸಿದ ಮನಕ್ಕೆ ಇನ್ನು ಸಾಕು ನಿನ್ನ ಉಪಟಳ ಎಂದು ಕಣ್ತೆರೆದು ಕೈ ಬೀಸಿ ಕರೆದರೆ ಸಾಕು ದೇಹವನ್ನು ಆವರಿಸಿದ ಕಾಮ ಸುಟ್ಟು ಭಸ್ಮವಾಗುತ್ತದೆ. ಅರಿವಿನ ದೇವರ ಭಾಷೆಯಾಳು ಕಾಮನು. ಕಾಯದಲ್ಲಿಯೇ ಹುಟ್ಟಿ, ಕಾಯಕ್ಕೆ ಸುಖ ನೀಡಿ, ಕಾಯದಲ್ಲಿಯೇ ಮಾಯವಾಗಿ, ಕಾಯದ ಕೈಗೆ ಸಿಗದೆ ಕಾಯವನ್ನೇ ಹರಿದು ತಿನ್ನುತ್ತಾನೆ.

ಕಾಯವನ್ನು ಆವರಿಸಿದ ಕಾಮ ಕಾಯದಲ್ಲಿಯೇ ಸಂಗಮವಾದ ಅರಿವಿನ ದೇವರ ಭಾಷೆಯ ಆಳು!

ರಾವಣನ ಕಾಯವನ್ನು ಆವರಿಸಿದ ಕಾಮ, ಸೀತೆಯನ್ನು ನೋಡಿ ಸತ್ತ. ಕೀಚಕನ ಕಾಯವನ್ನು ಆವರಿಸಿದ ಕಾಮ, ದ್ರೌಪದಿಯನ್ನು ಮುಟ್ಟಿ ಸತ್ತುಹೋಯಿತು. ಕಾಯದಲ್ಲಿ ಹುಟ್ಟಿದ ಕಾಮದ ದ್ರವ್ಯ ಕಾಯದಿಂದಲೇ ಹೊರಬಂದು ಕಾಯಕ್ಕೆ ಸುಳ್ಳುಸುಖ ನೀಡುತ್ತದೆ. ಕಾಯಕ್ಕೂ ಈ ವಿಷಯ ಗೊತ್ತಿಲ್ಲ; ಕಾಯವನ್ನು ಆವರಿಸಿದ ಕಾಮದ ಕಾಯಕ್ಕೂ ಈ ವಿಷಯ ಗೊತ್ತಿಲ್ಲ. ಕಾಯದಲ್ಲಿ

ಸಂಗಮವಾದ ಅರಿವಿನ ಕಾಯಕ್ಕೆ ಮಾತ್ರ ಈ ವಿಷಯ ಗೊತ್ತಿದೆ. ಹೀಗಾಗಿ ರಾವಣನ ಕಾಯ ಕಾಮದ ಸುಖಕ್ಕಾಗಿ ಸೀತೆಯ ಕಾಯ ಬಯಸಿ ಸತ್ತುಹೋಯಿತು. ಕಾಮದ ಕಾಯ ಸಾಯಬೇಕಿತ್ತು ಆದರೆ ರಾವಣನ ಕಾಯ ಸತ್ತುಹೋಯಿತು.

ಕಾಯವನ್ನು ಆವರಿಸಿದ ಕಾಮದ ಕಾಯಕ್ಕೆ ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯದೊಂದಿಗೆ ಕಾಮಕೇಳಿಯಾಡುವ ಬಯಕೆಯಾದಾಗ ಕಾಮದ ಕಾಯ ಭಸ್ಮವಾಗುತ್ತದೆ. ಕಾಮದ ಕಾಯ ಮತ್ತು ಕಾಯಗಳೆರಡು ಅರಿವಿನ ಕಾಯದ ಭಾಷೆಯ ಆಳಾಗುತ್ತವೆ.

ಅರಿವಿನ ದೇವರ ಹೆಸರು ಹೇಳಿದವರ ಅಜ್ಞಾನವನ್ನು ಎಸೆದು ಜ್ಞಾನಿಯನ್ನಾಗಿಸುತ್ತಾನೆ ಕಪಿಲಸಿದ್ಧ ಮಲ್ಲಿಕಾರ್ಜುನ.

**650**

**ದೇವಿ ದೇವನಾ ನಂಬಿದಾ**
**ನಂಬಿದವ್ರೈವರ ನಿಲವ ಕೇಳಿರೊ ಅಯ್ಯಾ!**
**ಹರಿವ ನದಿಗಳಂತೆ ಪರಹಿತಾರ್ಥವಾಗಿಪ್ಪರಯ್ಯಾ,**
**ತಾವು ಮಾಡುವರಲ್ಲದೆ ಮೂಲದೊಳಗಿರರು,**
**ಕಪಿಲಸಿದ್ಧ ಮಲ್ಲಿನಾಥನ ಕೂಡಿಪ್ಪರಯ್ಯಾ.**

ನೂರೊಂದು ಕೌರವರಿಗೂ, ಐದು ಪಾಂಡವರಿಗೂ ದ್ರೌಪದಿಗೂ ಅಜಗಜಾಂತರ ವ್ಯತ್ಯಾಸ. ಕೌರವರು ಗುರು ಹಿರಿಯರನ್ನು ನಂಬಲಿಲ್ಲ. ಕೃಷ್ಣನನ್ನು ನಂಬಲಿಲ್ಲ. ಐವರು ಪಾಂಡವರು ಹಾಗಲ್ಲ; ಶ್ರೀಕೃಷ್ಣನನ್ನು ನಂಬಿದರು. ಆಪತ್ಕಾಲದಲ್ಲಿದ್ದ ದ್ರೌಪದಿ ನಂಬಿ ಕೂಗಿ ಕರೆದಾಗ ಕೃಷ್ಣ ವಸ್ತ್ರ ನೀಡಿ ರಕ್ಷಣೆ ಮಾಡಿದ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ವಾಸ ಮಾಡುವ ಮನವೆಂಬ ದ್ರೌಪದಿಯನ್ನು ದೇವಿಯಂತೆ ನಂಬಿದರು. ಮನವೆಂಬ ದ್ರೌಪದಿದೇವಿ ಹಾಗೂ ಪಾಂಡವರು ಕೃಷ್ಣನನ್ನು ನಂಬಿದರು. ಹರಿವ ನದಿಗಳಂತೆ ಸ್ವಾರ್ಥ ಮರೆತು ಹಳ್ಳ ಕೊಳ್ಳ ತಿರುವುಗಳನ್ನು ಸವೆಸಿ ಜ್ಞಾನ ಮಹಾ ಸಾಗರದೊಳಗೆ ಸೇರಿ ಜ್ಞಾನ ಸಾಗರವೇ ತಾವಾದರು. ಸಾಗರದಿಂದ ಬಂದ ನದಿಗಳು ಸಾಗರದತ್ತ ಹರಿದು ಸಾಗರದಲ್ಲಿಯೇ ಸಂಗಮವಾಗಿ ಸಾಗರವೇ ತಾವಾದವು.

ಮನವೆಂಬ ದ್ರೌಪದಿ ಕಣ್ಣಿನ ಸಂಗ ಮಾಡಿ ತನಗೆ ಬೇಕಾದಂತೆ ನೋಡುತ್ತಾಳೆ. ಆಗ ದೇಹ ದೃಶ್ಯದ ಮೂಲವನ್ನು ಅರಿಯಲು ಹೋಗಬೇಕು. ಅರಿಯಲು ಹೋದವರು ಮಾತ್ರ ಪಾಂಡವರಾಗುತ್ತಾರೆ. ದ್ರೌಪದಿಯ ಸಂಗ ಮಾಡಿ ಶ್ರೀಕೃಷ್ಣನನ್ನು ಆರಾಧಿಸುತ್ತಾರೆ. ಅಜ್ಞಾನದ ಸಂಗ ಮಾಡದೇ ಹೊರಗೆ ಬರುತ್ತಾರೆ.

ದೃಶ್ಯದ ಮೂಲವನ್ನು ಅರಿಯದೆ ನೋಡಿದವರು ಕೌರವರೆಂದು ಕರೆಯಿಸಿಕೊಳ್ಳುತ್ತಾರೆ. ಕಾಯ ವಜ್ರದ್ದಾದರೇನು ಅದರ ಹೆಸರೇ ದುರ್ಯೋಧನ. ಕೌರವರ ಸಂಖ್ಯೆ ಅಧಿಕ; ಪಾಂಡವರ ಸಂಖ್ಯೆ ಐದು ಮಾತ್ರ. ಇದಕ್ಕೆಲ್ಲ ಕಾರಣ ದ್ರೌಪದಿ; ಶ್ರೀಕೃಷ್ಣ.

ದೇಹ ಎನ್ನುವುದು ಪಾಂಡವರಿದ್ದ ಧರ್ಮ ಕ್ಷೇತ್ರವೂ ಹೌದು; ಕುರುಕ್ಷೇತ್ರವೂ ಹೌದು. ದೇಹ ತನಗೆ ತಾನೇ ತಿಳಿಯಲು ಹೋದರೆ ದೇಹದಲ್ಲಿಯೇ ಇದ್ದ ಶ್ರೀಕೃಷ್ಣನ ದರುಶನವಾಗುತ್ತದೆ. ದೇಹದಲ್ಲಿಯೇ ಇದ್ದ ಕೃಷ್ಣನ ಸಂಗ ಮಾಡಿ ಕೃಷ್ಣನನ್ನು ಆರಾಧಿಸಿದ ದೇಹ ವೈಕುಂಠವೆಂದು

ಕರೆಯಿಸಿಕೊಳ್ಳುತ್ತದೆ. ಅರಿಯದಿದ್ದರೆ ದೇಹ ಕುರುಕ್ಷೇತ್ರವಾಗುತ್ತದೆ.

ವ್ಯಾಸ ಮಹರ್ಷಿಗಳು ಜಾಣರು. ಸಿದ್ಧರಾಮ ಶಿವಯೋಗಿಗಳು ಜಾಣರ ಜಾಣರು. ಇಡೀ ಮಹಾಭಾರತವನ್ನು ತಮ್ಮ ವಚನದ ಐದು ಸಾಲುಗಳಲ್ಲಿ ಬೆಡಗಿನಿಂದ ಬಂಧಿಸಿದ್ದಾರೆ.

ದ್ರೌಪದಿದೇವಿ ಐವರು ಗಂಡರನ್ನು ನಂಬಲಿಲ್ಲ. ಸಭೆಯಲ್ಲಿದ್ದ ಹಿರಿಯರನ್ನು ನಂಬಲಿಲ್ಲ. ಆಚಾರ್ಯರನ್ನು ನಂಬಲಿಲ್ಲ. ಶ್ರೀಕೃಷ್ಣನನ್ನು ಮಾತ್ರ ನಂಬಿದಳು. ಹಾಗೆಯೇ ಪಾಂಡವರು ಕೂಡಾ ತಮ್ಮ ಬಲವನ್ನು ಸಭೆಯ ಮುಂದೆ ಪ್ರದರ್ಶಿಸಲಿಲ್ಲ ಶ್ರೀಕೃಷ್ಣನನ್ನೇ ನಂಬಿದರು.

ಶ್ರೀಕೃಷ್ಣನೆಂದರೆ ಅರಿವು. ದ್ರೌಪದಿಯೆಂದರೆ ಮನ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇವು ದೇಹದ ಜ್ಞಾನದ್ವಾರಗಳು. ತಿಳಿದರೆ ದೇಹ ಧರ್ಮಕ್ಷೇತ್ರ ; ತಿಳಿಯದಿದ್ದರೆ ದೇಹ ಕುರುಕ್ಷೇತ್ರ!

**651**

**ದೇವಿಯರಿಬ್ಬರಿಲ್ಲದಂದು, ಪ್ರಧಾನಿಮಂತ್ರಿಗಳಿಲ್ಲದಂದು,**
**ಆರಾರೂ ಇಲ್ಲದಂದು ನೀನಾದಿಮುಖಶೂನ್ಯನಯ್ಯಾ.**
**ಅರ್ಥಾಂತಾನ್ವಯಕ್ಕೆ ನೀ ಮೂಲನೆಂಬೆ.**
**ನಿನ್ನೊಡನೆ ಬಂದಾತ ಬಸವಣ್ಣ.**
**ನೀನು ತಮಂಧದಲ್ಲಿ ಜ್ಞಾನಭಾಸ್ಕರದೀಪ್ತಿಯಂ ಪ್ರವೇಶಿಸಲು ಪಟ್ಟಡೆ,**
**ನೀ ಸಕಲವನು ನಿಃಕಲವನು ಪ್ರಾಪಂಚಿಕವನು ತಾತ್ಪರ್ಯವ ಮಾಡುವಾಗ**
**ನೀನೆ ಎಂದೆಂಬೆ, ಅದು ಬಸವಣ್ಣನನುಮತ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ನೀನನಾದಿ ಮೂಲದೊಡೆಯನೆಂದೆಂಬೆ. ನಿಮ್ಮ ಬಲ್ಲಾತ ಬಸವಣ್ಣ;**
**ಗುರು-ಲಿಂಗ-ಜಂಗಮತ್ರಯವು ಬಸವಣ್ಣನಂಶಿಕವು.**

ಭೂಮಿಯ ಮೇಲೆ ಹುಟ್ಟಿದ ಎಷ್ಟೋ ಜೀವಿಗಳು ಸಹಜವಾಗಿಯೇ ಇವೆ. ಆದರೆ ಅವೆಲ್ಲವುಗಳಿಗೆ ನಿನ್ನ ಪರಿಚಯವಿಲ್ಲ. ನಿನ್ನ ಪರಿಚಯವಿದ್ದಂತೆ ನಟಿಸಿ ಆರಾಧಿಸುತ್ತಿರುವ ಎಷ್ಟೋ ಮನುಜರಿಗೆ ಕೂಡಾ ನಿನ್ನ ಪರಿಚಯವಿಲ್ಲ.

ನಿನ್ನೊಂದಿಗೆ ನಿನ್ನ ನೆರಳಾಗಿ ಬಂದ ನಿನ್ನ ದೇವಿಯರು ಇಲ್ಲದಂದು, ಪ್ರಧಾನಿ ಮಂತ್ರಿಗಳು ಇಲ್ಲದಂದು, ಆರಾರೂ ಇಲ್ಲದಂದು ನೀನು ಆದಿಮುಖ ಶೂನ್ಯನಯ್ಯಾ. ಇಡೀ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದ ಜಗನ್ನಾಥನು ನೀನು. ನೀನೇ ಈ ಬ್ರಹ್ಮಾಂಡಕ್ಕೆ ಮೂಲನೆಂದು ಕಂಡುಹಿಡಿದಾತ ಬಸವಣ್ಣ.

ಆತ ನಿನ್ನೊಡನೆ ಬಂದಾತ. ನಿನ್ನಂತೆ ಜಗದಗಲ ಮುಗಿಲಗಲಕ್ಕೂ ಪಸರಿಸಿದಾತ. ಪಾತಾಳದಿಂದತ್ತತ್ತ ಚಾಚಿಕೊಂಡ ನಿಮ್ಮ ಶ್ರೀಚರಣದಲ್ಲಿ ಪವಡಿಸಿದಾತ ಬಸವಣ್ಣ. ಬ್ರಹ್ಮಾಂಡದಿಂದ ಅತ್ತತ್ತಲೂ ಚಿಮ್ಮಿದ ನಿಮ್ಮ ಶ್ರೀಮುಕುಟದಲ್ಲಿ ಸಂಗಮವಾದ ಸಂಗನ ಬಸವಣ್ಣನು ಆತ.

ಅಗಮ್ಯ ಅಗೋಚರ ಅಪ್ರತಿಮವಾದ ಅಂಗದಲ್ಲಿಯೇ ಸಂಗಮವಾದ ನಿಮ್ಮ ಶ್ರೀಚರಣಕ್ಕೆ ದಾಸಾನುದಾಸನಾದಾತ ಬಸವಣ್ಣ. ಸಕಲ ಅಂಗಗಳಲ್ಲಿಯೂ ಸಂಗಮವಾದ ಸಂಗಯ್ಯನನ್ನು ಕಂಡು ''ಎನಗಿಂತ ಕಿರಿಯರಿಲ್ಲ'' ಎಂದು ಎದೆ ತುಂಬಿ ಹಾಡಿದಾತ ಬಸವಣ್ಣ.

ನೀನು ಅನಾದಿ ಮೂಲದೊಡೆಯನಾಗಿ ಒಡಲು ಧರಿಸಿ ಬಂದಾಗ ಒಡಲಲ್ಲಿಯೇ ನಿನ್ನ ನೆರಳಾಗಿ ನಿನ್ನ ಮೂಲವನ್ನು ಅರಿತಾತ ಬಸವಣ್ಣ. ಒಡಲೊಳಗಿದ್ದು ಒಡಲಿಂಗೆ ಆಧಾರವಾಗಿ ಒಡಲ ಸೋಂಕದೆ ಒಡಲ ಬೆಳಗುವ ನಿನ್ನನ್ನು ಕಂಡುಹಿಡಿದಾತ ಬಸವಣ್ಣ.

ಗುರು ಲಿಂಗ ಜಂಗಮನು ನೀನೇ ಎಂದು ನಿನಗೆ ಹೆಸರಿಟ್ಟು ಅದರ ಅಂಶಿಕನು ತಾನೇ ಆದಾತ ಬಸವಣ್ಣ. ಆರಾರೂ ಇಲ್ಲದಂದು ನೀನು ಅನಾದಿಯೆಂಬ ಹೆಸರಿನಿಂದ ಬೆಳಗಿದಾಗ ಬಸವಣ್ಣ ಆದಿಮೂಲನಾಗಿ ನಿನ್ನ ಬೆಳಕಿನ ಕಿರಣಗಳನ್ನು ಭುವಿಗೆ ಚೆಲ್ಲಿದಾತ ಬಸವಣ್ಣ.

ನೀನು ಬೆಳಗಿದ ಬೆಳಕಿನಿಂದ ಕತ್ತಲು ಹುಟ್ಟಿ ಆ ಕತ್ತಲೇ ಪುನಃ ನಿನ್ನ ಬೆಳಕಿನಲ್ಲಿ ಪ್ರವೇಶ ಮಾಡಿ ಜ್ಞಾನದ ಬೆಳಕಾಗಿ ಬೆಳಗಿದ ಸಕಲನು ನೀನೇ ನಿಃಕಲನು ನೀನೇ. ಪ್ರಾಪಂಚಿಕನು ನೀನೇ. ಈ ನಿನ್ನ ವೃತ್ತಾಂತ ಸಿದ್ಧವಾದುದು ಬಸವಣ್ಣನಿಂದ ಎಂದು ಸಿದ್ಧರಾಮ ಶಿವಯೋಗಿಗಳು ಬಸವಣ್ಣನನ್ನು ಸ್ಮರಿಸಿದ್ದಾರೆ.

**652**

**ದೇಶ ಪರಿಭಾಷೆಯಲ್ಲಿ ಅಸುರದ ಲಾಂಛನವ**
**ಘಾಸಿಯಪ್ಪವರೆಲ್ಲರರಿಯಲಹುದೆ?**
**ಸರ್ವೇಶ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಭಕ್ತಿ ಭಾಷೆಯಾದಂಗಲ್ಲದರಿಯಲಿಲ್ಲ.**

ಲೋಕದ ಭಾಷೆಯನು ಕೇಳಿದ ಮನುಜ ಲೋಕದಂತೆ ಸಿಡಿದೇಳುವನು. ಘಾಸಿಗೊಳ್ಳುವನು. ಇಲ್ಲಸುಖದ ತುತ್ತ ತುದಿಗೆ ಓಲಾಡುವನು. ಲೋಕದ ಭಾಷೆಯೆಂದರೆ ಅದು ಅಸುರ ಭಾಷೆ. ಪರಮಾತ್ಮನ ಲಾಂಛನವನ್ನು ಹೊತ್ತ ಅಸುರ ಭಾಷೆ. ಭಾಷೆಯ ನುಡಿಯುವವನು ಕೂಡಾ ತಿಳಿಯದೇ ನುಡಿಯುವ ಭಾಷೆ. ಭಾಷೆಯ ಕೇಳುವವನು ಕೂಡಾ ತಿಳಿಯದೇ ಕೇಳುವ ಭಾಷೆ.

ಭಾಷೆ ಎನ್ನುವುದು ಲಿಂಗ; ಅದು ಜ್ಯೋತಿರ್ಲಿಂಗ. ಮುತ್ತು ಮಾಣಿಕ್ಯ ಸ್ಫಟಿಕ. ಅದರ ಬೆಲ ಅಸುರರಿಗೆ ತಿಳಿಯದು. ಲೋಕಕ್ಕೂ ತಿಳಿಯದು. ತಾವು ನುಡಿಯುವ ಮಾತಿಗೆ ಲೋಕದ ಜನ ಸಕ್ಕರೆಯ ಪಾಕ ಲೇಪಿಸಿ ನುಡಿಯುವರು. ಇಲ್ಲ ವಿಷದ ಲೇಹ ಲೇಪಿಸಿ ನುಡಿಯುವರು. ಭಾಷೆಯನ್ನು ಭಕ್ತಿಯಿಂದ ಸ್ವೀಕರಿಸುವ ಶಕ್ತಿ ಶರಣನಿಗೆ ಮಾತ್ರ ಇದೆ.

ಬೈದವರನ್ನು ಎನ್ನ ಬಂಧುಗಳೆಂಬೆ ಎಂದು ಬಸವಣ್ಣನವರು ಹೇಳಬೇಕಾದರೆ ಲೋಕದ ಜನ ಬೈಯ್ಯಲು ಬಳಸಿದ ಭಾಷೆಯನ್ನು ಅರಿಯರು. ತಾವು ಅರಿಯದೆ ಇದ್ದ ಭಾಷೆಗೆ ವಿಷದ ಲೇಹ ಬಳಸಿ ಬಾಣದಂತೆ ಎಸೆಯುತ್ತಾರೆ ಎಂದು ಅರ್ಥವಲ್ಲವೆ?

''ಕುರುಡನ ಮಗ ಕುರುಡ'' ಎಂದು ದ್ರೌಪದಿ ತನ್ನ ತನುವಿನಲ್ಲಿದ್ದ ಭಾಷೆಗೆ ವಿಷದ ಲೇಹ ಬಳಸಿ ದುರ್ಯೋಧನನಿಗೆ ಎಸೆದಾಗ ಅದು ಬ್ರಹ್ಮಾಸ್ತ್ರಕ್ಕಿಂತಲೂ ಅಧಿಕವಾಗಿ ದುರ್ಯೋಧನನನ್ನು ಘಾಸಿಗೊಳಿಸಿತು. ದ್ರೌಪದಿಯ ಆ ಭಾಷೆಯನ್ನು ಕೇಳಿದ ಶ್ರೀಕೃಷ್ಣ ಇನ್ನು ಯುದ್ಧ ತಪ್ಪಿದ್ದಲ್ಲ. ದ್ರೌಪದಿ ಚೆಲ್ಲಿದ ವಿಷದ ಲೇಹ ಇಡೀ ದೇಶದ ತುಂಬಾ ಪಸರಿಸಿ ಭಾಷೆಯ ನುಡಿಯುವ ಲೋಕದ ಜನರನ್ನೇ ಅಹುತಿ ತೆಗೆದುಕೊಳ್ಳುವುದರಲ್ಲಿ ಸಂದೇಹವೇ ಇಲ್ಲ ಎಂದು ಮಮ್ಮಲ ಮರಗಿದನಂತೆ. ಭಾಷೆಯ ಆ ವಿಷ ದೇಶದ ತುಂಬಾ ವ್ಯಾಪಿಸಲು ಹದಿಮೂರು ವರ್ಷಗಳೇ ಬೇಕಾಯಿತು.

ಲೋಕದ ಭಾಷೆಯನ್ನು ಕೇಳಿದ ಲೋಕ ಘಾಸಿಯಾಗುತ್ತದೆ ಇಲ್ಲ ಸುಖವಾಗುತ್ತದೆ. ಲೋಕದ ಭಾಷೆಯನ್ನು ಕೇಳಿದ ಶರಣರಿಗೆ ಅರಿವಾಗುತ್ತದೆ; ಸುಖವೂ ಆಗುವುದಿಲ್ಲ ದುಃಖವೂ ಆಗುವುದಿಲ್ಲ. ಏಕೆಂದರೆ ಲೋಕದ ಭಾಷೆಯಲ್ಲಿ ಅರಿವಿದೆ; ಅರಿವಿನ ಅಮೃತವಿದೆ ಎಂದು ಶರಣ ಮಾತ್ರ ತಿಳಿಯುತ್ತಾನೆ. ಆತ ಭಾಷಾಜ್ಞಾನಿ.

ಲೋಕ ಭಾಷೆಯನ್ನು ಬ್ರಹ್ಮಾಸ್ತ್ರದಂತೆ ಬಳಸಿದರೆ ಶರಣ ತನ್ನ ಸುದರ್ಶನ ಚಕ್ರವನ್ನು ಬಿಟ್ಟು ಭಾಷೆಗೆ ಅಂಟಿದ ಸುಖ ದುಃಖಗಳ ವಿಷದ ಲೇಹವನ್ನು ಕತ್ತರಿಸಿ, ಭಾಷೆಯನ್ನು ಸ್ವೀಕರಿಸುತ್ತಾನೆ. ಈ ಕಲೆ ಲೋಕದ ಸಕಲ ತನುಗಳಲ್ಲಿದ್ದರೂ ಕೂಡಾ ಲೋಕಕ್ಕೆ ಬಳಸಲು ಸಾಧ್ಯವಾಗುತ್ತಿಲ್ಲ.

ದೇಶ ಪರಿಭಾಷೆಯಲ್ಲಿ ಅಸುರದ ಲಾಂಛನವ ಘಾಸಿಯಪ್ಪವರೆಲ್ಲರೂ ಅರಿಯಲಹುದೆ? ಸರ್ವೇಶ ಕಪಿಲಸಿದ್ಧ ಮಲ್ಲಿಕಾರ್ಜುನನ ಭಕ್ತಿ ಭಾಷೆಯಾದವನಿಗೆ ಮಾತ್ರ ಸಾಧ್ಯವಾಗುತ್ತದೆ. ಲೋಕದ ಜನ ಸುರನನ್ನು ಹೊತ್ತುಕೊಂಡ ಅಸುರರು. ಸುರನ ಭಾಷೆ ಅಸುರನಿಗೆ ಅರ್ಥವಾಗುವುದಿಲ್ಲ.

**653**

**ದೇಹದ ಸಿರಿಯ ಆಗು ಹೋಗನರಿಯಬಾರದು**
**ಆಗೆಂದರಿಯಬಾರದು, ಈಗೆಂದರಿಯಬಾರದು**
**ಇದನೋಜೆ ಮಾಡಿಕೊಳ್ಳಿ ಶಿವಭಕ್ತಿಯಿಂದ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಂಪದ್ಭರಿತವಾದ ಸಾಕ್ರಟೀಸನ ದೇಹಕ್ಕೆ ವಿಷಪ್ರಾಸನವಾಯಿತು. ದೇಹದಲ್ಲಿ ಅರಿವಿನ ಸಂಪತ್ತು ಇದೆಯೆಂದು ಇಡೀ ಪ್ರಪಂಚಕ್ಕೆ ಸಾರಿದ ಜ್ಞಾನಿಯಾತ. ಜ್ಞಾನ ಎನ್ನುವುದು ದೇಹದಲ್ಲಿ ಇಲ್ಲ; ಪುಸ್ತಕದಿಂದಲೇ ದೇಹಕ್ಕೆ ಜ್ಞಾನ ಬರುತ್ತದೆ ಎಂದು ನಂಬಿದ ದೇಹಗಳು ಸಾಕ್ರಟೀಸನಿಗೆ ವಿಷ ಪ್ರಾಸನ ಮಾಡಿ ಕೊಂದು ಹಾಕಿದವು.

ಗರ್ಭಕ್ಕೆ ಹರಿದ ಜಲಬಿಂದುವಿನಲ್ಲಿ ವಿಷವೂ ಇದೆ; ಅಮೃತವೂ ಇದೆ. ಜ್ಞಾನವೂ ಇದೆ; ಅಜ್ಞಾನವೂ ಇದೆ. ಬೇರ್ಪಡಿಸಿಕೊಂಡು ಸಹಜವಾಗಿ ಬದುಕಲು ತನುವಿಗೆ ಮಾತ್ರ ಬರುತ್ತದೆ. ಬೇರ್ಪಡಿಸಿಕೊಳ್ಳಲು ಬಾರದ ಹಾವು ವಿಷವನು ಉಗುಳುತ್ತಾ ಬದುಕುತ್ತದೆ.

ಸಾಕ್ರಟೀಸ ಮಹಾಜ್ಞಾನಿ, ಸಂತ. ಆತನ ವಿಚಾರಗಳು ಹಲವಾರು ತನುಗಳಿಗೆ ಹಿಡಿಸಲಿಲ್ಲ. ರಾಜನಿಗೆ ದೂರು ನೀಡಿದವು. ರಾಜ ಜೇಲಿಗೆ ತಳ್ಳಿ ವಿಷಪ್ರಾಸನ ನೀಡಿ ಕೊಂದು ಹಾಕುವ ಶಿಕ್ಷೆ ನೀಡಿದ. ಸಾಕ್ರಟೀಸ ಹಸನ್ಮುಖಿಯಾದ. ದೇಹಕ್ಕಾಗಿ ಅಳಲಿಲ್ಲ. ದೇಹಕ್ಕೆ ವಿಷದ ರುಚಿ ನೋಡುವ ಭಾಗ್ಯ ಕಲ್ಪಿಸಿದ ರಾಜನಿಗೆ ದೂರು ನೀಡಿದ ದೇಹಗಳಿಗೆ ಧನ್ಯವಾದ ಹೇಳಿದ.

ವಿಷ ಉಣ್ಣಿಸಿ ಕೊಂದು ಹಾಕುವ ದಿನ ಬಂತು. ಜೇಲರ್ ವಿಷ ನೀಡಲೇ ಇಲ್ಲ. ಎರಡು ಮೂರು ದಿನಗಳು ಕಳೆದು ಹೋದವು; ವಿಷ ನೀಡಲೇ ಇಲ್ಲ.

ಜೇಲರನನ್ನು ಕರೆದು ಸಾಕ್ರಟೀಸ ಕೇಳಿದ: ಯಾಕೆ ತಾವು ನನಗೆ ಇನ್ನೂ ವಿಷ ನೀಡಲೇ ಇಲ್ಲವಲ್ಲ. ಜೇಲರ್ ಹೇಳಿದ: ಪೂಜ್ಯರೆ ತಮ್ಮನ್ನು ಇನ್ನೂ ಎರಡು ಮೂರು ದಿನಗಳವರೆಗಾದರೂ ಕಣ್ತುಂಬಿ ನೋಡುವ ಆಸೆಯಿಂದಾಗಿ ನಾವು ತಮಗೆ ವಿಷ ನೀಡಲಿಲ್ಲ!

ಹಾಗೆ ಮಾಡಬೇಡಿ ಸಾಹೇಬರೆ, ನನಗೆ ವಿಷದ ರುಚಿ ನೋಡುವ ತವಕವಿದೆ. ದಯವಿಟ್ಟು

ರಾಜನ ಆಜ್ಞೆಯನ್ನು ಪಾಲಿಸಿ, ಎಂದು ಸಾಕ್ರಟೀಸ ಜೇಲರಿಗೆ ಹೇಳಿದ. ಇದು ಸಾಕ್ರಟೀಸನ ಸತ್ಯ ಕತೆ.

ಮೊಳೆ ಹೊಡೆದು ಶಿಲುಬೆಗೆ ಏರಿಸಿ ಕೊಂದು ಹಾಕುವ ಶಿಕ್ಷೆ ನೀಡಿದ ರಾಜನನ್ನು ಏಸುಕ್ರಿಸ್ತ ಹೇ ಪ್ರಭುವೇ ಈ ರಾಜನನ್ನು ಕ್ಷಮಿಸು. ನನಗೂ ರಾಜನಿಗೂ ಇಡೀ ಬ್ರಹ್ಮಾಂಡಕ್ಕೂ ನೀನೇ ಪ್ರಭುವೆಂಬುದು ಇವರಿಗೆ ಗೊತ್ತಿಲ್ಲ ಎಂದು ಅಂಗದಲ್ಲಿಯೇ ವಾಸ ಮಾಡಿದ ಅರಿವಿನ ಪ್ರಭುವಿನೊಂದಿಗೆ ಮಾತನಾಡಿದ.

ಮನವೆಂಬ ನಾನು ಅಂಗವನ್ನು ಆವರಿಸಿಕೊಂಡಿದ್ದೇನೆ. ಅರಿವಿನ ಪ್ರಭುದೇವ ಅಂಗದಲ್ಲಿಯೇ ವಾಸ ಮಾಡಿದ್ದಾನೆ. ಸಾಕ್ರಟೀಸನಿಗೆ ಏಸುಕ್ರಿಸ್ತನಿಗೆ ಪ್ರಭುವಿನ ದರುಶನವಾಯಿತು. ಅವರಿಬ್ಬರೂ ಅಂಗ ದಲ್ಲಿಯೇ ಸಂಗಮವಾದ ಅರಿವಿನ ಪ್ರಭುವಿನೊಂದಿಗೆ ಏಸುಪ್ರಭು ವಾಸ ಮಾಡಿದರು. ಅಂಗವೆಂಬ ಮನೆ ಹಳೆಯದಾದಾಗ ಅಥವಾ ಏಸುವಿಗೆ ಪ್ರಭುವಿಗೆ ಸಾಕಾದಾಗ ಅಂಗಬಿಟ್ಟು ಹೋಗುತ್ತಾರೆ.

ದೇಹ ಶ್ರೀಮಂತನದೂ ಅಲ್ಲ ಬಡವನದೂ ಅಲ್ಲ; ರಾಜನದೂ ಅಲ್ಲ; ಸೈನಿಕದೂ ಅಲ್ಲ; ದರಿದ್ರ ನದೂ ಅಲ್ಲ. ದೇಹದಲ್ಲಿ ಅರಿವಿನ ಪ್ರಭುವೂ ಇದ್ದಾನೆ; ಆತನನ್ನು ಆರಾಧಿಸುವ ಭಕ್ತನೂ ಇದ್ದಾನೆ.

ದೇಹ ಎನ್ನುವುದು ಇವರಿಬ್ಬರೂ ವಾಸವಾಗಿದ್ದ ಮನೆಯಾಗಿದೆ. ಮನೆ ಹಳೆಯದಾದರೆ ಅವರೇ ಬಿಟ್ಟು ಹೋಗುತ್ತಾರೆ. ಮನೆಯಲ್ಲಿ ವಾಸ ಮಾಡುವುದು ಸಾಕಾದಾಗ ಅವರಿಬ್ಬರೂ ಹೊರಟು ಹೋಗುತ್ತಾರೆ. ದೇಹ ತಾನಾಗಿಯೇ ಸತ್ತು ಹೋಗುವುದು ಅಥವಾ ದೇಹವನ್ನು ಕೊಂದು ಹಾಕುವುದು ನೆಪಮಾತ್ರ.

ಗೊತ್ತಿದ್ದವರು ದೇಹದ ಸಿರಿಯ ಆಗನು ಅರಿಯರು ಹೋಗನು ಅರಿಯರು. ಸಕಲ ದೇಹಗಳಲ್ಲಿಯೂ ದೇವರಿದ್ದಾನೆ ಎಂದು ದೇಹದಲ್ಲಿಯೇ ಇರುವ ಮನಕ್ಕೆ ಗೊತ್ತಾದಾಗ ದೇವರಿದ್ದ ದೇಹವನ್ನು ದೇವರು ಬಿಟ್ಟು ಹೋದರೂ ಒಂದೇ ಅದನ್ನು ದೇವರು ಕೆಡವಿದರೂ ಒಂದೇ. ದೇವರಿದ್ದ ದೇಹವನ್ನು ದೇವರೇ ಹೊಡೆದು ಕೊಂದು ಹಾಕಿದ; ದೇವರಿದ್ದ ದೇಹವನ್ನು ದೇವರೇ ಬಿಟ್ಟು ಹೋದ !

**654**

**ದೇಹವೆಂಬ ದೇವಾಲಯದಲ್ಲಿ**
**ದೇವಾಲಯದವರ ಮೂವರು ಮಂದಿಯ ಕಾಣದೆ**
**ಕಂಗೆಟ್ಟಿದ್ದೇನೆ ಗುರುವೆ.**
**ದೇಗುಲದೊಡೆಯರ ಕರತಂದು ದೇವಾಲಯದಂತುವ ತೋರಾ**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ದೇವರು ಇದ್ದಾನೆ; ದೇವಾಲಯವೂ ಇದೆ; ದೇವರನ್ನು ಆರಾಧಿಸಬೇಕಾದ ಭಕ್ತನೂ ಇದ್ದಾನೆ ಆದರೂ ಒಬ್ಬರಿಗೊಬ್ಬರು ಸಂಬಂಧ ವಿಲ್ಲದಂತೆ ದೇವಾಲಯ ಹಾಳು ಬಿದ್ದಿದೆ.

ಎನ್ನ ಕಾಲೇ ಕಂಬ ದೇಹವೇ ದೇವಾಲಯ ಶಿರವೇ ಹೊನ್ನ ಕಳಶವಯ್ಯಾ ಎಂದು ಬಸವಣ್ಣನವರು ದೇವಾಲಯದ ಪರಿಚಯವನ್ನು ಸಕಲ ದೇಹಗಳಿಗೆ ಮಾಡಿಸಿದ್ದಾರೆ. ದೇಹ ದೇವಾಲಯವಾಗಿದ್ದರೂ, ದೇಹವೇ ದೇವಾಲಯವೆಂದು ದೇಹ ವೇದಿಕೆ ಮೇಲೆ ನಿಂತು ಕೂಗುತ್ತಿದೆಯೇ ಹೊರತು, ದೇಹಕ್ಕೆ ತಾನು ದೇವಾಲಯವೆಂದು ಅನುಭವಕ್ಕೆ ಬರುತ್ತಿಲ್ಲ.

ದೇಹವೇ ದೇವಾಲಯ. ಈ ದೇವಾಲಯದಲ್ಲಿ ದೇಹವನ್ನು ಧರಿಸಿದ ದೇವರು ಒಬ್ಬನಿದ್ದಾನೆ. ದೇಹವನ್ನು ಆವರಿಸಿದ ಮನವೂ ಒಂದು ದೇಹವೇ ಆಗಿದೆ. ಈ ದೇಹ ಭಕ್ತನಾಗಿ ದೇಹದಲ್ಲಿಯೇ ಇದ್ದ ದೇವರನ್ನು ಆರಾಧಿಸಬೇಕು.

ದೇಹ ದೇವರು ಭಕ್ತ ಈ ಮೂವರೂ ಒಬ್ಬರಿಗೊಬ್ಬರು ಸಂಬಂಧವಿಲ್ಲದಂತೆ ಇದ್ದಾರೆ. ದೇವಾಲಯದಲ್ಲಿಯ ಈ ಮೂವರನ್ನು ಕಾಣದೇ ಕಂಗೆಟ್ಟಿದ್ದೇನೆ ಗುರುವೆ ಎಂದು ಸಿದ್ಧರಾಮ ಶಿವಯೋಗಿಗಳು ದೇಹದಲ್ಲಿಯೇ ಇದ್ದ ಅರಿವೆಂಬ ಗುರುದೇವನೊಂದಿಗೆ ಮಾತನಾಡಿದ್ದಾರೆ.

ಸಿದ್ಧರಾಮ ಶಿವಯೋಗಿಗೆ ಈ ಮೂವರನ್ನು ಒಂದು ಮಾಡುವ ಆಸೆ ! ಎಂತಹ ಕರುಣಾ ಮಯಿ ಈತ.

ದೇಗುಲದೊಡೆಯರ ಕರತಂದು ದೇವಾಲಯದಂತುವ ತೋರಾ ಕಪಿಲಸಿದ್ಧ ಮಲ್ಲಿನಾಥ ಯ್ಯಾ:

ದೇವರು ಒಡಲೊಳಗೆ ಇದ್ದಾನೆ; ಒಡಲು ಸೋಂಕಿಲ್ಲ ಒಡಲಿಗೆ ಆಧಾರವಾಗಿದ್ದಾನೆ; ಒಡಲನ್ನು ಬೆಳಗುತ್ತಿದ್ದಾನೆ; ಬೆಳಗಿಂಗೆ ಬೆಳಗಾಗಿ ಬೆಳಗುತ್ತಿದ್ದಾನೆ ಎಂದು ಪ್ರಭುದೇವರು ಹೇಳಿದ್ದಾರೆ. ಒಡಲೊಡೆಯ ಒಡಲೊಳಗಿದ್ದರೂ ಒಡಲನ್ನು ಆವರಿಸಿದ ಮನಕ್ಕೆ ಪರಿಚಯವಿಲ್ಲದಂತೆ ಇದ್ದಾನೆ; ಒಡಲಿಗೆ ಪರಿಚಯವಿಲ್ಲದಂತೆ ಇದ್ದಾನೆ.

ದೇಹದಲ್ಲಿಯೇ ಇದ್ದ ದೇವರ ಪರಿಚಯ ದೇಹಕ್ಕೆ, ದೇಹವನ್ನು ಆವರಿಸಿದ ಮನಕ್ಕೆ ಇಲ್ಲದ್ದಕ್ಕಾಗಿ, ಮನ ದೇಹದೊಂದಿಗೆ ಸಂಗ ಮಾಡಿ ತನಗೆ ಬೇಕಾದ ದೇವರನ್ನು ಕಲ್ಲು ಲೋಹ ಮಣ್ಣಲ್ಲಿ ಮಾಡಿ ಅದಕ್ಕೊಂದು ಭವ್ಯವಾದ ಆಲಯವನ್ನು ನಿರ್ಮಿಸಿ ದೇಹ ದೇವರನ್ನು ಆರಾಧಿಸುತ್ತದೆ.

ದೇಹವನ್ನು ಆವರಿಸಿದ ಮನ, ತನ್ನನ್ನು ದೇಹವನ್ನು ಸೃಷ್ಟಿ ಮಾಡಿ ದೇಹದಲ್ಲಿಯೇ ಇದ್ದ ದೇವರನ್ನು ಮರೆತು ದೇಹದಿಂದಲೇ ಮಾಡಿದ ದೇವರನ್ನು ದೇಹ ಆರಾಧಿಸುತ್ತಲಿದೆ.

ಮೂವರು ಆಡುವ ಈ ಆಟವನ್ನು ನೋಡಿ ಕಂಗೆಟ್ಟಿದ್ದೇನೆ ಗುರುವೆ. ಭಾಷೆ ವೇಷ ದೇಶ ಗಡಿ ಬೇರೆ ಬೇರೆಯಾದರೇನು ? ದೇಹ ಎನ್ನುವುದು ಒಂದೇ ಅಲ್ಲವೆ ? ದೇಹಲ್ಲಿಯೇ ಇದ್ದ ದೇವರು ಕೂಡಾ ಒಬ್ಬನೇ ಅಲ್ಲವೆ ? ದೇಹದಲ್ಲಿಯೇ ಇದ್ದ ದೇವರನ್ನು ಪೂಜಿಸಬೇಕಾದ ಮನವೆಂಬ ಭಕ್ತನು ಕೂಡಾ ಒಬ್ಬನೇ ಅಲ್ಲವೆ ?

ಮೂವರು ಕೂಡಿ ಒಂದೇ ಜಾಗದಲ್ಲಿದ್ದರೂ ದೇಹ ಮುಸಲ್ಮಾನನಾಗಿ ನಾನು ಬೇರೆ ದೇವರೆ ಬೇರೆ ಎಂದು ದೇವರನ್ನು ಪ್ರಾರ್ಥಿಸುತ್ತದೆ. ದೇಹದಲ್ಲಿಯೇ ದೇವರನ್ನು ಬಚ್ಚಿಟ್ಟುಕೊಂಡ ದೇಹಗಳು ಕೈ ಮೇಲೆ ಮಾಡಿ ದೇವರನ್ನು ಪ್ರಾರ್ಥಿಸಿದರೆ ದೇಹದಲ್ಲಿಯೇ ಇದ್ದ ದೇವರು ದೇಹದ ಸ್ಥಿತಿಯನ್ನು ನೋಡಿ ನಗಲಾರನೆ ?

ದೇಹದಲ್ಲಿಯೇ ಇದ್ದ ದೇವರನ್ನು ಆರಾಧಿಸಲು ಕ್ರಿಸ್ತ ಹೇಳಿದರೆ, ಹೇಳಿದ ಕ್ರಿಸ್ತನನ್ನೇ ದೇವರೆಂದು ಆರಾಧಿಸಿದರೆ ದೇವರಾದರೂ ಏನು ಮಾಡಿಯಾನು?

ದೇಹದಲ್ಲಿಯೇ ಇದ್ದ ದೇವರನ್ನು ದೇಹವೇ ಮರೆತು, ಕಲ್ಲು ಮಣ್ಣು ಕಟ್ಟಿಗೆಯಲ್ಲಿ ಹುಡುಕುವ ದೇಹವನ್ನು ನೋಡಿ ಕಂಗೆಟ್ಟಿದ್ದೇನೆ ಗುರುವೆ. ದೇಗುಲ ದೊಡೆಯರ ಕರೆದು ತಂದು ದೇವಾಲಯದಂತುವ ತೋರಾ ಕಪಿಲಸಿದ್ಧ ಮಲ್ಲಿನಾಥಯ್ಯಾ ಎಂದು ಸಿದ್ಧರಾಮ ಶಿವಯೋಗಿಗಳು ದೇಹದಲ್ಲಿಯೇ ಇದ್ದ ದೇವರನ್ನು ಬೇಡಿಕೊಂಡಿದ್ದಾರೆ.

**ದೇಹಸಂಗವ ಕಳೆದು ವಾಯುಪ್ರಾಣವ ಕೊಂದು**
**ಕಾಯ ನಿರ್ಮಳತೆಯನು ಮಾಡಿ**
**ಎನ್ನ ವಾಯದಲೋನ್ನತದ ವ್ಯಾಕುಲವ ಬಿಡಿಸೀಗ**
**ಏಕಾಕ್ಷರದ ಭೇದವನರುಪಿ ಚತುಃಪದವನತಿಗಳೆದು**
**ಶುದ್ಧ ಆನಂದ ಭಾವತ್ರಯಲಿಂಗ ಮೂಲವನು ಮಾಡಿ ಭಾವಿಸುತ**
**ಸಕಳ ನಿಃಕಳ ತತ್ವ ತುರೀಯ ತ್ವಂಪದ ತತ್ತ್ವಾರ್ಥವನೋರಂತೆ**
**ಅರುಪಿದ ಆನಂದ ತತ್ವಾತೀತನು ಶ್ರೀಗುರು ಚೆನ್ನಬಸವಣ್ಣನಯ್ಯಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಬಯಲು ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದೆ. ಬಯಲಿನಿಂದಲೇ ಜನ್ಮ ಪಡೆದ ಬ್ರಹ್ಮಾಂಡ ಬಯಲನ್ನೇ ಆಶ್ರಯ ಮಾಡಿಕೊಂಡು ಬಯಲಲ್ಲಿಯೇ ಇದೆ. ಬಯಲಲ್ಲಿ ವಾಯು ಅಗ್ನಿ ಜಲ ಪೃಥ್ವಿ ಇದ್ದರೂ ಇವುಗಳ ಅವಶ್ಯಕತೆ ಬಯಲಿಗಿಲ್ಲ. ಆದರೆ ದೇಹ ತಾನು ಬಯಲ ಬೀಜದಿಂದ ಹುಟ್ಟಿದ ವೃಕ್ಷವೆಂಬುದನ್ನು ಮರೆತುದರಿಂದಾಗಿ ವಾಯುವಿನ ಸಂಗ ಮಾಡಿದೆ. ಅಗ್ನಿಯ ಸಂಗ ಮಾಡಿದೆ. ಜಲದ ಸಂಗ ಮಾಡಿದೆ. ಪೃಥ್ವಿಯ ಸಂಗ ಮಾಡಿದೆ.

ಬಯಲಿಂದಲೇ ಹುಟ್ಟಿದ ಅಗ್ನಿ ಪೃಥ್ವಿ ಜಲ ವಾಯು, ಬಯಲಿಂದಲೇ ಹುಟ್ಟಿದ ಕಾಯದ ಸಂಗ ಮಾಡಿ, ತಮ್ಮಿಂದಲೇ ಕಾಯ ಕಾಯದ ಪ್ರಾಣ ಎಂದು ಬಲವಾಗಿ ತಿಳಿದುಕೊಂಡಿವೆ. ದೇಹ ಕೂಡಾ ನಾಲ್ಕು ಭೂತಗಳಿಲ್ಲದಿದ್ದರೆ ತಾನು ಇಲ್ಲವೇ ಇಲ್ಲ ಎಂದು ತಿಳಿದುಕೊಂಡಿದೆ.

ಕಾಯ ತಾನು ಬಯಲ ವೃಕ್ಷ ಎನ್ನುವುದನ್ನು ಮರೆತಿದೆ. ಹಾಗೆಯೇ ಪೃಥ್ವಿ ಜಲ ಅಗ್ನಿ ವಾಯು ಕೂಡಾ ತಾವು ಬಯಲ ಪ್ರಸಾದವೆಂಬುದನ್ನೇ ಮರೆತು ಹೋಗಿವೆ. ಹೀಗಾಗಿ ದೇಹದ ಸಂಗ ಮಾಡಿದ ವಾಯು ದೇಹದ ಪ್ರಾಣವನ್ನು ಕೊಲ್ಲುತ್ತದೆ.

ಗುರುದೇವ ಓಂ ಎಂಬ ಏಕಾಕ್ಷರವನ್ನು ಕಾಯಕ್ಕೆ ಬೋಧಿಸಿ ಕಾಯದಲ್ಲಿರುವ ಬಯಲ ಸಂಪತ್ತನ್ನು ಕಾಯಕ್ಕೆ ತೋರಿಸುತ್ತಾನೆ.

ಸಾಲೋಕ್ಯ ಸಾಮಿಪ್ಯ ಸಾರೂಪ್ಯ ಸಾಯುಜ್ಯ ಎಂಬ ಚತುಃಪದವನ್ನು ಅತಿಗಳೆದು, ಶುದ್ಧ ಆನಂದ ಭಾವತ್ರಯಲಿಂಗ ಮೂಲವನು ಮಾಡಿ ಭಾವಿಸಲು ಹೇಳುತ್ತಾನೆ.

ಸಾಲೋಕ್ಯವೆಂದರೆ ತನುವಿನ ಆರಾಧ್ಯ ದೇವತೆಯಾದ ಬಯಲ ದೇವನೊಂದಿಗೆ ವಾಸಿಸುವಂತೆ ಬೋಧಿಸುತ್ತಾನೆ. ಸಾಮಿಪ್ಯವೆಂದರೆ ಬಯಲ ದೇವನ ಸಾನ್ನಿಧ್ಯದಲ್ಲಿಯೇ ವಾಸಿಸುವುದನ್ನು ತಿಳಿಸಿಕೊಡುತ್ತಾನೆ. ಸಾರೂಪ್ಯವೆಂದರೆ ಆ ದೇವನಿಗೆ ಸಮನಾದ ರೂಪವನ್ನು ಧರಿಸುವುದನ್ನು ಹೇಳಿಕೊಡುತ್ತಾನೆ.

ಸಾಯುಜ್ಯವೆಂದರೆ ಆ ದೇವನಿಗೆ ಸಮನಾದ ರೂಪವನ್ನು ಧರಿಸುವುದು. ಇವು ನಾಲ್ಕೂ ದೇವತಾರಾಧಕರನು ಪಡೆವ ಪದವಿಗಳು. ಈ ನಾಲ್ಕೂ ಪದವಿಗಳನ್ನು ಮೀರಿದವನು ದೇಶ ಕಾಲ ರೂಪ ಹಾಗೂ ಭಾವ ಭೇದಗಳನ್ನೆಲ್ಲ ಅಳಿದವನು.

ತತ್ವವೇ ತಾನಾಗಿರುವಾಗ ತತ್ವವನ್ನು ಪಾಲಿಸುವುದು ಅದನ್ನು ಕಲಿಯುವುದು ಕಾಯಕ್ಕೆ ರೂಢಿಯಾಗಿದೆ. ಕಾಯ ತತ್ವ ಬೇರೆ ಬೇರೆ ಅಲ್ಲವೆಂದು ಕಾಯವೇ ಪ್ರತಿಪಾದಿಸಿದಾಗ, ಅದನ್ನು

ಅಕ್ಷರ ರೂಪದಲ್ಲಿ ತಂದು ದಾಖಲಿಸಿದಾಗ, ಕಾಯ ದಾಖಲಿಸಿದ ಕಾಯವನ್ನು ಆರಾಧಿಸುವುದು ಕಾಯದ ಮರೆವು ಆಗಿದೆ. ಕಾಯದಲ್ಲಿಯೇ ತತ್ವವಿದೆಯೆಂದು ಕಾಯವನ್ನು ಆವರಿಸಿದ ಮನಕ್ಕೆ ಅರಿವಾದರೆ ಸಾಕು ಆ ತತ್ವವೇ ತಾನಾಗುತ್ತದೆ. ಹೀಗೆ ಅರುಹಿದಾತನೇ ಚೆನ್ನಬಸವಣ್ಣನೆಂದು ಸಿದ್ಧರಾಮ ಶಿವಯೋಗಿಗಳು ಕೊಂಡಾಡಿದ್ದಾರೆ.

**656**

**(ದೋಷವು)? ಮನದಲ್ಲಿದ್ದು ಕಾರ್ಯದಲ್ಲಿಲ್ಲದವಗೆ ಶತಜನ್ಮಕ್ಕೆ ಮೋಕ್ಷ.**
**ಕಾಯದಲ್ಲಿದ್ದು ಮನದಲ್ಲಿಲ್ಲದವಗೆ ಮೂರು ಜನ್ಮಕ್ಕೆ ಮೋಕ್ಷ.**
**ಕಾಯ ಮನೋಯುಗದಲ್ಲಿಲ್ಲದವ ಮೋಕ್ಷರೂಪು ನೋಡಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜ್ಞಾನ ಕಾಯ ಮನೋಕಾಯ ಸ್ಥೂಲಕಾಯ ಎಂದು ಮೂರು ತೆರನ ಕಾಯಗಳು ಕೂಡಿಕೊಂಡು ಸ್ಥೂಲಕಾಯದ ಮೂಲಕ ಕಾಣುತ್ತದೆ.

ಮನೋಕಾಯದಲ್ಲಿ ದೋಷವಿದ್ದು ಅದು ಕಾಯದ ಸಂಗ ಮಾಡಿದರೆ ನೂರು ಜನ್ಮಕ್ಕೆ ಮೋಕ್ಷ ಲಭಿಸುತ್ತದೆ ಎಂದು ಸಿದ್ಧರಾಮ ಶಿವಯೋಗಿಗಳು ಅನುಭವದಿಂದ ಹೇಳಿದ್ದಾರೆ.

ಕಾಯದಲ್ಲಿ ದೋಷವಿದ್ದು ಅದು ಮನದ ಸಂಗ ಮಾಡಿದರೆ ಮೂರು ಜನ್ಮಕ್ಕೆ ಮೋಕ್ಷ ಲಭಿಸುತ್ತದೆ ಎಂದು ನಿಖರವಾಗಿ ಹೇಳಿದ್ದಾರೆ ಶರಣರು.

ಮನದಲ್ಲಿದ್ದ ದೋಷ ಮನಕ್ಕೆ ಗೊತ್ತಾದರೆ ಮನೋಕಾಯ ಜ್ಞಾನಕಾಯಕ್ಕೆ ಶರಣು ಹೋದರೆ ಸಾಕು ಒಂದೇ ಜನ್ಮದಲ್ಲಿ ಮುಕ್ತನಾಗುತ್ತಾನೆ. ಮನೋಕಾಯ ಸ್ಥೂಲಕಾಯದ ಸಂಗ ಸಂಪೂರ್ಣ ಬಿಡಬೇಕಾಗುತ್ತದೆ.

ಮನೋಕಾಯ ದೋಷದಲ್ಲಿದ್ದು ಕಾಯದ ಸಂಗ ಮಾಡಿದಾಗ ಆ ಸಕಲ ದೋಷವನ್ನು ಕಾಯದಲ್ಲಿಟ್ಟು ತನಗೆ ಬೇಕಾದಾಗ ಮನೋಕಾಯ ಬಳಕೆ ಮಾಡುತ್ತದೆ. ಹಾಗೆ ಬಳಕೆ ಮಾಡುವಾಗ ಸ್ಥೂಲಕಾಯದ ಜೊತೆಗೆ ಇರುತ್ತದೆ. ಮನೋಕಾಯ ಮಾಡುವ ತಪ್ಪುಗಳನ್ನು ಸ್ಥೂಲಕಾಯದ ಮೂಲಕ ಪ್ರಕಟಿಸುತ್ತದೆ. ಅದು ಸ್ಥೂಲಕಾಯದ ದೋಷವೆಂದು ಸಕಲ ಸ್ಥೂಲಕಾಯಗಳು ತಿಳಿಯುತ್ತವೆ. ಸಕಲ ಸ್ಥೂಲಕಾಯಗಳು ಸೇರಿ ನಿರಪರಾಧಿ ಸ್ಥೂಲಕಾಯಕ್ಕೆ ಶಿಕ್ಷೆ ಕೊಡುತ್ತದೆ. ಇದು ಸ್ಥೂಲಕಾಯದ ದೋಷ !

ಮನೋಕಾಯದ ದೋಷವನ್ನು ಸ್ಥೂಲಕಾಯದ ಮೇಲೆ ಹೇರಲು ಬಂದಾಗ, ಸ್ಥೂಲಕಾಯ ಪ್ರತಿಭಟಿಸದಿದ್ದರೆ ಅದು ಸ್ಥೂಲಕಾಯದ ದೋಷವೂ ಆಗುತ್ತದೆ. ಆದರೆ ಪ್ರತಿಭಟಿಸಲು ಸ್ಥೂಲಕಾಯಕ್ಕೆ ಸಾಧ್ಯವಾಗುವುದಿಲ್ಲ. ಏಕೆಂದರೆ ಮನೋಕಾಯ ದೋಷದ ಮೂಲಕ ಸ್ಥೂಲ ಕಾಯದಿಂದ ಸುಖಿಸುತ್ತದೆ. ಮನೋಕಾಯದ ದೋಷದ ಸುಖವನ್ನು ಸ್ಥೂಲಕಾಯ ಕೂಡಾ ಅನುಭವಿಸಿ ದೋಷಕ್ಕೆ ಗುರಿಯಾಗುತ್ತದೆ. ಹಾಗೆಯೇ ಮನೋಕಾಯದ ಸಕಲ ದೋಷಗಳು ಸ್ಥೂಲಕಾಯದಲ್ಲಿ ಸಂಗ್ರಹವಾಗುತ್ತವೆ.

ಕಾಯ ಮಾನಸಿಕ ಹಾದರದಲ್ಲಿ ತೊಡಗಿದರೆ ಅದು ಮನೋಕಾಯದ ದೋಷ. ಕಾಯ, ಮನೋಕಾಯದ ದೋಷ ಪೂರ್ಣ ಸುಖಕ್ಕೆ ಸ್ಪಂದಿಸಿ ಸುಖದಲ್ಲಿ ನಿರತವಾದರೆ ಅದು ಭೌತಿಕ ಸುಖ. ಮನೋಕಾಯ ಸ್ಥೂಲಕಾಯಗಳೆರಡೂ ದೋಷದಿಂದ ಕೂಡಿವೆ ಎಂದು ಸಕಲ ಕಾಯಗಳ ಗಮನಕ್ಕೆ ಬರುತ್ತದೆ.

ಮನೋಕಾಯ ತನ್ನ ದೋಷಪೂರಿತ ಸುಖವನ್ನು ಕಾಯದ ಮೂಲಕ ಅನುಭವಿಸಲು ಸಿದ್ಧವಾದಾಗ ಕಾಯ ಪ್ರತಿಭಟಿಸಿದರೆ ಆಗ ಮನೋಕಾಯ ತನ್ನ ಹಾದರದ ಮೂಲಕ ಸುಖ ಅನುಭವಿಸುತ್ತದೆ. ಆಗ ತನ್ನ ತಪ್ಪು ಮನೋಕಾಯದ ಅರಿವಿಗೆ ಬರುತ್ತದೆ; ಸ್ಥೂಲಕಾಯದ ಅನುಭವಕ್ಕೆ ಕೂಡಾ ಬರುತ್ತದೆ. ಈ ಎರಡೂ ಕಾಯಗಳಿಗೆ ಜ್ಞಾನ ಕಾಯ ಮಾಹಿತಿ ಕೊಡುತ್ತದೆ.

ಜ್ಞಾನ ಕಾಯವೆಂಬುದು ಮನೋಕಾಯಕ್ಕೂ ಸ್ಥೂಲಕಾಯಕ್ಕೂ ಜನ್ಮ ನೀಡಿ ಸ್ಥೂಲಕಾಯದಲ್ಲಿಯೇ ಸಂಗಮವಾಗಿದೆ. ಮನೋಕಾಯದ ದೋಷವನ್ನು ಮನೋಕಾಯಕ್ಕೆ ಮನವರಿಕೆಯಾಗುವ ಹಾಗೆ ಜ್ಞಾನ ಕಾಯ ಕೂಡಲೇ ಮನೋಕಾಯಕ್ಕೆ ಪಾಠ ಮಾಡುತ್ತದೆ. ಸ್ಥೂಲ ಕಾಯ ಮನೋಕಾಯದ ದೋಷದ ಸುಖ ಉಣ್ಣಲು ಸಿದ್ದವಾದಾಗ, ಜ್ಞಾನ ಕಾಯ ಕೂಡಲೇ ತಡೆದು ನಿಲ್ಲಿಸುವ ಯತ್ನ ಮಾಡುತ್ತದೆ. ಸ್ಥೂಲಕಾಯಕ್ಕೆ ದೋಷದ ರುಚಿ ಅಧಿಕವಾಗಿ ದೋಷಕ್ಕೆ ಭಾಜನವಾದಾಗ ಜ್ಞಾನಕಾಯ, ಸ್ಥೂಲಕಾಯ ಮನೋಕಾಯಗಳೆರಡಕ್ಕೂ ಅವುಗಳ ದೋಷವನ್ನು ಅವುಗಳಿಗೆ ಹೇಳಿ ಬೋಧಿಸುವ ಕಾಯಕದಲ್ಲಿ ಸದಾ ನಿರತವಾಗಿರುತ್ತದೆ.

ಸ್ಥೂಲಕಾಯ ಮತ್ತು ಮನೋಕಾಯಗಳೆರಡೂ ತಮ್ಮ ತಮ್ಮ ದೋಷಗಳ ಅಜ್ಞಾನವನ್ನು ಜ್ಞಾನಕಾಯಕ್ಕೆ ಅರ್ಪಣೆ ಮಾಡಿ ಸಂಪೂರ್ಣ ಶರಣಾಗತನಾಗುವದೇ ಶರಣ ಪರಂಪರೆ. ಈ ಕಾಯಕ ದಲ್ಲಿ ನಿರತವಾದ ಕಾಯ ಒಂದೇ ಜನ್ಮದಲ್ಲಿ ಮುಕ್ತನಾಗುತ್ತದೆ; ಹುರಿದ ಬೀಜದಂತೆ ಆಗುತ್ತದೆ.

**657**

**ಧನಕ್ಕೆ ಮನಕ್ಕೆ ಕಾಮಿಸದಿರು ಎನ್ನಯ್ಯಾ,**
**ನಿಮ್ಮ ನೆನೆದು ನಿಮ್ಮ ನೋಡಿ**
**ನಿಮ್ಮ ತೋರಿ ನಿಮ್ಮ ಚಿತ್ತದಲ್ಲಿರಿಸಾ.**
**ಸಲೆ ನಿಮ್ಮ ಬೇಡುವ ಮನ, ದಾಸಿಮನ ಮಾಡದಿರೆನ್ನ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ತಂದೆ.**

ತನು ನಿನ್ನದು, ಮನ ನಿನ್ನದು, ಧನವೂ ನಿನ್ನದು. ಹೀಗಿರುವಾಗ ಮನ ಮತ್ತು ಮನ ದಿಂದಲೇ ಜನ್ಮ ತಳೆದ (ಧನ) ಅರಿವನ್ನು ಬಳಕೆ ಮಾಡಿ ನಿನ್ನನ್ನು ನೆನೆದೆ. ಅದಕ್ಕಾಗಿ ನನ್ನನ್ನು ನೀನು ಕಾಮಿಸದಿರು ಎನ್ನಯ್ಯಾ.

ನಾನು ನಿನ್ನ ಬೆನ್ನ ಹಿಂದಿನ ಕೂಸು. ಸದಾ ನಿಮ್ಮ ನೋಡಿ, ನಿಮ್ಮನ್ನೇ ನೆನೆದು, ನಿಮ್ಮನ್ನು ಎನಗೆ ತೋರಿ, ನಿಮ್ಮ ಚಿತ್ತದಲ್ಲಿ ಇರಿಸು ಪರಮಾತ್ಮನೆ.

ಸದಾ ನಿಮ್ಮನ್ನು ಬೇಡುವ ಮನವನ್ನು ದಾಸಿ ಮನವನ್ನಾಗಿ ಮಾಡದಿರು ತಂದೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನೀನು ತಂದೆಯೇ ಆಗಿರುವಿ. ಮಾಂಸಪಿಂಡಕ್ಕೆ ಜನ್ಮ ಕೊಟ್ಟ ತಂದೆ ತಾಯಿಯನ್ನು ನೆನೆಯುವಂತೆ ಮಾಡಿದ್ದು ಕೂಡಾ ನೀನೇ ಆಗಿರುವಿ. ನೀನೇ ನನ್ನ ತಂದೆಯಾದರೂ ನಿನ್ನನ್ನು ಮರೆಯುವಂತೆ ಮಾಡಿದವನು ಕೂಡಾ ನೀನೇ ಆಗಿರುವಿ.

ಈ ನಿಮ್ಮ ಮಗುವಿನ ತನುವಿನಲ್ಲಿ ನಿಮ್ಮ ಚಿತ್ತವನ್ನು ಇರಿಸದೇ ಅದಕ್ಕೆ ನನ್ನ ಚಿತ್ತವನ್ನು ಇರಿಸಿರುವಿ. ನನ್ನ ಚಿತ್ತ ನಿನ್ನನ್ನು ನೋಡದು. ನೀನು ಸೃಷ್ಟಿ ಮಾಡಿದ ಸತ್ಯವನ್ನು ನೋಡುವ ಶಕ್ತಿಯೂ ಅದಕ್ಕಿಲ್ಲ ತಂದೆ.

''ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ ಬಿಚ್ಚಿ ನೋಡಿದರೆ ಹುರುಳಿಲ್ಲವಯ್ಯಾ'' ಎಂದು ಬಸವಣ್ಣನವರು ನಿನ್ನ ಮುಂದೆ ತಮ್ಮ ಅಳಲನ್ನು ಅರುಹಿ ನಿನ್ನತ್ತ ವಾಲುವ ಚಿತ್ತವನ್ನು ದಯಪಾಲಿಸಲು ನಿಮಗೆ ಬೇಡಿದರು. ತಮಗೊಂದೇ ಅಲ್ಲ; ಇಡೀ ಲೋಕದ ತನುಗಳಲ್ಲಿರುವ ಚಿತ್ತವನ್ನು ಕಳೆದು ತಮ್ಮತ್ತ ವಾಲುವ ಚಿತ್ತವನ್ನು ಕರುಣಿಸಲು ಬೇಡಿದರು.

ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು. ನಿನಗಲ್ಲದೆ ಅದನ್ನು ಬೇಡುವ ದಾಸಿಮನವನ್ನಾಗಿಸದಿರು ತಂದೆ; ಸತಿ ನಿಮ್ಮ ಬೇಡುವೆನು ಎಂದರು. ಅಷ್ಟೇ ಅಲ್ಲ; ಬೇಡಿದರೆ ಎನ್ನೊಡೆಯನ ಬೇಡುವೆ ; ಹಾಡಿದರೆ ಎನ್ನೊಡೆಯನ ಹಾಡುವೆ ಎಂದು ನಿಮ್ಮನ್ನು ನೆನೆದರು.

ನನ್ನ ಚಿತ್ತ ಹಳದಿ ಲೋಹವನ್ನು ನೋಡಿ ಚಿನ್ನವೆಂದು ಜೊಲ್ಲು ಸುರಿಸಿ ಖರೀದಿ ಮಾಡುತ್ತದೆ; ಇಲ್ಲ ಕೊಂದು ಪಡೆಯುತ್ತದೆ. ಚಿನ್ನಕ್ಕಾಗಿ ಯುದ್ಧ ಮಾಡಿ ಸಾವಿರಾರು ಜನರನ್ನು ಕೊಂದು ಹಾಕುತ್ತದೆ. ಮಣ್ಣಿಗಾಗಿ ಯುದ್ಧ ಮಾಡುತ್ತದೆ. ಮಣ್ಣಲ್ಲಿ ಹುಟ್ಟಿದ ಲೋಹವೆಂಬ ಉದಾಸೀನ ಚಿತ್ತಕ್ಕಿಲ್ಲ. ಏಕೆಂದರೆ ಅದು ಮನದಿಂದ ಸೃಷ್ಟಿಯಾಗಿದೆ. ಮನದಿಂದಲೇ ಸೃಷ್ಟಿಯಾದ ಅರಿವು ಕೂಡಾ ಹಾಗೆಯೇ ಇದೆ. ಚಿನ್ನದ ಕಿರೀಟವನ್ನು ನಿನಗೆ ಧರಿಸಿ ನಿನ್ನನ್ನು ಆರಾಧಿಸುತ್ತದೆ. ಚಿನ್ನದ ಕಳಶವನ್ನು ಶಿಖರಕ್ಕೆ ಧರಿಸಿ ನಿನ್ನನ್ನು ಆರಾಧಿಸುತ್ತದೆ.

ಧನ ಮನದ ಆಸೆಗಾಗಿ ನನ್ನನ್ನು ಕಾಮಿಸದಿರು ತಂದೆಯೇ ನಿಮ್ಮ ನೆನೆದು ನಿಮ್ಮ ನೋಡಿ ನಿಮ್ಮ ತೋರಿ ನಿಮ್ಮ ಚಿತ್ತದಲ್ಲಿರಿಸಾ. ಸತಿ ನಿಮ್ಮ ಬೇಡುವ ಮನವನ್ನು ದಾಸೀಮನವನ್ನಾಗಿ ಮಾಡದಿರಯ್ಯಾ.

**658**

**ಧರೆ ದೆಸೆವಳಯವೆಲ್ಲ ತನಗಾದಡೂ ನಿಲ್ಲಳು.**
**ಎನಿತು ತ್ರಿಭುವನ ರಾಜ್ಯ ಪದಂಗಳು ತನಗಾದಡೂ ನಿಲ್ಲಳು.**
**ಅನಿತರೊಳು ತೃಪ್ತಿವಡೆಯಳು.**
**ಈ ಆಸೆಯೆಂಬವಳಿಂದವೆ ನಿಮ್ಮಡೆಗಾಣದಿಪ್ಪೆನು.**
**ಈ ಆಸೆಯೆಂಬ ಪಾತಕಿಯನೆಂದಿಂಗೆ ನೀಗಿ**
**ಎಂದು ನಿಮ್ಮನೊಡಗೂಡಿ ಬೇರಾಗದಿಪ್ಪೆನೊ, ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಈ ಭೂಮಿಯ ಮೇಲಿದ್ದ ಸಂಪತ್ತೆಲ್ಲ ತನ್ನ ಕೈವಶವಾದಡೂ ತನುವನ್ನು ಆವರಿಸಿದ ಮನವೆಂಬ ಮಾಯೆಗೆ ಸಮಾಧಾನವಿಲ್ಲ. ತ್ರಿಭುವನದ ರಾಜ್ಯಪದಂಗಳು ತನ್ನ ಕೈವಶವಾದಡೂ ತನುವನ್ನು ಆವರಿಸಿದ ಮನವೆಂಬ ಮಾಯೆಗೆ ಒಂದಿನಿತೂ ಸಮಾಧಾನವಿಲ್ಲ. ತೃಪ್ತಿಯೆಂಬುದು ಇಲ್ಲವೇ ಇಲ್ಲ.

ಈ ಆಸೆಯೆಂಬ ಮಾಯೆ ಎನ್ನನ್ನು ಆವರಿಸಿದ್ದಕ್ಕಾಗಿ ನಾನು ನಿಮ್ಮೊಂದಿಗೆ ಕೂಡಲು ಸಾಧ್ಯವಾಗುತ್ತಿಲ್ಲ. ಎಂದು ಈ ಪಾತಕಿಯನ್ನು ಕೊಡವಿ ನಿಮ್ಮೊಂದಿಗೆ ಸಂಗಮವಾಗಿ ಬೇರಾಗದಂತಿರುವೆನೋ ಹೇಳಾ ತಂದೆ.

ತನುವಿನ ಸಂತಸಕ್ಕಾಗಿ ತನುವನ್ನು ಆವರಿಸಿದ ಮನ ಸುಳ್ಳು ಸಂಪತ್ತನ್ನು ಆಯ್ಕೆ ಮಾಡಿಕೊಂಡಿದೆ. ಮಣ್ಣನ್ನು ಆಯ್ಕೆ ಮಾಡಿಕೊಂಡಿದೆ ; ಮಣ್ಣಿಗಾಗಿ ಯುದ್ಧ ಮಾಡುತ್ತದೆ.

ಜಲ ಗಟ್ಟಿಯಾಗಿ ಮಣ್ಣಾಗಿದೆ. ಜಲವೇ ಗಟ್ಟಿಯಾಗಿ ಮಣ್ಣೊಳಗಿನ ಹೊನ್ನಾಗಿದೆ. ಜಲ ಬಿಂದುವೇ ಗರ್ಭದಲ್ಲಿ ಹೊಕ್ಕು ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ ಅವು ಸೋರದಂತೆ ಸುಂದರವಾದ ಚರ್ಮದ ಕವಚವಾಗಿ ತನುವಾಗಿದೆ.

ಜಗದಗಲ ಮುಗಿಲಗಲ ವ್ಯಾಪಿಸಿಕೊಂಡ ನೀನು, ತನುವಿನ ಮೂಲಕ ಇಡೀ ಬ್ರಹ್ಮಾಂಡವನ್ನು ನೋಡಲು ತನುವಿನಲ್ಲಿಯೇ ತನ್ಮಯವಾಗಿರುವಿ. ನಿನ್ನ ಜಗಮುಗಿಸುವ ಬೆಳಕಿನಿಂದ ನೆರಳಾಗಿ ತನುವನ್ನು ಮನವೆಂಬ ಮಾಯೆ ಆವರಿಸಿಕೊಂಡಿಹಳು.

ನಿನ್ನಿಂದ ಹುಟ್ಟಿದ ಮನವೆಂಬ ಮಾಯೆ ನಿನ್ನ ಸಂಗ ಮಾಡಿದರೆ ನೀನು ಸೃಷ್ಟಿ ಮಾಡಿದ ಬ್ರಹ್ಮಾಂಡವೆಲ್ಲ ತನು ಮತ್ತು ಮನದ ವಶವಾಗುತ್ತದೆ. ಆಗ ಇಡೀ ಬ್ರಹ್ಮಾಂಡದ ಅಧಿಪತಿಯೇ ತಾನಾಗುತ್ತದೆ. ಬ್ರಹ್ಮಪೀಠದ ಒಡೆಯನಾಗುತ್ತದೆ. ಆದರೆ ಮನವೆಂಬ ಮಾಯೆ ತನುವಿನ ಸಂಗ ಮಾಡಿ ಭೂಮಿ ಹೇಮ ಕಾಮಿನಿಯ ಸಂಗಕ್ಕಾಗಿ ಹಗಲಿರುಳೆನ್ನದೆ ಚಿಂತಿಸುತ್ತಾ ಸೃಷ್ಟಿ ಮಾಡಿದ ನಿನ್ನನ್ನೇ ಮರೆತು ಹೋಗಿದೆ.

ಭೂಮಿ ನಿನ್ನದಲ್ಲ ಹೇಮ ನಿನ್ನದಲ್ಲ ಕಾಮಿನಿಯು ನಿನ್ನವಳಲ್ಲ; ಇವು ಜಗಕ್ಕಿಕ್ಕಿದ ವಿಧಿ; ನಿನ್ನದೆಂಬುದು ಜ್ಞಾನರತ್ನ ಕಾಣಾ ಅದನ್ನು ಅಲಂಕರಿಸಿದೆಯಾದಡೆ ಎಲೆ ಮನವೆ ನಿನ್ನಂತಹ ಸಿರಿವಂತರು ಯಾರೂ ಇಲ್ಲ ಗುಹೇಶ್ವರ ಲಿಂಗದಲ್ಲಿ ಎಂದು ಪ್ರಭುದೇವರು ಮನಕ್ಕೆ ಬುದ್ಧಿಮಾತು ಹೇಳಿದ್ದಾರೆ. ಮನ ಕೇಳಬೇಕಲ್ಲ?

ಭೂಮಿ ಹೇಮ ವಿಷಯಕ್ಕಾಗಿ ತನುವನ್ನು ಆವರಿಸಿದ ಮನ ತನುವಿನೊಂದಿಗೆ ಯುದ್ಧ ಮಾಡುತ್ತದೆ. ಹಲವಾರು ತನುಗಳನ್ನು ಭೂಮಿ ಹೇಮ ವಿಷಯ ವಸ್ತುಗಳಿಗಾಗಿ ಸಾಯಿಸುತ್ತದೆ. ಸಕಲ ತನುಗಳಲ್ಲಿ ತನ್ಮಯವಾದ ಜ್ಞಾನೇಶ್ವರನನ್ನೇ ಮರೆಯುತ್ತದೆ.

ತನು ಮನವೆಂಬ ಮಾಯೆಗೆ ಆಶ್ರಯ ನೀಡಿ ತನುವಿನಲ್ಲಿಯೇ ತನ್ಮಯವಾದ ಜ್ಞಾನೇಶ್ವರನನ್ನು ಮರೆಯುತ್ತದೆ. ಮನ ಹೇಳಿದಂತೆ ತನು ಕೇಳುತ್ತದೆ; ತನುವಿನಲ್ಲಿಯೇ ತನ್ಮಯವಾದ ಜ್ಞಾನದೇವರು ಹೇಳಿದಂತೆ ತನು ಮನಾದಿಗಳು ಕೇಳುವುದೇ ಇಲ್ಲ.

ಜ್ಞಾನದೇವ ತನುವನ್ನು ತನ್ನತ್ತ ಸೆಳೆದರೆ ಮನವೆಂಬ ಮಾಯೆ ತನುವನ್ನು ತನ್ನತ್ತ ಸೆಳೆಯುತ್ತದೆ. ಹೀಗಾಗಿ ಭೂಮಿ ಹೇಮ ಕಾಮಿನಿಗಾಗಿ ತನು ತನುಕುಲವನ್ನೇ ಸರ್ವನಾಶ ಮಾಡಿ ತನುವೂ ಸಾಯುತ್ತದೆ. ಹೀಗೆ ಅಜ್ಞಾನದ ಎಷ್ಟೋ ಜನ್ಮಗಳನ್ನು ಹುಟ್ಟು ಸಾವುಗಳ ಮೂಲಕ ತನು ಕಳೆಯುತ್ತ ಸಾಗುತ್ತದೆ.

ತನುವಿನಲ್ಲಿ ತನ್ಮಯವಾದ ಜ್ಞಾನಕ್ಕೆ ಹುಟ್ಟು ಸಾವುಗಳಿಲ್ಲ. ತನುವನ್ನು ಆವರಿಸಿದ ಮನವೆಂಬ ಮಾಯೆ ತನುವಿನಲ್ಲಿಯೇ ತನ್ಮಯವಾದ ಜ್ಞಾನದೇವನ ಸಂಗ ಮಾಡಿದರೆ ಮಾಯೆ ಜ್ಞಾನದೇವನ ಮಡದಿಯಾಗುತ್ತಾಳೆ.

ಸತಿ ಪತಿಗಳಿಬ್ಬರು ಸಾವಿಲ್ಲದೆ ಕೇಡಿಲ್ಲದೆ ಕಾಯದಲ್ಲಿ ವಾಸ ಮಾಡುತ್ತಾರೆ. ತಾವು ವಾಸ ಮಾಡಿದ ಕಾಯವನ್ನೇ ಕೈಲಾಸವನ್ನಾಗಿಸುತ್ತಾರೆ. ತಮಗೆ ಸಾಕಾದಾಗ ಕಾಯ ಬಿಟ್ಟು ಬಯಲಿಂಗೆ ಬಯಲಾಗಿ ಹೋಗುತ್ತಾರೆ.

''ಎಂದು ನಿಮ್ಮೊಂದಿಗೆ ಕೂಡಿ ಬೇರಾಗದಿಪ್ಪೆನೋ ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ'' ಎಂದು ಮನವೆಂಬ ಮಾಯೆಗೆ ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರೊಂದಿಗೆ ಮಾತನಾಡುವ ಇಂತಹ ಶಿಕ್ಷಣದ ಭಾಗ್ಯ ಲಭಿಸುತ್ತದೆ ?

659

**ಧರೆಯಗಲದ ಜಲವು**
**ಕರಣೇಂದ್ರಿಯ ಗುಣವು**
**ತರತರದ ತೇಜದ ತೆರೆಯು ಬಂದು**
**ಪರಿಭವದ ತಡಿಗೆ ಹಾಕದ ಮುನ್ನ**
**ಮೃಡನೆ ನೀ ಕೈಗುಡಯ್ಯ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲಬಿಂದುವು ಗಟ್ಟಿಯಾಗಿ ಧರೆಯಾಗಿದೆ. ಧರೆಯ ಮೇಲೆ ಹರಿದ ಜಲಬಿಂದುವಿನಿಂದಲೇ ಸಕಲ ಸಸ್ಯಕಾಶಿಗಳು ಜನ್ಮ ತಳೆದಿವೆ. ಜಲದಲ್ಲಿರುವ ಜಲಚರಗಳು ಕೂಡಾ ಜಲದ ಹೊರತು ಬೇರಲ್ಲ. ಜಲವೇ ಇಡೀ ಬ್ರಹ್ಮಾಂಡಕ್ಕೆ ಜನ್ಮ ನೀಡಿ ಧರೆಯ ಮೇಲೆ ಒಳ ಹೊರಗೆನ್ನದೆ ಹರಿಯುತ್ತಲಿದೆ.

ಜಲಬಿಂದುವೇ ಜೀವಜಲಬಿಂದುವಾಗಿ ತನುವಾಗಿದೆ. ನೋಡುವುದಕ್ಕೆ ಕಣ್ಣಾಗಿದೆ; ಕೇಳುವುದಕ್ಕೆ ಕಿವಿಯಾಗಿದೆ; ಮುಟ್ಟುವುದಕ್ಕೆ ಚರ್ಮವಾಗಿದೆ; ಮೂಸಿಸುವುದಕ್ಕೆ ನಾಸಿಕವಾಗಿದೆ ; ರುಚಿಸುವುದಕ್ಕೆ ನಾಲಿಗೆಯಾಗಿದೆ.

ಸಕಲ ಕರಣೇಂದ್ರಿಯಗಳೇ ಆದ ಜಲ ಹಲವಾರು ಗುಣಗಳಿಗೆ ಜನ್ಮ ನೀಡಿದೆ. ನೋಡುವ ದೃಶ್ಯದಲ್ಲಿ ಸಾತ್ವಿಕ ರಾಜಸ ತಾಮಸ ಗುಣಗಳು ಹುಟ್ಟಿ ಇಡೀ ತನುವನ್ನು ಸುಖದುಃಖಗಳಿಗೆ ಈಡು ಮಾಡಿದೆ. ಹಾಗೆಯೇ ನೋಡುವ ದೃಶ್ಯದಲ್ಲಿ ನಿರ್ಗುಣವೂ ಇದೆ. ಈ ನಿರ್ಗುಣ ಬೆಳಗುವ ಬೆಳಕಿನ ಕಿರಣಗಳಿಂದಾಗಿ ಸಾತ್ವಿಕ ರಾಜಸ ತಾಮಸ ಗುಣಗಳು ಹುಟ್ಟಿವೆ. ಈ ಮೂರೂ ಗುಣಗಳ ದೃಶ್ಯ ನಿರ್ಗುಣ ದೃಶ್ಯದಲ್ಲಿ ಬೆರೆತಾಗ ಗುಣಾದಿಗಳು ತಮ್ಮ ಗುಣಗಳನ್ನು ಕಳೆದುಕೊಂಡು ನಿರ್ಗುಣವೇ ತಾವಾಗುತ್ತವೆ.

ಹೀಗಾಗಿ ಪರಮಾತ್ಮನನ್ನು ತ್ರಿಗುಣಾತೀತನೆಂದು ಕರೆಯುತ್ತಾರೆ. ಕಣ್ಣಲ್ಲಿಯೇ ಇರುವ ಈ ತ್ರಿಗುಣಾತೀತನ ದೃಶ್ಯವನ್ನು ಕಣ್ಣನ್ನು ಆವರಿಸಿರುವ ಸಾತ್ವಿಕ ರಾಜಸ ತಾಮಸ ಗುಣಗಳ ದೃಶ್ಯಗಳ ಮೂಲಕ ಕಂಡು ಹಿಡಿದು ನಿರ್ಗುಣದತ್ತ ಪ್ರಯಾಣ ಮಾಡಬೇಕಿದೆ.

ಸಾತ್ವಿಕ ರಾಜಸ ತಾಮಸ ಗುಣಗಳಿಂದ ಭರಿತವಾದ ದೃಶ್ಯ ತರತರದ ತೇಜವನ್ನು ಹೊಂದಿದೆ. ಈ ತೇಜದ ತೆರೆಯ ಅಲೆಯು ಬಂದು ಹಾಯಲು ತನು ತನ್ನ ತನವನ್ನೇ ಕಳೆದುಕೊಳ್ಳುತ್ತದೆ.

ದೇವೇಂದ್ರ, ದೇವತೆಗಳ ರಾಜ. ಆದರೂ ಋಷಿ ಪತ್ನಿಯನ್ನು ನೋಡಿ ಕಾಮದ ಉದ್ರೇಕಕ್ಕೆ ಒಳಗಾದ. ಕೋಳಿಯಾಗಿ ಕೂಗಿದ; ಮಲಗಿದ್ದ ಋಷಿಯನ್ನು ಸ್ನಾನಕ್ಕೆ ಕಳುಹಿಸಿದ; ಪುನಃ ಋಷಿಯ ವೇಷಧರಿಸಿ ಋಷಿ ಪತ್ನಿಯೊಂದಿಗೆ ಸುಖಿಸಿದ. ದೃಶ್ಯದ ತರತರದ ಅಲೆಗಳು ದೇವೇಂದ್ರನ ತನುವನ್ನು ಬಡಿದು ತನುವಿಗೆ ಸುಳ್ಳು ಸುಖವನ್ನು ನೀಡಿತು. ಪುನಃ ದುಃಖವನ್ನು ನೀಡಿತು. ತನ್ನ ಅಜ್ಞಾನವನ್ನು ತನುವಿನ ಮೂಲಕ ಮೆರೆದು ತನುವನ್ನೇ ಮೆಟ್ಟಿ ನಿಂತು ತನುವಿನಲ್ಲಿಯೇ ಮಾಯವಾಯಿತು.

ಬಲಿಷ್ಟ ರಾವಣ, ಸೀತೆಯನ್ನು ಅಜ್ಞಾನದಿಂದ ನೋಡಿ, ತನ್ನ ಹತ್ತು ತಲೆಗಳನ್ನು ಕಳೆದುಕೊಂಡ. ತನುವನ್ನು ಆವರಿಸಿದ ಮಾಯೆಯ ಆಟವೆಂದು ರಾಮ ತಿಳಿಯಲಿಲ್ಲ; ರಾವಣನು ಕೂಡಾ ತಿಳಿಯಲಿಲ್ಲ. ಏನೂ ಅರಿಯದ ತನು, ತನುವಿನ ಮಾಯೆಗೆ ತನುವೇ ಬಲಿಯಾಯಿತು.

ಜನನ ಮರಣಗಳ ದುಃಖಕ್ಕೆ ಒಳಗಾಗದ ಮುನ್ನ ಇದು ಮಾಯಾಜಾಲವೆಂದು ತಿಳಿಸಿ ಎನ್ನನ್ನು ರಕ್ಷಣೆ ಮಾಡು ತಂದೆಯೇ. ಮೃಡನೇ ನೀ ಎನ್ನ ಕೈ ಹಿಡಿದು ಮುನ್ನಡೆಸದಿದ್ದರೆ ನೀನು

ವಾಸ ಮಾಡಿದ ಕಾಯ ಕೈಲಾಸವೆಂದು ಕರೆಯಿಸಿಕೊಳ್ಳುವುದಾದರೂ ಹೇಗೆ ಎಂದು ಸಿದ್ಧರಾಮ ಶಿವಯೋಗಿಗಳು ಅಂಗದಲ್ಲಿ ಸಂಗಮವಾದ ಅರಿವಿನ ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**660**

**ಧರೆಯಗಲದೊಳಗೊಂದು ಹಿರಿದಪ್ಪ ಲೋಭವು**
**ತನುವೆಂಬುದನು ತಾನು ಲೀಯ್ಯಮಾಡಿ**
**ಮನ ಮಗ್ನದೊಳಗೆ ನೆಲೆಗೊಂಡನೆಂದಡೆ**
**ನೆಲೆಗೊಳ್ಳಲೀಯ್ಯದೆ ತನ್ನ ಮಾಯವ ಮಾಡಿತ್ತು**
**ಕರುಣಾಕರನೆ ಕಳೆದು ಕಾಯಯ್ಯ ತಂದೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವನ್ನು ಆವರಿಸಿದ ಲೋಭ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ಮರೆಯಿಸಿದೆ. ತನುವಿನಲ್ಲಿ ತನ್ಮಯವಾದ ಗುರುದೇವನನ್ನು ಮನಮಗ್ನವಾಗಿ ನೆಲೆಗೊಳ್ಳಲು ಆಸ್ಪದ ಕೊಡದೆ, ತನುವಿನ ಆಶ್ರಯ ಪಡೆದು, ತನುವನ್ನೇ ಕಾಡುತ್ತಲಿದೆ.

ಭಗವಂತನ ಚರಣ ಕಮಲಗಳಿಗೆ ದಾಸಾನು ದಾಸನಾಗದೆ, ಮನದಿಂದ ಹುಟ್ಟಿದ ಮಾಯೆ ಮನವನ್ನೇ ಕಾಡಿತ್ತು. ಕರುಣಾಕರನೆ ಈ ಮಾಯೆಯ ಕಳೆದು ಕಾಯಯ್ಯ ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಗುರುದೇವನೊಂದಿಗೆ ಮಾತನಾಡಿದ್ದಾರೆ.

''ಕಾಣಿಯ ಲೋಭ ಕೋಟಿಯ ಲಾಭವ ಕೆಡಿಸಿದುದ ನಾನರಿಯೆನಯ್ಯಾ. ಭಕ್ತಿಯ ಕುಳವನರಿಯದೆ ಮತಿಗೆಟ್ಟ ಪರಿಯ ನಾನರಿಯೆನಯ್ಯಾ. ಕೂಡಲ ಸಂಗನ ಶರಣರ ಸಂಗದಿಂದ ಅರಿದಡೆ ನಾನು ಬದುಕುವೆನಯ್ಯಾ'' ಎಂದು ಬಸವಣ್ಣನವರು ಮಾಯೆಯ ಬಗ್ಗೆ ಸಂಗಯ್ಯನೊಂದಿಗೆ ಮಾತನಾಡಿದ್ದಾರೆ.

ಪಂಚತಂತ್ರ ಕತೆಯಲ್ಲಿ ಹಸಿದ ತೋಳವೊಂದು ಹುಲಿ ಸತ್ತು ಬಿದ್ದುದನ್ನು ನೋಡುತ್ತದೆ. ಅದರ ಪಕ್ಕದಲ್ಲಿ ಬೇಟೆಗಾರನೊಬ್ಬ ತನ್ನ ಬಿಲ್ಲು ಬಾಣಗಳೊಂದಿಗೆ ಸತ್ತು ಬಿದ್ದುದನ್ನು ನೋಡುತ್ತದೆ. ಮೊದಲು ಹುಲಿಯನ್ನು ತಿನ್ನಲೇ ಅಥವಾ ಬೇಟೆಗಾರನನ್ನು ತಿನ್ನಲೇ ಎಂದು ಆಲೋಚಿಸುತ್ತದೆ. ಅಲ್ಲಿಯೇ ಬಿದ್ದ ಬಿಲ್ಲಿಗೆ ಕಟ್ಟಿದ ಚರ್ಮದ ದಾರವನ್ನು ಕಡಿಯಲು ನಿರ್ಧರಿಸುತ್ತದೆ. ಎದೆಯೇರಿಸಿ ಕಟ್ಟಿದ ಚರ್ಮದ ದಾರ ಕಡಿಯುವುದೊಂದೇ ತಡ ಬಿಲ್ಲು ಸಿಡಿದು ತೋಳದ ಗಂಟಲಿಗೆ ಚುಚ್ಚಿ ವಿಲವಿಲನೆ ಒದ್ದಾಡಿ ಪ್ರಾಣ ಬಿಡುತ್ತದೆ. ಕಾಣಿಯ ಲೋಭ ಕೋಟಿಯ ಲಾಭವ ಕೆಡಿಸಿದ ಕತೆಯಿದು.

ತೀರ್ಥಂಕರರು ಕತೆಗಳನ್ನು ಹೇಳುವ ಮೂಲಕ ತನುವನ್ನು ಆವರಿಸಿದ ಮಾಯೆಯನ್ನು ಕಳೆಯುವ ಪ್ರಯತ್ನ ಮಾಡಿರುವುದು ಜೈನ ಕಥಾಕೋಶ ಓದಿದಾಗ ತಿಳಿಯುತ್ತದೆ. ಸುಮಾರು ಎರಡು ಸಾವಿರದ ಐದುನೂರು ಕತೆಗಳನ್ನು ಇಪ್ಪತ್ತೈದು ಭಾಗಗಳನ್ನಾಗಿ ವಿಂಗಡಿಸಿ ಸಂದರ್ಭನುಸಾರವಾಗಿ ಆಯಾ ಕತೆ ಹೇಳಿ ತನುವಿನ ಅಜ್ಞಾನವನ್ನು ಎದುರಿಸುವ ಪ್ರಯತ್ನವನ್ನು ಮಹಾವೀರರು ಮಾಡಿದ್ದಾರೆ.

''ಲೋಭವೇಕೋ ಭಕ್ತಿಯ ಲಾಭ ಬಯಸುವಂಗೆ'' ಎಂದು ಬಸವಣ್ಣನವರು ಅರಿವೆಂಬ ಗುರುದೇವನಿಗೆ ಭಕ್ತಿಯನ್ನು ಮಾಡುವ ಮೂಲಕ ತನುವನ್ನು ಆವರಿಸಿದ ಲೋಭವನ್ನು ಕಳೆದುಕೊಳ್ಳಬಹುದು ಎಂದು ಹೇಳಿದ್ದಾರೆ.

ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ತನುವನ್ನು ಆವರಿಸಿದ ಮನ

ಭಕ್ತಿ ಮಾಡಿದರೆ ಸಾಕು ಅದು ಅರಿವೆಂಬ ಗುರುದೇವನ ಭಕ್ತನಾಗುತ್ತದೆ. ಮನ ಘನಮನವಾಗು ತ್ತದೆ. ಮನದಲ್ಲಿ ಮನೆ ಮಾಡಿಕೊಂಡು ತನುವನ್ನು ಹಗಲಿರುಳೆನ್ನದೆ ಕಾಡುವ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಕೂಡಲೇ ಉದುರಿಬೀಳುತ್ತವೆ. ಸಪ್ತವ್ಯಸನಗಳು ಸತ್ತು ಹೋಗುತ್ತವೆ. ಅಷ್ಟಮದಗಳು ದಿಕ್ಕಾಪಾಲಾಗಿ ಓಡುತ್ತವೆ. 'ಲೋಭ' ಕಾಣಿಗೆ ಸಮ; 'ಭಕ್ತಿ' ಕೋಟಿಗೆ ಸಮ. ದುಗ್ಗಾಣಿಯ ಲೋಭವನ್ನು ಅರಿಯದಿದ್ದರೆ ಕೆಡುವುದು ಮಾತ್ರ ತನುವೇ ಆಗಿದೆ.

**661**

**ಧವಳ ಮಂಟಪದೊಳಗೆ ಅವನಿಪ್ಪ ಎಮ್ಮ ನಲ್ಲ.**
**ಅವನ ಕೃಪೆಯಿಂ ಮಠವು ಪ್ರಬಲವಾಗೆ**
**ಕರುಣಾಕರನೆ ಕಪಿಲಸಿದ್ಧ ಮಲ್ಲೇಶ್ವರನ**
**ನೆನಹಿನ ಮಠಕಾನು ನಿತ್ಯವಕ್ಕೈ.**

ದೇಹವೆಂಬುದು ಶುಭ್ರವಾದ ಬಿಳಿಯ ಮಂಟಪ. ಬೆಳಗಿಂಗೆ ಬೆಳಗಾಗಿ ಬೆಳಗುವ ಅರಿ ವಿನ ಮಂಟಪ; ಆನಂದ ಮಂಟಪ. ಅದು ಕೈಲಾಸ.

ಕಾಯವೆಂಬ ಕೈಲಾಸದೊಳಗೆ ಅರಿವಿನ ನಲ್ಲನಿದ್ದಾನೆ. ಅವನ ಕೃಪೆಯಿಂದಾಗಿ ಕಾಯ ಜೀವದಿಂದ ಇದ್ದು ನಡೆದಾಡುತ್ತದೆ. ಅವನಿಗೆ ನಲ್ಲೆಯಾಗಬೇಕಾದ ಮನ ನಲ್ಲನಿದ್ದ ಕಾಯವನ್ನು ಕೈವಶ ಮಾಡಿಕೊಂಡಿದ್ದಾಳೆ. ನಲ್ಲನ ಕೃಪೆಯಿಂದ ಬೆಳಗಿಂಗೆ ಬೆಳಗಾಗಿ ಬೆಳಗಬೇಕಾದ ಕಾಯ ನ ಲ್ಲೆಯ ಕೈವಶವಾಗಿದೆ.

ನಲ್ಲೆ ಕಾಯದೊಂದಿಗೆ ಸಂಗ ಮಾಡಿ ತನಗೆ ಬೇಕಾದ ಹಾಗೆ ಹಾದರ ಮಾಡುತ್ತಾಳೆ. ನಲ್ಲನ ಮಾತು ನಲ್ಲೆಗೆ ಪಥ್ಯವಾಗುತ್ತಿಲ್ಲ. ಕಾಯಕ್ಕೆ ಅರ್ಥವಾಗುವುದಿಲ್ಲ. ಮನವೆಂಬ ನಲ್ಲೆ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ನಲ್ಲನ ಸಂಗ ಮಾಡಿದರೆ ಸಾಕು ಕತ್ತಲು ಆವರಿಸಿದ ಕಾಯ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ.

ನಲ್ಲನ ಕೃಪೆಯಿಂದ ಕಾಯವೆಂಬ ಕೈಲಾಸ ಮಿರಮಿರನೆ ಮಿಂಚುತ್ತದೆ. ಆಗ ಕಾಯವನ್ನು ಆವರಿಸಿದ ಮನವೆಂಬ ನಲ್ಲೆ ''ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ, ನಮ್ಮ ನಲ್ಲ ಸುಳಿಯ ಲಿಲ್ಲ, ಸುಳಿದು ಸಿಂಗಾರವ ಮಾಡಲಿಲ್ಲ, ಕೂಡಲ ಸಂಗಮದೇವನು ತನ್ನೊಳಗೆ ಬೈಚಿಟ್ಟನಾಗಿ'' ಎಂದು ಬಸವಣ್ಣ ನಲ್ಲನ ಕೈ ಹಿಡಿದು ಹಾಡಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ಮತ್ತೊಂದು ವಚನದಲ್ಲಿ ''ಎಮ್ಮ ಗಂಡನು ಏ ಕಾಂತಂಬೊಕ್ಕನು, ಬೇಗ ಬೇಗ ಹೊರನಡಿಯಿರಣ್ಣಗಳಿರಾ. ಒಬ್ಬನಿದ್ದಡೂ ಸೈರಿಸ ಕಪಿಲಸಿದ್ಧ ಮ ಲ್ಲಿಕಾರ್ಜುನಾ'' ಎಂದು ತಾವು ಗಂಡಾದರೂ ಹೆಣ್ಣಾಗಿ ಅರಿವಿನ ಗಂಡನ ಕುರಿತು ಹಾಡಿದ್ದಾರೆ.

ಕಾಯ ಸುಳ್ಳು ಸುಖ ಸುಳ್ಳು ದುಃಖದಿಂದ ಹೊರಗಾಗುವ ಪರಮ ಸುಖವನ್ನು ಹೊಂದಬೇಕಾದರೆ ಕಾಯವನ್ನು ಆವರಿಸಿದ ಮನವೆಂಬ ನಲ್ಲೆ ಕಾಯದಲ್ಲಿಯೇ ಸಂಗಮವಾದ ಅರಿವಿನ ಗಂಡನೊಂದಿಗೆ ಮಲಗಬೇಕು. ಆತ ಮನವೆಂಬ ನಲ್ಲೆಯೊಂದಿಗೆ ರಮಿಸಬೇಕಾದರೆ ಕಾಯದಲ್ಲಿ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ಇರಬಾರದು. ಸಪ್ತವ್ಯಸನಗಳು, ಅಷ್ಟಮದಗಳು ಕೂಡಾ ಇರಬಾರದು. ಇವರಲ್ಲಿ ಯಾರಾದರೂ ಒಬ್ಬರು ಇದ್ದರು ಕೂಡಾನಲ್ಲ

ನಲ್ಲೆಯನ್ನು ಏಕಾಂತಕ್ಕೆ ಕರೆಯುವುದಿಲ್ಲ.

ಮನವೆಂಬ ನಲ್ಲೆಗೆ ಕಾಯದಲ್ಲಿಯೇ ಇದ್ದ ಅರಿವಿನ ನಲ್ಲನ ಪರಿಚಯವಾಗಿದೆ. ಹೀಗಾಗಿ ಕಾಯದೊಂದಿಗೆ ಸಂಗ ಮಾಡಿದ ತನ್ನ ಸೋದರರಾದ ಅರಿಷಡ್ವರ್ಗಗಳನ್ನು, ಸಪ್ತವ್ಯಸನಗಳನ್ನು, ಅಷ್ಟಮದಗಳನ್ನು ಸಾತ್ವಿಕ ರಾಜಸ ತಾಮಸವೆಂಬ ಮೂರು ಗುಣಗಳನ್ನು, ಹೀಗೆ ಇಪ್ಪತ್ನಾಲ್ಕು ಸೋದರರನ್ನು ಹೊರಗೆ ಹೋಗಲು ಹೇಳುತ್ತಾಳೆ.

ಒಬ್ಬರಿದ್ದಡೂ ಸೈರಿಸ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ತಮ್ಮ ಅಣ್ಣಂದಿರಿಗೆ ಮನವೆಂಬ ನಲ್ಲೆ ಪರಿಪರಿಯಿಂದ ಬೇಡಿ ಹೊರಗೆ ಕಳುಹಿಸುತ್ತಾಳೆ. ಆಗ ನಲ್ಲ ನಲ್ಲೆಯನ್ನು ಬರಸೆಳೆದು ಬಿಗಿದಪ್ಪಿಕೊಂಡು ಕಾಯವನ್ನು ಕೈಲಾಸದಂತೆ ಬೆಳಗುತ್ತಾನೆ.

**662**

**ಧಾತುವ ಮೀರಿದ್ದ ಬಣ್ಣವ,**
**ಅಜಾತ ನಿನ್ನ ಕೂಟವ,**
**ಆರಿಗಯ್ಯಾ ಭೇದಿಸಲಕ್ಕು?**
**ಅಭೇದ್ಯ ಕಾರಣ ಶಿವನೇ,**
**ಆದಿ ಅಕ್ಷರದಲ್ಲಿ ಆಮೋದದಾನತದ ಭೇದವ**
**ಆ ಭೇದವ ಭೇದಿಸಲಾಹುದೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲಕ್ಕೆ ಬಣ್ಣವಿಲ್ಲ ರೂಪವಿಲ್ಲ ರುಚಿಯಿಲ್ಲ ತನ್ನ ಮಟ್ಟವನ್ನು ತಾನು ಕಾಯ್ದುಕೊಳ್ಳುತ್ತದೆ. ಜೀವ ಜಲಬಿಂದುವಿನಿಂದ ಜನ್ಮ ತಳೆದ ಧಾತುವಿಗೆ ಬಣ್ಣವಿದೆ ರೂಪವಿದೆ ರುಚಿಯಿದೆ ಹಾಗೆಯೇ ತನ್ನ ಮಟ್ಟವನ್ನು ತಾನು ಕಾಯ್ದುಕೊಳ್ಳಲು ಅದಕ್ಕೆ ಸಾಧ್ಯವಾಗುತ್ತಿಲ್ಲ.

ಪರಮಾತ್ಮನೆ, ನೀನು ಬಯಲಾಗಿದ್ದರೂ, ಬಯಲಬಿಂದುವಾಗಿ ಬಿಂದುವನ್ನು ಕೂಡಿದೆ. ನಿನ್ನ ಕೂಟದಿಂದಾಗಿ ಹುಟ್ಟಿದ ತನುವಿನಲ್ಲಿ ನೀನೆ ತನ್ಮಯನಾಗಿ ಅಜಾತನೆಂದು ಕರೆಯಿಸಿಕೊಂಡೆ. ಅದಾರಿಗಯ್ಯಾ ನೀನು ಕೂಡಿದ ಕೂಟವನ್ನು ಭೇದಿಸಲು ಸಾಧ್ಯವಾಗುವುದು? ನೀನು ಅಭೇದ್ಯ. ಭೇದಿಸಲು ಬಾರದ ಶಿವ ನೀನು.

ಜಲ ಬಿಂದುವಿನಿಂದಾದ ಧಾತುವಿಗೆ ಬಣ್ಣವಿಲ್ಲದಿದ್ದರೂ, ನಿನ್ನಿಂದ ಜನ್ಮ ತಳೆದ, ನೀನು ವಾಸ ಮಾಡಿದ ತನುವಿಗೆ ಬಣ್ಣವಿದೆ. ಅದಕ್ಕೆ ರುಚಿಯಿದೆ. ರೂಪವಿದೆ. ತನ್ನ ಮಟ್ಟವನ್ನು ಕಾಯ್ದುಕೊಳ್ಳಲು ಅದಕ್ಕೆ ಸಾಧ್ಯವಾಗುತ್ತಿಲ್ಲ. ಅಂತಹ ತನುವಿನಲ್ಲಿ ತನ್ಮಯವಾದ ನಿನಗೆ ಬಣ್ಣವಿಲ್ಲ; ರೂಪವಿಲ್ಲ; ರುಚಿಯಿಲ್ಲ. ಸಮಸ್ವರೂಪನು ನೀನಾಗಿರುವಿ. ಆಕಾರದಲ್ಲಿದ್ದು ನಿರಾಕಾರನೆಂದು ಕರೆಯಿಸಿಕೊಂಡಿರುವಿ.

ಅಜಾತನೆ, ನಿನ್ನ ಕೂಟವನ್ನು ಭೇದಿಸಲು ಯಾರಿಗಾದರೂ ಸಾಧ್ಯವಾಗುವುದೆ ತಂದೆ. ನಿನ್ನಿಂದಲೇ ಜನ್ಮ ತಳೆದ ಶಿವೆಗೆ ಮಾತ್ರ ಸಾಧ್ಯವಾಗಲು ಸಾಧ್ಯ. ಏಕೆಂದರೆ ತನುವಿನಲ್ಲಿದ್ದ ನೀನು ನಿರಾಕಾರ; ತನುವನ್ನು ಆವರಿಸಿದ ಮನ ಕೂಡಾ ನಿರಾಕಾರ.

ನಿರಾಕಾರವಾದ ಮನ, ತನುವಿನ ಸಂಗದಿಂದ ದೂರವಾಗಿ, ತನುವಿನಲ್ಲಿಯೇ ಇದ್ದ

ನಿನ್ನನ್ನು ಕೂಡಿದಾಗ, ಮನವೇ ಮಹಾದೇವಿಯಾಗುತ್ತಾಳೆ. ಮಹಾದೇವನನ್ನು ಕೂಡಿ ಕೂಡದ ಅಗಲದ ಕೂಟದ ಸುಖವನ್ನು ಅನುಭವಿಸುತ್ತಾಳೆ.

ನೀನು ಅನಾದಿ ಶಿವನಾದರೆ ಆಕೆ ಆದಿ. ಆದಿ ಅಕ್ಷರವಾಗಿ ಅಕ್ಷರೋತ್ತಮನನ್ನು ಕೂಡಿ ಶಿವೆಯೇ ತಾನಾಗಿದ್ದಾಳೆ. ಕತ್ತಲು ಬೆಳಗಿನಲ್ಲಿ ಕೂಡಿ ಬೆಳಕೇ ಆದಾಗ; ಆ ಬೆಳಕಿನ ಭೇದವನ್ನು ಭೇದಿಸಲು ಯಾರಿಗಾದರೂ ಸಾಧ್ಯವಾಗುವುದೆ ?

ತನು ಕುಲಕ್ಕೆ ನಿನ್ನನ್ನು ಭೇದಿಸಲು ಸಾಧ್ಯವಿಲ್ಲ. ಏಕೆಂದರೆ ಅದಕ್ಕೆ ಆಕಾರ ಮಾತ್ರ ಗೊತ್ತು. ತನುವನ್ನು ಆವರಿಸಿದ ಮನವು ನಿರಾಕಾರ. ತನುವಿನಲ್ಲಿ ತನ್ಮಯವಾದ ನೀನು ಕೂಡಾ ನಿರಾಕಾರ. ನಿರಾಕಾರ ಮಾತ್ರ ನಿರಾಕಾರವಾದ ನಿನ್ನಲ್ಲಿ ಕೂಡಿ ಕೂಡದ ಅಗಲದ ಕೂಟದ ಸುಖವನ್ನು ಅನುಭವಿಸಲು ಸಾಧ್ಯವಾಗುತ್ತದೆ.

ನಿಮ್ಮಿಬ್ಬರ ಕೂಟಕ್ಕೆ ತನು ಸಾಕ್ಷಿಯಾಗುತ್ತದೆ. ನಿಮ್ಮಿಬ್ಬರ ವಾಸಕ್ಕೆ ತನು ಪುಣ್ಯಕ್ಷೇತ್ರವಾಗುತ್ತದೆ. ನೀನಿದ್ದರೂ ನಿನ್ನನ್ನು ಅರಿಯಲು ಸಾಧ್ಯವಾಗದ ತನುವಿಗೆ ನಿನ್ನನ್ನು ಭೇದಿಸಿ ಹುಡುಕಲು ಸಾಧ್ಯವೆ ?

ತನು ತನ್ನಿಂದ ಮಾಡಿದ ಶಿವನನ್ನು ಶಿವನೆಂದು ತಿಳಿದಿದೆ. ಆತ ಶಿವನಲ್ಲವೆಂದು ಯಾರಾದರೂ ತನುವಿಗೆ ಹೇಳಲು ಸಾಧ್ಯವೆ ? ಸಾಧ್ಯವಿಲ್ಲ. ಏಕೆಂದರೆ ಹೇಳುವವರು ಕೂಡಾ ತನು ಉಳ್ಳವರಾಗಿದ್ದಾರೆ.

**663**

**ಧ್ಯೇಯಕ್ಕೆ ಅತಿರೂಪು ದಾಯನುಂಗಿಪ್ಪುದೀ**
**ತಾನೊಂದು ರೂಪಾಗಿ ದಾಯವಿಲ್ಲದೆ ಇಪ್ಪುದು.**
**ಅದು ನಿಹಿತ ತಾನು ದಾಯವು**
**ವಾಯವು ಕಾಯಕ್ಕೆ ಅತಿ ಬ್ರಹ್ಮವಾಯದಿಂದರಿಯಲ್ಕೆ.**
**ಸುಲಭ ತಾನೆ ಕಾಳದಲಿ ಧವಳತೆಯ ಸಾನಂದದನ್ವತೆಯ**
**ಸಾಯದೆ ಸತ್ತಾತ ಕಂಡನಿದನು.**
**ಕಂಡು ಬ್ರಹ್ಮಾಂಡವನು ಉಂಡನದನನ್ವಯದ**
**ಮಂಡಲಕ್ಕದು ಕರ ಚೋದ್ಯ.**
**ತಾನು ಕಂಡು ಕಾಣದೆ ಈಗ ಉಂಡು ಉಣ್ಣದೆ**
**ಈಗ ಕಂಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು, ತನುವಿನ ಮೂಲಕ ನೋಡಬೇಕೆಂಬ ಧ್ಯೇಯವಿಟ್ಟುಕೊಂಡು ಬಂದ ತನುವನ್ನು, ತನುವನ್ನು ಆವರಿಸಿದ ಮನವೆಂಬ ಪಾಲುದಾರನು ನುಂಗಿದನು.

ತನು ಮನಗಳೆರಡು ತನುವಿನಲ್ಲಿಯೇ ತನ್ಮಯವಾದ ಪರಮಾತ್ಮನನ್ನು ಪೂಜಿಸಿ ಆ ಪರಮಾತ್ಮನ ಪಾದದಲ್ಲಿ ಲೀನವಾಗಲು ಬಂದವರು. ಮನ ಬಯಸಿ ಬಂದಾಗ, ಅದರೊಂದಿಗೆ ಈ ಬ್ರಹ್ಮಾಂಡವನ್ನು ನೋಡಿದರಾಯಿತು ಎಂದು ತಾನೊಂದು ರೂಪಾಗಿ ತನುವಿನಲ್ಲಿಯೇ ತನ್ಮಯವಾದ ; ದಾಯವಿಲ್ಲದೆ.

ರೂಪವನ್ನು ಆವರಿಸಿದ ಮನ ದಾಯ. ದಾಯವೆಂದರೆ ಪರಮಾತ್ಮನ ಪಾಲುದಾರ. ಆತನ ಅರ್ಧಾಂಗಿ. ಅಂಗದಲ್ಲಿ ಸಂಗಮವಾದ ಲಿಂಗಕ್ಕೆ, ಅಂಗವನ್ನು ಆವರಿಸಿದ ಮನ, ಶರಣು ಹೋದಾಗ, ಲಿಂಗಯ್ಯ ಮನವನ್ನು ತನ್ನ ಸತಿಯಾಗಿಸಿಕೊಳ್ಳುತ್ತಾನೆ. ಶರಣು ಹೋದ ಸತಿಯೇ ಶರಣನೆಂದು ಕರೆಯಿಸಿಕೊಳ್ಳುತ್ತಾನೆ. ಶರಣ ಸತಿ ಲಿಂಗಪತಿಯಾಗಿ, ಅರ್ಧನಾರೀಶ್ವರರಾಗಿ ಅಂಗದಲ್ಲಿಯೇ ವಾಸ ಮಾಡುತ್ತಾರೆ. ಇವರಿಬ್ಬರು ವಾಸ ಮಾಡಿದ ಕಾಯವೇ ಕೈಲಾಸವೆಂದು ಕರೆಯಿಸಿಕೊಳ್ಳುತ್ತದೆ.

ಕೈಲಾಸ ಮಾಡಬೇಕೆಂಬ ಉದ್ದೇಶವಿಟ್ಟುಕೊಂಡು ಬಂದ ಕಾಯವನ್ನು, ಪಾಲುದಾರ ನುಂಗಿ ಹಾಕಿದ. ಶಿವನ ಉದ್ದೇಶ ಈಡೇರದ್ದಕ್ಕಾಗಿ ರೂಪದಲ್ಲಿಯೇ ತಾನೊಂದು ನಿರೂಪನಾಗಿ ಇದ್ದು ಬಿಟ್ಟ. ನಿರೂಪ ಶಿವನಲ್ಲಿ ಸಂಗಮವಾಗಬೇಕಾದ, ನಿರೂಪದ ಮನ ರೂಪ ಹೊತ್ತ ಕಾಯದಲ್ಲಿ ಸಂಗಮವಾಯಿತು. ಕಾಯ ತಾನು ಒಂದಾಯಿತು. ಶಿವನ ಧ್ಯೇಯ ಈಡೇರಲಿಲ್ಲ. ತಾನೊಂದು ನಿರೂಪವೇ ಆಗಿ ರೂಪದಲ್ಲಿ ವಾಸ ಮಾಡಹತ್ತಿದ.

ಕಾಯಕ್ಕೆ ಸಾವಿದೆ. ಕಾಯದಲ್ಲಿದ್ದ ಶಿವನಿಗೆ ಸಾವಿಲ್ಲ ; ಹುಟ್ಟೂ ಇಲ್ಲ. ಆತನ ಅರ್ಧಾಂಗಿಯಾಗಬೇಕಾದ ಮನಕ್ಕೂ ಸಾವಿಲ್ಲ. ಶಿವನ ಅರ್ಧಾಂಗಿಯಾಗಬೇಕಾದ ಮನ ಕಾಯದ ಸಂಗ ಮಾಡಿ ಶಿವನನ್ನು ಮರೆತು ಹೋಗಿದೆ. ಕಾಯಕ್ಕೆ ಸುಖದುಃಖಗಳನ್ನು ಕೊಡುತ್ತಾ ಕಾಯದೊಂದಿಗೆ ಇದೆ. ಕಾಯಕ್ಕೆ ತಿಳಿಯುತ್ತಿಲ್ಲ; ಕಾಯವನ್ನು ಮಾಯ ಬಿಡುತ್ತಿಲ್ಲ.

ಕಾಯಕ್ಕೆ ಸಾವು ಬರುವ ಮುನ್ನವೇ ಕಾಯವನ್ನು ಆವರಿಸಿದ ಮಾಯದ ಸಂಗವನ್ನು ಬಿಡಬೇಕು. ಆಗ ಕಾಯ ಬದುಕಿಯೂ ಸತ್ತು ಹೋಗುತ್ತದೆ. ಏಕೆಂದರೆ ಅದು ಶಿವನಿದ್ದ ಕ್ಷೇತ್ರ. ಕಾಯ ಕೈಲಾಸವಾಗಿ ಮಾರ್ಪಡುತ್ತದೆ. ಕಾಯದ ಮೂರು ಗುಣಗಳನ್ನು ಕಾಯವಿದ್ದಾಗಲೇ ಕಳೆದುಕೊಂಡು ಅದು ನಿರ್ಗುಣಿಯಾಗುತ್ತದೆ.

ಶಿವ ನಿರ್ಗುಣಿಯಾದುದರಿಂದ ಕಾಯ ಕೂಡಾ ನಿರ್ಗುಣಿ. ಹೀಗಾಗಿ ಕಾಯ ಸಾಯದೆ ಸತ್ತಾತ ಕಂಡನಿದನು. ಕಂಡು ಬ್ರಹ್ಮಾಂಡವನು ಉಂಡನದನು. ಏಳುನೂರಾ ಮೂವತ್ತು ಕೋಟಿ ಕಾಯ ಮಂಡಲಗಳಿರುವ ಕಾಯಗಳಿಗೆ ಇದು ಬಲು ಚೋದ್ಯ.

ಸತ್ತ ಕಾಯವನ್ನು ಗೂಟಕ್ಕೆ ಹೊಡೆದಾಗ ಅದರ ಮುಂದೆ ಕುಳಿತ ಕಾಯಗಳು ಕಾಯದ ಗುಣಗಳನ್ನು ಹಾಡಿ ಹೊಗಳಿ ತೆಗಳಿದಾಗ ಅದು ಹೇಗೆ ಸುಮ್ಮನೆ ಕುಳಿತಿರುತ್ತದೆಯೋ ಹಾಗೆಯೇ ಲಿಂಗಯ್ಯನಿಗೆ ಶರಣು ಹೋದ ಶರಣನ ಕಾಯ ಬದುಕಿಯೂ ಸತ್ತಂತಿರುತ್ತದೆ.

ಬಯ್ಗಳಿಗೆ ಕುಗ್ಗುವುದಿಲ್ಲ; ಹೊಗಳಿಕೆಗೆ ಹಿಗ್ಗುವುದಿಲ್ಲ. ''ಎಷ್ಟು ಬಯ್ದರೂ ಗೂಟಕ್ಕೆ ಬಡಿದ ಹೆಣದಂತಿರುವೆಯಲ್ಲ'' ಎಂಬ ನಾಣ್ಣುಡಿಯೂ ಇದೆ. ಅದು ಕಾಯ ಶರಣನಾದ ಸಂಕೇತ.

ತನುವಿನಲ್ಲಿಯೇ ತನ್ಮಯವಾದ ಶಿವನನ್ನು ಕಂಡ. ಶಿವನ ಪರಮ ಸುಖವನ್ನು ಇದ್ದಾಗಲೇ ಉಂಡ. ಉಂಡುದನ್ನು ಯಾರೂ ಕಾಣಲಿಲ್ಲ. ಕಂಡ, ಉಂಡ. ಉಂಡೂ ಉಣ್ಣದೆ ಈಗ ಕಂಡ. ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಕಾಣದ ಸುಖ ಉಂಡುದನ್ನು ಬರೆದಿದ್ದಾರೆ. ಅಕ್ಷರ ಪ್ರಸಾದವನ್ನು ಈ ಮೂಲಕ ಸಕಲ ಕಾಯಗಳಿಗೆ ಹಂಚಿದ್ದಾರೆ.

**664**

**ನಂಟರಿಷ್ಟರನ್ಯರಾರಾದೊಡೆಯೂ ಬಂದು ನಿಂದಿರ್ದಡೆ,**
**ಅವರಿವರೆಂದೆನ್ನದೆ ಮನವಿಚ್ಛಂದವಾಗದೆ**

**ಒಂದೆಯಂದದಿ ಇಪ್ಪಂತಪ್ಪ ನಿಮ್ಮದೊಂದು ಸಮತಾಗುಣ**
**ಎನ್ನನೆಂದು ಪೊಂದಿಪ್ಪುದು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಗದಲ್ಲಿರುವ ಸಕಲ ತನುಗಳೆಲ್ಲ ಒಂದೇ ಆಗಿವೆ. ಆದರೂ ಸಕಲ ತನುಗಳಿಗೆ ಈ ವಿಷಯ ಮರೆತು ಹೋಗಿದೆ. ತನು ಒಂದೇ. ತನುವಿನ ಕಣ್ಣು ಒಂದೇ; ಅದು ಹೆಣ್ಣಾದರೇನು, ಗಂಡಾದರೇನು? ದೇಶ ಭಾಷೆ ಬೇರೆ ಬೇರೆಯಾದರೇನು ? ಅದು ವಾಸ ಮಾಡುವ ನೆಲ ಒಂದೇ. ಗಾಳಿ, ಜಲ ಒಂದೇ.

ತನುವಿನ ಕಿವಿ ಒಂದೇ. ಕೇಳುವ ಶಬ್ದ ಬೇರೆ ಬೇರೆಯಾದರೇನು? ಅದರಲ್ಲಿರುವ ಅರಿವು ಒಂದೇ. ಚರ್ಮ ಒಂದೇ; ಅದರ ಸ್ಪರ್ಶ ಒಂದೇ. ಮೂಗು ಒಂದೇ; ಅದು ವಾಸಿಸುವ ಸುಗಂಧ ದುರ್ಗಂಧ ಕೂಡಾ ಒಂದೇ. ನಾಲಿಗೆ ಒಂದೇ ಅದು ರುಚಿಸುವ ಪದಾರ್ಥ ಕೂಡಾ ಒಂದೇ. ಆದರೂ ತನುವಿನಲ್ಲಿ ಹೆಣ್ಣು ಗಂಡು ಎನ್ನುವ ಭ್ರಮೆ ಆವರಿಸಿರುವುದರಿಂದ ಕಣ್ಣು ಅಜ್ಞಾನದಿಂದ ನೋಡುತ್ತದೆ. ತನ್ನನ್ನು ತಾನೇ ಭೇದಿಸಿಕೊಂಡು ಹೆಣ್ಣು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಗಂಡನ್ನು ನೋಡುತ್ತದೆ; ಗಂಡು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಹೆಣ್ಣನ್ನು ನೋಡುತ್ತದೆ.

ತನುವನ್ನು ಆವರಿಸಿದ ಮನದಿಂದಾಗಿ ತನುವಿನ ಭಾವ ಅನೇಕ ಬಾರಿ ಪಲ್ಲಟವಾಗಿ ದುರ್ಭಾವಕ್ಕೆ ಒಳಗಾಗುತ್ತದೆ. ಭಾವ ಅರಳಿದಾಗ ತನ್ನಂತೆಯೇ ಇರುವ ತನು ಗೆಳೆಯ ಬಂಧು ನೆಂಟನಾಗುತ್ತದೆ. ಭಾವ ಕೆರಳಿದಾಗ ತನ್ನಂತೆಯೇ ಇರುವ ತನು ವೈರಿಯಾಗುತ್ತದೆ.

ತನುವಿನಲ್ಲಿರುವ ಭಾವ ಕೆರಳಿದೆಯೇ ಹೊರತು ತನುವಿನಲ್ಲಿ ಯಾವ ವ್ಯತ್ಯಾಸವೂ ಆಗಿಲ್ಲವೆಂದು ತನು ತಿಳಿಯುವುದೇ ಇಲ್ಲ. ತನುವಿನ ಭಾವ ದೃಶ್ಯ ಶಬ್ದ ಸ್ಪರ್ಶ ರುಚಿ ವಾಸನೆಗಳ ಮೂಲಕ ಅರಳುತ್ತದೆ; ಹಾಗೆಯೇ ಅವುಗಳ ಮೂಲಕವೇ ಕೆರಳುತ್ತದೆ.

ದೃಶ್ಯ ಶಬ್ದ ಸ್ಪರ್ಶ ರುಚಿ ವಾಸನೆಗಳನ್ನು ಅನುಭವಿಸುವ ಇಂದ್ರಿಯಗಳಿಗೆ ಜಾತಿ ಮತ ಪಂಥ ಧರ್ಮಗಳಿಲ್ಲ. ಹೆಣ್ಣು ಗಂಡು ಎನ್ನುವ ಭೇದವೂ ಇಲ್ಲ. ಅರಿವು ಇದೆ. ಹಾಗೆಯೇ ಮನ ಕೂಡಾ ಆಯಾ ಇಂದ್ರಿಯಗಳಲ್ಲಿ ವಾಸ ಮಾಡಿದೆ. ಇಂದ್ರಿಯಗಳಲ್ಲಿರುವ ಅರಿವು ಬಳಕೆಯಾದರೆ ನಂಟರು ಅನ್ಯರು ಎಂದು ತನು, ತನುವನ್ನು ನೋಡದೆ, ತನ್ನಂತೆಯೇ ಇರುವ ತನುವೆಂದು ನೋಡುತ್ತದೆ. ಹೆಣ್ಣು ಗಂಡು ಎನ್ನುವ ಅಜ್ಞಾನದಿಂದ ನೋಡಿದರೆ, ತನುವಿನಲ್ಲಿ ಹಾದರದ ರಸಾಯನ ಸೃಷ್ಟಿಯಾಗುತ್ತದೆ. ಸಂಬಂಧಗಳ ಭಾವ ಸೃಷ್ಟಿಯಾಗುತ್ತದೆ. ಧರ್ಮ ಜಾತಿ ಮತ ಪಂಥಗಳ ಭಾವ ದುರ್ಭಾವ ತನುವಿನಲ್ಲಿ ಸೃಷ್ಟಿಯಾಗಿ ತನು ತನ್ನ ರಾಕ್ಷಸತ್ವವನ್ನು ಮೆರೆಯುತ್ತದೆ.

''ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ; ಇವ ನಮ್ಮವ, ಇವ ನಮ್ಮವ, ಇವ ನಮ್ಮವನೆಂದೆನಿಸಯ್ಯಾ. ಕೂಡಲ ಸಂಗಮದೇವಾ, ನಿಮ್ಮ ಮನೆಯ ಮಗನೆಂದೆನಿಸಯ್ಯಾ.

ತನುವಿನಲ್ಲಿ ಅರಿವು ಎನ್ನುವ ಸಂಗಯ್ಯನು ಮನೆ ಮಾಡಿಕೊಂಡಿದ್ದಾನೆ. ತನುವನ್ನು ಮನ ಎಂಬ ಅಜ್ಞಾನಿ ಆವರಿಸಿಕೊಂಡು, ತನುವಿನ ಗೆಳೆತನ ಮಾಡಿದೆ. ಮನ ತನುವಿನ ಸಕಲ ಕೋಣೆಗಳಿಗೂ ಹರಿದಾಡಿ ತನಗೆ ಇಚ್ಛೆ ಬಂದಂತೆ ನೋಡುತ್ತದೆ. ಅರಿವಿನ ಮಾತು ಮನ ಕೇಳುವುದಿಲ್ಲ.

ಚರ್ಮ ನೋಡಿ ಹೆಣ್ಣು ಗಂಡು ಎಂದು ಮನ ನಿರ್ಧರಿಸಿ ತನುವಿನೊಂದಿಗೆ ಹಾದರಕ್ಕೊಳಗಾಗುತ್ತದೆ. ಆದರದ ಮಾತುಗಳನ್ನು ಆಡುತ್ತಾ, ಅಕ್ಕ ತಂಗಿ ಅಣ್ಣ ತಮ್ಮ ಎಂದು ನುಡಿಯುತ್ತದೆ. ಹಾದರದ ದೃಶ್ಯ; ಆದರದ ಮಾತು ತನುವಿನಲ್ಲಿ ಏಕಕಾಲಕ್ಕೆ ಹುಟ್ಟುತ್ತವೆ. ಇದು ತಪ್ಪೆಂದು ತನುವಿಗೆ ಅನ್ನಿಸು

ವುದೇ ಇಲ್ಲ. ಇಂತಹ ಅಜ್ಞಾನದಲ್ಲಿ ತನುವಿನ ಆಯುಷ್ಯ ಮುಗಿದೇ ಹೋಗುತ್ತದೆ.

ಹೆಣ್ಣು ಗಂಡು ಎಂದು ನೋಡಿ ಹಾದರಕ್ಕೊಳಗಾಗುವ ದೃಶ್ಯದಲ್ಲಿ ಅಜ್ಞಾನವಿದೆ. ತಾನು ನೋಡಿದ್ದು ತಪ್ಪೆಂದು ಪಾಠ ಮಾಡುವ ದೃಶ್ಯದಲ್ಲಿ ಅರಿವಿದೆ. ಒಂದು ದೃಶ್ಯ ಅರಿವಿನದ್ದಾದರೆ ಮತ್ತೊಂದು ದೃಶ್ಯ ಮನದ್ದು. ಮನ ಹೇಗೆ ಸಕಲ ಇಂದ್ರಿಯಗಳಲ್ಲಿ ಹರಿದಾಡುತ್ತದೆಯೋ ಹಾಗೆಯೇ ಅರಿವು ಸಕಲ ಇಂದ್ರಿಯಗಳಲ್ಲಿ ವಾಸ ಮಾಡಿದೆ. ಇಂದ್ರಿಯಗಳು ಅರಿವಿನ ಸೊತ್ತು. ಮನ ಇಂದ್ರಿಯಗಳನ್ನು ಆವರಿಸಿದೆ. ಹೀಗಾಗಿ ಮನ ತನುವನ್ನು ಭೇದಭಾವದಿಂದ ನೋಡುತ್ತದೆ. ಅಜ್ಞಾನದಿಂದ ನೋಡುವ ಮನಕ್ಕೆ ಅರಿವು ಪಾಠ ಮಾಡುತ್ತದೆ. ಅರಿವಿಗೆ ಸಮತಾಗುಣವಿದೆ.

ಮನಕ್ಕೆ ಅರಿವಿನ ಮಾತು ಇಚ್ಛೆಯಾದರೆ, ಮನ ಅರಿವಿಗೆ ದಾಸಾನುದಾಸನಾಗುತ್ತದೆ. ಅರಿವಿನ ಮನೆಯ ಮಗನಾಗುತ್ತದೆ. ತನುವಿಗೆ ಮನದಿಂದಾಗಿ ಅಂಟಿದ ಅಜ್ಞಾನಗಳು ಉದುರಿಬೀಳುತ್ತವೆ. ಕಾಯ ಬುದ್ಧನಾಗುತ್ತದೆ; ಬೋಧೀವೃಕ್ಷವಾಗುತ್ತದೆ.

**665**

**ನಂಬಿದೆನಯ್ಯಾ ಪ್ರಭುವಿನ ಪಾದವ.**
**ನಂಬಿದೆನಯ್ಯಾ ಬಸವಣ್ಣನ ಪಾದವ.**
**ನಂಬಿ ನಚ್ಚಿ ನಿಮ್ಮ ಮೊರೆಹೊಕ್ಕೆನಯಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವನ ಪಾದವನ್ನು ತೋರಿದ ಸದ್ಗುರು ಪ್ರಭುವಿನ ಪಾದವನ್ನು ನಂಬಿದೆನಯ್ಯಾ. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಪಾದವನ್ನು ತೋರಿದ ಸದ್ಗುರು ಬಸವಣ್ಣನ ಪಾದವನ್ನು ನಂಬಿದೆನಯ್ಯಾ. ನಂಬಿ ನಚ್ಚಿ ನಿಮ್ಮ ಮೊರೆ ಹೊಕ್ಕೆನಯ್ಯಾ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

ತನುವಿನಲ್ಲಿ ಅದ್ಭುತವಾದ ಶಕ್ತಿಯಿದೆ. ಇಡೀ ಬ್ರಹ್ಮಾಂಡದ ಸೃಷ್ಟಿಗೆ ಕಾರಣವಾದದ್ದೇ ತನು. ಆದರೂ ತನುವಿಗೆ ತಾನೇ ಬ್ರಹ್ಮಾಂಡದ ಸೃಷ್ಟಿಕರ್ತ ಎನ್ನುವ ಸಂಗತಿ ಗೊತ್ತಿಲ್ಲ. ಗೊತ್ತಿದ್ದ ತನು ಮಾತ್ರ ತನಗೆ ತಾನೇ ''ಅಹಂ ಬ್ರಹ್ಮಾಸ್ಮಿ'' ಎಂದು ''ಬುದ್ಧ'' ಎಂದು ''ಮಹಾವೀರ'' ಎಂದು ಕರೆದುಕೊಳ್ಳುತ್ತದೆ.

ತನುವನ್ನು ಆವರಿಸಿದ ಮನವೆ ನಾನು ಎಂದು ತಿಳಿದ ಶಂಕರರು ತನುವಿನಲ್ಲಿಯೇ ಸಂಗಮವಾದ ''ಬ್ರಹ್ಮ''ನನ್ನು ಬಲವಾಗಿ ನಂಬಿದ. ''ಅಹಂ ಬ್ರಹ್ಮಾಸ್ಮಿ'' ಎಂದು ಇಡೀ ಮನುಕುಲ ಕೇಳುವ ಹಾಗೆ ಕೂಗಿ ಹೇಳಿದ.

ಸಿದ್ಧಾರ್ಥ ರಾಜ. ಆದರೂ ಪ್ರಜೆಗಳನ್ನು ನಂಬಲಿಲ್ಲ. ಆಶ್ರಯ ನೀಡಿದ ಸೈನಿಕರನ್ನೂ ನಂಬಲಿಲ್ಲ. ಅಂಗದಲ್ಲಿಯೇ ಸಂಗಮವಾದ ''ಬುದ್ಧ''ನನ್ನು ಬಲವಾಗಿ ನಂಬಿದ. ಸಂಬುದ್ಧನಾದ. ಸಿದ್ಧಾರ್ಥ ಸಂಬುದ್ಧನಲ್ಲಿ ಕಳೆದುಹೋದ.

ವರ್ಧಮಾನ ಕೂಡಾ ರಾಜನೇ ಆಗಿದ್ದ. ಈತ ಕೂಡಾ ಯಾವ ತನುಗಳನ್ನು ನಂಬಲಿಲ್ಲ. ಅಂಗದಲ್ಲಿಯೇ ಸಂಗಮವಾದ ''ಮಹಾವೀರ''ನನ್ನು ನಂಬಿದ. ಆತ ಅರಿಷಡ್ವರ್ಗಗಳನ್ನು, ಸಪ್ತವ್ಯಸನಗಳನ್ನು, ಅಷ್ಟಮದಗಳನ್ನು ಗೆದ್ದಾತ. ಗೆದ್ದು ತನುವಿನಲ್ಲಿಯೇ ಇದ್ದಾತ.

ಚಕ್ರವರ್ತಿ ತನ್ನ ಸೈನಿಕರನ್ನು ನಂಬಿ ಯುದ್ಧ ಮಾಡಿ ಸಾವಿರಾರು ಸೈನಿಕರನ್ನು ಕೊಂದು

ಸಾಮ್ರಾಟ ಎಂದು ಕರೆಯಿಸಿಕೊಳ್ಳಬಹುದು. ಆದರೆ ತನುವಿನಲ್ಲಿಯೇ ಇದ್ದ ತನುವಿನ ವೈರಿಗಳನ್ನು ಗೆಲ್ಲುವುದು ಬಲು ಜಟಿಲ. ವರ್ಧಮಾನ 'ಮಹಾವೀರ'ನನ್ನು ನಂಬಿದ. 'ಮಹಾವೀರ' ವರ್ಧಮಾನನ ಸಕಲ ವೈರಿಗಳನ್ನು ಕೊಂದು ತನ್ನಂತೆ ಮಾಡಿಕೊಂಡ.

ಕ್ರಿಸ್ತ ಕ್ರಿಷ್ಣ ಪೈಗಂಬರರು ಬಸವಾದಿ ಶರಣರು ದಾಸವರೇಣ್ಯರು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ನಂಬಿದರು. ಆತನಿಗೆ ದಾಸು ಹೋಗಿ ದಾಸಾನು ದಾಸರಾದರು. ಅರಿವಿನ ದೇವನಿಗೆ ಶರಣು ಹೋಗಿ ಶರಣಾಗತರಾಗಿ ಶರಣರೇ ತಾವಾದರು.

ನಂಬಿದರು. ನಚ್ಚಿದರು. ಆ ಪರಮಾತ್ಮನ ಮೊರೆ ಹೋದರು. ಹೊರಗಿನ ದೇವರನ್ನು ನಂಬಿದರೆ ತಾನೇ ಮಾಡಿದ ನೈವೇದ್ಯ ತನಗೆ ಸಿಕ್ಕುತ್ತದೆ. ಒಳಗಿನ ದೇವರನ್ನು ನಂಬಿದರೆ, ನಂಬಿದ ತನ್ನನ್ನು ಆತ ತನ್ನಂತೆ ಮಾಡಿಕೊಳ್ಳುತ್ತಾನೆ. ಕ್ರಿಷ್ಣನಂತೆ ವಿರಾಟಸ್ವರೂಪಿಯನ್ನಾಗಿಸುತ್ತಾನೆ. ಶಂಕರರಂತೆ ಬ್ರಹ್ಮನಾಗಿಸುತ್ತಾನೆ. ಸಿದ್ಧಾರ್ಥನಂತೆ ಬುದ್ಧನಾಗುತ್ತಾನೆ. ವರ್ಧಮಾನನಂತೆ ಮಹಾವೀರನಾಗುತ್ತಾನೆ.

ನಂಬಿದ ಬಸವಾದಿ ಶರಣರನ್ನು ದಾಸವರೇಣ್ಯರನ್ನು ತನಗೆ ದಾಸಾನುದಾಸರನ್ನಾಗಿಸಿಕೊಂಡ. ''ನಂಬರು ನಚ್ಚರು ಬರಿದೆ ಕರೆವರು, ನಂಬಲರಿಯರೀ ಲೋಕದ ಮನುಜರು ! ನಂಬಿ ಕರೆದಡೆ, ಓ ಎನ್ನನೇ ಶಿವನು? ನಂಬದೆ ನಚ್ಚದೆ ಬರಿದೆ ಕರೆವರ ಕೊಂಬ ಮೆಟ್ಟಿ ಕೂಗೆಂದ ಕೂಡಲಸಂಗಮದೇವ'' ಎಂದು ಬಸವಣ್ಣನವರು ತಾವು ಅತ್ಯಂತ ಕಿರಿಯರಾಗಿ ಆ ಹಿರಿಯನನ್ನು ನಂಬಿ ಕೂಗಿ ಕರೆದರು. ಆತನಿಗೆ ಮೊರೆಹೊಕ್ಕರು. ಸಕಲ ಅಂಗಗಳಲ್ಲಿ ಸಂಗಮವಾದ ಆತನನ್ನು ಬಲವಾಗಿ ನಂಬಿದರು. ಸಂಗಯ್ಯಾ ಎಂದು ಹೆಸರಿಟ್ಟು ಕರೆದರು.

ಅಂಗ ಸಾಮಾನ್ಯವಲ್ಲ; ಸಂಗಯ್ಯನಿಗೆ ಆಶ್ರಯಕೊಟ್ಟಿದೆ. ಕೈಲಾಸದ ಒಡೆಯನಿಗೆ ಆಶ್ರಯ ಕೊಟ್ಟ ಕಾಯವು ಕೈಲಾಸವೇ ಆಗಿದೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವಿನ 'ಶಿವ'ನನ್ನು ಬಲವಾಗಿ ನಂಬಬೇಕು. ನಂಬಿ ಕೂಗಿ ಕರೆಯಬೇಕು. ನಂಬಿ ಕರೆದಡೆ, ಓ ಎನ್ನನೇ ಶಿವನು?

ಪೈಗಂಬರರು ನಂಬಿದರು. 'ಅಲ್ಲಾ' ಎಂದು ಕೂಗಿ ಕರೆದರು. ಓ ಎಂದು ಮೈದಡವಿ ಬಿಗಿದಪ್ಪಿಕೊಂಡ. ಏಸು 'ಪ್ರಭು' ಎಂದು ಕೂಗಿ ಕರೆದ. ಓ ಎಂದು ಬಿಗಿದಪ್ಪಿಕೊಂಡು ಮೈದಡವಿದ.

ನಂಬಿ ನಚ್ಚಿ ಮೊರೆ ಹೊಕ್ಕ ಸಿದ್ಧರಾಮ ಶಿವಯೋಗಿ ಹೇಳಿದ ಮಾತು, ನಂಬಿ ಕರೆದಡೆ ಓ ಎನ್ನನೇ ಶಿವನು ಎಂದು ಬಸವಣ್ಣ ಹೇಳಿದ ಮಾತು ಒಂದೇ ಆಗಿದೆ. ಓದುಗರು ಸಂಶೋಧನೆ ಮಾಡಲೇಬೇಕು. ಸಂಶೋಧಕರು ಸಂಶೋಧನೆ ಮಾಡಿ ನಿರ್ಧರಿಸಲೇಬೇಕು. ನಂಬದೆ ನಚ್ಚದೆ ಬರಿದೆ ಕರೆದವರ ಕೊಂಬ ಮೆಟ್ಟಿ ಕೂಗುತ್ತಾನೆ.

**666**

**ನಟ್ಟಡವಿಯೊಳಗೆ ಇರುಳು-ಹಗಲೆನ್ನದೆ**
**ಅಪ್ಪಾ! ಅಯ್ಯಾ! ಎಂದು ನಾನರಸುತ್ತ ಹೋದಡೆ,**
**'ನಾನಿದ್ದೇನೆ ಬಾ ಮಗನೆ' ಎಂದು ಕರೆದು, ಎನ್ನ ಕಂಬನಿದೊಡೆದು,**
**ತನ್ನ ನಿಜವ ತೋರಿದ ಪಾದವಿಂದೆನ್ನಲ್ಲಿಗೆ ನಡೆದುಬಂದಡೆ**
**ನಾನರಿಯದೆ ಮರುಳುಗೊಂಡೆಹೆನೆಂದು**
**ಎನ್ನ ಮನದೊಳಗೆಚ್ಚರ ಮಾಡಿದೆ.**

**ಆತನನರಿಸಿಕೊಂಡು ಬಂದೆನ್ನ ಹೃದಯದಲಿಂಬಿಟ್ಟುಕೊಂಬೆ,**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನನ.**

ಭೂಮಿ ಹೇಮ ವಿಷಯ ವಸ್ತುಗಳಲ್ಲಿ ತನುವಿಗೆ ಸುಖವಿಲ್ಲ. ತನುವಿನಲ್ಲಿ ಉಂಟಾಗುವ ದುಃಖವನ್ನು ಈ ಯಾವ ವಸ್ತುಗಳೂ ನಿವಾರಿಸಲಾರವು. ಬಂಧು ಬಳಗ ಮಾತಾ ಪಿತ ಸುತರುಗಳಿಂದ ತನುವಿನಲ್ಲಿ ಉಂಟಾದ ದುಃಖ ಶಮನವಾಗಲಾರದು. ಸಪ್ತವ್ಯಸನಗಳು ತನುವಿನಲ್ಲಿ ಜ್ವಾಲೆಯಾಗಿ ಉರಿಯುತ್ತವೆ. ಅಷ್ಟಮದಗಳಿಂದ ಅರಿಷಡ್ವರ್ಗಗಳಿಂದ ತನು ಬಳಲಿ ಬೆಂಡಾಗುತ್ತದೆ.

ತನುವಿನಲ್ಲಿ ಹುಟ್ಟಿದ ದುಃಖ, ತನುಗಳ ಮೂಲಕ ಹುಟ್ಟಿದ ಸುಖ ದುಃಖಗಳು ಸುಖವೂ ಅಲ್ಲ ಅವು ದುಃಖವೂ ಅಲ್ಲ ಎಂದು ತಿಳಿಯುವುದಕ್ಕೆ ತನುವಿಗೆ ಸಾಕಷ್ಟು ಅವಧಿಯೇ ಬೇಕಾಗುತ್ತದೆ.

ತನುವಿನ ದುಃಖ ತನುವನ್ನು ಆವರಿಸಿದ ಮನದಿಂದಲೇ ಎಂದು ತನು ಮತ್ತು ಮನಕ್ಕೆ ತಿಳಿದಾಗ; ಮನ ತನುವಿಗೆ ಹೇರುವ ಸುಖದುಃಖಗಳನ್ನು ತನು ಪ್ರತಿಭಟಿಸಲು ತೊಡಗುತ್ತದೆ. ಆಗ ಮನ, ಮನದಲ್ಲಿಯೇ ಟಿಸಿಲೊಡೆದು; ಮನ ತನುವಿಗೆ ನೀಡುವ ಅಜ್ಞಾನವನ್ನು ಮನವೇ ತಡೆಯತೊಡಗುತ್ತದೆ.

ಹಗಲಿರುಳು ಎನ್ನದೆ ಅಪ್ಪಾ ! ಅಯ್ಯಾ ! ಎಂದು ವರಲುತ್ತಾ ಆಲೋಚನೆಯಲ್ಲಿ ತೊಡಗುತ್ತದೆ. ದುಃಖದ ಮೂಲವನ್ನು ಹುಡುಕಿ, ನಿಜ ಸುಖವನ್ನು ಯಾರಾದರೂ ಎನಗೆ ತೋರಿಯಾರೆ ಎಂದು ಆಲೋಚನೆಗೆ ಒಳಗಾಗುವುದೊಂದೇ ತಡ 'ನಾನಿದ್ದೇನೆ ಮಗನೆ' ಎಂದು ಕಂಬನಿಯನ್ನು ಒರೆಸಿ ನನ್ನ ಮೈದಡವಿ ನನ್ನಲ್ಲಿಯೇ ಇದ್ದ ಅರಿವಿನ ತಂದೆಯನ್ನು ತೋರುವ ಗುರುದೇವನು ನಾನಿದ್ದಲ್ಲಿಗೇ ಬರುತ್ತಾನೆ. ಅಥವಾ ಆತನಿದ್ದಲ್ಲಿಗೆ ನಾನಾದರೂ ಹೋಗುತ್ತೇನೆ. ಎರಡೂ ಒಂದೇ. ದುಂಬಿ ಮಕರಂದದ ನ್ಯಾಯದಂತೆ. ಹೂವಿದ್ದಲ್ಲಿಗೆ ದುಂಬಿ ಬಂದರೇನು; ಮಕರಂದ ದುಂಬಿಯನ್ನು ಹೂವಿದ್ದಲ್ಲಿಗೆ ಕರೆದು ತಂದಂತೆ.

'ನಾನಿದ್ದೇನೆ ಬಾ ಮಗನೆ' ಎಂದು ಕರೆದು, ಎನ್ನ ಕಂಬನಿದೊಡೆದು, ತನ್ನ ನಿಜವ ತೋರಿದ ಪಾದವಿಂದೆನ್ನಲ್ಲಿಗೆ ನಡೆದುಬಂದಡೆ ನಾನರಿಯದೆ ಮರುಳುಗೊಂಡಿಹೆನೆಂದು ಎನ್ನ ಮನದೊಳಗೆಚ್ಚರ ಮಾಡಿದೆ. ಆತನನ್ನು ಅರಸಿಕೊಂಡು ಬಂದು ಎನ್ನ ಹೃದಯದಲಿ ಇಂಬಿಟ್ಟುಕೊಂಬೆ, ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನನ :

ಸುಖ ದುಃಖಗಳನ್ನು ಹೊಂದಿದ ತನುವೊಂದು ಇದೆ; ಪರಮಸುಖವನ್ನು ಹೊಂದಿದ ತನುವೊಂದು ಇದೆ. ಈ ಎರಡು ಕಾಣಬಾರದ ತನುಗಳು ಕಾಣುವ ಸ್ಥೂಲ ತನುವಿನಲ್ಲಿಯೇ ಇವೆ.

ಸುಖ ದುಃಖಗಳನ್ನು ಹೊಂದಿದ ತನು ಸ್ಥೂಲ ತನುವಿನ ಸಂಗ ಮಾಡಿದುದಕ್ಕಾಗಿ, ಸ್ಥೂಲ ತನು ಚಿಂತೆಗೀಡಾಗಿದೆ. ದುಃಖಕ್ಕೆ ಒಳಗಾಗಿದೆ. ಅರಿಷಡ್ವರ್ಗಗಳು ಸಪ್ತವ್ಯಸನಗಳು ಅಷ್ಟಮದಗಳು ಸ್ಥೂಲತನುವನ್ನು ಬಾಧಿಸುತ್ತಲಿವೆ. ಸುಖಕ್ಕಾಗಿ ದುಃಖ, ದುಃಖ ನಿವಾರಣೆಗಾಗಿ ಸುಖವನ್ನು ಹುಡುಕುತ್ತಾ ಹಗಲಿರುಳೆನ್ನದೆ ತನು ಚಿಂತೆಗೆ ಒಳಗಾಗಿದೆ.

ಚಿಂತೆಯೇ ಇಲ್ಲದ, ನಿಶ್ಚಿಂತ, ನಿರಾಳ, ಸದಾ ಪರಮಸುಖದಲ್ಲಿದ್ದ ತನು ಕೂಡಾ ಸ್ಥೂಲ ತನುವಿನಲ್ಲಿಯೇ ಸಂಗಮವಾಗಿದೆ. ಈ ತನು ಸೂಕ್ಷ್ಮ ಮತ್ತು ಸ್ಥೂಲ ತನುಗಳಿಗೆ ಜನ್ಮ ನೀಡಿದೆ. ಇವುಗಳಿಗೆ ಯಾವ ಬಾಧೆಯೂ ತಟ್ಟಬಾರದೆಂದು ಸ್ಥೂಲ ತನುವಿನಲ್ಲಿಯೇ ವಾಸ ಮಾಡಿದೆ. ಸ್ಥೂಲ ಸೂಕ್ಷ್ಮ ತನುಗಳಿಗೆ ಸದಾ ಅರಿವಿನ ಪಾಠ ಮಾಡುತ್ತಾ ತನ್ನಂತೆ ಪರಮಸುಖವನ್ನು ಕರುಣಿಸಬೇಕೆಂಬ ಹಿರಿಯ ಬಯಕೆಯನ್ನು ಹೊಂದಿದೆ. ಆದರೂ ಸ್ಥೂಲ ಮತ್ತು ಸೂಕ್ಷ್ಮ ತನುಗಳಿಗೆ ಅರಿವೆಂಬ

ಗುರುದೇವನ ಪರಿಚಯವೇ ಇಲ್ಲ.

ಪರಮ ಸುಖದ ಪರಿಚಯ ಮಾಡಿಕೊಂಡ ತನುವೊಂದು, ತನುವಿನಲ್ಲಿಯೇ ತನ್ಮಯವಾದ ಗುರುದೇವನ ಪರಿಚಯ ಮಾಡಿದರೆ ಸಾಕು ಮನೋಮಯವಾದ ತನು ಗುರುದೇವನ ಸಂಗ ಮಾಡಿ ಗುರುದೇವನೇ ತಾನಾಗುತ್ತದೆ. ಸ್ಥೂಲ ತನು ಗುರುದೇವನನ್ನು ತನ್ನ ಹೃದಯದಲ್ಲಿಂಬಿಟ್ಟುಕೊಂಡು ಸದಾ ಪರಮಸುಖಿಯಾಗುತ್ತದೆ.

**667**

**ನಡ ನಡ ನಡಗುವ ಅವಗುಣ ಮನಂಗಳ**
**ಅವಧಿಗಳು ನೆರೆದೆಂದಿಂಗೆ ಪೋಪವೆಂದು**
**ನಿಮ್ಮೊಡಗೂಡಿ ಬೇರಾಗದೆಂದಿಪ್ಪೆನೊ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನನ್ನ ಮನದ ಗುಣಾವಗುಣಗಳು ನನ್ನ ತನುವನ್ನು ಗಡಗಡನೆ ನಡಗಿಸುತ್ತದೆ. ನಾನು ಹಾಗೆ, ನನ್ನ ತನುವೂ ಹಾಗೆ. ಸಂಗದ ಫಲವನ್ನು ನಾನು ಅನುಭವಿಸುತ್ತಿದ್ದೇನೆ. ಮನವೆಂಬ ನಾನು ಸಂಗ ಮಾಡಿದ ತನುವನ್ನು ನನ್ನಂತೆ ಮಾಡಿಕೊಂಡಿದ್ದೇನೆ. ಅದು ನೋಡಲು ಮಾತ್ರ ತನು. ಆದರೆ ಅದು ನನ್ನಿಂದಾಗಿ ತಿಪ್ಪೆಯಾಗಿದೆ.

ತಿಪ್ಪೆಯಂತಿರುವ ನನ್ನ ತನುವಿನಲ್ಲಿ ಪರಮಾತ್ಮನೆ ನೀನು ತಿಪ್ಪೇರುದ್ರನೆಂಬ ಹೆಸರು ಪಡೆದು ಪರಮ ಸಂತೋಷದಲ್ಲಿ ಇರುವಿ. ಗಡಗಡನೆ ನಡಗುವ ನಾನೆತ್ತ ? ಪರಮಾನಂದದಿಂದಲಿ ಇರುವ ನೀನೆತ್ತ ? ತನುವೊಂದೆ. ಆದರೆ ನನ್ನ ಮತ್ತು ನಿನ್ನ ಇರುವಿಕೆ ಮಾತ್ರ ಬೇರೆ ಬೇರೆ.

ಇರುವ ಒಂದು ತನುವನ್ನು ಸಾತ್ವಿಕ ತನುವೆಂದು, ತಾಮಸ ತನುವೆಂದು, ರಾಜಸ ತನುವೆಂದು ಮೂರು ವಿಧನಾಗಿ ವಿಂಗಡಿಸಿಕೊಂಡಿದ್ದೇನೆ. ಸಕಲ ತನುಗಳಲ್ಲಿಯೂ ನೀನಿರುವಿ. ನೀನಿದ್ದ ತನು ಸಾತ್ವಿಕ ರಾಜಸ ತಾಮಸ ಎಂದು ಮುಸುಕು ಹಾಕಿಕೊಳ್ಳಲು ಸಾಧ್ಯವೆ ? ಹೆಣ್ಣು ಗಂಡು ಎಂದು ಹೇಳಿ ಬೇಧ ಮಾಡಲು ಸಾಧ್ಯವೆ ?

ನಿನ್ನ ಪರಿಚಯ ನನಗಾದ ಮೇಲೆ ನಾನೇ ಹೆಣ್ಣು; ನೀನೆ ಗಂಡು. ನಾವಿಬ್ಬರು ವಾಸ ಮಾಡುವ ತನುವೇ ನಮಗೆ ಮನೆಯಾಗುವುದು. ತಿಪ್ಪೆಯಂತಿರುವ ಮನೆ ಉಪ್ಪರಿಗೆಯಾಗುವುದು. ಅದು ನಿರ್ಭಯನಾಗುವುದು. ಅದೆಷ್ಟೋ ಕಾಲ ಮಾತು ಮಾತಿಗೂ ಗಡಗಡನೆ ನಡಗುವ ಭಯ, ನಿನ್ನ ಪರಿಚಯದಿಂದಾಗಿ ನಿನ್ನೊಂದಿಗೆ ಲೀನವಾಗುವುದೊಂದೇ ತಡ ಕೂಡಲೇ ಮಾಯವಾಗುವುದು.

ನಿಮ್ಮಿಂದಲೇ ಜನ್ಮ ಪಡೆದ ಮನವೆಂಬ ನಾನು, ಜನ್ಮಕೊಟ್ಟ ನಿಮ್ಮನ್ನು ಮರೆತುದರ ಫಲವನ್ನು ಅದೆಷ್ಟೋ ಕಾಲ ಅನುಭವಿಸಿದ್ದೇನೆ. ಸಾತ್ವಿಕದ ಮುಖವಾಡ ತನುವಿಗೆ ಧರಿಸಿ ಅದೆಷ್ಟೋ ಕಾಲ ಭಯದಿಂದ ನಡುಗಿದ್ದೇನೆ. ರಾಜಸದ ಮುಖವಾಡ ತನುವಿಗೆ ಧರಿಸಿ ಅದೆಷ್ಟೋ ಕಾಲ ಭಯದಿಂದ ನಡುಗಿದ್ದೇನೆ. ತಾಮಸದ ಮುಖವಾಡ ತನುವಿಗೆ ಧರಿಸಿ ಅದೆಷ್ಟೋ ಕಾಲ ಭಯದಿಂದ ನಡುಗಿದ್ದೇನೆ.

ನೀನು ವಾಸ ಮಾಡಿದ ಕಾಯ ನಿನ್ನದು. ಅದು ನನ್ನದೆಂದು ತಿಳಿದು ಮೂರು ಗುಣಗಳ ಮುಖವಾಡ ಕಾಯಕ್ಕೆ ಧರಿಸಿ, ಭಯದಿಂದ ನಡುಗಿದ್ದೇನೆ. ನೀನು ತ್ರಿಗುಣಾತೀತನು. ನಿರ್ಗುಣನು. ನಿನ್ನನ್ನೊಡಗೂಡಿ ಬೇರಾಗದಂತೆ ಎಂದಿಪ್ಪೆನೊ? ಕಪಿಲಸಿದ್ಧ ಮಲ್ಲಿಕಾರ್ಜುನಾ.

**ನಡೆನುಡಿಗಲೊಂದಾದವರಿಗೊಲಿವೆ ಕಂಡಯ್ಯಾ.**
**ನುಡಿಯೆ ಬ್ರಹ್ಮವಾದವರ ನೀನೊಲ್ಲೆಯಯ್ಯಾ.**
**ಮೃಡನೆ, ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗ,**
**ನುಡಿಯ ಬ್ರಹ್ಮಂಗಳಿಂದಪ್ಪುದೇನೊ !**

'ಬ್ರಹ್ಮ'ನೆಂದರೆ ವ್ಯಕ್ತಿಯಲ್ಲ. ಆತ ಅವ್ಯಕ್ತ. ವ್ಯಕ್ತ ಕಾಯಕ್ಕೆ ಜನ್ಮ ನೀಡಿ, ಆ ಕಾಯದಲ್ಲಿಯೇ ಅವ್ಯಕ್ತನಾಗಿ ಇದ್ದಾತ. ಈತ ನುಡಿಗೆ ಒಲಿಯುವಾತನಲ್ಲ. ನಿಃಶಬ್ದಕ್ಕೆ ಒಲಿಯುವಾತ. ನಿಃಶಬ್ದ ನುಡಿಗೆ ಒಲಿಯುವಾತ.

ಶಬ್ದದಲ್ಲಿ ಆಯುಧವಿದೆ; ಆದರವೂ ಇದೆ; ಅಗ್ನಿಯೂ ಇದೆ. ಮಡಿವಾಳ ನುಡಿದ ಶಬ್ದ ಮರ್ಯಾದಾ ಪುರುಷ ರಾಮನನ್ನು ವಿಲಿವಿಲಿ ಒದ್ದಾಡುವಂತೆ ಮಾಡಿತು. ಸೀತೆಯನ್ನು ಕಾಡಿಗೆ ಕಳುಹಿಸಿತು. ನುಡಿದ ಮಡಿವಾಳ ಇಡೀ ಜನತೆಯ ಅಪವಾದಕ್ಕೆ ಗುರಿಯಾದ. ಶಬ್ದವನ್ನು ನಿಃಶಬ್ದ ಮಾಡಿ ಕೇಳುವ ಶಕ್ತಿ ಇವರಾರಿಗೂ ಸಾಧ್ಯವಾಗಲೇ ಇಲ್ಲ.

ಶಬ್ದದಲ್ಲಿ ನಿಃಶಬ್ದದ ಅಮೃತವೊಂದಿದೆ. ಹೀಗಾಗಿ ನಿಃಶಬ್ದಂ ಬ್ರಹ್ಮ ಮುಚ್ಚತೆ ಎಂದು ಅನುಭವಿಸಿದವರು ನುಡಿದರು. ಅದು ಬಾಯಿಂದ ಬಾಯಿಗೆ ಬಂದು ಬ್ರಹ್ಮ ಎನ್ನುವುದು ಬರೀ ಬಾಯಿ ಮಾತು ಆಗಿದೆ. ಬಾಯಿಯಿಂದ ಬ್ರಹ್ಮವ ನುಡಿಯಬಹುದು. ಅದು ನುಡಿದ ತನುವಿನ ಅನುಭವಕ್ಕೆ ಬಾರದಿದ್ದರೆ ನುಡಿ ಬ್ರಹ್ಮವಾಗುತ್ತದೆ. ನುಡಿಯೆ ಬ್ರಹ್ಮವನ್ನಾಗಿಸಿಕೊಂಡ ತನುವನ್ನು ತನುವಿನಲ್ಲಿಯೇ ತನ್ಮಯವಾದ ಬ್ರಹ್ಮನು ಬಲ್ಲ. ತನುವಿನ ಮಾತಿಗೂ ತನುವಿನಲ್ಲಿ ತನ್ಮಯವಾದ ಬ್ರಹ್ಮನಿಗೂ ಅದು ಸಂಬಂಧವಿಲ್ಲ.

ಬ್ರಹ್ಮ ಎನ್ನುವುದು ಬರೀ ಮಾತಲ್ಲ. ಅದು ದೃಶ್ಯದಲ್ಲಿಯೂ ಅನುಭವಕ್ಕೆ ಬರಬೇಕು. ಸ್ಪರ್ಶದಲ್ಲಿಯೂ ಅನುಭವಕ್ಕೆ ಬರಬೇಕು. ರುಚಿ ಅನುಭವಿಸುವ ನಾಲಿಗೆಯ ಅನುಭವಕ್ಕೂ ಬರಬೇಕು. ಮೂಸಿಸಿ ಸುಗಂಧ ದುರ್ಗಂಧಗಳನ್ನು ಅನುಭವಿಸುವ ನಾಸಿಕಕ್ಕೂ ಅನುಭವಕ್ಕೆ ಬರಬೇಕು.

ಸದಾ ಭಾವ ದುರ್ಭಾವಕ್ಕೆ ಒಳಗಾಗುವ ಅವ್ಯಕ್ತ ವಸ್ತುವಿಗೂ ಅನುಭವಕ್ಕೆ ಬರಬೇಕು. ಆಗ ನೋಡಿದ ದೃಶ್ಯವೆಲ್ಲ ಬ್ರಹ್ಮರಸವಾಗಿ ನುಡಿಯ ಮೂಲಕ ಚಿಮ್ಮುವುದು. ಕೇಳಿದ ಶಬ್ದವೆಲ್ಲ ತನುವನ್ನು ವಿಚಲಿತಗೊಳಿಸದೆ ತನುವಿಗೆ ಪ್ರಸಾದವಾಗಿ ಶಬ್ದ, ಶಬ್ದ ಮಾಡದೆ ನಿಃಶಬ್ದ ಬ್ರಹ್ಮನಾಗಿ ಹೊರಬರುವುದು.

ಸ್ಪರ್ಶ ರುಚಿ ವಾಸನೆಗಳಿಗೆ ಬ್ರಹ್ಮನಾದಾತ ಗಾಸಿಗೊಳ್ಳುವುದಿಲ್ಲ. ಸಕಲ ಮಾತು ದೃಶ್ಯ ವಾಸನೆ ಸ್ಪರ್ಶ ರುಚಿಗಳನ್ನು ಸಂಯಮದಿಂದ ಪರಮಾನಂದದಿಂದ ಸ್ವೀಕರಿಸಿ ಪ್ರಸಾದ ಮಾಡಿಕೊಳ್ಳುತ್ತಾನೆ.

ಸಾಕ್ರಟೀಸನು ವಿಷವನ್ನು ಅಮೃತದಂತೆ ಸ್ವೀಕರಿಸಿ, ಇಡೀ ಭ್ರಮಾ ಲೋಕವನ್ನೇ ಬೆರಗುಗೊಳಿಸಿದ. ಸಿಲುಬೆಗೆ ಏರಿದ ಏಸು ತನಗೆ ಮಳೆ ಜಡಿದವರನ್ನು ಮನ್ನಿಸು ಪ್ರಭು ಎಂದು ಕೇಳಿಕೊಂಡ. 'ಪ್ರಭು' ಎನ್ನುವವನು ವ್ಯಕ್ತಿಯಲ್ಲ; ಅವ್ಯಕ್ತ ಬ್ರಹ್ಮ. ಏಸು ಬ್ರಹ್ಮನೊಂದಿಗೆ ಮಾತನಾಡಿದ, ಆತನೊಂದಿಗೆ ಲೀನವಾದ. ಏಸು-ಪ್ರಭು ಒಂದಾದರು. ಸಿಲುಬೆ ಹೇಗೆ ಜಡವೊ ದೇಹವೂ ಹಾಗೆಯೇ ಜಡ. ಸಿಲುಬೆಗೆ ಮೊಳೆಜಡಿದಂತೆ. ಏಸು ಮತ್ತು ಪ್ರಭು ಸಾಕ್ಷಿಯಾಗಿ ಮೊಳೆ ಜಡಿಯುವ ಕೆಲಸವನ್ನು ವೀಕ್ಷಿಸಿದರು.

ನುಡಿಯ ಬ್ರಹ್ಮವಾದವರ ನೀನೊಲ್ಲೆಯಯ್ಯಾ. ಮೃಡನೆ, ಕಪಿಲಸಿದ್ಧ ಮಲ್ಲಿಕಾರ್ಜುನ

ಲಿಂಗ, ನುಡಿಯ ಬ್ರಹ್ಮಂಗಳಿಂದ ಅಪ್ಪುದೇನೊ ! ಎಂದು ಸಿದ್ಧರಾಮ ಶಿವಯೋಗಿಗಳು ನಡೆಯಲು ಬಾರದೆ ನುಡಿಯುವ ವೇಷದ ಮನಗಳನ್ನು ಪ್ರಶ್ನಿಸಿದ್ದಾರೆ.

**669**

**ನಡೆ-ನೋಟ-ಭಾವ-ದೃಷ್ಟಿ ಲಯವಾಯಿತ್ತು.**
**ಗಮನ-ಗಾಂಭೀರ್ಯವಡಗಿತ್ತು; ಕಾಲಕಂಠವಳಿಯಿತ್ತು.**
**ಗಮನ-ಸುಮನವಡಗಿತ್ತು, ಕದಳಿ ಲೋಕದಳವಾಯಿತ್ತು.**
**ಪ್ರಸಾದ ಸಂಬಂಧ ಬಲುಹಿನಲ್ಲಿ ನಿಂದಿತ್ತು.**
**ಮಾತು ಮನವಾಯಿತ್ತು. ಅನುಭಾವವೈಕ್ಯವಾಯಿತ್ತು.**
**ನಮ್ಮ ಕಪಿಲಸಿದ್ಧ ಮಲ್ಲಿನಾಥನಲ್ಲಿ**
**ನಮ್ಮ ಚೆನ್ನಬಸವಣ್ಣನ ಪ್ರಾಣಲಿಂಗ ಸಂಬಂಧ**
**ಪರಿಣಾಮದಲ್ಲಿ ನಿಂದಿತ್ತು.**

ಮನದಿಂದಾಗಿ ಅಂಗವನ್ನು ಆವರಿಸಿದ ಸುಳ್ಳು ನಡೆ-ಸುಳ್ಳುಭಾವ-ಸುಳ್ಳು ದೃಷ್ಟಿ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ದರುಶನದಿಂದಾಗಿ ಲಯವಾಯಿತ್ತು. ಅಜ್ಞಾನದ ಗಮನ ಅಹಂಕಾರದ ಗಾಂಭೀರ್ಯವ ಆಡಗಿ ಕಾಲಕಂಠವು ಅಳಿಯಿತ್ತು.

ಗಮನ-ಸುಮನವು ಸಹಜ ಅರಿವಿನಲ್ಲಿ ಅಡಗಿ, ಕಾಯವೆಂಬ ಕದಳಿ ಲೋಕದಳವಾಯಿತ್ತು. ಕಣ್ಣಿನ ಅಜ್ಞಾನದ ಹಸಿವು ಮುಕ್ಕಣ್ಣನ ಕಣ್ಣಿಗೆ ತುತ್ತಾಗಿ ಪ್ರಸಾದ ಸಂಬಂಧವು ಏರ್ಪಟ್ಟಿತ್ತು. ಮಾತು ಮನವಾಯಿತ್ತು. ಅನುಭಾವವು ನಿರ್ಭಾವದಲ್ಲಿ ಐಕ್ಯವಾಯಿತ್ತು. ನಮ್ಮ ಕಪಿಲಸಿದ್ಧ ಮಲ್ಲಿನಾಥ ನಲ್ಲಿ ನಮ್ಮ ಚೆನ್ನಬಸವಣ್ಣನ ಪ್ರಾಣಲಿಂಗ ಸಂಬಂಧ ಪರಿಣಾಮದಲ್ಲಿ ನಿಂದಿತ್ತು:

ಚೆನ್ನಬಸವಣ್ಣ ಕಾಯದಲ್ಲಿ ಸಂಗಮವಾದ ಪ್ರಾಣವನ್ನು, ಪ್ರಾಣದಲ್ಲಿ ಸಂಗಮವಾದ ಲಿಂಗವನ್ನು ಸಿದ್ಧರಾಮ ಶಿವಯೋಗಿಗೆ ತೋರಿದ ನಿಮಿತ್ತ ಕಾಯ ಕೈಲಾಸವಾಯಿತ್ತು. ಅದರ ಪರಿ ಣಾಮದ ಸುಖವನ್ನು ಉಂಡು ಆ ಪರಮ ಸುಖ ಸಕಲ ಕಾಯಗಳಿಗೂ ದಕ್ಕಲಿ ಎಂದು ಸಿದ್ಧರಾಮ ಶಿವಯೋಗಿಗಳು ಚೆನ್ನಬಸವಣ್ಣನಿಂದ ತುತ್ತು ಮಾಡಿ ಉಂಡುದನ್ನೇ ಡೇಗಿದ್ದಾರೆ.

**670**

**ನಡೆ ನೋಡುವ ಸುಖದ ಸುಗ್ಗಿ ನೀನೆ ಅಯ್ಯಾ,**
**ಕಾಯ ಜೀವದ ಗುಣ ನೀನೆ ಅಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಕಾಯ ಜ್ಞಾನದಿಂದ ನಡೆದರೆ ಅದಕ್ಕೆ ಕಾರಣನು ನೀನೇ. ಕಾಯ ಜ್ಞಾನದಿಂದ ನೋಡಿದರೆ ಅದಕ್ಕೆ ಕಾರಣನು ಕೂಡಾ ನೀನೇ ಆಗಿರುವಿ. ಕಾಯ ಜ್ಞಾನದ ಸುಖದ ಸುಗ್ಗಿಯಲ್ಲಿ ಮುಳುಗಿದ್ದರೆ ಅದಕ್ಕೆ ಕಾರಣನು ನೀನೇ ಆಗಿರುವಿ.

ಕಾಯವು ನೀನೇ ಆಗಿರುವಿ. ಅದರ ಜೀವವು ನೀನೇ ಆಗಿರುವಿ. ಕಾಯದ ಸಾತ್ವಿಕ ಗುಣವೂ ನೀನೇ ಆಗಿರುವಿ; ಕಾಯದ ರಾಜಸ ಗುಣವೂ ನೀನೇ ಆಗಿರುವಿ. ಕಾಯದ ತಾಮಸ ಗುಣವೂ ನೀನೇ ಆಗಿರುವಿ. ಕಾಯದ ತ್ರಿಗುಣಗಳನ್ನು ಕಳೆದು ಕಾಯದಲ್ಲಿಯೇ ನೀನಿದ್ದು

ತ್ರಿಗುಣಾತೀತನೂ ನೀನೇ ಆಗಿರುವಿ.

ಕಾಯ ನೀನೇ. ಕಾಯವನ್ನು ಆವರಿಸಿದ ಮನವೂ ನೀನೆ. ಇವೆರಡಕ್ಕೂ ಜನ್ಮ ನೀಡಿ ಕಾಯದಲ್ಲಿಯೇ ಇದ್ದು ಇವೆರಡನ್ನೂ ನಿನ್ನಂತೆ ಮಾಡಿಕೊಳ್ಳುವ ಆಟ ಕೂಡಾ ನಿನ್ನದೇ ಆಗಿದೆ. ಅರಿವಿನಿಂದ ನಡೆದು, ಅರಿವಿನಿಂದಲೇ ನುಡಿದು, ಅರಿವಿನಿಂದಲೇ ನೋಡಿ ಸುಖದ ಸುಗ್ಗಿಯನ್ನು ಮಾಡುವ ಹಿರಿಯ ಆಸೆಯಿಂದಾಗಿ ಕಾಯವನ್ನು ಹೊತ್ತು ತಂದವ ನೀನೇ ಆಗಿರುವಿ.

ಅನಂತಕಾಲ ಕಾಯದ ಮೂಲಕ ಸಾತ್ವಿಕ ಗುಣದ ಸುಖವನ್ನು ಅನುಭವಿಸುವ ಇಚ್ಛೆ ನಿನ್ನದು. ಒಂದನಂತಕಾಲ ರಾಜಸ ಗುಣದ ಸುಖದ ಸುಗ್ಗಿಯನ್ನು ಅನುಭವಿಸುವ ಇಚ್ಛೆ ನಿನ್ನದು. ಒಂದನಂತಕಾಲ ತಾಮಸ ಗುಣದ ಸುಖ ಅನುಭವಿಸಿ ಸುಗ್ಗಿಯನ್ನು ಆಚರಿಸುವ ಇಚ್ಛೆ ನಿನ್ನದು.

ಒಂದನಂತಕಾಲ ಮೂರುಗುಣಗಳನ್ನು ನಾಶ ಮಾಡಿ ಗುಣಾತೀತನೆಂದು ಕರೆಯಿಸಿಕೊಂಡು ಪರಮಸುಖದ ಸುಗ್ಗಿಯನ್ನು ಮಾಡುವ ಲೀಲೆ ನಿನ್ನದು. ಕಾಯವು ನೀನೆ; ಅದರ ಜೀವವು ನೀನೇ. ಅದರ ಗುಣವು ಕೂಡಾ ನೀನೇ ಆಗಿರುವಿ ತಂದೆ.

**671**

**ನನ್ನ ಕೋಪವೆಂಬುದು ನಿನ್ನ ಕಣ್ಣು ನೋಡಯ್ಯಾ;**
**ನಾನೇತರೊಳಗೇನು ಹೇಳಯ್ಯಾ!**
**ನಿಮ್ಮ ಜ್ಞಾನದ ತೇಜದ ಮುಂದೆ ಎನ್ನರಿವು ಏತರದು ಹೇಳಯ್ಯಾ!**
**ಎನ್ನ ದಿಟದ ಭಕ್ತಿ ನಿಮ್ಮ ರೂಪು ಕಂಡಯ್ಯಾ.**
**ಎನಗೆ ಬೇರೆ ಸ್ವತಂತ್ರತೆಯುಂಟೆ, ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮುಕ್ಕಣ್ಣ ನೀನು. ನಿನ್ನ ಕಣ್ಣಿನ ಮೂಲಕ ಕೋಪಾಗ್ನಿಯನುಗುಳುವ ಕಿಡಿಗಣ್ಣಯ್ಯ ನಾನು ನೋಡಯ್ಯಾ ; ನಾನು ಏತರೊಳಗೇನು ಹೇಳಯ್ಯಾ ! ನಿನ್ನ ಶಿಶು ನಾನು. ನನ್ನ ತಂದೆ ನೀನು.

ನಿಮ್ಮ ಜ್ಞಾನದ ತೇಜದ ಮುಂದೆ ಎನ್ನರಿವು ಏತರದು ಹೇಳಯ್ಯಾ! ಕೋಟಿ ಸೂರ್ಯರನ್ನು ಬೆಳಗುವ ನಿಮ್ಮ ಜ್ಞಾನ ತೇಜದ ಮುಂದೆ ಎನ್ನರಿವು ಏತರದು ತಂದೆ. ಸಕಲ ವಸ್ತುಗಳನ್ನು ಬೆಳಗುವವ ನೀನು. ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಕು ನೀನು. ನೀನು ಬೆಳಗುವ ವಸ್ತು ನಿನಗೆ ಬೇಡ. ನೀನು ಬೆಳಗಿದ ವಸ್ತುವನ್ನು ನಾನು ಬೆಳಗಿ ನನಗೆ ಬೇಕೆಂದು ಎತ್ತಿಕೊಳ್ಳುವ ಸ್ವಾರ್ಥಿ ನಾನು.

ನಿಮಗೆ ಬೇಡವಾದುದು ನನಗೆ ಬೇಕು. ನನ್ನೊಳಗಿದ್ದೂ ಬೆಳಗುವ ನೀನು ನನ್ನದೇ ಆದ ರೂಪು ಆಗಿರುವಿ. ಹೀಗಾಗಿ ಎನ್ನ ದಿಟದ ಭಕ್ತಿ ನಿಮ್ಮ ರೂಪು ಕಂಡಯ್ಯಾ.

ಎನಗೆ ಬೇರೆ ಸ್ವತಂತ್ರ ಉಂಟೆ ? ಹೇಳಾ ತಂದೆ. ನನ್ನ ಕಣ್ಣಲ್ಲಿ ನೀನಿರುವೆಯಾಗಿ ನನಗೆ ನೋಡಲು ಬರುತ್ತದೆ. ನಾನು ನೋಡುವುದೇ ಬೇರೆ, ನೀನು ನೋಡುವುದೇ ಬೇರೆಯೆಂದು ನಿನ್ನ ನೋಟದಿಂದಲೇ ನನಗೆ ನಿನ್ನ ನೋಟದ ಅರಿವಾಗಿದೆ.

ನನ್ನ ಚರ್ಮದಲ್ಲಿ ನೀನು ಇದ್ದುದರಿಂದ ನನಗೆ ಸ್ಪರ್ಶದ ಅನುಭವ ಆಗುತ್ತಲಿದೆ. ಆದರೆ ನಿನ್ನ ಸ್ಪರ್ಶವೇ ಬೇರೆ ನನ್ನ ಸ್ಪರ್ಶವೇ ಬೇರೆ ಎಂದು ನನಗೆ ನಿನ್ನ ಸ್ಪರ್ಶದ ಮೂಲಕ ಅರಿವಾಗಿದೆ ನನ್ನಯ್ಯ.

ನನ್ನ ನಾಸಿಕದಲ್ಲಿ ನೀನಿದ್ದುದರಿಂದ ನನಗೆ ಸುಗಂಧ ದುರ್ಗಂಧದ ಅರಿವಾಗುತ್ತದೆ. ಆ ದರೆ ನಾನು ಘ್ರಾಣಿಸುವುದು ವಾಸನೆಯಾದರೆ ನೀನು ಘ್ರಾಣಿಸುವುದು ಪರಿಮಳ.

ನನ್ನ ಕಿವಿಯಲ್ಲಿ ಕಿವಿಯಾಗಿ ನೀನಿದ್ದು ನನ್ನನ್ನು ಕೇಳುವಂತೆ ಮಾಡಿದೆ. ಆದರೆ ನಾನು ಕೇಳುವುದು ಶಬ್ದವಾದರೆ ನೀನು ಕೇಳುವುದು ನಿಃಶಬ್ದ. ಶಬ್ದ ಬಾಧೆಯನ್ನುಂಟು ಮಾಡಿದರೆ ನಿಃಶಬ್ದ ಪರಮಸುಖವನ್ನುಂಟು ಮಾಡುತ್ತದೆ.

ಎನ್ನ ಜಿಹ್ವೆಯೊಳಗೆ ನಿನ್ನ ಜಿಹ್ವೆಯಿದ್ದು ರುಚಿಸುವ ಶಕ್ತಿಯನ್ನು ಕೊಟ್ಟಿರುವೆ. ಆದರೆ ನಾನು ಅನುಭವಿಸುವುದು ರುಚಿ ಅರುಚಿ ಮಾತ್ರ. ನಿನಗೆ ರುಚಿ ಬೇಡ. ಸಕಲ ರುಚಿಗಳನ್ನೂ ಪ್ರಸಾದವಾಗಿಸಿಕೊಳ್ಳುವ ನಿನ್ನ ತೇಜದ ಮುಂದೆ ಎನ್ನರಿವು ಏತರದ್ದಯ್ಯಾ.

ನಾನು ನಿನ್ನ ಕಂದನೇ ಆದರೂ ನಿನ್ನ ಪರಿಚಯ ನನಗಿಲ್ಲ. ನಿನ್ನ ದಿಟ ಪರಿಚಯ ನನಗಾದಾಗ ನಿನ್ನನ್ನು ಆರಾಧಿಸಲು ಬರುತ್ತದೆ. ನನ್ನಲ್ಲಿಯೇ ಇದ್ದ ನೀನು ನನ್ನನ್ನು ಅಪ್ಪಿಕೊಂಡು ನಿನ್ನಂತೆಯೇ ಮಾಡಿಕೊಳ್ಳುವೆ. ಇದರ ಹೊರತಾಗಿ ಎನಗೆ ಬೇರೆ ಸ್ವತಂತ್ರತೆಯುಂಟಾ ಕಪಿಲಸಿದ್ಧ ಮಲ್ಲಿಕಾರ್ಜುನಾ !

**672**

**ನಮ್ಮ ನಲ್ಲನೂ ನಾವೂ ನೆರೆವಲ್ಲಿ**
**ಅವ ಬಂದು ಝುಳಪಿಸುವ ಹಾಹಾ ಯ್ಯಾ ಯ್ಯಾ ಯ್ಯಾ.**
**ಅವಗೆ ನಿಮಗೆ ಮತ್ಸರವುಂಟು.**
**ಆತನ ಕೈಕಾಲ ಛೇದಿಸಿ ನಾವು ನಿಶ್ಚಿಂತದಿ**
**ಮನೆಗೆ ಹೋಹ ಬಾರಾ ಬಾರಾ ಎಂದಳು**
**ಕಪಿಲಸಿದ್ಧ ಮಲ್ಲಿನಾಥಯ್ಯನ.**

ನಮ್ಮ ನಲ್ಲನೂ ನಾವೂ ನೆರೆವಲ್ಲಿ ಅವನು ಬಂದು ಝುಳಪಿಸುವ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು. ಹೆಂಡತಿ ಗಂಡನೊಂದಿಗೆ ಸಂಗ ಮಾಡುವಾಗ ಅವನು ಬಂದು ಝುಳಪಿಸುವ ಎನ್ನಬೇಕಾದರೆ ಅವನು ಎಂದರೆ ಯಾರು? ಅವನು ಏಕಾದರೂ ಝುಳಪಿಸುತ್ತಾನೆ ? ಇದೊಂದು ವಿಚಿತ್ರವಾದ ಮಾತು.

ಅವನು ಹೆಂಡತಿಗೊಂದೆ ನಲ್ಲನಲ್ಲ; ಗಂಡನಿಗೆ ಕೂಡಾ ನಲ್ಲನೇ ಆಗಿದ್ದಾನೆ. ಸಿದ್ಧರಾಮ ಶಿವಯೋಗಿಗಳು ಗಂಡು ; ಆದರೂ ತನ್ನನ್ನು ನಲ್ಲೆ ಎಂದು ಕರೆದುಕೊಂಡು ನಲ್ಲನೊಂದಿಗೆ ನೆರೆಯಲು ಕಾತುರಗೊಂಡಿದ್ದಾರೆ.

ನಲ್ಲನಲ್ಲೆಯರು ಕೂಡುವ ಕೂಟ ಅವನಿಗೆ ಇಷ್ಟವಿಲ್ಲ. ಅವನು ಹೆಂಡತಿಗೂ ನಲ್ಲ; ಗಂಡನಿಗೂ ನಲ್ಲ. ಗಂಡ ಹೆಂಡತಿಯರು ಕೂಡುವ ಕೂಟ ಗಂಡನಿಗೆ ಇಷ್ಟವಿಲ್ಲ. ಏಕೆಂದರೆ ಅವರಿಬ್ಬರು ಕೂಡುವ ಕೂಟ ಹೆಣ್ಣು ಹೆಣ್ಣು ಕೂಡುವ ಕೂಟ. ಈ ಕೂಟವನ್ನು ಗಂಡನಾದವನು ಸಹಿಸುವುದಿಲ್ಲ.

ಅಂಗದಲ್ಲಿಯೇ ಸಂಗಮವಾದ ಪರಮ ಪುರುಷನೊಬ್ಬನೇ ಪುರುಷನು. ಅಂಗವನ್ನು ಆವರಿಸಿದ ಮನವೇ ನಲ್ಲೆ. ಮನವೆಂಬ ನಲ್ಲೆ ಪರಮ ಪುರುಷನೊಂದಿಗೆ ಕೂಡುವ ಕೂಟವೇ ಕೂಡದ ಅಗಲದ ಕೂಟ. ಈ ಕೂಟ ಕಾಯ ಒಂದರಲ್ಲಿಯೇ ನಡೆಯುತ್ತದೆ. ಅವಗೆ ನಿಮಗೆ ಮತ್ಸರವುಂಟು. ಆತನ ಕೈಕಾಲು ಛೇದಿಸಿ ನಾವು ನಿಶ್ಚಿಂತದಿ ಮನೆಗೆ ಹೋಹ ಬಾರಾ ಬಾರಾ ಎಂದಳು: ಇದು ಅತ್ಯಂತ ಸೂಕ್ಷ್ಮವಾದ ಮಾತು. ಅನುಭಾವಿಗಳಿಗೆ ಮಾತ್ರ ಅರಿವಾಗುವ ಮಾತು.

ಗಂಡ ಹೆಂಡತಿ ಲೋಕದ ದೃಷ್ಟಿಯಲ್ಲಿ ಅನ್ಯೋನ್ಯವಾಗಿದ್ದರೂ ಶಿವಪಾರ್ವತಿ ಎಂದು ಕರೆಯಿಸಿಕೊಂಡರೂ ಮನದ ಹಾದರ ನಡೆದೆ ಇರುತ್ತದೆ. ಗಂಡು ಹೆಣ್ಣೆಂದು ತನುವನ್ನು ಗುರುತಿಸಬಹುದು. ಆದರೆ ಮನದ ದೃಷ್ಟಿಯಲ್ಲಿ ತನು ಹೆಣ್ಣಲ್ಲ ಗಂಡು ಕೂಡಾ ಅಲ್ಲ. ಮನ ಮಾತ್ರ ಹೆಣ್ಣು. ಮನ ತಾನು ಹೆಣ್ಣೆನ್ನುವುದನ್ನು ಮರೆತು ತನುವನ್ನೇ ಗಂಡನ್ನಾಗಿಸಿಕೊಂಡಿದೆ. ತನುವನ್ನೇ

ಹೆಣ್ಣನ್ನಾಗಿಸಿಕೊಂಡಿದೆ.

ಕಾಯ ಗಂಡಾಗಿ ಹೆಂಡತಿಯ ಕಾಯವನ್ನು ಕೂಡುವಾಗ ಅನ್ಯಕಾಯದೊಂದಿಗೆ ಮನ ಹಾದರ ಮಾಡುತ್ತದೆ. ಕಾಯ ಹೆಣ್ಣಾಗಿ ಗಂಡನ ಕಾಯದೊಂದಿಗೆ ಕೂಡುವಾಗ ಅನ್ಯಕಾಯದೊಂದಿಗೆ ಹಾದರ ಮಾಡುತ್ತದೆ. ಪುರುಷ ತನ್ನ ಸ್ವ ಸ್ತ್ರೀಯೊಂದಿಗೆ ಕೂಡುವಾಗ ಅನ್ಯಸ್ತ್ರೀಯೊಂದಿಗೆ ಹಾದರ ಮಾಡುತ್ತಾನೆ. ಸ್ತ್ರೀ ತನ್ನ ಪುರುಷನೊಂದಿಗೆ ಕೂಡುವಾಗ ಅನ್ಯಪುರುಷನೊಂದಿಗೆ ಹಾದರ ಮಾಡುತ್ತಾಳೆ. ಮಾನಸಿಕ ಹಾದರ ಸ್ತ್ರೀ ಪುರುಷರಿಬ್ಬರಲ್ಲಿಯೂ ನಡೆಯುತ್ತದೆ. ಇದು ಸ್ತ್ರೀ ಕಾಯದ ತಪ್ಪೂ ಅಲ್ಲ; ಪುರುಷ ಕಾಯದ ತಪ್ಪೂ ಅಲ್ಲ. ಕಾಯವನ್ನು ಆವರಿಸಿದ ಮನದ ತಪ್ಪು.

ಮನವೆಂಬ ಹೆಣ್ಣಿಗೆ ಎಲ್ಲಿಯವರೆಗೆ ಪರಮ ಪುರುಷನ ಸುಖ ಸಿಗುವುದಿಲ್ಲವೋ ಅಲ್ಲಿಯವರೆಗೆ ಮನಕ್ಕೆ ತೃಪ್ತಿಯಿಲ್ಲ. ಹೀಗಾಗಿ ಕಾಯಕ್ಕೆ ಗರತಿಯ ವೇಷ ಹಾಕಿ ಮನ ಹಾದರದಲಿ ತೊಡಗುತ್ತದೆ. ಕಾಯವನ್ನು ಆವರಿಸಿದ ಮನವೆಂಬ ಸತಿಗೆ ಕಾಯದಲ್ಲಿಯೇ ಸಂಗಮವಾದ ಪರಮ ಪುರುಷನೊಂದಿಗೆ ಕೂಡುವ ಭಾಗ್ಯ ದೊರೆಯುವವರೆಗೆ ಕಾಯದಲ್ಲಿ ಹಾದರ ನಡೆಯುತ್ತಲೇ ಇರುತ್ತದೆ.

ಸತಿ ರಂಭೆಯಂತೆ ಇದ್ದರೂ ಕೂಡಾ ಪತಿ ಪರಸತಿಯರನ್ನೇ ನೋಡುತ್ತಾನೆ. ತನಗೆ ಇಚ್ಛೆಯಾದ ರೂಪದೊಂದಿಗೆ ಪತಿಯ ಹಾದರ ನಡೆದೇ ಇರುತ್ತದೆ. ಮನೋಕಾಯ ಜ್ಞಾನಕಾಯದೊಂದಿಗೆ ಕೂಡಿದಾಗಲೇ ಕಾಯಕ್ಕೆ ಅಂಟಿದ ಕಾಮದ ರೋಗ ತಂತಾನೆ ಶಮನವಾಗುತ್ತದೆ.

ಮನವೆಂಬ ಸತಿ ಅರಿವೆಂಬ ಪತಿಯೊಂದಿಗೆ ಕೂಡಿ ಸತಿಪತಿಗಳಾಗಿ ಕಾಯವನ್ನೇ ಮನೆಯನ್ನಾಗಿಸಿಕೊಂಡು ಕಾಯದಲ್ಲಿಯೇ ಕೂಡುತ್ತಾರೆ. ಸತಿಪತಿಗಳಿಬ್ಬರು ಕಾಮದ ಕೈಕಾಲು ಛೇದಿಸಿ ನಿಶ್ಚಿಂತೆಯಿಂದ ಕೂಡದ ಅಗಲದ ಕೂಟದ ಸುಖವನ್ನು ಕಾಯವೆಂಬ ಕೈಲಾಸದಲ್ಲಿಯೇ ಅನುಭವಿಸುತ್ತಾರೆ.

**673**

**ನಯನೇಂದ್ರಿಯಂಗಳು ಮುಟ್ಟದೆ,**
**ಶ್ರೋತ್ರೇಂದ್ರಿಯಂಗಳು ಮುಟ್ಟದೆ,**
**ಘ್ರಾಣೇಂದ್ರಿಯಂಗಳು ಮುಟ್ಟದೆ,**
**ಜಿಹ್ವೇಂದ್ರಿಯಂಗಳು ಮುಟ್ಟದೆ,**
**ತ್ವಗಿಂದ್ರಿಯಂಗಳು ಮುಟ್ಟದೆ,**
**ಇಂತು ಇಂದ್ರಿಯಂಗಳು ಹಲವ ಹರಿಯದೆ,**
**ಇವು ಈಶನ ಮುಖವೆಂದರ್ಪಿಸಾ ಸೂಸಲೀಯದೆ,**
**ಸರ್ವಕರಣಂಗಳು ಈಶನ ಕರಣಂಗಳೆಂದರ್ಪಿಸಾ,**
**ಎಲೆ ಅಯ್ಯಾ , ನಿನಗೆ ಗುರು ಕರುಣವಾದ ಬಳಿಕ,**
**ಸರ್ವಾಂಗ ಲಿಂಗಾಂಗವೆಂದರ್ಪಿಸಿ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ ನಿತ್ಯವ ಕೂಡಾ ಅಯ್ಯಾ.**

ಮನುಷ್ಯ , ಕರಣಂಗಳು ತನ್ನವೆಂದು ತಿಳಿದಿದ್ದಾನೆ. ಅವು ತನ್ನವಲ್ಲ. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಇವು ಐದು ಕರಣಂಗಳು ಈಶನವು. ಈಶ್ವರನಿಗೆ ಐದು ಮುಖಗಳು. ಈ ಐದು ಕರಣೇಂದ್ರಿಯಂಗಳು ತನ್ನವೆಂದು ತಿಳಿದದ್ದಕ್ಕೆ ಮನುಷ್ಯ ಇವುಗಳಿಂದಲೇ ತಪ್ಪಿತಸ್ಥನಾಗಿದ್ದಾನೆ. ಈ ಐದು ಕರಣೇಂದ್ರಿಯಗಳನ್ನು ಈಶ್ವರನಿಗೆ ಮಾತ್ರ ಬಳಕೆ ಮಾಡಲು ಬರುತ್ತದೆ.

ನನಗೆ ನೋಡಲು ಬರುವುದಿಲ್ಲ. ಈಶ್ವರನಿಗೆ ಮಾತ್ರ ನೋಡಲು ಬರುತ್ತದೆ. ರಾವಣ ಕಣ್ಣು ತನ್ನದೆಂದು ತಿಳಿದು ಸೀತೆಯನ್ನು ನೋಡಿದ. ಕಾಯದಲ್ಲಿ ಕಾಮದ ರಸಾಯನ ಚಿಮ್ಮಿತು. ಸೀತೆಯನ್ನು ಮೋಹಿಸಲು ಹೋಗಿ ತನ್ನ ಹತ್ತು ತಲೆಗಳನ್ನು ಕಳೆದುಕೊಂಡ.

ಕಣ್ಣಲ್ಲಿ ಈಶ್ವರನಿದ್ದಾನೆಂದು ಈಶ್ವರನ ಭಕ್ತ ರಾವಣ ತಿಳಿಯದೆ ಹೋದ. ತನುವನ್ನು ಆವರಿಸಿದ ಮನವೆಂಬ ರಾವಣ ನೋಡುವ ಕಣ್ಣಲ್ಲಿ ಪ್ರವೇಶ ಮಾಡಿ, ಕಣ್ಣನ್ನು ತನ್ನದನ್ನಾಗಿಸಿಕೊಂಡಿದ್ದಾನೆ. ಕಣ್ಣಿನ ಕಣ್ಣಲ್ಲಿಯೇ ಈಶ್ವರ ಸಂಗಮವಾಗಿದ್ದಾನೆ. ನನ್ನ ಕಣ್ಣೇ ಬೇರೆ; ಈಶ್ವರನ ಕಣ್ಣೇ ಬೇರೆ, ಕಣ್ಣು ಈ ಎರಡೂ ಕಂಗಳ ದೃಶ್ಯಕ್ಕೆ ಉಪಕರಣವಾಗಿದೆ.

ನಾನು ನೋಡಿದರೆ ಸತ್ಯ ಕಾಣುವುದಿಲ್ಲ. ಈಶ್ವರನನ್ನು ಸ್ಪರ್ಶಿಸಿ ನೋಡಿದರೆ ಬರೀ ಸತ್ಯ ಮಾತ್ರ ಕಾಣುತ್ತದೆ. ಸೀತೆಗೂ ಮಂಡೋದರಿಗೂ ವ್ಯತ್ಯಾಸ ಕಾಣುವುದಿಲ್ಲ. ಈಶ್ವರನ ದೃಶ್ಯ ತಾಗದೇ ನೋಡಿದ ಫಲವನ್ನು ರಾವಣ ಪಡೆದುಕೊಂಡ. ಸತಿಸುತರನ್ನು, ಅಪಾರವಾದ ಸಂಪತ್ತನ್ನು, ರಾಜ್ಯ ಕೋಶ ಎಲ್ಲದರ ಜೊತೆಗೆ ತನ್ನ ಹತ್ತು ತಲೆಗಳನ್ನು ಕಳೆದುಕೊಂಡ.

ಎಲ್ಲಿ ನೋಡಿದರೂ ನೋಡಲು ಬಾರದ ಕಣ್ಣುಗಳೇ ಇವೆ. ''ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯಾ'' ಎಂಬ ಬಸವಣ್ಣನ ಸೂತ್ರ ಕಣ್ಣಿಗೆ ಅರ್ಥವಾಗಲೊಲ್ಲದು. ''ನೋಡೂದ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ'' ಎಂಬ ಪ್ರಭುದೇವರ ಸೂತ್ರ ಕೂಡಾ ಕಣ್ಣಿಗೆ ಅರ್ಥವಾಗುತ್ತಿಲ್ಲ. ಹಳದಿ ಲೋಹವನ್ನು ಚಿನ್ನವೆಂದು ಯುದ್ಧಕ್ಕೆ ಸನ್ನದ್ಧನಾಗುವ ಕಣ್ಣಿಗೆ ಕಣ್ಣೊಳಗಿದ್ದ ಕಣ್ಣು ಹೇಗೆ ತಿಳಿಯಬೇಕು?

ಚರ್ಮ ಹೆಣ್ಣು ಅಲ್ಲ ಗಂಡು ಅಲ್ಲ ಎಂದು ನೋಡುವ ಶಕ್ತಿ ಈಶ್ವರನ ಕಣ್ಣಿಗೆ ಮಾತ್ರ ಇದೆ. ಕಾಯದಲ್ಲಿ ಈಶ್ವರಿಯೂ ಇದ್ದಾಳೆ; ಈಶ್ವರನೂ ಇದ್ದಾನೆ. ಕಾಯ ಇವರಿಬ್ಬರ ಸಂಗಮ. ಇವರಿಬ್ಬರಿಂದಲೇ ಕಾಯ ಜನ್ಮ ತಳೆದಿದೆ. ಇವರಿಬ್ಬರು ಸಕಲ ಕಾಯಗಳಲ್ಲಿಯೂ ಇದ್ದಾರೆ. ಮನ ಈಶ್ವರನನ್ನು ಮುಟ್ಟಿ ಈಶ್ವರಿಯಾಗುತ್ತಿಲ್ಲ. ಮನ ತನ್ನ ಕಣ್ಣಿನಿಂದ ತಾನೇ ಈಶ್ವರನನ್ನು ಮುಟ್ಟದೆ ಒಬ್ಬಂಟಿಯಾಗಿ ನೋಡಿದರೆ ಲೋಹ ಚಿನ್ನವಾಗಿ ಕಾಣುತ್ತದೆ. ಅದನ್ನು ಪಡೆಯುವುದಕ್ಕಾಗಿ ಮನ ಈಶ್ವರನಿದ್ದ ಕಾಯವನ್ನು ಕಳ್ಳನನ್ನಾಗಿ ಮಾಡುತ್ತದೆ. ರಾಜನನ್ನಾಗಿ, ರಾವಣನನ್ನಾಗಿ, ಕೀಚಕನನ್ನಾಗಿ ಮಾಡುತ್ತದೆ.

ಮನೋಮಯವಾದ ಕಣ್ಣು ಕಣ್ಣೊಳಗಿದ್ದ ಈಶ್ವರನ ಕಣ್ಣನ್ನು ಮುಟ್ಟಲು ಹಲವಾರು ವರ್ಷಗಳಾದರೂ ಬೇಕಾಗಬಹುದು. ಹಲವಾರು ಯುಗಗಳಾದರೂ ಬೇಕಾಗಬಹುದು. ಅಥವಾ ಹಲವಾರು ಕ್ಷಣಗಳಾದರೂ ಸಾಕಾಗಬಹುದು. ಇದು ಘಟಿಸಬೇಕಾದರೆ, ಕಣ್ಣಿಗೆ ಕಣ್ಣೊಳಗೊಂದು ಅರಿವಿನ ಕಣ್ಣಿದೆಯೆಂದು ಬಲವಾಗಿ ತಿಳಿಯಬೇಕು. ತಿಳಿದು ಮುಟ್ಟಲು ಹೋಗುವುದೊಂದೇ ತಡ ಈಶ್ವರನ ಜ್ಞಾನಾಗ್ನಿಗೆ ಅಜ್ಞಾನದ ಕಾಮದ ಕಣ್ಣು ಬೆಂದು ಭಸ್ಮವಾಗುತ್ತದೆ. ಕುರುಡು ಕಣ್ಣು ಈಶ್ವರನ ಕಣ್ಣಿಗೆ ಅರ್ಪಣೆಯಾಗುತ್ತದೆ.

''ಕಿವಿಯೊಳಗೆ ಕಿವಿಯಿದ್ದು ಕೇಳಲೇಕರಿಯರಯ್ಯಾ'' ಎಂದು ಕಿವಿಗೆ ಬಸವಣ್ಣನವರು ಕಿವಿಮಾತು ಹೇಳಿದ್ದಾರೆ. ದ್ರೌಪದಿಯ ನಗು ಕೇಳಿದ ದುರ್ಯೋಧನನ ವಜ್ರಶರೀರ ಛಿದ್ರಛಿದ್ರವಾಯಿತು. ಹದಿನೆಂಟು ಅಕ್ಷೋಹಿಣಿ ಸೈನ್ಯ ಯುದ್ಧದಲ್ಲಿ ಸತ್ತು ಹೋಯಿತು. ರಕ್ತದ ಸರೋವರಗಳು ನಿರ್ಮಾಣವಾದವೆಂದು ವ್ಯಾಸಮಹರ್ಷಿಗಳು ಶಬ್ದದಿಂದ ಸೃಷ್ಟಿಯಾದ ಮಹಾಭಾರತವನ್ನು ಬಣ್ಣಿಸಿದ್ದಾರೆ.

ಆದರೂ ಕಿವಿಗಳಿಗೆ ನಾಚಿಕೆಯಾಗಬೇಕಲ್ಲ! ಅಜ್ಞಾನದ ಕಿವಿ ಜ್ಞಾನದ ಕಿವಿಗೆ ಅರ್ಪಣೆಯಾಗಲಿಲ್ಲ. ಮೂಗು ನಾಲಿಗೆ ಚರ್ಮಗಳ ಅಜ್ಞಾನ ಅಲ್ಲಲ್ಲಿಯೇ ಇದ್ದ ಜ್ಞಾನಕ್ಕೆ ಅರ್ಪಣೆಯಾಗಬೇಕು ಇದು ಗುರುಕರುಣವಾದಾಗಲೇ ಪ್ರಯತ್ನಿಸಲು ಸಾಧ್ಯವಾಗುತ್ತದೆ.

ಸರ್ವಾಂಗವು ಲಿಂಗಾಂಗವೆಂದು ಅರ್ಪಿಸಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನನ್ನು ಕೂಡಲು ಬರುತ್ತದೆ.

**674**

**ನರವೇಷವನು ಕಳೆದು ಶಿವವೇಷವನು ಮಾಡಿ**
**ಉರುತರವು ಪ್ರಸನ್ನ ಪ್ರಸಾದವ**
**ಪರಿಯನರುಪಿ ಭವ ತಪ್ಪಿಸಿದ ಗುರು**
**ಆದ ನಿಸ್ತಾರವೆಂದಾತ ಶಿಷ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ನರನು ಇದ್ದಾನೆ. ಶಿವ ಕೂಡಾ ಇದ್ದಾನೆ. ನರ ಕಾಯವನ್ನು ಬಳಕೆ ಮಾಡಿದರೆ ಅದು ನರನ ಕಾಯ. ನರ ಶಿವನೊಂದಿಗೆ ಸಂಗಮವಾಗಿ ಶಿವನಿಗೆ ದಾಸನಾದರೆ ಅದು ಶಿವನ ಕಾಯ. ಅಂತಹ ಕಾಯವನ್ನು ಶರಣರು ಕೈಲಾಸವೆಂದು ಕರೆದಿದ್ದಾರೆ.

ನರನಿದ್ದ ಕಾಯಕ್ಕೆ ಜನನವಿದೆ ಮರಣವಿದೆ. ಕಾಯದಲ್ಲಿಯೇ ಇದ್ದ ಶಿವನಿಗೆ ನರ ದಾಸಾನುದಾಸನಾದಾಗ ಅದು ಶಿವಕಾಯವಾಗುತ್ತದೆ. ಶಿವಕಾಯಕ್ಕೆ ಜನನವಿಲ್ಲ ಮರಣವಿಲ್ಲ.

ಕಾಯದಲ್ಲಿ ಶಿವ ಸಂಗಮವಾದ ವಿಚಾರವನ್ನು ನರನಿಗೆ ಗುರುದೇವ ತಿಳಿಸುತ್ತಾನೆ. ಶಿವನಿಗೆ ದಾಸನಾಗುವ ಸೂತ್ರವನ್ನು ಗುರುದೇವ ಹೇಳಿಕೊಡುತ್ತಾನೆ. ಹೀಗಾಗಿ ಕಾಯ ಜನನ ಮರಣಗಳ ಭವರೋಗವನ್ನು ತಪ್ಪಿಸಿಕೊಂಡು ನಿರೋಗಿಯಾಗುತ್ತದೆ.

ಕಾಯವನ್ನು ಆವರಿಸಿದ ಮನವೆಂಬ ನರ ಅರಿವೆಂಬ ಗುರುದೇವನಿಗೆ ಹೇಗೆ ಶಿಷ್ಯನಾಗಬೇಕೆಂಬುದನ್ನು ಸದ್ಗುರು ಹೇಳಿಕೊಡುತ್ತಾನೆ. ಕಾಯ ನರವೇಷವನ್ನು ಕಳಚಿ ಸದಾ ಪ್ರಸನ್ನ ಪ್ರಸಾದಿಯಾಗಿ ಪರಮ ಸಂತೋಷದಿಂದ ಇರುವ ಶಿವನನ್ನು ಕೂಡಿ ಶಿವೆಯೇ ತಾನಾಗುತ್ತಾಳೆ. ಶಿವ-ಶಿವೆಯರಿದ್ದ ಕಾಯ ಕೈಲಾಸವೆಂದು ಕರೆಯಿಸಿಕೊಂಡು ಶಿವ-ಶಿವೆಯರಿಗೆ ಸಾಕ್ಷಿಯಾಗುತ್ತದೆ.

**675**

**ನರಸಮುದ್ರವೆಂಬುದೊಂದು**
**ಕೊಳಚೆಯೊಳಗಣ ಚಿಕ್ಕ ಮಹಾಕೊಳಚೆಯೊಳಗೆ**
**ಅಯ್ಯಾ, ಲೋಕ ಬಿದ್ದು ತೇಂಕಾಡುತ್ತಿದೆ.**
**ಇದರಿಂದ ಹೊಲ್ಲ; ಕೈಯ ನೀಡು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ನೀನು.**

ತನುವೆಂಬುದೊಂದು ಸಮುದ್ರ. ಅದು ಜಲಸಾಗರ. ಜಲಬಿಂದುವೇ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ ಇವು ಸೋರದಂತೆ ಸುಂದರವಾದ ಚರ್ಮವಾಗಿ ತನುವಾಗಿ ಗರ್ಭದಿಂದ ಹೊರಬಂದಿದೆ. ಹೀಗಾಗಿ ತನುವೆಂಬುದೊಂದು ಸಮುದ್ರ. ಜಲ ರಕ್ತವಾಗಿದೆ. ಆ ರಕ್ತವೇ ಮಾಂಸವಾಗಿದೆ. ಆ ಮಾಂಸವೇ ಮೂಳೆಯಾಗಿದೆ. ಆ ಮೂಳೆಯೇ ಮಜ್ಜೆಯಾಗಿದೆ. ಇದು ಮೇದಸ್ಸು ಆಗಿದೆ. ಜಲವೇ ಚರ್ಮದ ಕವಚವಾಗಿರುವುದು ಒಂದು ಸೋಜಿಗ ! ಕಾಣುವ ಕಣ್ಣು ಕೇಳುವ ಕಿವಿಯಾಗಿದೆ. ಮೂಸಿಸುವ ಮೂಗು, ರುಚಿಸಲು ನಾಲಿಗೆಯಾಗಿದೆ. ಸ್ಪರ್ಶಿಸಲು ಚರ್ಮವಾಗಿದೆ.

ನರಸಮುದ್ರವೆಂಬುದೊಂದು ಕೊಳಚೆ. ಅದು ಬರೀ ಕೊಳಚೆಯಲ್ಲ; ಕೊಳಚೆಯೊಳಗಣ ಚಿಕ್ಕ ಮಹಾಕೊಳಚೆ. ಈ ಕೊಳಚೆಯಲ್ಲಿ ಇಡೀ ಲೋಕವೇ ಬಿದ್ದು ತೇಕಾಡುತ್ತಲಿದೆ. ಈ ಕೊಳಚೆಯಲ್ಲಿ ಅದ್ದುವವನೂ ನೀನೇ. ಪಾರದರ್ಶಕವಾದ ಜಲವನ್ನೇ ಕೊಳಚೆ ಮಾಡಿದವನು ಕೂಡಾ ನೀನೇ ಆಗಿರುವಿ. ಆ ಕೊಳಚೆಯನ್ನೇ ಗೊಬ್ಬರ ಮಾಡಿ, ಸುಂದರ ಸುಮಧುರವಾದ ಅರಿವಿನ ಪರಿಮಳ ಬೀರುವ ಪುಷ್ಪವನ್ನಾಗಿಸಿದವನು ಕೂಡಾ ನೀನೇ ಆಗಿರುವಿ. ಆ ಪುಷ್ಪದಲ್ಲಿ ಪವಡಿಸಿದವನು ಕೂಡಾ ನೀನೇ ಆಗಿರುವಿ.

ನಾನು ನರಸಮುದ್ರವೆಂಬ ಕೊಳಚೆಯೊಳಗಣ ಮಹಾಕೊಳಚೆಯಲ್ಲಿ ಬಿದ್ದು ಒದ್ದಾಡುತ್ತಲಿದ್ದೇನೆ. ಕೈಯ ನೀಡಿ ಬರಸೆಳೆದು ಎತ್ತಿಕೊಂಡು ನಿನ್ನಂತೆ ಮಾಡಿಕೊ ಪ್ರಭುವೆ. ಕಪಿಲಸಿದ್ಧ ಮಲ್ಲಿಕಾರ್ಜುನನು ನೀನು.

ಸಿದ್ಧರಾಮ ಶಿವಯೋಗಿಗಳ ಮತ್ತೊಂದು ವಚನದ ಸೂತ್ರ ಈ ಕೆಳಗಿನಂತಿದೆ:

''ತಿಳಿನೀರೆಂಬೆ ತಿಳಿನೀರೆಂಬೆ ತಿಳಿ ನೀ ಎಂದು ಒಂದು ದಿನ ಅಂದಿಲ್ಲೆಲ್ಲೆ ಮಾನವಾ. ಕ್ಷಣ ಕ್ಷಣಕ್ಕೆ ತಿಳಿನೀ ಎಂದಡೆ, ತಳುಹದೆ ತನ್ನ ನಿಜವ ಕೊಡನೆ ಕಪಿಲಸಿದ್ಧ ಮಲ್ಲೇಂದ್ರ ?'' (ಹಳೆ ಕಟ್ಟಿನ 901 ನೇ ವಚನ)

ತಿಳಿತಿಳಿಯಾದ ಪಾರದರ್ಶಕವಾದ ಜೀವಜಲಬಿಂದುವೇ, ರಕ್ತವಾಗಿದೆ, ಮಾಂಸವಾಗಿದೆ, ಮಜ್ಜಾ ಮೇದಸ್ಸು ಆಗಿದೆ. ಕೊಳಚೆಯೊಳಗಣ ಮಹಾಕೊಳಚೆಯಾಗಿದೆ. ತನುವಿನಲ್ಲಿಯ ರಕ್ತ ವಿರಕ್ತವಾದಾಗಲೇ ಜ್ಞಾನಪುಷ್ಪ ಅರಳುತ್ತದೆ.

ಜಲ ಸತ್ಯವಲ್ಲ. ಅದರ ಸತ್ಯ ಆಮ್ಲಜನಕ ಜಲಜನಕ. ಇವೆರಡೂ ಕಾಣುವುದಿಲ್ಲ. ಜಲಜನಕ ಉರಿಯುವುದರ ಮೂಲಕ ಕಾಣುತ್ತದೆ; ಆಮ್ಲಜನಕ ಉರಿಸುವುದರ ಮೂಲಕ ಕಾಣುತ್ತದೆ. ಉರಿಯುವ ಜನಜನಕ ಉರಿಸುವ ಆಮ್ಲಜನಕ ಇವೆರಡು ಬಯಲ ಗರ್ಭದಲ್ಲಿವೆ. ಬಯಲದೇವ ಇವೆರಡನ್ನು ಕೂಡಿಸಿ ತಾನು ಒಳಹೊರಗೆನ್ನದೆ ಬೆರೆತು ಜೀವಜಲವನ್ನಾಗಿ ಮಾಡಿದ.

ಜೀವ ಜಲವೇ ಗಟ್ಟಿಯಾಗಿ ಭೂಮಿಯಾಯಿತು. ಜೀವಜಲವೇ ಹರಿದು ಸಸ್ಯ ಕಾಶಿಯಾಯಿತು. ಜೀವಜಲಬಿಂದುವೇ ಹರಿದು ತನುವಾಯಿತು. ತನುವನ್ನು ಆವರಿಸಿದ ಮನವಾಯಿತು. ತನುವಿನಲ್ಲಿಯೇ ಸಂಗಮವಾಗಿ ಜ್ಞಾನವಾಯಿತು. ಮಹಾಜ್ಞಾನ ದೇವನಾಯಿತು.

ತಿಳಿದರೆ ತಿಳಿ ನೀರೇ ನರಸಮುದ್ರವಾಗಿದೆ. ತಿಳಿ ನೀರೇ ಮಹಾಕೊಳಚೆಯಾಗಿದೆ. ಲೋಕ ಅದರಲ್ಲಿ ಬಿದ್ದು ತೇಕಾಡುತ್ತಲಿದೆ. ತಿಳಿದರೆ ತಿಳಿಯುವ ನಾನು ಅಲ್ಲಿಯೇ ಇದ್ದೇನೆ. ತಿಳಿಸುವ ದೇವನೂ ಅಲ್ಲಿಯೇ ಇದ್ದಾನೆ. ಈ ನರಸಮುದ್ರವೆಂಬ ಕೊಳಚೆಯೊಳಗಣ ಮಹಾಕೊಳಚೆಯ ಜೀವನ ಇನ್ನು ಸಾಕು. ನಿನ್ನನ್ನು ಅರಿಯದೆ ಈ ಅಜ್ಞಾನದ ಲೋಕದಲ್ಲಿ ಬಿದ್ದು ತೇಕಾಡುತ್ತಿದ್ದೇನೆ. ಇದರಿಂದ ನನ್ನನ್ನು ಹೊರಗೆ ಮಾಡು ತಂದೆ ಎಂದು ಕೈ ನೀಡಿದರೆ ಸಾಕು ಭರದಿಂದ ಸೆಳೆದು ಬಿಗಿದಪ್ಪಿಕೊಳ್ಳುತ್ತಾನೆ. ಕೆಸರಿನಲ್ಲಿಯೇ ಕಮಲವನ್ನು ಅರಳಿಸುತ್ತಾನೆ.

**676**

**ನಲ್ಲನ ನೋಟದ ಬೇಟದ ಕೂಟದ ಪರಿಯ**
**ನಾನೇನೆಂದು ಹೇಳುವೆ ? ವಿಪರೀತ ಕೆಳದಿ.**
**ಕೂಟದ ಸುಖದಲ್ಲಿ ನೋಟ ಕಂಬೆಳಗಾದಡೆ**
**ಬೇಟ ಬೇರುಂಟೆ ? ಹೇಳು ಅವ್ವಾ.**
**ನೋಡಿದ ದೃಷ್ಟಿ ಎವೆಗುಂದದೆ? ಮೋಹದ ಪರಿ ಎಂತುಂಟು?**

**ಹೇಳಾ ಅವ್ವಾ.**
**ನೋಟ ಬೇಟ ಕೂಟ ಸಮಸುಖ ಸಮರತಿಯಾದಡೆ**
**ಕಪಿಲಸಿದ್ಧ ಮಲ್ಲಿನಾಥಯ್ಯ ಬೇರಿಲ್ಲವವ್ವಾ.**

ತನುವನ್ನು ಆವರಿಸಿದ ಮನವೇ ನಲ್ಲೆ. ತನುವಿನಲ್ಲಿ ಸಂಗಮವಾದ ಅರಿವೇ ನಲ್ಲ. ನಲ್ಲೆಗೆ ನಲ್ಲನ ಸಂಗಮಾಡುವುದು ತಿಳಿಯದಿದ್ದರೆ, ನಲ್ಲೆ ಕಾಯದ ಸಂಗ ಮಾಡಿ ಹಾದರ ಮಾಡುತ್ತದೆ. ನೋಡಿದ ಸಕಲ ವಸ್ತುಗಳನ್ನು ಮೋಹ ಮಾಡಿ ಬೇಡುತ್ತದೆ. ರುಚಿಸಿದ ಸಕಲ ವಸ್ತುಗಳನ್ನು ಮೋಹ ಮಾಡಿ ಬೇಡುತ್ತದೆ. ಸ್ಪರ್ಶಿಸಿ ಮೂಸಿಸಿದ ಸಕಲ ವಸ್ತುಗಳನ್ನು ಮೋಹ ಮಾಡಿ ಬೇಡುತ್ತದೆ.

ನಲ್ಲೆಗೆ ನಿಜನಲ್ಲ ಸಿಗುವವರೆಗೆ ತನು ಮತ್ತು ಮನದ ಹಾದರ ನಿಲ್ಲುವುದಿಲ್ಲ. ವಸ್ತುವಿಗಾಗಿ ತನು ತನುವನ್ನು ದ್ವೇಷ ಅಸೂಯೆ ಮತ್ಸರಗಳಿಂದ ನೋಡಿ ವೈರತ್ವ ಹಗೆತನ ಸಾಧಿಸುತ್ತದೆ. ಇಲ್ಲ ತನು ತನುವನ್ನು ಮೋಹ ಮಾಡಿ ಸ್ವಾರ್ಥ ಮೆರೆಯುತ್ತದೆ. ಏಕೆಂದರೆ ಅಜ್ಞಾನಿ ಮನದಿಂದಾಗಿ ತನುವಿನಲ್ಲಿ ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ಹುಟ್ಟಿಕೊಳ್ಳುತ್ತವೆ.

ಮನ ತನುವನ್ನು ಮೋಹ ಮಾಡಿದ್ದಕ್ಕಾಗಿ ತನು ಸಕಲ ವಸ್ತುಗಳನ್ನು ಮೋಹ ಮಾಡುತ್ತದೆ. ವಸ್ತುಗಳ ಆಸೆಗಾಗಿ ತನು ರಾಜ, ಕಳ್ಳ, ಭಿಕ್ಷುಕ, ವಿಷಯಲಂಪಟ, ಸಾತ್ವಿಕ ಎಂಬ ಹಲವಾರು ವೇಷಗಳನ್ನು ಧಾರಣೆ ಮಾಡುತ್ತದೆ.

ತನುವನ್ನು ಆವರಿಸಿದ ಮನವೆಂಬ ನಲ್ಲೆಗೆ ತನುವಿನಲ್ಲಿ ತನ್ಮಯವಾದ ಅರಿವಿನ ನಲ್ಲನ ಮೇಲೆ ದೃಶ್ಯ ಹರಿದರೆ ಸಾಕು ಆ ನೋಟದ ಕೂಟದ ಬೇಟದ ಪರಿಯೇ ಬೇರೆ. ನಲ್ಲನ ನೋಟದಲ್ಲಿ ನಲ್ಲೆಯ ನೋಟ ಬೆರೆತ ಕೂಟದ ಸುಖವೆ ಬೇರೆ. ನಾನೇನೆಂದು ಹೇಳಲಿ, ವಿಪರೀತ ಕೆಳದಿ.

ಅರಿವಿನ ನಲ್ಲನ ನೋಟದ ಕೂಟದ ಸುಖದಲ್ಲಿ ನನ್ನ ಅಜ್ಞಾನದ ಕತ್ತಲೆ ನೋಟ ಬೆಳ್ಳನೆ ಬೆಳಗಿ ಬೆಳಗಿಂಗೆ ಬೆಳಗಾಯಿತು. ನಾನು ನೋಡುವ ಸಕಲ ವಸ್ತುಗಳನ್ನು ನನ್ನ ನೋಟ ಬೆಳಗಿ ಬೆಳಗಿ ತೋರಿದವು. ಚಿನ್ನ ಲೋಹವಾಗಿ ಬೆಳಗಿತು. ಚಿನ್ನವೆಂದು ಮುಟ್ಟಲಿಲ್ಲ. ಚಿನ್ನಕ್ಕಾಗಿ ಯುದ್ಧ ಮಾಡಲಿಲ್ಲ. ಚಿನ್ನವನ್ನು ಮೋಹಿಸಿ ಕಳುವು ಮಾಡಿ ಕಳ್ಳನಾಗಲಿಲ್ಲ.

ನೋಡಿದ ದೃಷ್ಟಿ ಎದೆಗುಂದದೆ ನಿನ್ನ ಮೋಹದ ಪರಿ ವಿಪರೀತ ನೋಡಾ ಅವ್ವಾ. ನೋಟ ಬೇಟ ಕೂಟ ಸಮ ಸುಖ ಸಮರತಿಯಾಯಿತು. ಎಲ್ಲಿ ನೋಡಿದರೂ ನೀನೆ. ನಿನ್ನ ಹೊರತಾಗಿ ಅನ್ಯರು ಕಾಣಲೇ ಇಲ್ಲ. ಹೆಣ್ಣಾಗಿ ಗಂಡನ್ನು ಮೋಹಿಸಲಿಲ್ಲ. ಗಂಡಾಗಿ ಹೆಣ್ಣನ್ನು ಮೋಹಿಸಲಿಲ್ಲ.

ಅಂಗದಲ್ಲಿ ಸಂಗಮವಾದ ಅರಿವಿನ ನಲ್ಲ ಗಂಡಾಗಿ ಕಂಡಾಗ, ಅಂಗವನ್ನು ಆವರಿಸಿದ ಮನವೆಂಬ ನಲ್ಲೆ ಹೆಣ್ಣಾಗಿ ಕಂಡಾಗ, ಅಂಗ ಗಂಡಾದರೂ ಹೇಗೆ ಆದೀತು? ಅಂಗ ಹೆಣ್ಣಾದರೂ ಹೇಗೆ ಆದೀತು? ಅಂಗವನ್ನು ಆವರಿಸಿದ ಅಜ್ಞಾನವೆಂಬ ಹೆಣ್ಣನ್ನು ಅಂಗದಲ್ಲಿಯೇ ಸಂಗಮವಾದ ಜ್ಞಾನವೆಂಬ ಗಂಡು ಬರಸೆಳೆದು ಅಪ್ಪಿದಾಗ ಆ ಸುಖ ಎಲ್ಲಿಯಾದರೂ ಸಿಕ್ಕೀತೆ ? ಅಂಗ ಅಂಗದೊಂದಿಗೆ ಸುಖಿಸುವುದನ್ನು ಮರೆತು ಹೋಯಿತು. ಅರಿವಿನ ಲಿಂಗಯ್ಯನೆ ಸಖನಾದ ಮನವೇ ಆತನ ಸಖಿಯಾಯಿತು. ಇವರಿಬ್ಬರಿಗೆ ಅಂಗ ಮನೆಯಾಯಿತು. ಅಂಗದಲ್ಲಿಯೇ ಸಮಸುಖ ಸಮರತಿ ಸಮಕೂಟ ಏರ್ಪಟ್ಟು ಸರ್ವಾಂಗವೂ ಲಿಂಗಾಂಗವಾಯಿತು. ಸತಿಪತಿಗಳಿಗೆ ಮನೆಯಾಯಿತು. ಶಿವಪಾರ್ವತಿಯರಿದ್ದ ಕೈಲಾಸವಾಯಿತು. ಅರ್ಧನಾರೀಶ್ವರ ಎಂದು ಅಂಗದಿಂದಲೇ ಅಂಗ ಕೂಗಿ ಕರೆಯುವ ಶಕ್ತಿ ಅಂಗಕ್ಕೆ ತಂತಾನೇ ಬಂದು ಬೆಳಗಿಂಗೆ ಬೆಳಗಾಗಿ ಬೆಳಗಿತು.

**677**

**ನಲ್ಲ! ನಿಮ್ಮ ಬೇಂಟ ವಿಷಮದ ಬೇಟವಯ್ಯಾ.**
**ನಲ್ಲ! ನಿಮ್ಮ ಬಯಲಿಗೆ ಬೇಟಗೊಂಡೆನಯ್ಯಾ.**
**ಅಯ್ಯಾ, ಅಕ್ಕಟಾ, ಇವಳೆನ್ನ ಸಬುದಕ್ಕೆ ಬೇಟಗೊಂಡಳೆಂದು**
**ಕೂಡಿ ಕೂಡಿ ಕೂಡ್ಯೆ ಎನ್ನ,**
**ಕಪಿಲಸಿದ್ಧ ಮಲ್ಲೇಶ್ವರದೇವಾ.**

ನಲ್ಲನೆ, ನಿಮ್ಮ ಪ್ರೇಮವೇ ವಿಚಿತ್ರ ! ಅಜ್ಞಾನವನ್ನು ಪುಡಿಪುಡಿ ಮಾಡಿ ಅಪ್ಪಿಕೊಳ್ಳುವ ನಿನ್ನ ಅಪ್ಪುಗೆಯ ಸವಿ ಹಿತವಾದ ಅಮೃತ. ನಲ್ಲನೆ ! ನಿನ್ನ ಬಯಲಿಗೆ ಮೋಹಗೊಂಡೆನಯ್ಯಾ. ಬಯಲಲ್ಲಿ ಇದ್ದರೂ ಬಯಲ ಪರಿಚಯವು ನನಗಿರಲಿಲ್ಲ. ಬಯಲ ಬೀಜವೇ ನಾನಾಗಿದ್ದರೂ; ಬಯಲ ಬೀಜದಿಂದಲೇ ಹುಟ್ಟಿದ ಬೋಧಿ ವೃಕ್ಷವೇ ನಾನಾಗಿದ್ದರೂ ಬಯಲೆಂದರೆ ಯಾರೆಂಬುದು ನನಗೆ ಗೊತ್ತಿರಲಿಲ್ಲ.

ನಾನು ರೂಪು; ನೀನು ನಿರೂಪು ಎಂದು ಗುರುದೇವನಿಂದ ಗೊತ್ತಾಗುವುದೊಂದೇ ತಡ ನಿನ್ನ ಪ್ರೇಮಪಾಶದಲ್ಲಿ ಜಾರಿಬಿದ್ದೆ. ರೂಪು ನೋಡೇ ರೂಢಿಯಿದ್ದ ನನಗೆ ನಿನ್ನ ನಿರೂಪು ಕಾಣಲೊಲ್ಲದು. ರೂಪೇ ಇಲ್ಲದ ನಲ್ಲ ನೀನು; ರೂಪನ್ನು ಆವರಿಸಿದ ನಿರೂಪು ನಲ್ಲೆ ನಾನು. ನನ್ನಿಂದಾಗಿ ರೂಪು ನಿನ್ನನ್ನು ನೋಡಲೇ ಇಲ್ಲ. ನೀನಿದ್ದ ರೂಪುವಿನ ವ್ಯಾಮೋಹದಿಂದಾಗಿ ನಾನು ಕೂಡಾ ನಿನ್ನನ್ನು ನೋಡಲೇ ಇಲ್ಲ. ಏಕೆಂದರೆ ನಿರೂಪ ನಲ್ಲನಿಗೆ ನಲ್ಲೆಯಾಗಬೇಕಾದ ನಾನು ರೂಪೇ ನಾನೆಂದು ನಿರ್ಧರಿಸಿ ಬರೀ ರೂಪುವಿನೊಂದಿಗೆ ಸಂಗ ಮಾಡಿದೆ.

ರೂಪು ನೋಡಿ ಸ್ತ್ರೀ ಎಂದು ಮೋಹಗೊಂಡೆ, ರೂಪು ನೋಡಿ ಪುರುಷನೆಂದು ಮೋಹಗೊಂಡೆ. ಹುಸಿಮೋಹ ಎಂದು ನನಗೆ ತಿಳಿಯಲೇ ಇಲ್ಲ. ನಲ್ಲನೇ ! ನೀನು ನಿರೂಪು. ನಿನ್ನ ನಲ್ಲೆಯಾದ ನಾನು ಕೂಡಾ ನಿರೂಪು. ಅದೆಷ್ಟು ಸುಂದರ ನೀನು. ನಿನ್ನ ಬಯಲಿಗೆ ಬೇಟಗೊಂಡೆನಯ್ಯ ನಾನು.

ರೂಹಿಲ್ಲದ ಚೆಲುವ ನೀನು. ಕೇಡಿಲ್ಲದ, ಸಾವೇ ಇಲ್ಲದ ಚೆಲುವ ನೀನು. ನಿನ್ನ ಚೆಲುವು ನೋಡಿ ಅಕ್ಕ ಕೌಶಿಕನನ್ನು ಛೀ ಎಂದು ದೂರ ತಳ್ಳಿರಬೇಕು. ಏಕೆಂದರೆ ಅಕ್ಕ ಕೂಡಾ ಸಾವಿಲ್ಲದ ರೂಹೇ ಇಲ್ಲದ ಚೆಲುವೆ. ತನ್ನ ಚೆಲುವು ನೀನೇ ನಿನಗಾಗಿ ಕರುಣಿಸಿದ ಚೆಲುವು ಅದು.

ಅಯ್ಯಾ, ಅಕ್ಕಟಾ, ಅಕ್ಕ ನಿನ್ನ ಬೇಟಗೊಂಡಳೆಂದು ಆ ಚೆಲುವಿಗೆ ನೀನು ಮಾರುಹೋದೆ. ಕೂಡಿ ಕೂಡಿ ಕೂಡ್ಯೆ ಎನ್ನ ನಲ್ಲನೆ ಎಂದು ಕೂಗಿದ ಆ ನಲ್ಲೆಗೆ ನೀನು ಮಾರುಹೋದೆ ನಲ್ಲ ನಲ್ಲೆಯರಿಬ್ಬರು ಕದಳಿಯಲ್ಲಿ ಕೂಡಿ ಬಯಲಾದಿರಿ.

**678**

**ನಸುನಗೆಯ ಥಾಳದಲ್ಲಿ ಎಸೆದಿಪ್ಪ ನನ್ನ ನಲ್ಲನೆ.**
**ಹೊಸ ಕುಸುಮದ ಕಾಣಿಕೆಯ ತಂದೆನು ;**
**ಶಿಶುವೆಂದು ಮನ್ನಿಸಿದ ಶಿಶು ಸಸಿಯ ಫಲಕ್ಕೆ**
**ಮೂಲಸ್ವಾಮಿಯಾಯಿತ್ತಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಅಂಗದಲ್ಲಿಯೇ ಸಂಗಮವಾದ ನನ್ನ ನಲ್ಲನು ನಸುನಗೆಯ ಶಾಂತ ಮಹಾಸಾಗರದಲ್ಲಿ

ಎಸೆದಿಪ್ಪನು. ನಾನಾದರೂ ಆತನ ಮುಡಿಗೆ ಹುಲ್ಲು ತಾರದೆ ಹೊಸ ಬಗೆಯ ಕುಸುಮದ ಕಾಣಿಕೆಯ ತಂದೆನು. ಶಿಶುವೆಂದು ಮನ್ನಿಸಿ ಶಿಶು ಸಸಿಯ ಫಲಕ್ಕೆ ಮೂಲಸ್ವಾಮಿಯಾಗಲೇಬೇಕು.

ಶಿಶುವೆಂದರೆ ಲೋಕಕ್ಕೆ ಅದು ಶಿಶುವಲ್ಲ. ತಂದೆಯನ್ನು ಗುರುತಿಸಿ ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲ ಸಂಗಮದೇವಾ ಹಾಲಲ್ಲಾದರೂ ಅದ್ದು, ನೀರಲ್ಲಾದರೂ ಅದ್ದು ಅದು ನಿನ್ನ ಧರ್ಮ ಎಂದು, ಶಿಶು ತಂದೆಯ ಮೂಲವನ್ನು ತಿಳಿದು ಅರಿವಿನ ತಂದೆ ಎಂದು ಗುರುತಿಸಲು ಅರವತ್ತು ವರುಷವಾದರೂ ಬೇಕಾಗಬಹುದು ಅಥವಾ ಇಡೀ ಆಯುಷ್ಯವಾದರೂ ಸವೆಯಬಹುದು.

ಅಂಗಕ್ಕೆ ಎಷ್ಟು ವರುಷವಾದರೇನು ? ಅಂಗದಲ್ಲಿಯೇ ಸಂಗಮವಾದ ಅರಿವಿನ ತಂದೆಯನ್ನು ಅರಿಯದ ಮನ ಅದು ಶಿಶುವೇ ಆಗಿದೆ. ಶಿಶುವೆಂದು ಮನ್ನಿಸಿ ಸಲಹುವ ತಂದೆಯೇ ಮೂಲಸ್ವಾಮಿಯಾಗುತ್ತಾನೆ.

ಶಿಶು ನಸುನಗೆಯ ನಗುವ ಬೀರಿ, ಶಾಂತಸಾಗರದಲ್ಲಿ ಸಾಗರವೇ ತಾನಾಗಿ ಐಕ್ಯವಾಗುತ್ತದೆ. ಸಾಗರದಿಂದ ಬಂದ ಬಿಂದು ಸಾಗರವೆಂದು ತನಗೆ ಗೊತ್ತಾಗಲಿಲ್ಲ. ಹರಿದು ಹರಿದು ಹಲವಾರು ತಿರುವುಗಳನ್ನು ತಿರುತಿಗಿಸಿ ಬಾವಿ ಕೆರೆ ಹಳ್ಳ ನದಿಯಾಗಿ ಸಮುದ್ರ ಸೇರಲು ತಡವಾಯಿತು.

ಆದರೇನು ? ಅದು ಸಮುದ್ರವಲ್ಲವೇ ? ಸಮುದ್ರ ಸೇರಿ ಸಮುದ್ರವೇ ತಾನಾಯಿತು. ಸಮುದ್ರದಿಂದ ಬಂದುದು ತನಗೆ ತಿಳಿದಿರಲಿಲ್ಲ. ಶಿಶುವೆಂದು ಮನ್ನಿಸಿ ಶಿಶು ಸಸಿಯ ಫಲಕ್ಕೆ ಸಮುದ್ರ ಮೂಲಸ್ವಾಮಿಯಾದ.

**679**

**ನಾದ ಬಿಂದು ಕಳೆಗಳಲ್ಲಿ ಆದಿಯಾಮೋದವಾದ**
**ಭೇದಾದಿ ಭೇದವನ್ನು ಭೇದಿಸಿಹೆನೆಂದಾನು ಅಯ್ಯಾ.**
**ವೇಧೆ ವಿಕಳನಾದೆನು ಕಂಡಾ,**
**ಸಾದಾಖ್ಯ ದೇಹದ ಮೀರಿದ ಬ್ರಹ್ಮವಾದೆನು**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ನಾದಕ್ಕೆ ಮೋಹಗೊಂಡು ಅನಂತಕಾಲಗಳನ್ನು ಕಳೆದೆ. ಬಿಂದುವಿನ ಮೋಹದಿಂದಾಗಿ ಅನಂತಕಾಲಗಳನ್ನು ವ್ಯರ್ಥ ಕಳೆದುಕೊಂಡೆ. ಬಾಹ್ಯ ದೇವರನ್ನು ಆರಾಧಿಸುತ್ತಾ ಆ ದೇವನೇ ಶಿವನೆಂದು ತಿಳಿದು ಅನಂತಕಾಲ ಪೂಜಿಸಿ ಕಾಲಕಳೆದೆ. ನಾದ ಬಿಂದು ಕಳೆಗಳಿಗತೀತನು ನೀನು ಎಂದು ಭೇದಾದಿ ಭೇದಗಳನ್ನು ಭೇದಿಸಿ ಎಂದಾದರೂ ನಿನ್ನ ನೋಡಿಯೇನು ತಂದೆ ?

ಇಷ್ಟಲಿಂಗ ದೀಕ್ಷೆ ಪಡೆದು ಒಂದನಂತಕಾಲ ವಿಕಳನಾದೆನು ನಾನು. ಲಿಂಗಯ್ಯನಿದ್ದ ಅಂಗಕ್ಕೆ ಯಾರಾದರೂ ದೀಕ್ಷೆ ಕೊಡಲು ಸಾಧ್ಯವೆ ? ನಿನ್ನ ಇರುವಿಕೆಯನ್ನು ನಾನೇ ಕಂಡುಕೊಳ್ಳಬೇಕು. ಹಾಗೆಯೇ ನನ್ನ ಇರುವಿಕೆಯನ್ನು ನನ್ನಿಂದಲೇ ನಾನೇ ಕಂಡುಕೊಳ್ಳಬೇಕು.

ಅನಂತಕಾಲ ಭ್ರಮೆಗೊಂಡ ನಾನು ನಾದಮಾಡಿ ನಿನ್ನನ್ನು ಕರೆದೆ. ನಾದ ಮಾಡಿ ನಿನ್ನನ್ನು ಒಲಿಸಿಕೊಳ್ಳಲು ಹೋದ ರಾವಣನಿಗೆ ಅರೆ ಆಯುಷ್ಯವಾಯಿತ್ತು. ವೇದವನೋದಿ ನಿನ್ನನ್ನು ಒಲಿಸಿಕೊಳ್ಳಲು ಯತ್ನಿಸಿದ ಬ್ರಹ್ಮನ ಶಿರಹೋಯಿತ್ತು. ನೀನು ಭಕ್ತಿ ಪ್ರಿಯನು. ಸಕಲ ಭ್ರಮೆ ಕಳೆದುಕೊಂಡು ಅಂಗದಲ್ಲಿಯೇ ಸಂಗಮವಾದ ನಿನಗೆ ನಾನು ಭಕ್ತಿ ಮಾಡಲು ಹೋದಾಗ ದೇಹದ

ಸಕಲ ಗುಣಗಳನ್ನು ಉದುರಿಸಿದ ನೀನು ನನ್ನನ್ನು ಬ್ರಹ್ಮನನ್ನಾಗಿಸಿದೆ.

ಭ್ರಮೆ ಕಳೆದುಕೊಂಡ ಮನ ಬ್ರಹ್ಮವೇ ತಾನಾಯಿತು. ಮನದ ಸಂಗ ಕಳೆದುಕೊಂಡ ತನುವೇ ವಿಷ್ಣುವಾಯಿತು. ತನುವಿನಲ್ಲಿ ತನ್ಮಯವಾದ ಅರಿವೇ ಶಿವನಾಯಿತು.

ಭೇದಾದಿ ಭೇದವನ್ನು ಎಂದಾದರೂ ಭೇದಿಸಿಹೆನು ಎಂದು ಚಿಂತೆಯಲ್ಲಿ ಇದ್ದ ನನ್ನ ಸಕಲ ಭೇದ ಗುಣಗಳನ್ನು ಕಳೆದು ತ್ರಿಗುಣಾತೀತನಾಗಿ ತನುವಿನಲ್ಲಿಯೇ ದರುಶನವಿತ್ತು ಸಲಹಿದೆ ತಂದೆ.

**680**

**ನಾದ ಬಿಂದುವಿನಲ್ಲಿ ಆದಿಬ್ರಹ್ಮನ ಕೂಡಿ**
**ವಾದ ಸಾದಾಖ್ಯಗಳನೊಡಗೂಡಿದ**
**ಆನಂದ ತುಂಬಿಗಳ ಭೇದ ಭೇದಿಯ ಕೂಡಿ,**
**ಮೋದ ಮೂವತ್ತಾರು ತತ್ವಂಗಳ ಭೇದಗಳ ಭೇದಿಸಿ,**
**ಅಕ್ಷರದ್ವಯದಲ್ಲಿ ತಾನು ಸಂಗಮವಾದ ನಿಶ್ಚಯದಲಿ;**
**ತವಕಿಸುವ ಕರಣವನು, ಹರಿವ ಪ್ರಪಂಚುವನು,**
**ಒಸರುವ ಬಿಂದುವನು ಪಸರಿಸುವ ಭೇದವನು**
**ದೆಸೆಗೆಟ್ಟು ಕಂಡೆ ಕಪಿಲಸಿದ್ಧ ಮಲ್ಲೇಶ್ವರಾ.**

ಶಿವನನ್ನು ಒಲಿಸಿಕೊಳ್ಳಬೇಕೆಂದು ನಾದ ಮಾಡಿದ ಜನ ಈ ಭೂಮಿಯ ಮೇಲೆ ಸಾಕಷ್ಟು ಇದ್ದಾರೆ. ನಾದಕ್ಕೆ ಮರುಳಾಗಿ ಅದಕ್ಕೆ ಹಲವಾರು ಹೆಸರುಗಳನ್ನು ಕೊಟ್ಟು ಮಳೆ ಬರಿಸಿದವರು ಇದ್ದಾರೆ. ಜ್ಯೋತಿ ಹಚ್ಚಿದವರು ಇದ್ದಾರೆ. ಇದರಿಂದ ವಾದ ಸಾದಾಖ್ಯಗಳನೊಡಗೂಡಬಹುದೇ ಹೊರತು ಮತ್ತೇನೂ ಸಾಧ್ಯವಾಗುವುದಿಲ್ಲ.

ಸಾದಾಖ್ಯಗಳು ಎಂದರೆ ಕರ್ಮ, ಕರ್ತೃ, ಮೂರ್ತಿ, ಅಮೂರ್ತಿ, ಶಿವ, ಮಹಾ, ಅಗಮ್ಯ, ಅಗೋಚರ, ಅಪ್ರಮಾಣ ಎಂದು ಒಂಬತ್ತು ವಿಧದ ಅನುಭವವಾಗುತ್ತದೆ. ಕರ್ಮ ಎಂದರೆ ನಾದ, ಅದನ್ನು ಮಾಡಿದವನು ತಾನೆ. ಅದನು ಅನುಭವಿಸಿದ ಮೂರ್ತಿಯೂ ತಾನೆ. ನಾದ ಅಮೂರ್ತ, ಶಿವನೂ ಅಮೂರ್ತ.

ಅದು ಮಹಾಸಿದ್ಧಿ ಎಂದು, ಅದು ಅಗಮ್ಯ, ಅಗೋಚರ ಅದು ಅಪ್ರಮಾಣ ಎಂದರೆ ಮೂರ್ತರೂಪದ ತಾನು ಅಮೂರ್ತ ರೂಪದ ಶಿವನೊಂದಿಗೆ ಮಾತನಾಡಿದಂತೆ ಆಗಲಿಲ್ಲ. ಬದಲಾಗಿ ತನಗೆ ತಾನೇ ನಾದ ಮಾಡಿ ಬಿಂದುವಿನ ನಾದರಸ ಚಿಮ್ಮಿ ಭ್ರಮೆಯಿಂದ ತನಗೆ ತಾನೇ ಸಂತೋಷಪಡುತ್ತಾನೆ.

ಹಾಡಿದವನಿಗೂ ಸಂತೋಷ, ಕೇಳಿದವನಿಗೂ ಸಂತೋಷ. ನಾದದಿಂದ ತನಗೆ ತಾನೇ ಸುಖ ಉಂಟಾಗಿ ಸುಖದ ಭ್ರಮಾರಸ ಚಿಮ್ಮುತ್ತದೆ. ಇದು ಭೇದ ಭೇದಿಯ ಕೂಡಿದ ಸುಖವೇ ಹೊರತು ಮತ್ತೇನೂ ಅಲ್ಲ. ಶಿವ ನಾದಪ್ರಿಯನೂ ಅಲ್ಲ; ವೇದ ಪ್ರಿಯನೂ ಅಲ್ಲ. ಭಕ್ತಿಪ್ರಿಯ.

ಮೋದ ಮೂವತ್ತಾರು ತತ್ವಂಗಳ ಭೇದಗಳನ್ನು ಭೇದಿಸಿ, ಅಕ್ಷರದ್ವಯದಲ್ಲಿ ತಾನು ಸಂಗಮವಾದುದನ್ನು, ಅಕ್ಷರಗಳ ಮೂಲಕವೇ ನಿರ್ಧರಿಸಿ ತವಕಿಸುವ ಇಂದ್ರಿಯಗಳ ಮೂಲಕ ಹರಿಯುವ ಪ್ರಪಂಚವನ್ನು, ತಾನು ಅದರಲ್ಲಿ ಒಂದಾಗಿ ನೋಡಬಹುದು. ಅಥವಾ ಸಾಕ್ಷಿಯಾಗಿ ಕೂಡಾ ನೋಡಬಹುದು.

ಇಪ್ಪತ್ತೈದು ಆತ್ಮ ತತ್ವಗಳನ್ನು ಅಕ್ಷರಗಳ ಮೂಲಕ ನುಡಿದರೆ ಶಿವ ಒಲಿಯಲು ಸಾಧ್ಯವೆ? ಹತ್ತು ವಿದ್ಯಾತತ್ವಗಳನ್ನು ಒಂದು ಶಿವತತ್ವವನ್ನು ಅಧ್ಯಯನ ಮಾಡಿ ನುಡಿದರೆ ಭ್ರಮಾಮಯವಾದ ಆನಂದ ರಸ ಚಿಮ್ಮುವುದು.

ತನು ಎನ್ನುವ ಎರಡಕ್ಷರಗಳಲ್ಲಿ ಶಿವ ಎನ್ನುವ ಎರಡಕ್ಷರಗಳು ಸಂಗಮವಾಗಿವೆ. ಮನ ಎನ್ನುವ ಎರಡಕ್ಷರಗಳು ಎರಡಕ್ಷರಗಳ ತನುವನ್ನು ಆವರಿಸಿವೆ.

ಮನ ಎನ್ನುವ ಎರಡಕ್ಷರಗಳು ಶಿವ ಎನ್ನುವ ಎರಡಕ್ಷರಗಳ ಸಂಗವನ್ನು ಮಾಡದೆ, ತನು ಎನ್ನುವ ಎರಡಕ್ಷರಗಳ ಸಂಗ ಮಾಡಿ ಮೂವತ್ತಾರು ತತ್ವಗಳನ್ನು ಅಕ್ಷರಗಳಲ್ಲಿಯೇ ಸೃಷ್ಟಿ ಮಾಡಿ; ನನಗೆ ಶಿವ ಸಿಕ್ಕ ಎಂದು ಮರುಳಾಗಿ ಭ್ರಮೆಯಿಂದ ನುಡಿಸಲ್ಪಟ್ಟ ನಾದ ನಾದವೇ ಹೊರತು ಮತ್ತೇನೂ ಅಲ್ಲ.

ಲೋಕ ಮನ ಎನ್ನುವ ಎರಡಕ್ಷರಗಳಿಗೆ ಬಲಿಯಾಗಿದೆ. ಇಡೀ ಲೋಕವೇ ಮನದಲ್ಲಿ ಮಗ್ನವಾಗಿ ಮನದತ್ತಲೇ ಹರಿಯುತ್ತದೆ.

ಮನಕ್ಕೆ ಆದ ಭ್ರಮಾಸಂತೋಷವನ್ನು ಮನವೇ ಸಾಕ್ಷಿಯಾಗಿ ನೋಡಲು ಬರುವುದು ಬಲು ಜಟಿಲ. ಏಕೆಂದರೆ ಮನ ತನುವಿನೊಂದಿಗೆ ಸಂತೋಷದಿಂದ ನುಡಿಯುವ ಪ್ರತಿ ಶಬ್ದಗಳೂ ಭ್ರಮೆಯಿಂದಲೇ ಕೂಡಿವೆ. ಮನ ಎನ್ನುವುದೇ ಭ್ರಮೆ. ತನುವಿನಲ್ಲಿ ತನ್ಮಯವಾದ ಅರಿವು ಎನ್ನುವುದೇ ''ಶಿವ''.

ಮನ ಇಲ್ಲದ್ದು. ಶಿವ ಇದ್ದಕ್ಕಿದ್ದಂತೆ ಇದ್ದವನು. ಈತ ತನುವಿನಲ್ಲಿಯೇ ಇದ್ದಾನೆ. ಇಲ್ಲದ ಮನ ಇದ್ದಕ್ಕಿದ್ದಂತೆ ಇದ್ದ ಶಿವನಲ್ಲಿ ಸಂಗಮವಾಗಲು ಅಕ್ಷರಗಳ ಅವಶ್ಯಕತೆಯಿಲ್ಲ. ಸಂಗೀತದ ಅವಶ್ಯಕತೆಯೂ ಇಲ್ಲ. ವೇದ ಆಗಮ ಉಪನಿಷತ್ತುಗಳ ಅವಶ್ಯಕತೆಯೂ ಇಲ್ಲ. ಇವುಗಳು 'ಶಿವ'ನ ವಿವರಗಳನ್ನು ಮನಕ್ಕೆ ವಿವರಿಸಿದರೂ ಕೂಡಾ ಮನ ಅವುಗಳಲ್ಲಿ ಅನಂತಕಾಲ ಮುಳುಗಿ ಶಿವನತ್ತ ಮುಖ ಮಾಡುವುದು ತಡವಾಗುತ್ತದೆ.

ಆದರೆ ಮನ ಎಂದರೆ ಇಲ್ಲದ್ದು. ಇಲ್ಲವಾಗುವ ವಸ್ತುಗಳನ್ನು ಇದ್ದಂತೆ ಇರುವ ಶಾಶ್ವತ ವಸ್ತುಗಳೆನ್ನುವಂತೆ ತನುವಿಗೆ ಆಸೆ ಹುಟ್ಟಿಸಿ, ತನು ಮನಗಳೆರಡೂ ಅನಂತಕಾಲ ತನುವಿನಲ್ಲಿಯೇ ತನ್ಮಯವಾದ ಶಿವನನ್ನು ಮರೆತು ಶಿವನ ಜಪ ಜಪಿಸುತ್ತದೆ !

**681**

**ನಾನಾ ಭವದಲ್ಲಿ ಬಂದು, ಮಾಡಿದುದನುಂಬ**
**ಲೋಕದ ಲೌಕಿಕರುಗಳಿರಾ ಕೇಳಿರೇ, ನೀವು:**
**ಏಕೋದೇವನರ್ಚಿಸಿರೇ.**
**ಜನ್ಮ ಕರ್ಮವೆಂಬ ಕಾನನದೊಳಗೆ ಬೀಳದೆ,**
**ಐದಾರೇಳೆಂಟೆಂದೆಂಬ ಮೃಗದ ಕೈಯಲಿ ತಿನಿಸಿಕೊಳ್ಳದೆ,**
**ಐದು ಬಾಣವನುಳ್ಳವಂಗೆ ನೀನು ಗುರಿಯಾಗದೆ**
**ನೆನೆಯಾ ಶಿವನ ವಿಚಿತ್ರಮೂಲ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ,**
**ಹತ್ತೆ ಸಾರಿ ನೀನು ಸುಖಿಯಾಗು.**

ಸಿದ್ಧರಾಮ ಶಿವಯೋಗಿಗಳು, ಇಡೀ ಲೋಕದ ಲೌಕಿಕರನ್ನು ಕಾಡುವ ಮನಕ್ಕೆ ಬುದ್ಧಿ ಹೇಳಿದ್ದಾರೆ. ನಾನಾ ಭವದಲ್ಲಿ ಬಂದು ನೀ ಮಾಡಿದುದನು ನೀನೇ ಉಣ್ಣುವ ಮನವೇ ಕೇಳು ಏಕೋದೇವನನ್ನು ನೀನು ಅರ್ಚಿಸಿ ಪೂಜಿಸಿದಾಗಲೇ ನಿನಗೆ ಮುಕ್ತಿ ಲಭಿಸುವುದು.

ಜನ್ಮ ಕರ್ಮವೆಂಬ ದಟ್ಟಡವಿಯೊಳು ನೀ ಬೀಳದೆ ಐದು ಆರು ಏಳು ಎಂಟೆಂಬ ಕ್ರೂರ ಮೃಗಗಳಿಗೆ ನೀನು ಆಹುತಿಯಾಗದೆ ಬದುಕುಳಿಯುವೆ. ಐದು ಬಾಣವುಳ್ಳವನಿಗೆ ನೀನು

ಬಲಿಯಾಗದೆ ನೆನೆಯಾ ವಿಚಿತ್ರ ಮೂಲವನ್ನು.

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಬಳಿ ಸಾರಿ ನೀನು ಸುಖಿಯಾಗು. ಕಣ್ಣು ಕಿವಿ ಮೂಗು ನಾಲಿಗೆ ಚರ್ಮವೆಂಬ ಪಂಚೇಂದ್ರಿಯಗಳಲ್ಲಿ ವಿಚಿತ್ರವಾದ ಕ್ರೂರಮೃಗ ಬಚ್ಚಿಟ್ಟುಕೊಂಡಿದೆ. ಅದು ಏಕಕಾಲಕ್ಕೆ ತನ್ನ ಐದು ಬಾಣಗಳನ್ನು ಬಿಟ್ಟು ನಿನ್ನನ್ನು ಕೊಂದು ತಿನ್ನುವುದು. ಆ ಐದು ಬಾಣಗಳಿಗೆ ಗುರಿಯಾಗದೆ ಆ ಐದು ಜಾಗದಲ್ಲಿಯೇ ಇದ್ದ ಶಿವನ ಮೂಲವನ್ನು ಕಂಡುಕೊಂಡು ಅವನ ಬಳಿ ಹೋಗಿ ಅಲ್ಲಿಯೇ ಸಂಗಮವಾಗಿ ನೀನು ಸುಖಿಯಾಗು.

ಐದು ಆರು ಏಳು ಎಂಟು ಎಂಬ ಕ್ರೂರಮೃಗಕ್ಕೆ ಸಿಕ್ಕು ಆ ಮೃಗದಿಂದ ನೀನು ತಿನ್ನಿಸಿಕೊಳ್ಳದೆ ಪಾರಾಗು. ಅವು ನಿನ್ನ ಜನ್ಮದಿಂದಲೇ ಬಂದು ನಿನ್ನನ್ನು ನುಂಗಲು ಹಗಲಿರುಳು ಎನ್ನದೇ ಕಾದು ಕುಳಿತಿವೆ.

ಸೀತೆಯನ್ನು ನೋಡಿದ ರಾವಣನ ಕಣ್ಣಲ್ಲಿ ಕುಳಿತ ಕ್ರೂರಮೃಗ, ರಾವಣನನ್ನೇ ಕೊಂದು ರಾವಣನನ್ನೇ ತಿಂದು ತೇಗಿತು. ರಾಮನ ಕಿವಿಯಲ್ಲಿ ಕುಳಿತು ಮಡಿವಾಳನ ಮಾತು ಕೇಳಿದ ಕ್ರೂರಮೃಗ ಶ್ರೀರಾಮನನ್ನು ಚಿತ್ರಹಿಂಸೆಗೆ ಗುರಿಮಾಡಿತು. ದ್ರೌಪದಿಯನ್ನು ಮುಟ್ಟಲು ಹೋದ ಕೀಚಕನ ಚರ್ಮದಲ್ಲಿ ಬಚ್ಚಿಟ್ಟುಕೊಂಡ ಕ್ರೂರಮೃಗ ಜಗಜಟ್ಟಿ ಕೀಚಕನನ್ನೇ ಕೊಂದು ತಿಂದು ಹಾಕಿತು.

ತನುವಿನಲ್ಲಿದ್ದ ಪಂಚೇಂದ್ರಿಯಗಳು ತನುವಿನ ಮೃತ್ಯುವಿಗಾಗಿ ತನುವಿನಲ್ಲಿಯೇ ಕಾದು ಕುಳಿತಿವೆ. ತನುವನ್ನು ಆವರಿಸಿದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಆರು ಮೃಗಗಳು ತನುವನ್ನು ಪೋಷಣೆ ಮಾಡುತ್ತಿಲ್ಲ. ಬದಲಾಗಿ ಆಶ್ರಯ ನೀಡಿದ ತನುವನ್ನೇ ನುಂಗಲು ತನುವಿನಲ್ಲಿಯೇ ಕಾದು ಕುಳಿತಿವೆ.

ತನುವಿನಲ್ಲಿಯೇ ಇದ್ದ ಸಪ್ತವ್ಯಸನಗಳು ತನುವ್ಯಸನ, ಮನವ್ಯಸನ, ಧನವ್ಯಸನ, ರಾಜ್ಯವ್ಯಸನ, ವಿಶ್ವವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನವೆಂಬ ಸಪ್ತವ್ಯಸನಗಳೆಂಬ ಕ್ರೂರಮೃಗಗಳು ತನುವಿನಲ್ಲಿಯೇ ಆಶ್ರಯ ಪಡೆದು ತನುವಿನ ಮೃತ್ಯುವಿಗಾಗಿ ಕಾದು ಕುಳಿತಿವೆ.

ತನುವಿನಲ್ಲಿಯೇ ಇದ್ದ ಕುಲಮದ, ಛಲಮದ, ಧನಮದ, ರೂಪಮದ, ಯೌವ್ವನಮದ, ವಿದ್ಯಾಮದ, ರಾಜಮದ, ತಪೋಮದವೆಂಬ ಎಂಟು ಮೃಗಗಳು ತನುವಿನಲ್ಲಿಯೇ ಆಶ್ರಯಪಡೆದು ತನುವನ್ನು ಮೃತ್ಯುಕೂಪಕ್ಕೆ ಕರೆದುಕೊಂಡು ಹೋಗುವ ಕ್ರೂರಮೃಗಗಳಾಗಿ ಮಾರ್ಪಟ್ಟಿವೆ.

ಎಲೆ ಮನವೆ, ನಿನ್ನಿಂದಾಗಿ ಇಡೀ ಲೋಕದ ತನುಗಳನ್ನು ಲೌಕಿಕಕ್ಕೆ ಕರೆದುಕೊಂಡು ಹೋಗುವ ಕ್ರೂರಮೃಗಗಳು ತನುವಿನಲ್ಲಿಯೇ ಸೃಷ್ಟಿಯಾದವು. ನೀನು ಮಾಡಿದುದನ್ನು ನೀನೇ ಉಣ್ಣುವಂತಾಯಿತು. ಶಿವನ ಮೂಲದಿಂದ ಬಂದವಳು ನೀನು. ಶಿವನನ್ನು ಮರೆತುಹೋದೆ. ಶಿವನಿದ್ದ ತನುವನ್ನೇ ನಿನ್ನ ಮನೆಯನ್ನಾಗಿಸಿಕೊಂಡು ಐದು ಆರು ಏಳು ಎಂಟೆಂಬ ಕ್ರೂರ ಮೃಗಗಳನ್ನು ಸೃಷ್ಟಿ ಮಾಡಿದೆ. ದೇವರಿದ್ದ ದೇಹವೆಂಬ ದೇವಾಲಯವನ್ನೇ ಕ್ರೂರಮೃಗಗಳು ವಾಸಮಾಡುವ ಕಾಡನ್ನಾಗಿಸಿದೆ. ಆಶ್ರಯ ನೀಡಿದ ಕಾಯುವನ್ನೇ ಕಾನನವನ್ನಾಗಿಸಿದೆ. ಐದು ಬಾಣವನುಳ್ಳವಂಗೆ ನೀನು ಗುರಿಯಾಗದೆ ನೆನೆಯಾ ಶಿವನ ವಿಚಿತ್ರ ಮೂಲವನು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಹತ್ತೆ ಸಾರಿ ನೀನು ಸುಖಿಯಾಗು ಮನವೇ.

**682**

**ನಾನಾ ವಿಧದ ಶುದ್ಧ ಸಿದ್ಧ ಪ್ರಸಿದ್ಧದಾ**
**ಸಾರವನು ಉಂಡು ತಾ ಗುರುವಾದನ್ನೆ**
**ಧಾರುಣೋದ್ಧಾರದಲಿ ಅತ್ಯಂತ ಕಳೆಯ ಇರಿಸಿದಾತ**

ಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ.

ಅಂಗದಲ್ಲಿಯೇ ಸಂಗಮವಾದ ನಾನಾ ವಿಧದ ಶುದ್ಧ ಸಿದ್ಧ ಪ್ರಸಿದ್ಧದ ಸಾರವನು ಉಂಡು ತಾ ಗುರುವಾದನು. ಗುರುವೆಂದರೆ ವ್ಯಕ್ತಿಯಲ್ಲ. ಶಿಷ್ಯನೆಂದರೂ ವ್ಯಕ್ತಿಯಲ್ಲ. ಇವರಿಬ್ಬರೂ ಅಂಗದಲ್ಲಿಯೇ ಇದ್ದವರು.

ಅಂಗವನ್ನು ಆವರಿಸಿದ ಮನ ಸಾತ್ವಿಕ ರಾಜಸ ತಾಮಸ ಗುಣಗಳ ಪ್ರಸಾದವನ್ನು ಸ್ವೀಕರಿಸಿದರೆ ಅಂಗದಲ್ಲಿಯೇ ಸಂಗಮವಾದ ಗುರುದೇವನಿಗೆ ಅದಾವುದೂ ಇಷ್ಟವಿಲ್ಲ. ತ್ರಿಗುಣಗಳಿಗೆ ಅತೀತನಾದವನು. ಅರಿಷಡ್ವರ್ಗಗಳ ಬಾಧೆಯಿಲ್ಲ. ಸಪ್ತವ್ಯಸನಗಳೂ, ಅಷ್ಟಮದಗಳೂ ಆತನನ್ನು ಏನೂ ಮಾಡಲರಿಯವು.

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನು. ಅಂಗವನ್ನು ಅಂಗದ ಕಣಕಣವನ್ನೂ ಅದರ ಸಂಪತ್ತನ್ನೂ ಧಾರಣೆ ಮಾಡಿಕೊಂಡವನು. ಲಿಂಗಯ್ಯನಿಗಾಗಿ ಸಿದ್ಧವಾದ ಸರ್ವವಸ್ತುವೂ ಅಂಗದಲ್ಲಿಯೇ ಇದೆ. ಸರ್ವ ಕಾಯವನ್ನು ಕೈಲಾಸವನ್ನಾಗಿಸಿಕೊಂಡು ಆ ಕಾಯದಲ್ಲಿಯೇ ಪವಡಿಸಿದಾತ ಗುರುದೇವ.

ಮನ, ಅಂಗವನ್ನು ತಿಪ್ಪೆಯನ್ನಾಗಿಸಿಕೊಂಡರೆ ಗುರುದೇವನು ತಾನು ಸದಾಶಿವನಾಗಿ ಆ ತಿಪ್ಪೆಯನ್ನೇ ಉಪ್ಪರಿಗೆಯನ್ನಾಗಿಸಿಕೊಂಡು ತಿಪ್ಪೇರುದ್ರನಾದಾತ ಶಿವ. ಗುರುದೇವನೇ ಮಹಾದೇವ; ಗುರುದೇವನೇ ಸದಾಶಿವ; ಗುರುದೇವನೇ ಸಾಕ್ಷಾತ್ ಪರಬ್ರಹ್ಮ! ಹೀಗಾಗಿ ಗುರುದೇವನು ಎನ್ನುವವನು ವ್ಯಕ್ತಿಯಲ್ಲ.

ಮನ ಅವ್ಯಕ್ತ. ಅವ್ಯಕ್ತ ಮನಕ್ಕೆ ಅಂಗದಲ್ಲಿಯೇ ಸಂಗಮವಾದ ಗುರುದೇವನನ್ನು ಪೂಜಿಸುವ ಕಲೆ ಸಿದ್ಧಿಸಿದಾಗ ಗುರುದೇವ ಅಂತಹ ಮನವನ್ನು ತನ್ನಂತೆ ಮಾಡಿಕೊಳ್ಳುವನು. ಶಿಷ್ಯನನ್ನಾಗಿ ಸ್ವೀಕರಿಸುವನು. ಹೀಗಾಗಿ ಶಿಷ್ಯ ಕೂಡಾ ವ್ಯಕ್ತನಲ್ಲ. ಅವ್ಯಕ್ತ ಶಿಷ್ಯ ಮಾತ್ರ, ಅವ್ಯಕ್ತ ಗುರುದೇವನನ್ನು ನೋಡಬಲ್ಲ. ಆತನನ್ನು ಪೂಜಿಸಬಲ್ಲ.

''ಹಲವು ದೈವಗಳನ್ನು ಪೂಜೆ ಮಾಡುವ ಗೊರವನನ್ನು ಗುರುದೇವನೆಂದು ನುಡಿದು ಕರೆವ ವಿವೇಕ ಹೀನ ದುರಾಚಾರಿಯ ಮುಖವ ನೋಡಲಾಗದು. ಸಕಲ ದೇವರಿಗೆ ಒಡೆಯನಾದ ಸದಾಶಿವನೆ ಗುರುದೇವನು'' ಎಂದು ಚೆನ್ನಬಸವಣ್ಣ ಹೇಳಿದ್ದಾರೆ.

ಅಂತಹ ಶಿವಲಿಂಗಕ್ಕೆ ಪಾದತೀರ್ಥ ಪ್ರಸಾದವನ್ನು ಅರ್ಪಿಸುವ ವೀರ ಮಹೇಶ್ವರ ಜಂಗಮದೇವರು ನಮಗೆ ಗುರುದೇವ ಮಹಾದೇವನು. ಗುರುದೇವನು ಎನ್ನುವ ಶಬ್ದವು ಉಳಿದವರಿಗೆ ಸಲ್ಲದೆಂದು ನುಡಿದಿದ್ದಾರೆ ಚೆನ್ನಬಸವಣ್ಣ.

ವಿಪ್ರ, ಭ್ರಷ್ಟ, ನಂಟ, ಶ್ವಪಚ ಮಾನವರ ವೇಷ ತಾಳಿ ಹಲಬರ ಹೊಗಳಿ ಕೀಳು ದೈವದ ಕಾಲ ತೊಳೆದು ಎಂಜಲ ತಿಂಬ ಭ್ರಷ್ಟ ಜಾತಿಯ ಗುರುದೇವನೆಂದು ಹೇಸಿಕೆಯಿಲ್ಲದೆ ನುಡಿದು, ಕರೆವ ದುರಾಚಾರಿಗಳಿಗೆ ಶಿವಭಕ್ತಿ ಸಲ್ಲದು; ನರಕ ತಪ್ಪವು. ಅಂಜದೆ ಗುರುವೆಂದು ಕರೆಯಿಸಿಕೊಂಬ ಅಜ್ಞಾನಿ ಗೊರವಂಗೆ ಮೊದಲೆ ನರಕ ತಪ್ಪದು. ಎಂದು ಚೆನ್ನಬಸವಣ್ಣ ನುಡಿಯುತ್ತಾರೆ.

''ಶಿಷ್ಯನೆಂಬ ಪ್ರತಿಭಾವವಿಲ್ಲದ ಗುರು, ಗುರುವೆಂಬ ಪ್ರತಿಭಾವವಿಲ್ಲದ ಶಿಷ್ಯ, ಏನೆಂಬೆನಯ್ಯಾ ಎರಡಿಲ್ಲದ ಘನವ. ಏನೆಂಬೆನಯ್ಯ ಎರಡೊಂದಾದ ಘನವ. ಕೂಡಲ ಚೆನ್ನಸಂಗನಲ್ಲಿ ಗುರುಶಿಷ್ಯ ಸಂಬಂಧವಪೂರ್ವ''.

''ಗುರುವುಳ್ಳಾತ ಶಿಷ್ಯನಲ್ಲ, ಪ್ರಸಾದವುಳ್ಳಾತ ಭಕ್ತನಲ್ಲ. ಲಿಂಗೈಕ್ಯನಾದರೆ ಸ್ಥಾವರಲಿಂಗ ವಿರೋಧಿಯಾಗಿರಬೇಕು. ಕಾಯಕ್ಕೆ ಸಾಹಿತ್ಯವೆಲ್ಲಿಯಾದರೂ ಉಂಟು, ಆತ್ಮಸಾಹಿತ್ಯವಪೂರ್ವ. ಆಚಾರ ಸಾಹಿತ್ಯ ಲೋಕ, ಅನಾಚಾರ ಸಾಹಿತ್ಯ ಶರಣ. ಇದು ಕಾರಣ ಕೂಡಲ ಚೆನ್ನಸಂಗಯ್ಯ

ನಾನು ಅನಾಚಾರಿಯಾದ ಕಾರಣ ಎನಗೆ ಪ್ರಸಾದ ನೆಲೆಗೊಂಡಿತ್ತು''.

''ಗುರುವಾಗಬಹುದು, ಶಿಷ್ಯನಾಗಬಾರದು. ದೇವನಾಗಬಹುದು, ಭಕ್ತನಾಗಬಾರದು. ಶಿಷ್ಯನ ಪೂರ್ವಾಶ್ರಯವ ಗುರುವರಿಯ, ಗುರುವಿನ ಪೂರ್ವಾಶ್ರಯವ ಶಿಷ್ಯನರಿಯ. ಆಶೆ ನಿಮಿತ್ತವಾದ ಭಕ್ತಿ ಮುಕ್ತಿಗೆ ಸಾಧನವಲ್ಲ, ಕೂಡಲಚೆನ್ನಸಂಗನಲ್ಲಿ ನೇಮದಲೆಂಕರು''

ಕಾಯ ಉಳ್ಳವನು ಗುರುವಲ್ಲ. ಪ್ರತಿ ಕಾಯದಲ್ಲಿ ಗುರುದೇವನಿದ್ದಾನೆ. ಕಾಯಕ್ಕೆ ಶಿಷ್ಯನಾಗಬಾರದು. ಶಿಷ್ಯನ ಕಾಯಕ್ಕೆ ಕಾಯ ಗುರುವಾಗಬಾರದು. ಶಿಷ್ಯನ ಪೂರ್ವಾಶ್ರಯ ನೋಡಲು ಹೋದರೆ ಆತ ಗುರುದೇವನೇ ಆಗಿದ್ದಾನೆ.

ಗುರುವಿನ ಪೂರ್ವಾಶ್ರಯ ಶಿಷ್ಯ ನೋಡಲು ಹೋದರೆ ಆತ ಕೂಡಾ ಗುರುದೇವನೇ ಆಗಿದ್ದಾನೆ. ಆಶೆ ನಿಮಿತ್ತವಾದ ಭಕ್ತಿ ಮುಕ್ತಿಗೆ ಸಾಧನವಲ್ಲ. ಪ್ರತಿ ಕಾಯವೂ ಗುರುದೇವನನ್ನು ಧಾರಣೆ ಮಾಡಿಕೊಂಡು ಧರೆಗೆ ಇಳಿದು ಬಂದಿದೆ. ಕಾಯವನ್ನು ಆವರಿಸಿದ ಮನವೇ ಕಾಯದಲ್ಲಿಯೇ ಇದ್ದ ಅರಿವೆಂಬ ಗುರುದೇವನನ್ನು ತಿಳಿದು ಆ ಗುರುದೇವನಿಗೆ ಶಿಷ್ಯನಾಗಬೇಕು. ಇದು ಶರಣರ ಶಿಕ್ಷಣ.

**683**

**ನಾನು ನಾನೊ, ನೀನು ನೀನೊ,**
**ಬಸವ ಬಸವಾ,**
**ಮೌನಮುಗ್ಧ ಬಸವ ನೀನೆ,**
**ಕಪಿಲಸಿದ್ಧಮಲ್ಲಿನಾಥಯ್ಯಾ.**

ನಾನು ನಾನೇ. ನೀನು ನೀನೇ. ನಾನು ವಾಚಾಳಿ. ನೀನು ಮೌನಿ. ನೀನು ನೋಡುವುದನ್ನೇ ನೋಡಿ ಮೌನಿಯಾಗುವೆ. ನಾನು ನೋಡಿ; ನೋಡಿದುದನ್ನು ನೋಡಲುಬಾರದ ಬಾಯಿಯ ಮೂಲಕ ನೋಡಿದೆನೆಂದು ನುಡಿದು ಹೇಳುವೆ. ಬಸವ ಬಸವಯ್ಯಾ, ನಾನು ನಾನೇ. ನೀನು ನೀನೇ. ನನಗೂ ನಿನಗೂ ಅಜಗಜಾಂತರ ವ್ಯತ್ಯಾಸ. ನಾನು ನೀನು ಒಂದೇ ದೇಹದಲ್ಲಿದ್ದರೂ ನೀನು ಮೌನಿ. ನಾನು ವಾಚಾಳಿ.

ಬಸವ ಬಸವಾ, ಮೂಗಿನಲ್ಲಿಯೇ ಇದ್ದು ಪರಿಮಳವನ್ನು ಮೂಸಿಸಿ ಮೌನಿಯಾದ ನೀನೆತ್ತ ? ಮೂಗಿನಲ್ಲಿಯೇ ಇದ್ದ ನಾನು ಸುಗಂಧ ದುರ್ಗಂಧವನ್ನು ಮೂಸಿಸಿ, ಮೂಸಿಸಲು ಸಾಧ್ಯವಾಗದ ಬಾಯಿಯ ಮೂಲಕ ಸುಗಂಧ ದುರ್ಗಂಧವೆಂದು ನುಡಿದು ಹೇಳುವ ನಾನೆತ್ತ ? ಮೌನಿ ನೀನು ಬಸವ. ಮುಗ್ಧ ನೀನು ಬಸವಾ. ನುಡಿಯಲುಬಾರದುದನ್ನು ನುಡಿದು ಹೇಳುವ ವಾಚಾಳಿ ನಾನು ಬಸವಾ.

ಬಸವಾ, ಚರ್ಮದಲ್ಲಿ ನೀನು ಸಂಗಮವಾಗಿರುವುದರಿಂದ ಸ್ಪರ್ಶದ ಅನುಭವ ನನಗಾಗಿದೆ. ಆದರೆ ನಾನು ಮುಟ್ಟಿ ಉದ್ರಿಕ್ತನಾದೆ. ನೀನು ಇತರರನ್ನೂ ನಿನ್ನಂತೆಯೇ ಮುಟ್ಟಿ ಪರಮ ಹಂಸನಾದೆ. ಮುಟ್ಟಿ ಸುಖ ದುಃಖಗಳನ್ನು ಅನುಭವಿಸುವ ನಾನೆತ್ತ ? ಯಾರು ಮುಟ್ಟಿದರೂ ಪರಮಸುಖವನ್ನು ಅನುಭವಿಸುವ ನೀನೆತ್ತ ? ಮಾತನಾಡದ ಮೌನಿ ನೀನು. ಮುಟ್ಟಿ ಮುಟ್ಟಲುಬಾರದ ಬಾಯಿಯ ಮೂಲಕ ಮುಟ್ಟಿದೆನೆಂದು ಹೇಳುವ ವಾಚಾಳಿ ನಾನು.

ಕಿವಿಯಲ್ಲಿದ್ದು ಸಕಲ ಶಬ್ದಗಳನ್ನು ಕೇಳಿ ಮೌನದಿಂದ ಪ್ರಸಾದ ಮಾಡಿಕೊಳ್ಳುವ ನೀನೆತ್ತ; ಕಿವಿಯಲ್ಲಿದ್ದು ಕೇಳಿ ಸುಳ್ಳು ಸುಖ ದುಃಖಗಳಿಂದ ಬಳಲಿ ಕೇಳಲು ಬಾರದ ಬಾಯಿಯ ಮೂಲಕ ಕೇಳಿದೆನೆಂದು ನುಡಿದು ಹೇಳುವ ನಾನೆತ್ತ ? ನಾನು ನೀನು ಒಂದೇ ದೇಹದಲ್ಲಿದ್ದರೂ ನನಗೂ

ನಿನಗೂ ಅಜಗಜಾಂತರ ವ್ಯತ್ಯಾಸ ತಂದೆ. ನೀನು ಮೌನಿ ಮುಗ್ಧ; ನಾನು ವಾಚಾಳಿ.

ನಾಲಿಗೆಯಲ್ಲಿದ್ದು ರುಚಿಯನೆಣಿಸದೆ ಸಕಲವನ್ನೂ ಪ್ರಸಾದ ಮಾಡಿಕೊಳ್ಳುವ ಶಕ್ತಿ ನಿನ್ನದು. ರುಚಿ ಅರುಚಿಯೆಂದು ಅನುಭವಿಸಿ ರುಚಿಸಲು ಬಾರದ ಬಾಯಿಯ ಮೂಲಕ ನುಡಿದು ಹೇಳುವ ವಾಚಾಳಿ ನಾನು. ವಿಷವನ್ನು ಅಮೃತವನ್ನು ಪರಮಹಂಸನಂತೆ ಮೌನದಿಂದ ಸ್ವೀಕರಿಸುವ ಬಸವ ನೀನು.

ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನನ್ನು ಬಸವಣ್ಣ ನೆನೆದರೆ, ಸಿದ್ಧರಾಮ ಶಿವಯೋಗಿಗಳು ಅರಿವಿನ ಸಂಗಯ್ಯನಿಗೆ ಬಸವಣ್ಣ ಎಂದು ಹೆಸರಿಟ್ಟು ನಾನು ನಾನೊ, ನೀನು ನೀನೊ, ಬಸವ ಬಸವಾ ಮೌನ ಮುಗ್ಧ ಬಸವ ನೀನೆ, ಕಪಿಲಸಿದ್ಧ ಮಲ್ಲಿನಾಥಯ್ಯನೂ ನೀನೆ ಎಂದು ಭಕ್ತಿಯಿಂದ ಪ್ರಾರ್ಥಿಸಿದ್ದಾರೆ.

ದೇಹದಲ್ಲಿ ಸಂಗಮವಾದ ಅರಿವು ಒಂದೇ. ದೇಹವನ್ನು ಆವರಿಸಿದ ಮನ ಒಂದೇ. ದೇಹ ಕೂಡಾ ಒಂದೇ. ಅಂದ ಮೇಲೆ ಬಸವಣ್ಣನ ದೇಹ, ಸಿದ್ಧರಾಮ ಶಿವಯೋಗಿಗಳ ದೇಹ ಎಂದು ಬೇರ್ಪಡಿಸಲು ಸಾಧ್ಯವೆ? ಒಂದೇ ದೇಹದಲ್ಲಿ ಬಸವಣ್ಣನೂ ಇದ್ದಾನೆ. ಸಿದ್ಧರಾಮನೂ ಇದ್ದಾನೆ. ಬಸವಣ್ಣನಿಗೆ ಸಿದ್ಧರಾಮನ ಪರಿಚಯವಾಗಿದೆ, ಸಿದ್ಧರಾಮನಿಗೆ ಬಸವಣ್ಣನ ಪರಿಚಯವಾಗಿದೆ. ಘನ ಮನಗಳೆರಡೂ ದೇಹದಲ್ಲಿ ಒಂದಾಗಿ ಮೌನಿಯಾಗಿವೆ.

**684**

**ನಾನೇನ ಮಾಡುವುದೆಲ್ಲವನು ನೀನೆಂದೆ ಇದ್ದೆನಯ್ಯಾ.**
**ನಾನೇನ ಮಾಡುವುದೆಲ್ಲವನು ನೀನೆ ಅಲ್ಲವೆಂದಡೆ**
**ಅದು ಮಾಣಲಿ, ನಿಮ್ಮಾಣತಿ.**
**ಕಾಣಬಾರದ ಘನವ ಕಾಯದಲ್ಲಿ ಧರಿಸಿ,**
**ಹೇಳಬಾರದ ನಿಜವ ಮನದಲ್ಲಿ ನೆಲೆಗೊಳಿಸಿ,**
**ತೋರಬಾರದ ಕುರುಹ ಎನ್ನರಿವಿನಲ್ಲಿರಿಸಿ**
**ಇನ್ನು ನಿಮ್ಮ ಕಾಂಬಂತೆ ಮಾಡಾ,**
**ಕಪಿಲಸಿದ್ಧ ಮಲ್ಲಿನಾಥಾ.**

ನನಗೆ ಬೇರೆ ಕಾಯವಿಲ್ಲ. ನಿನ್ನ ಕಾಯದೊಳಗೆ ನೀನು ನನಗೆ ಜನ್ಮವಿತ್ತೆ. ಅದು ನನ್ನ ಕಾಯವೆಂದೇ ತಿಳಿದೆ. ನಾನೇನು ಮಾಡಿದರೂ ಅದು ನಿನ್ನ ಲೀಲೆ ಎಂದು ತಿಳಿದೆ. ನೀನೇ ಅದನ್ನು ಮಾಡಿಸುವ ತಂದೆ ಎಂದು ತಿಳಿದೆ. ನಾನೇನ ಮಾಡುವುದೆಲ್ಲವನು ನೀನೇ ಎಂದು ತಿಳಿದು ನಿನ್ನ ಕಾಯದಲ್ಲಿಯೇ ಇದ್ದೆನಯ್ಯಾ.

ನಾನೇನ ಮಾಡುವುದೆಲ್ಲವನು ನೀನೇ ಅಲ್ಲವೆಂದು ನನಗೆ ಹೇಳಿದ ಮೇಲೆ ಇನ್ನು ಅದು ಮಾಣಲಿ. ನಿಮ್ಮಾಣತಿಯಂತೆ ಆಗಲಿ. ನೀನಿದ್ದ ಕಾಯವನ್ನು ನಿಮ್ಮವರಿಂದಲೇ ನೀನು ಕಳ್ಳ ಎಂದು ಕರೆಯಿಸಿಕೊಳ್ಳುವಂತೆ ಮಾಡಿದೆ. ಲೋಹದಲ್ಲಿ ಚಿನ್ನ ಸೃಷ್ಟಿ ಮಾಡಿ ನನ್ನನ್ನು ಮೋಹಿಸುವಂತೆ ಮಾಡಿದೆ. ನನಗೆ ಅದು ದೊರೆಯದೆ ಇದ್ದಾಗ ಕದಿಯುವಂತೆ ಮಾಡಿದೆ. ನಿನ್ನನ್ನು ಪ್ರಾರ್ಥಿಸಿ ಕದ್ದರೂ ನನ್ನನ್ನು ನಿನ್ನವರಿಂದಲೇ ಕಳ್ಳ ಎಂದು ಕೂಗಿ ಕರೆಯುವಂತೆ ಮಾಡಿದೆ.

ಕದಿಯಲು ಪ್ರೇರಣೆ ನೀಡಿದವನು ನೀನೆ. ಕದ್ದಾಗ ಕಳ್ಳ ಎಂದು ಕೂಗಿ ಕರೆದು ಅಪಮಾನಕ್ಕೆ ಈಡು ಮಾಡಿದವನು ಕೂಡಾ ನೀನೇ. ನಾನೇನ ಮಾಡಿದರೂ ಅದೆಲ್ಲವನು ನೀನೇ ಎಂದು ತಿಳಿದು ನಿನ್ನ ಕಾಯದಲ್ಲಿಯೇ ಇದ್ದವನು ನಾನು.

ಚರ್ಮ ನೋಡಿ ನನಗೆ ನಾನೇ ಹೆಣ್ಣೆಂದು ಕರೆದುಕೊಂಡೆ; ಚರ್ಮ ನೋಡಿ ನನಗೆ ನಾನೇ ಗಂಡೆಂದು ಕರೆದುಕೊಂಡೆ. ಹೆಣ್ಣಾಗಿ ನೋಡಿ ಗಂಡನ್ನು ಕಾಮಿಸುವಂತೆ ಮಾಡಿದೆ; ಗಂಡಾಗಿ ನೋಡಿ ಹೆಣ್ಣನ್ನು ಕಾಮಿಸಿ ಮೋಹಿಸುವಂತೆ ಮಾಡಿದೆ. ಕಾಯ ಕಾಯದೊಂದಿಗೆ ಕೂಡುವ ಕೂಟ ಹೆಣ್ಣು ಹೆಣ್ಣು ಕೂಡುವ ಹಾದರದ ಕೂಟವೆಂದು ನೀನೇ ನನ್ನನ್ನು ಜರಿದು ನುಡಿದೆ.

ಕಾಯವನ್ನು ಆವರಿಸಿದ ಮನವೇ ಹೆಣ್ಣು; ಕಾಯದಲ್ಲಿಯೇ ಸಂಗಮವಾಗಿ ನನಗೆ ತಿಳಿ ಹೇಳುವ ನೀನೇ ಗಂಡು. ಇಂತಹ ನೀನು ಕಾಣಬಾರದ ಘನವಂತನೇ ಆಗಿರುವಿ. ಕಂಡು ಬರುವ ಕಾಯವನ್ನು ಧರಿಸಿಕೊಂಡಿರುವಿ. ಕಾಣಬಾರದ ನನ್ನನ್ನು ಕಾಯದಲ್ಲಿಯೇ ಸೃಷ್ಟಿ ಮಾಡಿ, ಹೇಳಬಾರದ ನಿಜವನ್ನು ಎನ್ನ ಮನದಲ್ಲಿ ನೆಲೆಗೊಳಿಸಿದ ಮಹಾಂತ ನೀನು.

ತೋರಬಾರದ ಕುರುಹನ್ನು ಎನ್ನರಿವಿನಲ್ಲಿರಿಸಿದೆ. ಆ ಅರಿವಿನ ಮೂಲಕ ಕಾಣಬಾರದ ನಿಮ್ಮನ್ನು ಕಾಣುವಂತೆ ಮಾಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**685**

**ನಾನೀನೆಂಬ ಮನ ನೀನೆಯಾದೆ ಬಸವಾ.**
**ತಾನೆಂಬ ತನು ನೀನೆಯಾದೆ ಬಸವಾ.**
**ಕಪಿಲಸಿದ್ಧ ಮಲ್ಲಿನಾಥನೆ,**
**ನೀನೆಂಬ ಮಾಟ ನೀನೆ ಬಸವಾ.**

ತನುವನ್ನು ಆವರಿಸಿದ ಮನ, ತನುವಿನಲ್ಲಿಯೇ ತನ್ಮಯವಾದ ಅರಿವಿನ ಒಡೆಯನಿಂದಲೇ ಸೃಷ್ಟಿಯಾದದ್ದು. ಸೃಷ್ಟಿ ಮಾಡಿದ ಒಡೆಯನನ್ನೇ ಮರೆತು ಒಡಲು ತನ್ನದೇ ಎಂದು ಘೋಷಿಸಿತು. ಅದರಲ್ಲಿ ತನಗೆ ಬೇಕಾದ ಅರಿಷಡ್ವರ್ಗಗಳನ್ನು ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ತುಂಬಿ, ಒಡೆಯನ ತನುವನ್ನು ತನಗೆ ಬೇಕಾದಂತೆ ಬಳಸಿ, ಅಹಂಕಾರದಿಂದ ಬೀಗಿತು. ಹೀಗೆ ಬೀಗುವ ಮನವನ್ನು ಘನಮನವನ್ನಾಗಿಸುವ ಆಲೋಚನೆ ಕಲ್ಯಾಣದ ಬಸವಣ್ಣನಿಗೆ ಹೊಳೆಯಿತು.

ಅಂಗವನ್ನು ಆವರಿಸಿದ ಅಹಂಕಾರಿ ಅಜ್ಞಾನಿ ಮನವನ್ನು ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನಿಗೆ ಒಪ್ಪಿಸಿ ಸಂಪೂರ್ಣ ಶರಣಾಗತನಾಗಿ ಶರಣನೇ ತಾನಾಗುವ ಸರಳ ಸೂತ್ರವನ್ನು ಸಕಲರಿಗೂ ಬಸವಣ್ಣ ಹೇಳಿದ ಕಾರಣ, ಸಿದ್ಧರಾಮ ಶಿವಯೋಗಿಗಳು ಅಂಗವನ್ನು ಆವರಿಸಿದ ಮನಕ್ಕೆ ಬಸವಾ ಎಂದು ನಾಮಕರಣ ಮಾಡಿದರು.

ಅಂಗವನ್ನು ಆವರಿಸಿದ ಮನ ಅರಿವಿನ ಅಂಗವನ್ನು ತನಗೆ ಬೇಕಾದಂತೆ ಜಾತಿ ಮತ ಧರ್ಮ ಪಂಗಡ ಎಂದು, ಹೆಣ್ಣು ಗಂಡು ಎಂದು, ಶ್ರೀಮಂತ ಬಡವ ಭಿಕ್ಷುಕ ಕಳ್ಳ ಹಾದರಿಗ ಸೈನಿಕ ರಾಜ ಸೇನಾಧಿಪತಿ ಪ್ರಧಾನಿ ದಾಸಿ ಎಂದು, ತನಗೆ ಇಷ್ಟ ಬಂದಂತೆ ಕರೆದುಕೊಂಡಿದೆ.

ಅಂಗವನ್ನು ಆವರಿಸಿದ ಮನ ಅಂಗವನ್ನು ಅರಿವುಳ್ಳ ಲಿಂಗ ಎಂದು ಲಿಂಗಾಂಗ ಎಂದು ತಿಳಿಯುವುದನ್ನೇ ಮರೆತು ಹೋಗಿದೆ. ಹೀಗೆ ಭೇದ ಬುದ್ಧಿಯಿಂದ ಗುರುತಿಸಿಕೊಳ್ಳುವ ಮನವನ್ನು ಹಿಡಿದು ಬಸವಣ್ಣ ಘನಮನವನ್ನಾಗಿಸಿದರು.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಶರಣುಹೋಗಿ ಶರಣ ಸತಿ ಲಿಂಗ ಪತಿಯನ್ನಾಗಿಸಿಕೊಳ್ಳುವ ಸರಳಾತಿ ಸರಳ ವಿಧಾನವನ್ನು ಮನಕ್ಕೆ ಮನವರಿಕೆ ಮಾಡಿಕೊಟ್ಟರು. ಮನ ಅರಿವಿನೊಂದಿಗೆ ಬೆರೆತು ಅರಿವೇ ತಾನಾಯಿತು. ತನು ಅರಿವಿನ

ತನುವಾಯಿತು. ತನು ಮನ ಅರಿವು ಒಂದಾಯಿತು.

ತನು ಒಂದೇ, ತನುವನ್ನು ಆವರಿಸಿದ ಮನ ಒಂದೇ, ತನುವಿನಲ್ಲಿ ತನ್ಮಯವಾದ ಅರಿವು ಕೂಡಾ ಒಂದೇ. ಭಾಷೆ ಬೇರಾದರೇನು ನೋಡುವ ನೋಟ ಒಂದೇ. ಸ್ಪರ್ಶಿಸುವ ಚರ್ಮ ಒಂದೇ. ಕೇಳುವ ಕಿವಿ ಒಂದೇ, ಮೂಸಿಸುವ ಮೂಗು ಒಂದೇ. ರುಚಿಸುವ ನಾಲಿಗೆ ಒಂದೇ. ಹರಿಯುವ ರಕ್ತ ಒಂದೇ. ಅಸ್ತಿ ಮಾಂಸ ಮಜ್ಜೆ ಮೇದಸ್ಸು ಒಂದೇ. ನಿಂತ ನೆಲ ಒಂದೇ, ಕುಡಿವ ಜಲ ಒಂದೇ, ಸುಳಿವ ಗಾಳಿ ಒಂದೇ ಎಂದು ತಿಳಿದು ಮನ ಘನಮನವಾಯಿತು.

ತನು ತನುವನ್ನು ನೋಡಿ ತನ್ನಂತೆಯೇ ಇರುವ ಅರಿವುಳ್ಳ ಗುರುತನುವೆಂದು ಬಾಗಿ ಶರಣು ಶರಣಾರ್ಥಿ ಎಂದು ಕೈಮುಗಿಯಿತು. ನಾನು ಎಂದು ಅಹಂಕಾರದಿಂದ ಬೀಗುವ ಮನ ಸಕಲ ಅಜ್ಞಾನವನ್ನು ಕಳೆದುಕೊಂಡು ತಾನು ತಾನೇ ಆಯಿತು.

ತನ್ನ ಅಜ್ಞಾನದ ವಿರುದ್ಧ ತಾನೇ ಹೋರಾಟ ಮಾಡಿ, ತನಗೆ ತಾನೇ ಗೆಲ್ಲುವ ಸ್ವಯಂ ಕ್ರಾಂತಿ ಕಿಡಿ ಹೊತ್ತಿಸಿದ ಬಸವಣ್ಣನನ್ನು ಸಿದ್ಧರಾಮ ಶಿವಯೋಗಿಗಳು ಸ್ಮರಿಸಿದ್ದಾರೆ.

"ಬಸವಣ್ಣಾ ಓಂಕಾರದಿಂದತ್ತತ್ತ ನೀನೇ; ನಾದ ಬಿಂದು ಕಳೆಗಳಿಂದತ್ತತ್ತ ನೀನೇ, ಪ್ರಥಮಾಚಾರ್ಯ ನೀನೇ, ಲಿಂಗಾಚಾರ್ಯ ನೀನೇ, ಜಂಗಮಾಚಾರ್ಯ ಪ್ರಸಾದಾಚಾರ್ಯ ನೀನೇ, ಬಸವಣ್ಣಾ ಎನಗೆ ಸರ್ವಾಚಾರ್ಯ ನೀನೇ, ನೀನೇ ಗತಿಮತಿಯಾಗಿ ಎನ್ನನುಳುಹಿದ ಕಾರಣ ಕೂಡಲ ಚೆನ್ನಸಂಗಮದೇವಾ ಆವ ವರ್ಣವಿಲ್ಲದಂದು 'ಓಂ ನಮಃ ಶಿವಾಯ' ಎನುತಿರ್ದೆನು ಎಂದು ಚೆನ್ನಬಸವಣ್ಣ ಬಸವಣ್ಣನನ್ನು ಸ್ಮರಿಸಿದ್ದಾರೆ.

ಹಾಗೆಯೇ ತನು ನೀನೇ, ಮನ ನೀನೇ, ತನುವಿನಲ್ಲಿ ತನ್ಮಯವಾದ ಅರಿವು ನೀನೇ ಬಸವ ಬಸವಾ ಎಂದು ಈ ನಾಡಿನ ಸಕಲ ಶರಣರು ಕೂಡಾ ಬಸವಣ್ಣನನ್ನು ಸ್ಮರಿಸಿದ್ದಾರೆ.

**686**

**ನಾ ಬಲ್ಲೆನೈ ನಿನ್ನ, ನೀ ಬಲ್ಲೆಯೈ ಎನ್ನ.**
**ಆರಯ್ಯ ಬಲ್ಲನೈ ಬಸವಣ್ಣನು.**
**ಭಾನುವಿನ ಉದಯಕ್ಕೆ ಆದಿಯಕ್ಷರ ಭೇದ**
**ಅನತದಿ ನೀನಾದೆ ಬಸವ ತಂದೆ.**
**ಸೀಮೆಗೆಟ್ಟಾ ಲೋಕ ಏನಾದಡೇನಯ್ಯಾ**
**ಆನು ನಿನ್ನೊಳಗಡಗಿ ಐಕ್ಯಪದದ**
**ಅನತವನೈದಿ ನಾ ಕೂಡೆ ಸುಖಿಯಾದ**
**ಬಳಿಕೇನಾದಡೇನಯ್ಯ ಬಸವಣ್ಣ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶರಣ ವಿರೋಧಿ ಲೋಕ, ಲೋಕ ವಿರೋಧಿ ಶರಣ. ಶರಣನನ್ನು ಶರಣ ಮಾತ್ರ ತಿಳಿಯುತ್ತಾನೆ. ಅನುಭಾವಿಯನ್ನು ಅನುಭಾವಿ ಮಾತ್ರ ತಿಳಿಯುತ್ತಾನೆ. ಸಿದ್ಧರಾಮ ಶಿವಯೋಗಿ ತಾನು ಸಹಜನಾಗಬೇಕೆಂಬ ಉತ್ಕಟ ಇಚ್ಛೆಯನ್ನು ಹೊಂದಿ ಸೊನ್ನಲಾಪುರದಿಂದ ಕಲ್ಯಾಣಕ್ಕೆ ಬಂದಿದ್ದ.

ಕೃಷಿ ಮಾಡದಿದ್ದರೆ ಯಾವ ತನು ಕೂಡಾ ಸಹಜಾವಸ್ಥೆಯನ್ನು ಹೊಂದಲಾರದು. ಸಹಜಾವಸ್ಥೆಯಿಂದ ಸದಾ ಪರಮ ಸಂತೋಷದಿಂದ ಇರುವುದಕ್ಕೆ ತನುವಿಗೆ ತಂತಾನೆ ಬರುವುದಿಲ್ಲ. ಪರಸತಿ, ಪರಧನ, ಪರದೈವಕ್ಕೆರಗುವುದಿಲ್ಲ ಎಂದು ಪ್ರತಿಜ್ಞೆ ಮಾಡಿದರೆ ಸಾಲದು. ಹಾಗೆ ಸಹಜವಾಗಿ

ಇರಲು ತನುವಿಗೆ ಸಾಧ್ಯವಾಗಬೇಕು.

ಋಷಿಮುನಿಗಳು ಈ ಮೂರು ಕೆಲಸಕ್ಕಾಗಿ ಜೀವನ ಪರ್ಯಂತ ಜಪ ತಪ ಯೋಗ ಅನುಷ್ಠಾನಗಳನ್ನು ಮಾಡಿದರು. ಆದರೂ ಈ ಮೂರನ್ನು ಗೆಲ್ಲದೇ ವಿಫಲರಾದರು. ಶರಣರು ಮಾತ್ರ ಜಪ ತಪ ಅನುಷ್ಠಾನಗಳನ್ನು ಮಾಡದೇ ಸಹಜವಾಗಿ ಇದ್ದರು. ಹೀಗೆ ಸಹಜವಾಗಿರಬಹುದೆಂದು ಹಲವಾರು ಸೂತ್ರಗಳನ್ನು ವಚನಗಳ ಮೂಲಕ ಹೆಣೆದು ದಾಖಲಿಸಿದರು.

ತನುವಿನಲ್ಲಿ ಸಹಜತೆ ಇದೆ. ಅದು ಹುಟ್ಟಿನಿಂದಲೇ ಬಂದಿದೆ. ಅಸಹಜತೆ ತನುವನ್ನು ಆವರಿಸಿದೆ. ಅದು ಕೂಡಾ ಹುಟ್ಟಿನಿಂದಲೇ ಬಂದಿದೆ. ಅಸಹಜತೆಯನ್ನು ಬೇರ್ಪಡಿಸಿಕೊಂಡು, ಸದಾ ಪರಮ ಸಂತೋಷದಿಂದ ಹೇಗಿರಬಹುದೆಂದು ಸಹಜತೆಯೇ ಹೇಳಿಕೊಡುತ್ತದೆ. ಇದೊಂದು ಶಿಕ್ಷಣ. ಈ ಶಿಕ್ಷಣವನ್ನು ಸರಳೀಕರಿಸಿ ಇಡೀ ಕಲ್ಯಾಣವನ್ನೇ ಪ್ರಯೋಗ ಶಾಲೆಯನ್ನಾಗಿ ಮಾಡಿಕೊಂಡಿದ್ದರು ಬಸವಣ್ಣ.

ಈ ವಾರ್ತೆಯನ್ನು ಕೇಳಿ ಪ್ರಭುದೇವರು ಸಿದ್ಧರಾಮ ಶಿವಯೋಗಿಗಳು ಮುಂತಾದ ಶರಣರು ಕಲ್ಯಾಣಕ್ಕೆ ಬಂದಿದ್ದರು. ಸಹಜ ಶಿಕ್ಷಣ ಬಯಸಿ ಬಂದವರು ಒಂದು ಲಕ್ಷ ತೊಂಬತ್ತಾರು ಸಾವಿರ ಜನ. ಸಹಜ ಶಿಕ್ಷಣವನ್ನು ಪಡೆದವರು ಏಳುನೂರಾ ಎಪ್ಪತ್ತು ಜನ. ಎರಡುನೂರಾ ನಲವತ್ತೆಂಟು ಜನಕ್ಕೆ ಒಬ್ಬರಂತೆ ಸಹಜ ಶಿಕ್ಷಣವನ್ನು ಹೊಂದಿದರು. ಇದು ಇಡೀ ಜಗತ್ತಿನಲ್ಲಿಯೇ ದೊಡ್ಡ ಸಂಖ್ಯೆ.

ಕೋಟಿಗೊಬ್ಬ ಶರಣ ಎಂದು ಶರಣರೇ ಹೇಳಿದ ಮಾತನ್ನು ಕಲ್ಯಾಣದಲ್ಲಿ ಬಸವಣ್ಣನವರು ಸುಳ್ಳು ಮಾಡಿದರು. ಪ್ರತಿ ತನುವಿನಲ್ಲಿಯೂ ಸಹಜತೆಯಿದೆ. ಮನಕ್ಕೆ ಬಯಕೆಯಾದರೆ ಸಾಕು ಪ್ರತಿ ತನು ಕೂಡಾ ಸಹಜತೆಯ ಪರಮಸುಖವನ್ನು ಹೊಂದುತ್ತದೆ ಎಂದು ಸಾರಿದರು.

ನಾ ಬಲ್ಲೆನ್ನೈ ನಿನ್ನ, ನೀ ಬಲ್ಲೆಯೈ ಎನ್ನ. ಆರು ಬಲ್ಲರು ಬಸವಣ್ಣನ. ಸೂರ್ಯ ಸಕಲರನ್ನು ಬೆಳಗಿದರೆ ಬೆಳಗುವ ಸೂರ್ಯನನ್ನು ಸಕಲರನ್ನೂ ನೀನು ಬೆಳಗಿದೆ ಬಸವ ತಂದೆ. ಸೀಮೆಗೆಟ್ಟ ಲೋಕ ಏನಾದಡೇನಯ್ಯಾ; ನಾನು ನಿನ್ನೊಳಗೆ ಅಡಗಿ ಐಕ್ಯಪದದ ಸುಖವನ್ನು ಹೊಂದಿ ಪರಮಸುಖಿಯಾದೆ. ಬಳಿಕ ಏನಾದಡೇನಯ್ಯ ಬಸವಣ್ಣ, ಕಪಿಲಸಿದ್ಧ ಮಲ್ಲಿಕಾರ್ಜುನಾ.

ಸಹಜತೆಯನ್ನು ಹೊಂದುವುದು ಎಂದರೆ ಸಮಾಜವನ್ನು ಅಪಮಾನಕ್ಕೆ ಈಡುಮಾಡುವುದು ಎಂದಲ್ಲ. ಸಹಜತೆಯ ಕ್ರಾಂತಿಯಲ್ಲಿ ತೊಡಗಿದ ತನು ಸಕಲ ಅಜ್ಞಾನದ ಸಂಪ್ರದಾಯಗಳನ್ನು ತನಗೆ ತಾನೇ ಉದುರಿಸಿಕೊಳ್ಳುತ್ತದೆ. ತನುವಿನಲ್ಲಿಯ ಅರಿವಿನ ಸಂಪತ್ತು ತನುವನ್ನು ಆವರಿಸಿದ ಮನಕ್ಕೆ ಲಭ್ಯವಾಗಿ ಮನ ತನಗೆ ತಾನೆ ಶಾಂತಗೊಳ್ಳುತ್ತದೆ.

ಅರಿವೇ ಗುರುವಾಗುತ್ತಾನೆ; ಮನವೇ ಆ ಗುರುದೇವನಿಗೆ ಭಕ್ತನಾಗುತ್ತಾನೆ. ಮನವೇ ಸಖಿಯಾಗಿ ಅರಿವೇ ಸಖನಾಗುತ್ತಾನೆ. ಮನವೇ ಸತಿಯಾಗಿ ಅರಿವೇ ಲಿಂಗವಾಗುತ್ತದೆ. ತನು ಇವರಿಬ್ಬರಿಗೆ ಸಾಕ್ಷಿಯಾಗುತ್ತದೆ. ಸತಿಪತಿಗಳಿಬ್ಬರೂ ಕಾಯವನ್ನೇ ಮನೆ ಮಾಡಿಕೊಂಡು ಕಾಯದಲ್ಲಿ ವಾಸ ಮಾಡುತ್ತಾರೆ. ಸಾಕಾದಾಗ ಕಾಯ ಬಿಟ್ಟು ಬಯಲಲ್ಲಿ ಸೇರಿ ಬಯಲಾಗುತ್ತಾರೆ.

ಬಸವಣ್ಣನಿಂದ ಸಹಜ ಸೂತ್ರ ತಿಳಿದು, ಸಹಜ ಸುಖಿಯಾದ ಮೇಲೆ, ನನ್ನ ಕಾಯ ಬಸವಣ್ಣನ ಕಾಯ ಏನಾದಡೇನು ? ಕ್ರಿಸ್ತನ ಕಾಯವನ್ನು ಲೋಕ ಶಿಲುಬೆಗೇರಿಸಿ ಮೊಳೆ ಜಡಿಯಲಿಲ್ಲವೆ ? ಸಾಕ್ರಟೀಸನಿಗೆ ವಿಷಪ್ರಾಶನ ಮಾಡಿಸಲಿಲ್ಲವೆ ? ಶರಣ ಸತಿಯಾಗಿ ಲಿಂಗ ಪತಿಯಾಗಿ ಸತಿಪತಿಗಳಿಬ್ಬರು ಮನೆಯನ್ನಾಗಿಸಿಕೊಂಡು ಕಾಯದಲ್ಲಿದ್ದಾಗ ಕಾಯ ತನಗೆ ತಾನೆ ಬಿದ್ದರೇನು ? ಕಾಯದಲ್ಲಿದ್ದವರು ತಮಗೆ ಸಾಕಾಗಿ ಬಿಟ್ಟು ಹೋದರೇನು ? ಅಥವಾ ಕಾಯವನ್ನು ಲೋಕದ ಜನ ಹಿಂಸೆ ಮಾಡಿ ಕೊಂದರೇನು ? ಕಾಯದಲ್ಲಿದ್ದವರು ಮಾತ್ರ ಪರಮಸುಖಿಗಳು.

ಬಸವಣ್ಣ ಕಾಯಬಿಟ್ಟು ಹೋದ ವಾರ್ತೆಯನ್ನು ಕೇಳಿ ಶರಣ ಸತಿಯಾದ ಸಿದ್ಧರಾಮ ಶಿವಯೋಗಿಗಳು ತನ್ನ ಪತಿ ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ಮಾತನಾಡಿದ ಮಾತನ್ನು ಸೂತ್ರರೂಪದ ಅಕ್ಷರಗಳಲ್ಲಿ ದಾಖಲಿಸಿದ್ದಾರೆ.

**687**

**'ನ್ಯಾ ಭುಕ್ತಂ ಕ್ಷೀಯತೇ ಕರ್ಮ' ಎಂದುದಾಗಿ**
**ಬಾಳದಕ್ಷರವ ತೊಡೆಯಲಿಕೆ ಆರಳವಯ್ಯಾ,**
**ಗುರುಕಾರುಣ್ಯವುಳ್ಳವರಿಗಲ್ಲದೆ?**
**ಗುರುವೆ, ಎನ್ನ ಭವಕ್ಕೆ ಬಾರದಂತೆ ತಪ್ಪಿಸಿದೆ;**
**ತೋರಿಸಿದೆ ಉರುತರ ಪಾದೋದಕ-ಪ್ರಸಾದವ;**
**ನಿನ್ನ ಗುಣದಿಂದ ತನುಗುಣ ನಾಸ್ತಿಯಾದೆ.**
**'ನ್ಯಾ ಭುಕ್ತಂ' ಎಂಬುದ ಮೀರಿ ಶಿವಭೋಕ್ತೃವಾದೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನಿನ್ನ ಕೂಡಿದೆ.**

ಬರೆದುಕೊಂಡು ಬಂದ ಬರಹವನ್ನು ತೊಡೆಯಲಿಕ್ಕೆ ಯಾರಿಗೂ ಸಾಧ್ಯವಿಲ್ಲ ಎನ್ನುವ ಮಾತನ್ನು ಗುರುದೇವ ಮಾತ್ರ ಸುಳ್ಳಾಗಿಸುತ್ತಾನೆ. ಯಾರೂ ಬರೆದುಕೊಂಡು ಬರುವುದಿಲ್ಲ. ತನಗೆ ತಾನೇ ಹೇರಿಕೊಂಡ ಅಜ್ಞಾನ ತನ್ನನ್ನು ಹಾಗೆ ನುಡಿಸುತ್ತದೆ.

ಜಾತಿ ಮತ ಪಂಥ ಧರ್ಮ ಹೆಣ್ಣು ಗಂಡು ಎಂದು ತಾನೇ ಹೇರಿಕೊಂಡ ಅಜ್ಞಾನವನ್ನು ತಾನೇ ತನ್ನದೇ ಆದ ಜ್ಞಾನದಿಂದ ನೋಡಿ ತಳ್ಳಬೇಕು. ತನು ಎಂದರೆ ಅದು ಅರಿವಿನ ಜಾತಿಯದ್ದಾಗಿರಬೇಕಿತ್ತು. ತನು ಮನಕ್ಕೆ ಸೋತು ಶರಣಾಗತನಾಗಿದೆ. ತನುವಿನಲ್ಲಿಯೇ ತನ್ಮಯವಾದ ಅರಿವು ತನುವನ್ನು ತನ್ನತ್ತ ಬಾ ಎಂದು ಕೈ ಮಾಡಿ ಕರೆಯುತ್ತಿದೆ. ತನುವನ್ನು ಆವರಿಸಿದ ಮನ ಮತ್ತು ತನುವಿಗೆ ಅರಿವಿನತ್ತ ಹೋಗಿ ಆ ಅರಿವೇ ತಾನಾಗಬೇಕೆಂಬ ಅರಿವು ಮರೆವಾಗಿದೆ.

''ಅರಿವೇ ಗುರು'' ಎಂದು ತನು ಹೇಳುವುದನ್ನೂ ಮರೆತಿಲ್ಲ. ತನು ಮತ್ತು ಮನ ಅರಿವಿಗೆ ಶರಣು ಹೋಗಿ ಆ ಅರಿವನ್ನು ಬಳಕೆ ಮಾಡಲು ಸಿದ್ಧತೆಯನ್ನೂ ನಡೆಸಿಲ್ಲ. ಆದರೆ ಅರಿವು ಪಡೆಯುವ ಯತ್ನ ಮಾತ್ರ ತನುವಿನಿಂದ ನಡೆದಿದೆ.

ಶಾಲಾ ಕಾಲೇಜುಗಳ ಮೂಲಕ, ಪುಸ್ತಕಗಳ ಮೂಲಕ, ತನುವನ್ನೇ ಗುರುವಾಗಿಸಿಕೊಂಡು ಆ ಗುರುವಿಗೆ ತನುವೇ ಶಿಷ್ಯನಾಗಿ; ಶಿಷ್ಯ ಗುರುವಿನ ಮೂಲಕ ಅರಿವು ಪಡೆಯಬೇಕೆಂಬ ಕಾತುರದಲ್ಲಿಯೂ ಇದೆ. ಈ ಮಾರ್ಗವೇ ತಪ್ಪೆಂದು ತನು ಮತ್ತು ಮನಕ್ಕೆ ಅರಿವಾಗುತ್ತಿಲ್ಲ. ಅರಿವಾಗದಿದ್ದರೇನಂತೆ ತನು ಮತ್ತು ಮನಕ್ಕೆ ಅರಿವು ಬೋಧಿಸುವುದನ್ನೂ ನಿಲ್ಲಿಸಿಲ್ಲ.

'ಅರಿವೇ ಗುರು' ಎಂದರೆ ಅರಿವು ಒಂದು ವ್ಯಕ್ತಿಯಲ್ಲ. ಅರಿವು ಗುರುವಾಗಿ, ತನು ಮತ್ತು ಮನಕ್ಕೆ ಸದಾ ಪಾಠ ಮಾಡುವ ಶಕ್ತಿ. ಈ ಶಕ್ತಿಯನ್ನು ತನುವನ್ನು ಆವರಿಸಿದ ಮನ ಮತ್ತು ತನು ಅರಿವಿಗೆ ಶರಣಾಗತನಾಗಿ ಪಡೆಯಬೇಕು. ಹಾಗೆ ಪಡೆದ ತನು ''ಜ್ಞಾನಿ''ಯೆಂದು ಇತರ ತನುಗಳಿಂದ ಕರೆಯಿಸಿಕೊಳ್ಳುತ್ತದೆ. ಅಂತಹ ತನು ಸಹಜ ತನುವಾಗಿ ತನ್ನ ಸುಳ್ಳು ಸುಖ ಸುಳ್ಳು ದುಃಖಗಳಿಂದ ತಾನೇ ದೂರವಾಗಿ ಪರಮಸುಖವನ್ನು ಅನುಭವಿಸುತ್ತದೆ.

ಪರಮ ಸುಖದ ಸದಾವಕಾಶವನ್ನು ಯಾವ ತನು ಕೂಡಾ ಕಳೆದುಕೊಳ್ಳಬಾರದು. ಏಕೆಂದರೆ ಪರಮ ಸುಖವನ್ನು ಸದಾ ನೀಡುವ ಅರಿವು ಸಕಲ ತನುಗಳಲ್ಲಿಯೂ ಇದೆ. ಆ ಅರಿವನ್ನು ಸದಾ ಬಳಕೆ ಮಾಡುವ ವಿಧಾನವನ್ನು ಅನುಸರಿಸಿದಾತ ಬುದ್ಧನಾದ. ಮಹಾವೀರನಾದ. ಕ್ರಿಸ್ತನಾದ. ಕ್ರಿಷ್ಣನಾದ. ಪೈಗಂಬರನಾದ. ಬಸವಾದಿ ಶರಣರು, ದಾಸವರೇಣ್ಯರು, ತತ್ವಪದಕಾರರು ಆ ಅರಿವನ್ನೇ ಬಳಕೆ ಮಾಡಿ ಗುರುವೆಂದು ಕರೆಯಿಸಿಕೊಂಡರು.

ಇಂತಹ ಗುರುಗಳನ್ನು ಪೂಜಿಸಿ ಆರಾಧಿಸಿ ಅವರಿಗೆ ಆಲಯಕಟ್ಟಿ ಉತ್ಸವಗಳನ್ನು ಮಾಡಿದರೆ ತನು ಮತ್ತು ಮನ ಗುರುವಾಗಲಾರದು, ಬದಲಾಗಿ ಮನ ತನುವಿಗೆ ವೇಷ ಹಾಕಿ ಗುರುವೆಂದು ಘೋಷಿಸಿಕೊಳ್ಳುತ್ತದೆ. ಯಾವ ತನುವೂ ವೇಷ ಧರಿಸಿ ಗುರುವೆಂದು ಘೋಷಣೆ ಮಾಡಿಕೊಳ್ಳುವ ಅವಶ್ಯಕತೆಯಿಲ್ಲ. ಅರಿವಿಗೆ ಯಾವ ವೇಷದ ಅವಶ್ಯಕತೆಯೂ ಇಲ್ಲ. ಏಕೆಂದರೆ ವೇಷ ಧರಿಸಲು ಅದು ವ್ಯಕ್ತಿಯಲ್ಲ. ಪ್ರತಿ ವ್ಯಕ್ತಿಯಲ್ಲಿದ್ದ ಅವ್ಯಕ್ತ ಶಕ್ತಿ.

ಗುರುವೆ, ಎನ್ನನ್ನು ಭವಕ್ಕೆ ಬಾರದಂತೆ ತಪ್ಪಿಸಿದೆ; ನಿನ್ನ ಗುಣದಿಂದ ನನ್ನ ತನುಗುಣ ನಾಸ್ತಿಯಾಯಿತು ಎಂದು ಸಿದ್ಧರಾಮ ಶಿವಯೋಗಿಗಳು ಅರಿವೆಂಬ ಗುರುದೇವನೊಂದಿಗೆ ಮಾತನಾಡಿದ ಮಾತನ್ನು ಓದುಗರಿಗಾಗಿ ದಾಖಲಿಸಿದ್ದಾರೆ.

ತನು, ಮನ, ಅರಿವು ಮೂರರ ಸಂಗಮವೇ ತನು. ತನುವನ್ನು ಆವರಿಸಿದ ಮನ ತನುವಿನ ಸಂಗ ಬಿಟ್ಟು, ಅರಿವಿನ ಸಂಗ ಮಾಡಿದಾಗ, ಮನಕ್ಕೆ ಅರಿವಿನೊಂದಿಗೆ ಮಾತನಾಡಲು ಬರುತ್ತದೆ. ಆಗ ತನುಗುಣ ತಂತಾನೆ ಉದುರಿ ಬೀಳುತ್ತದೆ. ಅರಿವೆಂಬ ಗುರುದೇವನು ತನುವನ್ನು ಬಳಕೆ ಮಾಡುತ್ತಾನೆ. ಆಗ ತನು ಗುರುತನುವಾಗುತ್ತದೆ.

**688**

**ನಾ ಮಾಡಿದ ಕೆರೆಯೆತ್ತ, ಕರಿಕಾಲಚೋಳ ಮಾಡಿದ ಕೆರೆಯೆತ್ತ?**
**ನಾ ಮಾಡಿದ ಬತ್ತವೆತ್ತ, ದೇವಬತ್ತಗಳೆತ್ತ?**
**ಕಪಿಲಸಿದ್ಧ ಮಲ್ಲಿಕಾರ್ಜುನದೇವನ ಭಾಗ್ಯವೆತ್ತ,**
**ಪ್ರಮಥ ಚಿಂತಾಮಣಿಯ ಪಾದೋದಕವೆತ್ತ?**
**ಕೇಳಾ ಕೇದಾರಯ್ಯಾ.**

ಕರಿಕಾಲ ಚೋಳ ಮಹಾರಾಜ. ಈತ ತಮಿಳುನಾಡಿನ ತಂಜಾವೂರು ಜಿಲ್ಲೆಯ ತಿರುಚಾನಪಳ್ಳಿಯ ಹತ್ತಿರ ಹರಿಯುವ ಕಾವೇರಿ ನದಿಗೆ ಕ್ರಿ.ಪೂ. 100ರಲ್ಲಿ ಮಹಾ ಕೆರೆಯನ್ನು ಕಟ್ಟಿಸಿದ. ಕೆರೆಯ ಉದ್ದ 0.329 ಕಿ.ಮೀ (ಒಂದು ಸಾವಿರದ ಎಪ್ಪತ್ತೊಂಬತ್ತು ಅಡಿ) ಅಗಲ 20 ಮೀ (ಅರವತ್ತಾರು ಅಡಿ) ನೀರಾವರಿಯ ಹಿರಿಯ ಉದ್ದೇಶವಿಟ್ಟುಕೊಂಡು ಅಣೆಕಟ್ಟೆ ಪುಣ್ಯಾತ್ಮನನ್ನು ಸಿದ್ಧರಾಮ ಶಿವಯೋಗಿಗಳು ಹನ್ನೆರಡನೇ ಶತಮಾನದಲ್ಲಿ ಸ್ಮರಿಸಿದ್ದಾರೆ.

ಕಟ್ಟಿದ ಈ ಕೆರೆ 1804 ನೇ ಶತಮಾನದ ಬ್ರಿಟಿಷ್ ಆಡಳಿತದಲ್ಲಿ ಪುನಃ ನವೀಕರಣಗೊಂಡಿತು. ಕ್ಯಾಪ್ಟನ್ ಕಾಲ್ಡ್‌ವೆಲ್ ಎನ್ನುವ ಮಿಲ್ಟ್ರಿ ಇಂಜಿನೀಯರ್ ಇದನ್ನು ನವೀಕರಿಸಿದರು. ಕಲ್ಲುಕಟ್ಟಡದಿಂದ ಕಟ್ಟಲ್ಪಟ್ಟ ಈ (ಡ್ಯಾಮ್)ಅಣೆಕಟ್ಟೆ ಈಗಲೂ ಸುಂದರವಾಗಿ ಕೆಲಸ ಮಾಡುತ್ತಲಿದೆ. ಇಂತಹ ಬೃಹತ್ಪ್ರಮಾಣದ ಕೆರೆಯನ್ನು ನಿರ್ಮಿಸಿದ ಕರಿಕಾಲ ಚೋಳ ರಾಜನೆತ್ತ, ನಾ ಮಾಡಿದ ಕೆರೆಯೆತ್ತ

ಎಂದು ತಮ್ಮನ್ನು ಸಮೀಕರಿಸಿ ನುಡಿದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಬತ್ತ ಬೆಳೆದವನು ಶ್ರೇಷ್ಠನಲ್ಲ; ಬತ್ತ ಮಾಡಿದವನು ಶ್ರೇಷ್ಠ. ಹಾಗೆಯೇ ತನು ಶ್ರೇಷ್ಠವಲ್ಲ; ತನುವನ್ನು ಮಾಡಿ, ತನುವಿನಲ್ಲಿಯೇ ಇದ್ದು; ತನು ಬೇಡಿದ್ದನ್ನು ಕೊಡುವ ಕಪಿಲಸಿದ್ಧ ಮಲ್ಲಿಕಾರ್ಜುನನೇ ಶ್ರೇಷ್ಠ !

ತನುವನ್ನು ಆವರಿಸಿ, ತನುವಿನೊಂದಿಗೆ ಸಂಗ ಮಾಡಿದ ಮನವೆತ್ತ; ತನುವಿನಲ್ಲಿಯೇ ತನ್ಮಯವಾದ ತನು ಬೇಡಿದ್ದನ್ನು ಕೊಡುವ ಅವನೆತ್ತ ? ನಾನು ಬೇಡುವವನಾದರೆ, ಅವನು ನಾನು ಬೇಡಿದ್ದನ್ನು ಕೊಡುವ ಪ್ರಮಥ ಚಿಂತಾಮಣಿ ಎಂದು ಸಿದ್ಧರಾಮ ಶಿವಯೋಗಿಗಳು ಕೇದಾರಯ್ಯ ಶರಣರಿಗೆ ತನುವಿನಲ್ಲಿ ತನ್ಮಯವಾದ ಅರಿವಿನ ಚಿಂತಾಮಣಿಯನ್ನು ಪರಿಚಯಿಸಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ತಾವು ಮಾಡಿದ ಸಮಾಜಮುಖಿ ಹಿರಿಯ ಕೆಲಸಗಳನ್ನು ತಾವೇ ಹೀಗಳೆದುಕೊಂಡು; ಕೇದಾರಯ್ಯನಿಗೆ ತಾವು ಗುರುವಾಗದೆ; ಕೇದಾರಯ್ಯನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳದೆ ಗುರುಶಿಷ್ಯರಿಬ್ಬರ ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನನ್ನು ಕೇದಾರಯ್ಯನಿಗೆ ಪರಿಚಯಿಸಿದ್ದಾರೆ.

ಗುರು ಎನ್ನುವವನು ವ್ಯಕ್ತಿಯಲ್ಲ. ಶಿಷ್ಯ ಎನ್ನುವವನು ಕೂಡಾ ವ್ಯಕ್ತಿಯಲ್ಲ. ಇವರಿಬ್ಬರು ಒಂದೇ ತನುವಿನಲ್ಲಿ ಇರುವ ಅವ್ಯಕ್ತ ಶಕ್ತಿ.

'ಅರಿವು' ಎನ್ನುವುದು ವ್ಯಕ್ತಿಯಲ್ಲ; ಅದು ಸಕಲ ತನುಗಳಲ್ಲಿಯೂ ತನ್ಮಯವಾದ ಭಾಗ್ಯ. ಈ ಭಾಗ್ಯವನ್ನೇ ಗುರು 'ಅರಿವೇ ಗುರು'ವೆಂದು ಹೆಸರಿಸಿದ್ದಾರೆ. ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಪ್ರಮಥ ಚಿಂತಾಮಣಿಯ ಭಾಗ್ಯವನ್ನು ಹೊಂದಬೇಕು. ಈ ಭಾಗ್ಯವನ್ನು ಹೊಂದಿದ ತನು ಯಾವ ತನುವಿಗೂ ಗುರುವಾಗದೆ; ಯಾವ ತನುವನ್ನೂ ಶಿಷ್ಯನನ್ನಾಗಿಸಿಕೊಳ್ಳದೆ; ತನುವನ್ನು ಆವರಿಸಿದ ಮನವನ್ನು ಹಿಡಿದು; ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ಪರಿಚಯ ಮಾಡಿಸಬೇಕು.

ಸಿದ್ಧರಾಮ ಶಿವಯೋಗಿಗಳು ಕೇದಾರಯ್ಯನಿಗೆ ತಾವು ಗುರುವಾಗದೆ ಕೇದಾರಯ್ಯನ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ಕೇದಾರಯ್ಯನಿಗೆ ಪರಿಚಯಿಸಿದ್ದಾರೆ.

ಗುರುದೇವನೆಂದು ವೇಷಧರಿಸಿಕೊಂಡ ಕಾಯಗಳು ಎಚ್ಚರಗೊಳ್ಳದಿದ್ದರೆ ಅವು ವೇಷದ ಕಾಯಗಳು. ವೇಷ ವೇಶಿಗೆ ಸಮ ಎಂದು ಶರಣರು ವೇಷ ಹಾಕಿಕೊಂಡ ಗುರುಗಳನ್ನು ಹೀಗಳಿದಿದ್ದಾರೆ.

**689**

**ನಾ ಮುನ್ನ ಉಳಿದೆ ಕಳೆದೆ ಮಿಂಡರ**
**ನೀ ಹೋಗಿ ತಾರಗೆ ಅವ್ವಾ.**
**ಚಿತ್ತವು ಮನವು ಹೋಗಿ**
**ನಾನವನ ಹತ್ತಿದ ಮನವ ತರಲಿಕಾರೆನಹೊ.**
**ಅಯ್ಯಾ, ಕಪಿಲಸಿದ್ಧ ಮಲ್ಲಿನಾಥಯ್ಯಾ**
**ನಾನೀಗ ಏಗೆಯ್ದರೂ ಬಿಡಲಾರೆನವ್ವ.**

ತನುವನ್ನು ಆವರಿಸಿದ ಮನ, ಚಿತ್ತ ತನುವಿನ ಮೇಲೆ ನೆಟ್ಟಾಗ ಅದು ತನುವಿನ ಸಂಗ ಅಷ್ಟು ಸುಲಭವಾಗಿ ಬಿಡುವುದಿಲ್ಲ. ತನುವಿನಲ್ಲಿಯೇ ಸಂಗಮವಾದ ಅರಿವಿನ ಸಂಗ ಮಾಡಲು ಮನ ಮತ್ತು ಚಿತ್ತಕ್ಕೆ ಹಲವಾರು ವರುಷಗಳೇ ಬೇಕಾಗಬಹುದು. ಅಥವಾ ಹಲವಾರು ಜನ್ಮಗಳೇ ಬೇಕಾಗಬಹುದು.

ಮನ ಮತ್ತು ಚಿತ್ತ ಎಲ್ಲಿಯವರೆಗೆ ತನುವಿನ ಸಂಗ ಬಿಟ್ಟು ಅರಿವಿನ ಸಂಗ ಮಾಡುವುದಿಲ್ಲವೊ ಅಲ್ಲಿಯವರೆಗೆ ಅದು ಹಲವಾರು ಮಿಂಡರೊಂದಿಗೆ ಹಾದರ ಮಾಡುತ್ತಲೇ ಇರುತ್ತದೆ. ಹಾಗೆಯೇ ತಾನು ಸಾತ್ವಿಕನೆಂದು ತನುವಿಗೆ ಸುಂದರವಾದ ಸಾತ್ವಿಕ ಪಾತ್ರ ಹಾಕಿ, ಲೋಕಕ್ಕೆ ತಾನು ಸಾತ್ವಿಕನೆಂದು ಡಂಗುರ ಹೊಡೆಯುತ್ತದೆ.

ಮನ ತನ್ನ ಚಿತ್ತವನ್ನು ಹರಿಯಬಿಟ್ಟು, ತನುವಿನೊಂದಿಗೆ ಅನ್ಯ ತನುವಿನ ಸಂಗ ಮಾಡಿ ಹಾದರ ಮಾಡುತ್ತದೆ. ತನುವಿನ ರೂಪ, ಯೌವ್ವನ, ತನುವಿನ ಮೇಲಿದ್ದ ಆಭರಣ, ವಸ್ತ್ರ, ಭೂಮಿ, ತನುವಿನ ಅಧಿಕಾರ ಮನ ಮತ್ತು ಚಿತ್ತಕ್ಕೆ ಆಕರ್ಷಣೆಯಾಗುತ್ತದೆ.

ಚಿತ್ತ ಇವುಗಳ ಮೇಲೆ ನೆಟ್ಟರೆ ಮನ ಅನಂತಕಾಲ ತನುವಿನೊಂದಿಗೆ ಸುಖಿಸುತ್ತ, ತನುವಿನ ಆಯುಷ್ಯವನ್ನು ವ್ಯರ್ಥ ಕಳೆಯುತ್ತದೆ. ಮನ ಮತ್ತು ಚಿತ್ತಕ್ಕೆ ವಸ್ತುವಿನ ಸತ್ಯ ಅರಿವಾಗುವುದಿಲ್ಲ. ಸತ್ಯ ತಿಳಿಯುವ ಶಕ್ತಿ ಮನಕ್ಕೂ ಇಲ್ಲ; ಚಿತ್ತಕ್ಕೂ ಇಲ್ಲ.

ಮನದ ಚಿತ್ತ ಚಿನ್ನದ ಮೇಲೆ ನೆಟ್ಟರೆ, ಮನ ತನುವಿನೊಂದಿಗೆ ಚಿನ್ನ ಖರೀದಿಸಬೇಕು ಇಲ್ಲ ಕಳುವು ಮಾಡಿ ಪಡೆಯಬೇಕು ಅಥವಾ ಕೊಲೆ ಮಾಡಿಯಾದರೂ ಚಿನ್ನ ಪಡೆಯಲೇಬೇಕೆಂಬ ತವಕದ ನಂಜನ್ನು ತನುವಿನ ಮೇಲೆ ಮನ ಚೆಲ್ಲುತ್ತದೆ. ಹೀಗಾಗಿ ಚಿತ್ತ ಮತ್ತು ಮನದ ಬಯಕೆಗಾಗಿ ತನು ಹಾದರಿಗ, ಕಳ್ಳ, ಕೊಲೆಗಡುಕನ ಪಟ್ಟ ಕಟ್ಟಿಕೊಳ್ಳುತ್ತದೆ.

ಸಿದ್ಧರಾಮ ಶಿವಯೋಗಿಗಳು ಮನವನ್ನು ಎರಡು ಭಾಗ ಮಾಡಿ, ತಾವು ಹೆಣ್ಣಾಗಿ ಮನದೊಂದಿಗೆ ಮಾತನಾಡಿದ್ದಾರೆ. ಎಲೆ ಅವ್ವಾ, ತನುವಿನಲ್ಲಿಯೇ ತನ್ಮಯವಾದ ಚೆಲುವ ಅರಿವಿನ ನಲ್ಲನನ್ನು ನೋಡಿದೆ. ಅವನಿಗೆ ನಾನು ಮರುಳಾದೆ. ಅವನ ಸಂಗ ಮಾಡಿ ಅವನೊಂದಿಗೆ ಕೂಡಿದೆ. ಅವನ ಬಿಸಿ ಅಪ್ಪುಗೆಯಲ್ಲಿ ನಾನೆಲ್ಲವನ್ನೂ ಮರೆತೆ ತಾಯಿ. ಎನ್ನ ಚಿತ್ತ ಮನವೂ ಹೋಗಿ ಅವನಲ್ಲಿಯೇ ನೆಟ್ಟಿದೆ ತಾಯಿ. ಅವನನ್ನು ಬಿಡಿಸಿಕೊಂಡು ಮತ್ತೆ ಹೊರಬರಲಾರೆನವ್ವಾ.

ಕಪಿಲಸಿದ್ಧ ಮಲ್ಲಿನಾಥಯ್ಯ ಹಿಂದಿನ ನನ್ನ ಸಕಲ ಹಾದರಗಳನ್ನೂ ಕಳೆದು ತನ್ನಂತೆ ಮಾಡಿಕೊಂಡನವ್ವಾ. ನಾನೀಗ ನನ್ನ ನಲ್ಲನ ನಲ್ಲೆ. ನಾನು ಅವನ ಸತಿ. ಅವನೇ ನನಗೆ ಪತಿ. ಇನ್ನು ನನಗೆ ಮನವಿಲ್ಲ; ಇನ್ನು ನನಗೆ ಚಿತ್ತವಿಲ್ಲ. ಮನವೇ ಅವನಿಗೆ ಶರಣು ಹೋಗಿ ಸತಿಯಾಗಿದೆ. ಅವನೇ ನನಗೆ ಪತಿಯಾಗಿದ್ದಾನೆ.

ಕಾಯವನ್ನೇ ಕೈಲಾಸ ಮಾಡಿಕೊಂಡು ನಾವಿಬ್ಬರೂ ಅಲ್ಲಿ ವಾಸಕ್ಕಿದ್ದೇವೆ ತಾಯಿ.

**690**

**ನಾಯಂತೆ ಮನುಜರಪ್ಪರೆ ಅಯ್ಯ.**
**ನಾಯಿ ಕಚ್ಚಿದಂತೆ ಕಚ್ಚುವರೆ?**
**ಅವರು ಅರೆನಾಯಾದರೆ ನಾವು ನೆರೆನಾಯಪ್ಪರೆ ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ದೇವರದೇವ.**

ತನುವಿನ ರೂಪ, ಅದರ ವಾಸನೆಯನ್ನು ಕಂಡು, ನಾಯಿ ತನ್ನವರಲ್ಲವೆಂದು ಬೊಗಳಿ ಕಚ್ಚುತ್ತದೆ. ನಾಯಿ ನಾಯಿಯೇ ; ಮನುಷ್ಯ ಮನುಷ್ಯನೇ.

ನಾಯಿ ಮನುಷ್ಯನ ರೂಪ ಅವನ ವಾಸನೆಯನ್ನು ಕಂಡು ಹಿಡಿದು, ತನ್ನ ಮಾಲೀಕನೆಂದು ಬಾಲ ಅಲ್ಲಾಡಿಸುತ್ತದೆ. ಹಾಗೆಯೇ ಪ್ರತಿ ತನುವಿನಲ್ಲಿ ತನುವಿನ ಮಾಲೀಕ ತನ್ಮಯವಾಗಿದ್ದಾನೆ.

ತನುವನ್ನು ಆವರಿಸಿದ ಮನವೆಂಬ ನಾಯಿಗೆ ತನುವಿನಲ್ಲಿ ತನ್ಮಯವಾದ ಅರಿವಿನ ಮಾಲಕನ ಪರಿಚಯವಿಲ್ಲ. ಹೀಗಾಗಿ ಅದು ರೂಪ ನೋಡಿ ಬೊಗಳುತ್ತದೆ. ವಾಸನೆ ಮೂಸಿಸಿ ಬೊಗಳುತ್ತದೆ.

ತನುವಿನಲ್ಲಿ ತನ್ಮಯವಾದ ಮಾಲೀಕನನ್ನು ನೋಡಿದ ಬಸವಣ್ಣ ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ ಎಂದು ನುಡಿದ. ಎಲ್ಲಿ ನೋಡಿದರೂ ಆತನಿಗೆ ಶಿವಸ್ವರೂಪಿಗಳೇ ಕಂಡರು. ಶಿವನಿದ್ದ ಲಾಂಛನಕ್ಕೆ ಶರಣು ಶರಣಾರ್ಥಿ ಎಂದರು.

ಲಾಂಛನಕ್ಕೆ ಶರಣೆಂಬೆ; ಅವರಂತರಂಗವ ನೀವೇ ಬಲ್ಲಿರಿ ಎಂದು ಬಸವಣ್ಣ ನುಡಿದರು. ನಾಯಿಗೇನು ಗೊತ್ತು ನಾರಿವಾಣದ ರುಚಿ. ತೆಂಗಿನ ಕಾಯಿಯ ಸಿಪ್ಪೆ ಬಿಡಿಸಿದರೆ ಅದರ ಸಿಹಿಜಲ, ಅದರ ತಿರುಳು ಗಮನಕ್ಕೆ ಬರುತ್ತದೆ. ಈ ಕೆಲಸ ನಾಯಿಗೆ ಸಾಧ್ಯವಾಗುವುದಿಲ್ಲ. ನಾಯಿತನವು ಇಲ್ಲವಾದಾಗ ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರು ಪರಿಚಯವಾಗುತ್ತಾನೆ. ಆತ ತನಗೂ ಮಾಲೀಕ ಸಕಲರಿಗೂ ಮಾಲೀಕ.

ಮಾಲೀಕನಿಲ್ಲದ ತನು ಈ ಭೂಮಿಯ ಮೇಲೆ ಒಂದೂ ಇಲ್ಲ. ತನುವನ್ನು ಆವರಿಸಿದ ಮನಕ್ಕೆ ನಾಯಿತನವಿದೆ. ಹೀಗಾಗಿ ಮನಕ್ಕೆ ಮಹಾದೇವನ ಪರಿಚಯವಿಲ್ಲ. ಯಾರು ಬಂದರೂ ಬೊಗಳುತ್ತದೆ. ಅದು ನಾಯಿ. ನಾಯಿಗೆ ರೂಪ ನೋಡಿ ಬಾಲ ಅಲುಗಾಡಿಸುವ ಶಕ್ತಿಯಿದೆ. ವಾಸನೆ ನೋಡಿ ಬಾಲ ಅಲುಗಾಡಿಸುವ ಶಕ್ತಿಯಿದೆ. ನಾಯಿಗೆ ರೂಪ ವಾಸನೆ ಗೊತ್ತು .

ಮಹಾದೇವನ ಸಂಗ ಮಾಡಿದ ಮನವೆಂಬ ನಾಯಿ ನಾಯಿಯಲ್ಲ. ಅದು ಕೂಡಾ ಮಹಾದೇವಿ. ತನುವಿನಲ್ಲಿ ತನ್ಮಯವಾದ ಮಹಾದೇವ ನಿರೂಪ. ತನುವನ್ನು ಆವರಿಸಿದ ಮನವೂ ನಿರೂಪ. ತನುವಿನ ರೂಪ ನೋಡಿ ಬೊಗಳುವ ಶಕ್ತಿ ನಾಯಿಗೆ ಇದ್ದರೆ, ತನುವಿನ ನಿರೂಪ ನೋಡಿ ಮಾಲೀಕನನ್ನು ಮಹಾದೇವ ಎಂದು ಶರಣು ಹೋಗಿ ಶರಣಾಗತನಾಗುವ ಶಕ್ತಿ ಮನಕ್ಕೆ ಮಾತ್ರ ಇದೆ.

''ಅವಲಕ್ಷಣ ನಾಯನುಡಿಯ ನಾಲಿಗೆಯ ಸಡಗರ ಡೋವಿಗೆ ಮೃತ್ಯುವಿನ ನುಡಿಯೊಳಗಾಯಿತ್ತು. ಬೇಡವೋ ಪರವಾದಿಗಳುಹದಿರು. ಬೇಡವೋ ದೂಷಕ ಬಗುಳದಿರು. ಭಕ್ತಿಗೆಯೂ ಬೇಟಕ್ಕೆಯೂ ಜಾತಿ ಸೂತಕವುಂಟೆ ? ಪರುಷ ಮುಟ್ಟಲು ಕಬ್ಬುನ ಹೊನ್ನಾಯಿತು ಕಾಣಾ ನಮ್ಮ ಕೂಡಲಸಂಗನ ಶರಣರನು ಅವರಿವರೆಂದಡೆ ಕುಂಭಿಪಾತಕ ನಾಯಕ ನರಕ ತಪ್ಪದು ಕಾಣಾ''.

ನಾಯಿಗೂ ಮನುಷ್ಯನಿಗೂ ವ್ಯತ್ಯಾಸವಿದೆ. ನಾಯಿಗೆ ಮಾಲೀಕನು ಒಬ್ಬನೇ. ಹಾಗೆಯೇ ಮನವೆಂಬ ನಾಯಿಗೆ ಕೂಡಾ ಮಾಲೀಕನೊಬ್ಬನೆ ಆಗಬೇಕು. ನಾಯಿ ರೂಪ ವಾಸನೆ ನೋಡಿ ಮಾಲೀಕನನ್ನು ಕಂಡು ಹಿಡಿಯುತ್ತದೆ.

ಹಾಗೆಯೇ ಮನವೆಂಬ ನಾಯಿ ತನುವೆಂಬ ಲಾಂಛನ ನೋಡಿ ಆ ಲಾಂಛನದಲ್ಲಿದ್ದ ಅರಿವೆಂಬ ಮಾಲೀಕನನ್ನು ಕಂಡುಹಿಡಿದಾಗ ಮನದ ನಾಯಿತನ ಹೋಗಿ ಮಹಾದೇವಿಯೇ ತಾನಾಗುತ್ತಾಳೆ. ಪರುಷ ಮುಟ್ಟಲು ಕಬ್ಬಿಣ ಹೊನ್ನಾಗುತ್ತದೆ. ಮಹಾದೇವನನ್ನು ಮುಟ್ಟಿದ ಮನ ಮಹಾದೇವಿಯಾಗುತ್ತಾಳೆ.

ಈ ಭೂಮಿಯ ಮೇಲಿದ್ದ ಸಕಲ ತನುಗಳು ಕೂಡಾ ಮಹಾದೇವನು ವಾಸ ಮಾಡಿದ ಲಾಂಛನವೇ ಆಗಿವೆ. ಅಂತಹ ತನುಗಳನ್ನು ಅವರಿವರೆಂದಡೆ ಕುಂಭೀಘಾತಕ ನಾಯಕ ನರಕ ತಪ್ಪದು ಎಂದು ಮಹಾದೇವನ ದರುಶನವಾದ ಮನಕ್ಕೆ ಮನವರಿಕೆಯಾಗುತ್ತದೆ.

**691**

**ನಾಸಿಕವಿದ್ದು ನಾಸಿಕರೋಗವಿದ್ದಡೆಂತು ?**

**ಅಲ್ಲಿಯೋಗವ ನಡೆಸಲು ಮನಕ್ಕೆ ಶಾಂತಿಯಿಲ್ಲ.**
**ಶಾಂತಿಯಿಲ್ಲದಲ್ಲಿ ಭವಶಾಂತಿಯೆಂತು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿಗೆ ಮೂಗು ಇದೆ. ಇಡೀ ಲೋಕದ ತನುಗಳಿಗೂ ಮೂಗು ಇದೆ. ಅಂತೆಯೇ ಸಕಲ ಪ್ರಾಣಿ ಪಶು ಪಕ್ಷಿ ಜಲಚರ ಉರುಗ ಕೀಟಾದಿಗಳಿಗೂ ಮೂಗು ಇದೆ. ತನುವಿಗಿರುವ ಮೂಗಿನ ವಿಚಾರವೇ ಬೇರೆ; ಇತರೆ ಪ್ರಾಣಿಗಳಿಗಿರುವ ಮೂಗಿನ ವಿಚಾರವೇ ಬೇರೆ.

ತನುವಿನ ಮೂಗಿಗೆ ರೋಗವಿದೆ. ರೋಗವಿದೆಯೆಂದು ಮೂಗಿಗೆ ಗೊತ್ತಿಲ್ಲ. ಮೂಗಿನೊಳಗೊಂದು ಮೂಗು ಇದೆ. ಅದು ನಿರೋಗಿ. ಮೂಗಿನೊಳಗೊಂದು ಮೂಗು ಇದೆಯೆಂದು ರೋಗದ ಮೂಗು ಕಂಡುಕೊಳ್ಳಬೇಕು ಅಥವಾ ನಿರೋಗಿ ಮೂಗು ರೋಗದ ಮೂಗಿಗೆ ತಿಳಿಯುವಂತೆ ತಿಳಿಸಿ ಹೇಳಬೇಕು.

ಬಸವಣ್ಣನವರು ''ನಾಸಿಕದೊಳಗೊಂದು ನಾಸಿಕವಿದ್ದು ಮೂಸಿಸಲೇಕರಿಯರಯ್ಯಾ'' ಎಂದು ನಾಸಿಕವುಳ್ಳವರನ್ನು ಪ್ರಶ್ನಿಸಿದ್ದಾರೆ. ಮೂಗು ಮೂಗಿನೊಳಗಿದ್ದ ಮೂಗನ್ನು ಎಲ್ಲಿಯವರೆಗೆ ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲವೊ ಅಲ್ಲಿಯವರೆಗೆ ಅದು ಮೂಗೇ ಅಲ್ಲ. ಏಕೆಂದರೆ ಅದಕ್ಕೆ ಮೂಸಿಸಲು ಬರುವುದಿಲ್ಲ.

ತನುವಿನಲ್ಲಿದ್ದು ಮೂಸಿಸುವ ಮೂಗು ಮೂಗಲ್ಲವೇ ಎಂದು ಕೇಳಿದರೆ ಹೌದು ಅದು ಮೂಗಲ್ಲವೆಂದೇ ಶರಣರು ಖಚಿತವಾಗಿ ಹೇಳುತ್ತಾರೆ. ಏಕೆಂದರೆ ಮೂಗಿಗೆ ಸುಗಂಧ ದುರ್ಗಂಧದ ಪರಿಚಯ ಮಾತ್ರ ಇದೆಯೇ ಹೊರತು ಅದಕ್ಕೆ ಅರಿವಿನ ಪರಿಮಳದ ಪರಿಚಯವಿಲ್ಲ.

ಮೂಗು ಒಂದು ವಸ್ತುವನ್ನು ಮೂಸಿಸಿ, ಸುಗಂಧವೆಂದು ತಾನು ನುಡಿಯದೆ, ಬಾಯಿಯ ಮೂಲಕ ನುಡಿಸುತ್ತದೆ. ಅದೇ ವಸ್ತುವನ್ನು ನಂತರ ಮೂಸಿಸಿ ದುರ್ಗಂಧವೆಂದು ಬಾಯಿಯ ಮೂಲಕ ನುಡಿಸುತ್ತದೆ. ಅಂದ ಮೇಲೆ ಮೂಗಿಗೆ ಸುಗಂಧ ದುರ್ಗಂಧದ ಪರಿಚಯ ಮಾತ್ರ ಇದೆ. ಆ ವಸ್ತುವಿನ ಸತ್ಯ ಪರಿಚಯವಿಲ್ಲ. ಆ ವಸ್ತುವಿನ ಪರಿಮಳವೂ ಪರಿಚಯಯವಿಲ್ಲ.

ಮೂಗಿನೊಳಗೊಂದು ಮೂಗು ಇದೆ; ಆ ಮೂಗಿಗೆ ಸತ್ಯ ಮಾತ್ರ ಗೊತ್ತಿದೆ. ಹೀಗಾಗಿ ಸತ್ಯವಸ್ತುವನ್ನು ಮಾತ್ರ ಮೂಸಿಸಿ, ಅದಕ್ಕೆ ಪರಿಮಳ ಎಂದು ಹೆಸರಿಟ್ಟು ನುಡಿದಿದೆ.

ಉದಾಹರಣೆಗೆ ಬೆಳಿಗ್ಗೆ ತಿನ್ನುವ ಪದಾರ್ಥ ಸುಗಂಧ. ಅದನ್ನು ಮೂಸಿಸುವ ವಿಧಾನವೇ ಬೇರೆ. ಗರಿಗರಿಯಾಗಿರುವ ಪದಾರ್ಥವನ್ನು ಕಣ್ಣಿನಿಂದ ನೋಡುವ, ಅದನ್ನು ಕೈಗಳಿಂದ ಮುಟ್ಟುವ, ನಾಲಿಗೆಯ ಮೂಲಕ ಹೊರಬರುವ ರಸದ ರಸಾನುಭವ ಬಲು ಆನಂದ. ಆ ಪದಾರ್ಥವನ್ನು ಅವಸರದಿಂದ ಉಣ್ಣುವ ತವಕವನ್ನು ಮೂಗು ತನ್ನ ವಾಸನೆಯಿಂದಾಗಿ ತನುವಿನಲ್ಲಿ ಸೃಷ್ಟಿ ಮಾಡುತ್ತದೆ.

ಉಂಡ ಪದಾರ್ಥ ಸುಗಂಧವೆಂದು ತಿಳಿದ ಮೂಗು ತನುವಿನಲ್ಲಿ ಸಂತೋಷವನ್ನು ಉಂಟು ಮಾಡಿತು. ಸುಗಂಧವೆಂದು ತಿಳಿದು ಬೆಳಿಗ್ಗೆ ಉಂಡ ಪದಾರ್ಥ ತನುವಿಗೆ ಆಹಾರವಾಗಿ, ಪುನಃ ಬೆಳಿಗ್ಗೆ ತನುವಿನ ಮೂಲಕ ಮಲವಾಗಿ ಹೊರಬಂದಾಗ, ಮೂಗು ಅದನ್ನು ದುರ್ಗಂಧವೆಂದು ಸಾರಿ, ಕೈ ಬೆರಳಿಂದ ಮೂಗು ಮುಚ್ಚಿಕೊಳ್ಳುತ್ತದೆ. ಸುಗಂಧವೆಂದು ಸಾರಿದ್ದು ಮೂಗೇ; ದುರ್ಗಂಧವೆಂದು ಸಾರಿದ್ದು ಕೂಡಾ ಮೂಗೇ ಆಗಿದೆ. ಅಂದರೆ ಮೂಗಿಗೆ ಪದಾರ್ಥದಲ್ಲಿ ಸುಗಂಧ ಕಂಡದ್ದು ನಿಜವೋ ಅಥವಾ ದುರ್ಗಂಧ ಎಂದು ಘೋಷಿಸಿದ್ದು ನಿಜವೋ? ಇವೆರಡೂ ಸುಳ್ಳೆ. ಏಕೆಂದರೆ ಪದಾರ್ಥದಲ್ಲಿ ಇವೆರಡರ ಹೊರತಾಗಿ ಮತ್ತೊಂದಿದೆ. ಅದು ಮೂಗಿಗೆ ಗೊತ್ತಿಲ್ಲ. ಏಕೆಂದರೆ ಅದು ವಾಸನೆಯ

ರೋಗದಿಂದ ಬಳಲುತ್ತಲಿದೆ.

ತಾನು ಉಣ್ಣುವ ಬೆಳಗಿನ ಅನ್ನದ ತಟ್ಟೆಯನ್ನು ನಾಯಿ ಹಸು ಹಂದಿಯ ಮುಂದೆ ಇಟ್ಟರೆ ಸೊಗಸಾಗಿ ಉಣ್ಣುತ್ತವೆ. ತಾನು ಉಂಡು ತನ್ನಿಂದ ಹೊರಬಂದ ಮಲವನ್ನು ಕೂಡಾ ಅವು ಇನ್ನೂ ಸೊಗಸಾಗಿ ಉಣ್ಣುತ್ತವೆ. ಬೆಳಿಗ್ಗೆ ಊಟ ಮಾಡಿದ ಇಡ್ಲಿ ವಡೆ ದೋಸೆ ಉಪ್ಪಿಟ್ಟು ಪೂರಿ ಪಲ್ಲೆ ಜೀರ್ಣವಾಗಿ ಗ್ರೈಂಡ್ ಆಗಿ ಹೊರಬಂದ ಪದಾರ್ಥವನ್ನು ಮೃಷ್ಟಾನ್ನವೆಂದು ಪ್ರಾಣಿಗಳು ಮೂಸಿಸಿ ತಿಳಿದವು. ಪ್ರಾಣಿಗಳಿಗೆ ಪದಾರ್ಥ ಪರಿಮಳವಾದರೆ. ಮನುಷ್ಯನಿಗೆ ಪದಾರ್ಥ ಸುಗಂಧವೂ ಹೌದು ದುರ್ಗಂಧವೂ ಹೌದು. ಏಕೆಂದರೆ ಮೂಗು ರೋಗದಿಂದ ಕೂಡಿದೆ. ಹೀಗಾಗಿ ಅದಕ್ಕೆ ಶಾಂತಿಯಿಲ್ಲ. ಮೂಗಿನೊಳಗೊಂದು ಮೂಗು ಇದೆ. ಅದಕ್ಕೆ ಪರಿಮಳ ಮಾತ್ರ ಗೊತ್ತು. ಅದು ಸದಾ ಪರಮಶಾಂತಿಯಿಂದ ಇದೆ.

ಮೂಗಿಗೆ ಮೂಗಿನೊಳಗಿದ್ದ ಮೂಗಿನ ಪರಿಚಯವಾಗಲೇಬೇಕು. ಅದಕ್ಕಾಗಿಯೇ ವಿಷ್ಣು 'ವರಹಾ' ಅವತಾರವನ್ನು ತಾಳಿದ. ಮೂಗಿಗೆ ವಸ್ತುವಿನ ಸತ್ಯ ಗೊತ್ತಿಲ್ಲ. ಮೂಗಿನೊಳಗಿದ್ದ ಮೂಗಿಗೆ ಮಾತ್ರ ವಸ್ತುವಿನ ಸತ್ಯ ಗೊತ್ತಿದೆ. ಅದೇ ಅವತಾರ. ದೇಹದಲ್ಲಿಯೇ ಇದ್ದ ಸತ್ಯದ ಅವತಾರ. ದೇವರ ಅವತಾರ. ದೇವರು ಎಂದರೆ ದೇಹದಲ್ಲಿಯೇ ಇರುವ ಸತ್ಯವೇ ಹೊರತು ಮತ್ತೇನೂ ಅಲ್ಲ. ಸಿದ್ಧರಾಮ ಶಿವಯೋಗಿ ಆತನನ್ನು ಕಪಿಲಸಿದ್ಧ ಮಲ್ಲಯ್ಯ ಎಂದು ಹೆಸರಿಟ್ಟು ಕರೆದಿದ್ದಾನೆ.

**692**

**ನಿಜದ ಪ್ರಭೆ ನಿತ್ಯಪ್ರಕಾಶ ತೋರತ್ತಿದೆ ಎನಗಯ್ಯಾ.**
**ಮೂರ್ತಿಯಾಗಿದೆ ಎನ್ನ ಕಣ್ಣ ಮುಂದೆ ಅಯ್ಯಾ.**
**ಇದರ ಪ್ರಭೆಯ ಕಂಡು ಬೆರಗಾದೆನಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ಕರುಣಿಸಯ್ಯಾ ನಿಮ್ಮ ಧರ್ಮ.**

ನಿರಾಕಾರದಿಂದಲೇ ಆಕಾರ ಸೃಷ್ಟಿಯಾಗಿದೆ. ಆಕಾರಕ್ಕೆ ತಾನು ನಿರಾಕಾರ ಎನ್ನುವುದೇ ಮರೆತು ಹೋಗಿದೆ. ತಾನು ನಿರಾಕಾರವೆಂದು ಗೊತ್ತಾಗುವುದು ಮನುಷ್ಯನಿಗೆ ಮಾತ್ರ. ಅದು ಕೂಡಾ ತಾನು ನಿರಾಕಾರವೆಂದು ಯಾವ ವ್ಯಕ್ತಿ ಸದಾ ಪ್ರಯತ್ನದಲ್ಲಿರುತ್ತಾನೋ ಅವನಿಗೆ ಮಾತ್ರ ನಿರಾಕಾರ ಕಲೆ ಸಿದ್ಧಿಸುತ್ತದೆ.

ಕಾಯ ಆಕಾರವಾಗಿದ್ದರೂ ಕಾಯದ ಸಕಲ ಕಾಯಕಗಳೂ ನಿರಾಕಾರವೇ ಆಗಿವೆ. ಕಣ್ಣು ನೋಡಲು ಕಾಣುತ್ತದೆ. ಆದರೆ ಅದರ ಕಾಯಕ ಮಾತ್ರ ನಿರಾಕಾರ. ನಾಲಿಗೆ ಕಾಣುತ್ತದೆ; ಇದು ಅನುಭವಿಸುವ ರುಚಿ ಕಾಣುವುದಿಲ್ಲ. ನಾಲಿಗೆಯ ಕಾಯಕ ಕೂಡಾ ನಿರಾಕಾರವೇ ಆಗಿದೆ. ಕಿವಿ ಸಾಕಾರ. ಇದರ ಕಾಯಕ ಮಾತ್ರ ನಿರಾಕಾರ. ಚರ್ಮ ಆಕಾರದಿಂದ ಕೂಡಿದೆ. ಇದರ ಕಾಯಕ ಮಾತ್ರ ಸ್ಪರ್ಶ ಅದು ನಿರಾಕಾರ. ಮೂಗು ಸಾಕಾರವಾದರೆ ಮೂಗಿನ ಕಾಯಕ ಮಾತ್ರ ನಿರಾಕಾರ.

ಕಾಯ ಕಾಣುತ್ತದೆ. ಕಾಯವನ್ನು ಆವರಿಸಿದ ಮನವೆಂಬ ಕಾಯ ಕಾಣುವುದಿಲ್ಲ. ಕಾಯದಲ್ಲಿ ಸಂಗಮವಾದ ಘನವೆಂಬ ನಿಜಕಾಯ ಕೂಡಾ ಕಾಣುವುದಿಲ್ಲ. ಈ ಕಾಯದ ನಿಜದ ಪ್ರಭೆ ನಿತ್ಯ ಪ್ರಕಾಶ. ಈ ಪ್ರಕಾಶ, ಕಾಯವನ್ನು ಆವರಿಸಿದ ಮನೋ ಕಾಯಕ್ಕೆ ಮಾತ್ರ ಕಾಣುತ್ತದೆ. ಆದರೆ ಮನಕ್ಕೆ ನಿಜದ ಪ್ರಕಾಶದಲ್ಲಿ ಐಕ್ಯವಾಗಿ ಪ್ರಕಾಶವೇ ತಾನಾಗಬೇಕೆಂಬ ಸದಿಚ್ಛೆ ಹೊಂದಿದ ಮನೋಕಾಯಕ್ಕೆ ಮಾತ್ರ ಈ ಕಾಯಕ ಸಾಧ್ಯ.

ಸಿದ್ಧರಾಮ ಶಿವಯೋಗಿಗಳು ಅಕಾಯಗಳೆರಡೂ ಕೂಡಿ ಮೂರ್ತಿಯಾದ ಕಾಯವನ್ನು ಕಂಡು ಬೆರಗಾಗಿದ್ದಾರೆ. ಅದರ ಪ್ರಭೆಯ ಕಂಡು ಮೈಮರೆತು ಕುಣಿದಾಡಿದ್ದಾರೆ.

ಕಾಯದಲ್ಲಿ ಸಂಗಮವಾದ 'ಶಿವ'ನ ಕಾಯವೂ ಅಕಾಯ. ಕಾಯವನ್ನು ಆವರಿಸಿದ 'ಶಿವೆ'ಯ ಕಾಯವೂ ಅಕಾಯ. ಇವೆರಡೂ ಕಾಯಗಳಿಗೆ ಆಶ್ರಯ ನೀಡಿದ ಕಾಯದ ಪ್ರಭೆಯನ್ನು ಏನೆಂದು ಬಣ್ಣಿಸುವುದು ! ಕಾಯಕ್ಕೆ ತಾನು ಹೀಗೆ ಎಂದು ಗೊತ್ತಾಗದಿದ್ದರೇನಂತೆ ? ಗೊತ್ತಾದ ಕಾಯಕ್ಕೆ ಮಾತ್ರ ಪರಮ ಸುಖ.

ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ : ಎಲ್ಲಿ ನೋಡಿದರೂ ನಿಜದ ಪ್ರಭೆಯ ನಿನ್ನ ನಿತ್ಯ ಪ್ರಕಾಶ ಎನಗೆ ತೋರುತ್ತಲಿದೆ. ಆ ಪ್ರಭೆಯೇ ಮೂರ್ತಿಯಾಗಿ ಎನ್ನ ಕಣ್ಣ ಮುಂದೆ ನಿಂತಿದೆ. ಈ ನಿನ್ನ ಕಾಯದ ಪ್ರಭೆಯ ಕಂಡು ಬೆರಗಾದೆನಯ್ಯಾ.

ಕಪಿಲಸಿದ್ಧ ಮಲ್ಲಿನಾಥಯ್ಯಾ ಸಕಲ ಕಾಯಗಳಿಗೂ ಕರುಣಿಸಯ್ಯಾ ; ಸಕಲ ಕಾಯಗಳಿಗೂ ನಿನ್ನನ್ನು ನೋಡುವ ಭಾಗ್ಯ ಕಲ್ಪಿಸಯ್ಯಾ, ಇದು ನಿನ್ನ ಧರ್ಮ. ಎಂದು ಕಾಯದಲ್ಲಿ ಸಂಗಮವಾದ ಅರಿವಿನ 'ಶಿವ'ನೊಂದಿಗೆ ಮಾತನಾಡಿದ್ದಾರೆ. ಮಾತನಾಡುವ ಈ ಸೂತ್ರವನ್ನು ಸಕಲ ಕಾಯಗಳ ಅಭ್ಯುದಯಕ್ಕಾಗಿ ಅಕ್ಷರಗಳ ಮೂಲಕ ದಾಖಲಿಸಿದ್ದಾರೆ.

**693**

**ನಿಜವ ನಂಬಿದ ಬ್ರಹ್ಮ ಅಜಲೋಕದಲ್ಲಿಪ್ಪ.**
**ಭಜನಾಕ್ಷರದ್ವಯದ ಸಿಂಹಾಸನದ**
**ನೆಲೆಯ ಮೇಲಿಟ್ಟು ಕುರುಹುಗೆಡಬಲ್ಲಡೆ,**
**ತೆರಹಿಲ್ಲ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನಿಜವ ನಂಬಿದ ಬ್ರಹ್ಮ ಅಜಲೋಕದಲ್ಲಿಪ್ಪ:

ಬಸವಣ್ಣನವರು ಕಾಯವನ್ನು ಕೈಲಾಸ ಎಂದು ಕರೆದರೆ, ಸಿದ್ಧರಾಮ ಶಿವಯೋಗಿಗಳು ಕಾಯವನ್ನು ಅಜಲೋಕ ಎಂದು ಕರೆದಿದ್ದಾರೆ. ಕಾಯ, ಕಾಯವನ್ನು ಕೈಲಾಸದಂತೆ ನೋಡಲು ಕಾಯಕ್ಕೆ ಬರುವುದಿಲ್ಲ. ಪುಣ್ಯಕ್ಷೇತ್ರವನ್ನು ಕೈಲಾಸವೆಂದು ಹೆಸರಿಟ್ಟು ಕರೆದು, ಕಾಶಿ ರಾಮೇಶ್ವರ ಶ್ರೀಶೈಲ ಮುಂತಾದ ಕ್ಷೇತ್ರಗಳಿಗೆ ಕಾಲ್ನಡಿಗೆಯಿಂದ ನಡೆಯುತ್ತ, ಕಾಯವನ್ನು ದಂಡಿಸಿ, ಕೈಲಾಸ ಕಂಡೆನೆಂದು ಕಾಯ ಭ್ರಮೆಯಿಂದ ಹಿಗ್ಗುತ್ತದೆ.

ಕಾಯದಿಂದಲೇ ಕಲ್ಲು ಕಟೆದು, ಆ ಕಲ್ಲನ್ನೇ ದೇವರನ್ನಾಗಿಸಿ, ಆ ಕಲ್ಲಿನಿಂದಲೇ ಆಲಯವನ್ನು ಕಟ್ಟಿ; ಕಾಯದಿಂದಲೇ ಕಟ್ಟಿದ ಆಲಯಕ್ಕೆ ಪುಣ್ಯಕ್ಷೇತ್ರವೆಂದು ಹೆಸರಿಸಿ, ಶಿವನಿದ್ದ ಕೈಲಾಸವೆಂದು ಬಣ್ಣಿಸುತ್ತಾ ; ಶಿವನಿದ್ದ ಕಾಯವನ್ನೇ ದಂಡಿಸುತ್ತದೆ.

ಇದು ಕಾಯವನ್ನು ಆವರಿಸಿದ ಮನದ ಕೆಲಸವೆಂದು ಕಾಯಕ್ಕೆ ತಿಳಿಯುವುದಿಲ್ಲ. ಶಿವನಿಗೆ ಆಶ್ರಯ ನೀಡಿ, ಶಿವನೊಂದಿಗೆ ಇರಬೇಕಾದ ಕಾಯ, ಮನದೊಂದಿಗೆ ಗೆಳೆತನ ಮಾಡಿದೆ. 'ಮನ' ಅರಿವೆಂಬ ಶಿವನಿಗೆ ಅರ್ಪಣೆ ಮಾಡಿ 'ಶಿವೆ'ಯೇ ಆಗಬೇಕಾದ ಮನ, ಕಾಯದ ಗೆಳೆತನ ಮಾಡಿದೆ. ಹೀಗಾಗಿ ಕಾಯದಲ್ಲಿಯೇ ಸಂಗಮವಾದ 'ಶಿವ' ಮನಕ್ಕೆ ಸಿಕ್ಕುತ್ತಿಲ್ಲ. 'ಮನ' ಕಾಯವನ್ನು ದಂಡಿಸಿ ಶಿವನನ್ನು ಹುಡುಕುವ ಯತ್ನದಲ್ಲಿದೆ.

ಕಾಯದಿಂದಲೇ ಮಾಡಿದ ಆಲಯವನ್ನು ಕಾಯ ಕೈಲಾಸವೆಂದು ತಿಳಿದಿದೆ. ಕಾಯವನ್ನು ಆವರಿಸಿದ ಮನ ಕಾಯವೇ ಕೈಲಾಸವೆಂಬುದನ್ನು ಮರೆತು ಕಾಯವನ್ನು ಕೈಲಾಸದ ಹಂಬಲಕ್ಕಾಗಿ ದಂಡಿಸುತ್ತದೆ. ಕಾಶಿ ರಾಮೇಶ್ವರ ಶ್ರೀಶೈಲ ತಿರುಪತಿಗೆ ನಡೆಯುತ್ತಾ ಹೋಗಿ, ಕಾಯವನ್ನು ದಂಡಿಸುವುದು ಹುಚ್ಚು ಕೆಲಸವೆಂದು ಕಾಯಕ್ಕೆ ತಿಳಿಯುತ್ತಿಲ್ಲ; ಕಾಯವನ್ನು ಆವರಿಸಿದ ಮನಕ್ಕೂ ತಿಳಿಯುತ್ತಿಲ್ಲ. ವ್ಯಾಟಿಕಾನ್, ಮೆಕ್ಕಾ, ತಿರುಪತಿ, ಕಾಶಿ, ಶ್ರೀಶೈಲ ಎಂದರೆ ಕಾಯಕ್ಕೆ, ಕಾಯವನ್ನು ಆವರಿಸಿದ ಮನಕ್ಕೆ ಬಲು ಇಷ್ಟ. ಕಾಯವೇ ಕೈಲಾಸವೆಂದು, ಅದು ಬ್ರಹ್ಮನಿದ್ದ ಬ್ರಹ್ಮಲೋಕವೆಂದು ಭ್ರಮೆ ಆವರಿಸಿದ ಮನಕ್ಕೆ ಹೊಳೆಯುತ್ತಿಲ್ಲ.

ಮನವೆಂಬ ಭ್ರಮೆ ಬಿಡಿಸಿಕೊಂಡರೆ ಸಾಕು ಕಾಯವೇ ಕೈಲಾಸವೆಂಬುದು ಕಾಯಕ್ಕೂ ಹೊಳೆಯುತ್ತಿಲ್ಲ. ಹುಚ್ಚರ ಸಂತೆಯಲ್ಲಿ ಉಂಡವನೇ ಜಾಣ ಎನ್ನುವಂತೆ, ಕಾಯಗಳಿಗೆ ಕಾಯವೇ ಗುರುವಾಗಿ, ಕಾಯವನ್ನೇ ಶೋಷಣೆಗೆ ಈಡು ಮಾಡಿದೆ. ಕಾಯಗಳಿಗೆ ಕಾಯವೇ ಜಗದ್ಗುರುವಾಗಿದೆ. ಮೌಲ್ವಿ ಪೋಪ್ ಆಗಿದೆ. ಪೂಜಾರಿ ಆಗಿದೆ. ಕಾಯ ಕಾಯವನ್ನೇ ಶೋಷಣೆ ಮಾಡುತ್ತಲಿದೆ.

''ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ ? ಈ ಲೋಕದೊಳಗೆ ಮತ್ತೆ ಅನಂತಲೋಕ ? ಶಿವಲೋಕ, ಶಿವಾಚಾರವಯ್ಯಾ, ಶಿವಭಕ್ತನಿದ್ದ ಠಾವೇ ದೇವಲೋಕ, ಭಕ್ತನಂಗಳವೇ ವಾರಣಾಸಿ, 'ಕಾಯವೆ ಕೈಲಾಸ', ಇದು ಸತ್ಯ, ಕೂಡಲಸಂಗಮದೇವಾ''. ಎಂದು ಬಸವಣ್ಣನವರು ಖಚಿತವಾಗಿ ಹೇಳಿದರು. ಆದರೂ ಕಾಯ ತಾನು ಕೈಲಾಸವೆಂಬುದನ್ನು ತನಗೆ ತಾನೇ ನಂಬಬೇಕಲ್ಲ ? ತಾನು ಹೇಗೆ ಕೈಲಾಸವೆಂಬುದನ್ನು ಕಾಯ ಮತ್ತು ಮನ ಕಾಯದಲ್ಲಿಯೇ ಕಂಡುಕೊಳ್ಳಬೇಕಲ್ಲ ? ಅಥವಾ ಕಾಯದಲ್ಲಿಯೇ ಕೈಲಾಸ ಕಂಡ ಶರಣರನ್ನು ಹುಡುಕುವ ಯತ್ನವಾದರೂ ಕಾಯ ಮಾಡಬೇಕಲ್ಲ? ನಿಜವ ನಂಬಿದ ಬ್ರಹ್ಮ ಅಜಲೋಕದಲ್ಲಿಪ್ಪ. ಕಾಯವೇ ಅಜಲೋಕ; ಅದು ಬ್ರಹ್ಮಲೋಕವೂ ಹೌದು. ಕಾಯವನ್ನು ಆವರಿಸಿದ ಮನವೇ ಬ್ರಹ್ಮ; ಕಾಯವೇ ಬ್ರಹ್ಮಲೋಕ. ಎರಡಕ್ಷರದ 'ಕಾಯ'ವೆಂಬುದೇ ಬ್ರಹ್ಮನಿಗೆ ಸಿಂಹಾಸನ. ಮನ ತಾನು ಕಾಯವೆಂಬ ಭ್ರಮೆಯನ್ನು ಬಿಡಿಸಿಕೊಂಡು ಬ್ರಹ್ಮಲೋಕಕ್ಕೆ ಪಯಣಿಸಲು ಅಣಿಯಾದಾಗ ಕಾಯದ ಕುರುಹು ತಂತಾನೆ ಕೆಡುತ್ತದೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ 'ಶಿವ 'ನ ಸಂಗ ಮಾಡಿದಾಗ ಮನ ಆ ಶಿವನಿಗೆ ಶಿವೆಯಾಗುತ್ತದೆ. ಶಿವ ಶಿವೆಯರು ಒಂದಾಗುತ್ತಾರೆ. ಅರ್ಧನಾರೀಶ್ವರರಾಗುತ್ತಾರೆ. ಅವರಿದ್ದ ಕಾಯ ಕೈಲಾಸವಾಗುತ್ತದೆ. ಇದು ನಿಜ. ನಿಜವ ನಂಬಿದ ಬ್ರಹ್ಮ ಅಜಲೋಕದ ಒಡೆಯನಾಗುತ್ತಾನೆ. ಎರಡಕ್ಷರದ ಕಾಯವೇ ಆತನಿಗೆ ಸಿಂಹಾಸನವಾಗುತ್ತದೆ.

**694**

**ನಿಟಿಲಾ (ಕ್ಷಾರ) ಕಾರ ಕರಣಿಕಂ ಭವಾ ಬಸವ ಬಸವಾ,**
**ನಿಜತತ್ವಜ್ಞಾನ (ತನು) ಬಸವ ಬಸವಾ,**
**ಕಪಿಲಸಿದ್ಧಮಲ್ಲಿನಾಥಯ್ಯಾ ,**
**ಬಸವಣ್ಣನಿಂದ ನಿಮ್ಮ ಪ್ರಾಣಲಿಂಗವ ಕಂಡೆನಯ್ಯಾ.**

ಬಸವಣ್ಣನೆಂದರೆ ಮಹಾಜ್ಞಾನಿ, ಜ್ಞಾನದ ಹಣೆಗಣ್ಣುಳ್ಳಾತ. ಜನನ ಮರಣಗಳನ್ನು ಗೆದ್ದಾತ. ಕಾಯದ ಸಕಲ ಶಿಕ್ಷಣ ಕಲೆಯನ್ನೂ ಬಲ್ಲ ಕರಣಿಕನು ಆತ.

ಸಮರಸ ಸಮತತ್ವ ಸಮಕಲೆಯ ಶಿಕ್ಷಣ ಸಕಲ ತನುಗಳಲ್ಲಿಯೂ ಸಂಗಮವಾಗಿದೆ. ಮನಕ್ಕೆ

ಈ ಕಲೆ ಗೊತ್ತಾಗದ ನಿಮಿತ್ತ ತನುವನ್ನು ಆವರಿಸಿ, ತನುವಿನ ಗೆಳೆತನ ಮಾಡಿ, ತನ್ನದೇ ಆದ ಸುಳ್ಳುಸುಖದ ಶಿಕ್ಷಣವನ್ನು ತನುವಿಗೆ ನೀಡಿ, ತನು ಮನ ಇವೆರಡೂ ಕೂಡಿ ಸುಳ್ಳುಸುಖ ಅನುಭವಿಸುವುದರಲ್ಲಿ ಮಗ್ನವಾಗಿವೆ.

ತನುವಿನಲ್ಲಿ ಅರಿವಿನ ಹಣೆಗಣ್ಣು ಇದ್ದರೂ ಕೂಡಾ ಆ ಕಣ್ಣಿನಿಂದ ನೋಡುವ ಶಕ್ತಿ ತನುವಿಗೆ ಬಾರದೇ ಇರುವುದರಿಂದ, ಮನೋಮಯವಾದ ಕಾಮದ ಕಣ್ಣು ಮಾತ್ರ ತನುವಿಗೆ ಬಳಕೆಯಾಗುತ್ತಿರುವುದರಿಂದ ತನು ಜನನಮರಣಗಳಿಗೆ ಗುರಿಯಾಗಿದೆ.

ತನುವಿನಲ್ಲಿ ತನ್ಮಯವಾದ ನಿಜತತ್ವವನ್ನು ತನು ಬಳಸಿಕೊಳ್ಳಲು ಬಸವಣ್ಣ ಇಡೀ ತನು ಲೋಕಕ್ಕೆ ಸಾರಿದ. ಕಣ್ಣಿಗೆ ಕಣ್ಣಲ್ಲಿರುವ ಹಣ್ಣೆಗಣ್ಣು ಪಾಠಮಾಡುವ ವಿಧಾನವನ್ನು ಇಡೀ ನಾಡಿನ ಕಣ್ಣಿಗೆ ಭೋದಿಸಿದ. ''ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯಾ'' ಎಂದು ಕಣ್ಣುಳ್ಳವರನ್ನು ಪ್ರಶ್ನಿಸಿದ.

ನೋಡುವ ಅಜ್ಞಾನದ ಕಾಮದ ಕಣ್ಣೊಳಗೊಂದು ಅರಿವಿನ ಕಣ್ಣಿದೆ. ನೋಡಿ ಇಡೀ ತನುವಿನಲ್ಲಿ ಕಾಮಸಿಂಚನದವಾದಾಗ, ಹೀಗೆ ನೋಡುವುದು ತರವಲ್ಲವೆಂದು ಅರಿವಿನ ಕಣ್ಣು ಕಾಮದ ಕಣ್ಣಿಗೆ ಪಾಠ ಮಾಡುತ್ತದೆ. ಏಕೆಂದರೆ ನೋಡಿದ್ದು ತಪ್ಪೆಂದು ನೋಡಿದ ಕಣ್ಣಿಗೆ ಗೊತ್ತಾಗುತ್ತದೆ.

ಕಾಮದಿಂದ ನೋಡಿದ ಕಣ್ಣು, ಕಾಮದ ಸುಖದಲ್ಲಿ ಮೈಮರೆತಾಗ, ಅದು ತಪ್ಪು ಎಂದು ಎಚ್ಚರಿಸುವ ಕಣ್ಣೇ ಅರಿವಿನ ಹಣೆಗಣ್ಣು. ಈ ಹಣೆಗಣ್ಣನ್ನು ಪರಿಚಯ ಮಾಡಿಕೊಂಡಾತನೇ ನಿಟಲಾಕ್ಷ. ಶಿವ.

'ಶಿವ ' ಎನ್ನುವವನು ವ್ಯಕ್ತಿಯಲ್ಲ. ಸಕಲ ವ್ಯಕ್ತಿಗಳಲ್ಲಿಯೂ ಸಂಗಮವಾದ ಅವ್ಯಕ್ತ ಶಕ್ತಿ. ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಿವಿನ ಶಕ್ತಿಯನ್ನು ಕಂಡುಕೊಂಡಾಗ ಆ ಮನ ಘನಮನವಾಗುತ್ತದೆ. ಆ ತನುವಿಗೆ ಹಣೆಗಣ್ಣು ಮೂಡುತ್ತದೆ. ಆ ತನುವೇ ನಿಟಲಾಕ್ಷನೆಂದು ಕರೆಯಿಸಿಕೊಳ್ಳುತ್ತದೆ. ತನುವಿನ ಅಜ್ಞಾನವನ್ನು ತನುವಿನ ಜ್ಞಾನದಿಂದಲೇ ಸುಟ್ಟು ಬೂದಿ ಮಾಡುತ್ತದೆ.

ತನುವಿನಲ್ಲಿ ತನ್ಮಯವಾದ ಅರಿವಿನ ಸೂತ್ರವನ್ನು ಸಕಲ ತನುಗಳ ಬಳಕೆಗಾಗಿ ಬರೆದಿಟ್ಟ ಮಹಾ ಕರಣಿಕ ಬಸವಣ್ಣ. ತನುವಿನ ಜನನ ಮರಣದ ಬಾಧೆಯನ್ನು ಕಳೆದಾತ ಬಸವಣ್ಣ. ಕಲ್ಯಾಣ ಬಯಸಿದ ಕಾಯ ಬಸವಣ್ಣ ಬರೆದಿಟ್ಟ ಸೂತ್ರಗಳನ್ನು ನೋಡಿ ಬಸವ ಬಸವಾ ಎಂದು ಸ್ತುತಿಸಿದೆ.

ನಿಜತತ್ವಜ್ಞಾನ ತನು ಬಸವ ಬಸವಾ: ತನುವಿನಲ್ಲಿ ತನ್ಮಯವಾದ 'ಜ್ಞಾನ'ವನ್ನು ಪುರಾತರು 'ಶಿವ' ಎಂದು ಕರೆದರು. 'ಅಲ್ಲಾ' ಎಂದು ಕರೆದರು. 'ಗಾಡ್' ಎಂದು ಕರೆದರು. ಸಿದ್ಧರಾಮ ಶಿವಯೋಗಿಗಳು 'ಬಸವ' ಎಂದು ಹೆಸರಿಟ್ಟು ಕರೆದರು. ತನುವಿನಲ್ಲಿ ತನ್ಮಯವಾದ ಜ್ಞಾನಕ್ಕೆ ಜ್ಞಾನಿಗಳು ತಮಗೆ ಪ್ರಿಯವಾದ ಸಾವಿರಾರು ಹೆಸರಿನಿಂದ ಕರೆದಿದ್ದಾರೆ. ಯಾವ ಹೆಸರಿನಿಂದ ಕರೆದರೇನು? ಮನ ತನುವಿನಲ್ಲಿಯೇ ತನ್ಮಯವಾದ ಜ್ಞಾನಕ್ಕೆ ಶರಣು ಹೋಗಿ ಶರಣಾಗತನಾಗಬೇಕು. ಆ ಜ್ಞಾನವೇ ತಾನಾಗಬೇಕು.

ಬಸವಣ್ಣನಿಂದ ನಿಮ್ಮ ಪ್ರಾಣಲಿಂಗವ ಕಂಡೆನಯ್ಯಾ: ತನುವಿನಲ್ಲಿಯೇ ತನ್ಮಯವಾದ ಜ್ಞಾನಕ್ಕೆ ಕಪಿಲಸಿದ್ಧಮಲ್ಲಯ್ಯ ಎಂದು ಹೆಸರಿಟ್ಟು ಕರೆದು ಆತನೊಂದಿಗೆ ಮಾತನಾಡುವ ವಿಧಾನವನ್ನು ಓದುಗರಿಗೆ ಸೂತ್ರರೂಪದಲ್ಲಿ ವಿವರಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**695**

**ನಿತ್ಯ ಪ್ರಸಾದವನು ತಥ್ಯಮಾಡ್ಯೆ ಗುರುವೆ**
**ಭಕ್ತಿತ್ರಯದ ನಿತ್ಯನಿರುಪಮ**
**ಕಪಿಲಸಿದ್ಧ ಮಲ್ಲೇಶ್ವರನೆ,**

**ಭಕ್ತಿಪಥವನೆ ಕುಡುವುದೊಲಿದು ತಂದೆ.**

ಉಂಡ ಅನ್ನವನ್ನು ದೇಹ ಹೇಗೆ ಜೀರ್ಣ ಮಾಡಿಕೊಳ್ಳುವುದೋ, ಹಾಗೆಯೇ ದೇಹಕ್ಕೆ ಬಡಿದ ಶಬ್ದ, ಸ್ಪರ್ಶ, ರುಚಿ, ವಾಸನೆ, ನೋಡಲ್ಪಡುವ ದೃಶ್ಯವನ್ನು ಸಹ ಜೀರ್ಣ ಮಾಡಿಕೊಳ್ಳುವ ಶಕ್ತಿಯನ್ನು ದಯಪಾಲಿಸು ಗುರುದೇವನೆ ಎಂದು ಸಿದ್ಧರಾಮ ಶಿವಯೋಗಿಗಳು ಅರಿವೆಂಬ ಗುರುದೇವನನ್ನು ಬೇಡಿಕೊಂಡಿದ್ದಾರೆ.

ಪ್ರತಿದಿನ ಉಂಡ ಅನ್ನವನ್ನು ಪ್ರಸಾದ ಮಾಡಿಕೊಳ್ಳುವ ಶಕ್ತಿ ದೇಹಕ್ಕೆ ಹೇಗಿದೆಯೋ ಹಾಗೆಯೇ ನೋಡಿದ್ದೆಲ್ಲವನ್ನು ಪ್ರಸಾದ ಮಾಡಿಕೊಳ್ಳುವ ಶಕ್ತಿ ಕಣ್ಣಿಗಿಲ್ಲ; ಕೇಳಿದ್ದೆಲ್ಲವನ್ನು ಪ್ರಸಾದವನ್ನಾಗಿಸಿಕೊಳ್ಳುವ ಶಕ್ತಿ ಕಿವಿಗಿಲ್ಲ; ರುಚಿಸಿದ್ದನ್ನು ಪ್ರಸಾದ ಮಾಡಿಕೊಳ್ಳುವ ಶಕ್ತಿ ನಾಲಿಗೆಗಿಲ್ಲ; ಮೂಸಿಸಿ, ಸ್ಪರ್ಶಿಸಿದ್ದನ್ನು ಪ್ರಸಾದ ಮಾಡಿಕೊಳ್ಳುವ ಶಕ್ತಿ ಮೂಗು ಮತ್ತು ಚರ್ಮಕ್ಕಿಲ್ಲ.

ನಿತ್ಯ ಉಂಡುದನ್ನು ಕರಗಿಸಿಕೊಳ್ಳುವ ಕ್ರಿಯೆಯಲ್ಲಿ ದೇಹ ತೊಡಗಿದಂತೆ, ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ತೊಡಗಿಲ್ಲ. ನೋಡಿದ ದೃಶ್ಯವನ್ನು, ಕೇಳಿದ ಶಬ್ದವನ್ನು, ಮೂಸಿಸಿದ ವಾಸನೆಯನ್ನು, ಸ್ಪರ್ಶಿಸಿದ ಸ್ಪರ್ಶವನ್ನು, ರುಚಿಸಿದ ರುಚಿಯನ್ನು ಪ್ರಸಾದ ಮಾಡಿಕೊಳ್ಳಬೇಕೆಂಬ ಕಿಂಚಿತ್ ಬಯಕೆಯೂ ಅವುಗಳಿಗಿಲ್ಲ.

ಲಕ್ಷ್ಮಣನನ್ನು ವಧಿಸಲು ಬಂದ ರಾವಣ ಸೀತೆಯನ್ನು ನೋಡಿ ಕೆಟ್ಟ. ಸೀತೆಯ ರೂಪ ಕಣ್ಣಲ್ಲಿ ಪ್ರಸಾದವಾಗದೆ ರಾವಣನಲ್ಲಿ ಉಳಿದು ಇಡೀ ರಾಜ್ಯವನ್ನು ನಾಶ ಮಾಡಿತು. ಇಡೀ ದೇಹವನ್ನು ದೇಹಕ್ಕೆ ಸಂಬಂಧಪಟ್ಟ ಬಂಧು ಬಳಗವನ್ನು ನಾಶ ಮಾಡಿತು. ಆದರೂ ರಾವಣನ ಕಣ್ಣಲ್ಲಿ ಸಂಗ್ರಹವಾದ ಸೀತೆಯ ರೂಪು ನಾಶವಾಗಲಿಲ್ಲ.

ಮಡಿವಾಳ ನುಡಿದ ಶಬ್ದ ಮರ್ಯಾದಾ ಪುರುಷ ರಾಮನ ಕಿವಿಯಲ್ಲಿ ತಾಂಡವ ನೃತ್ಯ ಮಾಡಿತು. ತುಂಬು ಗರ್ಭಿಣಿ ಸೀತೆಯನ್ನು ಶ್ರೀರಾಮ ಕಾಡಿಗಟ್ಟಿದ. ಇಡೀ ರಾಜ್ಯ ಮಮ್ಮಲ ಮರುಗಿತು. ಆದರೂ ಮಡಿವಾಳ ನುಡಿದ ಶಬ್ದ ಶ್ರೀರಾಮನ ಕಿವಿಯಲ್ಲಿ ಜೀರ್ಣವಾಗದೆ ಹಾಗೆಯೇ ಉಳಿಯಿತು.

ದ್ರೌಪದಿಯ ನಗು ದುರ್ಯೋಧನನ ವಜ್ರಶರೀರವನ್ನು ಛಿದ್ರ ಛಿದ್ರಗೊಳಿಸಿತು. ಯುದ್ಧದಲ್ಲಿ ಹದಿನೆಂಟು ಅಕ್ಷೋಹಿಣಿ ಸೈನ್ಯ ಸತ್ತು ಹೋಯಿತು. ನೂರುಜನ ಸಹೋದರರು ಬಂಧು ಬಾಂಧವರು ಸತ್ತು ಹೋದರು. ಆದರೂ ದ್ರೌಪದಿಯ ನಗು ದುರ್ಯೋಧನನ ಕಿವಿಯಲ್ಲಿ ತಾಂಡವ ನೃತ್ಯ ಮಾಡಿತು. ಭೀಮನ ಗಧೆಯಿಂದ ದುರ್ಯೋಧನನ ಎರಡು ತೊಡೆಗಳು ಮುರಿದು ಹೋದವು. ಆದರೂ ನಗುವಿನ ಶಬ್ದ ಮುರಿದ ತೊಡೆಗಳ ಮೇಲೆ ದ್ರೌಪದಿಯನ್ನು ಕೂಡಿಸಿಕೊಂಡು ಪ್ರತೀಕಾರ ತೀರಿಸಿಕೊಳ್ಳಲು ಹಾತೊರೆಯುತ್ತಿತ್ತು.

ಉಂಡ ಅನ್ನ ಜೀರ್ಣವಾಗದಿದ್ದರೆ ದೇಹಕ್ಕೆ ತೊಂದರೆಯಿಲ್ಲ. ತನಗೆ ತಾನೆ ಮೂಗು, ಬಾಯಿ, ಗುದದ್ವಾರದಿಂದ ಹೊರಬಂದು ದೇಹದ ತೊಂದರೆ ನಿವಾರಣೆಯಾಗುತ್ತದೆ. ಆದರೆ ಕೇಳಿದ ಶಬ್ದ, ನೋಡಿದ ದೃಶ್ಯ, ಮುಟ್ಟಿದ ಸ್ಪರ್ಶ, ರುಚಿಸಿದ ರುಚಿ, ಮೂಸಿಸಿದ ವಾಸನೆಯನ್ನು ಹೇಗೆ ಹೊರಗೆ ತಳ್ಳಬೇಕೆಂಬ ಉಪಾಯ ದೇಹಕ್ಕೂ ಗೊತ್ತಿಲ್ಲ ಆಯಾ ಇಂದ್ರಿಯಗಳಿಗೂ ಗೊತ್ತಿಲ್ಲ. ಗೊತ್ತು ಮಾಡಿಕೊಂಡು ತಾನು ಪರಮಸುಖಿಯಾಗಬೇಕೆಂಬ ಚಿಂತೆ ಕೂಡಾ ಯಾವ ದೇಹದಲ್ಲಿಯೂ ಕಂಡು ಬರುತ್ತಿಲ್ಲ.

ಬುದ್ಧ ಮಹಾವೀರ ಕ್ರಿಸ್ತ ಕ್ರಿಷ್ಣ ಪೈಗಂಬರ ಬಸವಾದಿ ಶರಣರು ದಾಸವರೇಣ್ಯರು ಈ ನಾಡಿನ ಜ್ಞಾನಿಗಳು ಮಾತ್ರ ಚಿಂತಿಸಿದರು. ಹಲವಾರು ಸೂತ್ರರೂಪದ ವಚನಗಳನ್ನು ಮುಂಡಿಗೆಗಳನ್ನು ಕೀರ್ತನ, ತತ್ವಪದಗಳನ್ನು ಭಗವದ್ಗೀತೆ ಬೈಬಲ್ ಕುರಾನ್‌ಗಳನ್ನು ಬರೆದರು.

ಜ್ಞಾನಿಗಳು ಬರೆದ ಸೂತ್ರ ದೇಹಗಳಿಗೆ ಬಳಕೆಯಾಗಲೇ ಇಲ್ಲ. ಬರೆದವರನ್ನು ಆರಾಧಿ

ಸಿದರು. ಅವರಿಗೆ ಬೃಹತ್ ಆಲಯಗಳು ನಿರ್ಮಾಣವಾದವು. ಜ್ಞಾನಿಗಳು ದೇವರಾದರು. ಅವರ ಹೆಸರಿನಲ್ಲಿ ಧರ್ಮ ನಿರ್ಮಾಣವಾದವು. ದೇಹ ಮತ್ತಷ್ಟು ಅಜೀರ್ಣಕ್ಕೆ ಒಳಗಾಯಿತು. ದೇಹದಲ್ಲಿಯ ಸತ್ಯ ದೇಹದಲ್ಲಿಯೇ ಉಳಿಯಿತು.

ದೇಹವನ್ನು ಮನವೆಂಬ ಅಜ್ಞಾನ ಆವರಿಸಿದೆ. ದೇಹದಲ್ಲಿ ಜ್ಞಾನ ಸಂಗಮವಾಗಿದೆ. ದೇಹವನ್ನು ದೇಹದ ಇಂದ್ರಿಯಗಳ ಮೂಲಕ ಅಜ್ಞಾನಕ್ಕೆ ಕರೆದುಕೊಂಡು ಹೋಗುವ ಮನ, ದೇಹದಲ್ಲಿ ಸಂಗಮವಾದ ಜ್ಞಾನಕ್ಕೆ ಶರಣು ಹೋಗಬೇಕು. ಸಿದ್ಧಾರ್ಥ ಬುದ್ಧನಿಗೆ ಶರಣು ಹೋದ. ಬುದ್ಧನೇ ತಾನಾದ.

'ಬೌದ್ಧ'ನಾಗುವುದು ಎಂದರೆ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡಂತೆ. 'ಬುದ್ಧ'ನಾಗುವುದು ಎಂದರೆ ದೇಹದ ಸಕಲ ಅಜ್ಞಾನವನ್ನು ಕಳೆದುಕೊಂಡು ಜ್ಞಾನಿಯಾದಂತೆ. ಸಿದ್ಧರಾಮ ಶಿವಯೋಗಿಗಳು ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನೊಂದಿಗೆ ಮಾತನಾಡುತ್ತಾ : ''ಗುರುದೇವನೇ, ಈ ದೇಹಕ್ಕೆ ನಿತ್ಯ ಬಡಿಯುವ ಅಜ್ಞಾನವನ್ನು ಪ್ರಸಾದ ಮಾಡಿಕೊಂಡು ಉಣ್ಣುವ ಶಕ್ತಿ ನಿನಗೆ ಮಾತ್ರ ಇದೆ. ನೀನು ಭಕ್ತಿ ತ್ರಯದ ನಿರುಪಮನು. ಕಪಿಲಸಿದ್ಧ ಮಲ್ಲೇಶ್ವರನು ಕೂಡಾ ನೀನೇ ಆಗಿರುವಿ. ಎನಗೆ ಭಕ್ತಿ ಪಥವನೆ ಕರುಣಿಸು ತಂದೆ. ನನ್ನನ್ನು ಹಡೆದ ಜ್ಞಾನಿ ನೀನು. ನಿನ್ನನ್ನು ಮರೆತ ಅಜ್ಞಾನಿ ನಾನು. ಪುನಃ ನನಗೆ ನಿನ್ನನ್ನು ನೆನೆಯುವಂತೆ ಮಾಡು ಗುರುದೇವನೆ''.

**696**

**ನಿತ್ಯ ಲಿಂಗಾರ್ಚನೆಯ ಅತ್ಯಂತದಿಂ ಮಾಡಿ**
**ಮತ್ತೆ ಸಮತೆಯ ಕೈಯಲನುಜ್ಞೆ ತೊಡೆದು**
**ನಿತ್ಯಗುರು ಶ್ರೀ ಕಪಿಲಸಿದ್ಧ ಮಲ್ಲೇಶ್ವರನ**
**ಅರ್ಚಿಸುವ ಭಕ್ತರಿಗೆ ಭವ ದೂರವೈ.**

ಅರಿವಿನ ಆಚರಣೆಯೇ ಲಿಂಗಾರ್ಚನೆ. ಈ ಆಚರಣೆ ಯಾರಿಗೂ ಕಾಣುವುದಿಲ್ಲ. ಆಚರಣೆಯಲ್ಲಿ ನಿರತರಾದವರಿಗೆ ಮಾತ್ರ ಕಾಣುತ್ತದೆ. ಅಗೋಚರದ ಅರಿವಿನ ಆಚರಣೆಯನ್ನು ಶರಣರು ಸಮತೆಯ ಆಚರಣೆ ಎಂದು ಕೂಡಾ ಕರೆದರು.

ಈ ಆಚರಣೆಯಲ್ಲಿ ತೊಡುಗುವವನು ತನ್ನ ಅರಿವಿನ ಮೇಲೆ ಭಕ್ತಿ ಮಾಡುತ್ತಾ, ಆ ಅರಿವಿಗೆ ಸಂಪೂರ್ಣ ಶರಣು ಹೋಗಿ ಶರಣಾಗತನಾಗಿ, ಆ ಅರಿವಿನ ಮಾತು ಮಾತ್ರ ಕೇಳಬೇಕು. ಅರಿವನ್ನೇ ಗುರುದೇವನನ್ನಾಗಿ ಮಾಡಿಕೊಂಡು, ಮನ ಆ ಗುರುದೇವನಿಗೆ ಗುಲಾಮನಾಗಬೇಕು.

ಗುಲಾಮನೆನ್ನುವವನಿಗೆ ಸ್ವಾತಂತ್ರ್ಯವಿಲ್ಲ. ಮಾಲೀಕ ಹೇಳಿದ್ದನ್ನು ಚಾಚೂ ತಪ್ಪದೆ ಪಾಲಿಸುವುದೇ ಗುಲಾಮನ ಕೆಲಸ. ಒಂದಿಷ್ಟೂ ಮನದಲ್ಲಿ ಕೂಡಾ ತಾತ್ಸಾರ ತಾಳದೆ, ಗುರುವಿನ ಆದೇಶವನ್ನು ಗುಲಾಮ ಪಾಲಿಸಬೇಕು.

ತಾನು ಹೇಗೆ ನೋಡಿದೆನೆಂದು ಕಣ್ಣುಳ್ಳ ಸಕಲ ತನುಗಳಿಗೂ ಗೊತ್ತಾಗುತ್ತದೆ. ನೋಡಿದ ಹಾದರದ ನೋಟ ತನುವಿಗೆ ಸುಖವಾಗಬೇಕಾದರೆ, ಅದು ತಪ್ಪೆಂದು ನೋಡಿದ ತನಗೆ ಯಾರು ಹೇಳಿದರು?

ಹಾದರದಿಂದ ನೋಡಿದ ಮನವೂ ಅಗೋಚರ; ನೋಡಿದ ನೋಟ ತಪ್ಪು ಎಂದು ಹೇಳಿದ ಅರಿವಿನ ದೃಶ್ಯವೂ ಅಗೋಚರ. ಈ ಎರಡೂ ಅಗೋಚರ ಕೆಲಸಗಳು ಕಣ್ಣಲ್ಲಿಯೇ ನಡೆಯುತ್ತದೆ. ಹಾದರ ನೋಟ ಬಿಟ್ಟು ಅರಿವಿನ ನೋಟಕ್ಕೆ ಮೊರೆಹೋಗುವ ದೃಶ್ಯವೇ ಅಗೋಚರದ ಆಚಾರ.

ಅಂಗದ ಮೇಲೆ ಲಿಂಗವಿಟ್ಟುಕೊಂಡು, ಅದಕ್ಕೆ ನೀರು ಹಾಕಿ ತೊಳೆದು, ಆ ನೀರನ್ನು

ಮೈತುಂಬಾ ಹೂಸಿಕೊಂಡು, ಪತ್ರಿ ಪುಷ್ಪ ವಿಭೂತಿ ಧಾರಣೆ ಮಾಡಿ, ಧೂಪ ದೀಪದಿಂದ ಬೆಳಗಿ, ಸಕಲರಿಗೂ ಗೋಚರಕ್ಕೆ ಬರುವಂತೆ ಮೂರು ವೇಳೆ ಪೂಜಿಸಿದರೆ ಕಣ್ಣಿನ ಹಾದರ ಉದರಿ ಬೀಳಲು ಸಾಧ್ಯವೆ ?

ಸಕಲರಿಗೂ ಗೋಚರಕ್ಕೆ ಬರುವಂತೆ ಮಸೀದಿಗೆ ಹೋಗಿ ನಮಾಜು ಮಾಡಿದರೆ ಕಣ್ಣಲ್ಲಿ ಹರಿದಾಡುವ ಅಜ್ಞಾನ ತೊಲಗುವುದೆ? ದೇವಸ್ಥಾನ ಪುಣ್ಯಕ್ಷೇತ್ರಗಳಿಗೆ ಹೋಗಿ ರುದ್ರಾಭಿಷೇಕ ಕಲ್ಯಾಣೋತ್ಸವ ಕುಂಕುಮಾರ್ಚನೆ ಮಾಡಿದರೆ ಕಣ್ಣಿನ ಹಾದರ ನಿಲ್ಲಲು ಸಾಧ್ಯವೆ ?

ನೋಡಿದಾಗೊಮ್ಮೆ ನೋಡಿದ ನೋಟಕ್ಕೆ ನೋಟದ ಹಾದರ ಗೊತ್ತು ಮಾಡುವ ಗುರುದೇವನ ನೋಟವೊಂದು ಕಣ್ಣಲ್ಲಿಯೇ ಇದೆ. ಗುರುದೇವನ ನೋಟದಿಂದ ನೋಡಬೇಕೆಂದು ಹಾದರದಿಂದ ನೋಡುವ ನೋಟಕ್ಕೆ ಅನ್ನಿಸಬೇಕು. ತನ್ನ ಹಾದರದ ನೋಟ ತನಗೆ ಛೀ ಅನ್ನಿಸಬೇಕು. ಇದು ಯಾವಾಗ ನೋಟದಲ್ಲಿಯೇ ಘಟಿಸುತ್ತದೆಯೋ ಅಂದೇ ಹಾದರದ ನೋಟ ಅರಿವಿನ ನೋಟಕ್ಕೆ ಶರಣಾಗುತ್ತದೆ.

ಈ ಎರಡೂ ನೋಟಗಳು ಕಣ್ಣಲ್ಲಿಯೇ ಘಟಿಸುವುದರಿಂದ ಇದು ಅಗೋಚರ. ಅಗೋಚರದ ಹಾದರದ ನೋಟ ತನಗೆ ಹೇಗೆ ಗೊತ್ತಾಗುವುದೋ ಹಾಗೆಯೇ ಅಗೋಚರದ ಅರಿವಿನ ನೋಟವು ಕೂಡಾ ತನಗೆ ಗೊತ್ತಾಗುತ್ತದೆ. ಆಗ ಹಾದರದ ನೋಟ ಬಿಟ್ಟು ಅರಿವಿನ ನೋಟವನ್ನು ಹಿಡಿಯಬೇಕು. ಒಂದನ್ನು ಬಿಡಬೇಕು; ಒಂದನ್ನು ಹಿಡಿಯಬೇಕು.

ಅಜ್ಞಾನದ ನೋಟವನ್ನು ಬಿಟ್ಟು ಜ್ಞಾನದ ನೋಟವನ್ನು ಹಿಡಿಯಬೇಕು. ಇವೆರಡೂ ಅಗೋಚರದ ಕೆಲಸಗಳೇ ಆಗಿವೆ.

ಗೋಚರಕ್ಕೆ ಬರುವ ಪೂಜೆ ಪ್ರಾರ್ಥನೆ ಉರುಳು ಸೇವೆ ಪಲ್ಲಕ್ಕಿ ಸೇವೆ ಲಿಂಗಾರ್ಚನೆ ರುದ್ರಾಭಿಷೇಕ ಕಲ್ಯಾಣೋತ್ಸವ ದೀಡನಮಸ್ಕಾರ ಜ್ಯೋತಿ ಹೊರುವುದು, ಮಕ್ಕಾ ಮದೀನ ವ್ಯಾಟಿಕಾನ್ ಶ್ರೀಶೈಲ ಕಾಶಿ ರಾಮೇಶ್ವರಕ್ಕೆ ಹೋಗಿ ದರ್ಶನ ಮಾಡಿಕೊಳ್ಳುವ ಸಂಪ್ರದಾಯವನ್ನು ಮನ ತನುವಿಗೆ ಹೇರಿ ಅಜ್ಞಾನದ ಕೆಲಸದಲ್ಲಿ ಸುಖಿಸುತ್ತಾ ತನುವಿನೊಂದಿಗೆ ಹಾದರ ಮಾಡುತ್ತಾ ಅಸಮ ಕೆಲಸದಲ್ಲಿ ಭಾಗಿಯಾಗಿದೆ.

ಹಾದರದ ನೋಟ ಅರಿವಿನ ನೋಟಕ್ಕೆ ಜಾರಿದರೆ ಸಾಕು ; ಜನನ ಮರಣಗಳ ಬಾಧೆಯಿಂದ ತಂತಾನೆ ದೂರವಾಗುತ್ತದೆ. ಅಜ್ಞಾನ ತೊಡೆದು ಸಮತೆಯ ಜ್ಞಾನ ತನುವಿನ ಮೂಲಕ ತಂತಾನೆ ಹೊರ ಚಿಮ್ಮುತ್ತದೆ. ಅರಿವನ್ನೇ ಗುರುದೇವನೆಂದು ಅರ್ಚಿಸಿ ಪೂಜಿಸುವ ಭಕ್ತಮನಕ್ಕೆ ಜನನವಿಲ್ಲ ಮರಣವಿಲ್ಲ.

**697**

**ನಿಧಾನವ ಕಂಡರೆ ಜಲಗ ತೊಳೆಯಲೇಕೆ ?**
**ಮಾಣಿಕ್ಯ ದೊರಕೊಂಡರೆ ಕೊಳ್ಳಿಯ ಬೆಳಕೇಕೆ ?**
**ಕಾಮಧೇನು ಕರೆವರೆ ಕರುವಿನ ಹಂಗೇಕೆ ?**
**ಎಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು**
**ತಮ್ಮ ನಿಜರೂಪವ ತೋರಿದ ಬಳಿಕ**
**ಆರಾಧನೆಯೆಂಬ ಉಪಚಾರದ ಹಂಗೇಕೆ ಹೇಳಾ.**

ಅರಿವು ದೇಹದ ಸಂಪತ್ತು. ಆ ಅರಿವೇ ಗುರುದೇವನಾಗಿ ದೇಹವನ್ನು ಆವರಿಸಿದ ಮನವನ್ನು ಕೈ ಮಾಡಿ ಕರೆಯುತ್ತಲಿದೆ. ಆದರೂ ಮನ ತನ್ನದೇ ಆದ ಅರಿವನ್ನು ತಾನೇ ಬಳಕೆ ಮಾಡಲು

ಬಾರದಂತಹ ದುಃಸ್ಥಿತಿಯನ್ನು ತಾನೇ ತಂದುಕೊಂಡಿದೆ.

ಚಿನ್ನದ ಬೆನ್ನುಬಿದ್ದು ಹಗಲಿರುಳು ಎನ್ನದೆ ಚಿನ್ನಕ್ಕಾಗಿ ಚಿನ್ನದ ಸಂಗ್ರಹಕ್ಕಾಗಿ ದುಡಿಯುತ್ತಲಿದೆ. ದುಡಿದು ದುಡಿದು ದೇಹದ ಆಯುಷ್ಯ ಮುಗಿದರೂ ಮನಕ್ಕೆ ಚಿನ್ನದ ಆಸೆ ಕಡಿಮೆಯಾಗುವುದಿಲ್ಲ. ಚಿನ್ನಕ್ಕಾಗಿ ದೇಹಕ್ಕೆ ಮನ ಕಳ್ಳನ ಹಣೆಪಟ್ಟಿ ಕಟ್ಟುತ್ತದೆ. ಜಲಗ ತೊಳೆಯುವ ಕೆಲಸಕ್ಕೂ ಹಚ್ಚುತ್ತದೆ.

ತಳದೊಂದಿಗೆ ಪುಟ್ಟಿಯಲ್ಲಿ ಜಲ ತಂದು, ಅದನ್ನು ಜಾನಿಸಿ, ಇಡೀ ದಿನ ಚಿನ್ನದ ಚೂರು ಹುಡುಕುವ ಕೆಲಸದಲ್ಲಿ ಮನ ತನುವನ್ನು ತೊಡಗಿಸುತ್ತದೆ. ನೀರಿನೊಂದಿಗೆ ಜಾನಿಸಿ ಜಾನಿಸಿ ಮರಳನ್ನು ಚೆಲ್ಲುವಾಗು ಮಿಣುಕುವ ಚಿಕ್ಕ ಲೋಹದ ತುಣುಕು ಕಂಡರೆ ಸಾಕು ತನು ರೋಮಾಂಚನಗೊಂಡು ಹಸನ್ಮುಖಿಯಾಗುತ್ತದೆ. ಅದೊಂದು ಹಳದಿ ಲೋಹ ಎಂದು ಸಂಪದ್ಭರಿತ ಅರಿವು ತನುವಿನಲ್ಲಿಯೇ ತನ್ಮಯವಾಗಿ ಮನಕ್ಕೆ ಹೇಳುತ್ತಿದ್ದರೂ ಮನ ತನುವಿನೊಂದಿಗೆ ಚಿನ್ನಕ್ಕಾಗಿ ಜಲಗ ತೊಳೆಯುವ ಕಾಯಕದಲ್ಲಿ ಮುಂದುವರೆಯುತ್ತದೆ.

ತಾನೇ ಸೃಷ್ಟಿ ಮಾಡಿ, ಹೆಸರಿಸಿದ ಚಿನ್ನಕ್ಕೆ ತಾನೇ ಮರುಳಾಗಬೇಕೆ ಹೇಗೆ ಎನ್ನುವುದು ಮನಕ್ಕೆ ಹೊಳೆಯುತ್ತಿಲ್ಲ. ಹೀಗಾಗಿ ಮನ ಒಂದು ತನುವನ್ನು ಜಲಗ ತೊಳೆದು ಚಿನ್ನ ಹುಡುಕುವ ಕೆಲಸದಲ್ಲಿ ತೊಡಗಿಸಿದರೆ, ಮತ್ತೊಂದು ತನುವನ್ನು ಮನ ರಾಜನಾಗಿಸಿ ಮತ್ತೊಬ್ಬ ರಾಜನನ್ನು ಚಿನ್ನಕ್ಕಾಗಿ ಯುದ್ಧ ಮಾಡಿ ಕೊಲ್ಲುವ ಕೆಲಸಕ್ಕೆ ಹಚ್ಚಿದೆ. ಚಿನ್ನದ ಆಸೆಗಾಗಿ ಮನ ತನುವನ್ನು ಸೇನೆ, ಸೇನಾಧಿಪತಿ ಪ್ರಧಾನಿಯನ್ನಾಗಿ ಮಾಡಿ, ಪ್ರಾಣ ಹೋಗುವವರೆಗೂ ಯುದ್ಧಮಾಡಿ ತನುವನ್ನು ಸಾಯಿಸುತ್ತದೆ.

ತನುವಿನಲ್ಲಿಯೇ ತನ್ಮಯವಾದ ಅರಿವಿನ ಸಂಪತ್ತು; ತನುವನ್ನು ಆವರಿಸಿದ ಮನಕ್ಕೆ ಹೊಳೆಯುವುದೇ ಇಲ್ಲ. ಮರ ಹೇಗೆ ಹೂ ಕಾಯಿ ಹಣ್ಣನ್ನು ಬಿಟ್ಟು ತನಗೆ ತಾನೆ ಆರು ಋತುಗಳಲ್ಲಿ ಫಳಫಳನೆ ಹೊಳೆಯುತ್ತದೆಯೋ ಹಾಗೆಯೇ ತನುವಿನಲ್ಲಿ ಕೂಡಾ ಅದ್ಭುತವಾದ ಅರಿವಿನ ಸಂಪತ್ತು ಇದೆ. ಅದನ್ನು ಬಳಸಿಕೊಳ್ಳಲು ಮನಕ್ಕೆ ಸಾಧ್ಯವಾಗುತ್ತಿಲ್ಲ.

ಸಿದ್ಧರಾಮ ಶಿವಯೋಗಿಗಳು ತನುವಿನ ಸಂಪತ್ತನ್ನು ನಿಧಾನ, ಮಾಣಿಕ್ಯ, ಕಾಮಧೇನು ಎಂದು ಕರೆದಿದ್ದಾರೆ. ಇದೆಲ್ಲ ತನುವಿನಲ್ಲಿಯೇ ಇದ್ದರು ಕೂಡಾ ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿ ತನ್ಮಯವಾದ ಅರಿವಿನ ನಿಜರೂಪ ಗೊತ್ತಾಗುತ್ತಿಲ್ಲ. ತನುವಿನಲ್ಲಿ ತನ್ಮಯವಾದ ಅರಿವಿಗೆ ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿಕಾರ್ಜುನ ದೇವರು ಎಂದು ಹೆಸರಿಟ್ಟು ಕರೆದು; ತಮ್ಮ ನಿಜರೂಪವ ಎನಗೆ ತೋರಿದ ಬಳಿಕ ಬಾಹ್ಯ ಸಂಪತ್ತಿಗಾಗಿ ಆರಾಧನೆಯೆಂಬ ಉಪಚಾರದ ಹಂಗೇಕೆ ಹೇಳಾ !

ಇನ್ನು ನಾನು ಸ್ವತಂತ್ರ. ನನ್ನ ನಿಧಾನವ ನಾನೇ ಕಂಡೆ; ಜಲಗ ತೊಳೆಯಲೇಕೆ ? ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಕು ನಾನೇ ಆದ ಮೇಲೆ, ನನ್ನನ್ನು ನಾನು ಬೆಳಗಿಕೊಳ್ಳಲು ಕೊಳ್ಳಿಯ ಬೆಳಕೇಕೆ? ಕಾಮಧೇನುವು ನಾನೇ ಆಗಿರುವಾಗ ಕರುವಿನ ಹಂಗೇಕೆ ? ತನಗೆ ತಾನೇ ಮಾತನಾಡಿಕೊಂಡು ತನಗೆ ತಾನೇ ಉಪದೇಶ ಮಾಡುವ ಭೋಧಿವೃಕ್ಷವೇ ತಾವಾದ ಮೇಲೆ ಮತ್ತೊಬ್ಬರ ಹಂಗೇಕೆ ಎಂದು ಪ್ರಶ್ನಿಸಿದ್ದಾರೆ.

ವೃಕ್ಷ ಪ್ರೌಢತ್ವಕ್ಕೆ ಬಂದ ಮೇಲೆ ತನಗೆ ತಾನೇ ಮೊಗ್ಗುಮೂಡಿ, ಹೂವಾಗಿ ಅರಳಿ, ಕಾಯಿಯಾಗಿ, ಹಣ್ಣಾಗಿ, ಬೀಜದಲ್ಲಿ ವೃಕ್ಷವನ್ನು ಅಡಗಿಸಿ ತೊಟುಬಿಟ್ಟು ಹೊರಚೆಲ್ಲುತ್ತದೆ.

ವೃಕ್ಷ ಮತ್ತೊಂದು ವೃಕ್ಷದ ಮೊಗ್ಗು ಹೂವನ್ನು ಕಸಿಯಲಿಲ್ಲ. ಕಾಯಿ ಹಣ್ಣನ್ನು ಕಸಿಯಲಿಲ್ಲ. ತನಗೆ ತಾನೇ ಮೊಗ್ಗು ಮೂಡಿಸಿಕೊಂಡು ಹೂವಾಗಿ ಅರಳಿತು. ತನು ಜ್ಞಾನದ ಹೂವಾಗಿ ಅರಳಲು ಅದೆಷ್ಟು ಕಾಲಬೇಕು ? ತನು ಬರೆದ ಪುಸ್ತಕ ತನುವೇ ಓದಿ ಜ್ಞಾನಿಯಾಗಬೇಕೆ ? ಒಂದು ತನು ಮತ್ತೊಂದು ತನುವಿಗೆ ಬೋಧಿಸಬೇಕೆ ?

ತನುವಿಗೆ ಅರಿವಿದೆ. ಅದು ಅರಿವಿನ ಹೂವನ್ನು ಅರಳಿಸಲೇಬೇಕು. ಅರಿವನ್ನು ಎರವಲು ಪಡೆಯಬೇಕಿಲ್ಲ. ವೃಕ್ಷದ ಬೇರು ಕಾಂಡ ರೆಂಬೆ ಕೊಂಬೆಗಳಲ್ಲಿ ಸಂಗಮವಾದ ಮೊಗ್ಗು ಹೂವಾಗಿ ಅರಳಿ ತನಗೆ ತಾನೇ ಹೇಗೆ ಪರಿಮಳವನ್ನು ಬೀರುವುದೋ ಹಾಗೆಯೇ ತುನುವಿನಲ್ಲಿಯೇ ತನ್ಮಯವಾದ ಬ್ರಹ್ಮಕಮಲ ತನಗೆ ತಾನೇ ಅರಳಬೇಕು. ಈ ಕೃಷಿಯಲ್ಲಿ ತನು ಮತ್ತು ಮನಗಳೆರಡೂ ತೊಡಗಬೇಕು.

**698**

**ನಿನಗೆ ನೀನೆ ಕರ್ತನು ಬಸವಾ;**
**ಎನಗೆ ನೀನೆ ಕರ್ತನು ಬಸವಾ;**
**ನಾ ಮಾಡುವ ಭಕ್ತಿಗೆ ನೀನೆ ಕರ್ತನು ಬಸವಾ.**
**ಕರುಣಿ ಕಪಿಲಸಿದ್ಧಮಲ್ಲಿನಾಥ ಬಸವಾ.**

ನಿನಗೆ ನೀನೇ ಮಾಲೀಕ ಬಸವಾ; ಎನಗೂ ಕೂಡಾ ನೀನೇ ಮಾಲೀಕ ಬಸವಾ; ನಾ ಮಾಡುವ ಭಕ್ತಿ ನಿನ್ನಿಂದಲೇ ಸಾಧ್ಯವಾಯಿತು. ಹೀಗಾಗಿ ನಾ ಮಾಡುವ ಭಕ್ತಿಗೂ ನೀನೇ ಮಾಲೀಕ ಬಸವಾ.

ಕರುಣಿ ಕಪಿಲಸಿದ್ಧ ಮಲ್ಲಿನಾಥ ಬಸವಾ: ಅಂತರಂಗದ ಗುರುದೇವನನ್ನು ತೋರಿದ ಗುರುದೇವನ ಹೆಸರನ್ನು ಅಂತರಂಗದ ಗುರುದೇವನಿಗೆ ಇಟ್ಟು ಭಕ್ತಿಯಿಂದ ಹಣೆಮಣೆದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ತನುವನ್ನು ಆವರಿಸಿದ ಮನ ತನುವಿನಲ್ಲಿ ತನ್ಮಯವಾದ ಗುರುದೇವನನ್ನು ಕಂಡುಕೊಂಡು ಆ ಗುರುದೇವನಿಗೆ ಗುಲಾಮನಾದ ಬಳಿಕ, ಅದು ಘನಮನವೇ ಆಗುತ್ತದೆ. ಹೀಗಾಗಿ ಶಂಕರಾಚಾರ್ಯರು 'ಅಹಂಬ್ರಹ್ಮಾಸಿ' ಎಂದು ತನಗೆ ತಾನೆ ಗಟ್ಟಿಯಾಗಿ ಕೂಗಿದರು. ನಾನೇ ಬ್ರಹ್ಮ. ನನ್ನ ಹೊರತಾಗಿ ಬ್ರಹ್ಮವಿಲ್ಲ ಎಂದು ಲೋಕಕ್ಕೆ ಕೇಳುವಂತೆ ಖಚಿತವಾಗಿ ಹೇಳಿದರು.

ಬಸವಣ್ಣ ಸಿದ್ಧರಾಮ ಶಿವಯೋಗಿಗಳಿಗೆ ಅಂತರಾಳದ ಗುರುದೇವನನ್ನು ತೋರಿದರು. ತನುವನ್ನು ಆವರಿಸಿದ ಭ್ರಮಾಭರಿತವಾದ ಮನ, ತನುವಿನಲ್ಲಿಯೇ ತನ್ಮಯವಾದ ಬ್ರಹ್ಮನನ್ನು ಅರಿತು ಆ ಬ್ರಹ್ಮನಲ್ಲಿಯೇ ಲೀನವಾಯಿತು. ಪರಮ ಸಂತೋಷದಿಂದ 'ಅಹಂಬ್ರಹ್ಮಾಸ್ಮಿ' ಎಂದು ಕೂಗಿತು.

ಬ್ರಹ್ಮನನ್ನು ತೋರಿದ ಬಸವಣ್ಣನೂ ಬ್ರಹ್ಮನೇ ಆಗಿದ್ದಾನೆ. ಬ್ರಹ್ಮನನ್ನು ನೋಡಿಕೊಂಡ ನಾನು ಕೂಡಾ ಬ್ರಹ್ಮನೇ ಆಗಿದ್ದೇನೆ. ತನಗೆ ತಾನೇ ಬ್ರಹ್ಮನನ್ನು ನೋಡಿಕೊಂಡು ಬ್ರಹ್ಮನೇ ತಾನಾದ ಬಸವಾ. ಎನಗೆ ಬ್ರಹ್ಮನನ್ನು ತೋರಿದ ಬಸವನೂ ಬ್ರಹ್ಮ ಎಂದು ಸಿದ್ಧರಾಮ ಶಿವಯೋಗಿಗಳು ಭಕ್ತಿಯಿಂದ ಹಾಡಿದ್ದಾರೆ.

ಬಸವನೆಂದರೆ ಬ್ರಹ್ಮ; ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ಆಗಿದ್ದಾನೆ.

**699**

**ನಿನ್ನಡಕ ನೀನೆಯಾದೆ ಬಸವಲಿಂಗವೆ.**
**ಎನ್ ಚಿತ್ಪಿಂಡದ ರೂಪು ನಿಮ್ಮಲ್ಲಿ**
**ತಲ್ಲೀಯವಾಯಿತ್ತು ಬಸವ ಗುರುವೆ.**
**ಭಾವಿಸಿಹೆನೆಂಬ ಭಾವ ನಷ್ಟವಾಯಿತ್ತಯ್ಯಾ,**
**ಕಪಿಲಸಿದ್ಧ ಮಲ್ಲಿನಾಥನ ಗುರು ಬಸವಾ.**

ತನುವಿನ ಸಂಪತ್ತು ತನುವಿನಲ್ಲಿಯೇ ಬಚ್ಚಿಟ್ಟುಕೊಂಡಿದೆ. ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿ ಬಚ್ಚಿಟ್ಟುಕೊಂಡ ಸಂಪತ್ತನ್ನು ಬಳಕೆ ಮಾಡಬೇಕೆಂಬ ಅರಿವಿಲ್ಲ. ಹೀಗಾಗಿ ಮನ ತನುವನ್ನು

ಹಿಡಿದು ಬಾಹ್ಯ ಸಂಪತ್ತನ್ನು ಹುಡುಕುತ್ತದೆ. ಅದು ಸಿಕ್ಕರೂ ಬಳಸುವ ಧಾರಾಳತನ ಮನಕ್ಕಿಲ್ಲ. ಹೀಗಾಗಿ ಬಸವಣ್ಣನವರು ಮನಕ್ಕೆ ಬುದ್ಧಿಮಾತು ಹೇಳಿದರು.

''ಆಯುಷ್ಯವುಂಟು ಪ್ರಳಯವಿಲ್ಲೆಂದು ಅರ್ಥವ ಮಡುಗುವಿರಿ; ಆಯುಷ್ಯ ತೀರಿ ಪ್ರಳಯ ಬಂದಡೆ ಆ ಅರ್ಥವ ನಂಬುವರಿಲ್ಲ. ನೆಲವನು ಅಗೆದು ಮಡುಗದಿರಾ, ನೆಲ ನುಂಗಿದಡೆ ಉಗುಳುವುದೆ? ಕಣ್ಣಿನಲ್ಲಿ ನೋಡಿ, ಮಣ್ಣಿನಲ್ಲಿ ನೆರಹಿ, ಉಣ್ಣದೆ ಹೋಗದಿರಾ! ನಿನ್ನ ಮಡದಿಗಿರಲೆಂದಡೆ, ಆ ಮಡದಿಯ ಕೃತಕ ಬೇರೆ; ನಿನ್ನ ಒಡಲು ಕೆಡೆಯಲು ಮತ್ತೊಬ್ಬನಲ್ಲಿಗೆ ''ಅಡಕದೆ'' ಮಾಬಳೆ ? ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡ. ಕೂಡಲ ಸಂಗನ ಶರಣರಿಗೆ ಒಡನೆ ಸವೆಸುವುದು''.

ಮನ ತನುವಿನೊಂದಿಗೆ ಗಳಿಕೆ ಮಾಡಿದ ಬಾಹ್ಯಸಂಪತ್ತನ್ನು ತನುವಿನೊಂದಿಗೆ ಉಣ್ಣದೆ ಜಿಪುಣತನದಿಂದ ತನುವನ್ನು ಕೊಲ್ಲುತ್ತದೆ. ತನುವಿನಲ್ಲಿ ತನ್ಮಯವಾದ ಅರಿವಿನ ಸಂಪತ್ತನ್ನು ಕೂಡಾ ಉಣ್ಣದೆ ತನುವನ್ನು ವ್ಯರ್ಥ ಸಾಯಿಸುತ್ತದೆ. ತನು ಇಲ್ಲವಾದ ಮೇಲೆ, ತನು ಗಳಿಕೆ ಮಾಡಿದ ಸಂಪತ್ತೂ ವ್ಯರ್ಥ. ತನುವಿನಲ್ಲಿ ತನ್ಮಯವಾದ ಅರಿವಿನ ಸಂಪತ್ತು ಕೂಡಾ ವ್ಯರ್ಥವಾಗುತ್ತದೆ.

ಸಿದ್ಧರಾಮ ಶಿವಯೋಗಿಗಳು ಬಸವಣ್ಣನನ್ನು ಸ್ಮರಿಸಿ, ಕೊಂಡಾಡುತ್ತಾ.

ನಿನ್ನಲ್ಲಿ ಅಡಗಿಸಿಕೊಂಡ ಸಂಪತ್ತು ಅದು ನೀನೆಯಾದೆ ಬಸವಣ್ಣಾ; ಬಸವಲಿಂಗವೇ. ಸತ್‌ಚಿತ್ ಆನಂದಮಯವಾದ ಸಚ್ಚಿದಾನಂದ ಸ್ವರೂಪದ ಚಿತ್ಪಿಂಡ ಚಿನ್ಮಯ ಸ್ವರೂಪದ ಬ್ರಹ್ಮಾಂಡವೇ ಆದ ಎನ್ನ ರೂಪು ಕೂಡಾ ನಿಮ್ಮಲ್ಲಿ ತಲ್ಲೀನವಾಯಿತ್ತು ಬಸವಗುರುವೆ. ಅದೆಂತಹ ಭಾಗ್ಯ ನನ್ನದು.

ಭಾವಿಸಿಹೆನೆಂಬ ಭಾವ ಕೂಡಾ ನಷ್ಟವಾಗಿ ನಿರ್ಭಾವವಾಯಿತ್ತು ಬಸವ ಗುರುವೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿನಾಥನಿಗೂ ನೀನೆ ಗುರುಬಸವಾ.

ಕ್ಷಣಕೊಮ್ಮೆ ಊಸರವಳ್ಳಿಯಂತೆ ಬದಲಾಗುವ ಭಾವ; ಅದು ದುರ್ಭಾವವಾಗುವುದು ತಡವೇ ಆಗುವುದಿಲ್ಲ. 'ಭಾವ' ಬದಲಾಗಿ ದುರ್ಭಾವವಾದರೆ ಅದು ತನುವನ್ನು ಕೆರಳಿಸುತ್ತದೆ. ಯಾರಾದರೂ ಹೊಗಳಿದರೆ ಸಾಕು 'ಭಾವ' ತನುವನ್ನು ಅರಳಿಸುತ್ತದೆ.

ಭಾವಿಸಿಹೆನೆಂಬ ಭಾವ ನೀ ತೋರಿದ ಅರಿವಿನ ಸಂಪತ್ತಿನಲ್ಲಿ ಲೀಯವಾಗಿ, ಅದರ ಅಜ್ಞಾನ ನಷ್ಟವಾಯಿತು ಬಸವಯ್ಯಾ. ಹೀಗಾಗಿ ಕಪಿಲಸಿದ್ಧ ಮಲ್ಲಯ್ಯನಿಗೂ ನೀನೇ ಗುರುವಾದೆ ತಂದೆ ಎಂದು ಹೃದಯತುಂಬಿ ಬಸವರಾಜ ದೇವರನ್ನು ನೆನೆದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**700**

**ನಿನ್ನನಾರು ಬಲ್ಲರು ಎನ್ನವರಲ್ಲದೆ ?**
**ಅಂದು ನೀನು ಅನಾಹತಲೋಕದಲ್ಲಿ ದೇಶಿಕನಾಗಿ ಇರಲಾಗಿ**
**ನಿನ್ನನೆನ್ನವರು ಸಲಹರೆ ?**
**ನೀನು ಶುದ್ಧ ಸಿದ್ಧ ಧವಳದಲಿ ಬಂದಡೆ**
**ನಿನ್ನೊಡನೆ ಬಂದು ಊಡಿಸಿದರೆಮ್ಮವರು**
**....... ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪರಮಾತ್ಮನೆ, ನಿನ್ನನ್ನು ಕಲ್ಲಲ್ಲಿ ಕೆತ್ತಿ ಕಲ್ಲೇ ನೀನೆಂದು ತಿಳಿದು ಆರಾಧಿಸುವವರು ಇಡೀ ಲೋಕದಲ್ಲೆಲ್ಲಾ ಇದ್ದಾರೆ. ಆದರೆ ನಿನ್ನ ನಿಜರೂಪವನ್ನು ಅರಿತವರು ಮಾತ್ರ ವಿರಳಾತಿ ವಿರಳ.

ಎಮ್ಮವರು ಮಾತ್ರ ನಿನ್ನ ನಿಜರೂಪವನ್ನು ಅರಿತವರು. ಹಾಗೆಯೇ ನಿನ್ನನ್ನು ಕೂಡಾ ಬಲ್ಲವರು, ನಿನ್ನನಾರು ಬಲ್ಲರು ಎನ್ನವರಲ್ಲದೆ ಶಿವನೆ ! ಶಿವಶರಣರು ಮಾತ್ರ ನಿನ್ನನ್ನು ಬಲ್ಲರು.

ನೀನು ಏನು ಸಾಮಾನ್ಯನೆ ? ತನುವನ್ನು ಸೃಷ್ಟಿಮಾಡಿ, ಸೃಷ್ಟಿಮಾಡಿದ ಆ ತನುವಿನಲ್ಲಿಯೇ ನೀನು ತನ್ಮಯನಾಗಿ ತನುವನ್ನು ಹುಡುಕಲು ಹಚ್ಚಿದೆ. ಭೇದಿಸಲುಬಾರದ ತನುಲೋಕದಲ್ಲಿದ್ದ ನಿನ್ನನ್ನು ಎನ್ನವರು ಸಲಹರೆ ?

ತನುವನ್ನು ಹಡೆದು, ಆ ತನುವಿನಲ್ಲಿಯೇ ನೀನಿದ್ದು ತನುವನ್ನು ಆವರಿಸಿದ ಮನಕ್ಕೆ ಮಾರ್ಗದರ್ಶಕನಾಗಿ ನೀನು ಇರುವೆ. ಆದರೂ ಲೋಕ ನಿನ್ನನ್ನು ತಿಳಿಯಲಿಲ್ಲ. ಎನ್ನವರು ನಿನ್ನನ್ನು ತಿಳಿಯದೆ ಬಿಡಲಿಲ್ಲ. ಎನ್ನವರು ತುತ್ತಿಗೊಮ್ಮೆ ಶಿವಶರಣೆನ್ನುತ್ತ ನಿನಗೆ ಉಣ್ಣಿಸುತ್ತಾ ಅವರು ಉಂಡು ನಿನ್ನನ್ನು ಸಲಹಿದರು.

ಯಾರೂ ಅರಿಯದ, ಯಾರೂ ಭೇದಿಸಲಾಗದ ತನುವಿನಲ್ಲಿ ನೀನಿದ್ದರೂ ತನುಲೋಕ ನಿನ್ನನ್ನು ಅರಿಯಲಿಲ್ಲ. ಒಡಲೊಳಗಿದ್ದು ಒಡಲಿಂಗಾಧಾರವಾಗಿ ಒಡಲ ಸೋಂಕದೆ ಒಡಲ ಬೆಳಗುವ ಶುದ್ಧ ಸಿದ್ಧ ಧವಳದಲಿ ನೀನು ಬಂದಡೆ ನಿನ್ನೊಡನೆ ಬಂದು ಊಡಿಸಿದರು ಎಮ್ಮವರು.

ಕಪಿಲಸಿದ್ಧ ಮಲ್ಲಿಕಾರ್ಜುನನೇ ಒಡಲೊಳಗಿದ್ದು ಒಡಲ ಸೋಂಕದೆ ಒಡಲನ್ನು ಬೆಳಗುವ ಮಹಾಂತನೆ ನಿನ್ನನಾರು ಬಲ್ಲರು ಎನ್ನವರಲ್ಲದೆ !

ಸ್ವರ್ಗ ಮರ್ತ್ಯ ಪಾತಾಳವನ್ನು ಶೋಧಿಸಬಹುದು; ಭೇದಿಸಲುಬಾರದ ತನುವೆಂಬ ಅನಾಹತಲೋಕದಲ್ಲಿ ದೇಶಿಕನಾಗಿ, ದಾರಿ ತೋರಿಸುವ ಮಾರ್ಗದರ್ಶಕನಾಗಿ, ತತ್ವೋಪದೇಶವ ಮಾಡುವ ಆಚಾರ್ಯನಾಗಿ ನೀನಿದ್ದರೂ; ಕಲ್ಲನ್ನೇ ಕೆತ್ತಿ ದೇವರನ್ನಾಗಿಸಿ ಆ ಕಲ್ಲೇ ದೇವರೆಂದು ತಿಳಿದು ಆರಾಧಿಸುವ ತನುಲೋಕಕ್ಕೆ ಏನೆನ್ನಬೇಕು !

ನಿನ್ನನ್ನು ತಿಳಿಯದೆ ಆರಾಧಿಸುವ ಲೋಕ ದೊಡ್ಡದು. ಎನ್ನವರು ಮಾತ್ರ ನಿನ್ನನ್ನು ಬಲ್ಲವರು. ತನುವಿನಲ್ಲಿ ತನ್ಮಯವಾದ ನೀನು ಆಚಾರ್ಯನಾಗಿ ಪಾಠಮಾಡಲು ಆ ಪಾಠವನ್ನೇ ಉಪದೇಶವೆಂದು ತಿಳಿದು, ನಿನಗೆ ಶರಣು ಹೋಗಿ ಶರಣಾಗತರಾದರು. ಅವರೇ ಶರಣರು. ಆ ಶರಣರೇ ನನ್ನವರು. ನನ್ನವರು ಮಾತ್ರ ನಿನ್ನನ್ನು ಬಲ್ಲವರು. ನಿನಗೆ ಶರಣು ಹೋಗಿ ನಿನ್ನನ್ನು ಸಲಹುವವರು.

**701**

**ನಿನ್ನನೊಲಿಸುವಡೆ ನಿರಹಂಭಾವವೆ ತೃಪ್ತಿ;**
**ಅನ್ಯಭಾವಂಗಳನೊಲ್ಲೆನಯ್ಯಾ.**
**ಹೊನ್ನು ಹೆಣ್ಣು ಮಣ್ಣು ಮುನ್ನವೆ ಸಟೆ ಮಾಡಿ,**
**ದಾಸೋಹದಲ್ಲಿ ಸುಖಿಯಾದೆನಯ್ಯಾ**
**ಕಪಿಲಸಿದ್ಧಮಲ್ಲೇಶ್ವರಾ.**

ಪರಮಾತ್ಮನೆ, ನಿನ್ನನ್ನು ಒಲಿಸಿಕೊಳ್ಳುವುದು ಸುಲಭದ ಮಾತಲ್ಲ. ನೀನು ಅಂದರೆ ಅನ್ಯನಲ್ಲ; ತನುವಿನಲ್ಲಿಯೇ ತನ್ಮಯವಾದ ಗುರುದೇವನು, ನಿರಹಂಭಾವಕ್ಕೆ ಮಾತ್ರ ತೃಪ್ತಿಪಡುವೆ. ನಿರ್ಭಾವಕ್ಕೆ ಮಾತ್ರ ಒಲಿವೆ. ಅನ್ಯಭಾವಂಗಳಿಗೆ ನೀನು ಒಲ್ಲೆಯಯ್ಯಾ.

ಹೊನ್ನು ಹೆಣ್ಣು ಮಣ್ಣು ಸುಳ್ಳು ಮಾಡಿದವನಿಗೆ ನೀನು ಒಲಿಯುವೆ, ಸದಾ ನಿನ್ನ ಧ್ಯಾನದ ಜ್ಞಾನ ದಾಸೋಹದಲ್ಲಿ ಸುಖಿಯಾದೆನಯ್ಯಾ.

ಭಾವ ಸಕಲರಿಗೂ ಗೊತ್ತು, ಹಾಗೆಯೇ ದುರ್ಭಾವವೂ ಗೊತ್ತು, ನಿರ್ಭಾವವೊಂದು ತನುವಿನಲ್ಲಿ ತನ್ಮಯವಾಗಿದೆಯೆಂಬುದನ್ನು ತನುವನ್ನು ಆವರಿಸಿದ ಮನದಿಂದಲೇ ಕಂಡುಕೊಳ್ಳಬೇಕು. ಅದು ನಿನ್ನನ್ನು ಒಲಿಸಿಕೊಳ್ಳುವ ಕಾತುರದಲ್ಲಿದ್ದ ತನುವಿಗೆ ಹೊಳೆಯುತ್ತದೆಯೇ ಹೊರತು, ಅನ್ಯ ತನುಗಳಿಗೆ ನಿರಹಂಭಾವವೆಂದರೇನೆಂಬುದೇ ಗೊತ್ತಾಗುವುದಿಲ್ಲ.

ಭಾವದಿಂದಲೇ ಹಳದಿ ಬಣ್ಣ ಮೆತ್ತಿಕೊಂಡ ಲೋಹ ಚಿನ್ನವಾಯಿತು. ಚಿನ್ನ ತನಗೆ ಬೇಕೆಂಬ ಆಸೆ ತನುವಿನಲ್ಲಿ ಸೃಷ್ಟಿಯಾಯಿತು. ಈ ಆಸೆಯೇ ಕಾಮವಾಯಿತು. ಕಾಮ ಹೆಣ್ಣಾಗಿ ಗಂಡನ್ನು ಕಾಡುತ್ತದೆ; ಗಂಡಾಗಿ ಹೆಣ್ಣನ್ನು ಕಾಡುತ್ತದೆ. ಕಾಮದ ಚಿತ್ತ ಯಾವ ವಸ್ತುವಿನ ಮೇಲೆ ನೆಡುತ್ತದೆಯೋ ಆ ವಸ್ತುವನ್ನು ಭಾವದಿಂದಲಾದರೂ ಪಡೆಯುತ್ತದೆ ಇಲ್ಲ ದುರ್ಭಾವದಿಂದಲಾದರೂ ಪಡೆಯುತ್ತದೆ.

ವಸ್ತುವಿನ ಸತ್ಯ ನೋಡುವ ಶಕ್ತಿ ಭಾವಕ್ಕೆ ಇಲ್ಲ; ಭಾವಿಸಬೇಕು ಎನ್ನುವ ಆಸೆಗೂ ವಸ್ತುವಿನ ಸತ್ಯದ ಪರಿಚಯವಿಲ್ಲ. ಹೀಗಾಗಿ ಮನ ತನುವಿನೊಂದಿಗೆ ಹೊನ್ನಿಗಾಗಿ ಯುದ್ಧ ಮಾಡುತ್ತದೆ. ಹೊನ್ನು ತನುವಿಗಿಂತ ಶ್ರೇಷ್ಠವಲ್ಲ ಎನ್ನುವುದು ತನುವಿಗೆ ಗೊತ್ತಿದ್ದರೂ ಕೂಡಾ ಹೊನ್ನಿನ ಮೇಲಿನ ಭಾವದಿಂದಾಗಿ ತನು ತನುವನ್ನು ಕೊಂದು ಹೊನ್ನು ಪಡೆಯುತ್ತದೆ. ಹೊನ್ನನ್ನು ಹಳದಿ ಲೋಹವೆಂದು ಸುಳ್ಳು ಮಾಡುವ ಶಕ್ತಿ ಭಾವಕ್ಕೆ ಇಲ್ಲ.

ಭಾವ, ದೇಹವನ್ನು ಹೆಣ್ಣು ಎಂದು ಗಂಡು ಎಂದು ಭಾವಿಸಿದೆ. ದೇಹ ಗಂಡೂ ಅಲ್ಲ; ಹೆಣ್ಣು ಕೂಡಾ ಅಲ್ಲ. ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು, ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ರೋಮ ನಖ ಇವು ಯಾವೂ ಹೆಣ್ಣು ಅಲ್ಲ; ಗಂಡು ಕೂಡಾ ಅಲ್ಲ. ದೇಹವನ್ನು ಆವರಿಸಿದ ಮನ ಒಂದೇ ಈ ಕಾಯಕದಲ್ಲಿ ನಿರತವಾಗಿವೆ.

ದೇಹವನ್ನು ಆವರಿಸಿದ ಮನ, ತಾನು ಹೆಣ್ಣು ಎನ್ನುವ ಅಜ್ಞಾನ ಆಮಂತ್ರಣ ಮಾಡಿಕೊಂಡು ಹೆಣ್ಣು ಎಂದು ಭಾವಿಸಿದೆ. ಗಂಡು ಎಂದು ಭಾವಿಸಿದೆ. ದೇಹದಲ್ಲಿರುವ ಯಾವ ಪದಾರ್ಥಗಳು ಕೂಡಾ ಹೆಣ್ಣೂ ಅಲ್ಲ; ಗಂಡೂ ಅಲ್ಲ. ಅದು ದೇಹ ಮಾತ್ರ; ದೇಹವನ್ನು ಆವರಿಸಿದ ಮನ, ದೇಹದಲ್ಲಿಯೇ ಸಂಗಮವಾದ ಅರಿವಿನೊಂದಿಗೆ ಲೀನವಾದಾಗ ಹೆಣ್ಣು ಗಂಡೆಂದು ಭಾವಿಸುವ ಭಾವ ನಿರ್ಭಾವವಾಗುತ್ತದೆ. ಹೆಣ್ಣು ಗಂಡು ಎನ್ನುವ ಅಜ್ಞಾನ ಸುಳ್ಳಾಗುತ್ತದೆ.

ಜಲಬಿಂದು ಗರ್ಭಹೊಕ್ಕು ತನುವಾಗಿದೆ. ಜಲಬಿಂದುವೇ ಗಟ್ಟಿಯಾಗಿ ಮಣ್ಣು ಆಗಿದೆ. ಮಣ್ಣಿನಲ್ಲಿರುವ ಹೊನ್ನು ಆಗಿದೆ. ಸಸ್ಯಕಾಶಿಯಾಗಿದೆ ಜಲಚರ ಪಶುಪಕ್ಷಿ ಪ್ರಾಣಿಯಾಗಿ ಇಡೀ ಬ್ರಹ್ಮಾಂಡವೇ ನಿರ್ಮಾಣವಾಗಿದೆ. ಸಕಲ ಪ್ರಾಣಿಗಳು ಸಹಜವಾಗಿವೆ.

ತನು ಮಾತ್ರ ಭಾವದಿಂದಾಗಿ ದುರ್ಭಾವ ಹೊಂದಿ ಅಹಂಕಾರಿಯಾಗಿದೆ. ಭಾವಕ್ಕೆ ಸತ್ಯ ಪರಿಚಯವಾದರೆ ಸಾಕು ಅದು ನಿರ್ಭಾವವಾಗುತ್ತದೆ. ನಿರಹಂಭಾವಿಯಾಗುತ್ತದೆ. ಹೊನ್ನು ಹೆಣ್ಣು ಮಣ್ಣಿನ ಮೂಲ ಪರಿಚಯವಾಗಿ ಅವು ಮೂರು ಸುಳ್ಳಾಗುತ್ತವೆ.

ಹೊನ್ನು ಲೋಹವಾಗಿ, ಮನ ಹೆಣ್ಣಾಗಿ, ಜಲಬಿಂದುವೇ ಮಣ್ಣಾಗಿ ಕಾಣುತ್ತದೆ. ತನುವಿನಲ್ಲಿಯೇ ತನ್ಮಯವಾದ ಜ್ಞಾನದಾಸೋಹದಿಂದಾಗಿ ತನುವನ್ನು ಆವರಿಸಿದ ಅಜ್ಞಾನ ಇಲ್ಲವಾಗುತ್ತದೆ. ತನು ಮನ ಘನ ಒಂದಾಗಿ ಸದಾ ಜ್ಞಾನದಾಸೋಹದಿಂದ ಬೆಳಗುತ್ತದೆ.

**702**

**ನಿನ್ನವನಾಗಿ ಅನ್ಯರ ಬೇಡುವ**

**ಅನ್ಯಾಯವನೇನೆಂಬೆನೆಲೆಯಯ್ಯಾ.**
**ನಿನ್ನನರ್ಚಿಸಿದ ಪುರಾತನರು ನೀವೆಯಾದರು.**
**ನಿನ್ನನರ್ಚಿಸಿದ ಬಸವಣ್ಣ ನೀನೆಯಾದ**
**ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ**
**ಗುರುವಾಗಿ ಬಂದೆನ್ನ ಭವದ ಬೇರ ಹರಿದ ಬಳಿಕ**
**ನಿನ್ನವರು ನೀನು ನಾನೆಂಬ ಸಂದೇಹವೇಕಯ್ಯ?**

ಅರಿವೇ ಗುರು, ಆ ಗುರುದೇವನೇ ಮಹಾದೇವ, ಮಹಾದೇವನೇ ಸದಾಶಿವ, ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮ.

ಅರಿವು ತನುವಿನಲ್ಲಿ ತನ್ಮಯವಾಗಿದೆ. ಆ ಅರಿವೇ ಮಹಾದೇವನಾಗಿ ಸದಾಶಿವನಾಗಿ, ಸಾಕ್ಷಾತ್ ಪರಬ್ರಹ್ಮನಾಗಿ, ತನುವನ್ನು ಆವರಿಸಿದ ಮನಕ್ಕೆ ಪಾಠ ಮಾಡುತ್ತಲಿದೆ. ಮನದ ಮನೋಹರನಾಗಿ ಮನ ಬೇಡಿದ್ದನ್ನು ಮಹಾದೇವ ನೀಡುವಾಗ, ಮನ ತನುವನ್ನು ಹಿಡಿದು ಅನ್ಯರನ್ನು ಬೇಡಿದರೆ ಯಾರಾದರೂ ಏನು ಮಾಡಿಯಾರು ? ಇದು ನ್ಯಾಯವಲ್ಲ; ಅನ್ಯಾಯ.

ಸಿದ್ಧಾರ್ಥ ಬುದ್ಧನನ್ನು ಬೇಡಿ ಬುದ್ಧನೇ ತಾನಾದ. ವರ್ಧಮಾನ ಮಹಾವೀರನನ್ನು ಬೇಡಿದ. ಮಹಾವೀರನೇ ತಾನಾದ. ಕ್ರಿಸ್ತ, ಕ್ರಿಷ್ಣ, ಪೈಗಂಬರ, ಶಂಕರರು, ಬಸವಾದಿ, ಶರಣರು ದಾಸವರೇಣ್ಯರು ನಿನ್ನನ್ನು ಅರ್ಚಿಸಿದರು. ನೀವೇ ಆದರು.

ಅಂಗದಲ್ಲಿಯೇ ಸಂಗಮವಾದ ಗುರುದೇವನು ಬಂದು ಎನ್ನ ಅಂಗವನ್ನು ಆವರಿಸಿದ ಮನದ ಭವದ ಬೇರನ್ನು ಹರಿದ ಬಳಿಕ ನಿನ್ನವರು ನೀನು ನಾನೆಂಬ ಸಂದೇಹವೇಕಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಭೂಮಿಯ ಮೇಲೆ ಜನ್ಮತಳೆದ ಅಂಗಗಳೆಲ್ಲ ಅರಿವಿನ ಲಿಂಗಾಂಗಗಳೇ ಆಗಿರುವಾಗ ನಿನ್ನವರು ನೀನು ನಾನು ಎಂಬ ಸಂದೇಹವಾದರೂ ಎಲ್ಲಿಯದು ? ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿಯೇ ತನ್ಮಯವಾದ ಮಹಾದೇವನ ಪರಿಚಯವಿಲ್ಲದುದಕ್ಕಾಗಿ ನಾನು ಬೇರೆ ನೀನು ಬೇರೆ, ನಾನು ಹೆಣ್ಣು ನೀನು ಗಂಡು, ನಾನು ಶ್ರೀಮಂತ ನೀನು ಬಡವ ಎಂಬ ಸಂದೇಹ ಕಾಡುತ್ತಿತ್ತು.

ಮನವೆಂಬ ನಾನು ಮಹಾದೇವನ ಮಡದಿಯಾದಾಗ, ನಾನು ನಿನ್ನವಳು. ನಾನು ನಿನ್ನವಳಾಗಿ ಅನ್ಯರ ಬೇಡುವುದೆಂದರೇನು ? ನಿನಗಿಂತ ಶ್ರೀಮಂತರು ಈ ಲೋಕದಲ್ಲಿ ಯಾರಾದರೂ ಇರುವರೆ ?

ನನಗೆ ಗೊತ್ತಿದೆ; ಈ ಲೋಕದಲ್ಲಿರುವ ಯಾವ ತನುಗಳಿಗೂ ಕೂಡಾ ಬಡತನವಿಲ್ಲವೆಂದು. ಅನ್ಯರನ್ನು ಬೇಡಿ ಬೇಡಿ ಅನ್ಯಾಯಕ್ಕೆ ಒಳಗಾಗಿವೆ. ತನ್ನವನನ್ನು ಅರ್ಚಿಸಿದ ಬಸವಣ್ಣ ತಾನೇ ಅವನಾದ. ತನ್ನವರನ್ನು ಅರ್ಚಿಸಿದ ಪುರಾತರು ತಾವೇ ಅವರಾದರು.

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೇ ನೀನು ಗುರುವಾಗಿ ಬಂದು ಎನ್ನ ಭವದ ಬೇರು ಹರಿದ ಬಳಿಕ ನಿನ್ನವರು ನೀನು ನಾನೆಂಬ ಸಂದೇಹ ನನಗೆ ಇಲ್ಲವಾಯಿತು ಗುರುವೇ.

**703**

**ನಿನ್ನವರ ಮೂರ್ತಿಧ್ಯಾನದಿಂದ ನೀನಪ್ಪೆ**
**ಅಪ್ಪೆನಪ್ಪೆನಯ್ಯಾ ದ್ವಯವಿಲ್ಲದೆ.**
**ನೀ ಬಂದು ಇರಿಸಿದಂತೆ ಇದ್ದು ಹೇಳಿದ ಹಾಂಗೆ**
**ನೆನೆದೆನಾದಡೆ ಆನವರಪ್ಪುದೇನರಿದಯ್ಯಾ,**

**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನಿನ್ನವರು ನಿನ್ನನ್ನು ಒಲಿಸಿಕೊಂಡು ನಿನ್ನ ಧ್ಯಾನ ಮಾಡುತ್ತಿರುವುದರಿಂದ ನೀನು ದೇವನಾದೆ. ನೀನು ದೇವನಾದದ್ದು ನಿನ್ನನ್ನು ಆರಾಧಿಸುವವರಿಂದ. ತನುವಿನಲ್ಲಿ ತನ್ಮಯವಾದ ನಿನ್ನನ್ನು ತನುವನ್ನು ಆವರಿಸಿದ ಮನದಿಂದಲೇ ಕಂಡುಕೊಂಡರು. ನಿನ್ನನ್ನು ಆರಾಧಿಸಿದರು. ನೀನು ಏಕೋದೇವನಾದೆ. ನಿನ್ನನ್ನು ಆರಾಧಿಸುವ ನಿನ್ನವನು ನಿನ್ನನ್ನು ಆರಾಧಿಸುತ್ತಾ ನಿನ್ನಲ್ಲಿಯೇ ಕಳೆದು ಹೋದ. ಆಗ ನೀನು ನೀನಪ್ಪೆ ಅಪ್ಪೆನಪ್ಪನಯ್ಯಾ ದ್ವಯವಿಲ್ಲದೆ ಅದ್ವೈತಿಯಾಗಿ.

ಮುನ್ನ ನೀ ಬಂದು ಇರಿಸಿದಂತೆ ಇರಲಿಲ್ಲ. ನೀ ಹೇಳಿದ ಹಾಗೆ ಕೇಳಲಿಲ್ಲ. ನಿನ್ನನ್ನು ನೆನೆಯಲಿಲ್ಲ. ಹೀಗಾಗಿ ನೀನೇ ಬೇರೆ ನಿನ್ನನ್ನು ಆರಾಧಿಸುವವನೇ ಬೇರೆಯಾಗಿದ್ದ.

ತನುವಿನೊಳಗೆ ನೀನು ತನ್ಮಯವಾಗಿದ್ದರೂ ನಿನ್ನನ್ನು ಹೊತ್ತುಕೊಂಡು ನಿನ್ನವನು ನಿನ್ನನ್ನು ಕಲ್ಲಲ್ಲಿ ಕೆತ್ತಿ, ಆ ಕಲ್ಲೇ ನೀನೆಂದು ಆರಾಧಿಸುತ್ತಿದ್ದ. ಅವನನ್ನು ಕಂಡ ನೀನು ಅವನಲ್ಲಿಯೇ ಇದ್ದು ಗಹಗಹಿಸಿ ನಗುತ್ತಿದ್ದರೂ ನಿನ್ನ ನಗುವನ್ನು ಕೇಳುವ ಶಕ್ತಿ ಅವನಿಗಿಲ್ಲ.

ನೀನಿರಿಸಿದಂತೆ ಅವನಿದ್ದ; ಅವನಾದರೂ ಏನು ಮಾಡಿಯಾನು ? ಲೋಕ ಹೇಳಿದ ಹಾಗೆ ಅರಾಧಿಸಿದ; ಲೋಕ ಹೇಳಿದ ಹಾಗೆ ನೆನೆದ. ನಾನೇ ಬೇರೆ ದೇವರೇ ಬೇರೆ ಎಂದು ತಿಳಿದು ಕಲ್ಲನ್ನೇ ದೇವರಾಗಿ ಆರಾಧಿಸಿದ. ಎಷ್ಟು ಕಾಲ ಕಲ್ಲಿಗೆ ನೀರೆರೆದರೆ, ನೆನೆದು ಮೃದುವಾಗಿ, ಆರಾಧಿಸುವ ತನಗೆ ಏನಾದರೂ ಹೇಳಲು ಸಾಧ್ಯವೆ ?

ನಿನ್ನವರ ಮೂರ್ತಿಧ್ಯಾನದಿಂದ ನೀನಪ್ಪೆ. ನಿನ್ನವರು ನಿನ್ನನ್ನು ಆರಾಧಿಸಿ, ನಿನಗೆ ಮಾತ್ರ ಶರಣು ಹೋಗಿ, ಶರಣಾಗತರಾದ ಶರಣರು ಮಾತ್ರ ನಿನ್ನನ್ನು ಕಂಡರು. ನಿನ್ನನ್ನು ಆರಾಧಿಸಿದರು. ಅವರ ದಯೆಯಿಂದಾಗಿ ನೀನು ದೇವರಾದೆ; ದ್ವಯವಿಲ್ಲದೆ.

ನೀ ಬಂದು, ನೀನಿರಿಸಿದಂತೆ ನಾನಿದ್ದು, ನೀ ಹೇಳಿದ ಹಾಗೆ ನಾ ನಿನ್ನ ನೆನೆದಡೆ, ನಾನು ನಿನ್ನವರಂತೆ, ನಿನ್ನನ್ನು ಸದಾನೆನೆಯುವ ಶರಣರಂತೆ, ನಾನು ಕೂಡಾ ಇರಲು ಸಾಧ್ಯವಾಗುತ್ತದೆ ತಂದೆ ದ್ವಯವಿಲ್ಲದೆ.

**704**

**ನಿನ್ನಾಜ್ಞೆಯಿಂದ ಲೋಕ ಒಪ್ಪಿಪ್ಪುದಯ್ಯಾ, ತಂದೆ**
**ಬಸವಣ್ಣನಾಜ್ಞೆಯಿಂದ ನೀನಿಪ್ಪೆಯಾಗಿ.**
**ಅನಿಮಿಷಾನಂದದಲ್ಲಿ ಬಸವಾಕ್ಷರತ್ರಯ**
**ಗುರು ಬಸವಮೂರ್ತಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಲೋಕ ನಿನ್ನಾಜ್ಞೆಯನ್ನು ಪಾಲಿಸುತ್ತಲಿದೆ. ಬಸವಣ್ಣನ ಆಜ್ಞೆಯನ್ನು ನೀನು ಪಾಲಿಸುತ್ತಲಿರುವಿ. ದೇವರೆಂದರೆ ಯಾರು ಎಂದು ಲೋಕಕ್ಕೆ ಗೊತ್ತಿಲ್ಲ. ಹೀಗಾಗಿ ಲೋಕ ದೇವನ ಆಧೀನದಲ್ಲಿದೆ. ದೇವರೆಂದರೆ ಯಾರೆಂದು ಬಸವಣ್ಣನಿಗೆ ಗೊತ್ತಿದೆ. ಹೀಗಾಗಿ ಆತನ ದೇಹದಲ್ಲಿಯೇ ನೀನು ಬಂಧಿಯಾಗಿರುವಿ.

ಆತ ಕುಳಿತರೆ ನೀನೂ ಕುಳಿತುಕೊಳ್ಳುವಿ; ಆತ ಮಲಗಿದರೆ ನೀನೂ ಮಲಗುವಿ; ಆತನ ದೇಹವೇ ನಿನಗೆ ಆಲಯವೆಂದ ಮೇಲೆ, ನೀನು ಆತನ ಸ್ವಾಧೀನ. ಬಸವಣ್ಣನ ಆಜ್ಞೆಯನ್ನು ಪಾಲಿಸುವ ಮಹಾಮಹಿಮ ನೀನು.

ಲೋಕ ಕೂಡಾ ದೇಹಗಳಿಂದ ಕೂಡಿದ್ದರೂ; ದೇಹದಲ್ಲಿಯೇ ದೇವರಿದ್ದಾನೆ ಎಂದು ಲೋಕದಲ್ಲಿರುವ ದೇಹಗಳಿಗೆ ಗೊತ್ತಿಲ್ಲ. ಹೀಗಾಗಿ ದೇವರನ್ನು ಹೊತ್ತುಕೊಂಡ ದೇಹಗಳು

ದೇವಾಲಯಕ್ಕೆ ಹೋಗುತ್ತವೆ. ನಿನ್ನಾಜ್ಞೆಯಿಂದ ಲೋಕ ಒಪ್ಪಿಪ್ಪುದಯ್ಯಾ ತಂದೆ.

ಅನಿಮಿಷಾನಂದದಲ್ಲಿ ಬಸವಾಕ್ಷರತ್ರಯ ಗುರುಬಸವಮೂರ್ತಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ;

ಜಲದಲ್ಲಿಯೇ ಇದ್ದು ಜಲದಿಂದಲೇ ಜನ್ಮ ತಳೆದು, ಜಲದಲ್ಲಿಯೇ ಕಣ್ಣು ಮಿಟುಕಿಸದೆ ಪರಮಾನಂದದಿಂದ ಓಡಾಡುವ ಅನಿಮಿಷವೆಂಬ ಮೀನಿನಂತೆ, ತನುತ್ರಯವೆಂಬ ಬಸವಾಕ್ಷರದ ತನುವಿನಲ್ಲಿಯೇ ತನ್ಮಯವಾದ ನೀನು ಕಾರಣತನುವೂ ಆಗಿರುವಿ; ಸ್ಥೂಲತನುವೂ ಆಗಿರುವಿ; ಸೂಕ್ಷ್ಮ ತನುವೂ ಆಗಿರುವಿ. ತನುತ್ರಯಗಳು ನಿನ್ನವೇ ಆದರೂ ನೀನು ಆ ತನುತ್ರಯಗಳನ್ನು ತಾಕದೆ ತನುವಿನಲ್ಲಿಯೇ ಇದ್ದು ತನುವನ್ನು ಬೆಳಗುವ ಗುರು ಕಪಿಲಸಿದ್ಧ ಮಲ್ಲಯ್ಯನೇ ನೀನಾಗಿರುವಿ ತಂದೆ.

**705**

**ಸಂದುಗಳ ಬಿಚ್ಚಿ ಪರಿದೆಂದಿಂಗೆ ಪೋಪವು,**
**ಎಂದು ನಿಮ್ಮೊಡಗೂಡಿ ಬೇರಾಗದೆಂದಿಪ್ಪೆನು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ದೇಹ ಒಂದೇ. ಅದು ದೇಹದ ಧರ್ಮದೊಂದಿಗೆ ಭರಿತವಾಗಿದೆ. ಅದು ಇಸ್ಲಾಂ ಅಲ್ಲ, ಕ್ರೈಸ್ತ ಅಲ್ಲ, ಹಿಂದು, ಜೈನ್, ಬೌದ್ಧ, ಫಾರ್ಸಿ ಕೂಡಾ ಅಲ್ಲ. ಅದು ಹೆಣ್ಣು ಅಲ್ಲ; ಗಂಡು ಕೂಡಾ ಅಲ್ಲ. ಅದು ದೇಹ ಮಾತ್ರ. ಅರಿವು ಎಂಬ ಗುರುದೇವ ದೇಹಕ್ಕೆ ಜನ್ಮ ನೀಡಿ, ಆ ದೇಹವನ್ನೇ ದೇವಾಲಯವನ್ನಾಗಿಸಿಕೊಂಡು ದೇಹದಲ್ಲಿಯೇ ಇದ್ದಾನೆ.

ಅರಿವು ಎಂಬ ಗುರುದೇವನ ಬೆಳಕಿನಿಂದ ಕತ್ತಲು ಎನ್ನುವ ಸಂದೇಹಿ ಮನ ಹುಟ್ಟಿ, ದೇಹವನ್ನು ಆವರಿಸಿದೆ. ತಾನು ಆವರಿಸಿಕೊಂಡ ದೇಹವನ್ನು ತನ್ನದೇ ಎಂದು ಸ್ವಾಧೀನಪಡಿಸಿಕೊಂಡು ತನ್ನ ಇಚ್ಛೆ ಬಂದತೆ ದೇಹವನ್ನು ಬಳಸುತ್ತಲಿದೆ. ಇಂತಹ ಸಂದೇಹಿ ಮನವನ್ನು ಪೈಗಂಬರರು ಸೈತಾನ ಎಂದು ಕರೆದರು. ಇದಕ್ಕೆ ಅಲ್ಲಾನ ದರುಶನವಾದಾಗಲೇ ಇದು ಇಲ್ಲವಾಗುತ್ತದೆ. ದೇಹದಲ್ಲಿ ಅಲ್ಲಾ ಒಬ್ಬನೇ ಉಳಿಯುತ್ತಾನೆ. ಆದರೆ ಸಂದೇಹಿ ಮನವೆಂಬ ಸೈತಾನ ಅಲ್ಲಾನನ್ನು ನಂಬುತ್ತಿಲ್ಲ. ಎಲ್ಲಿಯವರೆಗೆ ಸೈತಾನ ಅಲ್ಲಾನನ್ನು ನಂಬುವುದಿಲ್ಲವೋ ಅಲ್ಲಿಯವರೆಗೆ ಅದರ ಸಂದು ಸಂದುಗಳಲ್ಲಿರುವ ಅಜ್ಞಾನ ನಾಶವಾಗುವುದಿಲ್ಲ.

ಎಂದು ನಿಮ್ಮೊಡಗೂಡಿ ಬೇರಾಗದೆಂದಿಪ್ಪೆನೊ ಕಪಿಲಸಿದ್ಧ ಮಲ್ಲಿಕಾರ್ಜುನಾ:

ಮನದಿಂದಲೇ ತನು ಸುಖ ದುಃಖಗಳನ್ನು ಅನುಭವಿಸುತ್ತಲಿದೆ. ಮನದಿಂದ ಅನುಭವಿಸುವ ತನುವಿನ ಸುಖವೂ ಸುಳ್ಳು, ದುಃಖ ಕೂಡಾ ಸುಳ್ಳು. ಹೀಗೆಂದು ಸದ್ಗುರುವಿನಿಂದಲೇ ಮನಕ್ಕೆ ಗೊತ್ತಾದಾಗ ಅದರ ಗತಿ ಬದಲಾಗುತ್ತದೆ. ಅದರ ಹೊರಮುಖದ ಪ್ರಯಾಣ ಸಂಪೂರ್ಣ ನಿಂತು ಹೋಗುತ್ತದೆ. ತನಗೆ ಪಾಠ ಮಾಡುತ್ತಿರುವ ಸದ್ಗುರುವಿನ ದರುಶನಕ್ಕಾಗಿ ಹಾತೊರೆಯುತ್ತದೆ. ಅಂತರಾಳದ ಪ್ರಯಾಣ ಶುರುವಾಗುತ್ತದೆ.

ಎಂದು ನಿಮ್ಮೊಡಗೂಡಿ ಬೇರಾಗದಂತೆ ಬೆರೆತು ಒಂದಾಗುವೆನೊ ! ತಂದೆ ನಿಮ್ಮನ್ನು ನಂಬದೆ ಕೆಟ್ಟೆ. ನಂಬಲೊಲ್ಲದ ಸಂದೇಹಿ ಮನ ನಾನು. ನನ್ನ ಸಂದು ಸಂದುಗಳಲ್ಲಿ ತುಂಬಿಕೊಂಡ ಅಜ್ಞಾನದ ಕತ್ತಲೆ ನಿಮ್ಮ ಬೆಳಕಿನಿಂದಲೇ ನಾಶವಾಗುತ್ತದೆ ಎಂದು ನನಗೆ ನಿಮ್ಮಿಂದಲೇ ತಿಳಿದಿದೆ. ನಿಮ್ಮನ್ನು ನಂಬಿ, ನಿಮಗೆ ಶರಣಾಗತನಾಗಿ ಸಂಪೂರ್ಣ ಶರಣು ಹೋಗುವುದೊಂದೇ ನನಗೆ ದಾರಿ. ನನಗೆ ನೀನು ಯಾರೆಂದು ತಿಳಿಯದೇ ಇದ್ದಾಗ ನೀನು ನನ್ನ ಬೆನ್ನು ಬಿದ್ದೆ. ಈಗ ನನಗೆ ನೀನು ಯಾರೆಂದು

ನಿನ್ನಿಂದಲೇ ನನಗೆ ತಿಳಿದಿದೆ. ನಿನಗಾಗಿ ನಾನು ಹಗಲಿರುಳೆನ್ನದೆ ಹಂಬಲಿಸುತ್ತಿರುವಾಗ ನೀನು ನನ್ನಿಂದ ಮುನಿಸಿಕೊಳ್ಳುತ್ತಿರುವೆಯಲ್ಲ! ಎಂದು ನಿಮ್ಮೊಡನೆಕೂಡಿ ಬೇರಾಗದೆಂದಿಪ್ಪೆನೊ ಕಪಿಲಸಿದ್ಧ ಮಲ್ಲಿಕಾರ್ಜುನಾ.

**706**

**ನಿಮ್ಮನರಿವರನರಿವೆನಯ್ಯಾ.**
**ನಿಮ್ಮ ಮರೆವರ ಮರೆವೆನಯ್ಯಾ.**
**ಮಾಯಿದೇವಿಗೆ ಮತವ ಕೊಟ್ಟು**
**ಎಲ್ಲ ಹಿರಿಯರ ಜರಿವೆಯಯ್ಯಾ.**
**ಇವೆಲ್ಲವ ತೋರಿ ನೀ ಗೆಲುವೆಯಯ್ಯಾ**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಎಲ್ಲರ ತಪ್ಪು ತನಗೆ ಗೊತ್ತಾಗುತ್ತದೆ. ತನ್ನ ತಪ್ಪು ತನಗೆ ಗೊತ್ತಾಗುವುದಿಲ್ಲ. ಏಕೆಂದರೆ ತನುವನ್ನು ಮನವೆಂಬ ಮಾಯೆ ಆವರಿಸಿದೆ.

ಅರಿವು ಎನ್ನುವ ಗುರುದೇವನು ತನುವನ್ನು ಸೃಷ್ಟಿ ಮಾಡಿ, ಆ ತನುವಿನಲ್ಲಿ ತಾನಿದ್ದು, ತನುವು ಗುರುದೇವನನ್ನು ತಿಳಿಯದಂತೆ, ಮನವೆಂಬ ಮಾಯೆಯನ್ನು ತನುವಿನಲ್ಲಿ ಸೃಷ್ಟಿ ಮಾಡಿದ್ದಾನೆ. ಮಾಯೆಯ ಮಾತು ಕೇಳುವಂತೆ ತನುವಿಗೆ ಆದೇಶ ಕೊಟ್ಟು, ತಾನು ತನುವಿನಲ್ಲಿಯೇ ಇದ್ದು, ತನುವಿಗೂ ಮನಕ್ಕೂ ಉಪದೇಶ ಮಾಡುತ್ತಿದ್ದಾನೆ.

ಗುರುದೇವ ತನ್ನ ಮತವನ್ನು ಮಾಯೆಗೆ ಕೊಟ್ಟು ಉಪದೇಶ ಆಲಿಸದಂತೆ ಮಾಡಿದ್ದಾನೆ. ಹೀಗಾಗಿ ಮನ ಗುರು ಹಿರಿಯರನ್ನು ನಿಂದಿಸುತ್ತದೆ. ಯಾರ ಮಾತೂ ಮನಕ್ಕೆ ಸರಿ ಎನ್ನಿಸುವುದಿಲ್ಲ. ಯಾರ ನಡತೆಯೂ ಮನಕ್ಕೆ ಸರಿ ಎನ್ನಿಸುವುದಿಲ್ಲ. ತನ್ನ ನಡತೆ ಕೂಡಾ ಸರಿಯಿಲ್ಲವೆಂದು ತನಗೆ ಅನ್ನಿಸುವುದೇ ಇಲ್ಲ.

ಹನ್ನೆರಡು ಜನ ಬುದ್ಧಿವಂತರ ಕತೆಯಂತೆ. ಹನ್ನೆರಡು ಜನ ಬುದ್ಧಿವಂತರು ನದಿ ದಾಟಿ ದಡ ಸೇರಬೇಕಾಗಿತ್ತು. ತಾವು ಕಳೆದು ಹೋಗಬಾರದೆಂದು ಒಬ್ಬರ ಕೈ ಮತ್ತೊಬ್ಬರು ಹಿಡಿದು ನದಿ ದಾಟಿದರು. ನದಿಯಲ್ಲಿ ಯಾರೂ ಕೊಚ್ಚಿ ಹೋಗಲಿಲ್ಲವೆ ಹೇಗೆ ಎಂದು ಎಣಿಕೆ ಮಾಡಿದರು. ಒಬ್ಬ ತನ್ನನ್ನು ಬಿಟ್ಟು ಎಲ್ಲರನ್ನೂ ಎಣಿಕೆ ಮಾಡಿದ. ಲೆಕ್ಕ ತಪ್ಪಾಯಿತು. ಹನ್ನೊಂದು ಜನ ಮಾತ್ರ ಇದ್ದರು. ಹೀಗೆ ಎಲ್ಲರೂ ಎಣಿಕೆ ಮಾಡಿದರು ಕೂಡಾ ಜನ ಹನ್ನೊಂದೇ ಆದರು.

ಲೋಕದಲ್ಲಿರುವ ತನುಗಳೆಲ್ಲ ತನ್ನನ್ನು ತಾನು ಅರಿಯದ ತನುಗಳೇ ಆಗಿವೆ. ತನ್ನನ್ನು ತಾನು ಮರೆತಿವೆ. ಲೋಕದ ಜನ ತನಗೆ ಕಾಣುತ್ತಾರೆ. ತಾನು ತನಗೆ ಕಾಣುವುದಿಲ್ಲ. ಹನ್ನೆರಡು ಜನ ಬುದ್ಧಿವಂತರ ಕತೆಯದು ಮರೆತ ತನ್ನನ್ನು ತಾನು ಅರಿಯುವ ಸೂತ್ರವೇ ಆಗಿದೆ.

ನಿಮ್ಮನ್ನು ಅರಿಯುವವರನು ಅರಿಯುವೆನು. ನಿಮ್ಮನ್ನು ಮರೆತವರನ್ನು ಮರೆಯುವೆನು. ಅರಿವೆಂಬ ಗುರುದೇವನೇ, ನೀನು ಎನ್ನ ತನುವಿನಲ್ಲಿಯೇ ತನ್ಮಯವಾಗಿದ್ದರೂ, ನಾನು ನಿನ್ನನ್ನು ಅರಿಯದಂತೆ ಮಾಡಿರುವಿ. ಮನವೆಂಬ ಮಾಯೆಯನ್ನು ತನುವಿನಲ್ಲಿ ಸೃಷ್ಟಿ ಮಾಡಿ, ಸಕಲ ಗುರು ಹಿರಿಯರನ್ನು ಜರಿಯುವಂತೆ ಮಾಡಿರುವಿ. ಇವೆಲ್ಲವನ್ನೂ ನೀನು ನನಗೆ ತೋರಿ ನೀ ಗೆಲುವೆಯಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

**707**

**ನಿಮ್ಮ ನುಡಿಯ ಇರವಿನಂತೆ,**

**ಪ್ರಮಥರ ಇರವೊ, ನಿಮ್ಮ ಇರವೊ ?**
**ಒಂದಕ್ಕೊಂದು, ಒಂದಕ್ಕೊಂಬತ್ತು ಮಾಡಿ ನುಡಿದಡೆ,**
**ಸಹಜವೆಂಬುವ ಭಾವ ಅದೆಂತು ?**
**ಕಪಿಲಸಿದ್ಧಮಲ್ಲಿಕಾರ್ಜುನ ಶರಣರಲ್ಲಿ ಸಹಜಪ್ರೇಮವುಳ್ಳಡೆ,**
**ಸಕಲರ ನುಡಿಯೆ ಇಷ್ಟ ಕೇಳಾ, ಕಿನ್ನರಯ್ಯಾ.**

ಕಾಯದಲ್ಲಿ ಅರಿವೆಂಬ ಗುರುದೇವನು ಇದ್ದಾನೆ; ಮನವೆಂಬ ಭಕ್ತನೂ ಇದ್ದಾನೆ. ನಿಮ್ಮ ನುಡಿ, ನಿಮ್ಮ ಮೇಲೆ ಆಸಕ್ತಿ ಹೊಂದಿದ ಭಕ್ತನಿಗೆ ಮಾತ್ರ ಕೇಳುತ್ತದೆ. ನೀವು ನುಡಿದಂತೆ ಭಕ್ತ ನುಡಿದು ನಡೆದು ತೋರಿಸುತ್ತಾನೆ. ಅದು ನಿಮಗೆ ಮಾತ್ರ ಕಾಣುತ್ತದೆ. ನಿಮ್ಮನ್ನು ಅರಿತ ಶರಣರಿಗೆ ಮಾತ್ರ ಕಾಣುತ್ತದೆ.

ಒಂದು ಕಾಯದಲ್ಲಿ ನೀವು ಇರುವಿರಿ; ನಿಮ್ಮನ್ನು ತಿಳಿದ ನಿಮ್ಮ ಭಕ್ತನೂ ಇರುವನು. ನಿಮ್ಮಿಬ್ಬರ ಇರುವಿಕೆ ನಿಮ್ಮನ್ನರಿತವರಿಗೆ ಮಾತ್ರ ಕಾಣುತ್ತದೆ.

ನೀವು ನುಡಿದ ನುಡಿ ನಿಮ್ಮ ಭಕ್ತನಿಗೆ ಮಾತ್ರ ಕೇಳುತ್ತದೆ. ಏಕೆಂದರೆ ನೀವು ನಿಮ್ಮ ಭಕ್ತನಿಗಾಗಿ ಮಾತ್ರ ನುಡಿಯುವಿರಿ. ಇತರರಿಗೆ ಕೇಳುವುದಿಲ್ಲ. ಇದು ನಿಮ್ಮ ಇರುವಿಕೆ. ನೀವು ನುಡಿದದ್ದನ್ನು ಭಕ್ತ ನುಡಿಯುತ್ತಾನೆ. ಅದು ಲೋಕಕ್ಕೆಲ್ಲ ಕೇಳುತ್ತದೆ. ನೀವು ನುಡಿದಂತೆ ನುಡಿದು ನಡೆದವನೇ ಭಕ್ತನಾಗುತ್ತಾನೆ; ಶರಣನಾಗುತ್ತಾನೆ. ಪ್ರಮಥರ ಸಾಲಿನಲ್ಲಿ ಸೇರುತ್ತಾನೆ. ಲೋಕದ ಎಣಿಕೆಗೆ ಬರುತ್ತಾನೆ.

ಒಂದು ಕಾಯದಲ್ಲಿ ನಿಮ್ಮ ಇರುವಿಕೆಯೂ ಇದೆ. ನಿಮ್ಮನರಿತ ಪ್ರಮಥರ ಇರುವಿಕೆಯೂ ಇದೆ. ನಿಮ್ಮ ನುಡಿ ಸಹಜ. ಪ್ರಮಥರಿಂದ ಹೊರಬಂದ ನುಡಿಯೂ ನಿಮ್ಮ ನುಡಿಯೇ ಆಗಿರುವುದರಿಂದ ಅದು ಕೂಡಾ ಸಹಜವೇ ಆಗಿದೆ.

ತನು ಒಂದೇ. ಅದನ್ನು ಒಂದು ಎಂದು ತಿಳಿಯುವುದಕ್ಕಾಗಿ ಒಂಬತ್ತು ಮಾಡಿ ನುಡಿಯುವ ಭಾವವನ್ನು ಸಹಜವೆನ್ನಲು ಸಾಧ್ಯವೇ ?

ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಅರಿತ ಶರಣರಲ್ಲಿ, ಲೋಕಕ್ಕೆ ಸಹಜಪ್ರೇಮವುಳ್ಳಡೆ, ಸಕಲರ ನುಡಿಯೂ ಇಷ್ಟವಾಗಿಯೇ ಇರುತ್ತದೆ ಎಂದು ಸಿದ್ಧರಾಮ ಶಿವಯೋಗಿಗಳು ನುಡಿಯ ಬಗ್ಗೆ ಕಿನ್ನರಯ್ಯ, ಶರಣನಿಗೆ ವಿವರಿಸಿ ಹೇಳಿದ್ದಾರೆ.

ಶಬ್ದದಲ್ಲಿ ಸು-ಶಬ್ದ ಕು-ಶಬ್ದ ಎಂಬುದಿಲ್ಲ. ಅರಿವು ಮಾತ್ರ ಇದೆ. ಅರಿವಾಗಲೆಂದು ಗುರುದೇವ ತನ್ನ ಭಕ್ತನಿಗಾಗಿ ನುಡಿದ ನಿಃಶಬ್ದ, ಭಕ್ತನಿಂದ ಶಬ್ದವಾಗಿ ಹೊರಬಂದು ಇಡೀ ಲೋಕವೇ ಕೇಳುವಂತಹ ಶಬ್ದವಾಗಿದೆ. ಅದು ಒಂದೇ. ಅದರಲ್ಲಿ ಅರಿವಿನ ಅಮೃತ ಮಾತ್ರ ಇದೆ. ಅರಿವಿನ ಅಮೃತ ಪಾನ ಮಾಡುತ್ತಾ ಕೇಳುವ ಶರಣರಿಗೆ ಸಕಲರ ನುಡಿಗಳೂ ಇಷ್ಟವಾಗುತ್ತವೆ ಎಂದು ಕಿನ್ನರಯ್ಯನಿಗೆ ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಅವರಿಗಾಗಿ ಹೇಳಿದ ನುಡಿ ಸಕಲ ಓದುಗರೂ ಕೇಳಲೆಂದು ವಚನದ ಮೂಲಕ ದಾಖಲಿಸಿದ್ದಾರೆ.

**708**

**ನಿಮ್ಮ ಶ್ರೀಪಾದವ ಹರಿದು ಹತ್ತುವ**
**ನೆನೆವ ಮನವ ಕೆಡಿಸಲೆಂದು**
**ಮೋಹದ ಗಾಳಿ ಕೈ ವೀಸಲೊಡನೆ**

**ಕೋಪದ ಕಿಚ್ಚು ಹತ್ತಿ ಬೆಂದೆನಯ್ಯಾ.**
**ನಿಮ್ಮ ನೆನೆವ ಮನವ ಕಾಡುವ ವಿಧಿಯ**
**ಕೊಂದು ನೆಲೆಸೆನ್ನಲ್ಲಿ ಕಪಿಲಸಿದ್ಧ ಮಲ್ಲಿನಾಥ ದೇವರದೇವ.**

ಸರ್ವರಲ್ಲಿ ನೀನಿದ್ದರೂ, ನೀನಿದ್ದು ಸಕಲರನ್ನೂ ಕೈ ಮಾಡಿ ಕರೆದರೂ ನಿನ್ನ ಪರಿಚಯವಿಲ್ಲದವರು ನಿನ್ನನ್ನು ಒಲ್ಲರು. ಆದರೂ ಅವರು ಬೇಡಿದ್ದನ್ನು ಕೊಡುವ ಕರುಣಾಮಯಿ ನೀನು.

ಕಳ್ಳ ನಿನ್ನನ್ನು ಬೇಡಿಯೇ ಕಳುವು ಮಾಡಲು ಹೋಗುತ್ತಾನೆ ; ಅವನಿಗೆ ನೀನು ತಥಾಸ್ತು ಎನ್ನುವಿ. ಭಿಕ್ಷುಕ ನಿನ್ನ ಬೇಡಿಯೇ ಭಿಕ್ಷೆ ಬೇಡಲು ಹೋಗುತ್ತಾನೆ. ಅವನಿಗೂ ತಥಾಸ್ತು ಎನ್ನುವಿ ನೀನು. ಭ್ರಷ್ಟಾಚಾರಿ ವಿಷಯಲಂಪಟ ಕೊಲೆ ಗಡುಕನಿಗೆ ನೀನು ಯಾರು ಎಂದು ತಿಳಿಯದಿದ್ದರು ಕೂಡಾ, ಅವನು ಕೂಡಾ ನಿನ್ನನ್ನು ಪೂಜಿಸಿಯೇ ಅವನ ಕೆಲಸಕ್ಕೆ ಹೋಗುತ್ತಾನೆ, ಆದರೂ ಅವರೆಲ್ಲರಿಗೆ ನೀನು ಬೇಡಿದ್ದನ್ನು ಕೊಡುವಿ. ಅವರಾರೂ ನಿಮ್ಮ ಶ್ರೀಪಾದ ಬೇಕೆಂದು ಕೇಳಲಿಲ್ಲ.

ನಿಮ್ಮ ಶ್ರೀಪಾದ ಬೇಕೆಂದು ಕೇಳಿದ ನಿನ್ನವನಿಗೆ ನೀನು ಕಾಡಿಸುವುದು ಉಚಿತವೆ ? ಮೋಹದ ಗಾಳಿ ಬೀಸಿ ಕೋಪದ ಕಿಚ್ಚು ಹೊತ್ತಿಸಬೇಕೆ ನನ್ನಯ್ಯಾ.

ನಿಮ್ಮ ನೆನೆವ ಮನವ ಕಾಡುವ ವಿಧಿಯ ಕೊಂದು ನೆಲೆಸೆನ್ನಲ್ಲಿ ಎಂದು ಹಗಲಿರುಳೆನ್ನದೆ ಬೇಡುವ ಮನಕ್ಕೆ ನಿನ್ನ ದರುಶನ ನೀಡಿ ಘನ ಮನವನ್ನಾಗಿಸು ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

**709**

**ನಿರ್ವಾಣ ಪುರುಷರಿಗೆ ಕ್ಷುಧೆಯಾಗಿ ಕಾಡಿತ್ತು.**
**ಅಯ್ಯಾ, ಮಹಾಯೋಗಿಗಳಿಗಾಗಲೀ**
**ಕರ್ಮ ತಾತ್ಪರ್ಯಕೆ ತನ್ನ ಮಯವಿತ್ತುದೈ**
**ಇನ್ನೇವೆನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಿದ್ಧಾರ್ಥ ತನ್ನನ್ನು ತಾನು ತಿಳಿಯಲೇಬೇಕೆಂದು ಕಾಡಿಗೆ ಹೋದ. ಸುಖದ ಸುಪ್ಪತ್ತಿಗೆಯಲ್ಲಿ ಮಲಗಿದ ರಾಜಕುಮಾರ ಆತ. ಈ ಎಲ್ಲ ಬಾಹ್ಯ ಸುಖಕ್ಕಿಂತಲೂ ತನ್ನನ್ನು ತಾನು ಅರಿಯಲೇಬೇಕೆಂಬ ಆಂತರಿಕ ಸುಖದ ಬಯಕೆ ಹೆಚ್ಚಾಯಿತು. ತಾನು ಅನುಭವಿಸಿದ ಪೂರ್ವಾಶ್ರಯದ ಸುಖ ನೆನಪಿಗೆ ಬರಲೇ ಇಲ್ಲ. ನಿರ್ಜನ ಪ್ರದೇಶ, ಕಾಡು, ಕ್ರೂರಮೃಗಗಳು, ಕಿತ್ತು ತಿನ್ನುವ ಹಸಿವು, ಬಾಯಾರಿಕೆ, ಇವು ಯಾವು ಆಂತರಿಕ ಸುಖದ ಬಯಕೆಯನ್ನು ಹಿಮ್ಮೆಟ್ಟಲಿಲ್ಲ.

'ಸಿದ್ಧಾರ್ಥ'ನ ತನುವಿನಲ್ಲಿಯೇ 'ಬುದ್ಧ' ತನ್ಮಯವಾಗಿದ್ದರೂ 'ಸಿದ್ಧಾರ್ಥ'ನಿಗೆ 'ಬುದ್ಧ' ದರುಶನ ನೀಡಲು ಎಂಟು ವರುಷಗಳ ಅವಧಿ ಬೇಕಾಯಿತು. ಈ ಅವಧಿಯಲ್ಲಿ ನಿರ್ವಾಣದ ಸುಖ ಕ್ಷುದ್ರದೇವತೆಯಾಗಿ ಕಾಡಿತು.

ವರ್ಧಮಾನ ಕೂಡಾ ರಾಜಕುಮಾರ. ಸುಖದಲ್ಲಿಯೇ ಉಂಡು ಸುಖದ ಡೇಗು ಡೇಗಿದವನು. ಆದರೂ ನಿರ್ವಾಣಕ್ಕಾಗಿ ಆತ್ಮಸಾಕ್ಷಾತ್ಕಾರಕ್ಕಾಗಿ ಕಾಡಿಗೆ ಹೋದ. ಅರಮನೆಯನ್ನು ಮರೆತು ಕಾಡಲ್ಲಿ ಅಲೆದ. ಮೈತುಂಬಾ ರಕ್ತಗಾಯ. ಮೈಮೇಲಿನ ಬಟ್ಟೆಗಳು ಬೇಲಿಗೆ ಸಿಕ್ಕು ಕಿತ್ತು ಹೋದವು. ಅದ್ಯಾವುದರ ಪರಿವೆಯಿಲ್ಲದೆ ನಿರ್ವಾಣದ ಪರಮ ಸುಖ ಕೈ ಮಾಡಿ ಕರೆಯುತ್ತಿತ್ತು.

ನಿರ್ವಾಣ ಸುಖದ ಹಂಬಲ ಒಂದುಕಡೆಯಾದರೆ, ಮಾಯೆಯ ಕಾಡಾಟ ಮತ್ತೊಂದು ಕಡೆ. ಮಾಯೆಯ ಸುಖ ಗೊತ್ತಿದೆ. ಅದು ಸುಳ್ಳು ಎಂದು ಗೊತ್ತಿದೆ. ಹೀಗಾಗಿ ಮಾಯಾಮಯವಾದ

ಸುಖ ನಿರ್ವಾಣದ ಬಯಕೆವುಳ್ಳ ಪರಮ ಪುರುಷರನ್ನು ಕಾಡಿದರೂ ಅದನ್ನು ತುಳಿದು ಮುನ್ನುಗ್ಗುತ್ತಾರೆ. ಕರ್ಮಯೋಗ ಜ್ಞಾನಯೋಗ ಎಂದು ಎರಡು ಮಾರ್ಗಗಳು. ತನು ಗರ್ಭದಿಂದ ಹೊರಬಂದ ಮೇಲೆ ಎರಡು ಮಾರ್ಗಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳುತ್ತದೆ. ಎಲ್ಲಿ ನೋಡಿದರೂ ಕರ್ಮಯೋಗವನ್ನು ಆಯ್ಕೆ ಮಾಡಿಕೊಂಡ ತನುಗಳೇ ಸಿಕ್ಕುತ್ತವೆ.

ಕಾವಿ ನಿಲುವಂಗಿ ಜನಿವಾರ ರುದ್ರಾಕ್ಷಿ ಲಿಂಗ ಶಿಲುಬೆ ಧರಿಸಿ, ಗಡ್ಡ ಬಿಟ್ಟು ಟೊಪ್ಪಿಗೆ ಹಾಕಿಕೊಂಡು ಮಠಮಂದಿರ ಆಶ್ರಮಗಳನ್ನು ಕಟ್ಟಿಕೊಂಡು ಬ್ರಹ್ಮಚರ್ಯವನ್ನು ಪಾಲಿಸುವ ತನುಗಳು ಕೂಡಾ ಕರ್ಮಯೋಗಿಗಳೇ ಆಗಿದ್ದಾರೆ. ಏಕೆಂದರೆ ಜ್ಞಾನಯೋಗಕ್ಕೆ ಯಾವ ವೇಷದ ಅವಶ್ಯಕತೆಯೂ ಇಲ್ಲ. ಕಳ್ಳ ದರೋಡೆಕೋರ ಭ್ರಷ್ಟಾಚಾರಿ ಲಂಚ ಸ್ವೀಕರಿಸಿ ಉಪಜೀವನ ನಡೆಸುವ ತನುಗಳು ಕೂಡಾ ಕರ್ಮಯೋಗಿಗಳೇ ಆಗಿದ್ದಾರೆ.

ಯೋಗ ಅಂದರೆ ಕೂಡುವುದು. ತನು, ಮನ, ಜ್ಞಾನ ಈ ಮೂರು ಒಂದು ಮತ್ತೊಂದರಲ್ಲಿ ಕೂಡುವುದು. ತನುವನ್ನು ಆವರಿಸಿದ ಮನ ತನುವಿನಲ್ಲಿ ಕೂಡಿ ತನು ಮನ ಒಂದಾದರೆ ಅದು ಕರ್ಮಯೋಗ ಎಂದು ಕರೆಯಿಸಿಕೊಳ್ಳುತ್ತದೆ. ತನುವಿನಲ್ಲಿ ತನ್ಮಯವಾದ ಜ್ಞಾನ ತನುವಿನಲ್ಲಿಯೇ ಇದ್ದು ತನುವನ್ನು ಮನವನ್ನು ತನ್ನತ್ತ ವಾಲಲು ಸದಾ ಕೈಮಾಡಿ ಕರೆಯುತ್ತದೆ. ಹೀಗಾಗಿ ಕರ್ಮಯೋಗಿ ಸಹಜನಲ್ಲ.

ರಾಜನಿಗೆ ರಾಜ್ಯ ವಿಸ್ತಾರಕ್ಕಾಗಿ ಸದಾ ಯುದ್ಧ ಮಾಡುವ ಆಸೆ, ಪೀಠಾಧಿಪತಿ, ಜಗದ್ಗುರು, ಆಶ್ರಮವಾಸಿಗೆ ಸದಾ ತನ್ನ ಆಶ್ರಮ ಬೆಳೆಸುವ ಆಸೆ. ಮನದಲ್ಲಿ ಉಂಟಾಗುವ ಆಸೆಯ ತೃಪ್ತಿಗಾಗಿ ತನುವನ್ನು ಮನ ಎಲ್ಲಿಗಾದರೂ ಕರೆದುಕೊಂಡು ಹೋಗುತ್ತದೆ. ತನುವಿನೊಂದಿಗೆ ತೃಪ್ತಿಪಡುತ್ತದೆ.

ಮನಸ್ಸಿಗೆ ಬಾಹ್ಯ ವಸ್ತುಗಳ ಮೇಲೆ ಆಸೆಯಾದರೆ ಕರ್ಮಯೋಗ. ಇದು ಬೇಗ ಲಭ್ಯವಾಗುತ್ತದೆ. ಇದಕ್ಕಾಗಿ ಪ್ರಾಣ ಕಳೆದುಕೊಳ್ಳಲು ತನುವನ್ನು ಮನ ಸಿದ್ಧಪಡಿಸುತ್ತದೆ.

ಮನಸ್ಸಿಗೆ ಆಂತರಿಕ ಜ್ಞಾನದ ಮೇಲೆ ಆಸೆಯಾದರೆ ವಸ್ತುಗಳು ತೃಣವಾಗಿ ಕಾಣುತ್ತವೆ. ತನುವಿನಲ್ಲಿದ್ದ ಜ್ಞಾನದ ದರ್ಶನ ಮನಸ್ಸಿಗೆ ಆದ ಮೇಲೆ, ಮನ ಜ್ಞಾನದಲ್ಲಿಯೇ ಸಂಗಮವಾಗಿ ಜ್ಞಾನಿಯೇ ತಾನಾಗುತ್ತದೆ. ಮನ ಘನದಲ್ಲಿ ಕಳೆದು ಹೋಗಿ ಘನಮನವಾಗುತ್ತದೆ. ಸಿದ್ಧಾರ್ಥ ಬುದ್ಧನಾದಂತೆ, ವರ್ಧಮಾನ ಮಹಾವೀರನಾದಂತೆ.

ಮನ ತನುವನ್ನು ಹಿಡಿದು ಕರ್ಮಯೋಗಕ್ಕೆ ಹೇಗೆ ಕೃಷಿ ಮಾಡುತ್ತದೆಯೋ ಹಾಗೆಯೇ ತನುವಿನಲ್ಲಿಯೇ ತನ್ಮಯವಾದ ಜ್ಞಾನಕ್ಕಾಗಿ ತನುವನ್ನು ಆವರಿಸಿದ ಮನ ಕೃಷಿ ಮಾಡಲೇಬೇಕು.

ಮನ ತನುವನ್ನು ಹಿಡಿದು ಕರ್ಮಕ್ಕಾಗಿ ಹೇಗೆ ಹಗಲಿರುಳೆನ್ನದೆ ತನ್ನ ರಕ್ಕಸ ರೂಪವನ್ನು ಪ್ರಕಟಪಡಿಸಿ ದುಡಿದು ಸುಖಿಸುತ್ತದೊ ಹಾಗೆಯೇ ಜ್ಞಾನಯೋಗಕ್ಕಾಗಿ ಒಂದು ಚೂರೂ ಆಸಕ್ತಿ ತೋರದ ಮನವನ್ನು ಕುರಿತು ಸಿದ್ಧರಾಮ ಶಿವಯೋಗಿಗಳು, ಕರ್ಮ ತಾತ್ಪರ್ಯಕೆ ತನ್ನಮಯವಿತ್ತುದೈ ಇನ್ನೇವೆನ್ನೈ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದಿದ್ದಾರೆ.

**710**

**ನಿರ್ವಾಣ ಹೋಹರ ಕಂಡರೆ ಅವರನರಿವ ಕೇಳಿರಣ್ಣಾ.**
**ಕ್ರೋಧ-ಲೋಭ-ಹರುಷಾದಿವೆರಸಿಹರ ಕಾಣೆವಣ್ಣಾ.**
**ಅಯ್ಯಾ, ಆನೀಸುವೆರಸಿ ನಿರ್ವಾಣಿಯೆಂದರೆ,**
**ಕಪಿಲಸಿದ್ಧ ಮಲ್ಲಿನಾಥಯ್ಯನು ನಗುವನಯ್ಯಾ.**

ಕಾಯವನ್ನು ಆವರಿಸಿದ ಮನ ಕಾಯದ ಮೇಲೆ ಮೋಹ ಮಾಡಿ, ಕಾಯವನ್ನು ಮೋಹಿಸುತ್ತದೆ; ಕಾಮಿಸುತ್ತದೆ.

ಕ್ರೋಧ ಲೋಭ ಹರುಷಾದಿಗುಣಗಳು ಕಾಯದಲ್ಲಿ ಹುಟ್ಟಿ, ಮನ ಕಾಯದೊಂದಿಗೆ ಸಂಗ ಮಾಡುತ್ತಾ ಕಾಯದಲ್ಲಿಯೇ ಕಾಲ ಕಳೆಯುತ್ತದೆ.

ಕಾಯದೊಂದಿಗೆ ಸಂಗ ಮಾಡಿ, ಕಾಮ ಕೇಳಿ ಮಾಡುವ ಮನಕ್ಕೆ, ನಿರ್ವಾಣ ಎನ್ನುವ ಶಬ್ದ ಕೂಡಾ ಸುಖ ಕೊಡುತ್ತದೆ. ಹಾಗಂದರೇನೆಂದು ಅದಕ್ಕೆ ಗೊತ್ತಾಗುವುದೇ ಇಲ್ಲ. ಧ್ಯಾನ ಭಂಗಿಯಲ್ಲಿ ಕುಳಿತು ಕಾಮ-ಕ್ರೋಧ-ಲೋಭ-ಹರುಷಾದಿಗಳೊಂದಿಗೆ ಸದಾ ಕಾಲ ಕಳೆಯುವ ಮನ ನಿರ್ವಾಣದ ಮಾತನಾಡಿದರೆ ಅದು ನಿರ್ವಾಣಿಯಲ್ಲ.

ಕಾಮ ಕ್ರೋಧಾದಿ ಅರಿಷಡ್ವರ್ಗಗಳು ಮನಕ್ಕೆ ಹೇಗೆ ರುಚಿಸುತ್ತವೆಯೋ ಹಾಗೆಯೇ ನಿರ್ವಾಣದ ಮಾತುಗಳು ಕೂಡಾ ಮನಕ್ಕೆ ರುಚಿಸುತ್ತವೆ.

ಅರಿಷಡ್ವರ್ಗಗಳನ್ನಿಟ್ಟುಕೊಂಡು ತಾನು ನಿರ್ವಾಣಿಯೆಂದರೆ ತನುವಿನಲ್ಲಿಯೇ ತನ್ಮಯವಾದ ಅರಿವಿನ ಮಲ್ಲಯ್ಯನು ನಗುವನಯ್ಯಾ.

ಕಾಮಾದಿ ಅರಿಷಡ್ವರ್ಗಗಳು ಮನಕ್ಕೆ ತೃಣವೆನ್ನಿಸುತ್ತದೆ. ತನುವಿನಲ್ಲಿಯೇ ತನ್ಮಯವಾದ ಅರಿವು ಘನವೆನ್ನಿಸುತ್ತದೆ. ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ಇವುಗಳ ಮೂಲಕ ಮನ ತನುವಿನೊಂದಿಗೆ ಸುಖಿಸಬೇಕಾದರೆ ತನುವಿಗೆ ಬಾಹ್ಯವಸ್ತುಗಳು ಬೇಕಾಗುತ್ತವೆ. ಮನಕ್ಕೆ ನಿರ್ವಾಣದ ಆಸೆಯಾದರೆ ಅದಕ್ಕೆ ತನುವಿನ ಅವಶ್ಯಕತೆಯಿಲ್ಲ. ತನುವಿನಲ್ಲಿಯೇ ತನ್ಮಯವಾದ ಅರಿವಿನ ಮಲ್ಲಯ್ಯನೊಂದಿಗೆ ಸಂಗ ಮಾಡುತ್ತದೆ.

ಆಹಾರ ನಿದ್ರೆ ಮೈಥುನಗಳು, ಸಪ್ತವ್ಯಸನಗಳು, ಅಷ್ಟಮದಗಳು ತನುವಿನಲ್ಲಿ ಇಲ್ಲವಾಗುತ್ತವೆ. ಘನದೊಂದಿಗೆ ಬೆರೆತು ಘನಮನವಾಗುವ ಆಸೆ ಮನಕ್ಕೆ ಅಧಿಕವಾಗುತ್ತದೆ. ನಿರ್ವಾಣದೆಡೆಗೆ ಹೋಗುವ ಬಯಕೆಯಾದ ಮನವನ್ನು ಘನ ಅಪ್ಪಿಕೊಂಡು ತನ್ನಂತೆ ಮಾಡಿಕೊಳ್ಳುತ್ತದೆ.

**711**

**ನಿಷ್ಕಳಾತ್ಮನನು ಅರ್ಚಿಸೇನೆಂದೆಂಬೆ**
**ಆ ನಿಷ್ಕಳವನರ್ಚಿಸುವ ಪರಿ ಹೇಂಗೊ? ಎಲೆ ಅಯ್ಯಾ:**
**ನೀನು ಸಕಲದೊಳಗೆ ಇದ್ದು ನಿಷ್ಕಳವ ಭೇದಿಸಿ ಪೂರತನಾದೆನೆಂಬೆ.**
**ನೀನೀ ಬೀಡಲಿರದಿದ್ದು ಒಬ್ಬಳ ಸಂಗವನ್ನೈವರು ಮಾಡುವಲ್ಲಿ**
**ಕಾಬ ಪರಿಯು ಹೇಗೊ? ಗುರು ಕರುಣವುಳ್ಳವಂಗಲ್ಲದೆ.**
**ಅನಾಹತ ಲೋಕದಲ್ಲಿ ವಿಶ್ರಮಿಸುವಲ್ಲಿ,**
**ಮೂಲ ತೊಡಗಿ ಸಾದಾಖ್ಯಪರಿಯಂತರ ಹೊಲಬುದಪ್ಪಿ ಬಪ್ಪಾಗ**
**ಕಂಡವರಾರೊ ನಿನ್ನ ಪರಿಯ, ಗುರುಕರುಣವುಳ್ಳವಂಗಲ್ಲದೆ.**
**ಆಧಾರ ಮೂಲ ಮಧ್ಯ ಅಪರಸ್ಥಾನ**
**ಹೃತ್ಸರೋಜದೊಳಿರ್ದ ಕನ್ನಿಕೆ**
**ಬೆಳಗುಗೊಡನಂ ಹೊತ್ತು ಸೂಸಲೀಯದೆ**

**ಮೂವತ್ತಾರು ಮನೆಯನು ನೋಡಿ**
**ಸಾವಿರಂಗ ಪ್ರತಿಷ್ಠೆಯ ಮಾಡಿ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ**
**ಇದ್ದೆಸೆಯನಿದ್ದೆಸೆಯಾದಳು.**

ಪರಮಾತ್ಮನನ್ನು ಪೂಜಿಸುವೆನೆಂದೆಂಬೆ ; ಆ ಪರಮಾತ್ಮನನ್ನು ಪೂಜಿಸುವ ಬಗೆ ಹೇಗೆ ? ನೀನು ಸಕಲದೊಳಗೆ ಇದ್ದು ನಿಷ್ಕಳ ಪರಮಾತ್ಮನನ್ನು ಭೇದಿಸಿ ಪೂಜಿಸಿದೆನೆಂದೆಂಬೆ. ಹಾಗಾದರೆ ಐದು ಜನ ಸೇರಿ ಒಬ್ಬಳ ಸಂಗ ಮಾಡಿದುದನು ನೀನು ಕಂಡಿರುವೆಯಾ ? ಗುರುದೇವನ ಕೃಪೆ ಆದವರಿಗೆ ಮಾತ್ರ ಇದು ಸಾಧ್ಯವಾಗುವುದು.

''ಒಬ್ಬಳು ಐವರೊಂದಿಗೆ ಹಾದರ ಮಾಡುವಳು'' ಇದು ಲೋಕದ ನಿಯಮ. ಲೋಕಕ್ಕೆ ಗುರುದೇವನ ಕೃಪೆ ಇಲ್ಲ. ಲೋಕ ಗುರುದೇವನ ಕೃಪೆಗಾಗಿ ಆಸೆ ಮಾಡುವುದಿಲ್ಲ. ಲೋಕ ಮಾಡುವ ಪರಮಾತ್ಮನ ಪೂಜೆಯೇ ಬೇರೆ. ಗುರುಕೃಪೆಯಾದವನು ಮಾಡುವ ಪೂಜೆಯೇ ಬೇರೆ.

ಆಧ್ಯಾತ್ಮ ಎಂದರೆ ಬರೀ ಮಾತಲ್ಲ. ತಾನು ಆಡುವ ಮಾತು ತನ್ನ ಅನುಭವಕ್ಕೆ ಬರಬೇಕು. ಆ ತಂತ್ರಗಾರಿಕೆ ತನಗೆ ಗೊತ್ತಿದ್ದರೆ ಮಾತ್ರ ತಾನು ನುಡಿದ ಮಾತನ್ನು ವಿವರಿಸಿ ತಿಳಿಯುವಂತೆ ಹೇಳುತ್ತಾನೆ. ತಂತ್ರಗಾರಿಕೆಯ ಮಾತನ್ನು ಆಲಿಸಿ ಗುರುದೇವ ತಲೆದೂಗುತ್ತಾನೆ.

ಮಹಾಭಾರತದಲ್ಲಿ ವ್ಯಾಸಮಹರ್ಷಿಗಳು ಐವರು ಪಾಂಡವರು ದ್ರೌಪದಿಯೊಬ್ಬಳನ್ನು ವರಿಸುವ ಚಿತ್ರಣವನ್ನು ಚಿತ್ರಿಸಿದರು. ಲೋಕ ಅದನ್ನು ಓದಿ ತನಗೆ ತಿಳಿದಂತೆ ನಂಬಿತು. ಇದು ಅಂತರಾಳದ ಮಾತೆಂದು ಲೋಕ ತಿಳಿಯಲಿಲ್ಲ.

ತನುವನ್ನು ಆವರಿಸಿದ ಮನವೆಂಬ ಹೆಣ್ಣು ಕಣ್ಣಿನ ಮೂಲಕ ದೃಶ್ಯದೊಂದಿಗೆ ಹಾದರ ಮಾಡುತ್ತದೆ. ಕಿವಿಯ ಮೂಲಕ ಶಬ್ದದೊಂದಿಗೆ ಹಾದರ ಮಾಡುತ್ತದೆ. ಮೂಗಿನ ಮೂಲಕ ಗಂಧದೊಂದಿಗೆ ಹಾದರ ಮಾಡುತ್ತದೆ. ನಾಲಿಗೆಯ ಮೂಲಕ ರುಚಿಯೊಂದಿಗೆ ಹಾದರ ಮಾಡುತ್ತದೆ. ಚರ್ಮದ ಮೂಲಕ ಸ್ಪರ್ಶದೊಂದಿಗೆ ಹಾದರ ಮಾಡುತ್ತದೆ. ಹೀಗೆ ಒಬ್ಬಳು ಐವರೊಂದಿಗೆ ಹಾದರ ಮಾಡುವಳು. ಈ ಹಾದರದಲ್ಲಿ ಲೋಕ ನಿರತವಾಗಿದೆ.

ಒಬ್ಬಳ ಸಂಗವನು ಐವರು ಮಾಡುವಲ್ಲಿ ಕಾಬ ಪರಿಯು ಹೇಗೊ ಎಂದು ಸಿದ್ಧರಾಮ ಶಿವಯೋಗಿಗಳು ಪ್ರಶ್ನಿಸಿದ್ದಾರೆ. ಕಣ್ಣ ಮೂಲಕ ನೋಡಿ ಹಾದರ ಮಾಡುವ ಮನವೆಂಬ ಅಜ್ಞಾನದ ಕಣ್ಣಿನೊಂದಿಗೆ, ಕಣ್ಣಲ್ಲಿಯೇ ಇದ್ದ ಜ್ಞಾನದ ಕಣ್ಣು ಸಂಗ ಮಾಡಿದಾಗ, ಅಜ್ಞಾನ ನಾಶವಾಗಿ, ಜ್ಞಾನ ಮಾತ್ರ ಉಳಿಯುತ್ತದೆ. ಹೀಗೆ ಕಿವಿ, ಮೂಗು, ನಾಲಿಗೆ, ಚರ್ಮದಲ್ಲಿದ್ದ ಅಜ್ಞಾನವನ್ನು ಆಯಾ ಭಾಗದಲ್ಲಿದ್ದ ಜ್ಞಾನ ನುಂಗಿದಾಗ, ಅಜ್ಞಾನದ ಹಾದರಕ್ಕೆ ಕಾರಣವಾದ ಮನ ಘನಮನವಾಗುತ್ತದೆ. ಈ ಮಾತು ಗುರುಕೃಪೆಯಾದವನಿಗೆ ಮಾತ್ರ ಗೊತ್ತಾಗುತ್ತದೆ ಹೊರತು ಅನ್ಯರಿಗೆ ಸಾಧ್ಯವಾಗುವುದಿಲ್ಲ.

ಕಾಯ ಕೈಲಾಸವೆಂದು ಕಾಯಕ್ಕೆ ಗೊತ್ತಾಗಬೇಕಾದರೆ, ಕಾಯದಲ್ಲಿರುವ ಅನೇಕ ರಹಸ್ಯಗಳು ಕಾಯವನ್ನು ಆವರಿಸಿದ ಮನಕ್ಕೆ ಗೊತ್ತಾಗಬೇಕು. ಆಗ ಮನ ಕಾಯದ ರಹಸ್ಯವನ್ನು ಗುರುದೇವನ ಸಹಾಯದಿಂದ ಭೇದಿಸುತ್ತಾ, ಕಾಯದ ಮೂಲಕ್ಕೆ ಹೋಗಿ, ಕಾಯದಲ್ಲಿಯೇ ಸಂಗಮವಾದ ಘನಕ್ಕೆ ಶರಣು ಹೋಗಿ ಶರಣಾಗತನಾಗುತ್ತದೆ. ಮನವನ್ನು ಆವರಿಸಿದ ಅಜ್ಞಾನದ ಮೂಲ ಅಡಗಿ ಜ್ಞಾನದ ಮೂಲದಿಂದ ಬಂದುದು ಮನಕ್ಕೆ ನೆನಪಾಗುತ್ತದೆ. ಇದು ಗುರುಕರುಣವುಳ್ಳವಂಗೆ ಮಾತ್ರ ಸಾಧ್ಯವಾಗುತ್ತದೆ.

ಕಾಯ ಮೂವತ್ತಾರು ವಿಧದಲ್ಲಿ ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಕಿನ ಕೊಡ. ಹೃದಯ

ಕಮಲದಲ್ಲಿದ್ದ ಸರೋಜ ಬೆಳಗಿಂಗೆ ಬೆಳಗಾಗಿ ಬೆಳಗುವ ಜ್ಞಾನ ಸೂರ್ಯನನ್ನು ನೋಡಿ ಅರಳುತ್ತಾಳೆ. ಅರಳಿದ ಆ ಜ್ಞಾನದ ಬೆಳಕಿನಲ್ಲಿ ಒಂದಾಗುತ್ತಾಳೆ.

**712**

**ನೀನಲ್ಲದವರ ಹಾರೆನಯ್ಯಾ;**
**ನೀನಲ್ಲದವರ ಬೇಡೆನಯ್ಯಾ;**
**ನೀನಲ್ಲದವರ ಮೂಗಳೆಯನಯ್ಯಾ;**
**ನೀನಲ್ಲದವರ ಬೇಡಿದರೆ ಹುರುಳಿಲ್ಲವಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವನ್ನೇ ಗುರುವನ್ನಾಗಿಸಿಕೊಂಡ ಮನ, ಅರಿವೆಂಬ ಗುರುದೇವನೊಂದಿಗೆ ಆಡಿದ ಮಾತಿದು. ನೀನಲ್ಲದವರ ಹಾರೆನಯ್ಯಾ; ನೀನಲ್ಲದವರ ಬೇಡೆನಯ್ಯಾ; ನೀನಲ್ಲದವರ ಮೂಗಳೆಯನಯ್ಯಾ; ನೀನಲ್ಲದವರ ಬೇಡಿದರೆ ಹುರುಳಿಲ್ಲವಯ್ಯಾ .

ಸಕಲ ಕಾಯಗಳಲ್ಲಿಯೂ ನೀನೇ ಇರುವಿ. ನೀನಿಲ್ಲದ ಕಾಯ ಈ ಭೂಮಿಯ ಮೇಲೆ ಒಂದೂ ಇಲ್ಲ. ನೀನಿರುವಿ ಎಂದು ಕಾಯಕ್ಕೆ ಕಾಯವನ್ನು ಆವರಿಸಿದ ಮನಕ್ಕೆ ಗೊತ್ತಿಲ್ಲದಿದ್ದರೇನಂತೆ ! ನೀನಿರುವಿಯೆಂದು, ನಿನ್ನ ಇರುವಿಕೆ ಗೊತ್ತಾದ ಕಾಯಕ್ಕೆ ಎಲ್ಲೆಲ್ಲೂ ನೀನೇ ಕಾಣುವಿ. ಹೀಗಾಗಿ ಅದು ಬೇಡಿದರೆ ನಿನ್ನನ್ನೇ ಬೇಡುವುದು. ಹಾಡಿದರೆ ನಿನ್ನನ್ನೇ ಹಾಡುವುದು. ಸೆರಗೊಡ್ಡಿ ತನ್ನ ಬಡತನವನ್ನು ನಿನ್ನಲ್ಲಿ ಬಿನ್ನೈಸಿಕೊಳ್ಳುವುದು. ನೀನಲ್ಲದವರ ಬೇಡಿದರೆ ಹುರುಳಿಲ್ಲವಯ್ಯಾ.

ತನು ನಿನ್ನದು; ಆದರೆ ಅದು ನೀನಲ್ಲ. ತನುವನ್ನು ಆವರಿಸಿದ ಮನ ನಿನ್ನದು; ಆದರೆ ಮನವೇ ನೀನಲ್ಲ. ನೀನಲ್ಲದವರ ಬೇಡೆನಯ್ಯಾ. ತನುವೂ ನೀನಲ್ಲ; ಮನವೂ ನೀನಲ್ಲ. ತನುವಿನಲ್ಲಿಯೇ ತನ್ಮಯವಾದ ನಿನ್ನನ್ನು ಬೇಡುವ ಕಲೆ ನಿನ್ನ ಬಲ್ಲವನಿಗೆ ಮಾತ್ರ ಗೊತ್ತಿದೆ. ಆತ ನಿನ್ನನ್ನು ಬೇಡುವಾಗ ತನು ಮನಗಳೆರಡೂ ಅಡ್ಡಿಪಡಿಸುವುದಿಲ್ಲ. ಏಕೆಂದರೆ ಬೇಡುವಾತ ತನು ಮನಗಳೆರಡನ್ನೂ ಮಾತನಾಡಿಸುವುದಿಲ್ಲ.

ಬುದ್ಧ ಬುದ್ಧನನ್ನೇ ಬೇಡಿದ. ಮಹಾವೀರ ಮಹಾವೀರನನ್ನೇ ಬೇಡಿದ. ಇವರಿಬ್ಬರೂ ತನು ಉಳ್ಳ ಮನವನ್ನು ಬೇಡಲಿಲ್ಲ; ಮನ ಉಳ್ಳ ತನುವನ್ನೂ ಬೇಡಲಿಲ್ಲ. ತನುವಿನಲ್ಲಿಯೇ ತನ್ಮಯವಾದ ಬುದ್ಧನನ್ನು ಬುದ್ಧ ಬೇಡಿದ. ಬುದ್ಧ ಬುದ್ಧನನ್ನೇ ಹಾಡಿದ.

ತನುವನ್ನು ಬೇಡಲು ತನುವೇನು ಸ್ವತಂತ್ರವೇ. ಮನವನ್ನು ಬೇಡಲು ಮನವೇನು ಸ್ವತಂತ್ರವೇ? ತನು ಮತ್ತು ಮನವನ್ನು ಬೇಡಿದರೆ ಕೊಡುವುದಕ್ಕಾದರೂ ಅವುಗಳಲ್ಲಿ ತನ್ನದೇ ಆದ ವಸ್ತುಗಳೆ ಇಲ್ಲ. ಹೊನ್ನು ತನ್ನದಲ್ಲ; ಮಣ್ಣು ತನ್ನದಲ್ಲ; ಉಣ್ಣುವ ಅನ್ನವೂ ತನ್ನದಲ್ಲ. ತನ್ನದಲ್ಲದೇ ಇರುವಾಗ ಬೇಡಿದರೆ ಕೊಡಲಾದರೂ ಅವುಗಳಲ್ಲಿ ಏನಿದೆ ?

ನೀನಲ್ಲದವರ ಬೇಡೆನಯ್ಯಾ; ನೀನಲ್ಲದವರ ಬೇಡಿದರೆ ಹುರುಳಿಲ್ಲವಯ್ಯಾ ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ. ಅವರನ್ನೇ ಬೇಡಿದ್ದಾರೆ.

**713**

**ನೀನು ತಾನು ಹಿಡಿಯದುದೆಲ್ಲವ ತೇಜದಲುಡಿಸಿ**

**ಹೆರರಿಗೆ ಭಾಜನ ಮಾಡಿದೆಯವ್ವ**
**ನೀನಿವನಲ್ಲಿದ್ದು ಉಣ್ಣದೆ ಹೋದೆ ಮಗಳೆ.**
**ಅವ್ವಾ, ಇಂತು ಬರಿದಾಗಿ ಬರಿದಾತನ ಕೂಡಿದೆ**
**ಕಪಿಲಸಿದ್ಧ ಮಲ್ಲಿನಾಥನನೆಯವ್ವಾ.**

ಕವಿಯಾದವನು ಅಕ್ಷರಗಳಲ್ಲಿ ನವರಸ ತುಂಬಿ ಓರಣವಾಗಿ ಹೆಣೆದು ಓದುಗರನ್ನು ಅದರಲ್ಲಿ ಮುಳುಗಿಸುತ್ತಾನೆ. ಅನುಭಾವಿ ಅಕ್ಷರಗಳಲ್ಲಿ ಬ್ರಹ್ಮರಸ ತುಂಬಿ ತನುವನ್ನು ಆವರಿಸಿದ ಭ್ರಮೆಯನ್ನು ಹೊಡೆದೋಡಿಸಿ ಬ್ರಹ್ಮನನ್ನಾಗಿ ಮಾಡುತ್ತಾನೆ. ಬ್ರಹ್ಮರಸವೆತ್ತ, ನವರಸವೆತ್ತ ?

ನವರಸ ಪಾನ ಮಾಡುವವನು ಕೆಚ್ಚಲೊಳಗಿದ್ದ ಉಣ್ಣೆಯಂತೆ; ಅದಕ್ಕೆ ಕ್ಷೀರದ ರುಚಿ ಗೊತ್ತಾಗುವುದೇ ಇಲ್ಲ. ಬ್ರಹ್ಮರಸ ಪಾನ ಮಾಡುವವನೇ ಬೇರೆ. ಅವನು ಕಾಮಧೇನುವಿನ ಸವಿಯನ್ನು ಸವಿಯುತ್ತಾನೆ.

''ಕುರಿವಿಂಡು ಕಬ್ಬಿನ ಉಲಿವ ತೋಟವ ಹೊಕ್ಕು ತೆರನನರಿಯದೆ ತನಿರಸದ ಹೊರಗಣ ಎಲೆಯನೆ ಮೆಲಿದವು ! ನಿಮ್ಮನರಿವ ಮದಕರಿಯಲ್ಲದೆ ಕುರಿ ಬಲ್ಲುದೆ ಕೂಡಲಸಂಗಮದೇವಾ''.

ಬಸವಾದಿ ಶರಣರು ಒಂದೊಂದು ಅಕ್ಷರದಲ್ಲಿಯೂ ಬ್ರಹ್ಮರಸವನ್ನೇ ತುಂಬಿದರು; ಕಬ್ಬಿನ ಗದ್ದೆಯನ್ನು ನೆಟ್ಟರು. ರಸಭರಿತ ಕಬ್ಬನು ಬಿಟ್ಟು ಎಲೆಯನ್ನು ಮೇಯುವ ಕುರಿಗಳಿಗೇನುಗೊತ್ತು ಬ್ರಹ್ಮರಸದ ರುಚಿ ? ಅವ್ವ, ತಾಯಿ ನೀನು ಅವನ ಸಂಗ ಮಾಡಿದ್ದರೆ ಜಗವ ಬೆಳಗುವ ಬೆಳಕನ್ನೇ ನಿನಗೆ ಉಡಿಸುತ್ತಿದ್ದ. ಬೆಳಕಿನಲ್ಲಿದ್ದು ನೀನೂ ಬೆಳಕನ್ನು ಕಾಣಲಿಲ್ಲ; ನನ್ನನ್ನೂ ಹೆರರಿಗೆ ಭಾಜನ ಮಾಡಿದೆ. ನಾನು ಮಾಡಿದ ಪಾಪವಾದರೂ ಏನು ?

ತನುವೆಂದರೆ ಬ್ರಹ್ಮರಸ ತುಂಬಿದ ಕಬ್ಬು. ಮನವೆಂಬ ತಾಯಿ ಮುತ್ತಿಗೆ ಹಾಕಿದ್ದಕ್ಕಾಗಿ ಅದು ಬಡವಾಗಿದೆ. ಹಿಂದು ಮುಸಲ್ಮಾನ ಕ್ರೈಸ್ತ ಫಾರ್ಸಿ ಬೌದ್ಧ ಜೈನ ವೀರಶೈವ ಸಿಖ್ ಎಂದು ಕರೆಯಿಸಿಕೊಳ್ಳುತ್ತಲಿದೆ. ಹೆಣ್ಣೆಂದು, ಗಂಡೆಂದು ಕರೆಯಿಸಿಕೊಂಡು ಕಾಮದ ಶಿಪಾಯಿ ಆಗಿದೆ. ಶ್ರೀಮಂತ ಬಡವ ದರಿದ್ರ ಭಿಕ್ಷುಕ ಎಂದು ಕರೆಯಿಸಿಕೊಂಡು ಬ್ರಹ್ಮರಸ ಭರಿತವಾದ ತನು ಹೆರರಿಗೆ ಭಾಜನವಾಯಿತೆ ಹೊರತು ಕೆಚ್ಚಲಲ್ಲಿದ್ದೂ ಉಣ್ಣದೆ ಹೋದೆ ಮಗಳೆ.

''ಕಬ್ಬಿಗೆ ಜೇನಿಟ್ಟಿತ್ತೆಂಬರು ಜೇನಿನ ರುಚಿ ಕಬ್ಬಿಗೆ ಗೊತ್ತಿಲ್ಲ, ಕಬ್ಬಿನ ರುಚಿ ಜೇನಿಗೆ ಗೊತ್ತಿಲ್ಲ. ನಡುವೆ ಸಿಬಿರು ಅಡ್ಡಿಯಾಗಿದೆ '' ತಾಯಿ. ಎಲ್ಲಿ ನೋಡಿದರೂ ನಡೆದಾಡುವ ಕಬ್ಬುಗಳೇ. ಆದರೆ ಕಬ್ಬಿನ ರುಚಿ ಕಬ್ಬಿಗೆ ಗೊತ್ತಿಲ್ಲ. ಮೇಯುವ ಕುರಿಗಳು ತನಿರಸದ ಹೊರಗಣ ಎಲೆಗಳನ್ನೇ ಮೇಯ್ದವು ; ಮದಕರಿಯ ಸುಳಿವು ಕಾಣುತ್ತಿಲ್ಲ ಅವ್ವಾ. ಕೆಚ್ಚಲೊಳಗಿದ್ದೂ ಉಣ್ಣದೆ ಹೋದೆಯವ್ವಾ. ಇಂತು ಬರಿದಾಗಿ ಬರಿದಾತನ ಕೂಡಿ ಬ್ರಹ್ಮರಸ ಭರಿತವಾದ ತನುವನ್ನು ಹೆರರಿಗೆ ಭಾಜನ ಮಾಡಿದೆಯವ್ವಾ.

ತನುವಿನಲ್ಲಿಯೇ ತನಿರಸ ತನ್ಮಯವಾಗಿದ್ದರೂ ತನುವನ್ನು ಹಿಡಿದ ನಿನ್ನಿಂದಾಗಿ ತನು ತನಿರಸ ಕಾಣಲಿಲ್ಲ; ತನುವನ್ನು ಹಿಡಿದ ಮನವೆಂಬ ನೀನು ಕೂಡಾ ತನಿರಸ ಕಾಣಲಿಲ್ಲ.

ಕಪಿಲಸಿದ್ಧ ಮಲ್ಲಿನಾಥಯ್ಯನು 'ನನೆ 'ಯಾಗಿ ತನುವಿನಲ್ಲಿ ಬಚ್ಚಿಟ್ಟುಕೊಂಡಿದ್ದಾನೆ. ನೀನು ನೆನೆಯುವುದೊಂದೆ ತಡ ಹೂವಾಗಿ ಅರಳಿ ಅರಿವಿನ ಪರಿಮಳ ಬೀರುತ್ತಾನೆ. ತನು ಮನ ಘನ ಒಂದಾಗಿ ಬ್ರಹ್ಮಕಮಲ ಅರಳುತ್ತದೆ.

**714**

**ನೀನು ಸಕಲದಲ್ಲಿ ಸ್ವಾತ್ಮಿಸುವ ಭೇದವ**

**ನೀನು ನಿಃಕಲದಲ್ಲಿ ಪ್ರವೇಶಿಸುವ ಭೇದವ**
**ನೀನು ಸಕಲ ನಿಃಕಲಾತ್ಮಕವಾಗಿ ತೊಳಗಿ ಬೆಳಗುತಿಪ್ಪ ಭೇದವ**
**ಅರಿಯಬಹುದೆ ಎಲ್ಲರಿಗೆ ?**
**ಆನಂದಸ್ಥಾನದಲ್ಲಿ ಬೆಳಗುತ್ತಿಪ್ಪ ಅಕ್ಷರದ್ವಯದ ಭೇದವ**
**ಅನ್ಯರಿಗೆಂತರಿಯಬಹುದಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನೀನು ಸಾಕಾರದಲ್ಲಿದ್ದ ನಿರಾಕಾರನು. ಸಾಕಾರದಲ್ಲಿ ಪ್ರವೇಶ ಮಾಡಿ ನಿರಾಕಾರನಾಗಿರುವ ನಿನ್ನನ್ನು ನಿನ್ನವರೇ ಬಲ್ಲರು. ಅವರು ಕೂಡಾ ಸಾಕರದಲ್ಲಿದ್ದೂ ನಿರಾಕಾರವೇ ತಾವಾದವರು.

ನೀನು ಸಕಲದಲ್ಲಿಯೂ ಇದ್ದು ನಿಃಕಲಾತ್ಮಕವಾಗಿ ತೊಳಗಿ ಬೆಳಗುತಿಪ್ಪ ಭೇದವನ್ನು ಭೇದಿಸಿ ನಿನ್ನನ್ನು ಅರಿಯುವುದು ಎಲ್ಲರಿಗೂ ಸಾಧ್ಯವಿಲ್ಲ.

ಕಾಯ ನೋಡಲು ಸಾಕಾರವಾಗಿದ್ದರು, ಕಾಯದ ಸಕಲ ಕಾಯಕ ನಿರಾಕಾರವೇ ಆಗಿದೆ. ಕಣ್ಣು ಸಾಕಾರ ಅದರ ದೃಶ್ಯ ನಿರಾಕಾರ. ನಿರಾಕಾರದ ದೃಶ್ಯಕ್ಕೆ ಸಾಕಾರ ಕಾಣುತ್ತದೆ. ಮತ್ತೊಂದು ನಿರಾಕಾರ ದೃಶ್ಯಕ್ಕೆ ಬರೀ ನಿರಾಕಾರ ಮಾತ್ರ ಕಾಣುತ್ತದೆ.

ಕಣ್ಣು ಎರಡಾದರೂ ಅವುಗಳ ದೃಶ್ಯ ಒಂದೇ. ಕಣ್ಣು ಸಾಕಾರ; ದೃಶ್ಯ ನಿರಾಕಾರ. ನಿರಾಕಾರದ ದೃಶ್ಯಗಳು ಎರಡು. ಒಂದು ದೃಶ್ಯಕ್ಕೆಸಾಕಾರ ಮಾತ್ರ ಕಂಡರೆ ಮತ್ತೊಂದು ದೃಶ್ಯಕ್ಕೆನಿರಾಕಾರ ಮಾತ್ರ ಕಾಣುತ್ತದೆ.

ಸಾಕಾರ ತನುವಿನಲ್ಲಿ ತನ್ಮಯವಾದ ಅರಿವಿನ ದೃಶ್ಯಕ್ಕೆ ಸಾಕಾರ ಗೊತ್ತಿಲ್ಲ; ಹೀಗಾಗಿ ಸಾಕಾರದಲ್ಲಿರುವ ಸತ್ಯವನ್ನು ಮಾತ್ರ ನೋಡುತ್ತದೆ. ಈ ದೃಶ್ಯ ನಿರಾಕಾರ; ಇದು ಸಾಕಾರದಲ್ಲಿರುವ ನಿರಾಕಾರವನ್ನೇ ನೋಡುತ್ತದೆ.

ಸಾಕಾರ ತನುವನ್ನು ಆವರಿಸಿದ ಮನ ನಿರಾಕಾರ. ಇದಕ್ಕೆ ನಿರಾಕಾರ ಗೊತ್ತಿಲ್ಲ. ಸಕಲ ಸಾಕಾರ ವಸ್ತುಗಳಲ್ಲಿ ನಿರಾಕಾರ ತನ್ಮಯವಾಗಿದ್ದರೂ ಕೂಡಾ ಮನೋದೃಶ್ಯಕ್ಕೆ ನಿರಾಕಾರ ಕಾಣುವುದೇ ಇಲ್ಲ. ಹೀಗಾಗಿ ಇದು ಸಾಕಾರವನ್ನೇ ನೋಡುತ್ತದೆ. ಸಕಲದಲ್ಲಿ ನಿಃಕಲಾತ್ಮಕವಾಗಿ ತೊಳಗಿ ಬೆಳಗುತ್ತಿದ್ದರೂ ಬೆಳಗುವ ಬೆಳಕು ಮನೋಮಯವಾದ ಕಣ್ಣಿಗೆ ಕಾಣುವುದಿಲ್ಲ.

ಆನಂದ ಸ್ಥಾನದಲ್ಲಿ ಬೆಳಗುತ್ತಿಪ್ಪ ಶಿವಮಯವಾದ ಅರಿವಿನ ಬೆಳಕು ಅನ್ಯರಿಗೆ ಅರಿಯಲು ಸಾಧ್ಯವಿಲ್ಲ; ಅಂದರೆ ಮನೋಮಯವಾದ ದೃಶ್ಯಕ್ಕೆ ಹೇಗೆ ಸಾಧ್ಯ ಎಂದು ಸಿದ್ಧರಾಮಶರಣರು ಪ್ರಶ್ನಿಸಿದ್ದಾರೆ.

**715**

**ನೀನೆಂದವನೀಗ ಆರು ಬೇಲಿಯ ಕಳವ**
**ಆರೂಢವನು ಮಾಳ್ಪ ನಿನ್ನ ಪದಕೆ**
**ಆರೈದು ಎನ್ನುವನು ಓರಂತೆ ನೋಡದಡೆ**
**ಆನವಗೆ ಗುರಿಯಪ್ಪೆನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಐದು ಕರ್ಮೇಂದ್ರಿಯಗಳು, ಆರು ಅರಿಷಡ್ವರ್ಗಗಳು, ಏಳು ವ್ಯಸನಗಳು, ಎಂಟು ಮದಗಳು ಇವು ತನುವಿಗೆ ಹಚ್ಚಿದ ಬೇಲಿ. ಮನ ಈ ಬೇಲಿಯನ್ನು ದಾಟಿ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ಸನ್ನಿಧಿಗೆ ಹೋಗಬೇಕು. ಆದರೆ ಮನಕ್ಕೆ ಬೇಲಿಯೊಂದಿಗೆ

ಗೆಳೆತನವಿದೆ. ತನಗೆ ತಾನೇ ಹಚ್ಚಿಕೊಂಡು ರೂಢಿಗತವಾದ ಬೇಲಿಯನ್ನು ತನಗೆ ದಾಟಲು ಸಾಧ್ಯವಾಗುವುದಿಲ್ಲ. ಅದಕ್ಕೆ ಆರೂಢಿಯೇ ಆಗಬೇಕು.

ಆರೂಢಿಗೆ ಬೇಲಿ ಕಾಣುವುದೇ ಇಲ್ಲ. ಈತನ ಕೃಪಾದೃಷ್ಟಿ ರೂಢಿಗತವಾದ ಮನದ ಮೇಲೆ ಬಿದ್ದರೆ ಸಾಕು ಮನ ಆರೂಢನೇ ತಾನಾಗುವುದು.

ತನುವನ್ನು ಆವರಿಸಿದ ಮನ ರೂಢಿಯುಳ್ಳವನಾದರೆ, ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಯಾವುದೇ ಆದ ರೂಢಿಯಿಲ್ಲ. ಹೀಗಾಗಿ ಆತನನ್ನು ಆರೂಢ ಎಂದು ಕರೆಯುವರು.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು, ಸಪ್ತವ್ಯಸನಗಳು, ಅಷ್ಟಮದಗಳು ತನುವಿನಲ್ಲಿ ತನ್ಮಯವಾದ ಗುರುದೇವನಿಗೆ ಸಂಬಂಧವಿಲ್ಲ. ಆತನಿಗೆ ಇವು ಕಾಣುವುದೇ ಇಲ್ಲ. ತನುವನ್ನು ಆವರಿಸಿದ ಮನ ಈ ಬೇಲಿಯನ್ನು ಸೃಷ್ಟಿಮಾಡಿ, ತನುವೆಂಬ ತೋಟಕ್ಕೆ ಹಚ್ಚಿದೆ. ತೋಟದಲ್ಲಿಯ ಮರುಜವಣಿಯ ಹಣ್ಣನ್ನು ಮೆಲ್ಲಲು ಮನಕ್ಕೆ ಸಾಧ್ಯವಾಗುತ್ತಿಲ್ಲ. ಏಕೆಂದರೆ ತಾನೇ ಹಚ್ಚಿದ ಬೇಲಿ ತನಗೆ ಮುಳುವಾಗಿದೆ.

ಗುರುದೇವನಿಗೆ ಮನವನ್ನು ತನ್ನಂತೆ ಮಾಡಿಕೂಳ್ಳಬೇಕೆಂಬ ಬಯಕೆ ಆದರೆ ಸಾಕು ಆನವಗೆ ಗುರಿಯಪ್ಪೆನ್ನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.

**716**

**ನೀರಪಟ್ಟಣದೊಳಗೆ ನಿರವಯವ ತಂದಿರಿಸಿ**
**ತೋರಿದನು ಒಂದು ಸೂಚನೆ ಮಾತ್ರವ,**
**ಆನಂದಗುರುವಿನ ಆಜ್ಞೆ ಮೀರಿದಡೆ**
**ಗುರುವೆ ಪಾಲಿಸಿದನ್ನೈ ಶಿಷ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲಜನಕ ಮತ್ತು ಆಮ್ಲಜನಕ ಇವೆರಡೂ ಕಾಣುವುದಿಲ್ಲ. ಕಾಣಬಾರದ ಬಯಲಲ್ಲಿ ಇವೆರಡೂ ಇವೆ. ಜಲಜನಕ ಆಮ್ಲಜನಕವನ್ನು ಒಂದು ಮಾಡಿ, ಕಾಣಬಾರದ ಬಯಲು ಅದರಲ್ಲಿ ಬೆರೆತು, ಕಾಣುವ ಜಲವನ್ನಾಗಿ ಮಾಡಿತು. ಜಲ ಕಾಣುತ್ತದೆ, ಬಯಲು ಕಾಣುವುದಿಲ್ಲ. ಕಂಡುಬರುವ ಜಲಕ್ಕೂ ರೂಪಿಲ್ಲ; ಕಾಣಬಾರದ ಬಯಲಿಗೂ ರೂಪಿಲ್ಲ.

ಕಾಣಬಾರದ ಬಯಲು ಕಂಡುಬರುವ ಜಲ, ಇವೆರಡೂ ಒಂದಾಗಿ ಗರ್ಭಕ್ಕೆ ಹೊಕ್ಕು ನೀರಪಟ್ಟಣವಾಗಿ ಹೊರ ಬಂದಿದೆ ; ತನು ಕಾಯ ಅಂಗ ದೇಹ ಶರೀರವೆಂದು ಹೆಸರು ಪಡೆದಿದೆ. ಇದೊಂದು ದೊಡ್ಡ ಪಟ್ಟಣ. ಜಲವೇ ರಕ್ತವಾಗಿದೆ. ಜಲವೇ ಗಟ್ಟಿಗೊಂಡು ಎಲುಬಿನ ಹಂದರವಾಗಿದೆ. ಜಲವೇ ಮಾಂಸವಾಗಿ ಎಲುಬಿಗೆ ಮೆತ್ತಿಕೊಂಡಿದೆ. ಮಜ್ಜಾ ಮೇದಸ್ಸು ಕೂಡಾ ಜಲದಿಂದಲೇ ನಿರ್ಮಾಣವಾಗಿ, ಸುಂದರವಾದ ಚರ್ಮದ ಹೊದಿಕೆಯಿಂದ ನೀರಪಟ್ಟಣ ಮಿರಿಮಿರಿ ಮಿಂಚುತ್ತಲಿದೆ.

ನೀರಪಟ್ಟಣದೊಳಗೆ ನಿರವಯವ ತಂದಿರಿಸಿ ತೋರಿದನು ಒಂದು ಸೂಚನೆ ಮಾತ್ರವ : ತನುವಿನೊಳಗಿದ್ದು ತನುವಿಗೆ ಸಹಜಾನಂದವನ್ನುಂಟು ಮಾಡುವ ಗುರುದೇವನು ತನುವಿನಲ್ಲಿದ್ದಾನೆ. ಹಾಗೆಯೇ ತನುವನ್ನು ಆವರಿಸಿದ ಮನವೆಂಬ ಶಿಷ್ಯನೂ ತನುವಿನಲ್ಲಿಯೇ ಇದ್ದಾನೆ.

ಗುರುದೇವನ ಆಜ್ಞೆಯನ್ನು ಆಲಿಸಿ, ಆತನ ಉಪದೇಶವನ್ನು ಶಿಷ್ಯ ಪಾಲಿಸಿದಡೆ, ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ. ನಿರಾಕಾರ ಗುರು ತೋರಿದ ಸೂಚನೆ ಮಾತ್ರವನು ನಿರಾಕಾರನಾದ ಶಿಷ್ಯನು ಮೀರದೆ ಪಾಲಿಸಲೇಬೇಕು.

ಗುರುದೇವನು ಬೋಧಿಸುವ ಉಪದೇಶವನ್ನು ಶಿಷ್ಯ ಆಲಿಸಬೇಕು. ಇವರಿಬ್ಬರ ಚಮತ್ಕಾರದ ಚಿತ್ರಣ ತನುವಿನಲ್ಲಿಯೇ ನಡೆಯುತ್ತದೆ. ತನು ಇವರಿಬ್ಬರ ಉಪದೇಶಕ್ಕೆ ಸಾಕ್ಷಿಯಾಗುತ್ತದೆ.

717

**ನೀರು ನೀರನೆ ಕಡೆದು ನೀರೊಳಗೆ ಉತ್ಪತ್ಯ**
**ನಿರಾಲಂಬರೂಪವು.**
**ಅರಣ್ಯದೊಳಗೆ ಮತ್ತೆ ಓರಂತೆ ಇದ್ದಡೆ**
**ಕಾರಣವ ಹೇಳುವನು ಭಕ್ತಿರೂಪಾ.**
**ಮೂರು ತಾನೇಯಾಗಿ, ಆರರಲಿ ಅನುಕರಿಸಿ**
**ಆರಾರನೇ ಮೀರಿ ಗುರುಕರುಣದಾ**
**ತೋರುವ ಶಿವಭಕ್ತಿ ಮೀರಿಪ್ಪ ವೈರಾಗ್ಯ**
**ನೀರು ನಿರ್ಮಲ ವಜ್ರ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನೀರು ನೀರನೆ ಉಂಡು, ನೀರಲ್ಲಿಯೇ ಇದ್ದು, ನೀರು ತಾಗದೆ, ನೀರ ಮೇಲೆಯೇ ಅರಳಿದ ಕಮಲ ನೀರಲ್ಲದೆ ಮತ್ತೇನು ? ನೀರ ಮೇಲೆ ಅರಳಿನಿಂತ ಆ ರೂಪವನು ಹೂ ಎನ್ನಲು ಸಾಧ್ಯವೆ ? ಹಾಗೆಯೇ ಜಲಬಿಂದು ಜಲಬಿಂದುವಿನೊಂದಿಗೆ ಸಂಗಮವಾಗಿ, ಜೀವ ಜಲಬಿಂದುವಾಗಿ, ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ, ಅವು ಸೋರದಂತೆ ಜಲಬಿಂದುವೇ ಚರ್ಮವಾಗಿ ಹೆಣೆದುಕೊಂಡು ನಿರಾಲಂಬ ರೂಪವಾಯಿತು.

ಯಾವ ಆಸರೆಯೂ ಇಲ್ಲದ ಬಯಲ ಬಿಂದುವೇ, ಬಯಲ ಬೀಜವಾಗಿ, ಬಯಲಲ್ಲೇ ಬಿದ್ದು ಕ್ರಮಬದ್ಧವಾಗಿ ಮೊಳಕೆವೊಡೆದು ವೃಕ್ಷವಾಯಿತು.

ಬಯಲೇ ರೂಪಾದಂತೆ ಅಲ್ಲವೆ ? ಮಾತನಾಡುವ ವೃಕ್ಷವನ್ನು ಬೋಧೀವೃಕ್ಷವೆಂದು ಬುದ್ಧ ಕರೆದದ್ದು ಸರಿಯಾಗಿಯೇ ಇದೆ.

ನೀರು ನೀರನೆ ಕಡೆದು, ನೀರೊಳಗೆ ಉತ್ಪತ್ಯವಾದ ವೃಕ್ಷದ ರೂಪವು ನಿರಾಲಂಬ. ಅದು ನಿಂತ ಭೂಮಿ ಕೂಡಾ ಬಯಲ ಬೀಜದಿಂದಲೇ ಗಟ್ಟಿಯಾಗಿ ಭೂಮಿಯಾಯಿತು. ನೀರು ನೀರನೆ ಕಡೆದು ನೀರೊಳಗೆ ಹುಟ್ಟಿದ ಭೂಮಿ ಕೂಡಾ ನೀರೇ ಆಗಿದೆ. ಅದು ಕೂಡಾ ಅದರ ರೂಪ ಕೂಡಾ ನಿರೂಪವೇ ಆಗಿದೆ.

ಸ್ಥೂಲ ತನು ಕಂಡರೂ ಅದು ನೀರು ನೀರನೆ ಕಡೆದು ನಿರೊಳಗೆ ಉತ್ಪತ್ತಿಯಾಗಿ, ಮೂರೂ ತಾನೇಯಾಯಿತು. ಸೂಕ್ಷ್ಮ ತನುವೂ ನೀರೇ, ಕಾರಣ ತನು ಕೂಡಾ ನೀರೆ ಆಗಿದೆ.

ಆರಾರಲಿ ಅನುಕರಿಸಿ ಆರಾರನೇ ಮೀರಿ ಗುರುಕರುಣದಿಂದ ಗುರುದೇವನೇ ತಾನಾದ ನೀರು ಬೆಳಗಿಂಗೆ ಬೆಳಗಾಗಿ ಬೆಳಗುವ ನಿರ್ಮಲವಾದ ವಜ್ರವಾಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

718

**ನೀರೊಳಗೆ ಯಂತ್ರವನೆ ಹೂಡಿ**
**ನಿರಾಮಯವ ತುಂಬಿ,**

**ತುಂಬಿದ ನೀರೊಳಗೆ ಒಲೆಯ ಹೂಡಿ**
**ಅಡುಕಿ ಸುಡವಿನಂಶವ**
**ನೀವು ನೋಡಲೊಡನೆ ಎಲ್ಲಾ ಉತ್ಪತ್ಯ**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ನಿರಾಮಯನು ನೀರಲ್ಲಿಯೇ ಯಂತ್ರವನ್ನು ಬಿಟ್ಟು, ನೀರೊಳಗೆ ಒಲೆಯನ್ನು ಹೂಡಿ, ತನಗೆ ಬೇಕಾದ ಅಡುಗೆಯನ್ನು ಉತ್ಪತ್ತಿ ಮಾಡುತ್ತಿರುವನು. ನೀರಲ್ಲಿಯೇ ಇರುವ ನಿರಾಮಯನ ಇರುವಿಕೆಯೇ ವಿಚಿತ್ರ.

ನೀರಲ್ಲಿಯೇ ತನುವನ್ನು ಸೃಷ್ಟಿ ಮಾಡಿದ ನಿರಾಮಯನು ಯಾರ ಕೈಗೂ ಸಿಗದ ಮನವನ್ನು, ನೀರಲ್ಲಿಯೇ ಸೃಷ್ಟಿ ಮಾಡಿದ ನಿರಾಮಯನು ನೀರಲ್ಲಿಯೇ ಒಲೆಯ ಹೂಡಿ, ಆಶ್ರಯಕೊಟ್ಟ ತನುವನ್ನೇ ಉರಿಯುವಂತೆ ಮಾಡಿದ್ದಾನೆ.

ನೀರೊಳಗಿದ್ದ ಯಂತ್ರ ನೀರ ತನುವನ್ನೇ ಓಡುವಂತೆ ಮಾಡಿದೆ. ನೋಡುವಂತೆ ಮಾಡಿದೆ. ಮುಟ್ಟಿ ರುಚಿಸಿ ಸುಖಿಸುವಂತೆ ಮಾಡಿದೆ. ಮೂಸಿಸುವಂತೆ ಮಾಡಿದೆ. ಕೇಳುವಂತೆ ಮಾಡಿದೆ.

ನೀರೊಳಗಿನ ಯಂತ್ರ ನೀರನ್ನು ನುಡಿಯುವಂತೆ ಮಾಡಿದೆ. ನುಡಿಯುವ ಮಾತು ನುಡಿಯಲ್ಲಿರುವಾಗಲೇ ನುಡಿಯ ಕೇಳಿ ನೀರೊಳಗೆ ಒಲೆ ಹತ್ತಿ ಉರಿಯುವಂತೆ ಮಾಡಿದೆ. ನುಡಿದ ಮಾತು ನೀರು ನೀರಿಗೆ ಸಿಂಚನವಾಗಿ ಸುಖಿಸುವಂತೆ ಮಾಡಿದೆ. ನುಡಿದ ಆ ನುಡಿ ಕೇಳಿ ದುಃಖಿಸುವಂತೆ ಮಾಡಿದೆ.

ನೀರು ಸುಖಿಸುವುದೆಂದರೇನು ? ನೀರು ದುಃಖಿಸುವುದೆಂದರೇನು ? ಇದು ವಿಚಿತ್ರವಲ್ಲವೆ? ನೀರೊಳಗಿರುವ ನಿರಾಮಯನ ಅವತಾರವಿದು. ನೀರೊಳಗೆ ನೀರ ಬ್ರಹ್ಮಾಂಡವನ್ನೇ ಸೃಷ್ಟಿ ಮಾಡಿದ ನಿರಾಮಯನು ಆ ಬ್ರಹ್ಮಾಂಡಕ್ಕೆ ಒಡೆಯನಾಗಿದ್ದಾನೆ.

ನೀರೊಳಗೆ ನಿರಾಮಯನೂ ಇದ್ದಾನೆ. ನೀರನ್ನು ಭ್ರಮೆಯೆಂಬ ಮನವೂ ಆವರಿಸಿದೆ. ಇದು ನಿರಾಮಯನ ಬೆಳಕಿನಿಂದಲೇ ಹುಟ್ಟಿದ ನೆರಳು. ನಿರಾಮಯನಿದ್ದ ಬೆಳಗುವ ನೀರತನುವನ್ನೇ ಕತ್ತಲು ಮಾಡಿದ ಕರಿನೆರಳು. ನಿರಾಮಯ ನೋಡಲೊಡನೆ ಬೆಳಕಿಂಗೆ ಬೆಳಗಾಗಿ ಬೆಳಗಿ, ಗಂಗೆಯಾಗಿ ಜಟೆಯಲ್ಲಿ ಅವತರಿಸಿ, ಗಂಗಾಧರನನ್ನು ಧಾರಣೆ ಮಾಡಿಕೊಂಡು, ಉತ್ಪತ್ಯ ಸ್ಥಿತಿ ಲಯಕ್ಕೆ ಕಾರಣವಾದಳು.

ನೀರೊಳಗೆ ಯಂತ್ರವನೆ ಹೂಡಿ, ಆ ನೀರಲ್ಲಿ ನಿರಾಮಯನು ತುಂಬಿ, ತುಂಬಿದ ನೀರೊಳಗೆ ಹೊಲೆಯನು ಹೂಡಿ ಅಡುಕಿ ಸುಡುವಿನಂಶವ ಏನೆಂದು ಹೇಳಲಿ ! ನಿರಾಮಯನಾದ ನೀವು ನೋಡಲೊಡನೆ ಇಡೀ ಬ್ರಹ್ಮಾಂಡವೇ ಉತ್ಪತ್ತಿ. ಕಪಿಲಸಿದ್ಧ ಮಲ್ಲಿಕಾರ್ಜುನಾ.

**719**

**ನೀಲಕಂಧರಗಿರಿಯ ಮೇಲಿಪ್ಪ ನೀನಲ್ಲ.**
**ಆಲಸ್ಯವಿಲ್ಲದೆ ಅತಿಶಯದಲಿ**
**ಬಾಲ ಕನಸಿನ ಲೀಲೆಯಾಯಿತ್ತು ಭಕ್ತಿಯ**
**ಹೇಳುವಡೆ ಆರಿಗೆಯು ಉಪಮೆಯಿಲ್ಲ.**
**ಭಾಳನಯನದ ಮೇಲೆ ಬಾಲೆಯರ ಸಂಯೋಗ.**
**ಈರಾರು ಬೆಳಕವರ ಇಕ್ಕೆಲದಲ್ಲಿ**
**ಸ್ಥೂಲ ಸೂಕ್ಷ್ಮದಲ್ಲಿ ಮೇಲಿಪ್ಪ ಘನವದರ**

**ಈರೇಳು ಘಟಿಸುವ ಲೋಕಕ್ಕೆ**
**ದಿಕ್ಕರಿಗಳೆಂಟಾಗಿ ಬೆಟ್ಟವೆಂಟಾಗಿರ್ಪ**
**ಘನತರದ ನಿಜವ ಬಲ್ಲವರಾರು ? ಹೊಲಬನರಿವವರಾರು**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ನಿಜಭಕ್ತಿಯ.**

ಒಂದು ಲಕ್ಷ ತೊಂಬತ್ತಾರು ಸಾವಿರ ಜನ ಕಲ್ಯಾಣದಲ್ಲಿ ನಿಜವನರಿಯಲು ಉತ್ಸುಕರಾಗಿದ್ದರು; ಅರಿತವರು ಮಾತ್ರ ಏಳುನೂರಾ ಎಪ್ಪತ್ತು.

ಮಳೆಗಾಲ ಚಳಿಗಾಲ ಬೇಸಿಗೆ ಕಾಲದಲ್ಲಿ ಮರ ಇದ್ದಲ್ಲಿಯೇ ಇದ್ದು ಹೇಗೆ ಸಹಜ ಫಲ ಬಿಡುತ್ತದೆಯೋ ಹಾಗೆಯೇ ತನುವೆಂಬ ಜ್ಞಾನದ ಮರಕ್ಕೂ ಆ ಶಕ್ತಿ ಇದೆಯೆಂದು ಅನುಭವಿಸಿದ ಅನುಭಾವಿಗಳೂ ಸಕಲ ಜ್ಞಾನಿಗಳೂ ಹೇಳಿದ್ದಾರೆ. ತನುವಿನ ಸಹಜ ಶಕ್ತಿಯನ್ನು ತನು ಬಳಕೆ ಮಾಡಿಕೊಳ್ಳಲು ಅನೇಕ ಸೂತ್ರಗಳನ್ನು ಜ್ಞಾನಿಗಳು ರಚಿಸಿದರು. ತನು ಕೇಳಬೇಕಲ್ಲ; ತನುವಿನ ಬಾಲ್ಯತನ ಅಡ್ಡಿಪಡಿಸುತ್ತದೆ.

ತನುವಿಗೆ ಸಾಕಷ್ಟು ವಯಸ್ಸು ಆಗಿರಬಹುದು; ತನುವನ್ನು ಆವರಿಸಿದ ಮನ ಬಾಲ್ಯಾವಸ್ಥೆಯಲ್ಲಿಯೇ ಇದ್ದರೆ ಯಾರಾದರೂ ಏನು ಮಾಡಿಯಾರು. ಹೀಗೆ ಸಹಜವಾಗಿ ಇರಬಹುದು ಎಂದು ಹೇಳಿದ ಜ್ಞಾನದ ಸಹಜ ತನುವನ್ನು ತನು ಪೂಜಿಸತೊಡಗುತ್ತದೆ. ಹಾಗೇ ಸಹಜವಾಗಿರಲು ನನಗೂ ಸಾಧ್ಯವೆಂದು ತನು ಪ್ರಯತ್ನ ಮಾಡುವುದಿಲ್ಲ. ಮನ ತನುವಿಗೆ ಸಹಜವಾಗಿರಲು ಸಹಕರಿಸುವುದಿಲ್ಲ.

ತನು ಮನಗಳೆರಡೂ ಬಾಲೆಯರೇ ಆಗಿದ್ದಾರೆ. ಇವೆರಡರ ಸಂಯೋಗಕ್ಕೆ ಆತುರಪಡುವಷ್ಟು ಮನ ಘನದೊಂದಿಗೆ ಸಂಯೋಗ ಮಾಡಲು ಒಪ್ಪುವುದಿಲ್ಲ.

ಸ್ಥೂಲಕಾಯ ಸೂಕ್ಷ್ಮಕಾಯಗಳು ಎಲ್ಲಿಯವರೆಗೆ ಸಂಯೋಗದಲ್ಲಿರುತ್ತವೆಯೋ ಅಲ್ಲಿಯವರೆಗೆ ಅವು ಸಹಜ ಸುಖವನ್ನು ಅನುಭವಿಸಲು ಸಾಧ್ಯವಾಗುವುದಿಲ್ಲ.

ಸ್ಥೂಲ ಸೂಕ್ಷ್ಮ ಕಾಯಗಳ ಸಂಗದ ಫಲವಾಗಿ ಅರಿಷಡ್ವರ್ಗಗಳು ಸಪ್ತವ್ಯಸನಗಳು ಅಷ್ಟಮದಗಳು ಸೃಷ್ಟಿಯಾಗಿ, ಬೆಟ್ಟದಾಕಾರವಾಗಿ ಸ್ಥೂಲ ತನುವಿನಲ್ಲಿ ಬೆಳೆದು ನಿಂತಿವೆ. ಸಹಜವಾಗಿರಬೇಕಾದ ಕಾಯಗಳೆರಡು ತಮ್ಮ ಸುಖಕ್ಕಾಗಿ ತಾವೇ ಮಾಡಿಕೊಂಡ ಅಜ್ಞಾನ ತಮ್ಮನ್ನೇ ಕಾಡಹತ್ತಿವೆ.

ಆ ಅಜ್ಞಾನದ ಸುಳಿಯಲ್ಲಿ ಸಿಲುಕಿದ ಸ್ಥೂಲ ಸೂಕ್ಷ್ಮಗಳೆರಡೂ ತಮ್ಮನ್ನು ತಾವೇ ತಿಳಿದುಕೊಂಡು ಘನತರದ ನಿಜವನು ಅರಿಯಲು ಹೋದಾಗ ಕಪಿಲಸಿದ್ಧ ಮಲ್ಲಯ್ಯನ ನಿಜ ಭಕ್ತಿಯನ್ನು ಮೆರೆಯುತ್ತವೆ.

**720**

**ನೀಲಕಂಧರ ನಿನ್ನ ಶೂಲ ಮಸ್ತಕದಲ್ಲಿ**
**ತೋರಿಪ್ಪ ಬೆಟ್ಟವೆಂಟು, ಹರಿದು ಹಬ್ಬಿತ್ತು**
**ನಿನ್ನಯ ನಾಮದ ಪರಿಣತೆಯ ಸುಧೆಯ ಬಳ್ಳಿ ಫಲವಾಯಿತು.**
**ಮೂರರಲ್ಲಿ ಮರಳಿ ಬಿತ್ತಿದಡಿಲ್ಲದಂತೆ**
**ಕುರುಹುಗೆಟ್ಟು ಹೋಯಿತ್ತಯ್ಯಾ,**

**ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ನಿನ್ನ ನುಂಗಿದ ಫಲಕ್ಕೆ ಭವವಿಲ್ಲ ಕಂಡಾ.**

ನೀಲಕಂಧರನೆ, ನಿನ್ನ ಶೂಲ ಮಸ್ತಕದಲ್ಲಿ ತೋರಿದ ಅಷ್ಟಮದಗಳನ್ನು ಹರಿದು ಹಾಕಿತು. ನಿನ್ನ ನಾಮಸ್ಮರಣೆಯಿಂದಾಗಿ ಸುಧೆಯ ಬಳ್ಳಿ ಹಬ್ಬಿ ಜ್ಞಾನದ ಫಲವಾಯಿತು.

ಸ್ಥೂಲ ಸೂಕ್ಷ್ಮ ಕಾರಣಗಳು ಒಂದಾಗಿ ಮತ್ತೆ ಬಿತ್ತಿದರೆ ಫಲವಿಲ್ಲದಂತೆ ಕೆಟ್ಟುಹೋದವು. ನಿನ್ನ ನುಂಗಿದ ಫಲಕ್ಕೆ ಜನನ ಮರಣಗಳಿಲ್ಲ ತಂದೆ.

ಮಸ್ತಕದಲ್ಲಿ ಜ್ಞಾನವಿದೆಯೆಂದು ಸಕಲರೂ ಹೇಳುತ್ತಾರೆ. ಸ್ಥೂಲ ಸೂಕ್ಷ್ಮವೆಂಬ ಕಾಯದ ಮಸ್ತಕದಲ್ಲಿ ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ತುಂಬಿರಬೇಕಾದರೆ ಜ್ಞಾನಕಾಯದ ಬಳ್ಳಿ ಹಬ್ಬಿ ಫಲವಾದರೂ ಯಾಕೆ ಬಿಟ್ಟೀತು !

ವಿಷಭರಿತವಾದ ಎರಡು ಕಾಯಗಳ ಅಜ್ಞಾನವನ್ನು ಕಡೆದು ನೀಲಕಂಠನಾದರೂ ಯಾಕೆ ಪಾನ ಮಾಡಿಯಾನು ? ಸ್ಥೂಲ ಸೂಕ್ಷ್ಮ ಕಾಯಗಳಿಗೆ ನೀಲಕಂಠನೊಬ್ಬನಿದ್ದಾನೆ ಎನ್ನುವುದು ಗೊತ್ತಿಲ್ಲದಿರುವಾಗ ಆತ ತನ್ನ ಶೂಲವನ್ನಾದರೂ ಆ ಎರಡು ಕಾಯಗಳ ಮಸ್ತಕದಲ್ಲಿ ಯಾಕಾದರೂ ನೆಟ್ಟಾನು?

ಸ್ಥೂಲ ಸೂಕ್ಷ್ಮ ಕಾಯಗಳೆರಡೂ ಸ್ಥೂಲ ಕಾಯದಲ್ಲಿಯೇ ಸಂಗಮವಾದ ನೀಲಕಂಧರನನ್ನು ನೆನೆಯುವುದೊಂದೇ ತಡ, ತನ್ನ ತ್ರಿಶೂಲವನ್ನು ಮಸ್ತಕದಲ್ಲಿ ನೆಟ್ಟು, ತನ್ನ ಜ್ಞಾನ ಸುಧೆಯನ್ನು ಚೆಲ್ಲುತ್ತಾನೆ. ಸುಧೆಯ ಬಳ್ಳಿ ತನುವಿನ ತುಂಬಾ ಹಬ್ಬಿ ಮರಣವೇ ಇಲ್ಲದ ಮರುಜವಣಿಯ ಫಲಬಿಟ್ಟು ಬ್ರಹ್ಮಾಂಡವನ್ನೇ ಬೆಳಗುತ್ತದೆ. ನೀಲಕಂಧರನ ನುಂಗಿದ ಫಲಕ್ಕೆ ಭವವಿಲ್ಲದಂತಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**721**

**ನೀಲಕಂಧರನೆಂಬಾತ ಬಾಲತ್ವದಲಿ**
**ಭಾಮಿನಿಯ ಒಡಗೂಡಿ ಸಂದು ಸವೆದು,**
**ಇದು ಕ್ರೀ ಇದು ನಿಃಕ್ರೀ, ಇದು ಶುದ್ಧ ಇದು ಸಿದ್ಧ ಇದು ಪ್ರಸಿದ್ಧ,**
**ಇದು ಭಾವ ಇದು ನಿರ್ಭಾವವೆಂದು ಅರುಪುವಾಗ**
**ಪಿಂಡಾಂಡಂಗಳಿಲ್ಲ; ಅಷ್ಟಮೂರ್ತಿ ಕೂಡಿದ ರುದ್ರನಿಲ್ಲ.**
**ಆನಂದವೆ ಒಡಲಾಗಿಪ್ಪ ಮಹಾತ್ಮನ ನಿಜವ ಕಂಡಾತ ಬಸವಣ್ಣ.**
**ಆ ಬಸವಣ್ಣನೆನಗರುಪಿದ ಗುಣದಿಂದ ಶುದ್ಧನಾದೆನು.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ಬಸವಣ್ಣ ನೆನ್ನ ಪರಮಾರಾಧ್ಯರು.**

ಸದಾ ಸಹಜಾನಂದದಲ್ಲಿಯೇ ಇರುವ ಮಹಾತ್ಮನ ಒಡಲೊಂದು ಒಡಲಲ್ಲಿಯೇ ಇದೆ. ಆ ನಿಜವ ಕಂಡಾತ ಬಸವಣ್ಣ . ಈ ಭೂಮಿಯ ಮೇಲಿರುವ ಸಕಲ ಒಡುಲುಗಳಲ್ಲಿಯೂ ಮಹಾತ್ಮನೊಬ್ಬನು ಇದ್ದಾನೆ. ಆತನೆ ನೀಲಕಂಧರ. ಆತ ಬಾಲಕನಿದ್ದಾಗ ಭಾಮಿನಿಯ ಒಡಗೂಡಿ ಬಾಲಲೀಲೆಗಳನ್ನು ಮೆರೆದ.

ಯಾವ ಒಡಲಾದರೇನು ? ಅದು ಬಾಲಕಂಧರನ ಒಡಲೇ ಆಗಿದೆ; ಬಾಲಕ್ರಿಷ್ಣನ ಒಡಲೇ ಆಗಿದೆ. ಒಡಲಿಗೆ ವಯಸ್ಸಾದರೇನು ? ಒಡಲಲ್ಲಿರುವ ಮಹಾತ್ಮನ ಪರಿಚಯ ಒಡಲಿಗೆ ಆಗುವವರೆಗೆ

ಅದು ಬಾಲಕೃಷ್ಣನ ಒಡಲೆಂದು, ಬಾಲಕಂಧರನ ಒಡಲೆಂದು ಶರಣರು ಕರೆಯುತ್ತಾರೆ.

ಒಡಲು, ಒಡಲೊಳಗಿದ್ದ ಮಹಾತ್ಮನ ಲಾಂಛನ ! ಒಡಲೊಳಗಿದ್ದು ಒಡಲು ಸೋಂಕದೆ ಒಡಲಿಂಗೆ ಆಧಾರವಾಗಿ ಒಡಲು ಬೆಳಗುವ ಮಹಾತ್ಮನ ಲಾಂಛನ.

''ಲಾಂಛನಕ್ಕೆ ಶರಣೆಂಬೆ ಅವರಂತರಂಗವ ನೀವೆ ಬಲ್ಲಿರಿ'' ಎಂದು ಬಸವಣ್ಣ ಒಡಲಲ್ಲಿಯೇ ಇದ್ದ ಮಹಾತ್ಮನೊಂದಿಗೆ ಮಾತನಾಡಿದ. ಈ ನಿಜವನ್ನು ಬಸವಣ್ಣ ಸಿದ್ಧರಾಮ ಶಿವಯೋಗಿಗಳಿಗೆ ಅರುಹಿದ. ಒಡಲನ್ನು ಮುಟ್ಟಿ ಇದು ಕ್ರೀ ಎಂದ. ಒಡಲೊಳಗಿರುವ ಒಡಲನ್ನು ತೋರಿ ಇದು ನಿಃಕ್ರೀ ಎಂದ. ಇದು ಶುದ್ಧ ಇದು ಸಿದ್ಧ ಇದು ಪ್ರಸಿದ್ಧ ಎಂದ.

ಒಡಲನ್ನು ಮುಟ್ಟಿ ಇದು ಭಾವ ಎಂದ, ಒಡಲಲ್ಲಿಯೇ ಇರುವ ಒಡಲೊಡೆಯನ ಒಡಲಿಗೆ ಭಾವವಿಲ್ಲ; ಅದು ನಿರ್ಭಾವ ಎಂದು ತಿಳಿಸಿದಾಗ; ಪಿಂಡಾಂಡಗಳಿಲ್ಲದ ಅಷ್ಟ ಮೂರ್ತಿ ಕೂಡಿದ ರುದ್ರನಿಲ್ಲದ ಸಹಜಾನಂದದ ನಿಜ ಒಡಲೊಂದು ಒಡಲೊಳಗೆ ಇರುವುದು ಕಂಡು ಪರಮಾನಂದವಾಯಿತು.

ಬಸವಣ್ಣ ಸತ್ಯವನ್ನು ಕಂಡಾತ. ತಾನು ಕಂಡ ಆ ಸತ್ಯವನ್ನು ನನಗೆ ಅರುಹಿದಾಗ ನಾನು ಶುದ್ಧನಾದೆನು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆ ನಿನ್ನ ದರುಶನಕ್ಕೆ ಕಾರಣವಾದಾತ ಬಸವಣ್ಣ. ಬಸವಣ್ಣನೆನಗೆ ಪರಮಾರಾಧ್ಯರು. ಪ್ರಥಮಾಚಾರ್ಯರು ಎಂದು ಸಿದ್ಧರಾಮ ಶಿವಯೋಗಿಗಳು ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ. ಇದು ತನಗೆ ತಾನೆ ಮಾತನಾಡಿಕೊಳ್ಳುವ ಮಾತಲ್ಲ. ತಾನು ತನ್ನ ತನುವಿನಲ್ಲಿಯೇ ತನ್ಮಯವಾದ ಪರಮಾತ್ಮನೊಂದಿಗೆ ಆಡಿದ ಮಾತು.

**722**

**ನೀಲಬಿಂದುವಿನಲ್ಲಿ ಲೋಲುಪ್ತರೆಲ್ಲರೂ**
**ಆಲಸ್ಯವೇನವ್ವ ಅವನೆಡೆಗಳಲ್ಲಿ.**
**ಬಾಲಕನ ಕನಸಿನ ಲೀಲೆ ತಾನಾದೊಡೆ**
**ಆಲಸ್ಯವಿಲ್ಲವದು ಮುಂದೆ ತತ್ವಂಗಳ**
**ಎರಡು ಮೂರನು ಐದನಾಲ್ಕು**
**ಏಳನು ಎಂಟ ಏಕಮಾಡಿ ಕೂಡುವ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸೃಷ್ಟಿಗಾಗಿ ಕೂಡುವ ಬಿಂದುಗಳ ಬಯಕೆಯನ್ನು ಸುಖಕ್ಕಾಗಿ ಎಂದು ತಿಳಿದು ಇಡೀ ಲೋಕವೆಲ್ಲ ಲೋಲುಪ್ತವಾಗಿದೆ. ತನುವನ್ನು ಆವರಿಸಿದ ಮನ ತನುವಿನ ಸುಖಕ್ಕಾಗಿ ಪರಮ ಪುರುಷನೊಂದಿಗೆ ಸಂಗ ಮಾಡುವುದನ್ನೇ ಮರೆತು ಹೋಗಿದೆ.

ಬಾಲಕನ ಕನಸಿನ ಲೀಲೆ ಎಷ್ಟು ದಿನಗಳವರೆಗೆ ನಡೆದೀತು ? ಬಾಲಕನಾಗಿ ಎಷ್ಟು ದಿನಗಳವರೆಗೆ ಮುಂದುವರೆದಾನು ? ಮನಕ್ಕೆ ಪ್ರೌಢತ್ವ ಬರುವುದೊಂದೇ ತಡ ಅದರ ಆಲಸ್ಯಗಳೆಲ್ಲ ಮುರಿದು ಬೀಳುವವು.

'ತತ್ವಮಸಿ' ತಾನೇ ಆಗಿದ್ದರೂ ಪುಸ್ತಕದ ತತ್ವಗಳಿಂದ ರಂಜಿಸುವ ಮನದ ಪಾಂಡಿತ್ಯವನ್ನು ತಳ್ಳಿ ತನುವಿನಲ್ಲಿಯೇ ತನ್ಮಯವಾದ ಮಹಾಪುರುಷ ತನ್ನಂತೆ ಮಾಡಿಕೊಳ್ಳುವನು.

ಹೆಣ್ಣು ಗಂಡೆಂಬ ಅಜ್ಞಾನ ಏಕ ಮಾಡುವನು. ಸ್ಥೂಲ ಸೂಕ್ಷ್ಮ ಕಾರಣ ತನುಗಳನ್ನು ಏಕ

ಮಾಡುವನು. ಐದು ಜ್ಞಾನೇಂದ್ರಿಯಗಳನ್ನು ಏಕಮಾಡುವನು–ಐದು ನಾಲ್ಕು ಒಂಬತ್ತು ರಂಧ್ರಗಳನ್ನು ಏಕ ಮಾಡುವನು. ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ಸುಟ್ಟು ತನುವಿನಲ್ಲಿಯೇ ತನ್ಮಯವಾದ ಮಹಾಪುರುಷ ತನುವನ್ನು ಆವರಿಸಿದ ಮನವೆಂಬ ನಲ್ಲೆಯೊಂದಿಗೆ ಕೂಡಿ ಅರ್ಧನಾರೀಶ್ವರನೆಂದು ಕರೆಯಿಸಿಕೊಳ್ಳುವನು.

**723**

**ನುಡಿವಲ್ಲಿ ದೋಷವನಾರಿಸದೆ ಬಾಯಿಚ್ಚೆಗೆ ಬಂದಂತಾಡಿದಡೆ**
**ಅದು ಹೆಮ್ಮೆಯಲ್ಲದೆ ಸಹಜಜ್ಞಾನವಲ್ಲ.**
**ಅದೇನು ಕಾರಣವೆಂದಡೆ,**
**ಪಾಷಾಣದ ಮೂರ್ತಿ ಘನವೆಂದಡೆ ಅಗ್ನಿಯಿಂದ ಭಂಗ.**
**ಅಗ್ನಿ ಘನವೆಂದಡೆ ತೋಯದಿಂದ ಭಂಗ.**
**ತೋಯ ಘನವೆಂದಡೆ ಮಾರುತನಿಂದ ಭಂಗ.**
**ಮಾರುತ ಘನವೆಂದಡೆ ಬಯಲಿನಿಂದ ಭಂಗ.**
**ಬಯಲು ಘನವೆಂದಡೆ ಅಂತಃಕರಣದಿಂದ ಭಂಗ.**
**ಅಂತಪ್ಪಂತಃಕರಣ ಘನವೆಂದಡೆ ಮಾಯೆಯಿಂದ ಭಂಗ.**
**ಮಾಯೆ ಘನವೆಂದಡೆ ಮಹಾದೇವ ಕಪಿಲಸಿದ್ಧ ಮಲ್ಲಿಕಾರ್ಜುನ**
**ಪರಬ್ರಹ್ಮದಿಂದ ಭಂಗ ಕೇಳಾ, ಮಡಿವಾಳ ತಂದೆ.**

ಸಹಜ ಜ್ಞಾನವೆಂದರೆ ಬರೀ ಮಾತಲ್ಲ. ಅದನ್ನು ಶಾಸ್ತ್ರದಿಂದ ಸಿದ್ಧಮಾಡಲೂ ಬರುವುದಿಲ್ಲ. ಸಹಜ ಜ್ಞಾನವೆಂಬುದು ಸಕಲ ತನುಗಳಲ್ಲಿ ತನ್ಮಯವಾಗಿದೆ. ಆ ಜ್ಞಾನದಿಂದಲೇ ಮನ ಸೃಷ್ಟಿಯಾಗಿ ತನುವನ್ನು ಆವರಿಸಿದೆ.

ಸಹಜ ಜ್ಞಾನವನ್ನು ತಿಳಿದು ಆ ಜ್ಞಾನದಲ್ಲಿಯೇ ಸಂಗಮವಾಗಬೇಕಾದ ಮನ, ತನುವಿನೊಂದಿಗೆ ಸಂಗ ಮಾಡಿ, ವೇದ ಆಗಮ ಶಾಸ್ತ್ರ ಪುರಾಣಗಳನ್ನು ಉಪನಿಷತ್‌ಗಳನ್ನು ಸೃಷ್ಟಿಮಾಡಿ ಸಹಜ ಜ್ಞಾನವನ್ನೇ ಮರೆತು ಹೋಗಿದೆ.

ಶಾಸ್ತ್ರದಿಂದ ವೇದ ಆಗಮ ಉಪನಿಷತ್‌ಗಳಿಂದ ಮಾತನಾಡಿ ಸಹಜ ಜ್ಞಾನವೆಂದು ಖಚಿತವಾಗಿ ಹೇಳಲು ಬರುವುದಿಲ್ಲ. ನೋಡುವ ನಿಜ ದೃಶ್ಯವನ್ನು ಮಾತಿನ ಮೂಲಕ ಹೇಳುವುದಾದರೂ ಹೇಗೆ ? ನೋಡಿ ಹಾದರದಲ್ಲಿ ತೊಡಗುವ ಮನದ ಸ್ವಭಾವವನ್ನಾದರೂ ಮಾತಿನ ಮೂಲಕ ಹೇಳಲು ಬರುವುದಿಲ್ಲವೆಂದ ಮೇಲೆ, ನಿಜ ಹೇಳುವುದಾದರೂ ಹೇಗೆ ? ಸಹಜಜ್ಞಾನ ಮಾತಿಗೆ ನಿಲುಕುವುದಿಲ್ಲ. ಅದನ್ನು ಅದೇ ಆಗಿ ಅನುಭವಿಸಲು ಮಾತ್ರ ಸಾಧ್ಯ.

ನಿತ್ಯನಿರಂಜನ ತಾನೆಂದರಿಯದೆ 'ತತ್ವಮಸಿ' ಎಂದು ಹೊರಗನೆ ಬಳಸಿ ಸತ್ತಿತ್ತಲ್ಲಾ ಜಗವೆಲ್ಲ ನಾಯಿ ಸಾವ ! ತಮ್ಮ ತಾವರಿಯದೆ, ಸತ್ತವರ ಹೆಸರ ಪತ್ರವನೋದಿದಡೆ ಎತ್ತಣ ಮುಕ್ತಿ ಗುಹೇಶ್ವರಾ.

ತನುವನ್ನು ಆವರಿಸಿದ ಮನ ತನುವಿನಿಂದಲೇ ಹೊರ ಬಂದ ತತ್ವವನ್ನು ಅಕ್ಷರಗಳ ಮೂಲಕ ಸೆರೆಹಿಡಿದು ತತ್ವ ನೀನೇ ಆಗಿರುವಿ ಅದನ್ನು ತಿಳಿ ಎಂದು ನಾಯಿಯಂತೆ ಬೊಗಳುತ್ತದೆ. ತಿಳಿಯಬೇಕಾದವನು ತಾನೇ ಎಂದು ಮನ ಅರಿಯದೇ ಹೋಗುತ್ತದೆ. ಹೀಗೆ ತನುವಿನ

ಆಯುಷ್ಯವನ್ನೇ ಮನ ವ್ಯರ್ಥವಾಗಿ ಕಳೆಯುತ್ತದೆ.

ರಂಜನೆಗೆ ಒಳಗಾಗದ ನಿರಂಜನ ವಸ್ತು ತನುವಿನಲ್ಲಿಯೇ ತನ್ಮಯವಾಗಿದ್ದರೂ, ತನುವನ್ನು ಆವರಿಸಿದ ಮನ ತತ್ತ್ವವನ್ನು ಓದಿ, ಕೇಳಿ ರಂಜನೆಗೆ ಒಳಗಾಗುತ್ತದೆ. 'ತತ್ತ್ವಮಸಿ' ಎಂದು ವೇದಿಕೆ ಮೇಲೆ ನಿಂತು ಸಕಲರಿಗೂ ಕೇಳುವಂತೆ ಬೊಗಳುತ್ತದೆ.

ನುಡಿವಲ್ಲಿ ದೋಷವನಾರಿಸದೆ ಬಾಯಿಚ್ಚೆಗೆ ಬಂದಂತಾಡಿದಡೆ ಅದು ಹೆಮ್ಮೆಯಲ್ಲದೆ ಸಹಜ ಜ್ಞಾನವಲ್ಲ. ದೋಷವನ್ನು ಆರಿಸಿ ತೆಗೆದೊಗೆದು ನಡೆದು ನುಡಿಯುವವನೆ ಸಹಜ ಜ್ಞಾನಿ.

ಲಿಂಗ ಘನವೆಂದು ನುಡಿದು ಹೇಳಿದರೆ ಅದು ಪಾಷಾಣ. ಅಗ್ನಿಯಿಂದ ಅದರ ಭಂಗವಾಗುತ್ತದೆ. ಅಗ್ನಿ ಘನವೆಂದು ನುಡಿಯಲು ಹೋದರೆ ಅದರಿಂದ ಸಿದ್ಧವಾದ ರಸಪಾಕದಿಂದ ಅಗ್ನಿಯ ಭಂಗವಾಗುತ್ತದೆ. ರಸಪಾಕವೇ ಘನವೆಂದು ನುಡಿಯಲು ಹೋದರೆ ಅದು ಗಾಳಿಯಿಂದ ಭಂಗವಾಗುತ್ತಾದೆ. ಗಾಳಿಯೇ ಘನವೆಂದು ನುಡಿಯಲು ಹೋದರೆ ಬಯಲಿನಿಂದ ಭಂಗವಾಗುತ್ತದೆ. ಬಯಲು ಘನವೆಂದಡೆ ಅಂತಃಕರಣದಿಂದ ಭಂಗವಾಗುತ್ತದೆ. ಅಂತಃಕರಣವೇ ಘನವೆಂದು ನುಡಿಯಲು ಹೋದರೆ ಮಾಯೆಯಿಂದ ಭಂಗವಾಗುತ್ತದೆ. ಮಾಯೆ ಘನವೆಂದು ನುಡಿಯಲು ಹೋದರೆ ಮಹಾದೇವ ಕಪಿಲಸಿದ್ಧ ಮಲ್ಲಿಕಾರ್ಜುನ ಪರಬ್ರಹ್ಮದಿಂದ ಭಂಗವಾಗುತ್ತದೆ ಎಂದು ಸಿದ್ಧರಾಮ ಶಿವಯೋಗಿಗಳು ಮಡಿವಾಳ ಮಾಚಿದೇವರಿಗೆ ಸಹಜ ಜ್ಞಾನದ ಮಹಾಸೂತ್ರವನ್ನು ಹೇಳಿದ್ದಾರೆ.

**724**

**ನುಡಿಹಿಡಿದು ತಾರ್ಕಿಕರಂತೆ ತರ್ಕಿಸುವಾತ ನಾನಲ್ಲ.**
**ಆಡುವ ಮಾತಿಗೆ ಈಡ ಮಾಡುವ ನುಡಿಯಲ್ಲಿ**
**ವಾಕ್ಪಟುತನವು ನಿಜವಲ್ಲ.**
**ನಡೆಯುವ ನಂದಿ ಕುಂಟುವುದುಂಟು,**
**ಹೋಗುವ ಮನುಜ ಎಡಹುವುದುಂಟು,**
**ಮಾತಾಡುವ ಶರಣ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ**
**ತಪ್ಪಿದಡೆ ತಪ್ಪಲ್ಲ ಕೇಳಾ ಪ್ರಭುವೆ.**

ನುಡಿ ಹಿಡಿದು ತಾರ್ಕಿಕರಂತೆ ತರ್ಕಿಸುವಾತನಲ್ಲ ಶರಣ. ಪಾಂಡಿತ್ಯದ ವಾಕ್ಪಟುತನವು ನಿಜ ಅಲ್ಲ. ಆಡುವ ಮಾತಿಗೆ ಈಡಾಗುವಾತನಲ್ಲ ಶರಣ.

ನಡೆಯುವ ಎತ್ತು ಕುಂಟುವುದು ಸಹಜ, ನಡೆಯುವ ಮನುಜ ಎಡಹುವುದು ಕೂಡಾ ಸಹಜ. ಶರಣ ಮಾತಾಡುವನು. ಮಾತನಾಡುವ ಶರಣನ ಮಾತು ಮಲ್ಲಯ್ಯನಿಗೆ ಮಾತ್ರ ಕೇಳುತ್ತದೆ. ಮಲ್ಲಯ್ಯನಾಡುವ ಮಾತು ಶರಣನಿಗೆ ಕೇಳುತ್ತದೆ. ಮಲ್ಲಯ್ಯನೊಂದಿಗೆ ಮಾತನಾಡುವಾಗ ಶರಣ ತಪ್ಪಿದರೆ ಅದು ತಪ್ಪಲ್ಲ ಕೇಳಾ ಪ್ರಭುವೆ. ಎಂದು ಸಿದ್ಧರಾಮ ಶಿವಯೋಗಿಗಳು ಮಾತಲ್ಲದ ಮಾತು ಮಾತನಾಡುವ ಮೂಲಕ ಪ್ರಭುದೇವರಿಗೆ ಸಿದ್ಧಮಾಡಿ ತೋರಿದ್ದಾರೆ.

ಬಸವಣ್ಣ, ನುಡಿದರೆ ಮುತ್ತಿನ ಹಾರದಂತಿರಬೇಕು ಎಂದರು. ತನು ನುಡಿದ ನುಡಿ ತನುವಿಗೆ ಕೇಳುವುದು. ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಘನದೊಂದಿಗೆ ನುಡಿಯುವ

ನುಡಿ ಕೇಳುವುದಿಲ್ಲ. ಅದು ಮುತ್ತಿನ ಹಾರದಂತೆ. ಮುತ್ತಿನ ಹಾರ ಬೆಳಗುತ್ತದೆ. ಅದು ನುಡಿಯುವುದಿಲ್ಲ.

ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು. ಮಾಣಿಕ್ಯ ಕೂಡಾ ನುಡಿಯುವುದಿಲ್ಲ. ಅದು ದೀಪದಂತೆ ಬೆಳಗುತ್ತದೆ. ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು ಸ್ಫಟಿಕ ಕೂಡಾ ನುಡಿಯುವುದಿಲ್ಲ; ಅದು ಕೂಡಾ ಬೆಳಗುತ್ತಾ ಥಳಥಳನೆ ಹೊಳೆಯುತ್ತದೆ.

ತರ್ಕಕ್ಕಾಗಿ ನುಡಿಯುವ ನುಡಿಯಲ್ಲ. ಅದು ಸೂತಕ. ''ಶಬ್ದ ಸೂತಕಿಗಳು ರೌರವ ನರಕಿಗಳು'' ಎಂದು ಪ್ರಭು ದೇವರು ನುಡಿದಿದ್ದಾರೆ. ಮೂರು ಸೂತಕಗಳು ಮೂರಾರು ದಿನಗಳಿದ್ದು ಹೋಗುತ್ತದೆ. ಶಬ್ದ, ಸೂತಕವಾಗಿ ತನುವಿನಲ್ಲಿ ಉಳಿದು ತನುವನ್ನು ತನುವಿರುವವರೆಗೆ ಛಿದ್ರ ಛಿದ್ರ ಗೊಳಿಸುತ್ತದೆ. ದ್ರೌಪದಿಯ 'ನಗು' ದುರ್ಯೋಧನನ ವಜ್ರ ಶರೀರವನ್ನು ಶರೀರ ಇರುವವರೆಗೆ ಬಾಧಿಸಿತು. ಮಹಾಭಾರತ ಯುದ್ಧಕ್ಕೆ ನಾಂದಿ ಹಾಡಿತು. ಹದಿನೆಂಟು ಅಕ್ಷೋಹಿಣಿ ಸೈನ್ಯವನ್ನು ದ್ರೌಪದಿಯ ಒಂದು ನಗುವಿನ ಧ್ವನಿ ನುಂಗಿ ಹಾಕಿತು.

ತನುವಿನಿಂದ ಹೊರಬರುವ ನುಡಿ ತನುವಿಗೆ ಸುಖ ನೀಡುತ್ತದೆ ಇಲ್ಲ ದುಃಖ ಉಂಟು ಮಾಡುತ್ತದೆ. ಆದರೆ ಇದು ನಿಜವಲ್ಲ. ನುಡಿಯಲ್ಲಿ ಸುಖವೂ ಇಲ್ಲ ದುಃಖವೂ ಇಲ್ಲ. ನುಡಿಯಲ್ಲಿ ಅರಿವು ಮಾತ್ರ ಇದೆ. ನುಡಿಯನ್ನು ಅರಿವಿನಿಂದ ಕೇಳುವ ಕಲೆ ಶರಣನಿಗೆ ಮಾತ್ರ ಗೊತ್ತಿದೆ.

ಚೆನ್ನಬಸವಣ್ಣ, ಸು-ಶಬ್ದ, ಕು-ಶಬ್ದ ಶಬ್ದದಲ್ಲಿಯೇ ನೋಡಾ ಎನ್ನುವ ಸೂತ್ರವನ್ನು ಲೋಕಕ್ಕೆ ನೀಡಿದ್ದಾರೆ. ಆದರೆ ಲೋಕ ಶರಣರ ನಿಃಶಬ್ದ ಸುಖವನ್ನು ಲೋಕ ಅನುಭವಿಸಬೇಕಲ್ಲ; ಅದು ಲೋಕಕ್ಕೆ ಸಾಧ್ಯವಾಗುವುದಿಲ್ಲ. ಶರಣ ತಾನು ಸತಿಯಾಗಿ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನೆಂಬ ಪತಿಯೊಂದಿಗೆ ಮಾತನಾಡುತ್ತಾನೆ. ಒಂದುವೇಳೆ ಮಾತನಾಡುವ ಶರಣ ತಪ್ಪಿದೊಡೆ ಅದು ತಪ್ಪಲ್ಲವೆಂದು ಪ್ರಭುದೇವರಿಗೆ ಹೇಳಿದ ಮಾತನ್ನು ಸಿದ್ಧರಾಮ ಶಿವಯೋಗಿಗಳು ದಾಖಲಿಸಿದ್ದಾರೆ.

**725**

**ನೆನಹಿನ ನಲ್ಲನು ಮನೆಗೆ ಬಂದಡೆ**
**ಮನದಲ್ಲಿ ಗುಡಿಗಟ್ಟುವೆನವ್ವಾ.**
**ತೋರಣ ತೋರಣ ಮಾಮರ ಮಾಮರ ತೋರಣಗಟ್ಟುವೆನವ್ವಾ.**
**ಕಾಮಸಂಗವಳಿದು ನಿಷ್ಕಾಮ ಸಂಗಕ್ಕೆಳಸುವೆನವ್ವಾ**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡುವೆನವ್ವಾ.**

ಹೆಣ್ಣು ಗಂಡು ಎಂದು ಹೇಳುವುದು ದೇಹವಲ್ಲ. ದೇಹದಲ್ಲಿಯೇ ಸಂಗಮವಾದ ಜ್ಞಾನ ಗಂಡು; ದೇಹವನ್ನು ಆವರಿಸಿದ ಮನ ಹೆಣ್ಣು. ದೇಹವನ್ನು ಹೆಣ್ಣೆಂದು ನೋಡುವುದು ಅಜ್ಞಾನ; ದೇಹವನ್ನು ಗಂಡೆಂದು ನೋಡುವುದು ಅಜ್ಞಾನ.

ಕಣ್ಣಲ್ಲಿ ಅಜ್ಞಾನದ ದೃಶ್ಯವೂ ಇದೆ; ಜ್ಞಾನದ ದೃಶ್ಯವೂ ಇದೆ. ಜ್ಞಾನದ ದೃಶ್ಯದಿಂದ ನೋಡಿದರೆ ದೇಹ ಹೆಣ್ಣು ಅಲ್ಲ ಗಂಡು ಕೂಡಾ ಅಲ್ಲ. ದೇಹ, ಗಂಡು ಎನ್ನುವ ಜ್ಞಾನ, ಹೆಣ್ಣು ಎನ್ನುವ ಮನ ವಾಸ ಮಾಡಿದ ಮನೆ.

ಸಿದ್ಧರಾಮ ಶಿವಯೋಗಿಗಳು ಮನವೆಂಬ ಹೆಣ್ಣು ತಾವಾಗಿ, ದೇಹವನ್ನು ಮನೆಯನ್ನಾಗಿಸಿಕೊಂಡು, ಜ್ಞಾನಿ ಎಂಬ ನೆನಹಿನ ನಲ್ಲನು ಮನೆಗೆ ಬಂದಡೆ ಮನದಲ್ಲಿಯೇ ಎನ್ನ

ಹೃದಯದಲ್ಲಿಯೇ ಅವನಿಗೆ ಆಲಯ ಕಟ್ಟುವೆನವ್ವಾ. ತೋರಣ ತೋರಣ ಮಾಮರ ಮಾಮರ ತೋರಣಗಟ್ಟುವೆನವ್ವಾ.

ಕಾಮಸಂಗವಳಿದು ನಿಷ್ಕಾಮಸಂಗಕ್ಕೆಳೆಸುವೆನವ್ವಾ:

ದೇಹ ದೇಹದೊಂದಿಗೆ ಕೂಡುವುದು ಕಾಮ. ಇದು ಸುಖವಲ್ಲ; ದುಃಖಕ್ಕೆ ಕರೆದುಕೊಂಡು ಹೋಗುವ ಸುಖ. ಕೂಡಿ ಕ್ಷಣಾರ್ಧದಲ್ಲಿ ಅಗಲುವ ದುಃಖ. ದೇಹಕ್ಕೆ ಮತ್ತೊಂದು ದೇಹಕ್ಕೆ ಜನ್ಮಕೊಡುವ ಬಯಕೆಯಾದಾಗ ಹುಟ್ಟುವ ಕ್ರಿಯೆ.

ಈ ಕ್ರಿಯೆಯಿಂದ ಆಗುವ ದೇಹದ ಶ್ರಮವನ್ನೇ ಮನ ತನ್ನ ರುಚಿಯೆಂದು ತಿಳಿದು ದೇಹವನ್ನು ಮತ್ತೆ ಮತ್ತೆ ಕಾಮದ ಕ್ರಿಯೆಯಲ್ಲಿ ತೊಡಗಿಸುತ್ತದೆ. ಮನದ ಆಸೆಗಾಗಿ ಕೂಡುವ ಎರಡು ದೇಹಗಳ ಕೂಟದಲ್ಲಿ ಸೃಷ್ಟಿಯ ಬಯಕೆಯಿಲ್ಲ. ಹೀಗೆ ದೇಹದೊಂದಿಗೆ ದೇಹಕೂಡುವ ಕೂಟವನ್ನು ಶರಣರು ''ಹೆಣ್ಣು ಹೆಣ್ಣು ಕೂಡುವ ಕೂಟ'' ಅಜ್ಞಾನದ ಕೂಟ ಎಂದು ಕರೆದಿದ್ದಾರೆ.

ಮನವೆಂಬ ನಲ್ಲೆ ಜ್ಞಾನವೆಂಬ ನಲ್ಲನೊಂದಿಗೆ ಕೂಡುವ ಕೂಟ ಪರಮಪುರುಷ ಮಹಾಸತಿಯೊಂದಿಗೆ ಕೂಡುವ ಮಹಾಜ್ಞಾನದ ಕೂಟ. ಇದು ಕೂಡದ ಅಗಲದ ಮಹಾಕೂಟ. ಈ ಕೂಟದಲ್ಲಿ ಕಾಮವಿಲ್ಲ; ಬರೀ ಪ್ರೇಮ ಮಾತ್ರ. ಇದು ಎರಡು ಕಾಯಗಳ ಕೂಟವಲ್ಲ; ಒಂದು ಕಾಯದಲ್ಲಿ ಎರಡು ಅಕಾಯಗಳು ಕೂಡುವ ಮಹಾಕೂಟ. ನಿಷ್ಕಾಮ ಸಂಗಕ್ಕೆಳೆಸುವ ಮಹಾಕೂಟ. ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡುವ ಸಪ್ರೇಮ ಸುಖದ ಮಹಾಕೂಟ.

**726**

**ನೆನಹಿನ ಮನೆಯೊಳಗೆ ಆನಿದ್ದೇನೆಂದಡೆ**
**ಮನವು ಮತ್ತನ್ಯಕ್ಕೆ ಹರಿವುದಯ್ಯಾ.**
**ಮನಕ್ಕಿನ್ನೇವೆನೇವೆ ?**
**ಎನ್ನ ಮನದೊಡೆಯ ಮಹಾದಾನಿ**
**ನಿನ್ನ ಪಾದಂಗಳನುರೆ ಮಚ್ಚಿಸಿ**
**ಎನ್ನ ಶುದ್ಧಾತ್ಮನ ಮಾಡಿ ಕರುಣಿಸಯ್ಯಾ ಪರಮಗುರುವೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸದಾ ಅರಿವೆಂಬ ಗುರುದೇವನನ್ನೇ ನೆನೆಯಬೇಕಾದ ಮನದಲ್ಲಿ 'ನಾನು' ಎನ್ನುವ ಅಹಂಕಾರ ಹುಟ್ಟಿದೆ. ಹೀಗಾಗಿ ಮನ ತನುವಿನೊಂದಿಗೆ ಅನ್ಯವಿಷಯಗಳಿಗೆ ಹರಿಯುತ್ತಲಿದೆ. ಇಂತಹ ಮನಕ್ಕಿನ್ನೇವೆನೇವೆನಯ್ಯಾ.

ಎನ್ನ ಮನದೊಡೆಯ ಮಹಾದಾನಿ, ಮಹಾದೇವ ಅತ್ತಲಿತ್ತ ಸುಳಿಯುವ ಹಾದರದ ಮನವನ್ನು ಶುದ್ಧಮಾಡಿ ನಿನ್ನಂತೆ ಮಾಡಿಕೊಳ್ಳಯ್ಯಾ. ಸದಾ ನಿನ್ನ ಚರಣ ಕಮಲಗಳಿಗೆ ಹಣೆಯಚ್ಚಿ ಶರಣಾಗತನಾಗುವಂತೆ ಮಾಡಿ ಕರುಣಿಸಯ್ಯಾ ಪರಮಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನನೇ.

**727**

**ನೆನಹಿನ ಸಂಯೋಗದಾ ನೆಲೆಮನೆಯಲ್ಲಿಪ್ಪೆ ಕಂಡವ್ವಾ.**
**ಚಲನೆಯಿಲ್ಲದೆ ಕೂಡವ್ವಾ,**

**ಅವ್ವಾ ನೀನು ಚಲನೆಯಿಲ್ಲದೆ ಕೂಡಾ.**
**ಚಿತ್ತವಿಚಿತ್ತವಾದಡೆ ಮತ್ತೆ ಒಲಿಯನವ್ವಾ,**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ನೋಡಲು ಹೋದರೆ ತನು ಒಂದೇ ಇದೆ. ಆದರೆ ಮನದ ಉಪಟಳದಿಂದಾಗಿ ತನು ಹೆಣ್ಣಾಗಿದೆ, ಗಂಡಾಗಿದೆ. ಸಾತ್ವಿಕ ರಾಜಸ ತಾಮಸ ಎಂದು ಮೂರು ಅವತಾರಗಳನ್ನು ತಾಳುತ್ತದೆ.

ತನುವೊಂದು ಮನೆ, ಮನವೊಂದು ಮನೆ, ಜ್ಞಾನವೊಂದು ಮನೆ. ತನು ಮನ ಇವೆರಡರ ಮನೆಯೂ ತನುವಿನಲ್ಲಿಯೇ ಇವೆ. ತನುವನ್ನೇ ಮನೆಯನ್ನಾಗಿಸಿಕೊಂಡಿವೆ. ಮನ ಒಮ್ಮೆಯೂ ಜ್ಞಾನದ ಮನೆಗೆ ಹೋಗಿಲ್ಲ. ಜ್ಞಾನಿ ಮಲ್ಲಯ್ಯನ ದರುಶನ ಮಾಡಿಕೊಂಡಿಲ್ಲ. ತನುವಿನ ಸಂಗ ಮಾಡಿದ ಮನ ಸದಾ ಚಲನೆಯಲ್ಲಿದೆ. ಎಲ್ಲಿ ಹೋದರೂ ಮನಕ್ಕೆ ಸಮಾಧಾನವಿಲ್ಲ.

ಸದಾ ಸುಖಕ್ಕಾಗಿ ತನುವನ್ನು ಅತ್ತಿಂದಿತ್ತ ಇತ್ತಿಂದತ್ತ ಓಡಾಡಿಸುತ್ತಲೇ ಇರುತ್ತದೆ. ಮನ ತನ್ನ ಸುಖಕ್ಕಾಗಿ ತನುವನ್ನು ಸದಾ ದುಃಖದಲ್ಲಿಡುತ್ತದೆ. ಕಳ್ಳ ಹಾದರಿಗ ಭ್ರಷ್ಟಾಚಾರಿ ಶ್ರೀಮಂತ ಬಡವ ಭಿಕ್ಷುಕ ದರಿದ್ರ ಗುರು ಶಿಷ್ಯ ಮಠಾಧೀಶ ಪಾದ್ರಿ ಮೌಲ್ವಿ ಬಿಕ್ಕು ನಾನಾರೀತಿಯ ಹೆಸರುಳ್ಳ ಹಾದರದ ಹಣೆಪಟ್ಟಿಯನ್ನು ತನುವಿಗೆ ಕಟ್ಟಿ, ತನುವಿನ ಮೂಲಕ ಮನ ಸುಖಿಸುತ್ತದೆ. ತನುವಿಗೆ ಸುಖವಾದರೂ ಮನಕ್ಕೆ ಸುಖ; ತನುವಿಗೆ ದುಃಖವಾದರೂ ಮನಕ್ಕೆ ಸುಖ. ಸುಖ ದುಃಖದ ಅಜ್ಞಾನದ ಸುತ್ತಾಟದಲ್ಲಿ ತನುವಿನ ಆಯುಷ್ಯ ಮುಗಿದೇ ಹೋಗುತ್ತದೆ. ಮನ ಮುಕ್ತನಾಗುವುದೇ ಇಲ್ಲ.

ತನುವಿನಲ್ಲಿಯೇ ಮನದೊಡೆಯನ ಮನೆಯಿದೆ. ಎಲೆ ಮನವೆಂಬ ಅವ್ವೆಯೇ; ನೀನು ಸದಾ ನೆನೆಯಲೇಬೇಕಾದ ನೆನಹಿನ ನೆಲೆಮನೆ ನಿನ್ನ ಪಕ್ಕದಲ್ಲಿಯೇ ಇದೆ ಕಂಡವ್ವಾ. ಚಲನೆಯಿಲ್ಲದೆ ನಿನ್ನ ನಲ್ಲನೊಂದಿಗೆ ಕೂಡವ್ವಾ. ಅವ್ವಾ ನೀನು ಚಲನೆಯಿಲ್ಲದೆ ಕೂಡಾ ತಾಯಿ.

ನಿನ್ನ ನಲ್ಲನೊಂದಿಗೆ ನೀನು ಕೂಡದಿದ್ದರೆ ನಿನ್ನ ಚಿತ್ತ ವಿಚಿತ್ತವಾಗುತ್ತದೆ. ಮತ್ತೆ ಒಲಿಯನವ್ವಾ ಕಪಿಲಸಿದ್ಧ ಮಲ್ಲಿನಾಥಯ್ಯಾ.

**728**

**ನೆನಹು ಮುಕ್ತಾಫಳವಾಗಿ ತರುಣಿ ನಿನ್ನ ಗಳದಲ್ಲಿ**
**ಚಲನೆಯಿಲ್ಲದೆ ದಾಯವಾದವೊ ಅವ್ವಾ.**
**ಆದಿ ಮಧ್ಯಬಿಂದುವಿನೊಳು**
**ಭೇದಿಸಿದ ನಾದ ಕಳೆಯ ದಾಯವ ನೋಡಾ,**
**ದಾಯಂ ಮಣಿಯ ಆಭರಣದಲ್ಲಿ ಆಚೆ ಒಪ್ಪಿದಳಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವನ್ನು ಆವರಿಸಿದ ಮನ ಸದಾ ತರುಣಿ. ಈಕೆ ರೂಹಿಲ್ಲದ ಚೆಲುವೆ. ತನುವಿನಲ್ಲಿಯೇ ತನ್ಮಯವಾದ ರೂಹಿಲ್ಲದ ಚೆಲುವನ ನೆನೆದರೆ ಸಾಕು; ಆ ನೆನಹೆ ಮುಕ್ತಿಯ ಫಲವಾಗಿ ತರುಣಿಯ ಕೊರಳಿಗೆ ಮಣಿಯಾಗಿ ಚಲನೆಯಿಲ್ಲದ ಆಭರಣವಾಗುತ್ತದೆ.

ತರುಣಿ ಜ್ಞಾನದ ಆಭರಣದೊಂದಿಗೆ ನಿರಾಭರಣ ಸುಂದರಿಯಾಗಿ ಕಾಣುತ್ತಾಳೆ. ಆದಿಯಲ್ಲಿಯೂ ಬಿಂದುವೇ ಆಗಿತ್ತು; ಮಧ್ಯದಲ್ಲಿಯೂ ಬಿಂದುವೇ ಆಗಿತ್ತು. ಬಿಂದು

ಬಿಂದುವಿನೊಂದಿಗೆ ಕೂಡಿ ಬಿಂದುವನು ಭೇದಿಸಿ ನಾದವಾಯಿತು ಕಳೆಯಾಯಿತು. ಅವೆರಡರ ಫಲದ ಲಾಭದಿಂದಾಗಿ ದಾಯವಾಯಿತು; ತನುವಾಯಿತು.

ಚಲನೆಯಿಲ್ಲದ ಲಾಭವನು ಪಡೆದಳು ಅವ್ವಾ. ಆಭರಣವನ್ನು ಧರಿಸಿ ನಿರಾಭರಣ ಸುಂದರಿಯಾಗಿ ಜ್ಞಾನಾಭರಣಕ್ಕೆ ಒಪ್ಪಿದಳು ಅವ್ವೆ. ಕಪಿಲಸಿದ್ಧ ಮಲ್ಲಯ್ಯನಿಗೆ ಒಪ್ಪಿಗೆಯಾದಳು ತರುಣಿ.

ತನುವಿನಲ್ಲಿಯೇ ತನ್ಮಯವಾದ ಮುಕ್ತಿಯ ಫಲ ಸಕಲರಿಗೂ ದೊರೆಯುವುದು ದುರ್ಲಭ. ತನುವನ್ನು ಆವರಿಸಿದ ಮನಕ್ಕೆ ಹೊರತುಪಡಿಸಿ ಅದು ಯಾರಿಗೂ ದಕ್ಕುವುದಿಲ್ಲ. ತನುವಿನಲ್ಲಿ ತನ್ಮಯವಾದ ಅರಿವಿನ ಅರಸನಿಗೆ ಮನ ತಾರುಣ್ಯದ ಅರಸಿಯಾಗಿ ಆತನೊಂದಿಗೆ ಬೆರೆತರೆ ಸಾಕು; ಚಲನೆಯೇ ಇಲ್ಲದ ಲಲನಾಮಣಿಗೆ ಮಣಿಯಾಗಿ ಆಕೆಯ ಕೊರಳಿಗೆ ಆಭರಣವಾಗಿ, ಆಕೆಗೆ ಒಪ್ಪಿಗೆಯಾಗುವಂತೆ ಸೇರುತ್ತಾನೆ; ಕಪಿಲಸಿದ್ಧ ಮಲ್ಲಿಕಾರ್ಜುನ.

**729**

**ನೆನೆವರ ಮನೆಯೊಳಗೆ ಮನೆಗಟ್ಟಿಯಿಪ್ಪೆ ನೀನಯ್ಯಾ.**
**ನಂಬಿದ ಶರಣರಿಗೊಲಿದು ಕೈಲಾಸವನೊಲಿದಿಪ್ಪೆ ನೀನಯ್ಯಾ.**
**ನಿಮ್ಮ ನಂಬಲೊಡನೆ ಕೈಲಾಸದಲೊಡಬೀಡಾಗಿಪ್ಪೆಯಯ್ಯಾ,**
**ಎನ್ನ ಕಪಿಲಸಿದ್ಧ ಮಲ್ಲೇಶ್ವರದೇವ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಅಂಗವನ್ನು ಆವರಿಸಿದ ಮನ ನೆನೆದರೆ ಸಾಕು, ಆ ಅಂಗವೇ ಕೈಲಾಸ; ಗಟ್ಟಿ ಚಿನ್ನ ನೋಡಯ್ಯಾ.

ನಿನಗೆ ಶರಣಾಗತನಾಗಿ; ಶರಣು ಹೋದ ಶರಣ ನಿನಗೆ ಸತಿಯಾದರೆ ಸಾಕು ನೀನು ಆಕೆಗೆ ಪತಿಯಾಗುವಿ. ಕಾಯವನ್ನೇ ಕೈಲಾಸವನ್ನಾಗಿಸಿಕೊಂಡು ಶರಣ ಸತಿ ಲಿಂಗಪತಿಯಾಗಿ ಪರಮಸುಖದಿಂದ ಇರುವಿರಿ.

ನಿನ್ನನ್ನು ನಂಬಿ ಶರಣು ಹೋದ ಶರಣರಿಗೆ ಮಾತ್ರ ನೀನೊಲಿವೆ. ''ಸುರರ ಬೇಡಿದಡಿಲ್ಲ, ನರರ ಬೇಡಿದಡಿಲ್ಲ ಬರಿದೆ ಧೃತಿಗೆಡಬೇಡ ಮನವೆ ! ಆರನಾದಡೆಯೂ ಬೇಡಿ ಬೇಡಿ ಬರಿದೆ ಧೃತಿಗೆಡಬೇಡ ಮನವೆ ! ಕೂಡಲಸಂಗಮದೇವನಲ್ಲದೆ ಆರ ಬೇಡಿದಡಿಲ್ಲ ಮನವೆ''

ಮನ, ತಾನು ಮಾಡಿದ ದೇವರನ್ನು ನಂಬಿದಂತೆ, ತನ್ನನ್ನು ತಾನು ವಾಸ ಮಾಡಿದ ತನುವನ್ನು ಸೃಷ್ಟಿಮಾಡಿ ತನುವಿನಲ್ಲಿಯೇ ಇದ್ದ ದೇವರನ್ನು ಅಷ್ಟು ಸರಳವಾಗಿ ನಂಬುವುದಿಲ್ಲ.

ದೇವಾನುದೇವತೆಗಳನ್ನು ಬೇಡುತ್ತದೆ, ಕಂಡಕಂಡ ಮನುಜರನ್ನು ಬೇಡುತ್ತದೆ. ತನ್ನನ್ನು ಸೃಷ್ಟಿ ಮಾಡಿದ ದೇವರನ್ನು ಬೇಡುವುದನ್ನು ಮನ ಮರೆತು ಹೋಗುತ್ತದೆ. ಹೀಗಾಗಿ ಬಸವಣ್ಣನವರು ''ಬೇಡಿದರೆ ಎನ್ನೊಡೆಯನ ಬೇಡುವೆ, ಹಾಡಿದರೆ ಎನ್ನೊಡೆಯನ ಹಾಡುವೆ'' ಎಂದು ಮನಕ್ಕೆ ನೆನಪು ಮಾಡಿದ್ದಾರೆ.

ಎಲೆ ಮನವೆ ನಿನ್ನನ್ನು ಸೃಷ್ಟಿಮಾಡಿ ನಿನಗೆ ಜನ್ಮಕೊಟ್ಟ ದೇವನನ್ನು ನಂಬು. ನಂಬಲೊಡನೆ ನೀನಿದ್ದ ಕಾಯವೇ ಕೈಲಾಸದ ಬೀಡಾಗುತ್ತದೆ ಅದು ಕಪಿಲಸಿದ್ಧ ಮಲ್ಲೇಶ್ವರ ದೇವರು ವಾಸಮಾಡುವ ಕ್ಷೇತ್ರವಾಗುತ್ತದೆ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

**730**

**ನೆರೆದೆನು ನೆರೆದೆನು ಎಂಬಡೆ ನಾನೇನು ಎರವೆ ?**

**ಶ್ರೀಗುರುಸ್ವಾಮಿ ಎನ್ನ ನಿನ್ನ ನಿನ್ನನೆನ್ನ ಕರಸ್ಥಲದಲ್ಲಿ**
**ಸ್ಥಾಪ್ಯಗೊಳಿಸಿದ ಬಳಿಕ,**
**ಮಹಾಜ್ಯೋತಿರ್ಮಯದಲ್ಲಿ ತಮವುಂಟೆ ?**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ**
**ಮಹಾಪ್ರಸಾದವನೊಡಗೂಡಿದ ಬಳಿಕ,**
**ಬೇರೆ ನಾನೊಂದು ನದಿಯೆನಲುಂಟೆ ? ಪ್ರಭುವೆ.**

ಕೂಡಿದೆನು ಕೂಡಿದೆನು ಎನ್ನಲು ನಾನೇನು ಹೊರಗಿನವನೆ ? ನಿನ್ನನ್ನು ಕೂಡುವುದಕ್ಕಾಗಿಯೇ ನೀನು ನನ್ನನ್ನು ಸೃಷ್ಟಿಮಾಡಿರುವಿ. ತನುವನ್ನು ಸೃಷ್ಟಿ ಮಾಡಿ ತನುವಿನಲ್ಲಿಯೇ ಇರುವಿ. ನೀನು ಸೃಷ್ಟಿ ಮಾಡಿದ ತನುವಿನಲ್ಲಿ ನೀನು ನಾನು ಇರುವಾಗ ನಾನು ಬೇರೆಯವನು ಹೇಗಾಗುತ್ತೇನೆ ?

ಶ್ರೀಗುರುಸ್ವಾಮಿ ತನುವಿಗೆ ಜನ್ಮಕೊಟ್ಟು, ತನುವಿನಲ್ಲಿಯೇ ನನ್ನನ್ನು ಸ್ಥಾಪ್ಯಗೊಳಿಸಿದ ಬಳಿಕ, ನಾನು ಹೇಗೆ ಬೇರೆಯವನಾಗುತ್ತೇನೆ !

ಮಹಾ ಜ್ಯೋತಿರ್ಮಯ ಬೆಳಕಿನಲ್ಲಿ ಕತ್ತಲನ್ನು ಹುಡುಕಿದರೆ ಸಿಕ್ಕಬಲ್ಲುದೆ ? ಮೂರೊಂದಾದ ಘನವನ್ನು ಬೇರೆ ಬೇರೆ ಎಂದು ನೋಡಲಾದರೂ ಬರುತ್ತದೆಯೇ ಹೇಗೆ ?

ಮಲಪ್ರಭ ಘಟಪ್ರಭ ಕ್ರಿಷ್ಣೆ ಬೇರೆ ಬೇರೆಯಾಗಿ ಹರಿಯುತ್ತಿದ್ದುದು ನಿಜವೇ. ಆ ಮೂರೂ ನದಿಗಳು ಆಯಾ ಹೆಸರಿನಿಂದ ಕರೆಯಿಸಿಕೊಳ್ಳುತ್ತಿದ್ದವು. ಹರಿಯುತ್ತ ಹರಿಯುತ್ತಾ ಮೂರೂ ನದಿಗಳು ಒಂದೆಡೆ ಸಂಗಮಗೊಂಡಾಗ ಕ್ರಿಷ್ಣೆಯನ್ನು ಕ್ರಿಷ್ಣ ಎಂದು ಹೆಸರಿಟ್ಟು ಕರೆಯಲಾದರೂ ಸಾಧ್ಯವಾಗುವುದೆ? ಮಲಪ್ರಭ ಘಟಪ್ರಭವೆಂದು ಕರೆಯಲಾದರೂ ಸಾಧ್ಯ ವಾದೀತೆ ? ಮೂರೂ ನದಿಗಳು ಕೂಡಿ ಕೂಡಲಸಂಗಮವಾಗಿವೆ. ಹಾಗೆಯೇ ತನು ಮನ ಘನದಲ್ಲಿ ಕೂಡಿ ಬೆಳಗಿಂಗೆ ಬೆಳಕಾಗಿ ಬೆಳಗುವ ಬೆಳಕೇ ಆದಾಗ, ಅಲ್ಲಿ ಕತ್ತಲನ್ನು ಹುಡುಕಲು ಸಾಧ್ಯವೆ ?

ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಮಹಾಪ್ರಸಾದವನು ಒಡಗೂಡಿದ ಬಳಿಕ ಬೇರೆ ನಾನೊಂದು ನದಿಯೆಂದು ಹೇಳಲಾದರೂ ಬರುತ್ತದೆಯೇ ಪ್ರಭುವೆ ! ಎಂದು ಸಿದ್ಧರಾಮ ಶಿವಯೋಗಿಗಳು ಮೂರೊಂದಾದ ಸೂತ್ರದ ವಿವರವನ್ನು ತಾನು ತಾನೇ ಆದ ಬಗೆಯನ್ನು ಪ್ರಭುದೇವರು ಒಪ್ಪುವಂತೆ ಹೇಳಿದ್ದಾರೆ.

**731**

**ನೆರೆಮನೆಯ ಕೇರಿಯೊಳಗೆ ಗುರುಕರುಣ ಪಾತ್ರೆಯಲಿ**
**ಹರುಷದಿಂದ ಭಿಕ್ಷವ ತಂದೆ ಅವ್ವಾ,**
**ಕರಣ ಶುದ್ಧಮಾಡಿ ಉಣ್ಣ ಬಾರಾ.**
**ನೆನಹಿನ ಗುಣದಲ್ಲಿ ಕರಣ ಕಾನನದಲ್ಲಿ**
**ತೆರಹುಗೆಟ್ಟು ಇದ್ದೆನು ಕಂಡಾ.**
**ಕರುಣಾಕರನೆ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ**
**ನೆನಹಿನಲ್ಲಿ ಲೀಯವಾದೆನು.**

ನೆರೆಮನೆಯ ಕೇರಿಯೊಳಗೆ ಹೋಗಿ ಭಕ್ತಿಯಿಂದ ಭಿಕ್ಷೆ ಬೇಡಲು ಗುರುದೇವ ಕರುಣೆಯಿಂದ

ಹರುಷದಿ ಭಿಕ್ಷೆ ನೀಡಲು ಪಾತ್ರೆತುಂಬಿತು. ಕರಣಂಗಳೆಲ್ಲ ಶುದ್ಧಿಯಾಗಿ ಜ್ಞಾನಕಿರಣಂಗಳಾಗಿ ಬೆಳಗಿದವು ತಾಯಿ. ಕರಣಂಗಳ ಕಾಡಿನಲ್ಲಿ ಗುರುದೇವನನ್ನು ಸದಾ ನೆನೆಯುತ್ತಾ ತೆರಹು ಗೆಟ್ಟು ಇದ್ದೆನು ಕಂಡಾ. ಕರುಣಾಕರನೆ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ನೆನಹಿನಲ್ಲಿ ಲೀಯವಾದೆನು.

ತನು ನೋಡಲು ಒಂದೇ ಆಗಿ ಕಂಡರೂ ಅದರೊಳಗೆ ಮೂರು ಕೇರಿಗಳ ಮೂರು ಮನೆಗಳಿವೆ. ಒಂದು ಅರಿವಿನ ಮನೆ ಅದರಲ್ಲಿ ಗುರುದೇವ ವಾಸ ಮಾಡುತ್ತಾನೆ. ಆತ ಬೆಳಗುವ ಅರಿವಿನ ಬೆಳಕಿನಿಂದ ಸೃಷ್ಟಿಯಾದ ಮನವೆಂಬ ಕತ್ತಲ ಮನೆಯೊಂದು. ಇವರಿಬ್ಬರ ಮನೆಗೆ ಆಶ್ರಯ ನೀಡಿದ ಸ್ಥೂಲಮನೆಯೊಂದು.

ಕತ್ತಲ ಮನೆ ಕತ್ತಲಕೇರಿಯೊಳಗೆ ವಾಸ ಮಾಡುತ್ತದೆ. ಅದಕ್ಕೆ ಎಲ್ಲಿ ನೋಡಿದರೂ ಕತ್ತಲೇ ಕಾಣುತ್ತದೆ. ಕತ್ತಲೆಂದರೆ ಆ ಮನೆಗೆ ಬಲು ಇಷ್ಟ. ಇರುಳು ಮಾತ್ರ ಅದಕ್ಕೆ ಬೆಳಕಾಗಿ ಕಾಣುತ್ತದೆ. ಬೆಳಕು ಕತ್ತಲಾಗಿ ಕಾಣುತ್ತದೆ. ಒಂದು ರೀತಿಯಲ್ಲಿ ಗೂಗೆಯಿದ್ದಂತೆ. ಅದಕ್ಕೆ ಹಗಲು ಕಣ್ಣು ಕಾಣುವುದೇ ಇಲ್ಲ. ಇದು ಕೂಡಾ ಹಾಗೆಯೇ ಸದಾ ಅಜ್ಞಾನದ ಕೆಲಸದಲ್ಲಿಯೇ ಭಾಗಿಯಾಗಿರುತ್ತದೆ.

ಗುರುಕರುಣದಿಂದಾಗಿ ಅರಿವಿನ ಕೇರಿಗೆ ಹೋಗಿ ಗುರುದೇವನನ್ನು ಬೆಳಕಿನ ಭಿಕ್ಷೆ ಬೇಡಲು ಹರುಷದಿಂದ ನೀಡಿದನು. ಪಾತ್ರೆ ತುಂಬಿ ಇಡೀ ಕತ್ತಲಕೇರಿಯೇ ಬೆಳಕಿಂಗೆ ಬೆಳಕಾಗಿ ಬೆಳಗಿತು. ಆ ಬೆಳಕಿನಲ್ಲಿಯೇ ಲೀನವಾಗಿ ತನ್ನ ಅಜ್ಞಾನದ ಕತ್ತಲನ್ನು ಕಳೆದುಕೊಂಡಿತು.

**732**

**ನೆಲದೊಳಗೆ ಭವಿಸಿತ್ತು ಹಲವು ಪರಿಯ ಬಣ್ಣ**
**ಉಲಿದಾಡುವುದು ದಾಯದಾಯದೊಳಗೆ**
**ಸ್ಥೂಲ ಮೂರಾಕೃತಿಯ ಮೇಲೆ ಸೂಕ್ಷ್ಮ ನಿಂದು**
**ಆ ಸ್ಥೂಲಕ್ಕೆ ಸೂಕ್ಷ್ಮಕ್ಕೆ ಅಂತ ತಾನೆ.**
**ಆರೂಢದಾ ಘನವ ಆರು ಬಲ್ಲವರಯ್ಯಾ,**
**ಆಲಯವ ಮೀರಿಪ್ಪ ಸಂಬಂಧಿಯಾ.**
**ಭಾಳದಿಂ ಮೇಲಿಪ್ಪ ಕಾರಣದ ಸನುಮತ್ಯ**
**ಆರಾರರಿಂದತ್ತ ಆದನಾ ತಾ ತೋರಿಪ್ಪ**
**ನಿಸ್ಸೀಮ ಆನಂದ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಯಲು ದೇವನ ಲೀಲೆ ಅನಂತ. ಬಯಲಿಗೆ ಬಣ್ಣವಿಲ್ಲ ರೂಪವಿಲ್ಲ ವಾಸನೆಯಿಲ್ಲ ರುಚಿಯಿಲ್ಲ. ಆದರೂ ಅದು ತನ್ನ ಗರ್ಭದೊಳಗಿನ ಜಲಜನಕ ಆಮ್ಲಜನಕವನ್ನು ಕೂಡಿಸಿ ತಾನು ಅದರಲ್ಲಿ ಬೆರೆತು ಜಲವನ್ನಾಗಿ ಮಾಡಿತು. ಆ ಜಲವನ್ನೇ ಗಟ್ಟಿಗೊಳಿಸಿ ನೆಲವನ್ನಾಗಿ ಮಾಡಿತು. ಆ ನೆಲದ ಮೇಲೆ ಜೀವಜಲ ಹರಿದು, ಉಲಿದಾಡುವ ಹಲವಾರು ಬಣ್ಣಗಳ ರೂಪ ನಿರ್ಮಾಣ ಮಾಡಲು ಬಯಲು ಕಾರಣವಾಯಿತು.

ಬಯಲು ತನುವಿಗೆ ಜನ್ಮಕೊಟ್ಟು ಅದರಲ್ಲಿ ಸೂಕ್ಷ್ಮ ಸ್ಥೂಲವೆಂದು ಎರಡು ತನುಗಳನ್ನಿಟ್ಟು ಕಾರಣ ತನುವಾಗಿ ತಾನೇ ಉಳಿಯಿತು. ಆ ಸ್ಥೂಲ ತನುವಿಗೆ, ಸೂಕ್ಷ್ಮ ತನುವಿಗೆ ಅಂತ್ಯ ತಾನೇ ಆಯಿತು.

ಬಯಲಿಗೆ ಯಾವ ರೂಢಿಯೂ ಇಲ್ಲ. ಬಯಲು ಎಲ್ಲಾ ಆದರೂ ತಾನೂ ಏನೂ ಅಲ್ಲ.

ಬೀಸುವ ಗಾಳಿ, ಹರಿಯುವ ಜಲ, ಉರಿಯುವ ಬೆಂಕಿ, ಸುರಿಯುವ ಮಳೆ, ತಿರುಗುವ ಭೂಮಿ, ಬೆಳೆಯುವ ಬೆಳೆ ಪಶು ಪಕ್ಷಿ ಪ್ರಾಣಿ ಉರಗ ಜಲಚರ ಆಕಾಶ ಕಾಯಗಳು ನಕ್ಷತ್ರಗಳು ಸೂರ್ಯ ಚಂದ್ರ ಮುಂತಾದವುಗಳಿಗೆ ಜನ್ಮ ನೀಡಿದ ಬಯಲು ಅದು ಆರೂಢ.

ಜನ್ಮ ನೀಡಿದ ಸಕಲ ವಸ್ತುಗಳಿಗೂ ಹಲವಾರು ರೂಢಿಯಿದೆ. ಆದರೆ ಜನ್ಮನೀಡಿದ ಬಯಲಿಗೆ ಮಾತ್ರ ಯೂವ ರೂಢಿಯೂ ಇಲ್ಲ.

ಎಲೆ ಬಯಲ ದೇವನೆ ಆರು ಬಲ್ಲರಯ್ಯ ನಿನ್ನ ಆರೂಢದ ಘನವ! ಆಲಯವ ಮೀರಿಪ್ಪ ಸಂಬಂಧಿ ನೀನು. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳಿಂದತ್ತತ್ತ ನೀನು. ನಿಸ್ಸೀಮನು ನೀನು. ಘಟಸ್ಥಲ ಪ್ರಭ ನೀನು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನೆಲದೊಳಗೆ ಭವಿಸಿತ್ತು ನಿನ್ನ ಹಲವು ಪರಿಯ ಬಣ್ಣ.

**733**

**ನೆಲ್ಲ ಗಿಡುವಿನಮರೆಯಲೊಂದು ಹುಲ್ಲು ಗಿಡವಾನಯ್ಯಾ.**
**ನಿಮ್ಮ ಚರಣವೆ ಶರಣು ಶರಣೆಂದು**
**ನಾನು ಧನ್ಯನಾದೆನು ನೋಡಯ್ಯಾ.**
**ನಿಮ್ಮ ನೆನೆದವರೆಲ್ಲ ಧನ್ಯರು,**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ಪರಮಾತ್ಮನೆ, ನೀನು ಅಂದರೆ ಯಾರಿಗೆ ಗೊತ್ತು ? ಆದರೂ ಎಲ್ಲರೂ ನಿನ್ನ ಆರಾಧಿಸುವವರೇ ಆಗಿದ್ದಾರೆ. ನಿನಗಾಗಿ ಭವ್ಯವಾದ ಆಲಯಗಳನ್ನು ಕಟ್ಟಿದ್ದಾರೆ. ಅಲ್ಲಿ ನೀನಿಲ್ಲವೆಂದು; ಆಲಯ ಕಟ್ಟಿದ ಪ್ರತಿ ಕಾಯದಲ್ಲಿ ನೀನೆ ಇರುವಿಯೆಂದು ಅವರಿಗೆ ಗೊತ್ತಿಲ್ಲ. ಆಲಯದಲ್ಲಿರುವ ದೇವರು ನೀನಲ್ಲವೆಂದು ನಿನ್ನನ್ನು ಆರಾಧಿಸುವವರಿಗೆ ಗೊತ್ತಿಲ್ಲ. ನಿನ್ನನ್ನು ಆರಾಧಿಸುವ ಸಕಲ ತನುಗಳಲ್ಲಿಯೂ ನೀನಿರುವಿಯೆಂದು ಕೂಡಾ ಅವರಿಗೆ ಗೊತ್ತಿಲ್ಲ.

ನೆಲ್ಲ ಸಸಿಯ ಮರೆಯಲೊಂದು ಹುಲ್ಲು ಸಸಿ ನಾನಯ್ಯಾ. ನನಗೆ ಗೊತ್ತು ನನ್ನ ತನುವಿನಲ್ಲಿಯೇ ನೀನಿರುವಿಯೆಂದು, ಹೀಗಾಗಿ ನಿಮ್ಮ ಚರಣಕ್ಕೆ ಶರಣು ಶರಣೆಂದು ಧನ್ಯನಾದೆನು ನಾನು ನೋಡಯ್ಯಾ. ನಿಮ್ಮ ನೆನೆದವರೆಲ್ಲ ಧನ್ಯರು, ಕಪಿಲಸಿದ್ಧ ಮಲ್ಲಿನಾಥಯ್ಯ.

**734**

**ನೇಮಾಕ್ಷರದ ರೀತಿ ನಾನು ಪ್ರಸಾದದಲಿ**
**ಸಾಮ ಮಂಡಲದಲಿ ಭವಿಸುತಿಹುದು,**
**ನಾಮ ನಿರ್ನಾಮ ನಿತ್ಯದ ನಿಜದ ಐಕ್ಯದೊಳು**
**ಮೂಲ ಲಿಂಗತ್ರಯವು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನೇಮಾಕ್ಷರಗಳಿಂದ ಕೂಡಿದ ನಾಮವೇ ಅಧಿಕವಾಗಿದೆ; ಈ ಭೂಮಂಡಲದಲ್ಲಿ. ನೇಮಾಕ್ಷರದ ನಾನು ಎನ್ನುವ ನಾಮ ನಿರ್ನಾಮ ಮಾಡಿಕೊಳ್ಳುವುದು ಬಲು ಜಟಿಲ. ಅದು ಪ್ರಸಾದವಾಗುವುದು ಸುಲಭದ ಮಾತು ಅಲ್ಲವೇ ಅಲ್ಲ.

ಹೆಸರನುಳಿಸುವ ಮಾತು ಎಲ್ಲಿ ನೋಡಿದರೂ ಬರುತ್ತದೆಯೇ ಹೊರತು ಹೆಸರನ್ನು ಕಳೆದುಕೊಂಡು ನಿತ್ಯ ನಿಜ ಐಕ್ಯದೊಳಗೆ ಹೋಗಿ ಪರಮ ಸುಖಿಯಾಗುವ ಕಲೆ ಕಾಯಕ್ಕೆ ಹೊಳೆಯದೇ ಇರುವುದು ದುರ್ದೈವದ ಸಂಗತಿ.

ಅಂಗದ ಮೂಲ ಲಿಂಗತ್ರಯವೇ ಆಗಿದೆ. ಅಂಗ ಮೂರು ಲಿಂಗಗಳ ಸಂಗವು. ಸೂಕ್ಷ್ಮಾಂಗವೆಂಬ ಲಿಂಗ ಒಂದು, ಸ್ಥೂಲಾಂಗವೆಂಬ ಲಿಂಗವೊಂದು, ಜ್ಞಾನಾಂಗವೆಂಬ ಲಿಂಗವೊಂದು. ಹೀಗೆ ತ್ರಿಲಿಂಗಗಳ ಸಂಗಮವೇ ಅಂಗ. ಇದರ ಮೂಲ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ.

**735**

**ನೈರುತಿಯೆಂಬಳು ಜಲದ ಮನೆಯ ಸ್ಥಳದಲ್ಲಿ ಇಪ್ಪಳು**
**ಬಾಸಣಿಸಿದ ಶಿಖರದ ಮೇಲೆ.**
**ಧರಣಿಯ ಮೂರುತಿ ತನಗೆ ನೋಡಾ !**
**ವಿಕಟದ ವೀರೆಯರಿಬ್ಬರಿಗೆ ವಿಕಟದ ಗಂಡ,**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ತನುವಿನಲ್ಲಿ ತನ್ಮಯವಾದ ಆತ್ಮವನ್ನು ತನುವನ್ನು ಆವರಿಸಿದ ಮನ ಕೂಡಿ ಆ ಆತ್ಮದೊಂದಿಗೆ ಒಂದಾಗಲು ಬಹಳಷ್ಟು ಕಾಲ ಸವೆಯಬೇಕಿಲ್ಲ. ಇದು ತನ್ನದೇ ಆದ ಕಲೆ; ವಿದ್ಯೆ. ಈ ಆತ್ಮ ವಿದ್ಯೆಯನ್ನು ಅರಿಯಲು ವೇದ ಆಗಮ ಉಪನಿಷತ್ತುಗಳು ಹುಟ್ಟಿಕೊಂಡವು. ಭಗವದ್ಗೀತೆ ಬೈಬಲ್ ಕುರಾನ್‌ಗಳು ಹುಟ್ಟಿಕೊಂಡವು.

ತನುವಿನಲ್ಲಿಯೇ ತನ್ಮಯವಾದ ಆತ್ಮವನ್ನು ಅರಿಯಲು ತನುವಿನಿಂದಲೇ ಲಕ್ಷಗಟ್ಟಲೆ ಗ್ರಂಥಗಳು ರಚನೆಯಾದವು. ಆದರೂ ತನು ಮನಗಳೆರಡೂ ತನುವಿನಲ್ಲಿ ತನ್ಮಯವಾದ ಆತ್ಮವನ್ನು ಅರಿಯಲಿಲ್ಲ. ಆ ಆತ್ಮದೊಂದಿಗೆ ತನು ಮನಗಳೆರಡೂ ಕೂಡಲಿಲ್ಲ.

ನೋಡಲು ಹೋದರೆ ಬೇರೆ ಬೇರೆ ಇಲ್ಲ. ಆತ್ಮವಿದ್ಯೆಗೆ ಒಂದು ಮೆರಗು ಬರಲೆಂದು ಸಿದ್ಧರಾಮ ಶಿವಯೋಗಿಗಳು ಬೆಡಗಿನಿಂದ ನುಡಿದರು. ತಂದೆಯ ಮುಖಾಂತರ ತಾಯಿ ಗರ್ಭಕ್ಕೆ ಹರಿದ ಜಲಬಿಂದುವು ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ ಚರ್ಮದ ಕವಚವಾಗಿ ಗರ್ಭದಿಂದ ತನುವಾಗಿ ಹೊರಬಂದರೆ ಅದನ್ನು ತನುವೆನ್ನಲು ಸಾಧ್ಯವೆ? ಸಿದ್ಧರಾಮ ಶಿವಯೋಗಿಗಳು ಇದನ್ನು ಜಲದಿಂದ ನಿರ್ಮಾಣವಾದ ಜಲದ ಮನೆಯೆಂದು ಕರೆದರು.

ಈ ಜಲದ ಮನೆಯ ಮೊನೆಯ ಮೇಲೆ ಮನವೆಂಬ ನೈರುತಿ ಮನೆ ಮಾಡಿಕೊಂಡಿದ್ದಾಳೆ. ಇಡೀ ಭೂಮಂಡಲವನ್ನೇ ತನ್ನ ಕಿಬ್ಬೆರಳಲಿ ಆಡಿಸುತ್ತಿದ್ದಾಳೆ. ವಿಕಟದ ವೀರೆಯರು ಇಬ್ಬರು ಒಬ್ಬಳು ಜಟೆಯ ಮೇಲೆ, ಮತ್ತೊಬ್ಬಳು ತೊಡೆಯ ಮೇಲೆ. ಇವರಿಬ್ಬರಿಗೆ ವಿಕಟದ ಗಂಡ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

**736**

**ನೋಟಕ್ಕೆ ನೋಟವಾಯಿತ್ತು ನಿಮ್ಮ ಪ್ರಸಾದ;**
**ಶಬ್ದಕ್ಕೆ ಶಬ್ದವಾಯಿತ್ತು ನಿಮ್ಮ ಪ್ರಸಾದ;**
**ಸ್ಪರುಷನಕ್ಕೆ ಸ್ಪರುಷನವಾಯಿತ್ತು ನಿಮ್ಮ ಪ್ರಸಾದ;**

**ಗಂಧಕ್ಕೆ ಗಂಧವಾಯಿತ್ತು ನಿಮ್ಮ ಪ್ರಸಾದ;**
**ರಸಕ್ಕೆ ರಸವಾಯಿತ್ತು ನಿಮ್ಮ ಪ್ರಸಾದ;**
**ಪರಿಣಾಮಕ್ಕೆ ಪರಿಣಾಮವಾಯಿತ್ತು ನಿಮ್ಮ ಪ್ರಸಾದ;**
**ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ನಿಮ್ಮ ಚನ್ನಬಸವಣ್ಣನ ಧರ್ಮವಯ್ಯಾ.**

ತನುವಿನಲ್ಲಿ ಎರಡು ನೋಟಗಳಿವೆ. ಒಂದು ಅಜ್ಞಾನದ ನೋಟವಾದರೆ ಮತ್ತೊಂದು ಜ್ಞಾನದ ನೋಟ. ನನ್ನದು ಅಜ್ಞಾನದ ನೋಟ; ನಿನ್ನದು ಜ್ಞಾನ ನೋಟ. ನಿಮ್ಮ ಜ್ಞಾನ ನೋಟಕ್ಕೆ ನನ್ನ ಅಜ್ಞಾನದ ನೋಟ ಪ್ರಸಾದವಾಯಿತು. ಬರೀ ಜ್ಞಾನ ನೋಟ ಮಾತ್ರ ಕಣ್ಣಲ್ಲಿ ಉಳಿಯಿತು. ಅಂತಹ ಕಣ್ಣು ಮುಕ್ಕಣ್ಣನ ಕಣ್ಣೆಂದು ಕರೆಯಿಸಿಕೊಂಡಿತು.

ಶಬ್ದದಲ್ಲಿ ನಿಃಶಬ್ದವೂ ಇದೆ, ಶಬ್ದವೂ ಇದೆ. ಹೀಗಾಗಿ ಶಬ್ದದಲ್ಲಿ ಸು-ಶಬ್ದ ಕು-ಶಬ್ದವೆಂದು ಸೃಷ್ಟಿಯಾಗಿದೆ. ಕಿವಿಗೆ ಇವೆರಡು ಮಾತ್ರ ಗೊತ್ತು. ಪ್ರತಿ ಶಬ್ದದಲ್ಲಿ ಅರಿವು ಮಾತ್ರ ಇದೆ. ಕಿವಿ ಅರಿವಿನ ಹೊರತಾಗಿ ಸು-ಶಬ್ದವೆಂದು ಕೇಳಿ ಸುಖಿಸುತ್ತದೆ ಕು-ಶಬ್ದವೆಂದು ಕೇಳಿ ದುಃಖಿಸುತ್ತದೆ. ಶಬ್ದದಲ್ಲಿರುವ ಅರಿವು ಶಬ್ದದಲ್ಲಿಯೇ ಉಳಿಯುತ್ತದೆ. ಕಿವಿಗೆ ಶಬ್ದದ ಅರಿವಾದರೆ ಆ ಶಬ್ದ ನಿಃಶಬ್ದವಾಗುತ್ತದೆ. ಶಬ್ದ ನಿಃಶಬ್ದಕ್ಕೆ ಪ್ರಸಾದವಾಗುತ್ತದೆ.

ಚರ್ಮ ಹೆಣ್ಣೂ ಅಲ್ಲ; ಅದು ಗಂಡು ಕೂಡಾ ಅಲ್ಲ. ಆದರೆ ಅದು ಹೆಣ್ಣೆಂದು ತಿಳಿದು ಗಂಡನ್ನು ಮುಟ್ಟುತ್ತದೆ; ಗಂಡೆಂದು ತಿಳಿದು ಹೆಣ್ಣನ್ನು ಮುಟ್ಟುತ್ತದೆ. ಹೀಗಾಗಿ ಚರ್ಮದಲ್ಲಿ ಉದ್ರೇಕ ಕ್ರೋಧ ಹುಟ್ಟುತ್ತದೆ. ಚರ್ಮವನ್ನು ಚರ್ಮ ಮುಟ್ಟಿದಾಗ ಏನೂ ಆಗಲಿಲ್ಲ. ಅಂದರೆ ನನ್ನನ್ನು ನಾನೇ ಮುಟ್ಟಿಕೊಂಡರೆ ಏನೂ ಆಗುವುದಿಲ್ಲ. ಏಕೆಂದರೆ ಚರ್ಮಕ್ಕೆ ತನ್ನದೇ ಚರ್ಮ ಎಂದು ಗೊತ್ತಿದೆ. ಇದೇ ಅರಿವಿನ ಚರ್ಮ. ಇದಕ್ಕೆ ಮಾತ್ರ ಸ್ಪರುಶನದ ಕಲೆ ಗೊತ್ತಿದೆ. ಯಾರು ಮುಟ್ಟಿದರೂ ಮುಟ್ಟಿದ ಸ್ಪರ್ಷ ಪ್ರಸಾದವಾಗುತ್ತದೆ.

ಮೂಗಿಗೆ ಸುಗಂಧ ದುರ್ಗಂಧ ಮಾತ್ರ ಗೊತ್ತು ಪರಿಮಳ ಗೊತ್ತಿಲ್ಲ. ಹೂವು ಸುಗಂಧ ಬೀರುತ್ತದೆ. ಅದು ಕೊಳೆತು ಹೋದ ಮೇಲೆ ಸುಗಂಧ ಬೀರಿದ ಹೂ ದುರ್ಗಂಧ ಬೀರುತ್ತದೆ. ಹೂವು ಸುಗಂಧವೂ ಅಲ್ಲ; ದುರ್ಗಂಧವೂ ಅಲ್ಲ. ಅದರ ಮೂಲ ಪರಿಮಳವೇ ಆಗಿದೆ.

ಸಸ್ಯಕ್ಕೆ ಹರಿದ ಜಲಕ್ಕೆ ವಾಸನೆಯಿಲ್ಲ. ಸಸ್ಯಕ್ಕೂ ವಾಸನೆಯಿಲ್ಲ. ಮೊಗ್ಗಿಗೂ ವಾಸನೆಯಿಲ್ಲ. ಹೂವಿಗೆ ಮಾತ್ರ ವಾಸನೆಯಿದೆ. ಈ ವಾಸನೆ ಸುಗಂಧವೂ ಅಲ್ಲ ದುರ್ಗಂಧವೂ ಅಲ್ಲ. ಅದರ ಮೂಲ ಪರಿಮಳ. ಇಂತಹ ಪರಿಮಳವನ್ನು ಮೂಸಿಸುವ ಮೂಗಿಗೆ ಸುಗಂಧ ದುರ್ಗಂಧಗಳೆರಡೂ ಪ್ರಸಾದವಾಗುತ್ತವೆ.

ಪದಾರ್ಥದಲ್ಲಿಯೂ ರುಚಿಯಿಲ್ಲ; ನಾಲಿಗೆಯಲ್ಲಿಯೂ ರುಚಿಯಿಲ್ಲ. ರುಚಿ ಇರುವುದು ಮನದಲ್ಲಿ ಮಾತ್ರ. ಮನ ನಾಲಿಗೆಯ ತುದಿಯಲ್ಲಿರುವುದರಿಂದ ಅದಕ್ಕೆ ರುಚಿ ಅರುಚಿ ಮಾತ್ರ ಗೊತ್ತು.

ಬೆಲ್ಲ ಸಿಹಿ. ಕಬ್ಬಿಗೆ ಹರಿದ ನೀರಿಗೆ ರುಚಿ ಇಲ್ಲ. ವಾಸನೆಯೂ ಇಲ್ಲ. ಹಾಗೆಯೇ ನಾಲಿಗೆಯಲ್ಲಿ ಭರಿತವಾದ ಜಲಕ್ಕೂ ವಾಸನೆಯಿಲ್ಲ ರುಚಿಯಿಲ್ಲ. ಇದು ವಿಜ್ಞಾನ. ಕಬ್ಬು ಮೆಣಸು ಈರುಳ್ಳಿ ನಿಂಬೆ ಬೆಳ್ಳುಳ್ಳಿ ಪೇರಲ ಕಲ್ಲಂಗಡಿ ಮೋಸಂಬಿ ಮಾವು ಇವುಗಳಿಗೆ ಹರಿದದ್ದೆಲ್ಲ ಜಲ. ನಾಲಿಗೆಯಲ್ಲಿದ್ದ ಜಲದಲ್ಲಿ ಪದಾರ್ಥ ಬೆರೆತು ಜಲವಾಗಲು ಸ್ವಲ್ಪ ಸಮಯ ಬೇಕು ಅಷ್ಟೇ.

ಜಿಹ್ವೆಯಲ್ಲಿ ಜಿಹ್ವೆಯಿದ್ದು ರುಚಿಸಲೇಕರಿಯರಯ್ಯಾ ಎಂದು ಬಸವಣ್ಣನವರು ಹೇಳಿದರೆ

ರಸಕ್ಕೆ ರಸವಾಯಿತ್ತು ನಿಮ್ಮ ಪ್ರಸಾದವೆಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಸೂತ್ರ ಒಂದೇ. ಹಾಗೆಯೇ ರಸದ ಮೂಲವೂ ಒಂದೇ ಆಗಿದೆ.

ಕಪಿಲಸಿದ್ಧ ಮಲ್ಲಿನಾಥಯ್ಯಾ, ನಿಮ್ಮ ಚನ್ನಬಸವಣ್ಣನ ಧರ್ಮವಯ್ಯಾ. ಶರಣರು ವಿಜ್ಞಾನಿಗಳು. ಹೀಗಾಗಿ ತನುವಿನ ಧರ್ಮವನ್ನು ವೈಜ್ಞಾನಿಕವಾಗಿ ಕಂಡುಕೊಂಡರು. ಹೀಗೆ ಪ್ರತಿಯೊಂದು ತನು ವಿಜ್ಞಾನಿಯಾಗಲೇಬೇಕು. ಇಲ್ಲದಿದ್ದರೆ ಅಜ್ಞಾನಕ್ಕೆ ಬಲಿಯಾಗಿ ವ್ಯರ್ಥವಾಗಿ ಸತ್ತು ಹೋಗುತ್ತದೆ.

**737**

**ನೋಟದ ಬೆರಗು ನೀನೆಯಯ್ಯಾ;**
**ಕೂಟದ ಕೂಟ ನೀನೆಯಯ್ಯಾ;**
**ಕಪಿಲಸಿದ್ಧ ಮಲ್ಲಿನಾಥಾ.**

ನನ್ನ ಅಜ್ಞಾನದ ನೋಟವನ್ನು ನನಗೆ ಗೊತ್ತು ಮಾಡಿ, ನನ್ನನ್ನು ನಾನೇ ನಾಚಿಕೊಳ್ಳುವಂತೆ ಮಾಡುವ ಬೆರಗಿನ ಜ್ಞಾನದ ನೋಟ ನೀನೇ ಅಯ್ಯಾ.

ದೇಹ ದೇಹದೊಂದಿಗೆ ಕೂಡುವ ಕೂಟವೆ ಸುಖದ ಕೂಟವೆಂದು ತಿಳಿದ ಅಜ್ಞಾನಿ ನಾನು. ಅಂಗವನ್ನು ಆವರಿಸಿದ ಮನ, ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನೊಂದಿಗೆ ಕೂಡುವ ಕೂಟವೇ ಕೂಡದ ಅಗಲದ ಕೂಟದ ಪರಮ ಸುಖವೆಂದು ಅರುಹಿದಾತ ನೀನೇ ಅಯ್ಯಾ.

ಅಜ್ಞಾನದಿಂದ ನೋಡಿ ಹಾದರದ ಸುಖ ಪಡುವ ನಾನೆತ್ತ ? ನಾನು ಹಾದರದಿಂದ ನೋಡಿದ ನೋಟವನ್ನೇ ನೀನು ಜ್ಞಾನದಿಂದ ನೋಡಿ ಆ ನೋಟದ ಮೂಲಕ ನಾನು ನೋಡಿದ ಅಜ್ಞಾನದ ಹಾದರವನ್ನು ಖಂಡಿಸಿದ ನೀನೆತ್ತ; ನಿನ್ನ ನೋಟ ಎತ್ತ. ನಿನ್ನ ಜ್ಞಾನದ ನೋಟ ನನ್ನ ಅಜ್ಞಾನದ ನೋಟವನ್ನು ಬೆರಗುಗೊಳಿಸಿತು ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

**738**

**ನೋಟದ ಭಕ್ತಿ ಬಸವನಿಂದಾಯಿತ್ತು;**
**ಕೂಟದ ಜ್ಞಾನ ಬಸವನಿಂದಾಯಿತ್ತು ಕಾಣಾ.**
**ಎಲ್ಲಿಯ ಶಿವಜ್ಞಾನ ಎಲ್ಲಿಯ ಮಾಟಕೂಟ ಬಸವನಲ್ಲದೆ ?**
**ಮಹಾಜ್ಞಾನ ಮಹಾಪ್ರಕಾಶ ಬಸವಣ್ಣನ ಧರ್ಮವಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಬಸವಣ್ಣ, ತನುವಿನಲ್ಲಿಯ ಸಹಜ ಜ್ಞಾನವನ್ನು ಕಂಡುಹಿಡಿದ ಮಹಾಜ್ಞಾನಿ. ಆತ ಕಂಡುಹಿಡಿದ ಸಹಜಜ್ಞಾನದ ಸರಳ ಸೂತ್ರಗಳಿಂದಾಗಿ ಈ ನಾಡಿನಲ್ಲಿ ಏಳುನೂರಾ ಎಪ್ಪತ್ತು ಜನ ಮಹಾಜ್ಞಾನಿಗಳಾಗಿ ಹೊರಹೊಮ್ಮಿದರು. ಪ್ರಪಂಚದ ಇತಿಹಾಸದಲ್ಲಿಯೇ ಇದು ಮೊದಲು. ಈ ದಾಖಲೆಯನ್ನು ಇದುವರೆಗೂ ಯಾರೂ ಮುರಿದಿಲ್ಲ.

ಸಿದ್ಧರಾಮ ಶಿವಯೋಗಿಗಳು ಬಸವಣ್ಣನನ್ನು ಮನಸಾರೆ ಸ್ತುತಿಸಿದ್ದಾರೆ. ಏಕೆಂದರೆ ತನಗೆ ಮರುಜನ್ಮ ನೀಡಿದಾತ ಬಸವಣ್ಣ. ನೋಟದ ಭಕ್ತಿ ಬಸವನಿಂದಾಯಿತ್ತು; ಕೂಟದ ಜ್ಞಾನ

ಬಸವನಿಂದಾಯಿತ್ತು ಕಾಣಾ ಎಂದು ಅರಿವಿನ ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

ಎಲ್ಲಿಯ ಶಿವಜ್ಞಾನ ಎಲ್ಲಿಯ ಮಾಟಕೂಟ ಬಸವಣ್ಣನಿಲ್ಲದಿದ್ದರೆ, ಇದು ಸಾಧ್ಯವಾಗುತ್ತಿತ್ತೆ? ಕಾಲ್ಯಾಣದಲ್ಲಿ ಏಳುನೂರಾ ಎಪ್ಪತ್ತು ಶರಣರು ಉದಯವಾಗಲು ಸಾಧ್ಯವಾಗುತ್ತಿತ್ತೆ ? ಎಂದು ಅರಿವಿನ ಮಲ್ಲಯ್ಯನನ್ನೇ ಪ್ರಶ್ನಿಸಿದ್ದಾರೆ.

ಅಂಗದಲ್ಲಿ ಅರಿವು ಸಂಗಮವಾಗಿದ್ದರೂ, ಅರಿವು ಅಂಗದಲ್ಲಿಯೇ ಇದೆಯೆಂದು ಅಂಗವನ್ನು ಆವರಿಸಿದ ಮನಕ್ಕೆ ಗೊತ್ತಿರಲಿಲ್ಲ. ಅಂಗಕ್ಕೂ ಗೊತ್ತಿರಲಿಲ್ಲ. ಕಣ್ಣ ನೋಟದಲ್ಲಿ ಅರಿವಿದೆಯೆಂದು ಕಣ್ಣನ್ನು ಆವರಿಸಿದ ಮನಕ್ಕೆ ಗೊತ್ತಿರಲಿಲ್ಲ. ಹೀಗಾಗಿ ನೋಟದ ಬೆರಗಿನ ಕೂಟ ನೋಟದಲ್ಲಿ ಏರ್ಪಟ್ಟಿರಲಿಲ್ಲ.

ಜ್ಞಾನಮಯವಾದ ಅಂಗದೊಂದಿಗೆ, ಮನೋಮಯವಾದ ಅಂಗದ ಕೂಟದ ಕಲೆ ಯಾರಿಗೂ ಗೊತ್ತಿರಲಿಲ್ಲ. ಜ್ಞಾನಮಯವಾದ ಅಂಗದಲ್ಲಿ, ಮನೋಮಯವಾದ ಅಂಗದ ಕೂಟದ ಕೂಟವನ್ನು ಏರ್ಪಡಿಸಿದಾತ ಬಸವಣ್ಣನೇ ಆಗಿದ್ದಾನೆ. ಈ ಕೂಟದಿಂದಾಗಿ ಮಹಾಜ್ಞಾನದ ಮಹಾ ಪ್ರಕಾಶದ ಬಸವಣ್ಣನ ಧರ್ಮವು ಉದಯವಾಯಿತು.

ಅರಿವಿನ ಧರ್ಮವೇ ಬಸವಣ್ಣನ ಧರ್ಮವಾಯಿತು. ಸಕಲ ತನುಗಳಲ್ಲಿ ಅರಿವಿನ ಧರ್ಮದ ತನುವೊಂದು ಸಂಗಮವಾಗಿದೆಯೆಂದು ಸಕಲ ತನುಗಳಿಗೆ ಸಹಜವಾಗಿ ಮನವರಿಕೆ ಮಾಡಿದಾತ ಬಸವಣ್ಣ.

**739**

**ನೋಟವೆ ಕೂಟವಾಗಿ**
**ಕೂಟವೆ ಜೀವನವಾಗಿ ನಿರ್ದಾಟಿಸುವ**
**ಗಂಡನೆನಗೆಂದಪ್ಪನಯ್ಯಾ, ಎಂದಪ್ಪನಯ್ಯಾ?**
**ಅಪ್ಪುವೆ ಗುರುಕರುಣದಿಂದ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬ್ರಹ್ಮ ಜ್ಞಾನಿಯಾಗಬೇಕೆಂಬ ನೋಟದ ಇಚ್ಛೆಯೇ ಬೇರೆ. ಭ್ರಮಾ ಸುಖವನ್ನು ಅನುಭವಿಸಬೇಕೆಂಬ ನೋಟದ ಕೂಟವೇ ಬೇರೆ. ಈ ಕೂಟ ಕೂಡಿ ಅಗಲುವಕೂಟ. ಇದು ಜೀವನದ ಕೂಟವಲ್ಲ. ಉಪಜೀವನದ ಕೂಟ. ಉಪಜೀವನದ ನೋಟ.

ನೋಟವೇ ಕೂಟವಾಗಿ ಆ ಕೂಟವೇ ಜೀವನವಾಗಿ ನೀರ್ದಾಟಿಸುವ ಗಂಡನು ಎನಗೆ ಎಂದು ಸಿಗುವನು. ಅವನು ನನ್ನನ್ನು ಎಂದೂ ಬಿಡದಂತೆ ಬಿಗಿದಪ್ಪಿಕೊಳ್ಳುವನೋ; ಆ ಅಪ್ಪಿಗೆಯ ಗುರುಕರುಣ ಎನಗೆ ಎಂದು ಲಭಿಸುವುದೊ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಅಂಗದಲ್ಲಿಯೇ ಸಂಗಮವಾದ ಅರಿವಿನ ಗಂಡನು ಅಂಗವನ್ನು ಆವರಿಸಿದ ಮನವೆಂಬ ಅಂಗನೆಯೊಂದಿಗೆ ಕೂಡುವ ಕೂಟವೇ ಕೂಡದ ಅಗಲದ ಕೂಟ. ಅರಿವಿನ ಜೀವನದ ಕೂಟ. ಅರಿವಿನ ಲಿಂಗಯ್ಯನೆಂಬ ಗಂಡ ಮನವೆಂಬ ಅಂಗನೆಯ ಕೈಹಿಡಿದು ಭವ ಸಾಗರವೆಂಬ ನೀರ್ದಾಟಿಸುವನು.

ಅಂತಹ ನಿಜಗಂಡ ನನಗೆ ಎಂದಾದರು ಸಿಗುವನೊ ? ಅವನ ಅಪ್ಪುಗೆಯಲ್ಲಿ ಪರಮಸುಖ ಹೊಂದುವ ಭಾಗ್ಯ ನನಗೆ ಗುರುದೇವನು ಎಂದಾದರು ಕರುಣಿಸಿಯಾನು ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿನಾಥಯ್ಯನನ್ನು ಪ್ರಾರ್ಥಿಸಿದ್ದಾರೆ.

**740**

**ನೋಡಿದಡೆ ಮೂರ್ತಿಯಾಗಿದೆ**

**ಹಿಡಿದಡೆ ಬಯಲಾಗಿದೆ**
**ನುಡಿದಡೆ ಬ್ರಹ್ಮ ಬಾಯದೆಗೆದಂತಿದೆ,**
**ಶಿವಶಿವ! ಈ ಸುಳುಹು ಎನ್ನ ಪರಮಗುರು**
**ಕಪಿಲಸಿದ್ಧ ಮಲ್ಲಿನಾಥನಲ್ಲದೆ ಮತ್ತೊಂದಾಗಲರಿಯದು.**

ನುಡಿಯುವ ಶಕ್ತಿ ತನುವಿಗೊಂದೇ ಇದೆ. ನುಡಿದಡೆ ನುಡಿಯುವ ಸಕಲ ನುಡಿಗಳು ಬ್ರಹ್ಮ ಬಾಯದೆಗೆದಂತಿದೆ. ಭ್ರಮೆಯಿಂದ ಕೇಳುವುದರಿಂದಾಗಿ ನುಡಿ, ಸುಖ ಇಲ್ಲ ದುಃಖವನ್ನುಂಟು ಮಾಡುತ್ತದೆ.

ನುಡಿಯಲ್ಲಿ ಸುಖವೂ ಇಲ್ಲ ದುಃಖವೂ ಇಲ್ಲ, ನುಡಿಯಲ್ಲಿ ಅರಿವು ಮಾತ್ರ ಇದೆ. ಅದನ್ನು ಅರಿವಿನಿಂದ ಕೇಳಬೇಕು. ಮರೆವಿನಿಂದ ಕೇಳಿದರೆ ನುಡಿ ಇಡೀ ತನುವನ್ನು ಆಯುಧದಂತೆ ಕೊಚ್ಚಿ ಹಾಕುತ್ತದೆ.

ನುಡಿ ಒಂದು ವಸ್ತುವಲ್ಲ ; ಕೇಳುವ ತನು ಕೂಡಾ ಮೂರ್ತಿ ಅಲ್ಲ. ನೋಡಿದಡೆ ರೂಪ; ಮೂರ್ತಿಯಾಗಿ ಕಾಣುತ್ತದೆ. ಅರಿವಿನಿಂದ ನೋಡಿದರೆ ಅದು ನಿರೂಪ; ಬಯಲಾಗಿದೆ.

''ಬಯಲು ಬಯಲನು ಬಿತ್ತಿ, ಬಯಲು ಬಯಲನು ಬೆಳೆದು ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ಬಯಲು ಜೀವನ ಬಯಲು ಭಾವನೆ ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು; ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ'' ಎಂದು ಅಲ್ಲಮ ಪ್ರಭುಗಳು ಬಯಲ ಮೂರ್ತಿ ಬಗ್ಗೆ ಹೇಳಿದ್ದಾರೆ.

ಎಂತಹ ಅದ್ಭುತವಾದ ಸೂತ್ರ. ಸಕಲ ವಸ್ತುಗಳ ಪೂರ್ವಾಶ್ರಯ ಬಯಲು. ಇಡೀ ಬ್ರಹ್ಮಾಂಡವೇ ಬಯಲ ಬೀಜದಿಂದ ಸೃಷ್ಟಿಯಾಗಿದೆ. ಬಯಲನ್ನೇ ಆಧಾರವಾಗಿಸಿಕೊಂಡು ಬಯಲಲ್ಲೇ ನಿಂತಿದೆ.

ನನಗೆ ಭೂಮಿ ಆಶ್ರಯ ನೀಡಿದೆ. ಭೂಮಿಗೆ ಬಯಲು ಆಶ್ರಯ ನೀಡಿದೆ. ನಕ್ಷತ್ರ ಆಕಾಶಕಾಯ ಸೂರ್ಯ ಚಂದ್ರ ಕೂಡಾ ಬಯಲ ಆಶ್ರಯದಲ್ಲಿವೆ. ಇದನ್ನು ತಿಳಿಯುವ ಶಕ್ತಿ ತನುವಿಗೊಂದೇ ಇದೆ. ಏಕೆಂದರೆ ಬಯಲು ಮೂರ್ತಿಯಾಗಿ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದೆ. ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನು ನೋಡಿ ಪರಮಸುಖ ಹೊಂದುವುದಕ್ಕಾಗಿ ಮೂರ್ತಿಯಾಗಿದೆ.

ನೋಡಿದಡೆ ಮೂರ್ತಿಯಾಗಿದೆ, ಹಿಡಿಯಲು ಹೋದರೆ ಅದು ಬಯಲು. ನುಡಿದಡೆ ಬ್ರಹ್ಮ ಬಾಯದೆಗೆದಂತಿದೆ, ಶಿವ ಶಿವ ! ಈ ಸುಳುಹು ನೀಡಿದಾತ ಎನ್ನ ಪರಮಗುರು ಕಪಿಲಸಿದ್ಧ ಮಲ್ಲಿನಾಥನು. ನನಗೆ ರೂಪು ಇದೆ.

ನನ್ನ ಗುರುದೇವನಿಗೆ ರೂಪು ಇಲ್ಲ. ಆತ ನಿರೂಪು ! ನನ್ನ ರೂಪಲ್ಲಿಯೇ ಇದ್ದು ನಿರೂಪವಾಗಿ ನೋಡುತ್ತಾನೆ. ನಿರೂಪದಿಂದ ಕೇಳುತ್ತಾನೆ. ನಿರೂಪದಿಂದ ಮುಟ್ಟುತ್ತಾನೆ. ನಿರೂಪದಿಂದ ರುಚಿಸುತ್ತಾನೆ. ನಿರೂಪದಿಂದ ಪರಿಮಳವನ್ನು ಮೂಸಿಸುತ್ತಾನೆ.

ಮನ ಪರಮ ಗುರುವಿಗೆ ಶಿಷ್ಯನಾದರೆ ನೋಡುವ ಮೂರ್ತಿ ಬಯಲಾಗಿ ಕಾಣುತ್ತದೆ. ಕೇಳುವ ಶಬ್ದವೆಲ್ಲ ಬ್ರಹ್ಮ ಬಾಯದೆಗೆದಂತೆ. ಈ ಸುಳುಹು ಪರಮಗುರು ಶಿಷ್ಯನಿಗೆ ಮಾತ್ರ ಕೊಡುತ್ತಾನೆ.

**741**

**ನೋಡಿ ನೋಡಿ ಕಂದದಿದ್ದಡೆ,**
**ಕೂಡಿ ಕೂಡಿ ಲೀಯವಾಗದಿದ್ದಡೆ,**
**ಆ ನೋಟ ಕೂಟ ಏತಕ್ಕೆ ಹೇಳಾ, ಎಲೆ ಅವ್ವಾ?**

**ಕಪಿಲಸಿದ್ಧ ಮಲ್ಲಿಕಾರ್ಜುನಾ, ನಿನ್ನ ಕೂಡಿ ನೀನಾಗದಿದ್ದಡೆ,**
**ಆ ನೋಟ ಕೂಟ ಏತಕ್ಕೆ ಹೇಳಾ ಅವ್ವಾ?**

ರಾವಣ ಸೀತೆಯನ್ನು ನೋಡುವ ನೋಟಕ್ಕೆ ನೋಟವೆನ್ನಲು ಸಾಧ್ಯವೆ ? ನೋಡಿ ನೋಡಿ ಕಂದದ ನೋಟವನ್ನು ನೋಟವೆನ್ನಲು ಬರುವುದಿಲ್ಲ. ಅದು ಹಾದರದ ನೋಟ.

ಸುಖವಾದರೂ ತಾನು ಹಾಗೆ ನೋಡುವುದು ತಪ್ಪು ಎಂದು ಹಾದರದ ನೋಟಕ್ಕೆ ಗೊತ್ತಾಗುತ್ತದೆ. ಹಾಗೆ ಗೊತ್ತು ಮಾಡುವ ನೋಟವೆ ಅರಿವಿನ ನೋಟ; ಗುರುದೇವನ ನೋಟ; ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ನೋಟ.

ನನ್ನ ನೋಟವನ್ನು ಕಂದಿಸುವ ಗುಣ ಗುರುದೇವನ ನೋಟದಲ್ಲಿದೆ. ನೋಡುವಾಗೊಮ್ಮೆ ನೋಟ ಸರಿಯಿಲ್ಲವೆಂದು ಹೇಳಿದರೂ ನೋಡಿ ನೋಡಿ ಕಂದದಿದ್ದರೆ ಹೇಗೆ ನನ್ನಯ್ಯಾ ! ನೋಡುವ ನನ್ನ ಹಾದರದ ನೋಟ ಕೂಡಿ ಕೂಡಿ ನಿನ್ನ ನೋಟದಲ್ಲಿ ಲೀಯವಾಗದಿದ್ದರೆ ಹೇಗೆ ಹೇಳಾ, ಎಲೆ ಅವ್ವಾ? ಆ ಹಾದರದ ನೋಟವಾದರೂ ಏಕೆ ? ಆ ಹಾದರದ ಕೂಟವಾದರೂ ಏಕೆ ? ಗುರುದೇವನೆ, ಕಪಿಲಸಿದ್ಧ ಮಲ್ಲಿಕಾರ್ಜುನನೇ, ನಿನ್ನ ಕೂಡಿ ನೀನಾಗದಿದ್ದಡೆ, ಆ ನೋಟ ಕೂಟ ಏತಕ್ಕೆ ಹೇಳಾ ಎಲೆ ಅವ್ವಾ!

**742**

**ಪಂಚಬ್ರಹ್ಮವನೆನಗೆ ವಂಚಿಸದೆ ತೋರಿದಿರಿ ಚೆನ್ನಬಸವಣ್ಣಾ.**
**ಪಂಚಾಕ್ಷರದ ಭೇದವನರುಹಿದಿರಿ ಚೆನ್ನಬಸವಣ್ಣಾ.**
**ಪಂಚಭೂತಾತ್ಮವನು ಕಳೆದು ಶಿವಲಿಂಗವನು**
**ಪಂಚಮದೊಳಗಿರಿಸಿದ್ಯೆ ಚೆನ್ನಬಸವಣ್ಣ ಗುರುವೆ,**
**ಕಪಿಲಸಿದ್ಧ ಮಲ್ಲಿನಾಥಾ.**

ತನುವನ್ನು ಆವರಿಸಿದ ಸಕಲ ಭ್ರಮೆಯನ್ನು ಕಳೆದು, ತನುವಿನಲ್ಲಿಯೇ ತನ್ಮಯವಾದ ಪಂಚಬ್ರಹ್ಮನನ್ನು ಸದ್ಗುರು ಚೆನ್ನಬಸವಣ್ಣನವರು ಎನಗೆ ವಂಚನೆಯಿಲ್ಲದೆ ತೋರಿದರು.

ಅಂಗದ ಪಂಚಭೂತಾತ್ಮವನ್ನು ಕಳೆದು ಅಂಗವನ್ನೇ ಶಿವಲಿಂಗವನ್ನಾಗಿ ಮಾಡಿದರು. ಆ ಶಿವಲಿಂಗವನ್ನು ಪಂಚಮದೊಳಗೆ ಇರಿಸಿದರು ಚೆನ್ನ ಬಸವಣ್ಣ. ಎಂದು ಸಿದ್ಧರಾಮ ಶಿವಯೋಗಿಗಳು ಪರಮಗುರು ಚೆನ್ನ ಬಸವಣ್ಣನನ್ನು; ಬಸವಣ್ಣನನ್ನು ಹೃದಯ ಪೂರ್ವಕವಾಗಿ ಸ್ಮರಿಸಿದ್ದಾರೆ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಭ್ರಮೆ ತುಂಬಿತ್ತು. ಹೀಗಾಗಿ ಇಡೀ ತನು ಭ್ರಮಾತನುವಾಗಿತ್ತು. ಕಣ್ಣು ಇದ್ದರೂ ನೋಡುವುದನ್ನು ನೋಡುತ್ತಿರಲಿಲ್ಲ. ಕಿವಿ ಕೇಳುವ ಸತ್ಯವನ್ನು ಕೇಳುತ್ತಿರಲಿಲ್ಲ. ಮೂಗು ಸುಗಂಧ ದುರ್ಗಂಧವನ್ನು ಮಾತ್ರ ಮೂಸಿಸುತ್ತಿತ್ತು. ಪರಿಮಳದ ಪರಿಚಯ ಮೂಗಿಗೆ ಇರಲಿಲ್ಲ. ಚರ್ಮದ ಸ್ಪರ್ಷನ ಹಾದರದಿಂದ ಕೂಡಿತ್ತು. ನಾಲಿಗೆ ರುಚಿ ಅರುಚಿಯ ರೋಗಿಯಾಗಿತ್ತು. ಈ ಐದು ಭಾಗಗಳಲ್ಲಿ ಭ್ರಮೆ ಇರುವುದರಿಂದ ತನು ರೋಗಗ್ರಸ್ತವಾಗಿದೆ ಎಂದು ಹೇಳುತ್ತಾ ಕಣ್ಣಲ್ಲಿರುವ ಕಣ್ಣಿನ ಕಣ್ಣನ್ನು ಕಣ್ಣಿಗೆ ತೋರಿ ಇದು ಮುಕ್ಕಣ್ಣನ ಕಣ್ಣೆಂದು ಹೇಳಿದರು. ಅಜ್ಞಾನದ ಕಣ್ಣು ಮುಕ್ಕಣ್ಣನ ಕಣ್ಣಿಗೆ ತುತ್ತಾಗುವ ವಿಧಾನವನ್ನು ಸರಳವಾಗಿ ಹೇಳಿದರು ಬಸವಣ್ಣ.

ಕಿವಿಯಲ್ಲಿರುವ ಅರಿವಿನ ಕಿವಿಯನ್ನು ಕಿವಿಗೆ ತೋರಿ ಅಜ್ಞಾನದ ಕಿವಿಯನ್ನು

ಇಲ್ಲವಾಗಿಸಿದರು. ಚರ್ಮದಲ್ಲಿರುವ ಅರಿವಿನ ಚರ್ಮವನ್ನು ಚರ್ಮಕ್ಕೆ ತೋರಿದರು. ಮೂಗಿನಲ್ಲಿರುವ ಅರಿವಿನ ಮೂಗನ್ನು ಮೂಗಿಗೆ ತೋರಿದರು. ಜಿಹ್ವೆಯಲ್ಲಿರುವ ಅರಿವಿನ ಜಿಹ್ವೆಯನ್ನು ಜಿಹ್ವೆಗೆ ವಂಚಿಸದೆ ತೋರಿದರು ಬಸವಣ್ಣಾ.

ಪಂಚಾಕ್ಷರದ ಭೇದವನು ಅರುಹಿ, ಆ ಪಂಚಾಕ್ಷರಿಯೇ ನೀನೆಂದು ಹೇಳಿದರು ಬಸವಣ್ಣ. ಪಂಚ ಭೂತಾತ್ಮ ಶರೀರವೆಂಬುದನು ಇಲ್ಲವಾಗಿಸಿ, ಶಿವಲಿಂಗವನು ಪಂಚಮದೊಳಗಿರಿಸಿ ನೀನೆ ಆ ಶಿವಲಿಂಗವೆಂದು ಗಟ್ಟಿಯಾಗಿ ಹೇಳಿದರು ಚೆನ್ನಬಸವಣ್ಣ ಎಂದು ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**743**

**ಪಂಚೇಂದ್ರಿಯವೆಂಬ ಸೊಣಗ ಮುಟ್ಟದ ಮುನ್ನ**
**ಮನ ನಿಮ್ಮ ನೆಯ್ದುವಂತೆ ಮಾಡಯ್ಯಾ.**
**ಮೀಸಲು ಬೀಸರವೋಗದ ಮುನ್ನ**
**ನೀ ನಿತ್ಯವಾಗಿ ಪ್ರಯೋಗಿಸಯ್ಯಾ.**
**ಎನ್ನಾಸುರದ ಸ್ನೇಹವಿಂಗಿ ಹೋಗದ ಮುನ್ನ ಈಶನ ನೀ ಕೂಡಿಕೊಳ್ಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪಂಚೇಂದ್ರಿಯಗಳಲ್ಲಿ ಅಜ್ಞಾನಿಯೆಂಬ ನಾಯಿಯೂ ಇದೆ; ಅರಿವಿನ ಮಲ್ಲಯ್ಯನೂ ಇದ್ದಾನೆ. ಅರಿವಿನ ಮಲ್ಲಯ್ಯನಿಗೆ ಶರಣು ಹೋಗಲು ನಾಯಿಗೆ ಇಷ್ಟವಿಲ್ಲ. ಹೀಗಾಗಿ ಅರಿವಿನ ಮಲ್ಲಯ್ಯ ನೋಡುವ ಮುನ್ನ ನಾಯಿ ನೋಡುತ್ತದೆ. ನಾಯಿಗೆ ಎಲ್ಲಿ ನೋಡಿದರೂ ತನಗೆ ಬೇಕಾದ ಪದಾರ್ಥಗಳೇ ಕಾಣುತ್ತವೆ; ಪ್ರಸಾದ ಕಾಣುವುದಿಲ್ಲ.

ನೋಡಿದರೆ ಹಾದರ, ಮುಟ್ಟಿದರೆ ಹಾದರ, ರುಚಿಸಿದರೆ ಹಾದರ, ಮೂಸಿಸಿದರೆ ಹಾದರ, ಕೇಳಿದರೂ ಹಾದರ. ಸೊಣಗ ಮುಟ್ಟದ ಮುನ್ನ ಮನ ನಿಮ್ಮನ್ನು ಕೂಡುವಂತೆ ಮಾಡಯ್ಯ. ನಿಮ್ಮ ಚರಣ ಕಮಲಗಳಿಗೆ ಶರಣು ಹೋಗಿ ಶರಣಾಗತನಾಗುವಂತೆ ಮಾಡಯ್ಯಾ.

ನಿಮಗಾಗಿ ಇದ್ದ ಮೀಸಲ ಪ್ರಸಾದವದು ನಾಯಿಮುಟ್ಟಿ ಎಂಜಲಾಗದಂತೆ ಮಾಡಯ್ಯಾ. ನೀನು ನಿತ್ಯ ನಿತ್ಯ ಪ್ರಯೋಗಿಸದಿದ್ದರೆ ನಾಯಿಬುದ್ಧಿ ಮಾಣದಯ್ಯಾ.

ಎನ್ನ ರಕ್ಕಸತನದ ಸ್ನೇಹವು ಹಿಂಗಿ ಹೋಗದ ಮುನ್ನ ಈಶ್ವರನ ನೀ ಕೂಡಿಕೊಳ್ಳಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.

**744**

**ಪಚ್ಚೆಯಗಿರಿ ಪ್ರಭೆಯೇರಿ ನಿಚ್ಚ ವಿನಯದ ಸುಖವ ಕಂಡು**
**ಅನುಭವದ ಹೆಣ್ಣಿಗೆ ಧವಳೆ ವರ್ಣವನೇಕೀಕರಿಸಲು**
**ನಿಚ್ಚಳನುವಾಯಿತ್ತಯ್ಯಾ ಅಚ್ಚ ಆರೆಸಳ ಪೀಠ.**
**ಆ ಪೀಠದಲ್ಲಿ ವೀರದಾಸಯ್ಯನೆಂಬವ ಗುರುವಿಡಿದು ನಡೆಯೆ**
**ನೀರಾಟ ನಿಂದು ನೆಲೆಗೊಂಡನಯ್ಯ ನಿಮ್ಮ ಶರಣ ಚೆನ್ನಬಸವಣ್ಣನು.**
**ಕಪಿಲಸಿದ್ಧ ಮಲ್ಲಿನಾಥಯ್ಯಾ ಚೆನ್ನಬಸವಣ್ಣನಿಂದ ಬದುಕಿದೆನಯ್ಯಾ.**

ಭೂಮಂಡಲದಲ್ಲಿರುವ ನೀರೆಯರೆಲ್ಲ ನೀರಾಟದಲ್ಲಿ ಮಗ್ನರಾಗಿದ್ದಾರೆ. ಎಲ್ಲಿ ನೋಡಿದರೂ ನೀರು ನೀರಿನೊಂದಿಗೆ ಆಡುವ ನೀರಾಟವೇ ನಡೆದಿದೆ. ನೀರನ್ನಾಗಿ ಮಾಡಿದವನು ಅವನೆ; ನೀರಲ್ಲಿದ್ದು ನೀರೆಯನ್ನಾಗಿಸಿದವನೂ ಅವನೆ; ನೀರೆ ನೀರೆಯೊಂದಿಗೆ ನೀರಾಡಿಸುವವನೂ ಅವನೆ.

ನೀರಲ್ಲಿ ನೆಲೆಗೊಂಡವನು ನೀರೆಯ ಆಟ ನಿಲ್ಲಿಸಿದಾಗ, ಅದು ಪಚ್ಚೆಯಗಿರಿ ಪ್ರಭೆಯಂತೆ ಬೆಳಗುವುದು. ನಿತ್ಯ ನಿತ್ಯವಿನಯದ ಸುಖವನ್ನು ಉಣ್ಣುವುದು. ಅನುಭವದ ಹಣ್ಣಾಗಿ ಮಾಗುವುದು. ಧವಳ ವರ್ಣವನ್ನು ಏಕೀಕರಿಸಿ ನಿತ್ಯ ನಿತ್ಯ ಅನುವಾಯಿತ್ತಯ್ಯಾ ಅನುಭವಿಸುವ ಪರಮಸುಖಕ್ಕೆ ಅಚ್ಚ ಆರೆಸಳ ಪೀಠ.

ಆ ಪೀಠದಲ್ಲಿ ಅರಿವಿನ ಷಡ್ರಸಭಕ್ತಿ ಹುಟ್ಟಿ ವೀರದಾಸಯ್ಯ ನೆಂಬುವನು ಗುರುವಿಡಿದು ನಡೆಯೆ ನೀರಾಟನಿಂದು ನೆಲೆಗೊಂಡನಯ್ಯಾ; ನಿಮ್ಮ ಶರಣ ಚನ್ನಬಸವಣ್ಣನು.

''ತಿಳಿ ನೀರೆಂಬೆ ತಿಳಿನೀರೆಂಬೆ, ತಿಳಿ ನೀ ಎಂದು ಒಂದು ದಿನ ಅಂದಿಲ್ಲೆಲೆ ಮಾನವಾ. ಕ್ಷಣಕ್ಷಣಕ್ಕೆ ತಿಳಿ ನೀ ಎಂದಡೆ ತಳುಹದೆ ತನ್ನ ನಿಜವ ಕೊಡನೆ ಕಪಿಲಸಿದ್ದ ಮಲ್ಲೇಂದ್ರ ?''

ಹೊನ್ನು ಹೆಣ್ಣು ಮಣ್ಣು ಅಲ್ಲೆ. ಮುತ್ತು ಮಾಣಿಕ್ಯ ಸ್ಫಟಿಕವೂ ಅಲ್ಲೆ. ತನು ಅಲ್ಲೆ. ತನು ಮನ ಜ್ಞಾನವೂ ಅಲ್ಲೆ ನೀರಲ್ಲೆ. ನೀರಾಟ ನಿಂದು ನೆಲೆಗೊಂಡನಯ್ಯ ನಿಮ್ಮ ಶರಣ ಚೆನ್ನಬಸವಣ್ಣನು. ಚೆನ್ನಬಸವಣ್ಣನಿಂದಾಗಿ ನನಗೆ ನಿನ್ನ ದರುಶನವಾಯಿತು ಮಲ್ಲಯ್ಯ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**745**

**ಪಟ್ಟಣವೈದು ವಳೆಯ ಹದಿನಾಲ್ಕು**
**ಅಗಳೆ ಕೆಸರು ಘಾತ ಗಾಜರು ಮೂವರು.**
**ಇಪ್ಪತ್ತೈದು ಮಂದಿ ತಳವಾರರು**
**ಸಮಗೂಡದೆ ಹೋರುತ್ತೈದಾರೆ. ಗಾಜರು ಮೂವರು ಒಬ್ಬರಾಗಿ**
**ಕೋಟೆ ಬಿದ್ದು ಕೆಸರರತು ಇಪ್ಪತ್ತೈದು ಮಂದಿ ತಳವಾರರ**
**ಮೂಲ ನಾಶವಂ ಮಾಡಿದರೆ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಗೆ ಕಟ್ಟುವೆ ಸ್ಥಿರಪಟ್ಟ.**

ತನುವಿಗೆ ಪಂಚೇಂದ್ರಿಯಗಳೆಂಬ ಐದು ಪಟ್ಟಣಗಳು, ಏಳು ಊರ್ಧ್ವ ಮುಖಗಳು, ಏಳು ಅಧೋಮುಖಗಳೆಂಬ ಹದಿನಾಲ್ಕು ಮಂಡಲಗಳು. ಸಾತ್ವಿಕ ರಾಜಸ ತಾಮಸ ಎಂಬ ಮೂವರು ಗಾಜರು.

ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಐದು ಪ್ರಾಣಾದಿ ವಾಯುಗಳು, ಐದು ಶಬ್ದಾದಿ ವಿಷಯಗಳು, ನಾಲ್ಕು ಚಿತ್ತ, ಬುದ್ಧಿ, ಮನ, ಅಹಂಕಾರಗಳು. ಒಂದು ಜೀವನು. ಹೀಗೆ ಇಪ್ಪತ್ತೈದು ಮಂದಿ ತಳವಾರರು.

ತನುವೆಂಬ ಪಟ್ಟಣದ ಕೋಟೆ ಬಿದ್ದು, ಇದಕ್ಕೆ ಮೆತ್ತಿದ ಅಜ್ಞಾನದ ಕೆಸರನ್ನು ಅರಿವಿನಿಂದ ಅರಿತು. ಇಪ್ಪತ್ತೈದು ತಳವಾರರ ಮೂಲವನ್ನು ನಾಶಮಾಡಿದಾಗ ಅಂಗದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನು ಅರಿವಿನ ಸ್ಥಿರ ಪಟ್ಟಣವನ್ನು ಪರಮಸಂತೋಷದಿಂದ ಕಟ್ಟುವನು.

**746**

**ಪಡೆವೆನೆಂಬ ದುಃಖದಿಂದ ಹಡೆದಡೆ**

**ಕೈಕೊಂಬುದು ದುಃಖಕ್ಕೆಡೆಯಿಲ್ಲದೆ ಕಡು ದುಃಖವಪ್ಪುದು.**
**ಈ ದುಃಖವ ಎಂದಿಗೆ ನೀಗಿ**
**ಎಂದು ನಿಮ್ಮನೊಡಗೂಡಿ ಬೇರಾಗದೆಂದಿಪ್ಪೆನೊ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕೃಷಿ ಮಾಡದೆ, ತನುವಿನಲ್ಲಿ ತನ್ಮಯವಾದ ಸಹಜ ಜ್ಞಾನವನ್ನು ಪಡೆಯುವುದು ಸಾಧ್ಯವಿಲ್ಲ. ಹಿಮಾಲಯಕ್ಕೆ ಹೋಗಿ ಜಪತಪಗಳನ್ನು ಮಾಡಿದ್ದಾರೆ. ಹಲವಾರು ವರುಷಗಳವರೆಗೆ ಒಂಟಿಕಾಲ ಮೇಲೆ ನಿಂತು ಪ್ರಾರ್ಥಿಸಿದ್ದಾರೆ.

ಸಿದ್ಧಾರ್ಥ ಅರಮನೆಯ ಸುಖವನ್ನು ತ್ಯಜಿಸಿ ಕಾಡು ಮೇಡು ಅಲೆದ. ವರ್ಧಮಾನನ ಬಟ್ಟೆ ಕಳಚಿ ಹೋದದ್ದು ಆತನಿಗೆ ತಿಳಿಯಲಿಲ್ಲ. ಪಡೆದೇ ತೀರುವೆನೆಂಬ ದುಃಖದಿಂದ ಕಡು ದುಃಖವಾಗುವುದೇ ಹೊರತು ಪರಮ ಸುಖ ಲಭಿಸುವುದು ಬಲು ದುರ್ಲಭ.

ಈ ದುಃಖವ ಎಂದಿಗೆ ನೀಗಿ ಎಂದು ನಿಮ್ಮೊಡನೆ ಕೂಡಿ ಬೇರಾಗದೆ ಎಂದಿಪ್ಪೆನೊ ಕಪಿಲಸಿದ್ಧ ಮಲ್ಲಿಕಾರ್ಜುನಾ.

**747**

**ಪದ ಫಲ ಭವಕೆ ತಾರದಿರಯ್ಯ ನಿನ್ನ ಧರ್ಮ.**
**ಪದದಿಂದ ಫಲದಿಂದ ಭವ, ಆ ಭವದಿಂದ ನರಕ.**
**ಇಂತಪ್ಪವನೆನಗೆ ತೋರದಿರಯ್ಯ ನಿಮ್ಮ ಧರ್ಮ.**
**ಇಂತಪ್ಪವನೆನ್ನವರಿಗೆಯೂ ತೋರದಿರಯ್ಯಾ**
**ನಾನೂ ಎನ್ನವರೂ ಕೂಡಿ ನಿನ್ನ ಬೇಡಿಕೊಂಬೆವಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಫಲ ಪದವಿಗಳ ಲೋಕಕ್ಕೆ ಎನ್ನನ್ನು ತಾರದಿರಯ್ಯಾ. ನಿನ್ನ ಅರಿವಿನ ಧರ್ಮದಲ್ಲಿ ಇರಿಸಿ ಎನ್ನನ್ನು ಸದಾ ರಕ್ಷಣೆ ಮಾಡು ತಂದೆ.

ಫಲದಿಂದ ಪದವಿಗಳಿಂದ ತನು ಭವವೆಂಬ ಜನನ ಮರಣಗಳ ದುಃಖಕ್ಕೆ ಈಡಾಗುತ್ತದೆ. ಆ ಭವದಿಂದಲೇ ನರಕ.

ಫಲ ಪದವಿಗಳಿಗಾಗಿ ಸದಾ ಆಸೆ ಪಡುವವನನ್ನು ಎನಗೆ ತೋರದಿರಯ್ಯಾ. ಅದು ನಿಮ್ಮ ಧರ್ಮ.

ಫಲ ಪದವಿಗಳನ್ನು ಬೇಡುವವನನ್ನು ನೀನು ಎನ್ನವರಿಗೂ ಎನ್ನ ಶರಣರಿಗೂ ತೋರದಿರಯ್ಯಾ. ನಾನೂ ಎನ್ನವರೂ ಕೂಡಿಕೊಂಡು ನಿನ್ನ ಬೇಡಿಕೊಂಬೆವಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**748**

**ಪದವ ಬಯಸರು ಅವರು ಫಲವ ಬಯಸರು**
**ಅವರು ಹದುಳದಿಂದಿಪ್ಪರೈ ಫಲಪದವು ಹೊದ್ದದೆ.**
**ಶಶಿಧರನೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ**
**ಸಹಲೋಕವೆ ಅವರು ಇದ್ದ ಲೋಕ.**

ಎಮ್ಮ ಶರಣರು ನಿನಗೆ ಶರಣು ಹೋಗಿ ಶರಣಾಗತರಾಗಿ ಶರಣರಾದವರು. ನಿನ್ನಿಂದ ಶರಣ ಎಂದು ಕರೆಯಿಸಿಕೊಂಡವರು.

''ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರಪದವಿಯನೊಲ್ಲೆ, ನಾನು ಮತ್ತಾವ ಪದವಿಯ ನೊಲ್ಲೆನಯ್ಯಾ. ಕೂಡಲ ಸಂಗಮದೇವಾ. ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾಪದವಿಯ ಕರುಣಿಸಯ್ಯಾ''.

ಸಕಲ ಪದವಿಗಳಿಗಿಂತಲೂ ನಿಮ್ಮ ಸದ್ಭಕ್ತರ ಪಾದವನು ಅರಿಯುವ ಮಹಾ ಪದವಿಯನ್ನು ಕರುಣಿಸು ಎಂದು ಗುರುದೇವನನ್ನು ಬೇಡಿದ್ದಾರೆ ಬಸವಣ್ಣ.

ಶರಣರು ಯಾವ ಫಲ ಪದವಿಗಳನ್ನು ಅಲಂಕರಿಸದೆಯೇ ಯಾವ ಫಲ ಪದಗಳನ್ನು ಹೊದ್ದದೆ ಹದುಳದಿಂದ ಪರಮ ಸುಖದಿಂದ ಇರುತ್ತಾರೆ.

ಏಕೆಂದರೆ ಅವರು ಶಶಿಧರನಾದ ಕಪಿಲಸಿದ್ಧ ಮಲ್ಲಿಕಾರ್ಜುನ ದೇವನು ವಾಸಮಾಡಿದ ಸಹ ಲೋಕವೇ ಅವರ ಲೋಕವಾಗಿದೆ. ಅವರಿದ್ದ ಲೋಕವಾಗಿದೆ ಎಂದು ಸಿದ್ಧರಾಮ ಶಿವಯೋಗಿಗಳು ನುಡಿದಿದ್ದಾರೆ.

**749**

**ಪರಮಪದದಲ್ಲಿ ಅರಿದಪ್ಪ ಆಳಾಪವ ಅಜಲೋಕದಲ್ಲಿ ಮಾಡುವೆ.**
**ಎಲೆ ಭ್ರಮರಾ, ಬಲ್ಲಾ ಅಯ್ಯನ ಸುದ್ದಿಯ?**
**ಅಯ್ಯ ಎದೆಗೆ ಚರ್ಮವಂ ಹೊದೆದು**
**ಶುದ್ಧ ಧವಳಿತವೆಂಬ ಮನೆಯಲ್ಲಿ**
**ಕಾಮ್ಯಲಂಪಟಿಯ ಸಂಗವ ಮಾಡುವಾಗ ಬಲ್ಲಾ.**
**ಉರುತರ ದಿವ್ಯಜ್ಞಾನ ಪ್ರವೇಶಿಸುವಾಗ ಆ ಕಾಮ್ಯಲಂಪಟಿ**
**ಅಯ್ಯನೊಳು ಸಂದು ಸವದು ಒಂದಾದುದ ಬಲ್ಲಾ.**
**ನಿತ್ಯಗುರು ನಿತ್ಯಲಿಂಗ ನಿತ್ಯಜಂಗಮವಲ್ಲದೆ ಅನಿತ್ಯನೆಂಬವರಿಗೆ**
**ಅಪ್ಪುದೆ ಭಕ್ತಿ? ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬ್ರಹ್ಮಸುಖವನ್ನು ಲೋಕದ ಜನಕ್ಕೆ ಹೇಳಿದರೆ ಭ್ರಮಾಭರಿತವಾದ ಜನ ಕೇಳಬೇಕಲ್ಲ. ಪರಮ ಪದದಲ್ಲಿ ಅರಿದಿಪ್ಪ ಆಳಾಪವ ಅಜ ಲೋಕದಲ್ಲಿ ಮಾತ್ರ ಹಾಡುವೆ. ಎಲೆ ಭ್ರಮರಾ, ನೀನೇನು ಬಲ್ಲೆಯಾ ಅಯ್ಯನ ಸುದ್ದಿಯಾ ?

ಎನ್ನ ಅಯ್ಯ ಎದೆಗೆ ಚರ್ಮವನ್ನು ಹೊದ್ದು ಪರಿಶುದ್ಧವಾದ ತನುವೆಂಬ ಮನೆಯಲ್ಲಿ ಮನವೆಂಬ ಕಾಮ ಲಂಪಟಿಯ ಸಂಗವ ಮಾಡುವುದನು ನೀನು ಬಲ್ಲೆಯಾ ?

ದಿವ್ಯಜ್ಞಾನ ಎದೆಯಲ್ಲಿ ಪ್ರವೇಶಿಸುವಾಗ ಆ ಕಾಮ್ಯಲಂಪಟಿಯು ಅಯ್ಯನೊಳು ಸಂದುಸವದು ಒಂದಾದುದನು ನೀನು ಬಲ್ಲೆಯಾ ?

ನಿತ್ಯಗುರು ನಿತ್ಯಲಿಂಗ ನಿತ್ಯಜಂಗಮವಲ್ಲದೆ ಅನಿತ್ಯವೆಂಬವರಿಗೆ ಅಪ್ಪುದೆ ಭಕ್ತಿ ? ಕಪಿಲಸಿದ್ಧ ಮಲ್ಲಿಕಾರ್ಜುನಾ.

**750**

**ಪರಶಕ್ತಿ ಆದಿಯೈಯ್ದು ಬೆರೆಸಿ ಬೆರೆಯದೆ ಬ್ರಹ್ಮವನರಿದೆನೆಂಬ ಯೋಗಿ ಕೇಳಾ.**

**ಅದು ಸಗುಣದಲ್ಲಿ ತಾತ್ಪರ್ಯ ಅದು ನಿಷ್ಕಳದಲ್ಲಿ ನಿತ್ಯ ಅರಿದೆನೆಂಬ ಯೋಗಿ ಕೇಳಾ.**
**ಅದು ಅನಾಹತದಲ್ಲಿ ಆನಂದ,**
**ಅದು ಭಕ್ತಿಜ್ಞಾನವೈರಾಗ್ಯವಂ ಕೂಡಿದ ಏಕಮತ**
**ಅದು ಪದ ನಾಲ್ಕು ಮೀರಿದ ಮಹಾಮತ.**
**ಅದು ಉಂಡುದನುಣ್ಣದು, ಅದು ಬಂದಲ್ಲಿ ಬಾರದು,**
**ಅದು ಸಕಳದಲ್ಲಿಯೂ ತಾನೆ ನಿಷ್ಕಳದಲ್ಲಿಯೂ ತಾನೆ,**
**ಅದು ಪ್ರಾಪಂಚಿಕದಲ್ಲಿಯೂ ತಾನೆ, ಅದು ತಾತ್ಪರ್ಯದಲ್ಲಿಯೂ ತಾನೆ.**
**ಅದು ಸಕಲ ಸರ್ವದ ನಿಷ್ಕಳದ ನಿರ್ಮಲದ ಮದದ ಮಾತ್ಸರ್ಯದ**
**ಬಣ್ಣ ಹಲವರಿದ ಅತಿಗಳೆದ ಪರಮಸೀಮೆಯ ಅರಿದೆನೆಂಬ ಯೋಗಿ.**
**ಅದು ಒಂದರಲ್ಲಿ ನಿತ್ಯ, ಎರಡರಲ್ಲಿ ತಾತ್ಪರ್ಯ, ಮೂರರಲ್ಲಿ ಮುಕ್ತ,**
**ನಾಲ್ಕರಲ್ಲಿ ಕ್ರೋಧಿ, ಐದರಲ್ಲಿ ಆನಂದ, ಆರರಲ್ಲಿ ತಾನೆ,**
**ಇಪ್ಪತ್ತೈದು ಪಟ್ಟಣದ ತಾತ್ಪರ್ಯಂಗಳನ್ನರಿತು ಮೂವತ್ತಾರು ವೃಕ್ಷಂಗಳ**
**ಮೇಲೆ ಹಣ್ಣೊಂದೆ ಆಯಿತ್ತು ಕಾಣಾ. ಆ ಹೆಣ್ಣು ಹಣಿತು,**
**ತೊಟ್ಟುಬಿಟ್ಟು ನಿರ್ಮಳ ಜ್ಞಾನಾಮೃತದಿಂ ತುಂಬಿ ಭೂಮಿಯ ಮೇಲೆ**
**ಬಿದ್ದಿತ್ತು. ಆ ಬಿದ್ದ ಭೂಮಿ ಪರಲೋಕ.**
**ಆ ಹಣ್ಣ ಗುರು ಕರುಣವುಳ್ಳವಂಗಲ್ಲದೆ ಮೆಲಲಿಲ್ಲ.**
**ದೀಕ್ಷತ್ರಯದಲ್ಲಿ ಅನುಮಿಷನಾಗಲ್ಲದೆ**
**ಆ ಲೋಕದಲ್ಲಿರಲಿಲ್ಲ. ಆ ಲೋಕದಲ್ಲಿದ್ದವಂಗೆ ಅಜಲೋಕದ**
**ಅಮೃತವನು ನಿತ್ಯವು ಸೇವಿಸಿ ಸತ್ಯಮುಕ್ತನಾಗಿ**
**ಬೇಡಿದವಕ್ಕೆ ಬೇಡಿದ ಪರಿಯ ಕೇವಲವನಿತ್ತು ತಾನು ಕಾಂಕ್ಷೆಗೆ**
**ಹೊರಗಾಗಿ ಕಾಲನ ಕಮ್ಮಟಕ್ಕೆ ಕಳವಣ್ಣವಾಗಿ ನಿತ್ಯ ಸಂಗಮಕ್ಕೆ**
**ಸಂಯೋಗವಾಗಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ**
**ಅನಾಹತ ಮೂಲಗುರುವಾಗಿ, ಎನ್ನನಿಷ್ಟಕ್ಕೆ ಪ್ರಾಪ್ತಿಸಿದನಯ್ಯಾ.**

ಪಂಚ ಜ್ಞಾನೇಂದ್ರಿಯಗಳಲ್ಲಿ ತನ್ಮಯವಾದ ಪರಮಾತ್ಮನ ಹಿಂದೆಯೇ ಆದಿ ಪರಶಕ್ತಿ ಇದ್ದರೂ ಬೆರೆಸಿ ಬೆರೆಯದೆ ಬ್ರಹ್ಮವನು ಅರಿದೆನೆಂಬ ಯೋಗಿ ಕೇಳಾ. ಅರಿಯಲು ಬಾರದ ಬ್ರಹ್ಮವನ್ನು ಅರಿದೆನೆಂದು ಹೇಳುವ ಯೋಗಿ ಕೇಳಾ. ಅದು ಅರಿಯಲು ಬಾರದ ತನುವಿನಲ್ಲಿ ಭಕ್ತಿ ಜ್ಞಾನ ವೈರಾಗ್ಯದಿಂದ ಕೂಡಿದ ಏಕಮತ.

ಅದು ಪದ ನಾಲ್ಕು ಮೀರಿದ ಮಹಾಮತ. ಅದು ಕೇಳಿದ ಮಾತನು ಹೇಳದು. ಉಂಡುದನ್ನು ಉಣ್ಣದು, ಅದು ಬಂದಲ್ಲಿ ಬಾರದು. ಅದು ಚಲನೆಯಿಲ್ಲದ ಅಚಲವಸ್ತು. ಸಕಲದಲ್ಲಿಯೂ ತಾನೆ ಇದೆ. ನಿಷ್ಕಲದಲ್ಲಿಯೂ ತಾನೇ ಇದೆ. ಅದು ಪ್ರಾಪಂಚಿಕದಲ್ಲಿ ತಾನಿದ್ದು ಇಲ್ಲದಂತಿದೆ. ಅದು ತಾತ್ಪರ್ಯದಲ್ಲಿಯೂ ತಾನಿದೆ.

ಅದು ಸಕಲ, ಅದು ನಿಷ್ಕಲ, ಅದು ಸರ್ವದ, ಅದು ನಿರ್ಮಲ. ಅದು ಮದ ಮಾತ್ಸರ್ಯಗಳ ಬಣ್ಣ ಹಲವರಿದು ಅದೆಲ್ಲವನ್ನೂ ಅತಿಗಳೆದು ಪರಮಸೀಮೆಯನು ಅರಿದ ಯೋಗಿ. ಅದು ಕಾಮದಲ್ಲಿ ನಿತ್ಯ, ಕ್ರೋಧದಲ್ಲಿ ತಾತ್ಪರ್ಯ, ಲೋಭದಲ್ಲಿ ಮುಕ್ತ, ಮೋಹದಲ್ಲಿ ಕ್ರೋಧಿ, ಮದದಲ್ಲಿ

ಆನಂದ, ಮತ್ಸರದಲ್ಲಿ ತಾನೆ.

ಇಪ್ಪತ್ತೈದು ಆತ್ಮತತ್ವಗಳನ್ನು, ಹತ್ತು ವಿದ್ಯಾತತ್ವಗಳನ್ನು ಒಂದು ಶಿವತತ್ವವನ್ನು ಹೊಂದಿದ ತನುವೆಂಬ ವೃಕ್ಷದ ಮೇಲೆ ಮಹಾಜ್ಞಾನವೆಂಬ ಹಣ್ಣು ಆಯಿತ್ತು ಕಾಣಾ. ಆ ಹಣ್ಣು ಮಾಗಿ ತೊಟ್ಟು ಬಿಟ್ಟು ನಿರ್ಮಲ ಜ್ಞಾನಾಮೃತದಿಂದ ಭರಿತವಾಗಿ ಭೂಮಿಯ ಮೇಲೆ ಕಾಯವೆಂಬ ನಾಮವನ್ನು ಪಡೆದು ಬಿದ್ದಿತು.

ಆ ಬಿದ್ದ ಭೂಮಿಯೇ ಪರಲೋಕ. ದೇವಾನು ದೇವತೆಗಳು ವಾಸಮಾಡಿದ ಭೂಲೋಕ. ಇಂತಹ ಭೂಮಿಯ ಮೇಲೆ ಬಿದ್ದ ಹಣ್ಣು ಗುರುಕರುಣವುಳ್ಳವಂಗಲ್ಲದೆ ಮೆಲ್ಲಲು ಸಾಧ್ಯವಿಲ್ಲ. ದೀಕ್ಷಾತ್ರಯದಲ್ಲಿ ಅನಿಮಿಷನಾಗಬಲ್ಲಡೆ ಮಾತ್ರ ಆ ಲೋಕದಲ್ಲಿರಲು ಸಾಧ್ಯ.

ಭೂ ಲೋಕದಲ್ಲಿದ್ದವನು ಬ್ರಹ್ಮಲೋಕದ ಅಮೃತವನು ನಿತ್ಯ ಸೇವಿಸಿ ಮುಕ್ತನಾಗುತ್ತಾನೆ. ಬೇಡಿದವನಿಗೆ ಬೇಡಿದ ಪರಿಯ ಕೈವಲ್ಯವನಿತ್ತು ತಾನು ಕಾಂಕ್ಷೆಗೆ ಹೊರಗಾಗುತ್ತಾನೆ.

ಕಾಲನ ಕಮ್ಮಟಕ್ಕೆ ಕಳವಣ್ಣನಾಗಿ ನಿತ್ಯ ಸಂಗಮುಕ್ಕೆ ಸಂಯೋಗವಾಗಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ ಅನಾಹತ ಮೂಲಗುರುವಾಗಿ, ಎನ್ನನಿಷ್ಟಕ್ಕೆ ಪ್ರಾಪ್ತಿಸಿದನಯ್ಯಾ.

ಸಿದ್ಧರಾಮ ಶಿವಯೋಗಿಗಳು ಜ್ಞಾನಿಯಾಗುವ ಆಕಾಂಕ್ಷೆವುಳ್ಳ ಮನಕ್ಕೆ ಹೇಳಿದ ದಿವ್ಯ ಸೂತ್ರವಿದು.

**751**

**ಪರಾಶಕ್ತಿಯಾದಿ ಐದನೊಡಗೂಡಿದ**
**ಪರತತ್ವದ ಪ್ರಮಾಣವನರಿತೆನೆಂಬ ಯೋಗಿ ಕೇಳಾ,**
**ನಿನ್ನ ಚಿತ್ತ ಬುದ್ಧಿ ಮನ ಅಹಂಕಾರವೆಂಬಲ್ಲಿ**
**ತಪ್ಪದೆ ಪ್ರವೇಶಿಸಿಪ್ಪಾಕೆ ಐದರೊಳಗೊಬ್ಬಳು.**
**ಇನಿತು ಸಂಬಂಧಿಯೈಸಿ ನೀನು ಇದರೊಳಗಾತು ಸಿಲುಕುವನಲ್ಲ**
**ಪರಬ್ರಹ್ಮದ ಸೊಮ್ಮುಹಮ್ಮಳಿದು ಬ್ರಹ್ಮಸ್ಥಾನದಲ್ಲಿ**
**ನಿರ್ಮಳಜ್ಞಾನಿಯಾಗಿಪ್ಪ ಆತನಿದಕ್ಕೆ ಸಿಕ್ಕ, ನೀನಿದರೊಳಗಣವನು**
**ಅಯ್ಯ ವಾಙ್ಮನಸಾಗೋಚರನು**
**ಕಪಿಲಸಿದ್ಧ ಮಲ್ಲಿಕಾರ್ಜುನನ ಪ್ರಮಾಣನು.**

ತನುವನ್ನು ಆವರಿಸಿದ ಮನವೆಂಬ ಪರಾಶಕ್ತಿ ತನುವಿನಲ್ಲಿಯ ಐದು ಇಂದ್ರಿಯಗಳನ್ನು ಕೂಡಿದ ಮೇಲೆ ಪರತತ್ವವನ್ನು ಅದರ ಪ್ರಮಾಣವನ್ನು ಅರಿತೆನೆಂದು ಹೇಳುವ ಯೋಗಿಯೇ ಸ್ವಲ್ಪಕೇಳು.

ನಿನ್ನ ಚಿತ್ತ ಬುದ್ಧಿ ಮನ ಅಹಂಕಾರವೆಂಬಲ್ಲಿ, ತಪ್ಪದೆ ಪ್ರವೇಶ ಮಾಡಿದಾಕೆ, ಐವರಲ್ಲಿ ಒಬ್ಬಳು ಮಾತ್ರ. ಇಂತಹ ಸಂಬಂಧದಲ್ಲಿ ನೀನು ಸಿಲುಕುವವನಲ್ಲ. ಪ್ರರಬ್ರಹ್ಮದ ಸೊಮ್ಮು ಹಳಿದವನು ನೀನು. ಬ್ರಹ್ಮಸ್ಥಾನದಲ್ಲಿ ನಿರ್ಮಲ ಜ್ಞಾನಿಯಾಗಿಪ್ಪವನು ನೀನು. ಅಂತಹ ನೀನು ಇದಕ್ಕೆ ಸಿಲುಕುವವನಲ್ಲ. ನೀನು ಅದರೊಳಗಣವನು. ಅಯ್ಯಾ ನೀನು ವಾಕ್ಕಿಗೂ ಮನಸ್ಸಿಗೂ ಅಗೋಚರನು. ಹೀಗಾಗಿ ನಿನ್ನನ್ನು ವಾಙ್ಮನಸಾಗೋಚರನೆಂದು ಕರೆಯುವರು. ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನು ಅಪ್ರಮಾಣನು. ಯಾರೂ ನಿನ್ನನ್ನು ಹೀಗೆ ಎಂದು ಪ್ರಮಾಣಿಸಲರಿಯರು.

ಪರತತ್ವದ ಪ್ರಮಾಣವನು ಅರಿತೆನೆಂಬ ಕಷ್ಟ ನಿನಗೇಕೆ ? ಅದು ನೀನೇ ಆಗಿರುವಿ ತಂದೆ. ಅರಿತೆ ಅರಿತೆ ಎಂದು ಹೇಳುವ ಯೋಗಿಯ ಮಾತು ಕೇಳಿದ ಸಿದ್ಧರಾಮ ಶಿವಯೋಗಿ ಆತನಿಗೆ ಮೇಲಿನಂತೆ ಹೇಳಿದ್ದಾರೆ.

752

**ಪರಸ್ತ್ರೀಯರಾದಿಯನ್ನು ಆಜೆ ತಾನು ಬೆರಸಿ ಬೆರೆಯಳೈ**
**ಬಾರನು ಅವರ ಪರಸ್ಥಾನಕ್ಕೆ.**
**ಬಂದಡೆ ಮೂಲಸ್ವಾಮಿಯಪ್ಪಳವರ**
**ಮೂಲ ನಾಶಮಾಡುವಳು.**
**ಮಾಡಿದಾನಂದದಲ್ಲಿ ನೋಡಿ ತನ್ನಮಯವಪ್ಪಳು**
**ಕಪಿಲಸಿದ್ಧ ಮಲ್ಲಿನಾಥಯ್ಯನವ್ವೆ.**

ತನುವನ್ನು ಆವರಿಸಿದ ಮನ ಸ್ತ್ರೀ. ತನುವಿನಲ್ಲಿ ತನ್ಮಯವಾದ ಜ್ಞಾನವೇ ಪುರುಷ. ಆತನನ್ನು ಪರಮಾತ್ಮ ಎಂದು ಕರೆದಿದ್ದಾರೆ. ಆ ಪರಮಾತ್ಮನಿಗೆ ಮನವೆಂಬ ಸ್ತ್ರೀ ಪರಸ್ತ್ರೀ . ತಾನು ಆ ಪರಮಾತ್ಮನಿಗೆ ಸ್ತ್ರೀ ಆದ ಮೇಲೆ ಸ್ತ್ರೀ ಎಂದು ಕರೆಯಿಸಿಕೊಂಡ ನಾನು ಮತ್ತೊಂದು ಸ್ತ್ರೀಯೊಂದಿಗೆ ಬೆರೆಯಬಹುದೇ? ಇದು ಸಮಾಜ ಬಾಹಿರ ಕೆಲಸ. ಹೀಗಾಗಿ ಪರಸ್ತ್ರೀಯಾದ ಆಕೆ ತಾನು ಮತ್ತೊಬ್ಬ ಸ್ತ್ರೀಯೊಂದಿಗೆ ಬೆರೆಯಳು. ಮೂಲ ಸ್ವಾಮಿಯೊಂದಿಗೆ ಕೂಡಿ ಪರಸ್ಥಾನವೆಂಬ ಕೈಲಾಸಕ್ಕೆ ಶೋಭೆ ತರುವಳು.

ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ಸಿದ್ಧರಾಮ ಶಿವಯೋಗಿಗಳು ಮೂಲ ಸ್ವಾಮಿ ಎಂದು ಕರೆದಿದ್ದಾರೆ. ತನುವನ್ನು ಆವರಿಸಿದ ಮನ, ತನುವಿನಲ್ಲಿಯೇ ತನ್ಮಯವಾದ ಮೂಲ ಸ್ವಾಮಿಯೊಂದಿಗೆ ಕೂಡಿದಾಗ ತನುವನ್ನು ಆವರಿಸಿದ ಮೂಲ ಅಜ್ಞಾನ ತಂತಾನೆ ನಾಶವಾಗುತ್ತದೆ. ಮೂಲ ಸ್ವಾಮಿಯೊಂದಿಗೆ ಕೂಡಿ ಮಹಾದಾನಂದದಲ್ಲಿ ತನ್ನಮಯಪ್ಪವಳು. ಕಪಿಲಸಿದ್ಧ ಮಲ್ಲಿನಾಥಯ್ಯನ ಅವ್ವೆ.

753

**ಪರಿಭವಕ್ಕೆ ಬಪ್ಪ ಪರಮಾಣು ನೀನಲ್ಲ.**
**ಕುರುಹಿಂಗೆ ಬಂದ ಸೀಮ ನೀನಲ್ಲ.**
**ಏಕಯ್ಯ ನಿನಗೆ ಪ್ರಾಪಂಚಿಕವು ?**
**ಆನಂದಮಧ್ಯದಲಿ ಅಪರವಾಗಿ.**
**ಅಪರಮಧ್ಯದಲಿ ಪೂರ್ವನಾಗಿ**
**ಆ ಪೂರ್ವಕ್ಕೆ ಒಡೆಯ ನೀನೆಯಾಗಿಪ್ಪೆ.**
**ಆರಯ್ಯಾ ಬಲ್ಲರು ನಿನ್ನ ಪರಿಯ ?**
**ಶರಣಸತಿ ಲಿಂಗಪತಿಯಾಗಿದ್ದವರು ಬಲ್ಲರು.**
**ಏಕಲಿಂಗನಿಷ್ಠಾಪರರು ಅವರು ಬಲ್ಲರು.**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ಏಕಯ್ಯಾ,**
**ಒಡಿದೆಯೆಂದು ನಂಬುಗೆಗೊಡುವಂತೆ ಕರಂಗೊಟ್ಟರು.**

ಜನನ ಮರಣಗಳಿಗೆ ಈಡಾಗುವ ಪರಮಾಣು ನೀನಲ್ಲ. ಕುರುಹು ಉಳ್ಳವನು ನೀನಲ್ಲ. ನೀನು ನಿಸ್ಸೀಮನು. ಏಕಯ್ಯ ನಿನಗೆ ಪ್ರಾಪಂಚಿಕವು ? ಕುರುಹುಳ್ಳವನಿಗೆ ಪ್ರಾಪಂಚಿಕ. ನೀನು ನಿರುಪನು. ಪರಮಾನಂದದಲ್ಲಿ ಪರಿಪೂರ್ಣವಾಗಿ ಕಾಯದಲ್ಲಿಯೇ ಸಂಗಮವಾದವನು. ಆ

ಕಾಯವೆಂಬ ಕೈಲಾಸಕ್ಕೆ ಒಡೆಯನು ನೀನು. ಅಷ್ಟೇ ಏಕೆ ಈ ಬ್ರಹ್ಮಾಂಡವನ್ನು ಸೃಷ್ಟಿಮಾಡಿ, ಇಡೀ ಬ್ರಹ್ಮಾಂಡವನ್ನೆ ನಿನ್ನ ಗರ್ಭದಲ್ಲಿಟ್ಟುಕೊಂಡವನು.

ಯಾರಯ್ಯ ಬಲ್ಲವರು ನಿನ್ನ ಪರಿಯ ? ಶರಣಸತಿ ಲಿಂಗಪತಿಯಾದವರು ಮಾತ್ರ ಬಲ್ಲರು. ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನವೆಂಬ ಲಿಂಗಯ್ಯನನ್ನೆ ಪತಿಯಾಗಿಸಿಕೊಂಡು, ಅಂಗವನ್ನು ಆವರಿಸಿದ ಮನವನ್ನೆ ಲಿಂಗಯ್ಯನಿಗೆ ಸತಿಯನ್ನಾಗಿಸಿ, ಶರಣ ಸತಿಯಾಗಿ ಲಿಂಗಯ್ಯನನ್ನೆ ಪತಿಯಾಗಿ ಮಾಡಿಕೊಂಡವರು ಮಾತ್ರ ನಿನ್ನನ್ನು ಬಲ್ಲವರು.

ಅಂಗದ ಮೇಲೆ ಲಿಂಗ ಕಟ್ಟಿಕೊಂಡವರು ನಿನ್ನನ್ನು ಅರಿಯರು. ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನಿಗೆ ಶರಣು ಹೋದ ಏಕಲಿಂಗ ನಿಷ್ಠಾಪರರು ಮಾತ್ರ ನಿನ್ನನ್ನು ಬಲ್ಲರು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಏಕಯ್ಯ ಓಡಿದೆಯೆಂದು ನಂಬಿಗೆಗೊಡುವಂತೆ ಕರಂಗೊಟ್ಟರು.

ಕರವೆಂದರೆ ಕಾಯ, ಕಾಯದಲ್ಲಿಯೇ ಸಂಗಮವಾದ ಲಿಂಗಯ್ಯನನ್ನು ನಂಬದೆ ಲೋಕ ಹೊರಗಡೆಯೇ ಓಡುತ್ತದೆ. ಓಡಿದೆಯೆಂದು ನೀನು ಏಕಯ್ಯ ಅವರನ್ನು ನಂಬಿಗೆಗೆ ಓಗೊಡುವಂತೆ ಮಾಡಿದೆ. ಕರದೊಳಗಿದ್ದು ಕಾಣದಂತೆ ಓಡಿದವರನ್ನು ಕರೆದು ರಮಿಸಬಾರದೆ ತಂದೆ.

**754**

**ಪರಿಶುದ್ರತದ ಭಕ್ತಿಯಲಿ ಸವೆದು ಮಾಡಿದ ಚಿತ್ತ**
**ತನು ಮುಖದ ಯೋಗಕ್ಕೆ ತಮವ ಕಳುಹಿ**
**ಭ್ರಮೆಗೆಟ್ಟ ಸದ್ಭಕ್ತಿ ಅನುವನು ಅರಿದಾತ**
**ಕರುಣಾಕರನು ಶಿಷ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಚಿತ್ತ ಭ್ರಮೆಗೆಟ್ಟು, ಮಹಾಜ್ಞಾನದಲ್ಲಿ ನೆಟ್ಟಾಗ, ಆ ಮಹಾಜ್ಞಾನದ ಮೂಲಕ ವಸ್ತುವನ್ನು ನೋಡಿದ ಚಿತ್ತ ಚಿತ್ತವಲ್ಲ. ಚಿತ್ತ ಪರಿಶುದ್ಧವಾಗಿ ಮಹಾಜ್ಞಾನಕ್ಕೆ ಭಕ್ತಿ ಮಾಡಿ ಸವೆದ ಚಿತ್ತ. ಅಂತಹ ಚಿತ್ತವನ್ನು ಚಿತ್ತವೆನುವಂತಿಲ್ಲ; ಅದು ಸಮಚಿತ್ತ. ತನುವಿನಲ್ಲಿ ತನ್ಮಯವಾದ ಜ್ಞಾನದೊಂದಿಗೆ ಬೆರೆತು ಚಿತ್ತದ ಭ್ರಮೆಯನ್ನು ನಷ್ಟ ಮಾಡಿಕೊಂಡು ಸದ್ಭಕ್ತಿಯ ಅರಿವನ್ನು ಅರಿತ ಚಿತ್ತ.

ಚಿತ್ತ ಚಿನ್ನದಲ್ಲಿ ನೆಟ್ಟರೆ ತನುವನ್ನು ಕಳ್ಳನನ್ನಾಗಿ ಮಾಡುತ್ತದೆ. ದರೋಡೆಕೋರನನ್ನಾಗಿ ಮಾಡುತ್ತದೆ. ಚಿನ್ನ ಸಿಗದಿದ್ದರೆ ತನುವಿಗೆ ದರಿದ್ರನ ಪಟ್ಟ ಕಟ್ಟುತ್ತದೆ. ಚಿತ್ತ ಬಯಸಿದ ಚಿನ್ನ ಸಿಕ್ಕರೆ ತನುವಿಗೆ ಶ್ರೀಮಂತನ ಪಟ್ಟ ಕಟ್ಟುತ್ತದೆ. ಆ ಚಿನ್ನಕ್ಕಾಗಿ ತನುವಿಗೆ ರಾಜನ ಪಟ್ಟ ಕಟ್ಟಿ ಮತ್ತೊಬ್ಬ ರಾಜನೊಂದಿಗೆ ಯುದ್ಧಕ್ಕೆ ಕಳುಹಿಸುತ್ತದೆ. ಚಿನ್ನದಲ್ಲಿ ನೆಟ್ಟ ಚಿತ್ತಕ್ಕಾಗಿ ಎಷ್ಟೋ ತನುಗಳು ಬಡಿದಾಡಿ ಬರಿದಾಗುತ್ತವೆ.

ಸಮಚಿತ್ತ ಹಾಗಲ್ಲ. ಚಿತ್ತ ಜ್ಞಾನದಲ್ಲಿ ಮಿಂದು ಪರಿಶುಭ್ರವಾಗಿದೆ. ಸಮಚಿತ್ತವಾಗಿದೆ. ಈ ಸಮಚಿತ್ತ ಚಿನ್ನದಲ್ಲಿ ನೆಡುವುದಿಲ್ಲ; ಹಳದಿ ಬಣ್ಣದ ಲೋಹವೆಂದು ಉದಾಸಿನ ಮಾಡುತ್ತದೆ. ಕರುಣಾಕರನು ಕರುಣಿಸಿದ ಚಿತ್ತ ಕಪಿಲಸಿದ್ಧ ಮಲ್ಲಿಕಾರ್ಜುನನ ಕಮಲಚರಣಗಳಿಗೆ ಶರಣುಹೋಗಿ ಆತನಿಗೆ ಪರಮಶಿಷ್ಯನಾಗಿದೆ.

**755**

**ಪರುಷಲಿಂಗವ ಕೈಯಲ್ಲಿ ಹಿಡಿದು ಸ್ವರ**

**ಫಲವನೀಯೆಂಬರು.**
**ಶ್ರೀಗುರುಸ್ವಾಮಿ ಕರಸ್ಥಲಕಿತ್ತುದು ಹುಸಿಯೆ?**
**ಇವಂದಿರು ಕೆಟ್ಟಕೇಡಿಂಗೆ ಕಡೆಯಿಲ್ಲ.**
**ಮುಟ್ಟಿಯಾ ಮುಟ್ಟದವರನೇನೆಂಬೆನಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಬೇಡಿದ್ದನ್ನು ಕೊಡುವ ಕಾಮಧೇನುವು ಇದ್ದರೂ, ಸ್ವರಮಾಡಿ ಫಲ ಪದವಿಗಾಗಿ ಕಂಡ ದೇವರಿಗೆ ಹಣೆಮಣೆಯುವರು. ಶ್ರೀಗುರುಸ್ವಾಮಿ ಕರಸ್ಥಲಕಿತ್ತುದು ಹುಸಿಯೇ? ಕಾಯದಲ್ಲಿ ಅರಿವೆಂಬ ಗುರುದೇವನು ಕಾಯವನ್ನು ಆವರಿಸಿದ ಮನಕ್ಕೆ ಬೇಡಿದುದನ್ನು ಕೊಟ್ಟರು, ದರಿದ್ರ ಮನ ಕಾಯದೊಂದಿಗೆ ಅನ್ಯರನ್ನು ಬೇಡುವುದು ಬಿಡುವುದಿಲ್ಲ. ಮನ ತನಗೆ ಬೇಕಾದುದನ್ನು ಕಾಯದೊಂದಿಗೆ ಬೇಡುತ್ತದೆ.

ಉದಾ : ಭಿಕ್ಷುಕ ತನಗೆ ಇಂದು ಯಥೇಚ್ಛ ಭಿಕ್ಷೆ ಸಿಗಲೆಂದು ದೇವರಲ್ಲಿ ಬೇಡಿಯೇ ಭಿಕ್ಷೆಗೆ ಹೋಗುತ್ತಾನೆ. ಕಾಯದಲ್ಲಿಯೇ ಇದ್ದ ದೇವರು ತಥಾಸ್ತು ಎನ್ನುತ್ತಾನೆ. ಕಳ್ಳ ತನಗೆ ಇಂದು ಹೇರಳವಾದ ಆಭರಣಗಳು ದೊರೆಯಲೆಂದು ದೇವರಲ್ಲಿ ಬೇಡಿಯೇ ಕಳವು ಮಾಡಲು ಹೋಗುತ್ತಾನೆ. ಕಾಯದಲ್ಲಿಯೇ ಇದ್ದ ದೇವರು ತಥಾಸ್ತು ಎಂದು ಹರಸುತ್ತಾನೆ. ಲಂಚಕೋರ ತನಗೆ ಇಂದು ಹೇರಳವಾಗಿ ಲಂಚ ಸಿಗಲೆಂದು ದೇವರನ್ನು ಬೇಡಿಯೇ ಕಾರ್ಯಾಲಯಕ್ಕೆ ಹೋಗುತ್ತಾನೆ. ಕಾಯದಲ್ಲಿಯೇ ಸಂಗಮವಾದ ದೇವರು ಅವನಿಗೂ ತಥಾಸ್ತು ಎಂದು ಹರಸುತ್ತಾನೆ. ಇವರೆಲ್ಲ ಕೆಟ್ಟಕೇಡಿಂಗೆ ಕಡೆಯಿಲ್ಲ. ಒಮ್ಮೆಯೂ ಬೇಡಿದ್ದನ್ನೆಲ್ಲ ಕೊಡುವ ದೇವರನ್ನು ನೀನೆ ಬೇಕೆಂದು ಯಾರೂ ಕೇಳಲಿಲ್ಲ.

ಕಾಯದೊಳಗಿದ್ದು, ಕಾಯವನ್ನು ಮುಟ್ಟಿಯೂ ಕಾಯದಲ್ಲಿಯೇ ಇದ್ದ ಅರಿವಿನ ದೇವರನ್ನು ಅರಿಯದವನನ್ನು ಏನೆಂಬೆನಯ್ಯ? ಕಪಿಲಸಿದ್ಧ ಮಲ್ಲಿಕಾರ್ಜುನ.

756

**ಪಸರಿ ಪರ್ಬಿ ಮಾಯೆ ದೆಸೆವರಿವುದಯ್ಯಾ**
**ವಿಷಮಾಕ್ಷನಾದಡೆಯು ಗೆಲುವೆನೆನುತ**
**ವಸುಧೀಶ ಕಪಿಲಸಿದ್ಧ ಮಲ್ಲಿಕಾರ್ಜುನ.**

ತನುವನ್ನು ಆವರಿಸಿದ ಮನ ಮಾಯೆಯಾಗಿ ಎಲ್ಲೆಡೆಯೂ ಸುತ್ತಾಡಿಸುತ್ತದೆ. ವಿಷಮಾಕ್ಷನ ಸಂಗಾತಿಯಾದಾಗ ಮಾತ್ರ ಅದಕ್ಕೆ ಗೆಲುವು ಸಾಧ್ಯ. ಆದರೆ ಮನವೆಂಬ ಮಾಯೆ ತನುವಿನ ಸಂಗ ಮಾಡಿದೆ. ವಸುಧೀಶನನ್ನು ದೂರತಳ್ಳಿದೆ. ತನುವಿನೊಂದಿಗೆ ಗೆಳೆತನ ಮಾಡಿ ಕಾಮ, ಕ್ರೋಧಾದಿ ಅರಿಷಡ್ವರ್ಗಗಳನ್ನು ತನುವಿನಲ್ಲಿಟ್ಟು ಸಪ್ತವ್ಯಸನಗಳನ್ನು ತನುವಿಗೆ ಹಚ್ಚಿ ಅಷ್ಟಮದಗಳನ್ನು ತನುವಿಗೆ ಕಟ್ಟಿ ಮನವೆಂಬ ಮಾಯೆ ತನುವಿನ ತುಂಬ ಹರಿದಾಡುತ್ತಲಿದೆ. ತನುವಿನಲ್ಲಿಯೇ ತನ್ಮಯವಾದ ವಸುಧೀಶ ಕಪಿಲಸಿದ್ಧ ಮಲ್ಲಿಕಾರ್ಜುನನ ಪರಿಚಯ ಮನವೆಂಬ ಮಾಯೆಗೆ ಇಲ್ಲದೆ ಹೋಗಿದೆ. ಹೀಗಾಗಿ ಮನವೆಂಬ ಮಾಯೆ ತನುವಿಗೆ ಕಾಶಾಯ ತೊಡಿಸಿ ಗುರುದೇವನ ವೇಷ ಹಾಕಿದೆ. ತನುವಿಗೆ ಶಿಷ್ಯನ ವೇಷ ಹಾಕಿದೆ. ತನುವಿಗೆ ರಾಜನ ವೇಷ ಹಾಕಿದೆ. ತನುವಿಗೆ ಮಂತ್ರಿ, ಪ್ರಧಾನಿ, ಸೇನೆ ಸೇನಾಧಿಪತಿ ವೇಷ ಹಾಕಿ ತನುವೇ ತನುವಿನೊಂದಿಗೆ ಯುದ್ಧಕ್ಕಿಳಿದಿದೆ. ಇದು ತನುವಿನಲ್ಲಿ

ಹರಿದಾಡುವ ಮಾಯೆಯ ಕೆಲಸವೆಂದು ತನುವಿಗೆ ಗೊತ್ತಿದ್ದರು ಅದು ಮನವೆಂಬ ಮಾಯೆಯ ಮಾತು ಕೇಳುತ್ತದೆ. ಹೊರತು ತನುವಿನಲ್ಲಿಯೇ ತನ್ಮಯವಾದ ಗುರುದೇವನ ಮಾತು ಕೇಳುವುದಿಲ್ಲ.

ಮನವೆಂಬ ಮಾಯೆ ತನ್ನ ಅಜ್ಞಾನವನ್ನು ತಾನು ಸುಲಭವಾಗಿ ಗೆಲ್ಲುವ ಸೂತ್ರವನ್ನು ತನುವಿನಲ್ಲೆ ತನ್ಮಯವಾದ ಅರಿವೆಂಬ ಗುರುದೇವ, ತನುವಿಗೆ ತನುವನ್ನು ಆವರಿಸಿದ ಮನಕ್ಕೆ ಪಾಠ ಮಾಡಿದರೂ, ತನ್ನ ವಿಷಮ ತನುವನ್ನು ಕಳೆದುಕೊಂಡು ಸಮತೆಯ ಗೆಲುವಿನತ್ತ ಜಿಗಿಯಲು ಸಾಧ್ಯವಾಗುತ್ತಿಲ್ಲ.

ವಸುಧೀಶ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ತನುವಿನ ತುಂಬ ಹಬ್ಬಿದ ಮನವೆಂಬ ಮಾಯೆಯ ದೆಸೆಯನ್ನು ಅರಿಯುವುದಕ್ಕೆ ಅರಿತು ಅದನ್ನು ಬೋಧಿಸುವುದಕ್ಕೆ ನಿನಗೆ ಮಾತ್ರ ಸಾಧ್ಯ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

757

**ಪಾತಕರಟ್ಟಿ ಪುಣ್ಯಪುರುಷರಿಗರುಹುವಲ್ಲಿ ತಮ್ಮಪ್ಪಣೆಯೆ ಅಯ್ಯಾ?**
**ಆರೂ ಅರಿಯದ ಬೋಧೆಯನರುಹಬೇಕೆಂಬಪೇಕ್ಷೆ**
**ಲಿಂಗದಲ್ಲಿ ತೋರಿದುದು ಎನ್ನ ಸುಕೃತವಲ್ಲ**
**ಎನ್ನ ಯೋಗದ ಬಲವಲ್ಲ**
**ನಿಮ್ಮ ಪಾದದ ಮಹಾಕೃಪೆ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿಯದ ಬೋಧೆಯನ್ನು ಪುಣ್ಯಪುರುಷರಿಗೆ ತಿಳಿಹೇಳಬೇಕೆಂಬುದು ತಮ್ಮಪ್ಪಣೆಯೆ ಅಯ್ಯ. ಪ್ರತಿ ಅಂಗದಲ್ಲಿಯೂ ಸಂಗಮವಾದ ನೀನು ಸಕಲ ಅಂಗಗಳಿಗೂ ಬೋಧಿಸುತ್ತಿರುವೆ. ನಿನ್ನ ಬೋಧೆಯು ಅನಂತ, ಅಗಮ್ಯ, ಅಪ್ರಮಾಣ, ಅಪ್ರತಿಮ ಹೀಗಿರುವಾಗ ಪ್ರತಿಯೊಂದು ತನುವು ಮತ್ತೊಂದು ತನುವಿಗೆ ಏನಾದರೂ ಹೇಳಬೇಕು.

ಅರಿಯದುದನ್ನು ಬೋಧಿಸಬೇಕೆಂಬ ಆಪೇಕ್ಷೆಯನ್ನು ಪಡುತ್ತದೆ. ಹೀಗೆ ಆಪೇಕ್ಷೆಪಡುವುದು ಕೂಡಾ ನಿನ್ನ ಕೃಪೆಯೇ ತಂದೆ ! ಒಂದು ತನು ಪರಿಪೂರ್ಣ ತನುವೇ ಆಗಿರುವಾಗ, ಆ ತನುವಿಗೆ ಮತ್ತೊಂದು ತನು ಏನಾದರೂ ಹೇಳಲು ಸಾಧ್ಯವೇ? ಆ ತನುವಿನಲ್ಲಿ ತನ್ಮಯವಾದ ಅರಿವು ಮತ್ತೊಂದು ತನುವಿಗೆ ಬೋಧಿಸುವುದಕ್ಕಾಗಿ ಬಂದುದಲ್ಲ. ಅದು ನಿನ್ನ ಕೃಪೆ. ಆ ಯೋಗ ಸಕಲ ತನುಗಳಿಗೂ ಇದೆ.

ಸಕಲ ತನುಗಳಲ್ಲಿಯೂ ತನ್ಮಯವಾದ ಅರಿವು ಇರುವಾಗ, ಆ ಅರಿವೇ ಗುರುದೇವನೆಂದು, ಆ ಗುರುದೇವನೆ ಮಹಾದೇವನೆಂದು, ಆ ಮಹಾದೇವನೆ ಸದಾಶಿವನೆಂದು, ಆ ಸದಾಶಿವನು ಪರಬ್ರಹ್ಮನೆಂದು ಹೆಸರು ಪಡೆದಿರುವಾಗ, ಆ ಮಹಾದೇವನಿಗೆ ಪಾತ್ರಧಾರಿ ಮನ ಏನಾದರೂ ಬೋಧಿಸಲು ಸಾಧ್ಯವೇ ? ಅದು ಎನ್ನ ಯೋಗದ ಬಲವಲ್ಲ.

ಸಾಧ್ಯವಾದರೆ ನಿಮ್ಮ ಪಾದದ ಮಹಾಕೃಪೆಯಿಂದಾಗಿ ತನುವಿನಲ್ಲಿಯೇ ತನ್ಮಯವಾದ ಪುಣ್ಯ ಪುರುಷನನ್ನು ತನುವನ್ನು ಆವರಿಸಿದ ಮನವೆಂಬ ಮಾಯೆಗೆ ತಮ್ಮಪ್ಪಣೆಯಂತೆ ಸೂಚಿಸಬಹುದು. ತಮ್ಮನ್ನು ಪರಿಚಯಿಸಬಹುದು.

758

**ಪಾದೋದಕವು ಲಿಂಗದ ಮೇಲೆ ಎರೆದಲ್ಲಿ ಜಂಗಮ ಘನವಾಯಿತ್ತು.**
**ಆ ಲಿಂಗೋದಕ ಸ್ವೀಕರಿಸಿದಲ್ಲಿ ಜಂಗಮಕ್ಕೆ ಘನವಾಯಿತ್ತು.**
**ಲಿಂಗದ ಕಳೆಯೆ ಜಂಗಮ, ಜಂಗಮದ ಕಳೆಯೇ ಲಿಂಗ;**
**ಆವುದ ಘನವೆಂಬೆ; ಆವುದ ಕಿರಿದೆಂಬೆ?**
**ಲಿಂಗ-ಜಂಗಮ ನೇತ್ರದಲ್ಲಿಯ ಪ್ರಕಾಶದಂತೆ ತಿಳಿದೆ ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪಾದೋದಕ ಎಂದರೆ ಪಾದವನ್ನು ತೊಳೆದ ನೀರಲ್ಲ. ಅದು ಜ್ಞಾನೋದಕ. ಜ್ಞಾನೋದಕವು ಒಂದು ವಸ್ತುವಲ್ಲ. ಹಾಗೆಯೇ ಲಿಂಗವು ಕೂಡಾ ಒಂದು ವಸ್ತುವಲ್ಲ. ಜಂಗಮ ಎನ್ನುವುದು ಒಂದು ವ್ಯಕ್ತಿಯಲ್ಲ. ಅಂಗದ ಮೇಲೆ ಕಟ್ಟಿಕೊಂಡ ಲಿಂಗಕ್ಕೆ, ಜಂಗಮನ ಪಾದ ತೊಳೆದ ಉದಕ ಎರೆದು ಪೂಜಿಸುವ ಪೂಜೆಯು ಪೂಜೆ ಅಲ್ಲ. ಅಂಗದಲ್ಲಿ ಸಂಗಮವಾದ ಅರಿವೇ ಲಿಂಗ ! ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗವನ್ನು ಅರಿತುಕೊಂಡವನೆ ಜಂಗಮ! ಇಡೀ ಜ್ಞಾನದ ಸಾರವೇ ಪಾದೋದಕ !

ಲಿಂಗೋದಕ ಸ್ವೀಕರಿಸಿದಲ್ಲಿ ಜಂಗಮಕ್ಕೆ ಘನವಾಯಿತ್ತು: ಅರಿವಾಗಬಹುದು. ಅರಿವನ್ನು ಸ್ವೀಕರಿಸಿ ಆಚರಣೆಗೆ ತರುವುದು ಜಂಗಮ. ಕಣ್ಣಿನ ನೋಟದಲ್ಲಿ ಚಿನ್ನ ಎಂದು ಗೊತ್ತಾದಾಗ, ಅರಿವು ಅದು ಚಿನ್ನವಲ್ಲ ಹಳದಿ ಲೋಹ ಎಂದು ಖಚಿತವಾಗಿ ಹೇಳುತ್ತದೆ. ಚಿನ್ನವೆಂದು ಸ್ವೀಕರಿಸುವ ಮನವನ್ನು ಜಂಗಮ ತನ್ನ ಬಿಚ್ಚುಗತ್ತಿಯಿಂದ ಕತ್ತರಿಸುತ್ತಾನೆ.

ಹಳದಿ ಲೋಹವನ್ನು ಪಡೆಯದಂತೆ ತನ್ನ ಅರಿವಿನ ಬಲದಿಂದ ತಡೆಯುತ್ತಾನೆ. ಸಿದ್ಧರಾಮ ಶಿವಯೋಗಿಗಳು ಲಿಂಗೋದಕ ಸ್ವೀಕರಿಸಿದಲ್ಲಿ ಜಂಗಮ ಘನವಾಯಿತೆಂದು ಸೂತ್ರದ ಮೂಲಕ ವಿವರಿಸಿದ್ದಾರೆ.

ಲಿಂಗದ ಕಳೆಯೇ ಜಂಗಮ. ಜಂಗಮದ ಕಳೆಯೇ ಲಿಂಗ. ಆವುದ ಘನವೆಂಬೆ, ಆವುದ ಕಿರಿದೆಂಬೆ. ಲಿಂಗ, ಜಂಗಮ ಇವರಿಬ್ಬರು ನೇತ್ರದಲ್ಲಿಯ ಪ್ರಕಾಶದಂತೆ ಎಂದು ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ಸುಂದರವಾದ ಸೂತ್ರವನ್ನೇ ಹೇಳಿದ್ದಾರೆ.

759

**ಪಾದೋದಕವೆಂಬುದು ಪರಮಾತ್ಮ ಚಿದ್ರೂಪು ನೋಡಾ.**
**ಪಾದೋದಕವೆಂಬುದು ಮೋಕ್ಷದ ಮಾರ್ಗ ನೋಡಾ.**
**ಪಾದೋದಕವೆಂಬುದು ಪಾಪದ ಕೇಡು ನೋಡಾ.**
**ಪಾದೋದಕವೆಂಬುದು ಪ್ರಮಥರ ಇರವು ನೋಡಾ.**
**ಪಾದೋದಕವೆಂಬುದು ಕಪಿಲಸಿದ್ಧಮಲ್ಲಿಕಾರ್ಜುನನ.**
**ಮಹಿಮೆ ನೋಡಾ.**

ಗಂಗೆಯನ್ನು ಧಾರಣೆ ಮಾಡಿಕೊಂಡಾತನೇ ಗಂಗಾಧರ. ಗಂಗೆಯನ್ನು ಧಾರಣೆ ಮಾಡಿಕೊಂಡದ್ದು ಯಾರಿಗೆ ಬಲವಾಗಿ ತಿಳಿದಿದೆಯೋ ಆತನೇ ಗಂಗಾಧರ. ಹಾಗೆಯೇ ಉದಕ ಪಾದೋದಕವನ್ನು ಧಾರಣೆ ಮಾಡಿಕೊಂಡಿದೆ.

ಉದಕ ಕಾಣುತ್ತದೆ. ಮುಟ್ಟಿದರೆ ಅನುಭವಕ್ಕೆ ಬರುತ್ತದೆ. ಮುಟ್ಟುವ ತನು ಕೂಡಾ ಉದಕದ ಬಿಂದುವಿನಿಂದಲೇ ಜನ್ಮ ಪಡೆದಿದೆ. ಉದಕವೇ ಪಾದೋದಕವಾಗಿದೆ. ಉದಕವನ್ನು ಧಾರಣೆ ಮಾಡಿಕೊಂಡು ಜ್ಞಾನೋದಕ, ಮಹಾಜ್ಞಾನ ಉಳ್ಳ ತನು ಎಂದು ಕರೆಯಿಸಿಕೊಂಡಿದೆ.

ಸಿದ್ಧರಾಮ ಶಿವಯೋಗಿಗಳು ಪಾದೋದಕವೆಂಬುದು ಪರಮಾತ್ಮ; ಅದು ಚಿದ್ರೂಪು ಎಂದು ಕರೆದಿದ್ದಾರೆ. ಪಾದೋದಕವೆಂಬುದು ಜ್ಞಾನೋದಕ ; ಅದು ಅಜ್ಞಾನಕ್ಕೆ ಮುಕ್ತಿಕೊಡುವ ಸೂತ್ರ.

ಉದಕಕ್ಕೆ ಪುಣ್ಯವುಂಟು; ಪಾಪವುಂಟು. ಪಾದೋದಕಕ್ಕೆ ಪುಣ್ಯವಿಲ್ಲ ಪಾಪವಿಲ್ಲ. ಪಾದೋದಕವೆಂಬುದು ಪುಣ್ಯ ಪಾಪಗಳ ಕೇಡು ನೋಡಾ.

ಪಾದೋದಕವೆಂಬುದು ಪ್ರಮಥರ ಇರುವು. ಪಾದೋದಕ ಹೇಗೆ ನಿರಾಕಾರವೊ ಪ್ರಮಥರ ಇರುವು ಕೂಡಾ ನಿರಾಕಾರವೇ ಆಗಿದೆ.

ಪಾದೋದಕವೆಂಬುದು ಕಪಿಲಸಿದ್ಧ ಮಲ್ಲಿಕಾರ್ಜುನನ ಮಹಿಮೆ. ''ನೀರಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ, ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯಾ'' ಎಂದು ಮುಕ್ತಾಯಕ್ಕ ಹೇಳುವ ಮಾತು ಅದೆಷ್ಟು ಸೂಕ್ತ ! ಅದೆಂತಹ ಸೂತ್ರ. ಉದಕದ ಬೊಂಬೆಗೆ ತಾನು ಬಯಲು ಎಂಬುದು ಕೂಡಲೇ ಅರ್ಥವಾಗಬೇಕು. ಉದಕದ ಬೊಂಬೆಗೆ ತಾನು ಬರೀ ಉದಕವಲ್ಲ ಪರಮಾತ್ಮನ ಚಿದ್ರೂಪವೇ ಆದ ಪಾದೋದಕ ಎಂದು ಕೂಡಲೇ ಅರಿವಾಗಬೇಕು.

ಉದಕದ ಬೊಂಬೆಯಂತೆ ಗೆಜ್ಜೆಕಟ್ಟಿಕೊಂಡು ಕುಣಿದಾಡುವ ಮನುಕುಲಕ್ಕೆ ಶರಣರ ವಚನಗಳು ದಿವ್ಯ ಸೂತ್ರಗಳೇ ಆಗಿವೆ.

**760**

**ಪಾಪವ ಮಾಡಿ ಮುಳುಗಿದಡೇನು;**
**ಮುಳುಗಿ ಪಾಪವ ಮಾಡಿದಡೇನು ?**
**ಗಂಗೆ ಪದವಿಯ ಕೊಟ್ಟಡೆ ಅದು ದುರ್ಗುಣವೆ ಅಯ್ಯಾ.**
**ಸದ್ಗುಣವಾದಡೂ ಆಗಲಿ,**
**ಈ ಮನುಜರು ಮಾಡುವ ಕರ್ಮಕ್ಕೆ**
**ಆಕೆಯ ಸದ್ಗುಣ ಸಂಧಾನವಾಯಿತ್ತು ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪಾಪವ ಮಾಡಿ ಗಂಗೆಯ ಮುಳುಗಿದಡೇನು; ಗಂಗೆಯ ಮುಳುಗಿ ಪಾಪವ ಮಾಡಿದಡೇನು? ಗಂಗೆ ಪದವಿಯ ಕೊಟ್ಟಡೆ ಅದು ದುರ್ಗುಣವೆ ಅಯ್ಯಾ.

ಕೃಷ್ಣೆ ಘಟಪ್ರಭ ಎರಡೂ ಸೇರಿ ಸಂಗಮದಲ್ಲಿ ಮುಳುಗಿದರೆ ಅಲ್ಲಿ ಕೃಷ್ಣೆಯೂ ಇಲ್ಲ ಘಟಪ್ರಭೆಯೂ ಇಲ್ಲ. ಬರೀ ಸಂಗಮ. ಗಂಗೆ ಸಂಗಮವೆಂದು ಹೆಸರು ಪಡೆದಳು. ಅಥವಾ ಸಂಗಮದಲ್ಲಿಯ ಜಲ ಗಂಗೆ ಎಂದು ಹೆಸರು ಪಡೆದಳು.

ಗಂಗೆ ಧಾರಣ ಮಾಡಿದ ತನು ಗಂಗೆಯಲ್ಲಿ ಮುಳುಗಿದರೆ ಪಾಪ ಪುಣ್ಯ ಎಂದು ಹೇಳಲು ಸಾಧ್ಯವೆ ? ಏನು ಮಾಡುವುದು ಗಂಗೆಯನ್ನು ಧರಿಸಿದ ಗಂಗಾಧರನಿಗೆ ಮಾತನಾಡಲು ಬರುತ್ತದೆ. ಗಂಗೆಗೆ ಮಾತನಾಡಲು ಬರುವುದಿಲ್ಲ. ಹೀಗಾಗಿ ಗಂಗೆಗೆ ಪಾಪವೂ ಇಲ್ಲ ಪುಣ್ಯವೂ ಇಲ್ಲ.

ಗಂಗೆಯನ್ನು ಧರಿಸಿದ ತನುವಿಗೆ ಮಾತ್ರ ಪಾಪವೂ ಇದೆ ಪುಣ್ಯವೂ ಇದೆ.

ಗಂಗೆಗೆ ಗಂಗೆಯನ್ನು ಧಾರಣೆ ಮಾಡಿದ ಗಂಗಾಧರನ ಪರಿಚಯವಾದರೆ ಸಾಕು ಗಂಗೆ ಗಂಗಾಧರನ ಜಟೆಯಲ್ಲಿ ಕೂಡುತ್ತಾಳೆ. ಗಂಗಾಧರ ಎಂದು ಅರ್ಧನಾರೀಶ್ವರ ಎಂದು ಹೆಸರು ಪಡೆಯುತ್ತಾಳೆ. ಮನವೆಂಬ ಗಂಗೆ ಮಹಾದೇವಿಯೇ ಆಗುತ್ತಾಳೆ.

ಗಂಗೆಯನ್ನು ಧಾರಣೆ ಮಾಡಿದ ಮಹಾದೇವನಿಗೆ 'ಗಂಗಾಧರ' ಎಂಬ ಪದವಿಯನ್ನು ಕೊಟ್ಟಿದ್ದಾಳೆ. ಅದು ದುರ್ಗುಣವೆ, ಏನು ಸದ್ಗುಣವೆ?

ಸದ್ಗುಣವಾದರೇನು ದುರ್ಗುಣವಾದರೇನು ಮನುಜರು ಮಾಡುವ ಕರ್ಮಕ್ಕೆ ಆಕೆಯ ಸದ್ಗುಣ ಸಂದಾಯವಾಗಿದೆ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**761**

**ಪಾವನವಾದೆನು ಬಸವಣ್ಣಾ,**
**ನಿಮ್ಮ ಪಾವನ ಮೂರ್ತಿಯ ಕಂಡು.**
**ಪರತತ್ವವನೈದಿದೆ ಬಸವಣ್ಣಾ, ನಿಮ್ಮ ಪರಮ ಸೀಮೆಯ ಕಂಡು.**
**ಪದ ನಾಲ್ಕು ಮೀರಿದೆ ಬಸವಣ್ಣಾ, ನಿಮ್ಮ ಪರುಷ ಪಾದವ ಕಂಡು.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿದೆ ;**
**ಬಸವಣ್ಣಾ, ಬಸವಣ್ಣಾ, ಬಸವಣ್ಣಾ, ನೀನು ಗುರುವಾದೆಯಾಗಿ.**

ಗುರುದೇವನನ್ನು ತೋರುವ ಗುರುದೇವನೇ ನಿಜವಾದ ಗುರುದೇವ. ಶಿಷ್ಯನನ್ನಾಗಿ ಮಾಡಿಕೊಳ್ಳುವ ಗುರುವು ಗುರುವಲ್ಲ. ಇಡೀ ಲೋಕವೇ ಗುರುಲೋಕ. ಸಕಲರೂ ಗುರುಗಳೇ ಎನ್ನುವುದು ಲೋಕಕ್ಕೆ ಗೊತ್ತಿಲ್ಲ.

ಶಿಷ್ಯನ ಶಿಷ್ಯತನವನ್ನು ಕೆಡಿಸಿ, ಗುರುವಿನ ಗುರುತನವನ್ನು ಗುರುದೇವನೇ ಕೆಡಿಸಿಕೊಂಡ ಗುರುದೇವನು ಮಾತ್ರ ಗುರು. ಅಂತಹ ಗುರುದೇವನು ಬಸವಣ್ಣನಲ್ಲದೆ ಬೇರೆ ಯಾರೂ ಅಲ್ಲ.

ಬಸವಣ್ಣ ಈ ಭೂಮಂಡಲದಲ್ಲಿ ಮೊಟ್ಟ ಮೊದಲಿಗೆ ಗುರುದೇವ ಎನ್ನುವವನು ವ್ಯಕ್ತಿ ಅಲ್ಲ ಎಂದು ಸಾರಿದಾತ. ವ್ಯಕ್ತಿಯಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಮಾತ್ರ ಗುರು ಎಂದು ಇಡೀ ಲೋಕಕ್ಕೆ ಕೇಳುವಂತೆ ಖಚಿತವಾಗಿ ಹೇಳಿದ.

ಹಾಗೆಯೇ ಶಿಷ್ಯನೆಂಬುವವನು ಕೂಡಾ ವ್ಯಕ್ತಿಯಲ್ಲ. ತನುವನ್ನು ಆವರಿಸಿದ ಮನವೇ ಶಿಷ್ಯ. ಈ ಶಿಷ್ಯ ಅರಿವೆಂಬ ಗುರುದೇವನಿಗೆ ಶಿಷ್ಯನಾಗಬೇಕು. ಇವರಿಬ್ಬರೂ ನಿರಾಕಾರರು. ನಿರೂಪರು.

ರೂಪು ಉಳ್ಳ ತನುವಿನಲ್ಲಿ ನಿರೂಪವಾಗಿ ಸಂಗಮವಾದ ಅರಿವೇ ಗುರು. ಈ ಗುರುದೇವನಿಗೆ ರೂಪು ಉಳ್ಳ ತನುವನ್ನು ಆವರಿಸಿದ ನಿರಾಕಾರ ಮನವೇ ಶಿಷ್ಯ. ಗುರುಶಿಷ್ಯರಿಬ್ಬರು ಈ ಭೂಮಿಯ ಮೇಲಿರುವ ಸಕಲ ತನುಗಳಲ್ಲಿಯೂ ತನ್ಮಯರಾಗಿದ್ದಾರೆ.

ಗುರುದೇವನನ್ನು ನನ್ನ ತನುವಿನಲ್ಲಿಯೇ ಕಂಡು ಪಾವನವಾದೆನು ಬಸವಣ್ಣಾ. ನಿಮ್ಮ ಪಾವನ ಮೂರ್ತಿಯ ಕಂಡು ಪಾವನವಾದೆನು ಬಸವಣ್ಣಾ. ಪರತತ್ವವನೈದಿದೆ ಬಸವಣ್ಣಾ, ನಿಮ್ಮ ಪರಮಸೀಮೆಯ ಕಂಡು.

ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯವೆಂಬ ನಾಲ್ಕು ಪದವಿಯನ್ನು ಮೀರಿದೆ

ಬಸವಣ್ಣಾ ನಿಮ್ಮ ಪರುಷ ಪಾದವ ಕಂಡು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿದೆ ಬಸವಣ್ಣಾ, ಬಸವಣ್ಣಾ, ಬಸವಣ್ಣಾ ನೀನು ಎನಗೆ ಗುರುವಾದ ಕಾರಣ.

**762**

**ಪುಣ್ಯಪಾಪಂಗಳಾದಡೇನು ? ಈಶ್ವರ ಕಲ್ಪನೆಯಿಲ್ಲದನ್ನಕ್ಕ**
**ಮಾಡೆಂದು ಮಾಡಿಸಬಾರದಯ್ಯಾ.**
**ನೋಡಯ್ಯಾ ನೋಡಯ್ಯಾ ಮುನ್ನಿನ ಕಲ್ಪನೆಯುಳ್ಳವರ**
**ಬೇಡೆಂದು ಮಾಣಿಸಬಾರದಯ್ಯಾ, ನೋಡಾ !**
**ಅಯ್ಯಾ, ನೀನೆಹಗೆ ಕಲ್ಪಿಸಿದೆ ಅಹಗೆ ಅಹರು**
**ಎನ್ನ ಕಪಿಲಸಿದ್ಧ ಮಲ್ಲೇಶ್ವರದೇವ.**

ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನು, ತಾನಿದ್ದ ತನುವನ್ನು, ಆ ತನುವನ್ನು ಆವರಿಸಿದ ಮನವನ್ನು ತನಗೆ ಇಚ್ಛೆಬಂದಂತೆ ದುಡಿಸುವನು. ಅದು ಪರಮಾತ್ಮನ ಜವಾಬ್ದಾರಿ.

ಒಂದು ತನು ಮತ್ತೊಂದು ತನುವಿಗೆ ಪುಣ್ಯ ಮಾಡೆಂದು ಹೇಳಬಾರದು ಪಾಪದ ಕೆಲಸವನ್ನು ಕೂಡಾ ಮಾಡಿಸಬಾರದು. ಅದು ಈಶ್ವರನ ಇಚ್ಛೆಯಂತೆ ಇರಲು ಬಿಡಬೇಕೇ ಹೊರತು ಹೀಗೆ ಮಾಡೆಂದು ಹೇಳುವುದು ಉಚಿತವಲ್ಲ.

ತನಗೆ ತಾನೇ ತನಗೆ ತೋಚಿದಂತೆ ಪುಣ್ಯ ಪಾಪ ಮಾಡುವ ತನುವನ್ನು ಮಾಣಿಸುವುದೂ ಉಚಿತವಲ್ಲ. ಮಹಾದೇವನ ಆದೇಶವಿಲ್ಲದೆ ಒಂದು ಹುಲುಕಡ್ಡಿ ಕೂಡಾ ಅಲುಗಾಡದು.

ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೇ ತನುವಿನಲ್ಲಿದ್ದ ನೀನು ಹೇಗೆ ಹೇಳುವೆಯೋ ಹಾಗೇ ಆ ತನು ನಡೆಯುವುದು. ಹಾಗೆಯೇ ಆ ತನುವನ್ನು ಆವರಿಸಿದ ಮನ ಕೂಡಾ ನಿನ್ನ ಆದೇಶವನ್ನು ಪಾಲಿಸುವುದು.

ತನುವಿನಲ್ಲಿದ್ದು ತನುವಿಗೆ ಆದೇಶ ನೀಡುವವನು ನೀನೇ. ತನುವಿನಲ್ಲಿದ್ದು ತನುವನ್ನು ಆವರಿಸಿದ ಮನಕ್ಕೆ ಆದೇಶ ನೀಡುವವನು ಕೂಡಾ ನೀನೇ. ತನು ಮನಗಳೆರಡು ತನುವಿನಲ್ಲಿಯೇ ತನ್ಮಯವಾದ ಜಗದೀಶನ ಆದೇಶ ಪಾಲಿಸುವವೇ ಹೊರತು ಬೇರೆ ತನುವಿನ ಆದೇಶ ಪಾಲಿಸುವುದು ಕೂಡಾ ತನು ಮತ್ತು ಮನಕ್ಕೆ ಶೋಭೆಯಲ್ಲ.

**763**

**ಪುಣ್ಯವ ಮಾಡಬೇಕೆಂದು ಮರುಗಬೇಡ,**
**ಪಾಪವ ಮಾಡದಿದ್ದಡೆ ಪುಣ್ಯ ದಿಟ. ಬೇರೆ ತೀರ್ಥಬೇಡ,**
**ಸತ್ಯವ ನುಡಿವಲ್ಲಿ ಸಂದಿಲ್ಲದಿಹನು.**
**ಕಪಿಲಸಿದ್ಧ ಮಲ್ಲಿಕಾರ್ಜುನ ಹುಸಿಗೆ (ಹರುಡಿಗನು).**

ಪುಣ್ಯಪಾಪವೆಂಬುದು ಮನದ ಇಚ್ಛೆ. ಮನ ತನುವಿನೊಂದಿಗೆ ಸಂಗ ಮಾಡಿ ಮತ್ತೊಂದು ತನುವಿಗೆ ಸಹಾಯ ಮಾಡುತ್ತದೆ. ತಾನು ಸಹಾಯ ಮಾಡಲು ಆ ತನುವೇನು ಅಸಹಾಯಕ ತನುವೆ? ಅದು ತನ್ನಂತೆ ಪರಿಪೂರ್ಣ ತನುವಲ್ಲವೆ ಹೇಗೆ ? ಸಕಲ ತನುಗಳಲ್ಲಿ ಅರಿವು ಎನ್ನುವ ಗುರುದೇವನು ತನ್ಮಯವಾಗಿರುವಾಗ ಆತನಿಗೆ ಸಹಾಯ ಮಾಡುವ ಶಕ್ತಿ ಯಾರಿಗಾದರೂ ಇದೆಯೆ ?

ಸಕಲ ತನುಗಳಲ್ಲಿಯೂ ತನ್ಮಯವಾದ ಮಹಾದೇವನು ಆತ. ತನುವಿನ ಒಡೆಯನು ಆತ. ತನುವಿನ ಒಡೆಯನಿಗೆ, ತನು, ತನುವನ್ನು ಆವರಿಸಿದ ಮನ ಇವೆರಡು ಪುಣ್ಯ ಮಾಡಲು ಸಾಧ್ಯವೆ ?

ಸಕಲ ತನುಗಳಲ್ಲಿದ್ದ ತನುವಿನೊಡೆಯ ಮಹಾದೇವನಿಗೆ ತನುವನ್ನು ಸಲಹುವ ಜವಾಬ್ದಾರಿ ಇದೆ. ಮನ ತನುವಿನಲ್ಲಿ ತನ್ಮಯವಾದ ಒಡಲೊಡೆಯನಿಗೆ ಶರಣು ಹೋದರೆ ಸಾಕು; ಅದು ಶರಣ ತನುವಾಗುತ್ತದೆ. ಬುದ್ಧತನುವಾಗುತ್ತದೆ. ಬಸವಾದಿ ಶರಣರ ದಾಸವರೇಣ್ಯರ ತನುವೆಂದು ಕರೆಯಿಸಿಕೊಳ್ಳುತ್ತದೆ. ಆದರೆ ಮನ ಮಹಾದೇವನ ಸಂಗ ಮಾಡದೆ ತನುವಿನ ಸಂಗ ಮಾಡಿದೆ. ಹೀಗಾಗಿ ತನುವನ್ನು ಬೇಡುವ ಭಿಕ್ಷುಕನನ್ನಾಗಿ ಮಾಡಿದೆ; ಕೊಡುವ ಕೊಡುಗೈ ದಾನಿಯನ್ನಾಗಿ ಮಾಡಿದೆ.

ಬೇಡಲು ಬಂದ ತನುವನ್ನು ನಿಂದಿಸಿ ಪಾಪದ ಮಾತುಗಳನ್ನು ಆಡಿ ಬಾಧೆಗೆ ಈಡುಮಾಡುವಂತೆ ಮಾಡಿದೆ. ನೀಡಿದರೆ ಪುಣ್ಯ ಹೇಗೆ ? ನೀಡದಿದ್ದರೆ ಪಾಪ ಹೇಗೆ ? ನೀಡುವ ಯಾವ ವಸ್ತುವನ್ನು ತನು ಸೃಷ್ಟಿ ಮಾಡಿಲ್ಲ. ಬೇಡುವ ಯಾವ ವಸ್ತುವನ್ನು ತನು ಸೃಷ್ಟಿ ಮಾಡಿಲ್ಲ. ತನುವನ್ನು ಸೃಷ್ಟಿ ಮಾಡಿದ ಒಡಲೊಡೆಯ ತನುವಿಗೆ ಬೇಕಾದ ಸಕಲ ಪದಾರ್ಥಗಳನ್ನು ಸೃಷ್ಟಿ ಮಾಡಿದ್ದಾನೆ. ಒಡಲಲ್ಲಿಯೇ ಇದ್ದು, ಒಡಲನ್ನು ಬೇಡುವಂತೆ ಮಾಡಿದ್ದಾನೆ. ಬೇಡಿದ ಒಡಲಿಗೆ ನೀಡುವಂತೆ, ನೀಡದಂತೆ ಮಾಡಿದ್ದಾನೆ.

ಮನ ತನಗೆ ಬೇಕಾದ ಪದಾರ್ಥಗಳನ್ನು ತನುವಿನೊಂದಿಗೆ ಬೇಡಿ ಸುಖಿಸುತ್ತದೆ. ಬೇಡುವುದು, ನೀಡುವುದು ಇದ್ದರೂ, ಕೊಡದೆ ಇರುವುದು ಮನಕ್ಕೆ ಸುಖ. ತನ್ನ ಸುಖಕ್ಕಾಗಿ ತನುವನ್ನು ಮನ ವ್ಯರ್ಥ ದಂಡಿಸುತ್ತದೆ.

ಪಾಪ ಪುಣ್ಯದ ಶಬ್ದಕ್ಕೆ ತನುವನ್ನು ಗುರಿಮಾಡುತ್ತದೆ. ಒಡಲನ್ನು ಆವರಿಸಿದ ಮನ ಒಡಲೊಡೆಯನನ್ನು ಬೇಡಿದರೆ ಬೇಡಿದ್ದನ್ನು ಕೊಡುವ ಕಾಮಧೇನುವಾತ; ಮುಟ್ಟಿದ್ದನ್ನು ಪಡೆಯುವ ಪರುಷಮಣಿಯಾತ. ಮನ ಮನದೊಡೆಯ ಮಹಾದೇವನನ್ನು ಬೇಡಿದರೆ, ಬೇಡಿದ ಮನವನ್ನು ಘನಮನವನ್ನಾಗಿ ಮಾಡುತ್ತಾನೆ.

ಬೇಡಿದ್ದನ್ನು ಕೊಡುವ ಧನಿಕನು ತನುವಿನಲ್ಲಿಯೇ ತನ್ಮಯವಾಗಿದ್ದರೂ ಜಿಪುಣ ಅವಿವೇಕಿ ಮನ ಅನ್ಯ ತನುವನ್ನೇ ಬೇಡುತ್ತದೆ.

ಪಾಪವ ಮಾಡದಿದ್ದಡೆ ಪುಣ್ಯದಿಟ. ಬೇರೆ ತೀರ್ಥ ಬೇಡ, ಸತ್ಯವ ನುಡಿವಲ್ಲಿ ಸಂದಿಲ್ಲದೆ ಇಹನು, ಕಪಿಲಸಿದ್ಧ ಮಲ್ಲಿಕಾರ್ಜುನ:

ವೃಕ್ಷ, ಜ್ಞಾನಿ. ಅದು ಯಾರನ್ನೂ ಏನೂ ಬೇಡುವುದಿಲ್ಲ. ಹಾಗೆಯೇ ತನು ಕೂಡಾ ಬೋಧೀವೃಕ್ಷ. ಕಾಮಧೇನು ! ಸಕಲ ಬ್ರಹ್ಮಾಂಡವೂ ತನುವಿನಲ್ಲಿಯೇ ಅಡಗಿದೆ. ಹೀಗಾಗಿ ಅದು ಇಡೀ ಬ್ರಹ್ಮಾಂಡವನ್ನೇ ನೋಡುತ್ತದೆ. ಅಂದರೆ ಬ್ರಹ್ಮಾಂಡವೇ ದೊಡ್ಡದೆಂದು ಅಲ್ಲ. ಅದನ್ನು ನೋಡುವ ತನುವಿನ ಶಕ್ತಿಯೇ ದೊಡ್ಡದು ! ಆ ಶಕ್ತಿಯೇ ಕಪಿಲಸಿದ್ಧ ಮಲ್ಲಿಕಾರ್ಜುನ.

**764**

**ಪುತ್ರನ ಪೂಜೆಯು ಜನಕನಿಗೆ ದುಃಖಕರವಲ್ಲ.**
**ಸತಿಯ ವೈಭವವು ಪತಿಗೆ ಪ್ರಾಣಹಾನಿಯಲ್ಲ.**
**ತನ್ನ ಭೃತ್ಯನಿಗಾದ ಜಯಘೋಷ ಅರಸನಿಗೆ ಅಸಂತೋಷರಲ್ಲ.**
**ಇದು ಕಾರಣ ಶಿಷ್ಯನ ಸಮರದಲ್ಲಿ**
**ಶ್ರೀಗುರು ಕಪಿಲಸಿದ್ಧ ಮಲ್ಲಿಕಾರ್ಜುನಂಗೆ ಕೇಳಲು ಅದು ಯೋಗ್ಯವಲ್ಲ,**

**ಅಲ್ಲಮ ಮಹಾಪ್ರಭುವೆ.**

ಹಡೆದ ಮಗನನ್ನು ಹೊಗಳುವುದು ತಂದೆಗೆ ಬಲು ಸುಖ. ಸತಿಯ ವೈಭವ ಕೂಡಾ ಪತಿಗೆ ಪ್ರಾಣಹಾನಿಯೇನೂ ಅಲ್ಲ. ಯುದ್ಧ ಗೆದ್ದು ಬಂದ ಸೇವಕನಿಗೆ ಜಯಘೋಷ ಹಾಕುವುದು ಅರಸನಿಗೆ ಬಲು ಸಂತೋಷವೇ ಆಗಿದೆ. ಆದರೆ

ಶಿಷ್ಯನ ಸಮರದಲ್ಲಿ ಶ್ರೀಗುರು ಕಪಿಲಸಿದ್ಧ ಮಲ್ಲಿಕಾರ್ಜುನಂಗೆ ಕೇಳಲು ಅದು ಯೋಗ್ಯವಲ್ಲ ಎಂದು ಅಲ್ಲಮಪ್ರಭುಗಳಿಗೆ ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಇದು ಬಲು ಗುಟ್ಟಾದ ರಹಸ್ಯ.

ಆಯಾಕ್ಷೇತ್ರದಲ್ಲಿ ಲೋಕಕ್ಕೆ ಸಂತೋಷವಾಗಬಹುದು. ಆದರೆ ಗುರುದೇವನಿಗೆ ಶಿಷ್ಯನ ಸಮರ ಸಂತೋಷ ತರುವುದು ಉಚಿತವಲ್ಲ ಪ್ರಭುವೆ ಎಂದು ಸೂಕ್ಷ್ಮಾತಿ ಸೂಕ್ಷ್ಮ ಸೂತ್ರವನ್ನು ಬಿಚ್ಚಿ ಅಲ್ಲಮಪ್ರಭುಗಳ ಮುಂದಿಟ್ಟಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಹೇರಳವಾದ ಧನರಾಶಿಯನ್ನು ಮಗ ಮನೆಗೆ ತಂದರೆ, ತಂದೆ ಮಗನನ್ನು ಆರಾಧಿಸುತ್ತಾನೆ. ಅದು ಎಲ್ಲಿಂದ ತಂದೆ ಎಂದು ದುಃಖಿಸುವುದಿಲ್ಲ. ಸತಿ ವೈಭವದಿಂದ ಮೆರೆದರೆ ಪತಿ ಆಕೆಯ ಸೌಂದರ್ಯವನ್ನು ಹೀರುತ್ತಾನೆ. ಆಕೆಯ ವೈಭವ ಪತಿಗೆ ಪ್ರಾಣಹಾನಿಯಲ್ಲ.

ಸೇವಕ ಯುದ್ಧದಲ್ಲಿ ಸಾವಿರಾರು ಜನರನ್ನು ಕೊಂದು ಬಂದರೆ, ಅರಸನಿಗೆ ಬಲು ಸಂತೋಷ. ಜಯಘೋಷ ಮಾಡುತ್ತಾನೆ. ಇದು ಲೋಕದ ನಿಯಮ ಪ್ರಭುವೆ. ಆದರೆ ಗುರುದೇವ ಶಿಷ್ಯನ ಸಮರವನ್ನು ಲೋಕದಂತೆ ಆಲಿಸುವುದು ತರವಲ್ಲ ಪ್ರಭುವೆ !

ತನುವಿನಲ್ಲಿ ಅರಿವು ಎಂಬ ಗುರುದೇವನು ತನ್ಮಯವಾಗಿದ್ದಾನೆ. ತನುವನ್ನು ಆವರಿಸಿದ ಶಿಷ್ಯನೆಂಬ ಮನ ತನುವನ್ನು ಹಿಡಿದು ಪರಸತಿಯೊಂದಿಗೆ ಹಾದರಕ್ಕೆ ಇಳಿದರೆ ಸುಮ್ಮನಿರುವುದು ಗುರುದೇವನಾದವನಿಗೆ ಶೋಭೆಯಲ್ಲ ಪ್ರಭುವೆ.

ಮನವೆಂಬ ಶಿಷ್ಯ, ತನುವನ್ನು ಹಿಡಿದು ಕಳುವಿಗೆ ಹೋಗಿ, ತನುವನ್ನು ಕೊಂದು, ಚಿನ್ನ ಪಡೆದರೂ, ತನುವಿನಲ್ಲಿಯೇ ತನ್ಮಯವಾದ ಗುರುದೇವ, ನೋಡಿಯೂ ನೋಡದಂತೆ ಇರುವುದು ತರವಲ್ಲ ಪ್ರಭುವೆ ! ಮನವೆಂಬ ಶಿಷ್ಯ ತನುವಿನೊಂದಿಗೆ ತನುವನ್ನು ನೋಡಿ ಮನದಲ್ಲಿ ಹಾದರ ಮಾಡುತ್ತಾ ಅಕ್ಕಾ ಎಂದು ಮಾತನಾಡುವುದನ್ನು ಕೇಳಿಯೂ ಕೇಳದಂತೆ ಇರುವ ಗುರುವಿನ ನಡತೆ ಸರಿಯಲ್ಲ ಪ್ರಭುವೆ.

ಚಿನ್ನವಿದ್ದರೂ, ಚಿನ್ನಕ್ಕಾಗಿ ರಾಜ ಮತ್ತೊಬ್ಬ ರಾಜನೊಂದಿಗೆ ಯುದ್ಧ ಮಾಡಿ, ಸಾವಿರಾರು ತನುಗಳನ್ನು ಕೊಂದು ಚಿನ್ನ ಪಡೆಯುವುದು ಗುರುದೇವನಿಗೆ ಗೊತ್ತಿಲ್ಲವೆ ? ಕೊಲ್ಲುವ ತನುವಿನಲ್ಲಿಯೂ ಇದ್ದು ಕೊಲ್ಲುವುದಕ್ಕೆ ಸಮ್ಮತಿಯಿತ್ತಿದ್ದಾನೆ. ಸಾಯುವ ತನುವಿನಲ್ಲಿಯೂ ಇದ್ದು ಸಾಯುವುದಕ್ಕೆ ಸಮ್ಮತಿಯಿತ್ತಿದ್ದಾನೆ. ಜಡವಸ್ತುವಿನ ಆಸೆಗಾಗಿ ಚೇತನ ಬಲಿಯಾಗುತ್ತಿರುವುದನ್ನು ತಡೆಯದೆ ಸುಮ್ಮನಿರುವುದು ಗುರುದೇವನಿಗೆ ಉಚಿತವಲ್ಲ ಪ್ರಭುವೆ ಎಂದು ಸಿದ್ಧರಾಮ ಶಿವಯೋಗಿಗಳು ಅಂತರಂಗದ ಅರಿವೆಂಬ ಗುರುದೇವನ ಬಗ್ಗೆ ಅಲ್ಲಮಪ್ರಭುಗಳ ಮುಂದೆ ದೂರಿದ್ದಾರೆ.

**765**

**ಪುದುಗಿದ್ದ ಸಂಸಾರ ಬಂಧನಂಗಳ ಪೆರ್ದೊರೆ**
**ಎಂದಿಂಗೆ ಬಿಟ್ಟು ಪೋಪುದು ?**
**ಎಂದಿಪ್ಪೆ ನಿಮ್ಮೊಡಗೂಡಿ ಬೇರಾಗದೆಂದಿಪ್ಪೆನು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಂಸಾರಗಳು ಎರಡು. ಒಂದು ಅರಿವಿನ ಸಂಸಾರ. ಮತ್ತೊಂದು ಮರೆವಿನ ಸಂಸಾರ. ಮರೆವಿನ ಸಂಸಾರ ಅಜ್ಞಾನದ ಸಂಸಾರ. ಇದು ತನುವಿನಲ್ಲಿ, ತನುವನ್ನು ಆವರಿಸಿದ ಮನ ತನುವಿಗೆ ಹೇರಿದ ಸಂಸಾರ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಪುದುಗಿದ್ದ ಸಂಸಾರ ಬಂಧನಂಗಳು ಎಂದಿಂಗೆ ಬಿಟ್ಟು ಹೋಗುವವು ದೊರೆಯೆ ಎಂದು ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕೇಳಿದ್ದಾರೆ.

ಅರಿವಿನ ಸಂಸಾರ ಹೊರಗಿನದಲ್ಲ. ಬೈಬಲ್ ಭಗವದ್ಗೀತೆ ಕುರಾನ್‌ಗಳಿಂದ ಹೆರವಲು ಪಡೆದ ಸಂಸಾರವೂ ಅಲ್ಲ. ಹೊರಗಿನ ಸಂಸಾರವೆಲ್ಲ ಅಜ್ಞಾನದ ಸಂಸಾರವೇ ಆಗಿದೆ. ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಸಾರ ಮಾತ್ರ ಲಿಂಗಯ್ಯನ ಸಂಸಾರ.

ಹೊರಗಿನ ಅಜ್ಞಾನದ ಸಂಸಾರ ಬಿಟ್ಟು ಹೋದ ಮೇಲೆ ಅಂತರಂಗದ ಅರಿವಿನ ಸಂಸಾರ ತಂತಾನೆ ಗೋಚರಕ್ಕೆ ಬರುವುದು.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಶರಣುಹೋಗಿ ಶರಣಾಗತನಾದ ಮೇಲೆ, ಆತ ಅರಿವಿನ ಸಂಸಾರದ ದಾರಿಗೆ ಹಚ್ಚುತ್ತಾನೆ. ಈ ಕಾಯಕ ಕಾಯದಲ್ಲಿಯೇ ನಡೆಯುತ್ತದೆ.

ಎಲ್ಲಿಯವರೆಗೆ ಮನ ಅರಿವಿನ ಲಿಂಗಯ್ಯನಿಗೆ ಶರಣು ಹೋಗುವುದಿಲ್ಲವೊ ಅಲ್ಲಿಯವರೆಗೆ ಲಿಂಗಯ್ಯ ಅಂಗವನ್ನು; ಅಂಗವನ್ನು ಆವರಿಸಿದ ಮನವನ್ನು ಕಾಡುತ್ತಲೇ ಇರುತ್ತಾನೆ.

ಅರಿವಿನ ಸಂಸಾರದಲ್ಲಿ ನಿರತವಾದ ಅಂಗದ ಸೇವೆ ಮಾಡುವ ಬಯಕೆ ಮರೆವಿನ ಸಂಸಾರದಲ್ಲಿ ನಿರತವಾದ ಅಂಗಕ್ಕೆ ಆದರೆ ಸಾಕು, ಅರಿವಿನ ಲಿಂಗಯ್ಯ ಅರಿವಾದ ಅಂಗದಲ್ಲಿಗೆ ಮರೆವಿನ ಅಂಗವನ್ನು ಕರೆದುಕೊಂಡು ಹೋಗುತ್ತಾನೆ. ಅರಿವಿನ ದಾರಿಗೆ ಹಚ್ಚುತ್ತಾನೆ.

ಅರಿವೆಂಬ ಗುರುದೇವನ ಸುಖವನ್ನು ಉಣ್ಣಲು ತೊಡಗಿದ ಮನ, ನಿಮ್ಮೊಡಗೂಡಿ ಬೇರಾಗದೆ ಎಂದಿಪ್ಪೆನೋ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಮನ, ಹಗಲಿರುಳೆನ್ನದೆ ಗುರುದೇವನ ಸ್ಮರಣೆ ಮಾಡುತ್ತದೆ. ಆತನೊಂದಿಗೆ ಕೂಡಿ ಕೂಡದಗಲದ ಕೂಟದ ಅರಿವಿನ ಸುಖವನ್ನು ಸವಿಯುತ್ತದೆ.

**766**

**ಪೂಗಂಧವವಂಗೆ ಗಂಧವಾರಣೆ ಮಾಡಿ ತೋರುತ ಬರಲಿ.**
**ಮೆಚ್ಚಿದನೆಂದು ಇವಳ ಕಂಡು ಅವ್ವ**
**ಎಲ್ಲ ಗುಣ ಇವಳಲುಂಟೆಂದು ಮೆಚ್ಚಿದೆನೆಂದು**
**ಕಪಿಲಸಿದ್ಧಮಲ್ಲಿನಾಥನೊಲಿದು**
**ನೆರದರೆ ಕಾಮಿಯಾದೆನಗೆಯವ್ವಾ.**

ಅರಿವಿನ ತನುವೆಂದು ತನುಗಳ ಮೂಲಕ ತನು ಹೆಸರು ಪಡೆದಿದ್ದರೂ, ಅದು ಮಾಡುವ ಕೆಲಸ ಮಾತ್ರ ಮರೆವಿನ ಕೆಲಸ. ಹೀಗಾಗಿ ತನುವಿಗೆ ಅರಿವಾಗಲೆಂದು ಶರಣರು ನಾನಾ ಸೂತ್ರಗಳನ್ನು ಹೆಣೆದಿದ್ದಾರೆ.

ತನುವನ್ನು ಆವರಿಸಿದ ಮರೆವನ್ನು ಹೆಣ್ಣಾಗಿಸಿ, ತನುವಿನಲ್ಲಿ ತನ್ಮಯವಾದ ಅರಿವನ್ನು ಗಂಡನ್ನಾಗಿಸಿ, ಮರೆವು ಎನ್ನುವ ಹೆಣ್ಣು ಅರಿವು ಎನ್ನುವ ಗಂಡನೊಂದಿಗೆ ಕೂಡಿ, ಕೂಡದ ಅಗಲದ ನಿಷ್ಕಾಮದ ಕೂಟದ ಅರಿವಿನ ಸುಖವನ್ನು, ತನು ಉಣ್ಣಲೆಂದು ಸಿದ್ಧರಾಮ ಶಿವಯೋಗಿಗಳು ಈ ಸೂತ್ರ ಹೆಣೆದಿದ್ದಾರೆ.

ಹೂವಿನ ಗಂಧವು ಅವನಿಗೆ. ಗಂಧಧಾರಣೆ ಮಾಡಿ, ಗಂಧವನು ತೋರುತ, ಮೆಚ್ಚಿದನೆಂದು ಇವಳ ಕಂಡು, ಅವ್ವ ಸಕಲಗುಣ ಸಂಪನ್ನಳೆಂದು, ನಿರ್ಗುಣ ಚೆಲುವನು ಕಾದು ನಿಂತ. ಅವನು

ಮೆಚ್ಚಿದ ಚೆಲುವೆಯೆಂದು ಕಪಿಲಸಿದ್ಧ ಮಲ್ಲಿಕಾರ್ಜುನನೊಲಿದು ನೆರೆದರೆ ಕಾಮಿಯಾದನು ನೋಡಾ ಎನಗೆ ಎಂದು ಆ ಚೆಲುವೆ ಹೇಳಿದ್ದಾಳೆ.

ಗಂಡಿನ ಚೆಲುವು ನೋಡಿ, ಹೆಣ್ಣು ತನ್ನತ್ತ ಒಲಿಸಿಕೊಂಡು ಕೂಡುವ, ಕಾಮದ ಪ್ರಸಂಗವಾಗಿ ಕಂಡರೂ, ಅದು ಕಾಮಕೇಳಿಯಲ್ಲ. ನಿಷ್ಕಾಮ ಪ್ರೇಮವು ಈ ವಚನದಲ್ಲಿ ಭರಿತವಾಗಿದೆ.

ಗಂಡು ಎನ್ನುವ ಕಾಯವೇ ಜ್ಞಾನ ಕಾಯ. ಈ ಕಾಯ ಕಾಣುವುದಿಲ್ಲ. ಹೆಣ್ಣು ಎನ್ನುವ ಕಾಯವೇ ಮನೋಕಾಯ ಮರೆವಿನ ಕಾಯ. ಈ ಕಾಯ ಕೂಡಾ ಕಾಣುವುದಿಲ್ಲ. ಇವೆರಡೂ ಅಕಾಯಗಳೇ ಆಗಿವೆ. ಇವೆರಡೂ ಕಾಯಗಳು ಸ್ಥೂಲಕಾಯವನ್ನು ಆಶ್ರಯ ಮಾಡಿಕೊಂಡು ಸ್ಥೂಲಕಾಯದಲ್ಲಿ ವಾಸಮಾಡಿವೆ.

ಹೆಣ್ಣು ಎನ್ನುವ ಸೂಕ್ಷ್ಮಕಾಯ, ತನ್ನ ವಯ್ಯಾರವನಪುಗಳಿಂದ, ಗಂಡು ಎನ್ನುವ ಜ್ಞಾನ ಕಾಯವನ್ನು ಬರಮಾಡಿಕೊಂಡು, ಕಾಮ ಕೇಳಿಯಾಡಿದಾಗ, ಈ ಕೂಟದ ಸುಖದಿಂದ ಸ್ಥೂಲಕಾಯದಲ್ಲಿ ನಿಷ್ಕಾಮ ಪ್ರೇಮದ ಸುಧೆ ಚಿಮ್ಮತ್ತದೆ. ಬುದ್ಧಕಾಯ ಎಂದು ಕರೆಯಿಸಿಕೊಳ್ಳುತ್ತದೆ.

**767**

**ಪೂಜಿಸುವ ಪೂಜಕನ ಏಡಿಸಿತ್ತೆ ಮಾಯೆ**
**ಆಶ್ಯೆದು ರುದ್ರಪದವರಸುವವರ.**
**ಏಡಿಸಿಯೆ ಕಾಡಿತ್ತು ಮಾಯೆಗಜಕಂಜುವೆನು**
**ಕಾಯಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗವನ್ನು ಆವರಿಸಿದ ಮನ, ಆಶ್ರಯ ನೀಡಿದ ಅಂಗದೊಂದಿಗೆ ಸಂಗಮಾಡಿ, ಅಂಗವನ್ನು ಮಾಯೆಯಾಗಿ ಕಾಡುತ್ತದೆ. ಅಂಗವನ್ನು ಹಿಡಿದು, ಅಂಗದ ಮೇಲೆ ಲಿಂಗವನ್ನು ಧರಿಸುತ್ತದೆ. ಧರಿಸಿದ ಲಿಂಗವನ್ನು ಪೂಜಿಸಲು ಹಚ್ಚುತ್ತದೆ. ತ್ರಿಕಾಲ ಪೂಜೆ ಮಾಡುವ ಪೂಜಕನನ್ನು ಏಡಿಸಿ ಕಾಡುತ್ತದೆ.

ಅಂಗದೊಂದಿಗೆ ಸಂಗ ಮಾಡಿದ ಮಾಯೆ, ಅಂಗಕ್ಕೆ ರುದ್ರಪದವಿಯ ಆಸೆಯನ್ನು ಹಚ್ಚುತ್ತದೆ. ಬ್ರಹ್ಮಪದವಿಯ ಆಸೆಯನ್ನು ಹಚ್ಚುತ್ತದೆ. ವಿಷ್ಣುಪದವಿಯ ಆಸೆಯನ್ನು ಹಚ್ಚಿ, ಪೂಜಿಸುವ ಪೂಜಕರಿಗೆ ಆಲಯವನ್ನು ನಿರ್ಮಿಸುತ್ತದೆ.

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು, ಅಂಗವನ್ನು ಆವರಿಸಿದ ಮನ ಮರೆತು ಹೋಗುತ್ತದೆ. ''ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ, ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ, ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ, ಈ ಮಾಯೆಯ ಕಳೆವಡೆ ಎನ್ನಳವಲ್ಲ. ನೀವೇ ಬಲ್ಲಿರಿ ಕೂಡಲ ಸಂಗಮದೇವಾ''.

ತನು ಒಂದೇ. ತನುವನ್ನು ಆವರಿಸಿದ ಮನ ಒಂದೇ. ತನುವಿನಲ್ಲಿ ಸಂಗಮವಾದ ಅರಿವು ಕೂಡಾ ಒಂದೇ. ಆದರೆ ಮನವೆಂಬ ಮಾಯೆಯಿಂದಾಗಿ ತನು ಹೆಣ್ಣಾಗಿದೆ; ಗಂಡಾಗಿದೆ. ಜನಿತಕ್ಕೆ ತಾಯಿ ಎಂದು ಕರೆಯಿಸಿಕೊಂಡಿದೆ. ಮೋಹಕ್ಕೆ ಮಗಳು ಎಂದು ಕರೆಯಿಸಿಕೊಂಡಿದೆ. ಕೂಟಕ್ಕಾಗಿ ಸ್ತ್ರೀ ಎಂದು ಕರೆಯಿಸಿಕೊಂಡಿದೆ.

ಮನವೆಂಬ ಮಾಯೆ, ತನಗೆ ಬೇಕಾದಂತೆ ಸಂಬಂಧ ಕಲ್ಪಿಸಿಕೊಳ್ಳುತ್ತದೆ. ತನಗೆ ಬೇಕಾದಾಗ ತಾನೆ ಕಟ್ಟಿಕೊಂಡ ಸಂಬಂಧವನ್ನು ತಾನೇ ಮುರಿಯುತ್ತದೆ.

''ಕೂಡಲಸಂಗಮದೇವ ನೀ ಮಾಡಿದ ಮಾಯೆ, ಹಲಬರ ಬಾಯ ಟೊಣೆದೇ

ಹೋಯಿತ್ತು'' ಮಾಯೆಯೆಂಬ ಮದಗಜಕೆ ಅಂಜುವೆನು. ನೀ ಮಾಡಿದ ಮಾಯೆಯನ್ನು ಕಳೆಯುವುದು ಎನಗೆ ಸಾಧ್ಯವಿಲ್ಲ ತಂದೆ. ಕಾಯಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**768**

**ಪೂಜೆಯ ಉಪಕರಣ ನೋಡಿ ಎನ್ನ ಮನಕ್ಕೆ**
**ಬಹಳ ಬಾಧೆಯಾಯಿತ್ತು.**
**ಗುರುವಿನ ಪರಮಗುರು ಸಂಗನ ಬಸವಯ್ಯ ಪೂಜಿಸ ಬಂದಡೆ,**
**ಕಪಿಲಸಿದ್ಧ ಮಲ್ಲಿಕಾರ್ಜುನನ ಬಾಲಕ ಅಂಗವಿರಹಿತನಾದನು**
**ಶ್ರೀಗುರುಮೂರ್ತಿಯೆ.**

ಅಂಗದಲ್ಲಿಯೇ ಸಂಗಮವಾದ ದೇವರನ್ನು ಮರೆತು, ಅಂಗವನ್ನು ಆವರಿಸಿದ ಮನ, ತನಗೆ ಬೇಕಾದ, ತಾನೇ ಮಾಡಿದ ದೇವರನ್ನು ಆರಾಧಿಸುತ್ತದೆ; ಪೂಜಿಸುತ್ತದೆ. ಆ ಪೂಜಾಸಾಮಾಗ್ರಿಗಳು ಉಪಕರಣಗಳನ್ನು ನೋಡಿದರೆ ಇನ್ನೇನು ದೇವರು ಒಲಿದೇ ತೀರುತ್ತಾನೆ ಎನ್ನುವಂತೆ ಇರುತ್ತವೆ.

ರುದ್ರಾಕ್ಷಿ ಭದ್ರಾಕ್ಷಿ ಕರಡಿಗೆ ವಿಭೂತಿ ಕುಂಕುಮ ಗಂಧ ದೀಪ, ಧೂಪ, ಕಲ್ಲು ಸಕ್ಕರೆ ತೆಂಗಿನಕಾಯಿ ವೀಳೆ ಬಿಲ್ವ ನಾನಾ ರೀತಿಯ ಪುಷ್ಪ ಷಡ್ರಸಾನ್ನದ ನೈವೇದ್ಯ ಕರ್ಪುರ ದರ್ಬೆ ಪಂಚಾಮೃತ ನಾನಾರೀತಿಯ ಫಲಗಳು ಇವು ಪೂಜೆಗೆ ಬೇಕಾದ ಸಾಮಾನುಗಳು.

ಈ ಪೂಜೆಯಿಂದ ಮನ ಭ್ರಮೆಯಿಂದಾಗಿ ಅರಳುತ್ತದೆ. ಇನ್ನೇನು ದೇವರು ನನಗೆ ಸಾಕ್ಷಾತ್ಕಾರವಾಗುತ್ತಾನೆ ಎನ್ನುವ ಭ್ರಮೆಯ ಮೂಲಕ ತನುವಿನ ಆಯುಷ್ಯವೇ ಮುಗಿದು ಹೋಗುತ್ತದೆ. ಕೊನೆಗೆ ತ್ರಿಕಾಲ ಪೂಜಾನಿಷ್ಠ ಎಂದು ಕರೆಯಿಸಿಕೊಳ್ಳುತ್ತದೆ.

ಗುರುವಿನ ಪರಮಗುರು ಸಂಗನಬಸವಯ್ಯ ಪೂಜಿಸಬಂದಡೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಬಾಲಕ ಅಂಗವಿರಹಿತನಾದನು ಶ್ರೀಗುರುಮೂರ್ತಿಯೆ:

ಮನ ತನುವಿನೊಂದಿಗೆ ಪೂಜಿಸುವ ಪೂಜೆ ಗೋಚರದ ಪೂಜೆ. ಗೋಚರದ ಆಚಾರದ ಪೂಜೆ. ಈ ಪೂಜೆ ಲೋಕಕ್ಕೆ ಕಾಣುತ್ತದೆ. ಪರಮಗುರುದೇವನ ಪೂಜೆ ಕಾಣುವುದಿಲ್ಲ. ಆತನದು ಅಗೋಚರದ ಆಚಾರದ ಪೂಜೆ. ಈ ಪೂಜೆ ಲೋಕಕ್ಕೆ ಕಾಣುವುದಿಲ್ಲ. ಪೂಜಿಸುವ ತನಗೆ ಮಾತ್ರ ಕಾಣುತ್ತದೆ.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಭಕ್ತಿಯಿಂದ ಪೂಜಿಸಿ ಭಕ್ತನೇ ತಾನಾಗುವ ಪೂಜೆ. ಪೂಜಿಸುವ ಭಕ್ತನೂ ಕಾಣುವುದಿಲ್ಲ; ಪೂಜೆಗೆ ಒಳಗಾದ ಲಿಂಗವೂ ಕಾಣುವುದಿಲ್ಲ. ಇವರಿಬ್ಬರ ಪೂಜೆಯಲ್ಲಿ ಅಂಗ ಕಳೆದು ಹೋಗುತ್ತದೆ. ಅಂಗದಲ್ಲಿ ಸಂಗಮವಾದ ಲಿಂಗ, ಅಂಗವನ್ನು ಆವರಿಸಿದ ಮನವೆಂಬ ಭಕ್ತ ಇವರಿಬ್ಬರೂ ಅಂಗವಿರಹಿತರಾಗುತ್ತಾರೆ. ಶ್ರೀಗುರುಮೂರ್ತಿಯೇ ತಾವಾಗುತ್ತಾರೆ.

**769**

**ಪೂರ್ವದ ಜೀರ್ಣಲಿಂಗ ಮೈ ತೊರೆದಲ್ಲಿ ದುಃಖವಿಲ್ಲಿಷ್ಟು ದೇವಾ.**
**ಪೂರ್ವದಮೃತ ಕಲಹದಲ್ಲಿಲ್ಲಿಷ್ಟು ದುಃಖ ದೇವಾ.**
**ದುಃಖದಿಂದಖಿಲಾಂಗ ವಹ್ನಿಕಣಗಳಾದವು ದೇವಾ,**
**ಇಂತಪ್ಪಗ್ನಿಕಣಕ್ಕೆ ನಿಮ್ಮ ವಿಲೋಕನವೆ ವೃಷ್ಟಿಧಾರೆ,**

**ಕಪಿಲಸಿದ್ಧಮಲ್ಲಿಕಾರ್ಜುನ ದೇವಾ.**

ಊಟ ಮಾಡಿದ ಅನ್ನ ದೇಹಕ್ಕೆ ಹೇಗೆ ಪ್ರಸಾದವಾಗುತ್ತದೆ. ಜೀರ್ಣವಾಗಿ ರಕ್ತ, ಮೂಳೆ, ಮಾಂಸ, ಮಜ್ಜೆ, ಮೇದಸ್ಸು ಆಗಿ, ಚರ್ಮಕ್ಕೆ ಕಾಂತಿ ಬರುತ್ತದೆ. ಹಾಗೆಯೇ ಪೂರ್ವದಲ್ಲಿ ನೋಡಿದ ದೃಶ್ಯವನ್ನು, ಕೇಳಿದ ಶಬ್ದವನ್ನು ಜೀರ್ಣಿಸಿಕೊಳ್ಳುವ ಜೀರ್ಣಲಿಂಗ ಒಂದಿದೆ. ಮುಟ್ಟಿದರೆ ಜೀರ್ಣವಾಗುವ, ಮೂಸಿಸಿದರೆ ಜೀರ್ಣವಾಗುವ ಜೀರ್ಣಲಿಂಗ ಪೂರ್ವದಲ್ಲಿ ಸಹಜವಾಗಿತ್ತು. ಈಗ ಮತ್ತೆ ಆ ಜೀರ್ಣಲಿಂಗ ಮೈತೊರೆದಲ್ಲಿ ದೇಹಕ್ಕೆ ಅಷ್ಟೊಂದು ದುಃಖವಾಗುವುದಿಲ್ಲ. ಪೂರ್ವಕಾಲದಲ್ಲಿ ತನು ಸಹಜವಾಗಿತ್ತು. ಅದಕ್ಕೆ ದುಃಖವಿರಲಿಲ್ಲ ಎಂಬುದನ್ನು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ತನುವನ್ನು ಆವರಿಸಿದ ಅಜ್ಞಾನವನ್ನು, ತನುವಿನಲ್ಲೆ ತನ್ಮಯವಾದ ಜ್ಞಾನಸುಧೆಯನ್ನು ಬೇರ್ಪಡಿಸಲು ಪೂರ್ವಕಾಲದಲ್ಲಿ ಪ್ರಯತ್ನಿಸಲಾಯಿತು. ತನುವೆಂಬ ಅಮೃತ ಕಲಶದಲ್ಲಿ, ಅಮೃತ ಮತ್ತು ಅಜ್ಞಾನವೆಂಬ ವಿಷ ಕಡೆದು ಬೇರ್ಪಡಿಸುವಾಗ, ಇಷ್ಟೊಂದು ದುಃಖವಿರಲಿಲ್ಲ ದೇವ. ಅಜ್ಞಾನದ ದುಃಖದಿಂದಾಗಿಯೇ ತನುವಿನಲ್ಲಿ ಅಗ್ನಿ ಕಣಗಳಾಗಿ, ಇಡೀ ದೇಹವನ್ನೆ ಸುಡುತ್ತದೆ. ಇಂತಹ ಅಗ್ನಿ ಕಣಗಳಿಗೆ ನಿಮ್ಮ ಜ್ಞಾನದ ವೃಷ್ಠಿಧಾರೆಯೇ ಔಷಧಿಯೆಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಪೂರ್ವಕಾಲದಲ್ಲಿ ತನು ಸಹಜವಾಗಿತ್ತು. ಅದಕ್ಕೆ ದುಃಖವಿರಲಿಲ್ಲ, ಸುಖವೆಂಬುದು ಇರಲಿಲ್ಲ, ಮರದಂತೆ ತನು ಸಹಜ ಸುಖದಲ್ಲಿತ್ತು. ನಂತರ ಅಜ್ಞಾನ ಸಂಗ್ರಹವಾಗುತ್ತಾ, ಅದನ್ನು ಬೇರ್ಪಡಿಸಿ, ಜ್ಞಾನವನ್ನು ಅಮೃತದಂತೆ ಬಳಕೆ ಮಾಡಿಕೊಳ್ಳುವ ಹೊಸ ಶಿಕ್ಷಣವನ್ನು, ತನುವನ್ನು ಆವರಿಸಿದ ಮನ ತನುವಿನ ಮೂಲಕ ಆವರಿಸಿಕೊಂಡಿತು. ಈಗ ಮತ್ತೆ ತನುವಿಗೆ ಆಪತ್ಕಾಲ ಬಂದೊದಗಿದೆ.

ತನುವನ್ನು ಜಾತಿ, ಮತ, ಪಂಥ, ಶಿಕ್ಷಣ, ಧರ್ಮ, ಹೆಣ್ಣು, ಗಂಡು ಎನ್ನುವ ಅಜ್ಞಾನದ ಅಗ್ನಿ ಕಣಗಳು ದೇಹವನ್ನು ದಹಿಸುತ್ತಲಿವೆ. ಅಜ್ಞಾನದ ಅಗ್ನಿ ಕಣಗಳು ದಹಿಸದ ದೇಹ ಕೂಡಾ ದೇಹದಲ್ಲಿಯೇ ಇದೆ. ದೇಹವನ್ನು ಆವರಿಸಿದ ಮನ ದೇಹದೊಂದಿಗೆ ಅಜ್ಞಾನ ಭರಿತವಾದ ಜ್ಞಾನಾಮೃತವುಳ್ಳ ದೇಹದಲ್ಲಿ ಲೀನವಾಗಬೇಕಿದೆ. ಜ್ಞಾನದ ಬಲದಿಂದ ಅಜ್ಞಾನಕ್ಕೆ ಕೇಡುಂಟಾಗಿ, ಅಜ್ಞಾನ ಕಾಯ ತಂತಾನೇ ಇಲ್ಲವಾಗುತ್ತದೆ. ಇಂತಹ ಅದ್ಭುತವಾದ ಚಮತ್ಕಾರಿ ರಹಸ್ಯಮಯವಾದ ಶಿಕ್ಷಣ ಕಲಿಯಲು ಸಿದ್ಧರಾಮ ಶಿವಯೋಗಿಗಳು ಸಕಲ ಓದುಗರಿಗೂ ಉಪಯೋಗವಾಗುತ್ತದೆಂದು ತಮ್ಮ ವಚನದ ಮೂಲಕ ದಾಖಲಿಸಿದ್ದಾರೆ.

**770**

**ಪೂರ್ವಸಿಂಹಾಸನದಲ್ಲಿ,**
**ಮಹಾಪರ್ವತದ ಮಸ್ತಕದಲ್ಲಿ,**
**ಆ ಪರ್ವತಕ್ಕೆ ಕಾವಲು ಒಂಬತ್ತಾಗಿ,**
**ಆ ಒಂಬತ್ತ ಕೂಡಿದ ದ್ವಾರ ಕೆಳಗಾಗಿ,**
**ಅದರಿಂದ ನಡೆಯುತ್ತಿದ್ದ ಸಕಲ ವ್ಯವಹಾರಂಗಳು,**
**ಆ ಪೂರ್ವದ್ವಾರದಲ್ಲಿ ಮಹಾಜ್ವಲ,**
**ಮಹಾಜ್ವಲದಲ್ಲಿ ಗಂಭೀರ ಕಮಲ,**
**ಗಂಭೀರ ಕಮಲದಲ್ಲಿ ಭವಿಸಿದಗ್ನಿ,**

**ಪೂರ್ವದ್ವಾರವ ತಾಗೆ ಅಲ್ಲಿದ್ದ ವಾಯುರಾಜನು**
**ದುರ್ಗ ಒಂಬತ್ತಕ್ಕೆ ಒಂದೇ ದ್ವಾರದಲ್ಲಿ ದಾಳಿಯನಿಟ್ಟು**
**ನಾಯಕ ದುರ್ಗದಲ್ಲಿದ್ದ ಸುಗುಣ**
**ಸುಜ್ಞಾನವೆಂಬ ಸರೋವರ ಹೊಕ್ಕ.**
**ಮೂರು ಮೆಟ್ಟಿನ ಭಾವಿಯನ್ನಿಳಿದು,**
**ಆ ಜಲವ ಕದಡಲಾಗಿ**
**ಬಪ್ಪ ಬಾಹತ್ತರ ನಿಯೋಗದ ಧಾಳಾಧಾಳಿಯಂ ಕಂಡು,**
**ಅಯ್ಯ, ಜಲವ ಹೋಗೆ ಇವರು ಕದಡಿದ ಜಲದೊಳಗೆ**
**ಹೋದವರೆಲ್ಲಾ ಮುಕ್ತರಾ,**
**ನೀನೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಹಿಡಿಗೊಳಗಾದ.**

ತನುವೆಂಬುದು ಜ್ಞಾನ ಸಿಂಹಾಸನ; ಜ್ಞಾನದ ಮಹಾಪರ್ವತ. ಅದು ಜ್ಞಾನ ಮಸ್ತಕ. ಈ ಜ್ಞಾನ ಪರ್ವತಕ್ಕೆ ಕಾಲಗಳು ಒಂಬತ್ತು. ತನು, ಮಹಾಜ್ಞಾನಿ ಮುಖಿ ಎಂದು ಕರೆಸಿಕೊಂಡಿತು. ಅದರ ಒಂಬತ್ತು ದ್ವಾರಗಳು ಮಾತ್ರ ಅಧೋಮುಖವಾಗಿವೆ. ಕೆಳಮುಖವಾಗಿವೆ. ಅಜ್ಞಾನವೆಂದರೆ ಅವುಗಳಿಗೆ ಬಹು ಸುಖ. ಸಕಲ ಅಜ್ಞಾನದ ವ್ಯವಹಾರಗಳು ಅಲ್ಲಿಯೇ ನಡೆಯುತ್ತವೆ. ಜ್ಞಾನ ಗಂಭೀರ ಕಮಲದಲ್ಲಿ ಹುಟ್ಟಿದ ಅಗ್ನಿ, ಪೂರ್ವದ್ವಾರಕ್ಕೆ ತಾಗಿ, ಅಲ್ಲಿದ್ದ ವಾಯುರಾಜನು ಒಂಬತ್ತು ದ್ವಾರಗಳಿಗೆ ದಾಳಿಯನ್ನಿಟ್ಟು, ಅದರ ನಾಯಕ ತನುವೆಂಬ ದುರ್ಗದಲ್ಲಿದ್ದ ಸುಗುಣ, ಸುಜ್ಞಾನವೆಂಬ ಸರೋವರವನ್ನು ಹೊಕ್ಕು, ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಮೆಟ್ಟಿನ ಭಾವಿಯನ್ನಿಳಿದು ಆ ಜಲವ ಕದಡಲಾಗಿ ಎಪ್ಪತ್ತೆರಡು ನಿಯೋಗಗಳಿಗೆ ಆ ದಾಳಿ ಹಬ್ಬಿತು.

ಅಯ್ಯಾ, ಆ ಅಜ್ಞಾನದ ಜಲವು ಹೋಗಿ, ಕದಡಿದ ಜಲದೊಳಗೆ ಕೂಡಿ, ಈ ಜಲದಲ್ಲಿ ಮಿಂದವರೆಲ್ಲ ಮುಕ್ತರಾ? ಕಪಿಲಸಿದ್ಧ ಮಲ್ಲಿಕಾರ್ಜುನ ದೇವನೇ, ಅಜ್ಞಾನದ ಜಲದೊಳಗಿದ್ದು, ಜಲವ ತಾಗದೆ ಜಲಕ್ಕೆ ಆಧಾರವಾಗಿ ಜಲದ ಪರ್ವತವನ್ನು ಬೆಳಗಿಂಗೆ ಬೆಳಗಾಗಿ ಬೆಳಗಿಸುವ ಕಾಯಕದಲ್ಲಿ ನಿರತವಾಗಿರುವೆ.

**771**

**ಪೃಥುವಿಯ ಪ್ರಮಾಣಗಳನಿರ್ದಾಟಿಸಿ**
**ಪ್ರಮಾಣ ಕಟ್ಟಿದ ನೆಲೆಮನೆ ಅಯ್ಯಾ ನಿನ್ನದು.**
**ಬಳಸುತ್ತಿಪ್ಪ ಹಲವು ವ್ಯವಹಾರವ**
**ಕೊಂಡ ಭಂಡಂಗಳೆಲ್ಲಾ ತೀರಿ ನಿನ್ನ ಮೆಲುವಾಯ್ದರೆ,**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯ**
**ಭಕ್ತಿ ಜ್ಞಾನ ವೈರಾಗ್ಯನಾದ.**

ತನುವೆಂದರೆ ಸಾಮಾನ್ಯವಲ್ಲ, ಇಡೀ ಬ್ರಹ್ಮಾಂಡದ ಸೃಷ್ಟಿಗೆ ಕಾರಣವಾದುದು. ಜಲ ಬಿಂದುವಿನಿಂದ ಆದ ಪೃಥ್ವಿಯನ್ನು ಇಡೀ ಬ್ರಹ್ಮಾಂಡವನ್ನು ಪ್ರಮಾಣಿಸಿ, ನೀರು ದಾಟಿಸಿದ ಶಕ್ತಿ ತನುವಿನಲ್ಲಿ ತನ್ಮಯವಾಗಿದೆ. ಇಡೀ ಬ್ರಹ್ಮಾಂಡವೆಲ್ಲ ನೀರಿನಿಂದಲೇ ನಿರ್ಮಾಣವಾಗಿದೆ.

ಇಡೀ ಬ್ರಹ್ಮಾಂಡವನ್ನು ಪ್ರಮಾಣಿಸುವ ಶಕ್ತಿ ನೀರಿನಿಂದಲೇ ಆದ ನೀರ ತನುವಿಗೆ ಮಾತ್ರ

ಇದೆ. ಬಳಸುತ್ತಿರುವ ಅಜ್ಞಾನದ ವ್ಯವಹಾರದಿಂದಾಗಿ ತಾನು ಬ್ರಹ್ಮಾಂಡದಲ್ಲಿ ಒಂದಾಗಿ ಸುಖ ದುಃಖಗಳನ್ನು ಅನುಭವಿಸುತ್ತಿದೆ. ಅದರ ಅಜ್ಞಾನದ ಪ್ರಮಾಣ ತೀರಿದ ಬಳಿಕ ತನುವಿನಲ್ಲಿಯೇ ತನ್ಮಯವಾದ ಭಕ್ತಿ, ಜ್ಞಾನನಿಧಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆ ತಾನಾಗುತ್ತದೆ.

ಪೃಥ್ವಿಯ ಪ್ರಮಾಣವನ್ನು ಅಳೆದು, ನೀರ್ದಾಟಿಸುವ ಶಕ್ತಿ ತನುವಿನಲ್ಲಿಯೇ ತನ್ಮಯವಾದ ವೈರಾಗ್ಯ ನಿಧಿ ಜ್ಞಾನಿಗೆ ಮಾತ್ರ ಇದೆ. ನೀರ ಮೇಲೆ ಕಟ್ಟಿದ ನೀರ ನೆಲೆಮನೆಯಯ್ಯ ನಿಮ್ಮದು. ಬಳಸುತಿಪ್ಪ ಹಲವು ವ್ಯವಹಾರಗಳಿಂದಾಗಿ ತಿಳಿಯುತ್ತಿಲ್ಲ ಅಷ್ಟೇ. ಕೊಂಡಬಂಡಗಳೆಲ್ಲ ತೀರಿ ನಿನ್ನ ಮೆಲುವಾಯ್ದರೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನೀನೇ.

772

**ಪೊರ ಕಣ್ಣನೆ ಮುಚ್ಚಿ, ಒಳ ಕಣ್ಣನೆ ತೆರೆದು**
**ಬಂದಾನೆಂಬ ರಭಸಕ್ಕೆ ಕಿವಿಯಾತು ಕೇಳುತ್ತಿದ್ದೆನು.**
**ಅದೆತ್ತಣಿಂದ ಸುಳಿದನೆಂದರಿಯೆನಯ್ಯಾ.**
**ಸರ್ವ ಪ್ರತಿಬಿಂಬ ಹೊಳೆದರೆ**
**ಕಣ್ಣ ತುಂಬಿ ತುಂಬಿ ಹಿಡಿದೆ.**
**ಆ ಪ್ರತಿಬಿಂಬವಿಡಿದೆ**
**ಕಪಿಲಸಿದ್ಧ ಮಲ್ಲಿಕಾರ್ಜುನನ ಮಾಡುವೆನು.**

ಹೊರಕಣ್ಣನ್ನು ಮುಚ್ಚಿ, ಒಳ ಕಣ್ಣನ್ನು ತೆರೆಯುವುದು ಬಲು ಜಟಿಲವಾದ ಕೆಲಸ. ಹೊರಗಿನ ವಸ್ತುಗಳು ಹೊರಕಣ್ಣಿಗೆ ಶ್ರೇಷ್ಠವಾಗಿ ಕಾಣುತ್ತವೆ. ಹೊರಕಣ್ಣಿಗೆ ಒಳಗೆ ಏನು ಕಾಣುವುದಿಲ್ಲ. ಹೊರ ಕಣ್ಣು ಇರುವವರೆಗೆ ಒಳಕಣ್ಣು ತೆರೆಯುವುದಿಲ್ಲ. ಒಳಕಣ್ಣು ಹೊರಕಣ್ಣಿಗೆ ಜ್ಞಾನದ ಪಾಠ ಮಾಡುತ್ತಿದ್ದರೂ, ಹೊರ ಕಣ್ಣಿನ ಅನುಭವಕ್ಕೆ ಬರುವುದಿಲ್ಲ.

ಹೀಗಾಗಿ ಹೊರಗಿನ ವಸ್ತುಗಳು ಹೊರಕಣ್ಣಿಗೆ ಶ್ರೇಷ್ಠವಾದರೆ ಒಳಕಣ್ಣಿಗೆ ತೃಣವಾಗಿ ಕಾಣುತ್ತವೆ. ಹೊರಕಣ್ಣಿಗೆ ಚಿನ್ನ ಶ್ರೇಷ್ಠವಾಗಿ ಕಂಡರೆ, ಒಳಕಣ್ಣಿಗೆ ಚಿನ್ನ ಲೋಹವಾಗಿ ಕಾಣುತ್ತದೆ. ಹೊರಕಣ್ಣು ಹಾದರದಲ್ಲಿ ನಿರತರವಾದರೆ, ಒಳಕಣ್ಣು ಹೊರಕಣ್ಣಿನ ಹಾದರವನ್ನು ಖಂಡಿಸುತ್ತದೆ. ಹೊರಕಣ್ಣು ಮುಚ್ಚುವದೆಂದರೆ ಅದು ಒಳಕಣ್ಣಿನ ಸಂಗ ಮಾಡಬೇಕು. ಒಳಕಣ್ಣಿನ ಜ್ಞಾನದ ಬೆಳಕಿಂದಾಗಿ ಹೊರಕಣ್ಣಿನ ಅಜ್ಞಾನ ಕರಗಿ ಒಳಕಣ್ಣಿನ ಬೆಳಕಿನಲ್ಲಿ ಲೀನವಾಗಿ ಬೆಳಕೆ ಆಗುತ್ತದೆ. ಆ ಬೆಳಕಿನ ರಭಸಕ್ಕೆ ಇಡೀ ತನುವೆ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ. ಸರ್ವ ಪ್ರತಿಬಿಂಬಗಳೆಲ್ಲ ಥಳಥಳನೆ ಹೊಳೆಯುತ್ತವೆ. ಕಣ್ಣು ತುಂಬಿ, ತುಂಬಿದ ಆ ಬೆಳಕೆ ಪ್ರತಿಬಿಂಬವನ್ನು ಬೆಳಗಿ, ಕಪಿಲಸಿದ್ಧ ಮಲ್ಲಿಕಾರ್ಜುನನನ್ನಾಗಿ ಮಾಡುತ್ತದೆ.

773

**ಪ್ರಣವಾಕ್ಷರದಿಂ ಮೇಲೆ ಒಪ್ಪಿಪ್ಪ ಬೀಜಾಕ್ಷರದ ಪರಿಯಿನ್ನೆಂತೊ?**
**ವೈನೈಯೆಂಬ ಶುದ್ಧ ಧವಳತೆಯ ಮೀರಿಪ್ಪ**
**ಅಕ್ಷರವೆರಡು, ಒಂದೆಸಳಿನ ಕಮಳ,**

**ನಿತ್ಯನೆಂಬ ಅಧಿದೇವತೆ**
**ಶುದ್ಧ ಸ್ಫಟಿಕ ಸಂಕಾಶವರ್ಣ**
**ನಿತ್ಯನಿರಂಜನೈಕ್ಯಪದವು,**
**ಕಪಿಲಸಿದ್ಧ ಮಲ್ಲಿನಾಥಯ್ಯನ ಕೂಟ**
**ಜಗದಾಟ ಭವದಾಟ ಜನ್ಮನಾಶ.**

ತನುವೆಂದರೆ ಸಾಮಾನ್ಯವಲ್ಲ. ಅದು ಓಂಕಾರ! ಅದನ್ನು ಪ್ರಣವಾಕ್ಷರವೆಂದು ಕರೆದಿದ್ದಾರೆ. ತಿಳಿಯದ್ದಕ್ಕಾಗಿ ಓಂಕಾರವೆಂಬ ತನು ಹೆಣ್ಣು-ಗಂಡು ಎನ್ನುವ ಭೇದವನ್ನು ಹೊತ್ತುಕೊಂಡಿದೆ. ಧರ್ಮ, ಜಾತಿ, ಮತ, ಪಂಥಗಳ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಅಶುದ್ಧವಾಗಿದೆ. 'ಓಂ' ಎಂದರೆ ಎರಡಕ್ಷರಗಳ ಒಂದೆಸಳಿನ ಕಮಲ. ಅದರ ಅಧಿದೇವತೆ ನಿತ್ಯನೆಂಬ ಶುದ್ಧ ಸ್ಫಟಿಕ. 'ಅ'ಕಾರ, 'ಉ'ಕಾರ, 'ಮ'ಕಾರ ಎಂಬ ಮೂರಕ್ಷರಗಳ ಸಂಗಮ. ಹೀಗಾಗಿ ತನು ಒಂದೇ ಎಂದು ಗೊತ್ತಿದ್ದರೂ ಅದು ಹೆಣ್ಣು-ಗಂಡು ಎಂದು ಎರಡಾಗಿದೆ. ತನು ಜ್ಞಾನ ಕಮಲವೆಂದು ಗೊತ್ತಿದ್ದರು ಅದು ಸಾತ್ವಿಕ, ರಾಜಸ, ತಾಮಸ ಎಂದು ಮೂರಾಗಿದೆ. ತನು ಒಂದೇ ಎಂದು ಗೊತ್ತಿದ್ದರೂ ಸ್ಥೂಲತನು, ಸೂಕ್ಷ್ಮತನು, ಕಾರಣ(ಜ್ಞಾನ)ತನು ಎಂದು ಮೂರಾಗಿದೆ. ತ್ರಿಕೂಟ ಸಂಗಮವೆಂದು ತನು ತನುವಿನಿಂದಲೇ ಕರೆಯಿಸಿಕೊಂಡಿದೆ.

ತನು ನಿತ್ಯ ನಿರಂಜನವು, ಐಕ್ಯ ಪದವು. ಅದು ಕಪಿಲಸಿದ್ಧ ಮಲ್ಲಿನಾಥಯ್ಯನ ಕೂಟಸ್ಥಲವು ಆಗಿದೆ. ಆದರೂ, ತನುವಿಗೆ ರಂಜನೆಯೆಂದರೆ ಬಲು ಇಷ್ಟ. ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿಯೇ ತನ್ಮಯವಾದ ನಿರಂಜನನೆಂದರೆ ಅದಕ್ಕೆ ಬಲು ಕಷ್ಟ.

ರಂಜನೆಯುಳ್ಳ ಮನ ತನುವಿನೊಂದಿಗೆ ಸಂಗಮವಾದುದಕ್ಕಾಗಿ ತನು-ಮನಗಳೆರಡು ರಂಜನೆಯ ಕೂಟದಲ್ಲಿ ನಿರತವಾಗಿವೆ. ನಿರಂಜನನು ತನುವಿನಲ್ಲಿ ತನ್ಮಯವಾಗಿದ್ದರೂ, ತನುವಿಗೆ ಅಂಟಿಕೊಳ್ಳದೆ ಬೆಳಗುತ್ತಿದ್ದಾನೆ. ತನುವಿನೊಂದಿಗೆ ಸಂಗ ಮಾಡದೆ ತನುವಿಗೆ ಆಧಾರವಾಗಿದ್ದಾನೆ. ಇದು ಜಗದಾಟ, ಭವದಾಟ ಇದರಿಂದ ಜನ್ಮನಾಶ.

ತನುವನ್ನು ಆವರಿಸಿದ ರಂಜನೆಯುಳ್ಳ ಮನ ತನುವಿನಲ್ಲೆ ತನ್ಮಯವಾದ ನಿರಂಜನನೊಂದಿಗೆ ಕೂಡಿದಾಗ ಆ ಕೂಟದಿಂದಾಗಿ ಮನದ ರಂಜನೆ ನಿರ್ನಾಮವಾಗಿ ನಿರಂಜನನೆ ತಾನಾಗುತ್ತದೆ. ಮನಕ್ಕೆ ನಿತ್ಯ ನಿರಂಜನನ ಐಕ್ಯ ಪದವು ಸಿದ್ಧಿಸುತ್ತದೆ. ಕೂಡದ ಅಗಲದ ಕೂಟದ ಸುಖದಿಂದಾಗಿ ಕಪಿಲಸಿದ್ಧ ಮಲ್ಲಿನಾಥಯ್ಯನೆ ತಾನಾಗುತ್ತದೆ.

**774**

**ಪ್ರಥಮಸ್ಥಾನದಲ್ಲಿ ಒಡಗೂಡಿದಳು,**
**ಪಂಚಬ್ರಹ್ಮನ ಅಪರಸ್ಥಾನದಲ್ಲಿ ಒಡಗೂಡಿದಳು,**
**ಸಹಸ್ರದಳದ ಕಂಜಕನ್ನಿಕೆಯ ಮಧ್ಯಮಸ್ಥಾನದಲ್ಲಿ**
**ಶಕ್ತಿ ಪಂಚಕವನತಿಗೆಳೆದಳು.**
**ಅವರ ಹಣೆಯಲ್ಲಿ ಲಿ[ಖಿತ]ವ ಬರೆದು,**
**ಅಜಲೋಕದಲ್ಲಿ ಆನಂದ ಪ್ರಕಾಶವನೊಡಗೂಡಿದ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಆನಂದ ಸ್ಥಾನದಾದಿಶಕ್ತಿ.**

ಕಾಯವನ್ನು ಆವರಿಸಿದ ಮನ, ಕಾಯದಲ್ಲಿಯೇ ಸಂಗಮವಾದ ಬ್ರಹ್ಮನೊಡನೆ ಕೂಡಿ, ಬ್ರಹ್ಮನ ಮಡದಿಯಾದಳು. ಪ್ರಥಮ ಸ್ಥಾನದಲ್ಲಿ ಒಡಗೂಡಿ ಸರಸ್ವತಿಯೆ ಪಂಚಬ್ರಹ್ಮನ ಅಪರ ಸ್ಥಾನವಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮದಲ್ಲಿ ಕೂಟಸ್ಥಳಾಗಿ ಪಂಚಬ್ರಹ್ಮನನ್ನು ಒಡಗೂಡಿದಳು. ಸಹಸ್ರದಳದ ಕಂಜಕನ್ನಿಕೆಯ ಮಧ್ಯಮ ಸ್ಥಾನದಲ್ಲಿ ಶಕ್ತಿ ಪಂಚಕವನ್ನು ಅತಿಗಳೆದು ಹಣೆಯಲ್ಲಿ ಲಿಖಿತವ ಬರೆದಳು.

ಬ್ರಹ್ಮಲೋಕದಲ್ಲಿ ಆನಂದ ಪ್ರಕಾಶವನ್ನು ಒಡಗೂಡಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಪರಮಾನಂದ ಸ್ಥಾನಕ್ಕೆ ಆದಿಶಕ್ತಿಯಾದಳು. ಕಾಯ ಒಂದೇ ಕಾಯವನ್ನು ಆವರಿಸಿಕೊಂಡ ಮನವೆನಿಸಿಕೊಂಡು ಶಿವೆಯಾದಳು. ಆ ಶಿವೆ ಕಾಯದಲ್ಲಿಯೇ ಸಂಗಮವಾದ ಶಿವನೊಂದಿಗೆ ಕೂಡಿ ಅರ್ಧನಾರೀಶ್ವರಿ ಎಂದು ಕರೆಯಿಸಿಕೊಂಡಳು.

775

**ಪ್ರಪಂಚದಿಂದ ಪಾರಮಾರ್ಥವ ಕಂಡೆನೆಂಬುದು ದುರ್ಲಭ**
**ಶಿಷ್ಯನಾಗಿ ಗುರುವ ಕಾಣಬೇಕು;**
**ಭಕ್ತನಾಗಿ ಜಂಗಮವ ಕಾಣಬೇಕು.**
**ಇದು ಕಾರಣ, ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ**
**ಗುರುವ ಕಂಡುದು ಸುಕೃತ;**
**ಪ್ರಭುವಿನ ಪೂರ್ಣಕೃಪೆ ಕೇಳಾ, ಕೇದಾರಯ್ಯಾ.**

ಪ್ರಪಂಚದಿಂದ ಪಾರಮಾರ್ಥವ ಕಂಡೆನೆಂಬುದು ದುರ್ಲಭ ಅದು ಸಾಧ್ಯವಲ್ಲದ ಮಾತು. ಪ್ರಪಂಚ ಪಾರಮಾರ್ಥವೆಂಬುದು ಲೋಕದ ಮಾತು. ಈ ಮಾತಿಗೂ ಜ್ಞಾನ ಶಿಕ್ಷಣಕ್ಕೂ ಅಜಗಜಾಂತರ ವ್ಯತ್ಯಾಸ.

ಶಿಷ್ಯನಾಗಿ ಗುರುದೇವನನ್ನು ಕಾಣಬಹುದು. ಭಕ್ತನಾಗಿ ಜಂಗಮವ ಕಾಣಬೇಕು. ಕಾಯವುಳ್ಳವನು ಶಿಷ್ಯನು ಅಲ್ಲ. ಕಾಯ ಉಳ್ಳವನು ಗುರುದೇವನು ಅಲ್ಲ. ಕಾಯದಲ್ಲಿಸಂಗಮವಾದ ಅರಿವೇ ಗುರು. ಕಾಯವನ್ನು ಆವರಿಸಿದ ಮನವೇ ಶಿಷ್ಯ. ಕಾಯವನ್ನು ಆವರಿಸಿದ ಮನ ಶಿಷ್ಯನಾಗಿ ಪರಿವರ್ತನೆಗೊಂಡು ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನನ್ನು ಕಾಣಬೇಕು. ಗುರುದೇವನಿಗೆ ಕಾಯವಿಲ್ಲ. ಶಿಷ್ಯನಿಗೂ ಕಾಯವಿಲ್ಲ. ಕಾಯವನ್ನು ಮನೆಯನ್ನಾಗಿಸಿಕೊಂಡು, ಆ ಮನೆಯಲ್ಲಿಯೇ ಶಿಷ್ಯ ಗುರುದೇವನನ್ನು ಕಾಣಬೇಕು.

ಭಕ್ತನಾಗಿ ಜಂಗಮ ಕಾಣಬೇಕು : ಗುರುದೇವ ಶಿಷ್ಯನ ಅಜ್ಞಾನವನ್ನು ತನ್ನ ಜ್ಞಾನದ ಮೂಲಕ ತಿಳಿಹೇಳುತ್ತಾನೆ. ಜಂಗಮ ಅಜ್ಞಾನವನ್ನು ಕತ್ತರಿಸಿ ಹಾಕುತ್ತಾನೆ. ಶಿಷ್ಯನಾದವನು ಗುರುದೇವನ ಸಹಾಯದಿಂದ ಜಂಗಮನ ಮೂಲಕ ತನ್ನ ಅಜ್ಞಾನವನ್ನು ಕಳೆದುಕೊಳ್ಳಬೇಕು. ಗುರುದೇವನಿಗೆ ಶಿಷ್ಯನಾದವನು ಜಂಗಮಗೆ ಭಕ್ತನಾಗಬೇಕು.

ಗುರುದೇವನಿಗೂ ಕಾಯವಿಲ್ಲ, ಜಂಗಮನಿಗೂ ಕಾಯವಿಲ್ಲ, ಶಿಷ್ಯನಿಗೂ ಕಾಯವಿಲ್ಲ. ಗುರುದೇವನನ್ನು ಕಂಡುದು ಶಿಷ್ಯನ ಸುಕೃತ; ಪ್ರಭುದೇವನ ಪೂರ್ಣ ಕೃಪೆ ಕೇಳಾ ಎಂದು ಸಿದ್ಧರಾಮ ಶಿವಯೋಗಿಗಳು ಕೇದಾರಯ್ಯನಿಗೆ ಹೇಳಿದ್ದಾರೆ.

776

**ಪ್ರಭುವಿನ ದಯದಿಂದ ಬಂದೆನಿಲ್ಲಿಗೆ**

**ಇಷ್ಟಲಿಂಗದ ಮರ್ಮವನರಿದೆ.**
**ಗುರು ಬಸವನ ದಯೆ, ಚೆನ್ನಬಸವನ ಕೃಪೆ.**
**ಇದಕ್ಕೆ ಮಿಗಿಲಾಗಿ ಕಂಡು ಧನ್ಯನಾದೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಿದ್ಧರಾಮ ಶಿವಯೋಗಿಗಳು ಅಲ್ಲಮ ಪ್ರಭುದೇವರನ್ನು, ಬಸವಣ್ಣನನ್ನು, ಚೆನ್ನಬಸವಣ್ಣನನ್ನು ಹೃದಯಪೂರ್ವಕವಾಗಿ ಸ್ಮರಿಸಿದ್ದಾರೆ. ಪ್ರಭುವಿನ ದಯದಿಂದಾಗಿ ಸೊನ್ನಲಾಪುರದಿಂದ ಅವರು ನನ್ನನ್ನು ಬಸವಣ್ಣನಿದ್ದ ಕಲ್ಯಾಣಕ್ಕೆ ಕರೆದುಕೊಂಡು ಬಂದರು. ಅವರ ದಯದಿಂದಾಗಿ ನಾನು ಇಷ್ಟಲಿಂಗದ ಮರ್ಮವನ್ನು ಅರಿತೆ. ಗುರುದೇವನೆ ಆದಂತ ಬಸವಣ್ಣನ ದಯದಿಂದಾಗಿ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಕಂಡುಕೊಂಡೆ. ಚೆನ್ನಬಸವಣ್ಣನ ಕೃಪೆಯಿಂದಾಗಿ ಅಂಗದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನನ್ನು ಕಂಡು ಧನ್ಯನಾದೆ, ಎಂದು ಸಿದ್ಧರಾಮ ಶಿವಯೋಗಿಗಳು ಮೂವರು ಮಹಾಂತರನ್ನು ಸ್ಮರಿಸಿದ್ದಾರೆ.

777

**ಪ್ರಸಾದತತ್ವದಲಿ ಪ್ರಾದೇಶಿಕನು ನೀನೆ.**
**ಸಾದಾಖ್ಯತತ್ವಗಳ ಸಮನಿಸದಿಹ**
**ನಾದಬಿಂದುಕಳೆಯ ಆದಿಮಧ್ಯಾವಸಾನ**
**ಮೂದೇವರಿಗೆ ತಾನು ಶಕ್ತವಲ್ಲಾ.**
**ಅವ್ವೆಯ ಕರದಲ್ಲಿ ಅವ್ಯಯ ತಾನಿಪ್ಪ**
**ಒಯ್ಯನೆ ನಡೆಯಯ್ಯ ಮಠದೊಳಯಿಂಕೆ.**
**ಮಠದೊಳಗಣ ಭೇದ ಕುಟಿಲಕ್ಕೆ ಇಂಬಿಲ್ಲ,**
**ಮಠವ ಶುದ್ಧಿಯ ಮಾಡಲೆ ಮರಳು ತಾಯೆ.**
**ಅಡಿಗಡಿಗೆ ಸಂಗಮದ ನುಡಿಯ ನೀನಾಡಿ**
**ಒಡಗೂಡವ್ವಾ ಕಪಿಲಸಿದ್ಧ ಮಲ್ಲಿಕಾರ್ಜುನನಾ.**

ಅವ್ವೆಯ ಕಾಯದಲ್ಲಿ ಅವ್ಯಯನಿದ್ದಾನೆ. ವಯ್ಯನೆ ನಡೆಯಯ್ಯ ಮಠದೊಳಗೆ, ಮಠದೊಳಗಣ ಭೇದ ಕುಟಿಲಕ್ಕೆ ಇಂಬಿಲ್ಲ ಮಠವ ಶುದ್ಧಿಯ ಮಾಡೆಲೆ ಮರುಳು ತಾಯೆ ಅಡಿಗಡಿಗೆ ಸಂಗಮದ ನುಡಿಯು ನೀನಾಡುವೆ ಒಡನೆ ಒಡಗೂಡವ್ವ ಕಪಿಲಸಿದ್ಧ ಮಲ್ಲಿಕಾರ್ಜುನನ.

ಕಾಯವೆಂಬುದು ಮಠ, ಅದು ಅರಿವಿನ ಮಠ, ಅಲ್ಲಿ ಕುಟಿಲತನಕ್ಕೆ ಇಂಬಿಲ್ಲ. ಮಠ ಪರಿಶುದ್ಧಿಯಾಗಿಯೇ ಇದೆ. ಮನ ತನಗೆ ಬೇಕಾದ ವಸ್ತುಗಳನ್ನು ಮಠದೊಳಗಿಟ್ಟು ಅದಕ್ಕೆ ಮರುಳಾಗಿದೆ. ಅಶುದ್ಧವಾದ ಮಠವನ್ನು ಮನವೇ ಅದರ ತಾಯಿಯಾಗಿ ಶುದ್ಧಿಯನ್ನು ಮಾಡಬೇಕಿದೆ. ಅಲ್ಲಿ ಪ್ರಸಾದ ತತ್ವದ ಪ್ರಾದೇಶಿಕನು ಇದ್ದಾನೆ. ಸಾದಾಖ್ಯ ತತ್ವಗಳ ಸಮನಿಸದಿಹ ನಾದ, ಬಿಂದು, ಕಳೆಯ ಆದಿ ಮಧ್ಯ ಅವಸಾನ ಹೊಂದಿದ ಮೂದೇವರಾದ ಬ್ರಹ್ಮ, ವಿಷ್ಣು, ರುದ್ರ ಇವರಿಗೆ ಆತ ಶಕ್ತನಲ್ಲ. ಅದನ್ನು ಮೀರಿದಾತ ಪ್ರಸಾದ ಕಾಯದ ಪ್ರಾದೇಶಿಕನು ಆತ. ಕಾಯವೆಂಬ ಮಠದೊಳಗೆ ಇದ್ದು ಅದರ ಭೇದಕ್ಕೆ ಕುಟಿಲತನಕ್ಕೆ ಇಂಬು ಕೊಡದ ಪ್ರಾದೇಶಿಕನು ಆತ. ಎಲೆ

ಮರುಳು ತಾಯೆ. ಮಠವ ಶುದ್ಧಿ ಮಾಡು. ಅಡಿಗಡಿಗೆ ಆತನೊಂದಿಗೆ ಸಂಗಮವಾಗುವ ನುಡಿಯನ್ನು ನೀನಾಡಿ ಒಡಗೂಡವ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು.

**778**

**ಪ್ರಸಾದಿಯಾದಾತ ಪ್ರಳಯಕ್ಕೊಳಗಾಗ,**
**ಇಂದ್ರಿಯಗಳ ಹರಿಯಲೀಯ,**
**ಬಂದುದನತಿಗಳೆಯ-ಅದು ಲಿಂಗಮುಖದಿಂ ಬಂದುದಾಗಿ,**
**ಆತನ ಅಂಗ ಸರ್ವಾಂಗ ಲಿಂಗಾಂಗ;**
**ಆತನ ನಡೆ-ನುಡಿ ಚೈತನ್ಯ ಸಾಕ್ಷಾತ್ ಅಯ್ಯನ ಸದ್ಭಾವ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿದ**
**ನಿತ್ಯಪ್ರಸಾದಿಯ ಪರಿಯಿಂತುಂಟು.**

ಕಾಯ ಮತ್ತೆ ಮತ್ತೆ ಅಜ್ಞಾನಕ್ಕೆ ಒಳಗಾಗುವುದೇ ಪ್ರಳಯ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇವುಗಳಲ್ಲಿ ಜ್ಞಾನಭರಿತವಾಗಿದ್ದರೂ , ಜ್ಞಾನವನ್ನು ಬಳಸುವುದಕ್ಕೆ ಇಂದ್ರಿಯಗಳನ್ನು ಆವರಿಸಿದ ಮನಕ್ಕೆ ಬರುವುದಿಲ್ಲ. ಹೀಗಾಗಿ ಮನ ಕಣ್ಣಿಂದ ನೋಡುವ ಮೂಲಕ ಕಾಯವನ್ನು ಉದ್ರೇಕಕ್ಕೆ ಒಳಗು ಮಾಡುತ್ತದೆ. ಕಾಯದ ಮೂಲಕ ಮನ ಸುಖಿಸಿ ಕಾಯವನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುತ್ತದೆ.

ಮನದ ದೃಶಕ್ಕೆ ಮನಸೋತ ದೇವೇಂದ್ರ, ಉದ್ರೇಕಕ್ಕೆ ಒಳಗಾಗಿ ಋಷಿ ಪತ್ನಿಯೊಂದಿಗೆ ಸುಖಿಸಿದ. ಋಷಿಯ ಕೋಪಕ್ಕೆ ತುತ್ತಾಗಿ ಶಾಪಗ್ರಸ್ಥನಾದ. ನಿರಪರಾಧಿ ಋಷಿಪತ್ನಿ ಕೂಡಾ ಶಾಪಗ್ರಸ್ಥಳಾದಳು. ದೇವೇಂದ್ರನಿಗೆ ಋಷಿಪತ್ನಿಯ ರೂಪ ಪ್ರಸಾದವಾಗಲಿಲ್ಲ. ಅದು ಕಾಮದ ಉದ್ರೇಕಕ್ಕೆ ಕಾರಣವಾಯಿತು. ಚರ್ಮದಲ್ಲಿಯ ಅಜ್ಞಾನ, ಕಣ್ಣಿನಲ್ಲಿಯ ಅಜ್ಞಾನ ಮಾತ್ರ ಮನಕ್ಕೆ ಬಳಕೆಯಾಯಿತು. ಕಣ್ಣಲ್ಲಿರುವ ಜ್ಞಾನ, ಚರ್ಮದಲ್ಲಿರುವ ಜ್ಞಾನ ಮನಕ್ಕೆ ಬಳಕೆಯಾಗಲಿಲ್ಲ. ಹೀಗಾಗಿ ಕಾಯದ ಅಜ್ಞಾನದಿಂದಲೇ ಕಾಯ ಪ್ರಳಯಕ್ಕೆ ಒಳಗಾಯಿತು.

ರೂಪ ಹಲವಾದಡೇನು? ರೂಪವನ್ನು ಹೊತ್ತ ನಿರೂಪ ಒಂದೇ. ರಂಭೆ, ಊರ್ವಶಿಯಾದರೇನು? ಋಷಿಪತ್ನಿಯಾದರೇನು? ಚರ್ಮ ಒಂದೇ. ಚರ್ಮ ಹೆಣ್ಣಾಗಿ ಕಂಡಾಗ ಚರ್ಮದಲ್ಲಿಯೇ ಉದ್ರೇಕ ಹುಟ್ಟಿ, ಚರ್ಮವೇ ಗಂಡಾಗುತ್ತದೆ. ಚರ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ ಎನ್ನುವ ವಿವೇಕ ಚರ್ಮದಲ್ಲಿಯೇ ಉಳಿಯುತ್ತದೆ. ಚರ್ಮ ಚರ್ಮದೊಂದಿಗೆ ಕೂಡುವ ಬಯಕೆ ಚರ್ಮದಲ್ಲಿ ಹುಟ್ಟುತ್ತದೆ. ತನುವಿನ ದ್ರವ್ಯ ತನುವಿನ ಮೂಲಕ ಹರಿದು ಸುಖವಾಯಿತೆಂದು ಚರ್ಮ ಭಾವಿಸುತ್ತದೆ. ಚರ್ಮದಲ್ಲಿಯೇ ಇದ್ದ ಜ್ಞಾನದ ಚರ್ಮ ಅಜ್ಞಾನದ ಚರ್ಮವನ್ನು ಅಣುಕಿಸುತ್ತದೆ. ಊರ್ವಶಿ ರಂಭೆಯ ಚರ್ಮ, ಋಷಿಪತ್ನಿಯ ಚರ್ಮ, ದೇವೇಂದ್ರನ ಚರ್ಮ ಬೇರೆ ಬೇರೆಯಾಗಿತ್ತೆ ? ನೋಡುವ ಕಣ್ಣಿಗೆ ರೂಪ ಪ್ರಸಾದವಾದರೆ, ಮುಟ್ಟುವ ಚರ್ಮಕ್ಕೂ ಸ್ಪರ್ಶ ಪ್ರಸಾದವಾಗುತ್ತದೆ.

ದೇಹ ದೇಹದೊಂದಿಗೆ ಕೂಡುವುದು ಮತ್ತೊಂದು ದೇಹದ ಜನ್ಮಕ್ಕಾಗಿ. ಮತ್ತೊಂದು ದೇಹವನ್ನು ಪಡೆಯಬೇಕು ಎನ್ನುವ ಬಯಕೆ ದೇಹಕ್ಕೆ ಇಲ್ಲದಿದ್ದರೆ ದೇಹ ಕೂಟಕ್ಕೆ ಸಿದ್ಧವಾಗುವುದಿಲ್ಲ. ಆದರೆ ಮನ ದೇಹದೊಂದಿಗೆ ಸಂಗಮಾಡಿರುವುದರಿಂದ ಕಾಮವನ್ನು ಸುಖ ಎಂದು ತಿಳಿದುಕೊಂಡಿದೆ.

ಕಾಮಸುಖಕ್ಕಾಗಿ ಕಾಯವನ್ನು ಮನ ಮತ್ತೆ ಮತ್ತೆ ಉದ್ರೇಕಗೊಳಿಸುತ್ತದೆ. ಕಾಮ ಮನಕ್ಕೆ ಪ್ರಸಾದವಾಗುವುದಿಲ್ಲ.

ಕಾಯದಲ್ಲಿಯೇ ಸಂಗಮವಾದ ಜ್ಞಾನ ಕಾಯದಲ್ಲಿ ಕಾಯವನ್ನು ಆವರಿಸಿದ ಮನೋಕಾಯ ಸಂಗಮವಾದಾಗ ಅದು ಪ್ರಸಾದಕಾಯವಾಗುತ್ತದೆ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮವೆಂಬ ಇಂದ್ರಿಯಗಳಲ್ಲಿ ಪರಿಪೂರ್ಣವಾದ ಜ್ಞಾನವೇ ಹರಿದಾಡುತ್ತದೆ.

ನೋಡಿದ ದೃಶ್ಯ ಪ್ರಸಾದವಾಗುತ್ತದೆ. ಕೇಳಿದ ಶಬ್ದ ಮೂಸಿಸಿದ ಸುಗಂಧ ದುರ್ಗಂಧ, ಮುಟ್ಟಿದ ಸ್ಪರ್ಶ, ರುಚಿಸಿದ ರುಚಿ ಅಲ್ಲಲ್ಲಿಯೇ ಪ್ರಸಾದವಾಗುತ್ತದೆ.

ಪ್ರಸಾದಿ ಎಂದರೆ ಶರಣ. ಸಕಲ ಅಜ್ಞಾನವನ್ನು ಪ್ರಸಾದ ಮಾಡಿಕೊಳ್ಳುವ ಆತನ ಅಂಗ ಲಿಂಗಾಂಗ. ಆತನ ನಡೆ ನುಡಿ ಚೈತನ್ಯ. ಕಪಿಲಸಿದ್ಧ ಮಲ್ಲಯ್ಯನನ್ನು ಕೂಡಿದ ಆತ ನಿತ್ಯ ಪ್ರಸಾದಿ.

**779**

**ಪ್ರಾಣ ಅಪಾನ ವ್ಯಾನ ಉದಾನ ಸಮಾನ ನಾಗ ಕೂರ್ಮ**
**ಕ್ರಕರ ದೇವದತ್ತ ಧನಂಜಯ-ಇಂತೀ ದಶವಾಯುಗಳು.**
**ಅಲ್ಲಿ ಪ್ರಾಣವಾಯು ಇಂದ್ರನೀಲವರ್ಣ ಕಂಡದ ಅಧೋ ಭಾಗೆಯಲ್ಲಿರ್ದು**
**ಹೃದಯ ಪಾದ ನಾಭಿ ನಾಶಿಕವಧರಂಗಳಲ್ಲಿ ಉಚ್ಛ್ವಾಸ**
**ನಿಶ್ವಾಸಂಗಳಿಂದ ಚರಿಸುತ್ತಿಹುದು.**
**ಅಪಾನವಾಯು ಇಂದ್ರಗೋಪವರ್ಣ, ವಾಯು ಶಿಶ್ನ ಉರ**
**ಜಾನು ಪಾದ ಜಂಘೆ ನಾಭಿಮೂಲ ಜಠರದಲ್ಲಿರ್ದು**
**ಮಲ ಮೂತ್ರಂಗಳ ಪೊರಮಡಿಸುತ್ತಿಹುದು.**
**ವ್ಯಾನವಾಯು ಗೋಕ್ಷೀರವರ್ಣ, ಕರ್ಣ ಅಕ್ಷಿ ಘ್ರಾಣ**
**ಗಂಡಾಗ್ರ ಗುಲ್ಫಂಗಳಲ್ಲಿ ವರ್ತಿಸುತ್ತ ಹಿಡಿವುದು ಬಿಡುವುದು**
**ಇವು ಮೊದಲಾದ ವ್ಯಾಪಾರಂಗಳ ಮಾಡುತ್ತಿಹುದು.**
**ಉದಾನವಾಯು ಎಳೆಮಿಂಚಿನವರ್ಣ, ಹಸ್ತಪಾದಾದಿ ಸರ್ವಸಂದುಗಳಿಲ್ಲಿರ್ದು**
**ಸಂದು ಸಂದುಗಳಿಗೆ ಪಟುತ್ವಮಂ ಪುಟಿಸುತ್ತಿಹುದು.**
**ಸಮಾನವಾಯು ಶುದ್ಧ ಸ್ಫಟಿಕವರ್ಣ, ದೇಹ ಮಧ್ಯದಲ್ಲಿರ್ದು**
**ಸರ್ವ ಸಂದುಗಳಲ್ಲಿ ವ್ಯಾಪಿಸಿಕೊಂಡು, ಕೊಂಡಂತಹ ಅನ್ನರಸವ**
**ಸರ್ವಾಂಗಕ್ಕೆ ಸಮಾನವಂ ಮಾಡಿ ಅಷ್ಟಕೋಟಿ ರೋಮನಾಳಂಗಳಿಗೂ**
**ಹಂಚಿಕ್ಕಿ ಅಂಗವಂ ಪೋಷಿಸುತ್ತಿಹುದು.**
**ನಾಗವಾಯು ಬಾಲಸೂರ್ಯನ ವರ್ಣ, ಕಂಠಸ್ಥಾನದಲ್ಲಿರ್ದು**
**ವರ್ಧಿ ನಿರೋಧಂಗಳಿಂದುದ್ಗಾರಮಂ ಮಾಡಿಸುತ್ತಿಹುದು.**
**ಕೂರ್ಮವಾಯು ಕುಂದೇಂದುವಿನ ವರ್ಣ, ನೇತ್ರಮೂಲದಲ್ಲಿರ್ದು**
**ಉನ್ಮೀಲನ ನಿಮೀಲನಾಡಿಗಳನು ಮಾಡುತ್ತಿಹುದು.**
**ಕೃಕರವಾಯು ನೀಲವರ್ಣ ಕಾಯದಲ್ಲಿರ್ದು ಕ್ಷುಧಾದಿ**
**ಧರ್ಮಂಗಳಂ ಮಾಡುತ್ತಿಹುದು.**
**ದೇವದತ್ತವಾಯು ಸ್ಫಟಿಕವರ್ಣ, ತಾಲಮೂಲದಲ್ಲಿರ್ದು**

**ಅಗುಳಿಕೆಯೊರಡಿಗಳಂ ಪುಟ್ಟಿಸುತ್ತಿಹುದು.**
**ಧನಂಜಯವಾಯು ಸಪ್ತ ಜಾಂಬೂನದ ವರ್ಣ,**
**ಶೋಕರಾಗಂಗಳ ಪುಟ್ಟಿಸಿ ಹಾಡಿಸುತ್ತಿಹುದು.**
**ಇಂತೀ ದಶವಾಯುಗಳ ದೇಹವನುದ್ಧರಿಸುತ್ತಿಹವು.**
**ಈ ವಾಯುವನೇರಿ ಜೀವನು**
**ಈಡಾಪಿಂಗಳ ಮಾರ್ಗದಲ್ಲಿ ವ್ಯವರಿಸುತ್ತಿಹನು.**
**ಈ ವಾಯುಗತಿಯನರಿದು ಯೋಗಿಸುವುದೇ ಯೋಗ.**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ**
**ನಿಜವನೈದುವುದೇ ಮಾರ್ಗವು.**

ಸಿದ್ಧರಾಮ ಶಿವಯೋಗಿಗಳು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕ್ರಕರ, ದೇವದತ್ತ, ಧನಂಜಯ ಈ ದಶವಾಯುಗಳು ಕಾಯದಲ್ಲಿ ಹೇಗೆ ಕಾರ್ಯನಿರ್ವಹಿಸುತ್ತವೆ ಎಂಬುದನ್ನು ದಾಖಲಿಸಿದ್ದಾರೆ. ಪ್ರಾಣವಾಯು ರೇಚಕ, ಪೂರಕ, ಕುಂಭಕದ ಕೆಲಸವನ್ನು ಮಾಡುತ್ತದೆ. ಹಾಗೆಯೇ ರಸಗಳನ್ನು ನೀರಸಗಳನ್ನಾಗಿ ಮಾಡಿ ಮಲಮೂತ್ರಗಳನ್ನು ನಡೆಸುವುದು ಅಪಾನವಾಯು. ಶಕ್ತಿ ಚೇಷ್ಟೆಯ ಮಾಡುವುದು ವ್ಯಾನವಾಯು. ಪಾದವನ್ನು ನೆಲಕ್ಕೆ ಊರಿ ಕಾಯವನ್ನು ನಡೆಸುವ ಮೂಲಕ ಉದಾನವಾಯು ಚಲನೆ ಶೀಲವಾಗಿದೆ. ಸಮಧಾತುಗಳನ್ನು ತಿಳಿದು ಅನ್ನಪಾನಾದಿಗಳನ್ನು ಹರಡುವುದು ಸಮಾನ ವಾಯುವಿನ ಕೆಲಸ. ರಸವ್ಯಾಪ್ತಿಯ ಮಾಡುವುದು ನಾಗವಾಯುವಿನ ಕೆಲಸ. ಗೊರಗೊರ ಶಬ್ಧವನ್ನು ಮಾಡುವುದು ಕೂರ್ಮವಾಯುವಿನ ಕೆಲಸ. ಆಕಳಿಕೆ, ಮೈಮುರಿಯುವಿಕೆಯನ್ನು ಮಾಡುವುದು ಕ್ರುಕರವಾಯುವಿನ ಕೆಲಸ. ಓಕರಿಕೆ ಉಂಟು ಮಾಡುವುದು ದೇವದತ್ತ ವಾಯುವಿನ ಕೆಲಸ. ಶೋಕರಾಗಾದಿಗಳನ್ನು ಹುಟ್ಟಿಸುವುದು ಧನಂಜಯ ವಾಯುವಿನ ಕೆಲಸ.

ಈ ದಶವಾಯುಗಳ ಸ್ಥಾನ:

ಗುಹ್ಯದಲ್ಲಿ ಅಪಾನವಾಯುವಿದೆ. ನಾಭಿಯಲ್ಲಿ ಸಮಾನ ವಾಯುವಿದೆ. ಹೃದಯದಲ್ಲಿ ಪ್ರಾಣವಾಯುವಿದೆ. ಕಂಠದಲ್ಲಿ ಉದಾನ ವಾಯುವಿದೆ. ಸಮಸ್ತ ಸಂದುಗಳಲ್ಲಿ ವ್ಯಾನವಾಯುವಿದೆ. ಇಡ ನಾಡಿಯಲ್ಲಿ ನಾಗವಾಯು ಮನೆ ಮಾಡಿಕೊಂಡಿದೆ. ಪಿಂಗಳ ನಾಡಿಯಲ್ಲಿ ಕೂರ್ಮವಾಯು ಇದೆ. ಸುಶುಮ್ನನ ನಾಡಿಯಲ್ಲಿ ಕ್ರುಕರ ವಾಯುವಿದ್ದರೆ, ಹಸ್ತದಲ್ಲಿ ದೇವದತ್ತ ವಾಯುವಿದೆ. ಜಿಹ್ವೆಯಲ್ಲಿ ಧನಂಜಯವಾಯು ಮನೆ ಮಾಡಿಕೊಂಡಿದೆ. ಹೀಗೆ ದಶವಾಯುಗಳು ದೇಹವನ್ನು ಉದ್ಧರಿಸುತ್ತಿವೆ. ಈ ದಶವಾಯುಗಳ ಮೇಲೆ ಜೀವನು ಎಂಬುವವನು ಸವಾರಿ ಮಾಡುತ್ತ ಈಡಪಿಂಗಳ ಮಾರ್ಗದಲ್ಲಿ ವ್ಯವಹರಿಸುತ್ತಿರುವನು. ವಾಯುಗತಿಯನ್ನು ಅರಿದು ಯೋಗಿಸುವುದೇ ಯೋಗ. ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ನಿಜವನು ಹೊಂದುವುದೇ ಮಾರ್ಗವು.

**780**

**ಪ್ರಾಣದ ತತ್ವದಲಿ ಪ್ರಾಪಂಚುವಿಲ್ಲದಿರು.**
**ಏಕ ಏಕಾರ್ಥವೆಂದು ನಿರ್ವಾಣದ**
**ಆಕಾರಧ್ಯಾನವು ಬೇಕು ಮನ ಕರದಲ್ಲಿ.**

**ಸಾಕಾರದಿಂದತ್ತ ಶೂನ್ಯಭೇದ**
**ಅನೇಕ ರೂಪನು ಕಪಿಲಸಿದ್ಧ ಮಲ್ಲಿಕಾರ್ಜುನನ**
**ಬೇಕಾದವೀ ಪರಿಯ ತಪ್ಪದಿಹುದು.**

ಪ್ರಾಣದ ತತ್ವದಲ್ಲಿ ಪ್ರಾಪಂಚುವಿಲ್ಲದಂತೆ ಇರಬೇಕು. ನಿರ್ವಾಣವೇ ಬೇರೆ, ಪ್ರಾಪಂಚವೇ ಬೇರೆ. ಮನ ಮತ್ತು ಕಾಯ ಒಂದಾಗಿರುವುದರಿಂದ ಅದು ಪ್ರಾಪಂಚುವನ್ನು ಆಯ್ಕೆ ಮಾಡಿಕೊಂಡಿದೆ. ಮನ ಕಾಯದೊಂದಿಗೆ ಧ್ಯಾನದಲ್ಲಿ ನಿರತವಾದರೆ ಅದು ಏಕಾರ್ಥದ ನಿರ್ವಾಣ. ಮನ ಮತ್ತು ಕರ ಸಂಗಮವಾದರೆ ಅದು ಸಾಕಾರ ಶೂನ್ಯ. ತತ್ವವೆನ್ನುವುದು ಸಾಕಾರದಿಂದತ್ತತ್ತ.

ನಿರಾಕಾರ ಶಿವನು ಸಾಕಾರದ ಅನೇಕ ರೂಪುಗಳನ್ನು ಹೊಂದಿದ್ದಾನೆ. ಅಂದರೆ ಭೂಮಂಡಲದ ಏಳುನೂರಾ ಮೂವತ್ತು ಕೋಟಿ ರೂಪುಗಳನ್ನು ಹೊಂದಿದವನು ನಿರಾಕಾರ ಮೂರ್ತಿ ಶಿವನೇ ಆಗಿದ್ದಾನೆ.

ಮನ ಕಾಯದೊಂದಿಗೆ ಸಂಗಮವಾಗಿ ಪ್ರಾಪಂಚಿಕವನ್ನು ನಡೆಸುತ್ತಿರುವುದರಿಂದ ಏಕಾರ್ಥ ಕಳೆದು ಹೋಗಿದೆ. ಪ್ರತಿ ಕಾಯದಲ್ಲಿ ಸಂಗಮವಾದ ನಿರಾಕಾರವಾದ ಅರಿವು ಏಕಾರ್ಥವಾದರೆ ಕಾಯವನ್ನು ಆವರಿಸಿದ ಮನ ಅನೇಕ ರೂಪುಗಳನ್ನು ಹೊಂದಿದೆ. ಸಕಲ ರೂಪುಗಳಲ್ಲಿಯೂ ನಿರೂಪು ಸಂಗಮವಾಗಿದೆ. ನಿರೂಪು ವಸ್ತುವಲ್ಲ. ಹಾಗೆಯೇ ಕಂಡುಬರುವ ಸಾಕಾರ ರೂಪದಲ್ಲಿರುವ ಕಾಯ ಕೂಡ ಸಾಕಾರವಲ್ಲ. ನಿರೂಪು ನಿರಾಕಾರ ರೂಪುಳ್ಳ ಸಾಕಾರವನ್ನು ಧಾರಣ ಮಾಡಿಕೊಂಡಿದೆ. ಹಾಗೆಯೇ ರೂಪುಳ್ಳ ಸಾಕಾರ ರೂಪದ ಕಾಯ ನಿರೂಪುಳ್ಳ ನಿರಾಕಾರವನ್ನು ಧಾರಣ ಮಾಡಿಕೊಂಡಿದೆ. ನಿರಾಕಾರ ಸಾಕಾರಕ್ಕೆ ಭೋದೆ ಮಾಡುವ ವಿಧಾನದಲ್ಲಿಯೂ ಕಾಯ ನಿರ್ವಾಣ ಹೊಂದುತ್ತದೆ. ಕಾಯವನ್ನು ಆವರಿಸಿದ ಮನವೆಂಬ ನಿರಾಕಾರ ಅರಿವೆಂಬ ನಿರಾಕಾರದಲ್ಲಿ ಸಂಗಮವಾದರೂ ಕಾಯ ನಿರ್ವಾಣ ಹೊಂದುತ್ತದೆ. ನಿರ್ವಾಣ ಹೊಂದಿದ ಕಾಯಕ್ಕೆ ಅನೇಕ ರೂಪುಗಳು ಏಕ ರೂಪವಾಗಿ ಕಾಣುತ್ತದೆ.

**781**

**ಪ್ರಾಣಲಿಂಗ ಸಂಬಂಧಿಯಾದ ಬಳಿಕ**
**ಪರಸ್ತ್ರೀ ಪರದ್ರವ್ಯವ ಮುಟ್ಟದಿರಬೇಕು.**
**ಅಂಗಲಿಂಗ ಸಂಬಂಧಿಯಾದ ಬಳಿಕ**
**ಸ್ತ್ರೀ ಸಂಗವ ತೊರೆಯಲೇಬೇಕು.**
**ಪ್ರಸಾದಲಿಂಗ ಸಂಬಂಧವಾದ ಬಳಿಕ**
**ಅಪ್ಯಾಯನವರಿಯಲೇಬೇಕು.**
**ಸರ್ವಾಂಗಲಿಂಗ ಸಮ್ಮತ ಸಂಬಂಧಿಯಾದ ಬಳಿಕ ಸರ್ವವೂ**
**ತಾವಾಗಿರಬೇಕು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**
**ಇಂತಪ್ಪವರು ಸುಲಭರೆ? ಎತ್ತಾನಕೊಬ್ಬರಲ್ಲದೆ.**

ಪರಸ್ತ್ರೀ ಎಂದರೆ ಪರಶಿವನ ರಾಣಿ. ಕಾಯವನ್ನೇ ಕೈಲಾಸ ಮಾಡಿಕೊಂಡು ಪರಶಿವ ಪರಶಿವೆಯರಿಬ್ಬರೂ ಕಾಯದಲ್ಲಿಯೇ ಇದ್ದಾರೆ. ಇವರಿಬ್ಬರೂ ಒಂದಾದಾಗ ಕಾಯ ಕೈಲಾಸ. ಕಾಯಕ್ಕೆ ದ್ರವ್ಯದ ಅವಶ್ಯಕತೆಯಿಲ್ಲ, ಪರಶಿವನ ರಾಣಿ ಶಿವನ ಸಂಗಮಾಡದ ಮುನ್ನ ಕಾಯದ ಸಂಗಮಾಡಿ ಪ್ರಾಣ ಸಂಬಂಧಿಯಾಗಿದ್ದಳು.

ಕಾಯದಲ್ಲಿ ಸಂಗಮವಾದ ಅರಿವಿನ ಶಿವನ ಪರಿಚಯವಾದ ಮೇಲೆ ಮನ ಶಿವನಿಗೆ ಶರಣು ಹೋಗಿ ಪರಶಿವನ ರಾಣಿಯಾದಳು. ಇಡೀ ಬ್ರಹ್ಮಾಂಡಕ್ಕೆ ಜನ್ಮಕೊಟ್ಟ ಒಡಲೊಡೆಯನ ಒಡತಿಯಾದ ಮೇಲೆ, ಒಡೆಯ ಒಡತಿಯರಿಗೆ ಒಡಲು ಅವರ ವಾಸಕ್ಕೆ ಮನೆಯಾಯಿತು. ಅವರ ಮನೆಯೆಂದರೆ ಸಾಮಾನ್ಯವೆ? ಅದು ಕೈಲಾಸ. ಅದಕ್ಕೆ ಪರಸ್ತ್ರೀಯ ಅವಶ್ಯಕತೆಯಿಲ್ಲ; ಪರದ್ರವ್ಯದ ಅವಶ್ಯಕತೆಯೂ ಇಲ್ಲ. ಸಿದ್ಧಾರ್ಥ ಬುದ್ಧನಾದಂತೆ. ಅರಮನೆ ರಾಣಿವಾಸವನ್ನು ಹಿಂತಿರುಗಿಯೂ ನೋಡಲಿಲ್ಲ. .

ಅಂಗ ಅರಿವಿನ ಲಿಂಗಯ್ಯನ ಸಂಬಂಧಿಯಾದ ಬಳಿಕ, ಅಂಗ ಅಂಗದೊಂದಿಗೆ ಸಂಬಂಧವಾದರೂ ಯಾಕೆ ಮಾಡುತ್ತದೆ. ಸ್ತ್ರೀ ಎನ್ನುವುದು ಒಂದು ಅಂಗವೇ ಆಗಿದೆ. ಪುರುಷನೆನ್ನುವುದು ಕೂಡಾ ಒಂದು ಅಂಗವೇ ಆಗಿದೆ.

ಮನವೆಂಬುದು ಹೆಣ್ಣು; ಅಂಗವೆಂಬುದು ಕೂಡಾ ಹೆಣ್ಣು. ಹೀಗಾಗಿ ಮನವೆಂಬ ಹೆಣ್ಣು ಅಂಗವೆಂಬ ಹೆಣ್ಣಿನೊಂದಿಗೆ ಸಂಗ ಮಾಡಿರುವುದರಿಂದ ಅಂಗದಲ್ಲಿಯೇ ಸಂಗಮಾಡಿದ ಪರಮಪುರುಷ ಇವರಿಬ್ಬರ ಹತ್ತಿರ ಸುಳಿಯಲಿಲ್ಲ. ಮನ ಪರಮ ಪುರುಷನ ಸಂಗ ಮಾಡಿದ ಮೇಲೆ ಅಂಗವೂ ಮನದೊಂದಿಗೆ ಪರಮ ಪುರಷನ ಪಾದಕ್ಕೆ ಶರಣು ಹೋಯಿತು. ಅಂಗ ಲಿಂಗಯ್ಯನೊಂದಿಗೆ ಸಮರಸ ಸುಖದಲ್ಲಿ ಬೆರತಾಗ, ತಾನು ಹೆಣ್ಣೆಂದು ತನಗೆ ಖಚಿತವಾಗಿ ಗೊತ್ತಾಯಿತು. ಅಂದಮೇಲೆ ಹೆಣ್ಣು ಹೆಣ್ಣಿನೊಂದಿಗೆ ಹೇಗೆ ಸಂಗಮಾಡೀತು? ತಂತಾನೆ ಸ್ತ್ರೀ ಸಂಗವ ತೊರೆಯಲೇಬೇಕು. ಏಕೆಂದರೆ ಸ್ತ್ರೀ ಪರಮ ಪುರುಷನ ಸಂಗದಲ್ಲಿ ಕೂಡದ ಅಗಲದ ಕೂಟದ ಪರಮಸುಖದಲ್ಲಿ ನಿರತಳಾಗಿದ್ದಾಳೆ.

ಪ್ರಸಾದಲಿಂಗ ಸಂಬಂಧವಾದ ಬಳಿಕ ಅಂಗವನ್ನು ಆವರಿಸಿದ ಸಕಲ ಇಂದ್ರಿಯಗಳು ಜ್ಞಾನದ ಕಿರಣೇಂದ್ರಿಯಗಳಾಗುತ್ತವೆ. ನೋಡಿದ ದೃಶ್ಯ, ಕೇಳಿದ ಶಬ್ದ, ಮುಟ್ಟಿದ ಸ್ಪರ್ಶ, ಮೂಸಿಸಿದ ಗಂಧ, ರುಚಿಸಿದ ಪದಾರ್ಥಗಳೆಲ್ಲ ಅರಿವಿನ ಲಿಂಗಯ್ಯ ಪ್ರಸಾದ ಮಾಡಿಕೊಳ್ಳುತ್ತಾನೆ. ಸಕಲವೂ ಲಿಂಗಯ್ಯನಿಗೆ ಆಪ್ಯಾಯನವಾಗುತ್ತದೆ.

ಸರ್ವಾಂಗವೂ ಲಿಂಗಾಂಗವೆಂದು ಕರೆಯಿಸಿಕೊಳ್ಳುತ್ತದೆ. ಅಂಗ ಅಂಗವನ್ನು ಆವರಿಸಿದ ಮನ ಲಿಂಗ ಸಂಬಂಧಿಯಾದ ಬಳಿಕ ಸಕಲ ಅಂಗಗಳು ಲಿಂಗಾಂಗವಾಗಿ ಕಾಣುತ್ತವೆ. ಇಡೀ ಬ್ರಹ್ಮಾಂಡವೇ ಲಿಂಗಮಯವಾಗಿ ಕಾಣುತ್ತದೆ.

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ಇಂತಪ್ಪವರು ಸುಲಭರೆ? ಇವರು ಸೂರ್ಯನನ್ನು ಬೆಳಗುವ ಸೂರ್ಯರು.

**782**

**ಪ್ರಾಣಲಿಂಗಿಯಾದಾತನು ಪ್ರಳಯಕ್ಕೊಳಗಾಗನು.**
**ಅನ್ಯಕ್ಕೆ ಕೈಯಾನನು ಎಲ್ಲವೂ ತನ್ನೊಳಗೆ ಇಪ್ಪವಾಗಿ.**
**ತನ್ನ ಮೀರಿದುದೊಂದು ಆಧಿಕ್ಯ ಬೇರಿಲ್ಲಾಗಿ.**
**ಕೈವಲ್ಯಲಿಂಗವು ಪ್ರಾಣವೆಂಬ ಸತಿಗೆ ಸಂಯೋಗ ಸಮನಿಸಿದ ಬಳಿಕ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ**
**ಕೂಡಿದ ಉರುತರ ಪ್ರಾಣಲಿಂಗ.**

ಪ್ರಾಣ ತಾನು ಸತಿಯಾಗಿ ಅರಿವಿನ ಲಿಂಗಯ್ಯನನ್ನು ಪತಿಯನ್ನಾಗಿಸಿಕೊಂಡಾಗ ಆ ಪ್ರಾಣವೇ ಪ್ರಾಣಲಿಂಗವೆಂದು ಕರೆಯಿಸಿಕೊಳ್ಳುತ್ತದೆ. ಪ್ರಾಣ ಪ್ರಳಯಕ್ಕೆ ಒಳಗಾಗದೆ ಅದು

ನಿರ್ಭಯನಾಗುತ್ತದೆ.

ಪ್ರಾಣಲಿಂಗಿಯೇ ತಾನಾದಾತ ಅನ್ಯಕ್ಕೆ ಕೈಚಾಚುವುದಿಲ್ಲ. ಏಕೆಂದರೆ ಸಕಲ ವಸ್ತುಗಳು ಕೂಡಾ ತನ್ನಿಂದಲೇ ಸೃಷ್ಟಿಯಾಗಿವೆ ಎಂದು ತನಗೆ ತಿಳಿಯುತ್ತದೆ. ತನಗಿಂತ ಅಧಿಕವಾದ, ತನ್ನನ್ನು ಮೀರಿದ ವಸ್ತು ಮತ್ತೊಂದಿಲ್ಲವೆಂದು ತನಗೆ ಗೊತ್ತಾಗುತ್ತದೆ.

ಕೈಯಲ್ಲಿಯೇ ಇದ್ದ ಲಿಂಗ ಕೈಗೆ ಸಿಗುವುದು ದುರ್ಲಭ. ಕೈ ಎಂದರೆ ಕರ, ಕಾಯ. ಕಾಯದಲ್ಲಿ ಕೈಲಾಸವೇ ಅಡಗಿದೆ. ಹಾಗೆಂದು ಕಾಯಕ್ಕೆ ಗೊತ್ತಿಲ್ಲ. ಕೈಲಾಸಕ್ಕೆ ಐದು ಮಹಾದ್ವಾರಗಳಿವೆ. ಆ ಜ್ಞಾನದ್ವಾರಗಳ ಮೂಲಕ ಕೈಲಾಸ ಪ್ರವೇಶ ಮಾಡಬಹುದಾಗಿದೆ. ಹೀಗೆಂದು ಕಾಯದಿಂದಲೇ ಕಾಯಕ್ಕೆ ತಿಳಿಯುತ್ತದೆ.

ಕಾಯದಲ್ಲಿದ್ದ ಕಾಲಿನ ಐದೈದು ಬೆರಳುಗಳು, ಕೈಯಲ್ಲಿದ್ದ ಐದೈದು ಬೆರಳುಗಳು, ಜ್ಞಾನದ ಮಹಾದ್ವಾರಗಳ ಇರುವಿಕೆಯನ್ನು ಸೂಚಿಸುತ್ತವೆ, ಮಹಾಜ್ಞಾನಿಯನ್ನು ಕಾಯ ತನ್ನಲ್ಲಿಯೇ ಬಚ್ಚಿಟ್ಟುಕೊಂಡು ತನಗೆ ಗೊತ್ತಿಲ್ಲದಂತೆ ಆತನಿಗೆ ಆಶ್ರಯ ನೀಡಿದೆ.

ಮಹಾಜ್ಞಾನಿಯ ಬೆಳಕಿನ ನೆರಳೆ ಕಾಯವನ್ನು ಆವರಿಸಿ ಕತ್ತಲೆ ಕಾಯವನ್ನಾಗಿ ಮಾಡಿದೆ. ಎಲ್ಲಿಯವರೆಗೆ ಕತ್ತಲು ಕಾಯದ ಗೆಳೆತನ ಬಿಟ್ಟು ಕಾಯದಲ್ಲಿಯೇ ಸಂಗಮವಾದ ಬೆಳಕಿನ ಸಂಗ ಮಾಡುವುದಿಲ್ಲವೊ ಅಲ್ಲಿಯವರೆಗೆ ಕಾಯಕ್ಕೆ ಪ್ರಳಯ ಕಟ್ಟಿಟ್ಟಬುತ್ತಿ .

ಕಾಯವನ್ನು ಆವರಿಸಿದ ಕತ್ತಲೆಯ ಮನ, ಕಾಯದಲ್ಲಿಯೇ ಇದ್ದ ಬೆಳಕಿನ ಸಂಗ ಮಾಡುವುದೊಂದೇ ತಡ, ಅದು ಕೂಡಲೇ ಬೆಳಗುತ್ತದೆ. ಒಳಹೊರಗೆನ್ನದೆ ಬೆಳಗುತ್ತದೆ. ಇವೆರಡರ ಸಂಯೋಗ ಗಮನಿಸಿದ ಬಳಿಕ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿದ ಉರುತರ ಪ್ರಾಣಲಿಂಗಿಯಾಗುತ್ತದೆ.

**783**

**ಪ್ರಾಪಂಚಿಕ ಸೀಮೆಯ ಮೀರಿದ ಭೇದವ,**
**ಆನಂದ ಸ್ಥಾನದ ಆಂದೋಳವ,**
**ಆರರ ಕರಣಂಗಳ ತೋರುವ ಅಜ್ಞಾನವ ಮೀರಿದೆ ಮಧ್ಯಮದಲ್ಲಿ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಪ್ರಾಪಂಚಿಕ ಪಾರಮಾರ್ಥ ಇವು ಕಾಯದ ಎರಡು ದಡಗಳು, ಒಂದು ದಡದಿಂದ ಮತ್ತೊಂದು ದಡಕ್ಕೆ ಹೋಗಬೇಕೆಂದು ಕಾಯದಲ್ಲಿ ಸದಾ ಬಯಕೆ ಇರುತ್ತದೆ. ಹೀಗಾಗಿ ಕಾಯ ಕಾಯದಲ್ಲಿಯೇ ಇದ್ದ ಪಾರಮಾರ್ಥವನ್ನು ಮರೆತು ಹೋಗಿದೆ. ಮರೆತು ಹೋದ ಪಾರಮಾರ್ಥವನ್ನು ಪ್ರಾಪಂಚಿಕದಂತೆ ಬಳಸುತ್ತದೆ.

ಪ್ರಾಪಂಚಿಕದಲ್ಲಿದ್ದ ಕಾಯ ಸದಾ ಪಾರಮಾರ್ಥದ ಮಾತನಾಡುತ್ತದೆ. ಪಾರಮಾರ್ಥದ ಸಾಹಿತ್ಯ ರಚಿಸಿ ಪ್ರಾಪಂಚಿಕರಿಂದ ಹೊಗಳಿಸಿಕೊಳ್ಳುತ್ತದೆ.

ಪಾರಮಾರ್ಥದಲ್ಲಿದ್ದರೆ ಪ್ರಾಪಂಚಿಕ ಬೇಡ. ಪ್ರಾಪಚಿಂಕದಲ್ಲಿದ್ದರೆ ಪಾರಮಾರ್ಥಬೇಡ. ಕಾಯದಲ್ಲಿ ಇವೆರಡರ ಜುಗಲಬಂದಿಯಿಂದಾಗಿ ಆಂದೋಲನ ಉಂಟಾಗಿದೆ. ಸದಾ ಪರಮ ಸುಖದಲ್ಲಿಯೇ ಇರಬೇಕಾದ ಕಾಯ, ಕಾಯದ ಕರಣಂಗಳ ಮೂಲಕ ಸದಾ ದುಃಖವನ್ನು ಅನುಭವಿಸುತ್ತಲಿದೆ. ಕಾಯದ ಸುಖವು ಕೂಡಾ ದುಃಖದ ಮೊದಲ ಮೆಟ್ಟಿಲಾಗುತ್ತದೆ.

ಕಾಯವನ್ನು ಆವರಿಸಿದ ಮನವೆಂಬ ಮಾಯೆ, ತನ್ನ ಕತ್ತಲ ಸೆರಗನ್ನು ಕಾಯಕ್ಕೆ ಹೊದಿಸಿ, ತನ್ನಂತೆ ಮಾಡಿಕೊಂಡು, ಪ್ರಾಪಂಚಿಕ ಸೀಮೆಯಲ್ಲಿ ಮೇಯುತ್ತಲಿದೆ. ಪಾರಮಾರ್ಥ ಕೂಡಾ ಅದಕ್ಕೆ

ಮೇವು. ಪಾರಮಾರ್ಥವೆಂಬ ಮೇವು ಪ್ರಾಪಂಚಿಕ ಬದುಕಿಗೆ ಬಳಸಿಕೊಂಡು ತನ್ನ ಅಜ್ಞಾನದ ಪ್ರಾಪಂಚವನ್ನು ಮುಂದುವರೆಸಿದೆ.

ಕಾಯವನ್ನು ಆವರಿಸಿದ ಕತ್ತಲೆಯ ಮನ, ತಾನು ಬೆಳಕಾಗಬೇಕೆಂದು ಬಯಸಿದರೆ ಪ್ರಾಪಂಚಿಕ ಸೀಮೆಯನ್ನು ಮೀರುತ್ತದೆ. ನಿಸ್ಸೀಮದ ಬೆಳಕಿನ ಲೋಕದತ್ತ ಪಾದಾರ್ಪಣೆ ಮಾಡುತ್ತದೆ. ಆರರ ಕರಣಂಗಳೇ ಜ್ಞಾನ ಕಿರಣಂಗಳಾಗುತ್ತವೆ. ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕೂಡಿದ ಮನ ಘನಮನವಾಗಿ ಬೆಳಗುತ್ತದೆ.

**784**

**ಪ್ರಾಪಂಚಿಕವ ಮೀರಿ ಪರಮಾಣನತಿಗಳೆದು**
**ನಾದ ಬಿಂದುವಿನಲ್ಲಿ ಆದಿಯಾಗಿ ಮೋದದೊಂದಾಮೋದ**
**ಆನಂದ ಮಧ್ಯಮದ ಭೇದವನು ಭೇದಿಸುವ**
**ತಾನು ತಾನೆ ಸೂಕ್ಷ್ಮದ ಘನತೆಯಲು**
**ಆನಂದದಾಂದೋಳು ಭೇಧಿಸಿಯೆ ಕಂಡೆ ನಾ.**
**ಶುದ್ಧ ಮಧ್ಯಮದಲಿ ಭೇದಕ್ಕತೀತನಾ**
**ಕಪಿಲಸಿದ್ಧ ಮಲ್ಲೇಶ್ವರನು, ನಾದ ಬಿಂದುವಿನಲ್ಲಿ ಪೂರ್ಣನಾಗಿ.**

ಕಾಯದಲ್ಲಿಯ ಜ್ಞಾನವನ್ನು, ಕಾಯವನ್ನು ಆವರಿಸಿದ ಮನದಿಂದಲೇ ಕಂಡುಕೊಳ್ಳಬೇಕು. ಕಾಯವನ್ನು ಆವರಿಸಿದ ಮನ ಕಾಯದ ಸಂಗ ಮಾಡಿ ಅಸಹಜತೆಯ ಗುಣಗಳನ್ನು ಕಾಯದಲ್ಲಿ ಸಂಗ್ರಹ ಮಾಡಿ ತಾನು ಕಲಿತದ್ದನ್ನೆ ತಾನು ಬಳಸುತ್ತಲಿದೆ. ಹೀಗಾಗಿ ಕಾಯ ಸದಾ ದುಃಖದ ಮಡುವಿನಲ್ಲಿ ಮುಳುಗಿದೆ. ಕಾಯದಲ್ಲಿಯ ದುಃಖ ಪರಮಾಣುವಿನೋಪಾದಿಯಲ್ಲಿ ಸ್ಫೋಟಿಸುತ್ತಲಿವೆ. ಅದನ್ನು ಹೊರಗಿನ ಯಾವ ತತ್ವದಿಂದಲೂ ತಡೆಯಲು ಸಾಧ್ಯವಿಲ್ಲ.

ದುಃಖ ಪ್ರಾಪಂಚಿಕವನ್ನು ಮೀರಿ ಪರಮಾಣುವನು ಅತಿಗಳೆದು ಬೆಳಕಿನ ಬಿಂದುವಿನಿಂದಲೇ ಹೊರಬಂದ ಕತ್ತಲೆಯ ಬಿಂದುವು ಪುನಃ ಬೆಳಕಿನ ಬಿಂದುವಿನಲ್ಲಿ ಮುಳುಗಿದಾಗಲೇ ಅದು ಮುಕ್ತನಾಗುತ್ತದೆ.

ತಾನು ತಾನೆ ಸೂಕ್ಷ್ಮದ ಘನತೆಯನ್ನು ಭೇದಿಸಿ, ಆನಂದದ ಬಿಂದುವಿನಲ್ಲಿ ಮಿಂದು, ಆ ಆನಂದವೇ ತಾನಾಗಬೇಕಿದೆ. ಶುದ್ಧ ಮಧ್ಯಮದಲಿ ಭೇದಕ್ಕತೀತನು ಕಪಿಲಸಿದ್ಧ ಮಲ್ಲಿಕಾರ್ಜುನನು, ನಾದಬಿಂದುವಿನಲ್ಲಿ ಪೂರ್ಣನು.

ಅದು ಪೂರ್ಣ ಇದು ಪೂರ್ಣ ಎಲ್ಲಿಲ್ಲಿಯೂ ಪೂರ್ಣವೇ ಭರಿತವಾಗಿದೆ ಎಂದು ಪೂರ್ಣವಾದಾಗಲೇ ಗೊತ್ತಾಗುತ್ತದೆ.

**785**

**ಪ್ರಾಪಿತವೇಕೆ ಬಾರದಯ್ಯಾ? ಇಂದಿನ ಅವಸ್ಥೆಗೆ!**
**ಕಲ್ಪಿತವೇಕೆ ಬಾರದಯ್ಯಾ? ಇಂದಿನ ಅವಸ್ಥೆಗೆ!**
**ಲಿಖಿತವೇಕೆ ಬಾರದಯ್ಯಾ? ಇಂದಿನ ಅವಸ್ಥೆಗೆ!**
**ಇಂದಿನಿತು ಏಕೆ ಬಾರದು? ನಾನೇನು ಮಾಡುವೆನು ದೇವಾ!**
**ಅಯ್ಯಾ ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯಾ,**

**ನಿನಗೆ ಕೂಪ ಅವಸ್ಥೆಯಲಿ ಪ್ರಾಣ ಬಿಡದು ಲಿಖಿತಬಾರದು**
**ಎನ್ನನಿಂತಿರಿಸುವರೆ ಹೇಳೆಲೆ ದೇವಯ್ಯಾ.**

ಅಯ್ಯ ಪರಮಪಿತ ಪರಮಾತ್ಮನೆ ನನ್ನನ್ನು ಸೃಷ್ಟಿಮಾಡಿ, ನೀನು ನನ್ನಲ್ಲಿಯೇ ಇದ್ದು ನನಗೆ ದರುಶನವನು ಕೊಡದೆ ಈ ಅವಸ್ಥೆಗೆ ನನ್ನನ್ನು ಏಕೆ ನೂಕಿದೆ ದೇವರೆ!

ನನ್ನ ಈ ಅಜ್ಞಾನದ ಅವಸ್ಥೆಗೆ ಮುಕ್ತಿ ಇಲ್ಲವೆ? ನಿನ್ನನ್ನು ಕಾಣುವ ಪ್ರಾಪ್ತಿ ಎನಗಿಲ್ಲವೆ? ನನ್ನಲ್ಲಿಯೇ ಇದ್ದು ನನಗೆ ದರುಶನ ನೀಡದ ಲಿಖಿತವಾದರೂ ಎನ್ನ ಹಣೆಯಲ್ಲಿ ಏಕೆ ಬರೆದೆಯಯ್ಯಾ? ಅಜ್ಞಾನದ ಅಂಧಕಾರದ ಬಾವಿಯಲ್ಲಿ ನನ್ನನ್ನೇಕೆ ತಳ್ಳಿದೆ. ಪ್ರಾಣ ಬಿಡದು, ದುಃಖ ಇಂಗದು, ನಿನಗೀ ಕೂಪ ಅವಸ್ಥೆ ಸರಿಯೆ? ಕಪಿಲಸಿದ್ಧ ಮಲ್ಲಿಕಾರ್ಜುನಾ ಎನ್ನನಿಂತಿರಿಸುವರೆ ಅಯ್ಯಾ.

**786**

**ಪೃಥುವಿಯ ಮೇಲಪ್ಪ ಬಿಗಿದ ಪಾದಶಿಲೆ**
**ದಾಯದ ಚಲನೆಯಾಗದಿರು ಕಂಡಾ, ಎಲೆ ಅಯ್ಯಾ.**
**ಅಯ್ಯ, ಅವ್ಯಯಪದವ ಅಯ್ಯನೊಯ್ಯನೆಯಿದಯ್ಯ ಎಲೆ ಅಯ್ಯ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ**
**ಅಯ್ಯನತ್ತ ಶುದ್ಧನಾಗನಯ್ಯ.**

ಭೂಮಿಯ ಮೇಲೆ ಹುಟ್ಟಿದ ಸಕಲ ಜೀವಿಗಳು ಸಹಜವಾಗಿವೆ. ತನುವನ್ನು ಆವರಿಸಿದ ಮನ ಮಾತ್ರ ತನುವಿನಲ್ಲಿಯೇ ಸಂಗಮವಾದ ಅರಿವಿನತ್ತ ಹೋಗದೆ ತನುವಿನೊಂದಿಗೆ ಪಾಲುದಾರನಾಗಿ ಚಲನೆಯಲ್ಲಿದೆ. ಮನ ಅರಿವಿನೊಂದಿಗೆ ಸಂಗಮವಾಗುವುದು ಅರಿವಿಗೆ ಶರಣುಹೋಗಿ ಶರಣಾಗತನಾಗುವುದೊಂದು ದೊಡ್ಡ ಕಲೆ. ಮನಕ್ಕೆ ಅರಿವೆಂಬ ಗುರುದೇವನು ಒಲಿದರೆ ಒಲಿಯುಬಹುದು. ಇಲ್ಲದಿದ್ದರೆ ಇಲ್ಲ. ಮನ ತನುವಿನ ಈ ವೃತ್ತಾಂತವನೆಲ್ಲ ಗುರುದೇವನೊಂದಿಗೆ ತಿಳಿದುಕೊಂಡು ಅಂತರಾಳದ ಸದ್ಗುರುವಿಗೆ ಶರಣುಹೋಗಲು ಬರುತ್ತದೆ. ಆತನಿಗೆ ದಾಸಾನು ದಾಸನಾಗಲು ಕೂಡಾ ಬರುತ್ತದೆ.

ಗುರುವಿನ ಗುಲಾಮನಾಗನಿದ್ದರೆ ದೊರೆಯದಣ್ಣ ಮುಕ್ತಿ ಎಂದು ಸಕಲ ಸಂತರು ಹಾಡಿದ್ದಾರೆ. ಗುರುದೇವನಿಗೆ ಶರಣು ಹೋಗುವ ದಾರಿಗಳು ಸಾಕಷ್ಟಿವೆ. ಗುರುದೇವನಿಗೆ ಶರಣುಹೋಗಿ ಶರಣರಾದ ಶರಣರು ಸಾಕಷ್ಟು ಸೂತ್ರಗಳನ್ನು ಬರೆದಿದ್ದಾರೆ. ಕೆಲವೊಂದು ಸೂತ್ರಗಳು ಕಾಲಘಟ್ಟದನ್ವಯ ಆ ಕಾಲದಲ್ಲಿಯೇ ಅವರವರಿಗೆ ತಿಳಿದು ಮುಂದೆ ಆ ಸೂತ್ರಗಳು ಕೆಲವರ ಅನುಭವಕ್ಕೆ ಬರಲು ಸಾಧ್ಯವಾಗದೆ ಇರಬಹುದು. ಅನುಭವಕ್ಕೆ ಬಂದರು ಅಕ್ಷರಗಳ ಮೂಲಕ ದಾಖಲಿಸಲು ಸಾಧ್ಯವಾಗದೆ ಇರಬಹುದು. ಅಂದ ಮಾತ್ರಕ್ಕೆ ಶರಣರು ದಾಖಲಿಸಿದ್ದು ಸಮಂಜಸವಲ್ಲ ಎನ್ನುವಂತಿಲ್ಲ. ಅದು ಅಪರಾಧವಾಗುತ್ತದೆ. ಓದುಗನ ಅನುಭವಕ್ಕೆ ಬರಲು ಸಾಧ್ಯವಿಲ್ಲ ಅಷ್ಟೇ. ಬಂದರು ಅದನ್ನು ವಿವರಿಸಿ ಹೇಳಲು ಸಾಧ್ಯವಾಗುವುದಿಲ್ಲ.

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಅಯ್ಯನತ್ತ ಶುದ್ಧನಾಗಯ್ಯ :

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಿವಿನ ಮಲ್ಲಯ್ಯನಿಗೆ ಶರಣು ಹೋಗಿ ಶುದ್ಧನಾಗಬೇಕಿದೆ. ಆತ ಸಕಲ ತನುಗಳಿಗೂ ಅಯ್ಯ.

787

**ಫಲಪದಭವಕ್ಕೆ ತಾರದಿರಯ್ಯಾ ನಿನ್ನ ಧರ್ಮ.**
**ಫಲಪದದಿಂದ ಭವ, ಆ ಭವದಿ ನರಕ.**
**ಇಂತಪ್ಪವನೆನಗೆಯು ಎನ್ನವರಿಗೆಯು**
**ತೋರದಿರಯ್ಯಾ, ನಿನ್ನ ಧರ್ಮ.**
**ನಾನು ಎನ್ನುವರು ನಿನ್ನನೇ ಬೇಡಿಕೊಂಬೆವಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಫಲ ಪದವಿಯ ಆಸೆ ಲೋಕಕ್ಕೆ ಇದೆ. ಲೋಕ ಫಲ ಪದವಿಗಾಗಿಯೇ ಬದುಕುತ್ತದೆ. ಅದು ಲೌಕಿಕ ಧರ್ಮ. ನಿನ್ನ ಧರ್ಮವಲ್ಲ. ಫಲದಿಂದ ಪದವಿಯಿಂದ ಜನನ ಮರಣಗಳ ಬಾಧೆ. ಆ ಭವದಿಂದ ನರಕ. ಇಂತಹ ದುಃಖವನ್ನು ಎನಗೆ ನೀನು ತೋರದಿರಯ್ಯ ನನಗೊಂದೆ ಅಲ್ಲ; ನನ್ನ ಶರಣರಿಗೂ ತೋರದಿರಯ್ಯ; ಅದು ನಿನ್ನ ಧರ್ಮ.

ನಿನ್ನ ಧರ್ಮ ಲೌಕಿಕ ಧರ್ಮವಲ್ಲ. ಅಲೌಕಿಕ ಧರ್ಮ. ಲೋಕಕ್ಕೆ ನಿನ್ನ ಧರ್ಮ ಬೇಡ, ಶರಣರಿಗೆ ಲೋಕದ ಧರ್ಮ ಬೇಡ. ನಿನ್ನ ಧರ್ಮ ಅರಿವಿನ ಧರ್ಮ. ನನಗೆ ನಿನ್ನ ದರ್ಶನವಾದರೆ ಸಾಕು, ನಿನ್ನ ಅರಿವಿನ ಧರ್ಮವನ್ನು ಪಾಲಿಸುತ್ತೇನೆ.

ಲೋಕದ ಜನರಂತೆ ನಿನ್ನನ್ನು ಫಲಕ್ಕಾಗಿ, ಪದವಿಗಾಗಿ ಬೇಡುವುದಿಲ್ಲ. ಒಡಲಿಗಾಗಿ ಬೇಡುವುದಿಲ್ಲ. ಒಡಲೊಳಗೆ ನೀನಿರುವಿ ಒಡಲನ್ನು ಬೆಳಗುವಿ. ಒಡಲೊಳಗಿದ್ದ ಕಾಮಧೇನು ನೀನು. ಹೀಗಾಗಿ ಎನಗೆಯೂ ಎನ್ನವರಿಗೆಯೂ ನಿನ್ನ ಅರಿವಿನ ಧರ್ಮ ಪಾಲಿಸುವುದೆಂದರೆ ಬಲು ಇಷ್ಟ. ನಾನು ನನ್ನ ಶರಣರು ಕೂಡಿ ನಿನ್ನನ್ನೇ ಬೇಡಿಕೊಂಬೆವಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ, ಫಲಕ್ಕಾಗಿ, ಪದವಿಗಾಗಿ ನಮ್ಮನ್ನು ಭವಕ್ಕೆ ತಾರದಿರಯ್ಯ.

788

**ಫಲಪದವನತಿಗಳೆದು ಹಲವು ಸೀಮೆಯ ಮೀರಿ**
**ಹೊಲಬುಗೆಟ್ಟಾತನತಿ ಬ್ರಹ್ಮವಾದ,**
**ತನ್ನೊಳಗೆ ಜಗವಾಗಿ ಜಗದೊಳಗೆ ತಾನಾಗಿ**
**ತನುಗುಣಕೆ ತಾ ದೂರವಾಗಿ.**
**ಕುರುಹುಗೆಟ್ಟಾ ಸೀಮೆ ಹಲಬರೊಳಗಿದ್ದು**
**ಒಲವು ನೀನಾದೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಫಲವನ್ನು, ಪದವಿಯನ್ನು ಅತಿಗಳೆದು, ಹಲವು ಸೀಮೆಯ ಮೀರಿ ನಿಸ್ಸೀಮನಾದಾತನು ಮಾತ್ರ ಬ್ರಹ್ಮನಾಗುತ್ತಾನೆ. ಫಲ ಮತ್ತು ಪದವಿಗಳು ಭ್ರಮೆಯುಳ್ಳವನಿಗೆ ಬೇಕೆ ಬೇಕು. ಲೋಕ ಭ್ರಮಾ ಜ್ಞಾನದಿಂದ ಭರಿತವಾಗಿದೆ. ಲೋಕದ ಜ್ಞಾನವನ್ನು ಕೆಡಸಿಕೊಂಡು ಅಲೌಕಿಕ ಜ್ಞಾನದತ್ತ ಸಾಗುತ್ತಾರೆ.

ಸಿದ್ಧಾರ್ಥನಿಗೆ ಫಲ, ಪದವಿ ಬೇಕಾಗಿತ್ತು. ಆಲೋಚನೆ ಮಾಡಿದ. ಅವುಗಳಲ್ಲಿ ಹುರುಳಿಲ್ಲವೆಂದು ತನಗೆ ತಾನೆ ತಿಳಿದ. ಹೀಗಾಗಿ ಸಿದ್ಧಾರ್ಥನ ಪದವಿ ನಷ್ಟವಾಯಿತು. ಆತ ತಾನಾಗಿಯೇ ತನಗೆ ದೊರೆತ ಸಕಲ ಪದವಿಗಳನ್ನು ತೃಣವಾಗಿ ನೋಡಿದ. ಹೆಂಡತಿ, ಮಕ್ಕಳು, ರಾಜ್ಯ, ಪದವಿ ಇದೆಲ್ಲಾ

ಸಕಲರಿಗೂ ಬೇಕು. ಅರಿವಿನಿಂದ ನೋಡಿದಾಗ ಈ ಎಲ್ಲಾ ಫಲ ಪದವಿಗಳು ತೃಣವಾಗಿ ಕಾಣುತ್ತವೆ.

ಸಿದ್ದಾರ್ಥನಿಗೆ ಬೇಕಾದ ಫಲಪದವಿ ಬುದ್ಧನಿಗೆ ಬೇಕಾಗಲಿಲ್ಲ. ಬುದ್ಧನಿಗೆ ಬೇಕಾದ ಜ್ಞಾನ, ಸಿದ್ದಾರ್ಥನಿಗೆ ತಿಳಿಯಲಿಲ್ಲ. ಸಿದ್ದಾರ್ಥ ತಿಳಿಯಲು ಹೋದಂತೆಲ್ಲ ಆತನಿಗೆ ಬುದ್ಧನ ದರ್ಶನವಾಯಿತು. ಸಕಲ ಪದವಿಯನ್ನು ತಿರಸ್ಕರಿಸಿದ. ಬ್ರಹ್ಮಾಪದವಿಯನ್ನು ಅಲಂಕರಿಸಿದ. ತನು ಗುಣಕ್ಕೆ ತಾನು ದೂರವಾದ ಕುರುಹು ಕೆಡಬೇಕಾದ ಸೀಮೆ ಹಲವರೊಳಗಿದೆ. ಒಲವಾಗಬೇಕು ಅಷ್ಟೇ. ಆ ಒಲವು ಕೂಡಾ ನೀನೇ ದಯಪಾಲಿಸಬೇಕು ಕಪಿಲಸಿದ್ಧ ಮಲ್ಲಿಕಾರ್ಜುನ.

**789**

**ಫಲಪದವನತಿಗಳೆದು ಹೊಲೆಗಲಸಿ ದಲಗೆಟ್ಟು**
**ಕುಲವನಾಳಿದವರಾರೊ ಅಯ್ಯಾ.**
**ನೀ ಸಲ್ಲದಿನ್ನು ನೆಲೆಗೆಟ್ಟು ಬ್ರಹ್ಮದೊಳಗೆ,**
**ಅಯ್ಯ, ನಿನ್ನ ಹೊಲೆಗಲಸಿ ಹೊರಗಾದೆ.**
**ಅಯ್ಯಾ, ದಲವೆ ಫಲವಾಗಿ ಹೊಲೆಯ ನೆಲೆಯಾದಡೆ**
**ಒಲವು ತಪ್ಪದು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಫಲ ಪದವಿಯನ್ನು ಅಲ್ಲಗಳೆಯುವುದೆಂದರೆ ಸರಳವಾದ ಮಾತಲ್ಲ. ಲೋಕಕ್ಕೆ ವಿರೋಧಿ ಯಾಗುವುದು. ಅತ್ಯಂತ ಕಠಿಣವಾದ ಪ್ರಯಾಣ. ಲೋಕ ದೇವರಿಗಾಗಿ ಹೊರಗಡೆ ಪ್ರಯಾಣ ಮಾಡಿದರೆ, ಫಲ ಪದವಿಯನ್ನು ಅಲ್ಲಗಳೆದ ವ್ಯಕ್ತಿ ತನ್ನ ತನುವಿನಲ್ಲಿಯೇ ತನ್ಮಯವಾದ ಅವ್ಯಕ್ತ ದೇವರಿಗೆ ಮೊರೆ ಹೋಗುತ್ತಾನೆ. ಈ ಪ್ರಯಾಣ ಅಗೋಚರದ ಆಚಾರದ ಪ್ರಯಾಣ. ಪ್ರಯಾಣಿಸುವ ತನಗೆ ಮಾತ್ರ ಗೊತ್ತಾಗುತ್ತದೆ. ಲೋಕದ ಪ್ರಯಾಣ ಸಕಲರಿಗೂ ಗೊತ್ತಾಗುತ್ತದೆ.

ಲೋಕದ ಆಚಾರ ಗೋಚರದ ಆಚಾರ. ಜ್ಞಾನಿಗೆ ಲೋಕದ ಆಚಾರ ಬೇಡವಾಗುತ್ತದೆ. ಜ್ಞಾನಿಯ ಆಚಾರ ಲೋಕಕ್ಕೆ ಬೇಡವಾಗುತ್ತದೆ. ಜ್ಞಾನಿಯ ಧರ್ಮ ಲೋಕಕ್ಕೆ ಬೇಡ. ಲೋಕದ ಧರ್ಮ ಜ್ಞಾನಿಗೆ ಬೇಡ. ಹೀಗಾಗಿ ಜ್ಞಾನಿಯನ್ನು ಲೋಕದಿಂದ, ಕುಲದಿಂದ, ಧರ್ಮದಿಂದ ಹೊರಗಿಡುತ್ತಾರೆ.

ಅಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನನು ನಿನ್ನ ಹೊಲೆಗಲಸಿ ಹೊರಗಾದೆ ದಳವೆ ಫಲವಾಗಿ ಹೊಲೆಯ ನೆಲೆಯಾದಡೆ ಒಲವು ತಪ್ಪದು ಕಪಿಲಸಿದ್ಧ ಮಲ್ಲಿಕಾರ್ಜುನ. ಬೀಜ ಅಂಕುರವಾಗಿ. ಅಂಕುರ ನೆಲಕ್ಕೆ ಬಿದ್ದ ಬೀಜವನ್ನು ಹೊರಗೆ ಚೆಲ್ಲಿ ಗಿಡವಾಗಿ, ಮರವಾಗಿ, ಹೂಬಿಟ್ಟು, ಬಿಟ್ಟ ಹೂವೆ ಫಲವಾಗಿ ಆ ಫಲದಲ್ಲಿ ವೃಕ್ಷವನ್ನೆ ಬಚ್ಚಿಟ್ಟುಕೊಂಡು ಹೊರಗಾದಂತೆ.

ಸಿದ್ದಾರ್ಥನಿಗೆ ಬೇಕಾದ ಫಲ ಪದವಿ, ಬುದ್ಧನಿಗೆ ಬೇಕಾಗಲಿಲ್ಲ, ಬುದ್ಧನಿಗೆ ಬೇಕಾದ ಜ್ಞಾನ, ಸಿದ್ದಾರ್ಥನಿಗೆ ತಿಳಿಯಲಿಲ್ಲ. ಸಿದ್ದಾರ್ಥ ತಿಳಿಯಲು ಹೋಂದತೆಲ್ಲ ಆತನಿಗೆ ಬುದ್ಧನ ದರ್ಶನವಾಯಿತು. ಸಕಲ ಪದವಿಯನ್ನು ತಿರಸ್ಕರಿಸಿ ಬ್ರಹ್ಮ ಪದವಿಯನ್ನು ಅಲಂಕರಿಸಿದ. ತನುಗುಣಕ್ಕೆ ತಾನು ದೂರವಾದ. ಕುರುಹು ಕೆಡಬೇಕಾದ ಸೀಮೆ ಹಲವರೊಳಗಿದೆ; ಒಲವಾಗಬೇಕು ಅಷ್ಟೇ. ಆ ಒಲವು ಕೂಡಾ ನೀನೇ ದಯಪಾಲಿಸಬೇಕು ಕಪಿಲಸಿದ್ಧ ಮಲ್ಲಿಕಾರ್ಜುನ.

**790**

**ಫಲಪದಾದಿಗಳ ಭಕ್ತರಿಗೆ ಕೊಟ್ಟೆನೆಂದೆಂಬೆ;**

**ಅವರವನೊಲ್ಲರು!**
**ಅವರು ನಿನಗೆ ನಿನ್ನ ರೂಪಿಂಗೆ ತನುಮನಧನಾದಿಗಳ ಕೊಡುವರು.**
**ಎಲೆ ವಂಚಕನಾದ ಶಿವನೆ ನಿರ್ವಂಚಕರೆಮ್ಮವರು!**
**ನಿನ್ನನೇನ ಬೇಡವರವರು? ನೀನೇನವರಿಗೆ ಕೊಡುವೆ?**
**ನಿನ್ನ ಕೊಡನೆಮ್ಮವರೊಲ್ಲರು ಕಾಣಾ,**
**ಕೊಡು, ಕೊಡದೆ ಹೋಗು, ಕಪಿಲಸಿದ್ಧ ಮಲ್ಲಿಕಾರ್ಜುನಾ!**

ಫಲ ಪದವಿಗಳನ್ನು ಭಕ್ತರಿಗೆ ಕೊಟ್ಟು, ದೇವರೆಂದು ನೀನು ಅವರಿಂದ ಹೊಗಳಿಸಿಕೊಳ್ಳುವೆ. ಶರಣರು ಫಲ ಪದವಿಗಳನ್ನು ಒಲ್ಲರು. ಸಾಧ್ಯವಾದರೆ ಶರಣರೆ ನಿನಗೆ ತನು ಮನ ಧನಾದಿಗಳನ್ನು ಕೊಡುವರು. ಎಲೆ ವಂಚಕನಾದ ಶಿವನೇ, ನಮ್ಮ ಶರಣರು ನಿರ್ವಂಚಕರು ಅವರು. ನಿನ್ನನ್ನು ಏನೂ ಬೇಡರು ಅವರು. ನೀನೇನು ಅವರಿಗೆ ಕೊಡುವೆ. ನೀನು ಕೊಟ್ಟರು ಎಮ್ಮವರು ಒಲ್ಲರು. ಎಲೆ ಶಿವನೆ ನೀನು ಕೊಡು, ಕೊಡದೆ ಹೋಗು ಎಮ್ಮವರಿಗೆ ನಿನ್ನಿಂದ ಏನೂ ಆಗಬೇಕಾಗಿಲ್ಲ.

**791**

**ಫಲವ ಮೀರಿದ ಪದವು. ಪದವ ಮೀರಿದ ಸೀಮೆ.**
**ಫಲಪದಕೆ ದೂರವಾಗಿಯೆ ಚಿತ್ರಿಸಿ ಕರುಣವ ಹಿಡಿದಾಚಾರ್ಯ**
**ಕರುಣಶುದ್ಧತೆಯಿಂದ ತರುಣಿಯ ಮಸ್ತಕದ**
**ಸಿಂಹಾಸನಾ ಕಾಲಕರ್ಮವ ಕಳೆದು**
**ಬೆಳಗು ಬೆಳಗಿನಲೀಗ ತಿಳಿದ ಬ್ರಹ್ಮಾಂಡದಾ ಸೊಮ್ಮು**
**ಭಕ್ತಿ ವೀರಮಾಹೇಶ್ವರವು ಆರಿಗಾಗದು ದೇವ**
**ಸೋಹಮೆಂಬುದಕ್ಕ ತ್ಯತಿಷ್ಠ ಕಾನನದ**
**ಕಾವೋದ ಕಂಬನಿಯ ಭಾನು ತಾ**
**ಕಪಿಲಸಿದ್ಧ ಮಲ್ಲೇಶ್ವರಾ.**

ತನುವನ್ನು ಆವರಿಸಿದ ಮನ ತನುವಿನೊಂದಿಗೆ ಸಂಗಮಾಡಿ ಸದಾ ಫಲವನ್ನು ಬೇಡುತ್ತದೆ. ಪದವಿಯನ್ನು ಬೇಡುತ್ತದೆ. ಫಲ ಪದಕೆ ಹತ್ತಿರವಾಗಿ ಫಲ ಪದವಿಗಳೆರಡನ್ನು ಕೊಡುವ ದೇವರಿಂದ ದೂರವಾಗುತ್ತದೆ. ಫಲಕ್ಕೆ ಪದವಿಗೆ ದೂರವಾದರೆ ಮನ ದೇವರಿಗೆ ಹತ್ತಿರವಾಗುತ್ತದೆ. ಬೇಡುವ ಫಲದಲ್ಲಿಯೂ ಹುರುಳಿಲ್ಲ. ನೀಡುವ ಪದವಿಯಲ್ಲೂ ಹುರುಳಿಲ್ಲವೆಂದು ಮನಕ್ಕೆ ತನಗೆ ತಾನೇ ಅರಿವಾಗುತ್ತದೆ. ಕಾಯ ಕರಣೇಂದ್ರಿಯಗಳನ್ನು ಹಿಡಿದಿರುವುದರಿಂದ ಫಲ ಮತ್ತು ಪದವಿಗೆ ಹತ್ತಿರವಾಗುತ್ತದೆ. ಮನ ಅರಿವಿನೊಂದಿಗೆ ಸಂಗ ಮಾಡಿದಾಗ, ಅರಿವೆಂಬ ಗುರುದೇವನಿಗೆ ಶರಣು ಹೋಗಿ ಶರಣಾಗತನಾದಾಗ ಶರಣನೇ ತಾನಾದಾಗ ಕರಣೇಂದ್ರಿಯಗಳು ಪರಿಶುದ್ಧವಾಗುತ್ತವೆ. ಬೇಡುವುದು ತನ್ನಿಂದ ತಾನೇ ನಿಂತು, ಮನ ಸಕಲ ಭ್ರಮೆಗಳನ್ನು ಕಳೆದುಕೊಂಡು ಬ್ರಹ್ಮಸಿಂಹಾಸನದತ್ತ ಧಾಪುಗಾಲು ಇಡುತ್ತದೆ. ಅದು ಬೆಳಂಗಿಗೆ ಬೆಳಗಾಗಿ ಬೆಳಗುವ ಬ್ರಹ್ಮಾಂಡದ ಸೊಮ್ಮು. ಅದು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ.

792

**ಬಯಸದಿರು ಬಯಸದಿರು ಅನ್ಯೋನ್ಯರನು.**
**ನೀನು ಬಯಸಿದಂತಾಗದದು,**
**ನಿಬ್ಬಯಕೆಯು ತನುವಿನೊಳಗಳವಡಲು**
**ಮನ ಮಹಾ ಸಾಯುಜ್ಯಪದವ ಮೀರಿಪ್ಪುದೈ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮರದಲ್ಲಿದ್ದ ಸಕಲ ಗುಣಗಳು ಮನುಷ್ಯನಲ್ಲಿವೆ. ಮರ ಮೂರು ಕಾಲಗಳಲ್ಲಿ ಏನನ್ನೂ ಬೇಡುವುದಿಲ್ಲ. ಮರ ಪಕ್ಕದ ಮರದಿಂದ ಏನೂ ಬಾಚಿಕೊಳ್ಳುವುದಿಲ್ಲ. ಬೇಸಿಗೆಯಲ್ಲಿ ಚಿಗುರು ಹೂ ಕಾಯಿ ಹಣ್ಣು ಹೊತ್ತುಕೊಂಡು ಸುಂದರವಾಗಿ ದಿನ ಕಳೆಯುತ್ತದೆ. ಮಳೆಗಾಲದಲ್ಲಿ ತೂಗಾಡುತ್ತಾ ಇನ್ನೂ ಸಂತೋಷಪಡುತ್ತದೆ. ಚಳಿಗಾಲದಲ್ಲಿ ಜಲದ ಬಾಧೆಯಿದ್ದರೂ ಎಲೆಗಳು ರೆಂಬೆ ಟೊಂಗೆ ಬಡ್ಡೆಗೆ ಮಾತ್ರ ನೀರುಣಿಸಿ ಗಿಡದಿಂದ ತಂತಾನೆ ನೆಲಕ್ಕೆ ಉದುರುತ್ತವೆ. ನಾವು ನೀರುಣ್ಣುವುದು ಬೇಡ ಎಂದು ನಿರ್ಧಾರ ತಳೆದ ಎಲೆಗಳ ತ್ಯಾಗ ಇಡೀ ಲೋಕ ಮೆಚ್ಚಲೇಬೇಕು.

ಸಿದ್ಧಾರ್ಥನಿಗೆ ಎಲ್ಲ ಇದ್ದರೂ ಅದನ್ನು ಬಳಸುವುದಕ್ಕೆ ವಾಕರಿಕೆ ಬಂದಂತಾಯಿತು. ವೃಕ್ಷವನ್ನು ನೋಡಿದ; ಅದೆಂಥ ಸುಂದರ ಸ್ವಭಾವ. ತನುವನ್ನು ನೋಡಿದ; ಇದು ಅದಕ್ಕಿಂತಲೂ ಸುಂದರವಾಗಿರುವುದು ಗಮನಕ್ಕೆ ಬಂತು. ವೃಕ್ಷದ ಸೌಂದರ್ಯ ತನುವಿನಲ್ಲಿ ತನ್ಮಯವಾದುದನು ಸಿದ್ಧಾರ್ಥ ಕಂಡುಹಿಡಿದ. ಅದಕ್ಕೆ ಬುದ್ಧ ಎಂದು ಕರೆದ. ವೃಕ್ಷ ಮೌನದ ಜಪ ಮಾಡಿದರೆ, ತನು ಬೋಧೆಯ ಜಪ ಮಾಡುತ್ತದೆ.

ತನುವಿನಲ್ಲಿ ತನ್ಮಯವಾದ ಬೋಧೆ ತನುವಿಗೆ ತನುವನ್ನು ಆವರಿಸಿದ ಮನಕ್ಕೆ ಮಾತ್ರ ಕೇಳುತ್ತದೆ. ಹೀಗಾಗಿ ಸಿದ್ಧಾರ್ಥ ತನುವನ್ನು ಬೋಧೀವೃಕ್ಷ ಎಂದು ಕರೆದ. ಬುದ್ಧ ಯಾರಿಂದಲೂ ಏನನ್ನೂ ಬಯಸುವುದಿಲ್ಲ. ಮನ ತನುವಿನ ಮೂಲಕ ಬಯಸುತ್ತದೆ; ಆದರೂ ಅದರ ಬಯಕೆ ತೀರುವುದಿಲ್ಲ. ಮನ ಬಯಸಿದಂತೆ ಆಗುವುದಿಲ್ಲ. ತನುವಿನಲ್ಲಿಯೇ ತನ್ಮಯವಾದ ನಿಬ್ಬಯಕೆಯು ತನುವಿನಲ್ಲಿ ಅಳವಡಲು, ಮನ ಮಹಾ ಸಾಯುಜ್ಯ ಪದವಿಯ ಮೀರುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

793

**ಬಯಸುವೆನಯ್ಯಾ ನಿನ್ನವರ ಸಂಗವ**
**ಎಳಸುವೆನಯ್ಯಾ ನಿನ್ನವರ ಸಂಗಕ್ಕೆ**
**ಬಯಕೆ ಬೇರನ್ಯಕ್ಕೆಳಸದಂತೆ**
**ಹರುಷಿತನ ಮಾಡಯ್ಯಾ ಭಕ್ತಿಯೊಳಗೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿಯೇ ಸಂಗಮವಾದ ನಿನಗೆ ಬಯಕೆಯಿಲ್ಲ. ಕಾಯವನ್ನು ಆವರಿಸಿದ ಮನ ಕಾಯದ ಗೆಳೆತನ ಮಾಡಿರುವುದರಿಂದ ಮನ ಮತ್ತು ಕಾಯಕ್ಕೆ ಬಯಕೆ ಇದೆ. ಬಯಕೆಯೇ ಇಲ್ಲದ ಪರಮಾತ್ಮ ನೀನು.  ನಿನ್ನ ಸಂಗ ಮಾಡಿದ ಶರಣರ ಸಂಗಮಾಡುವ ಕಾತುರದ ಬಯಕೆಯನ್ನು ನೀನೇ ನನ್ನಲ್ಲಿ ತುಂಬಬೇಕು ನನ್ನಯ್ಯ. ಇದರ ಹೊರತಾಗಿ ಅನ್ಯಕ್ಕೆಳಸದಂತೆ ನನ್ನನ್ನು ಸದಾ

ಹರುಷಿತನನ್ನಾಗಿ ಮಾಡಯ್ಯಾ.

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಬಯಸುವೆನಯ್ಯಾ ನಿನ್ನವರ ಸಂಗವ. ಎಳಸುವೆನಯ್ಯಾ ನಿನ್ನವರ ಸಂಗಕ್ಕೆ. ಫಲಪದವಿ ಮುಂತಾದ ಬಯಕೆಗಳೆಲ್ಲ ತೃಣವೆಂದು ನನಗೆ ತಿಳಿದಿದೆ. ಬೇರೆ ಅನ್ಯಕ್ಕೆ ಎಳೆಸದಂತೆ ಹರುಷಿತನ ಮಾಡಯ್ಯಾ.

**794**

**ಬಲ್ಲಲ್ಲಿ ಲಿಂಗವನು ಸೊಲ್ಲುಗೊಳಿಸಿದನವ್ವಾ**
**ಎಲ್ಲಾ ಕಳಜ್ಞನನು ತಾನೆನಿಸಿ.**
**ಸೊಲ್ಲಿನ ಬ್ರಹ್ಮಾಂಡ ಅಲ್ಲಿ ಆವರ್ಚಿಸಲು**
**ಸಲ್ಲಲಿತ ಜ್ಞಾನಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಅರಿವಿನ ಲಿಂಗವಿಲ್ಲದ ಸ್ಥಳವೇ ಇಲ್ಲ. ಮುಳ್ಳು ಗುತ್ತುವಡೆ ತೆರಹಿಲ್ಲದ ಘನ ಎಂದು ಶರಣರು ಹೇಳಿದ್ದಾರೆ. ಮುಳ್ಳಿನ ಮೊನೆ ಇಡಲು ಸಹಿತ ಕಾಯದಲ್ಲಿ ಸಂದಿಲ್ಲದಂತೆ ಪರಮಾತ್ಮನೇ ಭರಿತವಾಗಿದ್ದಾನೆ.

ಇಡೀ ಬ್ರಹ್ಮಾಂಡಕ್ಕೆ ಜನ್ಮ ಕೊಟ್ಟು, ತನ್ನಿಂದ ಸೃಷ್ಟಿಯಾದ ಬ್ರಹ್ಮಾಂಡವನ್ನು ತಾನೇ ನೋಡಲು, ಕಾಯಕ್ಕೆ ಜನ್ಮಕೊಟ್ಟ.

ಜನ್ಮಕೊಟ್ಟ ಆ ಕಾಯದಲ್ಲಿ ತಾನು ಸಂಗಮವಾಗಿ ಕಾಯಕ್ಕೆ ಕಾಣದಾದ. ಕಾಯವನ್ನು ಆವರಿಸಿದ ಮನವನ್ನು ಸೃಷ್ಟಿಮಾಡಿ, ಮನ ಕಾಯವನ್ನು ಒಂದಾಗಿಸಿದ. ಕಾಯ ಕೈಲಾಸವೆಂದು ಅನಿಸಿಕೊಂಡರು ಕಾಯವೇ ಕೈಲಾಸವೆನಿಸುವಂತೆ ಮಾಡಿದ. ಕಾಯ ಸೃಷ್ಟಿ ಮಾಡಿದ ಕೈಲಾಸದಲ್ಲಿ ತನ್ನನ್ನು ಹುಡುಕುವಂತೆ ಕಾಯಕ್ಕೆ ಕೆಲಸ ಹಚ್ಚಿದ. ಕಾಯವೆಂಬ ಬ್ರಹ್ಮಾಂಡದಲ್ಲಿಯೇ ಹುಡುಕಲಾಗಿ, ಮನೋಹರಮಯವಾದ ಸಲ್ಲಲಿತ ಜ್ಞಾನಗುರು ಕಪಿಲಸಿದ್ಧ ಮಲ್ಲಿಕಾರ್ಜುನ ಅಲ್ಲಿಯೇ ಸಿಕ್ಕ.

ಕಣ್‌ತೆರೆದು ನೋಡಲಾಗಿ ಎಲ್ಲೆಲ್ಲೋ ಲಿಂಗವನ್ನು ಸೊಲ್ಲಗೊಳಿಸಿದನವ್ವ, ಎಲ್ಲಾ ಕಳಜ್ಞನನು ತಾನೆನಿಸಿ. ಎಲ್ಲೆಲ್ಲಿಯೂ ಗುರುದೇವನ ಹೊರತಾಗಿ ಒಂದು ಹುಲುಕಡ್ಡಿಯು ಅಲುಗಾಡದು. ಇಡೀ ಬ್ರಹ್ಮಾಂಡದಲ್ಲಿ ಬಚ್ಚಿಟ್ಟುಕೊಂಡು ಬ್ರಹ್ಮಾಂಡಕ್ಕೆ ತಿಳಿಯದಂತೆ ಬ್ರಹ್ಮಾಂಡವನ್ನು ಮುನ್ನಡೆಸುವ ಬ್ರಹ್ಮಗುರು ಆತ.

**795**

**ಬಲ್ಲೆ ಬಲ್ಲೆ ನಿನ್ನ, ಜನನ ಮರಣಕ್ಕೆ ಹೊರಗಾದನೆಂಬುದ.**
**ಬಲ್ಲೆ ಬಲ್ಲೆ ನಿನ್ನ, ಕಾಲಕಲ್ಪಿತಕ್ಕೆ ಹೊರಗಾದನೆಂಬುದ.**
**ಬಲ್ಲೆ ಬಲ್ಲೆ ನೀನು ಮಹಾನಿತ್ಯ ಮಂಗಳನೆಂಬುದ.**
**ಬಲ್ಲೆ ಬಲ್ಲೆ ನೀನು ಸತ್ಯಶುದ್ಧದೇವನೆಂಬುದ.**
**ಬಲ್ಲೆ ಬಲ್ಲೆ ನೀನು ಫಲಪದವ ಮೀರಿದನೆಂಬುದ,**
**ಬಲ್ಲೆ ಬಲ್ಲೆ ನೀನು ಉರುತರ ಲೋಕಪ್ರಕಾಶನೆಂಬುದ.**
**ಬಲ್ಲೆ ಬಲ್ಲೆ ನೀನು ಪರಿಭವಕ್ಕೆ ಬಾರನೆಂಬುದ.**
**ಬಲ್ಲೆ ಬಲ್ಲೆ ನೀನು ಕಾಲನ ಕಮ್ಮಟಕ್ಕೆ ಸಲ್ಲನೆಂಬುದ.**
**ಎಲ್ಲ ಬಲ್ಲತನಕ್ಕೆ ಮಂಗಳವನೀಯ**
**ಉತ್ತರ ದಕ್ಷಿಣ ಪೂರ್ವ ಪಶ್ಚಿಮವೆಂಬ**

**ದ್ವಾರಂಗಳಲ್ಲಿ ತಪ್ಪದೆ ಬಪ್ಪಾಗ**
**ಆನು ನಿನ್ನೊಡನೆ ಬಾರದೆ ಉಳಿದುದುಂಟೆ?**
**ಆನೇನು ಭೇದವಾಗಿಪ್ಪೆನೆಲೆ ಅಯ್ಯಾ.**
**ಸಂದು ಸವೆದು ಹಂಗು ಹರಿದು**
**ಲೀಯ ಒಳಗಾಗಿದ್ದ ಎನ್ನ ನೋಡದೆ ಇಪ್ಪುದು ಆದಾವ ಗರುವತನ?**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ನನಗೆ ಜನನ ಉಂಟು ಮರಣ ಉಂಟು. ನನ್ನಲಿಯೇ ಸಂಗಮವಾದ ನಿನಗೆ ಜನನವಿಲ್ಲ ಮರಣವಿಲ್ಲ. ನೀನು ಜನನ ಮರಣಕ್ಕೆ ಹೋರಗಾದವನು ಎಂಬುದನ್ನು ನನಗೆ ಜನ್ಮ ನೀಡಿದ ನಿನ್ನಿಂದಲೇ ನಾನು ಕಂಡುಕೊಂಡೆ. ನಾನು ಬಲ್ಲೆನು ನೀನು ಕಾಲಕ್ಕೆ ಕಲ್ಪಿತಕ್ಕೆ ಹೊರಗಾದವನೆಂಬುದ ನಾನು ಬಲ್ಲೆ ಬಲ್ಲೆನು ಅದು ನಾನು ನಿನ್ನಿಂದಲೇ ತಿಳಿದುಕೊಂಡೆ, ನೀನು ನನ್ನಲ್ಲಿಯೇ ಇದ್ದ ಮಹಾನಿತ್ಯ ಮಂಗಳ ನೆಂಬುದನ್ನು.

ಬಲ್ಲೆನು ಬಲ್ಲೆನು ನಾನು ನೀನು ಸತ್ಯ ಶುದ್ಧ ದೇವನೆಂಬುದನ್ನು, ಬಲ್ಲೆನು ಬಲ್ಲೆನು ನಾನು ನೀನು ಫಲಪದವನ್ನು ಮೀರಿದವನೆಂಬುದ. ಬಲ್ಲೆ ಬಲ್ಲೆ ನೀನು ಉರುತರ ಲೋಕ ಪ್ರಕಾಶನೆಂಬುದ. ಬಲ್ಲೆ ಬಲ್ಲೆ ನೀನು ಪರಿಭವಕ್ಕೆ ಬಾರನೆಂದು. ಬಲ್ಲೆ ಬಲ್ಲೆ ನೀನು ಕಾಲನ ಕಮ್ಮಟಕ್ಕೆ ಸಲ್ಲನೆಂಬುದ. ಎಲ್ಲವನ್ನು ಬಲ್ಲತನಕ್ಕೆ ಮಂಗಳವನ್ನು ಹಾಡುವವ ನೀನು.

ಉತ್ತರ ದಕ್ಷಿಣ ಪೂರ್ವ ಪಶ್ಚಿಮವೆಂಬ ದ್ವಾರಂಗಳಲ್ಲಿ ತಪ್ಪದೇ ಬರುವಾಗ ನಾನು ನಿನ್ನೊಡನೆ ಬಾರದೆ ಉಳಿದುದುಂಟೆ? ನಾನೇನು ಭೇದವಾಗಿರುವೆನೆ ಎಲೆ ಅಯ್ಯಾ.

ಸಂದು ಸಂದುಗಳಲ್ಲಿ ನೀನಿರುವೆ. ಅಲ್ಲಿಯೂ ನಾನಿರುವೆ. ಆದರೆ ಹಂಗು ಹರಿದು ಲೀಯವಾಗಿ ನನ್ನೊಳಗಿದ್ದ ನೀನು ನನ್ನನ್ನು ನೋಡದೆ ಇರುವುದು ಆದಾವ ಗರುವತನ. ಕಪಿಲಸಿದ್ಧ ಮಲ್ಲಿಕಾರ್ಜುನ. ಸಂದು ಸವೆದು ಹಂಗು ಹರೆದು ನನ್ನೊಳಗೆ ಲೀಯವಾಗಿ ನೀನು ನನಗೆ ದರ್ಶನ ನೀಡು ತಂದೆ.

**796**

**ಬಸವ ಕಾರಣ ವಸುಧೆ, ವಸುಧೆ ಕಾರಣ ಬಸವ,**
**ಬಸವ ಕಾರಣ ಚೆನ್ನಬಸವ ಬಂದ.**
**ಬಸವ ಚೆನ್ನಬಸವ ಪ್ರಭು ಶಿವನೆಂಬ ಮಾತೆಯಲಿ**
**ಶಿಶುವಾಗಿ ಜನಿಸಿದೆನಯ್ಯಾ ಕಪಿಲಸಿದ್ಧ ಮಲ್ಲಿನಾಥಾ.**

ಬಸವರಾಜ ದೇವರ ಕಾರಣದಿಂದಾಗಿ ಈ ಭೂಮಿ ಹುಟ್ಟಿತು. ಈ ಪುಣ್ಯ ಭೂಮಿ ಹುಟ್ಟಿದ ಕಾರಣದಿಂದಾಗಿ ಬಸವರಾಜ ದೇವರು ಹುಟ್ಟಿದರು. ಬಸವರಾಜ ದೇವರು ಹುಟ್ಟಿದ ಕಾರಣದಿಂದಾಗಿ ಚೆನ್ನಬಸವಣ್ಣ ಬಂದ. ಈ ಭೂಮಿಗೆ ಬಸವಣ್ಣ, ಚೆನ್ನಬಸವಣ್ಣ ಅಲ್ಲಮಪ್ರಭು ಶಿವನೆಂಬ ಮಾತೆಯರಲ್ಲಿ ಅವರ ಶಿಶುವಾಗಿ ನಾನು ಜನಿಸಿದೆನು ಕಪಿಲಸಿದ್ಧ ಮಲ್ಲಿನಾಥ.

ಕಾಯದಲ್ಲಿ ಸಹಜ ಧರ್ಮವೊಂದು ಇದೆ ಎಂದು ಮೊಟ್ಟಮೊದಲಿಗೆ ಈ ಭೂಮಿಯ ಮೇಲೆ ಬಸವಣ್ಣನವರು ಮಾತ್ರ ಕಂಡು ಹಿಡಿದರು. ಹೀಗಾಗಿ ಭಾರತ ಪುಣ್ಯ ಭೂಮಿ ಎಂದು ಬಸವಣ್ಣನ ಕಾರಣದಿಂದಾಗಿ ಕರೆಯಿಸಿಕೊಂಡಿತು. ಬಸವಣ್ಣನ ಕಾರಣದಿಂದಾಗಿ ಸಹಜಜ್ಞಾನಿ ಚೆನ್ನಬಸವಣ್ಣ ಈ ಭೂಮಿಯ ಮೇಲೆ ಪ್ರಕಾಶಿಸಿದ. ಬಸವ ಚೆನ್ನಬಸವ ಪ್ರಭುದೇವರ ಕಾರಣದಿಂದಾಗಿ ಅವರ

ಶಿಶುವಾಗಿ ನಾನು ಜನಿಸಿದೆನು ಎಂದು ಸಿದ್ಧರಾಮ ಶಿವಯೋಗಿ ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ಮಾತನಾಡಿದ್ದಾರೆ. ನೀನು ನನಗೆ ಪಿತನಾದರೆ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು ಎನಗೆ ಮಾತೆಯರು ಆಗಿದ್ದಾರೆ.

**797**

**ಬಸವಣ್ಣನ ನೆನೆದು ಮಾಡುವ ಭಕ್ತಿ ನಡೆವುದಯ್ಯಾ.**
**ಬಸವಣ್ಣನ ನೆನೆಯದೆ ಮಾಡುವ ಭಕ್ತಿ ಎಳತಟವಯ್ಯಾ**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಬಸವಣ್ಣ ಭಕ್ತಿಗೆ ಮೂಲಪುರುಷ. ಲೋಕ ತಾನು ಮಾಡಿದ ದೇವರಿಗೆ ಭಕ್ತಿ ಮಾಡಿದರೆ, ಬಸವಣ್ಣ ತನ್ನನ್ನು ಮಾಡಿ ತನ್ನ ತನುವಿನೊಳಗೆ ತನ್ಮಯವಾದ ದೇವರಿಗೆ ಭಕ್ತಿ ಮಾಡಿದ. ಹಾಗೆಯೇ ಸಕಲರು ಸರಳವಾಗಿ ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರಿಗೆ ಹೇಗೆ ಭಕ್ತಿ ಮಾಡಬೇಕೆಂದು ಸಾವಿರಾರು ಸೂತ್ರಗಳ ಮೂಲಕ ತಿಳಿಹೇಳಿದ. ಹೀಗಾಗಿ ಬಸವಣ್ಣನನ್ನು ಶರಣರು ಭಕ್ತಿಭಂಡಾರಿ ಎಂದು ಕರೆದಿದ್ದಾರೆ.

ಬಸವಣ್ಣನ ನೆನೆಯದೆ ಮಾಡಿದ ಭಕ್ತಿ ಎಳತಟವಯ್ಯ ಎಂದರೆ ಎಳೆದಾಟವಯ್ಯ ಅದು ತನ್ನನ್ನು ಸಂಸಾರದಲ್ಲಿ ಪಾರು ಮಾಡದು, ಪಾರಮಾರ್ಥದಲ್ಲಿ ಪಾರುಮಾಡದು.

ಸಿದ್ಧರಾಮ ಶಿವಯೋಗಿಗಳು ತಮ್ಮದೆ ಆದ ಒಂದು ವಚನದಲ್ಲಿ ಹೀಗೆ ಬರೆದಿದ್ದಾರೆ. ''ಕೆರೆಯ ಕಟ್ಟಿಸುವವನೇ ಕರ್ಮಿ, ಅಗ್ರವನೆತ್ತಿಸುವವನೇ ಪಾತಕಿ, ಶಿವಾಲಯವ ಕಟ್ಟಿಸುವವನೇ ದ್ರೋಹಿ. ಗುರುಹಿರಿಯರ ಕಂಡರೆ ನಮಿಸುವಾತನೆ ಚಾಂಡಾಲ. ಸತ್ಕ್ರೀಯಿಂದ ಶಿವಾರ್ಚನೆ ಮಾಡುವವನೆ ಅನಾಚಾರಿ ಇಂತಿ ಐವರನೊಳಗೊಂಬನೆ ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನ''.

ಕೆರೆ ಕಟ್ಟಿಸಿ ಭಕ್ತಿ ಮಾಡುವವನು ಭಕ್ತನಲ್ಲ, ಅವನು ಕರ್ಮಿ. ಅಗ್ರಹಾರವನು ಕಟ್ಟಿಸಿ ಭಕ್ತಿ ತೋರುವವನು ಭಕ್ತನಲ್ಲ, ಅವನು ಪಾತಕಿ. ಶಿವಾಲಯವ ಕಟ್ಟಿಸಿ ಭಕ್ತಿ ಮಾಡುವವನು ಭಕ್ತನಲ್ಲ, ಅವನು ದ್ರೋಹಿ. ಗುರುಹಿರಿಯರನ್ನು ಕಂಡು ನಮಿಸುವಾತನು ಕೂಡಾ ಭಕ್ತನಲ್ಲ, ಅವನು ಚಾಂಡಾಲ. ಸತ್ಕ್ರೀಯೆಯಿಂದ ಶಿವಾರ್ಚನೆ ಮಾಡುವವನು ಭಕ್ತನಲ್ಲ, ಅವನು ಅನಾಚಾರಿ. ಇವೆಲ್ಲಾ ಹೊರಗಣ ಭಕ್ತಿ; ಗೋಚರಕ್ಕೆ ಬರುವ ಭಕ್ತಿ. ಬಸವಣ್ಣ ಹೇಳಿದ ಭಕ್ತಿಯೇ ಬೇರೆ. ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ತನುವನ್ನು ಆವರಿಸಿದ ಮನವೆಂಬ ಭಕ್ತನಿಂದ ಭಕ್ತಿ ಮಾಡುವುದೇ ಭಕ್ತಿ ಎಂದಿದ್ದಾರೆ.

ತನುವಿನಿಂದ ತನುವಿನ ಮೂಲಕ, ತನುವಿಗೆ ಮಾಡುವ ಭಕ್ತಿ ಭಕ್ತಿಯಲ್ಲ. ತನುವನ್ನು ಆವರಿಸಿದ ಮನ ತನುವಲ್ಲ, ಅದು ತನುವಿನಲ್ಲಿಯೇ ಇದ್ದ ಅವ್ಯಕ್ತ ತನು. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಕೂಡಾ ತನುವಿಲ್ಲ. ಮನವೆಂಬ ತನು, ಸ್ಥೂಲ ತನುವಿನ ಸಂಗ ಬಿಟ್ಟು, ಸಕಲ ಅಜ್ಞಾನವನ್ನು ಕಳೆದುಕೊಂಡು, ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಭಕ್ತಿ ಮಾಡುವುದೇ ನಿಜಭಕ್ತಿ!

ಈ ಭೂಮಿಯ ಮೇಲೆ ಅವತರಿಸಿದ ಯಾವ ಸಂತರೂ ಸರಳವಾದ ಸಹಜವಾದ ಇಂತಹ ಸೂತ್ರವನ್ನು ಹೇಳಲಿಲ್ಲ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಬಸವಣ್ಣನನ್ನು ನೆನೆದು ಮಾಡುವ ಭಕ್ತಿ ನಡೆಯುವುದಯ್ಯ ಎಂದು ಹೇಳುತ್ತಾ, ಬಸವಣ್ಣನನ್ನೆ ನೆನೆಯದೆ ಮಾಡುವ ಭಕ್ತಿ

ಎಳೆತಟವಯ್ಯ. ಅದು ಹೊಯಿದಾಡುವ ಭಕ್ತಿ ಎಂದು ಕಪಿಲಸಿದ್ಧ ಮಲ್ಲಿನಾಥನೊಂದಿಗೆ ಸಿದ್ಧರಾಮ ಶಿವಯೋಗಿಗಳು ಮಾತನಾಡಿದ್ದಾರೆ. ಆತನ ಈ ಮಾತು ಸಾಧ್ಯವಾದರೆ ಓದುಗ ಕೇಳಿಸಿಕೊಳ್ಳಲಿ ಎಂದು ಹೇಳಿದ ಹಾಗಿದೆ.

**798**

**ಬಸವಣ್ಣ ಸಮತೆ ಎನಗಾಗದಯ್ಯಾ.**
**ಅಯ್ಯಾ, ಲಿಂಗಸ್ಥಲ-ಜಂಗಮಸ್ಥಲ-ಪ್ರಸಾದಸ್ಥಲ ನಿನಗಾಗದಯ್ಯಾ**
**ತ್ರಿವಿಧ ಸಕೀಲ ಸಂಬಂಧವನರಿದಡೆ**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ಇತ್ತ ಬಾ ಎಂದೆತ್ತಿಕೊಳ್ಳನೇ ಅಯ್ಯ !**

ಬಸವಣ್ಣನ ಸಮತೆ ಎನಗಾಗದಯ್ಯಾ:

ಅದೆಂತಹ ಸಮತೆ ಬಸವಣ್ಣನದು! ಕಳ್ಳ ಮನೆಗೆ ಬಂದು ಆಕಳ ಕದ್ದುಕೊಂಡು ಹೋದರೆ, ಕರುವ ಬಿಟ್ಟು ಹೋದನಲ್ಲ ಎಂದು ಹೇಳಿದನಂತೆ! ಇದೆಂತಹ ಅಚ್ಚರಿಯ ಮಾತು. ಶರಣರು ಆಶ್ಚರ್ಯದಿಂದ ಬಸವಣ್ಣನನ್ನು ನೋಡಿದರೆ, ಹಾಗೆ ನೋಡಬೇಡಿ; ಅಲ್ಲಿ ಉಂಬರೂ ಸಂಗ ಇಲ್ಲಿ ಉಂಬರೂ ಸಂಗ ಎಂದು ಅವರ ನೋಟಕ್ಕೆ ಉತ್ತರ ಕೊಟ್ಟನಂತೆ. ಅದೆಂತಹ ಸಮತೆ! ಅಂತಹ ಸಮತೆ ಎನಗಾಗದಯ್ಯಾ.

ಕಳ್ಳ ಮನೆಗೆ ಬಂದು ಕಳುವುಮಾಡಲು ತೊಡಗಿದಾಗ ಕಳ್ಳ-ಕಳ್ಳ ಎಂದು ಚೀರಿದ ಗಂಗಾಮಾತೆಗೆ ಕೊಡುಕೊಡೆಲೆ ಚಾಂಡಾಲಗಿತ್ತಿ ಎನ್ನಯ್ಯನ ಕೈಯಿ ನೊಂದಾವು ಎಂದು ಹೇಳಿದ. ಇದು ಎಂತಹ ಸಮಾನತೆಯ ಮಾತು! ಕೊರಳಲ್ಲಿ ಧರಿಸಿದ ಚಿನ್ನ ಅದು ಚಿನ್ನವಲ್ಲ, ಲೋಹವೆಂದು ಎಚ್ಚರಿಸಲು ಬಂದ ಸಂಗಮನಾಥ. ಆತನನ್ನು ಕಳ್ಳ ಎನ್ನಲು ಸಾಧ್ಯವೇ?

ಹೊನ್ನಿನೊಳಗೊಂದು ಒರೆಯ ಅನ್ನದೊಳಗೊಂದು ಅಗಳ, ವಸ್ತ್ರದೊಳಗೊಂದು ಎಳೆಯ ಇಂದಿಂಗೆ ನಾಳಿಂಗೆ ಎಂದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಎಂದು ಹೇಳಲಾಗಿಯೂ; ಚಿನ್ನ ಧರಿಸಿದ ನಿನ್ನ ಅಜ್ಞಾನವನ್ನು ತೊಲಗಿಸಲು ಬಂದ ಕೂಡಲಸಂಗಮನನ್ನು ನೀನು ಕಳ್ಳ ಎಂದು ನುಡಿಯುವುದೆ?

ಅಯ್ಯಾ, ಲಿಂಗಸ್ಥಲ-ಜಂಗಮಸ್ಥಲ-ಪ್ರಸಾದಸ್ಥಲ ನಿನಗಾಗದಯ್ಯ. ತ್ರಿವಿಧ ಸಕೀಲ ಸಂಗಮವನ್ನು ಅರಿತು ನಿಸ್ಥಲ ಮಾಡಿದಾತ ಬಸವಣ್ಣ. ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯ ಇತ್ತ ಬಾ ಎಂದು ಎತ್ತಿಕೊಳ್ಳನೇ ಅಯ್ಯಾ.

**799**

**ಬಸವಣ್ಣನೇ ತಾಯಿ, ಬಸವಣ್ಣನೇ ತಂದೆ**
**ಬಸವಣ್ಣನೇ ಪರಮಬಂಧುವೆನಗೆ.**
**ವಸುಧೀಶ ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ನಿಮ್ಮ ಹೆಸರಿಟ್ಟು ಗುರು ಬಸವಣ್ಣನಯ್ಯಾ.**

ತಂದೆ ತಾಯಿ ಮಾಂಸ ಪಿಂಡಕ್ಕೆ ಜನ್ಮಕೊಟ್ಟರೆ, ಗುರುದೇವ ಮಾಂಸ ಪಿಂಡವನ್ನು ಮಂತ್ರ ಪಿಂಡವನ್ನಾಗಿಸುತ್ತಾನೆ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಬಸವಣ್ಣನೇ ತಾಯಿ, ಬಸವಣ್ಣನೇ ತಂದೆ ಬಸವಣ್ಣನೇ ಪರಮಬಂಧುವೆನಗೆ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಬಸವರಾಜ ದೇವರು ಕೂಡಾ ''ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು, ನೀನಲ್ಲದೆ ಮತ್ತಾರೂ ಇಲ್ಲವಯ್ಯಾ, ಕೂಡಲಸಂಗಮದೇವಾ ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ನಿಮ್ಮ ಧರ್ಮ'' ಎಂದಿದ್ದಾರೆ.

ಹಡೆದ ತಂದೆ ತಾಯಿಗೂ, ತಂದೆ ತಾಯಿಯನ್ನು ಹಡೆದ ತಂದೆಗೂ ತಂದೆ ಮಾತ್ರ ಒಬ್ಬನೆ! ಲೋಕ ಹಡೆದ ತಂದೆ ತಾಯಿಗಳನ್ನೇ ತಂದೆ ತಾಯಿ ಎಂದರೆ ಶರಣರು ಮಾತ್ರ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ತಂದೆ ಎಂದು ಕರೆಯುತ್ತಾರೆ. ಸದಾ ಆತನನ್ನೇ ನೆನೆಯುತ್ತಾರೆ. ಏಕೆಂದರೆ ಗುರುದೇವ ಬ್ರಹ್ಮಾಂಡದಲ್ಲಿರುವ ಸಕಲ ಕಾಯಗಳಿಗೂ ಜನ್ಮ ನೀಡಿದ್ದಾನೆ. ಜನ್ಮ ನೀಡಿದ ಆ ಕಾಯದಲ್ಲಿಯೇ ತಾನು ಸಂಗಮವಾಗಿ, ಕಾಯಕ್ಕೆ ಅರಿವಿನ ಪಾಠ ಮಾಡುತ್ತಾನೆ. ಹೀಗಾಗಿ ತಂದೆ ನೀನು ತಾಯಿ ನೀನು ಎಂದಿದ್ದಾರೆ ಬಸವಣ್ಣ.

ಸಿದ್ಧರಾಮ ಶಿವಯೋಗಿಗಳು ತಮ್ಮ ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನೊಂದಿಗೆ ಮಾತನಾಡುತ್ತಾ, ವಸುಧೀಶನೆ ಕಪಿಲಸಿದ್ಧ ಮಲ್ಲಿಕಾರ್ಜುನನೇ ನಿಮಗೆ ಹೆಸರಿಟ್ಟು ಕರೆದಾತ ಕೂಡಾ ಗುರುದೇವನಾದ ಬಸವಣ್ಣನೇ ಅಯ್ಯಾ.

**800**

**ಬಸವಣ್ಣ ಬಸವಣ್ಣ ಭಕ್ತಿ ಬೀಜ ನಷ್ಟ.**
**ಬಸವಣ್ಣ ಬಸವಣ್ಣ ಬಸವಣ್ಣ ಮುಕ್ತಿಬೀಜ ನಷ್ಟ**
**ಬಸವಣ್ಣ ಮೋಕ್ಷವೆಂಬುದು ಮುನ್ನವೆ ಅಡಗಿತ್ತು.**
**ಬಸವಣ್ಣ ತೋರದೆ ಬೀರದೆ ಹೋದೆಹೆನೆಂಬೆ,**
**ಮಹಾಜ್ಞಾನಿ ಬಸವಣ್ಣಾ, ನೀನೆಲ್ಲಿ ಯಡಗಿದೆಯೊ**
**ಕಪಿಲಸಿದ್ಧ ಮಲ್ಲಿನಾಥ ಬಸವಾ?**

ಬಸವಣ್ಣನೆಂಬ ಮಹಾವೃಕ್ಷದಲ್ಲಿ ಬಸವಣ್ಣನೆಂಬ ಭಕ್ತಿ ಬೀಜಗಳು ಹುಟ್ಟಿದ್ದವು. ಅದೆಷ್ಟೋ ಕಾಯಗಳು, ಹದಮಾಡಿಕೊಂಡ ಭೂಮಿಯಲ್ಲಿ, ಬಸವಣ್ಣನೆಂಬ ಭಕ್ತಿ ಬೀಜವ ಬಿತ್ತಿ, ಜ್ಞಾನ ವೃಕ್ಷಗಳೇ ಆಗಿದ್ದವು. ಕಲ್ಯಾಣವೆಂಬುದು ಬಸವಕಲ್ಯಾಣವಾಯಿತ್ತು.

ಬಸವಣ್ಣ ನೀನು ತೋರದೆ ಬೀರದೆ ನೀನು ಹೋಗುವುದನ್ನು ಯಾರಿಗೂ ಹೇಳದೆ ಹೋದೆಯಲ್ಲ ಬಸವಣ್ಣ. ಮಹಾಜ್ಞಾನಿ ಬಸವಣ್ಣಾ, ನೀನೆಲ್ಲಿ ಅಡಗಿದೆಯೋ ತಂದೆ; ನನ್ನಯ್ಯಾ ಬಸವಣ್ಣಾ. ನೀನು ಇಲ್ಲದ ಕಲ್ಯಾಣವು ಬರಿದಾಯಿತ್ತಲ್ಲಾ ಬಸವಣ್ಣಾ. ನೀನು ಸೃಷ್ಟಿ ಮಾಡಿದ ಭಕ್ತಿ ಬೀಜ ನಷ್ಟವಾಯಿತ್ತಲ್ಲ ಬಸವಣ್ಣಾ.

ನೀನು ಸೃಷ್ಟಿ ಮಾಡಿದ ಮುಕ್ತಿಬೀಜ ನಷ್ಟವಾಯಿತ್ತಲ್ಲಾ ಬಸವಣ್ಣಾ. ನೀನು ಸೃಷ್ಟಿ ಮಾಡಿದ ಸಹಜ ಮೋಕ್ಷದ ದಾರಿ ಹಾಳಾಯಿತ್ತಲ್ಲಾ ಬಸವಣ್ಣಾ.

ಯಾರಿಗೂ ನೀನು ಹೋಗುವ ಸುಳುಹು ತೋರದೆ ಬೀರದೆ ಶರಣಕುಲವನ್ನು ಅಗಲಿ ನೀನೆಲ್ಲಿ ಅಡಗಿದೆಯೋ ಬಸವಣ್ಣಾ! ಅಜ್ಞಾನದಿಂದ ದಣಿದು ಬಂದವರಿಗೆ ಭಕ್ತಿಯ ರಸವನ್ನು ಪಾನ ಮಾಡಿಸಿದ ಮಹಾಂತ ನೀನು! ದಣಿದು ಮುಕ್ತಿ ಬೇಡಲು ಬಂದವರಿಗೆ ಬ್ರಹ್ಮರಸವನು ಕುಡಿಸಿ ಅವರ ಭ್ರಮೆ ಕಳೆದ ಮಹಾವೀರ ನೀನು! ಮೋಕ್ಷ ಕೇಳಲು ಬಂದ ಸಾಧಕರಿಗೆ, ನೀನೆಂದು ಬಂಧನವಾಗಿರುವಿ? ಎಂದು ಸಹಜ ಜ್ಞಾನದ ರಸಪಾಕ ಉಣಬಡಿಸಿ ಮುಕ್ತನನ್ನಾಗಿಸಿದ ಮಹಾಜ್ಞಾನಿ ಬಸವಣ್ಣ ನೀನು!

ಬಸವಣ್ಣ ನೀನೆಲ್ಲಿ ಅಡಗಿದೆಯೋ! ಜ್ಞಾನಭಂಡಾರಿ! ಕಪಿಲಸಿದ್ಧ ಮಲ್ಲಿನಾಥನ ಬಸವಾ ಎಂದು ಸಿದ್ಧರಾಮ ಶಿವಯೋಗಿಗಳು ಬಸವಣ್ಣನ ಅಗಲಿಕೆಯ ದುಃಖವನ್ನು ಸಹಿಸಿಕೊಳ್ಳಲು ಸಾಧ್ಯವಾಗದೆ ಚರಮಗೀತೆಯನ್ನು ಹಾಡಿದ್ದಾರೆ.

**801**

**ಬಸವನ ಹಾಡದರ, ಬಸವನ ಹೊಗಳದರ**
**ಬಸವಾಕ್ಷರತ್ರಯದ ಜಪವಿಲ್ಲದ ದೆಸೆಗೇಡಿ ಮನುಜರ**
**ಎನ್ನತ್ತ ತೋರದಿರಯ್ಯಾ, ತಂದೆ**
**ವಿಷಮಾಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಬಸವನ ಹಾಡ ಹಾಡದವರ, ಬಸವನ ಹೊಗಳದವರ, ಬಸವಾಕ್ಷರತ್ರಯದ ಜಪವಿಲ್ಲದ ದೆಸೆಗೇಡಿ ಮನುಜರ ಎನ್ನತ್ತ ತೋರದಿರಯ್ಯಾ. ತಂದೆ ವಿಷಮಾಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಬಸವಣ್ಣನನ್ನು ಭಕ್ತಿಯಿಂದ ಸ್ಮರಿಸಿದ್ದಾರೆ.

ಓಂಕಾರದಿಂದತ್ತತ್ತ ನೀನೇ ಬಸವಣ್ಣಾ! ನಾದ ಬಿಂದು ಕಳೆಗಳಿಂದತ್ತತ್ತ ನೀನೇ ಬಸವಣ್ಣಾ! ಪ್ರಥಮಾಚಾರ್ಯ ನೀನೇ ಬಸವಣ್ಣಾ! ಲಿಂಗಾಚಾರ್ಯ ನೀನೇ ಬಸವಣ್ಣಾ! ಜಂಗಮಾಚಾರ್ಯ ನೀನೇ ಬಸವಣ್ಣಾ! ಪ್ರಸಾದಾಚಾರ್ಯ ನೀನೇ ಬಸವಣ್ಣಾ! ಎನಗೆ ಸರ್ವಾಚಾರ್ಯನು ನೀನೇ ಬಸವಣ್ಣಾ! ನೀನೆ ಗತಿಮತಿಯಾಗಿ ಎನ್ನನುಳುಹಿದ ಕಾರಣ ಕೂಡಲಚೆನ್ನ ಸಂಗಮದೇವಾ ಆವ ವರ್ಣವಿಲ್ಲದಂದು ಓಂನಮಃಶಿವಾಯ ಎನುತಿರ್ದೆನು ಎಂದು ಬಸವಣ್ಣನನ್ನು ಸ್ಮರಿಸಿದ್ದಾರೆ.

ಕೆಳಗೇಳು ಲೋಕಂಗಳು ಇಲ್ಲದ ಮುನ್ನ, ಮೇಲೇಳು ಲೋಕಂಗಳು ಇಲ್ಲದ ಮುನ್ನ ಸಮಸ್ತ ಬ್ರಹ್ಮಾಂಡಗಳಿಲ್ಲದ ಮುನ್ನ, ಅಲ್ಲಿಂದತ್ತತ್ತ. ಬಸವಣ್ಣಾ, ನೀನು ಲಿಂಗಭಕ್ತ. ಜಂಗಮಪ್ರಾಣಿ! ಶಶಿಧರನ ಶರಣಂಗೆ ವೃಕ್ಷಧರ ಸ್ವಾಯತವಾಗಿ, ನಮ್ಮ ಗುಹೇಶ್ವರ ಲಿಂಗಕ್ಕೆ ಸಂಗನ ಬಸವಣ್ಣನೇ ಭಕ್ತನೆಂದರಿದು ನಾನು ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು ಎಂದು ಅಲ್ಲಮ ಪ್ರಭುಗಳು ಬಸವಣ್ಣನನ್ನು ಸ್ಮರಿಸಿದ್ದಾರೆ.

ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ ಮಾಡುವ ಮಾಟವಳಿಯಿತ್ತು ಬಸವಾ. ಇಂದಿಗೆ ಊಟವಳಿಯಿತ್ತು ಬಸವಾ. ಇಂದಿಂಗೆ ಅವರ ಸಂಗವಳಿದು ನಿರಾಲಂಬ ಮೂರ್ತಿಯ ಇರವು ಕಾಣಿಸಿತಯ್ಯಾ ಬಸವಾ, ಸಂಗಯ್ಯಾ ಬಸವನ ರೂಪ ಎನ್ನಲ್ಲಿ ಅಡಗಲು ಎಂದು ನೀಲಮ್ಮ ತಾಯಿ ಬಸವರಾಜ ದೇವರನ್ನು ಸ್ಮರಿಸಿದ್ದಾರೆ.

**802**

**ಬಸವನನು ಹೊಗಳುವವ, ಬಸವನನು ನೆನೆವವರ,**
**ಬಸವನನು ಗುರು ಚರ ಇಷ್ಟವೆನಿಪ**
**ಸದಮಲಜ್ಞಾನಪ್ರಕಾಶ ಸದ್ವರ್ತನರ**
**ಹೊರೆಯೊಳಗೆನ್ನ ನಿರಿಸಯ್ಯಾ ಗುರುವೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಸದಾ ಬಸವಣ್ಣನನ್ನು ನೆನೆವ ಶರಣರಲ್ಲಿ ಎನ್ನನಿರಿಸು, ಸದಾ ಬಸವಣ್ಣನನ್ನೇ ಹೊಗಳುವವರ ಚರಣಕಮಲದ ಸೇವಕನನ್ನಾಗಿ ಇರಿಸು. ಬಸವಣ್ಣನನ್ನೇ ಗುರುದೇವನನ್ನಾಗಿಸಿಕೊಂಡವರ ಹತ್ತಿರ

ಸದಾ ಎನ್ನನಿರಿಸು. ಸದಮಲಜ್ಞಾನ ಪ್ರಕಾಶ ಸದ್ವರ್ತನರ ಹೊರೆಯೊಳಗೆನ್ನನು ಇರಿಸಯ್ಯಾ ಗುರುವೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.

ಬಸವಣ್ಣ ಇಡೀ ಲೋಕಕ್ಕೆ ಸಹಜ ಜ್ಞಾನದ ಸರಳ ಸೂತ್ರವನ್ನು ನೀಡಿದಾತ. ಇಡೀ ಮನುಜ ಲೋಕವನ್ನೇ ಗುರುವಾಗಿ ಸ್ವೀಕರಿಸಿದಾತ. ಗುರುದೇವನ ಹೊರತು ಯಾರೂ ಶಿಷ್ಯರೆಂಬುವವರೆ ಇಲ್ಲ. ಸಕಲ ಮನುಕುಲವೆಲ್ಲ ಗುರುಕುಲ. ನಾನೊಬ್ಬನೇ ಅವರೆಲ್ಲರಿಗೆ ಭಕ್ತನೆಂದು ಲೋಕಕ್ಕೆ ಕೇಳುವಂತೆ ಸಾರಿದಾತ ಬಸವಣ್ಣ.

ಗುರು ಲಿಂಗ ಜಂಗಮ ಮಹೇಶ್ವರ ಪ್ರಸಾದಿ ಐಕ್ಯ ಎನ್ನುವ ಶಬ್ದಗಳ ಮೂಲಕ ಸಹಜ ಜ್ಞಾನವನ್ನು ತಿಳಿಸಿದಾತ ಬಸವಣ್ಣ.

ಹೆಣ್ಣು ಗಂಡು ಎನ್ನುವ ಅಂಗಗಳಿಲ್ಲ. ಪ್ರತಿ ಅಂಗದಲ್ಲಿಯೂ ಅರಿವೆಂಬ ಗುರುದೇವನಿದ್ದಾನೆ; ಆತ ಮಾತ್ರ ಗಂಡು. ಪ್ರತಿ ದೇಹವನ್ನು ಮನ ಆವರಿಸಿದೆ; ಆ ಮನವೇ ಹೆಣ್ಣು ಎಂದು ಹೇಳಿ ಅಂಗದ ಅಜ್ಞಾನವನ್ನು ಕಳೆದಾತ ಬಸವಣ್ಣ. ಇಂತಹ ಬಸವಣ್ಣನನ್ನು ಹೊಗಳುವವರ ಸಂಗದಲ್ಲಿರಿಸು ಎನ್ನನು. ಬಸವಣ್ಣನೇ ಗುರುದೇವನನ್ನಾಗಿ ಸ್ವೀಕರಿಸಿದವರ ಸೇವೆಯ ಮಾಡುವ ಭಾಗ್ಯವನ್ನು ಎನಗೆ ದಯಪಾಲಿಸಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಬಸವಣ್ಣನನ್ನು ಸ್ಮರಿಸಿದ್ದಾರೆ.

**803**

**ಬಸವನೇ ಮಾತೆಯಯ್ಯಾ, ಬಸವನೇ ತಾತನಯ್ಯ.**
**ಬಸವನೇ ಇಹಪರಕೆ ದಾತ, ನಾಥ.**
**ಬಸವಾಕ್ಷರತ್ರಯದ ಸೋಪಾನವಿಡಿದೀಗ**
**ತ್ರೈಲಿಂಗಕ್ಕೆ ಆನು ಮೂಲವಾದೆ.**
**ಬಸವ ಚೆನ್ನಬಸವ ಪ್ರಭುವಿನ ಕರುಣದಿಂದ**
**ದೆಸೆಯೆರಡುಗೆಟ್ಟೆನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಬಸವಣ್ಣನೆ ಎನಗೆ ಮಾತೆಯಯ್ಯಾ. ಬಸವಣ್ಣನೆ ಎನಗೆ ತಾತನಯ್ಯಾ ಆತ ನನಗೊಂದೆ ಅಲ್ಲ ಇಹಕ್ಕೂ ಪರಕ್ಕೂ ಬಸವಣ್ಣನೆ ದಾತನಾಗಿದ್ದಾನೆ. ನಾಥನು ಆಗಿದ್ದಾನೆ.

ಬಸವಾಕ್ಷರತ್ರಯವನ್ನು ಸೋಪಾನವನ್ನಾಗಿಸಿಕೊಂಡು ತ್ರೈಲಿಂಗಕ್ಕೆ ನಾನು ಮೂಲವಾದೆ. ಬಸವ ಚೆನ್ನಬಸವ ಹಾಗೂ ಪ್ರಭುದೇವರ ಕರುಣದಿಂದಾಗಿ ದೆಸೆ ಎರಡು ಕೆಟ್ಟೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

ಬಸವ ಎನ್ನುವ ಮೂರಕ್ಷರದಿಂದಲೇ ಸ್ಥೂಲತನು, ಸೂಕ್ಷ್ಮತನು, ಕಾರಣತನುವಿನ ಮೂಲವನ್ನು ಕಂಡುಕೊಂಡು ಆ ಮೂಲವೇ ನಾನಾದೆ. ಸಾತ್ವಿಕ, ರಾಜಸ, ತಾಮಸವೆಂಬ ಮೂರು ಗುಣಗಳನ್ನು ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರ ಕರುಣದಿಂದಾಗಿ ಕಳೆದುಕೊಂಡು ನಿರ್ಗುಣಿಯಾದೆನಯ್ಯಾ. ನಿರ್ಗುಣಿ ಎಂದರೆ ಸಾಮಾನ್ಯನಲ್ಲ; ಸಕಲ ಗುಣಗಳನ್ನು ಕಳೆದುಕೊಂಡವನು. ನಿರಾಕಾರನು ಇಹಪರಕ್ಕೆ ದಾತನು, ನಾಥನು ಆದಂತಹ ಬಸವಣ್ಣನೆ ನಿರ್ಗುಣಿ.

**804**

**ಬಸವಾ ಬಸವಾ ಎಂಬ ಶಬ್ದವಡಗಿತ್ತು.**

**ಬಸವಾ ಬಸವಾ ಎಂಬ ಕಂಬ ಮುರಿಯಿತ್ತು.**
**ಬಸವಾ ಬಸವಾ ಎಂಬ ಮಾಟ ನಷ್ಟವಾಯಿತ್ತಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಬಸವಾ ಬಸವಾ ಎಂಬ ಶಬ್ದ ಅಡಗಿತ್ತು. ಬಸವ ಎಂಬುದು ಅದು ಶಬ್ದವಲ್ಲ. ಅದು ನಿಃಶಬ್ದ. ಶಬ್ದವನ್ನು ನಿಃಶಬ್ದ ನುಂಗಿ ಬಸವ ಎಂಬ ಅಕ್ಷರಗಳಾದವು. ಬಸವಾ ಬಸವಾ ಎಂಬ ಕಂಬ ಮುರಿಯಿತ್ತು. ಬಸವ ಎಂಬುದು ಒಂದು ಕಂಬವೇ ಇಲ್ಲದ ದಿಂಡು ಅದು ಕದಳಿ. ಸುಲಿದಂತೆಲ್ಲಾ ಇಂಬಿಲ್ಲದಂತೆ ಕಂಬ ಕಾಣದಾಯಿತು. ಬಸವಣ್ಣ ನಿರಾಕಾರ. ಆತ ಸಾಕಾರವಾಗಿ ಬಂದು, ನಿರಾಕಾರದಲ್ಲಿ ಲೀನವಾಗಿ, ಆಕಾರ ಇಲ್ಲವಾದ ಬಸವಣ್ಣ. ಬಸವಾ ಬಸವಾ ಎಂಬ ಮಾಟ ನಷ್ಟವಾಯಿತ್ತಯ್ಯಾ.

ಬಯಲ ಬೀಜವೇ ಮಾಟವಾಗಿ ಮಹಾಜ್ಞಾನದ ವೃಕ್ಷವಾಗಿ ನಡೆದಾಡುವ ಮಾತನಾಡುವ ಜ್ಞಾನದ ಮರವಾಗಿ ಮಾಟ ನಷ್ಟವಾಯಿತ್ತು. ಕಪಿಲಸಿದ್ಧ ಮಲ್ಲಿಕಾರ್ಜುನನೆ ತಾನಾಗಿ ಬಸವಾ ಎಂಬ ಶಬ್ದ–ನಿಃಶಬ್ದದಲ್ಲಿ ಅಡಗಿತ್ತು.

**805**

**ಬಸವಾ ಬಸವಾ, ನಿಮ್ಮಿಂದ ಕಂಡೆನಯ್ಯಾ ಭಕ್ತಿಯ.**
**ಬಸವಾ ಬಸವಾ, ನಿಮ್ಮಿಂದ ಕಂಡೆನಯ್ಯಾ ಜ್ಞಾನವ.**
**ಬಸವಾ ಬಸವಾ, ನಿಮ್ಮಿಂದ ಕಂಡೆನಯ್ಯಾ ವೈರಾಗ್ಯವ.**
**ಕರುಣಿ ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ನಿಮಗೂ ಎನಗೂ ಬಸವಣ್ಣನೆ ಶಿವಪಥಿಕನಯ್ಯಾ.**

ಬಸವಾ, ಬಸವಾ ನಿಮ್ಮಿಂದ ಕಂಡೆನಯ್ಯಾ ಭಕ್ತಿಯ:

ಭಕ್ತಿಯೆಂದರೆ ಅಂಗದ ಮೇಲೆ ಲಿಂಗಯ್ಯನನ್ನು ಇಟ್ಟುಕೊಂಡು ಭಸ್ಮ, ಪತ್ರೆ, ಪುಷ್ಪ ಧರಿಸಿ ನೈವೇಧ್ಯವ ಮಾಡಿ ಪೂಜಿಸುವುದು ಭಕ್ತಿಯಲ್ಲಿ. ಇದು ತೋರಿಕೆಯ ಭಕ್ತಿ. ಸಾಯುವವರೆಗೂ ಅಂಗದ ಮೇಲೆ ಲಿಂಗವ ಕಟ್ಟಿಕೊಂಡು ಆ ಲಿಂಗಯ್ಯನನ್ನು ಆರಾಧಿಸಿ ಭಕ್ತಿ ಮಾಡಿದರೂ ಕೂಡಾ ಆತ ನನಗೆ ದರುಶನ ಕೊಡಲು ಸಾಧ್ಯವಿಲ್ಲ. ಏಕೆಂದರೆ ಪೂಜಿಸುವ ಲಿಂಗ ಲಿಂಗವಲ್ಲ. ಲಿಂಗಕ್ಕೆ ಮಾಡುವ ಭಕ್ತಿ ಕೂಡಾ ಭಕ್ತಿಯಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಯ್ಯನನ್ನು ಅಂಗವನ್ನು ಆವರಿಸಿದ ಮನ ಪೂಜಿಸುವುದೇ ಭಕ್ತಿ. ಹೀಗೆ ಪೂಜಿಸುವ ಪೂಜಕನನ್ನು ಶರಣರು ಭಕ್ತನೆಂದು ಕರೆದಿದ್ದಾರೆ.

ಬಸವಾ ಬಸವಾ ನಿನ್ನಿಂದ ಕಂಡೆನಯ್ಯಾ ಜ್ಞಾನವ:

ಬಸವಣ್ಣ ನನ್ನಲ್ಲಿರುವ ಜ್ಞಾನವನ್ನು ನಾನು ಹೇಗೆ ಬಳಕೆಮಾಡಿಕೊಳ್ಳಬೇಕೆಂದು ಆ ಜ್ಞಾನಿಯೇ ನಾನಾಗುವ ಬಗೆ ಹೇಗೆಂದು ನೀವು ಹಲವಾರು ಸೂತ್ರಗಳ ಮೂಲಕ ನನಗೆ ತೋರಿದಿರಿ. ನೀನು ನನಗೆ ಜ್ಞಾನ ತೋರುವಾಗ ಗುರುವಾಗಲಿಲ್ಲ, ನನ್ನನ್ನು ನೀವು ಶಿಷ್ಯನನ್ನಾಗಿಸಿಕೊಳ್ಳಲಿಲ್ಲ. ನನ್ನಲ್ಲಿರುವ ಜ್ಞಾನ ಸಂಪತ್ತನ್ನು ನನಗೆ ತೋರಿಸಿದ ಮಹಾಜ್ಞಾನಿಯಯ್ಯಾ ನೀವು.

ಬಸವಾ ಬಸವಾ ನನಗೆ ನೀವು ನನ್ನಲ್ಲಿಯೇ ಭಕ್ತಿಯನ್ನು ತೋರಿದಿರಿ. ನನ್ನಲ್ಲಿಯೇ ವೈರಾಗ್ಯವನ್ನು ತೋರಿದಿರಿ ಬಸವ ತಂದೆ. ನನ್ನ ಅಜ್ಞಾನವನ್ನು ನಾನು ಬಳಕೆ ಮಾಡದೆ; ನನ್ನ ಜ್ಞಾನದ ಮೂಲಕ ನಾನು ಹೇಗೆ ವಿರಾಗಿಯಾಗಬೇಕು ಎನ್ನುವ ಸೂತ್ರವನ್ನು ಕರುಣಿಸಿದ ಶಿವಸ್ವರೂಪಿಗಳು

ನೀವು. ಹೀಗಾಗಿ ಕಪಿಲಸಿದ್ಧ ಮಲ್ಲಿನಾಥಯ್ಯನೇ ನಿಮಗೂ ಎನಗೂ ಬಸವಣ್ಣನೆ ಶಿವಪಥವನ್ನು ತೋರಿದ ಶಿವಪಥಿಕನಯ್ಯ.

**806**

**ಬಸವಾ ಬಸವಾ, ಭವರೋಗ ವೈದ್ಯ.**
**ಬಸವಾ ಬಸವಾ, ನಿನ್ನರಿವು ನೀನೆ.**
**ಬಸವಾ ಬಸವಾ, ಕಾಲಕಲ್ಪಿತನಷ್ಟ ನೀನೆ.**
**ಬಸವಾ, ಕಪಿಲಸಿದ್ಧ ಮಲ್ಲಿನಾಥನಲ್ಲಿ**
**ನೀನೆಲ್ಲಿ ಅಡಗಿದೆಯೊ ಬಸವಾ.**

ಬಸವಣ್ಣ ಭವರೋಗದ ವೈದ್ಯರು. ಇಡೀ ಲೋಕಕ್ಕೆ ಜನನ ಮರಣಗಳು ಗೊತ್ತು. ಲೋಕದಲ್ಲಿರುವ ಆಧ್ಯಾತ್ಮ ಲೋಕಕ್ಕೆ ಜನನ ಮರಣಗಳು ಇಲ್ಲವೆಂಬುದು ಗೊತ್ತು; ಅದು ಶಬ್ದದಲ್ಲಿ ಮಾತ್ರ!

ಬಸವಣ್ಣ, ಜನನ ಮರಣಗಳು ಇಲ್ಲವೆಂಬುದನ್ನು ನೀವು ಸರಳ ಸೂತ್ರಗಳ ಮೂಲಕ ಎನಗೆ ತೋರಿದಿರಿ. ಅಂಗವನ್ನು ಆವರಿಸಿದ ಮನಕ್ಕೆ ಜನನವಿಲ್ಲ ಮರಣವಿಲ್ಲ, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೂ ಜನನವಿಲ್ಲ ಮರಣವಿಲ್ಲ, ಮನ ಅರಿವೆಂಬ ಗುರುದೇವನಿಗೆ ಶಿಷ್ಯನಾದಾಗ ಮಾತ್ರ ಇದು ಸಾಧ್ಯವಾಗುತ್ತದೆ ಎಂದು ಮೊಟ್ಟ ಮೊದಲಿಗೆ ತನು ಲೋಕಕ್ಕೆ ತಿಳಿ ಹೇಳಿದ ವೈದ್ಯರು ನೀವು. ತನುವಿನ ಭವರೋಗವನ್ನು ಬಿಡಿಸಿದ ಮಹಾಂತರು ನೀವು. ಗುರುದೇವನೆ ಮಹಾದೇವ, ಮನವೇ ಮಹಾದೇವಿ. ಇವರಿಬ್ಬರು ವಾಸ ಮಾಡಿದ ಕಾಯವೇ ಕೈಲಾಸವೆಂದು ಕಾಯಲೋಕಕ್ಕೆ ತಿಳಿಹೇಳಿ ಕಾಯಕ್ಕಂಟಿದ ಜನನ-ಮರಣಗಳೆಂಬ ರೋಗ ಬಿಡಿಸಿದ ವೈದ್ಯರು ನೀವು.

ಬಸವಾ, ಬಸವಾ, ನಿನ್ನರುವು ನೀವೆ ಎಂದು ಸಾರಿದ ಮೂಲ ಪುರುಷರು ನೀವು. ಅರಿವನ್ನು ಯಾವ ಕಾಯವು, ಪುಸ್ತಕಗಳ ಮೂಲಕ, ಗುರುದೇವನ ಮೂಲಕ ಸಂಗ್ರಹಮಾಡಿಕೊಳ್ಳುವ ಅವಶ್ಯಕತೆ ಇಲ್ಲ. ಸಕಲ ಪುಸ್ತಕಗಳು ಕಾಯದಿಂದಲೇ ಹೊರಬಂದಿವೆ. ಕಾಯಕ್ಕೆ ಕಾಯದಿಂದ ಹೊರಬಂದ ಪುಸ್ತಕಗಳು ಏನನ್ನು ಬೋಧಿಸಲು ಸಾಧ್ಯವಾಗುವುದಿಲ್ಲ. ಕಾಯವನ್ನು ಆವರಿಸಿದ ಮನದಿಂದಲೇ ಕಾಯದಲ್ಲಿ ಸಂಗಮವಾದ ಅರಿವನ್ನು ಕಂಡುಕೊಳ್ಳಬೇಕೆಂದು ಹೇಳಿದ ಮೂಲಪುರುಷರಾದ ಬಸವದೇವರು ನೀವು.

ಬಸವಣ್ಣ ಕಾಲಕಲ್ಪಿತನಷ್ಟ ಮಾಡಿದವನು ನೀನು. ಕಾಯಕ್ಕೆ ಕಾಲವಿದೆ. ಅದು ಕಾಯವನ್ನು ಕಲ್ಪನೆ ಮಾಡಿಕೊಂಡಿದೆ. ಅದರ ಕಲ್ಪನೆ ಕಾಯದಲ್ಲಿಯೇ ಸಂಗಮವಾದ ಗುರುದೇವನು ಮಾತ್ರ ನಷ್ಟ ಮಾಡಲು ಸಾಧ್ಯ. ಅಂತಹ ಗುರುದೇವನನ್ನು ಲೋಕಕ್ಕೆ ತೋರಿದ ಮಹಾಂತ ನೀನು ಬಸವಣ್ಣ.

ಕತ್ತಲೆಯನ್ನು ಆವರಿಸಿದ ಇಡೀ ಲೋಕವನ್ನು, ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಬೆಳಕಿನಿಂದ ಬೆಳಗಿ, ನೀನೆಲ್ಲಿ ಅಡಗಿದೆಯೋ ಬಸವಣ್ಣ ಎಂದು ಬಸವಣ್ಣನ ಮಹಾಜ್ಞಾನದಲ್ಲಿ ಸಂಗಮವಾಗಿ ಕೂಡಲಸಂಗಯ್ಯನೇ ತಾನಾದ ಬಸವಣ್ಣನ ಆಗಲಿಕೆಯ ದುಃಖದಲ್ಲಿ ಸಿದ್ಧರಾಮ ಶಿವಯೋಗಿಗಳು ಈ ಮಾತನ್ನು ಹೇಳಿದ್ದಾರೆ.

**807**

**ಬಹುಪರಿಯ ಪುಷ್ಪದಲ್ಲಿ**

**ಹೊಸಪರಿಯ ಜಲದಲ್ಲಿ ಎಸೆದಿಪ್ಪ**
**ಲೋಕ ಬ್ರಹ್ಮಾಂಡಗಳ ಮುಸುಕಿಪ್ಪ**
**ಶಕ್ತಿಯ ಹಸಿಯ ಮಸ್ತಕದಲ್ಲಿ**
**ಒಸೆದು ಅರ್ಚಿಪನಾತ ಪರಮಯೋಗಿ.**
**ಸಾಗರದ ಮೇಲಿಪ್ಪ ಯೋಗಪಂಚಮದಲ್ಲಿ**
**ಭೋಗಿಪನು ನಿತ್ಯತೃಪ್ತನಾಗಿ.**
**ಮೇಲಿಪ್ಪ ಕಳೆಗಳಲ್ಲಿ ತೋರಿಪ್ಪ ಸತ್ವದಲ್ಲಿ**
**ತಾನಿಪ್ಪನೈ ಗುರು ಶ್ರೀ ಕಪಿಲಸಿದ್ಧ ಮಲ್ಲೇಶ್ವರಾ.**

ಬಹುಪರಿಯ ಪುಷ್ಪದಲ್ಲಿ, ಹೊಸಪರಿಯ ಜಲದಲ್ಲಿ ಎಸೆದಿಪ್ಪ ಲೋಕ ಬ್ರಹ್ಮಾಂಡಗಳ ಮುಸುಕಿಪ್ಪ ಶಕ್ತಿಯ ಹಸಿಯ ಮಸ್ತಕದಲ್ಲಿ ಒಸೆದು ಅರ್ಚಿಪನಾತ ಪರಮಯೋಗಿ:

ಇಡೀ ಬ್ರಹ್ಮಾಂಡದ ತುಂಬಾ ಜಲವನ್ನು ಚೆಲ್ಲಿ ಬಹುಪರಿಯ ಪುಷ್ಪಗಳನ್ನು ಬೆಳೆದಿದ್ದಾನೆ. ಪುಷ್ಪಗಳನ್ನು ಬೆಳೆದವನು ಪರಮಯೋಗಿ. ಅವನ ಪುಷ್ಪಗಳನ್ನು ಕಿತ್ತಿ, ಪುಷ್ಪಗಳಿಗೆ ಅಲಂಕರಿಸಿ, ಪುಷ್ಪವನ್ನು ಬೆಳಗುವವನು ಅವನೆ. ಇದೊಂದು ಅತ್ಯಂತ ಸುಂದರವಾದ ಉಪಮೆ. ಜಲದಿಂದಲೇ ಭೂಮಿ ಪುಷ್ಪವಾಗಿ ಅರಳಿನಿಂತಿದೆ. ಅದರಲ್ಲಿರುವ ಕಲ್ಲು, ಮಣ್ಣು, ಹೊನ್ನು ಇವೆಲ್ಲ ಜಲದಿಂದ ಅರಳಿದ ಪುಷ್ಪಗಳೇ ಆಗಿವೆ. ಭೂಮಿಯ ಮೇಲೆ ಬೆಳೆದ ಗಿಡ, ಮರ, ಬಳ್ಳಿಗಳೆಲ್ಲ ಜಲದಿಂದ ಅರಳಿದ ಪುಷ್ಪಗಳೇ ಆಗಿವೆ. ಜಲದಲ್ಲಿ ಓಡಾಡುವ ಜಲಚರಗಳೆಲ್ಲ ಜಲವನ್ನುಂಡು ಜಲದಿಂದಲೇ ಅರಳಿ ಜಲದಲ್ಲಿಯೇ ಓಡಾಡುವ ಪುಷ್ಪಗಳು. ಇದೆಲ್ಲದರ ಅರಿವು ಜಲ ಚೆಲ್ಲಿ ಪುಷ್ಪವನ್ನಾಗಿಸಿದ ಕಾಯವೆಂಬ ಪುಷ್ಪಕ್ಕೆ ಮಾತ್ರ ಇದೆ.

ಜಲ ನೋಡಲು ಹೋದರೆ ಜಲವಲ್ಲ; ಜಲಜನಕ ಆಮ್ಲಜನಕ ಇವೆರಡನ್ನು ಬೆರೆಸಿದ ಬಯಲು ಜಲವನ್ನಾಗಿ ಮಾಡಿದೆ. ಒಳ ಹೊರಗೆನ್ನದೆ ಬಯಲು ಜಲದಲ್ಲಿ ಬಚ್ಚಿಟ್ಟುಕೊಂಡು ಜೀವಜಲವನ್ನಾಗಿಸಿ ಅರಳಿಸಿದೆ. ಈ ಜೀವಜಲವು ಕೂಡಾ ಬಯಲ ಬೀಜದಿಂದ ಅರಳಿದ ಪುಷ್ಪ. ಬಯಲೇ ಜೀವಜಲದ ಬೀಜವಾಗಿ ಕಾಯವಾಗಿ ಅರಳಿ, ಅರಳಿದ ಕಾಯದಲ್ಲಿ ತಾನಿದ್ದು ಇದನೆಲ್ಲ ತಿಳಿಯಲು ಮನವನ್ನು ಸೃಷ್ಟಿ ಮಾಡಿದೆ.

ಮನಕ್ಕೆ ಕಾಯದಲ್ಲಿಯೇ ಸಂಗಮವಾದ ಪರಮಯೋಗಿಯ ಪರಿಚಯವಾದಾಗ, ಇಡೀ ಬ್ರಹ್ಮಾಂಡವನ್ನು ನೋಡಲು ಆ ಪರಮಯೋಗಿಗೆ ಮಾತ್ರ ಬರುತ್ತದೆ. ಆತ ಬ್ರಹ್ಮಾಂಡದಲ್ಲಿ ಅರಳಿದ ಸಕಲ ಪುಷ್ಪಗಳನ್ನು ಪುಷ್ಪದಂತೆಯೇ ನೋಡುತ್ತಾನೆ. ಜಲಸಾಗರದ ಮೇಲೆ ಮಹಾಪರಿಯ ಪಂಚಮ ಯೋಗದ ಮೂಲಕ ಭೋಗಿಪ್ಪನು ನಿತ್ಯತೃಪ್ತನಾಗಿ. ಮೇಲಿಪ್ಪ ಕಳೆಗಳಲ್ಲಿ ತೋರಿಪ್ಪ ಸತ್ವಗಳಲ್ಲಿ ತಾನೇ ತಾನಾಗಿ ಇರುವನು ಗುರು ಕಪಿಲಸಿದ್ಧ ಮಲ್ಲೇಶ್ವರ.

**808**

**ಬಾತೆಗೆಟ್ಟ ಬಾಳುವೆಗಳೆಲ್ಲಾ ನಿಮ್ಮ ಹೋಲುವವೆ?**
**ಬುದ್ಧಿಯ ಕಲಿ ಮಗಳೆ,**
**ಗುರುವಿನ ಮನದಲ್ಲಿ ಏನಿಹುದು ಅಹಂಗಹುದವ್ವಾ.**
**ಬುದ್ಧಿಗೆ ಬುದ್ಧಿ ಲೆಕ್ಕಕ್ಕೆ ಲೆಕ್ಕ ಸರಿಯಾದಡೆ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಗೆ ಯೋಗ್ಯವಾಗವ್ವಾ.**

ಲೋಕದ ಬಾಳುವೆಗಳೆಲ್ಲಾ ಕೆಲಸಕ್ಕೆ ಬಾರದ ಬಾಳುವೆಗಳು. ಉಪಜೀವನಕ್ಕಾಗಿ ಬಂದ ಕಾಯಗಳು. ಜೀವನವೆಂದರೇನೆಂದು ಗೊತ್ತೇ ಇಲ್ಲದ ಕಾಯಗಳು. ಪರಮಾತ್ಮನ ಲಾಂಛನವಾಗಲೇಬೇಕೆಂದು ಒಂಚೂರು ಅರಿಯದ ಕಾಯಗಳೆಲ್ಲ ಬಾತೆಗೆ ಬಾರದ ಕಾಯಗಳು. ಬಾತೆಗೆಟ್ಟ ಬಾಳುವೆಗಳೆಲ್ಲಾ ನಿಮ್ಮ ಹೋಲುವವೆ? ಬುದ್ಧಿಯ ಕಲಿ ಮಗಳೆ, ಅಂದರೆ ನಿನ್ನ ಸಂಸಾರ ಸುಧಾರಿಸುವುದು.

ಗುರುದೇವನ ಮನವನ್ನು ನಿನ್ನತ್ತ ಒಲಿಸು ಮಗಳೆ. ಇಲ್ಲದಿದ್ದರೆ ಗುರುದೇವನ ಮನದಲ್ಲಿ ಏನಿಹುದೋ ಅದೇ ಆಗುವುದು ಮಗಳೆ.

ಬುದ್ಧಿಗೆ ಬುದ್ಧಿ ಲೆಕ್ಕಕ್ಕೆ ಲೆಕ್ಕ ಸರಿಯಾದಡೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಗೆ ಯೋಗ್ಯವಾಗುವಿ ಮಗಳೆ.

**809**

**ಬಾರದ ಭವವ ಬಂದೆನುಣ್ಣದುದನುಂಡೆನಯ್ಯಾ:**
**ನಾನು ಮಾಡಿದುದನು. ಇನ್ನು ಭವಕ್ಕೆ ಬಾರದಂತೆ ಮಾಡ ತಂದೆ.**
**ಕರ್ಮವನುಣ್ಣದಂತೆ ನಿರೂಪಿಸಯ್ಯಾ , ಅಯ್ಯಾ ನಿಮ್ಮ ಧರ್ಮ.**
**ವಿಚಿತ್ರಮೂಲ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ನಿಮ್ಮ ಹತ್ತೆ ಸಾರುವ ಮನಕ್ಕೆ**
**ಮಂಗಳವನೀಯಯ್ಯಾ ಗುರುವೆ.**

ಎಂಬತ್ತು ನಾಲ್ಕು ಲಕ್ಷ ಜನ್ಮಂಗಳಲ್ಲಿ ಬಂದೆನು. ಜನನ ಮರಣಂಗಳ ದುಃಖ ಬಾಧೆಯನ್ನು ಉಂಡೆನು. ಬರಬಾರದಾಗಿತ್ತು ಈ ಲೋಕಕ್ಕೆ; ಬಂದೆನು ಉಣ್ಣದುದನು ಉಂಡೆನಯ್ಯಾ. ನಾನು ಮಾಡಿದುದನು ನಾನೇ ಉಂಡೆನಯ್ಯಾ.

ನನ್ನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗಬೇಕೆಂದು ನೀನು ನನಗಾಗಿ ನನ್ನ ಕಾಯದಲ್ಲಿಯೇ ಕಾಯುತ್ತ ಕುಳಿತೆ. ನಿನ್ನನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ನಾನು ಮಾಡಿದ ಕರ್ಮವನ್ನು ನಾನೇ ಉಣ್ಣುತ್ತ ಕಾಲಕಳೆದೆ.

ಇನ್ನು ನನ್ನನ್ನು ಭವಕ್ಕೆ ಬಾರದಂತೆ ಮಾಡಾ ತಂದೆ. ನಾ ಮಾಡಿದ ಕರ್ಮವನ್ನು ನಾನೇ ಉಣ್ಣದಂತೆ ನಿರೂಪಿಸಯ್ಯಾ. ಅದು ನಿಮ್ಮ ಧರ್ಮ. ನನ್ನ ಅಜ್ಞಾನದಿಂದಾಗಿ ನಿನ್ನ ಕಾಯವನ್ನು ನಾನು ತಿಪ್ಪೆಯಂತೆ ಮಾಡಿದೆ ದೇವಾ. ನಿನಗೆ ಉಪ್ಪರಿಗೆಯಾದರೇನು? ತಿಪ್ಪೆಯಾದರೇನು? ತಿಪ್ಪೆಯ ಮೇಲೆ ಕುಳಿತು ತಿಪ್ಪೇರುದ್ರನೆಂಬ ಹೆಸರು ಪಡೆದ ಪರಮಾತ್ಮ ನೀನು.

ವಿಚಿತ್ರ ಮೂಲ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆ, ನಿಮ್ಮ ಹತ್ತೆ ಸಾರುವ ಮನಕ್ಕೆ ಮಂಗಳವನೀಯಯ್ಯಾ ಗುರುವೆ.

**810**

**ಬಾರದೆ ಗಂಡ, ಬಡವಾದೆ**
**ಉಣ್ಣದೆ ಗಂಡ, ಉಪವಾಸವಿದ್ದೆ.**
**ನನ್ನ ಕಣ್ಣ ನೀರು ನಿನ್ನ ಕಣ್ಣ ತಾಗಲೊ**
**ಕಪಿಲಸಿದ್ಧ ಮಲ್ಲಿನಾಥಾ.**

ಸಿದ್ಧರಾಮ ಶಿವಯೋಗಿಗಳು ಲೋಕದ ದೃಷ್ಟಿಯಲ್ಲಿ ಗಂಡಾದರೂ ತಾವು ಅರಿವುಳ್ಳ ಹೆಣ್ಣಾಗಿ ಅರಿವಿನ ಗಂಡನನ್ನು ಸ್ಮರಣೆ ಮಾಡಿದ್ದಾರೆ. ಲೋಕದ ದೃಷ್ಟಿಯಲ್ಲಿ ದೇಹ ಗಂಡು. ಜ್ಞಾನಿಯ ದೃಷ್ಟಿಯಲ್ಲಿ ಮನ ಹೆಣ್ಣು; ಜ್ಞಾನ ಗಂಡು.

ಮನ ಹೆಂಡತಿಯಾಗಿ, ಜ್ಞಾನ ಗಂಡನಾಗಿ, ದೇಹವನ್ನು ಮನೆಯನ್ನಾಗಿಸಿಕೊಂಡು ದೇಹದಲ್ಲಿ ಸಂಸಾರ ಹೂಡುವುದು ಜ್ಞಾನ ಸಂಸಾರ. ಅರಿವಿನ ಸಂಸಾರ. ಇಂತಹ ಅರಿವಿನ ಸಂಸಾರಕ್ಕಾಗಿ ಮನವೆಂಬ ಹೆಂಡತಿ ಹಗಲಿರುಳೆನ್ನದೆ ಜ್ಞಾನಿ ಗಂಡನ ಬರುವಿಕೆಗಾಗಿ ಬಳಲುತ್ತಾಳೆ.

ಎನ್ನಂಗದಲ್ಲಿ ನಿನಗೆ ನಿತ್ಯಮಜ್ಜನ ಎಂದು ಹೆಂಡತಿಯಾದವಳು ತಾನು ಸ್ನಾನ ಮಾಡುತ್ತಾ ಗಂಡನಿಗೆ ಸ್ನಾನ ಮಾಡಿಸುತ್ತಾಳೆ. ಗಂಡ ಎಂದರೆ ದೇವರು. ಅಂಗದ ಮೇಲೆ ಕಟ್ಟಿಕೊಂಡ ಲಿಂಗಕ್ಕೆ ನಿತ್ಯ ಮಜ್ಜನ ಮಾಡಿದರೂ ಕೂಡಾ ಅದು ನೆನೆಯುವುದಿಲ್ಲ. ಸ್ನಾನ ಮಾಡಿಸಿದ ತನ್ನೊಂದಿಗೆ ಮಾತನಾಡುವುದಿಲ್ಲ. ತಾನು ಆಡಿದ ಮಾತು ಲಿಂಗಕ್ಕೆ ಕೇಳಿ ಬರುವುದಿಲ್ಲ.

ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಜಡ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನೆಂಬ ಗಂಡ ಚೇತನ. ಅಂಗಕ್ಕೆ ನೀರೆರೆದರೆ ಸಾಕು ಅಂಗದಲ್ಲಿಯೇ ವಾಸ ಮಾಡುತ್ತಿರುವ ಮನವೆಂಬ ಹೆಂಡತಿ ಅರಿವೆಂಬ ಗಂಡ ಇವರಿಬ್ಬರಿಗೂ ಪರಮಾನಂದವಾಗುತ್ತದೆ.

ಹೆಂಡತಿ ಸ್ನಾನ ಮಾಡುತ್ತಾ ಗಂಡನಿಗೆ ಸ್ನಾನ ಮಾಡಿಸುತ್ತಾಳೆ. 'ಎನ್ನಂಗದಲ್ಲಿ ನಿನಗೆ ನಿತ್ಯ ಮಜ್ಜನ' ಎನ್ನುವ ಮಾತು ಅದೆಷ್ಟು ಸುಂದರವಾಗಿದೆ. ಸತ್ಯವಾಗಿದೆ. ಕೇಳಿದರೆ ಕೂಡಲೇ ಅನುಭವಕ್ಕೆ ಬರುವ ಮಾತು. ಯಾರೂ ಅಲ್ಲಗಳೆಯದ ಮಾತು.

ಗಂಡನೆ ನೀನು ಬಾರದ್ದಕ್ಕಾಗಿ ನಾನು ಬಡವಾದೆ. ಅಜ್ಞಾನದಿಂದ ವಿಲಿವಿಲಿ ಒದ್ದಾಡುತ್ತಿದ್ದೇನೆ. ಗಂಡನೆ ನಿನ್ನ ಅರಿವಿನ ಕಣ್ಣಿನಿಂದ ನೋಡುವ ನೋಟವೇ ಬೇರೆ. ನನ್ನ ಹಾದರದ ಕಣ್ಣಿನಿಂದ ನೋಡುವ ನೋಟವೇ ಬೇರೆ. ಗಂಡನಿದ್ದೂ ಹಾದರ ಮಾಡುವುದು ಮಹಾಪಾಪವೆಂದು ನನಗೆ ಗೊತ್ತಾಗಿದೆ. ನನ್ನ ಕಣ್ಣು ನಿನಗಾಗಿ ಹಪಹಪಿಸುತ್ತಲಿದೆ.

''ಎಮ್ಮ ಗಂಡನು ಏಕಾಂತಂಬೊಕ್ಕನು ಬೇಗ ಬೇಗನೆ ಹೊರನಡಿಯಿರಣ್ಣಗಳಿರಾ. ಒಬ್ಬನಿದ್ದಡೂ ಸೈರಿಸ ಕಪಿಲಸಿದ್ಧ ಮಲ್ಲಿಕಾರ್ಜುನಾ''. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಅಣ್ಣಂದಿರು ನನ್ನನ್ನು ತನ್ನತ್ತ ಬಾ ಎಂದು ಕೈ ಮಾಡಿ ಕರೆಯುತ್ತಿದ್ದಾರೆ. ಅಂಗದಲ್ಲಿಯೇ ಇದ್ದ ಅವರನ್ನು ಹೊರದಬ್ಬಿ ನಿನ್ನ ಅರಿವಿನ ಕೂಟಕ್ಕಾಗಿ ನಾನು ದಾರಿಕಾಯುತ್ತಿದ್ದೇನೆ ಗಂಡನೆ. ಬಾ ಬೇಗ ಬಂದು ನನ್ನನ್ನು ಅಪ್ಪಿಕೊ.

ನಿನ್ನನ್ನು ಕೂಡುವ ಕೂಟದ ಸುಖಕ್ಕಾಗಿ ಅದೆಷ್ಟೋ ದಿನಗಳಿಂದ ಉಣ್ಣದೆ ಗಂಡನೆ ಉಪವಾಸವಿದ್ದೇನೆ. ನನ್ನ ಕಣ್ಣ ನೀರು ನಿನ್ನ ತಾಗಲಿಲ್ಲವೆ ಗಂಡನೆ ಕಪಿಲಸಿದ್ದ ಮಲ್ಲಿಕಾರ್ಜುನನೆ ಸಾವಿಲ್ಲದ ಸರದಾರ ನೀನು. ಕೇಡಿಲ್ಲದ ರೂಹಿಲ್ಲದ ಚೆಲುವನು ನೀನು.

ನಿನ್ನ ಕೂಡದ ಅಗಲದ ಕೂಟದ ಸುಖದ ಹಂಬಲಕ್ಕಾಗಿ ಬಡವಾದೆ ನಾನು. ನಿನ್ನ ಬರುವಿಕೆಗಾಗಿ ಉಣ್ಣದೆ ಉಪವಾಸವಿದ್ದೆ ನಾನು. ನನ್ನ ದುಃಖದ ಕಣ್ಣೀರ ಕಟ್ಟೆ ಒಡೆದು ತಾಗಲಿಲ್ಲವೆ ನಿನಗೆ? ಬಾ ಬಂದು ಬೇಗ ಅಪ್ಪಿಕೊ. ಲಿಂಗಾಂಗ ಸಮರಸ ಕೂಟದ ಸುಖವನುಣ್ಣುವ ಬಯಕೆಯಾಗಿದೆ ಗಂಡನೆ ಎಂದು ಸಿದ್ಧರಾಮ ಶಿವಯೋಗಿಗಳು ಬೇಡಿಕೊಂಡಿದ್ದಾರೆ.

**811**

**ಬಾರಯ್ಯಾ, ಎನ್ನ ಸರ್ವಾಂಗದ ಗಂಡನೆ.**
**ಬಾರಯ್ಯಾ, ಎನ್ನ ಹೃದಯಕಮಲದಳಾಸನನೆ.**
**ಬಾರಯ್ಯಾ, ಎನ್ನ ಚಿತ್ತದ ಸೌಂದರನೆ.**
**ಬಾರಯ್ಯಾ, ಎನ್ನ ಶುದ್ಧ ಸಿದ್ಧ ಪ್ರಸಿದ್ಧ ಪ್ರಾಣೇಶ್ವರನೆ.**
**ಬಾರಯ್ಯಾ, ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ, ಸಂದಿಲ್ಲದೆ.**

ಅಂಗದಲ್ಲಿ ಸಂಗಮವಾದ ಅರಿವಿನ ಗಂಡನನ್ನು ಅಂಗವನ್ನು ಆವರಿಸಿದ ಮನವೆಂಬ ಹೆಂಡತಿ ಬಾರಯ್ಯಾ ಎನ್ನ ಸರ್ವಾಂಗದ ಗಂಡನೆ ಎಂದು ಕರೆಯುವ ಚಿತ್ರಣವನ್ನು ಈ ವಚನದ ಮೂಲಕ ಓದುಗರಿಗಾಗಿ ದಾಖಲಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಸರ್ವಾಂಗದಲ್ಲಿಯೂ ಅರಿವಿನ ಗಂಡ ಬಚ್ಚಿಟ್ಟುಕೊಂಡಿದ್ದಾನೆ. ಅಂಗವನ್ನು ಆವರಿಸಿದ ಮನ ಆ ಗಂಡನಿಗೆ ಹೆಂಡತಿಯಾಗಿ ಕರೆದರೆ ತಪ್ಪದೇ ಬಂದು ಮನವೆಂಬ ಮನೋಕನ್ಯೆಯನ್ನು ಮದುವೆಯಾಗುತ್ತಾನೆ. ಸರ್ವಾಂಗವು ಲಿಂಗಯ್ಯನಿಗೆ ಮನೆಯಾಗುತ್ತದೆ. ಆ ಮನೆಯಲ್ಲಿ ಗಂಡ-ಹೆಂಡಿರಿಬ್ಬರು ಅರ್ಧನಾರೀಶ್ವರರಾಗಿ ಸಂಸಾರ ಮಾಡುತ್ತಾರೆ.

ಎಲ್ಲಿ ನೋಡಿದರೂ ಅರ್ಧನಾರೀಶ್ವರರು ವಾಸ ಮಾಡಿದ ಮನೆಯೇ ಕಾಣುತ್ತದೆ. ಮನವೆಂಬ ಹೆಂಡತಿ ಅರಿವೆಂಬ ಗಂಡನೊಂದಿಗೆ ಸರ್ವಾಂಗವನ್ನು ಮನೆಯನ್ನಾಗಿಸಿಕೊಂಡು ಸಂಸಾರ ಹೂಡಿದ ಚೆಲುವ ಚೆಲುವೆಯರಿಗೆ ಮಾತ್ರ ಇದು ಸಾಧ್ಯವಾಗುತ್ತದೆ.

ಇಂತಹ ಸುಂದರವಾದ ದೇಹವಿದ್ದು, ದೇಹಕ್ಕೆ ಅರಿವಾಗದ ಕಾರಣ ಅದು ಸುಳ್ಳು ಸುಖ ಸುಳ್ಳು ದುಃಖ ಅನುಭವಿಸುತ್ತಲಿದೆ. ಅರ್ಧನಾರೀಶ್ವರರಿಗೆ ಆಲಯವಾಗಬೇಕಿದ್ದ ದೇಹ ಕಳ್ಳ, ಸುಳ್ಳ, ಭ್ರಷ್ಟಾಚಾರಿ, ಶ್ರೀಮಂತ, ಬಡವ, ಭಿಕ್ಷುಕ, ದರಿದ್ರ, ರಾಜ, ಮಂತ್ರಿ, ಸೈನಿಕ, ಸೇನಾಧಿಪತಿ, ಅಧಿಕಾರಿ ಮುಂತಾದ ಹಣೆಪಟ್ಟಿಯನ್ನು ಹಚ್ಚಿಕೊಂಡು ದುಃಖದಲ್ಲಿ ಮುಳುಗಿದೆ. ತಾನು ಅರ್ಧನಾರೀಶ್ವರರಿದ್ದ ಆಲಯವೆಂಬುದನ್ನು ಮರೆತುಹೋಗಿದೆ.

ಸಿದ್ಧರಾಮ ಶಿವಯೋಗಿಗಳು ಇಡೀ ಲೋಕದ ತನುಗಳಿಗೆ ಮತ್ತೊಮ್ಮೆ ನೆನಪು ಮಾಡಿದ್ದಾರೆ. ಕಾಯವೆಂದರೆ ಸಾಮಾನ್ಯವಲ್ಲ ಅದು ಕೈಲಾಸವೆಂದು.

ಬಾರಯ್ಯಾ, ಎನ್ನ ಹೃದಯ ಕಮಲದಲ್ಲಿ ಆಸನ ಮಾಡಿದ ನಲ್ಲನೆ. ಬಾರಯ್ಯಾ, ಎನ್ನ ಚಿತ್ತವನ್ನು ಶೃಂಗಾರಗೊಳಿಸಿದ ಸುಂದರನೆ. ಬಾರಯ್ಯಾ, ಎನ್ನ ಶುದ್ಧ ಸಿದ್ಧ ಪ್ರಸಿದ್ಧ ಪ್ರಾಣೇಶ್ವರನೇ. ಬಾರಯ್ಯಾ, ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನ ಸಂದಿಲ್ಲದಂತೆ ಎನ್ನಂಗದೊಂದಿಗೆ ಸಂಗ ಮಾಡುವ ಸರ್ವಾಂಗದ ಗಂಡ ನೀನು ಎಂದು ಪ್ರಾರ್ಥಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**812**

**ಬಾಲನಾಗಿದ್ದಂದು ಕರೆದು ಎತ್ತಿ ಮುದ್ದಿಕ್ಕಿ**
**ಮೊಲೆವಾಲಕೊಟ್ಟು ಸಲಹಿದ ಬಸವಾ.**
**ಮೂಲ ಶಿವಜ್ಞಾನಕ್ಕೆ ದೀಪ್ತಿಯನಿಕ್ಕಿ ಸಲಹಿದ ಬಸವಾ,**
**ಎನಗೆ ನೀನೆ ಗತಿಯಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ ಬಸವಾ.**

ಸಿದ್ದರಾಮ ಶಿವಯೋಗಿಗಳು ತನುವಿನಲ್ಲಿ ತನ್ಮಯವಾದ ಗುರುದೇವನಿಗೆ ಬಸವಾ ಎಂದು ಹೆಸರಿಟ್ಟು ಕರೆದಿದ್ದಾರೆ.

ಬಸವಣ್ಣನೇ ನಾನು ಬಾಲಕನಾಗಿದ್ದಾಗ ನನ್ನನ್ನು ಕರೆದು ಎತ್ತಿ ಮುದ್ದಿಕ್ಕಿ ಮೊಲೆ ಹಾಲು ಕೊಟ್ಟು ಸಲಹಿದ ಬಸವಣ್ಣ ನೀನು. ತಾಯಿಯೆಂದು ಎನ್ನಿಂದ ಕರೆಯಿಸಿಕೊಂಡ ಪುಣ್ಯಾತ್ಮ ನೀನು. ಮೂಲ ಶಿವಜ್ಞಾನವೆಂಬ ಭಕ್ತಿಗೆ ದೀಪ್ತಿಯನಿಕ್ಕಿ ಸಲಹಿದ ಬಸವಣ್ಣ ನೀನು. ನನ್ನ ಸಕಲ ಅಜ್ಞಾನವನ್ನು ನಿನ್ನ ಜ್ಞಾನದ ಬೆಳಕಿನಿಂದ ಬೆಳಗಿ ಎನ್ನ ಹೃದಯಕ್ಕೆ ಅರಳುವಂತೆ ಮಾಡಿದ ಪರಮಾತ್ಮ ನೀನು.

ಎನಗೆ ನೀನೇ ಗತಿಯಯ್ಯಾ. ಕಪಿಲಸಿದ್ಧ ಮಲ್ಲಿನಾಥಯ್ಯ ಬೇರಲ್ಲ, ಬಸವಣ್ಣನು ಬೇರಲ್ಲ. ಹೆಸರು ಬೇರೆಯಾದರೇನು? ಅಂಗವನ್ನು ಬೆಳಗುವ ಬೆಳಕು ಮಾತ್ರ ಒಂದೇ. ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು, ನೀನಲ್ಲದೆ ಎನಗೆ ಮತ್ಯಾರು ಇಲ್ಲವಯ್ಯಾ ಬಸವಣ್ಣ ಎನಗೆ ಮೊಲೆ ಹಾಲು ಕೊಟ್ಟು ಸಲಹಿದ ತಾಯಿ ನೀನು ಎಂದು ಸಿದ್ಧರಾಮ ಶಿವಯೋಗಿಗಳು ಬಸವಣ್ಣನನ್ನು ಸ್ಮರಿಸಿದ್ದಾರೆ.

**813**

**ಬಾಲರು ಇನಿದ ಮಚ್ಚಿದಂತೆ ನಾ ನಿಮ್ಮ ಮಚ್ಚಿ ಬಿಡುವೆನೆ!**
**ಮಚ್ಚಿದ ಮನಕ್ಕೆ ತುಚ್ಛ ಬಾರದಂತೆ ಮಾಡು ಕಂಡಾ.**
**ಎಲೆ ಅಯ್ಯಾ, ಅಯ್ಯಾ, ನಿಮ್ಮ ಧರ್ಮ.**
**ಸರ್ವರೆಲ್ಲರೂ ಈ ನಿನ್ನವ ನಿನ್ನವನೆಂದೆಂಬರು.**
**ಎನ್ನ ಮಾನಸ-ವಾಚಕ-ಕಾಯಕದಲ್ಲಿ ನೀನಲ್ಲದೆ ಅನ್ಯವನರಿಯೆ.**
**'ಭೃತ್ಯಾಪರಾಧ ಸ್ವಾಮಿನೋ ದಂಡ' ಎಂಬುದುಂಟು.**
**ನಿನ್ನ ಬಲ್ಲಂತೆ ಸಲಹು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಾಲರಿಗೆ ತಾಯಿಯ ಮೊಲೆ ಹಾಲು ಅಮೃತವಿದ್ದಂತೆ. ಹೀಗಾಗಿ ಬಾಲರು ತಾಯಿಯ ಮೊಲೆ ಹಾಲನ್ನು ಮೆಚ್ಚುತ್ತಾರೆ. ತಾಯಿ ಎಂದರೆ ಮಗುವಿಗೆ ಬಲು ಇಷ್ಟ. ಮೆಚ್ಚಿದ ಮನಕ್ಕೆ ತುಚ್ಛ ಬಾರದಂತೆ ಮಾಡು ಕಂದ ಎಲೆ ಅಯ್ಯಾ ಅಯ್ಯಾ ನಿಮ್ಮ ಧರ್ಮ.

ಮೊಲೆಹಾಲ ಮೆಚ್ಚಿದ ಮಗು, ಯೌವ್ವನಕ್ಕೆ ಬಂದ ಮೇಲೆ ಅದು ಮೊಲೆಯನ್ನು ತುಚ್ಛದಂತೆ ನೋಡುತ್ತದೆ. ಉಂಡ ಮೊಲೆಯಲ್ಲಿಯೇ ವಿಕೃತ ಕಾಮವನ್ನು ಕಂಡು ಮನ ತುಚ್ಛವಾಗುತ್ತದೆ. ಉಂಡ ಅಮೃತ ಮರೆತು, ಕಂಡುಬರುವ ಕಾಮರಸವನ್ನು ಹೀರುತ್ತದೆ. ಬಾಲ್ಯದಲ್ಲಿ ಹೇಗೆ ಹಸಿವಿಗಾಗಿ ಆಸಕ್ತಿಯಾಯಿತೋ, ಯೌವ್ವನದಲ್ಲಿ ಕಾಮದ ಹಸಿವು ಬಾಯದೆರೆಯುವಂತೆ ಮಾಡುತ್ತದೆ. ಇಂತಹ ತುಚ್ಛತನವನ್ನು ಎನ್ನಲ್ಲಿ ಮಾಣಿಸು ಪರಮಾತ್ಮನೇ ಅದು ನಿನ್ನ ಧರ್ಮ.

ಸರ್ವಕಾಯಗಳಲ್ಲಿ ನಿನ್ನ ಅರಿವಿನ ಧರ್ಮ ಭರಿತವಾಗಿದೆ. ಆದರೂ ನೀನು ತನು ಮತ್ತು ಮನದತ್ತ ವಾಲಿದರೂ ಮನ ಮತ್ತು ತನುಗಳೆರಡು ನಿನ್ನನ್ನು ಬಯಸುತ್ತಿಲ್ಲ. ನಾನು ಹಾಗಲ್ಲ ಎನ್ನ ಮನ ಕಾಯ ವಾಚದಲ್ಲಿ ನೀನಲ್ಲದೆ ಅನ್ಯರಿಲ್ಲ ನನ್ನ ಅಪರಾಧವನ್ನು ಮನ್ನಿಸಿ ನೀನು ಬಲ್ಲಂತೆ ಎನ್ನನ್ನು ಸಲಹು ಕಪಿಲಸಿದ್ದ ಮಲ್ಲಿಕಾರ್ಜುನಾ.

**814**

**ಬಾವಿಯೊಳಗೊಂದು ಬಾಲಚಂದ್ರನ ಜನನ**

**ಸ್ಥೂಲಸೂಕ್ಷ್ಮಕ್ಕೆ ತಾನು ಮೂಲನಾಗಿ,**
**ಆರೈದುವೋರಂತೆ ಧಾರುಣಿಯ ಸಮನವನು**
**ತಾನು ನಡೆಸುತ್ತಿಕ್ಕು ಸುಚಿತ್ತದಿಂದ,**
**ಆ ಚಿತ್ತವನು ಮನವನು ಮತ್ತೆ ಸ್ವಸ್ಥಾನದಲಿ**
**ಹತ್ತೆ ಸಾರಿಸಿದಾತ ನಿತ್ಯನಾ ಮತ್ತೆ,**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡಿ**
**ಚಿತ್ತವೆಲ್ಲವೂ ನಿಶ್ಚಿತ್ತವಾಗಿ.**

ಬಾವಿಯೊಳಗೊಂದು ಬಾಲಚಂದ್ರನ ಜನನ ಸ್ಥೂಲಸೂಕ್ಷ್ಮಕ್ಕೆ ತಾನು ಮೂಲನಾಗಿ:

ತನುವೆ ಒಂದು ಬಾವಿ. ಸ್ಥೂಲತನುವಿನೊಳಗೆ ಸೂಕ್ಷ್ಮತನುವಿನೊಳಗೆ ಕಾರಣ ತನುವೆಂಬ ಬಾಲಚಂದ್ರನು. ಇವೆರಡು ತನುಗಳಿಗೆ ಆಧಾರವಾಗಿದ್ದರೂ, ಇವೆರಡು ತನುಗಳನ್ನು ಸೋಂಕದೆ ಇವೆರಡು ತನುಗಳನ್ನು ಭೂಮಿಯ ಮೇಲೆ ಬೆಳಗುತ್ತಿದ್ದಾನೆ. ಭಾವಿಸಲು ಹೋದರೆ ಸ್ಥೂಲ ಮತ್ತು ಸೂಕ್ಷ್ಮ ತನುಗಳು. ನೋಡಲು ಹೋದರೆ ಸ್ಥೂಲ ತನುವೊಂದೆ ಕಾಣುತ್ತದೆ. ಬಾವಿಯೊಳಗೆ ಹುಣ್ಣಿಮೆಯಂದು ಬಾಲಚಂದ್ರ ಕಂಡರೂ ಕಾಣದಂತೆ ಸ್ವಸ್ಥಾನದಲ್ಲಿ ಹೇಗೆ ಇರುತ್ತದೋ ಹಾಗೆಯೇ ಜ್ಞಾನಿಗೆ ತನುವೊಂದೆ. ತನುವಿನಲ್ಲಿದ್ದ ಜ್ಞಾನ ಒಂದೇ, ಇದನ್ನು ತಿಳಿಯುವ ಮನ ಒಂದೇ, ಮನದಲ್ಲಿರುವ ಸುಚಿತ್ತವು ಒಂದೇಯಾಗಿ ಸ್ವಸ್ಥಾನದಲ್ಲಿ ಮೂರೊಂದಾದ ಘನದಂತೆ ಗೋಚರಿಸುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡಿದ ಚಿತ್ತವೆಲ್ಲವೂ ಚೇಷ್ಟೆ ಇಲ್ಲದ ನಿಶ್ಚಿತ್ತವಾಗಿ ಸುಚಿತ್ತವಾಗಿ ಗೋಚರಕ್ಕೆ ಬರುತ್ತದೆ. ಜ್ಞಾನಿ ಸಕಲ ತನುಗಳನ್ನು ತನ್ನಂತೆ ನೋಡುತ್ತಾನೆ. ಏಕೆಂದರೆ ಮನ ತನುವಿನಲ್ಲಿ ಸಂಗಮವಾಗಿ ತನು-ಮನಗಳೆರಡು ಅರಿವಿನ ತನುವಿನಲ್ಲಿ ಸಂಗಮವಾಗಿ ಸುಮನವಾಗಿದೆ. ಚಿತ್ತವೆಲ್ಲವೂ ನಿಶ್ಚಿತ್ತವಾಗಿ ಸುಚಿತ್ತವಾಗಿದೆ.

**815**

**ಬಿಂದು ಕೂಟವು ತಾನು ಒಂಬತ್ತು ಪರಿಯಾಗೆ**
**ಒಂಬತ್ತು ವಿಧದಲ್ಲಿ ಒಸರಿವರಿದು**
**ಶಂಭುವಿನ ಮಸ್ತಕದ ಇಂಬಪ್ಪಸಸಿಗವು**
**ತುಂಬಿ ಒಸರುವರೆ ಗುರು ಕಪಿಲಸಿದ್ಧ ಮಲ್ಲಿಕಾರ್ಜುನ.**

ಬಯಲ ಬೀಜವು ಜೀವಜಲಬಿಂದುವಾಗಿ ಗರ್ಭದಲ್ಲಿ ಹೊಕ್ಕು, ಒಂಬತ್ತು ಪರಿಯಾಗಿ ಒಂಬತ್ತು ವಿಧದಲ್ಲಿ ಒಸರಿ ಅರಿವಿನ ತನುವಾಗಿ ಗರ್ಭದಿಂದ ಹೊರಬಂದಿದೆ. ನೋಡಲು ಹೋದರೆ ತನು ಒಂದೇ. ಆದರೆ ಅದಕ್ಕೆ ರಂಧ್ರ, ಒಂಬತ್ತು; ಅದಕ್ಕೆ ಕಾರಣವಾದ ಬಿಂದು ಒಂದೇ. ಇಡೀ ಬ್ರಹ್ಮಾಂಡವೇ ಬಿಂದುವಾಗಿ ಬಿಂದುವಿನ ಗರ್ಭದಲ್ಲೆ ಸಂಗಮವಾಗಿ ಗರ್ಭಕ್ಕೆ ಹರಿದು ಒಂಬತ್ತು ಮಹಾದ್ವಾರಗಳ ಮೂಲಕ ಗರ್ಭದಿಂದ ಹೊರಬಂದಿದೆ. ಹೊರಬಂದ ಕಾಯದ ಮಸ್ತಕದಲ್ಲಿ ಸಾಕ್ಷಾತ್ ಶಂಭುಲಿಂಗವೇ ಸಂಗಮವಾಗಿದೆ.

ಅಂಗವೆಂಬುದು ಶಂಭುವಿನ ಸಸಿಯಾಗಿ ಬೋಧಿವೃಕ್ಷವಾಗಿ ಜ್ಞಾನದ ಫಲಗಳನ್ನು ಹೊತ್ತುಕೊಂಡು ಬೆಳೆದು ನಿಂತಿದೆ. ಇಡೀ ಬ್ರಹ್ಮಾಂಡವೇ ಕಾಯದಲ್ಲಿ ತುಂಬಿ ಬ್ರಹ್ಮರಸವಾಗಿ ಹರಿಯುತ್ತಿದೆ.

ಗುರು ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ಕೃಪೆಯಿಂದ, ತನ್ನ ಭ್ರಮೆಯನ್ನು

ಕಳೆದುಕೊಂಡು ಬ್ರಹ್ಮಕಮಲವಾಗಿ ಅರಳಿ ನಿಂತಿದೆ. ಬಿಂದುವಿನ ಕೂಟವು ತನುವಿನಲ್ಲಿ ಒಂಬತ್ತು ತಳಿಯಾಗಿ ತೋರುತ್ತಲಿದೆ. ಶಂಭುವಿನ ಮಸ್ತಕದಲಿ ಇಂಬಪ್ಪ ಸಸಿಯದು.

**816**

**ಬಂದು ಮೂವತ್ತರೊಳು ಸಂದ ಅಕ್ಷರವಾರು**
**ಒಂದಕ್ಕೆ ಅಕ್ಷರವು ಆರು.**
**ಆರೂನೆಲ್ಲ ಘಟ್ಟಣಿಗೆ ಮುನ್ನ ಫಲಿತವಾಯಿತು ಮಠವು.**
**ಮಠದಿಂದ ಮೇಲೆ ತಾಣಕಂಬನಿರುಗೆ**
**ಕಂಬದಿಂ ಮೇಲೊಪ್ಪಿ ಇಂಬಪ್ಪ ತುಂಬಿಯ**
**ಶಂಭುವೆಂಬಾ ಕುಸುಮ ವಿಕಾಸವಾಗೆ,**
**ಅಂಬರದ ಮೇಲೀಗ ಬಿಂಬವೆಸೆದುದ ಕಂಡೆ,**
**ಶಂಭುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಒಂದು ಬಿಂದುವಿನಲ್ಲಿ ಮೂವತ್ತಾರು ತತ್ವಗಳು ಭರಿತವಾಗಿ ಒಂದಕ್ಕೆ ಅಕ್ಷರವು ಆರು. ಆರೂ ಅಕ್ಷರಗಳು ಘಟ್ಟಿಯಾಗಿ ಅದರ ಫಲವೇ ಮಠವಾಯಿತು ತನುವಾಯಿತು.

ಮಠದಿಂದ ಮೇಲೆ ತಾಳಕಂಬವಾಗಿ ನಿಂತು; ಕಂಬದ ಮೇಲೆ ಒಪ್ಪುವ ಇಂಬಪ್ಪ ತುಂಬಿಯು ಶಂಭುವೆಂಬ ಕುಸುಮವು ವಿಕಾಸವಾಯಿತು.

ಅಂಬರದ ಮೇಲಿಂದ ಬಿಂಬವೆಸೆದುದ ಕಂಡೆ, ಶಂಭುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಅಂಬರದ ಮೇಲಿಂದ ಶಂಭುವು ಎಸೆದ ಬಿಂದುವೊಂದರಲ್ಲಿ ಮೂವತ್ತಾರು ತತ್ವಗಳುಳ್ಳ ಕಾಯವೆಂಬ ಮಠವು ನಿರ್ಮಾಣವಾಯಿತು. ಅದೆಂಥ ಸುಂದರವಾದ ಘಟ್ಟಣಿಗೆಯ ಮಠ!

'ಓಂ ನಮಃ ಶಿವಾಯ'ವೆಂಬ ಆರಕ್ಷರದ ಮಠ. ಆರೂನೆಲ್ಲ ಮೂವತ್ತಾರು ಮಾಡಿಕೊಂಡು ಘಟ್ಟಣಿಗೆ ಮುನ್ನ ಫಲಿತವಾದ ಮಠ.

'ನ'ಕಾರವು ರಕ್ತವಾಗಿ ಹರಿದು, 'ಮ'ಕಾರವು ಮಾಂಸವಾಗಿ, 'ಶಿ'ಕಾರವು ಅಸ್ತಿಯಾಗಿ, 'ವಾ'ಕಾರವೇ ಮಜ್ಜೆಯಾಗಲು, 'ಯ'ಕಾರವೇ ಮೇದಸ್ಸು ಆಯಿತು. ಇದರ ಒಂದು ಬಿಂದುವೂ ಹೊರಗೆ ಚೆಲ್ಲದಂತೆ 'ಓಂ'ಕಾರವೇ ಚರ್ಮವಾಗಿ ಹೆಣೆದುಕೊಂಡು ಅಂಬರ ನಾಚುವಂತೆ ಶಂಭು ಎಸೆದ ಅಂಬರದ ಬಿಂದುವೊಂದು ಮೂವತ್ತಾರು ತತ್ವದ ತಾಳ ಕಂಬವಾಯಿತು. ಕಂಬದ ಮೇಲೆ ಶಂಭುವೆಂಬ ಕುಸುಮವಾಗಿ ಅರಳಿ ನಿಂತು ಶರಣರಿಂದ ಮಾತನಾಡುವ ಮರ ಎಂದು ಕರೆಯಿಸಿಕೊಂಡಿತು.

ಅಂಬರದ ಮೇಲಿಂದ ಶಂಭುವೆಸೆದ ಬಿಂದುವೊಂದು ಮಾತನಾಡುವ ತಾಳೆಮರವಾಗಿ ಅದರ ಮೇಲೊಂದು ಶಂಭುವೆಂಬ ಪುಷ್ಪ ಅರಳಿ 'ಓಂನಮಃಶಿವಾಯ'ವೆಂಬ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**817**

**ಬಿನ್ನಾಣ ದೇಹವನು ತನ್ನಮಯ ಮಾಡಿದನು**
**ಉನ್ನತೋನ್ನತ ಲಿಂಗವನು ತೋರಿ**

**ಫಲಪದವ ಹೊದ್ದದ ಹಾಂಗೆ ಮಾಡಿದನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಸಂಪದ್ಭರಿತವಾದ ಅರಿವುಳ್ಳ ದೇಹವನ್ನು ಹೇದಲ್ಲಿಯೇ ಇದ್ದ ದೇವರು ತನ್ನಂತೆ ಮಾಡಿಕೊಳ್ಳುವ ಕಾಯಕದಲ್ಲಿ ಹಗಲಿರುಳೆನ್ನದೆ ನಿರತವಾಗಿದ್ದಾನೆ.

ದೇಹ ಒಂದೇ. ದೇವರು ದೇಹವನ್ನು ಸೃಷ್ಟಿ ಮಾಡಿ ತಾನು ಅದರಲ್ಲಿದ್ದಾನೆ. ತಾನಿದ್ದ ದೇಹವನ್ನು ತನ್ನಂತೆ ಮಾಡಿಕೊಳ್ಳುವ ಕಾಯಕದಲ್ಲಿ ನಿರತನಾಗಿದ್ದಾನೆ. ಆತನ ಪ್ರಭಾವಳಿಯ ಬೆಳಕಿನಿಂದ ದೇಹದಲ್ಲಿ ಮನವೆಂಬ ಮಾಯೆ ಹುಟ್ಟಿದೆ. ಮಾಯೆ ದೇಹದೊಂದಿಗೆ ಬೆರೆತು ದೇವರನ್ನೇ ಮರೆತಿದೆ. ಫಲಪದವಿಗಳ ಬೆನ್ನು ಬಿದ್ದಿದೆ.

ಸಿದ್ಧಾರ್ಥ ಎಂಬ ಹೆಸರಿನ ದೇಹ ಫಲಪದವಿಗಳನ್ನು ತಳ್ಳಿ ಬುದ್ಧನೊಂದಿಗೆ ಒಂದಾಯಿತು. ಬುದ್ಧನೇ ತಾನಾಯಿತು. ಬುದ್ಧನೆಂದರೆ ವ್ಯಕ್ತಿಯಲ್ಲ; ದೇಹವೂ ಅಲ್ಲ. ದೇಹದಲ್ಲಿದ್ದ ಬುದ್ಧ ಎಂಬ ಹೆಸರಿನ ದೇವರು ತಾನಿದ್ದ ದೇಹವನ್ನು ತನ್ನಂತೆ ಮಾಡಿಕೊಂಡ. ಅದರಲ್ಲಿ ತನ್ಮಯವಾದ; ದೇವರಿದ್ದ ದೇಹವೇ ದೇವರಾಯಿತು. ಲಿಂಗವಾಯಿತು; ಲಿಂಗಾಂಗವಾಯಿತು.

ಸಿದ್ಧಾರ್ಥ ಬುದ್ಧನಾದದ್ದು ಸಕಲ ದೇಹಗಳನ್ನು ಬುದ್ಧನನ್ನಾಗಿಸುವುದಕ್ಕಾಗಿ. ಸಕಲ ದೇಹಗಳು ಬುದ್ಧನನ್ನು ನೋಡಿ ಬುದ್ಧನಾಗಲಿಲ್ಲ; ಬುದ್ಧನನ್ನು ಆರಾಧಿಸಿದವು; ಬೌದ್ಧರಾದವು.

ಬಿನ್ನಾಣ ದೇಹವನ್ನು ತನ್ನಂತೆ ಮಾಡಿಕೊಳ್ಳಲು ದೇಹಗಳಿಗೆ ಉನ್ನತೋನ್ನತವಾದ ಬುದ್ಧನನ್ನು ತೋರಿದ, ಮಹಾವೀರನನ್ನು ತೋರಿದ. ಬಸವಾದಿ ಶರಣರನ್ನು ದಾಸವರೇಣ್ಯರನ್ನು ತೋರಿದ. ಕ್ರಿಷ್ಣ ಕ್ರಿಸ್ತ ಪೈಗಂಬರರನ್ನು ತೋರಿದ. ದೇಹ, ದೇಹವನ್ನು ಆವರಿಸಿದ ಮನ ಪದವಿಯತ್ತ ಹೊರಳಿದವೇ ಹೊರತು ದೇಹದಲ್ಲಿಯೇ ಇದ್ದ ದೇವರನ್ನು ನೋಡಲೇ ಇಲ್ಲ.

ಸಕಲ ದೇಹಗಳಲ್ಲಿಯೂ ದೇವರಿದ್ದಾನೆ. ದೇಹಗಳಿಗೆ ಗೊತ್ತಿಲ್ಲ. ತಾನಿದ್ದ ದೇಹವನ್ನು ತನ್ನಂತೆ ಮಾಡಿಕೊಳ್ಳಲು ಹಗಲಿರುಳೆನ್ನದೆ ದುಡಿಯುತ್ತಿದ್ದಾನೆ.

**818**

**ಬಿಳಿಯಗಿರಿ ತಳವೆಳಗಾಗಿ ಬೆಳೆಯೆ ಅನುವಿಡಿದು ಸುಖವ ಕಂಡು**
**ಅನುಭವದವಳಿಗೆ ಮಿಂಚುವರ್ಣ ಸುಖವನೇಕೀಕರಿಸಿ ನೋಡಲು**
**ಅನುವಾಯಿತ್ತಯ್ಯಾ ಬೆಳ್ಪಿನ ಹದಿನಾರೆಸಳ ಪೀಠ.**
**ಆ ಪೀಠದಲ್ಲಿ ಸಜ್ಜನನೆಂಬವ ನಿಂದು ಪ್ರಸಾದವಿಡಿದು ನಡೆಯೆ**
**ವ್ಯೋಮದ ಗುಣ ಕೆಟ್ಟು ನೆಲೆಗೊಂಡನಯ್ಯಾ**
**ನಿಮ್ಮ ಶರಣ ಚೆನ್ನಬಸವಣ್ಣನು. ಕಪಿಲಸಿದ್ಧ ಮಲ್ಲಿನಾಥಯ್ಯಾ ,**
**ಚೆನ್ನಬಸವಣ್ಣನಿಂದ ಬದುಕಿದೆನು.**

ತನು, ಬೆಳಗಿಂಗೆ ಬೆಳಗಾಗಿ ಬೆಳಗುವ ಬಿಳಿಯಗಿರಿ. ಇದು ತಲೆಕೆಳಗಾಗಿ ಬೆಳೆದಿದೆ. ಅನುವಿಡಿದು ಅನುಭವದ ಸುಖವನು ಉಂಡು ಮಿರಮಿರನೇ ಮಿಂಚುತ್ತಿದೆ. ಸುಖವನ್ನು ಏಕೀಕರಿಸಿ ನೋಡಲು ಅನುವಾಯಿತ್ತಯ್ಯಾ ಬೆಳ್ಪಿನ ಹದಿನಾರು ಎಸಳಿನ ಪೀಠ.

ಮರಕ್ಕೆ ಬಾಯಿ ಬೇರು. ಅದು ನೆಲವನ್ನು ಆಶ್ರಯಿಸಿ ಬೆಳೆದು ಮೇಲೆ ಫಲಪುಷ್ಪಗಳನ್ನು ಅರಳಿಸುತ್ತದೆ. ಕೆಳಗೆ ನೀರೆರೆದರೆ ಮೇಲೆ ಫಲಪುಷ್ಪವಾಗಿ ಅರಳುತ್ತದೆ. ಹಾಗೆಯೇ ತನು ಕೂಡಾ

ತಲೆಕೆಳಗಾಗಿ ಬೆಳೆದಿದೆ. ಬಾಯಿ ಬೇರಾಗಿದೆ. ಅಲ್ಲಿ ಹದಿನಾರು ದಳಗಳುಳ್ಳ ವಿಶುದ್ಧಿ ಚಕ್ರವು ಇದೆ. ಅದು ಕಂಠದಲ್ಲಿದ್ದು, ಅ ಆ ಇ ಈ ಉ ಊ ಋ ೠ ಎ ಏ ಐ ಒ ಓ ಔ ಅಂ ಅಃ ಎಂಬ ಹದಿನಾರು ಅಕ್ಷರಗಳು ಅಲ್ಲಿವೆ. ವಿಶುದ್ಧಿಯಲ್ಲಿಯ ಚಕ್ರದ ಲಿಂಗಕ್ಕೆ ಷೋಡಷದಳ ಸ್ವರೂಪವಾದ ಚಿದ್ಘನ ಮಹಾಲಿಂಗವೆನ್ನುವರು. ಹೀಗಾಗಿ ಅಮೃತ ಮತ್ತು ವಿಷ ಪಾಲ್‌ಗಡಲಿನಿಂದ ಹೊರಬಂದಾಗ, ವಿಷಪಾನ ಮಾಡಿ ಕಂಠದಲ್ಲಿಟ್ಟುಕೊಂಡು ನೀಲಕಂಠ ಎಂದು ಕರೆಯಿಸಿಕೊಂಡ. ಕಂಠದ ಆ ಪೀಠದಲ್ಲಿ ನೀಲಕಂಠನಿದ್ದಾನೆ. ಸಕಲವನ್ನು ಪ್ರಸಾದ ಮಾಡಿಕೊಳ್ಳುವ ಶಕ್ತಿ ಆತನಿಗಿದೆ. ವ್ಯೋಮದ ಗುಣ ಕೆಟ್ಟು ಕಾಯವಾಗಿ ನೆಲೆಗೊಂಡಿದ್ದಾನೆ. ಆತನೇ ನಿಮ್ಮ ಶರಣ ಚೆನ್ನಬಸವಣ್ಣ. ಕಪಿಲಸಿದ್ಧಮಲ್ಲಿನಾಥಯ್ಯಾ ಚೆನ್ನಬಸವಣ್ಣನಿಂದ ಬದುಕಿದೆನು. ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ಮಾತನಾಡಿದ್ದಾರೆ.

**819**

**ಬಿಳಿಯ ತತ್ತಿಯೊಳಗೆ ಹಲವು ಬ್ರಹ್ಮಾಂಡವ್ವೆ,**
**ಒಲವಿಂದಲಿಪ್ಪವವು ಸಮತೆ.**
**ತಾಯ ಹಲವು ತತ್ತಿಯನಿಟ್ಟು**
**ಮರಳಿ ಆಡುತ್ತಿಪ್ಪುದದು ಕರುಣ ಸಮತೆಯ ಸಾಕ್ಷಿಯೆನಿಪ ಭಕ್ತಿ.**
**ಕರುಣಾಕರನು ಕಪಿಲಸಿದ್ಧ ಮಲ್ಲೇಶ್ವರನು**
**ಇಂಥ ಸಕಲವನು ಧರಿಸಿ ಶರಣರ ಕರದಲಿ.**

ಬೆಳಗಿಂಗೆ ಬೆಳಗಾಗಿ ಬೆಳಗುವ ತನುವೆಂಬ ಬಿಳಿಯ ತತ್ತಿಯೊಳಗೆ ಹಲವು ಬ್ರಹ್ಮಾಂಡಗಳು ಬಚ್ಚಿಟ್ಟುಕೊಂಡಿವೆ. ಹೀಗಾಗಿ ಪುರಾತರು ಸೂರ್ಯಕೋಟಿ ಸಮಪ್ರಭ ಎಂದು ಕರೆದಿದ್ದಾರೆ. ಸೂರ್ಯ ಇಡೀ ಬ್ರಹ್ಮಾಂಡವನ್ನೇ ಬೆಳಗುತ್ತಾನೆ. ಬೆಳಗುವುದು ಬೆಳಕಿನ ಕೆಲಸ; ಆದರೆ ಅದು ಚೇತನವಲ್ಲ. ಆ ಬೆಳಕಿಗೆ ಬ್ರಹ್ಮಾಂಡದ ಪರಿಚಯವಿಲ್ಲ. ಕಣ್ಣ ಬೆಳಕು ಹಾಗಲ್ಲ; ಸೂರ್ಯ ಬೆಳಗಿದ ಬೆಳಕನ್ನು ಕಣ್ಣಿನ ದೃಶ್ಯ ಬೆಳಗುತ್ತದೆ. ಅದು ಚೇತನ. ಸೂರ್ಯನಿಗೆ ಸುಂದರವಾದ ಹೂವಿನ ಪರಿಚಯವಿಲ್ಲ. ಹೂ ಬೆಳಕಿಗಾಗಿ ಕಾಯುತ್ತದೆ. ಹಾಗೆಯೇ ಕಣ್ಣ ಬೆಳಕು ಇಡೀ ಬ್ರಹ್ಮಾಂಡವನ್ನೇ ಬೆಳಗುತ್ತದೆ. ಬೆಳಗುವ ಸೂರ್ಯನನ್ನು ಬೆಳಗುತ್ತದೆ. ಆ ಬಿಳಿಯ ತತ್ತಿಯೊಳಗೆ ಹಲವು ಬ್ರಹ್ಮಾಂಡವು ಅಡಗಿವೆ. ಒಲವಿನ ಬೆಳಕಿನ ಸಮತೆ ಸಕಲ ತತ್ತಿಗಳಲ್ಲಿ ಇದೆ. ತಾಯಿ ಹಲವು ತತ್ತಿಯನ್ನಿಟ್ಟು ಆ ತತ್ತಿಯೊಂದಿಗೆ ಮರಳಿ ಮರಳಿ ಆಡುತ್ತಿದ್ದಾಳೆ. ಕರುಣಾಮಯ ಸಮತೆಯ ಸಾಕ್ಷಿಯಾದ ಭಕ್ತಿಯನ್ನು ಹೀರಿ ಕರುಣಾಕರನು ಕಪಿಲಸಿದ್ಧ ಮಲ್ಲೇಶ್ವರನು ಇಂತಹ ಸಕಲವನ್ನು ಧರಿಸಿ ಶರಣರ ಕರದಲ್ಲಿ ಬಚ್ಚಿಟ್ಟುಕೊಂಡಿದ್ದಾನೆ.

**820**

**ಬೀಜ-ವೃಕ್ಷದಂತೆ ನೀನಿಪ್ಪೆಯಯ್ಯಾ.**
**ನಿರಾಕಾರವೆ ಮೂರ್ತಿಯಾಗಿ, ಮೂರ್ತಿಯೆ ನಿರಾಕಾರವಾಗಿ.**
**ಇಂತಿವೆಲ್ಲವನತಿಗಳೆದು ಬಯಲಾಗಿಪ್ಪೆಯಯ್ಯಾ ನೀನು.**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನ ದೇವಯ್ಯಾ.**

ಬೀಜ-ವೃಕ್ಷದಂತೆ ನೀನೆರುವೆಯಯ್ಯಾ. ಪರಮಾತ್ಮನೇ ಬೀಜದಲ್ಲಿ ವೃಕ್ಷ ಅಡಗಿದೆ ಬೀಜವಿಲ್ಲದೆ ವೃಕ್ಷವಿಲ್ಲ. ವೃಕ್ಷವಿಲ್ಲದೆ ಬೀಜವಿಲ್ಲ. ಬೀಜ ವೃಕ್ಷದ ನ್ಯಾಯದಂತೆ ನಿನ್ನ ಇರುವಿಕೆ. ನಿರಾಕಾರವೇ ಮೂರ್ತಿಯಾಗಿದೆ. ಮೂರ್ತಿಯೇ ನಿರಾಕಾರವಾಗಿದೆ.

''ಬಯಲ ರೂಪ ಮಾಡಬಲ್ಲಾತನೆ ಶರಣ, ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ. ಬಯಲ ರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ; ಆ ರೂಪ ಬಯಲು ಮಾಡಲರಿಯದಿದ್ದಡೆ ಎಂತು ಲಿಂಗಾನುಭಾವಿ ಎಂಬೆ? ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರವುಂಟೆ ಕೂಡಲಸಂಗಮದೇವ''.

ಬಯಲು ಕಾಣುವುದಿಲ್ಲ. ಬಯಲಲ್ಲಿದ್ದ ಜಲಜನಕವು ಕಾಣುವುದಿಲ್ಲ. ಬಯಲಲ್ಲಿದ್ದ ಆಮ್ಲಜನಕವು ಕಾಣುವುದಿಲ್ಲ. ಕಾಣಬಾರದ ಜಲಜನಕವನ್ನು, ಕಾಣಬಾರದ ಆಮ್ಲಜನಕವನ್ನು ಹಿಡಿದು, ಬಯಲುದೇವ ತಾನು ಒಳಹೊರಗೆನ್ನದೆ ಅದರಲ್ಲಿ ಬೆರೆತು ಜಲವನ್ನಾಗಿಸಿದ. ಜಲವನ್ನೇ ಗಟ್ಟಿಯನ್ನಾಗಿಸಿ ಭೂಮಿಯನ್ನಾಗಿ ಮಾಡಿದ. ಜಲಬಿಂದುವೇ ಬಯಲ ಜೀವಜಲಬಿಂದುವಾಗಿ ಗರ್ಭಹೊಕ್ಕು ತನುವಾಗಿ ಹೊರಬಂದು ರೂಪವಾಗಿದೆ.

ಬಯಲು ರೂಪಾಯಿತಲ್ಲವೇ, ರೂಪ ಎನ್ನಲು ಹೋದರೆ ಅದು ನಿರೂಪ! ತನು ರೂಪವಾದರೆ ತನುವಿನ ದೃಶ್ಯ ನಿರೂಪ. ಕಿವಿ ರೂಪವಾದರೆ ಅದು ಕೇಳುವ ಶಬ್ದ ನಿರೂಪ! ಚರ್ಮ ರೂಪವಾಗಿ ಕಂಡರೆ ಅದರ ಸ್ಪರ್ಶ ನಿರೂಪ! ಮೂಗು ರೂಪವಾಗಿ ಕಂಡರೆ ಗಂಧ ನಿರೂಪ! ನಾಲಿಗೆ ರೂಪವಾಗಿ ಕಂಡರೆ ರುಚಿ ನಿರೂಪ! ನಿರಾಕಾರವೇ ಮೂರ್ತಿಯಾಗಿದೆ! ಮೂರ್ತಿಯೇ ನಿರಾಕಾರವಾಗಿದೆ! ಇಂತಿವೆಲ್ಲವನ್ನು ಅಲ್ಲಗಳೆದು ಬಯಲಾಗಿಪ್ಪೆಯಯ್ಯಾ ನೀನು.

ಬಯಲು, ತಾನು ಸೃಷ್ಟಿಮಾಡಿದ ಸಕಲ ಬ್ರಹ್ಮಾಂಡವನ್ನು, ತನ್ನ ಗರ್ಭದಲ್ಲೆ ಇಟ್ಟುಕೊಂಡು ಪೋಷಣೆ ಮಾಡುತ್ತಲಿದೆ. ಬಯಲು ಬಯಲೇ ಆಗಿದೆ. ಬಯಲು ಸೃಷ್ಟಿಮಾಡಿದ ಸಕಲ ಬ್ರಹ್ಮಾಂಡವು ಕೂಡಾ ಬಯಲೇ ಆಗಿದೆ. ಸಾಕಾರ ನಿರಾಕಾರವನ್ನು ಹೊತ್ತುಕೊಂಡಿದೆ. ನಿರಾಕಾರ ಸಾಕಾರವನ್ನು ಹೊತ್ತುಕೊಂಡಿದೆ.

ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು, ತಾನೇ ಪರಮ ಸಂತೋಷದಿಂದ ನೋಡಬೇಕೆನ್ನುವ ಬಯಕೆಯಿಂದಾಗಿ ಬಯಲೇ ಬೀಜವಾಗಿ ಬಯಲಲ್ಲಿ ಬಿತ್ತಿದೆ. ಬಯಲು ಬಿತ್ತಿದ ಬೀಜ ಬಯಲಲ್ಲೆ ಬಯಲು ವೃಕ್ಷವಾಗಿ ಬೆಳೆದು ನಿಂತಿದೆ. ಸಿದ್ಧರಾಮ ಶಿವಯೋಗಿ ಬಯಲನ್ನು ಬೀಜ ವೃಕ್ಷದಂತೆ ಕಂಡರು. ಸಿದ್ಧಾರ್ಥ ಬಯಲನ್ನು ಬೋಧಿವೃಕ್ಷವೆಂದು ಕರೆದ. ವೃಕ್ಷಕ್ಕೆ ವೃಕ್ಷ ಬೋಧೆಮಾಡುವ ಸೋಜಿಗ ಬ್ರಹ್ಮಾಂಡದಲ್ಲಿ ಮಾತ್ರ ಕಾಣಬಹುದು.

**821**

**ಬೀಸುವ ಗಾಳಿ ಧೂಳಿಯನೆತ್ತಲು**
**ಮಸುಳಿದನೆ ಸೂರ್ಯನು?**
**ಆ ಸೂರ್ಯನಂತೆ ಬೆಳಗುತ್ತಿರವೇಡಾ!**
**ಹಿರಿಯರ ಮನವು ಮನವಿಚ್ಛಂದವಾಗದೆ**
**ಒಂದೆಯುಂದದಿ ಇಪ್ಪಂತಪ್ಪ ನಿಮ್ಮದೊಂದು ಸಮತೆಯ ಗುಣ**
**ಎನ್ನನೆಂದು ಪೊದ್ದಿಪ್ಪುದು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬೀಸುವ ಗಾಳಿ ಸೂರ್ಯನನ್ನು ತಾನು ಎಬ್ಬಿಸಿದ ಧೂಳಿನಿಂದ ಮುಸುಕಿದರೆ ಏನಾಯಿತು. ಸೂರ್ಯನು ಇಲ್ಲದಂತಾದನೆ? ಬೆಳಗುವ ಸೂರ್ಯ ಸದಾ ಬೆಳಗುತ್ತಲೆ ಇದ್ದಾನೆ. ಗಾಳಿ, ಧೂಳು, ಮೋಡಗಳಿಂದ ಸೂರ್ಯ ಕಾಣದಿದ್ದರೆ ಏನಾಯಿತು? ಸೂರ್ಯನೇ ಇಲ್ಲವೆಂದು ಅರ್ಥವೇನು? ಬೆಳಗುವ ಸೂರ್ಯನನ್ನು ಕಾಣುವ ಹಾಗೆ ಮಾಡುವ ಶಕ್ತಿ ಗಾಳಿಗೆ ಇಲ್ಲವೆಂದು ನಿರ್ಧರಿಸುತ್ತದೆ.

ಸಕಲ ತನುಗಳಲ್ಲಿ ಜ್ಞಾನ ಸೂರ್ಯನು, ಇಡೀ ಬ್ರಹ್ಮಾಂಡವನ್ನು ಬೆಳಗುತ್ತಿರುವ ಸೂರ್ಯನನ್ನು ನಾಚಿಸುವಂತೆ ಬೆಳಗುತ್ತಿದ್ದಾನೆ. ಆತ ಪ್ರತಿ ತನುವಿನಲ್ಲಿಯೂ ತನ್ಮಯವಾಗಿದ್ದಾನೆ. ತನುವನ್ನು ಆವರಿಸಿದ ಮನವೆಂಬ ಮಾಯೆಗೆ ಬೆಳಗುವ ಜ್ಞಾನ ಸೂರ್ಯನ ಪರಿಚಯವಿಲ್ಲ. ಮನಕ್ಕೆ ಪರಿಚಯವಿಲ್ಲದಿದ್ದರೆ ಏನಾಯಿತು? ಜ್ಞಾನ ಸೂರ್ಯನಿಲ್ಲವೆಂದು ನಿರ್ಧರಿಸಬೇಕೆ? ಮನ ಹಗಲುಗುರುಡು, ಅದು ಗೂಗೆ. ಗೂಗೆಗೆ ಹಗಲು ಕಣ್ಣು ಕಾಣುವುದಿಲ್ಲ. ಹಾಗೆಯೇ ತನುವಿನಲ್ಲಿಯೇ ತನ್ಮಯವಾದ ಬೆಳಗುವ ಜ್ಞಾನ ಸೂರ್ಯ ಮನವೆಂಬ ಗೂಗೆಗೆ ಕಾಣುವುದಿಲ್ಲ. ಹಿರಿಯರ ಮನವು ವಿಚ್ಛಿಂದವಾಗದೆ ಒಂದೆಯಂದದಿ ಸದಾ ಬೆಳಗುವ ನಿಮ್ಮದೊಂದು ಸಮತೆಯ ಗುಣ ನನ್ನನ್ನು ಎಂದು ಬೆಳಗುವುದೋ ಕಪಿಲಸಿದ್ಧ ಮಲ್ಲಿಕಾರ್ಜುನ.

**822**

**ಬೆಟ್ಟವ ನೆಮ್ಮಿ ಕಟ್ಟಿಗೆಯ ತಳುವದು ಅದಾವಚ್ಚರಿ!**
**ಪ್ರಾಣಕ್ಕೆ ಹೊಣೆಯಾದಲ್ಲಿ ಕಾದುವುದು ಅದಾವಚ್ಚರಿ!**
**ಪರಕಾಯವ ತೊಟ್ಟದ್ದಲ್ಲಿ ಅಚ್ಚರಿ ಅರಿಬಿರಿದೆ.**
**ನಿಮ್ಮುವ ಕಾರುಣ್ಯವಾಗಿದ್ದಲ್ಲಿ ಎನಗೆಲ್ಲಿಯೂ ಸುಖ.**
**ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗದಲ್ಲಿ**
**ಪ್ರಭುದೇವರಿಂದ ಬದುಕಿದೆ.**

ಬೆಟ್ಟವ ನಂಬಿ ಕಟ್ಟಿಗೆಯ ತಳ್ಳುವುದು ಅಚ್ಚರಿಯಲ್ಲ. ಅದು ಸಹಜ. ಏಕೆಂದರೆ ಸ್ಥೂಲ ಕಾಯವೇ ಪ್ರಮುಖವಾದಾಗ ಕಾಯವೇ ಶ್ರೇಷ್ಠ. ಯುದ್ಧದ ಸಂದರ್ಭದಲ್ಲಿ ಯುದ್ಧಮಾಡುತ್ತಾ ಹಲವಾರು ಕಾಯಗಳನ್ನು ಕೊಂದಾದರೂ ಪ್ರಾಣದೊಂದಿಗೆ ಬದುಕುವ ಪ್ರಯತ್ನ ಮಾಡುತ್ತದೆ. ಇದರಲ್ಲಿ ಯಾವ ಅಚ್ಚರಿಯೂ ಇಲ್ಲ.

ಸ್ಥೂಲ ಕಾಯದಲ್ಲಿ ಅರಿವೆಂಬ ಗುರುದೇವನಿದ್ದಾನೆ. ಆತನಿದ್ದರೆ ಮಾತ್ರ ಪ್ರಾಣ ಉಳಿಯುತ್ತದೆ; ಜೊತೆಗೆ ಕಾಯವೂ ಉಳಿಯುತ್ತದೆ ಎಂದು ಯುದ್ಧದಲ್ಲಿ ನಿರತವಾದ ಕಾಯಗಳಿಗೆ ಅನ್ನಿಸುವುದೇ ಇಲ್ಲ. ಇದು ಸಹಜ. ಲೋಕ ಕೂಡಾ ಹಾಗೆಯೇ ಇದೆ.

ಪ್ರಭುದೇವರ ದರುಶನದಿಂದಾಗಿ ನಾನು ಪರಕಾಯ ತೊಟ್ಟಿರುವ ವಿಚಾರ ನನಗೆ ಅವರಿಂದ ಅರಿವಾಯಿತು. ಆಶ್ಚರ್ಯದಿಂದ ಪರಮಾಶ್ಚರ್ಯದಿಂದ ಅವರ ಮಾತು ಆಲಿಸಿ ಅರಿಯಲು ಹೋದೆ. ಕಾಯದಲ್ಲಿ ಮತ್ತೊಂದು ಕಾಯ ಹೊದ್ದಿರುವ ವಿಚಾರ ಕಾಯಕ್ಕೆ ಹೊಳೆಯಿತು.

ಸ್ಥೂಲಕಾಯವೊಂದೇ ಪ್ರಧಾನವಲ್ಲ. ಮನೋಕಾಯ ಸ್ಥೂಲಕಾಯವನ್ನು ಹಡೆದ ಕಾಯವೊಂದು ಕಾಯದಲ್ಲಿಯೇ ಇದೆ. ಎರಡು ಕಾಯಗಳನ್ನು ಒಂದು ಮಾಡಿಕೊಂಡು ಪರಕಾಯದಲ್ಲಿ ಪ್ರವೇಶ ಮಾಡುವ ಮಹಾಕಾಯಕದಲ್ಲಿ ಕಾಯ ತೊಡಗಬೇಕಾಗಿದೆ.

ಮಹಾಕಾಯವುಳ್ಳ ಮಹಾತ್ಮನ ಕರುಣೆಯಾದರೆ ಸಾಕು, ನನಗೆಲ್ಲೆಡೆಯೂ ಸುಖವೇ ಸುಖ. ಆಗ ನಾನು ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನನಾಗುವೆನು. ಕಪಿಲಸಿದ್ಧ ಮಲ್ಲಿಕಾರ್ಜುನನೇ ನಾನಾಗುವ ಕಾಯಕವನ್ನು ಪ್ರಭುದೇವರು ನನಗೆ ದಯಪಾಲಿಸಿದರು. ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

**823**

**ಬೇಕು ಬೇಡೆನ್ನದೆ, ಸಾಕು ಸವಿಯೆನ್ನದೆ,**
**ಆಕಾರವಿದು ತಾನು ಒಲ್ಲೆನೆನದೇಕೈಕ ರುದ್ರ ನಾನಾದೆನು ಎನ್ನದೆ,**
**ಅನೇಕ ಪರಿಯಿಂ ಭಜಿಸು ಸಮತೆ ಪದವಾ.**
**ಆ ಪದದ ಫಲದಿಂದ ನೀ ತಾನೆ ಅಪ್ಪೆಯೈ**
**ಏಕೆ ಭ್ರಾಂತಪ್ಪೆಯೈ.**
**ಗುರು ಕರುಣವು ತನ್ನ ಪದವನೆಯ್ದಿತ್ತು.**
**ನಿನ್ನ ಭವನಾಶವನು ಮುನ್ನವೆ ಮಾಡೂದು**
**ನಂಬು ಕಪಿಲಸಿದ್ಧ ಮಲ್ಲೇಶನಾ.**

ಆಕಾರವುಳ್ಳ ತನು ಒಂದು; ಆಕಾರವನ್ನು ಆವರಿಸಿದ ನಿರಾಕಾರ ತನುವೊಂದು; ಆಕಾರ ತನುವಿನಲ್ಲಿ ತನ್ಮಯವಾದ ನಿರಾಕಾರ ತನುವೊಂದು. ಆಕಾರವನ್ನು ಆವರಿಸಿದ ನಿರಾಕಾರ ತನುವು ಬೇಕು ಬೇಡೆನ್ನದೆ, ಸಾಕು ಸವಿಯೆನ್ನದೆ ಸಕಲವನ್ನು ಬೇಡುತ್ತದೆ. ಬಂದುದೆಲ್ಲವನ್ನು ಒಲ್ಲೆನ್ನೆನ್ನದ ರುದ್ರತನುವದು.

ಈ ತನುವಿಗೆ ಜನನವುಂಟು ಮರಣವುಂಟು. ಈ ತನುವಿನಲ್ಲಿಯೇ ತನ್ಮಯವಾದ ನಿರಾಕಾರ ತನುವಿಗೆ ಜನನವಿಲ್ಲ ಮರಣವಿಲ್ಲ. ಜನನ ಮರಣಂಗಳಿಗೆ ಸಿಕ್ಕು ವಿಲವಿಲನೆ ಒದ್ದಾಡುವ ಸಾಕಾರ ತನುವು ನಿರಾಕಾರ ತನುವನ್ನು ಭಜಿಸಲೇ ಬೇಕು. ಎನಗೆ ಸಮತೆಯನ್ನು ಕರುಣಿಸು ಗುರುದೇವನೇ ಎಂದು ಬೇಡಲೇಬೇಕು. ನನ್ನ ಭ್ರಮೆಯನ್ನು ಕಳೆದು ಬ್ರಹ್ಮನನ್ನಾಗಿಸು ಪರಮಾತ್ಮನೆ ಎಂದು ಪರಿಪರಿಯಿಂದ ನೀ ಬೇಡಿದರೆ ನೀನು ತಾನೆಯಪ್ಪಿ. ಅವನು ನಿನ್ನನ್ನು ತನ್ನಂತೆ ಮಾಡಿಕೊಳ್ಳುವನು.

ನಿನ್ನ ಜನನ ಮರಣಗಳ ಬಾಧೆಯನ್ನು ಅಳಿದು, ನಿನಗೆ ಮರುಜವಣಿಯ ಫಲವನ್ನು ಮೇಯಿಸಿ, ಮರಣವೇ ಇಲ್ಲದ ಚೆಲುವೆಯಾದ ನಿನ್ನನ್ನು ಅವನೇ ವರಿಸುವನು. ನಂಬು ನಂಬು ಎಲೆ ಮನವೇ ಕಪಿಲಸಿದ್ಧ ಮಲ್ಲಿಕಾರ್ಜುನನ.

**824**

**ಬೇಡ ಬೇಡಯ್ಯ ಕಾಡಲಾಗದು ಎನ್ನ**
**ರೂಢೀಶ ನೀನೆನ್ನ ತಡಿಗೆ ಚಾಚಾ.**
**ಗಾಡಿಗತನದಿಂದ ನೋಯಿಸಿದಡೆ**
**ನೋಡಿ ಮೊರೆಯಿಡುವೆನ್ನೈ ಬಸವಣ್ಣಂಗೆ.**
**ಆರೂಢನೆ ನಿಮ್ಮ ಗಾರುಮಾಡಿಸುವರೆಮ್ಮವರಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ದೇವರೆ, ನೀನು ಹೊರಗಿರುವಿಯೆಂದು ಲೋಕ ಪೂಜಿಸಿದಂತೆ ನಾನೂ ಕೂಡಾ ನಿನ್ನನ್ನು ಹೊರಗೆಯೇ ಪೂಜಿಸಿದೆ. ಬಸವಣ್ಣನ ಕೃಪೆಯಿಂದಾಗಿ ನೀನು ನನ್ನ ದೇಹದಲ್ಲಿಯೇ ಇರುವಿಯೆಂದು

ಗೊತ್ತಾಯಿತು. ನೀನು ನನಗೆ ದರುಶನ ನೀಡಿ ನನ್ನ ಅಜ್ಞಾನವನ್ನು ಸುಟ್ಟು ಹಾಕು ತಂದೆ. ಇನ್ನು ನನ್ನನ್ನು ದಡ ಸೇರಿಸು.

ದರುಶನ ನೀಡದೆ ಗಾಡಿಗತನದಿಂದ ನೋಯಿಸಿದಡೆ ನೋಡಿ ಮೊರೆಯಿಡುವೆನು ಬಸವಣ್ಣನ. ನೀನೊಬ್ಬನೆ ದೇವರೆಂದು ನೀನು ನನಗೆ ದರುಶನ ನೀಡದೆ ಮುನಿಸಿಕೊಂಡರೆ, ನನ್ನ ಮೇಲೆ ಉದಾಸೀನ ಮಾಡಿದರೆ, ನನಗೆ ನಿನ್ನಂತಹ ದೇವರು, ನಿನ್ನನ್ನು ತೋರಿದ ದೇವರು ಬಸವಣ್ಣಂಗೆ ಮೊರೆಯಿಡುವೆ! ಆತ ಕರುಣಾಮಯಿ! ನಿನ್ನ ಹಾಗೆ ಕಾಡುವವನಲ್ಲ! ನಾನು ಬೇಡಿದರೆ ಇಲ್ಲವವನೂ ಅಲ್ಲ! ಇನ್ನು ನಿನ್ನ ಅಂಜಿಕೆ ನನಗಿಲ್ಲ!

ಆರೂಢನೆ ನಿಮ್ಮ ಗಾರುಮಾಡಿಸುವರೆಮ್ಮವರಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**825**

**ಬ್ರಹ್ಮಪೂಜಿಸುವ, ವಿಷ್ಣು ಪೂಜಿಸುವ, ಇಂದ್ರಪೂಜಿಸುವ,**
**ರವಿ ಪೂಜಿಸುವ, ಚಂದ್ರ ಪೂಜಿಸುವ,**
**ಅಂದಂದಿಂಗೆ ಬಂದ ಸುಖದುಃಖಗಳನುಣತಿಪ್ಪರು.**
**ಅದು ಕಾರಣ, ಲಿಂಗಪೂಜಕರಿಗೆ ಭವವುಂಟೆಂದು ಹೇಳುತ್ತಿದೇನೆ.**
**ಪ್ರಸಾದಲಿಂಗ ಪ್ರಾಣಗಳಿಗೆ ಭವವಿಲ್ಲ, ಸಂದಿಲ್ಲ;**
**ಇದು ನಿಶ್ಚಯ ನಂಬು,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಾಣೆ.**

ಬ್ರಹ್ಮ ವಿಷ್ಣು ಇಂದ್ರ ರವಿ ಚಂದ್ರ ನಿನ್ನನ್ನು ಪೂಜಿಸಿದರು. ಆದರೂ ಅವರು ಸುಖವನ್ನು ಅನುಭವಿಸಿದರು; ದುಃಖವನ್ನೂ ಅನುಭವಿಸಿದರು. ಏಕೆಂದರೆ ನಿನ್ನನ್ನು ಅವರು ಲಿಂಗ ಮಾಡಿ ಪೂಜಿಸಿದರು.

ನೀನು ಪ್ರಸಾದಲಿಂಗಯ್ಯನೆಂದು ಅವರಿಗೆ ಗೊತ್ತಾಗಲಿಲ್ಲ. ಹೀಗಾಗಿ ಅವರು ಬಲಶಾಲಿಗಳಾದರೂ ಕೂಡಾ ಸುಖದುಃಖಗಳನ್ನು ಅನುಭವಿಸಿದರು. ಪರಮಸುಖವೆಂದರೇನೆಂದು ಅವರಿಗೆ ತಿಳಿಯಲೇ ಇಲ್ಲ.

ಲಿಂಗ ಪೂಜಕರಿಗೆ ಭವವುಂಟು. ಜನನವುಂಟು ಮರಣವುಂಟು. ಪ್ರಸಾದಲಿಂಗಿಗಳಿಗೆ ಜನನವಿಲ್ಲ ಮರಣವಿಲ್ಲ. ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಲಿಂಗವಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವೆ ಗುರು. ಗುರುದೇವನೇ ಮಹಾದೇವನು. ಆ ಮಹಾದೇವನೇ ಸದಾಶಿವನು. ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮನು.

ಅಂಗವನ್ನು ಸೃಷ್ಟಿ ಮಾಡಿ ಆ ಅಂಗದಲ್ಲಿಯೇ ತಾನು ಲಿಂಗಯ್ಯನಾಗಿ ಸಂಗಮವಾಗಿದ್ದಾನೆ. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಆರಾಧಿಸಿದರೆ ಸಾಕು ಮನ ಘನಮನವಾಗುತ್ತದೆ. ಪ್ರಸಾದಲಿಂಗಪ್ರಾಣಿ ಎಂದು ಕರೆಯಿಸಿಕೊಳ್ಳುತ್ತದೆ. ಇದಕ್ಕೆ ಭವವಿಲ್ಲ, ಸಂದಿಲ್ಲ; ಇದು ನಿಶ್ಚಯ. ನಂಬು, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಾಣೆ.

**826**

**ಬ್ರಹ್ಮಾಂಡಂಗಳಿಂದತ್ತತ್ತಲಾದ ಆದ್ಯಕ್ಷರದ**
**ಭೇದವ ಭೇದಿಸಿ ಸಾದಾಖ್ಯ ತತ್ವವನತಿಗಳೆದು**
**ಶುದ್ಧ ಸಿದ್ಧ ಪ್ರಸಿದ್ಧ ಪಂಚಮಬ್ರಹ್ಮಕ್ಕೆ ಸೊಮ್ಮಾದ**

**ಆರುವರ್ಣಂಗಳ ಐವತ್ತೆರಡಕ್ಷರದ**
**ಆನಂದಸ್ಥಾನವ ಬಲ್ಲಾತ ಗುರು.**
**ಇಪ್ಪತ್ತೈದಕ್ಷರದ ಹತ್ತೆ ಹೊದ್ದದಿಪ್ಪ ಪರಮಗುರುವೆ**
**ನೀನು ಶಿಷ್ಯ ಕಾರಣ ಪರಶಿವಮೂರ್ತಿ ಗುರುರೂಪಾದೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗವೆಂದರೆ ಸಾಮಾನ್ಯವಲ್ಲ. ಅದು ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದೆ. ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತನ್ನ ಗರ್ಭದಲ್ಲಿ ಬಚ್ಚಿಟ್ಟುಕೊಂಡಿದೆ. ಓಂಕಾರವೆಂದು, ಓಂನಮಃಶಿವಾಯ ಎಂದು ಕರೆಯಿಸಿಕೊಂಡಿದೆ. ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವೆನ್ನಿಸಿಕೊಂಡಿದೆ. ಪಂಚ ಮಹಾಬ್ರಹ್ಮಕ್ಕೆ ಸೊಮ್ಮಾಗಿ, ಆರು ವರ್ಣಗಳ ಮೂಲಕ ದರುಶನ ನೀಡಿದೆ.

ಐವತ್ತೆರಡಕ್ಷರಗಳಿಗೆ ಜನ್ಮ ನೀಡಿ, ಅಕ್ಷರೋತ್ತಮನೆಂದು ಕರೆಯಿಸಿಕೊಂಡಿದೆ. ಜೀವಜಲಬಿಂದುವನ್ನು ಸೃಷ್ಟಿ ಮಾಡಿ, ಅದರಲ್ಲಿ ತಾನು ಬಚ್ಚಿಟ್ಟುಕೊಂಡು, ಗರ್ಭಕ್ಕೆ ಹರಿದು ಲಿಂಗಯ್ಯನೆಂದು ಕರೆಯಿಸಿಕೊಂಡಿದೆ.

ಇಪ್ಪತ್ತೈದು ಆತ್ಮ ತತ್ವಗಳನ್ನು ಹೊದ್ದೂ ಹೊದ್ದದಂತೆ ಇರುವ ಪರಮಗುರುದೇವನು ತಾನೆಂದು ಗುರುತಿಸಿಕೊಂಡಿದೆ.

ಶಿಷ್ಯನೂ ತಾನೇ ಗುರುದೇವನೂ ತಾನೇ ಆಗಿ ಗುರು ರೂಪ ಕಾಯವಾಗಿದೆ; ಕೈಲಾಸವಾಗಿದೆ. ಕಪಿಲಸಿದ್ಧ ಮಲ್ಲಿಕಾರ್ಜುನ ತಾನಾಗಿದೆ.

**827**

**ಭಕ್ತನ ಮನ ಹೆಣ್ಣಿನೊಳಗಾದಡೆ, ವಿವಾಹವಾಗಿ ಕೂಡುವುದು.**
**ಭಕ್ತನ ಮನ ಮಣ್ಣಿನೊಳಗಾದಡೆ, ಕೊಂಡು ಆಲಯವ ಮಾಡುವುದು.**
**ಭಕ್ತನ ಮನ ಹೊನ್ನಿನೊಳಗಾದಡೆ, ಬಳಲಿ ದೊರಕಿಸುವುದು ನೋಡಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಭಕ್ತ ಎನ್ನುವ ಪದ ಹೆಣ್ಣು ಅಲ್ಲ ಗಂಡು ಕೂಡಾ ಅಲ್ಲ. ಅಂಗವನ್ನು ಆವರಿಸಿದ ಮನ, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಭಕ್ತಿ ಮಾಡಿದಾಗ ಅದು ಭಕ್ತನಾಗುತ್ತದೆ.

ಮನ ಹೆಣ್ಣಿನೊಳಗಾದಡೆ, ಅರಿವೆಂಬ ಗುರುದೇವನನ್ನೇ ಗಂಡನನ್ನಾಗಿ ಮಾಡಿಕೊಂಡು, ತಾನು ಆ ಗಂಡನಿಗೆ ಹೆಂಡತಿಯಾಗಿ, ವಿವಾಹ ಮಾಡಿಕೊಂಡು ಕೂಡದ ಅಗಲದ ಕೂಟದ ಸುಖದಲ್ಲಿ ಕೂಡುವುದು.

ಭಕ್ತನ ಮನ ಮಣ್ಣಿನೊಳಗಾದಡೆ, ದೇಹವನ್ನೇ ದೇವಾಲಯ ಮಾಡಿ ತಾನು ನಾರಿಯಾಗಿ, ದೇಹದಲ್ಲಿಯೇ ಸಂಗಮವಾದ ಈಶ್ವರನೊಂದಿಗೆ ಕೂಡಿ ಅರ್ಧನಾರೀಶ್ವರನೇ ತಾನಾಗುವುದು.

ಭಕ್ತನ ಮನ ಹೊನ್ನಿನೊಳಗಾದಡೆ ಬಳಲಿ ದೊರಕಿಸುವುದು ನೋಡಾ:

ಹೊನ್ನಿಗಾಗಿ, ಮಣ್ಣಿಗಾಗಿ, ಹೆಣ್ಣಿಗಾಗಿ ಬಳಲುವುದು ಮನದ ಗುಣ. ಈ ಮೂರೂ ವಸ್ತುಗಳು ಇಡೀ ಜಗದ ತನುಗಳನ್ನು ವಿಧಿಯಾಗಿ ಕಾಡುತ್ತಲಿದೆ.

ಕಾಯವನ್ನು ಆವರಿಸಿದ ಮನ, ಕಾಯದೊಂದಿಗೆ ಸಂಗ ಮಾಡಿದ್ದಕ್ಕಾಗಿ ಅದಕ್ಕೆ ಹೊನ್ನೆಂದರೆ

ಬಲು ಇಷ್ಟ. ಹಗಲಿರುಳು ಎನ್ನದೆ ಕಾಯವನ್ನು ಬಳಲಿಸಿ ಹೊನ್ನು ಪಡೆಯುತ್ತದೆ. ಕಾಯದ ಆಯುಷ್ಯವನ್ನು ಮನ ಹೊನ್ನಿಗಾಗಿ ನಷ್ಟ ಮಾಡುತ್ತದೆ. ಹೊನ್ನು ಒಂದು ಲೋಹ. ಅದರಲ್ಲಿ ಹಳದಿ ಬಣ್ಣ ಮಿಶ್ರವಾಗಿದೆ. ಅದು ಜಲಬಿಂದುವಿನಿಂದ ಜನ್ಮ ತಳೆದಿದೆ. ಹೊನ್ನಿನ ಮೋಹಕ್ಕೆ ಬಲಿಯಾದ ಕಾಯ ಕೂಡಾ ಜಲಬಿಂದುವಿನಿಂದಲೇ ಜನ್ಮ ತಳೆದಿದೆ. ಎರಡರ ಸ್ವರೂಪವೂ ಒಂದೇ ಆಗಿದೆ. ಈ ಸತ್ಯ, ಕಾಯದಲ್ಲಿಯೇ ಸಂಗಮವಾದ ಮಹಾಜ್ಞಾನ; ಕಾಯಕ್ಕೆ ಮಾತ್ರ ಗೊತ್ತು. ಹೀಗಾಗಿ ಜ್ಞಾನಕಾಯಕ್ಕೆ ಬೇಡವಾದ ವಸ್ತು ಸ್ಥೂಲ-ಸೂಕ್ಷ್ಮ ಕಾಯಕ್ಕೆ ಬೇಕಾಗುತ್ತದೆ.

ಹೊನ್ನಿಗಾಗಿ, ಹೆಣ್ಣಿಗಾಗಿ, ಮಣ್ಣಿಗಾಗಿ, ಮನ ಕಾಯವನ್ನು ಕಳ್ಳನನ್ನಾಗಿಸುತ್ತದೆ; ಸುಳ್ಳನನ್ನಾಗಿಸುತ್ತದೆ. ಭ್ರಷ್ಟ, ವಿಷಯಲಂಪಟನನ್ನಾಗಿಸುತ್ತದೆ, ರಾಜ ಮಂತ್ರಿ ಪ್ರಧಾನಿಯನ್ನಾಗಿಸುತ್ತದೆ.

ಮನ ಮಹಾಜ್ಞಾನಕಾಯಕ್ಕೆ ಹಣೆ ಮಣಿದು, ಆ ಜ್ಞಾನದಿಂದ ಹೆಣ್ಣು ಮಣ್ಣು ಹೊನ್ನನ್ನು ನೋಡಿದಾಗ ತನ್ನ ಅಜ್ಞಾನಕ್ಕೆ ತಾನೇ ಮರುಕ ವ್ಯಕ್ತಪಡಿಸಿ ನಾಚಿ ನೀರಾಗುತ್ತದೆ.

ಮನಕ್ಕೆ ಮಹಾಜ್ಞಾನದ ಪರಿಚಯವಿಲ್ಲದ್ದಕ್ಕಾಗಿ ಅದು ಕಾಯದ ಗೆಳೆತನ ಮಾಡಿ ಮಣ್ಣು ಹೊನ್ನು ಹೆಣ್ಣಿಗೆ ಶರಣು ಹೋಗಿದೆ. ಹೀಗಾಗಿ ಅವುಗಳನ್ನು ಯುದ್ಧ ಮಾಡಿ ಕೊಂದಾದರೂ ಪಡೆಯುತ್ತದೆ; ಕಳ್ಳನಾಗಿ ಕದ್ದು ಸುಖ ಅನುಭವಿಸುತ್ತದೆ.

ಕಾಯದಲ್ಲಿದ್ದ ಕಾಮದ ದ್ರವ್ಯ, ಕಾಯದಿಂದಲೇ ಹೊರಬಂದು, ಕಾಯಕ್ಕೆ ಸುಖಕೊಡುತ್ತದೆ. ಅದು ಸುಖವೂ ಅಲ್ಲ ದುಃಖವೂ ಅಲ್ಲ; ಮತ್ತೊಂದು ಕಾಯಕ್ಕೆ ಜನ್ಮ ನೀಡುವುದಕ್ಕಾಗಿ ಕಾಯದಿಂದಲೇ ಹೊರಬಂದ ಬಯಲ ಬೀಜಗಳು ಅವು.

ಮನ ತನಗೆ ತಾನೇ ತನುವಿನಲ್ಲಿ ತನ್ಮಯವಾದ ಜ್ಞಾನರತ್ನವನ್ನು ಅಲಂಕರಿಸಿದಾಗ ಹೆಣ್ಣು ಮಣ್ಣು ಹೊನ್ನಿನ ಅಜ್ಞಾನ ಬತ್ತಲಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**828**

**ಭಕ್ತನಾದುದಕ್ಕೆ ಇದೆ ಚಿಹ್ನವು ನೋಡಾ, ಎಲೆ ದೇವಾ.**
**ಕೈಯಲ್ಲಿರಲು ಮಾಂಸದ ಮುದ್ದೆ,**
**ಬಾಯಲ್ಲಿರಲು ವಾರಾಂಗನೆಯ ತಾಂಬೂಲ,**
**ಮನದಲ್ಲಿರಲು ಕತ್ರಿಯ ಭಾವ,**
**ಕೊರಳಲ್ಲಿರಲು ಲಿಂಗ, ದೇಹದಲ್ಲಿರಲು ಲಿಂಗಲಾಂಛನ,**
**ಜಂಗಮವೆಂದು ನಂಬುವುದು ಕಾಣಾ,**
**ಕಪಿಲಸಿದ್ಧ ಮಲ್ಲಿನಾಥಾ.**

ಅಣು ರೇಣು ತೃಣ ಕಾಷ್ಟದಲ್ಲಿ ದೇವರಿದ್ದಾನೆ. ಆತನಿದ್ದ ಲಾಂಛನ ಹೇಗಿದ್ದರೇನು? ಮನುಷ್ಯನಿಗೆ, ಕಲ್ಲಲ್ಲಿ ಕಟ್ಟಿಗೆಯಲ್ಲಿ ಮಣ್ಣಲ್ಲಿ ಲೋಹದಲ್ಲಿ ಮರದಲ್ಲಿ ನೀರಲ್ಲಿ ಹೊಂಡ ಕೊಂಡಗಳಲ್ಲಿ ದೇವರನ್ನು ಕಾಣುವ ಗುಣವಿದೆ. ಆದರೆ ಮನುಷ್ಯನಿಗೆ ಮನುಷ್ಯನಲ್ಲಿರುವ ದೇವರನ್ನು ಕಾಣುವ ಗುಣ ಮರೆಯಾಗಿದೆ.

ಮನುಷ್ಯ ಮನುಷ್ಯನನ್ನು ಗುರುವೆಂದು ನಂಬುತ್ತಾನೆ. ಶಿಷ್ಯನೆಂದು ನಂಬುತ್ತಾನೆ. ಕಳ್ಳ

ಭ್ರಷ್ಟ ವಿಷಯ ಲಂಪಟನೆಂದು ನಂಬುತ್ತಾನೆ. ರಾಜ, ಮಂತ್ರಿ, ಶಾಸಕ, ಸಚಿವ, ಅಧಿಕಾರಿ, ಜವಾನ, ರೈತ, ಹೆಣ್ಣು, ಗಂಡು ಎಂದು ನಂಬುತ್ತಾನೆ. ವೃತ್ತಿ ಪ್ರವೃತ್ತಿಯ ಮೂಲಕ ಮನುಷ್ಯ ಮನುಷ್ಯನನ್ನು ನೋಡುವ ಗುಣ ಮನುಷ್ಯನಲ್ಲಿದೆ. ಆದರೆ ಮನುಷ್ಯನಲ್ಲಿಯೇ ಬಚ್ಚಿಟ್ಟುಕೊಂಡ ದೇವರನ್ನು ನೋಡುವ ಸತ್ಯ ಮಾತ್ರ ಮನುಷ್ಯನಿಗೆ ಮರೆತು ಹೋಗಿದೆ.

ಉಪಜೀವನಕ್ಕಾಗಿ ತನು ಯಾವ ವೃತ್ತಿಯಲ್ಲಿದ್ದರೇನು ಅದು ದೇವರಿದ್ದ ಲಾಂಛನವಲ್ಲವೆ? ''ಲಾಂಛನಕ್ಕೆ ಶರಣೆಂಬೆ ಅವರಂತರಂಗವನು ಅಲ್ಲಿದ್ದ ನೀನೆ ಬಲ್ಲೆ. ಅರಸನ ಸುದ್ದಿ ಎಮಗೇಕಯ್ಯಾ ಕೂಡಲಸಂಗಮದೇವ'' ಎನ್ನುತ್ತಾರೆ ಬಸವಣ್ಣ.

ವೃತ್ತಿಯನ್ನು ನೋಡಿ ಮನುಷ್ಯ ಮನುಷ್ಯನನ್ನು ಅಳೆಯಬೇಕೊ? ಅಥವಾ ಮನುಷ್ಯನಲ್ಲಿದ್ದ ದೇವರನ್ನು ನೋಡಿ ಆ ದೇವರಿಗೆ ಹಣೆಮಣಿಯಬೇಕೊ. ಮೊದಲನೇ ಕೆಲಸ ಲೋಕದ ಸಕಲ ಮಾನವರಿಗೂ ಗೊತ್ತಿದೆ. ಅದು ಸತ್ಯವಲ್ಲ. ಎರಡನೇ ಕೆಲಸ ಆ ಕೆಲಸದಲ್ಲಿದ್ದ ಶರಣರಿಗೆ ಮಾತ್ರ ಗೊತ್ತಿದೆ.

ಮನುಷ್ಯನ ಕೈಯಲ್ಲಿ ಮಾಂಸದ ಮುದ್ದೆಯಿದ್ದರೇನು, ಬಾಯಲ್ಲಿ ವಾರಾಂಗನೆಯ ತಾಂಬೂಲ ಇದ್ದರೇನು, ಮನದಲ್ಲಿ ಕತ್ರಿಯ ಭಾವ ಇದ್ದರೇನು?

ದೇಹದಲ್ಲಿರಲು ಲಿಂಗ ಲಾಂಛನ ಜಂಗಮವೆಂದು ನಂಬುವುದು ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ:

ಸಿದ್ಧರಾಮ ಶಿವಯೋಗಿಗಳು ಹೇಳಿದಂತೆ ಬಸವಣ್ಣನವರು ಕೂಡಾ ಹೇಳಿದ್ದಾರೆ. ಅಂದ ಮಾತ್ರಕ್ಕೆ ಸಿದ್ಧರಾಮ ಶಿವಯೋಗಿಗಳು ಬಸವಣ್ಣನವರ ವಚನವನ್ನು ನಕಲು ಮಾಡಿದ್ದಾರೆಂದು ಅಲ್ಲ. ಸತ್ಯ ಒಂದೇ. ಅದನ್ನು ಯಾವ ಶರಣರು ಹೇಳಿದರು ಕೂಡಾ ಸತ್ಯವೇ. ನಕಲು ಮಾಡಿ ಹೌದು ಎನ್ನಿಸಿಕೊಳ್ಳುವ ಗುಣ ಸಾಹಿತಿಗಳಿಗೆ ಕವಿಗಳಿಗೆ ಮಾತ್ರ ಗೊತ್ತು. ಇವರು ಲೋಕವನ್ನು ರಂಜನೆಗೆ ಒಳಗು ಮಾಡುವ ಕೆಲಸದಲ್ಲಿದ್ದಾರೆ. ಇದು ಉಪಜೀವನದ ಮಾರ್ಗ. ಶರಣರು ಹಾಗಲ್ಲ. ಅವರು ನಿರಂಜನರು. ತಾವು ರಂಜನೆಗೆ ಒಳಗಾಗುವುದಿಲ್ಲ; ಲೋಕವನ್ನು ಕೂಡಾ ರಂಜನೆಗೆ ಒಳಗು ಮಾಡುವುದಿಲ್ಲ.

''ಎಡದ ಕೈಯಲ್ಲಿ ಕತ್ತಿ, ಬಲದ ಕೈಯಲ್ಲಿ ಮಾಂಸ, ಬಾಯಲ್ಲಿ ಸುರೆಯ ಗಡಿಗೆ, ಕೊರಳಲಿ ದೇವರಿರಲು ಅವರ ಲಿಂಗನೆಂಬೆ, ಸಂಗನೆಂಬೆ, ಕೂಡಲಸಂಗಮದೇವಾ, ಅವರ ಮುಖ ಲಿಂಗಿಗಳೆಂಬೆನು''. ಸತ್ಯ ಹೀಗಿದೆಯೆಂದು ಬಸವಣ್ಣ ಬರೆದರೇನು ಸಿದ್ಧರಾಮರು ಬರೆದರೇನು? ಸತ್ಯ ಒಂದೇ ಆಗಿದೆ. ಸತ್ಯವನ್ನು ನೋಡಿ ಸತ್ಯವನ್ನು ತಿಳಿದು ಸತ್ಯವೆಂದೇ ಹೇಳಬೇಕು.

**829**

**ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂದು**
**ಹೆಸರಿಟ್ಟುಕೊಂಬಿರಿ. ಆರು ಪರಿಯಲ್ಲಿ ಆರಾದವನರಿಯಿರಿ.**
**ಭಕ್ತನಾದಡೇಕೆ ಭವದ ಬೇರು?**
**ಮಾಹೇಶ್ವರನಾದಡೇಕೆ ಪ್ರಳಯಕ್ಕೊಳಗಿಹ?**
**ಪ್ರಸಾದಿಯಾದಡೇಕೆ ಇಂದ್ರಿಯವ್ಯೆದ ಅನಿಗ್ರಹಿಯಾಗಿಡ?**
**ಪ್ರಾಣಲಿಂಗಿಯಾದಡೇಕೆ ಉತ್ಪತ್ತಿ ಸ್ಥಿತಿ ಲಯಕೊಳಗಾಗಿಹ?**
**ಶರಣನಾದಡೇಕೆ ಉಪಬೋಧೆಗೊಳಗಾಗಿಹ?**
**ಐಕ್ಯನಾದಡೇಕೆ ಇಹ-ಪರವನರಿದಿಹ?**

**ಇವೆಲ್ಲ ತರ್ಕ, ಇವೆಲ್ಲ ಅಭ್ಯಾಸ!**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ, ನಿಮ್ಮ ಷಡುಸ್ಥಲವಭೇದ್ಯ!**

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವನ್ನು ಅಲ್ಲಲ್ಲಿಯೇ ಇದ್ದ ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನಿಗೆ ಅರ್ಪಿಸಿದವನು ಮಾತ್ರ ಭಕ್ತನಾಗಲು ಸಾಧ್ಯ. ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿಯಾಗಲು ಸಾಧ್ಯ. ಶರಣ ಐಕ್ಯನಾಗಲು ಸಾಧ್ಯ.

ಆರು ಪರಿಯಲಿ ಆರಾದವನು. ಆರನು ಅರಿತು ಆರಾದವನು. ಹಾಗೆಯೇ ಇದ್ದವನು. ಇದು ಪಾಂಡಿತ್ಯವಲ್ಲ. ಪಂಡಿತನಾದವನು ಆರು ಸ್ಥಲಗಳನ್ನು ಹೇಳುತ್ತಾನೆ. ಅರಿಷಡ್ವರ್ಗ ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ಹೇಳುತ್ತಾನೆ. ಹೇಳುವುದಕ್ಕೂ ಇರುವುದಕ್ಕೂ ಅಜಗಜಾಂತರ ವ್ಯತ್ಯಾಸವಿದೆ.

ಹೇಳುವವನು ಹೇಳುತ್ತಾನೆಯೇ ಹೊರತು ಆತನಿಗೆ ಇರಲು ಬರುವುದಿಲ್ಲ. ಶರಣರಿಗೆ ಇರಲು ಬರುತ್ತದೆಯೇ ಹೊರತು ಹೇಳುವುದಿಲ್ಲ. ಒಂದಾದವನು ಆರೂ ಅರಿತು ಆರಾಗುತ್ತಾನೆ. ಆರಾದವನು ಒಂದಾಗಿ ಆರೂ ಸ್ಥಲಗಳನ್ನು ಕಿತ್ತೆಸೆದು ಸ್ಥಲವೆನ್ನದೆ ನಿಸ್ಥಲವೆನ್ನದೆ ಮೌನಿಯಾಗುತ್ತಾನೆ.

ಚಿನ್ನ ಚಿನ್ನದಂತೆಯೇ ಇದೆ. ಮಣ್ಣಲ್ಲಿದ್ದರೇನು, ಕಲ್ಲಲ್ಲಿದ್ದರೇನು, ತಿಪ್ಪೆಯಲ್ಲಿ ಬಿದ್ದಿದ್ದರೇನು? ಅದನ್ನು ಚಿನ್ನವೆಂದು ಕರೆಯುತ್ತಾರೆ. ಚಿನ್ನವನ್ನು ಚಿನ್ನವೆಂದು ಹೇಳಲು ಅಭ್ಯಾಸದ ಅವಶ್ಯಕತೆಯಿಲ್ಲ. ಚಿನ್ನವನ್ನು ಕಳುವು ಮಾಡುವವನು, ಚಿನ್ನವನ್ನು ಸಂಗ್ರಹಿಸುವವನು ಇವರಿಬ್ಬರೂ ಕಳ್ಳರೆ. ಲೋಕ ಒಬ್ಬನನ್ನು ಕಳ್ಳ, ಮತ್ತೊಬ್ಬನನ್ನು ಶ್ರೀಮಂತ ಎಂದು ಕರೆಯುತ್ತದೆ. ಇವರಿಬ್ಬರೂ ಚಿನ್ನವೆಂದರೇನೆಂದು ಗೊತ್ತಿಲ್ಲದವರು.

ಚಿನ್ನವೆಂದರೆ ಏನೆಂದು ಅರಿತರೆ, ಒಬ್ಬ ರಾಜ ಚಿನ್ನಕ್ಕಾಗಿ ಮತ್ತೊಬ್ಬ ರಾಜನೊಂದಿಗೆ ಯುದ್ಧ ಮಾಡುವುದಿಲ್ಲ. ಹಗಲಿರುಳು ದುಡಿದು ಬಚ್ಚಿಟ್ಟುಕೊಂಡು ಶ್ರೀಮಂತನೆಂದು ಕರೆಯಿಸಿಕೊಳ್ಳುವುದಿಲ್ಲ. ಕಳ್ಳ, ಚಿನ್ನಕ್ಕಾಗಿ ಶ್ರೀಮಂತನನ್ನು ಕೊಂದು ಪಡೆಯುವುದಿಲ್ಲ. ಅರಿತರೆ ಅದು ಹಳದಿ ಲೋಹ!

ಸಾಹಿತಿಯಾದವನು, ಕವಿಯಾದವನು ಅನ್ನಕ್ಕಾಗಿ ಚಿನ್ನಕ್ಕಾಗಿ ಬರೆಯುತ್ತಾನೆ. ಶರಣ ಆರು ಪರಿಯಲ್ಲಿ ಅರಿತು ಆರಾದಾತ. ಸಕಲರನ್ನೂ ತನ್ನಂತೆ ಮಾಡಿಕೊಳ್ಳುವ ಪ್ರಯತ್ನಕ್ಕಾಗಿ ಆತನ ಬರಹ.

ಚಿನ್ನ ಕಲ್ಲಲ್ಲಿ ಬಚ್ಚಿಟ್ಟುಕೊಂಡಿದೆ. ಹಾಗೆಯೇ ಜ್ಞಾನವೆಂಬ ಚಿನ್ನ ಕಾಯದಲ್ಲಿ ಬಚ್ಚಿಟ್ಟುಕೊಂಡಿದೆ. ಎಲ್ಲಿನೋಡಿದರೂ ಚಿನ್ನವೇ ಚಿನ್ನ. ಅಜ್ಞಾನವೆಂಬ ಕಲ್ಲನ್ನು ಪುಡಿಮಾಡಿ ಸರಿಸುವ ಯತ್ನ ಮಾತ್ರ ಶರಣನದು.

**830**

**ಭಕ್ತರ ನುಡಿ ಅಭವನಲ್ಲದೆ**
**ಅನ್ಯವ ನುಡಿಯದು, ಅನ್ಯಕ್ಕೆ ಎಡೆಯಾಗದು.**
**ಆತನ ಶ್ರೋತ್ರ ತ್ವಕ್ಕು ನೇತ್ರ ಜಿಹ್ವೆ ಘ್ರಾಣವೆಂಬ**
**ಪಂಚೇಂದ್ರಿಯಂಗಳು ಆತನ ಐದು ಮುಖಂಗಳಯ್ಯಾ!**
**ಆತ ಪತಿ ಆತ ಸತಿ:**
**ಆತನ ಕರಣಂಗಳೆಲ್ಲವು ಈಶನ ಉಪಕರಣಂಗಳು.**
**ಆತನ ಕರಣಂಗಳೆಲ್ಲವು ಈಶನ ಹೇಮಶೈಲ.**
**ಆತ ನಿತ್ಯವೂ ಲಿಂಗಾರ್ಚನೆಯ ಮಾಡುವ ಕಾರಣ,**

**ಆತಂಗೊಂದೂ ಇದಿರಿಲ್ಲ; ಆತ ಲೋಕಕ್ಕೆ ಉಪದೇಶಿಕ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿದ ತಾತ್ಪರ್ಯ ಭಕ್ತಿ.**

ಭಕ್ತ, ದೇಹದಲ್ಲಿ ಸಂಗಮವಾದ ಅರಿವಿನ ದೇವರು ನುಡಿಸಿದಂತೆ ನುಡಿವನು. ಹೀಗಾಗಿ ಆತನ ನುಡಿ ಅಭವನ ನುಡಿ. ಅನ್ಯವ ನುಡಿಯನು. ಅನ್ಯಕ್ಕೆ ಎಡೆಯಾಗನು. ಭಕ್ತನ ಕಣ್ಣು ಕಿವಿ ಮೂಗು ನಾಲಿಗೆ ಚರ್ಮವೆಂಬ ಪಂಚೇಂದ್ರಿಯಂಗಳು ಪರಮಾತ್ಮನ ಐದು ಮುಖಗಳು.

ಆತನೇ ಪತಿ ಆತನೇ ಸತಿ:

ಕಾಯ ಸತಿ-ಪತಿಗಳಿಗೆ ಮನೆಯಾಗಿದೆ. ಕಾಯವನ್ನು ಆವರಿಸಿದ ಮನ ಸತಿಯಾಗಿ, ಕಾಯದಲ್ಲಿ ಸಂಗಮವಾದ ಜ್ಞಾನವೇ ಪತಿಯಾಗಿದೆ. ಸತಿ ಪತಿಗೆ ಭಕ್ತಿಮಾಡಿ ಸತಿಪತಿಗಳಾದರು. ಕಾಯದಲ್ಲಿಯ ಕರಣಂಗಳೆಲ್ಲವು ಅರ್ಧನಾರೀಶ್ವರನಿಗೆ ಉಪಕರಣಂಗಳಾದವು. ಭಕ್ತನ ಕರಣಂಗಳೆಲ್ಲವು ಈಶ್ವರನ ಹೇಮ ಶೈಲ. ಎಂತಹ ಸುಂದರವಾದ ಮಾತು. ಮಾತಲ್ಲದ ಮಾತು. ಮಾತನಳಿಯುವ ಮಾತು.

ಭಕ್ತ ನಿತ್ಯವೂ ಅರಿವಿನ ಲಿಂಗಯ್ಯನನ್ನು ಪೂಜಿಸುವ ಕಾರಣ ಆತನಿಗೊಂದು ಇದಿರಿಲ್ಲ. ಭಕ್ತ, ಲೋಕಕ್ಕೆ ಉಪದೇಶಿಕ. ಭಕ್ತನಿಗೆ ಲಿಂಗಯ್ಯ ಉಪದೇಶಿಕ. ಲಿಂಗಯ್ಯ ನುಡಿದು ಹೇಳಿದ ಮಾತು ಭಕ್ತ ಲೋಕಕ್ಕೆ ನುಡಿದು ಹೇಳುತ್ತಾನೆ.

ಲಿಂಗಯ್ಯನು ನುಡಿದ ನುಡಿ ಲೋಕಕ್ಕೆ ಕೇಳುವುದಿಲ್ಲ. ಹೀಗಾಗಿ ಲಿಂಗಯ್ಯ ನುಡಿದುದನ್ನೆ ಭಕ್ತ ನುಡಿದು ಲೋಕಕ್ಕೆ ಉಪದೇಶ ಮಾಡುತ್ತಾನೆ. ಇದು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿದ ತಾತ್ಪರ್ಯ ಭಕ್ತಿ.

**831**

**ಭಕ್ತಿಗೆ ಭಕ್ತ ಬಸವಣ್ಣನಯ್ಯ.**
**ಮುಕ್ತಿಗೆ ಯುಕ್ತ ಬಸವಣ್ಣನಯ್ಯಾ.**
**ಮುಕ್ತಿಗೆ ಮುಕ್ತ ಬಸವಣ್ಣನಯ್ಯಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಭಕ್ತಿಗೆ ಭಕ್ತಿ ಮಾಡಿದಾತ ಬಸವಣ್ಣ:

ವ್ಯಕ್ತಿ ವ್ಯಕ್ತಿಗೆ ಭಕ್ತಿ ಮಾಡುವುದು ಮಾತ್ರ ಲೋಕಕ್ಕೆ ಗೊತ್ತಿತ್ತು. ಶಿಷ್ಯ ಗುರುದೇವನಿಗೆ ಭಕ್ತಿ ಮಾಡುವುದು ಮಾತ್ರ ಲೋಕಕ್ಕೆ ಗೊತ್ತಿತ್ತು. ಬಸವಣ್ಣ ಯಾರಿಗೂ ಭಕ್ತಿ ಮಾಡಿದಾತನಲ್ಲ. ಆದರೂ ಇಡೀ ಲೋಕಕ್ಕೆ ಭಕ್ತಿ ಸೂತ್ರವನ್ನು ಹೇಳಿಕೊಟ್ಟಾತ ಮಾತ್ರ ಬಸವಣ್ಣನೊಬ್ಬನೇ ಆಗಿದ್ದಾನೆ.

ಸಿದ್ಧರಾಮ ಶಿವಯೋಗಿಗಳು ಭಕ್ತಿಗೆ ಭಕ್ತ ಬಸವಣ್ಣನಯ್ಯಾ ಎಂದು ಹೇಳಿದ್ದಾರೆ. ಭಕ್ತಿಗೆ ಭಕ್ತಿ ಮಾಡಿದಾತ; ಭಕ್ತಿಗೆ ಹಣೆಮಣಿದಾತ ಬಸವಣ್ಣ. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನಿಗೆ ಭಕ್ತನಾಗಿ ಭಕ್ತಿ ಮಾಡುವುದೇ ಭಕ್ತಿ.

ಮನವೂ ಕಾಣುವುದಿಲ್ಲ. ಅರಿವಿನ ಸಂಗಯ್ಯನೂ ಕಾಣುವುದಿಲ್ಲ. ಕಾಣಬಾರದ ಗುರುದೇವನಿಗೆ ಕಾಣಬಾರದ ಮನವೆಂಬ ಶಿಷ್ಯ ಭಕ್ತನಾಗಿ ಭಕ್ತಿ ಮಾಡುವುದು ಸಕಲರಿಗೂ ಸಾಧ್ಯವಾಗದ ಮಾತು. ಇದು ಲೋಕಕ್ಕೆ ನಿಲುಕದ ಮಾತು.

ಬಸವಣ್ಣನಿಗೆ ಮಾತ್ರ ಭಕ್ತಿಗೆ ಭಕ್ತನಾಗಿ ಭಕ್ತಿ ಮಾಡುವ ಕಲೆ ಹೊಳೆಯಿತು. ಆತನ ಅನುಭಾವಕ್ಕೆ ಬಂದು, ಭಕ್ತನಾಗಿ ಭಕ್ತಿಭಂಡಾರಿ ಎಂದು ಶರಣರೊಂದಿಗೆ ಕರೆಯಿಸಿಕೊಂಡ

ಮಹಾನುಭಾವಿ ಬಸವಣ್ಣ.

ತನ್ನ ಅನುಭಾವಕ್ಕೆ ಬಂದ ಭಕ್ತಿಯನ್ನು ಶರಣರಿಗೆ ಸರಳವಾಗಿ ಸೂತ್ರ ರೂಪದಿಂದ ಹೇಳಿದ ಬಸವಣ್ಣ; ಲೋಕಕ್ಕೆ ತಿಳಿಯಲೆಂದು ವಚನರೂಪದಲ್ಲಿ ಅಕ್ಷರಗಳ ಮೂಲಕ ದಾಖಲಿಸಿದ ಬಸವಣ್ಣ.

ತಾನಾಗಿ ಹಿಡಿದುಕೊಂಡ ಅಜ್ಞಾನವನ್ನು ಅರಿತು ತಾನೇ ಬಿಟ್ಟಾಗ ತನಗೆ ಬಂಧನವಿಲ್ಲ. ತನ್ನ ಜ್ಞಾನದಿಂದ ನೋಡಿ ತನ್ನ ಅಜ್ಞಾನವನ್ನು ತಾನೇ ಬಿಡುವ ಸರಳ ಉಪಾಯವನ್ನು ಹೇಳುತ್ತಾ ಮುಕ್ತಿಗೆ ಯುಕ್ತ ಉಪಾಯವನ್ನು ಹೇಳಿದ ಬಸವಣ್ಣ. ಹೀಗಾಗಿ ಮುಕ್ತಿಗೆ ಮುಕ್ತ ಬಸವಣ್ಣನಯ್ಯ ಎಂದು ಸಿದ್ಧರಾಮ ಶಿವಯೋಗಿಗಳು ಬಸವಣ್ಣನನ್ನು ಸ್ಮರಿಸಿದ್ದಾರೆ.

832

**ಭಕ್ತಿಯ ಕೂಟವಾಯಿತ್ತು ಬಸವಣ್ಣಂಗೆ.**
**ಶಕ್ತಿಯ ಕೂಟವಾಯಿತ್ತು ಶಿವದಾಸಣ್ಣಂಗೆ.**
**ಆಚಾರ ಕೂಟವಾಯಿತ್ತು ಏಲೇಶ್ವರದ ಕೇತಯ್ಯಂಗೆ.**
**ಅರ್ಪಿತ ಕೂಟವಾಯಿತ್ತು ಅನಿಮಿಷಂಗೆ.**
**ಪ್ರಾಣಲಿಂಗ ಕೂಟವಾಯಿತ್ತು ನಿಮಗೆ**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಭಕ್ತಿ, ಶಕ್ತಿ, ಆಚಾರ, ಅರ್ಪಿತ, ಐಕ್ಯ, ಪ್ರಾಣಲಿಂಗ ಇವು ಸೂತ್ರಗಳು. ಈ ಸೂತ್ರಗಳ ಮೂಲಕ ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ಸಂಗಮವಾದ ಜ್ಞಾನದೊಂದಿಗೆ ಕೂಡಿ ಕೂಡದ ಅಗಲದ ಜ್ಞಾನದ ಸುಖವನ್ನು ಪರಮಾನಂದದಿಂದ ಅನುಭವಿಸಬಹುದಾಗಿದೆ.

ಸಿದ್ಧರಾಮ ಶಿವಯೋಗಿಗಳು ಬಸವಣ್ಣನವರು ಭಕ್ತಿಯ ಸೂತ್ರವನ್ನು ಹಿಡಿದು ಜ್ಞಾನಿಗಳಾದರು ಎಂದು ಹೇಳಿದ್ದಾರೆ. ಶಿವದಾಸಣ್ಣ ಶರಣರು ಶಕ್ತಿಯ ಸೂತ್ರವನ್ನು ಹಿಡಿದು ಜ್ಞಾನದೊಂದಿಗೆ ಕೂಡಿ ಪರಮ ಸುಖವನ್ನು ಅನುಭವಿಸಿದರೆಂದು ದಾಖಲಿಸಿದ್ದಾರೆ. ಏಲೇಶ್ವರದ ಕೇತಯ್ಯನವರು ಆಚಾರಕೂಟದ ಅರಿವಿನ ಸೂತ್ರವನ್ನು ಹಿಡಿದು ಕೂಡದ ಅಗಲದ ಪರಮ ಕೂಟದ ಸುಖವನ್ನು ಅನುಭವಿಸಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ಗುರುಗಳಾದ ಚೆನ್ನಬಸವಣ್ಣನವರ ಅರ್ಪಿತ ಕೂಟದ ಸೂತ್ರವನ್ನು ಹಿಡಿದು ಜ್ಞಾನ ಚಕ್ರವರ್ತಿ ಎಂದು ಕರೆಯಿಸಿಕೊಂಡರು. ಅನಿಮಿಷ ದೇವರು ಐಕ್ಯಕೂಟದ ಸೂತ್ರವನ್ನು ಹಿಡಿದು ಕೂಡದ ಅಗಲದ ಕೂಟದ ನಿಜಸುಖ ಅನುಭವಿಸಿದರೆಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಸ್ವತಃ ನಿಮಗೆ ಅಂದರೆ ತನಗೆ ಪ್ರಾಣಲಿಂಗ ಕೂಟದ ಸೂತ್ರದಿಂದಾಗಿ ಮಹಾಜ್ಞಾನದ ಪರಮಸುಖ ಉಂಟಾಯಿತೆಂದು ಹೇಳುತ್ತಾ ಕಪಿಲಸಿದ್ಧ ಮಲ್ಲಿನಾಥಯ್ಯನೊಂದಿಗೆ ಮಾತನಾಡಿದ್ದಾರೆ.

833

**ಭಕ್ತಿಯ ಬಯಸುವಡೆ ನಿತ್ಯನಿತ್ಯ ನೆನೆಯಾ,**
**ನಿಸ್ತಾರ ನಿಸ್ತಾರವೆಂದು ಮುಂದೆ ಬಂದಾಡೌ**
**ಆತ ಶುದ್ಧದೇವ ಎಲ್ಲರ ಪರಿಯಂತಲ್ಲ ಕಾಣಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಭಕ್ತಿಯ ಸೂತ್ರವಿಡಿದು ಮಹಾಜ್ಞಾನಿಯಾದ ಮಹಾದೇವನೊಂದಿಗೆ ಸಂಗ ಮಾಡುವುದು ಸರಳವಾದ ಮಾತಲ್ಲ. ಮನಸ್ಸು ದೇಹದೊಂದಿಗೆ ಸಂಗಮವಾದರೆ ದೇಹ ಕರ್ಮಯೋಗಿಯೆಂದು ಕರೆಯಿಸಿಕೊಳ್ಳುತ್ತದೆ. ಈತ ಉಪಜೀವನಕ್ಕಾಗಿ ಹಗಲಿರುಳು ಎನ್ನದೆ ದುಡಿಯುತ್ತಾನೆ. ದುಡಿದು ದುಡಿದು ಸುಖ-ದುಃಖಗಳನ್ನು ಅನುಭವಿಸುತ್ತಾ ವೃದ್ಧಾವಸ್ಥೆಗೆ ತಲುಪಿ ಇಹಲೋಕವನ್ನು ತ್ಯಜಿಸುತ್ತಾನೆ. ಸುಖಕ್ಕಾಗಿ ಹಂಬಲಿಸಿ ದುಃಖವನ್ನು ಹೆಗಲಿಗೆ ಹಾಕಿಕೊಂಡು ಜೀವನ ಪರ್ಯಂತ ಮುನ್ನಡೆಯುತ್ತಾನೆ.

ಜ್ಞಾನ ಮಾರ್ಗವೇ ಬೇರೆ. ಈ ಜ್ಞಾನ ಮಾರ್ಗವನ್ನು ಭಕ್ತಿಯ ಸೂತ್ರದ ಮೂಲಕ ತಲುಪಬಹುದಾಗಿದೆ. ಭಕ್ತಿ ಮಾಡುವುದೆಂದರೆ ಶಿವಾಲಯಗಳಿಗೆ ಹೋಗಿ ಪ್ರದಕ್ಷಿಣೆ ಮಾಡುವುದಲ್ಲ. ಶಿಷ್ಯ ಗುರುದೇವನ ಸೇವೆ ಮಾಡುವುದು ಕೂಡಾ ಭಕ್ತಿ ಮಾರ್ಗವಲ್ಲ. ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಗೆ ಸೇವೆ ಮಾಡುವುದು ಭಕ್ತಿಯ ಸಂಕೇತವಲ್ಲ. ಅವ್ಯಕ್ತ ವ್ಯಕ್ತಿ ಅವ್ಯಕ್ತ ವ್ಯಕ್ತಿಗೆ ಭಕ್ತಿ ಮಾಡುವುದೇ ಭಕ್ತಿ.

ವ್ಯಕ್ತಿಯನ್ನು ಅವ್ಯಕ್ತ ವ್ಯಕ್ತಿಯೊಬ್ಬ ಆವರಿಸಿದ್ದಾನೆ. ವ್ಯಕ್ತಿ ಕಾಣುತ್ತಾನೆ. ಅವ್ಯಕ್ತ ವ್ಯಕ್ತಿ ಕಾಣುವುದಿಲ್ಲ. ಹೀಗೆ ಕಾಣುವ ವ್ಯಕ್ತಿಯಲ್ಲಿ ಅವ್ಯಕ್ತ ವ್ಯಕ್ತಿಯೊಬ್ಬ ಸಂಗಮವಾಗಿದ್ದಾನೆ. ವ್ಯಕ್ತಿಯನ್ನು ಆವರಿಸಿದ ಅವ್ಯಕ್ತ ವ್ಯಕ್ತಿ ಭಕ್ತನಾಗಿ ವ್ಯಕ್ತಿಯಲ್ಲೇ ಸಂಗಮವಾದ ಅವ್ಯಕ್ತ ವ್ಯಕ್ತಿಗೆ ಭಕ್ತಿ ಮಾಡುವುದೇ ಭಕ್ತಿ ಮಾರ್ಗ.

ಈತ ಸಕಲ ಕಾಯಕಗಳನ್ನು ದೂರತಳ್ಳಿ, ಕಾಯವನ್ನು ಆವರಿಸಿದ ಕಾಯದಿಂದ ಕಾಯದಲ್ಲಿಯೇ ಸಂಗಮವಾದ ಕಾಯದೊಂದಿಗೆ ಕೂಡುವ ಕಾಯಕದಲ್ಲಿ ನಿರತವಾಗಿರುತ್ತಾನೆ! ಈ ಕಾಯಕ ಸಹಜ ಕಾಯಕ, ಕಾಯದೊಂದಿಗೆ ಮಾಡುವ ಕಾಯಕ ಉಪಜೀವನಕ್ಕಾಗಿ ಮಾಡುವ ಕೆಲಸ! ಇದನ್ನು ಕಾಯಕವೆಂದು ಕರೆಯುವಂತಿಲ್ಲ.

ಸಿದ್ಧಾರ್ಥ ರಾಜಕುಮಾರನ ಕೆಲಸ ಬಿಟ್ಟು, ಕಾಯದಲ್ಲಿಯೇ ಸಂಗಮವಾದ ಬುದ್ಧನೊಂದಿಗೆ ಗೆಳೆತನ ಮಾಡಿ ಆತನೊಂದಿಗೆ ಸಂಗಮವಾದ ಪರಿಶುದ್ಧವಾದ ಕಾಯಕದಲ್ಲಿ ಸಿದ್ಧಾರ್ಥ ನಿರತನಾದ! ಸುಮಾರು ಎಂಟು ವರ್ಷಗಳವರೆಗೆ ಈ ಕಾಯಕ ನಿತ್ಯ ನಿತ್ಯ ಭಕ್ತಿಯಿಂದ ಮಾಡಿದ! ಸಿದ್ಧಾರ್ಥ ಬುದ್ಧನಾಗಿ ಪರಮ ಸುಖವನ್ನು ಪರಮಾನಂದದಿಂದ ಅನುಭವಿಸಿದ! ಆತ ಶುದ್ಧ, ಸಿದ್ಧ, ಪ್ರಸಿದ್ಧ. ಅಂತಹ ವ್ಯಕ್ತಿ ಎಲ್ಲರ ಪರಿಯಂತಲ್ಲ ಕಾಣಾ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ.

**834**

**ಭಕ್ತಿಯ ಭಾವದ ಬಯಕೆಯ ಬಯಸುವೆ, ಅವಧಾರಯ್ಯಾ.**
**ಎನ್ನ ಮನ ನಿಮ್ಮ ನೆನೆವಂತೆ ಮಾಡಯ್ಯಾ.**
**ಎನ್ನ ಮನ ನಿಮ್ಮ ಶ್ರೀಪಾದವನಗಲದಂತೆ ಮಾಡು,**
**ಶ್ರೀ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪರಮಾತ್ಮನೆ, ನಿನ್ನನ್ನು ಒಲಿಸಿಕೊಳ್ಳುವುದಕ್ಕಾಗಿ ಭಕ್ತಿಯ ಸೂತ್ರವನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಭಾವದಿಂದ ನಿನ್ನೊಂದಿಗೆ ಸಂಗ ಮಾಡುವ ಬಯಕೆಯನ್ನು ಬಯಸಿರುವೆ. ಬಾರಯ್ಯ, ಪರಮಾತ್ಮನೇ! ಮಹಾಜ್ಞಾನಿಯೇ! ನನ್ನ ಮನಸ್ಸು ಸದಾ ನಿಮ್ಮನ್ನು ನೆನೆಯುವಂತೆ ಮಾಡಯ್ಯಾ! ಎನ್ನ ಮನ ಸದಾ ನಿಮ್ಮ ಶ್ರೀಪಾದವನ್ನು ಅಗಲದಂತೆ ಮಾಡು ಗುರುದೇವನೆ!

ನೀನು ಯಾರು ಎಂಬುದು ನನಗೆ ಗೊತ್ತಿರಲಿಲ್ಲ. ನಿನ್ನನ್ನು ನನಗೆ ತಿಳಿದಂತೆ ಕಲ್ಲಲ್ಲಿ ಕೆತ್ತಿ, ಕೆತ್ತಿದ ಕಲ್ಲಿಗೆ ಕಲ್ಲಿನಿಂದಲೇ ಆಲಯ ನಿರ್ಮಾಣ ಮಾಡಿ, ಆ ಕಲ್ಲನ್ನೇ ದೇವರನ್ನಾಗಿಸಿ, ಆ ಕಲ್ಲಿಗೆ

ಭಕ್ತಿ ಮಾಡಿದೆ. ಆಲಯದ ಸುತ್ತ ಪ್ರದಕ್ಷಿಣೆ ಮಾಡಿದೆ. ಪ್ರಾಂಗಣದಲ್ಲಿ ಕೈಮುಗಿದು ಕುಳಿತೆ, ಗರ್ಭ ಗುಡಿಯೊಳಗೆ ಬಂದು ರುದ್ರಾಭಿಷೇಕ ಮಾಡಿದೆ. ಭಕ್ತಿಯಿಂದ ಪತ್ರೆ, ಫಲ, ಪುಷ್ಪಗಳನ್ನಿಟ್ಟು ನಾನಾ ಭಕ್ಷ್ಯ ಭೋಜ್ಯಗಳೊಂದಿಗೆ ನೈವೇದ್ಯ ಮಾಡಿದೆ. ಕಾಯದ ಆಯುಷ್ಯ ಕಳೆಯಿತೆ ಹೊರತು ನೀನು ನನಗೆ ದರುಶನ ನೀಡಲಿಲ್ಲ. ನಿನ್ನನ್ನು ಕಂಡ ಬಸವಣ್ಣನ ಸಹಾಯದಿಂದ ನನಗೆ ನಿನ್ನ ಪರಿಚಯವಾಯಿತು. ಆತ ನನಗೆ ಭಕ್ತಿಯ ಸೂತ್ರವನ್ನು ಹೇಳಿಕೊಟ್ಟ ಮೊದಲನೇ ಪರಮಾತ್ಮ. ಆತನಿಂದಾಗಿ ನಿನಾರೆಂದು ನನಗೆ ಗೊತ್ತಾಯಿತು. ಇನ್ನು ಎನ್ನ ಮನ ನಿಮ್ಮ ಶ್ರೀಪಾದವನ್ನು ಅಗಲದಂತೆ ಮಾಡು. ಸದಾ ನಿಮ್ಮನ್ನು ನೆನೆವಂತೆ ಮಾಡು. ಭಕ್ತಿಯ ಭಾವದ ಬಯಕೆಯಿಂದ ಬಯಸುವೆ ಅವಧಾರಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನನೆ.

**835**

**ಭಕ್ತಿಯಿಲ್ಲದ ಬೇಗೆಯಲ್ಲಿ ಬೆಂದೆನಯ್ಯಾ ತಂದೆ.**
**ನಿತ್ಯವಪ್ಪ ಭಕ್ತಿಪಥವ ಕುಡು ತಂದೆ!**
**ತತ್ತ್ವ ಕಾಮ್ಯಾರ್ಥವನೊಲ್ಲೆನಯ್ಯಾ, ಭಕ್ತಿಯೊಳಗಿರಿಸಯ್ಯಾ.**
**ನಿತ್ಯ ನಿಗಮಗೋಚರ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ಭಕ್ತರ ಸಂಗದೊಳಿರಿಸಯ್ಯಾ.**

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನಿನ್ನ ಶ್ರೀಪಾದವನ್ನು ಪೂಜಿಸಿ, ನಿತ್ಯ ವಪ್ಪ ಭಕ್ತಿ ಪಥವ ಕೊಡು ತಂದೆ. ಭಕ್ತಿಯಿಲ್ಲದ ಬೇಗೆಯಲ್ಲಿ ಇರುವವರೆಗೆ ಬೆಂದೆನಯ್ಯಾ. ಭಕ್ತಿಯೆಂದರೆ ಏನೆಂದು ತಿಳಿಯದೆ ನಿನಗಾಗಿ ಭಕ್ತಿ ಮಾಡಿದೆ. ಕಲ್ಲಿಗೆ ಪೂಜಿಸಿ ಭಕ್ತಿ ಮಾಡುವ ಭಕ್ತಿಯನ್ನು ಕಂಡು ನನ್ನಲ್ಲಿಯೇ ಇದ್ದ ನೀನು ಗಹಗಹಿಸಿ ನಕ್ಕೆ, ಅದು ನನಗೆ ತಿಳಿಯಲಿಲ್ಲ.

ನಿನ್ನನ್ನು ಒಲಿಸಿಕೊಳ್ಳುವುದಕ್ಕಾಗಿ ತತ್ವ ಗ್ರಂಥಗಳಿಗೆ ಮರುಳಾದೆ. ನೀನು ಅಲ್ಲಿಯೂ ಇಲ್ಲವೆಂದು ನನಗೆ ತಿಳಿಯಿತು. ಹೀಗಾಗಿ ನೀನು ಭಕ್ತಿ ಮಾರ್ಗವನ್ನು ಹೇಳಿದೆ. ಭಕ್ತಿಯ ಸೂತ್ರದಿಂದ ನಿನ್ನನ್ನು ಅರ್ಚಿಸಿ, ಪೂಜಿಸಿ, ನನ್ನವನನ್ನಾಗಿಸಿಕೊಳ್ಳಬೇಕೆಂಬ ಬಯಕೆ ನನ್ನದು. ಹೀಗಾಗಿ ನೀನು ಭಕ್ತರ ಸಂಗದೊಳಗೆ ಎನ್ನನ್ನು ಇರಿಸಯ್ಯ ಅವರು ನಿಮ್ಮವರು. ನಿಮಗೆ ಶರಣುಹೋದವರು. ನಿಮ್ಮವರ ಭಕ್ತಿಯ ಸಂಗದೊಳಗೆ ಸದಾ ಎನ್ನನ್ನು ಇರಿಸಿ ಅವರ ಸೇವೆಯ ಮಾಡುವ ಭಾಗ್ಯವನ್ನು ನನಗೆ ದಯಪಾಲಿಸು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಸದಾ ನನ್ನನ್ನು ಭಕ್ತಿಯೊಳಗಿರಿಸಯ್ಯಾ. ನಿತ್ಯ ನಿಗಮಗೋಚರನು ನೀನು, ಭಕ್ತರ ಸಂಗದೊಳಗಿರಿಸಿ ಕಾಪಾಡು ತಂದೆ.

**836**

**ಭಕ್ತಿಯುಕ್ತನುಮಲ್ಲ ಮುಕ್ತಿಗ್ರಾಹಕನಲ್ಲ**
**ಪಥದ ವೇದ್ಯನುವಲ್ಲದೆಂತೆಂತೋ?**
**ಕರ್ಮಕಾಯನಲ್ಲ ಕಾಲಾಗ್ನಿಯಲ್ಲ**
**ತನ್ನಲ್ಲಿ ತಾನೆ ಆಕಾರಂ ಭೊ!**
**ಆಗಮವಾಯವೋನ್ನಮಃ ನಾ ದೇವದೇವ**
**ಲಿಂಗಾಯತ್ತಂ ಭೊ ಸ್ವತಂತ್ರಶೀಲ**

**ಕಪಿಲಸಿದ್ಧ ಮಲ್ಲಿನಾಥಾ, ಆತನೆ ಅಚ್ಚಶರಣಂ ಭೊ!**

ಪರಮಾತ್ಮನು ಸ್ವತಂತ್ರನು. ಆತ ಯಾರ ಗರ್ಭದಲ್ಲೂ ಹುಟ್ಟಲಿಲ್ಲ. ಆತನಿಗೆ ಹುಟ್ಟಿಲ್ಲ, ಸಾವಿಲ್ಲ, ಕೇಡಿಲ್ಲ. ರೂಹಿಲ್ಲದ ಚೆಲುವನು ಆತ. ರೂಪಿಗೆ ಜನ್ಮಕೊಟ್ಟು ಜನ್ಮಕೊಟ್ಟ ಆ ರೂಪಿನಲ್ಲಿಯೇ ತಾನು ಸಂಗಮವಾಗಿ ಆ ರೂಪಿನ ಆಗು-ಹೋಗುಗಳನ್ನು ಸ್ವತಂತ್ರವಾಗಿ ವೀಕ್ಷಿಸುವ ಓಂಕಾರನು ಅವನು! ದೇವರ ದೇವನು ಅವನು! ತನುವಿಗೆ ಆಕಾರ ನೀಡಿ ಆ ತನುವನ್ನು ಸೋಂಕದೆ ಸದಾ ಆ ತನುವನ್ನು ಬೆಳಗುವ ಬೆಳಕು ಅವನು! ಆತ ಕರ್ಮಕಾಯನಲ್ಲ ಕಾಲಾಜ್ಞಿಯು ಅಲ್ಲ. ಪಥದ ವೈದ್ಯನು ಅವನಲ್ಲ. ಭಕ್ತಿಯುಕ್ತನಲ್ಲ. ಮುಕ್ತಿಗ್ರಾಹಕನು ಕೂಡಾ ಅವನಲ್ಲ. ಆತನು ಆತನೇ. ಅಚ್ಚಶರಣಂಭೊ ಕಪಿಲಸಿದ್ಧ ಮಲ್ಲಿಕಾರ್ಜುನ.

ಕಾಯಕ್ಕೆ ಜನ್ಮ ನೀಡಿ, ಕಾಯದಲ್ಲಿ ತಾನಿದ್ದು, ಕಾಯವನ್ನು ತಾಗದೆ, ಕಾಯವನ್ನು ಬೆಳಗುವ ಆತನ ಬೆಳಕಿನ ನೆರಳಿನಿಂದ, ಕಾಯದ ಮೇಲೊಂದು ಕಾಯವನ್ನು ಸೃಷ್ಟಿಮಾಡಿದ. ಆ ಕಾಯಕ್ಕೆ ಮಾಯದ ಗುಣವನ್ನು ತುಂಬಿದ. ತಾನು ನಿರ್ಗುಣಿಯೆಂದು ಕರೆಯಿಸಿಕೊಂಡ ಮಹಾಪ್ರಭು ಆತ.

ಕಾಯವನ್ನು ಆವರಿಸಿದ ಮಾಯೆಯೆಂಬ ಕಾಯ, ತನ್ನ ಗುಣಗಳನ್ನು ಕಳೆದುಕೊಂಡು ನಿರ್ಗುಣದತ್ತ ಪಯಣ ಬೆಳೆಸಿದಾಗಲೇ ಅದಕ್ಕೆ ಮುಕ್ತಿ! ಆದರೆ ಪರಮಾತ್ಮನು ಮಾಯೆಗಾಗಿ ಮುಕ್ತಿ ಮಾರುವ ಗ್ರಾಹಕನಲ್ಲ! ಭಕ್ತಿಯ ಯುಕ್ತಿಯನ್ನು ಕೊಡುವ ಮಲ್ಲನು ಆತನಲ್ಲ! ಸ್ವತಂತ್ರಶೀಲ ಕಪಿಲಸಿದ್ಧ ಮಲ್ಲಿನಾಥ!

**837**

**ಭಕ್ತಿರೂಪನು ಬಸವ, ನಿತ್ಯರೂಪನು ಬಸವ,**
**ಮತ್ತಾನಂದ ಸ್ವರೂಪ ಬಸವಣ್ಣನು.**
**ಸತ್ತುರೂಪನು ಬಸವ, ಚಿತ್ತುರೂಪನು ಬಸವ;**
**ಎತ್ತೆತ್ತ ನೋಡಿದಡೆ ಅತ್ತತ್ತ ಪರಿಪೂರ್ಣನಾಗಿಪ್ಪ**
**ಬಸವಣ್ಣನಿಂ ನಿತ್ಯಸುಖಿಯಾಗಿರ್ದೆನ್ನೈ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ನಿರೂಪದಲ್ಲಿದ್ದು, ಭಕ್ತಿ ಮಾಡುವ ಭಕ್ತಿ ರೂಪನು ಬಸವಣ್ಣ. ನಿರೂಪದ ನಿತ್ಯರೂಪನು ಬಸವಣ್ಣ. ಕಾಯ ರೂಪು ಆದರೆ, ಕಾಯವನ್ನು ಆವರಿಸಿದ ಅಕಾಯ ನಿರೂಪ. ಕಾಯದಲ್ಲಿ ಸಂಗಮವಾದ ಕಾಯ ಕೂಡ ನಿರೂಪ! ಅದು ನಿತ್ಯ ನಿರೂಪ! ಕಾಯವನ್ನು ಆವರಿಸಿದ ಕಾಯ, ಕಾಯದಲ್ಲಿ ಸಂಗಮವಾದ ಕಾಯ, ಕಾಯದಲ್ಲಿಯೇ ಸಂಗಮವಾಗಿ ಸಂಗಮನಾಥನಾದನು ಸಂಗಯ್ಯ! ಇಂತಹ ಸಂಗನಬಸವಣ್ಣನು ಭಕ್ತಿ ರೂಪನು ಹೌದು. ನಿತ್ಯ ರೂಪನು ಹೌದು ಮತ್ತು ಆನಂದ ಸ್ವರೂಪನು ಸಂಗನ ಬಸವಣ್ಣ. ಸತ್‌ಸ್ವರೂಪನು ಬಸವಣ್ಣನು, ಚಿತ್ತಸ್ವರೂಪನು ಬಸವಣ್ಣನು. ಎತ್ತೆತ್ತ ನೋಡಿದರೂ ಅತ್ತತ್ತ ಪರಿಪೂರ್ಣನಾಗಿಪ್ಪ ಬಸವಣ್ಣನಿಂದ ನಾನು ನಿತ್ಯಸುಖಿಯಾದೆ ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೊಂದಿಗೆ ಮಾತನಾಡಿದ್ದಾರೆ.

**838**

**ಭಕ್ತಿಸ್ಥಲದ ವರ್ಮವನು**

**ಲೋಕಕ್ಕೆ ನಿಶ್ಚಿಂತವ ಮಾಡಿ ತೋರಿದ ಬಸವಣ್ಣ.**
**ತನ್ನ ಪದದುನ್ನತವ ಏಕೈಕಸದ್ಭಾವರಿಗಿತ್ತ**
**ಎನ್ನ ಗುರು ಚೆನ್ನಬಸವಣ್ಣನು,**
**ಬಸವ, ಚೆನ್ನಬಸವನೆಂಬ ಮಹಾಸಮುದ್ರದೊಳಗೆ**
**ಹರುಷಿತನಾದೆನ್ನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಸವಣ್ಣ ಚೆನ್ನಬಸವಣ್ಣನೆಂಬ ಇಬ್ಬರು ಮಹಾತ್ಮರು; ಅವರು ಮಹಾಸಮುದ್ರ. ಅಲ್ಲಿ ಬರಿ ಮುತ್ತು ರತ್ನಗಳೆ. ಭಕ್ತಿಸ್ಥಲವೆಂಬ ಬೆಳಗುವ ಮುತ್ತನ್ನು ಲೋಕಕ್ಕೆ ನಿಶ್ಚಿಂತವ ಮಾಡಿ ತೋರಿದ ಬಸವಣ್ಣ. ಭಕ್ತಿ ಎಂಬುದು ಬಲು ಸರಳವಾಗಿ ಅನಿಸುತ್ತದೆ. ಆದರೆ ಆ ಸ್ಥಲದ ವರ್ಮವನ್ನು ಅರಿಯುತ್ತ ಹೋದಂತೆಲ್ಲ ತನುವನ್ನು ಆವರಿಸಿದ ಚಿಂತೆಗಳೆಲ್ಲ ತಂತಾನೇ ಉದುರಿ ಬಿದ್ದು, ನಿಶ್ಚಿಂತನಾಗುತ್ತಾನೆ ಮನುಷ್ಯ.

ಭಕ್ತಿಸ್ಥಲವನ್ನು ಅಲಂಕರಿಸಿದವನು ಉನ್ನತ ಪದವಿಯನ್ನು ಅಲಂಕರಿಸಿದಂತೆ. ಹೀಗಾಗಿ ಬಸವಣ್ಣ ಭಕ್ತಿಭಂಡಾರಿ ಎಂದು ಕರೆಯಿಸಿಕೊಂಡ. ಭಂಡಾರ ಎಂದರೆ ಸಂಪತ್ತು. ಭಕ್ತಿಯ ಸಂಪತ್ತನ್ನು ಬಸವಣ್ಣನಲ್ಲಿ ಮಾತ್ರ ಕಾಣಬಹುದು. ತನುವನ್ನು ಆವರಿಸಿದ ಮನ, ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಭಕ್ತಿ ಮಾಡಿದಾಗ, ಆ ಗುರುದೇವ ಮನವನ್ನು ತನ್ನಂತೆ ಮಾಡಿಕೊಳ್ಳುತ್ತಾನೆ. ತನ್ನ ಸಕಲ ಪದವಿಯನ್ನು ಸದ್ಭಾವದ ಭಕ್ತಿ ಮಾಡಿದ ಏಕೈಕ ಭಕ್ತನಿಗೆ ಮಾತ್ರ ಕೊಡುತ್ತಾನೆ. ಹಾಗೆಯೇ ಗುರುದೇವ ಭಕ್ತಿ ಮಾಡಿದ ಭಕ್ತನನ್ನು ತನ್ನಂತೆ ಮಾಡಿಕೊಳ್ಳುತ್ತಾನೆ.

ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವ, ತನ್ನ ಪದವಿಯನ್ನು ತನಗೆ ಭಕ್ತಿ ಮಾಡಿದ ಏಕೈಕ ಭಕ್ತನಿಗೆ ಮಾತ್ರ ಕೊಡುತ್ತಾನೆ. ಎಲ್ಲರಿಗೂ ತನ್ನ ಸಂಪತ್ತನು ಕರುಣಿಸಲು ಗುರುದೇವನಿಗೆ ಸಾಧ್ಯವಾಗುವುದಿಲ್ಲ.

ತನುವಿನಲ್ಲಿ ತನ್ಮಯವಾದ ಗುರುದೇವನು ಒಬ್ಬನೆ. ತನುವನ್ನು ಆವರಿಸಿದ ಮನ ಕೂಡಾ ಒಂದೇ. ಇವರಿಬ್ಬರನ್ನು ತನ್ನ ಒಡಲಲ್ಲಿಟ್ಟುಕೊಂಡ ಒಡಲು ಕೂಡಾ ಒಂದೇ. ತನುವನ್ನು ಆವರಿಸಿದ ಮನಕ್ಕೆ ಅರಿವೆಂಬ ಗುರುದೇವನ ಪರಿಚಯವಾದ ಮೇಲೆ ಆ ಗುರುದೇವನಿಗೆ ಮಾತ್ರ ಭಕ್ತಿ ಮಾಡುತ್ತದೆ. ಹೀಗಾಗಿ ಗುರುದೇವ ಭಕ್ತಿ ಮಾಡಿದ ಭಕ್ತನಿಗೆ ಮಾತ್ರ ತನ್ನ ಪದವಿಯನ್ನು ಕರುಣಿಸುತ್ತಾನೆ. ಅಂತಹ ಸದ್ಗುರುವಿನ ಕರುಣೆಯನ್ನು ಪಡೆಯಲು ಕಾರಣರಾದ ಬಸವಣ್ಣ ಚೆನ್ನ ಬಸವಣ್ಣನೆಂಬ ಮಹಾಸಮುದ್ರದೊಳಗೆ ಮಿಂದು ಹರುಷಿತನಾದೆ.

ಅಂಗದಲ್ಲಿಯೇ ಸಂಗಮವಾದ ಗುರುದೇವನು ಬೇರಲ್ಲ; ಆ ಗುರುದೇವನನ್ನು ತೋರಿದ ಬಸವಣ್ಣ ಚೆನ್ನಬಸವಣ್ಣನೆಂಬವರು ಕೂಡಾ ಬೇರಲ್ಲ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನರು ಅವರು.

**839**

**ಭಜಿಸುವೊಡೆ ನಾನೀಗ ಭಜಕನೇ?**
**ಅಯ್ಯಾ, ನಿಜ ನಿರ್ಮಲಾಂಗ ನೀ,**
**ಆನಂದದಾನತದ ಕರುಣ ಕಾನನದೊಳಗೆ ಹೊಲಬುದಪ್ಪಿದ**
**ಸೀಮೆ. ತನತ್ರಯವ ಮಲತ್ರಯವ ದಹನಮಾಡಿ,**
**ಮನದ ಮಧ್ಯದೊಳಗೆ ಪಂಚಮಾಳಾಪಕ್ಕೆ**

**ತನು ಸೃಷ್ಟಿ ಸಾಯುಜ್ಯಪದವೆಯ್ದಿತು.**
**ಅನುನಯದ ಪುರಾತ ಚರಿತವಂ ಹಾಡೀಗ ಹರುಷಿತನುವಾದೆನೈ.**
**ಸಕಲದೊಳಗೆ ಕರುಣಾಕರನೆ**
**ಎನ್ನ ಕರಣ ನಿರ್ಮಳತೆಯನು ಹರುಷದಿಂ ಮಾಡಿದೈ.**
**ಭಕ್ತಿಯಿತ್ತು ಎರಡೆಂಟು ಗ್ರಾಮದೊಳು ಕಳೆಯನಿರಿಸಿದೆ.**
**ನಿಮ್ಮ ಮನದ ಮಧ್ಯದೊಳಗೆ ಮುಖವೈದನೂ ರಚಿಯಿಸಿದ**
**ಭೇದವನು ಹದುಳ ಮಾಡಿಯೆ ಅರಿತೆ.**
**ಒದವಿದೆನು ತತ್ತ್ವ ಮೂವತ್ತಾರನೂ**
**ತನುವೆ ಮಹಾತವಕ ಘನ ಪಾಶದಿಂದತ್ತ**
**ಮನವ ಶುದ್ಧವ ಮಾಡಿದಯ್ಯಾ.**
**ಗುರುವೆ, ಕರುಣಾಕರನೆ ಕಪಿಲಸಿದ್ಧಮಲ್ಲೇಶ್ವರಾ,**
**ಶರಣದೇಹಿಕ ದೇವ ಶರಣು ತಂದೆ.**

ನನಗೆ ನೀನಾರೆಂದು ಗೊತ್ತಿರಲಿಲ್ಲ. ಭಕ್ತನಾಗಿ ಭಜಿಸಿದೆನು ನಾನು. ನನಗೆ ದರುಶನವಿತ್ತ ನಿರ್ಮಲಾಂಗನು ನೀನು. ಆನಂದಮಯನು ನೀನು. ಕರುಣಾಕರನು ನೀನು. ಇಂತಹ ಸುಂದರವಾದ ಕಾಡಿನಲ್ಲಿ ದಾರಿತಪ್ಪಿದ ನಿನ್ನದೇ ಆದ ನಿನ್ನಂಗದ ಕರು ನಾನು. ನಿಸ್ಸೀಮ ನೀನು. ಆ ನಿನ್ನ ಸೀಮೆಯಲ್ಲಿ ಬಂಧಿ ನಾನು.

ತನುತ್ರಯವನು ಮಲತ್ರಯವನು ದಹನ ಮಾಡಿದ ತಂದೆ ನೀನು. ತನುವಿನ ಪಂಚಮ ಆಲಾಪಕ್ಕೆ ಸಾಯುಜ್ಯ ಪದವಿಯನು ಕರುಣಿಸಿ ಅನುನಯದ ನಿನ್ನ ಪುರಾತ ಚರಿತೆಯನು ನನ್ನಿಂದ ಹಾಡಿಸಿ ಹರುಷಿತನಾದೆ ಸಕಲದೊಳಗೆ; ಕರುಣಾಕರನೆ.

ಎನ್ನ ಕರಣಂಗಳನ್ನು ಹರುಷದಿಂದ ನಿರ್ಮಲಗೊಳಿಸಿ ಎನ್ನ ತನುವಿನಲ್ಲಿ ನಿನ್ನನ್ನು ಹಾಡಿ ಆರಾಧಿಸುವ ಭಕ್ತಿಯ ಸೂತ್ರವನು ಇಟ್ಟು, ಮೇಲೆ ಅಷ್ಟಮದಗಳನಿಟ್ಟು ಅದನ್ನು ಅರಿಯುವ ಅಷ್ಟದಳ ಕಮಲದ ಹೃದಯವನಿಟ್ಟ ಕಲಾವಿದ ನೀನು.

ತನುವಿನಲ್ಲಿ ಮನವನಿಟ್ಟು ಹೊಲಿದು ಅದರ ಮಧ್ಯದೊಳಗೆ ಐದು ಮುಖವನು ಚಿತ್ರಿಸಿದ ಚಿತ್ರಕಾರನು ನೀನು. ನೀನಿಟ್ಟ ಭೇದವನು ನಿನ್ನಿಂದಲೇ ಅರಿತು ಹದುಳ ಮಾಡಿದೆ ತಂದೆ ಕರುಣಾಕರನೆ.

ಮನವ ಶುದ್ಧವ ಮಾಡಲು ತನುವಿನಲ್ಲಿ ಮೂವತ್ತಾರು ತತ್ವಗಳನಿಟ್ಟು, ಘನಪಾಶವನು ಕಳಚಿ ಎಸೆಯುವ ಅರಿವನು ಕೊಟ್ಟು ಸಲಹಿದ ಕರಣಾಕರನು ನೀನು. ಕಪಿಲಸಿದ್ಧ ಮಲ್ಲೇಶ್ವರ ಶರಣ ದೇಹಿಕ ದೇವ ಶರಣು ತಂದೆ.

**840**

**ಭಸಿತ ರುದ್ರಾಕ್ಷಿಯ ಎಸೆವ ಪಂಚಾಕ್ಷರಿಯ,**
**ಅಸಮ ಶ್ರೀಗುರು ಲಿಂಗ ಜಂಗಮದ ನಿಜವ,**
**ಅತಿಶಯದ ಪಾದೋದಕ ಪ್ರಸಾದವನರುಹಿ**
**ಸಲಹಿದಾತನು ಗುರುವು,**

ಕಪಿಲಸಿದ್ಧ ಮಲ್ಲಿಕಾರ್ಜುನಾ.

ಭಸ್ಮ, ರುದ್ರಾಕ್ಷಿ, ಪಂಚಾಕ್ಷರಿ ಮಂತ್ರವನು ಎಸೆದು, ಶ್ರೀಗುರು, ಲಿಂಗ, ಜಂಗಮದ ನಿಜವನು ತಿಳಿಯಲು ಪಾದೋದಕ ಪ್ರಸಾದವನು ಇತ್ತು ಸಲಹಿದ ಗುರುದೇವನು ನೀನು. ಕಪಿಲಸಿದ್ಧ ಮಲ್ಲಿಕಾರ್ಜುನನೇ ಕರುಣಾಕರನೆ ಗುರುದೇವನನ್ನು ತೋರಿದ ಗುರುದೇವ ನೀನು.

ಭಸ್ಮ ರುದ್ರಾಕ್ಷಿ ಧರಿಸಿ ಪಂಚಾಕ್ಷರಿಯನು ಉಚ್ಚರಿಸಿದರೆ ಶರಣನಾಗುವುದಿಲ್ಲ. ಅವನು ಗುರುದೇವನೂ ಆಗುವುದಿಲ್ಲ. ಸೆಗಣಿಮಯವಾದ ತನುವನ್ನು ಜ್ಞಾನಾಗ್ನಿಯಲ್ಲಿ ಬೇಯಿಸಿ ಕುರುಳು ಮಾಡಿ ಸುಟ್ಟು ಭಸ್ಮ ಕಾಯವನ್ನಾಗಿಸುವುದೇ ಭಸ್ಮದ ಮಹತ್ವ. ಭಸ್ಮದಲ್ಲಿ ಸೆಗಣಿಯಿಲ್ಲ.

ಸದಾ ಹಾದರ ಮಾಡುವ ನೇತ್ರಗಳನ್ನು ನೇತ್ರದಲ್ಲಿರುವ ಜ್ಞಾನನೇತ್ರದಿಂದ ನಾಶ ಮಾಡುವುದೇ ರುದ್ರಾಕ್ಷಿ. ತನುವಿಗೆ ಎರಡು ನೇತ್ರಗಳು ಮಾತ್ರ ಇಲ್ಲ. ಮೈತುಂಬಾ ನೇತ್ರಗಳೇ ಇವೆ. ಎಲ್ಲಿ ಮುಟ್ಟಿದರೂ ಮುಟ್ಟಿದ ಜಾಗದಲ್ಲಿ ಅಜ್ಞಾನವು ಇದೆ. ತನುವನ್ನು ಆವರಿಸಿದ ಅಜ್ಞಾನವನ್ನು ತನುವಿನಲ್ಲಿಯೇ ತನ್ಮಯವಾದ ಜ್ಞಾನದ ಮೂಲಕ ನಾಶ ಮಾಡುವುದೇ ಗುರುದೇವ ರುದ್ರಾಕ್ಷಿ ನೀಡಿದ ಸಂಕೇತ.

ನಮಃಶಿವಾಯವೆಂಬ ಪಂಚಾಕ್ಷರಿಯನ್ನು ತನುವಿನ ಮೂಲಕ, ತನು ಸಾಯುವವರೆಗೆ ನುಡಿದರೂ ತನುವಿಗೆ ಫಲ ದೊರಕುವುದಿಲ್ಲ. ತನುವಿನ ಅಜ್ಞಾನ ಕರಗುವುದಿಲ್ಲ. ಏಕೆಂದರೆ ನಮಃಶಿವಾಯವೆಂಬ ಐದಕ್ಷರಗಳ ಮಂತ್ರದ ಮಹಾಮಹಿಮ ತಾನೇ ಆಗಿರುವನು. ತನುವಿನಲ್ಲಿ ಹರಿಯುವ ರಕ್ತವೇ 'ನ'ಕಾರ, ಮಾಂಸವೇ 'ಮ'ಕಾರ, ತನುವನ್ನು ಹಂದರ ರೂಪದಲ್ಲಿ ನಿಲ್ಲಿಸಿ ನಡೆದಾಡುವ ಶಕ್ತಿಯನ್ನು ಕೊಟ್ಟ ಎಲುಬುಗಳೆ 'ಶಿ'ಕಾರ. ಅದರಲ್ಲಿ ಹರಿದಾಡಿ ಬಲವನ್ನು ಇತ್ತ ಮಜ್ಜವೆ 'ವಾ'ಕಾರ. ಮೇದಸ್ಸೇ 'ಯ'ಕಾರವಾಗಿದೆ.

ಪ್ರಪಂಚದಲ್ಲಿರುವ ಸಕಲ ತನುಗಳು ಇದರ ಹೊರತಾಗಿ ಇಲ್ಲ. ಆದರೂ ತನುವಿಗೆ ಸಕಲ ತನುಗಳೆಲ್ಲ ನಮಃಶಿವಾಯವೇ ಆಗಿವೆಯಲ್ಲ ಎನ್ನುವ ಪರಿಚಯ ಮರೆವು ಆಗಿರುವುದರಿಂದಾಗಿ; ಇದನ್ನು ಅರಿತ ಗುರುದೇವ, ಸಕಲ ತನುಗಳು ನಮಃಶಿವಾಯವೆಂಬ ಮಂತ್ರವೇ ತಾವಾಗಲೆಂದು ಮಂತ್ರವನ್ನು ಕಿವಿಯಲ್ಲಿ ಊದಿದ.

ಮಂತ್ರವೇ ತಾನೆಂದು ತನ್ನ ಅನುಭವಕ್ಕೆ ಬರಬೇಕೆ ಹೊರತು ನಮಃಶಿವಾಯ ಎಂದು ಹಗಲಿರುಳೆನ್ನದೆ ಬೊಗಳಿದರೆ ಉಪಯೋಗವಿಲ್ಲ. ಜ್ಞಾನಿಯಾದವನು ಬೊಗಳುವ ತನುವನ್ನು ಕುರಿತು ನೀನು ನಮಃಶಿವಾಯವೇ ಆಗಿರುವಾಗ ಬೊಗಳಿ ಬೊಗಳಿ ಕಾಲ ವ್ಯಯ ಮಾಡುವುದಾದರೂ ಯಾಕೆ? ನಿನ್ನನ್ನು ನಮಃಶಿವಾಯ ಅಲ್ಲವೆಂದವರು ಯಾರು? ನೀನೇ ನಮಃಶಿವಾಯ. ನಿನ್ನಂತೆ ಸಕಲರೂ ಮಂತ್ರಪುರುಷರೆ. ಸ್ತ್ರೀಯಾದರೇನು, ಪುರುಷರಾದರೇನು? ಇಬ್ಬರೂ ಮಂತ್ರಮಯ ಮಹಾಪುರುಷರೇ ಆಗಿದ್ದಾರೆ.

ಗುರುದೇವನಿಗೆ ಯಾರೂ ಸಮಾನರಲ್ಲ ಅಂತಹ ಶ್ರೀಗುರುದೇವನನ್ನು ತಿಳಿಯಲು, ಲಿಂಗ ಜಂಗಮವನ್ನು ತಿಳಿಯಲು ಪಾದೋದಕ ಪ್ರಸಾದವನ್ನು ಕೊಟ್ಟು ಸಲಹಿದಾತನು ಗುರುವು.

ಗುರುದೇವನು ನೀನೆ ಆಗಿರುವಿ. ಲಿಂಗವೂ ನೀನೇ ಆಗಿರುವಿ. ಜಂಗಮನು ಕೂಡಾ ನೀನೇ ಆಗಿರುವಿ ಎಂದು ಗುರುದೇವ ಶಿಷ್ಯನಿಗೆ ತಿಳಿಹೇಳುತ್ತಾನೆ. ಇವರೆಲ್ಲ ನೀನೇ ಎಂದು ತಿಳಿಯಲು ಪಾದೋದಕ ಪ್ರಸಾದವೆಂಬ ಸೂತ್ರವನ್ನು ಕೂಡಾ ಕೊಟ್ಟು, ತನ್ನಂತೆ ಮಾಡಿ, ತಾನು ಹಿಂದೆ ಸರಿಯುತ್ತಾನೆ. ಮನುಕುಲವಲ್ಲ; ಇದು ಗುರುಕುಲ ಎಂದು ಗುರುದೇವನಾದವನು ಶಿಷ್ಯನನ್ನು ಗುರುದೇವನನ್ನಾಗಿಸಿ ಮನುಕುಲಕ್ಕೆ ಸಾರುತ್ತಾನೆ.

ಗುರುವಾಗಿಯೂ, ಶಿಷ್ಯನನ್ನು ಗುರುವನ್ನಾಗಿಸುವ ಗುರುದೇವ ದೊರೆಯುವುದು ದುರ್ಲಭ! ಎಣಿಕೆಯಲ್ಲಿ ಮಾತ್ರ ಸಿಕ್ಕುತ್ತಾರೆ; ಹುಡುಕುವ ಗಟ್ಟಿಮುಟ್ಟಾದ ಜಟ್ಟಿಯಂತಿರುವ ಶಿಷ್ಯನಿಗೆ!

ಕಾಯಕ್ಕೆ ನಾನಾರೀತಿಯ ಹಸಿವಾಗುತ್ತದೆ. ಅನ್ನದ ಹಸಿವಾದಾಗ ಕಾಯ ಅನ್ನವನ್ನು ಉಂಡು ಪ್ರಸಾದ ಮಾಡಿಕೊಳ್ಳುತ್ತದೆ. ಉಂಡ ಅನ್ನ ಜೀರ್ಣವಾಗುತ್ತದೆ. ಹಾಗೆಯೇ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು ಜೀರ್ಣಮಾಡಿಕೊಳ್ಳುವ ಶಕ್ತಿ ಕಾಯಕ್ಕಿಲ್ಲ. ಕಾಯವನ್ನು ಆವರಿಸಿದ ಮನಕ್ಕೂ ಇಲ್ಲ.

ಅಷ್ಟಮದಗಳು ಸಪ್ತವ್ಯಸನಗಳು, ಸಾತ್ವಿಕ ರಾಜಸ ತಾಮಸವೆಂಬ ಮೂರು ಮಹಾರೋಗಗಳು ಕಾಯದಲ್ಲಿಯೇ ಉಳಿದು, ಕಾಯವನ್ನು ಕಿತ್ತುತಿನ್ನುತ್ತವೆ. ಉಂಡ ಅನ್ನದಂತೆ ಸಹಜವಾಗಿ ಪ್ರಸಾದ ಮಾಡಿಕೊಳ್ಳುವ ಶಕ್ತಿ ಪ್ರಸಾದ ಸೂತ್ರಕ್ಕೆ ಇದೆ. ಪಾದೋದಕಕ್ಕೆ ಇದೆ. ಪಾದೋದಕವೆಂದರೆ ಜ್ಞಾನೋದಕ!

ಉದಕದ ಬಿಂದುವಿನಿಂದಲೇ ಉದಕದ ತನುವಾಗಿದೆ. ಜ್ಞಾನೋದಕ ತನುವಿಗೆ ಮಹಾಜ್ಞಾನವಾಗಿ ಆಧಾರವಾಗಿದೆ.

ಜಲಭರಿತವಾದ ಕಣ್ಣ ಮೂಲಕ ಅಜ್ಞಾನದ ದೃಶ್ಯವೂ ಹರಿಯುತ್ತದೆ. ಹಾಗೆಯೇ ಅದರ ಜೊತೆಗೆ ಜ್ಞಾನ ದೃಶ್ಯವೂ ಹರಿದು ಅಜ್ಞಾನ ದೃಶ್ಯಕ್ಕೆ ಪಾಠ ಮಾಡುತ್ತದೆ. ಇದೇ ಪಾದೋದಕ. ಇಂತಹ ಪಾದೋದಕ ಪ್ರಸಾದವನ್ನು ಕೊಟ್ಟು ಸಲಹಿದಾತ ಗುರುದೇವ ಎಂದು ಸಿದ್ಧರಾಮ ಶಿವಯೋಗಿಗಳು ಗುರುದೇವನ ಗುಣಗಾನ ಮಾಡಿದ್ದಾರೆ.

**841**

**ಭಸಿತ ದುದ್ರಾಕ್ಷಿಯನು ಧರಿಸಿ**
**ಸಂಪ್ರೀತಿಯಲ್ಲಿ ಬಸವಾಕ್ಷರತ್ರಯವ ನೆನೆಯುತಿಪ್ಪ**
**ಶರಣರೇ ಇಹಲೋಕ ಪರಲೋಕ;**
**ಭ್ರಮೆಗೆಟ್ಟು ಇರುತಿಪ್ಪ ಇಹಲೋಕವೇ ರುದ್ರಲೋಕ ತಾನು.**
**ಕರುಣಾಕರ ಕಪಿಲಸಿದ್ಧ ಮಲ್ಲೇಶ್ವರನ**
**ಶರಣರು ಇರುತಿಪ್ಪುದೇ ರುದ್ರಲೋಕ ತಾನು.**

ಭಸ್ಮ ರುದ್ರಾಕ್ಷಿಯನ್ನು ಧರಿಸಿ, ಸಂಪ್ರೀತಿಯಲ್ಲಿ ಬಸವಾಕ್ಷರ ತ್ರಯವನ್ನು ನೆನೆಯುತಿಪ್ಪ ಶರಣರೇ ಇಹಲೋಕ ಪರಲೋಕ. ಭ್ರಮೆಗೆಟ್ಟು ಇರುವಂತಹ ಇಹಲೋಕವೇ ರುದ್ರಲೋಕ, ಶರಣರು ಇರುವ ಲೋಕವೇ ರುದ್ರಲೋಕ.

ಭಸ್ಮ, ರುದ್ರಾಕ್ಷಿಯನ್ನು ಧರಿಸುವುದು ಎಂದರೆ ಮೈತುಂಬ ಭಸ್ಮ ಹೂಸಿಕೊಂಡು ರುದ್ರಾಕ್ಷಿ ಧರಿಸಿದವನು ಮರ್ತ್ಯಲೋಕದಲ್ಲಿಯೇ ವಾಸಮಾಡುತ್ತಾನೆ. ಅವನಿಗೆ ಸುಖವುಂಟು ದುಃಖವುಂಟು.

ಸಗಣಿಯಂತಹ ಅಜ್ಞಾನಕಾಯವನ್ನು ತನ್ನ ಜ್ಞಾನಾಗ್ನಿಯಿಂದಲೇ ಸುಟ್ಟುಕೊಂಡು ಇಡೀ ಕಾಯವನ್ನೇ ಭಸ್ಮಕಾಯ ಮಾಡಿಕೊಂಡಾತ ಶರಣ.

ಇಡೀ ತನುವಿನ ತುಂಬಾ ಅಜ್ಞಾನದ ಕಣ್ಣುಗಳೇ ಇವೆ. ಕಣ್ಣಿನಲ್ಲಿ ಅಜ್ಞಾನದ ದೃಶ್ಯವು ಇದೆ. ಜ್ಞಾನದ ದೃಶ್ಯವು ಇದೆ. ಕಣ್ಣು ಜ್ಞಾನ–ಅಜ್ಞಾನ ದೃಶ್ಯಗಳಿಗೆ ಉಪಕರಣ. ಅಜ್ಞಾನದ ದೃಶ್ಯವನ್ನು ಜ್ಞಾನ ದೃಶ್ಯದ ಮೂಲಕ ಸುಟ್ಟು, ಜ್ಞಾನದ ಕಣ್ಣೊಂದೇ ಬಳಕೆ ಮಾಡಿದಾತ ಮಾತ್ರ ಶರಣ. ಈತ ರುದ್ರಾಕ್ಷಿ ಧರಿಸಿದಾತ.

ಭಸ್ಮ ರುದ್ರಾಕ್ಷಿ ಧರಿಸಿ ಕಾವಿ ಹಾಕಿದಾತ ಈ ತಂತ್ರಗಾರಿಕೆಯನ್ನು ಅರಿಯದಿದ್ದಲ್ಲಿ ಆತ ಶರಣನಲ್ಲ. ಉಪಜೀವನಕ್ಕಾಗಿ ವೇಷ ಹಾಕಿದಾತ! ಆತ ಸುಂದರವಾದ ಭವ್ಯವಾದ ಮಠ,

ಮಂದಿರಗಳಲ್ಲಿ ವಾಸ ಮಾಡುತ್ತಿದ್ದರೂ ಆತನಿಗೆ ಅದು ನರಕ!

ಅಜ್ಞಾನದ ಕಾಯವನ್ನು ಸುಟ್ಟುಕೊಂಡು ಜ್ಞಾನದ ಕಾಯವನ್ನು ಬಳಸುವಾತ ನಿಜವಾದ ಭಸ್ಮಧಾರಿ. ಈತ ಭಸ್ಮಧಾರಣೆ ಮಾಡುವ ಅವಶ್ಯಕತೆ ಇಲ್ಲ. ಕಾವಿ ಹಾಕಿ ರುದ್ರಾಕ್ಷಿ ಧರಿಸುವ ಅವಶ್ಯಕತೆಯು ಇಲ್ಲ. ಈತ ಇದ್ದ ನೆಲವೇ ರುದ್ರಲೋಕ, ಇಹಲೋಕ, ಪರಲೋಕ. ಶರಣರು ವಾಸಮಾಡುವ ಸ್ಥಳವೇ ರುದ್ರಲೋಕ ಎಂದು ಸಿದ್ಧರಾಮ ಶಿವಯೋಗಿಗಳು ಇಡೀ ಲೋಕಕ್ಕೆ ಸಾರಿದ್ದಾರೆ.

**842**

**ಭಸಿತವನಿಟ್ಟಿಹೆ, ರುದ್ರಾಕ್ಷಿಯ ಧರಿಸಿಹೆ.**
**ನೀನೊಲ್ಲೆ, ನೀನೊಲಿದೆ.**
**ನಿನ್ನೊಲುಮೆ ಏಕೆ ಎಲೆ ಅಯ್ಯ.**
**ನಿನ್ನವರೊಲ್ಲರು! ಆ ಒಲುಮೆ ತಾನೆನಗೇಕೆ?**
**ಹೇಳಾ, ಎಲೆ ಅಯ್ಯಾ**
**ಪುರುಷರಿಲ್ಲದ ಸ್ತ್ರೀಯರ ಶೃಂಗಾರದಂತೆ**
**ನಿನ್ನೊಲುಮೆ ಏಕೆ? ಹೇಳಾ!**
**ನಿಜಭಕ್ತಿಯಲ್ಲಿರಿಸಿ ಸದ್ಭಕ್ತನೆಂದೆನಿಸಿ**
**ಸದಾಚಾರಿಗಳ ಸಂಗಡ ಎನ್ನ ಹುದುವಿನಲ್ಲಿ ಕುಳ್ಳಿರಿಸಿ**
**ಓರಂತೆ ಮಾಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ನೀನೊಲಿದುದಕ್ಕೆ ಇದು ಕುರುಹು.**
**ಅಲ್ಲದಿರ್ದಡೆ ಇದು ವೈಶಿಕ!**

ಭಸ್ಮವನ್ನು ಧರಿಸಿರುವೆ ರುದ್ರಾಕ್ಷಿಯ ಹಾಕಿರುವೆ ಆದರೂ ನೀನೊಲ್ಲೆ ನೀನೊಲಿದೆ. ಅಂಗದ ಮೇಲೆ ರುದ್ರಾಕ್ಷಿಯನ್ನು ಧರಿಸಿದವರನ್ನು ನೀನೊಲ್ಲೆ. ಸರ್ವಾಂಗವನ್ನು ರುದ್ರಾಕ್ಷಿಯನ್ನಾಗಿಸಿ ಕೊಂಡವರಿಗೆ ನೀನೊಲಿದೆ. ಭಸ್ಮವ ಧರಿಸಿದವರನ್ನು ನೀನೊಲ್ಲೆ. ಭಸ್ಮಕಾಯವ ಮಾಡಿಕೊಂಡವರಿಗೆ ನೀನೊಲಿದೆ. ನಿನ್ನ ಒಲುಮೆ ಏಕೆ ಎಲೆ ಅಯ್ಯಾ. ನಿನ್ನವರು ಒಲ್ಲರು. ಏಕೆಂದರೆ ಅವರೇ ನೀನಾಗಿರುವಾಗ ಅವರಿಗೆ ನಿನ್ನೊಲುಮೆಯಾದರು ಏಕೆ ಹೇಳಾ ಎಲೆ ಅಯ್ಯಾ?

ಪುರುಷರಿಲ್ಲದ ಸ್ತ್ರೀಯರ ಶೃಂಗಾರದಂತೆ ನಿನ್ನೊಲುಮೆ ಏಕೆ ಹೇಳಾ? ನಾನು ಸ್ತ್ರೀ ನೀನೇ ಪುರುಷನಾಗಿರುವಾಗ ಅದು ನನ್ನಲ್ಲಿಯೇ ಇದ್ದು ನನ್ನನ್ನು ಪತಿಯಾಗಿ ಸ್ವೀಕರಿಸಿದಾಗ ನಿನ್ನೊಲುಮೆ ಏಕೆ ಹೇಳಾ.

ನಿಜ ಭಕ್ತಿಯಲ್ಲಿ ಸದಾ ನನ್ನನ್ನು ಇರಿಸಿ, ಸದ್ಭಕ್ತನನ್ನಾಗಿಸಿ, ಸದಾಚಾರಿಗಳ ಸಂಗಡ ಎನ್ನನ್ನು ಹುದುವಿನಲ್ಲಿ ಕುಳ್ಳಿರಿಸಿ, ಅವರಂತೆ ಎನ್ನನ್ನು ಮಾಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ನೀನೊಲಿದುದಕ್ಕೆ ಇದು ಕುರುಹು, ಅಲ್ಲದಿದ್ದಡೆ ಇದು ಬರಿ ವೈಶಿಕ:

ವೇಷ ವೇಶಿಗೆ ಸಮ ಎನ್ನುವುದು ನಿನಗೆ ಗೊತ್ತಿಲ್ಲವೇ? ಭಸ್ಮ ರುದ್ರಾಕ್ಷಿ ಧರಿಸಿ, ಕಾವಿ, ನಿಲುವಂಗಿ ಹಾಕಿಕೊಂಡು, ಕೊರಳಲ್ಲಿ ಲಿಂಗ, ಶಿಲುಬೆ ಕಟ್ಟಿಕೊಂಡು, ಗಡ್ಡ ಬಿಟ್ಟು ಟೊಪ್ಪಿಗೆ ಹಾಕಿಕೊಂಡು ನಿನ್ನನ್ನು ಒಲಿಸಿಕೊಳ್ಳುವ ವೇಶ್ಯೆ ನಾನಲ್ಲ. ಅದು ನನಗೆ ಸಲ್ಲದ ಕೆಲಸ. ಸದಾಚಾರಿಗಳ ಸಂಗಡ ಎನ್ನನ್ನು ಕುಳ್ಳಿರಿಸಿ ಅವರಂತೆ ಮಾಡಾ ನನ್ನನ್ನು. ಅವರು ನಿನ್ನನ್ನು ಒಲಿಸಿಕೊಂಡವರು. ನಿನಗೆ

ಶರಣು ಹೋಗಿ ಶರಣಾಗತರಾಗಿ ಶರಣರಾದ ಶರಣರೇ ಅವರು. ಯಾವ ವೇಷವನ್ನು ಧರಿಸಿದವರಲ್ಲ ಅವರು. ಅಂತಹವರ ಸಂಗದಲ್ಲಿರಿಸಿ ಎನ್ನನ್ನು ಸಲಹು ಕಪಿಲಸಿದ್ಧ ಮಲ್ಲಿಕಾರ್ಜುನ. ನೀನು ಎನಗೆ ಒಲಿದುದಕ್ಕೆ ಇದೆ ಕುರುಹು ನೋಡಾ.

**843**

**ಭಾವ ಬಲಿಸಬೇಕಲ್ಲದೆ ವಿಭಾವ ಮಾಡಲುಂಟೆ?**
**ಗುರುಭಕ್ತಿಯಲ್ಲಿ ಭಾವ ಬಲಿದುದೆ ಬ್ರಹ್ಮಜ್ಞಾನ;**
**ಗುರುಭಕ್ತಿಯಲ್ಲಿ ಭಾವ ನಿಂದುದೆ ಸಹಜಸ್ಥಿತಿ.**
**ಗುರುಭಕ್ತಿ ಮರೆವ ಅರಿವ ಮರೆತುದೆ,**
**ಕಪಿಲಸಿದ್ಧ ಮಲ್ಲಿಕಾರ್ಜುನದೇವನ ಮಹಾಮನೆ;**
**ಇದು ಸತ್ಯ ಕೇಳಾ ಶಿವತಾಯಿಯೆ.**

ಭಾವ ನಿರ್ಭಾವದಲ್ಲಿ ಸಂಗಮವಾದಾಗ ಅದಕ್ಕೆ ಬಲ ಬರುತ್ತದೆ. ಭಾವ ನಿರ್ಭಾವವಾಗುತ್ತದೆ. ಇಲ್ಲದಿದ್ದರೆ ಭಾವ ಒಮ್ಮೆ ಭಾವವಾಗಿರುತ್ತದೆ. ಮತ್ತೊಮ್ಮೆ ದುರ್ಭಾವವಾಗುತ್ತದೆ. ಭಾವ ಅರಳುವುದರಿಂದಾಗಿ ಒಂದು ತನು ಮತ್ತೊಂದು ತನುವಿನ ಗೆಳೆತನ ಮಾಡುತ್ತದೆ.

ಮತ್ತೊಂದು ತನುವಿನ ಮಾತುಗಳು ಹಿತವಾದರೆ ಗೆಳೆತನ. ಮಾತಿನಲ್ಲಿ ವ್ಯತ್ಯಾಸ ಕಂಡುಬಂದರೆ ಅಥವಾ ಕೇಳಿದರೆ ಭಾವ ದುರ್ಭಾವವಾಗುತ್ತದೆ. ಗೆಳೆತನದ ಗೆಳೆಯನೇ ವೈರಿಯಾಗುತ್ತಾನೆ.

ಮತ್ತೆಂದು ಸ್ನೇಹಿತನಾಗಲು ಸಾಧ್ಯವಿರದಿದ್ದರೂ ಭಾವ ತನುವನ್ನು ಕಲಕಿ ದುರ್ಭಾವಕ್ಕೆ ವಾಲುತ್ತದೆ. ಭಾವ ನಿರ್ಭಾವವಾದಗಲೇ ಗುರುದೇವನಲ್ಲಿ ಗುರುಭಕ್ತಿಯಲ್ಲಿ ಭಾವ ಬಲಿಯುತ್ತದೆ. ಭಾವ ಬಲಿದ ಕುರುಹೇ ಬ್ರಹ್ಮಜ್ಞಾನ. ಗುರುಭಕ್ತಿಯಲ್ಲಿ ಭಾವಮಿಂದುದೆ ಸಹಜಸ್ಥಿತಿ. ಗುರುಭಕ್ತಿ ಮರೆತು, ಅರಿವನು ಮರೆತು, ಅರಿವು ತಾನಾದುದೇ ಕಪಿಲಸಿದ್ಧ ಮಲ್ಲಿಕಾರ್ಜುನ ದೇವನ ಮಹಾಮನೆ.

**844**

**ಭಾವಿಸಿದರೆ ಹೆಂಗೂಸು**
**ನಡುವೆ ನಿಂದಿರೆ ಹೆಂಪುಳ್ಳ ಗಂಡುಗೂಸು!**
**ಒಬ್ಬ ತನಗೆಂಬ ಒಬ್ಬ ತನಗೆಂಬ**
**ಸುತ್ತಿ ನೋಡಿ ಸುಯ್ವಳು ಹೋ!**
**ಎಮ್ಮಿಂದ ನಿಮಗೆ ವಿವಾಹ ಬೇಡಯ್ಯಾ,**
**ಎಮ್ಮ ಗಂಡ ಬಾಯಾಳು, ಕಪಿಲಸಿದ್ಧ ಮಲ್ಲಿನಾಥಾ.**

ಭಾವಿಸಿದರೆ ಹೆಣ್ಣು, ಗಂಡು. ತಿಳಿದು ನೋಡಿದರೆ ಗಂಡು ಅಲ್ಲ ಹೆಣ್ಣು ಅಲ್ಲ. ಅದು ಬರಿಯ ಅಂಗ, ಸರ್ವಾಂಗವೂ ಲಿಂಗ. ಆದರೂ ಲೋಕ ತನಗೆಂಬ ಒಬ್ಬ, ತನಗೆಂಬ ಮತ್ತೊಬ್ಬ ಹೆಣ್ಣು-ಗಂಡು ಎಂಬ ಅಜ್ಞಾನ ಎಲ್ಲಿ ನೋಡಿದರೂ ಸುಳಿವುದು. ಕಣ್ಣು ನೋಡಿ ಗಂಡು ಎಂದು ಹೆಣ್ಣಾಗಿ ಆಸೆ ಮಾಡುವುದು. ಹೆಣ್ಣೆಂದು ನೋಡಿ ಗಂಡಾಗಿ ಆಸೆ ಮಾಡುವುದು. ಹೀಗಾಗಿ ಲೋಕ ಮದುವೆಯಾಗಿ ಹೆಣ್ಣು-ಗಂಡಿನ ಸುಖದಲ್ಲಿ ನಿರತವಾಗಿದೆ.

ಕಪಿಲಸಿದ್ಧ ಮಲ್ಲಿಕಾರ್ಜುನ ಎಮಗೆ ವಿವಾಹ ಬೇಡ. ಅಂತರಂಗದ ಗಂಡ ನೀವೇ ಆದ ಕಾರಣ, ನಿಮಗೆ ನಾನೇ ಹೆಣ್ಣಾದ ಕಾರಣ, ಸತಿ-ಪತಿಗಳಿಬ್ಬರು ಕಾಯವೆಂಬ ಕೈಲಾಸದಲ್ಲಿಯೇ ವಾಸವಾಗಿ ಅರ್ಧನಾರೀಶ್ವರರಾಗಿದ್ದಾರೆ.

ಕಪಿಲಸಿದ್ಧ ಮಲ್ಲಿನಾಥ ಎಮ್ಮ ಗಂಡ ಬಾಯಾಳು:

ಆತ ನುಡಿದದ್ದು ನನಗೆ ಮಾತ್ರ ಕೇಳುತ್ತದೆ. ಆತ ನುಡಿಯುವ ಮೂಲಕ ನನ್ನನ್ನು ಮಾತನಾಡಿಸುತ್ತಾನೆ. ನನ್ನ ಹೊರತು ನನ್ನ ಗಂಡನ ಮಾತು ಯಾರಿಗೂ ಕೇಳುವುದಿಲ್ಲ. ಆತ ಆಡಿದ ಮಾತು ನನಗೆ ಕೇಳುತ್ತದೆ. ನಾನು ನುಡಿದ ಮಾತು ಲೋಕಕ್ಕೆ ಕೇಳುತ್ತದೆ. ಆತ ಭಾವಿಸಿದರೆ ನಾನು ಹೆಂಗೂಸು ಆತ ಗಂಡುಗೂಸು.

**845**

**ಭೂಮಿ ಒಂದರೊಳಗೆ**
**ಒಂದು ನಾಮಸಾಮ್ಯ ವೃಕ್ಷ ಹುಟ್ಟಿ**
**ಮೂಲನಾಶವಪ್ಪ ಫಲ ಮೂರು**
**ಸೀಮೆಗೆಟ್ಟಿತು ಬ್ರಹ್ಮಾಂಡ.**
**ಅಪರಾಹ್ನದ ಆದಿಯಲ್ಲಿ**
**ಅಡಗಿದವು ಸಕಲ ಬ್ರಹ್ಮಾಂಡ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬೀಜ ಭೂಮಿಗೆ ಬಿದ್ದು, ಟಿಸಿಲೊಡೆದು ಅಂಕುರದೊಂದಿಗೆ ಹೊರಬಂದು, ಬೇರು ಭೂಮಿಯಲ್ಲಿ ಇಳಿದು ವೃಕ್ಷವಾಗುತ್ತದೆ. ಬಿದ್ದ ಬೀಜವೇ ವೃಕ್ಷವಾಗಲಿಲ್ಲ. ಬೀಜದಲ್ಲಿಯ ಅಂಕುರ ಚಿಮ್ಮಿ, ಬೀಜವನ್ನು ಹೊರಗೆ ಚೆಲ್ಲಿ ವೃಕ್ಷ ಭೂಮಿಯ ಮೇಲೆ ಹಸಿರು ಚೆಲ್ಲಿ ನಿಲ್ಲುತ್ತದೆ. ಮೊಗ್ಗಾಗಿ ಹೂವಾಗಿ ಅರಳಿ ಕಾಯಾಗಿ ಹಣ್ಣು ಬಿಟ್ಟು ಆ ಹಣ್ಣಿನೊಳಗಣ ಬೀಜದ ಒಳಗೆ ಮರದ ಸಕಲ ಸತ್ವಗಳನ್ನು ತುಂಬಿ ತೊಟ್ಟು ಬಿಟ್ಟು ಫಲ ನೆಲಕ್ಕುರುಳುತ್ತದೆ. ಇದು ಬೀಜ-ವೃಕ್ಷದ ನಿಯಮ.

ಬೀಜವೇ ವೃಕ್ಷವಾಗಲಿಲ್ಲ. ಬೀಜದೊಳಗಣ ಶಕ್ತಿ ಬೀಜವನ್ನು ಹೊರಚೆಲ್ಲಿ ವೃಕ್ಷವಾಯಿತು. ಹಾಗೆಯೇ ತನು ಕೂಡಾ ಒಂದು ಜ್ಞಾನದ ವೃಕ್ಷ. ಜ್ಞಾನ ಶಕ್ತಿಯ ಮೂಲಕ ಬೆಳೆದು ನಿಂತು ಸ್ಥೂಲ ಸೂಕ್ಷ್ಮ ಕಾರಣ ಎಂಬ ಮೂರು ಫಲಗಳನ್ನು ಬಿಟ್ಟು ಇಡೀ ಬ್ರಹ್ಮಾಂಡದ ಉಗಮಕ್ಕೆ ಕಾರಣವಾಯಿತು.

ಸೀಮೆಗೆಟ್ಟು ನಿಸ್ಸೀಮನೆನೆಸಿಕೊಂಡು ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಫಲಗಳನ್ನು ಮುರಿದಿಕ್ಕಿ ತ್ರಿಗುಣಾತೀತ ಎಂಬ ಮರುಜವಣಿಯ ಫಲವನ್ನು ಬಿಟ್ಟು, ಇಡೀ ಬ್ರಹ್ಮಾಂಡವನ್ನೇ ಬೆಳಗಿಸಿತು. ಅದರ ಬೆಳಕು ಶತಕೋಟಿ ಸೂರ್ಯರನ್ನು ನಾಚಿಸಿತು. ಅದರ ಬೆಳಕಿಗೆ ಅಡಗಿದವು ಸಕಲ ಬ್ರಹ್ಮಾಂಡವು ಕಪಿಲಸಿದ್ಧ ಮಲ್ಲಿಕಾರ್ಜುನ.

**846**

**ಭೇದಾದಿ ಭೇದವ ವಾದಿಸುವವರ ನೋಡಿಸದಿರಯ್ಯಾ,**
**ಏಕೋದೇವನೆಂಬುವರ ಅನೇಕ ವಿಧದಿಂದ ತೋರಿಸಯ್ಯ.**
**ನಿರಾಕಾರವೆಂಬವರ ಸಂಗಕ್ಕೆಳಸದಂತೆ ಮಾಡಯ್ಯ.**

**ಏಕೋದೇವನೆಂಬವರ ಸಂಗದಲ್ಲಿರಿಸು ಎನ್ನ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜ್ಞಾನ ಎನ್ನುವುದು ಸರ್ವಾಂಗದಲ್ಲಿಯೂ ಭರಿತವಾಗಿದೆ. ಅಂಗವನ್ನು ಆವರಿಸಿದ ಮನದಿಂದಾಗಿ ಭೇದ ಜ್ಞಾನ ಸೃಷ್ಟಿಯಾಗಿದೆ. ಹೀಗಾಗಿ ಎಲ್ಲಿ ನೋಡಿದರೂ ಪುಸ್ತಕದಲ್ಲಿಯ ಜ್ಞಾನವೇ ಶ್ರೇಷ್ಠ ಎಂದು ಮನ ತಿಳಿದಿರುವುದರಿಂದ, ವೇದ ಆಗಮ ಉಪನಿಷತ್ತುಗಳು, ಮಹಾಭಾರತ, ರಾಮಾಯಣ, ಭಗವದ್ಗೀತೆ, ಭಾಗವತಗಳು, ಕುರಾನ್, ಬೈಬಲ್ ಗ್ರಂಥಗಳು ಜ್ಞಾನ ಗ್ರಂಥಗಳಾಗಿ ಹೊರಬಂದವು.

ಈ ಎಲ್ಲಾ ಗ್ರಂಥಗಳು ಸರ್ವಾಂಗದ ಕಡೆ ಬೆರಳು ಮಾಡಿ ತೋರಿಸಿದರೂ, ಮನಸ್ಸು ಅಂಗದಲ್ಲಿಯೇ ಸಂಗಮವಾಗಿರುವ ಏಕೋದೇವನನ್ನು ಅರಿಯಲು ಸಾಧ್ಯವಾಗುತ್ತಿಲ್ಲ. ಕೆಲವರು ದೇವರು ಸಾಕಾರವೆಂದರೆ, ಮತ್ತೆ ಕೆಲವರು ದೇವರು ನಿರಾಕಾರವೆಂದು ಪ್ರತಿಪಾದಿಸುತ್ತಾರೆ. ದೇವರನ್ನು ಹೊತ್ತ ದೇಹದಿಂದಲೇ ಹೀಗೆ ಪ್ರತಿಪಾದಿಸುವ ಮನವನ್ನು ಕಂಡು ದೇಹದಲ್ಲಿಯ ದೇವರು ಮನದ ಮಾತು ಕೇಳಿ ನಗುತ್ತಾನೆ.

ಹೀಗಾಗಿ ಸಿದ್ಧರಾಮ ಶಿವಯೋಗಿಗಳು ದೇವರು ಒಬ್ಬನೇ ಅವನು ನಿರಾಕಾರನಲ್ಲ. ನಿರಾಕಾರ ದೇವರು ಎನ್ನುವವರ ಸಂಗದಿಂದ ನನ್ನನ್ನು ದೂರ ಮಾಡಯ್ಯ ಏಕೋದೇವರೆನ್ನುವವರ ಸಂಗದಲ್ಲಿ ನನ್ನನ್ನು ಇರಿಸು ಕಪಿಲಸಿದ್ಧ ಮಲ್ಲಿಕಾರ್ಜುನ ಎಂದಿದ್ದಾರೆ.

ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದ ದೇವರು, ದೇಹವನ್ನು ಸೃಷ್ಟಿ ಮಾಡಿ, ಆ ದೇಹದಲ್ಲಿಯೇ ಸಂಗಮವಾಗಿದ್ದಾನೆ. ದೇಹವನ್ನು ಆವರಿಸಿದ ಮನ ದೇಹದಲ್ಲಿಯೇ ಇದ್ದ ಏಕೋದೇವನ ಸಂಗ ಮಾಡಿದಾಗ, ಇಡೀ ಬ್ರಹ್ಮಾಂಡವನ್ನು ತನಗೆ ನೋಡಲು ಬರುತ್ತದೆ. ಇಡೀ ಬ್ರಹ್ಮಾಂಡದ ಸೃಷ್ಟಿಗೆ ಏಕೋದೇವನೇ ಕಾರಣನೆಂಬುದು ಅನುಭವಕ್ಕೆ ಬರುತ್ತದೆ.

**847**

**ಭ್ರಮಣವಿಡಿದ ಭ್ರಮಿತರು**
**ಕಮಳದ ಎಸಳ ಅಕ್ಷರದ ವರ್ಣವ ಕಂಡೆಹೆನೆಂಬರಯ್ಯಾ.**
**ಕಾಬ ಕಾಣಿಕೆ ಯಾರಿಗೂ ಸಾಧ್ಯವಲ್ಲ.**
**ಕಂಡ ಕಂಡ ನಮ್ಮ ಕಪಿಲಸಿದ್ಧ ಮಲ್ಲಿನಾಥನಲ್ಲಿ**
**ಚೆನ್ನಬಸವಣ್ಣ.**

ಅಂಗದಲ್ಲಿ ಬ್ರಹ್ಮಾಂಡವೇ ಸಂಗಮವಾಗಿದೆ. ಅಂಗವನ್ನು ಮನ ಆವರಿಸಿರುವುದರಿಂದ ಅಂಗ ಭ್ರಮೆಗೆ ಒಳಪಟ್ಟಿದೆ. ತಾನು ಸೃಷ್ಟಿ ಮಾಡಿದ ವಸ್ತುಗಳನ್ನು ತಾನೇ ಅವಿವೇಕಿಯಂತೆ ಬಚ್ಚಿಟ್ಟುಕೊಳ್ಳುತ್ತಲಿದೆ. ವಸ್ತುಗಳಿಗಾಗಿ ಮನ ತನುವಿನ ಪ್ರಾಣ ತೆಗೆಯಲು ಕೂಡಾಹೇಸುತ್ತಿಲ್ಲ.

ಅಂಗದಲ್ಲಿಯೇ ಸಂಗಮವಾದ ದೇವರನ್ನು ಮರೆತ ಮನ, ಕಲ್ಲು ಕಟ್ಟಿಗೆ ಲೋಹಗಳಿಂದ ದೇವರನ್ನು ಸೃಷ್ಟಿ ಮಾಡಿದೆ. ತಾನು ಸೃಷ್ಟಿ ಮಾಡಿದ ದೇವರಿಗೆ ತಾನೇ ಮೊರೆಹೋಗಿ ತನಗೆ ಬೇಕಾದುದನ್ನು ಬೇಡುತ್ತದೆ. ನಾನು ಬೇಡಿದ ಪದಾರ್ಥವನ್ನು ನನಗೆ ದೇವರು ಕೊಟ್ಟ ಎಂದು ಬೊಗಳೆ ಹೊಡೆಯುತ್ತಾ, ಕಮಲದ ಎಸಳ ಅಕ್ಷರದ ವರ್ಣವ ಕಂಡೆನೆಂದು, ನಾನು ಕಂಡ ಸತ್ಯ ಯಾರಿಗೂ ಸಾಧ್ಯವಿಲ್ಲವೆಂದು, ಕಾಣದುದ ಕಂಡೆ ಎಂದು, ಕಂಡ ಕಂಡವರಿಗೆ ಹೇಳುತ್ತದೆ ಭ್ರಮಾಧೀನ ಮನಸ್ಸು.

ತನುವಿನಲ್ಲಿಯೇ ತನ್ಮಯವಾಗಿದ್ದ ದೇವರನ್ನು ಮರೆತು ತಾನು ಸೃಷ್ಟಿ ಮಾಡಿದ ದೇವರೇ ದೇವರೆಂದು ಭ್ರಮಿಸಿ ಭ್ರಮಾಧೀನಕ್ಕೆ ಒಳಗಾಗಿದೆ. ಸರ್ವಾಂಗದಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಿನಾಥನನ್ನು ಕಂಡವರೆಂದರೇ ಚೆನ್ನಬಸವಣ್ಣನೊಬ್ಬನೆ.

**848**

**ಭ್ರೂಮಧ್ಯದಿಂ ಮೇಲೆ ಒಪ್ಪಿಪ್ಪ ಕನ್ನಿಕೆಯ**
**ನಿನ್ನ ಜ್ಯೋತಿರ್ಮಯದ ಬೆಳಗ ತೋರಾ.**
**ಆ ಬೆಳಗಿನ ಬಳಗಂಗಳು ಶುದ್ಧ ಸಿದ್ಧ ಪ್ರಸಿದ್ಧವ ಪ್ರವೇಶಿಸಿಪ್ಪವು.**
**ನಿನ್ನಾನಂದ ಸ್ಥಾನದಲ್ಲಿ ಅತಿಶಯವಪ್ಪ ಬೀಜಾಕ್ಷರದ್ವಯಂಗಳುಂಟು**
**ಅದರ ಮಹಾಪ್ರಭೆಯಲ್ಲಿ ಒಪ್ಪಿಪ್ಪ ಅವ್ಯಯ**
**ವಾಙ್ಮನಕ್ಕಗೋಚರನಾಗಿಪ್ಪ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ**
**ನೋಡಿಹೆನೆಂಬ ಭರವಸೆ ಘನ, ತೋರಾ ಎಲೆ ಅವ್ವಾ!**

ಮನವೆಂಬುದು ಕನ್ಯೆ. ಆಕೆ ಗುರುಕನ್ಯೆ. ಕಾಯಕ್ಕೆ ಮುಪ್ಪು ಬಂದರೂ ಕೂಡಾ ಗುರುದರ್ಶನ ಪಡೆಯದಿದ್ದರೆ ಆಕೆ ಕನ್ಯೆಯಾಗಿಯೇ ಉಳಿಯುತ್ತಾಳೆ.

'ತನು' 'ಮನ' 'ಘನ' ಇವು ಬೀಜಾಕ್ಷರದ್ವಯಂಗಳು. ಅದರ ಮಹಾಪ್ರಭೆಯಲ್ಲಿ ಒಪ್ಪಿಪ್ಪ ವಾಙ್ಮನಕ್ಕಗೋಚರನಾಗಿರುವ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ ಗುರುದೇವನಿದ್ದಾನೆ. ಆ ಗುರುದೇವನಿಗಾಗಿಯೇ ಕಾಯುತ್ತಿರುವ ಗುರುಕನ್ಯೆ ಕೂಡಾ ಎರಡಕ್ಷರದ ಆನಂದಸ್ಥಾನವೆಂಬ ತನುವಿನಲ್ಲಿ ಕಾಯುತ್ತಿದ್ದಾಳೆ. ಗುರುದೇವನೇ ನಿನ್ನ ಬೆಳಗ ತೋರಿ ಆ ಕನ್ಯೆಯನ್ನು ನಿನ್ನಂತೆ ಮಾಡಿಕೊಳ್ಳಯ್ಯ. ನಿನ್ನ ಬೆಳಗಿನ ಬಳಗಂಗಳು ಶುದ್ಧ ಸಿದ್ಧ ಪ್ರಸಿದ್ಧವಾಗಿ ಆಕೆಯ ಬರುವಿಕೆಗಾಗಿ ಕಾಯುತ್ತಿಹವು.

ಭ್ರೂಮಧ್ಯದಿಂ ಮೇಲೆ ಒಪ್ಪಿಪ್ಪ ಕನ್ನಿಕೆಗೆ ನಿನ್ನ ಜ್ಯೋತಿರ್ಮಯದ ಬೆಳಗು ತೋರಾ. ಕಪಿಲಸಿದ್ಧ ಮಲ್ಲಿಕಾರ್ಜುನಾ.

**849**

**ಮಂಗಳದ ಮನೆಯಲ್ಲಿ ಸಂಗ ತನಗಾನಂದ**
**ಸಂಗವೆ ನೆಲೆಮನೆಯು.**
**ನಿತ್ಯವಾಗಿಪ್ಪ ಶ್ವೇತಜಲದಲ್ಲಿಪ್ಪ**
**ರೀತಿ ಸಂಖ್ಯೆಯನರಿದು, ಧಾತುವನು ಅತಿಗಳೆದು,**
**ತೂಗಿ ತೂಗಿ ಆಡಿವೋದಾತನು ಮೀರಿ ಕಂಡನು.**
**ಒಂದ ತೋರಿದನು ಅತಿಶಯವ ಲೋಕಕ್ಕೆಲ್ಲಾ.**
**ನಿರ್ಲೋಕ ನಿರ್ನಾಮ ನಿತ್ಯನು.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ತೋರಿದನು**
**ಸಾಯುಜ್ಯಪದವ ಮೀರಿ.**

ಅಂಗವೆಂಬುದು ಮಂಗಳಕರನಾದ ಭಗವಂತನಿದ್ದ ಮನೆ. ಆತನ ಅಂಗನೆ ಕೂಡಾ

ಅಂಗದಲ್ಲಿಯೇ ಇದ್ದಾಳೆ. ಮಂಗಳಾಂಗನ ಸಂಗಕ್ಕಾಗಿ ಕಾತುರದಿಂದ ಕಾಯುತ್ತಿದ್ದಾಳೆ.

ನಿತ್ಯವಾಗಿಪ್ಪ ನೀರ ಬೊಂಬೆ. ''ನೀರಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯ'' ಎಂದು ಮುಕ್ತಾಯಕ್ಕ ನೀರದೇವರನ್ನು ಸ್ಮರಿಸಿದ್ದಾಳೆ. ನಿತ್ಯವಾಗಿಪ್ಪ ಶ್ವೇತಜಲದಲ್ಲಿಪ್ಪ ರೀತಿ ಸಂಖ್ಯೆಯನರಿದು, ಧಾತುವನು ಅತಿಗಳೆದು, ತೂಗಿ ತೂಗಿ ಆಡಿವೋದಾತನು ಮೀರಿ ಕಂಡನು ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಸ್ಮರಿಸಿದ್ದಾರೆ.

ತನುವಿನ ಲೋಕವು, ನೀರ್ಲೋಕವೆಂದು ಶರಣರಿಂದ ಕರೆಯಿಸಿಕೊಂಡಿದೆ. ಕೂಗಿ ಕೂಗಿ ಆಡಿವೋದಾತನು ಅಲ್ಲಿಯೇ ಇದ್ದಾನೆ. ನೀರ್ಲೋಕವನ್ನು ನಿರ್ನಾಮ ಮಾಡಿದ ನಿತ್ಯನು ಅವನು. ನಾಮವನ್ನು ಆವರಿಸಿದ ತನು ತನ್ನ ನಿಜನಾಮವನ್ನು ಕಳೆದುಕೊಂಡು, ತಾನಿಟ್ಟುಕೊಂಡ ನಾಮಕ್ಕಾಗಿ ಹಗಲಿರುಳೆನ್ನದೆ ದುಡಿಯುತ್ತಲಿದೆ. ಆ ನಾಮವನ್ನು ಕಿತ್ತೆಸೆದು, ನಾಮರಹಿತ ವೃಕ್ಷವನ್ನಾಗಿಸಿದನು. ಅದರಲ್ಲಿದ್ದ ನಿತ್ಯನು ಸತ್ಯನೂ ಆದಂತಹ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು ತೋರಿದನು ಸಾಯುಜ್ಯ ಪದವ ಮೀರಿ.

**850**

**ಮಂಗಳದ ಸಂಗ ಅಂಗಕ್ಕೆ ಮಚ್ಚಿದುದ**
**ಹಿಂಗಿ ಹೇಳಲ್ಕಿದಕೆ ಜಿಹ್ವೆಯುಂಟೆ?**
**ಈರಾರು ಸುಖಗಳನು ಮೇಲಾದ ಮಧುರವನು**
**ಓರಂತೆ ಉಂಡುದಕೆ ಪ್ರಳಯವುಂಟೆ?**
**ನಿಗಮಂಗಳರಿಯದಿಹ ಅಗಣಿತ ಮೆಟ್ಟದಾ**
**ಶ್ರುತಿಯ ತಪ್ಪಲಲಿರ್ದ ನಿತ್ಯತೃಪ್ತಾ**
**ಮೂರಾರು ಈರಾರು ತೋರಿರ್ಪ ನಿಶ್ಚಯದ**
**ಆರರಿಂದಂ ಮೇಲೆ ಸಂಯೋಗವು**
**ಸ್ವಾನುಭಾವದ ದೀಕ್ಷೆ ತಾನು ತನಗಳವಟ್ಟು**
**ಹೇಳದೆ ಹೋದನಾ ಇರ್ದ ಮನೆಗೆ**
**ಮೂರನು ಮುಟ್ಟದೆ ಆರನು ತಟ್ಟದೆ**
**ಮೀರಿ ಉರವಣಿಸಿದನು ಸಾಯುಜ್ಯದಾ**
**ಫಲಪದವನತಿಗಳೆದು ನಿಗಮಕ್ಕಭೇದ್ಯನ ಕಂಡೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗವನ್ನು ಆವರಿಸಿದ ಮನ, ಅಂಗದಲ್ಲಿಯೇ ಸಂಗಮವಾದ ಪರಮಾತ್ಮನನ್ನು ಮೆಚ್ಚಿ, ಆತನೊಂದಿಗೆ ಪರಮಸುಖ ಪಡುತ್ತಿರುವಾಗ, ಅಂಗಕ್ಕೆ ಆದ ಆನಂದವನ್ನು ಹೇಳಲಿಕ್ಕೆ ಅದಕ್ಕೇನು ನಾಲಿಗೆಯುಂಟೆ? ಅದು ಈರಾರು ಸುಖಗಳನ್ನು ಅದರ ಮಧುರವನ್ನು ಉಂಡುದಕ್ಕೆ ಪ್ರಳಯ ಉಂಟೆ? ಒಂದೆಡೆ ಅರಿಷಡ್ವರ್ಗಗಳು, ಆರು ಸುಖಗಳು, ಅದರ ಬೆನ್ನ ಹಿಂದೆಯ ಇರುವ ಮತ್ತಾರು ಸುಖಗಳು ಇದನ್ನು ಆಗಮ ನಿಗಮಂಗಳ ಮೂಲಕ ಅರಿಯಲು ಸಾಧ್ಯವಿಲ್ಲ. ಶ್ರುತಿಯ ಪಕ್ಕದಲ್ಲಿದ್ದ ನಿತ್ಯ ತೃಪ್ತನು ಆತ.

ರಾಜಸ, ತಾಮಸ, ಸಾತ್ವಿಕ ಮೂರು ಗುಣಗಳನ್ನು ಅರಿಷಡ್ವರ್ಗದ ಆರು ಸುಖ-ದುಃಖಗಳನ್ನು ತೋರಿ ಷಟಸ್ಥಲಗಳ ಮೇಲೆ ಹೂಡುವ ಸಂಯೋಗವೇ ಸ್ವಾನುಭಾವದ ದೀಕ್ಷೆ

ತಾನು ತನಗಳವಟ್ಟು ಹೇಳದೆ ಹೋದನು ತಾನಿರ್ದ ಮನೆಗೆ.

ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಗುಣಗಳನ್ನು ಮುಟ್ಟದೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವೆಂಬ ಆರನ್ನು ತಟ್ಟದೆ ಇವುಗಳನ್ನು ಮೀರಿ ಉರವಣಿಸಿದನು ಸಾಯುಜ್ಯವಾ. ಅದರ ಸಂಗ ಸುಖವನ್ನು ಏನೆಂದು ಹೇಳುವುದು ಫಲ-ಪದಗಳನ್ನು ಅತಿಗಳೆದು ನಿಗಮಕ್ಕೆ ಆವೇಧನ ಕಂಡೆ ಕಪಿಲಸಿದ್ಧ ಮಲ್ಲಿಕಾರ್ಜುನ.

**851**

**ಮಂಗಳಾಂಗನ ಬೆಳಗು ಹೊಂಗದಿಹ ಭೇದವನು**
**ಜಂಗಮಸ್ಥಾವರದೊಳೇಕವೆಂದು**
**ಲಿಂಗಸಂಗದಲ್ಲಿದ್ದ ಮಂಗಳ ಪ್ರಸಾದ**
**ತ್ರೈಲಿಂಗ ಮೂಲನು ಶಿಷ್ಯ ಕಪಿಲಸಿದ್ಧ ಮಲ್ಲಿಕಾರ್ಜನಾ.**

ಅಂಗ ಸ್ಥಾವರವಾದರೆ, ಅಂಗದಲ್ಲಿಯೇ ಸಂಗಮವಾದ ಜಂಗಮ ಚೇತನ. ಆತ ಮಂಗಳಾಂಗ, ಸದಾ ಸುಂದರ, ರೂಹಿಲ್ಲದ ಚೆಲುವನು ಆತ. ಅಂಗದಲ್ಲಿಯೇ ಲಿಂಗವಿದ್ದು ಅಂಗವನ್ನು ಆವರಿಸಿದ ಮನ ಲಿಂಗವನ್ನು ಅರಿತಾಗಲೇ ಮನಕ್ಕೆ ಮಂಗಳ ಪ್ರಸಾದವಾಗುತ್ತದೆ. ಅಂಗವನ್ನು ಆವರಿಸಿದ ಮನ ಶಿಷ್ಯನಾದರೆ, ಅಂಗದಲ್ಲಿಯೇ ಸಂಗಮವಾದ ಗುರುದೇವನೆ ಶಿಷ್ಯನಿಗೆ ಗುರುವಾಗುತ್ತಾನೆ. ಗುರುಶಿಷ್ಯರಿಬ್ಬರು ಅಂಗವೆಂಬ ಸ್ಥಾವರವನ್ನೇ ಮನೆಯಾಗಿಸಿಕೊಂಡು ಆ ಮನೆಯಲ್ಲಿ ವಾಸಕ್ಕಿದ್ದಾರೆ. ಗುರು-ಶಿಷ್ಯ ಮತ್ತು ಅಂಗ ಈ ಮೂರು ತ್ರೈಲಿಂಗಗಳಾಗಿವೆ. ಮಂಗಳಾಂಗನ ಬೆಳಕು ಸ್ಥಾವರವನ್ನು ಏಕಮಾಡಿಕೊಂಡು ಲಿಂಗ ಸಂಗದಲ್ಲಿ ಇದ್ದ ಮಂಗಳ ಪ್ರಸಾದ ತ್ರೈಲಿಂಗ ಮೂಲನು ಶಿಷ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಶಿಷ್ಯ ತನುವುಳ್ಳವನಲ್ಲ, ಗುರುದೇವನು ತನುವುಳ್ಳವನಲ್ಲ ಇವರಿಬ್ಬರ ಸಂಗಮವೇ ಮಂಗಳಾಂಗನ ಬೆಳಕಾಗಿ ಅಂಗವನ್ನು ಸೋಂಕದೆ ಅಂಗವನ್ನು ಲಿಂಗಾಂಗವನ್ನಾಗಿಸಿ ಅಂಗವನ್ನು ಬೆಳಗುತ್ತಲಿದೆ.

**852**

**ಮಂಗಳಾತ್ಮನೆ ನಿನ್ನ ಮಂಗಳದ ಮೂರ್ತಿಯ**
**ಕಂಗಳಲಿ ನೋಡುವ ಸುಕೃತವಿತ್ತು,**
**ಹಿಂಗಿ ಹಿಂಗದ ನಿತ್ಯ ಸಂಗಸುಖಕಾನಾದೆ**
**ಮಂಗಳಾತ್ಮನೆ ಕಪಿಲಸಿದ್ಧ ಮಲ್ಲೇಶ್ವರಾ.**

ಅಂಗದಲ್ಲಿ ಮಂಗಳಾತ್ಮನು ಸಂಗಮವಾಗಿದ್ದಾನೆ. ಅಂಗವನ್ನು ಆವರಿಸಿದ ಮನ ಮಂಗಳಾತ್ಮನ ಸಂಗ ಮಾಡಿ ಆ ಸಂಗ ಸುಖದಿಂದ ಅಂಗವನ್ನು ನೋಡಲು ಸಕಲ ಅಂಗಗಳು ಮಂಗಳ ಮೂರ್ತಿಯಾಗಿ ಕಂಗಳಿಗೆ ದರುಶನವಿತ್ತು, ಪರಮ ಸುಖವಾಯಿತು. ಇದೊಂದು ಅಂಗದ ಸುಕೃತ, ಹಿಂಗಿ ಹಿಂಗದ ನಿತ್ಯ ಸುಖ. ಆ ಸಂಗ ಸುಖಕ್ಕೆ ಮಂಗಳಾತ್ಮನೆ ಕಾರಣನೆಂದು ಮನ ಆ ಮಂಗಳಾತ್ಮನೊಂದಿಗೆ ಸಂಗ ಮಾಡಿ ಪರಮ ಸುಖವನ್ನು ಅನುಭವಿಸಿತು.

ಅಂಗ ಸಾಮಾನ್ಯವಲ್ಲ, ಅದು ಮಂಗಳಾತ್ಮನಾದ ಮಂಗಳ ಮೂರ್ತಿಯೇ ಇದ್ದ ಲಾಂಛನ.

ಕಂಗಳಿಗೆ ನೋಡುವ ಭಾಗ್ಯಬೇಕು, ಅದಕ್ಕೆ ಸುಕೃತವು ಇರಬೇಕು. ಅಂದಾಗ ಮಾತ್ರ ಕಂಗಳಿಗೆ ಸರ್ವಾಂಗದಲ್ಲಿ ಮಂಗಳಮೂರ್ತಿಯ ದರ್ಶನವಾಗುತ್ತದೆ. ಹಿಂಗಿ ಹಿಂಗದ ನಿತ್ಯ ಸಂಗ ಸುಖಕ್ಕೆ ಭಾಜನನಾಗುತ್ತಾನೆ. ಕಪಿಲಸಿದ್ಧ ಮಲ್ಲೇಶ್ವರನೇ ತಾನಾಗುತ್ತಾನೆ.

**853**

**ಮಚ್ಚಿದೆ ಮಚ್ಚಿದೆ ನಲ್ಲನೆ, ಅಯ್ಯಾ;**
**ನಿನ್ನ ಮಚ್ಚಿ ನಾನು ಅಗಲಲಾರೆ.**
**ಮಚ್ಚಿದ ಮನಕಿನ್ನು ಮಂಗಳವನೀಯಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ನಿನ್ನ ಬೆಳಕಿನ ಕಿರಣಗಳಿಂದ ಸೃಷ್ಟಿಯಾದ ನೆರಳು ನಾನು. ನನ್ನದೇ ಆದ ಕತ್ತಲೆಯ ಅಜ್ಞಾನಲೋಕವನ್ನು ಮೆಚ್ಚಿ ಅದರ ಸುಖವನ್ನು ಉಂಡೆ. ಅದು ಸುಖವೆಂದು ತಿಳಿದುಕೊಂಡಿದ್ದೆ. ಆದರೆ ಅದು ಸುಖವಲ್ಲ; ದುಃಖಕ್ಕೆ ಕರೆದುಕೊಂಡು ಹೋಗುವ ದುಃಖದ ಲೇಪದ ಸುಖ. ಸಕ್ಕರೆ ಲೇಪದ ಸುಖವೆಂದು ನನಗೆ ನಿನ್ನಿಂದಲೇ ತಿಳಿಯಿತು ನಲ್ಲನೆ.

ಅನಂತ ಕಾಲದವರೆಗೆ ಕಾಯವೆಂಬ ಕೈಲಾಸದಲ್ಲಿ ನೀನು ನನಗಾಗಿ ಕಾದೆ. ನಾನು ತಪ್ಪು ಮಾಡಿದಾಗಲೆಲ್ಲಾ ನನ್ನ ತಪ್ಪನ್ನು ಸಹಿಸಿಕೊಂಡು ನೇವರಿಸಿದೆ. ನನ್ನ ಹಾದರ ಅನಂತ. ನಿನ್ನ ಸೈರಣೆ ಮಾತ್ರ ಲೆಕ್ಕಕ್ಕಿಲ್ಲ, ಅದೆಷ್ಟು ತಾಳ್ಮೆ ನಿನ್ನದು? ಆದರೂ ಕೈ ಮಾಡಿ ಕರೆಯುವ ನಲ್ಲನನ್ನು ಮೆಚ್ಚಿದೆ ಮೆಚ್ಚಿದೆ, ನಲ್ಲನೆ, ಅಯ್ಯಾ; ನಿನ್ನ ಮೆಚ್ಚಿದ ನಾನು ನಿನ್ನನ್ನು ಬಿಟ್ಟು ಅಗಲಲಾರೆ.

ಮೆಚ್ಚಿದ ಮನಕ್ಕಿನ್ನು ಮಂಗಳವನು ಈಯಯ್ಯಾ. ನನ್ನನ್ನು ನಿನ್ನಂತೆ ಮಾಡಿಕೊ ನನ್ನಯ್ಯ. ನಾನು ನಿನಗಾಗಿಯೇ ಹುಟ್ಟಿದ್ದೇನೆ. ನನ್ನನ್ನು ಬರಸೆಳೆದುಕೊಂಡು ನಿನ್ನಂತೆ ಮಾಡಿಕೊ. ಅರ್ಧನಾರೀಶ್ವರನಾಗು ನಲ್ಲನೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ.

**854**

**ಮಜ್ಜನಕ್ಕೆರೆಯ ಹೇಳಿದಡೆ ನಾನೇನ ಮಜ್ಜನಕ್ಕೆರೆವೆನು?**
**ಒಳಗೊಂದು ಪ್ರಾಣಲಿಂಗವ ಕಂಡೆನಯ್ಯಾ.**
**ಹೊರಗಣ ಹೂವ ಕೊಯ್ದು, ಹೊರಗನೆ ಮಜ್ಜನಕ್ಕೆರೆವರು;**
**ಉಪಚಾರದ ನೇಮವ ನಾನೊಲ್ಲೆನಯ್ಯಾ.**
**ಸ್ವಾನುಭಾವವನರಿಯದವನೇತರ ಸುಖಿಯೊ?**
**ಕಪಿಲಸಿದ್ಧ ಮಲ್ಲಿನಾಥನನೊಲ್ಲನಯ್ಯಾ.**

ನೀವು ಜಗದಗಲ ಮುಗಿಲಗಲ. ಮಿಗೆಯಗಲ; ಎಮ್ಮಗಲ. ಪಾತಾಳದಿಂದ ಅತ್ತತ್ತ ನಿಮ್ಮ ಶ್ರೀಚರಣ. ಬ್ರಹ್ಮಾಂಡದಿಂದಲೂ ಅತ್ತತ್ತ ನಿಮ್ಮ ಶ್ರೀಮುಕುಟ. ಅಗಮ್ಯರು ನೀವು. ಅಪ್ರಮಾಣ ಅಪ್ರತಿಮರು ನೀವು. ಅಂತಹ ನಿಮಗೆ ನಾನು ಮಜ್ಜನಕ್ಕೆರೆಯಲು ಸಾಧ್ಯವೆ?

ಲೋಕ ತನಗೆ ತಿಳಿದಂತೆ ನಿನ್ನನ್ನು ಕಲ್ಲಲ್ಲಿ ಕೆತ್ತಬಹುದೆ? ಕೆತ್ತಿದ ಕಲ್ಲಿಗೆ ಮಜ್ಜನಕ್ಕೆರೆದು ನಿನಗೆ ಅಭಿಷೇಕ ಮಾಡಿದೆನೆಂದು ಭ್ರಮೆಯಿಂದ ಉಬ್ಬಿಕೊಬ್ಬಿ ನುಡಿಯಬಹುದೆ? ನನಗೆ ಇದು ಸಾಧ್ಯವಿಲ್ಲ.

ಗುರುದೇವ ನಿನ್ನ ಇರುವಿಕೆಯನ್ನು ನನಗೆ ತೋರಿಸಿದ್ದಾನೆ. ಆತ ನಿನ್ನನ್ನು ಕಂಡುಂಡ ಸ್ವಾನುಭಾವಿ. ಹಾಗೆಂದು ನಾನು ಖಚಿತವಾಗಿ ತಿಳಿದ ಕಾರಣ ಲೋಕದಂತೆ ನಾನು ನಿನ್ನನ್ನು ಪೂಜಿಸಲಾರೆ.

ಲೋಕದ ಜನ ಹೊರಗಣ ಹೂವ ಕೊಯ್ದು ಹೊರಗನೆ ಮಜ್ಜನಕ್ಕೆರೆವರು. ಅವರು ಮಾಡುವ ಉಪಚಾರದ ನೇಮುವ ನಾನೊಲ್ಲೆನಯ್ಯಾ.

ಎನ್ನ ಅಂಗದೊಳಗೊಂದು ಪ್ರಾಣಲಿಂಗವನು ಕಂಡೆನಯ್ಯಾ. ಲಿಂಗಯ್ಯನೇ ನೀನೆಂದು ಸ್ವಾನುಭಾವದಿಂದ ತಿಳಿದು ಎನ್ನಂಗಕ್ಕೆ ಮಜ್ಜನಕ್ಕೆರೆದೆನಯ್ಯ.

ಎನ್ನಂಗದಲ್ಲಿ ನಿನಗೆ ನಿತ್ಯ ಮಜ್ಜನವ ಮಾಡಿದೆನಯ್ಯಾ. ಪುಷ್ಪವ ಕೊಯ್ದು ಎನ್ನ ತುರುಬಿನಲ್ಲಿರುವ ನಿನಗೆ ಧರಿಸಿದೆನಯ್ಯಾ. ಎನ್ನ ಕಣ್ಣಲ್ಲಿರುವ ನಿನಗೆ ಬ್ರಹ್ಮಾಂಡದಲ್ಲಿರುವ ನಿಸರ್ಗದ ಸೌಂದರ್ಯವನ್ನು ಅರ್ಪಿಸಿದೆನಯ್ಯಾ. ನನ್ನ ಜಿಹ್ವೆಯಲ್ಲಿರುವ ನಿನಗೆ ನಾನಾ ವಿಧದ ಷಡ್ರಸಾನ್ನದ ನೈವೇದ್ಯವನ್ನು ಅರ್ಪಿಸಿದೆನಯ್ಯಾ. ನನ್ನ ಮೂಗಿನಲ್ಲಿರುವ ನಿನಗೆ ನಾನಾ ವಿಧದ ಪುಷ್ಪ ಪರಿಮಳದ ಧೂಪವನ್ನು ಸಮರ್ಪಿಸಿದೆನಯ್ಯಾ. ನನ್ನ ಕಿವಿಯಲ್ಲಿರುವ ನಿನಗೆ ನಾನಾ ವಿಧದ ಘಂಟಾನಾದವನ್ನು ಮಾಡಿದೆನಯ್ಯಾ. ನನ್ನ ಚರ್ಮದಲ್ಲಿರುವ ನಿನಗೆ ಭಸ್ಮ ಶ್ರೀಗಂಧಗಳನ್ನು ಧರಿಸಿ ಸುಖಿಸಿದೆನಯ್ಯಾ.

ಹೊರಗಣ ಹೂವ ಕೊಯ್ದು, ಹೊರಗನೆ ಮಜ್ಜನಕ್ಕೆರೆದು ಉಪಚಾರವ ಮಾಡುವ ನೇಮುವನು ನಾನೊಲ್ಲೆನಯ್ಯಾ. ಸ್ವಾನುಭಾವವನರಿಯದವನು ಏತರ ಸುಖಿಯೊ? ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಅಂಥವರನು ಒಲ್ಲನಯ್ಯಾ.

**855**

**ಮಠದೊಳಗೆ ಮೂವರು ಮಠದ ಹೊರಗೈವರು.**
**ಕುಟಿಲವನು ಬೆಳೆಸುತ್ತ ಅನುಪಮದಾನಿ**
**ನಿಟಿಲಾಕ್ಷ ಸೀಮೆಯನು ದಾರಿಯುಯೆಂದೀಗ**
**ಕುಟಿಲವೆ ತಮಗೊಂದು ಅಂಗವಾಗೆ**
**ಅಟಮಟವ ತೋರಿ ತಾನೆಯಗಲಿದ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು.**

ಅಂಗದಲ್ಲಿ ಅರಿವಿನ ಲಿಂಗಯ್ಯನಿದ್ದರೂ ಮನ ಅವನನ್ನು ಪೂಜಿಸಿ ಅವನ ಚರಣ ಕಮಲಗಳಿಗೆ ಶರಣು ಹೋಗಿ ಶರಣಾಗತನಾಗಿ ಶರಣನಾಗದೆ ಸಾತ್ವಿಕ ವೇಷ, ರಾಜಸ ವೇಷ, ತಾಮಸಿಗನ ವೇಷ ಹಾಕಿ, ಮೂರು ಪಾತ್ರಗಳ ಮೂಲಕ ಅರಿವಿನ ಲಿಂಗಯ್ಯನಿದ್ದ ಅಂಗದೊಂದಿಗೆ ಸುಖಿಸುತ್ತದೆ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮವೆಂಬ ಪಂಚೇಂದ್ರಿಯಗಳ ಮೂಲಕ ಹಾದರ ಮಾಡುತ್ತಲಿದೆ. ಕುಟಿಲ ವಿದ್ಯೆಯನ್ನು ಕಲಿತು ಸರ್ವಾಂಗದಲ್ಲಿರುವ ಅನುಪಮ ದಾನಿ ಅರಿವಿನ ಲಿಂಗಯ್ಯನನ್ನೇ ಮರೆತು ಹೋಗಿದೆ. ಹೀಗಾಗಿ ಅಂಗದಲ್ಲಿಯೇ ಸಂಗಮವಾದ ಅನುಪಮದಾನಿ ನಿಟಿಲಾಕ್ಷನ ದಾರಿಯೇ ಬೇರೆಯಾಗಿ ಅಂಗವನ್ನು ತಾಗದೆ ಲಿಂಗಯ್ಯನ ಅಂಗವಾಗಿ ಅಂಗದಲ್ಲಿಯೇ ಉಳಿದ. ಅಂಗಕ್ಕೆ ಆಧಾರವಾಗಿ ಅಂಗವನ್ನು ಬೆಳಗುವುದನ್ನು ಬಿಡಲಿಲ್ಲ.

ಮಠದೊಳಗೆ ಮೂವರು, ಮಠದ ಹೊರಗೆ ಐವರಿದ್ದ ಕುಟಿಲದ ಅಂಗವೇ ಬೇರೆಯಾಯಿತು. ಅಟಮಟವ ತೋರಿ ತಾನೇ ಅಗಲಿದ ಕಪಿಲಸಿದ್ಧ ಮಲ್ಲಿಕಾರ್ಜುನ.

ಕಾಮ ಕ್ರೋಧಾದಿ ಅರಿಷಡ್ವರ್ಗಗಳನ್ನು ತೋರಿದ. ಸಪ್ತವ್ಯಸನಗಳನ್ನು ತೋರಿದ. ಅಷ್ಟಮದಗಳನ್ನು ತೋರಿದ. ಸಾತ್ವಿಕ ರಾಜಸ ತಾಮಸಗುಣಗಳನ್ನು ಅಂಗದಲ್ಲಿಟ್ಟು ಹೊಲಿದು ಕುಟಿಲ ಅಂಗವನ್ನು ಬೇರ್ಪಡಿಸಿದ.

ಕುಟಿಲಾಂಗ ಒಂದು, ಲಿಂಗಯ್ಯನ ಅಂಗ ಒಂದು, ಇವೆರಡನ್ನು ಹೊತ್ತುಕೊಂಡ ಸ್ಥೂಲಾಂಗ ಒಂದು ಎಂದು ಅಂಗದಲ್ಲಿಯೇ ಇದ್ದ ಲಿಂಗಯ್ಯ ಅಂಗವನ್ನು ಬೇರ್ಪಡಿಸಿ ತಾನೇ ಅಗಲಿದ; ಕಪಿಲಸಿದ್ಧ ಮಲ್ಲಿಕಾರ್ಜುನ.

**856**

**ಮಡದಿಯರೈವರ ಗಂಡರ ಪಿಡಿದೊಯ್ದರು ಕಳ್ಳರು.**
**ಮಡದಿ ಮೊರೆಯಿಟ್ಟೈಹೆನೆಂದು ಅರಸಿನ ಗ್ರಾಮಕ್ಕೆ ಬರಲು,**
**ಅರಸು ಅಂತಃಪುರದೊಳಗೈದಾನೆ.**
**ಅರಸನ ಕೂಡೆ ಏಕಾಂತವ ಮಾಡುವ**
**ಪ್ರಧಾನಿಯ ಕಂಡು ಮೊರೆಯಿಟ್ಟಡೆ,**
**ಪ್ರಧಾನಿ ಪಾಲಿಸುತ್ತಿರ್ದ ಬಗೆಯ ನೋಡಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ .**

ಓದುಗರಿಗೆ ಕಾಯದ ರಹಸ್ಯ ತಿಳಿಯಲೆಂದು ಸಿದ್ಧರಾಮ ಶಿವಯೋಗಿಗಳು ನಾನಾ ಸೂತ್ರಗಳ ಮೂಲಕ ವಿವರಿಸಿದ್ದಾರೆ. ಕಾಯದ ರಹಸ್ಯವನ್ನು ಬಯಲು ಮಾಡಿ ಓದುಗರಿಗೆ ಉಣಿಸಿದ್ದಾರೆ. ತಾಯಿ ಹೃದಯ ಅವರದು.

ಮಡದಿ ಒಬ್ಬಳು ಐವರು ಗಂಡಂದಿರು. ಅವರನ್ನು ಕಳ್ಳರು ಹಿಡಿದುಕೊಂಡು ಹೋದರು. ಮಡದಿ ಗಂಡಂದಿರಿಗಾಗಿ ರೋಧನೆ ಮಾಡುತ್ತಾ ಅರಸನಿದ್ದ ಗ್ರಾಮಕ್ಕೆ ಬಂದಳು. ಅರಸ ಅಂತಃಪುರದಲ್ಲಿದ್ದ. ಅರಸನ ಕೂಡ ಏಕಾಂತದಲ್ಲಿದ್ದ ಪ್ರಧಾನಿಯ ಕಂಡು ಮಡದಿ ಮೊರೆಯಿಟ್ಟಳು. ಪ್ರಧಾನಿ ಪಾಲಿಸುತ್ತಿದ್ದ ಬಗೆಯ ನೋಡಾ ಕಪಿಲಸಿದ್ಧ ಮಲ್ಲಿನಾಥಯ್ಯ .

ದ್ರೌಪದಿ ಒಬ್ಬಳೆ. ಆಕೆಗೆ ಗಂಡಂದಿರು ಐದು. ಧರ್ಮ ಭೀಮ ಅರ್ಜುನ ನಕುಲ ಸಹದೇವರು. ಹೆಂಡತಿ ದ್ರೌಪದಿ ಸಾತ್ವಿಕ ಗಂಡಂದಿರೊಂದಿಗೆ ಸಂಸಾರದಲ್ಲಿ ನಿರತಳಾಗಿದ್ದಳು. ಸಾತ್ವಿಕರು ರಾಜಸರಾಗಿ ತಮ್ಮ ರಾಜಗುಣಗಳನ್ನು ಬೀರಿ ಲೆತ್ತವನ್ನು ಆಡಿದರು. ದುರ್ಯೋಧನಾದಿ ನೂರಾ ಒಂದು ದುಷ್ಟರು ಐವರನ್ನು ಹಿಡಿದೊಯ್ದರು.

ದ್ರೌಪದಿ ಅರಸನೊಂದಿಗೆ ಮೊರೆಯಿಟ್ಟಳು. ಪ್ರಧಾನಿ ಅರಸನೊಂದಿಗೆ ಏಕಾಂತದಲ್ಲಿದ್ದ. ದ್ರೌಪದಿ ಪ್ರಧಾನಿಯೊಂದಿಗೆ ಮಾತನಾಡಬೇಕು. ಪ್ರಧಾನಿ ರಾಜನೊಂದಿಗೆ ಇದ್ದಾನೆ.

ಮನವೆಂಬ ದ್ರೌಪದಿ ಅರಸ ಪ್ರಧಾನಿ ಐವರು ಗಂಡರನ್ನು ದೂರತಳ್ಳಿ ಕೃಷ್ಣನಿಗೆ ಮೊರೆಯಿಟ್ಟರೆ ಶ್ರೀಕೃಷ್ಣ ದ್ರೌಪದಿಯನ್ನು ತನ್ನಂತೆ ಮಾಡಿಕೊಳ್ಳುತ್ತಾನೆ. ಇದು ಸಾಧ್ಯವಾಗದ ಮಾತು. ದ್ರೌಪದಿ ತನ್ನ ಬೆತ್ತಲು ಮುಚ್ಚಲು ಸೀರೆಯನ್ನು ಮಾತ್ರ ಕೇಳಿದಳು. ಶ್ರೀಕೃಷ್ಣ ಸೀರೆಯನಿತ್ತು ತಥಾಸ್ತು ಎಂದ.

ಶ್ರೀಕೃಷ್ಣನೇ ಬೇಕೆಂದು ಬೇಡುವವರಿಲ್ಲದೆ ಸಕಲ ಅಂಗಗಳು ಬಡವಾಗಿವೆ.

**857**

**ಮತ್ತೆ ಮತ್ತೆ ತನ್ನ ಚಿತ್ತ ಮುಟ್ಟದಲ್ಲಿಗೆ**

**ಹೊತ್ತು ಹೊತ್ತು ತೊಳಲುತಿರ್ದಳವ್ವೆ.**
**ಚಿತ್ತ ಪರಿಪಕ್ವವಾದಡೆ ಅವನಅಂಗದಲ್ಲಿ ಭೇದಿಸಿಹೆನೆಂದು**
**ಅಂಗ ಅನ್ಯಂಗವಾಗದ ಮುನ್ನ,**
**ಲಿಂಗ ನೀನೇಯಾದಳು ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನನವ್ವೆ.**

ಚಿತ್ತ ಮುಟ್ಟಿದ ವಸ್ತುಗಳ ಸತ್ಯ ಮನಕ್ಕೆ ಕಾಣುವುದಿಲ್ಲ. ಚಿತ್ತದ ಬೇಡಿಕೆ ಈಡೇರಿಸುವ ಕೆಲಸವನ್ನು ತನುವಿನ ಮೂಲಕ ಮನವೆಂಬ ಅವ್ವೆ ಮಾಡುತ್ತಾಳೆ. ತನು ಅಪವಾದಕ್ಕೆ ಗುರಿಯಾಗುತ್ತದೆ.

ಚಿತ್ತದ ಮಾತನ್ನು ಹೊತ್ತು ಹೊತ್ತು ತಿರುಗುವ ಮನವೆಂಬ ಅವ್ವೆ, ಚಿತ್ತದ ಪರಿಪಕ್ವತೆಗಾಗಿ ಕಾಯುತ್ತಿದ್ದಾಳೆ. ಚಿತ್ತ ಸುಚಿತ್ತವಾಗಿ ಪರಿಪಕ್ವವಾದರೆ ಕೂಡಲೇ ಭೇದಿಸಿಹೆನೆಂದು ಅರಿವೆಂಬ ಗುರುದೇವನ ಅಂಗದಲ್ಲಿಯೇ ಕಾಯುತ್ತಿದ್ದಾಳೆ; ಅಂಗ ಅನ್ಯಂಗವಾಗದ ಮುನ್ನ, ಲಿಂಗ ನೀನೇಯಾದಳು ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನನ ಅವ್ವೆ.

**858**

**ಮದನಂಗೆ ಮೋಹಿಸುವ ಮನವ ಸುಟ್ಟ ಪರಿಯ**
**ಪದುಳದಿಂ ಬಲ್ಲವರಾರು ಹೇಳಾ.**
**ಕರುಣಾಕರನೆ, ಕಪಿಲಸಿದ್ಧ ಮಲ್ಲೇಶ**
**ನೀ ಕರುಣಿಸಿದವರಿಗಲ್ಲದೇ ಇಲ್ಲವೈ.**
**ಪರಮಪಾವನರವರು ಪರಮ ಮಾಹೇಶ್ವರರು,**
**ಪರುಕಿಸೆ ನೀನೆಂಬೆ ಕಾಣಾ, ಎನ್ನ ತಂದೆ.**

ಮನ್ಮಥ ತನ್ನ ಕಾಮವಾಸನೆಯ ಗಾಳಿಯನ್ನು ಪರಮಾತ್ಮನ ಮೇಲೆ ಬೀರಲು ಹೂ ಬಾಣ ಹೂಡಿದನು. ಮನ್ಮಥನಿಗೆ ಪರಮಾತ್ಮನೊಂದಿಗೆ ಕಾಮಕೇಳಿಯಾಡುವ ಆಸೆಯಾಯಿತು.

ಕಾಯದಲ್ಲಿ ಕಾಮವಾಸನೆಯುಳ್ಳ ಮನ್ಮಥನ ಕಾಯವೊಂದು ಇದೆ. ಸ್ಥೂಲ ಕಾಯವನ್ನು ಮನ್ಮಥನ ಕಾಯ ಆವರಿಸಿದೆ. ಸ್ಥೂಲಕಾಯದಲ್ಲಿ ಜ್ಞಾನಕಾಯವೊಂದು ಇದೆ. ಅದೇ ಪರಮಾತ್ಮನಕಾಯ. ಆ ಕಾಯದ ಮೇಲೆ ಮನ್ಮಥನ ಮೋಹದ ಹೂ ಬಾಣ ತಾಗಿದ ಕೂಡಲೇ ಜ್ಞಾನಾಗ್ನಿಗೆ ತುತ್ತಾಗಿ ಮನ್ಮಥ ಸುಟ್ಟು ಹೋದ.

ಮೋಹಿಸುವ ಮದನನ ಮನವ ಸುಟ್ಟ ಬೂದಿಯನ್ನು ಧರಿಸಿದ ಪರಮಾತ್ಮ ಭಸ್ಮಧಾರಿಯೆಂಬ ಹೆಸರು ಪಡೆದ. ಇದನ್ನು ಹದುಳದಿಂದ ಬಲ್ಲವರು ಯಾರು ಹೇಳಾ?

ಕರುಣಾಕರನೆ ನೀ ಕರುಣಿಸಿದವರಿಗಲ್ಲದೇ ಇಲ್ಲವೈ :

ಪರಮಾತ್ಮನ ಮೇಲೆ ಮದನನಿಗೆ ಮೋಹವುಂಟಾಗಿ ಮನವ ಸುಟ್ಟುಕೊಳ್ಳುವ ಬಯಕೆ ಸಕಲ ಮನಗಳಿಗೂ ಆಗಬೇಕಲ್ಲ? ಅದು ಕೂಡಾ ಅವನ ಕರುಣೆ ಇರಬೇಕು. ಅವನು ಕರುಣಿಸಿದವರಿಗಲ್ಲದೆ ಅವನ ಮೇಲೆ ಮನಕ್ಕೆ ಮೋಹವಾಗದು.

ಪರಮಾತ್ಮನ ಮೇಲೆ ಮೋಹ ಮಾಡಿದ ಮದನನೇ ಧನ್ಯ. ಅವನ ಮನ ಸುಟ್ಟು ಪರಮಾತ್ಮನಿಗೆ ಧರಿಸುವ ಭಸ್ಮವಾಗುತ್ತದೆ. ಅವರು ಪರಮ ಪಾವನರು. ಪರಮ ಮಾಹೇಶ್ವರರು ಪರೀಕ್ಷಿಸಿ ನೀನೆಂಬೆ ಕಾಣಾ, ಎನ್ನ ತಂದೆ ಕಪಿಲಸಿದ್ಧ ಮಲ್ಲೇಶ್ವರಾ.

859

**ಮದಹಸ್ತಿ ಮದಹಸ್ತಿಯ ಹಿಡಿವುದಲ್ಲದೆ,**
**ಮತ್ತೊಂದು ರೂಪ ಹಿಡಿವುದೆ?**
**ಆ ರೂಪಿಂಗಾ ರೂಪು ಹಿಡಿವುದಲ್ಲದೆ,**
**ಮತ್ತೊಂದು ರೂಪ ಹಿಡಿವುದೆ?**
**ರೂಪಿಲ್ಲದಾತನ ರೂಪಿಸಿ ಹಿಡಿವೆನು**
**ಕಪಿಲಸಿದ್ಧ ಮಲ್ಲಿನಾಥಯ್ಯನ.**

ಮದಿಸಿದ ಆನೆ ಮದಿಸಿದ ಆನೆಯನ್ನು ಹಿಡಿವುದಲ್ಲದೆ ಮತ್ತೊಂದು ರೂಪ ಹಿಡಿಯುವುದಿಲ್ಲ. ಹಾಗೆಯೇ ಮದಭರಿತವಾದ ಮನವೆಂಬ ನಿರೂಪು ಮದಭರಿತವಾದ ಜ್ಞಾನದ ನಿರೂಪವೆಂಬ ನಲ್ಲನನ್ನೇ ಹಿಡಿದು ಸುಖಿಸುವುದು.

ಮನಕ್ಕೆ ರೂಪಿಲ್ಲ; ಈಕೆ ರೂಪಿಲ್ಲದ ಚೆಲುವೆ. ರೂಪಿಲ್ಲದ ಚೆಲುವೆ ರೂಪಿಲ್ಲದ ಚೆಲುವ ಕಪಿಲಸಿದ್ಧ ಮಲ್ಲಿಕಾರ್ಜುನನ ಹಿಡಿದು ಮೋಹಿಸುವಳಲ್ಲದೆ ಮತ್ತೊಂದು ರೂಪ ಹಿಡಿವಳೆ?

ಲೋಕದಲ್ಲಿರುವ ತನುಗಳನ್ನು ಆವರಿಸಿದ ಮನಕ್ಕೂ ರೂಪಿಲ್ಲ. ಆದರೂ ರೂಪುಳ್ಳ ಸ್ಥೂಲ ತನುವನ್ನು ಹಿಡಿದು ಮೋಹಕ್ಕೆ ಒಳಗಾಗಿದೆ.

ನಿರೂಪು ಮನ ರೂಪವನ್ನು ಹಿಡಿದರೆ ಅದು ರೂಪುಳ್ಳ ತನುವನ್ನು ಮೋಹಿಸುತ್ತದೆ. ತನು ತನುವಿನೊಂದಿಗೆ ಕೂಡುವ ಕೂಟ ಕೂಡದ ಅಗಲದ ಕೂಟದ ಸುಖದಂತಲ್ಲ. ಅದು ಹೆಣ್ಣು ಹೆಣ್ಣು ಕೂಡಿದ ಕೂಟ. ಕೂಡಿ ಅಗಲುವ ಕೂಟ.

ನಿರೂಪು ನಿರೂಪದೊಂದಿಗೆ ಕೂಡುವ ಕೂಟ ಕೂಡದಗಲದ ಕೂಟ. ಮಹಾಜ್ಞಾನದ ಕೂಟ. ಸ್ತ್ರೀ ಮಹಾಪುರುಷನೊಂದಿಗೆ ಕೂಡುವ ಜ್ಞಾನದ ಕೂಟ. ಕಪಿಲಸಿದ್ಧ ಮಲ್ಲಿನಾಥಯ್ಯನೆಂಬ ಮಹಾಪುರುನೊಂದಿಗೆ ಕೂಡಿದ ಕೂಟ.

860

**ಮಧ್ಯದ ಮಧ್ಯದಲ್ಲಿ ವೇದಾದಿಮೂಲಿನಿ**
**ಆದಿಯ ಸಂತಕ್ಕೆ ಆದಿಯಾಗಿಪ್ಪಳು.**
**ಐದೇಳನಡರಿದಡೆ ಮೈದೋರದಿಪ್ಪಳು.**
**ಪತಿಗೆ ಪತಿಯಾಗಿಪ್ಪಳು ಸತಿಗೆ ಬುದ್ಧಿಯಾಗಿಪ್ಪಳು.**
**ತನ್ನ ನೋಡಲೆಂದು ಹೋದಡೆ ಚಂದ್ರ, ಸೂರ್ಯರ ನುಂಗಿ**
**ಕಣ್ಣಾಗಣದೆ ಹೋಗಿ ಅತ್ತೆಯ ಕೈವಿಡಿಯಲು,**
**ಈ ಮೂವ್ವರಿಗೆ ಹುಟ್ಟಿಗೆ ತಾನೆಯಾದಳು.**
**ತಾಯ ಕೈವಿಡಿದನೆಂದು ನಾನಂಜಿ ಸತಿಯಾದೆನೆನಗೆ ಪತಿಯಾದೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ನಿನ್ನ ಕೂಡಿದ ಕೂಟ ನೀನರಿದಡರಿವೆ, ಮರದಡೆ ಮರವೆ.**

ಪರಮಾತ್ಮನೆ ನಿನ್ನ ಆಟವೇ ಹೀಗೆ. ಚಂದ್ರ, ಸೂರ್ಯರನ್ನು ನುಂಗಿದ ಮನವೆಂಬ

ಮಾನಸಿಯನ್ನು ಸತಿಯಾಗಿಸಿಕೊಂಡೆ. ನೀನಿದ್ದ ಕಾಯವೆಂಬ ಕೈಲಾಸವನ್ನೇ ಮೂರುಭಾಗ ಮಾಡಿ ಸೀಳಿದವಳನ್ನು ನೀನು ಸತಿಯಾಗಿಸಿಕೊಂಡೆ. ಕೈಲಾಸವನ್ನು ಕೆಡಿಸಿ ಸಾತ್ವಿಕ ಲೋಕವೆಂದು ಸಾರಿದಳು. ಇದು ರಾಜಸ ಲೋಕವೆಂದು ಸಾರಿದಳು. ಸಾತ್ವಿಕವೂ ಅಲ್ಲ ರಾಜಸವೂ ಅಲ್ಲ ತಾಮಸ ಲೋಕವೆಂದು ಸಾರಿದಳು.

ನಿನ್ನ ಕೈಹಿಡಿದು ಬಾಳಬೇಕಾದ ಸತಿ ನಿನ್ನೊಂದಿಗಿರದೆ ನಿನ್ನನ್ನು ಮರೆತು ಈ ಮೂರು ಲೋಕದಲ್ಲಿ ಅಲೆಯುತ್ತಾ ಕೈಲಾಸವನ್ನೇ ಯಾಮಾರಿಸಿದಳು.

ಈ ಮೂರೂ ಲೋಕಗಳ ಹುಟ್ಟಿಗೆ ತಾನೇ ಕಾರಣವಾದಳು. ಮೂರೂ ಲೋಕವನ್ನು ಹಡೆದ ಮಾತೆ ಎಂದು ದೇವಾನು ದೇವತೆಗಳಿಂದ ಕರೆಯಿಸಿಕೊಂಡಳು. ಪತಿಯ ಮೇಲೆ ಇಚ್ಛೆಯಾಗಲು ಮಾತೆಯ ಕೈವಿಡಿದನೆಂದು ತಾನೇ ಅಂಜಿ ಸತಿಯಾದಳು. ಸತಿಗೆ ಪತಿಯಾದ ಕಪಿಲಸಿದ್ಧ ಮಲ್ಲಿಕಾರ್ಜುನ.

ಆದಿಯ ಸಂತಾನಕ್ಕೆ ಆದಿಯಾಗಿಪ್ಪಳು. ಮಧ್ಯಮಧ್ಯದಲ್ಲಿ ವೇದ ಆಗಮ ಉಪನಿಷತ್ ಭಗವದ್ಗೀತೆ ಬೈಬಲ್ ಕುರಾನ್‌ಗಳಿಗೆ ಜನ್ಮವಿತ್ತು, ಅವುಗಳಿಗೆ ಮೂಲಿಗಳಾದಳು. ತಾನು ಸತಿಯಾದರೂ ಪತಿಗೆ ಪತಿಯಾಗಿ ಪತಿಯನ್ನೇ ಮರೆಮಾಚಿದವಳು. ತನ್ನ ನೋಡಲೆಂದು ಹೋದ ಚಂದ್ರ ಸೂರ್ಯರನ್ನು ನುಂಗಿದಳು.

ಆಹ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆ, ನಿನ್ನ ಕೂಡಿದ ಕೂಟ ನೀನರಿದಡೆ ಅರಿವೆ; ಮರೆದಡೆ ಮರವೆ. ನಿನ್ನ ಶರಣರಿಗೆ ಮಾತ್ರ ಇದರ ಸುಳಿವು. ನಿನ್ನವರಲ್ಲದೆ ಅರಿಯರು ನೋಡಾ ನಿನ್ನ ಈ ಇರುವು.

**861**

**ಮಧ್ಯನದಿಯ ನಾವು ಒಡೆದಡೆ ದುಃಖದಿಂದೇನು?**
**ಜನಕ ಮರಣ ಹೊಂದಿದಡೆ ಮಾಡಿದ ದುಃಖದಿಂದೇನು?**
**ಧೂಪನಾಗರ ಮುಟ್ಟಿಂದ ಮಾಡಿದ ದುಃಖದಿಂದೇನು?**
**ನಾಗರನಂಗ ಗರುಡನ ಬಾಯಿಗೆ ಬಿದ್ದಂತಾಯಿತ್ತು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನೋಮಯವಾದ ನದಿ, ಸ್ಥೂಲನದಿ, ಸೂಕ್ಷ್ಮನದಿ. ಹೀಗೆ ತ್ರಿಕೂಟ ಸಂಗಮವಾದದ್ದೇ ತನು. ಮೂರು ನದಿಗಳು ಹರಿಯುತ್ತಿರುವಾಗ ಅವುಗಳ ಹೆಸರಿನಿಂದ ಕರೆಯಿಸಿಕೊಳ್ಳುತ್ತವೆ. ಆ ಮೂರೂ ನದಿಗಳು ಒಂದಾಗಿ ಕೂಡಿದಾಗ ಮೂರೂ ಹೆಸರುಗಳನ್ನು ಕಳೆದುಕೊಂಡು 'ಸಂಗಮ' ಎಂದು ಕರೆಯಿಸಿಕೊಳ್ಳುತ್ತದೆ. ಇದು ದುಃಖವೇ ಇಲ್ಲದ ಆನಂದ ಸಾಗರ.

ಸ್ಥೂಲ ತನುವೆಂಬುದೇ ಮಧ್ಯನದಿ. ಇದು ಒಡೆದು ಹೋದಾಗ ದುಃಖವಾಗುತ್ತದೆ. ಸ್ಥೂಲ ತನುವನ್ನು ಹಡೆದ ತನು, ಮರಣ ಹೊಂದಿದಾಗ ಕೂಡಾ ತನುವಿಗೆ ತಂದೆ ಮರಣ ಹೊಂದಿದನೆಂದು ದುಃಖವಾಗುತ್ತದೆ.

ಮನೋಮಯವಾದ ತನುವೆ ಧೂಪನಾಗರ. ಧೂಪ ಇಲ್ಲದ್ದು, ಧೂಪ ನಾಗರವೂ ಇಲ್ಲದ್ದು ಈ ಧೂಪನಾಗರ ಸ್ಥೂಲತನುವನ್ನು ಕಚ್ಚಿದಾಗ ಕೂಡಾ ದುಃಖವಾಗುತ್ತದೆ. ಇಲ್ಲದ ತನುವೊಂದು ಇದ್ದ ಸ್ಥೂಲ ತನುವನ್ನು ಮುಟ್ಟಿ ಬಾಧೆಗೆ ಒಳಪಡಿಸುತ್ತದೆ.

ಅನಂಗನಾಗರ ಅಂದರೆ ಇಲ್ಲದ ಮನೋಮಯ ತನುವನ್ನು ನಾಗರನಂಗ ಎಂದು ಕರೆದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ನಾಗರನಂಗ ಗರುಡನ ಬಾಯಿಗೆ ಬಿದ್ದಂತಾಯಿತ್ತು ಕಪಿಲಸಿದ್ಧ ಮಲ್ಲಿಕಾರ್ಜುನಾ:

ಸ್ಥೂಲ ತನುವನ್ನು ವಿಷ್ಣು ಎಂದು ಕರೆದಿದ್ದಾರೆ ಪುರಾತರು. ವಿಷ್ಣುವಿನ ವಾಹನವೇ ಗರುಡ. ಈ ಗರುಡನ ಬಾಯಿಗೆ ನಾಗರನಂಗ ಬಿದ್ದಂತಾಯಿತ್ತು ಕಪಿಲಸಿದ್ಧ ಮಲ್ಲಿಕಾರ್ಜುನಾ. ಗರುಡನ ಬಾಯಿಗೆ ಬಿದ್ದ ಅನಂಗ ನಾಗರ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**862**

**ಮಧ್ಯಮದ ಸುಖವನು ಹೊದ್ದುವ ತತ್ವವನು**
**ಅರ್ಧಬಿಂಬಂಗಳ ಕಿರಣಂಗಳ**
**ಈ ಹೊದ್ದದ ಪ್ರಪಂಚಿಕವ ನಿತ್ಯದ ತತ್ವವನು**
**ಮಧ್ಯಮದಲಿ ಕಂಡೆ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸ್ಥೂಲ ತನುವಿಗೆ ವೇದ ಆಗಮ ಉಪನಿಷತ್ ಭಗವದ್ಗೀತೆ ಭಾಗವತ ಬೈಬಲ್ ಕುರಾನ್‌ಗಳ ಅವಶ್ಯಕತೆ ಇದೆ. ಅದು ತತ್ವಗಳನ್ನು ಹೊದ್ದ ಮಧ್ಯಮದ ತನು. ಅರ್ಧಂಬರ್ಧ ಬಿಂಬಗಳ ಕಿರಣಂಗಳನ್ನು ಮಾತ್ರ ಹೊರಹಾಕುತ್ತದೆ.

ಬ್ರಹ್ಮಾಂಡಕ್ಕೆ ಜನ್ಮ ನೀಡಿ ತತ್ವಗಳನ್ನು ಹೊರಚೆಲ್ಲಿದ ತತ್ವವೇತ್ತ ತನುವೊಂದು ಇದೆ. ಈ ತನುವು ಕೂಡಾ ಮಧ್ಯಮ ತನುವಿನಲ್ಲಿಯೇ ಕಾಣುತ್ತದೆ. ತತ್ವವೇ ತಾವಾದ ತತ್ವವೇತ್ತ ಶಿವಶರಣರಿಗೆ ಮಾತ್ರ ಕಾಣುತ್ತದೆ.

ಸ್ಥೂಲ ತನುವೆಂದು ಕರೆಯಿಸಿಕೊಂಡ ಮಧ್ಯಮ ತನುವಿನಲ್ಲಿ ತನ್ಮಯವಾದ ತತ್ವವೇತ್ತ ತನುವಿಗೆ ತನುವನ್ನು ಆವರಿಸಿದ ಮನದಿಂದ ಶರಣು ಹೋದ ಶರಣರಿಗೆ ಮಾತ್ರ ಕಾಣುತ್ತದೆ.

**863**

**ಮನದ ಮಂಟಪದೊಳಗೆ ಅವ ಬಂದು ಕುಳ್ಳಿರಲು,**
**ಮನದಿಂದಲಾನಂದಕರವು ಹುಟ್ಟಿ**
**ಒಲಿದು ಅರ್ಚಿಸುವಾಗ ಫಲ ಪದವ ಬೇಡದೆ**
**ಛಲಿಯಪ್ಪನೈ ಶಿಷ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವನ್ನು ಸೃಷ್ಟಿಮಾಡಿ, ಕಾಯವನ್ನು ಆವರಿಸಿದ ಮನೋಕಾಯವನ್ನು ಸೃಷ್ಟಿ ಮಾಡಿ, ಕಾಯದಲ್ಲಿಯೇ ಇದ್ದ ಅಕಾಯ ಶಿವನು, ಮನೋಕಾಯವೆಂಬ ಮಂಟಪದೊಳಗೆ ಶಿವ ಬಂದು ಕುಳ್ಳಿರಲು, ಮನದಿಂದ ಮಹದಾನಂದದ ಕಾಯ ಹುಟ್ಟಿ, ಒಲಿದು ಅರ್ಚಿಸುವಾಗ, ಫಲಪದವ ಬೇಡದೆ ಛಲದಂಕಮಲ್ಲನೆನ್ನಿಸಿಕೊಂಡ ಶಿಷ್ಯೋತ್ತಮ; ಕಪಿಲಸಿದ್ಧ ಮಲ್ಲಿಕಾರ್ಜುನಾ.

ಜ್ಞಾನ ಕಾಯವೇ ಗುರುದೇವನ ಕಾಯ. ಈ ಕಾಯ ಕಾಣುವುದಿಲ್ಲ. ಸ್ಥೂಲ ಕಾಯವನ್ನೇ ಮನೆಯನ್ನಾಗಿಸಿಕೊಂಡಿದೆ. ಸ್ಥೂಲಕಾಯವನ್ನು ಆವರಿಸಿದ ಮನೋಕಾಯವೊಂದು ಇದೆ. ಈ ಕಾಯವೂ ಕಾಣುವುದಿಲ್ಲ. ಇದೇ ಗುರುಕಾಯಕ್ಕೆ ಶಿಷ್ಯನಾಗಬೇಕಾದ ಕಾಯ.

ಮನೋಕಾಯವನ್ನು ಶಿಷ್ಯನನ್ನಾಗಿಸಿಕೊಳ್ಳಬೇಕೆಂಬ ಬಯಕೆ, ಗುರು ಕಾಯಕ್ಕೆ ಆದಾಗ,

ಆ ಗುರುದೇವನ ಕಾಯ ಶಿಷ್ಯನ ಕಾಯದಲ್ಲಿ ಬಂದು ಕುಳಿತುಕೊಳ್ಳುತ್ತದೆ. ಗುರುದೇವನೇ ಒಲಿದು ಶಿಷ್ಯನನ್ನಾಗಿಸಿಕೊಳ್ಳುತ್ತಾನೆ. ಇದು ಶಿಷ್ಯ ಕಾಯದ ಅದೃಷ್ಟ. ಪ್ರಯತ್ನವಿಲ್ಲದೆ ಬಂದ ಫಲ.

ಶಿಷ್ಯ ಪರಮಾನಂದದಿಂದ ಗುರುದೇವನನ್ನು ಅರ್ಚಿಸುತ್ತಾನೆ. ಸ್ಥೂಲಕಾಯವು ಗುರುಶಿಷ್ಯರಿಬ್ಬರಿಗೂ ಆಶ್ರಮವಾಗುತ್ತದೆ. ಶಿಷ್ಯ ಗುರುದೇವನನ್ನು ಪರಮಾನಂದದಿಂದ ಅರ್ಚಿಸುತ್ತಾನೆ. ಫಲಪದವಿಗಳನ್ನು ಬೇಡದ ಛಲವಂತನಾತ. ಕಪಿಲಸಿದ್ಧ ಮಲ್ಲಿಕಾರ್ಜುನಾ.

**864**

**ಮನದ ಮಲಿನವನು ಕಳೆಯಾ ಅಯ್ಯಾ,**
**ಮನವೇ ಶುದ್ಧನಾಗು, ಮನವೇ ಸಿದ್ಧನಾಗು,**
**ಮನವೇ ಪ್ರಸಿದ್ಧನಾಗಯ್ಯಾ,**
**ಮನದೊಡೆಯ ಮಹಾದೇವ ಕಪಿಲಸಿದ್ಧ ಮಲ್ಲಿನಾಥಾ,**
**ಮನದ ಸರ್ವಾಂಗ ನೀನಾಗಯ್ಯಾ.**

ಸ್ಥೂಲ ಕಾಯದಲ್ಲಿದ್ದು ಮನೋಕಾಯವನ್ನು ಸೃಷ್ಟಿ ಮಾಡಿದ ಮನದೊಡೆಯ ಮಹಾದೇವ ನೀನು. ಒಡೆಯನನ್ನು ಮರೆತು ಸ್ಥೂಲಕಾಯದ ಸಂಗ ಮಾಡಿದ ಮನ, ತನ್ನದೇ ಆದ ಅಜ್ಞಾನದ ಸಂಸಾರವನ್ನೇ ಹೂಡಿದೆ. ಮಹಾದೇವನಿದ್ದ ಕಾಯಕ್ಕೆ ಸುಖ ದುಃಖಗಳ ಚಿಂತೆಯನ್ನು ಹರಡಿದೆ.

ಮಹಾದೇವನೆ, ಮನದೊಡೆಯನೆ, ಮನದ ಮಲಿನವನ್ನು ನೀನೆ ಕಳೆಯಯ್ಯಾ. ಮನವೇ ಮಹಾದೇವನನ್ನು ನೆನೆದು ಶುದ್ಧನಾಗು, ಮನವೇ ನಿನ್ನೊಡೆಯನನ್ನು ನೆನೆದು ಸಿದ್ಧನಾಗು. ಮನವೇ ಮಹಾದೇವನ ಸಂಗ ಮಾಡಿ ಪ್ರಸಿದ್ಧನಾಗು. ಮನದೊಡೆಯ ಮಹಾದೇವ ಕಪಿಲಸಿದ್ಧ ಮಲ್ಲಿನಾಥಾ ಮನದ ಸರ್ವಾಂಗ ನೀನಾಗಯ್ಯಾ.

**865**

**ಮನದ ಮುಂದಣ ಮಾಯಕ್ಕೆ ಒಡೆಯ ನೀನೆಯಯ್ಯಾ.**
**ಆವ ಪರಿಯಲ್ಲಿ ಎನ್ನ ನಡೆಸಿಕೊಂಡೆ?**
**ನಿನ್ನ ಮನಬಂದಂತೆ ನಡೆಸಿಕೊಳ್ಳಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ನೀನಿದ್ದ ಕಾಯ ನಿನ್ನದೆ; ನೀನಿದ್ದ ಕಾಯವನ್ನು ಆವರಿಸಿದ ನನ್ನ ಕಾಯವು ನಿನ್ನದೆ. ಆ ಕಾಯದ ಒಡೆಯನು ನೀನೆ ಅಯ್ಯಾ. ನೀನಿದ್ದ ಕಾಯದಲ್ಲಿ ಮಾಯೆ ತುಂಬಿ ಕಾಯವನ್ನು ನಡೆಸಿಕೊಳ್ಳಬೇಕೆ? ನಿನ್ನ ಕಾಯದಲ್ಲಿ ನೀನೆ ಮಾಯೆ ತುಂಬುವುದು ನಿನಗೆ ನ್ಯಾಯವೇ ಅಯ್ಯಾ. ಆವ ಪರಿಯಲ್ಲಿ ನನ್ನನ್ನು ನೀನು ನಡೆಸಿಕೊಂಡೆ ಅಯ್ಯಾ?

ಕೈಲಾಸವೆಂದು ಕರೆಯಿಸಿಕೊಳ್ಳಬೇಕಾದ ಜ್ಞಾನ ಕಾಯ, ರಾಜನೆಂದು ಕರೆಯಿಸಿಕೊಂಡು ರಾಜನನ್ನು ಕೊಂದು ಮಹಾರಾಜನಾಯಿತು. ಮಂತ್ರಿಯಾದದ್ದು ಕಾಯವೇ. ಸೈನಿಕನಾದುದ್ದು ಕಾಯವೇ. ಗುರುವೆಂದು ಅನಿಸಿಕೊಂಡಿದ್ದು ಕಾಯವೇ. ಶಿಷ್ಯನೆಂದು ಕರೆಯಿಸಿಕೊಂಡಿದ್ದು ಕಾಯವೇ. ಹೆಣ್ಣೆಂದು ಗಂಡೆಂದು ಕರೆಯಿಸಿಕೊಂಡಿದ್ದು ಕೂಡಾ ಕಾಯವೇ. ಕಳ್ಳ, ವಿಟ, ವೇಶ್ಯೆ, ಹಾದರಿಗ ಎಂದು

ಕರೆಯಿಸಿಕೊಂಡದ್ದು ಕೂಡಾ ಕಾಯವೇ. ನೀನಿದ್ದ ಕಾಯವನ್ನು ಯಾವ ಪರಿಯಲ್ಲಿ ನಡೆಯಿಸಿಕೊಂಡೆ; ಕಾಯದೊಡೆಯ ಮಹಾದೇವನೆ. ನೀನು ಯಾರೆಂದು ನನಗೆ ಗೊತ್ತಿರಲಿಲ್ಲ. ನೀನು ನಡೆಸಿಕೊಂಡಂತೆ ನಾನು ನಡೆದೆ, ಅದು ನನ್ನ ದೋಷವಲ್ಲ ನಿನ್ನದೇ ಕಾಯ. ಅದು ನೀನಿದ್ದ ಕಾಯ!.

ಇನ್ನು ನಿನ್ನ ಮನ ಬಂದಂತೆ ನಡೆಯಿಸಿಕೊಳ್ಳಯ್ಯಾ; ನಾನು ನಿನ್ನನ್ನು ಪ್ರಾರ್ಥಿಸುವುದೊಂದೆ ದಾರಿ, ಕಪಿಲಸಿದ್ಧ ಮಲ್ಲಿಕಾರ್ಜುನ.

**866**

**ಮನದಲ್ಲಿಯ ಘನವ ನೆನೆಯಬಾರದು.**
**ತೀರಲದು ಮಾಯಾಜಾಲವೆನಬಾರದು.**
**ಎಂದರದು ಕಪಿಲಸಿದ್ಧ ಮಲ್ಲಿಕಾರ್ಜುನನ ಮುಟ್ಟಲು**
**ಬಾರದು.**

ಸ್ಥೂಲಕಾಯ, ಜ್ಞಾನಕಾಯ, ಮನೋಕಾಯ ಒಂದು ಕಾಯದಲ್ಲಿ ಇನ್ನೆರಡು ಕಾಯಗಳನಿಟ್ಟು; ಘನವಂತ ತನಗೆ ತಾನೇ ಹೊಲಿದುಕೊಂಡಿದ್ದಾನೆ! ಘನ ಕಾಯವೊಂದಿದೆ, ಸ್ಥೂಲ ಕಾಯದಲ್ಲಿಯೂ ಘನಕಾಯವಿದೆ. ಮನೋಕಾಯದಲ್ಲಿಯೂ ಕೂಡಾ ಘನ ಕಾಯವಿದೆ. ಮನೋಕಾಯದಲ್ಲಿರುವ ಘನವನ್ನು ನೆನೆಯಲು ಬಾರದಂತೆ ಮಾಡಿದ್ದಾನೆ ಘನವಂತ!

ಒಂದು ಕಾಯದಲ್ಲಿ ಮೂರು ಕಾಯಗಳನ್ನು ಹೆಣೆದ ಘನವಂತನ ಮಾಯಾಜಾಲವನು ಹೀಗೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಘನವಂತನ ಪರಿಚಯವಾದ ಮೇಲೆ, ಮೂರು ಕಾಯಗಳು ಕೂಡಾ ಘನಕಾಯವೆ. ಮಾಯಾಜಾಲವೆಂದು ಕರೆದರೆ ಕಾಯದಲ್ಲಿಯೇ ಸಂಗಮವಾದ ಮಲ್ಲಿಕಾರ್ಜುನಯ್ಯನ ಮುಟ್ಟಲು ಬಾರದು.

**867**

**ಮನನತ್ರಾಣರೂಪವಾದ ಚಿತ್ತೇ, ಮಂತ್ರವಲ್ಲದೆ**
**ಬೇರೆ ಮಂತ್ರಗಳುಂಟೆ ಅಯ್ಯಾ?**
**ಸರ್ವಮಂತ್ರಮಾತೆ ಪಂಚಾಕ್ಷರಿಯೆ ತಾನಾಗಿ,**
**ಕಪಿಲಸಿದ್ಧ ಮಲ್ಲಿಕಾರ್ಜುನಂಗೆ ಅಂಗವಾದ ಚಿತ್ತೆ,**
**ಪ್ರಣಯಮೂಲವಾದ ಮಂತ್ರವಯ್ಯಾ.**

ಮನೋಕಾಯದಲ್ಲಿ ಮನನ ತ್ರಾಣರೂಪವಾದ ಚಿತ್ತ ಸೃಷ್ಟಿಯಾಗಿದೆ. ಚಿತ್ತ ಸುಚಿತ್ತವಾದರೆ ಅದು ಸರ್ವ ಮಂತ್ರಮಾತೆಯಾಗುತ್ತದೆ. ಪಂಚಾಕ್ಷರಿಯೆಂಬ ನಮಃ ಶಿವಾಯವೇ ತಾನಾಗಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಿಗೆ ಚಿತ್ತವೆಂಬ ತಾಯಿ ಅಂಗವಾಗುತ್ತಾಳೆ. ಇದು ಪ್ರಣಯ ಮೂಲವಾದ ಮಂತ್ರವಲ್ಲ. ಶಿವ ಶಿವೆಯರ ಸಂಗಮ.

ಚಿತ್ತ ಸುಚಿತ್ತವಾಗದಿದ್ದರೆ, ಅದು ಪ್ರಳಯ ಕಾಯದಲ್ಲಿ ಹುಟ್ಟಿ ಕಾಯವನ್ನು ಆವರಿಸಿದ ಕಾಯಕ್ಕೆ ಮಹಾಮಾಯೆಯಾಗಿ ಕಾಡುತ್ತದೆ ಚಿತ್ತ. ಉದಾ: ಚಿನ್ನದಲ್ಲಿ ಚಿತ್ತ ನೆಟ್ಟರೆ ತನಗೆ ಬೇಕೆಂದು

ಮನೋಮಯವಾದ ಕಾಯವನ್ನು ಕಾಡಿಸುತ್ತದೆ. ಮನೋಮಯವಾದ ಕಾಯ ಸ್ಥೂಲಕಾಯವನ್ನು ಯಾಮಾರಿಸಿ ಚಿನ್ನವನ್ನು ಪಡೆಯುವಂತೆ ಮಾಡುತ್ತದೆ.

ಚಿನ್ನ ಎಂದರೆ ಲೋಹವೆಂದು ಚಿತ್ತಕ್ಕೆ ಗೊತ್ತಿಲ್ಲ. ಹಳದಿ ಬಣ್ಣವಿದ್ದರೇನು ಅದು ಲೋಹವೇ ಆಗಿದೆ. ಚಿನ್ನವೆಂದು ತಿಳಿದ ಚಿತ್ತ; ಕಾಯಕ್ಕೆ ರಾಜನ ಶೌರ್ಯ ಹೊದಿಸಿ; ಮತ್ತೊಬ್ಬ ರಾಜನೊಂದಿಗೆ ಯುದ್ಧಕ್ಕೆ ಅಣಿಯಾಗುತ್ತದೆ. ಚಿನ್ನಕ್ಕಾಗಿ ಯುದ್ಧ. ರಾಜ-ರಾಜನನ್ನು ಕೊಂದು, ಮಂತ್ರಿ-ಮಂತ್ರಿಯನ್ನು ಕೊಂದು, ಸೈನಿಕ-ಸೈನಿಕನನ್ನು ಕೊಂದು ಸಾವು ನೋವುಗಳು ಅನುಭವಿಸಿ ರಕ್ತದ ಕಾಲುವೆಯನ್ನೆ ಹರಿಸಿ, ಚಿನ್ನ ಪಡೆದು, ಮತ್ತೆ ಚಿನ್ನಕ್ಕಾಗಿ ಚಿತ್ತ, ಕಾಯಕ್ಕೆ ಬೇಡಿಕೆಯನ್ನು ಒಡ್ಡುತ್ತದೆ.

ಚಿನ್ನಕ್ಕಾಗಿ, ರಾಜ, ಕಳ್ಳ, ಕೊಲೆಗಡುಕ, ಹತ್ಯಾಚಾರಿಯ ಹಣೆಪಟ್ಟಿಯನ್ನು ಕಾಯದಲ್ಲಿಯೇ ಹುಟ್ಟಿದ ಚಿತ್ತ ಕಾಯಕ್ಕೆ ಕಟ್ಟುತ್ತದೆ. ಕಾಯದಲ್ಲಿಯೇ ಸಂಗಮವಾದ ಜ್ಞಾನಕಾಯಕ್ಕೆ ಮಾತ್ರ ಅದು ಚಿನ್ನವಲ್ಲ ಲೋಹವೆಂದು ತಿಳಿದಿದೆ. ಚಿತ್ತ, ಜ್ಞಾನಕಾಯದಲ್ಲಿ ಸಂಗಮವಾದಾಗ ಅದು ಸುಚಿತ್ತವಾಗುತ್ತದೆ. ಕಾಯ ಮಂತ್ರಕಾಯವಾಗುತ್ತದೆ. ಪಂಚಾಕ್ಷರಿಯೇ ತಾನಾಗಿ ಸರ್ವಮಂತ್ರಮಾತೆಯಾಗುತ್ತದೆ. ಮಲ್ಲಿಕಾರ್ಜುನಯ್ಯನಿಗೆ ಅಂಗವಾಗಿ ಸಂಗಕ್ಕೆ ಅಣಿಯಾಗುತ್ತದೆ. ಪ್ರಣವ ಮೂಲವಾದ ಮಂತ್ರವೇ ತಾನಾಗಿ ಜ್ಞಾನಕಾಯದೊಂದಿಗೆ ಕೂಡುತ್ತದೆ.

**868**

**ಮನ ನಿಲುಕದು, ಭಾವ ಭಾವಿಸದು**
**ಅರಿವು ಕುರುಹಿಡಿದು**
**ಉಪಮೆ ಸ್ಥಳವಿಡಲರಿಯದು.**
**ಮಂತ್ರತಂತ್ರಗಳಿಗೆಂತೂ ಸಿಲುಕದು.**
**ಜಪ ತಪ ಧ್ಯಾನ ಮೌನಂಗಳಿಗೆ ಅಳವಲ್ಲದ ಘನವದು!**
**ಕಪಿಲಸಿದ್ಧ ಮಲ್ಲಿಕಾರ್ಜುನನ**
**ನಿಲುವನು ಅಂತಿಂತೆನಬಹುದೆ?**

ತನುವಿನಲ್ಲಿ ತನ್ಮಯವಾದ ಜ್ಞಾನ, ತನುವನ್ನು ಆವರಿಸಿದ ಮನಕ್ಕೆ ನಿಲುಕದು. ಭಾವ ಭಾವಿಸದು. ಅರಿವು ಕುರುಹಿಡಿದು ಉಪಮೆ ಸ್ಥಳವಿಡಲರಿಯದು. ಮಂತ್ರತಂತ್ರಗಳಿಗಂತೂ ಸಿಲುಕದು:

ಮನಕ್ಕೆ ಜ್ಞಾನ ನಿಲುಕದು, ಭಾವ ದುರ್ಭಾವವಾಗಿ ಮನವನ್ನು ಕಲುಕಿ ತನುವನ್ನು ಹಿಂಡಿ-ಹಿಪ್ಪೆ ಮಾಡಿ ಎಸೆಯುತ್ತದೆ. ತನುವಿನಲ್ಲಿಯ ಭಾವ ಕ್ಷಣ-ಕ್ಷಣಕ್ಕೂ ಅರಳುತ್ತದೆ, ಹಾಗೆಯೇ ಕೆರಳುತ್ತದೆ. ಭಾವ ಅರಳಿದಾಗ ಭಾವವೆನಿಸಿಕೊಳ್ಳುತ್ತದೆ, ಅದು ಕೆರಳಿದಾಗ ದುರ್ಭಾವವೆನಿಸಿಕೊಳ್ಳುತ್ತದೆ. ತನು ಒಂದೇ. ಆದರೆ ತನುವಿನಲ್ಲಿ ಹುಟ್ಟಿದ ಭಾವ ತನುವನ್ನು ಹೆಣ್ಣಾಗಿಸಿದೆ. ತನುವನ್ನೇ ಗಂಡಾಗಿಸಿದೆ. ಚರ್ಮ ಒಂದೇ. ಆದರೂ ಅದು ಒಂದೇ ಎಂದು ತಿಳಿಯುವ ಶಕ್ತಿ ಭಾವಕ್ಕಿಲ್ಲ. ಹೆಣ್ಣನ್ನು ನೋಡಿ ಗಂಡಾಗಿ ಗಂಡನ್ನು ನೋಡಿ ಹೆಣ್ಣಾಗಿ ದುರ್ಭಾವಿಯಾಗುತ್ತದೆ. ಎರಡು ತನುಗಳಲ್ಲಿ ತನ್ಮಯವಾದ ನಿರೂಪ ನೋಡುವ ಶಕ್ತಿ ಭಾವಕ್ಕಿಲ್ಲ. ಎರಡು ರೂಪಗಳಿಗೆ ಮೂಲವಾದ ನಿರೂಪ ಒಂದೇ. ಭಾವ, ನಿರೂಪದಲ್ಲಿ ಸಂಗಮವಾದಾಗ ನಿರ್ಭಾವವಾಗುತ್ತದೆ. ಬದಲಾವಣೆಗೆ ಅವಕಾಶವಿಲ್ಲದಂತಾಗುತ್ತದೆ. ಭಾವ ಭಾವಿಸಿದ ಅರಿವು ಮರೆವಾಗಿ ನಿರ್ಭಾವದಲ್ಲಿ

ಕೊಚ್ಚಿ ಹೋಗುತ್ತದೆ.

ಭಾವ ನಿರ್ಭಾವವಾಗಿ, ಮನ ಘನಮನವಾದಾಗ, ಭಾವ ಭಾವಿಸಲು ಅರಿವು ಕುರುಹಿಡಿಯದು. ಮಂತ್ರ ತಂತ್ರಗಳಿಗಂತೂ ಸಿಲುಕದು, ಜಪ-ತಪ ಜ್ಞಾನ ಮೌನಂಗಳಿಗೆ ಅವಕಾಶವಿಲ್ಲದ ಘನವದು. ಕಪಿಲಸಿದ್ಧ ಮಲ್ಲಿಕಾರ್ಜುನನ ನಿಲುವನು ಅಂತಿಂತೆನ್ನಬಹುದೇ?

**869**

**ಮನ ಮಹಾಮಂಗಳವನೈದಿ, ಹಿಂದು ಮುಂದು ಅರತು,**
**ಬಂದ ಬಟ್ಟೆಯ ಮುಚ್ಚಿ ಬಾರದಂತೆ ಹೋದರಯ್ಯಾ ನಿಮ್ಮವರು.**
**ನೀನು ಸಟೆಕಾರ, ನಿನ್ನಿಂದ ಊರು ಹಾಳಾಯಿತ್ತು.**
**ಎನ್ನ ನಿನ್ನವರಂತೆ ಮಾಡಿ, ಅವರ ಸಂಗದೊಳಗೆನ್ನನಿರಿಸಯ್ಯಾ**
**ಇರಿಸದಿದ್ದಡೆ ನಿನ್ನ ಬಯ್ಯುವುದೆ ಸತ್ಯ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ!**

ಪರಮಾತ್ಮನೇ, ಸಕಲ ಕಾಯಗಳಲ್ಲಿಯೂ ನೀನಿದ್ದರೂ ಕೂಡಾ, ಆ ಕಾಯಕ್ಕೆ ದರುಶನ ಕೊಡದೆ ಕಾಯವನ್ನು ಆವರಿಸಿದ ಮನಕ್ಕೆ, ಮಹಾಮಂಗಳವನ್ನುಂಟು ಮಾಡದ ಸಟೆಕಾರ ನೀನು! ಸುಳ್ಳ ನೀನು! ನಿನ್ನಿಂದ ಕಾಯವನ್ನು ಕಳ್ಳನನ್ನಾಗಿಸಿದ ಕಳ್ಳ ನೀನು! ನಿನ್ನಿಂದಲೇ ಊರು ಹಾಳಾಗಿದೆ! ಹಿಂದು ಮುಂದು ಅರಿಯದಂತೆ ಮಾಡಿದವನು ನೀನು! ದಾರಿಯನ್ನೇ ಮರೆಮಾಚಿ ಆ ದಾರಿಗೆ ಬೇಲಿ ಹಾಕಿದವನು ನೀನು!

ಎನ್ನನ್ನು ನಿನ್ನವರಂತೆ ಮಾಡಿ ಅವರ ಸಂಗದೊಳಗೆ ಇರಿಸುವುದು ನಿನ್ನ ಧರ್ಮವಯ್ಯಾ. ಮನವನ್ನು ಮಹಾಮಂಗಳದ ಅಂಗಳವನ್ನಾಗಿಸಿ; ಹಿಂದು ಮುಂದು ಅರಿಯದಂತೆ ಮಾಡುವುದು ನಿನ್ನ ಧರ್ಮವಲ್ಲ. ಬಂದ ದಾರಿಯಲ್ಲಿ ಕಲ್ಲು ಮುಳ್ಳು ಹಾಕದಂತೆ ಹೆದ್ದಾರಿಯನ್ನಾಗಿಸುವುದು ನಿನ್ನ ಧರ್ಮವಯ್ಯಾ.

ಬಂದ ದಾರಿಯನ್ನು ಮುಚ್ಚಿಹಾಕಿ, ಮತ್ತೆ ಬಾರದಂತೆ ಹೋದರಯ್ಯಾ ನಿಮ್ಮವರು. ಎನ್ನನ್ನು ಅವರ ಸಂಗದೊಳಗಿರಿಸಿ ಸಲಹುವದು ನಿನ್ನ ಧರ್ಮ! ಇರಿಸದಿದ್ದಡೆ ನಿನ್ನ ಬಯ್ಯುವುದೇ ಸತ್ಯ! ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

**870**

**ಮನವೆಂಬ ಮಂಟಪದ ನೆಳಲಲ್ಲಿ**
**ನೆನೆಹೆಂಬ ಜ್ಞಾನಜ್ಯೋತಿಯ ಬೆಳಗನಿಟ್ಟು**
**ಘನಪುರುಷ ಪವಡಿಸೈದಾನೆ, ಎಲೆ ಅವ್ವಾ.**
**ಅದನೊಂದೆರಡೆನ್ನದೆ ಮೂರು ಬಾಗುಲ ಮುಚ್ಚಿ ನಾಲ್ಕ ಮುಟ್ಟದೆ**
**ಐದ ತಟ್ಟದೆ ಇರು ಕಂಡಾ, ಎಲೆ ಅವ್ವಾ.**
**ಆರೇಳೆಂಟೆಂಬ ವಿಹಂಗಸಂಕುಳದ ಉಲುಹು ಪ್ರಬಲವಾದಡೆ,**
**ಕಪಿಲಸಿದ್ಧ ಮಲ್ಲಿಕಾರ್ಜುನನು ನಿದ್ರೆಗೆಟ್ಟಲ್ಲಿರನು..**

ಕಾಯ ಕೈಲಾಸವಾದರೆ, ಮನವೇ ಮಂಟಪ. ಜ್ಞಾನ ಕಾಯದ ಜ್ಯೋತಿಯ ಬೆಳಗನ್ನು

ಮನವೆಂಬ ಮಂಟಪದ ನೆರಳಲಲ್ಲಿ ಬೆಳಗಿಸಿ ಘನಪುರುಷನು ಪವಡಿಸಿದ್ದಾನೆ. ಅಂತಹ ಸುಂದರವಾದ ಕಾಯವನ್ನು ಒಂದೆನ್ನದೆ ಎರಡೆನ್ನದೆ ಮೂರು ಬಾಗಿಲನ್ನು ಮುಚ್ಚಿ ನಾಲ್ಕ ಮುಟ್ಟದೆ ಐದ ತಟ್ಟದೆ ಇರು ಕಂಡಾ ಎಲೆ ಅವ್ವಾ.

ಕಾಯವೊಂದೆ. ಆದರೂ ಕಾಯದಲ್ಲಿ ಸಾತ್ವಿಕ ರಾಜಸ ತಾಮಸ ಎನ್ನುವ ಅಜ್ಞಾನ ಕಾಯಗಳನ್ನು ಮನ ಸೃಷ್ಟಿ ಮಾಡಿದೆ. ಮನ ಸೃಷ್ಟಿ ಮಾಡಿದ ಮೂರು ಕಾಯಗಳ ಬಾಗಿಲುಗಳನ್ನು ಮನವೇ ಮುಚ್ಚಿ ಸಾಲೋಕ್ಯ, ಸಾಮಿಪ್ಯ, ಸಾರೋಪ್ಯ, ಸಾಯುಜ್ಯವೆಂಬ ನಾಲ್ಕು ಪದವಿಗಳನ್ನು ಮುಟ್ಟದೆ ಐದು ಇಂದ್ರಿಯಗಳನ್ನು ತಟ್ಟದೆ ಇರುಕಂಡಾ ಎಲೆ ಅವ್ವಾ.

ಕಾಮ, ಕ್ರೋಧ, ಲೋಭ, ಮೋಹ, ಮದ-ಮತ್ಸರವೆಂಬ ಆರು ಅರಿಷಡ್ವರ್ಗಗಳನ್ನು ಸಪ್ತವ್ಯಸನಗಳೆಂಬ ಅಷ್ಟಮದಗಳೆಂಬ ವಿಹಂಗ ಸಂಕುಳದ ಉಲುಹು ಪ್ರಬಲವಾದಡೆ ಕಪಿಲಸಿದ್ಧ ಮಲ್ಲಿಕಾರ್ಜುನನು ನಿದ್ರೆಗೆಟ್ಟು ಅಲ್ಲಿರನು.

**871**

**ಮನೆಮನೆಯ ಮುಂದೆ ಹರಿಹರಿದು ಹಲವು**
**ಕ್ಷುಧೆಯೆಂಬವಳ ಪರಿಯಿಂದ**
**ತಾನಾ ಪರಿ ವಿಪರೀತನಾದ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ**
**ಮೂವರಿಂದ ಮೂಲನಾದೆ.**

ಸಾತ್ವಿಕ ರಾಜಸ ತಾಮಸ ಎಂಬ ಮೂರು ಗುಣಗಳಲ್ಲಿ ಮನ ತನುವಿನೊಂದಿಗೆ ಮುಳುಮುಳುಗಿ ತೇಲುತ್ತದೆ. ಸಾತ್ವಿಕವಾಗಿ, ರಾಜಸ ತಾಮಸ ಗುಣಗಳನ್ನು ಅನುಭವಿಸುತ್ತಾ ತಾನು ಸಾತ್ವಿಕ ಮಾತ್ರ; ತಾನು ರಾಜಸನೂ ಅಲ್ಲ ತಾಮಸಿಗನೂ ಅಲ್ಲ ಎಂದು ಲೋಕದ ಮುಂದೆ ಅನಂತ ಕಾಲದವರೆಗೆ ತನು ಅಭಿನಯಿಸುತ್ತದೆ.

ತಾಮಸ ಗುಣದ ಸುಖ ಅನುಭವಿಸುವುದು ಲೋಕಕ್ಕೆ ಗೊತ್ತಾದರೆ ಸಾಕು ಸಾತ್ವಿಕ ಗುಣಕ್ಕೆ ಎಳ್ಳು ನೀರು ಬಿಟ್ಟು ತಾಮಸ ಗುಣದಲ್ಲಿ ಮನ ತನುವಿನೊಂದಿಗೆ ಅನಂತಕಾಲ ಕಳೆಯುತ್ತದೆ.

ರಾಜಸ ಗುಣದ ಮನ, ಸಾತ್ವಿಕ ತಾಮಸ ಗುಣಗಳನ್ನು ವ್ಯಕ್ತಪಡಿಸದೆ ರಾಜಸದಲ್ಲಿದ್ದು ಅನಂತಕಾಲ ತನುವಿನ ಮೂಲಕ ಕಳೆದು ತನುವಿನ ಆಯುಷ್ಯವನ್ನು ಅಪವ್ಯಯಗೊಳಿಸುತ್ತದೆ.

ಇದನ್ನು ತಿಳಿದ ಗುರುದೇವನ ಸಹಾಯದಿಂದಾಗಿ, ಈ ಮೂರೂ ಗುಣಗಳಿಂದ ಮೂಲಿಗನಾದೆ. ಪ್ರತಿ ತನುವಿನಲ್ಲಿ ಅರಿವೆಂಬ ಗುರುದೇವನಿದ್ದಾನೆ. ತಾನಿದ್ದ ಆ ತನುವಿನ ಯೋಗಕ್ಷೇಮಗಳನ್ನು ಆತನೇ ನೋಡಿಕೊಳ್ಳುತ್ತಾನೆ. ಹೀಗಿರುವಾಗ ಒಂದು ತನುವಿಗೆ ಮತ್ತೊಂದು ತನು ಭಿಕ್ಷೆ ನೀಡುವುದೆಂದರೇನು? ಅದಕ್ಕೆ ಸಹಾಯ ಮಾಡುವುದೆಂದರೇನು? ಇದು ಸೋಜಿಗದ ಮಾತೇ ಆಗಿದೆ. ಸಹಭೋಜನ ಮಾಡಬಹುದು. ಗುರುದೇವನಿಗೆ ಭಿಕ್ಷೆ ನೀಡುವ ಶಕ್ತಿ ಮನವನ್ನು ಆವರಿಸಿದ ತನುವಿಗೆ ಇದೆಯೋ ಹೇಗೆ ಎಂದು ಆಯಾ ತನುಗಳು ಅರಿಯಲು ಹೋದಾಗ ಸಾತ್ವಿಕ ರಾಜಸ ತಾಮಸ ಗುಣಗಳನ್ನು ಕಳೆದುಕೊಂಡು, ಮನ ಘನದಲ್ಲಿ ಬೆರೆತು ಘನಮನವಾಗುತ್ತದೆ. ತ್ರಿಗುಣಾತೀತನಾಗುತ್ತದೆ.

**872**

**ಮರುಳುತನದಲಿ ಭ್ರಮಿಸಿ ಫಲಪದಕ್ಕೊಳಗಪ್ಪವನ**

**ಎತ್ತಿದ ಗುರು ಬಸವಣ್ಣ.**
**ಆಜ್ಞಾಸಿದ್ಧನನರ್ಚಿಸುವ ಪರಿಯಾಯವಿದೆಂದು**
**ತೋರಿದ ಗುರು ಬಸವಣ್ಣ.**
**ಸರ್ವಸ್ವವನೊಪ್ಪಿಸೆ ಎನ್ನ ತನ್ನಂತೆ ಮಾಡಿದ**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಮರಳು ತನದಲ್ಲಿ ಭ್ರಮಾ ಸುಖಕ್ಕೆ ಒಳಗಾದ ಫಲದವಿಗಳ ಕ್ಷುಲ್ಲಕ ಆಸೆಗಳಿಗೆ ಬಲಿಯಾದ ತನುಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಎತ್ತಿಹಿಡಿದಾತ ಗುರು ಬಸವಣ್ಣನು.

ತನುವಿನ ಸಂಗ ಮಾಡಿದ ಮನವನ್ನು ಬಿಡಿಸಿ, ತನುವಿನಲ್ಲಿಯೇ ಸಂಗಮವಾದ ಮಹಾಜ್ಞಾನಿ ಅರಿವಿನ ಸಂಗಯ್ಯನ ಸಂಗ ಮಾಡಲು ಕಲಿಸಿದಾತ ಗುರುಬಸವಣ್ಣನು.

ಮನ ತನುವಿನೊಂದಿಗೆ ಕೂಡಿದರೆ ಅಜ್ಞಾನ. ಅಜ್ಞಾನದ ಪ್ರಪಂಚ! ಮನ ತನುವಿನಲ್ಲಿಯೇ ತನ್ಮಯವಾದ ಆಜ್ಞಾಸಿದ್ಧನ ಅರ್ಚಿಸಿದರೆ ಅದು ಜ್ಞಾನಪ್ರಪಂಚ, ಶರಣರ ಪ್ರಪಂಚ!

ಕಾಯಕ್ಕೆ ಅಂಟಿದ ಮಾಯಮಯವಾದ ಮರುಳುತನವನ್ನು ಬಿಡಿಸಿ, ಸರ್ವಸ್ವವನು ಎನಗೆ ಒಪ್ಪಿಸಿ ಎನ್ನನ್ನು ತನ್ನಂತೆ ಮಾಡಿದ ಕಪಿಲಸಿದ್ಧ ಮಲ್ಲಿಕಾರ್ಜುನ.

**873**

**ಮಲತ್ರಯಂಗಳ ಕೆಡಿಸಲ್ಕೆ ಪ್ರಭುವಾಗಿ ಬಂದ;**
**ಅಜ್ಞಾನಿಗಳಿಗೆ ಸುಜ್ಞಾನವ ತೋರಲ್ಕೆ ಪ್ರಭುವಾಗಿ ಬಂದ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ,**
**ಎನ್ನ ಭವದ ಬೇರ ಹರಿಯಲ್ಕೆ ಪ್ರಭುವಾಗಿ ಬಂದ.**

ಆಣವಮಲ, ಮಾಯಾಮಲ, ಕಾರ್ಮಿಕ ಮಲಗಳೆಂಬ ಮನತ್ರಯಗಳು ತನುವನ್ನು ಜ್ಞಾನಿಯನ್ನಾಗಲು ಬಿಡದೆ, ತನುವನ್ನೇ ಕೇಂದ್ರವನ್ನಾಗಿಸಿಕೊಂಡು, ಆ ತನುವಿನಲ್ಲಿಯೇ ತಮ್ಮ ಅಜ್ಞಾನದ ಸಾಮ್ರಾಜ್ಯವನ್ನು ಕಟ್ಟಿ, ಆಶ್ರಯ ನೀಡಿದ ತನುವನ್ನೇ ಆಳುತ್ತಲಿವೆ.

ತನುವಿನಲ್ಲಿಯೇ ಹುಟ್ಟಿದ ಮಲತ್ರಯಗಳನ್ನು ಕೆಡಿಸಿಕೊಳ್ಳಲು ತನುವಿಗೆ ಸಾಧ್ಯವಾಗುವುದಿಲ್ಲ. ಇಂತಹ ಮಲತ್ರಯಗಳನ್ನು ಕೆಡಿಸುವುದಕ್ಕಾಗಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು ಪ್ರಭುವಾಗಿ ಬಂದ.

ಅಜ್ಞಾನಿಗಳಿಗೆ ಪ್ರತಿ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನವನ್ನು ತೋರುವುದಕ್ಕಾಗಿ ಪ್ರಭುದೇವರಾಗಿ ಬಂದು ತನುಗಳನ್ನು ಉದ್ಧರಿಸಿದ.

ಎನ್ನ ಜನನ ಮರಣದ ಅಜ್ಞಾನದ ಬೇರನ್ನು ಹರಿದುಹಾಕಲು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಸಾಕ್ಷಾತ್ ಪ್ರಭುದೇವರಾಗಿ ಬಂದು, ಎನ್ನ ಭವದ ಬೇರು ಹರಿದು ಹಾಕಿದ ಎಂದು ಸಿದ್ಧರಾಮ ಶಿವಯೋಗಿಗಳು ಅಲ್ಲಮಪ್ರಭುದೇವರನ್ನು ಸ್ಮರಿಸಿದ್ದಾರೆ.

**874**

**ಮಲತ್ರಯದ ಕೆಸರಿನೊಳಗೆ ಒಸೆದು ಬಿದ್ದವ ನಾನು,**

**ವಸುಧೆಪತಿ ನೀ ಎನ್ನ ತಡಿಗೆ ಚಾಚ.**
**ಮದೀಶನೆ, ಕರುಣಕಾನನದೊಳಗೆ ಸಂತಸವಿರಿಸ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪಿಂಡಕ್ಕೆ ಜನ್ಮಕೊಟ್ಟ ತಂದೆ ತಾಯಿಗಳು, ಮಲಮಯವಾದ ಅಣುವನ್ನು ಗರ್ಭಕ್ಕೆ ಚಿಮ್ಮಿ ತನುವಿಗೆ ಜನ್ಮ ನೀಡಿದರು. ಮಲ ಭರಿತವಾದ ಅಣುವೇ ತನುವಾಗಿ ಮಾಯಾಮಯವಾದ ಕತ್ತಲೆಯ ಬಲೆಯನ್ನು ಹೆಣೆದುಕೊಂಡು ತಂದೆ ತಾಯಿ ಗಂಡ ಹೆಂಡತಿ ಬಂಧು ಬಳಗ ಗುರು ಶಿಷ್ಯ ಫಲಪದವಿಗಳು ಎಂಬ ಮಾಯಾಮಯವಾದ ಸಂಸಾರ ಹೆಣೆದುಕೊಂಡು ತಾನು ಆ ಕೆಸರಲ್ಲಿ ಬಿದ್ದು ಒದ್ದಾಡುತ್ತಲಿದೆ.

ನಾನಾ ರೀತಿಯ ಕರ್ಮಗಳು ಕಾಯಕ್ಕೆ ಮೆತ್ತಿಕೊಂಡು, ಕಾಯ ಕೆಸರಿನಲ್ಲಿ ಜಾರಿ ಬಿದ್ದಿದೆ. ಪ್ರತಿ ಅಣುವಿನಲ್ಲಿ ನೀನು ಬಚ್ಚಿಟ್ಟುಕೊಂಡು ತನುವಾಗುವ ಬಯಕೆಯಿಂದ ಗರ್ಭಕ್ಕೆ ಹೋಗುವುದು ಹಡೆದ ತಂದೆ ತಾಯಿಗಳಿಗೇನು ಗೊತ್ತು? ತಂದೆ ತಾಯಿಗಳು ಮದೀಶ ಬೇಕೆಂದು ಹಡೆಯಲಿಲ್ಲ.

ಮಾಯಾಮಯವಾದ ಮತ್ತು ತುಂಬಿಕೊಂಡು ಅಣುವನ್ನು ಗರ್ಭಕ್ಕೆ ಚಿಮ್ಮಿದರು. ಅವರು ಚಿಮ್ಮಿದ ಪ್ರತಿ ಅಣುವಿನಲ್ಲಿ ನೀನಿರುವಿಯೆಂದು ಅವರಿಗೆ ಗೊತ್ತಿಲ್ಲ ತಂದೆ. ಅವರು ಹಡೆದ ಕೆಸರಿನೊಳಗೆ ಜಾರಿಬಿದ್ದವ ನಾನು. ವಸುಧೆಪತಿಯೇ, ಪರಮಾತ್ಮನೆ ಇದು ನೀನಿದ್ದ ಕಾಯ. ನೀ ಎನ್ನ ತಡಿಗೆ ಚಾಚ.

ಮದೀಶನೆ, ಕಪಿಲಸಿದ್ಧ ಮಲ್ಲಿಕಾರ್ಜುನನೆ, ಕರುಣಕಾನನದೊಳಗೆ ಎನ್ನನ್ನು ಸಂತಸದಿಂದಿರಿಸಾ.

**875**

**ಮಹವನೊಡಗೂಡಿಹೆವೆಂದೆಂಬಿರಿ:**
**ಮಹವೇನುತ್ತಮದಲ್ಲಿಪ್ಪುದೊ, ಮಧ್ಯಮದಲ್ಲಿಪ್ಪುದೊ,**
**ಅಧಮದಲ್ಲಿಪ್ಪುದೊ? ಇಪ್ಪುದಿಪ್ಪುದು ಉತ್ತಮದಲ್ಲಿ,**
**ಇಪ್ಪುದಿಪ್ಪುದು ಮಧ್ಯಮದಲ್ಲಿ, ಇಪ್ಪುದಿಪ್ಪುದು ಅಧಮದಲ್ಲಿ,**
**ಮಹಾಪ್ರಸಾದ ಸಂಪನ್ನರಾದವರಿಗೆ ಮಹವು**
**ಸರ್ವಾಂಗದಲ್ಲಿಪ್ಪುದಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಉತ್ತಮ ಮಧ್ಯಮ ಅಧಮ ಎಂದು ಲೋಕ ತನುವಿಗೆ ಪಟ್ಟ ಕಟ್ಟುತ್ತದೆ. ಇದು ಲೋಕದ ನಿಯಮ. ಉತ್ತಮನು ತಾನು ಪರಮಾತ್ಮನನ್ನು ಕಂಡಿದ್ದೇನೆ ನನಗೆ ಸಾಕ್ಷಾತ್ಕಾರವಾಗಿದೆ ಎಂದು ಲೋಕದ ಮುಂದೆ ಜಂಬ ಕೊಚ್ಚಿಕೊಳ್ಳುತ್ತಾನೆ.

ಮಧ್ಯಮರೆನ್ನಿಸಿಕೊಂಡವರು ಅಧಮರೆನ್ನಿಸಿಕೊಂಡವರು ಕೂಡಾ ಇದರಿಂದ ಹೊರತಾದವರೇನಲ್ಲ. ದಾನ ಧರ್ಮ ಪುಣ್ಯದ ಕೆಲಸಗಳನ್ನು ಮಾಡಿ ನನಗೆ ದೇವರು ಒಲಿದನೆಂದೇ ಹೇಳಿಕೊಳ್ಳುವರು. ಅದು ಅವರವರ ಸ್ವಭಾವ.

ಅಣು ರೇಣು ತೃಣ ಕಾಷ್ಟದಲ್ಲಿದ್ದ ಪರಮಾತ್ಮ ಸರ್ವಾಂಗದಲ್ಲಿಯೂ ಭರಿತವಾಗಿದ್ದಾನೆ. ಉತ್ತಮ ಮಧ್ಯಮ ಅಧಮ ಎಂದು ಲೋಕದಿಂದ ಹಣೆಪಟ್ಟಿ ಹೊಂದಿದ ಕಾಯಗಳಲ್ಲಿಯೂ ಅರಿವು ಎಂಬ ಗುರುದೇವರು ಸಂಗಮವಾಗಿದ್ದಾನೆ ಎಂಬುದು ಅವರಿಗೆ ಗೊತ್ತಿಲ್ಲ ಅಷ್ಟೇ.

ಉತ್ತಮ ಮಧ್ಯಮ ಅಧಮ ಎಂಬ ಕಾಯಕದಲ್ಲಿ ನಿರತವಾದ ಮನ ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯದ ಸಂಗ ಮಾಡಿದಾಗ ಮನ ಘನಮನವಾಗುತ್ತದೆ. ಅರಿವಿನ ಮಹಾಪ್ರಸಾದ ಪಡೆದು ಧನ್ಯನಾಗುತ್ತದೆ. ಇಂತಹ ಘನಮನವಾದ ಕಾಯಕ್ಕೆ ಮಾತ್ರ ಮಹವು ಸರ್ವಕಾಯಗಳಲ್ಲಿಯೂ ಸಂಗಮವಾಗಿದೆ ಎಂದು ಗೊತ್ತಾಗುತ್ತದೆ.

**876**

**ಮಹಾಜ್ಯೋತಿಯನೊಡಗೂಡಿಪ್ಪ**
**ಉರುತರ ಪರಮಜ್ಞಾನಿ ಘನತರರದ ಸಂಯೋಗಿ**
**ಬ್ರಹ್ಮಾಂಡಂಗಳು ನಿನ್ನ ಮರೆಸಲರಿಯವು.**
**ಸಕಲ ಬ್ರಹ್ಮಾಂಡಂಗಳನೊಳಗು ಮಾಡಿ**
**ಮೇಲೆ ತೊಳಗಿ ಬೆಳಗುತಿಪ್ಪ**
**ಎಮ್ಮ ಶರಣರ ಕರಸ್ಥಲದಲ್ಲಿ ಸಿಕ್ಕಿ.**
**ಮಹಾದೀಪ್ತಿಯನಿಂಬುಗೊಂಡಿತ್ತಾ ಕರಸ್ಥಲವು:**
**ಆ ಕರಸ್ಥಲಕ್ಕೆ ಆವ ಬ್ರಹ್ಮಾಂಡಂಗಳ ಸರಿಯೆಂಬೆ?**
**ನಿಮ್ಮ ಶರಣರ ಕರಸ್ಥಲವೆ ಪ್ರಮಾಣವಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮಹಾಬೆಳಗಿನೊಂದಿಗೆ ಒಡಗೂಡಿದ ಪರಮಜ್ಞಾನಿ, ಘನತರದ ಸಂಯೋಗಿ. ಬ್ರಹ್ಮಾಂಡಂಗಳು ನಿನ್ನನ್ನು ಮರೆಸಲರಿಯವು.

ಸಕಲ ಬ್ರಹ್ಮಾಂಡಂಗಳನ್ನು ಒಳಗು ಮಾಡಿಕೊಂಡು ತೊಳಗಿ ಬೆಳಗುತ್ತಿರುವ ಬೆಳಗೆ, ಎಮ್ಮ ಶರಣರ ಕೈಯಲ್ಲಿ ನೀನು ಸಿಕ್ಕಿಹಾಕಿಕೊಂಡೆಯಲ್ಲ! ಕೈ ಎಂದರೆ ಬರೀ ಕೈಯಲ್ಲ; ಸರ್ವಾಂಗದ ಐದು ಭಾಗಗಳು! ಶರಣರ ಸರ್ವಾಂಗವೂ ಮಹಾದೀಪ್ತಿಯನು ಇಂಬುಗೊಂಡು ಬೆಳಗುತ್ತಿತ್ತು ಲಿಂಗವಾಗಿ!

ಶರಣರ ಕರಸ್ಥಲಕ್ಕೆ ಆವ ಬ್ರಹ್ಮಾಂಡಗಳ ಸರಿಯೆಂಬೆ? ನಿಮ್ಮ ಶರಣರ ಕರಸ್ಥಲವೆ ಪ್ರಮಾಣವಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**877**

**ಮಹಾದೇವ ದೇವಂಗೇರಿಸುವೆ, ಆರ ಹಸ್ತ ಮುಟ್ಟದ,**
**ಆರ ದೃಷ್ಟಿ ಮುಟ್ಟದ, ಮನಪುಷ್ಪದಿಂದ ಪೂಜಿಸುವೆನೆನ್ನ**
**ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ದೇವನಾ.**

ಮಹಾದೇವನೇ ಮನದೊಡೆಯನೆ ಎನ್ನ ಕಾಯದಲ್ಲಿಯೇ ಸಂಗಮವಾದ ಮಲ್ಲಿಕಾರ್ಜುನನೇ; ಯಾರ ಹಸ್ತವೂ ತಾಗದ, ಯಾರ ದೃಷ್ಟಿಯೂ ತಾಗದಂತಹ ಮನಪುಷ್ಪದಿಂದ ಪೂಜಿಸುವೆನು ನಿನ್ನನ್ನು.

ಸಕಲ ಪುಷ್ಪಗಳಿಗೆ ದುಂಬಿಯ ಎಂಜಲು ಹತ್ತಿದೆ. ಗಾಳಿ ಸೋಂಕಿದೆ. ಸೂರ್ಯನ ಬೆಳಕಿನಿಂದ ಅರಳಿ ನಿಂತಿದೆ; ಹೀಗಾಗಿ ಯಾವ ಪುಷ್ಪಗಳೂ ಮೀಸಲಲ್ಲ. ಹರಿಯುವ ಜಲವೂ ಮೀಸಲಲ್ಲ. ಹಾಲು

ಮೃಷ್ಟಾನ್ನಗಳೂ ಮೀಸಲಲ್ಲ.

ಮನವೆಂಬ ಪುಷ್ಪ ಮಾತ್ರ ನಿನಗಾಗಿ ಎಷ್ಟೋ ಜನ್ಮಗಳಿಂದ ಕಾದು ಕುಳಿತಿದೆ. ಪರಿಮಳ ಭರಿತವಾದ ಪುಷ್ಪ.

ಪುಷ್ಪದಲ್ಲಿ ಸುಗಂಧವಿದೆ. ಅದು ಕೊಳೆತಾಗ ದುರ್ಗಂಧ ಬೀರುತ್ತದೆ. ಮನ ಪುಷ್ಪ ಹಾಗಲ್ಲ; ಅದು ನಿನಗಾಗಿಯೇ ಅರಳಿ ನಿಂತಿದೆ! ನಿನ್ನ ಮುಡಿಗೇರುವುದೊಂದೇ ತಡ ಪರಿಮಳ ಬೀರುತ್ತಾ ದಶದಿಕ್ಕುಗಳಿಗೆ ಹರಡುತ್ತದೆ!

**878**

**ಮಹಾಬೆಳಗಿನಲ್ಲಿ ಭವಿಸಿದಳವ್ವೆ,**
**ಮಹಾಬೆಳಗಿನಲ್ಲಿ ಪ್ರಬಲವಾಗಿ**
**ಮಹಾಬೆಳಗಿನ ಬೆಳಗೆ ಭಕ್ತರಲ್ಲಿಯೆ ತೋರಿ**
**ಮಹಾಬೆಳಗಿನ ಬೆಳಗು ಕಪಿಲಸಿದ್ಧ ಮಲ್ಲಿಕಾರ್ಜುನ.**

ಬಯಲ ಬೆಳಗೇ ಬಿಂದುವಾಗಿ, ಬೀಜವಾಗಿ, ಅಂಗದಿಂದ ಅಂಗದ ಗರ್ಭಕ್ಕೆ ಚಿಮ್ಮಿ; ಸರ್ವಾಂಗವನ್ನೂ ಬೆಳಗಿ, ಬೆಳಗಿಂಗೆ ಬೆಳಗಾಗಿ ಬೆಳಗುವ ನಗುಮುಖದ ಚೆಲುವನೊಂದಿಗೆ ಬಂದವಳು ಅವ್ವೆ.

ಸಾವಿಲ್ಲದ ರೂಹಿಲ್ಲದ ಕೇಡಿಲ್ಲದ ಬೆಳಗುವ ಚೆಲುವನ ಬೆಳಗಿನಿಂದ ಹುಟ್ಟಿದ ಅವ್ವೆಗೂ ಸಾವಿಲ್ಲ ಕೇಡಿಲ್ಲ. ಮಹಾಬೆಳಗಿನ ಬೆಳಗು ಭಕ್ತರಲ್ಲಿಯೂ ತೋರಿ ಬೆಳಗುವ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಬೆಳಕಿನಲ್ಲಿ ಮಿಂದು ಬೆಳಗಾಗಿ ಒಂದಾದಳು.

**879**

**ಮಹಾಭಕ್ತರ ಹೃದಯದಲ್ಲಿ**
**ದೇವರ ದೇವ ಬೈಸಣಿಗೆಯಾಗಿಪ್ಪ.**
**ಭಕ್ತರ ವಚನಂಗಳು ಗಂಗಾನದಿಯಾಗಿ,**
**ಎದೆ ಕರ್ಣಂಗಳು ತುಂಬಲೊಡನೆ**
**ವಿರಕ್ತಿ ವೇಧೆಯಾಗಿ ಭಕ್ತಿಯಾಮೋದವಾಗಿ**
**ನಿಮ್ಮ ಶ್ರೀಪಾದವ ಸುತ್ತುಗೆ ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಮಹಾಭಕ್ತರ ಹೃದಯದಲ್ಲಿ ದೇವರ ದೇವನಾದ ಕಪಿಲಸಿದ್ಧ ಮಲ್ಲಿಕಾರ್ಜುನದೇವನು ಬೀಸಣಿಗೆಯಾಗಿಪ್ಪನು.

ಭಕ್ತರ ವಚನಂಗಳು ಗಂಗಾನದಿಯಾಗಿ, ಎದೆ ಕರ್ಣಂಗಳು ತುಂಬಲೊಡನೆ ವಿರಕ್ತಿ ವೇಧೆಯಾಗಿ ಭಕ್ತಿಯು ಆಮೋದವಾಗಿ ನಿಮ್ಮ ಶ್ರೀಪಾದವ ಸುತ್ತುಗೆ ಕಪಿಲಸಿದ್ಧ ಮಲ್ಲಿನಾಥಯ್ಯಾ.

'ಎನ್ನ ತಪ್ಪು ಅನಂತ ಕೋಟಿ, ನಿಮ್ಮ ಸೈರಣೆಗೆ ಲೆಕ್ಕವಿಲ್ಲ' ಎಂದು ಬಸವಣ್ಣ ಹಾಡಿದ್ದಾರೆ. ತನುವನ್ನು ಆವರಿಸಿದ ಮನ ಅನಂತಕೋಟಿ ತಪ್ಪು ಮಾಡಿದರೂ ಕೂಡಾ ತನುವಿನಲ್ಲಿಯೇ ತನ್ಮಯವಾದ ಪರಮಾತ್ಮನು ಮನದ ಮೈದಡವಿ ಮೃದು ವಚನದಿಂದ ನೇವರಿಸುತ್ತಾನೆ. ಮತ್ತೊಮ್ಮೆ

ತಪ್ಪು ಮಾಡಬೇಡ ಎಂದು ಮನಕ್ಕೆ ಹೇಳುತ್ತಾನೆ. ಮನ ಪರಮಾತ್ಮನಿಗೆ ಭಕ್ತನಾಗುವವರೆಗೆ ಆತನ ಈ ಕೆಲಸ ಬೀಸಣಿಗೆಯಾಗಿ ನಡೆದೇ ಇರುತ್ತದೆ.

ಎಂದು ಮನ ಮನದೊಡೆಯ ಮಹಾದೇವನಿಗೆ ಭಕ್ತನಾಗುತ್ತದೆಯೋ ಅಂದೆ ಆ ಕಂದನಿಗಾಗಿ ದೇವರದೇವ ಕೈಯಲ್ಲಿ ಬೀಸಣಿಗೆ ಹಿಡಿದು ಮಹಾಭಕ್ತನ ಆರೈಕೆ ಮಾಡುತ್ತಾನೆ. ಭಕ್ತ ಮಾತನಾಡಿದ ಮಾತುಗಳೆಲ್ಲ ವಚನಗಳಾಗಿ ಗಂಗಾನದಿಯಂತೆ ಹರಿಯುತ್ತವೆ.

ಎದೆ ಕರ್ಣಂಗಳು ತುಂಬಿ ಭಕ್ತನ ಭಕ್ತಿಯು ಆಮೋದವಾಗಿ ಪರಮಾತ್ಮನ ಶ್ರೀಪಾದಗಳನ್ನು ತೋಯಿಸುತ್ತವೆ.

**880**

**ಮಹಾವಿಂಧ್ಯ ಪರ್ವತದಲ್ಲಿ ಜ್ಯೋತಿರ್ಮಯವೆಂಬ**
**ಪ್ರಜ್ವಲ ಸ್ಫಟಿಕ ಘಟದಲ್ಲಿ ಒಪ್ಪಿ ತೋರುವ**
**ಜ್ಯೋತಿರ್ಮಯ ಲಿಂಗವೇ ನೀನು, ಸೂಕ್ಷ್ಮವೇ ನೀನು.**
**ಉರುತರ ಸಕಲ ಬ್ರಹ್ಮಾಂಡಂಗಳೆಲ್ಲ ನಿನ್ನ**
**ರೋಮಕೂಪದ ಕೊನೆಯ ಮೊನೆಯ ಮೇಲೆ.**
**ಸಕಲ ವ್ಯಾಪಿಯಡಗಿಪ್ಪಂಥ ಬ್ರಹ್ಮಾಂಡಂಗಳನ್ನು ಧರಿಸಿಪ್ಪ ನಿನ್ನ**
**ಅನಂತ ವೇದಂಗಳೆಲ್ಲವು ನಿನ್ನೊಳಗೆ.**
**ನೀನು ಸರ್ವವ್ಯಾಪ್ತಿಗೆ ಒಳಗಾದುದಿಲ್ಲ.**
**ನಿನ್ನ ಮೀರಿದ ಆಧಿಕ್ಯ ಒಂದೂ ಇಲ್ಲ.**
**ಘನತರಲಿಂಗವೆ ಗುರುಕರುಣದಿಂದ**
**ಎನ್ನ ಕರಸ್ಥಲಕ್ಕೆ ಬಂದು ಸೂಕ್ಷ್ಮವಾದೆಯಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವೆಂಬುದು ಮಹಾವಿಂಧ್ಯ ಪರ್ವತ. ಜ್ಯೋತಿರ್ಮಯಲಿಂಗ. ಪ್ರಜ್ವಲ್ಯಮಾನವಾಗಿ ಥಳಥಳನೆ ಹೊಳೆಯುವ ಸ್ಫಟಿಕದ ಘಟಕ. ಅದರಲ್ಲಿ ಒಪ್ಪಿ ತೋರುವ ಜ್ಯೋತಿರ್ಮಯ ಲಿಂಗಯ್ಯನೇ ನೀನು. ಸೂಕ್ಷ್ಮಾತಿ ಸೂಕ್ಷ್ಮವೇ ನೀನು.

ಶ್ರೇಷ್ಠಾತಿ ಶ್ರೇಷ್ಠನು ನೀನು. ಸಕಲ ಬ್ರಹ್ಮಾಂಡಂಗಳೆಲ್ಲ ನಿನ್ನ ರೋಮ ಕೂಪದ ಮೊನೆಯ ಮೇಲೆ ನಿಂತಿವೆ. ಸಕಲ ವ್ಯಾಪ್ತಿಯಲ್ಲಿ ಅಡಗಿರುವಂಥ ಬ್ರಹ್ಮಾಂಡಂಗಳನ್ನು ಧರಿಸಿಪ್ಪ ನಿನ್ನ ಅನಂತ ವೇದಗಳು ಆಗಮ ಉಪನಿಷತ್‌ಗಳು ಭಗವದ್ಗೀತೆ ಬೈಬಲ್ ಕುರಾನ್‌ಗಳು ನಿನ್ನೊಳಗೆ ಅಡಗಿವೆ ಪರಮಾತ್ಮನೆ.

ನಿನ್ನ ವ್ಯಾಪ್ತಿಗೆ ಮೀರಿದ ಆಧಿಕ್ಯ ಒಂದೂ ಇಲ್ಲ. ಘನತರ ಲಿಂಗಯ್ಯನೆ ಗುರುದೇವನ ಕರುಣೆಯಿಂದಾಗಿ ಎನ್ನಂಗದಲ್ಲಿ ಬಂದು ಸಂಗಮವಾದೆ ತಂದೆ. ಸೂಕ್ಷ್ಮಾತಿ ಸೂಕ್ಷ್ಮವಾದೆಯಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**881**

**ಮಹಿಮೆಯುದತಿಶಯ ನಿಮಿತ್ತ ನಿಮ್ಮ ಇಷ್ಟಧಾರಣಾರ್ಹವಲ್ಲದೆ,**

**ಅನುಭವ ತೊಡಕಿನ ಖಂಡನೆಯಿಂದಿಲ್ಲ; ಆದರಾಗಬಹುದು.**
**ಲಿಂಗವಂತನು ಪುರಾತನ ಮೆಚ್ಚುಗೆಯಲ್ಲದೆ ಪರಬ್ರಹ್ಮದ ಮೆಚ್ಚಲ್ಲ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸೃಷ್ಟಿಕರ್ತ ನೀವೆಂದು, ಫಲಪದವಿಗಳನ್ನು ಕೊಡುವ ದೇವನೆಂದು ಅಂಗದ ಮೇಲೆ ಲಿಂಗಧರಿಸಿ ನಿನ್ನನ್ನು ಪೂಜಿಸುವ ಲೋಕವೊಂದು ಇದೆ. ಅದು ಹಿರಿಯರು ಹಾಕಿಕೊಟ್ಟ ಮಾರ್ಗವನ್ನು ಅಳಿಯದೆ ಆಚರಿಸುವ ಲೋಕ. ನಿನ್ನನ್ನು ಅರಿಯದ ಲೋಕ.

ಅಂಗವನ್ನು ಅವರಿಸಿದ ಮನದ ಮೂಲಕ ಅಂಗದಲ್ಲಿಯೇ ಸಂಗಮವಾದ ನಿನ್ನನ್ನು ಅನುಭಾವದ ಮೂಲಕ ತಿಳಿಯಬೇಕಲ್ಲದೆ, ಅಂಗದ ಮೇಲೆ ಲಿಂಗಧರಿಸಿ ಆ ಲಿಂಗವನ್ನು ಆರಾಧಿಸಿದರೆ ಅಂಗದಲ್ಲಿಯೇ ಇದ್ದ ನೀನು ಅಂಗವನ್ನು ಆವರಿಸಿದ ಮನಕ್ಕೆ ಒಲಿಯಲು ಸಾಧ್ಯವೆ?.

ಲಿಂಗವಂತನು ತನ್ನ ಕುಲಜರಾದ ಹಿರಿಯರನ್ನು ಮೆಚ್ಚಿದನಲ್ಲದೆ ಅಂಗದಲ್ಲಿಯೇ ಸಂಗಮವಾದ ಬ್ರಹ್ಮನನ್ನು ಮೆಚ್ಚಲಿಲ್ಲ. ಬ್ರಹ್ಮನ ಮೆಚ್ಚುಗೆಯೂ ಅವನ ಮೇಲಿಲ್ಲ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

**882**

**ಮಾಡದುದ ಮಾಡಲು ದೈವಬಲವೆಂಬುದೀ ಲೋಕ.**
**ಎಲೆ ಕಪಿಲಸಿದ್ಧ ಮಲ್ಲಯ್ಯಾ,**
**ಏಲೇಶಂಗೆ ಪ್ರಾಣವ ಕೊಟ್ಟುದಾವ ಬಲ ಹೇಳಾ,**
**ಸೆರಗೊಡ್ಡಿ ಬೇಡುವೆ.**

ದೇಹವೆ ದೇವಾಲಯ. ದೇಹವನ್ನು ಸೃಷ್ಟಿಮಾಡಿದ ದೇವರು ಆ ದೇಹದಲ್ಲಿಯೇ ಇದ್ದಾನೆ. ತನ್ನನ್ನು ತಿಳಿಯಲು ದೇವರು ದೇಹದಲ್ಲಿಯೇ ಮನವೊಂದನ್ನು ಸೃಷ್ಟಿಮಾಡಿದ.

ಮನ ದೇಹದಲ್ಲಿಯೇ ಇದ್ದ ದೇವರ ಶ್ರೀಚರಣಗಳಿಗೆ ದಾಸಾನು ದಾಸನಾಗ ಬೇಕಿತ್ತು. ಶರುಣು ಹೋಗಿ ಶರಣಾಗತನಾಗಿ ಶರಣನಾಗಬೇಕಿತ್ತು. ಆದರೆ ಮನ ದೇಹದಲ್ಲಿದ್ದ ದೇವರನ್ನು ತಿಳಿಯಲಿಲ್ಲ, ಆ ದೇವರ ಸಂಗ ಮಾಡಲಿಲ್ಲ. ದೇಹದ ಸಂಗ ಮಾಡಿತು. ದೇಹವನ್ನು ಸಕಲ ಬ್ರಹ್ಮಾಂಡವನ್ನು ಸೃಷ್ಟಿಮಾಡಿದ ದೇವರು, ಹೊರಗಿದ್ದಾನೆಂದು ತಿಳಿದು, ಭವ್ಯವಾದ ದೇವಾಲಯವನ್ನು ದೇಹದಿಂದ ನಿರ್ಮಾಣ ಮಾಡಿತು.

ಕಲ್ಲಿನಿಂದ ಮಾಡಿದ ದೇವಾಲಯ, ಕಲ್ಲಿನಿಂದ ಮಾಡಿದ ದೇವರು, ಆ ದೇವರಿಗೆ ವಸ್ತ್ರಾಭರಣಗಳನ್ನು ತೊಡಿಸಿ ಭ್ರಮೆಯಿಂದ ಆರಾಧಿಸಿತು. ದೇವರ ಆಶೀರ್ವಾದದಿಂದ ದೈವಬಲದಿಂದಲೇ ಈ ಕೆಲಸವಾಯಿತೆಂದು ತಿಳಿದು ಭ್ರಮೆಯಿಂದ ದೇಹದ ಆಯುಷ್ಯವನ್ನೇ ಕಳೆಯಿತು.

ದೇಹಕ್ಕೆ ದೇಹವನ್ನು ಆವರಿಸಿದ ಮನಕ್ಕೆ ದೇವರ ದರುಶನವಾಗಲೇ ಇಲ್ಲ. ದೇಹದಲ್ಲಿಯೇ ಇದ್ದ ದೇವರು ನಾನು ಇಲ್ಲಿದ್ದೇನೆ ನೀನು ಅಲ್ಲಿ ಆರಾಧಿಸುವೆಯಲ್ಲ ಎಂದು ಕೂಗಿ ಹೇಳಿದರೂ ದೇವರ ಕೂಗು ದೇಹಕ್ಕೆ ಕೇಳಲೇ ಇಲ್ಲ. ದೇಹದಲ್ಲಿಯೇ ಇದ್ದ ದೇವರನ್ನು ದೇಹವನ್ನು ಅವರಿಸಿದ ಮನ ಸೆರಗೊಡ್ಡಿ ಬೇಡಲಿಲ್ಲ.

ಸಕಲ ಶರಣರು, ದಾಸರು, ಸಂತರು ನಿನ್ನನ್ನು ಬೇಡಿ ನಿನ್ನ ದರುಶನ ಪಡೆದಿದ್ದಾರೆ. ಅವರ

ಪಾದದ ಧೂಳಿಯಾಗಿ ನನ್ನನ್ನು ಇರಿಸು ಎಂದು ಸೆರಗೊಡ್ಡಿ ಬೇಡಿದರೆ ತಥಾಸ್ತು ಎನ್ನುತ್ತಾನೆ ದೇವರು.

**883**

**ಮಾಡಿದ ಕಾರ್ಯದಿಂದ ಜ್ಞಾನ ಸಾಧನೆಯಾಗಬೇಕು.**
**ಮಾಡಿದ ಕಾರ್ಯದಿಂದ ಸತ್ಪುರುಷರ ಹರ್ಷ ನಿರ್ಭರವಾಗಬೇಕು.**
**ಮಾಡಿದ ಕಾರ್ಯದಿಂದ ಪ್ರಮಥರು ಅಹುದಹುದೆನಬೇಕು.**
**ಅದು ಕಾರಣ, ಮಾಡಿಸಿ ಜ್ಞಾನಪ್ರಾಪ್ತಿಯಾಗಲಿಲ್ಲ;**
**ಮಾಡಿಸಿ ಪ್ರಮಥರ ಮನೋಹ್ಲಾದವಾಗಲಿಲ್ಲ;**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಸಾಕ್ಷಾತ್ಕಾರವಾಗಲಿಲ್ಲ;**
**ಕೇಳಾ ಕೇದಾರಯ್ಯಾ.**

ಮನ ಕಾಯದೊಂದಿಗೆ ಸಂಗ ಮಾಡಿ ತನಗೆ ಬೇಕಾದ ಕೆಲಸವನ್ನು ಮಾಡುತ್ತದೆ. ಕಾಯದ ಕೆಲಸ ಕಾಯದ ಭೋಜನಕ್ಕಾಗಿಯೇ ಹೊರತು ಜ್ಞಾನಕ್ಕಾಗಿ ಅಲ್ಲ, ಮನ ತನುವಿನೊಂದಿಗೆ ಮಾಡಿದ ಕೆಲಸದಿಂದ ಮನಕ್ಕೆ ಫಲ ಪದವಿ ಶ್ರೀಮಂತಿಕೆ ಅಧಿಕಾರ ಸಿಗುತ್ತದೆಯೇ ಹೊರತು, ಜ್ಞಾನ ಸಿಗುವುದಿಲ್ಲ.

ಊಟಕ್ಕಾಗಿ ಕಾಯವನ್ನು ದುಡಿಯಲು ಹಚ್ಚಿದ ಮನಕ್ಕೆ ತಾನು ಬೇಡಿದ ಊಟಸಿಗುತ್ತದೆ. ಜ್ಞಾನಕ್ಕಾಗಿ ಮನ, ಕಾಯವನ್ನು ಕಾಯಕದಲ್ಲಿ ತೊಡಗಿಸಿದರೆ ಕಾಯಕ್ಕೆ ಜ್ಞಾನ ಲಭ್ಯವಾಗುತ್ತದೆ. ಇಂಥ ಕಾಯಕ ಮಾಡುವುದರಿಂದಾಗಿ ಕಾಯಕ್ಕೆ ಜ್ಞಾನ ಲಭ್ಯವಾಗಿ ಸತ್ಪುರುಷರಿಗೆ ಹರ್ಷವಾಗುತ್ತದೆ. ಕಾಯ ಮಾಡಿದ ಜ್ಞಾನದ ಕಾಯಕದಿಂದಾಗಿ ಪ್ರಮಥರು ಅಹುದಹುದೆನ್ನುತ್ತಾರೆ.

ಕಾಯ ಕಾಯಕದಲ್ಲಿ ನಿರತವಾಗದೆ ಅನ್ಯ ಕಾಯಗಳ ಮೂಲಕ ಕಾಯಕ ಮಾಡಿಸಿದಲ್ಲಿ ಜ್ಞಾನ ಪ್ರಾಪ್ತಿಯಾಗುವುದಿಲ್ಲ. ಪ್ರಮಥರ ಮನವೂ ಆಹ್ಲಾದಕರವಾಗಿರುವುದಿಲ್ಲ. ಹಾಗೆಯೇ ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನೂ ಸಾಕ್ಷಾತ್ಕಾರವಾಗುವುದಿಲ್ಲ.

**884**

**ಮಾಡಿದೆನೆಂಬ ಪಾಪದ ಶುದ್ಧಿ ಸೂಕ್ಷ್ಮದಲ್ಲಿ ಹೇಳಿಹೆನಯ್ಯಾ;**
**ವ್ಯಾಸನ ಮನದ ಶಾಂತಿಗಾಗಿ**
**ರೂಢಿಯಲ್ಲಿ ಮೈದೊಳೆದನೆಂಬ ಗಾದೆಯಂತೆ,**
**ಮಾಡಿದ ಪಾಪವ ತೀರಿಸಲಿಲ್ಲ.**
**ಇನ್ನು ಮುಂದೆ ಮಾಡೆನೆಂಬುದಕ್ಕೆ ಗಂಗೆಯ ಸ್ನಾನ ಕೇಳಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

''ಮಾಡಿದೆನೆಂಬುದು ಮನದಲ್ಲಿ ಹೊಳೆದಡೆ, ಏಡಿಸಿ ಕಾಡಿತ್ತು ಶಿವನ ಡಂಗುರ, ಮಾಡಿದೆನೆನ್ನದಿರಾ ಲಿಂಗಕ್ಕೆ, ಮಾಡಿದೆನೆನ್ನದಿರಾ ಜಂಗಮಕ್ಕೆ, ಮಾಡಿದೆನೆಂಬುದು ಮನದಲ್ಲಿಲ್ಲದಿದ್ದಡೆ ಬೇಡಿತ್ತನೀವನು ಕೂಡಲ ಸಂಗಮದೇವ''.

''ನೂರು ಇಲಿಗಳನ್ನು ತಿಂದು ಬೆಕ್ಕು ಮೆಕ್ಕಾಕ್ಕೆ ಹೋಗಿ ಪ್ರಾರ್ಥಿಸಿದಂತೆ'' ಎನ್ನುವ ಗಾದೆಯೊಂದು ಇದೆ. ಹಾಗೆಯೇ ಮನದ ಶಾಂತಿಗಾಗಿ ಗಂಗೆಗೆ ಹೋಗಿ ಮೈದೊಳೆದರೆ ಮಾಡಿದ ಪಾಪ

ಹೋಗುವುದಿಲ್ಲ. ಬದಲಾಗಿ ಮುಂದೆ ಪಾಪ ಮಾಡುವುದಿಲ್ಲವೆಂದು ಗಂಗೆಯ ಸ್ನೇಹ ಮಾಡಿದಂತೆ!

ಮನ ತನುವಿನೊದಿಗೆ ಪುಣ್ಯಮಾಡಿದರೂ ಕೂಡಾ ತನುವಿನಲ್ಲಿ ಮಾಡಿದೆನೆಂಬ ರೋಗ ಅಚ್ಚಳಿಯದೆ ಉಳಿಯುತ್ತದೆ. ಮಾಡಿದೆ ನಾನೇ ಮಾಡಿದೆನೆಂದು ಸಾಯುವವರೆಗೆ ಹೇಳುತ್ತಾ ತಿರುಗುತ್ತದೆ.

ಪಾಪ ಮಾಡಿದರು ಕೂಡಾ ಮಾಡಬಾರದಿತ್ತು ಮಾಡಬಾರದಿತ್ತು ಎಂದು ತನುವಿನೊಂದಿಗೆ ಮನ ಮರುಗುತ್ತಾ ಮರುಗುತ್ತಾ ಸಾಯುವವರೆಗೆ ಕಳವಳಿಸುತ್ತದೆ.

ತಾನು ಮಾಡಿದ್ದಾದರೂ ಏನು? ತನ್ನದೇ ಆದ ವಸ್ತುಗಳು ಒಂದಾದರೂ ಇದೆಯಾ ದಾನ ಮಾಡುವುದಕ್ಕೆ? ಕದ್ದೆನೆಂಬ ಪಾಪ, ಕೊಟ್ಟೆನೆಂಬ ಪುಣ್ಯದ ರೋಗ ತನುವಿಗೆ ಮನ ಮೆತ್ತಿ, ತನುವಿನೊಂದಿಗೆ ಆಡುವ ಆಟವಿದು! ಜಗದೀಶ ಆಟವಿದು!

ಎಲ್ಲಿಯವರೆಗೆ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ಸಂಗ ಮನ ಮಾಡುವುದಿಲ್ಲವೊ, ಅಲ್ಲಿಯವರೆಗೆ ಮಾಡಿದೆನೆಂಬ ಪಾಪದ ರೋಗ ಹೋಗುವುದಿಲ್ಲ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಸಂಗ ಮಾಡಿದ ಕೂಡಲೇ ಮನ ಘನಮನವಾಗುತ್ತದೆ.

**885**

**ಮಾಡಿ ಮಾಡಿ ನಿತ್ಯ ಲಿಂಗಾರ್ಚನೆಯ,**
**ಮಾಡಿ ಮಾಡಿ ನಿತ್ಯ ಜಂಗಮಾರ್ಚನೆಯ,**
**ಮಾಡಿ ಮಾಡಿ ವಿಸ್ತಾರವೆಂದು ಮಾಡಿ ಕೂಡಿದವರೆಲ್ಲ ನಿತ್ಯರಾದರು.**
**ಮಾಡದೆ ಕೂಡದೆ ಯೋಗವೆಂದು, ಆತ್ಮಬೋಧೆಯೆಂದು,**
**ಯೋಗಿಗಳ ಅನುಮತವೆಂದು,**
**ಆಧ್ಯಾತ್ಮವ ನುಡಿದು ಶಿವಪೂಜೆಗೆ ದೂರವಾಗಬೇಡ.**
**ಅಲ್ಲದೆ, ಕೆಲವರೊಳಗೆ ಆಡಿ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಚಿತ್ತಕ್ಕೆ ದೂರವಾಗದೆ**
**ಶಿವಾರ್ಚನೆಯ ಮಾಡಿದಡೆ ದಿವ್ಯಯೋಗಿಯಪ್ಪೆ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಅಂಗವನ್ನು ಆವರಿಸಿದ ಮನದಿಂದ ನಿತ್ಯ ನಿತ್ಯ ಲಿಂಗಾರ್ಚನೆಯ ಮಾಡುವುದು. ಆ ಲಿಂಗಯ್ಯನಿಂದ ಉದ್ಭವವಾದ ಜಂಗಮನಿಗೆ ಮನದಿಂದಲೇ ಅರ್ಚಿಸಿ, ಪೂಜಿಸುವುದು, ಹೀಗೆ ಆರಾಧಿಸಿ, ಅರ್ಚಿಸಿ ಪೂಜಿಸಿದವರೆಲ್ಲಾ ನಿತ್ಯರಾದರು, ಸತ್ಯ ಶರಣರಾದರು.

ಏನೂ ಮಾಡದೇ, ಕೂಡದೇ, ಯೋಗವೆಂದು ಆತ್ಮ ಬೋಧೆಯೆಂದು, ಇದು ಯೋಗಿಗಳ ಅನುಮತವೆಂದು, ಆಧ್ಯಾತ್ಮವನ್ನು ಬಾಯಿಯಲ್ಲಿ ನುಡಿದು ಅಂಗದಲ್ಲಿಯೇ ಸಂಗಮವಾದ ಅರಿವಿನ ಪೂಜೆಗೆ ದೂರವಾದರು.

ಬಾಯಿಮಾತಿನಲ್ಲಿ ಆಡಿ ಅರಿವೆಂಬ ಗುರುದೇವನ ಚಿತ್ತಕ್ಕೆ ದೂರವಾಗದೇ ಶಿವಾರ್ಚನೆಯ ಮಾಡಿದಡೆ ದಿವ್ಯ ಯೋಗಿಯಪ್ಪೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನಾಗುವುದರಲ್ಲಿ ಸಂದೇಹವಿಲ್ಲ ಎಲೆ ಮನವೇ.

**886**

**ಮಾಡಿ ಮಾಡಿ ಹೋದವರಿಗೆ ಪದವಿಯಾದಡೆ,**

**ಅದು ನ್ಯಾಯವಾಯಿತು ದೇವರಲ್ಲಿ.**
**ಮಾಡಿ ಮಾಡದೆ ಹೋದವರಿಗೆ ಪದವಿಯಾದಡೆ,**
**ಅದು ನ್ಯಾಯವೆ ದೇವರಲ್ಲಿ.**
**ಮಾಡಿ ಶುದ್ಧನಾದೆನೆಂಬುದು ಮನದ ಭ್ರಮೆ.**
**ಮಾಡದೆ ಶುದ್ಧನಾದೆನೆಂಬುದೂ ಮನದ ಭ್ರಮೆಯದು.**
**ಗಂಗೆಯ ಮುಳುಗಿದವರೆಲ್ಲಾ ಶುದ್ಧ; ಇದು ಸತ್ಯ, ಇದು ಅಸತ್ಯ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮಾಡಿ ಮಾಡಿ ಹೋದವರಿಗೆ ಲೋಕ ಪದವಿಯನ್ನು ಕೊಟ್ಟು ಸನ್ಮಾನಿಸುತ್ತದೆ. ಇದು ನ್ಯಾಯದ ಮಾತು. ಮಾಡಿ ಮಾಡದೇ ಹೋದವರಿಗೆ ಪದವಿಯಾದಡೇ ಅದು ನ್ಯಾಯವೇ ದೇವರಲ್ಲಿ: ಮಾಡಿದ ಕೆಲಸ ಕೆಲವರಿಗೆ ಕಾಣುತ್ತದೆ. ಇದು ಲೋಕದ ನಿಯಮ. ಲೋಕ, ಮಾಡಿದವರನ್ನು ಮಾತ್ರ ನೋಡುತ್ತದೆ. ಮಾಡಿಯೂ ಮಾಡದವರನ್ನು ನೋಡುವ ಶಕ್ತಿ ಲೋಕಕ್ಕಿಲ್ಲ. ನೋಡಿಯೂ ನೋಡದವರನ್ನು ನೋಡುವ ಶಕ್ತಿ ಲೋಕಕ್ಕಿಲ್ಲ.

ಶರಣರು, ಹೆಣ್ಣುಗಂಡು ವಿಭಾಗಿಸಿ ನೋಡುವುದಿಲ್ಲ. ನೋಡಿದರೆ ಅವರಿಗೆ ನಿರೂಪ ಕಾಣುತ್ತದೆಯೇ ಹೊರತು, ರೂಪ ಕಾಣುವುದಿಲ್ಲ. ನಿರೂಪವಿಲ್ಲದಿದ್ದರೆ ರೂಪ ಆಧಾರವಿಲ್ಲದಂತೆ ಶವವಾಗುತ್ತದೆ! ಶವವನ್ನು ಯಾರೂ ನೋಡುವುದಿಲ್ಲ! ರೂಪ ನೋಡುವ ಲೋಕಕ್ಕೆ ನಿರೂಪ ನೋಡುವ ಶಕ್ತಿ ಇಲ್ಲ. ನಿರೂಪ ನೋಡುವ ಶರಣರಿಗೆ ರೂಪ ಕಾಣುವುದಿಲ್ಲ. ಇವರು ಮಾಡಿಯೂ, ಮಾಡದೇ ಹೋದವರು! ನೋಡಿಯೂ ನೋಡದೇ ಹೋದವರು!

ಮಾಡಿ ಶುದ್ಧನಾದೆನೆಂಬುದು ಮನದ ಭ್ರಮೆ:

ಮಾಡದೆಯೆ ಮಾಡಿ ಶುದ್ಧನಾದೆನೆಂಬುದು ಮನದ ಭ್ರಮೆ. ಗಂಗೆಯ ಮುಳುಗಿದವರೆಲ್ಲ ಶುದ್ಧ, ಇದು ಲೋಕದ ನಿಯಮ, ಇದು ಲೋಕದ ಸತ್ಯ. ಇದು ಶರಣರಿಗೆ ಸಲ್ಲದ ಕಾಯಕ ಕಪಿಲಸಿದ್ಧ ಮಲ್ಲಿಕಾರ್ಜುನಾ.

**887**

**ಮಾಡಿಸಯ್ಯ ಎನಗೆ ನಿನ್ನವರ ಸಂಗವ,**
**ಮಾಡಿಸಯ್ಯ ಎನಗೆ ನಿನ್ನವರ ಆನಂದವ,**
**ಆಗಿಸಯ್ಯಾ. ನಿನ್ನವರಾದಂತೆ.**
**ನೋಡಿಸಯ್ಯಾ, ನಿನ್ನವರ ಕೂಡೆ ಸಂಗವನು.**
**ಮಾಡಿಸಯ್ಯ ಎನಗೆ ಬಚ್ಚ ಬರಿಯ ಭಕ್ತಿಯನು.**
**ಕೊಡಿಸಯ್ಯ ಎನಗೆ ಪಾದೋದಕ ಪ್ರಸಾದವನೊಚ್ಚತ.**
**ಸಲಿಸಯ್ಯ ನಿನ್ನವರ ಕೂಡಿ ಸಲಿಕೆಗೆ**
**ಇರಿಸಯ್ಯ ನಿನ್ನವರ ಪಾದದ ಕೆಳಗೆ ನಿತ್ಯನಿತ್ಯನಾಗಿ.**
**ಬರಿಸದಿರಯ್ಯ ಎನ್ನ ಭವಭವದಲ್ಲಿ,**
**ಬರಿಸಿ ಬರಿಸಿ ಕಾಲಕಾಮಂಗೆ ಗುರಿ ನಿಗ್ರಹಕ್ಕೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ,**

**ಇನಿತನು ಇತ್ತು ಕೆಡಿಸಯ್ಯಾ ಎನ್ನ ಭವದ ಹುಟ್ಟು.**

ಅರಿವೆಂಬ ಗುರುದೇವನ ಸಂಗ ಮಾಡಿದವರು. ಆ ಗುರುದೇವನಿಗೆ ಶರಣು ಹೋದವರು ಶರಣರು, ಅವರು ಮಾತ್ರ ನಿನ್ನವರು! ನಾನು ನಿನ್ನನ್ನು ತಿಳಿಯಲು, ನಿನ್ನ ತಿಳಿದವರಾದ, ನಿನ್ನವರ ಸಂಗವನ್ನು, ನಿನಗೆ ಶರಣು ಹೋದವರ ಸಂಗವನ್ನು ಎನಗೆ ಮಾಡಿಸಯ್ಯಾ! ನಿನ್ನವರ ಆನಂದವನ್ನು ಎನಗೆ ಕರುಣಿಸು ತಂದೆ! ಎನಗೆ ನೋಡಿಸಯ್ಯಾ ನಿನ್ನವರನ್ನು. ಕೂಡಿದರೆ ನಿನ್ನವರ ಸಂಗವನ್ನು ಕೂಡಿಸಯ್ಯಾ.

ಮಾಡಿಸಯ್ಯಾ ಎನಗೆ ಬಚ್ಚ ಬರಿಯ ಭಕ್ತಿಯನ್ನು, ತನುವನ್ನು ಆವರಿಸಿದ ಮನಕ್ಕೆ ಭಕ್ತಿಯನ್ನು ಹುಟ್ಟಿಸುವಂತೆ ಮಾಡಿ, ಆ ಭಕ್ತಿಯಿಂದ ನಿನ್ನವರನ್ನು ಹಾಡುವಂತೆ ಮಾಡಯ್ಯ. ಕೊಡಿಸಯ್ಯ ಎನಗೆ ನಿನ್ನವರ ಪಾದೋದಕ ಪ್ರಸಾದವನ್ನು ಸಲ್ಲಿಸಯ್ಯ, ನಿನ್ನವರು ಕೂಡಿಸಲಿಕೆ ಎನಗೆ ಆಶೀರ್ವದಿಸು ತಂದೆ.

ನಿನ್ನವರೆಂದರೆ ನಿನ್ನನ್ನು ಕಂಡವರು ನೀನೇ ಆದವರು. ನಿತ್ಯ-ನಿತ್ಯ ನಿನ್ನನ್ನು ನೆನೆಯುವವರು. ಅವರ ಪಾದದ ಕೆಳಗೆ ಧೂಳಿಕೆಯಾಗಿ ನನ್ನನ್ನು ಇರಿಸಯ್ಯಾ, ಬರಿಸದಿರಯ್ಯಾ ಎನ್ನನ್ನು ಭವ-ಭವದಲ್ಲಿ. ಜನನ ಮರಣಂಗಳ ಭಾದೆಯನ್ನು ಬರಿಸಿ ಬರಿಸಿ ನನ್ನನ್ನು ಕಾಲಕಾಮಂಗೆ ನೂಕದಿರಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ!

ಇನಿತನ್ನು ಇತ್ತು ಕೆಡಿಸಯ್ಯ ಎನ್ನ ಭವದ ಹುಟ್ಟ!

**888**

**ಮಾಡುವ ಮಹಿಮೆಗೆ ಇಂದ್ರಜಾಲವೆಂದಡೆ,**
**ಇಲ್ಲಿ ಅಪೂರ್ವದ ಬೋಧೆಯ ಲಕ್ಷಣ ತೋರ್ಪದು,**
**ಮಹತ್ವದಿಂದ ಶ್ರದ್ಧೆ, ಶ್ರದ್ಧೆಯಿಂದ ಮುಕ್ತಿ ಎಂಬುದು ಸತ್ಯ ಸತ್ಯ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರುದೇವ ಮಾಡುವ ಮಹಿಮೆ ಇಂದ್ರ ಜಾಲದಂತಿದೆ. ಅರಿವೆಂಬ ಗುರುದೇವನು ಅಪೂರ್ವ. ಅವನ ಬೋಧೆಯ ಲಕ್ಷಣ ತೋರ್ಪದು ಕೂಡಾ ಅಪೂರ್ವ!

ನೋಡುವ ಕಣ್ಣಲ್ಲಿ ಹಾದರ ಮಾಡುವ ಅಜ್ಞಾನವೂ ಇದೆ. ಇದು ತಪ್ಪೆಂದು ಹಾದರ ಮಾಡಿದ ದೃಶ್ಯಕ್ಕೆ ಬೋಧಿಸುವ ಅರಿವೆಂಬ ಗುರುದೇವನ ದೃಶ್ಯವೂ ಇದೆ. ಇದು ಪೂರ್ವಾಪೂರ್ವ! ತನು ಎಂದು ಹುಟ್ಟಿತೋ ಅಂದಿನಿಂದಲೇ ತನುವಿನಲ್ಲಿ ಅಜ್ಞಾನವೂ ಇದೆ. ಆ ಅಜ್ಞಾನಕ್ಕೆ ಅದು ತಪ್ಪೆಂದು ಬೋಧೆ ಮಾಡುವ ಜ್ಞಾನಿ ಗುರುವು ಕೂಡಾ ಅಲ್ಲಿಯೇ ಇದ್ದಾನೆ!

ಕಣ್ಣು ತಾನು ನೋಡಿ ಹಾದರದಲ್ಲಿ ಮುಳುಗುವ ಅಜ್ಞಾನದ ದೃಶ್ಯಕ್ಕೆ, ಗುರುದೇವನು ನೋಡಿಯೇ ನಿನ್ನದು ತಪ್ಪೆಂದು ಜ್ಞಾನದಿಂದ ಬೋಧಿಸುತ್ತಾನೆಂದರೆ ಇದು ಇಂದ್ರಜಾಲವಲ್ಲದಿದ್ದರೇ ಮತ್ತೇನು?

ಕಣ್ಣಿಗೆ ತಾನು ನೋಡಿದ ಹಾದರವೂ ತಿಳಿಯುತ್ತದೆ. ಹಾಗೇ ನೋಡಿದ್ದು ತಪ್ಪು ಎಂದು ಕೂಡಾ ತನಗೆ ತಿಳಿಯುತ್ತದೆ. ಮಹತ್ವಪೂರ್ಣವಾದ ಶ್ರದ್ಧೆಯಿಂದ ಎರಡನ್ನು ಕಂಡುಕೊಳ್ಳಬೇಕಾದ ಶಕ್ತಿ ಕಣ್ಣಿಗೆ ಬಂದಾಗ ಸತ್ಯದ ಮೇಲೆ ಇಡುವ ಶ್ರದ್ಧೆಯಿಂದಲೇ ಮುಕ್ತಿ! ತಾನೇ ಹಾಕಿಕೊಂಡ ಅಜ್ಞಾನದ ಬಂಧನದಿಂದ ತಾನೇ ಹೇಗೆ ದೂರವಾಗಬೇಕು ಎಂಬ ಸತ್ಯವನ್ನು ತನಗೆ ನಿತ್ಯ ನಿತ್ಯ ಬೋಧಿಸುವ ಕಪಿಲಸಿದ್ಧ ಮಲ್ಲಿಕಾರ್ಜುನನಿಂದ ಕೇಳಿ ತಿಳಿಯುತ್ತಾನೆ!

**889**

**ಮಾನಸದ ಯೋಗಕ್ಕೆ ಏನೊಂದು ಉಪಮೆಯೆ**
**ತಾನು ತಾನೊಂದಾಗಿ ಮರುಹು ಮರಹನ್ನತಿಗಳೆದು**
**ಕುರುಹುಯಿಲ್ಲದಿಪ್ಪುದು ನೋಡಾ ಅಯ್ಯಾ,**
**ನಾಮವೆಂಬ ಧೇಯದಲ್ಲಿ ಕಾಮ್ಯವೆಂಬ ಅಮೃತವನೆ ಕರೆದು**
**ನಿರ್ನಾಮಂಗೆ ಅರ್ಪಿಸುವೆನು.**
**ಸೋಮಪ್ರಭೆಯಲ್ಲಿ ಪಂಚೇಂದ್ರಿಯಂಗೆ ಪಸರವಾಗದ ಮುನ್ನ**
**ಆ ನಿಮ್ಮನೈದುವೆ ಕಂಡಾ.**
**ನಾಮ ನಿರ್ನಾಮವೆಂಬ ನಿಜರನತಿಗಲೆಯದ ಮುನ್ನ**
**ನಾ ನಿಮ್ಮನೈದುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನ ನಿರಾಕಾರವಾಗಿದ್ದರೂ, ಅದು ಆಕಾರವೆಂಬ ತನುವಿನ ಸಂಘ ಮಾಡಿದೆ. ಮನಕ್ಕೆ ಕಾಯವೆಂಬ ಕುರುಹನ್ನು ಬಿಟ್ಟು ಬದುಕಲು ಆಗುತ್ತಿಲ್ಲ. ತನುವೆಂಬ ಕುರುಹು ಇಂದು ಇದ್ದು ಇಲ್ಲದಂತಾಗುತ್ತದೆ. ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಕೂಡಾ ನಿರಾಕಾರ. ಈತ ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವ! ಮನ ಈತನ ಸಂಗ ಮಾಡಿದರೆ, ನಾಮ ನಿರ್ನಾಮವಾಗಿ, ಅರಿವಿನ ಅಮೃತವನ್ನೇ ಉಂಡು, ಕಾಯಕ್ಕಂಟಿದ ಕಾಮವನ್ನು ನಿರ್ನಾಮಂಗೆ ಅರ್ಪಿಸಲು ಬರುತ್ತದೆ. ಸೋಮಪ್ರಭೆಯಲ್ಲಿ ಬೆಳಗುತ್ತದೆ. ಕಾಯದ ಐದು ಜ್ಞಾನೇಂದ್ರಿಯಗಳು ಕೂಡಿ ನಿಜರತಿಯನ್ನು ಅನುಭವಿಸುತ್ತದೆ. ಪಂಚಾನನ ಎಂದು ಕರೆಯಿಸಿಕೊಂಡು ಮನ ಘನಮನವಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**890**

**ಮಾಮರದ ಮೇಲೆ ಹೂಗಳು ಹಲವಾಗಿ**
**ನಾನಾ ತುಂಬಿಗಳು ಬಂದು**
**ಅಯ್ಯ ಕಾಮಕ್ಕೆ ಇಚ್ಛೈಸುವಾ,**
**ಕ್ರೋಧಕ್ಕೆ ಇಚ್ಛೈಸುವಾ.**
**ಆಮಿಷಕ್ಕೆ ಇಚ್ಛೈಸುವಾ.**
**ತಾಮಸ ತನ್ನ ರೂಪವಾಗಿ**
**ಈ ಸೋಮಶಿಖರದಲ್ಲಿಪ್ಪ ನಾಮಾಮೃತವನುಂಡು**
**ತುಂಬಿಯ ತುಂಬಿಯ ತಗಳುವೆಯಿಂ ಬಪ್ಪ**
**ಸರದಿಯನೊಡಗೂಡುವೆ ಶಂಭುವೆ**
**ಕಪಿಲಸಿದ್ಧ ಮಲ್ಲಿಕಾರ್ಜುನದೇವ.**

ತನುವನ್ನು ಆವರಿಸಿದ ಮನ, ತನುವನ್ನು ಹಿಡಿದು ತನಗೆ ಬೇಕಾದ ಪ್ರತಿಯೊಂದು ಸುಖವನ್ನು ತನುವಿನ ಮೂಲಕ ಅನುಭವಿಸುತ್ತದೆ. ತನುವಿನ ಮೂಲಕ ಇಚ್ಛಿಸುತ್ತದೆ: ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು, ಸಪ್ತವ್ಯಸನಗಳನ್ನು, ಅಷ್ಟಮದಗಳನ್ನು ತನುವಿನಲ್ಲಿ

ತುಂಬಿ, ತನಗೆ ಬೇಕಾದಂತೆ ತನುವನ್ನು ಅನುಭವಿಸಿ, ತನುವಿಗೆ ಕೆಟ್ಟ ಹಣೆಪಟ್ಟಿ ಕಟ್ಟುತ್ತದೆ.

ತನುವಿನಲ್ಲಿಯೇ ತನ್ಮಯವಾದ ಸೋಮನಾಥನ ನಾಮಾಮೃತವನ್ನು ಮನ ಉಣ್ಣದೇ ತನುವನ್ನು ಕ್ಷಣ ಕ್ಷಣಕ್ಕೂ ಯಾಮಾರಿಸುತ್ತದೆ. ಮನ ತನುವಿನೊಂದಿಗೆ ಸಂಗ ಮಾಡಿದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಕ್ಕೆ ತನುವನ್ನು ಬಲಿ ಮಾಡಿ, ಮನ ಸುಖಿಸುತ್ತದೆ. ತನುವನ್ನು ತಾಮಸ, ರಾಜಸ, ಸಾತ್ವಿಕನೆಂದು ಮೂರು ವಿಧದಲ್ಲಿ ಸೀಳಿ, ಮನ ತನುವಿನ ಮೇಲೆ ತನ್ನ ಅಜ್ಞಾನದ ರಾಜ್ಯಭಾರ ಮಾಡುತ್ತಿದೆ. ತನುವಿನಲ್ಲಿ ತುಂಬಿದ ಅರಿವಿನ ಅಮೃತವನ್ನು ತನುವನ್ನು ಆವರಿಸಿದ ಮನವೆಂಬ ತುಂಬಿ ಸವಿಯಲು ಹೋದಾಗ ಅದು ಘನಮನವಾಗುತ್ತದೆ. ಶಂಭುವೇ ತಾನಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನಾ.

**891**

**ಮಾಸಿಮಾಸಿದಂತೆ ತೊಳೆದಡೆ ಶುದ್ಧಮಾಡುವ ಗುಣ ಉದಕವಯ್ಯಾ.**
**ಶ್ವಾಸಶ್ವಾಸಕ್ಕೆ ಶಾಂತಿಯ ಕೊಡುವ ಗುಣ ಉದಕವಯ್ಯಾ;**
**ಮಾಡಿದ ಪಾಪವ ಪರಿಹರಿಸುವದೆಂಬುದು ಶಶವಿಷಾಣ;**
**ನಿಶ್ಚಯ ನೋಡಯ್ಯಾ.**
**ಅದು ಕಾರಣ, ಇದು ಗಂಗೆಯಹುದು ಶುದ್ಧ ಶಾಂತಿಗೆ;**
**ಗಂಗೆಯಲ್ಲ ಕರ್ಮಶುದ್ಧಕೆ; ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವೆಂಬುದು ಉದಕದ ಬಿಂದುವಿನಿಂದ ಆದದ್ದು. ಉದಕವೇ ರಕ್ತ, ಮೂಳೆ, ಮಾಂಸ, ಮಜ್ಜೆ, ಮೇದಸ್ಸು ಆಗಿ, ಇವು ಚೆಲ್ಲದಂತೆ ಸುಂದರವಾದ ಚರ್ಮವನ್ನು ಹೆಣೆದುಕೊಂಡು, ಉದಕ ಕಾಯದಿಂದಲೇ ಕಾಯ ಎಂದು ಕರೆಯಿಸಿಕೊಂಡಿದೆ. ಕಾಯದಲ್ಲಿ ಶಾಂತಿಯ ಅರಿವಿನ ಅಮೃತವಿದ್ದರೂ, ಕಾಯವನ್ನು ಆವರಿಸಿದ ಮನದಿಂದಾಗಿ ಕಾಯ; ಕಾಮ, ಕ್ರೋಧಾದಿ ಅರಿಷಡ್ವರ್ಗಗಳ ಅಶುದ್ಧ ಮಣ್ಣು ಮೆತ್ತಿಕೊಂಡಿದೆ. ಕಣ, ಕಣಕ್ಕೂ ಅದರ ವಿಷಾಣು ಹರಡಿದೆ. ಕಾಯದ ಮೂಲಕ ಮನ ಮಾಡಿದ ಪಾಪ-ಪುಣ್ಯಗಳಿಂದಾಗಿ ಹಗಲಿರುಳೆನ್ನದೇ ಕಾಯವೇ ಬಳಲುತ್ತಿದೆ. ಕಾಯ ಪರಿಶುದ್ಧವಾದ ಗಂಗೆಯೆಂದು ಕಾಯವನ್ನು ಆವರಿಸಿದ ಮನಕ್ಕೆ ಹೊಳೆಯುತ್ತಿಲ್ಲ.

ಕಾಯದಲ್ಲಿಯೇ ಸಂಗಮವಾಗಿ ಗಂಗೆಯನ್ನು ಧರಿಸಿಕೊಂಡ ಗಂಗಾಧರನೊಬ್ಬನಿದ್ದಾನೆ, ಆತನ ಚರಣ ಕಮಲಗಳಿಗೆ ಮನ ಎರಗಿದಾಗ, ಮನದಿಂದಾದ ಪಾಪಾಕರ್ಮಗಳು, ಗಂಗೆಗೆ ಅಂಟಿದ ಮಣ್ಣು, ಗಂಗೆಯಿಂದ ಜಾರಿ ನೆಲಕ್ಕೆ ಉರುಳಿ, ತನಗೆತಾನೇ ಪರಿಶುದ್ಧವಾದಂತೆ ಮನ ಘನಮನವಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ. ಇದು ನಿಶ್ಚಯ ನೋಡಯ್ಯ.

**892**

**ಮಾಹೇಶ್ವರನಾದಾತ ಮರಣಕ್ಕೊಳಗಾಗ,**
**ಕರಣೇಂದ್ರಿಯಂಗಳಿಗೆ ಎಡೆಗುಡ.**
**ಕಾಲ ಕಲ್ಪಿತನಲ್ಲ, ಕರ್ಮಕ್ಕೆ ವಿರಹಿತ.**
**ಆತನ ತನು ಸಾಕ್ಷಾತ್ ಶಿವನ ತನು.**
**ಆತ ನಿತ್ಯ ಕೇವಲ ಮುಕ್ತ,**

**ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡಿದ ಮಹೇಶ್ವರನು.**

ಮಾಹೇಶ್ವರನಾದಾತ ಮರಣಕ್ಕೆ ಒಳಗಾಗುವುದಿಲ್ಲ. ಏಕೆಂದರೆ ಆತನಿಗೆ ಕಾಯವಿಲ್ಲ. ಕಾಯವನ್ನು ಆವರಿಸಿದ ಮನಕ್ಕೂ ಕಾಯವಿಲ್ಲ. ಕಾಯವಿಲ್ಲದ ಮನ ಕಾಯವಿಲ್ಲದ ಮಾಹೇಶ್ವರನೊಂದಿಗೆ ಸಂಗ ಮಾಡಿದಾಗ, ಕಾಯ ಅವರಿಬ್ಬರ ಆಶ್ರಯಕ್ಕೆ ಕೈಲಾಸವಾಗುತ್ತದೆ. ಮನ ಮತ್ತು ಮಾಹೇಶ್ವರರಿಬ್ಬರೂ ಸೇರಿ ಒಂದಾಗಿ ಅರ್ಧನಾರೀಶ್ವರರಾಗುತ್ತಾರೆ.

ಮನ ಕಾಯದೊಂದಿಗೆ ಇದ್ದಾಗ ಅದಕ್ಕೆ ಜನನವುಂಟು, ಮರಣವುಂಟು. ಅದಕ್ಕೆ ಇಂದ್ರಿಯಗಳುಂಟು. ಕಾಮ, ಕ್ರೋಧಾದಿ ಅರಿಷಡ್ವರ್ಗಗಳುಂಟು. ಸಪ್ತವ್ಯಸನಗಳುಂಟು. ಅಷ್ಟಮದಗಳುಂಟು.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಮಾಹೇಶ್ವರನ ಸಂಗಮಾಡಿದಾಗ, ಮನ ಘನಮನ! ತನು ಸಾಕ್ಷಾತ್ ಶಿವತನು! ಆತನು ಕಾಲ ಕಲ್ಪಿತನಲ್ಲ. ಆತನು ನಿತ್ಯ. ಕೇವಲ ಮುಕ್ತ. ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕೂಡಿದ ಮಾಹೇಶ್ವರನು ಆತ.

**893**

**ಮುಂದಲೆವಿಡಿದು ಮೋಹಿಸುವ ಗಂಡನ ಕಾಣದೆ**
**ಬಾಯ್ಬಿಡುತ್ತಿದೇನೆ ಗುರುವೆ.**
**ಈ ಮಂದಮತಿಯ ಮುಂಡವ ಕೊಂಡೊಯ್ದು**
**ಸಂದೇಹವಿಲ್ಲದೆ ಎನ್ನ ಗಂಡನ ಎನಗೆ ತೋರಿದಡೆ,**
**ನೀನೆನ್ನ ತಂದೆ ಎಂಬೆನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನ ತಾನು ಹೆಣ್ಣಾಗಿ, ''ನನ್ನನ್ನು ನೋಯಿಸುವ ಗಂಡನನ್ನು ಕಾಣದೇ ಬಾಯಿ ಬಿಡುತ್ತಿದ್ದೇನೆ ಗುರುದೇವನೇ, ಈ ಮಂದಮತಿಯ ಮುಂಡವ ಕೊಂಡೊಯ್ದು ಸಂದೇಹವಿಲ್ಲದೇ ಎನ್ನ ಗಂಡನ ಎನಗೆ ತೋರಿದಡೆ ನಿನ್ನನ್ನೇ ತಂದೆ ಎಂದು ಕರೆಯುವೆನಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಾ'' ಎಂದು ನುಡಿದಿದೆ.

ಅಂಗ ಎನ್ನುವುದು ಗಂಡೂ ಅಲ್ಲ, ಹೆಣ್ಣೂ ಅಲ್ಲ. ಮನ ಕಾಯವನ್ನು ಹಿಡಿದದ್ದಕ್ಕಾಗಿ ಮನದ ಅಜ್ಞಾನದಿಂದಾಗಿ ಕಾಯ ಹೆಣ್ಣಾಗಿದೆ, ಗಂಡೂ ಆಗಿದೆ.

ಕಾಯವನ್ನು ಆವರಿಸಿದ ಮನಕ್ಕೆ, ಕಾಯದ ಮೇಲಿನ ಮೋಹ ಸಾಕಾದಾಗ, ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ನೆನಪಾಗುತ್ತದೆ! ಮನ, ತಾನು ಹೆಣ್ಣಾಗಿ ಗುರುದೇವನ್ನು ಬೇಡುತ್ತದೆ. ತಾನಿದ್ದ ಕಾಯದ ಮೇಲಿನ ಎನ್ನ ಮೋಹದ ಕತ್ತನ್ನು ಕೊಂಡೊಯ್ದು ಅರಿವೆಂಬ ಗುರುದೇವನನ್ನು ತೋರಿದಡೆ ಆತನನ್ನೆ ಗಂಡನನ್ನಾಗಿಸಿಕೊಂಡು ಕಾಯದಲ್ಲಿನಾವಿಬ್ಬರು ಸತಿ-ಪತಿಗಳಾಗುತ್ತೇವೆ. ಅರಿವು ಗುರುವಾದರೆ ಮನ ಆ ಗುರುವಿಗೆ ಶಿಷ್ಯನಾಗಿರುತ್ತಾನೆ. ಅರಿವೇ ಗಂಡನಾದರೆ, ಮನ ಆ ಗಂಡನಿಗೆ ಹೆಂಡತಿಯಾಗುತ್ತಾಳೆ. ಅರಿವು ಸಖನಾದರೆ, ಮನ ಆ ಸಖನಿಗೆ ಸಖಿಯಾಗಿ ಕಾಯವನ್ನೇ ಕೈಲಾಸವನ್ನಾಗಿಸಿಕೊಂಡು ಕಾಯದಲ್ಲಿ ವಾಸ ಮಾಡುತ್ತಾರೆ.

**894**

**ಮುಕ್ತ್ಯಂಗನೆಗೆ ಚಿತ್ತಶುದ್ಧಿಯಪ್ಪ ವೃಕ್ಷವ**
**ಚಿತ್ತದಲ್ಲಿ ಬಿತ್ತಿದನಲ್ಲಾ.**
**ಆ ವೃಕ್ಷ ಆ ಫಲಕರ್ಮಕ್ಕೆ**
**ಆ ಫಲವಾಗುತ್ತೈದೂದೆ ನೋಡಾ.**
**ನಿಃಕರ್ಮಕ್ಕೆ ಸಫಲವಪ್ಪ ವೃಕ್ಷ ನೀನೆ ಅಯ್ಯ.**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವೆಂಬ ಗುರುದೇವನ ಕೃಪೆಯಿಂದಾಗಿ ಮನ ಮುಕ್ತಳಾಗಿದ್ದಾಳೆ. ಮುಕ್ತ್ಯಂಗನೆಯಾಗಿದ್ದಾಳೆ. ಆಕೆಯ ಚಿತ್ತ ಶುದ್ಧಿಯಾಗಿದೆ. ಆಕೆಯಿದ್ದ ವೃಕ್ಷದಲ್ಲಿ ಅರಿವಿನ ಅಕ್ಷರ ಬಿತ್ತಿ ಜ್ಞಾನ ವೃಕ್ಷವಾಗಿಸಿದ್ದಾನೆ. ಆ ವೃಕ್ಷ ಅರಿವಿನ ಫಲವನ್ನು ಹೊತ್ತು ಮೈತುಂಬಿ ನಿಂತಿದೆ.

ನಿಃಕರ್ಮಕ್ಕೆ ಸಫಲ ವೃಕ್ಷವಪ್ಪ ನೀನೆ ಅಯ್ಯಾ ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ.

ತನು ಎನ್ನುವುದು ನಡೆದಾಡುತ್ತಾ ಮಾತನಾಡುವ ಮರ. ಹೀಗಾಗಿ ಸಿದ್ಧಾರ್ಥ ತನುವನ್ನು ಬೋಧಿ ೯ವೃಕ್ಷವೆಂದು ಕರೆದ. ಮನವೆಂಬ ಮಾಯೆ ಬುದ್ಧನ ಸಂಗ ಮಾಡಿ ಮುಕ್ತಳಾದರೆ ಸಾಕು, ಕಾಯ ತನ್ನ ಸಕಲ ಅಜ್ಞಾನದ ಫಲಗಳನ್ನು ಕಳಚಿಕೊಂಡು ಬುದ್ಧನಾಗುತ್ತದೆ. ಬುದ್ಧನಿದ್ದ ಮರವಾಗುತ್ತದೆ. ಅರಿವಿನ ಮಾತುಗಳನ್ನು ಆಡುತ್ತಾ, ನಡೆದಾಡುವ ಮಾತನಾಡುವ ಮರವೆಂದು ಶರಣರಿಂದ ಕರೆಯಿಸಿಕೊಳ್ಳುತ್ತದೆ.

**895**

**ಮುಕ್ತ್ಯಂಗನೆಯ ಸಂಯೋಗದಿಂದ**
**ಶುದ್ಧ ಮುಗ್ಧನಾದೆ.**
**ಭಕ್ತ್ಯಂಗನೆಯ ಸಂಯೋಗದಿಂದ**
**ಉರುತರ ನಿಷ್ಕಳವನೆಯ್ದಿದೆ.**
**ಜ್ಞಾನಾಂಗನೆಯ ಸಂಯೋಗದಿಂದ ತತ್ವಾರ್ಥವನರಿದೆ.**
**ಕಪಿಲಸಿದ್ಧ ಮಲ್ಲಿಕಾರ್ಜುನನ ಸಂಯೋಗದಿಂದ ತ್ವಮಸಿಯಾದೆ.**

ಮನ ಅರಿವಿನ ಸಂಗ ಮಾಡಿದ್ದಕ್ಕಾಗಿ ಘನಮನವಾಯಿತು. ಮನವೇ ಅರಿವಿನ ಸಂಯೋಗದಿಂದಾಗಿ ಮುಕ್ತ್ಯಂಗನೆಯೆಂದು ಕರೆಯಿಸಿಕೊಂಡಳು. ಜ್ಞಾನದ ಸೇವೆ ಮಾಡುವ ಕಾರಣದಿಂದಾಗಿ ಮನವೆಂಬ ಮುಕ್ತ್ಯಂಗನೆಯೇ, ಭಕ್ತ್ಯಂಗನೆಯೆಂದು ಕರೆಯಿಸಿಕೊಂಡಳು. ಮಹಾಜ್ಞಾನಕ್ಕೆ ಮುಕ್ತ್ಯಂಗನೆ ಭಕ್ತಿ ಮಾಡುವ ಕಾರಣಕ್ಕಾಗಿ ತತ್ವರ್ಥವನ್ನು ಅರಿದು ಆ ತತ್ವವೇ ತಾನಾದಳು. ಕಪಿಲಸಿದ್ಧ ಮಲ್ಲಿಕಾರ್ಜುನನ ಸಂಯೋಗದಿಂದಾಗಿ ತತ್ವಮಸಿಯೆಂದು ಶರಣರಿಂದ ಕರೆಯಿಸಿಕೊಂಡಳು.

**896**

**ಮುಕ್ತಿಯ ಕೂಟಕ್ಕೆ ಮೂಲಿಗ ನೀನೆ ಬಸವಾ,**
**ಭಕ್ತಿಯ ತನುಸಂಬಂಧಿ ನೀನೆ ಬಸವಾ.**
**ಎನಿತೆನಿತು ಜರಿದಡೂ 'ಬಸವಾ' ಎಂಬುದ ಮಾಣುವೆನೆ ಅಯ್ಯಾ?**
**ಎನಿತೆನಿತು ಕಡಿದಡೂ 'ಬಸವಾ' ಎಂಬುದ ಮಾಣುವೆನೆ ಅಯ್ಯಾ?**
**ಕಪಿಲಸಿದ್ದ ಮಲ್ಲಿನಾಥಯ್ಯಾ.**

ಸಿದ್ಧರಾಮ ಶಿವಯೋಗಿಗಳು ಬಸವಣ್ಣನವರನ್ನು ಸ್ಮರಿಸಿದ್ದಾರೆ. ಬಸವಣ್ಣನವರನ್ನು ಭಕ್ತಿ ಭಂಡಾರಿಯೆಂದು ಇಡೀ ಶರಣ ಸಮೂಹ ಹಾಗೂ ಈ ನಾಡು ಸ್ಮರಿಸುತ್ತದೆ. ಬಸವಣ್ಣನವರು ಮುಕ್ತಿಗೆ ಸರಳಸೂತ್ರವನ್ನು ಕಂಡು ಹಿಡಿದ ಮೂಲಿಗರು.

ತನುವಿನಲ್ಲಿ ತನ್ಮಯವಾದ ಮಹಾಜ್ಞಾನದ ಸಂಬಂಧವನ್ನು, ತನುವನ್ನು ಆವರಿಸಿದ ಮನದ ಮೂಲಕ ಭಕ್ತಿ ಮಾಡುತ್ತ, ಹೇಗೆ ಸಂಬಂಧ ಬೆಳೆಸಬಹುದು ಎನ್ನುವ ಸೂತ್ರವನ್ನು ಹೆಣೆದವರಲ್ಲಿ ಬಸವಣ್ಣ ಮೊದಲಿಗರು! ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಎನಿತೆನಿತು ಜರಿದಡೂ ಬಸವಾ ಎಂಬುದ ಮಾಣ್ಬೆನೆ ಅಯ್ಯಾ? ಎನಿತೆನಿತು ಕಡಿದಡೂ ಬಸವಾ ಎಂಬುದ ಮಾಣ್ಬೆನೆ ಅಯ್ಯಾ ಕಪಿಲಸಿದ್ಧ ಮಲ್ಲಿನಾಥಯ್ಯ ಎಂದಿದ್ದಾರೆ.

ತನುವಿನಲ್ಲಿ ತನ್ಮಯವಾದ ಮಹಾಜ್ಞಾನಕ್ಕೆ ''ಬಸವಾ''! ಎಂದು ನಾಮಕರಣ ಮಾಡಿ ತನುವನ್ನು ಆವರಿಸಿದ ಮನದಿಂದ ಬಸವಾ ಎಂಬ ಮೂರಕ್ಷರದ ಮಹಾಜ್ಞಾನಕ್ಕೆ ಭಕ್ತಿ ಮಾಡಿದ್ದಾರೆ ಸಿದ್ಧರಾಮ ಶಿವಯೋಗಿಗಳು! ಯಾರಾದರೂ ನನ್ನನ್ನು ಜರಿದಡೂ ಬಸವಾ ಎನ್ನುವ ಮಹಾಜ್ಞಾನಕ್ಕೆ ಭಕ್ತಿ ಮಾಡುವುದು ಬಿಡುವುದಿಲ್ಲ. ಎಂದು ಕಪಿಲಸಿದ್ಧ ಮಲ್ಲಿನಾಥಯ್ಯನೊಂದಿಗೆ ಮಾತಾಡಿದ್ದಾರೆ.

**897**

**ಮುಕ್ತಿಯ ಲಾಂಛನ ಮುಕ್ತಿಯ ರೂಪು ಕಾಣಾ ಬಸವ.**
**ಭಕ್ತಿಯ ಲಾಂಛನ ಭಕ್ತಿಯ ರೂಪು ಕಾಣಾ ಬಸವ.**
**ನಮ್ಮ ಕಪಿಲಸಿದ್ಧ ಮಲ್ಲಿನಾಥಯ್ಯನ ರೂಪು ಕಾಣಾ ಬಸವ.**

ಮನಸ್ಸು ಭಗವಂತನಿದ್ದ ಲಾಂಛನವಾದ ತನುವಿನೊಂದಿಗೆ ಸಂಬಂಧ ಬೆಳೆಸಿ ಭಗವಂತನನ್ನು ಅಲಕ್ಷ್ಯ ಮಾಡಿ ಲಾಂಛನದೊಂದಿಗೆ ಹಾದರ ಮಾಡುತ್ತದೆ. ಹೆಣ್ಣು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಗಂಡನ್ನು ನೋಡುತ್ತದೆ. ಗಂಡು ಎನ್ನುವ ಅಜ್ಞಾನ ಆಮಂತ್ರಣ ಮಾಡಿಕೊಂಡು ಹೆಣ್ಣನ್ನು ನೋಡಿ ಹಾದರ ಮಾಡುತ್ತದೆ. ಆದರೆ ದೇಹ ಹೆಣ್ಣೂ ಅಲ್ಲ, ಗಂಡೂ ಅಲ್ಲ, ಅದು ಮುಕ್ತಿಯ ಲಾಂಛನ. ಭಕ್ತಿಯ ಲಾಂಛನ ಸಾಕ್ಷಾತ್ ಕಪಿಲಸಿದ್ಧ ಮಲ್ಲಿನಾಥಯ್ಯನ ರೂಪು ಕಾಣಾ, ಬಸವಾ.

ತನುವಿನಲ್ಲಿ ತನ್ಮಯವಾದ ಶಿವನಿಗೆ ಸಿದ್ಧರಾಮ ಶಿವಯೋಗಿಗಳು ಬಸವಣ್ಣ, ಬಸವಾ ಎಂದು ಹೆಸರಿಟ್ಟು ಕರೆದು ತನು ಬಸವನ ರೂಪು, ಅದು ಮುಕ್ತಿಯ ಲಾಂಛನ. ತನು ಬಸವನ ರೂಪು, ಅದು ಭಕ್ತಿಯ ಲಾಂಛನ ಎಂದು ಸ್ಮರಿಸಿದ್ದಾರೆ.

**898**

**ಮುಖವನರಿಯದೆಂತರ್ಪಿಸುವೆನಯ್ಯಾ? ಅದು ಭವ ಹರಿಯದು**
**ಅವಯವದ ಪರಿಯಾಣದಲ್ಲಿ ಅನಿಮಿಷವೆಂಬ ಓಗರವನಿಕ್ಕಿ,**
**ತನುತ್ರಯದಿಂ ಮೇಲಣ ಆನಂದ ಕೋಣೆಯಲ್ಲಿ,**
**ಅನಿಮಿಷಲಿಂಗಾರ್ಚನೆಯ ಮಾಡಬಲ್ಲಡೆ**
**ಆತನನುಪಮ ಲಿಂಗಾರ್ಚಕನೆಂಬೆ;**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ನೀನೆಂಬೆ.**

ಲಿಂಗಕ್ಕೆ ಮುಖವಿಲ್ಲ, ಮುಖವಿಲ್ಲದ ಲಿಂಗಕ್ಕೆ ನೈವೇದ್ಯವನು ಅರ್ಪಿಸಿದಡೆ ಅದು ಜನನ ಮರಣಗಳ ಬಾಧೆಯನು ಅರಿಯದು. ನನ್ನೊಂದಿಗೆ ಮಾತನಾಡದು, ನನ್ನ ಅಜ್ಞಾನವನ್ನು ಕಳೆಯುವ ಶಕ್ತಿ ಲಿಂಗಕ್ಕಿಲ್ಲ. ಅವಯವದ ಪರಿಯಾಣದಲ್ಲಿ ಅನಿಮಿಷವೆಂಬ ಓಗರವನ್ನು ಇಕ್ಕಿ, ಅನಿಮಿಷ ಲಿಂಗಾರ್ಚನೆಯ ಮಾಡಬಲ್ಲಡೆ ಆತನನ್ನು ಅನುಪಮ ಲಿಂಗಾರ್ಚಕನೆಂಬೆ.

ಸ್ಥೂಲತನು, ಸೂಕ್ಷ್ಮತನು, ಕಾರಣ ತನುಗಳ ಮೇಲಣ ಆನಂದ ಕೋಣೆಯಲ್ಲಿ ಪರಮಾನಂದದಿಂದ ಪೂಜಿಸುವ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ, ಆತನನ್ನು ನೀನೆ ಎಂಬೆ.

**899**

**ಮುಗ್ಧೆಯ ಸಂಯೋಗದಿಂದ ಮುಕ್ತಿವಡೆದೆನೆಂದು,**
**ಅರ್ಥೋದಯಗಿರಿಯಲ್ಲಿ ಆನಂದದಿಂದ**
**ಮುಗ್ಧೆಯ ಮೂಲಕೆ ಹೊದ್ದುವ ತತ್ವವನು**
**ನಾಮ ಮಧ್ಯದಲಿ ಕಂಡೆ ಕಾಣಾ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವನ್ನು ಆವರಿಸಿದ ಮನವೆಂಬ ಕನ್ಯೆ, ತನುವಿನಲ್ಲಿಯೇ ಸಂಗಮವಾದ ಜ್ಞಾನವೆಂಬ ಮಹಾಪುರುಷನಿಂದ ಜನ್ಮ ಪಡೆದಿದ್ದಾಳೆ. ಜನ್ಮಕೊಟ್ಟ ಪುರುಷನನ್ನೆ ಮರೆತು ಮುಗ್ಧತನವನ್ನು ತೋರುತ್ತಿದ್ದಾಳೆ. ಮುಗ್ಧೆ, ಮಹಾಪುರುಷನ ಸಂಯೋಗದಿಂದಲೇ ಮುಕ್ತಿ ಪಡೆಯಬೇಕಾಗಿದೆ. ಆದರೆ, ಪುರುಷನಿದ್ದ ತನುವಿನೊಂದಿಗೆ ಅರ್ಥೋದಯಗಿರಿಯಲ್ಲಿ ಆನಂದ ಕೊಡುತ್ತಿದ್ದಾಳೆ. ಆದರೂ ಮನಕ್ಕೆ ಮಹಾಪುರಷನು ಬಿತ್ತಿದ ತತ್ವವೆಂದರೆ ಬಲು ಇಷ್ಟ, ಆ ತತ್ವವನ್ನು ಬದ್ಧ ತನುವಿನ ನಾಮದ ಮೂಲಕ ನುಡಿಯುತ್ತಿದ್ದಾಳೆ. ತತ್ವನಾಮದ ನುಡಿಗೆ ಸಿಲುಕಿತು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಮುಗ್ಧೆ ತನುವಿನ ಸಂಯೋಗದಿಂದ ಮುಕ್ತಿ ಪಡೆಯದೇ ಅರ್ಥೋದಯಗಿರಿಯಲ್ಲಿಯೇ ಉಳಿದಳು ಆನಂದದಿಂದ.

**900**

**ಮುಟ್ಟದಂತೆ ಇರಿಸು; ಮರಳಿ ಹುಟ್ಟದಂತೆ ಮಾಡು.**
**ಹುಟ್ಟಿ ಹುಟ್ಟಿ ಹೊಂದುತಿರ್ದ ಕಷ್ಟವ ಬಿಡಿಸಯ್ಯಾ ತಂದೆ,**
**ನಿಮ್ಮ ನಂಬಿದೆನಯ್ಯಾ ನಾನು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮುಟ್ಟದಂತೆ ಇರಿಸು, ಮರಳಿ ಹುಟ್ಟದಂತೆ ಮಾಡು; ಹುಟ್ಟಿ, ಹುಟ್ಟಿ ಹೊಂದುತಿರ್ದ ಕಷ್ಟವ ಬಿಡಿಸಯ್ಯಾ ತಂದೆ, ನಿಮ್ಮ ನಂಬಿದನೆಯ್ಯಾ ನಾನು ಕಪಿಲಸಿದ್ಧ ಮಲ್ಲಿಕಾರ್ಜುನಾ.

ಇಡೀ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದ ಭಗವಂತ, ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ತಾನೇ ನೋಡಬೇಕೆಂದು ತನುವನ್ನು ಸೃಷ್ಟಿ ಮಾಡಿದ. ಆ ತನುವಿನಲ್ಲಿ ತಾನು ತನ್ಮಯನಾಗಿ ಮನವನ್ನು ಸೃಷ್ಟಿ ಮಾಡಿದ, ಮನದೊಂದಿಗೆ ಕೂಡಿ ಪರಮ ಸಂತೋಷದಿಂದ ಬ್ರಹ್ಮಾಂಡವನ್ನು ನೋಡಬೇಕೆಂದು ಬಯಸಿದರೆ, ಬಯಸಿದ ಬಯಕೆ ಈಡೇರಲಿಲ್ಲ. ಏಕೆಂದರೆ ಮನ ಭಗವಂತನ ಶ್ರೀ ಚರಣಗಳಿಗೆ ದಾಸನಾಗದೇ ತನುವಿನ ಸಂಗಮಾಡಿ ಲೋಕದ ಸಂಸಾರವನ್ನು ಮೆಚ್ಚಿಕೊಂಡಿತು.

ಹೆಂಡತಿ ಮಕ್ಕಳು ಗಂಡ ಸೊಸೆ ಅಣ್ಣ-ತಮ್ಮ-ಬಂಧು-ಬಳಗವೆಂದು ಸಂಸಾರದ ಸುಖದಲ್ಲಿ ಮುಳುಗಿತು. ಅಲ್ಲಿ ಸುಖವುಂಟು, ದುಃಖವುಂಟು. ಹುಟ್ಟು ಸಾವುಗಳುಂಟು. ಕಷ್ಟ ಕಾರ್ಪಣ್ಯಗಳುಂಟು. ಇದರ ಸುಖ-ಅನುಭವಿಸಿ ಅನುಭವಿಸಿ, ತನುವಿನ ಸಂಗ ಕಳಚಿಕೊಂಡು, ಮನಕ್ಕೆ ಭಗವಂತನ ಸಂಗ ಮಾಡಲು ಆಸೆಯಾಗಿದೆ. ತನಗೆ ಜನ್ಮ ಕೊಟ್ಟ ಭಗವಂತನನ್ನು ಕುರಿತು ಈ ಅಜ್ಞಾನದ ಸಂಸಾರವನ್ನು ಮತ್ತೇ ಹುಟ್ಟದಂತೆ ಇರಿಸು, ಮರಳಿ ಹುಟ್ಟದಂತೆ ಮಾಡು, ಮತ್ತೇ ಮತ್ತೇ ಹುಟ್ಟಿ ಹುಟ್ಟಿ ಹೊಂದುತ್ತಿರುವ ನನ್ನ ಕಷ್ಟವನ್ನು ಬಿಡಿಸಯ್ಯಾ ಎನ್ನ ತಂದೆ ಕಪಿಲಸಿದ್ಧ ಮಲ್ಲಿಕಾಜುನನೇ ನಾನು ನಿಮ್ಮ ನಂಬಿದೆನಯ್ಯಾ!.

**901**

**ಮುಟ್ಟದಿರು ಮೂರುವನು ಮುಟ್ಟಿಸದಿರಾರುವನು**
**ಬಟ್ಟ ಬಯಲಾಗು ಗುರುಹಸ್ತದಿಂದ**
**ಮುಟ್ಟು ಮೂರರ ಅಸುವ ಬಿಟ್ಟು ಕಲೆ ಆರಲಿ ತತ್ವಕೆ**
**ತವಕಿಸದೆ ಗುರುವಾಗು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಾತ್ವಿಕ, ರಾಜಸ, ತಾಮಸ ಎಂದು ತನುವನ್ನು ಮನ ಮೂರು ಗುಣಗಳ ಮೂಲಕ ಬೇರ್ಪಡಿಸಿದೆ. ಹಾಗೆಯೇ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಅರಿಷಡ್ವರ್ಗಗಳನ್ನು ಮನ ತನುವಿನಲ್ಲಿ ಸೃಷ್ಟಿ ಮಾಡಿ ತನುವಿನ ಮೂಲಕ ಸುಖ ದುಃಖಗಳನ್ನು ಅನುಭವಿಸುತ್ತದೆ. ಮನಕ್ಕೆ ಸುಖವೆಂದರೆ ಇಷ್ಟ, ದುಃಖವೆಂದರೂ ಕೂಡಾ ಇಷ್ಟ! ಮನ ತನುವಿನ ಮೂಲಕ ಅನುಭವಿಸುವ ಸುಖ ದುಃಖಗಳು ತನುವಿಗೆ ಪೆಟ್ಟು ಕೊಡುತ್ತವೆ.

ಸಾತ್ವಿಕ ಗುಣ ಉಳ್ಳ ತನುವನ್ನು ಲೋಕ ಮೆಚ್ಚುತ್ತದೆ. ಸಾತ್ವಿಕ ಗುಣವೆಂಬುದು ಮನ ತನುವಿಗೆ ಹಾಕಿದ ವೇಷವೆಂದು ತನುವಿಗೂ ಗೊತ್ತಾಗುವುದಿಲ್ಲ! ಲೋಕಕ್ಕೂ ಗೊತ್ತಾಗುವುದಿಲ್ಲ! ಮನ ತನುವಿಗೆ ಸಾತ್ವಿಕ ಪಾತ್ರ ತೊಡಿಸಿ ರಾಜಸ ಹಾಗೂ ತಾಮಸ ಗುಣಗಳ ಸುಖವನ್ನು ಗುಪ್ತವಾಗಿ ಉಣ್ಣುತ್ತದೆ! ಲೋಕಕ್ಕೆ ಕಾಣುವಂತೆ ತನುವಿಗೆ ಮನ ರಾಜಸ ಪಾತ್ರವನ್ನು ತೊಡಿಸಿ ತಾಮಸ ಗುಣದ ಸುಖವನ್ನು ಉಣ್ಣುತ್ತಾ ಸಾತ್ವಿಕ ಪಾತ್ರದಲ್ಲಿ ಇರುತ್ತದೆ.

ಕಾಯದಲ್ಲಿ ಶ್ರೀಗುರುದೇವನಿದ್ದರೂ, ಅಜ್ಞಾನಿ ಮನ, ಗುರುದೇವನ ಸಂಗ ಮಾಡದೇ, ತನುವಿನ ಸಂಗ ಮಾಡಿ, ಅರಿಷಡ್ವರ್ಗಗಳೆಂಬ ಕಾಮ ಕ್ರೋಧಾದಿ ಆರನ್ನು ತನುವಿನಲ್ಲಿಟ್ಟು, ಮನ ತನುವಿನೊಂದಿಗೆ ಸುಖಿಸುತ್ತದೆ. ಮನದಿಂದಾಗಿ ತನುವಿನಲ್ಲಿ ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಗುಣಗಳಿಂದ ಆರು ಅರಿಷಡ್ವರ್ಗಗಳು ಸೃಷ್ಟಿಯಾಗಿವೆ.

ತನುವಿನಲ್ಲಿ ತನ್ಮಯವಾದ ಶ್ರೀಗುರು ಚರಣಕ್ಕೆ ಹಣೆ ಮಣೆದು ಬಟ್ಟ ಬಯಲಾಗು ಎಲೇ ಮನವೇ. ಮೂರು ಗುಣಗಳನ್ನು ಬಿಟ್ಟು, ಮೂರು ತನುಗಳಲ್ಲಿ ಸಂಗಮವಾಗಿ ಒಂದಾಗು. ಆರು ತತ್ವಗಳಿಗೆ ಶರಣಾಗು. ಆ ಕಲೆಯಲ್ಲಿ ಪಳಗಿ ತತ್ವಕ್ಕೆ ತವಕಿಸದೆ ಗುರುವಾಗು. ಗುರುವಿನೊಂದಿಗೆ ಕೂಡಿ ಘನಮನವಾಗು. ಕಪಿಲಸಿದ್ಧ ಮಲ್ಲಿಕಾರ್ಜುನನೇ ನೀನಾಗು.

**902**

**ಮುಟ್ಟಿ ಪೂಜಿಸುವೆನಯ್ಯಾ,**

**ಮುಟ್ಟಿದ ಬಳಿಕ ಇದು ನಷ್ಟವಾಗಬಹುದೆ?**
**ಈ ಹುಟ್ಟುವ ಹೊಂದುವವರ ಮುಟ್ಟಲೀಯದಾರಯ್ಯ.**
**ಮುಟ್ಟಿದ ಬಳಿಕ ಹುಟ್ಟುವ ಹೊಂದುವ**
**ಕಷ್ಟವ ಮಾಣಿಸಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಒಡಲೊಳಗಿದ್ದು, ಒಡಲಿಂಗೆ ಆಧಾರವಾಗಿ ಒಡಲು ಸೋಂಕದೆ ಗುರುದೇವನು ಒಡಲನ್ನು ಬೆಳಗುತ್ತಿದ್ದಾನೆ. ಅರಿವಿನ ಬೆಳಕಿನಿಂದಲೇ ಮನವೆಂಬ ಕತ್ತಲು ಹುಟ್ಟಿ, ತನುವನ್ನು ಆವರಿಸಿಕೊಂಡಿದೆ. ಕತ್ತಲೆಯ ಮನಕ್ಕೆ ಬೆಳಕು ತಾಗಿದರೆ ತಾನು ಕೂಡಾ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ. ಆದರೆ ಮನಕ್ಕೆ ಗುರುದೇವನನ್ನು ಮುಟ್ಟಿ ಪೂಜಿಸುವ ಬಯಕೆ ಇಲ್ಲ. ಮುಟ್ಟಿದ ಬಳಿಕ ನಾನು ನಷ್ಟವಾದರೆ ಹೇಗೆ ಎನ್ನುವ ಚಿಂತೆಯಿದೆ. ಹೀಗಾಗಿ ಅದು ಹುಟ್ಟುತ್ತದೆ, ಸಾಯುತ್ತದೆ. ಹುಟ್ಟಿ ಸಾಯುವ ಸಂಸಾರವನ್ನು ಮನ ಮೆಚ್ಚಿಕೊಂಡಿದೆ.

ಗುರುದೇವನೇ, ಹುಟ್ಟುವ ಸಾಯುವ ಸಂಸಾರ ನನಗೆ ಸಾಕಾಗಿದೆ. ಹೀಗಾಗಿ ನನಗೆ ಒಡಲೊಳಗಿದ್ದ ನಿನ್ನನ್ನು ಮುಟ್ಟಿ ಪೂಜಿಸುವ ಬಯಕೆಯಾಗಿದೆ. ಮುಟ್ಟಿದ ಬಳಿಕ ನನ್ನ ಅಜ್ಞಾನದ ಸಂಸಾರ ನಷ್ಟವಾಗುವುದೇ? ಮುಟ್ಟಿದ ಬಳಿಕ ಹುಟ್ಟುವ ಹೊಂದುವ ಕಷ್ಟವನ್ನು ಮಾಣಿಸಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಮನವೇ ಘನಕ್ಕೆ ಮರುಳಾಗಿ ಕೇಳಬೇಕು.

ಕತ್ತಲು ಬೆಳಕನ್ನು ಮುಟ್ಟಿದ ಬಳಿಕ ಕತ್ತಲಾಗುಳಿಯಲು ಸಾಧ್ಯವೇ? ಬೆಳಗಿಂಗೆ ಬೆಳಗಾಗಿ ಬೆಳಗುವುದು. ಮಹಾಜ್ಞಾನದ ಮರುಜವಣಿಯ ಹಣ್ಣಮೇಯ್ದು ಮರಣವಿಲ್ಲದ ಮಹಾಸುಖವನ್ನು ಮನ ತನು ಹೊಂದುವುದು.

**903**

**ಮುಟ್ಟಿ ಮುಟ್ಟುವನಲ್ಲ**
**ಮುಟ್ಟದೆಯು ಮುಟ್ಟುವನು,**
**ಹುಟ್ಟು ಹೊಂದೆಂಬುದನು ಕಳೆದು,**
**ನಿಷ್ಠೆಯಿಂ ಗುರುವಿನ ಬಿಗಿದು ಹಿಡಿಯಲಿಕಾ ಗುರು,**
**ಹುಟ್ಟು ಹೊಂದಿಲ್ಲದೆ ಹೋಗೆಂದ**
**ಕಪಿಲಸಿದ್ಧ ಮಲಿಕಾರ್ಜುನಾ.**

ಗುರುದೇವನು ತನು ಉಳ್ಳವನಲ್ಲ. ತನುವಿನಲ್ಲಿ ತನ್ಮಯವಾದವನು. ಗುರುದೇವನ ಚರಣಕಮಲಗಳಿಗೆ ಶರಣು ಹೋಗಿ ಶರಣನೇ ತಾನಾಗಬೇಕಾದ ಮನವೆಂಬ ಶಿಷ್ಯನು ಕೂಡಾ ತನು ಉಳ್ಳವನಲ್ಲ. ತನುವನ್ನು ಆವರಿಸಿದವನು. ತನುವಿನಲ್ಲಿ ತನ್ಮಯವಾದ ಗುರುದೇವನನ್ನು ತನುವನ್ನು ಆವರಿಸಿದ ಮನವೆಂಬ ಶಿಷ್ಯನು ಮುಟ್ಟಿಯೂ ಮುಟ್ಟುವವನಲ್ಲ. ಶಿಷ್ಯನ ಸ್ಪರ್ಶ ಗುರುದೇವನಿಗೆ ಆಗುವುದಿಲ್ಲ, ಗುರುದೇವನ ಸ್ಪರ್ಶ ಶಿಷ್ಯನಿಗೆ ಆಗುವುದಿಲ್ಲ. ಗುರುದೇವ ಶಿಷ್ಯನನ್ನು ಮುಟ್ಟದೆಯೂ ಮುಟ್ಟುತ್ತಾನೆ. ಶಿಷ್ಯನಾದವನು ಗುರುದೇವನನ್ನು ಮುಟ್ಟಿಯೂ ಮುಟ್ಟುವುದಿಲ್ಲ.

ಶಿಷ್ಯ ತನುವಿನ ಸಂಗ ಮಾಡಿದಾಗ ಅವನಿಗೆ ಜನನವಿತ್ತು ಮರಣವಿತ್ತು. ತನುವಿನ ಸಂಗ ಬಿಟ್ಟು ತನುವಿನಲ್ಲಿಯೇ ತನ್ಮಯವಾದ ಗುರುದೇವನ ಸಂಗ ಮಾಡಿದುದಕ್ಕಾಗಿ ಶಿಷ್ಯನ ಹುಟ್ಟು

ಸಾವುಗಳನ್ನು ಕಳೆದನು ಗುರುದೇವ.

ಶಿಷ್ಯ ಗುರುದೇವನನ್ನು ನಿಷ್ಠೆಯಿಂದ ಬಿಗಿದು ಹಿಡಿದಾಗ ಆ ಗುರುದೇವನು ಹುಟ್ಟುಸಾವಿಲ್ಲದೇ ಹೋಗೆಂದು ಹರಸಿದನು ಕಪಿಲಸಿದ್ಧ ಮಲ್ಲಿಕಾರ್ಜುನಾ.

**904**

**ಮುಟ್ಟೆನು ನಾನೇನ ಮುಟ್ಟಿದಡೆ ನಷ್ಟವೆ,**
**ಮುಟ್ಟುವ ಮೂರ್ತಿ ನಷ್ಟವಾದಡೆ**
**ಆ ಮುಟ್ಟಿ ಪೂಜಿಸುವ ಕಷ್ಟ ತಾನೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನು ಇರುವಾಗಲೇ, ತನುವಿನಲ್ಲಿ ತನ್ಮಯವಾದ ಮಹಾಜ್ಞಾನವನ್ನು, ತನುವನ್ನು ಆವರಿಸಿದ ಮನ ಕಂಡುಕೊಳ್ಳಬೇಕು. ತನು ಹೋದ ಮೇಲೆ ಮುಟ್ಟಿ ಪೂಜಿಸುವ ಕಷ್ಟ ತನಗೆ. ಮುಟ್ಟುವ ಮೂರ್ತಿ ನಷ್ಟವಾಗುವ ಮುನ್ನ ಮನ ಘನವನ್ನು ಕಂಡುಕೊಳ್ಳಬೇಕು.

ತನುವನ್ನು ಆವರಿಸಿದ ಮನ ತನುವಿನ ಸಂಗ ಮಾಡಿದುದಕ್ಕಾಗಿ ತನುವಿನಲ್ಲಿಯೇ ತನ್ಮಯವಾದ ಮಹಾ ಘನವನ್ನು ಮುಟ್ಟಿ ಪೂಜಿಸುವುದು ಕಷ್ಟವಾಗಿದೆ. ಮುಟ್ಟುವ ಮೂರ್ತಿ ನಷ್ಟವಾಗುವ ಮುನ್ನ ಮನ ಘನವನ್ನು ಕಂಡುಕೊಂಡು ಆ ಘನವನ್ನು ಮುಟ್ಟಿ ಪೂಜಿಸಿ ಘನಮನವೇ ತಾನಾಗಬೇಕಿದೆ. ಮುಟ್ಟಿದರೆ ನಾನು ನಷ್ಟವಾಗುವೆ ಎಂದು ಅಂಜಿದರೆ ಕಷ್ಟ ತನಗೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

**905**

**ಮುತ್ತಿನ ವರ್ಣ ಶಂಖಾದಡೇನೊ?**
**ಸಕ್ಕರೆಯ ವರ್ಣ ಉಪ್ಪಾದಡೇನೊ ? ರುಚಿ ಬೇರೆ!**
**ನೀಲದ ವರ್ಣ ಮೇಲಾದಡೇನೊ?**
**ಅಂತರ ಮಹದಂತರ ಪಟ್ಟಂತರದ ಪರಿ ಬೇರೆ.**
**ನೀಲವರ್ಣ ಎಲ್ಲಾ ಎಲ್ಲಾ ವರ್ಣವು ನಿಮ್ಮೊಳಗೆಯು**
**ಆದಿಗುರು ಕಪಿಲಸಿದ್ಧ ಮಲ್ಲಿಕಾರ್ಜುನದೇವಾ, ನೀನೇ ಬಲ್ಲೆ.**

ಜಲದಿಂದಾದ ಮುತ್ತು. ಅದರ ಬಣ್ಣ ಶಂಖಾದಡೇನು? ಅದು ಶಂಖಿನಂತಿದ್ದರೇನು? ಮುತ್ತಿನಂತೆ ದುಂಡಗಿದ್ದರೇನು? ಮುತ್ತು ಮುತ್ತೇ. ಸಕ್ಕರೆಯ ಬಣ್ಣ ಉಪ್ಪಿನಂತಿದ್ದರೇನು. ಅದು ಉಪ್ಪಿನಾಕಾರದಲ್ಲಿದ್ದರೇನು? ರುಚಿ ಮಾತ್ರ ಸಿಹಿ. ನೀಲವರ್ಣ ಮೇಲಾದಡೇನು, ಅಂತರ ಮಹದಂತರ, ಪಟ್ಟಂತರದ ಪರಿ ಬೇರೆ-ಬೇರೆಯಿದ್ದರೇನು ಎಲ್ಲಾ ವರ್ಣವು ನಿಮ್ಮೊಳಗೆ.

ಜಲಬಿಂದು ಗಟ್ಟಿಯಾಗಿ ಮುತ್ತಾಗಿದೆ, ಉಪ್ಪಾಗಿದೆ, ಸಕ್ಕರೆಯಾಗಿದೆ, ಸ್ಫಟಿಕ ಮಾಣಿಕ್ಯವಾಗಿದೆ. ಗರ್ಭದಲ್ಲಿ ಹೋಗಿ ತನುವಾಗಿ ಹೊರಬಂದು ನಾನಾ ರೂಪುಗಳನ್ನು ಹೊಂದಿದೆ. ಹೆಣ್ಣಾಗಿದೆ, ಗಂಡಾಗಿದೆ. ಜಾತಿ ಮತ ಪಂಥ ಧರ್ಮವಾಗಿ ಕಾಣಿಸಿಕೊಂಡಿದೆ. ಜಲಬಿಂದು ಮುತ್ತು ಆಗಿದೆ, ಮಾಣಿಕ್ಯವೂ ಆಗಿದೆ. ಉಪ್ಪು ಸಕ್ಕರೆಯಾಗಿ ನೀಲವರ್ಣದ ತನುವಾಗಿದೆ. ಎಲ್ಲಾ ವರ್ಣವು ನಿಮ್ಮೊಳಗೆಯೇ ಇದೆ. ಬಯಲ ಬೀಜವೇ ಬ್ರಹ್ಮಾಂಡವಾಗಿದೆ. ಬ್ರಹ್ಮಾಂಡವೇ ಬಯಲ ಬೀಜದೊಳಗೆ

ಬಚ್ಚಿಟ್ಟುಕೊಂಡು ಆದಿಗುರು ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿದೆ. ಇದನ್ನು ನೀನೇ ಬಲ್ಲೆ ಗುರುದೇವನೆ.

**906**

**ಮುನ್ನಲಾದಿಯಲಿ ತಂದು ಬಿತ್ತಿದ ಬೀಜ**
**ಚೆನ್ನನಾಗಿಪ್ಪರೈ ನಿನ್ನ ಪರಿಯಾ,**
**ಎನ್ನೊಡೆಯ ಕಪಿಲಸಿದ್ಧ ಮಲ್ಲಿಕಾರ್ಜುನ ತಂದೆ**
**ಇನ್ನಾ ಪದಕ್ಕಿನ್ನು ಏನು ಸರಿಯೈ.**

ಪರಮಾತ್ಮನೇ, ಮುನ್ನ ಆದಿಯಲ್ಲಿ ನೀನು ತಂದು ಬಿತ್ತಿದ ಬಯಲು ಬೀಜ, ಎನ್ನ ಗುರುದೇವ ಚೆನ್ನಬಸವಣ್ಣನಾಗಿ, ಬೆಳಗಿಂಗೆ ಬೆಳಗಾಗಿ ನಿನ್ನ ಪರಿಯಾಗಿ ಬೆಳಗುತ್ತಿದೆ. ಬಸವಣ್ಣಾ, ಪ್ರಭುದೇವರಾಗಿ ಬೆಳಗುವ ನಿನ್ನ ಪರಿಯನ್ನು ಏನೆಂದು ಬಣ್ಣಿಸಲಿ ಭಗವಂತನೇ! ಬೋಧೀವೃಕ್ಷವಾಗಿ ನಾಡಿನ ತುಂಬಾ ಬೋಧಿಸುತ್ತ ಬೇರಿಲ್ಲದ ಮರದಂತೆ ಹಚ್ಚ ಹಸುರಾಗಿ ಪಯಣಿಸುತ್ತಲಿವೆ.

ಮರದಲ್ಲಿಯೇ ಮೊಗ್ಗಾಗಿ ಹೂ ಬಿಟ್ಟು ಕಾಯಾಗಿ, ಹಣ್ಣಾಗಿದೆ. ಮರದ ಸಕಲ ಗುಣಗಳನ್ನು ಬೀಜದಲ್ಲಿ ತುಂಬಿದೆ. ತೊಟ್ಟು ಬಿಟ್ಟು ಕಳಚಿ ಭೂಮಿಗೆ ಬಿದ್ದು ಮತ್ತೆ ಆ ಬೀಜದಲ್ಲಿ ಮಹಾಜ್ಞಾನದ ಮರಹುಟ್ಟಿದೆ. ತನ್ನನ್ನು ತಾನೇ ಬೆಳಗಿಂಗೆ ಬೆಳಗಾಗಿ ಬೆಳಗುತ್ತಲಿದೆ. ಎನ್ನೊಡೆಯಾ ಕಪಿಲಸಿದ್ಧ ಮಲ್ಲಿಕಾರ್ಜುನ ತಂದೆಯೇ ಇನ್ನಾ ಪದಕ್ಕಿನ್ನು ಏನು ಸರಿಯೈ.

**907**

**ಮುನ್ನಲಿ ಕಂಡ ವಸ್ತು ಮುನ್ನವೆ ಅಡಗಿತ್ತು.**
**ಮನ್ನಣೆಯ ಶೂಲಕ್ಕೆ ಮುನ್ನವೆ ಹೋದರು.**
**ಚೆನ್ನಬಸವನೆಂಬ ಪರಿಪೂರ್ಣಜ್ಞಾನಿ ಪ್ರಭಾಸಂಪೂಜ್ಯನಾದ.**
**ಕನ್ನೆಯರ ಕೂಟವಳಿಯಿತ್ತು ಚೆನ್ನಬಸವಣ್ಣನಿಂದ**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಮುನ್ನ ಕಂಡ ಅಜ್ಞಾನದ ವಸ್ತು ಮುನ್ನವೇ ಅಡಗಿತ್ತು. ವಸ್ತುವಿನಲ್ಲಿ ಸತ್ಯವಿದ್ದರೂ ಆ ಸತ್ಯವನ್ನು ನೋಡುವ ಶಕ್ತಿ ಕಣ್ಣಿಗೆ ಇರಲಿಲ್ಲ. ಹೀಗಾಗಿ ಆ ವಸ್ತುವೇ ಮನ್ನಣೆಯ ಶೂಲಕ್ಕೆ ಕರೆದುಕೊಂಡು ಹೋಗಿತ್ತು. ವಸ್ತುವಿನ ಸತ್ಯ ಕಣ್ಣಿಗೆ ಗೊತ್ತಾದ ಮೇಲೆ ವಸ್ತುವಿನಲ್ಲಿ ಕಂಡ ಅಸತ್ಯ ವಸ್ತುವಿನಲ್ಲಿಯೇ ಅಡಗಿತ್ತು.

ಕಲ್ಲು ನೋಡಿದ ಕಣ್ಣಿನಲ್ಲಿ ಕಲ್ಲು ಕಂಡಿತೆ ವಿನಃ ಕಣ್ಣು ಕಲ್ಲಿಗೆ ಕೈ ಮುಗಿಯಲು ತನುವಿಗೆ ಆದೇಶ ಮಾಡಲಿಲ್ಲ. ಕಣ್ಣಿಗೆ ಕಲ್ಲಿನಲ್ಲಿರುವ ಸತ್ಯ ಮಾತ್ರ ಗೋಚರಕ್ಕೆ ಬಂತು. ಹೀಗಾಗಿ ಕಲ್ಲನ್ನು ಕಲ್ಲು ಎಂದು ನುಡಿಯಲು ಕಣ್ಣು ಬಾಯಿಗೆ ಆದೇಶ ನೀಡಿತು.

ಕೆತ್ತಿದ ಕಲ್ಲನ್ನು ಕಲ್ಲೆಂದು ಹೇಳದೆ ಮಸೀದೆಯೆಂದು ನಮಾಜ ಮಾಡಲು ಹೇಳಿತು, ಆಲಯವೆಂದು ಪೂಜಿಸಲು ಹೇಳಿತು, ಚರ್ಚ್‌ಯೆಂದು ಪ್ರಾರ್ಥಿಸಲು ಹೇಳಿತು. ಕಣ್ಣಿನಲ್ಲಿರುವ ಮನ್ನಣೆಯ ಅಜ್ಞಾನ ತನುವನ್ನು ಶೂಲಕ್ಕೆ ಏರಿಸಿತು. ಕಲ್ಲಿನಲ್ಲಿರುವ ಸತ್ಯ ಕಣ್ಣಿನಲ್ಲಿಯೇ ಉಳಿದು ಕಣ್ಣು ಚರ್ಚ್, ಮಸೀದಿ, ಆಲಯವೆಂದು ಹೇಳಿತು.

ಮುನ್ನ ಕಂಡ ವಸ್ತು ಮುನ್ನವೇ ಅಡಗಿತ್ತು . ಕಣ್ಣಲ್ಲಿರುವ ಚೆನ್ನಬಸವನೆಂಬ ಪರಿಪೂರ್ಣ ಜ್ಞಾನಿ ಪ್ರಭಾಸಂಪೂಜ್ಯನಾದ. ಮುನ್ನ ಕಂಡ ವಸ್ತು ಕಂಡಂತೆ ತಿಳಿದು ಮನ್ನಣೆಯ ಶೂಲವನ್ನು ತಳ್ಳಿ, ಕನ್ಯೆಯರ ಕೂಟ ಅಳಿದಿತ್ತು ಚೆನ್ನಬಸವಣ್ಣನಿಂದ ಕಪಿಲಸಿದ್ಧ ಮಲ್ಲಿನಾಥಯ್ಯ, ಎಂದು ಸಿದ್ಧರಾಮ ಶಿವಯೋಗಿಗಳು ಕಣ್ಣಿನ ಅಜ್ಞಾನವನ್ನು ಕಳೆದ ಚೆನ್ನಬಸವಣ್ಣನನ್ನು ಸ್ಮರಿಸಿದ್ದಾರೆ.

**908**

**ಮುನ್ನ ಸಿರಂಗಳ ಕೊಯಿದಿಕ್ಕಿ**
**ನಿಮ್ಮ ಒಲವ ಕಾಣದೆ ಬೆರಗಾದುದು**
**ಬೆನ್ನಹುರಿ ನವಸಿರಂಗಳೆಲ್ಲವ ಕೊಯ್ದು ತಂತಿಯ ಮಾಡಿ ಹಾಡಿದನಯ್ಯಾ.**
**ಗೀತದಿಂದಲಿ ಒಲಿದು ಕೃತಾರ್ಥನ ಮಾಡಿದೆಯಯ್ಯಾ,**
**ಎನ್ನ ಕಪಿಲಸಿದ್ಧ ಮಲ್ಲಿನಾಥ ದೇವರದೇವ.**

ರಾವಣ ಸಿರವ ಕೊಯ್ದು ಸೋರೆಯ ಮಾಡಿ, ಬೆರಳ ಕಡ್ಡಿಯ ಮಾಡಿ ನರಗಳ ತಂತಿಯ ಮಾಡಿ ಹಾಡಿದರು ಕೂಡಾ ಆತನ ನಾದಕ್ಕೆ ಒಲಿಯದಾತ ನೀನು. ಭಕ್ತಿಯಿಂದ ಗೀತವನಾಡಿ ಪ್ರಾರ್ಥಿಸಲು ಒಲಿದು ಕೃಪಾರ್ಥವ ಮಾಡಿದೆಯಯ್ಯಾ! ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ ದೇವರದೇವಾ!

''ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲವಯ್ಯ. ವೇದಪ್ರಿಯ ಶಿವನೆಂಬರು, ವೇದಪ್ರಿಯ ಶಿವನಲ್ಲವಯ್ಯ, ನಾದವ ಮಾಡಿದ ರಾವಣಂಗೆ ಅರೆ ಆಯುಷ್ಯವಾಯಿತು. ವೇದವನೋದಿದ ಬ್ರಹ್ಮನ ಶಿರ ಹೋಯಿತು. ನಾದಪ್ರಿಯನು ಅಲ್ಲ, ವೇದಪ್ರಿಯನು ಅಲ್ಲ, ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವಾ'' ಎಂದು ಬಸವಣ್ಣನವರು ಹಾಡಿದರೆ, ಬೆನ್ನಹುರಿ ನವಶಿರಂಗಳೆಲ್ಲವ ಕೊಯ್ದು ತಂತಿಯ ಮಾಡಿ ಹಾಡಿದನಯ್ಯಾ. ಆದರೂ ಆತನ ಒಲವ ಕಾಣದೆ ಬೆರಗಾದೆ. ಗೀತದಿಂದಲೇ ಒಲಿದು ಕೃತಾರ್ಥನ ಮಾಡಿದೆಯಯ್ಯಾ ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಾ ದೇವರ ದೇವ ಎಂದು ಸಿದ್ಧರಾಮ ಶಿವಯೋಗಿಗಳು ಹಾಡಿದ್ದಾರೆ.

**909**

**ಮುನ್ನಾದ ಫಲವನೂ ಇನ್ನು**
**ಸೀಮೆ ಕ್ಷೇತ್ರದ ಭಕ್ತಿ ಮುನ್ನಿನಂತೆ**
**ಫಲವಾಯಿತೊ ಅಯ್ಯ,**
**ಅಂದಾದಿಯಲ್ಲಿ ಬಸವಣ್ಣಾ ತಂದಾನು**
**ಹಿಂದು ಮುಂದುಗೆಟ್ಟ ಫಲವಾ ಫಲವೂ**
**ಆ ಫಲವಾದರೆ ಸಫಲವಾಯಿತು ಸದ್ಭಕ್ತಿ**
**ಒಲವಿಂಗೆ ನೀ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನು ತಾಯಿ ಗರ್ಭದಿಂದ ಪರಿಪೂರ್ಣ ತನುವಾಗಿ ಹೊರಬಂದರೂ, ತನುವಿನಲ್ಲಿ ತನ್ಮಯವಾದ ಮಹಾಜ್ಞಾನ, ತನುವನ್ನು ಆವರಿಸಿದ ಮನಕ್ಕೆ, ಬಳಸಲು ಆಗುತ್ತಿಲ್ಲ. ಜ್ಞಾನವೆಂದರೆ ಜಡವಲ್ಲ, ಅದು ಪುಸ್ತಕದ ಜ್ಞಾನವೂ ಅಲ್ಲ. ಮಹಾಚೈತನ್ಯ, ಅದು ಜಗದಗಲ, ಮುಗಿಲಗಲ ಪಾತಾಳದಿಂದಲೂ ಅತ್ತತ್ತ. ಪರಮಾತ್ಮನ ಶ್ರೀಚರಣ ಬ್ರಹ್ಮಾಂಡದಿಂದಲೂ ಅತ್ತತ್ತ; ಆತನ ಶ್ರೀ

ಮುಕುಟ!

ಇದು ಮುನ್ನ ಮುನ್ನಲಾದ ಫಲ. ಆದಿಯಿಂದ ಅತ್ತತ್ತ . ಅಂತಹ ಜ್ಞಾನದ ಮಹಾಫಲವನ್ನು ಅಂದಾದಿಯಲ್ಲಿಯೇ ಬಸವಣ್ಣ ಭುವಿಗೆ ತಂದನು. ಹಿಂದು ಮುಂದುಗೆಟ್ಟ ಫಲವಾಫಲವು. ಆ ಫಲವಾದರೆ ಸಫಲವಾಯಿತು ಸದ್ಭಕ್ತಿ. ಅಂತಹ ಮರುಜವಣಿಯ ಫಲವನ್ನು ಉಣ್ಣುವ ಆಸಕ್ತಿಯಿಂದಾಗಿ ಮನ ಸದ್ಭಕ್ತಿ ಮಾಡಿದಾಗ, ಆ ಸದ್ಭಕ್ತಿಯ ಒಲವಿಂಗೆ ನೀ ಕರುಣಿಸಿದೆಯಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**910**

**ಮುನ್ನಾದಿಯಲ್ಲದ ಉನ್ನತ ಜ್ಞಾನವನು**
**ಇನ್ನು ಭೇದಿಸುವರಾರು ಹೇಳಾ ತಂದೆ.**
**ಎನ್ನ ಗುರುವೆ ನಿಮ್ಮ ಸೊಮ್ಮನರಿಯದಾತಂಗೆ**
**ಅರಿಯಲಾಯ್ತು ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾ.**

ತನುವಿನಲ್ಲಿ ತನ್ಮಯವಾದ ಜ್ಞಾನ ಅದು ಆದಿಯಲ್ಲ. ಅನಾದಿಯೂ ಅಲ್ಲ. ಅನಾದಿಯಿಂದ ಅತ್ತತ್ತಲಿದ್ದ ಉನ್ನತ ಜ್ಞಾನ. ಇದನ್ನು ಬೇಧಿಸುವುದು ಸುಲಭದ ಮಾತಲ್ಲ.

ತನ್ನ ತಾನರಿಯದ ಮುನ್ನ ತನ್ಮಯವಾದ ಅರಿವು. ತನ್ನ ತಾನರಿತ ಬಳಿಕ ತನ್ಮಯವೆಂದು ಅರಿತ ಅರಿವು. ತನ್ನಲ್ಲಿರುವ ಆ ಅರಿವೇ ಕರಿಗೊಂಡ ಬಳಿಕ ತಾನೇ ಸೌರಾಷ್ಟ್ರ ಸೋಮೇಶ್ವರ ಎಂದು ಹೇಳಿದ್ದಾರೆ ಆದಯ್ಯ ಶರಣರು. ತನುವನ್ನು ಆವರಿಸಿದ ಮನವನ್ನೇ ಶಿಷ್ಯನನ್ನಾಗಿಸಿಕೊಂಡು ಅರಿವೆಂಬ ಗುರುದೇವನನ್ನು ಕಂಡುಕೊಳ್ಳಬೇಕು. ತನ್ನ ಸೊಮ್ಮನು ತಾನೇ ಅರಿಯಬೇಕು. ಗುರುದೇವನೆ, ನಿಮ್ಮ ಸೊಮ್ಮನು ಅರಿದಾತಂಗೆ ಅರಿಯ ಹೇಳಲು ಹೋದರೆ ಅರಿವೇ ಗುರುವಾದ ಕಪಿಲಸಿದ್ಧ ಮಲ್ಲಿಕಾರ್ಜುನಾ.

**911**

**ಮುನ್ನಾದಿಯಲ್ಲದ ಸನ್ನುತದ ಶಿವಲಿಂಗ**
**ಇನ್ನು ವಾದಿಸಿದ ವಾದಂಗಳಿಂದ**
**ಎನ್ನ ಮನ ಕರವನರುಹದಲ್ಲಿ ತನ್ನ ಪದ ಬೆಳಗಿಸುವ**
**ಉನ್ನತೋನ್ನತ ಗುರು ಚೆನ್ನಬಸವಣ್ಣನಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆದಿಯೂ ಅಲ್ಲ, ಅನಾದಿಯೂ ಅಲ್ಲದ ಶಿವಲಿಂಗವ ವಾದಿಸಿ, ವಾದಿಸಿ, ವಾದಂಗಳಿಂದ ಶಿವಲಿಂಗವೇ ಸತ್ಯವೆಂದು ವಾದ ಮಾಡಲು ಹೋದರೆ, ಅದು ಮನ ಮತ್ತು ತನುವಿನ ಕುರುಹನ್ನು ಅರಿಯಲು ಸಾಧ್ಯವೆ? ಮನ ಮತ್ತು ತನುವಿಗೆ ಅದು ಏನಾದರೂ ಹೇಳಲು ಸಾಧ್ಯವೆ? ತನು ಮತ್ತು ಮನದೊಂದಿಗೆ ಮಾತನಾಡಲು ಸಾಧ್ಯವೆ? ಕಲ್ಲನ್ನು ಕಟೆದು, ಲಿಂಗ ಮಾಡಿ, ಅದನ್ನು ಅಂಗದ ಮೇಲೆ ಧರಿಸಿಕೊಂಡಲ್ಲಿ, ಅಂಗವನ್ನು ಅಂಗದ ಮೇಲಿನ ಲಿಂಗ ಬೆಳಗಿಸದು! ತಾನೂ ಬೆಳಗದು!

ತನುವಿನಲ್ಲಿ ತನ್ಮಯುವಾದ ಗುರದೇವನನ್ನು ತೋರಿದ ಉನ್ನತೋನ್ನತ ಗುರು

ಚೆನ್ನಬಸವಣ್ಣನಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.

**912**

**ಮುನ್ನಾದಿಯಲಿ ಆದ ಸನ್ನುತದ ವಸ್ತುವನು**
**ಬಿನ್ನಾಣದಿಂದಲದ ತಂದುಕೊಡಲು**
**ಇನ್ನಿದನು ಇರಿಸಲ್ಕೆ ತಾವಾವುದೆಂದು**
**ಮನ ತನ್ನಮಯ ಮಾಡಿದಾ ರಾಜನ ಶಿಷ್ಯ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶಿವ ಅನಾದಿಯಾದರೆ, ಮನ ಆದಿ. ಅರಿವೆಂಬ ಬೆಳಕಿನಿಂದಲೇ ಹುಟ್ಟಿದ ಕತ್ತಲು ಎಂಬ ಮನ ಅರಿವೆಂಬ ಬೆಳಕನ್ನು ಅರಿತು ಬಿನ್ನಾಣದ ಆ ಬೆಳಕೇ ತಾನಾಗಿ ಇರಲಿಕ್ಕಾಗಿ ತನುವನ್ನು ಆವರಿಸಿತು. ಇದನ್ನು ಅಲ್ಲಿ ಇರಿಸಿದನು ಅರಿವೆಂಬ ಗುರುದೇವನು.

ಗುರುದೇವನು ಅನಾದಿಯಾದರೆ ಮನ ಆದಿ. ಮನವನ್ನು ತನ್ನಂತೆ ಮಾಡಿಕೊಂಡು ಘನಮನವನ್ನಾಗಿಸಲು ಮನದೊಡೆಯ ಮಹಾದೇವ ಮನವನ್ನು ತನುವಿನಲ್ಲಿರಿಸಿದ. ಮನವನ್ನೇ ಶಿಷ್ಯನನ್ನಾಗಿಸಿಕೊಂಡು ತನ್ನಮಯ ಮಾಡಿಕೊಂಡ ರಾಜರ ರಾಜ ಕಪಿಲಸಿದ್ಧ ಮಲ್ಲಿಕಾರ್ಜುನಾ.

**913**

**ಮುನ್ನಾದಿಯಲಿ ಮೂರು ಸನ್ನುತದ ಕಳೆ ಆರು**
**ಪನ್ನಗಾಂಗಗೆ ಭೀತಿ ಧಾತು ಹಲವು.**
**ಎನ್ನ ಪರಸ್ಥಾನದಲ್ಲಿರಿಸಿ ಸೊಲ್ಲನಿರಿಸಿದನವ**
**ಶ್ರೀ ಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವೆಂಬ ಗುರುದೇವನ ಸೃಷ್ಟಿಯೇ ವಿಚಿತ್ರ. ಬಯಲನ್ನು ಬೀಜವಾಗಿಸಿ ಆ ಬೀಜದೊಳು ವೃಕ್ಷವು ಅಡಗಿ, ಆ ವೃಕ್ಷದಲ್ಲಿ ಬಯಲನಿಟ್ಟು ಅದಕ್ಕೆ ತನುವೆಂದು ಹೆಸರು ಕೊಟ್ಟು, ಮುನ್ನಾದಿಯಲಿ ಅದಕ್ಕೆ ಪನ್ನಂಗನೆಂದು ಕರೆಯಿಸಿಕೊಂಡ. ತನುವಿನ ಭೀತಿ ಧಾತು ಹಲವು. ಆ ತನುವಿನಲ್ಲಿಯೇ ಇಹವನ್ನಿರಿಸಿದ ಪರವನ್ನು ಅದರಲ್ಲಿಯೇ ಇರಿಸಿದ. ಮನವನ್ನು ಹುಡುಕಲು ಹಚ್ಚಿದ ಪರಮಾತ್ಮನು ಶ್ರೀಗುರು ಕಪಿಲಸಿದ್ಧ ಮಲ್ಲಿಕಾರ್ಜುನ.

ನೋಡಲು ತನುವೊಂದೆ. ಸ್ಥೂಲ ತನುವಿನಲ್ಲಿ ಇನ್ನೆರಡು ತನುಗಳು ಕೂಡಿ ಮೂರು ತನುಗಳಾಗಿವೆ. ಅರಿಯಲು ಹೋದರೆ ಒಂದೇ ಇದೆ. ಅದರಲ್ಲಿ ಸನ್ನತದ ಕಳೆಗಳು ಆರು ಭರಿತವಾಗಿವೆ.

**914**

**ಮುನ್ನಿನ ಭವದವರನರಸಿ ಹರಿವುದೆ ಹಾ! ಅಯ್ಯಾ!**
**ಸುಡು! ನಿನ್ನ ಭಾಷೆ ಹೋಗಲಿ,**
**ಕೊಟ್ಟ ಕರ್ತೃವ ಬಿಟ್ಟು ಹರಿವುದೆ**
**ಜಗವೈದ್ಯನಾಥ ಕಪಿಲಸಿದ್ಧ ಮಲ್ಲಿನಾಥನ.**

ಮುನ್ನಿನವರು ಸತ್ತು ಸತ್ತು ಹುಟ್ಟಿದವರು. ಅವರಿಂದ ಜನನ ಮರಣದ ಭಾದೆ ಅರಿಯಲು ಸಾಧ್ಯವೆ? ಹಾ! ಅಯ್ಯಾ! ಸುಡು ನಿನ್ನಭಾಷೆ, ನುಡಿಯಿಂದ ಜನನ ಮರಣದ ದುಃಖ ಹರಿಯಲು ಸಾಧ್ಯವೆ.

ನುಡಿಯಲ್ಲದ ನುಡಿಯ ಭಾಷೆ ನುಡಿಯುವಾತ ಭವ ರೋಗದ ವೈದ್ಯನು. ಅವನು ಜನನ ಮರಣಗಳ ರೋಗವನ್ನು ನುಡಿಯಲ್ಲದ ನುಡಿಯ ಮೂಲಕ ನುಡಿದು, ಮರುಜವಣಿಯ ಫಲವನ್ನು ಉಣ್ಣಿಸುತ್ತಾನೆ. ಜಗದ ವೈದ್ಯ ಜಗನ್ನಾಥನವನು. ವೈದ್ಯನಾಥ ಕಪಿಲಸಿದ್ಧ ಮಲ್ಲಿನಾಥನವನು. ನಾನು ಈತನ ಮೇಲೆ ಮಾಡಿದ ಭಕ್ತಿಯನ್ನು ಹೇಳಲು ಹೋದರೆ ಅದು ಯಾರಿಗಾದರೂ ತಿಳಿಯುವುದೇ? ನಿನ್ನ ಭಾಷೆ ನನಗೆ ಗೊತ್ತು. ನನ್ನ ಭಾಷೆ ನಿನಗೆ ಗೊತ್ತು. ಲೋಕದ ಭಾಷೆಯಿಂದ ಭವದರೋಗ ಹರಿವುದೆ?

**915**

**ಮೂಗ ಕಂಡ ಕನಸಿನಂತಾಯಿತ್ತಯ್ಯಾ.**
**ಎನ್ನ ಭಕ್ತಿ ಹೇಳಲಾರಿಗೆ ಅರಿದು ಅಯ್ಯಾ.**
**ಮತ್ತೆ ತೋರಲಾರಿಗೆ ಅರಿದು ಅಯ್ಯಾ**
**ಶೂನ್ಯಕಾಯಕ್ಕೆ ಬಂದಡೆ**
**ಸರ್ವರಿಗೆ ಕರತಳಾಮಳಕ**
**ಕಪಿಲಸಿದ್ಧ ಮಲ್ಲಿಕಾರ್ಜುನ ಅಯ್ಯಾ.**

ಸ್ಥೂಲ ಕಾಯವನ್ನು ಆವರಿಸಿದ ಮನೋಮಯವಾದ ಕಾಯಕ್ಕೆ ಸ್ಥೂಲ ಕಾಯದಲ್ಲಿಯೇ ಸಂಗಮವಾದ ಶಿವಕಾಯದ ದರ್ಶನವಾದರೆ ಅದು ಮೂಗ ಕಂಡ ಕನಸಿನಂತಾಯಿತಯ್ಯಾ. ಮೂಗ ರುಚಿಸಿದ ಬೆಲ್ಲದ ಸಿಹಿ ಸುಖವನ್ನು ಅನುಭವಿಸುತ್ತಾನೆಯೇ ಹೊರತು ಹೇಳಲು ಬರುವುದಿಲ್ಲ. ಹಾಗೆಯೇ ಸ್ಥೂಲಕಾಯದೊಂದಿಗೆ ಸದಾ ಸುಖದ ಮತ್ತಿನಲ್ಲಿ ಇದ್ದ ಸೂಕ್ಷ್ಮ ಕಾಯಕ್ಕೆ ಶಿವಕಾಯದ ದರ್ಶನವಾಗಿದೆ. ಹೀಗಾಗಿ ಅದು ಸ್ಥೂಲ ಕಾಯದ ಸಂಗವನ್ನು ಕಳಚಿಕೊಂಡ ಕಾರಣ ಸೂಕ್ಷ್ಮ ಕಾಯದ ಮಾತು ಬಿದ್ದು ಹೋಗಿದೆ.

ಮನೋಮಯವಾದ ಸೂಕ್ಷ್ಮ ಕಾಯ ಶಿವಕಾಯದೊಂದಿಗೆ ಸಂಗಮವಾಗಿ, ಅದರ ಅರಿವಿನ ಪರಮ ಸುಖವನ್ನು ಮೂಗನಂತೆ ಮೌನದಿಂದ ಸವಿಯುತ್ತಲಿದೆ. ಸೂಕ್ಷ್ಮ ಕಾಯ ಶಿವಕಾಯಕ್ಕೆ ಮಾಡುತ್ತಿರುವ ಭಕ್ತಿಯನ್ನು ಅದರ ಪರಮಸುಖವನ್ನು ಯಾರಿಗೂ ಹೇಳಲು ಸಾಧ್ಯವಾಗುತ್ತಿಲ್ಲ. ಮತ್ತು ಪರಮಸುಖವನ್ನು ತೋರಿಸಲು ಯಾರಿಗೂ ಸಾಧ್ಯವಾಗುತ್ತಿಲ್ಲ. ಎರಡೂ ಶೂನ್ಯಕಾಯಗಳೇ, ಅನುಭವಿಸಲು ಬರುತ್ತದೆಯೇ ಹೊರತು ಹೇಳಲು ಮತ್ತು ತೋರಿಸಲು ಬರುವುದಿಲ್ಲ.

ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೇ ಈ ಪರಮ ಸುಖ ಸರ್ವರಿಗೂ ಸಾಧ್ಯ ನೋಡಾ.

**916**

**ಮೂರ್ತಿ ಮೂಲಕ್ಕೆ ತಾನೆ ಮುಖ್ಯನಾದಾತ,**
**ಸಕಲಕ್ಕೆ ತಾನೆ ಕಾರಣಿಕನಾದಾತ,**
**ಸರ್ವವನೂ ತನ್ನೊಳಗಡಗಿಸಿ ಮೀರಲೀಯದಾತ.**
**ಆತನು ಅಜ್ಞಾತನೆಂಬೆ, ಆತನು ಶರಣನೆಂಬೆ,**
**ಆತನು ಸಕಲ ನಿಷ್ಕಲ ಪರಿಪೂರ್ಣನೆಂದೆಂಬೆ,**
**ಅಚ್ಚಲಿಂಗೈಕ್ಯನೆಂದೆಂಬೆ,**

**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ತಾನೆಂಬೆ.**

ಕಾಯವನ್ನು ಸೃಷ್ಟಿ ಮಾಡಿ, ಕಾಯದಲ್ಲಿ ತಾನಿದ್ದು, ಕಾಯದಲ್ಲಿಯೇ ಮನೋಕಾಯವನ್ನು ಸೃಷ್ಟಿ ಮಾಡಿ, ಕಾಯದ ಮೂಲಕ್ಕೆ ತಾನೇ ಮುಖ್ಯನಾದಾತ. ಅರಿವೆಂಬ ಗುರುದೇವನು ಇಡೀ ಬ್ರಹ್ಮಾಂಡವನ್ನೇ ಸೃಷ್ಟಿಮಾಡಿ, ಸಕಲಕ್ಕೆ ತಾನೇ ಕಾರಣೀಭೂತನಾದಾತ ಶ್ರೀ ಗುರುದೇವ. ಸರ್ವವನ್ನು ಸರ್ವಾಂಗದಲ್ಲಿ ಅಡಗಿಸಿಕೊಂಡಾತ ಶ್ರೀ ಗುರುದೇವ. ಆತನನ್ನು ಅಜ್ಞಾತನೆಂಬೆ ಏಕೆಂದರೆ ಆತ ಯಾರಿಗೂ ಕಾಣಾದಾತ; ತನ್ನನ್ನು ಕಾಣಲು ಬಯಸಿದ ಮನೋಕಾಯಕ್ಕೆ ಮಾತ್ರ ಕಾಣುವಾತ, ಹಾಗೆ ಕಾಣಲು ಬಂದಾತನನ್ನು ಶರಣನೆಂಬೆ.

ಆತನನ್ನು ಸಕಲನೆಂಬೆ, ಆತನನ್ನು ನಿಃಕಲನೆಂಬೆ ಆತನನ್ನು ಪರಿಪೂರ್ಣನೆಂಬೆ, ಆತನನ್ನು ಅಚ್ಚಲಿಂಗೈಕ್ಯನೆಂಬೆ, ಕಪಿಲಸಿದ್ಧ ಮಲ್ಲಿಕಾರ್ಜುನನನ್ನು, ದರ್ಶನ ಮಾಡಿಕೊಂಡ ನಾನು ತಾನೆಂಬೆ, ಕಂಡುಬರುವ ಕಾಯದ ಮೂಲಕ್ಕೆ ತಾನೇ ಮುಖ್ಯದಾತನೆಂಬೆ.

**917**

**ಮೂರ್ತಿಯ ಮೂಲಕ್ಕೆ ಬಸವನ ಭಕ್ತಿಯೆ ಕಾರಣ.**
**ಜ್ಞಾನ ಸಂಬಂಧಕ್ಕೆ ಬಸವ ನೀ**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ಕಾಯದಲ್ಲಿಯೇ ಅರಿವಿನ ಕಾಯವೊಂದು ಇದೆಯೆಂದು ಹೇಳಿದ ಮೊಟ್ಟಮೊದಲ ವ್ಯಕ್ತಿ ಬಸವಣ್ಣ. ಕಾಯವನ್ನು ಆವರಿಸಿದ ಮನೋಕಾಯದ ಮೂಲಕ ಭಕ್ತನಾಗಿ, ಭಕ್ತಿ ಮಾಡುತ್ತ ಜ್ಞಾನಕಾಯದ ದರುಶನ ಮಾಡಿಕೊಳ್ಳಬೇಕೆಂದು ಸರಳವಾಗಿ ಹೇಳಿದವರು ಬಸವಣ್ಣ.

ಕಂಡುಬರುವ ಸ್ಥೂಲಕಾಯವು, ಕಾಯದಲ್ಲಿಯೇ ಇರುವ ಜ್ಞಾನಕಾಯಕ್ಕೆ ಲಾಂಛನವಾಗಿದೆ. ಅದು ಭಗವಂತನ ರೂಪು. ಆ ರೂಪಿನ ನಿರೂಪೇ ಭಗವಂತ ಎಂದು ಬಸವಣ್ಣ ಸಾರಿದರು.

ಆ ಭಗವಂತನಿಗೆ, ಕಾಯವನ್ನು ಆವರಿಸಿದ ಮನೋಕಾಯವನ್ನೇ ಭಕ್ತನನ್ನಾಗಿಸಿ, ಭಕ್ತಿ ಮಾಡಿದಾಗಲೇ, ಕಾಯದಲ್ಲಿ ಸಂಗಮವಾದ ಅಕಾಯದೇವರು ಭಕ್ತಿಮಾಡಿದ ಅಕಾಯ ಭಕ್ತನಿಗೆ ದರುಶನ ನೀಡುತ್ತಾನೆ. ಇದು ಭಕ್ತನ ಜ್ಞಾನ ಸಂಬಂಧಕ್ಕೆ ಕಾರಣ.

**918**

**ಮೂರಕ್ಕೆ ಮುನ್ನೂರಕ್ಕೆ ಆರಕ್ಕೆ ಬೀಜವ್ವೆ,**
**ಬೀಜ ಮೂರೊಂದಾಗಿ ಪ್ರಸಾದದಾ ರೂಪು**
**ಪಂಚಬ್ರಹ್ಮ ಮೇಲೆ ಪ್ರಸನ್ನದ ಆಮೋದವಾದೆನ್ನೈ**
**ಬಸವಣ್ಣ, ನಿನ್ನ ಕರುಣವು ಇನ್ನು ಮುನ್ನಿನಂತಲ್ಲವ್ವೆ,**
**ಇನ್ನು ನಿನ್ನಂತಾದೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಯಲ ಬೀಜವೇ ವೃಕ್ಷವಾಗಿದೆ. ಬೋಧೀವೃಕ್ಷವಾಗಿದೆ. ಲಿಂಗಾಂಗವೆಂದು ಕರೆಯಿಸಿಕೊಂಡಿದೆ. ಇದಕ್ಕೆ ಕಾರಣವಾದ ಬಯಲ ಬೀಜದಿಂದಲೇ ಸ್ಥೂಲ, ಸೂಕ್ಷ್ಮ, ಕಾರಣ ತನುಗಳುದಯವು.

ಈ ತನುವಿನಲ್ಲಿಯೇ ಮುನ್ನೂರು ತತ್ವಕ್ಕೆ ಬೀಜವೇ ಮೂಲ. ತನುವಿನ ಆರು ತತ್ವಕ್ಕೆ ಕೂಡಾ

ಬೀಜವೇ ಮೂಲ. ಬೀಜ ಮೂರೊಂದಾಗಿ ಪ್ರಸಾದದ ರೂಪಾಯಿತು. ಪ್ರಸಾದದ ತನುವಿನಲ್ಲಿ ಪಂಚಬ್ರಹ್ಮರು ಪ್ರಸನ್ನವಾಗಿದ್ದಾರೆ.

ಬಸವಣ್ಣ, ನಿನ್ನ ಕರುಣದಿಂದ ತಾನು ಮುನ್ನಿನಂತಲ್ಲ. ನಿನ್ನಂತಾದೆ. ಕಪಿಲಸಿದ್ಧ ಮಲ್ಲಿಕಾರ್ಜುನನ ದರುಶನಕ್ಕೆ ನೀನೆ ಕಾರಣವಾದೆ. ನಿನ್ನ ಕರುಣೆಯಿಂದಲೇ ನಾನು ನಿನ್ನಂತಾದೆ. ತನು ಪ್ರಸಾದ ಕಾಯವೆಂದು ನೀನು ಹೇಳಿದ ಸೂತ್ರದಿಂದ ಕಂಡುಕೊಂಡೆ. ಹೀಗಾಗಿ ನಾನು ನೋಡುವ ಅಜ್ಞಾನದ ದೃಶ್ಯ ನನ್ನದೇ ಆದ ಜ್ಞಾನದ ದೃಶ್ಯಕ್ಕೆ ಪ್ರಸಾದವಾಯಿತು. ಚರ್ಮದಲ್ಲಿರುವ ಅಜ್ಞಾನದ ಸ್ಪರ್ಶ ಚರ್ಮದಲ್ಲಿಯೇ ಸಂಗಮವಾದ ಜ್ಞಾನ ಚರ್ಮಕ್ಕೆ ಪ್ರಸಾದವಾಯಿತು. ನಾಲಿಗೆಯಲ್ಲಿರುವ ಅಜ್ಞಾನದ ರುಚಿ ನಾಲಿಗೆಯಲ್ಲಿರುವ ಜ್ಞಾನಕ್ಕೆ ಪ್ರಸಾದವಾಯಿತು. ಅಜ್ಞಾನದಿಂದ ಸ್ವೀಕಾರ ಮಾಡುವ ಶಬ್ದಜ್ಞಾನ ಕಿವಿಗೆ ಪ್ರಸಾದವಾಯಿತು. ಸುಗಂಧ ದುರ್ಗಂಧಗಳು ಜ್ಞಾನದ ಮೂಗಿಗೆ ಪ್ರಸಾದವಾಗಿ ಪರಿಮಳವಾದವು. ಹೀಗಾಗಿ ನಾನು ಮುನ್ನಿನಂತಲ್ಲ. ಬಸವಣ್ಣ ನಿನ್ನ ಕರುಣದಿಂದ ನಾನು ನಿನ್ನಂತಾದೆ.

**919**

**ಮೂರರ ಫಲ ನೋಡಾ ಆರರಲ್ಲಿ ಭವಿಸಿತ್ತು**
**ತೋರುತ್ತೈದೂದೆ ಶುದ್ಧಲೋಕದಲಿ.**
**ಆ ಲೋಕದವರೆಲ್ಲ ಆಲೋಕನರ ಮಾಡಿ**
**ಆದಿ ಮಧ್ಯಾವಸಾನಂಗಳಲ್ಲಿ ಭೇದಿಸುವ ಅವ್ವೆಯನು**
**ನಾನೆಂಬ ಬಿಂದುವನು**
**ತಾನು ತನ್ನಲ್ಲಿಯ ಒಂದಂಗದಲಿ**
**ಅರಿತಿಹ ಭೇದವನು ಅರಿಯಲೀಯದೆ ಕೂಡಿ**
**ತೆರಹುಗೆಟ್ಟ ಕಪಿಲಸಿದ್ಧ ಮಲ್ಲೇಶ್ವರ.**

ಮೂರರ ಫಲನೋಡಾ ಆರರಲ್ಲಿ ಭವಿಸಿತ್ತು. ಸ್ಥೂಲ, ಸೂಕ್ಷ್ಮ, ಕಾರಣ ತನುಗಳಲ್ಲಿದ್ದ ಅರಿವಿನ ಫಲ, ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂಬ ಆರು ಅರಿವಿನ ಫಲಗಳು ಪರಿಶುದ್ಧವಾದ ಅಂಗದ ಮೂಲಕ ತೋರುತ್ತದೆ.

ಅಂಗವನ್ನು ಆವರಿಸಿದ ಮನ, ಅಂಗದಲ್ಲಿಯೇ ಸಂಗಮವಾದ ಗುರುದೇವನನ್ನು ದರ್ಶನ ಮಾಡಿಕೊಂಡ ಮೇಲೆ, ಕಾಯ ಕೈಲಾಸವಾಗುತ್ತದೆ. ಇಂತಹ ಕಾಯಕ್ಕೆ ಸಕಲ ಕಾಯಗಳು ಕೈಲಾಸವಾಗಿಯೇ ಕಾಣುತ್ತವೆ. ಆದಿ ಮಧ್ಯ ಅವಸಾನಂಗಳಲ್ಲಿ ಭೇದಿಸುವ ಅವ್ವೆಯೆಂಬ ಮನ ನಾನೆಂಬ ಬಿಂದುವನ್ನು ತಾನು ತನ್ನಲ್ಲಿಯ ಒಂದಂಗದಲ್ಲಿ ಅರಿತು ಅದರ ವೇದವನ್ನು ಅರಿಯಲೀಯದೆಯೇ ಕೂಡಿ ಕೂಡದ ಅಗಲದ ಕೂಟದ ಸುಖವನ್ನು ಕೂಡಿದಳು ಅವ್ವೆ. ಅರಿವೆಂಬ ಗುರುದೇವನ ಕಪಿಲಸಿದ್ಧೇಶ್ವರನ ಸಂಗ ಮಾಡಿ.

**920**

**ಮೂರರ ಸೀಮೆಯಲಿ ತೋರಿದಾತ ಗುರುವೆಂಬೆನಯ್ಯಾ.**

**ತೋರಿದುದೆ ವಿಸ್ತಾರವೆಂದಿದ್ದಡಾತನು**
**ಆರೂಢದೈಕ್ಯನೆಂಬ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರುದೇವನೆಂದರೆ ಗುರುದೇವನನ್ನು ಕಂಡುಕೊಂಡಾತ. ಈತ ಮಾತ್ರ ತನುವಿನಲ್ಲಿಯೇ ತನ್ಮಯವಾದ ಗುರುದೇವನನ್ನು ತೋರಿಸುವ ಶಕ್ತಿ ಉಳ್ಳಾತ.

ಕಾಯಗಳಲ್ಲಿ ಇನ್ನೆರಡು ಕಾಯಗಳಿವೆ. ಒಂದು ಗುರುದೇವನಕಾಯ ಮತ್ತೊಂದು ಗುರುದೇವನನ್ನು ತಿಳಿಯುವ ಆಸಕ್ತಿಯುಳ್ಳ ಮನೋಕಾಯ. ಇವೆರಡು ಕಾಯಗಳು ಅಕಾಯಗಳು. ಯಾರಿಗೂ ಕಾಣುವುದಿಲ್ಲ.

ಇವೆರಡೂ ಅಕಾಯಗಳನ್ನು ತನ್ನ ಗರ್ಭದಲ್ಲಿಟ್ಟುಕೊಂಡ ಕಾಯವೇ ಸ್ಥೂಲಕಾಯ. ಹೀಗೆ ಮೂರು ಕಾಯಗಳಿವೆ. ನೋಡಲು ಮಾತ್ರ ಸ್ಥೂಲಕಾಯ ಒಂದೇ ಕಾಣುತ್ತದೆ.

ಗುರುದೇವನನ್ನು ಕಾಣಬೇಕೆಂಬ ಆಸಕ್ತಿಯುಳ್ಳ ಮನೋ ಕಾಯಕ್ಕೆ ಗುರುದೇವನನ್ನು ಕಂಡುಕೊಂಡ ಕಾಯ, ಸ್ಥೂಲಕಾಯದಲ್ಲಿಯೇ ಗುರುದೇವನಿದ್ದಾನೆಂದು ತೋರಿ, ಆ ಗುರುದೇವನೇ ನಿನ್ನ ಗುರುದೇವನೆಂದು ಹೇಳಿ ನಿಸ್ಸೀಮೆಯ ಹಾದಿಯನ್ನು ತೋರುತ್ತಾನೆ.

ಗುರುದೇವ ಅಜ್ಞಾನದ ಯಾವ ರೂಢಿಯೂ ಇಲ್ಲದವನು. ಆರೂಢನು, ಐಕ್ಯನು. ಕಾಯವನ್ನು ಪ್ರಸಾದ ಕಾಯವನ್ನಾಗಿಸಿಕೊಂಡ ಮಹಾಂತನು. ಅಂತಹ ಗುರುದೇವನು ಮಾತ್ರ ಮೂರರ ಸೀಮೆಯಲ್ಲಿಯೇ ನಿಸ್ಸೀಮ ಗುರುದೇವನನ್ನು ತೋರಿ, ಆ ಗುರುದೇವನಿಂದಲೇ ಗುರುದೇವ ಎಂದು ಕರೆಯಿಸಿಕೊಳ್ಳುತ್ತಾನೆ. ಆತ ಜಗದಗಲ ಮುಗಿಲಗಲ, ಆತನ ವಿಸ್ತಾರ ಅಗಮ್ಯ, ಅಪ್ರಮಾಣ. ಆತ ಅಪ್ರತಿಮ ಕಪಿಲಸಿದ್ಧ ಮಲ್ಲಿಕಾರ್ಜುನಾ.

**921**

**ಮೂರರಿಂದಂ ಮುನ್ನ,**
**ಮೂರರಿಂದಂ ಹಿಂದೆ,**
**ತೋರಿಪ್ಪುದಾರಾರು ಅತ್ಯತಿಷ್ಠ.**
**ಐದಾರು ಏಳೆಂಟತಿಗಳೆಯ ಬಲ್ಲಡೆ,**
**ತಾನೂ ಚಿದ್ರೂಪ ಕಪಿಲಸಿದ್ಧ ಮಲ್ಲಿಕಾರ್ಜುನ.**

ಕಾಯದಲ್ಲಿ ಬ್ರಹ್ಮಾಂಡವೇ ಬಚ್ಚಿಟ್ಟುಕೊಂಡಿದೆ. ಹೀಗಾಗಿ ಅದು ಮೂರು ಹೌದು, ಆರು ಹೌದು. ಕಾಯವನ್ನು ಆವರಿಸಿದ ಮನೋಮಯ ಕಾಯಕ್ಕೆ ಕಾಯದಲ್ಲಿಯೇ ಸಂಗಮವಾದ ಅರಿವಿನ ಕಾಯದೊಂದಿಗೆ ಸಂಗ ಮಾಡುವುದಕ್ಕೆ ಅದಕ್ಕೆ ಇಷ್ಟವಿಲ್ಲದ ಕಾರಣ ಐದು ಜ್ಞಾನೇಂದ್ರಿಯಗಳನ್ನೇ, ಕರ್ಮೇಂದ್ರಿಯಗಳನ್ನಾಗಿಸಿಕೊಂಡು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಆರು ಅರಿಷಡ್ವರ್ಗಗಳೊಂದಿಗೆ ಸುಖಿಸುತ್ತದೆ, ದುಃಖಿಸುತ್ತದೆ. ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ತನುವಿನಲ್ಲಿಟ್ಟು ತನುವಿನೊಂದಿಗೆ ಸುಖಿಸಿ ತನುವಿಗೆ ದುಃಖ ಉಂಟು ಮಾಡುತ್ತದೆ.

ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ಸಂಗ ಮಾಡಿದರೆ ಸಾಕು ಮೂರರಿಂದ ಮುನ್ನ ನಾನೇ ಇದ್ದೆ ಮೂರರ ಹಿಂದೆ ನಾನೇ ಇದ್ದೆ. ನಾನು ಚಿದ್ರೂಪ, ನಾನೇ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ತಿಳಿದು ಮೂರೊಂದಾಗಿ ಐದು-ಆರು-ಏಳು-ಎಂಟೆಂಬ ಅಜ್ಞಾನವನ್ನು ಅಲ್ಲಗಳೆಯುತ್ತದೆ.

922

**ಮೂರರಿಂದ ಮುನ್ನಾದ,**
**ಮೂರು ಮತ್ತೆ ತಾನಾದ.**
**ಆರನತಿಗಳೆದ ತತ್ವ ಸೀಮೆಯಾದ,**
**ಆರು ತಾನಾಗಿ ಆರಾರುನತಿಗಳೆದ.**
**ಸಂಬಂಧದ ಮೇಲಣ ಕ್ರಿಯಾಳಾಪ ತವಕಿಸುವ ಸಂಯೋಗ**
**ಅದರೊಳಗೆ ವಿಯೋಗಿ ಕಪಿಲಸಿದ್ಧ ಮಲ್ಲೇಶ್ವರ.**

ಅರಿವೆಂಬ ಗುರುದೇವನು ಜೀವ ಜಲಬಿಂದುವಿನ ಮೂಲಕ ಗರ್ಭಕ್ಕೆ ಹೋಗಿ, ಆ ಜಲಬಿಂದುವಿನಿಂದಲೇ ರಕ್ತ ಮೂಳೆ ಮಾಂಸ ಮೇದಸ್ಸನ್ನಾಗಿ ಮಾಡಿ, ಅವು ಸೋರದಂತೆ ಸುಂದರವಾದ ಚರ್ಮವನ್ನು ಹೆಣೆದುಕೊಂಡು ತನುವಾಗಿ ಬಂದಿದ್ದಾನೆ.

ಆತನ ಅರಿವಿನ ಬೆಳಕಿನಿಂದ ಮನೋಮಯವಾದ ತನುವೊಂದು ಸೃಷ್ಟಿಯಾಗಿ, ತನುವನ್ನೇ ಆವರಿಸಿಕೊಂಡಿದೆ. ಮನೋಮಯವಾದ ತನುವಿಗೆ ಗುರುದೇವನು ಪ್ರತಿನಿತ್ಯ ಬೋಧಿಸುತ್ತಾನೆ. ಮನ ಆ ಗುರುದೇವನಿಗೆ ಭಕ್ತಿ ಮಾಡಿ ಭಕ್ತನಾದರೆ ಸಾಕು, ಮೂರು ತನುಗಳನ್ನು ತಿಳಿಯುತ್ತಾನೆ. ಮೂರು ತನುಗಳ ಮುನ್ನ ತಾನಿದ್ದುದನ್ನು ತಿಳಿಯುತ್ತಾನೆ. ಮೂರು ತನುಗಳು ತಾನು ಆದುದ್ದನ್ನು ತಿಳಿಯುತ್ತಾನೆ. ತನುವಿನಲ್ಲಿಯ ಅರಿಷಡ್ವರ್ಗಗಳನ್ನು ಅಳಿದು, ಆರು ತತ್ವಗಳು ತಾನೇ ಆಗಿ, ಸ್ಥೂಲ ತನುವನ್ನು ಬೆಳಗುತ್ತಾನೆ. ಈ ಎಲ್ಲಾ ಸಂಬಂಧಗಳ ಮೇಲಣ ಕ್ರಿಯಾಲಾಭವ ಮಾಡಿ ಸಂಯೋಗಕ್ಕಾಗಿ ತವಕಿಸಿ ಅದರೊಳಗೆ ವಿಯೋಗಿಯಾಗಿ ಉಳಿಯುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ.

923

**ಮೂರರಿಂದವೆ ಮುನ್ನ, ಮೂರು ನಿನ್ನಯ ಸೀಮೆ**
**ಮೂರು ತಾನೊಂದಾಗಿ ಅತಿ ಪದದಲಿ,**
**ಆರು ಭಕ್ತಿಯು ತನಗೆ ಆರಾರು ತತ್ತ್ವದಿಂ**
**ಮೇಲಿಪ್ಪ ಸೀಮೆಗದು ನಿಚ್ಚಣಿಗೆಯ್ಯೆ**
**ಅನತದ ಗುರು ಕರುಣದಾಜ್ಞೆಯನುವಿಡಿದು**
**ಅನೆಯ್ದೆನು ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವನ್ನು ಆವರಿಸಿದ ಮನೋಮಯವಾದ ತನು, ತನುವಿನಲ್ಲಿಯೇ ತನ್ಮಯವಾದ ಅರಿವಿನ ತನು, ಇವೆರೆಡು ತನುಗಳಿಗೆ ಆಶ್ರಯ ನೀಡಿದ ಸ್ಥೂಲತನು. ಇವು ಮೂರು ಒಂದಾಗುವುದಕ್ಕೆ ಮನೋಮಯವಾದ ಮನವೇ ಪ್ರಯತ್ನ ಮಾಡಬೇಕು. ತನುವಿಗೆ ಕಾರಣವಾದ ಅರಿವಿನ ತನು, ಮನೋಮಯವಾದ ತನು ಮುನ್ನ ಮುನ್ನವೇ ಇದ್ದ ತನು. ಮೂರು ತನುಗಳನ್ನು ಸೀಮೆಯನ್ನಾಗಿಸಿಕೊಂಡ ಮನ ಸಾತ್ವಿಕ, ರಾಜಸ, ತಾಮಸ ಎಂಬ ಗುಣಗಳನ್ನಾಗಿಸಿಕೊಂಡು ಮೂರನ್ನು ತನ್ನ ಸೀಮೆಯನ್ನಾಗಿಸಿಕೊಂಡು ತಿರುಗಾಡುತ್ತದೆ.

ತನುವನ್ನಾವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಭಕ್ತಿ ಮಾಡಿ ಭಕ್ತನಾದಾಗ, ಆ ಭಕ್ತನಿಗೆ ಗುರುದೇವ ತತ್ವವನ್ನು ಬೋಧಿಸುತ್ತಾನೆ. ಭಕ್ತ ಮಹೇಶ್ವರ ಪ್ರಸಾದಿ

ಪ್ರಾಣಲಿಂಗಿ ಶರಣ ಐಕ್ಯ ಈ ಆರು ತತ್ವಗಳು ನೀನೆಂಬೆ. ಇವರ ಮೇಲಿರುವ ಸೀಮೆಗಿದು ನಿಚ್ಚಣಿಕೆ. ಗುರುದೇವನ ಕರುಣೆಯ ಆಜ್ಞೆಯನ್ನು ಹಿಡಿದು ಆ ಗುರುವೇ ತಾನಾದ; ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾದ.

**924**

**ಮೂರರಿಂ ಮುನ್ನವೆ ತೋರಿಪ್ಪ ಸದ್ಭಕ್ತಿ**
**ಮೀರಿಪ್ಪ ಕ್ರೀಯದಕೆ ಶಾಖೆ ಮೂರು.**
**ಫಲವು ಹಲವಾಗಿ ಅಲ್ಲಿಪ್ಪ ಫಲವಾರು**
**ಸಲ್ಲದು ದುಷ್ಕರ್ಮಿಗಳ ಯೋಗಕ್ಕದು.**
**ಸ್ವಾತಂತ್ರ ಸೀಮೆಯನು ತೋರಿಪ್ಪ ತತ್ವದಾ**
**ಸೀಮೆ ತಾನು ಅನಾಹತನು ಸ್ವಾತಂತ್ರ ನಿಸ್ಸೀಮ**
**ಸ್ವಾತಂತ್ರ ಸದ್ಭಕ್ತಿಗೊಲಿವಾತನು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸೂಕ್ಷ್ಮಕಾಯ, ಸ್ಥೂಲಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಗೆ ಸದ್ಭಕ್ತಿ ಮಾಡಿದಾಗ ಗುರುದೇವನು ಅರಿವಿನ ಮರುಜವಣಿಯ ಫಲವನ್ನು ಕರುಣಿಸುತ್ತಾನೆ. ಅಲ್ಲಿಪ್ಪ ಫಲವೇ ಭಕ್ತನಾಗಿ ಮಹೇಶ್ವರನಾಗಿ, ಪ್ರಸಾದಿಯಾಗಿ ಪ್ರಾಣಲಿಂಗಿಯಾಗಿ ಶರಣನಾಗಿ ಐಕ್ಯನಾಗಿ ಆರು ವಿಧದಲ್ಲಿ ತೋರುತ್ತಾನೆ.

ದುಷ್ಕರ್ಮಿ ಮನಕ್ಕೆ ಈ ಯೋಗ ಸಲ್ಲುವುದಿಲ್ಲ. ಆತ ಸ್ವತಂತ್ರನು. ಸದ್ಭಕ್ತರಿಗೆ ಮಾತ್ರ ತತ್ವವನ್ನು ತೋರಿ ನಿಸ್ಸೀಮ ತತ್ವದಲ್ಲಿ ಸ್ವಾತಂತ್ರಿಯಾಗಿ ಮೆರೆಯುವಂತೆ ಮಾಡುತ್ತಾನೆ. ಗುರುದೇವ ಮೂರು ಕಾಯಗಳಿಗಿಂತ ಮುನ್ನವೇ ಇದ್ದವನು. ಇದ್ದಂತೆ ಇರುವ ಸ್ವಾತಂತ್ರ್ಯ ಸದ್ಭಕ್ತಿಗೆ ಮಾತ್ರ ಒಲಿಯುವಾತನು. ತತ್ವವಾರನು ತೋರಿ ಸ್ವಾತಂತ್ರ್ಯ ಸೇವೆಯಲಿ ಮೆರೆಸುವಾತನು. ಕಪಿಲಸಿದ್ಧ ಮಲ್ಲಿಕಾರ್ಜುನಾ.

**925**

**ಮೂರಾರರಿಮ್ಮೇಲೆ ಆರೂಢವದು ಸಮಸತೆ,**
**ಆರು ಬಣ್ಣವ ಮೀರಿದದು ಅಚಳ ಸಮತೆ,**
**ತೋರಿಪ್ಪ ತಮಗಳನು ಮೀರಿಪ್ಪುದದು ಸಮತೆ,**
**ಗಾರು ಮಾಡದು ಸಮತೆ.**
**ಜ್ಞಾನಮೂಲದಿಂ ಮೀರಿಪ್ಪುದದು**
**ತತ್ವ ಮೂರತ್ತಾರರ ಮೇಲೆ ತೋರಿಪ್ಪುದದು**
**ನೀನು ಮೀರಿಪ್ಪ ಸಮತೆ ಸಂಯೋಗ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಾತ್ವಿಕ, ರಾಜಸ, ತಾಮಸ ಗುಣಗಳಿಗೆ ಅತೀತನು. ಹೀಗಾಗಿ ಶಿವನನ್ನು ತ್ರಿಗುಣಾತೀತ ಎಂದು ಕರೆದಿದ್ದಾರೆ. ಆತ ನಿರ್ಗುಣನು; ಯಾವ ರೂಢಿಯು ಇಲ್ಲದ ಆರೂಢನು, ಸಮರಸವುಳ್ಳವನು. ಆರು ತತ್ವಗಳ ಮೇಲಿದ್ದವನು. ಅರಿಷಡ್ವರ್ಗ, ಸಪ್ತವ್ಯಸನಗಳು, ಅಷ್ಟಮದಗಳನ್ನು

ಮೀರಿದವನು. ಅಚಲನು ಸಮತೆವುಳ್ಳವನು ತೋರುವ ಸಕಲ ತನುಗಳನ್ನು ಮೀರಿ ಸಮತೆಯಿಂದ ಬೆಳಗುವವನು. ತತ್ವ ಮೂವತ್ತಾರರ ಮೇಲೆ ತೋರುವವನು. ಇಪ್ಪತ್ತೈದು ಆತ್ಮ ತತ್ವಗಳು (ಭೂತ ಪಂಚಕ ಐದು, ಸ್ತೋತ್ರಾದಿ ಜ್ಞಾನ ಪಂಚಕ ಐದು, ಶಬ್ದಾದಿ ವಿಷಯ ಪಂಚಕ ಐದು, ವಾಗಾದಿ ಕರ್ಮ ಪಂಚಕ ಐದು, ಮನೋ ಪಂಚಕಗಳು ಐದು) ವಿದ್ಯಾ ತತ್ವ ಹತ್ತು ಶಿವತತ್ವ ಒಂದು ಹೀಗೆ ಶಿವನು ಜಗನ್ಮಯನು, ಮೂವತ್ತಾರು ತತ್ವಗ್ಗಳಿಗೆ ಮೀರಿದವನು. ನೀನು ಮೀರಿಪ್ಪ ಸಮತೆಯ ಸಂಯೋಗವೇ ಕಪಿಲಸಿದ್ಧ ಮಲ್ಲಿಕಾರ್ಜುನಾ.

**926**

**ಮೂರು ಮುಕ್ತಿಮೂಲಾಧಾರಕೆ**
**ಆರು ಶಕ್ತಿ ಅಂತ್ಯಕ್ಕೆ**
**ಮೇಲೆ ಇದ್ದಳವ್ವೆ ಒಬ್ಬಳು.**
**ಆಳಾಪನ ನಡೆಸಿ ಅವ್ವೆ**
**ಕ್ರೀಯಂ ನಿಃಕ್ರೀಯಾಗುತ್ತಿದ್ದಳು.**
**ಶೂಲಹಸ್ತನೆಂಬ ಬಾಲಕನ ಜನನಿಯಾದಳು,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಅವ್ವೆ.**

ತನುವಿನಲ್ಲಿ ಮುಕ್ತಿಯು ಸಂಗಮವಾಗಿದೆ. ಮುಕ್ತಿಗೆ ಬೇಕಾದ ಆರು ಶಕ್ತಿಯು ಸಂಗಮವಾಗಿದೆ. ಅದರ ಮೇಲೆ ಮನವೆಂಬ ಅವ್ವ ಆಲಾಪವ ನಡೆಸಿದ್ದಾಳೆ. ಕ್ರಿಯೆಯಲ್ಲಿ ಇದ್ದಂತೆ ಭಾಸವಾಗಿ ಪುನಃ ನಿಃಕ್ರಿಯವಾಗುತ್ತಾಳೆ. ಈ ಎಲ್ಲ ಜ್ಞಾನಕ್ಕೆ ಕಾರಣನಾದ ಶೂಲಹಸ್ತನೆಂಬ ಬಾಲಕನ ಜನನಿಯಾದಳು ಕಪಿಲಸಿದ್ಧ ಮಲ್ಲಿಕಾರ್ಜುನನ ಅವ್ವೆ.

ಮೂರು ತನುಗಳನ್ನು ಒಂದು ಮಾಡುವ ಶಕ್ತಿಯು ಆಕೆಯಲ್ಲಿದೆ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವನ್ನು ತಿಳಿಯುವ ಯುಕ್ತಿಯು ಆಕೆಯಲ್ಲಿದೆ. ಕ್ರಿಯೆಗಳಲ್ಲಿ ತೊಡಗಿದ ಆಕೆ ನಿಃಕ್ರಿಯಳಾಗಿ ಒಂದಾಗಬೇಕು ಅಷ್ಟೇ.

**927**

**ಮೂರು ಬಲೆಯನು ಇಕ್ಕಿ ಜಾರಿ ಕೆಡಹುವ ಮಾಯೆ**
**ಆರೂಢರೆಂಬವರನೇಡಿಸುವುದು.**
**ಕರುಣಾಕರನು ಕಪಿಲಸಿದ್ಧ ಮಲ್ಲೇಶ್ವರನ**
**ಶರಣರಿಗೆ ಅಂಜಿ ನಿಂದಿತು ಮಾಯೆ.**

ಮನವೆಂಬ ಮಾಯೆ ಸಾತ್ವಿಕ ತನು, ರಾಜಸ ತನು, ತಾಮಸ ತನು ಎಂದು ಇದ್ದ ಒಂದು ತನುವಿನಲ್ಲಿಯೇ ನೂರು ಬಲೆಯನ್ನು ಹಾಕಿ ಅರಿವೆಂಬ ಗುರುದೇವನ ಲಾಂಛನವನ್ನು ಜಾರಿ ಕೆಡಹುವಳು. ಆರೂಢರೆಂಬುವರನು ಏಡಿಸಿ ಕಾಡುವಳು ಶರಣರಿಗೆ ಮಾತ್ರ ಅಂಜಿ ನಿಂತಳು ಮಾಯೆ.

ಶರಣನೆಂದರೆ ಅರಿವೆಂಬ ಗುರುದೇವನಿಗೆ ಶರಣು ಹೋಗಿ ಶರಣಾಗತನಾದಾತನೆ ಶರಣ. ಕರುಣಾಕರ ಕಪಿಲಸಿದ್ಧ ಮಲ್ಲಿಕಾರ್ಜುನನ ಭಕ್ತ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೆ ಆತ. ಆತನ

ಮಹಾಜ್ಞಾನದ ಬೆಳಕಿನಿಂದಲೇ ಕತ್ತಲು ಎಂಬ ಮನ ಸೃಷ್ಟಿಯಾಗಿ ಬೆಳಗಿಂಗೆ ಬೆಳಗಾಗಿ ಬೆಳಗುವ ತನುವನ್ನು ಆವರಿಸಿ ಕತ್ತಲು ಮಾಡಿದೆ. ಕತ್ತಲಿಗೆ ಬೆಳಕೆಂದರೆ ಅಂಜಿಕೆ, ಬೆಳಕಿನ ಕಿರಣಗಳು ಕತ್ತಲ ಮೇಲೆ ಬೀಳುವುದೊಂದೆ ತಡ ಬೆಳಕಿಗೆ ಅಂಜಿದ ಕತ್ತಲು ಬೆಳಕೇ ಆಗಿ ನಿಲ್ಲುತ್ತದೆ.

**928**

**ಮೂರು ಮಠ ಮೂವತ್ತು ಆರಾಗಿ ತೋರುತಿದೆ**
**ಮೀರಿಪ್ಪ ಬೊಮ್ಮ ತಾ ಹಮ್ಮಡರಿತು**
**ಮಠವು ತಾನೊಂಬತ್ತು ಕುಟಿಲವು ಹಲವಾಗಿ**
**ನಿಟಿಲನೇತ್ರನ ರೂಪು ಅಜಲೋಕದಾ**
**ಸಾದಾಖ್ಯ ದೇಹವಾರಾರು ಹೋಗಲಿಲ್ಲೆಲ್ಲಿ**
**ಮೂವರಿಗೆ ತಾನು ಶಕ್ಯವಲ್ಲ.**
**ನಾದ ಬಿಂದು ಕಳಾತೀತ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಅಧಿಕ್ಯವನರಿವ ಯೋಗಿ ಯಾರು?**

ತನುವಿನಲ್ಲಿದ್ದ ಶಕ್ತಿ ತನುವೇ ತಿಳಿದು ಜ್ಞಾನತನುವಾಗಬೇಕೆಂಬ ಸದಿಚ್ಛೆಯಿಂದಾಗಿ ಶರಣರು ಓದುಗರಿಗೆ ತನುವಿನಲ್ಲಿದ್ದ ಶಕ್ತಿಯನ್ನು ಹಲವಾರು ಸೂತ್ರಗಳ ಮೂಲಕ ವಿವರಿಸಿದ್ದಾರೆ.

ತನುವೊಂದೆ ಆದರೆ ಅದನ್ನು ಆಂತರಿಕವಾಗಿ ನೋಡಲು ಹೋದರೆ ಸೂಕ್ಷ್ಮ, ಕಾರಣ ಎಂದು ಇನ್ನೆರಡು ತನುಗಳ ಅನುಭವ ಸ್ಥೂಲ ತನುವಿನಲ್ಲಿ ಆಗುತ್ತದೆ. ಆ ಮೂರು ತನುಗಳಲ್ಲಿ ಮೂವತ್ತಾರು ತತ್ವಗಳಾಗಿ ತೋರುತ್ತದೆ. ಹೀಗಾಗಿ ಸಕಲ ತತ್ವಗಳನ್ನು ಮೀರಿದ ಬ್ರಹ್ಮತನುವೆಂದು ತನು ಜ್ಞಾನಿಗಳಿಂದ ಕರೆಯಿಸಿಕೊಂಡಿದೆ.

ತನುವನ್ನೇ ಪೀಠವನ್ನಾಗಿಸಿಕೊಂಡು ಬ್ರಹ್ಮ ಪವಡಿಸಿದ್ದಾನೆ. ಮಠವು ಒಂದೇ ಆದರೆ ಅದರಲ್ಲಿ ಒಂಭತ್ತು ಕುಟಿಲ ಗುಣಗಳಿವೆ. ಅದನ್ನು ಕವಿಯಾದವನು ನವರಸವೆಂದು ಬಣ್ಣಿಸುತ್ತಾನೆ. ಆ ಎಲ್ಲ ಭ್ರಮೆಗಳನ್ನು ಶರಣರು ಇಲ್ಲವಾಗಿಸಿ ತನು ಲೋಕವನ್ನೇ ಬ್ರಹ್ಮಲೋಕವನ್ನಾಗಿಸಿದ್ದಾರೆ. ಆತನನ್ನು ನಿಟಿಲ ನೇತ್ರನೆಂದು ಕೂಡಾ ಕರೆಯುತ್ತಾರೆ.

ತನು, ಲೋಕಕ್ಕೆ ಭ್ರಮಾಲೋಕವಾದರೆ ಕವಿಗೆ ನವರಸಗಳ ಕಬ್ಬು. ಅನುಭಾವಿಗೆ ತನು ಬ್ರಹ್ಮರಸ ಚಿಮ್ಮುವ ಮಹಾಜ್ಞಾನದ ಬ್ರಹ್ಮಲೋಕ. ನಾದ, ಬಿಂದು, ಕಲೆಗಳಿಗೆ ಅತೀತವಾದ ಕಪಿಲಸಿದ್ಧ ಮಲ್ಲಿಕಾರ್ಜುನನ ವಾಸಸ್ಥಾನ. ಯೋಗಿ ಯಾರು ಎಂದು ತನುವನ್ನು ಆವರಿಸಿದ ಭೋಗಿ ತನುವಿನಲ್ಲಿಯೇ ಹುಡುಕಿದಾಗ ಸಕಲ ಭ್ರಮಾರಸಗಳನ್ನು ಧೂರೀಕರಿಸಿ ಬ್ರಹ್ಮರಸ ಪಾನ ಮಾಡಿಸುವ ಬ್ರಹ್ಮ ತನುವಿನಲ್ಲಿಯೇ ತನುವನ್ನಾವರಿಸಿದ ಮನಕ್ಕೆ ದರುಶನ ನೀಡುತ್ತಾನೆ.

**929**

**ಮೂರು ವೃಕ್ಷವು ಶುದ್ಧ, ಆರು ಫಲವೂ ಸಿದ್ಧ,**
**ಆರಾರು ಕೋಟಿಯದು ಪ್ರಸಿದ್ಧದಾ ತೆನೆಗಡದ ಸೀಮೆಯಲಿ,**
**ತನುವಿನ ಮಂಟಪದ ಗನ ಮಸ್ತಕದಲ್ಲಿಪ್ಪ**
**ಹೊಂಗಳಸದಾ ಮೂರು ಮತ್ತೊಂದಾಗಿ**
**ಆರರಾಹುತಿಯಿಂದ ಆರಾರು ಕೋಟಿಯಿಂದತ್ತಲಾಗಿ**

**ಮೀರಿನಿಂದಾ ತ್ವಮಸಿ**
**ಕಪಿಲಸಿದ್ಧ ಮಲ್ಲಿನಾಥನ**
**ಸಾರಹೃದಯನ ಭಕ್ತಿ ಫಲವಿಂತುಟು.**

ಸಿದ್ಧರಾಮ ಶಿವಯೋಗಿಗಳು ತನುವನ್ನು ಬೆಡಗಿನ ಮಾತುಗಳಿಂದ ವಚನಗಳ ಮೂಲಕ ಬಣ್ಣಿಸಿದ್ದಾರೆ. ನೋಡಲು ಹೋದರೆ ಒಂದೇ ತನು. ಇದನ್ನು ಸಿದ್ಧಾರ್ಥ ಬೋಧೀವೃಕ್ಷವೆಂದು ಕರೆದ. ಅಂದರೆ ಮಾತನಾಡುವ ಮರ ಎಂದರ್ಥ.

ಶರಣರು, ವೃಕ್ಷವೊಂದರಲ್ಲಿ ಮೂರು ಶುದ್ಧ ವೃಕ್ಷಗಳಿವೆ ಅದರಲ್ಲಿ ಆರು ಸಿದ್ಧ ಫಲಗಳಿವೆ ಎನ್ನುತ್ತಾರೆ. ಆರಾರು ಕೋಟಿಯದು ಪ್ರಸಿದ್ಧದ ತೆನೆಗೆಡದ ಸೀಮೆಯಲಿ ತನುವಿನ ಮಂಟಪದ ಘನ ಮಸ್ತಕದಲ್ಲಿಪ್ಪ:

ಮೂವತ್ತಾರುಕೋಟಿ ಪ್ರಸಿದ್ಧಿ ಪಡೆದ ತೆನೆಗಳು ತಲೆ ಎತ್ತಿವೆ ಈ ಸೀಮೆಯಲಿ.

ಹೊನ್ನಿನ ಕಳಸವುಳ್ಳ ಮೂರು ತೆನೆಗಳು ಮತ್ತೆ ಒಂದೇ ಆಗಿ, ಆರರಾಹುತಿಯಿಂದ ಆರಾರು ಕೋಟಿಯಿಂದ ಅಂದರೆ ಮೂವತ್ತಾರು ಕೋಟಿ ತನುಗಳು ಅರಿವಿನ ತೆನೆಬಿಟ್ಟು, ತತ್ವಮಸಿ ಎಂಬ ಪದವನ್ನು ಮೀರಿ ನಿಂತು ಕಪಿಲಸಿದ್ಧ ಮಲ್ಲಿನಾಥ ಎಂದು ಕರೆಯಿಸಿಕೊಂಡಿವೆ. ಅಮೃತ ರಸ ತುಂಬಿದ ಹೃದಯದ ತನುವಿನ ಭಕ್ತಿ ಫಲವು ಇಂತುಂಟು.

ಹನ್ನೆರಡನೆಯ ಶತಮಾನದಲ್ಲಿ ಜಗತ್ತಿನ ಒಟ್ಟು ಜನಸಂಖ್ಯೆ ಮೂವತ್ತಾರು ಕೋಟಿ ಇರಬೇಕು. ಆ ಎಲ್ಲಾ ಸಕಲ ತನುಗಳಲ್ಲಿಯೂ ಬ್ರಹ್ಮರಸ ಭರಿತವಾಗಿದೆ. ಭ್ರಮೆಭರಿತವಾದ ಮನ ಬ್ರಹ್ಮರಸ ಪಾನವನ್ನು ಮಾಡಿ ಭ್ರಮೆ ಕಳೆದುಕೊಳ್ಳಬಹುದಾಗಿದೆ. ತನುವಿನ ಸಾರ ಹೃದಯದ ಭಕ್ತಿ ಫಲ ಹೀಗಿದೆಯೆಂದು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**930**

**ಮೂರೂರ ಮಧ್ಯದಲ್ಲಿ ಆರು ವರ್ಣದ ಪದ್ಮ**
**ಬೇರೆ ಬೇರವಕೆ ಅಕ್ಷರಗಳಾರು.**
**ಏರಿ ಬಂದಪೆವೆಂಬ ಕರ್ಮಯೋಗಿಗಳೆಲ್ಲ ಗಾರಾಗಿ ಹೋದರು.**
**ಮೀರಿದ ಶಿವಯೋಗ ಗಾರಾದವರಿಗೆ ಸೂರೆಯೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ?**

ಮೂರರ ಮಧ್ಯದಲ್ಲಿ ಆರು ವರ್ಣದ ಪದ್ಮ ಬೇರೆ ಬೇರೆ ಬೇರವಕೆ ಅಕ್ಷರಗಳಾರು: ಯೋಗದಲ್ಲಿ ಎರಡು ಬಗೆ. ಒಂದು ಕರ್ಮಯೋಗ ಮತ್ತೊಂದು ಜ್ಞಾನಯೋಗ. ಕರ್ಮಯೋಗದಲ್ಲಿ ಆಸಕ್ತಿವುಳ್ಳ ಮನ ಉಪಜೀವನ ಮಾಡುತ್ತ ಸುಖ-ದುಃಖಗಳನ್ನು, ಸಾವು-ನೋವುಗಳನ್ನು ಅನುಭವಿಸುತ್ತಾ ನಾನಾ ರೀತಿಯ ವೇಷಗಳನ್ನು ತನುವಿಗೆ ಹಾಕಿ, ಒಮ್ಮೆ ತನುವಿನ ಎಲ್ಲಾ ಆಯುಷ್ಯವನ್ನು ವ್ಯರ್ಥವಾಗಿ ಕಳೆದು, ಮನ ತನುವಿನ ಸಾವಿಗೆ ಕಾರಣವಾಗುತ್ತದೆ.

ಸಾತ್ವಿಕ, ರಾಜಸ, ತಾಮಸ ಗುಣಗಳಲ್ಲಿ ಒದ್ದಾಡುತ್ತಾ, ಅದರ ಸುಖವನ್ನು ಉಣ್ಣುತ್ತಾ, ಮೂರೂ ಗುಣಗಳಿಗೆ ಅತೀತನಾದ ಪರಮಾತ್ಮನನ್ನು ಕಾಣದೇ ಮನ ತನುವನ್ನು ಬೀಸಿ ಹೊಗೆಯುತ್ತದೆ.

ಜ್ಞಾನಯೋಗಿ ಹಾಗಲ್ಲ. ತನುವನ್ನು ಶ್ರೀ ಗುರುವಿನ ಲಾಂಛನವೆಂದು, ಪರಮಾತ್ಮನು ವಾಸ

ಮಾಡಿದ ಕೈಲಾಸವೆಂದು ತಿಳಿದು ಕಾಯಕ್ಕೆ ಹಣೆ-ಮಣಿಯುತ್ತಾನೆ. ಅದು ಯಾರ ಕಾಯವಾದರೇನು? ಹೆಣ್ಣಾದರೇನು, ಗಂಡಾದರೇನು, ಕಳ್ಳನಾದರೇನು, ಭ್ರಷ್ಟಾಚಾರಿಯಾದರೇನು? ಕಾಯ ಮಾತ್ರ ಪರಮಾತ್ಮನ ಲಾಂಛನ! ಅದು ಅರಿವೆಂಬ ಗುರುದೇವನು ವಾಸ ಮಾಡಿದ ವಾಸಸ್ಥಾನ. ಹೀಗಾಗಿ ಬಸವಣ್ಣನವರು ಕಾಯವನ್ನು ನೋಡಿ ಅದರಲ್ಲಿದ್ಧ ಈಶ್ವರನನ್ನು ಕಂಡು ''ಎನಗಿಂತ ಕಿರಿಯರಿಲ್ಲ'' ಎಂದು ಸಾರಿದರು.

ಇದು ಶಿವಯೋಗಿಯ ಕೆಲಸ, ಜ್ಞಾನಯೋಗಿಯ ಕೆಲಸ. ಒಂದು ತನುವಿನಲ್ಲಿಯೇ ಬ್ರಹ್ಮ, ವಿಷ್ಣು, ಮಹೇಶ್ವರನನ್ನು ಕಂಡರು. ತನು ಆ ಮೂವರಿಗೆ ಆರು ವರ್ಣದ ಪದ್ಮವಾಯಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು. ಕರ್ಮಯೋಗಿಗಳೆಲ್ಲ ಗಾರಾಗಿ ಹೋದರು, ಮೀರಿದ ಶಿವಯೋಗ ಗಾರಾದವರಿಗೆ ಸರಿಯೇ? ಕಪಿಲಸಿದ್ಧ ಮಲ್ಲಿಕಾರ್ಜುನಾ.

**931**

**ಮೂಲಮಂತ್ರವ ಬಲಿದು ಮೇಲೆ ಪ್ರಣಮವ ನಿಲಿಸಿ,**
**ಕೀಲಕುಂಡಲಿಯಲ್ಲಿ ಸರವ ಮಾಡಿ,**
**ಜಾಳಾಂಧರದ ಒಳಗೆ ಅನಲ ಪ್ರಜ್ವಲಿಸಲಿಕೆ**
**ಮೇಲೆ ಕೋಡನಿಕ್ಕಿತ್ತೈ ಯೋಗಿನಾಥ.**

ತನುವೆಂದರೆ ಸಾಮಾನ್ಯವಲ್ಲ. ಅದು ಪ್ರಣವ ಮಂತ್ರ. ಓಂ ನಮಃ ಶಿವಾಯ ಎಂಬ ಆರಕ್ಷರಗಳು ತನುವಿನಲ್ಲಿ ಸಂಗಮವಾಗಿವೆ. ರಕ್ತ, ಮೂಳೆ, ಮಾಂಸ, ಮಜ್ಜೆ, ಮೇದಸ್ಸು ಇವು ಐದು ಸೋರದಂತೆ ಸುಂದರವಾದ ಚರ್ಮ ಓಂಕಾರವಾಗಿ ತನುವನ್ನು ''ನಮಃಶಿವಾಯ'' ಎಂಬ ಐದಕ್ಷರಗಳ ಮೂಲಕ ಹೊಲಿದುಕೊಂಡಿದೆ. ''ಓಂ ನಮಃ ಶಿವಾಯ'' ಎನ್ನುವ ಈ ಮಂತ್ರ ಬ್ರಹ್ಮಾಂಡವನ್ನು ಸೃಷ್ಟಿಮಾಡಿ, ಇಡೀ ಬ್ರಹ್ಮಾಂಡವನ್ನೇ ಬೆಳಗುತ್ತಾ, ಕುಂಡಲಿನಿಯ ಸರವಾಗಿ ಜಾಳಾಂಧರದ ಒಳಗೆ ಬೆಳಗಿಂಗೆ ಬೆಳಗಾಗಿ ಪ್ರಜ್ವಲಿಸುತ್ತಿದೆ.

ಎಲ್ಲಿ ನೋಡಿದರೂ ಓಂಕಾರ ಓಂನಮಃಶಿವಾಯ ಎಂಬ ನಾದವೇ ನಾದ. ಬ್ರಹ್ಮನಾದವನ್ನು ಬ್ರಹ್ಮಾಂಡದ ತುಂಬಾ ಪಸರಿಸಬೇಕಾದ ತನು, ಮನದಿಂದಾಗಿ ಹಿಂದೂ, ಮುಸಲ್ಮಾನ, ಬೌದ್ಧ, ಜೈನ, ಸಿಖ್, ಪಾರ್ಸಿ ಎಂಬ ಅಜ್ಞಾನದ ಕೋಡು ನೆತ್ತಿಯ ಮೇಲೆ ಮೂಡಿದೆ. ತಾನು ಓಂ ನಮಃ ಶಿವಾಯ ಎಂಬ ಮೂಲ ಮಂತ್ರವನ್ನೇ ಮರೆತು ಹೋಗಿದೆ. ಇದು ಯೋಗಿನಾಥನು ಸೃಷ್ಟಿಮಾಡಿದ ಲೀಲೆ!

**932**

**ಮೃದು ರುಚಿ ರೂಪು ಕೂಡಿ ಸಕ್ಕರೆಯಾಯಿತ್ತು.**
**ಗುರು ಲಿಂಗ ಜಂಗಮ ಕೂಡಿ ವಸ್ತುವಾಯಿತ್ತು.**
**ಮೃದುವಿನಂತೆ ಗುರು, ರುಚಿಯಂತೆ ಲಿಂಗ,**
**ರೂಪಿನಂತೆ ಜಂಗಮ ಕೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಮಣ್ಣಿನಲ್ಲಿ ಬಿದ್ದ ಬೀಜಕ್ಕೆ ಜಲ ಹರಿದು ಅಂಕುರವಾಗಿ ಕಬ್ಬಾಯಿತು. ಕಬ್ಬು ಸಕ್ಕರೆಯಾಯಿತು. ಜಲ ಹರಿದು ಕಬ್ಬಾಯಿತು. ಜಲವೇ ಸಕ್ಕರೆಯಾಯಿತು. ಹಾಗೆಯೇ ಗುರು,

ಲಿಂಗ, ಜಂಗಮ ಕೂಡಿ ಕಾಯವೆಂಬ ವಸ್ತುವಾಯಿತು.

ಮೃದುವಿನಂತೆ ಗುರು, ರುಚಿಯಂತೆ ಲಿಂಗ, ರೂಪಿನಂತೆ ಜಂಗಮ ಕೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ:

ಜಲವೇ ಕಬ್ಬಾಗಿದೆ. ಜಲದಿಂದಲೇ ತನುವಾಗಿದೆ. ಜಲದಿಂದಲೇ ಇಡೀ ಬ್ರಹ್ಮಾಂಡವಾಗಿದೆ. ಜಲದಲ್ಲಿ ಬ್ರಹ್ಮಾಂಡ ಬಚ್ಚಿಟ್ಟುಕೊಂಡಿದೆ. ಜಲಬಿಂದುವೆ ಗರ್ಭದಲ್ಲಿ ಹೋಗಿ ತನುವಾಗಿದೆ. ಜಲ ತನುವಿನಲ್ಲಿ ತನ್ಮಯವಾಗಿ ಗುರುವಾಗಿದೆ. ಲಿಂಗವಾಗಿದೆ. ಜಂಗಮವಾಗಿದೆ. ಲಿಂಗಾಂಗವೆಂದು ಅಂಗ ಕರೆಯಿಸಿಕೊಂಡಿದೆ. ಅಂಗವನ್ನು ಆವರಿಸಿದ ಮನವಾಗಿದೆ. ಅಂಗದಲ್ಲಿಯೇ ಸಂಗಮವಾದ ಗುರುವನ್ನು, ಲಿಂಗವನ್ನು, ಜಂಗಮವನ್ನು ಕಂಡುಕೊಂಡು ಗುರುಲಿಂಗ ಜಂಗಮದಲ್ಲಿ ಸಂಗಮವಾಗಿ ಮನ ಘನಮನವೆನ್ನಿಸಿಕೊಂಡಿದೆ. ಕಪಿಲಸಿದ್ಧ ಮಲ್ಲಿಕಾರ್ಜುನನೆ ತಾನಾಗಿದೆ.

ಸಕಲ ಅಂಗಗಳು ಗುರುಲಿಂಗ ಜಂಗಮ ಸಂಗಮಗೊಂಡಿದ್ದ ಪರಿಪೂರ್ಣವಾದ ಅಂಗಗಳು! ಅಂಗವನ್ನು ಆವರಿಸಿದ ಮನದಿಂದಲೇ ಗುರು, ಲಿಂಗ, ಜಂಗಮನನ್ನು ಕಂಡುಕೊಂಡು ಮನ ಘನಮನವಾಗಬೇಕಾಗಿದೆ!

**933**

**ಮೇಖಲಾ ಮೂರರೊಳು ಸಾಕಲ್ಯ ಪ್ರಸಾದ**
**ಏಕದಶವೂ ತಾನೊಪ್ಪುತಿಹುದು.**
**ಆಕಾರ ಚತುಷ್ಟಯದ ಮೇಲಿಪ್ಪ,**
**ಹತ್ತನೆಯ ನಿರಾಕಾರ ನಿರ್ಮಳದ ನಿತ್ಯ ತಾನು**
**ಕರಣ ನಿರ್ಮಲತೆಯನು ವಿಮಲದಾನಂದವನು ಕರುಣಿಸುತಿಪ್ಪವೈ.**
**ಜನನ ಮರಣ ದೂರವಾಗಿ**
**ಕರುಣಾಕರನು ಕಪಿಲಸಿದ್ಧ ಮಲ್ಲೇಶ್ವರನ**
**ಕರುಣವುಳ್ಳಂಗಲ್ಲದೆ ಇವು ಅರಿಯಲರಿದು.**

ಸಾತ್ವಿಕ, ರಾಜಸ, ತಾಮಸ ಇವು ತನುವಿನ ಗುಣಗಳು, ತನುವೇ ಅಲ್ಲ. ತನುವಿನಲ್ಲಿ ತನ್ಮಯವಾದ ಪ್ರಸಾದವು ಅಲ್ಲ, ಏಕದಗವಾಗಿ ತಾನೊಪ್ಪುತಿಹುದು. ಆ ಆಕಾರವೇ ಚತುಷ್ಟಯದ ಮೇಲಿಪ್ಪ, ನಿರಾಕಾರ ನಿರ್ಮಳದ ನಿತ್ಯ ಬೆಳಗುವ ಬೆಳಗಿಂಗೆ ಬೆಳಗಾಗಿ ಬೆಳಗುವ ಜ್ಯೋತಿ ತಾನು. ಕರಣಂಗಳು ತಾನಲ್ಲ.

ನಿರ್ಮಲತೆಯ ಕರುಣ ತಾನು, ಅವು ವಿಮಲದಾನಂದವನು ಕರುಣಿಸುತ್ತಿವೆ. ಅಂತಹ ನಿರ್ಮಲ ಜ್ಯೋತಿಯ ನಿತ್ಯ ಬೆಳಗಿದೆ; ಅದನ್ನು ಕಂಡುಕೊಂಡು ಮನ ಘನಮನವಾಗಿ ಬೆಳಗಿನೊಂದಿಗೆ ಬೆಳಗುತ್ತಲಿದೆ. ಆ ಬೆಳಗಿಂಗೆ ಜನನವಿಲ್ಲ ಮರಣವಿಲ್ಲ. ಅದು ಸಾಕ್ಷಾತ್ ಕರುಣಾಕರ ಕಪಿಲಸಿದ್ಧ ಮಲ್ಲೇಶ್ವರನು ಅವನ ಕರುಣ ಉಳ್ಳವಂಗಲ್ಲದೆ ಅನ್ಯಕ್ಕೆ ಅರಿಯಲು ಸಾಧ್ಯವಿಲ್ಲ.

**934**

**ಮೇರುವಿನ ಮಧ್ಯದಲಿ ಓರಂತೆ ಸುಧೆವರಿದು**
**ಆರಾರು ಆರುವರ್ರೈ ಅತ್ಯತಿಷ್ಠ.**
**ಧಾರುಣಿಗೆವರಿಯದಾ ಮೇಲಪ್ಪ ಪಸರದ**

**ಮೂರು ಮಸ್ತಕದಲ್ಲಿ ಅರತು ಅರತ,**
**ಓರಂತೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ**
**ಅಹೋರಾತ್ರಿಯಲಿ ಅರಸಿ ಕಂಡೆ ನಾನು.**

ತನು ತನ್ನ ಇನ್ನೆರಡು ಶಕ್ತಿಗಳನ್ನು ಕೂಡಿಕೊಂಡು ಅಮೃತವಾಗಿ ಮೂವತ್ತಾರು ತತ್ವಗಳ ಮೂಲಕ ಹರಿಯುತ್ತಲಿದೆ. ಮೂರು ಮಸ್ತಕದಲ್ಲಿ ಸ್ಥೂಲ ಕಾರಣ ಸೂಕ್ಷ್ಮವೆಂದು.

ಮನವೆಂಬ ಸೂಕ್ಷ್ಮ ತನು, ಸ್ಥೂಲ ತನುವಿನಲ್ಲಿ ಸಂಗಮವಾದ, ಶ್ರೀ ಗುರುದೇವನ ತನುವಿನ ಮಸ್ತಕದಲ್ಲಿ ಅರಿತರಿತು, ಮನ ಘನಮನವಾಗಿ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನನ್ನು ಅಹೋರಾತ್ರಿಯಲಿ ಅರಸಿ ಅರಸಿ ಕಂಡೆ ನಾನು. ಮೇರುವಿನ ಮಧ್ಯದಲ್ಲಿ ಓರಂತೆ ಸುಧೆ ಹರಿದು ಮೂವತ್ತಾರು ತತ್ವಗಳೋ ಪಾದಿಯಲ್ಲಿ ಹರಿಯುತ್ತಿರುವ ಅಮೃತವನ್ನು ಉಂಡು ಕೃತಾರ್ಥನಾದೆ!

**935**

**ಮೇಲುಗೆಟ್ಟಾ ಸೀಮೆ, ತೆರಹುಗೆಟ್ಟಾ ಬ್ರಹ್ಮ;**
**ಅಯ್ದಾರು ಕಣೆಯದಿಂ ಮೇಲೆ ದುರ್ಗ.**
**ಕಾಲಾಳು ನಾಯಕರು ಮೇಲೆ ರಥಪಾಯಕರು**
**ಆರೈದು ಓರಂತೆ ದುರ್ಗದಲ್ಲಿ.**
**ಧಾರುಣಿಯ ಕಳ್ಳರಿಗೆ ನಾನಂಜಿ ದುರ್ಗದೊಳು**
**ಓರಂತೆ ಅಡಗಿರ್ದ ಕಪಿಲಸಿದ್ಧ ಮಲ್ಲಿಕಾರ್ಜುನ.**

ಸ್ಥೂಲ ತನುವನ್ನು ನೋಡಿ ತನುಗಳು ಹೆಣ್ಣೆಂದು ಗಂಡೆಂದು ಜಾತಿ ಮತ ಪಂಥ ಧರ್ಮಗಳಲ್ಲಿ ಶ್ರೀಮಂತ ಬಡವ ದರಿದ್ರನೆಂದು ತನುವನ್ನು ತನುಗಳೆ ಗುರುತಿಸಿ ಕರೆಯುತ್ತವೆ.

ತನುವಿನಲ್ಲಿ ತನ್ಮಯವಾದ ರಹಸ್ಯವನ್ನು ಸಕಲ ತನುಗಳು ಮರೆತು ಹೋಗಿವೆ. ತನುವಿನಲ್ಲಿ ವಿಷ್ಣುವಿದ್ದಾನೆ, ಬ್ರಹ್ಮನಿದ್ದಾನೆ, ಮಹೇಶ್ವರನಿದ್ದಾನೆ. ಈ ರಹಸ್ಯವನ್ನು ಮರೆತುಹೋದ ತನು ಕಾಲಾಳು, ನಾಯಕ, ರಾಜ, ಸೇನಾಧಿಪತಿ, ಮಂತ್ರಿ, ಹೆಣ್ಣು, ಗಂಡು ಎಂದು ಗುರುತಿಸಿ ಅಕಾಲಕ್ಕೆ ತುತ್ತಾಗುತ್ತದೆ.

ದ್ವೇಷ, ಅಸೂಯೆ, ಕ್ರೌರ್ಯ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು, ಸಪ್ತವ್ಯಸನಗಳು, ಅಷ್ಟಮದಗಳು, ತನುವಿನಲ್ಲಿ ಹುಟ್ಟಿ ಕೋಟೆಯಂತೆ ತನುವನ್ನು ತನುವೇ ಬಂಧಿಸಿಕೊಂಡಿದೆ. ಆ ಬಂಧನದಲ್ಲಿ ಅರಿವೆಂಬ ಗುರುದೇವನು ಕಪಿಲಸಿದ್ಧ ಮಲ್ಲಿಕಾರ್ಜುನನಾಗಿ ಅಡಗಿ ಕುಳಿತಿದ್ದಾನೆ.

ರಹಸ್ಯಮಯವಾದ ಕೋಟೆಯನ್ನು ಭೇದಿಸುವ ಶಕ್ತಿ, ತನುವೆಂಬ ಕೋಟೆಯನ್ನು ಆವರಿಸಿದ ಮನಕ್ಕೆ ಬಂದಾಗಲೆ, ತನ್ನ ಭ್ರಮೆಯನ್ನು ತಾನೇ ಕಳೆದುಕೊಂಡು ತಾನೇ ಬ್ರಹ್ಮನಾಗುತ್ತದೆ. ತಾನೇ ವಿಷ್ಣುವಾಗುತ್ತದೆ. ತಾನೇ ಮಹೇಶ್ವರನಾಗುತ್ತದೆ. ಇಡೀ ಬ್ರಹ್ಮಾಂಡದ ಸೃಷ್ಟಿಗೆ ತಾನೇ ಕಾರಣನೆಂದು ತನಗೆ ತಾನೇ ತಿಳಿಯುತ್ತದೆ.ಅಹಂ ಬ್ರಹ್ಮಾಸ್ಮಿ ಎಂದು ಗಟ್ಟಿಯಾಗಿ ತನುಲೋಕಕ್ಕೆ ಕೂಗಿ ಹೇಳುತ್ತದೆ.

**936**

**ಮೊದಲಲ್ಲಿಯ ಪುಣ್ಯಪಾಪವದು**
**ಇದರಲ್ಲಿಯ ಜೀವಕ್ಕೆ ಸುಖದುಃಖ ನೋಡಾ ಎಂದೆನಲಾರೆ,**

**''ಸಂಗಾತ್ಸಂಜಾಯತೇ ಜ್ಞಾನಂ ಜ್ಞಾನಾತ್ಸಂಜಾಯತೇ (ಶಿವಃ)**
**ಶಿವಾತ್ಸಂಜಾಯತೇ ಮುಕ್ತಿರ್ಮುಕ್ತಿರನ್ಯತ್ರ ನಾಸ್ತಿ ವೈ'' ಎಂದ ಬಳಿಕ,**
**ಸಂಗದಿಂ ಸುಖದುಃಖವಲ್ಲದೆ, ಪೂರ್ವಾರ್ಜಿತ ಪುಣ್ಯಪಾಪವೆಂಬವ**
**ತಿಳಿಯಬಾರದು ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಂಗದಿಂದ ಸುಖವು ಉಂಟು. ದುಃಖವು ಉಂಟು. ಬಾಹ್ಯಸಂಗದಿಂದ ಪೂರ್ವಾರ್ಜಿತ ಪುಣ್ಯ ಪಾಪವೆಂಬ ಕಲ್ಪನೆಯ ರೋಗವು ಉಂಟು. ಇದರಿಂದ ತನು ಸದಾ ಸುಖಕ್ಕೆ ಒಳಗಾಗುತ್ತದೆ. ದುಃಖಕ್ಕೂ ಒಳಗಾಗುತ್ತದೆ. ಇದು ಸುಳ್ಳುಸುಖ, ಸುಳ್ಳುದುಃಖವೆಂದು ಮನವು ತಿಳಿಯುವುದಿಲ್ಲ; ತನುವು ತಿಳಿಯುವುದಿಲ್ಲ.

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಶ್ರೀ ಗುರುದೇವನ ಅಂಗವೊಂದಿದೆ. ಅಂಗವನ್ನು ಆವರಿಸಿದ ಮನೋಮಯ ಅಂಗವು ಅಂಗದಲ್ಲಿಯೇ ಸಂಗಮವಾದ ಶ್ರೀ ಗುರುದೇವನ ಅಂಗದೊಂದಿಗೆ ಸಂಗಮಾಡಿದಾಗ ಮನೋಮಯ ಮಾಡಿದ ಅಂಗ ಘನ ಮನವಾಗಿ ಪರಮ ಸುಖವನ್ನು ಹೊಂದುತ್ತದೆ.

ಮನ ಅಂತರಂಗದ ಅರಿವೆಂಬ ಶ್ರೀಗುರುದೇವನ ಸಂಗ ಮಾಡಿದಾಗ ಸುಳ್ಳು ಸುಖ ದುಃಖಗಳನ್ನು ಕಳೆದುಕೊಳ್ಳುತ್ತದೆ. ಪೂರ್ವಾರ್ಜಿತ ಪುಣ್ಯ ಪಾಪವೆಂಬುದು ಅದು ತನ್ನದೇ ಅಜ್ಞಾನವೆಂದು ತಿಳಿಯುತ್ತದೆ. ಬಾಹ್ಯ ಸಂಗಕ್ಕೂ ಅಂತರಂಗ ಸಂಗಕ್ಕೂ ಅಜಗಜಾಂತರ ಸಾಮ್ಯವಿದೆ. ಬಾಹ್ಯ ಸಂಗ ಸುಳ್ಳು ಸುಖ, ಸುಳ್ಳು ದುಃಖವನ್ನು ನೀಡಿದರೆ, ಅಂತರಂಗದ ಶ್ರೀ ಗುರುವಿನ ಸಂಗ ಅರಿವಿನ ಪರಮಸುಖವನ್ನು ನೀಡುತ್ತದೆ.

ಪರಮ ಸುಖದಿಂದಾಗಿ ಸುಖವಿಲ್ಲ ದುಃಖವಿಲ್ಲ. ಪರಮಸುಖದ ಪ್ರಯತ್ನವೆಂದು ಪರಮಸುಖಕ್ಕಾಗಿ ಮಾಡುವ ಯಾತ್ರೆಯೆಂದು ಮನ ತಿಳಿಯುತ್ತದೆ. ಯಾತ್ರೆ ದೀರ್ಘಕಾಲದ್ದು ಆಗಿರಬಹುದು ಅಥವಾ ಅಲ್ಪ ಕಾಲದ್ದು ಆಗಿರಬಹುದು. ಅದು ಶ್ರೀ ಗುರುವಿನ ಸಂಗಕ್ಕಾಗಿ ಹಾತೊರೆಯುವ ಮನಕ್ಕೆ ಬಿಟ್ಟ ಕೆಲಸ. ಇದರ ನಿರ್ಧಾರವನ್ನು ಸ್ವತಃ ತಾನೇ ಮಾಡಬೇಕಾಗಿದೆ.

**937**

**ಮೋಹಿಸುವಲ್ಲಿ ಮೋಹಿಸದೆ ಇಪ್ಪಾತ**
**ಕಾಮಿಸುವಲ್ಲಿ ಕಾಮಿಸದೆ ಇಪ್ಪಾತ**
**ಆತನಿಪ್ಪೆಡೆಯಲ್ಲಿ ಇರದೆ ಇಪ್ಪಾತ**
**ಆತನು ವಾಙ್ಮನಕ್ಕಗೋಚರನೆಂಬೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ನೀ ಸಾಕ್ಷಿಯಾಗಿ ನೀನೆಂಬೆ.**

ತನು ಮತ್ತೊಂದು ತನುವನ್ನು ಹೆಣ್ಣೆಂದು, ಗಂಡೆಂದು ತಿಳಿದು ಮೋಹಕ್ಕೆ ಒಳಗಾಗುತ್ತದೆ. ಆದರೆ ತನುವಿನಲ್ಲಿ ತನ್ಮಯವಾದ ಅರಿವೆಂಬ ಶ್ರೀ ಗುರುದೇವನು ಮೋಹಕ್ಕೆ ಒಳಗಾಗುವುದಿಲ್ಲ. ತನುವನ್ನು ಆವರಿಸಿದ ಮನ ತನುವನ್ನು ಹೆಣ್ಣಾಗಿಸಿ, ಗಂಡನ್ನು ನೋಡಿ ತನುವಿನೊಂದಿಗೆ ಮೋಹಕ್ಕೆ ಒಳಗಾಗಿಸುತ್ತದೆ. ತನು, ತನು ಕಾಮಕ್ಕೆ ಒಳಗಾಗಿ ಕಾಮಿಸುವಾಗ ಶ್ರೀ ಗುರುದೇವನಿಗೆ ಕಾಮವಿಲ್ಲ. ಕಾಮಕ್ಕೆ ಒಳಗಾಗದೆ ಇರುವಾತ ಶ್ರೀಗುರು.

ತನು ತನುವಿನೊಂದಿಗೆ ಕೊಡುವುದೆಂದರೇನು? ಇದು ತನುವಿನ ತನುವನ್ನು ಆವರಿಸಿದ

ಮನದ ಹುಚ್ಚಾಟ. ತನುವು ಹೆಣ್ಣು ಅಲ್ಲ, ಗಂಡು ಅಲ್ಲ. ಮನ ತಾನು ಭ್ರಮೆಯಿಂದ ಹೆಣ್ಣು ಎನ್ನುವ ಅಜ್ಞಾನವನ್ನು ತನುವಿಗೆ ಒರೆಸಿ, ತನುವನ್ನು ಹೆಣ್ಣಾಗಿಸಿ ತನುವನ್ನು ಗಂಡಾಗಿಸಿ, ಹೆಣ್ಣುತನುವೆಂದು ಗಂಡುತನುವೆಂದು ಭ್ರಮೆಯಿಂದ ತಿಳಿದು ತನುವಿನೊಂದಿಗೆ ತನು ಮೋಹಕ್ಕೆ ಜಾರುತ್ತದೆ. ತನುವಿನೊಂದಿಗೆ ತನು ಕಾಮಕ್ಕೆ ಜಾರುತ್ತದೆ.

ತನುವಿನಲ್ಲಿ ಮೋಹ, ಕಾಮ ಸೃಷ್ಟಿಯಾಗುವುದು ತನು ಮತ್ತೊಂದು ತನುವಿಗೆ ಜನ್ಮ ಕೊಡುವುದಕ್ಕಾಗಿ ಮಾತ್ರ.

ತನುವಿಗೆ ಮತ್ತೊಂದು ತನು ಬೇಕೆಂದು ಅನಿಸದಿದ್ದರು ಮನ ತನುವಿನಲ್ಲಿ ಮೋಹ ಮತ್ತು ಕಾಮ ಸೃಷ್ಟಿ ಮಾಡುವುದು ದುರ್ದೈವದ ಸಂಗತಿ.

ತನುವಿನಲ್ಲಿ ತನ್ಮಯವಾದ ಅರಿವೆಂಬ ಶ್ರೀ ಗುರುದೇವನಿಗೆ ಮೋಹವು ಬೇಡ. ಕಾಮವು ಬೇಡ ಆತನಿಗೆ. ತನುವನ್ನು ಮನವನ್ನು ತನ್ನಂತೆಯೇ ಮಾಡಿಕೊಳ್ಳುವ ಹಿರಿಯ ಬಯಕೆಯಿದೆ ಆತನಿಗೆ. ಶ್ರೀ ಗುರುದೇವ, ತನು ತನುವಿನೊಂದಿಗೆ ಕಾಮಿಸುವಾಗ ಕಾಮ ಬೇಡವೆಂದು ಹೇಳುತ್ತಾನೆ. ಮೋಹಿಸುವಾಗ, ಮೋಹ ಬೇಡವೆಂದು ಹೇಳುತ್ತಾನೆ.

ತನು ತನುವಿನೊಂದಿಗೆ ಕಾಮಿಸುವ ಬಯಕೆಯಾಗುವುದು ಮತ್ತೊಂದು ತನುವಿನ ಜನ್ಮಕ್ಕಾಗಿ ಮಾತ್ರ! ತನುವಿಗೆ ಮತ್ತೊಂದು ತನುವು ಬೇಡವಾದಾಗ ತನುವಿನಲ್ಲಿ ಮೋಹ ಹುಟ್ಟುವುದಿಲ್ಲ, ಕಾಮವು ಕೂಡಾ ಹುಟ್ಟುವುದಿಲ್ಲ. ಆದರೆ, ತನುವನ್ನು ಆವರಿಸಿದ ಮನ, ತನ್ನ ಕಾಮ ಸುಖಕ್ಕಾಗಿ, ತನ್ನ ತನುವಿನಲ್ಲಿ ಮೋಹ, ಕಾಮ ಸೃಷ್ಟಿ ಮಾಡಿ, ತನುವನ್ನು ಹೆಣ್ಣಾಗಿಸಿ ಗಂಡಿನ ತನುವಿನೊಂದಿಗೆ ಸುಳ್ಳುಸುಖ ಅನುಭವಿಸುತ್ತದೆ. ತಾನು ಗಂಡಾಗಿ ಹೆಣ್ಣು ತನುವಿನೊಂದಿಗೆ ಮೋಹಿಸಿ ಕಾಮಿಸಿ ಸುಳ್ಳುಸುಖ ಅನುಭವಿಸುತ್ತದೆ.

ತನುವನ್ನು ಆವರಿಸಿದ ಮನ ಹೆಣ್ಣು. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಶ್ರೀಗುರುದೇವನೆ ಗಂಡು. ಹೆಣ್ಣು ಮತ್ತು ಗಂಡಿಗೆ ತನು ಆಶ್ರಯ ನೀಡಿದೆ. ಅವರಿಬ್ಬರು ಒಬ್ಬರಲ್ಲಿ ಒಬ್ಬರು ಕೂಡಿಕೊಂಡು ಕೂಡದ ಅಗಲದ ಕೂಟದ ಮಹಾಜ್ಞಾನದ ಸುಖವನ್ನು ಅನುಭವಿಸುವಾಗ ತನು ಅವರಿಬ್ಬರಿಗೆ ಸಾಕ್ಷಿಯಾಗಿ ನಿಲ್ಲುತ್ತದೆ. ಇದು ವಾಙ್ಮನಕ್ಕಗೋಚರವಾದ ಪರಮಸುಖ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನೀ ಸಾಕ್ಷಿಯಾಗಿ ನೀ ಎಂದ.

**938**

**ಯಜಮಾನಂ ಸಾಜದಿ ಜೋಯಿಸಕಾರ ತಾನೆಯಾಗಿ ಲಗುನವೆ?**
**ತಿಟ್ಟವಿಟ್ಟಂತೆ ಕುಂದದಿಕ್ಕಿ ಆಕಾಶ**
**ಆಕಾಶಲಿಂಗವಾಗುತ್ತಿಕ್ಕೆಲನ ಸಿಂಹಾಸನಗೊಂಡು**
**ನಡುವೆ ನಿಂದಾ ಪಶುರೂಪುಗೊಂಡು ಸಲಕ್ಷಣವಿಡಿದು**
**ಎಲ್ಲ ಲಿಂಗಮಯವಾಗಲು ಓಡಿ ನಡೆವೆ**
**ಕಪಿಲಸಿದ್ಧ ಮಲ್ಲಿನಾಥನಾದ.**

ಕಾಯ ರಹಸ್ಯಮಯವಾದ ಸಂಸಾರವನ್ನು ಹೊಂದಿದೆ. ಕಾಯದಲ್ಲಿ ಸಂಗಮವಾದ ಯಜಮಾನನು ಅವನೆ, ಜೋಯಿಸಕಾರನು ಅವನೆ ಆಗಿ, ಆಕಾಶವನ್ನೆ ದಿಬ್ಬಣವನ್ನಾಗಿಸಿ, ಕಾಯ

ಕಾಯದೊಂದಿಗೆ ಮದುವೆಯನ್ನು ಮಾಡುತ್ತಿದ್ದಾನೆ. ಕಾಯ ಕೈಲಾಸ. ಆಕಾಶ ಲಿಂಗವು ಕಾಯವನ್ನು ಸಿಂಹಾಸನವನ್ನಾಗಿಸಿಕೊಂಡು ಕಾಯದಲ್ಲಿ ಪವಡಿಸಿದೆ. ನಡುವೆ ನಿಂತ ಮನವೆಂಬ ಪಶು ರೂಪುಗೊಂಡು ಕಾಯವನ್ನು ಹಿಡಿದು ತನ್ನ ಅಜ್ಞಾನದ ಕೆಲಸವನ್ನು ಮಾಡುತ್ತಲಿದೆ.

ಕಾಯದಲ್ಲಿ ಸಂಗಮುವಾದಾತ ಪಶುಪತಿ. ಕಾಯವನ್ನು ಆವರಿಸಿದ ಮನ ಪಶುಪತಿಗೆ ಸತಿಯಾಗಬೇಕಾದವಳು! ಈ ಸತಿ ಪತಿಗಳಿಗೆ ಕಾಯವೇ ಕೈಲಾಸ. ಕಾಯ, ಸತಿಪತಿಗಳಿದ್ದ ಅರಿವಿನ ಮನೆ. ಪಶುವಿನಿಂದಾಗಿ ಪಶು ರೂಪುಗೊಂಡು, ಪಶುವಿನ ಸಂಸಾರ ನಡೆಸಿದೆ. ಸಲ್ಲಕ್ಷಣ ವಿಡಿದು ತಿಳಿಯಲು, ಎಲ್ಲಾ ಲಿಂಗಮಯವಾಗಲು, ಪಶು ಓಡಿ ಹೋಗಿ, ಕಪಿಲಸಿದ್ಧ ಮಲ್ಲಿಕಾರ್ಜುನನು ತಾನಾಯಿತು.

**939**

**'ಯಥಾ ಬೀಜಸ್ತಥಾಂಕುರಃ' ತಪ್ಪದು ನೋಡಾ!**
**ನಿನ್ನ ಮಕ್ಕಳು ಆರು ಬೇಡಿತನೀವರು,**
**ನಿನ್ನ ಮಕ್ಕಳು ನಿನ್ನಂತೆ ದಾನಶೀಲರು**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ಯಥಾ ಬೀಜ ಸ್ತಥಾಂಕುರಃ : ಬೀಜದಂತೆ ಅಂಕುರ. ಬೀಜದಂತೆಯೇ ಮರ. ಬೀಜವನ್ನು ಸೃಷ್ಟಿಮಾಡಿದವನು ನೀನೆ, ಅ ಬೀಜದಲ್ಲಿ ಅಂಕುರನಾದವನು ನೀನೆ, ವೃಕ್ಷವಾದವನು ನೀನೆ. ಹೂವಾಗಿ, ಕಾಯಾಗಿ, ಹಣ್ಣಾಗಿ, ಹಣ್ಣಿನಲ್ಲಿರುವ ಬೀಜದಲ್ಲಿ ವೃಕ್ಷವನ್ನು ಅಡಗಿಸಿ, ಆ ಬೀಜವನ್ನು ನೆಲಕ್ಕೆ ಬಿಟ್ಟವನು ನೀನೆ. ಹೀಗಾಗಿ ನಿನ್ನ ಮಕ್ಕಳು ನಿನ್ನಂತೆಯೇ ಇರುವರು. ನೀನು ಬೇಡಿದ್ದನ್ನು ಕೊಡುವೆ; ಅವರು ಕೂಡಾ ನಿನ್ನಂತೆ ದಾನಶೀಲರು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ''ಯಥಾ ಬೀಜ ಸ್ತಥಾಂಕುರಃ'' ತಪ್ಪದು ನೋಡಾ.

ಕಾಯವನ್ನು ಸೃಷ್ಟಿಮಾಡಿ, ಕಾಯದಲ್ಲಿ ನೀನಿದ್ದು, ನಿನ್ನನ್ನು ತಿಳಿಯಲು ಕಾಯದಲ್ಲಿಯೇ ಮನವೆಂಬ ಮಗನನ್ನು ಸೃಷ್ಟಿ ಮಾಡಿರುವೆ. ಅವನು ನಿನ್ನಂತೆಯೇ ಇದ್ದಾನೆ. ನಿನ್ನನ್ನು ತಿಳಿಯದೆ ನಿನ್ನಂತೆಯೇ ಆಗಿದ್ದಾನೆ. ಹಡೆದ ತಂದೆಯನ್ನು ತಿಳಿಯದೆ, ಪಡೆದ ತಂದೆ ತಾಯಿಗಳನ್ನೇ ತಂದೆ ತಾಯಿಯೆಂದು ತಿಳಿದು ಹಡೆದ ತಂದೆಯನ್ನೆ ಮರೆತಿದ್ದಾನೆ ಮಗ!

ಪಡೆದ ತಂದೆ ತಾಯಿಗೂ ತಂದೆಯಾತ, ತನಗೂ ತಂದೆಯಾತ. ಹೀಗಾಗಿ ಬಸವಣ್ಣನವರು, ಇಡೀ ಬ್ರಹ್ಮಾಂಡಕ್ಕೆ ಜನ್ಮಕೊಟ್ಟು ಕಾಯದಲ್ಲಿಯೇ ಸಂಗಮವಾದ ಸಂಗಮನಾಥನನ್ನು ಕಾಯವನ್ನು ಆವರಿಸಿದ ಮನ, ಆ ತಂದೆಗೆ ಮಗನಾಗಿ: ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು ನೀನಲ್ಲದೆ ಮತ್ತಾರೂ ಇಲ್ಲವಯ್ಯ ಕೂಡಲಸಂಗಮದೇವಾ ಅದು ನಿಮ್ಮ ಧರ್ಮ ಎಂದಿದ್ದಾರೆ. ಬಸವಣ್ಣನವರು ತಂದೆಗೆ ಮಗನಾಗಿದ್ದಾರೆ. ತಂದೆಯಂತೆ ಮಗನಾಗಿಲ್ಲ. ತಂದೆ ಮಹಾ ದಾನಿ, ಮಗ ಅಲ್ಲ. ದಾನ ಮಾಡಲು ಅವನಲ್ಲಿ ಏನು ಇಲ್ಲ. ಎಲ್ಲ ತಂದೆಯದೆ!

**940**

**ಯಮನಿಯಮಾಸನಧ್ಯಾನರೂಢ ಪ್ರಾಣಾಯಾಮ**

**ಪ್ರತ್ಯಾಹಾರವೆಂಬ ಪಂಚಸಮಾಧಿಯಿಂ ಸಿಕ್ಕಿ**
**ಅಜಲೋಕದ ಸುದ್ದಿಯನರಿವವರು ಎತ್ತಾನೊಬ್ಬರು,**
**ಸುಲಭವೆ ಎಲ್ಲರಿಗೆ ಶಿವಲಿಂಗಭಕ್ತಿ ?**
**ಸುಲಭವೆ ಎಲ್ಲರಿಗೆ ಗುರುಚರಭಕ್ತಿ?**
**ಸುಲಭವೆ ಎಲ್ಲರಿಗೆ ಜೀವ ಜಂತುವಿನ ಮೇಲೆ**
**ದಯವುಳ್ಳದು?**
**ಶಿವಲಿಂಗಾರ್ಚನೆಯ ಮಾಡಿ ಗುರುಚರಭಕ್ತಿ ಅಳವಟ್ಟ ಬಳಿಕ**
**ಸರ್ವವು ತಾನಾಗಿರಬೇಕು.**
**ಸದಾಚಾರ ಶಿವಾಚಾರ ನಿಹಿತಾಚಾರ ದಯಾಚಾರವುಳ್ಳವರಿಗೆ**
**ಸರ್ವಯೋಗವಪ್ಪುದು; ಅವ್ಯಯಂಗೆ ಯೋಗ್ಯರಪ್ಪರು**
**ನಿಮ್ಮ ಕೂಡಿ ದ್ವಯವಿಲ್ಲದೆ ಏಕವಪ್ಪರಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಯಮ ನಿಯಮ ಆಸನ ಧ್ಯಾನರೂಢ ಪ್ರಾಣಾಯಾಮ ಪ್ರತ್ಯಾಹಾರವೆಂಬ ಪಂಚ ಸಮಾಧಿಯಿಂದ ಬ್ರಹ್ಮಲೋಕದ ಸುದ್ದಿಯನ್ನು ತಿಳಿಯಲಿಕ್ಕೆ ಸಾಧ್ಯವಿಲ್ಲ. ಇದು ಲೋಕಕ್ಕೆ ಗೊತ್ತಾಗಬೇಕೆಂಬ ಆಚಾರದಲ್ಲಿ ಮನ ತನುವನ್ನು ತೊಡಗಿಸಿ ಆಚಾರಕ್ಕೆ ಇಳಿಯುತ್ತದೆ. ಈ ಆಚಾರ ಹೌದೆನಿಸಿಕೊಳ್ಳುವ ಆಚಾರವೇ ಹೊರತು, ಸ್ವತಃ ಬ್ರಹ್ಮನ ಪರಿಚಯವಾಗಿ ಬ್ರಹ್ಮನೇ ತಾನಾಗಿ ಬ್ರಹ್ಮರಸ ಪಾನಮಾಡಲು ಸಾಧ್ಯವಾಗದು. ಅಜಲೋಕದ ಸಂಬಂಧ ಬೆಳೆಸುವುದು ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಬ್ರಹ್ಮರಸ ಪಾನ ಮಾಡಬೇಕೆಂಬ ಬಯಕೆ ಮನಕ್ಕೆ ಆದರೆ ಸಕಲರಿಗೂ ಸಾಧ್ಯವಾಗುತ್ತದೆ.

ಭ್ರಮೆಯನ್ನು ಕಳೆದುಕೊಂಡು ಬ್ರಹ್ಮ ಸಾಕ್ಷಾತ್ಕಾರವಾದ ಮನ, ಸಕಲ ಜೀವ ಜಂತುವಿನ ಮೇಲೆ ಕರುಣೆ ತೋರುತ್ತದೆ. ಏಕೆಂದರೆ ಅಣು-ರೇಣು ತೃಣಕಾಷ್ಟದಲ್ಲಿ ಮನ ಬ್ರಹ್ಮನನ್ನೇ ಕಾಣುತ್ತದೆ. ಹೀಗಾಗಿ ಶಂಕರಾಚಾರ್ಯರು 'ಅಹಂಬ್ರಹ್ಮಾಸ್ಮಿ'ಯೆಂದು ಸಕಲರಿಗೂ ಕೇಳುವಂತೆ ಸಾರಿ ಹೇಳಿದರು.

ಯಮ ನಿಯಮ ಆಸನಾದಿಗಳಲ್ಲಿ ರೂಢಿಯಾದ ತನು, ತನುವನ್ನಾವರಿಸಿದ ಮನ, ತನುವಿಗೆ ಕಾವಿ ಧರಿಸಿ ವಿಭೂತಿ ಬಳೆದು, ರುದ್ರಾಕ್ಷಿ ಹಾಕಿಕೊಂಡು ವೇಷದ ವ್ಯವಹಾರ ಮಾಡುತ್ತದೆಯೇ ಹೊರತು ಅದಕ್ಕೆ ಬ್ರಹ್ಮಸಾಕ್ಷಾತ್ಕಾರವು ಆಗುವುದಿಲ್ಲ. ಅಹಂ ಬ್ರಹ್ಮಾಸ್ಮಿಯೆಂದು ನುಡಿಯಿಂದ ಹೇಳುವ ಮಾತಲ್ಲ. ಸರ್ವಕಾಯವೂ ಬ್ರಹ್ಮಕಾಯವಾಗಿರಬೇಕು. ಇಂತಹ ಕಾಯಕ್ಕೆ ಸದಾಚಾರ ಶಿವಾಚಾರ ನಿಹಿತಾಚಾರ ದಯಾಚಾರ ಕಾಯದಲ್ಲಿ ತನಗೆ ತಾನೇ ಹುಟ್ಟಿ ದ್ವಯವಿಲ್ಲದೇ ಬ್ರಹ್ಮವೇ ತಾನಾಗಿರುವುದು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುವುದು.

**941**

**ಯಾವನ ಗತಿಯವನ ಮತಿಯಾನಪ್ಪೆ**
**ಅವ ನಿಂದಲ್ಲಿ ನಿಲುವೆ, ಅವ ಬಿಟ್ಟಡೆ ಬಿಡುವೆ,**
**ಅವ ಹಿಡಿಯಿತ್ತ ಹಿಡಿವೆ, ಬೆನ್ನ ಬಳಿಯ ಸಲುವೆ.**
**ಪ್ರಾಣವ ಮೇಲಿಕ್ಕಿ ನೆರವೆ ಕಪಿಲಿಸಿದ್ಧ ಮಲ್ಲಿನಾಥಯ್ಯನ.**

ಪ್ರಪಂಚದ ಏಳುನೂರಾ ಮೂವತ್ತು ಕೋಟಿ ತನುಗಳಲ್ಲಿ ಅರಿವೆಂಬ ಗುರುದೇವನಿದ್ದಾನೆ. ಅವನಿಲ್ಲದ ತನು ಒಂದೂ ಇಲ್ಲ! ತನುವನ್ನು ಆವರಿಸಿದ ಮನಕ್ಕೆ ಮತ್ತು ತನುವಿಗೆ ನಮ್ಮೊಂದಿಗೆ ಗುರುದೇವನಿದ್ದಾನೆ ಎಂಬುದು ಗೊತ್ತಿಲ್ಲ. ಗೊತ್ತು ಮಾಡಿಕೊಳ್ಳುವ ಬಯಕೆವುಳ್ಳ ಸಕಲ ಮನ ಮತ್ತು ತನುಗಳಿಗೂ ಅಲ್ಲಿಯೇ ಇದ್ದ ಗುರುದೇವ ಒಲಿಯುತ್ತಾನೆ.

ತನುವಿನಲ್ಲಿಯ ಅರಿವು ಎಂಬ ಗುರುದೇವನ ತನುವೊಂದಿದೆ. ಆತ ತನುವಿಗೂ ತನುವನ್ನು ಆವರಿಸಿದ ಮನಕ್ಕು ಪಾಠ ಮಾಡುತ್ತಿದ್ದಾನೆ. ಮನ ಮತ್ತು ತನುವಿಗೆ ಗುರುದೇವನ ಪಾಠ ಆಲಿಸಬೇಕೆಂಬ ಬಯಕೆಯೇ ಇಲ್ಲದಿದ್ದರೆ ಯಾರಾದರೂ ಏನು ಮಾಡಿಯಾರು? ಗುರುದೇವ ಮಾತ್ರ ತನು ನಿಂತರೆ ಆತನೂ ನಿಲ್ಲುವನು. ತನು ಹಿಡಿದರೆ ಆತನು ಹಿಡಿಯುವನು. ಬೆಂಗಾವಲಾಗಿ ಬೆನ್ನ ಬಳಿಯೇ ನಿಂತು ತನುವನ್ನು ಸಲಹುವನು. ದುಃಖಿಸಿದಾಗ ಕಣ್ಣೀರನ್ನ ಒರೆಸುವನು. ಅಜ್ಞಾನದ ಸುಖ ಬಯಸಿದಾಗ ಬೇಡವೆಂದು ಕನಿಕರಿಸಿ ಕೈ ಹಿಡಿದು ನಿಲ್ಲಿಸುವನು.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ತಾನಿದ್ದು, ಅಜ್ಞಾನಕ್ಕೆ ಹೋಗದಂತೆ ತಡೆದು, ಮಹಾಜ್ಞಾನದ ಉಪದೇಶ ಮಾಡುವನು. ಪ್ರಾಣದಲ್ಲಿ ಪ್ರಾಣವಾಗಿ ಕೂಡಿಹನು ಕಪಿಲಸಿದ್ಧ ಮಲ್ಲಿನಾಥಯ್ಯ.

**942**

**ಯುಗ ಜುಗ ಮಡಿವಂದು**
**ಧಗಿಲು ಭುಗಿಲೆಂದು ಮುಸುಕಿದ ಮಹಾಜ್ವಾಲೆ ಇದೇನೊ!**
**ಇಂದೆನ್ನ ಕಣ್ಗೆ ಗೋಚರವಾಯಿತ್ತೆಲೆ ಅಯ್ಯಾ !**
**ನೀವೆಂದರಿಯೆನಯ್ಯಾ .**
**ನಾನೆನ್ನ ಕಾಯದ ಕಳವಳದಲ್ಲಿದ್ದೆನಲ್ಲದೆ**
**ನೀವೆಂಬ ಬಗೆದೋರದೆ ಕೆಟ್ಟೆನೆಲೆ ಅಯ್ಯಾ.**
**ಆಳ್ದನೊಡನೆ ಆಳು ಮುನಿದಡೆ, ಆರು ಕೆಡುವರು ಹೇಳಾ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬ್ರಹ್ಮಾಂಡವನ್ನು ಸೃಷ್ಟಿಮಾಡಿದಾತ, ಆ ಬ್ರಹ್ಮಾಂಡದೊಳಗೆ ತಾನಿದ್ದಾತ, ಆತನಿಗೆ ಬೇಡವಾದಾಗ ಬಿಟ್ಟು ಹೋಗುತ್ತಾನೆ. ಆಗ ಬ್ರಹ್ಮಾಂಡವೇ ಇಲ್ಲ, ಎಲ್ಲೂ ನೋಡಿದರು ಪ್ರಳಯ. ಸಕಲ ಪ್ರಳಯಕ್ಕೂ ಕಾರಣವಾದಾತ ಭಗವಂತನೇ ಆಗಿದ್ದಾನೆ. ಬಸವಣ್ಣನವರು ಪ್ರಳಯದ ಬಗ್ಗೆ ಈ ಕೆಳಗಿನಂತೆ ಹೇಳಿದ್ದಾರೆ.

ಯುಗ ಜುಗ ಪ್ರಳಯವಹಂದೂ ಕಾಣೆ ನಿಂದೂ ಕಾಣೆ! ಧಗಿಲು ಬುಗಿಲು ಎಂದುವರಿಂದೂ ಕಾಣೆನಿಂದೂ ಕಾಣೆ ! ಕೂಡಲ ಸಂಗಮದೇವನಲ್ಲದೆ ತಲೆದೋರುವ ದೈವಂಗಳನಂದೂ ಕಾಣೆನಿಂದೂ ಕಾಣೆ.

ಧಗಿಲು ಬುಗಿಲೆಂದು ಮುಸುಕಿದ ಮಹಾಜ್ವಾಲೆ ಇದೇನೋ ! ಇಂದೆನ್ನ ಕಣ್ಣಿಗೆ ಗೋಚರವಾಯಿತ್ತಲೆ ಅಯ್ಯ. ಆದರೆ ಇದಕ್ಕೆ ನೀವೆ ಕಾರಣವೆಂದೂ ಅರಿಯೆನಯ್ಯ. ಏಕೆಂದರೆ ನಾನೂ ನನ್ನ ಕಾಯದ ಕಳವಳದಲ್ಲಿದ್ದೆನಲ್ಲದೆ ನೀವೆಂಬ ಬಗೆದೋರದೆ ಕೆಟ್ಟೆನು ಪರಮಾತ್ಮನೆ. ಆಳ್ದನೊಡನೆ ಆಳು ಮುನಿದಡೆ ಆರು ಕೆಡವರು ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಸಿದ್ಧರಾಮ ಶಿವಯೋಗಿಗಳ ವಚನದ ಸೂತ್ರ, ಬಸವಣ್ಣನವರು ಹೇಳುವ ವಚನದ ಸೂತ್ರವು

ಒಂದೇ ಆಗಿದೆ.

ಕಾಯದಲ್ಲಿ ಸಂಗಮವಾದ ಭಗವಂತನನ್ನು ಕಾಯವನ್ನು ಆವರಿಸಿದ ಮನ ಭಗವಂತನನ್ನು ನೋಡದೇ ಆತನ ಸೇವೆಯಲ್ಲಿ ನಿರತವಾಗದೇ, ಕಾಯದ ಕಳವಳಕ್ಕೆ ಅತ್ತೊಡೆ, ಕಾಯದಲ್ಲಿದ್ದ ಭಗವಂತ ಕಾಯವನ್ನು ಪ್ರಳಯಕ್ಕೊಡ್ಡುವನು.

**943**

**ಯೋಗದ ನೆಲೆಯನರಿದೆನೆಂಬಾತ**
**ಲಿಂಗಾರ್ಚನೆಯ ಮಾಡಯ್ಯ.**
**ಮನತ್ರಯ ಮದತ್ರಯ ಮಲತ್ರಯಂಗಳ ಕಳೆದು**
**ತನುತ್ರಯಂಗಳನೇಕೀಭವಿಸಿ**
**ಲಿಂಗತ್ರಯದಲ್ಲಿ ಶಬ್ದ ಮುಗ್ಧನಾಗಿ**
**ಲಿಂಗಾರ್ಚನೆಯ ಮಾಡಯ್ಯಾ.**
**ಅದು ನಿಸ್ತಾರ ಸಮಸ್ತ ಯೋಗಿಗಳ ಮೀರಿದದು**
**ನಿಮ್ಮ ಕೂಡಿ ಬೆರೆಸುವ ಶಿವಯೋಗವಿಂತುಟಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಯೋಗದ ನೆಲೆಯನ್ನು ಅರಿಯಬಹುದು. ಅದನ್ನು ಕಾಯದ ಮೂಲಕ ಮನ ಪ್ರತಿನಿತ್ಯ ಯೋಗ ಮಾಡಬಹುದು. ಯೋಗಮಾಡಿ ಯೋಗದ ನೆಲೆಯನು ಅರಿತೆನೆಂದು ತನುವಿನೊಂದಿಗೆ ಹೇಳುವ ಮನ, ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಲಿಂಗಯ್ಯನನ್ನು ಅರ್ಚನೆ ಮಾಡುವುದು ಬಲು ಕಷ್ಟ. ಆತನನ್ನು ಪೂಜಿಸುವುದು ಬಲು ಕಷ್ಟ.

ಲಿಂಗಾರ್ಚನೆ ಮಾಡಲು ಮನ ಸಾತ್ವಿಕ ರಾಜಸ ತಾಮಸ ಗುಣಗಳನ್ನು ಕಳೆದುಕೊಳ್ಳಬೇಕಾಗುತ್ತದೆ. ಮನ, ಮನನ, ಮನನೀಯ ಎಂಬ ಮನತ್ರಯಗಳನ್ನು ಕಳೆದುಕೊಳ್ಳಬೇಕಾಗುತ್ತದೆ. ಆಣವಮಲ ಮಾಯಾಮಲ ಕಾರ್ಮಿಕಮಲ ಎಂಬ ಮಲತ್ರಯಗಳನ್ನು ಕಳೆದುಕೊಂಡು ಸ್ಥೂಲತನು, ಸೂಕ್ಷ್ಮತನು, ಕಾರಣ ತನುಗಳನ್ನು ಏಕೀಭವಿಸಿ ಲಿಂಗತ್ರಯದಲ್ಲಿ ಶಬ್ದಮುಗ್ಧನಾಗಿ ಲಿಂಗಾರ್ಚನೆ ಮಾಡಬೇಕಾಗುತ್ತದೆ. ಅದು ಮನಕ್ಕೆ ಸುಲಭವಾದ ಮಾತಲ್ಲ ಸಮಸ್ತ ಯೋಗಿಗಳಿಗೂ ಮೀರಿದ ಕೆಲಸವದು. ಅಂಗದಲ್ಲಿಯೇ ಸಂಗಮವಾದ ಗುರುದೇವನಿಗೆ ನಿಮ್ಮ ಕೂಡಿ ಬೆರೆಸುವ ಶಿವಯೋಗ ವಿಂತುಟಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

**944**

**ಯೋಗಭೂಷಣನೆ,**
**ನಿಮ್ಮ ನೆರೆಯಲು ಬೇಕು ಬೇಕೆಂಬ ಸದ್ಭಕ್ತರ**
**ಮನದ ಕೊನೆಯಲ್ಲಿ ತಿಳುಹುವೆ ಅಕ್ಷರವ.**
**ಬಸವ ಬಸವ ಬಸವ ಎಂಬ ಮಧುರಾಕ್ಷರತ್ರಯದೊಳಗೆ**
**ತಾನೆ ತ್ರೈಲಿಂಗ ಒಪ್ಪಿಕ್ಕು ಘನಗುರುವೆ ಬಸವಣ್ಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಯೋಗ ಭೂಷಣನೇ, ನಾಗಾಭರಣನೇ, ಚಂದ್ರಶೇಖರನೇ, ಗಂಗಾಧರನೇ, ಅರ್ಧನಾರೀಶ್ವರನೆ ನಿಮ್ಮನ್ನು ತಿಳಿಯಲೇಬೇಕೆಂಬ ಕುತೂಹಲವುಳ್ಳ ಸದ್ಭಕ್ತರ ಮನದ ಕೊನೆಯಲ್ಲಿ ತಿಳುಹುವೆ ಅಕ್ಷರವ. ಬಸವಾ ಬಸವಾ ಬಸವಾ ಎಂಬ ಮಧುರಾಕ್ಷರ ತ್ರಯದೊಳಗೆ ತಾನೇ ತ್ರೈಲಿಂಗ ಒಪ್ಪಿರುವುದು. ಘನ ಗುರುವೇ ಬಸವಣ್ಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಬಸವ ಎಂಬ ಮೂರಕ್ಷರಗಳು ತನು, ಮನ, ಘನದೊಳಗೆ ಮಧುರಾಕ್ಷರವಾಗಿ ಸಂಗಮವಾಗಿವೆ. ಕಾಯವೂ ಬಸವಣ್ಣನೆ, ಕಾಯವನ್ನು ಆವರಿಸಿದ ಮನವೂ ಬಸವಣ್ಣನೇ. ಕಾಯದಲ್ಲಿ ಸಂಗಮವಾದ ಶ್ರೀ ಗುರು ಕೂಡಾ ಬಸವಣ್ಣನೇ ಆಗಿದ್ದಾನೆ. ಬಸವಣ್ಣನೆಂಬ ಮನ ಬಸವಣ್ಣನೆಂಬ ಮಹಾಜ್ಞಾನದಲ್ಲಿ ಸಂಗಮವಾಗಿ ತನು, ಮನ, ಘನ, ತ್ರಿಕೂಟ ಸಂಗಮವಾಯಿತು.

ಕಾಯವನ್ನು ಆವರಿಸಿದ ಮನವೆಂಬ ಹಾವು, ಕಾಯದಲ್ಲಿಯೇ ಸಂಗಮವಾದ ಪರಮಾತ್ಮನನ್ನು ಅರಿತು, ತನ್ನ ವಿಷವನೆಲ್ಲಾ ಕಳೆದುಕೊಂಡು ಈಶ್ವರನ ಕೊರಳಿಗೆ ಆಭರಣವಾಗಿ ಭೂಷಣವಾಯಿತು. ನಾಗಭೂಷಣನೆಂದು ಕರೆಯಿಸಿಕೊಂಡಿತು. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಯಿತು.

**945**

**ಯೋಗಮೂರುತಿ ಸಮತೆ,**
**ನಾದಬ್ರಹ್ಮದ ಸಮತೆ, ಆದಿಯಾಧಾರಕ್ಕೆ ಮಾತೆ ಸಮತೆ.**
**ಮೂದೇವರಿಗೆ ಕುಲಗುರು ತಾನು.**
**ಸಮತೆಯನು ಭೇದಿಸಿದ ಸಿದ್ಧ**
**ಸುಮತಿಯ ಸಂಗಮಾ ಆದಿಯಕ್ಷರದಲ್ಲಿ**
**ಆಮೋದ ಬಿಂದುವಿನ ಆನಂದ ಧಾತು ಸಮತೆರೂಪು.**
**ಸುಜ್ಞಾನ ಭರಿತನು ಕಪಿಲಸಿದ್ಧ ಮಲ್ಲೇಶ್ವರನ**
**ರೂಪು ಮಾಡಿದ ಗುರು ಸಮತೆ ರೂಪು.**

ಯೋಗವೆಂದರೆ ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಶ್ರೀ ಗುರುದೇವನನ್ನು ಕೂಡುವುದು. ಆತನೊಂದಿಗೆ ಸಂಗ ಮಾಡಿ, ಆತನ ಚರಣ ಕಮಲಗಳಿಗೆ ದಾಸಾನು ದಾಸನಾಗಿ ದಾಸನಾಗುವುದು. ಗುರುದೇವನ ಚರಣ ಕಮಲಗಳಿಗೆ ಶರಣು ಹೋಗಿ ಶರಣಾಗತನಾಗಿ ಶರಣನೇ ತಾನಾಗುವುದು.

ಹೀಗಾದಾಗ ಕಾಯ ತಂತಾನೇ ಸಮತೆಯ ಯೋಗ ಮೂರುತಿಯಾಗುತ್ತದೆ. ನಾದ ಬ್ರಹ್ಮದ ಸಮತೆ ಸಿದ್ಧಿಸುತ್ತದೆ. ಆದಿಯಾಧಾರಕ್ಕೆ ಮಾತೆ ತಾನೇ ಆಗಿ ಸಮತೆ ಸಿದ್ಧಿಸುತ್ತದೆ. ಬ್ರಹ್ಮ ವಿಷ್ಣು ಮಹೇಶ್ವರನೆಂಬ ಗುರು ತಾನೇ ಆಗುತ್ತದೆ. ಮನ ಘನದಲ್ಲಿ ಬೆರೆತು ಕಾಯಕ್ಕೆ ಸಮತೆ ಸಿದ್ಧಿಸುತ್ತದೆ. ತ್ರಿಕೂಟ ಸಂಗಮದಲ್ಲಿ ಒಂದಾಗಿ ಸಮತಿಯಾಗುತ್ತದೆ. ಸುಜ್ಞಾನ ಭರಿತ ಕಾಯ ಕಪಿಲಸಿದ್ಧಮಲ್ಲೇಶ್ವರನ ಗುರು ಸಮತೆಯ ರೂಪಾಗಿ ನಿಲುತ್ತದೆ.

**946**

**ಯೋಗವನರಿದೆನೆಂಬೆ, ಯೋಗವನರಿದೆನೆಂಬೆ;**
**ಯೋಗದ ನೆಲೆಯನಾರು ಬಲ್ಲರು?**

**ಯೋಗದ ನೆಲೆಯ ಹೇಳಿಹೆ ಕೇಳಾ**
**ತಾತ್ಪರ್ಯಕರ್ಣಿಕೆಯ ಮಸ್ತಕದಲ್ಲಿಪ್ಪ ಕುಂಭದೊಳಗೆ ತೋರುತ್ತಿದೆ;**
**ಹಲವು ಬಿಂಬ ಹೋಗುತ್ತಿದೆ, ಹಲವು ರೂಪ ಒಪ್ಪುತ್ತಿದೆ;**
**ಏಕ ಏಕವಾಗಿ ಆನಂದಸ್ಥಾನದಲ್ಲಿ ಅನಿಮಿಷವಾಗುತ್ತಿದೆ;**
**ಪೂರ್ವಾಪರ ಮಧ್ಯ ಶುದ್ಧ ಪಂಚಮವೆಂಬ ಸ್ಥಾನಂಗಳಲ್ಲಿ**
**ಪ್ರವೇಶಿಸುತ್ತಿದೆ ತಾನು ತಾನೆಯಾಗಿ.**
**ಅರಿಯಾ ಭೇದಂಗಳ**
**ಬಿಂದು ಶ್ವೇತ ಪೂರ್ವಶುದ್ಧ ಆನಂದ ಧವಳ ಅನಿಮಿಷ ಸಂಗಮ**
**ಶುದ್ಧ ಸಿದ್ಧ ಪ್ರಸಿದ್ಧ ತತ್ವವೆಂಬ ಪರಮಸೀಮೆ ಮುಖಂಗಳಾಗಿ,**
**ಅಜಲೋಕದಲ್ಲಿ ಅದ್ವಯ, ನೆನಹಿನ ಕೊನೆಯ ಮೊನೆಯಲ್ಲಿ ಒಪ್ಪಿ ತೋರುವ**
**ಧವಳತೆಯ ಬೆಳಗಿನ ರಂಜನ ಪ್ರವಾಹ ಮಿಗಿಲಾಗಿ,**
**'ತ್ವಂ' ಪದವಾಯಿತ್ತು, ಮೀರಿ 'ತ್ವಮಸಿ'ಯಾಯಿತ್ತು**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ**
**ನಾಮವ ನುಂಗಿ ಲೀಯವಾಯಿತ್ತು .**

ಯೋಗದ ನೆಲೆಯನ್ನು ಯಾರು ಅರಿಯದೇ ಯೋಗವನ್ನು ಅರಿದೆನೆಂದು ಹೇಳುವರು. ಯೋಗವೆಂದರೆ ಉಸಿರುಬಿಟ್ಟು, ಉಸಿರನ್ನು ಎಳೆದುಕೊಳ್ಳುವ ಕುಲುಮೆಯತಿತ್ತಿ ಅಲ್ಲ. ಯೋಗವೆಂದರೆ ಒಂದು ಮತ್ತೊಂದರಲ್ಲಿ ಕೂಡುವುದು. ಅಂಗವನ್ನು ಆವರಿಸಿದ ಮನ, ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನೊಂದಿಗೆ ಸಂಗಮವಾಗಿ ಏಕವಾಗಿ ಆನಂದ ಸ್ಥಾನದಲ್ಲಿ ಅನಿಮಿಷನೇ ತಾನಾಗುವುದು.

ಪೂರ್ವಾಪುರ ಮಧ್ಯಶುದ್ಧ ಪಂಚಮಂಗಳ ಸ್ಥಾನದಲ್ಲಿ ತಾನು ತಾನೇ ಆಗಿ, ಭೇದಂಗಳ ಅರಿತು, ಶುದ್ಧ ಸಿದ್ಧ ಪ್ರಸಿದ್ಧ ತತ್ವವೆಂಬ ಬ್ರಹ್ಮಲೋಕದಲ್ಲಿ ಕೂಡುವುದು.

ಅಜ್ಞಾನದ ಕಣ್ಣು ಜ್ಞಾನದ ಕಣ್ಣಿನಲ್ಲಿ ಸಂಗಮವಾಗಿ ನೋಡುವುದು. ಕಿವಿ ಕಿವಿಯಲ್ಲಿ ಸಂಗಮವಾಗಿ ಶಬ್ಧವನ್ನು ನಿಶ್ಯಬ್ಧವಾಗಿ ಮಾಡಿ ಕೇಳುವುದು. ಚರ್ಮ ಚರ್ಮದಲ್ಲಿ ಸಂಗಮವಾಗಿ ಜ್ಞಾನದಿಂದ ಮುಟ್ಟುವುದು. ನಾಲಿಗೆ ನಾಲಿಗೆಯಲ್ಲಿ ಸಂಗಮವಾಗಿ ಜ್ಞಾನದಿಂದ ರುಚಿಸುವುದು. ಮೂಗು ಮೂಗಿನಲ್ಲಿ ಸಂಗಮವಾಗಿ ಪರಿಮಳವನ್ನು ಮೂಸಿಸುವುದು. ಧವಳತೆಯ ಬೆಳಗಿನ ರಂಜನೆಯ ಪ್ರವಾಹವನ್ನು ನಿರಂಜನನಾಗಿ ರೂಪಿಸುವುದು. ತನುವಿನಲ್ಲಿ ತನ್ಮಯವಾದ ತತ್ವವನ್ನು, ತನುವನ್ನು ಆವರಿಸಿದ ಮನದಿಂದ ಅರಿತು, ಆ ತತ್ವವೇ ತಾನಾಗುವುದು. ತನುವಿಗೆ ಅಂಟಿದ ನಾಮವನ್ನು ನುಂಗಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೇ ತಾನಾಗುವುದು.

**947**

**ಯೋಗಿಗೆ ಕೋಪವೆ ಮಾಯೆ ;**
**ರೋಗಿಗೆ ಅಪಥ್ಯವೆ ಮಾಯೆ ;**
**ಜ್ಞಾನಿಗೆ ಮಿಥ್ಯವೆ ಮಾಯೆ ;**

**ಅರಿದೆನೆಂಬವಂಗೆ ನಾನು ನೀನೆಂಬುದೆ ಮಾಯೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಯೋಗಿಯಾದವನಿಗೆ ಕೋಪ ಮಾಯವಾಗುತ್ತದೆ. ಅದು ಮಾಯೆಯಾಗಿ ಕಾಡುವುದಿಲ್ಲ. ಅವನು ಎಂದೂ ರೋಗಿಯಾಗುವುದಿಲ್ಲ.

ಜ್ಞಾನಿ ಮಿಥ್ಯವ ನುಡಿಯುವುದಿಲ್ಲ. ಏಕೆಂದರೆ ಸದಾ ಮಿಥ್ಯವನ್ನು ನುಡಿಯುವ ಮನವೆಂಬ ಮಾಯೆ, ಅಂಗದಲ್ಲಿಯೇ ಸಂಗಮವಾದ ಜ್ಞಾನದ ಕಿರಣಗಳಿಂದ ಸುಟ್ಟು ಜ್ಞಾನವೇ ಆಗಿರುತ್ತದೆ.

ಅರಿತವನು ಅರಿದು ಅರಿದು ಆ ಅರಿವೇ ತಾನಾಗಿರುವಾಗ ನಾನು ಎನ್ನುವ ಅಜ್ಞಾನ, ನೀನು ಎನ್ನುವ ಅಜ್ಞಾನ, ಅರಿತವನಲ್ಲಿ ಸುಳಿಯುವುದಿಲ್ಲ. ಅರಿವನು ಅರಿತು ಆ ಅರಿವೇ ಆದಾತ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ಆಗಿರುತ್ತಾನೆ.

**948**

**ಯೋಗಿಯ ಶರೀರ ವೃಥಾಯ ಹೋಗಲಾಗದಯ್ಯಾ.**
**ಪುಣ್ಯವ ಪುಣ್ಯವ ಮಾಡುವುದು ಲೋಕಕ್ಕೆ.**
**ಆದಿಯ ಹಾದಿಯ ಹತ್ತುವುದಯ್ಯಾ .**
**ಆ ಲೋಕಕ್ಕೆ ಸೋಪಾನವ ಕೊಡುವ**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯನು.**

ಲೋಕದ ಸಕಲ ಕಾಯಗಳಲ್ಲಿ ಶಿವಯೋಗಿಯೇ ಸಂಗಮವಾಗಿದ್ದಾಗ, ಅದನ್ನು ತಿಳಿದುಕೊಂಡ ಯೋಗಿ ಯಾವ ಕಾಯಕ್ಕೆ ಪುಣ್ಯವ ಮಾಡಬೇಕು? ಪುಣ್ಯ ಪಾಪಂಗಳು ಎನ್ನುವವು ಇಲ್ಲದಿರುವಾಗ ಈ ಮಾತು ಹುಸಿಯಾಗುತ್ತದೆ. ಕಾಯದಲ್ಲಿಯ ಸಂಪತ್ತನ್ನು ಅರಿತುಕೊಂಡಾತ ಕಾಯದಲ್ಲಿ ಅರಿವಿನ ಸಂಪತ್ತಿದೆ ಎಂದು ಕಾಯವನ್ನು ಆವರಿಸಿದ ಮನಕ್ಕೆ ಹೇಳಬಹುದೇ ಹೊರತು ಮತ್ತೇನನ್ನು ಮಾಡಲು ಸಾಧ್ಯವಿಲ್ಲ. ಪ್ರತಿ ಕಾಯದಲ್ಲಿ ಸಂಗಮವಾದ ಪರಮಾತ್ಮನಿಗೆ ಕಾಯದ ಮೂಲಕ ಏನಾದರು ಹೇಳಲು ಬರುತ್ತದೆಯೇ? ಅಥವಾ ಬೋಧೆ ಮಾಡಲು ಬರುತ್ತದೆಯೆ? ಪರಮಾತ್ಮನಿಗೆ ಏನು ಹೇಳಲು ಬರುವುದಿಲ್ಲ! ಮನಕ್ಕೆ ಏನು ಹೇಳಿದರು ತಿಳಿಯುವುದಿಲ್ಲ!

**949**

**''ಯೋ ದೇಹಿರೂಪಃ ಪರಮಸ್ಸುಖೋಪಿ**
**ಯೋ ಭೂಷಭೂಷಃ ಪರಮಾತ್ಮಲಿಂಗಂ!**
**ಯೋ ಲೋಕನಾಥೋ ಮಮ ಲೋಕದಾಯೀ**
**ಯೋ ದೇಹಿದೇಹೋ ಮಮ ದೇಹಶೇಷಃ॥''**
**ಎಂದೆನಿಸಿದ ಬಸವಾ.**
**ಎಲ್ಲ ಲೋಕತ್ರಯಪ್ರತಿಪಾದಿತ ಶಬ್ದದಲ್ಲಿ**
**ಘನಗಂಭೀರವಾದ ಬಸವಾ.**
**ಬಕಾರಸಂಬಂಧ ಬಹುಧಾಮರೂಪ ಬಸವಾ,**

**ನೀನೆಲ್ಲಡಗಿದೆಯೊ ಬಸವಾ?**
**ಕಾಲಕಲ್ಪಿತನಷ್ಟವಾಗಿ ಕಾಲಕಲ್ಪಿತಂಗಳನರಿದೆಯೊ ಬಸವಾ,**
**ಅರಿದ ಮೂರ್ತಿಯ ನಿಮ್ಮಲ್ಲಿ ಕುರುಹಿಟ್ಟುಕೊಂಡಿರೆ ಬಸವಾ.**
**ಇಷ್ಟ ಬ್ರಹ್ಮಾಂಡವ ಘಟ್ಟಿಗೊಳಿಸಿದಿರಿ ಬಸವಾ,**
**ಲಿಂಗದೃಷ್ಟಿಯ ರೂಪ ನಷ್ಟವ ಮಾಡಿದಿರಿ ತಂದೆ ಗುರುಬಸವಾ,**
**ಗುಣವೆಲ್ಲಡಗಿದವೊ ಬಸವ ಗುರುವೆ,**
**ಮನವೆಲ್ಲಡಗಿತ್ತೊ ಮಹಾಬಸವಾ?**
**ಕಾಯಗುಣ ಮನಸುಮನಂಗಳು ನಿಮ್ಮಲ್ಲಡಗಿದವೆ ಬಸವ ತಂದೆ?**
**ಎಲೆ ಬಸವಲಿಂಗವೆ, ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ಬಸವಾ ಬಸವಾ ಬಸವಾ!**

ಸಿದ್ಧರಾಮ ಶಿವಯೋಗಿಗಳು ಬಸವಣ್ಣನನ್ನು ಸ್ಮರಿಸಿದ್ದಾರೆ. ಲೋಕದ ಕಾಯಗಳಲ್ಲಿ ಘನಗಂಭೀರನಾದ ಪರಮಾತ್ಮನೇ ತುಂಬಿದ್ದಾನೆಂದು ಹೇಳಿದ ಮಹಾನುಭಾವನು ಬಸವಣ್ಣ. ಕಾಯವನ್ನು ಆವರಿಸಿದ ಮನವನ್ನು ಕಾಯಕ್ಕೆ ತೋರಿ, ಕಾಯದಲ್ಲಿ ಸಂಗಮವಾದ ಶ್ರೀಗುರುದೇವನನ್ನು ಮನಕ್ಕೆ ತೋರಿ, ಮನವನ್ನು ಘನಮನವನ್ನಾಗಿಸಿದಾತ ಬಸವಣ್ಣ. ಬಸವಣ್ಣ ಘನಗಂಭೀರನು, ಬಹುಧಾಮ ರೂಪನು ನೀನೇ ಆದ ಬಸವಣ್ಣ, ನೀನೆಲ್ಲಡಗಿದೆಯೋ ಬಸವಾ ಬಸವದೇವ ಕಲ್ಪಿತ ಕಾಲವನ್ನು ಕಾಯದಿಂದಲೇ ನಷ್ಟಮಾಡಿ, ಕಾಲಕಲ್ಪಿತಗಳನ್ನು ಕಾಯದಿಂದಲೇ ಅರಿಯುವಂತೆ ಲೋಕಕ್ಕೆ ಹೇಳಿದಾತ ಬಸವಣ್ಣ.

ಕಾಯವನ್ನು ಆವರಿಸಿದ ಮನವನ್ನು ಕಾಯದಲ್ಲಿಯೇ ಸಂಗಮವಾದ ಸಂಗಯ್ಯನೊಂದಿಗೆ ಬೆರಸಿ, ಕಾಯಕ್ಕೆ ಸಂಗಯ್ಯ ಎಂದು ಹೆಸರಿಟ್ಟು ಕರೆದು, ಶರಣು ಶರಣಾರ್ಥಿಯೆಂದು ಹಣೆಮಣೆದ ಬಸವದೇವರ ದೇವ ನೀನು. ರೂಪ ನಷ್ಟಮಾಡಿ ನಿರೂಪದ ಲಿಂಗದೃಷ್ಟಿಯಿಂದ ರೂಪವನ್ನು ನೋಡಿ ಎನಗಿಂತ ಕಿರಿಯರಿಲ್ಲ ಎಂದು ನಿನ್ನ ಹಿರಿತನವನ್ನು ಮರೆದ ಗುರುಬಸವ ದೇವ ನೀನು.

ಸಾತ್ವಿಕ, ರಾಜಸ, ತಾಮಸ ಗುಣಗಳನ್ನಡಗಿಸಿ, ಮನವನ್ನು ನಿರ್ಗುಣಿಯನ್ನಾಗಿ ಮಾಡಿದೆಯಾ ಬಸವಾ. ಕಾಯಗುಣಗಳು ಮನೋಗುಣಗಳನ್ನು ನಿಮ್ಮಲ್ಲಡಗಿಸಿಕೊಂಡು ಕಾಯಲೋಕಕ್ಕೆ ಪಾತ ಮಾಡಿದೆಯಾ ಬಸವಾ. ಎಲೇ ಬಸವಾ ಲಿಂಗವೇ ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯನೆ ಬಸವಾ ಬಸವಾ ಬಸವಾ ಎಂದು ಸದಾ ನಿನ್ನ ನಾಮಸ್ಮರಣೆಯನ್ನು ಮಾಡುವೆನು ತಂದೆ.

**950**

**ರಜತಗಿರಿಯ ಮೇಲೆ ಅಜಪಯೋಗದಲಿ ಭಜಿಸುವೊಡೆ**
**ಅದಕೆ ಹಲವು ಬೆಟ್ಟದಾ ಶೂಲಾಕೃತಿಯ ಮೇಲೆ**
**ಭಾಳಲೋಚನನಿಪ್ಪ ಭಾವದಲಿ**
**ಗಿರಿಗಳಾರೇಳೆಂಟರಾನೀಲ ಕಂಬುವಿನಲ್ಲಿ**
**ಬಾಲಕನು ನಿಂದೀಗ ಬಾಲ್ಯವನು ಕಳೆದು**
**ತನ್ನಯ ರೂಪಿನಾ ಭಾವದಾ ಬೆಳಗಿನಲಿ**

**ಗುರುವಿನಾ ಶುದ್ಧತೆಯ ಸಾಯುಜ್ಯವನು ಮೀರಿ**
**ಸಂಬಂಧವಾತನು ತಾನೊಂದಾಗಿ**
**ತವಕ ತವಕವ ಕೂಡಿ**
**ಕಪಿಲಸಿದ್ಧ ಮಲ್ಲಿಕಾರ್ಜುನನ ತದ್ರೂಪಾದ.**

ಕಾಯವೆಂಬುದು ರಜತ ಪರ್ವತ. ಕಾಯವನ್ನು ಆವರಿಸಿದ ಮನ ರಜತ ಪರ್ವತವೆಂಬ ಕಾಯದಲ್ಲಿಯೇ ಆಸೀನನಾದ ಪರಮಾತ್ಮನನ್ನು ಜಪವಲ್ಲದ ಅಜಪದ ಮೂಲಕ ಭಜಿಸಬೇಕು. ಹಲವು ಬೆಟ್ಟದ ಶೂಲಾಕೃತಿಯ ಮೇಲೆ ಭಾಳಲೋಚನನು ನಿರ್ಭಾವದಲಿ ಇದ್ದಾನೆ.

ಗಿರಿಗಳು ಆರು, ಏಳು, ಎಂಟು ಎಂಬ ನೀಲ ಪರ್ವತದಲಿ ಮನವೆಂಬ ಬಾಲಕನು ನಿಂತು ಬಾಲ್ಯದಾಟವನ್ನು ಆಡುತ್ತಲ್ಲಿದ್ದಾನೆ.

ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್ವರ್ಗಗಳೊಂದಿಗೆ ಸಪ್ತವ್ಯಸನಗಳೊಂದಿಗೆ ಅಷ್ಟಮದಗಳೊಂದಿಗೆ ಮನವೆಂಬ ಬಾಲಕನು, ತನ್ನ ಬಾಲ್ಯದಾಟ ಮುಗಿಸಿದಾಗಲೇ, ಶ್ರೀ ಗುರುವಿನ ಶುದ್ಧತೆಯ ಸಾಯುಜ್ಯವನ್ನು ಮೀರಿ, ಶ್ರೀ ಗುರುವಿನೊಂದಿಗೆ ಸಂಬಂಧವನ್ನು ಮಾಡುವ ಭಕ್ತನ ಕಾಯಕದಲ್ಲಿ ತೊಡಗುತ್ತಾನೆ. ಭಕ್ತನಿಗೆ ಶ್ರೀ ಗುರುವನ್ನು ಪೂಜಿಸುವ ತವಕ ಹೆಚ್ಚಾದಂತೆಲ್ಲ ಅರಿವೆಂಬ ಶ್ರೀ ಗುರುವಿನೊಂದಿಗೆ ಕೂಡಿ ಆ ಶ್ರೀ ಗುರುವೇ ತಾನಾಗುತ್ತಾನೆ. ತದ್ರೂಪವಾದ ಕಪಿಲಸಿದ್ಧ ಮಲ್ಲಿಕಾರ್ಜುನನೆ ಆಗುತ್ತಾನೆ.

**951**

**ರಾಜಲಿಂಗವ ತಂದು ಪೂಜೆ ಕರದೊಳಗಿಟ್ಟು**
**ಭೇದಿಸಲಿ ಬಾರದದ ಆನಂದವ.**
**ಅಭೇದ್ಯಕರನಿತ್ಯವೆಂದಾ ಗುರುವ ಪಾಲಿಸಿದ**
**ಅಭೇದ್ಯ ಶಿಷ್ಯನು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನ, ಕಾಯದೊಳಗೆ ಸಂಗಮವಾದ ಅರಿವಿನ ಲಿಂಗವನ್ನು ಮರೆತು, ಕಾಯದೊಂದಿಗೆ ಬೆರೆತು, ಮರೆವಿನ ಬೆಟ್ಟದ ಲಿಂಗವನ್ನು ಮಾಡಿ, ಆ ಲಿಂಗವನ್ನೇ ಕರದೊಳಗಿಟ್ಟು, ಮೂರು ಕಾಲದಲ್ಲಿ ಪತ್ರಿ ಪುಷ್ಪಗಳನ್ನು ಅರ್ಚಿಸಿ ಪೂಜಿಸಿದರೂ ಕೂಡಾ, ಆ ಲಿಂಗ ಪೂಜಿಸುವ ತನುವಿಗೂ, ಭ್ರಮೆಗೊಳಗಾದ ಮನಕ್ಕೂ ಏನನ್ನು ಹೇಳುವುದಿಲ್ಲ. ತಾನು ಪೂಜಿಸುವ ಪೂಜೆಯ ಸುಖವನ್ನು ಕೂಡ ಕೈಯಲ್ಲಿರುವ ಕಲ್ಲ ಲಿಂಗಕ್ಕೆ ಅನಭವಿಸಲು  ಸಾಧ್ಯಾವಾಗುವುದಿಲ್ಲ.

ಮನ ಭ್ರಮೆಯಿಂದ ಕಾಯದೊಂದಿಗೆ ಕಲ್ಲ ಲಿಂಗವನ್ನು ಆರಾಧಿಸಿ, ಕಾಯದ ಆಯುಷ್ಯವನ್ನು ವ್ಯರ್ಥವಾಗಿ ಕಳೆಯುತ್ತದೆ. ''ಎರೆದರೆ ನೆನೆಯದು ಮರೆತರೆ ಬಾಡದು ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ'' ಎನ್ನುವ ಶರಣರ ಮಾತು ಕೂಡಾ ಮನ ಮತ್ತು ತನುವಿಗೆ ಹೊಳೆಯುತ್ತಿಲ್ಲ. ಶರಣರ ಈ ಮಾತನ್ನು ಸೂತ್ರವಾಗಿಸಿಕೊಂಡು, ಮನ ತನುನಲ್ಲಿಯೇ ತನ್ಮಯವಾದ ಅರಿವಿನ ಲಿಂಗವನ್ನು ಆರಾಧಿಸಲು, ಆ ಮನವನ್ನೇ ಘನಮನವನ್ನಾಗಿಸಿ, ಲಿಂಗಯ್ಯ ತನ್ನ ಶಿಷ್ಯನನ್ನಾಗಿಸಿಕೊಳ್ಳುತ್ತಾನೆ. ಗುರು ಶಿಷ್ಯರಿಬ್ಬರೂ ಕಾಯವನ್ನೆ ಕೈಲಾಸವನ್ನಾಗಿಸಿಕೊಂಡು ಕಪಿಲಸಿದ್ಧ ಮಲ್ಲಿಕಾರ್ಜುನರೇ ತಾವಾಗುತ್ತಾರೆ.

952

**ರಾಯ ಬಿನ್ನಾಣಿಯ ಮಣ್ಣ ಗೋವಿಂದನ**
**ಒಂದೆ ಗವಿಯ ಸಂಗತು**
**ಒಂದೆ ಬೆಡಗಿನ ಕೊಳದಲಿಕ್ಕಿದನಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ!**
**ಕೊಳವನೊಡಹೊಯ್ದರೆ**
**ಸಂಗತ ಲಿಂಗತವಾಯಿತ್ತಯ್ಯಾ.**

ಅಲ್ಲಮ ಪ್ರಭುಗಳು ಕಾಯವನ್ನು ಗವಿಯನ್ನಾಗಿಸಿ, ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಈಶ್ವರನನ್ನಾಗಿಸಿ, ಗುಹೇಶ್ವರ ಎಂದು ಹೆಸರಿಟ್ಟು ಕರೆದಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ತಮ್ಮ ವಚನದಲ್ಲಿ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವರಿಗೆ ರಾಯ ಎಂದು ಹೆಸರಿಟ್ಟು ಕಾಯವನ್ನು ಆವರಿಸಿದ ಮನಕ್ಕೆ ಬಿನ್ನಾಣಿ ಎಂದು ಕರೆದಿದ್ದಾರೆ. ಇವರಿಬ್ಬರಿದ್ದ ಕಾಯವನ್ನು ಮಣ್ಣ ಗೋವಿಂದನನ್ನಾಗಿಸಿ, ರಾಯ ಮತ್ತು ಬಿನ್ನಾಣಿ ವಾಸ ಮಾಡಿದ ಗವಿಯ ಸಂಗತಿಯನ್ನು ಬೆಡಗಿನ ಕೊಳದಲ್ಲಿಕ್ಕಿ ಬೆಡಗಿನ ಮಾತುಗಳಿಂದ ಬಣ್ಣಿಸಿದ್ದಾರೆ. ಈ ಮೂವರು ಇದ್ದ ಕಾಯವೇ ನೀರಕೊಳವಾಗಿದೆ.

ಜಲಬಿಂದುವೇ ಗರ್ಭದಲ್ಲಿ ಹೋಗಿ ರಕ್ತ, ಮಾಂಸ, ಮಜ್ಜೆ, ಮೇದಸ್ಸು ಆಗಿ ಜಲವೇ ಚರ್ಮವಾಗಿ ಜಲವನ್ನು ಸೋರದಂತೆ ತನುವಿನ ರೂಪದಲ್ಲಿ ಹೆಣೆದುಕೊಂಡಿದೆ.

ಕೊಳ ಒಡೆದು ಹೋಯ್ದರೆ ಆದರ ಸಂಗದ ಲಿಂಗತ್ತವಾಯಿತ್ತಯ್ಯ:

ಅರಿವಿನಿಂದ ಭರಿತವಾದ ಕಾಯದ ಕೊಳವನ್ನು ಮನ ಬಗೆ ಬಗೆದು ನೋಡಿದಾಗ ರಾಯ ಮಣ್ಣ ಗೋವಿಂದನಾಗಿ ಬಿನ್ನಾಣದಿಂದ ಮಲಗಿದ್ದಾನೆ, ಕೊಳದ ಕಾಯವನ್ನೇ ಗವಿಯನ್ನಾಗಿಸಿಕೊಂಡು. ಆತ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

953

**ರುಚಿಯನತಿ ರುಚಿಸಿದಲ್ಲಿ ವಿಷವಾಯಿತ್ತು;**
**ರುಚಿಯು ನಿಜಶಕ್ತಿಯಂತಿರಲು ಅಮೃತವಾಯಿತ್ತು.**
**ಇದು ಕಾರಣ, ಗುರುಭಕ್ತರಿಗೆ ಗುರುಕರುಣವೆ ಸಾಕು;**
**ಅನ್ಯರ ಅನುಭವ, ಅನ್ಯರ ಸಮರಸ**
**ಕಪಿಲಸಿದ್ಧ ಮಲ್ಲಿಕಾರ್ಜುನನ ಶರಣನಿಗನಿಷ್ಟ ಕೇಳಾ, ಮಡಿವಾಳಯ್ಯಾ.**

ಪ್ರತಿ ಪದಾರ್ಥದಲ್ಲಿ ಜಲವಿದೆ. ಜಲವೇ ಕಬ್ಬಿಗೆ ಹರಿದು ಸಿಹಿಯಾಗಿದೆ. ಸಿಹಿ ರುಚಿಯೆನಿಸಿದೆ. ಜಲವೇ ಮೆಣಸಿನ ಸಸಿಗೆ ಹರಿದು ಖಾರವಾಗಿದೆ. ಜಲವೇ ಹುಣಸೆಗೆ ಹರಿದು ಹುಳಿಯಾಗಿದೆ. ಮಾವಿಗೆ ಹರಿದು ಮಧುರವಾಗಿದೆ. ಈರುಳ್ಳಿಗೆ ಹರಿದು ಕಾಕು ಆಗಿದೆ. ಬೆಳ್ಳುಳ್ಳಿಗೆ ಹರಿದು ಘಾಟಾಗಿದೆ. ಜಲವೇ ಉಪ್ಪಾಗಿದೆ, ಕಲ್ಲು ಸಕ್ಕರೆಯಾಗಿದೆ.

ಜಲ ರುಚಿಸುವ ನಾಲಿಗೆಯಲ್ಲಿ ಜಲವೇ ಇದೆ. ಜಲವನ್ನೇ ರುಚಿಸಿದ ನಾಲಿಗೆಯಲ್ಲಿ ಜಲವೇ

ರುಚಿಯಾಗಿದೆ. ನಾಲಿಗೆಯಲ್ಲಿ ಮನವೆಂಬ ಮರೆವು ವಾಸಮಾಡಿರುವುದರಿಂದ ನಾಲಿಗೆಗೆ ರುಚಿಬೇಕು. ರುಚಿಯನು ಅತಿಯಾಗಿ ರುಚಿಸಿದಲ್ಲಿ ಕಾಯಕ್ಕೆ ರುಚಿಯೇ ವಿಷವಾಗುತ್ತದೆ. ಆದರೂ ನಾಲಿಗೆಯಲ್ಲಿ ರುಚಿಯ ಬೇಡಿಕೆ ಇದ್ದೇ ಇರುತ್ತದೆ.

ಜಲಕ್ಕೆ ರುಚಿಯಿಲ್ಲ, ವಾಸನೆಯೂ ಇಲ್ಲ, ರೂಪವೂ ಇಲ್ಲ. ಅದು ತನ್ನ ಮಟ್ಟವನ್ನು ತಾನು ಕಾಯ್ದುಕೊಳ್ಳುತ್ತದೆ. ಹೀಗೆಂದು ವಿಜ್ಞಾನ ಹೇಳುತ್ತದೆ. ಆದರೆ ನಾಲಿಗೆಯ ಮೇಲಿರುವ ಮರೆವಿನ ನಾಲಿಗೆಗೆ ರುಚಿಬೇಕು. ಆ ರುಚಿಯೇ ತನಗೆ ವಿಷವಾಗಿ ಕಾಡುತ್ತದೆ. ನಾಲಿಗೆಯಲ್ಲಿರುವ ಅರಿವಿನ ನಾಲಿಗೆಗೆ ಸಕಲ ರುಚಿಯೂ ನಿಜಶಕ್ತಿ, ಅದು ಅಮೃತ. ಹೀಗಾಗಿ ಶರಣರು ''ಪ್ರಸಾದದಲ್ಲಿ ರುಚಿಯನ್ನರಸಬಹುದೆ'' ಎಂದು ರುಚಿಯನ್ನು ಹುಡುಕುವ ನಾಲಿಗೆಯನ್ನು ಪ್ರಶ್ನಿಸಿದ್ದಾರೆ.

ಇದು ಕಾರಣ ಗುರುಭಕ್ತರಿಗೆ ಗುರುಕರಣವೇ ಸಾಕು. ಅನ್ಯರ ಅನುಭವ ಅನ್ಯರ ಸಮರಸ ಕಪಿಲಸಿದ್ಧ ಮಲ್ಲಿಕಾರ್ಜುನನ ಶರಣರಿಗೆ ಅನಿಷ್ಟ ಕೇಳು ಮಡಿವಾಳಯ್ಯಾ ಎಂದು ಸಿದ್ಧರಾಮ ಶಿವಯೋಗಿಗಳು ಮಡಿವಾಳ ಮಾಚಿದೇವರಿಗೆ ನಾಲಿಗೆಯಲ್ಲಿರುವ ಅರಿವಿನ ರಹಸ್ಯವನ್ನು ಬಿಚ್ಚಿಟ್ಟಿದ್ದಾರೆ.

**954**

**ರುದ್ರಂಗೆ ಪಾರ್ವತಿಯು, ವಿಷ್ಣುವಿಂಗೆ ಲಕ್ಷ್ಮೀಯು,**
**ಬ್ರಹ್ಮಂಗೆ ಸರಸ್ವತಿಯು**
**ಮತ್ತೆ ತೃಣದರಶನದ ಫಲದ ಆಹಾರದವರ**
**ಸುತ್ತಿ ಮುತ್ತಿತ್ತು ನೋಡಾ ಮಾಯೆ;**
**ಸಪ್ತಧಾತುವ ಮೀರಿ ಪಂಚಭೂತವ ಜರಿದ**
**ಶರಣರಿಗೋಡಿತ್ತು ಮಾಯೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ರುದ್ರ, ಪಾರ್ವತಿ, ವಿಷ್ಣು, ಲಕ್ಷ್ಮೀ, ಬ್ರಹ್ಮ, ಸರಸ್ವತಿ ಎನ್ನುವವರು ದೇವತೆಗಳಲ್ಲ, ಅವರ ವಾಸ ಕೈಲಾಸವು ಅಲ್ಲ. ಇವರೆಲ್ಲರು ಕಾಯದಲ್ಲಿಯೇ ಇದ್ದಾರೆ. ಇದೊಂದು ಬೆಡಗಿನ ವಚನ.

ತನುವನ್ನು ಆವರಿಸಿದ ಮನಕ್ಕೆ ಜ್ಞಾನದ ಬಗ್ಗೆ ಕುತೂಹಲ ಉಂಟಾಗಿ; ಬ್ರಹ್ಮರಸದ ರುಚಿಯ ಬಯಕೆ ಮನಕ್ಕೆ ಆಗಲಿ ಎನ್ನುವ ಉದ್ದೇಶದಿಂದ ಜ್ಞಾನಿಗಳು ಬ್ರಹ್ಮರಸವನ್ನು ನಾನಾ ರೀತಿಯಿಂದ ಬಣ್ಣಿಸಿದ್ದಾರೆ. ಕವಿಗಳು, ಸಾಹಿತಿಗಳಾದವರು ನವರಸವನ್ನು ಬಣ್ಣಿಸಿದ್ದಾರೆ. ಸಾಹಿತಿಗಳು ನವರಸಗಳ ಮೂಲಕ ಕಾಯವನ್ನು ಭ್ರಮೆಗೆ ಕರೆದುಕೊಂಡು ಹೋದರೆ, ಶರಣರು ಕಾಯಕ್ಕೆ ಬ್ರಹ್ಮರಸ ಪಾನ ಮಾಡಿಸಿ ಬ್ರಹ್ಮನನ್ನಾಗಿಸುತ್ತಾರೆ. ಮನ ಬ್ರಹ್ಮರಸ ಸವಿದಂತೆಲ್ಲ ಕಾಯದಲ್ಲಿಯೇ ಸಕಲ ದೇವಾನುದೇವತೆಗಳು ಮನಕ್ಕೆ ದರ್ಶನ ನೀಡುತ್ತಾರೆ. ಮನ ಸಕಲ ಭ್ರಮೆಗಳನ್ನು ಕಳೆದುಕೊಂಡು ಬ್ರಹ್ಮನೇ ತಾನಾಗುತ್ತದೆ. ಕಾಯದಲ್ಲಿ ರುದ್ರ ಎಂಬ ಮಹಾಜ್ಞಾನಿಯೂ ಇದ್ದಾನೆ. ಕಾಯವನ್ನು ಆವರಿಸಿದ ಮನ ರುದ್ರನ ಮಹಾಜ್ಞಾನವನ್ನು ಸವಿಯಲು ಹೋದಾಗ ಆ ಮನವೇ ರುದ್ರನಿಗೆ ಪಾರ್ವತಿಯಾಗುತ್ತಾಳೆ.

ಕಾಯವೇ ವಿಷ್ಣು, ಈತ ರಕ್ಷಣೆಯನ್ನು ಮಾಡುವಾತ. ಕಾಯವನ್ನು ಆವರಿಸಿದ ಮನಕ್ಕೆ ವಿಷ್ಣುವಿನ ದರ್ಶನದ ಬಯಕೆಯಾದಾಗ ಮನವೇ ಮಹಾಲಕ್ಷ್ಮೀಯಾಗಿ ವಿಷ್ಣುವಿನೊಂದಿಗೆ ಕೂಡುತ್ತಾಳೆ.

ಮನವೇ ಬ್ರಹ್ಮ, ಮನದಲ್ಲಿಯೇ ಸಂಗಮವಾದ ಬ್ರಹ್ಮನ ದರ್ಶನ ಮಾಡಿಕೊಳ್ಳಬೇಕೆಂದು ಭ್ರಮ್ಮಾ ಭರಿತವಾದ ಮನಕ್ಕೆ ಬಯಕೆಯಾದಾಗ ಆ ಮನವೇ ಘನಮನವಾಗಿ ಸರಸ್ವತಿ ಆಗುತ್ತಾಳೆ.

ಸಪ್ತಧಾತುವ ಮೀರಿ ಪಂಚಭೂತವನ್ನು ಜರಿದ ಶರಣರಿಗೆ ಮಾಯೆಯೆಂಬ ಮನ ಅಂಜಿ ಓಡಿ ಹೋಗುತ್ತದೆ. ಇದ್ಯಾವ ಬಯಕೆಯೂ ಇಲ್ಲದ ನಾನಾ ಬಯಕೆಗಳ ಫಲವನ್ನು ಬೇಡಿ, ಫಲಹಾರವನ್ನು ಬೇಡುವ ತೃಣ ಮಾನವರ ಸುತ್ತಿ ಮುತ್ತಿತ್ತು ನೋಡಾ ಮಾಯೆ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ರುದ್ರ-ಪಾರ್ವತಿ, ವಿಷ್ಣು-ಲಕ್ಷ್ಮೀ, ಬ್ರಹ್ಮ-ಸರಸ್ವತಿಯರ ದರುಶನವನ್ನು ಓದುಗರಿಗೆ ಕಾಯದಲ್ಲಿಯೇ ಮಾಡಿಸಿದ್ದಾರೆ.

**955**

**ರೂಢಿಯರಿಯಲ್ಕೆ ಗಾಡಿಗನೆಂಬುದ**
**ನಾ ಬಲ್ಲೆ, ಎನ್ನವರು ಬಲ್ಲರು.**
**ನಿನ್ನನೇನ ಬೇಡಿಹರೆಲೆ ಅಯ್ಯಾ.**
**ನೀ ಕೂರ್ತು ಕೊಡುವ ಸ್ವರ್ಗವನೊಲ್ಲರು**
**ನಿನ್ನಲುಳ್ಳ ಫಲಪದಾದಿಗಳನೆನ್ನವರೊಲ್ಲರು.**
**ಬೇಡಿ ಅರ್ಥಿಸುವುದಾದಡೆ ಹುಸಿ;**
**ಕೊಡು ಕೊಡದೆ ಮಾಣು.**
**ಬೇಡುವ ಹೀನ ನಿನಗಲ್ಲದೆ ಎನ್ನವರಿಗುಂಟೆ?**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಎಲೇ ಭಗವಂತನೇ ಲೋಕದ ರೂಢಿಯನು ಅರಿಯಲು ಹೋದರೆ ನೀನು ಗಾರುಡಿಗನೆಂಬುದನು ನಾ ಬಲ್ಲೆ. ಎನ್ನವರು ಬಲ್ಲರು. ಎಮ್ಮವರೆಂದರೆ ಎನ್ನ ಶರಣರು ಕೂಡಾ ಬಲ್ಲರು.

ನೀನು ಮಾಟಗಾರನೆಂದು ಅವರು ತಿಳಿದ ಮೇಲೆ ನಿನ್ನನೇನು ಬೇಡಿದರೂ ನಿನ್ನಲ್ಲಿ ಅವರಿಗೆ ಕೊಡಲು ಏನಾದರು ಇದೆಯೇ? ನೀ ಕೂತುಕೊಂಡಿರುವ ಸ್ವರ್ಗವನು ಎಮ್ಮವರು ಒಲ್ಲರು. ನಿನ್ನಲುಳ್ಳ ಫಲ-ಪದವಿಗಳನ್ನು ಕೂಡಾ ಎಮ್ಮವರೊಲ್ಲರು. ಬೇಡಿ ಅರ್ಥೈಸಲು ಹೋದರೆ ಬೇಡುವುದೆಲ್ಲಾ ಹುಸಿಯಾಗಿಯೇ ಕಾಣುತ್ತದೆ. ನೀ ಕೊಡು ಕೊಡದೇ ಮಾಣು, ಬೇಡುವ ಹೀನ ಗುಣ ನಿನಗಲ್ಲದೇ ಎಮ್ಮ ಶರಣರಿಗುಂಟೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

**956**

**ರೂಹಿಲ್ಲದ ನೆಲದಲ್ಲಿ ಸಸಿಯನೇಂ ಬೆಳೆವುದಯ್ಯಾ?**
**ಭಯವಿಲ್ಲದವನಲ್ಲಿ ಭಕ್ತಿಯನೇಂ ಬೆಳೆವುದಯ್ಯಾ?**
**ಭಯ ಕೆಟ್ಟಡೆ ಭಕ್ತಿ ಬಿಡುವುದು, ಮಹದೇವನೊಲ್ಲ**
**ಕಪಿಲಸಿದ್ಧ ಮಲ್ಲಿನಾಥನಾ ಹೋ! ಅಯ್ಯಾ!**

ಕಾಯಕ್ಕೆ ರೂಪ ಇದೆ. ಕಾಯವನ್ನು ಆಧಾರವನ್ನಾಗಿಸಿಕೊಂಡ ಅಕಾಯಕ್ಕೆ ರೂಪ ಇಲ್ಲ. ಹಾಗೆಯೇ ನೆಲಕ್ಕೆ ರೂಪ ಇದೆ. ನೆಲವನ್ನೇ ಆಧಾರವಾಗಿಸಿಕೊಂಡ ಬಯಲಿಗೆ ರೂಪಿಲ್ಲ. ಬಯಲ

ಬೀಜದಿಂದಲೇ ನೆಲ ರೂಪಾಗಿದೆ. ಕಾಯ ಕೂಡಾ ರೂಪಾಗಿದೆ. ರೂಪುಳ್ಳ ನೆಲಕ್ಕೆ ರೂಪಿಲ್ಲದ ಬಯಲೇ ಆಧಾರ. ಅಂದ ಮೇಲೆ ಕಾಯವು ಬಯಲೇ! ನೆಲವು ಬಯಲೇ! ಬಯಲ ಆಧಾರದಲ್ಲಿದ್ದ ಬಯಲ ನೆಲದ ಮೇಲೆ ಯಾವ ಸಸಿಯನ್ನು ಬೆಳೆಯಬೇಕಯ್ಯ? ಹಾಗೆಯೇ ಭಯವಿಲ್ಲದವನಲ್ಲಿ ಭಕ್ತಿಯನು ಏನು ಬೆಳೆವುದಯ್ಯ, ಭಯ ಕೆಟ್ಟಡೆ ಭಕ್ತಿ ಬಿಡುವುದು ಅಂತಹವನು ಮಹಾದೇವನಲ್ಲ. ಕಪಿಲಸಿದ್ಧ ಮಲ್ಲಿನಾಥ ನಿರ್ಭಯನು ನೋಡಾ ಅಯ್ಯಾ.

957

**ಲಿಂಗತ್ರಯವಾವುದೆಂದಡೆ ಹೇಳುವೆ:**
**ಅಪರಸ್ಥಾನದಲ್ಲಿಪ್ಪಾತ ಇಷ್ಟ,**
**ಮಧ್ಯಮಸ್ಥಾನದಲ್ಲಿಪ್ಪಾತ ಗುರು,**
**ಆನಂದಸ್ಥಾನದಲ್ಲಿಪ್ಪಾತ ಅಭೇದ್ಯ.**
**ಇದಕ್ಕೆ ಮೂಲಾಧಾರಂಗಳು,**
**ಸರ್ವಸತ್ವದಿಂದ ಕಾಬುದು ಗುರುವ,**
**ಕಂಡು ಮಚ್ಚೂದು ಲಿಂಗವ,**
**ಅವಿರಳವಿಲ್ಲದೆ ನಚ್ಚೂದು ಜಂಗಮವ**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡೂದು.**

ಶರಣರು ಕಾಯವನ್ನು ಲಿಂಗತ್ರಯ ಎಂದು ಕರೆದಿದ್ದಾರೆ. ಸೂಕ್ಷ್ಮ ಸ್ಥೂಲ ಕಾರಣ ಅಂಗಗಳು ಲಿಂಗತ್ರಯಗಳೇ ಆಗಿವೆ. ಅದು ಲಿಂಗತ್ರಯವೂ ಹೌದು. ಇದನ್ನೇ ಇಷ್ಟಲಿಂಗವೆಂದು ಗುರುಲಿಂಗವೆಂದು ಆನಂದ ಸ್ಥಾನದಲ್ಲಿರುವಂತ ಭೇದಿಸಲು ಬಾರದ ಅಭೇದ್ಯಲಿಂಗವೆಂದು ಹೆಸರಿಸಿದ್ದಾರೆ. ಸರ್ವರಿಗೂ ಕಾಣ ಬರುವಂತಿರುವುದೇ ಗುರುಲಿಂಗ. ಅಂಗದಲ್ಲಿ ಸಂಗಮವಾದ ಅರಿವಿನ ಲಿಂಗ; ಅದೇ ಜಂಗಮಲಿಂಗ ಕಪಿಲಸಿದ್ಧ ಮಲ್ಲಿಕಾರ್ಜುನನು ಕೂಡುವುದು.

958

**ಲಿಂಗದಲ್ಲಿ ಸಂಪನ್ನನಾಗಿ ಗುರುವಾದ ಬಸವಣ್ಣ.**
**ಗುರುವಿನಲ್ಲಿ ಸಂಪನ್ನನಾಗಿ ಜಂಗಮವಾದ ಬಸವಣ್ಣ.**
**ಜಂಗಮದಲ್ಲಿ ಸಂಪನ್ನನಾಗಿ ತ್ರೈವಿದ್ಯಕ್ಕೆ ವಿದ್ಯಾರೂಪವಾದ ಬಸವಣ್ಣ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಲ್ಲಿ ಬಸವಣ್ಣ ಸಾಕ್ಷಾತ್ ಸಂಪನ್ನನಾದ.**

ಅಂಗದಲ್ಲಿಯೇ ಸಂಗಮವಾದ ಲಿಂಗದಲ್ಲಿ ಸಂಪನ್ನನಾಗಿ ಗುರುವಾದ ಬಸವಣ್ಣ. ಆ ಶ್ರೀಗುರುದೇವನಲ್ಲಿ ಸಂಪನ್ನನಾಗಿ ಜಂಗಮವಾದ ಬಸವಣ್ಣ. ಆ ಜಂಗಮದಲ್ಲಿ ಸಂಪನ್ನನಾಗಿ ತ್ರೈವಿದ್ಯಕ್ಕೆ ವಿದ್ಯರೂಪವಾದ ಬಸವಣ್ಣ.

ಗುರು ಲಿಂಗ ಜಂಗಮ ಬಸವಣ್ಣ ಎಂದರೆ ವ್ಯಕ್ತಿಗಳಲ್ಲ ಕಾಯದಲ್ಲಿಯೇ ಸಂಗಮವಾದ ಅವ್ಯಕ್ತ ಅರಿವಿನ ಶಕ್ತಿಗೆ ಸಿದ್ಧರಾಮ ಶಿವಯೋಗಿಗಳು ಹೀಗೆ ನಾಮಕರಣ ಮಾಡಿದ್ದಾರೆ. ಬಸವಣ್ಣನನ್ನು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಸಂಪನ್ನನಾದನೆಂದು ಶ್ರೀಗುರುದೇವನನ್ನು ಸ್ಮರಿಸಿದ್ದಾರೆ.

**959**

**ಲಿಂಗಪೂಜಕರಿಗೆ ಭವವುಂಟೆಂದು ಹೇಳುತ್ತಿದ್ದೇನೆ,**
**ಬ್ರಹ್ಮ ವಿಷ್ಣ್ವಾದಿಗಳು ಲಿಂಗಾರ್ಚನೆಯ ಮಾಡಿ**
**ಭವಕ್ಕೆ ಬಂದುದನರಿಯಾ.**
**ಬಸವಣ್ಣ ಮೊದಲಾದ ಪುರಾತರೆಲ್ಲ**
**ಪ್ರಸಾದಲಿಂಗವ ಗ್ರಹಿಸಿ ಸಂದಿಲ್ಲದ ಕೂಟವ ಮಾಡಿದ**
**ಗುರು ಕಪಿಲಸಿದ್ಧಮಲ್ಲಿಕಾರ್ಜುನಯ್ಯ.**

ಲಿಂಗಪೂಜೆ ಮಾಡುವ ಭಕ್ತರಿಗೆ ಜನನವುಂಟು; ಮರಣವುಂಟು ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಲಿಂಗಪೂಜೆಯನ್ನು ಮಾಡಿದ ಬ್ರಹ್ಮನ ತಲೆ ಹೋಯಿತು. ಲಿಂಗ ಪೂಜೆಯನು ಮಾಡಿದ ವಿಷ್ಣು ಮುಂತಾದ ದೇವತೆಗಳಿಗೆ ಮರಣ ತಪ್ಪಲಿಲ್ಲ.

ಬಸವಣ್ಣ ಮೊದಲಾದ ಪುರಾತನರೆಲ್ಲ ಲಿಂಗ ಪೂಜೆಯನು ಮಾಡಲಿಲ್ಲ. ಅಂಗದಲ್ಲಿಯೇ ಸಂಗಮವಾದ ಪ್ರಸಾದ ಲಿಂಗವನುಗ್ರಹಿಸಿ ಸಂದಿಲ್ಲದೆ ಆ ಲಿಂಗದೊಂದಿಗೆ ಕೂಡದ ಅಗಲದ ಕೂಟದ ಸುಖವನ್ನು ಉಂಡು ಸಾಕ್ಷಾತ್ ಗುರು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯರೇ ಆದರು.

**960**

**ಲಿಂಗ ಲಿಂಗವೆಂಬ ಸಂದೇಹ ಉಳ್ಳನ್ನಕ್ಕ**
**ಸಂದಳಿಯದೆಂಬರೈ ನಿನ್ನವರೆನ್ನ.**
**ಮನ್ನಣೆಯ ಕರಸ್ಥಲಕ್ಕೆ ಇನ್ನು ನೀ ಬಂದಡೆ**
**ಉನ್ನತೋನ್ನತನಪ್ಪೆ ಸಂದಿಲ್ಲದೆ**
**ನಾ ನಿಮ್ಮ ಸೊಮ್ಮಿನೊಳಗಾನೀಗ ಲೀಯ್ಯವಪ್ಪೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಲಿಂಗ ಲಿಂಗವೆಂದು ಸಂದೇಹ ಉಳ್ಳನ್ನಕ್ಕ ಸಂದಳಿಯದೆಂಬರೈ ನಿನ್ನವರು. ಎನ್ನ ಲಿಂಗಯ್ಯನೆ, ಲಿಂಗ ಲಿಂಗ ಎಂಬ ಸಂದೇಹ ಎನಗೆ ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೆ ನೀನು ಲಿಂಗವನ್ನೇ ಆರಾಧಿಸಿ ಕಾಯದ ಆಯುಷ್ಯವನ್ನು ವ್ಯರ್ಥ ಕಳಿಯುವಿ ಎಂದು ನಿನ್ನವರೆ ನನಗೆ ತಿಳಿ ಹೇಳಿದರು.

ಲಿಂಗಯ್ಯನೇ ಲೋಕ ಮನ್ನಣೆಯ ಕಾಯವೆಂಬ ಕರಸ್ಥಲಕ್ಕೆ ನೀ ಬಂದು, ಸಕಲ ಕಾಯಕ್ಕೂ ನೀ ತಿಳಿಹೇಳಿದೆಡೆ, ನೀನು ಉನ್ನತೋನ್ನತನಪ್ಪೆ ಸದ್ದಿಲ್ಲದಂತೆ, ಸಂದಿಲ್ಲದಂತೆ. ಆಗ ನಾನು ನಿಮ್ಮ ಸೊಮ್ಮಿನೊಳಗೆ ಲೀಯವಾಗುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

**961**

**ಲಿಂಗವ ಪೂಜಿಸಿ ಫಲವೇನಯ್ಯಾ.**
**ಅಂಗನೆಯರೊಲುಮೆಯಾಗದನ್ನಕ್ಕ ?**
**ಜಂಗಮವ ಪೂಜಿಸಿ ಫಲವೇನಯ್ಯಾ,**
**ಮೋಕ್ಷಾಂಗನೆ ಮೈಗೂಡದನ್ನಕ್ಕ ?**

**ಅಂಗಜ ಬಂದು ಫಲವೇನಯ್ಯಾ,**
**ನಾ ಮನವೊಲಿದು ರತಿಗೊಲಿಯದನ್ನಕ್ಕ?**
**ಶರಣಸತಿ ಲಿಂಗಪತಿ ಎಂಬ ವೀರತ್ವ ಕೆಟ್ಟಿತೆನ್ನಲೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಲಿಂಗದ ಮೇಲೆ ಕಟ್ಟಿಕೊಂಡ ಲಿಂಗವನ್ನು ಮೂರು ವೇಳೆ ಪೂಜಿಸಿದರು ಫಲವೇನಯ್ಯ? ಅಂಗವನ್ನು ಆವರಿಸಿದ ಮನವೆಂಬ ಅಂಗನೆಯರು ಒಲಿಯಲಿಲ್ಲ. ಜಂಗಮನನ್ನು ಕರೆದು ಪೂಜಿಸಿ ಆರಾಧಿಸಿದರೂ ಫಲವೇನಯ್ಯ? ಅಂಗವನ್ನು ಆವರಿಸಿದ ಮನವೆಂಬ ಮೋಕ್ಷಾಂಗನೆ ಅಂಗದಲ್ಲಿಯೇ ಸಂಗಮವಾದ ಗುರುದೇವನನ್ನು ಕೂಡಲಿಲ್ಲ. ಅಂಗದಲ್ಲಿಯೇ ಸಂಗಮವಾದ ಅಂಗಜನಿದ್ದರು ಫಲವೇನಯ್ಯ? ಮನವೊಲಿದು ರತಿಗೊಲಿಯದನ್ನಕ್ಕ ಶರಣ ಸತಿ ಲಿಂಗ ಪತಿ ಎಂಬ ವೀರತ್ವ ಲಿಂಗವ ಪೂಜಿಸಿದ್ದಕ್ಕಾಗಿ ಕೆಟ್ಟಿತೆನ್ನಲೆ ಕಪಿಲಸಿದ್ಧ ಮಲ್ಲಿಕಾರ್ಜುನ.

**962**

**ಲಿಂಗವ ಪೂಜಿಸುವೆ ಕ್ಷುಧೆ ನಿಮಿತ್ತ.**
**ಗುರುವ ಪೂಜಿಸುವೆ ಲಿಂಗವ ಕೊಟ್ಟ ಹಂಗಿಗೆ,**
**ಲಿಂಗಾರ್ಪಣೆಯಲ್ಲಿ ಆನೆ ತೃಪ್ತ,**
**ಗುರುವಾರ್ಪಣೆಯಲ್ಲಿ ಗುರು ಲಿಂಗತ್ರಯ ತೃಪ್ತ,**
**ಜಂಗಮಾರ್ಪಣೆಯಲ್ಲಿ ಹಿಂಗದೆ ತ್ರಿವಿಧವು ತೃಪ್ತ.**
**ಭವವಿಲ್ಲ ನಂಬು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಾಣೆ.**

ಲಿಂಗವ ಪೂಜಿಸುವೆ, ಕ್ಷುಧೆ ನಿಮಿತ್ತ. ಗುರುದೇವನನ್ನು ಪೂಜಿಸುವೆ ಲಿಂಗವ ಕೊಟ್ಟ ಹಂಗಿಗೆ, ಲಿಂಗಾರ್ಪಣೆಯಲ್ಲಿ ನಾನೇ ತೃಪ್ತ. ಗುರುದೇವ ಅಂಗದ ಮೇಲೆ ಕಟ್ಟಿಕೊಳ್ಳಲು ಲಿಂಗಕೊಟ್ಟ, ಆ ಲಿಂಗವನ್ನು ಪೂಜಿಸಲು ಹೇಳಿದ. ಗುರುದೇವ ಹೇಳಿದನೆಂದು ಗುರುವಿನ ಆಜ್ಞೆ ಮೀರದೆ; ಆತ ಲಿಂಗವ ಕೊಟ್ಟ ಹಂಗಿಗಾಗಿ ಲಿಂಗವನು ಪೂಜಿಸಿದೆ. ಈ ಲಿಂಗ ಪೂಜೆಯಿಂದ ನಾನೇ ಭ್ರಮೆಯಿಂದ ತೃಪ್ತಿಪಟ್ಟೆ.

ಗುರುದೇವ ಹೇಳಿದ ಗುರುವಿನ ಪೂಜೆಯಲಿ ಅಂಗವೆಂಬ ಲಿಂಗವು ತೃಪ್ತಿಯಾಯಿತು. ಅಂಗದಲ್ಲಿಯೇ ಸಂಗಮವಾದ ಗುರುಲಿಂಗವು ತೃಪ್ತಿಯಾಯಿತು. ಅಂಗವನ್ನು ಆವರಿಸಿದ ಮನೋಲಿಂಗವು ತೃಪ್ತಿಯಾಯಿತು. ಗುರುಲಿಂಗದಲ್ಲಿ ಜಂಗಮವಾಗಿ ಹಿಂಗದೆ ತ್ರಿವಿಧವು ತೃಪ್ತ ಇನ್ನು ನನಗೆ ಭವವಿಲ್ಲ; ಜನನ ಮರಣಗಳು ಇಲ್ಲ; ನಂಬು ನಿನ್ನಾಣೆ.

**963**

**ಲಿಂಗವಾದಡೆ ಚೆನ್ನಬಸವಣ್ಣನಂತಾಗಬೇಕಯ್ಯಾ;**
**ವೀರನಾದಡೆ ಮಡಿವಾಳಯ್ಯನಂತಾಗಬೇಕಯ್ಯ;**
**ನಿಗ್ರಹಿಯಾದಡೆ ಹೊಡೆಹುಲ್ಲ ಬಂಕಯ್ಯನಂತಾಗಬೇಕಯ್ಯ;**
**ಧೀರನಾದಡೆ ಘಟ್ಟಿವಾಳಯ್ಯನಂತಾಗಬೇಕಯ್ಯ;**
**ಲಿಂಗದಲ್ಲಿ ನಿರ್ವಯಲಾದಡೆ**
**ನೀಲಲೋಚನೆಯಮ್ಮನಂತಾಗಬೇಕಯ್ಯ.**

**ಈ ಐವರ ಕಾರುಣ್ಯ ಪ್ರಸಾದವ ಕೊಂಡು ಬದುಕಿದೆನಯ್ಯ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಲಿಂಗವಾದಡೆ ಮಹಾಜ್ಞಾನಿ ಚೆನ್ನಬಸವಣ್ಣನಂತಾಗಬೇಕು, ವೀರನಾದಡೆ ಮಡಿವಾಳ ಮಾಚಿದೇವನಂತಾಗಬೇಕಯ್ಯ. ತನುವಿನ ಅಜ್ಞಾನವನ್ನು ತನ್ನದೇ ಆದ ಅರಿವಿನ ಬಿಚ್ಚುಗತಿಯಿಂದ ಕೊಂದು ಸಾಯಿಸಿದಾತ ಮಡಿವಾಳಯ್ಯ. ಜ್ಞಾನವಾಗದಿದ್ದರೂ ಚಿಂತೆಯಿಲ್ಲ; ಸಕಲ ಅಜ್ಞಾನವನ್ನು ನಿಗ್ರಹಿಸಿಕೊಂಡ ಛಲದಂಕ ಮಲ್ಲ ಹೊಡೆಹುಲ್ಲ ಬಂಕಯ್ಯನಂತಾಗಬೇಕಯ್ಯ.

ಹೆಂಡತಿ ಪರ ಪುರುಷನೊಂದಿಗೆ ಸಂಗ ಸುಖದಲ್ಲಿದ್ದಾಗ ಮನದಲ್ಲಿ ಕೋಪವ ತಾಳದೆ, ಪುರುಷನನ್ನು ತನ್ನ ಸ್ತ್ರೀಯನ್ನು ಗೌರವದಿಂದ ಕಂಡು ಸತಿಯೊಂದಿಗೆ ಸಂಗ ಸುಖವನ್ನು ಮಾಡಿದ ಪುರುಷನನ್ನು ಅತಿಥಿಯಾಗಿ ಮನೆಯಲ್ಲಿಯೇ ಇರಲು ಹೇಳಿದ ವೀರಾಧಿವೀರ ಘಟ್ಟಿವಾಳಯ್ಯನಂತಾಗಬೇಕಯ್ಯ, ಧೀರನಾದೊಡೆ.

ಲಿಂಗದಲ್ಲಿ ನಿರ್ವಯಲಾದೊಡೆ ನೀಲಾಲೋಚನೆ ಅಮ್ಮನಂತಾಗಬೇಕಯ್ಯ ಈ ಐವರ ಕಾರುಣ್ಯ ಪ್ರಸಾದವ ಕೊಂಡು ಬದುಕಿದೆನೆಯ್ಯಾ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

**964**

**ಲಿಂಗವಿಚಾರ, ಜಂಗಮವಿಚಾರ, ಪಾದೋದಕವಿಚಾರ**
**ಬಹು ಸೂಕ್ಷ್ಮ ಕೇಳಯ್ಯಾ.**
**ಮೊದಲನೆಯ ಪಾದೋದಕ ಗುರುಸಂಬಂಧ ;**
**ಎರಡನೆಯ ಪಾದೋದಕ ಲಿಂಗಸಂಬಂಧ ;**
**ಮೂರನೆಯ ಪಾದೋದಕ ಜಂಗಮ ಸಂಬಂಧ,**
**ಈ ತ್ರಿವಿಧೋದಕ ಭಕ್ತನಲ್ಲಿ ಸಂಬಂಧ.**
**ಈ ತ್ರಿವಿಧೋದಕ ಗುರು-ಲಿಂಗ-ಜಂಗಮದಲ್ಲಿ ಸಂಬಂಧ.**
**ಅದು ಕಾರಣ, ಭಕ್ತ-ಮಹೇಶ-ಪಾದೋದಕ, ಪ್ರಸಾದದಲ್ಲಿ**
**ಭೇದವ ಮಾಡಿ ನಿಂದಡೆ,**
**ಅಘೋರ ನರಕದಲ್ಲಿಕ್ಕುವ ಕಪಿಲಸಿದ್ಧ ಮಲ್ಲಿಕಾರ್ಜುನ.**

ಲಿಂಗವಿಚಾರ, ಜಂಗಮವಿಚಾರ, ಪಾದೋದಕವಿಚಾರ ಬಹುಸೂಕ್ಷ್ಮ. ಮೊದಲನೆಯ ಪಾದೋದಕ : ಅಂತರಂಗದಲ್ಲಿಯೇ ಗುರುದೇವನನ್ನು ತೋರಿ ಅವನೇ ನಿನ್ನ ನಿಜಗುರು ಎಂದು ಹೇಳುವ ಗುರುದೇವನ ಸೇವೆ ಮಾಡುತ್ತ ಅಂತರಂಗದ ಗುರುದೇವ ಬೇರೆ ಅಲ್ಲ; ತಾವು ಕೂಡಾ ಬೇರೆ ಅಲ್ಲ ಎಂದು ಅವರ ಪಾದಸೇವೆ ಮಾಡುತ್ತಾ ಉದಕದಿಂದ ಅವರ ಪಾದವನ್ನು ತೊಳೆದ ಪಾದೋದಕವೇ ಮೊದಲನೆ ಪಾದೋದಕ.

ಎರಡನೆ ಪಾದೋದಕ ಲಿಂಗ ಸಂಬಂಧ : ಅಂಗದ ಮೇಲೆ ಧರಿಸಿದ ಲಿಂಗವನ್ನು ಗುರುಪಾದೋದಕದಿಂದ ಮಜ್ಜನ ಮಾಡಿ, ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನನ್ನು ಅಂಗದ ಮೇಲೆ ಕಟ್ಟಿಕೊಂಡ ಲಿಂಗದಲ್ಲಿ ಆರಾಧಿಸಿ ಅರ್ಚಿಸುವುದು ಎರಡನೇ ಪಾದೋದಕ.

ಮೂರನೇ ಪಾದೋದಕ : ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಲ್ಲಿ

ಜಂಗಮ ದರ್ಶನ ಮಾಡಿಕೊಂಡು, ಆತನ ಜ್ಞಾನ ಪಾದೋದಕವನ್ನು ಸ್ವೀಕರಿಸುವ ವಿಧಾನವನ್ನು ಗುರುದೇವ ಹೇಳುತ್ತಾನೆ. ಈತ ಜಂಗಮನನ್ನು ಕಂಡಾತ, ಲಿಂಗಯ್ಯನ ದರುಶನ ಮಾಡಿಕೊಂಡಾತ, ಅರಿವೆಂಬ ಗುರುದೇವನ ದರುಶನ ಮಾಡಿಕೊಂಡು ಆ ಗುರುದೇವನೇ ಆದಾತ ಗುರುದೇವ.

ಅಂಗವನ್ನು ಆವರಿಸಿದ ಮನವನ್ನು ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಭಕ್ತಿ ಮಾಡಿ ಭಕ್ತನಾದಾತನೇ ಭಕ್ತ. ಈ ತ್ರಿವಿಧೋದಕ ಭಕ್ತನಲ್ಲಿ ಸಂಬಂಧ. ಈ ತ್ರಿವಿಧೋದಕ ಗುರು ಲಿಂಗ ಜಂಗಮದಲ್ಲಿ ಸಂಬಂಧ.

ಇದು ಕಾರಣ ಭಕ್ತ ಮಹೇಶ ಪಾದೋದಕ ಪ್ರಸಾದದಲ್ಲಿ ಭೇದವ ಮಾಡಿ ನಿಂದಡೆ ಅಘೋರ ನರಕದಲ್ಲಿಕ್ಕುವ ಕಪಿಲಸಿದ್ಧ ಮಲ್ಲಿಕಾರ್ಜುನ:

ತನುವಿನಲ್ಲಿ ತನ್ಮಯವಾದ ಅರಿವಿಗೆ ಗುರು ಎಂದು, ಲಿಂಗ, ಜಂಗಮ ಪಾದೋದಕ ಪ್ರಸಾದ ಎಂದು ಶರಣರು ಕರೆದಿದ್ದಾರೆ. ತನುವನ್ನು ಆವರಿಸಿದ ಮನದಿಂದ, ತನುವಿನಲ್ಲಿಯೇ ತನ್ಮಯವಾದ ಗುರುದೇವನನ್ನು ಕಂಡುಕೊಂಡ ಮನ, ಆ ಗುರುದೇವ ಹೇಳಿದಂತೆ ಕೇಳಬೇಕು. ಆತ ನುಡಿಸಿದಂತೆ ನುಡಿಯಬೇಕು. ಆತ ನೋಡಿಸಿದಂತೆ ನೋಡಬೇಕು, ಆತ ಮುಟ್ಟಿದಂತೆ ಮುಟ್ಟಬೇಕು. ಆತ ರುಚಿಸಿದಂತೆ ರುಚಿಸಬೇಕು. ಇದು ಸಾಧ್ಯವಾಗದ ತನು ತನಗೆ ತಾನೇ ಅಘೋರ ನರಕದಲ್ಲಿ ಬೀಳುವುದು. ಏಕೆಂದರೆ

ತನುವಿಗೆ ಸ್ವತಃ ನೋಡುವ ಜ್ಞಾನವಿಲ್ಲ. ತಾನು ನೋಡುವ ನೋಟ ಸರಿಯಿಲ್ಲವೆಂದು ತನಗೆ ತಿಳಿಯುತ್ತದೆ. ತನು ಮನದಿಂದ ನೋಡಿದಾಗ ಗುರುದೇವ ಅರಿವಿನಿಂದ ತಿಳಿಹೇಳುತ್ತಾನೆ. ನೀನು ನೋಡಿದ ನೋಟ ಸರಿಯಿಲ್ಲವೆಂದು. ಹೀಗಾಗಿ ತಾನು ನೋಡಿದ ಅಜ್ಞಾನದ ನೋಟ ತನ್ನ ಕಣ್ಣಲ್ಲಿಯೇ ಉಳಿದು, ತನು ಇರುವವರೆಗೆ ನರಕಯಾತನೆ ಅನುಭವಿಸುತ್ತಾನೆ. ತಾನು ಕೇಳಿದ ಶಬ್ದ ತನ್ನ ತನುವಿನಲ್ಲಿಯೇ ಉಳಿದು, ತನುವಿರುವವರೆಗೆ ನರಕಯಾತನೆ ಅನುಭವಿಸುತ್ತಾನೆ.

ಉದಾ: ದ್ರೌಪದಿಯ ಕುಹಕದ ನಗುವಿನ ಶಬ್ದ, ದುರ್ಯೋಧನನ ದೇಹದಲ್ಲಿಯೇ ಉಳಿದುದಕ್ಕಾಗಿ ಮಹಾಭಾರತ ಯುದ್ಧವಾಯಿತು. ಹದಿನೆಂಟು ಅಕ್ಷೋಹಿಣಿ ಸೈನ್ಯ ಸತ್ತು ಹೋಯಿತು. ರಕ್ತದ ಸರೋವರಗಳು ನಿರ್ಮಾಣವಾದವು. ನೂರುಜನ ತಮ್ಮಂದಿರು, ಬಂಧುಗಳು, ಆಚಾರ್ಯರು ಸತ್ತು ಹೋದರು. ಭೀಮ ದುರ್ಯೋಧನನ ತೊಡೆಗಳನ್ನು ಮುರಿದರೂ ಕೂಡಾ ದ್ರೌಪದಿಯನ್ನು ಒಮ್ಮೆಯಾದರೂ ತನ್ನ ತೊಡೆಯ ಮೇಲೆ ಕೂಡಿಸಿಕೊಳ್ಳಬೇಕೆಂಬ ಕ್ರೌರ್ಯ ದುರ್ಯೋಧನನನ್ನು ನರಕಯಾತನೆಯಲ್ಲಿ ಮುಳುಗಿಸಿತು.

ದ್ರೌಪದಿಯ ಮರೆವಿನ ನಗು, ದುರ್ಯೋಧನನ ಅರಿವಿಗೆ ಹೊಳೆಯಲೇ ಇಲ್ಲ. ಅರಿವು ತನುವಿನ ಸಂಪತ್ತು. ತನುವಿನ ಅರಿವು ತನುವಿಗೆ ಹೊಳೆದು ಬಳಕೆ ಮಾಡಲು ಸಾಧ್ಯವಾಗದಿದ್ದರೆ ಅದು ಕ್ಷಣಕ್ಷಣಕ್ಕೂ ನರಕಯಾತನೆ ಅನುಭವಿಸುತ್ತದೆ. ನುಡಿದದ್ದು ಕೇಳಿದ್ದು ಮೂಸಿಸಿದ್ದು ನೋಡಿದ್ದು ಮುಟ್ಟಿದ್ದು ತನುವಿನಲ್ಲಿ ಗಾಯವಾಗಿ ಉಳಿದು, ತನುವಿರುವವರೆಗೆ ತನುವನ್ನು ಬಾಧಿಸುತ್ತದೆ.

**965**

**ಲಿಂಗಾಂಗ ಒಂದಾದ ಬಳಿಕ ಭಕ್ತನ ನೋಡಲಿಲ್ಲ.**
**ಲಿಂಗಾಂಗ ಒಂದಾದ ಬಳಿಕ ಜಂಗಮವ ನೋಡಲಿಲ್ಲ.**
**ಲಿಂಗಾಂಗ ಒಂದಾದ ಬಳಿಕ ಏನೆಂದರಿಯಲಿಲ್ಲವು ನೋಡಯ್ಯಾ.**

ಎಮ್ಮಯ್ಯ ಕಪಿಲಸಿದ್ಧ ಮಲ್ಲಯ್ಯ ಎಲ್ಲರಲ್ಲಿಯೂ!

ಲಿಂಗಾಂಗ ಒಂದಾದ ಬಳಿಕ: ಸಕಲ ಅಂಗಗಳಲ್ಲಿಯೂ ಅರಿವಿನ ಲಿಂಗ ಸಂಗಮವಾಗಿದೆ. ಅಂಗವನ್ನು ಆವರಿಸಿದ ಮನ ಅರಿವಿನ ಲಿಂಗಕ್ಕೆ ಭಕ್ತನಾಗಿ ಆ ಲಿಂಗದಲ್ಲಿ ಸಂಗಮವಾದಾಗ ಭಕ್ತನೆನ್ನುವವನು ಕಳೆದು ಹೋಗುತ್ತಾನೆ. ಅಂಗವನ್ನು ಆವರಿಸಿದ ಮನ ಲಿಂಗದಲ್ಲಿ ಸಂಗಮವಾಗಿ ಲಿಂಗಾಂಗವಾಗುತ್ತದೆ.

ಅರಿವಿನ ಲಿಂಗದಲ್ಲಿಯೇ ಜಂಗಮನು ಒಡಮೂಡಿ, ಅಂಗ ಮತ್ತು ಮನ ಅಜ್ಞಾನಕ್ಕೆ ತುತ್ತಾಗದಂತೆ, ಸದಾ ಅಂಗದಲ್ಲಿ ಜಾಗೃತವಾಗಿ ಅಂಗರಕ್ಷಕನಾಗಿರುತ್ತಾನೆ. ಹೀಗೆ ಲಿಂಗಾಂಗ ಒಂದಾದ ಬಳಿಕ ಜಂಗಮ ಕಳೆದು ಹೋಗುತ್ತಾನೆ. ಅರಿವಿನ ಲಿಂಗಾಂಗ ಮಾತ್ರ ಇರುತ್ತದೆ. ಹೀಗೆ ಲಿಂಗಾಂಗ ಒಂದಾದ ಬಳಿಕ ಭಕ್ತನೆಂದು ಅನಲಿಲ್ಲ, ಜಂಗಮನೆಂದು ಅನಲಿಲ್ಲ ಏನೆಂದರಿಯಲಿಲ್ಲವು ನೋಡಯ್ಯ. ಎಮ್ಮಯ್ಯ ಕಪಿಲಸಿದ್ಧ ಮಲ್ಲಯ್ಯ ಎಲ್ಲರಲ್ಲಿಯೂ ಕಾಣುತ್ತಾನೆ. ಲಿಂಗಾಂಗ ಒಂದಾದ ಬಳಿಕ ಲೋಕದ ಸರ್ವಾಂಗಗಳೂ ಒಂದಾಗಿ ಕಾಣುತ್ತವೆ.

**966**

**ಲಿಂಗಾರ್ಚನೆಯ ಮಾಡುವ ಗುರುಪಾದವ ಪೂಜಿಪ**
**ಜಂಗಮಕ್ಕೆ ಶರಣೆಂಬ, ಪ್ರಸಾದವ ಕೊಂಬ,**
**ಅನ್ಯಸತಿಯ ನೋಡ, ಪರನಿಂದೆಯ ಮಾಡ,**
**ಭಕ್ತರ ಕೊಂಡಾಡುವ, ಸತ್ಯದಿ ನಡೆವ**
**ಸದ್ಭಕ್ತರ ನೆನೆವುದೆ ಮಂತ್ರವಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಲಿಂಗಾರ್ಚನೆಯ ಮಾಡುವ ಗುರುಪಾದವನ್ನು ಪೂಜಿಸುವ ಜಂಗಮಕ್ಕೆ ಶರಣೆಂದು ಪ್ರಸಾದವ ಕೊಂಬ ಶರಣನು ಅನ್ಯ ಸತಿಯರ ನೋಡ. ಪರನಿಂದೆಯ ಮಾಡ. ಭಕ್ತರನ್ನು ಕೊಂಡಾಡುವನು. ಸತ್ಯದಿಂದ ನಡೆಯುವನು. ಸದ್ಭಕ್ತರನ್ನು ನೆನೆಯುವುದೇ ಆತನ ಮಂತ್ರವಾಗಿರುತ್ತದೆ.

ಅಂಗವನ್ನು ಆವರಿಸಿದ ಮನ ಹೆಣ್ಣಾಗಿ, ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಸತಿಯಾದ ಮೇಲೆ, ಪರಸತಿಯನ್ನು ನೋಡುವುದಿಲ್ಲ. ಏಕೆಂದರೆ ತಾನು ಹೆಣ್ಣು; ತನ್ನಂತೆಯೇ ಇರುವ ಕಾಯವನ್ನು ಆವರಿಸಿದ ಮನಗಳೆಲ್ಲ ಹೆಣ್ಣೆ ಆಗಿರುವುದರಿಂದ; ಹೆಣ್ಣು ಹೆಣ್ಣನ್ನು ಕಾಮದಿಂದ ನೋಡುವುದಿಲ್ಲ. ಹಾಗೆ ನೋಡುವುದು ಲೋಕ ವಿರೋಧದ ಮಾತು.

ಲಿಂಗಾಂಗ ಒಂದಾದ ಬಳಿಕ ಪರನಿಂದೆಯ ಮಾಡುವುದಿಲ್ಲ. ಪ್ರತಿ ಶಬ್ದದಲ್ಲಿ ಅರಿವಿದೆಯೆಂದು ಗೊತ್ತಾದಾಗ ಯಾವ ಶಬ್ದದಿಂದ ನಿಂದೆ ಮಾಡಲು ಬರುತ್ತದೆ. ಸಕಲ ಕಾಯಗಳಲ್ಲಿಯೂ ಶ್ರೀ ಗುರುವೇ ಇದ್ದಾನೆ. ಹಾಗೆಯೇ ಸಕಲ ಶಬ್ದಗಳಲ್ಲಿ ಅರಿವು ಇದೆ. ಶಬ್ದದಿಂದ ಶ್ರೀ ಗುರುದೇವನನ್ನು ಆರಾಧಿಸಲು ಬರುತ್ತದೆಯೇ ಹೊರತು ನಿಂದೆ ಮಾಡಲು ಬರುವುದಿಲ್ಲ.

ಸಕಲ ಕಾಯಗಳಲ್ಲಿಯೂ ಭಕ್ತನೂ ಇದ್ದಾನೆ, ಲಿಂಗಯ್ಯನು ಇದ್ದಾನೆ. ಹೀಗಾಗಿ ಬಸವಣ್ಣನವರು ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ ಎಂದು ನುಡಿದರು.

ಪ್ರತಿ ಕಾಯದಲ್ಲಿ ಸತ್ಯ ಸಂಗಮವಾಗಿರುವುದರಿಂದ, ಆ ಸತ್ಯಕ್ಕೆ ತನುವನ್ನು ಆವರಿಸಿದ ಮನವೆಂಬ ಭಕ್ತ ಮಣಿದಿರುವಾಗ ಇದನ್ನು ಅರಿತಾತ ಸತ್ಯ ಮತ್ತು ಭಕ್ತಿಯೇ ಆತನಿಗೆ

ಮಂತ್ರವಾಗುತ್ತದೆ.

**967**

**ಲೋಕದ ಗಂಡರ ಮಹಾತ್ಮೆಯ ಹೆಂಡಿರರಿವರೆ?**
**ಹಾ ಹಾ! ಅಯ್ಯಾ!**
**ಶರೀರದೊಳಗೆ ಸಂದು ನಿಮ್ಮನಂತು ಗಾಣಲಾರದಾದನು**
**ಬೇಟಗೊಂಡು ನಿಮ್ಮನೆ ಬೇಡುವೆನಯ್ಯ**
**ಅಯ್ಯಾ ಎನ್ನನೆನಿಸು ಭವ ಬರಿಸಿದಡೆ**
**ನೀನೆ ಗಂಡ ನಾನೆ ಹೆಂಡತಿ,**
**ಕಪಿಲಸಿದ್ಧ ಮಲ್ಲೇಶ್ವರ, ದೇವರ ದೇವಯ್ಯ.**

ಲೋಕದ ಗಂಡನು ಗಂಡನಲ್ಲ. ಲೋಕದ ಹೆಂಡತಿ ಹೆಂಡತಿಯಲ್ಲ. ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನನ್ನು ಗಂಡನನ್ನಾಗಿಸಿಕೊಂಡು ಆ ಗಂಡನಿಗೆ ಅಂಗವನ್ನು ಆವರಿಸಿದ ಮನವೆ ಹೆಂಡತಿಯಾಗಬೇಕು. ಲೋಕದ ಗಂಡನಿಗೂ ಗಂಡ ಬೇಕು. ಲೋಕದ ಹೆಂಡತಿಗೂ ಗಂಡ ಬೇಕು.

ಲೋಕದ ಸಕಲ ಅಂಗಗಳನ್ನು ಆವರಿಸಿದ ಮನವೆಂಬ ಹೆಂಡತಿ ಒಬ್ಬಳೆ. ಹಾಗೆಯೇ ಅಂಗದಲ್ಲಿ ಸಂಗಮವಾದ ಅರಿವೆಂಬ ಶ್ರೀಗುರುದೇವನೆಂಬ ಗಂಡನು ಕೂಡಾ ಒಬ್ಬನೇ. ಲೋಕದ ಅಂಗಗಳೆಲ್ಲಾ ಅಂಗದಲ್ಲಿಯೇ ಸಂಗಮವಾದ ಗಂಡ-ಹೆಂಡತಿಯರಿಗೆ ಅರಿವಿನ ಅರಮನೆಯಾಗುತ್ತದೆ.

ಅಯ್ಯಾ ಶರೀರದೊಳಗೆ ಸಂದು ನಿಮ್ಮನಂತುಗಾಣಲಾರದಾದೆನು ಭೇಟೆಗೊಂಡು ನಿಮ್ಮನೆ ಬೇಡುವೆನಯ್ಯ ಅಯ್ಯಾ ಎನ್ನ ನೆನಿಸು ಭವವ ಭರಿಸಿದೊಡೆ ನೀನೇ ಗಂಡ ನಾನೇ ಹೆಂಡತಿ ಕಪಿಲಸಿದ್ಧ ಮಲ್ಲೇಶ್ವರ ದೇವರದೇವಯ್ಯ :

ಅಂಗದಲ್ಲಿಯೇ ಅರಿವಿನ ಗಂಡ ಹೆಂಡತಿಯಿದ್ದರು ಅಂಗ ಅವರಿಬ್ಬರನ್ನು ಕಾಣದೇ ಹೋಗುತ್ತದೆ. ಸರ್ವಾಂಗದ ಸಂದು ಸಂದುಗಳಲ್ಲಿ ಅವರಿಬ್ಬರಿದ್ದರೂ ಅಂಗ ಕಾಣದೇ ಇರುವುದು ಅಂಗದ ದೌರ್ಭಾಗ್ಯವೇ ಸರಿ.

ಅಯ್ಯಾ ಎನ್ನ ಅಂತರಂಗದ ಗಂಡನೆ, ಎಷ್ಟೋ ಜನ್ಮಗಳವರೆಗೆ ಈ ಅಂಗ ಜನನ-ಮರಣಗಳಿಂದ ನೋವುಗಳನ್ನು ಅನುಭವಿಸಿ, ಮತ್ತೆ ಮತ್ತೆ ಈ ಲೋಕಕ್ಕೆ ಬಂದರೂ ಕೂಡಾ ಪರಮಾತ್ಮನೇ ನೀನೇ ಎನಗೆ ಗಂಡ; ನಾನೇ ನಿನಗೆ ಹೆಂಡತಿ ನೋಡಾ; ಕಪಿಲಸಿದ್ಧ ಮಲ್ಲೇಶ್ವರ ದೇವರದೇವಯ್ಯ.

**968**

**ಲೋಕದ ಲೋಕಿಗಳು ಏಕಯ್ಯ ನುಡಿವರು**
**ಲೋಕನಾತನಿಪ್ಪ ಠಾವನರಿಯರು.**
**ಕಲ್ಲೊಳಗೆ ಹೇಮ, ಕಾಷ್ಠದೊಳಗಗ್ನಿ,**
**ತಿಲದೊಳು ತೈಲ, ಜಲದೊಳು ಮುತ್ತು,**
**ಹಾಲೊಳು ತುಪ್ಪ, ಸ್ಥಲದೊಳಗೆ ರತ್ನವಿಪ್ಪ ಪರಿಯಲ್ಲಿ**
**ನೀವಿಪ್ಪ ಭೇದವ ನರರೆತ್ತ ಬಲ್ಲರೈ,**

**ಕಪಿಲಸಿದ್ಧ ಮಲ್ಲಿಕಾರ್ಜುನ.**

ಲೋಕದ ಲೌಕಿಕರು ಏಕಯ್ಯ ನಿನ್ನನ್ನು ಅರಿಯರು. ಜರಿದು ನುಡಿವರು; ತನುವಿನಲ್ಲಿಯೇ ತನ್ಮಯವಾಗಿರುವ ಅರಿವೆಂಬ ಶ್ರೀ ಗುರುದೇವನು ಇರುವ ಠಾವನ್ನು ಅರಿಯರು.

ಕಲ್ಲೊಳಗಿರುವ ಹೇಮವನ್ನು ಕಲ್ಲೊಡೆದು ಪಡೆದರು. ಕಟ್ಟಿಗೆಯಲ್ಲಿರುವ ಅಗ್ನಿಯನ್ನು ಅರಿವಿನಿಂದ ಅರಿತರು. ತಿಲದೊಳಗಿರುವ ತೈಲವನ್ನು, ಜಲದೊಳಗಿರುವ ಮುತ್ತನ್ನು, ಹಾಲೊಳಗಿರುವ ತುಪ್ಪವನ್ನು ಸ್ಥಲದೊಳಗಿರುವ ರತ್ನ ಇರುವ ಪರಿಯನ್ನು ಅರಿತಂತೆ ನರನೊಳಗೆಯಿರುವ ಈಶನನ್ನು ಭೋದಿಸಿ ಪಡೆಯುವ ಭೇದವನು ಅರಿಯರೇಕಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಲೋಕದಲ್ಲಿರುವ ಮನುಷ್ಯ ಜಲದೊಳಗೆ ಹಾರಿ ಈಜುವುದನ್ನು ಕಲಿತ, ಆಕಾಶಕ್ಕೆ ಹಾರುವುದನ್ನು ಕಲಿತ, ತಿಲದೊಳಗೆ ತೈಲವನ್ನು, ಜಲದೊಳಗೆ ಮುತ್ತನ್ನು, ಹಾಲೊಳಗಿನ ತುಪ್ಪವನ್ನು ಬಗೆದು ತೆಗೆದ ಮನುಷ್ಯ. ಮನುಷ್ಯನೊಳಗಡೆ ಇದ್ದ ಮಹಾದೇವನನ್ನು ಹುಡುಕಿ ತೆಗೆಯಲು ಮನುಷ್ಯನಿಗೆ ಆಗುತ್ತಿಲ್ಲ. ಇದು ತನು ಲೋಕದ ದುರ್ದೈವ. ಸಕಲ ತನುಗಳಿಗೆ ತನುವಿನಲ್ಲಿದ್ದ ನೀನೇ ತನುವಿಗೆ ದರುಶನವಿತ್ತು ಅಜ್ಞಾನದ ತನುವನ್ನು ನೀನೇ ಮುಕ್ತನನ್ನಾಗಿಸಬೇಕು.

**969**

**ಲೋಕ ಹದಿನಾಲ್ಕರಲ್ಲಿ ಏಕೈಕ ಸಮತೆಯನು**
**ಠಾವರಿದು ಗ್ರಾಮವನು ನೋಡಿ ರಚಿಸಿ,**
**ಸೀಮೆ ಸಾಯುಜ್ಯದಲಿ ತರಳ ನದಿ ಹರಿವುತಿರೆ,**
**ತರುಣಿಯ ಮಸ್ತಕದ ನದಿಯು ಅರತು,**
**ಅತಿಶಯದ ಆನಂದಗಾಳಿ ಬೀಸಲು ತಂದ ಪರಿಮಳವು**
**ನೇತ್ರದಿ ಊರ್ಧ್ವವಾಗಿ**
**ಅತಿಶಯದ ರೂಪ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಅವಗ್ರಹಿಸಿದ ರೂಪು ಸಮತೆ ತಾನೆ.**

ಲೋಕ ಹದಿನಾಲ್ಕರಲ್ಲಿ : ಭೂಲೋಕ, ಭುವರ್‌ಲೋಕ, ಮಹರ್‌ಲೋಕ, ಜನಲೋಕ, ತಪಲೋಕ, ಸತ್ಯಲೋಕ, ಅಥಲ, ವಿತಲ, ಸುತಲ, ರಸಾತಲ, ತಲಾತಲ, ಮಹಾತಲ, ಪಾತಾಳ ಹೀಗೆ ಉರ್ಧ್ವಲೋಕಗಳು ಏಳು, ಅಧೋ ಲೋಕಗಳು ಏಳು ಎಂಬ ಹದಿನಾಲ್ಕು ಲೋಕಗಳಿವೆ ತನುವಿನಲ್ಲಿ.

ಹಾಗೆಯೇ ಏಕೈಕ ಸಮತೆಯ ಲೋಕವೊಂದಿದೆ. ಅದನ್ನು ಅರಿತು ಆ ಗ್ರಾಮವನು ನೋಡಿ ರಚಿಸಿ, ಸೀಮೆ ಸಾಯುಜ್ಯದಲಿ ತರಳನದಿ ಹರಿವುತಿದೆ.

ತರುಣಿಯ ಮಸ್ತಕದ ನದಿಯು ಅರಿತು ಅತಿಶಯದ ಆನಂದದ ಗಾಳಿ ಬೀಸಲು ತಂದ ಪರಿಮಳವು ನೇತ್ರದಿ ಉರ್ಧ್ವವಾಗಿ :

ಸಿದ್ಧರಾಮ ಶಿವಯೋಗಿಗಳು ಕಾಯದ ರಹಸ್ಯವನ್ನು ಅರಿಯುವ ಬೆಡಗಿನ ವಚನವನ್ನು ಓದುಗರಿಗಾಗಿ ವಚನದ ಸೂತ್ರದ ಮೂಲಕ ದಾಖಲಿಸಿದ್ದಾರೆ.

ತನುವಿನಲ್ಲಿ ಏಳು ಊರ್ಧ್ವ ಲೋಕಗಳು, ಏಳು ಅಧೋಮಯವಾದ ಲೋಕಗಳು ಇವೆ. ಈ ಲೋಕದಲ್ಲಿಯೇ ಅರಿವಿನ ಕಾಯವೊಂದು ಇದೆ. ಅರಿವಿನ ತರುಣ ನದಿಯಾಗಿ ತನುವಿನಲ್ಲಿಯೇ

ಹರಿಯುತ್ತಲ್ಲಿದೆ. ಇದನ್ನು ಅರಿಯುವ ಮನವೆಂಬ ತರುಣಿ ತನುವಿನಲ್ಲಿಯೇ ವಾಸವಾಗಿದ್ದಾಳೆ. ಆಕೆ ತನ್ನ ಮಸ್ತಕದ ಮೂಲಕ ಭೋರ್ಗರೆದು ಹರಿಯುತ್ತಿರುವ ಅರಿವಿನ ನದಿಯನು ಅರಿತು, ಅದರ ಆನಂದದ ಅರಿವಿನ ಪರಿಮಳದ ಗಾಳಿಯು ಬೀಸಲು, ಅರಿವಿನ ನೇತ್ರ ಊರ್ಧ್ವ ಮುಖವಾಗುತ್ತದೆ. ಅದರ ರೂಪು ಸಮತೆ ಅವಗ್ರಹಿಸುತ್ತಾ ಹೋದಂತೆ, ಆ ಅತಿಶಯದ ರೂಪು ತಾನೇ ತಾನಾಗಿ, ಕಪಿಲಸಿದ್ಧ ಮಲ್ಲಿಕಾರ್ಜುನನ ದರುಶನವಾಗುತ್ತದೆ.

**970**

**ಲೋಕ ಹದಿನಾಲ್ಕರೊಳು ಹೋಗಿ ಅಡಗಿಹೆನೆಂದಡಾ**
**ಪರಿಯ ತಾಮಸರು ತನ್ಮಯವೆ?**
**ಅನೇಕ ಪರಿಯಲ್ಲಿ ಕೊಂದು ಕೂಗಿತ್ತು ಈ ಮಾಯೆ**
**ಕಾಯಯ್ಯ ಕಪಿಲಸಿದ್ಧ ಮಲ್ಲೇಶ್ವರಯ್ಯಾ.**

ಕಾಯದಲ್ಲಿರುವ ಅಜ್ಞಾನದ ಹದಿನಾಲ್ಕು ಲೋಕದೊಳಗೆ ಹೋಗಿ ಸುತ್ತಾಡಿ, ಅದಕ್ಕೆ ನಾನಾ ರೀತಿಯ ಸುಖದುಃಖಗಳನ್ನು ಉಣಿಸಿ, ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾಗಿ ಇರಲು ಸಾಧ್ಯವೆ? ನಾನಾ ಪರಿಯ ತಾಮಸ ಗುಣವು ಅದಕ್ಕೆ, ನಾನಾ ಪರಿಯ ಸಾತ್ವಿಕ ಗುಣವು ಅದಕ್ಕೆ, ನಾನಾ ಪರಿಯ ರಾಜಸ ಗುಣವು ಅದಕ್ಕೆ. ಈ ಪರಿಯ ಮೂರು ಗುಣವಿದ್ದ ಮನ ತನ್ನ ಗುಣಗಳನ್ನು ತಾನೇ ಕೊಂದುಕೊಂಡು ಕಾಯಯ್ಯ ಕಪಿಲಸಿದ್ಧ ಮಲ್ಲೇಶ್ವರ ಎಂದು ಮನವೆಂಬ ಮಾಯೆಗೆ ಕೂಗಲು ಸಾಧ್ಯವೆ?.

ಹದಿನಾಲ್ಕು ಲೋಕಗಳನು ಸುತ್ತಾಡುವ ಸುಖದುಃಖಗಳ ಭರಾಟೆ ಅದಕ್ಕೆ.

**971**

**ವಂಚನೆಯ ಮಾಡಿದೆ ನಾನಯ್ಯ ನಿನಗಾನು.**
**ನೀ ಬರಹೇಳಿದ ಹಾಂಗೆ ಬಂದೆ.**
**ನೀ ಬರಹೇಳಿದ ಹಾಂಗೆ ಇದ್ದೆ.**
**ನೀ ಮಾಡಹೇಳಿದ ಹಾಂಗೆ ಮಾಡಿದೆ.**
**ನೀ ಗುರುವಾಗಿ ಬಂದು ಪರಮಸೀಮೆ ಇದೆಂದು ತೋರಿದೆ.**
**ನಾನು ಅಲ್ಲಿಯೇ ಇದ್ದೆನು.**
**ಇನ್ನು ನೀನೊಯ್ಯುದ್ದಲ್ಲಿಗೆ ಬಂದೆನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶ್ರೀ ಗುರುದೇವನೆ ನಿನಗೆ ನಾನು ವಂಚನೆ ಮಾಡಿದೆನಯ್ಯಾ ಎಂದು ಅಂಗವನ್ನು ಆವರಿಸಿದ ಮನ ಅರಿವಿಗೆ ಹಣೆಮಣೆದು ಆ ಅರಿವನ್ನೇ ಗುರುದೇವನನ್ನಾಗಿಸಿಕೊಂಡು ಆತನಿಗೆ ಹೀಗೆ ಹೇಳುತ್ತದೆ – ಪರಮಾತ್ಮನೇ ನೀನೇ ನನಗೆ ಬರ ಹೇಳಿದೆ, ನೀ ಹೇಳಿದ ಹಾಗೇ ನಾನು ಬಂದೆ. ನೀ ಬರ ಹೇಳಿದ ಹಾಗೇ ಇದ್ದೆ. ನೀ ಹೇಳಿದ ಹಾಗೇ ಮಾಡಿದೆ. ನೀ ಗುರುವಾಗಿ ಬಂದು ಅರಿವಿನ ಪರಮ ಸೀಮೆ ಇದೆಂದು ನನಗೆ ತೋರಿದೆ ನೀನು. ನೀ ತೋರಿದಲ್ಲಿಯೇ ನಾನಿದ್ದು ಇನ್ನು ನೀನೊಯ್ದಲ್ಲಿಗೆ ನಾನು ಬಂದೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

ಅನಂತ ಕಾಲದಿಂದಲೂ ನಿನಗೆ ನಾನು ವಂಚನೆಯ ಮಾಡಿದೆ. ನೀ ಹೇಳಿದ ಮಾತನ್ನು ಒಂದೂ ಕೇಳದಂತೆ. ಇನ್ನು ನನಗೆ ತಿಳಿದಿದೆ, ನೀನಾರೆಂದು, ನಾನು ನಿನ್ನಲ್ಲಿಯೇ ಇದ್ದೇನೆಂದು. ಇನ್ನು ನೀನು ಕರೆದುಕೊಂಡು ಹೋಗುವಲ್ಲಿಗೆ ನಾನು ಬರುವೆನಯ್ಯ ನೀನಿರುವಲ್ಲಿಯೇ ನಾನಿರುವೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**972**

**ವರ್ಗ ಪಟ್ಟಣದಲ್ಲಿ ಎರಡೆಂಟು ಕಳೆಗಳನು**
**ಹದುಳ ಪಟ್ಟಣಮಾಡಿ ಒಪ್ಪಿತೋರಿ**
**ಸಮತೆ ಅಧಿಕಾರದಲಿ ಸುಮತಿಯಾದುದು.**
**ಗ್ರಾಮ ಭ್ರಮೆಗೆಟ್ಟುದೈ ಬಿಡು ಜ್ಯೋತಿರ್ಮಯವೈ.**
**ಆನಂದ ಪಾತ್ರೆಯಲಿ ಸಮತೆ ತೈಲವನೆರೆಯೆ**
**ಬೆಳಗು ಪ್ರಭೆಯಾಗಿ ದೆಸೆದೆಸೆಗೆವರಿದು,**
**ಅತಿಶಯದೆ ನಿತ್ಯ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಎಯ್ದಿದ ಬೆಳಗು ಸಮತೆಯಾದೆ.**

ಕಾಯವೆಂಬುದು ಅರಿವಿನ ಪಟ್ಟಣ. ಅಲ್ಲಿ ಅಷ್ಟದಳ ಕಮಲಗಳೆಂಬ ಎಂಟು ಕಲೆಗಳಿವೆ. ಅಷ್ಟಮದಗಳನ್ನು ಅಳಿದು ಹದುಳ ಪಟ್ಟಣ ಮಾಡಿ ಒಪ್ಪಿ ತೋರುವಂತೆ ಅರಿವಿನಿಂದ ಶೃಂಗರಿಸಿ, ಸಮತೆ ಅಧಿಕಾರದಲಿ ಸುಮತಿಯಾದುದು. ಸಮತೆಯ ಅಧಿಕಾರದಲ್ಲಿ ಸುಮತಿಯಾಗಿ ಮೆರೆಯಬೇಕಾದ ತನು ತನುವನ್ನಾವರಿಸಿದ ಮನದಿಂದಾಗಿ ಇಡೀ ತನು ಭ್ರಮೆಯಿಂದ ಕೂಡಿದೆ. ಮನ ಅರಿವಿಗೆ ಹೋಗಲು ಸಾಧ್ಯವಾಗುತ್ತಿಲ್ಲ. ತನು, ಮನದ ಯಾವ ಮಾತನ್ನು ಪ್ರತಿಭಟಿಸುತ್ತಿಲ್ಲ. ಆನಂದ ಪಾತ್ರೆಯಲಿ ಸಮತೆಯ ತೈಲವು ಬೆಳಗುವ ಪ್ರಭೆಯಾಗಿ ದೆಸೆದಿಕ್ಕುಗಳಿಗೂ ಹರಿದಿರುವುದು, ಮನ ಮತ್ತು ತನುವಿಗೆ ಗೋಚರಕ್ಕೆ ಬರುತ್ತಿಲ್ಲ. ಬೆಳಗಿಂಗೆ ಬೆಳಗಾಗಿ ಬೆಳಗುವ ಕಪಿಲಸಿದ್ಧ ಮಲ್ಲಿಕಾರ್ಜುನನ ಬೆಳಕು ಕತ್ತಲೆಯ ಮನಕ್ಕೆ ಹೊಳೆಯುತ್ತಿಲ್ಲ.

**973**

**ವಚನ ಪಾತಕಗಳಿಂದ ದೆಸೆಗೆಟ್ಟರು,**
**ಕೆಲಬರು ವಚನದಿಂದಲೈದುವರಯ್ಯ ಐಕ್ಯವನು.**
**ವಚನವೆ ನೆಲೆಯಾಗಿ ಚಿತ್ತ ದೊರಕೊಂಡಡೆ**
**ಭಜಿಸುವ ಹಂಗು ಹರಿವುದೈ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಭಗವದ್ಗೀತೆ, ಬೈಬಲ್, ಕುರಾನ್ ಮುಂತಾದ ಸಕಲ ಅರಿವಿನ ಗ್ರಂಥಗಳು ತನುವಿನಲ್ಲಿ ತನ್ಮಯವಾದ ಅರಿವಿನತ್ತ ಬೆಟ್ಟು ಮಾಡಿ ತೋರುತ್ತವೆ. ಆದರೆ ಮನ

ವಚನಗಳು, ಗ್ರಂಥಗಳೇ ಶ್ರೇಷ್ಠವೆಂದು ತನುವಿನೊಂದಿಗೆ ಅವುಗಳ ಬೆನ್ನುಹತ್ತಿದೆ. ವಚನಗಳು ಅಥವಾ ಅರಿವಿನ ಗ್ರಂಥಗಳು ಮನಕ್ಕೆ ಔಷಧಿಯಾದರೆ ಮನ ತನುವಿನಲ್ಲಿ ತನ್ಮಯವಾದ

ಅರಿವೆಂಬ ಗುರುದೇವನ ಶ್ರೀ ಚರಣಗಳಿಗೆ ಶರಣುಹೋಗಿ ಶರಣನೇ ತಾನಾಗುತ್ತದೆ.

ವಚನಗಳು ತನುವನ್ನು ಆವರಿಸಿದ ಮನಕ್ಕೆ ಟಾಣಿಕ್ ಆದರೆ, ಮನಕ್ಕೆ ತನುವಿನೊಂದಿಗೆ ರಕ್ಕಸ ಬಲ ಬರುತ್ತದೆ. ವಚನ ಅರಿವಿನ ಸೂತ್ರವಾದರೆ ಮನದ ಅಜ್ಞಾನ ಹರಿದು ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ. ವಚನಗಳು ಮನಕ್ಕೆ ಔಷಧಿಯಾಗಬೇಕು. ಗುರುಗಳಿಗೆ, ಆಶ್ರಮವಾಸಿಗಳಿಗೆ, ಉಪನ್ಯಾಸಕರಿಗೆ ವ್ಯಾಪಾರದ ಸರಕಾಗಬಾರದು.

**974**

**ವರ್ಣವಿಲ್ಲದ ಲಿಂಗಕ್ಕೆ ರೂಪು ಪ್ರತಿಷ್ಠೆಯ ಮಾಡುವ**
**ಪರಿ ಇನ್ನೆಂತೊ?**
**ಪ್ರಳಯವಿಲ್ಲದ ಲಿಂಗಕ್ಕೆ ಪ್ರಾಣ ಪ್ರತಿಷ್ಠೆಯ ಮಾಡುವ**
**ಪರಿ ಇನ್ನೆಂತೊ?**
**ನೆನೆಯಬಾರದ ಲಿಂಗಕ್ಕೆ ಅನುಗ್ರಹವ ಮಾಡುವ ಪರಿ ಇನ್ನೆಂತೊ?**
**ನುಡಿಯಬಾರದ ಲಿಂಗಕ್ಕೆ ಜಪ ಪೂಜೆಯದೆಂತೊ?**
**ಇಲ್ಲದ ಲಿಂಗವ ಧರಿಸುವ ಪರಿ ಇನ್ನೆಂತೊ?**
**ಮಹಾಮಹಿಮ ಕಪಿಲಸಿದ್ಧ ಮಲ್ಲಿಕಾರ್ಜುನ.**
**ಇದರಂತುವ ನೀವೆ ಬಲ್ಲಿರಿ.**

ಲಿಂಗ ಬಯಲು. ಅದಕ್ಕೆ ಬಣ್ಣವಿಲ್ಲ, ರೂಪು ಇಲ್ಲ. ರೂಪದಲ್ಲಿ ಸಂಗಮವಾದ ನಿರೂಪ ಅದು. ಆ ನಿರೂಪೇ ರೂಪವನ್ನು ಮಾಡಿಕೊಂಡು ಮನವೆಂಬ ನಿರೂಪವನ್ನು ತನುವಿನಲ್ಲಿಯೇ ಸ್ಥಾಪಿಸಿದೆ.

ತನುವನ್ನು ಆವರಿಸಿದ ಮನದಿಂದಾಗಿ ತನುವಿಗೆ ಪ್ರಳಯವುಂಟಾಗಿದೆ. ಲಿಂಗಕ್ಕೆ ಪ್ರಳಯವಿಲ್ಲ. ಪ್ರಳಯವಿಲ್ಲದ ಲಿಂಗಕ್ಕೆ ಮನ ತನುವನ್ನು ಹಿಡಿದುಕೊಂಡು ಪ್ರಾಣ ಪ್ರತಿಷ್ಠೆಯ ನಾಟಕವನ್ನು ಆಡುತ್ತದೆ. ತನುವನ್ನು ಹಿಡಿದು ಲಿಂಗಮಾಡಿ ಅಂಗದ ಮೇಲೆ ಧರಿಸಿ ನೆನೆಯಬಾರದ ಲಿಂಗಕ್ಕೆ ಅನುಗ್ರಹವ ಮಾಡುತ್ತದೆ. ನುಡಿಯಬಾರದ ಲಿಂಗಕ್ಕೆ ಜಪ-ಪೂಜೆಗಳಿಂದ ಆರಾಧಿಸುತ್ತದೆ.

ಅಂಗದ ಮೇಲೆ ಧರಿಸುವ ಲಿಂಗ ಲಿಂಗವಲ್ಲ, ಅದನ್ನು ಲಿಂಗವೆನ್ನುವಂತಿಲ್ಲ. ಅಂಗವನ್ನು ಧಾರಣೆ ಮಾಡಿಕೊಂಡು ಬಂದ ಲಿಂಗವೇ ಅರಿವಿನ ಲಿಂಗ. ಅದಕ್ಕೆ ವರ್ಣವಿಲ್ಲ; ಪ್ರಳಯವಿಲ್ಲ. ಇಂತಹ ಲಿಂಗವನ್ನು ಅಂಗದಲ್ಲಿಯೇ ಇಟ್ಟುಕೊಂಡು ಅಂಗದ ಮೇಲೆ ಲಿಂಗ ಧರಿಸುವ ಆಸಕ್ತಿವುಳ್ಳ ಮನಕ್ಕೆ ನಾಚಿಕೆಯಾಗಬೇಕು. ಅಂಗದಲ್ಲಿಯೇ ಸಂಗಮವಾದ ಮಹಾಮಹಿಮ ಕಪಿಲಸಿದ್ಧ ಮಲ್ಲಿಕಾರ್ಜುನನೆ ಇದರಂತುವ ನೀವೇ ಬಲ್ಲಿರಿ.

**975**

**ವರ್ಮವನರಿತು ಅಯ್ಯಾ ನಿಮ್ಮ ಕಾಬವರು**
**ಸುಲಭವೆ ಲೋಕದಲ್ಲಿ?**
**ಲಿಂಗಭಕ್ತಿ ಜಂಗಮಭಕ್ತಿ ಗುರುಭಕ್ತಿ ಸುಲಭವೆ?**
**ಲಿಂಗಭಕ್ತ ಪ್ರಭುದೇವ,**
**ಜಂಗಮಭಕ್ತ ಬಸವಣ್ಣ.**

**ಗುರು ಮೊದಲಾದ ಪ್ರಸಾದ ಸರ್ವಕ್ಕೂ,**
**ಅನುಭಾವಿ ಚೆನ್ನಬಸವಣ್ಣ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ,**
**ಇಂತಿವರ ಪಾದಕ್ಕೆ ನಮೋ ನಮೋಯೆಂಬೆ.**

ಅನುವರಿತು ತನುವಿನಲ್ಲಿಯೇ ಬಚ್ಚಿಟ್ಟುಕೊಂಡ ಅರಿವೆಂಬ ಗುರುದೇವನೆ, ನಿಮ್ಮನ್ನು ಕಾಣಲು ಸುಲಭ ಸಾಧ್ಯವೇ ಈ ಲೋಕದಲ್ಲಿಯ ಜನಕ್ಕೆ? ಸಾಧ್ಯವಿಲ್ಲ!

ಲಿಂಗಭಕ್ತಿ, ಜಂಗಮಭಕ್ತಿ ಎನ್ನುವುದು ಸುಲಭವೇ? ಇದೆಲ್ಲಾ ಅಂಗದಲ್ಲಿಯೇ ಸಂಗಮವಾದ ಅರಿವಿನ ಶಕ್ತಿ; ಅರಿವಿಗೆ ಶರಣು ಹೋದ ಶರಣರಿಗೆ ಮಾತ್ರ ಸಾಧ್ಯ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಪ್ರಭುದೇವರನ್ನು ಲಿಂಗ ಭಕ್ತನೆಂದು, ಬಸವಣ್ಣನನ್ನು ಜಂಗಮ ಭಕ್ತನೆಂದು ಹೆಸರಿಸಿದ್ದಾರೆ.

ಗುರುಪ್ರಸಾದ ಮೊದಲಾದ ಸರ್ವಕ್ಕೂ ಅನುಭಾವಿ ಚೆನ್ನಬಸವಣ್ಣನೇ ಕಾರಣ ಕಪಿಲಸಿದ್ಧ ಮಲ್ಲಿಕಾರ್ಜುನಾ ಇಂತಿವರ ಪಾದಕ್ಕೆ ನಮೋ ನಮೋ ಎಂಬೆ.

**976**

**ವಾದ ಬುದ್ಧಿಯ ಬಲ, ವಾದ ಅಭ್ಯಾಸದ ಬಲ ;**
**ಮಹತ್ವ ಸುಕೃತದ ಫಲ, ಮಹತ್ವ ಸಿದ್ಧಿಯ ಬಲ ;**
**ಅರಿವು ಜ್ಞಾನದ ಬಲ, ಅರಿವು ಸಜ್ಜನಸಹವಾಸದ ಬಲ.**
**ಅರಿವು ಬಾಹ್ಯದಲ್ಲಿ ಇಷ್ಟಲಿಂಗ,**
**ಅರಿವು ಅಂತರಂಗದಲ್ಲಿ ಪ್ರಾಣಲಿಂಗ,**
**ಅರಿವು ಭಾವದಲ್ಲಿ ಆತ್ಮಲಿಂಗ.**
**ಇದು ಕಾರಣ,**
**ವಾದಿಸಿದಲ್ಲಿ ಹುರುಳಿಲ್ಲ, ಮಹತ್ವ ಮಾಡುವಲ್ಲಿ ಹುರುಳಿಲ್ಲ.**
**ಲಿಂಗಜ್ಞಾನವೇ ಹುರುಳು, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ವಾದ ಬುದ್ಧಿಯ ಬಲ, ವಾದ ಅಭ್ಯಾಸದ ಬಲ, ಮಹತ್ವ ಸುಕೃತದ ಬಲ, ಮಹತ್ವ ಸಿದ್ಧಿಯ ಬಲ, ಇದು ಮಹತ್ವ ಬಲ. ಅರಿವು ಮಾತ್ರ ಜ್ಞಾನದ ಬಲ. ಅದು ಸಜ್ಜನರ ಸಹವಾಸವನ್ನು ಬಯಸುತ್ತದೆ.

ಅಂಗದಲ್ಲಿಯೇ ಸಂಗಮವಾದ ಅರಿವನ್ನು ಮಾತ್ರ ಅರಿವೆಂದು ಹೇಳಬಹುದೆ ಹೊರತು ಮನ ಬುದ್ಧಿಯ ಬಲದಿಂದ ವಾದಮಾಡಿ, ಅಭ್ಯಾಸದ ಬಲದಿಂದ ವಾದಮಾಡಿ, ತರ್ಕಿಸಿ ಪಂಡಿತನೆನ್ನಿಸಿಕೊಂಡರೆ, ಸುಕೃತದ ಫಲ ಉಣ್ಣುತ್ತದೆ. ಅದು ದೇಹದ ಸುಕೃತ. ಮನ ದೇಹದೊಂದಿಗೆ ಸಿದ್ಧಿ ಮಾಡಿಕೊಂಡ ಸಿದ್ಧಿಯ ಬಲ. ಅದು ತನುವಿಗೆ ಮಹತ್ವವನ್ನು ತಂದುಕೊಡುತ್ತದೆ ಹೊರತು ಮತ್ತೇನು ಸಾಧಿಸಿದಂತಲ್ಲ.

ಜ್ಞಾನದ ಬಲ ಹಾಗಲ್ಲ. ಅದು ಗಳಿಸಿಕೊಂಡದ್ದಲ್ಲ, ತನುವಿನಲ್ಲಿಯೇ ತನ್ಮಯವಾದದ್ದು. ಬುದ್ಧಿಯ ಬಲದಿಂದ ವಾದ ಮಾಡುವಾಗಲೂ ಇತ್ತು. ಅಭ್ಯಾಸದ ಬಲದಿಂದ ವಾದ ಮಾಡುವಾಗಲೂ ಇತ್ತು. ತನು ಸುಕೃತದ ಫಲವನ್ನು ಉಣ್ಣುವಾಗಲು ಇತ್ತು. ಮನ ತನುವಿನೊಂದಿಗೆ ಸಿದ್ಧಿಯ ಬಲ ಹೊಂದಿದಾಗಲೂ ಇತ್ತು.

ವಾದಿಸಿದಾಗ ವಾದದಲ್ಲಿ ಹುರುಳಿಲ್ಲವೆಂದು ಜ್ಞಾನ, ತನುವಿಗೆ ಹೇಳಿತ್ತು. ಅಭ್ಯಾಸ ಬಲದಿಂದ ವಾದ ಮಾಡುವಾಗ ಇದು ನಿನ್ನ ಅರಿವಿನ ಸಂಪತ್ತಲ್ಲವೆಂದು ಜ್ಞಾನ ಸೂಚಿಸಿತ್ತು.

ಸರ್ವಾಂಗದ ಅರಿವೇ ಗುರುವು. ಇದೇ ಇಷ್ಟಲಿಂಗ. ಅರಿವು ಅಂತರಂಗದಲ್ಲಿಯ ಪ್ರಾಣಲಿಂಗ. ಅರಿವು ಭಾವದಲ್ಲಿಯ ಆತ್ಮಲಿಂಗ. ವಾದಿಸಿದಲ್ಲಿ ಹುರುಳಿಲ್ಲ. ಮಹತ್ವ ಮಾಡುವಲ್ಲಿ ಹುರುಳಿಲ್ಲ. ಲಿಂಗಜ್ಞಾನವೇ ಹುರುಳು ಕಪಿಲಸಿದ್ಧ ಮಲ್ಲಿಕಾರ್ಜುನಾ.

**977**

**ವಾದಿಸಿ ವಾದಿಸಿ ಗುರುಕ್ರಿಯೆಯ ಹಿಡಿದಡೆಯೂ ವಾದ ಮಾಣದು ;**
**ಬಿಟ್ಟಡೆಯೂ ವಾದ, ಹಿಡಿದಡೆಯೂ ವಾದ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಟ**
**ಒಮ್ಮೆ ಕಾಲಕೂಟ, ಒಮ್ಮೆ ಅಮೃತದ ನೋಟ,**
**ಕೇಳಾ ಕಿನ್ನರಯ್ಯಾ.**

ಸಿದ್ಧರಾಮ ಶಿವಯೋಗಿಗಳು ಕಿನ್ನರಯ್ಯ ಎಂಬ ಶರಣರಿಗೆ ವಾದಿಸಿ ವಾದಿಸಿ ವಾದ ಮಾಡುವ ಮನದ ಅಜ್ಞಾನದ ಬಗ್ಗೆ ತಿಳಿ ಹೇಳಿದ್ದಾರೆ.

ವಾದ ಮಾಡುವುದಕ್ಕಾಗಿ ಮನ ಗುರುದೇವನಿಂದ ದೀಕ್ಷೆ ಪಡೆದು ವಾದ ಮಾಡಿದರೆ, ದೀಕ್ಷೆ ಪಡೆದ ಸುಖ ಮನಕ್ಕೆ ಆಗುವುದೇ ಇಲ್ಲ, ಬಿಟ್ಟಡೆಯೂ ವಾದ, ಹಿಡಿದೆಡೆಯೂ ವಾದ. ವಾದಕ್ಕಾಗಿಯೇ ಗುರುದೀಕ್ಷೆ ಪಡೆದು, ಮನ ತನ್ನ ಅಜ್ಞಾನವನ್ನು ತಾನೇ ಹೇರಿಕೊಳ್ಳುತ್ತದೆ. ಮುಕ್ತಿ ಹೊಂದಲು, ಮನ ಮತ್ತು ತನುವಿಗೆ ಸಾಧ್ಯವಾಗುವುದೇ ಇಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನನ್ನು ಕೂಡಿದಾಗ ಮನಕ್ಕೆ ಪರಮ ಸುಖವಾಗುತ್ತದೆ. ಗುರುದೀಕ್ಷೆ ಪಡೆದರೇನು ಒಮ್ಮೆ ಕಾಲಕೂಟ ವಿಷವಾಗುತ್ತದೆ. ಮತ್ತೊಮ್ಮೆ ಅಮೃತದ ನೋಟದಂತೆ ಭಾಸವಾಗುತ್ತದೆ. ಜ್ಞಾನ ವಾದಕ್ಕಾಗಿ ಅಲ್ಲ ಪರಮಸುಖವನ್ನು ಅನುಭವಿಸುವುದಕ್ಕೆ. ತನುವಿನ ಅಜ್ಞಾನದ ಕತ್ತಲೆಯನ್ನು ತನಗೆ ತಾನೇ ಕಳೆದುಕೊಂಡು ಬೆಳಗಿಂಗೆ ಬೆಳಗಾಗಿ ಬೆಳಗುವುದಕ್ಕೆ!

**978**

**ವಾಯದ ದೇಹವ ಮನೆಯ ಮಾಡಿ ಮಾಯದಲ್ಲಿಪ್ಪೆ ಕಂಡಾ.**
**ನೇತ್ರದ ಬಾಗಿಲ ತೆರೆದು ನೋಡುತ್ತಿಪ್ಪೆ ಕಂಡಾ.**
**ನಿನ್ನ ಇರವೊಂದು ವಿಪರೀತ**
**ಮಠವೊಂದಘಟಿತದೊಳಗೆ ಎನ್ನ ಮರೆದಿಪ್ಪೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಎಲೆ ಮನವೇ, ದೇಹದಲ್ಲಿ ಮನೆಯ ಮಾಡಿಕೊಂಡು ದೇಹದಲ್ಲಿರುವ ನನ್ನನ್ನು ಮರೆತಿರುವೆಯಲ್ಲ. ನಿನ್ನನ್ನು ಸೃಷ್ಟಿಮಾಡಿದ ನನ್ನನ್ನೇ ಮರೆತು, ನನ್ನ ನೇತ್ರದ ಬಾಗಿಲು ತೆಗೆದು ನೀನು ನೋಡುತ್ತಿರುವೆಯಲ್ಲಾ. ನೀನೊಂದು ಪರಿ, ನಿನ್ನ ಇರುವೊಂದು ಪರಿ. ಮಠವೆಂಬ ಘಟಿತದೊಳಗೆ ನೀನಿದ್ದು ಎನ್ನನ್ನು ಮರೆತಿರುವೆಯಲ್ಲ.

ನನ್ನ ಕಣ್ಣಿನಿಂದ ನನ್ನಂತೆಯೇ ಇರುವ ತನುವನ್ನು ನೀನು ಹಾದರದಿಂದ ನೋಡುವುದು

ಸರಿಯೇ. ತನುವೊಂದೇ, ತನುವಿನ ಮೇಲೆ ಹೊದ್ದಿರುವ ಚರ್ಮವೊಂದೆ. ಚರ್ಮದೊಳಗೆ ಹರಿಯುತ್ತಿರುವ ನೆತ್ತರೂ ಕೂಡಾ ಒಂದೇ. ಮಾಂಸ, ಮಜ್ಜೆ, ಮೇದಸ್ಸು ಕೂಡಾ ಒಂದೇ ಆಗಿರುವಾಗ ಹಾದರದಿಂದ ನೋಡುವುದು ಸರಿಯೆ? ನನ್ನನ್ನು ಮರೆತುದಕ್ಕಾಗಿ ನಿನಗೀ ಶಿಕ್ಷೆ!

**979**

**ವಾಯುವ ನುಂಗಿದ ಬಣ್ಣ, ಬಣ್ಣವ ನುಂಗಿದ ಛಾಯೆ,**
**ಅಂಜನ ಪ್ರವೇಶಮಧ್ಯದಲ್ಲಿ ಲೀಯವಾದೆನಯ್ಯಾ ನಿನ್ನೊಡನೆ**
**ಲೀಯವಾದೆನಯ್ಯಾ ಶುದ್ಧ ಸಿದ್ಧ ಪ್ರಸಿದ್ಧದಲ್ಲಿ ಪ್ರವೇಶಿಸಲೊಡನೆ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**
**ಸೀಮೆಯ ಮೀರಿ ಸಂಬಂಧಿಯಾದೆನು.**

ವಾಯುವ ನುಂಗಿದ ಬಣ್ಣ, ಬಣ್ಣವ ನುಂಗಿದ ಛಾಯೆಗೆ, ಅರಿವಿನ ಅಂಜನ ಹಾಕಿ, ಮಾಯೆಯನು ಕಡೆಗಣಿಸಿ, ಮಧ್ಯದಲಿ ಪ್ರವೇಶ ಮಾಡಿ ಲೀಯವಾದನೆಯ್ಯಾ ನಿನ್ನೊಡನೆ. ನಾನು ನಿನ್ನಂತಾಗುವುದು ನಿನಗೆ ಬೇಕಿಲ್ಲವೆ ತಂದೆ. ನಿನ್ನೊಂದಿಗೆ ಲೀಯವಾಗದಂತೆ ನನ್ನನ್ನು ನೀನು ಮಾಯೆಯನ್ನಾಗಿ ಮಾಡಿದೆ. ನಿನ್ನ ಸಂಗ ಸಂಯೋಗದಲ್ಲಿ ಒಂದಾಗದಂತೆ ಮಾಡಿದೆಯಾ.

ಕಪಟದೇಹವನ್ನು ಕಪಟಮನವನ್ನು ಸೃಷ್ಟಿಮಾಡಿದವನು ನೀನೇ. ನಿನ್ನೊಂದಿಗೆ ಲೀಯವಾದರೆ ಅನುಗ್ರಹಿಸುವೆನೆಂದು ಪಣ ತೊಟ್ಟವನು ಕೂಡಾ ನೀನೆ. ನೀನೆ ಹಾಕಿದ ಜಾಲವನ್ನು ಭೇದಿಸಿ ನಿನ್ನೊಂದಿಗೆ ಸಂಯೋಗವಾಗಿ ಶುದ್ಧ ಸಿದ್ಧ ಪ್ರಸಿದ್ಧದಲ್ಲಿ ಪ್ರವೇಶಿಸಿದೆನೆಯ್ಯಾ–ಸೀಮೆಯ ಮೀರಿ ಸಂಬಂಧಿಯಾದೆನು.

**980**

**ವಾಯುವೆನ್ನುವನತಿ ಮದದಿಂದ**
**ಕಾಯಶೂನ್ಯವ ಮಾಡುವೆನೆನುತಿಹೆವಯ್ಯ.**
**ವಾಯದ ಕಾಯವು ಕೆಡದ ಮುನ್ನ**
**ನೇಮ ನಿಮ್ಮುವ ನೆನೆಯಲೀಯವು**
**ಅಯ್ಯೋ ಮಹಾದೇವ,**
**ಮನವೆ ನೀವಾಗಿ ಕೈಕೊಟ್ಟು ಕಾಯಯ್ಯಾ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿಯೇ ಇದ್ದ ಕಾಯವನ್ನು ಆವರಿಸಿದ ಮನ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವೆಂಬ ಅರಿಷಡ್ವರ್ಗಗಳನ್ನು ಸೃಷ್ಟಿಮಾಡಿ, ಕಾಯವನ್ನೇ ಕಪಟಿಯನ್ನಾಗಿ ಮಾಡಿದೆ. ಆದರೆ ಕಾಯ ಇವೆಲ್ಲವುಗಳಿಗೆ ಆಶ್ರಯ ನೀಡಿದೆ. ಕಪಟತನವನ್ನು ಮಾಣಿಸಿ ಕಾಯ ಶೂನ್ಯವ ಮಾಡಯ್ಯ. ಕಾಯದಲ್ಲಿದ್ದ ಮಾಯೆ ಕಾಯವನ್ನೇ ಶೂನ್ಯವನ್ನಾಗಿಸುವೆ ಎನ್ನುತ್ತಿದೆ.

ಕಾಯ ಕೆಡದ ಮುನ್ನ ನಿಮ್ಮನ್ನು ನೆನೆಯಲೀಯವು ಮಹಾದೇವನೆ, ಮನದೊಡೆಯನೇ,

ಮನದ ಕೈಹಿಡಿದು ಮನವೆ ನೀನಾಗಿ ಕಾಯಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

**981**

**ವಾರಾಸಿಯಿಂದತ್ತಲಾರು ಬಲ್ಲರು ದೇವಾ?**
**ಈರೇಳನತಿಗಳೆದ ನಿತ್ಯ ನಿತ್ಯ ಕಾರುಣ್ಯಭಾವದಲಿ**
**ಆ ಮರುಳುಗೊಂಡಡೆ ಆರು ಏವಿಧಿಯಾದಡೇನಯ್ಯ?**
**ಕಾರುಣ್ಯಕರ ಕಪಿಲಸಿದ್ಧ ಮಲ್ಲೇಶ್ವರಾ**
**ಓರಂತೆಯಾದ ಬಳಿಕಾನಂದನು.**

ಕಾಯ ಹೋದ ಮೇಲೆ ಯಾರು ಬಲ್ಲರು ದೇವ? ಕಾಯದಲ್ಲಿಯೇ ಸಂಗಮವಾದ ನಿನ್ನನ್ನು ಕಾಣುವ ಬಯಕೆ ಕಾಯಕ್ಕೂ ಇಲ್ಲ, ಕಾಯವನ್ನು ಆವರಿಸಿದ ಮನಕ್ಕೂ ಇಲ್ಲ. ಮನ, ಕರುಣಾಕರನಾದ ನಿನ್ನ ಮೇಲೆ ಮರುಳುಗೊಳ್ಳದೆ, ಕಾಯವನ್ನೇ ಮೆಚ್ಚಿಕೊಂಡಿದೆ. ಕಾಯದೊಂದಿಗೆ ಸುಖಿಸಿ ನಿತ್ಯ ನಿತ್ಯ ಕಾಯಕ್ಕೆ ದುಃಖವನ್ನುಂಟು ಮಾಡುತ್ತದೆ. ಮನ ಸೃಷ್ಟಿಸಿದ ಆರು ವಿಧಿಗಳು ಏನಾದಡೇನಯ್ಯ ಅವುಗಳಿಗೆ ಮರಳುಗೊಂಡಡೆ ಕಾಯ ವ್ಯರ್ಥವಾಗಿ ಇಲ್ಲವಾಗುತ್ತದೆ. ಕರುಣಾಕರನೆ ಕಪಿಲಸಿದ್ಧ ಮಲ್ಲೇಶ್ವರ ನನ್ನನ್ನು ನಿನ್ನಂತೆ ಮಾಡಿಕೊಂಡ ಬಳಿಕ ನಾನು ನೀನೇ ಆದೆನು. ಸಹಜಾನಂದವನು ಹೊಂದಿದೆನು.

**982**

**ವಿಷಮ ವಿಷಮ ಗಾಳಿಯಲ್ಲಿ ದೆಸೆಗೆಟ್ಟೆನಯ್ಯಾ ತಂದೆ.**
**ಆಮಿಷ ರೋಷಂಗಳೆನ್ನುವ ಕಾಡಿಹವು.**
**ಶಾಶ್ವತ ನಿತ್ಯ ನಿತ್ಯ ನೀನೆ ನಿಜಪದವನೀಯಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವೆಂಬ ವಿಷಮಯವಾದ ವಿಷಯ ಗಾಳಿಯಲ್ಲಿ ದೆಸೆಗೆಟ್ಟೆನಯ್ಯ. ಇದರಿಂದಾಗಿ ನಿನ್ನನ್ನು ಕಾಣದಂತಾದನೆಯ್ಯಾ ತಂದೆ. ಆಸೆ ಆಮಿಷಗಳು ರೋಷಂಗಳು ನನ್ನನ್ನು ಕಾಡುತ್ತಿದೆ. ಸಪ್ತವ್ಯಸನಗಳು, ಅಷ್ಟಮದಗಳಿಂದಾಗಿ ನನ್ನಲ್ಲಿ ನೀನಿದ್ದರೂ ನಿನ್ನ ದರುಶನ ಭಾಗ್ಯ ನನಗೆ ಸಾಧ್ಯವಾಗುತ್ತಿಲ್ಲ.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಇದ್ದ ನಿನ್ನೊಂದಿಗೆ ಸುಖಿಸದೇ ನನ್ನನ್ನು ಕಾಡಿಸುತ್ತಿರುವುದು ತಂದೆ. ಶಾಶ್ವತ ನೀನು, ನಿತ್ಯನು ನೀನು, ಸತ್ಯನು ನೀನು, ನಿಜಪದವಿಯನ್ನು ಕೊಡುವವನು ನೀನೆ. ಆದರೂ ಮನ ನಿನ್ನನ್ನು ತಿಳಿಯದೇ ನನ್ನ ಬೆನ್ನು ಬಿದ್ದಿದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ಮನವನ್ನು ಘನಮನವನ್ನಾಗಿಸಿ ನಿಜ ಪದವಿಯನ್ನು ಕರುಣಿಸು ತಂದೆ.

**983**

**ವೀರಧೀರರುಗಳೆಲ್ಲಾ ಕೈಲಾಸಪುರಕ್ಕೆ ದಾಳಿಯ ದಂಡು ಕಾಣಿಕೆ.**
**ಸುತ್ತಿ ಮುತ್ತಿ ಪರಬ್ರಹ್ಮರೆಂಬ ಕೋಂಟೆಯ ಕೊಳ್ಳಿರೆ.**

**ಸಮತೆ ಸೈರಣೆ ಸಮಾಧಾನವೆಂಬ ಕೈದುವ ಕೊಳ್ಳಿರೆ.**
**ಅತಿರಥ ಮಹಾರಥರೆಲ್ಲರೂ ಆಯತವಾಗಿರೆ,**
**ನಮ್ಮ ಕಪಿಲಸಿದ್ಧ ಮಲ್ಲಿನಾಥನೆಂಬ**
**ಶಿವಲಿಂಗವನೊಡಗೂಡಿಕೊಳ್ಳಿರೆ.**

ವೀರರು, ಧೀರರಾದವರು ಕಾಯದೊಂದಿಗೆ ಸೆಣೆಸಾಡಿ, ಕಾಯವನ್ನೇ ಮಣಿಸಿ, ಕಾಯದಿಂದ ವೀರರೆನ್ನಿಸಿಕೊಂಡವರು ವೀರರಲ್ಲ, ಅವರು ಧೀರರೂ ಅಲ್ಲ.

ವೀರನಾದವನು, ಧೀರನಾದವನು ಕಾಯವೆಂಬ ಕೈಲಾಸಪುರಕ್ಕೆ ದಾಳಿ ಮಾಡುತ್ತಾನೆ. ಅದರಲ್ಲಿರುವ ಅರಿಷಡ್ವರ್ಗಗಳೆಂಬ ರಕ್ಕಸರನ್ನು ಸಪ್ತವ್ಯಸನಗಳೆಂಬ ದುಷ್ಟರನ್ನು ಅಷ್ಟಮದಗಳೆಂಬ ಅಜ್ಞಾನಿಗಳನ್ನು ಕೊಂದು, ಕೈಲಾಸದಲ್ಲಿ ವಾಸವಾದ ಕೈಲಾಸಪತಿಯನು ವಶಮಾಡಿಕೊಳ್ಳುತ್ತಾನೆ. ಆ ಕೋಟೆಯನ್ನು ತನ್ನಂತೆ ಮಾಡಿಕೊಂಡು ಪರಬ್ರಹ್ಮನನ್ನು ಕೂಡುತ್ತಾನೆ.

ಸಮತೆ, ಸಮಾಧಾನ, ಸೈರಣೆಯ ಮಹಾಸುಖವನ್ನು ಹೊಂದುತ್ತಾನೆ. ಇನ್ನೆಂದೂ ಯುದ್ಧಮಡುವ ಗೋಜಿಗೆ ಹೋಗುವುದಿಲ್ಲ. ಅವನನ್ನು ಸೋಲಿಸುವ ಮಹಾರಥಿಗಳು ವಿಶ್ವದಲ್ಲಿ ಹುಟ್ಟುವುದೇ ಇಲ್ಲ.

ಅತಿರಥ ಮಹಾರಥರೆಲ್ಲರು ಕಾಯವೆಂಬ ಕೈಲಾಸವನ್ನು ಮುತ್ತಿಗೆ ಹಾಕಿ, ಸಾಧ್ಯವಾದರೆ ಅದರೊಳಗಿದ್ದ ರಕ್ಕಸರನ್ನು ನಾಶಮಾಡಿ ಕಾಯವೆಂಬ ಕೋಟೆಯನ್ನು ನಿಮ್ಮಂತೆ ಮಾಡಿಕೊಳ್ಳಿ, ಕಾಯದೊಳಗಿದ್ದ ಕಪಿಲಸಿದ್ಧ ಮಲ್ಲಿನಾಥನೆಂಬ ಶಿವಲಿಂಗವನೊಡಗೂಡಿರಿ. ಆತನ ಸಂಪತ್ತನ್ನು ನಿಮ್ಮಂತೆ ಮಾಡಿಕೊಳ್ಳಿ.

**984**

**ವೃಕ್ಷಛಾಯೆಯಲ್ಲಿಹಂಗೆ ನೀನು,**
**ಸಕಲರಿಗೆ ಸ್ವಾತಂತ್ರ್ಯ ಪದವನೀವೆ, ನಿನಗಿಲ್ಲ.**
**ನೀನು ನಿಷ್ಕಲದಲ್ಲಿ ನಿರ್ಣೈಸಿ**
**ಸಕಲದಲ್ಲಿ ಸ್ವಾತಂತ್ರಿಸಿ ಇಪ್ಪೆ.**
**ಆನಂದವೆಂಬ ಗತಿಯಲ್ಲಿ,**
**ಸಾನಂದವೆಂಬ ತಾಳವಿಡಿದು ಆಡಲಾಗಿ,**
**ಕೊಟ್ಟೆನೆಂಬ ಪದವ ಅವರೊಲ್ಲದಿದ್ದಡೆ**
**ನೀನೆ ಒಚ್ಚತ ಹೋಹೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ ನಿನಗಿದು ಸಹಜ.**

ಕಾಯವೆಂಬುದು ಜ್ಞಾನದ ಮಹಾವೃಕ್ಷ. ಸಿದ್ಧಾರ್ಥ ಜ್ಞಾನದೊಂದಿಗೆ ಒಂದಾಗಿ, ಸಿದ್ಧಾರ್ಥನೆಂಬ ಅಜ್ಞಾನದ ಹೆಸರನ್ನು ಕಳೆದುಕೊಂಡು, ತನಗೆ ತಾನೇ ಬುದ್ಧನೆಂದು ಕರೆದುಕೊಂಡ. ಕಾಯದ ಛಾಯೆಯಲ್ಲಿ ಆತನಿದ್ದು, ಕಾಯದ ಮೋಹಕ್ಕೆ ಬಲಿಯಾಗದೇ, ಬೋಧೀವೃಕ್ಷದಂತೆ ಬೋಧಿಸುತ್ತಾ ಸುತ್ತಾಡಿದ. ಹಾಗೆಯೇ ಸಕಲ ಕಾಯಗಳಲ್ಲಿಯೂ ಮಹಾಜ್ಞಾನದ ಕಾಯವೊಂದಿದೆ. ಸ್ಥೂಲ ಕಾಯದ ಛಾಯೆಯಲ್ಲಿ ಜ್ಞಾನ ಕಾಯವಿದೆ. ಸ್ಥೂಲ ಕಾಯವನ್ನು ಮನೋಕಾಯ ಆವರಿಸಿದೆ. ಮನೋಕಾಯ ಜ್ಞಾನಕಾಯ ಮತ್ತು ಸ್ಥೂಲಕಾಯವನ್ನು ತನ್ನ ನೆರಳಾಗಿಸಿಕೊಂಡು ಓಡಾಡುತ್ತದೆ.

ಸಕಲ ಕಾಯಗಳಿಗೂ ಜ್ಞಾನಕಾಯ ತನ್ನ ಇರುವಿಕೆಯ ಸ್ವಾತಂತ್ರ್ಯದ ವಿವರವನ್ನು ಬೋಧಿಸುತ್ತಾ ನಡೆದಾಡುವ ಬೋಧೀವೃಕ್ಷವಾಗುತ್ತದೆ. ಸಕಲರಿಗೂ ಸ್ವಾತಂತ್ರ್ಯ ಪದವಿಯನ್ನು ಕರುಣಿಸುತ್ತದೆ.

ಮಹಾದಾನಂದವನ್ನು ಅನುಭವಿಸುತ್ತಾ ಸಾನಂದವೆಂಬ ತಾಳವನ್ನಿಡಿದು ಆಡಲಾಗಿ ಕೊಟ್ಟೆನೆಂಬ ಪದವ ಅವರೊಲ್ಲದಿದ್ದಡೆ ನೀನೆ ಒಚ್ಚಿತ ಹೋಹೆ ಕಪಿಲಸಿದ್ಧ ಮಲ್ಲಿಕಾರ್ಜುನ ನಿನಗಿದು ಸಹಜ.

ಸಕಲ ಕಾಯಗಳಿಗೂ ಕಾಯವನ್ನಾವರಿಸಿದ ಮನಕ್ಕೂ, ಕಾಯದಲ್ಲಿಯೇ ಇದ್ದ ನೀನು ಮಹಾದಾನಂದದ ಸಕಲ ಪದವಿಗಳನ್ನು ನೀಡಲು ಹೋದರು ಕೂಡಾ ಅವರು ಸ್ವೀಕರಿಸದಿದ್ದರೆ ನೀನಾದರು ಏನು ಮಾಡಲು ಸಾಧ್ಯ. ನಿನ್ನ ಸಹಜಾನಂದವನ್ನು ನೀನೇ ಅನುಭವಿಸುವಿ, ಒಲ್ಲದವರನ್ನು ಒಲ್ಲದವರಿಗೆ ಕೊಟ್ಟೇತೀರುವೆ ಎಂಬ ಕರುಣೆ ನಿನ್ನಲ್ಲಿದ್ದರೂ ತೆಗೆದುಕೊಳ್ಳುವ ಛಲ ಅವರಿಗಿಲ್ಲ.

**985**

**ವೃಕ್ಷ-ಬೀಜದಂತೆ ಇಪ್ಪೆ ನೀನು ಅಯ್ಯಾ.**
**ಅಯ್ಯಾ, ನಿರಾಕಾರದೊಳಗೆ ಮೂರ್ತಿ**
**ಮೂರ್ತಿಯೊಳಗೆ ನಿರಾಕಾರ ನೀನು.**
**ಅಯ್ಯಾ , ಮೂರ್ತಿ ಮೂರ್ತಿಗಳನೆ ತೋರಿ ಆಡಿ**
**ಬಯಲಲಿಪ್ಪೆಯೈ.**
**ಎನ್ನ ಕಪಿಲಸಿದ್ಧ ಮಲ್ಲೇಶ್ವರದೇವಾ.**

ವೃಕ್ಷದೊಳಗಣ ಬೀಜದಂತೆ ಬೀಜದೊಳಗಣ ವೃಕ್ಷದಂತೆ ನೀನಿರುವೆ ದೇವನೆ. ಬೀಜದೊಳಗಿರುವ ವೃಕ್ಷ ನಿರಾಕಾರ, ವೃಕ್ಷದೊಳಗಿರುವ ಬೀಜವು ನಿರಾಕಾರ, ಹಾಗೆಯೇ ಕಾಯ ಮೂರ್ತಿಯಾಗಿ ಕಂಡರೂ ಕಾಯದೊಳಗಿರುವ ನಿರಾಕಾರ ಕಾಯನು ನೀನು.

ಕಾಯ, ಕಾಯದೊಳಗಿನ ಕಾಯವನ್ನು ಅರಿಯದಂತೆ ಕಾಯವನ್ನು ಇಟ್ಟಿರುವೆ. ಕಾಯವನ್ನು ಆವರಿಸಿದ ಮನೋಕಾಯವು ನಿನ್ನನ್ನು ತಿಳಿಯದು. ಮೂರ್ತರೂಪದ ಕಾಯ ತನ್ನೊಳಗಿರುವ ಅಮೂರ್ತರೂಪದ ಕಾಯಹೊಂದಿದ ನಿನ್ನನ್ನು ತಿಳಿಯದು.

ಕಾಯಕ್ಕೆ ಮೂರ್ತಿ ಮಾಡಲು ಪ್ರೇರಣೆಯಿತ್ತವನು ನೀನೆ. ಕಾಯದಿಂದಲೇ ಮೂರ್ತಿಗೆ ಆಲಯವನ್ನು ನಿರ್ಮಿಸಿದವನು ನೀನೆ. ಅದನ್ನು ಪೂಜಿಸಲು ಹೋದಾಗ, ಕಾಯದೊಳಗಿದ್ದ ನೀನು, ಪೂಜಿಸುವ ಕಾಯವನ್ನು ನೋಡಿ ನಗುವವನು ನೀನೆ. ನಿನ್ನನ್ನು ಮರೆಯಿಸಿ ಮೂರ್ತಿಗಳನ್ನೇ ತೋರಿ ಆಡಿ ನಲಿಯುವ ನೀನು ಬಯಲಲ್ಲಿಪ್ಪೆಯೆಯ್ಯಾ. ಕಾಯದಲ್ಲಿದ್ದು ಕಾಯಕ್ಕೆ ಕಾಣದಂತೆ, ಕಾಯ ಪೂಜಿಸುವ ದೇವರನ್ನು ಕಂಡು ನಗುವುದು ನಿನ್ನಾಟವಲ್ಲವೇ ಕಪಿಲಸಿದ್ಧ ಮಲ್ಲಿಕಾರ್ಜುನಾ.

**986**

**ವೇದಂಗಳು ದೈವವಾದಡೆ ಕುಕ್ಕರ ಕುದುರೆಗಳಾಗಲೇಕೋ?**
**ಶಾಸ್ತ್ರಂಗಳು ದೈವವಾದಡೆ ಹೊರಜು ಕಣ್ಣಿಗಳಾಗಲೇಕೋ?**
**ಆಗಮಂಗಳು ದೈವವಾದಡೆ ಕೀಲುಗಲಣಿಕೆಗಳಾಗಲೇಕೋ?**
**ಪುರಾಣಂಗಳು ದೈವವಾದಡೆ ಅಚ್ಚು ಹೊರಜೆಯಾಗಲೇಕೋ?**

**ಚಂದ್ರಸೂರ್ಯರು ದೈವವಾದಡೆ ಗಾಲಿಗಳಾಗಲೇಕೋ?**
**ಇವ ಹಿಡಿದಾಡಿ ಭಜಿಸಿ ಪೂಜೆ ಮಾಡಿದವರು ದೈವವಾದಡೆ,**
**ಪುಣ್ಯ-ಪಾಪಕ್ಕೀಡಾಗಲೇಕೋ?**
**ಇದು ಕಾರಣ, ವೇದಂಗಳು ದೈವವಲ್ಲ, ಶಾಸ್ತ್ರಂಗಳು ದೈವವಲ್ಲ,**
**ಆಗಮಂಗಳು ದೈವವಲ್ಲ, ಪುರಾಣಂಗಳು ದೈವವಲ್ಲ,**
**ಚಂದ್ರ ಸೂರ್ಯರು ದೈವವಲ್ಲ, ಆತ್ಮನು ದೈವವಲ್ಲ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ನೀನೊಬ್ಬನೇ ದೈವ.**

ವೇದ, ಶಾಸ್ತ್ರ, ಆಗಮ ಪುರಾಣಗಳು, ಭಗವದ್ಗೀತೆ, ಮಹಾಭಾರತ, ರಾಮಾಯಣ, ಭಾಗವತ, ಬೈಬಲ್, ಖುರಾನ್, ಗ್ರಂಥ ಸಾಹೇಬ, ತ್ರಿಪಿಟಿಕ ಈ ಎಲ್ಲಾ ಗ್ರಂಥಗಳು ಕಾಯದಿಂದಲೇ ಹೊರ ಬಂದಿವೆ. ಕಾಯದಿಂದ ಹೊರಬಂದ ಅಮೃತ ಕಾಯಕ್ಕೆ ಏನಾದರೂ ಬೋಧಿಸಲು ಸಾಧ್ಯವೆ?

ಕೃಷ್ಣ, ಕ್ರಿಸ್ತ, ಪೈಗಂಬರರು ರಚಿಸಿರಬಹುದು. ಬಸವಾದಿ ಶರಣರು ದಾಸವರೇಣ್ಯರು ರಚಿಸಿರಬಹುದು. ಅವರೆಲ್ಲಾ ಕಾಯಉಳ್ಳವರಲ್ಲವೇ? ಕಾಯದಿಂದಲೇ ಅರಿವಿನ ಅಮೃತ, ಪುಸ್ತಕ ರೂಪದಲ್ಲಿ ಹೊರಬಂದಿದೆ. ಇಂತಹ ಪುಸ್ತಕಗಳು ಪುಸ್ತಕಗಳನ್ನೇ ಹೊರತಂದ ಕಾಯಕ್ಕೆ ಏನಾದರೂ ಹೇಳಲು ಸಾಧ್ಯವೆ?

ಕಾಯದಲ್ಲಿಯ ಅಮೃತವನ್ನು ಕಾಯಕ್ಕೆ ಬೆಟ್ಟು ಮಾಡಿ ಕಾಯದಲ್ಲಿಯೇ ಅಮೃತವಿದೆಯೆಂದು ತೋರಿಸುತ್ತದೆಯೇ ಹೊರತು ಮತ್ತೇನು ಅಲ್ಲ. ಪುಸ್ತಕಗಳು ಕಾಯದಿಂದಲೇ ಹೊರಬಂದ ಎಂಜಲು. ಕಾಯ ಮಿಗೆಮಿಗೆ ಮೀಸಲು.

''ತನ್ನ ತಾನರಿಯದೇ ಸತ್ತವರ ಪತ್ರ ಓದಿದಡೆ ಎತ್ತಣ ಮುಕ್ತಿ ಗುಹೇಶ್ವರಾ'' ಎಂದು ಪ್ರಭುದೇವರು ತಮ್ಮ ಒಂದು ವಚನದ ಸೂತ್ರದ ಮೂಲಕ ಹೇಳಿದ್ದಾರೆ.

ಹಲವಾರು ಅರಿವಿನ ಗ್ರಂಥಗಳನ್ನು ಬರೆದಿಟ್ಟ ಮಹಾನುಭಾವರು ಸತ್ತು ಹೋಗಿದ್ದಾರೆ. ಪುಸ್ತಕಗಳು ಸತ್ತು ಹೋದವರ ಪತ್ರಗಳು. ಕಾಯದಿಂದಲೇ ಹೊರಬಂದ ಪತ್ರಗಳು, ಅವು ಕಾಯಕ್ಕೆ ಏನಾದರೂ ಹೇಳಬಲ್ಲವೇ?

ವೇದ, ಶಾಸ್ತ್ರ, ಆಗಮ, ಪುರಾಣಗಳನ್ನು ಹಿಡಿದಾಡಿ ಭಜಿಸಿ ಪೂಜೆ ಮಾಡಿದವರು ದೈವವಾದಡೆ ಪುಣ್ಯ ಪಾಪಕ್ಕೆ ಈಡಾಗಲೇಕೋ? ಎಂದು ಸಿದ್ಧರಾಮ ಶಿವಯೋಗಿಗಳು ಪ್ರಶ್ನಿಸಿದ್ದಾರೆ. ಮುಂದುವರಿದು ಖಚಿತವಾಗಿ ಹೇಳಿದ್ದಾರೆ.

ವೇದಂಗಳು ದೈವವಲ್ಲ, ವರಣಂಗಳು ದೈವವಲ್ಲ, ಶಾಸ್ತ್ರಂಗಳು ದೈವವಲ್ಲ, ಆಗಮಂಗಳು ದೈವವಲ್ಲ, ಚಂದ್ರ ಸೂರ್ಯರು ದೈವವಲ್ಲ, ಆತ್ಮನು ದೈವವಲ್ಲ ಕಪಿಲಸಿದ್ಧ ಮಲ್ಲಿಕಾರ್ಜುನಾ ನೀನೊಬ್ಬನೇ ದೈವ.

**987**

**ವೇದ ನಾಲ್ಕರ ಮೇಲೆ ಆದ ಪಂಚಮವಾಕ್ಯ**
**ಆದ ಷಷ್ಠಮ ಬ್ರಹ್ಮವನು ಜಪಿಸುವ**
**ಆಮೋದವನು ಮೀರಿ ಹೋಯಿತ್ತೈ ಕೈವಲ್ಯದಾದಿಪದ ತಾನೆ ನಿತ್ಯ.**

**ನಿತ್ಯ ಅನಾದಿ ಸಂಸಿದ್ಧ ಯೋಗಮೂರ್ತಿ ಗುರುಸ್ವಾಮಿ**
**ಮೂದೇವರಿಗೆ ದೀಕ್ಷೆಮಾಡಲೆಂದು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ವೇದ ನಾಲ್ಕರ ಮೇಲೆ ಆದ ಪಂಚಮ ವಾಕ್ಯ. ಆದ ಷಷ್ಠಮ ಬ್ರಹ್ಮವನು ಜಪಿಸುವ ಆಮೋದವನ್ನು ಮೀರಿ ಹೋಯಿತ್ತೈ ಕೈವಲ್ಯದ ಆದಿಪದ ತಾನೇ ನಿತ್ಯ.

ನಮಃ ಶಿವಾಯ ಎಂಬ ಐದಕ್ಷರಗಳು ತಾನೇ. ಓಂ ನಮಃ ಶಿವಾಯ ಎಂಬ ಆರಕ್ಕಕರಗಳುಳ್ಳ ಮಂತ್ರವು ತಾನೇ. ಎಲ್ಲಿ ನೋಡಿದರೂ ಕಾಯ ಆರಕ್ಷರಗಳುಳ್ಳ ಮಂತ್ರವೇ ತಾನಾಗಿದೆ. ಮಂತ್ರ ತಾನೇ ಎಂದು ತನ್ನನ್ನು ತಾನು ತಿಳಿದುಕೊಳ್ಳಲು ತನಗೆ ಸಾಧ್ಯವಾಗದ ನಿಮಿತ್ಯ ಹಿಂದೂ, ಮುಸ್ಲಿಂ, ಫಾರ್ಸಿ, ಜೈನ, ಬೌದ್ಧ, ಹೆಣ್ಣು, ಗಂಡು ಎಂದು ತನಗೆ ತಾನೇ ಬೇಧಿಸಿಕೊಂಡು ಅಜ್ಞಾನದ ಸುಖದಲ್ಲಿ ತನ್ನನ್ನು ತಾನೇ ಮರೆತು ಹೋಗಿದೆ.

ಜಲಬಿಂದುವೇ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿದೆ. ಅವು ಸೋರದಂತೆ ಸುಂದರವಾದ ಚರ್ಮವನ್ನು ಹೊಲಿದುಕೊಂಡು ಷಡಕ್ಷರ ಮಂತ್ರಮಯವಾದ ಕೈವಲ್ಯ ಪದವನ್ನು ಹೊಂದಿದೆ. ಕಾಯವನ್ನು ಆವರಿಸಿದ ಮನದಿಂದಾಗಿ ಮಂತ್ರಮಯ ಕಾಯವನ್ನು ಮೀರಿ ಹೋಗಿದೆ.

ಸ್ಥೂಲಕಾಯ, ಸೂಕ್ಷ್ಮಕಾಯ, ಕಾರಣ ಕಾಯದಲ್ಲಿದ್ದ ಮೂದೇವರಿಗೆ ದೀಕ್ಷೆ ಮಾಡಲೆಂದು ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಗುರುಸ್ವಾಮಿ ಯೋಗ ಮೂರ್ತಿಯಾಗಿ ಕಾಯದಲ್ಲಿಯೇ ಅವತರಿಸಿದ್ದಾನೆ.

**988**

**ವೇದ ಪಾಠಕರೆಲ್ಲಾ ಕೇಳಿಭೋ!**
**ವೇದ ಸ್ವಯಂಭು ಎನಲೊಡನೆ ಅಯ್ಯಾ**
**ಎನ್ನ ಎದೆ ಝುಲ್ಲೆಂದವಯ್ಯ.**
**ಎಲೆ ಅಜ್ಞಾನಿ ಕೇಳು,**
**ಕಪಿಲಸಿದ್ಧ ಮಲ್ಲಿಕಾರ್ಜುನ ಒಬ್ಬನೆ ಸ್ವಯಂಭು.**

ವೇದವನ್ನು ಅಧ್ಯಯನ ಮಾಡುವ ಪಾಠಕರೆಲ್ಲರೂ ವೇದಗಳ ಮೇಲಿನ ಅಭಿಮಾನದಿಂದಾಗಿ ವೇದ ಸ್ವಯಂಭು ಎಂದು ಹೇಳುತ್ತಾರೆ. ಈ ಮಾತನ್ನು ಕೇಳಿದ ಸಿದ್ಧರಾಮ ಶಿವಯೋಗಿಗಳು ಎನ್ನ ಎದೆ ಝುಲ್ಲೆಂದವಯ್ಯ ಎಂದಿದ್ದಾರೆ. ವೇದ ಸ್ವಯಂಭು ಎಂದು ಹೇಳಿದ ಅಜ್ಞಾನಿಗಳೇ ಕೇಳಿ ಕಪಿಲಸಿದ್ಧ ಮಲ್ಲಿಕಾರ್ಜುನ ಒಬ್ಬನೇ ಸ್ವಯಂಭು.

ಬಯಲು ದೇವನು ಮಾತ್ರ ಸ್ವಯಂಭು. ಅವನು ಯಾರಿಗೂ ಹುಟ್ಟಲಿಲ್ಲ. ಯಾವ ಭೂತಗಳು ಅವನನ್ನು ಸೃಷ್ಟಿಮಾಡಲಿಲ್ಲ. ಬಯಲು ಆಮ್ಲಜನಕವನ್ನು ಸೃಷ್ಟಿ ಮಾಡಿ, ಜಲಜನಕವನ್ನು ಸೃಷ್ಟಿಮಾಡಿ ಅವೆರಡನ್ನು ಒಂದು ಮಾಡಿ ಒಳಹೊರಗೆನ್ನದಂತೆ ತಾನೂ ಅದರಲ್ಲಿ ಬೆರೆತು ಜಲವನ್ನು ಸೃಷ್ಟಿಮಾಡಿತು. ಜಲ ಒಂದು ಭೂತವಾಯಿತು.

ಬಯಲುದೇವ ಜಲವನ್ನು ಗಟ್ಟಿಗೊಳಿಸಿ ಭೂಮಿಯನ್ನಾಗಿಸಿದ. ಆಗ ಭೂಮಿ ಒಂದು ಭೂತವಾಯಿತು. ಜಲದಲ್ಲಿಯ ಜಲಜನಕವನ್ನು ಅಗ್ನಿಯನ್ನಾಗಿಸಿ ಅಗ್ನಿಯನ್ನು ಒಂದು ಭೂತವನ್ನಾಗಿಸಿದ. ಆಗ ಅಗ್ನಿ ಒಂದು ಭೂತವಾಯಿತು. ಜಲದಲ್ಲಿಯ ಆಮ್ಲಜನಕವನ್ನು

ಗಾಳಿಯನ್ನಾಗಿಸಿದ, ಆಗ ಗಾಳಿ ಒಂದು ಭೂತವಾಯಿತು. ಹೀಗೆ ಯಾರಿಗೂ ಹುಟ್ಟದ ಸ್ವಯಂಭು ಬಯಲುದೇವ ತಾನು ಭೂತನಾಥನಾಗಿ ನಾಲ್ಕು ಭೂತಗಳನ್ನು ಸೃಷ್ಟಿಮಾಡಿದ!

ಭೂಮಿಯ ಮೇಲೆ ಹರಿದ ಜೀವಜಲದಿಂದ ಜಲಚರಗಳು ಸಸ್ಯ, ಪ್ರಾಣಿ, ಪಶು, ಪಕ್ಷಿಗಳು ಕೀಟಗಳನ್ನು ಸೃಷ್ಟಿಮಾಡಿದ. ಇಡೀ ಬ್ರಹ್ಮಾಂಡಕ್ಕೆ ಜನ್ಮ ನೀಡಿದ ಸ್ವಯಂಭು ಆತ.

ತಾನು ಸೃಷ್ಟಿಮಾಡಿದ ಬ್ರಹ್ಮಾಂಡವನ್ನು ಸಹಜಾನಂದದಿಂದ ನೋಡಬೇಕೆಂಬ ಬಯಕೆಯಿಂದ ಕಾಯವನ್ನು ಸೃಷ್ಟಿಮಾಡಿದ. ತಾನು ಸೃಷ್ಟಿಮಾಡಿದ ಕಾಯದೊಳಗೆ ಕಾಯಕ್ಕೆ ತಾಗದಂತೆ ಅಕಾಯುವಾಗಿ ಕಾಯದಲ್ಲಿಯೇ ಉಳಿದ. ಆ ಅಕಾಯದ ಬೆಳಕಿನಿಂದ ಮನೋಮಯವಾದ ಮಾಯಾಮಯವಾದ ಕಾಯವೊಂದು ಕಾಯದಲ್ಲಿಯೇ ಸೃಷ್ಟಿಸಿದ.

ತಾನಿದ್ದ ಕಾಯಕ್ಕೂ ಕಾಯವನ್ನು ಆವರಿಸಿದ ಮನೋಕಾಯಕ್ಕು ತನ್ನನ್ನು ತಿಳಿಯದಂತೆ ಮಾಡಿದ. ತಾನು ನಾನಿದ್ದೇನೆಂದು ತಿಳಿ ಹೇಳಿದರು ತಿಳಿಯದಂತೆ ಮಾಡಿ, ಕಾಯದಿಂದಲೇ ತನ್ನನ್ನು ಕಲ್ಲಲ್ಲಿ ಕೆತ್ತಿ, ಅದನ್ನೇ ದೇವರೆಂದು ಕಾಯಕ್ಕೆ ಆರಾಧಿಸುವಂತೆ ಆದೇಶ ನೀಡಿದ. ತಾನಿದ್ದ ಕಾಯವೇ ಕೈಲಾಸವೆಂದು ಮನೋಮಯವಾದ ಕಾಯಕ್ಕೆ ತಿಳಿಯದಾಯಿತು.

ಕಾಯದಲ್ಲಿಯೇ ಸಂಗಮವಾದ ತನ್ನನ್ನು, ಕಾಯವನ್ನು ಆವರಿಸಿದ ಮನ ತಿಳಿದು, ಭಕ್ತನಾಗಿ ತನ್ನನ್ನು ಆರಾಧಿಸಿದ ಮನವನ್ನು ಘನಮನವನ್ನಾಗಿ ಮಾಡಿದ. ತನ್ನ ನಿಜಸ್ವರೂಪವನ್ನು ಮನಕ್ಕೆ ತೋರಿ ವ್ಯೋಮಕಾಯನಾದ. ಮನವನ್ನು ತನ್ನಂತೆ ಮಾಡಿಕೊಂಡು ತಾನೇ ಸೃಷ್ಟಿಮಾಡಿದ ಇಡೀ ಬ್ರಹ್ಮಾಂಡವನ್ನು ತಾನೇ ಸಹಜಾನಂದದಿಂದ ನೋಡುತ್ತ ಸ್ವಯಂಭುವೇ ತಾನಾದ. ಸಕಲ ಕಾಯಗಳನ್ನು ತನ್ನಂತೆ ಮಾಡಿಕೊಳ್ಳಬೇಕೆಂದು ತಾನೇ ಬುದ್ಧನಾದ, ಮಹಾವೀರನಾದ, ಕ್ರಿಸ್ತನಾದ, ಕೃಷ್ಣನಾದ, ಪೈಗಂಬರನಾದ, ಬಸವಾದಿ ಶರಣರಾಗಿ ದಾಸವರೇಣ್ಯರಾಗಿ ಅವತರಿಸಿದ. ಸಕಲ ಕಾಯಗಳನ್ನು ತನ್ನಂತೆಯೇ ಮಾಡಿಕೊಳ್ಳಲು ವೇದ ಆಗಮ ಉಪನಿಷತ್ತುಗಳನ್ನು ಶಾಸ್ತ್ರ ಪುರಾಣಗಳನ್ನು ಭಾಗವತ ಭಗವದ್ಗೀತೆಗಳನ್ನು ಬೈಬಲ್ ಖುರಾನ್‌ಗಳನ್ನು ತ್ರಿಪಿಟಿಕ ಗ್ರಂಥ ಸಾಹೇಬ ಮುಂತಾದ ಗ್ರಂಥಗಳನ್ನು ರಚಿಸಿದ.

ಅವುಗಳನ್ನು ಓದಿದ ಕಾಯಗಳು ಬರೆದವರಂತಾಗಲಿಲ್ಲ. ಬರೆದವರೇ ಶ್ರೇಷ್ಠರೆಂದು, ಬರೆದ ಗ್ರಂಥಗಳೇ ಶ್ರೇಷ್ಠರೆಂದು ಆರಾಧಿಸಿದರು. ವೇದಗಳೆ ಸ್ವಯಂಭು ಎಂದು ವೇದಗಳನ್ನು ಮೆರವಣಿಗೆ ಮಾಡಿದರೆ ಯಾರಾದರು ಏನೂ ಮಾಡಿಯಾರು?

ಜ್ಞಾನಿಗಳನ್ನು ಕಲ್ಲಲ್ಲಿ ಕೆತ್ತಿ ಅವರೇ ದೇವರೆಂದು ಅವರು ಬರೆದ ಗ್ರಂಥಗಳೇ ಶ್ರೇಷ್ಠವೆಂದು ಆರಾಧಿಸಿದರೆ ಯಾರಾದರು ಏನು ಮಾಡಿಯಾರು. ಬುದ್ಧನಂತಾಗದೇ ಬುದ್ಧನನ್ನು ಆರಾಧಿಸಿ ಬೌದ್ಧರಾದರು. ಕೃಷ್ಣನನ್ನು ಆರಾಧಿಸಿ ಹಿಂದೂ ಆದರು. ಪೈಗಂಬರನನ್ನು ಆರಾಧಿಸಿ ಮುಸಲ್ಮಾನ ಆದರು, ಕ್ರಿಸ್ತನನ್ನು ಆರಾಧಿಸಿ ಕ್ರಿಶ್ಚಿಯನ್ನರಾದರು ಅವರಂತೆ ಸ್ವಯಂಭು ಆಗಲಿಲ್ಲ, ಪ್ರತಿ ಕಾಯದಲ್ಲಿ ಯಾರಿಗೂ ಹುಟ್ಟದ ಸ್ವಯಂಭು ಇದ್ದಾನೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಸ್ವಯಂಭುವಿನ ಸಂಗದಲ್ಲಿ ಸಂಗಿಗನಾಗಬೇಕು.

**989**

**ವೇದ ಹದಿನಾರುಸಾವಿರಂಗಳು ನಿನ್ನನರಸಿಯೊದರಿ**
**ಕಾಣದೆ ಹೋದವು.**

**ನಿನ್ನಾಧಿಕ್ಯವ ಬಲ್ಲವರಾರಯ್ಯ ನಿನ್ನವರಲ್ಲದೆ ?**
**ಉರುತರ ಪರಮಜ್ಞಾನಿ ಘನತರದ ಸಂಯೋಗಿ**
**ನಿನ್ನ ಪ್ರಮಾಣವನರಿಯಲ್ಕೆ ಆರ ವಶವು ಹೇಳಾ.**
**ಸೀಮೆಯ ಮೀರಿದ ಸಂಬಂಧಿ, ಲೆಕ್ಕವ ಮೀರಿದ ಅಪ್ರಮಾಣ,**
**ಗುರುವಿನ ಕರುಣದಿಂದ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದೆ,**
**ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವೆ.**

ಹದಿನಾರು ಸಾವಿರ ವೇದಂಗಳು ನಿನ್ನಿಂದಲೇ ಬಂದು ನಿನ್ನನ್ನು ಹುಡುಕುತ್ತಾ, ಹುಡುಕುತ್ತಾ, ಒದರಿ ಒದರಿ ನಿನ್ನನ್ನು ಕಾಣದೇ ಹೋದವು. ಈ ಬ್ರಹ್ಮಾಂಡದೊಳಗೆ ನಿನ್ನ ಹಿರಿತನವ ಬಲ್ಲವರು ಯಾರಯ್ಯ? ನೀನು ಅಗಮ್ಯನು. ಅಪ್ರಮಾಣನು. ಅಪ್ರತಿಮನು. ಜಗದಗಲ ಮುಗಿಲಗಲ ವ್ಯಾಪಿಸಿಕೊಂಡವನು. ನಿನ್ನ ಪಾದ ಪಾತಾಳದಿಂದಲೂ ಅತ್ತತ್ತ, ನಿನ್ನ ಶ್ರೀಮುಕುಟ ಬ್ರಹ್ಮಾಂಡದಿಂದಲೂ ಅತ್ತತ್ತ. ಇಂತಹ ನಿನ್ನನ್ನು ನಿನ್ನವರಲ್ಲದೇ ಅನ್ಯರು ತಿಳಿಯಲು ಸಾಧ್ಯವೆ?

ನೀನು ನನ್ನಲ್ಲಿಯೇ ಬಚ್ಚಿಟ್ಟುಕೊಂಡ ಪರಮಜ್ಞಾನಿ. ಘನತರದ ಸಂಯೋಗಿ. ನೀನು ಹೀಗೆ ಎಂದು ಪ್ರಮಾಣಿಸಲು ಬಾರದಾತ. ಅಂತಹ ನೀನು ಯಾರ ವಶವಾದರು ಆಗಲು ಸಾಧ್ಯವೇ ಹೇಳಾ?

ಸೀಮೆಯ ಮೀರಿದ ನಿಸ್ಸೀಮ ಸಂಬಂಧಿ ನೀನು. ಲೆಕ್ಕವ ಮೀರಿದ ಅಪ್ರಮಾಣನು, ಶ್ರೀಗುರುದೇವನು ನೀನು. ನಿನ್ನನ್ನು ಕಂಡ ಗುರುದೇವನ ಕರುಣದಿಂದಾಗಿ ನೀನು ಎನ್ನ ತನುವಿನಲ್ಲಿ ಬಂದು ಚುಳುಕಾದೆ. ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವೇ.

**990**

**ವೇದ್ಯ ಸಾಧಿಸುವಲ್ಲಿ ನಾದಬ್ರಹ್ಮದ ಮುಂದೆ**
**ಆದಿಯಾದಕ್ಷರದ ಆಮೋದದಾ**
**ನಾದ ಬಿಂದು ಕಳೆಯ ಭೇದಕ್ಕೆ ಅವ ದೂರ ಮುಕ್ಯಾಧಾರ**
**ಕಪಿಲಸಿದ್ಧ ಮಲ್ಲಿಕಾರ್ಜುನನು.**

ಅಕ್ಷರಗಳ ಮೂಲಕ ವೇದವನು ಓದಿ ನಾದ ಬ್ರಹ್ಮನನು ಅರಿಯಬಹುದು. ಅಂಗದಲ್ಲಿಯೇ ಸಂಗಮವಾದ ಶ್ರೀಗುರುದೇವನು ನಾದ ಬಿಂದು ಕಳೆಯ ಬೇಧಕ್ಕೆ ಆತ ಬಹುದೂರ. ನಾದ ಮಾಡಿದ ರಾವಣನ ತಲೆ ಉರುಳಿ ಬಿದ್ದವು. ಆತನಿಗೆ ಅರೆ ಆಯುಷ್ಯವಾಯಿತು. ವೇದವನು ಓದಿದ ಬ್ರಹ್ಮನ ತಲೆ ಕೂಡ ಉದುರಿ ಬಿತ್ತು . ಶ್ರೀಗುರುದೇವನ ಸಾಕ್ಷಾತ್ಕಾರ ಆಗಲಿಲ್ಲ, ಶ್ರೀಗುರುದೇವ ನಾದ, ಬಿಂದು, ಕಳೆಗೆ ಅತೀಥನಾದವನು. ಸಾಕ್ಷಾತ್ ಈಶ್ವರನು. ಪರಮೇಶ್ವರನು. ಆತ ಕಪಿಲಸಿದ್ಧ ಮಲ್ಲಿಕಾರ್ಜುನನು. ಅಂಗದಲ್ಲಿ ಸಂಗಮವಾದ ಭಗವಂತನನ್ನು ಅರಿಯಲು ಅಂಗವನ್ನು ಆವರಿಸಿದ ಮನ ಆ ಭಗವಂತನಿಗೆ ಭಕ್ತನಾಗಿ ಪ್ರಾರ್ಥಿಸಲೇಬೇಕು. ಭಕ್ತನ ಪ್ರಾರ್ಥನೆಗೆ ಮಾತ್ರ ಓಗೊಡುವಾತ.

**991**

**ವ್ಯಾಘ್ರದಿಂ ದಿವರಾತ್ರಿಗಳಲ್ಲಿಯು ಕಾಣಬಹಾಂಗೆ**
**ಭೇರುಂಡನಾ ಭೂಮಿ ಆಕಾಶಂಗಳೆರಡರಲ್ಲಿಯೂ ಚರಿಸುವ ಹಾಂಗೆ.**

**ಶಿವಯೋಗಿಯಾ ಪ್ರಪಂಚ ಪರಮಾರ್ಥಂಗಳೆರಡಲ್ಲಿಯೂ**
**ಕಂಡು ಆಚರಿಸುವನೆಂಬುದು ತೋರಲ್ಪಡುತ್ತಿಹುದು.**
**ಶಿವಾಚಾರ ಸಂಪನ್ನರಾಗಿ ಶಿವಯೋಗದ ಹೊಲಬನರಿದವರು**
**ಲೌಕಿಕದತ್ತಲೂ ಚರಿಸುವರು, ಪರಮಾರ್ಥದತ್ತಲ್ಲೂ ಚರಿಸುವರು**
**ಕಪಿಲಸಿದ್ಧ ಮಲ್ಲಿನಾಥನೆಂಬ ಮಹಾಬಯಲು ಕೂಡಿರ್ಪರು.**

ಹುಲಿಗೆ ದಿನ ಯಾವುದೋ, ರಾತ್ರಿ ಯಾವುದೋ. ತನಗೆ ಬೇಕಾದ ಬೇಟೆಯನ್ನು ಹಿಡಿಯಲು ಅದಕ್ಕೆ ದಿನವಾದರು ಅಷ್ಟೇ, ರಾತ್ರಿಯಾದರೂ ಅಷ್ಟೇ. ಅದೇ ಸಮರ್ಥ. ಹಾಗೆ ಎರಡು ಮುಖಗಳುಳ್ಳ ಬೇರುಂಡ ಪಕ್ಷಿ, ಭೂಮಿ ಆಕಾಶಗಳೆರಡಲ್ಲಿಯೂ ಚರಿಸಬಹುದು. ಹಾಗೆಯೇ ಶಿವಯೋಗಿಗೂ ಕೂಡಾ ಎರಡು ಮುಖಗಳು. ಪ್ರಪಂಚದಲ್ಲಿಯೂ ಕೂಡಾ ಸಮರ್ಥನಾಗಿ ತನ್ನ ಸಂಸಾರವನ್ನು ನಡೆಸುತ್ತಾನೆ. ಪಾರಮಾರ್ಥದಲ್ಲಿಯೂ ಕೂಡ ತನ್ನನ್ನು ತಾನು ಅರಿತು, ಅರಿತ ಆ ಅರಿವಿನಲ್ಲಿ ಪರಮಸುಖವನ್ನು ಪಡೆಯುತ್ತಾನೆ.

ಹುಲಿ ಹಾಗೂ ಬೇರುಂಡದ ಹಾಗೆ ಇರುವಂತಹ, ಶಿವಾಚಾರ ಸಂಪನ್ನನು ಶಿವಯೋಗದ ಹೊಲಬನರಿತು ಲೌಕಿಕದಲ್ಲಿಯೂ ಇರುತ್ತಾನೆ. ಪಾರಮಾರ್ಥದಲ್ಲಿಯೂ ಇರುತ್ತಾನೆ. ಕಪಿಲಸಿದ್ಧ ಮಲ್ಲಿನಾಥನೆಂಬ ಮಹಾಬಯಲು ಕೂಡಿ ಬಯಲೇ ಆದಾತ ಎಲ್ಲಿದ್ದರೇನು? ಆತ ಬಯಲು, ಆತನ ಜೀವನವು ಬಯಲು. ಆತನ ಭಾವನೆಗಳು ಕೂಡಾ ಬಯಲು. ಬಯಲನ್ನು ಪೂಜಿಸಿ ಬಯಲೇ ಆದಾತ ಶಿವಯೋಗಿ.

**992**

**ಶಮೆದಮೆಶಾಂತಿಯ ನಡುವೆ**
**ಜ್ಞಾನಾಗ್ನಿಯೊಡನೊಡನೆ ಬೆಳಗುತಿಪ್ಪುದಗ್ನಿ ತಾ.**
**ನುಡಿಯ ಬ್ರಹ್ಮದವರಿಗೆ ಬಿಡದೆ ಸುಟ್ಟಿತ್ತು ಅಗ್ನಿ,**
**ಮೃಡಕರುಣವುಳ್ಳವರಿಗೆ ಶಾಂತವಾಗಿ,**
**ಎನ್ನೊಡೆಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ**
**ಒಡಗೂಡಿದಾತಂಗೆ ಶಾಂತವಾಗಿ.**

ಕಾಯದಲ್ಲಿಕ್ಷಮೆ, ಧಮೆ, ಶಾಂತಿಯೋಪಾದಿಯಲ್ಲಿ ಜ್ಞಾನಾಗ್ನಿ ಕಾಯ ಸೋಂಕದೆ ಕಾಯಕ್ಕೆ ಆಧಾರವಾಗಿ ಕಾಯವನ್ನು ಸುಡದೇ ಬೆಳಗಿಂಗೆ ಬೆಳಗಾಗಿ ಬೆಳಗುತ್ತಿರುವುದು. ಬ್ರಹ್ಮ ನುಡಿ ನುಡಿಯುವ ನುಡಿಯ ಭ್ರಮೆವುಳ್ಳವರಿಗೆ ಬಿಡದೆ ಸುಟ್ಟಿತ್ತು ಅಗ್ನಿ.

ಕಾಯವನ್ನು ಆವರಿಸಿದ ಮನೋಕಾಯ, ಕಾಯದೊಳಗೆ ಸಂಗಮವಾದ ಕಾಯವನ್ನು ಬೆಳಗುತ್ತಿರುವ ಜ್ಞಾನಕಾಯಕ್ಕೆ ಭಕ್ತನಾಗಿ, ಶರಣು ಹೋಗಿ ಶರಣಾಗತನಾದೊಡೆ, ಜ್ಞಾನಾಗ್ನಿ ಶಾಂತವಾಗಿ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ. ಶರಣು ಹೋದ ಭಕ್ತನಿಗೆ ಒಡೆಯ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ. ಒಡೆಯ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿ ಒಡಗೂಡಿದಾತ ಶಾಂತನಾಗಿ ಪರಮ ಶಾಂತಿಯ ಸುಖವನ್ನು ಅನುಭವಿಸುತ್ತಾನೆ.

**993**

**ಶರಣನಾದಡೆ ಸತಿಯ ಗೊಡ್ಡಾಟವೇಕಯ್ಯಾ ?**

**ಇಂದ್ರಿಯಂಗಳು ಹರಿಯಲೇಕೆ?**
**ತಾನೆ ಸತಿ ಲಿಂಗವೆ ಪತಿಯಾದ ಬಳಿಕ.**
**ಸರ್ವ ಸಂಯೋಗಕ್ಕೆ ಲಿಂಗವೆ ಪತಿ, ತಾನೆ ಸತಿಯಾದಾತ**
**ಅನ್ಯ ಸತಿಯರಿಗೆರಗ; ಕರಣಂಗಳ ಹರಿಯಲೀಯ;**
**ಕಾರ್ಪಣ್ಯಕ್ಕೊದಗ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಒಡಗೂಡಿದ ಶರಣ.**

ಶರಣನಾದಡೆ ಸತಿಯ ಗೊಡ್ಡಾಟವೇಕಯ್ಯ. ಇಂದ್ರಿಯಂಗಳು ಹರಿಯಲೇಕೆ?: ಅಂಗವನ್ನುಆವರಿಸಿದ ಮನವೇ ಸತಿಯಾಗಿ, ಅಂಗದಲ್ಲಿಯ ಸಂಗಮವಾದ ಮಹಾಪುರುಷನೇ ಪತಿಯಾಗಿ, ಸತಿ-ಪತಿಗಳು ಒಂದಾದ ಬಳಿಕ ಇಂದ್ರಿಯಂಗಳ ಗೊಡ್ಡಾಟ ತನಗೆ ತಾನೇ ನಿಲ್ಲುತ್ತದೆ.

ಮನವೆಂಬ ಸತಿ, ಅರಿವೆಂಬ ಲಿಂಗಪತಿಗೆ ಶರಣುಹೋಗಿ ಶರಣಾಗತಳಾಗಿ ಶರಣ ಸತಿಯಾದ ಬಳಿಕ ಆ ಸತಿಗೆ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನೇ ಪತಿಯಾಗುತ್ತಾನೆ. ಆಗ ಸತಿ ಅನ್ಯಸತಿಯರಿಗೆ ಎರಗಳು. ಕರಣಂಗಳ ಹರಿಯಲೀಯಳು. ಕಷ್ಟಕಾರ್ಪಣ್ಯಕ್ಕೆ ಈಡಾಗಳು.

ಅಂಗ ಅರಿವಿನ ಲಿಂಗಯ್ಯನೆಂಬ ಪತಿ ಇದ್ದ ಪುಣ್ಯಕ್ಷೇತ್ರ. ಅಂಗವನ್ನು ಆವರಿಸಿದ ಮನವೇ ಆ ಲಿಂಗಯ್ಯನಿಗೆ ಸತಿಯಾದಾಗ, ಲಿಂಗ ಪತಿ-ಶರಣಸತಿ ಎನ್ನಿಸಿಕೊಳ್ಳುತ್ತದೆ. ಆ ಅಂಗ ಅದೊಂದು ನಡೆದಾಡುವ ಜ್ಞಾನದ ಮರವಾಗುತ್ತದೆ. ಸತಿ-ಪತಿಗಳಿದ್ದ ಪುಣ್ಯಕ್ಷೇತ್ರವು ಆಗುತ್ತದೆ. ಅಂಗ ಹೆಣ್ಣು ಅಲ್ಲಗಂಡೂ ಅಲ್ಲ. ಸತಿ-ಪತಿಗಳು ಸಂಗಮವಾದ ಅರಿವಿನ ಮನೆ. ಆಗ ಗಂಡೂ ಎಂಬ ಅಜ್ಞಾನವೂ ಇಲ್ಲ, ಹೆಣ್ಣು ಎನ್ನುವ ಗೊಡ್ಡಾಟವು ಇಲ್ಲ, ಇಂದ್ರಿಯಂಗಳ ಹರಿದಾಟವು ತನಗೆ ತಾನೇ ಉದುರಿಬೀಳುತ್ತದೆ.

**994**

**ಶರಣಾರ್ಥಿ ಶರಣಾರ್ಥಿ ಬಸವ ಬಸವಾ ಗುರುವೆ,**
**ಗುರುವೆ ಬಸವ ಬಸವ ಬಸವಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ,**
**ನನ್ನಂಗ ನಿನ್ನಂಗ ಬಸವಣ್ಣಂಗರ್ಪಿತವಯ್ಯಾ.**

ಸಿದ್ಧರಾಮ ಶಿವಯೋಗಿಗಳು ಅಂಗದಲ್ಲಿಯೇ ಸಂಗಮವಾದ ಶ್ರೀಗುರುದೇವನ ಅಂಗಕ್ಕೆ ಬಸವಾ ಎಂದು ಹೆಸರಿಟ್ಟು ಕರೆದು ಶರಣಾರ್ಥಿ ಶರಣಾರ್ಥಿ ಬಸವ ಬಸವಾ ಗುರುವೆ, ಗುರುವೆ ಬಸವ ಬಸವ ಬಸವಾ ಎಂದು ಸ್ಮರಿಸಿದ್ದಾರೆ.

ಕಪಿಲಸಿದ್ಧ ಮಲ್ಲಿನಾಥಯ್ಯ ನನ್ನಂಗ ನಿನ್ನಂಗ ಬಸವಣ್ಣಂಗರ್ಪಿತವಯ್ಯಾ :

ಅಂಗದಲ್ಲಿನನ್ನದು ಒಂದು ಅಂಗವಿದೆ. ಸ್ಥೂಲಾಂಗವೆಂಬ ನಿನ್ನದು ಒಂದು ಅಂಗವಿದೆ. ನನ್ನಂಗವೇ ಮನೋಮಯವಾದ ಅಂಗ. ನಿನ್ನಂಗವೇ ಸ್ಥೂಲ ಅಂಗ. ಇವೆರಡು ಅಂಗಗಳಿಗೆ ಜನ್ಮಕೊಟ್ಟ ಶ್ರೀ ಗುರುದೇವನ ಅಂಗವೊಂದಿದೆ. ಆತನ ಅಂಗ ಕೂಡಾ ಸ್ಥೂಲಾಂಗದಲ್ಲಿಯೇ ಇದೆ. ಆ ಅಂಗವೇ ಬಸವಣ್ಣನ ಅಂಗ. ನನ್ನಂಗ ನಿನ್ನಂಗ ಈ ಎರಡೂ ಅಂಗಗಳು ಅಜ್ಞಾನದ ಅಂಗಗಳು ಇಂತಹ ಮನೋಮಯವಾದ ನನ್ನಂಗವೂ ಸ್ಥೂಲಮಯವಾದ ನಿನ್ನಂಗವು ಮಹಾಜ್ಞಾನಿಯಾದ ಬಸವಣ್ಣನಿಗೆ ಅರ್ಪಿತವಯ್ಯಾ.

995

ಶಿವತತ್ವ ಐದು ಅವಾವೆಂದಡೆ:
ಶಿವ, ಶಕ್ತಿ, ಸಾದಾಖ್ಯ, ಈಶ್ವರ, ಶುದ್ಧವಿದ್ಯೆ-ಇಂತು ಶಿವತತ್ವ ಐದು.
ಇನ್ನು ವಿದ್ಯಾತತ್ತ್ವವೆಂದಡೆ:
ಕಲೆ, ರಾಗ, ನಿಯತಿ, ವಿದ್ಯೆ, ಪುರುಷ, ಪ್ರಕೃತಿ-ಇಂತು
ವಿದ್ಯಾತತ್ವ ಏಳು.
ಇನ್ನು ಕರಣಂಗಳೆಂತೆಂದಡೆ:
ಚಿತ್ತ, ಬುದ್ಧಿ, ಅಹಂಕಾರ, ಮನ-ಇವು ಕರಣತತ್ತ್ವ ನಾಲ್ಕು.
ಇನ್ನು ಇಂದ್ರಿಯಂಗಳೆಂತೆಂದೆಡೆ:
ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ-ಇಂತು
ಬುದ್ಧೀಂದ್ರಿಯಂಗಳು ಐದು.
ಇನ್ನು ಕರ್ಮೇಂದ್ರಿಯಂಗಳೆಂತೆಂದಡೆ:
ವಾಕ್ಕು, ಪಾದ, ಪಾಣಿ, ಗುಹ್ಯ, ಪಾಯು-ಇಂತು
ಕರ್ಮೇಂದ್ರಿಯಂಗಳು ಐದು,
ಇನ್ನು ತನ್ಮಾತ್ರಂಗಳೆಂತೆಂದಡೆ:
ಶಬ್ಧ, ಸ್ಪರ್ಶ, ರೂಪು, ರಸ, ಗಂಧ-ಇಂತು ಜ್ಞಾನೇಂದ್ರಿಯ
ವಿಷಯ ಐದು.
ಇನ್ನು ಕರ್ಮೇಂದ್ರಿಯ ವಿಷಯವೆಂತೆಂದಡೆ:
ವಚನ, ಗಮನ, ಆದಾನ, ಆನಂದ, ವಿಸರ್ಜನ
ಇಂತು ಕರ್ಮೇಂದ್ರಿಯ ವಿಷಯ ಐದು.
ಇನ್ನು ವಾಕ್ಕುಗಳಾವುವೆಂದಡೆ:
ಪರಾ, ಪಶ್ಯಂತಿ, ಮಧ್ಯಮೆ, ವೈಖರಿ-ಇಂತು ವಾಕ್ಕು ನಾಲ್ಕು.
ಸಾತ್ವಿಕ, ರಾಜಸ, ತಾಮಸ-ಇಂತು ಗುಣ ಮೂರು.
ರಾಜಸಹಂಕಾರ, ವೈಖರಿಯಹಂಕಾರ, ಭೂತಾದಿಯಹಂಕಾರ
-ಇಂತು ಅಹಂಕಾರ ಮೂರು.
ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ-ಇಂತು ಭೂತಂಗಳು ಐದು.
ಭೂತಕಾರ್ಯ ಇಪ್ಪತ್ತೈದು-ಅವಾವೆಂದಡೆ :
ಅಸ್ಥಿ, ಮಾಂಸ, ತ್ವಕ್, ನಾಡಿ, ರೋಮ-ಈ ಐದು ಪೃಥ್ವೀಪಂಚಕ.
ಲಾಲಾ, ಮೂತ್ರ, ಸ್ವೇದ, ಶುಕ್ಲ, ಶೋಣಿತ-ಈ ಐದು
ಅಪ್ಪುವಿನ ಪಂಚಕ.
ಕ್ಷುಧೆ, ತೃಷೆ, ನಿದ್ರೆ, ಆಲಸ್ಯ, ಸ್ತ್ರೀಸಂಗ-ಈ ಐದು ಅಗ್ನಿಪಂಚಕ.
ಪರಿವ, ಪಾರುವ, ಸುಳಿವ, ನಿಲುವ, ಅಗಲುವ-ಈ ಐದು
ವಾಯುಪಂಚಕ.

ರಾಗ, ದ್ವೇಷ, ಭಯ, ಲಜ್ಜೆ, ಮೋಹ-ಈ ಐದು ಆಕಾಶಪಂಚಕ.
ಇಂತೀ ಇಪ್ಪತ್ತೈದು ಭೂತಕಾರ್ಯ ಪಂಚೀಕೃತಗಳು.
ಇನ್ನು ದಶವಾಯುಗಳು:
ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ,
ಕೃಕರ, ದೇವದತ್ತ , ಧನಂಜಯ-ಈ ಹತ್ತು ವಾಯುಗಳು.
ಇನ್ನು ದಶ ನಾಡಿಗಳು:
ಇಡಾ, ಪಿಂಗಳಾ, ಸುಷುಮ್ನಾ, ಗಾಂಧಾರಿ, ಹಸ್ತಿ , ಜಿಹ್ವೆ,
ಪುಷ್ಕರ, ಪಯಸ್ವಿನಿ, ಆಲಂಬು, ಲಕುಹ, ಶಂಕಿನಿ-ಇಂತೀ ಹತ್ತು ನಾಡಿಗಳು.
ಇಂತು ತತ್ತ್ವ ತೊಂಬತ್ತಾರು ಕೂಡಿಕೊಂಡು
ಆತ್ಮನು ಭೂಮಧ್ಯದಲ್ಲಿರ್ದು ಅವಸ್ಥೆಬಡುವುದನು ಹೇಳಿಹೆನು.
ಅದೆಂತೆಂದಡೆ ಅವಸ್ಥೆಯ ಕ್ರಮ:
ಪ್ರೇರಕಾವಸ್ಥೆ ಒಂದು, ಅಧೋವಸ್ಥೆ ಐದು, ಊರ್ಧ್ವಾವಸ್ಥೆ ಐದು,
ಮಧ್ಯಾವಸ್ಥೆ ಐದು, ಕೇವಲಾವಸ್ಥೆ ಒಂದು, ಸಕಲಾವಸ್ಥೆ ಒಂದು,
ಶುದ್ಧಾವಸ್ಥೆ ಒಂದು, ನಿರ್ಮಲಾವಸ್ಥೆ ಐದು,
ಅಂತೂ ಅವಸ್ಥೆ ಇಪ್ಪತ್ತನಾಲ್ಕು,
ಅವರಲ್ಲಿ ಪ್ರೇರಕಾವಸ್ಥೆಯೆಂತೆಂದಡೆ:
ತತ್ತ್ವಸಮೂಹಂಗಳನು ಕೂಡಿಕೊಂಡು ಇರ್ದಲ್ಲಿ ಆ ಪುರುಷನು
ಪಂಚೇಂದ್ರಿಯಂಗಳಲ್ಲಿ ವಿಷಯಂಗಳನು ಅತಿ ಚಮತ್ಕಾರದಲ್ಲಿ
ಅರಿವವೇಳೆ ಪ್ರೇರಕಾವಸ್ಥೆಯೆಂದು.
ಅದಕ್ಕೆ ಪ್ರೇರಿಸುವ ತತ್ತ್ವಂಗಳಾವುವೆಂದಡೆ-
ಶಿವತತ್ತ್ವ ಐದು, ವಿದ್ಯಾತತ್ತ್ವ ಏಳು, ಕರಣಂಗಳು ನಾಲ್ಕು,
ಭೂತಂಗಳಲ್ಲಿ ಒಂದು, ಇಂದ್ರಿಯಂಗಳಲ್ಲಿ ಒಂದು
-ಇಂತೀ ಹದಿನೆಂಟು ತತ್ತ್ವಂಗಳಲ್ಲಿ ವಿಷಯಂಗಳನರಿವನು.
ಅದು ಹೇಗೆಂದಡೆ-ಶಿವತತ್ತ್ವ ಐದು, ವಿದ್ಯಾತತ್ತ್ವ ಏಳು,
ಕರಣಂಗಳು ನಾಲ್ಕು-ಇಂತು ಹದಿನಾರು ತತ್ತ್ವ.
ಆಕಾಶಭೂತವೂ ಶ್ರೋತ್ರೇಂದ್ರಿಯವೂ ಕೂಡಿ
ಹದಿನೆಂಟು ತತ್ತ್ವದಲ್ಲಿ ಶಬ್ದವನರಿವ;
ವಾಯುಭೂತವೂ ತ್ವಗೇಂದ್ರಿಯವೂ ಕೂಡಿ
ಹದಿನೆಂಟು ತತ್ತ್ವದಲ್ಲಿ ಸೋಂಕವನರಿವ;
ತೇಜಭೂತವೂ ನಯನೇಂದ್ರಿಯವೂ ಕೂಡಿ
ಹದಿನೆಂಟು ತತ್ತ್ವದಲ್ಲಿ ರೂಪವನರಿವ;
ಅಪ್ಪುಭೂತವೂ ಜಿಹ್ವೇಂದ್ರಿಯವೂ ಕೂಡಿ
ಹದಿನೆಂಟು ತತ್ತ್ವದಲ್ಲಿ ರಸವನರಿವ;
ಪೃಥ್ವಿಭೂತವೂ ಘ್ರಾಣೇಂದ್ರಿಯವೂ ಕೂಡಿ

ಹದಿನೆಂಟು ತತ್ತ್ವದಲ್ಲಿ ಗಂಧವನರಿವ;
ಇಂತೀ ವಿಷಯಂಗಳನರಿವುದು.
ಇದು ಪ್ರೇರಕಾವಸ್ಥೆಯೆಂದೆನಿಸುವದು.
ಇನ್ನು ಅಧೋವಸ್ಥೆ ಐದಕ್ಕೆ ವಿವರ:
ಪ್ರಥಮದಲ್ಲಿ ಜಾಗ್ರಾವಸ್ಥೆ ಅದಕ್ಕೆ ಪ್ರೇರಿಸುವ ತತ್ತ್ವಂಗಳು
ಬಿಟ್ಟಿಹವಾವುವೆಂದಡೆ:
ಶಿವತತ್ತ್ವ ಐದು, ಮಾಯಾತತ್ತ್ವ ಒಂದು, ವಿದ್ಯಾತತ್ತ್ವ ಆರು,
ಭೂತಂಗಳು ಐದು ಇಂತು ಹದಿನೇಳು ಬಿಟ್ಟಿಹುದು.
ಇನ್ನು ಜಾಗ್ರಾವಸ್ಥೆಯಲ್ಲಿಹ ತತ್ತ್ವಗಳೆಷ್ಟೆಂದಡೆ:
ಕರಣ ನಾಲ್ಕು, ಬುದ್ಧೀಂದ್ರಿಯ ಐದು, ಕರ್ಮೇಂದ್ರಿಯ ಐದು,
ವಿಷಯ ಹತ್ತು, ವಾಯು ಹತ್ತು.
ಇಂತು ಮೂವತ್ತನಾಲ್ಕು ತತ್ತ್ವಂಗಳಲ್ಲಿ ಆ ತನು ಕೇಳದೆ ಕೇಳುವ,
ಮಾತಾಡದ ಹಾಂಗೆ ಆಲಸ್ಯದಲ್ಲಿ ಮಾತನಾಡುತ್ತಿಹನು,
ಇಂತು ಜಾಗ್ರಾವಸ್ಥೆ.
ಇನ್ನು ಸ್ವಪ್ನಾವಸ್ಥೆ. ಅದಕ್ಕೆ ಹತ್ತು ತತ್ತ್ವಂಗಳು ಬಿಟ್ಟಿಹವು.
ಅವಾವುವೆಂದಡೆ: ಬುದ್ಧೀಂದ್ರಿಯ ಐದು, ಕರ್ಮೇಂದ್ರಿಯ ಐದು,
ಲಲಾಟದಲ್ಲಿ ನಿಲುವು ಕಂಠಸ್ಥಾನದಲ್ಲಿ ಇಪ್ಪತ್ತೈದು ತತ್ತ್ವಂಗಳು
ಕೂಡಿಕೊಂಡಿಹುದು.
ಅದೆಂತೆಂದಡೆ: ಮಾಯೆ ಒಂದು, ವಾಯು ಹತ್ತು,
ವಿಷಯ ಹತ್ತು, ಕರಣ ನಾಲ್ಕು
ಇಂತು ಇಪ್ಪತ್ತೈದು ತತ್ತ್ವಂಗಳು ಕೂಡಿಕೊಂಡು ಸ್ವಪ್ನಂಗಳ
ಕಾಣುತಿಹನು.
ಇದು ಸ್ವಪ್ನಾವಸ್ತೆ.
ಇನ್ನು ಸುಷುಪ್ತಾವಸ್ಥೆಗೆ ಬಹಲ್ಲಿ
ಕಂಠಸ್ಥಾನದಲ್ಲಿ ನಿಂದ ತತ್ತ್ವಂಗಳಾವಾವವೆಂದಡೆ-
ಮಾಯೆ ಒಂದು, ವಾಯು ಒಂಬತ್ತು, ವಿಷಯ ಹತ್ತು,
ಕರಣ ಮೂರು-ಇಂತು ಇಪ್ಪತ್ತಮೂರು ತತ್ತ್ವ,
ಇನ್ನು ಹೃದಯಸ್ಥಾನದಲ್ಲಿ ಕೂಡಿಹ ತತ್ತ್ವ ಆವಾವೆಂದಡೆ:
ಪ್ರಾಣವಾಯು ಒಂದು, ಪ್ರಕೃತಿ ಒಂದು, ಚಿತ್ತ ಒಂದು
-ಇಂತು ಸುಷುಪ್ತಾವಸ್ಥೆಯಲ್ಲಿ ತತ್ತ್ವ,
ಇನ್ನು ತೂರ್ಯಾವಸ್ಥೆಗೆ ಬಹಾಗ ಹೃದಯದಲ್ಲಿ ನಿಂದ ತತ್ತ್ವ ಚಿತ್ತ
ಒಂದು. ನಾಭಿಸ್ಥಾನದಲ್ಲಿ ತೂರ್ಯಾವಸ್ಥೆಯಲ್ಲಿಹ ತತ್ತ್ವ
ಪ್ರಾಣವಾಯು ಒಂದು, ಪ್ರಕೃತಿ ಒಂದು.
ಅತೀತಾವಸ್ಥೆಗೆ ಹೋಹಾಗ ನಾಭಿಸ್ಥಾನದಲ್ಲಿ ತೂರ್ಯಾವಸ್ಥೆಯಲ್ಲಿ

ಪ್ರಾಣವಾಯುವುಳಿದು ಅತೀತಾವಸ್ಥೆಯಲ್ಲಿ ಪ್ರಕೃತಿಗೂಡಿ
ಮೂಲಾಧಾರದಲ್ಲಿ ಅಣವಮಲಯುಕ್ತವಾಗಿ
ಏನೆಂದರಿಯದೆ ಇಹುದು. ಇಂತಿದು ಅಧೋವಸ್ಥೆ.
ಇನ್ನು ಊರ್ಧ್ವಾವಸ್ಥೆ, ಅತೀತದಲ್ಲಿ ಪ್ರಕೃತಿಕಾರ್ಯಂಗಳೆಲ್ಲವನೂ
ಬಿಟ್ಟು, ತತ್ವಂಗಳೊಂದು ಇಲ್ಲದೆ,
ಅಣವಮಲಸ್ವರೂಪವಾಗಿ ಮೂಲಾಧಾರದಲ್ಲಿ ಬಿದ್ದಿರ್ದ ಆತ್ಮನಿಗೆ
ಪರಮೇಶ್ವರನ ಕರುಣದಿಂದ ಕ್ರಿಯಾಶಕ್ತಿ, ಶಕ್ತಿತತ್ವಮಂ
ಪ್ರೇರಿಸುವುದು,
ಆ ಶಕ್ತಿ ಕಲೆ, ಕಾಲ, ನಿಯತಿಗಳಂ ಪ್ರೇರಿಸುವುದು.
ಆ ವೇಳೆಯಲ್ಲಿ ಸೂಕ್ಷ್ಮೆಯೆಂಬ ವಾಕ್ಕು ಕೂಡುವುದು.
ಇಂತು ಅತೀತದಲ್ಲಿ ಅರುಹಿಸುವ ತತ್ವಂಗಳು:
ಶಕ್ತಿತತ್ವ, ಕಲೆ, ಕಾಲ, ನಿಯತಿ, ಸೂಕ್ಷ್ಮೆ ಇಂತು ತತ್ವಂಗಳು ಐದು.
ಇನ್ನು ತೂರ್ಯಾವಸ್ಥೆಗೆ ಬಹಾಗ
ಹಿಂದೆ ಹೇಳಿದ ತತ್ವ ಐದು, ಪಶ್ಯಂತಿಯೆಂಬ ವಾಕ್ಕು,
ಪ್ರಾಣವಾಯು ಕೂಡಿ
ತತ್ವ ಏಳು ತೂರ್ಯಾವಸ್ಥೆಯಲ್ಲಿ ಪ್ರೇರಿಸುವುದು:
ಹಿಂದೆ ಹೇಳಿದ ತತ್ವ ಏಳು ಕೂಡಿ,
ಹೃದಯಸ್ಥಾನದಲ್ಲಿ ಮಧ್ಯಮೆ, ಚಿತ್ತ-ಎರಡು ಕೂಡುತ್ತಿಹವು.
ಆ ವೇಳೆಯಲ್ಲಿ ಜ್ಞಾನಶಕ್ತಿ ಶುದ್ಧವಿದ್ಯಾತತ್ವಮಂ ಪ್ರೇರಿಸುವುದು.
ಆ ಶುದ್ಧವಿದ್ಯಾತತ್ವ ಆತ್ಮಂಗೆ ಅರಿವನೆಬ್ಬಿಸುವುದು.
ಇಚ್ಫಾಶಕ್ತಿ ಈಶ್ವರತತ್ವಮಂ ಪ್ರೇರಿಸುವುದು.
ಈಶ್ವರತತ್ವ ರಾಗತತ್ವಮಂ ಪ್ರೇರಿಸುವುದು.
ರಾಗತತ್ವ ಆತ್ಮಂಗೆ ಇಚ್ಫೆಯನೆಬ್ಬಿಸುವುದು.
ಆದಿಶಕ್ತಿ ಸಾದಾಖ್ಯತತ್ವಮಂ ಪ್ರೇರಿಸುವುದು.
ಸಾದಾಖ್ಯತತ್ವ ಪ್ರಕೃತಿತತ್ವಮಂ ಪ್ರೇರಿಸುವುದು.
ಪರಾಶಕ್ತಿ ಶಿವತತ್ವಮಂ ಪ್ರೇರಿಸುವುದು.
ಶಿವತತ್ವ ಗುಣತತ್ವಮಂ ಪ್ರೇರಿಸುವುದು.
ಇಂತು ಹದಿನೆಂಟು ತತ್ವ ಅವಾವವೆಂದಡೆ:
ಪಂಚಶಕ್ತಿ ಹೊರಗಾಗಿ, ಶಿವತತ್ವ ಐದು, ವಿದ್ಯಾತತ್ವ ಐದು,
ಪ್ರಾಣವಾಯು ಒಂದು, ಪ್ರಕೃತಿ ಒಂದು,
ಗುಣ ಮೂರು, ಚಿತ್ತ ಒಂದು, ಪುರುಷ ಒಂದು.
ಇಂತು ತತ್ವ ಹದಿನೇಳು ಸುಷುಪ್ತಾವಸ್ಥೆಯಲ್ಲಿ ಅರುಹಿಸುವುದು.
ಇನ್ನು ಸ್ವಪ್ನಾವಸ್ಥೆಯ ಕಂಠದಲ್ಲಿಹ ತತ್ವ:
ಜ್ಞಾನೇಂದ್ರಿಯ ವಿಷಯ ಹತ್ತು, ಕರ್ಮೇಂದ್ರಿಯ ವಿಷಯ ಹತ್ತು.

ಪ್ರಾಣವಾಯು ಉಳಿಯೆ, ವಾಯುಚಿತ್ತ ಉಳಿಯೆ,
ತ್ರಿಕರಣ ಅಹಂಕಾರ ಮೂರು, ವೈಖರಿಯ ವಾಕ್ಕು ಒಂದು
ಇಂತು ಇಪ್ಪತ್ತನಾಲ್ಕು ತತ್ತ್ವ.
ಸುಷುಪ್ತಾವಸ್ಥೆಯಲ್ಲಿ ಹಿಂದೆ ಹೇಳಿದ ತತ್ತ್ವ ಹದಿನೇಳು ಕೂಡಿ
ತತ್ತ್ವ ನಲವತ್ತೊಂದು ಸ್ವಪ್ನಾವಸ್ಥೆಯಲ್ಲಿ ಕೂಡಿಹವು.
ಆಗ ತನ್ನೊಳಗೆ ಅರುಹಿಸುವ ಪ್ರಕಾರವೆಂತೆಂದಡೆ:
ಚಿತ್ತ, ಬುದ್ಧಿ, ಅಹಂಕಾರ, ಮನ, ಹೃದಯ ಈ ಐದು.
ಚಿತ್ತವನು ಅಕಾರ ಪ್ರೇರಿಸುವುದು,
ಆ ಅಕಾರವನು ಬ್ರಹ್ಮ ಪ್ರೇರಿಸುವನು,
ಬುದ್ಧಿಯನು ಉಕಾರ ಪ್ರೇರಿಸುವುದು;
ಉಕಾರವನು ವಿಷ್ಣು ಪ್ರೇರಿಸುವನು,
ಅಹಂಕಾರವನು ಮಕಾರ ಪ್ರೇರಿಸುವುದು;
ಮಕಾರವನು ರುದ್ರ ಪ್ರೇರಿಸುವನು,
ಮನವನು ಬಿಂದು ಪ್ರೇರಿಸುವುದು;
ಬಿಂದುವನು ಈಶ್ವರ ಪ್ರೇರಿಸುವನು;
ಹೃದಯವನು ನಾದ ಪ್ರೇರಿಸುವುದು;
ನಾದವನು ಸದಾಶಿವ ಪ್ರೇರಿಸುವನು.
ಈ ಹದಿನೈದು ತನ್ನೊಳಗೆ ಸೂಕ್ಷ್ಮ ಶರೀರದಲ್ಲಿಹುದು.
........ಗೀ(?) ಅಷ್ಟತನುವಿನಿಂದ ಸ್ವರ್ಗನರಕವನರಿವನು.
ಮುಂದೆ ಜಾಗ್ರಾವಸ್ಥೆಯಲ್ಲಿ ಅರುಹಿಸುವ ತತ್ತ್ವ ಅವಾವವೆಂದಡೆ-
ಭೂತ ಐದು, ಉಭಯೇಂದ್ರಿಯ ಹತ್ತು,
ಭೂತಕಾರ್ಯ ಇಪ್ಪತ್ತೈದು,
ನಾಡಿ ಹತ್ತು, ಅಂತು ತತ್ತ್ವ ನಲವತ್ತೊಂದು.
ಅಂತು ಕೂಡಿ ತತ್ತ್ವ ತೊಂಬತ್ತೊಂದು. ಇಂತಿದು ಊರ್ಧ್ವಾವಸ್ಥೆ.
ಇನ್ನು ಸಕಲಾವಸ್ಥೆಯೆಂತೆಂದಡೆ:
ತೊಂಬತ್ತೊಂದು ತತ್ತ್ವ ಅವರಲ್ಲಿ ಪ್ರೇರಕತತ್ತ್ವವೊಂದು ಪ್ರೇರಿಸುವಲ್ಲಿ
ಸಕಲಾವಸ್ಥೆ.
ಅದು ಶಿವನನೂ ತನ್ನನೂ ಪಾಶಪಂಚಕವನು ಅರಿಯದ
ಎಲ್ಲ ವಿಷಯಂಗಳನು ಅರಿವುತ್ತಿಹುದು.
ಇನ್ನು ಮಧ್ಯಮಾವಸ್ಥೆಯೆಂತೆಂದಡೆ-
ಹಿಂದೆ ಕಂಡವನ ಈಗಲೆಂದು ಅರಿಯದೀಹುದೀಗ ಜಾಗ್ರ ಅತೀತ.
ಹಿಂದೆ ಕಂಡವನ ಅರಿದ ಹಾಂಗಿಹುದೀಗ ಜಾಗ್ರ ತುರೀಯ.
ಹಿಂದೆ ಕಂಡವನ ಮೆಲ್ಲನೆಚ್ಚತ್ತು ಅರಿವುದು ಜಾಗ್ರದ ಸುಷುಪ್ತಿ.
ಹಿಂದೆ ಕಂಡವನ ಕಂಡಾಗಲೆ ಅರಿವುದ ಜಾಗ್ರದ ಸ್ವಪ್ನ.

ಹಿಂದೆ ಕಂಡವನ ಹೆಸರು, ಇದ್ದ ಸ್ಥಳ, ಅವನ ಕಾಯಕ
ಮುಂತಾಗಿ ಚೆನ್ನಾಗಿ ಅರಿವುದು ಜಾಗ್ರದ ಜಾಗ್ರ.
ಅದೆಂತೆಂದಡೆ, ಜಾಗ್ರದಲ್ಲಿ ಪುರುಷತತ್ತ್ವದಲ್ಲಿ
ಎಲ್ಲ ತತ್ತ್ವಗಳು ಕೂಡಿದ ಕಾರಣದಿಂದ
ತಾನೇನ ನೆನೆದಿದ್ದುದನು ಮರೆವುದು ಜಾಗ್ರ ಅತೀತ.
ಆ ಪುರುಷತತ್ತ್ವದಲ್ಲಿ ಪ್ರಾಣವಾಯು ಕೂಡಲು ನೆನೆದುದನು
ಹೇಳಿಹೆನೆಂದಡೆ ತೋರುವ ಹಾಂಗೆ ಇಹುದು ತೋರದಿಹುದು
ಜಾಗ್ರದ ತುರೀಯ.
ಆ ಪುರುಷತತ್ತ್ವದಲ್ಲಿ ಪ್ರಾಣವಾಯು ಚಿತ್ತವು ಕೂಡಲು
ನೆನೆದುದನು ಮೆಲ್ಲನೆಚ್ಚತ್ತು ಅರಿದು ಹೇಳುವುದು ಜಾಗ್ರದ ಸುಷುಪ್ತಿ,
ಆ ಪುರುಷತತ್ತ್ವದಲ್ಲಿ ಕರಣ ನಾಲ್ಕು, ಇಂದ್ರಿಯ ಹತ್ತು,
ವಾಯು ಹತ್ತು, ವಿಷಯ ಹತ್ತು
ಅಂತೂ ತತ್ತ್ವ ಮೂವತ್ತನಾಲ್ಕು ಕೂಡಲಾಗಿ,
ತಾ ನೆನೆದುದನು ಇದ್ದುದನು ಚೆನ್ನಾಗಿ ಅರಿದು ವಿವರದಿಂದ
ಹೇಳುವುದು ಇದು ಜಾಗ್ರದ ಜಾಗ್ರ. ಇಂತಿದು ಮಾಧ್ಯಮಾವಸ್ಥೆ.
ಇನ್ನು ಕೇವಲಾವಸ್ಥೆಯೆಂತೆಂದಡೆ:
ಶುದ್ಧತತ್ತ್ವ ವಿದ್ಯಾತತ್ತ್ವವನೆಲ್ಲವ ಬಿಟ್ಟು
ಆಣವಮಲದಲ್ಲಿ ಅಣವಸ್ವರೂಪಾಗಿ
ಕಣ್ಗತ್ತಲೆಯಲ್ಲಿ ಏನೂ ಕಾಣದ ಕಣ್ಣಿನ ಹಾಂಗೆ ಇದ್ದುದೀಗ
ಕೇವಲಾವಸ್ಥೆ.
ಇನ್ನು ಶುದ್ಧವಸ್ಥೆಯೆಂತೆಂದಡೆ:
ಕರ್ಮಸಮಾನದಲ್ಲಿ ಶಕ್ತಿಪಾತವಾಗಿ, ತ್ರಿಪದಾರ್ಥಜ್ಞಾನವಾಗಿ,
ದಿಟವೆಂಬಂತೆ ತೋರುತ್ತಿಹ ದೇಹಾದಿಪ್ರಪಂಚವನು ಸಟೆಯೆಂದು
ಕಸವ ಕಳೆವ ಹಾಂಗೆ ಕಳೆದು,
ತತ್ತ್ವಂಗಳೊಳಗೆ ಇದ್ದು ತತ್ತ್ವಂಗಳಿಗೆ ಅನ್ಯವಾಗಿ
ಆ ತತ್ತ್ವಂಗಳನು ಅರಿದ ಸಕಲಾವಸ್ಥೆಯೆಂಬ ಕೇವಲಾವಸ್ಥೆಯೆಂಬ
ಈ ಎರಡೂ ಅವಸ್ಥೆಗಳೂ
ತನ್ನನು ಶಿವನನು ಅರಿವುದಕ್ಕೆ ಪ್ರಯೋಜನವಲ್ಲವೆಂದು
ಎರಡವಸ್ಥೆಯನೂ ಬಿಟ್ಟು ಸಕಲವನೂ ಹೊದ್ದದೆ
ಕೇವಲವನೂ ಹೊದ್ದದೆ
ತ್ರಾಸಿನ ಮುಳ್ಳುನಿಂದ ಹಾಂಗೆ ನಿಂದುದು ಶುದ್ಧವಾಸ್ಥೆ.
ಇದು ಶಿವನ ಶರಣರಿಗಲ್ಲದೆ ಇಲ್ಲ.
ಇನ್ನು ನಿರ್ಮಲಾವಸ್ಥೆ ಎಂತೆಂದಡೆ-
ಶಿವಜ್ಞಾನದಲ್ಲಿ ಬೋಧವನಳಿದು ಜ್ಞೇಯದೊಳು ಕೂಡಿಹ

ಜೀವನ್ಮುಕ್ತರಿಗೆ ಪಂಚಾವಸ್ಥೆಗಳು.
ಆ ಅವಸ್ಥೆಗಳಲ್ಲಿ ತತ್ತ್ವಗಳಾವಾವೆಂದಡೆ:
ಶಿವತತ್ತ್ವ, ಶಕ್ತಿತತ್ತ್ವ, ಸಾದಾಖ್ಯತತ್ತ್ವ, ಈಶ್ವರತತ್ತ್ವ,
ಶುದ್ಧ ವಿದ್ಯಾತತ್ತ್ವ ಈ ಐದು ಮೊದಲಾಗಿ
ಪರಾ, ಆದಿ, ಇಚ್ಛೆ, ಜ್ಞಾನ, ಕ್ರಿಯೆಯೆಂಬ ಶಕ್ತಿ ಪಂಚಕಗಳು
ಉಸುರಾಗಿ ಜಾಗ್ರಾವಸ್ಥೆಯಲ್ಲಿ ಅರಿವುತ್ತಿಹನು.
ಕ್ರಿಯಾಶಕ್ತಿ ಶಕ್ತಿತತ್ತ್ವಮಂ ಬಿಟ್ಟು ಉಳಿದ ಶಕ್ತಿ ನಾಲ್ಕು
ಒಡಲುಸುರಾಗಿ ಅರಿಯೆ ಸ್ವಪ್ನಾವಸ್ಥೆ.
ಜ್ಞಾನಶಕ್ತಿ ಶುದ್ಧವಿದ್ಯಾತತ್ತ್ವಮಂ ಬಿಟ್ಟು ಕಳೆದು
ಉಳಿದ ಶಕ್ತಿ ಮೂರರಲ್ಲಿ ಅರಿಯೆ ಸುಷುಪ್ತಾವಸ್ಥೆ.
ಇಚ್ಛಾಶಕ್ತಿ ಈಶ್ವರತತ್ತ್ವಮಂ ಬಿಟ್ಟು ಕಳೆದು
ಉಳಿದ ಶಕ್ತಿ ಎರಡರಲ್ಲಿ ಅರಿವುದು ತೂರ್ಯಾವಸ್ಥೆ.
ಆದಿಶಕ್ತಿ ಸಾದಿಖ್ಯತತ್ತ್ವವೂ ಬಿಟ್ಟು ಕಳೆದು
ಉಳಿದ ಪರಾಶಕ್ತಿ ಒಂದು ಶಿವತತ್ತ್ವ ಒಂದರಲ್ಲಿ ಅರಿಯೆ
ನಿರ್ಮಲದ ಅತೀತಾವಸ್ಥೆ.
ಇನ್ನು ಈ ಶಕ್ತಿ ಶಿವತತ್ತ್ವಂಗಳೆ ಒಡಲುಸುರಾಗಿ ಇದ್ದಲ್ಲಿ
ಶಿವನಲ್ಲದೆ ಮತ್ತೊಂದು ಏನೂ ತೋರದು.
ಅಂಥ ಜೀವನ್ಮುಕ್ತರು ನಿರ್ಮಲಜಾಗ್ರದಲ್ಲಿ
ಎಂತು ಅರಿವುತ್ತಿರಪ್ಪರೆಂದಡೆ
ಆ ಪರಮಾವಸ್ಥೆಯನೂ ಅನುಭವದಲ್ಲಿ ಅರಿವುದು.
ಮಲ ಪಂಚಕಗಳನು ಅರುಹಿಸುವ ಸದಮಲ ಶಿವಜ್ಞಾನ
ಪರೆ ಮೊದಲಾದ ಪೂರ್ಣ ಬೋಧದಲ್ಲಿ ಕೂಡಿ
ತಾನು ಇಲ್ಲದಿರುವಂದು
ಏನೂ ತೋರದ ಪೂರ್ಣ ಬೋಧವಾಗಿ ನಿಂದುದು
ನಿರ್ಮಲಜಾಗ್ರ.
ಇನ್ನು ಪರಾಶಕ್ತಿಯನೂ ಶಿವತತ್ತ್ವವನೂ ಮೀರಿ,
ಪರದಲಿ ಬೆರೆದು,
ಅದ್ವೈತವೂ ಅಲ್ಲದೆ, ದ್ವೈತಾದ್ವೈತವೂ ಅಲ್ಲದೆ,
ಶಿವದ್ವೈತವೂ ಅಲ್ಲದೆ
ಇನತೇಜದಲ್ಲಿ ಕಣ್ಣು ತೇಜ ಕೂಡಿದ ಹಾಂಗೆ
ಆಣವದ ಅಣುವಿನ ಹಾಂಗೆ ತಾನು ಇಲ್ಲದೆ ಇಹನು.
ಇದು ಶಿವಾದ್ವೈತ.
ಇಂತಲ್ಲದೆ ಆತ್ಮ ಆತ್ಮ ಕೆಟ್ಟಡೆ, ಆತ್ಮವರ್ಗ ಮುಕ್ತಿಸುಖವಿಲ್ಲ,
ಅಳಿದ ಠಾವಿನಲ್ಲಿ ಹುಟ್ಟುವುದಾಗಿ,

**ಶಿವ ತಾನೆ ಆತ್ಮನಾಗಿ ಹುಟ್ಟುವನಹುದು:**
**ಶಿವನಲ್ಲಿ ಹುಟ್ಟಿ ಮಲ ಉಳ್ಳದಹುದಿಲ್ಲ.**
**ಶಿವ ತಾನೆ ಹುಟ್ಟಿಸಿ ನರಕ-ಸ್ವರ್ಗದ ಮಾನವನಹನು,**
**ಪಕ್ಷಪಾತಿಯಹನು, ನಿಃಕರುಣಿಯಹನು, ವಿಕಾರಿಯಹನು.**
**ಶಿವನಲ್ಲಿ ಕೂಡದೆ ಬೇರಾಗಿ ಇಹನೆಂದಡೆ,**
**ಮುಕ್ತಿಯೆಂಬ ಮಾತು ಇಲ್ಲವಹುದು.**
**ಪಂಚಕೃತ್ಯವ ಮಾಡಲು ಕಾರಣವಿಲ್ಲ ಒಂದಾಗೆ!**
**ಎರಡಾಗದೆ ಭೇದಾಭೇದವಾಗಿಹನೆಂದಡೆ**
**ಶಿವಭಕ್ತಿಯನೂ ಶಿವಕ್ರಿಯೆಗಳನೂ ಮಾಡಿ**
**ಶಿವನ ಕೂಡಿಹೆನೆಂದೆನ್ನಬೇಡ!**
**ಮುನ್ನವೆ ಒಂದಾಗಿ ಇದ್ದನಾಗಿ,**
**ಈ ಭೇದವ ತಿಳಿಯಬಲ್ಲಡೆ ಆತನೆ ಶರಣ ಕಾಣಾ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಿದ್ಧರಾಮ ಶಿವಯೋಗಿಗಳು ತನುವಿನಲ್ಲಿ ತನ್ಮಯವಾದ ತತ್ತ್ವಗಳನ್ನು ವಿವರಿಸಿದ್ದಾರೆ. ಸಕಲ ವಿವರಗಳೂ ಈ ವಚನದಲ್ಲಿ ಇರುವುದರಿಂದ ಓದುಗರು ವಚನವನ್ನೇ ಓದಿ ನಿಧಾನವಾಗಿ ಅರ್ಥೈಸಿಕೊಂಡರೆ ಸಾಕು.

ಒಂದರಲ್ಲಿಯೇ ಎಲ್ಲಾ ತತ್ತ್ವಗಳೂ ಅಡಗಿವೆ. ಒಂದು ಎರಡಾಗದೆ ಭೇದ ಭೇದವಾಗಿಹನೆಂದಡೆ ಶಿವಭಕ್ತಿಯನು, ಶಿವಕ್ರಿಯೆಗಳನು ಮಾಡಿ ಶಿವನ ಕೂಡಿಹೆನೆಂದು ಎನ್ನಬೇಡ. ಮುನ್ನವೇ ಒಂದಾಗಿಯ್ದಿನಾಗಿ ಈ ಭೇದವ ತಿಳಿಯಬಲ್ಲಡೆ ಆತನೇ ಶಿವನು ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**996**

**ಶಿಖರ ಶಿರಸದಂತ್ಯದಲ್ಲಿ ಕಳಸ ಕೆಲಸ ರುಚಿಸಿದ**
**ಪರಿಯ ನೋಡು, ಎಲೆ ಕಮ್ಮಟ.**
**ತರುಣ ಬಂದು ಕೊಪಂಗಳ ತೆರೆಹಿಲ್ಲದ**
**ಬ್ರಹ್ಮಾಂಡ ತರುಣಿಯ ಮಸ್ತಕದಲೊಕ್ಕೆ,**
**ಅತಿವೃಷ್ಟಿ ಪ್ರವಾಹದ ಒಳಗೆ ಬಿದ್ದು**
**ಅದ್ದೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದ ಶಿರವನ್ನು ಶಿಖರ ಎಂದು ಕರೆಯುತ್ತಾರೆ. ಈ ಶಿರದ ಅಂತ್ಯದಲ್ಲಿ ಕಳಸವನ್ನಿಟ್ಟು ಕೌಶಲ್ಯದ ಚಿತ್ತಾರಗಳನ್ನು ರಚಿಸಿ ಅರಿವಿನ ಅಮೃತವನ್ನು ತುಂಬಿದ ಪರಿಯು ಬಲು ವಿಚಿತ್ರ. ಕಾಯವೆಂಬುದು ಕರ್ತಾರನು ರಚಿಸಿದ ಕಮ್ಮಟ.

ಕಾಯಕ್ಕೆ ತಾರುಣ್ಯ ಬಂದು ಕಾಯದ ತುಂಬ ಅಜ್ಞಾನದ ಕೂಪಗಳು ಸಂದಿಲ್ಲದೇ ಮೂಡಲು, ಬ್ರಹ್ಮಾಂಡವನ್ನೇ ತುಂಬಿಕೊಂಡ ಕಾಯ, ಮನವೆಂಬ ತರುಣಿ ಹೊಕ್ಕ ಕೂಡಲೇ,

ಮಸ್ತಕದೊಳಗೆ ಅತಿವೃಷ್ಟಿ. ಅಜ್ಞಾನದ ಪ್ರವಾಹ ಭೋರ್ಗರೆದು ಹರಿದು ಜಾರಿಬಿದ್ದು, ಅದರೊಳಗೆ ತನಗೆ ತಾನೇ ಅದ್ದಿಕೊಂಡೆನಯ್ಯ. ಸುಖವು ನನ್ನಿಂದಲೇ, ದುಃಖವು ನನ್ನಿಂದಲೇ. ಸುಖವಾದದ್ದು ಸುಳ್ಳು, ದುಃಖವಾದದ್ದು ಸುಳ್ಳು ಎಂದು ನನಗೆ ನಾನೇ ನನ್ನ ಅರಿವಿನಿಂದ ತಿಳಿದುಕೊಂಡು ಅಜ್ಞಾನದ ಪ್ರವಾಹದಿಂದ ಎದ್ದು ಬಂದು ಮಹಾಜ್ಞಾನದ ತ್ರಿಕೂಟದ ಸಂಗಮದಲ್ಲಿ ನನ್ನನ್ನು ನಾನೇ ಅದ್ದಿಕೊಂಡೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ.

**997**

**ಶಿವನ ಕೀರ್ತಿ ಬಸವಣ್ಣನ ಧರ್ಮವಯ್ಯಾ,**
**ಶಿವನ ಸ್ತೋತ್ರ ಬಸವಣ್ಣನ ಧರ್ಮವಯ್ಯಾ,**
**ಶಿವನ ಮಂತ್ರೋಚ್ಚಾರಣೆ ಬಸವಣ್ಣನ ಧರ್ಮವಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ಸಿದ್ಧರಾಮ ಶಿವಯೋಗಿಗಳು ಶಿವನಿಗೆ ಬಸವಣ್ಣನ ಹೆಸರನ್ನು ಇಟ್ಟು, ಬಸವಣ್ಣನ ಧರ್ಮವೆಂದು ಹೇಳಿದ್ದಾರೆ. ಶಿವನ ಕೀರ್ತಿ ಬಸವಣ್ಣನ ಸಹಜ ಧರ್ಮವಾಗಿ ಮೆರೆಯಿತು. ಅಂಗದಲ್ಲಿಯೇ ಅರಿವಿನ ಕುರುಹಾಗಿ ಶಿವ ಸಂಗಮವಾಗಿದ್ದರೂ, ಅಂಗವನ್ನು ಆವರಿಸಿದ ಮನಕ್ಕೆ ಈತನೇ ಶಿವನೆಂದು ಗೊತ್ತಾಗಿರಲಿಲ್ಲ.

ಅಂಗದಲ್ಲಿ ಸಂಗಮವಾದ ಅರಿವಿನ ಶಿವನೇ ಶಿವನೆಂದು ಮನಕ್ಕೆ ಗೊತ್ತಾಗದ ನಿಮಿತ್ಯ, ಅಂಗವನ್ನು ಆವರಿಸಿದ ಮನ ಅಂಗದೊಂದಿಗೆ, ಕಲ್ಲಲ್ಲಿ ಶಿವನನ್ನು ಕೆತ್ತಿ, ಕಲ್ಲಿಂದಲೇ ಶಿವನಿಗೆ ಆಲಯಗಳನ್ನು ನಿರ್ಮಿಸಿ, ಶಿವನೆಂದು ಆರಾಧಿಸಿತು.

ಶಿವನ ಕೀರ್ತಿಯನು ಬಸವಣ್ಣ ಅರಿವಿನ ಧರ್ಮದಿಂದ ಮೆರವಣಿಗೆ ಮಾಡಿದ. ಅಂಗಕ್ಕೆ ಪ್ರತ್ಯೇಕವಾದ ಧರ್ಮವಿಲ್ಲವೆಂದು ಘೋಷಿಸಿದ. ಅಂಗ ಹಿಂದುವು ಅಲ್ಲ ಮುಸಲ್ಮಾನನು ಅಲ್ಲ, ಕ್ರೈಸ್ತನು ಅಲ್ಲ, ಸಿಖ್ ಫಾರ್ಸಿ ಜೈನನೂ ಅಲ್ಲ. ಬೌದ್ಧ ಮೊದಲೇ ಅಲ್ಲ. ಅಂಗ ಅರಿವಿನ ಧರ್ಮದಿಂದ ಭರಿತವಾಗಿದೆ. ಅಂಗದಲ್ಲಿ ಅರಿವು ಎನ್ನುವ ಲಿಂಗ ಸಂಗಮವಾಗಿದೆ. ಆ ಲಿಂಗಕ್ಕೆ ಮನ ಭಕ್ತನಾಗಿ ಆರಾಧಿಸಬೇಕು.

ಅರಿವಿನ ಲಿಂಗ ಹೇಳುವ ಧರ್ಮವನ್ನು ಮನ ಪಾಲಿಸಬೇಕು. ಇದು ಲಿಂಗಾಂಗ ಸಾಮರಸ್ಯ. ಇಂತಹ ರಹಸ್ಯಮಯವಾದ ಅರಿವಿನ ಧರ್ಮವನ್ನು ಬಸವಣ್ಣನವರು ಸಹಜವಾಗಿ, ಸರಳವಾಗಿ ತನು ಕುಲಕ್ಕೆ ಸಾರಿದರು. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಶಿವನ ಕೀರ್ತಿ ಬಸವಣ್ಣನ ಧರ್ಮವಯ್ಯಾ. ಶಿವನ ಸ್ತೋತ್ರ ಬಸವಣ್ಣನ ಧರ್ಮವಯ್ಯಾ . ಶಿವನ ಮಂತ್ರೋಚ್ಚಾರಣೆ ಬಸವಣ್ಣನ ಧರ್ಮವಯ್ಯಾ ಕಪಿಲಸಿದ್ಧ ಮಲ್ಲಿನಾಥಯ್ಯಾ ಎಂದಿದ್ದಾರೆ.

**998**

**ಶಿವನೆ, ನಿಮ್ಮನ್ನಲ್ಲದೆ ಮತ್ತೊಂದು ನಾನರಿಯೆನಯ್ಯಾ.**
**ಶಿವನೆ, ನಿಮ್ಮ ಸೇವೆಯನಲ್ಲದೆ,**
**ಮತ್ತೊಂದಕ್ಕೆ ಮನ ಹಾರೈಸದಂತೆ ಮಾಡಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಅಂಗದಲ್ಲಿ ಸಂಗಮವಾದ ಶಿವನ ಅಂಗವೊಂದು ಇದೆ. ಅದು ಅರಿವಿನ ಅಂಗ. ಅಂಗವನ್ನು ಆವರಿಸಿದ ಮನೋಮಯವಾದ ಅಂಗವೊಂದು ಇದೆ. ಅಂಗ, ಅರಿವಿನ ಅಂಗ, ಮನೋಮಯವಾದ ಅಂಗ. ಹೀಗೆ ಮೂರು ಅಂಗಗಳು.

ಮನೋಮಯವಾದ ಅಂಗ, ಅಂಗದಲ್ಲಿಯೇ ಸಂಗಮವಾದ ಶಿವನ ದರ್ಶನ ಮಾಡಿಕೊಂಡಾಗ, ಮನಕ್ಕೆ ಶಿವನ ಸಾಕ್ಷಾತ್ಕಾರವಾಗಿ, ಮನ ಘನಮನವಾಗುತ್ತದೆ. ಆಗ ಮನಕ್ಕೆ ಇಡೀ ಬ್ರಹ್ಮಾಂಡವೇ ಶಿವಮಯವಾಗಿ ಕಾಣುತ್ತದೆ. ಸಕಲ ವಸ್ತುಗಳಲ್ಲಿಯೂ ಸತ್ಯ ಇರುವುದು ಮನಕ್ಕೆ ಗೋಚರಕ್ಕೆ ಬಂದಾಗ, ಮನ ಪರಮಾನಂದದಿಂದ ಶಿವನೇ, ನಿಮ್ಮನ್ನಲ್ಲದೇ ಮತ್ತೊಂದ ನಾನರಿಯೆನಯ್ಯ. ಶಿವನೆ, ನಿಮ್ಮ ಸೇವೆಯನ್ನಲ್ಲದೇ ಮತ್ತೊಂದಕ್ಕೆ ಮನ ಹಾರೈಸದಂತೆ ಮಾಡಯ್ಯ ಕಪಿಲಸಿದ್ಧ ಮಲ್ಲಿನಾಥಯ್ಯಾ.

**999**

**ಶಿವಪೂಜೆಯನು ಮಾಡುವ ಕಾಲಕ್ಕೆ**
**ಅವಿತಥವಿಲ್ಲದೆ ಬಯಸದೀ ಮನವು,**
**ಇನ್ನೇವೆ ಇನ್ನೇವೆನಯ್ಯಾ.**
**ಕಾಲಕಿಚ್ಚೈಸೂದು ಕ್ರೋಧಕಿಕಿಚ್ಚೈಸೂದು**
**ಇನ್ನೇವೆ ಇನ್ನೇವೆನಯ್ಯಾ.**
**ನಿನ್ನ ಮನದಲು ಇರಲೀಯದು**
**ತನ್ನ ಮಯವ ಮಾಡೂದು.**
**ಈ ಮಾಯದ ಮನಕ್ಕಂಜುವೆ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಮನದಲ್ಲಿ ಟಿಸಿಲೊಡೆದು ಎರಡು ಭಾಗವಾಗಿ ಒಂದು ಮನ ಶಿವಪೂಜೆಯನು ಮಾಡಲು ಉತ್ಸುಕನಾದರೆ, ಮತ್ತೊಂದು ಕಾಮಕ್ಕೆ, ಕ್ರೋಧಕ್ಕೆ ಎಳೆಸುವುದು. ಸ್ವಾರ್ಥಕ್ಕೆಳಸಿ ತನಗೆ ಬೇಕಾದದ್ದನ್ನು ಬೇಡುವ ಮನವನ್ನು ಕಂಡು ಇನ್ನೇವೆನಯ್ಯಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ತನುವಿನಲ್ಲಿ ಇರಲೀಯದೇ ತನುವನ್ನೇ ತನ್ನಂತೆ ಮಾಡಿಕೊಂಡು, ಮಾಯಕ್ಕೆರಗುವ ಈ ಮಾಯದ ಮನಕ್ಕೆ ಅಂಜುವೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಎಂದಿದ್ದಾರೆ.

**1000**

**ಶಿವನೇ ಶಿವನೇ ಎಂದು ಒರಲುವೆನಯ್ಯಾ.**
**ಭವನೇ ಭವನೇ ಎಂದು ಬಾಯ ಬಿಡುವೆನಯ್ಯಾ.**
**ಎನ್ನ ಬಾಯಿಗೆ ನಿಮ್ಮ ಪ್ರಸಾದವನಿಕ್ಕಿ,**
**ಎನ್ನ ತನು ನಿಮಗಾಯಿತ್ತು, ಕಪಿಲಸಿದ್ಧ ಮಲ್ಲಿನಾಥಯ್ಯಾ.**

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಿವಿನ ಶಿವನನ್ನು

ಆರಾಧಿಸಲೇಬೇಕು. ಆರಾಧಿಸದಿದ್ದರೆ ಅದಕ್ಕೆ ಗತ್ಯಂತರವಿಲ್ಲ.

ಮನವೆನ್ನುವುದು ಕತ್ತಲು. ಕಾಯವನ್ನು ಸದಾ ಕತ್ತಲ ಸುಖಕ್ಕಾಗಿಯೇ ಕರೆದುಕೊಂಡು ಹೋಗುತ್ತದೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು ಕಾಯದಲ್ಲಿಯೇ ಸೃಷ್ಟಿ ಮಾಡಿ, ಕಾಯವನ್ನು ಕಳವಳಕ್ಕೀಡು ಮಾಡುತ್ತದೆ.

ಕಾಯದಲ್ಲಿ ಅರಿವಿನ ಬೆಳಕು ಇದೆ. ಆ ಬೆಳಕನ್ನೇ ಸಿದ್ಧರಾಮ ಶಿವಯೋಗಿಗಳು ಶಿವ ಎಂದು ಕರೆದಿದ್ದಾರೆ. ಕತ್ತಲು ಬೆಳಕಿನ ಸಂಗ ಮಾಡಿದರೆ ಬೆಳಕೇ ಆಗುವುದು. ಕಾಯ ಬೆಳಗಿಂಗೆ ಬೆಳಕಾಗಿ ಬೆಳಗುವುದು. ಇಲ್ಲದಿದ್ದರೆ ಜನನ ಮರಣಗಳಿಗೆ ತುತ್ತಾಗಿ, ಸದಾ ದುಃಖದಲ್ಲಿ ಮುಳುಗುವುದು.

ವೃಕ್ಷಕ್ಕೆ ಸುಖವಿಲ್ಲ, ದುಃಖವಿಲ್ಲ. ಮೂರು ಕಾಲಗಳಲ್ಲಿ ಅದು ಸಹಜವಾಗಿಯೇ ಇರುವುದು. ಹೀಗಾಗಿ ಶರಣರು ಕಾಯವನ್ನು ಜ್ಞಾನದ ಮರವೆಂದು ಕರೆದರು. ಬುದ್ಧ ಬೋಧೀವೃಕ್ಷವೆಂದು ಕರೆದ.

ಕಾಯ, ಜ್ಞಾನದ ಮರವಾಗಬೇಕಾದರೆ, ಕಾಯವನ್ನು ಆವರಿಸಿದ ಮನಕ್ಕೆ, ಕಾಯದಲ್ಲಿಯೇ ಸಂಗಮವಾದ ಅರಿವಿನ ಸಂಗ ಮಾಡುವ ಕಾಯಕಕ್ಕೆ ಹಚ್ಚಬೇಕು. ಮನ ಕಾಯದ ಈ ಕಾಯಕದಲ್ಲಿ ಸಫಲವಾದಾಗ, ಅರಿವಿನ ಪ್ರಸಾದ ಮನದ ಬಾಯಿಗೆ ಬಂದು ಬೀಳುತ್ತದೆ. ಶಿವನೇ ಶಿವನೇ ಎಂದು ಹೊರಲಿ ಬಾಯಿ ಬಿಡುವ ಮನಕ್ಕೆ ಶಿವನ ಪ್ರಸಾದದಿಂದಾಗಿ, ಆತನ ದರುಶನದಿಂದ ಮನ ಘನಮನವಾಗುತ್ತದೆ. ಮನದ ತನು ಜ್ಞಾನದ ತನುವಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**1001**

**ಶಿವಾಚಾರಸಂಪನ್ನರಾಗಿ ಯೋಗ ನಿಲವ ನಿಂದವರು,**
**ಇತ್ತಲನುಸರಿಸುವರು ಅತ್ತಲಾಚರಿಸುವರು ಪರಮಾರ್ಥವನು.**
**ಕಪಿಲಸಿದ್ಧ ಮಲ್ಲಿನಾಥನೆಂಬ ಮಹಾಬಯಲ ಮಾಡಿಪ್ಪರು.**

ಶಿವಾಚಾರವೆಂದರೆ ಗೋಚರಿಸುವ ಆಚಾರವಲ್ಲ, ಅಗೋಚರದ ಆಚಾರವುಳ್ಳವರೇ ಶಿವಾಚಾರ ಸಂಪನ್ನರು.

ಶಿವಾಲಯಕ್ಕೆ ಹೋಗಿ, ಶಿವನನ್ನು ಆರಾಧಿಸುವವನು ಶಿವಾಚಾರ ಸಂಪನ್ನನಲ್ಲ. ಅಂಗೈಯಲ್ಲಿ ಲಿಂಗವನ್ನು ಇಟ್ಟುಕೊಂಡು ತ್ರಿಕಾಲದಲ್ಲಿ ಪೂಜಿಸುವವನು ಕೂಡಾ ಶಿವಾಚಾರ ಸಂಪನ್ನನಲ್ಲ. ನೇತ್ರದ ಅಜ್ಞಾನವನ್ನು, ನೇತ್ರದ ಜ್ಞಾನಕ್ಕೆ ಇತ್ತು, ಜ್ಞಾನದಿಂದ ನೋಡುವವನೇ ಶಿವಾಚಾರ ಸಂಪನ್ನ. ತನುವಿನ ಅಜ್ಞಾನವನ್ನು ತನುವಿನ ಜ್ಞಾನದಲ್ಲಿ ಸಂಗ ಮಾಡಿ ನಿಂತವನೇ ಯೋಗಿ. ಇಂತಹ ಯೋಗಿಯಾದವನು ಪ್ರಪಂಚದಲ್ಲಿಯೂ ಇರುವನು, ಪಾರಮಾರ್ಥದಲ್ಲಿಯೂ ಇರುವನು. ಎರಡನ್ನು ಮಹಾಬಯಲು ಮಾಡಿ ಇರುವ ಶಕ್ತಿ ಶಿವಾಚಾರ ಸಂಪನ್ನನಿಗೆ ಮಾತ್ರ ಇರುತ್ತದೆ. ಆತ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1002**

**ಶಿವಾಚಾರಸಂಪನ್ನರೆಂಬ ಮಹಾಯೋಗ್ಯರು**
**ಜಡಾವಸ್ಥೆಯಲು ಇರಲು**
**ಉದಯದೂರ್ಧ್ವ ಶಿಖರಂಗಳುರಿದು,**
**ಶಿರಮಸ್ತಕದಲ್ಲಿರ್ದ ಅಮೃತ ಕರಗಿ ಸುರಿದು,**

**ತಗ್ಗಿ ನೆಲೆಗೊಂಡವರ ಹೃದಯಂಗಳೂ ಮಹಾಯೋಗ್ಯರು**
**ತಮ್ಮ ಉದಯಾಸ್ತಮಾನಂಗಳ ನೆನೆಯೆಂಬೆ**
**ಕಪಿಲಸಿದ್ಧ ಮಲ್ಲೇಶ್ವರಾ.**

ಅರಿವಿನ ಆಚಾರದಲ್ಲಿರುವವರೇ ಶಿವಾಚಾರಿಗಳು. ಲೋಕದ ದೃಷ್ಟಿಯಲ್ಲಿ ಶಿವಾಚಾರಿ ಅನಾಚಾರಿಯಾಗಿ ಕಾಣುತ್ತಾನೆ. ಶಿವಾಚಾರ ಸಂಪನ್ನರ ದೃಷ್ಟಿಯಲ್ಲಿ ಲೋಕ ಅನಾಚಾರದಲ್ಲಿ ಭಾಗಿಯಾದುದನು ಕಾಣುತ್ತಾರೆ.

ಶಿವಾಲಯಗಳನ್ನು ನಿರ್ಮಿಸುವುದು ಉತ್ಸವಗಳನ್ನು ಮಾಡುವುದು. ಜಾತ್ರೆ, ಪಲ್ಲಕ್ಕಿ, ಮೆರವಣಿಗೆಯಲ್ಲಿ ಲೋಕ ಭಾಗಿಯಾದರೆ ಶಿವಾಚಾರ ಸಂಪನ್ನನಿಗೆ ಈ ಎಲ್ಲಾ ಆಚಾರಗಳು ಅನಾಚಾರವಾಗಿ ಕಾಣುತ್ತವೆ. ಕಲ್ಲಿನಲ್ಲಿ ಶಿವನನ್ನು ಕೆತ್ತಿ ಆ ಶಿವನಿಗೆ ರುದ್ರಾಭಿಷೇಕ, ಪನ್ನೀರು ಸೇವೆ ಮುಂತಾದ ಆಚಾರಗಳ ಮೂಲಕ ಲೋಕ ಪೂಜೆಯಲ್ಲಿ ನಿರತವಾಗಿದ್ದರೆ, ಶಿವಾಚಾರ ಸಂಪನ್ನನಿಗೆ ಅಗೋಚರ ಆಚಾರ. ಕಲ್ಲಲ್ಲಿ ಕೆತ್ತಿದ ಶಿವನನ್ನು ಕಲ್ಲೆಂದೇ ನೋಡಿ ಮೌನಿಯಾಗುತ್ತಾನೆ. ಪ್ರತಿಯೊಂದು ವಸ್ತುವಿನಲ್ಲಿಯ ಸತ್ಯವನ್ನು ನೋಡಿ ಸಹಜನಾಗುತ್ತಾನೆ. ಸದಾ ಸಹಜಾವಸ್ಥೆಯಲ್ಲಿ ಇದ್ದರೂ ಕೂಡಾ ಆತನ ಮಸ್ತಕದಿಂದ ಸದಾ ಅರಿವಿನ ಅಮೃತ ಕರಗಿ ಸುರಿಯುತ್ತಿರುತ್ತದೆ. ಆತನೊಂದಿಗೆ ಬೆರೆತ ಹೃದಯಗಳು ಆತನಂತೆಯೇ ಆಗುತ್ತವೆ. ಆತನಿಗೆ ಉದಯವು ಇಲ್ಲ ಅಸ್ತಮಾನವು ಇಲ್ಲ. ಸದಾ ಬೆಳಗಿಂಗೆ ಬೆಳಗಾಗಿ ಬೆಳಗುತ್ತಾನೆ.

**1003**

**ಶಿಸು ಕಂಡ ಕನಸು ತಾ ಪಸರಿ ಪೆರ್ಬಿತು,**
**ಮೂರು ದೆಸೆದೆಸೆಯ ಬಣ್ಣಗಳು ಹಲವಾಗಿ**
**ಆಲಿ ಬೆಳಕನೆ ನುಂಗಿ, ಆಲಿಸುತ ಕಂಬನಿಯ**
**ಲೋಲನ್ನ ಕಂಡು ತಾ ಮುಗ್ಧೆಯಿಂದೂ**
**ಸಾನುವಿನ ಕೂಡನ ಹೊತ್ತಾನತದ ಲೋಕದೊಳು**
**ತಾನು ತಾನಾಗಿ,**
**ತತ್ವದ ತುದಿಯಲಿ ಹಮ್ಮಡಗಿದಕ್ಷರದ ಸೊಮ್ಮು ಮೀರಿದ**
**ಬ್ರಹ್ಮಕರ್ಮಿಗಳಿಗದು ತಾನು ವಶವಲ್ಲದೆ**
**ಇನ್ನು ಕಪಿಲಸಿದ್ಧ ಮಲ್ಲಿನಾಥನೆಂದೆಂಬ**
**ಸೊಮ್ಮಿನ ಬ್ರಹ್ಮಕ್ಕೆ ಸೇರಿತ್ತಯ್ಯ.**

ಶಿಶು ಕಂಡ ಕನಸು, ಇಡೀ ಬ್ರಹ್ಮಾಂಡವನ್ನೇ ತುಂಬಿ, ದೆಸೆದೆಸೆಯ ಬಣ್ಣಗಳಿಂದ ಹಲವಾಗಿ, ಕಣ್ಣಲ್ಲಿಯ ಬೆಳಕನ್ನು ನುಂಗಿ ಪರಮಾನಂದದ ಕಂಬನಿಯನು ಆಲಿಸುತ್ತಾ ಮುಗ್ಧೆಯಿಂದ ಲೋಕದೊಳು ತಾನು ತಾನಾಗಿ ಕೂಡಿ ಸಹಜಾನಂದವನು ಅನುಭವಿಸಿತು.

ತನು ಏನೂ ಕಲಿಯುವ ಅವಶ್ಯಕತೆ ಇಲ್ಲದಿದ್ದರೂ ತನುವಿನಿಂದ ಹೊರಬಂದ ತತ್ವಗಳನು ತಾನೇ ಕಲಿತು ವಶವಲ್ಲದ ಬ್ರಹ್ಮಕನ್ಯೆಯೆಂದು ಅನಿಸಿಕೊಳ್ಳುತ್ತಲಿದೆ. ಬ್ರಹ್ಮನೇ ತಾನಿರಬೇಕಾದಾಗ ಬ್ರಹ್ಮತತ್ವವನ್ನು ಕಲಿತರೆ ಆಡಲು ಬರುತ್ತದೆಯೇ ಹೊರತು ಇರಲು ಬರುವುದಿಲ್ಲ.

ಕಲಿಯಬೇಕಾಗಿಲ್ಲ ಇರುವಂತೇ ಇದ್ದ ಬ್ರಹ್ಮದಲ್ಲಿ ಭ್ರಮೆ ಸಂಗಮವಾಗಿ ತನ್ನ ಸೊಮ್ಮನ್ನು ತಾನು ಸೇರಬೇಕಾಗಿದೆ. ಆಗ ತನ್ನ ಸೊಮ್ಮನ್ನು ತಾನೇ ಬಳಸುವ ಕಲೆ ತನಗೆ ತಾನೇ ಬರುತ್ತದೆ. ಆಡಿದ ಮಾತುಗಳೆಲ್ಲ ಬ್ರಹ್ಮ. ಕೇಳುವ ಸಕಲ ಮಾತುಗಳು ಕೂಡಾ ಬ್ರಹ್ಮನೇ ಆಲಿಸಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ.

**1004**

**ಶ್ರೀಕರ ಬ್ರಹ್ಮಾದಿಗಳೇನು ಕಾರಣ**
**ಯೋನಿ, ನಾನಾ ಭವಂಗಳಲಿ ಬಂದರಯ್ಯ.**
**ಧ್ಯಾನ ಮೌನ ಸಮಾಧಿಕಾರಣದ ಸಮತೆಯನ್ನು,**
**ಭೇದಿಸಲು ಅರಿಯದೆ, ನಾನಾ ಭವಂಗಳಲಿ ಮಗ್ನವಾಗಿ,**
**ಅನಾದಿ ಸಂಸಿದ್ಧ ಕಪಿಲಸಿದ್ಧ ಮಲ್ಲಿಕಾರ್ಜುನ**
**ಆದಿಯಕ್ಷರ ಸಮತೆ ಸಮಗೂಡದು.**

ಶ್ರೀಕರ ಬ್ರಹ್ಮಾದಿಗಳಿಗೆ ಜನನವಿದೆ. ಮರಣವಿದೆ. ನಾನಾ ಜನ್ಮಂಗಳಲ್ಲಿ ಬಂದವರು ಅವರು. ಧ್ಯಾನ, ಮೌನ, ಸಮಾಧಿಯಲ್ಲಿ ಸಮತೆಯನ್ನು ಭೇದಿಸಲು ಅರಿಯದೇ ಹುಟ್ಟು-ಸಾವುಗಳ ಸುಖ-ದುಃಖಗಳನ್ನು ಅನುಭವಿಸುತ್ತಾ ಹೋದರು. ಬ್ರಹ್ಮನಿಗೆ ಹುಟ್ಟಿಲ್ಲ, ಸಾವಿಲ್ಲ ಕೇಡಿಲ್ಲ ರೂಹಿಲ್ಲ. ಯಾರೂ ಈತನನ್ನು ಹಡೆದಿಲ್ಲ.

ಅಂಗಕ್ಕೆ ಜನ್ಮ ನೀಡಿ ಅಂಗದಲ್ಲಿ ಬ್ರಹ್ಮನಾಗಿ ತಾನಿದ್ದವನು. ಅಂಗವನ್ನು ಆವರಿಸಿದ ಈತನ ಬೆಳಕಿನ ನೆರಳೆ ಮನವೆಂಬ ಭ್ರಮೆಯಾಯಿತು. ಬ್ರಹ್ಮನಿಂದ ಸೃಷ್ಟಿಯಾದ ಮನವೆಂಬ ಭ್ರಮೆ ಬ್ರಹ್ಮನನ್ನು ಅರಿಯದಿದ್ದಕ್ಕಾಗಿ ಅಂಗವನ್ನು ಆವರಿಸಿಕೊಂಡಿದೆ. ತಾನು ಹಿಡಿದುಕೊಂಡ ಅಂಗವನ್ನು ತಾನೇ ಬಿಟ್ಟು, ತನ್ನನ್ನು ಸೃಷ್ಟಿ ಮಾಡಿದ ಬ್ರಹ್ಮನೊಂದಿಗೆ ಸಂಗಮವಾದರೆ, ಸಕಲ ಭ್ರಮೆಗಳನ್ನು ಕಳೆದುಕೊಂಡು ಬ್ರಹ್ಮನೇ ತಾನಾಗುತ್ತದೆ. ಹುಟ್ಟು ಸಾವುಗಳನ್ನು ಕಳೆದುಕೊಳ್ಳುತ್ತದೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**1005**

**ಶುದ್ಧ ಕಾನನದೊಳಗೆ ಶುದ್ಧವಾಯುವು ಬೀಸಿ**
**ಪ್ರಸಿದ್ಧ ಕಮಲದಲ್ಲಿ ಬಹು ಛಾಯದ**
**ಹಲವು ಪರಿಯಲ್ಲಿ ಎಸೆವ ತೆರಹಿಲ್ಲದಿಹ ಗಮನ**
**ಕುರುಹಿಂಗೆ ಬಾರದಿಹ ಶೂನ್ಯಾಂಗನ**
**ಸ್ವಾನುಭಾವದ ಮನೆಯ ನಾನೊಡನೆ ಓಲಾಡಿ**
**ನೀನು ನಾನಾದೆ ಕಪಿಲಸಿದ್ಧ ಮಲ್ಲೇಶ್ವರಾ.**

ಪರಿಶುದ್ಧವಾದ ಕಾಡಿನೊಳಗೆ ಬೆಳೆದ ಕಮಲ ಜ್ಞಾನವಾಯು ಬೀಸಲಾಗಿ ಬಹುವಿಧದಲ್ಲಿ ಹಲವು ಪರಿಯಲ್ಲಿ ಅರಳಿ ನಿಂತಿತು. ಜಲದಲ್ಲಿ ಬೆಳೆದ ಕಮಲ ಜಲದಲ್ಲೇ ಹುಟ್ಟಿದೆ. ಜಲದ ಮೇಲೆ ನಿಂತು ಅರಳಿದೆ. ಅದರ ಬೇರು ಜಲವೇ, ಕಾಂಡ ಜಲವೇ, ಅದರ ಪತ್ರಗಳು ಜಲವೇ ಆಗಿವೆ. ಜಲ

ಜಲಗಳ ಮೇಲೆ ನಿಂತು ಜಲವೇ ಅರಳಿದಂತಲ್ಲವೇ. ಜಲ ಜಲದ ಮೇಲೆ ನಿಂತು ಅರಳಿ ನಿಂತಿದೆ ಎಂದರೆ ಸೋಜಿಗದ ಮಾತು.

ಭೂಮಿಯ ಮೇಲೆ ವಾಸಿಸುವ ಸಕಲ ಕಾಯಗಳು ಕುರುಹು ಆಗಿ ಕಂಡರೂ ಅದು ಶೂನ್ಯ ಕಾಯವೇ ಆಗಿದೆ. ಸ್ವಾನುಭಾವದ ಮನೆಯ ಮೇಲೆ ಓಲಾಡಿ ಶೂನ್ಯದೊಂದಿಗೆ ಶೂನ್ಯ ಮಾತಾಡಿದಂತಲ್ಲವೆ? ಕಾಯದ ಮೇಲೆ ಕಾಯವೊಂದು ಅರಳಿ ನಿಂತು, ಅರಳಿದ ಕಾಯದೊಂದಿಗೆ ಮಾತನಾಡುವ ಕಾಯಕದಲ್ಲಿ, ಕಾಯದಲ್ಲಿಯೇ ಇರುವ ಅಕಾಯ, ತನ್ನ ಸ್ವಾನುಭಾವದ ಕಾಯಕದಲ್ಲಿ ನಿರತವಾದಂತಿದೆ.

**1006**

**ಶುದ್ಧ ತತ್ವದೊಳಗೆ ಸಿದ್ಧ ಬ್ರಹ್ಮದೊಳಗೆ**
**ಪ್ರಸಿದ್ಧವೂ ತನುಮನ ತವಕದಲ್ಲಿ.**
**ಶುದ್ಧ ಸಿದ್ಧ ಭೇದ ಪ್ರಸಿದ್ಧದನುಮತವು ನಿರ್ದೈವರಿಗುಂಟೆ?**
**ಕಪಿಲಸಿದ್ಧ ಮಲ್ಲೇಶ್ವರಾ.**

ಶುದ್ಧ ತತ್ವದ ತನುವೊಂದು ತನುವಿನಲ್ಲಿಯೇ ತನ್ಮಯವಾಗಿದೆ. ಅದು ಸಿದ್ಧ ಬ್ರಹ್ಮ, ಶುದ್ಧ ಬ್ರಹ್ಮ, ಪ್ರಸಿದ್ಧ ಬ್ರಹ್ಮ. ತನು ಮತ್ತು ಮನ ಆ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದವನು ಸ್ವೀಕರಿಸುವ ತವಕದಲ್ಲಿ ನಿರತವಾಗಿವೆ. ಈ ಕಾಯಕವನ್ನು ಬಲ್ಲ ಕಾಯಗಳಿಗೆ ಮಾತ್ರ ಕಾಯದಲ್ಲಿಯೇ ಸಂಗಮವಾದ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದ ಲಭ್ಯವಾಗುತ್ತದೆ. ಹಾಗೆಂದರೇನೆಂದು ಗೊತ್ತೆ ಇಲ್ಲದ ನಿರ್ದೈವಿ ಕಾಯಗಳಿಗೆ ಈ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದಿ ಕಾಯಗಳು ದೊರೆಯಲುಂಟೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1007**

**ಶುದ್ಧದಲ್ಲಿ ಪ್ರವೇಶಿಸಿ, ಸಿದ್ಧದಲ್ಲಿ ಪ್ರಕಟಿಸಿ,**
**ಪ್ರಸಿದ್ಧದಲ್ಲಿ ಭೇದಿಸಿಯಿಪ್ಪ ಸಜ್ಜನ ಶುದ್ಧಶಿವಾಚಾರಂಗೆ**
**ನಿತ್ಯ ಲಿಂಗಾರ್ಚನೆ, ನಿತ್ಯ ಜಂಗಮಾರ್ಚನೆ,**
**ನಿತ್ಯ ಕೊಂಬುದು ಪಾದೋದಕ, ನಿತ್ಯ ಕೊಂಬುದು ಪ್ರಸಾದ.**
**ತಾಂ ನಿತ್ಯನಾಗಿ ಅನ್ಯದೈವಕ್ಕೆರಗ, ಅನ್ಯವ ಬಗೆಯ,**
**ಪಾದೋದಕಕ್ಕಲ್ಲದೆ ಬಾಯ್ದೆರೆಯ, ಪ್ರಸಾದವನಲ್ಲದೆ ಗ್ರಹಿಸ,**
**ಪಾದೋದಕ ಪ್ರಸಾದವಲ್ಲದೆ ಕೊಂಡಡೆ ಅನಾಚಾರ**
**ಹೊದ್ದೀತೆಂದು ಕಪಿಲಸಿದ್ಧ ಮಲ್ಲಿಕಾರ್ಜುನನ ಏಕೀಭವಿಸಿದ**
**ಲಿಂಗತ್ರಯದಲ್ಲಿ ನಿತ್ಯ ಪ್ರಸಾದಿ.**

ತನುವನ್ನು ಆವರಿಸಿದ ಮನ, ತನುವಿನಲ್ಲಿ ತನ್ಮಯವಾದ ಶುದ್ಧ ತನುವನ್ನು ಪ್ರವೇಶಿಸಿ, ಶುದ್ಧವೇ ತಾನಾಗಿ, ಸಿದ್ಧ ತನುವಿನ ಮೂಲಕ ಗೋಚರಿಸಿ, ಪ್ರಸಿದ್ಧದಲ್ಲಿ ಬೇಧಿಸಿದ ಸಜ್ಜನ ಶುದ್ಧ ಶಿವಾಚಾರ್ಯರ್ಗಂಗೆ ನಿತ್ಯ ಲಿಂಗಾರ್ಚನೆ. ನಿತ್ಯ ಜಂಗಮಾರ್ಚನೆ. ಸ್ವತಃ ತಾನು ನಿತ್ಯ ಪಾದೋದಕವನ್ನು ಕೊಂಡು, ನಿತ್ಯ ಪ್ರಸಾದವನು ಕೊಂಡು, ನಿತ್ಯವೇ ತಾನಾಗಿ ಅನ್ಯದೈವಕ್ಕೆ ಎರಗುವುದಿಲ್ಲ. ಅನ್ಯವನು ನುಡಿಯುವುದಿಲ್ಲ. ಜ್ಞಾನದ ನುಡಿಗಳಲ್ಲದೆ ಬಾಯ್ದೆರೆಯ. ಸಕಲವನ್ನು ಪ್ರಸಾದದಂತೆ ಗ್ರಹಿಸುತ್ತಾನೆ.

ಪಾದೋದಕ ಪ್ರಸಾದವಲ್ಲದೆ ಕೊಂಡಡೆ ಅನಾಚಾರ ಹೊದ್ದೀತೆಂದು ಕಪಿಲಸಿದ್ಧ ಮಲ್ಲಿಕಾರ್ಜುನನು ಏಕೀಭವಿಸಿದ ಲಿಂಗತ್ರಯದಲ್ಲಿ ನಿತ್ಯ ಪ್ರಸಾದಿ.

ತನುವಿನಲ್ಲಿ ಸುಖ ದುಃಖಗಳೂ ಆಗದಂತೆ ನೋಡುತ್ತಾನೆ. ಸುಖ ದುಃಖಗಳೂ ಆಗದಂತೆ ಕೇಳುತ್ತಾನೆ. ಸುಖ ದುಃಖ ಆಗದಂತೆ ರುಚಿಸಿ, ಗ್ರಹಿಸಿ ಮುಟ್ಟುತ್ತಾನೆ. ಶುದ್ಧ ಸಿದ್ಧ ಪ್ರಸಿದ್ಧ ಲಿಂಗತ್ರಯದಲ್ಲಿ ನಿತ್ಯ ಪ್ರಸಾದಿ ಆದಾತ.

**1008**

**ಶುದ್ಧದಿಂದ ಸಿದ್ಧವನರಿತೆ,**
**ಸಿದ್ಧದಿಂದ ಪ್ರಸಿದ್ಧವನರಿತೆ,**
**ಒಂದರಿಂದ ಒಂದನರಿದೆ, ಎರಡರಿಂದ ಮತ್ತೊಂದನರಿದೆ**
**ಆ ಒಂದರೊಳಗೆ ಎರಡೆನ್ನದಿದ್ದಡೆ**
**ನಿಮ್ಮಾಜ್ಞೆಗೆ ದೂರ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯಗಳು, ಮೂರು ಇವೆ. ಶುದ್ಧ ಕಾಯ, ಸಿದ್ಧಕಾಯ, ಪ್ರಸಿದ್ಧಕಾಯ. ಸಿದ್ಧಕಾಯವನು ಶುದ್ಧ ಕಾಯ ಆವರಿಸಿದೆ. ಸಿದ್ಧ ಕಾಯದಲ್ಲಿ ಪ್ರಸಿದ್ಧ ಕಾಯ ಸಂಗಮವಾಗಿದೆ. ಶುದ್ಧ ಸಿದ್ಧ ಸಂಗಮವಾಗಿರುವುದರಿಂದ ಒಂದನ್ನು ಮತ್ತೊಂದು ಅರಿಯಲು ಸಾಧ್ಯವಾಗುತ್ತಿಲ್ಲ. ಸಿದ್ಧವನ್ನರಿತಾಗಲೇ ಮನೋಕಾಯ ಶುದ್ಧವಾಗಿ ಸಿದ್ಧದಿಂದ ಪ್ರಸಿದ್ಧವನ್ನರಿಯಲು ಅಸುವಾಗುತ್ತದೆ.

ಒಂದರಲ್ಲಿಯೇ ಎರಡಿವೆ. ಎರಡೆನ್ನಲು ಹೋದರೆ ಮೂರಾಗಿದೆ. ಮೂರೆನ್ನಲು ಹೋದರೆ ಒಂದೇ ಆಗಿದೆ. ಒಂದರೊಳಗೆ ಇದ್ದ ಎರಡನ್ನು ಎರಡೆನ್ನದಿದ್ದಡೆ ಗುರುದೇವನೆ ನಿನ್ನಾಜ್ಞಾಗೆ ದೂರ ಕಪಿಲಸಿದ್ಧ ಮಲ್ಲಿಕಾರ್ಜುನ.

ಸಕಲ ಕಾಯಗಳು ಶುದ್ಧ, ಸಿದ್ಧ, ಪ್ರಸಿದ್ಧ ತತ್ವವನ್ನು ಹೊಂದಿದ್ದರೂ ಕೂಡ, ತಾನು ಶುದ್ಧ ಹೇಗೆ ಎಂದು ತಿಳಿಯಲು ಕಾಯಕ್ಕೆ ಸಾಧ್ಯವಾಗುತ್ತಿಲ್ಲ. ಶುದ್ಧದಿಂದಲೇ ತಾನು ಸಿದ್ಧವನ್ನು ಹೇಗೆ ಅರಿಯಬೇಕೆಂಬುದು ತಿಳಿಯಲು ಕಾಯಕ್ಕೆ ಸಾಧ್ಯವಾಗುತ್ತಿಲ್ಲ. ಸಿದ್ಧದಿಂದ ಪ್ರಸಿದ್ಧವನ್ನು ಹೇಗೆ ಅರಿಯಬೇಕೆಂಬುದು ಕೂಡಾ ತನಗೆ ಸಾಧ್ಯವಾಗದ ನಿಮಿತ್ಯ ಕಾಯ ಕೈಲಾಸವೆಂದು ಕರೆಯಿಸಿಕೊಳ್ಳದೇ ಕೇವಲ ಕಾಯವೆಂದು ಕರೆಯಿಸಿಕೊಳ್ಳಲು ಕೂಡಾ ಕಾಯಕ್ಕೆ ಆಗುತ್ತಿಲ್ಲ. ಇದು ಕಾಯದ ದುರ್ದೈವವೇ ಸರಿ.

**1009**

**ಶುದ್ಧ ದೀಕ್ಷೆಯೊಳಾನು ಸಿದ್ಧನಾದೆನು ಬಸವ ತಂದೆ,**
**ಸಿದ್ಧ ದೀಕ್ಷೆಯೊಳಾನು ಸ್ವಯವಾದೆನ್ನೈ.**
**ಶುದ್ಧ ಸಿದ್ಧವು ಕೂಡಿ ಪ್ರಸಿದ್ಧ ದೀಕ್ಷೆಯೊಳು**
**ಹೊದ್ದಿ ನಡೆವೆನು ಬಸವಣ್ಣ, ನಿನ್ನವರ ಹೊಲಬಿಗನಾಗಿ.**
**ಮತ್ತೆ ಪ್ರಸಾದವನು ಐದಾರನೇ ಗ್ರಹಿಸಿ,**
**ಮತ್ತೆ ಪಾದೋದಕವನೀರೈದ ಧರಿಸಿಯಾನು**

**ಹುಟ್ಟುಗೆಟ್ಟೆನು ಬಸವಣ್ಣಾ ನಿಮ್ಮ ಕರುಣದಿಂದ.**
**ಆನಂದಗುರು ಕಪಿಲಸಿದ್ಧ ಮಲ್ಲೇಶ್ವರನ**
**ಕಾರಣದ ಶರಣರಿಗೆ ಶಿಶುವಾದೆನು.**

ಬಸವ ತಂದೆ ಮನವನ್ನು ಹಿಡಿದು ಆ ಮನಕ್ಕೆ ಶುದ್ಧ ದೀಕ್ಷೆಯನು ನೀಡಿದೆ. ಆ ದೀಕ್ಷೆಯನ್ನು ಹೊಂದಿದ ಮನವೆಂಬ ನಾನು ಶುದ್ಧನಾದೆ. ಆ ಶುದ್ಧ ದೀಕ್ಷೆಯಿಂದ ನಾನು ಸಿದ್ಧನಾದೆ. ಸಿದ್ಧ ದೀಕ್ಷೆಯಿಂದಲೇ ನಾನು ಸ್ವಯವಾದೆ. ಶುದ್ಧ, ಸಿದ್ಧ ಕೂಡಿ ಪ್ರಸಿದ್ಧ ದೀಕ್ಷೆಯನು ಹೊದ್ದು, ಬಸವಣ್ಣ ನಾನು, ನೀನು ಹೇಳಿದಂತೆಯೇ ನಡೆದೆ. ಹಾಗೆ ನನ್ನನ್ನು ನನ್ನ ದೇವನೆ ನಡೆಸಿದ. ನಿನ್ನವರೊಂದಿಗೆ ಬೆರೆಯಲು ಅರ್ಹನಾದೆ. ಮತ್ತೆ ಪ್ರಸಾದ ತತ್ವವನು ಹೊಂದಿ ಕರ್ಮೇಂದ್ರಿಗಳು ಜ್ಞಾನೇಂದ್ರಿಯಗಳಾಗುವುದು ನಿನ್ನಿಂದಲೇ ಗ್ರಹಿಸಿದೆ. ಐದು ಆರಾಗಿ ನಿಂತವು. ಷಟಸ್ಥಲ ಪ್ರಭೆಯನು ಧರಿಸಿ, ಪಾದೋದಕವನ್ನು ಅರಿದು, ಹುಟ್ಟುಗೆಟ್ಟೆನು ಬಸವಣ್ಣ ನಿಮ್ಮ ಕರ್ಮದಿಂದ. ಸಿದ್ಧ ತನುವಿನಲ್ಲಿ ಆನಂದ ಗುರು ಎನಗೆ ದೊರೆತು, ಕಪಿಲಸಿದ್ಧ ಮಲ್ಲೇಶ್ವರನ ಕಾರಣದ ಶರಣರಿಗೆ ಶಿಶುವಾದೆನು ತಂದೆ ನಿಮ್ಮ ದಯದಿಂದ.

**1010**

**ಶುದ್ಧ ಪದ್ಮಾಸನದೊಳು ಕುಳ್ಳಿರ್ದು**
**ಅರ್ಥೋದಯವನೆತ್ತುತೈದಾನೆ,**
**ಹೊದ್ದಿರ್ದ ಪ್ರಪಂಚುಗಳನೆಲ್ಲವ ಸುಟ್ಟು**
**ಅರ್ಥೋದಯವನೆತ್ತುತೈದಾನೆ,**
**ಅರ್ಥೋದಯಾಗ್ನಿ ಶುಚಿ ತನ್ನ ಪ್ರವೇಶಿಸಲು**
**ಮುಗ್ದತ್ವ ಹೋಯಿತ್ತು ಕಾಣಾ.**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಕಾಯ, ಕಾಯವನ್ನು ಆವರಿಸಿದ ಮನ, ತಾನೇ ಸೃಷ್ಟಿ ಮಾಡಿದ ಅಜ್ಞಾನದ ಪ್ರಪಂಚವನ್ನು, ತಾನೇ ಹೊತ್ತುಕೊಂಡಿದೆ. ಅದರಿಂದ ತನಗೆ ಸುಖವೂ ಆಗಿದೆ. ದುಃಖವೂ ಆಗಿದೆ. ಮನ, ಸುಖ ದುಃಖಗಳನ್ನು ಮಾತ್ರ ತಿಳಿದಿದೆಯೇ ಹೊರತು ಅಂಗದಲ್ಲಿ ಅರಿವು ಇದೆ ಎಂದು ತಿಳಿದಿಲ್ಲ. ಅರಿವಿನಿಂದ ನೋಡಿದಾಗ ಸುಖದುಃಖಗಳು ಇಲ್ಲವಾಗುತ್ತವೆ ಎನ್ನುವುದು ಮನಕ್ಕೆ ಹೊಳೆಯುತ್ತಿಲ್ಲ.

ಉದಯದಲ್ಲಿಯೂ ಮನ, ಕತ್ತಲ ಕಣ್ಣುಗಳಿಂದ ನೋಡುತ್ತದೆ. ರಾತ್ರಿಯೂ ಮನ, ಕತ್ತಲ ಕಣ್ಣುಗಳಿಂದ ನೋಡುತ್ತದೆ. ಪರಿಶುದ್ಧವಾದ ಮಹಾಜ್ಞಾನ ಕಾಯದಲ್ಲಿ ಶುದ್ಧ ಕಾಯವಾಗಿ ಪದ್ಮಾಸನದಲ್ಲಿ ಜ್ಞಾನಾಸಕ್ತನಾಗಿದೆ.

ಭೂಮಿಯ ಮೇಲೆ ಕತ್ತಲೂ ಉಂಟು, ಬೆಳಕು ಉಂಟು. ಕತ್ತಲಲ್ಲಿ ಏನು ಕಾಣುತ್ತಿಲ್ಲ ಬೆಳಕಿನಲ್ಲಿ ನೋಡಲು ಹೋದರೆ ಕಣ್ಣು ಕುರುಡಾಗಿದೆ. ಕಲ್ಲೇ ದೇವರಾಗಿದೆ.

ಕಾಯದಲ್ಲಿ ಕುಳಿತ ದೇವರು ಕಾಯದ ಅಜ್ಞಾನವನ್ನು ಎಚ್ಚರಿಸುತ್ತಿಲ್ಲ. ತಾನೇ ಕೆತ್ತಿದ ಕಲ್ಲೆಂದು ಕಾಯಕ್ಕೂ ಅರಿವಾಗುತ್ತಿಲ್ಲ. ಕಲ್ಲನ್ನು ಕಲ್ಲೆಂದು ನೋಡುವ ಶಕ್ತಿ ಕಣ್ಣಲ್ಲಿಯೇ ಉಳಿದು, ಕಣ್ಣಿನ ಅಜ್ಞಾನ, ಕಾಯವನ್ನು ಮುಗ್ಧಗೊಳಿಸಿದೆ.

ಕಣ್ಣಲ್ಲಿಯೇ ಸಂಗಮವಾದ ಜ್ಞಾನ, ಕಣ್ಣಲ್ಲಿರುವ ಅಜ್ಞಾನವನ್ನು ಕೊಲ್ಲುತ್ತಿಲ್ಲ. ಕಣ್ಣಲ್ಲಿರುವ ಅಜ್ಞಾನ, ಕಣ್ಣಲ್ಲೇ ಇರುವ ಜ್ಞಾನಕ್ಕೆ ಹಣೆಮಣಿದಾಗ ಎಲ್ಲೆಲ್ಲೂ ಬೆಳಕು. ತಾನೇ ಹೊದ್ದುಕೊಂಡ ಪ್ರಪಂಚವನ್ನು, ತನ್ನ ಬೆಳಕಿನಿಂದಲೇ ಸುಟ್ಟು, ಮುಗ್ಧತ್ವ ಮಾಯವಾಗುತ್ತದೆ. ತನ್ನ ಬೆಳಕು ತನ್ನಲ್ಲಿಯೇ ಪ್ರವೇಶಿಸಿ ತನ್ನನ್ನೆ ಬೆಳಗಿದ ಕಾರಣ ತಾನೇ ಕಪಿಲಸಿದ್ಧ ಮಲ್ಲಿಕಾರ್ಜುನನಾದ.

**1011**

**ಶುದ್ಧಲಿಂಗವನು ಪ್ರಸಿದ್ಧ ಕರದಲಿ ಇಟ್ಟು**
**ಶುದ್ಧ ಸಿದ್ಧ ಪ್ರಸಿದ್ಧ ಪಾವನಾಂಗವ ಮಾಡಿ**
**ಹೊದ್ದಿದ ಪ್ರಪಂಚುವ ಕಳೆದು ನಿತ್ಯನೆನಿಸಿ**
**ಸದ್ಯೋನ್ಮುಕ್ತನ ಮಾಡಿ ಕೈವಲ್ಯಪದವಿದೆಂದು**
**ಆನಂದವ ಕರದಲ್ಲಿಟ್ಟು ಅರುಪಿದನಿದ ವಿಸ್ತಾರವೆಂದು**
**ಎನ್ನ ಜನ್ಮ ಕರ್ಮ ನಿರ್ವರ್ತನೆಯ ಮಾಡಿದ**
**ಗುರು ಚೆನ್ನಬಸವಣ್ಣನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನೋಮಯವಾದ ಅಂಗವನು, ಲಿಂಗಮಯವಾದ ಅಂಗದಲ್ಲಿಟ್ಟು, ಶುದ್ಧ, ಸಿದ್ಧ, ಪ್ರಸಿದ್ಧಾಂಗವನ್ನಾಗಿ ಮಾಡಿ, ಅಜ್ಞಾನದ ಪ್ರಪಂಚವನ್ನು ಕಳೆದು, ಸತ್ಯನೆನಿಸಿದ. ನಿತ್ಯನೆನಿಸಿದ. ಸದ್ಯೋನ್ಮುಕ್ತನನ್ನಾಗಿ ಮಾಡಿದ. ಕೈವಲ್ಯ ಪದವಿಯ ಪರಮಾನಂದವನ್ನು ಕೈಯಲ್ಲಿ ಕೊಟ್ಟು ಅದರ ಅರುಹುವಿನ ವಿಸ್ತಾರವನ್ನು ಅರುಹಿದಾತ ಚೆನ್ನಬಸವಣ್ಣ.

ಅನೇಕ ಸ್ವಭಾವಗಳನ್ನು ಭಾವ-ದುರ್ಭಾವಗಳನ್ನು ಹೊಂದಿದ ಮನವನ್ನು, ನಿರ್ವರ್ತನೆಯ ಮಾಡಿ ನಿರ್ಭಾವಗೊಳಿಸಿದನು ತಂದೆ ಗುರು ಚೆನ್ನಬಸವಣ್ಣ. ಮನೋಮಯವಾದ ಸೂಕ್ಷ್ಮಾಂಗವನ್ನು ಶುದ್ಧ ಲಿಂಗವನ್ನಾಗಿ ಮಾಡಿ, ಪ್ರಸಿದ್ಧಗೊಳಿಸಿ ಪಾವನಾಂಗವ ಮಾಡಿದುದು ಸಣ್ಣ ಮಾತಲ್ಲ. ಅಜ್ಞಾನದ ಪ್ರಪಂಚವನು ಕಳೆದು ಸದ್ಯೋನ್ಮುಕ್ತನನ್ನಾಗಿ ಮಾಡಿ ಕೈವಲ್ಯ ಪದವಿ ಕೊಟ್ಟುದು ಸಣ್ಣ ಮಾತಲ್ಲ. ಗುರುದೇವನ ಕೃಪೆಯಿಂದ ಕಪಿಲಸಿದ್ಧ ಮಲ್ಲಿಕಾರ್ಜುನನ ದರುಶನವಾಯಿತು.

**1012**

**ಶುದ್ಧವೆ ತದ್ರೂಪವಾಗಿ ಬಾರನೆ ಅಂದು**
**ಅನಾಹತನೆಂಬ ಗಣೇಶ್ವರನು ಬಂದೆನ್ನ ಜರಿಯನೆ?**
**ಜರಿದರೆ ನೀನು ಕೊಟ್ಟ ತಲೆಯ ಹುಣ್ಣ**
**ಕಣ್ಣೆಂದು ತೆರೆದು ಲಜ್ಜೆಗೆಡನೆ ಆನಾ ಗಣೇಶ್ವರನ ಕೈಯಲ್ಲಿ?**
**ಶುದ್ಧಕಾತನೊಡೆಯ, ಸಿದ್ಧಕಾತನೊಡೆಯ, ಪ್ರಸಿದ್ಧಾತನೊಡೆಯ!**
**ಒಪ್ಪಿಪ್ಪಾರು ಆತನ ಸೀಮೆ .**
**ಮೂವತ್ತಾರರ ಮೇಲಿಂದಾತನ ಸಂಯೋಗ.**
**ಇಂತಪ್ಪಾತನ ನೀನೆನ್ನಲರಿಯದೆ ನೊಂದೆ ಕೆಲವು ದಿನ.**

**ಈ ನೋವ ಮಾಣಿಸಿದಾತನೂ ಆತನೆ,**
**ಆತನಿಂದ ಉರುತರ ಕೈವಲ್ಯಕ್ಕೆ ಕಾರಣಿಕನಾದೆ!**
**ಆತನ ಪ್ರಸಾದದಿಂದ ನಿನ್ನವರ**
**ಪಾದೋದಕ ಪ್ರಸಾದಕ್ಕೆ ಯೋಗ್ಯನಾದೆ.**
**ಫಲಪದಕ್ಕೆ ದೂರವಾದೆ**
**ಕಪಿಲಸಿದ್ಧಮಲ್ಲಿಕಾರ್ಜುನಾ, ಬಸವಣ್ಣನಿಂದ.**

ಬಸವಣ್ಣನಿಂದ ಶುದ್ಧನಾದೆ. ಶಿವನ ತದ್ರೂಪವೇ ಆಗಿ ಬಂದು ಎನ್ನ ಕಣ್ಣು ತೆರೆಯಿಸಿದ ಬಸವಣ್ಣಾ. ಕಾಯದಲ್ಲಿದ್ದ ಪರಮಾತ್ಮನು, ಕಾಯಕ್ಕೆ ಕಣ್ಣು ಕೊಟ್ಟರು ಕಣ್ಣೊಂದು ತೆರೆದು ನೋಡಲು ಅದು ಹುಣ್ಣಾಗಿ ಕಂಡಿತು. ಆದರೆ ಕಣ್ಣು ಕೊಟ್ಟ ದೇವರು ಅದು ಹೆಣ್ಣಿನ ಕಣ್ಣೆಂದು ಜರಿಯಲಿಲ್ಲ, ಹುಣ್ಣಿನ ಕಣ್ಣೆಂದು ತೆರೆದು ನೋಡಲು ಲಜ್ಜೆಗೆಡಲಿಲ್ಲ. ಕಾಯದಲ್ಲಿ ಆತ ಶುದ್ಧನಾಗಿದ್ದರು ಅಶುದ್ಧವನು ಜರಿಯಲಿಲ್ಲ. ಸಿದ್ಧ-ಪ್ರಸಿದ್ಧನಾದರೆ ಆತನ ನಿಸ್ಸೀಮೆಯನು ದಾಟಲು ನನಗೆ ಸಾಧ್ಯವಾಗಲಿಲ್ಲ. ಅರಿಷಡ್ವರ್ಗಗಳೆಂಬ ಆರು ಸೀಮೆಗಳಲ್ಲಿಯೇ ಉಳಿದೆ. ಮೂವತ್ತಾರು ತತ್ವಗಳ ಮೇಲಿಂದ ಆ ಪರಮಾತ್ಮನ ಸಂಯೋಗ. ಇಂತಿಪ್ಪಾತನ ಅರಿಯಲು ಸಾಧ್ಯವಾಗದೇ ನಾನು ನೊಂದೆ ಕೆಲವು ದಿನ. ಈ ನೋವನು ಮಾಣಿಸಿದಾತನು ಬಸವಣ್ಣ. ಆತನಿಂದಾಗಿ ಕೈವಲ್ಯ ಪದವಿಗೆ ಕಾರಣೀಕನಾದೆ ನಾನು.

ಬಸವಣ್ಣನ ಪ್ರಸಾದದಿಂದಾಗಿ ಪರಮಾತ್ಮನೆ ನಿನ್ನವರೇ ಆದ ನಿನ್ನ ಶರಣರ ಪಾದೋದಕ ಪ್ರಸಾದಕ್ಕೆ ಯೋಗ್ಯನಾದೆ. ಅಜ್ಞಾನ ಪದವಿಯ ಫಲಪದಗಳಿಗೆ ದೂರವಾದೆ. ಕಪಿಲಸಿದ್ಧ ಮಲ್ಲಿಕಾರ್ಜುನ ಬಸವಣ್ಣನಿಂದ.

**1013**

**ಶುದ್ಧಸಂಗಮದಲ್ಲಿ ಸಂಯೋಗವಾದಳವ್ವೆ,**
**ಸಿದ್ಧ ಗುರುವಿನಲ್ಲಿ ನಿತ್ಯಳಾದಳವ್ವೆ.**
**ಪ್ರಸಿದ್ಧ ಜಂಗಮದಲ್ಲಿ ಪ್ರಾಣಸಂಯೋಗವಾದಳವ್ವೆ.**
**ಶುದ್ಧ ಸಿದ್ಧ ಪ್ರಸಿದ್ಧವ ಕೂಡಿದ**
**ಪ್ರಕಟಿತ ಸಂಯೋಗದಲ್ಲಿ ಸಮನಿಸಿದಳವ್ವೆ.**
**ಆಧಾರ ಮೂಲ ಪಂಚಿಕ ತೊಡಗಿ**
**ಬಹುವಿಧ ನಾಳಂಗಳಿಗೆ ಸಹಸ್ರ ಮುಚ್ಚಳಂ ಮುಚ್ಚಿದಳವ್ವೆ.**
**ಅಜ್ಞಾನವೆಂಬ ಬಿದ್ದಿನ ಬಂದಡೆ**
**ಇಕ್ಕಲಿಲ್ಲದಚ್ಚಿಗಂಬಟ್ಟು ಉದಾಸೀನಂ ಮಾಡಿದಳವ್ವೆ,**
**ಸುಜ್ಞಾನವೆಂಬ ಆತಂಗೆ**
**ನಿರ್ಮಳದಲೊಮ್ಮನವನಟ್ಟು,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ ನಿತ್ಯರ್ಪಿತವಂ ಮಾಡಿ**
**ಪ್ರಸಾದವ ಸ್ವೀಕಾರಂ ಮಾಡಿ ನಿತ್ಯಮುಕ್ತಳಾದಳವ್ವೆ.**

ಮನ ಅಜ್ಞಾನ ಸಂಸಾರಕ್ಕೆ ಒಳಗಾದಾಗ, ಗುರುದೇವ ಆ ಮನವನ್ನು ಹಿಡಿದು

ತನುವಿನಲ್ಲಿಯೇ ತನ್ಮಯವಾದ ಈಶ್ವರನ ದರುಶನ ಮಾಡಿಸಿದನು. ಆ ಪರಮಾತ್ಮನ ಚರಣ ಕಮಲಕ್ಕೆ ದಾಸಾನು ದಾಸಿಯಾದಳು. ಸಾಕ್ಷಾತ್ ಈಶ್ವರನಿಗೆ ಅರ್ಧಾಂಗಿಯಾದಳು. ಕಾಯವೆಂಬ ನನಗೆ ಅವ್ವೆಯಾದಳು.

ಶುದ್ಧ ಸಂಗಮದಲ್ಲಿ ಸಂಯೋಗವಾಗಿ ಸಿದ್ಧಗುರುವಿನಲ್ಲಿ ನಿತ್ಯಳಾದಳು ಅವ್ವೆ. ಪ್ರಸಿದ್ಧ ಜಂಗಮದಲ್ಲಿ ಪ್ರಾಣ ಸಂಯೋಗವಾದಳು ಅವ್ವೆ. ಶುದ್ಧವೂ ತಾನೇ ಆದಳು, ಸಿದ್ಧವೂ ತಾನೇ ಆದಳು, ಪ್ರಸಿದ್ಧವು ತಾನೇ ಆಗಿ ಪ್ರಕಟಿತ ಸಂಯೋಗದಲ್ಲಿ ಸಮನಿಸಿದಳು ಅವ್ವೆ.

ಆಧಾರ, ಮೂಲ, ಪಂಚಿಕದಲಿ ತನ್ಮಯವಾಗಿ ಬಹುವಿಧದ ಅಜ್ಞಾನದ ನಾಳಂಗಳಿಗೆ ಸಹಸ್ರ ಮುಚ್ಚಳಗಳನ್ನು ಮುಚ್ಚಿದಳು ಅವ್ವೆ.

ಅಜ್ಞಾನದ ಸುಖವನ್ನು ದುಃಖವನ್ನು ಉದಾಸೀನ ಮಾಡಿದಳು ಅವ್ವೆ. ಸುಜ್ಞಾನವೆಂಬ ಪರಮಾತ್ಮನಿಗೆ ನಿರ್ಮಲದಲಿ ಒಮ್ಮನವನ್ನು ಕೊಟ್ಟು ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ನಿತ್ಯಕ್ಕೆ ಅರ್ಪಿತವ ಮಾಡಿ, ಪ್ರಸಾದ ಸ್ವೀಕಾರ ಮಾಡಿ ನಿತ್ಯ ಮುಕ್ತಳಾದಳು ಅವ್ವೆ. ತನ್ನ ಅಜ್ಞಾನವನು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಲ್ಲಿ ಅರ್ಪಣೆ ಮಾಡಿ ಆ ಪರಮಾತ್ಮನಿಗೆ ಅರ್ಧಾಂಗಿಯಾದಳು ಅವ್ವೆ.

**1014**

**ಶುದ್ಧ ಸಂಯೋಗದಲ್ಲಿ ನಿನ್ನನೆ ನೆರೆವೆ;**
**ಸಿದ್ಧ ಸಂಯೋಗದಲ್ಲಿ ನಿನ್ನನೆ ಸಂಯೋಗಿಸುವೆ;**
**ಪ್ರಸಿದ್ಧ ಸಂಯೋಗದಲ್ಲಿ ನಿನ್ನನೆ ಕೂಡುವೆ;**
**ತಾತ್ಪರ್ಯದಿಂದ ನಿನ್ನ ನೆರೆವೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿನಲ್ಲಿ ತನ್ಮಯವಾದ ಪರಮಾತ್ಮನೇ ಹಗಲಿರುಳೆನ್ನದೆ ನಿನ್ನನ್ನೆ ನೆರೆವೆ. ತನುವನ್ನು ಆವರಿಸಿದ ಮನದಲ್ಲಿಯೇ ತನ್ಮಯವಾದ ನಿನ್ನನ್ನು ಸಂಯೋಗಿಸುವೆ. ತನುವಿನಲ್ಲಿಯೇ ತನ್ಮಯವಾದ ನಿನ್ನನ್ನೆ ಕೂಡುವೆ. ತನುತ್ರಯಗಳ ಒಡೆಯ ನೀನು. ಶುದ್ಧ ತನುವು ನೀನೆ, ಸಿದ್ಧ ತನುವು ನೀನೆ, ಪ್ರಸಿದ್ಧ ತನುವು ನೀನೆ. ಮೂರೊಂದಾದ ಘನ ನೀನು. ಕಪಿಲಸಿದ್ಧ ಮಲ್ಲಿಕಾರ್ಜುನಾ ನಿನ್ನಲ್ಲಿ ಬೆರೆತು ನೀನೆ ಆಗುವ ಆಸೆ ನನಗೆ.

**1015**

**ಶುದ್ಧ ಸಿದ್ಧ ಪ್ರಸಿದ್ಧ ಪಂಚಮಹಾವಾಕ್ಯಂಗಳನರಿದೆನೆಂಬ**
**ಯೋಗಿ ಕೇಳಾ ನೀನು.**
**ಶುದ್ಧವಾವುದು? ಸಿದ್ಧವಾವುದು? ಪ್ರಸಿದ್ಧವಾವುದು?**
**ಹೇಳಿರೇ ಬಲ್ಲರೆ.**
**ಪ್ರಾಣಾಯಾಮದಲಿ ಪ್ರವೇಶಿಸಬಲ್ಲಡೆ ಅದು ಶುದ್ಧ,**
**ಪ್ರತ್ಯಾಹಾರದಲಿ ಪ್ರಕಟಿಸಬಲ್ಲಡೆ ಸಿದ್ಧ.**
**ಪಂಚಬ್ರಹ್ಮದಲಿ ಪ್ರವೇಶಿಸಬಲ್ಲಡೆ ಪ್ರಸಿದ್ಧ.**
**ಕೋಹಂ ತತ್ವಾರ್ಥವಂ ಮೀರಿದ,**
**ಆಜ್ಞಾ ಸೀಮೆಯ ಸಮನಿಸಿದ,**

ಪ್ರಸಿದ್ಧ ಬ್ರಹ್ಮವನು ಮೀರಿದ,
ಅನಾಹತವನಾನಂದವ ಮಾಡಿದ,
ಆದಿಶಕ್ತಿಯ ಸಂಯೋಗವಂ ಮಾಡಿದ,
ಉರುತರ ಪರಮಸೀಮೆಯಂ ದಾಂಟಿದ.
ಮಾತೆಯಿಲ್ಲದ ಜಾತನ,
ಗಮನವಿಲ್ಲದ ಗಮ್ಯನ,
ಆ ಯಾರೂ ಅರಿಯದ ಅನಾತನ,
ಹಮ್ಮಿನ ಸೊಮ್ಮಳಿದ ನಿತ್ಯನ,
ಅನಂತ ಬ್ರಹ್ಮಾಂಡವಳಿವಲ್ಲಿ ಏನೆಂದರಿಯದ ಸತ್ಯನ,
ಸಕಳ ನಿಷ್ಕಳಾತ್ಮಕದಲಿ ಪೂರ್ಣನಪ್ಪ ಮುಕ್ತನ,
ಬ್ರಹ್ಮಯೋಗವನರಿವರನೇಡಿಸುವ ಶಕ್ತನ,
ಅವ್ವೆಯ ಮನದ ಕೊನೆಯ ಮೊನೆಯ ಮೇಲೆ
ನಿತ್ಯನಾಗಿಪ್ಪ ಒಡೆಯನ,
ಪ್ರಾಣಶೂನ್ಯನಪ್ಪ ಭಕ್ತಂಗೆ ಪ್ರಾಣನಾಗಿಪ್ಪ ಲಿಂಗನ,
ಇಹಪರ ಏಕವಾಗಿಪ್ಪಾತನ ತೋರಿದನೆನ್ನ ಗುರು
ಬಸವಣ್ಣನ ಕಂಡೆನಾತನ ಕೊಂಡೆ,
ಆತನ ಪಾದೋದಕ ಪ್ರಸಾದವ
ಹಿಂದೆ ಉಂಡ ಹಂಗೆ ಇನ್ನು ಉಂಡೆನಾಯಿತ್ತಾದೊಡೆ,
ಹಿಂದೆ ಬಂದ ಹಂಗೆ ಇನ್ನು ಬಂದೆನಾಯಿತ್ತಾದೊಡೆ,
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನಿಮ್ಮಾಣೆ.

ಬಸವಣ್ಣ ಅಂಗದಲ್ಲಿ ಸಂಗಮವಾಗಿ ಇಹಕ್ಕು ಪರಕ್ಕು ಏಕವಾಗಿರುವ ಗುರುದೇವನನ್ನು ಎನಗೆ ತೋರಿದ. ಶುದ್ದ, ಸಿದ್ಧ, ಪ್ರಸಿದ್ಧ ಪಂಚಮಹಾ ವಾಕ್ಯಂಗಳನು ಅರಿಯುವ ಕಲೆಯನ್ನು ಹೇಳಿದ. ಶುದ್ಧ ಪ್ರಸಾದವು ಪ್ರಾಣಯಾಮದಲ್ಲಿ ಪ್ರವೇಶಿಸುವ ವಿಧಾನವನ್ನು ಅರುಹಿದ.

ಸಿದ್ದ ಪ್ರಸಾದವನ್ನು ಪ್ರತ್ಯಾಹಾರದಲ್ಲಿ ಪ್ರಕಟಿಸುವ ವಿಧಾನವನ್ನು ಹೇಳಿದ. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮದಲ್ಲಿ ಸಂಗಮವಾದ ಬ್ರಹ್ಮನನ್ನು ಕೂಡಿ ಅಲ್ಲಿಯೇ ಇರುವ ಭ್ರಮೆಯನ್ನು ಕಳೆಯುವ ಕಲೆಯನ್ನು ವಿವರಿಸಿದ ಬಸವಣ್ಣ.

ಕೋಹಂ ತತ್ವಾರ್ಥವನ್ನು ಮೀರಿದ ಆಜ್ಞಾಸೀಮೆಯನ್ನು ಸಮನಿಸಿದ ಪ್ರಸಿದ್ಧ ಬ್ರಹ್ಮವನ್ನು ಮೀರಿ ಅನಾಹತದಲ್ಲಿ ಆನಂದವನ್ನು ಉಂಟು ಮಾಡಿದ. ಆದಿಶಕ್ತಿಯನ್ನು ಪರಶಿವನಲ್ಲಿ ಸಂಯೋಗವ ಮಾಡಿದ.

ಅರಿವೆಂಬ ಶ್ರೀಗುರುದೇವನು ಮಾತು ಇಲ್ಲದೇ ಹುಟ್ಟಿದವನು. ಗಮನವಿಲ್ಲದ ಅಗಮ್ಯನು. ಯಾರೂ ಅರಿಯದ ಅನಾಹತನು. ಅಹಂಕಾರ ಸೊಮ್ಮನು ಅಳಿದ ನಿತ್ಯನು. ಅನಂತ ಬ್ರಹ್ಮಾಂಡವು ಅಳಿಯುವಲ್ಲಿ ಏನೆಂದು ಅರಿಯದ ಸತ್ಯನು. ಸಕಲ ನಿಷ್ಕಳಾತ್ಮಕದಲ್ಲಿ ಪೂರ್ಣನಪ್ಪ ಮುಕ್ತನು. ಬ್ರಹ್ಮ ಯೋಗವನು ಅರಿಯುವವರ ಏಡಿಸುವ ಶಕ್ತನು. ಅವ್ಯಯ ಮನದ ಕೊನೆಯ ಮೊನೆಯ ಮೇಲೆ ನಿತ್ಯನಾಗಿಪ್ಪ ಒಡೆಯನು. ಪ್ರಾಣ ಶೂನ್ಯನಾದ ಭಕ್ತನಿಗೆ ಪ್ರಾಣನಾಗಿರುವ ಲಿಂಗಯ್ಯನ ಇಹ ಪರ

ಏಕವಾಗಿರುವಾತನ ತೋರಿದನು ಎನ್ನ ಗುರು ಬಸವಣ್ಣನು.

ಬಸವಣ್ಣ ತೋರಿದ ಗುರುದೇವನನ್ನು ನಾನು ಕಂಡೆನು. ಆತನನ್ನು ಕೊಂಡೆನು. ಆತನ ಪಾದೋದಕ ಪ್ರಸಾದವನು ಹಿಂದೆ ಉಂಡಹಾಗೆ ಇನ್ನು ಮುಂದೆ ಉಣ್ಣಲಾರೆನು. ಹಿಂದೆ ಬಂದ ಹಾಗೆ ಇನ್ನು ಬರಲಾರೆನು. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನಿಮ್ಮಾಣೆ.

**1016**

**ಶುದ್ಧಾತನನು ಮಾಡಿ ಪರಿಭವವ ತಪ್ಪಿಸಿದ**
**ಹೊದ್ದಲೀಯ್ಯದೆನ್ನತ್ತ ಸುಖದುಃಖವ**
**ಸದ್ಯೋನ್ಮುಕ್ತಿಯನ್ನಿತ್ತು ನಿನ್ನ ಪದದೋರಿಸಿದ**
**ಅತ್ಯಧಿಕ ನಿರ್ಮಳ ಶ್ರೀಗುರು ಚೆನ್ನಬಸವಣ್ಣನಯ್ಯಾ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಎನ್ನನು ಶುದ್ಧನನ್ನಾಗಿಸಿ, ಪ್ರಸಿದ್ಧನನ್ನಾಗಿಸಿ ಎನ್ನ ಜನನ ಮರಣಗಳನ್ನು ತಪ್ಪಿಸಿ ಸುಖದುಃಖಗಳನ್ನು ಹೊದ್ದಲಿಯದೆ ಪರಮ ಸುಖವನ್ನು ತೋರಿದ ಅತ್ಯಧಿಕ ನಿರ್ಮಲ ಶ್ರೀಗುರು ಚೆನ್ನಬಸವಣ್ಣನಯ್ಯ.

ತಮಗೆಮುಕ್ತಿಯನ್ನು ಇತ್ತು ಮಹಾ ಪದವಿಯನ್ನು ತೋರಿಸಿದ ಶ್ರೀಗುರು ಚೆನ್ನಬಸವಣ್ಣನನ್ನು ಸಿದ್ಧರಾಮ ಶಿವಯೋಗಿಗಳು ಸ್ಮರಿಸಿದ್ದಾರೆ.

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನೊಂದಿಗೆ ಅಂಗವನ್ನು ಆವರಿಸಿದ ಮನವನ್ನು ಸಿದ್ಧರಾಮ ಶಿವಯೋಗಿಯನ್ನಾಗಿಸಿ ಶ್ರೀ ಗುರುದೇವನಿಗೆ ತಾನು ಭಕ್ತನಾಗಿ ಆ ಗುರುದೇವನೊಂದಿಗೆ ಚೆನ್ನಬಸವಣ್ಣ ತೋರಿದ ಸೂತ್ರವನ್ನು ಹಂಚಿಕೊಂಡಿದ್ದಾರೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆ ಚೆನ್ನಬಸವಣ್ಣನು. ನನಗೆ ನಿನ್ನನ್ನು ತೋರದಿದ್ದರೆ ನೀನು ಯಾರೆಂದು ನನಗೆ ಗೊತ್ತಾಗುತ್ತಿರಲಿಲ್ಲ.

**1017**

**ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಮಾಯೆ.**
**ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಮರವೆ.**
**ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಪ್ರಪಂಚು.**
**ಶ್ರೀಗುರು ಕರಿಣಿಸಲೊಡನೆ ಬಿಟ್ಟಿತ್ತು ಎನ್ನ ಸುತ್ತಿರ್ದ**
**ಮಾಯಾಪಾಶ. ಅದೆಂತೆಂದಡೆ:**
**''ಗುಶಬ್ದಸ್ತ್ವಂಧಕಾರಃ ಸ್ಯಾತ್ ರುಶಬ್ದಸ್ತು ನಿರೋಧಕಃ**
**ಅಂಧಕಾರನಿರೋಧತ್ವಾತ್ ಗುರುರಿತ್ಯಬಿಧೀಯತೇ''**
**ಎಂದುದಾಗಿ, ಇದನರಿದು.**
**ಕಣ್ಣಿಂಗೆ ಸತ್ವರಜ ತಮವೆಂಬ ತಿಮಿರ ಕವಿದು**
**ಅಜ್ಞಾನವಶನಾದಲ್ಲಿ**
**ಸದ್ಗುರುವನುಪಧಾವಿಸಿ ಕಣ್ಗೆ ಔಷಧಿಯ ಬೇಡಲೊಡನೆ**
**''ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ**

**ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರುವೇ ನಮಃ''**
**ಎಂದುದಾಗಿ, ಶಿವಜ್ಞಾನವೆಂಬ ಅಂಜನವನೆಚ್ಚಿ,**
**ಎನ್ನ ಕಣ್ಣ ಮುಸುಂಕಿದ ಅಜ್ಞಾನ ಕಾಳಿಕೆಯ ಬೇರ್ಪಡಿಸಿ**
**ತನ್ನ ಶ್ರೀಪಾದವನರುಹಿಸಿಕೊಂಡನಯ್ಯಾ.**
**ಕಪಿಲಸಿದ್ಧ ಮಲ್ಲಿನಾಥಾ.**

ಗುರು ವ್ಯಕ್ತಿಯಲ್ಲ; ಅಂಗದಲ್ಲಿಯೇ ಸಂಗಮವಾದ ಅರಿವಿನ ಶಕ್ತಿ. ಕಾಯಕ್ಕೆ ಕಾಯವಾಗಿ ಬೋಧಿಸುವಾತ. ಕಾಯವನ್ನು ಆವರಿಸಿದ ಮನೋಮಯವಾದ ಕಾಯದ ಮಾಯೆಯನ್ನು ಬಿಡಿಸಿದಾತ. ಕಾಯಕ್ಕೆ ಮತ್ತೊಂದು ಕಾಯ ಎಂದೂ ಗುರುವಾಗುವುದಿಲ್ಲ! ಏಕೆಂದರೆ ಪ್ರತಿಯೊಂದು ಕಾಯವು ಪರಿಪೂರ್ಣವಾದ ಕಾಯ!

ಕಾಯವನ್ನು ಆವರಿಸಿದ ಮನೋಮಯವಾದ ಮಾಯಾಮಯವೆಂಬ ಕಾಯ, ಸ್ಥೂಲಕಾಯದ ಹಾದಿ ತಪ್ಪಿಸಿದಾಗ, ಸ್ಥೂಲಕಾಯದಲ್ಲೇ ಸಂಗಮವಾದ ಶ್ರೀಗುರುದೇವನು ಮನೋಮಯವಾದ ಕಾಯಕ್ಕೆ ಪಾಠ ಹೇಳುತ್ತಾನೆ. ಇಂತಹ ಅದ್ಭುತವಾದ ಕಲೆ, ಕಾಯದಲ್ಲಿ ಸಂಗಮವಾಗಿದ್ದರೂ, ಸಾಕಷ್ಟು ವಿಶ್ವವಿದ್ಯಾಲಯಗಳು ಪುಸ್ತಕಗಳ ಮೂಲಕ ಪಾಠ ಪ್ರವಚನ ಉಪನ್ಯಾಸಗಳಲ್ಲಿ ತೊಡಗಿವೆ. ಪಾಠಕ್ಕೆ ಬಳಕೆಯಾದ ಪುಸ್ತಕಗಳು ಕೂಡಾ ಕಾಯದಿಂದಲೇ ಹೊರಬಂದಿವೆ.

ಕಾಯವನ್ನು ಮನವೆಂಬ ಮಾಯೆ ಆವರಿಸಿರುವುದರಿಂದ, ಶ್ರೀಗುರುವಿನ ಕಾಯ ಮನೋಮಯವಾದ ಕಾಯಕ್ಕೆ ಕಾಣಿಸುತ್ತಿಲ್ಲ. ಹೀಗಾಗಿ ಕಾಯ ಕಲಿಯಲು ವಿಶ್ವವಿದ್ಯಾಲಯಗಳಿಗೆ ಹೋಗುತ್ತದೆ. ಆದರೂ ತಾನು ಓದಿದ ಸಕಲ ಪುಸ್ತಕಗಳು, ಕಾಯ ಆಪತ್ಕಾಲದಲ್ಲಿದ್ದಾಗ ನೆರವಿಗೆ ಬರುವುದಿಲ್ಲ! ಹೀಗಾಗಿ ಸಿದ್ದರಾಮ ಶಿವಯೋಗಿಗಳು ಶ್ರೀಗುರುದೇವನು ಕರುಣಿಸಲೊಡನೆ ಬಿಟ್ಟಿತ್ತು ಮಾಯೆ ಎಂದಿದ್ದಾರೆ.

ಶ್ರೀಗುರುದೇವನು ಕರುಣಿಸಲೊಡನೆ ಬಿಟ್ಟಿತ್ತು ಮರೆವೆ. ಶ್ರೀಗುರುದೇವನು ಕರುಣಿಸಲೊಡನೆ ಬಿಟ್ಟಿತ್ತು ಪ್ರಪಂಚ. ಶ್ರೀಗುರುದೇವನು ಕರುಣಿಸಲೊಡನೆ ಬಿಟ್ಟಿತ್ತು ಎನ್ನ ಮಾಯಾಪಾಷ. ಅದೆಂತೆಂದಡೆ ಗು ಶಬ್ದದಲ್ಲಿ ಅಂಧಕಾರ ನಿವಾರಣಾ ಶಕ್ತಿ ಇದೆ. ರು ಶಬ್ದದಲ್ಲಿ ಅಜ್ಞಾನ ನಿರೋಧಕ ಶಕ್ತಿ ಇದೆ. ಅಂಧಕಾರ ನಿವಾರಣೆಯಾದರೆ ಗುರುದೇವನೆ ತಾನಾಗುತ್ತಾನೆ.

ಗುರುದೇವನ ಪರಿಚಯವಿಲ್ಲದ ನಿಮಿತ್ಯ ಕಣ್ಣಿಗೆ ಸಾತ್ವಿಕ, ರಾಜಸ, ತಾಮಸ ಎಂಬ ಕತ್ತಲೆ ಕವಿದು ಕಾಯ ಅಜ್ಞಾನವಶದಲ್ಲಿದೆ.

ಕಾಯವನ್ನು ಆವರಿಸಿದ ಮನ ಸಾತ್ವಿಕ ಪಾತ್ರದಲ್ಲಿ ದಾನ ಧರ್ಮಾದಿಗಳನ್ನು ಮಾಡುತ್ತಾ ರಾಜಸ ಪಾತ್ರದಲ್ಲಿ ಅದಕ್ಕೆ ಬೇಕಾದ ಹಣ ಅಜ್ಞಾನದಿಂದ ಸಂಗ್ರಹಿಸುತ್ತದೆ.

ಹಾಗೆಯೇ ತಾಮಸ ಗುಣದಲ್ಲಿ ಕಾಯದೊಂದಿಗೆ ಅಜ್ಞಾನದ ಸುಖದಲ್ಲಿ ಮೈ ಮರೆಯುತ್ತದೆ. ಸದ್ಗುರು ದೇವನನ್ನು ಧ್ಯಾನಿಸಿ ಕಣ್ಣಿಗೆ ತ್ರಿಗುಣಗಳಿಗೆ ಅತೀತವಾದ ಅರಿವಿನ ಔಷಧವನ್ನು ಬೇಡಲೊಡನೆ ಜ್ಞಾನಾಂಜನವನ್ನು ನೀಡಲಾಗಿ ಅಜ್ಞಾನದ ಕತ್ತಲೆಯು ಕೂಡಲೇ ಕಳೆಯಿತು.

ಶಿವಜ್ಞಾನವೆಂಬ ಅಂಜನವನ್ನು ಮೆಚ್ಚಿ ಕಣ್ಣಿಗೆ ಮುಸುಕಿದ ಅಜ್ಞಾನವನ್ನು ಬೇರ್ಪಡಿಸಿ ತನ್ನ ಶ್ರೀಪಾದವನ್ನು ಅರುಹಿಸಿಕೊಂಡನಯ್ಯ ಕಪಿಲಸಿದ್ಧ ಮಲ್ಲಿನಾಥ.

**1018**

**ಶ್ರೀಗುರುವೆ ಬಸವಯ್ಯ, ಶ್ರೀ ಚರವೆ ಬಸವಯ್ಯ.**

**ಶ್ರೀಮಹಾ ಇಷ್ಟಲಿಂಗ ಬಸವಣ್ಣನು.**
**ಆರೈದು ಎನ್ನುವನು ಓರಂತೆ ಸಲಹಿದಾ**
**ಕಾರುಣ್ಯಸುರತರುವೆ ಬಸವಲಿಂಗ**
**ಭಾವಿಸಿ ಎನ್ನುವನು ಅಜಾತನ ಮಾಡಿದಾತ ಬಸವಣ್ಣ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಬಸವಣ್ಣ ನನ್ನನ್ನು ಸಾವಿಲ್ಲದ ಸರದಾರನನ್ನಾಗಿಸಿದಾತ. ಕಾಯಕ್ಕೆ ಸಾವಿದೆ. ಹುಟ್ಟಿದೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿ ಸಂಗಮವಾದ ಅರಿವೆಂಬ ಶ್ರೀಗುರುದೇವನ ಚರಣ ಕಮಲಗಳಿಗೆ ದಾಸಾನು ದಾಸನಾದರೆ ಸಾಕು. ಮನಕ್ಕೆ ಸಾವಿಲ್ಲ ಗುರುದೇನಿಗೂ ಸಾವಿಲ್ಲ.

ಗುರುದೇವ ಮತ್ತು ಮನವೆಂಬ ಶಿಷ್ಯ ಇವರಿಬ್ಬರೂ ವಾಸ ಮಾಡಿದ ಕಾಯವೇ ಕೈಲಾಸ. ಕಾಯ ಗುರು ಶಿಷ್ಯರಿಬ್ಬರ ವಾಸಕ್ಕೆ ಮನೆಯಾಗಿದೆ. ಅವರಿದ್ದ ಮನೆ ಬಿದ್ದರೇನು ಅವರಿಗೆ ಚಿಂತೆಯಿಲ್ಲ.

ಮನೆ ಬೀಳುವುದು ಸಹಜ, ಮನೆ ಕಟ್ಟುವುದು ಕೂಡಾ ಸಹಜವೆ. ಮನೆಯೇ ಏನೆಲ್ಲವಲ್ಲ. ಮನೆಯಲ್ಲಿ ವಾಸ ಮಾಡಿದ ಗುರುಶಿಷ್ಯರಿಬ್ಬರು ಪ್ರಮುಖರು. ಹೀಗಾಗಿ ಅಕ್ಕಮಹಾದೇವಿ ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚಲುವಂಗೆ ನಾನು ಒಲಿದೆನವ್ವ ಎಂದು ಹಾಡಿದ್ದಾಳೆ.

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚಲುವನೆಂದರೆ ಕಾಯದಲ್ಲಿಯೆ ಸಂಗಮವಾದ ಅರಿವು ಎನ್ನುವ ಶ್ರೀಗುರುದೇವನು ಆಗಿದ್ದಾನೆ. ಈತನಿಗೆ ಒಲಿದ ಮನವೆಂಬ ಚಲುವೆ ಕೂಡಾ ಸಾವಿಲ್ಲದಾಕೆಯಾಗುತ್ತಾಳೆ. ಚಲುವ ಚಲುವೆಯರಿಗೆ ಸಾವಿಲ್ಲ. ಇವರಿಬ್ಬರೂ ವಾಸ ಮಾಡಿದ ಕಾಯಕ್ಕೆ ಹುಟ್ಟಿದೆ! ಸಾವಿದೆ!

ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚಲುವನನ್ನು ತೋರಿದ ಶ್ರೀಗುರು ಬಸವಣ್ಣನನ್ನು ಸ್ಮರಿಸಿದ್ದಾರೆ.

ಬಸವಯ್ಯನೇ ಗುರು, ಬಸವಯ್ಯನೇ ಚರ, ಬಸವಯ್ಯನೇ ಮಹಾ ಇಷ್ಟಲಿಂಗ, ಅರೈದು ಎನ್ನನ್ನು ಓರಂತೆ ಸಲುಹಿದ ಕಾರುಣ್ಯ ಮೂರ್ತಿ ಬಸವಯ್ಯಾ. ಎನ್ನನ್ನು ಅಜಾತನ ಮಾಡಿದಾತ ಬಸವಣ್ಣ ಎಂದು ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ಹೇಳಿಕೊಂಡಿದ್ದಾಳೆ.

**1019**

**(ಸಿರಿಯಾಯಿತ್ತೆಂದು) ಉತ್ಸಾಹದಿಂದುಬ್ಬದೆ.**
**ಕೆಟ್ಟಡೆ ಮನನೊಂದು ಖಿನ್ನವಾಗದಂತೆ ಇರಬೇಡಾ ಹಿರಿಯ ಮನ**
**ಮನವಿಚ್ಛಂದವಾಗದೆ ಒಂದೆಯಂದದಿ ಇಪ್ಪಂತಪ್ಪ**
**ನಿಮ್ಮದೊಂದು ಸಮತೆಯ ಗುಣ**
**ಎನ್ನನೆಂದು ಪೊಂದಿಪ್ಪುದು ಕಪಿಲಸಿದ್ದ ಮಲ್ಲಿಕಾರ್ಜುನಾ.**

ಸಿರಿವಂತಿಕೆಯಿಂದ ಉಬ್ಬಿ ಕೆಟ್ಟಡೆ ಮನನೊಂದು ಖಿನ್ನವಾಗದಂತೆ ಇರಬೇಡ ಎಂದು ಸಿದ್ಧರಾಮ ಶಿವಯೋಗಿಗಳು ಮನಕ್ಕೆ ಸಮತೆಯ ಗುಣ ಬೋಧಿಸಿದ್ದಾರೆ.

ಕಾಯದಲ್ಲಿ ಅರಿವಿನ ಶ್ರೀಮಂತಿಕೆ ಇದೆ. ಇದು ಸಕಲ ಕಾಯಗಳಲ್ಲಿಯು ಸಂಗಮವಾಗಿದೆ. ಕಾಯವನ್ನು ಆವರಿಸಿದ ಮನೋಮಯ ಕಾಯಕ್ಕೆ ಅರಿವಿನ ಕಾಯ ಮರೆವಾದುದರಿಂದ ಸ್ಥೂಲಕಾಯದೊಂದಿಗೆ ಮನೋಮಯವಾದ ಕಾಯ ಸಂಗಮಾಡಿ, ಕಾಗದವನ್ನು ಕರೆನ್ಸಿಯೆಂದು,

ಲೋಹವನ್ನೆ ಚಿನ್ನವೆಂದು ತಿಳಿದು ಶ್ರೀಮಂತನಾಗಿದೆ. ಶ್ರೀಮಂತಿಕೆಯ ಉತ್ಸಾಹದಿಂದ ಉಬ್ಬಿದೆ. ಅದಿಲ್ಲದಿದ್ದಡೆ ಕೆಟ್ಟೆನೆಂದು ಮನನೊಂದು ಖಿನ್ನವಾಗುತ್ತದೆ.

ತನ್ನ ಅರಿವಿನ ಶ್ರೀಮಂತಿಕೆಯನ್ನು ಬಳಸಲು ಮನಕ್ಕೆ ಸಾಧ್ಯವಾಗದ ನಿಮಿತ್ತ ಅದು ಬಡವ, ಶ್ರೀಮಂತ, ದರಿದ್ರ, ಭಿಕ್ಷುಕನೆಂದು ಅರಿವುಳ್ಳ ಶ್ರೀಮಂತ ಕಾಯವನ್ನು ತನಗೆ ತಾನೆ ಬೇರ್ಪಡಿಸಿಕೊಂಡಿದೆ. ಮನ ತನ್ನನ್ನು ತಾನೇ ಛಿದ್ರಗೊಳಿಸಿಕೊಂಡಿದೆ. ಕಾಯದ ಮೇಲೆ ಇರುವ ಹಳದಿ ಲೋಹವನ್ನೆ ಶ್ರೇಷ್ಠವೆಂದು ತಿಳಿದು ಆಭರಣವನ್ನಾಗಿ ಧರಿಸಿಕೊಂಡು ಶ್ರೀಮಂತ ಎಂದು ಕರೆಯಿಸಿಕೊಂಡಿದೆ.

ಚಿನ್ನವೆಂದು ತಿಳಿದ ಕಾಯ, ಲೋಹ ಕದಿಯಲು ಹೋದಾಗ ಶ್ರೀಮಂತ ಕಾಯ ಚಿನ್ನವನ್ನು ಕೊಡದೆ ಪ್ರಾಣ ಕೊಡಲೂ ಹೇಸುವುದಿಲ್ಲ. ಕದಿಯಲು ಹೋದ ಕಾಯ ಕಾಯದ ಪ್ರಾಣ ತೆಗೆಯಲೂ ಹೇಸುವುದಿಲ್ಲ.

ಎರಡು ಕಾಯಗಳಿಗೆ ಚಿನ್ನ ಶ್ರೇಷ್ಠವೆ ಹೊರತು, ಕಾಯದಲ್ಲಿಯ ಕಾಯದ ಶ್ರೀಮಂತಿಕೆಯ ಪ್ರಾಣವು ಅಲ್ಲ. ಪ್ರಾಣ ದೊಡ್ಡದೊ? ಚಿನ್ನ ದೊಡ್ಡದೊ ಎಂದು ಕಾಯವನ್ನು ಕೇಳಲು ಹೋದರೆ, ಪ್ರಾಣವೇ ಶ್ರೇಷ್ಠ ಎಂದು ಎರಡೂ ಕಾಯಗಳು ಹೇಳುತ್ತವೆ. ಕಾಯದಲ್ಲಿ ಅರಿವಿನ ಶ್ರೀಮಂತಿಕೆ ಬಚ್ಚಿಟ್ಟುಕೊಂಡಿದ್ದರು ಅದನ್ನು ಬಳಕೆ ಮಾಡದೆ ಮನ ಚಿನ್ನಕ್ಕಾಗಿ ಪ್ರಾಣ ಕಳೆದುಕೊಳ್ಳಲೂ ಸಿದ್ಧವಾಗುತ್ತದೆ.

ಮನ, ಅರಿವಿನಿಂದ ನೋಡಿದರೆ ಅದು ಹಳದಿ ಲೋಹ. ಮರೆವಿನಿಂದ ನೋಡಿದರೆ ಅದು ಚಿನ್ನ. ಅರಿವಿನಲ್ಲಿ ಸಮತೆಯ ಗುಣವಿದೆ. ಅಂತಹ ನಿಮ್ಮದೊಂದು ಸಮತೆಯ ಗುಣವನ್ನು ಎನ್ನನೆಂದು ಹೊಂದಿಪ್ಪುದು. ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ಕಾಯದಲ್ಲಿಯೇ ಸಂಗಮವಾದ ಅರಿವಿನ ದೇವರನ್ನು ಪ್ರಾರ್ಥಿಸಿದ್ದಾರೆ.

**1020**

**ಶ್ರೀವಿಭೂತಿ ರುದ್ರಾಕ್ಷಿಯನು**
**ಧಾತಪ್ಪ ಬಸವಾಕ್ಷರತ್ರಯವನಾರಯ್ಯ**
**ಅರಿದು ಉಚ್ಚರಿಸುವರು**
**ಅವರಂಘ್ರಿಯಂಬುಜದಾಮೋದಭ್ರಮ ಆನಯ್ಯ.**
**ಅವರು ಆ ನಾದಬ್ರಹ್ಮವು ತಾವಾಗಿಪ್ಪರಯ್ಯಾ,**
**ಕಪಿಲಸಿದ್ದ ಮಲ್ಲಿಕಾರ್ಜುನ.**

ವಿಭೂತಿ ಎಂದರೆ ಅದರ ಮೂಲಸೆಗಣಿ. ತಾನು ಒಣಗಿ ತನ್ನನ್ನು ತಾನೇ ಸುಟ್ಟುಕೊಂಡು ವಿಭೂತಿಯಾಗಿದೆ. ವಿಭೂತಿಯಲ್ಲಿ ಸೆಗಣಿ ಹುಡುಕಿದರು ಸಿಗುವುದಿಲ್ಲ. ಸೆಗಣಿಯಲ್ಲಿ ವಿಭೂತಿ ಹುಡುಕಿದರೆ ಸಿಗುವುದಿಲ್ಲ. ಸೆಗಣಿಗೆ ತಾನು ವಿಭೂತಿಯಾಗಬೇಕೆಂಬ ಬಯಕೆ ಹುಟ್ಟಿದಾಗ, ತನಗೆ ತಾನೇ ಸುಟ್ಟುಕೊಂಡು ವಿಭೂತಿಯಾಗುತ್ತದೆ. ಹಾಗೆಯೇ ಅಜ್ಞಾನ ಭರಿತವಾದ ಸೆಗಣಿಮಯ ಕಾಯ, ತನಗೆ ತಾನೇ ಸುಟ್ಟುಕೊಂಡು ವಿಭೂತಿಯಾಗಬೇಕು. ಶ್ರೀ ವಿಭೂತಿ ಕಾಯವಾಗಬೇಕು.

ರುದ್ರಾಕ್ಷಿಯೆಂದರೆ ಒಂದು ಮರದ ಫಲವಲ್ಲ! ಕಾಯದಲ್ಲಿಯೇ ಸಂಗಮವಾದ ಅರಿವಿನ ಕಣ್ಣುಗಳು. ಪ್ರಕಾಶಮಯವಾದ ಜ್ಞಾನದಿಂದ ಸಕಲ ಅಜ್ಞಾನವನ್ನು ಕೊಂದು ರುದ್ರನಾಗಿ ಮೆರೆಯಬೇಕು.

ಕಣ್ಣಲ್ಲಿ ಅಜ್ಞಾನದ ಕಣ್ಣಿದೆ. ರುದ್ರನ ಕಣ್ಣಿದೆ. ಅಜ್ಞಾನದ ಕಣ್ಣನ್ನು ರುದ್ರನಿಗೆ ಅರ್ಪಿಸಬೇಕು. ಚರ್ಮದಲ್ಲಿ ಅಜ್ಞಾನದ ಕಣ್ಣು ಇದೆ. ಜ್ಞಾನದ ಕಣ್ಣು ಇದೆ. ಅದು ನೋಡುವುದಿಲ್ಲ. ಸ್ಪರ್ಶಿಸುವ

ಮೂಲಕ ನೋಡುತ್ತದೆ. ಅಜ್ಞಾನದ ಚರ್ಮವನ್ನು ಜ್ಞಾನದ ಚರ್ಮಕ್ಕೆ ಅರ್ಪಿಸಬೇಕು. ಹಾಗೆಯೇ ಕಿವಿ, ಮೂಗು, ನಾಲಿಗೆಯಲ್ಲಿಯ ಅಜ್ಞಾನವನ್ನು, ಅಲ್ಲಲ್ಲಿಯೇ ಇರುವ ರುದ್ರನಿಗೆ ಅರ್ಪಿಸಿದಾಗ ಕಾಯವೇ ರುದ್ರಾಕ್ಷಿ ಕಾಯವಾಗುತ್ತದೆ. ಬಸವಾಕ್ಷರತ್ರಯದ ಅರಿವಿನಿಂದ ಮೆರೆಯುತ್ತದೆ. ಆ ಕಾಯ ನಾದ ಬ್ರಹ್ಮನಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೆ ತಾನಾಗುತ್ತದೆ.

**1021**

**ಷಡಾಧಾರದಲ್ಲಿ ಅಡಿಗದ್ದಿ ಹೋದವರ ಕಂಡೆ.**
**ತತ್ವಂಗಳ ಗೋತ್ರ ಹೇಳಿ ಮುಟ್ಟದೆ ಹೋದವರ ಕಂಡೆ.**
**ಮಾತಿನ ಮಾಲೆಯನಾಡಿ ವಸ್ತುವನರಿಯದೆ**
**ಭ್ರಾಂತರಾಗಿ ಕೆಟ್ಟವರ ಕಂಡೆ.**
**ಅಷ್ಟಾಂಗಯೋಗವ ಮಾಡಿಹೆನೆಂದು**
**ಘಟಕೆಟ್ಟು ನಷ್ಟವಾದವರ ಕಂಡೆ.**
**ಇಂತಿದನರಿದು ಕರ್ಮಯೋಗವ ಮಾಡದೆ.**
**ಮರ್ಮಜ್ಞನಾಗಿ ಸರ್ವಗುಣ ಸಂಪನ್ನನಾಗಿ ನಿಜವನರಿದಾತಂಗೆ**
**ತನಗೇನು ಅನ್ಯ ಭಿನ್ನವಿಲ್ಲ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಕಲ ಶಾಸ್ತ್ರಗಳು, ಪುರಾಣಗಳು, ವೇದ, ಆಗಮ, ಉಪನಿಷತ್ತುಗಳು; ಬೈಬಲ್, ಭಗವದ್ಗೀತೆ, ಖುರಾನ್, ತ್ರಿಪಿಟಿಕ, ಜೈನ ಶಾಸ್ತ್ರ, ಗ್ರಂಥ ಸಾಹೇಬ ಈ ಎಲ್ಲಾ ಪುಸ್ತಕಗಳಿಗೂ ಕಾಯವೇ ಜನ್ಮ ನೀಡಿದೆ. ಈ ಎಲ್ಲಾ ಪುಸ್ತಕಗಳು ಕಾಯದಿಂದಲೇ ಹೊರಬಂದಿವೆ. ಕಾಯಕ್ಕೆ ಈ ಪುಸ್ತಕಗಳು ಏನನ್ನೂ ಹೇಳಲು ಸಾಧ್ಯವಾಗುವುದಿಲ್ಲ!

ಕಾಯವನ್ನು ಆವರಿಸಿದ ಮನ, ಅರಿವಿನ ಕಾಯದಿಂದಲೇ ಹೊರಬಂದ ಪುಸ್ತಕಗಳನ್ನು ಓದಿ, ಸ್ಥೂಲಕಾಯದಲ್ಲಿ ಇಟ್ಟುಕೊಂಡು, ತತ್ವಗಳನ್ನು ಹೇಳುತ್ತಾ, ಅವುಗಳನ್ನು ಮುಟ್ಟದೆ, ಪಂಡಿತನಾಗಿ ಸತ್ತು ಹೋಗುತ್ತದೆ. ಈ ಎಲ್ಲಾ ಪುಸ್ತಕಗಳು ಸತ್ತವರು ಬರೆದ ಪತ್ರಗಳು! ಅದನ್ನು ಓದಿದರೆ ಕಾಯಕ್ಕೆ ಮುಕ್ತಿ ದೊರೆಯುದಿಲ್ಲ. ಬದಲಾಗಿ ಪಂಡಿತ, ಶಾಸ್ತ್ರಿ, ಪ್ರವಚನ ಪಟು, ಗುರು, ಜಗದ್ಗುರುವಾಗಿ ಅಹಂಕಾರದಿಂದ ಪಲ್ಲಕ್ಕಿಯಲ್ಲಿ ಮೆರೆಯಬಹುದು. ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಶ್ರೀ ಗುರುದೇವರ ಕರುಣೆ ಮನಕ್ಕೆ ಆಗುವುದಿಲ್ಲ. ಸರ್ವಗುಣಗಳನ್ನು ಕಳೆದುಕೊಂಡು ಮನ ನಿರ್ಗುಣಿಯಾಗುವುದಿಲ್ಲ.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಶ್ರೀ ಗುರುದೇವನ ಚರಣ ಕಮಲಗಳಿಗೆ ಶರಣು ಹೋಗಿ ಶರಣಾಗತನಾಗಿ ಶರಣನಾದಾಗ ತನಗೂ ಆತನಿಗೂ ಭಿನ್ನವಿಲ್ಲದಂತೆ ತೋರುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೆ ತಾನಾಗುತ್ತದೆ.

**1022**

**ಷಡುಸ್ಥಳ ಸಮನಿಸದಯ್ಯಾ ಎಲ್ಲರಿಗೆ.**
**ಷಡುವ್ರತ ಸಮನಿಸದಯ್ಯಾ ಎಲ್ಲರಿಗೆ.**

**ಅರಿದರಿದು ಗುರುಭಕ್ತಿ, ಅರಿದರಿದು ಲಿಂಗಭಕ್ತಿ**
**ಅರಿದರಿದು ಜಂಗಮ ಭಕ್ತಿ.**
**ಅರಿದಯ್ಯಾ, ಸುಲಭವೆ ಎಲ್ಲರಿಗೆ?**
**ಅವ್ಯಯ ಕರುಣ ಅಳವಟ್ಟವರಿಗಲ್ಲದೆ**
**ಗುರ-ಚರ-ಇಷ್ಟತ್ರಯ ಅಳವಡದು.**
**ವ್ರತವಾರರಲ್ಲಿ ನಿಪುಣತೆಯಯ್ಯಾ.**
**ನಿನ್ನ ಕೃಪೆ ಎತ್ತಾನೊಬ್ಬರಿಗಲ್ಲವೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಲ್ಲ ಕಾಯಗಳಲ್ಲಿ ಬಳಕೆಯಾಗುತ್ತದೆ. ಇದನ್ನು ಯಾರೂ ಕಲಿಯಬೇಕಾಗಿಲ್ಲ. ಕಲಿಸಬೇಕಿಲ್ಲ. ಭಕ್ತನಾಗಿ, ಮಹೇಶ್ವರನಾಗಿ, ಪ್ರಸಾದಿಯಾಗಿ, ಪ್ರಾಣಲಿಂಗಿಯಾಗಿ, ಶರಣನಾಗಿ ಐಕ್ಯನೇ ತಾನಾಗಿ ಅರಿಷಡ್ವರ್ಗಗಳನ್ನು ಷಟಸ್ಥಲಗಳ ಮೂಲಕ ಕಳೆದುಕೊಳ್ಳಲು ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಇವು ಷಡ್‌ವ್ರತಗಳು ಅರಿದರಿದು ಗುರುಭಕ್ತಿ ಮಾಡಬೇಕು.

ಮನ ಭಕ್ತನಾಗಿ, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಭಕ್ತಿಮಾಡಿ, ಭಕ್ತನೇ ತಾನಾಗುವುದು. ಅದು ಎಲ್ಲರಿಗೂ ಸುಲಭವಾದ ಮಾತಲ್ಲ. ಅರಿದರಿದು ಲಿಂಗಭಕ್ತಿ ಮಾಡುವುದು, ಅರಿದರಿದು ಜಂಗಮನೇ ತಾನಾಗಿ ತನ್ನ ಅಜ್ಞಾನವನ್ನು ತನ್ನದೇ ಆದ ಅರಿವಿನ ಖಡ್ಗದಿಂದ ಹೊಡೆದೋಡಿಸುವುದು ಎಲ್ಲರಿಗೂ ಸುಲಭದ ಮಾತಲ್ಲ. ಗುರುಕಾರುಣ್ಯ ಆದವರಿಗೆ ಮಾತ್ರ ವ್ರತ ಆರರಲ್ಲಿ ನಿಪುಣರು.

ಗುರುಕೃಪೆ ಒಬ್ಬರಿಗಲ್ಲದೆ ಸಕಲರಿಗೂ ಸಾಧ್ಯವಲ್ಲ ಕಪಿಲಸಿದ್ಧ ಮಲ್ಲಿಕಾರ್ಜುನ:

ಅರಿವೆಂಬ ಗುರುದೇವನಿಗೆ ಶರಣು ಹೋಗಿ ಶರಣಾಗತನಾಗಿ ಶರಣನಾಗಲೇಬೇಕೆಂಬ ಛಲವುಳ್ಳ ಮನಕ್ಕೆ ಮಾತ್ರ ಷಡುವ್ರತ ದಕ್ಕುವುದು.

**1023**

**ಷಷ್ಟಮ ಬ್ರಹ್ಮಕ್ಕೆ ಪಟ್ಟಗಟ್ಟಿತು ಮಾತೆ**
**ಹೆತ್ತು ಹೆಸರಿಟ್ಟುದೈ ಅಕ್ಷರಾಂಕ.**
**ಆಗುವನು ಐದವನು ಮೇಲಿಪ್ಪ ಮೂರುವನು ಕೂಡಿ**
**ಹದಿನಾಲ್ಕರೊಳು ಲೋಕವಾಗಿ,**
**ಏಕೈಕ ರುದ್ರ ನಿನ್ನಾಕಾರ ಚತುಷ್ಟಯಕೆ**
**ಅನೇಕ ಪರಿಯಿಂ ಮಾತೆ ಬಸವಾಕ್ಷರ.**
**ನೀನಾದಿಮುಖ ಶೂನ್ಯನಾಗಿಪ್ಪಲ್ಲಿ**
**ನಿನ್ನವನು ಖ್ಯಾತಿಮಾಡಿದ ಬಸವ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿಷಡ್ವರ್ಗಗಳನ್ನು ಗುರುಕರುಣೆಯಿಂದ ಕಳೆದುಕೊಂಡು ಮನ ಮಾತೆಯಾಗಿ ಷಟಸ್ಥಲದಲ್ಲಿ ಅಳವಡಿಸಿ ಷಷ್ಟಮ ಬ್ರಹ್ಮಕ್ಕೆ ಪಟ್ಟ ಕಟ್ಟಿದಳು ಮನವೆಂಬ ಮಾತೆ. ಹೆತ್ತು ಹೆಸರಿಟ್ಟಳೈ

ಅಕ್ಷರಾಂಕ ಎಂದು. ಷಟಸ್ಥಲಗಳನ್ನು ಐದು ಜ್ಞಾನೇಂದ್ರಿಯಗಳನ್ನು ತನುತ್ರಯಗಳನ್ನು ಕೂಡಿ, ಹದಿನಾಲ್ಕರೊಳು ಲೋಕ ತಾನಾಗಿ, ಏಕೈಕ ರುದ್ರ ನಿನ್ನ ಆಕಾರ ಚತುಷ್ಟಯಕ್ಕೆ, ಅನೇಕ ಪರಿಯಿಂದ ಮಾತೆ ಬಸವಾಕ್ಷರವೇ ತಾನಾದಳು. ಅಂಗವನ್ನು ಆವರಿಸಿದ ಮನ ಆದಿಯಲ್ಲಿ ಶೂನ್ಯವೆ ಆಗಿತ್ತು. ಅವ್ವೆ ನಿನ್ನನ್ನು ಖ್ಯಾತಿ ಮಾಡಿದಾತ ಬಸವಣ್ಣ ಎಂದು ಸಿದ್ಧರಾಮ ಶಿವಯೋಗಿಗಳು ಮನದೊಂದಿಗೆ ಅಂಗದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ಮಾತನಾಡಿದ್ದಾರೆ.

**1024**

**ಸಂಗದವರ ಕಂಡು ಅಂಜಿ ನಿಸ್ಸಂಗನಾದೆ.**
**ಕಾಮಿಗಳ ಕಂಡು ಅಂಜಿ ನಿಃಕಾಮಿಯಾದೆ,**
**ಕಾರುಣ್ಯ ಸಿಂಧುವೆ ಕೇಳಯ್ಯಾ,**
**ಅನಾದಿಯಾಧಾರಕ್ಕೆ ಮೂಲ ನೀನೆ ಕಾಣಾ.**
**ಕಪಿಲಸಿದ್ಧ ಮಲ್ಲಿನಾಥಯ್ಯಾ**
**ಮಾತುಗಾರರ ಕಂಡು ಮೌನಿಯಾದೆ.**

ಗುರು ಕರುಣದಿಂದ ಲೋಕದ ಸಂಗಕ್ಕೆ ಅಂಜಿ ನಿಸ್ಸಂಗಿಯಾದೆ. ಕಾಮಿಗಳ ಕಂಡು ಅಂಜಿ ನಿಃಕಾಮಿಯಾದೆ. ಕಾರುಣ್ಯ ಸಿಂಧುವೇ ಕರುಣಾಕರನೇ ಕೇಳಯ್ಯ ಅನಾದಿ ಆದಿ ಆಧಾರಕ್ಕೆ ಮೂಲ ನೀನೆ ಕಪಿಲಸಿದ್ಧ ಮಲ್ಲಿನಾಥಯ್ಯ, ಮಾತುಗಾರರ ಕಂಡು ಮೌನಿಯಾದೆ.

ಎಲ್ಲಿ ನೋಡಿದರು ಲೋಕದ ಮಾತು. ಲೋಕಕ್ಕೆ ಗಾಯ ಮಾಡುವ ಮಾತು. ಮಾತು ಕೇಳಿದರೆ ಗಾಯವಾಗುತ್ತದೆ ಇಲ್ಲ ಸುಖವಾಗುತ್ತದೆ. ಅರಿವು ಆಗುವುದೇ ಇಲ್ಲ. ಪ್ರತಿ ಮಾತಿನಲ್ಲಿ ಅರಿವು ಇದೆ. ಹೀಗಾಗಿ ಮಾತು ಮುತ್ತಿನಂತೆ ಬೆಳಗುತ್ತದೆ. ಮಾತು ಜ್ಯೋತಿಯಂತೆ, ಮಾತು ಸ್ಫಟಿಕದ ಸಲಾಕೆಯಂತೆ, ಮಾತು ಮಾಣಿಕ್ಯದ ದೀಪ್ತಿಯಂತೆ, ಮಾತು ಅರಿವಿನಿಂದ ಕೇಳಲು ಬಾರದಿದ್ದರೆ ಅದು ಕಾಯಕ್ಕೆ ಗಾಯ ಮಾಡುತ್ತದೆ. ಗಾಯ ಮಾಡಿಕೊಂಡ ಕಾಯಕ್ಕೆ ಔಷಧಿ ಬೇಕೇ ಹೊರತು ಮಾತನಾಡಿ ಗಾಯಮಾಡಿದ ಕಾಯಕ್ಕೆ ಅಲ್ಲ ಎಂದು ಗಾಯ ಮಾಡಿಕೊಂಡ ಕಾಯ ತಿಳಿಯುವುದೇ ಇಲ್ಲ.

ಪ್ರತಿ ಮಾತಿನಲ್ಲಿ ಅರಿವಿದೆ. ಅರಿವಿನಿಂದ ಕೇಳಿದರೆ ಕಾಯಕ್ಕೆ ಗಾಯ ಆಗುವುದಿಲ್ಲ. ಮಾತನ್ನು ಅರಿವಿನಿಂದ ಕೇಳಬೇಕಾದರೆ ಗುರುವಿನ ಕರುಣೆ ಅಗತ್ಯ. ಮಾತಿನಲ್ಲಿ ಅರಿವಿದೆ ಎಂದು ಬೋಧಿಸುವ ಗುರುದೇವನನ್ನು ಹುಡುಕಲು ಬಯಕೆಯಾದ ಕಾಯಕ್ಕೆ ಮಾತ್ರ ಗುರುದೇವ ಸಿಗುತ್ತಾನೆ.

ಹಾಗೆಯೇ ಕಾಮ ಕಾಯದಲ್ಲಿಯೇ ಹುಟ್ಟಿ, ಕಾಯದಿಂದ ಕಾಮದ ದ್ರವ್ಯ ಹೊರಬಂದು, ಕಾಯಕ್ಕೆ ಸುಖವಾಗುತ್ತದೆ. ಆದರೆ ಕಾಯ ಮತ್ತೊಂದು ಕಾಯದಿಂದ ಕಾಮದ ಸುಖ ಆಗುತ್ತದೆ ಎಂದು ಭ್ರಮೆಯಿಂದ ಭಾವಿಸಿದ ನಿಮಿತ್ಯ ಲೋಕದ ಕಾಯಗಳಿಗೆ ಕಾಮ ಆವರಿಸಿದೆ. ಗುರುದೇವನ ಕರುಣೆಯಿಂದ ಕಾಮ ಅಂಜಿ ನಿಃಕಾಮಿ ಆಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**1025**

**ಸಂಗವ ಮಾಡುವೆ ನಿನ್ನವರಲ್ಲಿ**
**ಸ್ನೇಹವ ಮಾಡುವೆ ನಿನ್ನವರಲ್ಲಿ**

**ನಿನ್ನವರಲ್ಲದೆ ಅನ್ಯಕ್ಕೊಡಂಬಡದೆನ್ನ ಮನಸು.**
**ನಿನ್ನವರಲ್ಲದೆ ಅನ್ಯರ ಸಂಗವ ಮಾಡಿದರೆ**
**ನರಕ ತಪ್ಪದೈ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪರಮಾತ್ಮನೇ, ಗುರುದೇವನೆ ನಿನ್ನನ್ನು ಸಾಕ್ಷಾತ್ಕಾರ ಮಾಡಿಕೊಂಡ ನಿನ್ನವರೇ ಆದ ನಿನ್ನ ಶರಣರ ಸಂಗ ಮಾಡುವೆ. ನಿನ್ನ ಶರಣರ ಸ್ನೇಹವ ಮಾಡುವೆ. ನಿನ್ನವರಲ್ಲದೇ ಲೋಕದ ಸಂಗ ಮಾಡಲು ನನ್ನ ಮನಸ್ಸು ಒಪ್ಪುತ್ತಿಲ್ಲವಯ್ಯ.

ಲೋಕದ ಸಂಗ ಮಾಡಿದರೆ ಸುಖವುಂಟು, ದುಃಖವುಂಟು ಸಹಜವಾದ ಪರಮ ಸುಖವೆನ್ನುವುದು ಲೋಕಕ್ಕೆ ಪರಿಚಯವೇ ಇಲ್ಲ. ಲೋಕದ ಸಕಲ ಕಾಯಗಳಲ್ಲಿಯೂ ನೀನು ಸಂಗಮವಾಗಿದ್ದರು ನಿನ್ನ ಪರಿಚಯವೇ ಲೋಕಕ್ಕಿಲ್ಲ. ನಿನ್ನ ಪರಿಚಯವಿಲ್ಲದ ಲೋಕದ ಸಂಗ ಮಾಡಿದರೆ ನನಗೆ ನರಕ ತಪ್ಪದು ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1026**

**ಸಂಗಸುಖದಲ್ಲಿ ಸಂಗಿಯೂ ಅಲ್ಲದಿಪ್ಪೆ:**
**ನಿಸ್ಸಂಗ ಸುಖದಲ್ಲಿ ಸುಖವೆಂದೆಂಬೆ.**
**ಮತ್ತೆ ಸಂಗಕ್ಕೆ ಕಾರಣವಪ್ಪೆ;**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ನಿನ್ನ ಅಂಗ ಅನಂಗ.**

ಕಾಯ ಸ್ವತಂತ್ರವಾಗಿ ಏನು ಮಾಡಲು ಆಗುವುದಿಲ್ಲ. ಕಾಯವನ್ನು ಮನ ಬಳಸಿಕೊಂಡರೆ ಕಾಯ ಕರ್ಮಯೋಗಿಯೆಂದು ಕರೆಯಿಸಿಕೊಳ್ಳುವುದು. ಕಾಯವನ್ನು ಅರಿವು ಬಳಸಿಕೊಂಡರೆ ಜ್ಞಾನಯೋಗಿಯೆಂದು ಕರೆಯಿಸಿಕೊಳ್ಳುವುದು. ಲೋಕದ ಕಾಯಗಳನ್ನು ಮನ ಬಳಸಿಕೊಂಡು ಕಾಯದ ಸಂಗ ಸುಖದಲ್ಲಿ ಸಂಗಿಯಾಗಿದೆ. ಹೀಗಾಗಿ ಅದು ಕರ್ಮಯೋಗಿಯೆಂದು ಕರೆಯಿಸಿಕೊಂಡಿದೆ.

ಕಾಯದಲ್ಲೇ ಜ್ಞಾನ ಸಂಗಮವಾಗಿದ್ದರೂ ಜ್ಞಾನದ ಸಂಗ ಸುಖದ ಪರಿಚಯ ಕಾಯಕ್ಕಿಲ್ಲ. ಎಲ್ಲಿಯವರೆಗೆ ಮನ ಕಾಯದ ಸಂಗ ಸುಖದಲ್ಲಿ ತಲ್ಲೀನವಾಗಿರುವುದೋ ಅಲ್ಲಿಯವರಗೆ ಮನಕ್ಕೆ ಜ್ಞಾನವೆಂದರೇನೆಂದು ತಿಳಿಯುವುದೇ ಇಲ್ಲ. ಆದರೂ ಮನ ಕಾಯವನ್ನು ಆವರಿಸಿದ್ದರೆ ಜ್ಞಾನ ಕಾಯದಲ್ಲಿ ಸಂಗಮವಾಗಿದೆ. ಮನ ಜ್ಞಾನ ಕಾಯದಲ್ಲಿದ್ದರೂ ಕಾಯ ಮತ್ತು ಮನಕ್ಕು ಜ್ಞಾನದ ಪರಿಚಯವಿಲ್ಲ ಹೀಗಾಗಿ ಮನ ಜ್ಞಾನಿಗಳ ಸಂಘ ಮಾಡಲೇಬೇಕು.

ಜ್ಞಾನಿಗಳೆಂದರೆ ಮನ ಜ್ಞಾನದಲ್ಲಿ ಸಂಗಮವಾಗಿ ಜ್ಞಾನ ಕಾಯ ಒಂದಾಗಿ ಜ್ಞಾನಿಗಳೇ ತಾವಾದವರು. ಜ್ಞಾನ, ಕಾಯವನ್ನು ಉಪಕರಣ ಮಾಡಿಕೊಂಡು ಕಾಯವೇ ಜ್ಞಾನವಾದವರು. ಮನ ಜ್ಞಾನಕ್ಕೆ ಶರಣುಹೋಗಿ ಶರಣರೇ ತಾವಾದವರು.

ಮನವೇ, ನಿನ್ನವರಲ್ಲದೇ ಅನ್ಯಕ್ಕೆ ಒಡಂಬಡದು ಎನ್ನ ಮನಸ್ಸು. ನಿನ್ನವರಲ್ಲದೇ ಅನ್ಯಕ್ಕೆಳಸದು ಮನ. ಸಂಘ ಸುಖದಲ್ಲಿ ಸಂಗಿಯೂ ಅಲ್ಲದಿಪ್ಪೆ, ನಿಸ್ಸಂಗ ಸುಖದಲ್ಲಿ ಸುಖವೆಂದೆಂಬೆ ಏಕೆಂದರೆ ನಿನ್ನ ಅಂಗ ಅನಂಗ. ನಾನು ಕೂಡಾ ಅನಂಗಿ. ಅರ್ಧ ಅಂಗದಲ್ಲಿ ನೀನಿರುವೆ ಇನ್ನ ಅರ್ಧ ಅಂಗದಲ್ಲಿ ನಾನಿದ್ದು ಸಂಘ ಸುಖದಲ್ಲಿ ಕಾರಣರಾಗಿರುವೆವು ಕಪಿಲಸಿದ್ಧ ಮಲ್ಲಿಕಾರ್ಜುನಾ.

**1027**

**ಸಂಗ ಸುಖದಿಂದಲದು ಸಂಗವಾಗದು ನೋಡ**

**ಮಂಗಳಾಂಗನ ಬೆಳಗು ಚಿತ್ರತರವೈ**
**ಆಕಾಶವಡೆಯೆಂದಡದ ಹಿಡಿದನಾಜ್ಞೆಯಿಂ**
**ಸಾಹಸಿಗನ್ನೈ ಶಿಷ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನ ಕಾಯ ಜ್ಞಾನ, ಇವು ಮೂರು ತ್ರಿಕೂಟ ಸಂಗಮ. ಆದರೂ ಸಂಗವಲ್ಲ. ಮನ ಜ್ಞಾನದೊಂದಿಗೆ ಸಂಗಮವಾಗದಿದ್ದರೆ, ಅದು ಸಂಗವಲ್ಲ, ಅದು ಅರಿವಿನ ಸಂಗ ಸುಖವೂ ಅಲ್ಲ. ಕಾಯ ಕಾಯದೊಂದಿಗೆ ಸಂಗಮವಾಗುವ ಸಂಗ ಸುಖವು. ಸಂಗ ಸುಖವಲ್ಲ. ಜ್ಞಾನವೇ ತಾನಾದ ಮಂಗಳಾಂಗನ ಕಾಯದ ಬೆಳಕು ಚಿತ್ರ–ವಿಚಿತ್ರವು.

ನೋಡಲು ಹೋದರೆ ಜ್ಞಾನಕಾಯ, ಮನೋಕಾಯ, ಸ್ಥೂಲಕಾಯ ಒಂದಾಗಿಯೇ ಕಾಣುತ್ತವೆ. ಆದರೂ ಮನ ಜ್ಞಾನದೊಂದಿಗೆ ಒಂದಾಗದ ವಿನಹ ಒಂದಲ್ಲ. ಮನ ಮತ್ತು ಕಾಯ ಒಂದಾಗಿರುವುದರಿಂದ ಜ್ಞಾನಕ್ಕಾಗಿ ಕಾಯ ಗುರುಕಾಯಕ್ಕೆ ಶಿಷ್ಯನಾಗಿದೆ. ಕಾಯ ಗುರುವು ಅಲ್ಲ, ಕಾಯ ಶಿಷ್ಯನು ಅಲ್ಲ ಎಂದು ಕಾಯವನ್ನು ಆವರಿಸಿದ ಮನಕ್ಕೆ ತಿಳಿಯುತ್ತಿಲ್ಲ. ಮನ ಮಹಾಜ್ಞಾನಿ ಗುರುದೇವನಿಗೆ ಶರಣು ಹೋಗಿ, ಶರಣಾಗತನಾಗಿ ಶಿಷ್ಯನಾಗಬೇಕು. ಆ ಶಿಷ್ಯ ಸಾಹಸಿಗನಾಗಿ ಕಾಯವೇ ಇಲ್ಲದ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಅಕಾಯದೊಂದಿಗೆ ಅಕಾಯ ಶಿಷ್ಯನಾಗಿ ಬೆರೆಯಬೇಕು. ಈ ಕಾಯಕ ಸರಳವಲ್ಲ. ಅತ್ಯಂತ ಜಟಿಲವಾದುದು. ಕಠಿಣವಾದ ಈ ಕಾಯಕಕ್ಕೆ ಅಕಾಯ ಶಿಷ್ಯ ಸಾಹಸಿಗನಾಬೇಕು. ಆಗ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ.

**1028**

**ಸಂತವಿಸು ಸಂತವಿಸಲಾರೆ ನನ್ನ ಮನವ.**
**ಮುನ್ನಿನವರು ಮಾಡಿ ಕೂಡಿದ ಪರಿಯ ನೆನೆದು ನಾನು**
**ಬೇಯದ ಬೇಗೆಯಲಿ ಬೆಂದೆನಯ್ಯಾ ,**
**ಇಂತಲ್ಲದೆ, ಮರ ಕಿಚ್ಚು ಹತ್ತಿದಂತಾದೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವೆಂಬ ಶ್ರೀ ಗುರುದೇವನೆ, ಎನ್ನ ಮನಕ್ಕೆ ಕೃಪೆತೋರಿ, ನೀನೇ ಸಂತೈಸಬೇಕು. ನನಗೆ ನಾನೇ ಸಂತೈಸಲು ನನಗೆ ಸಾಧ್ಯವಾಗದ ಮಾತು. ನಿನ್ನ ಕಂದ ನಾನು. ನಾನು ಹಾದಿ ತಪ್ಪಿದಾಗ ಎನಗೆ ಸಾಂತ್ವನ ಮಾಡುವುದು ನಿನ್ನ ಧರ್ಮ. ಮುನ್ನಿನವರು ಪರಿ ಪರಿಯಾಗಿ ಬೇಡಿ, ನಿನ್ನನ್ನು ನೆನೆದು ಒಲಿಸಿಕೊಂಡರು. ಅವರಂತೆ ಮಾಡಲು ಹೋಗಿ ನಾನು ಬೇಯದ ಬೇಗೆಯಲಿ ಬೆಂದೆನಯ್ಯಾ . ನಿನ್ನ ಒಲುಮೆಯ ಕಾಣದೇ ಮರಕ್ಕೆ ಕಿಚ್ಚು ಹಚ್ಚಿದಂತೆ ಆದೆ. ಮರದೊಳಗಣ ಕಿಚ್ಚು ಮರವನ್ನೇ ನುಂಗಿದರೆ, ಮರ ಯಾರನ್ನು ಬೇಡಿದರೆ ತನ್ನ ಕಿಚ್ಚು ನಂದುವುದು? ಕಪಿಲಸಿದ್ಧ ಮಲ್ಲಿಕಾರ್ಜುನಾ ನಿನ್ನನ್ನು ಅರಿಯದಿದ್ದಕ್ಕಾಗಿ ಬೆಂದೆ. ನೀನೆ ಕೃಪೆ ಮಾಡು.

**1029**

**ಸಂದು ಸವೆಯಿತ್ತು, ಹಂಗು ಹರಿಯಿತ್ತು.**
**ಆಜ್ಞಾದೀಕ್ಷೆ ಪ್ರಬಲವಾಯಿತ್ತು.**

**ಸ್ವಾನುಭಾವದೀಕ್ಷೆ ಸಂಬಂಧಿಸಿತ್ತು**
**ಬೋಧಾದೀಕ್ಷೆ ಭೇದಿಸಿತ್ತು**
**ಅಯ್ಯಾ, ನಿಮ್ಮ ಸಾಧಿಸಿತ್ತು ಒಳಗುಮಾಡಿತ್ತು.**
**ಅರಿದೂ ಇನ್ನೊಂದೂ ಇಲ್ಲ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶ್ರೀ ಗುರುದೇವನೆ ನಿನ್ನ ದರುಶನದಿಂದಾಗಿ ಎನ್ನ ಸಂದು ಸವಿಯಿತು. ಎನ್ನ ಹಂಗು ಹರಿಯಿತು. ಅಜ್ಞಾದೀಕ್ಷೆ ಪ್ರಬಲವಾಯಿತು. ನಿನ್ನ ದರುಶನಕ್ಕಾಗಿ ಸ್ವಾನುಭಾವ ದೀಕ್ಷೆ ಸಂಬಂಧಿಸಿತ್ತು. ಬೋಧಾದೀಕ್ಷೆ ಬೇಧಿಸಿತ್ತು. ಅಯ್ಯಾ ನಿಮ್ಮ ಸಾಧಿಸಿತ್ತು. ನನ್ನನ್ನು ಬೆಳಗುವ ನಿಮ್ಮಲ್ಲಿ ಒಳಗು ಮಾಡಿ ಎನ್ನ ಅಜ್ಞಾನದ ಕತ್ತಲೆ ಕಳೆಯಿತ್ತು. ನಿನ್ನನ್ನು ಅರಿದ ಬಳಿಕ ನನ್ನನ್ನು ನಾನು ಮರೆತೆ. ನನ್ನ ಕತ್ತಲೆಲ್ಲಾ ನಿನ್ನ ಅರಿವಿನ ಬೆಳಕಿಗೆ ನಾಚಿ ಬೆಳಗಿಂಗೆ ಬೆಳಗಾಗಿ ಬೆಳಗಿತು ಕಪಿಲಸಿದ್ಧ ಮಲ್ಲಿಕಾರ್ಜುನಾ.

**1030**

**ಸಂಭ್ರಮದ ಶರಧಿಯೊಳಿಂಬಿನಲಿ ಪರಿತಪ್ಪಾಗ**
**ಗಂಭೀರ ಉಳ್ಳುದನೊಂದನು ಕಾಣೆ,**
**ಎನ್ನ ಬಿಡು ತನ್ನ ಬಿಡೆಂಬುದು ತನುಗುಣ ಸಂಬಂಧ.**
**ಎನ್ನ ಬಿಡು ತನ್ನ ಬಿಡೆಂಬುದು ಕಾಯವಿಕಾರ.**
**ದೆಸೆದೆಸೆವರಿದು ಪಸರಿಸುವ ಮನವನು.**
**ನಿಮ್ಮ ವಶಕ್ಕೆ ತಂದಿರಿಸಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಂಭ್ರಮದ ಸಂಸಾರವೇ ಹಾಗೆ. ಆ ಸುಖದಲ್ಲಿ ಮೈ ಮರೆತಾಗ ಯಾರೂ ಕಾಣುವುದಿಲ್ಲ. ಎನ್ನ ಬಿಡು ತನ್ನ ಬಿಡು ಎಂದು ತನುಗುಣ ಸಂಬಂಧಗಳು ಕಾಡುವವು. ಎನ್ನಬಿಡು ತನ್ನಬಿಡು ಎಂಬುದು ಕಾಯವಿಕಾರ.

ಗಂಭೀರವುಳ್ಳವನು ಕಾಯದಲಿ ಒಂದನು ಕಾಣೆ. ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ಕಾಯವನ್ನು ತಾಮುಂದು, ನಾಮುಂದು ಎಂದು ಕಾಡುವಾಗ ಮನ ಮತ್ತೆ ಮತ್ತೆ ಪರಿಹಾರಕ್ಕಾಗಿ ಆಲೋಚನೆ ಮಾಡುತ್ತದೆ. ಕಾಯವನ್ನು ಅಜ್ಞಾನದ ವಶಕ್ಕೆ ಕೊಂಡೊಯುತ್ತದೆ. ಇಂತಹ ಅಜ್ಞಾನದ ವಶದಲ್ಲಿದ್ದ ಕಾಯವನ್ನು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನಿನ್ನ ವಶಕ್ಕೆ ತಂದಿರಿಸಯ್ಯಾ.

**1031**

**ಸಂಯೋಗದಲ್ಲಿ ವಿಯೋಗಿಯಾದೆ.**
**ವಿಯೋಗದಲ್ಲಿ ಸಂಯೋಗಿಯಾದೆ.**
**ವಿಯೋಗ ಸಂಯೋಗವ ಕೂಡಿದ**
**ಶುದ್ಧ ತಾತ್ಪರ್ಯವಾದೆ.**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ**
**ಮಹಾಸುಖವ ನಚ್ಚಿ ಶುದ್ಧ ಮರುಳಾದೆನು.**

ಮನೋಕಾಯ, ಸ್ಥೂಲಕಾಯದಿಂದ ಬಿಡುಗಡೆಗೊಂಡು ಜ್ಞಾನಕಾಯದಲ್ಲಿ ಸಂಯೋಗವಾದಾಗ ಏನೊಂದರಿಯದ ಮಹಾಜ್ಞಾನ ಸುಖದಿಂದ ಮರುಳಾದೆನು ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ತಮ್ಮ ಪರಮ ಸುಖವನ್ನು ಹಂಚಿಕೊಂಡಿದ್ದಾರೆ.

ಕಾಯದೊಂದಿಗೆ ಸಂಗ ಮಾಡಿದ ಮನ, ಕಾಯದಿಂದ ಬಿಡುಗಡೆಯಾಗುವುದು ಸುಲಭವಲ್ಲದ ಮಾತು. ಈ ಕಾಯಕಕ್ಕೆ ಕಾಯ ತನ್ನದೇ ಆದ ಕೃಷಿಮಾಡಬೇಕಾಗುತ್ತದೆ. ಮನವೆಂಬ ಅಕಾಯ ಕಾಯದೊಂದಿಗೆ ಕೂಡಿದೆ. ಅದನ್ನು ಬಿಡಿಸಿಕೊಂಡು ಜ್ಞಾನವೆಂಬ ಅಕಾಯದಲ್ಲಿ ಮನವೆಂಬ ಅಕಾಯ ಕೂಡಿದ ಕೂಟ ಕೂಡದ ಅಗಲದ ಕೂಟ. ಮಹಾ ಸುಖದ ಸುಖ. ಪರಮಸುಖ ಇಂತಹ ಸುಖವನ್ನು ನಚ್ಚಿ ಶುದ್ಧವಾದೆ ಮರುಳಾದೆನಯ್ಯ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1032**

**ಸಂಸಾರ ತೆಪ್ಪದೊಳಗೆ ಆನೀಗ**
**ಅದ್ದಿ ಅಳಲುತ್ತ ಬಳಲುತ್ತಿಪ್ಪೆನಯ್ಯಾ,**
**ಬೇಗ ಬಾರಾ ಬಾರಾ ಅಯ್ಯಾ,**
**ವಜ್ರಲೇಪದಲಿ ಬಿದ್ದಿದ್ದೇನೆ**
**ಬೇಗ ಬಂದೆತ್ತಯ್ಯಾ, ಹೆತ್ತಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವನ್ನು ಆವರಿಸಿದ ಮನದಿಂದಾಗಿ ಎನ್ನ ತನುವಿನಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು ಹುಟ್ಟಿ ನನ್ನ ಅಜ್ಞಾನದ ಸಂಸಾರ ಬಹು ದೊಡ್ಡದಾಗಿದೆ. ಸಪ್ತವ್ಯಸನಗಳು, ಅಷ್ಟಮದಗಳು ತನುವಿನಲ್ಲಿಯೇ ಹುಟ್ಟಿ ತನುವನ್ನೇ ಕಾಡುತ್ತಲಿವೆ. ಈ ಅಜ್ಞಾನದ ಪ್ರಪಂಚದಲ್ಲಿ ಮನ ಎನ್ನನ್ನು ಅದ್ದಿರುವುದರಿಂದ ಅಳಲುತ್ತ , ಬಳಲುತ್ತಲಿದ್ದೆನಯ್ಯಾ.

ತನುವಿನಲ್ಲಿಯೇ ತನ್ಮಯವಾದ ಜ್ಞಾನ ನಿಧಿಯೇ ಬೇಗ ಬಾರಾ ಬಾರಾ ಅಯ್ಯಾ ವಜ್ರಲೇಪದಲಿ ಬಿದ್ದಿದ್ದೇನೆ. ನಿನ್ನ ಜ್ಞಾನದ ವಜ್ರಾಯುಧದಿಂದ ಎನ್ನ ಅಜ್ಞಾನವನು ತತ್ತರಿಸಿ ಬೇಗ ಬಂದೆತ್ತಯ್ಯಾ, ಹೆತ್ತಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1033**

**ಸಂಸಾರವನು ಹೊಸೆದುಬಿಟ್ಟ್ಯೆ ತಂದೆ**
**ವಸಮಾಡಿ ಕೊಟ್ಟೆಯಯ್ಯಾ ತ್ರಯಿಲಿಂಗ ಮೂಲಮತವ**
**ಜಗದೀಶನನು ಅವಗಹಿಸಿ ಕೊಟ್ಟ ಗುರು ಚೆನ್ನಬಸವಣ್ಣನಯ್ಯಾ**
**ಭವದೂರನಪ್ಪೆ ನಾನಿಹಪರವೆಲ್ಲರಲ್ಲಿ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯ ಒಂದು ಲಿಂಗ, ಜ್ಞಾನಕಾಯ ಒಂದು ಲಿಂಗ, ಮನೋಕಾಯವು ಕೂಡಾ ಒಂದು ಲಿಂಗ. ಹೀಗೆ ಪರಮಾತ್ಮ ಮೂರು ಲಿಂಗಗಳನ್ನು ಒಂದು ಮಾಡಿ ಕಾಯದಲ್ಲಿ ಹೊಸೆದಿದ್ದಾನೆ. ತಾನು ಅದರಲ್ಲಿ ಬೆರೆತಿದ್ದಾನೆ.

ಮನೋಕಾಯಕ್ಕೆ ಪರಮಾತ್ಮನಿದ್ದ ಕಾಯವೆಂದು ತಿಳಿಯದ್ದಕ್ಕಾಗಿ ಅದು ಕಾಯದ ಸಂಗ ಮಾಡಿ ಕಾಯದಲ್ಲಿಯೇ ತನ್ನ ಅಜ್ಞಾನದ ಸಂಸಾರ ಹೂಡಿದೆ. ಅರಿವಿನ ತಂದೆ ಶ್ರೀ ಗುರುದೇವ ಹೀಗೆ ಸಂಸಾರವನ್ನು ಹೊಸೆದು ಮನದ ಆ ಸಂಸಾರವನ್ನು ನೋಡುತ್ತ ತನುವಿನಲ್ಲಿಯೇ ಇದ್ದು ಮನವನ್ನು ತನ್ನೆಡೆಗೆ ಕರೆಯುತ್ತಿದ್ದಾನೆ.

ಗುರು ಚೆನ್ನಬಸವಣ್ಣನ ದಯದಿಂದ ಕಾಯದಲ್ಲಿಯೇ ಸಂಗಮವಾದ ಜಗದೀಶನನ್ನು ತೋರಿ ಆತನೊಂದಿಗೆ ಒಂದಾಗುವಂತೆ ಕರುಣಿಸಿದ ಕಾರಣ ಜಗದೀಶನ ಸಂಗ ಮಾಡಿ ಜನನ ಮರಣಗಳಿಂದ ದೂರವಾದೆ. ನಾನು ಇಹದಲ್ಲಿಯೂ ಪರದಲ್ಲಿಯೂ ಕಪಿಲಸಿದ್ಧ ಮಲ್ಲಿಕಾರ್ಜುನನನ್ನೆ ಕಂಡೆ ತ್ರೈಲಿಂಗ ಮೂಲ ಮತದವನಾದೆ.

**1034**

**ಸಂಸಾರದ ಅಣಲೊಳಗೆ ಇದ್ದೆನಯ್ಯಾ,**
**ಅಯ್ಯಾ, ಎನ್ನನಾವಾಗ ನುಂಗಿಹಿತೆಂದೆರಿಯೆನಯ್ಯಾ.**
**ಅಯ್ಯಾ, ಎನ್ನನಾವಾಗ ಮೆಲಿದೂತೆಂದರಿಯೆನು.**
**ಅದರ ಬಾಯೊಳಗಣಿಂದ ತೆಗೆದು ಎನ್ನ ಕಾಯಿ**
**ಕಪಿಲಸಿದ್ಧ ಮಲ್ಲಿನಾಥಯ್ಯಾ .**

ಕಾಯದ ಸಂಸಾರವು ಅಜ್ಞಾನದ ಸಂಸಾರ. ಕಾಯ ಗರ್ಭದಿಂದ ಹೊರ ಬರುವ ಮುನ್ನ ಅದರೊಳಗೆ ಪರಮಾತ್ಮನು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಆರು ಹೆಗ್ಗಣಗಳನ್ನು ಸಪ್ತವ್ಯಸನಗಳನ್ನು ಅಷ್ಟಮದಗಳನ್ನು ಕಾಯದೊಳಗಿಟ್ಟು, ಹೊಲಿದು ಗರ್ಭದಿಂದ ಭೂಮಿಗೆ ಎಸೆದಿದ್ದಾನೆ. ಕಾಯದೊಳಗಿದ್ದ ವ್ಯಸನಗಳು ಹೆಗ್ಗಣಗಳು, ಮದಗಳು ಕಾಯವನ್ನೇ ಹರಿದು ತಿನ್ನುತ್ತಲಿವೆ. ಮನವೆಂಬ ಮಾಯೆ ಕಾಯದ ಆಶ್ರಯದಲ್ಲಿದ್ದು ಕಾಯಕ್ಕೆ ದ್ರೋಹ ಬಗೆಯುತ್ತಿದೆ.

ಕಾಯವನ್ನು ಆವರಿಸಿದ ಮನವೆಂಬ ಮಾಯೆ ಕಾಯವನ್ನು ಯಾವಾಗ ನುಂಗುವುದೋ, ಯಾವಾಗ ತಿಂದು ತೇಗುವುದೊ ಎಂಬ ದುಗುಡದಲ್ಲಿದ್ದೇನೆ. ಅದರ ಬಾಯೊಳಗಿಂದ ತೆಗೆದು ಎನ್ನನ್ನು ಕಾಯಿ ಲಿಂಗಯ್ಯನೆ.

**1035**

**ಸಂಸಾರದ ವ್ಯಾಧಿಗೆ ಗುರು ಹೇಳಿದ ಔಷಧಂಗಳ ಮನದಲ್ಲಿಕ್ಕಿ,**
**ಮೂದಲಿಸಿ ಹೋಗಲೀಯದೆ ವಿಚಾರಿಸಿ ನೋಡುತಿದ್ದೆನು.**
**ಸಂಸಾರಂಗಳು ಮುಟ್ಟಲಮ್ಮದೆ ಹೆರಹಿಂಗಿ ತೇರ್ಗಟ್ಟಿದಂತೆ ನಿಂದು,**
**ಕಪಿಲಸಿದ್ಧ ಮಲ್ಲೇಶ್ವರದೇವರ ಶ್ರೀಪಾದಕ್ಕೆ ಬಟ್ಟೆಗೊಟ್ಟು**
**ಭಯಂಗೊಂಡು ನಿಂದು ಪೋಗಯ್ಯ ಪೋಗಯ್ಯಾ**
**ಎನುತ್ತಂ ಬರುವೆ?.**

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಶ್ರೀ ಗುರುದೇವನನ್ನು ಕೂಡಿ ಗುರುದೇವನೇ ತಾನಾದ ಗುರುಕಾಯವೇ ಬೇರೆ, ಕಾಯವೇ ಬೇರೆ. ಕಾಯಕ್ಕೆ, ಕಾಯದ ಅಜ್ಞಾನದ ಸಂಸಾರಕ್ಕೆ ಗುರುದೇವ ಅರಿವಿನ ಔಷಧವನ್ನು ನೀಡುತ್ತಾನೆ. ಅದನ್ನು ಮನ ಸ್ವೀಕರಿಸಿದರೆ ಔಷಧಿಯಾಗುತ್ತದೆ.

ಮನ ಗುರುದೇವ ನೀಡಿದ ಔಷಧವನ್ನು ಬಲವರ್ಧಕ ಟಾಣಿಕ್‌ನಂತೆ ಸ್ವೀಕರಿಸಿದರೆ, ಮನದ ಅಜ್ಞಾನದ ಬಲ ಅಧಿಕವಾಗುತ್ತದೆ. ಗುರು ಹೇಳಿದ ಮಂತ್ರವನ್ನು ಔಷಧಿಯನ್ನಾಗಿ ಸ್ವೀಕರಿಸದೇ ಉಪನ್ಯಾಸಕ್ಕೆ ಬಳಸಿದರೆ, ಅಜ್ಞಾನದ ಸಂಸಾರ ಕಾಯದಲ್ಲಿ ಕರಗುವುದಿಲ್ಲ. ಅನ್ಯ ಕಾಯಕ್ಕು ನೆರವಾಗುವುದಿಲ್ಲ. ಗುರುದೇವನ ದಿವ್ಯ ಔಷಧಿಯೇ ಮನಕ್ಕೆ ಮನರಂಜನೆಯ ಮಂತ್ರವಾಗುತ್ತದೆ. ಉಪಜೀವನಕ್ಕೆ ಸರಕಾಗುತ್ತದೆ. ಸಂಸಾರವನ್ನು ಮುಟ್ಟದೇ ಹೆರೆ ಹಿಂಗಿ ಹೆಮ್ಮರವಾಗಿ ನಿಲ್ಲುತ್ತದೆ.

ಭಗದ್ಗೀತೆ, ಬೈಬಲ್, ಖುರಾನ್‌ಗಳು ಜ್ಞಾನ ಗ್ರಂಥಗಳಾದರು ಮನ ಅವುಗಳನ್ನು ಉಪಜೀವನದ ವಸ್ತುಗಳೆಂದು ಸ್ವೀಕರಿಸಿ; ತನುವಿಗೆ ಗುರುವಿನ ವೇಷ ಹಾಕಿ ಮನ ಅಜ್ಞಾನದ ಬಲವನ್ನು ಇಮ್ಮಡಿಗೊಳಿಸಿಕೊಂಡಿದೆ. ಜ್ಞಾನದ ಔಷಧಿಯ ಗ್ರಂಥಗಳು ಮನಕ್ಕೆ ನಾಟುವುದಿಲ್ಲ.

ತನುವಿನಲ್ಲಿ ತನ್ಮಯವಾದ ಜ್ಞಾನಕ್ಕೆ ಮನ ತಲೆಬಾಗದಿದ್ದಲ್ಲಿ ಸಕಲ ಅರಿವಿನ ಔಷಧಿಗಳು ಮನವನ್ನು ಕರಗಿಸುವುದಿಲ್ಲ. ಕಪಿಲಸಿದ್ಧ ಮಲ್ಲೇಶ್ವರ ದೇವರ ಶ್ರೀಪಾದಕ್ಕೆ ಹಣೆಮಣೆದು ಎನ್ನ ಅಜ್ಞಾನವನ್ನು ಕಳೆಯಯ್ಯಾ, ಕಳೆಯಯ್ಯಾ ಎಂದು ಹೇಳಲಾಗಿ ಆತ ತನ್ನಂತೆ ಮಾಡಿಕೊಳ್ಳನೆ ಬೆಳಗಿಂಗೆ ಬೆಳಗಾಗಿ ಬೆಳಗಿಸಿ ಎನ್ನ ಕತ್ತಲೆಯ ಅಜ್ಞಾನವನ್ನು ಕಳೆಯನೆ.

**1036**

**ಸಂಸಾರ ಭ್ರಮೆಯಿಂದಾಯಿತ್ತು ಅಜ್ಞಾನ,**
**ಅಜ್ಞಾನದಿಂದಾಯಿತ್ತು ಅಹಂಮಮತೆ,**
**ಅಹಂಮಮತೆಯಿಂದಾಯಿತ್ತು ಭವಬಂಧನ.**
**ಈ ಭವಬಂಧನದ ಲಹರಿವಿಡಿದು,**
**ಹರಿಸುರಬ್ರಹ್ಮಾದಿಗಳು ಜ್ಞಾನರತ್ನವ ನೀಗಿ,**
**ಪ್ರಳಯಕ್ಕೊಳಗಾದರು, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನವೆಂಬ ಭ್ರಮೆಯಿಂದಾಗಿ, ಕಾಯ ಅಜ್ಞಾನಿಯೆಂದು ಕರೆಯಿಸಿಕೊಂಡಿದೆ. ಏಕೆಂದರೆ ಮನವೆಂಬ ಮಾಯೆ, ಕಾಯದ ಸಂಗ ಮಾಡಿ ತನ್ನ ಸುಖಕ್ಕಾಗಿ ಕಾಯಕ್ಕೆ ಕಾಮದ ದಾಹವನ್ನು ಹೇರಿದೆ. ಅದು ತನಗೆ ದೊರಕದೇ ಇದ್ದಾಗ ಕಾಯಕ್ಕೆ ಕ್ರೋಧದ ಬಾಣ ಎಸೆದು ಕೆಂಡಾಮಂಡಲವನ್ನಾಗಿಸುತ್ತದೆ. ಲೋಭ, ಮೋಹ, ಮದ, ಮತ್ಸರಗಳನ್ನು ಸಪ್ತ ವ್ಯಸನಗಳನ್ನು ಅಷ್ಟಮದಗಳನ್ನು ಕಾಯದಲ್ಲಿರಿಸಿ ಮನ ತನ್ನ ಸೈನಿಕರಂತೆ ಬಳಸಿಕೊಳ್ಳುತ್ತದೆ. ಇದರಿಂದಾಗಿ ಕಾಮ ಭವಬಂಧನದಲ್ಲಿ ತೊಡಗಿದೆ. ಜನನ ಮರಣಗಳ ಬಾಧೆಯಿಂದ ವಿಲವಿಲನೆ ಒದ್ದಾಡುತ್ತಲಿದೆ. ಈ ಬಾಧೆಯನ್ನು ಹರಿ, ಸುರ, ಬ್ರಹ್ಮಾದಿಗಳಿಗೂ ಕೂಡಾ ಕಳೆದುಕೊಳ್ಳಲು ಸಾಧ್ಯವಾಗಲಿಲ್ಲ. ಪ್ರಳಯಕ್ಕೂ ಒಳಗಾದರು, ಕಾಯದಲ್ಲಿಯೇ ಸಂಗಮವಾದ ಮಹೇಶ್ವರನು ಮಾತ್ರ, ಕಾಯದ ಸಕಲ ಬಾಧೆಯನ್ನು ನಿವಾರಿಸಬಲ್ಲ. ಆದರೆ ಮನ ಅರಿವೆಂಬ ಮಹೇಶ್ವರನಿಗೆ ಶರಣು ಹೋಗಿ ಶರಣಾಗತನಾದಾಗ ಮಾತ್ರ ಕಾಯದ ಸಕಲ ಅಜ್ಞಾನದ ವಿಷವನ್ನು ಕಂಠದಲ್ಲಿ ಧರಿಸಿಕೊಂಡು ನೀಲಕಂಠನಾಗುತ್ತಾನೆ.

**1037**

**ಸಂಸಾರವೆಂಬ ಅರಣ್ಯದೊಳಗೆ ಆಸುರವೊ, ಬಿಡದಿರೆನ್ನ.**

ಬೊಪ್ಪ, ಬೆನ್ನಲಿದ್ದು ಸಲುಹುದೆನ್ನ.
ಪಂಚೇಂದ್ರಿಯವೆಂಬ ಐದು ನಾಯ ಬಿಟ್ಟು,
ಕಾಮನೆಂಬ ಬೇಟೆಗಾರನ ಬಾಯಿಗೊಪ್ಪಿಸದಿದು,
ಕಪಿಲಸಿದ್ಧ ಮಲ್ಲಿಕಾರ್ಜುನ.

ಎನ್ನ ಹಡೆದ ತಂದೆಯೆ, ಸಂಸಾರವೆಂಬ ಅರಣ್ಯದೊಳಗೆ ಎನ್ನನ್ನು ಬಿಡದಿರು. ಹಡೆದ ತಂದೆ ನೀನು. ನಿನ್ನ ಹೊಟ್ಟೆಯಲ್ಲಿ ಹುಟ್ಟಿದವ ನಾನು. ನನ್ನ ಬೆನ್ನಲ್ಲಿ ಇದ್ದು ಸಲಹುವುದು ನಿನ್ನ ಕರ್ತವ್ಯ. ಆದರೆ ಕಾಯವನ್ನು ಸೃಷ್ಟಿಮಾಡಿ, ಕಾಯಕ್ಕೆ ಪಂಚೇಂದ್ರಿಯಗಳೆಂಬ ಐದು ನಾಯಿಗಳನ್ನು ಬಿಡುವುದು ಧರ್ಮವೇ ನನ್ನಯ್ಯ? ಅರಿವೆಂಬ ಗುರುದೇವನೆ, ನೀನು ಸೃಷ್ಟಿ ಮಾಡಿದ ಅಂಗದಲ್ಲಿ, ನೀನೇ ಇದ್ದರು ಕೂಡಾ ಕಾಮನೆಂಬ ಬೇಟೆಗಾರನ ಬಾಯಿಗೆ ಎನ್ನನ್ನು ಒಪ್ಪಿಸುವುದು ಸರಿಯೆ ನನ್ನಯ್ಯ? ಕಪಿಲಸಿದ್ಧ ಮಲ್ಲಿಕಾರ್ಜುನಾ ಸಂಸಾರವೆಂಬ ಅರಣ್ಯದೊಳಗೆ ಎನ್ನ ಬಿಡದೆ ಬೆನ್ನಲ್ಲಿದ್ದು ಸಲುಹಿ ಎನ್ನನ್ನು ನಿನ್ನಂತೆ ಮಾಡಿಕೊ.

**1038**

ಸಂಸಾರವೆಂಬ ಘೋರ ಕಾಂತಾರದೊಳಗೆನ್ನನಾಸುರರದಿ
ಬಿಡದಿರಾ ಬೊಪ್ಪ.
ಎನ್ನ ಬೆಂಬಳಿಯೊಳಿರ್ದು ಸಾಕಾ ಬೊಪ್ಪ.
ಎನ್ನ ಹೊರೆಯೊಳಿರ್ದು ಸಾಕಾ ಬೊಪ್ಪ.
ಈ ಪ್ರಿಯ ನಾಯಿ ತೋಡಿ ತಿನ್ನುತ್ತಿದೆ,
ಕಾಮವೆಂಬ ವೈರಿಗೊಪ್ಪಿಸದಿರೆನ್ನ ಬೊಪ್ಪ.
ಅವ್ವೆಯ ಮನೋನಾಥಾ, ನಿರಂಜನ ನಿರ್ಮಾಯ ನಿರವಯ,
ನಿಶ್ಶೂನ್ಯ ನಿರಾಲಂಬ ನಿರಾಭಾರಿ ನಿರ್ವ್ಯಸನಿ.
ಮುಕ್ತಿ ಸಾಮ್ರಾಜ್ಯಕ್ಕೊಡೆಯ ನೀನೆಯಯ್ಯಾ.
ನಿನ್ನನಗಲದಂತೆ ನಿನ್ನ ಶ್ರೀಪಾದದೊಳಿಂಬಿಡಯ್ಯಾ
ಕಪಿಲಸಿದ್ಧ ಮಲ್ಲಿನಾಥಯ್ಯಾ.

ಕಾಯದಲ್ಲಿ ಅರಿವು ಸಂಗಮವಾಗಿದೆ. ಆದರೂ ಕಾಯವನ್ನು ಮನ ಆವರಿಸಿ ಅಜ್ಞಾನದತ್ತ ಕರೆದುಕೊಂಡು ಹೋಗುತ್ತಲಿದೆ. ಅಜ್ಞಾನವೆಂದರೆ ಮನಕ್ಕೆ ಬಲು ಇಷ್ಟ. ಕಾಯದಲ್ಲಿದ್ದ ಜ್ಞಾನವನು ಮನ ಬಳಕೆ ಮಾಡಲು ಒಲ್ಲದು.

ಮನದಲ್ಲಿಯೇ ಟಿಸಿಲೊಡೆದು ಅಜ್ಞಾನದ ಮನದಿಂದ ಮನ ದೂರಾಗಿ, ಜ್ಞಾನ ದೇವರಲ್ಲಿ ಸಂಗಮವಾಗುವ ಹಲವಾರು ಪ್ರಯತ್ನಗಳನ್ನು ಜ್ಞಾನವನ್ನು ಬಳಕೆ ಮಾಡಿದ ಜ್ಞಾನಿಗಳು ಸೂತ್ರರೂಪದಲ್ಲಿ ಬರೆದಿದ್ದಾರೆ. ಸಿದ್ಧರಾಮ ಶಿವಯೋಗಿಗಳು ಸೂತ್ರದ ಒಂದಾಂಶವನ್ನು ಓದುಗರಿಗಾಗಿ ವಚನದ ಮೂಲಕ ನೀಡಿದ್ದಾರೆ.

ಸಂಸಾರವೆಂಬ ಘೋರ ಅರಣ್ಯದೊಳಗೆ ಎನ್ನನ್ನು ರಕ್ಕಸಿಗರಿಗೆ ಬಿಡದಿರಾ ತಂದೆ. ಎನ್ನ ಬೆನ್ನ ಬಳಿ ಇದ್ದು ನನ್ನನ್ನು ಸಲಹು ಬೊಪ್ಪನೆ. ನನ್ನ ಹೊರೆಯಳಿರ್ದು ಸಾಕು ನನ್ನಯ್ಯ. ಮನವೆಂಬ ಪ್ರಿಯ

ನಾಯಿ ನನ್ನನ್ನು ತೋಡಿ ತೋಡಿ ತಿನ್ನುತ್ತಲ್ಲಿದೆ. ಕಾಮವೆಂಬ ವೈರಿಗೆ ನನ್ನನ್ನು ಒಪ್ಪಿಸದಿರು ತಂದೆ. ನನ್ನ ತಾಯಿಯ ಮನೋವಲ್ಲಭನೆ, ನಿರಂಜನನೆ, ನಿರ್ಮಾಯನೆ, ನಿರವಯನೆ.

ನಿಶ್ಶೂನ್ಯನೇ, ನಿರಾಲಂಬನೇ, ನಿರಾಭಾರಿಯೇ, ನಿರ್ವ್ಯಸನಿಯೇ ಮುಕ್ತಿ ಸಾಮ್ರಾಜ್ಯಕ್ಕೆ ಒಡೆಯನು ನೀನೆ ಅಯ್ಯ. ನಿನ್ನನ್ನು ಅಗಲದಂತೆ ನಿನ್ನ ಶ್ರೀ ಪಾದದೊಳಗೆ ಎನ್ನನ್ನು ಇರಿಸಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.2

**1039**

**ಸಂಸಾರವೆಂಬ ರಾಹುವಿನ ಅಣಲೊಳಗೆ ಇದ್ದೆನಯ್ಯಾ;**
**ಆವಾಗ ನುಂಗಿತೆಂದರಿಯೆ, ಆವಾಗ ಉಗುಳಿತೆಂದರಿಯೆನಯ್ಯಾ.**
**ಅದರ ಬಾಯಿಂದೆನ್ನ ತೆಗೆದು ಕಾಯಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವನ್ನು ಆವರಿಸಿದ ಮನವೆಂಬ ಅಜ್ಞಾನ ತನುವಿನಲ್ಲಿಯೇ ತನ್ನ ಸಂಸಾರವನ್ನು ಹೂಡಿದೆ. ಆ ಅಜ್ಞಾನದ ಸಂಸಾರದ ಅಣಲೊಳಗೆ ರಾಹುವಾಗಿ ಬೆನ್ನು ಬಿದ್ದಿದೆ. ಆ ರಾಹು ಅರಿವಿನ ಸೂರ್ಯನಿಂದ ಹುಟ್ಟಿದ್ದರು ಹಡೆದ ಸೂರ್ಯನನ್ನೇ ನುಂಗುವ ಬಲ; ಗುರುದೇವನೆ ನೀನು ಅದಕ್ಕೆ ಇತ್ತಿರುವೆ. ನೀನಿದ್ದ ಕಾಯವನ್ನು ನಿನ್ನನ್ನು ಕಾಣದಂತೆ ಮಾಡಿದೆ. ನನ್ನನ್ನು ಯಾವಾಗ ನುಂಗುವುದೋ ನಾನರಿಯೇ. ನನ್ನನ್ನು ಯಾವಾಗ ಉಗುಳುವುದೋ ನಾನರಿಯೇ.

ಶ್ರೀ ಗುರುದೇವನೆ ನಿನಗೆ ಹುಟ್ಟಿದ ಕಂದ ನಾನು. ರಾಹುವಿನ ಬಾಯಿಂದ ಎನ್ನ ತೆಗೆದು ಕಾಯಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

**1040**

**ಸಂಸಾರವೆಂಬ ವಿಪರೀತ ರೂಪು ಕಾಡಿತಯ್ಯಾ**
**ಎನ್ನ ಭವ ಭವದಲ್ಲಿ ಕಾರ್ಪಣ್ಯದಿಂದ.**
**ನೆನೆಯಲರಿಯದೆ ಕಾಮುಕನಾಗಿ ಕರ್ಮಕ್ಕೊಳಗಾದೆನಯ್ಯಾ.**
**ಗುರುಕರುಣವಿಡಿದು ಇವ ಕಳಿದುಳಿವೆನು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯ ಜ್ಞಾನದ ಮರ. ಮರಕ್ಕೆ ಯಾವ ಬಾಧೆಯೂ ಇರುವುದಿಲ್ಲ. ಅದು ಆರು ಋತುಗಳಲ್ಲಿಯೂ ತನ್ನದೆ ಆದ ಇರುವಿಕೆಯಲ್ಲಿ ಇರುತ್ತದೆ. ಹಾಗೆಯೇ ಕಾಯ ಕೂಡ ನಡೆದಾಡುವ ಮರವಾಗಿ ಅರಿವಿನ ಮಾತುಗಳನ್ನು ಆಡುತ್ತಾ ಸುಂದರವಾಗಿ ಇರಬೇಕಾಗಿತ್ತು. ಆದರೆ ಕಾಯವನ್ನು ಸಂಸಾರವೆಂಬ ವಿಪರೀತ ರೂಪು ಕಾಡುತ್ತಲಿದೆ.

ಸಂಸಾರವೆನ್ನುವದು ರೂಪಲ್ಲ. ಆದರೂ ರೂಪುಳ್ಳ ಕಾಯಕ್ಕೆ ವಿಪರೀತವಾಗಿ ಕಾಡುತ್ತಲಿದೆ ಅನಂತ ಕಾಲದಿಂದ.

ಜನನ-ಮರಣಗಳ ಬಾಧೆ, ಆಸೆ-ಆಮಿಷಗಳ ಬಾಧೆ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳ ಬಾಧೆ, ಸಪ್ತವ್ಯಸನಗಳ ಬಾಧೆ, ಅಷ್ಟಮದಗಳ ಬಾಧೆ ಕಾಯವನ್ನು

ಹಗಲಿರುಳೆನ್ನದೇ ಕಾಡುತ್ತಲಿದೆ.

ಕಾಯ ಅರಿವೆಂಬ ಗುರುದೇವನ ಕೂಸಾದರು, ಆ ಕೂಸು ಜನ್ಮಕೊಟ್ಟ ತಂದೆಯನ್ನು ನೆನೆಯಲರಿಯದೇ ಕಾಮುಕನಾಗಿ ಕರ್ಮಕ್ಕೆ ಒಳಗಾಗಿದೆ. ಗುರುದೇವನ ಕರುಣೆಯಿಂದ ತನಗಂಟಿದ ಅಜ್ಞಾನದ ಸಂಸಾರವನ್ನು ಕಳೆದುಕೊಳ್ಳಲು ಮನಕ್ಕೆ ಸಾಧ್ಯವಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ಗುರು ಕರುಣೆಯನ್ನು ಕರುಣಿಸಿ ನನ್ನನ್ನು ಭವ ಭವದ ಕಾರ್ಪಣ್ಯದಿಂದ ಕಾಪಾಡಯ್ಯ.

**1041**

**ಸಂಸಾರವೆಂಬ ಸಾಗರಕ್ಕೆ ಒಡಲೆಂಬುದೊಂದು ಬ್ಯೈತ್ರ ಕಂಡಾ.**
**ಪುಣ್ಯಪಾಪವೆಂಬ ಭಂಡವನೆ ತುಂಬಿ**
**ಪಂಚ ಪಂಚೈವರು ಏರಿದರು.**
**ಜ್ಞಾನವೆಂಬ ಕೂಕಂಬೆಯ**
**ಲಿಂಗವೆಂಬ ತಾರಾಮಂಡಲವ ನೋಡಿ ನಡಸೂದು.**
**ಜವನ ಕಳ್ಳಾಳು ಕರ ಹಿರಿದು ಕಂಡಾ.**
**ಪುಣ್ಯಪಾಪವೆಂಬ ಭಂಡವ ಸಮಜೋಗವೆಂಬ ನೇಣ**
**ನವನಾಳದಲಿ ಕಟ್ಟಿ,**
**ಮನವೆಂಬ ಉಪಾಯವನು ವಾಹಿಕೊಳಲಿ**
**ನಿಧಿಯೆಂಬ ನಡುಗಡಲ ಸುಖದುಃಖದೊಳಗೆ**
**ತೆರೆಯ ಹೊಯಿಲು ಕರ ಹಿರಿದು ಕಂಡಾ.**
**ಉದುಮದವೆಂಬಾ ಸುಳಿಯಲ್ಲಿ ತಿರುಗದೆ**
**ಮತ್ತಾವ ನಿಮಿತ್ತದಂದಾಗಲಿ, ಪ್ರಾಣವಿಲ್ಲದವರ ಲಕ್ಷ್ಯವೆಂತು**
**ಕಪಿಲಸಿದ್ಧ ಮಲ್ಲಿಕಾರ್ಜುನ ತಂದೆ?.**

ಸಂಸಾರವೆಂಬುದು ಸಾಗರ, ಅದಕ್ಕೆ ಒಡಲೆಂಬುದೆ ಬ್ಯೈತ್ರ. ಬೃಹದಾಕಾರದ ಹಡಗು ದಂಡೆಯಲಿ ಜಡಿದ ಒಂದು ಚಿಕ್ಕ ಗೂಟಕ್ಕೆ ಕಟ್ಟಿದಾಗ ಹಡಗು ಅದನ್ನು ಬಿಡಿಸಿಕೊಳ್ಳಲು ಆಗುವುದಿಲ್ಲ. ಹಾಗೆಯೇ ಸಂಸಾರವೆಂಬ ಅಜ್ಞಾನವನ್ನು ಒಡಲು ಕಟ್ಟಿಹಾಕಲು ಬರುತ್ತದೆ. ಹಾಗೆಯೇ ಅದರಲ್ಲಿ ತೇಲಾಡುತ್ತಾ ಗಾಯ ಮಾಡಿಕೊಳ್ಳಲು ಬರುತ್ತದೆ.

ಕಾಯದಲ್ಲಿ ಪುಣ್ಯ-ಪಾಪವೆಂಬುದು ತುಂಬಿದೆ. ಅದರಲ್ಲಿ ಪಂಚೈವರು ಪಂಚರಾಗಿ ಇಪ್ಪತ್ತೈದು ಜನ ಏರಿ ಕುಳಿತ್ತಿದ್ದಾರೆ. ಜ್ಞಾನವೆಂಬ ಕೂಕಂಬೆಯ ಲಿಂಗವೆಂಬ ತಾರಾ ಮಂಡಲವ ನೋಡಿ ಅರಿವಿನ ಹಡಗು ನಡೆಸಬೇಕಾಗಿದೆ. ಸಂಸಾರವೆಂಬ ಸಾಗರದಲ್ಲಿ ಯಮನಾಳುಗಳು ಹಿಡಿದೊಯ್ಯಲು ಸಿದ್ಧರಿದ್ದಾರೆ. ಪುಣ್ಯಪಾಪವೆಂಬ ಭಂಡವ ಸಮಜೋಗವೆಂಬ ನೇಣ, ನವನಾಳದಲ್ಲಿ ಕಟ್ಟಿ ಮನವೆಂಬ ಉಪಾಯದಿಂದ ಅರಿವಿನ ನಿಧಿಯೆಂಬ ನಡುಗಡಲ ಸುಖ ದುಃಖದೊಳಗೆ ತೆರೆದು ತಳ್ಳುತ್ತಾ ಹರಿಗೋಲ ನಡೆಸಬೇಕಾಗಿದೆ. ಉದಮದವೆಂಬ ಸುಳಿಯಲ್ಲಿ ಸಿಲುಕದೆ, ಗುರುವೆಂಬ ಬೆಂಗುಂಡ ಹಿಡಿಕಂಡಾ.

ದಂಡೆಗೆ ಜಡಿದ ಗೂಟವೆಂಬ ಬೆಂಗುಂಡ ಬೃಹದಾಕಾರದ ಹಡಗನ್ನು ಹಿಡಿದು ನಿಲ್ಲಿಸುತ್ತದೆ. ಇಹಲೋಕ, ಪರಲೋಕ ವಿಘ್ನಗಳನು ಕಳೆದು ಪುಣ್ಯ, ಪಾಪವೆಂಬುದನು ಕಳೆದು ನಿಧಿಯೆಂಬ ನಡುಗಡಲಿನ ಸಂಪತ್ತನ್ನು ಧಾರೆಯೆರೆಯುತ್ತಾನೆ, ಗುರುದೇವ. ಸಕಲ ವಿಘ್ನಗಳನ್ನು ಕಳೆಯುವ ಶಕ್ತಿ ಆತನಿಗೆ ಮಾತ್ರ ಇದೆ.

1042

**ಸಂಸಾರವೆಂಬ ವಿಂಧ್ಯದೊಳಗೆ ಕಾಮನೆಂಬ ಕಳ್ಳನ ತೋರಿ**
**ಬೆಚ್ಚಿ ಬೆದರಿಸುವೆಯಯ್ಯಾ**
**ಆ ಕಾಮನ ಕರೆದು ಎನ್ನ ನಿನ್ನವನೆಂದು ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನೆ, ಅಂಗಕ್ಕೆ ಜನ್ಮಕೊಟ್ಟು ಅಂಗದಲ್ಲಿಯೇ ಸಂಸಾರವೆಂಬ ಕಾಡನಿಟ್ಟು ಹೊಲಿದು ಕಳಿಸಿರುವೆ. ಅದಕ್ಕೆ ಕಾಮನೆಂಬ ಕಳ್ಳನನ್ನು ಬೆನ್ನಟ್ಟಿರುವೆ ಇದು ನಿನಗೆ ನ್ಯಾಯವೇ?.

ಕಾಯಕ್ಕೆ ಎರಗಿದ ಕಾಮನನ್ನು ಕರೆದು ನನ್ನನ್ನು ನಿನ್ನವನೆಂದು ಹೇಳಾ; ನಿನ್ನ ಮನೆಯ ಮಗನೆಂದು ಹೇಳಿ ಕಾಮನನ್ನು ಕರೆದುಕೊಳ್ಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

1043

**ಸಕಲ ನಿಷ್ಕಲದೊಳಗೆ ಮುಖಲಿಂಗ ಮೂರರಲಿ**
**ಕುರುಹುಗೆಟ್ಟಪ್ಪುದದು ಸಕಲದಲ್ಲಿ.**
**ಅಖಿಲಲೋಕಾರಾಧ್ಯ ಗುರುಕರುಣದಿಂದಲಾ**
**ತ್ರೈಲಿಂಗವೊಂದಾದೆ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ**
**ಗುರುವಿನಾನಂದದಿಂ.**

ಅಂಗ ಒಂದೇ ಆದರು ಸ್ಥೂಲಾಂಗ, ಸೂಕ್ಷ್ಮಾಂಗ, ಕಾರಣಾಂಗ ಎಂದು ಮೂರು ಲಿಂಗಗಳಾಗಿ ಅರಳಿದೆ. ಅಂಗವನ್ನು ಆವರಿಸಿದ ಸೂಕ್ಷ್ಮಾಂಗ ಅಂಗವನ್ನು ಅಜ್ಞಾನಕ್ಕೆ ಕರೆದುಕೊಂಡು ಹೋಗುವುದರಿಂದಾಗಿ ಸೂಕ್ಷ್ಮಾಂಗ ಲಿಂಗವಾಗಿದ್ದರೂ, ಅದು ತನ್ನನ್ನು, ಸ್ಥೂಲಾಂಗವೆಂಬ ಲಿಂಗವನ್ನು ಕಾರಣಾಂಗವೆಂಬ ಶ್ರೀ ಗುರುದೇವನನ್ನು ಮರೆತುದರಿಂದ ಸಕಲದಲ್ಲಿಯೂ ಕುರುಹುಗೆಟ್ಟು ನಿಂತಿದೆ.

ಗುರುದೇವನ ಕರುಣೆಯಿಂದ ಪುನಃ ಶ್ರೀಗುರುದೇವನ ಲಿಂಗಾಂಗದಲಿ ಸಂಗಮವಾಗಿ ತ್ರೈಲಿಂಗವೆಂದು ಕರೆಯಿಸಿಕೊಳ್ಳುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

1044

**ಸಕಲ ನಿಃಕಲವ ಪೂಜಿಸಿಹೆನೆಂದೆಂಬೆ,**
**ಸಕಲವಾವುದು ನಿಃಕಲವಾವುದು ಹೇಳಾ.**
**ಸ್ವಾತಂತ್ರ್ಯವ ಮೀರಿಪ್ಪುದೀಗ ಸಕಲ ;**
**ಪರಬ್ರಹ್ಮದ ಸೊಮ್ಮಾಗಿಪ್ಪುದೀಗ ಶಿವಯೋಗ !**
**ಈ ಪೂಜಾದ್ವಯವನರಿತ ಬಳಿಕ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡುವೆ ಸಂದಿಲ್ಲದೆ.**

ಸಕಲವು ನಿಃಕಲವು ತಾನೇ ಆಗಿದ್ದರು ಪೂಜಿಸಬೇಕೆಂಬ ಅಜ್ಞಾನ ತನ್ನನ್ನು

ಆವರಿಸಿರುವುದರಿಂದ ಕಲ್ಲನ್ನೇ ಸರ್ವವ್ಯಾಪಿ ದೇವರನ್ನಾಗಿಸಿ ಪೂಜಿಸುತ್ತಾನೆ. ಕಾಯದಲ್ಲಿ ಸಂಗಮವಾದ ಅರಿವೆಂಬ ಶ್ರೀ ಗುರುದೇವನೆ ಸರ್ವತಂತ್ರ ಸ್ವತಂತ್ರನು. ಸ್ವಾತಂತ್ರ್ಯವನ್ನು ಮೀರಿದವನು ಪರಬ್ರಹ್ಮನು, ಆ ಪರಬ್ರಹ್ಮನ ಸೊಮ್ಮಾಗಿ ಕಾಯ ಅವತರಿಸಿದೆ. ಪರಬ್ರಹ್ಮನನ್ನು ಕಾಯದೊಳಗಿಟ್ಟುಕೊಂಡಿದೆ. ಆತನ ಬೆಳಕಿನಿಂದ ಮನವೆಂಬ ಮಾಯೆ ಕಾಯದಲ್ಲಿಯೇ ಹುಟ್ಟಿ, ಪೂಜಿಸಬೇಕೆಂಬ ತವಕ ಜನ್ಮತಳೆದಿದೆ.

ಜನ್ಮಕೊಟ್ಟ ತಂದೆಯನು ಮರೆತುದರಿಂದ ಸಕಲ ನಿಃಕಲವ ಪೂಜಿಸಬೇಕೆಂಬ ಕಾತುರ ಹೆಚ್ಚಾಗಿದೆ. ಮನ ಈ ಪೂಜಾದ್ವಯವನ್ನು ಅರಿಯುವುದೇ ಶಿವಯೋಗ. ಲಿಂಗಾಂಗ ಸಾಮರಸ್ಯ ಅರಿತ ಬಳಿಕ ಕಪಿಲಸಿದ್ಧ ಮಲ್ಲಿಕಾರ್ಜುನನ ಸಂದಿಲ್ಲದೇ ಕೂಡುತ್ತದೆ.

1045

**ಸಕಲ ನಿಷ್ಕಲಕೆಲ್ಲ ಬಸವನಾಮಾಕ್ಷರದ**
**ದೆಸೆ ತಾನು ತ್ರೈಲಿಂಗ ಮೂಲವಾಗಿ**
**ಬಸವನನಿಮಿಷಗಂದು ಗುರುವಾದ ಸಂಬಂಧ**
**ದೆಸೆಯೆನಗೆ ಆಯಿತ್ತೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬ್ರಹ್ಮಾಂಡಕ್ಕೆ ಜನ್ಮಕೊಟ್ಟ ಶ್ರೀಗುರುದೇವನು, ಕಾಯಕ್ಕೆ ಜನ್ಮ ನೀಡಿ, ಕಾಯದಲ್ಲಿ ಬಚ್ಚಿಟ್ಟುಕೊಂಡು, ಕಾಯದಲ್ಲೇ ಮನವನ್ನು ಸೃಷ್ಟಿಮಾಡಿ, ಮನಕ್ಕೆ ಶ್ರೀಗುರುದೇವನನ್ನು ಹುಡುಕಲು ಹಚ್ಚಿದ. ಇದು ಶ್ರೀಗುರುದೇವನ ಬೆಡಗು.

ಕಾಯದ ಬೆಡಗನ್ನು ಜ್ಞಾನಿಗಳು ನಾನಾವಿಧದಲ್ಲಿ ಬಿಚ್ಚಿಟ್ಟಿದ್ದಾರೆ. ಆದರೂ ಕಾಯದ ಬೆಡಗು ಕಾಯಕ್ಕೆ ತಿಳಿಯುತ್ತಿಲ್ಲ. ಕಾಯವನ್ನು ಆವರಿಸಿದ ಮಾಯೆಗೆ ಕಾಯವೆಂದರೆ ಬಲು ಇಷ್ಟ. ತನ್ನ ಅಜ್ಞಾನದ ಸಕಲ ಸುಖಗಳನ್ನು ಕಾಯದಿಂದಲೇ ಬೋಧಿಸಿ ಕಾಯವನ್ನು ಕೊಲ್ಲುತ್ತದೆ.

ಕಾಯದಲ್ಲಿ ಬೆಡಗಿನ ಅರಿವಿನ ರಹಸ್ಯವಿದೆ. ಅದರಲ್ಲಿ ಶ್ರೀ ಗುರುದೇವ ಬಚ್ಚಿಟ್ಟುಕೊಂಡಿದ್ದಾನೆ. ತಾನು ಅರಿಯಲೇಬೇಕೆಂದು ಮನಕ್ಕೆ ಬಯಕೆ ಯಾವಾಗ ಆಗುತ್ತದೊ ಆಗ ಶ್ರೀಗುರುದೇವನ ದರುಶನ ಆಗುತ್ತದೆ.

ಸಕಲ ಕಾಯಗಳಿಗೂ ಕಾಯದ ಸೂತ್ರ ಅರಿವಾಗಲೆಂದು ಬಸವಣ್ಣ ಅನುಮಿಷಯ್ಯನಿಗೆ ಗುರು ಸಂಬಂಧಿಯಾಗಿ ತಿಳಿಹೇಳಿದ. ಅನುಮಿಷ ಅಲ್ಲಮ್ಮನಿಗೆ ತಿಳಿಹೇಳಿದ. ಅಲ್ಲಮ್ಮನ ದೆಸೆ ಎನಗೆ ಆಯಿತು, ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ಶ್ರೀಗುರುದೇವನೊಂದಿಗೆ ಮಾತನಾಡಿದ್ದಾರೆ.

1046

**ಸಕಲ ಶ್ರುತಿಗಳು ನಿನ್ನ ಅನುಮಿಸಿದ ವಾಸನೆಗೆ**
**ಮುಸುಕಲಮ್ಮದೆ ತೊಲಗಿ ಹೊಗಳುತಿರಲು,**
**ನಾನೆ ಅಭೇದ್ಯಯೆಂದು ಹೊಗಳುವ ವೇದ**
**ಸಮತೆ ಸಾಯುಜ್ಯದಲಿ ದೀಕ್ಷೆಯವಕೆ.**

**ದೃಷ್ಟವಪ್ಪವ ನೀನು ಶ್ರುತವೆಂದು ಹೇಳುವೆ,**
**ಅತಿಶಯದ ಶ್ರುತ ದೃಷ್ಟಕೆ ಒಡೆಯನಾದವನೆ**
**ಹದುಳದಿಂದರ್ಚಿಸಾ ಸಮತೆ ಪದವಾ.**
**ಸಮತೆ ಸಜ್ಜನರೊಂದು ನೆನಹಿನಲಿ ಮೂರ್ತಿಯ್ಯೆ,**
**ಕರಣ ವಾರುಧಿಗಳದರ ಕೆಲಬಲದಲಿ.**
**ಕರುಣಾಕರನು ಕಪಿಲಸಿದ್ಧ ಮಲ್ಲೇಶ್ವರನು**
**ಸಮತೆ ಸಂಯೋಗದಲಿ ಸುಖಿಯಾದನು.**

ಸಕಲ ಶೃತಿಗಳು ನಿನ್ನಿಂದಲೇ ಹುಟ್ಟಿವೆ. ಅವು ನಿನಗೆ ಪಾಠ ಮಾಡಲು ಸಾಧ್ಯವೆ? ವೇದ, ಆಗಮ, ಉಪನಿಷತ್ತುಗಳು ಕಾಯದಿಂದಲೇ ಹುಟ್ಟಿ ಕಾಯದಿಂದಲೇ ಹೊಗಳಿಸಿಕೊಳ್ಳುತ್ತಲಿವೆ. ಕಾಯಕ್ಕೆ ದೀಕ್ಷೆಕೊಡಲು ಅವುಗಳಿಗೆ ಸಾಧ್ಯವಾಗುವುದೇ?

ಪರಮಾತ್ಮನೆ, ನೀನು ಅಗಮ್ಯ, ಅಪ್ರಮಾಣ, ಅಪ್ರತಿಮ ಲಿಂಗಯ್ಯನು ನೀನು, ಜಗದಗಲ ಮುಗಿಲಗಲ ವ್ಯಾಪಿಸಿಕೊಂಡ ನಿನಗೆ ನಿನ್ನಿಂದಲೇ ಬಂದ ವೇದಗಳು ಆಗಮ ಉಪನಿಷತ್ತುಗಳು ಶ್ರುತಿಗಳು ನಿನಗೆ ಏನಾದರು ಹೇಳಲು ಸಾಧ್ಯವೆ? ನಿನ್ನ ಶ್ರೀಚರಣ ಪಾತಾಳದಿಂದ ಅತ್ತತ್ತ ಎಂದು ಅವು ತಿಳಿಯವು. ನಿನ್ನ ಶ್ರೀ ಮುಕುಟ ಬ್ರಹ್ಮಾಂಡದಿಂದ ಅತ್ತತ್ತ ಎಂದು ಅವು ತಿಳಿಯವು. ಸಮತೆ ಸಜ್ಜನರ ನೆನಹಿನಲಿ ಮೂರ್ತಿಯ್ಯೆ ನೀನು, ಕರುಣವಾರುಧಿಗಳು ಅವರ ಕೆಲಬಲದಲಿ ನೀನು, ಕರುಣಾಕರನು ನೀನು. ಕಪಿಲಸಿದ್ಧ ಮಲ್ಲೇಶ್ವರನು ನೀನು, ಸಮತೆ ಸಂಯೋಗದಲಿ ಸುಖಿಯಾಗುವವನು ನೀನು.

**1047**

**ಸಕಲಾಗಮಸಾರ ನುಡಿಯಲ್ಲಿ**
**ನಿಸ್ಸಾರ ಶಂಕೆ ಸಂಭವ ಎನ್ನ ದುರಾತ್ಮನಲ್ಲಿ;**
**ಅದೇನೆಂದಡೆ ಪಾಪದ ಬಲೆಯಿಂದಾಗಲಿ**
**ಮತ್ತಾವ ನಿಮಿತ್ತದಿಂದಾಗಲಿ,**
**ಪ್ರಾಣವಿಲ್ಲದವರ ಲಕ್ಷ್ಯವೆಂತು**
**ಕಪಿಲಸಿದ್ಧ ಮಲ್ಲಿಕಾರ್ಜುನ ತಂದೆ?**

ಸಕಲ, ಆಗಮ, ಉಪನಿಷತ್ತುಗಳ, ಭಗವದ್ಗೀತೆ, ಬೈಬಲ್, ಕುರಾನ್‌ಗಳ ಸಾರವನ್ನು ಮನ ಕಾಯದ ಮೂಲಕ ನುಡಿದು ಹೇಳುತ್ತದೆ. ಆದರೆ ಪ್ರಯೋಗಕ್ಕೆ ಹೋಗಿ ಪಾಲಿಸಲು ಮಾತ್ರ ಮನಕ್ಕೆ ಸಾಧ್ಯವಾಗುವುದಿಲ್ಲ. ಅದರಲ್ಲಿ ಶಂಕೆ ಉಂಟಾಗುತ್ತದೆ.

ವೇದ ಆಗಮ ಉಪನಿಷತ್ತು ಭಗವದ್ಗೀತೆ ಬೈಬಲ್‌ಗಳಿಗೆ ಪ್ರಾಣವಿಲ್ಲ. ಕಾಯದಲ್ಲಿ ಸಂಗಮವಾದ ಶ್ರೀ ಗುರುದೇವನ ಮೂಲಕ ಹೊರಬಂದು ಕಾಯದಿಂದಲೇ ಪ್ರಕಟವಾದ ವೇದಗಳು ಕಾಯಕ್ಕೆ ಏನಾದರು ಹೇಳಲು ಸಾಧ್ಯವೆ? ಮನ ವೇದ, ಆಗಮ, ಉಪನಿಷತ್ತುಗಳನ್ನು ಕಾಯದ ಮೂಲಕ ನುಡಿದು, ಪ್ರವಚನ ಪಟುವೆಂದು ಕಾಯಗಳ ಮೂಲಕ ಕರೆಯಿಸಿಕೊಂಡು, ಕಾಯಕ್ಕೆ ಗುರುವಿನ ವೇಷ ಹಾಕಿ, ಉಪಜೀವನಕ್ಕೆ ತೊಡಗುತ್ತದೆ. ಅರಿವಿನ ನುಡಿಗಳನ್ನು ಕಾಯದ ಮೂಲಕ

ನುಡಿದು, ಮನ ಕಾಯಕ್ಕೆ ಬಲೆಯನ್ನು ಹೆಣೆಯುತ್ತದೆ. ಅಂಗದಲ್ಲಿಯೇ ಸಂಗಮವಾದ ಶ್ರೀಗುರುದೇವನನ್ನೇ ತಂದೆಯೆಂದು ತಿಳಿದು ಆತನ ಚರಣ ಕಮಲಗಳಿಗೆ ಶರಣು ಹೋಗಿ ಶರಣಾಗತನಾದಾಗ ಗುರುದೇವ ಮನವನ್ನು ಘನಮನವಾಗಿಸುತ್ತಾನೆ.

**1048**

**ಸಕಲ ಸಾದಾಖ್ಯದಲ್ಲಿ ಮುಖಲಿಂಗವೆಂದಿರಿಸಿ**
**ಸಕಲಲಿಂಗಕ್ಕೆ ಸನುಮತವಾದನು.**
**ಮುಖಲಿಂಗ ತ್ರೈಲಿಂಗವೆಂದು ಅರ್ಚಿಸಿದಾತ**
**ಭವದೂರ ಶಿಷ್ಯನೈ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಕಲ ಅಂಗಗಳಲ್ಲಿಯೂ ಶ್ರೀಗುರುದೇವನೆಂಬ ಲಿಂಗ ಸಂಗಮವಾಗಿದೆ. ಹೀಗಾಗಿ ಶರಣರಿಂದ ಅಂಗ ಲಿಂಗಮುಖವೆಂದು ಕರೆಯಿಸಿಕೊಂಡಿದೆ. ಅಂಗವನ್ನು ಆವರಿಸಿದ ಮನ, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಸಕಲ ಲಿಂಗಕ್ಕೆ ಸನುಮತನಾಗಿ, ಆ ಮುಖಲಿಂಗವನ್ನೇ ತ್ರೈಲಿಂಗವೆಂದು ಅರ್ಚಿಸಿ ಪೂಜಿಸಿದ ಮನವೆಂಬ ಶಿಷ್ಯನಿಗೆ ಜನನವಿಲ್ಲ, ಮರಣವಿಲ್ಲ ಅವನು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನು.

**1049**

**ಸಕ್ಕರೆಯ ಬಿಟ್ಟು ರುಚಿಯ ತೆಗೆಯಬಹುದೆ?**
**ಬೆಣ್ಣೆಯ ಬಿಟ್ಟು ಘೃತವ ತೆಗೆಯಬಹುದೆ?**
**ಭೂಮಿಯ ಬಿಟ್ಟು ಜಗವ ಮಾಡಬಹುದೆ?**
**ಜಂಗಮವಿರಹಿತ ಲಿಂಗವಿಲ್ಲ, ಲಿಂಗವಿರಹಿತ ಜಂಗಮವಿಲ್ಲ**
**ಕೇಳಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನೆ ಕಾಯದ ಮಾಲೀಕ. ಆತನಿಲ್ಲದೆ ಕಾಯವಿಲ್ಲ, ಕಾಯವಿಲ್ಲದೆ ಆತನಿಲ್ಲ. ಕಾಯವಿಲ್ಲದೆ ಪರಮಾತ್ಮನನ್ನು ಕಾಣಲು ಬರುವುದಿಲ್ಲ. ಕಾಯಕ್ಕೆ ಪರಮಾತ್ಮನೆ ಎಲ್ಲ. ಆದರೆ ಲೋಕ ಕಾಯವನ್ನು ಮೆಚ್ಚಿಕೊಂಡಿದೆ; ಹೀಗಾಗಿ ತಪ್ಪಾಗಿದೆ.

ಸಕ್ಕರೆಯಲ್ಲಿ ರುಚಿ ಹೇಗೆ ಪ್ರಮುಖವಾದದ್ದೊ ಹಾಗೆಯೇ ಬೆಣ್ಣೆಯೂ ಕೂಡಾ, ಬೆಣ್ಣೆಯಲ್ಲಿ ತುಪ್ಪ ಬಚಿಟ್ಟುಕೊಂಡಿದೆ. ಹಾಲಿನಲ್ಲಿ ಬೆಣ್ಣೆ ತುಪ್ಪ ಎರಡು ಬಚಿಟ್ಟುಕೊಂಡಿದೆ. ಬೆಣ್ಣೆ ಮತ್ತು ತುಪ್ಪ ಹಾಲಿನಲ್ಲಿ ನಿರಾಕಾರ. ಹಾಗೆಯೇ ಬೆಣ್ಣೆ ಆಕಾರವಾದರೆ ತುಪ್ಪ  ನಿರಾಕಾರ. ಆಕಾರ ಬಿಟ್ಟು ನಿರಾಕಾರವಿಲ್ಲ, ನಿರಾಕಾರ ಬಿಟ್ಟು ಆಕಾರವಿಲ್ಲ.

ನಿರಾಕಾರವನ್ನು ನೋಡಲು ಬರುವುದಿಲ್ಲ. ಅದು ಅನಂತ, ಅಪ್ರಮಾಣ, ಅಪ್ರತಿಮ, ಜಗದಗಲ, ಮುಗಿಲಗಲ. ಅಂತಹ ನಿರಾಕಾರ ವಸ್ತು ಕಾಯಕ್ಕೆ ಜನ್ಮ ನೀಡಿ ಕಾಯದಲ್ಲಿ ಅರಿವಾಗಿ ಬಚ್ಚಿಟ್ಟುಕೊಂಡಿದೆ. ಆ ಅರಿವಿನ ಬೆಳಕಿನಿಂದ ಮನ ಹುಟ್ಟಿ, ಕಾಯವನ್ನು ಆವರಿಸಿಕೊಂಡಿದೆ.

ಹಾಲಿನಲ್ಲಿ ತುಪ್ಪ, ಬೆಣ್ಣೆ ಹೇಗೆ ಬಚ್ಚಿಟ್ಟುಕೊಂಡಿದೆಯೊ ಹಾಗೇ ಕಾಯದಲ್ಲಿ ಅರಿವು ಎನ್ನುವ ಗುರುದೇವ ಬಚ್ಚಿಟ್ಟುಕೊಂಡಿದ್ದಾನೆ. ಮತ್ತು ಈ ಗುರುದೇವನನ್ನು ತಿಳಿಯಬೇಕಾದ ಮನವೆಂಬ

ಶಿಷ್ಯನೂ ಕೂಡಾ ಬಚ್ಚಿಟ್ಟುಕೊಂಡಿದ್ದಾನೆ. ಗುರು ಶಿಷ್ಯರಿಬ್ಬರೂ ಲಿಂಗ ಜಂಗಮರಾಗಿ ಅಂಗದಲ್ಲಿಯೇ ಬಚ್ಚಿಟ್ಟುಕೊಂಡಿದ್ದಾರೆ.

ಶಿಷ್ಯನಾದಾತ ಲಿಂಗ ಜಂಗಮರನ್ನು ತಿಳಿದು ಅವರಲ್ಲಿ ಒಂದಾಗಬೇಕು. ಆಗ ಅಂಗ ತ್ರಿಕೂಟ ಸಂಗಮವಾಗುತ್ತದೆ. ಲಿಂಗ ಜಂಗಮರು ಬೇರೆ-ಬೇರೆ ಅಲ್ಲ. ಅವರಿಬ್ಬರೂ ಒಂದೇ. ಹೇಗೆ ಬೆಣ್ಣೆ-ತುಪ್ಪ ಬೇರೆ ಬೇರೆ ಅಲ್ಲವೋ ಹಾಗೆಯೇ ಲಿಂಗ ಜಂಗಮರು ಕೂಡಾ ಒಂದೇ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1050**

**ಸಕ್ಕರೆಯು ಆಕಾರ, ರುಚಿಯು ನಿರಾಕಾರ ;**
**ಲಿಂಗವಾಕಾರ, ಜಂಗಮ ನಿರಾಕಾರ ;**
**ಬೆಣ್ಣೆ ಆಕಾರ, ಘೃತ ನಿರಾಕಾರ.**
**ಆಕಾರ ಬಿಟ್ಟು ನಿರಾಕಾರವಿಲ್ಲ, ನಿರಾಕಾರ ಬಿಟ್ಟು ಆಕಾರವಿಲ್ಲ.**
**ಲಿಂಗ ಜಂಗಮವೆಂಬುಭಯ ಶಬ್ದ ಒಂದೆ ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯ ಆಕಾರವಾದರೆ, ಅರಿವಿನಕಾಯ ನಿರಾಕಾರ. ಅರಿವೆಂಬ ಗುರುದೇವನನ್ನು ತಿಳಿಯುವ ಮನವೆಂಬ ಶಿಷ್ಯನೂ ಕೂಡಾ ನಿರಾಕಾರ. ಹೀಗೆ ಸಕ್ಕರೆಯು ಆಕಾರದಿಂದ ಕೂಡಿದೆ. ರುಚಿಯು ಸಕ್ಕರೆಯಲ್ಲಿ ನಿರಾಕಾರವಾಗಿ ಸಂಗಮವಾಗಿದೆ.

ಬೆಣ್ಣೆ ಆಕಾರ, ಬೆಣ್ಣೆಯಲ್ಲಿ ತುಪ್ಪ ನಿರಾಕಾರವಾಗಿ ಸಂಗಮವಾಗಿದೆ. ಲಿಂಗ ಆಕಾರವಾದರೆ ಜಂಗಮ ನಿರಾಕಾರ. ಲಿಂಗ ಜಂಗಮ ಎಂಬ ಶಬ್ದ ಒಂದೇ ಆಗಿದೆ. ಕಪಿಲಸಿದ್ಧಮಲ್ಲಿಕಾರ್ಜುನ ದೇವರು ಕಾಯದಲ್ಲಿ ತಾನೇ ಆಗಿ ಸಂಗಮವಾಗಿದ್ದಾನೆ. ಕಾಯವನ್ನು ಆವರಿಸಿದ ಮನವೆಂಬ ಭಕ್ತನ ಮೂಲಕ ಕಾಯದಲ್ಲಿ ಬಚ್ಚಿಟ್ಟುಕೊಂಡ ಅರಿವಿನ ದೇವರನ್ನು ಅರಿತು ಆ ದೇವರು ತಾನು ಒಂದಾಗಬೇಕಾಗಿದೆ.

**1051**

**ಸಜ್ಜನದಲ್ಲಿ ಸದಾಚಾರ ಸಮನಿಸಬೇಕಾಯಿತ್ತಾದರೆ**
**ಲಿಂಗತ್ರಯದ ನೆಲೆಯನರಿ,**
**ಪಾದೋದಕ ಬ್ರಹ್ಮದ ಪ್ರಮಾಣವನರಿ,**
**ಮಜ್ಜನಕ್ಕೆರೆವ ಭೇದವನರಿ,**
**ಅಲ್ಲದಿದ್ದಡೆ ನಿನಗನಿಮಿಷತ್ವವನರಿ.**
**ಅರಿಯದಿದ್ದರೆ ಅಭ್ಯಾಸದಲ್ಲಿ ಎಲ್ಲರಂತಪ್ಪೆ,**
**ಕಪಿಲಸಿದ್ಧ ಮಲ್ಲಿಕಾರ್ಜುನನಿಪ್ಪಿರವ ಕಾಣೆ.**

ಕಾಯಕ್ಕೆ ಸದಾಚಾರ ಸಮನಿಸಬೇಕಾದರೆ, ಕಾಯವನ್ನು ಅವರಿಸಿದ ಮನ, ಅಂಗದಲ್ಲಿಯೇ ಲಿಂಗತ್ರಯದ ನೆಲೆಯನು ಅರಿಯಬೇಕು.

ಅಂಗವು ಇದೆ; ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಇದ್ದಾನೆ. ಆ ಗುರುದೇವನನ್ನು ತಿಳಿಯಬೇಕಾದ ಮನವೆಂಬ ಭಕ್ತನು ಅಂಗವನ್ನು ಆವರಿಸಿದ್ದಾನೆ.

ಅಂಗವೆಂಬುದು ಉದಕದ ಬಿಂದುವಿನಿಂದ ಆಗಿದೆ. ಆ ಉದುಕದ ಬಿಂದುವೇ ರಕ್ತ, ಮೂಳೆ, ಮಾಂಸ, ಮಜ್ಜೆ, ಮೇದಸ್ಸು ಆಗಿ ಇವು ಯಾವು ಚೆಲ್ಲದಂತೆ ಉದಕವೇ ಸುಂದರವಾದ ಚರ್ಮವಾಗಿ ಹೆಣೆದುಕೊಂಡಿದೆ. ಉದಕದ ಬಿಂದು ಕಾಯದಲ್ಲಿ ಅರಿವಿನ ಉದಕವಾಗಿ ಪರಿವರ್ತನೆಗೊಂಡಿದೆ. ಉದಕದ ಛಾಯೆಯೆ ಮನವಾಗಿ ಉದಕವನ್ನು ಅರಿಯುವ ಪಾದೋದಕವಾಗಿದೆ. ಈ ಉದಕದಿಂದ ಅರಿವೆಂಬ ಗುರುದೇವನ ಪಾದ ತೊಳೆದಾಗ ಪಾದೋದಕವಾಗುತ್ತದೆ. ಜ್ಞಾನೋದಕವಾಗುತ್ತದೆ.

ಪಾದೋದಕವು ಜ್ಞಾನೋದಕವು ಹೌದು; ಬ್ರಹ್ಮವು ಹೌದು. ಮನ ಗುರುದೇವನಿಗೆ ಮಜ್ಜನಕ್ಕೆರೆದು ಅನಿಮಿಷತ್ವವನ್ನು ಅರಿಯಬೇಕಾಗಿದೆ. ಅರಿಯದಿದ್ದರೆ ಅಭ್ಯಾಸದಲ್ಲಿ ಲೋಕದ ತನು ಆಗಿ ಬದುಕಿ ಸತ್ತು ಹೋಗುತ್ತದೆ; ಏನೂ ಅರಿಯದಂತೆ. ಅರಿತರೆ ಕಪಿಲಸಿದ್ಧ ಮಲ್ಲಿಕಾರ್ಜುನನು ಕಾಯದಲ್ಲಿ ಬಚ್ಚಿಟ್ಟುಕೊಂಡಿರುವ ಇರುವಿಕೆಯನ್ನು ಕಂಡು ಆ ಅರಿವೇ ತಾನಾಗುತ್ತದೆ.

**1052**

**ಸಜ್ಜನ ನಾನು ಎನ್ನ ಗಂಡನೆ ನೀನು**
**ಮತ್ತನ್ಯಕ್ಕೆಳಸಲಾಪೆನೆ ಅಯ್ಯಾ.**
**ಕಾಮ ಕ್ರೋಧ ಲೋಭ ಮೋಹವು**
**ಎನ್ನ ಆಮಿಷ ತಾಮಸ ವಿಕಾರಂಗಳು ಅನಂತವಾಗಿ**
**ಎನ್ನ ತಮ್ಮ ಪ್ರಭೆಯನೆಯ್ದುವ ಮುನ್ನ**
**ನಿನ್ನ ನಿಜರೂಪನೀಯಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನೆ, ನೀನೆ ನನ್ನ ಗಂಡನು. ಸಜ್ಜನೆ ನಾನು, ನಿನ್ನ ಹೆಂಡತಿ. ನೀನು ಎನಗೆ ಗಂಡನೆಂದು ಗೊತ್ತಾಗದೆ ಇದ್ದಾಗ ನಾನು ಕಾಮಿಯಾಗಿದ್ದೆ, ಕ್ರೋಧಿಯಾಗಿದ್ದೆ, ಲೋಭಿಯಾಗಿದ್ದೆ, ಮೋಹಿಯಾಗಿದ್ದೆ. ಎನ್ನ ಆಮಿಷ, ತಾಮಸ ವಿಕಾರಂಗಳು ಅನಂತವಾಗಿ ನೀನಿದ್ದ ಕಾಯದಲ್ಲಿ ಸಪ್ತವ್ಯಸನಗಳು, ಅಷ್ಟಮದಗಳು ಹುಟ್ಟಿಕೊಂಡವು.

ನೀನಿದ್ದ ಕಾಯವನ್ನೇ ನಿನ್ನ ಪರಿಚಯವಿಲ್ಲದಿದ್ದಕ್ಕಾಗಿ ನಾನು ಕಾಯಕ್ಕೆ ಸಾತ್ವಿಕ ಪಾತ್ರ ಹಾಕಿ ನನಗೆ ಬೇಕಾದ ಆಸೆ ಆಮಿಷಗಳನ್ನು ನಿನ್ನ ಕಾಯದ ಮೂಲಕ ಉಂಡೆ. ಕಾಯಕ್ಕೆ ರಾಜಸ ಪಾತ್ರ ತೊಡಿಸಿ ನಾನಾ ಪದವಿಗಳ ಮೂಲಕ ರಾಜಭೋಗವನ್ನು ಉಂಡೆ. ಕಾಯಕ್ಕೆ ತಾಮಸ ಪಾತ್ರವನ್ನು ಹೊದಿಸಿ ಮಾಂಸ ಮದ್ಯಾದಿಗಳನ್ನು ಸೇವಿಸಿ ಸುಖಿಸಿದೆ.

ನನಗೆ ನೀನು ಯಾರು ಎಂದು ಗೊತ್ತಾಯಿತು! ನಿನ್ನ ನಿಜರೂಪವನ್ನು ಕಂಡು ನಾನು ನಿನ್ನನ್ನೇ ಗಂಡನನ್ನಾಗಿ ಮಾಡಿಕೊಂಡು ಸಜ್ಜನಳಾದೆ! ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೇ, ನಿನ್ನ ಅರ್ಧಾಂಗಿಯಾಗಿ ಅರ್ಧನಾರೀಶ್ವರಿ ಎಂದು ಕರೆಯಿಸಿಕೊಂಡೆ. ಇನ್ನು ಅನ್ಯಕ್ಕೆಳೆಸಲಾರೆ, ನೀನಿದ್ದ ಕಾಯವೇ ಎನಗೆ ಕೈಲಾಸವಾಯಿತು ಪರಮಾತ್ಮನೆ!

**1053**

**ಸಜ್ಜನವಾಳವೆ ತಾನಿತೆಂಬೆ**

**ಆಲಸಿದಡೆ ಹರಿವುದೆ ಅಯ್ಯ ಐಕ್ಯಪದವು?**
**ಐನಾನಾಕ್ಷರ ಅಂತಪೂರ್ವವನರಿದಡೆ**
**ಐಕ್ಯನಿನಗರಿದಿಲ್ಲ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗವನ್ನು ಆವರಿಸಿದ ಮನ, ಅಂಗದೊಂದಿಗೆ ಸಂಗಮಾಡಿ, ತನಗೆ ಬೇಕಾದ ಅರಿಷಡ್ವರ್ಗಗಳ ಕ್ಷಣಿಕ ಸುಖವನ್ನುಂಡು ಆಲಸಿಯಾಗಿದೆ. ಮತ್ತೆ ಮತ್ತೆ ಆ ಸುಖಗಳನ್ನು ಬಯಸುತ್ತಾ, ಆಯುಷ್ಯ ಪರ್ಯಂತ ಕ್ಷಣಿಕ ಸುಖವನ್ನೇ ಉಂಡು, ಪಾಪಪುಣ್ಯಗಳನ್ನು ಅಂಗದಲ್ಲಿ ತುಂಬಿಕೊಂಡು, ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನೊಂದಿಗೆ ಒಂದಾಗುವ, ಐಕ್ಯಪದವನ್ನು ಸಂಪೂರ್ಣ ಮರೆತು ಹೋಗಿದೆ. ಸಜ್ಜನನನ್ನು ಅರಿತು ತಾನು ಸಜ್ಜನಳಾಗದೆ, ದುರ್ಜನಿಯಾಗಿ ಕಾಯದೊಂದಿಗೆ ಕಾಲ ಕಳೆಯುತ್ತಲಿದೆ.

ಪೂರ್ವವನರಿದೊಡೆ, ಆತ ಅನಾದಿಯಾದಡೆ ನಾನು ಆದಿ. ಆತ ಐದಕ್ಷರಗಳುಳ್ಳ ನಮಃಶಿವಾಯವೆಂದು ಕರೆಯಿಸಿಕೊಂಡರೆ, ನಾನು ಓಂ ಎಂಬ ಶಕ್ತಿಯಾಗಿದ್ದೆ. ಕಾಯ ನಾವಿಬ್ಬರು ಕೂಡಿದ ಶಿವಶಕ್ತಿ ಎಂದು ಕರೆಯಿಸಿಕೊಂಡಿತ್ತು.

ನಾನು ಓಂ ಎಂಬ ಆದಿಶಕ್ತಿಯಾಗಿದ್ದರೂ, ಅನಾದಿ ಶಿವನನ್ನು ಮರೆತುದದಕ್ಕಾಗಿ, ಆತನಿದ್ದ ಅಂಗದೊಂದಿಗೆ ಸಾತ್ವಿಕಳೆನ್ನುವ ಪಾತ್ರ ಹಾಕಿಕೊಂಡು, 'ಓಂ ನಮಃ ಶಿವಾಯ' ಎಂಬ ಮಂತ್ರವನ್ನು ಕಾಯದ ಮೂಲಕ ಜಪಿಸಿದೆನೆ ಹೊರತು, ಜಪಿಸುವ ಕಾಯ ತಾನೇ, ಕಾಯದಲ್ಲಿ ಸಂಗಮವಾದ ''ಓಂ ನಮಃ ಶಿವಾಯ'' ಎಂಬುದು ತಾನೆ ಎಂಬ ತತ್ವವನ್ನು ಅರಿಯಲಿಲ್ಲ. ಅರಿತರಿತು ಐಕ್ಯಳೆ ನಾನಾಗಲಿಲ್ಲ. ಕಪಿಲಸಿದ್ಧ ಮಲ್ಲಿಕಾರ್ಜುನಾ ಪೂರ್ವವನರಿದು, ನಿನ್ನಲ್ಲಿ ಬೆರೆತು, ಪೂರ್ವಾಪೂರ್ವಳಾದೆ! ಐದಕ್ಷರಗಳ ಅಕ್ಷರೋತ್ತಮ ಪ್ರಭುವೆ.

**1054**

**ಸಜ್ಜನವಾಳುತ್ತಾಗಿ ಹಿಂದೆಂಬ ತೊಂಡುತನವೆ?**
**ಮಿಂಡಾ ನಿನ್ನನೆಂತು ನಂಬುವೆ?**
**ಆಹಾ, ತಾಯಿ ತಂದೆಯರು ನಿನ್ನ ನಡಸಿಹರೆಂಬೆನೆ?**
**ಆಹಾ, ತಾಯಿ ತಂದೆಯರಮ್ಮ ನಿಮ್ಮ ನುಡಿಸಿಹರೆಂಬೆನೆ?**
**ಆಹಾ, ಎಲ್ಲರ ಬಿಟ್ಟು ಪೊದ್ದಿದವನೆ ನಂಬುಗೆ ಮಾಡ ಆ ಆ ಆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವೆಂಬ ಗುರುದೇವನೆ, ನೀನು ಇಡೀ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿ, ಅದನ್ನು ನೋಡಲು ಅಂಗ ಧರಿಸಿ ಸಜ್ಜನನಾಗಿ ಬಂದೆಯಾ? ಶಿವ ನೀನು, ಶಕ್ತಿ ನಾನು ಆಗಿ ಅಂಗ ಧರಿಸಿದ ಕಾರಣ, ನೀನು ನನ್ನೊಂದಿಗೆ ಪರಮಸಂತೋಷದಿಂದ ಬ್ರಹ್ಮಾಂಡವನ್ನು ನೋಡಲು ನೀನಿದ್ದ ತನುವಿನಲ್ಲಿಯೇ ನನ್ನನ್ನು ಮನವನ್ನಾಗಿ ಮಾಡಿದೆಯಾ? ನನ್ನ ಹಾದರತನ ನಿನಗೆ ಸರಿಬಾರದ ಕಾರಣ, ನನ್ನ ಕೂಡಲು ನಿನಗೆ ಇಚ್ಛೆ ಆಗಲಿಲ್ಲವೆ? ನನಗೆ ಮಿಂಡ ನೀನು. ನೀನೆ ನನ್ನನ್ನು ಬರಸೆಳೆದು ಅಪ್ಪಿಕೊಳ್ಳದೆ, ನನ್ನನ್ನು ಹಾದರಕ್ಕೆ ಹಚ್ಚಿ, ನನಗೆ ಮನವೆಂದು ಹೆಸರನಿಟ್ಟೆ! ನೀನಿದ್ದ ಅಂಗದಲಿ ಅರಿಷಡ್ವರ್ಗಗಳನು ನೀನೇ ತುಂಬಿ, ನನಗೆ ಹಾದರ ಮಾಡಲು ನೀನೇ ಹಚ್ಚಿದೆ! ನಿನ್ನನೆಂತು ನಂಬುವುದು ಮಿಂಡನೆ?

ಆಹಾ, ನೀನು ತಂದೆ-ತಾಯಂದಿರಿಗೆ ಹುಟ್ಟದವನು. ಅವರು ನಿನ್ನನ್ನು ನಡೆಸಲು ಸಾಧ್ಯವೆ? ಆಹಾ ತಂದೆ-ತಾಯಿಗಳು ನಿನಗೆ ಇಲ್ಲವೆಂದ ಮೇಲೆ ಅವರು ನಿನ್ನನ್ನು ನುಡಿಸಲು ಸಾಧ್ಯವೆ?

ಮಿಂಡಾ! ನಿನ್ನನೆಂತು ನಂಬುವುದು? ನೀನು ಯಾರಿಗೂ ಹುಟ್ಟದವನು! ಎಲ್ಲರ ಬಿಟ್ಟು ನನ್ನನ್ನು ಹೊದೆಯಲು ಅಂಗದಲ್ಲಿಯೇ ಸಂಗಮವಾದವನು! ನೀನು ಪರಿಪೂರ್ಣವಾಗಿ ಅಂಗದಲ್ಲಿಯೇ ಸಂಗಮವಾಗಿರುವಿ. ಅಂಗದ ಮನೆಯ ಮೊನೆಯ ಮೇಲೆ ನಿನಗಾಗಿ ಕಾದು ಕುಂತವಳು ನಾನು! ಪರಮಾತ್ಮನೇ, ನಂಬುಗೆ ಮಾಡು ದೇವಾ ನನ್ನನ್ನು! ಆ ಆ ಆ ಕಪಿಲಸಿದ್ಧ ಮಲ್ಲಿಕಾರ್ಜುನನೆ!

**1055**

**ಸತ್ಯವ ನುಡಿದೆವೆಂದೆಂಬಿರಿ**
**ಸತ್ಯ ನಿಮಗೆಲ್ಲರಿಗೆ ಸುಲಭವೆ?**
**ಅದೇನು ಕಾರಣ ಸುಲಭವಲ್ಲ? ಸತ್ತಿಹಿರಾಗಿ;**
**ಸತ್ಯವ ನುಡಿದವರಿಗೆ ಸಾವುಂಟೆ?**
**ಸತ್ಯವ ನುಡಿವಲ್ಲಿ ಸಂದಿಲ್ಲದಿಪ್ಪ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ**
**ಹುಸಿಗೆ ಹುರುಡಿಗನು.**

ಸತ್ಯವ ನುಡಿಯುವುದು ಸರಳವಲ್ಲ. ಸತ್ಯವೇ ತಾನಾದಾಗ ನುಡಿಯುವ ನುಡಿಗಳೆಲ್ಲ ಬರೀ ನುಡಿಗಳಾಗಿರುವುದಿಲ್ಲ; ಅವು ಮುತ್ತಾಗಿ ಬೆಳಗುತ್ತವೆ! ಮಾಣಿಕ್ಯದ ದೀಪ್ತಿಯಂತೆ ಸ್ಫಟಿಕದ ಸಲಾಕೆಯಂತೆ ತನಗೆ ತಾನೇ ಅರಳುತ್ತವೆ! ನುಡಿದವರನ್ನು ನುಡಿ ಕೇಳಿದವರನ್ನು ಅರಳಿಸುತ್ತವೆ! ಸತ್ಯದ ಪರಿಚಯ ಅಂಗವನ್ನು ಆವರಿಸಿದ ಮನಕ್ಕೆ ಆದಾಗ ಈ ಘಟನೆ ಘಟಿಸುತ್ತದೆ.

ಮನಕ್ಕೆ ಅರಿವೆಂಬ ಗುರುದೇವನ ಪರಿಚಯ ಆಗದಿದ್ದರೆ; ಮನ ತನುವಿಗೆ ಸತ್ಯದ ವೇಷ ಧರಿಸಿ ತಾನು ಸತ್ಯ ನುಡಿಯುತ್ತೇನೆ ಎಂದು, ಸುಳ್ಳು ಮನ, ನುಡಿದು ಹೇಳುತ್ತದೆ. ಹಾಗೆ ಹೇಳಿದಾಗ ಅದು ಸತ್ಯವಲ್ಲ, ಅಸತ್ಯ! ಮನದ ನುಡಿ!

ಕಾಯಕ್ಕೆ ಜನನವಿದೆ ಮರಣವಿದೆ. ಕಾಯದಲ್ಲಿ ಸಂಗಮವಾದ ಅರಿವೆಂಬ ಸತ್ಯಕ್ಕೆ ಸಾವಿಲ್ಲ. ಅದಕ್ಕೆ ಹುಟ್ಟಿಲ್ಲ. ಸತ್ಯವನ್ನು ತಿಳಿದು ಅದು ನುಡಿದಂತೆ ನುಡಿಯುವ ಮನಕ್ಕೂ ಸಾವಿಲ್ಲ. ಕಾಯದಲ್ಲಿ ಬಚ್ಚಿಟ್ಟುಕೊಂಡ ಸತ್ಯ, ಸಾವಿಲ್ಲದ ಚೆಲುವನಾದರೆ, ಸತ್ಯದಲ್ಲಿ ಸಂಗಮವಾಗಿ ಸತ್ಯ ನುಡಿದಂತೆ ನುಡಿವ ಮನಕ್ಕೂ ಸಾವಿಲ್ಲ! ಹೀಗಾಗಿ ಮನವನ್ನು ಚೆಲುವೆ ಎಂದು ಕರೆಯಬಹುದಾಗಿದೆ.

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ನಾನು ಒಲಿದೆನವ್ವಾ. ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ಎಂದು ನುಡಿದಳು; ಸಾವಿಲ್ಲದ ಚೆಲುವೆ ಅಕ್ಕಮಹಾದೇವಿ! ಸಿದ್ಧರಾಮ ಶಿವಯೋಗಿಗಳು ಸಾವಿಲ್ಲದ ಚೆಲುವ ನುಡಿದಂತೆ ನುಡಿದು ಸಾವಿಲ್ಲದ ಚೆಲುವೆಯಾಗಿ ಆ ಚೆಲುವನಿಗೆ ಸತಿಯಾಗಿದ್ದಾರೆ. ಕಪಿಲಸಿದ್ಧ ಮಲ್ಲಿಕಾರ್ಜುನನನ್ನೆ ಪತಿಯನ್ನಾಗಿಸಿಕೊಂಡಿದ್ದಾರೆ.

**1056**

**ಸದಮದ ಚಿದ್ರೂಪ ಒದವಿಪ್ಪ ಪ್ರಾಪಂಚ**

**ಮಥನಕ್ಕೆ ಮಂಗಳದ ಸಂಗವೆರಡ**
**ಮೀರಿಪ್ಪ ಸಂಬಂಧ ಆರರಿಂದಂ ಮೇಲೆ**
**ಅತ್ಯತಿಷ್ಠ ಸೀಮೆಯನು**
**ಸಂಬಂಧ ಹೊಲಬನಾರಯ್ಯ ಬಂದ**
**ನಿಸ್ಸೀಮ ಕಪಿಲಸಿದ್ಧ ಮಲ್ಲಿಕಾರ್ಜುನ.**

ಅಂಗವನ್ನು ಸಂಗ ಮಾಡಿದ ಮಂಗಳದ ಎರಡು ಅಂಗಗಳು ಮಥನಕ್ಕೆ ಸಿದ್ಧವಾದರೆ, ಸದಮದ ಚಿದ್ರೂಪ ಒದವಿಪ್ಪ ಪ್ರಾಪಂಚ ಮೀರಿಪ್ಪ ಸಂಬಂಧ ಉಂಟಾಗುತ್ತದೆ. ಷಟಸ್ಥಲದ ಸೀಮೆಯನು ಮೀರಿ ನಿಸ್ಸೀಮ ಕಪಿಲಸಿದ್ಧ ಮಲ್ಲಿಕಾರ್ಜುನ.

ಮಂಗಳಮಯವಾದ ಎರಡಂಗಗಳು ಅಂಗದಲ್ಲಿಯೇ ಸಂಗಮವಾದರೆ ಅಂಗ ಲಿಂಗಾಂಗವಾಗುತ್ತದೆ. ತನ್ನತಾನೇ ಷಟಸ್ಥಲಗಳನ್ನು ಮೀರಿ ನಿಸ್ಸೀಮ ಕಪಿಲಸಿದ್ಧ ಮಲ್ಲಿಕಾರ್ಜುನನೇ ಆಗುತ್ತದೆ.

ಎರಡಂಗಗಳ ಮಥನದಲ್ಲಿ ಅರಿವಿನ ಅಮೃತ ಧಾರಾಕಾರವಾಗಿ ಸದಾ ಹರಿಯುತ್ತದೆ. ಸಮುದ್ರ ಮಥನದಲ್ಲಿ ಅಮೃತ ಹುಟ್ಟಿದಂತೆ.

ಸಮುದ್ರದಲ್ಲಿ ಪರ್ವತವನ್ನು ಕಡುಗೋಲು ಮಾಡಿ, ಮನವೆಂಬ ಹಾವನ್ನೇ ಹಗ್ಗ ಮಾಡಿ, ದೇವತೆಗಳು ರಕ್ಕಸರು ಕಟೆದಾಗ ಅಮೃತ ಮತ್ತು ವಿಷ ಹುಟ್ಟಿತೆಂದು ಅಮೃತವನ್ನು ದೇವತೆಗಳು ಕುಡಿದರೆಂಬ ಕಥೆ ಇದೆ. ಇದು ಅರಿವಿನ ಕಥೆ.

ಮನದಲ್ಲಿಯೇ ಸಾತ್ವಿಕ ಮನ ಇದೆ. ರಾಜಸ ಮನವು ಇದೆ. ತಾಮಸ ಮನವು ಇದೆ. ಸಾತ್ವಿಕ ಮನ ದೇವತೆಗಳಾದರೆ ತಾಮಸ ಮನ ರಕ್ಕಸರು. ಮನಕ್ಕೆ ಸಾತ್ವಿಕನಾಗಲು ಬರುತ್ತದೆ. ರಕ್ಕಸನಾಗಲೂ ಬರುತ್ತದೆ. ರಾಜಧರ್ಮವನ್ನು ಹೊಂದಿ, ತನುವನ್ನು ಆಳಲು ಬರುತ್ತದೆ!

ಜ್ಞಾನಿಗಳ ದೃಷ್ಟಿಯಲ್ಲಿ ಇವು ಮೂರು ಒಂದೇ. ಮನ ಮತ್ತು ಅರಿವಿನ ಮಥನದಿಂದ ಅಮೃತ ಹುಟ್ಟುತ್ತದೆ. ಅರಿವಿನ ಅಮೃತ ಪಾನ ಮಾಡಿದ ಮನದ ಮೂರು ಗುಣಗಳು ಕಳೆದು ಹೋಗಿ ಮನ ಘನಮನವಾಗುತ್ತದೆ. ಇದು ಸೀಮೆಗೆ ಮೀರಿದ ಸಂಬಂಧ! ನಿಸ್ಸೀಮ ಕಪಿಲಸಿದ್ಧ ಮಲ್ಲಿಕಾರ್ಜುನನ ಸಂಬಂಧ!

**1057**

**ಸನಕ ಸಾನಂದ ಮುನಿಜನಂಗಳು ಅರಿಯರಯ್ಯಾ**
**ನಿಮ್ಮಂತುವನು.**
**ಒಂದರಲ್ಲಿ ಹಲವಾಗಿ, ಹಲವರಲ್ಲಿ ಒಂದಾಗಿ,**
**ಸಾಕಾರ ನಿರಾಕಾರವಾಗಿಪ್ಪಲ್ಲಿ ಏಕವಾಗಿಪ್ಪೆ**
**ಕಪಿಲಸಿದ್ಧ ಮಲ್ಲಿನಾಥ ನೀನೆಯಾಗಿ.**

ಸನಕ ಸಾನಂದ ಮುನಿಜನಂಗಳು ದೇವತೆಗಳು ಅರಿವೆಂಬ ಶ್ರೀ ಗುರುದೇವನ ಇರುವಿಕೆಯನ್ನು ಅರಿಯದವರು. ನಿನ್ನ ಇರುವಿಕೆ, ಇಡೀ ಬ್ರಹ್ಮಾಂಡವನ್ನೇ ಸೃಷ್ಟಿಮಾಡಿ, ಒಂದರಲ್ಲಿ ಹಲವಾಗಿ ಹಲವುಗಳಲ್ಲಿ ಒಂದಾಗಿ ಇರುವಂತಹ ನಿನ್ನ ಇರುವಿಕೆಯನ್ನು, ಜಪತಪ ಮಾಡಿ ಶ್ರೇಷ್ಠರೆನ್ನಿಸಿಕೊಂಡವರಿಗೂ ಅರಿಯಲು ಸಾಧ್ಯವಾಗಿಲ್ಲ.

ನೀನು ಸಾಕಾರದಲ್ಲಿ ನಿರಾಕಾರನಾಗಿರುವೆ! ನಿರಾಕಾರದಲ್ಲಿ ಸಾಕಾರಾನಾಗಿರುವೆ! ಸಾಕಾರ ನಿರಾಕಾರವಾಗಿರುವಲ್ಲಿ ನೀನು ಅದರಲ್ಲಿ ಏಕವಾಗಿರುವೆ. ಶರಣರು ಮಾತ್ರ ನಿನ್ನ ಇರುವಿಕೆಯನ್ನು ಅರಿತರಿತು ಆ ಅರಿವೇ ಆದವರು!

ಬಯಲನ್ನು ಹಿಡಿದು ನಿನ್ನನ್ನು ರೂಪವನ್ನಾಗಿಸುವ ಶಕ್ತಿ ಶರಣರಿಗೆ ಮಾತ್ರ ಇದೆ! ಪುನಃ ಆ ರೂಪವನ್ನು ಹಿಡಿದು ಬಯಲು ಮಾಡುವ ಶಕ್ತಿ ನಿನ್ನ ದರುಶನ ಮಾಡಿಕೊಂಡ ನಿನ್ನ ಶರಣರಿಗೆ ಮಾತ್ರ ಇದೆ! ಬಯಲು ರೂಪವನ್ನು ಏಕವಾಗಿಸುವ ಶಕ್ತಿ ನಿನ್ನ ಶರಣರಿಗೆ ಮಾತ್ರ ಇದೆ. ಏಕೆಂದರೆ ಅವರು ಕಪಿಲಸಿದ್ಧ ಮಲ್ಲಿನಾಥಯ್ಯನೆ ಆದವರು.

**1058**

**ಸಮತೆಯೆ ಭಕ್ತಿ, ಸತ್ಯವೆ ಲಿಂಗ**
**ಅಸತ್ಯವೆ ಅನ್ಯದೈವ, ರೋಷವಿಲ್ಲದಿಹುದೆ ಪೂಜೆ**
**ಆಸೆಯಿಲ್ಲದಿಹುದೆ ಪ್ರಸಾದ.**
**ಇಷ್ಟಲಿಂಗದಲ್ಲಿ ನಿರತನಾಗಿದ್ದಡೆ**
**ಕಪಿಲಸಿದ್ಧ ಮಲ್ಲೇಶ್ವರ ದೇವರದೇವ!**

ಸಹಜವಾದ ಸಮಾನತೆಯ ದೃಷ್ಟಿಕೋನವೆ ಭಕ್ತಿ. ಆ ಸತ್ಯಕ್ಕೆ ಮನ ಭಕ್ತಿ ಮಾಡುವುದು ಸುಲಭವಾದದ್ದು ಅಲ್ಲ. ಮನಕ್ಕೆ ಪರಿವರ್ತನೆ ಆಗಿ ಸತ್ಯ ಮತ್ತು ಸಹಜತೆ ಅದಕ್ಕೆ ಉಂಟಾಗುತ್ತದೆ ಎನ್ನುವುದು ಸುಳ್ಳು.

ಸಹಜ ಮತ್ತು ಸಮಾನತೆಯ ಅರಿವಿನ ನಿರಾಕಾರ ಅಂಗವೊಂದು ಅಂಗದಲ್ಲಿಯೇ ಇದೆ. ಅಂಗವನ್ನು ಆವರಿಸಿದ ಮನಕ್ಕೆ ಸಹಜತೆಯ ಅಂಗದಲ್ಲಿ ಸಂಗಮವಾಗಿ ಆ ಸಹಜತೆಯೇ ತಾನಾಗಲು ಬರುತ್ತದೆ.

ಸಹಜತೆಯನ್ನು ಮನ ಒಲಿಸಿಕೊಳ್ಳಬೇಕಾದರೆ, ಸಹಜ ಮತ್ತು ಸತ್ಯಕ್ಕೆ ಭಕ್ತಿ ಮಾಡಲೇಬೇಕು. ಆಗ ಅಸತ್ಯ ಅಸಮತೆ ಅನ್ಯದೈವಾರಾಧನೆ, ಆಸೆ ರೋಷ ಆಮಿಷ ಕಾಮ, ಕ್ರೋಧಾದಿ ಅರಿಷಡ್ವರ್ಗಗಳು, ಅಷ್ಟಮದಗಳು, ಸಪ್ತ ವ್ಯಸನಗಳು ನಷ್ಟವಾಗುತ್ತವೆ.

ಮನ ಘನದಲ್ಲಿ ಸಂಗಮವಾಗಿ, ಘನ ಮನವಾಗುತ್ತದೆ. ಮನದಲ್ಲಿ ಶೇಖರಣೆಯಾದ ಸಕಲ ದೋಷಗಳು ಉದುರಿ ಬೀಳುತ್ತವೆ. ನೋಡಿದ ನೋಟ ದೃಶ್ಯಕ್ಕೆ ಪ್ರಸಾದವಾಗುತ್ತದೆ. ಕೇಳಿದ ಶಬ್ದ ಕಿವಿಗೆ ಪ್ರಸಾದವಾಗುತ್ತದೆ.

ಮುಟ್ಟಿದ ಸ್ಪರ್ಶ, ರುಚಿಸಿದ ರುಚಿ, ಮೂಸಿಸಿದ ಸುಗಂಧ ದುರ್ಗಂಧ ಆಯಾ ಭಾಗದಲ್ಲಿಯೇ ಪ್ರಸಾದವಾಗಿ ಕಪಿಲಸಿದ್ಧ ಮಲ್ಲೇಶ್ವರ ದೇವರ ದೇವ ತಾನೇ ಆಗುತ್ತಾನೆ.

**1059**

**ಸಮನಿಸದಯ್ಯ ಭಕ್ತಿ,**
**ಸೀಮೆಯ ಮೀರಿದ ಸಂಬಂಧಿಗಳಲ್ಲದೆ.**
**ಸಮನಿಸದಯ್ಯ ಐಕ್ಯವು,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ**
**ನಿನ್ನ ಭಕ್ತಿ ನಿಧಾನ ಎಲ್ಲರಿಗೆ ಸುಲಭವೆ?**

ಭಕ್ತಿಯೆಂದರೆ ವ್ಯಕ್ತಿಗೆ ವಿಧೇಯಕನಾಗಿರುವುದೆಂದಲ್ಲ. ವ್ಯಕ್ತ ಕಾಯದಲ್ಲಿ ಅರಿವಿನ ಅವ್ಯಕ್ತ ಶ್ರೀಗುರುದೇವನೊಬ್ಬ ಇದ್ದಾನೆ. ವ್ಯಕ್ತ ಕಾಯವನ್ನು ಆವರಿಸಿದ ಅವ್ಯಕ್ತ ಮನವೇ, ಭಕ್ತನಾಗಿ ಅತ್ಯಂತ ಭಕ್ತಿಯಿಂದ, ಅವ್ಯಕ್ತ ಶ್ರೀಗುರುದೇವನ ಸೇವೆ ಮಾಡಬೇಕು. ಆತನ ಸಂಬಂಧಿಯಾಗಬೇಕು.

ಆಗ ಅವ್ಯಕ್ತ ಮನದಲಿ ತುಂಬಿದ ಕಾಮಾದಿ ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ನಷ್ಟವಾಗುವವು! ಅಸಮತೆಯಿಂದ ಕೂಡಿದ ಮನ ತನ್ನ ಅಸಮತೆಯನ್ನು ಸಮತೆಯ ಜ್ಯೋತಿಯಾದ ಅವ್ಯಕ್ತ ಶ್ರೀಗುರುವಿಗೆ ಅರ್ಪಣೆ ಮಾಡಿ, ಸೀಮೆಯ ಮೀರಿದ ನಿಸ್ಸೀಮ ಸಂಬಂಧಿಯಾಗುತ್ತದೆ. ಮನವೇ ಭಕ್ತನಾಗಿ ಪರಮಾತ್ಮನಲ್ಲಿ ಐಕ್ಯವಾಗುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನಿನ್ನ ಭಕ್ತಿ ಸಂಪತ್ತು ಎಲ್ಲರಿಗೂ ಸುಲಭವಲ್ಲ ತಂದೆ!

**1060**

**ಸಮನಿಸದಯ್ಯಾ ಭವಿಸಂಗ ಭಕ್ತಂಗೆ.**
**ಸಮನಿಸದಯ್ಯಾ ಲಿಂಗಪ್ರಾಣಿಗೆ ಅನರ್ಪಿತ.**
**ಸಮನಿಸದಯ್ಯಾ ಪ್ರಾಣಲಿಂಗ ಸಂಬಂಧಿಗೆ ಬಹುಲಿಂಗಪ್ರಸಾದ.**
**ಇಂತೀ ಮೂರಕ್ಕಳುಕದಿದ್ದೆನಾದಡೆ, ನಾಯಕ ನರಕದಲ್ಲಿಕ್ಕುವ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಭಕ್ತನೆಂದರೆ ಮಹಾಜ್ಞಾನಿ. ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವನಿಗೆ ಅಂಗವನ್ನು ಆವರಿಸಿದ ಭವಿಮನ ಭಕ್ತನಾಗಿ ಭಕ್ತಿ ಮಾಡಿದರೆ ಅದು ಭಕ್ತ! ಆತನೆ ಮಹಾಜ್ಞಾನಿ! ಇಂತಹ ಜ್ಞಾನಿಗೆ ಪುನಃ ಭವಿಸಂಗ ಇಷ್ಟವಾಗುವುದಿಲ್ಲ. ಭಕ್ತನಿಗೂ ಭವಿಗೂ ಅಜಗಜಾಂತರ ವ್ಯತ್ಯಾಸ.

ಭವಿಯಾದವನು ಕಲ್ಲನ್ನು ಕೆತ್ತಿ, ಆ ಕಲ್ಲನ್ನೇ ದೇವರೆಂದು ಆರಾಧಿಸುತ್ತಾನೆ. ಹೀಗೆ ಆರಾಧಿಸುವ ಸಕಲ ಭವಿಗಳನ್ನು ಭವಿಯಾದವನು ಭಕ್ತನೆಂದು ಕರೆಯುತ್ತಾನೆ! ಲೋಕದ ದೃಷ್ಟಿಯಲ್ಲಿ ಕಲ್ಲುದೇವರಿಗೆ ಭಕ್ತಿ ಮಾಡುವವರೇ ಭಕ್ತರು! ಜ್ಞಾನಿಗಳ ದೃಷ್ಠಿಯಲ್ಲಿ ಅಂತಹ ಭಕ್ತರೆಲ್ಲ ಭವಿಗಳು! ಭವಿಗಳು ಅಂಗದ ಮೇಲೆ ಲಿಂಗ ಧರಿಸಿಕೊಂಡು ಆ ಲಿಂಗಕ್ಕೆ ಭಕ್ತರಾಗುತ್ತಾರೆ!

ಭಕ್ತರೆಂದು ಜ್ಞಾನಿಗಳಿಂದ ಕರೆಯಿಸಿಕೊಂಡವರು, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಶ್ರೀಗುರುದೇವನಿಗೆ ಭಕ್ತಿ ಮಾಡುತ್ತಾರೆ. ಇವರಿಗೆ ಅಂಗವೇ ಲಿಂಗ! ಇವರು ಮಾಡುವ ಪೂಜೆ ಅರ್ಪಿತ! ಅಂಗದ ಮೇಲೆ ಲಿಂಗ ಕಟ್ಟಿಕೊಂಡು ಆ ಲಿಂಗವನ್ನು ಪೂಜಿಸಿ ಅರ್ಪಿಸುವ ಭಕ್ತಿ ಅನರ್ಪಿತ! ಭವಿ ಸಂಗ ಭಕ್ತನಿಗೆ ಸಮನಿಸದು!

ಪ್ರಸಾದವೆಂದರೆ ಸಹಜವಾಗಿ ನೋಡುವುದು, ಸಹಜವಾಗಿ ಕೇಳುವುದು, ಸಹಜವಾಗಿ ಸ್ಪರ್ಶಿಸಿ, ರುಚಿಸಿ, ಮೂಸಿಸುವುದು. ಭವಿಗೆ ಇದು ಸಾಧ್ಯವಾಗುವುದಿಲ್ಲ. ನೋಡುವಾಗ ನೋಡುವ ನೋಟದಲಿ ಹಾದರವಿರುತ್ತದೆ. ದ್ವೇಷ, ಅಸೂಯೆ ಕ್ರೌರ್ಯವಿರುತ್ತದೆ. ಹೀಗಾಗಿ

ಸಮನಿಸದಯ್ಯ ಪ್ರಾಣಲಿಂಗ ಸಂಬಂಧಿಗೆ ಬಹುಲಿಂಗ ಪ್ರಸಾದ: ಸಮನಿಸದಯ್ಯ ಲಿಂಗ ಪ್ರಾಣಿಗೆ ಅನರ್ಪಿತ. ಸಮನಿಸದಯ್ಯ ಭವಿಸಂಗ ಭಕ್ತಂಗೆ ಮೂರಕ್ಕೆ ಅಳುಕದಿದ್ದೆನಾದಡೆ ನಾಯಕ ನರಕದಲಿಕ್ಕುವ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

1061

**ಸಮನಿಸುವ ಸುಖಕಿನ್ನು ಸಮನಿಸುವುದಾವುದಯ್ಯಾ?**
**ಕರಣ ಕಾನನದೊಳಗೆ ಹೊಲಬುದಪ್ಪುವೆನಯ್ಯಾ.**
**ದೆಸೆಗೆಟ್ಟವ ನಾನಯ್ಯಾ. ಎನ್ನ ನಿಮ್ಮಂತೆ ಮಾಡಯ್ಯಾ.**
**ಮೂರರಿಂದ ಮುಕ್ತಿಯಾದ ಆರೂಢದ ಬೇಟನೀಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಸಮಸುಖವೆನ್ನುವುದು ಪರಮಸುಖ! ಆ ಸುಖಕ್ಕೆ ಸಮಾನವಾದ ಸುಖ ಯಾವುದು ಇಲ್ಲ! ಸಮಸುಖ ಅರಿವಿನ ಸುಖವಾದರೆ; ಸುಖ ದುಃಖಗಳು ಮರೆವಿನಿಂದ ಉಂಟಾಗುತ್ತವೆ. ಹೀಗಾಗಿ ಸುಖವೆನ್ನಲು ಬರುವುದಿಲ್ಲ. ಏಕೆಂದರೆ ಸುಖದಲ್ಲಿ ದುಃಖವಿದೆ. ದುಃಖವೆನ್ನಲು ಬರುವುದಿಲ್ಲ ಏಕೆಂದರೆ ಸುಖದಿಂದಲೇ ದುಃಖವಾಗಿದೆ.

ಮನದ ಕೆಲಸವೇ ಹೀಗೆ. ಸುಖವನ್ನು ಕಾಯದೊಂದಿಗೆ ಅನುಭವಿಸುತ್ತಾ ಕಾಯದ ಆಯುಷ್ಯವನ್ನು ಸುಖದ ಚಿಂತೆಯಲ್ಲಿಯೇ ಕಳೆಯುತ್ತದೆ; ಕಾಯಕ್ಕೆ ಶಾಶ್ವತ ದುಃಖವನ್ನು ತಂದೊಡ್ಡುತ್ತದೆ. ಪರಮ ಸುಖವೆನ್ನುವುದು ಅದು ಪರಮಾತ್ಮನಸುಖ, ಸಮಸುಖ, ಸಹಜಸುಖ!

ಮನ, ಎನ್ನನ್ನು ನಿಮ್ಮಂತೆ ಮಾಡಯ್ಯ ಎಂದು ಪರಮಾತ್ಮನನ್ನು ಬೇಡಿಕೊಂಡಾಗ, ಆ ಪರಮಾತ್ಮನಿಗೆ ದಾಸಾನು ದಾಸನಾದಾಗ, ಶರಣು ಹೋಗಿ ಶರಣನೇ ತಾನಾದಾಗ ಬರುವ ಅರಿವಿನ ಸುಖವೇ ಸಮಸುಖ ಆರೂಢ ಸುಖ!

ಮನದ ಸುಖವೆಂದರೆ ರೂಢಿಗತವಾದುದ್ದು. ಕಾಯವನ್ನು ಸಾತ್ವಿಕ ಸುಖದಲ್ಲಿಟ್ಟು ಕಾಯಕ್ಕೆ ವೇಷ ಹಾಕಿ ಸುಖಿಸುತ್ತದೆ ಮನ. ಕಾಯವನ್ನು ಮನ ರಾಜಸ ಗುಣದಿಂದ ಸುಖಿಸುತ್ತದೆ. ತಾಮಸ ಗುಣದಿಂದ ಸುಖಿಸುತ್ತದೆ. ಮನ ತನುವಿಗೆ ಹಾಕುವ ವೇಷದ ರೂಢಿಗತ ಸುಖಗಳು ಆಗಿವೆ. ಸಾತ್ವಿಕ, ರಾಜಸ, ತಾಮಸ ಈ ಮೂರರಿಂದ ಮುಕ್ತಿಯಾದ ಆರೂಢ ಸುಖವೇ ಅರಿವಿನಸುಖ! ಸಹಜಸುಖ! ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಒಲಿಸಿಕೊಂಡ ಪರಮ ಸುಖ!

1062

**ಸಮಯ ಸಮಯೋಚಿತ ಭಾವ ಭಾವನಷ್ಟವಾಗಿ**
**ಕಾಲಕರ್ಮವಿಲ್ಲದೆ ಹೋಯಿತು;**
**ತತ್ವಜ್ಞಾನ ಪ್ರಕಾಶಿಕೆಯಡಗಿತ್ತು ;**
**ಆಧಾರಾಧೇಯವಡಗಿತ್ತಯ್ಯಾ;**
**ನಿರಾಧಾರ ಸಮಯವಾಯಿತ್ತಯ್ಯಾ;**
**ಬಸವ ಬಸವಾ ಬಸವಾ ಎಂಬ ಅನುಭಾವ ಬಯಲಾಯಿತ್ತಯ್ಯಾ.**
**ಎಸಳೆಂಟರ ಹಸನಳಿಯಿತ್ತಯ್ಯಾ ಬಸವಾ ನಿಮ್ಮಲ್ಲಿ.**
**ನಿಜಯೋಗ ಸಮಾಧಿಯಾಯಿತ್ತಯ್ಯಾ ಬಸವಾ ನಿಮ್ಮಲ್ಲಿ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ, ಬದುಕಿದೆನು ನಾನಿಂದು.**

ಕಾಯದಲ್ಲಿ ತತ್ವಜ್ಞಾನ ಪ್ರಕಾಶಮಾನವಾಗಿ ಬೆಳಗುತ್ತಿದ್ದರು; ಸಮಯೋಚಿತ ಭಾವ ನಷ್ಟವಾದ

ಕಾರಣ; ಕಾಯದಲ್ಲಿ ಸಂಗಮವಾದ ತತ್ವ; ಕಾಯದಲ್ಲಿಯೇ ಉಳಿದು, ಕಾಯ ಭಾವಕ್ಕೆ ಬಲಿಯಾಯಿತು. ದುರ್ಭಾವಕ್ಕೆ ಬಲಿಯಾಯಿತು. ಸಮಯೋಚಿತ ನಿರ್ಭಾವವು, ಭಾವಕ್ಕೆ ಪ್ರಕಟವಾಗಲೇ ಇಲ್ಲ.

ಕಾಯದಲ್ಲಿ ಜ್ಞಾನವು ಅಡಗಿ ನಿರಾಧಾರ ಸಮಯ ಬಳಕೆಯಾಗಿ ಬಸವಾ ಬಸವಾ ಬಸವಾ ಎಂಬ ಅನುಭಾವ ಬಯಲಾಯಿತ್ತಯ್ಯಾ. ಭಾವ ನಿರ್ಭಾವವಾದಾಗ ದೃಶ್ಯದಲಿ ಬದಲಾವಣೆಯಾಗುತ್ತದೆ. ಇಲ್ಲದಿದ್ದರೆ ಭಾವದಿಂದ ಕಾಯ ಅರಳುತ್ತದೆ; ಭಾವ ದುರ್ಭಾವಕ್ಕೆ ಒಳಗಾಗಿ ಕಾಯ ಕೆರಳುತ್ತದೆ. ಭಾವ ನಿಜದಲ್ಲಿ ನಿಂದು ನೋಡಿದರೆ ಅದು ಊಸರವಳ್ಳಿಯಂತೆ! ಭಾವದ ಬಣ್ಣ ಬದಲಾಗುತ್ತಲೆ ಇರುತ್ತದೆ. ನಿಭಾರ್ವಕ್ಕೆ ಬದಲಾವಣೆ ಇಲ್ಲ! ಅದು ಇದ್ದಂತೆ ಇರುತ್ತದೆ. ಅದು ನಿಜಯೋಗ. ಅದು ಸಾಕ್ಷಾತ್ ಬಸವಣ್ಣ! ಕಪಿಲಸಿದ್ಧ ಮಲ್ಲಿಕಾರ್ಜುನನೆ ಬಸವಣ್ಣನಿಂದ ನಾನು ಬದುಕಿದೆನೆಂದು ಸಿದ್ಧರಾಮ ಶಿವಯೋಗಿಗಳು ನುಡಿದಿದ್ದಾರೆ.

**1063**

**ಸರ್ವರಾದಿ ಅಂತ್ಯದಲ್ಲಿ ಒಬ್ಬನೆ ಇದ್ದೆಯಯ್ಯಾ.**
**ಸರ್ವಗತ ನೀನೆ ಕಂಡಯ್ಯಾ.**
**ಒಂದೊಂದು ಪರಿಯಲ್ಲಿ ಆಡುವ ಆನಂದಗುಣವ ನೋಡಯ್ಯಾ.**
**ಶೂನ್ಯಶೂನ್ಯ! ಕಾಯದ ಕರಸ್ಥಲಕ್ಕೆ ದೇವನಾದೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಯಲು ಒಂದೇ ಸತ್ಯ. ಉಳಿದುದೆಲ್ಲಾ ಬಯಲಿನಿಂದಲೇ ಆದದ್ದು. ಕೊನೆಗೆ ಬಯಲಾಗಿ ಬಯಲೊಂದೇ ಉಳಿಯುವುದು. ಬಯಲು ದೇವನೊಬ್ಬನೆ ದೇವರು. ಆ ದೇವನಿಂದಲೇ ಇಡೀ ವಿಶ್ವದಲ್ಲಿ ಏಳುನೂರಾ ಮೂವತ್ತು ಕೋಟಿ ದೇವರುಗಳು ಸೃಷ್ಟಿಯಾಗಿದ್ದಾರೆ. ಇವರೆಲ್ಲ ಒಮ್ಮೆ ಬಯಲಾಗಿ ತಮ್ಮನ್ನು ಸೃಷ್ಟಿಮಾಡಿದ ಬಯಲು ದೇವನಲ್ಲಿ ಲೀನವಾಗುತ್ತಾರೆ. ಅಲ್ಲಮ ಪ್ರಭುಗಳು ಆ ಒಬ್ಬನನ್ನು ಬಹಳ ಸುಂದರವಾಗಿ ಬಣ್ಣಿಸಿದ್ದಾರೆ.

ಬಯಲು ಬಯಲನೇ ಬಿತ್ತಿ ಬಯಲು ಬಯಲನೆ ಬೆಳೆದು ಬಯಲು ಬಯಾಲಾಗಿ ಬಯಲಾಯಿತ್ತಯ್ಯಾ. ಬಯಲು ಜೀವನ, ಬಯಲು ಭಾವನೆ, ಬಯಲು ಬಯಲಾಗಿ ಬಯಲಾಯಿತ್ತಯ್ಯಾ. ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು. ನಾನು ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ.

ಬಯಲೇ ಜೀವಜಲಬೀಜವಾಗಿ, ಗರ್ಭದಲ್ಲಿ ಹೊಕ್ಕು, ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಆಗಿ, ಆ ಜಲವೇ ಸುಂದರವಾದ ಚರ್ಮವಾಗಿ, ಧಾತುಗಳು ಸೋರದಂತೆ ಹೊಲಿದುಕೊಂಡು ಕಾಯವಾಗಿ ಭೂಮಿಗೆ ಬಂದಿದೆ.

ಬಯಲಿಂದ ಬಂದ ಕಾಯ, ಕಾಯವಿದ್ದಾಗಲೇ ಬಯಲನ್ನು ತಿಳಿದು ಬಯಲಾಗಬೇಕಾಗಿತ್ತು. ಬಯಲ ಸಹಜಸುಖ ಕಾಯವಿದ್ದಾಗಲೇ ಕಂಡುಕೊಳ್ಳಬೇಕಾಗಿತ್ತು. ಹಾಗೆ ಕಂಡುಕೊಳ್ಳುವ ಗುಣ ಕಾಯಕ್ಕೆ ಮಾತ್ರ ಇದೆ. ಕಾಯವನ್ನು ಆವರಿಸಿದ ಮನಕ್ಕು ಇದೆ. ಆದರೂ ಮನ ಬಯಲಿಂದಲೇ ಹುಟ್ಟಿದ್ದರೂ ತಾನು ಬಯಲೇ ಆಗಿದ್ದರೂ, ಬಯಲನ್ನು ತಿಳಿಯಲು ಬಯಲ ಮನಕ್ಕೆ ಸಾಧ್ಯವಾಗುತ್ತಿಲ್ಲ. ಕಾಯದಲ್ಲಿಯೇ ಸಂಗಮವಾದ ಬಯಲದೇವನನ್ನು ಪೂಜಿಸಿದರೆ ಸಾಕು ಮನ ಘನಮನವಾಗುತ್ತದೆ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

1064

**ಸರ್ಪನ ಮೇಲೆ ಪೃಥ್ವಿ ರಚಿಸದಂದು,**
**ಸಮುದ್ರಂಗಳೇಳು ಹಾಸದಂದು,**
**ಅಷ್ಟದಿಗುದಂತಿಗಳು ಹುಟ್ಟದಂದು,**
**ಶಂಖು ಶಲಾಕೆಯಿಲ್ಲದಂದು,**
**ಗಂಗೆ ಗೌರೀವಲ್ಲಭರಿಲ್ಲದಂದು,**
**ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಈ ಐವರೂ ಹುಟ್ಟದಂದು,**
**ಈ ಐವರ ತಾಯಿತಂದೆ ಇಲ್ಲದಂದು**
**ನಿಜಗುರು ಕಪಿಲಸಿದ್ಧ ಮಲ್ಲೇಶ್ವರಾ, ನಿಮ್ಮ ಹೆಸರೇನಯ್ಯಾ?.**

ಕಾಯದಲ್ಲಿ ಸಂಗಮವಾದ ಅರಿವೆಂಬ ಶ್ರೀಗುರುದೇವ ಆತ ಸಾಕ್ಷಾತ್ ಪರಮೇಶ್ವರ; ಬಯಲುದೇವನೆ ಆಗಿದ್ದಾನೆ. ಕಾಯಕ್ಕೆ ಜನ್ಮಕೊಟ್ಟು ಕಾಯದಲ್ಲಿಯೇ ಇದ್ದಾನೆ. ತನ್ನನ್ನು ತಿಳಿಯಲು ಮನವೆಂಬ ಸರ್ಪವನ್ನು ಕಾಯದಲ್ಲಿಯೇ ಸೃಷ್ಟಿ ಮಾಡಿದ್ದಾನೆ. ಆ ಸರ್ಪ ಮನುಕುಲ ವಾಸಮಾಡಿದ ಪೃಥ್ವಿಯನ್ನು ಹೊತ್ತುಕೊಂಡಿದೆ. ಸರ್ಪವೆಂಬ ಮನಕ್ಕೆ ಪರಮಾತ್ಮನ ಬಯಕೆಯಾದಾಗ, ಪರಮಾತ್ಮ ಅದರ ವಿಷದ ಹಲ್ಲು ಕಳಚಿ ತನ್ನ ಕೊರಳಿಗೆ ಆಭರಣ ಮಾಡಿಕೊಂಡು ಸರ್ಪಭೂಷಣ ಎಂದು ಕರೆಯಿಸಿಕೊಳ್ಳುತ್ತಾನೆ.

ಪರಮಾತ್ಮ ಬಯಲು. ಆತನ ಕೊರಳಲ್ಲಿ ಸರ್ಪ. ಸರ್ಪದ ತಲೆಯ ಮೇಲೆ ಪೃಥ್ವಿ, ಏಳೇಳು ಸಮುದ್ರಗಳು, ಅಷ್ಟದಿಕ್ಕುಗಳು ಹುಟ್ಟಿಕೊಂಡಿವೆ.

ಶಂಖು ಶಲಾಕೆ ಇಲ್ಲದಂದು, ಗಂಗೆ ಗೌರಿ ವಲ್ಲಭರಿಲ್ಲದಂದು, ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಈ ಐವರೂ ಹುಟ್ಟದಂದು, ಈ ವಿವರ ತಾಯಿ ತಂದೆ ಇಲ್ಲದಂದು ನಿಜಗುರು ಕಪಿಲಸಿದ್ಧ ಮಲ್ಲೇಶ್ವರಾ ನಿಮ್ಮ ಹೆಸರು ಬಯಲುದೇವನಯ್ಯಾ.

ಬಯಲೇ ಪೃಥ್ವಿಗೆ ಜನ್ಮ ನೀಡಿದೆ. ಇಡೀ ಬ್ರಹ್ಮಾಂಡಕ್ಕೂ ಜನ್ಮ ನೀಡಿದೆ. ಸೂರ್ಯ ಚಂದ್ರ ಸಕಲ ಆಕಾಶ ಕಾಯಗಳಿಗೂ ಜನ್ಮ ನೀಡಿ; ಅವೆಲ್ಲವುಗಳನ್ನು ಬಯಲು ತನ್ನ ಗರ್ಭದಲ್ಲಿ ಇಟ್ಟುಕೊಂಡಿದೆ. ಪರಮಾತ್ಮನು ಬಯಲು. ಆತನ ಕೊರಳಲ್ಲಿದ್ದ ಸರ್ಪವು ಬಯಲು. ಸರ್ಪ ಹೊತ್ತುಕೊಂಡ ಪೃಥ್ವಿಯೂ ಬಯಲು. ಪೃಥ್ವಿ ಹೊತ್ತುಕೊಂಡ ಏಳುನೂರಾ ಮೂವತ್ತುಕೋಟಿ ಕಾಯಗಳು ಕೂಡಾ ಬಯಲು. ಬಯಲೇ ಬೀಜವಾಗಿದೆ, ವೃಕ್ಷವಾಗಿದೆ, ಪುನಃ ಬಯಲಲ್ಲಿ ಬೆರೆತು ಬಯಲೇ ಆಗುತ್ತದೆ.

1065

**ಸರ್ಪವನೂ ಕಂಡು ಕಂಠಣಿಸದೆ ಓಸರಿಸದೆ**
**ಒಳಕೊಂಡಿಪ್ಪುದದಕೆ ಎಂತಿರಬೇಡಾ ಹಿರಿಯರ ಮನ?**
**ಮನವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ**
**ನಿಮ್ಮದೊಂದು ಸಮತಾಗುಣ ಎನ್ನನೆಂದು**
**ಬಂದು ಹೊದ್ದಿಪ್ಪುದು ಹೇಳಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸರ್ವವನು ಸೃಷ್ಟಿ ಮಾಡಿದ ಪರಮಾತ್ಮ, ಕಾಯವನ್ನು ಸೃಷ್ಟಿ ಮಾಡಿದ! ಕಾಯದಲ್ಲಿ ತಾನಿದ್ದರೂ, ತಾನು ಸೃಷ್ಟಿ ಮಾಡಿದ ಒಂದು ವಸ್ತುವು ತನಗೆ ಬೇಕಿಲ್ಲ! ಆದರೆ ಸರ್ವವನ್ನು ಒಳಗೊಂಡಿದ್ದಾನೆ. ಅಣು, ರೇಣು, ತೃಣ ಕಾಷ್ಟದಲ್ಲಿ ಆತನೇ ಸಂಗಮವಾಗಿದ್ದಾನೆ. ಆದರೆ ಆತನಿಗೆ ಒಂದು ಬೇಡಿಕೆಯೂ ಇಲ್ಲ. ಒಡಲೊಡೆಯ ಆತ.

ಒಡಲನ್ನು ಆವರಿಸಿದ ಮನ ಹಾಗಲ್ಲ. ಪರಮಾತ್ಮನಿಂದ ಸೃಷ್ಟಿಯಾಗಿದ್ದರೂ ಪರಮಾತ್ಮನೊಂದಿಗೆ ಒಂದಾಗಿ ಅರ್ಧನಾರೀಶ್ವರಿಯೇ ತಾನಾಗಬೇಕಾದ ಮನ ಹಾಗಲ್ಲ. ತಾನು ಸೃಷ್ಟಿ ಮಾಡಿದ ಎಲ್ಲವನ್ನು ತಾನೇ ಪಡೆಯಬೇಕೆಂಬ ಆಸೆ ಆಕೆಗೆ. ಏಕೆಂದರೆ, ಆತನ ಸಮತಾಗುಣವನ್ನು ತಾನು ಹೊದಿಯದ ಕಾರಣ, ಘನಮನವಾಗಬೇಕಾದ ತಾನು ತನ್ನ ಮನ ವಿಚ್ಛಂದವಾಗಿದೆ. ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಹೊದ್ದಿಪ್ಪುದು ಹೇಳಾ ಎಂದು ಆ ಪರಮಾತ್ಮನಲ್ಲಿ ಮನ ಪ್ರಾರ್ಥಿಸಿ, ಆತನ ಸಮತಾ ಗುಣವನ್ನು ಹೊದ್ದು, ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಬೇಕಿದೆ.

**1066**

**ಸರ್ವಾತ್ಮ ನೀನೆನ್ನ ಸರ್ವನನು ಮಾಡಿದೆ**
**ಉರ್ವಿಯೊಳಗಣ ಶುದ್ಧಿಯ ಮೆರೆಸಿದಿರಿ ನಿಮ್ಮ**
**ನಿರ್ವಾಣ ಪದವಿತ್ತ ಗುರು ಬಸವಣ್ಣನೈ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶ್ರೀ ಗುರುದೇವನು ಎನ್ನ ಕಾಯವನ್ನು ಕಾಯದೊಳಗಣ ಶ್ರೀಗುರುದೇವನನ್ನು ಕಾಯವನ್ನು ಆವರಿಸಿದ ಮನಕ್ಕೆ ಪರಿಚಯ ಮಾಡಿ ಮನವನ್ನು ಘನಮನವನ್ನಾಗಿಸಿದ. ಕಾಯವನ್ನು ಶುದ್ಧಿಯನ್ನಾಗಿಸಿ ಅರಿವಿನಿಂದ ಮೆರೆಯಿಸಿದ. ನಿರ್ವಾಣ ಪದವಿಯನ್ನು ಕಾಯಕ್ಕಿತ್ತ ಎನ್ನನ್ನು ಕರುಣಿಸಿದ ಗುರುಬಸವಣ್ಣನನ್ನು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಎಂದು ಕರೆದಿದ್ದಾರೆ.

ಕಾಯದೊಳಗೆ ಸಂಗಮವಾದ ಸರ್ವಾತ್ಮನನ್ನು ದರುಶನ ಮಾಡಿಸಿ ಸರ್ವವನ್ನು ಮಾಡಿದ ಆ ಪರಮಾತ್ಮನನ್ನು ಸಿದ್ಧರಾಮ ಶಿವಯೋಗಿಗಳು ಸರ್ವಾತ್ಮನೆಂದು ಸ್ಮರಿಸಿದ್ದಾರೆ. ನನ್ನನ್ನು ಸರ್ವಾತ್ಮನನ್ನಾಗಿ ಮಾಡಿದುದು ಸಣ್ಣ ಕೆಲಸವಲ್ಲ. ಶಿವನ ಹೊರತು ಅದು ಯಾರಿಂದಲೂ ಸಾಧ್ಯವಾಗದ ಮಾತು.

**1067**

**ಸಲ್ಲ ದುರಾಗತವು, ಅಯ್ಯಾ.**
**ನೀನೇಕೆ ಬಾರೆ? ಒಲ್ಲೆಯೇಕೆ? ಹೇಳಾ ಅಯ್ಯಾ.**
**ನೀ ಬಾರಯ್ಯ.**
**ಬಂದೆನ್ನ ಹೃದಯ ಮನಸಾಸನಮಾಡಿ ನಿಲ್ಲಯ್ಯ.**
**ಅಯ್ಯಾ ನೀ ಬಾರಾ, ಬಾರಾ ನಿನ್ನ ಧರ್ಮ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.**

ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನನೇ, ನೀ ಬಂದು ಕತ್ತಲೆಯ ಈ ಮನವನ್ನು ಬೆಳಗಿ

ನಿನ್ನಂತೆ ಮಾಡಿಕೊಳ್ಳಲಾರೆಯಾ? ನೀನೇ ಸೃಷ್ಟಿಸಿದ ಮನವನ್ನು ನೀನೇ ದೂರೀಕರಿಸಿದರೇ ಹೇಗೆ? ಇದು ನಿನಗೆ ನ್ಯಾಯವೆ! ನಿನ್ನ ಹತ್ತಿರ ನಾನಿದ್ದರು ನನಗೆ ದರುಶನ ಕೊಡದ ಇಚ್ಛೆ ನಿನಗೇಕೆ? ಬಾರಲೊಲ್ಲದ ತಂದೆಯೆ. ಅಯ್ಯ ನೀ ಬಾರಾ, ನೀ ಬಂದು ಎನ್ನನ್ನು ಸೇರುವುದು, ಎನ್ನ ಕೂಡುವುದು, ಅದು ನಿನ್ನ ಧರ್ಮ. ಬಂದೆನ್ನ ಹೃದಯದಲ್ಲಿ ಮನಶಾಸನ ಮಾಡಿ ನಿಲ್ಲಯ್ಯ. ನಿನಗೂ ನನಗೂ ಬಹಳ ದೂರವಿರದಿದ್ದರೂ ನಿನ್ನ ಬೆನ್ನ ಹಿಂದೆಯೇ ನಾನಿದ್ದರು ನನಗೆ ನೀನು ದರುಶನ ಕೊಡದಿರುವುದು ಸರಿಯೇ ನನ್ನಯ್ಯ; ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

**1068**

**ಸಾಗರದ ಮಧ್ಯದಲಿ ಸಾಧಿಸುವ ಬಹಿರಂಗ**
**ಆಗಮಂಗಳಿಗದು ಹೊರಗು ತಾನು.**
**ಯೋಗಕ್ಕೆ ಮೂಲವದು, ಯೋಗಕ್ಕೆ ಸಿದ್ಧವದು,**
**ಯೋಗಕ್ಕೆ ಅತ್ಯಂತ ಪರಮಸೀಮೆ.**
**ಸಾದಾಖ್ಯ ತತ್ವದಲ್ಲಿ ಸಂದು ಸವದರಿಗಿಲ್ಲ.**
**ಅದ್ಯಕ್ಷರದ್ವಯದ ಪರಿಯಿಂತುಟು.**
**ಮೂದೇವರೊಡೆಯ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಭೇದಿಸುವ ಯೋಗಿಯನು ಕಂಡು ನಗುವೆ.**

ಅಂಗದಲ್ಲಿ ಸಂಗಮವಾದ ಮಂಗಳಮಯ ಪರಮಾತ್ಮನನ್ನು, ವೇದ ಆಗಮ ಉಪನಿಷತ್ತು ಶಾಸ್ತ್ರ ಪುರಾಣ ಭಗವದ್ಗೀತೆ ಬೈಬಲ್ ಖುರಾನ್‌ಗಳಿಂದ ಕಂಡುಕೊಳ್ಳಲು ಸಾಧ್ಯವಾಗದ ಮಾತು. ಏಕೆಂದರೆ? ಈ ಗ್ರಂಥಗಳೆಲ್ಲಾ ಆತನಿಂದಲೇ ಹುಟ್ಟಿವೆ. ಆತನನ್ನು ಹೀಗೆ ಎಂದು ಹೇಳಲು ಅವುಗಳಿಗೆ ಸಾಧ್ಯವಾಗುವುದಿಲ್ಲ.

ಯೋಗಕ್ಕೆ ಸಿದ್ಧವದು, ಯೋಗಕ್ಕೆ ಮೂಲವದು, ಯೋಗಕ್ಕೆ ಅತ್ಯಂತ ಪ್ರಥಮ ಸೀಮೆ:

ಯೋಗ ಎಂದರೆ ಕೈ ಕಾಲು ಮಣಿಸುವುದಲ್ಲ. ಹಾಗೆ ಮಾಡುವುದರಿಂದ ಕಾಯ ಬಲಿಯಬಹುದೆ ಹೊರತು ಕಾಯದಲ್ಲಿದ್ದ ಪರಮಾತ್ಮ ಒಲಿಯುವುದಿಲ್ಲ. ಯೋಗವೆಂದರೆ ಕೂಡುವುದು. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಪರಮಾತ್ಮನಲ್ಲಿ ಶರಣು ಹೋಗಿ ಆ ಪರಮಾತ್ಮನಲ್ಲಿ ಕೂಡುವುದು. ನದಿ-ನದಿ ಬೆರೆತು ನದಿಯ ಹೆಸರು ಕಳೆದುಕೊಂಡಂತೆ.

ಅಂಗ ಎರಡಕ್ಷರಗಳಿಂದ ಕೂಡಿದೆ. ಮನವು ಎರಡಕ್ಷರಗಳಿಂದ ಕೂಡಿದೆ. ಅಂಗದಲ್ಲಿ ಸಂಗಮವಾದ ಗುರು ಕೂಡಾ ಎರಡಕ್ಷರಗಳಿಂದಾದಾತ. ಅಂಗ, ಲಿಂಗ, ಮನ ತ್ರಿಕೂಟ ಸಂಗಮವಾಗಿ ಮೂದೇವಕೊಡೆಯ ಕಪಿಲಸಿದ್ಧ ಮಲ್ಲಿಕಾರ್ಜುನನೆ ತಾನಾಗುವುದು; ಬೇಧಿಸಲು ಬಾರದ ಪರಮಾತ್ಮನನ್ನು ಕೂಡಿದ ಮನ ಘನಮನವಾಗುವುದು.

**1069**

**ಸಾಗರ ಸತ್ಯವ್ವೆ, ಹಲಬರ ಮುಖ ಪ್ರಭಾಳೆ, ನೀ ಬಾರವ್ವಾ,**
**ಕಂಗಳ ಕೋಮಳೆ ಕಿವಿಗಳ ಸಂಬಂಧಿಯೆ, ನೀ ಬಾರವ್ವಾ.**
**ಆತನ ಕಂಗಳ, ಕಿವಿಗಳ ಪರಿಯಾಣಕ್ಕೆ**
**ಚೊಕ್ಕ ಸರದೋಗರನೆತ್ತುವೆ, ನೀ ಬಾರವ್ವಾ**
**ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಂಗೆ.**

ಹಳ್ಳ ನದಿಯಲ್ಲಿ ಕೂಡಿ, ನದಿ ಸಾಗರದಲ್ಲಿ ಕೂಡಿ ಸಾಗರವೇ ಆಗಿದೆ. ನದಿ ಸಾಗರವನ್ನು ನಿರ್ಮಾಣ ಮಾಡಲಿಲ್ಲ. ಹಳ್ಳ ನದಿಯನ್ನು ನಿರ್ಮಾಣ ಮಾಡಲಿಲ್ಲ. ಬದಲಾಗಿ ಸಾಗರವೇ ಹಳ್ಳಕ್ಕೆ ಹರಿದು ಬಂದು ಹಳ್ಳವಾಗಿದೆ. ಸಾಗರವೇ ನದಿಗೆ ಹರಿದು ಬಂದು ನದಿಯಾಗಿದೆ.

ಸಾಗರದ ಜಲ ಆವಿಯಾಗಿ ಮೋಡವಾಗಿ ಧರೆಗೆ ಉರುಳಿ ಹಳ್ಳ ನದಿಯಾಗಿ ಸಾಗರದತ್ತ ಚಲಿಸಿ ಸಾಗರವೇ ಆಗಿದೆ. ಹೀಗಾಗಿ ಸಾಗರ ಎನ್ನುವಾಕೆಯೆ ಸತ್ಯವ್ವೆ. ಆಕೆ ಎಲ್ಲರಿಗೂ ಅವ್ವೆ.

ಜಲಬಿಂದುವೇ ಜೀವ ಜಲಬಿಂದುವಾಗಿ, ಗರ್ಭಹೊಕ್ಕು, ಕಂಗಳ ಕೋಮಲೆಯಾಗಿ, ಕಿವಿಗಳ ಸಂಬಂಧಿಯಾಗಿ, ಗಂಗವ್ವೆಯಾಗಿ ಗಂಗಾಧರನನ್ನು ಧಾರಣೆ ಮಾಡಿಕೊಂಡಿದ್ದಾಳೆ. ಗಂಗಾಧರನೇ ತಾನಾಗಿ ಆತನ ಜಟೆಯಲ್ಲಿ ಕುಳಿತು ಗಂಗೆ ಎನಿಸಿಕೊಂಡಿದ್ದಾಳೆ.

ಪರಮಾತ್ಮನ ಹಣೆಗಣ್ಣಾಗಿ ಕಿವಿಗಳ ಪರಿಯಾಣಕ್ಕೆ ಚೊಕ್ಕ ನಿಶ್ಯಬ್ಧದ ಓಗರವನಿತ್ತು ಅವ್ವೆಯಾಗಿದ್ದಾಳೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಮಡದಿಯಾಗಿ ಅರ್ಧನಾರೀಶ್ವರಿ ಎಂದು ಕರೆಯಿಸಿಕೊಂಡಿದ್ದಾಳೆ ಸಾಗರದ ಸತ್ಯವ್ವೆ!

**1070**

**ಸಾದಾಖ್ಯ ದೇಹದಲಿ ಆದ್ಯಂತ ಶೂನ್ಯದಲಿ**
**ಆಮೋದದಕ್ಷರವು ಕಂಗಳಾಗಿ**
**ಆನಂದ ರೂಪು ಕಪಿಲಸಿದ್ಧ ಮಲ್ಲಿಕಾರ್ಜುನನ**
**ನೇಮಾಕ್ಷರದ ರೂಪಕಳೆಯ ಪೇಳುವೆನಯ್ಯಾ.**

ಸಹಜವಾದ ದೇಹ! ಅದರ ಒಡೆಯ ಕೂಡಾ ಸಹಜವಾದಾತ! ಒಡಲೊಡೆಯನೊಂದಿಗೆ ಕೂಡಬೇಕಾದ ಒಡಲ ಒಡತಿ ಕೂಡಾ ಸಹಜವಾದಾಕೆ! ಆದರೆ ಒಡಲೊಡೆಯನೊಂದಿಗೆ ಸಂಗ ಮಾಡಬೇಕಾದ ಒಡತಿ, ಒಡಲಿನೊಂದಿಗೆ ಸಂಗ ಮಾಡಿದ್ದಾಳೆ. ಒಡಲೇ ತನ್ನ ಸರ್ವಸ್ವ ಎಂದು ತಿಳಿದುಕೊಂಡು ಒಡಲೊಡೆಯನನ್ನೇ ಮರೆತಿದ್ದಾಳೆ! ಹೀಗಾಗಿ ಸಹಜವಾಗಿಯೇ ಜ್ಞಾನದ ಮರದಂತೆ ಇರಬೇಕಾದ ಬೋಧೀವೃಕ್ಷ, ಅಸಹಜ ಒಡಲಾಗಿ ಒಡಲುಗಳಿಂದಲೇ ಸಾತ್ವಿಕ ರಾಜಸ ತಾಮಸ ಎಂದು ಕರೆಯಿಸಿಕೊಂಡಿದೆ. ಒಡಲು, ಸಹಜ ಒಡಲಿನಿಂದ ಬಹುದೂರ ಪಯಣಿಸಿದೆ.

ಒಡಲೇ, ಒಡಲಿನಿಂದ ಕಲಿಯಬೇಕಾದ ದುರ್ದೈವ, ಒಡಲನ್ನು ಆವರಿಸಿದೆ. ಪ್ರಪಂಚದಲ್ಲಿರುವ ಏಳುನೂರಾ ಮೂವತ್ತು ಕೋಟಿ ಒಡಲುಗಳೆಲ್ಲ ಸಹಜ. ಮತ್ತು ಪರಿಪೂರ್ಣ ಒಡಲುಗಳೇ ಆಗಿವೆ. ಹೀಗಿದ್ದೂ ಒಡಲು ಒಡಲಿಗೆ ತಂದೆ ತಾಯಿಯಾಗಿ ಬೋಧಿಸುತ್ತಲಿದೆ! ಗುರುವಾಗಿ ಬೋಧಿಸುತ್ತಲಿದೆ!

ಒಡಲು ಪರಿಪೂರ್ಣ ಒಡಲಾಗಿದ್ದರೂ, ಒಡಲನ್ನೇ ಗುರುವನ್ನಾಗಿಸಿಕೊಂಡು, ಒಡಲಿಗೆ ಒಡಲೇ ಶಿಷ್ಯನಾಗಿ, ಬೋಧೆ ಆಲಿಸುತ್ತಲಿದೆ. ಆಲಿಸಿದ ಬೋಧೆಯೆಲ್ಲ ಅರಿವಿಗೆ ಬಂದರೂ ತನ್ನಲ್ಲಿಯೂ ಆ ಶಕ್ತಿ ಇದೆ ಎನ್ನುವ ನೆನಪು ಒಡಲಿಗೆ ಬಾರದ ಕಾರಣ, ಅಜ್ಞಾನದ ಸುಖ ಮತ್ತು ದುಃಖದಲ್ಲಿ ಕೂಡಲೇ ಒಡಲು ಮೈಮರೆಯುತ್ತದೆ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇವುಗಳಲ್ಲಿ ಓಡಾಡುವ ಮನ, ಇವುಗಳಲ್ಲಿ ವಾಸ ಮಾಡಿದ ಅರಿವು, ಭಾವ, ಅಂತಃಕರಣ ಸಕಲ ಒಡಲುಗಳಲ್ಲಿ ಒಂದೇ ಆಗಿದೆ. ಒಡಲನ್ನು ಹೊದ್ದುಕೊಂಡ ಚರ್ಮ, ಒಡಲಲ್ಲಿ ಹರಿಯುವ ರಕ್ತ, ಮಜ್ಜೆ ಕೂಡಾ ಒಂದೇ ಆಗಿದೆ. ಮಾಂಸ ಮೂಳೆ ಮೇದಸ್ಸು ಕೂಡಾ ಒಂದೇ ಆಗಿದೆ. ಸೇವಿಸುವ ಗಾಳಿ ನೀರು ಆಹಾರ ಕೂಡಾ ಒಂದೇ ಆಗಿದೆ.

ಒಡಲನ್ನು ಆವರಿಸಿದ ಮನ, ಒಡಲ ಸಂಗ ಮಾಡದೆ, ಒಡಲೊಡೆಯನಾದ ಅಕ್ಷರೋತ್ತಮನ

ಸಂಗ ಮಾಡಿದರೆ ಸಾಕು, ಮನ ಒಡಲ ಒಡತಿಯಾಗುತ್ತಾಳೆ! ಒಡಲೊಡೆಯ ಒಡಲೊಡತಿ ಇಬ್ಬರೂ ಒಡಲನ್ನೇ ಮನೆಯನ್ನಾಗಿಸಿಕೊಂಡು; ಪರಮ ಸುಖದಿಂದ ಒಡಲಲ್ಲಿ ವಾಸ ಮಾಡುತ್ತಾರೆ!

ಘನದೊಂದಿಗೆ ವಾಸ ಮಾಡಲು, ಮನ ಮನಸ್ಸು ಮಾಡಬೇಕು. ಇದು ನಿಯಮ! ಮನ ಈ ನಿಯಮವನ್ನು ಪಾಲಿಸಲೇಬೇಕು. ಇಡೀ ವಿಶ್ವವೇ ಕಪಿಲಸಿದ್ಧ ಮಲ್ಲಿಕಾರ್ಜುನನು ವಾಸ ಮಾಡಿದ ಮಹಾದಾನಂದದ ತೋಟವಾಗಿ ಮಾರ್ಪಡುತ್ತದೆ. ಒಡಲ ಗುಣಗಳೆಲ್ಲ ಅಳಿದು ಒಡಲು ನಿರ್ಗುಣಿಯಾಗುತ್ತದೆ. ನಿರ್ಭಾವಿಯಾಗುತ್ತದೆ. ಆಕಾರದಲ್ಲಿದ್ದರೂ ನಿರಾಕಾರಿಯಾಗುತ್ತದೆ. ನರಹಂಕಾರಿಯಾಗುತ್ತದೆ. ಸಕಲ ರಂಜನೆಗಳನ್ನು ಕಳೆದುಕೊಂಡು ನಿರಂಜನನಾಗುತ್ತದೆ.

**1071**

**ಸಾದಾಖ್ಯ ದೇಹದಲಿ ಭೇದಿಸೇನೆಂದೆಂಬೆ**
**ಆದಿ ಅಕ್ಷರದ್ವಯದ ಪರಿಯಿಂತುಟು.**
**ಮೋದವಾಮೋದದಲಿ ಆನಂದದತಿಶಯದ ಸಂಗವಿಂತು,**
**ನಾದಬಿಂದುಕಳಾತೀತ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಭೇದ ಭೇದಿಗೆ ಅಲ್ಲದೆ ವೇದ್ಯವಲ್ಲ.**

ತನು ಮನ ಘನ ಎಂಬ ಎರಡಕ್ಷರಗಳ ಘನವನ್ನು ತನು, ಮನದಿಂದಲೇ ಅರಿಯಬೇಕು. ಎರಡಕ್ಷರದ ಮನ, ಎರಡಕ್ಷರದ ತನುವಿನಲ್ಲಿಯೇ ತನ್ಮಯವಾದ, ಎರಡಕ್ಷರದ ಘನವನ್ನು ಅರಿಯಬೇಕು. ಅರಿತರಿತು ಅರಿಯುವ ಅರಿವೇ ತಾನಾಗಬೇಕು. ಇದು ಆನಂದದ ಪರಮಾನಂದದ ಸಂಗ, ತ್ರಿಕೂಟ ಸಂಗಮದ ಸಂಗ.

ಮನ ತನುವಿನೊಂದಿಗೆ ಸಂಗ ಮಾಡಿ, ನಾದ ಬಿಂದು ಕಲೆಗೆ ಮರುಳಾಗಿದೆ. ವಿಜ್ಞಾನಿಯ ಪಟ್ಟ ಅಲಂಕರಿಸುವ ಪ್ರಯತ್ನದಲ್ಲಿ ಸಫಲವಾಗುತ್ತಿದೆಯೇ ಹೊರತು ಜ್ಞಾನಿಯಾಗುವ ಪ್ರಯತ್ನ ಮನಕ್ಕೆ ಎಳ್ಳನಿತೂ ಇಲ್ಲವಾಗಿದೆ.

ರಾಜ ಪ್ರಧಾನಿ ಕಲಾವಿದ ಶಾಸಕ ಸಚಿವ ವಿಜ್ಞಾನಿ ಅಧಿಕಾರಿ ಹಲವಾರು ಪದವಿಗಳಿಗೆ ಮರುಳುಗೊಂಡ ಮನ, ಅವುಗಳನ್ನು ಹೊಂದಿ, ಸುಖ ದುಃಖಗಳನ್ನು ಅನುಭವಿಸುತ್ತದೆಯೇ ಹೊರತು ಪರಮ ಸುಖದ ಆಸೆ ಮನಕ್ಕೆ ಇಲ್ಲ.

ಪರಮಸುಖವನ್ನು ಮನ, ತನುವಿನಲ್ಲಿಯೇ ಹುಡುಕಿ ಪಡೆಯಬೇಕು. ತನುವನ್ನು ಭೇದಿಸಿಯೇ ಪಡೆಯಬೇಕು. ತನುವಿನಲ್ಲಿಯೇ ಅರಿವು ತನ್ಮಯವಾಗಿದೆ. ತನುವಿನಿಂದಲೇ ನಾದ ಹೊರಬಂದಿದೆ. ತನುವಿನಿಂದಲೇ ಸಕಲ ಕಲೆಗಳು ಹೊರಬಂದಿವೆ. ತನುವಿನಿಂದಲೇ ಬಿಂದು ಹೊರಬಂದಿದೆ.

ತನುವಿಗೆ ತನುವಿನಿಂದಲೇ ಸುಖವಾಗಿದೆ. ತನುವಿಗೆ ತನುವಿನಿಂದಲೇ ದುಃಖವಾಗಿದೆ. ಸುಖದುಃಖಗಳೆರಡೂ ದುಃಖಗಳೇ ಎಂದು ಮನಕ್ಕೆ ಗೊತ್ತಾಗುತ್ತಿಲ್ಲ. ಮನ ತನುವಿನಲ್ಲಿಯೇ ತನುವನ್ನು ಭೇದಿಸಿ ಪರಮಸುಖವನ್ನು ಹುಡುಕಬೇಕು.

ಅರಿವು ಎನ್ನುವುದು ಪುಸ್ತಕಗಳಲ್ಲಿಲ್ಲ! ಪುಸ್ತಕಗಳಲ್ಲಿದ್ದ ಅರಿವು ತನುವಿನಿಂದಲೇ ಬಂದದ್ದು! ಪುಸ್ತಕದಲ್ಲಿದ್ದ ಅರಿವು ಮನಕ್ಕೆ ಇಷ್ಟವಾಗಿ ತನುವಿನೊಂದಿಗೆ ಓದಿ ಪುನಃ ತನುವಿನಲ್ಲಿಟ್ಟುಕೊಂಡರೆ ತನುವಾದರೂ ಏನು ಮಾಡೀತು?

ತನುವಿನಲ್ಲಿ ತನ್ಮಯವಾದ ಘನ, ಮನದ ಈ ಕೆಲಸಕ್ಕೆ ಆಸ್ಪದ ಕೊಡುವುದಿಲ್ಲ. ತನುವಿಗೆ

ಪ್ರತಿಭಟಿಸುವ ಶಕ್ತಿ ಇಲ್ಲ.

ಹೀಗಾಗಿ ಮನದ ಅಜ್ಞಾನದ ಕೆಲಸ ತನು ಇರುವವರೆಗೆ ಮುಂದೆ ಸಾಗುತ್ತದೆ. ''ಓದಿ ಕೆಟ್ಟ ಕೂಚು ಭಟ್ಟ'' ಎನ್ನುವ ನಾಣ್ಣುಡಿ ವಿಶ್ವಕ್ಕೆ ಅರ್ಥವಾಗುತ್ತಿಲ್ಲ. ''ಸತ್ತವರು ಬರೆದ ಪತ್ರಗಳನ್ನು ಓದಿದಡೆ ಎತ್ತಣ ಮುಕ್ತಿ ಗುಹೇಶ್ವರಾ'' ಎನ್ನುವ ಅಲ್ಲಮಪ್ರಭುಗಳ ಸೂತ್ರವೂ ವಿಶ್ವವಿದ್ಯಾಲಯಗಳಿಗೆ ಅರ್ಥವಾಗುತ್ತಿಲ್ಲ.

ಇದು ತನು ತನುವಿಗೆ ಹೇಳುವ ಬೋಧೆಯಲ್ಲ. ಮನ ತನುವಿನಲ್ಲಿಯೇ ಶೋಧನೆ ಮಾಡುವ ಕಲೆಯ ಚಾಕಚಕ್ಯತೆಯನ್ನು ಅರಿಯಬೇಕು. ಮನ ತನುವಿನಲ್ಲಿ ತನ್ಮಯವಾದ ಅರಿವನ್ನು ಭೇದ ಮಾಡಿ ಬಹುದೂರ ಪಯಣಿಸಿದೆ.

ದಣಿಯದೆ ಪಯಣಿಸುತ್ತಲೇ ಇದೆ. ಭೇದ ಬುದ್ಧಿಯ ಮನ ತನುವಿನಲ್ಲಿಯೇ ಭೇದಿಸಿ ಘನವನ್ನು ಹುಡುಕಬೇಕು. ಆ ಘನದಲ್ಲಿ ಸಂಗಮವಾಗಿ ಘನಮನವಾಗಬೇಕು. ಭೇದ ಭೇದಿಗೆ ಅಲ್ಲದೆ ವೇದ್ಯವಲ್ಲ.

**1072**

**ಸಾರಗ್ರಾಹಿಗಳಿಬ್ಬರು ಕೇಳಿರಯ್ಯಾ.**
**ಕೊಡನೆಂಬನ ಬಳಿಬಳಿಯಲ್ಲಿ**
**ಕೊಟ್ಟಾರ ಬರುತ್ತಿಪ್ಪುದೇಕೆಯಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾಥಯ್ಯಾ, ಕಟ್ಟಿತ ಕಳೆಯಲಾರದೆ**
**ಇಟ್ಟುದನೋಸರಿಸಲಾರದೆ ಬಪ್ಪರಯ್ಯಾ.**

ರಕ್ಷಣೆ ಮಾಡುವವನನ್ನು ವಿಷ್ಣು ಎಂದು ಕರೆಯುವರು. ಸೃಷ್ಟಿಕರ್ತನನ್ನು ಬ್ರಹ್ಮ ಎಂದು ಕರೆಯುವರು. ಇವರಿಬ್ಬರು ಸಾರಗ್ರಾಹಿಗಳು. ಇವರಿಗೆ ಗೊತ್ತಿಲ್ಲದೇ ಇರುವುದು ಏನೂ ಇಲ್ಲ.

ತನುವನ್ನು ವಿಷ್ಣು ಎಂದು ಕರೆದರೆ ಮನವನ್ನು ಬ್ರಹ್ಮ ಎಂದು ಕರೆಯುವರು. ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ಮಹೇಶ್ವರ ಎಂದು ಕರೆಯುವರು.

ತನುವನ್ನು ಆವರಿಸಿದ ಮನಕ್ಕೆ ತಾನು ಬ್ರಹ್ಮ ಎನ್ನುವ ಪರಿಚಯವಿಲ್ಲ. ತನುವಿಗೆ ತಾನು ವಿಷ್ಣು ಜಗದ್ ರಕ್ಷಕ ಎನ್ನುವ ಪರಿಚಯವಿಲ್ಲ. ತನುವಿನಲ್ಲಿ ಮಹೇಶ್ವರ ತನ್ಮವಾಗಿದ್ದರೂ, ಮಹೇಶ್ವರನ ಪರಿಚಯ ಮನಕ್ಕೂ ಇಲ್ಲ; ತನುವಿಗೂ ಇಲ್ಲ.

ಮಹೇಶ್ವರ ಎನ್ನುವ ಮಹಾಜ್ಞಾನಿ ತನುವಿನಲ್ಲಿಯೇ ತನ್ಮಯವಾಗಿದ್ದರೂ ಆತ ತನುವಿನ ಬಳಿ ಬಳಿಯಿದ್ದರೂ ತನುವಿಗೆ ಆತನ ಪರಿಚಯವಿಲ್ಲ. ಆದರೂ ತನು ವಿಷ್ಣು! ವಿಷ್ಣು ಎಂಬುವವನು ಯಾರೆಂದು ಜಗದಲ್ಲಿರುವ ತನುಗಳಿಗೂ ಪರಿಚಯವಿಲ್ಲ. ಆದರೂ ವಿಷ್ಣುವನ್ನು ಇಡೀ ಜಗತ್ತು ಆರಾಧಿಸುತ್ತಲಿದೆ.

ನಾರಾಯಣನೆಂದು, ಶ್ರೀಕೃಷ್ಣನೆಂದು, ಕಲಿಯುಗದ ವೆಂಕಟೇಶನೆಂದು, ವಾಮನನೆಂದು, ವರಾಹಾ ಅವತಾರಿಯೆಂದು, ಉಗ್ರನರಸಿಂಹನೆಂದು ಇಡೀ ಜಗದ ಜನ ಆರಾಧಿಸುತ್ತಿದ್ದಾರೆ. ಆರಾಧಿ ಸುವವರಿಗೂ ಗೊತ್ತಿಲ್ಲ ಅವನು ನಾನೇ ಎಂದು! ಆತನ ಬಳಿಬಳಿಯಿದ್ದ ಮಾಹೇಶ್ವರನ ಪರಿಚಯ ಮನಕ್ಕೆ ಆಗದಿದ್ದರೆ ಮನ ತಾನು ಬ್ರಹ್ಮನೆಂಬ ಅರಿವು ಕೂಡಾ ಮರೆವು ಆಗಿರುತ್ತದೆ!

ಮಾಹೇಶ್ವರ ಬಹುದೂರ ಇಲ್ಲ. ಈತನ ದರುಶನ ತನುವಿಗೆ ಆಗದಿದ್ದರೆ ಹೇಗೆ? ತನುವನ್ನು ಆವರಿಸಿದ ಮನಕ್ಕೆ ಆಗದಿದ್ದರೆ ಹೇಗೆ? ಇದು ತನು ಮತ್ತು ಮನದ ದುರ್ದೈವ. ಬಳಿಬಳಿಯಲ್ಲಿಯೇ ಇದ್ದ ಮಾಹೇಶ್ವರನ ದರುಶನ ವಿಷ್ಣುವಿಗೂ ಆಗುತ್ತಿಲ್ಲ; ಬ್ರಹ್ಮನಿಗೂ ಆಗುತ್ತಿಲ್ಲ.

ಬ್ರಹ್ಮ ಮತ್ತು ವಿಷ್ಣು ಇವರಿಬ್ಬರೂ ಮಾಹೇಶ್ವರನನ್ನು ನೋಡಲೇಬೇಕೆಂಬ ಹಟದಿಂದ:

ಬ್ರಹ್ಮ, ನಾನು ಮಾಹೇಶ್ವರನ ಶ್ರೀಮುಕುಟದ ಕಡೆಗೆ ಹೋಗುವೆ, ಆತನ ಶ್ರೀಮುಕುಟದ ದರುಶನ ಮಾಡಿಕೊಳ್ಳುವೆ ಎಂದ. ಹಾಗಾದರೆ ನಾನು ಮಾಹೇಶ್ವರನ ಶ್ರೀಪಾದ ದರುಶನ ಮಾಡಿಕೊಳ್ಳುವೆ ಎಂದ ವಿಷ್ಣು.

ಬ್ರಹ್ಮ ಈಶ್ವರನ ಶ್ರೀಮುಕುಟ ದರುಶನಕ್ಕಾಗಿ ಆಕಾಶಕ್ಕೆ ಹಾರಿದ! ವಿಷ್ಣು ಈಶ್ವರನ ಶ್ರೀಪಾದದ ದರುಶನಕ್ಕಾಗಿ ಪಾತಾಳಕ್ಕೆ ಜಿಗಿದ! ಬ್ರಹ್ಮನಿಗೆ ಈಶ್ವರನ ದರುಶನವಾಗಲೇ ಇಲ್ಲ. ಆಕಾಶ ಕಾಯಗಳಲ್ಲಿ ಬೆಳೆದ ಕೇದಿಗೆಯನ್ನು ತರೆದು ಕೆಳಗೆ ಜಿಗಿದ. ಸಕಲ ದೇವತೆಗಳಿಗೂ ಆ ಕೇದಿಗೆಯ ತೋರಿ ಇದು ಈಶ್ವರನ ಜಡೆ, ನನಗೆ ಈಶ್ವರನ ದರುಶನವಾಯಿತು ಎಂದು ಸುಳ್ಳು ಹೇಳಿದ. ಕೂಡಲೇ ಬ್ರಹ್ಮನ ತಲೆಯೊಂದು ನೆಲಕ್ಕೆ ಉರುಳಿತು! ಬ್ರಹ್ಮ ಸುಳ್ಳು ಹೇಳಿದ! ಕಾರಣ ಆತ ತನ್ನ ತಲೆ ಕಳೆದುಕೊಳ್ಳಬೇಕಾಯಿತು!

ವಿಷ್ಣುವಿಗೂ ಈಶ್ವರನ ಶ್ರೀಪಾದದ ದರುಶನವಾಗಲಿಲ್ಲ! ಹಾಗೆಯೇ ಮರಳಿ ಬಂದು, ನನಗೆ ದರುಶನ ಸಾಧ್ಯವಾಗಲಿಲ್ಲವೆಂದು ಹೇಳಿದ. ಇದು ಕಾಯದಲ್ಲಿಯೇ ನಡೆದ ಕತೆ! ಕಾಯಗಳಿಗೆ ಕತೆಯಾಗಿಯೇ ಕಾಯಗಳಲ್ಲಿಯೇ ಉಳಿದಿದೆ.

ಮಾಹೇಶ್ವರ ತನುವಿನಲ್ಲಿ ತನ್ಮಯವಾಗಿದ್ದರೂ ಆತ ಜಗದಗಲ, ಮುಗಿಲಗಲ, ಮಿಗೆಯಗಲ, ಎಮ್ಮಗಲ. ಪಾತಾಳದಿಂದಲೂ ಅತ್ತತ್ತ ಆತನ ಶ್ರೀಪಾದ. ಬ್ರಹ್ಮಾಂಡದಿಂದಲೂ ಅತ್ತತ್ತ ಆತನ ಶ್ರೀಮುಕುಟ. ಯಾರ ಗಮನಕ್ಕೂ ಬಾರದ ಅಗಮ್ಯನು ಆತ. ಯಾರ ಪ್ರಮಾಣಕ್ಕೂ ನಿಲುಕದ ಅಪ್ರಮಾಣನು ಆತ. ಅಪ್ರತಿಮನು ಆತ. ಕಾಯದಲ್ಲಿಯೇ ಬಂದು ಚುಳುಕಾಗಿದ್ದಾನೆ ಕಾಯಗಳಿಗೆ ದೊರಕದಂತೆ!

ಮಹಾಮಹಿಮರಿಬ್ಬರೂ ಈಶ್ವರನನ್ನು ಬ್ರಹ್ಮಾಂಡದಲ್ಲಿ, ಪಾತಾಳದಲ್ಲಿ ಹುಡುಕಿದರು. ಅವರಿಗೆ ಈಶ್ವರನ ದರುಶನವಾಗಲಿಲ್ಲ. ಹುಡುಕುವ ಕಾಯದಲ್ಲಿಯೇ ಆತನಿದ್ದಾನೆಂದು ಕಾಯದ ಅವತಾರ ತಾಳಿದ ವಿಷ್ಣುವಿಗೆ ಗೊತ್ತಾಗಲಿಲ್ಲ. ಮನದ ಅವತಾರ ತಾಳಿದ ಬ್ರಹ್ಮನಿಗೂ ಗೊತ್ತಾಗಲಿಲ್ಲ. ಬಳಿಬಳಿಯೇ ಇದ್ದ ಕಾಯ ಮತ್ತು ಮನಗಳೆರಡೂ ಸೇರಿ ಈಶ್ವರನಿಗಾಗಿ ಮಸೀದೆಗೆ ಹೋಗಿ ಐದುಬಾರಿ ನಮಾಜು ಮಾಡುತ್ತಲಿವೆ. ಚರ್ಚ್‌ಗೆ ಹೋಗಿ ಪ್ರಾರ್ಥಿಸುತ್ತಲಿವೆ. ಕಾಶಿ, ಶ್ರೀಶೈಲ, ತಿರುಪತಿ, ಜ್ಯೋತಿರ್ಲಿಂಗಗಳ ದರುಶನ ಮಾಡುತ್ತಾ ಪ್ರಾರ್ಥಿಸುತ್ತಲಿವೆ.

ಈಶ್ವರನಿಗಾಗಿ ಭವ್ಯವಾದ ಆಲಯಗಳನ್ನು ನಿರ್ಮಾಣ ಮಾಡಿ ಆರಾಧಿಸುತ್ತಲಿವೆ. ಮಸೀದೆ ಚರ್ಚ್‌ಗಳನ್ನು ನಿರ್ಮಾಣ ಮಾಡಿ ಪ್ರಾರ್ಥಿಸುತ್ತಲಿವೆ. ಕಾಯ ಮತ್ತು ಮನಗಳೆರಡು ಈಶ್ವರನಿಗಾಗಿ ಮುಸಲ್ಮಾನ ಆಗಿವೆ; ಕ್ರೈಸ್ತ ಆಗಿವೆ, ಜೈನ, ಬೌದ್ಧ, ಪಾರ್ಸಿ ಆಗಿವೆ. ಏನೇನೋ ಆಗಿವೆ. ಈಶ್ವರನಿಗಾಗಿ ಜಪತಪ ಪ್ರಾರ್ಥನೆ ಸಮಾಧಿ ಯೋಗ ನಮಾಜು ಏನೆಲ್ಲ ಮಾಡಿದರೂ ಇವರಿಬ್ಬರು ಬಳಿಬಳಿಯಲ್ಲಿಯೇ ಇದ್ದ ಈಶ್ವರನನ್ನು ಹುಡುಕಿ ಆತನ ದರುಶನ ಮಾಡಲು ತನು ಮತ್ತು ಮನಕ್ಕೆ ಸಾಧ್ಯವಾಗುತ್ತಿಲ್ಲ.

ಕೊಂಕುಳದಲ್ಲಿ ಹೊತ್ತುಕೊಂಡ ಜ್ಞಾನದ ಕೂಸನ್ನು ಮಸೀದೆಯಲ್ಲಿ ಹುಡುಕಿದರೆ ಸಿಗಲು ಸಾಧ್ಯವೆ? ಚರ್ಚ್, ಆಲಯಗಳಲ್ಲಿ ಹುಡುಕಿದರೆ ಸಿಗಲು ಸಾಧ್ಯವೆ? ಅಂಗದ ಮೇಲೆ ಲಿಂಗಧರಿಸಿ, ಕೊರಳಲ್ಲಿ ಸಿಲುಬೆಕಟ್ಟಿಕೊಂಡು ಪ್ರಾರ್ಥಿಸಿ, ಪೂಜಿಸಿದರೆ ಅರಿವಿನ ದೇವರು ಸಿಗಲು ಸಾಧ್ಯವೆ? ಮನ ಮತ್ತು ಕಾಯ ಯೋಚಿಸಲೇಬೇಕಾಗಿದೆ.

**1073**

**ಸಾರಥಿಯ ಮುಳ್ಳು ಕೊನೆಯಲ್ಲಿ ಸಾಗರವಡಗುವುದೆಂತಯ್ಯ?**
**ಬಾವಿಗೆ ಸೊಲ್ಲಗೆಯೊಳಗೆ ಲೋಕವಡಗುವುದೆಂತಯ್ಯ?**

**ಈ ಪರಿಗಳ ಈ ಭಕ್ತರ ಹೃದಯದಲ್ಲಿಪ್ಪ**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ತನು ಎಂದರೆ ಸಾಮಾನ್ಯವಲ್ಲ. ಸಾಗರ ಆವಿಯಾಗಿ ಬಿಂದುವಾಗಿ ನೆಲಕ್ಕೆ ಉರುಳಿ ಮತ್ತೆ ಸಾಗರವಾದಂತೆ! ಸಾಗರವೇ ಆವಿಯಾಗಿ, ಬಿಂದುವಾಗಿ, ತನುವಿನಲ್ಲಿ ಸಂಗಮವಾಗಿ, ಜ್ಞಾನ ಮಹಾಸಾಗರವೇ ಆಗಿದೆ. ಜ್ಞಾನದ ರಥವಾಗಿದೆ. ಇದನ್ನು ನಡೆಸುವ ರಥಿಕನು ಸಾರಥಿಯಾಗಿ ರಥದಲ್ಲಿಯೇ ಬಚ್ಚಿಟ್ಟುಕೊಂಡಿದ್ದಾನೆ.

ಕುರುಕ್ಷೇತ್ರ ಯುದ್ಧದಲ್ಲಿ ಶ್ರೀಕೃಷ್ಣ ರಥ ಓಡಿಸಿದ! ಹೀಗಾಗಿ ಅರ್ಜುನ ಯುದ್ಧ ಗೆದ್ದ! ಹದಿನೆಂಟು ಅಕ್ಷೋಹಿಣಿ ಸೈನ್ಯ ಸಾಗರದಲ್ಲಿ ಅಡಗಿದವು. ಅವು ಸಾಗರದಿಂದಲೇ ಬಂದಿದ್ದವು!

ರಥವನ್ನು ಶ್ರೀಕೃಷ್ಣ ಓಡಿಸಿದರೆ ಅದು ಧರ್ಮಯುದ್ಧ; ಧರ್ಮಕ್ಷೇತ್ರ! ಅರ್ಜುನ ರಥ ಓಡಿಸಿದರೆ ಅದು ಕುರುಕ್ಷೇತ್ರ. ಯುದ್ಧ ಗೆಲ್ಲಲು ಆಗುವುದಿಲ್ಲ.

ಪ್ರತಿ ಒಡಲ ಮೊನೆಯ ಮೇಲೆ ಒಡಲೊಡೆಯ ಪವಡಿಸಿದ್ದಾನೆ. ಒಡಲನ್ನು ಆವರಿಸಿದ ಮನ ಒಡಲೊಡೆಯನನ್ನು ಅರಿತರಿತು ಮನದ ವಶದಲ್ಲಿದ್ದ ಒಡಲನ್ನು ಒಡಲೊಡೆಯನ ಕೈಗಿತ್ತು ಒಡೆಯನಿಗೆ ದಾಸಾನು ದಾಸಿಯಾಗಬೇಕು.

ಒಡಲೊಡೆಯ ಮನವನ್ನು ಮನದನ್ನೆಯನ್ನಾಗಿಸಿಕೊಳ್ಳುತ್ತಾನೆ! ಒಡಲೊಡತಿಯನ್ನಾಗಿಸಿಕೊಂಡು ಆಕೆಯನ್ನು ತನ್ನ ಹೃದಯದಲ್ಲಿ ಬಚ್ಚಿಟ್ಟುಕೊಳ್ಳುತ್ತಾನೆ.

ಒಡಲು, ತಾನು ಮಾಡಿದ ದೇವರಿಗೆ ಭಕ್ತನಾಗದೆ, ತನ್ನನ್ನು ತನ್ನ ಒಡಲನ್ನು ಮಾಡಿ ಆ ಒಡಲಿನಲ್ಲಿಯೇ ಪವಡಿಸಿದ ಒಡಲೊಡೆಯನೆಂಬ ಮಹಾಜ್ಞಾನಿಗೆ ಭಕ್ತಿ ಮಾಡಿದಾಗ ಅಂತಹ ಭಕ್ತನನ್ನು ಒಡಲ ಹೃದಯದಲ್ಲಿಟ್ಟುಕೊಳ್ಳುತ್ತಾನೆ. ತಾನೂ ಆ ಹೃದಯದಲ್ಲಿಯೇ ಇದ್ದು ಒಡಲನ್ನು ರಕ್ಷಿಸುತ್ತಾನೆ.

ಸಾವಿಲ್ಲದ ಕೇಡಿಲ್ಲದ ಒಡೆಯ, ಸಾವಿಲ್ಲದ ಕೇಡಿಲ್ಲದ ಒಡತಿಯೊಂದಿಗೆ ಒಡಲಲ್ಲಿಯೇ ಕೂಡಿ, ಕೂಡದ ಅಗಲದ ಕೂಟದ ಸುಖವನ್ನು ಅನುಭವಿಸುತ್ತಾರೆ.

**1074**

**ಸಾಲೋಕ್ಯದಲ್ಲಿಪ್ಪರು ಕೋಟ್ಯಾನುಕೋಟಿ;**
**ಸಾಮಿಪ್ಯದಲ್ಲಿಪ್ಪರು ಕೋಟ್ಯಾನುಕೋಟಿ;**
**ಸಾರೂಪ್ಯದಲ್ಲಿಪ್ಪರು ಕೋಟ್ಯಾನುಕೋಟಿ;**
**ಸಾಯುಜ್ಯದಲ್ಲಿಪ್ಪರು ಕೋಟ್ಯಾನುಕೋಟಿ;**
**ನಂದಿವಾಹನರನೇಕ, ಗೌರೀರಮಣರನೇಕ;**
**ಇಂತಪ್ಪ ಗಣಂಗಳ ರೋಮದಲ್ಲಿ ಅನೇಕ ಬ್ರಹ್ಮಾಂಡಗಳು.**
**ಇಂತಪ್ಪಗಣಂಗಳು-ವೀರಭದ್ರದೇವರ ಜೆಡೆಮುಡಿಕೇಶಂಗಳಲ್ಲಿ**
**ಅನಂತಗಣಂಗಳುದಯ ವಿಸ್ತಾರವು.**
**ಇದೇನು, ನಿಮ್ಮರವಿಗೆ ದುರ್ಲಭ ಮಹತ್ವವೆಂಬೆನೆ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವೇ ಕೈಲಾಸ. ಕೈಲಾಸದಲ್ಲಿ ಅರಿವು ಎಂಬ ಗುರುದೇವನು ಈಶ್ವರನಾಗಿ ಜಗದೀಶನಾಗಿ

ವಾಸಮಾಡುತ್ತಿದ್ದಾನೆ. ಇಂತಹ ಕಾಯವೆಂಬ ಕೈಲಾಸವನ್ನು ಮನವೆಂಬ ಕನ್ಯೆ ಆವರಿಸಿದ್ದಾಳೆ. ಈಕೆ ಈಶ್ವರನ ಮಡದಿ. ಈಶ್ವರನ ಲೋಕದಲ್ಲಿದ್ದರೂ ಈಶ್ವರನ ಮಡದಿಯಾಗಿದ್ದರೂ ಈಶ್ವರನೇ ತನ್ನ ಗಂಡ ಎನ್ನುವ ಪರಿಚಯ ಈಕೆಗಿಲ್ಲ. ಏಕೆಂದರೆ ಈಕೆ ಇನ್ನೂ ಕನ್ಯೆಯಾಗಿದ್ದಾಳೆ. ಕೋಟ್ಯಾನುಕೋಟಿ ಕಾಯಗಳ ಸ್ಥಿತಿಯೂ ಹೀಗೆ ಇದೆ. ಕಾಯವನ್ನು ಆವರಸಿದ ಮನವೆಂಬ ಕನ್ಯೆಯ ಸ್ಥಿತಿಯೂ ಹೀಗೆಯೇ ಇದೆ.

ಕಾಯವೆಂಬ ಕೈಲಾಸದಲ್ಲಿಯೇ ವಾಸ ಮಾಡುತ್ತಿದ್ದರೂ ಮನವೆಂಬ ಕನ್ಯೆಗೆ ಕೈಲಾಸದ ಪರಿಚಯವಿಲ್ಲ; ಅದರ ಒಡೆಯನೇ ತನ್ನ ಗಂಡ ಎನ್ನುವ ಪರಿಚಯವಿಲ್ಲದೆ ಕನ್ಯೆಯಾಗಿ ಮಕ್ಕಳಾಟದಲ್ಲಿ ಮಗ್ನಳಾಗಿದ್ದಾಳೆ.

ಕಾಯಕ್ಕೆ ವಯಸ್ಸಾದರೇನಂತೆ? ಮನವೆಂಬ ಮಡದಿ ಇನ್ನೂ ಕನ್ಯೆ! ಪ್ರೌಢತ್ವವಿಲ್ಲದ ಮಡದಿಯೊಂದಿಗೆ ಗಂಡ ಕೂಡಲು ಸಾಧ್ಯವೆ? ಶಿವನ ಸಾಮೀಪ್ಯದಲ್ಲಿ ಹೆಂಡತಿ ಇದ್ದರೂ ಆಕೆಯೊಂದಿಗೆ ಸರಸ ಸಲ್ಲಾಪ ಆಡಲಾರ. ಏಕೆಂದರೆ ಆಕೆ ಇನ್ನೂ ಕನ್ಯೆ. ಕೋಟ್ಯಾನುಕೋಟಿ ಕನ್ಯೆಯರ ಸ್ಥಿತಿಯೂ ಹೀಗೆ ಇದೆ. ಗಂಡನ ಪರಿಚಯ ಹೆಂಡಂದಿರಿಗೆ ಇಲ್ಲವಾಗಿದೆ.

ಕಾಯ ಒಂದೇ. ಅದು ಈಶ್ವರನ ಸುಕ್ಷೇತ್ರ! ಕಾಯಕ್ಕೆ ರೂಪವಿದೆ. ಈಶ್ವರನಿಗೆ ರೂಪವಿಲ್ಲ! ಈಶ್ವರನ ಮಡದಿ ಮನವೆಂಬ ಕನ್ಯಾಮಣಿಗೂ ರೂಪವಿಲ್ಲ! ಈಕೆ ಈಶ್ವರನ ಪಕ್ಕದಲ್ಲಿದ್ದರೂ, ಆತನಂತೆ ಈಕೆ ಕೂಡಾ ನಿರೂಪ ಹೊಂದಿದ್ದರೂ, ಗಂಡನ ಪರಿಚಯ ಹೆಂಡತಿಗೆ ಇಲ್ಲ. ಏಕೆಂದರೆ ಇನ್ನೂ ಈಕೆ ಬಾಲಕಿ!

ಸತಿ ಪತಿಗಳಿಬ್ಬರೂ ಒಂದೇ ಕಾಯದಲ್ಲಿ ಸಂಗಮವಾಗಿದ್ದರೂ, ಪತಿಗೆ ಶರಣು ಹೋಗಲು ಸತಿಗೆ ಸಾಧ್ಯವಾಗುತ್ತಿಲ್ಲ. ಏಕೆಂದರೆ ಸತಿ ಇನ್ನೂ ಕನ್ಯೆಯಾಗಿಯೇ ಇದ್ದಾಳೆ. ಕೋಟ್ಯಾನುಕೋಟಿ ಕನ್ಯೆಯರಿದ್ದರೂ ಕನ್ಯೆಯರು ಪತಿಗೆ ಶರಣು ಹೋಗಿ ಶರಣ ಸತಿಯಾಗಲು ಸಾಧ್ಯವಾಗುತ್ತಿಲ್ಲ. ಲಿಂಗಯ್ಯನೇ ಪತಿಯಾಗಿ, ಆ ಪತಿಗೆ ಸತಿ ಶರಣು ಹೋದರೆ ಸಾಕು, ಲಿಂಗಯ್ಯ ಆಕೆಯನ್ನು ಸತಿಯನ್ನಾಗಿಸಿಕೊಳ್ಳುತ್ತಾನೆ. ಶರಣ ಸತಿಯಾಗಿ ಲಿಂಗಪತಿಯಾಗಿ ಕಾಯುವೆಂಬ ಕೈಲಾಸದಲ್ಲಿ ಸಂಗಸುಖ ಹೊಂದುತ್ತಾರೆ. ಇದು ಕೂಡದಗಲದ ಕೂಟದ ಸುಖ!

ನಂದಿ ವಾಹನರು, ಗೌರೀರಮಣರು, ಗಣಂಗಳು, ಕಾಯದ ರೋಮ ರೋಮದಲ್ಲಿ ವಾಸವಾಗಿದ್ದಾರೆ. ಅನೇಕ ಬ್ರಹ್ಮಾಂಡಗಳು ಕಾಯದಲ್ಲಿ ಇವೆ. ಈಶ್ವರನ ಜಡೆಯಲ್ಲಿ ಅನಂತ ಗಣಂಗಳು, ವೀರಭದ್ರದೇವರು ಹುಟ್ಟಿದ್ದಾರೆ. ಆದರೂ ಮನದ ಅರಿವಿಗೆ ಬರಬೇಕಲ್ಲ? ಕಾಯದ ಮಹತ್ವ ಕಾಯಕ್ಕೆ, ಕಾಯವನ್ನು ಆವರಿಸಿದ ಮನಕ್ಕೆ ಹೊಳೆಯಬೇಕಲ್ಲ! ಕಾಯ ಸಾಕ್ಷಾತ್ ಕಪಿಲಸಿದ್ಧ ಮಲ್ಲಯ್ಯನ ವಾಸಸ್ಥಾನವೆಂದು, ಕಾಯ, ಕಾಯವನ್ನು ಆವರಿಸಿದ ಮನ ತಿಳಿಯಬೇಕಲ್ಲ! ಅರಿವಿನ ಹತ್ತಿರವಿದ್ದರೂ ಅರಿವಿನ ಇರುವಿಕೆಯನ್ನು ತಿಳಿಯುವುದು ಬಲು ದುರ್ಲಭ!.

**1075**

**ಸಾಲೋಕ್ಯ ಪದ ಮೀರಿ ಸಾಮೀಪ್ಯ ಪದ ಮೀರಿ**
**ಸಾಯುಜ್ಯ ಪದವೀವ ಆತನನು**
**ವಶಮಾಡಿ ತಂದೆನ್ನ ಕರದೊಳಿತ್ತಾ ಗುರು**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನು ಅರಿವಿನ ಲೋಕ ಮರೆತು ಮರೆವಿನ ಲೋಕಕ್ಕೆ ಪ್ರವೇಶಮಾಡಿಯಾಗಿದೆ. ಅದು ಅರಿವಿನ ಮಾತು ಆಡುತ್ತದೆಯೇ ಹೊರತು, ಅದು ಸಹಜ ಅರಿವಲ್ಲ. ಹಾಗೆಂದು ತನುವಿಗೆ ತಿಳಿದಿದೆ.

ಮನಕ್ಕೂ ತಿಳಿದಿದೆ. ಆದರೂ ಅರಿವಿನ ಪಾತ್ರ ಹಾಕುವುದು ಮಾತ್ರ ತನುವಿಗೆ ತನುವನ್ನು ಆವರಿಸಿದ ಮನಕ್ಕೆ ಮರೆವಾಗಿಲ್ಲ.

ಅರಿವಿನ ಪಾತ್ರದಲ್ಲಿ ಅಭಿನಯಿಸಿ ಮಾತನಾಡುವುದಕ್ಕೆ ಮನ ಮತ್ತು ತನುವಿಗೆ ಬಲು ಮೋಜು. ಅರಿವನ್ನು ಗಳಿಕೆ ಮಾಡಿಕೊಳ್ಳಲು ಶಿಷ್ಯನ ಪಾತ್ರಹಾಕಿ ಗುರುವಿನ ಹತ್ತಿರ ಹೋಗುತ್ತದೆ. ಗುರುವಾದರೂ ಕೂಡಾ ಪಾತ್ರಧಾರಿಯೇ ಆಗಿದ್ದಾನೆ. ಕಾಷಾಯ ಕಾವಿ ತಿಲಕ ವಿಭೂತಿ ರುದ್ರಾಕ್ಷಿ ಸಿಲುಬೆ ಲಿಂಗ ಜನಿವಾರ ಗಡ್ಡ ಟೊಪ್ಪಿಗೆ ನಿಲುವಂಗಿ ಇವೆಲ್ಲ ಪಾತ್ರಕ್ಕೆ ಬೇಕಾಗುವ ವಸ್ತುಗಳೇ ಆಗಿವೆ. ಇವುಗಳನ್ನು ಧರಿಸಿ ಪೀಠದ ಮೇಲೆ ಕುಳಿತ ಗುರುವು ಪಾತ್ರಧಾರಿಯೇ ಆಗಿದ್ದಾನೆ!

ಸ್ವತಃ ಗುರುದೇವನಿಗೆ ಬ್ರಹ್ಮಪೀಠದ ಮೇಲೆ ಕುಳಿತುಕೊಳ್ಳುವ ಬಯಕೆ ಇಲ್ಲವಾಗಿದೆ. ಇಂತಹ ಗುರುದೇವ ಶಿಷ್ಯನಿಗಾದರೂ ಏನು ಹೇಳಿಯಾನು? ಉಪಜೀವನಕ್ಕಾಗಿ ಗುರು, ವೇಷ ಧರಿಸಿದ್ದಾನೆ! ಉಪಜೀವನಕ್ಕಾಗಿ ಶಿಷ್ಯ, ವೇಷ ಧರಿಸಿದ್ದಾನೆ!

ಗುರುದೇವನೆಂದರೆ ಕಾಯವೆಂಬ ಕೈಲಾಸದಲ್ಲಿ ವಾಸಮಾಡುವವನು! ಕಾಯಲೋಕದಲ್ಲಿರುವವನು. ಶಿಷ್ಯನು ಕೂಡಾ ಅದೇ ಲೋಕದಲ್ಲಿ ವಾಸ ಮಾಡುವವನು! ಇವರಿಬ್ಬರೂ ಕಾಯವನ್ನೇ ತಾವು ವಾಸಮಾಡುವ ಲೋಕವನ್ನಾಗಿ ಮಾಡಿಕೊಂಡವರು!

ಗುರುದೇವನ ಸಾಮಿಪ್ಯ ಶಿಷ್ಯನಿದ್ದಾನೆ ; ಶಿಷ್ಯನ ಸಾಮಿಪ್ಯ ಗುರುದೇವನಿದ್ದಾನೆ. ಇವರಿಬ್ಬರ ವಾಸ ಸಾಲೋಕ್ಯ, ಸಾಮಿಪ್ಯ!

ಇವರಿಬ್ಬರೂ ಒಂದೇ ಲೋಕದಲ್ಲಿದ್ದರೂ ಗುರುದೇವನ ಪರಿಚಯ ಶಿಷ್ಯನಿಗಿಲ್ಲ! ಗುರುದೇವನ ಸಾಮಿಪ್ಯ ಶಿಷ್ಯನಿದ್ದರೂ ಶಿಷ್ಯ ಗುರುದೇವನನ್ನು ಹುಡುಕುವುದು ಬಿಟ್ಟಿಲ್ಲ!

ಸಾಲೋಕ್ಯದಲ್ಲಿದ್ದು ಸಾಮಿಪ್ಯದಲ್ಲಿದ್ದು ಸಾಯುಜ್ಯ ಪದವಿಯನ್ನು ಹೊಂದಿದಾತನೇ ನಿಜ ಗುರು; ಸಹಜ ಗುರು! ಕಾಯವನ್ನೇ ಲೋಕವನ್ನಾಗಿ ಮಾಡಿಕೊಂಡ ಅರಿವೆಂಬ ಗುರುದೇವನ ಪರಿಚಯ, ಮನವೆಂಬ ಶಿಷ್ಯನಿಗೆ ಆದರೆ ಸಾಕು, ಈತ ಅರಿವೆಂಬ ಗುರುದೇವನಲ್ಲಿ ಸಂಗಮವಾಗಿ ಸಾಯುಜ್ಯ ಪದವಿಯನ್ನು ಹೊಂದುತ್ತಾನೆ.

ಗುರುದೇವನಲ್ಲಿ ಶಿಷ್ಯ ಕಳೆದು ಹೋಗುತ್ತಾನೆ. ಗುರುದೇವನೇ ತಾನಾಗುತ್ತಾನೆ. ವರ್ಧಮಾನ ಮಹಾವೀರನಲ್ಲಿ ಕಳೆದು ಹೋದಂತೆ! ಸಿದ್ಧಾರ್ಥ ಬುದ್ಧನಲ್ಲಿ ಕಳೆದು ಹೋದಂತೆ! ಬುದ್ಧನೇ ತಾನಾದಂತೆ!

ಇಂತಹ ಗುರುದೇವ ಮಾತ್ರ ಶಿಷ್ಯನ ಮೈದಡವಿ ಸಾಲೋಕ್ಯ ಸಾಮಿಪ್ಯ ಪದ ಮೀರಿ ಸಾಯುಜ್ಯ ಪದವಿಯನ್ನು ಕರುಣಿಸುವನು. ಅಷ್ಟೇ ಏಕೆ? ಗುರುದೇವ, ಗುರುದೇವನನ್ನು ಕರೆತಂದು ಶಿಷ್ಯನಲ್ಲಿ ಸಂಗಮಗೊಳಿಸುತ್ತಾನೆ. ಶಿಷ್ಯನ ವಶಕ್ಕೆ ಗುರುದೇವನನ್ನು ಜೋಪಾನ ಎಂದು ಹೇಳಿ ಮರೆಯಾಗುತ್ತಾನೆ.

ಶರಣರು ಕಾಯ ಲೋಕದಲ್ಲಿರುವ ಶಿಷ್ಯನಿಗೆ ಕಾಯಲೋಕದಲ್ಲಿಯೇ ಇರುವ ಗುರುದೇವನನ್ನು ಪರಿಚಯಿಸಿದರು. ಸಾಲೋಕ್ಯ ಪದವಿಯನ್ನು ನೀಡಿದರು.

ಗುರುದೇವನನ್ನು ಹುಡುಕುತ್ತಾ ಬಂದ ಶಿಷ್ಯನ ಮೈದಡವಿ, ನಿಜಗುರು ಹೀಗೆ ಹೇಳುತ್ತಾನೆ: ನಾನು ಗುರುವಲ್ಲ ; ನೀನು ಹುಡುಕುವ ಗುರುದೇವ ನಿನ್ನ ಸಾಮಿಪ್ಯವೇ ಇದ್ದಾನೆ! ಈತನೇ ನಿನಗೆ ಗುರು! ನೀನು ಈ ಗುರುದೇವನಿಗೆ ಶಿಷ್ಯನು! ಶಿಷ್ಯನ ಸಾಮಿಪ್ಯ ಇರುವ ಗುರುದೇವನನ್ನು ಶಿಷ್ಯನಿಗೆ ಪರಿಚಯಿಸಿ ಸಾಮಿಪ್ಯ ಪದವಿಯನ್ನು ನೀಡುತ್ತಾನೆ.

ಪುನಃ ಈ ಎರಡೂ ಪದವಿಗಳನ್ನು ಮೀರಿ, ಗುರುದೇವನನ್ನು ಹಿಡಿದು, ಶಿಷ್ಯನ ಹೃದಯದಲ್ಲಿ ಸಂಗಮಗೊಳಿಸಿ ಸಾಯುಜ್ಯ ಪದವಿಯನ್ನು ಕರುಣಿಸುತ್ತಾನೆ. ಸಿದ್ಧರಾಮ ಶಿವಯೋಗಿಗಳು,

ಸಾಯುಜ್ಯ ಪದವಿಯನ್ನು ಕರುಣಿಸಿದ ಗುರುದೇವರನ್ನು ಹೃದಯಪೂರ್ವಕವಾಗಿ ಸ್ಮರಿಸಿದ್ದಾರೆ. ಗುರುದೇವರಿಂದ ತಾವು ಉಂಡ ಸಿಹಿ ಅಡಿಗೆಯನ್ನು ಸಕಲ ಓದುಗರಿಗೂ ಉಣ ಬಡಿಸಿದ್ದಾರೆ. ಉಂಡವರೇ ಧನ್ಯರು! ಉಣ್ಣುವವರೇ ಧನ್ಯರು!

**1076**

**ಸೀಮೆಗೆಟ್ಟ ಸಂಬಂಧ ಸ್ಥಾನದಲ್ಲಿ**
**ಆನು ನೀನಾದ ಪರಿ ತಾನೆಂತುಟೊ?**
**ಇಷ್ಟಲಿಂಗದ ಪೂಜೆ ಮತ್ತೆ ಭವದಾಗರಕೆ**
**ತಂದಿಳುಹಿತ್ತು ನೋಡು ನೋಡಾ.**
**ಮತ್ತೆ ಚರಲಿಂಗ ಪೂಜೆಯ ಮಾಡಲಿಕ್ಕಾನು ಮುತ್ತೆರಡು ಆದೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸೀಮೆಗೆಟ್ಟ ನಿಸ್ಸೀಮ ಸಂಬಂಧ ಸ್ಥಾನದಲ್ಲಿ ನಾನು ನೀನಾದ ಪರಿ ಅತ್ಯಂತ ಕುತೂಹಲಕರವಾದದು. ಇಂತಹ ಪರಮ ಸುಖದಲ್ಲಿ ಮಿಂದ ನಾನು ಪುನಃ ತಾನಾಗುವುದೆಂದರೆ ಅದು ಅಲ್ಲದ ಮಾತು.

ನಾನು ನೀನಾದ ಮೇಲೆ ನನ್ನನ್ನು ನಾನು ಕಳೆದುಕೊಂಡೆ. ನಾನು ನಿನ್ನಲ್ಲಿ ಐಕ್ಯವಾದ ಮೇಲೆ ಮತ್ತೆ ಅಂಗದ ಮೇಲೆ ಲಿಂಗ ಕಟ್ಟಿಕೊಂಡು ಆ ಲಿಂಗವನ್ನು ಪೂಜಿಸುವುದೆಂದರೆ ಮತ್ತೆ ನಾನು ನಿನ್ನನ್ನು ಮರೆತು ಭವಕ್ಕೆ ಬಂದಂತೆ. ಜನನ ಮರಣದ ಬಾಧೆಯನ್ನು ಹೆಗಲಿಗೆ ಹಾಕಿಕೊಂಡಂತೆ.

ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಲಿಂಗವಲ್ಲ. ಅದು ನಾನು ಮಾಡಿದ ಲಿಂಗ, ಪಾಷಾಣ! ಅಂಗದಲ್ಲಿಯೇ ಸಂಗಮವಾದ ಲಿಂಗ ನನ್ನನ್ನು ಮಾಡಿದ ಲಿಂಗ. ನನ್ನನ್ನು ಮಾಡಿ ನನ್ನ ಅಂಗದಲ್ಲಿಯೇ ಸಂಗಮವಾಗಿ ನನ್ನನ್ನು ತನ್ನಂತೆ ಮಾಡಿಕೊಳ್ಳುವ ಹೆಬ್ಬಯಕೆ ಹೊಂದಿದ ಲಿಂಗ!

ನಾನು ಮಾಡಿದ ಲಿಂಗ ಪೂಜೆಗೆ ಅರ್ಹವಲ್ಲ. ನನ್ನನ್ನು ಮಾಡಿ ನನ್ನಂಗದಲ್ಲಿಯೇ ಸಂಗಮವಾದ ಲಿಂಗ ಮಾತ್ರ ನಾನು ಪೂಜಿಸಲು ಅರ್ಹವಾದ ಲಿಂಗ. ಆ ಲಿಂಗಯ್ಯನನ್ನು ಪೂಜೆಯ ಮಾಡಿದ ನಾನು ಮುತ್ತೆರಡು ಆದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ನಾನಾದೆ. ಲಿಂಗಯ್ಯನಿದ್ದ ಕಾಯ, ನಾನಿದ್ದ ಕಾಯ ಒಂದೇ. ಒಂದು ಕಾಯದಲ್ಲಿ ಎರಡು ಮುತ್ತುಗಳಿವೆ. ಅವೆರಡು ನುಡಿಯುವುದಿಲ್ಲ. ನುಡಿದ ನುಡಿ ಸಾಧ್ಯವಾದರೆ ಅವರಿಬ್ಬರಿಗೆ ಕೇಳುತ್ತದೆ. ಅನ್ಯ ಕಾಯಕ್ಕೆ ಕೇಳುವುದಿಲ್ಲ. ಅವರಿಬ್ಬರು ನುಡಿದ ನುಡಿ ಕಾಯ ನುಡಿಯಬಲ್ಲುದು. ಬುದ್ಧ ನುಡಿದಂತೆ ಸಿದ್ಧಾರ್ಥ ನುಡಿದ!

**1077**

**ಸೀಮೆಗೆಟ್ಟಾ ಬ್ರಹ್ಮದಾನತದ ಸಂಬಂಧ,**
**ಆದಿ ಅಕ್ಷರವೈದ ಮುಖವ ಮಾಡಿ,**
**ಭಾವ ಮನ ಕರಣದ ಹೊರಗಿಟ್ಟು ಸರ್ವಾಂಗವನು**
**ವೇಧಿಸಿದಾತ ಗುರು ಕಪಿಲಸಿದ್ಧ ಮಲ್ಲಿಕಾರ್ಜುನ.**

ಕಾಯದ ಸೀಮೆಯೊಳಗಿದ್ದ ಮನ, ತಾನೇ ಸೃಷ್ಟಿಸಿಕೊಂಡ ಭ್ರಮೆಯಿಂದಾಗಿ, ಕಾಯದ ಸಂಬಂಧ ಹೊಂದಿ, ಕಾಯದಲ್ಲಿಯೇ ಸಂಗಮವಾದ ಪರಮಾತ್ಮನನ್ನೇ ಮರೆತು ಹೋಗಿದೆ. ಭಾವ,

ಮನ, ಕರಣಂಗಳು ಸರ್ವಾಂಗವನ್ನು ಕಾಡುತ್ತಲಿವೆ. ಕಾಯದ ಪರಿಚಯವನ್ನು ಕಾಯವೇ ಮರೆತು ಹೋಗಿದೆ. ಕಾಯವನ್ನು ಆವರಿಸಿದ ಮನ, ಕಾಯದ ಸಂಗ ಮಾಡಿದುದರಿಂದ ಕಾಯದಲ್ಲಿಯ ನಿರ್ಭಾವ ಕಾಯದಲ್ಲಿಯೇ ಉಳಿದು ಬೆಳಕಿಗೆ ಬಾರದಂತಾಗಿದೆ.

ಮನ ಕಾಯವನ್ನು ಹಿಡಿದು ಅನ್ಯ ಕಾಯವನ್ನು ಸ್ವಕಾಯದಂತೆ ನೋಡುವ ಶಕ್ತಿ ಭಾವಕ್ಕಿಲ್ಲ. ಭಾವ ಸಂಬಂಧವನ್ನು ಬೆಳೆಸುತ್ತದೆ. ಪುನಃ ದುರ್ಭಾವಕ್ಕೆ ಹೋಗಿ ಸಂಬಂಧವನ್ನು ಮುರಿಯುತ್ತದೆ. ಭಾವಕ್ಕೆ ಭಾವ ಮತ್ತು ದುರ್ಭಾವಗಳೆಂಬ ಎರಡು ಮುಖಗಳು. ಭಾವ, ಇದರ ಮೂಲ ನಿರ್ಭಾವ! ಭಾವಕ್ಕೆ ತನಗೆ ತಾನೇ ನಿರ್ಭಾವಕ್ಕೆ ಹೋಗಲು ಸಾಧ್ಯವಾಗುವುದಿಲ್ಲ.

ಭಾವ ನಿರ್ಭಾವವಾಗಬೇಕು, ಕರಣಂಗಳು ಜ್ಞಾನ ಕಿರಣಂಗಳಾಗಬೇಕು. ಸರ್ವಾಂಗವನ್ನು ಭೇದಿಸಿ ಲಿಂಗಾಂಗವನ್ನಾಗಿಸಿ ಗುರುದೇವ ಸರ್ವಾಂಗದ ಮೇಲೆ ಅಂತಃಕರಣ ಬೀರಿ ಕಪಿಲಸಿದ್ಧ ಮಲ್ಲಿಕಾರ್ಜುನನನ್ನಾಗಿಸುತ್ತಾನೆ.

**1078**

**ಸೀಮೆಯ ಮೀರಿದ ಸಂಬಂಧಿಯ,**
**ಗ್ರಾಮವ ಮೀರಿದ ಅನಾಮಿಕನ,**
**ಆದ್ಯಕ್ಷರದ ಭೇದ ತಾನಾದ ಅನ್ಯಯಕಾರಿಯ,**
**ನಾದದೊಳಗಣ ಬಿಂದು, ಬಿಂದುವಿನೊಳಗಣ ಕಲೆ,**
**ಕಳೆಯೊಳಗಣ ಸಂಯೋಗ,**
**ಸಂಯೋಗದಲ್ಲಿ ಸಂಬಂಧಿ, ವಿಯೋಗದಲ್ಲಿ ನಿತ್ಯ.**
**ತಾತ್ಪರ್ಯವರ್ಮ ಕಳೆಗಳನರಿದಂಥ ಮುಕ್ತ**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡಿದ**
**ಉರುತರ ತಾತ್ಪರ್ಯ.**

ಅರಿವೆಂಬ ಗುರುದೇವನು, ಸೀಮೆಯ ಮೀರಿದ ನಿಸ್ಸೀಮ ಸಂಬಂಧಿ, ಗ್ರಾಮವ ಮೀರಿದ ಅನಾಮಿಕನು ಆತ. ಅಕ್ಷರ ಭೇದವ ಭೇದಿಸಿದ ಅಕ್ಷರೋತ್ತಮನು ಆತ. ನಾದದೊಳಗಣ ಬಿಂದುವು ಆತ. ಬಿಂದುವಿನೊಳಗಣ ಕಲೆಯು ಆತ. ಕಲೆಯೊಳಗಣ ಸಂಯೋಗ ಸಂಬಂಧಿಯು ಆತ. ಸಂಯೋಗದಲ್ಲಿ ಸಂಬಂಧಿ, ವಿಯೋಗದಲ್ಲಿ ನಿತ್ಯನು ಆತ. ತಾತ್ಪರ್ಯ, ವರ್ಮ, ಕಳೆಗಳನ್ನು ಅರಿದಂತ ಮುಕ್ತನು ಆತ, ಕಪಿಲಸಿದ್ಧ ಮಲ್ಲಿಕಾರ್ಜುನನು ಕೂಡಿದ, ಕೂಡದಗಲದ ಕೂಟದ ತಾತ್ಪರ್ಯವು ಆತ. ಇಂತಹ ಗುರುದೇವನು ಕಾಯದಲ್ಲಿ ಬಚ್ಚಿಟ್ಟುಕೊಂಡು, ಕಾಯವನ್ನು ಆವರಿಸಿದ ಮನಕ್ಕೆ, ಕಾಯದೊಂದಿಗೆ ಹುಡುಕಲು ಹಚ್ಚಿದ್ದಾನೆ.

ಮನ, ತಾನು ಸತಿಯಾಗಿ ಪತಿದೇವನಾದ ಪರಮಾತ್ಮನನ್ನು ಕಾಯದಲ್ಲಿಯೇ ಹುಡುಕಿ ಮುಕ್ತಳಾಗಬೇಕಾಗಿದೆ. ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕೂಡಿ ಕೂಡದ ಅಗಲದ ಕೂಟದ ಸುಖವನ್ನು ಉಣ್ಣಲೇಬೇಕಾಗಿದೆ. ಮನ ತನ್ನ ಸೀಮೆಯ ಮೀರಿದಾಗಲೇ ನಿಸ್ಸೀಮ ಸಂಬಂಧಿಯನ್ನು ಕೂಡಬಹುದಾಗಿದೆ. ಗ್ರಾಮವ ಮೀರಿದ ಅನಾಮಿಕನೊಂದಿಗೆ ಬೆರೆಯಬಹುದಾಗಿದೆ. ಆದ್ಯಕ್ಷರದ ಭೇದವನು, ಭೇದಿಸಿದಾಗಲೇ ಅಕ್ಷರೋತ್ತಮನ ಇರುವಿಕೆಯ ಅರಿವು ಆಗಿ ಆತನ ದರ್ಶನ ಭಾಗ್ಯ ಲಭ್ಯವಾಗುತ್ತದೆ.

ಆತ ನಾದಕ್ಕೆ ಒಲಿಯಲಾರ, ನಾದದೊಳಗಣ ಬಿಂದು ಆತ.

1079

**ಸೀಮೆಯ ಮೀರಿದ ಸಿರಿವಂತನೆ,**
**ಪದವ ಮೀರಿದ ಬಹುರೂಪನೆ,**
**ಆನಂದ ಆನಂದವಾದ ನಿತ್ಯ ಸಾನಂದನೆ,**
**ಸುಗುಣದಲ್ಲಿ ಬೆಳಗುತಿಹ ನಿತ್ಯ ಸಾನಂದನೆಲೆ ಅಯ್ಯಾ.**
**ನಿನ್ನಾನಂದವನಾರು ಬಲ್ಲರು?**
**ನೀನು ಲಿಂಗತ್ರಯದೊಳಗೆ,**
**ಎರಡೈದು ಪಾದೋದಕದಲ್ಲಿ,**
**ಐದಾರು ಕೂಡಿದ ಪ್ರಸಾದದಲ್ಲಿ,**
**ನಿತ್ಯಸುಖಿಯೆಂಬುದು ಸತ್ಯಶುಚಿಯೆಂಬುದ ನಿನ್ನವರೆ ಬಲ್ಲರು;**
**ಜಡವಿಡಿದು ನುಡಿವ ಅಜ್ಞಾನಿ ಹೊರಸುಗಳು ಬಲ್ಲರೆ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪರಮಾತ್ಮನು ಸೀಮೆಯ ಮೀರಿದ ನಿಸ್ಸೀಮ ಶ್ರೀಮಂತನು. ಮನ ಆತನನ್ನು ಅರಿಯದ್ದರಿಂದ ತನುವನ್ನು ಹಿಡಿದುಕೊಂಡು ಹೊನ್ನು, ಮಣ್ಣು, ಹಿಡಿದು ಶ್ರೀಮಂತನಾಗಿದೆ. ಮನ ಸೀಮೆಯ ಮೀರಿದ ನಿಸ್ಸೀಮ ಶ್ರೀಮಂತನನ್ನು ಅರಿಯದಿದ್ದರೆ, ಏನಿದ್ದರೇನು? ಅದು ಬಡವನೆ. ಕಡು ದರಿದ್ರನೆ.

ಕಾಯದಲ್ಲಿ ಸಂಗಮವಾದ ಅಕ್ಷರೋತ್ತಮನು ಆತ, ಪದವ ಮೀರಿದ ಬ್ರಹ್ಮ. ಆನಂದ ಮಹಾದಾನಂದವಾದ ನಿತ್ಯ-ನಿತ್ಯ ಸಾನಂದನು ಆತ. ತ್ರಿಗುಣಾತೀತನು ಆತ. ಸುಗುಣದಲ್ಲಿ ಬೆಳಗುತಿಹ ನಿತ್ಯ ಸಾನಂದನು ಆತ.

ಪರಮಾತ್ಮನೇ ನಿನ್ನ ಆನಂದವನ್ನು ಯಾರು ಬಲ್ಲರು! ನೀನು ಲಿಂಗತ್ರಯದೊಳಗೆ ಸಂಗಮವಾದಾತ.

ಎರಡೈದು ಪಾದೋದಕದಲ್ಲಿ ಐದು, ಆರು ಕೂಡಿದ ಪ್ರಸಾದದಲ್ಲಿ ನೀನು ನಿತ್ಯ ಸುಖಿ ಎಂಬುದನ್ನು ಸತ್ಯ ಶುಚಿ ಎಂಬುದನ್ನು ನಿನ್ನವರೇ ಆದ ನಿನ್ನ ಶರಣರು ಮಾತ್ರ ಬಲ್ಲರು.

ಜಡವಿಡಿದು ನುಡಿವ ನುಡಿದಂತೆ ನಡೆಯದ ಅಜ್ಞಾನಿಗಳು, ಮಹಾಜ್ಞಾನಿಯಾದ ನಿನ್ನನೆತ್ತಬಲ್ಲರು. ಕಪಿಲಸಿದ್ಧ ಮಲ್ಲಿಕಾರ್ಜುನಾ, ಸೀಮೆಯ ಮೀರಿದ ನಿಸ್ಸೀಮ ಶ್ರೀಮಂತನು ನೀನು.

1080

**ಸೀಮೆಯನು ದಾಟಿಪ್ಪ ಸಂಬಂಧಿ ತಾನಲ್ಲ**
**ಆನತದೊಳಗೆ ತನು ಬ್ರಹ್ಮ ತಲ್ಲೀಯ**
**ಶುದ್ಧ ಸಾನಂದ ತಾನೆ**
**ಕಪಿಲಸಿದ್ಧಮಲ್ಲಿಕಾರ್ಜುನ.**

ತನುವನ್ನು ಆವರಿಸಿದ ಮನವೆಂಬ ನನಗೆ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನೆ ಜನ್ಮ ನೀಡಿದನು. ಆದರೆ ಆತನೇ ನನ್ನ ಜನ್ಮದಾತನೆಂಬುದು ನನಗೆ ಪರಿಚಯವಿಲ್ಲ.

ಜನ್ಮ ನೀಡಿದ ತನುವನ್ನೆ ತಂದೆ-ತಾಯಿಯೆಂದು ತಿಳಿದ ಮನವೆಂಬ ಅಜ್ಞಾನಿ ನಾನು!

ನನಗೂ ನನ್ನನ್ನು ಹಡೆದ ತಂದೆ-ತಾಯಿಗೂ ಜನ್ಮ ನೀಡಿದ ತಂದೆ ಒಬ್ಬನೇ ಆಗಿದ್ದಾನೆ. ಆತನ ಪರಿಚಯ ನನಗೂ ಇಲ್ಲ, ನನ್ನ ತಂದೆ-ತಾಯಿಗೂ ಇಲ್ಲ, ಅಷ್ಟೇ ಏಕೆ ಇಡೀ ಲೋಕಕ್ಕೂ ಇಲ್ಲ! ಏಕೆಂದರೆ ಸೀಮೆಯುಳ್ಳವನು ನಾನು! ನಿಸ್ಸೀಮ ಸಂಬಂಧಿ ಆತ! ತನುವಿನಲ್ಲಿ ತನ್ಮಯವಾದ ಬ್ರಹ್ಮನು ಆತ. ಶುದ್ಧ, ಸಿದ್ಧ, ಪ್ರಸಿದ್ಧನು ಆತ. ಕಪಿಲಸಿದ್ಧ ಮಲ್ಲಿಕಾರ್ಜುನನು ಆತ!

**1081**

**ಸೀಮೆಯುಳ್ಳನ್ನಬರ ತಾನು ತನ್ನಂಗವಾಗಿರಬೇಕು,**
**ಅನ್ಯಂಗವಾಗದೆ ಅನ್ಯಂಗ ಅನ್ಯಂಗವೆ?**
**ಗುರುಕರುಣದಿಂದ ತನ್ನಂಗ ಅನ್ಯಂಗವಾದಡೆ**
**ಸೀಮೆಯ ಸಂಬಂಧಿ ತಾನಲ್ಲ,**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯನಲ್ಲಿ ಅಚ್ಚ ಶರಣನು.**

ಮನ ಮತ್ತು ಕಾಯ ತಮ್ಮ-ತಮ್ಮ ಸೀಮೆ ದಾಟಿ ನಿಸ್ಸೀಮನೊಂದಿಗೆ ಬೆರೆತಾಗಲೇ ಅನ್ಯ ಅಂಗಕ್ಕೆ ಆಸೆ ಪಡದೆ ಲಿಂಗಾಂಗವೇ ತಾನಾಗುತ್ತದೆ. ಲಿಂಗತ್ರಯವೇ ತಾವಾಗುತ್ತದೆ.

ಅಂಗ ಎಂಬುದು ಅದು ತನ್ನದಲ್ಲ, ಅದು ತಾನೂ ಅಲ್ಲ. ಅಂಗದಲ್ಲಿ ಗುರುದೇವ ಸಂಗಮವಾಗಿದ್ದಾನೆ. ಅರಿವೆಂಬ ಗುರುದೇವನು ಇದ್ದ ಅಂಗವು ಆತನ ಅಂಗವೇ ಆಗಿದೆ. ಹೀಗಾಗಿ ಅಂಗ ನನ್ನಂಗವಲ್ಲ ಅನ್ಯಂಗ.

ಗುರುದೇವನ ಕರುಣೆಯಿಂದ ಅದು ತನ್ನಂಗವಲ್ಲವೆಂದು ಗುರುದೇವನು ಇದ್ದ ಅನ್ಯಂಗವೆಂದು ಗುರುದೇವನಿಂದಲೇ ತನು ಮತ್ತು ಮನಕ್ಕೆ ತಿಳಿಯುತ್ತದೆ. ಏಕೆಂದರೆ ಗುರುದೇವನು ಅಂಗದಲ್ಲಿಯೇ ಸಂಗಮವಾದ ಗುರುದೇವನನ್ನು ದರುಶನ ಮಾಡಿಕೊಂಡಾತ. ಗುರುದೇವನು ಪ್ರತಿ ಅಂಗದಲ್ಲಿ ಹೀಗೆ ಸಂಗಮವಾಗಿದ್ದಾನೆಂದು ಮನ ಮುಟ್ಟಿ, ತನು ಮುಟ್ಟಿ, ಮನ ಮತ್ತು ತನುವಿಗೆ ತಿಳಿ ಹೇಳುತ್ತಾನೆ.

ಆಗ ಮನ ತನ್ನ ಸೀಮೆಯ ಸಂಬಂಧವನ್ನು ಕಳಚಿಕೊಂಡು ನಿಸ್ಸೀಮನ ದರುಶನ ಮಾಡಿಕೊಳ್ಳುತ್ತದೆ. ಸೀಮೆಯ ಸಂಬಂಧವನ್ನು ಕಳಚಿಕೊಳ್ಳುತ್ತದೆ. ಅಚ್ಚ ಶರಣನು ತಾನಾಗುತ್ತದೆ; ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಿಗೆ ಶರಣು ಹೋಗಿ.

**1082**

**ಸೀಮೆ ಸಂಗಮದಲ್ಲಿ ಲೀಯವಪ್ಪಾತ ಗುರು.**
**ಆರೂಢದೈಕ್ಯದಲಿ ಲೀಯವಾಗಿ**
**ಆರಾರನತಿಗಳೆದ ಆನಂದಮೂರ್ತಿಯನು**
**ತೋರಬಲ್ಲಾತ ಗುರು ಕಪಿಲಸಿದ್ಧ ಮಲ್ಲಿಕಾರ್ಜುನ.**

ಅಂಗ ಸೀಮೆಯುಳ್ಳದ್ದು. ಅಂಗದಲ್ಲಿಯೇ ಸಂಗಮವಾದ ಗುರುದೇವನು ನಿಸ್ಸೀಮನು.

ಅಂಗವನ್ನು ಆವರಿಸಿದ ಮನ ರೂಢಿಯಿಂದ ಕೂಡಿದ್ದರೆ; ಅಂಗದಲ್ಲಿಯೇ ಸಂಗಮವಾದ ಗುರುದೇವ ಆರೂಢನು. ಅರಿಷಡ್ವರ್ಗಗಳನ್ನು ಷಡುಸ್ಥಲಗಳನ್ನು ಅತಿಗಳೆದ ಆನಂದ ಮೂರ್ತಿಯೂ

ಆತ. ಇಂತಹ ಪರಮಾತ್ಮನನ್ನು ತೋರಬಲ್ಲಾತನೆ ಗುರುದೇವನು.

ಗುರುದೇವನೆಂದರೆ ಸಾಮಾನ್ಯನಲ್ಲ. ಕಾಯ ಉಳ್ಳವನಾಗಿದ್ದರು ಅಕಾಯನು. ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ದರುಶನ ಮಾಡಿಕೊಂಡು ಶ್ರೀಗುರುದೇವನೆಂದು ಕರೆಯಿಸಿಕೊಂಡವನು. ಕಪಿಲಸಿದ್ಧ ಮಲ್ಲಿಕಾರ್ಜುನನೆ ತಾನಾದವನು. ಈತ ಮಾತ್ರ ಗುರುದೇವನನ್ನು ಗುರುವಾಗಿ ಶಿಷ್ಯನಿಗೆ ತೋರಬಲ್ಲ!

**1083**

**ಸೀಮೆ ಸಂಬಂಧಗಳ ಮೀರಿಪ್ಪ ಮಂತ್ರಕ್ಕೆ**
**ರಾಜಮಂತ್ರನು ತಾನು ಪಂಚಾಕ್ಷರಿ.**
**ಪಂಚಾಕ್ಷರಿಯ ಗುಣದ ಬಸವಾಕ್ಷರತ್ರಯದೆ,**
**ಧ್ಯಾನ ಮೌನದ ಗುಣದ ಸತ್ವವಿಡಿದು,**
**ಆನಂದ ತ್ರೈಲಿಂಗ ಮೂಲಮಂತ್ರಕ್ಕೀಗ**
**ಬಸವಾಕ್ಷರವು ಮಾತೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವಿನಲ್ಲಿ ತನ್ಮಯವಾದ ಪರಮಾತ್ಮನು ನಿಸ್ಸೀಮನು. ಸೀಮೆ ಸಂಬಂಧಗಳನ್ನು ಮೀರಿದ ಪಂಚಾಕ್ಷರಿಯೇ ಆತ. ಹೀಗಾಗಿ ಪರಮಾತ್ಮನನ್ನು ಪಂಚಾಕ್ಷರಿ ಎಂದು ಕರೆದಿದ್ದಾರೆ.

ಕಾಯವು ಪಂಚಾಕ್ಷರಿಯೆಂದು ಕರೆಯಿಸಿಕೊಂಡಿದೆ. ''ನ''ಕಾರ ರುಧೀರಮಯವಾಗಿದೆ. ''ಮ''ಕಾರವು ಅಸ್ತಿಮಯವಾಗಿದೆ. ''ಶಿ''ಕಾರವು ಮಾಂಸಮಯವಾಗಿಹುದು. ''ವಾ''ಕಾರವು ಮಜ್ಜಾಮಯವಾಗಿಹುದು. ''ಯ''ಕಾರವು ಮೇದೋಮಯವಾಗಿಹುದು. ಹೀಗೆ ಕಾಯ 'ನಮಃಶಿವಾಯ'ವಾಗಿದೆ. ಕಾಯ ಹೆಣ್ಣು ಅಲ್ಲ ಗಂಡು ಅಲ್ಲ. ಅದು ರಾಜಮಂತ್ರ; ಪಂಚಾಕ್ಷರಿ! ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಪಂಚಾಕ್ಷರಿಯ ಗುಣದ ಕಾಯವನ್ನು ಬಸವಾಕ್ಷರತ್ರಯವೆಂದು ಕರೆದಿದ್ದಾರೆ.

ಕಾಯಕ್ಕೆ ಧ್ಯಾನ, ಮೌನ ಗುಣದ ಸತ್ವವಿದೆ. ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನು, ಕಾಯದಲ್ಲಿ ಧ್ಯಾನಸ್ಥನಾಗಿ ಮೌನದಿಂದ ಕುಳಿತ್ತಿದ್ದಾನೆ. ಈ ಧ್ಯಾನ ಮೌನ ಗುಣದ ಕಾಯವನ್ನು ಆವರಿಸಿದ ಮನ, ಸತ್ವವಿಡಿದು ಗುರುದೇವನ ದರುಶನ ಮಾಡಿಕೊಂಡಾಗ, ಕಾಯ ತ್ರೈಲಿಂಗವೆಂದು ಕರೆಯಿಸಿಕೊಳ್ಳುತ್ತದೆ. ಮೂಲ ಮಂತ್ರಕ್ಕೆ ಬಸವಾಕ್ಷರತ್ರಯವು ಮಾತೆಯಾಗಿದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗಿದೆ.

**1084**

**ಸೀಮೆ ಸಂಬಂಧವನು ಮೀರಿಪ್ಪ ಎನ್ನುವನು,**
**ಕಾಮ್ಯಾರ್ಥದಿಂದಲೊಲಿದು ಅರ್ಚಿಸದಿರಾ.**
**ನಿಷ್ಕಾಮ್ಯ ಆರೂಢ ಕಪಿಲಸಿದ್ಧ ಮಲ್ಲಿಕಾರ್ಜುನ**
**ನಿಷ್ಪ್ರಹತಿಗಿವರನ್ನ ಪದವ.**

ತನುವನ್ನು ಆವರಿಸಿದ ಮನ ತನುವಿನ ಸೀಮೆಗೆ ಒಳಪಟ್ಟಿದ್ದರಿಂದ ಅದು

ಸೀಮೆಯುಳ್ಳದ್ದಾಗಿದೆ. ತನುವಿನಲ್ಲಿಯೇ ತನ್ಮಯವಾದ ಪರಮಾತ್ಮನು ತನುವಿನಲ್ಲಿದ್ದು ತನುವನ್ನು ಸೋಂಕದೆ ತನುವನ್ನು ಅರಿವಿನಿಂದ ಬೆಳಗುವ ನಿಸ್ಸೀಮನು.

ಮನ ತನುವನ್ನು ಹಿಡಿದು ತನುವಿನೊಂದಿಗೆ ಕಾಮ, ಕ್ರೋಧಾದಿ ಅರಿಷಡ್ವರ್ಗಗಳನ್ನು ಅನುಭವಿಸುತ್ತದೆ. ಆ ಸುಖಕ್ಕಾಗಿ ದೇವನನ್ನು ಬೇಡುತ್ತದೆ. ಮನ ಬೇಡುವ ದೇವನಾದರು ದೇವನಲ್ಲ. ಮನ ತನುವನ್ನು ಹಿಡಿದು ತನಗೆ ಬೇಕಾದ ದೇವರನ್ನು ಕಲ್ಲು, ಕಟ್ಟಿಗೆ, ಲೋಹದಲ್ಲಿ ಕೆತ್ತಿ ಅದನ್ನೆ ದೇವರೆಂದು ಅರ್ಚಿಸಿ, ಪೂಜಿಸಿ ಕಾಮ್ಯಾರ್ಥವನ್ನು ಬೇಡುತ್ತದೆ.

ತಾನು ಮಾಡಿದ ದೇವರು ದೇವರಲ್ಲವೆಂದು ಮನ ಮತ್ತು ತನುವಿಗೆ ತಿಳಿಯುತ್ತಿಲ್ಲ. ತನ್ನನ್ನು ಮಾಡಿದ ದೇವರು ಮಾತ್ರ ದೇವರೆಂದು ಮನ ಮತ್ತು ತನುವಿಗೆ ತಿಳಿದಾಗ ಆ ದೇವರನ್ನು ನಿಷ್ಕಾಮದಿಂದ ಪೂಜಿಸುತ್ತದೆ.

ತನುವಿನಲ್ಲಿ ತನ್ಮಯವಾದ ದೇವರನ್ನು ಹೇಗೆ ಅರ್ಚಿಸಬೇಕು, ಹೇಗೆ ಪೂಜಿಸಬೇಕು? ಆತನನ್ನು ಪೂಜಿಸಲು ಅರ್ಚಿಸಲು ಬರುವುದಿಲ್ಲ.

ತಾನು ಉಣ್ಣುವಾಗ ಆತನಿಗೆ ಉಣ್ಣಿಸುತ್ತಾ ಉಣ್ಣುವುದೇ ಪೂಜೆ. ಆತನಿಗೆ ಮಜ್ಜನಕ್ಕೆರೆಯುತ್ತಾ ತನ್ನಂಗಕ್ಕೆರೆಯುವುದೇ ಮಜ್ಜನ. ಅನಂತ ಪುಷ್ಪಗಳನ್ನು ನೋಡಿ ಆತನಿಗೆ ಅದರ ಪರಿಮಳವನ್ನು ತೋರಿಸುವುದೇ ಪುಷ್ಪಾರ್ಚನೆ.

ನಿಷ್ಕಾಮ ಪೂಜೆಯನ್ನು ತನು ಮತ್ತು ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಆರೂಢ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ನಿಸ್ಪೃಹದಿಂದ ಆರಾಧಿಸುವುದೇ ಅರಿವಿನ ಅಗೋಚರದ ಆಚಾರದ ಪೂಜೆ.

**1085**

**ಸುಖವ ಹಡೆದೆನೆಂದು ಹಡೆದಡೆ,**
**ನಿಬ್ಬೆರಗದಿಂದ ಕೈಕೊಂಬುದೀ ದುಃಖವ.**
**ದುಃಖಕ್ಕೆ ಎಡೆಯಿಲ್ಲ ;**
**ಸಂಸಾರದೊಳಗಣ ಸುಖವಿಂತುಟು,**
**ಮತ್ತಂ ಕಡುದುಃಖವಪ್ಪುದು.**
**ಈ ದುಃಖವನೆಂದಿಂಗೆ ನೀಗಿ, ಎಂದು ನಿಮ್ಮೊಡಗೂಡಿ**
**ಬೇರಾಗದೆಂದಿಪ್ಪೆನೊ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವನ್ನು ಆವರಿಸಿದ ಮನಕ್ಕೆ ಸುಖ ಗೊತ್ತು, ದುಃಖ ಕೂಡಾ ಗೊತ್ತು. ಪರಮ ಸುಖದ ಪರಿಚಯ ಅದಕ್ಕಿಲ್ಲ. ಹೀಗಾಗಿ ಸುಖವನ್ನು ಹುಡುಕುತ್ತ ಮನ ತನುವಿನೊಂದಿಗೆ ಪ್ರಯಾಣ ಮಾಡುತ್ತದೆ. ಸುಖ ಸಿಗದೇ ಇದ್ದಾಗ ದುಃಖವನ್ನು ಕಾಯದ ಹೆಗಲಿಗೆ ಹಾಕಿಕೊಂಡು ಚಿಂತಿಸುತ್ತದೆ. ತಾನು ಅನುಭವಿಸಿದ ಕ್ಷಣಿಕ ಸುಖ, ಕ್ಷಣಿಕ ದುಃಖ ಅನಂತಕಾಲದವರೆಗೆ ತನುವಿನಲ್ಲಿ ಉಳಿದು ತನುವನ್ನು ಮತ್ತೆ ಮತ್ತೆ ಕಾಡುತ್ತದೆ.

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಶ್ರೀಗುರುದೇವನ ಸಂಗ ಮಾಡಿ ಆತನೊಂದಿಗೆ ಒಡಗೂಡಿದಾಗ ತನು ಅರಿವಿನ ಲಿಂಗಾಂಗವಾಗುತ್ತದೆ.

ದೃಶ್ಯ, ಶಬ್ದ, ಸ್ಪರ್ಶ, ರುಚಿ, ವಾಸನೆಯಲ್ಲಿ ಅರಿವಿದೆ. ಮನ ಶಬ್ದದಿಂದ ಸುಖವನ್ನು

ಅನುಭವಿಸುತ್ತದೆ. ದುಃಖವನ್ನು ಅನುಭವಿಸುತ್ತದೆ. ಆದರೆ ಶಬ್ದದಲ್ಲಿ ಸುಖವು ಇಲ್ಲ, ದುಃಖವೂ ಇಲ್ಲ. ಸಹಜವಾದ ಅರಿವಿದೆ. ಮನ ಅಂಗದಲ್ಲಿಯೇ ಸಂಗಮವಾದ ಅರಿವಿನಲ್ಲಿ ಸಂಗಮವಾದಾಗಲೇ ಮನಕ್ಕೆ ಶಬ್ದದಲ್ಲಿ ಅರಿವಿದೆ ಎಂದು ತಿಳಿಯುತ್ತದೆ. ಆಗ ಮನ ಶಬ್ದದವನ್ನು ನಿಶ್ಶಬ್ಧ ಮಾಡಿ ಅರಿವಿನಿಂದ ಕೇಳುತ್ತದೆ. ಹೀಗಾಗಿ ಶಬ್ದದಿಂದ ತನುವಿಗೆ ಸುಖವಾಗುವುದಿಲ್ಲ ದುಃಖವೂ ಆಗುವುದಿಲ್ಲ. ಹಾಗೆಯೇ ದೃಶ್ಯದಿಂದ, ಸ್ಪರ್ಶದಿಂದ, ವಾಸನೆಯಿಂದ, ರುಚಿಯಿಂದ ಸಹಜ ಸುಖವನ್ನು ಅನುಭವಿಸುತ್ತದೆ.

ಮನ ತನುವಿನಲ್ಲಿಯೇ ತನ್ಮಯವಾದ ಅರಿವಿನ ಮಲ್ಲಯ್ಯನನ್ನು ಬೇರಾಗದೆ ಕೂಡಿದ ಫಲವಿದು.

**1086**

**ಸುಖಮುಖವಾಗಿ ಸುಖಾಸೀನವಾಗಿ**
**ಆಧಾರ ಜ್ವಾಲೆಯನೆತ್ತಿ, ಕುಂಡಲಿಯ ಭುಜಗನ ಹೊಡೆದೆಬ್ಬಿಸಿ**
**ದಂಡನಾಳದ ತುದಿಯ ಮುಂದಣ ಮುಂಬಾಗಿಲ ಕಳೆದು ನೋಡಲು**
**ತ್ರಿಕೂಟಗಿರಿಯಾಗ್ರದಲ್ಲಿ ಮೇಲೆ ಸಿಂಹಾಸನವಿಕ್ಕಿ**
**ನಿಸ್ಸೀಮ ಕುಳ್ಳಿರ್ದನಯ್ಯಾ ನಮ್ಮ ನಿಜಗುರು ಸ್ವತಂತ್ರ**
**ಕಪಿಲಸಿದ್ಧ ಮಲ್ಲಿಕಾರ್ಜುನ ದೇವರದೇವನು.**

ಕಾಯ, ಜ್ಞಾನ ಮತ್ತು ಮನಕ್ಕೆ ಉಪಕರಣವಾಗಿದೆ. ಮನ, ಕಾಯವನ್ನು ಉಪಕರಣವಾಗಿ ಬಳಸಿದರೆ ಸದಾ ಸಾತ್ವಿಕ, ರಾಜಸ, ತಾಮಸ ಪಾತ್ರಗಳಲ್ಲಿ ಅಭಿನಯಿಸುತ್ತದೆ. ಕಾಯ ಸಾತ್ವಿಕವಾಗಿದ್ದರು ಅಭಿನಯ. ಕಾಯ ರಾಜಸವಾಗಿದ್ದರೂ ಅಭಿನಯ. ಕಾಯ ತಾಮಸ ಗುಣದಲ್ಲಿದ್ದರೂ ಕೂಡಾ ಅದು ಅಭಿನಯ. ಸಹಜವಲ್ಲ.

ಕಾಯವನ್ನು ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಬಳಕೆ ಮಾಡಿದರೆ ಸಾತ್ವಿಕ, ರಾಜಸ, ತಾಮಸ ಗುಣಗಳನ್ನು ಕಳೆದುಕೊಂಡು ಸದಾ ಕಾಯ ಸಹಜವಾಗಿಯೇ ಇರುತ್ತದೆ. ಮನ ಹೆಳವನಾಗುತ್ತದೆ. ತನ್ನ ಎಲ್ಲಾ ಅಭಿನಯವನ್ನು ಕಳೆದುಕೊಳ್ಳುತ್ತದೆ.

ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನು ಸ್ವತಂತ್ರನು ನಿಸ್ಸೀಮನು. ಆತ ನಿಜಗುರುವು. ಕಾಯದಲ್ಲಿ ಸುಖ-ಮುಖವಾಗಿ ಸುಖಾಸೀನನಾಗಿ ಕುಳಿತಿದ್ದಾನೆ. ಆತನನ್ನು ನೋಡಬೇಕಾದರೆ ಮನ ಆಧಾರ ಜ್ವಾಲೆಯನು ಎತ್ತಿ ಕುಂಡಲಿಯ ಹೊಡೆದೆಬ್ಬಿಸಿ ದಂಡನಾಳವ ತುದಿಯ ಮುಂದಣ ಮುಂಬಾಗಿಲ ತೆರೆದು ನೋಡಲು ತ್ರಿಕೂಟ ಗಿರಿಯ ಮೇಲೆ ಸಿಂಹಾಸನವನಿಕ್ಕಿ ಕುಳಿತಿರುವುದು ಮನಕ್ಕೆ ಕಾಣುತ್ತದೆ.

ಆತನ ದರುಶನ ಮಾಡಿಕೊಂಡ ಮನ ಘನಮನವಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ದೇವನಾಗುತ್ತದೆ. ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಶ್ರೀಗುರುದೇವನ ದರುಶನ ಆದಾಗಲೇ ಇದು ಸಾಧ್ಯವಾಗುತ್ತದೆ. ಮನದ ಅನುಭವಕ್ಕೆ ಬರುತ್ತದೆ.

**1087**

**ಸುಗಂಧ ಎಣ್ಣೆ ನೀರಡಿಕೆಗೆ ಕುಡಿಯಬಹುದೆ?**
**ಬಂಗಾರದ ಸಲಾಕೆ ಎದೆಯಲ್ಲಿ ಒತ್ತಬಹುದೆ?**
**ವಜ್ರದದ ತುಂಡು ತಿನ್ನಬಹುದೆ?**
**ಗುರುಭಕ್ತಿಯಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನ ಶರಣನ**
**ನುಡಿಯ ಕೇಳಿ ಸುಮ್ಮನಿರಬಹುದೆ?**

ಕಾಯದಲ್ಲಿಯೇ ಸಂಗಮವಾದ ಅರಿವಿನ ಶ್ರೀಮಂತಿಕೆಯ ಮುಂದೆ; ಸಕಲ ವಸ್ತುಗಳ ಶ್ರೀಮಂತಿಕೆಯು ಗೌಣ! ಅರಿವಿನ ಶ್ರೀಮಂತಿಕೆಯನ್ನು ಅನುಭವಿಸುವುದಕ್ಕಾಗಿ ಕಾಯ ಅವತಾರವೆತ್ತಿದೆ. ಅರಿವೆಂಬ ಗುರುದೇವನ ದರುಶನಕ್ಕಾಗಿ ಆತನ ಸಹಜ ಪರಮಸುಖ ಸವಿಯುವುದಕ್ಕಾಗಿ ಕಾಯದಲ್ಲಿ ಮನ ಸೃಷ್ಟಿಯಾಗಿದೆ.

ಶ್ರೀಗುರುದೇವನ ದಾಸನಾಗುವುದನ್ನು ಮರೆತ ಮನ; ಕಾಯದೊಂದಿಗೆ ಸಂಗ ಮಾಡಿರುವುದರಿಂದ; ತನಗೆ ಬೇಕಾದ ಬಾಹ್ಯ ವಸ್ತುಗಳೊಂದಿಗೆ ಸುಖಿಸುತ್ತದೆ. ಬಾಹ್ಯ ವಸ್ತುಗಳ ಮೂಲಕ ತನ್ನ ಶ್ರೀಮಂತಿಕೆಯನ್ನು ಪ್ರದರ್ಶಿಸುತ್ತದೆ.

ಸಕಲ ಕಾಯಗಳು ಮನಕ್ಕೆ ಬಲಿಯಾಗಿರುವುದರಿಂದ ಬಾಹ್ಯ ವಸ್ತುಗಳ ಅರಿವಿನ ಶ್ರೀಮಂತಿಕೆಯಲ್ಲಿ ಲೋಲುಪ್ತವಾಗಿವೆ. ಅಂತರಂಗದ ಅರಿವಿನ ಶ್ರೀಮಂತಿಕೆಯನ್ನು ಸಂಪೂರ್ಣವಾಗಿ ಮರೆತು ಹೋಗಿವೆ.

ಸಕಲ ಅಂಗಗಳು ಅರಿವಿನ ಶ್ರೀಮಂತಿಕೆಯಿಂದ ಬೆಳಗಿಂಗೆ ಬೆಳಗಾಗಿ ಬೆಳಗುತ್ತಿದ್ದರೂ; ಮನಕ್ಕೆ ಆ ಅರಿವಿನ ಶ್ರೀಮಂತಿಕೆಯನ್ನು ಅನುಭವಿಸಲು ಸಾಧ್ಯವಾಗುತ್ತಿಲ್ಲ. ಹೀಗಾಗಿ ಮನ ಕಾಯದೊಂದಿಗೆ ಭೂಮಿ, ಹೇಮ, ಕಾಮಕ್ಕೆ ಮರುಳಾಗಿದೆ.

ನೀರಡಿಕೆಯಾದರೆ ಸುಗಂಧದ ಎಣ್ಣೆಯನ್ನು ಯಾರೂ ಕುಡಿಯುವುದಿಲ್ಲ. ಆದರೂ ಮೂಗು ಸುಗಂಧಕ್ಕೆ ಮರುಳಾಗಿದೆ. ಬಂಗಾರದ ಸಲಾಖೆಯಿಂದ ಎದೆಯಲ್ಲಿ ಒತ್ತಿದರೂ ಬಾಯಾರಿಕೆ ನಿಲ್ಲುವುದಿಲ್ಲ. ಬಾಯಾರಿಕೆಯಾದಾಗ ರಾಜನಾದವನು ತನ್ನ ಕೀರಿಟವನ್ನು ಕೊಟ್ಟಾದರು ಕುಡಿಯಲು ನೀರು ಕೇಳುತ್ತಾನೆ. ತನ್ನ ಅರಸೊತ್ತಿಗೆಯನ್ನು ಬಿಟ್ಟುಕೊಡಲು ಮುಂದಾಗುತ್ತಾನೆ.

ಹಸಿವಾದಾಗ ಕಾಯ ತುತ್ತು ಅನ್ನ ಬಯಸುತ್ತದೆಯೇ ಹೊರತು, ವಜ್ರದ ತುಂಡನ್ನಲ್ಲ.

ಇದೆಲ್ಲಾ ಹೇಳುವುದಕ್ಕೆ ಸುಲಭವಾದರೂ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಶ್ರೀಗುರುದೇವನ ಮಾತು ಆಲಿಸಿ; ಆತನಿಗೆ ಶರಣು ಹೋಗಲು ಮನಕ್ಕೆ ಸಾಧ್ಯವಾಗುವುದಿಲ್ಲ. ಆತನ ನುಡಿ ಕೇಳಿ ಸುಮ್ಮನಿರಲು ಮನಕ್ಕೆ ಆಗುವುದಿಲ್ಲ. ಏಕೆಂದರೆ? ಅಂಗದಲ್ಲಿಯೇ ಕುಳಿತ ಅರಿವೆಂಬ ಶ್ರೀಗುರುದೇವನು ಕುಬೇರನು. ಆತನಷ್ಟು ಶ್ರೀಮಂತ ಈ ಪ್ರಪಂಚದಲ್ಲಿ ಯಾರು ಇಲ್ಲ. ಆತನಿಗೆ ಸುಗಂಧದ ಎಣ್ಣೆ, ಬಂಗಾರದ ಸಲಾಕೆ, ವಜ್ರದ ತುಂಡು ತೃಣಸಮಾನ!

**1088**

**ಸುಗತಿಯೆಂಬ ಪಟ್ಟಣದಲ್ಲಿ ನಿತ್ಯರೆಂಬ ತಾಳತ್ರಯದೊಳಗೆ**
**ಆರರ ಗೀತವ ತಪ್ಪದೆ ಹಾಡುತ್ತಲಿ,**
**ಮೂವತ್ತಾರು ರೂಪುಗಳೆಂಬವನೆ ಮೀರಿ,**
**ಈ ಮೂವತ್ತಾರರಲ್ಲಿ ಜವನಿಕೆಯುಡುಗೆ**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ,**
**ನೀ ಕೊಡುವುದಕ್ಕೆ ಏನೂ ಇಲ್ಲದಿರೆ ನಿನ್ನನೆ ಒಚ್ಚತಗೊಟ್ಟಡೆ**
**ನಾ ಕರ ಬೆರಗಾದೆನು.**

ಕಾಯದಲ್ಲಿ ನಿತ್ಯರೆಂಬುವರು ಇದ್ದಾರೆ. ಸತ್ಯರೆಂಬುವರು ಇದ್ದಾರೆ. ಕಾಯ ಸುಗತಿಯೆಂಬ ಪಟ್ಟಣ ತಾಳತ್ರಯ. ಅಲ್ಲಿ ಆರರ ಗೀತವು ಇದೆ ಮೂವತ್ತಾರು ರೂಪುಗಳ ತತ್ವವೂ ಇದೆ. ಈ

ಮೂವತ್ತಾರು ತತ್ವಗಳಲ್ಲಿ ಜವನಿಕೆಯು ಸುಂದರವಾದ ಉಡುಗೆಯನ್ನುಟ್ಟುಕೊಂಡು ಸುಗತಿಯೆಂಬ ಪಟ್ಟಣವನ್ನು ಸುತ್ತುತ್ತಿದ್ದಾಳೆ.

ವ್ಯಾಸ ಮಹರ್ಷಿಗಳು ಕಾಯವನ್ನು ಧರ್ಮಕ್ಷೇತ್ರವೆಂದು ಕುರುಕ್ಷೇತ್ರವೆಂದು ಕರೆದರು. ಕುರುಕ್ಷೇತ್ರವಾದ ಕಾಯದಲ್ಲಿ ಶ್ರೀಕೃಷ್ಣನ ಗೀತೆಯನ್ನು ಆಲಿಸಲು ಸಾಧ್ಯವಾಗುತ್ತಿಲ್ಲ. ಏಕೆಂದರೆ? ಅಲ್ಲಿ ನೂರಾ ಒಂದು ಕೌರವರಿದ್ದಾರೆ. ಅವರನ್ನು ಹಡೆದ ತಂದೆ ದೃತರಾಷ್ಟ್ರ ಹುಟ್ಟು ಕುರುಡ. ಆತನಿಗೆ ಮಕ್ಕಳ ಮೇಲೆ ಮೋಹವಿದೆಯೇ ಹೊರತು, ಧರ್ಮದ ಮೇಲೆ ಪ್ರೇಮವಿಲ್ಲ.

ಧರ್ಮಕ್ಷೇತ್ರ ಎಂಬ ಕಾಯದಲ್ಲಿಯೇ ಐದು ಜನ ಪಾಂಡವರಿದ್ದಾರೆ. ದ್ರೌಪದಿಯೂ ಇದ್ದಾಳೆ. ಕಾಯದಲ್ಲಿದ್ದ ಶ್ರೀಕೃಷ್ಣನ ಮೇಲೆ ಪಾಂಡವರಿಗೆ ಭಕ್ತಿ.

ಆಚಾರ್ಯರು, ಪಂಡಿತರು, ಕರ್ಣ, ವಿದುರ, ಶಲ್ಯ, ದ್ರುಪದ, ಕುಂತಿ ಮುಂತಾದವರು ಕಾಯ ಉಳ್ಳವರೇ ಆಗಿದ್ದಾರೆ. ಶ್ರೀಕೃಷ್ಣನು ಕೂಡಾ ಕಾಯ ಉಳ್ಳಾತನೇ ಆಗಿದ್ದಾನೆ. ಶ್ರೀಕೃಷ್ಣ ಕಾಯವನ್ನು ಧರ್ಮಕ್ಷೇತ್ರವನ್ನಾಗಿ ಬಳಕೆ ಮಾಡಿಕೊಂಡರೆ ಉಳಿದವರು ಕುರುಕ್ಷೇತ್ರವನ್ನಾಗಿ ಬಳಕೆ ಮಾಡಿಕೊಂಡರು.

ಕುರುಕ್ಷೇತ್ರ ಯುದ್ಧಕ್ಷೇತ್ರವಾಗಿ ಮಾರ್ಪಟ್ಟಿತು. ಹದಿನೆಂಟು ಅಕ್ಷೋಹಿಣಿ ಕಾಯಗಳು ಸತ್ತು ಹೋದವು. ರಕ್ತದ ಕಾಲುವೆ ಹರಿಯಿತು; ಸರೋವರ ನಿರ್ಮಾಣವಾಯಿತು.

ಸುಗತಿಯೆಂಬ ಕಾಯ ಪಟ್ಟಣದ ತಾಳತ್ರಯವಿಲ್ಲದೆ ಅರಿಷಡ್ವರ್ಗಗಳಿಂದ, ಅಷ್ಟಮದಗಳಿಂದ, ಸಪ್ತವ್ಯಸನಗಳಿಂದ ಬಳಲಿ ಬೆಂಡಾಯಿತು. ಶ್ರೀಕೃಷ್ಣನ ಗೀತೆ ಆಲಿಸಲು ಯಾರಿಗೂ ಸಾಧ್ಯವಾಗಲಿಲ್ಲ. ಭೂಮಿಗಾಗಿ ದುಡಿದರು, ಹೇಮಕ್ಕಾಗಿ ಮಡಿದರು. ಕಾಮಿನಿಗಾಗಿ ಮಡಿದರು. ಅವು ಯಾವು ಕಾಯದವಲ್ಲವೆಂದು ಕಾಯವನ್ನು ಆವರಿಸಿದ ಮನ ತಿಳಿಯಲೇ ಇಲ್ಲ. ಕಾಯದಲ್ಲಿಯೇ ಸಂಗಮವಾದ ಶ್ರೀಕೃಷ್ಣ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಬೆರಗಾದರು. ಕಾಯವನ್ನು ಆವರಿಸಿದ ಮನಕ್ಕೆ, ಕಾಯದಲ್ಲಿಯೇ ಸಂಗಮವಾದ ಪರಮಾತ್ಮನಿಗೆ ಶರಣು ಹೋಗುವುದು ತಿಳಿಯಲೇ ಇಲ್ಲ. ಕೊಡುವುದಕ್ಕೆ ತೆಗೆದುಕೊಳ್ಳುವುದಕ್ಕೆ ಏನು ಇಲ್ಲ ಎಂಬುದು ಮನಕ್ಕೆ ಹೊಳೆಯಲೇ ಇಲ್ಲ. ತನ್ನ ತಾನು ಪರಮಾತ್ಮನಿಗೆ ಅರ್ಪಿಸಿಕೊಳ್ಳುವುದಕ್ಕೆ ಮನಕ್ಕೆ ತಿಳಿಯದಿದ್ದಕ್ಕಾಗಿ ಕಾಯದಲ್ಲಿಯೇ ಇದ್ದ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಬೆರಗಾದನು.

**1089**

**ಸುಗುಣ ಮಣಿಮಾಲೆಗಳಗಣಿತ ಮಹಿಮನ ಹೊಂದಲಶಕ್ಯವಲ್ಲ.**
**ಕುಗುಣಿಗಳಂತರಂಗ ಶಿವನಲ್ಲಿ ಬರೆಯಲುದಯವಾದಡೆ,**
**ಅಲ್ಲ ಉಪಾಯವೆಂತು ಕಪಿಲಸಿದ್ಧ ಮಲ್ಲಿಕಾರ್ಜುನಾ?**

ಕಾಯದಲ್ಲಿ ಸುಗುಣ ಮಣಿಮಾಲೆಗಳ ಅಗಣಿತ ಮಹಿಮನು ಬಚ್ಚಿಟ್ಟುಕೊಂಡಿದ್ದಾನೆ. ಕಾಯವನ್ನು ಆವರಿಸಿದ ಮನ ಆತನನ್ನು ಹುಡುಕಿ ಆತನಿಗೆ ಶರಣು ಹೋಗಿ ಶರಣನಾಗಲೇಬೇಕು. ಅಂದರೆ ಮಾತ್ರ ಆ ಮಹಾ ಮಹಿಮನೆ ಶರಣನಿಗೆ ಪತಿಯಾಗುತ್ತಾನೆ. ಶರಣ ಆ ಮಹಾ ಮಹಿಮನಿಗೆ ಸತಿಯಾಗುತ್ತಾಳೆ. ಕಾಯ, ಸತಿ-ಪತಿಗಳಿಗೆ ಅರಿವಿನ ಮನೆಯಾಗುತ್ತದೆ. ಆದರೆ ಮನಕ್ಕೆ ತಾನು ಸತಿಯಾಗಿ ಮಹಾ ಮಹಿಮನನ್ನು ಪತಿಯನ್ನಾಗಿಸಿಕೊಳ್ಳುವುದು ಸಾಧ್ಯವಾಗುತ್ತಿಲ್ಲ.

ಬದಲಾಗಿ ಮನ ತಾನು ಸಂಗ್ರಹ ಮಾಡಿಕೊಂಡ ಅಜ್ಞಾನವನ್ನು ಕಾಯದಲ್ಲಿ ತುರಿಕಿ ಅದನ್ನು

ಉಗ್ರಾಣವನ್ನಾಗಿಸಿಕೊಂಡಿದೆ. ತಾನು ಅನುಭವಿಸಿದ ಸುಖ ದುಃಖಗಳನ್ನು ಕಾಯ ಇರುವವರೆಗೆ ಅನುಭವಿಸುತ್ತ ಮರಣಕ್ಕೆ ತುತ್ತಾಗುತ್ತದೆ.

ಮನ ತನ್ನ ಕುಗುಣಗಳನ್ನು ಅಂತರಂಗದಲ್ಲಿರುವ ಶಿವನಲ್ಲಿ ಬರೆಯಲು ಅನುವಾದರೆ ಉಪಾಯವೆಂತು ಎಂದು ಗುರುದೇವನನ್ನು ಕೇಳಿ ಆತನ ಸಹಕಾರದಿಂದ ಬರೆಯಲು ಅನುವಾದಡೆ ತನ್ನ ಸಕಲ ಅಜ್ಞಾನಗಳು ಕೆಳಗುರುಳಿ ಜ್ಞಾನಾಗ್ನಿಗೆ ಆಹುತಿಯಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ.

**1090**

**ಸುಚಿತ ಕರದಲಿ ಗುರುವ ಪ್ರಾಣಾಂತದಲಿ ಚರವ**
**ಭೇದಾದಿ ಭೇದದಲಿ ಶುದ್ಧಲಿಂಗವ ಮಾಡಿ**
**ಏಕಏಕವೆಂದು ಅರ್ಚಿಸಿ ಪ್ರಸನ್ನ ಪ್ರಸಾದವ ಕೊಂಡು**
**ಗುರುವಿನ ಪೂರ್ವಾಶ್ರಮವ ಕಳೆದು ಶಿಷ್ಯ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಸಹಜವಾದ ಅರಿವು ಇದೆ. ಅರಿವು ಇಲ್ಲದ ಕಾಯಗಳೇ ಭೂಮಿಯ ಮೇಲೆ ಇಲ್ಲ. ಕಾಯವನ್ನು ಆವರಿಸಿದ ಮನ ಕಾಯದ ಸಂಗ ಮಾಡಿರುವುದರಿಂದ ಅರಿವು ಮರೆವಾಗಿದೆ. ಮನ ಕಾಯದಲ್ಲಿಯೇ ಇದ್ದ ಅರಿವನ್ನು ಬಳಕೆ ಮಾಡುವುದು ಬಿಟ್ಟು ಗುರುದೇವನ ಕಾಯದಿಂದ ಹೊರಬಂದ ಅರಿವನ್ನು, ಮನ ಗುರುದೇವನಿಗೆ ಶಿಷ್ಯನಾಗಿ, ಆತ ನುಡಿದ ನುಡಿಗಳನ್ನು ಸಂಗ್ರಹ ಮಾಡಿಕೊಂಡು, ಆ ನುಡಿಗಳನೇ ಬಳಸಿದರೆ, ಶಿಷ್ಯ ಗುರುದೇವನ ಕಾಯಕ್ಕೆ ಮರುಳಾದಂತೆ! ಶಿಷ್ಯನ ಕಾಯದ ಅರಿವಿಗೆ ಮೊರೆಹೋಗದೆ ಗುರುದೇವನ ನುಡಿಗಳಿಗೆ ಮೊರೆಹೋದರೆ ಆ ನುಡಿಗಳು ಅಜ್ಞಾನವನ್ನು ಕೊಲ್ಲುವುದಿಲ್ಲ.

ಗುರುದೇವನ ಕಾಯವಾದರೇನು? ಶಿಷ್ಯನ ಕಾಯವಾದರೇನು? ಕಾಯ ಕಾಯವೇ ಹೊರತು ಅನ್ಯವಲ್ಲ. ಗುರುದೇವ, ಶಿಷ್ಯನ ಕಾಯದಲ್ಲಿದ್ದ ಅರಿವಿನ ಸಂಪತ್ತನ್ನು ಶಿಷ್ಯನಿಗೆ ಪರಿಚಯ ಮಾಡಿಕೊಡುತ್ತಾನೆ. ಅದರಲ್ಲಿದ್ದ ಅರಿವನ್ನು ಬಳಕೆ ಮಾಡುವ ವಿಧಾನವನ್ನು ಆತನಿಗೆ ಹೇಳಿಕೊಡುತ್ತಾನೆ. ಗುರುದೇವ ಹೇಳಿದ ಸೂತ್ರವನ್ನು ಶಿಷ್ಯ ಮನದ ಮೂಲಕ ತನ್ನ ತನುವಿನಲ್ಲಿಯೇ ತನ್ಮಯವಾದ ಅರಿವನ್ನು ಬಳಕೆ ಮಾಡಬೇಕು. ಬದಲಾಗಿ ಗುರುದೇವ ಹೇಳಿದ್ದನ್ನೆಲ್ಲ ಮರೆತು ಗುರುದೇವನನ್ನೇ ಕೊಂಡಾಡಿದರೆ, ಆತನನ್ನೆ ಅರ್ಚಿಸಿ, ಪೂಜಿಸಿ, ಪ್ರಾರ್ಥಿಸಿ ಆತನ ಮೇಲೆ ಮೋಹಗೊಂಡರೆ ಗುರುದೇವನಾದರೂ ಏನು ಮಾಡಿಯಾನು? ಗುರುದೇವ ಸತ್ತ ಮೇಲೆ ಶಿಷ್ಯ ಗುರುವಿನ ಆಶ್ರಮಕ್ಕೆ ವಾರಸುದಾರ ಆಗುತ್ತಾನೆಯೆ ಹೊರತು, ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಮನವೆಂಬ ಶಿಷ್ಯ ವಾರಸುದಾರ ಆಗುವುದಿಲ್ಲ!

ಸಕಲ ತನುಗಳಲ್ಲಿಯೂ ಅರಿವು ತನ್ಮಯವಾಗಿದ್ದಾಗ ತನುವಿನಲ್ಲಿ ತನ್ಮಯವಾದ ಅರಿವಿನ ಸಂಪತ್ತನ್ನೇ ಮನ ಪಡೆದು ಘನಮನವಾಗಬೇಕು. ಸ್ವತಃ ಗುರುವಾಗಬೇಕು.

ಗುರುದೇವ ಶಿಷ್ಯರಿಬ್ಬರೂ ಗುರುವಿನ ಪೂರ್ವಾಶ್ರಮವನ್ನು ಶಿಷ್ಯ ಕಳೆದುಕೊಳ್ಳಬೇಕು. ಶಿಷ್ಯನ ಪೂರ್ವಾಶ್ರಮವನ್ನು ಗುರುದೇವ ಕಳೆದುಕೊಳ್ಳಬೇಕು.

ಗುರು ಕಾಯ ಉಳ್ಳವನಲ್ಲ, ಕಾಯದಲ್ಲಿದ್ದವನು. ಶಿಷ್ಯ ಕೂಡಾ ಕಾಯ ಉಳ್ಳವನಲ್ಲ, ಕಾಯದಲ್ಲಿದ್ದವನು. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಶರಣು ಹೋಗಿ ಶರಣಾಗತನಾಗಿ ಆ ಗುರುದೇವನೆ ತಾನಾಗಬೇಕು.

ಗುರುದೇವನದು ಒಂದು ವೇಷವಲ್ಲ. ಶಿಷ್ಯನದು ಕೂಡಾ ಒಂದು ವೇಷವಲ್ಲ. ಒಂದು ಕಾಯದಲ್ಲಿ ಗುರುದೇವನು ಇದ್ದಾನೆ, ಶಿಷ್ಯನೂ ಇದ್ದಾನೆ. ಇದು ಮನದ ಅನುಭವಕ್ಕೆ ಬಂದಾಗಲೇ ಮನ ತನಗೆತಾನೇ ಕಪಿಲಸಿದ್ಧ ಮಲ್ಲಿಕಾರ್ಜುನನೆ ಆಗುತ್ತದೆ.

**1091**

**ಸುಜನ ಸಂಗತಿಯೊಳಗೆ ಅವ್ಯಯನು ತಾನೀಗ**
**ಭಜಿಸಿ ಅರಸುವವರಿಗೆ ತಾನು ಸಿಕ್ಕ.**
**ತನುವನ್ನು ಬೇಡದೆ ಅನ್ಯರನು ರಕ್ಷಿಸಿದೆ**
**ಉನ್ನತವು ಸದ್ಭಕ್ತಿ ಸೊಮ್ಮದಾತ**
**ಕರ್ಮವನು ಮೀರಿದನು ಕೇಳ.**
**ಅತಿಶಯದ ಭಕ್ತಿಯಲ್ಲಿ ದಿಟಘಟಿತ ಸಂಪನ್ನ**
**ನಿತ್ಯ ಭಕ್ತಿ ಸನ್ನಿಹಿತ ನಿಟಿಲಾಕ್ಷನು**
**ಕುಟಿಲಗಳೆದಾನೀಗ ಕಂಡು ಸುಖಿಯ್ಯೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಸಂಗಮುವಾದ ಸುಜನನು, ಅವ್ಯಯನು, ಅಪ್ರಮಾಣನು, ಅಪ್ರತಿಮನು. ಕಾಯವನ್ನು ಆವರಿಸಿದ ಮನದಿಂದ ಭಜಿಸಿ ಹುಡುಕುವ ಕಾಯದ ಕಾಯಕದಲ್ಲಿಯೇ ಹುಡುಕುವ ಮನಕ್ಕೆ ಸಿಕ್ಕೆ ಸಿಕ್ಕುತ್ತಾನೆ.

ತನು ಯಾವ ತನುವನ್ನು ಬೇಡಬೇಕಾಗಿಲ್ಲ. ಬೇಡುವ ಗುಣ ದುರ್ಜನ ಮನಕ್ಕೆ ಮಾತ್ರ ಇದೆ. ಅಂತಹ ಮನವು ಸಜ್ಜನನ ಸಂಘ ಮಾಡಿದಾಗ, ಆತನ ಸಂಗಾತಿಯಾದಾಗ, ಆತನ ಸೊಮ್ಮು ತಾನೇ ಆದಾಗ, ಸಕಲ ಕರ್ಮಗಳನ್ನು ಮೀರಿ ಅತಿಶಯದ ಭಕ್ತಿಯಲ್ಲಿ ದಿಟ ಘಟಿತ ಸಂಪನ್ನಳಾಗುತ್ತಾಳೆ.

ನಿಟಿಲಾಕ್ಷನು ನಿತ್ಯ ಭಕ್ತಿ ಸನ್ನಿಹಿತಳಿಗೆ ಒಲಿಯುವಾತ. ಆಕೆಯ ಕುಟಿಲತೆಗಳನೆಲ್ಲಾ ತನಗೆ ತಾನೇ ಕಳೆದುಕೊಂಡು ಸುಜನನ ಸಂಗಾತಿಯಾಗಿ ಸುಖಿಯಾದಳು. ಪರಮ ಸುಖಿಯಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೆ ತಾನಾದಳು.

**1092**

**ಸುರಭಿಮಧ್ಯದಲ್ಲಿಪ್ಪ ವಿರಳಕೂಪವ ನೋಡೆ**
**ಅರಿದಯ್ಯ ಅರಿದಯ್ಯ ಭಕ್ತಿಪಥವು.**
**ಕರುಣಾಕರನೆ ಕಪಿಲಸಿದ್ಧಮಲ್ಲೇಶ್ವರ.**

ಕಾಯದ ರಹಸ್ಯವನ್ನು, ಕಾಯವನ್ನು ಆವರಿಸಿದ ಮನದಿಂದಲೇ ಅರಿಯಬೇಕಾಗಿದೆ. ಅರಿದರಿದು ಆ ಅರಿವೇ ತಾನಾಗಬೇಕಾಗಿದೆ.

ಲೋಕದ ಭಕ್ತಿಯೇ ಬೇರೆ, ಅರಿವಿನ ಕಾಯಕದಲ್ಲಿರುವ ತನುವಿನ ಭಕ್ತಿಯೇ ಬೇರೆ. ಅರಿವಿನ ಕಾಯಕದಲ್ಲಿರುವ ತನುವಿನ ಭಕ್ತಿ ವಿರಳಾತಿವಿರಳ. ತನುವನ್ನು ಆವರಿಸಿದ ಮನದಿಂದಲೇ ತನುವಿನಲ್ಲಿಯೇ ತನ್ಮಯವಾದ ಅರಿವಿಗೆ ಭಕ್ತಿ ಮಾಡುತ್ತಾ ಭಕ್ತಿಪಥವನ್ನು ತನಗೆ ತಾನೇ

ಕಂಡುಕೊಳ್ಳಬೇಕು. ಅರಿವಿನ ಭಕ್ತಿ ಅರಿದರಿದು ಮಾಡುವ ಭಕ್ತಿ. ಈ ಭಕ್ತಿ ಯಾರಿಗೂ ಕಾಣುವುದಿಲ್ಲ. ತನಗೆ ಮಾತ್ರ ಕಾಣದೇ ಇರುವುದಿಲ್ಲ.

ಲೋಕದ ಭಕ್ತಿ ಗೋಚರದ ಭಕ್ತಿ. ಕಾಯ ಕಾಯಕ್ಕೆ ಮಾಡುವ ಭಕ್ತಿ. ಕಾಯದಿಂದ ಕಾಯದ ಮೂಲಕ ಕಾಯದಿಂದಲೇ ಮಾಡಿದ ದೇವರಿಗೆ ಮಾಡುವ ಭಕ್ತಿ. ಅದು ಎಲ್ಲರಿಗೂ ಕಾಣುತ್ತದೆ. ಇದು ಭಕ್ತಿಪಥವಲ್ಲ. ಅರಿದರಿದು ಮಾಡುವ ಭಕ್ತಿಯೂ ಅಲ್ಲ. ಕಾಲಾನುಕಾಲದಿಂದ ಸಂಪ್ರದಾಯದ ಮೂಲಕ ಮಾಡುವ ಭಕ್ತಿ. ಹೀಗೆ ಮಾಡುವ ಭಕ್ತಿ ಭಕ್ತಿಯೂ ಅಲ್ಲ. ಅದು ದೇವರು ಅಲ್ಲ. ಅರಿಯಲು ಹೋದರೆ ಅದು ಕಲ್ಲು, ಮರೆತಿರುವುದಿಂದ ಕಲ್ಲೇ ದೇವರಾಗಿದೆ.

ತನುವನ್ನು ಆವರಿಸಿದ ಮನ, ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವರನ್ನು ಕಂಡುಕೊಂಡು ಆ ಗುರುದೇವರಿಗೆ ಮಾಡುವ ಭಕ್ತಿಯನ್ನೆ ಶರಣರು ಭಕ್ತಿಪಥ ಎಂದು ಕರೆದಿದ್ದಾರೆ. ಅಂಗದಲ್ಲಿ ಸಂಗಮವಾದ ಗುರುದೇವ ಕರುಣಾಕರನು. ಕಪಿಲಸಿದ್ಧ ಮಲ್ಲೇಶ್ವರನು.

**1093**

**ಸುರುಚಿರ ಸ್ಥಾನದಲ್ಲಿ ಮೂರು ಗುಂಡನಿಟ್ಟು ಸುಡುತ್ತೈದಾರೆ**
**ಕಾಯ ಕರಣೇಂದ್ರಿಯ ಗುಣಂಗಳ ಹುಳ್ಳಿಯ ಮಾಡಿ.**
**ಕಾಯ ಕರಣೇಂದ್ರಿಯಗಳ ಹುಳ್ಳಿ ಸವೆದು ಅಜಲೋಕವ ತಾಗಿ,**
**ಅಲ್ಲಿರ್ದ ಶ್ವೇತಜಲ ಪ್ರವಾಹವಾಗೆ, ಅದನುಂಡು,**
**ನಿತ್ಯ ಮಹೋತ್ಸಾಹನಾದೆ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಕರಣೇಂದ್ರಿಯಗಳ ಗುಣಗಳು ಇವೆ. ಹಾಗೆಯೇ ಜ್ಞಾನ ಕಿರಣೇಂದ್ರಿಯಗಳು ಇವೆ. ಕರಣೇಂದ್ರಿಯಗಳ ಮೂಲಕ ಕಾಯ ಸುಖ ದುಃಖಗಳನ್ನು ಅನುಭವಿಸಿದರೆ, ಜ್ಞಾನ ಕಿರಣೇಂದ್ರಿಯದ ಮೂಲಕ ಪರಮ ಸುಖವನ್ನು ಅನುಭವಿಸುತ್ತದೆ. ಕರಣೇಂದ್ರಿಯಗಳು ಕಾಯವನ್ನು ಭ್ರಮಾ ಲೋಕಕ್ಕೆ ತಳ್ಳಿದರೆ, ಮಹಾಜ್ಞಾನ ಕಿರಣೇಂದ್ರಿಯ ಭ್ರಮಾ ಲೋಕವನ್ನು ಸುಟ್ಟು ಬ್ರಹ್ಮಲೋಕದತ್ತ ಕರೆದೊಯುತ್ತವೆ. ಅಲ್ಲಿ ಶುದ್ಧ ಶ್ವೇತ ಜಲದ ಪ್ರವಾಹ ಸದಾ ಹರಿಯುತ್ತದೆ. ಕಾಯವನ್ನು ಆವರಿಸಿದ ಮನ, ಕಾಯದೊಳಗಿದ್ದ ಬ್ರಹ್ಮರಸವನ್ನು ಪಾನ ಮಾಡಿ, ನಿತ್ಯ-ನಿತ್ಯ ಉತ್ಸುಕನಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ. ನಿತ್ಯ ನಿತ್ಯ ಸುಡುವ ರಾಜಸ, ತಾಮಸ, ಸಾತ್ವಿಕ ಗುಣಗಳಿಂದ ಹೊರಗಾಗಿ ತ್ರಿಗುಣಾತೀತನೆ ತಾನಾಗುತ್ತದೆ.

**1094**

**ಸೂಕ್ಷ್ಮಕರದಲ್ಲಿ ಶುದ್ಧ ಸಿಂಹಾಸನವನಿಕ್ಕಿ ಆಕಾರವನರ್ಚಿಸಿ**
**ಆನಂದವನೆಯ್ದಿಪ್ಪವರನೆನಗೆ ತೋರ!**
**ನೆನಹೆ ಮನೆಯಾಗಿ, ಆ ಮನೆಯೆ ಮತಿಯಾಗಿ,**
**ಆ ಮತಿಯೆ ಮಹಾಬೆಳಗಿನ ಕೂಟವಾಗಿ ಇಪ್ಪವರ ಎನಗೆ ತೋರಾ.**
**ಅನಂಗವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ನಿರಾಕಾರವೆಂಬ ಸೂಕ್ಷ್ಮಕಾಯವೊಂದಿದೆ. ಕಾಯದಲ್ಲಿ ಅರಿವಿನ ಮಲ್ಲಯ್ಯನ ಕಾಯವೊಂದಿದೆ. ಆತ ತನಗೆ ಇಚ್ಛೆ ಆದಲ್ಲಿ ಸೂಕ್ಷ್ಮ ಕಾಯದಲ್ಲಿ ಅರಿವಿನ ಶುದ್ಧ ಸಿಂಹಾಸನವನ್ನು ಹಾಕಿಕೊಂಡು ಅದರ ಮೇಲೆ ಕೂತುಕೊಂಡು ಸ್ಥೂಲಕಾಯವನ್ನೆ ಕೈಲಾಸವನ್ನಾಗಿಸುತ್ತಾನೆ.

ಅರಿವಿನ ಮಲ್ಲಯ್ಯನಿದ್ದ ಕಾಯ, ಆ ಕಾಯದಲ್ಲಿಯೇ ಮಲ್ಲಯ್ಯನಿದ್ದಾನೆಂದು ಕಾಯವನ್ನು ಆವರಿಸಿದ ಮನ ತಿಳಿದಾಗಲೇ, ಮನದ ಮತಿಯೇ ಮಹಾ ಬೆಳಗಿನ ಕೂಟವಾಗಿ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ.

ಅಂಗ ಅನಂಗ ವಿಧಾರಣ ಅರಿವಿನ ಸಿಂಹಾಸನವಾಗುತ್ತದೆ. ಅಂಗದಲ್ಲಿಯೇ ಇದ್ದ ಅರಿವಿನ ಲಿಂಗಯ್ಯ ಅಂಗವನ್ನು ಧಾರಣೆ ಮಾಡಿಕೊಳ್ಳದೇ ಅಂಗವನ್ನು ಸೋಂಕದೆ ಅಂಗಕ್ಕೆ ಆಧಾರವಾಗಿದ್ದು ಅಂಗವನ್ನು ಬೆಳಗಿಸುತ್ತಾನೆ. ಲಿಂಗಾಂಗವನ್ನು ಬೆಳಗಿಸುತ್ತಾನೆ.

ಅಂಗವನ್ನು ಆವರಿಸಿದ ಮನ ಕೂಡ ಅನಂಗವೆ. ಅಂಗದಲ್ಲೇ ಸಂಗಮವಾದ ಅರಿವಿನ ಮಲ್ಲಯ್ಯನು ಕೂಡಾ ಅನಂಗನೇ ಆಗಿದ್ದಾನೆ. ಮನೋಮಯವಾದ ಅನಂಗ ಅಂಗದಲ್ಲಿಯೇ ಸಂಗಮವಾದ ಅರಿವಿನ ಅನಂಗದಲಿ ಕೂಡಿ ಲಿಂಗಾಂಗವಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**1095**

**ಸೂಕ್ಷ್ಮನೈ ನೀನು.**
**ಲೋಕ ವೀರೇಳರ ಧಾರಣೆ ರೋಮಾಂತ್ಯದಲ್ಲಿ**
**ಬಹಳವಪ್ಪನ ಅಯ್ಯ ನಿಮ್ಮ**
**ಸೂಕ್ಷ್ಮಮಂ ಮಾಡಿ ಇತ್ತ ಗುರು ಚೆನ್ನಬಸವಣ್ಣನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಸಂಗಮವಾದ ಸೂಕ್ಷ್ಮಾತಿ ಸೂಕ್ಷ್ಮವಾದ ಅರಿವನ್ನೆ ಶ್ರೀಗುರುದೇವನನ್ನಾಗಿಸಿ, ಕಾಯವನ್ನು ಆವರಿಸಿದ ಮನವನ್ನೆ ಶಿಷ್ಯನನ್ನಾಗಿಸಿ, ಆ ಶಿಷ್ಯನ ಕೈಯಲ್ಲಿ ಶ್ರೀಗುರುದೇವನನ್ನು ಕೊಟ್ಟ ಮೊಟ್ಟ ಮೊದಲ ಗುರುದೇವನೆ ಚೆನ್ನಬಸವಣ್ಣ. ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೊಂದಿಗೆ ಮಾತನಾಡಿದ್ದಾರೆ.

ಅಯ್ಯಾ ಪರಮಾತ್ಮನೇ ಶ್ರೀಗುರುವೆ ನೀನು ಸೂಕ್ಷ್ಮಾತಿ ಸೂಕ್ಷ್ಮನಯ್ಯ. ಹದಿನಾಲ್ಕು ಲೋಕಗಳನ್ನು ಬಚ್ಚಿಟ್ಟುಕೊಂಡು ಕಾಯ ಲೋಕದ ರೋಮದ ಅಂತ್ಯದಲ್ಲಿ ವಾಸ ಮಾಡಿದ ನಿನ್ನನ್ನು ನನ್ನ ಕೈಗೆ ಇತ್ತಾತ್ತ ಗುರು ಚೆನ್ನ ಬಸವಣ್ಣನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನ.

**1096**

**ಸೂತಕ ಪಾತಕ ವಿರಹಿತವಾದಡೆ**
**ಆತನ ತನು ಸಾಕ್ಷಾತ್ ಶಿವನ ತನು;**
**ಆತ ನಿತ್ಯ ಕೇವಲ ಮುಕ್ತ ನೋಡಾ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ಶಿವಲಿಂಗವಿಡಿದ ಮಾಹೇಶ್ವರನು.**

ಕಾಯ, ಕಾಯವನ್ನು ಆವರಿಸಿದ ಮನದಿಂದಾಗಿ ನೋಡುವ ಕಣ್ಣಿನ ಮೂಲಕ ಸೂತಕಕ್ಕೆ

ಒಳಗಾಗುತ್ತದೆ. ಕೇಳುವ ಕಿವಿಯ ಮೂಲಕ ಸೂತಕಕ್ಕೆ ಒಳಗಾಗುತ್ತದೆ. ಮೂಸಿಸುವ ಮೂಗಿನ ಮೂಲಕ ಸೂತಕಕ್ಕೆ ಒಳಗಾಗುತ್ತದೆ. ರುಚಿಸುವ ನಾಲಿಗೆಯ ಮೂಲಕ ಸೂತಕಕ್ಕೆ ಒಳಗಾಗುತ್ತದೆ. ಸ್ಪರ್ಶಿಸುವ ಚರ್ಮದ ಮೂಲಕ ಸೂತಕಕ್ಕೆ ಒಳಗಾಗಿ ಮನ ಕಾಯವನ್ನು ಪಾತಕಿಯಾಗಿಸುತ್ತದೆ.

ನೋಡುವ ಕಣ್ಣಿನಲ್ಲಿ ಸೂತಕವು ಇದೆ, ಆ ಸೂತಕವನ್ನು ಕಳೆದು ಅರಿವಿನಿಂದ ನೋಡುವ ಶಿವನು ಅಲ್ಲಿಯೇ ಇದ್ದಾನೆ. ಕಣ್ಣಿನಲ್ಲಿ ಬಚ್ಚಿಟ್ಟುಕೊಂಡ ಅರಿವಿನ ಶಿವನನ್ನು, ಸೂತಕದಿಂದ ನೋಡುವ ಮನ ಪೂಜಿಸಿ ಅರ್ಚಿಸಿ ಶಿವನ ಕಣ್ಣಿನ ಮೂಲಕ ನೋಡಿದಾಗ, ಮನದ ಸೂತಕ ತಂತಾನೇ ಕಳೆದುಕೊಳ್ಳುತ್ತದೆ. ಕಣ್ಣು ಶಿವನ ಹಣೆಗಣ್ಣಾಗುತ್ತದೆ. ತನು ಸಾಕ್ಷಾತ್ ಶಿವನ ತನು ಆಗುತ್ತದೆ.

ಕಿವಿ, ಚರ್ಮ, ಮೂಗು ನಾಲಿಗೆಯಲ್ಲಿ ನಾಟ್ಯ ಮಾಡುವ ಅಜ್ಞಾನದ ಸೂತಕವನ್ನು, ಅಲ್ಲಲ್ಲಿಯೇ ಇದ್ದ ಶಿವನಿಂದ ಕಳೆದುಕೊಂಡು ಮನ ಘನಮನವಾಗಬೇಕು. ಈ ಸೂತ್ರವನ್ನು ಬಳಸಿಕೊಂಡ ಕಾಯವೇ ನಿತ್ಯ ಕಾಯ. ಅದು ಕೈವಲ್ಯ ಕಾಯ. ಸಕಲ ಬಂಧನಗಳನ್ನು ಕಳಚಿಕೊಂಡು ಮುಕ್ತನಾದ ಮಹಾಕಾಯ. ಕಪಿಲಸಿದ್ಧ ಮಲ್ಲಿಕಾರ್ಜುನನು ವಾಸ ಮಾಡಿದ, ಶಿವಲಿಂಗವಿಡಿದು ಮಾಹೇಶ್ವರನು ವಾಸ ಮಾಡಿದ ಮಹಾಕಾಯ.

**1097**

**ಸೇವ್ಯನಾಗಿ ಸ್ವಯವಾದೆ, ಸಂಗಿಯಾಗಿ ನಿಸ್ಸಂಗಿಯಾದೆ.**
**ಆನಂದನಾಗಿ ಅನಾಮಯನಾದೆ.**
**ಸರ್ವದೊಳಗಾಡಿ ಸಾದಾಖ್ಯತತ್ತ್ವವ ಮೀರಿದೆ.**
**ಕಪಿಲಸಿದ್ದ ಮಲ್ಲಿಕಾರ್ಜುನ ಲಿಂಗಾ.**
**ನಿಜ ಸ್ವರೂಪವನರುಹಿ ಎನಗೆ ಚುಳುಕಾದೆ.**

ಪರಮಾತ್ಮನೇ, ನೀನು ಯಾರೆಂದು ನೀನೇ ಸೃಷ್ಟಿಮಾಡಿದ ಮನದಿಂದಲೇ ನಿನ್ನನ್ನು ನಾನು ತಿಳಿದೆ. ನಿನ್ನ ಸೇವಕನಾಗಿ ನಾನು ನಿನ್ನಲ್ಲಿಯೇ ಸ್ವಯವಾದೆ ತಂದೆ.

ಅಂಗದಲ್ಲಿಯೇ ಬಚ್ಚಿಟ್ಟುಕೊಂಡ ನಿನ್ನನ್ನು; ಅಂಗವನ್ನು ಆವರಿಸಿದ ಮನವೆಂಬ ನಾನು ನಿನ್ನನ್ನು ತಿಳಿದು ನಿನ್ನ ಸಂಗಿಯಾದೆ. ನಿನ್ನ ಸಂಗ ಮಾಡಿದ ನಾನು ನಿಸ್ಸಂಗಿಯಾದೆ ! ಆನಂದದಿಂದ ಅನಾಮಯನಾದೆ ಪರಮಾತ್ಮನೆ.

ಕಾಯವನ್ನು ಧಾರಣೆ ಮಾಡಿಕೊಂಡ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೇ; ಕಾಯವನ್ನು ಆವರಿಸಿದ ನಾನು, ಕಾಯದಲ್ಲಿಯೇ ನಿನ್ನನ್ನು ತಿಳಿದು, ಸಾದಾಖ್ಯ ತತ್ವವನ್ನ ಮೀರಿದೆ. ಸರ್ವಕಾಯಗಳೊಂದಿಗೆ ಆಡಿ, ಸಹಜನಾಗಿ, ನಿಜವನು ಅರಿತು ನಿಶ್ಚಿಂತನಾದೆ ! ಕಾಯವನ್ನು ಆವರಿಸಿದ ನನಗೆ ಕಾಯದಲ್ಲಿಯೇ ಇದ್ದ ನೀನು, ನಿನ್ನ ನಿಜಸ್ವರೂಪವನ್ನು ಎನಗೆ ಅರುಹಿದೆ. ಎನ್ನಲ್ಲಿ ನೀನು ಚುಳುಕಾದೆ ತಂದೆ. ನಿನ್ನ ಸೇವಕನಾಗಿ ಸ್ವಯವಾದೆ. ನಿನ್ನ ಸಂಗಿಯಾಗಿ ನಿಸ್ಸಂಗಿಯಾದೆ. ಆನಂದದಿಂದ ಅನಾಮಯನಾದೆ ಪರಮಾತ್ಮನೆ. ನಿನ್ನಿಂದಲೇ ನಾನು ನಿನ್ನನ್ನು ತಿಳಿದು; ನಿನ್ನನ್ನು ಮೀರಿದೆ ! ಮಗ ತಂದೆಯನ್ನು ಮೀರಿ ನಿಂತರೆ ತಂದೆಗೆ ಪರಮಸುಖ ! ಏಕೆಂದರೆ ನಾನು ನಿನ್ನ ವಾರಸುದಾರ !

**1098**

**ಸೊಲ್ಲಡಗಿ ಅಲ್ಲಲ್ಲಿ ಹದುಳಿಗನಾಗಿದ್ದೆನೆಲೆಯಯ್ಯ.**

**ಎಲ್ಲಾ ಠಾವಿನಲ್ಲಿ ನೀನಿಪ್ಪನೆಂದು ತೊಳಲಿ ಬಳಲಿ ಬಂದೆ.**
**ಸಲ್ಲಲಿತ ಗುರುವೆ,**
**ಎನಗೆ ಸೊಲ್ಲನರುಹಿ ಬ್ರಹ್ಮವಿಪ್ಪ ನೆಲೆಯ ತೋರಿದ**
**ಗುರುವೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನ; ಕಾಯದ ಸಂಗ ಮಾಡಿ, ತನಗೆ ಬೇಕಾದ ದೇವರನ್ನು ತನಗೆ ಬೇಕಾದಂತೆ ಕಲ್ಲಲ್ಲಿ ಕೆತ್ತಿ, ಆಲಯವನ್ನು ಕಟ್ಟಿ, ಉತ್ಸವಗಳನ್ನು ಮಾಡಿ, ಆರಾಧಿಸಿ ಪ್ರಾರ್ಥಿಸಿ ಬೇಡಿದರೂ ಮನದ ಸೊಲ್ಲು ಅಡಗಲಿಲ್ಲ. ಸಾತ್ವಿಕನಾಗಿ ಪೂಜಿಸಿತು. ರಾಜಸಿಗನಾಗಿ ಆರಾಧಿಸಿತು. ತಾಮಸಿಗನಾಗಿ ತನಗೆ ಬೇಕಾದ ಸುಖವನ್ನು ಅದರ ಬೇಡಿಕೆಯನ್ನು ಪರಮಾತ್ಮನಲ್ಲಿಟ್ಟು ನಾನಾ ರೀತಿಯಿಂದ ಆರಾಧಿಸಿದರೂ ತೊಳಲಿ ಬಳಲಿದರೂ ಪೂಜೆಗೆ ಒಳಗಾದ ದೇವರು ಒಲಿಯಲಿಲ್ಲ! ತಾನು ಪೂಜಿಸುವ ದೇವರು ದೇವರಲ್ಲವೆಂದು ತನಗೆ ಹೊಳೆಯಲೇ ಇಲ್ಲ!

ಕಾಯದಲ್ಲಿಯೇ ಬಚ್ಚಿಟ್ಟುಕೊಂಡ ಮನೋಹರವಾದ ಯೋಗ್ಯವಾದ ಸಲ್ಲಲಿತ ಗುರುದೇವನು ಕಾಯಧರಿಸಿ, ಗುರುವಾಗಿ ಬಂದು, ಎನಗೆ ಅರುಹಿದ. ಎನ್ನ ಸೊಲ್ಲಡಗಿತು !

ಮಾತಿನಿಂದಲೇ ಹದುಳಿಗನೆನ್ನಿಸಿಕೊಂಡಿದ್ದೆ ನಾನು. ಮಾತಿನಲ್ಲಿಯ ಮುತ್ತನ್ನು ಮಾತಿನ ಬುರುಡೆಯ ಬಿಚ್ಚಿ ಎನ್ನ ಮಾತನಡಗಿಸಿ ಮಾತನ್ನೆ ಮುತ್ತನ್ನಾಗಿ ತೋರಿದ; ಸಲ್ಲಲಿತ ಗುರು ! ಸಕಲ ಮಾತುಗಳು ಜ್ಯೋತಿರ್ಲಿಂಗವೆಂದು ತೋರಿದ ! ಪ್ರತಿ ಮಾತಲ್ಲಿರುವ ಬ್ರಹ್ಮನನ್ನು ಎನಗೆ ತೋರಿ ಶಬ್ದವನ್ನು ನಿಶ್ಯಬ್ದವಾಗಿಸಿದ ಕಪಿಲಸಿದ್ಧ ಮಲ್ಲಿಕಾರ್ಜುನಾ !

**1099**

**ಸೋಂಕಿನ ಸುಖ ಮೊದಲಾದವನೆಲ್ಲವನು ಚರಲಿಂಗಕ್ಕರ್ಪಿಸುವೆ.**
**ಆ ಅರ್ಪಿತಮುಖದಲ್ಲಿ ಇಷ್ಟಲಿಂಗವನರಿಯದೆ**
**ಚರಲಿಂಗಕ್ಕರ್ಪಿಸುವೆ.**
**ಆ ಚರಲಿಂಗಕ್ಕರ್ಪಿಸಿ ಮಿಕ್ಕ ಶೇಷವನು**
**ಇಷ್ಟಲಿಂಗಕ್ಕೆ ಒಗರವಾಗಿ ನೀಡಿ,**
**ಪ್ರಸಾದವಾಗಿ ಕೈಕೊಂಬೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗಕ್ಕೆ ಬಡಿದ ಸೋಂಕಿನ ಸುಖ ದುಃಖಗಳನ್ನು; ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಅರ್ಪಿಸುವೆ. ಆತ ಸಕಲವನ್ನು ಸಹಜವಾಗಿ ಸ್ವೀಕರಿಸುವ ಗಟ್ಟಿಗ. ಮನ, ತನಗೆ ಬೇಕಾದ ಸುಖವನ್ನು, ದುಃಖವನ್ನು ಸ್ಥೂಲಾಂಗದ ಮೂಲಕ ಸ್ವೀಕರಿಸುತ್ತದೆ. ತನುವಿಗೆ ಸುಖವಾದರೂ ಮನಕ್ಕೆ ಸುಖ. ತನುವಿಗೆ ದುಃಖವಾದರೂ ಮನಕ್ಕೆ ಸುಖ! ಮನಕ್ಕೆ ಬೇಕಾದ ಸುಖದುಃಖಗಳನ್ನು, ಮನ ತನುವಿನ ಮೂಲಕ ಸ್ವೀಕರಿಸಿದರೆ; ತನುವಿಗಂಟಿದ ಸುಖ ದುಃಖಗಳನ್ನು ತನುವಿನಲ್ಲಿಯೇ ತನ್ಮಯವಾದ ಚರಲಿಂಗಕ್ಕರ್ಪಿಸುವೆ. ಉಳಿದುದನು ಇಷ್ಟಲಿಂಗಕ್ಕೆ ಒಗರವಾಗಿ ನೀಡಿ ಪ್ರಸಾದವಾಗಿ ಕೈಕೊಂಬೆ ಕಪಿಲಸಿದ್ಧ ಮಲ್ಲಿಕಾರ್ಜುನ.

ಪ್ರಸಾದವೆಂದರೆ: ಸ್ವೀಕರಿಸಿದ ಸಕಲ ಪದಾರ್ಥಗಳು ಕಾಯದಲ್ಲಿ ಹೇಗೆ ಜೀರ್ಣವಾಗುತ್ತವೆಯೋ ಹಾಗೆಯೇ ಮನ ತಾನು ದೃಶ್ಯದಿಂದ ಸ್ವೀಕರಿಸಿದ ವಸ್ತು ಕಣ್ಣಿನಲ್ಲಿ ಪ್ರಸಾದವಾಗಬೇಕು. ಕೇಳಿದ ಶಬ್ಧ ಕಿವಿಯಲ್ಲಿ ಪ್ರಸಾದವಾಗಬೇಕು. ಮುಟ್ಟಿದ ಸ್ಪರ್ಶ ಚರ್ಮದಲ್ಲಿ

ಪ್ರಸಾದವಾಗಬೇಕು. ಮೂಸಿಸಿದ ಸುಗಂಧ ದುರ್ಗಂಧ ಮೂಗಿನಲ್ಲಿ ಪ್ರಸಾದವಾಗಬೇಕು. ರುಚಿಸಿದ ಪದಾರ್ಥ ನಾಲಿಗೆಯಲ್ಲಿ ಪ್ರಸಾದವಾಗಬೇಕು. ಮನಕ್ಕೆ ಇದು ಸಾಧ್ಯವಾಗುವುದಿಲ್ಲ. ಮನ ತನುವಿನ ಮೂಲಕ ಸ್ವೀಕರಿಸಿದ ಪದಾರ್ಥ, ತನು ಮತ್ತು ಮನದಲ್ಲಿ ಜೀರ್ಣವಾಗದೇ ಹಾಗೆಯೇ ಉಳಿಯುತ್ತದೆ.

ಸ್ವೀಕರಿಸಿದ ಪದಾರ್ಥ ಜೀರ್ಣವಾಗದಿದ್ದರೆ ಕಾಯ ವಿಲ ವಿಲನೆ ಒದ್ದಾಡುತ್ತದೆ. ಹಾಗೆಯೇ ನೋಡಿದ ಕೇಳಿದ ಸ್ಪರ್ಶಿಸಿದ ರುಚಿಸಿದ ಮೂಸಿಸಿದ ಪದಾರ್ಥ ಪ್ರಸಾದವಾಗದಿದ್ದರೆ ತನು ಇರುವವರೆಗೂ ತನುವಿನಲ್ಲಿ ಜೀರ್ಣವಾಗದೆ ತನುವಿನಲ್ಲಿಯೇ ಉಳಿದು ತನುವನ್ನು ಕಾಡುತ್ತದೆ.

ಹೀಗಾಗಿ ಶಬ್ದ ಸ್ಪರ್ಶ, ಗಂಧ, ರೂಪ, ರುಚಿಗಳನ್ನು ಲಿಂಗಯ್ಯನಿಗೆ ಅರ್ಪಿಸುವ ಕಲೆ ಮನಕ್ಕೆ ಗೊತ್ತಾದರೆ ಸಾಕು ಆತ ಸಕಲವನ್ನು ಪ್ರಸಾದವನ್ನಾಗಿಸಿಕೊಳ್ಳುತ್ತಾನೆ. ಅರಿವಿನ ಮಲ್ಲಯ್ಯನಿಗೆ ಮಾತ್ರ ಈ ಶಕ್ತಿ ಇದೆ!

**1100**

**ಸೋಹಂ ಪದಾಜ್ಞೆಯಲ್ಲಿ ಆನತವನರುಹಿಸದೆ**
**ದಾಸೋಹಮಿತಿ ಸಂಗಮದೊಳತಿಭಕ್ತಿಯಿಂ**
**ಆನಂದ ಬ್ರಹ್ಮಲೋಕವ ಲೋಕಿಸಿದಿರೆನ್ನ**
**ಚೇತನವು ಸಕಲಕ್ಕೆ ಶ್ರೀಗುರುವೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನ ಕಾಯದ ಮೂಲಕ ಸ್ವೀಕರಿಸುವುದೆಲ್ಲಾ ಪ್ರಸಾದವಲ್ಲ. ಯಾವ ಪದಾರ್ಥವನ್ನೂ ಮನಕ್ಕೆ ಕಾಯದ ಮೂಲಕ ಸಹಜವಾಗಿ ಸ್ವೀಕರಿಸಲು ಬರುವುದಿಲ್ಲ ವೆಂದಮೇಲೆ; ಮನ ಕಾಯದ ಮೂಲಕ ದಾಸೋಹ ಮಾಡುವುದಾದರು ಹೇಗೆ ? ಲಿಂಗ ಜಂಗಮಕ್ಕೆ ಅರ್ಪಿಸುವ ಕಲೆ ಮನಕ್ಕೆ ಕರಗತವಾಗದಿದ್ದರೆ, ಅದಕ್ಕೆ ದಾಸೋಹ ಭಾವನೆಯೂ ಬರುವುದಿಲ್ಲ.

ಮನ, ಕಾಯದ ಮೂಲಕ ಯಾವ ಪದಾರ್ಥವನ್ನು ಭುಂಜಿಸಿದರೂ, ಅದು ಲಿಂಗ ಜಂಗಮಕ್ಕೆ ಅರ್ಪಿತವಾಗುವುದು, ಎನ್ನುವ ನಿಜ ಮನಕ್ಕೆ ಬಾರದಿದ್ದರೆ ದಾಸೋಹ ಭಾವನೆಯೂ ಬರುವುದಿಲ್ಲ.

ಮಹಾಮನೆಯಲ್ಲಿ ಕಟ್ಟಿದ ಆಕಳನ್ನು ಕಳ್ಳರು ಕದ್ದೊಯಿದಾಗ, ಬಸವಣ್ಣನವರು ಕರುವನ್ನು ಬಿಟ್ಟು ಹೋಗಿರುವರಲ್ಲ ಎಂದು ಕನಿಕರ ವ್ಯಕ್ತಪಡಿಸಿದರು. ಮುಂದುವರೆದು 'ಇಲ್ಲಿ ಉಂಬಡು ಸಂಗ, ಅಲ್ಲಿ ಉಂಬಡು ಸಂಗ' ಎಂದರಂತೆ. ಇದು ಪ್ರಸಾದ ಸ್ವೀಕರಿಸುವ ಕಲೆ ಮತ್ತು ಸಹಜ ದಾಸೋಹಂ ಭಾವನೆಯ ಕಲೆ ! ಪರಮಾತ್ಮನಿಗೆ ಉಣ್ಣಿಸುತ್ತಾ ಉಣ್ಣುವ ಕಲೆ ! ಇಲ್ಲಿ ಉಂಡರು ಪರಮಾತ್ಮನೇ ಉಣ್ಣುತ್ತಾನೆ. ಅಲ್ಲಿ ಉಂಡರೂ ಪರಮಾತ್ಮನೇ ಉಣ್ಣುತ್ತಾನೆ ಎಂದು ಹೇಳುವ ಮಾತು ಸಣ್ಣ ಮಾತಲ್ಲ, ಅನುಭಾವದಿಂದ ಹೊರಬಂದ ಮಾತು.

ಬ್ರಹ್ಮ ಲೋಕದಲ್ಲಿ ಯಾರುಂಡರೇನು ? ಅದು ಬ್ರಹ್ಮವೇ ಆಗಿದೆ. ಬ್ರಹ್ಮ ಕಾಯವೇ ಆಗಿದೆ. ಕಾಯವನ್ನು ಕಳ್ಳ, ಭ್ರಷ್ಟಾಚಾರಿ, ಶ್ರೀಮಂತ, ಬಡವ, ಹೆಣ್ಣು-ಗಂಡು ಎಂದು ವಿಂಗಡಿಸುವಂತಿಲ್ಲ. ಅದು ಬ್ರಹ್ಮಕಾಯ ! ಪ್ರತಿಕಾಯದಲ್ಲಿ ಶ್ರೀಗುರುವೇ ಇದ್ದಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ಇದ್ದಾನೆ. ಮನ ತನ್ನ ಭ್ರಮೆಯನ್ನು ಕಳೆದುಕೊಂಡು ಬ್ರಹ್ಮನಾಗಬೇಕು ಅಷ್ಟೇ.

**1101**

**ಸ್ಥಲ ಹದಿನಾಲ್ಕಕ್ಕೆ ಜಲಂಗಳೇಳಾಗಿ**

**ಪರವೇಷ್ಟಿಸಿಕೊಂಡಿಪ್ಪುದು.**
**ಆ ಸ್ಥಲ ಜಲಾದಿಗಳಿಪ್ಪವು ಒಂದು ವಟವೃಕ್ಷದ ಪತ್ರದಲ್ಲಿ.**
**ಇಂಥ ವಟವೃಕ್ಷಂಗಳು ಹದಿನಾಲ್ಕನು**
**ಅವಗ್ರಹಿಸಿಕೊಂಡಿಪ್ಪ ನಿನ್ನಯ ಸೀಮೆ**
**ಸರ್ವಾಂಗವನವಗ್ರಹಿಸಿಕೊಂಡಿಪ್ಪುದು**
**ಎಮ್ಮ ಶರಣರ ಕರಸ್ಥಲವಾವುದ**
**ಘನವೆಂಬೆವಾವುದ ಕಿರಿದೆಂಬೆನೆಲೆಯಯ್ಯ.**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಸಕಲ ಕಾಯಗಳು ಜಲಬಿಂದುವಿನಿಂದಲೇ ಜನ್ಮ ತಳೆದಿವೆ. ಜಲವೇ ನೋಡಲು ದೃಶ್ಯವಾಗಿದೆ. ಕೇಳಲು ಶಬ್ಧವಾಗಿದೆ. ಮೂಸಿಸುವ ಗಂಧವಾಗಿದೆ. ಸ್ಪರ್ಶ ಮತ್ತು ರುಚಿಗೂ ಜಲವೇ ಕಾರಣವಾಗಿದೆ. ಕಾಯ ಒಂದು ವಟವೃಕ್ಷ. ಬುದ್ಧ ಇದನ್ನು ಬೋಧೀವೃಕ್ಷವೆಂದು ಕರೆದ. ಸಿದ್ಧರಾಮ ಶಿವಯೋಗಿಗಳು ಈ ಕೆಳಗಿನಂತೆ ಹೇಳಿದ್ದಾರೆ.

ಕಾಯವನ್ನು ಕಾಯದಲ್ಲಿರುವ ಹದಿನಾಲ್ಕು ಸ್ಥಲಕ್ಕೆ ಜಲಂಗಳೇಳಾಗಿ ಪರವೇಷ್ಟಿಸಿಕೊಂಡಿಪ್ಪುದು. ಆ ಸ್ಥಲ ಜಲಾದಿಗಳಿಪ್ಪವು ಒಂದು ವಟವೃಕ್ಷದ ಪತ್ರದಲ್ಲಿ:

ಕಾಯದಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಆಮಿಷ ಎಂಬ ಏಳು ತರದ ಅಜ್ಞಾನದಿಂದ ಮನ ಟಿಸಿಲೊಡೆದಿದೆ. ಹಾಗೆಯೇ ಅಗ್ನಿಲಿಂಗ, ಧನುರ್ಲಿಂಗ, ಧನಲಿಂಗ, ಖಡ್ಗಲಿಂಗ, ಧ್ಯಾನಲಿಂಗ, ಪರ್ವತಲಿಂಗವೆಂಬ ಏಳು ಲಿಂಗಗಳು ಕಾಯದಲ್ಲಿವೆ. ಹೀಗೆ ಸ್ಥಲ ಹದಿನಾಲ್ಕಕ್ಕೆ ಜಲಾಂಗಗಳೇ ಏಳೇಳಾಗಿವೆ. ಇಂಥ ವಟವೃಕ್ಷದಲ್ಲಿಯ ಹದಿನಾಲ್ಕನ್ನು ಅವಗ್ರಹಿಸಿಕೊಂಡಿರುವ ನಿನ್ನಯ ಸೀಮೆ ಸರ್ವಾಂಗವಾದರೆ, ಅದರಲ್ಲಿ ನಿಸ್ಸೀಮನೆನಿಸಿಕೊಂಡ ನೀನೇ ಸಂಗಮವಾಗಿರುವಿ.

ಕಾಯದ ವೃತ್ತಾಂತ ಹೀಗಿರುವಾಗ ಯಾವ ಕಾಯ ಕಿರಿಯದೆನ್ನಲು ಬರುತ್ತದೆ. ನೀನಿದ್ದ ಕಾಯ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನ ವಾಸಸ್ಥಾನ; ಅದು ಕೈಲಾಸ!

**1102**

**ಸ್ಥಳವೊಂದರಲ್ಲಿ ಕೂಪಂಗಳು ಹಲವಾಗಿ ಭವಿಸುತ್ತೈದಾವೆ.**
**ಮೊದಲಲ್ಲಿ ಮೂರು, ಅಂತರದಲ್ಲಿ ಆರು.**
**ಪರಸ್ಥಾನದಲ್ಲಿ ಒಂಬತ್ತು.**
**ವೈನ್ಯೆಯೆಂಬ ಅಕ್ಷರದ ಮೊದಲ ಬಹುಶ್ರುತವಪ್ಪ ಕಮಲ**
**ವಿಚಿತ್ರಾಂದೋಳನೆಂಬ ಭ್ರಮರ**
**ಪರಿಮಳವ ಸೂಸಿ ಬೀಸರವೋಗಲೀಯದೆ**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಗೆ**
**ಸರ್ವಸ್ವವನರ್ಪಿಸಿ ಸುಖಿಯಾಯಿತು.**

ಕಾಯಸ್ಥಲವೊಂದೆ. ಅದರಲ್ಲಿ ಹಲವಾರು ಅಜ್ಞಾನದ ಬಾವಿಗಳು ಇವೆ. ಸಿದ್ಧರಾಮ ಶಿವಯೋಗಿಗಳು ಮೊದಲಲ್ಲಿ ಮೂರು, ನಂತರದಲ್ಲಿ ಆರು, ಪರಸ್ಥಾನದಲ್ಲಿ ಒಂಭತ್ತು ಎಂದು ವಿಂಗಡಿಸಿದ್ದಾರೆ. ಮಹಾಭಾರತದಲ್ಲಿ ವ್ಯಾಸರು ಕಾಯದಲ್ಲಿ ಐದು ಪಾಂಡವರನ್ನು ದ್ರೌಪತಿಯನ್ನು

ನೂರಾವೊಂದು ಕೌರವರನ್ನು ಒಬ್ಬ ಕೃಷ್ಣನನ್ನು ಚಿತ್ರಸಿದ್ದಾರೆ.

ವಿಚಿತ್ರ ಆಂದೋಳನವೆಂಬ ಭ್ರಮರ ಪರಿಮಳವ ಸೂಸಿ ಬೀಸರವ ಹೋಗಲೀಯದೆ ಕಪಿಲಸಿದ್ಧ ಮಲ್ಲಿಕಾರ್ಜುನನಿಗೆ ತನ್ನ ಸರ್ವಸ್ವವನ್ನು ಅರ್ಪಿಸಿ ಸುಖಿಯಾಯಿತೆಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಸಭೆಯಲ್ಲಿ ದ್ರೌಪದಿಯ ಸೀರೆ ಸೆಳೆಯುವಾಗ ದ್ರೌಪದಿಯನ್ನು ರಕ್ಷಣೆ ಮಾಡಲು ಪಾಂಡವರಿಗೆ ಸಾಧ್ಯವಾಗಲಿಲ್ಲ. ಕೌರವ ಪಕ್ಷದ ಯಾರೂ ನೆರವಾಗಲಿಲ್ಲ. ಎದೆಗಂಟಿಸಿಕೊಂಡ ಎರಡು ಕೈಗಳನೆತ್ತಿ, ಶ್ರೀಕೃಷ್ಣನಿಗೆ ಮೊರೆ ಹೋಗಿ, ಸರ್ವಸ್ವನ್ನು ಆತನಿಗೆ ಅರ್ಪಿಸಿದಾಗಲೇ ಪರಮ ಸುಖಿ ಆದಳು.

**1103**

**ಸ್ತ್ರೀಯರ ಮೂವರ ಮುಂದುಗೆಡಿಸಿತ್ತು ಮೋಹ,**
**ಅರಿಯರವ್ವಾ, ತಾವೊಂದು ದೇಹವುಂಟೆಂದೆಂಬುದ.**
**ಅರಿಯರವ್ವಾ ತಾವೊಂದು ರೂಪುಂಟೆಂದೆಂಬುದ,**
**ತ್ರಿಗುಣಾತ್ಮಕವೇ ರೂಪಾಗಿ, ರೂಪು ಅರೂಪಾದಡೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ**
**ನೆರೆವ ನೆನಹಿನಲ್ಲಿ ಲೀಯವಾದರು.**

ಕಾಯ, ಹೆಣ್ಣು ಅಲ್ಲ ಗಂಡೂ ಅಲ್ಲ. ಕಾಯದಲ್ಲಿ ವಿಷ್ಣುವು ಇದ್ದಾನೆ. ಮಹೇಶ್ವರನು ಇದ್ದಾನೆ. ಬ್ರಹ್ಮನು ಇದ್ದಾನೆ. ಈ ಮೂವರು ಕಾಯ ಉಳ್ಳವರಲ್ಲ. ಈ ಮೂವರ ಸತಿಯರೂ ಕೂಡಾ ಕಾಯ ಉಳ್ಳವರಲ್ಲ.

ಸ್ತ್ರೀಯರ ಮೂವರ ಮುಂದುಗೆಡಿಸಿತ್ತು ಮೋಹ, ಅರಿಯರವ್ವಾ, ತಾವೊಂದು ದೇಹವುಂಟೆಂದೆಂಬುದ, ಅರಿಯರವ್ವಾ ತಮಗೊಂದು ರೂಪುಂಟೆಂದೆಂಬುದು, ತ್ರಿಗುಣಾತ್ಮಕವೇ ರೂಪಾಗಿದೆ. ಆ ರೂಪೇ ಅರೂಪಾದಡೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನನ್ನು ನೆರೆವರು. ಆತನ ನೆನಹಿನಲ್ಲಿ ಲೀಯವಾಗುವರು.

**1104**

**ಸ್ಥೂಲ ಸೂಕ್ಷ್ಮ ಕಾರಣನೆಂದೆಂಬರಲ್ಲಾ ನಿನ್ನನು.**
**ಆದರ ಹಿಂದು ಮುಂದನರಿಯರು: ಬಂದ ಹಾಂಗೆ ನುಡಿವರು.**
**ಸ್ಥೂಲಕ್ಕೆ ನೆಲೆ ಯಾವುದು, ಹೇಳಿಹೆ ಕೇಳಿರಾ ಮನುಜರಿರಾ.**
**ಸ್ಥೂಲವದು ಅನೇಕ ಬ್ರಹ್ಮಾಂಡಗಳ ಮೀರಿಪ್ಪುದು;**
**ಅದು ಸ್ಥೂಲವೆ? ಅಲ್ಲ, ಹಾಂಗಿರಲಿ.**
**ಶ್ರೀ ಗುರುಸ್ವಾಮಿ ವಿಸ್ತಾರ ವಿಸ್ತಾರ ವಿಸ್ತಾರವೆಂದು**
**ಕೊಟ್ಟ ಲಿಂಗವೀಗ ಸ್ಥೂಲ.**
**ಆ ಲಿಂಗವು ಸಕಲ ವ್ಯಾಪ್ತಿಯ ತನ್ನೊಳಗೆ ಇಂಬಿಟ್ಟುಕೊಂಡ**
**ಕಾರಣ ಸೂಕ್ಷ್ಮವಾದ.**
**ಶಿಷ್ಯಕಾರಣ ಪರಶಿವ ಮೂರ್ತಿಯಾದ ಕಾರಣ ಕಾರಣವಾದ.**
**ಎಲೆ ಗುರುವೆ, ಲಿಂಗವೆ, ಜಂಗಮವೆ,**

**ನೀವು ಒಂದಾದ ಭೇದವ ಲೋಕದ ಜಡರೆತ್ತ ಬಲ್ಲರು?**
**ಬಸವಣ್ಣ ಬಲ್ಲ. ಆ ಬಸವಣ್ಣ ಅವ್ವೆಯ ಮನೋನಾಥ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,**
**ಬಸವಣ್ಣನ ಪ್ರಸಾದವ ಕೊಂಡು**
**ಭವಂ ನಾಸ್ತಿಯಾಗಿ ಬದುಕಿದೆನು.**

ಪರಮಾತ್ಮನೇ, ನೀನಿದ್ದ ಕಾಯವನ್ನು ಸ್ಥೂಲಕಾಯವೆಂದು, ಸೂಕ್ಷ್ಮಕಾಯವೆಂದು, ಕಾರಣಕಾಯವೆಂದು ಕರೆಯುವರಲ್ಲ ನಿನ್ನನ್ನು! ಯಾರೋ ಹೇಳಿದ್ದನ್ನು, ಓದಿದ್ದನ್ನು, ಕೇಳಿ ಅದರ ಹಿಂದು ಮುಂದನು ಅರಿಯದೆ, ತಮಗೆ ತೋಚಿದಂತೆ ನುಡಿಯುವರೇ ಹೊರತು, ಅನುಭಾವದಿಂದ ನೋಡಲು ಸಾಧ್ಯವಾಗುತ್ತಿಲ್ಲವಲ್ಲ.

ಸ್ಥೂಲವೆಂದು ನುಡಿಯುವರು. ನುಡಿಯುವ ಅವರಿಗೆ ಸ್ಥೂಲವೆಂದರೆ ಯಾವುದು ಎಂದು ತಿಳಿಯಲು ಅವರಿಗೆ ಸಾಧ್ಯವಾಗಿದೆಯೆ? ಸ್ಥೂಲವೆಂದು ನುಡಿದರೆ ಅದು ಹೇಗೆ ಸ್ಥೂಲವೆಂದು ಒಪ್ಪುವುದಕ್ಕೆ ಹೇಳಲು ಬರಬೇಕು. ಸ್ಥೂಲವೆಂದರೆ ಅದು ಬ್ರಹ್ಮಾಂಡವನ್ನು ಮೀರಿ ನಿಂತಿದೆ. ಅದು ಸ್ಥೂಲವೇ? ಅದು ಕೂಡಾ ಸ್ಥೂಲವಲ್ಲ!

ಸ್ಥೂಲವೆಂದರೆ ಜಗದಗಲ, ಮುಗಿಲಗಲ, ಮಿಗೆಯಗಲ, ಎಮ್ಮಗಲ. ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ, ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ. ಅಗಮ್ಯ, ಅಗೋಚರ, ಅಪ್ರಮಾಣ, ಅಪ್ರತಿಮ ಲಿಂಗವು ಕಾಯವೆಂಬ ಸ್ಥೂಲದೊಳಗೆ ಲಿಂಗವಾಗಿ ಇಂಬಿಟ್ಟುಕೊಂಡಿದೆ.

ಶ್ರೀಗುರುದೇವ ಇಂತಹ ಸ್ಥೂಲಾಂಗವನ್ನೆ ವಿಸ್ತಾರ, ವಿಸ್ತಾರ, ವಿಸ್ತಾರವೆಂದು ಲಿಂಗವನ್ನಾಗಿಸಿ ಕಾಯದ ಕೈಯಲ್ಲಿ ಕೊಟ್ಟ. ಈ ಲಿಂಗದ ಸಕಲ ವ್ಯಾಪ್ತಿಯು ಅಂಗದೊಳಗೆ ಇಂಬಿಟ್ಟುಕೊಂಡ ಕಾರಣ ಸೂಕ್ಷ್ಮವಾಯಿತು. ಈ ಸೂಕ್ಷ್ಮವೇ ಶಿಷ್ಯನಿಗೆ ಪರಶಿವ ಮೂರ್ತಿಯನ್ನು ಅರಿತ ಕಾರಣ ಕಾರಣವಾದ.

ಎಲೆ ಗುರುವೆ! ಎಲೆ ಲಿಂಗವೆ, ಎಲೆ ಜಂಗಮವೆ, ನೀವು ಒಂದಾದ ಭೇದವ ಲೋಕದ ಜಡರೆತ್ತ ಬಲ್ಲರು? ಬಸವಣ್ಣ ಮಾತ್ರ ಬಲ್ಲ! ಆ ಬಸವಣ್ಣ ಅವ್ವೆಯ ಮನೋನಾಥ.

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆ, ಬಸವಣ್ಣನ ಪ್ರಸಾದವನು ಕೊಂಡು ಎನ್ನ ಅಜ್ಞಾನದ ಜನನ ಮರಣಗಳು ನಾಶವಾದವು. ನಾನು ನಾಸ್ತಿಯಾಗಿ ಬದುಕಿದೆನು ತಂದೆಯೆ.

**1105**

**ಸ್ಥೂಲ ಸೂಕ್ಷ್ಮ ಕಾರಣವೆಂಬ ತನುಗಳ ಭೇದಂಗಳ**
**ಭೇದಿಸುವ ಪರಿಯನರಿದೆನಯ್ಯಾ ನಿಮ್ಮಲ್ಲಿ.**
**ನೀ ಕಾರಣ ತನುವಾಗಿಪ್ಪಲ್ಲಿ ಅರಿದೆ.**
**ಮಹಾಕಾರಣವ ಅರಿದು ಅನಾಮಯನಾದೆ.**
**ಸ್ಥೂಲದಲ್ಲಿ ಶುದ್ಧನಾದೆ, ಸೂಕ್ಷ್ಮದಲಿ ಸಿದ್ಧನಾದೆ, ಕಾರಣದಲಿ**
**ಪ್ರಸಿದ್ಧನಾದೆ.**
**ನಿಮ್ಮ ಕರುಣಕಾನನದಲ್ಲಿ ಕಂಗೆಟ್ಟೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸ್ಥೂಲ, ಸೂಕ್ಷ್ಮ, ಕಾರಣವೆಂಬ ತನುಗಳ ಭೇದಂಗಳನ್ನು ಭೇದಿಸುವ ಪರಿಯನ್ನು ಅರಿದರಿದು, ಅರಿತ ಸದ್ಗುರುವಿನಿಂದಲೇ ಅರಿತು ಅರಿತು, ಅನುಭಾವದಿಂದ ಅರಿಯಬೇಕು. ಆಗ ಕಾರಣ ತನುವಿನ ದರುಶನವು, ಸ್ಥೂಲ ತನುವಿನಲ್ಲಿ ಸೂಕ್ಷ್ಮ ತನುವಿನ ಮೂಲಕ ಆಗುತ್ತದೆ. ಸೂಕ್ಷ್ಮ ತನುವೇ ಕಾರಣ ತನುವಿನಲ್ಲಿ ಸಂಗಮವಾಗಿ, ಸ್ಥೂಲದಲ್ಲಿ ಒಂದಾಗಿ ಶುದ್ಧನಾಗುತ್ತದೆ. ಸೂಕ್ಷ್ಮದಲ್ಲಿ ಸಿದ್ಧನಾಗುತ್ತದೆ. ಕಾರಣದಲ್ಲಿ ಪ್ರಸಿದ್ಧನಾಗುತ್ತದೆ.

ಪರಮಾತ್ಮನು ಇದ್ದ ಕಾಯ ಬರೀ ಕಾಯವಲ್ಲ, ಕರುಣಾಮಯನಿದ್ದ ಕಾಡದು. ಆ ಕಾಡಿನಲ್ಲಿ ಕಂಗೆಟ್ಟವರೆ ಅಧಿಕರು. ಕಪಿಲಸಿದ್ಧ ಮಲ್ಲಿಕಾರ್ಜುನನ ಕರುಣೆಯಿಂದ, ಆತನನ್ನು ಭೇದಿಸುವ ಪರಿ, ಆತನಿಂದಲೇ ಅರಿತೆ ಎಂದು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1106**

**ಸ್ಫಟಿಕದ ಘಟದಲ್ಲಿ ಭೇದಿಸುವ ಮಹಾಪ್ರಭೆಯ**
**ಸಾರೋನ್ನತಿ ಹೇಗೆಂದಡೆ:**
**ಇತ್ತೆರನಾಗಿ ಇಬ್ಬರಲ್ಲಿ ಭವಿಸಿ**
**ಇಹಪರವೆಂಬ ಇದ್ದೆಸೆಗಿದ್ದೆಸೆಯಾಗಿ ಇಪ್ಪೆ ಎಲೆಯಯ್ಯಾ.**
**ನಿನ್ನ ಪರಿಯನು ಅರಿಯಬಹುದೆ? ಮಲಭಾಂಡದೇಹಿಗಳಿಗೆ.**
**ಸಂಗಸುಖದಲ್ಲಿ ಸಂಗಿಸುವ ಕ್ರೀಯನರಿಯದೆ ರುಚಿಸುವ**
**ಅಜ್ಞಾನ ಜಡರುಗಳಿಗೆ ಎಂತಪ್ಪುದಯ್ಯಾ.**
**ಅಜ್ಞಾನ ಜಡರಿಗೆ ನಿಜಶಕ್ತಿ ನಿಜಜಂಗಮ ನಿಜಪ್ರಸಾದ?**
**ಮಹಾನುಭಾವರಿಗಲ್ಲದೆ ನಿಮ್ಮ ಸಂಗ ಸಮನಿಸದು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲ ಮುತ್ತಾಗಿದೆ. ಮಾಣಿಕ್ಯವಾಗಿದೆ. ಸ್ಫಟಿಕವಾಗಿದೆ. ಭೂಮಿಯಾಗಿದೆ. ಭೂಮಿಯ ಮೇಲೆ ಜಲ ಹರಿದು ಸಸ್ಯ ಕಾಶಿಯಾಗಿದೆ. ಜಲವೇ ಜಲಚರವಾಗಿದೆ. ಜಲಬಿಂದುವೆ ಗಟ್ಟಿಯಾಗಿ ಸ್ಫಟಿಕದ ಘಟವಾಗಿದೆ. ಅದರಲ್ಲಿ ಮಹಾಪ್ರಭೆ ಬಚ್ಚಿಟ್ಟುಕೊಂಡಿದೆ. ಇತ್ತೆರನಾಗಿ ಇಬ್ಬರಲ್ಲಿ ಭವಿಸಿ ಇಹಪರವೆಂಬ ಇದ್ದೆಸೆಗಿದ್ದೆಸೆ ಬೆಳಗಿಂಗೆ ಬೆಳಗಾಗಿ ಬೆಳಗುತಲಿದೆ.

ಇಂತಹ ಎರಡು ಕಾಯಗಳಲ್ಲಿರುವ ನಿನ್ನ ಪರಿಯನ್ನು ಅರಿಯಲು ಸಾಧ್ಯವೆ ಮಲಭಾಂಡ ದೇಹಿಗಳಿಗೆ ? ಕಾಯ, ಕಾಯದ ಸಂಗ ಸುಖದಲ್ಲಿ, ಕಾಯದಲ್ಲಿಯೇ ಸಂಗಮವಾದ ಅಕಾಯಗಳ ಎರಡರ ಕ್ರಿಯೆಯನ್ನು ಅರಿಯದೆ, ಕಾಯದೊಂದಿಗೆ ಕಾಮದ ರುಚಿಯನ್ನು ಅನುಭವಿಸುವ ಅಜ್ಞಾನದ ಜಡರುಗಳಿಗೆ ನಿನ್ನ ಪರಿಚಯವಾದರು ಹೇಗೆ ಆಗುವುದಯ್ಯಾ? ಅಜ್ಞಾನ ಜಡರುಗಳಿಗೆ ನಿನ್ನ ನಿಜಶಕ್ತಿ, ನಿನ್ನ ನಿಜಜಂಗಮದು ಇರುವಿಕೆ, ನಿನ್ನ ನಿಜ ಪ್ರಸಾದವಾದರೂ ಹೇಗೆ ದೊರೆಯುವುದು ತಂದೆಯೆ? ನಿಮ್ಮನ್ನು ಅರಿತರಿತು ಆ ಅರಿವೇ ತಾವಾದ ಮಹಾನುಭಾವರಿಗಲ್ಲದೆ ನಿಮ್ಮ ಸಂಗ ಸಮನಿಸದು ಕಪಿಲಸಿದ್ಧ ಮಲ್ಲಿಕಾರ್ಜುನ.

**1107**

**ಸ್ಫಟಿಕದ ಘಟದಲ್ಲಿ ಶಿಶು ಪ್ರಾಣವನು ಹಡೆಯೆ**

**ನಿಟಿಲಾಕ್ಷ ನೋಡಿ ತಾ ನಗುತಿರ್ದನು.**
**ಘಟ ಭಿನ್ನವಾಗದೆ ಅಕ್ಷರದ್ವಯದಲ್ಲಿ**
**ತನು ತಾನೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವೆಂಬುದು ಸ್ಫಟಿಕದ ಘಟ. ನಿಟಿಲಾಕ್ಷ ಅದಕ್ಕೆ ಜನ್ಮಕೊಟ್ಟ. ಪ್ರಾಣ ತುಂಬಿದ. ಅದರಲ್ಲಿ ತಾನಿದ್ದು, ತನ್ನನ್ನು ತಿಳಿಯಲು, ತನ್ನೊಂದಿಗೆ ಸಂಗ ಮಾಡಲು, ಮನವನ್ನು ಸೃಷ್ಟಿ ಮಾಡಿದ್ದಾನೆ. ತನ್ನನ್ನು ತಿಳಿಯಲು ಸೃಷ್ಟಿಯಾದ ಮನ, ನಿಟಿಲಾಕ್ಷನೊಂದಿಗೆ ಸಂಗ ಮಾಡದೇ, ಕಾಯದೊಂದಿಗೆ ಸಂಗ ಮಾಡಿದುದಕ್ಕಾಗಿ, ತನುವಿನಲ್ಲಿಯೇ ಇದ್ದ ನಿಟಿಲಾಕ್ಷ, ತನುವನ್ನು ಆವರಿಸಿದ ಮನವನ್ನು ನೋಡಿ ನಗುತ್ತಿದ್ದಾನೆ.

ಘಟ ಭಿನ್ನವಾಗದ ಮುನ್ನ; ಘಟದಲ್ಲಿಯೇ ಇದ್ದ ನಿಟಿಲಾಕ್ಷನನ್ನು ಘಟವನ್ನಾವರಿಸಿದ ಮನ ತಿಳಿದರೆ, ಘಟ ತಾನೆ ಘಟದೊಳಗಿದ್ದ ಕಪಿಲಸಿದ್ಧ ಮಲ್ಲಿಕಾರ್ಜುನನು ತಾನೆ !

**1108**

**ಸ್ವಸ್ಥಿರವೆಂಬ ಭೂಮಿಯಲ್ಲಿ**
**ಸ್ತಂಭಂಗಳು ಮೂರಾಗಿ, ಫಲಂಗಳಾರಾದವು. ಆ ಫಲ ಮೀರಿತ್ತು.**
**ಮೇಲಣ ಮೂವತ್ತಾರ ಮೀರಿ, ಅವ್ವೆಗೆ ಯೋಗ್ಯವಾಗಿ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿ**
**ತತ್ವವಿದೆಂದರಿತು ತತ್ವಮಸಿಯಾದಳವ್ವೆ.**

ಕಾಯವೆಂಬುದು ಸ್ವಸ್ಥಿರವಾದ ಭೂಮಿ. ಆ ಭೂಮಿಯಲ್ಲಿ ಯಾರೂ ಯಾವ ಬೀಜವನ್ನು ಬಿತ್ತುವ ಅವಶ್ಯಕತೆಯಿಲ್ಲ. ಅದು ಸ್ವಯಂಭು ! ಅಲ್ಲಿ ಸ್ತಂಭಗಳು ಮೂರು. ಅದರ ಫಲಗಳು ಆರು. ಅದರ ಮೇಲಣ ಮೂವತ್ತಾರು ತತ್ವಗಳನ್ನು ಮೀರಿ ಅವ್ವೆಗೆ ಯೋಗ್ಯವಾಗಿದೆ.

ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನನ್ನು ಕೂಡಿ ಕೂಡದ ಅಗಲದ ಕೂಟದ ಪರಮ ಸುಖದಿಂದ ತತ್ವವೇ ತಾನೆಂದು ಅರಿತು ತತ್ವಮಸಿಯಾದಳು ಅವ್ವೆ.

ತನು, ತತ್ವದಿಂದ ಭರಿತವಾಗಿದೆ. ತನುವನ್ನು ಆವರಿಸಿದ ಮನವೆಂಬ ಅವ್ವೆ, ಅದರಲ್ಲಿ ಯಾವ ತತ್ವವನ್ನು ತುಂಬದೇ ಭರಿತವಾದ ತತ್ವವನ್ನು ಅರಿತು, ಆ ತತ್ವವೇ ತಾನಾಗಬೇಕಾಗಿದೆ !

**1109**

**ಸ್ವಾಧಿಷ್ಠಸ್ಥಾನದಲ್ಲಿ ಆದಿ ಅಕ್ಷರ ರೂಪು**
**ನಾದ ಬಿಂದುವಿನಲ್ಲಿ ದಳೆಯಗೊಟ್ಟು**
**ಭೇದಿಸುವ ಭೇದ್ಯ ಪ್ರಣವಕ್ಷೆ ತಾನಾನಂದ**
**ಸಾನಂದ ದೀಕ್ಷೆಯಲ್ಲಿ ತಾನು ತಾನೊಂದಾಗಿ**
**ನೀನಪ್ಪುದೇನರಿದು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಆದಿಯೂ ತಾನೇ, ಅನಾದಿಯೂ ತಾನೇ ! ಆದಿ ಅನಾದಿಯಿಂದ ಅತ್ತತ್ತಲೂ ಇದ್ದವನು ತಾನೇ ! ಬಿಂದುವಿನಿಂದ ಬೀಜವಾಗಿ ಅಂಕುರವಾಗಿ ಮೊಗ್ಗಾಗಿ ಹೂವಾಗಿ ಅರಳಿದವನು ತಾನೇ ! ನಾದವು ತಾನೇ. ಬಿಂದುವು ತಾನೇ. ಕಲೆಯೂ ತಾನೇ ! ಅದನ್ನು ಭೇದಿಸುವ ಅಭೇದ್ಯನು ತಾನೇ. ಪ್ರಣವನು ತಾನೇ. ಅದರಿಂದ ಪರಮಾನಂದ ಹೊಂದಿ ಸಾನಂದ ದೀಕ್ಷೆಯನು ಮಾಡಿದವನು ತಾನೇ.

ತಾನು ತಾನು ಒಂದಾಗಿ ನೀನು ಅಪ್ಪುವುದು ಏನನರಿದು ಕಪಿಲಸಿದ್ಧ ಮಲ್ಲಿಕಾರ್ಜುನಾ: ಕಾಯ ಕಾಯಕ್ಕೆ ಬೋಧೆ ಮಾಡುವುದು ಒಂದು ಸೋಜಿಗದ ಮಾತಲ್ಲವೆ ? ಕಾಯವೇ ಶಿಷ್ಯನಾಗಿ, ಆ ಶಿಷ್ಯ ಕಾಯಕ್ಕೆ, ಕಾಯವೇ ಗುರುವಾಗಿ ದೀಕ್ಷೆ ನೀಡುವುದೆಂದರೇನು? ಇದು ನೀನು ಆಡಿಸುವ ನಾಟಕವೇ ಇರಬೇಕು. ಶಿಷ್ಯ ಪಾತ್ರಧಾರಿಯೂ ನೀನೇ ! ಗುರು ಪಾತ್ರಧರಿಸಿ ಶಿಷ್ಯನಿಗೆ ಬೋಧೆ ನೀಡುವವನು ನೀನೇ ! ತಾನು ತಾನೊಂದಾಗಿ ನೀನಪ್ಪುದು ಏನನ್ನರಿದು ಕಪಿಲಸಿದ್ಧ ಮಲ್ಲಿಕಾರ್ಜುನಾ.

**1110**

**ಸ್ವಾಮಿ ಸ್ವಾಮಿ ಅಂಗ ಲಿಂಗ ಸಮರಸವ**
**ಅರಿದರಿದು ಅರಿಯದಂತಿರ್ಪೆ ನಾನು;**
**ಕರುಣಿಸಯ್ಯಾ. ಅಯ್ಯಾ ದಮ್ಮಯ್ಯಾ.**
**ನೀ ಲಿಂಗಾಂಗ ಸಮರಸದ ವಿಚಾರ ನಿಮಿತ್ತೆನ್ನ ತಂದುದ ಬಲ್ಲೆ.**
**ಲಿಂಗಾಂಗ ಸಮರಸ ನಿಮಿತ್ತ ತ್ರಿಕರಣಶುದ್ಧವಾಗಿ ನಾ ಬಂದುದ ಬಲ್ಲೆ.**
**ಎನ್ನ ಬೋಧಿಸಿ ಭವಕ್ಕೆ ಬಾರದನ ಮಾಡಯ್ಯ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗವೊಂದೆ. ಅಂಗದಲ್ಲಿ ಸಂಗಮವಾದ ಅರಿವೆಂಬ ಲಿಂಗ, ಅಂಗವನ್ನು ಆವರಿಸಿದ ಮನೋಲಿಂಗ ಮತ್ತು ಸ್ಥೂಲವೆಂಬ ಸ್ಥಾವರಲಿಂಗ ಇವು ಮೂರು ಅರಿದರಿದು ನೋಡಲಾಗಿ ಬೇರೆ-ಬೇರೆ ಇಲ್ಲ. ಸ್ವಾಮಿಯ ಸ್ವಾಮಿ ನೀನಾದರೂ ಅರಿಯದಂತಿರುವೆ ನಾನು. ನನ್ನನ್ನು ನಿನ್ನ ಅಂಗದಲ್ಲಿಯೇ ಸೃಷ್ಟಿ ಮಾಡಿ, ಆ ಅಂಗದಲ್ಲಿ ನೀನಿದ್ದು, ನಾನು ನಿನ್ನನ್ನು ಅರಿಯದಂತೆ ನೀನೇ ಮಾಡಿರುವಿ.

ಕರುಣಿಸಯ್ಯಾ, ಅಯ್ಯಾ ದಮ್ಮಯ್ಯ. ನೀನು ಲಿಂಗಾಂಗ ಸಮರಸದ ವಿಚಾರದ ನಿಮಿತ್ತ ನನ್ನನ್ನು ನೀನು ನಿನ್ನ ಅಂಗದಲ್ಲಿ ತಂದಿಟ್ಟುದುದನು ನಾನು ಬಲ್ಲೆ. ನಿನ್ನನ್ನು ಬಲ್ಲವರು ನನಗೆ ಹೇಳಿಕೊಟ್ಟಿದ್ದಾರೆ. ನನ್ನ ಅನುಭವಕ್ಕೆ ತಂದು ಕೊಟ್ಟಿದ್ದಾರೆ. ಹೀಗಾಗಿ ಲಿಂಗಾಂಗ ಸಮರಸದ ನಿಮಿತ್ತ ತ್ರಿಕರಣ ಶುದ್ಧನಾಗಿ ನಾ ಬಂದುದನು ನಾನೇ ಬಲ್ಲೆ. ನನ್ನನ್ನು ನಿನ್ನ ಅಂಗದಲ್ಲಿ ನೀನೇ ತಂದಿಟ್ಟುದುದನು ನಾನು ಬಲ್ಲೆ! ನನಗೆ ನೀನು ಗುರುವಾಗಿ, ನನ್ನನ್ನು ಶಿಷ್ಯನನ್ನಾಗಿಸಿಕೊಂಡು ಬೋಧಿಸುವುದನು ಕೂಡಾ ನಾನು ಬಲ್ಲೆ. ಸ್ವಾಮಿ, ಸ್ವಾಮಿ, ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನೆ, ನನ್ನನ್ನು ಮತ್ತೆ ಭವಕ್ಕೆ ಬಾರದಂತೆ ಮಾಡಯ್ಯ, ಕಪಿಲಸಿದ್ಧ ಮಲ್ಲಿಕಾರ್ಜುನಾ !

**1111**

**ಸ್ವಾಮಿ ಸ್ವಾಮಿ, ಗುರುಕರಜಾತ**
**ಗುರುಕರಜಾತನಪ್ಪುದೆಂದು ನುಡಿವರಯ್ಯಾ,**
**ಅನಾದಿ ಹರ ಪುರಾತನ ಗಣಂಗಳು,**
**ಗುರುವೆಂದಡೇನು, ಕರವೆಂದಡೇನು, ಜಾತವೆಂದಡೇನು?**
**ಇದನರುಹಿ ಪಾವನ ಮಾಡಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸ್ವಾಮಿ, ಸ್ವಾಮಿ, ಕಾಯದಲ್ಲಿದ್ದ ಶ್ರೀಗುರುದೇವನೆ. ಕಾಯಕ್ಕೆ ಜನ್ಮಕೊಟ್ಟು, ಕಾಯದಲ್ಲಿಯೇ

ಇದ್ದ ಪರಮಾತ್ಮನೇ. ನಿನ್ನನ್ನು ಗುರುಕರಜಾತನೆಂದು ನುಡಿದರಯ್ಯಾ. ನೀನು ಕಾಯದಲ್ಲಿಯೇ ಇರುವಿ. ನೀನು ಸೃಷ್ಟಿ ಮಾಡಿದ ಮನ ಕಾಯವನ್ನು ಆವರಿಸಿದೆ. ಆ ಮನವೇ ನಿನ್ನನ್ನು ತಿಳಿಯಬೇಕಾಗಿದೆ.

ನೀನು ಅನಾದಿಯಾದರೆ ನಾನು ಆದಿ. ನಿನ್ನನ್ನು ನಾನು ತಿಳಿದು, ನಿನ್ನ ಚರಣ ಕಮಲದಲ್ಲಿ ದಾಸಾನು ದಾಸನಾದಾಗ ನನಗೆ ಕೇಳಲು ಬರುತ್ತದೆ. ಗುರುವೆಂದಡೇನು? ಕರವೆಂದಡೇನು? ಜಾತನೆಂದಡೇನು? ಈ ಮೂವರನು ಈ ಮೂವರ ವೃತ್ತಾಂತವನು ನೀನೇ ನನಗೆ ಅರುಹಿ ಪಾವನ ಮಾಡಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಕಾಯ ಉಳ್ಳವನನ್ನೇ ಗುರುವೆಂದು ತಿಳಿದಿದ್ದೇನೆ. ಕಾಯ ಉಳ್ಳ ನಾನು ಆ ಗುರುದೇವನಿಗೆ ಶಿಷ್ಯನೆಂದು ತಿಳಿದಿದ್ದೇನೆ. ಕಾಯದಿಂದಲೇ ಕಾಯ ಜನ್ಮ ತಳೆದಿದೆ ಎಂದು ನಾನು ತಿಳಿದಿದ್ದೇನೆ. ನಾನು ತಿಳಿದಂತೆ ಇಡೀ ಲೋಕ ಹೀಗೆಯೇ ತಿಳಿದಿದೆ. ನನಗೇನು ಗೊತ್ತು? ಗುರುವೆಂದರೆ, ಕರವೆಂದರೆ, ಜಾತವೆಂದರೇನೆಂದು ? ಇದನ್ನು ಅರುಹಿ ಪಾವನ ಮಾಡಯ್ಯ. ಕಪಿಲಸಿದ್ಧ ಮಲ್ಲಿಕಾರ್ಜುನಾ.

**1112**

**ಹಡಗನೇರಿದವರ ಮುಂದೆ ಕಳುಹಿ**
**ಮರಳಿ ಹೋದೆಹೆನೆಂದರೆ ಹಡಗುಂಟೆ?**
**ಮಚ್ಚಿದಲ್ಲಿ ಮಹೋತ್ಸವವನೆಯ್ದು ಮನವೆ**
**ಬಳಿಕ ಅರಸಿದರುಂಟೆ?**
**ಅಯ್ಯನ ಸಂಗ ಅನಾದಿ ಸಂಸಿದ್ಧ ಯೋಗಮೂರ್ತಿ**
**ಗುರು ಸಿಕ್ಕಿದ್ದಿ ಕೂಡು ಮನವೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಹಡಗು ಹೋದ ಮೇಲೆ ಹೋಗುವುದಕ್ಕೆ ಸಿದ್ಧನಾಗುವುದು ಮೂರ್ಖತನ. ಹಡಗು ಇದ್ದಾಗಲೇ ಹಡಗನು ಹತ್ತಿ ಸಮುದ್ರ ದಾಟುವುದು ಜಾಣತನ ! ಹಡಗು ಹೋದ ಮೇಲೆ ದಾಟುವುದಕ್ಕೆ ಹಡಗುಂಟೆ ? ಗಾಳಿ ಬಿಟಾಗಲೇ ಕಣ ಮಾಡಿಕೊಳ್ಳಬೇಕು.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಪರಮಾತ್ಮನನ್ನು ಕಾಯವಿದ್ದಾಗಲೇ ಕಾಯದಲ್ಲಿಯೆ ಹುಡುಕಬೇಕು. ಹುಡುಕಿ ಪಡೆಯಬೇಕು.

ಮನ, ಪರಮಾತ್ಮನಿಗಾಗಿ ಕಾಯದ ಸಂಗ ಮಾಡಬೇಕೆ ಹೊರತು ತನ್ನ ಸುಖ ದುಃಖಗಳಿಗಾಗಿ ಅಲ್ಲ. ಆದರೆ ಮನ, ತನ್ನ ಸುಖ ದುಃಖಗಳನ್ನು ಕಾಯದ ಮೂಲಕ ಅನುಭವಿಸುತ್ತದೆ. ತನ್ನ ಸುಖ ದುಃಖಗಳಿಗಾಗಿ ಮನ ಕಾಯವನ್ನು ಬಳಸುತ್ತದೆಯೇ ಹೊರತು, ಕಾಯದಲ್ಲಿಯೇ ಇದ್ದ ಪರಮಾತ್ಮನಿಗೆ ದಾಸನಾಗಬೇಕೆಂದು, ಆತನಿಗೆ ಶರಣು ಹೋಗಿ ಶರಣನೇ ತಾನಾಗಬೇಕೆಂದು ಮನ ಕಾಯವನ್ನು ಬಳಸುವುದಿಲ್ಲ. ಬದಲಾಗಿ ಮನ ಕಾಯದೊಂದಿಗೆ ಸಂಗ ಮಾಡಿ, ತನಗೆ ಬೇಕಾದ ದೇವರನ್ನು ಕಾಯದಿಂದಲೇ ನಿರ್ಮಾಣ ಮಾಡಿ, ಕಾಯದೊಂದಿಗೆ, ಕಾಯಮಾಡಿದ ದೇವರನ್ನು ಪೂಜಿಸುತ್ತದೆ. ಕಾಯವನ್ನು ಮಾಡಿ ಕಾಯದಲ್ಲಿಯೇ ಇದ್ದ ದೇವರನ್ನು ಕಾಯ ಮರೆತು ಹೋಗಿದೆ.

ಎಲೆ ಮನವೇ, ಗುರುದೇವ ಕಾಯ ಉಳ್ಳವನಲ್ಲ. ಹಾಗೆಯೇ ಮನವೆಂಬ ನೀನು ಕೂಡಾ ಕಾಯ ಉಳ್ಳವನಲ್ಲ. ಎಲೆ ಮನವೇ, ಕಾಯದಲ್ಲಿಯೇ ಇದ್ದ ಅರಿವೆಂಬ ಗುರುದೇವರನ್ನು ಕೂಡು. ಅಯ್ಯನ ಸಂಗ ಮಾಡಿ ಯೋಗ ಮೂರ್ತಿಯಾಗು ! ಅನಾದಿಯಿಂದಲೂ ನೀನು ಗುರುದೇವನ

ಸಂಗ ಮಾಡಿದ್ದರೂ, ಆತ ನಿನ್ನೊಂದಿಗೆ ಇದ್ದರೂ ಆತನ ಪರಿಚಯ ನಿನಗೆ ಇರಲಿಲ್ಲ ಅಷ್ಟೇ.

**1113**

**ಹಡೆದ ಹೆಣ್ಣಿಗಾಗಲಿ, ಹಡೆದ ಗಂಡಿಗಾಗಲಿ,**
**ಗುರುಪಾದೋದಕ ಸ್ನಾನವೆ ಶುದ್ಧ ಕಾಣಾ.**
**ವನದ ಭೋಜನವಾಗಲಿ, ಮನೆಯ ಭೋಜನವಾಗಲಿ,**
**ಗುರುಪಾದೋದಕ ಪ್ರೋಕ್ಷಣೆಯೆ ಶುದ್ಧ ಕಾಣಾ.**
**ಮದುವೆಯ ಸಂಭ್ರಮವಾಗಲಿ, ಮರಣದ ದುಃಖವಾಗಲಿ.**
**ಗುರು ಪಾದೋದಕವೆ ಸಂಜೀವನ ಕಾಣಾ.**
**ಆಗುವ ದೀಕ್ಷೆಯೆ ಆಗಲಿ, ಭೋಗಿಪ ಶಿಕ್ಷೆಯೆ ಆಗಲಿ,**
**ಗುರುಪಾದೋದಕ ವರ್ತನವೆ ಅಮರಗಣ ನಡಾವಳಿ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯ ಗಂಡಾಗಲಿ, ಹೆಣ್ಣಾಗಲಿ ಕಾಯದಲ್ಲಿ ಸಂಗಮವಾದ ಜ್ಞಾನವೊಂದೆ. ಭಾಷೆ ಯಾವುವಾದರೂ ಆಗಲಿ, ದೇಶ ಯಾವುದಾದರೂ ಆಗಲಿ, ಕಾಯದಲ್ಲಿ ಸಂಗಮವಾದ ಜ್ಞಾನವೊಂದೆ. ಕಾಯವನ್ನು ಆವರಿಸಿದ ಮನ, ಕಾಯದಲ್ಲಿಯೇ ಸಂಗಮವಾದ ಜ್ಞಾನೋದಕದಿಂದ ಸ್ನಾನಮಾಡಿದಾಗಲೇ ಅದು ಶುದ್ಧವಾಗುತ್ತದೆ. ಪರಿಶುದ್ಧವಾಗುತ್ತದೆ. ಸಿದ್ಧನಾಗುತ್ತದೆ. ಪ್ರಸಿದ್ಧನಾಗುತ್ತದೆ ! ವನ ಭೋಜನವಾದರೇನು ? ಮನೆಯ ಭೋಜನವಾದರೇನು ? ಮನ ಶ್ರೀಗುರುದೇವನಿಗೆ ಅರ್ಪಣೆ ಮಾಡಿ ಆತನಿಗೆ ಉಣ್ಣಿಸುತ್ತಾ, ಕಾಯದ ಮೂಲಕ ತಾನು ಉಣ್ಣುತ್ತದೆ. ಇದು ಜ್ಞಾನದ ಮಹಾಭೋಜನ. ಮದುವೆಯ ಸಂಭ್ರಮವಾಗಲಿ ಮರಣದ ದುಃಖವಾಗಲಿ ಎರಡೂ ಒಂದೇ ಎಂದು ಗುರುಪಾದೋದಕವನ್ನು ಜ್ಞಾನೋದಕವೆಂದು ಸ್ವೀಕರಿಸಿದ ಮನಕ್ಕೆ ತಿಳಿಯುತ್ತದೆ.

ಗುರುಪಾದೋದಕ ಬರೀ ಉದಕವಲ್ಲ. ಅದು ಸಂಜೀವಿನಿ ! ಅದು ಅಂಜನ ! ಅದು ಕಾಮದೇನುವು ಹೌದು ! ಕಲ್ಪವೃಕ್ಷವು ಹೌದು ! ಅದು ಅಮೃತವು ಹೌದು !

ಆಗುವ ಧೀಕ್ಷೆಯೆ ಆಗಲಿ ಭೋಗಿಪ ಶಿಕ್ಷೆಯೆ ಆಗಲಿ ಎರಡು ಸಹಜವೆಂದೆ ಸ್ವೀಕರಿಸುತ್ತಾನೆ. ಏಕೆಂದರೆ ಗುರುಪಾದೋದಕ ಸ್ವೀಕರಿಸಿದ ತಾನು ಅಮರನಾಗಿದ್ದಾನೆ. ಸಹಜನಾಗಿದ್ದಾನೆ !

ಕ್ರಿಸ್ತನನ್ನು ಶಿಲುಬೆಗೇರಿಸಿ ಮೊಳೆ ಜಡೆದಾಗ ಆತ ನಗು ನಗುತ್ತ ತನಗೆ ನೀಡುವ ಶಿಕ್ಷೆಯನ್ನು ಸಹಜವಾಗಿ ಸ್ವೀಕರಿಸಿದ. ಸಾಕ್ರೆಟೀಸನಿಗೆ ನೀಡಿದ ವಿಷವನ್ನು ಅಮೃತದಂತೆ ಪಾನ ಮಾಡಿದ. ಇದು ಪಾದೋದಕದ ಮಹಿಮೆ ! ಕಾಯ ಯಾವ ದೇಶದ್ದಾದರೇನು, ಯಾವ ಭಾಷೆಯದ್ದಾದರೇನು ? ಹೆಣ್ಣಾದರೇನು, ಗಂಡಾದರೇನು ? ಕಾಯದಲ್ಲಿ ಸಂಗಮವಾದ ತತ್ವವನ್ನು ಕಾಯವೆ ತಿಳಿದಾಗ, ಸಕಲ ಕಾಯಗಳು ಹೀಗೆಯೇ ಸಹಜವಾಗಿ ಕೃಷ್ಣನಂತೆ, ಕ್ರಿಸ್ತನಂತೆ, ಬುದ್ಧ, ಮಹಾವೀರ, ಬಸವಾದಿ ಶರಣರಂತೆ, ದಾಸವರೇಣ್ಯರಂತೆ ಸಹಜವಾಗಿ ಇರುತ್ತವೆ.

**1114**

**ಹದಿನಾರು ಅಕ್ಷರದ ಹವಣ ಬಲ್ಲವರಾರು**

**ಅಜಲೋಕದಿಂ ಕೆಳಗೆ ತಾನೆ.**
**ಅರಸೂಸದ ಮದದ ಹದಿನಾರು ಕಲೆಯ**
**ಮತ್ತೆರಡೆಂಟು ಉಳಿಯಬಲ್ಲಡೆ**
**ಆತ ಬ್ರಹ್ಮನಾದ ನಾದಬಿಂದುವಿನಲ್ಲಿ. ಸಾಧಿಸಿದ ಸುಧೆಯದು.**
**ಅದ ಹರಿವಿಷ್ಣುಗಳಿಗಳವಲ್ಲದು**
**ಮೂದೇವರೊಡೆಯ ಕಪಿಲಸಿದ್ಧ ಮಲ್ಲಿಕಾರ್ಜುನನ**
**ಭೇದಿಸಿದ ಭಕ್ತಂಗೆ ಪಥ್ಯ ತಾನು.**

ಕಾಯವೆಂದರೆ ಸಾಮಾನ್ಯವಲ್ಲ. ಇದನ್ನು ಜ್ಞಾನಿಗಳು ಕೈಲಾಸವೆಂದು, ಬ್ರಹ್ಮಲೋಕವೆಂದು ಕರೆದಿದ್ದಾರೆ. ಮನ ಕಾಯದ ಅರಿವಿನ ಸಂಪತ್ತನ್ನು, ಕಾಯದಲ್ಲಿಯೇ ತಿಳಿಯಬೇಕು. ಕಾಯದಿಂದ ಹೊರ ಬಂದ ಅಕ್ಷರಗಳ ಮೂಲಕ ಅಲ್ಲ. ಪುಸ್ತಕಗಳ ಮೂಲಕವು ಅಲ್ಲ. ಮಂತ್ರದ ಮೂಲಕವು ಅಲ್ಲ. ಕಾಯ ಸ್ವತಃ 'ಓಂ ನಮಃ ಶಿವಾಯ' ಎಂಬ ಮಂತ್ರವೇ ತಾನಾಗಿದೆ. ಪುನಃ ತಾನು ಮಂತ್ರ ಜಪ-ತಪಗಳ ಮೂಲಕ ತಿಳಿಯಲು ಹೋದರೆ ಕಾಯದಲ್ಲಿ ಅಷ್ಟಮದಗಳು, ಅಷ್ಟಭೋಗ ಐಶ್ವರ್ಯಗಳು, ಅಷ್ಟಪ್ರಮಾಣಗಳು, ಅಷ್ಟಮಲಗಳು, ಅಷ್ಟ ಮಹಾಸಿದ್ದಿಗಳು, ಅಷ್ಟ ವಿಧಾರ್ಚನೆ, ಅಷ್ಟಾಂಗಯೋಗ, ಅಷ್ಟಮೂರ್ತಿಗಳು ಕಾಯದಲ್ಲಿ ಹುಟ್ಟಿಕೊಳ್ಳುತ್ತವೆ. ಮನ ಕಾಯದ ಮೂಲಕ ಕಾಯದಿಂದಲೇ ಕಲಿಯಲು ಹೋಗುತ್ತದೆ. ಹುಡುಕಲು ಹೋಗುತ್ತದೆ.

ಕಾಯದಲ್ಲಿ ಮೂದೇವರೊಡೆಯ ಕಪಿಲಸಿದ್ಧ ಮಲ್ಲಿಕಾರ್ಜುನನೇ ಇದ್ದಾನೆ. ಮನ ಭೇದಿಸಿ ಆತನಲ್ಲಿ ಸಂಗಮವಾಗಿ ಘನಮನನಾಗಬೇಕು. ಆತನ ಸುಧೆಯನು ಸವಿಯಬೇಕು.

**1115**

**ಹರನೆಂಬ ನಲ್ಲನಾಗದನ್ನಕ್ಕ ಆರಿಗಾದಡೂ ಪ್ರಿಯವಲ್ಲ**
**ಹರನೆಂಬ ನಲ್ಲನಾದ ಬಳಿಕ ಆರಿಗಾದಡೂ ಪ್ರಿಯವಯ್ಯ.**
**ಹರ ನಿರಾಮಯ ಕಪಿಲಸಿದ್ಧ ಮಲ್ಲಿನಾಥ ಹಾ! ಅಯ್ಯಾ!**

ಕಾಯ ಹೆಣ್ಣು ಅಲ್ಲ, ಗಂಡು ಅಲ್ಲ. ಕಾಯವನ್ನು ಆವರಿಸಿದ ಮನ ನಲ್ಲೆಯಾಗಿ ಕಾಯದಲ್ಲಿಯೇ ಸಂಗಮವಾದ ಹರನೆಂಬ ನಲ್ಲನನ್ನು ಪ್ರೇಮಿಸಬೇಕು. ಇಂತಹ ಪ್ರೇಮಕ್ಕೊಳಗಾದ ಕಾಯ ಸಕಲ ಕಾಯಗಳಿಗೂ ಪ್ರಿಯವಾಗುತ್ತದೆ.

ಕಾಯವನ್ನಾವರಿಸಿದ ಮನ ಹರನಿಗೆ ನಲ್ಲೆಯಾಗದಿದ್ದರೆ, ಆ ಕಾಯ ಯಾರಿಗೂ ಪ್ರಿಯವಾಗುವುದಿಲ್ಲ. ಹೀಗೆ ಪ್ರಿಯವಾಗದ ಕಾಯಗಳೇ ಲೋಕದಲ್ಲಿ ಭರಿತವಾಗಿವೆ. ಕಾಯವನ್ನು ಸಂಬಂಧ ಹಿಡಿದು ಪ್ರೀತಿಸುವುದು ಪ್ರೀತಿ ಅಲ್ಲ. ಅದು ಮೋಹ, ವ್ಯಾಮೋಹ ! ಮೋಹ ಮತ್ತು ವ್ಯಾಮೋಹಕ್ಕೆ ಒಳಗಾದ ಕಾಯಗಳು ಪ್ರೇಮದ ಕಲೆಯನ್ನು ಅರಿಯವು.

ಸಿದ್ಧರಾಮ ಶಿವಯೋಗಿಗಳು ತಮ್ಮದೇ ಆದ ಒಂದು ವಚನದಲ್ಲಿ ತಾವು ಹೆಣ್ಣಾಗಿ ಈ ಕೆಳಗಿನಂತೆ ನಲ್ಲನೊಂದಿಗೆ ರಮಿಸಿದ್ದಾರೆ.

''ಎಮ್ಮ ಗಂಡನು, ಏಕಾಂತಂಬೊಕ್ಕನು, ಬೇಗ ಬೇಗ ಹೊರನಡಿಯಿರಿ ಅಣ್ಣಗಳಿರಾ. ಒಬ್ಬನಿದ್ದಡೂ ಸೈರಿಸ ಕಪಿಲಸಿದ್ಧ ಮಲ್ಲಿಕಾರ್ಜುನಾ'' ಎಂದು ತಮಗೆ ತಾವೇ ಹಾಡಿಕೊಂಡಿದ್ದಾರೆ.

ಕಾಯದಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಆರು ಜನ

ಸಹೋದರರಿದ್ದಾರೆ. ಸಪ್ತವ್ಯಸನಗಳೆಂಬ ಏಳುಜನ, ಅಷ್ಟಮದಗಳೆಂಬ ಎಂಟು ಜನ, ಅಣ್ಣ-ತಮ್ಮಂದಿರು ಮನೆಯಲ್ಲಿಯೇ ವಾಸಕ್ಕಿದ್ದರೆ ಅರಿವಿನ ನಲ್ಲ ಬಂದು ಮನವೆಂಬ ತನ್ನ ನಲ್ಲೆಯನ್ನು ಕೂಡುವುದಾದರು ಎಂತು ? ಇವರಲ್ಲಿ ಒಬ್ಬರಿದ್ದಡೂ ಎನ್ನ ನಲ್ಲ ಎನ್ನೊಂದಿಗೆ ಕೂಡುವುದಿಲ್ಲ. ದಯವಿಟ್ಟು ನೀವು ಎನ್ನ ಕಾಯದಿಂದ ಹೊರಗೆ ಹೋಗಿ ಅಣ್ಣಂದಿರಾ ಎಂದು ಸಿದ್ಧರಾಮ ಶಿವಯೋಗಿಗಳು ತನ್ನ ನಲ್ಲನಿಗೆ ತಾನೇ ನಲ್ಲೆಯಾಗಿ ಹಾಡಿದ್ದಾರೆ.

**1116**

**'ಹರಬಸವಾಯ ನಮಃ' ಎಂದು ಪಾಪದೂರನಾದೆ.**
**'ಗುರುಬಸವಾಯ ನಮಃ' ಎಂದು ಭವದೂರನಾದೆ.**
**'ಲಿಂಗಬಸವಾಯ ನಮಃ' ಎಂದು ಲಿಂಗಾಂಕಿತನಾದೆ.**
**'ಜಂಗಮ ಬಸವಾಯ ನಮಃ' ಎಂದು**
**ನಿಮ್ಮ ಪಾದಕಮಲದಲ್ಲಿ ಭ್ರಮರನಾದೆ.**
**ಏಳಾ ಸಂಗನ ಬಸವ ಗುರು**
**ಕಪಿಲಸಿದ್ಧ ಮಲ್ಲಿಕಾರ್ಜುನ ಸ್ವಾಮಿಯೆ.**

ಬಸವನೇ ಹರನೆಂದು ಪ್ರಾರ್ಥಿಸಿ ಪಾಪದಿಂದ ದೂರನಾದೆ. ಗುರುದೇವನೆ ಬಸವನೆಂದು ಪ್ರಾರ್ಥಿಸಿ ಜನನ ಮರಣಗಳಿಂದ ದೂರನಾದೆ. ಲಿಂಗಯ್ಯನೇ ಬಸವನು ಎಂದು ಹೇಳಿ ಲಿಂಗಾಂಕಿತನೇ ನಾನಾದೆ. ಬಸವ ಬೇರಲ್ಲ, ಜಂಗಮ ಬೇರಲ್ಲ ಎಂದು ಪ್ರಾರ್ಥಿಸಿ ಪರಮಾತ್ಮನ ಪಾದಕಮಲದಲ್ಲಿ ಭ್ರಮರನಾದೆ. ಸಂಗನ ಬಸವಣ್ಣನು ಬೇರಲ್ಲ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ ಸ್ವಾಮಿಯೇ ಬಸವಣ್ಣ ಎಂದು ಸಿದ್ಧರಾಮ ಶಿವಯೋಗಿಗಳು ಶ್ರೀಗುರು ಬಸವಣ್ಣನನ್ನು ಸ್ಮರಿಸಿದ್ದಾರೆ.

**1117**

**ಹರಬೀಜ ನಾನಾದಡೆ ಹದನವನರಿಯದಿರ್ಪೆನೆ ಗುರುವೆ?**
**ಪರಮ ಭೃತ್ಯ ನಾನಾದಡೆ ಪ್ರಾಣದಿಂದಿರ್ಪೆನೆ ಗುರುವೆ?**
**ನರಬೀಜ ನಾನಾದೆ, ಗುರುದ್ರೋಹಿ ನಾನಾದೆ,**
**ಇನ್ನೆಂತು ಶ್ರೀಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ?**

ಕಾಯ ಹರನು ಬಿತ್ತಿದ ಬೀಜ. ಕಾಯವನ್ನು ಆವರಿಸಿದ ಮನ ನರಬೀಜವಾಗಿ ಕಾಯವನ್ನು ಬಳ್ಳಿಯಂತೆ ಆವರಿಸಿಕೊಂಡಿದೆ. ಹರ ಬಿತ್ತಿದ ಬೀಜದ ಹದನವನ್ನು ಅರಿಯದಂತೆ ಅಜ್ಞಾನವನ್ನು ಹೇರಿಕೊಂಡಿದೆ. ಹೀಗಾಗಿ ಮನ ನರನಾಗಿ ಗುರುದ್ರೋಹಿ ಎನ್ನಿಸಿಕೊಂಡಿದೆ.

ಕಾಯವನ್ನು ಆವರಿಸಿದ ಮನಕ್ಕೆ ಕಾಯದಲ್ಲಿಯೇ ಸಂಗಮವಾದ ಹರನ ಪರಿಚಯ ಆಗದ್ದರಿಂದ ನರನಾಗಿ ಗುರುವಿಗೆ ದ್ರೋಹ ಎಸಗುತ್ತಲಿದೆ. ಕಾಯಕ್ಕೆ ಕಾಯವನ್ನು ಆವರಿಸಿದ ಮನಕ್ಕೆ ಗುರುವೆಂದರೆ ಯಾರೆಂದು ತಿಳಿಯದು, ಹರನೆಂದರೆ ಯಾರೆಂದು ತಿಳಿಯದು, ಜಂಗಮ ಎಂದರೆ ಯಾರೆಂದು ತಿಳಿಯದು, ಪಾದೋದಕ ಪ್ರಸಾದವೆಂದರೆ ಯಾರೆಂದು ತಿಳಿಯದ ಕಾರಣ ನರಬೀಜವಾಗಿ ಗುರುದ್ರೋಹವನ್ನು ಎಸಗುತ್ತಲಿದೆ.

ಹರನನ್ನು ಮತ್ತು ಶ್ರೀಗುರುದೇವನನ್ನು ತಿಳಿದು ಗುರುದೇವನೆ ತಾನಾದ. ಶ್ರೀಗುರುವಿನ ಮೂಲಕ ನನಗೆ ಗುರುದೇವನು ಯಾರು ಎಂಬುದು ತಿಳಿಯಿತು. ತನುವಿನಲ್ಲಿಯೇ ತನ್ಮಯವಾದ ಗುರುದೇವನನ್ನು ಅರಿಯದ ಗುರುದ್ರೋಹಿ ನಾನಾದೆ, ನರಬೀಜ ನಾನಾದೆ ಗುರುವೆ. ಒಂದು ವೇಳೆ ನಾನು ನಿನಗೆ ಪರಮ ಭಕ್ತನಾಗದಿದ್ದೊಡೆ, ಪ್ರಾಣದಿಂದ ಇರಲು ನನಗೆ ಸಾಧ್ಯವಾಗುತ್ತಿತ್ತೇ? ನಿನ್ನ ದಯದಿಂದ ನಾನು ಜನನ ಮರಣಗಳನ್ನು ಗೆಲ್ಲುತ್ತಿದ್ದೆ ಶ್ರೀಗುರುವೇ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1118**

**ಹರಿದು ಹತ್ತುವೆನವನ,**
**ಹತ್ತಿ ಮನವ ಮುಟ್ಟಿ ಹಿಡಿವೆನವನ.**
**ಮಹಾಪ್ರಚಂಡ ಮನದಿಂದ**
**ಕಪಿಲಸಿದ್ಧ ಮಲ್ಲಿಕಾರ್ಜುನನ ಹಿಡಿವೆನು.**

ಕಾಯವನ್ನು ಆವರಿಸಿದ ಮನ ಅರಿವೆಂಬ ಶ್ರೀಗುರುದೇವನಿದ್ದ ಕಾಯವನ್ನು ಕಬಳಿಸಿದ್ದರಿಂದ ಕಾಯದಲ್ಲಿಯೇ ತನ್ಮಯವಾದ ಶ್ರೀಗುರುದೇವನ ಪರಿಚಯ ಮನಕ್ಕೆ ಇಲ್ಲದಂತಾಗಿದೆ. ಮನ ಕಾಯವನ್ನು ಬಿಟ್ಟು ಕಾಯದಲ್ಲಿಯೇ ಸಂಗಮವಾದ ಮಹಾದೇವನಿಗೆ ಸೇವಕನಾಗಿ ಅವನ ಪಾದ ಸ್ಪರ್ಶಮಾಡಿ ಅವನಲ್ಲಿಯೇ ಸಂಗಮವಾಗಬೇಕಾಗಿದೆ.

ಮಹಾದೇವನನ್ನು ಮರೆತುದರಿಂದ ಮಹಾದೇವನು ವಾಸಮಾಡಿದ ಕಾಯವನ್ನು ಹಿಡಿದು ಕಾಯದಿಂದಲೇ ಕಳ್ಳನೆಂದು ಕರೆಯಿಸಿಕೊಂಡಿದೆ. ವಿಷಯ ಲಂಪಟ, ವಿಟ, ವೇಶ್ಯೆ, ರಾಜ, ಮಂತ್ರಿ, ಪ್ರಧಾನಿ ಹೀಗೆಲ್ಲಾ ಕರೆಯಿಸಿಕೊಂಡು ಮನ ಮಹಾದೇವನನ್ನೆ ಮರೆತು ಹೋಗಿದೆ. ಪುನಃ ಮನದಿಂದಲೇ ಮಹಾದೇವನನ್ನು ಹಿಡಿದು ಆತನಲ್ಲಿಯೇ ಸಂಗಮವಾಗಿ ಮನ ಘನಮನವಾಗ ಬೇಕಾಗಿದೆ.

**1119**

**ಹರಿ ಬ್ರಹ್ಮ ಧರೆ ಆಕಾಶವಿಲ್ಲದ ಭಸ್ಮಕ್ಕೆ**
**ಸ್ಥಲವದು ಆದಿ ನೋಡಯ್ಯಾ.**
**ಭಸ್ಮವನೆ ಮಸುಳಿಸಿ, ಲೋಕಂಗಳನೆ ಹಡೆದು,**
**ಸಕಲ ಜೀವರನಿಂತು ಮಾಡಿದರೊಳರೆ?**
**ನಿನ್ನಿಚ್ಛೆ ನಿನಗೆ : ಸ್ವಯಂಭು ನೀನೆಯಾಗಿರ್ದೆಯಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಸಗಣಿ, ತನಗೆ ತಾನೇ ಒಣಗಿ ಬೆರಣಿಯಾಗಿ, ಬೆರಣಿಯೊಳಗಣ ಅಗ್ನಿ ಬೆರಣಿಗೆ ತಾಗಿ, ಬೆರಣಿ ತನಗೆ ತಾನೇ ಭಸ್ಮವಾಗಿದೆ.

ಹರಿ ಬ್ರಹ್ಮ ಧರೆ ಆಕಾಶವನ್ನು ಕಳಚಿಕೊಂಡ ಭಸ್ಮದ ಸ್ಥಲವದು ಆದಿ ನೋಡಯ್ಯಾ:

ಕಾಯದಲ್ಲಿ ಸಂಗಮವಾದ ಶಿವ, ಕಾಯ ಉಳ್ಳವನಲ್ಲ, ಅವನು ಅನಾದಿ. ಕಾಯ ಆದಿ. ಕಾಯವನ್ನು ಆವರಿಸಿದ ಮನವು ಕೂಡಾ ಆದಿ. ಅನಾದಿ ಆದಿಯನ್ನು ಸೃಷ್ಟಿ ಮಾಡಿ ಕಾಯವೆಂಬ ಕೈಲಾಸಕ್ಕೆ ಜನ್ಮ ನೀಡಿತು.

ಕಾಯ ಮತ್ತು ಮನ ಒಂದನ್ನೊಂದು ಹೊಸೆದುಕೊಂಡಿರುವುದರಿಂದ ತಾನು ಆದಿಯೆಂಬುದನ್ನು ಕೂಡಾ ಮರೆತು ಹೋಗಿ ಸೆಗಣಿಯಾಗಿದೆ. ಸೆಗಣಿಯಲ್ಲಿ ಭಸ್ಮ

ಬಚ್ಚಿಟ್ಟುಕೊಂಡಿದೆ. ಭಸ್ಮದ ಪರಿಚಯು ಸೆಗಣಿಗಿಲ್ಲ. ಸೆಗಣಿಯ ಪರಿಚಯ ಭಸ್ಮಕ್ಕಿಲ್ಲ. ಸೆಗಣಿ ತನಗೆ ತಾನೇ ಕುರುಳಾಗಿ ಒಣಗಿ ಕುರುಳಲ್ಲಿಯ ಅಗ್ನಿಯನ್ನು ಕುರುಳೆ ಸ್ಪರ್ಶಿಸಿದಾಗ ಅದು ಪುನಃ ಭಸ್ಮವಾಗುತ್ತದೆ. ಆ ಭಸ್ಮವನ್ನು ಶಿವ ತನ್ನ ನೊಸಲಿಗೆ ಧರಿಸಿಕೊಳ್ಳುತ್ತಾನೆ.

ಭಸ್ಮವನೇ ಮಸುಳಿಸಿ ಸೆಗಣಿ ಮಬ್ಬಾಗಿದೆ. ಲೋಕಂಗಳನು ಹಡೆದಿದೆ. ಸಕಲ ಜೀವಿಗಳನ್ನು ತನ್ನಂತೆಯೇ ಮಾಡಿಕೊಂಡಿದೆ. ತನ್ನಲ್ಲಿ ಬಚ್ಚಿಟ್ಟುಕೊಂಡ ಸ್ವಯಂಭುವನ್ನು ತನಗೆ ಇಚ್ಛೆಯಾಗಿ ತಾನೇ ಹುಡುಕಬೇಕು. ಸೆಗಣಿಯೂ ತಾನೇ; ಅದರಲ್ಲಿ ಬಚ್ಚಿಟ್ಟುಕೊಂಡ ಭಸ್ಮವು ತಾನೇ. ಅದರಲ್ಲಿ ಬಚ್ಚಿಟ್ಟುಕೊಂಡ ಕಪಿಲಸಿದ್ಧ ಮಲ್ಲಿನಾಥಯ್ಯನು ತಾನೇ. ತನಗೆ ಇಚ್ಛೆಯಾದರೆ ತನ್ನಲ್ಲಿಯೇ ಬಚ್ಚಿಟ್ಟುಕೊಂಡ ಸ್ವಯಂಭುವನ್ನು ತಾನೇ ಹುಡುಕಬೇಕು.

**1120**

**ಹರಿಬ್ರಹ್ಮರಿಬ್ಬರೂ ಸ್ತ್ರೀಯರಯ್ಯಾ.**
**ತಮ್ಮನೊಲಿದರೆ ಹಂಗಿಹರು, ಹೆಂಪೆ ಹೇಳಯ್ಯಾ,**
**ಎನ್ನ ಹರಿಬತನಕ್ಕೆ ಹಾನಿ ಹೊದ್ದಿತೆಂದು**
**ನಿಮ್ಮನಗಲಲಾರೆ, ಕಪಿಲಸಿದ್ಧ ಮಲ್ಲೇಶ್ವರಾ, ದೇವರ ದೇವಯ್ಯ.**

ಹರಿ ಮತ್ತು ಬ್ರಹ್ಮ ಇವರಿಬ್ಬರು ಪುರುಷರಲ್ಲ; ಸ್ತ್ರೀಯರೆ ಆಗಿದ್ದಾರೆ. ಪರಮ ಪುರುಷ ಪರಮಾತ್ಮನೊಬ್ಬನೆ ಮಹಾಪುರುಷ.

ಕಾಯ ಮತ್ತು ಕಾಯವನ್ನು ಆವರಿಸಿದ ಮನ ಇವೆರಡೂ ಸ್ತ್ರೀ ಕುಲಕ್ಕೆ ಸೇರಿದವುಗಳಾಗಿವೆ. ಪರಮ ಪುರುಷನನ್ನು ಮರೆತುದರಿಂದ ಕಾಯ ಹೆಣ್ಣಾಗಿದೆ. ಕಾಯವನ್ನು ಆವರಿಸಿದ ಮನ ಕೂಡಾ ಹೆಣ್ಣಾಗಿದೆ. ಆದರೂ ಕಾಯ ಮತ್ತು ಕಾಯವನ್ನು ಆವರಿಸಿದ ಮನ ಇವೆರಡು ಹೆಣ್ಣಾಗಿದ್ದರೂ ತಾನು ಗಂಡೆಂದು, ತಾನು ಹೆಣ್ಣೆಂದು ತನಗೆ ತಾನೇ ಆರೋಪಿಸಿಕೊಂಡು ಹೆಣ್ಣು ಆಗಿದೆ. ಗಂಡು ಆಗಿದೆ. ಕಾಯ ಮತ್ತು ಮನ ಹೆಣ್ಣೆಂಬುದನ್ನೆ ಮರೆತು ಹೋಗಿದೆ. ಕಾಯ ಹೆಣ್ಣು ಆಗಿದ್ದರು ಕಾಯವನ್ನೆ ಗಂಡು ಎಂದು ಆರೋಪಿಸಿಕೊಂಡು ಹೆಣ್ಣು-ಹೆಣ್ಣಿನೊಂದಿಗಿನ ಅಜ್ಞಾನದ ಸಂಗ ಸುಖದಲ್ಲಿ ನಿರತವಾಗಿದೆ.

ಕಾಯದಲ್ಲಿ ಸಂಗಮವಾದ ಪರಮ ಪುರುಷನೆಂಬ ಪರಮಾತ್ಮನ ಪರಿಚಯ ಇಲ್ಲದ ನಿಮಿತ್ಯ ಇಡೀ ಲೋಕ ಹೆಣ್ಣು ಹೆಣ್ಣಿನೊಂದಿಗೆ ಸಂಗ ಸುಖ ಬಯಸಿ ಹೆಣ್ಣು, ಹೆಣ್ಣು ಕೂಡಿ, ಹೆಣ್ಣನ್ನೆ ಹಡೆದಿವೆ. ಇಡೀ ವಿಶ್ವವೇ ಪುರುಷನನ್ನು ಅರಿಯದ ಸ್ತ್ರೀಲೋಕ ಪ್ರಮಿಳಾ ರಾಜ್ಯ ಎಂದು ಕರೆಯಿಸಿಕೊಂಡಿದೆ.

ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ದೇವಯ್ಯ ನಿಮ್ಮನ್ನಗಲಲಾರೆ. ನೀವೊಬ್ಬರೆ ಪರಮ ಪುರುಷರು. ನಿಮ್ಮ ಹೊರತಾಗಿ ಸಕಲ ಕಾಯಗಳು ಕಾಯವನ್ನು ಆವರಿಸಿದ ಮನ ಸ್ತ್ರೀಯರೇ ಆಗಿದ್ದಾರೆ. ನಿಮ್ಮ ಸಂಗ ಮಾಡಿದಾಗಲೇ ಸ್ತ್ರೀಗೆ ಮುಕ್ತಿ. ನ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ ಎಂದು ಮನು ಇದಕ್ಕೇ ಹೇಳಿರಬೇಕು.

ಶ್ರೀಕೃಷ್ಣನಿಗೆ ಹದಿನಾರು ಸಾವಿರ ಗೋಪಿಕಾಸ್ತ್ರೀಯರು. ಕೃಷ್ಣನೊಬ್ಬನೆ. ಶ್ರೀಕೃಷ್ಣನಿಗೆ ಅಷ್ಟೊಂದು ಹೆಂಡಿರು ಇದ್ದರೆಂದರೆ ಕೃಷ್ಣನೊಬ್ಬನೆ ಗಂಡು ಆಗಿರಬೇಕಲ್ಲಾ. ಆ ಗ್ರಾಮದ ಜನಸಂಖ್ಯೆಯೇ ಅಷ್ಟು. ಅದಕ್ಕೆ ಶ್ರೀಕೃಷ್ಣನೊಬ್ಬನೆ ಗಂಡು. ಉಳಿದವರೆಲ್ಲ ಹೆಣ್ಣು. ಅಂದರೆ ಜ್ಞಾನ ಮಾತ್ರ ಗಂಡು, ಮನ ಹೆಣ್ಣು. ಗಂಡು ಮತ್ತು ಹೆಣ್ಣು ವಾಸ ಮಾಡಲು ಇದ್ದ ಮನೆಯೇ ಕಾಯ.

**1121**

**ಹರಿಬ್ರಹ್ಮರು ಕಾವುದೊಂದು ಧರೆಯ ಹಿರಿಯ ಕೊಠಾರವಯ್ಯಾ.**
**ಬಾರದವರೆಲ್ಲರ ಬಂಧನಕ್ಕೆ ತಂದು**
**ಇಕ್ಕು ಬೀಯವನಿಕ್ಕುವರಯ್ಯಾ.**
**ಈ ಬೆಬ್ಬನೆ ಬೆರೆವ ಹಿರಿಯರೆಲ್ಲರ ಒಳಗು ಮಾಡಿದೆ,**
**ಎನ್ನ ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಕಾಯ ಹರಿಯೆಂದು ಕರೆಯಿಸಿಕೊಂಡರೆ; ಮನ ಬ್ರಹ್ಮನೆಂದು ಕರೆಯಿಸಿಕೊಂಡ. ಕಾಯದಲ್ಲಿಯೇ ಸಂಗಮವಾದ ಜ್ಞಾನ; ಪರಮಪುರುಷ ಪರಮಾತ್ಮನೆಂದು ಕರೆಯಿಸಿಕೊಂಡ. ಕಾಯ ಮತ್ತು ಮನ ಒಂದಾಗಿ, ಕಾಯದಲ್ಲಿ ಸಂಗಮವಾದ ಪರಮಪುರುಷ ಪರಮಾತ್ಮನನ್ನು ಮರೆತು, ಕಾಯ ಮತ್ತು ಮನ, ಕಾಯದೊಂದಿಗೆ ಸಂಗ ಮಾಡಿ, ಕಾಯಗಳ ಉಗ್ರಾಣವನ್ನೆ ನಿರ್ಮಾಣ ಮಾಡಿದವು.

ಕಾಯ ಕಾಯವನ್ನೆ ಹೆಣ್ಣೆಂದು ಕರೆಯಿತು. ಕಾಯ ಕಾಯವನ್ನೆ ಗಂಡೆಂದು ಕರೆದು, ಕಾಯ ಕಾಯದೊಂದಿಗೆ ಕೂಡಿ ಅಜ್ಞಾನದ ಕಾಯವನ್ನೆ ನಿರ್ಮಾಣ ಮಾಡಿತು. ಬರಬಾರದವರೆಲ್ಲರು ಈ ಭೂಮಿಗೆ ಬಂದು ಜನನ ಮರಣಗಳಿಗೆ ತುತ್ತಾದರು. ಪಂಡಿತರೆಂದು ಕರೆಯಿಸಿಕೊಂಡರು, ಹಿರಿಯರೆಂದು ಕರೆಯಿಸಿಕೊಂಡರು, ಋಷಿಮುನಿಗಳೆಂದು ಕರೆಯಿಸಿಕೊಂಡರು. ರಾಜ, ಪ್ರಧಾನಿ, ಸೇನಾಧಿಪತಿಯೆಂದು ಕರೆಯಿಸಿಕೊಂಡು ಕಾಯ ಕಾಯಕ್ಕೆ ಒಡೆಯನಾಯಿತು. ಕಾಯ ಕಾಯಕ್ಕೆ ದಾಸಾನು ದಾಸನಾಯಿತು. ಕಾಯ ಕಾಯಕ್ಕೆ ಗುರುವಾಯಿತು. ಕಾಯವೇ ಶಿಷ್ಯನಾಯಿತು. ನೀನಿಕ್ಕಿದ ಭಿಕ್ಷೆಯನ್ನು ಯಾರೂ ಅರಿಯಲಿಲ್ಲ. ಬೆಬ್ಬನೆ ಬೆರೆವ ಹಿರಿಯರೆಲ್ಲರನ್ನು ಅಜ್ಞಾನ ತನ್ನ ಸ್ವಾಧೀನಪಡಿಸಿಕೊಂಡು, ಕಾಯದಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆ ನಿನ್ನಿಂದ ಬಂದ ಮನ ನಿನ್ನನ್ನೇ ಮರೆತು ಹೋಯಿತು.

**1122**

**ಹರಿಯಾಣದೊಳಗಣ ಓಗರವ**
**ಹರಿಯುವರು ಹರಿಹರಿದುಂಡರಯ್ಯಾ.**
**ಪರ ವಧು ಬಂದು ಬೆರೆಸಲು ಆ ಹರಿ ಪರಹರಿಯಾದ.**
**ಉಣಬಂದ ಹರಿಯ ಶಿರವ ಮೆಟ್ಟಿ ನಿಂದಳು ನಿಮ್ಮ ಹೆಣ್ಣು.**
**ಇದ ಕಂಡು ನಾ ಬೆರಗಾದೆನಯ್ಯಾ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಕಾಯವೆಂಬ ಹರಿವಾಣದೊಳಗೆ ಶುದ್ಧ, ಸಿದ್ಧ, ಪ್ರಸಿದ್ಧವಾದ ಪರಮಾನ್ನವಿದೆ. ಹರಿಹರ ಬ್ರಹ್ಮಾದಿಗಳು ಕಾಯವೆಂಬ ಹರಿವಾಣವನ್ನು ತಮಗೆ ತಿಳಿದಂತೆ ಹರಿ ಹರಿದು ಉಂಡರು.

ಕಾಯವನ್ನು ಆವರಿಸಿದ ಮನವೆಂಬ ಪರವಧು ಪರಮಾತ್ಮನನ್ನೆ ಬೆರೆಸಿ ಆತನಿಗೆ ಸತಿಯಾದಾಗ ಹರಿವಾಣದೊಳಗಿದ್ದ ಓಗರವನ್ನು ಮಾತ್ರ ಉಣ್ಣುವ ಹರಿ ಪರಹರಿಯಾದ.

ಇದೊಂದು ರಹಸ್ಯಮಯವಾದ ಸೂತ್ರ. ಕಾಯದ ರಹಸ್ಯ ಕಾಯಕ್ಕೆ ತಿಳಿಯದಿದ್ದಕ್ಕಾಗಿ ಆ ರಹಸ್ಯವನ್ನು ತಿಳಿಯಲು ಕಾಯದಿಂದಲೇ ಬೈಬಲ್, ಭಗವದ್ಗೀತೆ, ಕುರಾನ್ ಗ್ರಂಥಗಳು

ಹೊರಬಂದವು. ಕಾಯಕ್ಕೆ ಕಾಯದಿಂದ ಬಂದ ಗ್ರಂಥಗಳೆ ಶ್ರೇಷ್ಠವಾದವು. ಬರೆದವರು ಶ್ರೇಷ್ಠರಾದರು. ಕಾಯ ಪುನಃ ತನ್ನ ಅಜ್ಞಾನವನ್ನೇ ತಾನು ಹೊದ್ದುಕೊಂಡು, ಗಂಡು ಹೆಣ್ಣಾಗಿ, ಗುರು ಶಿಷ್ಯನಾಗಿ ಶ್ರೀಮಂತ ಬಡವನಾಗಿ ಕಾಯ ಕಾಯವನ್ನು ಹೊಗಳುತ್ತ, ಕಾಯ ಕಾಯವನ್ನೆ ತೆಗಳುತ್ತ ಕಾಯ ಅಜ್ಞಾನದಿಂದ ಮೆರೆದವು. ಕಾಯದ ಜ್ಞಾನ ಕಾಯದಲ್ಲಿಯೇ ಉಳಿದುದನು ಕಂಡು ಜ್ಞಾನ ಬಳಸಿದ ಕಾಯ ಮಾತ್ರ ಬೆರಗಾಯಿತು.

ಅಜ್ಞಾನ ಉಣಬಂದ ಹರಿಯ ಶಿರವನ್ನು ಮೆಟ್ಟಿ ನಿಂತ ಮನವೆಂಬ ಹೆಣ್ಣು ಮಹಾದೇವನ ಹೆಂಡತಿಯಾದುದನು ಕಂಡು ಬೆರಗಾದೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1123**

**ಹರಿ ಹತ್ತು ಭವ ಬಂದ ; ಸಿರಿಯಾಗಿ ತೊಳಲಿತ್ತೈ**
**ಉರಗ ಖೇಚರರನ್ನು ಒರಸಿತಯ್ಯಾ !**
**ಕರುಣಾಕರನು ಕಪಿಲಸಿದ್ಧ ಮಲ್ಲೇಶ್ವರನ**
**ಶರಣರಿಗೆ ಅಂಜಿ ಓಡಿದುದು ಮಾಯೆ.**

ಹರಿ ಹತ್ತು ಅವತಾರಗಳಲ್ಲಿ ಬಂದು, ಜನನ ಮರಣಗಳ ಬಾಧೆಯನು ಅನುಭವಿಸಿದ. ಕಾಯದಲ್ಲಿ ಸಂಗಮವಾದ ಅರಿವಿನ ಸಂಪತ್ತು, ಕಾಯಕ್ಕೆ ಪರಿಚಯವಾಗಲೇ ಇಲ್ಲ. ಕಾಯವನ್ನು ಆವರಿಸಿದ ಮನವೆಂಬ ಉರುಗ, ಕಾಯದ ಹತ್ತು ಅವತಾರಗಳಲ್ಲಿಯೂ ಕಾಯವನ್ನೆ ತಿಂದು ಹಾಕಿತು.

ಕಾಯದಲ್ಲಿ ಅರಿವೆಂಬ ಶ್ರೀಗುರುದೇವನಾದ ಕರುಣಾಕರನು ಕಪಿಲಸಿದ್ಧ ಮಲ್ಲೇಶ್ವರನು ಸಂಗಮವಾಗಿದ್ದಾನೆ. ಈ ಪರಮಾತ್ಮನನ್ನು ಕಾಯವೆಂಬ ಹರಿ ಹತ್ತು ಅವತಾರಗಳಲ್ಲಿ ಬಂದರು ಅರಿಯಲಿಲ್ಲ. ಹರಿ ಹರನಿಗೆ ಶರಣು ಹೋಗಲಿಲ್ಲ. ಹರಿಗೆ ಹರನ ಪರಿಚಯ ಆಗಲೇ ಇಲ್ಲ. ತನುವಿಗೆ ಹಾಸಿಗೆಯಾಗಬೇಕಾದ ಹಾವು, ತನುವನ್ನು ಸುತ್ತಿ, ತನುವಿನಲ್ಲಿ ಕಾಮ ಸೃಷ್ಟಿಮಾಡಿ, ತನುವನ್ನೆ ಕಚ್ಚಿತು. ತನುವಿನಲ್ಲಿ ಕ್ರೋಧ ಸೃಷ್ಟಿಮಾಡಿ ತನುವನ್ನೆ ಸುಟ್ಟಿತು. ತನುವಿನಲ್ಲಿ ಲೋಭ ಸೃಷ್ಟಿಮಾಡಿ, ತನುವನ್ನೆ ತಿಂದು ಹಾಕಿತು. ತನುವಿನಲ್ಲಿ ಮೋಹ ಸೃಷ್ಟಿಮಾಡಿ, ತನುವಿನ ಅವತಾರಕ್ಕೆ ಕಾರಣವಾಯಿತು. ತನುವಿನಲ್ಲಿ ಮದ, ಮತ್ಸರ ಸೃಷ್ಟಿಮಾಡಿ ತನುವಿನಲ್ಲಿಯೇ ರಾಮ-ರಾವಣರನ್ನು ಸೃಷ್ಟಿ ಮಾಡಿತು. ತನುವನ್ನು ಆವರಿಸಿದ ಮನವೆಂಬ ಹಾವು ತನುವಿಗೆ ಆಭರಣವಾಗಲಿಲ್ಲ. ಅದು ಶರಣರಿಗೆ ಅಂಜಿ ಓಡಿ ಹೋಯಿತು. ಕರುಣಾಕರ ಕಪಿಲಸಿದ್ಧ ಮಲ್ಲೇಶ್ವರನ ಕೊರಳಿಗೆ ಆಭರಣವಾಯಿತು. ಆತ ನಾಗಭೂಷಣನೆನ್ನಿಸಿಕೊಂಡ.

**1124**

**ಹರುಣಿ ಹರುಣನನೆ ಜರೆದು ಮರೆವಂತೆ**
**ಎನ್ನಯ ಕರಣ ನಿಮ್ಮನೆ ನೆನೆದು ನೀವಾದವೈ.**
**ಈ ಪರವಶದ ಕೂಟಕ್ಕೆ ಉರವಣಿಸಲಾನೀಗ**
**ಕರಣೇಂದ್ರಿಯವರತ ಭೂಮಿ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪ್ರಾಣ ತನ್ನ ಪ್ರಾಣವನೆ ಜರಿದು ಪ್ರಾಣಕ್ಕೆ ಮರೆವು ಆವರಿಸಿ, ತನ್ನ ಇರುವಿಕೆಯನ್ನು ಕಳೆದುಕೊಳ್ಳುವಂತೆ; ಕಾಯದಲ್ಲಿರುವ ಕರ್ಣಗಳು ಕಾಯದಲ್ಲಿಯೇ ಸಂಗಮವಾದ ಕರುಣಾಕರನನ್ನು

ನೆನೆದು ಕರುಣಾಕರನೆ ಆಗಬೇಕಾಗಿದೆ. ಇದು ಕರಣಗಳಿಗೆ ಬಲು ಜಟಿಲವಾದ ಕೆಲಸ.

ಪ್ರಾಣಕ್ಕೆ ಕಾಯದ ಚಿಂತೆಯಿಲ್ಲ. ಕಾಯದೊಂದಿಗೆ ಪ್ರಾಣ ಗೆಳೆತನ ಮಾಡಿದ್ದರೂ ಕಾಯ, ಪ್ರಾಣ ಒಂದು ನಾಣ್ಯದ ಎರಡು ಮುಖವಾಗಿದ್ದರೂ ಕಾಯದ ಕಾಯಕವನ್ನು ಮರೆಯಿಸಿ ಪ್ರಾಣ ಪಕ್ಷಿ ಹಾರಿ ಹೋಗುತ್ತದೆ.

ಚಿನ್ನ ಪ್ರಾಣಕ್ಕಿಂತ ದೊಡ್ಡದಲ್ಲ. ಕಾಯದಲ್ಲಿರುವ ಕರ್ಣಗಳ ಚೇಷ್ಟೆಗೆ ಕಾಯ ಒಳಗಾಗಿ ಚಿನ್ನ ಬಚ್ಚಿಟ್ಟುಕೊಂಡ ಶ್ರೀಮಂತನ ಕಾಯಕ್ಕೆ ಮರೆವು ತಂದು ಚಿನ್ನವೇ ಶ್ರೇಷ್ಠವಾಗುತ್ತದೆ. ಕಾಯಕ್ಕೆ ಕಳ್ಳನ ವೇಷಧರಿಸಿದ ಕರ್ಣಗಳು ಶ್ರೀಮಂತನ ಕಾಯ ಬಚ್ಚಿಟ್ಟುಕೊಂಡ ಚಿನ್ನವನ್ನು ಕದಿಯಲು ಹೋದಾಗ ಚಿನ್ನವೇ ಶ್ರೇಷ್ಠವಾಗಿ ಕರ್ಣಂಗಳಿಗೆ ಪ್ರಾಣ ಕನಿಷ್ಠವಾಗುತ್ತದೆ. ಚಿನ್ನ ಕೊಡದಿದ್ದರೆ ಕಳ್ಳ ಕಾಯವನ್ನು ಕೊಂದು ಚಿನ್ನ ಪಡೆಯುತ್ತಾನೆ. ಕಳ್ಳ ಸಿಕ್ಕಿಹಾಕಿಕೊಂಡರೆ ಶ್ರೀಮಂತ ಕಳ್ಳನನ್ನು ಕೊಂದು ಚಿನ್ನವನ್ನು ರಕ್ಷಣೆ ಮಾಡುತ್ತಾನೆ. ಇಲ್ಲಿ ಪ್ರಾಣ ಪ್ರಾಣವನ್ನೇ ಜರಿದು ತನ್ನನ್ನು ತಾನೇ ಮರೆತು ಹೋಗಿದೆ. ಕಾಯದ ಕರ್ಣಂಗಳಿಗೆ ಚಿನ್ನವೇ ದೊಡ್ಡದಾಗಿದೆ.

ಈ ಪರವಶದ ಕೂಟಕ್ಕೆ ಉರವಣಿಸಲಾನೀಗ ಕರಣೇಂದ್ರಿಯ ಮರೆತ ಭೂಮಿ ಕಪಿಲಸಿದ್ಧ ಮಲ್ಲಿಕಾರ್ಜುನಾ: ಕಾಯ ಮತ್ತು ಪ್ರಾಣ ಚಿನ್ನಕ್ಕೆ ವಶವಾಗಿ ತಮ್ಮನ್ನು ತಾವೇ ಮರೆತು ಕಾಯವನ್ನು ಕಾಯದಲ್ಲಿದ್ದ ಪ್ರಾಣವನ್ನು ಕಳೆದುಕೊಳ್ಳಲು ಸಿದ್ಧವಾಗಿವೆ. ಇಡೀ ಕರಣೇಂದ್ರಿಯಗಳ ವಶದಲ್ಲಿ ಕಾಯ ಮತ್ತು ಪ್ರಾಣಗಳು ಬಂಧಿಯಾಗಿದೆ.

ಕಾಯವನ್ನು ಆವರಿಸಿದ ಮನ ಕರಣೇಂದ್ರಿಯಗಳನ್ನು ಸೃಷ್ಟಿಮಾಡಿ ಕಾಯವನ್ನು, ಪ್ರಾಣವನ್ನು, ಮನವನ್ನು ಮರೆತು ಹೋಗಿದೆ. ಅವೆಲ್ಲವುಗಳಿಗೆ ಚಿನ್ನವೇ ಶ್ರೇಷ್ಠವಾಗಿದೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವು ಎನ್ನುವ ಕಪಿಲಸಿದ್ಧ ಮಲ್ಲಿಕಾರ್ಜುನ ದೇವನೊಂದಿಗೆ ಸಂಗಮವಾದಾಗ ಆತನ ಕೂಟಕ್ಕೆ ವಶವಾದಾಗ ಚಿನ್ನ ತೃಣವಾಗುತ್ತದೆ. ಅದು ಹಳದಿ ಲೋಹವಾಗಿ ಕಾಣುತ್ತದೆ.

**1125**

**ಹಲಬರಿಗೆಳೆಯ ನೀನು, ಮೂವರಿಗೆ ಮುಗ್ಧ ನೀನು,**
**ನಿನ್ನನರ್ಚಿಸುವ ಪರಿಯೆಂತಯ್ಯಾ?**
**ಅಳಿದುಳುಕದಾ ಕಮಳ ಘನತರದಲಳವಟ್ಟು**
**ತನು ನಿನಗೆ ನೈವೇದ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪರಮಾತ್ಮನೇ, ಕಾಯದಲ್ಲಿಯೇ ಸಂಗಮವಾದ ನೀನು, ಕಾಯವನ್ನೇ ಕೈಲಾಸ ಮಾಡಿಕೊಂಡು ಇರುವ ನಿನ್ನನು ಅರಿತ ಶರಣರಿಗೆ ಎಳೆಯ ನೀನು. ಹೀಗಾಗಿ ಬಸವಣ್ಣನವರು ನಿನ್ನನ್ನು ಎಳೆಯನೆಂದು ಕರೆದಿದ್ದಾರೆ.

ಕಾಳಿ ಕಂಕಾಳದಿಂದ ಮುನ್ನ, ಉಮೆಯ ಕಲ್ಯಾಣದಿಂದ ಮುನ್ನ, ಹರಿ ವಿರಂಚಿಗಳಿಂದ ಮುನ್ನ, ಮುನ್ನ ಮುನ್ನ ಮುನ್ನ ಅಂದಿಂಗೆಳೆಯ ನೀನು ಹಳೆಯ ನಾನು ಕೂಡಲ ಸಂಗಮದೇವ.

ನಿನ್ನನ್ನು ಅರಿತವರೆ ನೀನು ಹೀಗೆ ಎಂದು ಕೈಗೆಟಕುವಂತೆ ಬರೆದಿದ್ದಾರೆ. ಅವರು ಅರಿಯುವ ಮುನ್ನ ನೀನಿದ್ದರು ನಿನ್ನನ್ನು ಅರಿತ ಮೊದಲಿಗರು ಅವರು. ಅವರಿಗೆ ಎಳೆಯ ನೀನು. ನಿನ್ನನ್ನು

ಅರಿತ ಅವರೇ ಹಳಬರು.

ಮೂವರಿಗೆ ಮುಗ್ಧ ನೀನು, ಕಾಯಕ್ಕು ಕಾಯವನ್ನು ಆವರಿಸಿದ ಮನಕ್ಕು ಮನದಿಂದ ಸಿದ್ಧವಾದ ಅರಿವಿಗೂ, ಕಾಯದಲ್ಲಿಯೇ ನೀನಿದ್ದರೂ ನಿನ್ನ ಪರಿಚಯ ಅವರಿಗಿಲ್ಲ. ಮುಗ್ಧರು ಅವರು. ಆದರೂ ತಮಗೆ ತಿಳಿದಂತೆ ನಿಮ್ಮನ್ನು ದೇವರಾಗಿಸಿದ್ದಾರೆ. ಅವರಿಂದಲೇ ಪೂಜೆಗೊಳ್ಳುವ ನೀನು ದೇವರಲ್ಲವೆಂದು ಅವರಿಗೆ ತಿಳಿಯದು. ಆದರೂ ಅವರು ನಿನ್ನನ್ನು ಅರ್ಚಿಸುತ್ತಾರೆ. ಅವರಲ್ಲಿದ್ದ ನೀನು ಅವರನ್ನು ಎಚ್ಚರಿಸುತ್ತಿಲ್ಲ. ಅವರು ಪೂಜಿಸುವ ದೇವರು ನಾನಲ್ಲವೆಂದು ಹೇಳದ ಮೂಗ ನೀನು.

ತನುವನ್ನು ಆವರಿಸಿದ ಮನ, ತನುವಿನಲ್ಲಿಯೇ ತನ್ಮಯವಾದ ನಿನಗೆ, ತನುವನ್ನು ನೈವೇದ್ಯವನ್ನಾಗಿ ಅರ್ಪಿಸಿದಾಗ, ಮುಗ್ಧರಿಗೆ ನಿನೊಲಿವೆ. ಮೂರೊಂದು ಘನವಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾವಾಗುವುದು.

**1126**

**ಹಲವು ಕಾಲದ ಹುಣ್ಣಿಂಗೆ ಹಿರಿದು ಧಾವತಿಗೊಂಡೆ ನಾನು.**
**ತಲೆಯ ಭಾಗದಲು ಹುಣ್ಣುವ ಕಳದಂತೆ**
**ಎಲ್ಲವ ಸಂದಿಸುವನ್ನ ತಾರ, ವಿಚಿತ್ರಮೂಲ**
**ಕಪಿಲಸಿದ್ಧ ಮಲ್ಲಿಕಾರ್ಜುನ ದೇವ.**

ಅಜ್ಞಾನವೆಂಬುದು ಕಾಯದಲ್ಲಿಯೇ ಹುಟ್ಟಿದ ಹಲವು ಕಾಲದ ಹುಣ್ಣು. ಅದು ಮಾಯುವುದು ಕಠಿಣ. ಕಾಯಕ್ಕೆ ಆದ ಗಾಯ ಹುಣ್ಣಾಗಿ ಮಾಯುತ್ತದೆ. ಅದಕ್ಕೆ ಸ್ವಲ್ಪ ಸಮಯವಾದರೂ ಸಾಕು. ಗಾಯದ ಮೇಲೆ ಕಟ್ಟಿದ ಅಕ್ಕಳೆ ಉದುರಿ ಕಾಯಕ್ಕೆ ಗಾಯವಾದ ನೆನಪು ಕೂಡಾ ಇಲ್ಲದಂತಾಗುತ್ತದೆ. ಕಾಯಕ್ಕಾದ ಅಜ್ಞಾನದ ಹುಣ್ಣು ಹಾಗಲ್ಲ. ಅದರ ಗಾಯ ಕಾಯ ಇರುವವರೆಗೆ ಇರುತ್ತದೆ. ಕಾಯದ ಜೊತೆಗೆ ಇಲ್ಲವಾಗುತ್ತದೆ.

ಶಬ್ದದಿಂದ ಆದ ಗಾಯ, ಸ್ಪರ್ಶದಿಂದ ಆದ ಗಾಯ, ಭಾವ ದುರ್ಭಾವದಿಂದ ಆದ ಗಾಯ, ವಾಸನೆಯಿಂದ ಆದ ಗಾಯ, ರುಚಿಯಿಂದ ಆದ ಗಾಯ, ದೃಶ್ಯದಿಂದ ಆದ ಗಾಯದ ಅಜ್ಞಾನದ ಹುಣ್ಣಿನ ಗಾಯದಿಂದ ಕಾಯ ದಾವತಿಗೊಳ್ಳುತ್ತದೆ.

ಕಾಯಕ್ಕೆ ಆದ ಕಾಲದ ಹುಣ್ಣಿನ ಗಾಯ, ಕಾಯದ ಕಾಲದೊಂದಿಗೆ ಅಳಿಯುತ್ತದೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಜ್ಞಾನದೊಂದಿಗೆ ಸಂಗಮವಾದಾಗ ಕಾಯಕ್ಕೆ ಆದ ಕಾಲದ ಹುಣ್ಣಿನ ಗಾಯ ಕೂಡಲೇ ಉದುರಿ ಬೀಳುತ್ತದೆ.

ಇದು ಸಕಲ ಕಾಯಗಳಿಗೂ ಸಾಧ್ಯವಾಗುತ್ತದೆ. ಕಾಯ ಮತ್ತು ಕಾಯವನ್ನು ಆವರಿಸಿದ ಮನ ತಮಗಾದ ಕಾಲದ ಹುಣ್ಣಿನ ಕಾಯಕ್ಕೆ ಆದ ಅಜ್ಞಾನದ ಗಾಯ ಕಳೆದುಕೊಳ್ಳಲು ಕಾಯ ಸಿದ್ಧವಾಗಬೇಕು. ಆಗ ಕಾಯದಲ್ಲಿಯೇ ಸಂಗಮವಾದ ಜ್ಞಾನದೇವರು ಕಾಯಕ್ಕೆ ಆದ ಕಾಲದ ಹುಣ್ಣನ್ನು ತನ್ನ ಅರಿವಿನ ಔಷಧಿಯನ್ನು ಹಚ್ಚಿ ಕೂಡಲೇ ಗುಣಮುಖನನ್ನಾಗಿ ಮಾಡುತ್ತಾನೆ.

ಕಾಯದಲ್ಲಿ ಸಂಗಮವಾದ ಜ್ಞಾನದೇವ ವಿಚಿತ್ರಮೂಲ. ಆತ ಸ್ಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ. ಕಾಯಕ್ಕೆ ಅಂಟಿದ ಹಲವು ಕಾಲದ ಹುಣ್ಣುಗಳ ಭವರೋಗದ ಬಾಧೆಯನ್ನು ಕೂಡಲೇ ಕಳೆಯುವ ಭವರೋಗದ ವೈದ್ಯನಾದ. ಈ ವೈದ್ಯನಿಗೆ ಮನ ಶರಣು ಹೋಗಲೇಬೇಕು.

**1127**

**ಹಲವು ದಳವ ಮೆಟ್ಟಿ ಪರೀಕ್ಷಿಸುವ**
**ಪ್ರಭಾಕರನ ಪರಿಯ ನೋಡಾ!**
**ಅಜ್ಞಾನಕ್ಕೆ ತಾನೆ ಹೊಲಬಿಗನಾಗಿ**
**ಕಿರಿಕಿರಿದರಲ್ಲಿ ಹಿರಿಹಿರಿದಾಗಿ**
**ನೀನೆರವ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ವಿಚಿತ್ರ ವಿನೋದಿ.**

ಸೂರ್ಯ ಇಡೀ ಭೂಮಂಡಲದಲ್ಲಿ ಕತ್ತಲನ್ನು ಸೃಷ್ಟಿ ಮಾಡಿದ. ತಾನು ಸೃಷ್ಟಿ ಮಾಡಿದ ಕತ್ತಲನ್ನು ಪುನಃ ತಾನೇ ಬೆಳಗಿ ತನ್ನಂತೆ ಮಾಡಿಕೊಂಡ. ಇದು ಪ್ರಭಾಕರನ ವಿಚಿತ್ರವಾದ ಗುಣ.

ಕಾಯದಲ್ಲಿ ಸಂಗಮವಾದ ಮಹಾಜ್ಞಾನಿ ಜ್ಞಾನದೇವನ ಪರಿಯೂ ಕೂಡಾ ಹೀಗೆ ಇದೆ. ಕಾಯವನ್ನು ಜ್ಞಾನದಿಂದ ಬೆಳಗುವವನು ಅವನೆ. ಅಂತಹ ಕಾಯದಲ್ಲಿ ಮನವನ್ನು ಸೃಷ್ಟಿ ಮಾಡಿ ಅಜ್ಞಾನದ ಕತ್ತಲನ್ನಾಗಿಸುವವನು ಅವನೆ. ಕಾಯದ ಅಜ್ಞಾನದ ಸೃಷ್ಟಿಗೆ ತಾನೇ ಕಾರಣ. ಕಾಯದಲ್ಲಿಯ ಅಜ್ಞಾನವನ್ನು ನುಂಗಿ ಬೆಳಗಿಂಗೆ ಬೆಳಗಾಗಿಸಿ ಕಾಯವನ್ನು ಕೈಲಾಸವನ್ನಾಗಿಸುವವನು ಅವನೆ. ಮನವೆಂಬ ಕತ್ತಲು ತನಗೆ ತಾನೇ ಕತ್ತಲೆಂದು ತಿಳಿದುಕೊಂಡ ಕಾಯದಲ್ಲಿಯೇ ಸಂಗಮವಾದ ಜ್ಞಾನದ ಬೆಳಕನ್ನು ಉಣ್ಣಲು ಇಚ್ಛೆ ಮಾಡಿದಾಗ ಕಾಯ ಜ್ಞಾನದಿಂದ ಬೆಳಗುತ್ತದೆ. ತನ್ನ ಕತ್ತಲನ್ನು ತನ್ನದೇ ಆದ ಬೆಳಕನ್ನು ಉಣ್ಣುವ ಮೂಲಕ ಕಳೆದುಕೊಳ್ಳುತ್ತದೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

ಜ್ಞಾನದೇವ ವಿಚಿತ್ರ ವಿನೋದಿ. ಅಜ್ಞಾನಕ್ಕೆ ತಾನೇ ಒಲವಿಗನಾಗಿದ್ದಾನೆ. ಕಿರಿಯ ಕಾಯದಲ್ಲಿ ಅರಿವಿನ ಹಿರಿಯನಾಗಿ ನಿಂತಿದ್ದಾನೆ.

**1128**

**ಹಲವು ಪರಿಯಲೆನ್ನ ದಲವ ಸಾಧಿಸೇನೆಂದಡೆ**
**ಬಲ್ಲಿದನಾ ನಿನಗೆ ಕಂಡಾ ಅವ್ವ.**
**ಕುಲವನುಳಿದೆ ದಲವನುಳಿದೆ**
**ಗುರುವಿನ ಬಲುಹೆ ನೆಲೆಮನೆಯಾಯಿತ್ತು.**
**ದಲವ ಸಾಧಿಸುವೆ ಇಷ್ಟು ಗುರು ಚರ ತ್ರಯದಲ್ಲಿ**
**ಕಪಿಲಸಿದ್ಧ ಮಲ್ಲಿನಾಥನ ಕೂಡುವೆ ಅವ್ವಾ.**

ಮನ ಕಾಯದ ಗೆಳೆತನ ಮಾಡಿ ಕಾಯದ ಮೂಲಕ ಪದವಿ, ಪಾಂಡಿತ್ಯ, ಶ್ರೀಮಂತಿಕೆಯನ್ನು ಸಾಧಿಸಿ, ವಿಶ್ವದಲ್ಲಿ ಪ್ರಮುಖ ವ್ಯಕ್ತಿತ್ವವನ್ನು ಪಡೆದುಕೊಂಡು, ವಿಶ್ವದಲ್ಲಿರುವ ಕಾಯಗಳು ಹೌದೌದೆಂದು ಚಪ್ಪಾಳೆ ತಟ್ಟಿದರೂ ಕೂಡಾ, ಮನದ ಗುಣ-ದುರ್ಗುಣಗಳನ್ನು ಕಾಯದಲ್ಲಿಯೇ ಸಂಗಮವಾದ ಶ್ರೀಗುರುದೇವನು ಪಟ್ಟಿ ಮಾಡಿಕೊಂಡು ಕ್ಷಣ ಕ್ಷಣಕ್ಕೂ ಹೀಯಾಳಿಸುತ್ತಾನೆ. ಕಾಯದ ಕುಲವನ್ನು ಅಲ್ಲಗಳೆಯುತ್ತಾನೆ. ಅದರ ಛಲವನ್ನು ಅಲ್ಲಗೆಳೆಯುತ್ತಾನೆ.

ಕಾಯ ಮತ್ತು ಮನಕ್ಕೆ ಒಪ್ಪಿಗೆಯಾಗುವುದು; ಕಾಯದಲ್ಲಿಯೇ ಸಂಗಮವಾದ ಶ್ರೀಗುರುದೇವನಿಗೆ ಒಪ್ಪಿಗೆಯಾಗುವುದಿಲ್ಲ. ಆತ ಕಾಯ ಮತ್ತು ಮನದ ಗುಣಾವಗುಣಗಳನ್ನು ಹಲವು ಪರಿಯಲ್ಲಿ ಖಂಡಿಸುತ್ತಾನೆ.

ಕಾಯ ಲೋಕಕ್ಕೆ ಮೆಚ್ಚುಗೆಯಾಗುವಂತೆ ನಡೆದರೆ ಅದು ನಡೆಯಲ್ಲ. ಕಾಯ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಶ್ರೀಗುರುದೇವನ ಮೆಚ್ಚುಗೆ ಗಳಿಸಿ ಆತ ನುಡಿದಂತೆ, ಕಾಯ ಮತ್ತು ಮನ ನಡೆದು ನುಡಿದಾಗ ಅಂತಹ ಕಾಯವನ್ನು ಶ್ರೀಗುರುದೇವ ಕಪಿಲಸಿದ್ಧ ಮಲ್ಲಿಕಾರ್ಜುನನನ್ನಾಗಿ ಮಾಡುತ್ತಾನೆ. ಆಗ ಗುರುದೇವನ ಒಲುಮೆಯಿಂದ ಆತನಿದ್ದ ಮನೆ ನೆಲೆಮನೆಯಾಗುತ್ತದೆ. ಕಾಯದ ಅಜ್ಞಾನದ ಕುಲವನಳಿದು ಜ್ಞಾನಕುಲದ ಕೈಲಾಸವನ್ನಾಗಿಸುತ್ತಾನೆ.

**1129**

**ಹಾಡ, ಎಂದಡೆ ಇದೆಂತುಟಾದಡಾಗಲಿ**
**ನೀ ಕೇಳುವಂತೆ ಹಾಡಿದೆನು ಕಂಡಯ್ಯ.**
**ಎಲೆ ಅಯ್ಯಾ, ಅಯ್ಯಾ, ಮಾ!**
**ನಿಮ್ಮ ಹಾಡುವ ಹಾಡ ಚಿತ್ತೈಸುವುದಯ್ಯಾ.**
**ನಿಮ್ಮ ಧ್ಯಾನಗಳನವಧರಿಸು, ಕೇಳು ಕೇಳಯ್ಯಾ,**
**ಎನ್ನ ಕಪಿಲಸಿದ್ಧ ಮಲ್ಲೇಶ್ವರ ದೇವರ ದೇವಯ್ಯ.**

ಶರಣರು ದಾಸರು ತತ್ವಪದಕಾರರು ತಮಗೆ ತಾವೇ ಹಾಡಿಕೊಂಡರು. ಜನ ಹೀಗೆ ಆಡುವ ಶರಣರನ್ನು ದಾಸರನ್ನು ಕಂಡು ಹುಚ್ಚರೆಂದು ಹೀಯಾಳಿಸಿದರು. ಆದರೂ ಅವರು ಮಾನ-ಅಪಮಾನಗಳನ್ನು ಲೆಕ್ಕಿಸಲಿಲ್ಲ. ಜ್ಞಾನಿಗಳ ಲೋಕವೆ ಬೇರೆ ! ಲೌಕಿಕರ ಲೋಕವೆ ಬೇರೆ! ಲೌಕಿಕರು ಲೋಕದೊಂದಿಗೆ ಮಾತನಾಡಿದರೆ, ಜ್ಞಾನಿಗಳು ತಮಗೆ ತಾವೇ ಮಾತನಾಡಿಕೊಳ್ಳುತ್ತಾರೆ. ಹಾಗೆಂದು ಲೋಕಕ್ಕೆ ತಿಳಿಯುತ್ತದೆ. ಜ್ಞಾನಿಯ ಮಾತೇ ಬೇರೆ.

ಶರಣ ತನುವಿನಲ್ಲಿಯೇ ತನ್ಮಯವಾದ ಅರಿವಿನ ಲಿಂಗಯ್ಯನಿಗೆ ಶರಣು ಹೋಗಿ ಆತನೊಂದಿಗೆ ಮಾತನಾಡುತ್ತಾನೆ. ಆತನ ಮಾತು ಲಿಂಗಯ್ಯ ಕೇಳುತ್ತಾನೆ. ಲಿಂಗಯ್ಯನ ಮಾತು ಶರಣ ಆಲಿಸಿ, ಆತ ನುಡಿಸಿದಂತೆ ನುಡಿಯುತ್ತಾನೆ !

ಸಿದ್ಧಾರ್ಥ, ಬುದ್ಧ ಬೇರೆ ಬೇರೆ ಅಲ್ಲ. ಕಾಯವೊಂದೆ. ಕಾಯದಲ್ಲಿ ಸಿದ್ಧಾರ್ಥನು ಇದ್ದಾನೆ, ಬುದ್ಧನು ಇದ್ದಾನೆ. ಸಿದ್ಧಾರ್ಥನಿಗೆ ಬುದ್ಧನ ಪರಿಚಯವಾಯಿತು. ಸಿದ್ಧಾರ್ಥ ಮತ್ತು ಬುದ್ಧ ಒಬ್ಬರಿಗೊಬ್ಬರು ಮಾತನಾಡಿಕೊಂಡರು. ಬುದ್ಧ ನುಡಿದಂತೆ ಸಿದ್ಧಾರ್ಥ ನುಡಿದ. ಹೀಗಾಗಿ ಸಿದ್ಧಾರ್ಥ ಬುದ್ಧ ಎಂದು ಲೋಕದ ಮೂಲಕ ಕರೆಯಿಸಿಕೊಂಡ !

ಸಿದ್ಧರಾಮ ಶಿವಯೋಗಿಗಳು ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲೇಶ್ವರ ದೇವರ ದೇವನೊಂದಿಗೆ ಮಾತನಾಡಿದ್ದಾರೆ. ಹಾಡಾ ಎಂದಡೆ ಆ ಹಾಡು ಹೇಗಿದ್ದರೇನು ? ರಾಗ, ತಾಳ ಇಲ್ಲದಿದ್ದರೇನು ? ನೀ ಕೇಳುವಂತೆ ಪರಮಾನಂದದಿಂದ ನಿನಗಾಗಿ ಹಾಡಿದೆನು; ನೀವೇ ಚಿತ್ತೈಸುವುದಯ್ಯಾ. ನಿಮ್ಮ ಧ್ಯಾನದಲ್ಲಿ ನನ್ನನ್ನು ಸದಾ ಇರಿಸಿ, ಅವಧರಿಸು ತಂದೆ; ಕೇಳು ಕೇಳಯ್ಯಾ, ಗುರುವೆ ನೀ ಹಾಡು ಎಂದರೆ ನಾ ಹಾಡುವೆನು.

**1130**

**ಹಾಡಿದರಿವರನು ಬೇಡಿದರಿವರನು.**

**ಕೇಡಿಲ್ಲದಭವನ ನೆನೆಯಾ ಮನವೆ.**
**ಕಣ್ಣಿಗೆ ತಿಮಿರ ಕವಿದು ಕವಿದು**
**ಕರ್ಮದ ಬಲೆಗಳ ಸಿಲುಕದ ಮುನ್ನ**
**ಸಕಲ ಜೀವಂಗಳಿಗೆ ಪ್ರಾಣನಿಸ್ತಾರಕ**
**ಕಪಿಲಸಿದ್ಧ ಮಲ್ಲಿನಾಥಾ, ನೀ ಕೊಟ್ಟುದನರಿಯಾ.**

ಎಲೆ ಮನವೇ, ನೀನು ಹಾಡಿದರೆ ಕಾಯದಲ್ಲಿ ಸಂಗಮವಾದ ಶ್ರೀಗುರುದೇವನನ್ನು ಹಾಡು. ಬೇಡಿದರೆ ನೀನು ಆತನನ್ನೆ ಬೇಡು. ಆತ ಕೇಡಿಲ್ಲದಾತ, ರೂಹಿಲ್ಲದಾತ, ಸಾವಿಲ್ಲದಾತ. ಆತನನ್ನು ಸದಾ ನೆನೆಯಾ ಮನವೇ. ಆತನನ್ನು ನೆನೆದರೆ ಆತ ನಿನ್ನ ಜನನ ಮರಣಗಳ ಬಾಧೆಯನ್ನು ಕಳೆದು ಸಾವಿಲ್ಲದ, ಕೇಡಿಲ್ಲದ ಮಂತ್ರವನ್ನು ಬೋಧಿಸುತ್ತಾನೆ. ಅದರಿಂದ ನಿನ್ನ ಭವರೋಗದ ದುಃಖ ಅಳಿಯುವುದು ಕಂಡಯ್ಯಾ.

ಎಲೆ ಮನವೇ, ನಿನ್ನ ಕಣ್ಣಿಗೆ ತಿಮಿರ ಕವಿದಿದೆ. ನೀನು ಕರ್ಮದ ಬಲೆಗಳಿಗೆ ಸಿಲುಕದ ಮುನ್ನ ಸಕಲ ಜೀವಿಗಳಿಗೆ ಪ್ರಾಣದಾನ ಮಾಡಿದ ಕಪಿಲಸಿದ್ಧ ಮಲ್ಲಿನಾಥನು, ನಿನಗೂ ಕೂಡಾ ಪ್ರಾಣಕೊಟ್ಟುದನು ಅರಿಯಾ ಮನವೇ. ಬಸವಣ್ಣನವರು ಕೂಡಾ ''ಹಾಡಿದರೆ ಎನ್ನೊಡೆಯನ ಹಾಡುವೆ, ಬೇಡಿದರೆ ಎನ್ನೊಡೆಯನ ಬೇಡುವೆ, ಒಡೆಯನಿಗೆ ಒಡಲು ತೋರಿ ಎನ್ನ ಬಡತನವ ಭಿನ್ನೈಸುವೆ, ಕೂಡಲಸಂಗಮದೇವರ ಸೆರಗೊಡ್ಡಿ ಬೇಡುವೆ''ನು ಎಂದು ಹಾಡಿದ್ದಾರೆ.

ಕಾಯ ತಾನು ಪರಿಪೂರ್ಣ ಕಾಯ. ಅರಿವಿನ ಶ್ರೀಮಂತಿಕೆಯನ್ನು ತುಂಬಿಕೊಂಡ ಕಾಯ! ಆದರೂ ಕೂಡಾ ಲೌಕಿಕರು ತಾವು ಪರಿಪೂರ್ಣ ಎನ್ನುವುದನ್ನು ಮರೆತು, ಅನ್ಯ ಕಾಯಗಳನ್ನು ಬೇಡುತ್ತವೆ. ಕಾಯವನ್ನು ಆವರಿಸಿದ ಮನ, ಕಾಯದಲ್ಲಿಯೇ ಸಂಗಮವಾದ ಅರಿವಿನ ದೇವರಿಗೆ ಸೆರಗೊಡ್ಡಿ ಬೇಡುವುದನ್ನೆ ಮರೆತು ಹೋಗಿದೆ.

ಇಳೆ ನಿಮ್ಮದಾನ, ಬೆಳೆ ನಿಮ್ಮದಾನ, ಸುಳಿದು ಬೀಸುವ ಗಾಳಿ ನಿಮ್ಮ ದಾನ, ನಿಮ್ಮ ದಾನವನುಂಡು ಅನ್ಯರನು ಹೊಗಳುವ ಕುನ್ನಿಗಳ ನೇನೆಂಬೆ ರಾಮನಾಥ ! ಎಂದು ಬೇಡುವ ಲೋಕಕ್ಕೆ ಸುಂದರವಾದ ಅರಿವಿನ ಸೂತ್ರವನ್ನು ನೀಡಿದ್ದಾರೆ ದಾಸಿಮಾರ್ಯರು.

ಸಿದ್ಧರಾಮ ಶಿವಯೋಗಿಗಳು ಕೂಡಾ ಲೋಕದ ಸಕಲ ಜೀವಿಗಳಿಗೆ ಪ್ರಾಣದಾನ ಮಾಡಿದ ಕಪಿಲಸಿದ್ಧ ಮಲ್ಲಿನಾಥನು ಕೊಟ್ಟುದನು ಅರಿಯದು ಈ ಲೋಕ ಎಂದಿದ್ದಾರೆ.

**1131**

**ಹಾಡಿ ಹಂಬಲಿಸಿದೆನಯ್ಯಾ,**
**ಅಯ್ಯಾ, ನಿಮ್ಮ ಬೇಡಿ ಬೇಡಿ ಬಾಯಿ ಬೋಡಾದೆನಯ್ಯಾ.**
**ನುಡಿಗೆಟ್ಟ ಬ್ರಹ್ಮದಲ್ಲಿ ನಡೆದೆನೆಂದರೆ**
**ಎನ್ನ ಒಡಲ ಆಮಿಷ ಕಾಡುತ್ತಲಿದೆ.**
**ಮೃಡನೇ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**
**ಬೇಕು ಬೇಡೆಂಬುದ ಕಳೆಯಯ್ಯಾ.**

ಮೃಡನೆ ಹಾಡಿ ಹಂಬಲಿಸಿದರೂ ನಿಮ್ಮ ಬೇಡಿ, ಬೇಡಿ ಬಾಯಿ ಬೋಡಾದರೆಯು, ನೀನು

ನನಗೆ ಒಲಿಯದಿದ್ದರೆ ಹೇಗೆ? ಪರಮಾತ್ಮನೇ, ಎನ್ನ ಒಡಲ ಆಮಿಷಕ್ಕಾಗಿ ನಿನ್ನನ್ನು ಬೇಡಿದೆ. ನುಡಿಗೆಟ್ಟು ಬ್ರಹ್ಮವ ನುಡಿದೆ. ನುಡಿದಂತೆಯೇ ನಡೆಯಲು ನನಗೆ ಸಾಧ್ಯವಾಗಲಿಲ್ಲ. ಒಡಲ ಆಮಿಷ ಕಾಡುತ್ತಲಿದೆ. ಮೃಡನೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆ ಬೇಕು ಬೇಡೆಂಬುದನು ಕಳೆಯಯ್ಯಾ ನನಗೆ ನೀನು ಮಾತ್ರ ಬೇಕೆಂಬುದನು ಎನ್ನಿಂದ ಬೇಡಿಸು ತಂದೆ. ನೀನು ನುಡಿದಂತೆ ನನ್ನನ್ನು ನುಡಿಯಲು ಹಚ್ಚಿ ಎನ್ನನ್ನು ಪಾರು ಮಾಡಯ್ಯಾ.

**1132**

**ಹಾಡುವೆ, ಹೊಗಳುವೆ, ಬೇಡುವೆ ಸೆರಗೊಡ್ಡಿ ಆನು.**
**ಕಾಡುವೆ ನಿಮ್ಮವರ ಸಂಗವನೆ ಕರುಣಿಸಯ್ಯಾ;**
**ಅಯ್ಯಾ , ನಿಮ್ಮ ಬೇಡುವ ಪದವಿಂತುಟಯ್ಯಾ;**
**ಕರುಣಾಕರ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ. ಕೃಪೆಮಾಡಾ, ಧರ್ಮಿ!**

ಲೋಕ ತಾನು ಮಾಡಿದ ದೇವರನು ಹಾಡುತ್ತದೆ, ಹೊಗಳುತ್ತದೆ. ಸೆರಗೊಡ್ಡಿ ತನಗೆ ಬೇಕಾದುದನು ತಾನು ಮಾಡಿದ ದೇವರನ್ನೆ ಬೇಡುತ್ತದೆ. ಅದು ತಾನು ಮಾಡಿದ ದೇವರು ತನ್ನಿಂದಲೇ ಪೂಜೆಗೆ ಒಳಗಾಗಿದೆ. ತನ್ನಿಂದಲೇ ಆಲಯ ನಿರ್ಮಿಸಿಕೊಂಡಿದೆ. ತನ್ನಿಂದಲೇ ಛತ್ರಿ, ಚಾಮರ, ಉತ್ಸವಗಳನ್ನು ಮಾಡಿಸಿಕೊಳ್ಳುತ್ತದೆ. ತನಗಾದರು ತಾನು ಮಾಡಿದ ದೇವರು; ಏನನ್ನಾದರು ಕೊಡಲು ಸಾಧ್ಯವೆ? ಎಂಬ ಅರಿವು ಲೋಕಕ್ಕೆ ಮರೆವಾಗಿದೆ. ಹೀಗಾಗಿ ಲೋಕದ ತುಂಬಾ ದೇವಾಲಯಗಳು, ಮಸೀದಿಗಳು, ಚರ್ಚ್‌ಗಳನ್ನು ನಿರ್ಮಿಸಿ ಲೋಕದ ಜನ ತಾವು ನಿರ್ಮಿಸಿದ ದೇವರನ್ನು ತಾವೇ ಬೇಡುತ್ತವೆ. ಜ್ಞಾನಿಗಳು ಹಾಗಲ್ಲ, ಅವರು ಆರಾಧಿಸುವ ದೇವರು ಯಾರಿಗೂ ಕಾಣುವುದಿಲ್ಲ. ಅವರಿಗೆ ಮಾತ್ರ ಕಾಣುತ್ತಾನೆ. ಜ್ಞಾನಿಗಳು ಆರಾಧಿಸುವ ದೇವರು ಲೋಕದಿಂದ ನಿರ್ಮಾಣವಾದ ದೇವರುಗಳಲ್ಲ. ಲೋಕವನ್ನು ನಿರ್ಮಾಣ ಮಾಡಿದ ದೇವರು.

ಕಾಯವನ್ನು ನಿರ್ಮಾಣ ಮಾಡಿ ಕಾಯದಲ್ಲಿಯೇ ಇದ್ದ ದೇವರನ್ನು ಕಾಯವನ್ನು ಆವರಿಸಿದ ಮನವನ್ನೆ ಭಕ್ತನನ್ನಾಗಿಸಿ ಬೇಡುತ್ತಾರೆ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಕುರಿತು ಅಂಗವನ್ನು ಆವರಿಸಿದ ಮನದಿಂದ ಹಾಡುವೆ, ಹೊಗಳುವೆ, ಸೆರಗೊಡ್ಡಿ ಬೇಡುವೆನು; ತಂದೆ ಕೃಪೆ ಮಾಡು ಕರುಣಾಕರನೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಕಾಡುವೆ ನಿನ್ನನ್ನು, ನನಗಾಗಿ ಅಲ್ಲ ನಿಮ್ಮವರ ಸಂಗದಲಿ ನನ್ನನ್ನು ಸದಾ ಇರುವಂತೆ ಮಾಡಿ ಕರುಣಿಸಯ್ಯಾ, ಅಯ್ಯಾ ನಿಮ್ಮ ಬೇಡುವ ಪದ ಇಂತುಟಯ್ಯಾ ಕೃಪೆ ಮಾಡು ಧರ್ಮಿ.

ಧರ್ಮ ಎನ್ನುವುದು ಇಲ್ಲ. ಕಾಯದಲ್ಲಿ ಸಂಗಮವಾದ ಅರಿವಿನ ಧರ್ಮವೇ ಧರ್ಮ. ಮನ ಕಾಯದೊಂದಿಗೆ ಅರಿವಿನ ಧರ್ಮವನ್ನು ಪಾಲಿಸಲೇಬೇಕು. ಹಾಗೇ ಪಾಲಿಸಲು ಕೃಪೆ ಮಾಡು ಧರ್ಮಿ ಎಂದು ಮನ ಅರಿವಿನ ಮಲ್ಲಯ್ಯನನ್ನು ಬೇಡಲೇಬೇಕು. ಈ ಕಲೆ ಕರಗತ ಮಾಡಿಕೊಂಡ ಕಾಯವೇ ಬುದ್ಧಕಾಯ. ಬಸವಾದಿ ಶರಣರಕಾಯ, ದಾಸವರೇಣ್ಯರಕಾಯ, ಕ್ರಿಸ್ತ, ಕೃಷ್ಣ, ಪೈಂಗಬರರ ಕಾಯವೆಂದು ಕರೆಯಿಸಿಕೊಳ್ಳುತ್ತದೆ.

**1133**

**ಹಾರವನಿಕ್ಕಿದ ಮಣಿಯ ಕಂಠಮಾಲೆ**
**ಮೂವತ್ತು ಮೂರುಕೋಟಿ.**

**ವೆಚ್ಚದಲ್ಲಿ ಉರಿ ಹತ್ತಿತ್ತು ಪ್ರಸಾದಿಯ,**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಕಾಯದಲ್ಲಿ ಅರಿವು ಸಂಗಮವಾಗಿದೆ. ಆ ಅರಿವಿನ ಮಣಿಯ ಕಂಠ ಮಾಲೆಯಾಗಿ ಧರಿಸಿಕೊಂಡ ಕಾಯವೇ ಜ್ಞಾನಕಾಯ; ಮಹಾದೇವನಕಾಯ; ನಾಗಭೂಷಣನಕಾಯ.

ಅರಿವಿನ ಮಣಿಯ ಕಂಠಮಾಲೆ ಏಳುನೂರಾ ಮೂವತ್ತು ಕೋಟಿ ಕಾಯಗಳಲ್ಲಿಯೂ ಇದೆ. ಈ ಅರಿವಿನ ಮಾಲೆ ಇಲ್ಲದ ಕಾಯ ವಿಶ್ವದಲ್ಲಿ ಒಂದೂ ಇಲ್ಲ. ಎಲ್ಲಿ ನೋಡಿದರೂ ಅರಿವಿನ ಮಣಿಯ ಕಂಠಮಾಲೆಯುಳ್ಳ ಕಾಯಗಳೇ ಇವೆ.

ಶರಣರ ಕಾಲಘಟ್ಟದಲ್ಲಿ ವಿಶ್ವದ ಜನಸಂಖ್ಯೆ ಮೂವತ್ತುಮೂರು ಕೋಟಿ. ಹೀಗಾಗಿ ಸಿದ್ಧರಾಮ ಶಿವಯೊಗಿಗಳು ತಮ್ಮ ವಚನದಲ್ಲಿ ಹಾರವನಿಕ್ಕಿದ ಮಣಿಯ ಕಂಠಮಾಲೆ ಮೂವತ್ತು ಮೂರುಕೋಟಿ ಎಂದಿದ್ದಾರೆ.

ಕಾಯದಲ್ಲಿ ಸಂಗಮವಾದ ಅರಿವಿನ ಮಣಿಯ ಕಂಠಮಾಲೆ; ಕಾಯವನ್ನು ಆವರಿಸಿದ ಮನಕ್ಕೆ ಕಾಣದ್ದರಿಂದ ಪ್ರತಿ ಕಾಯಕ್ಕೂ ಅಜ್ಞಾನದ ಉರಿ ಹತ್ತಿ ಧಗಧಗನೆ ಉರಿಯುತ್ತಲಿದೆ. ಕೇಳಿದ ಮಾತು ಕಿವಿಗೆ ಪ್ರಸಾದವಾಗುತ್ತಿಲ್ಲ. ನೋಡಿದ ದೃಶ್ಯ ಕಣ್ಣಿಗೆ ಪ್ರಸಾದವಾಗುತ್ತಿಲ್ಲ. ಮುಟ್ಟಿದ ಸ್ಪರ್ಶ ಚರ್ಮಕ್ಕೆ ಪ್ರಸಾದವಾಗುತ್ತಿಲ್ಲ. ರುಚಿಸಿದ ರುಚಿ ನಾಲಿಗೆಗೆ ಪ್ರಸಾದವಾಗುತ್ತಿಲ್ಲ. ಮೂಸಿಸಿದ ಗಂಧ ಮೂಗಿಗೆ ಪ್ರಸಾದವಾಗುತ್ತಿಲ್ಲ. ಸರ್ವಾಂಗ ಅಜ್ಞಾನದಿಂದ ಉರಿಯುತ್ತಲಿದೆ. ಅರಿವಿನ ಮಣಿ ಕಾಯದ ಕಂಠದಲ್ಲಿಯೇ ಬಚ್ಚಿಟ್ಟುಕೊಂಡಿದೆ. ಏಳುನೂರಾ ಮೂವತ್ತು ಕೋಟಿ ಕಾಯಗಳಲ್ಲಿ.

**1134**

**ಹಿಂದು ಮುಂದು ಸಂದಳಿದ ಬಳಿಕ**
**ಆನು ನೀನೆಂಬ ಭೇದವೇತಕಯ್ಯ?**
**ಆನಂದ ಅಪರಸ್ಥಾನದಲ್ಲಿ ಶುದ್ಧ ಸಂಯೋಗವಾದ ಬಳಿಕ**
**ದಳ ಪ್ರತಿಷ್ಠೆಯ ಮಾಡಿನೆಂದು ಏನೆಂಬೆನಯ್ಯ ?**
**ಪೂರ್ವದಳದಲ್ಲಿ ಲಕ್ಷವು ಇಪ್ಪತ್ನಾಲ್ಕುಸಾವಿರ ಎಸಳು,**
**ಅಪರದಳದಲ್ಲಿ ಹದಿನಾಲ್ಕು ಸಾವಿರ ಎಸಳು,**
**ನಾನಾ ವರ್ಣ ಆನಂದನೆಂಬ ಅಧಿದೇವತೆ ಮಧ್ಯಮಸ್ಥಾನದಲ್ಲಿ.**
**ಸಿದ್ಧ ಸಂಯೋಗವೆಂಬ ಸರೋವರದಲ್ಲಿ, ವೈನೈಯೆಂಬ ಕೊಳಂಗಳು**
**ಹದಿನಾರೆಸಳಿನ ಕಮಳ ಬೀಜಾಕ್ಷರಗಳೆಂಟು,**
**ಅಧಿದೇವತೆ ಸಚ್ಚಿದಾನಂದನೆಂಬ ಗಣೇಶ್ವರ**
**ಆನಂದ ಬ್ರಹ್ಮಲೋಕದಲ್ಲಿ ಗುರುವೆಂಬ ಸರೋವರದಲ್ಲಿ ನಿತ್ಯವೆಂಬ ಕೊಳ.**
**ಶುದ್ಧ ಶ್ವೇತನೆಂಬ ಅಮೃತ ಪ್ರವಾಹ,**
**ದಳವೊಂದು, ಮೂಲ ಮೂರು, ಫಲವಾರು**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಅಧಿದೇವತೆ.**

ದೇಹವನ್ನು ನಾನು ಎಂದುಕೊಂಡಿದ್ದೆ. ಹೀಗಾಗಿ ನನ್ನಲ್ಲಿ ನಾನು ಎಂಬ ಭೇದ ಅಂಕುರಿಸಿತ್ತು.

ಅದು ಅಜ್ಞಾನದ ಫಲ ಬಿಟ್ಟು, ಅನಂತ ಕಾಯಗಳನ್ನು ಮೃತ್ಯು ಲೋಕಕ್ಕೆ ಕೊಂಡೊಯ್ದಿತು. ಕಾಯದಲ್ಲಿ ನೀನಿರುವೆ ಎಂಬ ಅರಿವು ಈ ಜನ್ಮದಲ್ಲಿ ನನಗೆ ಬಂದಿದೆ. ನನಗೂ ಕಾಯಕ್ಕು ಜನ್ಮಕೊಟ್ಟು ನೀನು ಕಾಯದಲ್ಲಿಯೇ ಇರುವಿ ಎಂದು ನನಗೆ ನಿನ್ನಿಂದಲೇ ತಿಳಿಯಿತು.

ಪೂರ್ವದಲ್ಲಿ ಲಕ್ಷದ ಇಪ್ಪತ್ನಾಲ್ಕು ಸಾವಿರ ಎಸಳು ವ್ಯರ್ಥವಾದವು. ಅಪರದಲ್ಲಿ ಹದಿನಾಲ್ಕು ಸಾವಿರ ಎಸಳು ಅಪರವಾದವು. ದಳ ಪ್ರತಿಷ್ಠೆಯ ಮಾಡಿದೆನೆಂಬ ಅಹಂಕಾರ ಎನಗೆ. ನನ್ನ ನಿನ್ನ ಶುದ್ಧ ಸಂಯೋಗ ಕಾಯದಲ್ಲಿ ಆದ ಬಳಿಕ ಆನು ನೀನೆಂಬ ಭೇದವೇತಕಯ್ಯ? ಅಭೇದ್ಯನು ನೀನು ಎಂದು ನನಗೆ ನಿನ್ನಿಂದಲೇ ತಿಳಿಯಿತು.

ನೀನು ಸತ್‌ಚಿತ್ತ ಆನಂದನು. ಬ್ರಹ್ಮಲೋಕದ ಒಡೆಯನು. ನೀನಿದ್ದ ಕಾಯ ಅರಿವಿನ ಸರೋವರ. ಆ ಸರೋವರದಲ್ಲಿ ಶ್ರೀಗುರುವೆಂಬ ಕಮಲ, ಜಲದಿಂದಲೇ ಅರಳಿ ನಿಂತಿದೆ. ಅದು ನಿತ್ಯ ಸತ್ಯ ಕೊಳ. ಆ ಬ್ರಹ್ಮ ಕಮಲದಲ್ಲಿ ಶುದ್ಧ ಶ್ವೇತನೆಂಬ ಅಮೃತ ಪ್ರವಾಹೋಪಾದಿಯಲ್ಲಿ ಹರಿಯುತ್ತಲಿದೆ. ದಳವೊಂದೆ ಅದರ ಮೂಲ ಮೂರು. ಆ ಮೂಲದ ಮೂರರಿಂದಲೇ ಷಟಸ್ಥಲ ಪ್ರಭೆಯಾಗಿ ಬೆಳಗುತ್ತಲಿದೆ. ಒಂದರಲ್ಲಿ ಆರು ಫಲವಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಅಧಿದೇವತೆಯಾಗಿ ಕಾಯವನ್ನು ಪ್ರಭಾವಳಿಯಾಗಿ ಬೆಳಗುತ್ತಲಿದೆ.

**1135**

**ಹಿಂದೆ ಪರೀಕ್ಷಿಸಿ ತಿಳಿದು ನೋಡುವಡೆ,**
**ಪರಿಯಾಯ ಪರಿಯಾಯದಿಂದ ಬಂದಂಗವ ನೀ ಬಲ್ಲೆ ಬಸವಣ್ಣಾ.**
**ನಾ ನೊಂದ ನೋವನು ನೀ ಬಲ್ಲೆ ಬಸವಣ್ಣಾ.**
**ನಾನಂದು ಕಾಲನ ಕಮ್ಮಟಕ್ಕೆ ಗುರಿಯಾಗಿ ಇಪ್ಪಂದು**
**ನೀನು ಶೂನ್ಯರುದ್ರನು ಬಸವಣ್ಣಾ.**
**ನಾನಂದು ಹಲವು ಪರಿಯ ಬಹುರೂಪನಾಡುವಲ್ಲಿ**
**ನೀನು ವಿಚಿತ್ರವಿನೋದನೆಂಬ ಗಣೇಶ್ವರನು ಬಸವಣ್ಣಾ, ಎನ್ನಾದ್ಯಂತವ ನೀ ಬಲ್ಲೆ.**
**ಬಲ್ಲ ಕಾರಣ ಎನ್ನ ಪಾಲಿಸಿದೆ ಬಸವಣ್ಣಾ,**
**ನೀ ಪಾಲಿಸಿದ ಗುಣದಿಂದ ಪಾವನನಾದೆನು ಬಸವಣ್ಣಾ;**
**ಶುದ್ಧ ಸಿದ್ಧ ಪ್ರಸಿದ್ಧವನರಿದೆ ಬಸವಣ್ಣಾ. ಎಲೆ ಗುರುವೆ ಬಸವಣ್ಣಾ.**
**ನೀ ಪಾಲಿಸಿದ ಗುಣದಿಂದ ಜೀವನ್ಮುಕ್ತನಾದೆ;**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡಿ,**
**ನಿನ್ನವರಿಗೆಯೂ ನಿನಗೆಯೂ ಯೋಗ್ಯನಾದೆ ಬಸವಣ್ಣಾ.**

ಬಸವಣ್ಣಾ, ಹಿಂದೆ ಎನ್ನಂಗವ ಪರೀಕ್ಷಿಸಿ ತಿಳಿದು ನೋಡಿ ಅದು ಉಂಡ ನೋವನ್ನು ನೀನು ಬಲ್ಲೆ. ಎನ್ನ ಕಾಯ ನೊಂದ ನೋವನ್ನು ನೀನು ಬಲ್ಲೆ ಬಸವಣ್ಣಾ. ನಾನಂದು ಕಾಲನ ಕಮ್ಮಟಕ್ಕೆ ಗುರಿಯಾಗಿ ಅಜ್ಞಾನದ ಅಂಧಕಾರದಲ್ಲಿದ್ದಾಗ ನೀನು ಶೂನ್ಯ ರುದ್ರನಾಗಿದ್ದೆ ಬಸವಣ್ಣಾ. ನಾನು ಅಂದು ಹಲವು ಪರಿಯ ಬಹುರೂಪವನು ಧರಿಸಿದಾಗ ಆ ರೂಪದಲ್ಲಿಯ ನೀನು ವಿಚಿತ್ರ ವಿನೋದನೆಂಬ ಗಣೇಶ್ವರನು ಬಸವಣ್ಣಾ.

ಬಸವಣ್ಣಾ ಎನ್ನ ಆದಿ ಅಂತ್ಯವನು ನೀನು ಬಲ್ಲೆ. ನೀನು ನನ್ನನ್ನು ಬಲ್ಲ ಕಾರಣ ಎನ್ನನ್ನು ಅಜ್ಞಾನದಿಂದ ಪಾರುಮಾಡಿ ಪಾಲನೆ ಮಾಡಿದೆ ಬಸವಣ್ಣಾ. ಎನ್ನ ಅವಗುಣಗಳನ್ನು ಕಳೆದು ನೀ ಪಾಲಿಸಿದ ಕಾರಣ ನಾನು ಪಾವನನಾದೆನು ಬಸವಣ್ಣಾ.

ಬಸವಣ್ಣಾ, ನೀನು ಶುದ್ಧ ಸಿದ್ಧ ಪ್ರಸಿದ್ಧವನು ಎನ್ನಂಗದಲ್ಲಿ ಅರಿದು ಎನಗೆ ತೋರಿದ ಗುರುದೇವನು ನೀನು ಬಸವಣ್ಣಾ. ನೀ ಪಾಲಿಸಿದ ಗುಣದಿಂದಾಗಿ ಬಸವಣ್ಣಾ ನಾನು ಜೀವನ್ಮುಕ್ತನಾದೆ. ಕಪಿಲಸಿದ್ಧ ಮಲ್ಲಿಕಾರ್ಜುನನು ಕೂಡಿ ನಿನ್ನವರಿಗೆಯೂ ನಿನಗೆಯೂ ಯೋಗ್ಯನಾದೆ ಬಸವಣ್ಣಾ.

**1136**

**ಹಿಂದೆ ಬಂದುದನರಿದುದಿಲ್ಲಾಗಿ**
**ಮುಂದೆ ಬಹುದಕ್ಕೆ ಚಿಂತಿಸಲೇಕೆ?**
**ಇಂದಿಂಗೆಂಬುದು ಲಿಂಗದೊಲವು ಶಿವಭಕ್ತಂಗೆ;**
**ನಾಳಿಂಗೆಂಬುದು ಬದ್ಧಭವಿತನ.**
**ಎನ್ನಾದಿಗುರು ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾ,**
**ನೀವಂದಂದಿಗೆ ಕೊಟ್ಟ ಪಡಿ ತಪ್ಪದಯ್ಯಾ**
**ಮತ್ತಾರನೂ ಬಳಿವಿಡಿಯಲಿಲ್ಲವಯ್ಯಾ, ಎನ್ನ ತಂದೆ.**

ಹಿಂದೆ ಬಂದುದನು ನಾನು ಅರಿಯಲಿಲ್ಲ. ಮುಂದೆ ಪುನಃ ನಾನು ಬರುವೆನೆಂಬ ಚಿಂತೆ ಮಾಡಲೇಕೆ? ವರ್ತಮಾನದಲ್ಲಿರುವುದು ಅರಿವೆಂಬ ಗುರುದೇವನ ಒಲವು. ಆತನ ಸದಿಚ್ಛೆ. ಆತನನ್ನು ತಿಳಿದ ಭಕ್ತನಿಗೆ ಮಾತ್ರ ಶ್ರೀಗುರುದೇವನ ಒಲವು ಸದಾ ಇರುವುದು. ಶ್ರೀಗುರುದೇವನೆಂದರೆ ಅಂಗದಲ್ಲಿಯೇ ಇದ್ದು ಅಂಗಕ್ಕೂ ಅಂಗವನ್ನು ಆವರಿಸಿದ ಮನೋಮಯವಾದ ಅಂಗಕ್ಕೂ ಸದಾ ಅರಿವಿನ ಪಾಠ ಮಾಡುವಾತ. ಮನ ಈತನಿಗೆ ಭಕ್ತನಾಗಬೇಕು. ಶ್ರೀಗುರುದೇವ ಶಿವನಾದರೆ ಮನ ಶಿವಭಕ್ತ. ಶಿವಭಕ್ತನ ಮೇಲೆ ಲಿಂಗಯ್ಯನ ಒಲವು ಸದಾ ಇದ್ದೇ ಇರುತ್ತದೆ. ಶಿವಭಕ್ತನ ಮನದಲ್ಲಿ ನಾಳಿಂಗೆ ಎಂಬ ಬದ್ಧ ಭವಿತನ ಅಳಿದು ಹೋಗಿರುತ್ತದೆ. ಶಿವಭಕ್ತ ಭೂತಕಾಲದಲ್ಲಿಯೂ ಇರಲಾರ. ಭವಿಷತ್ತು ಆತನಿಗೆ ಬೇಡವೇಬೇಡ.

ಆದಿಗುರು ಕಪಿಲಸಿದ್ಧ ಮಲ್ಲಿಕಾರ್ಜುನದೇವರದೇವ ಕೊಟ್ಟ ಪಡಿ-ಪದಾರ್ಥಗಳನ್ನು ಅಂದಂದೇ ಪ್ರಸಾದ ರೂಪದಲಿ ಸ್ವೀಕರಿಸಿ ಮತ್ತಾರನು ನೆನೆಯಲಿಲ್ಲ. ಮತ್ತಾರ ಬಳಿಯು ಸೆರಗೊಡ್ಡಿ ಬೇಡಲಿಲ್ಲ. ಎನ್ನ ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನನೇ ಸಾಕ್ಷಿ.

**1137**

**ಹಿಂದೆ ಹಲವು ಯುಗಂಗಳು ತಿರುಗಿ ಬಪ್ಪಾಗ**
**ಅವನ್ನ ನೀ ಮಾಡಿದೆಯಲ್ಲದೆ ತಮ್ಮಾಜ್ಞೆಯಲಿ ಬಂದುದಿಲ್ಲ.**
**ಅಯ್ಯ, ನಿನ್ನಾಜ್ಞೆಯಲಿ ಬಂದ ಯುಗಂಗಳು**
**ಭವಭವದಲ್ಲಿ ಎನ್ನನೆ ಕಾಡಿದುವು,**
**ಸಂಸಾರವಾಗಿ ಎನ್ನನೆ ಕಾಡಿದುವು,**

**ಹೊನ್ನು ಹೆಣ್ಣು ಮಣ್ಣು ತ್ರಿವಿಧವಾಗಿ**
**ಎನ್ನನೆ ಕಾಡಿದುವು, ಆಶಾಪಾಶಂಗಳಾಗಿ ಗುರುವೆ ಬಸವಣ್ಣ**
**ಅವೆಲ್ಲಾ ನಿಮ್ಮ ಆಧೀನದವು ಮಾಡಿದಡಾದವು,**
**ಬೇಡಾಯೆಂದಡೆ ಮಾದವು.**
**ಅವಕ್ಕೆ ಎನ್ನನೊಪ್ಪಿಸದೆ, ನಿನ್ನವ ನಿನ್ನವನೆನಿಸಾ**
**ಕಪಿಲಸಿದ್ಧ ಮಲ್ಲಿಕಾರ್ಜುನನ ತೋರಿದ ಗುರು ಬಸವಣ್ಣ.**

ಕಪಿಲಸಿದ್ಧ ಮಲ್ಲಿಕಾರ್ಜುನನನೆ, ಎನಗೆ ಎನ್ನಂಗದಲ್ಲೆ ತೋರಿದ ಗುರು ಬಸವಣ್ಣನೆ, ಹಿಂದೆ ಹಲವು ಯುಗಂಗಳು ತಿರುಗಿ ನನ್ನ ನೆನಹಿನಲ್ಲಿ ಬರುವಾಗ, ಆ ನೆನಪುಗಳನ್ನು ನೀನೇ ಮಾಡಿರುವಿ. ಕಳೆದು ಹೋದ ಯುಗಗಳ ಸುಖ-ದುಃಖಗಳನ್ನು ನನ್ನಲ್ಲಿ ನೀನೇ ಇಟ್ಟಿರುವಿ. ಅವುಗಳನ್ನು ನೀನೇ ಮಾಡಿರುವಿ. ತಮ್ಮಾಜ್ಞೆಯನ್ನು ಆವು ಮೀರಲಿಲ್ಲ.

ನಿನ್ನಾಜ್ಞೆಯ ಮೂಲಕ ಬಂದಂತಹ ಯುಗಂಗಳು ಅವುಗಳ ನೆನಪುಗಳು ಭವ-ಭವದಲ್ಲಿ ನನ್ನನ್ನು ಕಾಡಿದವು. ಹೆಂಡತಿಯಾಗಿ ಕಾಡಿದವು. ಹೆಂಡತಿಗೆ ಗಂಡನಾಗಿ ಕಾಡಿದವು. ಗಂಡ-ಹೆಂಡರಿಗೆ ಮಕ್ಕಳಾಗಿ ಕಾಡಿದವು. ನಿನ್ನ ಆಜ್ಞೆಯಿಂದ ಬಂದ ಯುಗಂಗಳು ನಿನ್ನ ನೆನಪುಗಳು ಸಂಸಾರವಾಗಿ ನನ್ನನೇ ಕಾಡಿದವು. ಹೊನ್ನು, ಹೆಣ್ಣು, ಮಣ್ಣು ತ್ರಿವಿಧವಾಗಿ ನನ್ನನ್ನು ಕಾಡಿದವು.

ಶ್ರೀಗುರುದೇವನೆ ಬಸವಣ್ಣನೆ ಆಶಾಪಾಶಂಗಳಾಗಿ ಎನ್ನನ್ನು ಕಾಡಿದವು. ನನ್ನ ಕಾಡಿದ ಅವೆಲ್ಲ ನಿಮ್ಮ ಆಧೀನದಲ್ಲಿದ್ದವು. ನೀವು ಮಾಡಿದಡಾದವು. ನೀವು ಬೇಡೆಂದಡೆ ಮಾದವು.

ಪರಮಾತ್ಮನೆ ಶ್ರೀಗುರು ಬಸವಣ್ಣನೆ ಅವುಗಳಿಗೆ ಎನ್ನನ್ನು ಒಪ್ಪಿಸಬೇಡ. ನಾನು ನಿನ್ನವನು, ನನ್ನನ್ನು ನಿನ್ನವ, ನಿನ್ನವ ನೆನ್ನಿಸಿ ಎನ್ನನು ರಕ್ಷಿಸು ತಂದೆ ಶ್ರೀಗುರು ಬಸವಣ್ಣನೆ.

**1138**

**ಹಿಡಿಗಟ್ಟಿಗೊಳಗಾದನೆಂಬ ಸುದ್ದಿಯ ಗುರು ಕೇಳಿದ.**
**ಕೇಳಿ ಸೈರಿಸಲಾರದೆ ಕಂಡು ಕಂಡು, ಇರಿಸುವ ಠಾವಂ ತೋರಿದ.**
**ಅಲ್ಲಲ್ಲಿಯಿದ್ದಡೆ ಎಲ್ಲಿಯೂ ಇರನೆಂದು ಅಜಲೋಕಕ್ಕೆ ಕಳುಹಿದ.**
**ಅಜಲೋಕದಲ್ಲಿ ಆನಂದವೆಂಬ ಮನೆಯಲ್ಲಿ,**
**ಭಕ್ತಿಯೆಂಬ ಬಂಧನವಂ ಮಾಡಿ,**
**ಜ್ಞಾನವೆಂಬ ಕಾವಲಂ ಕೊಟ್ಟಿರಲಾಗಿ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಇನಿತು ಬಂಧನಕ್ಕೊಳಗಾದ.**

ಶ್ರೀಗುರುದೇವನ ಹಿಡಿತಕ್ಕೊಳಗಾದ ಶಿಷ್ಯನ ಸುದ್ದಿಯನು ಸದ್ಗುರು ಕೇಳಿದ. ಕೇಳಿ ಸೈರಿಸಲಾರದೆ ಆ ಶ್ರೀಗುರುದೇವರನ್ನು ಕಂಡು ಕಂಡು ಆತನ ಉಡ ಹಿಡಿತಕ್ಕೆ ಒಳಗಾಗಿ ಇರಿಸುವ ಠಾವವನ್ನು ತೋರಿದ.

ಶಿಷ್ಯ ಅಲ್ಲಲ್ಲಿ ಇದ್ದಡೆ ಎಲ್ಲಿಯೂ ಸಲ್ಲನೆಂದು ತಿಳಿದು, ಸದ್ಗುರು ದೇವ ಶಿಷ್ಯನನ್ನು ಬ್ರಹ್ಮಲೋಕಕ್ಕೆ ಕಳುಹಿಸಿದ. ಆ ಬ್ರಹ್ಮಲೋಕದಲಿ ಪರಮಾನಂದವೆಂಬ ಸಹಜಾನಂದದ ಮನೆಯಲ್ಲಿಯೇ, ಶಿಷ್ಯನ ಭಕ್ತಿಯಿಂದಲೇ ಶಿಷ್ಯನನ್ನು ಬಂಧನ ಮಾಡದೆ, ಜ್ಞಾನವೆಂಬ ಪರಮಾತ್ಮನನ್ನೆ ಕಾವಲಾಗಿಟ್ಟ ಸದ್ಗುರುವಿನ ಕಾಯಕ ಏನೆಂದು ಹೇಳಲಿ! ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಸದ್ಗುರು

ದೇವ ಈ ಪರಿಯಲ್ಲಿ ಎನ್ನನ್ನು ನಿನ್ನ ಬಂಧನಕ್ಕೆ ಒಳಗು ಮಾಡಿದ.

**1139**

**ಹಿಡಿತಂದು ಮಣ್ಣ ಮಾಳಿಗೆಯೊಳಗೆ ಇರಿಸಿದಡೆ**
**ಹೋಲುವುದರಿದು ಕಂಡಾ!**
**ಆ ಭಾವದಿಂದ ಭರಿತನಾಗಿ ಜೀವಿಸುತ್ತಿಪ್ಪಡೆ**
**ನಿಜಭಾವದಿಂದ ಭರಿತನಾಗಿ ಜೀವಿಸುವಡೆ**
**ಕಪಿಲಸಿದ್ಧ ಮಲ್ಲಿನಾಥ ಹೋತು ಕೂಡುವರು!**

ಪರಮಾತ್ಮನೆ ನನ್ನನ್ನು ನೀನು ವಾಸ ಮಾಡಿದ ಕೈಲಾಸದಿಂದ ಹಿಡಿದು ತಂದು ಮಣ್ಣ ಮಾಳಿಗೆಯೊಳಗೆ ಏರಿಸಿದೊಡೆ ಅದಕ್ಕು ಇದಕ್ಕು ಹೋಲಿಸುವುದು ಸರಿಯೇ ತಂದೆ. ಆ ಭಾವದಿಂದ ಭರಿತನಾಗಿ ಜೀವಿಸುತ್ತಿರುವೆ. ನಿಜ ಭಾವದಿಂದ ಭರಿತನಾಗಿ ಜೀವಿಸುವಂತೆ ನನ್ನನ್ನು ಆಶೀರ್ವದಿಸುವುದು ನಿನ್ನ ಧರ್ಮ. ಕಪಿಲಸಿದ್ಧ ಮಲ್ಲಿಕಾರ್ಜುನನೇ ನನ್ನನ್ನು ಹಿಡಿದು ತಂದು ಮಣ್ಣ ಮಾಳಿಗೆಯೊಳಗೆ ಇರಿಸುವುದು ನಿನ್ನ ಧರ್ಮವೇ ? ನಾನು ನಿನ್ನನ್ನೆ ಹೋಲುವೆ. ನನ್ನ ತನುವಿನ ಲಾಂಛನ ನಿನ್ನ ಕೈಲಾಸದ ನಿರೂಪವನ್ನು ಹೊದ್ದಿದೆ. ನಿಜ ಭಾವದಿಂದ ಇರುವಂತೆ ಆಶೀರ್ವದಿಸು, ನಿನ್ನೊಂದಿಗೆ ಕೂಡಿ ಕೂಡದ ಅಗಲದ ಕೂಟದ ಸುಖವನ್ನು ಅನುಭವಿಸಿದೆ.

**1140**

**ಹಿರಣ್ಯದಿಚ್ಛೆಯಲಿ ಹೆಚ್ಚಿ ನುಡಿವರು ನಿನ್ನಂಗವಪ್ಪರೆ ಅಯ್ಯಾ?**
**ಅಪ್ಪರಪ್ಪರು ಹೊನ್ನು ಹೆಣ್ಣು ಮಣ್ಣು ತ್ರಿವಿಧವ ಬಿಟ್ಟವರು.**
**ಅಪ್ಪರಪ್ಪರು ಸತ್ಪಾತ್ರ-ಅಪಾತ್ರವೆಂದರಿದವರು.**
**ಅಪ್ಪರಪ್ಪರು ಸದಾಚಾರ, ನಿಹಿತಾಚಾರ, ಗುರುಚರಭಕ್ತಿ,**
**ಸ್ವಾನುಭಾವದೀಕ್ಷೆ ಸಮನಿಸಿದವರು.**
**ನಿನ್ನಂಗ ಎಲ್ಲರಂತಲ್ಲ ಹೊಸ ಪರಿ ಎಲೆ ಅಯ್ಯಾ.**
**ಮಸ್ತಕದಲ್ಲಿ ಪೂಜೆಯ ಮಾಡಿ**
**ಅದ ನಿರ್ಮಾಲ್ಯವೆಂದು ತ್ಯಜಿಸಿ,**
**ಮರಳಿ ಪಡೆದು ನಿನಗೆ ಪಾತ್ರವಾದರು.**
**ಅಪ್ಪುದಕ್ಕನುಮಾನವೆ? ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಹೊನ್ನಿನ ಆಸೆಗಾಗಿ ನುಡಿಯುವವರು; ಪರಮಾತ್ಮನೇ ನಿನ್ನಂಗವನು ಬಲ್ಲರೆ ಅವರು ? ನೀನಿದ್ದ ಅಂಗ ಲಿಂಗಾಂಗ ! ಸುವರ್ಣವನ್ನು ಸೃಷ್ಟಿ ಮಾಡಿದ್ದು ನಿನ್ನಂಗವೆಂದು ತಿಳಿಯದೇ ಅಂಗವನ್ನು ಆವರಿಸಿದ ಮನ ನಿನ್ನಂಗದೊಂದಿಗೆ ಸಂಗ ಮಾಡಿ ಹೊನ್ನು, ಹೆಣ್ಣು, ಮಣ್ಣಿನ ಸುಖಕ್ಕಾಗಿ ಬೆನ್ನು ಬಿದ್ದರೆ ನೀನಾದರು ಏನು ಮಾಡಲು ಸಾಧ್ಯ ಶ್ರೀಗುರುವೆ ? ಅವರು ಅಪ್ಪರಪ್ಪರು. ಸತ್ಪಾತ್ರ-ಅಪಾತ್ರವೆಂದರಿದವರು. ಅಪ್ಪರಪ್ಪರು ಸದಾಚಾರ, ನೀಹಿತಾಚಾರ, ಗುರುಚರಭಕ್ತಿ, ಸ್ವಾನುಭಾವ ದೀಕ್ಷೆ ಸಮನಿಸಿದವರು ಸತ್ಪಾತ್ರಕ್ಕೆ ಸಲ್ಲುವರು.

ನಿನ್ನಂಗ ಎಲ್ಲರಂತಲ್ಲ, ಅದು ಹೊಸಪರಿ. ಎಲೆ ಅಯ್ಯಾ, ಮಸ್ತಕದಲ್ಲಿ ಪೂಜೆಯ ಮಾಡಿ ಅದನ್ನು ನಿರ್ಮಾಲ್ಯವೆಂದು ತ್ಯಜಿಸಿ ಮರಳಿ ಪಡೆದು ನಿನಗೆ ಪಾತ್ರವಾದರು. ಇಂಥವರು ಮಾತ್ರ ನಿನ್ನ ಸತ್ಪಾತ್ರಕ್ಕೆ ಸಲ್ಲುವರು. ನಿನಗೆ ಅನುಮಾನವೆ ಕಪಿಲಸಿದ್ಧ ಮಲ್ಲಿಕಾರ್ಜುನಾ ?

**1141**

**ಹಿರಣ್ಯವೆಂದು ಮನ ವೇಧಿಸಿ ಕೈಯಾಂತರೆ ಅಯ್ಯಾ ನಿಮ್ಮಾಣೆ,**
**ನಿಮ್ಮ ಪ್ರಸಾದಕಲ್ಲದೆ ಕೈಯಾನೆನಯ್ಯಾ.**
**ಅಯ್ಯಾ, ನಿಮ್ಮ ಪಾದೋದಕವಲ್ಲದೆ ಬೇರೆ ಕೊಳ್ಳೆನಯ್ಯಾ.**
**ನಿಮ್ಮಾಳು ಹೆರರ ಹಾರಿದರೆ ಕರೆದು ಬಾ ಎನ್ನಾ**
**ಕಪಿಲಸಿದ್ಧ ಮಲ್ಲಿನಾಥಾ ನಿನ್ನ.**

ವಸ್ತ್ರದಲ್ಲಿ ಹೊನ್ನು ಬಿದ್ದಡೆ ಎನಗೆ ಬೇಕೆಂದು ಮುಟ್ಟಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ ಎಂದು ಸತ್ಯಕ್ಕ ಪರಮಾತ್ಮನಿಗೆ ಸವಾಲು ಹಾಕಿದ್ದಾಳೆ. ಏಕೆಂದರೆ ? ಲೋಹಕ್ಕು, ಹಳದಿ ಲೋಹಕ್ಕು ವ್ಯತ್ಯಾಸ ಶಿವಶರಣೆ ಸತ್ಯಕ್ಕಳಿಗೆ ಕಂಡು ಬರಲಿಲ್ಲ. ಲೋಹಕ್ಕೆ ಯಾವ ಬಣ್ಣ ಮೆತ್ತಿದರೇನು ಅದು ಲೋಹವೆ ಆಗಿದೆ. ಎಂದು ಶರಣರಿಗೆ ಮಾತ್ರ ಗೊತ್ತಿದೆ. ಈ ಸೂತ್ರ ಲೋಕಕ್ಕೆ ಗೊತ್ತಿಲ್ಲ. ಏಕೆಂದರೆ? ಅದು ಹೊನ್ನಿಗಾಗಿ ಬದುಕಿದೆ. ಹೊನ್ನಿಗಾಗಿಯೇ ಸತ್ತಿದೆ. ಹೊನ್ನು, ಹೆಣ್ಣು, ಮಣ್ಣಿಗಾಗಿ ಯುದ್ಧ ಮಾಡಿ ಲೋಕ ಪಾಪದ ಕೂಪದಲ್ಲಿ ಮುಳುಗಿದೆ.

ಸಿದ್ಧರಾಮ ಶಿವಯೋಗಿಗಳು ಚಿನ್ನವೆಂದರೆ ಏನೆಂದು ತಿಳಿದವರು. ಅವರು ಕೂಡಾ ಲೋಹಕ್ಕೆ ಆಸೆ ಪಟ್ಟವರಲ್ಲ. ಹೀಗಾಗಿ ಅವರು: ''ಹಿರಣ್ಯವೆಂಬ ಮನ ವೇದಿಸಿ ಕೈಯ್ಯಾಂತರೆ ಅಯ್ಯಾ ನಿಮ್ಮಾಣೆ, ನಿಮ್ಮ ಪ್ರಸಾದಕಲ್ಲದೆ ಕೈಯಾನೆನಯ್ಯಾ'' ಎಂದಿದ್ದಾರೆ. ಪ್ರಸಾದ ಪಾದೋದಕ ಎಂದರೆ ಅಂಗದಲ್ಲಿಯೇ ಸಂಗಮವಾದ ಶ್ರೀಗುರುದೇವನ ಅರಿವು. ಈ ಅರಿವೆ ಗುರುವನ್ನಾಗಿಸಿಕೊಂಡ ಅಂಗ, ವಸ್ತುವಿನಲ್ಲಿರುವ ಸತ್ಯವನ್ನು ಮಾತ್ರ ನೋಡುತ್ತದೆ. ಚಿನ್ನ ಎಂದರೆ ಹಳದಿ ಬಣ್ಣದ ಲೋಹ, ಬಣ್ಣವಿಲ್ಲದ ಕಪ್ಪು ಲೋಹವನ್ನು ಲೋಕ ಮೆಚ್ಚುವುದಿಲ್ಲ. ಹಳದಿ ಬಣ್ಣವಿದ್ದ ಲೋಹ ಲೋಕಕ್ಕೆ ಪಂಚಪ್ರಾಣ !

ಲೋಹ ಯಾವ ಬಣ್ಣದ್ದಾದರೇನು ? ಅದು ಲೋಹವೆ ಎಂದು ಕೂಡಲೇ ತಿಳಿಯುವವನು ಶರಣ. ಈತ ಪಾದೋದಕ ಪ್ರಸಾದವಲ್ಲದೆ, ಬೇರೆ ಯಾವುದನ್ನು ಸ್ವೀಕರಿಸನು. ಏಕೆಂದರೆ ಶರಣ ಅರಿವಿನ ಆಳು. ಹೆರರಿಗೆ ಹಾರಿದರೆ ಕರೆದು ಬಾ ಎನ್ನ ಕಪಿಲಸಿದ್ಧ ಮಲ್ಲಿನಾಥ ನಿನ್ನ. ಎಂದು ಮಲ್ಲಯ್ಯನನ್ನೆ ಕರೆದಿದ್ದಾರೆ.

**1142**

**ಹಿರಿದಪ್ಪ ಶರಧಿಯ ಮಡುವಿನೊಳಗೆನ್ನ**
**ಕಡಲ ಕಾನನವಾದುದವ್ವಾ.**
**ಕಡಲು ಅಮೃತವಾಗಿ ಹರಿಯೆ**
**ಅವ್ವ, ನಾನು ದೆಸೆಗೆಟ್ಟು ಲೀಯವದರೊಳು.**
**ಮೃಡನೆ ನಿನ್ನನುವಾನೊಡಗೂಡಿದ**
**ಕಡಲಿಂಗೆಡೆವಿಡದೆ ನಮೋಯೆಂಬೆ**
**ಕಪಿಲಸಿದ್ಧ ಮಲ್ಲಿನಾಥಯ್ಯ.**

ಭೂಮಿ ಕಡಲೊಳಗಿನ ಮಡುವು. ಇಂತಹ ಹಿರಿದಪ್ಪ ಕಡಲ ಕಾಡಿನೊಳಗೆ ಎನ್ನನು ಇರಿಸಿದೆ. ಅಂಗವನ್ನು ಆವರಿಸಿದ ಮನಕ್ಕೆ ಅಂಗದಲ್ಲಿಯೇ ಸಂಗಮವಾದ ನಿನ್ನ ಅರಿವು ಹಾಲ್ಗಡಲಾಗಿ ಹರಿಯಿತು. ಎಲೆ ಅವ್ವಾ. ನಾನು ದೆಸೆಗೆಟ್ಟು ಲೀಯವಾದೆ ಆ ಅಮೃತ ಕಡಲೊಳಗೆ.

ಮೃಡನೆ ಪರಮಾತ್ಮನೇ ಶ್ರೀಗುರುದೇವನೆ ನಿನ್ನ ಅನುವಿನೊಳಗೆ ನಾನು ನಿನ್ನೊಡಗೂಡಿದೆ. ಹಾಲ್ಗಡಲಿಗೆ ಎಡೆಬಿಡದೆ ನಮೋ ನಮೋ ಎಂಬೆ ಕಪಿಲಸಿದ್ಧ ಮಲ್ಲಿನಾಥ.

**1143**

**ಹುಟ್ಟಿದ ಬೆಟ್ಟಂಗಳು ಬಟ್ಟಬರಿಯ ಲಿಂಗವಾದವಲ್ಲಾ.**
**ನಿಜವರಿತವರೆನ್ನವರು,**
**ಕುಬುದ್ದಿಯೆಲ್ಲವ ಕೊಂಡು ಮುಳುಗಿತ್ತು ನೋಡಾ.**
**ಕುಬುದ್ಧಿಯನರಿಯದ ನರದ್ರೋಹಿಗಳಿಗೆಲ್ಲಾ ಹಬ್ಬ ಬಂದಿತ್ತಲ್ಲಾ.**
**ನರರೆಂಬ ಕೊಬ್ಬಿದ ಕುರಿಗಳಿಗೆಲ್ಲಾ ಹಬ್ಬ ಬಂದಿತ್ತಲ್ಲಾ.**
**ನಿಸ್ಸೀಮ ನಿಜಗುಣ ಕಪಿಲಸಿದ್ಧ ಮಲ್ಲಿನಾಥಾ**
**ನರರೆಂಬ ಪ್ರಾಣಿಗಳಿಗೆ ಹಬ್ಬ ಬಂದಿತ್ತಲ್ಲಾ.**

ಹುಟ್ಟಿದ ಬೆಟ್ಟಗಳೆಲ್ಲಾ ಕಡಿದು ಕತ್ತರಿಸಿ ಲಿಂಗವನ್ನಾಗಿಸಿದರು. ದೇವರುಗಳನ್ನಾಗಿಸಿದರು. ಆಲಯ, ಚರ್ಚ್, ಮಸೀದಿಗಳಾದವು. ಲೋಕ ಬೆಟ್ಟವನು ಕಡಿದು ದೇವರನ್ನಾಗಿಸಿ ಬೆಟ್ಟವೆನ್ನುವುದನ್ನೆ ಮರೆತು ಹೋಯಿತು. ನಿಜವರಿತವರು ಮಾತ್ರ ಶರಣರು. ಅವರಿಗೆ ಲಿಂಗ ಕಾಣಲಿಲ್ಲ. ದೇವಾಲಯ ಕಾಣಲಿಲ್ಲ. ಚರ್ಚ್, ಮಸೀದಿಗಳೂ ಕಾಣಲಿಲ್ಲ. ಬರೀ ಬೆಟ್ಟಗಳು ಮಾತ್ರ ಕಂಡವು. ಕಲ್ಲನ್ನು ಕಲ್ಲೆಂದೆ ಹೇಳಿದರು ಹೊರತು ದೇವರೆಂದು ಹೇಳಲಿಲ್ಲ.

ನಿಜವರಿತವರು, ನಿಜವರಿಯದವರ ಕೊಂಡು ನಿಜದ ಹಾದಿಯನು ತೋರಿದರು. ಕಪಿಲಸಿದ್ಧ ಮಲ್ಲಿಕಾರ್ಜುನಾ ನೀನು ನಿಸ್ಸೀಮನು ನಿಜಗುಣನು.

**1144**

**ಹುಟ್ಟು ಮೆಟ್ಟೆಂಬುದು ನಿಮಗಿಲ್ಲವಯ್ಯಾ;**
**ನಿಮ್ಮಿಂದ ನೀವೆ ಸ್ವಯಂಭುವಯ್ಯಾ.**
**ಇಂತಾದಿರಯ್ಯಾ, ಹರುಷದಿಂದ ನೀವಿಂತಾದಿರಯ್ಯಾ.**
**ನಿಮ್ಮ ಮಹಾತ್ಮೆಯ ನೀವೆ ಬಲ್ಲಿರಯ್ಯಾ,**
**ನಿಜಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶ್ರೀಗುರುದೇವನೆ ನಿಮ್ಮ ಮಹಾತ್ಮೆಯನು ದೇವಾನುದೇವತೆಗಳು ತಿಳಿಯಲಿಲ್ಲ. ಏಕೆಂದರೆ ನೀವು ಸ್ವಯಂಭು, ಯಾರಿಗೂ ಹುಟ್ಟಿದವರಲ್ಲ ನೀವು ಎಂದು ದೇವತೆಗಳು ತಿಳಿಯಲಿಲ್ಲ. ಹುಟ್ಟು-ಮೆಟ್ಟೆಂಬುದು ನಿಮಗೆ ಇಲ್ಲವಯ್ಯಾ ನಿಮ್ಮಿಂದ ನೀವೇ ಸ್ವಯಂಭು.

ಅಂಗಕ್ಕೆ ಜನ್ಮ ನೀಡಿ, ಅದನ್ನೆ ಲಿಂಗಾಂಗವಾಗಿಸಿಕೊಂಡು, ಆ ಅಂಗದಲ್ಲಿ ಲಿಂಗಯ್ಯನಾಗಿ ಇದ್ದವರು ನೀವು ಪ್ರಭುವೆ. ನಿಮ್ಮ ಮಹಾತ್ಮೆಯನು ನೀವೇ ಬಲ್ಲಿರಿ. ಅಂಗವನ್ನು ಸೃಷ್ಟಿ ಮಾಡಿ ಆ

ಅಂಗದಲ್ಲಿ ಅರಿವಿನ ಲಿಂಗಯ್ಯನಾಗಿ, ಸ್ವಯಂಭುವಾಗಿ ನೀವಿದ್ದು, ನಿಮ್ಮನ್ನು ತಿಳಿಯಲು ಮನವನ್ನು ಸೃಷ್ಟಿ ಮಾಡಿದಿರಿ. ಆ ಮನದಿಂದ ನಿಮಗೆ ಭಕ್ತಿ ಮಾಡಿದಾಗ, ಆ ಮನವೇ ನಿಮಗೆ ಭಕ್ತಿ ಮಾಡಿ ಭಕ್ತನಾದಾಗ, ಆ ಭಕ್ತನಿಗೆ ಮಾತ್ರ ನೀವು ದರುಶನ ನೀಡಿದಿರಿ. ಆ ಭಕ್ತನ ಹೊರತು ನಿಮ್ಮ ಮಹಾತ್ಮೆಯನು ಯಾರು ಅರಿಯಲಿಲ್ಲ. ಇಂತಾದಿರಯ್ಯಾ, ಹರುಷದಿಂದ ನೀವು ಇಂತಾದಿರಯ್ಯಾ. ಹೀಗಾಗಿ ನಿಮ್ಮ ಮಹಾತ್ಮೆಯ ನೀವೇ ಬಲ್ಲಿರಯ್ಯಾ ನಿಜಗುರು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.

**1145**

**ಹೂವರಳೆಯ ಹಾಸಿನ ಮೇಲಿಪ್ಪನು.**
**ಗಳಗಳನೆ ಹೋಹನು, ಆತುರವೇರಿ ನಿಂದನು ಆತ.**
**ಅತ್ತಲೂ ಹೋಗಲರಿಯದೆ ಇತ್ತಲೂ ಬರಲರಿಯದೆ**
**ಅಲ್ಲಿಯೆ ನಿಂದಾತನ ಬರವ ಹಾರುತ್ತಿರ್ದೆನವ್ವಾ!**
**ಅದೆಂತೆಂದಡೆ:**
**ಎನ್ನ ಮನಕ್ಕೆ ಬಂದು, ಎನ್ನ ಕರಸ್ಥಲದಲ್ಲಿ ಮೂರ್ತಿಗೊಂಡು**
**ಕೂಡಿದನೆನ್ನ ಕಪಿಲಸಿದ್ಧ ಮಲ್ಲಿನಾಥಯ್ಯನವ್ವಾ.**

ಪರಮಾತ್ಮನು ಅರಳಿದ ಹೂವನ್ನು ಹಾಸಿಗೆಯಾಗಿಸಿಕೊಂಡು ಅದರ ಮೇಲೆ ಮಲಗಿದವನು. ಸರೋವರದ ಜಲವೇ ಕಮಲದ ಸಸಿಯಾಗಿ, ಆ ಸಸಿಯೇ ನೀರ ಮೇಲೆ ನಿಂತು ನೀರನ್ನು ತಾಗಿಸಿಕೊಳ್ಳದೆ ನೀರೆ ನೀರ ಮೇಲೆ ಅರಳಿ ನೀರಿಗೆ ಸೊಬಗನ್ನು ಬೀರಿದಂತೆ ಪರಮಾತ್ಮ ಜಲಬಿಂದುವನ್ನೆ ಕಾಯವನ್ನಾಗಿಸಿ, ಕಾಯದಲ್ಲಿ ಅರಿವಿನ ಹೂವಾಗಿ ಅರಳಿ ನಿಂತಿದ್ದಾನೆ.

ಆತ ಅತ್ತಲೂ ಹೋಗಲರಿಯ, ಇತ್ತಲೂ ಬರಲು ಅರಿಯ. ಅಲ್ಲಿಯೇ ನಿಂತಾತನ ಬರವನ್ನು ನೀರಿಕ್ಷಿಸುತ್ತಿದ್ದಾಳೆ ಅವ್ವ. ಅವ್ವ ಎಂದರೆ ಬೇರೆ ಯಾರೂ ಅಲ್ಲ. ಆಕೆ ತಂದೆಯ ಮನದನ್ನೆ, ತಂದೆಯ ಮಡದಿ. ಪರಮಾತ್ಮ ಕಾಯದ ಕರಸ್ಥಲದಲ್ಲಿ ಮೂರ್ತಿಗೊಂಡು ಕಾಯದ ಮನದಲ್ಲಿ ಬಂದು ನಿಂತಿದ್ದಾನೆ. ಕಾಯದಲ್ಲಿಯೂ ಮನದಲ್ಲಿಯೂ ಪರಮಾತ್ಮ ಸಂಗಮವಾಗಿದ್ದರೂ ಮನವೆಂಬ ಅವ್ವೆಗೆ ಪರಿಚಯವಿಲ್ಲ. ಕಾಯದ ಕರಸ್ಥಲದಲ್ಲಿಯೇ ಮೂರ್ತಿಗೊಂಡ ಕಪಿಲಸಿದ್ಧ ಮಲ್ಲಿನಾಥಯ್ಯನನ್ನು ಬಯಸಿ, ಕೂಡಿ, ಕೂಡದ ಅಗಲದ ಕೂಟವನ್ನು ಅನುಭವಿಸಿದಳು ಅವ್ವೆ.

**1146**

**ಹೃದಯಕಮಲದ ಅಷ್ಟದಳದ**
**ದ್ವಾತ್ರಿಂಶತ್‌ಕುಸುಮ ಮಧ್ಯದಲ್ಲಿಪ್ಪನಾ ಸೂರ್ಯ.**
**ಆ ಸೂರ್ಯನ ಮಧ್ಯದಲ್ಲಿಪ್ಪನಾ ಚಂದ್ರ.**
**ಆ ಚಂದ್ರನ ಮಧ್ಯದಲ್ಲಿಪ್ಪುದಾ ಅಗ್ನಿ.**
**ಆ ಅಗ್ನಿಯ ಮಧ್ಯದಲ್ಲಿಪ್ಪುದಾ ಕಾಂತಿ.**
**ಆ ಕಾಂತಿಯ ಮಧ್ಯದಲ್ಲಿಪ್ಪುದಾ ಸುಜ್ಞಾನ.**
**ಆ ಸುಜ್ಞಾನದ ಮಧ್ಯದಲ್ಲಿಪ್ಪುದಾ ಚಿದಾತ್ಮ.**

**ಆ ಚಿದಾತ್ಮನ ಮಧ್ಯದಲ್ಲಿಪ್ಪುದಾ ಚಿತ್ಪ್ರಕಾಶರೂಪನಪ್ಪ**
**ಪರಶಿವನು ಇಂತಪ್ಪ ಪರಶಿವನ**
**ಎನ್ನ ಸುಜ್ಞಾನಕಾಯದ ಮಸ್ತಕದ ಮೇಲೆ ಹಸ್ತವನಿರಿಸಿ,**
**ಮನ, ಭಾವ ಕರಣೇಂದ್ರಿಯಂಗಳಿಂ ಸ್ವರೂಪೀಕರಿಸಿ,**
**ದೃಷ್ಟಿಗೆ ತೋರಿ, ಕೈಯಲ್ಲಿ ಲಿಂಗವ ಕೊಟ್ಟ ಚೆನ್ನ ಬಸವಣ್ಣನ ಶ್ರೀಪಾದಕ್ಕೆ**
**ನಮೋ ನಮೋ ಎಂದು ಬದುಕಿದೆನಯ್ಯಾ ಪ್ರಭುವೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಸುಜ್ಞಾನ ಕಾಯ ಸಂಗಮವಾಗಿದೆ. ಮನೋಮಯವಾದ ಕಾಯದಿಂದಲೇ ಸುಜ್ಞಾನ ಕಾಯವನು ತಿಳಿಯಬೇಕು. ಹೀಗೆ ತಿಳಿದರೂ ಶ್ರೀಗುರು ಚೆನ್ನಬಸವಣ್ಣನು ಎನ್ನ ಮಸ್ತಕದ ಮೇಲೆ ತನ್ನ ಹಸ್ತವನು ಇರಿಸಿ ಮನ ಭಾವ ಕರಣೇಂದ್ರಿಯಗಳ ಮೂಲಕ ಎನ್ನ ನಿರೂಪವನು ಎನ್ನ ರೂಪಕ್ಕೆ ಸ್ವರೂಪೀಕರಿಸಿ ನನಗೆ ಕಾಣುವಂತೆ ತೋರಿದನು.

ಎನ್ನ ಕಾಯದ ಕೈಯಲ್ಲಿ ಅರಿವಿನ ಲಿಂಗವನ್ನು ಕೊಟ್ಟ ಸದ್ಗುರು ಚೆನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನೆಯ್ಯಾ ಪ್ರಭುವೆ ಕಪಿಲಸಿದ್ಧಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ತನ್ನ ಕಾಯದಲ್ಲಿಯೇ ಸುಜ್ಞಾನ ಕಾಯವನ್ನು ತೋರಿ ತನ್ನ ಕೈಯಲ್ಲಿ ಕೊಟ್ಟ ಸದ್ಗುರು ಚೆನ್ನಬಸವಣ್ಣ ತಿಳಿಸಿದ ಸೂತ್ರವನು ಪ್ರಭುದೇವರಲ್ಲಿ ಅರಕೆ ಮಾಡಿಕೊಂಡಿದ್ದಾರೆ.

ಹೃದಯ ಕಮಲದ ಅಷ್ಟದಳದ ದ್ವಾತ್ರಿಂಶತ್ ಕುಸುಮದ ಮಧ್ಯದಲ್ಲಿರುವ ಸೂರ್ಯ, ಆ ಸೂರ್ಯದ ಮಧ್ಯದಲ್ಲಿರುವ ಚಂದ್ರ, ಆ ಚಂದ್ರದ ಮಧ್ಯದಲ್ಲಿರುವ ಅಗ್ನಿ, ಅಗ್ನಿ ಮಧ್ಯದಲ್ಲಿರುವ ಕಾಂತಿ, ಆ ಕಾಂತಿಯ ಮಧ್ಯದಲ್ಲಿರುವ ಸುಜ್ಞಾನ, ಆ ಸುಜ್ಞಾನದ ಮಧ್ಯದಲ್ಲಿರುವ ಚಿದಾತ್ಮ, ಆ ಚಿದಾತ್ಮನ ಮಧ್ಯದಲ್ಲಿರುವ ಚಿತ್ ಪ್ರಕಾಶರೂಪ ಪರಶಿವನು ಹೀಗಿರುವನು. ಅಂತಹ ಸುಜ್ಞಾನ ಕಾಯದ ಮಸ್ತಕದ ಮೇಲೆ ಸದ್ಗುರು ಹಸ್ತವನಿರಿಸಿ ಎನ್ನ ದೃಷ್ಟಿಗೆ ತೋರಿದನು. ತೋರಿದ ಆ ಅರಿವಿನ ಲಿಂಗವನೆ ನನ್ನ ಕೈಯಲ್ಲಿ ಕೊಟ್ಟ ಚೆನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯಾ ಪ್ರಭುವೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1147**

**ಹೂಸಲಿಲ್ಲದ ಗೋಡೆ, ಲೇಸಿಲ್ಲದವನ ಮಾಟ,**
**ಕಂಗಳ ಸೂತಕ ಹರಿಯದವನ ಅಂಗದ ಕೂಟ, ಅದೆಂದಿಗೆ ನಿಜವಪ್ಪುದು.**
**ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸನ್ನ ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗದಲ್ಲಿ**
**ಪ್ರಭುವೆ ನೀನೆ ಬಲ್ಲೆ.**

ಹೂಸಲಿಲ್ಲದ ಗೋಡೆ ಬಹುಕಾಲದವರೆಗೆ ಉಳಿಯುವುದಿಲ್ಲ. ಲೇಸಿಲ್ಲದವನ ಮಾಟ, ಕಂಗಳ ಸೂತಕ ಹರಿಯದವನ ಅಂಗಳದ ಕೂಟ ಅದೆಂದಿಗೆ ನಿಜವಪ್ಪುದು:

ಕಣ್ಣಿನಲ್ಲಿ ಅರಿವೆಂಬ ಗುರುದೇವನ ಬೆಳಕು ಹರಿಯುತ್ತಲಿದೆ. ಹಾಗೆಯೇ ಮನವೆಂಬ ಅಜ್ಞಾನದ ದೃಶ್ಯ ಇಡೀ ಕಾಯಕ್ಕೆ ಸೂತಕದ ಸೋಂಕು ಹರಡಿದೆ. ಹೀಗಾಗಿ ಕಣ್ಣು ನೋಡಿದಂತೆ ನುಡಿಯಲು ಸಾಧ್ಯವಾಗುವುದಿಲ್ಲ. ನುಡಿದಂತೆ ನೋಡಲು ಕೂಡಾ ಕಣ್ಣಿಗೆ ಸಾಧ್ಯವಾಗುವುದಿಲ್ಲ.

ನುಡಿಯುವ ನುಡಿಯಂತೆ ನೋಟವಿಲ್ಲ, ನೋಡುವ ನೋಟದಂತೆ ನುಡಿಯಲು ಸಾಧ್ಯವಾಗುವುದಿಲ್ಲ. ನೋಡುವ ನೋಟದ ಅಜ್ಞಾನ ಕಾಯದಲ್ಲಿ ಬಣವೆಯ ರೂಪದಲ್ಲಿ ಹೊಟ್ಟಿಕೊಂಡಿದೆ. ನೋಡುವ ನೋಟಕ್ಕೂ ನುಡಿಯುವ ನುಡಿಗೂ ಸಾಮ್ಯವಿಲ್ಲ. ಹಾದರದಿಂದ ನೋಡಿ ಸೋದರ ಭಾವದಿಂದ ಅಕ್ಕ ಎಂದು ನುಡಿದರೆ ನುಡಿದ ನುಡಿ ನಿಜವೆ ? ನೋಡಿದ ನೋಟ ನಿಜವೆ ? ಹಾದರದ ನೋಟ, ಆದರದ ನುಡಿ ಇವೆರಡು ತನ್ನ ಕಾಯದಲ್ಲಿಯೇ ಸಂಗ್ರಹವಾಗಿ ನೋಟವನ್ನು ನುಡಿಯನ್ನು ಅಂಗದಲ್ಲಿಯೇ ಸಂಗಮವಾದ ಶ್ರೀಗುರುದೇವ ಖಡ್ಗದಿಂದ ಇರಿದು ಇರಿದು ಕೊಲ್ಲದೆ ಬಿಡನು.

ನೋಡುವವನು ತಾನೇ. ಆದರೂ ನೋಡಿದುದನ್ನು ನುಡಿಯುವುದಕ್ಕೆ ಭಯ ತನಗೆ! ನುಡಿಯುವವನು ತಾನೇ. ನುಡಿದಂತೆ ನೋಡುವುದಕ್ಕೆ ಹಿಂಜರಿಕೆ ತನಗೆ ! ಅಂದ ಮೇಲೆ ತನಗೆ ತಾನೇ ಶುದ್ಧನಾಗಲು ಸಾಧ್ಯವೆ, ಸಿದ್ಧನಾಗಲು, ಪ್ರಸಿದ್ಧ-ಪ್ರಸಾದನಾಗಲು ಸಾಧ್ಯವೆ ಕಪಿಲಸಿದ್ಧ ಮಲ್ಲಿಕಾರ್ಜುನ ಪ್ರಭುವೆ ನೀನೇ ಬಲ್ಲೆ.

**1148**

**ಹೆಣ್ಣನೊಲ್ಲೆನು ಎಂದಡೆನಗೆ ಹೆಣ್ಣಾಯಿತ್ತು.**
**ಮನ್ನಣೆಯ ದಾನಕ್ಕೆ ಗುರಿಯಾದೆನು.**
**ಎನ್ನನಿತ್ತೆನು ಎನ್ನನೊಲ್ಲೆನು ಎಂದೆಂಬವನ**
**ಇನ್ನು ಭವಕೆ ತಂದೆನೆಂದೆನುತಿದೆ ಮಾಯೆ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಹೆಣ್ಣು ಎನ್ನುವುದು ಮಾಯೆ ಅಲ್ಲ. ಅದು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಹೆಣ್ಣು ಎನ್ನುವುದು ಇಲ್ಲ. ಗಂಡು ಎನ್ನುವುದು ಇಲ್ಲ. ಅದು ಮನದಲ್ಲಿಯೇ ಉಂಟಾದ ಮಾಯೆ. ಒಂದು ದೇಹ ಮತ್ತೊಂದು ದೇಹವನ್ನು ನೋಡಿ ದೇಹದಲ್ಲಿ ಕಾಮದ ಬಯಕೆ ಉಂಟಾಗುತ್ತದೆ. ಮತ್ತು ದ್ವೇಷ, ಅಸೂಯೆ, ಮತ್ಸರಗಳು ಉಂಟಾಗುತ್ತವೆ. ಹಾಗೇ ದೇಹದಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು ಉಂಟಾದುದಕ್ಕೆ ಮತ್ತೊಂದು ದೇಹ ಕಾರಣವೆಂದು ದೇಹ ತಿಳಿದಿದೆ. ಇದೇ ತಪ್ಪಾಗಿದೆ.

ದೇಹದಲ್ಲಿ ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ಹುಟ್ಟಬೇಕಾದರೆ ದೇಹದಲ್ಲಿಯ ಅಜ್ಞಾನವೇ ಕಾರಣ ಎಂದು ಎಲ್ಲಿಯವರೆಗೆ ದೇಹಕ್ಕೆ ತಿಳಿಯುವುದಿಲ್ಲವೊ ? ಅಲ್ಲಿಯವರೆಗೆ ದೇಹದ ಅಜ್ಞಾನ ತೊಲಗುವುದಿಲ್ಲ.

ದೇಹ ತಾನು ಹೆಣ್ಣೆಂದು, ಗಂಡೆಂದು ಅಜ್ಞಾನ ಆಮಂತ್ರಣ ಮಾಡಿಕೊಂಡು, ಈ ಅಜ್ಞಾನಕ್ಕೆ ಹೆಣ್ಣು ಕಾರಣ ಎಂದು ಗಂಡು, ಗಂಡು ಕಾರಣ ಎಂದು ಹೆಣ್ಣು. ಹೀಗೆ ಒಂದನ್ನೊಂದು ದೂಷಣೆಗೆ ಗುರಿಯಾಗಿವೆ.

ರಾವಣ ತನ್ನ ಸರ್ವಸ್ವವನ್ನು ಕಳೆದುಕೊಳ್ಳಲು ಸೀತೆಯೇ ಕಾರಣ ಎಂದು ಲೋಕ ಆಡಿಕೊಳ್ಳುವುದು. ಆದರೆ ಚರ್ಮ ನೋಡಿ ಹೆಣ್ಣೆಂದು ಭಾವಿಸಿದ ರಾವಣನ ಅಜ್ಞಾನವನ್ನು ಯಾರೂ ದೂಷಿಸುವುದಿಲ್ಲ. ಸೀತೆಯದಾದರು ಚರ್ಮವೇ, ರಾವಣನದಾದರು ಚರ್ಮವೇ, ಮಂಡೋದರಿಯದಾದರು ಚರ್ಮವೇ ಆಗಿದೆ. ಚರ್ಮ ಹೆಣ್ಣು ಅಲ್ಲ ಗಂಡು ಅಲ್ಲ. ನೋಡುವ ಕಣ್ಣು ಕೂಡಾ ಹೆಣ್ಣು ಅಲ್ಲ ಗಂಡೂ ಅಲ್ಲ. ಅಂದ ಮೇಲೆ ರಾವಣ ಸೀತೆಯನ್ನು ಯಾವ ಕಣ್ಣಿನಿಂದ

ನೋಡಿ ಹೆಣ್ಣೆಂದು ಮರುಳಾದ ? ತಾನು ಗಂಡು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಸೀತೆಯನ್ನು ಹೆಣ್ಣು ಎಂದು ನೋಡಿದ್ದಕ್ಕಾಗಿ ದೇಹದಲ್ಲಿ ಕಾಮ ಎನ್ನುವ ಅಜ್ಞಾನ ಉತ್ಪತ್ತಿಯಾಯಿತು. ದೇಹದ ಜ್ಞಾನ ದೇಹದಲ್ಲಿಯೇ ಉಳಿಯಿತು. ಹೀಗಾಗಿ ಮಾಯೆ ಕಾಯವನ್ನು ಆವರಿಸಿ ಎನ್ನನಿತ್ತೆನು, ಎನ್ನನೊಲ್ಲೆನು ಎಂದೆಂಬವನನ್ನು ಇನ್ನು ಭವಕ್ಕೆ ನೂಕಿದೆ; ಜನನ ಮರಣದ ಬಾಧೆಯಲ್ಲಿ ತಂದು ನೂಕಿದೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬ ಅರಿವಿಗೆ ಮಾತ್ರ ಹೆದರಿ ಓಡಿಹೋಗುತ್ತದೆ.

### 1149

**ಹೆಣ್ಣ ಹಿಡಿದು ಹೆಣ್ಣ ಭೋಗಿಸಬಾರದು;**
**ಮಣ್ಣ ಹಿಡಿದು ಮಣ್ಣ ಭೋಗಿಸಬಾರದು;**
**ಹೊನ್ನ ಹಿಡಿದು ಹೊನ್ನ ಭೋಗಿಸಬಾರದು;**
**ಈ ಅಣಕದ ಭೇದವನಾರೂ ಅರಿಯರು;**
**ಅದೆಂತು ಭಕ್ತಿಸ್ಥಲವಳವಡುವುದು? ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯ ಜಲಬಿಂದುವಿನ ಮೂಲಕ ಜನ್ಮ ತೆಳೆದಿದೆ. ಬಯಲು, ಜಲಜನಕವನ್ನು ಆಮ್ಲಜನಕವನ್ನು ಒಂದು ಮಾಡಿ ಜಲಕ್ಕೆ ಜನ್ಮ ನೀಡಿ ಅದರಲ್ಲಿ ತಾನು ಸಂಗಮವಾಗಿದೆ. ಬಯಲು ಜಲಬಿಂದುವಿನೊಂದಿಗೆ ಗರ್ಭಹೊಕ್ಕು ಅದನ್ನೆ ರಕ್ತ, ಮೂಳೆ, ಮಾಂಸ, ಮಜ್ಜೆ, ಮೇದಸ್ಸನ್ನಾಗಿ ಮಾಡಿ ಸುಂದರವಾದ ಚರ್ಮವೂ ಆಗಿ ಅವು ಸೋರದಂತೆ ಹೊಲಿದುಕೊಂಡು ಕಾಯದ ಗರ್ಭದಿಂದ ಕಾಯವಾಗಿ ಹೊರಬಂದಿವೆ.

ಬಯಲ ಬೆಳಕಿನಿಂದ ಮನವೆಂಬ ನೆರಳು ಕಾಯವನ್ನು ಆವರಿಸಿ ಮನವಾಗಿದೆ. ಆ ಮನದ ಅಜ್ಞಾನದಿಂದಲೇ ಕಾಯ ಹೆಣ್ಣಾಗಿದೆ. ಗಂಡಾಗಿದೆ. ಮನ ತನ್ನ ಅಜ್ಞಾನ ಕಳೆದುಕೊಂಡು ಬಯಲ ದೇವನೆಂಬ ಮಹಾಪುರುಷನೊಂದಿಗೆ ಹೆಣ್ಣಾಗಿ ಬೆರೆತರೆ ಸಾಕು. ಗಂಡು ಹೆಣ್ಣು ಎಂದು ಬೋಧಿಸುವ ಮನದ ಅಜ್ಞಾನ ಸುಟ್ಟು ಹೋಗುತ್ತದೆ.

ಮನ ಸ್ವತಃ ಹೆಣ್ಣಾಗಿದ್ದರೂ ಹೆಣ್ಣ ಹಿಡಿದು ಹೆಣ್ಣನ್ನು ಬೋಗಿಸುವುದು ತನಗೆ ಅರಿವಾಗುತ್ತದೆ. ಮನಕ್ಕೆ ತಾನು ಹೆಣ್ಣು ಎಂದು ಖಚಿತವಾಗಿ ಗೊತ್ತಾಗುತ್ತದೆ. ಕಾಯ ಹೆಣ್ಣಾದರೇನು ಗಂಡಾದರೇನು? ಕಾಯವನ್ನು ಆವರಿಸಿದ ಮನ ಹೆಣ್ಣು. ಕಾಯದಲ್ಲಿ ಸಂಗಮವಾದ ಅರಿವು ಗಂಡು ಎಂದು ಮನಕ್ಕೆ ಖಚಿತವಾಗಿ ಗೊತ್ತಾಗುತ್ತದೆ. ಅಂದಿನಿಂದ ಮನದ ದಿನಚರಿಯೇ ಬದಲಾಗುತ್ತದೆ.

ಮಣ್ಣ ಹಿಡಿದು, ಮಣ್ಣ ಬೋಗಿಸಬಾರದು:

ಜಲಬಿಂದುವಿನಿಂದ ಕಾಯವಾಗಿದೆ ಎಂದು ಕಾಯಕ್ಕೆ ಗೊತ್ತಾಯಿತು. ಜಲಬಿಂದುವೇ ಗಟ್ಟಿಯಾಗಿ ಮಣ್ಣಾಗಿದೆ, ಕಲ್ಲಾಗಿದೆ, ಹೊನ್ನಾಗಿದೆ. ಅಂದ ಮೇಲೆ ಭೂಮಿ, ಹೇಮ, ಕಾಯವೆಂಬ ಕಾಮಿನಿ, ಒಂದೇ ಜಾತಿಗೆ ಸೇರಿದ್ದು. ಅಂದರೆ ಜಲಬಿಂದುವೇ ಹೆಣ್ಣಾಗಿದೆ, ಮಣ್ಣಾಗಿದೆ, ಹೊನ್ನಾಗಿದೆ. ಹೀಗಾಗಿ ತಾನು ಹೆಣ್ಣಾಗಿಯೂ ಹೆಣ್ಣ ಹಿಡಿದು ಭೋಗಿಸುವುದು ಅಜ್ಞಾನವೇ ಸರಿ. ತಾನು ಸ್ವತಃ ಮಣ್ಣಾಗಿದ್ದು, ಮಣ್ಣ ಹಿಡಿದು ಭೋಗಿಸುವುದು ಅಜ್ಞಾನವೇ ಸರಿ. ಈ ಅಣಕದ ಭೇದವನು ಯಾರೂ ಅರಿಯರು; ಅದೆಂತು ಭಕ್ತಿ ಸ್ಥಳ ಅಳವಡುವುದು ಕಪಿಲಸಿದ್ಧ ಮಲ್ಲಿಕಾರ್ಜುನಾ !

### 1150

**ಹೆತ್ತಳವ್ವೆ ಸಕಲ ಬ್ರಹ್ಮಾಂಡಗಳ,**

**ಅವ್ವೆ ಹೆತ್ತು ಹೆಸರಿಡಲರಿಯಳು. ಅವ್ವೆ ಚಿತ್ತ ವಿಚಿತ್ತವಾಗಿ ಅವ್ವೆ ಮತ್ತೆ ನನ್ನ ಹೆಸರಿಟ್ಟಳು.**
**ಚಿತ್ತದಾ ಕಥನದಿಂದ ಮತ್ತೆ ಶುದ್ಧವಾಗೆಂದಳು ಕಪಿಲಸಿದ್ಧ ಮಲ್ಲಿನಾಥನವ್ವೆ.**

ಕಾಯವನ್ನು ಆವರಿಸಿದ ಮನವೆಂಬ ಅವ್ವೆ, ಕಾಯದೊಂದಿಗೆ ಸಂಗ ಮಾಡಿ, ಸಕಲ ಬ್ರಹ್ಮಾಂಡಕ್ಕೆ ಜನ್ಮ ನೀಡಿದಳು. ಬ್ರಹ್ಮಾಂಡವನ್ನು ಹಡೆದ ತಾಯಿ ಬ್ರಹ್ಮಾಂಡಕ್ಕೆ ಹೆಸರಿಡಲು ಅರಿಯಳು. ಏಕೆಂದರೆ ? ಅವ್ವೆಯ ಚಿತ್ತ ವಿಚಿತ್ತವಾಗಿದೆ. ಮತ್ತೆ ಅವ್ವೆ ತನ್ನ ಚಿತ್ತವನು ಬ್ರಹ್ಮಾಂಡದ ಮೇಲೆ ನೆಟ್ಟು ಅದಕ್ಕೆ ತನ್ನದೇ ಆದ ಮಾಯೆ ಎಂಬ ಹೆಸರನ್ನು ಇಟ್ಟಳು. ತನ್ನ ಹೆಸರನ್ನು ಮಾಯೆ ಎಂದು ಇಟ್ಟುಕೊಂಡ ಅವ್ವೆ, ತನ್ನ ಮೂಲ ಹೆಸರನ್ನೆ ಮರೆತಳು. ವರಿಸಲು ಬಂದ ಪರಮಾತ್ಮನನ್ನೆ ಮರೆತಳು. ಚಿತ್ತದ ಕಥನದಿಂದ ಮತ್ತೆ ಶುದ್ಧವಾಗಲೆಂದು ಪ್ರಯತ್ನಿಸಿದಳು. ಕಥನ ಕಾಯದಲ್ಲಿ ಉಳಿದು ತನ್ನ ಮೂಲ ಪಥವನ್ನೆ ಮರೆತು ಹೋದಳು. ತಾನು ಹೇಳಿದ ಸಕಲ ಕಥನಗಳು ಕಾಯದಲ್ಲಿ ಮಥನಕ್ಕೊಳಗಾದವು. ಕಥನವಲ್ಲದ ಕಥನ ಕಪಿಲಸಿದ್ಧ ಮಲ್ಲಿನಾಥನವ್ವೆಗೆ ಹೊಳೆಯಲೆ ಇಲ್ಲ. ಬಂದ ಹಾದಿಯನು ಮರೆತು ಬ್ರಹ್ಮಾಂಡದ ರತಿಕ್ರೀಡೆಯಲ್ಲಿ ಮೈ ಮರೆತಳು ಅವ್ವೆ.

**1151**

**ಹೆಸರಿಡಬಾರದ ಘನತರ ಲಿಂಗವ ಹೆಸರಿಟ್ಟು,**
**ವಾಙ್ಮನಕ್ಕಗೋಚರವಪ್ಪ ಲಿಂಗವ ವಾಕ್ಯಕ್ಕೆ ತಂದು,**
**'ಅತ್ಯತಿಷ್ಠದ್ದ ಶಾಂಗುಲಂ' ಎಂಬ ಲಿಂಗವ ಚಿತ್ತಕ್ಕೆ ತಂದು,**
**ಸುತ್ತಿರ್ದ ಮಾಯಾಪ್ರಪಂಚವ ಬಿಡಿಸಿದ ಬಸವಣ್ಣ;**
**ಚಿತ್ತ ಶುದ್ಧನ ಮಾಡಿದ ಬಸವಣ್ಣ.**
**ಮಲತ್ರಯಂಗಳ ಹರಿದು, ಶುದ್ಧ ತಾತ್ಪರ್ಯವರುಹಿ,**
**ಮುಕ್ತನ ಮಾಡಿದ ಗುರು ಬಸವಣ್ಣ.**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆನ್ನ ಕಾರಣ ಧರೆಗೆ ಬಂದ.**

ಅಂಗ ಹೆಸರು ಇಡಲು ಬಾರದ ಘನಲಿಂಗ. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಅರಿಯದಿದ್ದಕ್ಕಾಗಿ ಅಂಗಕ್ಕೆ ಮನ ಹೆಸರಿಟ್ಟಿದೆ.

ವಾಕ್ಕಿಗೂ ಮನಕ್ಕೂ ಅಗೋಚರವಾದ ಲಿಂಗಾಂಗವನ್ನು ಮನ ತನ್ನ ಮಾತಿಗೆ ತಂದು ನಿಲ್ಲಿಸಿದೆ. ಅದು ಅತ್ಯತಿಷ್ಠದ್ದ ಶಾಂಗುಲ ಎಂಬುದನ್ನೆ ಮರತೆ ಹೋಗಿ ಮನ ತನ್ನ ಚಿತ್ತಕ್ಕೆ ತಂದು ಅಂಗಕ್ಕೆ ಮಾಯಾ ಪ್ರಪಂಚವನ್ನು ಸುತ್ತಿದೆ.

ಮನದ ಚಿತ್ತವನ್ನು ಬಸವಣ್ಣ, ಸುಚಿತ್ತವನ್ನಾಗಿಸಿ ಆ ಸುಚಿತ್ತಕ್ಕೆ ಅಂಗ ಲಿಂಗಾಂಗವೆಂದು, ಅದು ವಾಙ್ಮನಕ್ಕಗೋಚರವೆಂದು, ಅದು ಅತ್ಯತಿಷ್ಠದ್ದಶಾಂಗುಲವೆಂದು ಮನಕ್ಕೆ ಭೋದೆ ಮಾಡಿ, ಅರಿವಿನ ಲಿಂಗಯ್ಯನ ದರುಶನ ಮಾಡಿಸಿದ . ಮನದ ಮಾಯಾ ಪ್ರಪಂಚವನ್ನು ಬಿಡಿಸಿ ಚಿತ್ತ ಶುದ್ಧನ ಮಾಡಿದ. ಮಲತ್ರಯಂಗಳನು ಹರಿದು ಲಿಂಗಾಂಗ ಸಾಮರಸ್ಯದ ಶುದ್ಧ ತಾತ್ಪರ್ಯವನು ಅರುಹಿ ಮನವನ್ನು ಘನಮನವನ್ನಾಗಿಸಿ ಮುಕ್ತನ ಮಾಡಿದ ಗುರುಬಸವಣ್ಣಾ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು ನಾನು ಧರೆಗೆ ಬಂದ ಕಾರಣ ನನ್ನನ್ನು ಉದ್ಧರಿಸಲೆಂದು ಆತ ಧರೆಗೆ ಬಂದ.

**1152**

**ಹೆಸರಿಡಬಾರದ ಭವಗೇಡಿ,**

**ನಿನ್ನ ಕೂಡಿದವರು ನಿನ್ನಂತೆ ಹೆಸರುಗೆಡುವರಲ್ಲದೆ**
**ಮರಳಿ ಹೆಸರುಂಟೆ? ಎಲೆ, ಭವಗೇಡಿ ಹರನೆ,**
**ನಿನ್ನನರ್ಚಿಸಿದವರು ನಿನ್ನಂತೆ ಭವಗೆಡುವರಲ್ಲದೆ ಮರಳಿ ಭವವುಂಟೆ?**
**ಅನಾದಿ ಸಂಸಿದ್ಧ ಯೋಗಮೂರ್ತಿ**
**ಕಪಿಲಸಿದ್ಧ ಮಲ್ಲಿಕಾರ್ಜುನಾ. ಇದ್ದೆಸೆಗೇಡಿ ನೀನು,**
**ನಿನ್ನವರು ನಿನ್ನಂತೆ ಇದ್ದಸೆಗೆಟ್ಟರಯ್ಯಾ.**

ಜನನ ಮರಣಗಳ ದುಃಖಕ್ಕೆ ಈಡಾಗಬೇಕಾದರೆ ಕಾಯಕ್ಕೆ ಹೆಸರಿಡಬಹುದು. ಕಾಯವದು ಶಿವನಿದ್ಧ ಕೈಲಾಸ. ಮನ ಶಿವನನ್ನು ಮರೆತದ್ದರಿಂದ ಕಾಯಕ್ಕೆ ಶಿವನ ಹೆಸರಿಟ್ಟುಕೊಂಡಿದೆ. ಹಾಗೆಯೇ ಪಾರ್ವತಿಯ ಹೆಸರಿಟ್ಟುಕೊಂಡಿದೆ. ಕಾಯಕ್ಕೆ ಶಿವನ ಹೆಸರಿಟ್ಟುಕೊಂಡರೂ ಅದು ಶಿವನಲ್ಲ, ಪಾರ್ವತಿಯ ಹೆಸರಿಟ್ಟುಕೊಂಡರೂ ಅದು ಪಾರ್ವತಿಯಲ್ಲ.

ಕಾಯವನ್ನು ಆವರಿಸಿದ ಮನ, ತಾನು ಶಿವನ ಸಂಗಾತಿ ಪಾರ್ವತಿಯೆಂಬುದನ್ನು ಮರೆತಿದೆ. ಕಾಯ ಪಾರ್ವತಿಯು ಅಲ್ಲ. ಶಿವ ಪಾರ್ವತಿಯರಿಬ್ಬರೂ ಕಾಯದಲ್ಲಿ ವಾಸ ಮಾಡಿದ್ದಾರೆ.

ಕಾಯಕ್ಕೆ ಪಾರ್ವತಿಯೆಂದು ಹೆಸರಿಟ್ಟು ಪಾರು ಎಂದು ಕರೆದರೆ ಕೆಂಡಾಮಂಡಲವಾಗುವುದು. ಕಾಯದ ಪಿತ್ತ ನೆತ್ತಿಗೇರುವುದು. ಕಾಯಕ್ಕೆ ಗೌರವ ಅಗೌರವಗಳುಂಟು. ಹೀಗಾಗಿ ಕಾಯವನ್ನು ಹೆಸರಿನಿಂದ ಬಣ್ಣಿಸಿದರೆ ಕಾಯಕ್ಕೆ ಸುಖವಾಗುತ್ತದೆ, ಹೆಸರಿಡಿದು ಹೀಯಾಳಿಸಿದರೆ ಕಾಯಕ್ಕೆ ದುಃಖವಾಗುತ್ತದೆ. ಕಾಯದಲ್ಲಿ ಕೂಡಿದ ಶಿವ ಪಾರ್ವತಿಯರಿಗೆ ಹೆಸರುಂಟಲ್ಲದೆ, ಕಾಯಕ್ಕೆ ಹೆಸರಿಲ್ಲ. ಕಾಯದಲ್ಲಿದ್ದವರನ್ನು ಹೇಗೆ ಕರೆದರೇನು? ಅವರಿಗೆ, ಸುಖವಿಲ್ಲ ದುಃಖವಿಲ್ಲ. ಅವರಿಗೆ ಜನನವಿಲ್ಲ ಮರಣವಿಲ್ಲ. ಹೆಸರಿಡಬಾರದ ಭವಗೇಡಿ ಅವರು. ಅವರನ್ನು ಕೂಡಿದವರು ಅವರಂತೆ ಹೆಸರು ಗೆಡುವರು ಮರಳಿ ಅವರಿಗೆ ಹೆಸರುಂಟೆ.

ಭವಗೇಡಿ ಹರನೆ, ನಿನ್ನನು ಅರ್ಚಿಸಿದವರು ನಿನ್ನಂತೆ ಭವಗೆಡುವರು. ಮರಳಿ ಅವರಿಗೆ ಜನನವಿಲ್ಲ ಮರಣವಿಲ್ಲ. ಅನಾದಿ ಅವರು. ಸಂಸಿದ್ಧ ಯೋಗಮೂರ್ತಿ ಅವರು. ಕಪಿಲಸಿದ್ಧ ಮಲ್ಲಿಕಾರ್ಜುನ ಇದ್ದೆಸಗೇಡಿ ನೀನು. ನಿನ್ನವರು ನಿನ್ನಂತೆ ಇದ್ದೆಸಗೆಟ್ಟರಯ್ಯಾ, ಹೆಸರಿಲ್ಲದೆ ತಿರುಗಾಡುತ್ತಾ ಮಾತನಾಡುವ ಜ್ಞಾನದ ಮರವು ಅವರು. ಸಿದ್ಧಾರ್ಥ ತನ್ನ ಹೆಸರನ್ನು ಕಳೆದುಕೊಂಡು ಬುದ್ಧನಾದಂತೆ ಹೆಸರಿಲ್ಲದ ಬೋಧಿ ವೃಕ್ಷವೆ ತಾನಾದಂತೆ!

**1153**

**ಹೆಸರಿಡಬಾರದ ಲಿಂಗವ**
**ಕರಸ್ಥಳಕ್ಕೆ ಹೆಸರಿಟ್ಟು ತಂದನೆನ್ನ ಗುರು.**
**ಆ ಹೆಸರಿಟ್ಟ ಲಿಂಗದ ಹೆಸರು ಹೇಳುವೆನು.**
**ಕಂಜಕನ್ನಿಕೆಯ ಹಣೆಯಲ್ಲಿ ವಿಧಿವಶವೆಂದು ಬರೆದ**
**ಐದಕ್ಷರವೆ ಆತನ ಪರಮನಾಮ.**
**ಅವ್ಯಯ ಕರಂಗಳೊಪ್ಪಿಪ್ಪ ಅಕ್ಷರಂಗಳಾರೆ ದ್ವಿತೀಯ ನಾಮ.**
**ಅವ್ಯಯ ಆನಂದ ಮನ್ಮಸ್ತಕದಲ್ಲಿ**
**ಒಪ್ಪಿಪ್ಪ ಕ್ಷರದ್ವಯವೆ ಆತನ ಆಚಾರ್ಯನಾಮ**

**ಇಂತೀ ನಾಮತ್ರಯಂಗಳನರಿದು ಧ್ಯಾನಾರೂಢನಾಗಿ**
**ಲಿಂಗಾರ್ಚನೆಯ ಮಾಡುವರೆತ್ತಾನೊಬ್ಬರು.**
**ಬಸವಣ್ಣ ಮೊದಲಾದ ಸಕಲ ಪುರಾತರು,**
**ಆವ್ಯಯ ಅನುಮತದಿಂದ**
**ಶುದ್ಧ ಸಿದ್ಧ ಪ್ರಸಿದ್ಧ ಲಿಂಗಾರ್ಚನೆಯಂ ಮಾಡಿ ನೀನಾದರು.**
**ಎನಗಿನ್ನಾವುದು ಹದನವಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯಕ್ಕೆ ಹೆಸರಿಡಬಹುದು. ಕಾಯದಲ್ಲಿ ಸಂಗಮವಾದ ಅರಿವೆಂಬ ಲಿಂಗಯ್ಯನಿಗೆ ಹೆಸರಿಡಲು ಸಾಧ್ಯವಿಲ್ಲ. ಆತ ಹೆಸರಿಡಬಾರದ ಲಿಂಗಯ್ಯ. ಕಾಯವನ್ನು ಆವರಿಸಿದ ಮನವೆಂಬ ಕಂಜಕನ್ನಿಕೆಯ ಹಣೆಯಲ್ಲಿ ವಿಧಿವಶವೆಂದು ಬರೆದ ಹೆಸರನ್ನು ಕೆಡಿಸಿ, ಐದಕ್ಷರದ ನಮಃಶಿವಾಯ ಆತನ ಪರಮನಾಮ. ಗುರುದೇವ ಮನಕ್ಕೆ ಆ ಹೆಸರಿಟ್ಟು ಕರೆದ. ಆ ಮನವನ್ನೆ ಹೆಸರಿಲ್ಲದ ಲಿಂಗಯ್ಯನಿಗೆ ಭಕ್ತಳನ್ನಾಗಿಸಿದ.

ಆತನ ಪರಮನಾಮ ಐದಕ್ಷರಗಳೆಂಬ ನಮಃ ಶಿವಾಯವಾದರೆ ಆರಕ್ಷರಗಳೆಂಬ ಓಂ ನಮಃ ಶಿವಾಯ ಆತನ ದ್ವಿತೀಯ ನಾಮ.

ಆತನು ಅವ್ವೆಯನು ಆನಂದ ಮನೋಮತ್ಸಕದಲಿ ಒಪ್ಪಿಪ್ಪ ''ಗುರು'' ಎಂಬ ಅಕ್ಷರದ್ವಯವೇ ಆತನ ಆಚಾರ್ಯ ನಾಮ. ಇಂತಿ ನಾಮ ತ್ರಯಂಗಳನು ಅರಿದು ಧ್ಯಾನಾರೂಢನಾಗಿ ಲಿಂಗಾರ್ಚನೆಯ ಮಾಡುವವರು ವಿರಳಾತಿ ವಿರಳರು.

ಬಸವಣ್ಣ ಮೊದಲಾದ ಸಕಲ ಪುರಾತನರು ಅವ್ವೆಯನು, ಅಪ್ರಮಾಣನು, ಅಪ್ರತಿಮನ ಅನುಮತದಿಂದ ಶುದ್ಧ ಸಿದ್ಧ ಪ್ರಸಿದ್ಧ ಲಿಂಗಾರ್ಚನೆಯನು ಮಾಡಿದರು. ಅವರು ಸಾಕ್ಷಾತ್ ಶಿವ! ಅವರು ಕಪಿಲಸಿದ್ಧ ಮಲ್ಲಿಕಾರ್ಜುನ. ಎನಗೆ ಇನ್ನಾವುದು ಹದನವಯ್ಯಾ?

ಗುರುದೇವನೆ ಎನ್ನ ಮನವೆಂಬ ಕಂಜಕನ್ನಿಕೆಯ ಹಿಡಿದು ಆಕೆಯ ಹಣೆಯಲ್ಲಿ ಐದಕ್ಷರವ ಬರೆದು ಪರಮನಾಮನನು ತೋರು ಪ್ರಭುವೆ. ಆರಕ್ಷರಗಳನು ಬರೆದು ದ್ವಿತೀಯ ನಾಮನ ದರುಶನ ಮಾಡಿಸು ಗುರುದೇವನೆ. ಎನ್ನ ಮನೋ ಮಸ್ತಕದಲ್ಲಿ ಗುರು ಎಂಬ ಎರಡಕ್ಷರಗಳನು ಬರೆದು ಎನಗೆ ಒಪ್ಪಿಪ್ಪ ಆಚಾರ್ಯನ ದರುಶನ ಮಾಡಿಸು ಗುರುದೇವನೆ.

ಗುರುವಿನ ದರುಶನ ಮಾಡಿಕೊಂಡ ಗುರು ನೀನು. ನಿನ್ನ ಶಿಷ್ಯನಿಗೂ ಗುರುದೇವನ ದರುಶನ ಮಾಡಿಸುವ ಗುರುಧರ್ಮ ನಿನ್ನದು. ಸಕಲ ಕಾಯಗಳು ಗುರು ಕಾಯಗಳು ಎಂದು ಖಚಿತವಾಗಿ ಬಲ್ಲವನು ನಿನೊಬ್ಬನೆ ಆಗಿರುವೆ ಗುರುದೇವ. ನನಗೆ ಹದನವಾದುದನೆ ಮಾಡಿಸು. ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವನು ಎನಗೆ ಕರುಣಿಸು ಕಪಿಲಸಿದ್ಧ ಮಲ್ಲಿಕಾರ್ಜುನ.

**1154**

**ಹೆಸರಿಡಬಾರದ ಸುಖದ ಸಾಯುಜ್ಯದಲ್ಲಿ**
**ಅರ್ಪಿತಾವಧಾನ ಮುಖಂಗಳ ಭೇದಂಗಳ ಭೇದಿಸುವೆ.**
**ಇಡಾ ಪಿಂಗಳಾ ಸುಷಮ್ನಾನಾಳಂಗಳ ಭೇದಂಗಳ ಭೇದಿಸುವೆ.**
**'ಏಕ ಏವ ರುದ್ರೋನ ದ್ವಿತೀಯಃ' ಎಂಬ ಭೇದವ ಭೇದಿಸುವೆ,**

**ನಿತ್ಯಪ್ರಸಾದದಲ್ಲಿ ನಿಪುಣನಪ್ಪೆ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನ ಕೂಡುವೆ.**

ಹೆಸರಿಡಬಾರದ ಅರಿವಿನ ಲಿಂಗಯ್ಯ ಅಂಗದಲ್ಲಿಯೇ ಸಂಗಮವಾಗಿದ್ದಾನೆ. ಆತ ಪರಮಸುಖಿ. ಆತ ಏಕ, ಏವ ರುದ್ರೋನ ಅದ್ವಿತೀಯನು. ಅಂಗವನ್ನು ಆವರಿಸಿದ ಮನ ಅರಿಷಡ್ವರ್ಗಗಳನ್ನು, ಸಪ್ತವ್ಯಸನಗಳನ್ನು, ಅಷ್ಟಮದಗಳನ್ನು ಅರಿವಿನ ಲಿಂಗಯ್ಯನಿಗೆ ಅರ್ಪಿಸಿ ಗುರುದೇವನ ಮೂಲಕ ನೈಪುಣ್ಯತೆಯಿಂದ ಲಿಂಗಯ್ಯನ ದರುಶನ ಮಾಡಿಕೊಳ್ಳಬೇಕು.

ಆತ ಹೆಸರಿಲ್ಲದ ಸರದಾರ ಕಾಯದ ಹೆಸರು ಕೆಡಿಸಿಕೊಂಡು ಮನ ಕಾಯದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ದಾಸಾನು ದಾಸನಾಗಬೇಕು. ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವನು ಆತನಿಂದಲೇ ಪಡೆದು, ಆತನೊಂದಿಗೆ ಕೂಡಿ, ಕೂಡದ ಅಗಲದ ಕೂಟದ ಸುಖವನು ಅನುಭವಿಸಬೇಕು.

**1155**

**ಹೆಸರಿಡಲಿಕಳವಲ್ಲ, ಹೆಸರುಗೆಟ್ಟಾ ಸೀಮೆ ಪಸರಿಸುತಿಕ್ಕು ಮತ್ತಾನಂದದಾ**
**ಹೆಸರಿಡುವ ಸೀಮೆಯನು ಗುರುವಾಗಿ ಪಸರಿಸಲು**
**ವಸುಧೆ ಕಂಡಿತು ಒಂದು ಲಿಂಗರೂಪ.**
**ಆನಂದರೂಪ ಕಪಿಲಸಿದ್ಧ ಮಲ್ಲಿಕಾರ್ಜುನ**
**ಸೀಮೆಯೊಳಗಡಗಿಪ್ಪುದು ಅನಂತ ಬ್ರಹ್ಮಾಂಡವು.**

ಹೆಸರಿಲ್ಲದ ವೃಕ್ಷಕ್ಕೆ ಹೆಸರಿಟ್ಟು ಕರೆದವರಾರು ಅಕಟಕಟಾ ಎಂದು ಪ್ರಭುದೇವರು ನುಡಿದಿದ್ದಾರೆ. ''ಮರಳ ತಲೆ, ಹುರುಳು ತಲೆ ನೀನೆ ದೇವ. ಹೆಣ್ಣುಗೂಸು, ಗಂಡುಗೂಸು ನೀನೇ ದೇವ ಎಮ್ಮಕ್ಕನ ಗಂಡ ನೀನೇ ದೇವ, ಕೂಡಲ ಸಂಗಮದೇವ ಭ್ರಾಂತಳಿದು ಭಾವ ನಿಂದುದಾಗಿ''

ಪರಮಾತ್ಮನೇ ಹೆಣ್ಣುಕೂಸು, ಗಂಡುಕೂಸು ಎಂಬ ಅವತಾರ ತಳೆದಾಗ ಆತನಿಗೆ ಏನೆಂದು ಹೆಸರಿಡುವುದು! ಕಾಯಕ್ಕೆ ಕಾಯ ಗುರುವಲ್ಲ. ಶಿಷ್ಯನೂ ಅಲ್ಲ. ಕಾಯದಲ್ಲಿ ಪರಿಪೂರ್ಣ ಶಿವ ತನ್ಮಯನಾಗಿದ್ದಾನೆ. ಹೆಸರಿಟ್ಟು ಕರೆಯುವ ಕಾಯ ಪ್ರಪಂಚ ತನ್ನ ಅಜ್ಞಾನದ ಸೀಮೆಯನು ಮರೆತು, ಅಂಗದಲ್ಲಿಯೇ ಸಂಗಮವಾದ ನಿಸ್ಸೀಮ ಲಿಂಗರೂಪನಾದ ಗುರುದೇವನನ್ನು ಕಾಣುವ ಕಾಯಕ ಕಾಯದಲ್ಲಿಯೇ ಘಟಿಸಬೇಕು. ಕಾಯದಲ್ಲಿಯೇ ಅನಂತ ಬ್ರಹ್ಮಾಂಡದ ದರುಶನ ಕಾಯವನ್ನು ಆವರಿಸಿದ ಮನಕ್ಕೆ ಆಗುತ್ತದೆ. ಆಗ ಮನ ತನ್ನ ಸೀಮೆಯನು ಮೀರಿ ನಿಸ್ಸೀಮನೊಂದಿಗೆ ಸಂಗಮವಾಗಿ ಗುರುವಾಗುತ್ತದೆ. ಕಾಯಕ್ಕೆ ಇಟ್ಟುಕೊಂಡ ಹೆಸರು ತಂತಾನೇ ಕಳಚಿ ಬೀಳುತ್ತದೆ.

**1156**

**ಹೇಳಯ್ಯಾ, ಹೇಳಯ್ಯಾ, ಆ ಕಾಲದಲಿ ಮಾಡುವಿರಿ**
**ಲಗುನವೆಂತಹುದಯ್ಯ?**
**ಕೇಳಯ್ಯಾ, ಆ ಕಾಲವೆ ಸುಕಾಲವಾಗಿ ಲಗುನವಿಂತಹುದು.**
**ಭಕ್ತರು ಕಪಿಲಸಿದ್ಧ ಮಲ್ಲಿನಾಥನ**
**ಮನಮನದ ಚಿತ್ತದಲ್ಲಿ ಮುಂದಿಟ್ಟ ನಡೆವರಾಗಿ**
**ಅಂತಹುದಯ್ಯಾ, ಅಂತಹುದಯ್ಯಾ.**

ಲಗ್ನವೆಂದರೆ ಒಂದು ಕಾಯ ಮತ್ತೊಂದು ಕಾಯದೊಂದಿಗೆ ಸಂಸಾರ ಮಾಡುವುದಲ್ಲ. ಕಾಯದಲ್ಲಿ ಅಕಾಯದೊಂದಿಗೆ ಅಕಾಯ ಕೂಡಿ, ಕೂಡದ ಅಗಲದ ಕೂಟದ ಸುಖವನ್ನು ಹೊಂದುವುದೇ ಲಗ್ನ.

''ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ ರಾಶಿ, ಕೂಟ, ಋಣ, ಸಂಬಂಧ ಉಂಟೆಂದು ಹೇಳಿರಯ್ಯಾ. ಚಂದ್ರ ಬಲ ತಾರಾಬಲ ಉಂಟೆಂದು ಹೇಳಿರಯ್ಯಾ, ನಾಳಿನ ದಿನಕ್ಕೆ ಇಂದಿನ ದಿನ ಲೇಸೆಂದು ಹೇಳಿರಯ್ಯ ಕೂಡಲ ಸಂಗಮ ದೇವನ ಪೂಜಿಸಿದ ಫಲ ನಿಮ್ಮದಯ್ಯ'' ಎಂದು ಅಣ್ಣ ಬಸವಣ್ಣನವರು ಲಗ್ನದ ಮಾಹಿತಿಯನ್ನು ಶರಣರಿಗೆ ಸೂತ್ರದ ರೂಪದಲ್ಲಿ ಹೇಳಿದ್ದಾರೆ.

ಒಂದು ಗಂಡಿಗೆ ಒಂದು ಹೆಣ್ಣನ್ನು ತಂದು ಲಗ್ನ ಮಾಡಬಹುದು. ಇದು ಸುಲಭವಾದ ಕೆಲಸ. ಶರಣರ ದೃಷ್ಟಿಯಲ್ಲಿ ಇದು ಲಗ್ನವಲ್ಲ. ಲಗ್ನವಾದವರು ಕೂಡಾ ಪುನಃ ಲಗ್ನವಾಗಲೇಬೇಕು. ಇದು ಕಾಯ ಕಾಯದೊಂದಿಗೆ ಕೂಡಿದ ಲಗ್ನವಲ್ಲ. ಕಾಯವನ್ನು ಆವರಿಸಿದ ಮನ ಹೆಣ್ಣಾಗಿ, ಕಾಯದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನೆ ಪತಿಯಾಗಿಸಿಕೊಂಡು ಆತನೊಂದಿಗೆ ಲಗ್ನವಾಗುವುದು. ಈ ಲಗ್ನಕ್ಕೆ ತಾರಾಬಲ ಚಂದ್ರಬಲದ ಅವಶ್ಯಕತೆ ಇಲ್ಲ. ರಾಶಿಕೂಟ ಸಂಬಂಧಗಳ ಅವಶ್ಯಕತೆಯೂ ಇಲ್ಲ. ಸಮಾಜದ ಗುರು – ಹಿರಿಯರ ಅವಶ್ಯಕತೆಯು ಈ ಲಗ್ನಕ್ಕೆ ಇಲ್ಲ. ಕಾಯದಲ್ಲಿ ಘಟಿಸುವ ಈ ಲಗ್ನ; ಇಂತಹ ಲಗ್ನ ಮಾಡಿಕೊಂಡ ಶರಣರ ಸಮ್ಮುಖದಲ್ಲಿ ಜರುಗುತ್ತದೆ. ಶರಣರು ಮಾತ್ರ ಈ ಲಗ್ನವನ್ನು ಮಾಡಬಲ್ಲರು. ಶರಣರ ಸಮ್ಮುಖದಲ್ಲಿ ಮನವೆಂಬ ಕನ್ಯೆ ಅರಿವೆಂಬ ಗುರುದೇವನನ್ನೆ ಗಂಡನಾಗಿ ಪಡೆಯಲು ಒಪ್ಪಬೇಕು. ಅಂತಹ ಕಾಲದಲ್ಲಿ ಲಗ್ನ ನೆರವೇರುತ್ತದೆ. ಶರಣ ಸತಿ ಲಿಂಗಪತಿಯಾಗಿ ಕೂಡುವ ಕಾಲವೇ ಸುಕಾಲವಾಗಿ ಮಾರ್ಪಡುತ್ತದೆ.

**1157**

**ಹೊಗಳಿತೆಗೆ ಎನ್ನ ದೇಹ ಉರಸದಯ್ಯಾ.**
**ಹೊಗಳಿತೆಯ ಹೊಗಳುವಾಗ ನೆಲನ ಬಗಿದು ಹೋಗುವಂತಹುದಯ್ಯಾ.**
**ಅದು ನನ್ನ ದೇಹದ ಗುಣವಯ್ಯಾ.**
**ದೂಷಣೆ ಪಥ್ಯವಾದಲ್ಲದೆ ಈಸರನ ಕಾಣಬಾರದು**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ದೇವರ ದೇವ!.**

ಹೊಗಳಿಕೆಗೆ ದೇಹ ಉಬ್ಬುತ್ತದೆ. ತೆಗಳಿಕೆಗೆ ದೇಹ ಕುಗ್ಗುತ್ತದೆ. ಪ್ರತಿ ಮಾತು ಹೊಗಳಿಕೆ ತೆಗಳಿಕೆಗಳಿಂದ ಕೂಡಿರುತ್ತವೆ ಎಂದು ಕಾಯ ನಿರ್ಧರಿಸಿದೆ. ಹೀಗಾಗಿ ಕಾಯದಿಂದಲೇ ಹೊರ ಬಂದ ಮಾತು ಕಾಯಕ್ಕೆ ಅರಿವಿನಿಂದ ಕೇಳಲು ಸಾಧ್ಯವಾಗುತ್ತಿಲ್ಲ.

ಇಡೀ ಲೋಕಕ್ಕೆ ಕಾಯದ ಅರಿವು ಕಾಯದಲ್ಲಿಯೇ ಮರೆಯಾಗಿದೆ. ಕಾಯದ ಅರಿವಿನ ಮಾತುಗಳು ಕಾಯದಲ್ಲಿಯೇ ಮರೆಯಾಗಿ ಕಾಯದ ಮರೆವಿನ ಮಾತುಗಳು ಕಾಯದಲ್ಲಿಯೇ ಸಂಗ್ರಹವಾಗಿ ಕಾಯದ ಮಾತನ್ನು ಕೇಳಿ ಕಾಯವೇ ಹಿಗ್ಗುತ್ತದೆ, ಕಾಯದ ಮಾತನ್ನು ಕೇಳಿ ಕಾಯವೆ ಕುಗ್ಗುತ್ತದೆ. ಇದು ಕಾಯದ ಗುಣವಾಗಿದೆ.

ಕಾಯದಿಂದ ಹೊರಬಂದ ಮಾತನ್ನು ಕಾಯ ಕೇಳುವ ಮುನ್ನ ಮಾತಿನ ತಿರುವಣೆಗೆಯನ್ನು ಬಿಚ್ಚಿ ಅದರಲ್ಲಿರುವ ಅರಿವಿನ ಪಾನ ಮಾಡಿದಾಗಲೇ ತಿಳಿಯುತ್ತದೆ. ಮಾತಿನಲ್ಲಿ ಹೊಗಳಿಕೆಯಿಲ್ಲ, ತೆಗಳಿಕೆಯ ದೋಷವಿಲ್ಲವೆಂದು !

ಶಬ್ದದಲ್ಲಿ ಸುಶಬ್ದ, ಕುಶಬ್ದವೆಂದು ಇಲ್ಲ. ಆದರೆ ಕಾಯ ಎಷ್ಟೋ ಕಾಲಗಳಿಂದ ಮಾತನ್ನು ಕುಶಬ್ದವಾಗಿ ಸುಶಬ್ದವಾಗಿ ಕಾಯದ ಮೇಲೆ ಬಾಣದಂತೆ ಎಸೆಯುತ್ತದೆ.

ಮಾತನ್ನು ಹಿಡಿದು ಮುತ್ತನ್ನಾಗಿ ಸ್ವೀಕರಿಸುವ ಕಲೆ ಶರಣನಿಗೆ ಮಾತ್ರ ಗೊತ್ತು. ಆತ ಹೊಗಳಿಕೆ, ತೆಗಳಿಕೆಯ ಮಾತುಗಳನ್ನು ಈಶ್ವರನ ಪ್ರಸಾದದಂತೆ ಸ್ವೀಕರಿಸುತ್ತಾನೆ. ಪ್ರತಿ ಶಬ್ದದಲ್ಲಿ ಬ್ರಹ್ಮ ಬಚ್ಚಿಟ್ಟುಕೊಂಡಿದ್ದಾನೆ. ಭ್ರಮೆಯಿಂದ ಕೇಳಿದರೆ ಸುಖವಾಗುತ್ತದೆ. ಇಲ್ಲ ದುಃಖವಾಗುತ್ತದೆ. ಅರಿವಿನಿಂದ ಕೇಳಿದರೆ ಅದು ಸುಶಬ್ದವು ಅಲ್ಲ ಕುಶಬ್ದವು ಅಲ್ಲ. ಹೀಗೆ ಕೇಳುವಾತನೆ ದೇವರ ದೇವ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ ದೇವ.

**1158**

**ಹೊದ್ದಿಯೂ ಹೊದ್ದದಂತಿಪ್ಪವನ ಹೊದ್ದಿ**
**ಸಂಯೋಗವ ಮಾಡುವ ಪರಿಯೆಂತಯ್ಯಾ? ಇಬ್ಬಟ್ಟೆಯಾಗಿಪ್ಪ ನೀಲಕಂಧರ!**
**ಮಸ್ತಕದಲ್ಲಿ ಲೀಲೆಯಿಂದಿಪ್ಪವನ ಸಂಯೋಗವ ಮಾಡುವ ಪರಿಯೆಂತಯ್ಯಾ?**
**ಎಲೆ ಗುರುವೆ, ನೀನು ಸರ್ವಾಂಗವ ಪ್ರವೇಶಿಸುವಲ್ಲಿ,**
**ಎನ್ನೊಡನೆ ಪ್ರವೇಶಿಸಿದ ಕಾರಣ,**
**ಅನು ಸಂಯೋಗವ ಮಾಡಿದೆನೆಲೆ ಎಂದಡೆ,**
**ಮಿಕ್ಕಿನವರಿಗೆ ಸಮನಿಸುವುದೆ ಅಯ್ಯಾ, ಬಡವರಿಗೆ,**
**ಅನಂಗವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗ ನಿನ್ನ ಕರುಣವುಳ್ಳವರಿಗಲ್ಲದೆ.?**

ಪರಮಾತ್ಮ ಕಾಯವನ್ನು ಹೊತ್ತು ಹೊದ್ದದಂತಿರುವನು. ಕಾಯವನ್ನು ಹೊದ್ದು ಕಾಯದೊಂದಿಗೆ, ಕಾಯವನ್ನು ಆವರಿಸಿದ ಮನದೊಂದಿಗೆ, ಸಂಯೋಗವ ಮಾಡುವ ಅವನ ಪರಿಯೇ ವಿಪರೀತ. ನೀಲಕಂಧರ ಇಬ್ಬಟೆಯಾಗಿಪ್ಪನು ! ಒಬ್ಬನೇ ಎರಡು ಕಾಯಗಳನ್ನು ಹೊದ್ದು ಹೊದ್ದದಂತಿರುವನು ! ಕಾಯವನ್ನು ಹೊದ್ದು ಮಸ್ತಕದಲ್ಲಿ, ಅವನು ತನ್ನ ಲೀಲೆಯಿಂದ ಮಾಡುವ ಪರಿಯೆ ವಿಪರೀತ ವಿಚಿತ್ರವೂ ಆಗಿದೆ.

ಎಲೆ ನನ್ನೊಡನೆಯು ಗುರುದೇವನೆ. ನೀನು ಸರ್ವಾಂಗವನು ಪ್ರವೇಶಿಸುವಾಗ, ನೀನೊಬ್ಬನೆ ಪ್ರವೇಶಿಸಲಿಲ್ಲ. ಮನವೆಂಬ ಕಾರಣ ನಾನು ನಿನ್ನೊಂದಿಗೆ ಸಂಯೋಗವ ಮಾಡಿದೆನು. ಎಂದಡೆ ಮಿಕ್ಕವರಿಗೆ ನನ್ನಂತೆ ನಿನ್ನೊಂದಿಗೆ ಸಂಯೋಗವ ಮಾಡುವುದು ಸಮನಿಸುವುದೇ ಅಯ್ಯಾ! ಅವರು ಬಡವರು. ನೀನಿದ್ದ ಅಂಗದಲ್ಲಿ ನಿನ್ನ ಹುಡುಕದ ನಿರ್ಗತಿಕರು ಅವರು. ಅಂತವರಿಗೆ ನಿನ್ನೊಂದಿಗೆ ಸಂಯೋಗವ ಮಾಡುವುದು ಸಮನಿಸುವುದೇ ಅಯ್ಯಾ! ಅಂಗವನು ಧಾರಣೆ ಮಾಡಿಕೊಂಡ ಅನಂಗನು ನೀನು. ಕಪಿಲಸಿದ್ಧ ಮಲ್ಲಿಕಾರ್ಜುನನು ನೀನು. ನಿನ್ನ ಕರುಣ ಉಳ್ಳವರಿಗಲ್ಲದೆ ನಿನ್ನ ಸಂಯೋಗವು ಸಾಧ್ಯವಿಲ್ಲ.

**1159**

**ಹೊರಮನ ಹೊರತಾಗಿದ್ದವಳಾನಯ್ಯ,**
**ಸುತ್ತಿ ಮುತ್ತಿ ಆತನ ಸೆರಗಿನ ಬಳಿಗಳ ಹಿಡಿದು ಹಿರಿದು**
**ಕಂಗಳ ಕಣ್ಣಲ್ಲಿ ಗೆಲಿದೆನವ್ವ, ಅವ್ವಾ!**

**ಇಂತಹ ಮಾಯೆಯ ಬೆಡಗ ಬಲ್ಲ**
**ಕಪಿಲಸಿದ್ಧ ಮಲ್ಲಿನಾಥನವ್ವ, ಅವ್ವಾ!.**

ಕಾಯವನ್ನು ಆವರಿಸಿದ ಮನ ಟಿಸಿಲೊಡೆದು ಒಳಮನ, ಹೊರಮನವೆಂದು ಎರಡಾಗಿದೆ. ಅಯ್ಯಾ ಗುರುದೇವನೆ ಹೊರಮನ ಹೊರತಾಗಿದ್ದವಳು ನಾನಯ್ಯ. ಸುತ್ತಿ-ಮುತ್ತಿ ನಿನ್ನ ಸೆರಗಿನ ಬಳಿಗಳ ಹಿಡಿದು, ಇರಿದು ಕಂಗಳ ಕಣ್ಣಲ್ಲಿ ಕಣ್ಣಿಟ್ಟು ನಿನ್ನನು ಗೆಲೆದೆನವ್ವಾ ಅವ್ವಾ.

ಇಂತಹ ಮಾಯೆಯ ಬೆಡಗನು ಬಲ್ಲ ಕಪಿಲಸಿದ್ಧ ಮಲ್ಲಿನಾಥನವ್ವಾ ಅವ್ವ.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಗುರುದೇವನ ಸಂಗ ಮಾಡದೇ ಕಾಯದ ಸಂಗ ಮಾಡಿದರೆ ಅದು ಮಾಯೆ. ಅಂತಹ ಮಾಯೆಯ ಬೆಡಗನ್ನು ಮನದಲ್ಲಿಯ ಹೊರಮನವಾಗಿ ಕಾಯದ ಸಂಗ ಮಾಡಿದ ಮನವನ್ನು ಅರಿತರಿತು ಆ ಮಾಯೆಯಿಂದ ಬೇರ್ಪಟ್ಟು ಶ್ರೀಗುರುದೇವನ ಕಂಗಳಲ್ಲಿ ಕಣ್ಣಿಟ್ಟು, ಅಂಗದೊಂದಿಗೆ ಸಂಗಮಾಡಿದ ಮನವೆಂಬ ಮಾಯೆಯನ್ನು ಗೆಲ್ಲಬೇಕಾಗಿದೆ. ಇಂತಹ ಮಾಯೆಯ ಬೆಡಗನ್ನು ತಿಳಿದು ಕಪಿಲಸಿದ್ಧ ಮಲ್ಲಿನಾಥನೊಂದಿಗೆ ಅವ್ವ ಸಂಗ ಮಾಡಲೇಬೇಕಾಗಿದೆ.

**1160**

**ಹೊಲಬು ಸೀಮೆಯೊಳಗೆ ಹೊಲಬ ಮೀರಿದ ಅಸೀಮ**
**ಕುಲಗೆಟ್ಟ ಸಮತೆ ಸೀಮೆಯ ಸೀಮೆಯಾ.**
**ಈ ದೆಸಗೇಡಿ ಸೀಮೆಯನು ವಶಮಾಡಲುಬಲ್ಲಡೆ**
**ಸಮತೆಗಲ್ಲದೆ ಮತ್ತೆ ವೇದ್ಯವಲ್ಲ.**
**ಆನಂದಸ್ಥಾನದಲ್ಲಿ ಸಮತೆ ಸಮತೆಯ ಭೇದ**
**ಆರೂಢ ಕೂಟ ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡಿದ**
**ಆನಂದ ದಾರಿ ತಾ ಸಮತೆ ರೂಪ.**

ಕಾಯದಲ್ಲಿ ಸೀಮೆಯೊಳಗಿನ ಹೊಲಬು ಇದೆ. ಸೀಮೆ ಮೀರಿದ ನಿಸ್ಸೀಮನು ಇದ್ದಾನೆ. ಕಾಯದ ಕುಲಗೆಟ್ಟ ಸಮತೆ ಮಾತ್ರ ಸೀಮೆಯನು ಮೀರಿ ನಿಸ್ಸೀಮನಾಗಬಹುದು. ಈ ದೆಸಗೇಡಿ ಸೀಮೆಯನು ವಶ ಮಾಡಿಕೊಳ್ಳುವುದಕ್ಕೆ ಸಮತೆಗಲ್ಲದೆ ಮತ್ತಾರಿಗೂ ಸಾಧ್ಯವಿಲ್ಲ. ವೇದ್ಯವು ಅಲ್ಲ.

ಅಂಗವನ್ನು ಸೃಷ್ಟಿ ಮಾಡಿ ಲಿಂಗಯ್ಯ ಆ ಅಂಗದಲ್ಲಿಯೇ ಇದ್ದು, ಸಹಜ ಸಮತೆಯ ಸುಖವನು ಲಿಂಗಾಂಗದ ಮೂಲಕ, ತಾನು ಸೃಷ್ಟಿ ಮಾಡಿದ ಬ್ರಹ್ಮಾಂಡವನು ತಾನೇ ಆನಂದದಿಂದ ನೋಡುವ ಇಚ್ಛೆಯನು ಹೊಂದಿದ್ದಾನೆ. ಅಂಗವನು ಆವರಿಸಿದ ಮನ ಅಂಗದೊಂದಿಗೆ ರೂಢಿಯ ಸುಖವನು ಅನುಭವಿಸಿ, ಸೃಷ್ಟಿಗೆ ಕಾರಣವಾದರೆ, ಅಂಗದಲ್ಲಿಯೇ ಸಂಗಮವಾದ ಯಾವ ರೂಢಿಯೂ ಇಲ್ಲದ ಆರೂಢನು ಮನವೆಂಬ ಕಪಿಯ ಚೆನ್ನಾಟವನು ನೋಡುತ್ತಾ ಸಹಜವಾಗಿ ಅಂಗದಲ್ಲಿಯೇ ಕುಳಿತಿದ್ದಾನೆ. ಮನ ತನ್ನ ಕಪಿ ಚೇಷ್ಟೆಯನು ಬಿಟ್ಟು ಆರೂಢನೊಂದಿಗೆ ಕೂಡಿ ಕೂಡದ ಅಗಲದ ಕೂಟವನು ಸವಿದಾಗ ಸಮತೆಯ ರೂಪ ತನ್ನತಾನೇ ಮೂಡುತ್ತದೆ. ಮನವೆಂಬ ಕಪಿ ಆಂಜನೇಯನಾಗಿ ಆರೂಢನಿಗೆ ಮಣಿಯುತ್ತದೆ.

**1161**

**ಹೊಲಮೇರೆಯಿಂ ಮೇರೆ ಹೊಲಬುದಪ್ಪಿದ ನಾದ ಕಳೆಗಳ**

**ಮೀರಿರ್ದ ತುರ್ಯಂಗಳ, ಗುರುವಿನ ಕರುಣದ ಅನಿಮಿಷದ ಮನೆಯಲ್ಲಿ**
**ಹೊಲಬುದಪ್ಪಿದ ಕಂಡೆ ಮಧ್ಯಮವನು.**
**ಆನಂದಸ್ಥಾನದಲ್ಲಿ ಆಂದೋಳವಾಗಿಪ್ಪ ಮೂರರ ಕಳೆಗಳ ಭೇದಂಗಳ**
**ಮೀರಲೀಯದ ಬ್ರಹ್ಮ, ತೋರಲೀಯದ ಸತ್ವ**
**ನೀನಾದೆನ್ನೈ ಕಪಿಲಸಿದ್ಧ ಮಲ್ಲೇಶ್ವರಾ.**

ಕಾಯವೆಂಬುದು ಗುರುವಿನ ಮನೆ. ಅದರಲ್ಲಿ ಸದ್ಗುರು ವಾಸಮಾಡಿದ್ದಾನೆ. ಮನ ಗುರುದೇವನ ಸಂಗ ಮಾಡದೇ, ಮೇರೆ ತಪ್ಪಿ, ಕಾಯದ ಸಂಗ ಮಾಡಿ, ಅದರಿಂದ ಹೊರ ಹೊಮ್ಮುವ ನಾದ ಬಿಂದು ಕಲೆಗಳಿಗೆ ಮರುಳಾಗಿದೆ. ಇಡೀ ಕಾಯದ ಆಯುಷ್ಯವನ್ನು ಗುರುದೇವನಿಗೆ ಮೀಸಲಿಡಬೇಕಾದ ಮನ ನಾದ, ಬಿಂದು, ಕಲೆಗಳ ಸುಖಕ್ಕಾಗಿ ಕಾಯದ ಆಯುಷ್ಯವನ್ನೆ ಹಾಳುಗೆಡಗಿದೆ.

ಗುರುವಿನ ಮನೆಯಲ್ಲಿ ಗುರುವಿನೊಂದಿಗೆ ಶಿಷ್ಯನಿಲ್ಲದೆ ಗುರುದೇವ ತನಗೆ ತಾನೇ ಪರಮಾನಂದದಲ್ಲಿ ಮೈಮರೆತಿದ್ದಾನೆ. ಕಾಯ ಅನಿಮಿಷನಿದ್ದ ಮನೆ-ಮನೆಯನ್ನು ಆವರಿಸಿದ ಮನವೆಂಬ ಶಿಷ್ಯ ಹಾದಿತಪ್ಪಿ ಕಾಯದೊಂದಿಗೆ ಅಜ್ಞಾನದ ಸಕುಖದಲ್ಲಿ ಮೈಮರೆತಿದ್ದಾನೆ.

ಮನೋಕಾಯ, ಕಾಯದೊಂದಿಗೆ ಅಜ್ಞಾನದ ಸುಖದಲ್ಲಿ ಮುಳುಗಿದ್ದರೆ, ಶ್ರೀ ಗುರುದೇವನಿದ್ದ ಸ್ಥೂಲಕಾಯ ಮನೋಕಾಯವನ್ನು ಪ್ರತಿಭಟಿಸುತ್ತಿಲ್ಲ. ಗುರುದೇವನ ಕಾಯಕ್ಕೆ ಸ್ಥೂಲ ಕಾಯವೇ ಆಶ್ರಯ. ಆದರೂ ಆತ ಕಾಯವನ್ನು ಸೋಂಕದೆ ಕಾಯಕ್ಕೆ ಆಧಾರವಾಗಿ ಕಾಯವನ್ನು ಬೆಳಗುತ್ತಿದ್ದಾನೆ.

ಮೂರರ ಕಳೆಗಳ ಭೇದಂಗಳ ಮೀರಲೀಯದ ಬ್ರಹ್ಮ, ತೋರಲೀಯದ ಸತ್ವ ನೀನಾದೆಯಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ:

ಮೂರು ಕಾಯಗಳು ಇವೆ. ಆದರೂ ಮೂರೊಂದಾಗುತ್ತಿಲ್ಲ. ಅಕಾಯದಲ್ಲಿಯ ಸತ್ವ ಕಾಯಕ್ಕೆ ಗೋಚರಿಸುತ್ತಿಲ್ಲ. ಕಾಯವನ್ನು ಆವರಿಸಿದ ಮನಕ್ಕೂ ಗೋಚರಿಸುತ್ತಿಲ್ಲ. ಆದರೂ ನೀನು ನೀನೇ ಆಗಿ ಕಾಯವನ್ನು ಬೆಳಗುತ್ತಿರುವೆಯಲ್ಲ ಕಪಿಲಸಿದ್ಧ ಮಲ್ಲೇಶ್ವರಾ.

**1162**

**ಹೋ ಹೋ!**
**ಇದೇನು ಮುಕ್ತಿಯ ತೊಡಕು!**
**ಇದೇನು ನುಡಿವ ನುಡಿಗೆ ಆತಂಕವು!**
**ಇದೇನು ಜ್ಞಾನಜ್ಯೋತಿಗೆ ಮಾಯಾಪವನ ಪಟುತರವು!**
**ಇದೇನು ಕಪಿಲಸಿದ್ಧ ಮಲ್ಲಿಕಾರ್ಜುನ ಮಾಡಿ ತಂದಿಟ್ಟ**
**ಭೋಗದ ಉಗುಮಿಗೆಯು!.**

ಕಾಯದ ಆಟವೇ ವಿಪರೀತ. ಕಾಯ ಸಂಸಾರವನ್ನು ಹಿಡಿದಿದೆ. ಹಾಗೆಯೇ ಮುಕ್ತಿಯ ಮಾರ್ಗವನ್ನು ಹಿಡಿದುಕೊಂಡಿದೆ. ಭಕ್ತಿಯ ಮಾರ್ಗದಲ್ಲಿಯೂ ತನ್ನನ್ನು ತೊಡಗಿಸಿಕೊಂಡು ಮುಕ್ತಿ ಪಡೆಯಲೇಬೇಕೆಂದು ಪಣತೊಟ್ಟಿದೆ. ಹೋ ಹೋ ಇದೇನು ಮುಕ್ತಿಯ ತೊಡಕು ! ಇದೇನು ನುಡಿವ

ನುಡಿಗೆ ಆತಂಕವು ! ಇದೇನು ಜ್ಞಾನ ಜ್ಯೋತಿಯ ಮಾಯಾ ಪವನ ಪಟುತರವು ! ಇದೇನು ಕಪಿಲಸಿದ್ಧ ಮಲ್ಲಿಕಾರ್ಜುನ ಮಾಡಿ ತಂದಿಟ್ಟ ಭೋಗದ ಉಗುಮಿಗೆಯು !

ಕಾಯ ತಾನು ನುಡಿಯುವ ನುಡಿಯಿಂದಲೇ, ಕಾಯಕ. ತನಗೆ ಆತಂಕವನ್ನು ತಂದುಕೊಳ್ಳುತ್ತದೆ. ಕಾಯ ನುಡಿದ ನುಡಿಯನ್ನು, ಕೇಳುವ ಕಾಯವೆ ತಿಳಿಯಲು ಸಾಧ್ಯವಾಗದಿದ್ದರೆ, ಅಂತಹ ಕಾಯವನ್ನು ಕಾಯವೆನ್ನಲು ಸಾಧ್ಯವೆ ? ಕಾಯ ನುಡಿದ ನುಡಿಯಿಂದ ಕಾಯ ಮುಕ್ತನಾಗುವುದಾದರು ಹೇಗೆ ?

ಮರ್ಯಾದ ಪುರುಷ ಎನ್ನಿಸಿಕೊಂಡ ಶ್ರೀರಾಮನ ಕಾಯಕ್ಕೆ, ಮಡಿವಾಳ ನುಡಿದ ನುಡಿಯ ಕೇಳಲು ಸಾಧ್ಯವಾಗಲಿಲ್ಲ. ಶ್ರೀರಾಮ ಮಡಿವಾಳ ನುಡಿದ ನುಡಿಯ ಕೇಳಿ ಸೀತೆಯನ್ನು ಕಾಡಿಗೆ ಅಟ್ಟಿದ. ಶ್ರೀರಾಮನಿಗೂ ಆತಂಕ. ಯಾವ ನುಡಿಯನ್ನು ನುಡಿಯದ ಸೀತೆಗೂ ಆತಂಕ. ನುಡಿದ ನುಡಿಗೆ ಗಡಗಡನೆ ನಡುಗಿದ ಮಡಿವಾಳನಿಗೂ ಆತಂಕ ! ಈ ಮೂರು ಕಾಯಗಳ ಆತಂಕದಿಂದಾಗಿ ಇಡೀ ರಾಮ ರಾಜ್ಯದ ಕಾಯಗಳು ದುಃಖದಲ್ಲಿ ಮುಳುಗಿದವು. ಇದೇನು ಕಾಯದ ಮಾಯಾ ಪವನದ ಪಟುತರವು ! ಕಾಯದ ಜ್ಞಾನ ಜ್ಯೋತಿ ಬೆಳಗಿಂಗೆ ಬೆಳಗಾಗಿ ಬೆಳಗುತ್ತಿದ್ದರು, ಕಾಯಕ್ಕು ಕಾಯವನ್ನು ಆವರಿಸಿದ ಮನಕ್ಕೂ ಮಾಯೆಯೆಂಬ ಕತ್ತಲು ಮುಸುಕಿದೆ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು ಮಾಡಿ ತಂದಿಟ್ಟ ಭೋಗದ ಉಗುಮಿಗೆಯು ಮಾಯೆಯ ಆಟವನು ಕಾಯದಲ್ಲಿರುವ ಮಲ್ಲಯ್ಯನೇ ಕಳೆಯಬೇಕು. ಕಾಯಕ್ಕೆ ಮುಕ್ತಿಯ ತೊಡಕು ಹಾಕಿ ಮಾಯೆಯ ಸೆರಗು ಹೊದಿಸಿದ್ದಾನೆ.

## ಕಾಂಡ - 1 ಮುಕ್ತಾಯ

## ಕಾಂಡ - 2

## ಷಟ್‌ಸ್ಥಲ ವಚನಗಳು

**1163**

**ಹೃದಯಕಮಲದಲ್ಲಿ ವಾಸವಾಗಿರುವಾತ ಒಬ್ಬನು.**
**ಮನದ ಕೊನೆಯಲ್ಲಿ ಇರುವಾತನೊಬ್ಬನು.**
**ಚಿದಾಕಾಶದಲ್ಲಿರುವಾತನೊಬ್ಬನು.**
**ಇವರೆಲ್ಲರಲ್ಲಿ ಇರುವಾತನೊಬ್ಬನು.**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನು.**

ಇಡೀ ಪ್ರಪಂಚದಲ್ಲಿ ಕಾಣುವ ದೇಹಗಳೆಲ್ಲ ಹೆಣ್ಣು; ಅದರಲ್ಲಿ ವಾಸಮಾಡಿರುವಾತ ಮಾತ್ರ ಗಂಡು. ಆತ ಒಬ್ಬನೆ. ದೇಹದಲ್ಲಿ ಮನವನ್ನು ಸೃಷ್ಟಿಮಾಡಿ; ಆ ಮನದ ಕೊನೆಯಲ್ಲಿ ವಾಸಮಾಡಿದ್ದಾನೆ. ಚಿದಾಕಾಶದಲ್ಲಿ ಇರುವಾತನು ಒಬ್ಬನೇ. ಸಕಲ ದೇಹಗಳಲ್ಲಿ ಇರುವಾತ ಕೂಡಾ ಒಬ್ಬನೆ. ದೇಹದಲ್ಲಿರುವ ಮನವೆಂಬ ಹೆಣ್ಣು ದೇಹದಲ್ಲಿಯೇ ವಾಸಮಾಡಿದ ಪರಮ ಪುರುಷನನ್ನು ಕಂಡುಕೊಳ್ಳಬೇಕು. ತಾನು ಕಂಡುಕೊಂಡ ಪರಮ ಪುರುಷನನ್ನು ನಿತ್ಯವೂ ಆರಾಧಿಸಿ, ಆತನನ್ನೇ ಗಂಡನನ್ನಾಗಿಸಿಕೊಂಡು ತಾನು ಆತನಿಗೆ ಸತಿಯಾಗಬೇಕು.

ಆಗ ಮನಕ್ಕೆ ತನುವಿನಲ್ಲಿ ತನ್ಮಯವಾದ ಪರಮಾತ್ಮನನ್ನು ಕಂಡು, ಸಕಲ ತನುಗಳ ಹೃದಯ ಕಮಲದಲ್ಲಿ ವಾಸವಾಗಿರುವ ಪರಮಾತ್ಮನು ಒಬ್ಬನೆಂದು ಹಾಡಲು ಬರುತ್ತದೆ. ಸಕಲ ಮನದ ಕೊನೆಯಲ್ಲಿ ಇರುವಾತ ಕೂಡಾ ಒಬ್ಬನೆ ಎಂದು ಖಚಿತವಾಗಿ ನುಡಿಯಲು ಬರುತ್ತದೆ. ಸತ್-ಚಿತ್-ಆನಂದಮಯನು ಕೂಡಾ ಆತನೇ ಆಗಿದ್ದಾನೆ. ಆತ ಬೇರಾರೂ ಅಲ್ಲ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ಆಗಿದ್ದಾನೆ ಎಂದು ಸಿದ್ಧರಾಮ ಶಿವಯೋಗಿಗಳು ಖಚಿತವಾಗಿ ಹೇಳಿದ್ದಾರೆ.

ಮನವೇ ಸತಿಯಾಗಿ ಹೃದಯಕಮಲದಲ್ಲಿರುವ ಪರಮ ಪುರುಷನನ್ನು ಹೇಗೆ ಒಲಿಸಿಕೊಳ್ಳಬೇಕೆಂಬುದನ್ನು ಬಸವಣ್ಣನವರು ಬಹಳ ಸುಂದರವಾಗಿ ಚಿತ್ರಿಸಿದ್ದಾರೆ. ''ಸಂಸಾರವೆಂಬ ಶ್ವಾನವನು ಅಟ್ಟಿ, ಮೀಸಲ ಬೀಸರವ ಮಾಡದಿರಯ್ಯಾ , ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯಾ . ನೀವಲ್ಲದೆ ಮತ್ತೇನನೂ ಅರಿಯೆನು. ಕನ್ಯೆಯಲ್ಲಿ ಕೈವಿಡಿದೆನು, ನಿಮ್ಮಲ್ಲಿ ನೆರೆದೆನು.ಮನ್ನಿಸು ಕಂಡಾ ಮಹಾಲಿಂಗವೆ. ಸತಿಯಾನು, ಪತಿ ನೀನಯ್ಯಾ . ಮನೆಯೊಡೆಯ ಮನೆಯ ಕಾಯ್ದಿಪ್ಪ ಗಂಡನು. ನಿಮಗೊಲಿದ ಮನವನು ಅನ್ಯಕ್ಕೆ ಹರಿಸಿದಡೆ ನಿಮ್ಮ ಅಭಿಮಾನ ಹಾನಿ, ಕೂಡಲಸಂಗಮದೇವಾ.''

ಅರಿವು ಎಂದರೆ ಸಾಮಾನ್ಯವಲ್ಲ. ಮನಕ್ಕೆ ಪಾಠಮಾಡುವ ಗುರುವು ! ಹೀಗಾಗಿ ಶರಣರು ಮನವನ್ನು ಸತಿಯನ್ನಾಗಿಸಿದರು. ಅರಿವನ್ನು ಪತಿಯನ್ನಾಗಿಸಿದರು. ಶರಣ ಸತಿ; ಲಿಂಗ ಪತಿ ಎಂಬ ಸೂತ್ರವನ್ನು ಘೋಷಣೆ ಮಾಡಿದರು. ಈ ಸೂತ್ರ ಶರಣರನ್ನು ಆರಾಧಿಸುವ ಸಕಲರ ಬಾಯಿಯಲ್ಲಿಯೂ ಮಾತಾಗಿ ಉಳಿದಿದೆ; ಜೀರ್ಣವಾಗುತ್ತಿಲ್ಲ. ಜೀರ್ಣವಾಗದ ಎಷ್ಟೋ ಮಾತುಗಳು ಮನ ಮತ್ತು ಬಾಯಿಗೆ ಬಲ ನೀಡುತ್ತವೆ; ಆದರೆ ಕಾಯವನ್ನು ದುರ್ಬಲಗೊಳಿಸುತ್ತವೆ.

ಮನ, ತಾನು ಅರಿವಿಗೆ ಸತಿಯಾಗಲು ನಿರ್ಧಾರ ಮಾಡಬೇಕು. ಆ ಅರಿವನ್ನೇ ಗಂಡನನ್ನಾಗಿಸಿಕೊಂಡು ಸತಿ ಸ್ವತಃ ತನ್ನ ಪತಿಯೊಂದಿಗೆ ಸ್ವಗತದ ಮಾತನಾಡಬೇಕು. ಸತಿ-ಪತಿಗಳೊಂದಾದ ಕಾಯವೇ ಕೈಲಾಸ.

ಮನದ ಕೊನೆಯಲ್ಲಿ, ಹೃದಯಕಮಲದಲ್ಲಿ, ಚಿದಾಕಾಶಾದಲ್ಲಿ ಇರುವಾತನು ಒಬ್ಬನೆ ! ಸಕಲ ಹೃದಯದಲ್ಲಿರುವಾತನು ಒಬ್ಬನೆ !

**1164**

**ಸಿದ್ಧ ಸಿದ್ಧರುಗಳೆಲ್ಲ ರಸವಾದವ ಕಲಿತು ಬಂಧನಕ್ಕೆ ಗುರಿಯಾದರು.**
**ಅಮೃತವ ಸೇವಿಸಿದ ಸುರರೆಲ್ಲ ಪ್ರಳಯಕ್ಕೆ ಗುರಿಯಾದರು.**
**ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನ ಅರಿದವರೆಲ್ಲ**
**ಬಯಲಿಗೆ ಬಯಲಾದರು.**

ಇಡೀ ಪ್ರಪಂಚದಲ್ಲಿರುವ ಮನುಜರೆಲ್ಲ ಏನಾದರೂ ಸಾಧನೆ ಮಾಡಲೇಬೇಕೆಂಬ ಪಣ ತೊಟ್ಟಿದ್ದಾರೆ. ಮನುಷ್ಯನ ಹೊರೆತು ಯಾವ ಜೀವಿಯೂ ತನ್ನ ಸಾಧನೆಯನ್ನು ದಾಖಲಿಸುವುದಿಲ್ಲ.ಸಾಧನೆ ಎನ್ನುವದೇ ಬಂಧನ. ಯಾವ ಬಂಧನಕ್ಕೂ ಒಳಗಾಗದೆ ಸಹಜವಾಗಿರುವುದು ಎಷ್ಟೊಂದು ಜಟಿಲ !

ಸಿದ್ಧಾರ್ಥ ಮತ್ತು ವರ್ಧಮಾನ ತಮಗೆ ತಾವೆ ಹಾಕಿಕೊಂಡ ಬಂಧನದಿಂದ ತಾವೇ ಹೊರಬರಬೇಕಾದರೆ ಸಾಕಷ್ಟು ವರುಷಗಳೇ ಕಳೆದು ಹೋದವು. ಯಾವ ಬಂಧನವೂ ಇಲ್ಲದೆ ಬಯಲಿನಂತೆ ಸಹಜವಾಗಿ ಹೀಗಿರಬಹುದೆಂದು ಮನುಕುಲಕ್ಕೆ ಸಾರಿದರು. ಆದರೆ ಮನುಕುಲ ಕೇಳಬೇಕಲ್ಲ! ಬುದ್ಧನನ್ನು ಆರಾಧಿಸಿ ಬೌದ್ಧರಾಗಿರುವ ಮೂಲಕ ಬಂಧನವನ್ನು ಹೇರಿಕೊಂಡರು. ಮಹಾವೀರನನ್ನು ಆರಾಧಿಸುವ ಮೂಲಕ ಜೈನರಾಗಿ ತಮಗೆ ತಾವೇ ಬಂಧನವನ್ನು ಹೇರಿಕೊಂಡರು.

ಸಿದ್ಧಾರ್ಥ ಬುದ್ಧನಾಗುವುದು ಎಂದರೆ ಬಂಧನ ಕಳಚಿಕೊಂಡು ಸಹಜನಾಗುವುದು. ಯಾವ ಬಂಧನವೂ ಇಲ್ಲದ ಬುದ್ಧನೊಂದಿಗೆ ಸಿದ್ಧಾರ್ಥ ಬೆರೆತು ಒಂದಾಗುವುದು.

ಸಿದ್ಧಾರ್ಥನಿಗೆ ಸಾಮ್ರಾಟನಾಗಬೇಕೆಂಬ ಬಯಕೆಯಿತ್ತು.ಇಡೀ ರಾಷ್ಟ್ರ ಮತ್ತು ಆತನ ಹೆತ್ತವರಿಗೂ ಆಸೆಯಿತ್ತು .ಆದರೂ ಸಿದ್ಧಾರ್ಥ ತನಗೆತಾನೇ ಕಟ್ಟಿಹಾಕಿಕೊಂಡ ತನ್ನ ಬಂಧನವನ್ನು ಕಳಚಿಕೊಳ್ಳಲು ತಾನೇ ತನ್ನೊಂದಿಗೆ ಹೋರಾಟ ಮಾಡಿದ. ಅದೆಂತಹ ಹೋರಾಟ ! ತನ್ನ ವೈರಿಗಳನ್ನು ತಾನೇ ಸಂಹಾರ ಮಾಡಲು ನಲವತ್ತೆರಡು ವರುಷಗಳೇ ಬೇಕಾದವು ! ಸಿದ್ಧಾರ್ಥನಲ್ಲಿಯೇ ಸಂಗಮವಾದ ಬುದ್ಧನೊಂದಿಗೆ ಕೂಡಿಕೊಂಡ ಸಿದ್ಧಾರ್ಥ ಸಂಪೂರ್ಣವಾಗಿ ಕಳೆದುಹೋದ. ಕತ್ತಲು ಬೆಳಗುತ್ತಿರುವ ಬೆಳಕಿನಲ್ಲಿ ಕೂಡಿಕೊಂಡು ಬೆಳಕೇ ಆಯಿತು.ಕತ್ತಲು ತನಗೆತಾನೇ ಕಳೆದು ಹೋಯಿತು.

ನೋಡಿ ಬೌದ್ಧನಾಗುವುದೆಂದರೆ ಬಂಧನವಲ್ಲವೆ ? ಸಿದ್ಧಾರ್ಥ ಮಾತ್ರ ಬುದ್ಧನಾಗಲು ಸಾಧ್ಯ . ಅಂತೆಯೇ ತನಗೆ ತಾನು ತನ್ನ ತನುವಿಲ್ಲಿಯೇ ಇದ್ದ ಬುದ್ಧನ ಪರಿಚಯ ತನಗೆ ಆದ ಮೇಲೆಯೇ ತನ್ನ ತನುವಿನ ತನುಗುಣಗಳೆಲ್ಲಾ ಬತ್ತಿ ಹೋಗುತ್ತವೆಯೇ ಹೊರತು ಬುದ್ಧನನ್ನು ಆರಾಧಿಸಿದರೆ ಬುದ್ಧ ಆಗುವುದಿಲ್ಲ; ಬೌದ್ಧನಾಗುತ್ತಾನೆ. ಇದು ಬಂಧನವನ್ನು ಹೇರಿಕೊಂಡು ಇನ್ನೂ

ಜಟಿಲವಾದಂತೆ.

ಸಿದ್ಧ ಸಿದ್ಧರುಗಳೆಲ್ಲ ರಸವಾದವ ಕಲಿತು ಬಂಧನಕ್ಕೆ ಗುರಿಯಾದರು. ಅಮೃತವ ಸೇವಿಸಿದ ಸುರರೆಲ್ಲಾ ಪ್ರಳಯಕ್ಕೆ ಗುರಿಯಾದರು. ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಅರಿದವರೆಲ್ಲ ಬಯಲಿಗೆ ಬಯಲಾದರು.

ಬುದ್ಧನನ್ನು ಅರಿತ ಸಿದ್ಧಾರ್ಥ ಬುದ್ಧನೇ ಆದ. ಬುದ್ಧ ಎಂದರೆ ಬಯಲು ! ಬಯಲಿಗೆ ಯಾವ ಬಂಧನಗಳೂ ಇಲ್ಲ ! ಬಯಲು ಗಾಳಿಗೆ ಜನ್ಮ ನೀಡಿ ಗಾಳಿಯನ್ನು ತನ್ನ ಗರ್ಭದಲ್ಲಿ ಇಟ್ಟುಕೊಂಡಿದೆ. ಅಗ್ನಿಗೆ ಜನ್ಮ ನೀಡಿ ಅಗ್ನಿಯನ್ನು ತನ್ನ ಗರ್ಭದಲ್ಲಿ ಇಟ್ಟುಕೊಂಡಿದೆ. ಜಲಕ್ಕೆ ಜನ್ಮ ನೀಡಿ ಜಲವನ್ನು ತನ್ನ ಗರ್ಭದಲ್ಲಿ ಇಟ್ಟುಕೊಂಡಿದೆ. ಆದರೂ ಇವೆಲ್ಲವುಗಳ ಬಂಧನ ಬಯಲಿಗೆ ಇಲ್ಲ. ಇವುಗಳ ಮೂಲಕ ಆಗುವ ಬಾಧೆಯೂ ಬಯಲಿಗೆ ಇಲ್ಲ.ಗರ್ಭಧರಿಸಿದ ತಾಯಿ ತಾನು ಹೊತ್ತುಕೊಂಡ ಮಕ್ಕಳಿಂದಾಗುವ ಬಾಧೆಯಿಂದ ಸಹಜಾನಂದವಾಗುವಂತೆ ಬಯಲು ಯಾವ ಬಂಧನವು ಇಲ್ಲದೆ ಸಹಜವಾಗಿಯೇ ಇದೆ. ಅಂತೆಯೇ

ಬುದ್ಧ ಸಕಲ ತನುಗಳಲ್ಲಿಯೂ ಇದ್ದು ತನು ಗುಣಗಳಿಂದ ಮುಕ್ತನಾಗಿದ್ದಾನೆ. ತನುವಿನಲ್ಲಿಯೇ ತನ್ಮಯವಾದ ಬುದ್ಧನನ್ನು ತನುವನ್ನು ಆವರಿಸಿದ ಮನವೆಂಬ ಸಿದ್ಧಾರ್ಥ ಕಂಡುಕೊಂಡು ಆ ಬುದ್ಧನೇ ತಾನಾದ ! ಹೀಗೆ ಸಕಲರೂ ತಮಗೆ ತಾವೇ ಬುದ್ಧರಾಗಬೇಕೆಂದು ಬೋಧಿಸಿದ.

ಬುದ್ಧನಿಂದಲೇ ಇಡೀ ಬ್ರಹ್ಮಾಂಡ ರಚನೆಯಾಗಿದೆ. ಬ್ರಹ್ಮಾಂಡಕ್ಕೆ ಜನ್ಮ ನೀಡಿದ ಬುದ್ಧ ತನುವಿನಲ್ಲಿ ತನ್ಮಯವಾಗಿ ತನುವನ್ನು ಆವರಿಸಿದ ಮನಕ್ಕೆ ಸದಾ ಪಾಠಮಾಡುತ್ತಿದ್ದರೂ ಆತನ ಪಾಠವನ್ನು ಮನ ಕೇಳುತ್ತಿಲ್ಲ. ಏಕೆಂದರೆ ಮನ ತನುವಿನ ಸಂಗ ಮಾಡಿದೆ. ತನುವಿನಲ್ಲಿಯೇ ತನ್ಮಯವಾದ ಬುದ್ಧನ ಸಂಗ ಮಾಡಲು ಮನಕ್ಕೆ ಸಾಧ್ಯವಾಗುತ್ತಿಲ್ಲ. ಹೀಗಾಗಿ ಮನ ಸಿದ್ಧನಾಗಿ ರಸ ವಿದ್ಯೆಯನ್ನು ಕಲಿತು ವಿಜ್ಞಾನಿಯಾಗಿದೆ. ಸುಳ್ಳು ಸೃಷ್ಟಿಯ ಕ್ರಿಯೆಯಲ್ಲಿ ತೊಡಗಿದೆ. ಸ್ವತಃ ಅಮೃತಾತ್ಮನೇ ತಾನಾಗಿದ್ದರೂ ಅಮೃತ ಸೇವಿಸಿ ಅಮರನಾಗಲು ಹೊರಟಿದೆ. ತನಗೆ ತಾನೇ ಕಲಿತ ವಿದ್ಯೆಯ ಬಂಧನದಿಂದ ತನ್ನನ್ನು ತಾನೇ ತನಗರಿಯದಂತೆ ಬಂಧಿಸಿಕೊಂಡಿದೆ.

**1165**

**ಕಲ್ಪವೃಕ್ಷ ಮರನೆನ್ನಬಹುದೆ ?**
**ಕಾಮಧೇನು ಪಶುವೆನ್ನಬಹುದೆ ?**
**ಪರುಷದ ಕಣಿ ಪಾಷಾಣವೆನ್ನಬಹುದೆ ?**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ನುಂಗಿದವರೆಲ್ಲ**
**ಮಾನವರೆನ್ನಬಹುದೆ ?**

ಬೇಡಿದ್ದನ್ನೆಲ್ಲ ಕೊಡುವ ಕಲ್ಪವೃಕ್ಷ, ಬೇಡಿದ್ದನ್ನೆಲ್ಲ ಕೊಡುವ ಕಾಮಧೇನು, ಮುಟ್ಟಿದ್ದನ್ನೆಲ್ಲ ಚಿನ್ನ ಮಾಡುವ ಪರುಷ ಈ ಬ್ರಹ್ಮಾಂಡದಲ್ಲಿ ಇಲ್ಲವೇ ಇಲ್ಲ. ಆದರೂ ಇವುಗಳ ಹೆಸರು, ಇವು ಮಾಡುವ ಕೆಲಸ ಬ್ರಹ್ಮಾಂಡದಲ್ಲಿ ಕಥೆಯಾಗಿ ಉಳಿದಿದೆ.

ಬುದ್ಧ ಬೋಧಿ ವೃಕ್ಷವೆಂದು ಕರೆದ. ಈ ದೇಶದ ಪುರಾನತರು ಕಲ್ಪವೃಕ್ಷ ಹಾಗೂ ಕಾಮಧೇನು ಎಂದು ಕರೆದರು. ಪರುಷ ಎಂದು ಕೂಡಾ ಕರೆದರು. ಈ ಭೂಮಿಯ ಮೇಲೆ ಬುದ್ಧ ಹೆಸರಿಸಿದ

ಬೋಧಿವೃಕ್ಷವೂ ಇಲ್ಲ; ಹಾಗೆಯೇ ಪುರಾತನರು ಹೆಸರಿಸಿದ ಕಾಮಧೇನು ಕಲ್ಪವೃಕ್ಷ ಹಾಗೂ ಪರುಷವೂ ಇಲ್ಲ.

ಈ ಬ್ರಹ್ಮಾಂಡದಲ್ಲಿರುವ ಸಕಲ ತನುಗಳಲ್ಲಿ ಬಚ್ಚಿಟ್ಟುಕೊಂಡಿರುವ ಬುದ್ಧನನ್ನು ಸಿದ್ಧಾರ್ಥ ಕಂಡುಹಿಡಿದ. ಆತನನ್ನು ಆತ ಬಚ್ಚಿಟ್ಟುಕೊಂಡಿರುವ ತನುವನ್ನು ಬೋಧಿವೃಕ್ಷವೆಂದು ಕರೆದ. ತನುವಿಗೆ ತನು ಬೋಧಿಸುವ ಅವಶ್ಯಕತೆಯಿಲ್ಲ. ತನುವಿನಲ್ಲಿ ಬಚ್ಚಿಟ್ಟುಕೊಂಡ ಬುದ್ಧ ತನುವಿಗೆ, ತನುವನ್ನು ಆವರಿಸಿದ ಮನಕ್ಕೆ ಸದಾ ಬೋಧೆ ಮಾಡುತ್ತಲೇ ಇರುತ್ತಾನೆ. ಈ ಸೂಕ್ಷ್ಮತೆಯನ್ನು ತನುವನ್ನು ಆವರಿಸಿದ ಮನ ಮತ್ತು ತನು, ತನು ಇರುವಾಗಲೇ ಒಮ್ಮೆ ಅರಿಯಲೇ ಬೇಕು. ಆಗ ಮಾತ್ರ ತನುವಿನಲ್ಲಿ ಬಚ್ಚಿಟ್ಟುಕೊಂಡ ಬುದ್ಧನ ಮಾತನ್ನು ಮನ ಮತ್ತು ತನುವಿಗೆ ಕೇಳಲು ಬರುತ್ತದೆ. ಆತನ ಮಾತನ್ನು ಪಾಲಿಸಲು ಬರುತ್ತದೆ. ಅಂದಿನಿಂದ ತನು ಬೋಧಿವೃಕ್ಷವಾಗುತ್ತದೆ. ಬ್ರಹ್ಮಾಂಡದಲ್ಲಿರುವ ಸಕಲ ತನುಗಳನ್ನು ಬೋಧಿವೃಕ್ಷದಂತೆ ಕಾಣುತ್ತದೆ. ಇದು ಬುದ್ಧನನ್ನು ಕಂಡುಕೊಂಡ ತನುವಿಗೆ ಮಾತ್ರ ಸಾಧ್ಯವಾಗುತ್ತದೆ.

ಬೋಧಿವೃಕ್ಷವನ್ನು , ಕಲ್ಪವೃಕ್ಷವನ್ನು ಮರವೆನ್ನಲು ಬರುವುದಿಲ್ಲ. ಇವು ಬೇಡಿದ್ದನ್ನು ನೀಡುವ ಮಹಾವೃಕ್ಷಗಳು. ಇವುಗಳಿಗೆ ಸ್ವತಃ ಯಾವ ಬೇಡಿಕೆಯೂ ಇರುವುದಿಲ್ಲ, ಇಡೀ ಬ್ರಹ್ಮಾಂಡಕ್ಕೆ ಜನ್ಮ ನೀಡಿದ ಮರಕ್ಕೆ ಏನನ್ನು ಬೇಡಲು ಸಾಧ್ಯ; ಬ್ರಹ್ಮಾಂಡವೇ ತನ್ನದಿರುವಾಗ ! ಇಂತಹ ಮಹಾವೃಕ್ಷವನ್ನು ಮರವೆನ್ನಲು ಸಾಧ್ಯವೇ ? ಎಂದು ಪ್ರಶ್ನಿಸಿದ್ದಾರೆ ಸಿದ್ಧರಾಮಶಿವಯೋಗಿಗಳು.

ಕಾಮಧೇನು, ಪರುಷದ ಕಣಿ ಕೂಡಾ ಇಂತಹದ್ದೇ ಹೆಸರುಗಳಾಗಿವೆ. ತನುವಿನಲ್ಲಿರುವ ಅರಿವಿನ ಸಂಪತ್ತು ತನುವನ್ನು ಆವರಿಸಿದ ಮನಕ್ಕೆ ಗೊತ್ತಾದ ಮೇಲೆ ಮನ ಮತ್ತು ತನುವಿನ ಬೇಡುವ ಆಸೆ ಸಂಪೂರ್ಣವಾಗಿ ಹಿಂಗುತ್ತದೆ. ಮನ ಘನಮನವಾಗುತ್ತದೆ; ತನು ಕಾಮಧೇನು ಕಲ್ಪವೃಕ್ಷವಾಗುತ್ತದೆ.

ತನುವಿನಲ್ಲಿಯೇ ತನ್ಮಯವಾದ ಅರಿವಿನ ಸಂಪತ್ತು ತನು ಮತ್ತು ಮನಕ್ಕೆ ತಿಳಿಯದ್ದರಿಂದ ತನು ತನುವನ್ನು ಹೆಣ್ಣು ಗಂಡು ಎಂದು ನೋಡುತ್ತದೆ; ಶ್ರೀಮಂತ,ಬಡವ,ಭಿಕ್ಷುಕ,ದರಿದ್ರ,ಕಳ್ಳ ಭಷ್ಟಾಚಾರಿ,ಕೊಲೆಗಡುಕ ಎಂದು ವಿಭಾಗಿಸಿಕೊಂಡು ನೋಡುತ್ತದೆ. ತನುವೇ ತನುವಿನಲ್ಲಿ ಹೇರಿಕೊಂಡ ಅಜ್ಞಾನವನ್ನು ಹೊರಗಿನ ಜ್ಞಾನದಿಂದ ಕಳೆದುಕೊಳ್ಳಲು ಸಾಧ್ಯವಿಲ್ಲ. ತನುವಿನಲ್ಲಿಯೇ ಉಂಟಾದ ಅಜ್ಞಾನ ತನುವಿನಲ್ಲಿಯೇ ಬಚ್ಚಿಟ್ಟುಕೊಂಡ ಜ್ಞಾನದಿಂದ ಮಾತ್ರ ಹೋಗುತ್ತದೆ. ತನುವನ್ನು ಆವರಿಸಿದ ಮನದಿಂದಲೇ ತನುವಿನ ಜ್ಞಾನವನ್ನು ನುಂಗಬೇಕು. ಆಗ ಮನ ಮಹಾಮಾನವನಾಗುತ್ತದೆ. ಕಲ್ಪವೃಕ್ಷ ಕಾಮಧೇನುವಾಗುತ್ತದೆ, ಸ್ವತಃ ಪರುಷದ ಕಣಿಯಾಗುತ್ತದೆ, ಬುದ್ಧನಾಗುತ್ತದೆ; ಕಪಿಲಸಿದ್ಧಮಲ್ಲಿಕಾರ್ಜುನನೇ ತಾನಾಗುತ್ತದೆ.

**1166**

**ಕೆಲವರು ಲಿಂಗವ ಪೂಜಿಸಿ ಪಡೆದರು ಗತಿಯ;**
**ಕೆಲವರು ಲಿಂಗವ ಪೂಜಿಸಿ ಪಡೆದರು ಮತಿಯ;**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಪೂಜಿಸಿ,**
**ಪಡೆಯಲಿಲ್ಲ ಅವನ ಜ್ಯೋತಿಯ.**

ಮನಸ್ಸು ಅಂಗದ ಗೆಳೆತನ ಮಾಡಿ, ತನಗೆ ಬೇಕಾದುದನ್ನು ಪಡೆದುಕೊಳ್ಳುತ್ತದೆ. ತನಗೆ

ನಿಲುಕದ ವಸ್ತುವನ್ನು ಅಂಗದ ಮೇಲೆ ಧರಿಸಿದ ಲಿಂಗವನ್ನು ಪೂಜಿಸಿ, ಪೂಜಿಸಿದ ಫಲದಿಂದ ತನಗೆ ನಿಲುಕದ ಆ ಫಲ ಪದವಿಗಳನ್ನು ಪಡೆದುಕೊಳ್ಳುತ್ತದೆ. ಲೋಕದ ದೃಷ್ಟಿಯಿಂದ ಮನ ಸದ್ಗತಿಯನ್ನು ಹೊಂದುತ್ತದೆ. ಸದ್‌ಮತಿಯನ್ನೂ ಹೊಂದುತ್ತದೆ.

ಮನ ಅಂಗದ ಮೇಲೆ ಧರಿಸಿದ ಲಿಂಗವನ್ನು ಪೂಜಿಸಿ ಭ್ರಮೆಯಿಂದ ಗತಿಯನ್ನು ಹೊಂದುತ್ತದೆ; ಹಾಗೆಯೇ ಮತಿಯನ್ನು ಹೊಂದುತ್ತದೆ. ಹೀಗೆ ಲೋಕದ ಜನ ಹೊರಗಿನ ದೇವರನ್ನು ಆರಾಧಿಸಿ ಗತಿಮತಿಯನ್ನು ಹೊಂದುವ ತವಕದಲ್ಲಿ ಸದಾನಿರತವಾಗಿದೆ.

ಮನ ಅಂಗದೊಂದಿಗೆ ಧಾರಣೆ ಮಾಡಿಕೊಂಡ ಅರಿವಿನ ಲಿಂಗಯ್ಯನನ್ನೇ ಮರೆಯಿಸುತ್ತದೆ. ಅಂಗದಲ್ಲಿಯೇ ಸಂಗಮವಾದ ಅರಿವಿನ ಜ್ಯೋತಿ ಅಂಗವನ್ನು ಆವರಿಸಿದ ಮನಕ್ಕೆ ಕಾರಣ ನಿಮಿತ್ತ ಅದು ನೋಡಿದ ವಸ್ತುಗಳೆಲ್ಲಾ ಎರಡಾಗಿ ಕಾಣುತ್ತವೆ.

ದೇವರು ಎನ್ನುವ ವಸ್ತು ದೇವರಲ್ಲ.ಅದು ಕಲ್ಲು. ಕಲ್ಲು ಎನ್ನುವುದು ತನಗೆ ಗೊತ್ತಿತ್ತು . ಶಿಲ್ಪಿಗಳಿಂದ ಕಲ್ಲನ್ನು ಕಟೆಯಿಸಿ ದೇವರನ್ನಾಗಿಸಿ, ಅದನ್ನೇ ದೇವರೆಂದು ತಿಳಿದ ಮನ ಫಲ ಪದಗಳಿಗಾಗಿ ಅಂಗದೊಂದಿಗೆ ಆರಾಧಿಸುತ್ತದೆ. ಅಂಗದಲ್ಲಿಯೇ ಸಂಗಮವಾದ ದೇವರು ತಥಾಸ್ತು ಎನ್ನುತ್ತಾನೆ.

ಪೂಜಿಸಿದ ಫಲ ಮಾತ್ರ ತನುವಿಗೆ ದೊರೆಯುತ್ತದೆ. ಹೀಗೆ ತನ್ನ ಆಯುಷ್ಯ ಪರ್ಯಂತ ತಾನು ಮಾಡಿದ ದೇವರನ್ನು ತಾನೇ ಪೂಜಿಸಿ ಪೂಜಿಸಿ ಕಾಲಕಳೆಯುತ್ತದೆ. ತನುವಿನಲ್ಲಿಯೇ ತನ್ಮಯವಾದ ಅರಿವಿನ ಜ್ಯೋತಿಯನ್ನು ಒಮ್ಮೆ ನೋಡಿದರೆ ಸಾಕು ಮನ ಮತ್ತು ತನುವಿನ ಅನಂತ ಕಾಲದ ಅಜ್ಞಾನದ ಕತ್ತಲು ಕೂಡಲೇ ಕಳೆದು ಹೋಗುತ್ತದೆ. ಹೀಗೆ ಪಡೆದ ಮನವೇ ಘನಮನವಾಗುತ್ತದೆ.

**1167**

**ಲಿಂಗವ ಪೂಜಿಸಿದವರು ಹಲವರುಂಟು,**
**ಅಂಗವ ಪೂಜಿಸಿದವರು ಒಬ್ಬರೂ ಇಲ್ಲ;**
**ಕಾಮವ ತೊರೆದವರು ಹಲವರುಂಟು,**
**ನಿಃಕಾಮನಳಿದವರು ಒಬ್ಬರೂ ಇಲ್ಲ.**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ.**

ಅಂಗದಲ್ಲಿ ಅರಿವಿನ ದೇವರು ಇದ್ದಾನೆ. ಆ ದೇವರ ಮಾತು ಸದಾ ಕೇಳಿ ಆಚರಣೆಗೆ ತರುವ ಮನವೆಂಬ ಭಕ್ತನೂ ಅಂಗದಲ್ಲಿಯೇ ಇದ್ದಾನೆ. ಆದರೂ ಮನ ಅಂಗದ ಮೇಲೆ ಧರಿಸಿ, ಧರಿಸಿದ ಆ ಲಿಂಗವನ್ನು ಪೂಜಿಸುತ್ತದೆಯೇ ಹೊರತು ಅಂಗವನ್ನು ಪೂಜಿಸುವುದಿಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಪೂಜಿಸುವುದಿಲ್ಲ. ಹೀಗಿರುವ ಪ್ರತಿಯೊಂದು ಅಂಗವೂ ಅಪೂರ್ಣ ಅಂಗವೇ ಆಗಿದೆ.ಅಂಗ ಅಂಗದಲ್ಲಿಯೂ ಇರುವ ಅರಿವಿನ ಲಿಂಗಯ್ಯಾ ಇದು ತಪ್ಪಲ್ಲವೇ ?

ಒಮ್ಮೆ ಆಲೋಚನೆ ಮಾಡು ಎಂದು ಮನ ಮತ್ತು ಅಂಗಕ್ಕೆ ಬೋಧೆ ಮಾಡುತ್ತದೆ. ಹೀಗೆ ಬೋಧೆ ಮಾಡುವ ಅರಿವಿನ ಲಿಂಗಯ್ಯನ ಮಾತು ಕೇಳಿ, ಕಾಮವನ್ನು ಅಳಿದ ನಿಃಕಾಮಿ ಅರಿವಿನ ಲಿಂಗಯ್ಯನನ್ನು ಆತನಿದ್ದ ಅಂಗವನ್ನು ಪೂಜಿಸಿದ ಮನ ಒಂದೂ ಇಲ್ಲ ಎಂದು ಸಿದ್ಧರಾಮ

ಶಿವಯೋಗಿಗಳು ಮಮ್ಮಲ ಮರುಗಿದ್ದಾರೆ.

**1168**

**ಪರುಷ ಸೋಂಕಿದ ಬಳಿಕ ಕಾರ್ಬೊನ್ನದ ಕೇಡು ನೋಡಿರಯ್ಯಾ.**
**ಜ್ಯೋತಿ ಸೋಂಕಿದ ಬಳಿಕ ತಮಂಧದ ಕೇಡು ನೋಡಿರಯ್ಯಾ.**
**ಅಮೃತ ಸೋಂಕಿದ ಬಳಿಕ ರೋಗದ ಕೇಡು ನೋಡಿರಯ್ಯಾ .**
**ನಮ್ಮ ಕಪಿಲಸಿದ್ಧ ಮಲ್ಲನ ಸೋಂಕಿದ ಬಳಿಕ ,**
**ಭವದ ಕೇಡು ನೋಡಿರಯ್ಯಾ .**

ಪರುಷ ಮುಟ್ಟಿದ ಬಳಿಕ ಕಬ್ಬಿಣ ಚಿನ್ನವಾಗುತ್ತದೆ. ಜ್ಯೋತಿ ಮುಟ್ಟಿದ ಬಳಿಕ ಕತ್ತಲು ಬೆಳಕಾಗುತ್ತದೆ. ಅಮೃತ ಸೋಂಕಿದ ರೋಗಿ ಮೃತ್ಯುವನ್ನು ಕಳೆದುಕೊಂಡು ಅಮೃತಾತ್ಮನಾಗುತ್ತಾನೆ. ಕಪಿಲಸಿದ್ಧ ಮಲ್ಲಯ್ಯನ ಮುಟ್ಟಿದಾತನು ತನ್ನ ಜನನ ಮರಣಗಳ ಬಾಧೆಯನ್ನು ಕಳೆದುಕೊಳ್ಳುತ್ತಾನೆ.

ಪರುಷ ಎನ್ನುವ ವಸ್ತುವು ಇಲ್ಲ. ಇದ್ದರೂ ಅದು ಅನುಭಾವಿಗೆ ಮಾತ್ರ ಕಾಣುತ್ತದೆಯೇ ಹೊರತು ಅನ್ಯರಿಗೆ ಕಾಣುವುದಿಲ್ಲ. ಆದರೂ ಶರಣರು ಪರುಷ ಎನ್ನುವ ಶಬ್ದವನ್ನು ಬಳಕೆ ಮಾಡಿದ್ದಾರೆ. ಏಕೆಂದರೆ ಅವರಿಗೆ ಪರುಷ ಅನುಭವಕ್ಕೆ ಬಂದಿದೆ. ಹೀಗಾಗಿ ಆ ಪರುಷಕ್ಕೆ ಶರಣು ಹೋಗಿ ಶರಣಾಗತರಾಗಿದ್ದಾರೆ. ಶರಣ ಸತಿಯಾಗಿ ಆ ಪರುಷವನ್ನೇ ಪತಿಯನ್ನಾಗಿಸಿಕೊಂಡಿದ್ದಾರೆ.

ಪರುಷವೆಂದರೆ ಕಬ್ಬಿಣವನ್ನು ಚಿನ್ನ ಮಾಡುವ ವಸ್ತುವಲ್ಲ. ಕಬ್ಬಿಣದಂತೆ ತುಕ್ಕು ಹಿಡಿದು ನೊಂದು ಬೆಂದು ಒಮ್ಮೆ ತನ್ನ ಅಸ್ಥಿತ್ವವನ್ನೇ ಕಳೆದುಕೊಳ್ಳುವ ಕಾಯವನ್ನು ಕೈಲಾಸವಾಗಿಸುವ ಅನಂತ ಶಕ್ತಿ . ಈ ಶಕ್ತಿ ಕಾಯವಾಗಿ ಅಕಾಯವೆಂದು ಹೆಸರು ಪಡೆದು ಕಾಯದಲ್ಲಿಯೇ ಸಂಗಮವಾಗಿದೆ.

ಕಾಯವನ್ನು ಆವರಿಸಿದ ಮನ ಕಾಯವನ್ನು ಹಿಡಿದು ಕಾಯಕ್ಕೆ ಅಜ್ಞಾನದ ತುಕ್ಕು ಹಿಡಿಸಿ ಪರುಷವಿದ್ದ ಕಾಯವನ್ನು ಹಂತ ಹಂತವಾಗಿ ಕೊಲ್ಲುತ್ತದೆ. ಕಾಯ ಅಪ್ಪಟ ಅರಿವಿನ ಚಿನ್ನವಾಗಬೇಕೆಂದು ಬಯಸಿದರೆ ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಇದ್ದ ಪರುಷಮಣಿಯನ್ನು ಮುಟ್ಟಲೇಬೇಕು. ಅದಕ್ಕೆ ಶರಣು ಹೋಗಿ ಶರಣಾಗತನಾಗಲೇಬೇಕು. ಆಗ ಜ್ಯೋತಿ ಮುಟ್ಟಿದ ಕತ್ತಲು ಜ್ಯೋತಿಯೇ ಆಗುತ್ತದೆ. ಅಮೃತ ಸೋಂಕಿದ ರೋಗಿ ಮೃತ್ಯುಂಜಯನಾಗುತ್ತಾನೆ.

ಕಾಯದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯ ಸದಾ ಕಾಯಕ್ಕೂ ಕಾಯವನ್ನು ಆವರಿಸಿದ ಮನಕ್ಕೂ ಪಾಠಮಾಡುತ್ತಾನೆ. ಆದರೂ ಕಾಯ ಮತ್ತು ಮನ ಅರಿವಿನ ಮಲ್ಲಯ್ಯನ ಬೋಧೆಯನ್ನು ಆಲಿಸುತ್ತಿಲ್ಲ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ವಾಸ ಮಾಡಿದ ಅರಿವಿನ ಮಲ್ಲಯ್ಯನನ್ನು ಸೋಂಕಿದ ಕೂಡಲೇ ಮನ ಘನಮನವಾಗುತ್ತದೆ. ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನೇ ತಾನಾಗುತ್ತದೆ.

**1169**

**ಕ್ರಿಯಿಡಿದು ಆಚರಿಸಬೇಕಲ್ಲದೆ, ಅಕ್ರಿಯೊಡನಾಚರಿಸಲಾಗದು.**
**ಜ್ಞಾನವಿಡಿದು ನೋಡಬೇಕಲ್ಲದೆ, ದೃಷ್ಟಿವಿಡಿದು ನೋಡಬಾರದು.**
**ಲಿಂಗವಿಡಿದು ಪೂಜಿಸುವುದಲ್ಲದೆ, ಅಂಗವಿಡಿದು ಪೂಜಿಸಲಾಗದು.**

**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ.**

ಮನ ಕಾಯದೊಂದಿಗೆ ಸಂಗ ಮಾಡಿದರೆ ಕಾಯಕ್ಕೆ ಜ್ಞಾನಕ್ರಿಯೆಯಲ್ಲಿ ತೊಡಗುವುದಕ್ಕೆ ಸಾಧ್ಯವಾಗುವುದಿಲ್ಲ. ಅದು ಸದಾ ಅಜ್ಞಾನಕ್ರಿಯೆಯಲ್ಲಿ ತೊಡಗುತ್ತದೆ. ಆದರೂ ಕಾಯಕ್ಕೆ ವೇಷ ಧರಿಸಿ ಕ್ರಿಯೆಯಲ್ಲಿ ತೊಡಗಿದಂತೆ ಲೋಕದ ಕಣ್ಣಿಗೆ ಮಣ್ಣೆರಚುತ್ತದೆ.

ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಸಂಗವನ್ನು ಕಾಯವನ್ನು ಆವರಿಸಿದ ಮನ ಎಂದು ಮಾಡುತ್ತದೋ ಅಂದಿನಿಂದ ಕಾಯದ ಅಕ್ರಿಯೆ ನಿಂತು ಹೋಗುತ್ತದೆ. ಸರ್ವಾಂಗವೂ ಜ್ಞಾನಾಂಗವಾಗುತ್ತದೆ. ಏಕೆಂದರೆ ಮನ ಜ್ಞಾನದ ಸಂಗ ಮಾಡಿರುವುದರಿಂದಾಗಿ ಅಂಗ ಜ್ಞಾನಾಂಗವಾಗುತ್ತದೆ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ನಾಟ್ಯವಾಡುವ ಅಜ್ಞಾನ ತಂತಾನೆ ನೆಲಕ್ಕುರುಳಿ ಬೀಳುತ್ತದೆ. ಕಣ್ಣು ತನಗೆ ಕಾಣುವ ಸಕಲ ದೃಶ್ಯವನ್ನೂ ಜ್ಞಾನದಿಂದ ನೋಡುತ್ತದೆ. ಕೇಳುವ ಸಕಲ ಶಬ್ಧವನ್ನೂ ಜ್ಞಾನದಿಂದ ಕೇಳುತ್ತದೆ. ಮುಟ್ಟುವ ಸಕಲ ಸ್ಪರ್ಶವನ್ನೂ ಚರ್ಮ ಜ್ಞಾನದಿಂದ ಮುಟ್ಟುತ್ತದೆ.

ರುಚಿಸುವ ಸಕಲ ಪದಾರ್ಥವನ್ನೂ ನಾಲಿಗೆ ಜ್ಞಾನದಿಂದ ರುಚಿಸುತ್ತದೆ. ಮೂಸಿಸುವ ಸಕಲ ಗಂಧ ದುರ್ಗಂಧಗಳನ್ನೂ ಮೂಗು ಜ್ಞಾನದ ಪರಿಮಳದಿಂದ ಮೂಸಿಸುತ್ತದೆ.

ಮನ ಜ್ಞಾನದ ಪೂಜೆಯಲ್ಲಿ ತೊಡಗಿರುವುದರಿಂದಾಗಿ ಅಂಗದ ಮೂಲಕ ಪೂಜಿಸುವ ಸಕಲ ಪೂಜೆಗಳೂ ನಿಂತು ಹೋಗುತ್ತವೆ. ಏಕೆಂದರೆ ಮನವೆಂಬ ಭಕ್ತ ಜ್ಞಾನವೆಂಬ ಗುರುದೇವನಿಗೆ ಮಾತ್ರ ಭಕ್ತನಾಗಿದ್ದಾನೆ. ಗುರುದೇವನ ಪೂಜೆ ಸದಾ ಅಂಗದಲ್ಲಿ ನಡೆದಿರುವುದರಿಂದಾಗಿ ಅಂಗವಿಡಿದು ಪೂಜಿಸಲು ಬರುವುದಿಲ್ಲ. ಏಕೆಂದರೆ ಅಂಗ ಮನವೆಂಬ ಭಕ್ತನಿಗೆ ಮತ್ತು ಅರಿವೆಂಬ ಗುರುದೇವನಿಗೆ ಆಲಯವಾಗಿದೆ.

**1170**

**ಜ್ಞಾನವಿಡಿದಾಚರಿಸಿದರಲ್ಲದೆ, ಕ್ರಿಯೆವಿಡಿದಾಚರಿಸಲಿಲ್ಲವು.**
**ಕ್ರಿಯೆವಿಡಿದಾಚರಿಸಿದರಲ್ಲದೆ, ಜ್ಞಾನವಿಡಿದಾಚರಿಸಲಿಲ್ಲವು.**
**ರೂಪುವಿಡಿದು ನಿರೀಕ್ಷಿಸುವರಲ್ಲದೆ, ಅರೂಪವಿಡಿದು ನಿರೀಕ್ಷಿಸರು.**
**ಜ್ಞಾನಕ್ರಿಯೆವಿಡಿದಾಚರಿಸಿದರು ನಮ್ಮ**
**ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ, ಚೆನ್ನಬಸವಣ್ಣನವರು.**

ತನುವಿನಲ್ಲಿ ತನ್ಮಯವಾದ ಜ್ಞಾನ ಹೇಳಿದಂತೆ ಮನ ಕೇಳಿದರೆ ಅದು ಕೂಡಲೇ ಕ್ರಿಯೆಯಲ್ಲಿ ತೊಡಗುತ್ತದೆ. ಪುಸ್ತಕ ಹಾಗು ಗುರುಹಿರಿಯರು ಹೇಳಿದ ಧರ್ಮದ ಉಪದೇಶವನ್ನು ಮನ ತನುವಿನೊಂದಿಗೆ ಕೇಳಿದರೆ ಅದು ಮಾತನಾಡುತ್ತದೆ ಹೊರತು ಪಾಲಿಸಲು ಸಾಧ್ಯವಾಗುವುದಿಲ್ಲ. ಬದಲಾಗಿ ತನುವಿಗೆ ಧರ್ಮದ ವೇಷ ಹಾಕಿ ನಮಾಜ ಮಾಡುತ್ತದೆ. ವಾರಕ್ಕೊಮ್ಮೆ ಚರ್ಚ್‌ಗೆ ಹೋಗಿ ಪ್ರಾರ್ಥಿಸುತ್ತದೆ. ದೇವಾಲಯಗಳಿಗೆ ಹೋಗಿ ತೋರಿಕೆಯ ಭಕ್ತಿಯೊಂದಿಗೆ ಕೈಮುಗಿಯುತ್ತದೆ.ಈ ವೇಷ ತನುವಿನಲ್ಲಿಯೇ ತನ್ಮಯವಾದ ಜ್ಞಾನಕ್ಕೆ ಒಪ್ಪಿಗೆಯಾಗುವುದಿಲ್ಲ.

ಹೀಗಾಗಿ ಶರಣರು ಜ್ಞಾನ ಹಿಡಿದು ಅಗೋಚರ ಆಚರಣೆಯಲ್ಲಿ ತೊಡಗಿದರು. ಲೋಕದ

ಕ್ರಿಯೆ ಹಿಡಿದು ಆಚರಿಸಲಿಲ್ಲ. ಅಂತರಾಳದ ಅರಿವೆಂಬ ಗುರುದೇವನ ಮಾತು ಪಾಲಿಸಿದರು. ಆತ ಹೇಳಿದ ಕ್ರಿಯೆ ಹಿಡಿದು ಆಚರಿಸಿದರು. ಲೋಕದ ಜ್ಞಾನ ಹಿಡಿದು ಆಚರಿಸಲಿಲ್ಲ.

ಸಕಲ ತನುಗಳಲ್ಲಿ ಅರಿವೆಂಬ ಗುರುದೇವನು ತನ್ಮಯವಾಗಿದ್ದಾನೆ. ಗುರುದೇವನು ಇಲ್ಲದ ತನುಗಳು ಲೋಕದಲ್ಲಿ ಇಲ್ಲವೇ ಇಲ್ಲ. ಆದರೆ ಲೋಕ ರೂಪ ಹಿಡಿದು ತನುವನ್ನು ನೋಡುತ್ತದೆ. ಆಗ ಕಾಮ,ಕ್ರೋಧ,ಲೋಭ,ಮೋಹ,ಮದ,ಮತ್ಸರಕ್ಕೆ ಒಳಗಾಗುತ್ತದೆ. ರೂಪದಲ್ಲಿ ಗುರುದೇವ ನಿರೂಪವಾಗಿ ತನ್ಮಯವಾಗಿದ್ದಾನೆ. ರೂಪ ನಿರೂಪದ ಸ್ವತ್ತು. ಅದು ಗುರುದೇವನು ವಾಸ ಮಾಡಿದ ಆಲಯ ! ಇಂತಹ ರೂಪವನ್ನು ಹಿಡಿದು ಶರಣರು ಮಾತ್ರ ನೋಡಬಲ್ಲರು. ಲೋಕ ನೋಡುವಂತೆ ನೋಡಲು ಶರಣರಿಗೆ ಸಾಧ್ಯವಾಗುವುದಿಲ್ಲ.

ಇಂತಹ ಅಪ್ಪಟ ಜ್ಞಾನ ಕ್ರಿಯೆಯನ್ನು ಹಿಡಿದು ಅಗೋಚರ ಆಚಾರದಲ್ಲಿ ತೊಡಗಿದವರು ನಮ್ಮ ಚೆನ್ನಬಸವಣ್ಣನವರು ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

**1171**

**ಸಮದೃಷ್ಟಿಯಾಗದವನ ಭಕ್ತನೆಂತೆಂಬೆ ?**
**ವಿಷಯಂಗಳಳಿಯದವನ ಭಕ್ತನೆಂತೆಂಬೆ ?**
**ಶಿವಕರುಣವಿಡಿಯದನ್ನಕ್ಕ ಪ್ರಸಾದಿಯೆಂತೆಂಬೆ ?**
**ಅಂಗೇಂದ್ರಿಯಂಗಳಳಿಯದವನ ಪ್ರಾಣಲಿಂಗಿ ಎಂತೆಂಬೆ ?**
**ಸಂಕಲ್ಪ ಹರಿಯದನ್ನಕ ಶರಣೆಂತೆಂಬೆ ?**
**ನಮ್ಮ ಕಪಿಲಸಿದ್ಧಮಲ್ಲೇಶನ ಕೂಟವನರಿಯದವನ ಐಕ್ಯನೆಂತೆಂಬೆ ?**

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನೊಂದಿಗೆ ಕೂಡುವ ಕೂಟವನು ಅರಿಯದಿದ್ದಕ್ಕಾಗಿ ಅಂಗ ತನ್ನ ಸಮದೃಷ್ಟಿಯನ್ನು ಸಮತತ್ವವನ್ನು ಕಳೆದುಕೊಂಡಿದೆ.

ವಿಷಯಾದಿಗಳಿಂದ ಅಂಗ ಘಾಸಿಗೊಳ್ಳುತ್ತಾ ಕ್ಷಣಕ್ಷಣಕ್ಕೂ ಪರಿತಪಿಸುತ್ತದೆ. ವ್ಯಾಕುಲಕ್ಕೊಳಗಾಗುತ್ತದೆ. ಅಂಗದಲ್ಲಿರುವ ಸರ್ವೇಂದ್ರಿಯಗಳು ನೆರವಾಗಬೇಕಾದ ಅಂಗವನ್ನೇ ಮುಗ್ಗಲುಗೊಳಿಸುತ್ತಲಿವೆ. ಅಂಗವನ್ನು ಆವರಿಸಿದ ಮನದಿಂದಾಗಿ ಅಂಗ ಸಂಕಲ್ಪ ವಿಕಲ್ಪಗಳ ಅಜ್ಞಾನಕ್ಕೆ ತುತ್ತಾಗಿದೆ. ಕೈಲಾಸವೇ ಆಗಬೇಕಾದ ಕಾಯ ತಿಪ್ಪೆಯ ಗುಂಡಿಯಾಗಿದೆ. ವೇಷ ಧರಿಸಿ ಗುರುವಾಗಿರಬಹುದು, ವೇಷ ಧರಿಸಿ ಶಿಷ್ಯನಾಗಿರಬಹುದು, ಪಾದ್ರಿ,ಮೌಲ್ವಿಯಾಗಿರಬಹುದು, ಇದೆಲ್ಲ ಮನ ತೋರಿಕೆಗಾಗಿ ಅಂಗಕ್ಕೆ ಹಾಕಿದ ವೇಷ. ತನುವನ್ನು ಹುಲ್ಲುಗಾವಲನ್ನಾಗಿಸಿಕೊಂಡು ಪಶುವಿನಂತೆ ಮೇಯುತ್ತದೆ. ಹೀಗಾಗಿ ಸಮದೃಷ್ಟಿ ಅಂಗದಲ್ಲಿ ಕಳೆದು ಹೋಗಿದೆ. ಸಂಕಲ್ಪ ವಿಕಲ್ಪ ಅಜ್ಞಾನ ಗಟ್ಟಿಯಾಗಿ ಬೇರೂರಿದೆ. ಜ್ಞಾನೇಂದ್ರಿಯಗಳೇ ಆಗಬೇಕಾದ ಸಕಲ ಇಂದ್ರಿಯಗಳು ವಿಷಯಾಸಕ್ತಿಗೆ ತುತ್ತಾಗಿವೆ.

ಮನದಿಂದಾಗಿ ಅಜ್ಞಾನಕ್ಕೆ ತುತ್ತಾದ ಅಂಗವನ್ನು ಯಾವ ಅಂಗವೂ ಉದ್ಧರಿಸಲು ಸಾಧ್ಯವಿಲ್ಲ. ಉದ್ಧರಿಸುವುದಕ್ಕಾಗಿ ವೇಷ ಹಾಕಿದ ಅಂಗಗಳೆಲ್ಲಾ ಅಜ್ಞಾನದ ಅಂಗಗಳೇ ಆಗಿವೆ. ಏಕೆಂದರೆ ಮನದಿಂದಾಗಿ ಅಂಗ ಗುರುವಾಗಿದೆ; ಮನದಿಂದಾಗಿಯೇ ಅಂಗ ಶಿಷ್ಯನಾಗಿದೆ. ಅಂಗದಲ್ಲಿಯೇ ಸಮದೃಷ್ಟಿಯ ಸತ್ಯ ಸಂಗಮವಾಗಿದೆ ಎಂದು ಗುರುಶಿಷ್ಯರಿಬ್ಬರಿಗೂ ತಿಳಿಯುತ್ತಿಲ್ಲ. ಹೀಗಾಗಿ

ಗುರುಶಿಷ್ಯರಿಬ್ಬರ ಅಂಗಗಳೂ ಮನಕ್ಕೆ ಹುಲ್ಲುಗಾವಲಾಗಿವೆ.

ಮತ್ತೊಂದು ಅಂಗವನ್ನು ಅಜ್ಞಾನದಿಂದ ಪಾರುಮಾಡಲು ಹಾಕಿದ ಗುರುವೇಷದ ಅಂಗವೂ ಅಜ್ಞಾನದಿಂದ ಪಾರಾಗಲೇಬೇಕಾಗಿದೆ. ಶಿಷ್ಯನ ವೇಷ ಧರಿಸಿದ ಅಂಗವೂ ಅಜ್ಞಾನದಿಂದ ಪಾರಾಗಲೇಬೇಕಾಗಿದೆ.ಅರಿವೆಂಬ ಸಮದೃಷ್ಟಿಯುಳ್ಳ ಗುರುದೇವನು ಅಂಗದಲ್ಲಿಯೇ ಸಂಗಮವಾಗಿದ್ದಾನೆ. ಅಂಗವನ್ನು ಆವರಿಸಿದ ಮನ ಸಮದೃಷ್ಟಿಯುಳ್ಳ ಗುರುದೇವನಿಗೆ ಭಕ್ತನಾಗಬೇಕು. ಹೀಗೆ ಭಕ್ತಿ ಮಾಡುವ ಭಕ್ತನಿಗೆ ವೇಷದ ಅವಶ್ಯಕತೆಯಿಲ್ಲ. ಅಂಗದಲ್ಲಿಯೇ ಸಂಗಮವಾದ ಸಮದೃಷ್ಟಿಯುಳ್ಳ ಗುರುದೇವನನ್ನು ಕಂಡುಕೊಂಡ ಗುರುದೇವನಿಗೆ ಕೂಡಾ ವೇಷದ ಅವ್ಯಶಕತೆಯಿಲ್ಲ.

ಮನ ಘನಮನವಾಗಿ ಭಕ್ತನಾಗಿದೆ. ಸಮದೃಷ್ಟಿಯನ್ನು ಕಂಡುಕೊಂಡಿದೆ. ವಿಷಯಂಗಳೆಲ್ಲ ಕಳಚಿ ನಿರ್ವಿಷಯಿಯಾಗಿದೆ. ಅರಿವೆಂಬ ಗುರುದೇವನ ಪ್ರಸಾದಕ್ಕೆ ಇಂದ್ರಿಯಗಳ ಅಜ್ಞಾನ ತುತ್ತಾಗಿ ಜ್ಞಾನೇಂದ್ರಿಯಗಳೇ ಆಗಿವೆ. ಸಂಕಲ್ಪ ವಿಕಲ್ಪಗಳ ಅಜ್ಞಾನ ಕೊಡವಿಕೊಂಡು ಮನ ಅರಿವಿನ ಮಲ್ಲಯ್ಯನ ಕೂಟದಲ್ಲಿ ಐಕ್ಯವಾಗಿ ಆ ಮಲ್ಲಯ್ಯನೇ ತಾನಾಗಿದೆ.

**1172**

**ಭಕ್ತನಾದ ಬಳಿಕ ಜಂಗಮದ ಗುಣವನರಸಲೇಕೋ ?**
**ಮಹೇಶನಾದ ಬಳಿಕ ವಿಷಯಕ್ಕೆಳಸುವುದದೇಕೋ?**
**ಪ್ರಸಾದಿಯಾದ ಬಳಿಕ ಕಂಡುದಕ್ಕೆ ಕೈದುಡುಕುವುದೇಕೋ ?**
**ಪ್ರಾಣಲಿಂಗಿಯಾದ ಬಳಿಕ ಪ್ರಪಂಚದ ಹಂಗದೇಕೋ ?**
**ಶರಣನಾದ ಬಳಿಕ ಮೋಕ್ಷದ ಹಂಗೇಕೋ ?**
**ಐಕ್ಯನಾದ ಬಳಿಕ ಕಪಿಲಸಿದ್ಧಮಲ್ಲಯ್ಯನ**
**ನಾಮಸ್ಮರಣೆಯದೇಕೋ ?**

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಭಕ್ತನಾದ ಬಳಿಕ ಸಕಲ ತನುಗಳೂ ಜಂಗಮವಾಗಿ ಕಾಣುತ್ತವೆ. ಯಾವ ತನು ಹೇಗಿದ್ದರೇನು ? ತನುವಿನಲ್ಲಿತನ್ಮಯವಾದ ಜಂಗಮ ಮಾತ್ರ ಕಾಣುತ್ತಾನೆ. ಆ ಜಂಗಮನಿಗೆ ಭಕ್ತ ಶರಣು ಶರಣಾರ್ಥಿ ಎಂದು ಶರಣು ಹೋಗುತ್ತಾನೆ. ತನು ಗುಣಾದಿಗಳು ಭಕ್ತನಿಗೆ ಕಾಣುವುದೇ ಇಲ್ಲ.

ಅಂಗದಲ್ಲಿ ಸಂಗಮವಾದ ಅರಿವೇ ಗುರು. ಆ ಗುರುದೇವನೇ ಮಹಾದೇವ. ಆ ಮಹಾದೇವನೇ ಸದಾಶಿವ. ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮನೆಂದು ಅಂಗವನ್ನು ಆವರಿಸಿದ ಮನ ತಿಳಿದು ಆ ಬ್ರಹ್ಮನೇ ತಾನಾದ ಬಳಿಕ ಅಂಗ ವಿಷಯಕ್ಕೆ ಎಳೆಸುವುದಿಲ್ಲ.

ಭಕ್ತ ಮಹೇಶ ತಾನೇ ಆದ ಬಳಿಕ ಸಕಲ ಪದಾರ್ಥಗಳಲ್ಲಿರುವ ಸತ್ಯ ಗೋಚರಕ್ಕೆ ಬರುತ್ತವೆ. ನೋಡಿದ ಪದಾರ್ಥ ಕಣ್ಣಿಗೆ ಪ್ರಸಾದವಾಗಿ ಬೇಡುವ ಗುಣ ಉದುರಿ ಬೀಳುತ್ತದೆ. ಕೇಳುವ ಶಬ್ದಕಿವಿಗೆ ಪ್ರಸಾದವಾಗುತ್ತದೆ. ಮುಟ್ಟುವ ಪದಾರ್ಥ ಚರ್ಮಕ್ಕೆ ಪ್ರಸಾದವಾಗುತ್ತದೆ. ರುಚಿಸುವ ಪದಾರ್ಥ ನಾಲಿಗೆಗೆ ಪ್ರಸಾದವಾಗುತ್ತದೆ. ಮೂಸಿಸುವ ಗಂಧ ಮೂಗಿಗೆ ಪ್ರಸಾದವಾಗುತ್ತದೆ. ಹೀಗಾಗಿ ಕಂಡುದಕ್ಕೆ ಕೈ ದುಡುಕುವುದಿಲ್ಲ. ಭಕ್ತ ಮಹೇಶ ಪ್ರಸಾದಿ ತಾನೇ ಆದ ಬಳಿಕ ಪ್ರಾಣಕ್ಕೆ ಪ್ರಾಣ ತಾನೇ ಆಗಿ ಪ್ರಾಣಲಿಂಗಿಯಾಗುತ್ತಾನೆ. ಹೀಗಾಗಿ ಪ್ರಪಂಚದ ಆಗುಹೋಗುಗಳೂ ತನಗೆ ಬೇಕಾಗುವುದಿಲ್ಲ.

ಕಾಯದಲ್ಲಿ ಸಂಗಮವಾದ ಅರಿವೇ ಗುರುವಾಗಿ ಗುರುದೇವನ ಮನ ಶರಣು ಹೋಗಿ ಶರಣನೇ ತಾನಾದ ಬಳಿಕ ತನಗೆ ಯಾವ ಬಂಧನವೂ ಇಲ್ಲ. ತನಗೆ ಮೋಕ್ಷದ ಅವ್ಯಶಕತೆಯೂ ಇಲ್ಲ .

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನಿಗೆ ಶರಣು ಹೋಗಿ ಆತನಲ್ಲಿಯೇ ಐಕ್ಯವಾದ ಬಳಿಕ ಆ ಕಾಯವೇ ಕೈಲಾಸ. ಕೈಲಾಸವೇ ತಾನಾದ ಕಾಯಕ್ಕೆ ಮಲ್ಲಯ್ಯನ ನಾಮಸ್ಮರಣೆಯಾದರೂ ಯಾಕೆ ಬೇಕು ?

ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಎಂಬ ಆರು ಸೂತ್ರಗಳನ್ನು ಸಿದ್ಧರಾಮಶಿವಯೋಗಿಗಳು ತಮ್ಮ ವಚನದಲ್ಲಿ ಸುಂದರವಾಗಿ ವಿವರಿಸಿದ್ದಾರೆ. ಪ್ರಯೋಗಕ್ಕೆ ಹೋಗುವ ಓದುಗನೇ ಧನ್ಯ.

**1173**

**ಭಕ್ತನಾದ ಬಳಿಕ ಜಂಗಮ ಮೆಚ್ಚಬೇಕು ;**
**ಜಂಗಮವಾದ ಬಳಿಕ ಭಕ್ತ ಮೆಚ್ಚಬೇಕು ;**
**ಭಕ್ತನ ಕಾಯವೆ ಜಂಗಮನ ಕಾಯ ;**
**ಜಂಗಮದ ಕಾಯವೆ ಭಕ್ತನ ಕಾಯ.**
**ಕಪಿಲಸಿದ್ಧ ಮಲ್ಲೇಶಯ್ಯನಲ್ಲಿ ಇದೆ ಉಪಾಯ.**

ಭಕ್ತ ಜಂಗಮ ಎನ್ನುವವರು ಬೇರೆ ಬೇರೆ ಅಲ್ಲ. ಹಾಗೆಯೇ ಇವರಿಬ್ಬರೂ ವ್ಯಕ್ತಿಗಳಲ್ಲ. ಪ್ರತಿ ವ್ಯಕ್ತಿಯಲ್ಲಿಯೂ ಇರುವ ಅವ್ಯಕ್ತ ವ್ಯಕ್ತರಿವರು. ವ್ಯಕ್ತರು ಎಂದರೆ ಎಲ್ಲರಿಗೂ ಕಾಣುವವರು ಅಲ್ಲ. ಕಾಯದಲ್ಲಿಯೇ ಸಂಗಮವಾದ ಅವ್ಯಕ್ತ ಭಕ್ತನನ್ನು ಅವ್ಯಕ್ತ ಜಂಗಮನನ್ನು ಕಾಣಲೇಬೇಕೆಂದು ಕಾಯ ಬಯಸಿ ತನ್ನ ಉಪಾಯದಿಂದ ಅಕಾಯದೊಂದಿಗೆ ಕಾಯಕ ಮಾಡಿದಾಗ ಕಾಯಕ್ಕೆ ಇವರಿಬ್ಬರ ದರುಶನವಾಗುತ್ತದೆ.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಜಂಗಮನಿಗೆ ಭಕ್ತಿ ಮಾಡಿದಾಗ ಜಂಗಮ ತನಗೆ ಮಾಡಿದ ಭಕ್ತನ ಭಕ್ತಿಯನ್ನು ಮೆಚ್ಚಿ ತಲೆ ದೂಗುತ್ತಾನೆ.

ಕಾಯವನ್ನು ಆವರಿಸಿದ ಮನ ಜಂಗಮನಿಗೆ ಭಕ್ತನಾದ ಬಳಿಕವೇ ಜಂಗಮನ ದರುಶನ ಭಕ್ತನಿಗೆ ಆಗುತ್ತದೆ. ಜಂಗಮನ ಕೆಲಸವನ್ನು ಕಂಡು ಭಕ್ತ ತಲೆದೂಗುತ್ತಾನೆ. ಆತನಿಗೆ ಶರಣು ಹೋಗಿ ಶರಣನೇ ತಾನಾಗುತ್ತಾನೆ. ಭಕ್ತನ ಕಾಯ ಜಂಗಮನ ಕಾಯ ಎಂದು ಬೇರೆ ಬೇರೆ ಇಲ್ಲ. ಹಾಗೆ ತೋರುವ ಕಾಯಗಳೆಲ್ಲ ವೇಷದ ಕಾಯಗಳು. ಭಕ್ತನು ಕಾಯದಲ್ಲಿಯೇ ಇದ್ದಾನೆ; ಜಂಗಮನೂ ಕಾಯದಲ್ಲಿಯೇ ಇದ್ದಾನೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಜಂಗಮನನ್ನು ಕಂಡುಕೊಂಡರೆ ಸಾಕು ಆ ಮನವೇ ಜಂಗಮನಿಗೆ ಭಕ್ತನಾಗುತ್ತದೆ. ಹೀಗಾಗಿ ಭಕ್ತನ ಕಾಯವೇ ಜಂಗಮದ ಕಾಯ; ಜಂಗಮದ ಕಾಯವೇ ಭಕ್ತನ ಕಾಯ.

ಕಾಯವನ್ನು ಆವರಿಸಿದ ಮನ ತನ್ನ ಉಪಾಯದಿಂದ ಕಾಯದಲ್ಲಿ ಸಂಗಮವಾದ ಅರಿವಿನ ಮಲ್ಲಯ್ಯನನ್ನು ಕಂಡು ಆತನಿಗೆ ಶರಣು ಹೋಗಬೇಕು. ಹೀಗೆ ತನಗೆ ಶರಣು ಹೋಗುವ ಉಪಾಯವನ್ನು ಮನಕ್ಕೆ ಅರಿವಿನ ಮಲ್ಲಯ್ಯನೇ ಹೇಳಿಕೊಡುತ್ತಾನೆ.

**1174**

**ಭಕ್ತನಾದ ಬಳಿಕ ಭಕಸ್ಥಲವಳವಡುವುದೇ ದುರ್ಲಭ.**
**ಮಹೇಶನಾದ ಬಳಿಕ ಮಹೇಶಸ್ಥಲವಳವಡುವುದೆ ದುರ್ಲಭ,**
**ಭಕ್ತಸ್ಥಲ ಬಸವಣ್ಣಂಗಾಯಿತ್ತು ;**
**ಮಹೇಶಸ್ಥಲ ಚೆನ್ನಬಸವಣ್ಣಂಗಾಯಿತ್ತು ;**
**ಮೀರಿದ ಸ್ಥಲ ನಮ್ಮ ಪ್ರಭುವಿಂಗಾಯಿತ್ತು ;**
**ಕಪಿಲಸಿದ್ಧಮಲ್ಲಯ್ಯ ಎನಗಿನಿತೊಂದರಿವ ಪರಿ?**

ಗುರುದೇವನಿಗೆ ಶಿಷ್ಯನಾಗಿ ಭಕ್ತಿ ಮಾಡಬಹುದು. ಇದು ಲೋಕದ ಭಕ್ತಿ . ಹೀಗೆ ಭಕ್ತಿ ಮಾಡುವುದು ಸಕಲರಿಗೂ ಕಾಣುತ್ತದೆ. ಆದರೂ ಈತ ಭಕ್ತನಲ್ಲ. ಸಿದ್ಧರಾಮಶಿವಯೋಗಿಗಳು ಹೇಳಿದ ಭಕ್ತಿಯೇ ಬೇರೆ. ಲೋಕ ತಿಳಿದಂತೆ ಭಕ್ತಿ ಮಾಡುವ ಭಕ್ತನಿಗೆ ಭಕ್ತಿಸ್ಥಲ ಅಳವಡುವುದು ದುರ್ಲಭ.

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಅಂಗವನ್ನು ಆವರಿಸಿದ ಮನ ಭಕ್ತನಾಗಿ ಭಕ್ತಿ ಮಾಡಿದಾಗ ಆ ಭಕ್ತನಿಗೆ ಭಕ್ತಿಸ್ಥಲ ಅಳವಡುವುದು. ಇಂತಹ ಭಕ್ತ ಸಕಲ ತನುಗಳಲ್ಲಿ ತನ್ಮಯವಾದ ಗುರುದೇವನನ್ನು ಕಂಡು ಆತನಿಗೆ ಶರಣು ಹೋಗಿ ಶರಣು ಶರಣಾರ್ಥಿ ಎಂದು ಶಿರಬಾಗಿ ನಮಿಸುತ್ತಾನೆ.

ಬಸವಣ್ಣನನ್ನು ಕಂಡ ಅರಳಯ್ಯ ಶರಣಾರ್ಥಿ ಎಂದು ಹೇಳಿದಾಗ, ಶರಣು ಶರಣಾರ್ಥಿ ಅರಳಯ್ಯನವರೆ ಎಂದು ಬಸವಣ್ಣ ತಲೆಬಾಗಿ ನಮಿಸುತ್ತಾನೆ. ಭಕ್ತನಿಗೆ ಭಕ್ತಿಸ್ಥಲ ಅಳವಡುವುದು ದುರ್ಲಭ. ಭಕ್ತಸ್ಥಲ ಬಸವಣ್ಣಂಗಾಯಿತ್ತು ಎಂದು ಸಿದ್ಧರಾಮಶಿವಯೋಗಿಗಳು ಹೇಳಿದ್ದಾರೆ.

ಮಹೇಶ್ವರನ ವೇಷ ಧರಿಸಿದ ಮಾತ್ರಕ್ಕೆ ಮಹೇಶಸ್ಥಲ ಅಳವಡುವುದು ದುರ್ಲಭ. ತನುವಿನಲ್ಲಿ ತನ್ಮಯವಾದ ಅರಿವು ಗುರುದೇವನೂ ಹೌದು, ಮಹಾದೇವನೂ ಹೌದು. ಸದಾಶಿವನೂ ಹೌದು. ಮಹೇಶ್ವರನೂ ಹೌದು. ಸಾಕ್ಷಾತ್ ಪರಬ್ರಹ್ಮನೂ ಹೌದು. ತನುವನ್ನು ಆವರಿಸಿದ ಮನ ಮಹೇಶ್ವರನಿಗೆ ಶರಣು ಹೋಗಿ ಆ ಮಹೇಶ್ವರನೇ ತಾನಾದಾಗ ಮಹೇಶಸ್ಥಲ ಅಳವಡುವುದು. ಇಂತಹ ಮಹೇಶಸ್ಥಲ ಚೆನ್ನಬಸವಣ್ಣಂಗೆ ಮಾತ್ರ ಆಯಿತು ಎಂದು ಸಿದ್ಧರಾಮಶಿವಯೋಗಿಗಳು ಹೇಳಿದ್ದಾರೆ.

ಭಕ್ತಸ್ಥಲ ಮಹೇಶಸ್ಥಲಕ್ಕೂ ಮಿಗಿಲಾದ ಸ್ಥಲ ಪ್ರಭುದೇವರಿಗೆ ಮಾತ್ರ ಆಯಿತು ಎಂದು ಸಿದ್ದರಾಮಶಿವಯೋಗಿಗಳು ಬಸವಣ್ಣ, ಚೆನ್ನಬಸವಣ್ಣ, ಹಾಗು ಪ್ರಭುದೇವರನ್ನು ಸ್ಮರಿಸುತ್ತಾ ಎನಗಿನಿತೊಂದು ಒಲಿಸಿಕೊಳ್ಳುವ ಪರಿಯನ್ನು ಕರುಣಿಸು ಪರಮಾತ್ಮನೇ ಎಂದು ಸ್ವದೈವವಾದ ಅರಿವಿನ ಮಲ್ಲಯ್ಯನ್ನು ಬೇಡಿಕೊಂಡಿದ್ದಾರೆ.

**1175**

**ಶಾಸ್ತ್ರವ ಹೇಳುವವರೊಂದು ಕೋಟಿ.**
**ವೇದ ವೇದಾಂತವ ಹೇಳುವವರೊಂದು ಕೋಟಿ.**
**ನ್ಯಾಯಾ ನ್ಯಾಯವ ಹೇಳುವವರೊಂದು ಕೋಟಿ.**
**ಕಪಿಲಸಿದ್ಧಮಲ್ಲಿಕಾರ್ಜುನನ ಮಾಯಾಕೀಲವ**
**ಹೇಳುವವರೊಬ್ಬರೂ ಇಲ್ಲ ಎಲ್ಲಾದರೂ.**

ಭಗವದ್ಗೀತೆ,ಬೈಬಲ್, ಖುರಾನ್, ಬಗ್ಗೆ ಹೇಳುವವರು ಸಿಕ್ಕುತ್ತಾರೆ. ಈ ಮೂರು ಗ್ರಂಥಗಳ ಬಗ್ಗೆ ಇಡೀ ಮಾನವ ಕುಲಕ್ಕೆಲ್ಲಾ ಗೊತ್ತಿದೆ. ವೇದ,ಆಗಮ,ಉಪನಿಷತ್ತುಗಳ ಬಗ್ಗೆಯೂ ಲೋಕಕ್ಕೆ ಗೊತ್ತಿದೆ. ವಚನಶಾಸ್ತ್ರ,ಗುರುಗ್ರಂಥ ಸಾಹೇಬ, ದಾಸರ ಕೀರ್ತನೆಗಳು, ಮುಂಡಿಗೆಗಳು, ತತ್ವಪದಗಳ ಬಗ್ಗೆಯೂ ಲೋಕಕ್ಕೆ ಗೊತ್ತಿದೆ. ಇವೆಲ್ಲವುಗಳ ಬಗ್ಗೆ ಹೇಳುವವರು ಕೋಟಿ,ಕೋಟಿ ಜನ ಸಿಕ್ಕುತ್ತಾರೆ.ಆದರೂ ಕೂಡಾ ಹೇಳುವ ವ್ಯಕ್ತಿ ಸಹಜನಾಗಲು ಸಾಧ್ಯವಾಗುತ್ತಿಲ್ಲ. ಇದೊಂದು ಪರಮಾತ್ಮನ ರಚನೆಯ ಮಾಯಾಜಾಲ. ಈ ಮಾಯಾಜಾಲದ ಕೀಲ ಬಲ್ಲವನು ಮಾತ್ರ ಹೇಳಬಲ್ಲ.

ಭಗವದ್ಗೀತೆ,ಬೈಬಲ್,ಕುರಾನ್,ವಚನಶಾಸ್ತ್ರ,ವೇದ,ಆಗಮ,ಉಪನಿಷತ್ತುಗಳು ತನುವಿನಿಂದಲೇ ಹೊರ ಬಂದಿವೆ. ಸಕಲ ತತ್ವಗಳನ್ನು ಹೊರಗೆ ಚೆಲ್ಲಿದ ತನು ಪುನಃ ಅವುಗಳನ್ನು ತನುವಿನಲ್ಲಿಯೇ ಇಟ್ಟುಕೊಂಡರೆ ಅದು ಎಂಜಲು ಆಗುವುದಿಲ್ಲವೇ ? ಹೀಗೆ, ಎಂಜಲಶಾಸ್ತ್ರ ಹೇಳಲು ಬರುತ್ತದೆ. ಹೇಳಿದರೆ ಭ್ರಮೆಯಿಂದಾಗಿ ಆನಂದವಾಗುತ್ತದೆ. ಆದರೆ ಶಾಸ್ತ್ರ ಹೇಳುವವನಿಗೆ ಇರಲು ಬರುವುದಿಲ್ಲ. ಹಾಗೆಯೇ ಶಾಸ್ತ್ರ ಕೇಳುವವನಿಗೂ ಇರಲು ಬರುವುದಿಲ್ಲ.

ತನು ತನುವಿಗೆ ಬೋಧಿಸಲು ಸಾಧ್ಯವಾಗುವುದಿಲ್ಲ. ಆ ಬೋಧೆ ಕೇಳುವ ತನುವಿಗೆ ಯಾವ ಬೋಧೆಯು ನಾಟುವುದಿಲ್ಲ. ಏಕೆಂದರೆ ಕೇಳುವ ತನುವಿನಲ್ಲಿ ಹೇಳುವ ಪ್ರತಿ ತನುವಿನಲ್ಲಿ ತತ್ವ ಬಚ್ಚಿಟ್ಟುಕೊಂಡಿದೆ. ಹೀಗೆ ಬಚ್ಚಿಟ್ಟುಕೊಂಡ ತತ್ವ ಹೇಳುವ ತನುವನ್ನು ವಿರೋಧಿಸುತ್ತದೆ. ಆದರೂ ಭ್ರಮೆಯಿಂದ ಕೇಳುವ ತನು ಹೇಳುವ ತನುವನ್ನು ಗುರುವಾಗಿ ಸ್ವೀಕರಿಸುತ್ತದೆ. ಇದು ಸತ್ಯವಲ್ಲ.

ಸಕಲ ತನುಗಳಲ್ಲಿ ತನ್ಮಯವಾದ ತತ್ವ ಒಂದೇ ಆಗಿದೆ. ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ತತ್ವದ ಕೀಲನ್ನು ಅರಿತು ಆ ತತ್ವವೇ ತಾನಾಗಬೇಕು. ಹೀಗೆ ತತ್ವವೇತ್ತ ತನುವೇ ಮಾಯಾಮಯವಾದ ಚಕ್ರವ್ಯೂಹ ಬೇಧಿಸಿ ತನುವಿನಲ್ಲಿಯೇ ತನ್ಮಯವಾದ ತತ್ವವನ್ನು ತನ್ನದಾಗಿಸಿಕೊಳ್ಳಲು ಸಾಧ್ಯವಾಗುತ್ತದೆ. ಅಂತಹ ತನುವು ಮಾತ್ರ ತನುವಿನಲ್ಲಿಯೇ ತತ್ವ ಅಡಗಿದೆ ಎಂದು ತನುವಿಗೆ ಹೇಳಲು ಸಾಧ್ಯವಾಗುತ್ತದೆ. ಸಕಲ ತನುಗಳಿಗೂ ಹೇಳಲು ಸಾಧ್ಯವಾಗುವುದಿಲ್ಲ. ಹೀಗೆ ಪ್ರಯತ್ನ ಮಾಡಿದ ಸಕಲ ತನುಗಳು ತನುವಿನಲ್ಲಿಯೇ ಇದ್ದ ತತ್ವವನ್ನು ತಿಳಿದುಕೊಳ್ಳಬಹುದಾಗಿದೆ.

**1176**

**ಶಾಸ್ತ್ರದ ರಂಜನೆ ಲೋಕಕ್ಕಲ್ಲದೆ**
**ಲೊಕವಿರಹಿತಂಗೆಲ್ಲಿಹದೊ ?**
**ವೇದ ವೇದಾಂತದ ರಂಜನೆ ಮುಮುಕ್ಷುಗಳಿಗಲ್ಲದೆ**
**ಮೋಕ್ಷವಿರಹಿತಂಗೆಲ್ಲಿಯದೋ ?**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಮಾಯಾಕೀಲವ ತಿಳಿವಡೆ**
**ತಿಳಿದವರಿಗಲ್ಲದೆ ನಿಶೂನ್ಯರಿಗೆಲ್ಲಿಹದೋ**

ತನುವಿನಿಂದ ಹೊರಬಂದ ಭಗವದ್ಗೀತೆ,ಬೈಬಲ್, ಕುರಾನ್, ವೇದ, ಆಗಮ, ಉಪನಿಷತ್ತು ಮುಂತಾದ ತತ್ವವೇತ್ತ ಗ್ರಂಥಗಳಲ್ಲಿ ತನುವನ್ನು ನಿರಂಜನನನ್ನಾಗಿಸುವ ಸೂತ್ರಗಳು ಅಡಗಿವೆ. ಇಂತಹ ಶಾಸ್ತ್ರಗಳನ್ನು ಓದಿದ ತನು ಅಥವಾ ಕೇಳಿದ ತನು ನಿರಂಜನನಾಗಬೇಕಿತ್ತು. ಆದರೆ ಶಾಸ್ತ್ರ ಹೇಳುವ ತನು ರಂಜನೆಗೆ ಒಳಗಾಗುತ್ತದೆ. ಶಾಸ್ತ್ರ ಕೇಳುವ ತನುಗಳು ಕೂಡಾ ರಂಜನೆಗೆ ಒಳಗಾಗುಗತ್ತವೆ. ಏಕೆಂದರೆ

ತನುವಿನಿಂದ ಹೊರಬಂದ ತತ್ವ ಪುಸ್ತಕದಲ್ಲಿ ಬಚ್ಚಿಟ್ಟುಕೊಂಡು ತನುವಿಗೆ ಶಾಸ್ತ್ರವಾಗಿದೆ. ಅದು ತನುವಿನಿಂದಲೇ ಬಂದದ್ದು ಎಂದು ತನುವಿಗೆ ಗೊತ್ತಾಗದೇ ಓದುತ್ತದೆ. ಓದಿ ರಂಜನೆಗೆ ಒಳಗಾಗಿ ಓದಿದ ಶಾಸ್ತ್ರವನ್ನು ತನುವಿನಲ್ಲಿ ಬಚ್ಚಿಟ್ಟುಕೊಳ್ಳುತ್ತದೆ. ತನುವಿನಲ್ಲಿ ತನ್ಮಯವಾದ ತತ್ವ ತನುವಿಗೆ ಕೆಲಸಕ್ಕೆ ಬಾರದೇ ತನುವಿನಲ್ಲಿಯೇ ಉಳಿಯುತ್ತದೆ. ತಾನು ಓದಿ ಬಚ್ಚಿಟಟ್ಕೊಂಡ ತತ್ವವನ್ನು ತನು ನವರಸಗಳ ಮೂಲಕ ಹೊರಗೆ ಚೆಲ್ಲುತ್ತದೆ.

ಹೀಗಾಗಿ ಶಾಸ್ತ್ರ ಹೇಳುವ ತನು ರಂಜನೆಗೆ ಒಳಗಾಗುತ್ತದೆ. ಕೇಳುವ ತನು ಕೂಡಾ ರಂಜನೆಗೆ ಒಳಗಾಗುತ್ತದೆ. ಇದು ಲೋಕದ ತನುಗಳ ನಿಯಮ. ಈ ನಿಯಮವನ್ನು ಮೀರಿದ ತನು ಮಾತ್ರ ತನುವಿನಲ್ಲಿಯೇ ತನ್ಮಯವಾದ, ನಿರಂಜನನನ್ನು ಹುಡುಕುತ್ತದೆ. ತನುವನ್ನು ಆವರಿಸಿದ ಮನಕ್ಕೆ ಈ ನಿರಂಜನನ ಪರಿಚಯವಾದರೆ ಸಾಕು ಮನದ ರಂಜನೆಗಳೆಲ್ಲಾ ಉದುರಿ ಬೀಳುತ್ತವೆ. ನವರಸಗಳನ್ನು ಪಾನ ಮಾಡಿ ಮುಕ್ತನಾಗುತ್ತಾನೆ. ತನುವಿನಲ್ಲಿಯೇ ತನ್ಮಯವಾದ ತತ್ವದ ಮಾಯಾಕೀಲವ ತಿಳಿದು ನಿಶೂನ್ಯನಾಗುತ್ತದೆ.

**1177**

**ವೇಷವ ಧರಿಸಿ ಫಲವೇನಯ್ಯಾ .**
**ವೇಷದಂತಾಚಾರಣೆ ಇಲ್ಲದನ್ನಕ್ಕ ?**
**ವೇದಾಂತವನೋದಿ ಫಲವೇನಯ್ಯ ,**
**ಬ್ರಹ್ಮ ತಾವಾಗದನ್ನಕ್ಕ?**
**ನಾನಾ ಕೆರೆಯ ತೋಡಿ ಫಲವೇನಯ್ಯಾ ,**
**ಪುಣ್ಯತೀರ್ಥಂಗಳು ಬರದನ್ನಕ್ಕ**
**ಕಪಿಲಸಿದ್ಧಮಲ್ಲಿನಾಥ.**

ಬಸವಣ್ಣನವರು ಲಾಂಛನಕ್ಕೆ ಶರಣೆಂಬೆ ಎಂದಿದ್ದಾರೆ. ಇದು ಸೂತ್ರ . ಪ್ರತಿ ತನು ಕೂಡಾ ಅರಿವಿನ ಲಾಂಛನವಾಗಿದೆ. ಪ್ರಪಂಚದಲ್ಲಿರುವ ಏಳುನೂರಾ ನಲವತ್ತು ಕೋಟಿ ತನುಗಳು ಅರಿವಿನ ವೇಷವನ್ನು ಧರಿಸಿ ಗರ್ಭದಿಂದ ಹೊರ ಬಂದಿವೆ. ಪುನಃ ತನುವಿಗೆ ಗುರುವಿನ ವೇಷ ಧರಿಸುವ ಅವಶ್ಯಕತೆ ಇಲ್ಲ. ಹಾಗೇ ಧರಿಸಿದರೆ ತನುವನ್ನು ಆವರಿಸಿದ ಮನ ಉಪ ಜೀವನಕ್ಕಾಗಿ ತನುವಿಗೆ ಗುರುವಿನ ವೇಷ ಧರಿಸಿದೆಯೇ ಹೊರತು ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ಮನ ಕಂಡುಕೊಳ್ಳಲು ಸಾಧ್ಯವಾಗಿಲ್ಲವೆಂದೇ ಅರ್ಥ. ಹಾಗೆಯೇ ತನುವಿಗೆ ಅರಿವೆಯ ಮೂಲಕ ವೇಷ ಧರಿಸಿದರೆ ಅರಿವಾಯಿತಲ್ಲಾ ಎಂದು ಅರ್ಥವಲ್ಲ. ಹಾಗೇ ವೇಷ ಧರಿಸಿದ ತನುವಿಗೆ, ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ಫಲ ಸಿಗುವುದಿಲ್ಲ. ಏಕೆಂದರೆ ಗುರು ಎನ್ನುವವನು ವ್ಯಕ್ತಿ ಅಲ್ಲ. ಪ್ರತಿ ವ್ಯಕ್ತಿಯಲ್ಲಿ ತನ್ಮಯವಾದ ತತ್ವ; ಇಂತಹ ತತ್ವವೇತ್ತ ತನುವಿಗೆ ವೇಷದ ಅವಶ್ಯಕತೆ ಇಲ್ಲ.

ಆದರೂ ತನು ವೇಷ ಧರಿಸಿ ಮುಸಲ್ಮಾನನಾಗಿದೆ. ಮೌಲ್ವಿಯಾಗಿದೆ.ವೇಷ ಧರಿಸಿ ಹಿಂದುವೂ ಆಗಿದೆ. ಗುರು ಆಗಿದೆ. ಜಗದ್ಗುರು ಆಗಿದೆ. ವೇಷ ಧರಿಸಿ ಕ್ರಿಶ್ಚಿಯನ್ ಆಗಿದೆ, ಪೋಪ್ ಆಗಿದೆ. ಕುರಾನ್ ಭಗವದ್ಗೀತೆ, ಬೈಬಲ್, ವೇದ, ಆಗಮ,ಉಪನಿಷತ್ತುಗಳನ್ನು ಓದಿದರೆ ಫಲವೇನು ? ತನುವಿಗಂಟಿದ ಸಕಲ ಭ್ರಮೆಗಳನ್ನು ಕಳೆದುಕೊಂಡು ಬ್ರಹ್ಮನಾಗದಿದ್ದರೆ,ವೇಷ ಧರಿಸಿ ತನಗೆ ತಾನೇ

ಮೋಸ ಮಾಡಿಕೊಂಡಂತಾಗುವುದಿಲ್ಲವೇ ? ತನುವಿಗೆ ವೇಷ ಧರಿಸಿ ಉಪಜೀವನಕ್ಕಾಗಿ ಮನ ತನುವನ್ನು ಇಂತಹ ಅಜ್ಞಾನದ ದಾರಿಯಲ್ಲಿ ಕೊಂಡೊಯ್ಯಬಹುದೇ ? ತನು ಮತ್ತು ಮನ ಆಲೋಚನೆಯಲ್ಲಿ ತೊಡಗಲೇ ಬೇಕಾಗಿದೆ.

ಊರಿಗೆ ಒಳಿತಾಗಲೆಂದು ಕೆರೆ ತೋಡಿದರೆ ಮಳೆಯೇ ಬರದಿದ್ದರೆ ಹೇಗೆ ? ಮಳೆ ಬಂದರೂ ಹಳ್ಳ ತುಂಬಿ ಕೆರೆಗೆ ಹರಿಯದಿದ್ದರೆ, ಕೆರೆ ತೋಡಿದ ಫಲ ವ್ಯರ್ಥವಾಗುವುದಿಲ್ಲವೇ ? ಹೀಗಾಗಿ ತನು ಬ್ರಹ್ಮಕೆಲಸಗಳನ್ನು ಬಿಟ್ಟು ತನುವಿನಲ್ಲಿಯೇ ತನ್ಮಯವಾದ ಬ್ರಹ್ಮನನ್ನು ತನುವನ್ನು ಆವರಿಸಿದ ಮನದಿಂದ ಹುಡುಕಿ ಸ್ವತಃ ಬ್ರಹ್ಮನಾಗಬೇಕು. 'ಅಹಃ ಬ್ರಹ್ಮಾಸ್ಮಿ' ಎಂದು ಅರಿವಿನಿಂದ ಹೇಳುತ್ತಾ ಕುಣಿ ಕುಣಿದಾಡಬೇಕು.

**1178**

**ಶೇಷನ ಫಣೆಯಲ್ಲಾಡುವುದು ಲೇಸು ಕಂಡಯ್ಯಾ.**
**ಮೃತ್ಯುವಿನ ಬಾಯಿಯೊಳಗಿರುವುದು ಲೇಸು ಕಂಡಯ್ಯಾ.**
**ನಮ್ಮ ಕಪಿಲಸಿದ್ಧಮಲ್ಲಿನಾಥನ ನಡೆದ ದಾರಿಯಲ್ಲಿ,**
**ನಡೆವುದು ಲೇಸು ಕಂಡಯ್ಯಾ.**

ತನುವಿನಲ್ಲಿ ಹಾವು ಇದೆ. ಹಾವಿನ ವಿಷವೂ ಇದೆ. ಹಾವಿನ ತಲೆಯ ಮೇಲೆ ಇರುವ ಹಣೆಯ ಬೆಳಕು ಇದೆ. ತನುವಿನೊಳಗೆ ಮೃತ್ಯುವು ಇದೆ. ಮೃತ್ಯುಂಜಯನು ಇದ್ದಾನೆ. ಮೃತ್ಯುವಿಗೆ ಮೃತ್ಯುಂಜಯನ ಪರಿಚಯವಿಲ್ಲ. ಮನವೆಂಬ ಮೃತ್ಯುವು ಮೃತ್ಯುಂಜಯನತ್ತ ನಡೆಯುತ್ತಿಲ್ಲ. ಆತನಿರುವ ದಾರಿಗೂ ವಾಲುತ್ತಿಲ್ಲ. ಹಾಗೆಯೇ ಹಾವು ತನ್ನ ಹಣೆಯ ಮೇಲಿರುವ ಮಣಿಯ ಬೆಳಕಿನತ್ತ ವಾಲುತ್ತಿಲ್ಲ. ಇದು ತನುವಿನ ದುರ್ದೈವದ ಸಂಗತಿ. ಅರಿವಿನ ದಾರಿಯಲ್ಲಿ ಮರೆವು ನಡೆದರೆ ಅರಿವೇ ಆಗುವುದು. ಅರಿವೆಂದರೆ ಸಾಮಾನ್ಯವಲ್ಲ. ಸದಾ ಮರೆವಿಗೆ ಅರಿವಿನ ದಾರಿ ತೋರುವ ಗುರು. ತನು ಕಾಣುತ್ತದೆ, ತನುವಿನಲ್ಲಿ ತನ್ಮಯವಾದ ಮನವೆಂಬ ಹಾವು ಕಾಣುವುದಿಲ್ಲ. ಕಂಡು ಬರುವ ತನುವನ್ನು ಕಾಣಬಾರದ ಹಾವು ಸದಾ ಮೃತ್ಯುವಿನ ಬಾಯಿಗೆ ತಳ್ಳುತ್ತದೆ. ತನುವಿಗೆ ಮೃತ್ಯುವಿನ ಬಾಯಿಂದ ತಪ್ಪಿಸಿಕೊಂಡು ಅರಿವೆಂಬ ಗುರುದೇವನ ಚರಣ ಕಮಲಗಳಿಗೆ ಎರಗಿ ಆತನಿಗೆ ದಾಸಾನು ದಾಸಾನಾಗುವ ದಾರಿ ಕಂಡು ಬರುತ್ತಿಲ್ಲ.

ಮರೆವೆಂಬ ಮನಕ್ಕೆ ಅರಿವಿನ ದಾರಿ ಯಾರು ಹೇಳಬೇಕು ? ಒಂದು ವೇಳೆ ಹೇಳಿದರು ಕೂಡಾ ಅದು ಕಂಡುಕೊಳ್ಳಲು ಸಾಧ್ಯವೇ ? ಎಂದು ಕೇಳಿದರೆ ಅದು ಸಾಧ್ಯವಾಗುವುದೇ ಇಲ್ಲ ಎಂದು ಖಚಿತವಾಗಿ ಹೇಳಬಹುದು. ಏಕೆಂದರೆ ಮರೆವಿನ ಮನ ಅರಿವಿನ ಗುರುದೇವ ಇವರಿಬ್ಬರೂ ತನುವಿನಲ್ಲಿಯೇ ಇದ್ದಾರೆ. ಗುರುದೇವ ಹೇಳುವ ಪ್ರತಿ ಮಾತನ್ನು ಮರೆವಿನ ಮನ ಆಲಿಸಿ, ಆ ಹಾದಿಯಲ್ಲಿ ನಡೆದರೆ ಸಾಕು ಅದು, ಗುರುದೇವ ತಾನೇ ಆಗುತ್ತದೆ.

ತನುವಿನ ಲೋಕವೇ ಬೇರೆ ತನು ತನುವಿಗೆ ಪಾಠ ಮಾಡುವ ಪದ್ಧತಿ ಲೋಕದಲ್ಲಿ ಇದೆಯೇ ಹೊರತು ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿಯೇ ತನ್ಮಯಫಾದ ಗುರುದೇವ ಪಾಠ ಮಾಡುತ್ತಿರುವುದನ್ನು ಆಲಿಸುವ ಪದ್ಧತಿ ಮನಕ್ಕಿಲ್ಲ. ಇದು ತನುವಿನಲ್ಲಿಯೇ ನಡೆಯುವ ಅರಿವಿನ ಪಾಠ ಹೀಗೆ ಮಾಡುವ ಗುರುದೇವನ ಪಾಠವೇ ನಿಜವಾದ ಪಾಠ. ಇದು ನಿಜವಾದ ದ್ಹಾರಿ. ಮನವೆಂಬ ಹಾವು ಹರನ ಕೊರಳಿಗೆ ಆಭರಣವಾಗುವ ಲೇಸುಳ್ಳ ದಾರಿ. ಮೃತ್ಯುವು ಮೃತ್ಯುಂಜಯನಾಗುವ ದಾರಿ.

**1179**

**ಊರಿಗೊಂದು ಹಳ್ಳವಾದಡೆ,**
**ನೀರು ಕುಡಿವವರಿಗೂ ಒಂದೆ ಹಳ್ಳವೇ ? ಇಲ್ಲಿಲ್ಲ.**
**ಅರಿವವರಿಗೆ ಒಬ್ಬ ದೇವರಾದಡೆ,**
**ಆ ಲೋಕದವರಿಗೂ ಒಬ್ಬನೇ ? ಇಲ್ಲಿಲ್ಲ.**
**ನಮ್ಮ ಕಪಿಲಸಿದ್ಧ ಮಲ್ಲೇಶ್ವರನಲ್ಲದೆ ಬೇರೆ ದೈವವಿಲ್ಲ.**

ಊರಿಗೊಂದು ಹಳ್ಳವಿದ್ದಡೂ ಆ ಹಳ್ಳಕ್ಕೆ ಬೇರೆ ಬೇರೆ ನಾಮವಿದ್ದರೂ ಹಳ್ಳದಲ್ಲಿ ಹರಿಯುವ ಜಲ ಒಂದೇ. ಅದು ಯಾವ ಊರಾದರೇನು, ಯಾವ ದೇಶವಾದರೇನು ?

ಭೂಮಿಯ ಮೇಲೆ ಅವತರಿಸಿದ ತನುಗಳೆಲ್ಲಾ ಒಂದೆ. ಮನಕ್ಕೆ ತಿಳಿಯದಿದ್ದಕ್ಕಾಗಿ ತನು ಕಲ್ಲು ಕೆತ್ತಿ ದೇವನ ಆರಾಧನೆ ಮಾಡುತ್ತದೆ. ಹೀಗೆ ಲೋಕದಲ್ಲಿ ಕೋಟಿ ಕೋಟಿ ದೇವತೆಗಳು ತನುವಿನ ಕೈಯಲ್ಲಿ ಸೃಷ್ಟಿಯಾಗಿವೆ. ಅರಿಯಲು ಹೋದರೆ ಆಯಾ ದೇವರುಗಳಲ್ಲಿ ಬಚ್ಚಿಟ್ಟುಕೊಂಡ ಕಲ್ಲು ಒಂದೇ ಆಗಿದೆ.

ತನುವಿನಲ್ಲಿ ತನ್ಮಯವಾದ ದೇವರನ್ನು ತನುವನ್ನು ಆವರಿಸಿದ ಮನ ತನುವನ್ನು ಹಿಡಿದು ಕಲ್ಲು ಕೆತ್ತಿ ದೇವರನ್ನಾಗಿಸಿದೆ. ಕಲ್ಲನ್ನು ಮರೆತು ಹೋಗಿದೆ. ತನುವಿನಲ್ಲಿ ತನ್ಮಯವಾದ ಅರಿವೇ ಗುರು ಆ ಗುರುದೇವನಿಗೆ ಮಾತ್ರ ಕಲ್ಲು ಕಾಣುತ್ತದೆ. ತನುವನ್ನು ಆವರಿಸಿದ ಮನಕ್ಕೆ ದೇವರು ಕಾಣುತ್ತದೆ, ಕಲ್ಲು ಕಾಣುವುದೇ ಇಲ್ಲ. ಮನ ಗುರುದೇವನಿಗೆ ಶರಣು ಹೋಗಿ ಶರಣಾಗತನಾದರೆ ಮನವೇ ಘನಮನವಾಗುತ್ತದೆ. ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನೇ ತಾನಾಗುತ್ತದೆ. ಆಗ ಮನಕ್ಕೆ ಬೇರೆ ದೈವವಿಲ್ಲ.

**1180**

**ಅಮೃತವೆಂದರಿದಾತನೇನಮರನಾಗಲಿಲ್ಲ,**
**'ಬ್ರಹ್ಮಾಹಮಸ್ಮೀತಿ'ಎಂದಡಾತನೇನು ಮುಕ್ತನಾಗಲಿಲ್ಲ,**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ**
**ಗುಣತ್ರಯವಳಿಯದನ್ನಕ್ಕ.**

ಲೋಕ ತಾಮಸ,ರಾಜಸ ಗುಣಗಳನ್ನು ಬಚ್ಚಿಟ್ಟುಕೊಂಡು ಸಾತ್ವಿಕ ಗುಣದತ್ತ ಹೆಜ್ಜೆ ಇಡುತ್ತಲಿದೆ. ಲೋಕ ತೋರ್ಪಡಿಸುವ ಸಾತ್ವಿಕತೆ ಸಹಜವಲ್ಲ. ಆದರೂ ಲೋಕ ಸಾತ್ವಿಕತೆಯನ್ನು ನಂಬಿದೆ. ಸಾತ್ವಿಕತೆಯನ್ನು ವಿಶ್ವಾಸ ಮಾಡುತ್ತಲಿದೆ. ಅದು ಮುಖವಾಡವೆಂದು ತನ್ನಲ್ಲಿಯೇ ಬಚ್ಚಿಟ್ಟುಕೊಂಡ ಸಹಜತೆಯ ಅಮೃತದ ನುಡಿಗಳು ಗುಣತ್ರಯಗಳಿಗೆ ಹೊಳೆಯುತ್ತಲಿಲ್ಲ. ಏಕೆಂದರೆ ಗುಣತ್ರಯಗಳ ಸುಖ ತನುವಿಗೆ ಬೇಕಾಗಿದೆ. ಸಹಜತೆಯ ಸುಖ ತನುವಿಗೆ ಬೇಕಾಗಿಲ್ಲ . ಹೀಗಾಗಿ ತನು ಮತ್ತು ತನುವನ್ನಾವರಿಸಿದ ಮನ ತನುವಿನಲ್ಲಿಯೇ ಸಂಗಮವಾದ ಸಹಜತೆಯನ್ನು ಅರಿತರೂ ಅವು ಅಮರನಾಗಲು ಸಾಧ್ಯವಾಗುತ್ತಿಲ್ಲ.

'ಅಹಂ ಬ್ರಹ್ಮಾಸ್ಮಿ' ಎಂದು ಬೊಗಳಿದರೂ, ಭ್ರಮೆಯನ್ನು ಕಳೆದುಕೊಂಡು ಬ್ರಹ್ಮನೇ ತಾನಾಗಲು ಸಾಧ್ಯವಾಗುತ್ತಿಲ್ಲ. ಅಂಗದಲ್ಲಿ ಅರಿವಿನ ಲಿಂಗವೆಂಬ ಅಮೃತ ಸಂಗಮವಾಗಿದ್ದರೂ ಅಂಗವನ್ನು ಆವರಿಸಿದ ಮನಕ್ಕೆ ಹೊಳೆಯುತ್ತಿಲ್ಲ. ಏಕೆಂದರೆ ಮನ ಅಂಗವನ್ನು ಸಾತ್ವಿಕ, ತಾಮಸ,

ರಾಜಸವೆಂಬ ಗುಣತ್ರಯಗಳಿಂದ ಬಂಧಿಸಿದೆ.

ಮನ ತ್ರಿಗುಣಾತೀತನಾದಾಗ ಅಂದರೆ ಸಾತ್ವಿಕ,ತಾಮಸ,ರಾಜಸ ಗುಣಗಳನ್ನು ಕಳೆದುಕೊಂಡು ನಿರ್ಗುಣಿಯಾದಾಗ ತನಗೆ ತಾನೇ ಬ್ರಹ್ಮನಾಗುತ್ತಾನೆ. ತನಗೆ ತಾನೇ ಅಮೃತಾತ್ಮನಾಗುತ್ತಾನೆ. ತನಗೆ ತಾನೇ ಬ್ರಹ್ಮರಸವನ್ನು ಪಾನ ಮಾಡಿ ಸಕಲ ಭ್ರಮಾಗುಣಗಳನ್ನು ಕಳೆದುಕೊಂಡು ಮುಕ್ತನಾಗುತ್ತಾನೆ.

**1181**

**ಆಗುವುದನು ತಪ್ಪಿಸಿಹೆನೆಂದಡೆ ತಪ್ಪಲರಿಯದು.**
**ಆಗು ಭೋಗಂಗಳ ತಪ್ಪಿಸುವಡೆ ಸಚ್ಚಿದಾನಂದ ಶಿವಯೋಗಿಗಳಲ್ಲದೆ**
**ನರರಿಗೆಲ್ಲಿಯದೊ, ಕಪಿಲಸಿದ್ಧಮಲ್ಲಯ್ಯಾ !**

ಇಂದು ಬಪ್ಪುದು ನಮಗೀಗಲೇ ಬರಲಿ ಎನ್ನುವ ಧೈರ್ಯ ಶರಣರಿಗೆ ಮಾತ್ರವೇ ಇರುತ್ತದೆ. ಲೋಕಕ್ಕೆ ಇರುವುದಿಲ್ಲ. ಲೋಕ ಇದು ವಿಧಿ ನಿಯಮ ಎಂದು ತಿಳಿಯುತ್ತದೆ. ಶಿವಯೋಗಿ ಹಾಗಲ್ಲ. ಆತ ವಿಜ್ಞಾನಿ. ಆತನಿಗೆ ಸುಖವೂ ಇರುವುದಿಲ್ಲ ದುಃಖವೂ ಇರುವುದಿಲ್ಲ, ಸುಖ ಬಂದರೆ ಹಿಗ್ಗುವುದಿಲ್ಲ ದುಃಖ ಬಂದರೆ ಕುಗ್ಗುವುದಿಲ್ಲ, ಶಿವಯೋಗಿ ಸಹಜ ಸುಖಕ್ಕಾಗಿ ಮರುಹುಟ್ಟು ಪಡೆದಿರುತ್ತಾನೆ. ಲೋಕ ಸುಖ ದುಃಖಕ್ಕಾಗಿ ಜನ್ಮತಾಳಿದೆ.

ಆಗುವುದು ತಪ್ಪಿಸಿಹೆನೆಂದಡೆ ತಪ್ಪಲರಿಯದು; ಶರಣರು ಈ ಮಾತನ್ನು ಸುಳ್ಳು ಮಾಡುವರು. ಏಕೆಂದರೆ ಅವರು ಸುಖಕ್ಕಾಗಿ ಯಾವ ಕಾಯಕವನ್ನು ಮಾಡುವುದಿಲ್ಲ.ಹೀಗಾಗಿ ಅವರಿಗೆ ದುಃಖವೇ ಆಗುವುದಿಲ್ಲ. ಲೋಕ ಹಾಗಲ್ಲ ಅದು ಸುಖಕ್ಕಾಗಿಯೇ ಬದುಕಿದೆ. ಅದರಿಂದ ಬರುವ ದುಃಖವನ್ನು ಸ್ವತಃ ತಾನೇ ಮೈಮೇಲೆ ಎಳೆದುಕೊಳ್ಳುತ್ತದೆ. ಇದು ತನಗೆ ನೀಗದೇ ಇದ್ದಾಗ ವಿಧಿ ಎಂದು ಕೈಚೆಲ್ಲುತ್ತದೆ.

ಲೋಕದ ಮಾತು ಇರಲಿ; ದೇವೇಂದ್ರ ದೇವತೆಗಳಿಗೆ ರಾಜ. ಆದರೂ ತಾನು ತನ್ನ ಸುಖಕ್ಕಾಗಿ ಋಷಿ ಪತ್ನಿಯನ್ನು ಬಯಸಿದ. ಕೋಳಿಯಾಗಿ ಬೆಳಗಾಯಿತೆಂದು ಅಪರಾತ್ರಿಯಲ್ಲಿ ಕೂಗಿದ. ಋಷಿ ಪ್ರಾತಃ ವಿಧಿಯನ್ನು ಮುಗಿಸಲು ನದಿ ಕಡೆಗೆ ಹೊರಟ ಕೋಳಿಯಾಗಿ ಕೂಗಿದ ದೇವೇಂದ್ರ ಋಷಿ ವೇಷ ಧರಿಸಿ ಋಷಿ ಪತ್ನಿಯೊಂದಿಗೆ ಸುಖಿಸಿದ. ಋಷಿ ಅನುಮಾನದಿಂದ ಕುಟೀರಕ್ಕೆ ಮರುಳಿದಾಗ ಪತ್ನಿ ಋಷಿಯೊಂದಿಗೆ ಸುಖದಲ್ಲಿರುವುದನ್ನು ತಿಳಿದ.' ದೇವೇಂದ್ರನ ಗುಟ್ಟು ರಟ್ಟಾಯಿತು. ದೇವೇಂದ್ರನಿಗೂ ಋಷಿ ಪತ್ನಿಗೂ ಋಷಿ ಶಾಪ ಕೊಟ್ಟ. ಈ ಶಾಪ ದೇವೇಂದ್ರನಿಗೆ ವಿಧಿ ಎನ್ನಲು ಸಾಧ್ಯವೇ ? ಸುಖಕ್ಕಾಗಿ ಹಾತೊರೆದು ಸ್ವತಃ ಮೈಮೇಲೆ ಎಳೆದುಕೊಂಡ ದುಃಖ.

ಶರಣರು ಹೀಗಲ್ಲ. ಅವರು ಗಟ್ಟಿಗರು. ಘಟ್ಟಿವಾಳಯ್ಯ ಸಂಧ್ಯಾಕಾಲದಲ್ಲಿ ಮನೆಗೆ ತೆರಳಿದಾಗ ಪತ್ನಿ ಮತ್ತೊಬ್ಬ ಪುರುಷನೊಂದಿಗೆ ಸುಖದಲ್ಲಿದ್ದಳು. ಸುಖದ ಶಬ್ಧ ಕೇಳಿದ ಘಟ್ಟಿವಾಳಯ್ಯ ಅವರಿಗೆ ತೊಂದರೆಯನ್ನುಂಟು ಮಾಡಲಿಲ್ಲ. ಕಟ್ಟೆಯ ಮೇಲೆ ಕುಳಿತ. ಸೃಷ್ಟಿಯ ಕ್ರಿಯೆಯಲ್ಲಿ ತೊಡಗಿದ ಅವರಿಬ್ಬರನ್ನು ಮನದಲ್ಲಿಯೇ ಹರಸಿದ.

ಕಾರ್ಯ ಸಂಪನ್ನವಾದ ಮೇಲೆ ಹೊರಬಂದ ಆ ಇಬ್ಬರೂ ಘಟ್ಟಿವಾಳಯ್ಯನನ್ನು ನೋಡಿ ಥರಥರನೆ ನಡುಗಿದರು. ಹೆದರಬೇಡಿ ನೀವು ಯಾವ ತಪ್ಪು ಮಾಡಲಿಲ್ಲ. ನೀವಿಬ್ಬರೂ ಅತಿಥಿಗಳಾಗಿ ಸಾಧ್ಯವಾದರೆ ನನ್ನೊಂದಿಗೆ ವಾಸ ಮಾಡಿ ಅಥವಾ ಬೇರೆ ಮನೆಯಲ್ಲಿ ನಿಮ್ಮ ಜೀವನವನ್ನು ಹಾಯಾಗಿ ಮುಂದುವರೆಸಿ ಎಂದು ಘಟ್ಟಿವಾಳಯ್ಯ ಸಹಜವಾಗಿಯೇ ಪರಮ ಸಂತೋಷದಿಂದ ನುಡಿದ.

ಇಂತಹ ಕೆಲಸ ಸಚ್ಚಿದಾನಂದ ಶಿವಯೋಗಿಗಲ್ಲದೇ ನರರಿಗೆಲ್ಲಿಯದೋ ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧ ಮಲ್ಲಯ್ಯನನ್ನು ಪ್ರಶ್ನಿಸಿದ್ದಾರೆ. ಏಕೆಂದರೆ ಇದು ನರರಿಗೆ ಒಪ್ಪಿಗೆಯಾಗುವ ಮಾತಲ್ಲ, ನರನಲ್ಲಿಯೇ ಸಂಗಮವಾದ ನಾರಾಯಣನಿಗೆ ಒಪ್ಪಿಗೆಯಾಗುವ ಮಾತು.

ಘಟ್ಟಿವಾಳಯ್ಯ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನ ಭಕ್ತನು ಆತ.ಆತನಿಗೆ ಯಾರ ಸಂಗದ ಅವಶ್ಯಕತೆಯೂ ಇಲ್ಲ. ಸಕಲ ಕಾಯಗಳಲ್ಲಿಯೂ ಲಿಂಗಯ್ಯನಿದ್ದರೂ ಆಯಾ ಕಾಯಗಳಿಗೆ ಲಿಂಗಯ್ಯನನ್ನು ಕಂಡುಕೊಳ್ಳಲು ಸಾಧ್ಯವಾಗಿಲ್ಲ ಅಷ್ಟೆ. ಲಿಂಗಯ್ಯ ಸಂಗಮವಾದ ಅಂಗಗಳನ್ನು ಲಿಂಗಯ್ಯನನ್ನು ಕಂಡುಕೊಂಡ ಅಂಗ ನಿಂದೆ ಮಾಡಬಹುದೇ ? ಅದು ವೇಶ್ಯಾವೃತ್ತಿಯಲ್ಲಿದ್ದರೇನು ? ದಾಸಿಯ ವೃತ್ತಿಯಲ್ಲಿದ್ದರೇನು ? ಲಿಂಗಾಂಗವೇ ಆಗಿವೆ. ಇಂತಹ ಸೂತ್ರ ಶರಣರಿಗೆ ಮಾತ್ರವೇ ಹೊಳೆಯುತ್ತದೆ. ತಿಳಿದರೆ ಸಕಲ ತನುಗಳಿಗೂ ಹೊಳೆಯುತ್ತದೆ.

**1182**

**ಸಂಚಿತಾದಿ ಕರ್ಮತ್ರಯಂಗಳು**
**ಜೀವನಿಗಲ್ಲದೆ ಶಿವಸ್ವರೂಪನಿಗೆಲ್ಲಿಹವೊ?**
**ಆಡುವ ಗೊಂಬೆಯನು ಆಡಿಸುವಾತಂಗಲ್ಲದೆ,**
**ಆಡುವ ಗೊಂಬೆಗೆಲ್ಲಿಹದೊ ಸ್ವತಂತ್ರತೆ?**
**ಕಪಿಲಸಿದ್ಧಿಮಲ್ಲಿಕಾರ್ಜುನಯ್ಯಾ,**
**ಇದರಿರವು ಸ್ವತಂತ್ರನಿಗಲ್ಲದೆ ಅಸ್ವತಂತ್ರನಿಗೆಲ್ಲಿಹದೋ?**

ಅಂಗ ಅಂಗವನ್ನಾವರಿಸಿದ ಮನ ಒಂದಾದಾಗ ಸಂಚಿತಾದಿ ಕರ್ಮತ್ರಯಂಗಳು ಅಂಗದಲ್ಲಿ ಹುಟ್ಟುತ್ತವೆ. ಅಂಗ ಜೀವವಾದರೆ, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವ ಶಿವಸ್ವರೂಪ ಆತನಿಗೆ ಸಂಚಿತಾದಿ ಕರ್ಮತ್ರಯಂಗಳಿಲ್ಲ. ಆತ ತನುವನ್ನು ಹಾಗೂ ತನುವನ್ನಾವರಿಸಿದ ಮನವನ್ನು ಗೊಂಬೆಯಂತೆ ಆಡಿಸುತ್ತಾನೆ. ಗೊಂಬೆ ಆಡಿಸುವವನು ಸ್ವತಂತ್ರ, ಗೊಂಬೆ ಸ್ವತಂತ್ರವಲ್ಲ. ಗೊಂಬೆ ಆಡಿಸುವವ ಹೇಗೆ ಗೊಂಬೆ ಆಡಿಸುತ್ತಾನೆಯೋ ಹಾಗೆಯೇ ತನುವೆಂಬ ಗೊಂಬೆ ಆಡುತ್ತದೆ. ತನು ಮತ್ತು ಮನ ಒಂದಾಗಿ ತನುವಿನಲ್ಲಿಯೇ ಸಂಗಮವಾದ ತನುವಿನ ಸೂತ್ರಧಾರನಿಗೆ ಶರಣು ಹೋದಾಗ ಸಂಚಿತಾದಿ ಕರ್ಮತ್ರಯಂಗಳು ತನುವಿನಿಂದ ಉದುರಿ ಬೀಳುತ್ತವೆ. ಕಾಯ ಕೈಲಾಸವಾಗುತ್ತದೆ. ಕಾಯ ಮತ್ತು ಮನಕ್ಕೆ ಕಾಯದಲ್ಲಿಯೇ ಸಂಗಮವಾದ ಅರಿವಿನ ದೇವರು ಇರುವ ಅರಿವಾಗುತ್ತದೆ. ಸ್ವತಂತ್ರ ಧೀರ ಸಿದ್ದೇಶ್ವರನೇ ತಾನಾಗುತ್ತಾನೆ.

**1183**

**ಲಿಂಗವ ಪೂಜಿಸುವವರ ಕಂಡಡೆ,**
**ಎನ್ನ ಮನ ಉಬ್ಬಿತ್ತು ನೋಡಯ್ಯಾ ,**
**ಜಂಗಮವ ಪೂಜಿಸುವರ ಕಂಡಡೆ,**
**ಹೋದ ಪ್ರಾಣ ಬಂದಂತಾಯಿತ್ತಯ್ಯಾ .**
**ತನ್ನ ತಾನರಿವರ ಕಂಡಡೆ,**

**ಕಪಿಲಸಿದ್ಧಮಲ್ಲಯ್ಯನೀತನೆಂದು ನಂಬಿತ್ತು ನೋಡಯ್ಯಾ. ಎನ್ನ ಮನ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಅಂಗವನ್ನು ಆವರಿಸಿದ ಮನ ಕಂಡುಕೊಂಡು ಆತನೇ ಸರ್ವಾಂಗದಲ್ಲಿ ಸಂಗಮವಾದ ಲಿಂಗಯ್ಯನೆಂದು ನಂಬಿ ಆತನನ್ನು ಪೂಜಿಸುವ ಭಕ್ತರನ್ನು ಕಂಡರೆ ಎನ್ನ ಮನ ಉಬ್ಬಿತು ನೋಡಯ್ಯಾ ಎಂದು ಪರಮಾನಂದದಿಂದ ಹಾಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಸರ್ವಾಂಗದಲ್ಲಿ ಸಂಗಮವಾದ ಅರಿವಿನ ಲಿಂಗವೇ ಜಂಗಮ. ಸರ್ವಾಂಗವನ್ನು ಆವರಿಸಿದ ಮನ ಆ ಜಂಗಮನಿಗೆ ಭಕ್ತನಾಗಿ ಪೂಜಿಸುವುದನ್ನು ಕಂಡಡೆ ಹೋದ ಪ್ರಾಣ ಬಂದಂತಾಯಿತಯ್ಯಾ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಲೋಕ ಲಿಂಗ ಪೂಜಿಸುವುದು ಕಾಣುತ್ತದೆ. ಶರಣರ ಲಿಂಗ ಪೂಜೆ ಕಾಣುವುದಿಲ್ಲ. ಲೋಕ ಜಂಗಮನನ್ನು ಪೂಜಿಸುವುದನ್ನು ಕಾಣುತ್ತದೆ. ಶರಣ ಜಂಗಮವ ಪೂಜಿಸುವುದು ಕಾಣುವುದಿಲ್ಲ. ಲಿಂಗವೆಂದರೆ ಅಂಗದ ಮೇಲೆ ಧರಿಸಿದ ಲಿಂಗ ಲಿಂಗವಲ್ಲ. ಸರ್ವಾಂಗದಲ್ಲಿ ಸಂಗಮವಾದ ಅರಿವೇ ಲಿಂಗ, ಸರ್ವಾಂಗದಲ್ಲಿ ಸಂಗಮವಾದ ಅರಿವೇ ಜಂಗಮ.

ಲಿಂಗವೆಂದರೆ ಒಂದು ವಸ್ತುವಲ್ಲ ಜಂಗಮವೆಂದರೆ ಒಂದು ವ್ಯಕ್ತಿಯಲ್ಲ, ಅಂಗದಲ್ಲಿ ಸಂಗಮವಾದ ಅರಿವಿನ ಲಿಂಗವನ್ನು ಅರಿವುದೇ ತನ್ನ ತಾನು ಅರಿವುದು, ಅಂಗದಲ್ಲಿಯೇ ಸಂಗಮವಾದ ಜಂಗಮನನ್ನು ಅರಿಯುವುದೇ ತನ್ನ ತಾನು ಅರಿವುದು. ತನುವನ್ನು ಆವರಿಸಿದ ಮನ , ತನುವಿನಲ್ಲಿಯೇ ತನ್ಮಯವಾದ ಲಿಂಗಯ್ಯನನ್ನು ಹಾಗೂ ಜಂಗಮನನ್ನು ಸಾಕ್ಷಾತ್ ಕಪಿಲಸಿದ್ಧ ಮಲ್ಲಯ್ಯನೆಂದು ನಂಬಿದಾಗ ಆ ಮನವೇ ಘನಮನವಾಗುತ್ತದೆ.

**1184**

**ಲಿಂಗವಾದ ಬಳಿಕ ಪಂಚಸೂತ್ರ ಸಹವಾಗಿರಬೇಕು.**
**ಜಂಗಮವಾದ ಬಳಿಕ ಸದ್ಗುಣಸಹಿತವಾಗಿರಬೇಕು.**
**ತನ್ನ ತಾನರಿತವನಾದ ಬಳಿಕ ಮರೀಚಿಜಲದಂತಿರಬೇಕು**
**ನಮ್ಮ ಕಪಿಲಸಿದ್ಧಮಲ್ಲೇಶನಲ್ಲಿ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗವನ್ನು ಅಂಗವನ್ನು ಆವರಿಸಿದ ಮನ ಲಿಂಗಯ್ಯನನ್ನು ಅರಿತು ಆ ಲಿಂಗದೊಂದಿಗೆ ಒಂದಾದ ಬಳಿಕ ಅಂಗ ಲಿಂಗಾಗವಾಗುತ್ತದೆ. ತನಗೆ ತಾನೇ ಸಹಜವಾಗುತ್ತದೆ. ಕಣ್ಣು ಕಣ್ಣಿನ ಕಣ್ಣಾಗಿ, ಚರ್ಮ ಚರ್ಮದ ಚರ್ಮವಾಗಿ, ನಾಲಿಗೆ ನಾಲಿಗೆಯ ನಾಲಿಗೆಯಾಗಿ, ಕಿವಿ ಕಿವಿಯೊಳಗಣ ಕಿವಿಯಾಗಿ, ಮೂಗು ಮೂಗಿನೊಳಗಿನ ಮೂಗಾಗಿ ಅಂಗ ಸದಾ ಸಹಜವಾಗಿ ಅರಿವಿನ ಪರಿಮಳವನ್ನೇ ಬೀರುತ್ತದೆ. ನಡೆದಾಡುವ ಲಿಂಗವಾಗುತ್ತದೆ.

ಸದಾ ಚಲನೆಯಲ್ಲಿರುವ ಸದ್ಗುಣಿ ಜಂಗಮವಾಗುತ್ತದೆ. ನಿರ್ಗುಣಿಯಾಗಿ ನಿಜಾನಂದ ತತ್ವವನ್ನೇ ಬೀರುತ್ತದೆ. ತನಗೆ ತಾನೇ ಅರಿತರಿತು ಅರಿವಿನ ಕಣಜವೇ ತಾನಾಗುತ್ತಾನೆ. ಮರೀಚಿಕೆಯ ಜಲ ಕಣ್ಣಿಗೆ ಗೋಚರವಾಗಿ ಹಿಡಿಯಲು ಹೋದರೆ ಕಾಣದಂತಾಗುತ್ತದೆ. ಈ ಪರಮ ಸುಖವನ್ನು ಸಕಲ ಶರಣರು ಅನುಭವಿಸಿದರು. ತಾವು ತಮ್ಮಲ್ಲಿಯೇ ಇರುವ ಅರಿವಿನ ಅಮೃತವನ್ನು ಉಂಡ ಸವಿಯನ್ನು ಅಕ್ಷರಗಳ ಮೂಲಕ ದಾಖಲಿಸಿದರು.

ಬುದ್ಧ, ಮಹಾವೀರ, ಪೈಗಂಬರರು, ಕ್ರಿಸ್ತ , ಕೃಷ್ಣ, ದಾಸವರೇಣ್ಯರು, ತತ್ವಪದಕಾರರು

ಅರಿವಿನ ಪರಮ ಸುಖವನ್ನು ಉಂಡವರೇ ಆಗಿದ್ದಾರೆ. ಉಣ್ಣಲು ಬಾರದ ಜನಕ್ಕೆ ಅಜೀರ್ಣವಾದರೆ ಯಾರೇನು ಮಾಡಿಯಾರು ? ಅರಿವಿನ ಧರ್ಮವನ್ನು ಮರೆತು ತನು ಅಜ್ಞಾನದ ಧರ್ಮಕ್ಕೆ ಮರುಳಾದರೆ ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರು ಮರುಳ ಸಿದ್ಧಯ್ಯನಾದರೂ ಏನು ಮಾಡಿಯಾನು? ಮರುಳನಿಗೆ ಮರುಳನಾಗಿ ತನುವಿನಲ್ಲಿಯೇ ಮೈಮರೆತು ಪರಮಾನಂದದಿಂದ ತನಗೆ ಬೇಕಾದಷ್ಟು ದಿನಗಳವರೆಗೆ ವಾಸಿಸಿ ಕಾಯ ಕಳಚಿ ಬಯಲಲ್ಲಿ ಬಯಲಾಗಿ ಬಯಲಾಗುತ್ತಾನೆ.

**1185**

**ಲಿಂಗವ ಪೂಜಿಸುವವರನಂತರುಂಟು.**
**ಜಂಗಮವ ಪೂಜಿಸುವವರನಂತರುಂಟು.**
**ತನ್ನ ತಾನರಿದು, ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ**
**ಕೂಡುವವರೊಬ್ಬರೂ ಇಲ್ಲ.**

ಲಿಂಗಯ್ಯನೆಂದರೆ ಅಂಗಕ್ಕೆ ಸದಾ ಪಾಠಮಾಡುವಾತ, ಅಂಗ ಎಡವಿ ಬೀಳುವಾಗ ಅರಿವಿನ ಮಾತು ಹೇಳಿ ಅಂಗವನ್ನು ಆವರಿಸಿದ ಮನವನ್ನು ಮೈದಡವಿ ಮುನ್ನಡೆಸುವಾತ ಈತ ಹೊರಗಿಲ್ಲ. ಈತ ಹೊರಗಣ ದೇವರೂ ಅಲ್ಲ. ಅಂಗದಲ್ಲಿಯೇ ಅಂಗಕ್ಕೆ ಮತ್ತು ಮನಕ್ಕೆ ಜನ್ಮ ನೀಡಿ ಅಂಗವನ್ನು ತನ್ನಂತೆಯೇ ಮಾಡಿಕೊಳ್ಳುವ ಅರಿವಿನ ದೇವರು ಈತ. ಅಂಗವನ್ನಾವರಿಸಿದ ಮನ ಸದಾ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗವನ್ನು ಪೂಜಿಸಬೇಕು. ಆದರೆ ಮನ ಅಂಗದ ಮೇಲೆ ಲಿಂಗವನ್ನು ಧರಿಸಿ ಮರೆವಿನ ಲಿಂಗವನ್ನು ಪೂಜಿಸಲು ಅಂಗಕ್ಕೆ ಆದೇಶ ನೀಡಿದೆ. ಅಂಗದ ಮೇಲೆ ಧರಿಸಿದ ಲಿಂಗ ಅದು ಹೊರಗಣ ವಸ್ತು. ಹಾಗೆಯೇ ಇಡೀ ಬ್ರಹ್ಮಾಂಡದಲ್ಲಿ ಹೊರಗಣ ದೇವರನ್ನು ಪೂಜಿಸುವವರು ಕಾಣುತ್ತಾರೆಯೇ ಹೊರತು ಒಳಗಣ ದೇವರನ್ನು ಪೂಜಿಸುವವರು ಕಾಣುವುದಿಲ್ಲ.ಹೀಗಾಗಿ ಬ್ರಹ್ಮಾಂಡದಲ್ಲಿರುವ ಅಂಗಗಳೆಲ್ಲಾ ಒಂದೇ ಆಗಿದ್ದರೂ ಹೆಣ್ಣು,ಗಂಡು ಎಂದು ಹಿಂದೂ,ಮುಸ್ಲಿಂ,ಕ್ರೈಸ್ತ ಎಂದು ಬೌದ್ಧ, ಜೈನ, ಪಾರ್ಸಿ ಎಂದು ತನಗೆ ತಾನೇ ಅನಂತ ಅಂಗಗಳೆಂದು ಸೀಳಿಕೊಂಡಿದೆ.

ಅಂಗ ಮತ್ತು ಮನ ಪೂಜಿಸುವ ಅರಿವಿನ ಲಿಂಗಯ್ಯ ಸಕಲರಿಗೂ ಕಾಣುವುದಿಲ್ಲ. ಪೂಜಿಸುವವನಿಗೆ ಮಾತ್ರ ಕಾಣುತ್ತಾನೆ. ಆತನ ಅನುಭವಕ್ಕೆ ಬರುತ್ತಾನೆ. ಪೂಜಿಸುವ ಮನವೇ ಘನ ಮನವಾಗಿ ಜಂಗಮವಾಗುತ್ತದೆ. ಹೀಗಾಗಿ ಜಂಗಮವೂ ಕಾಣುವುದಿಲ್ಲ. ಪೂಜಿಸಿದ ಮನ ಜಂಗಮವನ್ನು ವ್ಯಕ್ತಿಯೆಂದು ಭಾವಿಸಿ ಜಂಗಮ ವೇಷ ಧರಿಸಿದ ವ್ಯಕ್ತಿಯನ್ನು ಪೂಜಿಸುತ್ತದೆ. ಹೀಗೆ ಪೂಜಿಸುವ ತನುಗಳು ಅನಂತ. ಇಂತಹ ತನುಗಳು ತನಗೆ ತಾನರಿಯದ ತನುಗಳು, ತನುವಿನಲ್ಲಿಯೇ ತನ್ಮಯವಾದ ಅರಿವಿನ ದೇವರನ್ನು ತನುವನ್ನಾವರಿಸಿದ ಮನ ಅರಿಯಲು ಹೋದರೆ ಆ ದೇವರಲ್ಲಿಯೇ ಕೂಡಿ ಕೂಡದ ಅಗಲದ ಕೂಟದ ಸುಖವನ್ನು ಅನುಭವಿಸುತ್ತದೆ. ತನಗೆ ತಾನೇ ಅರಿತು ಮನ ಅರಿವಿನ ದೇವರನ್ನು ಕಂಡುಕೊಂಡು ಆ ದೇವರೇ ತಾನಾಗುತ್ತದೆ.

**1186**

**ತಿಳಿಯದೆ ಪೂಜಿಸಿದಡಾಗುವುದೇನೋ ಅಯ್ಯಾ !**
**ತಿಳಿದು ತಿಳಿದು ಮಾಡಬೇಕು ಲಿಂಗ ಪೂಜೆಯ;**

**ತಿಳಿದು ತಿಳಿದು ಮಾಡಬೇಕು ಜಂಗಮಾರ್ಚನೆಯ**
**ತಿಳಿದು ಮಾಡಬೇಕು, ತಿಳಿಯದೆ ಮಾಡಲು**
**ನಿನ್ನ ಸಿದ್ಧಿಗೆ ಸಿದ್ಧರಾದರಲ್ಲದೆ,**
**ನಿನ್ನಂಗ ದೊರೆಕೊಂಬ ಪರಿಯ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇವರು ಹೊರಗಿಲ್ಲ. ದೇಹದಲ್ಲಿಯೇ ಸಂಗಮವಾಗಿದ್ದಾನೆ. ದೇಹದಲ್ಲಿ ಸಂಗಮವಾದ ಅರಿವೇ ಗುರು. ಅಂತಹ ಗುರುದೇವನೇ ಮಹಾದೇವ. ಆತನೇ ಸದಾಶಿವ; ಸಾಕ್ಷಾತ್ ಪರಬ್ರಹ್ಮನೂ ಆಗಿದ್ದಾನೆ.

ದೇಹವನ್ನು ಆವರಿಸಿದ ಮನದಿಂದ, ದೇಹದಲ್ಲಿಯೇ ಸಂಗಮವಾದ ದೇವರನ್ನು ಕಂಡುಕೊಂಡು, ಅಂತಹ ದೇವರಿಗೆ ಮನ ಭಕ್ತನಾಗಿ ತಿಳಿ ತಿಳಿದು ಪೂಜಿಸಬೇಕು. ಈ ಪೂಜೆಯೇ ಪೂಜೆ. ಹೀಗೆ ಮಾಡುವ ಪೂಜೆ ಯಾರಿಗೂ ಕಾಣುವುದಿಲ್ಲ. ತನಗೆ ಮಾತ್ರ ಕಾಣುತ್ತದೆ. ತನ್ನ ಅನುಭವಕ್ಕೆ ಮಾತ್ರ ಬರುತ್ತದೆ. ಸರ್ವಾಂಗದಲ್ಲಿಯೂ ಅರಿವಿನ ಲಿಂಗಯ್ಯ ಸಂಗಮವಾಗಿದ್ದಾನೆ. ಮನದಿಂದಲೇ ಈತನಿಗೆ ಭಕ್ತನಾಗಿ ತಿಳಿ ತಿಳಿದು ಲಿಂಗಯ್ಯನ ಪೂಜೆಯನ್ನು ಮಾಡಬೇಕು. ಈ ಲಿಂಗಯ್ಯನೇ ಜಂಗಮಯ್ಯನಾಗಿದ್ದಾನೆ. ಈ ಜಂಗಮನ ಪೂಜೆಯನು ಮನದಿಂದ ತಿಳಿ ತಿಳಿದು ಪೂಜೆಯನ್ನು ಮಾಡಬೇಕು.

ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಲಿಂಗವಲ್ಲ ಅದು ಕಲ್ಲು; ಪಾಷಾಣ. ಹೀಗೆಂದು ಮನಕ್ಕೆ ಗೊತ್ತಿದೆ. ಆದರೂ ಮನ ತನುವನ್ನು ಹಿಡಿದು ಕಲ್ಲನ್ನೇ ಲಿಂಗವನ್ನಾಗಿಸಿ ಅಂಗದ ಮೇಲೆ ಧರಿಸಿ, ತಿಳಿಯದೆ ಪೂಜಿಸುತ್ತದೆ.ಹೀಗೆ ಅಂಗ ಹಿಡಿದು ಅಂಗದ ಮೇಲೆ ಧರಿಸಿದ ಲಿಂಗವನ್ನು ಅನಂತ ಕಾಲ ಪೂಜಿಸಿ ಮಜ್ಜನಕ್ಕೆರೆದರೂ ಅದು ನೆನೆಯಲಿಲ್ಲ. ಪೂಜಿಸದೆ ಮರೆತರೂ ಅದು ಬಾಡಲಿಲ್ಲ. ಪೂಜಿಸಿದ ತನು ಮತ್ತು ಮನಕ್ಕೆ ಯಾವ ಸಂದೇಶವನ್ನು ನೀಡಲಿಲ್ಲ. ತಿಳಿಯದೆ ಪೂಜೆಮಾಡಿದ ತಪ್ಪಿಗಾಗಿ ತನುವಿನ ಆಯುಷ್ಯ ವ್ಯರ್ಥವಾಯಿತು. ಅನಂತ ಕಾಲದವರೆಗೆ ತಿಳಿಯದೆ ಮಾಡಿದ ಪೂಜೆಯಿಂದಾಗಿ ತನಗೆ ತಾನೇ ಭ್ರಮೆಗೆ ಒಳಪಟ್ಟು ಸಿದ್ಧನಾದನಲ್ಲದೆ ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಯ್ಯನ ದರುಶನವಾಗಲಿಲ್ಲ. ನಿನ್ನ ಅಂಗನನ್ನ ಅಂಗದಲ್ಲಿಯೇ ಸಂಗಮವಾಗಿದೆ ಎಂಬುದು ಅಂಗವನ್ನು ಆವರಿಸಿದ ಮನವೆಂಬ ಮಂಗಕ್ಕೆ ಹೊಳೆಯದಿದ್ದರೆ ಹೇಗೆ ಎನ್ನುವ ಕಾಳಜಿಯಿಂದಾಗಿ ಸಿದ್ಧರಾಮಶಿವಯೋಗಿಗಳು ಈ ಸೂತ್ರವನ್ನು ರಚಿಸಿದ್ದಾರೆ.

**1187**

**ಸಕಲ ನಿಃಕಲದಲ್ಲಿ, ಬ್ರಹ್ಮಾಂಡ ತತ್ವದಲ್ಲಿ**
**ಕರ್ಮದ ಸೊಮ್ಮಿನ ಸೀಮೆಯನತಿಗಳೆದು**
**ಅದ ಲಿಂಗವೆಂದು ತೋರಬಲ್ಲಾತ ಗುರು.**
**ತನುಗುಣ ಸಂಬಂಧವ ತಾನೆಂದು ತೋರಲೀಯದೆ,**
**ನಿಶ್ಚಯವ ಮಾಡಿ ತಾತ್ಪರ್ಯ ಕಳೆಯನಿರಿಸಿ,**
**ಸಕಲದಲ್ಲಿ ನಿಃಕಲದಲ್ಲಿ, ರೂಪಿನಲ್ಲಿ ಅರೂಪಿನಲ್ಲಿ,**
**ಭಾವದಲ್ಲಿ ನಿರ್ಭಾವದಲ್ಲಿ ಅವೆ ಅವಾಗಿ ತೋರಬಲ್ಲಾತ ಗುರು.**
**ಈ ಪರಿಯಲ್ಲಿ ತೋರಿ ಎನ್ನ ಭವವ ತಪ್ಪಿಸಿದ**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯನೆಂಬ ಪರಮಗುರು.**

ಇಡೀ ಜಗತ್ತಿನಲ್ಲಿರುವ ಅಂಗಗಳೆಲ್ಲಾ ಒಂದೇ. ಸಕಲ ಅಂಗಗಳು ಬ್ರಹ್ಮಾಂಡ ತತ್ವವನ್ನು ಹೊಂದಿವೆ. ಆದರೆ ತತ್ವ ಅಂಗದಲ್ಲಿಯೇ ಉಳಿದು ಅದು ಕರ್ಮವನ್ನು ಮಾತ್ರ ಪಾಲಿಸುತ್ತಲಿದೆ. ಇದಕ್ಕೆ ಕಾರಣ ಅಂಗವನ್ನು ಆವರಿಸಿದ ಮನವೇ ಆಗಿದೆ.

ಅಂಗ ಗುಣಗಳನ್ನು ತನಗೆ ತಾನೇ ಕಳೆದುಕೊಂಡು ನಿರ್ಗುಣಿಯಾಗಿ, ಇದು ಬರೀ ಅಂಗವಲ್ಲ ಲಿಂಗವೆಂದು ಪ್ರತಿ ಅಂಗಕ್ಕೆ ತೋರಬಲ್ಲಾತ ಗುರು.

ನನಗೆ ನಾನೇ ನನ್ನಂಗವನ್ನು ಅರಿವಿನಿಂದ ನೋಡಿಕೊಂಡಾಗ ನನ್ನ ಸರ್ವಾಂಗದಲ್ಲಿ ಗುರುದೇವನಿದ್ದಾನೆಂದು ನನಗೆ ತಿಳಿಯಿತು. ನಾನು ಆ ಗುರುದೇವನಿಗೆ ಶಿಷ್ಯನಾದೆ.

ಅಂಗದಲ್ಲಿ ಸಂಗಮವಾದ ಅರಿವೇ ಗುರು. ಅಂಗವನ್ನು ಆವರಿಸಿದ ಮನವೇ ಶಿಷ್ಯ . ಅಂಗ ಇವರಿಬ್ಬರೂ ವಾಸಕ್ಕೆ ಇದ್ದ ಮನೆಯೆಂದು ತಿಳಿದಾಗ ಅಂಗದ ಗುಣಗಳು ತನಗೆ ತಾನೇ ಕಳಚಿ ಬೀಳುತ್ತವೆ. ಆಗ ಸರ್ವಾಂಗ ನಿರ್ಗುಣಿಯಾಗುತ್ತದೆ. ಹೀಗೆ ನಿನ್ನ ಸರ್ವಾಂಗವೂ ಲಿಂಗವೇ ಆಗಿದೆ ಎಂದು ಮತ್ತೊಂದು ಅಂಗಕ್ಕೆ ತೋರಬಲ್ಲಾತ ಗುರು.

ಸಕಲ ವಸ್ತುಗಳಲ್ಲಿ ಅಡಗಿದ ಸತ್ಯ ವಸ್ತುವನ್ನು ತೋರ ಬಲ್ಲಾತನೇ ಗುರು. ರೂಪದಲ್ಲಿ ನಿರೂಪವನ್ನು , ಭಾವದಲ್ಲಿ ನಿರ್ಭಾವವನ್ನು ತೋರಬಲ್ಲಾತನೇ ಗುರು.

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ದರುಶನ ಬಯಸಿ ಒಳಹೊಕ್ಕಾಗ ಆತ ಮನವನ್ನು ಘನಮನವನ್ನಾಗಿಸಿ ತನ್ನಂತೆ ಮಾಡಿಕೊಳ್ಳುತ್ತಾನೆ. ಈತನೇ ಪರಮಗುರು.

**1188**

**ಶ್ರೀಗುರುವೇ ದಿವ್ಯಮಹಾಮುನಿಯೇ,**
**ಶ್ರೀಗುರುವೇ ಲೋಕವೀರೇಳ ಹೆತ್ತ**
**ಆನಂದಮಯ ಚಿನ್ಮಯ ಮಹಾಗುರುವೆ, ದೇವಾ,**
**ಶಿಷ್ಯಕಾರಣ ನೀವು ಪರಶಿವ ಮೂರ್ತಿಯಾದಿರಯ್ಯಾ,**
**ನಿತ್ಯ ಪ್ರಸಾದದಲ್ಲಿ ಮುಕ್ತನನು ಮಾಡಿದ**
**ನಿತ್ಯ ಜೋತಿರ್ಮಯ ಗುರುವೆ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಶ್ರೀ ಗುರುವೇ ದಿವ್ಯ ಮಹಾಮುನಿಯೇ ಇಡೀ ಬ್ರಹ್ಮಾಂಡಕ್ಕೆ ಜನ್ಮ ನೀಡಿದಾತ ನೀನು. ಆನಂದಮಯನು ನೀನು, ಚಿನ್ಮಯ ಮಹಾಗುರು ನೀನು. ದೇವಾದಿ ದೇವನೇ ಅಂಗವನ್ನು ಆವರಿಸಿದ ಮನವೆಂಬ ಶಿಷ್ಯನನ್ನು ಪಾವನ ಮಾಡಲು ನೀವು ಪರಶಿವ ಮೂರ್ತಿ ಆಗಿರ್ದರಯ್ಯಾ . ಅಂಗದಲ್ಲಿಯೇ ಅವಧರಿಸಿ ಅಂಗವನ್ನು ಆವರಿಸಿದ ಮನವೆಂಬ ಶಿಷ್ಯನನ್ನು ಮುಕ್ತನನ್ನಾಗಿ ಮಾಡಿ, ನಿತ್ಯ ನಿಮ್ಮ ಅರಿವಿನ ಪ್ರಸಾದವನ್ನು ನೀಡಿದಿರಿ.

ನಿಮ್ಮ ಪ್ರಸಾದವನು ಉಂಡ ಶಿಷ್ಯ ತನ್ನ ಸಕಲ ಅಜ್ಞಾನವನ್ನು ತೊಳೆದುಕೊಂಡು ಮಹಾಜ್ಞಾನಿಯಾಗಿ ನಿಮ್ಮಂತೆ ನೋಡಿದ. ಕೇಳಿದರೆ ನಿಮ್ಮ ಮಾತನ್ನೇ ಕೇಳಿದ. ಅರಿವಿನ ಪರಿಮಳವನ್ನು ಸ್ವೀಕರಿಸಿ ನಿಮ್ಮ ಬೆಳಗಿನಿಂದ ಬೆಳಗಾಗಿ ಬೆಳಗಿದ. ನಿತ್ಯ ಜ್ಯೋತಿರ್ಮಯ ಗುರುವೇ ಕಪಿಲಸಿದ್ಧ ಮಲ್ಲಿಕಾರ್ಜುನ.

**1189**

**ಗುರುವೆ, ಇಹಪರ ಗುರುವೆ, ಗುರುವೆ ಕರುಣಾಕರನೆ,**
**ಗುರುವೆ, ಶುದ್ಧಾತ್ಮನೆ ನಿರ್ಮಳಾಂಗ**
**ಗುರುವೆ, ನಿನ್ನಂತೆ ಎನ್ನುವನು ಮಾಡಿದ ಪರಮ**
**ಗುರುವೆ, ನೀನು ಕಪಿಲಸಿದ್ಧಮಲ್ಲಿನಾಥ.**

ಅಂಗವನ್ನು ಆವರಿಸಿದ ಮನ ಅಶಾಂತಿಯಿಂದ ಅಜ್ಞಾನದಿಂದ ಅಂಗದೊಂದಿಗೆ ಕ್ಷಣ ಕ್ಷಣಕ್ಕೂ ತಳಮಳಗೊಳ್ಳುತ್ತದೆ. ಅಂಗದಲ್ಲಿ ಅಗ್ನಿಯನ್ನುಂಟು ಮಾಡಿ ಧಗಧಗನೆ ಉರಿಯುವಂತೆ ಮಾಡುತ್ತದೆ ಮನ.

ಮನ ಅಂಗವನ್ನು ಆವರಿಸಿದ್ದರೆ ಅರಿವೆಂಬ ಗುರುದೇವ ಅಂಗದೊಳಗೆ ಸಂಗಮವಾಗಿ ಅಂಗದ ಪ್ರಳಯವನ್ನು ನಿರ್ಲಕ್ಷದಿಂದ ನೋಡುತ್ತಾ ನಿರ್ಲೇಪದಿಂದ, ಪರಮಾನಂದದಿಂದ ಅಂಗದಲ್ಲಿಯೇ ಇದ್ದಾನೆ. ಈತ ಇಹಲೋಕದ ಗುರು ಆಗಿದ್ದಾನೆ, ಪರ ಲೋಕದ ಗುರು ಆಗಿದ್ದಾನೆ. ಇಡೀ ಬ್ರಹ್ಮಾಂಡಕ್ಕೆ ಜನ್ಮ ನೀಡಿ ಅಂಗದೊಂದಿಗೆ ಅವತರಿಸಿ ಬ್ರಹ್ಮಾಂಡವನ್ನು ಪರಮಾನಂದದಿಂದ ನೋಡುತ್ತಾ ಅಂಗದಲ್ಲಿಯೇ ಇದ್ದಾನೆ. ಈತ ಕರುಣಾಕರನು, ಶುದ್ಧಾತ್ಮನು, ನಿರ್ಮಳಾಂಗನು ಆಗಿದ್ದಾನೆ. ಅಂಗವನ್ನು ಆವರಿಸಿದ ಮನವನ್ನು ಹಾಗೂ ಅಂಗವನ್ನು ತನ್ನಂತೆ ಮಾಡಿಕೊಳ್ಳಲು ಅಂಗವಾಗಿಯೇ ಅವತಾರವೆತ್ತಿದ್ದಾನೆ.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಶಿಷ್ಯನಾದರೆ ಮಾತ್ರ ಆ ಶಿಷ್ಯನಿಗೆ ಗುರುದೇವ ದರುಶನ ನೀಡಿ ತನ್ನಂತೆ ಮಾಡಿಕೊಳ್ಳುತ್ತಾನೆ. ಆತ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನೇ ಆಗಿದ್ದಾನೆ. ಆತನ ವಾರಸುದಾರ ತಾನೆಂದು ಬಲವಾಗಿ ಮನ ತಿಳಿದಾಗ ಮಾತ್ರ ಈ ವೃತ್ತಾಂತ ಅನುಭವಕ್ಕೆ ಬರುತ್ತದೆ.

**1190**

**ಅನುಪಮನೆ ನಿನ್ನ ಹವಣಿಸಲಿಕ್ಕರಿದಯ್ಯಾ**
**ಘನತರವೆನಿಸುವ ಸಾಯುಜ್ಯಪದವ ಮೀರಿದ,**
**ಶಬ್ದ ಹಲವ ಮೀರಿದ ಬ್ರಹ್ಮ**
**ಗುರುಕರುಣದಿಂದ ಕಂಡೆ ಪರಮಪದವ**
**ಗುರುವೆ, ಮದ್ಗುರುವೇ, ಸದ್ಗುರುವೇ, ತ್ರಿಜಗದ್ಗುರುವೇ,**
**ಗುರುವೇ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಗುರುದೇವ ವ್ಯಕ್ತಿ ಅಲ್ಲ. ವ್ಯಕ್ತಿಯಾಗಿ ಕಾಣುವ ಗುರುದೇವ ಕೂಡಾ ಪರಮ ಗುರುವನ್ನು ಅರಿಯಲೇಬೇಕು. ಹಾಗೆಯೇ ಶಿಷ್ಯ ಕೂಡಾ ವ್ಯಕ್ತಿ ಅಲ್ಲ. ವ್ಯಕ್ತಿಯಾಗಿ ಕಾಣುವ ಶಿಷ್ಯ ಕೂಡಾ ಪರಮ ಶಿಷ್ಯನನ್ನು ಅರಿಯಲೇಬೇಕು.

ಪರಮ ಗುರುದೇವನು ಪರಮ ಶಿಷ್ಯನಿಗೆ ಗುರುವಾದಾಗ ಆ ಗುರುದೇವನಿಗೆ ಮನ ಶಿಷ್ಯನಾದಾಗ ಅರಿಯಲೇಬೇಕು. ದೇಹವನ್ನು ಹಿಂದೂ,ಮುಸ್ಲಿಂ,ಕ್ರೈಸ್ತ,ಜೈನ,ಪಾರ್ಸಿ ಎಂದು ಸೀಳಿಕೊಂಡು ಸಾಕಷ್ಟು ಜನ ಗುರುವಾಗಿದ್ದಾರೆ. ಇಂತಹ ಗುರುಗಳಿಗೆ ಸಾಕಷ್ಟು ಜನ ಶಿಷ್ಯರು ಆಗಿದ್ದಾರೆ. ಇಂತಹ ಗುರುಗಳು ಗುರುಗಳೂ ಅಲ್ಲ, ಇಂತಹ ಶಿಷ್ಯರು ಶಿಷ್ಯರೂ ಅಲ್ಲ.

ಪ್ರತಿ ಅಂಗದಲ್ಲಿ ಸಂಗಮವಾದ ಅರಿವೇ ಗುರು. ಪ್ರತಿ ಅಂಗವನು ಆವರಿಸಿದ ಮನವೇ ಅಂಗದಲ್ಲಿ ಸಂಗಮವಾದ ಗುರುವಿಗೆ ಶಿಷ್ಯನಾಗಬೇಕು. ಅಂದರೆ ತನು ಉಳ್ಳಾತ ಗುರು ಅಲ್ಲ. ತನು ಉಳ್ಳಾತ ಶಿಷ್ಯನಲ್ಲ. ಗುರು-ಶಿಷ್ಯರಿಬ್ಬರೂ ತನುವಿನಲ್ಲಿಯೇ ಸಂಗಮವಾದವರು. ತನುವನ್ನು ಆವರಿಸಿದ ಮನ ತನ್ನನ್ನು ತಾನೇ ಕಂಡುಕೊಂಡು ತನ್ನಲ್ಲಿಯೇ ತನ್ಮಯವಾದ ಗುರುದೇವನನ್ನು ಕಂಡುಕೊಳ್ಳಬೇಕು. ಆಗ ತಾನು ಶಿಷ್ಯ ಎಂದು ತನ್ನ ಅನುಭವಕ್ಕೆ ಬರುತ್ತದೆ. ಆತ ಅನುಪಮ ಗುರು ಎಂದು , ಆತ ಘನತರ ಗುರುವೆಂದು, ಆತ ಸಾಯುಜ್ಯ ಪದವ ಮೀರಿದಾತನೆಂದು ಆತ ಶಬ್ಧ ಹಲವ ಮೀರಿದ ನಿಶ್ಯಬ್ಧ ಬ್ರಹ್ಮನೆಂದು.

ಶಿಷ್ಯ ಗುರುದೇವನನ್ನು ಕಂಡು ಆ ಗುರುದೇವನ ಕರುಣಾರಸನವನ್ನು ಪಾನಮಾಡಿ, ಗುರುವೇ, ಮದ್ಗುಗ್ಗುರುವೇ, ಸದ್ಗುಗ್ಗುರುವೇ, ತ್ರಿಜಗದ್ಗುಗ್ಗುರುವೇ ಎಂದು ಎದೆ ತುಂಬಿ ಹಾಡುತ್ತಾನೆ. ತನಗೆ ತಾನೇ ಕುಣಿ ಕುಣಿದಾಡುತ್ತಾನೆ.

**1191**

**ಮತಿತ್ರಯಂಗಳಲ್ಲಿ ಕುದಿಯಲೀಯದೆ,**
**ಮನಸಿಜನ ಬಾಣಕ್ಕೆ ಗುರಿಯಾಗಲೀಯದೆ,**
**ಎನ್ನ ತನ್ನಂತೆ ಮಾಡಿದನಯ್ಯಾ ಶ್ರೀಗುರು,**
**ಪದ ನಾಲ್ಕು ಮೀರಿ ಭವಕ್ಕೆ ಹೇತುವಾಗಲೀಯದೆ,**
**ಕರುಣಿಸಿ ಮುಕ್ತನ ಮಾಡಿದೆಯಯ್ಯಾ**
**ಶ್ರೀ ಗುರುವೇ, ಪರಮಗುರುವೇ,**
**ಪರಿಭವಕ್ಕೆ ಬರಲೀಯದಂತೆ**
**ಎನ್ನ ನಿಮ್ಮವರೊಳಗೊಬ್ಬನೆಂದೆನಿಸಿದೆಯಲ್ಲಾ,**
**ಗುರುವೆ, ಪರಮಗುರುವೆ,**
**ಕಾಲನ ಕಮ್ಮಟಕ್ಕೆ ಗುರಿಯಹ, ಎನ್ನನು ತೆಗೆದು,**
**ಗುರು ಲಿಂಗ ಜಂಗಮ, ತ್ರೈಲಿಂಗಕ್ಕೆ ಕಾರಣಿಕನ ಮಾಡಿದೆ.**
**ಇನ್ನು ಭವಕ್ಕೆ ಬಾರೆನು; ನಿನ್ನವರಾದಂತೆ ಅಪ್ಪೆನು**
**ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ಎನ್ನ ಮೀರಿದ ಪರ ಒಂದೂ ಇಲ್ಲ .**

ಶ್ರೀಗುರುದೇವನ ಕರುಣೆ ಅಪಾರ. ಆಣವ ಮಲ, ಮಾಯಾ ಮಲ, ಕಾರ್ಮಿಕ ಮಲಗಳೆಂಬ ಮಲತ್ರಯಗಳಲ್ಲಿ ತನುವನ್ನು ಕುದಿಯಲು ಬಿಡದೇ ಮನಸ್ಸಿಜನ ಬಾಣಕ್ಕೆ ಗುರಿಯಾಗಲು ಬಿಡದೇ ಆತನಿಗೆ ಮೊರೆ ಹೋದ ಶಿಷ್ಯನನ್ನು ತನ್ನಂತೆ ಮಾಡಿದಾತ ಶ್ರೀಗುರುದೇವರು . ಫಲ ಪದವಿಗಳನ್ನು ಅನುಭವಿಸಿ ಅದಕ್ಕೆ ಮರುಳಾಗಿ ಇಡೀ ಜೀವನವನ್ನು ನರಕವನ್ನಾಗಿಸಿ ಕೊಂಡ ತನುವನ್ನು ಜನನ ಮರಣಗಳಿಗೆ ತುತ್ತಾಗದಂತೆ ಮುಕ್ತನ ಮಾಡಿ ಕರುಣಿಸಿದಾತ ಶ್ರೀಗುರು. ಶ್ರೀಗುರುವೇ, ಪರಮಗುರುವೇ, ಮತ್ತೆ ಮತ್ತೆ ಭವಕ್ಕೆ ಬಂದು ಜನನ ಮರಣಗಳಿಗೆ ತುತ್ತಾಗದಂತೆ ಮಾಡಿ ನಿಮ್ಮವರೊಳಗೆ ಒಬ್ಬನೆಂದು ಎಂದೆನಿಸಿದೆಯಲ್ಲಾ ಗುರುವೇ.

ಗುರುವೇ,ಪರಮಗುರುವೇ, ಕಾಲನ ಕಮ್ಮಟಕ್ಕೆ ನನ್ನನ್ನು ಗುರಿಯಾಗದಂತೆ ಹೊರ ತೆಗೆದು ಗುರು,ಲಿಂಗ, ಜಂಗಮವೆಂಬ ತ್ರೈಲಿಂಗವನ್ನು ಅಂಗದೊಳಗೆ ತೋರಿ ನನ್ನನ್ನು ಕಾರಣೀಕನನ್ನಾಗಿ ಮಾಡಿದೆ.

ಗುರುವೇ, ಶ್ರೀಗುರುವೇ, ಪರಮಗುರುವೇ ನನ್ನನ್ನು ನಿನ್ನಂತೆ ಮಾಡಿದೆ. ಇನ್ನು ನಾನು ಭವಕ್ಕೆ ಬಾರೆನು. ನಿನ್ನನ್ನು ತಿಳಿದಂತಹ ನಿನ್ನ ಪ್ರಸಾದವನು ಉಂಡು ನಿನ್ನವರಾದಂತೆ ಆಗುವೆನು. ಕಪಿಲಸಿದ್ಧ ಮಲ್ಲಿಕಾರ್ಜುನ ಎನ್ನ ಮೀರಿದ ಪರ ಒಂದು ಇಲ್ಲ.

**1192**

**ನಾಗೇಂದ್ರನ ವಿಷವನು, ಬ್ರಹ್ಮನ ಕಪಾಲವನು**
**ಮತ್ತೊಬ್ಬರಿಗೆ ಹಿಡಿದು ತೀರುವುದೆ, ಎಲೆ ಅಯ್ಯಾ ?**
**ಎತ್ತಿದಡೆ ಮೇಲೇಳುಲೋಕವನುರುಹುದುವು;**
**ಇಳುಹಿದಡೆ ಕೆಳಗೇಳುಲೋಕವನುರುಹುದುವು;**
**ಇವನೆತ್ತದೆ ಇಳುಹದೆ ಕೊಂಡಾಡು ದೇವ**
**ನಿಮ್ಮ ಕಪಿಲಸಿದ್ಧಮಲ್ಲಿನಾಥಯ್ಯನೆ**

ನಾಗೇಂದ್ರನ ವಿಷವನು ತಲೆಬುರುಡೆಯಲೆ ಬರೆದ ಬ್ರಹ್ಮನ ಬರಹವನು ಯಾರು ದಕ್ಕಿಸಿಕೊಳ್ಳಲು ಅರಿಯರು, ಗುರುದೇವನ ಹೊರತಾಗಿ. ಗುರುದೇವನೆಂದರೆ ಸಾಮಾನ್ಯನಲ್ಲ. ಈತ ಸಾಕ್ಷಾತ್ ಮಹಾದೇವ, ಸದಾಶಿವನೂ ಆಗಿದ್ದಾನೆ. ಅಂಗದಲ್ಲಿಯೇ ಇದ್ದು ಅಂಗವನ್ನು ಆವರಿಸಿದ ಮನವೆಂಬ ವಿಷದ ಹಾವೊಂದನ್ನು ಪಳಗಿಸಿ ತನ್ನ ಕೊರಳಲ್ಲಿ ಆಭರಣವನ್ನಾಗಿಸಿಕೊಂಡಾತ.

ಮನವೆಂಬ ಹಾವು ಅಂಗದ ಆಶ್ರಯ ಪಡೆದು ಶಬ್ಧದಿಂದ ,ಸ್ಪರ್ಶದಿಂದ, ವಾಸನೆಯಿಂದ, ರುಚಿಯಿಂದ, ದೃಶ್ಯದಿಂದ, ಆಶ್ರಯ ಪಡೆದ ಅಂಗವನ್ನೇ ಕುಕ್ಕಿ ಕುಕ್ಕಿ ಹಂತ ಹಂತವಾಗಿ ಸಾಯಿಸುತ್ತದೆ. ಆಶ್ರಯಿಸಿದ ಅಂಗವನ್ನೇ ಅಜ್ಞಾನಕ್ಕೆ ಗುರಿ ಮಾಡಿ ಅಂಗದೊಂದಿಗೆ ಚಿನ್ನಾಟವಾಡುವುದು ಹಾವಿಗೆ ಬಲು ಸುಖ. ಕಾಯವನ್ನೇ ಕೈಲಾಸ ಮಾಡಿಕೊಂಡು ಆ ಕಾಯದಲ್ಲಿ ವಾಸ ಮಾಡಿದ ಮಹಾದೇವನಿಗೆ ಈ ಹಾವು ಆಭರಣವಾಗಿ ಕೊರಳನ್ನು ಸುತ್ತಿಕೊಂಡಿದೆ. ಹೀಗಾಗಿ ಮಹಾದೇವನನ್ನು ನಾಗಾಭರಣನೆಂದು ಕೂಡಾ ಕರೆಯುತ್ತಾರೆ.

ಕಾಯದಲ್ಲಿಯೇ ಸಂಗಮವಾದ ಮಹಾದೇವ ಮಹದಾನಂದದಲ್ಲಿ ಕುಳಿತಿದ್ದಾನೆ. ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ಸಂಗ ಮಾಡಿ ಹಾವಿನಂತೆ ಬುಸುಗುಡುತ್ತಲಿದೆ. ಇಂತಹ ಮನಕ್ಕೆ ಅರಿವಾದರೆ ಹಾವು ಮಾಹಾದೇವ ವಾಸಮಾಡಿದ ಕಾಯಕ್ಕೆ ಆಭರಣವಾಗುತ್ತದೆ.ಆಗ ಬ್ರಹ್ಮ ತಲೆಬುರುಡೆಯಲ್ಲಿ ಬರೆದ ವಿಧಿ ಬರಹ ತನಗೆ ತಾನೇ ಅಳಿಸಿಹೊಗುತ್ತದೆ. ಇದು ಅನುಭವಕ್ಕೆ ತಂದುಕೊಂಡ ಮನಕ್ಕೆ ಮಾತ್ರ ಸಾಧ್ಯವಾಗುತ್ತದೆ.

**1193**

**ಅಯ್ಯಾ ನಿಮ್ಮ ಕೈ ಬಿರ್ಚಲೊಡನೆ**
**ಬ್ರಹ್ಮಾಂಡಗಳು ತಳಿತಳಿಸುತ್ತವೆ.**

**ಬ್ರಹ್ಮ ಮರೆವನು, ವಿಷ್ಣು ತಾನೊರಗಿದನು,**
**ವೇದಂಗಳು ದೆಸೆದೆಸೆಗೆ ಬಾಯ್ಬಿಡಲು**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ,**
**ನಿಮ್ಮ ಕೈಯ ಶಬ್ಧದ ಹವಣೆಂತುಂಟು.**

ಬ್ರಹ್ಮ, ವಿಷ್ಣು, ಮಹಾದೇವ ಇವರನ್ನು ಲೋಕ, ದೇವತೆಗಳೆಂದು ಆರಾಧಿಸುತ್ತದೆ. ಇವರ ನಿಜ ಸ್ಥಿತಿಯನ್ನು ಅರಿಯಲು ಲೋಕಕ್ಕೆ ಸಾಧ್ಯವಾಗುತ್ತಿಲ್ಲ. ಲೋಕ ಇವರುಗಳನ್ನು ದೇವತೆಗಳೆಂದು ಭಾವಿಸಿದರೆ, ಶರಣರು ಲೋಕದ ಮಾತನ್ನು ಅಲ್ಲಗಳೆದರು. ದೇವರು ಇಲ್ಲವೆ ಇಲ್ಲವೆಂದು, ವೈಜ್ಞಾನಿಕವಾಗಿ ಪ್ರತಿಪಾದಿಸಿದರು. ಕಾಯವನ್ನು ವಿಷ್ಣು ಎಂದು ಕರೆದರು. ಮನವನ್ನು ಬ್ರಹ್ಮ ಎಂದು ಕರೆದರು. ಅರಿವನ್ನು ಮಹಾದೇವ ಎಂದು ಕರೆದರು. ಕಾಯದಲ್ಲಿ ವಿಷ್ಣುವಿನ ಶಕ್ತಿ ಬಚ್ಚಿಟ್ಟುಕೊಂಡಿದೆ, ಮನದಲ್ಲಿ ಬ್ರಹ್ಮನ ಶಕ್ತಿ ಬಚ್ಚಿಟ್ಟುಕೊಂಡಿದೆ. ಬ್ರಹ್ಮನಾಗಬೇಕಾದ ಮನ ಕಾಯವನ್ನು ಭ್ರಮೆಯಿಂದ ಆವರಿಸಿರುವುದರಿಂದ ತಾನು ಬ್ರಹ್ಮನೆಂಬುದನ್ನು ಮನ ಮರೆತುಹೋಗಿದೆ. ತಾನು ಕಾಯವೆಂಬುದನ್ನು ವಿಷ್ಣುವು ಮರೆತು ಹೋಗಿದೆ. ಕಾಯದಲ್ಲಿಯೇ ಸಂಗಮವಾದ ಮಹಾದೇವ ಮಾತ್ರ ಕಾಯವನ್ನು ಆವರಿಸಿದ ಮನವನ್ನು ಸದಾ ಎಚ್ಚರಿಸುತ್ತಲೇ ಇರುತ್ತಾನೆ.

ಎಂದು ಮನಕ್ಕೆ ಕಾಯದಲ್ಲಿ ಸಂಗಮವಾದ ಮಹಾದೇವನ ದರುಶನವಾಗುತ್ತದೆಯೋ ಅಂದೇ ಅದು ಧನ್ಯನಾಗುತ್ತದೆ. ಸಕಲ ಭ್ರಮೆಗಳನ್ನು ಕಳೆದುಕೊಂಡು ಬ್ರಹ್ಮನೇ ತಾನಾಗುತ್ತದೆ. ಸ್ವತಃ ತನಗೆ ತಾನೇ ಅಹಂ ಬ್ರಹ್ಮಾಸ್ಮಿ ಎಂದು ಮರೆತು ಕುಣಿ ಕುಣಿದಾಡುತ್ತದೆ. ಆಗ ಕಾಯ ತನಗೆ ತಾನೇ ಎಚ್ಚರಗೊಂಡು ತಾನೇ ವಿಷ್ಣುವೆಂದು ತನಗೆ ತಾನೇ ಕರೆದುಕೊಳ್ಳುತ್ತದೆ. ಕಾಯದಿಂದಲೇ ಹುಟ್ಟಿದ ವೇದಗಳು, ಉಪನಿಷತ್ತುಗಳು, ಭಗವದ್ಗೀತೆ, ಬೈಬಲ್, ಕುರಾನ್‌ಗಳು ದೆಸೆದೆಸೆಗೆ ಬಾಯ್ಬಿಡುತ್ತವೆ. ತನ್ನಿಂದ ಹುಟ್ಟಿದ ಪುಸ್ತಕಗಳು ತನಗೆ ಪಾಠ ಮಾಡಲು ಸಾಧ್ಯವೇ ಎಂದು ಸೆಟೆದು ನಿಲ್ಲುತ್ತವೆ. ಮಹಾದೇವ ವಾಸ ಮಾಡಿದ ಕಾಯದ ಮಹಿಮೆ ಇದು.

**1194**

**ಅಂಗಲಿಂಗಸಂಬಂಧಿಯಾದ ಬಳಿಕ**
**ಗುರುವಿನನುಮತದಿಂದ ಸ್ವಾನುಭಾವಲಿಂಗಸಂಬಂಧಿಯಾದ ಬಳಿಕ,**
**ಪ್ರಾಣನಿರ್ಪ ನೆಲೆಯನರಿ.**
**ಆ ಲಿಂಗ ಮಜ್ಜನೋದಕದಿಂದ ನಿನ್ನ ಕಾಯಶುದ್ಧಿ ;**
**ಆ ಲಿಂಗನಿರೀಕ್ಷಣೋದಕದಿಂದ ನಿನ್ನ ಅವಯವ ಶುದ್ಧಿ ;**
**ಆ ಲಿಂಗ ಪ್ರಸಾದೋದಕ ನಿನ್ನ ಪರಮ ಪದವು**
**ಇಂತು ಪಾದೋದಕತ್ರಯದಲ್ಲಿ , ಸುಖಿಯಾಗಿ**
**ಕಪಿಲಸಿದ್ಧಮಲ್ಲಿಕಾರ್ಜುನನ ಕೂಡಿ ನಿತ್ಯನಾಗು ಸಂದೇಹವಿಲ್ಲದೆ.**

ಅಂಗ ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಬಂಧಿಯಾದ ಬಳಿಕ ಗುರುದೇವನ ಅನುಮತದಿಂದ ಸ್ವಾನುಭಾವ. ಅರಿವಿನ ಸಂಬಂಧಿಯಾದ ಬಳಿಕ ಅಂಗಕ್ಕೆ ಸಂಬಂಧಪಟ್ಟ ಪ್ರಾಣನಿರುವ ನೆಲೆಯನ್ನು ಅರಿಯಬಹುದಾಗಿದೆ.

ಅಂಗದಲ್ಲಿ ಸಂಗಮವಾದ ಅರಿವೇ ಲಿಂಗ, ಆ ಲಿಂಗ ಮಜ್ಜನೋದಕದಿಂದ ಕಾಯ ಶುದ್ಧಿ

ಆಗುವುದು. ಲಿಂಗ ಮಜ್ಜನೋದಕವೆಂದರೆ ಜ್ಞಾನೋದಕ. ಇಂತಹ ಜ್ಞಾನ ನಿರೀಕ್ಷಣೆಯ ಉದಕದಿಂದ ಸರ್ವಾಂಗ ಶುದ್ಧಿ ಆಗುವುದು. ಇಂತಹ ಜ್ಞಾನದಿಂದಾಗಿ ಅರಿವಿನ ಪ್ರಸಾದದ ಉದಕದ ಪರಮ ಪದವು ಲಭ್ಯವಾಗುವುದು.ಹೀಗೆ ಲಿಂಗ ಮಜ್ಜನೋದಕ ಲಿಂಗ ನಿರೀಕ್ಷಣೆಯ ಉದಕ, ಲಿಂಗ ಪ್ರಸಾದೋದಕವೆಂಬ ಪಾದೋದಕ ತ್ರಯದಲ್ಲಿ ಕಾಯ ಪರಮ ಸುಖಿ ಆಗುವುದು. ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡಿ ಸಂದೇಹವಿಲ್ಲದೆ ನಿತ್ಯನಾಗುವುದು.

**1195**

**ಕಲ್ಪಿತೋದಕ ಒಂದು, ಅರ್ಪಣೋದಕ ಮೂರು,**
**ಮತ್ತೆ ಅಂಗೋದಕವು ತ್ರಯವಾಗಿಯು**
**ಮಿಕ್ಕ ಪ್ರಸಾದೋದಕ ಅವು ಮೂರು**
**ಸತ್ವರಜತಮತಿಗಳೆದವರಿಗಲ್ಲದೆ,**
**ಹತ್ತು ಪಾದೋದಕವನರಿಯಲು ತಾನು**
**ಚಿತ್ತ ಶುದ್ಧನಾಗಿ ಗುರುಕರುಣದಿಂದವೆ**
**ಹತ್ತು ಪಾದೋದಕ ಗ್ರಹಿಸುವ ಭಕ್ತರಿಗೆ**
**ಮತ್ತೆ ಸಂದಿಲ್ಲದಿಹೆ ಅವರು ನೀನು ?**
**ಮುತ್ತು ನೀರನು ಕೂಡಿದಾನಂದ ಭೇದದೊಲು**
**ತತ್ವಮಸಿಯಪ್ಪನೈ ಶ್ರೀಗುರು ಕಪಿಲಸಿದ್ಧಮಲ್ಲಿಕಾರ್ಜುನಾ.**

ನೀರು ಮುತ್ತಾಗಿದೆ. ಅದು ಮುತ್ತೆಂಬುದನು ಮರೆತುಹೋಗಿ ಬೆಳಗುತ್ತಲಿದೆ. ಹಾಗೆಯೇ ಜಲಬಿಂದುವೆ ಗಟ್ಟಿಗೊಂಡು ತತ್ವದಿಂದ ತನುವಾಗಿ ಬೆಳಗುತ್ತಲಿದೆ. ತನುವಿನಲಿ ತನ್ಮಯವಾದ ಬೆಳಗುವ ತನುವೊಂದು ತನುವಿಗೆ ಕಾಣುತ್ತಿಲ್ಲ. ತನುವನ್ನು ಆವರಿಸಿದ ಮನಕ್ಕೂ ಕಾಣುತ್ತಿಲ್ಲ. ಹೀಗಾಗಿ ಮನ ತನುವಿನಲ್ಲಿ ಕಲ್ಪನೆಯ ಒಂದು ಲೋಕವನ್ನೇ ನಿರ್ಮಾಣಮಾಡಿದೆ. ಸಾತ್ವಿಕ ,ರಾಜಸ, ತಾಮಸ, ಎಂಬ ಮೂರು ಗುಣಗಳನ್ನು ನಿರ್ಮಾಣ ಮಾಡಿದೆ. ಮನೋಮಯ ತನು, ಸ್ಥೂಲತನು,ಕಾರಣತನು ಎಂದು ಇರುವ ಒಂದು ತನುವಿನಲ್ಲಿಯೇ ಮೂರು ತನುಗಳನ್ನು ನಿರ್ಮಾಣ ಮಾಡಿಕೊಂಡಿದೆ. ತನುವಿನಲ್ಲಿ ತನ್ಮಯವಾದ ಬೆಳಕನ್ನೇ ಮರೆತು ಹೋಗಿದೆ.

ತನುವಿನಲ್ಲಿ ಅರಿವಿನ ಬೆಳಗುವ ಮುತ್ತು ಸದಾ ಸಹಜವಾಗಿ ಬೆಳಗುತ್ತಲಿದೆ. ಹಾಗೆಯೇ ತಾನು ಬೆಳಗುವ ಬಗೆಯನು ತನುವಿಗೂ ತನುವನ್ನು ಆವರಿಸಿದ ಮನಕ್ಕೂ ಶಬ್ಧದ ಮೂಲಕ ದೃಶ್ಯದ ಮೂಲಕ, ಸ್ಪರ್ಶ ಮತ್ತು ವಾಸನೆಯ ಮೂಲಕ, ರುಚಿಯ ಮೂಲಕ ವಿವರಿಸುತ್ತದೆ. ಹೀಗೆ ವಿವರಿಸುವಾತನೇ ಶ್ರೀಗುರು. ಹೀಗೆ ನುಡಿದು ಹೇಳುವ ಶ್ರೀಗುರುವಿನ ತತ್ವವನ್ನು ಅರಿತರಿತು ಆಲಿಸಿದ ತನು ಮತ್ತು ಮನ ಘನಮನವಾಗುವುದು. ಶ್ರೀಗುರುವನ್ನು ಕೂಡಿದ ಕೂಟದ ಸಹಜ ಸುಖ ತನು ಮತ್ತು ಮನಕ್ಕೆ ಉಂಟಾಗುವುದು. ಸಿದ್ಧರಾಮಶಿವಯೋಗಿಗಳು ಉದಕದಲ್ಲಿ ಉದಕವನ್ನು ಹುಡುಕಿ ಅರಿವಿನ ಉದಕಕ್ಕೆ ಅರ್ಪಣೆ ಮಾಡುವ ಸಹಜ ಸುಖವನ್ನು ಕೆಲವೇ ಸಾಲುಗಳಲ್ಲಿ ವಿವರಿಸಿದ್ದಾರೆ.

**1196**

**ಮುಖದಿಂದ ಹುಟ್ಟಿಪ್ಪ ಮೂರರ್ಪಿತೋದಕ ಒಳಗೆ,**

**ಹುಟ್ಟಿತು ಶುದ್ಧ ಪ್ರಸಾದೋದಕ**
**ಸದಮಲ ಜ್ಞಾನದಂಘ್ರಿಯಲ್ಲಿ ಹುಟ್ಟಿತೊಂದುದಕ**
**ಅದನು ಒಯ್ದೆರೆದಲ್ಲಿ ಉದ್ಭವಿಸಿತ್ತು ತಾ**
**ಕರಣೇಂದ್ರಿಯವನತಿಗಳೆದು ಹತ್ತನೆಯ ಪಾದೋದಕ**
**ಕ್ರಮವಿಂತುಟಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವಿನಲ್ಲಿಯೇ ಹುಟ್ಟಿದ ಸಾತ್ವಿಕ, ರಾಜಸ, ತಾಮಸ ಗುಣಗಳನ್ನು ತನುವಿನಲ್ಲಿಯೇ ತನ್ಮಯವಾದ ಗುರುದೇವನಿಗೆ ಅರ್ಪಣೆ ಮಾಡಿದಾಗ ಸ್ಥೂಲತನು, ಸೂಕ್ಷ್ಮತನು, ಕಾರಣ ತನುವಿನ ಮೂಲಕ ಶುದ್ಧ, ಸಿದ್ಧ, ಪ್ರಸಿದ್ಧ ಅರಿವಿನ ಪ್ರಸಾದದ ಉದಕ ಹುಟ್ಟುತ್ತದೆ. ಇದು ಅರಿವಿನ ಪ್ರಸಾದ ಜ್ಞಾನ ಪ್ರಸಾದ ಕರಣೇಂದ್ರಿಯಗಳನ್ನು ಅತಿಗಳೆದು ಜ್ಞಾನೇಂದ್ರಿಯಗಳನ್ನಾಗಿ ಮಾಡುವ ಪಾದೋದಕ.

ಮನದಿಂದ ಹುಟ್ಟಿದ ಸತ್ವ,ರಜ, ತಮೋ ಗುಣಗಳನ್ನು ತನುವಿನ ಮೂಲಕ ಬಳಕೆ ಮಾಡದೆ ತನುವಿನಲ್ಲಿಯೇ ತನ್ಮಯವಾದ ಶ್ರೀಗುರುವಿಗೆ ಅರ್ಪಣೆ ಮಾಡುವುದು ಸಣ್ಣ ಕೆಲಸವಲ್ಲ. ಇದೊಂದು ಅದ್ಭುತವಾದ ಕಾಯಕ. ಈ ಕಾಯಕವನ್ನು ಅರಿತರಿತು ಕಾಯದಿಂದಲೇ ಮಾಡಿದಾಗ ಕಾಯದಲ್ಲಿಯೇ ಹುಟ್ಟಿದ ಮೂರು ಉದಕಗಳನ್ನು ಅಂದರೆ ಸಾತ್ವಿಕ, ರಾಜಸ, ತಾಮಸ ಎಂಬ ಗುಣಗಳನ್ನು ಹಾಗೂ ಕಾಯದಲ್ಲಿಯೇ ಹುಟ್ಟಿದ ಕರಣೇಂದ್ರಿಯಗಳನ್ನು ಆ ಕರಣೇಂದ್ರಿಯಗಳ ಬೆನ್ನ ಬಳಿಯೇ ಇದ್ದ ಜ್ಞಾನೇಂದ್ರಿಯಗಳಿಗೆ ಅರ್ಪಣೆ ಮಾಡಿದ ಕಾಯ ಕೈಲಾಸವಾಗುತ್ತದೆ. ಹೀಗೆ ತನಗೆ ತಾನೇ ಕಾಯವನ್ನು ಕೈಲಾಸ ಮಾಡಿಕೊಳ್ಳುವ ಸೂತ್ರವನ್ನು ಸಿದ್ಧರಾಮ ಶಿವಯೋಗಿಗಳು ಈ ವಚನದ ಮೂಲಕ ವಿವರಿಸಿದ್ದಾರೆ.

**1197**

**ಲಿಂಗಾಂಗಿಗಳಿಗೆ ಪಾದೋದಕವಲ್ಲದೆ,**
**ಅಂಗಭವಿಗೆ ಪಾದೋದಕವೆಲ್ಲಿಹದೊ?**
**ಶರಣರಿಗೆ ಶಿವಾನುಭಾವಗೋಷ್ಠಿ ಎಲ್ಲಿಹದೊ?**
**ಲಿಂಗವಿರಹಿತರಿಗೆ ಪಾದೋದಕ ಸಲ್ಲದು, ಸಲ್ಲದು**
**ಕೊಟ್ಟವರಿಗೆ ಮುಕ್ತಿ ಮೊದಲೆ ಇಲ್ಲವು, ಇಲ್ಲವು,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅರಿವಿನ ಪರಮ ಸುಖ ಲಿಂಗಾಂಗಿಗಳಿಗೆ ಅಲ್ಲದೇ ಅಂಗದೊಂದಿಗೆ ಸುಖಿಸುವ, ದುಃಖಿಸುವ ಭವಿಗಳಿಗೆ ಎಲ್ಲಿಹದೋ ಎಂದು ಸಿದ್ಧರಾಮ ಶಿವಯೋಗಿಗಳು ಲೋಕವನ್ನು ಪ್ರಶ್ನಿಸಿದ್ದಾರೆ.

ಶಿವಾನುಭವಗೋಷ್ಠಿ ಶರಣರಿಗೆ ಮಾತ್ರ ಪರಮ ಸುಖವನ್ನು ತಂದುಕೊಡುತ್ತದೆ. ಕಾಮದ ಬಾಣ ತಾಗಿದ ಕಾಯಗಳಿಗೆ ಸಾಧ್ಯವಾಗುವುದಿಲ್ಲ.

ಕಾಯದಲ್ಲಿ ಸುಖವಿದೆ, ದುಃಖವೂ ಇದೆ. ಸುಖ-ದುಃಖಗಳನ್ನು ಕಳೆದುಕೊಂಡು ಪರಮ ಸುಖವನ್ನು ಅನುಭವಿಸುವ ಶಕ್ತಿಯು ಕಾಯದಲ್ಲಿಯೇ ಇದೆ. ಅದನ್ನು ಕಾಯ ಕಂಡುಕೊಳ್ಳಬೇಕು.

ಕಾಯದಲ್ಲಿ ಕಾಮವು ಇದೆ. ಆ ಕಾಮವನ್ನು ಸುಟ್ಟು ಬೂದಿ ಮಾಡುವ ಶಿವನು ಇದ್ದಾನೆ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನ ದರ್ಶನ ಅಂಗವನ್ನು ಆವರಿಸಿದ ಮನಕ್ಕೆ

ಆದರೆ, ಅದು ಲಿಂಗಾಂಗ .ಇಂತಹ ಲಿಂಗಾಂಗಕ್ಕೆ ಜ್ಞಾನೋದಕದ ಅನುಭವ ಆಗುತ್ತದೆ. ಈ ಜ್ಞಾನವನ್ನೇ ಸಿದ್ಧರಾಮ ಶಿವಯೋಗಿಗಳು ಪಾದೋದಕವೆಂದು ಕರೆದಿದ್ದಾರೆ.

ಜ್ಞಾನಕ್ಕೆ ಶರಣು ಹೋದ ಮನ ಮಾತ್ರ ಶರಣನೆಂದು ಕರೆಯಿಸಿಕೊಳ್ಳಲು ಸಾಧ್ಯವಾಗುತ್ತದೆ. ಇಂತಹ ಶರಣರು ಮಾತ್ರ ಶಿವಾನುಭಾವ ಗೋಷ್ಠಿಯನ್ನು ಮಾಡಬಹುದಾಗಿದೆ. ಆ ಗೋಷ್ಠಿಯಲ್ಲಿ ಪಾಲ್ಗೊಳ್ಳಬಹುದಾಗಿದೆ. ಉಳಿದ ಕಾಯಗಳಿಗೆ ಇದು ರುಚಿಸುವುದಿಲ್ಲ.

ಅಂಗದ ಮೇಲೆ ಲಿಂಗ ಧರಿಸಿಕೊಂಡು, ಆ ಲಿಂಗವನ್ನೇ ಪೂಜಿಸುವ ಭಕ್ತ , ಭಕ್ತನಲ್ಲ. ಆತ ಭವಿ. ಇಂತಹ ಲಿಂಗಧಾರಿಗಳಿಗೆ ವೇಷದ ಜಂಗಮ ಬಂದು ಪಾದೋದಕವೆಂದು ಪಾದ ತೊಳೆದ ಉದಕ ಭವಿಗಳಿಗೆ ಸಲ್ಲದು. ಇಬ್ಬರೂ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನನ್ನು ಕಂಡುಕೊಂಡವರಲ್ಲ. ಇಂತಹವರಿಗೆ ಪಾದೋದಕ ಸಲ್ಲದು, ಸಲ್ಲದು. ಪಾದೋದಕವೆಂದು ಪಾದ ತೊಳೆದ ಉದಕ ಕೊಟ್ಟ ಜಂಗಮನಿಗೆ ಮುಕ್ತಿ ಎಂಬುದು ಇಲ್ಲವು, ಇಲ್ಲವು ಎಂದು ಸಿದ್ಧರಾಮ ಶಿವಯೋಗಿಗಳು ಖಚಿತವಾಗಿ ಹೇಳಿದ್ದಾರೆ.

**1198**

**ಮಡಿವಾಳಯ್ಯ ತನ್ನ ದೇಹವ ಕೊಟ್ಟು,**
**ಗಣಾಚಾರದ ಶಕ್ತಿ ಪ್ರಸಾದವ ಪಡೆದ**
**ಘಟ್ಟಿವಾಳಯ್ಯ ತನ್ನ ಮಾಯೆಯ ಕೊಟ್ಟು,**
**ಮೂಲ ಪ್ರಸಾದವ ಪಡೆದ.**
**ಮರುಳ ಸಿದ್ಧಯ್ಯ ತನ್ನ ಮನವ ಕೊಟ್ಟು,**
**ಗಣ ಪ್ರಸಾದವ ಪಡೆದ**
**ನಾನು ಕರಣಾದಿಗಳ ಕೊಟ್ಟು,**
**ಚೆನ್ನಬಸವಣ್ಣ ಪ್ರಸಾದವ ಪಡೆದು,**
**ಭವವಿರಹಿತನಾದೆ ನೋಡಾ, ಕಪಿಲಸಿದ್ಧಮಲ್ಲಿನಾಥಾ.**

ಪ್ರಸಾದಕ್ಕೆ ಬಹಳ ಮಹತ್ವವುಂಟು. ಲೋಕ ತಿಳಿದಂತೆ ದೇವಸ್ಥಾನದಲ್ಲಿ ಕೊಡುವ ಪ್ರಸಾದ ಪ್ರಸಾದವಲ್ಲ. ಗುರು ಹಿರಿಯರು ಕೊಡುವ ಪ್ರಸಾದವು ಪ್ರಸಾದವಲ್ಲ. ಹೀಗೆ ಸ್ವೀಕಾರ ಮಾಡಿದ ಪ್ರಸಾದದಿಂದ ಕಾಯ ಸಧೃಡಿಯಾಗಬಹುಹದೇ ಹೊರತು ಜ್ಞಾನಿಯಾಗುವುದಿಲ್ಲ.

ನೋಡುವ ನೋಟದಲ್ಲಿ ಅಜ್ಞಾನ ಹರಿದು ದೇಹದಲ್ಲಿ ಪ್ರಚೋದನೆ ಕಾರ್ಯ, ಕಾಮ, ಸಿಟ್ಟು, ದ್ವೇಷ, ಅಸೂಯೆಗಳು ಉಂಟಾದಾಗ ಗುರುಹಿರಿಯರು ಕೊಡ ಮಾಡಿದ ಪ್ರಸಾದದಿಂದ ಕಣ್ಣಿನ ದೃಶ್ಯದಲ್ಲಿ ಉಂಟಾದ ಈ ಅಜ್ಞಾನ ನಾಶವಾಗುವುದಿಲ್ಲ.

ಕಣ್ಣಲ್ಲಿ, ಕಿವಿಯಲ್ಲಿ, ಚರ್ಮದಲ್ಲಿ, ಮೂಗಿನಲ್ಲಿ, ನಾಲಿಗೆಯಲ್ಲಿ, ನರ್ತನೆ ಮಾಡುವ ಅಜ್ಞಾನವನ್ನು ದೂರೀಕರಿಸಲು ಪ್ರಸಾದದ ಅವಶ್ಯಕತೆ ಇದೆ. ಇದು ಸುಲಭವಾಗಿ ದೊರೆಯುವ ಪ್ರಸಾದವು ಅಲ್ಲ. ಸಾಲಿನಲ್ಲಿ ನಿಂತು ಪಡೆಯುವ ತಿರುಪತಿಯ ಲಡ್ಡು ಅಲ್ಲ.

ಅರಿವಿನ ಪ್ರಸಾದ ಅದು ಕಾಯದಲ್ಲಿಯೇ ಇದೆ. ಕಾಯದಲ್ಲಿಯೇ ತನ್ಮಯವಾದ ಅರಿವಿನ ಪ್ರಸಾದವನ್ನು ಕಾಯವನ್ನು ಆವರಿಸಿದ ಮನ, ಕಾಯದಿಂದಲೇ ಕಾಯಕ ಮಾಡಿದಾಗ ಈ ಪ್ರಸಾದ ಕಾಯಕ್ಕೆ ಲಭ್ಯವಾಗುತ್ತದೆ. ಇಂತಹ ಅರಿವಿನ ಪ್ರಸಾದವನ್ನು ಮಡಿವಾಳ ಮಾಚಿದೇವರು ತಮ್ಮ

ದೇಹವನ್ನು ಕೊಟ್ಟು ಗಣಾಚಾರದ ಶಕ್ತಿ ಪಡೆದರೆಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಘಟ್ಟಿವಾಳಯ್ಯ ಶರಣರು ತಮ್ಮ ತನುವಿನಲ್ಲಿಯೇ ಉಂಟಾದ ಮಾಯೆಯನ್ನು ತನುವಿನಲ್ಲಿ ಉಂಟಾದ ಲಿಂಗಯ್ಯನಿಗೆ ಕೊಟ್ಟು, ಮಾಯೆಯನ್ನುಸುಟ್ಟು ಹಾಕುವ ಮೂಲಕ ಪ್ರಸಾದವನ್ನು ಪಡೆದರು.

ಶರಣರ ಗೋಷ್ಠಿ ಮುಗಿದ ಮೇಲೆ ಮನೆಗೆ ಮರಳಿದ ಘಟ್ಟಿವಾಳಯ್ಯ ಮನೆಯೊಳಗೆ ಕಿಲಕಿಲನೆಯ ಧ್ವನಿಯನ್ನು ಕೇಳಿದ. ಸತಿ ಪರ ಪುರುಷನಿಂದಿಗೆ ಪ್ರಣಯದಲ್ಲಿ ಮಗ್ನಳಾಗಿದ್ದಳು. ಘಟ್ಟಿವಾಳಯ್ಯನಿಗೆ ಯಾವ ಬಾಧೆಯು ಆಗಲಿಲ್ಲ. ಹೆದರಿದ ಅವರನ್ನು ಸಂತೈಸಿ ನೀವು ನಮ್ಮ ಮನೆಯ ಅತಿಥಿ ಎಷ್ಟು ದಿನವಾದರೂ ಈ ಮನೆಯಲ್ಲಿ ಸಂತೋಷದಿಂದ ನೀವಿಬ್ಬರೂ ಇರಬಹುದು. ನಿಮಗೆ ಬೇಸರವಾದರೆ ಬೇರೆ ಮನೆಯಲ್ಲಿ ವಾಸ ಮಾಡಬಹುದೆಂದು ವಿನಯದಿಂದ ನುಡಿದರು. ಘಟ್ಟಿವಾಳಯ್ಯ ತನುವಿನಲ್ಲಿ ಉಂಟಾದ ಮಾಯೆಯನ್ನು ತನುವಿನಲ್ಲಿಯೆ ತನ್ಮಯವಾದ ಅರಿವೆಂಬ ಗುರುದೇವನಿಗೆ ಕೊಟ್ಟು ಮೂಲ ಪ್ರಸಾದವನ್ನು ಪಡೆದುಕೊಂಡಿದ್ದ. ಈ ಸೂತ್ರವನ್ನು ತನುವಿನಲ್ಲಿ ಉಂಟಾದ ತಳಮಳಕ್ಕೆ ಬಾಣವಾಗಿ ತನಗೆ ತಾನೇ ಪ್ರಯೋಗಿಸಿಕೊಂಡ.

ಮರುಳ ಸಿದ್ಧಯ್ಯ ತಮ್ಮ ಮನವಕೊಟ್ಟು ಘನ ಪ್ರಸಾದವ ಪಡೆದರೆ ಸಿದ್ಧರಾಮ ಶಿವಯೋಗಿಗಳು ಕರಣಾದಿಗಳನ್ನು ಕೊಟ್ಟು ಚೆನ್ನ ಬಸವಣ್ಣನ ಪ್ರಸಾದವನ್ನು ಪಡೆದು ಭವವಿರಹಿತನಾದೆ ಎಂದು ತನುವಿನಲ್ಲಿಯೇ ತನ್ಮಯವಾದ ಅರಿವಿನ ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**1199**

**ಪ್ರಸಾದ ಕಾಯನಾದ ಬಳಿಕ ರಸರಸಾಯನೌಷಧಿಯ ಹಂಗೇಕೋ?**
**ಮನದಿಚ್ಛೆ ಪೂರ್ಣವಾದ ಬಳಿಕ ಮಂತ್ರದ ಲಕ್ಷ್ಯದ ಹಂಗೇಕೋ?**
**ನೀನಿಲ್ಲಿಗೆ ಬಂದ ಬಳಿಕ ಪರ್ವತದ ಹಂಗೇಕಯ್ಯಾ ಎನಗೆ,**
**ಕಪಿಲಸಿದ್ಧಮಲ್ಲಿನಾಥ?**

ಪ್ರಸಾದ ಕಾಯವೇ ತಾನಾದ ಬಳಿಕ ರಸರಸಾಯನೌಷಧಿಯ ಹಂಗೇಕೋ :

ಕಾಯದ ಸಕಲ ರೋಗಗಳಿಗೂ ಕಾರಣವಾದ ಮನ ಮಹಾದೇವನ ಸಂಗ ಮಾಡಿ, ಮಹಾದೇವನೇ ತಾನಾದ ಬಳಿಕ ರಸರಸಾಯನೌಷಧಿಗಳ ಹಂಗಿನಿಂದ ಕಾಯ ಬಹು ದೂರವಾಗುತ್ತದೆ. ಮನ ಭಕ್ತನಾಗಿ ಮಹಾದೇವನೊಂದಿಗೆ ಕಾಯದಲ್ಲಿ ವಾಸ ಮಾಡ ತೊಡಗುತ್ತದೆ. ಕಾಯ ಇವರಿಬ್ಬರ ವಾಸಕ್ಕೆ ಕೈಲಾಸವಾಗಿ ಮಾರ್ಪಡುತ್ತದೆ. ಹೀಗಾದಾಗ ಕಾಯಕ್ಕೆ ಯಾವುದಾದರು ರೋಗ ಬರಲು ಸಾಧ್ಯವೇ ? ಅಥವಾ ರಸರಸಾಯನ ಔಷಧಿಯ ವಿದ್ಯೆಯನ್ನು ಕಲಿತುಕೊಂಡು ಕಾಯಕ್ಕೆ ಸುಶ್ರೂತೆ ಮಾಡಲು ಸಾಧ್ಯವೆ. ಕಾಯದಲ್ಲಿ ವಾಸ ಮಾಡುವ ಭಕ್ತ ಮತ್ತು ಮಹೇಶ್ವರನಿಗೆ ಕಾಯದ ಹಂಗು ಇರುವುದಿಲ್ಲ. ಕಾಯ ಸಾಕಾದಾಗ ಅವರಿಬ್ಬರೂ ಕಾಯವನ್ನು ಬಿಟ್ಟು ಹೋಗುತ್ತಾರೆ. ಅದಕ್ಕೆ ಸುಶ್ರೂಶೆಯ ಅವಶ್ಯಕತೆ ಇರುವುದಿಲ್ಲ. ಕಾಯ ಅವರದಲ್ಲ, ಅವರು ವಾಸಕ್ಕಿದ್ದ ಮನೆ, ವಾಸಕ್ಕಿದ್ದವರಿಗೆ ಸಾಕಾದಾಗ ಮನೆ ಬಿಟ್ಟು ಹೊಗುತ್ತಾರೆ. ಪ್ರಸಾದ ಕಾಯ ಆದವರಿಗೆ ಇದು ಸಹಜ ಕ್ರಿಯೆ.

ಮನದಿಚ್ಛೆ ಪೂರ್ಣವಾದ ಬಳಿಕ ಮಂತ್ರದ ಲಕ್ಷ್ಯದ ಹಂಗೇಕೋ :

ಅಂಗದಲ್ಲಿ ಲಿಂಗಯ್ಯ ಸಂಗಮವಾಗಿದ್ದಾನೆ. ಆ ಲಿಂಗಯ್ಯನಿಗೆ ಭಕ್ತನಾಗಿ ಅಂಗವನ್ನು ಆವರಿಸಿದ ಮನ ಕೂಡಿದ ಬಳಿಕ ಮನದಿಚ್ಛೆ ಪೂರ್ಣವಾಗುತ್ತದೆ. ಮನ ಘನಮನವಾಗುತ್ತದೆ. ಮಂತ್ರವೇ ತಾನಾಗುತ್ತಾನೆ. ಹೀಗಾದಾಗ ಮನ ಕಾಯವನ್ನು ಹಿಡಿದು ಗಾಯತ್ರಿ ಮಂತ್ರ, ಷಡಕ್ಷರಿ

ಮಂತ್ರ, ನಾರಾಯಣನ ಮಂತ್ರ ಜಪಿಸಲು ಸಾಧ್ಯವೇ ? ಇದರ ಅವಶ್ಯಕತೆ ಮನಕ್ಕೆ ಬೀಳುವುದೇ ಇಲ್ಲ. ಏಕೆಂದರೆ ಮನದಿಚ್ಛೆ ಪೂರ್ಣವಾಗಿದೆ. ಪರ್ವತಕ್ಕೆ ಹೋಗಿ ಜಪ-ತಪಗಳನ್ನು ಮಾಡುವುದಿಲ್ಲ.

**1200**

**ದೇವನಿಂತವನೆಂದು ನಂಬಲಾಗದಯ್ಯಾ :**
**ಬಾ ಎಂದು ಹೇಳಿ ಬಯಲಾದ ದೇವನೊಳ್ಳಿದನೆ ?**
**ದೇವನಿಂತವನೆಂದು ನಂಬಲಾಗದಯ್ಯಾ :**
**ತನ್ನ ಕಾರ್ಯಕ್ಕೆ ಹೆಣಗಾಡಿಸಿದವ ಒಳ್ಳಿದನೆ ?**
**ಕಪಿಲಸಿದ್ಧಮಲ್ಲಯ್ಯಾ , ನಿನ್ನ ಲೀಲೆ ತಿಳಿಯದಾರಿಗೂ.**

ಕಾಯ ದೇವರಿದ್ದ ಕೈಲಾಸ. ಕಾಯವನ್ನು ಆವರಿಸಿದ ಮನದಿಂದಾಗಿ ಅದರ ಸುಖ-ದುಃಖಗಳ ಕೆಲಸದಿಂದಾಗಿ ಕಾಯ ತಾನು ಕೈಲಾಸವೆಂದು ಆತನಿಗೆ ಇರಲು ಅವಕಾಶ ಮಾಡಿಕೊಟ್ಟ ತಾನೇ ಧನ್ಯ ಎಂದು ಕಾಯಕ್ಕೆ ತಿಳಿಯಲು ಸಾಧ್ಯವಾಗುತ್ತಿಲ್ಲ. ಏಕೆಂದರೆ ಕಾಯ ಮತ್ತು ಕಾಯವನ್ನು ಆವರಿಸಿದ ಮನ ತನಗೆ ಬೇಕಾದ ದೇವರನ್ನು ತಾನೇ ನಿರ್ಮಾಣ ಮಾಡಿಕೊಂಡು ಆ ದೇವರನ್ನೇ ದೇವರೆಂದು ಖಚಿತವಾಗಿ ನಂಬಿ ಆರಾಧಿಸುತ್ತಲಿದೆ. ತನ್ನನ್ನು ಮಾಡಿದ ದೇವರನ್ನು ದೇವರೆಂದು ಮರೆತು ಹೋಗಿದೆ.

ಕಾಯಗಳೆಲ್ಲಾ ಒಂದೇ. ಕಾಯದಲ್ಲಿಯೇ ಇದ್ದ ದೇವರನ್ನು ಕಾಯವನ್ನು ಆವರಿಸಿದ ಮನ ಮತ್ತು ಕಾಯ ಮರೆತುದಕ್ಕಾಗಿ ಒಂದು ಕಾಯ ಕಳ್ಳನ ವೃತ್ತಿಯಲ್ಲಿ ತೊಡಗಿದ್ದರೆ, ಮತ್ತೊಂದು ಕಾಯ ಭ್ರಷ್ಟಾಚಾರದಲ್ಲಿ ತೊಡಗಿದೆ. ಒಂದು ಕಾಯ ಹೆಣ್ಣಾದರೇ, ಮತ್ತೊಂದು ಕಾಯ ಗಂಡು. ಹಲವು ಕಾಯ ಹಿಂದೂಗಳಾದರೆ, ಹಲವು ಕಾಯ ಮುಸಲ್ಮಾನ ಎಂದು ತಮಗೆ ತಾವೇ ಕರೆದುಕೊಂಡಿವೆ. ಇನ್ನು ಕೆಲವು ಕಾಯಗಳು ಕ್ರಿಶ್ಚನ್ನರೆಂದು ಕೊರಳಲ್ಲಿ ಶಿಲುಭೆ ಧರಿಸಿವೆ. ಜೈನ, ಪಾರ್ಸಿ, ಪಂಜಾಬಿ ಎಂದು, ಬೌದ್ಧನೆಂದು ತಮ್ಮನ್ನು ತಾವೇ ಸೀಳಿಕೊಂಡಿವೆ. ಕಾಯದಲ್ಲಿ ದೇವರಿದ್ದರೂ ಅವರವರ ಇಚ್ಛೆಯಂತೆ ತಾನೂ ಅದರಲ್ಲಿ ಇದ್ದು ಅವರನ್ನು ಇರಲು ಬಿಟ್ಟಿದ್ದಾನೆ. ದೇವನಿಂತವನೆಂದು ನಂಬಲಾಗದ ಸ್ಥಿತಿಯನ್ನು ದೇಹದಲ್ಲಿಯೇ ಇದ್ದ ದೇವರು ದೇಹಕ್ಕೆ ಉಂಟು ಮಾಡಿದ್ದಾನೆ. ಕಳ್ಳನೊಬ್ಬ ತನಗೆ ಅನುಕೂಲವಾಗಲಿ ಎಂದು ದೇವರನ್ನು ಬೇಡಿ ಕಳ್ಳತನಕ್ಕೆ ಹೋದರೆ ತಥಾಸ್ತು ಎಂದು ಆಶೀರ್ವದಿಸುತ್ತಾನೆ.

ಭಿಕ್ಷುಕ್ಷಕನೊಬ್ಬ ತಾನು ಬೇಡುವ ಮನೆ ಇಲ್ಲದಂತೆ ನೀಡಲಿ ಎಂದು ಬೇಡಿದಾಗ ತಥಾಸ್ತು ಎಂದು ಹೇಳುತ್ತಾನೆ. ವಿಷಯ ಲಂಪಟ, ಭ್ರಷ್ಟಾಚಾರ, ಅತ್ಯಾಚಾರಿ ನಾನಾ ಕಾಯಕಗಳಲ್ಲಿ ಕಾಯ ತೊಡಗಿವೆ. ಅರಿಯಲು ಹೋದರೆ ಕಾಯ ಒಂದೇ. ಕಣ್ಣು,ಕಿವಿ,ಮೂಗು,ನಾಲಿಗೆ,ಚರ್ಮ ಕಿವಿಗಳಿಗೆ ಭಾಷೆ ಇಲ್ಲ. ಇವುಗಳು ಕಾರ್ಯ ನಿರ್ವಹಿಸುವ ಕಾಯಗಳು ಕೂಡಾ ಇಡೀ ಜಗತ್ತಿನಲ್ಲಿ ಒಂದೇ ಆಗಿವೆ. ಚರ್ಮ ಇದಕ್ಕೆ ಯಾವ ಜಾತಿಯೂ ಇಲ್ಲ. ಇದು ಸ್ಪರ್ಶ ಜ್ಞಾನವನ್ನು ಹೊಂದಿದೆ. ಚರ್ಮದಲ್ಲಿ ಅರಿವಿನ ದೇವರು ಇದ್ದಾನೆ. ಮನವೆಂಬ ಮಾಯಾಜಾಲದ ಮರೆವು ಕೂಡಾ ಇದೆ. ಮನದ ಅಜ್ಞಾನದಿಂದಾಗಿ ಚರ್ಮವೆಂಬುದನ್ನು ಮರೆತು ಹೆಣ್ಣು, ಗಂಡೂ ಎಂಬ ಅಜ್ಞಾನವನ್ನು ತುಂಬಿಕೊಂಡು ಕಾಮ ಸುಖದಲ್ಲಿ ಮೈಮರೆತಿದೆ. ಹಾಗೆಯೇ ಕಣ್ಣು, ಕಿವಿ, ಮೂಗು, ನಾಲಿಗೆ ಇವುಗಳಿಗೆ ಹೊರತಾಗಿಲ್ಲ. ಅರಿವಿನ ದೇವರು ಇರುವ ವಿಷಯ ಇವುಗಳಿಗೆ ತಿಳಿಯದ ಕಾರಣ

ಪಂಚೇಂದ್ರಿಯಗಳ ಸುಖದಲ್ಲಿ ಕಾಯವನ್ನು ತಳ್ಳಿ ತಮ್ಮ ತನವನ್ನು ತಾವೇ ಕಳೆದುಕೊಂಡಿವೆ. ಇವೆಲ್ಲವುಗಳನ್ನು ತಿಳಿದು ತನ್ನನ್ನು ತಾನು ಅರಿತ ಜ್ಞಾನಿ ಮಾತ್ರ ''ನೀನಿದ್ದು ನಿನ್ನ ಕಾಯಕ್ಕೆ ನೀನೆ ಹೀಗೆ ತೊಂದರೆ ಕೊಡುವುದೆಂದರೇನು ? ದೇವನೇ, ನೀನು ಇಂತವನೆಂದು ನಂಬಲಾಗದಯ್ಯಾ''. ಸಕಲ ಕಾಯಗಳು ದೇವರನ್ನು ಆರಾಧಿಸುತ್ತವೆ. ದೇವರನ್ನು ಆರಾಧಿಸದ ಕಾಯಗಳು ಒಂದೂ ಇಲ್ಲ ಈ ಭೂಮಿಯ ಮೇಲೆ. ಆದರೂ ದೇವರು ಯಾರೆಂದು ಆ ಕಾಯಗಳಿಗೆ ತಿಳಿದಿಲ್ಲ. ಆರಾಧಿಸಿದರೂ ದರುಶನ ನೀಡದ ನಿನ್ನನ್ನು ಒಳ್ಳೆಯವನೆಂದು ಹೇಳಲು ಸಾಧ್ಯವೇ? ದೇವನಿಂತವನೆಂದು ದೇಹದಲ್ಲಿಯೇ ಇದ್ದ ನೀನು, ನಿನ್ನನ್ನೇ ನಂಬದಂತೆ ಮಾಡಿದೆ. ದೇವರನ್ನು ಹೊತ್ತುಕೊಂಡು ದೇವಾಲಯಗಳಿಗೆ ಹೋಗುವ ದೌರ್ಭಾಗ್ಯವನ್ನು ದೇವಾಲಯಗಳಿಗೆ ಕರುಣಿಸಿದ ನೀನು ಒಳ್ಳೆಯವನೆ ? ಕಾಯದಲ್ಲಿಯೇ ಇದ್ದು ಕಾಯಕ್ಕೆ ಅಜ್ಞಾನದ ಕೆಲಸ ಹಚ್ಚಿದವನು ನೀನು ಒಳ್ಳೆಯವನೆ ?ಕಾಯವುಳ್ಳವರಿಗೆ ನಿನ್ನ ಲೀಲೆ ಕಾಯದಲ್ಲಿಯೇ ಇದ್ದು ತಿಳಿಯದಂತೆ ಮಾಡಿದೆ. ದೇವನಿಂತವನೆಂದು ನಂಬಲಾಗದಯ್ಯಾ ಬಾ ಎಂದು ಹೇಳಿ ಬಯಲಾದ ದೇವನು ಒಳ್ಳೆಯವನೇ ?

**1201**

**ಮಾಡಿ ಮಾಡಿ ಹೋದರು ಕೆಲವರು.**
**ನೋಡಿ ನೋಡಿ ಹೋದರು ಹಲಬರು.**
**ನೀಡಿ ನೀಡಿ ಹೋದರು ಕೆಲಬರು.**
**ನೀಡದೆ ನೋಡದೆ ಮಾಡದೆ ಹೋದವರಾರನೂ ಕಾಣೆ**
**ನಿಮ್ಮ ಹೃದಯದೊಳು (ಕಪಿಲಸಿದ್ಧ) ಮಲ್ಲಯ್ಯಾ .**

ಹೋಮ, ಹವನ, ಯಜ್ಞ ,ಯಾಗ ಮಾಡಿ ಮಾಡಿ ನಿನ್ನ ನಿಜವನು ಅರಿಯದೇ ಹೋದರು ಕೆಲವರು. ಅನಂತ ಕಾಲದಿಂದ ಅಂಗದ ಮೇಲೆ ಲಿಂಗ ಧರಿಸಿ ನೆನೆಯದ ಲಿಂಗಕ್ಕೆ ಜಲವನು ಎರೆದು ಪತ್ರಿ , ಪುಷ್ಪ, ಭಸ್ಮ, ಗಂದಾಧಿಗಳನ್ನು ಧರಿಸಿ ಛತ್ರಿ ಚಾಮರ ಬೀಸಿ, ನೋಡಿ ನೋಡಿ ನಿನ್ನ ನಿಜವನು ನೋಡದೆ ಹೋದರು ಹಲವರು.

ಜಂಗಮರನ್ನ , ದೀನ ದಲಿತರನ್ನು ಕಂಡು ಮರುಗಿ ನೀಡಿ ನೀಡಿ ನಿನ್ನ ನಿಜವನು ಅರಿಯದೇ ಹೋದರು ಕೆಲವರು. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನೇ ನೀನು ಎಲ್ಲರನ್ನು ಮಾಡಿದವನು. ಇಡೀ ಬ್ರಹ್ಮಾಂಡಕ್ಕೆ ಜನ್ಮ ನೀಡಿ, ಅಂಗದಲ್ಲಿಯೇ ಇದ್ದು ನೀನು ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ಅಂಗದ ಮೂಲಕ ನೋಡಲು ಬಂದವನು ನೀನು. ಅಂಗವನ್ನು ಆವರಿಸಿದ ಮನವೆಂಬ ನಾನು ಅಂಗದೊಂದಿಗೆ ಏನಾದರು ಮಾಡಿದರೆ ಯಜ್ಞ , ಯಾಗ, ಹೋಮ ಮಾಡಿದರೆ ನೀನು ನನಗೆ ದರುಶನ ನೀಡಲು ಸಾಧ್ಯವೇ ? ಅಂಗದ ಮೇಲೆ ಲಿಂಗವನು ಧರಿಸಿಕೊಂಡು ಆ ಲಿಂಗವನು ನೋಡಿದರೆ ನೀನು ನನಗೆ ದರುಶನ ನೀಡಲು ಸಾಧ್ಯವೇ ? ಸಾಕಷ್ಟು ಜನರಿಗೆ ಅನ್ನ ನೀಡಿದರೆ ನೀನು ನನಗೆ ಒಲೆಯಲು ಸಾಧ್ಯವೇ ?

ಶರಣರು ಏನು ಮಾಡಲಿಲ್ಲ, ಏನು ನೋಡಲಿಲ್ಲ, ಯಾರಿಗೂ ನೀಡಲಿಲ್ಲ ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರವೆಂದು ಬಸವಣ್ಣನವರು ಎಚ್ಚರಿಸಿದರು. ನೀನು ಸೃಷ್ಟಿ ಮಾಡಿದ ಇಡೀ ಬ್ರಹ್ಮಾಂಡದಲ್ಲಿ ಮಾಡುವುದಕ್ಕೆ ಏನಾದರೂ ಇದೆಯೇ ನೀಡುವುದೆಲ್ಲಾ ನಿನ್ನ ಪ್ರಸಾದ, ಅದು ಪುನಃ ನಿನಗೆ ನೀಡುವ ಕಾಯಕದಲ್ಲಿ ತೊಡಗುವುದೆಂದರೇನು

? ನೀನು ಸೃಷ್ಟಿ ಮಾಡಿದ ಪಾಷಾಣವನ್ನು ನೀನೆ ಎಂದು ನೋಡಿದರೆ, ನೋಡಿದ ಕಣ್ಣು ಕುರುಡಾಗುವುದಲ್ಲದೇ ನೀನು ಒಲಿಯಲು ಸಾಧ್ಯವಿಲ್ಲ. ಹೀಗಾಗಿ ಶರಣರು ನೀಡಲಿಲ್ಲ, ಮಾಡಲಿಲ್ಲ, ನೋಡಲಿಲ್ಲ. ಹೃದಯದೊಳಗೆ ಬಚ್ಚಿಟ್ಟುಕೊಂಡ ನಿನ್ನೊಂದಿಗೆ ಕೂಡದ ಅಗಲದ ಕೂಟದ ಸುಖವನ್ನು ಉಂಡರು. ಶರಣರಂತೆ ನೀಡದೆ, ಮಾಡದೆ, ನೋಡದೆ ಹೋದವರಾರನ್ನು ಕಾಣೆ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1202**

**ಮಾಡಿದರು ಮಾಡಿದರು ತಮ್ಮ ಹಿತಕ್ಕಲ್ಲದೆ,**
**ಮತ್ತಾರ ಹಿತಕ್ಕಿಲ್ಲ ನೋಡಯ್ಯಾ .**
**ನೋಡಿದರು ನೋಡಿದರು ತಮ್ಮ ಹಿತಕ್ಕಲ್ಲದೆ,**
**ಮತ್ತಾರ ಹಿತಕ್ಕಲ್ಲ ನೋಡಯ್ಯಾ,**
**ತನ್ನ ಬಿಟ್ಟನ್ಯಹಿತವ ನೋಡಿದಡೆ,**
**ಕೂಡಿಕೊಂಬ ನಮ್ಮ ಕಪಿಲಸಿದ್ಧಮಲ್ಲಯ್ಯನವರ.**

ಶರಣರ ಮಾತು ಲಿಪಿಕಾರರಿಗೆ ಅರ್ಥವಾಗದಿದ್ದರೆ ಅವರು ತಮಗೆ ತೋಚಿದಂತೆ ತಿದ್ದಿ ಬರೆಯುತ್ತಾರೆ. ಸಿದ್ಧರಾಮ ಶಿವಯೋಗಿಗಳ ಈ ವಚನದಲ್ಲಿ ಆಗಿರುವುದು ಕೂಡಾ ಹೀಗೆಯೇ.

ಇವರ ಹಿಂದಿನ ವಚನದಲ್ಲಿ ''ಮಾಡಿ ಮಾಡಿ ಹೋದರು, ನೋಡಿ ನೋಡಿ ಹೋದರು, ನೀಡಿ ನೀಡಿ ಹೋದರು  ನೀಡದೆ, ನೋಡದೆ, ಮಾಡದೆ ಹೋದವರಾರನೂ ಕಾಣೆ ನಿಮ್ಮ ಹೃದಯದೊಳು ಮಲ್ಲಯ್ಯಾ ಎಂದು ಹೇಳಿದ್ದಾರೆ.

ಲೋಕದ ಡೊಂಕ ನೀವೇಕೆ ತಿದ್ದುವಿರಿ ಎಂದು ಬಸವಣ್ಣನವರು ಪ್ರಶ್ನಿಸಿದ್ದಾರೆ. ಏಕೆಂದರೆ ತನ್ನದೇ ಕೆಲಸ ಮಾಡಿಕೊಳ್ಳಲು ಸಾಕಷ್ಟು ಇರುವಾಗ ಅನ್ಯರ ಕೆಲಸ ನಾನು ಮಾಡಲು ಸಾಧ್ಯವೇ ?

ಇಡೀ ಭೂಮಂಡಲದಲ್ಲಿರುವ ಪ್ರತಿಯೊಂದು ತನುವಿನಲ್ಲಿಯೂ ಅರಿವಿನ ದೇವರು ತನ್ಮಯವಾಗಿರುವಾಗ ಆ ತನುವಿನ ಹಿತ ಬಯಸಲು ಸಾಧ್ಯವೇ ? ದೇವರಿದ್ದ ಆ ತನುವಿಗೆ ನಾನು ಏನಾದರೂ ಮಾಡಲು ಸಾಧ್ಯವೇ ? ಇದು ಕುಚೋದ್ಯದ ಮಾತು.

ಜಗತ್ತು ಅನ್ಯರ ಸೇವೆ ಮಾಡಲು ನಿರತವಾಗಿದೆ. ತನ್ನನ್ನು ತಾನೇ ಮರೆತು ಹೋಗಿದೆ. ಹೀಗಾಗಿ ತನಗೆ ಮಾಡಲು ಬರುವುದಿಲ್ಲ, ನೀಡಲು ಬರುವುದಿಲ್ಲ,ನೋಡಲು ಬರುವುದಿಲ್ಲ. ಮಾಡಿದೆನೆಂಬ ರೋಗ, ನೀಡಿದೆನೆಂಬ ರೋಗ, ನೋಡಿದೆನೆಂಬ ರೋಗ ತನ್ನ ತನುವಿನಲ್ಲಿಯೇ ಸಂಗ್ರಹವಾಗಿ ತನು ಇರುವವರೆಗೆ ತನ್ನ ತನುವನ್ನೇ ಕಾಡುತ್ತದೆ.

ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ ಎಂದು ಹೇಳುವ ಬಸವಣ್ಣನವರ ಸೂತ್ರ ಮಾಡುವ, ನೀಡುವ, ನೋಡುವ ತನುವಿನ ಅನುಭವಕ್ಕೆ ಹೊಳೆದರೆ ಅರ್ಥವಾಗುತ್ತದೆ.

**1203**

**ಲಿಂಗವಾದ ಬಳಿಕ ಪೂಜಿಸಲಿಲ್ಲ;**
**ಜಂಗಮವಾದ ಬಳಿಕ ನೋಡಲಿಲ್ಲ;**

**ಪ್ರಸಾದಿಯಾದ ಬಳಿಕ ರುಚಿಸಲಿಲ್ಲ;**
**ಇಂತೀ ತ್ರಿವಿಧ ಒಂದಾದ ಬಳಿಕ,**
**ಕಪಿಲಸಿದ್ಧಮಲ್ಲಯ್ಯಾ , ಬೇರೊಂದು ತಿಳಿಯಲಿಲ್ಲ.**

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಅರಿಯದಿದ್ದಕ್ಕಾಗಿ ಕಲ್ಲನ್ನೇ ದೇವರನ್ನಾಗಿಸಿ ಪೂಜಿಸುತ್ತದೆ.

ಮನ ಅರಿವನ್ನು ಅರಿತು ಆ ಅರಿವೇ ತಾನಾದ ಬಳಿಕ ಕಲ್ಲನ್ನು ಕಲ್ಲೆಂದು ತಿಳಿದು ಉದಾಸೀನ ಮಾಡುತ್ತದೆ. ಅಂಗದಲ್ಲಿಸಂಗಮವಾದ ಅರಿವೇ ಲಿಂಗ; ಆ ಅರಿವೇ ಜಂಗಮ; ಆ ಅರಿವೇ ಪ್ರಸಾದಿ.

ಹೀಗೆ ಪ್ರತಿ ಅಂಗದಲ್ಲಿ ಅರಿವು ಸಂಗಮವಾಗಿದೆ. ಆ ಅರಿವೇ ಗುರುದೇವ. ಮನ ಅರಿವೆಂಬ ಗುರುದೇವನು ತಾನೇ ಆದಾಗ ಯಾವ ಅಂಗವನ್ನು ನೋಡಿದರೂ ಗುರುದೇವನಿದ್ದ ಅಂಗವೇ ಕಾಣುತ್ತದೆ. ಹೀಗಾಗಿ ಹೆಣ್ಣೆಂದು ನೋಡಲಿಲ್ಲ; ಗಂಡೆಂದು ನೋಡಲಿಲ್ಲ. ಶ್ರೀಮಂತ ಬಡವ ದರಿದ್ರರು ಮೊದಲೇ ಕಾಣಲಿಲ್ಲ. ಸಕಲ ಅಂಗಗಳು ಲಿಂಗವಾಗಿ ಗೋಚರಿಸಿದವು.

ನೋಡುವ ಕಣ್ಣಿಗೆ, ರುಚಿಸುವ ನಾಲಿಗೆಗೆ, ಕೇಳುವ ಕಿವಿಗೆ, ಮುಟ್ಟುವ ಚರ್ಮಕ್ಕೆ, ಮೂಸಿಸುವ ಮೂಗಿಗೆ ಅಜ್ಞಾನ ಪ್ರಸಾದವಾಯಿತು. ಹೀಗಾಗಿ ಲಿಂಗವು ತಾನೇ ಆದ; ಜಂಗಮವೂ ತಾನೇ ಆದ; ಪ್ರಸಾದವೂ ತಾನೇ ಆದ. ವಸ್ತುವಿನಲ್ಲಿಯ ಸತ್ಯ ಗೋಚರಕ್ಕೆ ಬಂದರೆ ಅದು ಸತ್ಯವೂ ಹೌದು ! ಶಿವಮಯವೂ ಹೌದು! ಸುಂದರವೂ ಹೌದು !

**1204**

**ಪೂಜಿಸ ಹೋದಡೆ ಪೂಜಾ ಪದಾರ್ಥವಿಲ್ಲದಂತಾಯಿತ್ತಯ್ಯಾ ,**
**ನಮ್ಮ ಚೆನ್ನ ಬಸವೇಶ್ವರ ಗುರುವಿನ ಬೋಧೆಯಿಂದ.**
**ಮಾಡಿಸ ಹೋದಡೆ ಮಾಡುವ ರೂಪು ಇಲ್ಲದಂತಾಯಿತ್ತಯ್ಯಾ**
**ಅಲ್ಲಮನ ವಚನದಿಂದ.**
**ಇದರಿರವ ತಿಳಿಯಬೇಕೆಂದು ಹೋದಡೆ ಆನು ಕಾಣೆ,**
**ಕಪಿಲಸಿದ್ಧಮಲ್ಲಯ್ಯಾ .**

ಗುರುದೇವನೆಂದರೆ ಸಾಮಾನ್ಯನಲ್ಲ. ತನ್ನೆಡೆಗೆ ಬಂದ ಪ್ರತಿಯೊಬ್ಬನನ್ನು ತನ್ನಂತೆ ಮಾಡಿಕೊಳ್ಳುತ್ತಾನೆ. ದೇಹದಲ್ಲಿಯೇ ಅರಿವೆಂಬ ಗುರುದೇವನಿದ್ದಾನೆ ಎಂದು ಮನಕ್ಕೆ ದರ್ಶನ ಮಾಡಿಸುತ್ತಾನೆ. ಗುರುದೇವನ ದರುಶನದಿಂದಾಗಿ ಪೂಜಿಸುವ ದೇವರು ಮರೆತು ಹೋಗುತ್ತದೆ. ಪೂಜೆಗಾಗಿ ಬಳಕೆ ಮಾಡುವ ಪದಾರ್ಥವೂ ಇಲ್ಲವಾಗುತ್ತದೆ.

ಅಲ್ಲಮ ಪ್ರಭುವಿನ ವಚನದಿಂದ ಪೂಜಿಸುವ ದೇವರ ರೂಪು ಕೂಡಾ ಇಲ್ಲದಂತಾಗುತ್ತದೆ. ಇದನ್ನು ತಿಳಿಯಲು ಹೋದ ನಾನು ಎನ್ನುವ ಅಜ್ಞಾನವೂ ಕಾಣೆಯಾಗುತ್ತದೆ. ಚೆನ್ನಬಸವಣ್ಣನ ದಯೆಯಿಂದ. ಕೆತ್ತಿದ ಕಲ್ಲನ್ನೇ ದೇವರೆಂದು ತಿಳಿದು, ಆ ದೇವರಿಗೆ ಪತ್ರಿ , ಫಲ, ಪುಷ್ಪ, ಗಂಧ, ಧೂಪ, ದೀಪ, ನೈವೇದ್ಯಗಳಿಂದ ಆರಾಧಿಸುತ್ತಿದ್ದೆ. ಪೂಜಿಸುವ ಕಲ್ಲನ್ನು ಕಲ್ಲೆಂದು ತೋರಿದ. ಪೂಜಿಸುವ ಕಲ್ಲನ್ನು ಕಲ್ಲೆಂದು ತಿಳಿದ ನಿನ್ನ ಅರಿವೆ ನಿನಗೆ ಗುರುವೆಂದು ಹೇಳಿದ ಗುರುದೇವ. ಆ ಗುರುದೇವನೇ ಮಹಾದೇವ. ಆ ಗುರುದೇವನೇ ಸದಾಶಿವ. ಆ ಗುರುದೇವನೇ ಸಾಕ್ಷಾತ್ ಪರಬ್ರಹ್ಮನೆಂದು ಹೇಳಿದ ಗುರುದೇವ !

ನಾನು ಎಂಬ ಮನವನ್ನು ಹಿಡಿದು ಅರಿವೆಂಬ ಗುರುದೇವನಿಗೆ ಶಿಷ್ಯನನ್ನಾಗಿ ಮಾಡಿದ ಗುರುದೇವ ! ಆಗ ಇದರ ಅರಿವು ತಿಳಿಯ ಹೋದ ನಾನು ಕೂಡಾ ಇಲ್ಲವಾದೆ. ''ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು, ಬಯಲು ಬಯಲಾಗಿ ಬಯಲಾಯಿತಯ್ಯಾ'' ಎಂಬ ಅಲ್ಲಮಪ್ರಭು ದೇವರ ವಚನದಿಂದ ನಾನು ಎನ್ನುವ ಮನ ಕೂಡಾ ಕಾಣೆಯಾಯಿತು.

**1205**

**ಭಾವಲಿಂಗದಿಂದ ಇಷ್ಟಲಿಂಗವ ಧ್ಯಾನಿಸ ಹೋದಡೆ,**
**ಇಷ್ಟಲಿಂಗವೆ ಭಾವಲಿಂಗವಾಯಿತ್ತು.**
**ಭಾವಲಿಂಗದಿಂದ ತ್ರಿವಿಧವನರಿದೆಹೆನೆಂದಡೆ,**
**ಭಾವಲಿಂಗವನೆ ಮಹಾಲಿಂಗವಾಗಿ ಅಳವಡಿಸಿದನು,**
**ಎನ್ನ ಗುರು ಚೆನ್ನಬಸವಣ್ಣನು ಕಾಣಾ, ಕಪಿಲಸಿದ್ಧಮಲ್ಲೇಶಾ.**

ಅಂಗದಲ್ಲಿ ಅರಿವು ಇದೆ; ಭಾವ ಇದೆ; ಅಂಗದಲ್ಲಿ ಮನ ಕೂಡಾ ಇದೆ. ಮನದಿಂದ ಅರಿವನ್ನು ಅರಿಯಲು ಹೋದಾಗ ಅಂಗವೇ ಲಿಂಗವಾಯಿತು. ಅರಿವಿನ ಇಷ್ಟ ಲಿಂಗವಾಯಿತು. ಅಂಗದಲ್ಲಿರುವ ಭಾವ ನಿರ್ಭಾವವಾಯಿತು. ಈ ಭಾವದಿಂದ ಇಷ್ಟ ಲಿಂಗವೆಂಬ ಅಂಗದಿಂದ ಧ್ಯಾನಿಸ ಹೋದಡೆ ಇಷ್ಟ ಲಿಂಗವು ಕೂಡಾ ಭಾವ ಲಿಂಗವಾಯಿತು. ಈ ಭಾವಲಿಂಗದಿಂದ ಸ್ಥೂಲ ಸೂಕ್ಷ್ಮ ಕಾರಣವೆಂಬ ತ್ರಿವಿಧವನು ಅರಿಯಲು ಹೋದರೆ ಭಾವಲಿಂಗವೆ ಮಹಾಲಿಂಗವಾಯಿತು; ಎನ್ನ ಗುರುದೇವನ ಅನುಗ್ರಹದಿಂದ.

**1206**

**ಅವ್ವಾ, ನೀ ನೀರೆರೆದಡೆ ನೆನೆಯನು,**
**ಎರೆಯದಿದ್ದಡೆ ಒಣಗನು, ನೋಡವ್ವಾ.**
**ಎರೆದು ಎರೆಯದಿರ್ದಡೆ ಕೂಡಿಕೊಂಡು ಮರೆವೆನವ್ವಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ನೀರೆರೆಯಬೇಕೆ ಹೊರತು ಅಂಗದಿಂದಲೇ ಮಾಡಿದ ದೇವರಿಗಲ್ಲ. ಏಕೆಂದರೆ ಅಂಗದಿಂದ ಮಾಡಿದ ದೇವರು ದೇವರಲ್ಲ. ಅದು ಕಲ್ಲು. ಅಂಗವನ್ನು ಮಾಡಿ, ಅಂಗದಲ್ಲಿಯೇ ಸಂಗಮವಾಗಿ, ಅಂಗವನ್ನು ಆವರಿಸಿದ ಮನವನ್ನು ಕುರಿತು ಸದಾ ಬೋಧೆ ಮಾಡುವ ಅರಿವೆಂಬ ಗುರುದೇವನೆ ದೇವರು.

ಅಂಗ ಮಾಡಿದ ದೇವರು ಎರೆದರೆ ನೆನೆಯುವದಿಲ್ಲ; ಎರೆಯದಿದ್ದರೆ ಒಣಗುವುದಿಲ್ಲ. ಏಕೆಂದರೆ ಅದು ದೇವರಲ್ಲ; ಕಲ್ಲು. ಅಂಗವನ್ನು ಆವರಿಸಿದ ಮನ, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವರ ಚರಣಕಮಲಕ್ಕೆರಗಿ, ಆತನಿಗೆರೆದು ಎರೆಯದಿರ್ದಡೂ ಕೂಡಿಕೊಂಡು ಮನದ ಅಜ್ಞಾನವನ್ನು ಮರೆಮಾಡುವನು.

''ಎನ್ನಂಗದಲ್ಲಿ ನಿನಗೆ ನಿತ್ಯ ಮಜ್ಜನ '' ಎಂದು ಶಿವ ಶರಣರು ಹೇಳಿದ್ದಾರೆ. ''ಎರೆದರೆ ನೆನೆಯದು ಮರೆತರೆ ಬಾಡದು ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ '' ಎಂದೂ ಪ್ರಭುದೇವರು ಕೂಡಾ ಹೇಳಿದ್ದಾರೆ. ಈ ಮಾತುಗಳನ್ನು ಅನುಭವದಿಂದ ಆಲಿಸಲೇ ಬೇಕಾಗಿದೆ.

**1207**

**ಅವ್ವಾ ಅವ್ವಾ, ನಾನೇನೆಂಬೆನೀ ವಿಚಿತ್ರವನು !**
**ನೀರನೆರೆಯದೆ ಆದುದು ನೋಡವ್ವಾ ವೃಕ್ಷ;**
**ಗಾಳಿಯಿಲ್ಲದೆ ಚಲಿಸುತ್ತಿಹುದು; ಋತುವಿದಾಗದೆ ಫಲವಾಗುವುದು.**
**ಅದ ನೋಡಿ ನಮ್ಮ ಚೆನ್ನ ಬಸವಣ್ಣ.**
**ಮೊಳೆಯ ಚಿವುಟಿ ಒಗೆದ ನೋಡವ್ವಾ.**
**ಅದೆ ಕಪಿಲಸಿದ್ಧ ಮಲ್ಲೇಶನ ರೂಪು ನೋಡವ್ವಾ.**

ಅಂಗವೆಂಬುದು ಸಾಮಾನ್ಯವಲ್ಲ; ಬೇರಿಗೆ ನೀರು ಎರೆಯದೆ ಬೆಳೆದ ಬೇರಿಲ್ಲದ ಮರ ! ಬೋಧೆ ಮಾಡುತ್ತಾ ನಡೆದಾಡುವ ಅಂಗವೆಂಬ ಈ ಮರಕ್ಕೆ ಬುದ್ಧ '' ಬೋಧಿವೃಕ್ಷ''ವೆಂದು ಹೆಸರಿಟ್ಟು ಕರೆದ. ನೀರು ಎರೆಯದೆ, ಗಾಳಿಯಿಲ್ಲದೆ ಚಲಿಸುವ ವೃಕ್ಷ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಋತುವಿಲ್ಲದೆ ಫಲವಾಗುವುದು. ವೃಕ್ಷದ ಅಜ್ಞಾನವನ್ನು ಚಿವುಟಿ ಒಗೆದ ಚೆನ್ನಬಸವಣ್ಣ ಎಂದು ಗುರುದೇವನನ್ನು ನೆನೆದಿದ್ದಾರೆ. ರೂಪವನ್ನು ಹೊತ್ತುಕೊಂಡ ನಿರೂಪ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನ ರೂಪವೇ ಆಗಿದೆ ಎಂದು ಹೊಗಳಿದ್ದಾರೆ.

**1208**

**ಶಬ್ಧ ನೋಡುವಡೆ ನಪುಂಸಕ;**
**ಅದರ ಕಾರ್ಯ ನೋಡುವಡೆ,**
**ಹರಿಹರ ಬ್ರಹ್ಮಾದಿಗಳನ್ನೆಲ್ಲಾ ಮುರಿದಿಕ್ಕಿತ್ತು .**
**ಅದರಂತೆ ಹೋದಡೆ ತನ್ನನ್ನು ಬಿಡದು.**
**ತಾ ತಿಳಿದು ಹೋದಡೆ ತನ್ನ ಕಡೆ ಬರದು ನೋಡಾ, ಕಪಿಲಸಿದ್ಧಮಲ್ಲಯ್ಯಾ .**

''ಕು-ಶಬ್ಧ, ಸು-ಶಬ್ಧ, ಶಬ್ಧದಲ್ಲಿಯೇ ನೋಡಾ '' ಎಂದು ಚೆನ್ನ ಬಸವಣ್ಣ ಹೇಳಿದರೆ, ''ಶಬ್ಧ ಸೂತಕಿಗಳು ರೌರವ ನರಕಿಗಳು'' ಎಂದು ಅಲ್ಲಮಪ್ರಭುಗಳು ಹೇಳುತ್ತಾರೆ. ''ಶಬ್ಧ ನೋಡುವಡೆ ನಪುಂಸಕ '' ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಶಬ್ಧದಿಂದ ಈ ಎಲ್ಲಾ ವಚನಗಳನ್ನು ಹೇಳಬಹುದು, ಆದರೆ ಪ್ರಯೋಗಕ್ಕೆ ಹೋಗಿ ಅನುಭವಕ್ಕೆ ತಂದುಕೊಳ್ಳದ ವಿನಃ ಯಾರಿಗೂ ಅರ್ಥವಾಗದು.

ಶ್ರೀರಾಮ ಸ್ವತಃ ಹರಿಯ ಅವತಾರಿಯಾದರೂ ಕೈಕೇಯಿಯ ಮಾತಿನಿಂದಾಗಿ ಹದಿನಾಲ್ಕು ವರ್ಷ ವನವಾಸಕ್ಕೆ ಹೋದ. ಶಬ್ಧ ನುಡಿದು ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿದ ಕೈಕೇಯಿಗೆ ಸುಖವಾಗಬೇಕಿತ್ತು . ಆದರೆ ಸಾಯುವವರೆಗೂ ದುಃಖ ಅನುಭವಿಸಿದಳು.

ಮಡಿವಾಳನ ಶಬ್ಧ ಶ್ರೀರಾಮನಿಗೆ ಸೂತಕವಾಗಿ ಉಳಿಯಿತು. ಸೀತೆಯನ್ನು ಕಾಡಿಗೆ ಕಳುಹಿಸಿ ಶಾಶ್ವತ ದುಃಖ ಅನುಭವಿಸಿದ. ಶಬ್ದದಲ್ಲಿ ಅರಿವಿದೆ. ಶಬ್ಧ ಎನ್ನುವುದು ಕು- ಶಬ್ದವೂ ಅಲ್ಲ; ಸು-ಶಬ್ದವೂ ಅಲ್ಲ. ಶಬ್ಧವನ್ನು ಅರಿವಿನಿಂದ ಕೇಳಿದರೆ ಅದು ಸುಖವನ್ನುಂಟು ಮಾಡುವುದಿಲ್ಲ; ಹಾಗೆಯೇ ದುಃಖವನ್ನುಂಟು ಮಾಡುವುದಿಲ್ಲ; ನಪುಂಸಕವಾಗುತ್ತದೆ.

ಈ ದೇಶದ ಪ್ರಧಾನಿ ಪಾಕಿಸ್ತಾನದ ಪ್ರಧಾನಿಯನ್ನು ''ಕತ್ತೆ'' ಎಂದು ನುಡಿದರೆ ಯದ್ಧವೇ ಜರುಗುವುದು. ಇಡೀ ದೇಶದಲ್ಲಿ ವಾಸಮಾಡುವ ಜನರ ರಕ್ತ ಕತಕತನೆ ಕುದಿಯುತ್ತದೆ. ಸಾವಿರಾರು

ಜನರ ಸಾವು-ನೋವುಗಳಿಗೆ ''ಶಬ್ದ'' ಕಾರಣವಾಗುತ್ತದೆ. 'ಕತ್ತೆ'ಯೂ ಕತ್ತೆಯಲ್ಲ; ತಾನು ಕೂಡಾ 'ಕತ್ತೆ' ಅಲ್ಲ. ಒಂದು ಪ್ರಾಣಿಗೆ ಇಟ್ಟ ಹೆಸರು, ಎಂದು ಶಬ್ದ ನುಡಿಯುವವರಿಗೂ ಗೊತ್ತಾಗುವುದಿಲ್ಲ.

ಶಬ್ದ ಅರಿವಿನಿಂದ ಕೇಳಿದರೆ ನಪುಂಸಕವಾಗುತ್ತದೆ. ಮರೆವಿನಿಂದ ಕೇಳಿದರೆ ಶಬ್ದವೇ ಆಯುಧವಾಗಿ ತನು ಇರುವವರೆಗೆ ಹಂತ ಹಂತವಾಗಿ ಕೊಲ್ಲುತ್ತದೆ. ತನುವಿನಿಂದ ರಚನೆಯಾದ ಶಬ್ದ ತನುವನ್ನೇ ಸಂಕಟಕ್ಕೀಡು ಮಾಡುವುದು ತನುವಿನ ದುರ್ದೈವವೇ ಸರಿ.

**1209**

**ಮನಸ್ ಶಬ್ಧ ನಪುಂಸಕ ಎಂಬ ನ್ಯಾಯಜ್ಞನ ಮಾತು**
**ಪುಸಿಯಲ್ಲ ನೋಡಯ್ಯಾ.**
**ಶಬ್ಧ ನಪುಂಸಕವಾಗಿ ಕಾರ್ಯ ಪುಲ್ಲಿಂಗವಾದಡೆ,**
**ಆ ಶಬ್ಧ ಪಾಣಿನಿಗೆ ತಿಳಿಯದೆ ಹೋಯಿತ್ತೇನಯ್ಯಾ?**
**ಕಪಿಲಸಿದ್ಧಮಲ್ಲಯ್ಯಾ.**

ಮನಸ್ಸು ಇಲ್ಲದ್ದು. ಆದರೆ ದೇಹ ಇರುವವರೆಗೆ ದೇಹವನ್ನು ಇದ್ದಂತೆ ಕಾಡುತ್ತದೆ. ಮನಸನ್ನು ಅರಿವಿನಿಂದ ನೋಡಲು ಹೋದರೆ ಅದು ಇಲ್ಲವಾಗುತ್ತದೆ. ಕತ್ತಲು ಇಲ್ಲ. ಆದರೆ ಅದು ಬೆಳಕಿನಿಂದಲೇ ಸೃಷ್ಟಿಯಾಗಿ ಇದ್ದಂತೆ ಭಾಸವಾಗುತ್ತದೆ. ಕತ್ತಲಲ್ಲಿ ಬಿದ್ದ ವಸ್ತುಗಳು ಕಾಣುವುದಿಲ್ಲ. ಬೆಳಕು ಹಾಕಿದ ಕೂಡಲೆ ಕತ್ತಲು ಬೆಳಕಿನಲ್ಲಿ ಲೀನವಾಗಿ ಬೆಳಕೇ ಆಗುತ್ತದೆ. ಬೆಳಕಿನಿಂದ ಹುಟ್ಟಿದ ಕತ್ತಲು ಹೇಗೆ ಬೆಳಕಿನಿಂದಲೇ ಇಲ್ಲವಾಗುತ್ತದೋ ಹಾಗೆಯೇ ಅರಿವಿನಿಂದ ಹುಟ್ಟಿದ ಮನಸ್ಸು ಅರಿವಿನಿಂದಲೇ ನಾಶವಾಗುತ್ತದೆ.

ಶಬ್ದ ಕೂಡಾ ಹಾಗೆಯೇ. ಶಬ್ದದಲ್ಲಿ ಅರಿವಿದೆ. ಮರೆವಿನಿಂದ ಕೇಳಿದರೆ ಇಡೀ ದೇಹಕ್ಕೆ ಗಾಯವಾಗುತ್ತದೆ. ಅರಿವಿನಿಂದ ಕೇಳಿದರೆ ಶಬ್ದ ನಪುಂಸಕವಾಗುತ್ತದೆ. ''ನಿಃಶಬ್ದಂ ಬ್ರಹ್ಮಮುಚ್ಯತೆ'' ಎನ್ನುವ ಸೂತ್ರಕೂಡಾ ಇದೇ ಹೇಳುತ್ತದೆ.

ಶಬ್ದ ವನ್ನು ನಿಃಶಬ್ದ ಮಾಡಿ ಕೇಳುವ ಶಕ್ತಿ ಅರಿವಿಗೆ ಮಾತ್ರ ಇದೆ. ಮನಕ್ಕೆ ಇಲ್ಲ. ಕತ್ತೆ ಎನ್ನುವ ಶಬ್ದ ಗಾಯ ಮಾಡುವುದಿಲ್ಲ. ಬೆರಳು ತೋರಿ ನೀನು ಕತ್ತೆ ಎಂದು ನುಡಿದರೆ ನುಡಿದ ದೇಹಕ್ಕೂ ಕೇಳಿದ ದೇಹಕ್ಕೂ ಗಾಯವಾಗುತ್ತದೆ. ಎರಡೂ ದೇಹಗಳಲ್ಲಿ ಶಬ್ದ ಉಳಿದು ನೆನಪಾದಾಗೊಮ್ಮೆ ದೇಹಕ್ಕೆ ಗಾಯವಾಗುತ್ತದೆ.

ನುಡಿದ ದೇಹಕ್ಕೆ ನುಡಿಯಬಾರದಿತ್ತು ಎಂದು ಗಾಯವಾಗುತ್ತದೆ. ಕೇಳಿದ ದೇಹಕ್ಕೆ ನುಡಿದನಲ್ಲ ಎಂದು ಗಾಯವಾಗುತ್ತದೆ. ಕತ್ತೆ ಎನ್ನುವ ಶಬ್ಧ ಒಂದು ಪ್ರಾಣಿಗೆ ಇಟ್ಟ ಹೆಸರು. ಅದು ಕೂಡಾ ಕತ್ತೆ ಅಲ್ಲ; ಅಂದ ಮೇಲೆ ನಾನು ಹೇಗೆ ಕತ್ತೆ ಎನ್ನುವ ಅರಿವು ಮನಸ್ಸಿಗೆ ಹೊಳೆಯುವುದಿಲ್ಲ. ಹೀಗಾಗಿ ಶಬ್ದ ಪುಲ್ಲಿಂಗವಾಗಿ ದೇಹದಲ್ಲಿ ಮನಸ್ಸಿನ ಅಜ್ಞಾನದ ಕಾರ್ಯ ನಡೆಯುತ್ತದೆ. ಇದು ದೇಹಕ್ಕೂ ತಿಳಿಯದೆ ಹೋಗುತ್ತದೆ. ಹೀಗಾಗಿ ಶಬ್ದ ಕೇಳಿದ ಕೂಡಲೇ ದೇಹಕ್ಕೆ ಕಂಪನ ಉಂಟಾಗುತ್ತದೆ.

ಅರಿವು ಹಾಗಲ್ಲ. ಕತ್ತೆ ಎನ್ನುವ ಶಬ್ದ ಕಿವಿಗೆ ಬಿದ್ದ ಕೂಡಲೇ ಅದು ನಾನಲ್ಲ; ಕತ್ತೆ ಕೂಡಾ ಕತ್ತೆ ಅಲ್ಲ ಎಂದು ಕೂಡಲೇ ನಿರ್ಧಾರಕ್ಕೆ ಬರುತ್ತದೆ. ಮನಸ್ಸು ಮನೋಧರ್ಮ ಪಾಲನೆ ಮಾಡಿದರೆ; ಅರಿವು ಅರಿವಿನ ಧರ್ಮ ಪಾಲನೆ ಮಾಡುತ್ತದೆ.

ದೇಹದಲ್ಲಿ ಎರಡು ಧರ್ಮಗಳಿವೆ. ಒಂದು ಮನೋಧರ್ಮವಾದರೆ ಮತ್ತೊಂದು ಅರಿವಿನ

ಧರ್ಮ. ಮನೋಧರ್ಮ ಪಾಲನೆ ಮಾಡಿದ ದೇಹ ಹಿಂದು ಕ್ರಿಶ್ಚಿಯನ್ ಬೌದ್ಧ ಜೈನ ಪಾರ್ಸಿ ಮುಸಲ್ಮಾನ ಶ್ರೀಮಂತ ಬಡವ ಕಳ್ಳ ಭ್ರಷ್ಟಾಚಾರಿ ಹೆಣ್ಣು ಗಂಡು ಜವಾನ ಅಧಿಕಾರಿ ಶಾಸಕ ಸಚಿವ ಪ್ರಧಾನಿ ಅಧ್ಯಕ್ಷನೆಂದು ಮುಂತಾಗಿ ಗುರುತಿಸಿಕೊಂಡು ಸುಳ್ಳು ಸುಖ, ಸುಳ್ಳು ದುಃಖವನ್ನು ಹೇರಿಕೊಂಡು ಒಮ್ಮೆ ಇಲ್ಲವಾಗುತ್ತದೆ. ಅರಿವಿನ ಧರ್ಮವನ್ನು ಪಾಲನೆ ಮಾಡಿದ ದೇಹ ಇವು ಯಾವೂ ಇಲ್ಲದೆ ಪರಮಸುಖಿಯಾಗಿ ಬದುಕುತ್ತದೆ.

**1210**

**ವೇದ ವೇದಾಂತವನೋದಿದಡೇನು ಮನಸೂತಕವಳಿಯದನ್ನಕ್ಕ?**
**ಸಿದ್ಧ ಸಿದ್ಧಾಂತವ ಶ್ರಮಬಟ್ಟಡೇನು**
**ಸಾಧಿಸಿ ಕೀರ್ತಿಯ ಪಡೆಯದನ್ನಕ್ಕ?**
**ಇವೆಲ್ಲ ಹೊರಗಣ ಮಾತು.**
**ಮಾತೊಂದೆ ನಮ್ಮ ಕಪಿಲಸಿದ್ಧಮಲ್ಲೇಶನಲ್ಲಿ**
**ಸದಾಚಾರ ಸನ್ಮಾರ್ಗವಯ್ಯಾ.**

ವೇದ ವೇದಾಂತ ಅಂತರಂಗದ ಅರಿವಿಗೆ ಹೋಗುವ ಸೂತ್ರವೇ ಆಗಿದೆ. ಮನ ಅದನ್ನು ಓದಿ ಪಂಡಿತನಾಗುತ್ತದೆಯೇ ಹೊರತು; ಆ ಸೂತ್ರ ಹಿಡಿದು ಅರಿವಿಗೆ ಹೋಗಿ ಅರಿವೇ ತಾನಾಗುವುದಿಲ್ಲ.

ವೇದ ಆಗಮ ಉಪನಿಷತ್ತುಗಳು ಅಧ್ಯಯನ ಮಾಡಿದ ಮನ ಶಾಸ್ತ್ರಿಯಾಗುತ್ತದೆ; ಪ್ರವಚನಕಾರನಾಗುತ್ತದೆಯೇ ಹೊರತು ಸ್ವತಃ ತಾನೇ ಜ್ಞಾನಿ ಅದಾಗುವುದಿಲ್ಲ.

ವೇದ ಆಗಮ ಉಪನಿಷತ್ತುಗಳು ಹೊರಬಂದದ್ದು ಅಂತರಂಗದ ಅರಿವಿನಿಂದ. ಅದರಲ್ಲಿರುವ ಆ ಅರಿವೇ ತಾನಾಗಿರುವಾಗ ಅವುಗಳನ್ನು ಓದಿಯಾದರು ಏನಾಗಬೇಕಿದೆ. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಸಿದ್ಧ ವಸ್ತುವೇ ಆಗಿರುವ ಅರಿವೆಂಬ ಗುರುದೇವನು ನೀಡುವ ಅಮೃತವನ್ನು ಪಾನ ಮಾಡಬೇಕೇ ಹೊರತು; ವೇದಾಂತವನ್ನು ಓದಿ ಓದಿದ್ದನ್ನೇ ಒದರುವುದಕ್ಕಲ್ಲ.

ಓದಿದ ಓದು ಎಲ್ಲಾ ಮನದಲ್ಲಿ ಸೂತಕವಾಗಿ ತನುವನ್ನೇ ಕಾಡುತ್ತದೆ. ಇದೆಲ್ಲಾ ಹೊರಗಣ ಮಾತು. ಮಾತೊಂದೆ ನಮ್ಮ ಕಪಿಲಸಿದ್ಧಮಲ್ಲಯ್ಯನಲ್ಲಿ ಸದಾ ಅಗೋಚರದ ಆಚಾರವೇ ಸನ್ಮಾರ್ಗವಯ್ಯಾ.

ಓದಿದ ಓದು ನುಡಿಯಲು ಮಾತ್ರ ಬರುತ್ತದೆ; ನಡೆಯಲು ಬರುವುದಿಲ್ಲ. ನುಡಿದಂತೆ ನಡೆಯದಿರುವುದು ತನಗೆ ಗೊತ್ತಾಗುತ್ತದೆ. ತನ್ನರಿವೇ ತನಗೆ ಗುರುವಾಗಿ ನುಡಿದಂತೆ ನಡೆಯಲಿಲ್ಲ ಎಂದು ಹೇಳುತ್ತಾನೆ. ನುಡಿದಂತೆ ನಡೆಯದಿದ್ದರೆ ನುಡಿದದ್ದು, ನುಡಿದಂತೆ ನಡೆಯದೇ ಇರುವುದು ಈ ಎರಡೂ ಮಾತುಗಳು ಸೂತಕವಾಗಿ ತನುವಿನಲ್ಲಿಯೇ ಉಳಿಯುತ್ತವೆ.

**1211**

**ವೇದ ವೇದಾಂತವನೋದಿದವರೆಲ್ಲ ನಿರಂಜನರಾದಡೆ,**
**ಜನರಾರೋ ಈ ಲೋಕದಲ್ಲಿ?**
**ಸಿದ್ಧಾಂತವ ಸಾಧಿಸಿದವರೆಲ್ಲ ದೇವರಾದಡೆ,**
**ಸುರರಾರೋ ಸ್ವರ್ಗದಲ್ಲಿ?**

**ವೇದಾಂತವಳವಟ್ಟಿತ್ತು ಪ್ರಮಥರಿಗೆ,**
**ಸಿದ್ಧಾಂತವಳವಟ್ಟಿತ್ತು ಒಬ್ಬೊಬ್ಬರಿಗೆ.**
**ಈ ಎರಡರ ಕೀಲವಳವಟ್ಟಿತ್ತು ಎನ್ನ ಗುರು ಚೆನ್ನಬಸವಣ್ಣಂಗೆ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ವೇದ ವೇದಾಂತವನು ಓದುವುದು ಮನವೇ ಹೊರತು ಅನ್ಯವಲ್ಲ. ಸಿದ್ಧಾಂತವ ಸಾಧಿಸಲು ಹೋಗುವುದು ಕೂಡಾ ಮನವೇ ಆಗಿದೆ. ಮನ ಓದಿದರೆ ಅದು ಶಾಸ್ತ್ರಿಯಾಗುತ್ತದೆಯೇ ಹೊರತು ನಿರಂಜನನಾಗುವುದಿಲ್ಲ. ಸಾಧಿಸಿದ ಸಾಧನೆಗಳ ಮೂಲಕ ಮನ ಸಿದ್ಧಾಂತಿಯಾಗುತ್ತದೆಯೇ ಹೊರತು ಸಿದ್ಧನಾಗುವುದಿಲ್ಲ.

ತನುವಿನ ಕಣಕಣದಲ್ಲಿ ನಿರಂಜನನು ತನ್ಮಯವಾಗಿದ್ದಾನೆ. ಅರಿವಿನಿಂದಲೇ ವೇದ ಆಗಮ ಉಪನಿಷತ್ತುಗಳು ಹುಟ್ಟಿಕೊಂಡಿವೆ. ಅವನಿಗೆ ಓದುವ ಅವಶ್ಯಕತೆಯೇ ಇಲ್ಲ. ನಿರಂಜನನಿಂದಲೇ ಮನ ಸೃಷ್ಟಿಯಾಗಿ ತನುವನ್ನು ಆವರಿಸಿಕೊಂಡು ಸದಾ ರಂಜನೆಗೆ ಒಳಗಾಗಿದೆ. ಇಂತಹ ಮನಕ್ಕೆ ಓದಿದ ಓದು ನಿಲ್ಲುವುದಿಲ್ಲ.

ಮನದ ರಂಜನೆ ನಿರಂಜನನ ಸಂಗದಿಂದ ನಷ್ಟವಾಗುವುದು. ಏಕೆಂದರೆ ಅವನು ಅಕ್ಷರೋತ್ತಮ. ಸರ್ವೋತ್ತಮ. ಇಂತಹ ಬಯಕೆ ಉಳ್ಳ ಮನಕ್ಕೆ ಮಾತ್ರೆ ವೇದಾಂತವಾಗಿ ಉಪಯೋಗವಾಗುತ್ತದೆ. ಸಿದ್ಧಾಂತ ಸಿದ್ಧಿ ಪುರುಷನಲ್ಲಿಗೆ ಹೋಗಲು ರಹದಾರಿಯಾಗುತ್ತದೆ.

ಶರಣ ವೇದ ವೇದಾಂತವನು ಓದುವವನಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿಗೆ ಶರಣು ಹೋಗುತ್ತಾನೆ. ಅಲ್ಲಿಯೇ ನೆಲೆಸಿದ ಅವ್ಯಕ್ತ ಸಿದ್ಧ ವಸ್ತುವಿಗೆ ಶರಣು ಹೋಗಿ ಕಪಿಲಸಿದ್ಧ ಮಲ್ಲಿನಾಥನೇ ತಾನಾಗುತ್ತಾನೆ.

**1212**

**ತಿಳಿನೀರೆಂಬೆ ತಿಳಿನೀರೆಂಬೆ,**
**ತಿಳಿ ನೀ ಎಂದು ಒಂದು ದಿನ ಅಂದಿಲ್ಲೆಲೆ ಮಾನವಾ.**
**ಕ್ಷಣಕ್ಷಣಕ್ಕೆ ತಿಳಿ ನೀ ಎಂದಡೆ,**
**ತಳುಹದೆ ತನ್ನ ನಿಜವ ಕೊಡನೆ ಕಪಿಲಸಿದ್ಧಮಲ್ಲೇಂದ್ರ ?**

ನೀರ ಬಿಂದುವೇ ಗಟ್ಟಿಯಾಗಿ ತನುವಾಗಿದೆ. ತನುವಿನ ಗರ್ಭದ ಮೂಲಕ ಗರ್ಭಕ್ಕೆ ಹರಿದ ನೀರ ಬಿಂದುವಿನಿಂದಲೇ ಮತ್ತೆ ತನುವಾಗಿ ಹೊರಬಂದಿದೆ.

ತಾನು ನೀರೆಂಬುದನ್ನು ಮರೆತ ತನು ನೀರಿಗಾಗಿ ನೀರ ದಾಹಕ್ಕಾಗಿ ನೀರ ತನು ಹಪಹಪಿಸುತ್ತಲಿದೆ. ನೀರಬಿಂದುವೇ ನೀರ ಮೇಲೆ ಅರಳಿ ನಿಂತು 'ಹರಿ'ಯಾಯಿತು. ನೀರ ಬಿಂದುವೇ 'ಹರಿ'ಮಲಗಲು ಹಾವಿನ ಹಾಸಿಗೆಯಾಯಿತು. ನೀರಬಿಂದುವೇ ಹರಿಯ ಸೇವೆಗೆ ಸತಿಯಾಗಿ ಚಂಚಲೆಯಾಯಿತು. ಹರಿಯ ನಾಭಿಯಿಂದಲೇ ಹುಟ್ಟಿದ ಬಳ್ಳಿ ಕಮಲವಾಗಿ ನೀರ ಮೇಲೆಯೇ ಅರಳಿ ನಿಂತು ಬ್ರಹ್ಮನ ಸೃಷ್ಟಿಗೆ ಕಾರಣವಾಯಿತು. ಸರಸ್ವತಿ ಕೂಡಾ ಆ ಕಮಲದಲ್ಲಿಯೇ ಹುಟ್ಟಿ ಬ್ರಹ್ಮನಿಗೆ ಸತಿಯಾದಳು. ತನುವಿನ ಸೃಷ್ಟಿಗೆ ನೀರು ಕಾರಣವಾದರೂ ನೀರು ನೀರೆಂದು ತಿಳಿಯದೆ ನೀರು ನೀರಿಗಾಗಿಯೇ ಬದುಕಿದೆ. ನೀರು ನೀರೆಂದು ತಿಳಿಯಲು ನೀರಿಗೆ

ಸಾಧ್ಯವಾಗುತ್ತಿಲ್ಲ.

ನೀರು ಗಟ್ಟಿಯಾಗಿ ತನುವಿನ ಮೂಲಕ ನೋಡುವುದನ್ನು ಕಲಿತಿದೆ; ಕೇಳುವುದನ್ನು ಕಲಿತಿದೆ. ರುಚಿಸಿ ಮೂಸಿಸಿ ಸ್ಪರ್ಶಿಸುವುದನ್ನು ಕಲಿತಿದೆ. ಭಾವಿಸಿ ಭಾವಿಸಿದ ಭಾವನೆಗಳನ್ನು ಮುರಿದು ನಿರ್ಭಾವಕ್ಕೆ ಹೋಗುವುದನ್ನು ಕಲಿತಿದೆ. ಆದರೂ ನೀರು ನೀರೆಂಬುದನ್ನು ತಿಳಿಯದೇ ಹೋಗಿದೆ.

ನೀರು ಹೆಣ್ಣಾಗಿದೆ;ಗಂಡಾಗಿದೆ. ಜಾತಿ ಮತ ಪಂಥ ಧರ್ಮವೆಂದು ತನ್ನನ್ನು ತಾನೇ ಸೀಳಿಕೊಂಡಿದೆ. ನೀರು ಹಿಂದು ಮುಸ್ಲಿಂ ಕ್ರೈಸ್ತನಾಗಿದೆ. ಜೈನ ಬೌದ್ಧ ಪಾರ್ಸಿಯಾಗಿದೆ. ಶಾಸಕ ಸಚಿವ ಪ್ರಧಾನಿಯಾಗಿದೆ.ಅಧಿಕಾರಿ ಜವಾನ ಕಾರಕೂನನಾಗಿದೆ. ತಿಳಿ ತಿಳಿದು ನೋಡುವ ತನು ತಾನೂ ತಿಳಿನೀರೆಂಬುದನ್ನೇ ನೀರು ಮರೆತು ಹೋಗಿದೆ.

ಅರಿವಿನಿಂದ ತಿಳಿ ತಿಳಿದು ನೋಡಲು ಹೋದರೆ ನೀರು ನೀರಲ್ಲ. ಶುದ್ಧ ಜಲಜನಕ ಆಮ್ಲಜನಕಗಳ ಮಿಶ್ರಣ ! ಜಲಜನಕಕ್ಕೆ ಉರಿಯುವ ಗುಣವಿದೆ; ಆಮ್ಲಜನಕಕ್ಕೆ ಉರಿಸುವ ಗುಣವಿದೆ. ಇವೆರಡರ ಮಿಶ್ರಣಕ್ಕೆ ಉರಿಯುವ ಅಗ್ನಿಯನ್ನು ನಂದಿಸುವ ಗುಣವಿದೆ. ಇವೆರಡಕ್ಕೂ ಜನ್ಮ ನೀಡಿ, ಆಶ್ರಯ ಕೊಟ್ಟು ತನ್ನ ಗರ್ಭದಲ್ಲಿ ಇಟ್ಟುಕೊಂಡ ಬಯಲು ಅಗ್ನಿಗೆ ಸುಡುವುದಿಲ್ಲ; ಜಲಕ್ಕೆ ತೋಯುವುದಿಲ್ಲ. ಗಾಳಿಗೆ ನಲುಗುವುದಿಲ್ಲ, ಭೂಮಿಗೆ ಬಿರಿಯುವುದಿಲ್ಲ, ಸೆಳೆ ಮಿಂಚಿಗೆ ಸೀಳುವುದಿಲ್ಲ.

ಜಲ ಬಿಂದುವಿನ ಮೂಲವೇ ಬಯಲು. ಅದು ಬೀಜವಾಗಿ ದೇಹವಾಗಿದೆ. ಆ ಬಯಲೇ ದೇಹದಲ್ಲಿ ಸಂಗಮವಾಗಿ ದೇವರಾಗಿದೆ. ಇಡೀ ಬ್ರಹ್ಮಾಂಡದ ಸೃಷ್ಟಿಗೆ ಕಾರಣವಾಗಿದೆ. ಈ ಸೃಷ್ಟಿಗೆ ಕಾರಣವಾದ ನೀರು ತಿಳಿ ನೀರಾಗಿ ನೀರಲ್ಲಿಯೇ ತಿಳಿಯಬೇಕಿದೆ.

**1213**

**ಅಂಗಕ್ಕೆ ಭೋಗವ ಕೊಟ್ಟವರ ನೋಡಿದೆನಲ್ಲದೆ,**
**ಲಿಂಗಕ್ಕೆ ಕೊಟ್ಟವರ ನೋಡಲಿಲ್ಲ.**
**ಲಿಂಗಕ್ಕೆ ಷೋಡಶೋಪಚಾರಂಗಳ ಕೊಟ್ಟವರ ನೋಡಿದೆನಲ್ಲದೆ,**
**ಮನವ ಕೊಟ್ಟವರ ನೋಡಲಿಲ್ಲ.**
**ಮನವ ಕೊಟ್ಟವರ ನೋಡಿದೆನಲ್ಲದೆ,**
**ಮನ ಲಿಂಗವಾದವರ ನೋಡಲಿಲ್ಲ,**
**ಕಪಿಲಸಿದ್ಧಮಲ್ಲಯ್ಯಾ .**

ಮನ ಅಂಗದೊಂದಿಗೆ ಸಂಗಮಾಡಿ ನಾನಾ ಭೋಗದಲ್ಲಿ ನಿರತವಾಗುತ್ತದೆ. ಅಂಗದಲ್ಲಿ ಅರಿವು ಎನ್ನುವ ಲಿಂಗವೂ ಇದೆ. ಮನ ಅಂಗದೊಂದಿಗೆ ಭೋಗಿಸುವ ಸಕಲ ಭೋಗವನ್ನು ಲಿಂಗಕ್ಕೆ ಕೊಟ್ಟರೆ ಮನ ಘನಮನವಾಗುತ್ತದೆ. ಆದರೆ ಈ ಕಾಯಕ ಯಾವ ಕಾಯದಲ್ಲಿಯೂ ಘಟಿಸುವುದೇ ಇಲ್ಲ. ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಲಿಂಗವಲ್ಲ. ಅದೊಂದು ಉಪಕರಣ. ಇಂತಹ ಉಪಕರಣಕ್ಕೆ ಅರ್ಘ್ಯ, ಪಾದ್ಯ , ಆಚಮನ, ಪತ್ರಪುಷ್ಪ, ಗಂಧ, ಅಕ್ಷತೆ, ರುದ್ರಾಕ್ಷಿ , ಛತ್ರಿ , ಚಾಮರ, ವ್ಯಜನ, ಗೀತ,ವಾದ್ಯ , ನರ್ತನ, ಪ್ರದಕ್ಷಿಣ, ನಮಸ್ಕಾರ, ಸ್ತೋತ್ರ ಮುಂತಾದವುಗಳ ಮೂಲಕ ಲಿಂಗವೆಂಬ ವಸ್ತುವನ್ನು ಪೂಜಿಸಿದರೆ ಅದು ಪೂಜೆಯಲ್ಲ. ಅದು ಉಪಚಾರವೂ ಅಲ್ಲ. ಎರೆದರೆ

ನೆನೆಯುವುದಿಲ್ಲ; ಮರೆತರೆ ಬಾಡುವುದಿಲ್ಲ. ಇಂತಹ ಲಿಂಗಕ್ಕೆ ಆರಾಧನೆ ಮಾಡಿ ಧನ್ಯನಾದೆನೆಂದು ಬೀಗುವ ಮನಕ್ಕೆ ಏನೆನ್ನಬೇಕು ?

ಅಂಗದಲ್ಲಿಯೇ ಸಂಗಮವಾದ ಅರಿವು ಎನ್ನುವ ಲಿಂಗ ಯಾರಿಗೂ ಕಾಣುವುದಿಲ್ಲ. ಆದರೆ ಅನುಭವದಿಂದ ನೋಡಿದರೆ ತನಗೆ ಕಾಣದೇ ಇರುವುದಿಲ್ಲ. ಇಂತಹ ಲಿಂಗಕ್ಕೆ ಮನ ತನ್ನ ಸರ್ವಸ್ವವನ್ನು ಅರ್ಪಣೆ ಮಾಡಬೇಕು.

ಮನದ ಸರ್ವಸ್ವ ಎಂದರೆ ಅಜ್ಞಾನ; ಲಿಂಗ ಎಂದರೆ ಮಹಾಜ್ಞಾನ. ಇಂತಹ ಜ್ಞಾನಕ್ಕೆ ತನ್ನ ಅಜ್ಞಾನವನ್ನು ಅರ್ಪಣೆ ಮಾಡಬೇಕು. ಮನ ತನಗೆ ತಾನೇ ಲಿಂಗಕ್ಕೆ ಅರ್ಪಿಸಿ ಘನಮನವಾಗಬೇಕು.

**1214**

**ಉಂಡು ಉಂಡು ಹೋಗುವವರ ನೋಡಿ ನೋಡಿ**
**ನಾಚಿತ್ತಯ್ಯಾ ಎನ್ನ ಮನ.**
**ಎಡಹಿ ಎಡಹಿ ಹೋಗುವವರ ನೋಡಿ ನೋಡಿ**
**ನಾಚಿತ್ತಯ್ಯಾ ಎನ್ನ ಮನ.**
**ಉಣದೆ ಎಡಹದೆ ಹೋದಡೆ ಅವರೆ ಬಸವಾದಿ ಪ್ರಮಥರೆಂಬೆ,**
**ಅವರೆ ನೀವೆಂದು ಭಾವಿಸುವೆನಯ್ಯಾ ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನಸ್ಸಿನ ಕಥೆಯೇ ಹೀಗೆ. ಅದು ದೇಹವನ್ನು ಆವರಿಸಿ ತನಗೆ ಬೇಕಾದುದನು ದೇಹದ ಮೂಲಕ ಉಂಡು ಉಟ್ಟು ತೊಟ್ಟು ನೋಡಿ ಮುಟ್ಟಿ ಮೂಸಿಸಿ ಒಮ್ಮೆ ದೇಹವನ್ನು ಇಲ್ಲವಾಗಿಸಿ ದೇಹ ಬಿಟ್ಟು ಹೋಗುತ್ತದೆ. ಮನ ಮತ್ತು ಅರಿವು ಇದ್ದ ದೇಹ ಮನವನ್ನು ಅರಿವನ್ನು ಅಲಕ್ಷ್ಯ ಮಾಡಿದಾಗ, ಅವೆರಡು ದೇಹದಲ್ಲಿ ಇಲ್ಲವಾದಾಗ ದೇಹ ಶವವಾಗುತ್ತದೆ.

ದೇಹದಲ್ಲಿದ್ದ ಅರಿವೇ ಗುರುವಾಗಬೇಕಿತ್ತು. ಆ ಗುರುದೇವನೇ ಮಹಾದೇವನಾಗಬೇಕಿತ್ತು. ಆ ಮಹಾದೇವನಿಗೆ ಮನ ಮಡದಿಯಾಗಬೇಕಿತ್ತು. ಆದರೆ ಮನ ಮಹಾದೇವನೊಂದಿಗೆ ಸಂಗ ಮಾಡುವುದನ್ನು ಬಿಟ್ಟು ದೇಹದೊಂದಿಗೆ ಸಂಗ ಮಾಡಿದ್ದರಿಂದ ದೇಹವನ್ನು ಮನ ಉಣ್ಣುವುದಕ್ಕಾಗಿ ಉಡುವುದಕ್ಕಾಗಿ ತೊಡುವುದಕ್ಕಾಗಿ ಅಜ್ಞಾನದಿಂದ ನೋಡಿ ನೋಡಿ ಕೆಡುವುದಕ್ಕಾಗಿ ದೇಹವನ್ನು ಸೀಮಿತಗೊಳಿಸಿದೆ. ಹೀಗಾದರೂ ಕೂಡ ದೇಹಕ್ಕು ಮನಕ್ಕು ನಾಚಿಕೆಯಿಲ್ಲ ಹೀಗಾಗಿ ಮನ ದೇಹದೊಂದಿಗೆ ಅಜ್ಞಾನದ ಕೆಲಸದಲ್ಲಿ ಭಾಗಿಯಾಗಿ ಮತ್ತೆ ಮತ್ತೆ ಎಡವುತ್ತದೆ.

ಮನ ಮತ್ತು ತನುವಿನಲ್ಲಿ ತನ್ಮಯವಾದ ಅರಿವು ಒಂದನ್ನಾಗಿಸಿಕೊಂಡವರೇ ವೀರಾಧಿ ವೀರರು. ಮನದೊಂದಿಗೆ ಅರಿವೆಂಬ ಗುರುದೇವನಿಗೆ ಶರಣು ಹೋಗಿ ಶರಣನೇ ತಾವಾದವರು ; ಬಸವಾದಿ ಪ್ರಮಥರು ಅವರು ಸಾಕ್ಷಾತ್ ದೇವರೇ ಆಗಿದ್ದಾರೆ.

**1215**

**ಜಲವ ತರದೆ, ಪಾವಕವ ಹೊತ್ತಿಸದೆ,**
**ಪಾಕವ ಮಾಡಿ ಉಣಬಲ್ಲಡೆ ಐಕ್ಯನೆಂಬೆ, ಆರೂಢನೆಂಬೆ,**

**ಆರುಸ್ಥಲವ ಮೀರಿದ ಮಹಾಯೋಗಿ ಎಂಬೆ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅರಿವಿನ ಅಡಿಗೆಗೆ ಜಲದ ಅವಶ್ಯಕತೆಯಿಲ್ಲ ಅಗ್ನಿಯ ಅವಶ್ಯಕತೆಯೂ ಇಲ್ಲ. ಪ್ರತಿ ತನುವಿನಲ್ಲಿ ಅರಿವಿನ ರುಚಿಕರವಾದ ಅಡುಗೆ ಸಿದ್ಧವಿದೆ. ಅದನ್ನು ಪಾಕವ ಮಾಡಿ ಉಂಡಾತ ಅದರೊಂದಿಗೆ ಬೆರೆತು ಬೇರಾಗದಂತೆ ಒಂದಾಗುತ್ತಾನೆ. ಆ ಅರಿವಿನಲ್ಲಿಯೇ ಸಮಾಗಮವಾಗುತ್ತಾನೆ.

ತನುವನ್ನು ಆವರಿಸಿದ ಮನ ಅರಿವಿನ ಅಡಿಗೆಯನ್ನು ಉಣ್ಣುವುದಕ್ಕೆ ಸಿದ್ಧವಾಗಬೇಕು. ಅದು ತನುವನ್ನೇ ಪಾತ್ರೆಯನ್ನಾಗಿಸಿಕೊಂಡು ತನುವಿನಲ್ಲಿಯೇ ತನ್ಮಯವಾಗಿದೆ. ಇಂತಹ ಅಡುಗೆ ಉಂಡ ಮನ ಘನಮನವಾಗುತ್ತದೆ. ಯಾವ ಅಜ್ಞಾನದ ಲೋಕದ ಸಂಪ್ರದಾಯವಿಲ್ಲದ ಲೋಕದ ರೂಢಿಯನ್ನೇ ಮರೆತು ಆರೂಢನಾಗುತ್ತದೆ.

ಆರು ಸ್ಥಲವನ್ನು ಮೀರಿ ನಿಸ್ಥಲವಾಗುತ್ತದೆ. ಸ್ಥಲ ನಿಸ್ಥಲವೆನ್ನದೆ ಮಹಾಯೋಗಿಯೇ ತಾನಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**1216**

**ನೀರ ಮೇಲೆ ನಡೆವವರನಂತರುಂಟು;**
**ಖೇಚರರಾಗಿ ನಡೆವವರನಂತರುಂಟು;**
**ಕಪಿಲಸಿದ್ಧಮಲ್ಲಿಕಾರ್ಜುನಾ,**
**ಕಾಲಿಲ್ಲದೆ ನಡೆವವರೋರ್ವರಿಲ್ಲ.**

ಪಂಚಭೂತಗಳಲ್ಲಿ ಭೂಮಿಗೆ ಚಲನೆಯುಂಟು, ಜಲಕ್ಕೂ ಚಲನೆಯುಂಟು ,ವಾಯುವಿಗೂ ಚಲನೆಯುಂಟು, ಅಗ್ನಿಗೂ ಚಲನೆಯುಂಟು ಈ ನಾಲ್ಕು ಭೂತಗಳ ಸೃಷ್ಟಿಗೆ ಕಾರಣವಾದ ಬಯಲಿಗೆ ಚಲನೆಯಿಲ್ಲ.

ಆಮ್ಲಜನಕ ಜಲಜನಕ ಇವೆರಡರ ವಾಸ ಬಯಲಲ್ಲಿ .ಬಯಲು ಇವೆರಡನ್ನು ತನ್ನ ಗರ್ಭದಲ್ಲಿ ಇಟ್ಟುಕೊಂಡು ತಾನೇ ಸೃಷ್ಟಿಮಾಡಿ ತಾನೇ ಪೋಷಣೆ ಮಾಡುತ್ತಲಿದೆ. ತನಗೆ ಬಯಕೆಯಾದಾಗ ಇವೆರಡನ್ನು ಒಂದು ಮಾಡಿ ತಾನು ಅದರಲ್ಲಿ ಬೆರೆತು ಜಲವನ್ನಾಗಿಸುತ್ತದೆ. ಜೀವ ಜಲವನ್ನಾಗಿಸುತ್ತದೆ. ಜಲವನ್ನೇ ಗಟ್ಟಿಗೊಳಿಸಿ ಪೃಥ್ವಿಯನ್ನಾಗಿಸಿದೆ. ಆ ಪೃಥ್ವಿಯ ಮೇಲೆ ಜೀವ ಜಲ ಹರಿದು ಬ್ರಹ್ಮಾಂಡದ ಸೃಷ್ಟಿಗೆ ಕಾರಣವಾಗಿದೆ. ತನುವಿನ ಗರ್ಭದಲ್ಲಿ ಹೋಗಿ ತನುವಾಗಿದೆ. ಆ ತನುವಿನಲ್ಲಿಯೇ ತನ್ಮಯವಾಗಿ ಅರಿವಾಗಿದೆ. ಆ ಅರಿವೇ ಮನಕ್ಕೆ ಜನ್ಮ ನೀಡಿ ಚಲನೆಗೆ ಕಾರಣವಾಗಿದೆ. ತನುವಿನಲ್ಲಿ ಸುಳಿದಾಡುವ ವಾಯುವಿಗೆ ಕಾರಣವಾಗಿದೆ. ತನುವಿನಲ್ಲಿ ಮಂದಾಗ್ನಿಯಾಗಿ ಉರಿದು ಪಚನ ಕ್ರಿಯೆಗೆ ಕಾರಣವಾಗಿದೆ.

ಬಯಲೇ ಬೀಜವಾಗಿ ಇಡೀ ಬ್ರಹ್ಮಾಂಡಕ್ಕೆ ಜನ್ಮ ನೀಡಿ, ಅದನ್ನು ಸುಂದರವಾಗಿ ನೋಡುವ ತನುವೆಂಬ ನಡೆದಾಡುವ ವೃಕ್ಷವಾಗಿ ಜನ್ಮತಳೆದಿದೆ. ಬಯಲಿಗೆ ಕಾಲಿಲ್ಲ ಆದರೂ ಇಡೀ ಬ್ರಹ್ಮಾಂಡವನ್ನೇ ವ್ಯಾಪಿಸಿಕೊಂಡಿದೆ. ಇದನ್ನು ಅರಿತು ಆ ಅರಿವೇ ತಾನಾದವನೇ ಮಹಾಜ್ಞಾನಿ ಎಂದು ಕರೆಯಿಸಿಕೊಳ್ಳುತ್ತಾನೆ. ಬೋಧಿ ವೃಕ್ಷದಂತೆ ನಡೆದಾಡುತ್ತಾ ತನಗೆ ತಾನೇ ಬೋಧೆ ಮಾಡಿಕೊಳ್ಳುತ್ತಾನೆ.

ಬುದ್ಧ ತನುವನ್ನು ಬೋಧಿವೃಕ್ಷ ಎಂದು ಕರೆದ. ತನು ತನುವಿಗೆ ಬುದ್ಧ ಮನಕ್ಕೆ ಬೋಧಿ

ಸುವ ಒಂದು ಸುಂದರವಾದ ಪ್ರಕ್ರಿಯೆ.

**1217**

**ಮಣಿಗಳಿಗೆ ಎಜ್ಜ ಹಿಡಿಯುವರಲ್ಲದೆ,**
**ಮನಕ್ಕೆ ಎಜ್ಜ ಹಿಡಿಯುವವರಾರೂ ಇಲ್ಲ.**
**ವ್ಯಾಧಿಗೆ ಔಷಧವ ಕೊಡುವರಲ್ಲದೆ,**
**ಮರಣಕ್ಕೆ ಔಷಧವ ಕೊಡುವವರಾರೂ ಇಲ್ಲ.**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಗರ್ಭದೊಳು**
**ಪ್ರಥಮ ಚಿಂತಾಮಣಿ ಚೆನ್ನಬಸವಣ್ಣನಲ್ಲದೆ ಮತ್ತಾರೂ ಇಲ್ಲ.**

ಮಣಿಗಳನ್ನು ದಾರದಲ್ಲಿ ಬಂಧಿಸಬಹುದು ಮನವನ್ನು ಬಂಧಿಸಲು ಸಾಧ್ಯವಾಗುವುದಿಲ್ಲ. ವ್ಯಾಧಿಗೆ ಔಷಧವ ಕೊಡಬಹುದು ಮರಣಕ್ಕೆ ಔಷಧವನ್ನು ಕೊಡುವವರು ಯಾರೂ ಇಲ್ಲ.

ಇಡೀ ಲೋಕ ಮನದ ಹಿಡಿತದಲ್ಲಿದೆ. ತನು ಅರಿವಿನ ಹಿಡಿತದಲ್ಲಿರಬೇಕಿತ್ತು . ಅರಿವು ಹೇಳಿದಂತೆ ತನು ಕೇಳಬೇಕಿತ್ತು. ಆದರೆ ಮನ ಹೇಳಿದಂತೆ ತನು ಕೇಳುತ್ತದೆ. ಹೀಗಾಗಿ ತನುವಿಗೆ ಸುಖವಿದೆ, ದುಃಖವಿದೆ, ಪರಮಸುಖವಿಲ್ಲ. ಪರಮಸುಖಿ ಎಂದರೆ ಮರಣವಿಲ್ಲದವನು. ಆದರೆ ಮರಣ ಎಲ್ಲರಿಗೂ ಇದೆ. ಶರಣನಿಗೆ ಮಾತ್ರ ಮರಣವಿಲ್ಲ. ಏಕೆಂದರೆ ಶರಣ ಮಹಾಜ್ಞಾನಿ ; ಮನವನ್ನು ಅರಿವಿನ ಪಾದಕ್ಕೆ ಹಾಕಿ ಅದೇ ತಾನಾಗಿ ಅರಿವೆಂಬ ಗುರುದೇವನಿಗೆ ಶರಣು ಹೋಗಿ ಸಂಪೂರ್ಣ ಶರಣಾಗತನಾದವನು.

ತನುವನ್ನು ಮನ ಆವರಿಸಿದೆ. ತನುವಿನಲ್ಲಿ ಅರಿವು ಎಂಬ ಗುರುದೇವ ತನ್ಮಯವಾಗಿದ್ದಾನೆ.ಮನ ಗುರುವಿಗೆ ಶರಣು ಹೋದರೆ ಮನದ ಅಜ್ಞಾನ ಕಳೆದುಕೊಂಡು ಶರಣು ಹೋಗಿ ಶರಣನೇ ತಾನಾಗುತ್ತಾನೆ. ಆ ದೇಹದಲ್ಲಿ ಗುರುದೇವನೂ ಇದ್ದಾನೆ. ಹಾಗೆಯೇ ಆ ಗುರುದೇವನಿಗೆ ಶರಣು ಹೋದ ಶರಣನು ಇದ್ದಾನೆ. ಇವರಿಬ್ಬರೂ ಇದ್ದ ದೇಹವೇ ಆಲಯ. ಅದು ದೇವಾಲಯ.

ಇವರಿಬ್ಬರಿಗೂ ಬೇಸರವಾದಾಗ ದೇಹ ಬಿಟ್ಟು ಬಯಲಲ್ಲಿ ಸೇರಿ ಬಯಲಾಗುತ್ತಾರೆ. ಆಗ ದೇಹ ಶವವಾಗುತ್ತದೆ. ಶರಣನಿಗೂ ಮರಣದ ಭಯವಿಲ್ಲ. ಏಕೆಂದರೆ ಇವರಿಬ್ಬರೂ ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವರು.

**1218**

**ವೇಷದಲ್ಲಿ ಭಕ್ತನಾದಡೇನು, ವೇಷದಲ್ಲಿ ಮಹೇಶನಾದಡೇನು,**
**ಗುಣವಿಲ್ಲದನ್ನಕ್ಕರ ?**
**ಕ್ಷೀರಕ್ಕೂ ತಕ್ರಕ್ಕೂ ಬೇಧವೇನುಂಟು ?**
**ರುಚಿಯಿಂದಲ್ಲದೆ ರೂಪದಿಂದವೆ ?**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಮಹೇಶನಿಗೆ ವೇಷದ ಅವಶ್ಯಕತೆಯಿಲ್ಲ. ಭಕ್ತನಿಗೂ ವೇಷದ ಅವಶ್ಯಕತೆಯಿಲ್ಲ.

ಇವರಿಬ್ಬರೂ ನಿರ್ಗುಣಿಗಳು. ಸಾತ್ವಿಕ ಗುಣದವರಲ್ಲ ರಾಜಸ ಗುಣದವರಲ್ಲ ತಾಮಸ ಗುಣದವರು ಕೂಡಾ ಇವರಲ್ಲ. ಇವರಿಬ್ಬರೂ ದೇಹದಲ್ಲಿಯೇ ಇದ್ದವರು. ದೇಹ ಇವರಾದವರಲ್ಲ.

ವೇಷ ವೇಶ್ಯೆಗೆ ಸಮ ಉಪಜೀವನಕ್ಕಾಗಿ ವೇಷ ಧರಿಸುವವನು ಭಕ್ತನೂ ಅಲ್ಲ ಮಹೇಶನೂ ಅಲ್ಲ. ಹಾಲಿಗೂ ಮಜ್ಜಿಗೆಗೂ ರೂಪದಲ್ಲಿ ಬೇಧವಿಲ್ಲ ಅದನ್ನು ರುಚಿಯ ಮೂಲಕ ಕಂಡುಕೊಳ್ಳಬಹುದೇ ಹೊರತು ದೃಶ್ಯದ ಮೂಲಕ ಅಲ್ಲ. ವೇಷ ಧರಿಸಿದ ಭಕ್ತ ವೇಷಕ್ಕೆ ಮಾರು ಹೋಗುತ್ತಾನೆ. ಅವನಿಗೆ ರುಚಿಯ ಅನುಭವವಿಲ್ಲ. ಮಹೇಶನ ವೇಷ ಧರಿಸಿದ ಮನಕ್ಕೂ ಮಹೇಶನ ಅರಿವಿಲ್ಲ. ಒಂದು ವೇಳೆ ಅನುಭವವಾದರೆ ತನುವಿನ ಮೇಲೆ ಧರಿಸಿದ ವೇಷವನ್ನು ಸುಟ್ಟು ಹಾಕುತ್ತಾನೆ.

ಪ್ರತಿ ರೂಪದಲ್ಲಿ ಮಹೇಶನೆಂಬ ನಿರೂಪ ಬಚ್ಚಿಟ್ಟುಕೊಂಡಿದೆ. ಹಾಗೆಯೇ ಪ್ರತಿರೂಪದಲ್ಲಿ ಭಕ್ತನೆಂಬ ನಿರೂಪ ಬಚ್ಚಿಟ್ಟುಕೊಂಡಿದೆ. ಭಕ್ತ ಮತ್ತು ಮಹೇಶನನ್ನು ರೂಪದ ಮೂಲಕ ನೋಡುವಂತಿಲ್ಲ. ರೂಪದಲ್ಲಿರುವ ನಿರೂಪವನ್ನು ನೋಡುವ ಶಕ್ತಿ ಪ್ರತಿ ಭಕ್ತನಿಗೂ ಇದೆ. ಪ್ರತಿ ಮಹೇಶನಿಗೂ ಇದೆ. ಇವರು ದೇಹವುಳ್ಳವರಲ್ಲ ದೇಹದಲ್ಲಿ ಇದ್ದವರು.

**1219**

**ದುಷ್ಕರ್ಮಂಗಳ ಮಾಡುವರನಂತರುಂಟು;**
**ಸತ್ಕರ್ಮಂಗಳ ಮಾಡುವರೊಬ್ಬರೂ ಇಲ್ಲ ನೋಡಯ್ಯಾ.**
**ದುಷ್ಕರ್ಮವೆಂದಡೆ ವಿಷಯವಾಸನೆ,**
**ಸತ್ಕರ್ಮವೆಂದಡೆ ಕಪಿಲಸಿದ್ಧಮಲ್ಲಿಕಾರ್ಜುನನ**
**ಕೂಡುವ ವಾಸನೆ.**

ಸತ್ಕರ್ಮವೆಂದರೆ ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನಿಗೆ ಶರಣು ಹೋಗುವುದು. ಶರಣು ಹೋಗಿ ಶರಣನೇ ತಾನಾಗುವುದು. ಅವನಿಗೆ ದುಷ್ಕರ್ಮವಿಲ್ಲ, ಸತ್ಕರ್ಮವಿಲ್ಲ. ಶರಣನ ಕಾಯವನ್ನು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು ಕಾಡುವುದಿಲ್ಲ.

ಶರಣನು ಸಪ್ತವ್ಯಸನಗಳಿಂದ ಮುಕ್ತನು. ಅಷ್ಟಮದಗಳಿಂದ ಮುಕ್ತನು. ಸಕಲ ತನುಗಳಲ್ಲಿ ತನ್ಮಯವಾದ ಅರಿವೆಂಬ ಗುರುದೇವನನ್ನು ನೋಡುತ್ತಾನೆ. ಹೀಗಾಗಿ ಶರಣ ಸಕಲ ತನುಗಳಿಗೂ ಶರಣು ಶರಣಾರ್ಥಿ ಎಂದು ಹೇಳುತ್ತಾನೆ.

**1220**

**ಅರುವತ್ತೆಂಟು ಸಾವಿರ ವಚನಂಗಳ ಹಾಡಿ ಹಾಡಿ**
**ಸೋತಿತೆನ್ನ ಮನ ನೋಡಯ್ಯಾ.**
**ಹಾಡುವುದೊಂದೆ ವಚನ, ನೋಡುವುದೊಂದೆ ವಚನ;**
**ವಿಷಯ ಬಿಟ್ಟು ನಿರ್ವಿಷಯನಾಗುವುದೊಂದೆ ವಚನ,**
**ಕಪಿಲಸಿದ್ಧಮಲ್ಲೇಶನಲ್ಲಿ.**

ತನುವಿನಲ್ಲಿ ಎರಡು ಧರ್ಮಗಳಿವೆ. ಒಂದು ಅರಿವಿನ ಧರ್ಮ ಮತ್ತೊಂದು ವಿಷಯದ ಧರ್ಮ. ಅರಿವಿನ ಧರ್ಮವೆಂದರೆ ಅದು ನಿರ್ವಿಷಯ.

ಮನ ಹಲವಾರು ವಿಷಯಗಳೊಂದಿಗೆ ತನುವಿನೊಂದಿಗೆ ಸುಖಿಸುತ್ತದೆ. ಸ್ವತಃ ಮನಕ್ಕೆ

ನಿರ್ವಿಷಯಿಯಾಗಲು ಬರುವುದಿಲ್ಲ. ಅದೇನಿದ್ದರೂ ಅರಿವಿನ ಧರ್ಮವನ್ನು ಪಾಲಿಸಬೇಕು. ಆ ಅರಿವಿನಲ್ಲಿಯೇ ಲೀನವಾಗಿ ಹಾಡುವುದೇ ಬೇರೆ. ಆಗ ನೋಡಲು ಬರುತ್ತದೆ. ನೋಡುವ ವಸ್ತುವನ್ನೇ ನೋಡಿ ಸಹಜನಾಗುತ್ತದೆ. ನೋಡಿ ಸಹಜನಾದ ಮೇಲೆ ನುಡಿ ಕೆಟ್ಟ ನುಡಿಯನ್ನು ನುಡಿಯುತ್ತದೆ.

ಮನ ಅರಿವಿನ ಕಣ್ಣಿನಿಂದ ನೋಡುತ್ತದೆ. ಅರಿವಿನ ಕಿವಿಯಿಂದ ಕೇಳುತ್ತದೆ. ಅರಿವಿನ ಚರ್ಮದಿಂದ ಸ್ಪರ್ಶಿಸುತ್ತದೆ. ಅರಿವಿನ ನಾಲಿಗೆಯಿಂದ ರುಚಿಸುತ್ತದೆ. ಅರಿವಿನ ಮೂಗಿನಿಂದ ಮೂಸಿಸಿ ಸುಗಂಧ ದುರ್ಗಂಧ ಎಂಬ ಅಜ್ಞಾನವನ್ನು ಕಳೆದುಕೊಂಡು ಪರಿಮಳವನ್ನು ಮಾತ್ರ ಹೀರುತ್ತದೆ. ವಿಷಯ ಬಿಟ್ಟು ನಿರ್ವಿಷಯಿಯಾಗುತ್ತದೆ.

**1221**

**ನಿರ್ವಿಷಯನಾಗಬೇಕೆಂದು ಹೇಳುವರಲ್ಲದೆ,**
**ಆದವರನೊಬ್ಬರನೂ ಕಾಣೆ ನೋಡಯ್ಯಾ .**
**ಆಗುವುದೆ, ಆಗುವುದೆ ಮಾಯಾಂಶಿಕಂಗೆ?**
**ಆಗುವುದು ನಿನ್ನಂಶಿಕಂಗಲ್ಲದೆ ಇನ್ನಾರಿಗಯ್ಯಾ ,**
**ಕಪಿಲಸಿದ್ಧಮಲ್ಲಿನಾಥಾ.**

ನಿರ್ವಿಷಯನಾಗುವುದು ಸುಲಭದ ಮಾತಲ್ಲ. ವಿಷಯ ತನು ಮತ್ತು ಮನಕ್ಕೆ ಸುಖ ಕೊಡುವುದರಿಂದ ಅದನ್ನೇ ತನು ಸುಖವೆಂದು ತಿಳಿಯುತ್ತದೆ. ಆದರೆ ಆ ಸುಖದಲ್ಲಿ ದುಃಖ ಬಚ್ಚಿಟ್ಟುಕೊಂಡಿದೆ ಎಂಬುದು ಮನ ಮತ್ತು ತನುವಿಗೆ ತಿಳಿಯದೇ ಹೋಗುತ್ತದೆ. ಹೀಗಾಗಿ ಮನ ತನುವಿಗೆ ಸಾತ್ವಿಕನ ಸುಳ್ಳು ವೇಷ ಧರಿಸಿ ಯಾರೂ ಕಾಣದಂತೆ ವಿಷಯ ಸುಖವನ್ನು ತನುವಿನೊಂದಿಗೆ ಅನುಭವಿಸುತ್ತದೆ. ವಿಷಯ ಸುಖ ಅನುಭವಿಸಿ ಆನಂದ ಪಡುವ ಮನ ನಿರ್ವಿಷಯಕ್ಕೆ ಹೋಗಬೇಕಾಗಿರುವುದರಿಂದ ಇದು ಮನಕ್ಕೆ ಸಾಧ್ಯವಾಗುವುದಿಲ್ಲ. ನಿರ್ವಿಷಯದಲ್ಲಿ ಪರಮ ಸುಖವಿದೆ, ಸಹಜಾನಂದವಿದೆ. ನಿರ್ವಿಷಯದಲ್ಲಿ ಪರಮ ಸುಖವಿದೆ ಎಂದು ತನು ಇರುವವರೆಗೆ ಮನಕ್ಕೆ ಗೊತ್ತಾಗುವುದೇ ಇಲ್ಲ. ಇದು ಮನ ತನುವಿಗೆ ಮಾಡುವ ಮೋಸ.

ಮನದ ಮೋಸಕ್ಕೆ ಒಳಗಾದ ತನುವಾದರೂ ತನುವನ್ನು ಆವರಿಸಿದ ಮನವನ್ನು ತನು ಪ್ರತಿಭಟಿಸಬೇಕು. ಅಥವಾ ತನುವಿನಲ್ಲಿ ತನ್ಮಯವಾದ ನಿರ್ವಿಷಯಿಯೆಂಬ ಅರಿವಿನತ್ತ ಮನ ವಾಲಬೇಕು. ಅಥವಾ ತನುವೇ ಮನವನ್ನು ಪ್ರತಿಭಟಿಸಿ ತನುವಿನಲ್ಲಿಯೇ ತನ್ಮಯವಾದ ಅರಿವಿನ ಪರಮ ಸುಖವನ್ನು ತನು ಅನುಭವಿಸಬೇಕು. ಹೀಗೆ ಪ್ರಯತ್ನ ಮಾಡಿದರೆ ಸಕಲ ತನುಗಳು ತನುವನ್ನು ಆವರಿಸಿದ ಮಾಯಾಮಯವಾದ ಮನವನ್ನು ಕಳೆದುಕೊಂಡು ನಿರ್ವಿಷಯಿಯಾಗುತ್ತದೆ. ಅರಿವಿನ ಪರಮ ಸುಖವನ್ನು ಅನುಭವಿಸುತ್ತದೆ. ತನುವಿನಲ್ಲಿ ತಾನಾಗಿಯೇ ಈ ಘಟನೆ ಘಟಿಸಬೇಕೆಂದರೆ ಕೋಟಿಗೊಬ್ಬರಿಗೆ ಮಾತ್ರ ಸಾಧ್ಯವಾಗುತ್ತದೆ.

**1222**

**ಶ್ರುತಿ ಸ್ಮೃತಿ ಪುರಾಣಾಗಮಮೋಪನಿಷದ್ವಾಕ್ಯಂಗಳನರಿವಿಲ್ಲದೆ,**
**ಶ್ರುತ್ಯತೀತ ಮೂರ್ತಿಯನರಿದವರು ಒಬ್ಬರೂ ಇಲ್ಲ ನೋಡಯ್ಯಾ .**
**'ಸರ್ವಂ ಖಲ್ವಿದಂ ಬ್ರಹ್ಮ' ಎಂದರಿದು**

**ಮತ್ತೇನನರಿಯದೆ ಹೋದೆನಯ್ಯಾ ,**
**ನಿಮ್ಮ ಮಹಾಬಯಲಲ್ಲದೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಶೃತಿ, ಸ್ಮೃತಿ, ಪುರಾಣ, ಆಗಮ, ಉಪನಿಷತ್ತು , ಭಗವದ್ಗೀತೆ, ಬೈಬಲ್, ಕುರಾನ್‌ಗಳು ತನುವಿನಿಂದಲೇ ಹೊರಬಂದಿವೆ. ಓದಿದಾಗ ಸಕಲ ತನುಗಳಿಗೂ ಅರಿವಾಗುತ್ತದೆ. ಕೇಳಿದಾಗ ಓದಲು ಬಾರದವರಿಗೂ ಆನಂದವಾಗುತ್ತದೆ. ತನುವಿನಿಂದ ಬರೆಯಲ್ಪಟ್ಟ ವಸ್ತು ಬರೆದುದನ್ನು ಕೇಳಲ್ಪಟ್ಟ ವಸ್ತು ಓದುವ ವಸ್ತು ಕೂಡಾ ಒಂದೇ ಆಗಿರುವುದರಿಂದ ಅವುಗಳನ್ನು ಓದುವ ಅವಶ್ಯಕತೆಯಿಲ್ಲ.

ಮನ ತನುವಿನ ಮೂಲಕ ಬರೆದುದನ್ನು ತನುವಿನಲ್ಲಿ ದಾಖಲಿಸಿಕೊಂಡರೆ ಅದು ಅಜ್ಞಾನ. ತನುವಿನ ಮೂಲಕ ಬಂದುದನ್ನು ತನು ಎಂದಿಗೂ ಸ್ವೀಕರಿಸುವುದಿಲ್ಲ. ತನುವಿನಲ್ಲಿ ಹೊರಗಿನ ವಸ್ತುವಿನ ಚಿಕ್ಕ ಕಣವನ್ನು ಇಟ್ಟುಕೊಳ್ಳಲು ಜಾಗವಿಲ್ಲ. ಹೀಗಾಗಿ ತನುವಿನಿಂದ ಬಂದ ಶಾಸ್ತ್ರವನ್ನು ಮನ ಓದಿ ಅದನ್ನು ಉಪನ್ಯಾಸ ಮಾಡುವ ಮೂಲಕ ಪಂಡಿತನೆಂದು ಕರಿಸಿಕೊಳ್ಳುತ್ತಾನೆ. ಆದರೆ ಆ ತನು ಸ್ವತಃ ಜ್ಞಾನಿಯಲ್ಲ. ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನವನ್ನು ಬಳಸಿಕೊಂಡು ಆ ಜ್ಞಾನದಲ್ಲಿ ಅದು ಎಲ್ಲಿಯವರೆಗೆ ಮೀಯುವುದಿಲ್ಲವೋ ಅಲ್ಲಿಯವರೆಗೆ ಭ್ರಮಾಜ್ಞಾನದಿಂದ ಕೂಡಿರುತ್ತದೆ. ಜಗತ್ತಿನಲ್ಲಿರುವ ಸಕಲ ಪುಸ್ತಕಗಳು ತನುವಿನಲ್ಲಿರುವ ಅರಿವಿನ ಮೂಲಕ ಹೊರಬಂದಿವೆ. ಹೀಗಾಗಿ ಆ ಅರಿವೇ ಗುರುವು. ಆ ಗುರುದೇವನೇ ಮಹಾದೇವ. ಆ ಮಹಾದೇವನೇ ಸದಾಶಿವ. ಆ ಸದಾಶಿವನೇ ಸಾಕ್ಷಾತ್ ಪರಬ್ರಹ್ಮ. ಹೀಗಾಗಿ 'ಸರ್ವಂ ಖಿಲ್ವಿದಂ ಬ್ರಹ್ಮಂ' ಎಂದು ಅರಿತರೆ ಮತ್ತೇನನೂ ಅರಿಯುವ ಅವಶ್ಯಕತೆಯಿಲ್ಲ.

**1223**

**ಲಿಂಗಪೂಜೆಯ ಮಾಡಿ**
**ಲಿಂಗದ ಕರುಣವ ಹಡೆಯಿರೆಂದು ಹೇಳುವರಲ್ಲದೆ,**
**ನೀನಾ ಲಿಂಗವಾಗೆಂದು ಹೇಳುವರಿಲ್ಲ ನೋಡಯ್ಯಾ .**
**ಲಿಂಗ ನೀನೆಂದು ಹೇಳುವರಲ್ಲದೆ,**
**ಲಿಂಗದ ಲೀಲೆಯ ಹೇಳುವರಿಲ್ಲ ನೋಡಯ್ಯಾ .**
**ಲಿಂಗದ ಲೀಲೆಯ ಹೇಳುವರಲ್ಲದೆ,**
**ಲಿಂಗ ತಾನಾದವರಿಲ್ಲ ನೋಡಯ್ಯಾ .**
**ಲಿಂಗ ತಾವಾದವರು ಇಹರಲ್ಲದೆ,**
**ಲಿಂಗ ಶಬ್ಧಮುಗ್ಧವಾದವರು ಒಬ್ಬರೂ ಇಲ್ಲ, ಕಪಿಲಸಿದ್ಧಮಲ್ಲಯ್ಯಾ .**

ಅಂಗದ ಮೇಲೆ ಧರಿಸಿಕೊಂಡ ಲಿಂಗವು ಲಿಂಗವಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವೇ ಲಿಂಗ. ಈ ಲಿಂಗ ಅಂಗಕ್ಕೂ ಅಂಗವನ್ನು ಆವರಿಸಿದ ಮನಕ್ಕೂ ಸದಾ ಬೋಧೆ ಮಾಡುತ್ತದೆ. ಅಂಗದ ಮೇಲೆ ಕಟ್ಟಿಕೊಂಡ ಲಿಂಗವನ್ನು ಆರಾಧಿಸಿದರೆ ಯಾವ ಉಪಯೋಗವೂ ಇಲ್ಲ.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಲಿಂಗವನ್ನು ಆರಾಧಿಸಿ ಆ ಲಿಂಗವೇ ತಾನಾಗಬೇಕು. ಇಂತಹ ಕೃಷಿ ಮಾಡಬೇಕೆಂದು ಒಬ್ಬ ಗುರುದೇವರು ಹೇಳುವುದಿಲ್ಲ. ಲಿಂಗ ಪೂಜಿಸಿ ಲಿಂಗ ತಾನೇ ಆದವರು ಅಂಗದ ಮೇಲೆ ಕಟ್ಟಿಕೊಂಡ ಲಿಂಗವನ್ನು ಆರಾಧಿಸಲು ಹೇಳುವುದಿಲ್ಲ.

ಅಂಗದಲ್ಲಿಯೇ ಸಂಗಮವಾದ ಲಿಂಗದ ಲೀಲೆಯನ್ನು ಹೇಳುವುದು ಅಸಾಧ್ಯ ಅದು ಅನುಭವಿಸಿಯೇ ಸುಖಿಸಬೇಕು. ಆ ಲಿಂಗ ತಾನಾದವರಿಗೆ ಮಾತ್ರ ಇದು ಸಾಧ್ಯವಾಗುತ್ತದೆ.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಲಿಂಗವನ್ನು ಪೂಜಿಸಿ ಆ ಲಿಂಗವೇ ತಾನಾದಾಗ ಶಬ್ಧ ಮುಗ್ಧನಾಗುತ್ತಾನೆ. ನಿಶಬ್ಧವೇಧಿಯಾಗುತ್ತಾನೆ. ಕೇಳಿದ ಸಕಲ ಶಬ್ಧಗಳನ್ನು ಪ್ರಸಾದ ಮಾಡಿಕೊಂಡು ಪ್ರಸಾದಿಯಾಗುತ್ತಾನೆ.

**1224**

**ಸಿಂಹ ಮದಕರಿಯ ಮೇಲೆ ಹಾರುವುದಲ್ಲದೆ,**
**ಮದಮಹಿಷಿಯ ಮೇಲೆ ಹಾರುವುದೆ ಅಯ್ಯಾ ?**
**ಪಕ್ಷಿ ಆಕಾಶದಲ್ಲಿ ಹಾರುವುದಲ್ಲದೆ,**
**ಪಂಜರದಲ್ಲಿ ಹಾರದು ನೋಡಯ್ಯಾ .**
**ನಮ್ಮ ಕಪಿಲಸಿದ್ಧಮಲ್ಲೇಶನನರಿವವರು**
**ಜ್ಞಾನದ ಮೇಲೆ ಹಾರುವರಲ್ಲದೆ ಅಜ್ಞಾನದಲ್ಲಿ ಹಾರರು.**

ಈ ಪೃಥ್ವಿಯ ಮೇಲೆ ಜನ್ಮ ತಳೆದ ಪ್ರತಿಯೊಬ್ಬ ಮನುಷ್ಯನಿಗೂ ಜ್ಞಾನವಿದೆ. ಅದು ಅಂಗದಲ್ಲಿಯೇ ಸಂಗಮವಾಗಿದೆ. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನವನ್ನು ಕಂಡುಕೊಂಡು ಆ ಜ್ಞಾನವನ್ನೇ ಬಳಸಿದಾಗ ಆತ ಬುದ್ಧನಾಗುತ್ತಾನೆ. ಮಹಾವೀರನಾಗುತ್ತಾನೆ. ಕ್ರಿಸ್ತ , ಕೃಷ್ಣ, ಪೈಗಂಬರನೆಂದು ಕರೆಯಿಸಿಕೊಳ್ಳುತ್ತಾನೆ. ಮಹಾಜ್ಞಾನಿಯೇ ತಾನಾಗುತ್ತಾನೆ. ಈ ಪೃಥ್ವಿಯ ಮೇಲೆ ಜನ್ಮ ತಾಳಿದ ಯಾವ ವ್ಯಕ್ತಿಗೂ ಆ ವ್ಯಕ್ತಿಯ ಮನಕ್ಕೂ ಸ್ವತಃ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನವನ್ನು ಬಳಕೆ ಮಾಡಬೇಕೆಂಬ ಬಯಕೆಯೇ ಇಲ್ಲ.

ತನುವಿನಲ್ಲಿಯೇ ತನ್ಮಯವಾದ ಜ್ಞಾನವನ್ನು ಬಳಕೆಮಾಡುವ ವಿಧಾನವನ್ನು ಅಧ್ಯಾತ್ಮ ಎಂದು ಕರೆದು ಜಟಿಲಗೊಳಿಸಲಾಗಿದೆ. ಅಂತಹ ಜ್ಞಾನವನ್ನು ಪಡೆಯುವ ಆಸಕ್ತರು ಸಂಸಾರವನ್ನು ತೊರೆದು ಗುಡ್ಡಗಾಡುಗಳಲ್ಲಿ,ಮಠ ಆಶ್ರಮಗಳಲ್ಲಿ,ಹಿಮಾಲಯ ಪರ್ವತಗಳಲ್ಲಿ ಕಂಡು ಬರುತ್ತಾರೆ. ಇಂತಹ ಪ್ರಯತ್ನದಲ್ಲಿ ಇದ್ದವರು ಮಾತ್ರ ಅಧ್ಯಾತ್ಮ ಜೀವಿಗಳೆಂದು ಸಮಾಜ ಗುರುತಿಸಲ್ಪಟ್ಟಿದೆ.

ತನು, ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನವನ್ನು ಬಳಕೆಮಾಡಲು ಯಾವ ಜಾಗದಲ್ಲಿ ಇದ್ದಾದರೂ ಅಥವಾ ತಾನು ವಾಸ ಮಾಡುವ ಮನೆಯಲ್ಲಿಯೇ ಇದ್ದು ಸ್ವತಃ ತನ್ನದೇ ಆದ ತನುವಿನಲ್ಲಿ ಮಾತ್ರ ತನ್ನ ಜ್ಞಾನವನ್ನು ಕಂಡುಕೊಂಡು ಅದನ್ನು ಬಳಕೆಮಾಡಬೇಕಿದೆ. ಜ್ಞಾನದ ಹಾದಿಯನ್ನು ತುಳಿಯಲು ಯಾವ ಗುರುದೇವ ಬೋಧಿಸಿದರೂ ಕೂಡಾ ಸ್ವತಃ ತನ್ನ ಅನುಭವಕ್ಕೆ ಬಾರದ ವಿನಃ ಸ್ವರೂಪ ಜ್ಞಾನ ಆಗಲು ಸಾಧ್ಯವಾಗುವುದಿಲ್ಲ.

**1225**

**ನಿತ್ಯವೆಂದಡೆ ಲಿಂಗ, ಅನಿತ್ಯವೆಂದಡೆ ಅಂಗ.**
**ನಿತ್ಯವೆಂದಡೆ ಜ್ಞಾನ, ಅನಿತ್ಯವೆಂದಡೆ ಅಜ್ಞಾನ.**
**ನಿತ್ಯ ಕಾರ್ಯವು ಸತ್ಕರ್ಮ, ಅನಿತ್ಯ ಕಾರ್ಯಗಳೆ ವಿಷಯಂಗಳು.**

**ವಿಷಯಂಗಳೆ ನಿತ್ಯಂಗಳಾಗಲು,**
**ಜ್ಞಾನಿಯೆಂದು, ಐಕ್ಯನೆಂದು, ಪ್ರಮಥನೆಂದು, ವೀರಶೈವನೆಂದು,**
**ಕಪಿಲಸಿದ್ಧಮಲ್ಲಿಕಾರ್ಜುನನೆಂದು ಬೇರೆ ಉಂಟೇನೊ**
**ಹಾವಿನಹಾಳ ಕಲ್ಲಯ್ಯಾ ?**

ಅಂಗದಲ್ಲಿ ಸಂಗಮವಾದ ಅರಿವು ಎನ್ನುವುದೇ ಲಿಂಗ. ಅದು ಸತ್ಯ. ಅದು ಸುಂದರ ಅದು ಶಿವಮಯವು ಆಗಿದೆ. ಅಂಗವೆನ್ನುವುದು ಅನಿತ್ಯ ಅದು ಅಶಾಶ್ವತ. ಅನಿತ್ಯವೆಂದರೆ ಅಜ್ಞಾನ ಕ್ಷಣಿಕ ಸುಖ. ಇದು ಅರಿಷಡ್ವರ್ಗಗಳಿಂದ ತುಂಬಿದೆ.

ಅಂಗವನ್ನು ಆವರಿಸಿದ ಮನಕ್ಕೆ ಜನ್ಮವಿತ್ತುದು ಅರಿವೇ ಆಗಿದೆ. ಅರಿವನ್ನು ಮರೆತು ಮನ ಅನಿತ್ಯವಾದ ಅಸತ್ಯವೂ ಆದಂತಹ ಅಂಗದೊಂದಿಗೆ ಸಂಗಮಾಡಿರುವುದರಿಂದಾಗಿ ಅದಕ್ಕೆ ಅರಿಷಡ್ವರ್ಗಗಳೆಂದರೆ ಬಲು ಪ್ರೀತಿ. ವಿಷಯ ಸುಖದಲ್ಲಿ ಕ್ಷಣಕ್ಷಣಕ್ಕೂ ಸುಖಿಸುತ್ತಾ ನಿತ್ಯವೂ ಶಿವಮಯವು ಸುಂದರವೂ ಆದಂತಹ ಅರಿವಿನ ಪೂಜೆಯನ್ನೇ ಮರೆತು ಹೋಗುತ್ತದೆ. ಅರಿವಿನ ಪೂಜೆ ಮಾಡಿದ ಮನ ಆ ಅರಿವಿನಲ್ಲಿಯೇ ಐಕ್ಯವಾಗಿ ಜ್ಞಾನಿಯೆಂದು, ಐಕ್ಯನೆಂದು, ಪ್ರಮಥನೆಂದು ಕರೆಯಿಸಿಕೊಳ್ಳುತ್ತದೆ ಎಂದು ಸಿದ್ಧರಾಮ ಶಿವಯೋಗಿಗಳು ಹಾವಿನ ಹಾಳ ಕಲ್ಲಯ್ಯ ಶರಣರಿಗೆ ಅರಿವಿನ ಸೂತ್ರವನ್ನು ಹೇಳಿದ್ದಾರೆ.

**1226**

**ಎಲೆ ದೇವಾ, ನೀನೊಬ್ಬನೆ ಹಲವು ರೂಪಾಗಿ ಬಂದೆಯಯ್ಯಾ ;**
**ಭಕ್ತಿಯಲ್ಲಿ ಬಸವಣ್ಣನಾಗಿ ಬಂದಿರಿ;**
**ಮನದ ಮೈಲಿಗೆಯ ತೊಳೆಯುವಲ್ಲಿ ಮಡಿವಾಳನಾಗಿ ಬಂದಿರಿ;**
**ಎನ್ನ ಭಕ್ತಿಗೆ ಸೊನ್ನಲಿಗೆಯಲ್ಲಿ ಕಪಿಲಸಿದ್ಧಮಲ್ಲನಾಗಿ ಬಂದಿರಿ.**

ಸೊನ್ನಲಿಗೆಯಿಂದ ಬಂದ ಸಿದ್ಧರಾಮ ಶಿವಯೋಗಿಗಳು ಕಲ್ಯಾಣದಲ್ಲಿ ಬಸವಣ್ಣನನ್ನು ಮಡಿವಾಳ ಮಾಚಿದೇವರನ್ನು ಚೆನ್ನಬಸವಣ್ಣ ಮುಂತಾದವರನ್ನು ಕಂಡು ಹೃದಯ ತುಂಬಿ ಹಾಡಿದ್ದಾರೆ.

ಅಂಗದಲ್ಲಿ ಸಂಗಮವಾದ ಅರಿವನ್ನೇ ಗುರುದೇವನನ್ನಾಗಿಸಿಕೊಂಡು ಆ ಗುರುದೇವನನ್ನೇ ಮಹಾದೇವನನ್ನಾಗಿಸಿಕೊಂಡು ಆತನೊಂದಿಗೆ ಮಾತನಾಡಿದ್ದಾರೆ.

ಎಲೆ ದೇವ ನೀನು ನನ್ನನ್ನು ಉದ್ಧರಿಸಲೆಂದು ಹಲವಾರು ರೂಪದಲ್ಲಿ ಬಂದೆಯಯ್ಯಾ, ನಿನ್ನ ಕರುಣೆ ಅನಂತ. ನನ್ನ ಮೇಲೆ ಅದೆಷ್ಟು ಪ್ರೀತಿ ನಿನಗೆ. ದೇವರಿಗೆ ಭಕ್ತಿ ಹೇಗೆ ಮಾಡಬೇಕೆಂದು ಬಸವಣ್ಣನ ಅವತಾರದಲ್ಲಿ ಬಂದು ಹೇಳಿದಿರಿ ನೀವು ಮನದ ಮೈಲಿಗೆಯನ್ನು ಹೇಗೆ ತೊಳೆದುಕೊಳ್ಳಬೇಕೆಂದು ಮಡಿವಾಳ ಮಾಚನಾಗಿ ಬಂದು ಹೇಳಿದಿರಿ ನೀವು. ಎಲೆ ದೇವ ನಾನು ಮಾಡಿದ ಭಕ್ತಿಗೆ ಮೆಚ್ಚಿ ಸೊನ್ನಲಿಗೆಯಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನಾಗಿ ಬಂದು ಎನ್ನನ್ನು ಎತ್ತಿ ಹಿಡಿದಿರಿ ನೀವು. ನನ್ನನ್ನು ಉದ್ಧರಿಸಲು ಬಂದ ನಿಮ್ಮ ಲೀಲೆ ಅನಂತ.

**1227**

**ಭಕ್ತನಾದಡೆ ಬಸವಣ್ಣನಂತಾಗಬೇಕು.**
**ಜಂಗಮವಾದಡೆ ಪ್ರಭುವಿನಂತಾಗಬೇಕು.**

**ಭೋಗಿಯಾದಡೆ ನಮ್ಮ ಗುರು ಚೆನ್ನಬಸವಣ್ಣನಂತಾಗಬೇಕು.**
**ಯೋಗಿಯಾದಡೆ ನನ್ನಂತಾಗಬೇಕು ನೋಡಯ್ಯಾ ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಭಕ್ತ ಎಂದರೆ ಒಬ್ಬ ವ್ಯಕ್ತಿಯಲ್ಲ. ಅವ್ಯಕ್ತ ಶಕ್ತಿ. ಗುರು ಎಂದಡೆ ಅವ್ಯಕ್ತ ಶಕ್ತಿ . ದೇಹದಲ್ಲಿ ಅರಿವು ಎನ್ನುವ ಗುರುವೂ ಇದ್ದಾನೆ, ಹಾಗೆಯೇ ದೇಹವನ್ನು ಮನ ಆವರಿಸಿದೆ. ಈ ಮನದಿಂದಲೇ ದೇಹದಲ್ಲಿ ಇರುವ ಅರಿವೆಂಬ ಗುರುದೇವನಿಗೆ ಭಕ್ತಿಮಾಡಿ ಭಕ್ತನಾಗಬೇಕು. ಹೀಗೆ ಭಕ್ತಿ ಮಾಡಿದಾತನು ಬಸವಣ್ಣ.

ಅಂಗದಲ್ಲಿ ಜಂಗಮ ಎಂಬ ಅವ್ಯಕ್ತ ವಸ್ತುವಿದೆ. ಮನ ಮತ್ತು ತನು ಅಜ್ಞಾನಕ್ಕೆ ಬಲಿಯಾಗುವ ಮುನ್ನ ದೇಹದಲ್ಲಿಯೇ ಇರುವ ಅವ್ಯಕ್ತ ಜಂಗಮ ಅಜ್ಞಾನವನ್ನು ತಡೆಯುತ್ತಾನೆ. ತನ್ನ ಜ್ಞಾನಾಯುಧದಿಂದ ಅಜ್ಞಾನವನ್ನು ಕತ್ತರಿಸಿ ಹಾಕುತ್ತಾನೆ. ಮನ ಜಂಗಮಕ್ಕೆ ದಾಸನಾಗಬೇಕು. ಆಗ ಜಂಗಮನೇ ತಾನಾಗುತ್ತಾನೆ. ಹೀಗೆ ಜಂಗಮ ತಾನಾದಾತನು ಪ್ರಭುದೇವರು.

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಲಿಂಗವನ್ನು ಆವರಿಸಿದ ಮನ ಭಕ್ತನಾಗಿ ಅರ್ಪಿಸಿ ಸ್ವೀಕರಿಸಿದಾತನೇ ಭೋಗಿ. ಹೀಗೆ ಸಕಲವನ್ನೂ ಅರಿವೆಂಬ ಗುರುದೇವನಿಗೆ ಅರ್ಪಣೆ ಮಾಡಿ ಭೋಗಿಸಿದಾತನೇ ಚೆನ್ನಬಸವಣ್ಣ.

ದೇಹದಲ್ಲಿ ಅರಿವೆಂಬ ಗುರುದೇವನಿದ್ದಾನೆ. ದೇಹವನ್ನು ಮನ ಆವರಿಸಿದೆ. ಮನ ತನುವಿನ ಸಂಗ ಕಳಚಿಕೊಂಡು ತನುವಿನಲ್ಲಿಯೇ ತನ್ಮಯವಾದ ಗುರುದೇನೊಂದಿಗೆ ಬೇರಾಗದಂತೆ ಬೆರೆತಾತನೇ ಯೋಗಿ. ಹೀಗೆ ಯೋಗಿಯೆಂದು ಕರೆಸಿಕೊಂಡಾತನೇ ಸಿದ್ಧರಾಮ ಶಿವಯೋಗಿ.

**1228**

**ಧರೆ ಇಲ್ಲದೆ ಬೆಳೆಯಬಹುದೆ ಧಾನ್ಯವ ?**
**ಮಳೆ ಇಲ್ಲದೆ ನೋಡಬಹುದೆ ಬೆಳೆಗಳ ?**
**ಒಂದು ವಸ್ತುವಿಗಾದಡೂ ದ್ವಂದ್ವವೆ ಬೇಕು.**
**ನಮ್ಮ ಕಪಿಲಸಿದ್ಧಮಲ್ಲನ ನೋಡುವಡೆ**
**ಲಿಂಗಪೂಜೆ ಜಂಗಮ ದಾಸೋಹವೆ ಬೇಕು.**

ಧರೆಯಿಲ್ಲದೆ ಯಾವ ಬೆಳೆಗಳನ್ನು ಬೆಳೆಯಲು ಸಾಧ್ಯವಿಲ್ಲ. ಮಳೆಯಿಲ್ಲದೆ ಯಾವ ಬೆಳೆಗಳನ್ನು ನೋಡಲು ಸಾಧ್ಯವಿಲ್ಲ. ಒಂದು ವಸ್ತು ಪರಿಪೂರ್ಣವಾಗಲು ಮತ್ತೊಂದು ವಸ್ತುವಿನ ಅವಶ್ಯಕತೆಯಿದೆ. ಹಾಗೆಯೇ ದೇಹವನ್ನು ಆಲಯ ಮಾಡಿಕೊಂಡು ಆ ಆಲಯದಲ್ಲಿ ಅರಿವು ಎನ್ನುವ ಗುರುದೇವ ವಾಸಮಾಡಿದ್ದಾನೆ. ಆ ಗುರುದೇವನಿಗೆ ಭಕ್ತನಾಗಬೇಕಾದ ಮನ ದೇಹವನ್ನು ಆವರಿಸಿದೆ.

ಈ ಭಕ್ತ ದೇಹವೆಂಬ ದೇವಾಲಯದಲ್ಲಿ ಇರುವ ಗುರುದೇವನಿಗೆ ಸಲ್ಲಿಸುವ ಪೂಜೆಯೇ ಲಿಂಗ ಪೂಜೆ. ಭಕ್ತ ತಾನು ನೋಡುವ ಸಕಲ ವಸ್ತುಗಳನ್ನು ಕೇಳುವ ಸಕಲ ಶಬ್ದಗಳನ್ನು ಮುಟ್ಟಿ ಮೂಸಿಸಿ ರುಚಿಸುವ ಸಕಲ ಪದಾರ್ಥಗಳನ್ನು ಅಂಗದಲ್ಲಿಯೇ ಸಂಗಮವಾದ ಜಂಗಮನಿಗೆ ಅರ್ಪಣೆ ಮಾಡುವುದೇ ದಾಸೋಹ. ಹೀಗೆ ಮಾಡಿದ ಭಕ್ತ ದೇಹದಲ್ಲಿ ಜ್ಞಾನದ ಬೆಳೆಯನ್ನು ಬೆಳೆದು ಆ ಬೆಳೆಯನ್ನೇ ಉಂಡು ಪರಮ ಸುಖಿಯಾಗುತ್ತಾನೆ.

**1229**

**ಲಿಂಗಾಂಗ ಒಂದಾದುದಕ್ಕೆ ಇದೆ ಕುರುಹು ನೋಡಾ :**
**ಅಂಗಗುಣಂಗಳ ಬಿಟ್ಟು ಲಿಂಗಗುಣಂಗಳಾದಡೆ,**
**ಅದೆ ಲಿಂಗಾಂಗ ಸಾಮರಸ್ಯ .**
**ಲಿಂಗಗುಣಂಗಳ ಬಿಟ್ಟು ಅಂಗಗುಣಂಗಳಾದಡೆ,**
**ಅದೆ ಯಮಲೋಕ ಸಾದೃಶ್ಯ .**
**ಇದು ಪುಸಿಯಲ್ಲ. ಪುಸಿಯಲ್ಲ !**
**ಪುಸಿಯಾದಡೆ ನೀನೇಕೆ ಒಲಿಯಲಿಲ್ಲೆಮ್ಮಣ್ಣ ಬೊಮ್ಮಯ್ಯಂಗೆ,**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ?**

ದೇಹ ತ್ರಿಕೂಟ ಸಂಗಮ. ಹೀಗಾಗಿ ಶರಣರು ಲಿಂಗಾಂಗ ಎಂದು ಅಂಗವನ್ನು ಕರೆದಿದ್ದಾರೆ. ಅಂಗ ಅರಿವು ಮನ ಈ ಮೂರು ಲಿಂಗಗಳ ಸಂಗಮವೇ ಅಂಗ.

ಬಸವರಸರು ಅಂಗವನ್ನು ಕೂಡಲಸಂಗಮದೇವಾ ಎಂದು ಕರೆದಿದ್ದಾರೆ. ಪ್ರಭುದೇವರು ಗುಹೇಶ್ವರಾ ಎಂದು ಕರೆದಿದ್ದಾರೆ. ಅಂಗವನ್ನು ಆವರಿಸಿದ ಮನ ಅಂಗದೊಂದಿಗೆ ಸಂಗಮವಾದರೆ ಅದು ಅಂಗ ಗುಣಗಳನ್ನು ವ್ಯಕ್ತಪಡಿಸುತ್ತದೆ. ಸಾತ್ವಿಕ ಗುಣ ಹೊಂದಿ ಅಂಗ ಸಾತ್ವಿಕನ ಪಾತ್ರವನ್ನು ಧರಿಸಿ ಲೋಕದೊಂದಿಗೆ ವ್ಯವಹರಿಸುತ್ತದೆ. ರಾಜಸ ಗುಣವನ್ನು ಹೊಂದಿ ರಾಜಸನ ಪಾತ್ರದಲ್ಲಿ ಅಭಿವ್ಯಕ್ತಪಡಿಸುತ್ತದೆ. ತಾಮಸ ಗುಣಗಳನ್ನು ಹೊಂದಿ ತಾಮಸಿಗನ ಪಾತ್ರದಲ್ಲಿ ಕಾಣಿಸಿಕೊಳ್ಳುತ್ತದೆ.

ಈ ಮೂರು ಗುಣವುಳ್ಳವನಿಗೆ ಲಿಂಗದ ಪರಿಚಯವಿಲ್ಲ. ಮನ ತನ್ನ ಅಂಗಗುಣಗಳ ರುಚಿ ಕಳೆದುಕೊಂಡು ಅರಿವಿನ ಲಿಂಗಕ್ಕೆ ದಾಸನಾದಾಗ ಅಂಗ ಲಿಂಗಾಂಗವಾಗುತ್ತದೆ. ಆಗ ಅಂಗಗುಣಗಳು ತನಗೆ ತಾನೇ ಅಂಗದಿಂದ ಕಳಚಿ ಬೀಳುತ್ತವೆ. ಇದನ್ನು ಶರಣರು ಲಿಂಗಾಂಗ ಸಾಮರಸ್ಯ ಎಂದು ಕರೆದಿದ್ದಾರೆ. ಲಿಂಗ ಗುಣಂಗಳ ಉಳ್ಳವನು ತ್ರಿಗುಣಾತೀತನು. ಅಂಗ ಗುಣಂಗಳ ಉಳ್ಳವನು ಯಮಲೋಕದ ಬಾಧೆಯನು ಅನುಭವಿಸುವನು.

**1230**

**ಅವರವರ ಸದಾಚರಣೆ ಅವರವರಿಗೆ;**
**ಅವರವರ ದುರಾಚರಣೆ ಅವರವರಿಗೆ.**
**ಅವರವರ ಸದಾಚರಣೆ ನಮಗೇನು ಮೋಕ್ಷವ ಕೊಟ್ಟಿತ್ತೋ ?**
**ಅವರವರ ದುರಾಚರಣೆ ನಮಗೇನು ಭವದಲ್ಲಿ ತಳ್ಳಿಬಿಟ್ಟಿತ್ತೋ ?**
**ನಮ್ಮ ಲಕ್ಷ್ಯ ಲಾಂಛನದಲ್ಲಿ, ನಿಮ್ಮ ಲಕ್ಷ್ಯ ನಮ್ಮಲ್ಲಿ;**
**ಇದು ಸಟೆಯೆಂದು ನುಡಿಯಬೇಡ, ದೇವಾ.**
**ಮಗನಿಗಾದ ನೋವು ತಂದೆ-ತಾಯಿಗಳಿಗಾಗದೆ**
**ಅನ್ಯರಿಗೆಲ್ಲಿಹುದೋ?**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ,**
**ನಮ್ಮ ನೋವೆ ನಿಮ್ಮ ನೋವು.**

ಸದಾಚಾರ ಮತ್ತು ದುರಾಚಾರ ಆಯಾ ದೇಹಗಳಿಗೆ ಸಂಬಂಧಪಟ್ಟಿದ್ದೇ ಹೊರತು

ಅವೆರಡನ್ನು ನೋಡುವವನಿಗೆ ಮೋಕ್ಷವಿಲ್ಲ. ಸದಾಚಾರವೂ ಆಯಾ ದೇಹಕ್ಕೆ ಸಂಬಂಧಪಟ್ಟದ್ದು. ದುರಾಚಾರವೂ ಆಯಾ ದೇಹಕ್ಕೆ ಸಂಬಂಧಪಟ್ಟದ್ದು. ದೇಹದ ಲಕ್ಷ ದೇಹದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಲ್ಲಿ ನೆಟ್ಟಾಗ ಆ ದೇಹ ದೇವಾಲಯವಾಗುತ್ತದೆ. ಇದು ಸುಳ್ಳಲ್ಲ. ಅಂಗವನ್ನು ಆವರಿಸಿದ ಮನವೇ ಮಗನಾಗಬೇಕು ; ಅಂಗದಲ್ಲಿಯೇ ಸಂಗಮವಾದ ಅರಿವಿನ ತಂದೆಗೆ. ಆ ಮಗನ ಚಿಂತೆ ತಂದೆ-ತಾಯಿಗಳಿಗಲ್ಲದೆ ಅನ್ಯರಿಗೆ ಇರುವುದಿಲ್ಲ.

ಬಸವಣ್ಣ ಅರಿವಿನ ತಂದೆಯನ್ನು ‘ ತಂದೆ ನೀನು ತಾಯೀ ನೀನು ಬಂಧು ನೀನು ಬಳಗ ನೀನು, ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವ, ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ನಿಮ್ಮ ಧರ್ಮ ’ ಎಂದು ಅರಿವಿನ ತಂದೆಯೊಂದಿಗೆ ಮಗನಾಗಿ ಮಾತನಾಡಿದ್ದಾರೆ. ಮಗನಿಗೆ ನೋವಾದರೆ ತಂದೆಗೂ ನೋವಾಗುತ್ತದೆ.

ಹಡೆದ ತಂದೆ-ತಾಯಿಗಳು ಮಗನನ್ನು ಮರೆಯುತ್ತಾರೆ. ಅರಿವಿನ ತಂದೆ ಅಂಗದಲ್ಲಿಯೇ ಇದ್ದಾತ. ಈತ ಹಡೆದ ತಂದೆ-ತಾಯಿಗಳಿಗೂ ತಂದೆ, ಮಗನಿಗೂ ತಂದೆ ಇಡೀ ಬ್ರಹ್ಮಾಂಡದಲ್ಲಿರುವ ಸಕಲ ತನುಗಳಿಗೂ ತಂದೆಯಾಗಿದ್ದಾನೆ. ತನುವಿಗೆ ಜನ್ಮ ನೀಡಿ ತನುವಿನಲ್ಲಿಯೇ ಇದ್ದು ತನುವನನ್ನು ಉದ್ಧರಿಸಲು ಬಂದಾತ. ಇಂತಹ ತಂದೆಗೆ ನೋವಲ್ಲದೆ ಅನ್ಯರಿಗೆಲ್ಲಿಹುದೋ.

**1231**

**ಭಕ್ತನಾದ ಬಳಿಕ, ಅವರಿವರೆನ್ನದೆ ಮಾಡುವುದಯ್ಯಾ ಪ್ರಸಂಗವ.**
**ಭಕ್ತನಾದ ಬಳಿಕ, ಅವರಿವರೆನ್ನದೆ ಶರಣೆಂದು ಮನ್ನಿಸುವುದಯ್ಯಾ ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಭಕ್ತನಾದ ಬಳಿಕ ಅವರಿವರೆನ್ನುವಂತಿಲ್ಲ. ಈ ಪೃಥ್ವಿಯ ಮೇಲೆ ವಾಸಿಸುವ ಸಕಲ ಕಾಯಗಳು ಒಂದೇ ಆಗಿ ಕಾಣುತ್ತವೆ. ಕಾಯ ಯಾವ ಭಾಷೆಯದಾದರೇನು ಯಾವ ವೇಷ ಧರಿಸಿದರೇನು ? ಅದು ಹೆಣ್ಣಾದರೇನು ಗಂಡಾದರೇನು ನೋಡುವ ಕಣ್ಣು ಒಂದೇ, ಅದು ಹೆಣ್ಣು ಅಲ್ಲ ಗಂಡು ಅಲ್ಲ. ಕೇಳುವ ಕಿವಿ ಒಂದೇ ಮುಟ್ಟುವ ಚರ್ಮವೊಂದೆ ರುಚಿಸುವ ನಾಲಿಗೆ ಒಂದೇ ಮೂಸಿಸುವ ಮೂಗು ಒಂದೇ. ಕಾಯದಲ್ಲಿ ಹರಿಯುವ ರಕ್ತ , ಮೂಳೆ, ಮಾಂಸ, ಮಜ್ಜೆ, ಮೇದಸ್ಸು ಒಂದೇ. ರೋಮ, ನಖಗಳು ಕೂಡಾ ಒಂದೇ ಇವು ಯಾವೂ ಹೆಣ್ಣು ಅಲ್ಲ ಗಂಡು ಅಲ್ಲ. ಕಾಯವನ್ನು ಆವರಿಸಿದ ಮನ ಕಾಯದ ಗೆಳೆತನ ಮಾಡಿದುದಕ್ಕಾಗಿ, ಹೆಣ್ಣು ಗಂಡು ಜಾತಿ ಮತ ಪಂಥ ಶ್ರೀಮಂತ, ಬಡವ ಎಂದು ತನ್ನನ್ನು ತಾನೇ ಸೀಳಿಕೊಂಡಿದೆ.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಭಕ್ತನಾದ ಬಳಿಕ ಆ ಕಾಯ ಗುರುಶಿಷ್ಯರಿದ್ದ ಆಲಯವಾಗುತ್ತದೆ. ಎಲ್ಲಿ ನೋಡಿದರೂ ಕಾಯವೆಂಬ ಆಲಯಗಳೇ ಕಾಣುತ್ತವೆ. ಆ ಆಲಯದಲ್ಲಿದ್ದ ಗುರುದೇವನೇ ಕಾಣುತ್ತಾನೆ. ಅಂತಹ ಗುರುದೇವನಿಗೆ ಶರಣು ಶರಣಾರ್ಥಿ ಎಂದು ಮನ್ನಣೆ ನೀಡುತ್ತಾನೆ ಭಕ್ತನಾದವನು. ಈ ಕೃಷಿಯಲ್ಲಿ ಪ್ರತಿ ಕಾಯ ತೊಡಗಲೇ ಬೇಕಾಗಿದೆ.

**1232**

**ಭಕ್ತಿಯ ಬೆಳೆಸಿ ಹೇಳಿದೆನಲ್ಲದೆ,**

**ಭಕ್ತಿಯ ಮಾಡಿ ಬೆಳೆಯಲಿಲ್ಲ ನಾನು.**
**ಭಕ್ತಿಯ ಶಕ್ತಿ ಬಸವಣ್ಣಂಗಾಯಿತ್ತು ;**
**ಜ್ಞಾನದ ಶಕ್ತಿ ಚೆನ್ನಬಸವಣ್ಣಂಗಾಯಿತ್ತು .**
**ಯೋಗದ ಸಿದ್ಧಿ ಸಿದ್ಧರಾಮಂಗಾಯಿತ್ತು ,**
**ನಿಮ್ಮರಮನೆಯಲ್ಲಿ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವೆಂಬುದು ಅರಿವಿನ ಅರಮನೆ ಈ ಅರಮನೆಯಲ್ಲಿ ಅರಿವಿನ ಅರಸನಿದ್ದಾನೆ. ತನುವನ್ನು ಅವರಿಸಿದ ಮನದಿಂದ ಭಕ್ತಿಯ ಮಾಡಿ ಅರಿವಿನ ಬೆಳೆಯನ್ನು ಬೆಳೆದಾತ ಬಸವಣ್ಣ. ಬಸವಣ್ಣನಿಗೆ ಮಾತ್ರ ಭಕ್ತಿಯ ಬೆಳೆಯ ಬೆಳೆಯಲು ಸಾಧ್ಯವಾಯಿತು ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ತನುವಿನಲ್ಲಿ ಮಹಾಜ್ಞಾನದ ಶಕ್ತಿಯೂ ಇದೆ. ಮನ ಜ್ಞಾನದಲ್ಲಿ ಸಂಗಮ ಮಾಡಿ ಮಹಾಜ್ಞಾನಿಯೇ ತಾನಾದಾತ ಚೆನ್ನಬಸವ. ಮಹಾಜ್ಞಾನದ ಶಕ್ತಿ ಚೆನ್ನಬಸವಣ್ಣನಿಗೆ ಮಾತ್ರ ಸಾಧ್ಯವಾಯಿತು ಎಂದು ಹೇಳಿದ್ದಾರೆ ಶಿವಯೋಗಿಗಳು.

ಅಂಗದಲ್ಲಿಯೇ ಸಂಗಮವಾದ ಅರಿವಿನೊಂದಿಗೆ ಮನ ಕೂಡುವುದೇ ಯೋಗ. ಹೀಗೆ ಕೂಡಿ ಯೋಗದ ಸಿದ್ಧಿಯನ್ನು ಪಡೆದುಕೊಂಡವ ನಾನು ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ. ಇದು ಗರ್ವದ ಮಾತಲ್ಲ, ಅಹಂಕಾರದ ಮಾತೂ ಅಲ್ಲ. ಅರಿವೆಂಬ ಗುರುದೇವನೊಂದಿಗೆ ಮನ ಕೂಡಿದ ಮೇಲೆ ತನಗೆ ಸಿದ್ಧಿಯಾದ ಯೋಗದ ಅನುಭವವನ್ನು ಪರಮ ಸಂತೋಷದಿಂದ ಹಂಚಿಕೊಂಡಿದ್ದಾರೆ. ಈ ಘಟನೆ ತನುವೆಂಬ ಅರಿವಿನ ಅರಮನೆಯಲ್ಲಿಯೇ ಆಯಿತು ಎಂದು ಅರಿವಿನ ಅರಸನೊಂದಿಗೆ ಮಾತನಾಡಿದ್ದಾರೆ.

**1233**

**ಭಕ್ತ ಭಕ್ತನ ಕಂಡಲ್ಲಿ ಕೈಮುಗಿವುದೆ ಭಕ್ತಸ್ಥಲ.**
**ಜಂಗಮ ಜಂಗಮವ ಕಂಡಲ್ಲಿ ಶರಣೆಂಬುದು ಜಂಗಮಸ್ಥಲ.**
**ಭಕ್ತ ಜಂಗಮ ಎಂದು ಬೇರುಂಟೆ?**
**ರಸದಂತೆ ಭಕ್ತ , ರುಚಿಯಂತೆ ಜಂಗಮ ಕಾಣಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಭಕ್ತ ಮತ್ತು ಜಂಗಮ ಇವರಿಬ್ಬರು ಅಂಗದಲ್ಲಿಯೇ ಇದ್ದವರು. ಸಕಲ ಅಂಗಗಳಲ್ಲಿಯೂ ಭಕ್ತ ಜಂಗಮರು ಇದ್ದಾರೆ. ಇವರಿಬ್ಬರೂ ಇಲ್ಲದ ಅಂಗವೇ ಇಲ್ಲ ಈ ಭೂಮಿಯ ಮೇಲೆ .ಹೀಗಿದ್ದ ಮೇಲೆ ಅಂಗಕ್ಕೆ ಮತ್ತೊಂದು ಅಂಗ ಕಂಡಾಗ ಕೈಮುಗಿದು ಶರಣು ಶರಣಾರ್ಥಿ ಎಂಬುದೇ ಜಂಗಮಸ್ಥಲ. ಭಕ್ತ ಜಂಗಮ ಎನ್ನುವವರು ಬೇರಲ್ಲ. ಭಕ್ತನೇ ತನ್ನ ಲೀಲೆಗಾಗಿ ಜಂಗಮನಾಗಿದ್ದಾನೆ. ಜಂಗಮನೇ ತನ್ನ ಲೀಲೆಗಾಗಿ ಭಕ್ತನಲ್ಲಿ ಬಚ್ಚಿಟ್ಟುಕೊಂಡಿದ್ದಾನೆ. ರಸದಲ್ಲಿ ರುಚಿ ಇದ್ದಂತೆ .ಅಂದ ಮೇಲೆ ರಸ ರುಚಿ ಬೇರೆನ್ನಲು ಆಗುತ್ತದೆಯೇ ? ರಸದಲ್ಲಿ ರುಚಿ ಇದೆ ರುಚಿ ರಸದಿಂದಲೇ ನಿರ್ಮಾಣವಾಗಿದೆ. ಹಾಗೆಯೇ ಭಕ್ತ ಜಂಗಮ ಎಂದೂ ಬೇರೆ ಬೇರೆ ಅಲ್ಲ.

**1234**

**ಭಕ್ತನು ಭಕ್ತಿಯಿಂದರ್ಪಣ ಮಾಡಿಸುವಡೆ, ಭಕ್ತಂಗೆ ಭಕ್ತಸ್ಥಲ.**

**ಜಂಗಮನು ಆ ಭಕ್ತನ ಭಕ್ತಿಯ ವಹಿಸಿ ಪಾದೋದಕ ಕೊಡುವುದೆ**
**ಆ ಜಂಗಮಕ್ಕೆ ಭಕ್ತಸ್ಥಲ.**
**ಭಕ್ತಂಗಾಗಲಿ, ಜಂಗಮಕ್ಕಾಗಲಿ ಭಕ್ತಿಯೇ ಬೇಕು.**
**ಭಕ್ತಿಯಿಲ್ಲದೆ ಮೆರೆಸುವವರು ಭಕ್ತರಲ್ಲಾ ಜಂಗಮರಲ್ಲಾ ನೋಡಯ್ಯಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗವನ್ನು ಆವರಿಸಿದ ಮನವೇ ಭಕ್ತನಾಗಿ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಅರ್ಪಣೆ ಮಾಡಬೇಕು. ಹೀಗೆ ಅರ್ಪಣೆ ಮಾಡುವ ವಿಧಾನವೇ ಭಕ್ತಸ್ಥಲ.

ಕಣ್ಣು ಅಜ್ಞಾನದಿಂದಲೇ ನೋಡುವುದು, ಕಿವಿ ಅಜ್ಞಾನದಿಂದಲೇ ಕೇಳುವುದು, ಕೈ ಅಜ್ಞಾನದಿಂದಲೇ ಮುಟ್ಟುವುದು, ಮೂಗು ಅಜ್ಞಾನದಿಂದಲೇ ಮೂಸಿಸುವುದು, ನಾಲಿಗೆ ಅಜ್ಞಾನದಿಂದಲೇ ರುಚಿಸುವುದು ಈ ಎಲ್ಲಾ ಅಜ್ಞಾನವನ್ನು ಭಕ್ತ ಭಕ್ತಿಯಿಂದ ಅರಿವೆಂಬ ಗುರುದೇವನಿಗೆ ಅರ್ಪಣೆ ಮಾಡಬೇಕು. ಭಕ್ತನಿಗೆ ಅಡ್ಡಿಪಡಿಸುವ ಅಜ್ಞಾನವನ್ನು ಅಂಗದಲ್ಲಿಯೇ ಹುಟ್ಟಿದ ಜಂಗಮನು ತನ್ನ ಜ್ಞಾನದಿಂದ ಕತ್ತರಿಸಿ ಹಾಕುವನು. ಹೀಗೆ ಜಂಗಮನು ಭಕ್ತನ ಭಕ್ತಿ ವಹಿಸಿ ಜ್ಞಾನೋದಕ ನೀಡುವುದೇ ಜಂಗಮಕ್ಕೆ ಭಕ್ತಸ್ಥಲ.

ಭಕ್ತನಾಗಲಿ, ಜಂಗಮನಾಗಲಿ ಭಕ್ತಿಯೇ ಬೇಕು. ಇವರಿಬ್ಬರು ವ್ಯಕ್ತಿಗಳಲ್ಲ. ಅವ್ಯಕ್ತ ವ್ಯಕ್ತಿಗಳು. ಇವರಿಬ್ಬರೂ ವ್ಯಕ್ತಿಯಲ್ಲಿಯೇ ಸಂಗಮವಾಗಿದ್ದಾರೆ. ಹೀಗೆ ಸಂಗಮವಾದ ಅವ್ಯಕ್ತ ಭಕ್ತನನ್ನು ಅವ್ಯಕ್ತ ಜಂಗಮನನ್ನು ವ್ಯಕ್ತಿಯನ್ನು ಆವರಿಸಿದ ಮನಸಿಂದಲೇ ಕಂಡುಕೊಳ್ಳಬೇಕು. ಹೀಗೆ ಕಂಡುಕೊಳ್ಳದೇ ಭಕ್ತನ ವೇಷ ಹಾಕಿ ಭಕ್ತಿಯಿಲ್ಲದೇ ಮೆರೆವವನು ಭಕ್ತನಲ್ಲ. ಜಂಗಮನ ವೇಷ ಹಾಕಿ ಜಂಗಮನಂತೆ ಮೆರೆವವನು ಜಂಗಮನಲ್ಲ. ಇದು ತನಗೆ ತಾನೆ ಕೊಂಡುಕೊಳ್ಳುವ ಅಂತರಂಗದ ಶಿಕ್ಷಣ.

**1235**

**ಭಕ್ತಂಗೆ ಜಂಗಮಂಗೆ**
**ರೂಪದಿಂದ ಭೇದವೊ, ಆಚರಣೆಯಿಂದ ಭೇದವೋ ? ಅಲ್ಲಲ್ಲ.**
**ಭಕ್ತನಾದರೊ ಮೂರಕ್ಕೆ ಒಳಗು;**
**ಜಂಗಮವಾದರೆ ಮೂರಕ್ಕೆ ಹೊರಗು.**
**ಒಳಗಾದವರಿಗೆ ಹೊರಗಾದವರ ಪಾದೋದಕವಲ್ಲದೆ**
**ಒಳಗಾದವರ ಪಾದೋದಕ ಸಲ್ಲದು.**
**ತೆಗೆದುಕೊಂಡವರಿಗೆ ನರಕ ತಪ್ಪದು;**
**ಕೊಟ್ಟವಂಗೆಯೂ ಭವ ಹಿಂಗದು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಭಕ್ತ ಜಂಗಮ ಇವರಿಬ್ಬರಿಗೂ ರೂಪವಿಲ್ಲ, ಪ್ರತಿರೂಪದಲ್ಲಿಯೂ ಸಂಗಮವಾಗಿದ್ದಾರೆ. ಪ್ರತಿ ತನುವಿನಲ್ಲಿಯೂ ಸಂಗಮವಾಗಿದ್ದಾರೆ. ಭಕ್ತ ಗುರು ಲಿಂಗ ಜಂಗಮವನ್ನು ಒಳಗೆ ಆರಾಧಿಸುತ್ತಾನೆ. ಭಕ್ತನಿಗೆ ಅಡ್ಡಿ ಪಡಿಸುವ ಹೊರಗಣ ಅಜ್ಞಾನವನ್ನು ಜಂಗಮ ಕತ್ತರಿಸುತ್ತಾನೆ. ಭಕ್ತ ಮೂರಕ್ಕೆ ಒಳಗಾದರೆ, ಜಂಗಮ ಮೂರಕ್ಕೆ ಹೊರಗು. ಒಳಗೆ ಆರಾಧಿಸುವ ಭಕ್ತನಿಗೆ ಜಂಗಮನ ಪಾದೋದಕವಲ್ಲದೆ ಒಳಗಣ ಪಾದೋದಕ ಸಲ್ಲದು.

ಹೊರಗಣ ದೇವರಿಗೆ ಭಕ್ತನಾಗಿ ಪೂಜಿಸುವ ತನು ಇದು ಭಕ್ತನಲ್ಲ.ಭಕ್ತನ ವೇಷ ಧರಿಸಿದ ತನು. ಗುರು ಲಿಂಗ ಜಂಗಮವನ್ನು ಈ ಭಕ್ತ ಹೊರಗಡೆಯೇ ಕಂಡುಕೊಳ್ಳುತ್ತಾನೆ. ಹೀಗೆ ಕಂಡುಕೊಳ್ಳುವ ಭಕ್ತನಿಗೆ ನರಕ ತಪ್ಪದು. ಇಂತಹ ಭಕ್ತನಿಗೆ ದೀಕ್ಷೆ ಕೊಟ್ಟ ಗುರುದೇವನಿಗೂ ಜನನ, ಮರಣಗಳ ಬಾದೆ ತಪ್ಪದು. ಎಂದು ಸಿದ್ಧರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಸುಂದರವಾಗಿ ನಿರೂಪಿಸಿದ್ದಾರೆ.

**1236**

**ಎಲೆ ಅಯ್ಯಾ,**
**ಅವರ ಗುಣಕ್ಕೆ ಮುನಿವೆನಲ್ಲದೆ ಅವರ ರೂಪಿಂಗೆ ಮುನಿವೆನೆ? ಇಲ್ಲಿಲ್ಲ.**
**ಅವನು ಅನಾಚಾರದಲ್ಲಿ ಆಚರಿಸಿದಡೆ,**
**ತಂದೆ ಸದಾಚಾರಕ್ಕೆ ತರಬೇಕೆಂದು( ಮುನಿವನಲ್ಲದೆ)**
**ಆತನ ಮೇಲೆ ಮುನಿವನೇ? ಇಲ್ಲಿಲ್ಲ.**
**ನಾನು ಅಂತಾಗಬೇಕೆಂದು ಮುನಿವೆನಲ್ಲದೆ ಜಂಗಮಕ್ಕೆ ಮುನಿವೆನೆ?**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಳ್ಳ ಕಳ್ಳನಲ್ಲ, ಭ್ರಷ್ಟಾಚಾರಿಯೂ ಭ್ರಷ್ಟಾಚಾರಿಯಲ್ಲ, ಕೊಲೆಗಾರನು ಕೊಲೆಗಾರನಲ್ಲ, ಕಾಮಿಯು ಕಾಮಿಯಲ್ಲ. ಈ ಎಲ್ಲಾ ಗುಣಗಳಿಗೆ ಕಾರಣವಾದದು ಮನಸ್ಸು. ಮನಸ್ಸನ್ನು ಹೊತ್ತ ರೂಪವಲ್ಲ ಆದರೆ ದೇಹಕ್ಕೆ ಪಟ್ಟ ಕಟ್ಟುವುದು, ಕಳ್ಳ ಭ್ರಷ್ಟಾಚಾರಿ ಕೊಲೆಗಡುಕನ ಹಣೆಪಟ್ಟಿ ಕಟ್ಟುವುದು.

ಮನಸ್ಸಿಗೂ ತನುವಿಗೂ ಜನ್ಮ ಕೊಟ್ಟಾತ ಅರಿವಿನ ತಂದೆ; ಆತ ಗುರುದೇವನೂ ಹೌದು ಸದಾಶಿವನೂ ಹೌದು . ನಿರ್ಗುಣಿಯೂ ಹೌದು. ಮನ ತನ್ನ ಹಲವಾರು ಗುಣಗಳೊಂದಿಗೆ ತನುವಿನ ಮೂಲಕ ಸುಖ ಪಟ್ಟರೆ ಅದನ್ನು ಹಡೆದ ತಂದೆ ಸದಾಚಾರಕ್ಕೆ ತರಬೇಕೆಂದು ಹಗಲಿರುಳೆನ್ನದೆ ಪ್ರಯತ್ನ ಮಾಡುತ್ತಾನೆ. ತನು ಈ ತಂದೆಯ ಸಂಪತ್ತು ಪರಮಾತ್ಮನ ಆಸ್ತಿ ಇಂತಹ ರೂಪವನ್ನು ಮುನಿಯಲು ಸಾಧ್ಯವೇ ಇಂತಹ ರೂಪಕ್ಕೆ ಅಪಮಾನ ಮಾಡಲು ಸಾಧ್ಯವೇ.

ಪ್ರತಿ ತನುವಿನಲ್ಲಿಯೂ ಭಗವಂತನಿದ್ದಾನೆ. ಈ ತನುವಿನ ಗುಣಕ್ಕೆ ಮನವೇ ಕಾರಣ. ತನುವಿನಲ್ಲಿ ತನ್ಮಯವಾದ ನಿರ್ಗುಣ ಭಗವಂತನು ಕಾರಣನಲ್ಲ. ಈ ಭಗವಂತನಂತೆ ನಿರ್ಗುಣಿಯಾಗಲು ಸಕಲ ಗುಣಗಳುಳ್ಳ ಮನವನ್ನು ಮುನಿಯಬೇಕಲ್ಲದೆ ಗುರು ಲಿಂಗ ಜಂಗಮಕ್ಕೆ ಮುನಿಯಬಾರದು. ಈ ಎಲ್ಲಾ ಅವತಾರವೂ ಅರಿವೇ ಆಗಿದೆ.

**1237**

**ಎಲೆ ಅಯ್ಯಾ ಅಯ್ಯಾ ,**
**ಎನ್ನ ಶಿರ ನಿಮ್ಮ ಚರಣವ ಮುಟ್ಟಿದ ಬಳಿಕ**
**ಎನ್ನಲಿ ಗುಣದೋಷವನರಸುವರೆ ?**
**'ಭೃತ್ಯಾಪರಾಧಃ ಸ್ವಾಮಿನೋ ದಂಡಃ'!**
**ಕಪಿಲಸಿದ್ಧಮಲ್ಲಿಕಾರ್ಜುನದೇವಾ,**
**ತ್ರಾಹಿ ತ್ರಾಹಿ, ಕಾಯಯ್ಯಾ .**

ಅಯ್ಯಾ, ಪರಮಾತ್ಮನೇ ಪ್ರತಿ ಅಂಗದಲ್ಲಿ ಸಂಗಮವಾದ ಗುರದೇವನೇ ಮನವೆಂಬ ನಾನು ನಿನಗೆ ಭಕ್ತನಾಗಿ ಅಜ್ಞಾನ ತುಂಬಿದ ಈ ಶಿರವನ್ನು ನಿಮ್ಮ ಚರಣ ಕಮಲಗಳನ್ನು ತಾಗಿದಾಗ ಎನ್ನಲ್ಲಿ ಗುಣದೋಷವನ್ನು ಹುಡುಕಲು ಸಾಧ್ಯವೇ ? ಬೆಳಕನ್ನು ಕಂಡ ಕತ್ತಲೇ ಬೆಳಕಿನಲ್ಲಿ ಕರಗಿ ಬೆಳಕಾದಂತೆ.

ಜ್ಞಾನ ಭರಿತವಾದ ನಿಮ್ಮ ಶ್ರೀ ಚರಣಗಳನ್ನು ತಾಗಿದ ಎನ್ನ ಶಿರ ತನ್ನ ಸಕಲ ಅಜ್ಞಾನವನ್ನು ಕಳೆದುಕೊಂಡು ಜ್ಞಾನಿಯೇ ಆದಂತ ಈ ಸೇವಕನ ಅಜ್ಞಾನವನ್ನು ಮನ್ನಿಸಿ ಕಾಪಾಡು ತಂದೆ ಎಂದು ನಿಮ್ಮನ್ನು ಸದಾ ಬೇಡಿಕೊಳ್ಳುವೆ. ಕಾಯಯ್ಯಾ ಈ ಅಜ್ಞಾನದ ಕಾಯವನ್ನು ಕಾಯದಲ್ಲಿಯೇ ಇರುವ ಕಾಯದ ತಂದೆಯೇ ತ್ರಾಹಿ ತ್ರಾಹಿ ಎಂದು ಬೇಡಿಕೊಳ್ಳುವೆ ಕೃಪೆ ಮಾಡು ಭೃತ್ಯನ ಈ ಭೃತ್ಯಾಪರಾಧವನ್ನು ಮನ್ನಿಸಿ ಕಾಯಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1238**

**ಅನಂತಕೋಟಿ ದೇವರೆಲ್ಲರೂ ತಂಡತಂಡದಲ್ಲಿ**
**ದಂಡ ಪ್ರಣಾಮಂಗೈಯಲು**
**ಅವರ ಮುಕುಟ ಸಂಘಟ್ಟ ರಜ ಉದುರಲಿಕ್ಕೆ**
**ಅಲ್ಲಿ ರಜತಗಿರಿಗಳಾದವು.**
**ಕಪಿಲಸಿದ್ಧಮಲ್ಲಿಕಾರ್ಜುನ ದೇವರದೇವಾ, ನಿಮ್ಮ ಮುಂದೆ.**

ಈ ಬ್ರಹ್ಮಾಂಡದಲ್ಲಿ ಏಳುನೂರಾ ನಲವತ್ತು ಕೋಟಿ ದೇವತೆಗಳಿದ್ದಾರೆ. ಆ ದೇವತೆಗಳಲ್ಲಿರುವ ದೇವರು ಒಬ್ಬನೇ ಆಗಿದ್ದಾನೆ. ಅವರೆಲ್ಲರೂ ಆ ದೇವನನ್ನು ಪ್ರಾರ್ಥಿಸುವುದು ಬಿಟ್ಟು ಸ್ವತಃ ಅವರೇ ನಿರ್ಮಾಣ ಮಾಡಿದ ದೇವರನ್ನು ದೇವರೆಂದು ತಿಳಿದು ಆರಾಧಿಸುತ್ತಿದ್ದಾರೆ. ಅವರ ಮುಕುಟದಲ್ಲಿರುವ ಅಹಂಕಾರ ಎಲ್ಲಿಯವರೆಗೆ ಉದುರಿ ಬೀಳುವುದಿಲ್ಲವೋ ಅಲ್ಲಿಯವರೆಗೆ ತಮ್ಮ ತಮ್ಮ ದೇವರನ್ನು ಕಂಡುಕೊಳ್ಳಲು ದೇವರಿಗೆ ಸಾಧ್ಯವಾಗುವುದಿಲ್ಲ.

ದೇವರೆಂದರೆ ಸಾಮಾನ್ಯವಲ್ಲ ; ದೇಹದಲ್ಲಿಯೇ ಇದ್ದ ದೇವರು ದೇಹಕ್ಕೆ ದರುಶನ ಕೊಡುತ್ತಿಲ್ಲ. ದೇಹವಾದರೂ ತಾನೇ ಮಾಡಿದ ದೇವರನ್ನು ದೇವರೆಂದು ತಿಳಿದು ಆರಾಧಿಸುವುದು ಬಿಡುತ್ತಿಲ್ಲ. ತನ್ನನ್ನು ಮಾಡಿದ ದೇವರು ದೇವರೋ ತಾನು ಮಾಡಿದ ದೇವರು ದೇವರೋ ಎಂಬುದನ್ನು ದೇಹ ತಿಳಿಯುತ್ತಿಲ್ಲ. ದೇವರನ್ನು ಆರಾಧಿಸುವುದನ್ನು ದೇಹ ಬಿಡುತ್ತಿಲ್ಲ. ದೇವರ ಮಾತು ದೇಹಕ್ಕೆ ಕೇಳುತ್ತಿಲ್ಲ. ದೇಹದಲ್ಲಿಯೇ ದೇವರು ಇದ್ದು ನುಡಿದು ದೇಹಕ್ಕೆ ಹೇಳುವ ಮಾತು ದೇಹದ ಕಿವಿಗೆ ಬೀಳುತ್ತಿಲ್ಲ.ದೇಹ ದೇವರಿದ್ದ ದೇವಾಲಯವೆಂಬುದು ದೇಹಕ್ಕೆ ಹೊಳೆಯುತ್ತಿಲ್ಲ. ಕಾಯಯ್ಯಾ ದೇವರ ದೇವ ಈ ದೇವರನ್ನು.

**1239**

**ಹರಿಯೆಂಬಾತ ನಿಮ್ಮ ಚರಣವನರಿಯ;**
**ಬ್ರಹ್ಮನೆಂಬಾತ ನಿಮ್ಮ ಮುಕುಟವನರಿಯ;**
**ಯತಿ ವ್ರತಿ ಋಷಿಗಳೆಂಬವರು ನಿಮ್ಮ ಒಳಗನರಿಯರು;**
**ಸಮಸ್ತ ದೇವರ್ಕಳು ನಿಮ್ಮ ರೋಮದ ಪ್ರಮಾಣವನರಿಯರು;**
**ಶತಕೋಟಿ ಸೂರ್ಯರು ನಿಮ್ಮ ಬೆಳಗ ಕಾಣಲರಿಯರು.**

**ಕಪಿಲಸಿದ್ಧಮಲ್ಲಿಕಾರ್ಜುನಾ,**
**ನಾ ನಿಮ್ಮನರಿಯಬಲ್ಲವನೇ ಅಯ್ಯಾ ?**

ಬ್ರಹ್ಮ, ವಿಷ್ಣು, ಮಹೇಶ್ವರ ಎಂಬುವವರು ದೇವರಲ್ಲ ಇವರು ದೇಹದಲ್ಲಿಯೇ ಇದ್ದವರು. ದೇಹ ವಿಷ್ಣು, ಮನಸ್ಸು ಬ್ರಹ್ಮ, ಅರಿವೇ ಮಹೇಶ್ವರ.

ಮನಸ್ಸು ಭ್ರಮೆಯಿಂದ ಕೂಡಿರುವುದರಿಂದ ಅದು ಬ್ರಹ್ಮನಾಗಲರಿಯದು. ಹೀಗಾಗಿ ಬ್ರಹ್ಮ, ಮಹೇಶ್ವರನನ್ನು ಅರಿಯಲು ಸಾಧ್ಯವಾಗುತ್ತಿಲ್ಲ. ಏಕೆಂದರೆ ಮನಸ್ಸು ತನ್ನ ಭ್ರಮೆ ಕಳೆದುಕೊಂಡು ಬ್ರಹ್ಮನಾಗಲು ಸಾಧ್ಯವಾಗುತ್ತಿಲ್ಲ, ಹೀಗಾಗಿ ಚರಣಕಮಲವನ್ನು ಅರಿಯದು.

ದೇಹವೆಂದರೆ ವಿಷ್ಣು,ಇದು ಮನಸ್ಸಿನ ಸಂಗ ಮಾಡಿರುವುದರಿಂದ ತಾನು ವಿಷ್ಣು ಎನ್ನುವುದನ್ನೇ ಮರೆತು ಹೋಗಿದೆ. ದೇಹದಲ್ಲಿಯೇ ಸಂಗಮವಾದ ಮಹೇಶ್ವರನ ಸಂಗ ಎಂದು ಮಾಡುವುದೋ ಅಂದಿನಿಂದಲೇ ಅದು ವಿಷ್ಣು ಎಂಬ ಪದವಿಯನ್ನು ಪಡೆಯುತ್ತದೆ.

ಯತಿ,ವೃತಿ, ಋಷಿಗಳೆಂಬವರು ದೇಹದಲ್ಲಿಯೇ ಸಂಗಮವಾದ ದೇವರನ್ನು ಅರಿಯರು. ಸಮಸ್ತ ದೇವರು ಕೂಡ ದೇಹದಲ್ಲಿ ಸಂಗಮವಾದ ಮಹೇಶ್ವರನ ಒಂದು ರೋಮದ ಪ್ರಮಾಣವನ್ನು ಕೂಡಾ ಅರಿಯರು. ಶತಕೋಟಿ ಸೂರ್ಯರು ಮಹೇಶ್ವರನ ಬೆಳಗನ್ನು ಕಾಣಲು ಅರಿಯರು. ಶರಣರಿಗೆ ಮಾತ್ರ ಆ ಭಗವಂತನನ್ನು ಕಂಡು ಆ ಭಗವಂತನೇ ತಾನಾಗುವ ಶಕ್ತಿಯನ್ನು ಪಡೆದಿದ್ದಾರೆ.

ಬ್ರಹ್ಮ, ಮಹೇಶ್ವರನ ಮುಕುಟವನ್ನು ಅರಿಯಲು ಆಕಾಶಕ್ಕೆ ಹಾರಿ ಆಕಾಶಕಾಯದಲ್ಲಿ ಬೆಳೆದ ಕೇದಿಗೆಯ ಎಳೆಯನು ಕಿತ್ತು ತಂದು ಇದು ಮಹೇಶ್ವರನ ಜಡೆಯೆಂದು ಸುಳ್ಳು ಹೇಳಿದ ಕಾರಣ ಬ್ರಹ್ಮನ ಒಂದು ಶಿರ ಕೆಳಗೆ ಉರುಳಿತು ಎಂಬ ಕಥೆ ಇದೆ. ವಿಷ್ಣು ಮಹೇಶ್ವರನ ಪಾದ ಹುಡುಕಿಕೊಂಡು ಪಾತಾಳಕ್ಕೆ ಹಾರಿದರೂ ಮಹೇಶ್ವರನ ಪಾದ ದೊರೆಯಲಿಲ್ಲವೆಂದು ವಿಷ್ಣು ಮರಳಿ ಬಂದ ಕಥೆಯೂ ಇದೆ.

ಸೂರ್ಯನ ಬೆಳಕಿಗೆ ಕತ್ತಲನ್ನು ಬೆಳಗುವ ಶಕ್ತಿಯಿದೆ. ಆದರೆ ದೇಹವನ್ನು ಆವರಿಸಿದ ಅಜ್ಞಾನದ ಕತ್ತಲನ್ನು ಕಳೆಯುವ ಶಕ್ತಿ ಶತಕೋಟಿ ಸೂರ್ಯರಿಗೂ ಇಲ್ಲ. ಹೀಗಾಗಿ ಸೂರ್ಯ ಕೂಡಾ ಮಹೇಶ್ವರ ಬೆಳಗುವ ಬೆಳಕನ್ನು ಕಾಣಲು ಅರಿಯ.

ದೇಹದಲ್ಲಿ ಮಹಾದೇವ ಸಂಗಮವಾಗಿದ್ದರೂ ದೇಹವೆಂಬ ವಿಷ್ಣು ಮನವೆಂಬ ಬ್ರಹ್ಮ ಈತನನ್ನು ಕಾಣಲರಿಯರು. ಸಕಲ ದೇಹಗಳು ಕೂಡಾ ಮಹಾದೇವನನ್ನು ಹೊತ್ತ ದೇವರುಗಳೇ ಆಗಿವೆ. ಈ ಎಲ್ಲಾ ದೇವರುಗಳು ಕೂಡಾ ಮಹಾದೇವನನ್ನು ಅರಿಯರು. ಶರಣ ಮಾತ್ರ ಮಹಾದೇವನಿಗೆ ಶರಣು ಹೋಗಿ ಶರಣನಾದಾತ. ದೇಹದಲ್ಲಿರುವ ಮಹಾದೇವನನ್ನು ಕೂಡಿ ಆ ಮಹಾದೇವನೇ ತಾನಾದಾತ.

**1240**

**ನೆನೆಸುವ ಮರೆಸುವ ನೀನೆನ್ನ ತಂದೆ ,**
**ಎನ್ನ ಗುಣದೋಷ ನಿಮ್ಮದು .**
**ಕೇಳಯ್ಯಾ ಎನ್ನ ಬಿನ್ನಪವ :**
**ನಿಮ್ಮ ನೆನೆವವ ನಾನಲ್ಲ ಕಂಡಯ್ಯಾ ;**
**ನಿಮ್ಮಿಂದ ನಿಮ್ಮ ನೆನೆವೆನು, ಕೃಪೆಮಾಡಾ ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನೇ ನೀನು ಎನ್ನ ತಂದೆ. ನಿನ್ನನ್ನು ನೆನೆಸುವವನು ನೀನೇ ನಿನ್ನನ್ನು ಮರೆಸುವವನು ನೀನೇ. ಹೊರಗಿನ ದೇವರನ್ನು ನೆನೆಯುವಂತೆ ಮಾಡಿದವನು ನೀನೆ. ಹೊರಗಿನ ದೇವರನ್ನೇ ದೇವನೆಂದು ಎನಗೆ ತಿಳಿಯಿಸಿ ನಿನ್ನನ್ನು ಮರೆಯುವಂತೆ ಮಾಡಿದವನೂ ನೀನೇ ಎನಗಿರುವ ಈ ಗುಣದೋಷ ಎನ್ನನ್ನು ಹಡೆದ ತಂದೆಯಾದ ನಿಮ್ಮದೇ ಆಗಿರುವುದು. ಹೀಗಾಗಿ ನೆನೆಯುವ, ಮರೆಯುವ,ಗುಣಗಳು ನನಗೆ ನಿನ್ನಿಂದಲೇ ಬಂದಿವೆ.

ಎನ್ನ ಹಡೆದ ತಂದೆಯೇ, ಎನ್ನ ಮನವಿಯನ್ನು ಆಲಿಸು. ಎನ್ನ ಭಿನ್ನಪವನ್ನು ಕೇಳು ನಿಮ್ಮನ್ನು ನೆನೆವವನು ನಾನು ಕಂಡಯ್ಯಾ ನಿಮ್ಮಿಂದಲೇ ನಿಮ್ಮನ್ನು ನೆನೆದು ಪರಮ ಸುಖಿಯಾಗುವೆನು. ಕೃಪೆ ಮಾಡು ದೇವನೇ ಕಪಿಲಸಿದ್ಧಮಲ್ಲಿಕಾರ್ಜುನಾ.

**1241**

**ಕೈಗಳ ಬಿಚ್ಚಿ ಬಿಸಾಟಡೆ ಬಿಡೆನು?**
**ಮೈಗಳ ಕಡಿದು ಹರಹಿದಡೆ ಬಿಡೆನು, ಬಿಡೆ ನಿಮ್ಮ ಚರಣವ.**
**ತನುವಳಿದಡೆ ಜ್ಞಾನತನುವಿನಿಂದ ಕೂಡುವೆ**
**ಕಪಿಲಸಿದ್ಧಮಲ್ಲಿಕಾರ್ಜುನಾ ನಿಮ್ಮ.**

ಗುರುದೇವನೇ, ಮಹಾದೇವನೇ, ಸದಾಶಿವನೇ ಎನ್ನನ್ನು ಹಡೆದ ತಂದೆಯೇ ನೀನು ನಿನ್ನ ಕೈಗಳ ಮೂಲಕ ನನ್ನನ್ನು ಹಿಡಿದುಕೊಂಡಿರುವೆ. ಎನ್ನಂಗದಲ್ಲಿಯೇ ನೀನು ಸಂಗಮವಾಗಿರುವುದರಿಂದ ನಿನ್ನ ಮೈ ನನ್ನ ಮೈಯನ್ನು ಹಿಡಿದುಕೊಂಡಿದೆ.

ನನಗೆ ನೀನು ಯಾರೆಂದು ಗೊತ್ತಿಲ್ಲ. ಆದರೂ ನೀನು ನನ್ನನ್ನು ಹಿಡಿದುಕೊಂಡಿರುವೆ. ಹಿಡಿದುಕೊಂಡ ಕೈಗಳ ಮೂಲಕ ನನ್ನನ್ನು ಬಿಚ್ಚಿ ಬಿಸಾಡಿದರೂ ಕೂಡಾ ನಿನ್ನ ದರುಶನವಾಗದ ವಿನಃ ನಾನು ನಿನ್ನನ್ನು ಬಿಡೆನು !

ನಿನ್ನ ಮೈಗಳ ಮೂಲಕ ನನ್ನ ಮೈಯನ್ನು ಹಿಡಿದುಕೊಂಡಿರುವ ಕಾರಣ ನೀನು ಬಿಸಾಡಿದರು ಕೂಡಾ ನಾನು ನಿನ್ನನ್ನು ಬಿಡೆನು ನಿನ್ನ ದರುಶನವಾಗದ ವಿನಃ ಈ ತನುವಿನ ಆಯುಷ್ಯ ಮುಗಿದು ನಿನ್ನಿಂದ ಕಳಚಿ ಕೆಳಗೆ ಬಿದ್ದರೇನಾಯಿತು ನಾನು ಜ್ಞಾನ ತನುವಿನ ಮೂಲಕ ನಿಮ್ಮನ್ನು ಪುನಃ ಕೂಡುವೆನು ತಂದೆ.

**1242**

**ಸ್ತೋತ್ರವೆಂಬುದು ನೀನು ಮಾಡಲಾದವು ಕಂಡಯ್ಯಾ**
**ಮೂರ್ತಿಯೆಂಬುದು ನೀನು ನೆನೆದಡಾದುದು ಕಂಡಯ್ಯಾ.**
**ಆ ಮೂರ್ತಿಯೆಂಬುದು ನಿನ್ನ ಸ್ವಭಾವವು ಕಂಡಯ್ಯಾ.**
**ಎನ್ನ ಹೃತ್ಕಮಲದೊಳಗೆ ಹುಟ್ಟುವ ಸ್ಮರಣೆ**
**ನಿನ್ನ ಗತಿ ನೋಡಯ್ಯಾ**
**ಕಪಿಲಸಿದ್ಧಮಲ್ಲಿನಾಥಯ್ಯಾ,**
**ಬಾಣ ಮಯೂರ ಹಲಾಯುಧರಿಗೆಂತೊಲಿದೆ ಹೇಳಯ್ಯಾ.**

ವೇದ, ಆಗಮ, ಉಪನಿಷತ್ತುಗಳು, ಸ್ತೋತ್ರಗಳು ಅಂಗದಿಂದಲೇ ರಚನೆಯಾದವು. ಅಂಗದಲ್ಲಿ ಸಂಗಮವಾದ ನಿನ್ನಿಂದಲೇ ರಚನೆಯಾದವು. ನನ್ನಲ್ಲಿಯೇ ಇದ್ದ ನೀನು ನನಗೆ

ಕಾಣುದಿರುವುದಕ್ಕಾಗಿ ನೀನೆ ನನ್ನಿಂದ ನಿನ್ನ ಮೂರ್ತಿಯನ್ನು ಮಾಡಿಸಿದೆ ಕಂಡಯ್ಯಾ. ಆ ಮೂರ್ತಿಯ ಭಾವವನ್ನು ನಿನ್ನ ಸ್ವಭಾವದ ಮೂಲಕ ನನ್ನಿಂದ ಅರಳುವಂತೆ ಮಾಡಿದೆ ಕಂಡಯ್ಯಾ. ನನ್ನ ಹೃದಯ ಕಮಲದೊಳಗೆ ಹುಟ್ಟುವ ಪ್ರತಿ ಸ್ಮರಣೆಯು ನಿನ್ನ ಗತಿ ನೋಡಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ. ಬಾಣನಿಗೆ ಒಲಿದೆ, ಮಯೂರನಿಗೆ ಒಲಿದೆ, ಹಲಾಯುಧನಿಗೆ ಒಲಿದೆ ಎನಗೆ ಏಕೆ ಒಲಿಲಯಲಿಲ್ಲ ಹೇಳಯ್ಯಾ.

**1243**

**ವೇದಪ್ರಿಯನಲ್ಲಯ್ಯ ನೀನು ;**
**ಶಾಸ್ತ್ರಪ್ರಿಯನಲ್ಲಯ್ಯ ನೀನು ;**
**ನಾದಪ್ರಿಯನಲ್ಲಯ್ಯ ನೀನು ;**
**ಸ್ತೋತ್ರಪ್ರಿಯನಲ್ಲಯ್ಯ ನೀನು ;**
**ಯುಕ್ತಿಪ್ರಿಯನಲ್ಲಯ್ಯ ನೀನು ;**
**ಮುಕ್ತಿಪ್ರಿಯನಲ್ಲಯ್ಯ ನೀನು ;**
**ಭಕ್ತಿಪ್ರಿಯನೆಂದು ನಂಬಿದೆ,ಮರೆವೊಕ್ಕೆ**
**ಕಾಯಯ್ಯಾ ನೀನು,ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.**

ವೇದಗಳು ನಿನ್ನಿಂದಲೇ ಹುಟ್ಟಿರುವುದರಿಂದ ಅವುಗಳ ಮೂಲಕ ನಾನು ಪ್ರಾರ್ಥಿಸಿದರೆ ನೀನು ನನಗೆ ಒಲಿಯಲಾರೆ. ಏಕೆಂದರೆ ನೀನು ವೇದಪ್ರಿಯನು ಅಲ್ಲ. ಸಕಲ ಶಾಸ್ತ್ರಗಳು ಕೂಡಾ ದೇಹದಲ್ಲಿ ಸಂಗಮವಾದ ಅರಿವಿನ ಲಿಂಗಯ್ಯನಿಂದಲೇ ಹುಟ್ಟಿರುವುದರಿಂದ ಆ ಶಾಸ್ತ್ರಗಳೊಂದಿಗೆ ಆರಾಧಿಸಿದರು ಕೂಡಾ ನೀನು ನನಗೆ ಒಲಿಯುವುದಿಲ್ಲ. ಏಕೆಂದರೆ ನೀನು ಶಾಸ್ತ್ರ ಪ್ರಿಯನೂ ಅಲ್ಲ. ದೇಹದಲ್ಲಿಯೇ ಸಂಗಮವಾದ ದೇವರಿಂದಲೇ ಸಕಲ ನಾದಗಳು ಹುಟ್ಟಿರುವುದರಿಂದ ನಾದ ಮಾಡಿ ನಾನು ನಿನ್ನನ್ನು ಒಲಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.

ಸಕಲ ಸ್ತೋತ್ರಗಳು ನಿನ್ನಿಂದಲೇ ಹುಟ್ಟಿರುವುದರಿಂದ ನೀನು ಸ್ತೋತ್ರಕ್ಕೆ ಒಲಿಯುವವನಲ್ಲ. ಹೀಗಾಗಿ ನೀನು ಸ್ತೋತ್ರ ಪ್ರಿಯನು ಅಲ್ಲ.

ಸಕಲ ಯುಕ್ತಿಗಳು ನಿನ್ನಿಂದಲೇ ಹುಟ್ಟಿರುವುದರಿವಂದ ಯುಕ್ತಿಪ್ರಿಯನೂ ನೀನಲ್ಲ. ಹೀಗಾಗಿ ಯುಕ್ತಿಯಿಂದ ನಿನ್ನನ್ನು ಒಲಿಸಿಕೊಳ್ಳಲು ನನಗೆ ಸಾಧ್ಯವಾಗುವುದಿಲ್ಲ.

ಅಂಗದಲ್ಲಿ ಸಂಗಮವಾದ ಲಿಂಗಯ್ಯನೇ ಅಂಗವನ್ನು ಆವರಿಸಿದ ಎನ್ನ ಮನದಿಂದಲೇ ನಿನಗೆ ಭಕ್ತಿಮಾಡಿದಾಗ ಆ ಭಕ್ತಿಗೆ ಮಾತ್ರ ನೀನು ಎನಗೆ ಒಲಿಯುವೆ. ಎನ್ನನ್ನು ನಿನ್ನ ಭಕ್ತನನ್ನಾಗಿಸಿಕೊಂಡು ಸಲಹು ತಂದೆ ನಿನ್ನ ಮೊರೆ ಹೊಕ್ಕೆ ಕಾಯಯ್ಯಾ ನೀನು ನಿನ್ನನ್ನೇ ನಂಬಿದೆ ಭಕ್ತಿಪ್ರಿಯ ಕಪಿಲಸಿದ್ಧಮಲ್ಲಿಕಾರ್ಜುನಯ್ಯ.

**1244**

**ವೇದಪ್ರಿಯನಾದಡೆ ಛಿದ್ರಿಸುವೆಯಾ ಬ್ರಹ್ಮನ ಮಸ್ತಕವ ?**
**ಶಾಸ್ತ್ರಪ್ರಿಯನಾದಡೆ ಒಳಗುಮಾಡುವೆಯಾ ಶಬ್ದಕ್ಕೆ ?**
**ಮುಕ್ತಿಪ್ರಿಯನಾದಡೆ ಭವಕ್ಕೆ ತರುವೆಯಾ ಎನ್ನ ?**

**ಭಕ್ತಿಪ್ರಿಯನಾದಲ್ಲಿ ಒಯ್ಯಲಿಲ್ಲವೆ ಬೇಡನ ,**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನೇ, ಮಹಾದೇವನೇ, ಸದಾಶಿವನೇ, ವೇದಪ್ರಿಯನು ನೀನಲ್ಲ, ವೇದಪ್ರಿಯನು ನಿನಾಗಿದ್ದರೆ ವೇದವನ್ನು ಓದುವ ಬ್ರಹ್ಮನ ಶಿರವನ್ನು ಕತ್ತರಿಸಬಹುದಿತ್ತೇ ?

ಶಾಸ್ತ್ರಪ್ರಿಯನೂ ನೀನಲ್ಲ, ಶಾಸ್ತ್ರಪ್ರಿಯನು ನೀನಾದರೆ ಶಬ್ಧದಿಂದ ಸುಖ, ದುಃಖಗಳನ್ನು ಉಂಟುಮಾಡಲು ಸಾಧ್ಯವೇ ? ಶಬ್ಧದ ಸೂತಕವನ್ನುಂಟು ಮಾಡಿ ಎನ್ನನ್ನು ದುಃಖಕ್ಕೆ ತಳ್ಳಲು ಸಾಧ್ಯವೇ ? ಶಬ್ಧದಿಂದಾದ ಶಾಸ್ತ್ರ ಶಬ್ಧವನ್ನೇ ಅರಿತು ನಿಶ್ಯಬ್ಧವೇದಿಯಾಗಲು ಸಾಧ್ಯವಿಲ್ಲ.

ಮುಕ್ತಿಪ್ರಿಯನೂ ನೀನಲ್ಲ. ಮುಕ್ತಿಪ್ರಿಯನು ನೀನಾಗಿದ್ದರೆ ಮತ್ತೆ ಮತ್ತೆ ಎನ್ನನ್ನು ಜನನ–ಮರಣಗಳಿಗೆ ತುತ್ತಾಗುವಂತೆ ಮಾಡಲು ಸಾಧ್ಯವೇ?

ಭಕ್ತಿಪ್ರಿಯನು ನೀನು. ತನ್ನ ಅಜ್ಞಾನದ ಬೇಡವಾದ ಕಣ್ಣನ್ನು ಕಣ್ಣಪ್ಪ ಭಕ್ತಿಯಿಂದ ನಿನಗೆ ಅರ್ಪಣೆ ಮಾಡಿದ ಕೂಡಲೇ ಒಲಿಯಲಿಲ್ಲವೇ ನೀನು ಅವನಿಗೆ ! ಹೀಗಾಗಿ ಭಕ್ತಿಪ್ರಿಯನು ನೀನು ಕಪಿಲಸಿದ್ಧಮಲ್ಲಿಕಾರ್ಜುನಾ.

**1245**

**ಎನ್ನ ಕೋಪವೆಂಬುದು ನಿಮ್ಮ ಕಣ್ಣು ನೋಡಯ್ಯಾ ;**
**ನಾನೇತರೊಳಗೇನು ಹೇಳಯ್ಯಾ !**
**ನಿಮ್ಮ ಜ್ಞಾನದ ತೇಜದ ಮುಂದೆ ಎನ್ನರಿವು ಏತರದು ಹೇಳಯ್ಯಾ!**
**ಎನ್ನ ದಿಟದ ಭಕ್ತಿ ನಿಮ್ಮ ರೂಪು ಕಂಡಯ್ಯಾ ;**
**ಎನ್ನ ಸಟೆಯ ಭಕ್ತಿ ನಿಮ್ಮ ರೂಪು ಕಂಡಯ್ಯಾ ,**
**ಎನಗೆ ಬೇರೆ ಸ್ವತಂತ್ರತೆಯುಂಟೆ, ಹೇಳಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ನನ್ನದೊಂದು ಕಣ್ಣು ಇದೆ ಈ ದೇಹದಲ್ಲಿ, ನಿನ್ನದೂ ಒಂದು ಕಣ್ಣು ಇದೆ; ಈ ದೇಹದಲ್ಲಿರುವ ದೇಹದ ಕಣ್ಣು ನನ್ನ ಕಣ್ಣಿಗೂ ನಿನ್ನ ಕಣ್ಣಿಗೂ ಆಲಯವಾಗಿದೆ. ನನ್ನ ಕಣ್ಣಿಗೆ ನೋಡುವುದಕ್ಕೆ ಬರುವುದಿಲ್ಲ. ಏಕೆಂದರೆ ಅದು ಕುರುಡು ಕಣ್ಣು, ಕೋಪದ ಕಣ್ಣು. ಲೋಹವನ್ನು ನೋಡಿ ಚಿನ್ನವೆಂದು ಮೋಹಗೊಳ್ಳುತ್ತದೆ. ಕಲ್ಲನ್ನು ನೋಡಿ ದೇವರೆಂದು ಕೈಮುಗಿಯುತ್ತದೆ. ನಿನ್ನ ಕಣ್ಣು ಲೋಹವನ್ನು ನೋಡಿ ಲೋಹ ಎಂದು ಹೇಳಿತು. ನಾನು ನಂಬಲಿಲ್ಲ. ಕಲ್ಲನ್ನು ನೋಡಿ ಕಲ್ಲು ಎಂದು ಹೇಳಿತು. ಆದರೂ ನಾನು ನಂಬಲಿಲ್ಲ.ನಿಮ್ಮ ಜ್ಞಾನ ತೇಜದ ಮುಂದೆ ಎನ್ನ ಅಜ್ಞಾನದ ಕುರುಡುತನ ಅದರ ಅರಿವು ಏತರದ್ದು ಹೇಳಯ್ಯಾ ಎನ್ನ ದಿಟದ ಭಕ್ತಿ ನಿಮ್ಮ ರೂಪು ಕಂಡಯ್ಯಾ

ಎನ್ನೊಳಗೆ ನೀನಿದ್ದು ನೀನು ನೋಡಿಸಿದಂತೆ ನೋಡುವೆ, ನೀನು ಕೇಳಿಸಿದಂತೆ ಕೇಳುವೆ ಎನಗೆ ಬೇರೆ ಸ್ವತಂತ್ರತೆಯುಂಟೇ ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1246**

**ಹಿರಿದು ಆಗ್ರಹದಿಂದೆ ನೀನೆನ್ನ ಮೇಲಿಕ್ಕಿ**

**ಒಲ್ಲೆ ಸಾರೆಂದು ಹೋಹೆ ಕಾಣಯ್ಯಾ ,**
**ಕೈಯ ಹಿಡಿದಡೆ ಅಂತು ಮುರುಚುವೆ;**
**ಎನ್ನ ಉರದಲಪ್ಪಿ ಹಿಡಿದಡೆಂತು ಮುರುಚುವೆ?**
**ನೀನಿಂತು ಹೋಹ ಪರಿಗಳ ನಿಲಿಸುವೆನು ಕೇಳು ಗಡಾ!**
**ಸೂಕ್ಷ್ಮತನುವಿನಲ್ಲಿ ಹಿಡಿದಡೆ ಎಂತು ಮುರುಚುವೆ ಹೇಳಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ನನ್ನನ್ನು ಕೃಪೆಮಾಡಲೆಂದೇ ಬಂದು ನನ್ನ ತನುವಿನಲ್ಲಿ ತನ್ಮಯನಾದೆ. ಇದು ನಿನ್ನ ಹಿರಿಯ ಉದ್ದೇಶ. ಆದರೂ ಒಂಟಿಯಾಗಿ ಮಾಡಿ ಒಲ್ಲೆನೆಂದು ಸರಿದು ಹೋಗುವುದು ಸರಿಯೇ ? ನನ್ನ ಹಡೆದ ತಂದೆ ! ನಾನು ಹಿಡಿಯಲು ಹೋದರೆ ಕೈಗೆ ಸಿಕ್ಕುವುದಿಲ್ಲ; ನನ್ನನ್ನು ನೀನು ಹಡೆದರೂ ನೀನೇ ನನಗೆ ತಂದೆ ಎಂದು ನನಗೆ ತೋರುತ್ತಿಲ್ಲ. ಎನ್ನ ಹೃದಯ ಕಮಲದಲ್ಲಿ ವಾಸಿಸುವ ನೀನು ಅಲ್ಲಿಯೇ ನಾನು ನಿನ್ನನ್ನು ಹಿಡಿದಡೆ ಹೇಗೆ ತಪ್ಪಿಸಿಕೊಳ್ಳುವೆ ಹೇಳಾ ತಂದೆ.

ನಿನ್ನನ್ನು ಕಂಡ ಗುರುದೇವನ ಸಹಾಯದಿಂದ ನಾನು ಕೂಡಾ ನಿನ್ನನ್ನು ಕಂಡೆ. ಆ ಗುರುದೇವನ ಕೃಪೆ ನನ್ನ ಮೇಲೆ ಇರಲು ನನ್ನಿಂದ ನೀನೆಂತು ತಪ್ಪಿಸಿಕೊಂಡು ಹೋಗುವೆ ಹೇಳಾ ತಂದೆ.

ಸೂಕ್ಷ್ಮ ತನುವಿನಲ್ಲಿ ನಿನ್ನನ್ನು ಹಿಡಿದು ನಿನ್ನ ಪಾದ ಸೇವಕನಾಗಿ ಭಕ್ತಿ ಮಾಡಲು ಆ ಭಕ್ತಿಯಿಂದ ನೀನು ಹೇಗೆ ಕಳಚಿಕೊಳ್ಳುವೆ ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನ.

**1247**

**ಎನ್ನನಾಗಳೆ ಬಂದಿವಿಡಿದೆ ಗಡ ನೀನು.**
**ನಿಮ್ಮ ಹಿಡಿವಡೆ ಹಿಡಿವರು, ತನುವಿರೆ ತನು ಬೇರಾದವರು.**
**ನಿಮ್ಮ ಹಿಡಿವಡೆ ಹಿಡಿವರು, ಮನವಿರೆ ಮನ ಬೇರಾದವರು.**
**ನಿಮ್ಮ ಹಿಡಿದಡೆ ಹಿಡಿವರು, ಕೈಯಿರೆ ಕೈ ಬೇರಾದವರು.**
**ಈ ಸುಳ್ಳವರು ಮೊದಲಾಗಿ ನಿಮ್ಮ ಹಿಡಿಯಲಾರರು.**
**ಕಪಿಲಸಿದ್ಧಮಾಲ್ಲಿಕಾರ್ಜುನಾ,**
**ನಿಮ್ಮ ಹಿಡಿದು ತಡೆಯಲಾನೇತರವನಲ್ಲ.**
**ಕರುಣದಿಂದ ಬಾರಾ, ಎನ್ನ ದೇವರ ದೇವಾ.**

ಅರಿವೆಂಬ ಗುರುದೇವನು ಸಕಲ ತನುಗಳನ್ನು ತನ್ನ ಹಿಡಿತದಲ್ಲಿ ಬಂಧಿಸಿರುವನು. ಆದರೆ ಆಯಾ ತನುವಿನ ಮನ ತನುವನ್ನು ಬಂಧಿಯಾಗಿಸಿರುವುದರಿಂದ ನಿನ್ನನ್ನು ಹಿಡಿಯಲು ಮನಕ್ಕೆ ಸಾಧ್ಯವಾಗುತ್ತಿಲ್ಲ ನಿಮ್ಮನ್ನು ಹಿಡಿವಡೆ ಹಿಡಿದಿಡುವರು. ಆದರೆ ಅವರು ತನುವುಳ್ಳವರಲ್ಲ, ಶರಣರು ತನುವಿನಿಂದ ಬೇರಾದವರು. ಮನದಿಂದ ಬೇರಾದವರು ಮನವುಳ್ಳವರಲ್ಲ. ಕೈಯಿದ್ದರೂ ಕೈಯಿಲ್ಲದವರು ಕೈಯಿಂದ ಬೇರಾದವರು. ಅವರು ಮಾತ್ರ ನಿಮ್ಮನ್ನು ಹಿಡಿದಿಡುವರು.

ಮನವೆಂಬ ಸುಳ್ಳನಿಗೆ ನಿನ್ನ ಪರಿಚಯವಿಲ್ಲ ಆದರೂ ಅವನು ನಿನ್ನನ್ನು ಆರಾಧಿಸುವದು ಬಿಟ್ಟಿಲ್ಲ. ಎಂದೆಂದೂ ನಿಮ್ಮನ್ನು ಆ ಸುಳ್ಳನಿಗೆ ಹಿಡಿಯಲು ಸಾಧ್ಯವಿಲ್ಲ. ನಾನು ನಿಮ್ಮನ್ನು ಹಿಡಿದು

ತಡೆಯಲು ನನಗೆ ಅದೇತರ ಶಕ್ತಿ ಭಕ್ತಿಯಿಂದ ಮಾತ್ರ ನಿನ್ನನ್ನು ಒಲಿಸಬಲ್ಲೆ ನಿನ್ನನ್ನು ಬಂಧಿಸಬಲ್ಲೆ ಆದರೆ ಭಕ್ತಿಗೆ ತನುವಿಲ್ಲ ಕೈಯಿಲ್ಲ. ಕಾರಣ ಕರುಣದಿಂದ ಬಾರಾ ಎನ್ನ ದೇವರ ದೇವ.

**1248**

**ತೆರಹಿಲ್ಲದ ಘನವು ಕುರುಹಿಂಗೆ ಬಂದ ಕಾರಣವೇನು ಹೇಳಾ,**
**ಎಲೆ ಅಯ್ಯಾ , ಭಕ್ತಿ ಕಾರಣ.**
**ಇಚ್ಛೆಗೆ ಬಂದ ಬಳಿಕ ಉಪಚಾರಕ್ಕೆ ತೆರಹುಂಟೆ?**
**ಕಪಿಲಸಿದ್ಧಮಲ್ಲಿನಾಥಾ, ಬಿಜಯಮಾಡಾ, ಕರುಣಿಗಳರಸಾ.**

ಅಂಗದಲ್ಲಿ ಸಂದಿಲ್ಲದಂತೆ ಸಂಗಮವಾದ ಕರುಣಾಮಯಿ ನೀನು ಮುಳ್ಳಿನ ಮೊನೆಯಿಂದ ಚುಚ್ಚಿದರೂ ಅಲ್ಲೇ ನೀನು ನಾನಿದ್ದೇನೆಂದು ನುಡಿದು ಹೇಳುವೆ.

ನನ್ನ ಹಡೆದ ತಂದೆಯೇ; ಅರಿವೆಂಬ ಗುರುದೇವನೇ ನಿನಗೆ ಕುರುಹಿಲ್ಲ. ನೀನು ನಿರೂಪನು ಆದರೂ ರೂಪದಲ್ಲಿ ಸಂಗಮವಾಗಿ ರೂಪವನ್ನು ಆವರಿಸಿದ ಮನವೆಂಬ ನಿರೂಪಕ್ಕೆ ದರುಶನವಿತ್ತ ಕಾರಣ ಏನು ಹೇಳಾ ಎಲೆ ಅಯ್ಯಾ , ಭಕ್ತಿ ಕಾರಣ.

ಭಕ್ತಿಗೆ ಮಾರುಹೋದವನು ನೀನು ಎನ್ನ ಇಚ್ಛೆಗೆ ಬಂದ ಬಳಿಕ ನಿನಗೆ ಉಪಚಾರ ಮಾಡಲಾದರೂ ಎನಗೆ ಬರುವುದೇ ಇಲ್ಲ. ಎಲ್ಲಿ ನೋಡಿದರೂ ನೀನೇ ನೀನು ಎನ್ನಂಗಕ್ಕೆಂದು ಉಪಚಾರ ಮಾಡಿದರೆ ಅದು ನಿನಗೆ ಸಲ್ಲುವುದು ಕಪಿಲಸಿದ್ಧಮಲ್ಲಿಕಾರ್ಜುನನೇ ಬಿಜಯಮಾಡಾ ಕರುಣಿಗಳ ಅರಸ.

**1249**

**ಬೆಳಗು ಬೆಳಗು ಹಳಚುವಲ್ಲಿ ಕತ್ತಲೆ ಉಳಿಯಬಲ್ಲದೆ ಅಯ್ಯಾ ?**
**ಶರಣರು ಮಹಾನುಭಾವ ಗೋಷ್ಠಿಯ ಮಾಡುವಲ್ಲಿ,**
**ಸಂಗದೊಳಿರ್ದವರ ಅಜ್ಞಾನವಳಿದು ನಿಜವನ್ನೈದುವರಯ್ಯಾ**
**ನಿಮ್ಮ ಮಹಾನುಭಾವದ ಸೋಂಕಿನ ಸೆರಗಿನೊಳಗಿರ್ದು**
**ನಾನು ಪರಮಸುಖಿಯಾಗಿ ಮಡಿವಾಳನ ಪಾದದಲ್ಲಿ**
**ಮನ ಮಗ್ನವಾದೆನು ಕಾಣಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಬೆಳಗನ್ನು ಬೆಳಗು ಬೆಳಗುವಲ್ಲಿ ಕತ್ತಲೆ ಉಳಿಯಬಲ್ಲುದೇ ಅಯ್ಯಾ ? ಶರಣರು ಮಹಾನುಭಾವ ಗೋಷ್ಠಿಯ ಮಾಡುವಲ್ಲಿ ಶರಣರ ಸಂಗದೊಳಗಿದ್ದವರ ಅಜ್ಞಾನವೂ ಅಳಿದು ನಿಜದ ಅನುಭವವನ್ನು ಪಡೆಯುವರಯ್ಯ . ಶರಣನೆಂದರೆ ಸಾಮಾನ್ಯರಲ್ಲ ಕತ್ತಲನ್ನು ಜ್ಞಾನದ ಬೆಳಕಿನಿಂದ ಕಳೆದುಕೊಂಡು ಬೆಳಕೇ ಆಗಿ ಬೆಳಗುವರು. ಆ ಬೆಳಕಿಗೆ ಶರಣು ಹೋದವರು ಶರಣನೇ ತಾವಾದವರು ಅಂತವರ ಗೋಷ್ಠಿಯಲ್ಲಿ ಭಾಗವಹಿಸಿದವರು ತಮ್ಮ ಅಜ್ಞಾನವನ್ನು ಕಳೆದುಕೊಂಡು ತಮ್ಮದೇ ಅನುಭವದಿಂದ ಬೆಳಗಿಂಗೆ ಬೆಳಗಾಗಿ ಬೆಳಗುತ್ತಾರೆ. ಸಹಜ ನಿಜಪದವನ್ನು ಹೊಂದುತ್ತಾರೆ.

ಮಹಾನುಭಾವರ ಸೋಂಕಿನ ಸೆರಗಿನೊಳಗೆ ಇರ್ದು ಪರಮಸುಖಿಯಾಗಿ ಮಡಿವಾಳನ ಪಾದದಲ್ಲಿ ಮನಮಗ್ನವಾದೆನು ಕಾಣಾ ಎಂದು ಅಂಗದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ಸಿದ್ಧರಾಮ ಶಿವಯೋಗಿಗಳು ಮಾತನಾಡಿದ್ದಾರೆ.

**1250**

**ತನು ಉಂಟೆಂಬ ಭಾವ ಮನದಲ್ಲಿಲ್ಲವಯ್ಯಾ ;**
**ಮನ ಉಂಟೆಂಬ ಭಾವ ಅರುಹಿನಲ್ಲಿಲ್ಲವಯ್ಯಾ ;**
**ಅರುಹು ಉಂಟೆಂಬ ಭಾವ ನುಡಿಯೊಳಗಿಲ್ಲವಯ್ಯಾ ;**
**ಇಂತೀ ತನು ಮನ ಜ್ಞಾನವೆಂಬ ತ್ರಿವಿಧವು ಏಕಾರ್ಥವಾದ ಬಳಿಕ,**
**ಆವ ತನುವಿನ ಮೇಲೆ ಸ್ವಾಯತವ ಮಾಡುವೆ?**
**ಎನ್ನ ಕಾಯವೆ ಬಸವಣ್ಣನು, ಎನ್ನ ಪ್ರಾಣಲಿಂಗವೆ ಪ್ರಭುದೇವರು.**
**ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ**
**ಒಳಗು ಹೊರಗೆಂಬುದಿಲ್ಲ ಕಾಣಾ, ಚೆನ್ನಬಸವಣ್ಣಾ.**

ತನು, ಇದು ಕಾಣುತ್ತದೆ. ಮನವೆಂಬ ಮನೋಮಯವಾದ ತನುವು ಕಾಣುವುದಿಲ್ಲ. ತನು ಮತ್ತು ಮನಕ್ಕೆ ಜನ್ಮ ನೀಡಿದ ಅರಿವು ಎಂಬ ಗುರುದೇವನ ತನುವು ಕಾಣುವುದಿಲ್ಲ. ತನು ಉಂಟೆಂಬ ಭಾವ ಮನದಲ್ಲಿ ಇರುವವರೆಗೆ ತನುವಿಗೆ ಸುಖ ದುಃಖವುಂಟು, ಮರಣವೂ ಉಂಟು.

ಮನೋಮಯವಾದ ಸೂಕ್ಷ್ಮತನುವು ಅರಿವೆಂಬ ಗುರುದೇವನ ತನುವಿಗೆ ಶರಣಾಗತನಾದ ಮೇಲೆ ತನು ಉಂಟೆಂಬ ಭಾವ ಮನದಲ್ಲಿ ಉಳಿಯುವುದಿಲ್ಲ. ಮನ ಉಂಟೆಂಬ ಭಾವ ಅರಿವೆಂಬ ಗುರುದೇವನ ತನುವಿನಲ್ಲಿಯೂ ಉಳಿಯುವುದಿಲ್ಲ. ಅರಿವು ಉಂಟೆಂಬ ಭಾವ ನುಡಿವ ಯಾವ ನುಡಿಯೊಳಗೂ ಇರುವುದಿಲ್ಲ. ಏಕೆಂದರೆ ತನು ಮನ ಜ್ಞಾನವೆಂಬ ತ್ರಿವಿಧವು ಒಂದಾಗಿದೆ. ಹೀಗಿದ್ದ ಮೇಲೆ ಯಾವ ತನುವಿನ ಮೇಲಾದರೂ ಸ್ವಾಯತವ ಮಾಡಲು ಬರುವುದೇ ಎಲ್ಲಿ ನೋಡಿದರೂ ತನು ಮನ ಅರಿವು ಒಂದಾಗಿ ಇರುವ ತನುಗಳೇ ಕಾಣುತ್ತವೆ.

ಆಗ ಕಾಯವೇ ಬಸವಣ್ಣ ಪ್ರಾಣಲಿಂಗವೇ ಪ್ರಭುದೇವರು. ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಒಳಗೂ ಹೊರಗೂ ಎಂಬುದು ಇಲ್ಲವಾಗುತ್ತದೆ ಚೆನ್ನಬಸವಣ್ಣಾ ಎಂದು ಸಿದ್ಧರಾಮ ಶಿವಯೋಗಿಗಳು ಸದ್ಗುರು ಚೆನ್ನಬಸವಣ್ಣನವರಿಗೆ ತಮ್ಮ ಅರಿವಿನ ಪಾಠವನ್ನು ಒಪ್ಪಿಸಿದ್ದಾರೆ.

**1251**

**ತನುವಿದ್ದು ತನುವಿಲ್ಲ, ಮನವಿದ್ದು ಮನವಿಲ್ಲ,**
**ಭಾವವಿದ್ದು ಭಾವವೆಂಬ ಬುದ್ಧಿಯಿಲ್ಲ.**
**ನೀನೆಂಬುದುಂಟಾಗಿ ಭೃತ್ಯಾಚಾರವಿಲ್ಲ,**
**ನಾನೆಂಬುದುಂಟಾಗಿ ಅಹಂಕಾರವಿಲ್ಲ,**
**ಕಪಿಲಸಿದ್ಧಮಲ್ಲಿನಾಥಯ್ಯನಲ್ಲಿ ಲಿಂಗಸಂಗ ನಿರ್ಲೇಪವೆಂಬುದ**
**ಇದಿರಿಂಗೆ ನುಡಿದು ಹೇಳಬಾರದು ಕಾಣಾ,ಚೆನ್ನಬಸವಣ್ಣಾ.**

ತನುವಿದ್ದು ತನುವಿಲ್ಲ ತನುವಿದೆ ಆದರೆ ಅದು ನನ್ನದಲ್ಲ ಅರಿವೆಂಬ ಗುರುದೇವನದು ಆತನಿದ್ದ ತನು ಆತನದೇ ಹೊರತು ಅದು ನನ್ನದಲ್ಲ. ನನ್ನದೂ ಎಂದರೆ ಸುಖವುಂಟು ದುಃಖವುಂಟು ಜನನ ಮರಣಗಳುಂಟು.

ಮನ ಅರಿವೆಂಬ ಗುರುದೇವನಿಗೆ ದಾಸನಾದ ಮೇಲೆ ಮನವಿದ್ದು ಮನವಿಲ್ಲ. ಭಾವವಿದ್ದು

ಭಾವವೆಂಬ ಬುದ್ಧಿಯಿಲ್ಲ. ಏಕೆಂದರೆ ಭಾವ ಒಮ್ಮೆ ಅರಳುತ್ತದೆ ಮತ್ತೊಮ್ಮೆ ಕೆರಳುತ್ತದೆ. ಭಾವಕ್ಕೆ ಬದಲಾವಣೆಯುಂಟು ಭಾವ, ನಿರ್ಭಾವಕ್ಕೆ ದಾಸನಾದ ಮೇಲೆ ಅದು ನಿರ್ಭಾವವೇ ಆದುದರಿಂದ ಮತ್ತೆ ಮತ್ತೆ ಬದಲಾವಣೆಯಾಗುವ ಭಾವದ ಬುದ್ಧಿ ನಷ್ಟವಾಗುತ್ತದೆ. ಹೀಗಾಗಿ ಭಾವವಿದ್ದು ಭಾವವಿಲ್ಲ.

ನಾನು ಎನ್ನುವ ಅಜ್ಞಾನ ನೀನು ಎನ್ನುವ ನಿನ್ನ ಜ್ಞಾನದಲ್ಲಿ ಲೀನವಾಗಿ ನಾನು ಎನ್ನುವ ಅಹಂಕಾರ ಅಳಿದ ಬಳಿಕ ನಾನು ಇಲ್ಲ. ನಾನಿದ್ದರೂ ನಿನ್ನ ಸೇವಕ ಮಾತ್ರ .

ಕಪಿಲಸಿದ್ಧಮಲ್ಲಿನಾಥಯ್ಯನಲ್ಲಿ ಅಂಗ ಲಿಂಗಯ್ಯನ ಸಂಘಮಾಡಿ ಲಿಂಗಾಗವೇ ಆಗಿದೆ. ಇದನ್ನು ನುಡಿದು ಹೇಳಿದರೆ ಯಾರೂ ವಿಶ್ವಾಸ ಮಾಡುವದಿಲ್ಲ .ಅನುಭವಿಸಬೇಕೇ ಹೊರತು ನುಡಿದು ಹೇಳಬಾರದೆಂದು ಸಿದ್ಧರಾಮ ಶಿವಯೋಗಿಗಳು ಸದ್ಗುರು ಚೆನ್ನಬಸವಣ್ಣನಿಗೆ ಅರಿವಿನ ಪಾಠ ಒಪ್ಪಿಸಿದ್ದಾರೆ.

**1252**

**ಎಂದಿಪ್ಪೆನಯ್ಯಾ, ನೀನು ಗಣಂಗಳ ಸಮೂಹದಲ್ಲಿ,**
**ಎಂದಿಪ್ಪೆನಯ್ಯಾ , ನಿಮ್ಮವರ ನಡುವೆ,**
**ಎಂದಿಪ್ಪೆನಯ್ಯಾ , ಕೀಳಿಲ ಕಾಯ್ದು ,**
**ಎಂದಿಪ್ಪೆನಯ್ಯಾ , ಕಿಂಕರನಾಗಿ,**
**ಎಂದಿಪ್ಪೆನಯ್ಯಾ, ನಿಮ್ಮ ನಾನು ಡಿಂಗರಿಗನಾಗಿ,**
**ಎಂದಿಪ್ಪೆನಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನನ್ನು ತನುವನ್ನು ಆವರಿಸಿದ ಮನ ಒಲಿಸಿಕೊಳ್ಳಬೇಕಾದರೆ ಅನಂತ ಜನ್ಮಗಳೇ ಬೇಕಾಗುವುದು. ಹೀಗಾಗಿ ಜ್ಞಾನಿಗಳು ಕೋಟಿಗೊಬ್ಬ ಶರಣ ಎಂದು ನುಡಿದಿದ್ದಾರೆ. ತನು ಮತ್ತು ಮನ ಪುಸ್ತಕಗಳಲ್ಲಿದ್ದ ಜ್ಞಾನವನ್ನು ಜ್ಞಾನ ಎಂದು ತಿಳಿದಿದೆ. ಅದನ್ನು ಸಂಗ್ರಹಿಸಿ ಅದನ್ನೇ ನುಡಿಯುತ್ತದೆ. ಹೀಗಾಗಿ ತನುವಿನ ಮೂಲಕ ಜ್ಞಾನದ ನುಡಿಗಳನ್ನು ನುಡಿಯಬಹುದೇ ವಿನಃ ನುಡಿದಂತೆ ನಡೆಯಲು ಬರುವುದಿಲ್ಲ. ಏಕೆಂದರೆ ನುಡಿದದ್ದು ಜ್ಞಾನವಾದರೂ ಕೂಡಾ ಅದು ತನ್ನದಲ್ಲ, ಪುಸ್ತಕದಿಂದ ಬಂದು ತನುವಿನಲ್ಲಿ ಸಂಗ್ರಹವಾಗಿ ತನುವಿನ ಮೂಲಕ ನುಡಿದದ್ದು. ಹೀಗಾಗಿ ತನುವಿಗೆ ನುಡಿಯಲು ಬರುತ್ತದೆಯೋ ಹೊರತು ನಡೆಯಲು ಬರುವುದಿಲ್ಲ.

ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನಿಗೆ ತನುವನ್ನು ಆವರಿಸಿದ ಮನ ದಾಸನಾದಾಗ ಅಂತಹ ತನು ಜ್ಞಾನತನುವಾಗುತ್ತದೆ. ಇದು ಪ್ರಯತ್ನವಿಲ್ಲದೆ ಬರುವುದಿಲ್ಲ. ಸದಾ ಜ್ಞಾನದ ಕೃಷಿಯಲ್ಲಿ ತನು ಮತ್ತು ಮನ ತೊಡಗಿದಾಗ ಅದು ಜ್ಞಾನತನುವಾಗಲು ಸಾಧ್ಯವಾಗುತ್ತದೆ.

ಸದಾ ಜ್ಞಾನ ಕೃಷಿಯಲ್ಲಿ ತೊಡಗಿರುವವರೆಂದರೆ ಶರಣರು; ಅವರ ಗಣ ಸಮೂಹ ಅಂತಹ ಸಮೂಹದಲ್ಲಿ ನನ್ನನ್ನು ಇರಿಸಿ ಸಲಹು ತಂದೆ ಎಂದು ಮನ ಅರಿವೆಂಬ ಗುರುದೇವನಿಗೆ ಭಕ್ತನಾಗಿ ಬೇಡಿಕೊಳ್ಳುವ ಯುಕ್ತಿ ಬರಬೇಕಾಗುತ್ತದೆ. ಒಂದು ತನು ಮತ್ತೊಂದು ತನುವಿನೊಂದಿಗೆ ಮಾತನಾಡಬಹುದು ಬೇಡಬಹುದು ಈ ಕೆಲಸ ಎಲ್ಲರಿಗೂ ಸಾಧ್ಯವಾಗುತ್ತದೆ. ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಗುರುದೇವನಿಗೆ ಭಕ್ತನಾಗಿ ಆ ಗುರುದೇವನೊಂದಿಗೆ ಮಾತನಾಡುವ ಕಲೆ ಸಿದ್ಧಿಯಾಗುವುದು ಸುಲಭದ ಮಾತಲ್ಲ.

ಸಿದ್ಧರಾಮ ಶಿವಯೋಗಿಗಳು ಸರ್ವರಿಗೂ ಸಾಧ್ಯವಾಗಲೆಂದು ವಚನದ ಈ ಸೂತ್ರವನ್ನು ರಚಿಸಿದ್ದಾರೆ. ಎಂದಿಪ್ಪೆನಯ್ಯಾ ನಿಮ್ಮ ಗಣಂಗಳ ಸಮೂಹದಲ್ಲಿ ಎಂದಿಪ್ಪೆನಯ್ಯಾ ನಿಮ್ಮವರ ನಡುವೆ

ಎಂದಿಪ್ಪೆನಯ್ಯಾ ಕೀಳಿಲ ಕಾಯ್ದು ಅಂದರೆ ಶರಣರ ಪಾದರಕ್ಷೆ ಕಾಯುವ ಸೇವೆಯಲ್ಲಿ. ಎಂದಿಪ್ಪೆನಯ್ಯಾ ನಿಮ್ಮ ಶರಣರಿಗೆ ಕಿಂಕರನಾಗಿ ಎಂದಿಪ್ಪೆನಯ್ಯಾನಿಮ್ಮ ನಾಮ ಡಿಂಗರಿಗನಾಗಿ ಅಂದರೆ ನಿಮ್ಮ ನಾಮ ಸೇವಕನಾಗಿ. ಎಂದಿಪ್ಪೆನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಅಂಗದಲ್ಲಿಯೇ ಸಂಗಮವಾದ ಗುರುವಿನೊಂದಿಗೆ ಸರ್ವ ಓದುಗರಿಗೂ ತಿಳಿಯಪಡಿಸಿದ್ದಾರೆ.

**1253**

**ಎಂದಿಪ್ಪೆನಯ್ಯಾ , ಶುದ್ಧ ಸಿದ್ಧ ಪ್ರಸಿದ್ಧ ಪ್ರವೇಶಿಯಾಗಿ !**
**ಎಂದಿಪ್ಪೆನಯ್ಯಾ , ಭಕ್ತಿ ಜ್ಞಾನ ವೈರಾಗ್ಯ ಸಂಪನ್ನನಾಗಿ;**
**ಎಂದಿಪ್ಪೆನಯ್ಯಾ , ತತ್ವಾತತ್ವ ತೂರ್ಯಾತೂರ್ಯಾ ನೀನೆಯಾಗಿ;**
**ಎಂದಿಪ್ಪೆನಯ್ಯಾ , ದೀಕ್ಷಾತ್ರಯದಲ್ಲಿ ಸಂಪನ್ನನಾಗಿ;**
**ಎಂದಿಪ್ಪೆನಯ್ಯಾ , ಲಿಂಗತ್ರಯದಲ್ಲಿ ಪ್ರಸಾದಿಸಂಪನ್ನನಾಗಿ;**
**ಎಂದಿಪ್ಪೆನಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ , ನಿಮ್ಮವರ ನಡುವೆ ಓರಂತೆ.**

ಜ್ಞಾನದ ಸುಳುಹು ಮನಕ್ಕೆ ಸಿಕ್ಕಮೇಲೆ ಅದು ತಾನಾಗಲು ಮನ ಮತ್ತು ತನು ಹಗಲಿರುಳೆನ್ನದೆ ಕೃಷಿ ಮಾಡಬೇಕಾಗುತ್ತದೆ. ಅರಿವೆಂಬ ಗುರುದೇವನನ್ನು ಒಲಿಸಿಕೊಳ್ಳಲು ತನು ಮತ್ತು ಮನ ಸದಾ ಪ್ರಯತ್ನ ಪಡಬೇಕಾಗುತ್ತದೆ.

ಸಿದ್ಧರಾಮ ಶಿವಯೋಗಿಗಳು ಈ ಕೆಳಕಂಡಂತೆ ಪ್ರಯತ್ನ ಪಡಬಹುದೆಂದು ಓದುಗರಿಗೆ ಸುಳುಹು ನೀಡಿದ್ದಾರೆ.

ಎಂದಿಪ್ಪೆನಯ್ಯಾ ಶುದ್ಧ ಸಿದ್ಧ ಪ್ರಸಿದ್ಧನೇ ತಾವಾದ ತಮ್ಮಲ್ಲಿ ಪ್ರವೇಶಿಯಾಗಿ ಆ ಪರಮಾತ್ಮನ ಪರಿಚಯವಾದ ಮೇಲೆ ಆತನನ್ನೇ ಪ್ರಾರ್ಥಿಸಿದ್ದಾರೆ. ಎಂದಿಪ್ಪೆನಯ್ಯಾ ಭಕ್ತಿ , ಜ್ಞಾನ, ವೈರಾಗ್ಯ ಸಂಪನ್ನನಾಗಿ. ಎಂದಿಪ್ಪೆನಯ್ಯಾ ದೀಕ್ಷಾತ್ರಯದಲ್ಲಿ ಸಂಪನ್ನನಾಗಿ, ಎಂದಿಪ್ಪೆನಯ್ಯಾ ತತ್ವಾತತ್ವ ತೂರ್ಯಾತೂರ್ಯ ನೀನೆಯಾಗಿ. ಎಂದಿಪ್ಪೆನಯ್ಯಾ ಲಿಂಗತ್ರಯದಲ್ಲಿ ಪ್ರಸಾದಿ ಸಂಪನ್ನನಾಗಿ. ಎಂದಿಪ್ಪೆನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ನಿಮ್ಮವರ ನಡುವೆ ನಿಮ್ಮವರಂತೆ. ನೀನು ಕರುಣಿಸಿದರೆ ಮಾತ್ರ ನನಗೆ ಈ ಕೆಲಸ ಸಾಧ್ಯವಾಗುತ್ತದೆ.

**1254**

**ಒಡೆಯರುಳ್ಳ ತೊತ್ತಾನು; ತಾಯುಳ್ಳ ಶಿಶುವಾನು ;**
**ಸ್ವತಂತ್ರವೇಕಯ್ಯಾ , ನಿಮ್ಮವರ ನಡುವೆ ಎನಗೆ?**
**ನಿಮ್ಮವರು ಎನ್ನನೊಲ್ಲದಿದ್ದ ದುಃಖವನ್ನು ಮರೆವೆ ನಾನು;**
**ನಿಮ್ಮವರಾಜ್ಞೆಯ ಮೀರಿದೆನಾಯಿತ್ತಾದಡೆ ನಿಮ್ಮಾಣೆಯಯ್ಯಾ ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ನಾನು ಎಂದೂ ಸ್ವತಂತ್ರನಾಗಬಾರದು. ಹೀಗಾದರೆ ಅದು ಅಹಂಕಾರ. ಮನ ತನುವನ್ನು ಸ್ವತಂತ್ರಿಯಾಗಿ ಅದು ತನ್ನದೇ ಎಂದು ಬಳಕೆ ಮಾಡುತ್ತಿರುವುದರಿಂದ ಮನ ಮತ್ತು ತನು ಅಹಂಕಾರಿಯಾಗಿದೆ. ಮನ ತನುವಿನಲ್ಲಿಯೇ ತನ್ಮಯವಾದ ಗುರುವಿಗೆ ದಾಸನಾಗಬೇಕು. ತಾನು ಶಿಶುವಾಗಿ ಆ ಗುರುದೇವನನ್ನೇ ತಾಯಿಯನ್ನಾಗಿ ಮಾಡಿಕೊಳ್ಳಬೇಕು. ಅರಿವೆಂಬ ಗುರುದೇವ

ನುಡಿದು ಹೇಳಿದಂತೆ ಮನ ಮತ್ತು ತನು ಆತನಿಗೆ ದಾಸಾನುದಾಸನಾದಂತೆ ಕೇಳಬೇಕು.

ಮನ ಯಾರನ್ನೂ ಒಡೆಯರನ್ನಾಗಿ ಮಾಡಿಕೊಳ್ಳುವುದಿಲ್ಲ. ಸಕಲ ತನುಗಳಿಗೂ ಅದು ಒಡೆಯನೇ ಆಗಿರುವುದರಿಂದ ಯಾವ ತನಗಳು ಪರಮಸುಖಿಗಳಲ್ಲ. ತನುವಿನ ಅಹಂಕಾರ ತನುವನ್ನೇ ಸುಟ್ಟು ಸರ್ವನಾಶ ಮಾಡುತ್ತದೆ. ಏಕೆಂದರೆ ಒಡಲೊಡೆಯನಿಗೆ ಮನಕ್ಕೆ ದಾಸನಾಗುವುದು ತಿಳಿದಿಲ್ಲ. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಎನಗೆ ಸ್ವತಂತ್ರ ಬೇಕಯ್ಯಾ ನಿಮ್ಮವರ ನಡುವೆ ಎಂದು ಗುರುದೇವನನ್ನೇ ಪ್ರಶ್ನೆಮಾಡಿದ್ದಾರೆ.

ನಿಮ್ಮವರು ಎನ್ನನ್ನು ಒಲ್ಲದಿದ್ದ ದುಃಖವನ್ನು ಹೇಗಾದರೂ ಮಾಡಿ ಮರೆಯಬಹುದು ನಾನು ಆದರೆ ನಿಮ್ಮವರ ಆಜ್ಞೆಯ ಮೀರಿದೆನಾದಡೆ ನಿಮ್ಮಾಣೆಯಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.

ನಿಮ್ಮವರೆಂದರೆ, ನಿಮ್ಮನ್ನು ಅರಿತು ನೀವೇ ಆದವರು. ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನನ್ನು ಮನವೆಂಬ ಭಕ್ತ ಅರಿತು ಗುರುವೇ ಆದಾತ. ಭಕ್ತ ಮತ್ತು ಗುರು ಬೇರೆ ಬೇರೆ ಅಲ್ಲ; ಗುರುದೇವ ತನ್ನ ಲೀಲೆಗಾಗಿ ತನ್ನದೇ ಆದ ಕಾಯದಲ್ಲಿ ಭಕ್ತನಾಗಿದ್ದಾನೆ. ಅದೇ ಕಾಯದಲ್ಲಿ ಆ ಭಕ್ತನಿಗೆ ಗುರುದೇವನೂ ಆಗಿದ್ದಾನೆ.

**1255**

**ಆವಾಗಲು ನಿನ್ನವರುಗಳು ನೀನೆಂಬ ಮನವ,**
**ಅಲೆ ಉನ್ನತೋನ್ನತವ ಕೊಡು ಕಂಡಾ,**
**ಎಲೆ ಅಯ್ಯಾ , ನಿಮ್ಮ ಧರ್ಮವಯ್ಯಾ .**
**ನಿನ್ನ ಲಾಂಛನವ ಕಂಡು ತಾತ್ಪರ್ಯವೆಂದು ನಂಬುವ**
**ಮನಸಿಂಗೆ ಮಂಗಳವನೀಯಯ್ಯಾ .**
**ನಿನ್ನವರ ಸಹ ಲೋಕದಲ್ಲಿ ಅವರ ಕೀಳಿಲ ಕಾಯ್ದಿಪ್ಪ ಸುಕೃತವನು**
**ತಪ್ಪದೆ ಕೊಡು, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ,**
**ನಿಮ್ಮ ಧರ್ಮ.**

ತನುವಿನಲ್ಲಿ ತನ್ಮಯವಾದ ಸದ್ಗುರುವಿನ ಸುಳುಹು ತನುವನ್ನು ಆವರಿಸಿದ ಮನಕ್ಕೆ ಸಿಕ್ಕಾಗ ಆ ಗುರುದೇವನನ್ನು ಮನ ಆರಾಧಿಸುತ್ತದೆ. ಈ ಬ್ರಹ್ಮಾಂಡದಲ್ಲಿರುವ ಸಕಲ ತನಗಳೂ ಕೂಡ ಗುರುದೇವನು ಬಚ್ಚಿಟ್ಟುಕೊಂಡ ಲಾಂಛನಗಳೇ ಆಗಿವೆ ಆ ಲಾಂಛನ ಕಂಡು ನೀನೇ ಎನ್ನ ಗುರುದೇವ ಎಂದು ಆರಾಧಿಸುವ ಶಕ್ತಿ ಕೂಡಾ ಮನಕ್ಕೆ ಬಂದಿದೆ.

ಮನಕ್ಕೆ ಅರಿವಿನ ಸುಳುಹು ಸಿಕ್ಕಾಗ ಸಕಲ ತನುಗಳನ್ನು ತನ್ನಂತೆ ನೋಡುತ್ತದೆ. ತನ್ನಂತೆ ನಂಬುತ್ತದೆ. ಹೆಣ್ಣು, ಗಂಡು, ಜಾತಿ, ಮತ, ಪಂಥ, ಧರ್ಮ, ಶ್ರೀಮಂತ, ಬಡವ ಎಂಬ ಅಜ್ಞಾನ ಉದರಿ ಬೀಳುತ್ತದೆ. 'ಮಾನವ ಕುಲ ಒಂದೇ ವಲಂ' ಎಂದು ತನಗೆ ತಾನೇ ಶಾಶ್ವತ ನಂಬಿಗೆ ಹುಟ್ಟುತ್ತದೆ.

ಅರಿವಿನ ಧರ್ಮವೇ ಹಾಗೆ ಸಕಲ ತನುಗಳನ್ನು ಅರಿವಿನಿಂದ ತನ್ನಂತೆ ನೋಡುತ್ತದೆ. ಮನೋಧರ್ಮವನ್ನು ಆವರಿಸುವ ತನು ಹೆಣ್ಣು,ಗಂಡು,ಜಾತಿ,ಮತ,ಪಂಥ,ಶ್ರೀಮಂತ,ಬಡವ ಎಂದು ತನ್ನನ್ನು ತಾನೇ ಸೀಳಿಕೊಂಡು ಇತರರನ್ನು ನೋಡುತ್ತದೆ.

ಮನೋಧರ್ಮವನ್ನು ಅಳಿದು ಅರಿವಿನ ಧರ್ಮವನ್ನು ಕೃಪೆ ಮಾಡು ಎಲೆ ತಂದೆಯೇ

ಅದು ನಿಮ್ಮ ಧರ್ಮ. ಎಲ್ಲಿ ನೋಡಿದರೂ ನಿನ್ನ ಲಾಂಛನವ ಕಂಡು ಮನಸ್ಸಿಗೆ ಮಂಗಳವನ್ನು ಕೊಡು ತಂದೆ. ನಿನ್ನನ್ನು ಆರಾಧಿಸುವವರ ಲೋಕದಲ್ಲಿ ನನ್ನನ್ನು ದಾಸಾನುದಾಸನನ್ನಾಗಿ ಇರಿಸಿ ಸುಕೃತವನ್ನು ತಪ್ಪದೇ ಕೊಡು ಕಪಿಲಸಿದ್ಧಮಲ್ಲಿಕಾರ್ಜುನಾ ಇದು ನಿಮ್ಮ ಧರ್ಮ.

**1256**

**ಹಿಂದೆ ಬಯಸಿದೆ ಕಾಳುತನದಲ್ಲಿ,**
**ಎನ್ನ ಮಂದಮತಿಯ ನೋಡಯ್ಯಾ !**
**ಕೆರೆ ಬಾವಿ ಹೂದೋಟ ಚೌಕ ಛತ್ರಂಗಳ ಮಾಡಿ,**
**ಜೀವಂಗಳ ಮೇಲೆ ಕೃಪೆಯುಂಟೆಂದು ಎನ್ನ ದಾನಿಯೆಂಬರು.**
**ಆನು ದಾನಿಯಲ್ಲವಯ್ಯಾ , ನೀ ಇರಿಸಿದಂತೆ ಇದ್ದೆನು.**
**ನಿನ್ನ ಇಚ್ಛಾಮಾತ್ರವ ಮೀರಿದೆನಾಯಿತ್ತಾದಡೆ**
**ಫಲ ಪದ ಜನಪದ ಬಯಸಿದೆನಾದಡೆ ನಿಮ್ಮಾಣೆ!**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ,**
**ಭವಕ್ಕೆ ಬರಿಸದಿರಯ್ಯಾ ನಿಮ್ಮ ಧರ್ಮ!**

ಹಿಂದೆ ಕತ್ತಲೆ ಕವಿದಿತ್ತು . ಆದರೂ ನೀನು ಎನ್ನ ಮಂದಮತಿಯನ್ನು ನೋಡದೆ ಕರುಣಿಸಿದಿ ಅಯ್ಯಾ ನಾನು ಅದೆಂತಹಾ ಅಜ್ಞಾನದ ಕಾಯಕದಲ್ಲಿ ಇದ್ದೆ ನಿನ್ನನ್ನು ಮರೆತು ಕೆರೆ ಕಟ್ಟಿಸಿದೆ ಬಾವಿ ತೋಡಿ ಹೂದೋಟಗಳನ್ನು ನಿರ್ಮಾಣ ಮಾಡಿ ಚೌಕ ಛತ್ರಂಗಳನ್ನು ಮಾಡಿ ಮನುಜನ ಮೇಲೆ ಕನಿಕರ ಇರುವುದರಿಂದ ನನ್ನನ್ನು ದಾನಿ ಎಂದು ಕರೆದರು ನಾನು ದಾನಿಯಲ್ಲವಯ್ಯಾ . ಯಾವ ತನುವನ್ನು ನೋಡಿದರೂ ಆ ತನುವಿನಲ್ಲಿ ನೀನೇ ಇರುವುದರಿಂದ ನಿನಗೆ ದಾನ ಮಾಡುವ ಶಕ್ತಿ ನನಗಿದೆಯೇ ತಂದೆ ? ನೀನಿದ್ದ ತನುವನ್ನು ಬೇಡುವವನು ಎಂದು ಕರೆದೆ. ಬೇಡುವವನಿಗೆ ನಾನು ನೀಡುವವನಾಗಿ ದಾನಿಯೆಂದು ಕರೆಯಿಸಿಕೊಂಡೆ ಇದೆಂತಹಾ ಅಜ್ಞಾನ ನನ್ನದು.

ಸಕಲ ತನುಗಳು ನೀನಿರುವ ತನುಗಳು ಎಂದು ನನಗೆ ಗೊತ್ತಾದ ಮೇಲೆ ನನ್ನನ್ನು ನಾನೇ ಹೀಯಾಳಿಸಿಕೊಂಡೆ. ಇನ್ನು ನಾನು ದಾನಿಯಲ್ಲ ಮಹಾದಾನಿ ನೀನು. ನೀನು ಇರಿಸಿದಂತೆ ನಾನು ಇದ್ದೆನು. ನಿನ್ನ ಇಚ್ಛಾಮಾತ್ರವ ಮೀರಿದೆನಾದೊಡೆ ಇನ್ನು ಮುಂದೆ ಫಲಪದ ಜನನವ ಬಯಸಿದೆನಾದಡೆ ನಿಮ್ಮಾಣೆ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ . ನನ್ನನ್ನು ಮತ್ತೆ ಮತ್ತೆ ಹುಟ್ಟಿಸಿ ಸಾಯಿಸದಿರಯ್ಯಾ ಜನನ ಮರಣಗಳ ದುಃಖಕ್ಕೆ ಈಡು ಮಾಡದಿರಯ್ಯಾ ನಿಮ್ಮ ಧರ್ಮ.

**1257**

**ಮಾಡಿಸಯ್ಯಾ , ಎನಗೆ ನಿಮ್ಮವರ ಸಂಗವ.**
**ಮಾಡಿಸಯ್ಯಾ , ಎನಗೆ ನಿಮ್ಮವರಾನಂದವ.**
**ಆಗಿಸಯ್ಯಾ , ನಿಮ್ಮವರಂತೆ.**
**ನೋಡಿಸಯ್ಯಾ ,ನಿಮ್ಮವರ ಕೂಡೆ ಸಂಗವ ಮಾಡಿಸಯ್ಯಾ**
**ಎನಗೆ ಬಚ್ಚಬರಿಯ ಭಕ್ತಿಯ ಕೊಡಿಸಯ್ಯಾ .**

**ಎನಗೆ ಪಾದೋದಕ ಪ್ರಸಾದವನೊಚ್ಚತವ ಸಲಿಸಯ್ಯಾ .**
**ನಿಮ್ಮವರ ಕೂಡೆ ಸಿಕ್ಕಿ ಇರಿಸಯ್ಯಾ .**
**ನಿಮ್ಮವರ ಪಾದದ ಕೆಳಗೆ ನಿತ್ಯವಾಗಿ ಬರಿಸಯ್ಯಾ , ಎನ್ನ ಭವಭವದಲ್ಲಿ.**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ,**
**ನೀನಿಂತು ಕೆಡಿಸಯ್ಯಾ ಎನ್ನ ಭವಭವದ ಹುಚ್ಚ**

ಲೋಕ ಜನನ ಮರಣಗಳ ದುಃಖದಿಂದ ಭರಿತವಾಗಿದೆ. ಈ ದುಃಖವನ್ನು ಕೆಡಿಸಿಕೊಂಡು ಸದಾ ಪರಮಸುಖದಿಂದ ಇರಲು ಸಾಧ್ಯವಾಗುವುದಿಲ್ಲ. ಇದು ಯಾರಿಗೋ ಒಬ್ಬರಿಗೆ ಸಾಧ್ಯವಾಗುತ್ತದೆ. ಹೀಗಾಗಿ ಶರಣರು 'ಕೋಟಿಗೊಬ್ಬ ಶರಣ ಎಂದರು'.

ಜ್ಞಾನ ಸಂಗ್ರಹ ವಸ್ತುವಲ್ಲ. ಓದಿದರೆ ಬರುವುದಿಲ್ಲ. ಕೇಳಿದರೂ ಬರುವುದಿಲ್ಲ. ತನಗೆ ತಾನು ಅರಿತರಿತು ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ತನುವನ್ನು ಆವರಿಸಿದ ಮನದಿಂದಲೇ ಒಲಿಸಿಕೊಳ್ಳಬೇಕು. ಇಂತಹ ಕಲೆ ಯಾರಿಗೋ ಒಬ್ಬರಿಗೆ ಸಾಧ್ಯವಾಗುತ್ತದೆ. ಆಸಕ್ತರು ಅಂತಹ ಶರಣರನ್ನು ಹುಡುಕಿ ಸದಾ ಅವರ ಸಂಗದಲ್ಲಿ ಇರಬೇಕು. ಅವರು ಪಡುವ ಆನಂದದಲ್ಲಿ ಭಾಗಿಯಾಗಬೇಕು.

ಅಂಗದಲ್ಲಿ ಸಂಗಮವಾದ ಅರಿವೆಂಬ ಗುರುದೇವ ಬೇರಲ್ಲ; ಆ ಗುರುದೇವರಿಗೆ ಶರಣು ಹೋಗಿ ಶರಣನೇ ಆದಾತ ಕೂಡ ಬೇರೆ ಅಲ್ಲ. ಅಂತಹವರನ್ನು ನೋಡುವ ಭಾಗ್ಯ ಎನಗೆ ಕೊಡು ಅವರ ಸಂಗವ ಮಾಡಿಸು. ಎನ್ನ ಭಕ್ತಿಯನ್ನು ಅವರಿಗೆ ಮೀಸಲಾಗಿರಿಸಯ್ಯಾ . ಅವರೊಂದಿಗೆ ನನ್ನನ್ನು ಸದಾ ಇರಿಸಿ ಅವರ ಪಾದದ ಆಳಾಗಿಸಯ್ಯಾ ಎನ್ನನು ಭವಭವದಲ್ಲಿ. ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ನನ್ನ ಅಜ್ಞಾನವನ್ನು ಕೆಡಿಸಿ ನಿನ್ನ ಮಹಾಜ್ಞಾನದ ಸ್ನಾನ ಮಾಡಿಸು ತಂದೆ.

**1258**

**ನುಡಿಯಬಹುದು ಅದ್ವೈತವನೊಂದುಕೋಟಿ ವೇಳೆ ?**
**ಒಮ್ಮೆ ನಡೆಯಬಹುದೆ ನಿರ್ಧರವಾಗಿ ಸದ್ಭಕ್ತಿ ಸದಾಚಾರವ ?**
**ನುಡಿದಂತೆ ನಡೆವ, ನಡೆದಂತೆ ನುಡಿವ**
**ಸದ್ಭಕ್ತಿ ಸದಾಚಾರಯುಕ್ತ ಮಹಾತ್ಮರ**
**ಪಾದವ ಹಿಡಿದು ಬದುಕಿಸಯ್ಯಾ , ಪ್ರಭುವೆ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಎರಡೆಂಭತ್ತು ಕೋಟಿ ವಚನಗಳ ಹಾಡಿ ಮನ ಘನವನರಿಯಲಿಲ್ಲ. ಘನ ಮನವನರಿಯಲಿಲ್ಲ ಎಂದು ಪ್ರಭುದೇವರು ಹೇಳುತ್ತಾರೆ.

ಹುಟ್ಟಿನಿಂದ ಸಾಯುವವರೆಗೂ ಅದ್ವೈತವನು ನುಡಿಯಬಹುದು. ಆದರೆ ಒಮ್ಮೆಯೂ ಕೂಡಾ ನುಡಿದಂತೆ ನಡೆಯಲು ಸಾಧ್ಯವಾಗುವುದಿಲ್ಲ. ನುಡಿದಂತೆ ನಡೆಯಬೇಕೆಂದು ಹಠ ಹಿಡಿದು ಆಸಕ್ತನಾದರೆ ಕೈ ಹಿಡಿದು ನಡೆಸುವ ಸದ್ಗುರು ಬಯಕೆ ಮಾಡಿದ ತನುವಿದ್ದಲ್ಲಿಯೇ ಬಂದು ನಡೆಸಲು ಕಲಿಸುತ್ತಾನೆ. ಅಂತಹ ಮಹಾತ್ಮರ ಪಾದವ ಹಿಡಿದು ಬದುಕಿಸಯ್ಯಾ ಪ್ರಭುವೇ ಎಂದು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಸಿದ್ಧರಾಮ ಶಿವಯೋಗಿಗಳು ಬೇಡಿಕೊಂಡಿದ್ದಾರೆ.

**1259**

**ಇನಮಂಡಲದೊಳಗೆ ಕಿರಣವಡಗಿಪ್ಪಂತೆ,**
**ಫಲವಹ ಬೀಜದಲ್ಲಿ ವೃಕ್ಷವಡಗಿಪ್ಪಂತೆ,**
**ಇಂದುಕಾಂತ ರವಿಕಾಂತದಲ್ಲಿ ಜಲಬಿಂದು ಅಗ್ನಿ ಇಪ್ಪಂತೆ.**
**ಸಂದ ಕ್ಷೀರದಲ್ಲಿ ಹೊಂದಿದ ದಧಿ ತಕ್ರ ನವನೀತ ಘೃತವಿಪ್ಪಂತೆ**
**ಅಂಗದ ಮೇಲೆ ಲಿಂಗ ಸಾಹಿತ್ಯವಾಗಿ,**
**ತನ್ನೊಳಗೆ ಆ ಲಿಂಗವ ಕಂಡು, ಲಿಂಗದೊಳಗೆ ತನ್ನ ಕಂಡು,**
**ತನ್ನೊಳಗೆ ಸಮಸ್ತ ವಿಸ್ತಾರವನೆಲ್ಲವ ಕಂಡು,**
**ಜಂಗಮಮುಖ ಲಿಂಗವೆಂಬ ಭೇದವನು,**
**ಲಿಂಗಕ್ಕೆ ಜಂಗಮವೆ ಪ್ರಾಣವಾಗಿಪ್ಪ ಭೇದವನು,**
**ಅಂಗದೊಳಗೆ ಲಿಂಗವೆ ಆಚಾರವಾಗಿ ಅಳವಟ್ಟ ವಿವಿರವನ್ನು,**
**ಲಿಂಗಾಂಗಸ್ಥಲಸಂಬಂಧ ಸ್ಥಳಕುಳಂಗಳ ವಿವರವಾಗಿ ಇದ್ದಿತೆಂಬುದನು,**
**ಕಂಗಳ ನೋಟಕ್ಕೆ ಗುರಿಯಾದ ಲಿಂಗವೆ**
**ಅಂಗವನೊಳಕೊಂಬ ಭೇದವನು,**
**ಸಂಗನ ಬಸವಣ್ಣ ಚೆನ್ನಬಸವಣ್ಣನಿಂದ ಕೃಪೆಮಾಡಿಸಿ**
**ಎನ್ನನುಳುಹು, ಪ್ರಭುವೆ, ಕಪಿಲಸಿದ್ಧಮಲ್ಲಿಕಾರ್ಜುನದೇವಯ್ಯಾ .**

ಸೂರ್ಯನೊಳಗೆ ಬೆಳಕಿನ ಕಿರಣಗಳು ಅಡಗಿರುವಂತೆ ಬೀಜದಲ್ಲಿ ವೃಕ್ಷ ಅಡಗಿರುವಂತೆ ಕಲ್ಲಿನಲ್ಲಿ ಜಲ ಬಿಂದು ಅಗ್ನಿ ಅಡಗಿರುವಂತೆ ಹಾಲಿನಲ್ಲಿ ಮೊಸರು ಮಜ್ಜಿಗೆ ಬೆಣ್ಣೆ ತುಪ್ಪ ಅಡಗಿರುವಂತೆ ಅಂಗದಲ್ಲಿ ಅರಿವು ಅಡಗಿದೆ. ಅರಿವೆಂದರೆ ಸಾಮಾನ್ಯವಲ್ಲ ಅಂಗವನ್ನು ಸೃಷ್ಟಿಮಾಡಿ ಅಂಗದಲ್ಲಿಯೇ ಸಂಗಮವಾಗಿ ಅಂಗಕ್ಕೆ ನಿರಂತರ ಪಾಠ ಮಾಡುವ ಲಿಂಗ ಎಂದು ಕರೆದಿದ್ದಾರೆ ಶರಣರು.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಲಿಂಗವನ್ನು ಕಂಡುಕೊಂಡು ಆ ಲಿಂಗಯ್ಯ ಹೇಳುವ ಸದಾಚಾರವನ್ನು ರೂಢಿಸಿಕೊಂಡು ಆ ಆಚಾರದಲ್ಲಿಯೇ ಮಗ್ನವಾದಾಗ ಅದು ಘನಮನವಾಗುತ್ತದೆ. ಅಂಗವಿದೆ ಅಂಗವನ್ನು ಮನ ಆವರಿಸಿದೆ. ಅಂಗದಲ್ಲಿ ಲಿಂಗ ಸಂಗಮವಾಗಿದೆ. ಇಂತಹ ಅರಿವಿನ ಸಾಹಿತ್ಯವನ್ನು ಗುರುದೇವ ಅಂಗದಲ್ಲಿ ಸ್ಥಾಪಿಸಿದ್ದಾನೆ. ಆ ಅರಿವಿನ ಹಾದಿಯಲ್ಲಿಯೇ ನಡೆಯಲು ಯಾವ ಕಾಯ ಪ್ರಯತ್ನಿಸುತ್ತದೆಯೋ ಅಂತಹ ಕಾಯವೇ ಕೈಲಾಸವೆಂದು ಕರೆಯಿಸಿಕೊಳ್ಳುತ್ತದೆ.

ಅರಿವು ಎನ್ನುವುದು ಕಣ್ಣಿನಲ್ಲಿಯೂ ಇದೆ, ಚರ್ಮದಲ್ಲಿಯೂ ಇದೆ, ಕಿವಿಯಲ್ಲಿಯೂ ಇದೆ, ಮೂಗಿನಲ್ಲಿಯೂ ಇದೆ, ನಾಲಿಗೆಯಲ್ಲಿಯೂ ಇದೆ. ಕಣ್ಣಿನಲ್ಲಿರುವ ಅರಿವು ಕಣ್ಣನ್ನು ಆವರಿಸಿದ ಮನಕ್ಕೆ ಸದಾ ಪಾಠ ಮಾಡುತ್ತದೆ. ಕಿವಿಯಲ್ಲಿರುವ ಅರಿವು ಕಿವಿಯನ್ನು ಆವರಿಸಿದ ಮನಕ್ಕೆ ಸದಾ ಪಾಠ ಮಾಡುತ್ತದೆ. ಚರ್ಮದಲ್ಲಿ ಸಂಗಮವಾದ ಅರಿವು ಚರ್ಮದಲ್ಲಿ ಆವರಿಸಿದ ಮನಕ್ಕೆ ಸದಾ ಪಾಠ ಮಾಡುತ್ತದೆ. ನಾಲಿಗೆಯಲ್ಲಿ ಸಂಗಮವಾದ ಅರಿವು ನಾಲಿಗೆಯ ಮೇಲೆ ನಾಟ್ಯ ಮಾಡುವ ಮನಕ್ಕೆ ಸದಾ ಪಾಠ ಮಾಡುತ್ತದೆ. ನಾಸಿಕದಲ್ಲಿಯ ಅರಿವು ನಾಸಿಕವನ್ನು ಆವರಿಸಿದ ಮನಕ್ಕೆ ಸದಾ ಪಾಠ ಮಾಡುತ್ತದೆ. ಇಂತಹ ಮನದ ಭೇದವನ್ನು ತಿಳಿಸಿ ಅದರ ಅಜ್ಞಾನವನ್ನು ತನಗೆ ತಾನೇ ಬೇಧಿಸಿಕೊಂಡು ಅರಿವಿನಲ್ಲಿ ಸಂಗಮಗೊಳಿಸುವ ಸುಳುಹನ್ನು ಎನಗೆ ಚೆನ್ನಬಸವಣ್ಣನಿಂದ ಕೃಪೆ ಮಾಡಿಸಿ

ಎನ್ನನುಳುಹು ಪ್ರಭುವೇ ಎಂದು ಸಿದ್ಧರಾಮ ಶಿವಯೋಗಿಗಳು ಪ್ರಭುದೇವರನ್ನು ಪ್ರಾರ್ಥಿಸಿದ್ದಾರೆ.

**1260**

**ಬಡವ ನಿಧಾನವ ಕಂಡಂತೆ,**
**ಹಾರುವ ಮಾಳವ ಕಂಡಂತೆ,**
**ಶಿಶು ತನ್ನ ತಾಯ ಕಂಡಂತೆ,**
**ವೀರ ತಾನು ಪರಸೇನೆಯ ಕಂಡಂತೆ,**
**(ಆನು) ಚೆನ್ನವೀರ ಬಸವಣ್ಣನ ಪಾದವ ನೋಡಿ ಹರುಷಿತನಾದೆ.**
**ಮಾಡಿ ಮಾಡಿಸ ಉಪದೇಶವ, ನೋಡಿ ನೋಡಿಸಾ ಮಹಿಮೆಯ.**
**ಇದರದ್ಭುತವೇಕೆಂದಡೆ, ಕೊಡಿಸಾ ಎನ್ನ ಕೈಯಲ್ಲಿ ಇಷ್ಟಲಿಂಗವ.**
**ಪರಪ್ರಭುವೆ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಭೂಮಿಯಲ್ಲಿ ಹೇಮ ಅಡಗಿ ಕುಳಿತಂತೆ ಅಂಗದಲ್ಲಿ ಅರಿವು ಅಡಗಿದೆ. ಬಡವನಿಗೆ ಸಂಪತ್ತು ಕಂಡರೆ ಹೇಗೆ ಸಂತೋಷವಾಗುತ್ತದೋ ಶಿಶುವಿಗೆ ತನ್ನ ತಾಯಿ ಕಂಡರೆ ಹೇಗೆ ಸಂತೋಷವಾಗುತ್ತದೆಯೋ ವೀರನಿಗೆ ಯುದ್ಧ ನಿರತ ಸೇನೆಯು ಕಂಡರೆ ಹೇಗೆ ಸಂತೋಷವಾಗುತ್ತದೆಯೋ ಹಾಗೆಯೇ ಜ್ಞಾನದ ಸುಳುಹುಗಳನ್ನು ತಿಳಿ ಹೇಳುವ ಮಹಾಜ್ಞಾನಿಯನ್ನು ಕಂಡರೆ ತನ್ನ ತನುವಿನಲ್ಲಿಯೇ ಜ್ಞಾನವನ್ನು ಹುಡುಕುವವನಿಗೆ ಪರಮ ಸಂತೋಷವಾಗುತ್ತದೆ.

ಜ್ಞಾನದ ಸುಳುಹು ನೀಡುವ ಮಹಾಜ್ಞಾನಿ ಚೆನ್ನಬಸವಣ್ಣನ ಪಾದವ ನೋಡಿ ಹರುಷಿತನಾದೆ ಎಂದಿದ್ದಾರೆ. ಗುರುದೇವನನ್ನು ಕಂಡು ಮಾಡಿ ಮಾಡಿಸ ಉಪದೇಶವ, ನೋಡಿ ನೋಡಿಸ ಅರಿವಿನ ಮಹಿಮೆಯ. ಅಂಗದಲ್ಲಿ ಸಂಗಮವಾದ ಅರಿವಿನ ಮಹಿಮೆಯನ್ನು ಅಂಗವನ್ನು ಆವರಿಸಿದ ಮನವೇ ಕಂಡುಕೊಂಡಾಗ ಅದೊಂದು ಅದ್ಭುತ. ಅಂತಹ ಅದ್ಭುತವಾದ ಅಪ್ರಮಾಣವಾದ ಜಗದಗಲ ಮುಗಿಲಗಲ ವ್ಯಾಪಿಸಿಕೊಂಡ ಅರಿವು ತನ್ನಂಗದಲ್ಲಿ ಸಂಗಮವಾದುದನ್ನು ಕಂಡು ಅದನ್ನು ಗುರುದೇವ ತನ್ನ ಕೈಯಲ್ಲಿ ಸ್ಥಾಪಿಸುವ ಕ್ರಿಯೆಯನ್ನು ಕಂಡು ಪರಮ ಪ್ರಭುವೇ ಕಪಿಲಸಿದ್ಧಮಲ್ಲಿಕಾರ್ಜುನಾ ಇಂದು ಎನ್ನ ಕೈ ಸೇರಿದೆಯಾ ತಂದೆ ಎಂದು ಹೃದಯ ತುಂಬಿ ಕುಣಿದಾಡುತ್ತಾರೆ.

**1261**

**ಅಂಗಕ್ಕೆ ಲಿಂಗೋಪದೇಶ, ಮನಕ್ಕೆ ಮಂತ್ರೋಪದೇಶವೆ**
**ಘನವೆಂದು ನಂಬಿದೆನಯ್ಯಾ, ನಂಬಿದೆನಯ್ಯಾ .**
**ಈ ಎರಡರ ಬೋಧೋದ್ಧಾರಕೆ ಚೆನ್ನಬಸವಣ್ಣನೆ**
**ಘನಗುರು, ಘನಲಿಂಗ, ಘನಜಂಗಮವೆಂದು ನಂಬಿದೆನಯ್ಯಾ.**
**ಇದನಲ್ಲೆಂದಡೆನ್ನಗುಣವೆನ್ನನೆ ಸುಡಲೀಯದೆ, ಅಲ್ಲಯ್ಯಾ ಕಪಿಲಸಿದ್ಧಮಲ್ಲಯ್ಯಾ ?**

ಅಂಗದಲ್ಲಿ ಅರಿವು ಸಂಗಮವಾಗಿದೆ. ಆ ಅರಿವೇ ಗುರುವಾಗಿ ಅಂಗಕ್ಕೆ ಸದಾ ಉಪದೇಶಮಾಡುತ್ತದೆ. ಇದನ್ನೇ ಶರಣರು ಲಿಂಗೋಪದೇಶ ಎಂದು ಕರೆದಿದ್ದಾರೆ. ಹೀಗೆ ಅನುಭವ ಮಾಡಿಕೊಂಡ ಗುರುದೇವ ಆಸಕ್ತ ಅಂಗವನ್ನು ಕಂಡು ಆ ಅಂಗವನ್ನು ಆವರಿಸಿದ ಮನಕ್ಕೆ ಅರಿವಿನ ಸುಳುಹು ನೀಡುತ್ತಾನೆ. ಹೀಗೆ ಗುರುದೇವ; ಮನಕ್ಕೆ ನೀಡುವ ಸುಳುಹನ್ನೇ ಮಂತ್ರೋಪದೇಶವೆಂದು

ಕರೆದಿದ್ದಾರೆ. ಹೀಗೆ ಮಾಡುವ ಮಂತ್ರೋಪದೇಶವನ್ನು ನಾನು ನಂಬಿದೆನಯ್ಯಾ ಎಂದು ಸಿದ್ದರಾಮ ಶಿವಯೋಗಿಗಳು ಅಲ್ಲಮ ಪ್ರಭುಗಳಿಗೆ ಹೇಳಿದ್ದಾರೆ.

ಅಂಗಕ್ಕೆ ಅರಿವೆಂಬ ಗುರುದೇವ ಹೇಗೆ ಲಿಂಗೋಪದೇಶ ಮಾಡುತ್ತಾನೆ ? ಮನಕ್ಕೆ ಸದ್ಗುರು ಮಂತ್ರೋಪದೇಶವನ್ನು ಹೇಗೆ ಮಾಡುತ್ತಾನೆ ಎಂಬ ವಿವರವನ್ನು ಅಲ್ಲಮ ಪ್ರಭುಗಳಿಗೆ ಹೇಳುತ್ತಾ ಲಿಂಗೋಪದೇಶ ಮಂತ್ರೋಪದೇಶವೆಂಬ ಎರಡರ ಬೋಧೋದ್ಧಾರವನ್ನು ಬಣ್ಣಿಸಿದ್ದಾರೆ. ಹೀಗೆ ಬೋಧೆ ಮಾಡಿದ ಸದ್ಗುರು ದೇವನನ್ನೇ ಘನಗುರು, ಘನಲಿಂಗ ಘನಜಂಗಮವೆಂದು ನಂಬಿದೆನಯ್ಯಾ ಎಂದು ಹೇಳುತ್ತಾ ಇದಕ್ಕೆ ಕಾರಣ ಕರ್ತನಾದ ಚೆನ್ನಬಸವಣ್ಣನೇ ಎನಗೆ ಗುರು ಅಲ್ಲ ಎಂದಡೆ ಎನ್ನ ಗುಣ ಸುಡದೆ ಮಾಣದು ಎಂದು ಹೇಳಿದ್ದಾರೆ.

**1262**

**ಎಲ್ಲ ಪ್ರಮಥರು ಲಿಂಗವ ಧರಿಸುತ್ತಿರಲು**
**ನಾನೇನು ಒಲ್ಲೆನೆಂಬುವುದು ಕರ್ಮದ ಬಲೆಯೊ, ಮಾಯದ ಬಲೆಯೊ?**
**ಎಲೆ ಕಪಿಲಸಿದ್ಧಮಲ್ಲಿನಾಥಯ್ಯಾ ,ನಾ ಧರಿಸಿಕೊಂಬುವೆ ಲಿಂಗವ.**
**ನೀ ಕರೆಸಿಕೊಂಬುವನಾಗು ಮತ್ತೋರ್ವನ ನಿನ್ನ ಪೂಜೆಗೆ; ನಾ ನಿನ್ನವನಲ್ಲೆಲೆ ದೇವಾ.**

ಅರಿವಿನ ಲಿಂಗಧಾರಣೆ ಮಾಡಿಕೊಳ್ಳಲು ಪ್ರಮಥರಿಗೆ ಮಾತ್ರ ಸಾಧ್ಯ . ಅಂಗದ ಮೇಲೆ ಲಿಂಗ ಸರ್ವರೂ ಧರಿಸಬಹುದು ಆದರೆ ಲಿಂಗಕ್ಕೂ ತನಗೂ ಸಂಬಂಧವಿಲ್ಲ. ಲಿಂಗ ಅಂದರೆ ಏನೆಂಬುದು ಅಂಗಕ್ಕೆ ಗೊತ್ತಾಗದಿದ್ದರೆ ಅಂಗದ ಮೇಲೆ ಧರಿಸಿದ ಲಿಂಗ ವ್ಯರ್ಥವೇ ಸರಿ.

ಅಂಗದಲ್ಲಿ ಅರಿವು ಸಂಗಮವಾಗಿದೆ. ಅಂಗವನ್ನು ಮನ ಆವರಿಸಿದೆ. ಅಂಗದಲ್ಲಿಯೇ ಸಂಗಮವಾದ ಅರಿವನ್ನು ಮನ ಬಳಕೆ ಮಾಡಲು ಹೋದರೆ ಪುನಃ ಅಂಗದ ಮೇಲೆ ಲಿಂಗವನ್ನು ಧರಿಸಲು ಸಾಧ್ಯವಿಲ್ಲ. ಅದರ ಅಗತ್ಯವೂ ಇಲ್ಲ. ಏಕೆಂದರೆ ಲಿಂಗವೆಂದರೆ ಒಂದು ವಸ್ತುವಲ್ಲ ಅದು ಸರ್ವಾಂಗದಲ್ಲಿಯೂ ಸಂಗಮವಾಗಿದೆ.

ಅಂಗವನ್ನು ಆವರಿಸಿದ ಮನ ಅರಿವನ್ನು ಮರೆತುದರಿಂದ ಅಂಗದ ಮೇಲೆ ಲಿಂಗ ಧರಿಸಿ ಆ ಲಿಂಗವನ್ನೇ ದೇವರೆಂದು ಆರಾಧಿಸುತ್ತದೆ. ಅಂಗದ ಮೇಲೆ ಲಿಂಗ ಧರಿಸುವುದು ಶಿಲುಬೆ, ರುದ್ರಾಕ್ಷಿ , ಜನಿವಾರ ಧರಿಸುವುದು ಮನಕ್ಕೆ ಸಂಪ್ರದಾಯವಾಗಿದೆ. ಈ ಸಂಪ್ರದಾಯವನ್ನು ಅಂಗದೊಂದಿಗೆ ಮನ ಸದಾ ಆಚರಣೆಯಲ್ಲಿರುತ್ತದೆ.

ಅಂಗಕ್ಕೆ ಮನವೆಂಬ ಮಾಯೆ ಆವರಿಸಿರುವುದರಿಂದ ಆ ಮಾಯೆ ಸಂಪ್ರದಾಯವೆಂಬ ಕರ್ಮದ ಬಲೆ ಬೀಸಿ ಅಂಗವನ್ನು ಮಾಯದ ಬಲೆಗೆ ತಳ್ಳಿದೆ. ಮನಕ್ಕೆ ಅರಿವಾದರೆ, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗವನ್ನೇ ಧಾರಣೆ ಮಾಡಿಕೊಂಡು ಸದಾ ಆ ಲಿಂಗವನ್ನೇ ಆರಾಧಿಸುತ್ತದೆ. ಆಗ ಮನ ಘನಮನವಾಗುತ್ತದೆ. ಅಂಗಕ್ಕಂಟಿದ ಸಕಲ ಸಂಪ್ರದಾಯಗಳು ತನಗೆ ತಾನೇ ಕಳಚಿ ಬಿದ್ದು ಅಂಗ ಲಿಂಗಾಂಗವಾಗುತ್ತದೆ.

**1263**

**ವ್ಯಾಧಿ ಹೋಗುವ ಪರ್ಯಂತರ ರಸರಸಾಯನದ ಹಂಗಯ್ಯಾ ,**
**ಕ್ಷುತಿಪಾಸೆಯಡಗುವ ಪರ್ಯಂತರ ಅನ್ನೋದಕದ ಹಂಗಯ್ಯಾ .**

**ನಾ ಲಿಂಗಸಂಬಂಧಿಯಾಗುವ ಪರ್ಯಂತರ ನಿಮ್ಮ ಹಂಗಿನವನಯ್ಯಾ.**
**ಎಲೆ ಕಪಿಲಸಿದ್ಧಮಲ್ಲಿನಾಥಾ.**

ಅಂಗ ಎಲ್ಲಿಯವರೆಗೆ ಮನದ ಮಾತನ್ನು ಕೇಳುತ್ತದೆಯೋ ಅಲ್ಲಿಯವರೆಗೆ ಅಂಗ ನಾನಾ ವ್ಯಾಧಿಯಿಂದ ಬಳಲುತ್ತದೆ. ನೋಡಿದರೆ, ಕೇಳಿದರೆ, ಮುಟ್ಟಿದರೆ, ರುಚಿಸಿದರೆ, ಮೂಸಿಸಿದರೆ ಅಂಗದಲ್ಲಿ ರಸದ ರಸಾಯನವು ಹರಿದು ಅಂಗ ಅಜ್ಞಾನಕ್ಕೆ ಸೆರೆಯಾಳಾಗುತ್ತದೆ. ಸದಾ ರಂಜನೆಗೆ ಒಳಗಾಗುತ್ತದೆ.

ನೋಡಿದರೆ ಹಾದರದ ಸುಖ. ಈ ಸುಖ ತಪ್ಪೆಂದು ಹೀಗೆ ನೋಡಬಾರದೆಂದು ಅದು ತನಗೇ ತಿಳಿಯುತ್ತದೆ. ನೋಡಿದ ಸುಖ ಆ ಸುಖದಿಂದಾದ ದುಃಖ ಎರಡೂ ಅಂಗದಲ್ಲಿ ಉಳಿದು ಅಂಗದಲ್ಲಿ ಅಜ್ಞಾನದ ಮಹಾವ್ಯಾಧಿ ಹುಟ್ಟಿಕೊಳ್ಳುತ್ತದೆ. ಅಂಗಕ್ಕೆ ಮನದ ಹಂಗು ಹರಿಯುವುದಿಲ್ಲ. ಹಸಿವು ನಿದ್ರೆ ಬಾಯಾರಿಕೆಯ ಹಂಗು ಅಂಗದಲ್ಲಿ ಸದಾ ಉಂಟಾಗುತ್ತದೆ. ಮನದ ಹಂಗು ಹರಿದು ಮನ ಅರಿವಿನ ಸಂಬಂಧಿಯಾಗುವ ತನಕ ಮನಕ್ಕೆ ನಿರಂಜನನಾಗಲು ಬರುವುದಿಲ್ಲ. ಅದು ಸದಾ ರಂಜನೆಗೆ ಒಳಗಾಗುತ್ತದೆ. ಅಂಗದಲ್ಲಿ ಅರಿವು ಇದೆ. ಅದನ್ನು ತಿಳಿಯದೇ ಇರುವ ಮರೆವು ಕೂಡಾ ಇದೆ. ಮನ ಅರಿವನ್ನು ಅರಿತರೆ ಅದು ಇಲ್ಲವಾಗುತ್ತದೆ. ಅಂಗದ ಮೂಲಕ ಸದಾ ಸುಖಿಸುವ ಮನ ತಾನು ಸಂಪೂರ್ಣ ನಾಶವಾಗುವುದು ಅದಕ್ಕೆ ಬೇಕಾಗದ ನಿಮಿತ್ಯ ಅರಿವಿನತ್ತ ಪ್ರಯಾಣಿಸುವುದಿಲ್ಲ. ಅಂಗಕ್ಕೆ ಮನ ತಂದೊಡ್ಡುವ ಸುಖ ಸದಾ ಬೇಕಾಗಿರುವುದರಿಂದ ಅಂಗ ಮನವನ್ನು ಪ್ರತಿಭಟಿಸುವುದಿಲ್ಲ. ಹೀಗಾಗಿ ಅಂಗದಲ್ಲಿ ಅರಿವು ತನ್ಮಯವಾಗಿದೆ. ಆದರೂ ಅಂಗಕ್ಕೆ ಅರಿವಿನ ಪರಿಚಯವಿಲ್ಲ. ಅಂಗವನ್ನು ಆವರಿಸಿದ ಮನಕ್ಕೂ ಅರಿವಿನ ಪರಿಚಯವಿಲ್ಲ. ಎಲ್ಲಿಯವರೆಗೆ ಮನ ಮತ್ತು ಅಂಗಕ್ಕೆ ಅರಿವಿನ ಪರಿಚಯವಿರುವುದಿಲ್ಲವೋ ಅಲ್ಲಿಯವರೆಗೆ ಹಂಗಿನ ಅರಿವಿನ ಮನೆಯಲ್ಲಿ ಇವೆರಡು ವಾಸ ಮಾಡುತ್ತವೆ. ಏಕೆಂದರೆ ಅಂಗ ಅರಿವಿನ ಸುಖ ಉಣ್ಣಲು ಬಂದಿದೆ. ಅರಿವಿನ ಬೆಳಕಿನ ನೆರಳೇ ಮನವಾಗಿ ಅಂಗವನ್ನು ತನ್ನತ್ತ ಸೆಳೆದಿದೆ. ಅಂಗ ಮತ್ತು ಮನ ಎಲ್ಲಿಯವರೆಗೆ ಅರಿವನ್ನು ತಿಳಿಯುವುದಿಲ್ಲವೋ ಅಲ್ಲಿಯವರೆಗೆ ಅಂಗ ಅರಿವಿನ ಮನೆಯಾದರೂ ಅದು ಹಂಗಿನ ಮನೆಯೇ ಆಗಿದೆ.

**1264**

**ಹಾರುವೆ ಹಾರುವೆನಯ್ಯಾ ಮೂರರ ಮನೆಯ.**
**ನೋಡುವೆ ನೋಡುವೆನಯ್ಯಾ ಆರರ ಮನೆಯ.**
**ಕೂಡುವೆ ಕೂಡುವೆನಯ್ಯಾ ಈರಾರರ ಮನೆಯ.**
**ಆಡುವೆ ಆಡುವೆನಯ್ಯಾ,**
**ಕಪಿಲಸಿದ್ಧಮಲ್ಲಯ್ಯ, ಮತ್ತೂ ಮೂರರಲ್ಲೆ.**

ತನುವಿನಲ್ಲಿ ಅರಿವು ಇದೆ. ಮನವೂ ಇದೆ. ಹೀಗಾಗಿ ಇದು ಮೂರರ ಮನೆ. ಮನದಿಂದಾಗಿ ತನುವಿನಲ್ಲಿ ಸಾತ್ವಿಕ, ರಾಜಸ, ತಾಮಸ ಗುಣಗಳು ಹುಟ್ಟಿಕೊಂಡಿವೆ. ಮನವೇ ಸೃಷ್ಟಿ ಮಾಡಿದ ಈ ಮೂರು ಗುಣಗಳನ್ನು ಮನವೇ ಹಾರಿದಾಗ ಅದು ಘನಮನವಾಗುತ್ತದೆ. ಸದಾ ಅರಿವಿನ ಹಾಡ ಹಾಡುತ್ತಾ ಕುಣಿ ಕುಣಿದಾಡುತ್ತದೆ.

ಅರಿವಿನಿಂದ ನೋಡುತ್ತದೆ, ಅರಿವಿನಿಂದ ಕೇಳುತ್ತದೆ, ಅರಿವಿನಿಂದ ಮುಟ್ಟುತ್ತದೆ,

ಅರಿವಿನಿಂದ ಮೂಸಿಸುತ್ತದೆ, ಅರಿವಿನಿಂದ ರುಚಿಸುತ್ತದೆ. ಈ ಐದೂ ಜಾಗದಲ್ಲಿ ಮನ ವಾಸ ಮಾಡಿರುವುದರಿಂದಾಗಿ ತನುವನ್ನು ಸದಾ ರಂಜನೆಗೆ ಕರೆದುಕೊಂಡು ಹೋಗುತ್ತದೆ. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮದಲ್ಲಿ ನಿರಂಜನನೆಂಬ ಅರಿವು ಸಂಗಮವಾಗಿದೆ. ಆಯಾ ಜಾಗದಲ್ಲಿಯೇ ಮನ ಆವರಿಸಿರುವುದರಿಂದ ಇಡೀ ಅಂಗ ರಂಜನೆಗೆ ಒಳಗಾಗಿದೆ. ಅದು ನಿರಂಜನನನ್ನು ಕೂಡಿದರೆ ಸಾಕು ಸದಾ ಕೂಡದ ಅಗಲದ ಕೂಟದ ಸುಖವನ್ನು ಅನುಭವಿಸುತ್ತದೆ. ಮೂರೊಂದಾದ ಘನವಾಗುತ್ತದೆ. ಮತ್ತೆ ಮೂರಾಗುವುದಿಲ್ಲ.

**1265**

**ನದಿಯ ನೀರು ಹೋದುವಯ್ಯಾ ಸಮುದ್ರಕ್ಕೆ;**
**ಸಮುದ್ರದ ನೀರು ಬಾರವಯ್ಯಾ ನದಿಗೆ.**
**ನಾನು ಹೋದೆನಯ್ಯಾ ಲಿಂಗದ ಕಡೆಗೆ;**
**ಲಿಂಗ ಬಾರದು ನೋಡಯ್ಯಾ ನನ್ನ ಕಡೆಗೆ.**
**ಮಗ ಮುನಿದಡೆ ತಂದೆ ಮುನಿಯನು;**
**ನಾ ಮುನಿದಡೆ ನೀ ಮುನಿಯೆ ನೋಡಯ್ಯಾ ಕಪಿಲಸಿದ್ಧಮಲ್ಲಿನಾಥಾ.**

ನದಿಯ ನೀರು ಸಮುದ್ರಕ್ಕೆ ಹರಿದು ನದಿ ಸಮುದ್ರವೇ ಆಗಿದೆ. ಸಮುದ್ರ ಕಾದು ಆವಿಯಾಗಿ ಪುನಃ ನದಿಯಾಗುತ್ತದೆ. ಹಾಗೆಯೇ ನನಗೂ ನನ್ನನ್ನು ಸೃಷ್ಟಿಮಾಡಿ ನನ್ನ ತನುವಿನಲ್ಲಿಯೇ ಸಂಗಮವಾದ ಲಿಂಗಯ್ಯನಿಗೂ ಅವಿನಾಭಾವ ಸಂಬಂಧ.

ಒಬ್ಬರನ್ನು ಬಿಟ್ಟು ಒಬ್ಬರು ಇಲ್ಲದದಿದ್ದರೂ ಒಬ್ಬರಿಗೆ ಒಬ್ಬರು ಪರಿಚಯವಿಲ್ಲ. ಪರಿಚಯ ಆಗುವವರೆಗೂ ಜೀವನ ಸುಖ-ದುಃಖಗಳಿಂದ ಕೂಡಿರುತ್ತದೆ. ಪರಮ ಸುಖವನ್ನು ಬಯಸಿದ ಕೂಡಲೇ ಅಂಗ ಅಂಗದಲ್ಲಿಯೇ ಸಂಗಮವಾದ ಲಿಂಗ ಅಂಗವನ್ನು ಆವರಿಸಿದ ಮನ ಇವು ಮೂರು ಒಂದಾಗುತ್ತವೆ. ಆಗ ಅಂಗ ಲಿಂಗಾಂಗವೆಂದು ಅಂಗದಿಂದಲೇ ಕರೆಯಿಸಿಕೊಳ್ಳುತ್ತದೆ. ಅಂಗದಲ್ಲಿ ಹುಟ್ಟಿದ ಕೋಪ ತಾಪಗಳೆಲ್ಲಾ ಕೂಡಲೇ ಅಡಗುತ್ತವೆ.

**1266**

**ಸ್ಥೂಲದೇಹ ತೊಳೆದಡೇನು, ಸೂಕ್ಷ್ಮದೇಹ ಶುದ್ಧವಾದಡೇನು.**
**ಕಾರಣಾತೀತನಾಗದನ್ನಕ್ಕ?**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ, ನಾ ಯೋಗಿಯಾದಡೇನು**
**ಮನವೊಲಿದು ಚೆನ್ನಬಸವಣ್ಣ ಲಿಂಗವ ಕೊಡದನ್ನಕ್ಕ.**

ಸ್ಥೂಲದೇಹವೇ ಏನೆಲ್ಲಾ ಅಲ್ಲಾ. ಇದಕ್ಕೆ ಹುಟ್ಟು ಉಂಟು ಸಾವು ಉಂಟು. ಸ್ಥೂಲದೇಹವನ್ನು ಆವರಿಸಿದ ಮನಕ್ಕೆ ಸಾವಿಲ್ಲ. ಸ್ಥೂಲದೇಹದಲ್ಲಿಯೇ ಸಂಗಮವಾದ ಅರಿವು ಎಂಬ ಗುರುದೇವನಿಗು ಕೂಡಾ ಸಾವು ಇಲ್ಲ.

ಸ್ಥೂಲದೇಹವನ್ನು ಆವರಿಸಿದ ಮನವೆಂಬ ಸೂಕ್ಷ್ಮದೇಹ ಸ್ಥೂಲದೇಹದಲ್ಲಿಯೇ ವಾಸವಾದ ಅರಿವು ಎಂಬ ಗುರುದೇವನಿಗೆ ಹಣೆಮಣೆದಾಗಲೇ ಶುದ್ಧವಾಗುತ್ತದೆ. ಸಿದ್ಧನಾಗುತ್ತದೆ. ಪ್ರಸಿದ್ಧ ಪ್ರಸಾದಿಯಾಗುತ್ತದೆ.

ಸ್ಥೂಲದೇಹದಲ್ಲಿ ಸೂಕ್ಷ್ಮದೇಹವನ್ನು ಧಾರಣೆ ಮಾಡಿದ ಭಕ್ತನೂ ಇದ್ದಾನೆ ಕಾರಣ

ದೇಹವನ್ನು ಧಾರಣೆ ಮಾಡಿದ ಗುರುದೇವನೂ ಇದ್ದಾನೆ. ಇವರಿಬ್ಬರೂ ಸ್ಥೂಲದೇಹವನ್ನೇ ಆಲಯವನ್ನಾಗಿಸಿಕೊಂಡು ಈ ಆಲಯದಲ್ಲಿಯೇ ವಾಸವಾಗಿದ್ದಾರೆ. ಈ ಸಕೀಲವನ್ನು ಬಲ್ಲಾತನೇ ಮಹಾಜ್ಞಾನಿ. ಆತನಿಗೆ ಸಾವಿಲ್ಲ ಕೇಡಿಲ್ಲ ರೂಹಿಲ್ಲ. ಈಗ ಸ್ಥೂಲದೇಹವೆಂಬ ರೂಪದಲ್ಲಿ ನಿರೂಪನಾಗಿ ಸಂಗಮನಾದಾತ. ಇಂತಹ ಜ್ಞಾನಿ ಮಾತ್ರ ಜ್ಞಾನಾಸಕ್ತ ಅಂಗಕ್ಕೆ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗವನ್ನು ತೋರದನ್ನಕ್ಕ ಅಂಗಕ್ಕೆ ಅರಿವೆಂದರೇನೆಂದು ಗೊತ್ತಾಗಲು ಸಾಧ್ಯವೇ ಇಲ್ಲವೆಂದು ಸಿದ್ಧರಾಮ ಶಿವಯೋಗಿಗಳು ಈ ವಚನ ಸೂತ್ರದ ಮೂಲಕ ಓದುಗರಿಗೆ ವಿವರಿಸಿದ್ದಾರೆ.

**1267**

**ಏನೆಂಬೆ ಏನೆಂಬೆ ಕೊಟ್ಟ ದೇವರಂದವ!**
**ಮನದಲ್ಲಿ ಘನಲಿಂಗವಾಯಿತ್ತು , ಧ್ಯಾನದಲ್ಲಿ ಭಾವಲಿಂಗವಾಯಿತ್ತು ,**
**ನೇತ್ರದಲ್ಲಿ ಶಿವಲಿಂಗವಾಯಿತ್ತು , ಹೃದಯದಲ್ಲಿ ಮಹಾಲಿಂಗವಾಯಿತ್ತು ,**
**ಎನ್ನ ಕರಸ್ಥಲದಲ್ಲಿ ಇಷ್ಟಲಿಂಗವಾಗಿ ಅಳವಟ್ಟಿತ್ತು .**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನ**
**ಎಲ್ಲ ಕಡೆಯಲ್ಲಿ ಪರಾತ್ಪರ ವಸ್ತುವಾಗಿ, ಚೆನ್ನಬಸವಣ್ಣನಾಗಿ,**
**ನಾನು ಮರೆದೆನಯ್ಯಾ ಎನ್ನ ನಾಮವ, ನೋಡಯ್ಯಾ ಪ್ರಭುವೆ.**

ದೇಹದಲ್ಲಿ ಅರಿವು ಎಂಬ ದೇವರಿದ್ದಾನೆ. ದೇಹವನ್ನು ಮನ ಆವರಿಸಿದೆ. ದೇವರಿಗೆ ಹಣೆಮಣಿಯಬೇಕಾದ ಮನ ದೇಹದೊಂದಿಗೆ ಸಂಗ ಮಾಡಿ ದೇವರನ್ನೇ ಮರೆತಿದೆ. ತಾನು ಮಾಡಿದ ದೇವರನ್ನು ಆರಾಧಿಸುತ್ತದೆ.

ಚೆನ್ನಬಸವಣ್ಣ ಎಂಬ ಮಹಾಜ್ಞಾನಿ ಸಿದ್ಧರಾಮ ಶಿವಯೋಗಿಗೆ ದೇಹದಲ್ಲಿಯೇ ಸಂಗಮವಾದ ದೇವರನ್ನು ದೇಹವನ್ನು ಆವರಿಸಿದ ಮನಕ್ಕೆ ಪರಿಚಯಿಸಿ ಆ ದೇವರನ್ನು ಮನಕ್ಕೆ ಕೊಟ್ಟ ಬಳಿಕ ಆ ಮನವೇ ಘನಮನವಾಯಿತು, ಘನಲಿಂಗವಾಯಿತು, ಧ್ಯಾನದಲ್ಲಿ ಭಾವಲಿಂಗವಾಯಿತು. ನೋಡುವ ನೇತ್ರದಲ್ಲಿಯ ಮನ ಶಿವಲಿಂಗವಾಯಿತು. ಹೃದಯದಲ್ಲಿ ಮಹಾಲಿಂಗವಾಯಿತು. ಇಡೀ ದೇಹದಲ್ಲಿ ಇಷ್ಟಲಿಂಗವಾಗಿ ಅಳವಟ್ಟಿತು.

ಎಲ್ಲಿ ನೋಡಿದರೂ ಸಕಲ ವಸ್ತುಗಳು ಪರಾತ್ಪರ ವಸ್ತುವಾಗಿ ಗೋಚರಿಸಿದವು. ಸಕಲ ಕಾಯಗಳು ಗುರುಕಾಯವಾಗಿ ಕಂಡವು. ಕಾಯದ ನಾಮ ಅಳಿದು ಕಾಯವೇ ಕೈಲಾಸವಾಯಿತು ಎಂದು ಸಿದ್ಧರಾಮ ಶಿವಯೋಗಿಗಳು ಪ್ರಭುದೇವರ ಪ್ರಶ್ನೆಗೆ ಉತ್ತರಿಸಿದ್ದಾರೆ.

**1268**

**ಇನ್ನಾಡುವೆ, ಇನ್ನಾಡುವೆ ಮನಬಂದ ಪರಿಯಲ್ಲಿ**
**ಅದಕ್ಕೆ ನೀವು ಸಂದೇಹಗೊಳ್ಳದಿರಿ, ಪ್ರಮಥರಿರಾ.**
**ಸಂದೇಹವುಳ್ಳಡೆ ಜಂಗಮವಲ್ಲ. ಸಂದೇಹವೇ ಲಿಂಗವಾದ ಬಳಿಕ**
**ಇನ್ನೆಲ್ಲಿಹುದಯ್ಯಾ , ಇನ್ನೆಲ್ಲಿಹುದಯ್ಯಾ ಸಂಕಲ್ಪ ವಿಕಲ್ಪವು,**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹವನ್ನು ತನ್ನಿಚ್ಛೆಯಂತೆ ಕುಣಿಸುವ ಮನವೇ ಸದ್ಗುರುವಿನ ಕೃಪೆಯಿಂದ

ಘನಮನವಾದಾಗ ಕಾಯ ಕೈಲಾಸವೇ ಆಗುತ್ತದೆ. ಇನ್ನು ಮನ ಗುರುದೇವನ ಆದೇಶದಂತೆ ತನುವಿನ ಮೂಲಕ ಹಾಡುತ್ತದೆ. ಕುಣಿ ಕುಣಿದಾಡುತ್ತದೆ. ನಲಿ ನಲಿದಾಡುತ್ತದೆ. ಕಾಯದಲ್ಲಿದ್ದ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು, ಸಪ್ತವ್ಯಸನಗಳು, ಅಷ್ಟಮದಗಳು ಇಲ್ಲವಾಗುತ್ತವೆ. ಸಂದೇಹ ಇಲ್ಲವಾಗಿ ಜಂಗಮನೇ ತಾನಾಗುತ್ತದೆ. ಇದ್ದ ಸಂದೇಹವೇ ಅರಿವಿನ ಲಿಂಗವಾದ ಬಳಿಕ ಸಂಕಲ್ಪ ವಿಕಲ್ಪವು ನಿರ್ನಾಮವಾಗುತ್ತದೆ. ಇದು ಸತ್ಯ ಎಂದು ಪ್ರಮಥರಿಗೆ ಆಣೆ ಮಾಡಿ ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1269**

**ಎರಡಳಿದು ಒಂದಳವಟ್ಟುದೆ ಭಕ್ತಿಸ್ಥಲ;**
**ಮೂರಳಿದು ಎರಡಳವಟ್ಟುದೆ ಜಂಗಮಸ್ಥಲ;**
**ಈ ಎರಡಳಿದು ನಿಂದುದೆ ಪ್ರಾಣಲಿಂಗಿಸ್ಥಲ ನೋಡಯ್ಯಾ .**
**ಗುರುವೆ, ಸುರತರುವೆ, ಎನ್ನ ಕಾಮಧೇನುವೆ,**
**ಕೈಲಾಸದ ಮಹಾಲಿಂಗಮೂರ್ತಿಯೆ,**
**ಕಪಿಲಸಿದ್ಧಮಲ್ಲೇಶನೆ, ಚೆನ್ನಬಸವಣ್ಣನೆ.**

ಚೆನ್ನಬಸವಣ್ಣನವರ ಕೃಪೆಯಿಂದಾಗಿ ಮನ ಅಳಿದು ಘನಮನವಾಯಿತು. ತನುವಿನ ಗುಣಗಳು ಇಲ್ಲವಾದವು, ಮನ ಲಿಂಗದಲ್ಲಿ ಸಂಗಮವಾಗಿ ಜಂಗಮವೇ ತಾನಾಯಿತು. ಮನ ತನು ಇವುಗಳ ಗುಣಗಳಳಿದು ತನುವಿನಲ್ಲಿಯೇ ತನ್ಮಯವಾದ ಗುರುದೇವನಲ್ಲಿ ತನ್ಮಯವಾದುದರಿಂದ ಎರಡಳಿದು ಒಂದಾಯಿತು. ಇದೇ ಭಕ್ತಿಸ್ಥಲ. ಮೂರಳಿದು ಎರಡಾಯಿತು ಇದೇ ಜಂಗಮಸ್ಥಲ. ಎರಡಳಿದು ಒಂದಾಗಿ ನಿಂದುದೇ ಪ್ರಾಣಲಿಂಗಿಸ್ಥಲ ಎಂದು ಸಿದ್ಧರಾಮ ಶಿವಯೋಗಿಗಳು ಅಂಗದಲ್ಲಿಯೇ ಸಂಗಮವಾದ ಅರಿವು ಎಂಬ ಮಹಾಲಿಂಗ ಮೂರ್ತಿಯೊಂದಿಗೆ ಮಾತನಾಡುತ್ತಾ; ಈ ಲೋಕದ ಜ್ಞಾನದ ಮೂರ್ತಿಯೆ ಕಪಿಲಸಿದ್ಧಮಲ್ಲೇಶನೆ ಚೆನ್ನಬಸವಣ್ಣನೆ ಎಂದು ನಮಿಸಿದ್ದಾರೆ.

**1270**

**ಮೂರಳಿದು ಮೂರಳವಟ್ಟುದೆ ಭಕ್ತಸ್ಥಲ.**
**ಮೂರಳಿದು ಮೂರಳವಟ್ಟುದೆ ಜಂಗಮಸ್ಥಲ. ಅಳಿದು ಎಂದಡೆ,**
**ಇದ್ದ ಮನ ಲಿಂಗಕ್ಕೆ ಕೊಟ್ಟಾಗಳೆ ಹೆಣ್ಣಳಿದುದು;**
**ಇದ್ದ ಧನ ಜಂಗಮಕ್ಕೆ ಕೊಟ್ಟಾಗಳೆ ಹೊನ್ನಳಿದುದು;**
**ಇದ್ದ ತನು ಗುರುವಿಂಗೆ ಕೊಟ್ಟಾಗಳೆ ಮಣ್ಣಳಿದುದು.**
**ಅವರವರಾಚರಣೆಯ ನೋಡಿ ಕೊಡುವುದಲ್ಲದೆ,**
**ಬೇಡಿದ ಪರಿಯಲ್ಲಿ ಕೊಡುವುದೇನೋ ಅಯ್ಯಾ ?**
**ಸಿಂಧುಬಲ್ಲಾಳ ತನ್ನ ವಧುವ ಕೊಟ್ಟನೆಂದು ಹೇಳಿದಲ್ಲಿ,**
**ತನ್ನ ಹೆಂಡತಿಯನೇನಾದಡೂ ಕೊಟ್ಟನೆ? ಇಲ್ಲಿಲ್ಲ. ಹೆಣ್ಣು ಎಂದಡೆ ತಾನು,**
**ಶರಣಸತಿ ಲಿಂಗಪತಿ ಎಂಬ ಭಾವದಿಂದ**

**ಲಿಂಗಕ್ಕೆ ಮನ ಕೊಟ್ಟು ವಧುವಾದನಲ್ಲದೆ ತನ್ನಂಗನೆಯ ಕೊಡಲಿಲ್ಲವು.**
**(ಹೊನ್ನು) ಎಂದಡೆ ಜಂಗಮಕ್ಕೆ ಧನವ ಕೊಟ್ಟು**
**ನಿಧಿ ನಿಧಾನ ಒಲ್ಲವಾದನಲ್ಲದೆ, ತನ್ನಂಗನೆಯ ಕೊಡಲಿಲ್ಲವು.**
**(ಮಣ್ಣು) ಎಂದಡೆ ತನ್ನ ತನುವ ಗುರುವಿಂಗೆ ಕೊಟ್ಟು**
**ಸ್ವಯಂಭುವಾದನಲ್ಲದೆ ತನ್ನಂಗನೆಯ ಕೊಡಲಿಲ್ಲವು. ಹೆಣ್ಣು ಸಲ್ಲದು ಜಂಗಮಕ್ಕೆ;**
**ಹೊನ್ನು ಸಲ್ಲದು ಲಿಂಗಕ್ಕೆ; ಮಣ್ಣು ಸಲ್ಲದು ಗುರುವಿಂಗೆ.**
**ಇದರ ಭೇದವನಂತವುಂಟು: ತಿಳಿವಡೆ ಬಹು ದುರ್ಲಭ;**
**ತಿಳಿದು ನೋಡಿದಡೆ ಭಕ್ತಿಗೆ ಬಹು ಸುಲಭ.**
**ತಿಳಿದು ಮಾಡಿ ಮೋಕ್ಷವ ಹಡೆದರಲ್ಲದೆ,**
**ತಿಳಿಯದೆ ಮಾಡುವರೇನು ಮೇರುವಿನೊಳಗಿರುವ ಭಂಗಾರವನಾಗಲಿ,**
**ಸಮುದ್ರದೊಳಗಿರುವ ನಿಧಿನಿಧಾನಂಗಳನಾಗಲಿ ತಂದಿಹರೇನೋ?**
**ಕಪಿಲಸಿದ್ಧಮಲ್ಲಿಕಾರ್ಜುನಾ, ಇದರಿರವ ಹೇಳಿಕೊಡಯ್ಯಾ ,**
**ಎನ್ನ ಪ್ರಾಣಗುರು ಚೆನ್ನಬಸವಣ್ಣ.**

ಮೂರಳಿದು ಮೂರಳವಟ್ಟುದೆ ಭಕ್ತಸ್ಥಲ. ಮೂರಳಿದು ಮೂರಳವಟ್ಟುದೆ ಜಂಗಮಸ್ಥಲ. ಅಳಿದು ಎಂದಡೆ ತನುವನ್ನು ಅಳಿಯುವುದು ಅಲ್ಲ ಮನವನ್ನು ಅಳಿಯುವುದು ಅಲ್ಲ. ಇದ್ದ ಮನ ಇದ್ದಂತೆಯೇ ಇರುತ್ತದೆ. ಇದ್ದ ತನು ಇದ್ದಂತೆಯೇ ಇರುತ್ತದೆ. ಮನವೆಂದರೆ ಅಜ್ಞಾನ ಅದರ ಅಜ್ಞಾನದ ಗುಣಗಳನ್ನು ತನುವಿನಲ್ಲಿಯೇ ತನ್ಮಯವಾದ ಗುರುವಿಗೆ ಅರ್ಪಣೆ ಮಾಡಿದಾಗ ಮಣ್ಣಿನ ಆಸೆ ಅಳಿಯುತ್ತದೆ.

ತನುವಿನಲ್ಲಿಯೇ ತನ್ಮಯವಾದ ಜ್ಞಾನವನ್ನು ಬಳಕೆ ಮಾಡಲು ಮನಕ್ಕೆ ಸಾಧ್ಯವಾಗುವುದಿಲ್ಲ. ಪುಸ್ತಕದಿಂದ ಸಂಗ್ರಹವಾದ ಇತರ ತನುಗಳಿಂದ ಸಂಗ್ರಹವಾದ ಜ್ಞಾನವನ್ನು ಮನ ಸದಾ ಬಳಕೆ ಮಾಡುತ್ತಿರುವುದರಿಂದ ಅದರ ಅಜ್ಞಾನ ಹೆಚ್ಚಾಗುತ್ತದೆಯೇ ಹೊರತು ಕಡಿಮೆಯಾಗುವುದಿಲ್ಲ. ಇಂತಹ ಅಜ್ಞಾನವೆಂಬ ಧನವನ್ನು ತನುವಿನಲ್ಲಿಯೇ ತನ್ಮಯವಾದ ಜಂಗಮಕ್ಕೆ ಕೊಟ್ಟಾಗಲೇ ಹೊನ್ನಿನ ಆಸೆ ಅಳಿಯುತ್ತದೆ. ಮನವೇ ಹೆಣ್ಣಾಗಿ ಅಂಗದಲ್ಲಿಯೇ ಸಂಗಮವಾದ ಲಿಂಗಕ್ಕೆ ಕೊಟ್ಟಾಗಲೇ ಅಂಗದಲ್ಲಿ ಉಂಟಾಗುವ ಕಾಮದ ಆಸೆ ಅಳಿಯುತ್ತದೆ.

ಸಿಂಧುಬಲ್ಲಾಳ ತನ್ನ ವಧುವ ಕೊಟ್ಟನೆಂದು ಹೇಳಿದಲ್ಲಿ ತನ್ನ ಹೆಂಡತಿಯನ್ನೇ ಜಂಗಮನಿಗೆ ಕೊಟ್ಟನೆಂದು ಅರ್ಥವಲ್ಲ. ಹೆಣ್ಣು ಎಂದರೆ ಮನ, ಶರಣರು ಮನಕ್ಕೆ ಹೆಂಡತಿ ಎಂದು ಕರೆದಿದ್ದಾರೆ. ಅರಿವು ಎಂದರೆ ಗುರು, ಶರಣರು ತನುವಿನಲ್ಲಿ ತನ್ಮಯವಾದ ಗುರುವಿಗೆ ಗಂಡ ಎಂದು ಕರೆದಿದ್ದಾರೆ. ಮನವೆಂಬ ಹೆಂಡತಿಯನ್ನು ಗುರುವೆಂಬ ಗಂಡನಿಗೆ ಕೊಟ್ಟು ಆ ಗುರುವಿನಲ್ಲಿ ಒಂದಾಗುವುದು.

ಅರಿವೆಂಬ ಗುರುದೇವನಿಗೆ ಚಿನ್ನ ಬೇಕಾಗಿಲ್ಲ ಮಣ್ಣು ಕೂಡಾ ಬೇಕಾಗಿಲ್ಲ. ತಾನು ಸಂಗ್ರಹ ಮಾಡಿದ ಜ್ಞಾನದ ಅವಶ್ಯಕತೆಯೂ ಆತನಿಗಿಲ್ಲ. ಮಣ್ಣು ಕೂಡಾ ಆತನಿಗೆ ಬೇಕಾಗಿಲ್ಲ.

ಅಂಗವನ್ನು ಆವರಿಸಿದ ಮನ ಭಕ್ತನಾಗಿ ಅಂಗದಲ್ಲಿಯೇ ಸಂಗಮವಾದ ಗುರುದೇವನಿಗೆ ಭಕ್ತಿ ಮಾಡಬೇಕು.

ಅಂಗವನ್ನು ಆವರಿಸಿದ ಮನ ಹೆಂಡತಿಯಾಗಿ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಗಂಡನನ್ನಾಗಿಸಿಕೊಂಡು ಆತನೊಂದಿಗೆ ಕೂಡಬೇಕು. ಇದು ದುರ್ಲಭದ ಕೆಲಸ. ಕೆಲವರಿಗೆ ಮಾತ್ರ ಸಾಧ್ಯವಾಗುವ ಅತ್ಯಂತ ಸುಲಭ ಕಾಯಕ. ಸಮುದ್ರದೊಳಗಿರುವ ನಿಧಿಯನ್ನು

ತರಬಹುದು ತನುವಿನಲ್ಲಿಯೇ ತನ್ಮಯವಾದ ಅರಿವಿನ ನಿಧಿಯನ್ನು ಅರಿತು ಆ ಅರಿವೇ ತಾನಾಗುವುದು ಸುಲಭದ ಕಾಯಕ ಅಲ್ಲ. ಇಂತಹ ಕಾಯಕದಲ್ಲಿ ನಿರತವಾದ ಕಾಯವೇ ಧನ್ಯ .

**1271**

**ಮಾದಾರನಲ್ಲಿ ಉಂಡ ಶಿವನು; ನೀವೇಕೆ ಉಣ್ಣೆಸರಿ ಎಂದು ಕೇಳಿದಡೆ.**
**ಕೊಡುವೆನುತ್ತರವ, ಕೇಳಿರೆಲೆ ಮನುಜರಿರಾ.**
**ಮಾದಾರನಲ್ಲುಂಡ ಶಿವನು ಮೇದಾರನಲ್ಲಿಗೆ ಬಂದಲ್ಲಿ,**
**ರೂಪಳಿದು ರೂಪಾಗಿ ಬಾ ಎಂದನಲ್ಲದೆ, ಸಮರಸ ಮಾಡಲಿಲ್ಲವು.**
**ಮೇದಾರನಲ್ಲುಂಡು, ಮಾದಾರನ ಮನೆಗೆ ಬಂದಡೆ,**
**ರೂಪಳಿದು ರೂಪಾಗಿ ಬಾ ಎಂದನಂದು ಚೆನ್ನನು.**
**ಶಬ್ದಸೂತಕ ಶರಣರಿಗಲ್ಲದೆ ಸೂತಕರಿಗೆಲ್ಲಿಹದೋ ಕಪಿಲಸಿದ್ಧಮಲ್ಲಿಕಾರ್ಜುನಾ.**

ಮಾದಾರನ ಮನೆಯಲ್ಲಿ ಅಂಬಲಿಯನ್ನು ಉಂಡು ಆತನಿಗೆ ಪ್ರತ್ಯಕ್ಷವಾದ ಶಿವನನ್ನು ಉದ್ದೇಶಿಸಿ ಬಸವಣ್ಣ ತಮ್ಮ ಒಂದು ವಚನದಲ್ಲಿ ಹೀಗೆ ನುಡಿದಿದ್ದಾರೆ. ಮಾದಾರ ಚೆನ್ನಯ್ಯನ ಮನೆಯಲ್ಲಿ ಉಂಡೆ. ಆತನಿಗೊಲಿದೆ. ಎನ್ನನೇತಕೆ ಒಲ್ಲೆ ಶಿವನೇ ಎಂದು ಕೇಳುವ ಸೂತ್ರವೊಂದು ಇದೆ. ಬಸವಣ್ಣನವರು ಕರುಣಾಮಯಿ. ತನ್ನಂತೆ ಸಕಲ ಕಾಯಗಳು ಜ್ಞಾನದ ಅಮೃತವನ್ನು ಉಣ್ಣಲಿ ಎಂದು ಅರಿವೆಂಬ ಗುರದೇವನೊಂದಿಗೆ ಮಾತನಾಡುವ ಸೂತ್ರವನ್ನು ಸಕಲ ಕಾಯಗಳಿಗೂ ಮನದಟ್ಟಾಗುವಂತೆ ಹೇಳಿದ್ದಾರೆ. ಹಾಗೆಯೇ ಸಿದ್ಧರಾಮ ಶಿವಯೋಗಿಗಳ ಈ ವಚನದಲ್ಲಿ ಸೂತ್ರವೊಂದನ್ನು ನೀಡಿದ್ದಾರೆ. ಮಾದಾರನಲ್ಲಿ ಉಂಡ ಶಿವನು ನೀವೇಕೆ ಉಣ್ಣೆಸರಿ ಎಂದು ಕೇಳಿದರೆ ಕೊಡುವೆನುತ್ತರವ ಕೇಳಿರಲೆ ಮನುಜರಿರ;

ಮಾದಾರ ಮೇದಾರ ಡೋಹಾರ ಮಡಿವಾಳ ಯಾವ ಕಾಯಕವಾದರೇನು ಕಾಯ ಒಂದೇ ಕಾಯದಲ್ಲಿ ಸಂಗಮವಾದ ಅರಿವು ಒಂದೇ, ಕಾಯವನ್ನು ಆವರಿಸಿದ ಮನ ಕೂಡಾ ಒಂದೇ. ಮನ ಕಾಯದ ಸಂಗ ಮಾಡಿರುವದರಿಂದ ಅದು ಮಾದಾರ ಡೋಹಾರ ಮೇದಾರ ಮಡಿವಾಳ ಶ್ರೀಮಂತ ಬಡವ ಭ್ರಷ್ಟಾಚಾರಿ ರಾಜ ಮಂತ್ರಿ ಸೈನಿಕ ಎಂದು ತನ್ನನ್ನು ತಾನೇ ಸೀಳಿಕೊಂಡು ನೋಡುತ್ತದೆ. ಕೇಳುತ್ತದೆ. ಮುಟ್ಟಿ ಮೂಸಿಸಿ ರುಚಿಸುತ್ತದೆ.

ಕಾಯವನ್ನು ಆವರಿಸಿದ ಮನ ನಿರೂಪು. ಕಾಯದಲ್ಲಿ ಸಂಗಮವಾದ ಅರಿವು ಕೂಡಾ ನಿರೂಪ. ಇವೆರಡು ಒಂದಾದಲ್ಲಿ ಕಾಯದ ರೂಪ ಕೂಡಾ ಅಳಿದು ನಿರೂಪವೇ ತಾನಾಗುತ್ತದೆ. ಹೀಗೆ ನಿರೂಪವೇ ತಾವಾದ ಶರಣರಿಗೆ ಶಬ್ದ ಸೂತಕವಿಲ್ಲ. ಜಾತಿ ಮತ ಪಂಥ ಧರ್ಮಗಳ ಸೂತಕವಿಲ್ಲ. ಅವರು ನಿಶಬ್ದವೇದಿಗಳು. ಶಬ್ದವನ್ನು ನಿಶಬ್ದಮಾಡಿ ಕೇಳುವ ಶಕ್ತಿ ಮನ ಘನಮನವಾದಾಗಲೇ ಸಾಧ್ಯವಾಗುತ್ತದೆ. ಅದು ಸಕಲ ಸೂತಕಗಳನ್ನು ಕಳೆದುಕೊಳ್ಳುತ್ತದೆ.

**1272**

**ಶಿವನು ಚೆನ್ನನ ಮನೆಯಲ್ಲಿ ಅಂಬಲಿಯುಂಡನೆಂದಡೆ,**
**ನಮ್ಮ ಗಣಂಗಳು ನಗುವರಯ್ಯಾ ;**
**ಕೈಬಡೆದು ಕೈಬಡೆದು ನಗುವರಯ್ಯಾ .**

**ಶಿವನಾಚರಣೆ ಶಿವನಿಗಿರಲಿ, ನಮಗೇಕೆಂದರು.**
**ಶಿವನು ಉತ್ಪತ್ತಿ ಸ್ಥಿತಿ ಲಯಂಗಳಿಗೆ ಕರ್ತನು;**
**ನಾವು ಉತ್ಪತ್ತಿ ಸ್ಥಿತಿ ಲಯಂಗಳನಳಿಯಬೇಕೆಂದು ಬಂದೆವಲ್ಲದೆ,**
**ಅವರಲ್ಲಿ ವಾಕ್ಸಾಮರಸ್ಯವಲ್ಲದೆ, ಕಾಯಸಾಮರಸ್ಯವಿಲ್ಲವು.**
**ಶಬ್ಧವಿರಹಿತನಾಗಬೇಕೆಂದವರಿಗೆ ಶಬ್ಧಸೂತಕವೇಕಯ್ಯಾ ,**
**ಕಪಿಲಸಿದ್ಧಮಲ್ಲಿಕಾರ್ಜುನಾ?**

ಶಿವನು ಚೆನ್ನನ ಮನೆಯಲ್ಲಿ ಅಂಬಲಿಯುಂಡನೆಂದಡೆ ಯಾರಾದರೂ ನಗುತ್ತಾರೆ. ಶಿವ ಎಂದರೆ ಕೈಲಾಸದಲ್ಲಿರುವವನು. ಅವನು ಮಾದಾರ ಚೆನ್ನಯ್ಯನ ಮನೆಗೆ ಬಂದು ಅಂಬಲಿಯನ್ನಾದರು ಏಕೆ ಉಂಡಾನು ಎಂದು ಅಪಹಾಸ್ಯದ ಮಾತನಾಡುತ್ತಾರೆ. ಇದು ಅನುಭವಕ್ಕೆ ಬಾರದ ಮಾತು. ಈ ಮಾತು ಕೇಳಿ ಭಕ್ತಿರಸ ಬಲಿಯುವುದು ಉಂಟು. ಈ ಮಾತು ಕೇಳಿ ಕುಹಕದ ನಗು ನಗುವವರೂ ಉಂಟು. ಇವೆರಡು ಕೆಲಸಕ್ಕೆ ಬಾರದ ಮಾತುಗಳು; ಮಾತೇ ಹೊರತು ಮತ್ತೇನೂ ಅಲ್ಲ. ಶಿವನೆಂದರೆ ವ್ಯಕ್ತಿಯಲ್ಲ. ಶಿವನೆಂದರೆ ದೇವರೂ ಅಲ್ಲ. ಶಿವನೆಂದರೆ ಕಾಯವನ್ನು ಕೈಲಾಸವನ್ನಾಗಿಸಿಕೊಂಡು ಕಾಯದಲ್ಲಿಯೇ ಇದ್ದವನು. ಕಾಯವನ್ನು ಆವರಿಸಿದ ಮನಕ್ಕೆ ಶಿವನ ಪರಿಚಯವಿಲ್ಲ. ಅದೂ ಕಾಯದಲ್ಲಿಯೇ ಇದ್ದ ಶಿವನ ಪರಿಚಯವಿಲ್ಲ. ದೇಗುಲದಲ್ಲಿದ್ದ ಶಿವನ ಪರಿಚಯ ಉಂಟು.

ದೇಗುಲದಲ್ಲಿದ್ದ ಶಿವ ಶಿವನಲ್ಲ. ಕಾಯದಲ್ಲಿ ಸಂಗಮವಾದ ಶಿವನೇ ಶಿವ. ಈತ ಕಾಯದ ಒಡೆಯ ; ಕಾಯಕ್ಕೂ ಈತನ ಪರಿಚಯವಿಲ್ಲ. ಕಾಯವನ್ನು ಆವರಿಸಿದ ಮನಕ್ಕೂ ಈತನ ಪರಿಚಯವಿಲ್ಲ. ಮನ ಈತನಿಗೆ ಭಕ್ತನಾದಾಗ ಮಾತ್ರ ಮನಕ್ಕೆ ಶಿವನ ಪರಿಚಯವಾಗುತ್ತದೆ. ಕೂಡಲೇ ಕಾಯ ಕೈಲಾಸವಾಗುತ್ತದೆ. ಉತ್ಪತ್ತಿ ಸ್ಥಿತಿ ಲಯಂಗಳನಳಿಯುತ್ತದೆ. ನಿಶಬ್ಧವೇದಿಯಾಗುತ್ತದೆ. ಕಾಯ ಕಪಿಲಸಿದ್ಧಮಲ್ಲಿಕಾರ್ಜುನನೇ ತಾನಾಗುತ್ತದೆ.

**1273**

**ಅಧ್ಯಾತ್ಮ ಅಧ್ಯಾತ್ಮವೆಂದೆಂಬಿರಿ, ಅಧ್ಯಾತ್ಮವಾರಿಗೆ ?**
**ಶ್ರೀಗುರು ಬಹಳವಪ್ಪ ಶಿವಲಿಂಗವ ಸೂಕ್ಷ್ಮವ ಮಾಡಿ,**
**ಕರಸ್ಥಲದಲ್ಲಿ ಕೊಟ್ಟ ಬಳಿಕ ಬೇರೆ ಯೋಗವುಂಟೆ ?**
**ತನ್ನ ಹಸ್ತವ ಮಸ್ತಕದಲ್ಲಿಟ್ಟು ವಾಯುಪ್ರಾಣಿಯಾಗಿರ್ದುದ ಕೊಂದು**
**ಲಿಂಗಪ್ರಾಣಿಯ ಮಾಡಿದ ಬಳಿಕ,**
**ಅಕ್ಷರವೈದರಲ್ಲಿ ಮುಕ್ತನ ಮಾಡಿದ ಬಳಿಕ,**
**ಮರಳಿ ಯೋಗವುಂಟೆ ಶಿವಯೋಗವಲ್ಲದೆ ?**
**ಲಿಂಗಾರ್ಚನೆಯ ಮಾಡಿ ಜಂಗಮ ಪ್ರಸಾದವ ಕೊಂಡ ಬಳಿಕ,**
**ಬರಿಯ ಯೋಗಕ್ಕೆ ಒಡಂಬಡುವುದೆ ಅರಿವು ?**
**ಇಂತಪ್ಪವನತಿಗಳೆದು ಶುದ್ಧ ಶಿವಯೋಗಿಯ ಮಾಡಿದಾತ ಚೆನ್ನಬಸವಣ್ಣ.**
**ಮಹಾಲೋಕದಲ್ಲಿಪ್ಪ ಆದ್ಯಕ್ಷರದ್ವಯವ ಭೇದಿಸಿತಂದು ಕರಸ್ಥಲದಲ್ಲಿರಿಸಿ,**
**ಇದು ಉರುತರ ಪದವೆಂದು ತೋರಿಕೊಟ್ಟು,**

**ಎನ್ನ ತನ್ನಂತೆ ಮಾಡಿದ ಗುರು ಚೆನ್ನಬಸವಣ್ಣ.**
**ಆನು ಚೆನ್ನಬಸವಣ್ಣನ ಕರುಣದಿಂದ ಅಭ್ಯಾಸಯೋಗವನತಿಗಳೆದು**
**ಶಿವಯೋಗದಲ್ಲಿ ನಿತ್ಯನಾಗಿ,**
**ಭಕ್ತಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಎಂಬ**
**ಷಡುಸ್ಥಲಕ್ಕೆ ಅಧಿಕಾರಿಯಾದೆನು, ನಿನ್ನವರ ಸಲುಗೆಗೆ ಸಂದೆನು.**
**ಚೆನ್ನಬಸವಣ್ಣನ ಕೃಪೆ ಎನ್ನನಿಂತು ಮಾಡಿತ್ತು ಕಾಣಾ,**
**ಶ್ರೀಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಧ್ಯಾತ್ಮವೆಂದರೆ ಒಂದು ಕಲಿಕೆಯಲ್ಲ. ಅದು ಇರುವಿಕೆ. ಸ್ವಯ ಜ್ಞಾನವನ್ನು ಅರಿವಿನಿಂದ ಬಳಕೆ ಮಾಡುವುದರಲ್ಲಿ ನಿಪುಣನಾಗುವಿಕೆ. ಅಧ್ಯಾತ್ಮ ಎಂದರೆ ಆತ್ಮವನ್ನು ತಿಳಿಯುವುದು. ದೇಹದಲ್ಲಿ ಸಂಗಮವಾದ ಆತ್ಮ ದೇಹಕ್ಕೂ ಮನಸ್ಸಿಗೂ ಸದಾ ಅರಿವಿನ ಮಾತನ್ನು ಬೋಧಿಸುತ್ತದೆ. ಹೀಗೆ ಬೋಧಿಸುವ ಬೋಧೆಯನ್ನು ದೇಹ ಮತ್ತು ಮನಸ್ಸು ಆಲಿಸಿ ಅದನ್ನು ಪಾಲಿಸುವುದೇ ಆಧ್ಯಾತ್ಮ.

ಚೆನ್ನಬಸವಣ್ಣನವರು ಅರಿವನ್ನು ಅರಿತು ಆ ಅರಿವೇ ತಾವಾಗಿ ಗುರುವಾದವರು. ದೇಹದಲ್ಲಿದ್ದ ಅರಿವನ್ನು ಹೇಗೆ ಅರಿಯಬೇಕೆಂದು ನನಗೆ ಹೇಳಿಕೊಟ್ಟರು. ನನ್ನ ಅಜ್ಞಾನವನ್ನು ಕೊಂದು ನನ್ನದೇ ಆದ ಜ್ಞಾನವನ್ನು ಬಳಕೆ ಮಾಡುವಂತೆ ಮಾಡಿದರು.

ನಮಃ ಶಿವಾಯ ಎನ್ನುವ ಐದು ಅಕ್ಷರವನ್ನು ನನಗೆ ಹೇಳಿ ಆ ಅಕ್ಷರವೇ ನೀನಾದ ಅಕ್ಷರೋತ್ತಮ ನೀನು ಎಂದು ತಿಳಿ ಹೇಳಿ ನನ್ನನ್ನು ಅಜ್ಞಾನದಿಂದ ಮುಕ್ತನನ್ನಾಗಿಸಿದರು. ಹೀಗೆ ಅಕ್ಷರೋತ್ತಮನಾದ ಬಳಿಕ ಸಂಪ್ರದಾಯದ ಆಚಾರಗಳೆಲ್ಲಾ ಉದುರಿ ಬಿದ್ದವು.

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಯ್ಯನನ್ನು ಪೂಜಿಸಿ ಆ ಅರಿವಿನ ಪ್ರಸಾದವನ್ನು ಕೊಂಡ ಬಳಿಕ ಯೋಗಗಳೆಲ್ಲಾ ಬರಿದಾದವು. ಶುದ್ಧ ಶಿವಯೋಗಿಯ ದರ್ಶನ ಅಂಗದಲ್ಲಿಯೇ ಮಾಡಿಸಿದಾತ ಚೆನ್ನಬಸವಣ್ಣ.

ಲೋಕದಲ್ಲಿರುವ ತನುಗಳೆಲ್ಲಾ ಸಂಗ್ರಹ ಜ್ಞಾನದಿಂದ ಕೂಡಿವೆ. ಸ್ವರೂಪ ಜ್ಞಾನವೆನ್ನುವುದು ಲೋಕಕ್ಕೆ ಪರಿಚಯವಿಲ್ಲ. ಲೋಕದ ಜ್ಞಾನ ಅಜ್ಞಾನ. ಆ ಅಜ್ಞಾನವನ್ನು ಬೇಧಿಸಿ ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನವನ್ನು ಅಂಗದಲ್ಲಿಯೇ ತೋರಿಸಿ ಕೊಟಾತ ಚೆನ್ನಬಸವಣ್ಣ. ಆತ ನನಗೆ ಮಹಾಗುರು. ನನ್ನನ್ನು ತನ್ನಂತೆ ಮಾಡಿಕೊಂಡಾತ. ಆತನ ಕರುಣೆಯಿಂದ ನಾನು ಅಭ್ಯಾಸ ಯೋಗವನ್ನು ಕಳೆದುಕೊಂಡು ಅರಿವಿನ ಶಿವಯೋಗದಲ್ಲಿ ನಿರತನಾದೆ, ನಿತ್ಯನಾದೆ.

ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಡುಸ್ಥಲಕ್ಕೆ ಅಧಿಕಾರಿಯಾದೆನು ಮತ್ತು ನಿನ್ನವರ ಅಂದರೆ ಶರಣರ ಸಲುಗೆಗೆ ಸಂದೆನು. ಚೆನ್ನಬಸವಣ್ಣನ ಕೃಪೆ ಎನ್ನನು ಇಂತು ಮಾಡಿತ್ತು ಕಾಣಾ ಶ್ರೀಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಾ ಎಂದು ಅಂಗದಲ್ಲಿಯೇ ಸಂಗಮವಾದ ಅರಿವು ಎನ್ನುವ ಗುರುದೇವನಿಗೆ ತಾನು ಭಕ್ತನಾಗಿ ಸಿದ್ಧರಾಮ ಶಿಯೋಗಿಗಳು ಆತನೊಂದಿಗೆ ಮಾತನಾಡಿದ್ದಾರೆ.

**1274**

**ಆದಿ ಆಧಾರವಿಲ್ಲದಂದಿನ ಸಾದಾಖ್ಯ ದೇಹವಿಲ್ಲದಂದಿನ**
**ಅನಾದಿ ಸಂಸಿದ್ಧನ ಆಗುಮಾಡಿ ಹೆಸರಿಟ್ಟು,**

**ಕರಸ್ಥಲಕ್ಕೆ ತಂದುಕೊಟ್ಟ ಗುರು ಚೆನ್ನಬಸವಣ್ಣನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.**

ಆದಿ ಆಧಾರವಿಲ್ಲದ ಬಯಲು ರೂಪವುಳ್ಳದ್ದು ಅಲ್ಲ. ಅನಂತ ರೂಪುಗಳನ್ನು ಅದು ನಿರ್ಮಾಣ ಮಾಡಿದೆ. ಅದು ಅಂದೂ ಇತ್ತು ಇಂದೂ ಇದೆ ಎಂದೆಂದಿಗೂ ಇರುತ್ತದೆ. ಆ ಬಯಲೇ ಬೀಜವಾಗಿ ರೂಪವಾಗಿದೆ. ಅಖಂಡ ಬ್ರಹ್ಮಾಂಡವನ್ನು ನಿರ್ಮಾಣ ಮಾಡಿ ತಾನು ನಿರ್ಮಾಣ ಮಾಡಿದ ಬ್ರಹ್ಮಾಂಡವನ್ನು ತಾನೇ ನೋಡಿ ಪರಮ ಸುಖ ಪಡುವುದಕ್ಕಾಗಿ ತನುವನ್ನು ನಿರ್ಮಾಣ ಮಾಡಿ ಆ ತನುವಿನಲ್ಲಿ ತಾನು ತನ್ಮಯವಾಗಿ ತನ್ನನ್ನು ಹಾಗೂ ತನುವನ್ನು ಇಡೀ ಬ್ರಹ್ಮಾಂಡವನ್ನು ತಿಳಿಯುವದಕ್ಕಾಗಿ ಮನಕ್ಕೆ ಜನ್ಮ ಕೊಟ್ಟಿದೆ.

ಮನದಿಂದಲೇ ತನುವನ್ನು ತಿಳಿಯಬೇಕು, ತನುವಿನಲ್ಲಿ ತನ್ಮಯವಾದ ಬಯಲನ್ನು ತಿಳಿಯಬೇಕು. ಆ ಬಯಲಿನಲ್ಲಿ ಲೀನವಾಗಿ ಬಯಲೇ ತಾನಾಗಬೇಕು ಎಂದು ಸದ್ಗುರು ಚೆನ್ನಬಸವಣ್ಣ ನನಗೆ ತಿಳಿಸಿ ಕೃತಾರ್ಥನನ್ನಾಗಿಸಿದನು ಎಂದು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನೇ ಆದ ಕಪಿಲಸಿದ್ಧಮಲ್ಲಿಕಾರ್ಜುನನೊಂದಿಗೆ ಸಿದ್ಧರಾಮ ಶಿವಯೋಗಿಗಳು ಮಾತನಾಡಿದ್ದಾರೆ.

**1275**

**ಇಹಲೋಕ ಪರಲೋಕವೆಂಬ ಸಂದಳಿಯಿತ್ತಯ್ಯಾ.**
**ಗುರುವಿನ ಹಸ್ತದಲ್ಲಿ ಸತ್ತು, ಪಂಚಾಕ್ಷರಿಯಂದೆತ್ತಿದ ಕಾರಣದಲ್ಲಿ;**
**ನಿತ್ಯವೂ ಲಿಂಗಾರ್ಚನೆಯ ಮಾಡುವ ಕಾರಣದಲ್ಲಿ;**
**ನಿತ್ಯವೂ ವಿಭೂತಿ ರುದ್ರಾಕ್ಷಿಯ ಧಾರಣ ಮಾಡುವ ಕಾರಣದಲ್ಲಿ;**
**ಇಹಲೋಕವೆಂದೇನು, ಪರಲೋಕವೆಂದೇನು,**
**ಹಂಗು ಹರಿದು ಒಂದಾದ ಬಳಿಕ ?**
**ಮಲಮದಂಗಳು ಹರಿದು ನಾನು ನೀನಾದ ಬಳಿಕ ?**
**ಎಲೆ ಅಯ್ಯಾ, ಭಕ್ತರ ಸರ್ವಾಂಗ ಲಿಂಗತನು;**
**ಭಕ್ತರಿಪ್ಪ ಲೋಕವೆ ರುದ್ರಲೋಕ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ,**
**ನಿನ್ನ ಹಸ್ತವ ಮಸ್ತಕದಲ್ಲಿಟ್ಟಡಾಯಿತ್ತು?**

ಇಹಲೋಕ ಪರಲೋಕವೆಂಬ ಅಜ್ಞಾನ ಅಳಿದು ಹೋಯಿತು. ಸಂಗ್ರಹ ಜ್ಞಾನದಿಂದಾಗಿ ನನಗೆ ಪರಲೋಕವೆಂದು ಇಹಲೋಕವೆಂದು ತಿಳಿದಿತ್ತು. ಅಂಗವನ್ನು ಆವರಿಸಿದ ಅಜ್ಞಾನ ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನದಿಂದ ಸುಟ್ಟ ಕಾರಣ ಎರಡೂ ಅಜ್ಞಾನಗಳು ಇಲ್ಲವಾದವು.

ಅಂಗವನ್ನು ಆವರಿಸಿದ ಅಜ್ಞಾನವನ್ನು ಅಂಗದಲ್ಲಿಯೇ ಸಂಗಮವಾದ ಜ್ಞಾನಾಗ್ನಿಯಿಂದ ಸುಟ್ಟು ಆ ವಿಭೂತಿಯ ಧಾರಣೆ ಮಾಡಿದ ಕಾರಣ ಇಹಲೋಕ ಪರಲೋಕವೆಂಬ ಅಜ್ಞಾನದ ಹಂಗು ಹರಿದು ಒಂದಾದ ಬಳಿಕ ಮಲಮದಂಗಳು ಕೂಡಾ ಹರಿದು ಹೋದವು. ನಾನು ಎನ್ನುವ ಅಜ್ಞಾನ ನೀನು ಎನ್ನುವ ಜ್ಞಾನದಲ್ಲಿ ಲೀನವಾದ ಬಳಿಕ ಸರ್ವ ಅಂಗಗಳು ಲಿಂಗಾಂಗಗಳೇ. ಸರ್ವಾಂಗಗಳು ಇರುವ ಲೋಕವೆ ರುದ್ರಲೋಕ. ಅರಿವೆಂಬ ಗುರುದೇವನನ್ನು ಪರಿಚಯ ಮಾಡಿ ಗುರುದೇವ ತನ್ನ ಹಸ್ತವನ್ನು ಮಸ್ತಕದ ಮೇಲೆ ಇಟ್ಟ ಕಾರಣ ಗುರುವೇ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ನಿನ್ನ ದರ್ಶನವು ಎನಗಾಯಿತು.

**1276**

**ಶುದ್ಧವನರಿದೆ ಚೆನ್ನಬಸವಣ್ಣಾ ನಿಮ್ಮಿಂದೆ;**
**ಸಿದ್ಧವನರಿದೆ ಚೆನ್ನಬಸವಣ್ಣಾ ನಿಮ್ಮಿಂದೆ;**
**ಪ್ರಸಿದ್ಧವನರಿದೆ ಚೆನ್ನಬಸವಣ್ಣಾ ನಿಮ್ಮಿಂದೆ;**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ , ಚೆನ್ನಬಸವಣ್ಣ ಗುರುವಾಗಿ ಬಂದು**
**ಎನ್ನ ಜನ್ಮ ಕರ್ಮದ ನಿವೃತ್ತಿ ಮಾಡಿದನಯ್ಯಾ.**

ಕಾಯದಲ್ಲಿ ಅರಿವಿನ ಪರಿಶುದ್ಧವಾದ ಕಾಯ ಸಂಗಮವಾಗಿದೆ. ಕಾಯವನ್ನು ಮನೋಕಾಯ ಆವರಿಸಿದೆ. ಹೀಗಾಗಿ ಪರಿಶುದ್ಧವಾದ ಕಾಯವನ್ನು ಕಾಯಕ್ಕೆ ತಿಳಿಯಲಾಗುತ್ತಿಲ್ಲ. ಮನೋಕಾಯಕ್ಕೂ ತಿಳಿಯಲಾಗುತ್ತಿಲ್ಲ. ಪರಿಶುದ್ಧವಾದ ಸ್ಥೂಲಕಾಯಕ್ಕೆ ಹಾಗೂ ಮನೋಕಾಯಕ್ಕೆ ಅರಿವಿನ ಮಾತುಗಳಿಂದ ಬೋಧಿಸಿದರೂ ಆ ಬೋಧೆಯನ್ನು ಸ್ಥೂಲಕಾಯ ಮತ್ತು ಮನೋಕಾಯ ಅರಿಯಲು ಸಾಧ್ಯವಾಗುತ್ತಿಲ್ಲ.

ಕಾಯದಲ್ಲಿಯೇ ಸಂಗಮವಾದ ಪರಿಶುದ್ಧವಾದ ಕಾಯವನ್ನು ಅರಿಯಲು ಸದ್ಗುರು ಚೆನ್ನಬಸವಣ್ಣ ಮನೋಕಾಯ ಮತ್ತು ಸ್ಥೂಲಕಾಯಕ್ಕೆ ಬೋಧಿಸಿದ ನಿಮಿತ್ಯ ಪರಿಶುದ್ಧ ಕಾಯವನ್ನು ಅರಿಯಲು ನನಗೆ ಸಾಧ್ಯವಾಯಿತು ಎಂದು ಸಿದ್ಧರಾಮ ಶಿವಯೋಗಿಗಳು ಚೆನ್ನಬಸವಣ್ಣನನ್ನು ಸ್ತುತಿಸಿದ್ದಾರೆ. ಪರಿಶುದ್ಧವಾದ ಕಾಯ ಶುದ್ಧಕಾಯವೂ ಹೌದು ಸಿದ್ಧ ಕಾಯವೂ ಹೌದು ಪ್ರಸಿದ್ಧ ಕಾಯವೂ ಹೌದು. ಶುದ್ಧ ,ಸಿದ್ಧ ,ಪ್ರಸಿದ್ಧವನು ಚೆನ್ನಬಸವಣ್ಣ ಗುರುವಾಗಿ ಬಂದು ನನ್ನ ಜನ್ಮದ ಕರ್ಮವನ್ನು ನಿವೃತ್ತಿ ಮಾಡಿದನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ತಾವು ಶುದ್ಧ, ಸಿದ್ಧ, ಪ್ರಸಿದ್ಧವನ್ನು ಅರಿತ ಬಗೆಯನ್ನು ಪರಿಶುದ್ಧವಾದ ಕಾಯದೊಂದಿಗೆ ಮಾತನಾಡಿದ್ದಾರೆ.

**1277**

**ರೂಪಿಂಗೆ ರೂಪು, ಜ್ಞಾನಕ್ಕೆ ಸುಜ್ಞಾನ, ಪ್ರಾಣಕ್ಕೆ ಪ್ರಸಾದ**
**ಲಿಂಗತ್ರಯವ ವೇಧೆಯಿಂದವೆ ತಂದು**
**ಅವರವರ ಕರದಲ್ಲಿ ದೀಕ್ಷೆಯ ಮಾಡಿದನು ಚೆನ್ನಬಸವಣ್ಣ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ರೂಪದಲ್ಲಿ ಮತ್ತೊಂದು ರೂಪವಿದೆ. ಅದು ನಿರೂಪ. ರೂಪವನ್ನು ಮನೋಮಯವಾದ ರೂಪೊಂದು ಆವರಿಸಿದೆ. ಅದು ಕೂಡಾ ನಿರೂಪ ; ರೂಪದಲ್ಲಿದ್ದ ಈ ಎರಡೂ ರೂಪುಗಳು ಕಾಣುವುದಿಲ್ಲ. ಆದರೆ ಗುರುವಿನ ಆಶೀರ್ವಾದದಿಂದ ರೂಪ ಅನುಭವಕ್ಕೆ ಬರುತ್ತದೆ.

ರೂಪಕ್ಕೆ ಜ್ಞಾನವನ್ನು ಸಂಗ್ರಹ ಮಾಡಿಕೊಳ್ಳುವ ಶಕ್ತಿ ಇದೆ. ಇಂತಹ ಜ್ಞಾನದಿಂದ ರೂಪ ಅಜ್ಞಾನಕ್ಕೆ ಜಾರುತ್ತದೆ. ರೂಪದಲ್ಲಿ ಸುಜ್ಞಾನ ಒಂದಿದೆ. ಅದಕ್ಕೆ ಜ್ಞಾನದ ಅವಶ್ಯಕತೆಯಿಲ್ಲ. ಅದು ರೂಪದ ಮೂಲಕ ನಿರಂತರವಾಗಿ ಅಮೃತದಂತೆ ಹೊರಚಿಮ್ಮುತ್ತದೆ.

ರೂಪಕ್ಕೆ ಪ್ರಾಣ ಇದೆ. ಜ್ಞಾನವೆಂಬ ನಿರೂಪಕ್ಕೆ ಪ್ರಾಣ ಇಲ್ಲ. ಪ್ರಾಣ ಮತ್ತು ರೂಪ ಇವೆರಡಕ್ಕೆ ಜ್ಞಾನವೇ ಪ್ರಸಾದವಾಗಿ ಕೆಲಸ ಮಾಡುತ್ತದೆ. ಹೀಗೆ ಇವುಗಳನ್ನು ತಿಳಿದಂತಹ ಮಹಾಜ್ಞಾನಿಯಾದ ಚೆನ್ನಬಸವಣ್ಣನು ದೀಕ್ಷೆ ಮಾಡಿದ ಕಾರಣ ಕಪಿಲಸಿದ್ಧಮಲ್ಲಿಕಾರ್ಜುನನ ದರುಶನವಾಯಿತು ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

**1278**

**'ಎಂದೋ ಎನಗೆ ಶಿವಪದ ಎಂದೋ' ಎಂದು ಚಿಂತಿಸುವಂಗೆ**
**ಮುಂದೆ ತೋರುತಿದೆ ಪರಮಪ್ರಸಾದದ ಬೀಡು.**
**ಆ ಬೀಡು ಕಂಡು, ಶಿವಗಣಂಗಳ ನೆರವ ಮಾಡಿಕೊಂಡು,**
**ಪರಮಗುರು ಚೆನ್ನಬಸವಣ್ಣನ ಶ್ರೀಪಾದಾವಿಂದವನರಿದು,**
**ಅವರ ಕೃಪಾವಲೋಕನದಿಂದ ನಿಮ್ಮ ಶ್ರೀಪಾದವನರಿದೆ,**
**ಕಪಿಲಸಿದ್ಧಮಲ್ಲಿನಾಥಯ್ಯಾ .**

ತನುವಿನಲ್ಲಿ ತನ್ಮಯವಾದ ಅರಿವನ್ನು ತನುವನ್ನು ಆವರಿಸಿದ ಮನವೇ ಕಂಡುಕೊಳ್ಳಬೇಕು ಚಿಂತಿಸಬೇಕು. ನನ್ನ ಅರಿವೇ ನನಗೆ ದಕ್ಕುತ್ತಿಲ್ಲವಲ್ಲಾ ಎಂದು ತನು ಮತ್ತು ಮನ ಇವೆರಡೂ ತವಕದಿಂದ ಹಗಲಿರುಳೆನ್ನದೆ ಹಪಹಪಿಸಬೇಕು. ಆಗ ಅರಿವನ್ನೇ ತಿಳಿದು ಆ ಅರಿವೇ ತಾನಾದ ಗುರುದೇವ ಸದಾ ಚಿಂತಿಸುವ ತನುವಿಗೆ ಬಂದು ಉಪದೇಶ ನೀಡುತ್ತಾನೆ. ಅಥವಾ ಆ ತನುವೇ ಆ ಗುರುದೇವನ ಹತ್ತಿರ ಹೋಗಿ ತನ್ನ ತೊಂದರೆಯನ್ನು ನಿವಾರಿಸಿ ತನಗೆ ಪರಮ ಪದವಿಯನ್ನು ಕರುಣಿಸು ಎಂದು ಬೇಡಿಕೊಳ್ಳುತ್ತದೆ. ಆ ಗುರುದೇವನ ಕೃಪೆಯಿಂದ ಮನ ಅರಿವೆಂಬ ಗುರುದೇವನ ಶ್ರೀಪಾದವನ್ನು ಅರಿಯುತ್ತದೆ. ಅರಿತರಿತು ಆ ಅರಿವೇ ತಾನಾಗಿ ತನುವನ್ನು ಆವರಿಸಿದ ಮನವನ್ನು ತನುವಿನ ಅಜ್ಞಾನವನ್ನು ನಷ್ಟ ಮಾಡಿಕೊಂಡು ಅರಿವಿನ ಕಣಜವೇ ತಾನಾಗುತ್ತದೆ.

**1279**

**ಇನ್ನು ಜನನವು ಇಲ್ಲ**
**ಮುನ್ನವೆ ಸಂದಳಿದೆ ಕಳುಹಿದಂತೆ**
**ಉನ್ನತೋನ್ನತನಾದೆ ಚೆನ್ನಬಸವಣ್ಣನ ಕರುಣದಿಂದ**
**ನಿನ್ನ ರೂಪಾದೆ ಇನ್ನೆನಗೆ ಅರಿವುವುಂಟೆ ? ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗಕ್ಕೆ ಜನನವುಂಟು ಮರಣವುಂಟು; ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಯ್ಯನಿಗೆ ಜನನವಿಲ್ಲ ಮರಣವೂ ಇಲ್ಲ. ಆ ಅರಿವನ್ನು ತಿಳಿದು ಆ ಅರಿವೇ ತಾನಾಗುವ ಮನಕ್ಕೂ ಜನನವಿಲ್ಲ ಮರಣವಿಲ್ಲ.

ಮನ ಅಂಗವನ್ನು ಆವರಿಸಿ ಆ ಅಂಗದ ಗೆಳೆತನ ಮಾಡಿ ನಂಬಿರುವುದರಿಂದ ಅಂಗ ಜನನ-ಮರಣಗಳಿಂದ ಬಳಲುತ್ತದೆ. ಹೀಗೆ ಬಳಲುವ ಮನವೇ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಶರಣು ಹೋದಾಗ ಆ ಗುರುದೇವನೇ ತಾನಾಗುತ್ತದೆ. ಆಹ ಆ ಗುರುದೇವನಿಗೂ ಮರಣವಿಲ್ಲ ಹಾಗೂ ಆ ಗುರುದೇವನನ್ನು ತಿಳಿದ ಶಿಷ್ಯನಿಗೂ ಮರಣವಿಲ್ಲ.

ರೂಪವನ್ನು ಆವರಿಸಿದ ಮನ ರೂಪದಲ್ಲಿಯೇ ಇರುವ ನಿರೂಪನೊಂದಿಗೆ ಒಂದಾಗಿ ಆ ನಿರೂಪವೇ ತಾನಾದ ಬಳಿಕ ರೂಪು ಕೂಡಾ ತನ್ನದೇ; ನಿರೂಪ ರೂಪಕ್ಕೆ ಜನ್ಮ ನೀಡಿ ಆ ರೂಪದಲ್ಲಿಯೇ ವಾಸಮಾಡಿದೆ. ಈ ವಾರ್ತೆ ತಿಳಿದ ಬಳಿಕ ನಿರೂಪದ ರೂಪೇ ತಾನಾಗಿ ಮರೆವಿನ ಅರಿವನ್ನು ನಷ್ಟ ಮಾಡಿಕೊಂಡು ಅಂಗದಲ್ಲಿಯ ಅರಿವನ್ನು ಧಾರಣೆ ಮಾಡಿಕೊಂಡು ಕಪಿಲಸಿದ್ಧಮಲ್ಲಿಕಾರ್ಜುನನೇ ತಾನಾಗುತ್ತದೆ.

**1280**

**ಕರಂಗಳೆ ಮನೆಯಾಗಿ, ಕರಂಗಳೆ ಕರಂಗಳಾಗಿ**
**ಅರ್ಪಿಸುವ ಭೇದವನಾರು ಬಲ್ಲರಯ್ಯಾ ಚೆನ್ನಬಸವಣ್ಣನಲ್ಲದೆ?**
**ತನು ಪ್ರಾಣ ಇಷ್ಟಲಿಂಗ ಸಂಬಂಧಿಯಾಗಿ**
**ಇಂದ್ರಿಯಂಗಳೈದು ಮುಖಗಂಗಳಾಗಿ,**
**ಅರ್ಪಿಸುವ ಭೇದವನಾರು ಬಲ್ಲರಯ್ಯಾ ಚೆನ್ನಬಸವಣ್ಣನಲ್ಲದೆ?**
**ಆನಂದ ಸ್ಥಾನದಲ್ಲಿ ಅನಿಮಿಷಾಕ್ಷರದ ಸಂಯೋಗ ಅರ್ಪಣದ ಭೇದವ**
**ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಚೆನ್ನಬಸವಣ್ಣ ಬಲ್ಲ;**
**ಮಿಕ್ಕಿವರಿಗೆ ಸಾಮಾನ್ಯವೆಂಬೆನೆಂಬೆ ?**

ಕರ ಎಂದರೆ ತನು, ಕಾಯ ; ಈ ಕಾಯದಲ್ಲಿ ಅಕಾಯನಾಗಿ ಅರಿವೆಂಬ ಗುರುದೇವ ಕಾಯಕ್ಕೆ ಸಂಬಂಧಿಯಾಗಿ ಕಾಯಕ್ಕೂ ಮತ್ತು ಮನಕ್ಕೂ ಬೋಧಿಸುತ್ತಾನೆ. ಕಾಯಗಳೇ ಗುರುದೇವನಿಗೆ ಆತನು ವಾಸ ಮಾಡುವ ಮನೆಗಳಾಗಿವೆ. ಕಾಯವನ್ನು ಆವರಿಸಿದ ಮನೋಕಾಯವನ್ನು ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರು ಕಾಯಕ್ಕೆ ಅರ್ಪಿಸುವ ಈ ವಿಧಾನವನ್ನು ಶರಣರು ಮಾತ್ರ ಬಲ್ಲರು ಜ್ಞಾನಿಗಳು ಮಾತ್ರ ಬಲ್ಲರು. ಏಕೆಂದರೆ ಅವರು ತನು, ಪ್ರಾಣ ಮತ್ತು ಇಷ್ಟಲಿಂಗ ಸಂಬಂಧಿಯಾದವರು. ಇಂದ್ರಿಯಗಳನ್ನು ಕಾಯದ ಜ್ಞಾನ ಮುಖಗಳನ್ನಾಗಿ ಮಾಡಿಕೊಂಡವರು. ಕಾಯದ ಅಜ್ಞಾನವನ್ನು ಕಾಯದಲ್ಲಿಯೇ ಸಂಗಮವಾದ ಜ್ಞಾನಕ್ಕೆ ಅರ್ಪಿಸಬಲ್ಲ ಸಮರ್ಥರು ಶರಣರು; ಅವರು ಮಾತ್ರ ಅಜ್ಞಾನವನ್ನು ಹತ್ತಿರ ಬರಗೊಡದೆ ಎಚ್ಚರದಿಂದ ಮಹಾಜ್ಞಾನವನ್ನು ಬಳಸುತ್ತಾ ಪರಮಸುಖದ ಆನಂದ ಸ್ಥಾನದಲ್ಲಿರುವ ಅನಿಮಿಷರು ಅವರು. ಹೀಗೆ ಅರ್ಪಣೆ ಮಾಡುವ ಭೇದವನು ಶರಣ ಚೆನ್ನಬಸವಣ್ಣ ಮಾತ್ರ ಬಲ್ಲ. ಮಿಕ್ಕವರಿಗೆ ಅದು ಸಾಧ್ಯವಾಗುವ ಮಾತಲ್ಲ. ತನ್ನನ್ನು ತಾನು ಅರಿಯಲು ಹೋಗುವ ಸಮರ್ಥರೆಲ್ಲರಿಗೂ ಸಾಧ್ಯವಾಗುವುದು.

**1281**

**ಭಕ್ತಿವಿಡಿದು ಭಕ್ತನಾದ ಪ್ರಸಾದಿ. ಮೋಕ್ಷವಿಡಿದು, ಧೈರ್ಯವಿಡಿದು,**
**ಆ ಭಕ್ತಂಗೆ ಮಾಹೇಶ್ವರನಾದ ಪ್ರಸಾದಿ;**
**ಕಾರಣವಿಡಿದು ಅವಧಾನ ತಪ್ಪದ ಆ ಭಕ್ತಂಗೆ ಪ್ರಸಾದಿಯಾದ ಪ್ರಸಾದಿ;**
**ಕರ್ಮರಹಿತನಾಗಿ ಕಾಲಕಲ್ಪಿತವಿಲ್ಲದ ಆ ಭಕ್ತಂಗೆ ಪ್ರಾಣಲಿಂಗಿಯಾದ ಪ್ರಸಾದಿ,**

**ಪತಿಭಕ್ತಿವಿಡಿದು ಧರ್ಮಾರ್ಥಕಾಮಮೋಕ್ಷಂಗಳಾಸೆಯ**
**ನಿವೃತ್ತಿಯಂ ಮಾಡಿದ ಆ ಭಕ್ತಂಗೆ ಶರಣನಾದ ಪ್ರಸಾದಿ;**
**ಈ ಉಭಯ ಸಮರಸವೇಕವೆಂದು ತಿಳಿದು,**
**ಉಭಯಭಾವ ಉರಿಕರ್ಪೂರ ಸಂಯೋಗವಾದ,**
**ಆ ಭಕ್ತಂಗೆ ಐಕ್ಯನಾದ ಪ್ರಸಾದಿ.**
**ನಮ್ಮ ಕಪಿಲಸಿದ್ಧಮಲ್ಲಿನಾಥನಲ್ಲಿ ಸರ್ವಕ್ಕೆ ಚೈತನ್ಯವಾದ,**
**ನಮ್ಮ ಚೆನ್ನಬಸವಣ್ಣನೆಂಬ ಅಚ್ಚಪ್ರಸಾದಿ.**

ಅಜ್ಞಾನವನ್ನು ನುಂಗಿ ಹಾಕುವ ಶಕ್ತಿ ಮನಕ್ಕಿಲ್ಲ; ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನಿಗೆ ಮನ ಭಕ್ತನಾಗಬೇಕು. ಆ ಭಕ್ತನಿಗೆ ಮಾತ್ರ ಅಜ್ಞಾನವನ್ನು ಪ್ರಸಾದ ಮಾಡಿಕೊಂಡು ಪ್ರಸಾದಿಯಾಗುವ ಶಕ್ತಿ ಇದೆ. ಮನ ಜ್ಞಾನಕ್ಕೆ ಭಕ್ತಿ ಮಾಡಿ ಭಕ್ತನಾಗಬೇಕು. ಆ ಭಕ್ತಿ ಹಿಡಿದ ಭಕ್ತನಿಗೆ ಮಾತ್ರ ಅಜ್ಞಾನ ಉಣ್ಣುವ ಶಕ್ತಿ ಇದೆ. ಅದನ್ನು ಕರಗಿಸಿ, ಜೀರ್ಣಿಸಿಕೊಂಡು ಪ್ರಸಾದ ಮಾಡಿಕೊಳ್ಳುವ ಶಕ್ತಿಯೂ ಇದೆ. ಅದನ್ನು ಭಕ್ತಿವಿಡಿದು ಭಕ್ತನಾದ ಪ್ರಸಾದಿ ಎನ್ನುವ ಸಾಲಿನ ಸೂತ್ರವಿದು.

ಅಂಗ ಅಜ್ಞಾನದ ಬಂಧನದಲ್ಲಿ ಸದಾ ಇದ್ದು ಅದರ ಮುಕ್ತಿಗಾಗಿ ಕೂಡಾ ಸದಾ ಪ್ರಯತ್ನ ಮಾಡುತ್ತದೆ. ಆದರೂ ಧೈರ್ಯ ಸಾಲುವುದಿಲ್ಲ. ಮನ ಭಕ್ತನಾಗಿ ಅರಿವೆಂಬ ಮಹೇಶ್ವರನಲ್ಲಿ ಐಕ್ಯವಾಗಿ ಭಕ್ತನಾದ ಬಳಿಕ ಆ ಭಕ್ತನಿಗೆ ಅರಿವೇ ಮಹೇಶ್ವರನಾಗಿ ಅಜ್ಞಾನದ ಪ್ರಸಾದವನ್ನು ಸ್ವೀಕರಿಸುತ್ತಾನೆ.

ಕಾರಣವಿಡಿದು ನೆನಪಿನ ಅಜ್ಞಾನವನ್ನು ಮುರಿದು ಆ ಭಕ್ತನಿಗೆ ಪ್ರಸಾದಿಯಾದ ಪ್ರಸಾದಿ. ಅಂತಹ ಭಕ್ತ ಕರ್ಮರಹಿತನಾಗಿ ಕಾಲ ಕಲ್ಪಿತವನ್ನು ತುಳಿದು ಪ್ರಾಣಲಿಂಗಿಯಾದ ಪ್ರಸಾದಿ.

ಅಂಗದಲ್ಲಿ ಸಂಗಮವಾದ ಅರಿವು ಎಂಬ ಗುರುದೇವನನ್ನು ಪತಿಯನ್ನಾಗಿಸಿಕೊಂಡು ಅಂಗವನ್ನು ಆವರಿಸಿದ ಮನ ಆ ಪತಿಗೆ ಸತಿಯಾಗಿ ಪತಿ ಭಕ್ತಿ ಹಿಡಿದು ಧರ್ಮ, ಅರ್ಥ, ಕಾಮ, ಮೋಕ್ಷಂಗಳ ಆಸೆಯನು ನಿವೃತ್ತಿ ಮಾಡುತ್ತಾನೆ ಭಕ್ತ. ಅಂತಹ ಭಕ್ತನಿಗೆ ಶರಣನಾದ ಪ್ರಸಾದಿ.

ಉಭಯ ಸಮರಸವನ್ನು ಅರಿವು ಎನ್ನುವ ಕಪಿಲಸಿದ್ಧಮಲ್ಲಿನಾಥನಲ್ಲಿ ಸರ್ವೈಕ್ಯ ಚೈತನ್ಯವಾದ ಚೆನ್ನಬಸವಣ್ಣನೆಂಬ ಅಚ್ಚ ಪ್ರಸಾದಿ ಎಂದು ಸಿದ್ಧರಾಮ ಶಿವಯೋಗಿಗಳು ಗುರುದೇವನನ್ನು ಸ್ಮರಿಸಿದ್ದಾರೆ.

**1282**

**ಮೂರುಲಿಂಗಕ್ಕೆ ಮೂಲಮಂತ್ರವಾದಾತ ಗುರು**
**ಮೂರು ವಿದ್ಯೆಗೆ ವಿದ್ಯಾರೂಪವಾದಾತ ಗುರು.**
**ಹೊದ್ದಿದ ಪ್ರಪಂಚನತಿಗಳೆದು ರೂಪಿಯ ರೂಪವಾದಾತ ಗುರು.**
**ಲೋಕತ್ರಯಕ್ಕೆ ಕಪಿಲಸಿದ್ಧಮಲ್ಲಿಕಾರ್ಜುನನೇ ಗುರು.**

ಅಂಗವೆಂದರೆ ಬರೀ ಅಂಗ ಮಾತ್ರ ಅಲ್ಲ ಅದು ತ್ರೈಲಿಂಗ. ಮೂರು ಲಿಂಗಗಳ ಸಂಗಮ. ಸ್ಥೂಲತನು ಒಂದು ಲಿಂಗ, ಸೂಕ್ಷ್ಮತನು ಒಂದು ಲಿಂಗ, ಕಾರಣತನು ಒಂದು ಲಿಂಗ. ಈ ಮೂರು ಲಿಂಗಗಳನ್ನು ಒಂದು ಮಾಡುವ ತ್ರಿಕೂಟ ಸಂಗಮಕ್ಕೆ ಮೂಲಮಂತ್ರವಾದಾತ ಗುರು.

ಈ ಮೂರು ಲಿಂಗಗಳು ಸಂಗಮವಾದ ಸ್ಥೂಲತನುವಿಗೆ ಮೂರು ವಿದ್ಯೆಗಳುಂಟು. ಸಾತ್ವಿಕ ವಿದ್ಯೆ, ರಾಜಸ ವಿದ್ಯೆ, ತಾಮಸ ವಿದ್ಯೆ. ಇವುಗಳನ್ನು ಮೂರು ಗುಣಗಳು ಎಂದು ಕೂಡಾ ಕರೆಯುತ್ತಾರೆ. ಈ ಮೂರು ವಿದ್ಯೆಗಳಿಗೆ ವಿದ್ಯಾರೂಪಾದಾತ ಗುರು.

ಮೂರು ವಿದ್ಯೆಗಳನ್ನು ಹೊದ್ದ ತನುವಿನ ಪ್ರಪಂಚವನ್ನು ಅತಿಗಳೆದು ತನುವಿನ ರೂಪಕ್ಕೆ ರೂಪವಾದಾತ ಗುರು. ಮೂರು ಗುಣಗಳನ್ನು ಕಳೆಯುವ ಸೂತ್ರವನ್ನು ಹೇಳಿ ನಿರ್ಗುಣಿಯನ್ನಾಗಿ ಮಾಡುತ್ತಾನೆ ಈ ಗುರುದೇವ. ಇಂತಹ ಗುರುದೇವನನ್ನು ಸಿದ್ಧರಾಮ ಶಿಯೋಗಿಗಳು ಕಪಿಲಸಿದ್ಧಮಲ್ಲಿಕಾರ್ಜುನಾ ಎಂದು ಕರೆದಿದ್ದಾರೆ. ಈತ ಮೂರು ಲೋಕಗಳ ಒಡೆಯನು ಕೂಡಾ ಹೌದು.

**1283**

**ಐದು ಬ್ರಹ್ಮರಲ್ಲಿ ಅಯ್ಯಾ, ನೀನು ಅತಿಶಯ ಜೋತಿರ್ಮಯನು.**
**ಆನಂದ ಸ್ಥಾನದಲ್ಲಿ ಅಯ್ಯಾ , ನೀನು ಅತಿಶಯ ನಿತ್ಯಮಯನು.**
**ಬಾಹ್ಯಭ್ಯಂತರದಲ್ಲಿ ಪರಿಪೂರ್ಣನು.**
**ನಿನ್ನಾಧಿಕ್ಯವನರಿಯಲ್ಕೆ ನಿಗಮಕ್ಕಭೇದ್ಯನು.**
**ಗುರುವಿನ ಕರುಣದಿಂದ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದೆ ಶಿವನೇ,**
**ಮಹಾಲಿಂಗ ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವಿನಲ್ಲಿ ಐದು ಜ್ಞಾನೇಂದ್ರಿಗಳಿವೆ. ಆ ಜ್ಞಾನೇಂದ್ರಿಗಳನ್ನು ಪಂಚಬ್ರಹ್ಮ, ಪಂಚಾನನ ಎಂದು ಕೂಡಾ ಕರೆಯುತ್ತಾರೆ. ಆ ಪಂಚಬ್ರಹ್ಮರಿಗೂ ಒಡೆಯನು ಒಬ್ಬನು ಇದ್ದಾನೆ. ಆತ ಜ್ಯೋತಿರ್ಮಯನು, ನಿತ್ಯಮಯನು, ಪರಿಪೂರ್ಣನು ನಿಗಮಕ್ಕೆ ಅಭೇದ್ಯನು. ಅಂತಹ ಶಿವನನ್ನು ಮಹಾದೇವನೆಂದು, ಗುರುದೇವನೆಂದು, ಸದಾಶಿವನೆಂದು ಕರೆಯುತ್ತಾರೆ. ಆತ ಅವ್ಯಕ್ತ. ವ್ಯಕ್ತವಾದ ಶರೀರದಲ್ಲಿ ಅವ್ಯಕ್ತವಾಗಿ ಸಂಗಮವಾದಾತ. ವ್ಯಕ್ತ ಶರೀರದ ಅನುಭವಕ್ಕೂ ಬರುವಾತ. ಗುರುವಿನ ಕರುಣದಿಂದಾಗಿ ಕಾಯದ ಅನುಭವಕ್ಕೆ ಬಂದು ಕಾಯದಲ್ಲಿಯೇ ಚುಳುಕಾದೆ ಶಿವನೇ ಮಹಾಲಿಂಗ ಕಪಿಲಸಿದ್ಧಮಲ್ಲಿಕಾರ್ಜುನಾ ಎಂದು ಆ ಶಿವಪರಮಾತ್ಮನನ್ನು ಸಿದ್ಧರಾಮ ಶಿವಯೋಗಿಗಳು ಸ್ತುತಿಸುತ್ತಾ ಆತನೊಂದಿಗೆ ಮಾತನಾಡಿದ್ದಾರೆ.

**1284**

**ಭೇದಿಸಬಾರದೆ ಇಪ್ಪ ಅಭೇದ್ಯ ಶಿವನೆ.**
**ನಿನ್ನ ಭೇದಿಸಿ ತಂದುಕೊಟ್ಟನೆನ್ನಯ ಶ್ರೀಗುರು.**
**ಇನ್ನು ನಾ ನಿನ್ನ ಬಿಡುವೆನೆ ? ಬಿಡೆ ಬಿಡೆ.**
**ಮಚ್ಚಿದೆ ಪಾದೋದಕವ, ನಚ್ಚಿದೆ ಪ್ರಸಾದವ.**
**ಗುರುವೆ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಅಂಗವನ್ನು ಆವರಿಸಿದ ಮನಕ್ಕೆ ಹಾಗೂ ಅಂಗಕ್ಕೆ ಭೇದಿಸಲು ಸಾಧ್ಯವಿಲ್ಲ. ಅನಂತ ಜನ್ಮಗಳಿಂದಲೂ ಅಂಗದಲ್ಲಿ ಸಂಗಮವಾದ ಗುರುದೇವನನ್ನು ಹುಡುಕಲು ಅಂಗಕ್ಕೂ ಸಾಧ್ಯವಾಗಲಿಲ್ಲ. ಮನಕ್ಕೂ ಸಾಧ್ಯವಾಗಲಿಲ್ಲ.

ಅಂಗವನ್ನು ಆವರಿಸಿದ ಮನ ಅಂಗದೊಂದಿಗೆ ಪ್ರತಿ ಅಂಗವನ್ನು ಹೆಣ್ಣೆಂದು, ಗಂಡೆಂದು

ನೋಡುತ್ತದೆ. ಶ್ರೀಮಂತ, ಬಡವ, ಭಿಕ್ಷುಕ, ಕಳ್ಳ ಎಂದು ಭೇದಿಸಿ ಭೇದಿಸಿ ನೋಡುತ್ತದೆ. ಸರ್ವಾಂಗಗಳು ಲಿಂಗಸ್ವರೂಪವೇ ಆಗಿದ್ದರೂ ಕೂಡಾ ಅಂಗ ಅಂಗವನ್ನು ತನ್ನಂತೆ ಇರುವ ಅಂಗವೆಂದು ತಿಳಿಯಲು ಅಂಗಕ್ಕೆ ಸಾಧ್ಯವಾಗುತ್ತಿಲ್ಲ ಅಂದ ಮೇಲೆ ಅಂಗದಲ್ಲಿಯೇ ಸಂಗಮವಾದ ಶಿವನನ್ನು ಹುಡುಕಲು ಅಂಗಕ್ಕೆ ಸಾಧ್ಯವೇ ? ಸಾಧ್ಯವಾಗದು.

ಶ್ರೀಗುರುದೇವ ಅಂಗವನ್ನು ಭೇದಿಸಿ ಅಂಗಕ್ಕೂ ಅಂಗವನ್ನು ಆವರಿಸಿದ ಮನಕ್ಕೂ ಅಂಗದಲ್ಲಿಯೇ ಸಂಗಮವಾದ ಶ್ರೀಗುರುವನ್ನು ತೋರಿಸಿ ಕೊಟ್ಟನು. ಹೀಗೆ ಶ್ರೀಗುರುದೇವನನನ್ನು ತೋರಿಸಿ ಕೊಟ್ಟ ಮೇಲೆ ಅಂತಹ ಗುರುದೇವನನ್ನು ಬಿಡಲು ನನಗೆ ಸಾಧ್ಯವಾಗದು ಇನ್ನು ಶ್ರೀಗುರುದೇವನನ್ನು ಬಿಡೆನು. ಮಚ್ಚಿದೆ ಆತನ ಜ್ಞಾನೋದಕವನ್ನು ಅದನ್ನು ಪಾದೋದಕವೆಂದೇ ಸ್ವೀಕರಿಸುವೆ. ನಚ್ಚಿದೆ ಆತನ ಪ್ರಸಾದವನ್ನು ಏನೀ ಅದ್ಭುತ ? ಹಿಂದೆ ಕಂಡು ಬರುವ ಅಜ್ಞಾನವೆಲ್ಲಾ ಇಂದು ಕೂಡಲೇ ಪ್ರಸಾದವಾಗುತ್ತಿದೆ. ಸಕಲ ಅಂಗಗಳಲ್ಲಿಯೂ ಶ್ರೀಗುರುದೇವ ಸಂಗಮವಾಗಿರುವುದು ಕಂಡು ಬರುತ್ತದೆ. ಗುರುವೇ, ಕಪಿಲಸಿದ್ಧಮಲ್ಲಿಕಾರ್ಜುನನೇ ನಿನಗೆ ಅನಂತ ಕೋಟಿ ಪ್ರಣಾಮಗಳು. ನಿನ್ನನ್ನು ತೋರಿದ ಸದ್ಗುರುವಿನ ಶ್ರೀ ಚರಣಗಳಿಗೂ ಅನಂತ ಕೋಟಿ ಪ್ರಣಾಮಗಳು.

**1285**

**ದೆಸೆದಿಗ್ವಲಯದಲ್ಲಿ ಪಸರಿ ಪರ್ಬಿತ್ತು ನಿನ್ನ ನಾಮ.**
**ವಸುಧೆಯೆಲ್ಲವು ಹೆಣ್ಣು, ನೀನು ಗಂಡು.**
**ಬಸವಾಕ್ಷರತ್ರಯದಿಂದುದ್ಭವಿಸಿ ಸಕಲ ಬ್ರಹ್ಮಾಂಡಗಳಾದವಯ್ಯಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ದೆಸೆದಿಗ್ವಲಯದಲ್ಲಿ ಪಸರಿಸಿತ್ತು ನಿನ್ನ ಶ್ರೀನಾಮ. ವಸುಧೆಯಲ್ಲವು ಹೆಣ್ಣು, ನೀನು ಮಾತ್ರ ಗಂಡು. ಆದರೂ ನೀನು ಸೃಷ್ಟಿ ಮಾಡಿದ ಬ್ರಹ್ಮಾಂಡ ನಿನ್ನನ್ನು ತಿಳಿಯದಿದ್ದಕ್ಕಾಗಿ ಪ್ರತಿ ಅಂಗವೂ ಹೆಣ್ಣೆಂದು, ಗಂಡೆಂದು ಭಾವಿಸಿದೆ. ಗಡ್ಡ, ಮೀಸೆ ಬಂದರೇನಾಯಿತು ತಾನು ಗಂಡಲ್ಲವೆಂದು ತಿಳಿದಿಲ್ಲ. ಹೆಣ್ಣು, ಗಂಡು ಎಂದು ಹೇಳುವ ಅಂಗದಲ್ಲಿ ಸಂಗಮವಾದ ಪರಮ ಪುರುಷ ಮಾತ್ರ ನೀನೊಬ್ಬನೇ. ನೀನು ಗಂಡು ಕೂಡಾ ಆಗಿರುವೆ. ವಸುಧೆಯಲ್ಲವು ಹೆಣ್ಣು, ಇಡೀ ಬ್ರಹ್ಮಾಂಡದಲ್ಲಿ ವಾಸಮಾಡುವ ಸಕಲ ತನುಗಳನ್ನು ಆವರಿಸಿದ ಮನವೇ ಹೆಣ್ಣು.

ಒಂದಂಗದಲ್ಲಿ ಪರಮ ಪುರುಷನಾದ ಗಂಡು ಎಂದು ಕರೆಯಿಸಿಕೊಳ್ಳುವ ನೀನು ಇರುವೆ. ಆ ಅಂಗವನ್ನು ಆವರಿಸಿದ ಮನವನ್ನು ನೀನೇ ಸೃಷ್ಟಿಮಾಡಿ ಆ ಮನಕ್ಕೆ ಹೆಣ್ಣು ಎಂದು ನೀನೇ ನಾಮಕರಣ ಮಾಡಿರುವೆ.

ಅನಂತ ಜನ್ಮಗಳಿಂದ ಅಂಗವನ್ನು ಗಂಡು ಎಂದು ತಿಳಿದಿದೆ. ಅದೇ ಅಂಗವನ್ನು ಹೆಣ್ಣು ಎಂದು ತಿಳಿದಿದ್ದೆ. ಇವೆರಡೂ ಅಲ್ಲವೆಂದು ಅಂಗದೊಳಗಿದ್ದ ಅರಿವೆಂಬ ಗುರುದೇವನೇ ಗಂಡ ಎಂದು ಅಂಗವನ್ನು ಆವರಿಸಿದ ಮನ ಹೆಣ್ಣು ಎಂದು ತಿಳಿದು ಅರಿವಿನ ಗಂಡನಿಗೆ ಹೆಂಡತಿಯಾದಾಗಲೇ ಆ ಅಂಗಕ್ಕೆ ಮುಕ್ತಿ . ಅದರಲ್ಲಿ ಬಸವಾಕ್ಷರತ್ರಯಗಳು ಸಂಗಮವಾಗಿವೆ. ಆ ಅಕ್ಷರಗಳಿಂದಲೇ ಬ್ರಹ್ಮಾಂಡ ಸೃಷ್ಟಿಯಾಗಿದೆ ಕಪಿಲಸಿದ್ಧಮಲ್ಲಿಕಾರ್ಜುನಾ ಇದಕ್ಕೆ ನೀನೇ ಸಾಕ್ಷಿ.

ಗಂಡು ಅಲ್ಲ ಹೆಣ್ಣು ಅಲ್ಲ ; ನೀನು ಮಾತ್ರ ಗಂಡು ಎಂದು ತಿಳಿದ ಅಂಗವೇ ಧನ್ಯ . ಆ ಗಂಡಿಗೆ ಮನ ಹೆಂಡತಿಯಾಗಿ ಆ ಗಂಡನೊಂದಿಗೆ ಕೂಡಿದ ಮನವೇ ಧನ್ಯ.

1286

**ಮುನ್ನ-ಮುನ್ನ-ಶಶಿ ರವಿಗಳಿಲ್ಲದ ಮುನ್ನ,**
**ಬ್ರಹ್ಮ-ವಿಷ್ಣ್ವಾದಿಗಳುದ್ಭವಿಸುವ ಮುನ್ನ ಮುನ್ನ,**
**ಮೂರ್ತಿಗಳೆಂಟು ಒಂದಾಗದ ಮುನ್ನ, ತನುಮಧ್ಯವಳಯದಲ್ಲಿ**
**ಸಕಲ ಬ್ರಹ್ಮಾಂಡ ಜಲಮಯವಾಗಿಪ್ಪಲ್ಲಿ,**
**ಭಕ್ತಿಕಾರಣ ಬಸವನವಗ್ರಹಿಸಿಪ್ಪಲ್ಲಿ,**
**ಅದೆತ್ತಲಿದ್ದೆ ? ಅದ ನೀನೆ ಬಲ್ಲೆಯಯ್ಯಾ !**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಕುರುಹುಗೆಟ್ಟ ನಿಶ್ಚಿಂತನು.**

ಸೂರ್ಯ, ಚಂದ್ರರುಗಳು ಇಲ್ಲದ ಮುನ್ನ ನೀನಿದ್ದೆ. ಬ್ರಹ್ಮ ವಿಷ್ಣುಗಳಾದಿ ದೇವಾನು ದೇವತೆಗಳಿಗಿಂತ ಮುನ್ನ ನೀನಿದ್ದಿ. ಮೂರ್ತಿಗಳು ಎಂಟು ಒಂದಾಗದ ಮುನ್ನ ನೀನಿದ್ದಿ . ಸಕಲ ಬ್ರಹ್ಮಾಂಡ ಜಲಮಯವಾಗಿರುವಲ್ಲಿಯೂ ಕೂಡಾ ನೀನಿದ್ದಿ ಆದರೂ ನಿನ್ನನ್ನು ಕಂಡವರು ಯಾರೂ ಇರಲಿಲ್ಲ. ಭಕ್ತಿ ಕಾರಣ ಬಸವನ ಅನುಗ್ರಹದಿಂದಾಗಿ ಆತ ನಿನ್ನನ್ನು ಕಂಡು ಹಿಡಿದ. ಆತ ನಿನ್ನನ್ನು ಸೃಷ್ಟಿಸುವ ಮುನ್ನ ಅದೆತ್ತಲಿದ್ದೆ ನೀನು ; ಅದನ್ನು ನೀನೇ ಬಲ್ಲೆಯಯ್ಯಾ; ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ಕುರುಹುಗೆಟ್ಟ ನಿಶ್ಚಿಂತನು ನೀನು.

1287

**ಇಂದ್ರಾದಿ ದೇವತಾ ಸಂಕುಳಕ್ಕೆ**
**ಅಂತಪ್ಪ ಪದವನಿತ್ತಾತ ಬಸವಣ್ಣನಯ್ಯಾ .**
**ಬ್ರಹ್ಮ-ವಿಷ್ಣು ಮೊದಲಾದ ದೇವತಾಮೊತ್ತಕ್ಕೆ**
**ಅಂತಪ್ಪ ಪದವನಿತ್ತಾತ ಬಸವಣ್ಣನಯ್ಯಾ .**
**ಶಿವಲಿಂಗಭಕ್ತರಿಗೆ ಚರಲಿಂಗಧಾರಣೆಯ**
**ಪರಿಯಾಯದಿಂದಲೊರೆದಾತ ಗುರು.**
**ಇಹಲೋಕ ಪರಲೋಕದನುಮಿಷದ ಸುದ್ದಿಯನರುಹಿದಾತ**
**ಗುರು ಬಸವಣ್ಣನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.**

ಇಂದ್ರಾದಿ ದೇವತಾ ಸಂಕುಲಕ್ಕೆ ಅಂತಪ್ಪ ಪದವನ್ನು ಇತ್ತಾತ ಬಸವಣ್ಣನು. ಬ್ರಹ್ಮ.ವಿಷ್ಣು ಮೊದಲಾದ ದೇವತಾ ಮೊತ್ತಕ್ಕೆ ಪದವನ್ನು ಇತ್ತಾತ ಬಸವಣ್ಣನು. ಶಿವಲಿಂಗ ಭಕ್ತರಿಗೆ ಮನವನ್ನು ತೋರಿ ಚಲಿಸುವ ಆ ಮನಕ್ಕೆ ಲಿಂಗಧಾರಣೆಯ ಮಾಡಿದಾತ ಗುರು ಬಸವಣ್ಣನು. ಇಹಲೋಕ ಪರಲೋಕವನ್ನು ಸುಳ್ಳು ಮಾಡಿ ತನುವಿನ ಲೋಕದಲ್ಲಿ ಇಹಲೋಕ, ಪರಲೋಕದ ಅನುಮಿಶದ ಅರಿವಿನ ಸುದ್ದಿಯನ್ನು ಅರುಹಿದಾತ ಶ್ರೀಗುರು ಬಸವಣ್ಣನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ ಎಂದು ಆತನೊಂದಿಗೆ ಸಿದ್ಧರಾಮ ಶಿವಯೋಗಿಗಳು ಬಸವಣ್ಣನ ಸುದ್ದಿಯನ್ನು ಮಾತನಾಡಿದ್ದಾರೆ.

1288

**ಪ್ರಸಾದವೈದಾರ ಪಾದೋದಕವೆರಡೈದ ಆದಿಯಕ್ಷರದಲ್ಲಿ ದೀಕ್ಷಾತ್ರಯ.**

**ನಾದದಿಂದವೆ ತೂಗಿ ಬಿಂದು ಸಮನಿಸದೀಗ ಆಧಾರಸ್ಥಾನಕ್ಕೆ ಅತ್ಯತಿಷ್ಠತ್.**
**ಮೂಲಸ್ಥಾನದಲ್ಲಿದ್ದ ಮುನ್ನೂರು ಕಮಲಕ್ಕೆ**
**ಆದಿ ಭ್ರಮರನ್ನು ಬಸವ ಕಪಿಲಸಿದ್ಧಮಲ್ಲಿಕಾರ್ಜುನಾ.**

ಪ್ರಸಾದವು ಐದೆಂದು ಹೇಳುವವರು ; ಪಾದೋದಕವು ಹತ್ತೆಂದು ಹೇಳುವವರು ಉಂಟು. ಆದಿಯಕ್ಷರದಲ್ಲಿ ದೀಕ್ಷೆಗಳು ನೂರೆನ್ನುವವರೂ ಉಂಟು. ನಾದ, ಬಿಂದು, ಕಲೆ ಎಂದು ತೂಗಿ ಹೇಳುವವರು ಉಂಟು. ಆಧಾರ ಸ್ಥಾನದಲ್ಲಿ ಅತ್ಯತಿಷ್ಠ ದಶಾಂಗುಲ ಎಂದು ಹೇಳುವವರೂ ಉಂಟು. ಇದೆಲ್ಲವನ್ನು ಅತಿಗಳೆದು ಮೂಲ ಸ್ಥಾನದಲ್ಲಿದ್ದ ಮುನ್ನೂರು ಕಮಲಕ್ಕೆ ಆದಿಭ್ರಮರನು ಬಸವಣ್ಣನು ಒಬ್ಬನೇ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

ವೇದ ಆಗಮ, ಉಪನಿಷತ್ತುಗಳಲ್ಲಿ, ಪುರಾಣಗಳಲ್ಲಿ ಹುಡುಕಿದವರೂ ಉಂಟು. ಇವೆಲ್ಲವುಗಳನ್ನು ದೂರೀಕರಿಸಿ ಅಂಗದಲ್ಲಿಯೇ ಸಂಗಮವಾದ ಲಿಂಗವನ್ನು ಕಂಡು ಆ ಲಿಂಗವನ್ನೇ ಪತಿಯನ್ನಾಗಿಸಿದಾತ ಬಸವಣ್ಣ. ಮನವೆಂಬ ತಾನು ಆ ಲಿಂಗಕ್ಕೆ ಶರಣು ಹೋಗಿ ಸತಿಯಾಗುವ ಸೂತ್ರವನ್ನು ಹೇಳಿದಾತ ಬಸವಣ್ಣ. ಶರಣ ಸತಿ, ಲಿಂಗ ಪತಿ ಎಂದು ಕರೆದಾತ ಬಸವಣ್ಣನು. ಈತ ಆದಿಭ್ರಮರನು ಎಂದು ಸಿದ್ಧರಾಮ ಶಿವಯೋಗಿಗಳು ಬಸವಣ್ಣನಿಗೆ ಹೆಸರಿಟ್ಟು ಕರೆದಿದ್ದಾರೆ.

**1289**

**ಅಣ್ಣನ ನೋಡಿರೆ, ಲೋಕಕ್ಕೆ ಜಗದಕಣ್ಣ ಮದವ ಕಳೆದನು.**
**ಮುಕ್ಕಣ್ಣನಿಪ್ಪೆಡೆಯ ತೋರಿದನು. ಅಣ್ಣ ಬಸವಣ್ಣ ವಾಙ್ಮನಕ್ಕಗೋಚರನು.**
**ಮುಕ್ಕಣ್ಣನವತಾರಂಗಳನು ನಾಟಕವೆಂದರಿದು ಮೆರೆದನು.**
**ಸತ್ಯಶುದ್ಧ ನಿರ್ಮಳ ಕೈವಲ್ಯ ವಾಙ್ಮನಕ್ಕಗೋಚರ ಬಸವಣ್ಣನು,**
**ಅಣ್ಣಾ, ನಿಮ್ಮಿಂದ ಶುದ್ಧವ ಕಂಡೆ, ಸಿದ್ಧವ ಕಂಡೆ, ಪ್ರಸಿದ್ಧವ ಕಂಡೆನು**
**ಆರರಲ್ಲಿ ಆಂದೋಳನವಾದೆನು, ಆರು ವ್ರತದಲ್ಲಿ ನಿಪುಣನಾದೆನು,**
**ನೀನೊಂದು ಮೂರಾಗಿ, ಮೂರೊಂದಾರಾಗಿ ತೋರಿದ**
**ಗುಣವಿಂತುಟಯ್ಯಾ ಬಸವಣ್ಣ. ಇನ್ನೆನಗೆ ಅಧಿಕರಪ್ಪುದೊಂದಿಲ್ಲ.**
**ನಾನಿನ್ನು ಉರವಣಿಸಿ ಹರಿದೆ; ಹರಿದು ಭರದಿಂದ ಗೆಲುವೆ;**
**ತತ್ತ್ವ ಮೂವತ್ತಾರರ ಮೇಲೆ ಒಪ್ಪಿದ ತತ್ತ್ವಮಸಿಯನೈದುವೆ.**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .**
**ಬಸವಣ್ಣನ ಪ್ರಸಾದದಿಂದ ಅರಿದಪ್ಪುದೊಂದಿಲ್ಲ.**

ಕಣ್ಣಲ್ಲಿ ಜ್ಞಾನದ ದೃಶ್ಯವು ಇದೆ ಅಜ್ಞಾನದ ದೃಶ್ಯವೂ ಇದೆ. ಈ ಎರಡೂ ದೃಶ್ಯಗಳನ್ನು ಕಣ್ಣು ಹೊತ್ತುಕೊಂಡಿದೆ. ಕಣ್ಣು ಒಂದೇ ದೃಶ್ಯಗಳು ಎರಡು. ಒಂದು ದೃಶ್ಯ ಸದಾ ಹಾದರ ಮಾಡುತ್ತದೆ. ಅದು ಅಜ್ಞಾನದ ಕಣ್ಣು. ಹಾದರ ಮಾಡುವ ಈ ಕಣ್ಣಿಗೆ ಸದಾ ಪಾಠ ಮಾಡಿ ಜ್ಞಾನದ ಭೋದೆಯನ್ನುಭೋದಿಸುತ್ತದೆ. ಇದು ಜ್ಞಾನದ ಕಣ್ಣು. ಈ ಎರಡೂ ಕಣ್ಣುಗಳಿಗೆ ಕಣ್ಣು ಆಲಯವಾಗಿದೆ. ಅಜ್ಞಾನದ ಕಣ್ಣಿನ ಮದವನ್ನು ಜ್ಞಾನದ ಕಣ್ಣಿನಲ್ಲಿ ಲೀನ ಮಾಡಿಕೊಂಡು ಅಜ್ಞಾನವನ್ನು ಕಳೆದುಕೊಂಡು ನೋಡುವವನೇ ಮುಕ್ಕಣ್ಣ.

ಕಣ್ಣೊಳಗೆ ಕಣ್ಣಿದ್ದು ಕಾಣಲೇಕರಿಯರಯ್ಯಾ ಎಂಬ ಸೂತ್ರವನ್ನು ಮೊಟ್ಟಮೊದಲಿಗೆ ಹೇಳಿ

ಲೋಕಕ್ಕೆ ಮುಕ್ಕಣ್ಣನ ಪರಿಚಯವನ್ನು ಮಾಡಿಸಿದಾತ ಬಸವಣ್ಣ.

ಕಣ್ಣಪ್ಪ ತನ್ನ ಬೇಡವಾದ ಅಜ್ಞಾನದ ಕಣ್ಣನ್ನು ಅರಿವೆಂಬ ಶಿವನ ಕಣ್ಣಿಗೆ ಅರ್ಪಿಸಿ ಜ್ಞಾನದ ಕಣ್ಣಿನಿಂದ ನೋಡಿದಾತ. ಈತನನ್ನು ಬೇಡರ ಕಣ್ಣಪ್ಪ ಎಂದು ಕರೆಯುತ್ತಾರೆ. ಅಜ್ಞಾನದ ಕಣ್ಣನ್ನು ತನ್ನದೇ ಆದ ಜ್ಞಾನದ ಕಣ್ಣಿಗೆ ಅರ್ಪಿಸಿಕೊಂಡಾತನನ್ನು ಮುಕ್ಕಣ್ಣ ಎಂದು ಕರೆಯುತ್ತಾರೆ. ಒಂದು ಸಾಲಿನ ವಚನದ ಸೂತ್ರದಲ್ಲಿ ಮುಕ್ಕಣ್ಣನನ್ನು ಪರಿಚಯಿಸಿದಾತ ಬಸವಣ್ಣ. ಆತ ವಾಙ್ಮನಕ್ಕೆ ಅಗೋಚರನು. ಅಂತಹ ಅಣ್ಣನ ದಯದಿಂದ ಶುದ್ಧವ ಕಂಡೆ, ಸಿದ್ಧವ ಕಂಡೆ, ಪ್ರಸಿದ್ಧವ ಕಂಡೆನು ಎಂದು ಸಿದ್ಧರಾಮ ಶಿವಯೋಗಿಗಳು ಬಸವಣ್ಣನನ್ನು ಸ್ಮರಿಸಿದ್ದಾರೆ.

ಆರರಲ್ಲಿ ಆಂದೋಲನ ಮಾಡಿ ಆ ಆರೂ ವ್ರತಗಳಲ್ಲಿ ನಿಪುಣನಾದೆನು. ನೀನು ಒಂದೇ ಆಗಿರುವಿ. ಆದರೆ ಮೂರು ಒಂದಾಗಿ ಆರಾಗಿ ತೋರಿದ ಬಸವಣ್ಣ. ಇನ್ನು ನನಗಿಂತ ಅಧಿ ಕರಪ್ಪುವವರು ಒಬ್ಬರೂ ಇಲ್ಲ ಬಸವಣ್ಣನ ದಯೆಯಿಂದ ನಾನು ಮಹಾಜ್ಞಾನಿಯಾದೆ. ಬರದಿಂದ ಹರಿಯುವ ನದಿಯಾಗಿ ಅನಂತದ ಸಮುದ್ರವನ್ನು ತಲುಪಿದೆ.

ತತ್ತ್ವ ಮೂವತ್ತಾರರ ಮೇಲೆ ಒಪ್ಪುವ ತತ್ತ್ವ ಮಸಿಯನ್ನು ತಿಳಿದೆ ಬಸವಣ್ಣನ ದಯದಿಂದ. ಆ ತತ್ತ್ವ ನಾನೇ ಎಂದು ತಿಳಿದೆ ಅಣ್ಣನ ದಯದಿಂದ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ಬಸವಣ್ಣನ ಪ್ರಸಾದದಿಂದ ಎಲ್ಲವನ್ನೂ ಅರಿದೆ ಇನ್ನು ಅರಿಯುವುದು ಏನೂ ಇಲ್ಲ. ಅರಿದರಿದು ಆ ಅರಿವು ನಾನೇ ಆದೆ ತಂದೆ ಎಂದು ಸಿದ್ಧರಾಮ ಶಿವಯೋಗಿಗಳು ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**1290**

**ಲೋಕ ಲೌಕಿಕಂಗಳೆಲ್ಲಾ ನೀವು ಕೇಳಿರೆ.**
**ಏಕೈಕ ರುದ್ರನ ಅವತಾರವನರಿದೆವೆಂಬಿರಿ. ನೋಡಿ ನಚ್ಚಿರೆ ಶಿವನ.**
**ಶಿವನು ಬಸವಣ್ಣನಾದ ನೋಡಿರೆ, ಬಸವಣ್ಣ ಗುರುವಾದ, ಬಸವಣ್ಣ ಲಿಂಗವಾದ,**
**ಬಸವಣ್ಣ ಜಂಗಮವಾದ, ಬಸವಣ್ಣ ಪರಿಣಾಮ ಪ್ರಸನ್ನವಾದ,**
**ಬಸವಣ್ಣ ಮೂಲತ್ರಯವಾದ, ಬಸವಣ್ಣ ಭಕ್ತಿ ಎರಡಲಿ ತ್ರಯವಾದ,**
**ಬಸವಣ್ಣ ಆರಾರಿಂ ಮೇಲೆ ತೋರಿದ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ,**
**ಬಸವಣ್ಣನ ಪ್ರಸಾದವ ಕೊಂಡು ಭವಂ ನಾಸ್ತಿಯಾಗಿ ಬದುಕಿದೆನು.**

ಸಿದ್ಧರಾಮ ಶಿವಯೋಗಿಗಳು ಇಡೀ ಲೋಕದಲ್ಲಿರುವ ತನುಗಳನ್ನು ತಮ್ಮತ್ತ ಸೆಳೆದು ಅರಿವಿನ ಸೂತ್ರವನ್ನು ಹೇಳಿದ್ದಾರೆ. ಲೋಕದಲ್ಲಿರುವ ಲೌಕಿಕ ತನುಗಳೇ ನೀವು ಕೇಳಿರಿ ಏಕೈಕ ರುದ್ರನ ಅವತಾರವನ್ನು ಅರಿದೆವು ಎಂದು ಹೇಳುವಿರಿ. ಆ ರುದ್ರ ರುದ್ರನಲ್ಲ. ಅಂತರಂಗದಲ್ಲಿರುವ ಅರಿವಿನ ಶಿವನನ್ನು ಒಮ್ಮೆ ನೋಡಿ ಮೆಚ್ಚಬಾರದೆ ? ಆ ಶಿವನೇ ಧರೆಗಿಳಿದು ಬಸವಣ್ಣನಾದ ನೋಡಿರೆ, ಆ ಬಸವಣ್ಣನೆ ಇಡೀ ಲೋಕಕ್ಕೆ ಗುರುವಾದ ಕೇಳಿರೆ, ಆ ಬಸವಣ್ಣನೆ ಲಿಂಗವಾದ ಒಮ್ಮೆ ನೋಡಿರೆ. ಆ ಬಸವಣ್ಣನೇ ಇಡೀ ಲೋಕಕ್ಕೆ ಜಂಗಮವಾದ ನೋಡಿರೆ. ಬಸವಣ್ಣ ಪರಿಣಾಮ ಪ್ರಸನ್ನ ಪರವಾದ ನೋಡಿರೆ.

ಬಸವಣ್ಣನೇ ತನುವಾಗಿ ವಿಷ್ಣುವೆಂದು ಕರೆಯಿಸಿಕೊಂಡ. ಬಸವಣ್ಣನೇ ಮನವಾಗಿ ಬ್ರಹ್ಮನೆಂದು ಕರೆಯಿಸಿಕೊಂಡ, ಬಸವಣ್ಣನೆ ಕಾರಣ ತನುವಾಗಿ ಶಿವನೆಂದು ಕರೆಯಿಸಿಕೊಂಡ ಬಸವಣ್ಣ ಹೀಗೆ ಮೂಲತ್ರಯವಾದ. ಬಸವಣ್ಣ ಭಕ್ತಿ ಎರಡು ತ್ರಯವಾದ . ಬಸವಣ್ಣ ಆರಾರಿಂ ಮೇಲೆ ತೋರಿದ ಕಪಿಲಸಿದ್ಧಮಲ್ಲಿಕಾರ್ಜುನಯ್ಯನೇ ಬಸವಣ್ಣನ ಪ್ರಸಾದವ ಕೊಂಡು ಎನ್ನ

ಜನನ-ಮರಣವ ನಷ್ಟ ಮಾಡಿಕೊಂಡು ಬದುಕಿದೆನು.

**1291**

**ಸೀಮೆಯ ಮೀರಿದ ಸಂಬಂಧನೇ,**
**ಸಂಬಂಧದಲ್ಲಿ ಸಲಹುವ ಗುರು-ಲಿಂಗ-ಜಂಗಮ-ಪಾದೋದಕ-ಪ್ರಸಾದಕ್ಕೆ**
**ಅರ್ಹನ ಮಾಡಿದೆ. ಗುರುವೆ, ಕಪಿಲಸಿದ್ಧಮಲ್ಲಿಕಾರ್ಜುನಯ್ಯ,**
**ನೀ ಬಸವನಾಗಿ ಬಂದು ನಿನ್ನವರಿಗೆ ಯೋಗ್ಯನ ಮಾಡಿ, ಭವವ ತಪ್ಪಿಸಿದೆ.**

ಲೋಕವೊಂದೆಡೆಯಾದರೆ ಈ ಲೋಕಕ್ಕೆ ಸಂಬಂಧವೇ ಇಲ್ಲದ ಬಸವಣ್ಣನೇ ಬೇರೆ ಆತ ಲೋಕದ ಸೀಮೆಯನ್ನು ಮೀರಿದಾತ, ಲೋಕದ ಸಂಬಂಧದಲ್ಲಿ ಸಮನಿಸದ ಸಂಯೋಗನು ಆತ. ಸಕಲ ತನುಗಳನ್ನು ಗುರು, ಲಿಂಗ, ಜಂಗಮದಂತೆ ನೋಡಿದಾತ. ಸಕಲ ತನುಗಳನ್ನು ಮುಟ್ಟಿ ಮುಟ್ಟಿ ಈ ತನುವಿನಲ್ಲಿ ಗುರು ಇದ್ದಾನೆ, ಈ ತನುವಿನಲ್ಲಿಯೇ ಲಿಂಗಯ್ಯನಿದ್ದಾನೆ. ಈ ತನುವಿನಲ್ಲಿಯೇ ಜಂಗಮನಿದ್ದಾನೆ. ಈ ತನುವಿನಲ್ಲಿ ಪಾದೋದಕದ ಅರಿವಿನ ಅಮೃತ ಸದಾ ಧುಮ್ಮಿಕ್ಕುತ್ತಿದೆ. ಈ ತನು ಪ್ರಸಾದಕ್ಕೆ ಅರ್ಹವಾದ ಪ್ರಸಾದಿ ತನುವೆಂದು ಸಕಲ ತನುಗಳನ್ನು ಮುಟ್ಟಿ ಮುಟ್ಟಿ ತೋರಿ ಗುರುತನುವೆಂದು ಗೌರವಿಸಿ ಸಕಲ ತನುಗಳನ್ನು ಅರ್ಹನನ್ನಾಗಿಸಿದ ಶಿವ ಪರಮಾತ್ಮನು ಆತ. ಸಕಲ ತನುಗಳಲ್ಲಿ ಗುರುವನ್ನು ತೋರಿದ ಗುರ ಬಸವಣ್ಣನು ಆತ. ಬಸವಣ್ಣ ಬೇರೆ ಯಾರೂ ಅಲ್ಲ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನಯ್ಯನೇ ಆಗಿದ್ದಾನೆ. ಆತನೇ ಬಸವನಾಗಿ ಬಂದು ಆತನ ತನು ಕುಲವನ್ನು ಯೋಗ್ಯನನ್ನಾಗಿ ಮಾಡಿ ಜನನ-ಮರಣಗಳ ಬಾಧೆಯನ್ನು ತಪ್ಪಿಸಿದ.

**1292**

**ಗುರುವಾಗಿ ಬಂದೆನಗೆ ದೀಕ್ಷೆಯ ಮಾಡಿದಿರಿ,**
**ಲಿಂಗವಾಗಿ ಬಂದೆನಗೆ ಮನದ ಮಲಿನವ ಕಳೆದರಿ,**
**ಜಂಗಮವಾಗಿ ಬಂದೆನ್ನ ಪ್ರಪಂಚಕ ತನವ ಕಳೆದು**
**ಪರಮ ಸೀಮೆಯ ಮಾಡಿದಿರಿ.**
**ಇಂತಿವೆಲ್ಲವೂ ಬಸವಣ್ಣನಾಗಿ ಎನಗೆ**
**ಪ್ರಸಾದವ ನೀಡಿ ಸಲಹಿದ,ಕಪಿಲಸಿದ್ಧಮಲ್ಲಿಕಾರ್ಜುನ**
**ಇನ್ನೆನಗತಿಶಯವೇನೂ ಇಲ್ಲ.**

ಸಿದ್ಧರಾಮ ಶಿವಯೋಗಿಗಳು ತಮ್ಮ ಅಂಗದಲ್ಲಿಯೇ ಇರುವ ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ಮಾತನಾಡುತ್ತಾ ಈ ಕೆಳಗಿನಂತೆ ನುಡಿದಿದ್ದಾರೆ. ಮಲ್ಲಯ್ಯನೇ ನಿನ್ನ ದರುಶನ ಭಾಗ್ಯಕ್ಕೆ ಕಾರಣವಾದಾತ ಬಸವಣ್ಣನು,ಆತ ಎನಗೆ ಗುರುವಾಗಿ ಬಂದು ದೀಕ್ಷೆಯ ಮಾಡಿದ ಕಾರಣ ನನಗೆ ನಿನ್ನ ದರುಶನವಾಯಿತು. ಅರಿವಿನ ಲಿಂಗವಾಗಿ ಬಂದು ಎನ್ನ ಅಂಗಮತ್ತು ಮನದ ಮಲಿನವ ಕಳೆದನು. ಬಸವಣ್ಣ ಜಂಗಮಗವಾಗಿ ಬಂದು ಎನ್ನ ಪ್ರಾಪಂಚಿಕ ತನವನ್ನು ಕಳೆದನು. ಸೀಮೆಯ ಕಳೆದು ನಿಸ್ಸೀಮನನ್ನಾಗಿ ಮಾಡಿದನು. ಹೀಗೆ ಎನಗೆ ಸಕಲ ಪ್ರಸಾದವ ನೀಡಿ ಸಲಹಿದತಂದೆ ಕಪಿಲಸಿದ್ಧಮಲ್ಲಿಕಾರ್ಜುನಾ ಇನ್ನು ಎನಗೆ ಆಶಯವೇನೂ ಇಲ್ಲ.

**1293**

**ಅರ್ಪಿತ ಅವಧಾನ ಮುಖಂಗಳು ಎಲ್ಲರಿಗೆ ಸುಲಭವೆ,**
**ಅನಾದಿ ಸಂಸಿದ್ಧವಾಗಿ ಬಂದ ಬಸವಣ್ಣಂಗಲ್ಲದೆ?**
**ತ್ರೈಲಿಂಗ ಮೂಲಕ್ಕೆ ಮಂತ್ರಾದಿ ರೂಪ ಬಸವಣ್ಣ.**
**ತ್ರೈಲಿಂಗ ಪ್ರಸಾದಕ್ಕೆ ಅರ್ಹ ಬಸವಣ್ಣ.**
**ಮೂರುಲಿಂಗ ಒಂದಾದ ಮೂರ್ತಿ ಬಸವಣ್ಣ. ಕಪಿಲಸಿದ್ಧಮಲ್ಲಿಕಾರ್ಜುನಯ್ಯ**
**ನೀ ಸಾಕ್ಷಿಯಾಗಿ ಬಸವಣ್ಣನ ನೆನೆವವನು ನೀನಹರು.**

ಅರ್ಪಣೆ ಮಾಡುವದು ಸಕಲರಿಗೂ ಸುಲಭವಲ್ಲದ ಮಾತು. ಅನಾದಿಯಿಂದಲೂ ಅರ್ಪಣೆ ಮಾಡುವ ಶಕ್ತಿ ತನುವಿನಲ್ಲಿಯೇ ಬಂದಿರಬೇಕು. ಅಂತಹ ಶಕ್ತಿ ಬಸವಣ್ಣನಿಗೆ ಮಾತ್ರ ಸಾಧ್ಯವಾಯಿತು. ಹೀಗಾಗಿ ಅಂಗದಲ್ಲಿರುವ ಮೂರು ಲಿಂಗಗಳನ್ನು ಮಂತ್ರವನ್ನಾಗಿಸಿಕೊಂಡ ಬಸವಣ್ಣ; ಆ ಮೂರು ಲಿಂಗಗಳ ಪ್ರಸಾದಕ್ಕೆ ಅರ್ಹನಾದ ಬಸವಣ್ಣ, ಆ ಮೂರು ಲಿಂಗಗಳು ಒಂದಾದ ಸಾಕಾರ ಮೂರ್ತಿಯೇ ಬಸವಣ್ಣ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೇ ನೀನು ಸಾಕ್ಷಿಯಾಗಿ ಬಸವಣ್ಣನ ನೆನೆವವರೆಲ್ಲರೂ ನೀನೆ ಆಗುವರು.

**1294**

**ಪ್ರಥಮನಾಮಕ್ಕೀಗ ಬಸವಾಕ್ಷರವೆ ಬೀಜ.**
**ಗುರುನಾಮ ಮೂಲಕ್ಕೆ ಅಕ್ಷರಾಂಕ.**
**ಬಸವಣ್ಣ ಬಸವಣ್ಣ ಬಸವಣ್ಣ ಎಂದೀಗ.**
**ದೆಸೆಗೆಟ್ಟನ್ಯೆ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನ.**

ಇಡೀ ಜಗತ್ತಿಗೆ ಜ್ಞಾನದ ಸರಳ ಸೂತ್ರವನ್ನು ಹೇಳಿದಾತ ಬಸವಣ್ಣ. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಅಂಗವನ್ನು ಆವರಿಸಿದ ಮನಕ್ಕೆ ಸಹಜವಾಗಿ ಸೂತ್ರದ ಮೂಲಕ ತೋರಿಸಿಕೊಟ್ಟಾತ ಬಸವಣ್ಣ ಮಹಾಜ್ಞಾನಕ್ಕೆ ಬಸವಾಕ್ಷರವೇ ಬೀಜ.

ಬಸವರಸರು ಗುರುವಿನ ನಾಮದ ಮೂಲಕ್ಕೆ ಅಕ್ಷರಾಂಕ. ಆತ ಅಕ್ಷರೋತ್ತಮನು ಹೌದು. ಕಪಿಲಸಿದ್ಧಮಲ್ಲಿಕಾರ್ಜುನ ನಾನು ನಿನ್ನ ದರುಶನ ಮಾಡಿಕೊಳ್ಳಲಿಕ್ಕೆ ಬಸವಣ್ಣನೇ ಕಾರಣ ಪುರುಷ. ನನಗೆ ದರುಶನವಿತ್ತ ನೀನು ಬೇರೆಯಲ್ಲ. ಬಸವಣ್ಣನೂ ಬೇರೆ ಅಲ್ಲ. ಆತ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ. ಹೀಗಾಗಿ ನಾನು ಬಸವಣ್ಣ ಬಸವಣ್ಣ ಬಸವಣ್ಣ ಎಂದು ದೆಸೆಗೆಟ್ಟೆನಯ್ಯಾ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನ.

**1295**

**ಆದಿಯಾಧಾರಕ್ಕೆ ಮೂಲ ತಾ ಬಸವಣ್ಣ.**
**ಹೋದನ್ಯೆ ಭಕ್ತಿಯೊಳಗೆ ಹೊಲಬುದಪ್ಪಿ.**
**ಊರನರಿಯದ ಗ್ರಾಮ, ಹೊಲಬುದಪ್ಪಿದ ಸೀಮೆ;**
**ಆತನಾನತದಿಂದಾನು ನೀನಾದೆನ್ಯೆ.**
**ಬಸವಣ್ಣ ಬಸವಣ್ಣ ಬಸವಣ್ಣ ಎಂಬ ನಾಮಾಕ್ಷರದೊಳಗೆ**

**ದೆಸೆಗೆಟ್ಟೆನೈ ಗುರುವೆ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಪಿಲಸಿದ್ಧಮಲ್ಲಿಕಾರ್ಜುನನೇ ಎನ್ನ ಅಂಗದೊಳಗೆ ಸಂಗಮವಾದ ಪರಮಾತ್ಮನೆ ಬಸವಣ್ಣನ ಕೃಪೆಯಿಂದಾಗಿ ನಾನು ನೀನೇ ಆದೆನಯ್ಯಾ. ಬಸವಣ್ಣ ಬಸವಣ್ಣ ಬಸವಣ್ಣ ಎಂಬ ನಾಮಾಕ್ಷರದೊಳಗೆ ದೆಸೆಗೆಟ್ಟೆನಯ್ಯಾ. ಗುರುವೆ ಬಸವಣ್ಣ ಆದಿ ಆಧಾರಕ್ಕೂ ಮೂಲ ಪುರುಷನು ಆತ ನಿಸ್ಸೀಮನು. ಅಂಗವನ್ನೇ ಲಿಂಗವನ್ನಾಗಿ ಮಾಡಿಕೊಂಡು ಸಕಲ ಅಂಗಗಳನ್ನು ಲಿಂಗಾಂಗಳನ್ನಾಗಿ ಕಂಡ ಮಹಾವೀರನೂ ಆತ.

ಇಡೀ ಲೋಕಕ್ಕೆ ಭಕ್ತಿ ಮಾಡುವುದನ್ನು ಅಂದರೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಸಂಗಯ್ಯನಿಗೆ ಅಂಗವನ್ನು ಆವರಿಸಿದ ಮನದಿಂದ ಭಕ್ತಿ ಮಾಡಿ ಹೇಗೆ ಭಕ್ತನಾಗಬೇಕೆಂದು ತೋರಿಸಿ ಕೊಟ್ಟ ಮೂಲ ಪುರುಷನು ಬಸವಣ್ಣ.

**1296**

**ಶುದ್ಧ ಸಿದ್ಧ ಪ್ರಸಿದ್ಧದ ನೆಲೆಯನರಿದೆಹೆನೆಂದು**
**ತೊಳಲಿ ಬಂದೆ ಗಿರಿಗಹ್ವರದೊಳಗೆ,**
**ಕಂಡೆ ಕಾಮನೆಂಬ ಸಂಶಯವಾಯಿತ್ತು . ಅದೇನು ಕಾರಣ ?**
**ನಿನ್ನವರ ಗಣಸಮೂಹಕ್ಕೆ ತಾತವಪರ್ಯವ ಒಲ್ಲರಾಗಿ.**
**ನೀನು ಸದ್ಭಕ್ತದೇಹಿಕನಾಗಿ ಸದ್ಭಕ್ತರಲ್ಲಿ ಒಚ್ಚತವೋಗಿ ಇಪ್ಪೆಯಾಗಿ,**
**ಇಪ್ಪಾಗಿ ಗಿರಿಗಹ್ವರದಲ್ಲಿ ಗುರುವಿನ ಕರುಣದಿಂದ ಕಂಡೆ ನೀನಿಪ್ಪ ನೆಲೆಯು,**
**ಶುದ್ಧದ ಗುರುವಿನಲ್ಲಿ , ಸಿದ್ಧದ ಲಿಂಗದಲ್ಲಿ, ಪ್ರಸಿದ್ಧವ ಜಂಗಮದಲ್ಲಿ**
**ಕಂಡೆ, ಅರಿದೆ, ನಚ್ಚಿದೆ, ಮಚ್ಚಿದೆ. ಎನ್ನ ಸರ್ವ ಸ್ವಾಯತವನೊಚ್ಚಗೊಟ್ಟೆ,**
**ನಿನ್ನ ಗಣಸಮೂಹಕ್ಕೆ ಪ್ರಾಪ್ತನಾದೆ, ನಿನ್ನ ಭಕ್ತರ ಸಲುಗೆಗೆ ಸಂದೆ,**
**ಕಪಿಲಸಿದ್ಧಮಲ್ಲಿಕಾರ್ಜುನ ತಂದೆ.**

ನನ್ನನ್ನು ಹಡೆದು ಕೃತಾರ್ಥನನ್ನಾಗಿ ಮಾಡಲು ಅಂಗವನ್ನು ಸೃಷ್ಟಿ ಮಾಡಿದೆ. ಸದಾ ನನ್ನನ್ನು ರಕ್ಷಣೆ ಮಾಡಲು ಆ ಅಂಗದಲ್ಲಿಯೇ ಇದ್ದು ನನಗೆ ಪಾಠ ಮಾಡತೊಡಗಿದೆ. ನಿನ್ನನ್ನು ತಿಳಿಯಲು ಅಂಗದಲ್ಲಿ ಮನವನ್ನು ಕೂಡಾ ಸೃಷ್ಟಿ ಮಾಡಿದೆ. ಅನಂತ ಜನ್ಮಗಳು ಕಳೆದರೂ ಕೂಡ ಮನ ನಿನ್ನ ಶುದ್ಧ,ಸಿದ್ಧ,ಪ್ರಸಿದ್ಧ ನೆಲೆಯನ್ನು ಅರಿಯದೆ ತೊಳಲಿ ಬಳಲಿ ಬೆಂಡಾಗಿದೆ. ನಿನ್ನನ್ನು ಗಿರಿಗಹ್ವರದಲ್ಲಿ ಹುಡುಕುತ್ತದೆಯೇ ಹೊರತು ಅಂಗದಲ್ಲಿ ನಿನ್ನನ್ನು ಹುಡುಕಲು ಮನಕ್ಕೆ ಇನ್ನೂ ಸಾಧ್ಯವಾಗುತ್ತಿಲ್ಲ.

ಮನ ಕಾಯದೊಂದಿಗೆ ಸಂಗ ಮಾಡಿ ತಾನು ಕಾಯವೆಂದು ನಂಬಿ ಮತ್ತೊಂದು ಕಾಯದೊಂದಿಗೆ ಕಾಮಿಯಾಗಿ ಬಳಲುತ್ತದೆ. ಕಾಯದಲ್ಲಿ ಕಾಮವೆಂಬ ಸಂಶಯ ಹುಟ್ಟಲು ಅದೇನು ಕಾರಣ ನಿನ್ನವರು ಈ ಕಾಮಿ ಕಾಯವನ್ನು ತಮ್ಮ ಗಣ ಸಮೂಹಕ್ಕೆ ಸೇರಿಸಿಕೊಳ್ಳಲು ಒಲ್ಲರು.

ನೀನು ನಿನ್ನನ್ನು ಆರಾಧಿಸುವ ಘನಮನವೆಂಬ ಭಕ್ತ ದೇಹಿಗೆ ದೇಹಿಕನಾಗಿ ಅಂತಹ ಸದ್ಭಕ್ತರಲ್ಲಿ ಮನೆ ಮಾಡಿಕೊಂಡು ಇರುವೆಯಾಗಿ ಇಂತಹ ಗುರುಗಳ ಕರುಣೆಯಿಂದ ಅವರ ಸಹಾಯದಿಂದ ನೀನಿರುವ ನೆಲೆಯನ್ನು ಕಂಡೆನು ಮಲ್ಲಯ್ಯನೇ.

ಶುದ್ಧವನ್ನು ಗುರುವಿನಲ್ಲಿ ಕಂಡೆನು. ಸಿದ್ಧವನ್ನು ಲಿಂಗದಲ್ಲಿ ಕಂಡೆನು, ಪ್ರಸಿದ್ಧವನ್ನು ಜಂಗಮದಲ್ಲಿ ಕಂಡೆನು ಅರಿದೆನು! ನಚ್ಚಿದೆನು. ನಿನ್ನನ್ನು ಮಚ್ಚಿದೆನು ಎನ್ನ ಸ್ವಾಯತವನ್ನು ನಿನಗೆ

ಅರ್ಪಣೆ ಮಾಡಿ ನಿನ್ನ ಗಣ ಸಮೂಹಕ್ಕೆ ಪ್ರಾಪ್ತನಾದೆ. ನಿನ್ನ ಭಕ್ತರ ಸಲುಗೆಗೆ ಸಂದೆ ಕಲಪಿಸಿದ್ಧ ಮಲ್ಲಿಕಾರ್ಜುನ ತಂದೆ.

**1297**

**' ಸೋಹಂ ' ನೀನೆ ಎಲೆ ಅಯ್ಯ ;**
**' ಕೋಹಂ' ತತ್ವತೂರ್ಯಾರ್ಥವೂ ನೀನೆ ಅಯ್ಯಾ . 'ನಾಹಂ ನಾಹಂ ' ನೀನೆ ಅಯ್ಯ .**
**ಆನೆಂಬುದೊಂದು ಭ್ರಾಂತುಂಟೆ ? ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ,**
**ಗುರುವಿನ ಕೈಯಲು ಆನು ಸತ್ತು ಹುಟ್ಟಿದ ಬಳಿಕ ಆನು ನೀನೆಂಬ ಸಂದನಳಿದೆ.**

ಏಕೋ ಏನೋ ನಾನು ಎನ್ನುವ ಭ್ರಾಂತಿ ತನುವಿನಲ್ಲಿ ಬಂದು ಸೇರಿ ಇಡೀ ತನುವನ್ನು ತೊಂದರೆಗೆ ಈಡುಮಾಡಿದೆ. ಈ ಬ್ರಹ್ಮಾಂಡದಲ್ಲಿ ಹುಟ್ಟಿದ ಸಕಲ ತನುಗಳನ್ನು ನಾನು ಎನ್ನುವ ಭ್ರಾಂತಿ ಜನ್ಮಜನ್ಮಗಳಿಂದಲೂ ಕಾಡುತ್ತಾ ಬಂದಿದೆ.

ನಾನು ಆದರೂ ಹುಟ್ಟಿದ್ದು ಅವನಿಂದಲೇ; ಅವನಿಲ್ಲದಿದ್ದರೆ ನಾನು ಇಲ್ಲ, ತನುವು ಇಲ್ಲ ಆದರೂ ನಾನು ಎನ್ನುವುದೇ ಪ್ರಧಾನವಾಗಿದೆ.

ತನುವು ನನ್ನದಲ್ಲ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನದು. ನನಗೂ ನಾನಿದ್ದ ತನುವಿಗೂ ಮಾಲಿಕನು ಆತ. ನಾನು ಮತ್ತು ತನು ನಮಗೆ ಜನ್ಮ ನೀಡಿದ ಅರಿವೆಂಬ ಗುರುದೇವನನ್ನೇ ಮರೆತು ಹೋಗಿರುವುದರಿಂದ ಅವನೇ ಆಗಬೇಕಾದ ನನಗೆ ಭ್ರಾಂತಿ ಆವರಿಸಿದೆ. ಹೀಗಾಗಿ ಅರಿವೆಂಬ ಗುರುದೇವನ ತನುವನ್ನು ಮನ ಎಂದು ಕರೆಯಿಸಿಕೊಳ್ಳುವ ನಾನು ಹಿಡಿದುಕೊಂಡಿದ್ದೇನೆ. ತನುವು ನನ್ನನ್ನು ಹಿಡಿದುಕೊಂಡಿದೆ. ನಾವಿಬ್ಬರೂ ಸೇರಿ ನಮ್ಮಿಬ್ಬರನ್ನು ಸೃಷ್ಟಿ ಮಾಡಿ ಗುರುದೇವನನ್ನು ಮೆರತಿರುವುದರಿಂದ ತನುವಿಗೂ ನನಗೂ ಭ್ರಾಂತಿ ಆವರಿಸಿದೆ.

ಮನವೆಂಬ ನಾನು ಅರಿವೆಂಬ ಗುರುದೇವನ ಶ್ರೀಚರಣಕ್ಕೆ ಹಣೆಮಣೆದಾಗ ನಾನು ಎನ್ನುವ ಅಜ್ಞಾನಿ ಮನ ಸತ್ತು ಹೋಗುತ್ತದೆ. ಆ ಗುರುದೇವನ ಕೈಯಲ್ಲಿ ನಾನು ಎನ್ನುವ ಅಜ್ಞಾನ ಸತ್ತು ಹುಟ್ಟಿದ ಬಳಿಕ ನಾನು ನೀನೆಂಬ ಅಜ್ಞಾನದ ಕತ್ತಲೆ ಕಳೆದು ಹೋಗುತ್ತದೆ. ಆಗ ಸೋಹಂ ನೀನೇ ಕೋಹಂ ನೀನೆ ನಾಹಂ ಕೂಡಾ ನೀನೆ ಅಯ್ಯಾ ಎಂದು ನನಗೆ ಎದೆತುಂಬಿ ಹಾಡಲು ಬರುತ್ತದೆ.

**1298**

**ಅಂಗೈಯ ನೋಟದೊಳು ಕಂಗಳು ನೆಟ್ಟು, ಕಂಗಳ ತೇಜ ಲಿಂಗದಲ್ಲರತು,**
**ಲಿಂಗದ ಪ್ರಭೆಯೊಳಗೆ ಅಂಗವೆಲ್ಲ ಲೀಯವಾಗಿ,**
**ಸಂಗ ನಿಸ್ಸಂಗವೆಂಬ ದಂದುಗ ಹರಿದು,**
**ಹಿಂದು ಮುಂದೆಂಬ ಭಾವವಳಿದು ನಿಂದ,**
**ನಿಜದ ನಿರಾಳದಲ್ಲಿ ಪ್ರಾಣ ಸಮರತಿಯಾಗಿಪ್ಪ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ,**
**ಪ್ರಭುದೇವರ ಶ್ರೀಪಾದಕ್ಕೆ 'ನಮೋ ನಮೋ' ಎಂದು**
**ಬದುಕಿದೆ ಕಾಣಾ, ಚೆನ್ನಬಸವಣ್ಣಾ.**

ಅಂಗದಲ್ಲಿ ಐದು ನೋಟಗಳಿವೆ. ಕಣ್ಣು ಇದಕ್ಕೆ ನೋಡುವ ಶಕ್ತಿ ಇದೆ. ಇದಕ್ಕೆ ತನ್ನದೇ

ಆದ ಒಂದು ಒಳನೋಟವಿದೆ. ಕಿವಿ ಇದಕ್ಕೆ ಕೇಳುವ ಶಕ್ತಿ ಇದೆ. ಇದರ ಒಳ ಕೇಳುವಿಕೆಯು ಕಿವಿಯಲ್ಲಿಯೇ ಬಚ್ಚಿಟ್ಟುಕೊಂಡಿದೆ. ಮೂಗಿಗೆ ಸುಗಂಧ, ದುರ್ಗಂಧ ಹೀರುವ ಶಕ್ತಿ ಮೂಗಿನೊಳಗೆ ಒಂದು ಮೂಗು ಇದೆ. ಸುಗಂಧ, ದುರ್ಗಂಧಗಳನ್ನು ಅಳಿದು ಪರಿಮಳ ಹೀರುವು ಶಕ್ತಿ ಮಾತ್ರ ಇದಕ್ಕೆ ಇದೆ. ಚರ್ಮ ಇದಕ್ಕೆ ಸ್ಪರ್ಶಿಸುವ ಶಕ್ತಿ ಇದೆ. ಚರ್ಮದೊಳಗಣ ಚರ್ಮಕ್ಕೆ ಒಳನೋಟದ ಸ್ಪರ್ಶನವೊಂದಿದೆ. ನಾಲಿಗೆಗೆ ರುಚಿ ಅರುಚಿಯ ಶಕ್ತಿ ಇದೆ. ನಾಲಿಗೆಯೊಳಗಣ ನಾಲಿಗೆಗೆ ಪ್ರಸಾದ ಮಾಡಿಕೊಳ್ಳುವ ಶಕ್ತಿ ಇದೆ. ಈ ಐದು ನೋಟಗಳನ್ನು ಅಳೆದು ತೂಗಿ ಒಳ ಪ್ರವೇಶ ಮಾಡುವ ಅರಿವೆಂಬ ಗುರುದೇವನ ನೋಟವೊಂದು ಇದೆ. ಅದನ್ನು ಮನ ಮತ್ತು ತನುವಿನ ಮೂಲಕ ಅರಿತು ಅರಿತು ಅಂಗದಲ್ಲಿ ಪ್ರವೇಶ ಮಾಡಿ, ಅಲ್ಲಿಯೇ ಲೀಯವಾಗಿ, ಸಂಗ ನಿಸ್ಸಂಗವೆಂಬ ಭೌತಿಕ ದಂದುಗವನ್ನು ಹರಿದು ಹಾಕಿ ಹಿಂದು ಮುಂದೆಂಬ ಭಾವವಳಿದು ನಿಂತು ನಿಜದ ನಿರ್ಭಾವದ ನಿರಾಳದಲ್ಲಿ ಸಮರತಿಯಾಗಿರುವ ಪ್ರಾಣನಾಥನೆಂಬ ಗುರುದೇವನಲ್ಲಿ ಸಂಗಮವಾಗಿದೆ.

ಇದನ್ನು ನನಗೆ ಅರುಹಿದ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆ ಕಾಣಾ ಚೆನ್ನಬಸವಣ್ಣ ಎಂದು ಪ್ರಭುದೇವರು ತಿಳಿಹೇಳಿದ ಅರಿವಿನ ಸೂತ್ರವನ್ನು ಸದ್ಗುರು ಚೆನ್ನಬಸವಣ್ಣನೊಂದಿಗೆ ಹಂಚಿಕೊಂಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1299**

**ವಾಣಿ ನಾಲ್ಕರ ಮೇಲೆ ಮಾಣದೆ ನುಡಿವ**
**ನಿರ್ವಾಣಿಯ ಸಂಭಾಷಣೆಯ ಮಾಡಬಲ್ಲಡೆ ನಿರ್ವಾಣ.**
**ವರ್ಣವೇಳರೊಳಗೆ ಪರಿಪೂರ್ಣವಾಗಿಪ್ಪ**
**ಮಹಾವರ್ಣವ ತನ್ಮಯವ ಮಾಡಬಲ್ಲಡೆ ನಿರ್ವಾಣ.**
**ಸ್ಥಾನ ಹತ್ತರಲ್ಲಿ ಆನಂದ ಸಿಂಹಾಸನದ**
**ನಾನಾ ಬೆಳಗಿನ ಬೀಜದ ತಿರುಳನನುಭವಿಸಬಲ್ಲಡೆ ಲಿಂಗಾನುಭಾವಿ.**
**ಪ್ರಣವ ಹತ್ತರಲ್ಲಿ, ಧ್ಯಾನಚತುಷ್ಟಯ ಕೂಡಿದಲ್ಲಿಯ ಕೀಲಬಲ್ಲಡೆ ಲಿಂಗೈಕ್ಯ .**
**ಇದು ಕಾರಣ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ,**
**ನಿಮ್ಮ ಶರಣ ಚೆನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು.**

ನುಡಿದರೆ ಮುತ್ತಿನ ಹಾರದಂತಿರಬೇಕು. ನುಡಿದರೆ ಸ್ಪಟಿಕದ ಸಲಾಕೆಯಂತಿರಬೇಕು. ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು. ನುಡಿದರೆ ಲಿಂಗ ಮೆಚ್ಚಿ ಅಹುದಹುದೆನ್ನಬೇಕು. ಮುತ್ತು , ಮಾಣಿಕ್ಯ , ಸ್ಪಟಿಕ ಇವು ಯಾವು ನುಡಿಯುವುದಿಲ್ಲ, ಬೆಳಗುತ್ತವೆ. ಇವು ಬೆಳಗುವ ಬೆಳಕು ಯಾರನ್ನೂ ಹಾನಿ ಮಾಡುವುದಿಲ್ಲ.

ಜಲ ಗಟ್ಟಿಗೊಂಡು ಮುತ್ತಾಗಿದೆ. ಮಾಣಿಕ್ಯವಾಗಿದೆ, ಸ್ಪಟಿಕವಾಗಿದೆ. ಹಾಗೆಯೇ ಜಲಬಿಂದು ತಾಯಿ ಗರ್ಭಕ್ಕೆ ಹರಿದು ರಕ್ತ ,ಮೂಳೆ,ಮಾಂಸ, ಮಜ್ಜ, ಮೇದಸ್ಸು ಆಗಿ ಇವು ಸೋರದಂತೆ ಚರ್ಮದ ಕವಚವಾಗಿ ತನುವಾಗಿದೆ. ತನು ಕೂಡಾ ಜಲಬಿಂದುವಿನಿಂದಲೇ ಆದದ್ದು ಮುತ್ತು , ಮಾಣಿಕ್ಯ ,ಸ್ಪಟಿಕ ಬೆಳಗಿದಂತೆ ತನುವಿಗೆ ಕೂಡಾ ಅರಿವಿನಿಂದ ಬೆಳಗುವ ಶಕ್ತಿ ಇದೆ. ಹೀಗೆ ಬೆಳಗುವ ನುಡಿಗೆ ನಿರ್ವಾಣಿಯ ಶಕ್ತಿ ಇದೆ. ಅಜ್ಞಾನ ಸತ್ತಾಗ ತನುವಿನಲ್ಲಿ ತನ್ಮಯವಾದ ಅರಿವು ತನಗೆ ತಾನೇ ಬೆಳಗುತ್ತದೆ. ಅದು ಪರಿಪೂರ್ಣವಾದ ಅರಿವು. ಅದು ನಿರ್ವಾಣಿ, ಮಾತಲ್ಲದ ಮಾತು. ಅಜ್ಞಾನದ ಮಾತನ್ನು ಅಳಿಯುವ ಮಾತು. ತನಗೆ ತಾನೇ ಹೊರಬರುತ್ತದೆ.

ಆನಂದ ಸಿಂಹಾಸನದ ಮೇಲೆ ವಿರಾಜಮಾನನಾಗಿ ಬೆಳಗಿನ ಬೀಜದ ತಿರುಳನು ಅನುಭವಿಸುವ ಲಿಂಗಾನುಭಾವಿಯಾಗಿ ಮೆರೆಯುತ್ತಾನೆ. ತನಗೆ ತಾನೇ ಪ್ರಣವನಾಗುತ್ತಾನೆ. ಲಿಂಗೈಕ್ಯನಾಗುತ್ತಾನೆ. ಕಪಿಲಸಿದ್ಧಮಲ್ಲಿಕಾರ್ಜುನಯ್ಯನೇ ತಾನಾಗುತ್ತಾನೆ. ತನ್ನನ್ನು ಪರಮ ಸುಖಕ್ಕೆ ತೆಗೆದುಕೊಂಡು ಹೋದ ಚೆನ್ನಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎಂದು ಸಿದ್ಧರಾಮ ಶಿವಯೋಗಿಗಳು ಶ್ರೀಗುರುದೇವನನ್ನು ಸ್ಮರಿಸಿದ್ದಾರೆ.

**1300**

**ಭಕ್ತರೂಪು ಬಸವಣ್ಣ, ಕ್ಷಮಾರೂಪು ಬಸವಣ್ಣ ;**
**ಗುರುಸ್ವರೂಪು ಚೆನ್ನಬಸವಣ್ಣ, ಪ್ರಸಾದಸ್ವರೂಪು ಚೆನ್ನಬಸವಣ್ಣ.**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಪ್ರಭುವಾಗಿ ಬಂದು**
**ಬಸವಣ್ಣ ಚೆನ್ನಬಸವಣ್ಣನ ಒಕ್ಕುದಕೊಂಡು ಜಂಗಮವಾದನಯ್ಯಾ .**

ಬಸವಣ್ಣನೆಂದರೆ ಸಾಮಾನ್ಯನಲ್ಲ. ಆತ ಭಕ್ತರೂಪು ಕ್ಷಮಾರೂಪು. ಚೆನ್ನಬಸವಣ್ಣ ಸಾಕ್ಷಾತ್ ಗುರುಸ್ವರೂಪು ಪ್ರಸಾದರೂಪು. ಇವರು ರೂಪುಳ್ಳವರಾದರೂ ನಿರೂಪು. ಕಣ್ಣಿಗೆ ಕಂಡರೂ ಕಾಣಬಾರದವರು. ಹಿಡಿಯಲು ಹೋದರೆ ನಿರಾಕಾರ ಸ್ವರೂಪರು ಅವರು. ಪ್ರಭುದೇವರು, ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ . ಬಸವಣ್ಣ, ಚೆನ್ನಬಸವಣ್ಣ ಇವರು ಒಕ್ಕುದಕೊಂಡು ಜಂಗಮವೇ ತಾವಾದವರು.

ಜಂಗಮನೆಂದರೆ ಜಾತಿಯಲ್ಲ. ವ್ಯಕ್ತಿಯೂ ಅಲ್ಲ. ವ್ಯಕ್ತಿಯೊಳಗಣ ಅವ್ಯಕ್ತ ಶಕ್ತಿ . ಇಂತಹ ಅವ್ಯಕ್ತ ವ್ಯಕ್ತಿಯನ್ನು ಸಾಕ್ಷಾತ್ಕಾರ ಮಾಡಿಕೊಂಡ ವ್ಯಕ್ತಿಯೇ ಸರ್ವಶಕ್ತನು, ಆತ ಬೇರೆ ಯಾರೂ ಅಲ್ಲ, ಸಾಕ್ಷಾತ್ ಅಲ್ಲಮಪ್ರಭು ಕಪಿಲಸಿದ್ಧಮಲ್ಲಿಕಾರ್ಜುನನು. ಪ್ರಭುವಿನ ಪಾತ್ರ ಧರಿಸಿ ಬಂದು ಬಸವಣ್ಣ ಚೆನ್ನಬಸವಣ್ಣನವರು ಒಕ್ಕುದನು ಕೊಂಡು ಜಂಗಮವೇ ತಾವಾದವರು.

**1301**

**ನೀವು ಮಹಿಮರು ; ನಿಮ್ಮ ಮಹಿಮೆ ತಿಳಿಯದು ನೋಡಯ್ಯ .**
**ನಿಮ್ಮ ಸತ್ವವೆ ಬಸವಣ್ಣನು, ನಿಮ್ಮ ಜ್ಞಾನವೆ ಚೆನ್ನಬಸವಣ್ಣನು,**
**ನಿಮ್ಮ ರಾಣಿಯರೆ ಅಕ್ಕನಾಗಮ್ಮನು,**
**ನಿಮ್ಮ ಮಹತ್ವರೆ ಪ್ರಭುದೇವರು**
**ನೋಡಯ್ಯ ,ಕಪಿಲಸಿದ್ಧಮಲ್ಲಿಕಾರ್ಜುನಾ.**

ಪರಮಾತ್ಮನು ಹೊರಗಿಲ್ಲ. ಅವನಿಗೆ ಆಲಯ ಕಟ್ಟುವ ಅವಶ್ಯಕತೆಯೂ ಇಲ್ಲ.

ದೇವರೆಂದರೆ ಭಯ, ಭಕ್ತಿ ಹೀಗಾಗಿ ಕಾಣದ ದೇವರಿಗೆ ಆಲಯ ಕಟ್ಟಿ ಆ ಆಲಯದಲ್ಲಿ ಆ ದೇವರನ್ನು ಕೂಡಿಸಿ ಆರಾಧಿಸುವುದು ಲೋಕ. ಲೋಕಕ್ಕೆ ಆತ ಯಾರು ಎಂದು ಪರಿಚಯವಿಲ್ಲ. ಆತನನ್ನು ಪರಿಚಯಿಸಿಕೊಂಡವರು ಶರಣರು. ಸಾಕ್ಷಾತ್ ಆ ದೇವರಿಗೆ ಶರಣು ಹೋಗಿ ಸಕಲ ಶರಣರು ದೇವರೇ ಆದರು.

ದೇಹವನ್ನು ಆಲಯ ಮಾಡಿಕೊಂಡು ಮನಸ್ಸನ್ನು ಭಕ್ತನನ್ನಾಗಿಸಿ ದೇಹದಲ್ಲಿರುವ ಅರಿವನ್ನೇ ದೇವರನ್ನಾಗಿಸಿ, ಗುರುವನ್ನಾಗಿಸಿ ಆ ಗುರುದೇವನಿಗೆ ಸಂಪೂರ್ಣ ಶರಣು ಹೋದವನೇ ಶರಣ ಇಂತಹ ಶರಣ ಮಾತ್ರ ದೇವರ ಮಹಿಮೆಯನ್ನು ಬಲ್ಲ, ಆತನ ಮಹಿಮೆಯನ್ನು ಕಂಡುಕೊಂಡು

ಈ ಕೆಳಗಿನಂತೆ ಹಾಡುತ್ತಾನೆ.

ನೀವು ಮಹಾಮಹಿಮರು ನಿಮ್ಮ ಮಹಿಮೆ ಲೋಕಕ್ಕೆ ತಿಳಿಯದು ನೋಡಯ್ಯ, ನಿಮ್ಮ ಸತ್ವವೇ ಬಸವಣ್ಣನು. ನಿಮ್ಮ ಜ್ಞಾನವೇ ಚೆನ್ನಬಸವಣ್ಣನು. ನಿಮ್ಮ ರಾಣಿಯರೇ ಅಕ್ಕನಾಗಮ್ಮ ಮುಂತಾದ ಶಿವಶರಣೆಯರು. ನಿಮ್ಮ ಮಹತ್ವವೇ ಪ್ರಭುದೇವರು ನೋಡಯ್ಯ ಕಪಿಲಸಿದ್ದಮಲ್ಲಿಕಾರ್ಜುನ.

ನೀವು ಯಾರಿಗೂ ಕಂಡು ಬರುವುದಿಲ್ಲ. ಆದರೆ ಸಕಲರ ದೇಹವನ್ನೇ ದೇವಾಲಯವನ್ನಾಗಿ ಮಾಡಿಕೊಂಡು ಆ ಆಲಯದಲ್ಲಿ ನೀವು ವಾಸವಿರುವಿರಿ. ನಿಮ್ಮ ಇರುವಿಕೆಯನ್ನು ನೀವೇ ಸೃಷ್ಠಿ ಮಾಡಿದ ಮನಕ್ಕೆ ಮಾತ್ರ ತಿಳಿಯಬೇಕು. ನೀವೇ ಸೃಷ್ಠಿ ಮಾಡಿದ ತನುವಿಗೆ ಮಾತ್ರ ತಿಳಿಯಬೇಕು. ಹೀಗೆ ನಿಮ್ಮ ಸತ್ವವನ್ನು ಅರಿತವರೇ ಬಸವಣ್ಣ. ನಿಮ್ಮ ಜ್ಞಾನವೇ ತಾವಾದವರು ಚೆನ್ನಬಸವಣ್ಣ. ನಿಮ್ಮ ರಾಣಿಯರೇ ಅಕ್ಕನಾಗಮ್ಮ ಮುಂತಾದ ಶಿವಶರಣೆಯರು ನಿಮ್ಮ ಮಹತ್ವವೇ ತಾವಾದವರು ಪ್ರಭುದೇವರು ನೋಡಯ್ಯ ಎಂದು ಸಿದ್ಧರಾಮ ಶಿವಯೋಗಿಗಳು ಗುರುದೇವನ ಇರುವಿಕೆಯನ್ನು ಕಂಡುಕೊಂಡು ಹಾಡಿದ್ದಾರೆ.

**1302**

**ಎಲೆ ಎಲೆ ಲಿಂಗವೆ, ನಾನಂದೆ ಬರಲಿಲ್ಲ ಕಲ್ಯಾಣಕ್ಕೆ.**
**ಎಲೆ ಎಲೆ ಲಿಂಗವೆ, ನಾನಂದೆ ಬರಲಿಲ್ಲ ಮಾರ್ಗಕ್ಕೆ.**
**ಎಲೆ ಎಲೆ ಲಿಂಗವೆ, ನಾನಂದೆ ಚೆನ್ನಬಸವಣ್ಣನಾಗಲಿಲ್ಲ,**
**ಲಿಂಗವೆ ಲಿಂಗವೆ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಪಿಲಸಿದ್ಧಮಲ್ಲಿಕಾರ್ಜುನಯ್ಯನೇ ನನ್ನ ದೇಹದ ಹಲವಾರು ವರ್ಷಗಳ ಆಯುಷ್ಯ ನಷ್ಟವಾದ ಮೇಲೆ ನೀನು ಪ್ರಕಟವಾಗಬೇಕೇ ! ನನಗೆ ಮೊದಲೇ ನೀನು ಏಕೆ ದರುಶನ ಕೊಡಲಿಲ್ಲ.

ನಾನು ಈ ಹಿಂದೆಯೇ ಕಲ್ಯಾಣಕ್ಕೆ ಬಂದಿದ್ದರೆ ನಿನ್ನ ದರುಶನ ನನಗೆ ಆಗುತ್ತಿತ್ತು ಲಿಂಗಯ್ಯನೇ ನಾನಂದು ಬರಲಿಲ್ಲ. ಅರಿವಿನ ಈ ಮಾರ್ಗಕ್ಕೆ ಎಲೆ ಎಲೆ ಲಿಂಗವೇ, ನೀನು ನನಗೆ ಅಂದೇ ಏಕೆ ನಿನ್ನ ದರ್ಶನ ಮಾಡಿಕೊಳ್ಳಲು ನನಗೆ ಪ್ರೇರಣೆ ನೀಡಲಿಲ್ಲ. ಎಲೆ ಎಲೆ ಲಿಂಗವೇ ನಾನಂದೇ ಚೆನ್ನಬಸವಣ್ಣನಾಗಲಿಲ್ಲ ?

ಚೆನ್ನಬಸವಣ್ಣ ನನಗೆ ಗುರುದೇವ, ನಾನು ಆತನಿಗೆ ಶಿಷ್ಯ. ಆತ ನನಗೆ ವಿನೋದಕ್ಕಾಗಿ ಗುರುವಾದ, ನಾನು ಆತನಿಗೆ ವಿನೋದಕ್ಕಾಗಿಯೇ ಶಿಷ್ಯನಾದೆ. ಗುರುಶಿಷ್ಯರಿಬ್ಬರೂ ನಿನ್ನನ್ನು ಕಂಡುಕೊಳ್ಳಲು ಬಂದವರು. ಲಿಂಗಯ್ಯನೇ ನೀನಾದರೂ ಸರ್ವಾಂಗದಲ್ಲಿ ಬಚ್ಚಿಟ್ಟುಕೊಂಡಿರುವೆ. ಸರ್ವಾಂಗಗಳು ನಿನ್ನನ್ನು ಅಂಗದಲ್ಲಿ ಹುಡುಕುವುದನ್ನು ಬಿಟ್ಟು ಹೊರಗೆ ಹುಡುಕುತ್ತಲಿವೆ. ಲಿಂಗಯ್ಯನೇ ನಿನ್ನನ್ನು ಅಂಗದ ಮೇಲೆ ಧರಿಸಿಕೊಂಡು ಅದನ್ನೇ ಲಿಂಗಯ್ಯನೆಂದು ಪೂಜಿಸಿ ಪೂಜಿಸಿ ಅಂಗದ ಆಯುಷ್ಯವನ್ನೇ ಕಳೆದುಕೊಳ್ಳುತ್ತಲಿವೆ. ಸರ್ವಾಂಗದಲ್ಲಿಯೂ ಇದ್ದ ನೀನು ಅಂಗವನ್ನು ಆವರಿಸಿದ ಮನವನ್ನು ನಾನು ಇಲ್ಲೇ ಇರುವೆ ಎಂದು ಎಚ್ಚರಿಸಿದರೂ ಅವು ಏಕೆ ಎಚ್ಚರಗೊಳ್ಳುತ್ತಿಲ್ಲ ಎಲೆ ಎಲೆ ಲಿಂಗವೇ. ಶರಣರ ಅರಿವಿನ ಮಾರ್ಗಕ್ಕೆ ನಾನಂದೇ ಬರಲಿಲ್ಲ ಕಲ್ಯಾಣಕ್ಕೆ ಎಲೆ ಎಲೆ ಲಿಂಗವೇ ಕಪಿಲಸಿದ್ಧಮಲ್ಲಿಕಾರ್ಜುನನೇ.

1303

**ಅಯ್ಯಾ ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಕಂಡು**
**ಒಳಗೆ ಬೈಚಿಟ್ಟುಕೊಂಡೆನಯ್ಯಾ .**
**ಅಯ್ಯಾ ನಿಮ್ಮ ಶರಣ ಬಸವಣ್ಣನಿಂದ**
**ಲಿಂಗವ ಹಾಸಿ ಹೊದೆದುಕೊಂಡೆನಯ್ಯಾ .**
**ಅಯ್ಯಾ ನಿಮ್ಮ ಶರಣ ಬಸವಣ್ಣನಿಂದ ನಿರವಯವಾದೆನು.**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ,**
**ನಿಮ್ಮ ಶರಣ ಬಸವಣ್ಣಂಗೆ ನಮೋ ನಮೋ ಎನುತಿರ್ದೆನು.**

ಅಂಗದಲ್ಲಿಯೇ ಸಂಗಮವಾದ ಪರಮಾತ್ಮನೇ ಅಂಗದಲ್ಲಿಯೇ ಬಚ್ಚಿಟ್ಟುಕೊಂಡ ನಿನ್ನನ್ನು ನಿನ್ನ ಕಂಡ ಶರಣ ಬಸವಣ್ಣನು ನನಗೆ ಹೇಳಿದ ನಿಮಿತ್ಯ ನಾನು ನಿನ್ನನ್ನು ಕಂಡು ಧನ್ಯನಾದೆನಯ್ಯಾ .

ಅಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನನೇ ಅಂಗದಲ್ಲಿಯೇ ಬಚ್ಚಿಟ್ಟುಕೊಂಡ ನಿನ್ನನ್ನು ಕಂಡು ನಿನ್ನನ್ನೇ ಹಾಸಿ ಹೊದ್ದುಕೊಂಡೆನಯ್ಯಾ ; ಶರಣ ಬಸವಣ್ಣನ ದಯೆಯಿಂದ. ಅಯ್ಯಾ ನಿಮ್ಮ ಶರಣ ಬಸವಣ್ಣನಿಂದಾಗಿ ನಿರವಯವಾದೆನು. ನನ್ನ ಅಜ್ಞಾನದ ಕತ್ತಲು ನಿನ್ನ ಬೆಳಕಿನಿಂದ ಬೆಳಗುವ ಮೂಲಕ ಬೆಳಕೇ ಆಯಿತು. ಕಪಿಲಸಿದ್ಧಮಲ್ಲಿಕಾರ್ಜುನಯ್ಯನೇ ನಿಮ್ಮ ಶರಣ ಬಸವಣ್ಣಂಗೆ 'ನಮೋ ನಮೋ' ಎನ್ನುತ್ತಾ ಬದುಕಿದೆನು ತಂದೆ ಕಪಿಸಿದ್ಧಮಲ್ಲಿಕಾರ್ಜುನ.

1304

**ಎಲೆ ಅಯ್ಯಾ , ನಿಮ್ಮ ನೆಚ್ಚಿನ ಮಚ್ಚಿನ ಶರಣರ ಸಂಗದಲ್ಲಿರಿಸಿ,**
**ಎನ್ನನಾಗು ಮಾಡಿದಿರಿ.**
**ಆಹಾ! ನಿಮ್ಮ ಕರುಣವನೇನೆಂದುಪಮಿಸುವೆನು?**
**ಎರಡು ಪುರವ ಮೆಟ್ಟಿ ಮೇಲು ಪುರವ ನೋಡುತಿರ್ದೆನು.**
**ಮೇಲು ಪುರವ ಭೇದಿಸಲೊಡನೆ ನೀನು ನಾನಾದೆನಯ್ಯಾ .**
**ಕಪಿಲಸಿದ್ಧಮಲ್ಲಿನಾಥಾ,**
**ನಿಮ್ಮ ಶರಣ ಪ್ರಭುದೇವರ**
**ಕರುಣದಿಂದಲಾನು ಬದುಕಿದೆನು.**

ಕಪಿಲಸಿದ್ಧಮಲ್ಲಿಕಾರ್ಜುನಯ್ಯನೇ ನಿಮ್ಮ ಅಚ್ಚುಮೆಚ್ಚಿನ ಶರಣರ ಸಂಗದಲ್ಲಿ ನನ್ನನ್ನು ಇರಿಸಿ ನನ್ನನ್ನು ಆಗು ಮಾಡಿದಿರಿ ತಂದೆ. ಆಹಾ? ನಿಮ್ಮ ಕರುಣವನು ಏನೆಂದು ಉಪಮಿಸುವೆನು ? ಉಪಮಿಸಲು ಬಾರದು. ಎರಡು ಪುರವ ಮೆಟ್ಟಿ ಮೇಲು ಪುರವ ನೋಡುತಿರ್ದೆನು.

ತನುವಿನದು ಒಂದು ಪುರ, ತನುವನ್ನು ಆವರಿಸಿದ ಮನದ್ದು ಕೂಡಾ ಒಂದು ಪುರ. ಅನಂತ ಜನ್ಮಗಳಿಂದ ತನುವೇ ನಾನೆಂದು ಬಳಲಿ ಬೆಂಡಾದೆ. ತನುವನ್ನು ಆವರಿಸಿದ ಮನವೇ ನಾನೆಂದು ತೊಳಲಿ ಬಳಲಿ ಬೆಂಡಾದೆ, ತನು ನಾನಲ್ಲವೆಂದು ನಿಮ್ಮ ಮೆಚ್ಚಿನ ಶರಣರಿಂದ ನನಗೆ ತಿಳಿಯಿತು. ಮನವು ನಾನಲ್ಲವೆಂದು ನಿಮ್ಮ ಶರಣರಿಂದ ನನಗೆ ತಿಳಿಯಿತು. ನಿಮ್ಮ ಶರಣರ ದಯೆಯಿಂದ ಈ ಎರಡು ಅಜ್ಞಾನದ ಪುರವನ್ನು ಮೆಟ್ಟಿ ಅರಿವಿನ ಪುರವನ್ನು ನೋಡಿದೆ ತಂದೆ. ಅದು ನೀನಿದ್ದ ಕೈಲಾಸ.

ಅದನ್ನು ಬೇಧಿಸಲೊಡನೆ ನೀನು ನಾನಾದೆನಯ್ಯಾ ಕಪಿಲಸಿದ್ಧಮಲ್ಲಿನಾಥ, ನಿಮ್ಮ ಶರಣ ಪ್ರಭುದೇವರ ಕರುಣದಿಂದ ನಾನು ಬದುಕಿದೆನು ನನ್ನಯ್ಯಾ .

**1305**

**ಅಯ್ಯಾ , ಮೂರುಪುರದ ಮೇಲುಪ್ಪರಿಗೆಯ**
**ಕೆಲಸವನೇನೆಂಬೆನಯ್ಯಾ ?**
**ಮುತ್ತಿನ ಕಳಸದ ಮೇಲೊಂದು**
**ಅರಳಿದ ಪುಷ್ಪದ ಪರಿಯೊಳಗೆ ಅಗ್ನಿಯ ಕಂಡೆನಾಗಿ,**
**ಕಪಿಲಸಿದ್ಧಮಲ್ಲಿನಾಥ,**
**ನಿಮ್ಮ ಶರಣ ಚೆನ್ನಬಸವಣ್ಣ ತೋರಿದ ಹಾದಿ**
**ಸುಪಥವಾಯಿತ್ತಾಗಿ, ನಾನು ಚೆನ್ನಬಸವಣ್ಣಂಗೆ**
**ನಮೋ ನಮೋ ಎನುತಿರ್ದೆನು.**

ಕಪಿಲಸಿದ್ಧಮಲ್ಲಿಕಾರ್ಜುನ, ನೀನಿದ್ದ ಅಂಗವದು ಲಿಂಗಯ್ಯನ ಮನೆ. ಹೀಗಾಗಿ ಶರಣರು ಇದನ್ನು ಕೈಲಾಸ ಎಂದು ಕರೆದಿದ್ದಾರೆ. ಮನ ಕೂಡಾ ಘನವಾದದ್ದೇ ಸೃಷ್ಟಿ ಮಾಡಿದ ನಿನ್ನನ್ನು ತಿಳಿಯದ್ದರಿಂದ ಅದು ಮನವಾಯಿತು. ನಿನ್ನದೂ ಒಂದು ಮಹಾಮನೆ. ಹೀಗಾಗಿ ತನುವೆಂಬುದು ಮೂರುಪುರದ ಮೇಲುಪ್ಪರಿಗೆಯ ಮನೆ. ಇದರ ಕೆಲಸವನ್ನು ಏನೆಂದು ಹೇಳಲಿ ಪರಮಾತ್ಮನೇ ? ಮುತ್ತಿನ ಕಳಸದ ಮೇಲೊಂದು ಅರಳಿದ ಪುಷ್ಪ ಅದರೊಳಗೆ ಅಗ್ನಿಯ ಕಂಡೆ; ಅದು ಜ್ಞಾನಾಗ್ನಿ . ಕಾಣುವ ಸಕಲ ಅಜ್ಞಾನವನ್ನು ಕೂಡಲೇ ಭಸ್ಮ ಮಾಡಿ ತನ್ನಂತೆ ಮಾಡಿಕೊಳ್ಳುವ ಜ್ಞಾನಾಗ್ನಿ. ಕಪಿಲಸಿದ್ಧಮಲ್ಲಿಕಾರ್ಜುನಾ ಇದನ್ನು ನಿಮ್ಮ ಶರಣ ಚೆನ್ನಬಸವಣ್ಣ ತೋರಿದ ಹಾದಿ. ಇದು ನನಗೆ ಸುಪಥವಾಯಿತು. ನಾನು ಚೆನ್ನಬಸವಣ್ಣಂಗೆ ನಮೋ ನಮೋ ಎಂದು ಬದುಕಿದೆನು ತಂದೆ.

**1306**

**ಆಜ್ಞಾಸಿದ್ಧನನರ್ಚಿಸುವಲ್ಲಿ ಆರಯ್ಯಾ ಬಲ್ಲವರು, ಚೆನ್ನಬಸವಣ್ಣನಲ್ಲದೆ ?**
**ಮೂರ್ತಿಯೆಂಟು ಆಗದ ಮುನ್ನ ಮುಖಲಿಂಗವಾಗಿದರ**
**ಸುದ್ಧಿಯನ್ನಾರಯ್ಯ ಬಲ್ಲವರು, ಚೆನ್ನಬಸವಣ್ಣನಲ್ಲದೆ ?**
**ಸದಮಲಜ್ಞಾನದಲ್ಲಿ ಒಪ್ಪಿಪ್ಪ ಅಕ್ಷರದ್ವಯದ**
**ಭೇದಾದಿ ಭೇದವ ಭೇದಿಸಿ ಲೋಕಕ್ಕೆ ಭಕ್ತಿಯ ಸಾಧಿಸಿಕೊಟ್ಟು**
**ಲೋಕಕ್ಕೆ ಉರುತರ ಗುರುವಾದ ಕಾರಣ ಚೆನ್ನಬಸವಣ್ಣನೈ ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಲೋಕ ಜ್ಞಾನದ ಪರಮ ಸುಖದಲ್ಲಿಲ್ಲ. ಅದು ಅಜ್ಞಾನದ ಆರಾಧನೆಯಲ್ಲಿದೆ. ಅಜ್ಞಾನದ ಸುಖವೆಂದರೆ ಅದಕ್ಕೆ ಬಲು ಇಷ್ಟ ಅದನ್ನು ಹುಡುಕಿ ಪಡೆಯುತ್ತದೆ.

ಜ್ಞಾನವೆಂದರೆ ಪರಮಸುಖ ಅದು ಅಂಗದಲ್ಲಿಯೇ ಇದೆ. ಅದನ್ನು ಅರ್ಚಿಸಿ ಪೂಜಿಸುವವರು ಮಾತ್ರ ವಿರಳಾತಿ ವಿರಳ. ಜ್ಞಾನಾರ್ಜನೆಯಲ್ಲಿ ತೊಡಗಿದಾತ ಚೆನ್ನಬಸವಣ್ಣ

ಅಷ್ಟಮದವನ್ನು ಮುರಿದು ಸಪ್ತ ವ್ಯಸನಗಳನ್ನು ಸುಟ್ಟು ಅರಿಷಡ್ವರ್ಗಗಳಿಗೆ ಅರಿವಿನ ಲಿಂಗಧಾರಣೆ ಮಾಡಿ ಲಿಂಗ ಮುಖವೇ ತಾನಾದಾತ ಚೆನ್ನಬಸವಣ್ಣ, ಸದಮಲ ಜ್ಞಾನದಲ್ಲಿ ಒಪ್ಪಿಪ್ಪ ಅಕ್ಷರೋತ್ತಮನು ಆತ. ಅಂಗವನ್ನು ಆವರಿಸಿದ ಸಕಲ ಅಜ್ಞಾನವನ್ನು ಅಂಗದಲ್ಲಿಯೇ ಸಂಗಮವಾದ ಅರಿವಿನಿಂದ ಬೇಧಿಸಿ ಲೋಕಕ್ಕೆ ಅರಿವಿನ ಭಕ್ತಿಯನ್ನು ಸಾಧಿಸಿಕೊಟ್ಟು ಇಡೀ ಲೋಕಕ್ಕೆ ಉರುತರ ಗುರುವಾದ ಚೆನ್ನಬಸವಣ್ಣ ಕಪಿಲಸಿದ್ಧಮಲ್ಲಿಕಾರ್ಜುನಾ. ನಿನ್ನಿಂದ ಸಾಧ್ಯವಾಗದ ಕಾಯಕ ಚೆನ್ನಬಸವಣ್ಣನಿಂದ ಸಾಧ್ಯವಾಯಿತು. ಏಕೆಂದರೆ ಇಡೀ ಲೋಕಕ್ಕೆ ನಿನ್ನನ್ನು ಪರಿಚಯಿಸಿದಾತ ಚೆನ್ನಬಸವಣ್ಣ.

**1307**

**ಎಲೆ ಅಯ್ಯಾ ಗಾರುಡವ ಬಲ್ಲನಯ್ಯಾ, ಮತ್ತೆ ಗಾರುಡಿಗನಲ್ಲ ನೋಡಯ್ಯಾ.**
**ಎನ್ನ ಮನದ ಮೇಲಿಪ್ಪ ಶಂಕೆಯೆಂಬ ವಿಷವ**
**ಗಾರುಡಿಸಿ ಮಾಣಿ ನಿಶ್ಯಂಕನ ಮಾಡಿದ**
**ಕಪಿಲಸಿದ್ಧಮಲ್ಲಿನಾಥನಲ್ಲಿ ಮಡಿವಾಳ ಮಾಚಿತಂದೆಯ ಪಾದಕ್ಕೆ**
**ನಮೋ ನಮೋ ಎನುತಿರ್ದೆನು.**

ಮಡಿವಾಳ ಮಾಚಿ ತಂದೆ ಮನದ ಮೈಲಿಗೆಯನ್ನು ತೊಳೆದಾತ. ಆತ ಗಾರುಡಿಗ; ಆದರೂ ಮಾಂತ್ರಿಕನಲ್ಲ ನೋಡಯ್ಯಾ. ಮನದ ಮೇಲಿರುವ ಶಂಕೆ ಎಂಬ ವಿಷವ ಗಾರುಡಿಸಿ ಮಾಣಿಸಿ ನಿಶ್ಯಂಕನ ಮಾಡಿದ ಶಿವಪರಮಾತ್ಮನು ಆತ.

ಅಂಗವನ್ನು ಆವರಿಸಿದ ಮನ ಹಾವಾಗಿ ಇಡೀ ಅಂಗಕ್ಕೆ ವಿಷವನ್ನು ಕಕ್ಕಿ ಜನನ ಮರಣದ ಬಾಧೆಗೆ ಸಿಲುಕಿಸಿತ್ತು. ಮಡಿವಾಳ ಮಾಚಿ ತಂದೆ ಗಾರುಡಿಗ ಹಾವಿನ ಮಂತ್ರ ಬಲ್ಲಾತ. ಕಾಣಬಾರದ ಹಾವನ್ನು ಹಿಡಿದು ಅದರ ವಿಷದ ಹಲ್ಲನ್ನು ಕಿತ್ತಿ ಕೊರಳಲ್ಲಿ ಧರಿಸಿಕೊಂಡು, ನಾಗಭೂಷಣನೇ ತಾನಾಗುವ ಸೂತ್ರವನ್ನು ಇಡೀ ಲೋಕಕ್ಕೆ ಹೇಳಿದ ಮಡಿವಾಳ ಮಾಚಿ ತಂದೆಯ ಪಾದಕ್ಕೆ ನಮೋ ನಮೋ ಎಂದು ಬದುಕಿದನು ತಂದೆ.

**1308**

**ಮೂರು ಕಟ್ಟಿಗೆಯ ಮೂರರಲ್ಲಿರಿಸಿದನು.**
**ನಿರಾಳ ನಿಷ್ಪತ್ತಿಯಾದ ಲಿಂಗದಲ್ಲಿ**
**ಆರೂಢ ಅಂಗುಲದೊಳರುವೆರಳನರಿಸಿದನು**
**ಧೀರ ಮೋಳಿಗೆ ಮಾರ ಶರಣು ಶರಣು**
**ಆರೂಢ ದಶಗಳ ಭೇದವನರಿದಂತೆ**
**ತೋರಿದ ಶರಣೆಂದೆನ್ನೈ, ಕಪಿಲಸಿದ್ಧಮಲ್ಲಿನಾಥಾ.**

ಭೂಮಂಡಲದಲ್ಲಿರುವ ಅಂಗಗಳೆಲ್ಲ ಲೋಕದ ರೂಢಿಯಲ್ಲಿ ಇವೆ. ಸಮಾಜದಲ್ಲಿರುವ ಸಕಲ ರೂಢಿಗಳನ್ನು ಜಾರಿಗೆ ತಂದು ಆ ರೂಢಿಯಲ್ಲಿಯೇ ತಮ್ಮ ಆಯುಷ್ಯವನ್ನು ಕಳೆಯುತ್ತವೆ. ರೂಢಿಗತವಾದ ದೇಹಕ್ಕೆ ಸುಖವುಂಟು, ದುಃಖವುಂಟು. ಮನೋಮಯವಾದ ಸೂಕ್ಷ್ಮಾಂಗ ತನಗೆ ಬೇಕಾದ ರುಚಿಯ ರೂಢಿಯನ್ನು ಸ್ಥೂಲಾಂಗದ ಮೂಲಕ ಪೂರೈಸಿಕೊಂಡು ಅರಿವಿನ ಅಂಗವನ್ನೇ ಮರೆತು ಹೋಗಿದೆ.

ಸ್ಥೂಲ ಅಂಗ ಮತ್ತು ಸೂಕ್ಷ್ಮ ಅಂಗಕ್ಕೆ ತನ್ನದೇ ಆದ ರೂಢಿ ಉಂಟು. ಸ್ಥೂಲಾಂಗ ಮತ್ತು ಸೂಕ್ಷ್ಮಾಂಗಕ್ಕೆ ಜನ್ಮ ನೀಡಿ ಸ್ಥೂಲಾಂಗದದಲ್ಲಿಯೇ ಸಂಗಮವಾದ ಅರಿವಿನ ಅಂಗಕ್ಕೆ ಯಾವ ರೂಢಿಯೂ ಇಲ್ಲ. ಅದು ಆರೂಢ.

ಸ್ಥೂಲ ಅಂಗ, ಸೂಕ್ಷ್ಮ ಅಂಗ ಅರಿವೆಂಬ ಗುರುದೇವನ ಅಂಗ ಇವು ಮೂರು ಅಂಗಗಳೇ. ಅಂಗಕ್ಕೆ ಸ್ತ್ರೀ ಮತ್ತು ಪುರುಷ ಎನ್ನುವ ಅಂಗ ಕಾಣುತ್ತದೆಯೇ ಹೊರತು ಒಂದಂಗದಲ್ಲಿಯೇ ಇರುವ ಮೂರು ಅಂಗಗಳು ಕಾಣುವುದಿಲ್ಲ. ಹೀಗೆ ಮೂರು ಅಂಗಗಳನ್ನು ಕಂಡುಕೊಂಡ ಅಂಗವೇ ಲಿಂಗಾಂಗ. ಅದು ನಿರಾಳ. ಆರೂಢನಾದವನು ಅಂಗಕ್ಕೆ ಮೆತ್ತಿಕೊಂಡ ಸಕಲ ರೂಢಿಗಳನ್ನು ಮೆಟ್ಟಿ ಅಂಗದೊಳಗೆ ಸಂಗಮವಾದ ಅರುಹನ್ನು ಅರಿತು ಆ ಅರಿವೇ ತಾನಾಗಿ ಆರೂಢನಾದವನೇ ಧೀರ ಮೋಳಿಗೆ ಮಾರಯ್ಯ ಶರಣರು. ಆರೂಢಿಯ ಭೇಧವನ್ನು ಅರಿತು ಆ ಅರಿವೇ ತಾನಾಗಿ ತೋರಿದ ಶರಣ ಮೋಳಿಗೆ ಮಾರಯ್ಯನವರಿಗೆ ಶರಣು ಶರಣು ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1309**

**ಆದಿಮಧ್ಯಾಂತರ ಭೇದಿಸಿದ ಮಹಿಮನು, ನಾದಕ್ಕತೀತನು**
**ಪರಬ್ರಹ್ಮದ ಭೇದಾದಿ ಪರತತ್ತ್ವ ಮೂಲವೆಯಾದ**
**ಆದಿಗುರು ಘಟ್ಟಿವಾಳ, ಕಪಿಲಸಿದ್ಧಮಲ್ಲಿನಾಥ.**

ಸಿದ್ಧರಾಮ ಶಿವಯೋಗಿಗಳು ಘಟ್ಟಿವಾಳಯ್ಯ ಶರಣರನ್ನು ಪರತತ್ತ್ವ ಮೂಲದ ಆದಿಗುರು ಎಂದು ಅವರಿಗೆ ಹೆಸರಿಟ್ಟು ಪರಬ್ರಹ್ಮದ ಬೇಧಾದಿ ಭೇಧವನ್ನು ಅರಿತವರು. ಆದಿ, ಮಧ್ಯೆ ಅಂತ್ಯವನ್ನು ಭೇಧಿಸಿದ ಮಹಾಮಹಿಮರು. ನಾದಕ್ಕೆ ಅತೀತರು ಎಂದು ಸ್ಮರಿಸಿದ್ದಾರೆ.

ಘಟ್ಟಿವಾಳಯ್ಯರನ್ನು ಹೀಗೆ ಕೊಂಡಾಡಿದುದರಲ್ಲಿ ಸತ್ಯವೇ ಅಡಗಿದೆ. ಅವರು ಒಮ್ಮೆ ಸತ್ಸಂಗದಿಂದ ಮನೆಗೆ ಹೋದಾಗ ಮನೆಯಲ್ಲಿ ವಿಚಿತ್ರ ದೃಶ್ಯವನ್ನು ಕಂಡರು. ಹೆಂಡತಿ ಪರಪುರುಷನೊಂದಿಗೆ ಆನಂದ ಪಡುತ್ತಿದ್ದಾಗ ಮನೆಯ ಕಟ್ಟೆಯ ಮೇಲೆ ಕುಳಿತು ಯಾವ ದುಗುಡಿವಿಲ್ಲದೆ ಸಹಜವಾಗಿದ್ದರು. ಕೆಲವು ಕ್ಷಣಗಳ ನಂತರ ಅವರಿಬ್ಬರೂ ಹೊರಗೆ ಬಂದಾಗ ಕಟ್ಟೆಯ ಮೇಲೆ ಕುಳಿತ ಘಟ್ಟಿವಾಳಯ್ಯನನ್ನು ಕಂಡು ಹೆದರಿದರು. ಆಗ ಘಟ್ಟಿವಾಳಯ್ಯ ನೀವು ಹೆದರುವ ಅವಶ್ಯಕತೆಯಿಲ್ಲ ಅತಿಥಿಗಳಾಗಿ ನೀವು ನಮ್ಮ ಮನೆಯಲ್ಲೇ ವಾಸ ಮಾಡಿ ಎಂದು ಹೇಳುತ್ತಾ ಆತನ ಮೈದಡವಿದರು.

ನಮ್ಮ ಮನೆಗೆ ಆಗಮಿಸಿದ ಅತಿಥಿಗೆ ಸಿಹಿ ಅಡುಗೆ ಮಾಡಿ ಉಣಬಡಿಸಲು ಸತಿಗೆ ಹೇಳಿದರು. ನಂತರ ತಾವು ಈ ಮನೆಯಲ್ಲಿಯೇ ವಾಸಮಾಡಬಹುದು. ತಮಗೆ ಮುಜುಗರವಾದರೆ ನೀವಿಬ್ಬರು ನಿಮಗೆ ಸಂತೋಷ ಕಂಡ ಜಾಗದಲ್ಲಿ ವಾಸವಾಗಿರಬಹುದು ಎಂದು ಹೇಳಿದರು.

ಆದಿ,ಮಧ್ಯ,ಅಂತ್ಯವೆ ಭೇದಿಸಿದ ಮಹಾಮಹಿಮನು ಈತ. ರಾಗ, ದ್ವೇಷಗಳಿಗೆ ಒಳಗಾಗದ ನಾದಕ್ಕೆ ಅತೀತನಾದಾತ ಈತ. ಪರಬ್ರಹ್ಮದ ಭೇದಾದಿ ಭೇದದ ಪರತತ್ತ್ವ ಮೂಲವೇ ಆದ ಆದಿಗುರು ಘಟಿವಾಳಯ್ಯ , ಇಂತಹ ಘಟ್ಟಿಗನನು ಈ ಲೋಕದಲ್ಲಿ ಮತ್ತಾರನೂ ಕಾಣೆ ಕಪಿಲಸಿದ್ಧಮಲ್ಲಿನಾಥ ಎಂದು ಸಿದ್ಧರಾಮ ಶಿವಯೋಗಿಗಳು ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

ಲೋಕಕ್ಕೆ ಹಿಡಿಸದ ಮಾತು ಲೋಕದೊಂದಿಗೆ ಆಡುವಂತಿಲ್ಲ. ಸತಿ ಹಾದರ ಮಾಡಿದರೆ ಲೋಕದ ಗಂಡರು ಸತಿಯನ್ನು ಕೊಂದು ಹಾಕುತ್ತಾರೆ. ಇಲ್ಲ ಹಾದರಿಗನನ್ನು ಕೊಂದು ಹಾಕುತ್ತಾರೆ

ಅಥವಾ ತಾವಾದರೂ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಇದು ಲೋಕದ ನಿಯಮ. ಮನದ ನಿಯಮ ಮನಸ್ಸು ಸದಾ ಆ ಹಾದರದಲ್ಲಿ ಭಾಗಿಯಾಗಿರುತ್ತದೆ. ಹಾದರ ಮಾಡುವುದರಲ್ಲಿ ಸದಾ ತೊಡಗಿರುತ್ತದೆ. ಅದು ದೇಹದೊಂದಿಗೆ ಸುಖ ಪಡಲು ಇಚ್ಛಿಸಿದಾಗ ಲೋಕ ಅಂತಹ ದೇಹವನ್ನು ಹಾದರದ ದೇಹ ಎಂದು ಗುರುತಿಸುತ್ತಾರೆ. ದೇಹ ನಿರಪರಾಧಿ. ಮನಸ್ಸು ಅಪರಾಧಿ. ಮನಸ್ಸನ್ನು ಯಾರೂ ಹಿಡಿಯುವುದಿಲ್ಲ, ಹಿಡಿಯುವುದಕ್ಕೆ ಅದು ಸಿಗುವುದಿಲ್ಲ ಮನದ ತಪ್ಪನ್ನು ಮನಕ್ಕೆ ಮನದಟ್ಟು ಮಾಡುವುದೇ ಮನಕ್ಕೆ ಕೊಡುವ ಶಿಕ್ಷೆ. ಘಟ್ಟಿವಾಳಯ್ಯ ಮನದ ಮೈದಡವಿ ಸತಿ ಮತ್ತು ಆತನನ್ನು ಸಮಾಧಾನಪಡಿಸಿದನು. ಹೀಗಾಗಿ ಸಿದ್ಧರಾಮ ಶಿವಯೋಗಿಗಳು ಲೋಕದ ರೂಢಿಯನ್ನು ಮೆಟ್ಟಿ ನಿಂತ ಆರೂಢ ಶರಣ ಘಟ್ಟಿವಾಳಯ್ಯನಿಗೆ ಶರಣೆಂಬೆನಯ್ಯಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1310**

**ಅಹುದಹುದು ಮತ್ತೇನು ? ಮರಹಿಂಗೆ ಹಿರಿದು ಕಿರಿದುಂಟುಲ್ಲದೆ,**
**ಅರುಹಿಂಗೆ ಹಿರಿದು ಕಿರಿದುಂಟೆ ? ಹೇಳಯ್ಯಾ .**
**ಸಾವಂಗೆ ಭಯವುಂಟುಲ್ಲದೆ ಅಜಾತಂಗೆ ಭಯವುಂಟೆ ? ಹೇಳಯ್ಯಾ .**
**ಕಪಿಲಸಿದ್ಧಮಲ್ಲಿನಾಥನಲ್ಲಿ, ಮಹಾದೇವಿಯಕ್ಕನ ನಿಲುವಿಂಗೆ**
**ಶರಣೆಂದು ಶುದ್ಧನಾದೆ ಕಾಣಾ, ಚೆನ್ನಬಸವಣ್ಣಾ.**

ಅಂಗದಲ್ಲಿ ಅರಿವು ಸಂಗಮವಾಗಿದೆ. ಅಂಗವನ್ನು ಮನವೆಂಬ ಮರಹು ಆವರಿಸಿದೆ. ಮರೆವಿನ ಕಣ್ಣಿಗೆ ಹೆಣ್ಣು ಕಾಣಿಸುತ್ತದೆ ಗಂಡು ಕಾಣಿಸುತ್ತದೆ. ದೇಹ ಮತ್ತು ದೇಹದ ಸತ್ಯ ಕಾಣುವುದಿಲ್ಲ. ಹೆಣ್ಣು ಗಂಡೆಂದು ಶ್ರೀಮಂತ- ಬಡವನೆಂದು, ಹಿರಿಯ-ಕಿರಿಯನೆಂದು, ರಾಜ, ಸೈನಿಕ,ಮಂತ್ರಿಯೆಂದು ದೇಹವನ್ನು ವಿಂಗಡಿಸಿ ನೋಡುತ್ತದೆ. ದೇಹವನ್ನು ಮರಹು ಹಿಡಿದದ್ದರಿಂದ ಸಾವುಂಟು ಜನನವುಂಟು, ಭಯವುಂಟು.

ಅರಿವು, ಇದಕ್ಕೆ ಭಯವಿಲ್ಲ, ಸಾವಿಲ್ಲ, ಜನನವಿಲ್ಲ. ಹೆಣ್ಣು ಗಂಡು ಎನ್ನುವ ಅಜ್ಞಾನವಿಲ್ಲ ಇದು ಅಜಾತ ಸಾವಿಲ್ಲದ ರೂಹಿಲ್ಲದ, ಕೇಡಿಲ್ಲದ ಚೆಲುವ. ಶರಣೆ ಮಹಾದೇವಿ ಅಕ್ಕಳ ನಿಲುವು ಇದೇ ಆಗಿರುವುದರಿಂದ ಆ ಅಕ್ಕಳಿಗೆ ಶರಣೆಂದು ಶರಣು ಹೋಗಿ ಶುದ್ಧನಾದೆ. ಚೆನ್ನಬಸವಣ್ಣಾ ಎಂದು ಸಿದ್ಧರಾಮ ಶಿವಯೋಗಿಗಳು ಅರಿವೇ ತಾನಾದ ಕಪಿಲಸಿದ್ಧಮಲ್ಲಿನಾಥಯ್ಯನೊಂದಿಗೆ ಮಾತನಾಡಿದ್ದರೆ.

**1311**

**ಎಲೆ ಎಲೆ ಅಯ್ಯಾ , ನೀವು ಹೇಳಿರಯ್ಯಾ .**
**ಎನಗೆ ಗತಿಯೇನು? ಮತಿಯೇನು ?**
**ನಿಮ್ಮಲ್ಲಿ ಸಮರಸವೆಂತು ಹೇಳಯ್ಯಾ**
**ಮೂರನೆಯ ಕರುಮಾಡದ**
**ಮೇಲುವಾಗಿಲ ಮನೆಯೊಳಗಿಪ್ಪೆನೊ ನಾನು.**
**ಚೌಕಮಧ್ಯದ ಎಂಟೆಸಳ ಮೊನೆಯ ಮೋಹರದ**
**ನಡುವಣ ಕೋಟೆಯೊಳಗಿಪ್ಪೆನೊ ನಾನು.**
**ಕಾಮನ ಕಟ್ಟುವ ಪಂಜರವ ಬಿಟ್ಟು ನಿಲುವೆನೊ,**

**ಬಿಡದೆ ನಿಲುವೆನೊ? ಹೇಳು ಹೇಳಾ ನಿರ್ಣಯವ,**
**ಎಲೆ ಕಪಿಲಸಿದ್ಧಮಲ್ಲಿನಾಥಯ್ಯ.**

ನೋಡುವುದನ್ನು ನೋಡಲಾರದೆ ಕಣ್ಣು ಕುರುಡಾಗಿದೆ. ಅಂಗ ಒಂದೇ ಆದರೂ ಹೆಣ್ಣೆಂದು, ಗಂಡೆಂದು ಅರಿಷಡ್ವರ್ಗಗಳಿಂದ ಸಪ್ತ ವ್ಯಸನಗಳಿಂದ , ಅಷ್ಟಮದಗಳಿಂದ ತುಂಬಿ ತುಳುಕುತ್ತಿದೆ. ಇದೆಲ್ಲ ತನಗೆ ಗೊತ್ತಿದ್ದರೂ ತನ್ನ ಅಜ್ಞಾನವನ್ನು ತಾನೇ ಅಳಿದುಕೊಳ್ಳಲು ತನಗೆ ಸಾಧ್ಯವಾಗುತ್ತಿಲ್ಲ, ತನುವಿಗೂ ತನುವನ್ನು ಆವರಿಸಿದ ಮನಕ್ಕೂ ಸಾಧ್ಯವಾಗುತ್ತಿಲ್ಲ.

ತನುವಿನಲ್ಲಿ ತನ್ಮಯವಾದ ಅರಿವು ತನುವಿಗೂ ಮತ್ತು ಮನಕ್ಕೂ ಸಮರಸ ಭಾವದ ಪಾಠ ಮಾಡುವುದು ತನಗೆ ಕಂಡು ಬರುತ್ತಲಿದೆ. ಆದರೂ ಅಜ್ಞಾನದ ಈ ಕೋಟೆಯಿಂದ ಬಿಡಿಸಿಕೊಳ್ಳಲು ತನಗೆ ಸಾಧ್ಯವಾಗುತ್ತಿಲ್ಲ.

ತನುವಿನ ಅಜ್ಞಾನದ ಈ ಬಾಧೆಯನ್ನು ಯಾರ ಮುಂದೆ ಹೇಳಿದರೂ ತೀರುವುದಿಲ್ಲ. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ಕಂಡುಕೊಂಡ ತನುವಿನ ಗುರುದೇವ ಸಹಕರಿಸಬಹುದಾಗಿದೆ. ಆ ಸಹಕಾರದಿಂದ ತನಗೆ ಸಹಾಯವಾಗಬಹುದೇ ಹೊರತು ಸಿದ್ಧಿಯಾಗುತ್ತದೆ ಎಂದು ಏನೂ ಇಲ್ಲ. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ಕಂಡು ಆ ಗುರುದೇವನೊಂದಿಗೆ ಮಾತನಾಡುವ ಕಲೆ ತನಗೆ ಗೊತ್ತಾಗಬೇಕು.

ಎಲೆ ಎಲೆ ಅಯ್ಯಾ ನೀವು ಹೇಳಿರಯ್ಯಾ ಎನಗೆ ನೀವಲ್ಲದೆ ಗತಿಯಿಲ್ಲ, ನೀವಲ್ಲದೆ ಮತಿಯಿಲ್ಲ, ನಿಮ್ಮಲ್ಲೇ ಸಂಗಮವಾಗಿ ಸಮರಸವನ್ನು ಸಾಧಿಸುವುದು ಎಂತು ಹೇಳಯ್ಯಾ .

ಕಾಮ ಕಟ್ಟಿದ ಪಂಜರವ ಬಿಟ್ಟು ನಿನ್ನೊಂದಿಗೆ ಒಂದಾಗಲು ನನಗೆ ಸಾಧ್ಯವೇ ಹೇಳಯ್ಯಾ ? ಬಿಟ್ಟು ಬಿಡದೆ ನಿನ್ನೊಂದಿಗೆ ಎಂದು ನಿಲ್ಲುವೆನು ಹೇಳು ಹೇಳಾ ನನ್ನ ಹಡೆದ ತಂದೆ; ಕಪಿಲಸಿದ್ಧಮಲ್ಲಿನಾಥಾ ನಿನ್ನ ನಿರ್ಣಯವನ್ನು . ಎಂಟೆಸಳ ಚೌಕ ಮಧ್ಯದ ಮೊನೆಯ ಮೋಹದ ನಡುವೆ ಇರುವ ಅಜ್ಞಾನದ ಕೋಟೆಯೊಳಗೆ ಇರುವೆ ನಾನು. ನನ್ನನ್ನು ನಿನ್ನತ್ತ ಸೆಳೆದುಕೊಂಡು ಈ ಅಜ್ಞಾನದ ಬಂಧನದಿಂದ ನನ್ನನ್ನು ಮುಕ್ತನಾಗಿಸು ಎಂದು ಸಿದ್ಧರಾಮ ಶಿವಯೋಗಿಗಳು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಕಪಿಲಸಿದ್ಧಮಲ್ಲಯ್ಯ ಎಂದು ಹೆಸರಿಟ್ಟು ಆತನೊಂದಿಗೆ ಮಾತನಾಡಿದ್ದಾರೆ.

**1312**

**ತಾಯೆ, ಪರಮ ಸುಖಕಾರದ ಮೂರ್ತಿಯನಡಗಿಸಿ ನೀನೆಯಾದೆಯವ್ವಾ.**
**ತಾಯೆ, ಮಹಾಜ್ಞಾನ ಕಲ್ಪಿತದಲ್ಲಿ ನೀನೆಯಡಗಿದೆಯವ್ವಾ.**
**ತಾಯೆ, ನೀಲಮ್ಮನೆಂಬ ಸುಖವಾಸಮೂರ್ತಿ,**
**ಕಪಿಲಸಿದ್ಧಮಲ್ಲಿನಾಥಯ್ಯಾ , ನಮ್ಮ ತಾಯೆ ನೀಲಮ್ಮನಾದಳು.**

ತಂದೆ ನೀನು, ತಾಯಿ ನೀನು, ಬಂಧು ನೀನು, ಬಳಗ ನೀನು ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವಾ. ಹಾಲಲ್ಲಾದರೂ ಅದ್ದು ನೀರಲ್ಲಾದರೂ ಅದ್ದು ನಿಮ್ಮ ಧರ್ಮ. ಎಂದು ಬಸವಣ್ಣನವರು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಕುರಿತು ಹಾಡಿದ್ದಾರೆ. ತನುವಿನಲ್ಲಿ ತನ್ಮಯವಾದ ಅರಿವು ತಂದೆಯಾದರೆ, ತನುವನ್ನು ಆವರಿಸಿದ

ಮನ ತಾಯಿ, ಇವರಿಬ್ಬರಿಗೂ ಹುಟ್ಟುವ ಕೂಸೇ ಜ್ಞಾನ. ರಾಮಕೃಷ್ಣ ಪರಮಹಂಸರು ಮನವನ್ನು ತಾಯಿ ಎಂದು ಆರಾಧನೆ ಮಾಡಿದ್ದಾರೆ. ಆ ತಾಯಿಯನ್ನು ಕುರಿತು ನಾನಾ ರೀತಿಯಿಂದ ಹಾಡಿ ಹಾಡಿ ಕುಣಿದಾಡಿದ್ದಾರೆ.

ಸಿದ್ಧರಾಮ ಶಿವಯೋಗಿಗಳು ಮನಕ್ಕೆ ತಾಯಿ ಎಂದು ಹೆಸರಿಟ್ಟು ಕರೆದು ಪರಮ ಸುಖಕ್ಕೆ ಕಾರಣವಾದ ಮೂರ್ತಿಯನ್ನು ಅಡಗಿಸಿ ಈ ತನುವನ್ನು ನಿನ್ನದಾಗಿಸಿಕೊಂಡಿರುವೆಯಲ್ಲಾ ಹಡೆದವ್ವಾ ಹೇ ತಾಯೆ ಮಹಾಜ್ಞಾನ ಕಲ್ಪಿತದಲ್ಲಿ ನೀನು ಅಡಗಿರುವೆಯಲ್ಲಾ ಹಡೆದವ್ವ ತಾಯೆ ನೀಲಮ್ಮನೆಂಬ ಸುಖವಾಸ ಮೂರ್ತಿ ಕಪಿಲಸಿದ್ಧಮಲ್ಲಿನಾಥಯ್ಯಾ ಆ ನಮ್ಮ ತಾಯಿ ನೀಲಮ್ಮನಾದಳು.

ಬಸವಣ್ಣ ಮಹಾಜ್ಞಾನದಲ್ಲಿ ಐಕ್ಯವಾದ ಮೇಲೆ ನೀಲಮ್ಮ ತಾಯಿಯನ್ನು ಸುಖವಾಸ ಮೂರ್ತಿ ಕಪಿಲಸಿದ್ಧಮಲ್ಲಿನಾಥಯ್ಯನಿಗೆ ನಮ್ಮ ತಾಯಿಯೇ ನೀಲಮ್ಮನಾದಳು ಎಂದಿದ್ದಾರೆ.

**1313**

**ಎಲೆ ಅಯ್ಯಾ , ನಿಮ್ಮವರ ನೋವೆ ಎನ್ನ ನೋವು ನೋಡಾ.**
**ಕಂಡು ಕಂಡು ಸೈರಿಸಲಾರೆ ನೋಡಯ್ಯಾ**
**ನಿಮ್ಮವರೊಡನೊರಸೊರಗಾಗಿಪ್ಪವರ ಕಂಡಡೆ**
**ನಾನವರಿಗೆ ಮುನಿವೆ ನೋಡಾ,**
**ಕಪಿಲಸಿದ್ಧಮಲ್ಲಿನಾಥಾ, ನೀನವರಲ್ಲಿಪ್ಪೆಯಾಗಿ.**

ಎಲೆ ಅಯ್ಯಾ ನಿಮ್ಮವರ ನೋವೇ ಎನ್ನ ನೋವು ನೋಡಾ; ಕಂಡು ಕಂಡು ಸೈರಿಸಲಾರೆ ನೋಡಯ್ಯಾ : ನಿಮ್ಮವರು ಎಂದರೆ ನಿಮ್ಮನ್ನು ಕಂಡವರು ನಿಮಗೆ ಶರಣು ಹೋಗಿ ಶರಣಾದವರು. ಶರಣರು. ಈ ಭೂಮಂಡಲದಲ್ಲಿರುವ ಸಕಲ ಅಂಗಗಳಲ್ಲಿಯೂ ನೀನಿರುವಿ. ನಿನ್ನನ್ನು ನೋಡುವ ಶಕ್ತಿ ಆ ಅಂಗಗಳಿಗೆ ಇಲ್ಲದಿದ್ದರೇನಾಯಿತು ಸಕಲ ಅಂಗಗಳಲ್ಲಿಯೂ ನೀನೇ ಇರುವೆ. ನಿನ್ನನ್ನು ಅರಿಯದ ನಿಮಿತ್ಯ ಆ ಅಂಗಕ್ಕೆ ಸುಖವುಂಟು, ದುಃಖವುಂಟು. ನಿನ್ನೊಂದಿಗಿದ್ದು ನಿನ್ನನ್ನು ಕಾಣದವರನ್ನು ನಾನು ಕಂಡಡೆ ನಾನವರಿಗೆ ಮುನಿವೆ ನೋಡಾ ನನ್ನದು ಹುಸಿಮುನಿಸು ನಿನ್ನನ್ನು ಕಾಣಲು ಅವರಿಗೆ ಸಾಧ್ಯವಾಗುತ್ತಿಲ್ಲವಲ್ಲ ಎನ್ನುವ ಚಿಂತೆ ನನಗೆ ಏಕೆಂದರೆ ನೀನು ಅವರಲ್ಲಿರುವೆಯಾಗಿ ಕಪಿಲಸಿದ್ಧಮಲ್ಲಿನಾಥ.

**1314**

**ಎಕ್ಕೆವಿಂಡುಗಳೆಂಬವರು ಮುಕ್ಕಣ್ಣಾ, ನಿಮ್ಮ ಗಣಂಗಳು**
**ಬತ್ತಿದ ಕೆರೆ ಬಾಯಿಬಿಟ್ಟಂತೆ ಮೊರೆಯಿಟ್ಟು ಬರಲು,**
**ಹೊತ್ತಿನ ಅಂಗಾಲ ಕಿಚ್ಚು ನೆತ್ತಿಯ ಮುಟ್ಟಿದಡೆ,**
**ಚಕ್ಕನೆ ಕಪಿಲಸಿದ್ಧಮಲ್ಲಿನಾಥ ನೊಸಲಕಣ್ಣ ತೆಗೆದನು.**

ಪ್ರತಿ ತನುವಿಗೆ ಒಂದು ಅರಿವಿನ ಕಣ್ಣು ಇದೆ. ಅದೇ ಗುರುದೇವನ ಕಣ್ಣು. ಸದಾಶಿವನ ಕಣ್ಣು. ಮಹಾದೇವನ ಕಣ್ಣು. ಸಾಕ್ಷಾತ್ ಪರಬ್ರಹ್ಮನ ಕಣ್ಣು. ಈ ಕಣ್ಣನ್ನು ಎಚ್ಚರಿಸಲು ಹೋದ ಮನದ ಕಾಮಿ ಕಣ್ಣು ಸುಟ್ಟು ಬೂದಿಯಾಯಿತು.

ಇಂತಹ ಕಣ್ಣನ್ನು ದೇವಾನು ದೇವತೆಗಳು ಹಾಗೂ ಮಾನವ ಕುಲ ನೊಸಲ ಕಣ್ಣು ಎಂದು ಕರೆದಿದ್ದಾರೆ. ಶಿವನಿಗೆ ಮಾತ್ರ ಈ ಕಣ್ಣು ಇರುತ್ತದೆ. ಪ್ರತಿ ಕಾಯದಲ್ಲಿಯೂ ಶಿವ ತನ್ಮಯವಾಗಿದ್ದಾನೆ. ಕಾಯದಲ್ಲಿ ಕಾಯದಂತೆಯೇ ಇದ್ದು ಅಕಾಯವಾಗಿದ್ದಾನೆ. ಸದಾ ಧ್ಯಾನಸ್ಥಾನಾಗಿದ್ದಾನೆ.

ಕಾಯವನ್ನು ಮನೋಕಾಯು ಆವರಿಸಿದೆ. ಈ ಕಾಯ ಸ್ಥೂಲಕಾಯದ ಸಂಗ ಮಾಡಿರುವುದರಿಂದಾಗಿ ಧ್ಯಾನಸ್ಥನಾದ ಶಿವನ ಕಾಯ ಈ ಎರಡೂ ಕಾಯಗಳಿಗೆ ಕಾಣುವುದಿಲ್ಲ.

ಸ್ಥೂಲಕಾಯದ ಸಂಗಮಾಡಿದ ಮನೋಕಾಯಕ್ಕೂ ಒಂದು ಕಣ್ಣಿದೆ. ಇದು ಕಾಮದ ಕಣ್ಣು. ಸ್ಥೂಲ ಕಾಯದ ಕಣ್ಣನ್ನೂ ಬಳಸಿಕೊಂಡು ತಾನು ಇಚ್ಛೆ ಪಟ್ಟ ವಸ್ತುಗಳನ್ನು ನೋಡಿ, ಆ ವಸ್ತುಗಳ ಮೂಲಕ ಮನೋಕಾಯ ಸ್ಥೂಲಕಾಯದ ಮೂಲಕ ಸುಖಪಡುತ್ತದೆ. ಇದು ಭೌತಿಕ ಸುಖವೆಂದು ಸ್ಥೂಲಕಾಯಕ್ಕೆ ತಿಳಿಯುವುದಿಲ್ಲ. ಸ್ಥೂಲ ಕಾಯದಲ್ಲಿಯೇ ಸಂಗಮವಾದ ಶಿವನಿಗೆ ವಸ್ತುವಿನ ಸತ್ಯ ಮಾತ್ರ ಗೊತ್ತು. ಅರಿವಿನ ನೇತ್ರದಿಂದ ವಸ್ತುವಿನ ಸತ್ಯ ನೋಡಿ ಮನೋಮಯವಾದ ಕಣ್ಣಿಗೆ ಬೋಧೆ ಮಾಡಿದರೂ ಅದು ಆ ಬೋಧನೆಯನ್ನು ಸ್ವೀಕರಿಸುವುದಿಲ್ಲ.

ಮನೋಮಯವಾದ ನೇತ್ರದ ದೃಷ್ಟಿ ಮುಕ್ಕಣ್ಣನ ನೇತ್ರದತ್ತ ಹೊರಳಿದರೆ ಸಾಕು ಆ ನೇತ್ರವನ್ನು ಅದರ ದೃಷ್ಟಿಯನ್ನು ನೊಸಲ ಕಣ್ಣು ಸುಟ್ಟು ಬೂದಿ ಮಾಡುತ್ತದೆ.

ಮನೋಮಯವಾದ ಕಾಮದ ಕಣ್ಣಿನಲ್ಲಿ ಅರಿಷಡ್ವರ್ಗಗಳೆಂಬ ಆರು ಗಣಂಗಳು, ಸಪ್ತ ವ್ಯಸನಗಳೆಂಬ ಏಳು ಗಣಂಗಳು, ಅಷ್ಟಮದಗಳೆಂಬ ಎಂಟುಗಣಂಗಳು, ಸಾತ್ವಿಕ ರಾಜಸ ತಾಮಸ ಗುಣಗಳುಳ್ಳ ಮೂರು ಗಣಂಗಳು ನೊಸಲ ಕಣ್ಣುಳ್ಳ ಮುಕ್ಕಣ್ಣನನ್ನು ನೋಡಲು ಮೊರೆಯಿಟ್ಟು ಬರಲು ಹೊತ್ತಿದ ಅಂಗಾಲಿನ ಅರಿವಿನ ಕಿಚ್ಚು ನೆತ್ತಿಯ ಮುಟ್ಟುವುದೊಂದೇ ತಡ ಚಕ್ಕನೆ ಮುಕ್ಕಣ್ಣನ ನೊಸಲ ಕಣ್ಣು ತೆರೆದು ಸಕಲ ಗಣಂಗಳನ್ನು ಸುಟ್ಟು ತನ್ನಂತೆ ಮಾಡಿಕೊಳ್ಳುವುನು.

**1315**

**ಬ್ರಹ್ಮನಾದಡಾಗಲಿ, ವಿಷ್ಣುವಾದಡಾಗಲಿ,**
**ಇಂದ್ರನಾದಡಾಗಲಿ , ಚಂದ್ರನಾದಡಾಗಲಿ,**
**ಎಮ್ಮ ಶಿವಶರಣರ ನೋವು ಎನ್ನ ನೋವು ನೋಡಾ.**
**‘ಅವರನೊರಸುವೆನುರುಹುವೆಯೆಂದು**
**ಕಪಿಲಸಿದ್ಧಮಲ್ಲಿಕಾರ್ಜುನ ತನ್ನ ನೊಸಲ ಕಣ್ಣಿಂಗೆ ಬೆಸನನಿತ್ತಡೆ,**
**ನಿಲಬಲ್ಲ ಗುರುವನಾರನೂ ಕಾಣೆ.**

ಬ್ರಹ್ಮನ ಕಾಯವಾಗಲಿ ವಿಷ್ಣುವಿನ ಕಾಯವಾಗಲಿ ಇಂದ್ರನ ಕಾಯವಾಗಲಿ ಚಂದ್ರನ ಕಾಯವಾಗಲಿ, ಇಡೀ ಬ್ರಹ್ಮಾಂಡದ ಯಾವುದೇ ಕಾಯವಾಗಲಿ, ಸಕಲ ಕಾಯಗಳಲ್ಲಿಯೂ ನೊಸಲ ಕಣ್ಣುಳ್ಳ ಮುಕ್ಕಣ್ಣ ಸಂಗಮವಾಗಿದ್ದಾನೆ. ಆತ ಸಾಕ್ಷಾತ್ ಶಿವ.

ಕಾಯದಲ್ಲಿ ಸಂಗಮವಾದ ಶಿವನ ಕಾಯಕ್ಕೆ ಮನೋಮಯವಾದ ಕಾಯ ಶರಣು ಹೋಗುವುದೇ ಶರಣರ ಕಾಯ. ಇಂತಹ ಕಾಯಗಳೆಲ್ಲ ಶಿವಶರಣರ ಕಾಯಗಳು. ಶಿವನಿಗೆ ಶರಣು ಹೋದ ಕಾಯಗಳು. ಅಂತಹ ಕಾಯಗಳ ನೋವು ಎನ್ನ ನೋವು ನೋಡಯ್ಯಾ ಎಂದು ಸಿದ್ಧರಾಮಶಿವಯೋಗಿಗಳು ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

ಕಪಿಲಸಿದ್ಧಮಲ್ಲಿಕಾರ್ಜುನ ಕೂಡಾ ಬೇರಲ್ಲ. ಸಾಕ್ಷಾತ್ ನೊಸಲ ಕಣ್ಣುಳ್ಳ ಮುಕ್ಕಣ್ಣನು ಈತ.

ಈತನಿಗೆ ಬಯಕೆಯಾದರೆ ಬ್ರಹ್ಮನಾದರೇನು, ವಿಷ್ಣುವಾದರೇನು, ಇಂದ್ರ ಚಂದ್ರನಾದಡೇನು ತನ್ನ ನೊಸಲ ಕಣ್ಣ ಮೂಲಕ ಒರಸಿ ಉರುಹಿ ಸುಟ್ಟು ಬೂದಿ ಮಾಡುತ್ತಾನೆ. ಈತನನ್ನು ತಡೆಯಬಲ್ಲ, ಈತನ ಎದುರಿಗೆ ನಿಲಬಲ್ಲ ಕಾಯವುಳ್ಳ ಗುರುದೇವನಾರನೂ ಕಾಣೆ !

**1316**

**ಅಯ್ಯಾ , ನಿಮ್ಮ ಮೂರ್ತಿಯ ನೋಡಿದೆವೆಂದಡೆ ದೃಷ್ಟಿಯಾನವು.**
**ನಿಮ್ಮ ತೇಜವನಾರು ನೋಡಲಮ್ಮರಯ್ಯಾ**
**ನಿಮ್ಮ ತೇಜವನೊಬ್ಬರಿಗೆಯೂ ಉಪಮಿಸಬಾರದು.**
**ನೀವು ಮುನಿದು ನೊಸಲಕಣ್ಣ ತೆಗೆದಡೆ,**
**ಅದಕ್ಕೆ ಇದಿರಿಪ್ಪರಿನ್ನಾರು ಹೇಳಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ,**
**ನಿಮ್ಮ ತೇಜವು ಮೂರು ಲೋಕವ ನುಂಗಿದಡೆ ನೋಡಿ ಕಣ್ಣ ಮುಚ್ಚುತ್ತಿರ್ದೆನು.**

ಅಜ್ಞಾನದ ದೃಷ್ಟಿಗೆ ಅರಿವಿನ ಮೂರ್ತಿ ಕಾಣುವುದಿಲ್ಲ. ಆ ಮೂರ್ತಿ ಮೂರ್ತಿಯಲ್ಲ. ಇಡೀ ಬ್ರಹ್ಮಾಂಡವನ್ನು ಬೆಳಗುವ ಬೆಳಕು. ಅಂತಹ ಅರಿವಿನ ಬೆಳಕನ್ನು ಯಾರಿಗೂ ಹೋಲಿಸಲು ಸಾಧ್ಯವಿಲ್ಲ. ಅದು ಮಹಾಜ್ಞಾನಿಗೆ ಮಾತ್ರ ಸಾಧ್ಯ.

ಮಹಾಜ್ಞಾನಿಯಾದ ನೀವು ಪ್ರತಿ ಅಂಗದಲ್ಲಿಯೇ ಸಂಗಮವಾಗಿರುವಿರಿ. ಇಡೀ ಅಂಗವನ್ನು ಬೆಳಗುತ್ತಿರುವಿರಿ. ಆದರೆ ಅಂಗವನ್ನು ಸೋಂಕಿಲ್ಲ. ನೀವು ಬೆಳಗುತ್ತಿರುವ ಬೆಳಗಿನ ಪರಿಚಯ ಅಂಗಕ್ಕಿಲ್ಲ. ಅಂಗವನ್ನು ಆವರಿಸಿದ ಮನಕ್ಕೂ ಇಲ್ಲ. ಬ್ರಹ್ಮಾಂಡದಲ್ಲಿರುವ ಅಂಗಗಳೆಲ್ಲಾ ಹೀಗೆ ಇವೆ.

ಅಜ್ಞಾನದ ಕತ್ತಲನ್ನೇ ಹೊತ್ತುಕೊಂಡ ಅಂಗಗಳ ಮೇಲೆ ನೀವು ಮುನಿದು ನಿಮ್ಮ ನೊಸಲ ಕಣ್ಣ ತೆಗೆದಡೆ, ಅದಕ್ಕೆ ಯಾರಾದರೂ ಎದುರು ನಿಲ್ಲಲು ಸಾಧ್ಯವೇ ತಂದೆ?

ಬೆಳಗಿಂಗೆ ಬೆಳಗಾಗಿ ಬೆಳಗುವ ನಿಮ್ಮ ತೇಜವು ಮೂರು ಲೋಕವನ್ನು ನುಂಗುವುದು, ಅಂಗದಲ್ಲಿಯೇ ಇದ್ದು ಅಂಗವನ್ನು ಸೋಂಕದೆ ಅಂಗವನ್ನು ಬೆಳಗುವ ದಿವ್ಯವಾದ ಬೆಳಕನ್ನು ನೋಡುವ ಭಾಗ್ಯ ಅಂಗಕ್ಕಿಲ್ಲ.

ಅಂಗ ಸಾತ್ವಿಕ ರಾಜಸ ತಾಮಸವೆಂಬ ಮೂರು ಲೋಕಗಳನ್ನು ತನ್ನಲ್ಲಿ ನಿರ್ಮಾಣ ಮಾಡಿಕೊಂಡು ಅದರ ಅಜ್ಞಾನದ ಸುಖವನ್ನು ಉಣ್ಣುತ್ತಾ ಮೈಮರೆತಿದೆ. ನಿಮ್ಮ ತೇಜವು ಅಜ್ಞಾನದ ಆ ಮೂರು ಲೋಕವನ್ನು ನುಂಗಿದಡೆ  ನೋಡಿ ಕಣ್ಣು ಮುಚ್ಚುತ್ತದೆ.

## ಮಹೇಶ್ವರ ಸ್ಥಲ

**1317**

**ನೀ ಮುನಿದಡೆ ಮುನಿ ನಾ ನೆನ್ನುವೆನಯ್ಯಾ ಮೀರಿದ ವಚನವ .**
**ನೀ ಮಾಡಲಾದವು: ನಾನೇನು ಹೇಳಿದೆನೆ ಅಯ್ಯಾ ? ಇಲ್ಲಿಲ್ಲವು**
**ಬಹುದುರ್ಲಭ, ಬಹುದುರ್ಲಭ ನಿನ್ನ ಸ್ಥಳವಳವಡುವುದು,**

**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿದ್ದೂ ಅಂಗವನ್ನು ಬೆಳಗುತ್ತಿರುವ ನೀನು ಅಂಗದ ಮೇಲೆ ಮುನಿಸುಕೊಂಡಿರುವೆ. ನಿನ್ನ ಬೆರಳಿನಿಂದ ಹುಟ್ಟಿದ ಕತ್ತಲನ್ನೇ ಬೆಳಕೆಂದು ತಿಳಿದುಕೊಂಡು ಅಂಗ ನಿನ್ನನ್ನು ಮೀರಿದ ಮಾತುಗಳನ್ನು ಆಡುತ್ತಿದೆ.

ಭಗವದ್ಗೀತೆ, ಬೈಬಲ್, ಕುರಾನ್‌ಗಳು, ವೇದ, ಆಗಮ, ಉಪನಿಷತ್ತುಗಳು ನಿನ್ನಿಂದಲೇ ಸಿದ್ಧವಾದವು. ಅವು ನೀನೆ ಮಾಡಲು ಆದವು. ಅವುಗಳನ್ನು ಓದಿದ ನಾನು ನಾನೇನೆ ಹೇಳಿದರು ಅವು ನಿನ್ನವೇ ತಂದೆ. ನಿನ್ನಿಂದಲೇ ಆದವು. ನಾನೇನಾದರೂ ಹೇಳಿದೆನೆ ಅಯ್ಯಾ ? ಇಲ್ಲಿಲ್ಲವು. ಅವು ನಿನ್ನ ಮಾತುಗಳೇ ಆಗಿವೆ. ಅವುಗಳನ್ನು ನಾನು ಆಡಬಹುದು. ಆದರೆ ಅವುಗಳನ್ನು ಜೀರ್ಣಿಸಿಕೊಳ್ಳಲು ಬಹುದುರ್ಲಭವಯ್ಯಾ .

ಅಂಗದಲ್ಲಿಯೇ ಇದ್ದು ಅಂಗವನ್ನು ಸೋಂಕದೆ ಅಂಗವನ್ನು ಬೆಳಗುತ್ತಿರುವ ಬೆಳಕನ್ನು ಅಂಗ, ಅಂಗವನ್ನು ಆವರಿಸಿದ ಮನ ನೋಡಲು ಸಾಧ್ಯವೆ ? ಅವೇನಿದ್ದರೂ ಗೂಗೆಗಳು. ಕತ್ತಲೆಂದರೆ ಅವುಗಳಿಗೆ ಬಹಳ ಇಷ್ಟ. ಕತ್ತಲನ್ನೆ ಬೆಳಕೆಂದು ತಿಳಿದು ಮಾತನಾಡುವವು. ಅಂದಮಾತ್ರಕ್ಕೆ ಅವು ಬೆಳಕನ್ನು ನೋಡಲು ಸಾಧ್ಯವೆ?

ಬಹುದುರ್ಲಭ, ಬಹುದುರ್ಲಭ; ನಿನ್ನ ಸ್ಥಲ ಸಕಲ ಅಂಗಗಳಿಗೆ ಅಂಗಗಳನ್ನು ಆವರಿಸಿದ ಮನಕ್ಕೆ ನೀನು ಸಿಕ್ಕುವುದು ಬಹುದುರ್ಲಭ. ಎಲೆ ಅರಿವೆಂಬ ಗುರುದೇವನೆ ನೀ ಮುನಿದರೆ ಮುನಿ ಆದರೂ ನಾನು ನಿನಗೆ ಮೀರಿ ನಿನ್ನ ವಚನವನ್ನೇ ನುಡಿವೆನು.

**1318**

**ಹಣ್ಣಿಳಿದ ಬಳಿಕ ಮಣ್ಣಿನ ಹಂಗೇಕಯ್ಯಾ ?**
**ಮಣ್ಣಿಳಿದ ಬಳಿಕ ಹೊನ್ನಿನ ಹಂಗೇಕಯ್ಯಾ?**
**ಮುಕ್ಕಣ್ಣನಾದ ಬಳಿಕ ಮೂರರ ಹಂಗೇಕಯ್ಯಾ ?**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಭೂಮಿಗಾಗಿ ಮನ ತೊಳಲಿ ಬಳಲುತ್ತದೆ. ದೇಹದ ಇಡೀ ಆಯುಷ್ಯವನ್ನು ಮನ ಭೂಮಿಯ ಮೇಲೆ ಮೋಹ ಮಾಡುವುದರಲ್ಲಿಯೇ ಕಳೆದುಬಿಡುತ್ತದೆ. ಭೂಮಿ ನನ್ನದಲ್ಲ ಎಂದು ಮನಕ್ಕೆ ಹೊಳೆಯುವುದಿಲ್ಲ.

ಭೂಮಿಯ ಮೇಲೆ ನನಗೆ ಆಸೆ ಬೇಡ ಎಂದು ಆಸೆ ಮಾಡಿದ ಮನವನ್ನು ತನು ದೂರ ತಳ್ಳುವುದಿಲ್ಲ. ಮನಕ್ಕೂ ಗೊತ್ತಾಗುವುದಿಲ್ಲ; ತನುವಿಗೂ ಗೊತ್ತಾಗುವುದಿಲ್ಲ; ಹೀಗೆಯೇ ತನುವಿನ ಆಯುಷ್ಯ ಮುಗಿದೇ ಹೋಗುತ್ತದೆ.

ಹೀಗಾಗಿ ಪ್ರಭುಗಳು. ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿಯು ನಿನ್ನವಳಲ್ಲ, ಎಂದು ಜಗದ ತನುಗಳನ್ನು ಅಜ್ಞಾನದಲ್ಲಿ ನೂಕುವ ಮನಕ್ಕೆ ಪಾಠ ಮಾಡಿದರು. ಎಲೆ ಮನವೆ ನಿನ್ನದೆಂಬುದು ಜ್ಞಾನರತ್ನ ಅದನ್ನು ಅಲಂಕರಿಸಿದೆಯಾದೊಡೆ ನಿನ್ನಂತಹ ಸಿರಿವಂತರು ಯಾರೂ ಇಲ್ಲ ಎಂದು ಮನಕ್ಕೆ ಅರಿವಿನ ಮಾತು ಹೇಳಿದರು ಅಲ್ಲಮಪ್ರಭುಗಳು.

ತನುವಿನೊಂದಿಗೆ ಸಂಬಂಧ ಮಾಡಿದ ಮನ ತನುವಿನ ಗೆಳೆತನ ಬಿಟ್ಟು, ತನುವಿನಲ್ಲಿಯೇ

ತನ್ಮಯವಾದ ಮಹಾಜ್ಞಾನಕ್ಕೆ ಶರಣು ಹೋಗಿ ಶರಣನಾದರೆ ಸಾಕು ಮನ ಮತ್ತು ತನು ಮಾಗಿ ಪರಿಪಕ್ವವಾಗುತ್ತದೆ. ಮಣ್ಣಿನಿಂದಾದ ಹೊನ್ನು ಹೊನ್ನಲ್ಲ; ಅದೊಂದು ಲೋಹ ಎಂದು ತನಗೆ ತಾನೆ ತಿಳಿಯುತ್ತದೆ.

ಮಣ್ಣ ಕಳಚಿಕೊಂಡ ಲೋಹ ಬಣ್ಣದ ಸಂಗ ಮಾಡಿ ಹೇಗೆ ಹೊನ್ನಾಗಿದೆಯೋ ಹಾಗೆಯೇ ಮನದ ಸಂಗ ಕಳಚಿಕೊಂಡ ತನು ಜ್ಞಾನದ ಸಂಗ ಮಾಡಿ ಜ್ಞಾನಿಯೇ ತಾನಾಗಿ ಥಳ ಥಳನೆ ಹೊಳೆಯುತ್ತದೆ; ತಿಕ್ಕಲಿಲ್ಲ ಬೆಳಗಲಿಲ್ಲ, ಥಳಥಳ ಹೊಳೀತದ ಏನ್‌ಕೊಡ ಏನ್‌ಕೊಡವ ಎಂದು ಷರೀಫರು ಹಾಡಿದಂತೆ. ಮರ ತನ್ನ ಸತ್ವವನ್ನೆಲ್ಲ ತುಂಬಿ ಬೀಜವನ್ನಾಗಿಸಿದ ಬಳಿಕ ಕಾಯಿ ಮಾಗಿ ಹಣ್ಣಾಗುತ್ತದೆ. ತೊಟ್ಟು ಕಳಚಿ ಕೆಳಗೆ ಬಿದ್ದು ಹೆಮ್ಮರವಾಗಿ ಬೆಳೆದು ಬೆಳಗುತ್ತದೆ.

ಮಣ್ಣಲ್ಲಿ ಬಿದ್ದ ಹಣ್ಣನ್ನು ಯಾರು ತಿಂದರೇನು? ಮರಕ್ಕೆ ಒಂದಿಷ್ಟೂ ಚಿಂತೆಯಿಲ್ಲ. ತಿಂದು ಎಸೆದ ಬೀಜದಲ್ಲಿ ಮರದ ಮಂತ್ರ ಬಚ್ಚಿಟ್ಟುಕೊಂಡಿದೆ. ಅದು ಪುನಃ ಮಣ್ಣು ಕಳಚಿಕೊಂಡು ಮರವಾಗಿ ಬೆಳಗುತ್ತದೆ. ಮಣ್ಣು ಹೊನ್ನು ವಿಷಯದ ಆಸಕ್ತಿಗಳನ್ನು ಮನ ಮತ್ತು ತನುವಿನಿಂದ ಉದುರಿ ಬೀಳುತ್ತವೆ. ಏಕೆಂದರೆ ಅವು ಹಣ್ಣಿನಂತೆ ಮಾಗಿ ಜ್ಞಾನದ ಸಂಗ ಮಾಡಿದ ಕಾರಣ.

**1319**

**ಅಳವಟ್ಟಿತ್ತಳವಟ್ಟಿತ್ತಯ್ಯಾ , ನಿಮ್ಮಗಲ್ಲದಾರಿಂಗೆ ಜ್ಞಾನ**
**ಅಳವಟ್ಟಿತ್ತಳವಟ್ಟಿತ್ತಯ್ಯಾ,ನಿಮ್ಮಗಲ್ಲದಾರಿಂಗೆ ವೈರಾಗ್ಯ**
**ಅಳವಟ್ಟ ಬಳಿಕ ಕಳವಳಗೊಂಡಳು ಮಾಯೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಏನೆಂದೂ ತಿಳಿಯದ ಮನವೆಂಬ ಭವಿಗೆ ತನುವಿನಲ್ಲಿಯೇ ತನ್ಮಯವಾದ ಜ್ಞಾನದ ಸುಳುಹು ಅರಿವಾದಾಗ ಮನ ಜ್ಞಾನಕ್ಕೆ ಶರಣು ಹೋಗಿ ತನ್ನ ಭವಿತನ ಕಳೆದುಕೊಂಡು ಶರಣನಾಗುತ್ತದೆ.

ತನು ಮನಗಳೆರೆಡು ತನುವಿನಲ್ಲಿಯೇ ತನ್ಮಯವಾದ ಜ್ಞಾನವನ್ನು ಉಂಡು ಜ್ಞಾನಿಯೇ ತಾನಾದಾಗ ತನುವನ್ನು ಆವರಿಸಿಕೊಂಡ ವೈರಾಗ್ಯ ಮತ್ತು ಮಾಯೆಗಳೆರೆಡೂ ಇಲ್ಲವಾಗುತ್ತವೆ ಅರಿವಿನ ಮಲ್ಲಯ್ಯ ವಾಸ ಮಾಡಿದ ಕಾಯ ಕೈಲಾಸವಾಗುತ್ತದೆ.

**1320**

**ಹೇಳುವಡೆ ಬಹು ಸುಲಭ.**
**ಆಳುವಡೆ ಅದು ಬಹಳ ದುರ್ಘಟ ನೋಡಯ್ಯಾ .**
**ಅಳಿದ ಹಂಗೇಕಯ್ಯಾ ಗುರುವೆ,**
**ಕಪಿಲಸಿದ್ಧಮಲ್ಲಿಕಾರ್ಜುನ ತಂದೆ ?**

ಜ್ಞಾನ ಎನ್ನುವುದು ಹೊರಗಿಲ್ಲ. ಭಗವದ್ಗೀತೆ ಬೈಬಲ್ ಖುರಾನ್‌ಗಳಲ್ಲಿರುವುದು ಜ್ಞಾನವೇ ಆಗಿದೆ. ಆದರೂ ಅವುಗಳೆಲ್ಲಾ ದೇಹದಿಂದಲೇ ಹೊರಬಂದಿವೆ. ಪುನಃ ಅವುಗಳನ್ನು ಅಧ್ಯಯನ ಮಾಡಿ ದೇಹದಲ್ಲಿ ಸಂಗ್ರಹ ಮಾಡಿಕೊಂಡರೂ ಅದನ್ನು ಹೇಳಲು ಬರುತ್ತದೆಯೇ ಹೊರತು; ಆಪತ್ಕಾಲದಲ್ಲಿ ಅದು ಬಳಕೆಗೆ ಬರುವುದಿಲ್ಲ.

ದೇಹದಿಂದ ಹೊರಬಂದ ಜ್ಞಾನಕ್ಕೆ ಪುನಃ ದೇಹಕ್ಕೆ ಪಾಠ ಮಾಡುವ ಶಕ್ತಿ ಅದಕ್ಕೆ ಇರುವುದಿಲ್ಲ. ಸಕಲ ಜ್ಞಾನ ಪುಸ್ತಕಗಳು ಕೂಡಾ ದೇಹದಿಂದಲೇ ಹೊರಬಂದಿವೆ ಎನ್ನುವ ಸುಳುಹು ಕೂಡಾ ದೇಹಕ್ಕೆ ಹೊಳೆಯುವುದಿಲ್ಲ.

ದೇಹ ತನ್ನ ಕಾಲು ಶತಮಾನದಷ್ಟು ಆಯುಷ್ಯವನ್ನು ಜ್ಞಾನಾಧ್ಯಯನಕ್ಕಾಗಿ ಕಳೆಯುತ್ತದೆ. ಆದರೂ ದೇಹ ಜ್ಞಾನಿಯೆಂದು ದೇಹದೊಂದಿಗೆ ಕರೆಸಿಕೊಳ್ಳುವುದಿಲ್ಲ. ಏಕೆಂದರೆ ಅದು ಎಷ್ಟೇ ಅಧ್ಯಯನ ಮಾಡಿದರೂ ಕೂಡಾ ನಡೆಯುವಾಗ ಎಡವುತ್ತದೆ.

ಕಣ್ಣು ಕಿವಿ ಮೂಗು ನಾಲಿಗೆ ಹಾಗೂ ಚರ್ಮದಲ್ಲಿ ಜ್ಞಾನ ಸಂಗಮವಾಗಿದೆ. ನೋಡಿ ತಿಳಿಯಬೇಕಾದ ಕಣ್ಣು ಓದಿ ತಿಳಿಯಲು ದೇಹ ಇಡೀ ಕಣ್ಣನ್ನು ಬಳಸಿಕೊಳ್ಳತ್ತಲಿದೆ. ಇದು ಶುದ್ಧ ತಪ್ಪೆಂದು ದೇಹಕ್ಕೆ ಅದರ ಆಯುಷ್ಯ ಪರ್ಯಂತರ ಹೊಳೆಯುವುದೇ ಇಲ್ಲ.

ನೋಡುವಾಗ ತಾನು ತಪ್ಪು ನೋಡಿದೆನೆಂದು ನೋಡುವುದರ ಮೂಲಕವೇ ತಿಳಿಯುತ್ತದೆ. ತಪ್ಪು ನೋಡಿದ ದೃಶ್ಯಕ್ಕೆ ಸರಿಯಾಗಿ ನೋಡಿದ ದೃಶ್ಯ ನೀನು ಸರಿಯಾಗಿ ನೋಡಲಿಲ್ಲವೆಂದು ಬೋಧೆ ಮಾಡುತ್ತದೆ. ಅಂದರೆ ಸರಿಯಾಗಿ ನೋಡುವ ಕಣ್ಣು ಕಣ್ಣೆನಲ್ಲಿಯೇ ಇದೆ. ತಪ್ಪು ನೋಡುವ ಕಣ್ಣು ಕಣ್ಣೆನಲ್ಲಿಯೇ ಇದೆ.

''ಕಣ್ಣೆನಲ್ಲಿಯೇ ಕಣ್ಣೆದ್ದು ಕಾಣಲೇಕರಿಯರಯ್ಯಾ'' ಎನ್ನುವ ಬಸವಣ್ಣನವರ ವಚನದ ಸೂತ್ರವನ್ನು ಕಣ್ಣಿನ ಮೂಲಕ ಓದಿದರೆ ಕಣ್ಣು ತನ್ನ ಅಜ್ಞಾನವನ್ನು ಕಳೆದುಕೊಳ್ಳಲು ಸಾಧ್ಯವೆ?

''ಕಿವಿಯೊಳಗೆ ಕಿವಿಯಿದ್ದು ಕೇಳಲೇಕರಿಯರಯ್ಯಾ''ಎನ್ನುವ ಸೂತ್ರವನ್ನು ಓದಿದ ಕಣ್ಣು ಕಿವಿಯನ್ನು ಸದಾ ಎಚ್ಚರದಿಂದ ಇಡಲು ಸಾಧ್ಯವೆ? ಸಕಲ ಶಬ್ದಗಳನ್ನು ನಪುಂಸಕಗೊಳಿಸಿ ಅರಿವಿನಿಂದ ಕೇಳಲು ಕಿವಿಗೆ ಸಾಧ್ಯವಾಗುತ್ತದೆಯೇ?

''ತ್ವಕ್ಕಿನೊಳಗೆತ್ವಕ್ಕಿದ್ದು ಸ್ಪರ್ಶಿಸಲೇಕರಿಯರಯ್ಯಾ ಜಿಹ್ವೆಯೊಳಗೆ ಜಿಹ್ವೆಯಿದ್ದು ರುಚಿಸಲೇಕರಿಯರಯ್ಯಾ ನಾಸಿಕದೊಳಗೆ ನಾಸಿಕವಿದ್ದು ಮೂಸಿಸಲೇಕರಿಯರಯ್ಯಾ '' ಬಸವಣ್ಣನವರ ಈ ಸೂತ್ರದಿಂದ ಚರ್ಮ ನಾಲಿಗೆ ಮೂಗು ತನ್ನ ಅಜ್ಞಾನವನ್ನು ಕಳೆದುಕೊಳ್ಳಲು ಸಾಧ್ಯವೆ?

ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇದರೊಳಗೆ ಹರಿಯುವ ರಕ್ತ, ಮೂಳೆ, ಮಾಂಸ, ಮಜ್ಜೆ ಮೇದಸ್ಸು , ನಖ, ರೋಮ ಇವು ಯಾವೂ ಹೆಣ್ಣಲ್ಲ ಗಂಡು ಕೂಡಾ ಅಲ್ಲ.ಆದರೂ ಕಣ್ಣಲ್ಲಿರುವ ಅಜ್ಞಾನದ ದೃಶ್ಯ ತಾನು ಹೆಣ್ಣು ಎನ್ನುವ ಅಜ್ಞಾನವನ್ನು ಆಮಂತ್ರಣ ಮಾಡಿಕೊಂಡು ಗಂಡು ಎಂದು ಅಜ್ಞಾನದಿಂದ ನೋಡಿ ದೇಹದಲ್ಲಿ ಉದ್ರೇಕ ಉಂಟು ಮಾಡುತ್ತದೆ. ಈ ಹಾದರ ಮರೆಮಾಚಲು ಅಣ್ಣ ತಮ್ಮ ಚಿಕ್ಕಪ್ಪ ಮಾವ ಎಂದು ನುಡಿದು ಸಾತ್ವಿಕದ ಮುಖವಾಡ ಹಾಕಿಕೊಳ್ಳುತ್ತದೆ.

ನೀನು ತಪ್ಪು ನೋಡಿದೆ ಎನ್ನುವ ಅರಿವಿನ ದೃಶ್ಯ ಅಜ್ಞಾನದ ದೃಶ್ಯಕ್ಕೆ ಪಾಠ ಮಾಡುತ್ತದೆ. ನೀನು ತಪ್ಪು ನುಡಿದೆ ಎನ್ನುವ ಅರಿವಿನ ನುಡಿ ನುಡಿಗೆ ಬೋಧಿಸುತ್ತದೆ.

ಕಣ್ಣು ಕಿವಿ ಮೂಗು ನಾಲಿಗೆ ಚರ್ಮದಲ್ಲಿ ಜ್ಞಾನವೂ ಇದೆ; ಅಜ್ಞಾನವೂ ಇದೆ ಎಂದು ಬಸವಣ್ಣನವರ ವಚನದ ಮೂಲಕ ಗೊತ್ತಾದರೂ ಕೂಡಾ ಅನುಭವಕ್ಕೆ ಬರುವುದಿಲ್ಲ. ಇದನ್ನು ಅರಿತು ಆಚರಣೆಯಲ್ಲಿದ್ದ ಗರುದೇವ ಶಿಷ್ಯನ ಅನುಭವಕ್ಕೆ ತಂದರೂ ಕೂಡಾ ಸದಾ ಜ್ಞಾನದ ಆಚರಣೆಯಲ್ಲಿ ತೊಡಗುವುದು ಸಾಧ್ಯವಾಗುವುದೇ ಇಲ್ಲ.

ದೇಹದಲ್ಲಿ ಅರಿವೆಂಬ ಗುರುದೇವ ಸಂಗಮವಾಗಿದ್ದಾನೆ. ದೇಹವನ್ನು ಮನವೆಂಬ ಮರೆವು ಆವರಿಸಿದೆ. ಮನಕ್ಕೆ ಅರಿವೆಂಬ ಗುರುದೇವನ ಅರಿವಾದಾಗ ಗುರುದೇವನೇ ತಾನಾಗುತ್ತದೆ.

ಸುಳುಹು ನೀಡಿದ ಗುರುವಿನ ನೆನಪು ಕೂಡಾ ಕಳಚಿ ಬೀಳುತ್ತದೆ.

ಬೆಳಗುವ ದೀಪ ಪ್ರಣತಿ ಎಣ್ಣೆಯುಳ್ಳ ಬತ್ತಿಗೆ ಚುಂಬಿಸಿದಾಗ ಚುಂಬಿಸಿದ ಹಂಗು ಕಳೆದುಕೊಂಡು ಚುಂಬಿಸಿದ ದೀಪದಂತೆ ಪ್ರಜ್ವಲಮಾನವಾಗಿ ಬೆಳಗುತ್ತದೆ. ಬೆಳಗಿದ ದೀಪ ಬೆಳಗಿಸಿಕೊಂಡ ದೀಪಗಳೆರಡೂ ಕಡೆ ಮೊದಲೆಂಬ ವ್ಯತ್ಯಾಸವಿಲ್ಲದಂತೆ ಬೆಳಗುತ್ತವೆ. ಈ ಸೂತ್ರ ಹೇಳುವುದು ಬಹು ಸುಲಭ. ಆಚರಣೆಗೆ ತಂದುಕೊಳ್ಳುವುದು ಬಹು ಕಠಿಣ.

**1321**

**ಜಂಗಮವಾಗಿ ಫಲವೇನಯ್ಯಾ, ಜಗದ ಹಂಗು ತೊರೆಯದನ್ನಕ್ಕ?**
**ಯೋಗಿಯಾದಲ್ಲಿ ಫಲವೇನಯ್ಯಾ, ನಿನ್ನಂಗ ಬರದನ್ನಕ್ಕ,**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಜಂಗಮನ ವೇಷ ಹಾಕಿಕೊಂಡ ಕಾಯ ಜಂಗಮವಲ್ಲ. ಯೋಗಿಯ ವೇಷ ಹಾಕಿಕೊಂಡ ಕಾಯ ಯೋಗಿಯಲ್ಲ. ಇವರಿಬ್ಬರು ಕಾಯ ಉಳ್ಳವರಲ್ಲ; ಕಾಯದಲ್ಲಿ ಇದ್ದವರು. ಕಾಯದಲ್ಲಿ ಇದ್ದು ಕಾಯದ ಹಂಗು ತೊರೆದವರು. ಮನ ತನ್ನ ಸುಖಕ್ಕಾಗಿ ಕಾಯದ ಸಂಗ ಮಾಡಿ ಕಾಯಕ್ಕೆ ಜಂಗಮನ ವೇಷ ಹಾಕಿ ಕಾಯದ ಮೂಲಕ ಸುಖಿಸುತ್ತದೆ. ಹೀಗೆ ಸುಖಿಸುವ ಮುಖವಾಡ ಕಾಯಕ್ಕೆ ಕಾಯದಲ್ಲಿದ್ದ ಜಂಗಮನ ಮೂಲಕ ಹೊಳೆಯುತ್ತದೆ.

ಹೀಗೆಯೇ ಮನ ಕಾಯದ ಮೂಲಕ ಕಾಯಕ್ಕೆ ಯೋಗಿಯ ವೇಷ ಹಾಕಿ ಸುಖಿಸುತ್ತದೆ. ಹೀಗೆ ಸುಖಿಸುವಾಗ ಇದು ಅಜ್ಞಾನದ ಕೆಲಸವೆಂದು ಕಾಯಕದಲ್ಲಿಯೇ ಇದ್ದ ಯೋಗಿಯ ಮೂಲಕ ಕಾಯಕ್ಕೆ ಹೊಳೆಯುತ್ತದೆ. ಜಂಗಮ ಮತ್ತು ಯೋಗಿ ಪ್ರತಿ ಕಾಯದಲ್ಲಿಯೂ ಇದ್ದಾರೆ. ಕಾಯವನ್ನು ಸೋಂಕದೆ ಕಾಯದ ಹಂಗಿಲ್ಲದಂತೆಯೇ ಇದ್ದಾರೆ. ಕಾಯದಲ್ಲಿದ್ದು ಕಾಯವನ್ನು ಬೆಳಗುತ್ತಿದ್ದಾರೆ. ಬೆಳಗಿಂಗೆ ಬೆಳಗಾಗಿ ಬೆಳಗುತ್ತಿದ್ದಾರೆ.

ಕಾಯ ಕಾಣುತ್ತದೆ. ಕಾಯದಲ್ಲಿದ್ದ ಜಂಗಮನ ಕಾಯ ಕಾಣುವುದಿಲ್ಲ. ಕಾಯದಲ್ಲಿದ್ದ ಯೋಗಿಯ ಕಾಯವೂ ಕಾಣುವುದಿಲ್ಲ. ಕಾಯವನ್ನು ಆವರಿಸಿದ ಮನೋ ಕಾಯವೂ ಕಾಣುವುದಿಲ್ಲ. ಕಾಣಬಾರದ ಮನೋಕಾಯ ಕಾಯಕ್ಕೆ ಜಂಗಮನ ವೇಷ ಹಾಕುತ್ತದೆ. ಕಾಣಬಾರದ ಮನೋಕಾಯಕ್ಕೆ ಯೋಗಿಯ ವೇಷ ಹಾಕುತ್ತದೆ.

ಜಂಗಮವಾಗಿ ಫಲವೇನು, ಕಾಯಕ್ಕೆ ಜಗದ ಹಂಗು ತೊರೆಯಲು ಸಾಧ್ಯವಾಗುತ್ತದೆಯೇ? ಯೋಗಿಯಾಗಿ ಫಲವೇನು ಮನೋಕಾಯ ಯೋಗಿಯ ಕಾಯದಲ್ಲಿ ಸಂಗಮವಾಗಿ ಯೋಗಿಯೇ ತಾನಾಗಲು ಸಾಧ್ಯವಾಗುತ್ತದೆಯೇ ? ಸಾಧ್ಯವಾಗುವುದಿಲ್ಲ. ಏಕೆಂದರೆ ಜಂಗಮ ಮತ್ತು ಯೋಗಿ ಇವರಿಬ್ಬರೂ ಕಾಯ ಉಳ್ಳವರಲ್ಲ; ಕಾಯದಲ್ಲಿದ್ದವರು. ಸ್ಥೂಲ ಕಾಯ ಮತ್ತು ಮನೋಕಾಯಗಳೆರಡೂ ಜಂಗಮ ಮತ್ತು ಯೋಗಿಯಾಗಿ ಪರಿವರ್ತನೆಯಾಗಲು ಕೃಷಿ ಮಾಡಬೇಕು. ಆ ಎರಡು ಕಾಯಗಳಿಗೆ ಮನೋಕಾಯ ಮತ್ತು ಸ್ಥೂಲಕಾಯ ಶರಣು ಹೋಗಿ ಶರಣಾಗತನಾಗಬೇಕು.

**1322**

**ನೀರಿಲ್ಲದೆ ಜಳಕವ ಮಾಡಿ, ತರುವಿಲ್ಲದಲ್ಲಿ ಪುಷ್ಪವನೆತ್ತಿ ,**
**ಕರವಿಲ್ಲದೆ ಪೂಜಿಸಬಲ್ಲಡೆ ಜಂಗಮವೆಂಬೆ ಕಾಣಾ,**

**ಕಪಿಲಸಿದ್ಧಮಲ್ಲಿಕಾರ್ಜುನದೇವಾ,**
**ಆನು ತ್ರಿಕರ್ಣಶುದ್ಧನಾಗಿ.**

ತನುವಿಗೆ ಸ್ನಾನ ಬೇಕು ; ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಸ್ನಾನದ ಅವಶ್ಯಕತೆ ಇಲ್ಲ. ತನುವನ್ನು ಆವರಿಸಿದ ಮನಕ್ಕೂ ಸ್ನಾನದ ಅವಶ್ಯಕತೆ ಇಲ್ಲ. ಮನವನ್ನು ಭಕ್ತನನ್ನಾಗಿಸಿ ಈ ಭಕ್ತನಿಂದ ಅರಿವೆಂಬ ಗುರುದೇವನಿಗೆ ನೀರಿಲ್ಲದಲೇ ಜಳಕವ ಮಾಡಿಸಬಹುದು. ಗಿಡವಿಲ್ಲದೆ ಪುಷ್ಪವನು ಕೊಯ್ದು ಪೂಜಿಸಬಹುದು. ಸ್ಥೂಲ ದೇಹದ ಆಸರೆ ಇಲ್ಲದೆ ಭಕ್ತನ ಮೂಲಕ ಜಂಗಮನನ್ನು ಪೂಜಿಸುವ ಕಲೆ ಗೊತ್ತಾದಾಗ ಮನ ತ್ರಿಕರಣ ಶುದ್ಧಿಯಾಗುತ್ತದೆ. ಎಂದು ಸಿದ್ಧರಾಮ ಶಿವಯೋಗಿಗಳು ನೀರಿಲ್ಲದೆ ಜಳಕವ ಮಾಡುವ, ಗಿಡವಿಲ್ಲದೆ ಹೂವನ್ನು ಕೊಯ್ದು ಜಂಗಮನನ್ನು ಪೂಜಿಸುವ ಸೂತ್ರವನ್ನು ಸಕಲ ಓದುಗರಿಗೂ ತಮ್ಮ ವಚನದ ಮೂಲಕ ನೀಡಿದ್ದಾರೆ.

ಇದನ್ನು ಓದಿ ಕೃಷಿಯಲ್ಲಿ ತೊಡಗಿದಾತನೆ ಜಾಣ. ಆತನನ್ನು ಜಾಣರ ಜಾಣನೆಂದು ಕೂಡಾ ಕರೆಯಬಹುದಾಗಿದೆ.

**1323**

**ನೀರ ಕುಡಿದು ಅಗ್ನಿಯ ನುಂಗಿದವರ ಜಂಗಮವೆಂಬೆ.**
**ಊರ ನೋಡಿ ಸೇರದವರ ಜಂಗಮರೆಂದೆಂಬೆ,**
**ಹೆಣ್ಣ ಭೋಗಿಸಿ ಮುಕ್ಕಣ್ಣನ ಪಡೆದಾತನ ಜಂಗಮವೆಂಬೆನಯ್ಯಾ ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹಕ್ಕೆ ಕೋಪ ಬಂದರೆ ಅಗ್ನಿಯಂತೆ ಧಗ ಧಗನೆ ಉರಿಯುತ್ತದೆ. ನೀರ ಕುಡಿದರೂ ಅದು ತಣ್ಣಗಾಗುವುದಿಲ್ಲ. ಮನಕ್ಕೆ ಶಬ್ದ ತಿಳಿಯುವ ಶಕ್ತಿಯಿಲ್ಲ ತಾನು ಶಬ್ದವನ್ನು ಸ್ವೀಕರಿಸಿ ದೇಹಕ್ಕೆ ಕೋಪ ಬರುವಂತೆ ಮಾಡುತ್ತದೆ ಮನ.

ಮನ ಅರಿವೆಂಬ ಗುರುದೇವನ ಚರಣ ಕಮಲಗಳಿಗೆ ಶರಣು ಹೋಗಿ ಶರಣನೇ ತಾನಾದಾಗ ಬಂದ ಕೋಪಾಗ್ನಿಯನ್ನು ನೀರ ಕುಡಿದಂತೆ ನುಂಗಿಬಿಡುತ್ತದೆ.

ದೇಹ ಒಂದು ಸುಂದವಾದ ಗ್ರಾಮ. ಇದನ್ನು ಸಂತರು ಕೈಲಾಸಪುರ ಎಂದು ಕರೆದಿದ್ದಾರೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವಿನ ದೇವರನ್ನು ಹೆಣ್ಣಾಗಿ ಭೋಗಿಸಿದರೆ ಸಾಕು. ಮುಕ್ಕಣ್ಣನ ದರ್ಶನವಾಗುತ್ತದೆ. ಹೀಗೆ ಮುಕ್ಕಣ್ಣನನ್ನು ಪಡೆದ ಮನವೇ ಜಂಗಮವಾಗುತ್ತದೆ. ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನೇ ತಾನಾಗುತ್ತದೆ.

**1324**

**ಜಂಗಮವಾದುದಕ್ಕೆ ಚಿಹ್ನೆ ನೋಡಾ:**
**ಅಂಗವಿಡಿದು ಲಿಂಗವ ಪೂಜಿಸುವ;**
**ಲಿಂಗವಿಡಿದು ಅಂಗವ ಪೂಜಿಸ ನೋಡಾ.**
**ಶತದಳ ಸಹಸ್ರಸೂರ್ಯವರ್ಣದ ಪದ್ಮದೊಳಿಪ್ಪ**
**ಮಾಹಾಲಿಂಗವನರುಹಿ, ಪ್ರಾಣಲಿಂಗಿಯ ಕೂಟವನರಿಪಾತನೆ**

**ಜಂಗಮ ಕಾಣಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಅರಿವೆಂಬ ಲಿಂಗ ಸಂಗಮವಾಗಿದೆ. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗವನ್ನು ತಿಳಿಯದಿದ್ದಕ್ಕಾಗಿ ಅಂಗದ ಮೇಲೆ ಲಿಂಗ ಕಟ್ಟಿಕೊಂಡು ಮೂರು ಕಾಲ ಪೂಜಿಸುತ್ತದೆ. ಇದು ಹುರುಳಿಲ್ಲದ ಪೂಜೆ.

ಅಂಗದಲ್ಲಿಯೇ ಸಂಗಮವಾದ ಲಿಂಗವನ್ನು ಅಂಗವನ್ನು ಆವರಿಸಿದ ಮನ ಪೂಜಿಸುವ ಪೂಜೆಯೇ ನಿಜವಾದ ಪೂಜೆ. ಈ ಪೂಜೆಗೆ ಪತ್ರಿ , ಪುಷ್ಪ, ವಿಭೂತಿ, ಗಂಧದ ಅವಶ್ಯಕತೆ ಇಲ್ಲ. ಧೂಪ, ದೀಪ, ನೈವೇದ್ಯದ ಅವಶ್ಯಕತೆಯೂ ಇಲ್ಲ.

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗ ಸಹಸ್ರಸೂರ್ಯರನ್ನು ಬೆಳಗುವ ಬೆಳಕಿನ ಲಿಂಗ. ಇಂತಹ ಅರಿವಿನ ಲಿಂಗವನ್ನು ತಿಳಿ ಹೇಳಿ ಪ್ರಾಣಲಿಂಗಿಯ ಕೂಟವನ್ನು ಅರಿದಾತನೆ ಜಂಗಮ ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ಅಂತರಾಳದ ಅರಿವಿನ ಲಿಂಗವನ್ನು ಪೂಜಿಸುವ ಸೂತ್ರವನ್ನು ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**1325**

**ಒಂದು ಕೈಯಾದುದು ಗಂಡು.**
**ಅಂದು ಲಗ್ನವಾಗಬೇಕೆಂದು ಬಂದನಯ್ಯಾ ಲಿಂಗವು.**
**ಆ ಲಿಂಗ ರಮಣನಾಗಬೇಕೆಂದು ಹೋದಡೆ**
**ನೆರೆದು ಸುಮ್ಮನಾದ ನೋಡಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.ಮ**

ಕೈ ಎಂದರೆ ಅಂಗ. ಇದನ್ನು ಅಂಗೈ ಎಂದು, ಕೈ ಎಂದು, ಕರ ಎಂದು ಕರೆಯುತ್ತಾರೆ. ಕೈ , ಅಂಗೈ ಎಂದರೆ ಅಂಗದ ಐದು ಭಾಗಗಳು. ಕಣ್ಣು,ಕಿವಿ,ಮೂಗು, ನಾಲಿಗೆ, ಚರ್ಮ ಈ ಐದೂ ಭಾಗದಲ್ಲಿ ಮಹಾಪುರುಷ ವಾಸವಾಗಿದ್ದಾನೆ. ಈತನನ್ನು ತತ್ವಪದಕಾರರು ಗಂಡ ಎಂದು ಕರೆದಿದ್ದಾರೆ.

ದೇಹ ಎನ್ನುವುದು ಗಂಡು ಅಲ್ಲ ಹೆಣ್ಣು ಅಲ್ಲ. ದೇಹವನ್ನು ಆವರಿಸಿದ ಮನ ಹೆಣ್ಣಾಗಿ ದೇಹದಲ್ಲಿಯೇ ಇದ್ದ ಅರಿವಿನ ಗಂಡನನ್ನು ಹುಡುಕಿ ಲಗ್ನವಾಗಬೇಕು.

ಹೀಗೆ ಲಗ್ನವಾಗಬೇಕೆಂದು ಅರಿವಿನ ಲಿಂಗಯ್ಯ ಅಂಗದಲ್ಲಿ ಬಂದು ಸಂಗಮವಾಗಿದ್ದಾನೆ. ಅಂಗವನ್ನು ಆವರಿಸಿದ ಮನವೆಂಬ ರಮಣಿಗೆ ಆತ ರಮಣನಾಗಬೇಕೆಂಬ ಇಚ್ಛೆ ಆತನದು.

ಮನವೆಂಬ ರಮಣಿಗೆ ರಮಣನ ಮೇಲೆ ಇಚ್ಛೆಯಾಗದಿದ್ದರೆ. ರಮಣ ಆಕೆಯನ್ನು ಕೂಡದೆ ಸುಮ್ಮನಾಗುತ್ತಾನೆ ಎಂದು ಸಿದ್ಧರಾಮಶಿವಯೋಗಿಗಳು ಮಲ್ಲಯ್ಯನೊಂದಿಗೆ ಮಾತನಾಡುತ್ತಾ ಅರಿವಿನ ಸೂತ್ರವನ್ನು ಹಂಚಿಕೊಂಡಿದ್ದಾನೆ.

**1326**

**ನೋಡವ್ವಾ ನೋಡವ್ವಾ ಇದರಂದವ**
**ತಾ ಬಂದಡೆನ್ನ ಕರ ಒಂದು ತಾಯಾಯಿತ್ತು .**
**ಮತ್ತೊಂದು ಕರ ತಂದೆಯಾಯಿತ್ತು .**
**ಅವರವರು ಕೂಡಿದಲ್ಲಿ ಶಬ್ದವಿಲ್ಲದ ಕೂಸು ಹುಟ್ಟಿತ್ತು .**

**ಆ ಕೂಸು ಎನ್ನಟ್ಟಿ ಬಿಟ್ಟಿತ್ತು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವಿನಲ್ಲಿ ರಹಸ್ಯಮಯವಾದ ಅರಿವಿನ ಸೂತ್ರ ಬಚ್ಚಿಟ್ಟುಕೊಂಡಿದೆ. ಇದನ್ನು ಸಿದ್ಧರಾಮಶಿವಯೋಗಿಗಳು ಬಹಳ ಸುಂದರವಾಗಿ ಬೆಡಗಿನ ಶಬ್ದಗಳ ಮೂಲಕ ಬಣ್ಣಿಸಿದ್ದಾರೆ. ನೋಡವ್ವಾ ನೋಡವ್ವಾ ಇದರಂದವ ತಾ ಬಂದಡೆನ್ನ ಕರ ಒಂದು ತಾಯಾಯಿತ್ತು . ಮತ್ತೊಂದು ಕರ ತಂದೆಯಾಯಿತ್ತು . ಅವರವರು ಕೂಡಿದಲ್ಲಿ ಶಬ್ದವಿಲ್ಲದ ಕೂಸು ಹುಟ್ಟಿತ್ತು . ಆ ಕೂಸು ಎನ್ನಟ್ಟಿಬಿಟ್ಟಿತ್ತು ನೋಡಾ.

ಸ್ಥೂಲ ಕಾಯವನ್ನು ಆವರಿಸಿದ ಮನೋಕಾಯವು ತಾಯಿಯಾಗಿ ಸ್ಥೂಲ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಗಂಡನನ್ನಾಗಿಸಿಕೊಂಡು ಆ ತಂದೆಯೊಂದಿಗೆ ತಾಯಿ ಕೂಡಿದಲ್ಲಿ ಆ ಕೂಟದಿಂದಾಗಿ ಶಬ್ದವಿಲ್ಲದ ಅರಿವಿನ ಕೂಸು ಹುಟ್ಟಿತ್ತು. ಆ ಕೂಸು ಅಜ್ಞಾನವನ್ನು ಅಟ್ಟಿ ಬಿಟ್ಟಿತ್ತು ನೋಡಾ ಎಂದು ಸಿದ್ಧರಾಮಶಿವಯೋಗಿಗಳು ಕಪಿಲಸಿದ್ಧಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**1327**

**ಬರುವ ಮುಂದೆ ಪುರುಷನಿದ್ದೆ, ಬಂದ ಬಳಿಕ ಸ್ತ್ರೀಯಾದೆ,**
**ಇನ್ನು ಮೇಲೆ ನಪುಂಸಕನಾದೆ.**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಕೂಡಬೇಕೆಂದಲ್ಲಿ**
**ಪುರುಷನಾದೆ ನೋಡಾವ್ವಾ, ಎನ್ನ ಹೆತ್ತ ತಾಯೆ.**

ತಾಯಿ ಗರ್ಭ ಧರಿಸಿದಾಗ ಆ ಗರ್ಭಕ್ಕೆ ಕಾರಣವಾದ ಪರಮಾತ್ಮನು ಮಹಾಪುರುಷನೇ ಆಗಿದ್ದಾನೆ. ಗರ್ಭದಿಂದ ಹೊರ ಬಂದ ದೇಹವನ್ನು ಲೋಕ ಪುರುಷನೆಂದರೂ ಕೂಡ ಅದು ಪುರುಷನಲ್ಲ ಸ್ತ್ರೀಯಾಗಿದೆ. ಸ್ತ್ರೀಕೂಡ ಸ್ತ್ರೀಯೆ ಆಗಿದೆ.

ದೇಹದಲ್ಲಿ ಅರಿವು ಎಂಬ ಗುರುದೇವ ಸಂಗಮವಾಗಿದ್ದಾನೆ. ಆತ ಮಹಾ ಪುರುಷ. ದೇಹವನ್ನು ಮನ ಆವರಿಸಿದೆ. ಮಹಾಪುರುಷನಿಗೆ ಸ್ತ್ರೀಯಾಗಿ ಕೂಡಬೇಕಾದದ್ದು ಮನ. ಈ ಮನ ಮಾತ್ರ ಸ್ತ್ರೀ. ದೇಹ ಪುರುಷನೂ ಅಲ್ಲ, ಸ್ತ್ರೀಯೂ ಅಲ್ಲ. ಅದು ನಪುಂಸಕ. ಆದರೆ ಲೋಕ ಮೊಲೆ ಮೂಡಿಬಂದರೆ ಸ್ತ್ರೀ ಎಂದು ಕರೆಯುತ್ತದೆ, ಗಡ್ಡ, ಮೀಸೆ ಬಂದರೆ ಪುರುಷ ಎಂದು ಕರೆಯುತ್ತದೆ. ಲೋಕದ ಜ್ಞಾನ ಅಜ್ಞಾನ. ಶರಣರ ಜ್ಞಾನವೇ ಬೇರೆ ; ಅದು ನಿಜವಾದ ಜ್ಞಾನ. ಅಂಗದಲ್ಲಿಯೇ ಸಂಗಮವಾದ ನಿಜವಾದ ಜ್ಞಾನ.

ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಕೂಡಬೇಕಾದಲ್ಲಿ ಪುರುಷನಾದೆ ನೋಡವ್ವಾ ಎನ್ನ ತಾಯೆ: ದೇಹ ದೇಹದೊಂದಿಗೆ ಕೂಡುವ ಕೂಟ. ಹೆಣ್ಣು ಹೆಣ್ಣು ಕೂಡುವ ಕೂಟ. ದೇಹದಲ್ಲಿಯೇ ಸಂಗಮವಾದ ಅರಿವಿನ ಗಂಡನೊಂದಿಗೆ ದೇಹವನ್ನು ಆವರಿಸಿದ ಮನ ಸ್ತ್ರೀಯಾಗಿ ಕೂಡುವ ಕೂಟ ಮಹಾ ಕೂಟ. ಸ್ತ್ರೀ ಪುರುಷರು ಕೂಡುವ ಕೂಟ. ಇದು ದೇಹದಲ್ಲಿಯೇ ಜುರುಗುತ್ತದೆ ಎಂದು ಹೇಳಿದ್ದಾರೆ ಸಿದ್ಧರಾಮಶಿವಯೋಗಿಗಳು.

1328

**ಮೊಮ್ಮಗನಾಗಿ ಮೊಮ್ಮಗಳಾಗಿ ಮೊಮ್ಮಗನಾಗಿ ನಿಂದೆ**
**ನೋಡವ್ವಾ, ಮಗನ ಕರುಣದಿಂದ.**
**ಮಗನಾಗಿ ಮಗನಾದೆ ನೋಡವ್ವಾ, ಮಗನ ಕರುಣದಿಂದ,**
**ಮಗನು ಹೋಗಿ ಮಹಾಲಿಂಗನಾದೆ ನೋಡವ್ವಾ ನಿನಗೆ,**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನೊಂದಿಗೆ ಸಂಗಮಾಡಿದಾಗ, ಈ ಸಂಗ ಮಾಡಿದ ಕೂಟದಿಂದಾಗಿ ಜ್ಞಾನದ ಮಗ ಹುಟ್ಟುತ್ತದೆ. ಜ್ಞಾನದ ಮಗನಿಗೆ ಜನ್ಮ ಕೊಟ್ಟ ತಂದೆ ಈತ ಯಾರಿಗೂ ಹುಟ್ಟದಾತ. ಮನವೆಂಬ ತಾಯಿಗೆ ಜನ್ಮ ನೀಡಿ ಆ ತಾಯಿಯನ್ನೇ ವರಿಸಿದಾತ. ಈ ತಂದೆ ತಾಯಿಗಳಿಂದಲೇ ಜ್ಞಾನಿಯೆಂಬ ಮಗನ ಜನ್ಮ.

ಜ್ಞಾನಿಯೆಂಬ ಮಗನ ಸಂಸಾರದಿಂದಲೇ ಮೊಮ್ಮಗನಾಗಿ ಮೊಮ್ಮಗಳಾಗಿ ಹುಟ್ಟಿದೆ. ಲೋಕದ ದೃಷ್ಟಿಯಲ್ಲಿ ನಾನು ಹೆಣ್ಣಾದೆ ಗಂಡು ಕೂಡ ಆದೆ. ಇಡೀ ಲೋಕಕ್ಕೆ ಜನ್ಮ ನೀಡಿದ ತಂದೆಯ ದೃಷ್ಟಿಯಲ್ಲಿ ನಾನು ಹೆಣ್ಣಲ್ಲ ಗಂಡೂ ಅಲ್ಲ. ಜ್ಞಾನಿ ಮಗನ ಕರುಣೆಯಿಂದಾಗಿ ಲೋಕಕ್ಕೆ ಮೊಮ್ಮಗನಾದೆ ಮೊಮ್ಮಗಳಾದೆ. ಮಗನಾಗಿ ಮಗನಿಗೆ ಮಗನಾದೆ, ಮೊಮ್ಮಗನಾಗಿ ಮೊಮ್ಮಗನಿಗೆ ಮೊಮ್ಮಗಳಾದೆ. ಇದು ಮನ ಮಾಡಿಕೊಂಡ ಲೋಕದ ಸಂಬಂಧ.

ಮಗನು ಹೋಗಿ ಮಹಾಲಿಂಗನಾದ ನೋಡವ್ವಾ ನಿನಗೆ: ಅಂಗ ಮತ್ತೊಂದು ಅಂಗಕ್ಕೆ ಮಗನಾದರೇನು, ಮಗಳಾದರೇನು, ಮೊಮ್ಮಗ ಮೊಮ್ಮಗಳಾದರೇನು? ಅಂಗವನ್ನು ಆವರಿಸಿದ ಮನವೆಂಬ ತಾಯಿಗೆ ಮಗನೇ ಸರಿ. ಆ ತಾಯಿ ಹಡೆದ ಮಗ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನೊಂದಿಗೆ ಸಂಗಮಾಡಿ ಮಹಾಲಿಂಗವೇ ಆದಾಗ ಮನವೆಂಬ ತಾಯಿಗೆ ಗಂಡನಾಗುತ್ತಾನೆ. ಮಗ ತಾಯಿಗೆ ಮಹಾಲಿಂಗವೇ ಆಗುತ್ತಾನೆ. ಲೋಕದ ಸಕಲ ಅಜ್ಞಾನದ ಸಂಬಂಧವನ್ನು ಕಳಚಿಕೊಂಡು ಲಿಂಗಸಂಬಂಧಿಯಾಗುತ್ತಾನೆ.

1329

**ಲಿಂಗ ಘನವೆಂಬೆನೆ ? ಗುರುವಿಡಿದು ಕಂಡೆ.**
**ಗುರು ಘನವೆಂಬೆನೆ ? ಸಾಕಾರವಿಡಿದು ಕಂಡೆ.**
**ಸಾಕಾರ ಘನವೆಂಬೆನೆ ? ನಿರಾಕಾರವಿಡಿದು ಕಂಡೆ.**
**ನಿರಾಕಾರ ಘನವೆಂಬೆನೆ ? ಜಂಗಮವಿಡಿದು ಕಂಡೆನಯ್ಯಾ ,**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದ ಮೇಲೆ ಕಟ್ಟಿಕೊಂಡ ಲಿಂಗವನ್ನು ಗುರುದೇವ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನ ದರುಶನಕ್ಕಾಗಿ ಕೊಡುತ್ತಾನೆ. ಲಿಂಗಯ್ಯನ ದರುಶನ ಗುರುವಿನ ಮೂಲಕವೇ ಸಾಧ್ಯವಾಗುತ್ತದೆ. ಗುರುದೇವ ಸಾಕಾರ ಮೂರ್ತಿಯೇ ಆಗಿದ್ದಾನೆ. ಆತನನ್ನು ಕಾಣುವ ಶಿಷ್ಯ ಕೂಡ ಸಾಕಾರನೇ ಆಗಿದ್ದಾನೆ. ಸಾಕಾರನಾದ ನಾನು ಸಾಕಾರನಾದ ಗುರುದೇವನ ದರುಶನ ಮಾಡಿಕೊಂಡೆ.

ಸಾಕಾರ ಗುರುದೇವನ ಅಂಗದಲ್ಲಿ ನಿರಾಕಾರ ಗುರದೇವನೊಬ್ಬ ಸಂಗಮವಾಗಿದ್ದಾನೆ. ಸಾಕಾರ ಶಿಷ್ಯನ ಅಂಗದಲ್ಲಿ ನಿರಾಕಾ ಶಿಷ್ಯನು ಸಂಗಮವಾಗಿದ್ದಾನೆ. ಗುರುದೇವನೂ ನಿರಾಕಾರ; ಶಿಷ್ಯನೂ ನಿರಾಕಾರ. ನಿರಾಕಾರ ಶಿಷ್ಯನ ಮೂಲಕ ನಿರಾಕಾರ ಗುರುದೇವನನ್ನು ಕಂಡೆ.

ನಿರಾಕಾರನಾದ ಗುರುದೇವ, ಗುರುದೇವನ ಕಾಯದಲ್ಲಿಯೂ ಸಂಗಮವಾಗಿದ್ದಾನೆ; ಶಿಷ್ಯನ ಕಾಯದಲ್ಲಿಯೂ ಸಂಗಮವಾಗಿದ್ದಾನೆ. ನಿರಾಕಾರನಾದ ಶಿಷ್ಯ ಶಿಷ್ಯನ ಕಾಯದಲ್ಲಿಯೂ ಸಂಗಮವಾಗಿದ್ದಾನೆ; ಗುರುದೇವನ ಕಾಯದಲ್ಲಿಯೂ ಸಂಗಮವಾಗಿದ್ದಾನೆ.

ಇಡೀ ಬ್ರಹ್ಮಾಂಡದಲ್ಲಿರುವ ಸಕಲ ಕಾಯಗಳಲ್ಲಿಯೂ ಗುರು ಶಿಷ್ಯರಿಬ್ಬರೂ ಸಂಗಮವಾಗಿದ್ದಾರೆ. ಇದನ್ನು ಜಂಗಮ ಮಾತ್ರ ನೋಡಬಲ್ಲ. ಈತ ಕೂಡಾ ಸಕಲ ಕಾಯಗಳಲ್ಲಿಯೂ ಸಂಗಮವಾಗಿದ್ದಾನೆ. ಈ ಮೂವರೂ ಕಾಯದಲ್ಲಿದ್ದವರು; ನಿರಾಕಾರಿಗಳು. ನಿರಾಕಾರಿ ಜಂಗಮನಿಗೆ ನಿರಾಕಾರಿ ಗುರು ಶಿಷ್ಯರು ಕಾಣುತ್ತಾರೆಂದು ನಿರಾಕಾರಿ ಕಪಿಲಸಿದ್ಧಮಲ್ಲಿಕಾರ್ಜುನನೊಂದಿಗೆ ನಿರಾಕಾರಿ ಸಿದ್ಧರಾಮ ಶಿವಯೋಗಿಗಳು ಮಾತನಾಡಿದ್ದಾರೆ. ಈ ವಚನ ಸಾಕಾರವುಳ್ಳ ಅಕ್ಷರಗಳಿಂದ ಬರೆಯಲ್ಪಟ್ಟ ನಿರಾಕಾರ ಸೂತ್ರವಾಗಿದೆ.

**1330**

**ಹೆತ್ತ ತಾಯಿ ನೀನೆ ಅವ್ವಾ; ನನ್ನ ಹತ್ತಿರ ಬಂದಾಕೆ ನೀನೆ ಅವ್ವಾ ;**
**ಲಿಂಗದ ಮೊತ್ತವಾದಾಕೆ ನೀನೆ ಅವ್ವಾ;**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ರಾಣಿ ನೀನೆ ಅವ್ವಾ.**
**ಇದರನುಭಾವ ತಿಳಿದಾತನೆ ಜಂಗಮ;**
**ಇದರನುಭಾವವ ಕೇಳಿದಾತನೆ ಭಕ್ತ ನೋಡವ್ವಾ; ಆತ ಪ್ರಾಣಲಿಂಗಿಯವ್ವಾ.**

ಬ್ರಹ್ಮಾಂಡದಲ್ಲಿ ವಾಸಮಾಡಿದ ಪ್ರತಿ ತನುವಿನಲ್ಲಿಯೂ ಜ್ಞಾನ ಸಂಗಮವಾಗಿದೆ. ಜ್ಞಾನ ಇಲ್ಲದ ತನು ಇಲ್ಲವೇ ಇಲ್ಲ. ಆದರೂ ತನುವಿಗೆ ಜ್ಞಾನ ಬಳಕೆಯಾಗುವುದೇ ಇಲ್ಲ; ಏಕೆಂದರೆ ಮನ ತನುವನ್ನು ಆವರಿಸಿರುವುದರಿಂದ.

ಮನ ತನುವನ್ನು ಸದಾ ಬಳಕೆಮಾಡಿಕೊಳ್ಳುತ್ತದೆ. ಜ್ಞಾನ ಸದಾ ತನು ಮತ್ತು ಮನಕ್ಕೆ ಬೋಧೆ ಮಾಡುತ್ತದೆ. ಜ್ಞಾನದ ಮಾತನ್ನು ಮನ ಮತ್ತು ತನುಗಳೆರೆಡೂ ಕೇಳುವುದಿಲ್ಲ.

ಜ್ಞಾನ ತನುವಿಗೆ ಜನ್ಮ ನೀಡಿ; ಮಹಾಜ್ಞಾನಿ ತನುವಾಗಿ ಇಡೀ ಬ್ರಹ್ಮಾಂಡವನ್ನು ತನ್ನಂತೆ ಪರಮಾನಂದದಿಂದ ನೋಡಲು ಜ್ಞಾನ ತನುವಿನಲ್ಲಿಯೇ ಸಂಗಮವಾಗಿದೆ. ತನು ಜ್ಞಾನವನ್ನು ನೋಡಿದಂತೆ ತನುವಿನಲ್ಲಿಯೇ ಮನವನ್ನು ಸೃಷ್ಟಿಮಾಡಿದೆ. ಈ ಮನ ತನುವಿನ ಸಂಗಮಾಡಿ ತನುವಿನಲ್ಲಿ ಮಾಯಾಮಯವಾದ ಅರಿಷಡ್ವರ್ಗಗಳನ್ನು ಸೃಷ್ಟಿಮಾಡಿದೆ. ಸಪ್ತ ವ್ಯಸನಗಳನ್ನು, ಅರಿಷಡ್ವರ್ಗಗಳನ್ನು ಸೃಷ್ಟಿಮಾಡಿ ಅವುಗಳ ಸುಖದುಃಖದಲ್ಲಿ ತನು ಸದಾ ಲೀನವಾಗುವಂತೆ ಮಾಡಿದೆ.

ಮನ ಅಂದರೆ ಸಾಮಾನ್ಯವಲ್ಲ. ಇಡೀ ಬ್ರಹ್ಮಾಂಡದ ಸೃಷ್ಟಿಗೆ ಕಾರಣವಾದಾಕೆ. ತನುವಿನಲ್ಲಿಯೇ ತನ್ಮಯವಾದ ಜ್ಞಾನದೇವನಿಗೆ ಸತಿಯಾಗಬೇಕಾದಾಕೆ. ಅಂಗದ ಸಂಗ ಮಾಡಿ ಪತಿಯ ಸಂಗ ಮಾಡದೆ ಮೈಮರೆತಿದ್ದಾಳೆ. ಜ್ಞಾನದೇವರೆಂದರೆ ಸಾಕ್ಷಾತ್ ಶಿವ. ತನುವನ್ನು ಆವರಿಸಿದ ಮನ ಶಿವನನ್ನು ವರಿಸಿದಾಗ ಸಾಕ್ಷಾತ್ ಶಿವೆಯೇ ತಾನಾಗುತ್ತಾಳೆ. ಶಿವೆ ಶಿವನನ್ನು

ಕೂಡಿದಾಗ ತನುವಿನಲ್ಲಿ ಜ್ಞಾನದ ಶಿಶು ಹುಟ್ಟುತ್ತದೆ. ಜ್ಞಾನದ ಶಿಶುವಿಗೆ ಮನ ಹೆತ್ತ ತಾಯಿಯಾಗುತ್ತಾಳೆ.

ಆಗ ಜ್ಞಾನದ ಶಿಶು ಈ ಕೆಳಗಿನಂತೆ ಹಾಡುತ್ತದೆ: ಹೆತ್ತ ತಾಯಿ ನೀನೆ ಅವ್ವಾ; ನನ್ನ ಹತ್ತಿರ ಬಂದಾಕೆ ನೀನೆ ಅವ್ವಾ; ಲಿಂಗದ ಮೊತ್ತವಾದಾಕೆ ನೀನೆ ಅವ್ವಾ; ನಮ್ಮ ಕಪಿಲಸಿದ್ದಮಲ್ಲಿಕಾರ್ಜುನನ ರಾಣಿ ನೀನೆ ಅವ್ವಾ.

ಇದು ತನ್ನ ತನುವಿನಲ್ಲಿಯೇ ಘಟಿಸುತ್ತದೆ, ಇದರ ಅನುಭಾವ ತಿಳಿದಾತಾನೆ ಜಂಗಮ; ಇದರನುಭಾವವನ್ನು ಕೇಳಿದಾತನೇ ಭಕ್ತ . ಆತ ಪ್ರಾಣಲಿಂಗಿ ಎಂದು ಸಿದ್ಧರಾಮಶಿವಯೋಗಿಗಳು ಓದುಗರಿಗೆ ಮಹಾಜ್ಞಾನದ ಸೂತ್ರವನ್ನು ನೀಡಿದ್ದಾರೆ.

**1331**

**ನೀರನೆರೆಯದೆ ಒಂದು ಮರನಾಯಿತ್ತು ನೋಡವ್ವಾ;**
**ಆ ಮರಕ್ಕೆ ಊರ್ಧ್ವಶಾಖೆ ಅಧಃಶಾಖೆ**
**ಟೊಂಗೆಗಳಾದವು ನೋಡವ್ವಾ; ಮತ್ತನಂತ ಪರ್ಣಂಗಳಾದವು.**
**ಊರ್ಧ್ವಶಾಖೆಯ ನೋಡಹೋದಡೆ, ಊರ್ಧ್ವಶಾಖೆ ಕಾಣಬಾರದು.**
**ಅದು ವಿಚಾರಿಸಿ ನೋಡಿದಡೆ ಒಂದೆಯಾಗಿಹುದು.**
**ಇದರ ಕುರುಹು ನೋಡಿ ನಿಬ್ಬೆರಗಾದೆ ನೋಡವ್ವಾ;**
**ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ.**

ದೇಹ ಒಂದು ಬೇರಿಲ್ಲದ ನಡೆದಾಡುವ ಮರ. ಮಾತನಾಡುವ ಮರ, ಕೇಳುವ ಮರ, ಮೂಸಿಸುವ ಮರ, ಸ್ಪರ್ಶಿಸುವ ಮರ, ರುಚಿಸುವ ವಿಚಿತ್ರ ಮರ.

ದೇಹದಲ್ಲಿ ಅರಿವಿನ ಮರುಜವಣೆಯ ಫಲ ಬಿಡುವ ಒಂದು ಭಾಗವಾಗಿದೆ. ಇದನ್ನು ಶರಣರು ಊರ್ಧ್ವಶಾಖೆ ಎಂದು ಕರೆದರು. ಮತ್ತೊಂದು ಮರೆವಿನ ಫಲಬಿಡುವ ಭಾಗವಾಗಿದೆ. ಇದನ್ನು ಶರಣರು ಅಧಃಶಾಖೆ ಎಂದು ಕರೆದರು. ಈ ಭಾಗಕ್ಕೆ ಅನಂತ ಟೊಂಗೆಗಳು ಮತ್ತು ಅನಂತ ಪರ್ಣಂಗಳು.

ಬೇರಿಲ್ಲದ ಮರದಲ್ಲಿಯ ಈ ಎರಡು ಫಲಗಳನ್ನು ಉಣ್ಣುವ; ಪ್ರಾಣವೇ ಇಲ್ಲದ ಮನವೆಂಬ ಒಂದು ಪ್ರಾಣವಿದೆ.ಅರಿವಿನ ಮರು ಜವಣೆಯ ಫಲವನ್ನು ಉಂಡರೆ ಇದು ಆಂಜನೇಯ,ಪ್ರಾಣದೇವ ಎಂದು ದೇಹದೊಂದಿಗೆ ಕರೆಯಿಸಿಕೊಳ್ಳುತ್ತದೆ. ಮರೆವಿನ ಫಲ ಉಂಡರೆ ಇದು ಮರ್ಕಟ ಎಂದು ಕರೆಯಿಸಿಕೊಳ್ಳುತ್ತದೆ. ನೋಡಲು ಹೋದರೆ ಇದು ಯಾವುದೂ ಕಾಣುವುದಿಲ್ಲ. ದೇಹ ಒಂದೇ ಆಗಿ ಕಾಣುತ್ತದೆ. ಇದನ್ನು ಅರಿತರಿತು ಅರಿವಿನಿಂದ ನೋಡಲು ಹೋದರೆ ಮರೆವಿನ ಮಹಾಪರ್ವತವೇ ಆಗಿ ಗೋಚರಿಸುತ್ತದೆ.

ಅರಿವಿನ ಫಲ ಮಾತ್ರ ಉಂಡರೆ ಮರೆವಿನ ಮಹಾ ಪರ್ವತವನ್ನು ಕಿಬ್ಬೆರಳಿನಿಂದ ಎತ್ತಿ ಬೀಸಾಡಿ ಗೋವರ್ಧನನೆಂದು ಕರೆಯಿಸಿಕೊಳ್ಳುವುದರಲ್ಲಿ ಸಂಶಯವೇ ಇಲ್ಲ. ಮರೆವಿನ ಫಲ ಉಣ್ಣಬೇಕೋ, ಅರಿವಿನ ಫಲ ಉಣ್ಣಬೇಕೋ ಎಂಬುದನ್ನು ಮನ ಆಯ್ಕೆ ಮಾಡಿಕೊಳ್ಳಬೇಕು ಅಷ್ಟೆ.

**1332**

**ಲಿಂಗವ ಪೂಜಿಸ ಹೋದಡೆ ಲಿಂಗರೂಪಾದೆನು.**
**ಜಂಗಮವ ಪೂಜಿಸಹೋದಡೆ ಪ್ರಭುವಾದೆನು.**

**ಗುರುವ ಪೂಜಿಸಹೋದಡೆ ಚೆನ್ನಬಸವಣ್ಣನಾದೆನು.**
**ಎನಗಾಜ್ಞೆಯಾದಡೆ ಬರಿಯ ಸಿದ್ಧರಾಮನಾಗಿ ನಿಂದೆನು ನೋಡಾ.**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ, ನಮ್ಮ ಶರಣರ ಸಮೂಹದಲ್ಲಿ.**

ದೇಹ ಒಂದೇ ಅಲ್ಲ; ಅದರಲ್ಲಿ ಲಿಂಗವಿದೆ. ಜಂಗಮನೂ ಇದ್ದಾನೆ. ಗುರುದೇವನೂ ಇದ್ದಾನೆ. ಈ ಮೂವರನ್ನ ಪೂಜಿಸುವ ಮನವೆಂಬ ಭಕ್ತನೂ ಇದ್ದಾನೆ. ಹೀಗಾಗಿ ದೇಹ ಈ ಮೂವರೂ ಇದ್ದ ದೇವಾಲಯ ಆಗಿದೆ. ದೇಹವನ್ನು ಆವರಿಸಿದ ಮನ ದೇಹವನ್ನು ಮಾತ್ರ ಆರಾಧಿಸಿದರೆ ಅದು ಬರೀ ದೇಹ. ಹೆಸರುಳ್ಳ ಒಂದು ದೇಹ ಮಾತ್ರ .

ಮನ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಆರಾಧಿಸಿದರೆ ಅದು ಲಿಂಗಯ್ಯನೇ ತಾನಾಗುತ್ತದೆ. ಅಂಗದಲ್ಲಿಯೇ ಸಂಗಮವಾದ ಜಂಗಮನನ್ನು ಪೂಜಿಸಲು ಹೋದರೆ ಪ್ರಭುದೇವನೇ ತಾನಾಗುತ್ತದೆ. ದೇಹದಲ್ಲಿಯೇ ಸಂಗಮವಾದ ಗುರುದೇವನನ್ನು ಪೂಜಿಸಲು ಹೋದರೆ ಮಹಾಜ್ಞಾನಿ ಚೆನ್ನಬಸವಣ್ಣನೇ ತಾನಾಗುತ್ತದೆ.

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಆಜ್ಞೆಯಾಗುವುದೊಂದೇ ತಡ ಸಿದ್ಧರಾಮನೇ ತಾನಾಗುತ್ತದೆ; ಸದಾ ಶರಣರ ಸಮೂಹದಲ್ಲಿದ್ದಾಗ ಮಾತ್ರ ಇದು ಸಾಧ್ಯವಾಗುತ್ತದೆ.

**1333**

**ಎನ್ನ ಒಳಗನೊತ್ತಿ ನೋಡುವಿರಿ; ಎನ್ನಲೇನುಂಟಯ್ಯಾ ?**
**ನುಡಿಯಿಲ್ಲದಭವ ನೀನು, ನುಡಿಗಲಿತೆಂದಡೆ**
**ನಿಮ್ಮನೊಡಂಬಡಿಸಲಾನು ಸಮರ್ಥನೇ ?**
**ಅನಂತ ವೇದಂಗಳೆಲ್ಲವೂ ನಿಮ್ಮ ಮುಂದೆ**
**ಉಸುರಿಕ್ಕಲಮ್ಮದೆ ಮೂಗರಾಗಿದ್ದವು. ನಿಮಗಾನಿದಿರುತ್ತರವ**
**ಕೊಟ್ಟು ಕೆಟ್ಟ ಕೇಡಿಂಗೆ ಏನೆಂಬೆನೆಲೆ ಅಯ್ಯಾ ?**
**ಕಪಿಲಸಿದ್ಧಮಲ್ಲಿಕಾರ್ಜುನಾ,**
**ನಾನುಭಯಭ್ರಷ್ಟನೆಂಬುದ ನೀವೆ ಬಲ್ಲಿರಿ.**

ಬ್ರಹ್ಮಾಂಡಕ್ಕೆ ಜನ್ಮ ಕೊಟ್ಟ ನೀನು ಎನ್ನೊಳಗೆ ವಾಸಕ್ಕಿರುವಿ. ನೀನು ಎನ್ನನ್ನು ಒಳಗೊತ್ತಿನೋಡಿದರೆ ನೀನೆ ಇರುವಿ. ನಿನ್ನ ಹೊರತು ನನ್ನೊಳಗೇನುಂಟು ಹೇಳಯ್ಯಾ ?

ನುಡಿಯಿಲ್ಲದಭವ ನೀನು. ನೀನು ನನಗಾಗಿ ನುಡಿಯುವೆ. ನೀನು ನುಡಿಯುವ ನುಡಿ ನನ್ನ ಹೊರತು ಮತ್ತಾರೂ ಕೇಳಲರಿಯರು. ನಿನ್ನಿಂದ ನುಡಿಗಲಿತೆ ನಾನು. ಹೀಗೆಂದ ಮಾತ್ರಕ್ಕೆ ನಿಮಗೆ ನಾನು ಸರಿಯೇ ? ಅನಂತ ವೇದ ಆಗಮ ಉಪನಿಷತ್ತುಗಳು, ಭಗವದ್ಗೀತೆ, ಬೈಬಲ್, ಕುರಾನ್‌ಗಳು ಉಸುರಿಕ್ಕಲಮ್ಮದೆ ಉಸುರನು ಹೊರಹಾಕಲರಿಯದೆ ಮೂಗರಾದವು. ಹೀಗಿದ್ದಾಗ ನಿಮಗಾನು ಎದುರುತ್ತರವನು ಕೊಡಲು ಸಾಧ್ಯವೆ ತಂದೆ.

ನೀನು ಜನ್ಮ ನೀಡಿದ ಬ್ರಹ್ಮಾಂಡದ ಚಿಂತೆಯು ಎನಗಿಲ್ಲ. ನಿನ್ನಿಂದಲೇ ಹೊರ ಬಂದ ಅನಂತ ವೇದಗಳನು ಓದುವ ಆಸಕ್ತಿಯೂ ನನಗಿಲ್ಲ. ನಾನು ಉಭಯ ಭ್ರಷ್ಟ. ಇದನ್ನು ನೀವೆ ಬಲ್ಲಿರಿ ಕಪಿಲಸಿದ್ಧಮಲ್ಲಿಕಾರ್ಜುನಾ.

1334

**ಅಯ್ಯಾ , ನಿಮ್ಮ ಕಂಡ ಕಾಣಿಕೆಯಲ್ಲಿ ನಂಬಿ ನಚ್ಚಿ,**
**ಶರಣುಹೋಗಲರಿಯದೆ ಕೆಮ್ಮನೆ ಕೆಟ್ಟೆ;**
**ಅಹಂಕಾರವ ಹೊತ್ತುಕೊಂಡು ಕೆಟ್ಟೆ ನೋಡಯ್ಯಾ .**
**ಕೆಡಿಸಿ, ಮರುಗಿ, ಮರಸಿಹೆನೆಂಬ ಮರುಳು ನಾನಯ್ಯಾ .**
**ಕಪಿಲಸಿದ್ಧಮಲ್ಲಿನಾಥಯ್ಯಾ , ಹಾಲಲದ್ದು , ನೀರಲದ್ದು ; ನೀನೆ ಗತಿಮತಿ.**

ನನಗೆ ಜನ್ಮ ನೀಡಿ; ನಾನು ಕೆಡಬಾರದೆಂದು, ನನ್ನೊಳಗೆ ನೀನಿದ್ದು, ನನ್ನ ಕೈ ಹಿಡಿದು ಮುನ್ನಡೆಸುವ ತಂದೆ ನೀನು. ನಿನಗೆ ಶರಣು ಹೋಗದೆ ಕೆಟ್ಟ ಅಜ್ಞಾನಿ ನಾನು. ನೀನೆ ಸೃಷ್ಟಿಮಾಡಿದ ವಸ್ತುಗಳಿಗೆ ನಾನು ಮರುಳಾಗಿ ಅಹಂಕಾರವನ್ನು ಹೊತ್ತುಕೊಂಡು ನಿಮ್ಮನ್ನು ಅರಿಯದೆ ಕೆಟ್ಟೆ ನೋಡಯ್ಯಾ . ಕೆಡಿಸಿ ಮರುಗಿ ಮರಸಿಹೆನೆಂಬ ಮರುಳ ನಾನಯ್ಯಾ .ಕಪಿಲಸಿದ್ಧಮಲ್ಲಿನಾಥಯ್ಯಾ , ಇನ್ನು ನೀನಾರೆಂದು ನನಗೆ ಗೊತ್ತಾಗಿದೆ. ನೀನು ನನ್ನೊಳಗೆ ಇರುವ ನನ್ನನ್ನು ಹಡೆದ ನನ್ನ ತಂದೆಯೆಂದು ನನಗೆ ಗೊತ್ತಾಗಿದೆ. ನೀನು ಹಾಲಲ್ಲಾದರೂ; ಅದ್ದು ನೀರಲ್ಲಾದರೂ ಅದ್ದು ನೀನೆ ಗತಿ ಎನಗೆ. ನೀನೆ ಮತಿ ಎನಗೆ.

1335

**ಎನ್ನ ಭರಭಾರ ನಿಮ್ಮದಯ್ಯಾ , ಎನ್ನ ಹಾನಿವೃದ್ಧಿ ನಿಮ್ಮದಯ್ಯಾ ,**
**ಎನ್ನ ಕರಕರ ಕಾಡದಿರು ತಂದೆ ! ನಿನ್ನ ಕಾಟ ಎನ್ನ ಪ್ರಾಣದೋಟ !**
**ಕಪಿಲಸಿದ್ಧಮಲ್ಲಿನಾಥಾ, ಕೊಲ್ಲು ಕಾಯಿ ನಿಮ್ಮ ಧರ್ಮದವ ನಾನು.**

ಕಾಯದಲ್ಲಿ ಮನೋಧರ್ಮವಿದೆ. ಅರಿವಿನ ಧರ್ಮವಿದೆ. ಕಾಯ ಅರಿವಿನ ಧರ್ಮದ್ದು. ಮನೋಧರ್ಮ ಕಾಯವನ್ನು ವರಿಸಿ ತನ್ನಂತೆ ಮಾಡಿಕೊಂಡು ತನ್ನ ಭಾರವಾದ ಸುಖದಃಖಗಳನ್ನು ಕಾಯಕ್ಕೆ ಹೊರೆಸಿ ಕಾಯದಿಂದಲೇ ಸುಖಿಸುತ್ತದೆ. ಆದರೆ ಕಾಯ ಮನದ್ದಲ್ಲ ಮನ ಕಾಯದಲ್ಲಿದೆ. ಕಾಯದಲ್ಲಿದ್ದ ಅರಿವಿನ ಧರ್ಮಕ್ಕೆ ದಾಸಾನುದಾಸಗನಾಬೇಕಿತ್ತು .

ಮನ ಅರಿವಿನ ಧರ್ಮಕ್ಕೆ ದಾಸನಾಗುವುದು ಗೊತ್ತಾದ ತಕ್ಷಣ ಅದು ಅರಿವಿನ ಧರ್ಮಕ್ಕೆ ಶರಣು ಹೋಗಿ ಎನ್ನ ಭರಭಾರ ನಿಮ್ಮದಯ್ಯಾ ಎಂದು ಹಾಡುತ್ತದೆ. ಎನ್ನ ಹಾನಿವೃದ್ಧಿ ನಿಮ್ಮದಯ್ಯಾ ಎಂದು ಬೇಡುತ್ತದೆ. ಎನ್ನ ಕರಕರ ಕಾಡದಿರು ತಂದೆ, ನಿನ್ನ ಕಾಟ ಎನ್ನ ಪ್ರಾಣದೋಟ ಕಪಿಲಸಿದ್ಧಮಲ್ಲಿನಾಥಾ ಎಂದು ಆಲಾಪಿಸುತ್ತ ಕೊಲ್ಲು, ಕಾಯಿ ನಿಮ್ಮ ಅರಿವಿನ ಧರ್ಮದವ ನಾನು ಎಂದು ಶಿರವೊಡ್ಡಿ ಬೇಡುತ್ತದೆ.

ಬಸವಣ್ಣನವರು ಬೇಡಿದರೆ ಎನ್ನೊಡೆಯನ ಬೇಡುವೆ. ಹಾಡಿದರೆ ಎನ್ನೊಡೆಯನ ಹಾಡುವೆ. ಒಡೆಯಂಗೆ ಒಡಲ ತೋರಿ ಎನ್ನ ಬಡತನವ ಭಿನ್ನಯಿಸುವೆ ಎಂದು ಹಾಡಿದ್ದಾರೆ. ಮನ ಒಡಲೊಡೆಯ ನಾನು ಬೇಡುವ ವಿಧಾನದ ಸೂತ್ರ ಶರಣರು ತಮ್ಮ ವಚನದ ಮೂಲಕ ಓದುಗರಿಗೆ ನೀಡಿದ್ದಾರೆ.

1336

**ಎನ್ನ ತನು ಕರಗಿ, ಎನ್ನ ಮನ ಕರಗಿ ಕೊರಗಿದ ದುಃಖವಿದಾರದಯ್ಯಾ ?**

**‘ಅಯ್ಯಾ ಅಯ್ಯಾ’ ಎಂದು ಅಳುವ ಅಕ್ಕಿ ಇದಾರದಯ್ಯಾ ?**
**ಮರಹೆಂಬ ಕೂರಸಿಗೆ ಗುರಿಮಾಡಿದವರಾರಯ್ಯಾ ?**
**ಹಾ! ಹಾ! ಎಂಬ ಧ್ವನಿಯ ಕೇಳಲಾರದೆ,**
**ಕಂಡು ಕರುಣದಿಂದ ಶಿರವ ಹಿಡಿದೆತ್ತಿ ,**
**ಎನ್ನ ಕಣ್ಣ ನೀರ ತೊಡೆದೆನು ಕಪಿಲಸಿದ್ಧಮಲ್ಲಿನಾಥಯ್ಯನು.**

ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಬಾಗಿ ಆತನಿಗೆ ತನುಮನಗಳನ್ನು ಒಪ್ಪಿಸಿ ಸೆರಗೊಡ್ಡಿ ಬೇಡುವ ಕೂಗು ಇಲ್ಲಿದೆ. ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನಿಗೆ ತನುವನ್ನು ಒಪ್ಪಿಸದಿದ್ದಕ್ಕಾಗಿ ತನುವಿನಲ್ಲಿ ದುಃಖವಿದೆ. ಮನದಲ್ಲಿ ಕೊರಗಿದೆ. ತನು ಮನಗಳೆರಡನ್ನು ಲಿಂಗಯ್ಯನಿಗೆ ಒಪ್ಪಿಸಿದಾಗ ಸುಳ್ಳು ಸುಖವು ಇಲ್ಲದಾಗುತ್ತದೆ, ಸುಳ್ಳು ದುಃಖವೂ ಇಲ್ಲವಾಗುತ್ತದೆ. ಅಂಗದಲ್ಲಿಯೇ ಅರಿವಿನ ಲಿಂಗಯ್ಯ ಸಂಗಮವಾಗಿದ್ದರೂ ಮನ ಅಂಗದ ಸಂಗ ಮಾಡಿದುದಕ್ಕಾಗಿ ಲಿಂಗಯ್ಯನ ಸಂಗ ಮಾಡಲು ಮನಕ್ಕೆ ಸಾಧ್ಯವಾಗಿಲ್ಲ. ಹೀಗಾಗಿ ಮನಕ್ಕೆ ಮರೆವುಂಟಾಗಿದೆ. ಪುನಃ ಅಯ್ಯಾ ಅಯ್ಯಾ ಎಂದು ಮನ ಅತ್ತು ದಳದಳನೆ ಕಣ್ಣೀರ ಸುರಿಸಿ ಲಿಂಗಯ್ಯನ ಪಾದಕ್ಕೆ ಎರಗಿದಾಗ ಹಾ ! ಹಾ ! ಎಂಬ ದುಃಖದ ಧ್ವನಿಯ ಕೇಳಲಾರದೆ, ಲಿಂಗಯ್ಯ ಕಂಡು ಕರುಣದಿಂದ ತನುಮನಗಳ ಶಿರವನ್ನು ಹಿಡಿದೆತ್ತಿ ಕಣ್ಣ ನೀರ ತೊಡೆದನು ಎಂದು ಸಿದ್ಧರಾಮಶಿವಯೋಗಿಗಳು ಮಾತನಾಡಿದ್ದಾರೆ.

**1337**

**ಯೋಗದ ಹೊಲಬ ನಾನೆತ್ತ ಬಲ್ಲೆನಯ್ಯಾ ?**
**ಯೋಗ ಶಿವಶಕ್ತಿ ಸಂಪುಟವಾಗಿಪ್ಪುದಲ್ಲದೆ,**
**ಶಿವಶಕ್ತಿವಿಯೋಗವಪ್ಪ ಯೋಗವಿಲ್ಲವಯ್ಯಾ .**
**ಹೃದಯ ಕಮಲದಲ್ಲಿ ಇಪ್ಪಾತ ನೀನೆಯಲ್ಲದೆ,**
**ಎನಗೆ ಬೇರೆ ಸ್ವತಂತ್ರವಿಲ್ಲ ಕೇಳಾ. ಕಪಿಲಸಿದ್ಧಮಲ್ಲಿಕಾರ್ಜುನಾ.**

ಯೋಗ ಎಂದರೆ ಕೂಡುವಿಕೆ. ಅದನ್ನು ಓದಿ, ಕೇಳಿ ಕೂಡಲು ಸಾಧ್ಯವಿಲ್ಲ. ಏಕೆಂದರೆ ಅಂಗದಲ್ಲಿ ಲಿಂಗಯ್ಯನೆಂಬ ಅರಿವಿನ ಶಿವ ಸಂಗಮಗೊಂಡಿದ್ದಾನೆ. ಅಂಗದಲ್ಲಿಯೇ ಮನ ಶಿವನಿಗೆ ಶಕ್ತಿದೇವತೆಯಾಗಿ ಕೂಡಿಕೊಂಡಿದ್ದಾಳೆ. ಹೀಗಾಗಿ ತನು ಶಿವಶಕ್ತಿ ಸಂಗಮದ ಸಂಪುಟವಾಗಿದೆ. ಅಂಗ ಅರಿವೆಂಬ ಶಿವನು ಮನವೆಂಬ ಶಕ್ತಿ ಇವು ಮೂರು ಕೂಡಿವೆ ಅಗಲಲು ಸಾಧ್ಯವಿಲ್ಲ. ಶಿವ ಇಲ್ಲದ ಅಂಗವನ್ನು ಶಿವೆ ಎಂದು ಕರೆಯುತ್ತಾರೆ.

ಶಿವಶಕ್ತಿವಿಯೋಗವಪ್ಪ ಯೋಗವು ಇಲ್ಲವೇ ಇಲ್ಲ. ಹೃದಯ ಕಮಲದಲ್ಲಿ ಲಿಂಗಯ್ಯನಿದ್ದು ಮನವೆಂಬ ಶಕ್ತಿಯನ್ನು ತನ್ನೊಂದಿಗೆ ಕೂಡಲು ಕೈ ಮಾಡಿ ಕರೆಯುತ್ತಿದ್ದಾನೆ. ನಿಧಾನವಾಗಿ ಅಂತರಾಳವನ್ನು ಅವಲೋಕಿಸಿದಾಗ ಅಂಗದ ಅನುಭವಕ್ಕೆ ಬರುತ್ತದೆ. ಇದರ ಹೊರತಾಗಿ, ಅಂಗ ಮತ್ತು ಮನಕ್ಕೆ ಬೇರೆ ಸ್ವತಂತ್ರವಿಲ್ಲ ಎಂದು ಸಿದ್ಧರಾಮಶಿವಯೋಗಿಗಳು ಹೇಳಿದ್ದಾರೆ.

**1338**

**ಉತ್ಪತ್ತಿ ಸ್ಥಿತಿ ಲಯವಿಲ್ಲದಭವ ನೀನು ಕಂಡಯ್ಯಾ .**
**ಎನಗೆ ಬೇರೆ ಸ್ವತಂತ್ರವಿಲ್ಲ ಕೇಳಾ,**
**ನಿನ್ನಿಚ್ಛಾಮಾತ್ರದಲ್ಲಿ ನಾನಿಪ್ಪೆನು,**
**ಹಿರಿಯ ನೀನೆ ದೇವಾ, ಕಪಿಲಸಿದ್ಧಮಲ್ಲಿಕಾರ್ಜುನಾ,**
**ನಾನೇತರರೊಳಗಪ್ಪೆನು. ಹೇಳಾ, ಪ್ರಭುವೇ !**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಮಹಾದೇವನೂ ಆಗಿದ್ದಾನೆ. ಆತನು ಸದಾಶಿವನೂ ಆಗಿದ್ದಾನೆ. ಸಾಕ್ಷಾತ್ ಪರಬ್ರಹ್ಮನು ಆಗಿದ್ದಾನೆ. ಉತ್ಪತ್ತಿ ಸ್ಥಿತಿ ಲಯಕ್ಕೆ ಕಾರಣೀಕರ್ತನೂ ಆಗಿದ್ದಾನೆ. ಆದರೆ ಆತನಿಗೆ ಜನನವಿಲ್ಲ ಮರಣವಿಲ್ಲ. ಅಂಗವನ್ನು ಆವರಿಸಿದ ಮನ ಆತನನ್ನು ಕಂಡು ಈ ಕೆಳಗಿನಂತೆ ಹೇಳುತ್ತದೆ.

ಉತ್ಪತ್ತಿ ಸ್ಥಿತಿ ಲಯವಿಲ್ಲದಭವ ನೀನು ಕಂಡಯ್ಯಾ . ಎನಗೆ ಬೇರೆ ಸ್ವತಂತ್ರವಿಲ್ಲ ಕೇಳಾ ನಿನ್ನಿಚ್ಛಾಮಾತ್ರದಲ್ಲಿ ನಾನು ಇರುವೆನು. ಹಿರಿಯ ನೀನೆ ದೇವಾ ಕಪಿಲಸಿದ್ಧಮಲ್ಲಿಕಾರ್ಜುನಾ ಎಂದು ಸಿದ್ಧರಾಮಶಿವಯೋಗಿಗಳು ಅಂಗದೊಳಗೆ ಸಂಗಮವಾದ ಅರಿವಿನ ಲಿಂಗಯ್ಯನ ಕುರಿತು ಅಲ್ಲಮ ಪ್ರಭುಗಳ ಮುಂದೆ ಪ್ರಸ್ತಾಪಿಸಿದ್ದಾರೆ.

**1339**

**ಒಪ್ಪದನಲ್ಲದುದನೊಪ್ಪವ ಮಾಡುವಿರಯ್ಯಾ ,**
**ನಿಮ್ಮೊಲವು ಚೆಲುವ ಕಂಡಯ್ಯಾ .**
**ನೀವೆಂತು ನೋಡಿದಡಂತಿಪ್ಪುದಲ್ಲದೆ,**
**ಅಪ್ಪುದಲ್ಲವರೆಂಬವರಿಲ್ಲ ಕಾಣಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಒಪ್ಪುವ ಮಾತು ಲೋಕ ಒಪ್ಪುವುದಿಲ್ಲ. ಲೋಕ ಒಪ್ಪದುದನು ಲಿಂಗಯ್ಯನು ಒಪ್ಪವ ಮಾಡುವನು. ಆತನ ಒಲವೇ ಹಾಗೆ ಆತನ ಚೆಲುವೇ ಹಾಗೆ. ಆತನದು ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವು.

ನಾನು ನೋಡಿದಂತೆ ಆತ ನೋಡುವುದಿಲ್ಲ. ನಾನು ನೋಡಿದ ವಸ್ತುವನ್ನು ಆತ ನೋಡಿ ನೀನು ಹೀಗೆ ನೋಡಬೇಕೆ ಅದು ಹಾಗಿಲ್ಲವಲ್ಲ ಎಂದು ನಾನು ನೋಡಿದ ವಸ್ತುವನ್ನೆ ಆತ ನೋಡಿ ನನಗೆ ತಿಳಿಹೇಳುತ್ತಾನೆ. ನನ್ನದು ಬೇಕು ಎನ್ನುವ ಕಾಮದ ಕಣ್ಣು; ಆತನದು ಪರಮ ಪ್ರೇಮದ ಕಣ್ಣು. ಕಾಮದ ದೃಶ್ಯವನ್ನು ಸುಟ್ಟು ಬೂದಿಮಾಡಿ ಆ ದೃಶ್ಯದಲ್ಲಿ ಪ್ರೇಮವ ನೆಲೆಸುವ ಕಣ್ಣು. ಆತ ನೋಡಿದಡಂತಿಪ್ಪುದಲ್ಲದೆ, ಅಪ್ಪುದಲ್ಲವರೆಂಬವರಿಲ್ಲ ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1340**

**ಮಾತುಳ್ಳನ್ನಕ್ಕ ದೇಹ ಹಿಂಗದು,**
**ನೆನಹುಳ್ಳನ್ನಕ್ಕ ಪ್ರಾಣ ಸೂತಕ ಬಿಡದು,**

**ಕಾಯದ ಜೀವದ ಹೊಲಿಗೆಯ ಸಂದ ಬಿಚ್ಚಲರಿಯದು,**
**ಆನು ನಿರ್ದೇಹಿ ಎಂದಡೆ ನಗರೆ ನಿಮ್ಮ ಪ್ರಮಥರು?**
**ಎನ್ನ ಅಂತರಂಗದಲುಳ್ಳ ಅವಗುಣವ ಹಿಂಗಿಸಿ,**
**ನಿಮ್ಮಂತೆ ಮಾಡಿದಡಾನುಳಿವೆನಲ್ಲದೆ**
**ಬೇರೆ ಗತಿಯ ಕಾಣೆ ನೋಡಾ, ಅಯ್ಯಾ ಕಪಿಲಸಿದ್ಧಮಲ್ಲಿನಾಥಾ.**

ಕಣ್ಣಿಗೆ ನೋಡುವ ಕಲೆಯಿದೆ. ಮಾತನಾಡುವ ಕಲೆ ಕಣ್ಣಿಗೆ ಗೊತ್ತಿಲ್ಲ. ಆದರೂ ಅದು ಮಾತನಾಡುತ್ತದೆ ! ಕಣ್ಣು ನೋಡಿ ಮಾತನಾಡಿದ ಮಾತು ಕಣ್ಣಿಗೆ ಮಾತ್ರ ಕೇಳುತ್ತದೆ; ಇಡೀ ದೇಹಕ್ಕೆ ಮಾತ್ರ ಕೇಳುತ್ತದೆ; ಮತ್ತೊಂದು ದೇಹಕ್ಕೆ ಕೇಳುವುದಿಲ್ಲ.

ಹಾದರದಿಂದ ನೋಡಿ ಅಜ್ಞಾನದ ಸುಖವನ್ನು ಕಣ್ಣು ಮತ್ತು ದೇಹ ಅನುಭವಿಸುತ್ತದೆ. ಹಾದರದಿಂದ ನೋಡಿದ ಕಣ್ಣಿನಲ್ಲಿಯೇ ಅರಿವಿನ ದೃಶ್ಯ ಹುಟ್ಟಿ ನೀನು ಹೀಗೆ ನೋಡಬಾರದಿತ್ತು ಎಂದು ಅಜ್ಞಾನ ದೃಶ್ಯಕ್ಕೆ ಅರಿವಿನ ದೃಶ್ಯ ಪಾಠ ಮಾಡುತ್ತದೆ.

ಅಜ್ಞಾನದಿಂದ ನೋಡಿ ಹಾದರ ಮಾಡುವುದು ಕಣ್ಣಿನ ಮಾತುಗಳ ಮೂಲಕ ತನಗೆ ಗೊತ್ತಾಯಿತು. ಹೀಗೆ ನೋಡಿ ಸುಖ ಅನುಭವಿಸುವಾಗ ಕೂಡಲೆ ನೀನು ನೋಡಿದ್ದು ತಪ್ಪು ಎಂದು ಜ್ಞಾನದ ದೃಶ್ಯದ ಮೂಲಕ ತನಗೆ ಗೊತ್ತಾಯಿತು. ಜ್ಞಾನದ ದೃಶ್ಯದ ಮಾತು ಕಣ್ಣಿಗೂ ದೇಹಕ್ಕೂ ಕೇಳಿತು.

ಕಣ್ಣಿನ ಮೂಲಕ ನೋಡುವ ಅಜ್ಞಾನದ ದೃಶ್ಯದ ಮಾತುಗಳು ತನಗೆ ಕೇಳುತ್ತವೆ. ಹಾಗೆಯೇ ಜ್ಞಾನದ ದೃಶ್ಯದ ಮಾತುಗಳು ಕೂಡಾ ತನಗೆ ಕೇಳುತ್ತವೆ ಅಂದ ಮೇಲೆ ಬಾಯಿ ಮೂಲಕ ನಾನು ನೋಡಿದೆ ಎಂದು ಇತರರಿಗೆ ಕೇಳುವಂತೆ ಹೇಳುವ ಅವಶ್ಯಕತೆಯಿದೆಯೇ ?

ಕಣ್ಣು ಪ್ರತಿಯೊಂದು ವಸ್ತುವನ್ನು ಎರಡು ದೃಶ್ಯಗಳ ಮೂಲಕ ನೋಡುತ್ತದೆ. ಅಜ್ಞಾನದ ದೃಶ್ಯದಿಂದ ನೋಡಿದುದನ್ನು ನುಡಿದು ತನಗೆ ಮಾತಿನ ಮೂಲಕ ಹೇಳುತ್ತದೆ. ಹಾಗೆಯೇ ಜ್ಞಾನದ ದೃಶ್ಯದಿಂದ ಅದೇ ವಸ್ತುವನ್ನು ನೋಡಿ ನೋಡಿದುದನ್ನು ನುಡಿದು ತನಗೆ ಮಾತಿನ ಮೂಲಕ ಹೇಳುತ್ತದೆ.

ಕಣ್ಣು ನೋಡಿದ ಎರಡು ದೃಶ್ಯಗಳನ್ನು ಬಾಯಿ ಮೂಲಕ ಇತರರಿಗೆ ನುಡಿದು ಹೇಳುವಾಗ ಬಾಯಿ ಯಾವ ದೃಶ್ಯವನ್ನು ಬಳಕೆ ಮಾಡಿ ನುಡಿಯುತ್ತದೆ ? ಕಣ್ಣು ನೋಡಿದ ಅಜ್ಞಾನದ ದೃಶ್ಯವನ್ನು ಬಳಕೆ ಮಾಡಿ ಬಾಯಿ ನುಡಿಯಿತೋ. ಅಥವಾ ಜ್ಞಾನದ ದೃಶ್ಯವನ್ನು ಬಳಕೆ ಮಾಡಿ ಬಾಯಿ ಇತರರಿಗೆ ಕೇಳುವಂತೆ ನುಡಿಯಿತೋ ?

ಅಜ್ಞಾನದಿಂದ ನೋಡಿ ಹಾದರ ಮಾಡಿದುದನ್ನು ಬಾಯಿ ಮೂಲಕ ನುಡಿದು ಹೇಳುವಂತಿಲ್ಲ. ಜ್ಞಾನದಿಂದ ನೋಡಿ ಕಣ್ಣು ಮತ್ತು ದೇಹಕ್ಕೆ ಪಾಠ ಮಾಡಿದುದನ್ನು ಬಾಯಿ ಮೂಲಕ ನುಡಿದು ಹೇಳುವುದು ಸಾಧ್ಯವಾಗುವುದಿಲ್ಲ ಅಂದಮೇಲೆ ಬಾಯಿ ಮೂಲಕ ನುಡಿದು ಹೇಳುವುದೆಲ್ಲ ಸುಳ್ಳು ಎಂದಂತಾಗಲಿಲ್ಲವೆ ?

ಮಾತುಳ್ಳನ್ನಕ್ಕ ದೇಹದ ಅಜ್ಞಾನ ಹಿಂಗದು ಎಂದು ಹೇಳುವ ಸಿದ್ಧರಾಮಶಿವಯೋಗಿಗಳ ಮಾತಿನ ಸೂತ್ರ ಸತ್ಯವೂ ಆಗಿದೆ. ಹುಸಿಯ ನುಡಿಯಲು ಬೇಡ ಎಂದು ಹೇಳಿದ ಬಸವಣ್ಣನವರ ಸೂತ್ರವೂ ಸತ್ಯವೇ ಆಗಿದೆ. ನೋಡೂದ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ ಎಂದು ಹೇಳಿದ ಅಲ್ಲಮಪ್ರಭುಗಳ ಸೂತ್ರವೂ ಸತ್ಯವೇ ಆಗಿದೆ.

ಹಾದರದಿಂದ ನೋಡಿ ಸೋದರ ಭಾವದಿಂದ ನುಡಿದರೆ ಹಾದರದಿಂದ ನೋಡಿದ ನೆನಪು

ಕಣ್ಣಿನ ಮೂಲಕ ಇಡೀ ದೇಹದಲ್ಲಿ ಉಳಿದು ಪ್ರಾಣ ಇರುವವರೆಗೆ ಇಡೀ ದೇಹವನ್ನು ಸೂತಕವಾಗಿ ಕಾಡುವುದು. ಕಾಯದ ಜೀವದ ಅಜ್ಞಾನದ ಈ ಹೊಲಿಗೆಯ ಸಂದನು ತನಗೆ ತಾನೆ ಬಿಚ್ಚಿಕೊಳ್ಳಲು ತಿಳಿಯಲೇಬೇಕಾಗಿದೆ. ತಿಳಿದು ಅರಿವಿನ ಪರಮಸುಖವನ್ನುತನಗೆ ತಾನೇ ಉಣ್ಣಲೇಬೇಕಾಗಿದೆ.

ತನಗೆ ತಾನೆ ಅರಿಯದೆ ತಾನು ನಿರ್ದೇಹಿ ಎಂದು ಶಬ್ದದಿಂದ ನುಡಿದ ಮಾತ್ರಕ್ಕೆ ಜ್ಞಾನದ ಕಲೆಯನ್ನು ಬಲ್ಲವ ಮೆಚ್ಚುವುದಿಲ್ಲ. ಅಷ್ಟೇ ಏಕೆ ? ಪ್ರತಿಯೊಂದು ಕಾಯದಲ್ಲಿ ಬಚ್ಚಿಟ್ಟುಕೊಂಡ ಮಹಾಜ್ಞಾನಿ ಕೂಡಾ ಮೆಚ್ಚುವುದಿಲ್ಲ. ಕಾಯದ ಅಂತರಂಗದಲ್ಲಿ ತನಗೆ ತಾನೆ ಸಂಗ್ರಹ ಮಾಡಿಕೊಂಡ ಅವಗುಣಗಳನ್ನು ತನಗೆ ತಾನೇ ತನ್ನದೇ ಆದ ಜ್ಞಾನದಿಂದ ಹಿಂಗಿಸಿಕೊಂಡು ಜ್ಞಾನ ಹೇಳಿದಂತೆ ತಾನು ಮಾಡಿದರೆ ಆ ಮಹಾಜ್ಞಾನಿಯೇ ತಾನಾಗಿ ತನಗೆ ತಾನೇ ಉಳಿಯುವನಲ್ಲದೆ ಬೇರೆ ಗತಿಯ ಕಾಣೆ ಎಂದು ಸಿದ್ಧರಾಮಶಿವಯೋಗಿಗಳು ಹೇಳಿದ್ದಾರೆ. ಇದು ಅಂತರಂಗದ ಅರಿವಿನ ಮಾತು.

**1341**

**ಎಮ್ಮ ನಲ್ಲನೊಲಿದು ಒಲಿಸಿ ಕಾಡುತ್ತಿರೆ,**
**'ಬಾರಾ ಬಾರಾ' ಎಂದೆನ್ನ ಕರಣ ಹರಣವ ತೋರಿದಡೆ**
**ತಾನೆ ಒಲಿದು ಬಂದೆನ್ನ ತಲೆಯ ಪಿಡಿದು ನೆಗಹಿ,**
**ಎನ್ನ ಮನೆಗೆ ಬಂದ ಕಪಿಲಸಿದ್ಧಮಲ್ಲಿನಾಥನ**
**ಒಲುಮೆಯ ಘನವೇನೆಂದುಪಮಿಸುವೆನು.**

ಕಾಯದಲ್ಲಿ ಮನವೆಂಬ ಸ್ತ್ರೀ ಇದ್ದಾಳೆ ಅರಿವೆಂಬ ಮಹಾಪುರುಷನೂ ಇದ್ದಾನೆ. ಕಾಯ ಸ್ತ್ರೀ ಪುರುಷರಿದ್ದ ಕೈಲಾಸ. ಮನವೆಂಬ ಸ್ತ್ರೀ ನಲ್ಲೆಯಾದರೆ ಅರಿವೆಂಬ ಪುರುಷ ನಲ್ಲನಾಗಿದ್ದಾನೆ. ಇವರಿಬ್ಬರು ಒಬ್ಬರನ್ನೊಬ್ಬರು ಕೂಡುವುದು ಬಲುಕಷ್ಟ. ನಲ್ಲ ತನ್ನ ನಲ್ಲೆಯನ್ನು ಒಲಿಸಿಕೊಳ್ಳಲು ಹಗಲಿರುಳೆನ್ನದೆ ಪ್ರಯತ್ನಿಸುತ್ತಿದ್ದರೂ ನಲ್ಲೆಗೆ ಒಲವಿಲ್ಲ. ಆತನನ್ನು ಒಲಿಸಿಕೊಂಡು, ಕೂಡಿ ಒಂದಾಗಬೇಕೆಂಬ ಬಯಕೆಯೂ ಇಲ್ಲ ಹೀಗಾಗಿ ಕಾಯ ನಾನಾ ವೃತ್ತಿಗಳಲ್ಲಿ ತೊಡಗಿಕೊಂಡು ಆಯಾ ವೃತ್ತಿಮೂಲಕ ತನ್ನನ್ನು ಗುರುತಿಸಿಕೊಂಡಿದೆ. ಅರಿವಿನ ಧರ್ಮದಿಂದ ಬಹುದೂರ ಉಳಿದಿದೆ.

ಸಿದ್ಧರಾಮಶಿವಯೋಗಿಗಳು ಕಾಯದೊಳಗಿದ್ದ ನಲ್ಲ ಒಲಿದು ಒಲಿಸಿ ಕಾಡುತ್ತಿರೆ ಬಾರಾ ಬಾರಾ ಎಂದೆನ್ನ ತಲೆಯ ಹಿಡಿದು ನೆಗಹಿ ಎನ್ನ ಕಾಯದ ಮನೆಗೆ ಬಂದ ಕಪಿಲಸಿದ್ಧಮಲ್ಲಿನಾಥನ ಒಲುಮೆಯ ಘನವನ್ನು ಏನೆಂದುಪಮಿಸಲಿ ಎಂದು ನಲ್ಲನನ್ನು ಕೂಡಿದ ನಲ್ಲೆಯ ಪರಮ ಸುಖವನ್ನು ಓದುಗರಿಗೆ ಕರುಣಿಸಿದ್ದಾರೆ.

**1342**

**ಅಂಗವಳಿದು ನಿಂದವನೆಂದು ನಾನರಿಯೆ,**
**ಘನಲಿಂಗದಲ್ಲಿ ಸಲೆ ಸಂದವನೆಂದು ನಾನರಿಯೆ,**
**ಆವ ವೇಷದಲ್ಲಿ ಬಂದು ನಿಂದ ಠಾವನರಿಯೆ,**
**ಕ್ರೋಧವೆಂಬ ಸಂಸಾರದ ಸಾಗರದಲ್ಲಿ ಸಾಧನೆಯ ಮಾಡಲಾಗಿ**
**ಪ್ರಭುದೇವರ ಸುಳುಹು ಅಘಟಿತವಾಯಿತ್ತು**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಲಿಂಗಯ್ಯ ಸಂಗಮುವಾಗಿದ್ದಾನೆ ಆದರೂ ಅಂಗವನ್ನು ಸೋಂಕಿಲ್ಲ. ಅಂಗವನ್ನು ಬೆಳಗುತ್ತಿದ್ದಾನೆ. ಆದರೂ ಕೂಡ ಅಂಗದಲ್ಲಿಯೇ ಸಂಗಮುವಾದ ಅರಿವೆಂಬ ಲಿಂಗಯ್ಯನನ್ನು ಅಂಗ ಅರಿಯದು. ಅಂಗವನ್ನು ಆವರಿಸಿದ ಮನ ಕೂಡ ಘನಲಿಂಗಯ್ಯನನ್ನು ಅರಿಯದು. ಲೋಕ ಲಿಂಗಯ್ಯನನ್ನು ಹೊರಗೆ ಆರಾಧಿಸುತ್ತದೆ. ಅಂಗದಲ್ಲಿಯೇ ಅರಿವಿನ ಲಿಂಗಯ್ಯನಿದ್ದಾನೆ ಎಂಬ ವಿಷಯ ಅಂಗ ತಿಳಿಯದು.

ಪ್ರಭುದೇವರು ನೀಡಿದ ಸುಳುಹುನಿಂದ ಸಾಧನೆಯ ಮಾಡಲಾಗಿ ಕ್ರೋಧವೆಂಬ ಸಂಸಾರ ನಿರ್ನಾಮವಾಯಿತ್ತು. ಪ್ರತಿ ಅಂಗದಲ್ಲಿಯೂ ಲಿಂಗಯ್ಯನೆ ಇದ್ದಾನೆ ಎಂದು ತಿಳಿಯಿತು. ಮನ ಅಂಗಕ್ಕೆ ಯಾವ ವೇಷ ಧರಿಸಿದರೇನು. ಅದು ಲಿಂಗಯ್ಯನಿದ್ದ ಲಾಂಛನವೆಂದು ಖಚಿತವಾಗಿ ತಿಳಿಯಿತು ಕಪಿಲಸಿದ್ಧಮಲ್ಲಿಕಾರ್ಜುನಾ ಎಂದು ಸಿದ್ಧರಾಮಶಿವಯೋಗಿಗಳು ಹಾಡಿದ್ದಾರೆ.

**1343**

**ಅಯ್ಯಾ ಅಯ್ಯಾ ನೀವು ಬಾರದಿರ್ದಡೆ ಅಂತು ಹಂಬಲಿಸುತ್ತಿದೆ.**
**ನೀನೆನ್ನ ಹಂಬಲ ಕೇಳಿ ಕರುಣದಿಂದ ಭೋರನೆ ಬಂದಡೆ,**
**ಆನು ತಳವೆಳಗಾಗಿ ಅವಗುಣವೆಂಬ ರಜವ ಕಳೆದು**
**ಕಂಬಳಿಯ ಪೀಠವನೊಲ್ಲದೆ ಹೃದಯಪೀಠವನಿಕ್ಕಿ**
**ಮೇಲುಪ್ಪರಿಗೆಯೊರತೆಯ ಅಗ್ಗವಣಿಯ ತಂದು**
**ಪಾದಾರ್ಚನೆಯ ಮಾಡಿ,**
**ಎರಡೆಸಳ ಕಮಲವನೆರಡು ಪಾದಕ್ಕೆ ಪೂಜಿಸಿ,**
**ಕಂಗಳ ತಿರುಳ ತೆಗೆದು ಆರತಿಯನೆತ್ತಿ ,**
**ಉಸುರ ನುಂಗಿದ ಪರಿಮಳದ ಧೂಪವ ಬೀಸಿ,**
**ನೆತ್ತಿಯ ಪರಿಯಾಣದೊಳಿಟ್ಟು ಬೋನವ ಗಡಣಿಸಿದಡೆ,**
**ಸಯದಾನ ಸವೆಯದ ಆರೋಗಣೆಯ ಮಾಡಿ,**
**ಉಂಡ ಬಾಯ ತೊಳೆದಡೆ ಸಂದೇಹವಾದುದೆಂದು**
**ಮೇಲು ಸೆರಗಿನೊಳು ತೊಡೆದುಕೊಂಡು**
**ಬಾಯ ಮುಚ್ಚಳ ತೆಗೆಯದೆ,**
**ತ್ರಿಕರಣವೆಂಬ ತಾಂಬೂಲವನವಧರಿಸಿದ,**
**ಭಾವದ ಕನ್ನಡವ ಹರಿದುಹಾಯ್ಕಿದ,**
**ಆತನ ಪಾದಕ್ಕೆ ನಾನು ಶರಣೆಂದು ಪಾದೋದಕವ ಕೊಂಡೆ.**
**ಆತನ ಪ್ರಸಾದಕ್ಕೆನ್ನ ಸೆರಗ ಹಾಸಿ ಆರೋಗಿಸಿ ಸುಖಿಯಾದೆನು**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ,**
**ನಿಮ್ಮ ಶರಣ ಪ್ರಭುದೇವರ ಕರುಣವೆನಗೆ**
**ಸಾಧ್ಯವಾದ ಪರಿಯನೇನೆಂದುಪಮಿಸುವೆ !**

ಅಯ್ಯಾ ಪರಮಾತ್ಮನೆ ಎನ್ನಂಗದಲ್ಲಿಯೇ ಇದ್ದು ಎನಗೆ ದರುಶನ ನೀಡದ ಕಾರಣ ನಾನು ಹಗಲಿರುಳೆನ್ನದೆ ನಿನಗಾಗಿ ಹಂಬಲಿಸುತ್ತಲಿದ್ದೆ. ನೀನು ಎನ್ನ ಹಂಬಲ ಕೇಳಿ ಕರುಣದಿಂದ ಭೋರನೆ

ಬಂದಾಗ ನನ್ನ ಅವಗುಣಗಳು ತಲೆಕೆಳಗಾದವು ಎನ್ನ ರಜವ ಕಳೆದುಹೋಯಿತು.

ನಿನಗಾಗಿ ನಾನು ಕಂಬಳಿಯ ಪೀಠವನ್ನು ಹಾಸದೆ ಎನ್ನ ಹೃದಯವನ್ನೇ ಪೀಠವನ್ನಾಗಿಸಿ ಮೇಲುಪ್ಪರಿಗೆಯಲ್ಲಿರುವ ವರತೆಯ ಜಲವನ್ನು ತಂದು ಪಾದಾರ್ಚನೆಯ ಮಾಡಿದೆನು. ಎನ್ನ ದೃಶ್ಯದ ಎರಡೆಸಳ ಕಮಲವನ್ನು ನಿನ್ನ ಪಾದಕ್ಕೆ ಹರಡಿ ಪೂಜಿಸಿದೆನು. ಎನ್ನ ಕಣ್ಣುಗಳ ಮೂಲಕ ನಿನಗೆ ಆರತಿಯನೆತ್ತಿ ನನ್ನ ಉಸುರನು ನಾನೆ ನುಂಗಿ ಅದರ ಪರಿಮಳದ ಧೂಪವನ್ನು ನಿನಗೆ ಬೀಸಿ ಆರಾಧಿಸಿದೆನು. ನೆತ್ತಿಯನ್ನೆ ಪಾತ್ರೆಯನ್ನಾಗಿಸಿ.ಅದರೊಳಗೆ ಭೋನವ ಕುದಿಸಿ ಸಯಿದಾನ ಸವೆಯದೆ ಆರೋಗಣ ಮಾಡಿದೆನು. ಉಂಡ ಬಾಯಿ ತೊಳೆದೊಡೆ ಅನ್ಯರಿಗೆ ಸಂದೇಹವಾದೀತು ಎಂದು ಮೇಲೆ ಸೆರಗನ್ನು ಹೊದ್ದುಕೊಂಡು ಬಾಯ ಮುಚ್ಚಳ ತೆಗೆಯದೆ ತ್ರಿಕರ್ಣವೆಂಬ ತಾಂಬೂಲವನ್ನು ತಿನ್ನಿಸಿದೆನು.

ಭಾವದ ಕನ್ನಡವ ಹರಿದು ಹಾಕಿ ಆತನ ಶ್ರೀಪಾದಕ್ಕೆ ನಾನು ಶರಣೆಂದು ಪಾದೋದಕವಕೊಂಡೆ. ಶ್ರೀ ಗುರುದೇವನ ಪ್ರಸಾದಕ್ಕೆ ಎನ್ನ ಸೆರಗ ಹಾಸಿ ಆರೋಗಿಸಿ ಸುಖಿಯಾದೆನು ಕಪಿಲಸಿದ್ಧಮಲ್ಲಿಕಾರ್ಜುನಯ್ಯನೇ ನಿಮ್ಮನ್ನು ಕಂಡ ನಿಮ್ಮ ಶರಣ ಪ್ರಭುದೇವರ ಕರುಣೆ ಎನಗೆ ಸಾಧ್ಯವಾದ ಪರಿಯನ್ನು ಏನೆಂದುಪಮಿಸಲಿ !

**1344**

**ಆದಿಯಿಂದ ನಿಮ್ಮಿಂದಲಾನಾದೆನಯ್ಯಾ ,**
**ಅನಾದಿಯಲ್ಲಿ ನಿಮ್ಮಲ್ಲಿ ತದ್ಗತನಾಗಿರ್ದೆನಯ್ಯಾ.**
**ನಿಮ್ಮ ಹಸ್ತ ಮುಟ್ಟಿದಲ್ಲಿ,**
**ನಿಮ್ಮನೆನ್ನ ಮನದಲ್ಲಿಟ್ಟುಕೊಂಡಿರ್ದೆನಯ್ಯಾ .**
**ಕಾಯವೆಂಬ ಕಪಟವನೊಡ್ಡಿ ನಿಮ್ಮ ಮರಸಿಕೊಂಡಿರ್ದಡೆ,**
**ನಿಮ್ಮ ಬೆಂಬಳಿಯ ಸಂದು ನಿಮ್ಮ ಕಂಡೆನಯ್ಯಾ ,**
**ಕಪಿಲಸಿದ್ಧಮಲ್ಲಿನಾಥಯ್ಯಾ ,**
**ಎನ್ನಂತರಂಗವ ಶುದ್ಧವ ಮಾಡಿ ತಿಳುಹಾ, ನಿಮ್ಮ ಧರ್ಮ.**

ಅನಾದಿಯಲ್ಲಿ ನಾನು ನಿಮ್ಮಲ್ಲಿಯೇ ಸಂಗಮವಾಗಿದ್ದೆ. ನಾನು ನಿಮ್ಮಲ್ಲಿ ತದ್ಗತನಾಗಿದ್ದೆ. ಆದಿಯಿಂದಲೂ ನಾನು ನಿಮ್ಮವನೇ. ನಿಮ್ಮಿಂದಲೇ ಆದವನು. ನೀವೇ ಕಾಯಕ್ಕೆ ಜನ್ಮ ನೀಡಿ ಆ ಕಾಯದಲ್ಲಿಯೇ ನೀವು ಸಂಗಮವಾಗಿ ನನ್ನ ಕೈ ಹಿಡಿದು ಮುನ್ನಡೆಸಲು ನನಗೆ ಮನವೆಂಬ ನಾಮ ನೀಡಿ ಜನ್ಮ ಕೊಟ್ಟಿರಿ. ಹೀಗಾಗಿ ನಾನು ಆದಿಯಿಂದಲೂ ನಿಮ್ಮವನು, ಅನಾದಿಯಲ್ಲಿಯೂ ನಾನು ನಿಮ್ಮಲ್ಲಿ ತದ್ಗತನಾಗಿದ್ದೆ.

ಪರಮಾತ್ಮನೆ, ಗುರುದೇವನೆ, ಕರುಣಾಕರನೇ ನಿಮ್ಮ ಹಸ್ತದಿಂದ ಎನ್ನ ಮಸ್ತಕ ಮುಟ್ಟಿದ ಕಾರಣ ನಿಮ್ಮನ್ನು ನನ್ನ ಮನದೊಳಗೆ ಇಟ್ಟುಕೊಂಡು ಪೂಜಿಸಿದೆನಯ್ಯಾ .

ನೀನು ಲೀಲಾಧರನು, ನಿನ್ನ ಪರಿಚಯ ನನಗೆ ಬೇಗ ಆಗದಿರಲೆಂಬ ಕಾರಣದಿಂದಾಗಿ ಕಾಯವೆಂಬ ಕಪಟವನ್ನು ಒಡ್ಡಿ ನಿಮ್ಮನ್ನು ಆ ಕಾಯದಲ್ಲಿಯೇ ಮರೆಯಿಸಿಕೊಂಡಿದ್ದೀರಯ್ಯಾ .

ನಾನೇನು ಸಾಮಾನ್ಯನೇ ನಿಮ್ಮ ಬೆನ್ನ ಬಳಿಯ ಬಂದವನು ನಾನು. ನೀವು ಬಿಟ್ಟುಕೊಂಡ ಸಂದನು ನಿಮ್ಮಿಂದಲೇ ಕಂಡೆನಯ್ಯಾ ಎನ್ನ ಅಂತರಂಗವನು ಶುದ್ಧಮಾಡಿ ನನಗೆ ನಿಮ್ಮ ಬಗ್ಗೆ ತಿಳಿ

ಹೇಳಾ ಇದು ನಿಮ್ಮ ಧರ್ಮ.

**1345**

**ಕಂಡ ಕನಸು ದಿಟವಾಗಿ ಕಂಡೆನೆಂಬೆ**
**ಕಂಡೆನೆಂಬುದ ಬೆನ್ನ ಬಿಡದು ನೋಡಾ.**
**ಕಂಡದು ಕಾಣೆನೆಂಬುದ ಎರಡನೂ ಅರಿಯದೆ**
**ತವಕ ತಲ್ಲಣಕ್ಕೆ ಎಡೆಯಾದೆನು.**
**ಕಪಿಲಸಿದ್ಧಮಲ್ಲಿನಾಥಯ್ಯಾ ,**
**ನಿಮ್ಮ ಕರುಣವೆನಗೆ ಸಾಧ್ಯವಾಯಿತ್ತು.**

ಜಾಗೃತ್ ಸ್ವಪ್ನ ಸುಶುಪ್ತಿ ಇವು ಮೂರು ದಿಟವಲ್ಲ. ಕನಸಿನಲ್ಲಿ ಭಿಕ್ಷುಕನಾಗಿರುವುದು ಎದ್ದು ನೋಡಿದರೆ ತಾನು ಶ್ರೀಮಂತನಾಗಿರುತ್ತಾನೆ.

ಜಾಗೃತ್‌ನಲ್ಲಿ ತಾನು ಶ್ರೀಮಂತನೆಂಬುದು ದಿಟವಲ್ಲ ಹಾಗೆಯೇ ಕನಸಿನಲ್ಲಿ ತಾನು ಭಿಕ್ಷುಕನೆಂಬುದು ದಿಟವಲ್ಲ. ಸುಶುಪ್ತಿ ಎಂಬ ಗಾಢವಾದ ನಿದ್ರೆಯಲ್ಲಿ ಕೂಡ ತಾನು ಮಲಗಿದ್ದೆ ಎನ್ನುವುದು ಕೂಡ ದಿಟವಲ್ಲ ಈ ಮೂರೂ ವೃತ್ತಿಗಳನ್ನು ತಾನು ಸಾಕ್ಷಿಯಾಗಿ ನೋಡುವುದೇ ಸತ್ಯ.

ನಾನು ಕನಸು ಕಂಡೆನೆಂಬುದು ಎಚ್ಚರವಾಗಿದ್ದೇನೆಂಬುದು ನಾನು ಮಲಗಿದ್ದೇನೆಂಬುದು ಬೆನ್ನು ಬಿಡದಂತೆ, ನಾನು, ನನ್ನದು ಎನ್ನವ ರೋಗ ಕಾಡುತ್ತದೆ. ಕಂಡೆನು, ಕಾಣೆನು ಎಂಬ ಎರಡನ್ನೂ ಅರಿಯದ ತವಕ ತಲ್ಲಣಕ್ಕೆ ಎಡೆಯಾದೆನು. ನಾನು ಎನ್ನುವ ತವಕದ ಕೂಟ ನಿಮ್ಮಲ್ಲಿ ಕೂಡಿದಾಗ ಕೂಡದ ಅಗಲದ ಕೂಟದ ಸುಖವನ್ನು ಕಂಡೆನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ ನಿಮ್ಮ ಕರುಣೆಯಿಂದ ನನಗೆ ಇದು ಸಾಧ್ಯವಾಯಿತು.

**1346**

**ಕೂಡುವ ತವಕವೆ ನಿಮ್ಮಲ್ಲಿ**
**ನೀ ಕೂಪನಾಗಿದ್ದಲ್ಲಿ ಕೂಪೆ ನೋಡಯ್ಯಾ**
**ನೀನೊಲ್ಲದಿದ್ದರೆ ಒಲ್ಲೆನಯ್ಯಾ.**
**ಎನ್ನರಿವು ಮರವೆ ಇಬ್ಬರಿಗೂ ಸಮ ನೋಡಯ್ಯಾ.**
**ಎನ್ನ ಬಯಕೆಯೊಳಗಣ ಬಯಕೆಯ**
**ನಿಧಾನವು ನೀನೆಂದು ಕಂಡ ಬಳಿಕ**
**ಬಯಸುವಾತ ನೀನೆ ಕಾಣಾ,**
**ಕಪಿಲಸಿದ್ಧಮಲ್ಲಿನಾಥಯ್ಯಾ .**

ನನ್ನ ಬಯಕೆಯೊಳಗಣ ಬಯಕೆಯ ಸಂಪತ್ತು ನೀನೆ ಆಗಿರುವೆ ಎಂದು ನಾನು ನಿನ್ನನ್ನು ಕಂಡುಕೊಂಡ ಬಳಿಕ ನಾನು ಬಯಸುವ ಬಯಕೆಗಳಿಗೆಲ್ಲ ಪ್ರೇರಣೆ ನೀನೆ ಎಂದು ನನಗೆ ಗೊತ್ತಾಯಿತು. ಹೀಗಾಗಿ ನನ್ನನ್ನು ಕೂಡುವ ತವಕ ನನಗಿಂತ ಹೆಚ್ಚಾಗಿ ನಿಮ್ಮಲ್ಲಿಯೇ ಕಂಡುಬರುತ್ತದೆ. ನೀನು ನನ್ನನ್ನು ಪ್ರೀತಿಸುವವನಾಗಿದ್ದಲ್ಲಿ ನಾನು ನಿನ್ನ ಪ್ರಿಯತಮೆ ನೋಡಯ್ಯಾ. ನೀನೊಲ್ಲದಿದ್ದಡೆ ನಾನೂ ಕೂಡ ಒಲ್ಲೆನಯ್ಯಾ. ಅರಿವು ಮರೆವು ಇಬ್ಬರಿಗೂ ಸಮ ನೋಡಯ್ಯಾ ಏಕೆಂದರೆ ಎನ್ನ ಬಯಕೆಯೊಳಗಿನ ಬಯಕೆಯ ನಿಧಾನವು ನೀನೆ ಆಗಿರುವೆ.

**1347**

**ಅಣುವಿನೊಳಗೆ ಅಣುವಾಗಿಪ್ಪಿರಿ, ಎಲೆ ದೇವಾ, ನೀವು.**
**ಮನದೊಳಗೆ ಘನವಾಗಿಪ್ಪಿರಿ ಎಲೆ ದೇವಾ,**
**ಜಗದೊಳಗೆಲ್ಲಿಯೂ ನೀವಿಲ್ಲದೆಡೆಯುಂಟೆ ?**
**ಎಂಬತ್ತುನಾಲ್ಕು ಲಕ್ಷ ಶಿವಾಲಯಂಗಳ ಮಾಡಿ**
**ನೀವು ಒಮ್ಮನದೊಳಗಿಪ್ಪುದ ಕಂಡು ನಾನು ಮಾಡಿದೆನಲ್ಲದೆ**
**ಕಪಿಲಸಿದ್ಧಮಲ್ಲಯ್ಯಾ ಎನಗೆ ಬೇರೆ ಸ್ವತಂತ್ರವಿಲ್ಲವೆಂದರಿವೆನು.**

ಅಣುವಿನೊಳಗೆ ಅಣುವಾಗಿಪ್ಪಿರಿ ಎಲೆ ದೇವಾ ನೀವು. ಏಳು ನೂರಾ ಮೂವತ್ತೆಂಟು ಕೋಟಿ ಕಾಯಗಳಲ್ಲಿ ನೀವೇ ಸಂಗಮವಾಗಿರುವಿರಿ. ನೀವಿಲ್ಲದ ಕಾಯ ಜಗದೊಳಗೆ ಎಲ್ಲಿಯೂ ಇಲ್ಲ. ಈ ಬ್ರಹ್ಮಾಂಡದಲ್ಲಿರುವ ಕಾಯಗಳೆಲ್ಲ ನೀನು ವಾಸಮಾಡಿದ ಕೈಲಾಸವೆ ಆಗಿದೆ. ಒಮ್ಮನದೊಳಗಿಪ್ಪ ಕಾಯಕ್ಕೆ ಮಾತ್ರ ನೀವು ಪ್ರಕಟವಾಗಿರುವಿರಿ. ನಿಮ್ಮನ್ನು ಕಂಡ ಕಾಯ ಸಕಲ ಕಾಯಗಳಲ್ಲಿಯೂ ನಿಮ್ಮನ್ನೇ ಕಾಣುತ್ತದೆ. ಕಂಡು ಕುಣಿ ಕುಣಿದಾಡುತ್ತದೆ. ನೀವಲ್ಲದೆ ಎನಗೆ ಬೇರೆ ಸ್ವತಂತ್ರವಿಲ್ಲವೆಂದು ತನಗೆ ತಾನೇ ಅರಿಯುತ್ತದೆ.

**1348**

**ಸಕಲ ಲಿಂಗವ ಹಿಡಿದು ಅಗಲದೆ ನಡೆ ಎಂದಿರಾಗಿ ನಡೆವುತ್ತಿರ್ದೆನು**
**ಲಿಂಗಪ್ರತಿಷ್ಠೆಯ ಮಾಡೆಂದು ಎನಗೆ ನಿರೂಪಿಸುತ್ತಿರ್ದ ಕಾರಣ,**
**ಮಾಡುತ್ತಿರ್ದೆನಲ್ಲದೆ, ಎನಗೆ ಬೇರೆ ಸ್ವತಂತ್ರವುಂಟೆ ?**
**ಹಿಂದೆ ನೀವು ಕೊಟ್ಟ ನಿರೂಪ ಹುಸಿಯಾದಡೆ,**
**ಇನ್ನು ಮುಂದೆ ಸ್ವಯವಪ್ಪಂತೆ ನಡೆಸಾ. ಕಪಿಲಸಿದ್ಧಮಲ್ಲಿನಾಥಯ್ಯಾ .**

ದೇಹ ರೂಪವುಳ್ಳದ್ದು ಅದು ನಿರೂಪವೆಂಬಂತೆ ಅರಿವಿನ ಲಿಂಗಯ್ಯನ ಅಧೀನವಾಗಿದೆ. ಅಂಗ ಕಾಣುತ್ತದೆ, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗ ಕಾಣುವುದಿಲ್ಲ. ಕಾಣುವ ಕಣ್ಣಿನಲ್ಲಿ ಕಾಣಬಾರದ ಅರಿವಿನ ದೃಶ್ಯವಿದೆ ಹಾಗೆಯೇ ಮರೆವಿನ ದೃಶ್ಯವೂ ಇದೆ. ಇದು ಕೂಡ ಕಾಣುವುದಿಲ್ಲ. ಕಾಣಬಾರದ ಅರಿವಿನ ಲಿಂಗದಿಂದಾಗಿ ಅಂಗ ಸ್ಥೂಲಾಂಗ ಎಂದು ಕರೆಯಿಸಿಕೊಂಡಿದೆ. ಸ್ಥೂಲಾಂಗ ಸಂಬಂಧ ಬೆಳೆಸಿದ ಸೂಕ್ಷ್ಮಾಂಗವು ಸ್ಥೂಲಾಂಗಕ್ಕೆ ಲಿಂಗವನ್ನು ಧಾರಣೆ ಮಾಡಿ ಅದನ್ನೇ ಲಿಂಗವೆಂದು ಒತ್ತಿ ಒತ್ತಿ ಹೇಳುತ್ತದೆ. ಕಾರಣ, ಅಂಗ ಅಂಗದ ಮೇಲೆ ಇದ್ದ ಲಿಂಗವನ್ನೇ ಲಿಂಗ ಎಂದು ತಿಳಿದುಕೊಂಡಿದೆ.

ಸೂಕ್ಷ್ಮಾಂಗ ಬೇರೆಯಲ್ಲ; ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನಿಂದ ಜನ್ಮ ಪಡೆದು ಅಂಗವನ್ನು ಆವರಿಸಿಕೊಂಡಿದೆ. ಹೀಗಾಗಿ ಸೂಕ್ಷ್ಮಾಂಗದ ಮಾತು ಸ್ಥೂಲಾಂಗ ಕೇಳಲು ಗತ್ಯಂತರವಿಲ್ಲ. ಅದಕ್ಕೆ ಬೇರೆ ಸ್ವತಂತ್ರವೂ ಇಲ್ಲ. ರೂಪದೊಳಗೆ ಸಂಗಮವಾದ ನಿರೂಪವೇ ಸತ್ಯವೆಂದು ಸಕಲ ಜ್ಞಾನಿಗಳು, ವೇದ, ಆಗಮ, ಉಪನಿಷತ್ತುಗಳು ಹೇಳುತ್ತಿದ್ದರೂ ಕೂಡ ರೂಪಕ್ಕೆ ನಿರೂಪ ಹುಸಿಯಾದ ಕಾರಣ ರೂಪದೊಳಗೆ ಸಂಗಮವಾದ ಲಿಂಗಯ್ಯನೇ ಇನ್ನು ಮುಂದೆ ನಿಮಗೆ ತಿಳಿದಂತೆ ಈ ರೂಪವುಳ್ಳ ನೀನೆ ದೇಹವನ್ನು ನಡೆಸಾ ಕಪಿಲಸಿದ್ಧಮಲ್ಲಿಕಾರ್ಜುನಾ .

**1349**

**ಕೃಷಿಯ ಮಾಡಿ ಉಣ್ಣದೆ ಹಸಿವು ಹರಿವ ಪರಿ ಇನ್ನೆಂತೊ ?**
**ಕರ್ಮ ಯೋಗವ ಮಾಡದೆ.**
**ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತೊ ?**
**ಬೇಯದ ಅಶನವನುಂಬ ಠಾವಾವುದು ಕಪಿಲಸಿದ್ಧಮಲ್ಲಿಕಾರ್ಜುನಲಿಂಗಕ್ಕೆ ?**

ಕಾಯದಲ್ಲಿ ಸಂಗವುವಾದ ಜ್ಞಾನ ಪಡೆಯಲು ಕಾಯವನ್ನು ಆವರಿಸಿದ ಮನ ಕಾಯದಿಂದಲೇ ಕೃಷಿ ಮಾಡಬೇಕು . ಕರ್ಮ ಮಾಡದ ವಿನಹ ಜ್ಞಾನ ಒಲಿಯುವುದಿಲ್ಲ.

ಬೇಯದ ಅನ್ನವನು ಉಣ್ಣಲು ಹೇಗೆ ಸಾಧ್ಯವಾಗುವುದಿಲ್ಲವೋ ಹಾಗೆಯೇ ಕಾಯವನ್ನು ಆವರಿಸಿದ ಮನ ಕಾಯದೊಳಗೆ ಸಂಗಮವಾಗಿ ಅರಿವಿನೊಂದಿಗೆ ಒಂದಾಗಲು ಕಾಯ ಹಿಡಿದು ಕೃಷಿ ಮಾಡಲೇಬೇಕು. ಆಗ ಅದು ಧರ್ಮಕ್ಷೇತ್ರವಾಗಿ ಮಾರ್ಪಡುತ್ತದೆ. ಕಾಯ ಕರ್ಮಯೋಗವನ್ನು ಮಾಡದಿದ್ದರೆ ಅದು ಕುರುಕ್ಷೇತ್ರವಾಗಿ ಉಳಿಯುತ್ತದೆ. ಕಾಯದಲ್ಲಿದ್ದ ಚಿತ್ತ ನಿರ್ಮಲವಾದ ಸುಚಿತ್ತವನ್ನು ಅರಿಯದೇ ಹೋಗುತ್ತದೆ. ಜ್ಞಾನದ ಹಸಿವು ಹಿಂಗಬೇಕಾದರೆ ಮನ ಕಾಯ ಹಿಡಿದು ಕಾಯದೊಂದಿಗೆ ಕಾಯದಲ್ಲಿಯೇ ಸಂಗಮವಾದ ಮಹಾಜ್ಞಾನದೊಂದಿಗೆ ಕೃಷಿ ಮಾಡಲೇಬೇಕು.

**1350**

**ಕೈಯಲ್ಲಿ ಹಿಡಿದು ಕಾಬುದು ಕರ್ಮಪೂಜೆಯಲ್ಲವೆ ?**
**ಮನದಲ್ಲಿ ನೆನೆದು ಮಾಡುವುದೆಲ್ಲವು ಕಾಯದ ಕರ್ಮವಲ್ಲವೇ ?**
**ಭಾವಶುದ್ಧವನರಿವ ಪರಿ ಇನ್ನಾವುದು ? ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯದ ಮೂಲಕ ಮಾಡುವ ಸಕಲ ಪೂಜೆಗಳೆಲ್ಲ ಕರ್ಮಪೂಜೆಗಳೇ ಆಗಿವೆ. ಮನದ ಮೂಲಕ ನೆನೆನೆನೆದು ಮಾಡುವ ಪೂಜೆಯೂ ಕೂಡ ಕಾಯದಿಂದ ಮಾಡುವ ಕರ್ಮವೇ ಆಗಿದೆ. ಈ ಪೂಜೆಯಿಂದ ಕಾಯದೊಳಗೆ ಇದ್ದ ಭಾವ ಶುದ್ಧವಾಗಲಾರದು.

ಭಾವ ಅದು ಭಾವಿಸುವ ಭಾವದಿಂದ ಕಾಯವನ್ನು ಅರಳಿಸುತ್ತದೆ. ಅದು ಭಾವಿಸುವ ದುರ್ಭಾವದಿಂದ ಕಾಯ ಕೆರಳುತ್ತದೆ.

ಶಬ್ದವನ್ನು ಹಿತವಾಗಿ ಕೇಳುವ ಶಕ್ತಿ ಭಾವಕ್ಕಿದೆ ಹಾಗೆಯೇ ಶಬ್ದವನು ಕಹಿಯಾಗಿ ಕೇಳಿ ಭಾವವನ್ನು ಕೆರಳಿಸುವ ಶಕ್ತಿ ಕೂಡ ಕಾಯಕ್ಕಿದೆ.

ಕೈಯಲ್ಲಿ ಹಿಡಿದು ಪೂಜಿಸುವ ಮೂಲಕ, ಕೈಯಲ್ಲಿ ಹಿಡಿದುದನು ಮನದಲ್ಲಿ ಪೂಜಿಸುವ ಮೂಲಕ ಭಾವ ನಿರ್ಭಾವವಾಗುವುದಿಲ್ಲ. ಹೀಗೆ ಪೂಜಿಸುವ ಕಾಯ ಮನ ಮತ್ತು ಕಾಯದ ಕರ್ಮವಾಗುತ್ತದೇ ಹೊರತು ಮತ್ತೇನು ಆಗುವುದಿಲ್ಲ.

ಮನ ಅರಿವೆಂಬ ಲಿಂಗಯ್ಯನ ಮೂಲಕ ವಸ್ತುವನ್ನು ನೋಡಿದಾಗ ವಸ್ತುವಿನ ಸತ್ಯ ಬಾವಕ್ಕೆ ಅರಿವಾಗಿ ಅದು ನಿರ್ಭಾವವಾಗುತ್ತದೆ. ಆಗ ಅದು ಭಾವಿಸಿದಾಗ ಅದರ ಭಾವ ಅರಳುವುದಿಲ್ಲ ಕೆರಳುವುದಿಲ್ಲ ಏಕೆಂದರೆ ವಸ್ತುವಿನ ಸತ್ಯ ಭಾವಕ್ಕೆ ಅರಿವಾಗುವುದರಿಂದ ಅದು ನಿರ್ಭಾವ ಹೊಂದುತ್ತದೆ.

**1351.**

**ಬಣ್ಣವಿಲ್ಲದೆ ಚಿನ್ನ ನಾಮಕ್ಕರ್ಹನಾದ ಪರಿ ಇನ್ನೆಂತಯ್ಯಾ .**

**ಹೂವೊಣಗಿ ವಾಸನೆ ಮುಡಿದ ಠಾವಿನಲ್ಲಿ**
**ವಾಸನೆ ನಿಂದುದಿಲ್ಲವೆ ? ಅಯ್ಯಾ .**
**ಕ್ರೀಶುದ್ಧವಾದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವು ಭಾವಶುದ್ಧವಾಗಿರ್ಪನು.**

ಬಣ್ಣವಿಲ್ಲದ ಲೋಹವನ್ನು ಚಿನ್ನ ಎಂದು ಕರೆಯಲು ಸಾಧ್ಯವಿಲ್ಲ. ಲೋಹಕ್ಕೆ ಬಣ್ಣವಿದ್ದರೇನು, ಇಲ್ಲದಿದ್ದರೇನು ಅದು ಲೋಹವೇ ಆಗಿದೆ. ಹಳದಿ ಬಣ್ಣದ ಲೋಹವನ್ನು ಚಿನ್ನ ಎಂದು ನಾಮಕರಣ ಮಾಡಿದ್ದೆ ತಪ್ಪಾಗಿದೆ. ಹಳಿದಿ ಬಣ್ಣವಿದ್ದ ಲೋಹಕ್ಕಾಗಿ ಮನುಷ್ಯ ಎಷ್ಟೋ ಯುದ್ಧಗಳನ್ನು ಮಾಡಿದ್ದಾನೆ. ಸಾವು ನೋವುಗಳನ್ನು ಕಂಡುಕೊಂಡಿದ್ದಾನೆ. ತನ್ನ ಇಡೀ ಆಯಷ್ಯವನ್ನು ಹಳದಿ ಲೋಹಕ್ಕಾಗಿಯೇ ಮುಡಿಪಾಗಿಟ್ಟಿದ್ದಾನೆ. ಇದು ಮನುಷ್ಯನ ದುರ್ದೈವ.

ಲೋಹದಲ್ಲಿ ಹಳದಿ ಬಣ್ಣ ಸಂಗಮವಾದಂತೆ ಕಾಯದಲ್ಲಿ ಅರಿವು ಸಂಗಮವಾಗಿದೆ. ಕಾಯದಲ್ಲಿದ್ದ ಅರಿವು ಕಾಯವನ್ನು ಆವರಿಸಿದ ಮನ ಕಾಯಕ್ಕೆ ಬಳಕೆ ಆಗದ ಕಾರಣ ಚಿನ್ನವೇ ಶ್ರೇಷ್ಠವಾಗಿದೆ. ಕಾಯ ತನ್ನ ಅರಿವಿನ ಶ್ರೇಷ್ಠತೆಯನ್ನು ತಾನೇ ಕಳೆದುಕೊಂಡಿದೆ. ಅರಿವಾದರೆ ಅದು ಲೋಹವೇ. ವಾಸನೆಗಾಗಿ ಹೂ ಮುಡಿಯುವುದುಂಟು. ಒಣಗಿದ ಹೂವನ್ನು ಯಾರೂ ಮುಡಿಯುವುದಿಲ್ಲ.

ಅರಿವಾದರೆ ಹೂವಿನ ವಾಸನೆ ಮುಖ್ಯವೇ ಹೊರತು ಅದನ್ನು ಯಾರೂ ಕೊಯ್ಯುವುದಿಲ್ಲ. ಹಳದಿ ಲೋಹಕ್ಕಾಗಿ ಕಾಯ ಯುದ್ಧ ಮಾಡುವುದಿಲ್ಲ. ಏಕೆಂದರೆ ಕಾಯದಲ್ಲಿದ್ದ ಅರಿವು ಕಾಯಕ್ಕೆ ಗುರುವಾಗಿ ಅದು ಗುರುಕಾಯವಾಗುತ್ತದೆ. ಅರಿವಿನ ಕಾಯವಾಗುತ್ತದೆ. ಅದರ ಭಾವ ಶುದ್ಧವಾಗಿ ನಿರ್ಭಾವವಾಗಿ ಮಾರ್ಪಡುತ್ತದೆ.

**1352**

**ನುಡಿದೆಹೆನೆಂಬ ಉಲುಹಿನ ಗಲಭೆಯ ತೋಟಿ ಬಿಡದು**
**ಉತ್ತಮ ಮಧ್ಯಮ ಕನಿಷ್ಠವೆಂಬುವ**
**ತಿರುಗಿ ಕಂಡೆಹೆನೆಂಬ ಕಾಲಿನ ಎಡೆಯೂಟ ಬಿಡದು.**
**ಎನಗೆ ಗರ್ವ ಮೊದಲಾದಲ್ಲಿ ನಿಮಗೆ ಗರ್ವವೆಗ್ಗಳವಾಯಿತ್ತು .**
**ಈ ಉಭಯ ತೋಟಿಯ ನಾನಿನ್ನಾರಿಗೆ ಹೇಳುವೆ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ನುಡಿದ ನುಡಿ ನಾನು ಹೀಗೆ ನುಡಿದೆನೆಂದು ಹೀಗೆ ನುಡಿಯಬಾರದಿತ್ತೆಂದು ನುಡಿದ ಕಾಯದಲ್ಲಿಯೇ ನುಡಿ ಇದ್ದು ಕಾಯ ಇರುವವರೆಗೆ ನುಡಿದ ನುಡಿ ಕಾಯವನ್ನು ಕಾಡುತ್ತದೆ. ನುಡಿದೆಹೆನೆಂಬ ಉಲುಹಿನ ಗಲಭೆಯ ಬಿಡದು.

ಉತ್ತಮ ಮಧ್ಯಮ ಕನಿಷ್ಠ ಎನ್ನುವ ಅಜ್ಞಾನ ಕಾಯವನ್ನು ಕಾಡುತ್ತದೆ. ಅದು ಕಾಯದಲ್ಲಿಯೇ ಹುಟ್ಟಿ ಕಾಯವನ್ನು ಕಾಡುತ್ತದೆ. ಕಾಯ ಇರುವವರೆಗೆ ಕಾಡುತ್ತದೆ. ಕಾಯದಲ್ಲಿ ಗರ್ವ ಮೊದಲಾದಲ್ಲಿ ಕಾಯದಲ್ಲಿಯೇ ಸಂಗಮವಾದ ಅರಿವು ಶ್ರೇಷ್ಠವಾಯಿತ್ತು. ಕಾಯವನ್ನು ಆವರಿಸಿದ ಮನಕ್ಕೆ ಅರಿವಾದರೆ ಕಾಯದಲ್ಲಿ ಹುಟ್ಟಿದ ಗರ್ವ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಂದ ನಿರ್ನಾಮವಾಗುತ್ತದೆ. ಗರ್ವಭಂಗವಾಗುತ್ತದೆ. ಜ್ಞಾನ ಅಜ್ಞಾನದ ಈ ಉಭಯವನ್ನು ಕಾಯ ಕಾಯಕ್ಕೆ ಹೇಳಲು ಸಾಧ್ಯವೇ? ಕಾಯದಲ್ಲಿ ಗರ್ವವು ಇದೆ ಅದನ್ನು

ಭಂಗಗೊಳಿಸುವ ಗುರುದೇವನು ಕಾಯದಲ್ಲಿಯೆ ಸಂಗಮವಾಗಿದ್ದಾನೆ. ಇದು ಕಾಯದ ಅರಿವಿನ ರಹಸ್ಯ.

**1353**

**ಕಾಯ ಸೊನೆಯರತಲ್ಲದೆ ಹಣ್ಣಿನ ರಸ ಚಿಹ್ನೆದೋರದು**
**ಕಾಯ ಕರ್ಮವ ಮಾಡಿ, ಜೀವ ಜ್ಞಾನವನರಿದು,**
**ತ್ರಿವಿಧಭಾವ ಶುದ್ಧಿಯಾದಲ್ಲದೆ ಮೇಲೆ ಕಾಣಲಿಲ್ಲ,**
**ಕಪಿಲಸಿದ್ಧಮಲ್ಲಿಕಾರ್ಜುನಲಿಂಗವ.**

ಕಾಯ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಕಾಯವನ್ನು ಆವರಿಸಿದ ಮನ ಭಕ್ತನಾಗಿ ಶರಣು ಹೋದಾಗ ಮಾತ್ರ ಕಾಯ ಹಣ್ಣಿನಂತೆ ಜ್ಞಾನದಿಂದ ಮಾಗುತ್ತದೆ. ಹೀಗೆ ಮಾಗದ ವಿನಹ ಕಾಯ ಕೈಲಾಸವಾಗಲು ಅರಿಯದು.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಅರಿಯಲು ಕಾಯ ಹಿಡಿದು ಕರ್ಮವ ಮಾಡಿದಾಗಲೇ ಕಾಯದ ಜೀವ ಕಾಯದಲ್ಲಿಯೆ ಇದ್ದ ಜ್ಞಾನವನ್ನು ಅರಿಯುತ್ತದೆ.

ರಾಜಸ, ಸಾತ್ವಿಕ, ತಾಮಸ ಗುಣಗಳು ಅದರ ಭಾವ ಶುದ್ಧಿಯಾಗದ ವಿನಹ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಕಾಯಕ್ಕೆ ಕಾಣಲು ಬರುವುದಿಲ್ಲ.

ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಅರಿಯದ ವಿನಹ ತ್ರಿವಿಧ ಭಾವ ಶುದ್ಧವಾಗಲು ಸಾಧ್ಯವಿಲ್ಲ. ಹೀಗಾಗಿ ಹಾವು ಸಾಯುವುದಿಲ್ಲ ಕೋಲು ಮುರಿಯುವುದಿಲ್ಲ ಎನ್ನುವಂತಾಗಿದೆ ದೇಹದ ಸ್ಥಿತಿ.

**1354**

**ಬೆರಸಿ ಬೆಚ್ಚಾತನ ಕಂಡೆನೆಂಬೆನಯ್ಯಾ ,**
**ಆತನ ಬಟ್ಟೆಯ ಕಾಣೆ ನೋಡಯ್ಯಾ .**
**ಶರೀರವಿಡಿದಿಪ್ಪ ಶತಕೋಟಿ ಜೀವಂಗಳ ಭೇದವನರಿಯೆನು.**
**ನಿಮ್ಮ ನಾನೆತ್ತ ಬಲ್ಲೆನಯ್ಯಾ ?**
**ನೀವು ಮಾಡಿದ ಬೆಂಬಳಿಯಲ್ಲಿ ಹೊರೆಗಾಣಲಾಪನಲ್ಲದೆ**
**ನಾಂ ಬೇರೆ ಕಾಂಬುದು ಹುಸಿ**
**ನೀ ತೋರಯ್ಯಾ ಎನಗೆ, ಕಪಿಲಸಿದ್ಧಮಲ್ಲಿನಾಥಯ್ಯಾ .**

ಕಾಯದಲ್ಲಿ ಸಂಗಮವಾದ ಗುರುದೇವನನ್ನು ನಾನು ಕಂಡೆ ಎಂದು ಶಬ್ದದಿಂದ ಹೇಳಿದರೆ ಸಾಲದು. ಆತನಿರುವ ಸ್ಥಳವನ್ನು ಅರಿಯುವುದು ಜಟಿಲ. ಆತನಿರುವ ಆ ದಾರಿಯಲ್ಲಿ ನಡೆಯುವುದು ಕೂಡ ಇನ್ನೂ ಜಟಿಲ.

ಕಾಯದಲ್ಲಿ ಶತಕೋಟಿ ಜೀವಗಳಿವೆ. ಅವು ಕಾಯವನ್ನು ಹಿಡಿದಿವೆ. ಕಾಯದಲ್ಲಿ ಅರಿವಿದ್ದರೂ ಕಾಯದಲ್ಲಿದ್ದ ಶತಕೋಟಿ ಜೀವಂಗಳನ್ನು ಅರಿಯಲು ಕಾಯಕ್ಕೆ ಸಾಧ್ಯವಾಗುತ್ತಿಲ್ಲ. ಕಾಯವನ್ನು ಆವರಿಸಿದ ಮನಕ್ಕೂ ಸಾಧ್ಯವಾಗುತ್ತಿಲ್ಲ ಅಂದ ಮೇಲೆ ಕಾಯವನ್ನು ಆವರಿಸಿದ ಮನ

ಕಾಯದಲ್ಲೇ ಸಂಗಮವಾದ ಗುರುದೇವನನ್ನು ಅರಿಯಲು ಅದಕ್ಕೆ ಸಾಧ್ಯವಾಗುತ್ತಿಲ್ಲ. ಏಕೆಂದರೆ ಗುರುದೇವನಿಗೆ ಭಕ್ತನಾಗುವ ಸುಳುಹು ಮನಕ್ಕೆ ದೊರೆಯುತ್ತಿಲ್ಲ.

ಗುರುದೇವನಿಂದಲೇ ಜನ್ಮ ಪಡೆದ ಮನ ಮತ್ತು ಕಾಯ ಗುರುದೇವನನ್ನು ಹೊರಗೆ ಕಾಣುತ್ತವಲ್ಲದೆ ಕಾಯದಲ್ಲಿಯೇ ಇದ್ದ ಅರಿವೆಂಬ ಗುರುದೇವನೇ ಗುರುವೆಂದು ಕಾಯಕ್ಕೆ ಹೊಳೆಯದ್ದರಿಂದ ಕಾಯ ಕಾಯವನ್ನೇ ಗುರುವಾಗಿಸಿಕೊಂಡಿದೆ. ತಾನು ಕಾಣುವುದು ಹುಸಿ ಅದು ನೀನಲ್ಲ ನೀ ತೋರದ ವಿನಹ ಎನಗೆ ಗತ್ಯಂತರವಿಲ್ಲ ಎಂದು ಮನ ಕಾಯದಲ್ಲಿಯೇ ಸಂಗಮವಾದ ಗುರುದೇವನಿಗೆ ಶರಣು ಹೋದಾಗ ಸಾಧ್ಯವಾಗುತ್ತದೆ.

**1355**

**ಉಪಮೆ ಅನುಪಮೆ ಎಂಬುದು ನಿಮ್ಮಧೀನ ಕಂಡಯ್ಯಾ ,**
**ಹೇಳಿ ಕೇಳಿಹೆನೆಂಬುದು ನೀವು ಕಂಡಯ್ಯಾ ,**
**ಎನ್ನಂತರಂಗಕ್ಕೆ ಬಹಿರಂಗಕ್ಕೆ ನೀವೆ ಕರ್ತರಾದ ಕಾರಣ,**
**ನಿಮ್ಮ ನಿಜವ ಹೇಳದಿರ್ದಡೆ ಎಂತುಳಿವೆನಯ್ಯಾ ,**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .**

ಉಪಮೆ ಅನುಪಮೆ ಎಂಬ ನುಡಿಗಳು ನಿಮ್ಮಿಂದಲೇ ನನ್ನನ್ನು ನುಡಿಯುವಂತೆ ಮಾಡಿದವು ಹೀಗೆ ನುಡಿಯುವ ನಾನು ನೀವು ಉಪಮಾತೀತರೆಂದು ನಾನು ಕಂಡುಕೊಳ್ಳಲಿಲ್ಲ. ಹೇಳುವುದನ್ನು ಕೇಳುವುದನ್ನು ಕೇಳಿದ್ದನ್ನು ಹೇಳಿದ್ದನ್ನೂ ನಾನು ನಿಮ್ಮಿಂದಲೇ ಕಂಡುಕೊಂಡೆನು. ಅವೆರಡಕ್ಕೂ ಅತೀತನಾದ ನಿಮ್ಮನ್ನು ಕಂಡುಕೊಳ್ಳಲು ನನಗೆ ಸಾದ್ಯವಾಗಲಿಲ್ಲ.

ಎನ್ನ ಅಂತರಂಗಕ್ಕೂ ಬಹಿರಂಗಕ್ಕೂ ನೀವೆ ಕರ್ತರಾದ ಕಾರಣ ನೀವು ನುಡಿಸಿದಂತೆ ನಾನು ನುಡಿಯುವೆ. ಹೀಗೆ ನುಡಿಯುವುದು ಹುಸಿ ಎಂದು ನಿನ್ನನ್ನು ಕಂಡುಕೊಂಡು ನಿನಗೆ ಶರಣು ಹೋದ ಶರಣರಿಂದ ನನಗೆ ತಿಳಿಯಿತು. ನಿಮ್ಮ ನಿಜವನ್ನು ನೀವೇ ಹಡೆದ ನಿಮ್ಮ ಕಂದನಿಗೆ ನೀವೆ ಹೇಳದಿದ್ದರೆ ನಾನು ಎಂತು ಉಳಿವೆನಯ್ಯಾ ಕಪಿಲಸಿದ್ಧಮಲ್ಲಿನಾಥಯ್ಯಾ.

**1356**

**ಕಾಯವಿಡಿದಿಹನ್ನಕ್ಕರ ಕಾಮವೆ ಮೂಲ,**
**ಜೀವವಿಡಿದಿಹನ್ನಕ್ಕರ ಕ್ರೋಧವೆ ಮೂಲ,**
**ವ್ಯಾಪ್ತಿಯುಳನ್ನಕ್ಕರ ಸಕಲ ವಿಷಯಕ್ಕೆ ಆಸೆಯೆ ಮೂಲ,**
**ಎನ್ನ ಆಸೆ ಘಾಸಿಮಾಡುತ್ತಿದೆ,**
**ಶಿವಯೋಗದ ಲೇಸಿನ ಠಾವ ತೋರು, ಕಪಿಲ ಸಿದ್ಧ ಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನ ಕಾಯದ ಸಂಗ ಮಾಡಿದರೆ ಅಲ್ಲಿ ಕಾಮವೇ ತುಂಬಿರುತ್ತದೆ; ಕಾಮಕ್ಕಾಗಿ ಮನ ಕಾಯದ ಸಂಗ ಮಾಡುತ್ತದೆ. ಮನ ಕಾಯ ಎಲ್ಲಿಯವರೆಗೆ ಹಿಡಿದಿರುತ್ತದೆಯೊ ಅಲ್ಲಿಯವರೆಗೆ ಕಾಯಕ್ಕೆ ಕಾಮವೇ ಮೂಲ. ಜೀವ ಹಿಡಿದಿರುವ ವರೆಗೆ ಕ್ರೋಧವೇ ಮೂಲ. ಕಾಯದ ಸಕಲ ವಿಷಯಗಳಿಗೂ ಆಸೆಯೇ ಮೂಲ. ಕಾಯದಲ್ಲಿ ಉಂಟಾದ ಆಸೆ ಕಾಯವನ್ನೇ ಗಾಯ ಮಾಡುತ್ತದೆ ಘಾಸಿ ಮಾಡುತ್ತದೆ.

ಅರಿಷಡ್ವರ್ಗಗಳು ಸಪ್ತ ವ್ಯಸನಗಳು ಅಷ್ಟಮದಗಳು, ಮನ ಕಾಯದ ಸಂಗ ಮಾಡಿರುವುದಕ್ಕಾಗಿ ಇವೆಲ್ಲವು ಕಾಯದಲ್ಲಿಯೇ ಹುಟ್ಟಿ ಕಾಯವನ್ನು ಘಾಸಿಗೊಳಿಸುತ್ತವೆ.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಶಿವನನ್ನು ಕೂಡುವ ಬಯಕೆ ಅದಕ್ಕಾದಾಗ ಅದು ಘನ ಮನವಾಗುತ್ತದೆ; ಕಪಿಲಸಿದ್ಧ ಮಲ್ಲಿಕಾರ್ಜುನನು ತಾನಾಗುತ್ತದೆ.

**1357**

**ನೀರ ಕ್ಷೀರದ ಸಂದುಗಳ ಹಂಸೆ ಬಿಚ್ಚಬಲ್ಲದು ನೋಡಯ್ಯಾ**
**ದೇಹದ ಜೀವದ ಸಂದ ನೀವು ಬಿಚ್ಚಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯಾ ?**
**ನೀವಿಕ್ಕಿದ ತೊಡಕ ಬಿಡಿಸಬಾರದು,**
**ನೀವು ಬಿಡಿಸಿದ ತೊಡಕ ವಿಕ್ಕಬಾರದು ಕಪಿಲಸಿದ್ಧ ಮಲ್ಲಿನಾಥಯ್ಯಾ ,**
**ಎನ್ನ ಕಾಯದ ಜೀವದ ಹೊಲಿಗೆಯ ಬಿಡಿಸಾ ನಿಮ್ಮ ಧರ್ಮ.**

ಕ್ಷೀರದಲ್ಲಿ ನೀರು ಬೆರೆತಾಗ ನೀರು ಕ್ಷೀರವಾಗಿಯೇ ಕಾಣುತ್ತದೆ ಇದನ್ನು ಬೇರ್ಪಡಿಸಲು ಸಾಧ್ಯವಿಲ್ಲ. ಆದರೆ ಹಂಸ ಕ್ಷೀರವನ್ನು ಮಾತ್ರ ಕುಡಿದು ಕ್ಷೀರದಲ್ಲಿ ಬೆರೆತ ನೀರನ್ನು ಹಾಗೆಯೇ ಬಿಡುತ್ತದೆ. ಕ್ಷೀರದಲ್ಲಿರುವ ನೀರನ್ನು ಹಂಸ ಹೇಗೆ ಬಿಟ್ಟು ಬೇರ್ಪಡಿಸುತ್ತದೆಯೋ ಹಾಗೆಯೇ ದೇಹದ ಜೀವದ ಸಂದನ್ನು ದೇಹದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವರೇ ಆದ ನೀವು ಮಾತ್ರ ಬಿಚ್ಚ ಬಹುದು. ಇಂತಹ ಕೆಲಸ ನನಗೆ ನೀಗುವುದಿಲ್ಲ ನೀವು ಇಕ್ಕಿದ ತೊಡಕನ್ನು ಬಿಡಿಸಲು ನನಗೆ ಸಾಧ್ಯವೇ ಅಯ್ಯಾ?

ಕಾಯದಲ್ಲಿ ನೀವಿದ್ದು ನಿಮ್ಮನ್ನು ಅರಿತು ಆ ಅರಿವೇ ಆಗಬೇಕಾದ ಮನಕ್ಕೆ ನೀವು ಇಂತಹ ತೊಡಕನ್ನು ಇಕ್ಕಬಹುದೇ? ಕಾಯಕ್ಕೆ ಜೀವದ ಹೊಲಿಗೆಯನು ಹಾಕಿ ಅದರೊಳಗೆ ಅರಿಷಡ್ವರ್ಗಗಳೆಂಬ ಹೆಗ್ಗಣಗಳನ್ನು ಇಟ್ಟು ಕಳಿಸಬಹುದೇ? ಎನ್ನ ಕಾಯದ ಜೀವದ ಹೊಲಿಗೆಯನು ನನ್ನ ಹಡೆದ ತಂದೆಯಾದ ನೀವೇ ಅದನ್ನು ಬಿಡಿಸಬೇಕು ಇದು ನಿಮ್ಮ ಧರ್ಮ.

**1358**

**ಅಯ್ಯಾ ಮನದ ರಜದ ಮಣ್ಣ ಕಳೆದು**
**ದಯಾ ಶಾಂತಿಯುದಕವ ತೆಗೆವೆನಯ್ಯಾ ,**
**ಜಳಕವ ಮಾಡಿ ಯೋಗಕಂಪನಿಕ್ಕಿ ಹೊದೆವೆನಯ್ಯಾ**
**ಅದನೊಂದೆಡೆಗೆ ತಂದು ಬಿಟ್ಟ ಗಾಣದಲ್ಲಿಕ್ಕಿ ಹಿಳಿವೆನಯ್ಯಾ**
**ಆ ಹಿಳಿದ ರಸದ ಕಂಪ ಕೊಡುವ ಒಡೆಯ ನೀನೆ, ಕಪಿಲಸಿದ್ಧ ಮಲ್ಲಿನಾಥಯ್ಯಾ .**

ಮನಕ್ಕಂಟಿದ ಅಜ್ಞಾನದ ಗುಣಗಳ ಮಣ್ಣ ಕಳೆಯುವುದು ಬಲು ಕಷ್ಟ. ಅದಕ್ಕಂಟಿದ ಮಣ್ಣನ್ನು ದಯ ಮತ್ತು ಶಾಂತಿ ಎಂಬ ಉದಕದಿಂದಲೇ ತೊಳೆಯಬೇಕು. ಆ ಉದಕದಿಂದಲೇ ಜಳಕವ ಮಾಡಬೇಕು, ಕಾಯದಲ್ಲಿಯೇ ಸಂಗಮವಾದ ಶಿವನಿಗೆ ಶರಣುಹೋಗಿ ಆತನ ಅರಿವಿನ ಪರಿಮಳವನ್ನು ಹೊದ್ದುಕೊಂಡು ಆ ಯೋಗದ ಕಂಪನ್ನು ಸವೆಯುತ್ತಾ ಅಲ್ಲಿಯೇ ಕಾಲ ಕಳೆಯಬೇಕು. ತನುವನ್ನು ಆವರಿಸಿದ ಮನವನ್ನು ಒಂದೆಡೆಗೆ ತಂದು ಅರಿವಿನ ಗಾಣದಲ್ಲಿ ಹಿಂಡಿ ಹಿಪ್ಪೆಯ ಮಾಡಿ ಆ ಬ್ರಹ್ಮರಸದ ಸುಖವನ್ನು ಅನುಭವಿಸಬೇಕು ಅದರಿಂದ ಹೊರಸೂಸುವ ಅರಿವಿನ ಪರಿಮಳದ ಒಡೆಯ ನೀನೆ ಕಪಿಲಸಿದ್ಧ ಮಲ್ಲಿಕಾರ್ಜುನ.

1359

**ಮನವೆಂಬ ಸಂಕಲ್ಪವನರಿಯನು ಸಂಕಷ್ಟ ಸಿದ್ಧಿಯಾಯಿತ್ತಾಗಿ,**
**ಸಂಕಲ್ಪವೆಂಬ ಸಂಬಂಧವನರಿಯೆನು, ನಿಮ್ಮ ವಿಚಾರವೆಡೆಗೊಂಡಿತ್ತಾಗಿ,**
**ನಿಮ್ಮ ವಿಚಾರವೆ ಅಂತರಂಗದೊಳಗೆ ತುಂಬಿತ್ತಾಗಿ,**
**ಎನ್ನ ಮನದ ಮುಂದೆಲ್ಲಾ ನೀನೆಯಾಗಿರ್ದೆಯಯ್ಯಾ**
**ಕಪಿಲಸಿದ್ಧ ಮಲ್ಲಿನಾಥಯ್ಯಾ .**

ಕಾಯದಲ್ಲಿ ಎರಡು ವಿಚಾರಗಳಿವೆ : ಅರಿವಿನದು ಒಂದು ವಿಚಾರ, ಮನಸ್ಸಿನದು ಮತ್ತೊಂದು ವಿಚಾರ, ಮನಸ್ಸಿನಲ್ಲಿ ಸಂಕಲ್ಪ ವಿಕಲ್ಪ ಎಂಬ ಎರಡು ಸಂಬಂಧಗಳಿವೆ. ಮನಸ್ಸು ಕಾಯದೊಂದಿಗೆ ಸಂಕಲ್ಪವನ್ನು ಮಾಡುತ್ತದೆ ಹಾಗೆಯೇ ವಿಕಲ್ಪವನ್ನು ಮಾಡುತ್ತದೆ.

ಮನಸ್ಸು ಅರಿವಿನೊಂದಿಗೆ ಸಂಬಂಧ ಬೆಳೆಸಿದಾಗ ತಾನು ಕಲ್ಪನೆ ಮಾಡಿದ ಸಂಕಲ್ಪ ವಿಕಲ್ಪಗಳೆರಡು ಇಲ್ಲವಾಗುತ್ತವೆ. ಆಗ ಕಾಯದಲ್ಲಿ ಅರಿವಿನ ಅಮೃತ ಮಂತ್ರ ತುಂಬಿರುತ್ತದೆ. ಮನ ಕಾಯದೊಂದಿಗೆ ಕಾಯದಲ್ಲಿಯೇ ಸಂಗಮವಾದ ಅರಿವಿನ ಅಮೃತವನ್ನು ಮಾತ್ರ ಪಾನ ಮಾಡುತ್ತಾ ಆ ಗುರುದೇವನ ವಿಚಾರದಲ್ಲಿಯೇ ಮಗ್ನವಾಗುತ್ತದೆ.

ಸಂಕಲ್ಪ ವಿಕಲ್ಪಗಳನ್ನು ಕಳೆದುಕೊಂಡ ಮನ ಘನಮನವಾಗುತ್ತದೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

1360

**ವಿವೇಕವೆಂಬುದು ಬೇರಿಲ್ಲ ಕಂಡಯ್ಯಾ.**
**ನವನಾಳದ ಸುಳುಹ ತೊಡೆದು ಸುನಾಳದ ಶುದ್ಧವ ಮಾಡುವೆ.**
**ಅಷ್ಟದಳ ಕಮಲವನು ಊರ್ಧ್ವಮುಖವಾಗಿ ನಿಜಪದದಲ್ಲಿ ನಿಲ್ಲಿಸುವೆ.**
**ಐವತ್ತೆರಡಕ್ಷರವ ತಿಳಿದು ನೋಡಿ ಏಕಾಕ್ಷರದಲ್ಲಿ ನಿಲ್ಲಿಸುವೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ಎನ್ನ ವಿಚಾರದ ಹವಣ ನೀನೆ ಬಲ್ಲೆ.**

ವಿವೇಕ ಎನ್ನುವುದು ಕಾಯದಲ್ಲಿಯೇ ಸಂಗಮವಾಗಿದೆ, ಅದು ಪರಿಶುದ್ಧವಾದ ವಿವೇಕ. ನವನಾಳದ ಹಿಂದೆಯೇ ಸುನಾಳವಿದೆ. ಅದು ಸದಾ ಊರ್ಧ್ವಮುಖ ಮತ್ತೊಂದು ಅಧೋ ಮುಖ

ಮನ ಕಾಯ ಹಿಡಿದು ವಿವೇಕವನ್ನು ಪುಸ್ತಕದಲ್ಲಿ ಹುಡುಕುತ್ತದೆ. ಅದು ವಿವೇಕವಲ್ಲ. ತೋರುವಿಕೆಗೆ ಕೇಳುವಿಕೆಗೆ ವಿವೇಕವಾಗಿ ಕಂಡರೂ ಕಾಯ ಆಪತ್ಕಾಲಕ್ಕೆ ಸಿಕ್ಕಿ ಹಾಕಿಕೊಂಡಾಗ ಎರವಲು ವಿವೇಕ ವಿಪಯೋಗಕ್ಕೆ ಬರುವುದಿಲ್ಲ. ಹೊರಗಿನ ವಿವೇಕವನು ಬಿಟ್ಟು ಕಾಯದಲ್ಲಿಯೇ ಇದ್ದ ವಿವೇಕವನ್ನು ಮನ ಬಳಕೆಮಾಡಲು ತೊಡಗಿದಾಗ ಅದು ಏಕಾಕ್ಷರದಲ್ಲಿ ನಿಂತು ಅಕ್ಷರೋತ್ತಮನೇ ತಾನಾಗುತ್ತದೆ, ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

1361

**ಅಂತರಂಗದಲ್ಲಿ ನಿಮ್ಮ ನೋಡುವನಲ್ಲ ಕೇಳು ಕಂಡಾ, ಎಲೆ ಅಯ್ಯಾ.**

**ಬಹಿರಂಗದಲ್ಲಿ ಬಳಸುವುನಲ್ಲ ಕೇಳು ಕಂಡಾ ಎಲೆ ಅಯ್ಯಾ.**
**ಸುಷುಮ್ನದ ಬಟ್ಟೆಯ ತುದಿಯನಡರಿ**
**ಸಾವಿರ ದಳದ ಮಂಟಪದಲ್ಲಿ ನಿಮ್ಮ ನೆಲೆಗಂಡಿಪ್ಪೆ ನೋಡಾ,**
**ಕಪಿಲಸಿದ್ಧಮಲ್ಲಿನಾಥಯ್ಯಾ .**

ಅಂತರಂಗ ಬಹಿರಂಗದಲ್ಲಿ ನೀವೇ ಇರುವಾಗ, ಆ ವಸ್ತು ಕೂಡ ನಾನೇ ಆಗಿರುವಾಗ ಅಂತರಂಗದಲ್ಲಿ ನಿಮ್ಮನ್ನು ನೋಡಿ ಬಹಿರಂಗದಲ್ಲಿ ಬಳಸುವುದಾದರು ನನಗೆ ಯಾಕೆ ಬೇಕು.

ಸಕಲ ಕಾಯಗಳಲ್ಲಿಯೂ ನೀನೇ ಸಂಗಮವಾಗಿರುವಾಗ ನಿಮ್ಮನ್ನು ಹೊತ್ತು ಕೊಂಡ ನಾನು ನಿಮ್ಮ ವಿಷಯವನ್ನು ಯಾವ ಕಾಯಕ್ಕೆಂದು ಹೇಳಲಿ ? ಕೇಳುವವನು ನೀನೆ ಆಗಿರುವಾಗ ಹೇಳುವುದು ಕೇಳುವುದು ಅದು ನಿನ್ನ ಲೀಲೆಯೇ ಸರಿ. ಸಾವಿರ ದಳದ ಮಂಟಪದಲ್ಲಿ ನೀವಿರುವಿರಿ. ನೀವಿರುವ ನೆಲೆಯನ್ನು ನಾನಲ್ಲದೆ ಮತ್ತೆ ಬೇರೆ ಯಾರಾದರು ಕಾಣಲು ಸಾಧ್ಯವೇ ? ನೀವಿರುವಲ್ಲಿಯೇ ನಾನಿರುವೆ ನೋಡಾ ಕಪಿಲಸಿದ್ಧಮಲ್ಲಿನಾಥಯ್ಯಾ ಸುಷುಮ್ನದ ದಾರಿ ಎಳೆಯು ನನಗೆ ಎಳೆಎಳೆಯಾಗಿ ತಿಳಿಯಿತು.

**1362**

**ನಾ ನಿಮ್ಮ ರೂಪ ವಿಚಾರಿಸುವನಲ್ಲ ಕೇಳಾ**
**ನಮ್ಮ ಧ್ಯಾನದಲ್ಲಿ ಇಪ್ಪಾತನಲ್ಲ ಕೇಳಾ**
**ಅತ್ಯತಿಷ್ಠದ್ದ ಶಾಂಗುಲದಲ್ಲಿ ನಿಮ್ಮ ನಿಲಿಸಿ,**
**ನಾನೊಂದೆಡೆಯಲ್ಲಿ ಇಪ್ಪಾತನಲ್ಲ ನೋಡಾ.**
**ಓಂಕಾರವೆಂಬ ಪೀಠಿಕೆ ನಾನಾಗಿ**
**ನಿಶಬ್ದವೆಂಬ ಲಿಂಗವ ನೆಲೆಗೊಳಿಸಿ**
**ಬೆರೆಸಿ ಬೇರಿಲ್ಲದೆ ಇಪ್ಪೆ ನೋಡಯ್ಯಾ ,**
**ಕಪಿಲಸಿದ್ಧಮಲ್ಲಿನಾಥಯ್ಯಾ ನೀವು ಪ್ರಣವರೂಪಾಗಿ.**

ನಾ ನಿಮ್ಮ ರೂಪ ವಿಚಾರಿಸುವವನಲ್ಲ ಗುರುದೇವನೆ. ಏಕೆಂದರೆ ನೀವು ನಿರೂಪು ನಿಮ್ಮ ರೂಪವೇ ನಾನಾಗಿರುವೆ. ನಮ್ಮ ಧ್ಯಾನದಲ್ಲಿ ಇಪ್ಪಾತನು ನೀನಲ್ಲ ತಂದೆಯೇ. ನಿಮ್ಮ ಧ್ಯಾನವ ನಾನು ಮಾಡಲಾಗಿ ನೀನು ನನ್ನಲ್ಲಿಯೇ ನೆಲೆಸಿ ಜಗದಗಲ ಮುಗಿಲಗಲ ವಿಸ್ತರಿಸಿದುದನು ಕಂಡೆ.

ಮನವೆಂಬ ನಾನು ಒಂದೆಡೆಯಲ್ಲಿ ಇರುವಾತನಲ್ಲ, ನನಗೆ ಜನ್ಮಕೊಟ್ಟ ನೀನೇ ನಾನು ಹೋದಲ್ಲೆಲ್ಲ ನೀನಿರುವುದನ್ನು ಕಂಡೆ ಏಕೆಂದರೆ ಓಂಕಾರವೆಂಬ ಪೀಠಿಕೆ ನಾನಾಗಿ ನಿಶಬ್ದವೆಂಬ ಲಿಂಗವ ನೆಲೆಗೊಳಿಸಿ ಬೆರೆಸಿ ಬೇರಿಲ್ಲದಂತೆ ಇರುವುದನು ಕಂಡೆ ನೋಡಯ್ಯಾ ನೀವು ಪ್ರಣವರೂಪಾಗಿ.

**1363**

**ನಾದ ಬಿಂದುವೆಂಬಲ್ಲಿ ಅಂಗ ಲಿಂಗ ಸಂಬಂಧವೆಂದೆನಯ್ಯಾ ,**
**ನಾದ ಪ್ರಾಣ, ಬಿಂದು ಕಾಯವಾದ ಕಾರಣ ನಾದ ಸ್ವರವಲ್ಲ, ಒಂದು ಕಾಯವಲ್ಲ**
**ಉಭಯ ಸೂತಕರಹಿತ ಕಂಡಯ್ಯಾ ,**

**ನಾದ ಬಿಂದುವಿನ ಒಡ್ಡವ ತೋರಿ ಮನ ಮಗ್ನವಾದ ನಿಲವ**
**ಕಪಿಲಸಿದ್ಧ ಮಲ್ಲಿಕಾರ್ಜುನಾ ನೀನೆ ಬಲ್ಲೆ.**

ನಾದ ಬಿಂದು ಎಂದರೆ ಅಂಗ ಲಿಂಗ ಸಂಬಂಧವಿದ್ದಂತೆ. ನಾದ ಕಾಣುವುದಿಲ್ಲ, ಬಿಂದು ಕಾಣುತ್ತದೆ. ಅದು ಬರಿಗಣ್ಣಿಲೆ ಕಾಣುವುದಿಲ್ಲ. ಹಾಗೆಯೇ ಅಂಗ ಕಾಣುತ್ತದೆ. ಅಂಗದಲ್ಲಿಯೇ ಸಂಗಮವಾದ ಅರಿವು ಎಂಬ ಲಿಂಗವು ಕಾಣುವುದಿಲ್ಲ.

ನಾದ ಪ್ರಾಣವಾದರೆ ಬಿಂದು ಕಾಯ, ನಾದ ಸ್ವರವಲ್ಲ ಹಾಗೆಯೇ ಬಿಂದು ಕೂಡ ಕಾಯವಲ್ಲ. ಇವೆರಡನ್ನೂ ಶಬ್ದದ ಮೂಲಕ ಉಸುರಿದರೆ ಖಂಡಿತ ಸೂತಕವಾಗುತ್ತದೆ. ಶಬ್ದಾತೀತ. ಇವೆರಡೂ ಸೂತಕ ರಹಿತ. ಕಾಯದಲ್ಲಿದ್ದ ಅರಿವನ್ನು ಕಾಯವನ್ನು ಆವರಿಸಿದ ಮನ ಅರಿತರಿತು ಆ ಅರಿವೇ ತಾನಾದುದನ್ನು ನೀನೆ ಬಲ್ಲೆ ಕಪಿಲಸಿದ್ಧಮಲ್ಲಿಕಾರ್ಜುನಾ.

**1364**

**ಎನ್ನ ಮನದಲ್ಲಿ ಮತ್ತೊಂದಕ್ಕಿಂಬಿಲ್ಲ ಕಂಡಯ್ಯಾ**
**ನಿಮ್ಮ ನೆನೆವೆ ನಾನು, ನೀನು ಎನ್ನ ನೆನೆವೆ ಕಂಡಯ್ಯಾ**
**ನಿನಗೆಯೂ ಎನಗೆಯೂ ಒಮ್ಮನ ನೋಡಯ್ಯಾ ನೀ ಮನಮುಕ್ತನಾದ ಕಾರಣ,**
**ನಿನ್ನೊಡನೆ ಎನ್ನ ಮನಮುಕ್ತನ ಮಾಡಯ್ಯಾ , ಕಪಿಲಸಿದ್ಧಮಲ್ಲಿನಾಥ.**

ಮನವೆಂಬ ನಾನು ತನುವಿನ ಸಂಗ ಮಾಡಿದುದಕ್ಕಾಗಿ ತನುವಿನಲ್ಲಿಯೇ ತನ್ಮಯವಾದ ನಿಮ್ಮನ್ನು ನಾನು ಮರೆತಿದ್ದೆ. ಆದರೂ ಅನಂತ ಜನ್ಮಗಳಿಂದ ನೀನು ನನ್ನನ್ನು ಬಿಟ್ಟು ಎಂದೂ ಅಗಲಲಿಲ್ಲ. ಗುರುದೇವನ ಅನುಗ್ರಹದಿಂದಾಗಿ ನೀನು ಯಾರು ಎಂಬುದು ನನಗೆ ಗೊತ್ತಾಯಿತು. ಇನ್ನು ನಾನು ನಿಮ್ಮನ್ನು ನೆನೆವೆ ಕಂಡಯ್ಯಾ .

ನಿನಗೆಯೂ ಎನಗೆಯೂ ಒಮ್ಮನ ನೋಡಯ್ಯಾ. ಮನಕ್ಕೆ ಜನ್ಮಕೊಟ್ಟು ಮನವನ್ನು ಮುಕ್ತನನ್ನಾಗಿಸಿದ ಕಾರಣ ನೀನು ಮನಮುಕ್ತನಯ್ಯಾ. ನಿನ್ನೊಡನೆ ಕೂಡಿ ಕೂಡದ ಅಗಲದ ಕೂಟದ ಸುಖವನ್ನು ಉಣ್ಣುವುದಕ್ಕಾಗಿ ಎನ್ನನ್ನು ಮನ ಮುಕ್ತನನ್ನಾಗಿ ಮಾಡಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1365**

**ಮನವನ್ನು ಯೋಗವೆಂದಡೇನು ಕೊರತೆ ? ಹೇಳಾ ಎಲೆ ಅಯ್ಯಾ.**
**ಮನವಿಲ್ಲದ ಬಟ್ಟಬರಿಯ ಬೊಮ್ಮವೆಂದಡೇನು? ಹೇಳು ಎಲೆ ಅಯ್ಯಾ.**
**ನುಡಿದ ಮಾತಿನಲ್ಲಿ ವಿವರ ತೋರುತ್ತಿದೆ ಎಂದಡೆ,**
**ತಾತ್ಪರ್ಯವಂತಪ್ಪುದೆ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಘನದಲ್ಲಿ ಮನ ಮಗ್ನವಾಗುವುದನ್ನೇ ಯೋಗವೆಂದು ಕರೆದಿದ್ದಾರೆ ಪುರಾತರು. ತನು ಮನ ತನುವಿನಲ್ಲಿ ತನ್ಮಯವಾದ ಘನ ಏನು ಬೇರೆ ಬೇರೆಯಾಗಿವೆಯೇ? ಇಲ್ಲ, ನೋಡಲು ಹೋದಡೆ ತನುವೊಂದೇ, ತನುವನ್ನು ಆವರಿಸಿದ ಮನ ತನುವಿನೊಂದಿಗೆ ಕೂಡಿ ಭೌತಿಕ ಸುಖ ಅನುಭವಿಸುತ್ತಿರುವುದರಿಂದ ಮನ ಬ್ರಹ್ಮನೆಂಬುದನ್ನು ಮರೆತು ಭ್ರಮೆಯಲ್ಲಿ ಮುಳುಗಿ ಹೋಗಿದೆ.

ಮನ ಬ್ರಹ್ಮನೆ ತಾನಾಗಲು ತನುವಿನಲ್ಲಿಯೇ ತನ್ಮಯವಾದ ಅರಿವೆಂಬ

ಗುರುದೇವನೊಂದಿಗೆ ಕೂಡಲೇ ಬೇಕು ಕೂಡಿ ಕೂಡದ - ಅಗಲದ ಅರಿವಿನ ಕೂಟದ ಪರಮಸುಃಖವನು ಅನುಭವಿಸಿಲೇಬೇಕು. ಆಗ ನುಡಿದ ಮಾತು ಮುತ್ತಾಗಿ ಅರಳುತ್ತದೆ, ಮಾಣಿಕ್ಯವಾಗಿ ಬೆಳಗುತ್ತದೆ, ಸ್ಪಟಿಕವಾಗಿ ಥಳಥಳನೆ ಹೊಳೆಯುತ್ತದೆ ಮಾತಿನ ತಾತ್ಪರ್ಯ ತನ್ನನ್ನು ಬಾಧಿಸುವುದಿಲ್ಲ ಹಾಗೆಯೇ ಅರಳಿಸುವದಿಲ್ಲ.

**1366**

**ಅಂಗದಂತೆ ಲಿಂಗ, ಲಿಂಗದಂತೆ ಅಂಗವಾದ ಬಳಿಕ,**
**ಅಂಗದಂತೆ ಲಿಂಗೈಕ್ಯ , ಲಿಂಗದಂತೆ ಅಂಗೈಕ್ಯ.**
**ಮನವೆ ಲಿಂಗ, ಲಿಂಗವೆ ಮನವಾದ ಬಳಿಕ,**
**ಮಾತು ಮಾತುಗಳೆಲ್ಲ ಹೊಳ್ಳಾದ ಕಾರಣ,**
**ಮಾತೇ ಲಿಂಗೈಕ್ಯ, ಲಿಂಗೈಕ್ಯವೇ ಸ್ವರ !**
**ಶಬ್ದಸಂದಣೆಗಿನ್ನು ತೆರಹುಂಟೆ ? ಕಪಿಲಸಿದ್ಧಮಲ್ಲಿನಾಥಯ್ಯಾ ,**
**ಇನ್ನು ನಿಮ್ಮ ದೇವರೆಂದು ಅರಸಲುಂಟೇ ಇಲ್ಲವೋ**
**ಎಂಬುವುದು ತಿಳಿಹಿಕೊಡು ಅಯ್ಯಾ .**

ಲಿಂಗ ಅಂಗಕ್ಕೆ ಜನ್ಮ ನೀಡಿ ಅಂಗ - ಲಿಂಗವನ್ನು ಅಗಲದಿರಲಿ ಎಂದು ಲಿಂಗ ಅಂಗದಲ್ಲಿಯೇ ಸಂಗಮವಾಗಿದೆ, ಅಂಗದಲ್ಲಿ ಲಿಂಗ ಐಕ್ಯವಾಗಿದೆ, ಲಿಂಗದಲ್ಲಿ ಅಂಗ ಐಕ್ಯವಾಗಿದೆ. ಲಿಂಗಾಂಗದ ಸಾಮರಸ್ಯವನ್ನು ಲಿಂಗವನ್ನು ಆವರಿಸಿದ ಮನ ಪರಿಪೂರ್ಣವಾಗಿ ತಿಳಿದ ಬಳಿಕ ಮನವೇ ಲಿಂಗವಾಗಿದೆ, ಲಿಂಗವೇ ಮನವಾಗಿದೆ. ಲಿಂಗಾಂಗದಿಂದ ಹೊರಬರುವ ಮಾತುಗಳೆಲ್ಲ ಲಿಂಗದಿಂದ ಹೊರಬರುವ ಮಾತುಗಳೇ ಆಗಿವೆ. ಸ್ವರ ಲಿಂಗೈಕ್ಯವಾಗಿದೆ, ಹೀಗಾದ ಬಳಿಕ ಶಬ್ದ ಸಂದಣಿಗೆ ಅವಕಾಶ ಉಂಟೇ ಕಪಿಲಸಿದ್ಧಮಲ್ಲಿನಾಥಯ್ಯಾ ಇನ್ನು ನಿಮ್ಮನ್ನು ದೇವರೆಂದು ಹುಡುಕಲು ಸಾಧ್ಯವೇ ? ಇಲ್ಲ. ಏಕೆಂದರೆ ಹುಡುಕುವ ಮನವೇ ಘನಮನವಾಗಿ ದೇವರಾದ ಕಾರಣ ದೇವರು ಎನ್ನುವವನು ಇಲ್ಲ ವೆಂಬುದನು ಸಕಲರಿಗೂ ತಿಳಿಹೇಳಿಕೊಡು ತಂದೆ. ಏಕೆಂದರೆ ಹುಡುಕುವ ದೇಹದಲ್ಲಿ ನೀನಿರುವೆ.

**1367**

**ಅಯ್ಯಾ ನಿಮ್ಮ ದೇವರೆಂದು,ಭಾವಿಸಲರಿಯೆನು, ಕೇಳು ಕಂಡಾ.**
**ಎನ್ನ ಮನವ ನುಂಗಿದೆ ಎಂದು, ನಿಮಗಾನು ಬಿನ್ನಹವ ಮಾಡಿದ ಕಾರಣ,**
**ಎನ್ನ ಒಳಹೊರಗೆಲ್ಲಾ ನೀನೇ ಕಂಡಯ್ಯಾ.**
**ನಿಮ್ಮೊಳಗೆ ಅಡಗಿದ ನುಡಿಯನೊಳಕೊಂಡ ಅರಿವ**
**ಅರಿದರಿದು ಮರೆದ ಪರಿ ಎಂತಯ್ಯಾ, ಕಪಿಲಸಿದ್ಧಮಲ್ಲಿನಾಥಯ್ಯಾ .**

ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನಾದ ನಿನ್ನನ್ನು ತನುವನ್ನು ಅವರಿಸಿದ ಮನವೆಂಬ ನಾನು ಮರೆತ ಕಾರಣ ತನುವಿನೊಂದಿಗೆ ಕೂಡಿ, ದೇವರನ್ನು ಹುಡುಕುವ ಕಾಯಕದಲ್ಲಿ ನಾನು ತನ್ಮಯವಾದ ಕಾರಣ, ಕಾಯದಲ್ಲಿ ತನ್ಮಯವಾದ ನಿಮ್ಮನ್ನು ದೇವರೆಂದು ತಿಳಿಯಲಿಲ್ಲ;

ನೀನು ಎನ್ನ ಮನವನ್ನು ನುಂಗಿದೆ, ಏಕೆಂದರೆ ನಾನು ನಿಮ್ಮನ್ನು ಬಿನ್ನಹವ ಮಾಡಿದ ಕಾರಣ,

ಎನ್ನ ಒಳ ಹೊರಗೆಲ್ಲ ನೀನೇ ಕಂಡಯ್ಯಾ. ಜಗದಗಲ ಮುಗಿಲಗಲ ವಿಸ್ತರಿಸಿಕೊಂಡವನು ನೀನೆ ಕಂಡಯ್ಯಾ. ಅಂತಹ ನೀನು ಎನ್ನೊಳಗೆ ಅಡಗಿ, ಎನ್ನ ಮುಡಿಯನ್ನು ಒಳಕೊಂಡು ಅರಿದರಿದು ಅರಿಯ ಬೇಕಾದ ನಿನ್ನನ್ನು ನಾನು ಮರೆದ ಪರಿ ಎಂತಯ್ಯಾ ಕಪಿಲಸಿದ್ಧ ಮಲ್ಲಿನಾಥಯ್ಯಾ.

**1368**

**ಅಯ್ಯಾ ಕಬ್ಬುನ ನೀರನೊಳ ಕೊಂಬಂತೆ,**
**ಶಬುದ ನಿರಾಳವನೊಳ ಕೊಂಬಂತೆ,**
**ಮರೀಚಿಯ ಬಯಲೊಳಕೊಂಬಂತೆ,**
**ಎನ್ನನೆಂದೊಳಕೊಂಬೆ ಹೇಳಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾದ ಕಬ್ಬಿಣ ನೀರನು ತನ್ನೊಳಗೆ ಸೆಳೆದುಕೊಳ್ಳುವಂತೆ; ತಂದೆ ಕಪಿಲಸಿದ್ಧಮಲ್ಲಿ ಕಾರ್ಜುನಾ ನೀನು ನನ್ನನ್ನು ಎಂದು ನಿಮ್ಮೊಳಗೆ ಭರದಿಂದ ಸೆಳೆದುಕೊಳ್ಳುವೆ ಹೇಳಾ.

ಶಬ್ದ ನಿರಾಳವನು ಒಳಕೊಂಡು ಇಲ್ಲವಾಗುವಂತೆ ಮರೀಚಿಯನು ಬಯಲು ತನ್ನೊಳ ಸೆಳೆದುಕೊಳ್ಳುವಂತೆ ನನ್ನನ್ನು ಎಂದು ನಿನ್ನೊಳಗೆ ಸೆಳೆದುಕೊಳ್ಳುವೆ ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನೊಂದಿಗೆ ಮಾತನಾಡಿದ್ದಾರೆ.

**1369**

**ಕೆರೆ ತೊರೆ ದೇಗುಲಂಗಳ ಕಡೆಯಿಂದ ನಿಮ್ಮ ಕಂಡೆ :**
**ಎಡಹುವ ಕಲ್ಲ ತೆಗೆವ ಮರೆಯಲ್ಲಿ ನಿಧಾನವ ಕಂಡಂತೆ.**
**ಎನ್ನ ಮರವೆಯ ತಮದ ಅದ್ರಿಗೆ ದಿನಮಣಿ ಜನಿಸಿದಂತೆ.**
**ಕಪಿಲಸಿದ್ಧಮಲ್ಲಿ ಕಾರ್ಜುನಲಿಂಗವೆಂಬ ಭ್ರಾಂತು ಸ್ವಯವಾಯಿತ್ತು ,**
**ಪ್ರಭುದೇವರ ಕಾರುಣ್ಯದಿಂದ.**

ಕೆರೆ ತೊರೆ ದೇವಾಲಯಗಳನ್ನು ಕಟ್ಟಿಸುವ ಮೂಲಕ ನಿಮ್ಮನ್ನು ಕಾಣುವ ಪ್ರಬಲ ಇಚ್ಛೆಯಿತ್ತು. ಎಡಹುವ ಕಲ್ಲ ತೆಗೆಯುವ ಮರೆಯಲ್ಲಿ ಸಂಪತ್ತು ಇದೆ ಎಂದು ನಾನು ಅರಿತಿರಲಿಲ್ಲ. ನನ್ನ ಮರೆವೆಯ ಕತ್ತಲಿನಲ್ಲಿ ಬೆಳಗಿನ ದಿನಮಣಿ ಜನಿಸಿದಂತೆ ಪ್ರಭುದೇವರ ಕಾರುಣ್ಯದಿಂದಾಗಿ ನನ್ನ ಭ್ರಮೆಯನ್ನು ನಾನೇ ಕಳೆದುಕೊಳ್ಳುವಂತೆ ನನಗೆ ಅರಿವಾಯಿತು

ಕಾಯದಲ್ಲಿ ಅರಿವಿದೆ ಆ ಅರಿವೇ ಗುರುವೆಂದು ಆ ಗುರುದೇವನೇ ಮಹಾದೇವನೆಂದು ಆ ಮಹಾದೇವನೇ ಸದಾಶಿವನೆಂದು ನನಗೆ ತಿಳಿದಿರಲಿಲ್ಲ. ಆ ಸದಾಶಿವನನ್ನು ಕಾಣುವ ಬಯಕೆಯಿಂದಾಗಿ ಕೆರೆ ತೊರೆ ದೇವಾಲಯಗಳನ್ನು ಕಟ್ಟಿಸಿದೆ. ಆದರೂ ನನಗೆ ಆ ಸದಾಶಿವ ಒಲಿಯಲಿಲ್ಲ. ಪ್ರಭುದೇವರ ಕಾರುಣ್ಯದಿಂದ ಕಾಯದಲ್ಲಿಯೇ ಗುರುದೇವನಿದ್ದಾನೆಂದು ಎನಗೆ ತಿಳಿಯಿತು. ನನ್ನನ್ನು ಆವರಿಸಿದ ಭ್ರಮೆ ನನ್ನಲ್ಲಿಯೇ ಸಂಗಮವಾದ ಬ್ರಹ್ಮನಲ್ಲಿ ಲೀನವಾಯಿತು.

ಎಡವಿದ ಕಲ್ಲಿನ ಮರೆಯಲ್ಲಿ ಅರಿವಿನ ಸಂಪತ್ತು ಇರುವುದು ನನಗೆ ಗೋಚರವಾಯಿತು.

ಕಾಯದಿಂದಲೇ ಆಲಯ ಕಟ್ಟಿದೆ, ಕಾಯವೇ ಆಲಯವೆಂದು ತಿಳಿಯಲಿಲ್ಲ. ಪ್ರಭುದೇವರ ಕಾರುಣ್ಯದಿಂದಾಗಿ ಕಾಯದಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನದೇವಾ ಕಾಯವನ್ನು ಆವರಿಸಿದ ಮನಕ್ಕೆ ದರುಶನವಿತ್ತ ಕಾರಣ ಮನ ಘನಮನವಾಯಿತ್ತು .

**1370**

**ಅಯ್ಯಾ ನಿಮ್ಮ ಶರಣವುಂಡ ಸಬುದವೆನ್ನ ಮನಕ್ಕೆ ವೇದ್ಯವಾಯಿತ್ತು.**
**ನಿಮ್ಮ ನಿಜವುಂಡ ನಿಲವು ಎನ್ನ ಮತಿಗೆ ವೇದ್ಯವಾಯಿತ್ತು.**
**ನಿಮ್ಮ ಕರುಣ ಪ್ರಸಾದವೆನ್ನ ಸರ್ವಾಂಗವೇದ್ಯವಾಯಿತ್ತು.**
**ನಿಮ್ಮ ಕಾಯವಿಡಿದಿಪ್ಪ ಕರಸ್ಥಲದ ಕಾರಣವ ಹೇಳಾ ಕಪಿಲಸಿದ್ಧ ಮಲ್ಲಿನಾಥ.**

ಕಾಯದಿಂದ ಹೊರ ಬಂದ ಶಬ್ದವನ್ನು ಶರಣರು ಮಾತ್ರ ಉಣ್ಣಬಲ್ಲರು. ಶಬ್ದವನ್ನು ನಿಶ್ಯಬ್ದಮಾಡಿಕೊಂಡು ಉಣ್ಣುವ ಶಕ್ತಿ ಶರಣರಿಗೆ ಮಾತ್ರ ಇದೆ. ಏಕೆಂದರೆ ಪ್ರತಿ ಶಬ್ದದಲ್ಲಿ ಗುರುದೇವನೇ ಇದ್ದಾನೆ ಎಂಬುವುದು ಅವರಿಗೆ ಮಾತ್ರ ಗೊತ್ತು .

ಶರಣರು ಉಂಡ ನಿಮ್ಮ ಶಬ್ದ ಎನ್ನ ಮನಕ್ಕೆ ವೇದ್ಯವಾಯಿತ್ತು. ಏಕೆಂದರೆ ಪ್ರತಿ ಶಬ್ದದಲ್ಲಿ ಇರುವ ಅರಿವಿನ ಸಂಪತ್ತನ್ನು ಶಬ್ದದ ನಿಜವನ್ನು ಎನಗೆ ತಿಳಿಯುವಂತೆ ಹೇಳಿದಾಗ ಶರಣರು ಉಂಡ ನಿಜವು ಎನ್ನ ಮತಿಗೆ ವೇದ್ಯವಾಯಿತ್ತು. ಕೇಳಿದ ಕಿವಿ ಆ ಶಬ್ದವನ್ನು ಪ್ರಸಾದ ಮಾಡಿಕೊಂಡಾಗ ಆ ಶಬ್ದದ ನಿಜವು ಸರ್ವಾಂಗಕ್ಕೆ ವೇದ್ಯವಾಯಿತ್ತು .

ಕಾಯ ನಿಮ್ಮನ್ನು ಹಿಡಿದಿಟ್ಟುಕೊಂಡಿದೆ ಕಾಯದ ತುಂಬಾ ನೀವೆ ಸಂಗಮವಾಗಿರುವಿರಿ. ಹೀಗೆ ನೀವಿದ್ದ ಕಾಯವನ್ನು ನಿಮ್ಮನ್ನು ತಿಳಿಯದಂತೆ ಮಾಡಿರುವುದು ನಿಮಗೆ ಒಳಿತೆ.

**1371**

**ಕಾಯವೆ ಪೀಠಕೆ ಪ್ರಾಣವೆ ಲಿಂಗವಾಗಿರಲು,**
**ಬೇರೆ ಮತ್ತು ಕುರುಹೇಕಯ್ಯಾ ?**
**ಕುರುಹುವಿಡಿದು ಕೂಡುವ ನಿಶ್ಚಯವುಂಟೆ ? ಜಗದೊಳಗೆ.**
**ನಷ್ಟವ ಕೈಯಲ್ಲಿ ಹಿಡಿದು ದೃಷ್ಟವ ಕಂಡೆಹೆನೆಂದೆಡೆ**
**ಕಪಿಲಸಿದ್ಧ ಮಲ್ಲಿನಾಥಯ್ಯಾ.**

ಅಂಗದಲ್ಲಿಯೇ ಲಿಂಗ ಸಂಗಮವಾಗಿರಲು ಮತ್ತೆ ಅದಕ್ಕೆ ಬೇರೆ ಲಿಂಗಬೇಕೆ ? ಅಂಗದಲ್ಲಿಯೇ ಲಿಂಗ ಸಂಗಮವಾದ್ದರಿಂದ ಅಂಗ ಲಿಂಗಾಂಗ ಎನಿಸಿಕೊಂಡಿದೆ. ಲಿಂಗದಿಂದಲೇ ಅಂಗಕ್ಕೆ ಪ್ರಾಣ ಕಳೆ ಬಂದಿದೆ. ಆ ಪ್ರಾಣವೂ ಕೂಡ ಲಿಂಗವೇ ಆಗಿದೆ ಹೀಗಿರುವಾಗ ಲಿಂಗದ ಮೇಲೆ ಲಿಂಗ ಧರಿಸುವುದು ನ್ಯಾಯವೇ ? ಅಂಗದ ಮೇಲಿರುವ ಲಿಂಗ ಅಂಗದಲ್ಲಿಯೇ ಸಂಗಮವಾದ ಲಿಂಗವನ್ನು ಅರಿಯದು, ಹೀಗಾಗಿ ಅಂಗ ಲಿಂಗವನ್ನು ಹಿಡಿದು ಲಿಂಗದಲ್ಲಿ ಕೂಡುವುದು ಅಸಾಧ್ಯ. ಕಾಯದಲ್ಲಿ ಸ್ಪಷ್ಟತೆಯ ಅರಿವಿದ್ದು ನಷ್ಟವ ಕೈಯಲ್ಲಿ ಹಿಡಿದು ಸ್ಪಷ್ಟತೆಯ ಕಡೆಗೆ ನಡೆಯುವುದು ಕಷ್ಟವಲ್ಲವೇ ? ಕಾಯವನ್ನು ಆವರಿಸಿದ ಮಾಯಾಮಯವಾದ ಮನ ಘನವನ್ನು ತಿಳಿಯಲೇ ಬೇಕು.

1372

**ಅಯ್ಯಾ ನಿಮ್ಮ ಕರಸ್ಥಲದ ಘನವನುಪಮಿಸಬಲ್ಲವರಿಲ್ಲವಯ್ಯಾ.**
**ನಿಮ್ಮ ಮಹಿಮೆಯನರಿವಡೆ ನಾನೇತರೊಳಗೇನಯ್ಯಾ?**
**ಇಷ್ಟಲಿಂಗವ ಮುಟ್ಟದ ಶರಣರೊಳಗೆ ಹುಟ್ಟಿದ**
**ಕರಸ್ಥಲವೆಷ್ಟೆಂಬುದು, ತಿಳುಹಿ ಎನ್ನನುಳುಹಿಕೊಳ್ಳಾ,**
**ಕಪಿಲಸಿದ್ಧಮಲ್ಲಿಮಲ್ಲಿಕಾರ್ಜುನಾ.**

ಅಯ್ಯಾ ಅರಿವೆಂಬ ಗುರುದೇವನೆ ನೀವು ಸಂಗಮವಾದ ಕಾಯವನ್ನು ಉಪಮಿಸಬಲ್ಲವರು ಇಲ್ಲವಯ್ಯಾ ಕಾಯದ ಘನವನ್ನು ಹೀಗೆಂದು ಹೇಳಲು ಯಾರಿಗೂ ಸಾಧ್ಯವಾಗುವುದಿಲ್ಲ.

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲದ ಕಾಯದಲ್ಲಿ ಘನಕ್ಕೆ ಘನವಾಗಿ ನೀವು ಬಂದು ಚುಳುಕಾಗಿ ಇರುವಿರಿ. ಅಂತಹ ನಿಮ್ಮ ಘನವನ್ನು ಅಂತಹ ನಿಮ್ಮ ಮಹಿಮೆಯನ್ನು ಅರಿಯಲಿಕ್ಕೆ ನಾನೇತರೊಳಗೇನಯ್ಯಾ .

ನಿಮ್ಮ ಇರುವಿಕೆಯನ್ನು ಕಂಡು ನಿಮ್ಮನ್ನು ಮುಟ್ಟಿ ನಿಮಗೆ ಶರಣುಹೋಗಿ ಶರಣಾಗತನಾಗದ ಶರಣನಿಗೆ ಮಾತ್ರ ಸಾಧ್ಯ. ಏಕೆಂದರೆ ನಿಮ್ಮನ್ನು ಅರಿತರಿತು ಕಾಯದೊಳಗೆ ಸಂಗಮವಾದ ನಿಮ್ಮನ್ನು ಕೂಡಿ ಕೂಡದ ಅಗಲದ ಕೂಟದ ಸುಖವನ್ನು ಏನೆಂದು ಉಪಮಿಸಲಿ; ಕಾಯದ ಮಹಿಮೆ ಎನಗೆ ತಿಳಿಹಿ ಎನ್ನನ್ನು ನಿನ್ನ ಹತ್ತಿರವೇ ಉಳಿಸಿಕೊಳ್ಳ ಕಪಿಲಸಿದ್ಧ ಮಲ್ಲಿಕಾರ್ಜುನಾ.

1373

**ಅಯ್ಯಾ ನಿಮ್ಮ ಕರಸ್ಥಲದ ಘನ ನಿಮ್ಮಲ್ಲಿರಲಿ**
**ಕರಸ್ಥಲವನೊಲ್ಲೆ, ಪರಸ್ಥಲವನೊಲ್ಲೆ, ಆಮದನೊಲ್ಲೆ ನೋಡಯ್ಯಾ?**
**ಕಪಿಲಸಿದ್ಧ ಮಲ್ಲಿನಾಥಯ್ಯಾ ನೀ ಒಲಿದು, ಸಂಗನ ಬಸವಣ್ಣನ ಶ್ರೀಪಾದವ**
**ತೋರಿಹೆನೆಂಬ ಮಾತಿಂಗೆ ಮಾರುಹೋದೆನು?**
**ಇನ್ನು ತೋರಿ ಎನ್ನನ್ನುಳುಹಿಕೊಳ್ಳಾ ಎನ್ನ ದೇವರ ದೇವಾ.**

ಶರಣರ ಇರುವಿಕೆ ಮತ್ತು ಅವರ ಮಾತುಗಳು ಲೋಕಕ್ಕೆ ಬಲು ವಿಚಿತ್ರವಾಗಿ ಕಾಣುತ್ತವೆ. ಕರಸ್ಥಲದಲ್ಲಿ ಸಂಗಮವಾದ ನಿಮ್ಮನ್ನು ಉಪಮಿಸಲು ಯಾರಿಗೂ ಸಾಧ್ಯವಿಲ್ಲ ಎಂದು ಹೇಳುತ್ತಾರೆ ಈ ವಚನದಲ್ಲಿ . ಅಯ್ಯಾ ನೀವಿರುವ ನಿಮ್ಮ ಕರಸ್ಥಲದ ಘನ ನಿಮ್ಮಲ್ಲಿಯೇ ಇರಲಿ ಆ ಕರಸ್ಥಲವನ್ನು ನಾನು ಒಲ್ಲೆ ಪರಸ್ಥಲವನ್ನೂ ನಾನು ಒಲ್ಲೆ ಆವುದನ್ನು ನಾನು ಒಲ್ಲೆ ನೋಡಯ್ಯಾ ಕಪಿಲಸಿದ್ಧ ಮಲ್ಲಿನಾಥಯ್ಯಾ ನೀನು ಎನಗೆ ಒಲಿದು ಸಂಗನ ಬಸವಣ್ಣನ ಶ್ರೀಪಾದವನ್ನು ಎನಗೆ ತೋರಿಹೆನೆಂಬ ನಿಮ್ಮ ಮಾತಿಂಗೆ ಮಾರುಹೋದೆನು. ಇನ್ನಾದರು ನನಗೆ ಬಸವದೇವರ ತೋರಿ ಎನ್ನನ್ನುಳುಹಿಕೊಳ್ಳ ಎನ್ನ ದೇವರ ದೇವಾ ಎಂದು ಸಿದ್ಧರಾಮ ಶಿವಯೋಗಿಗಳು ನೇರವಾಗಿ ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

1374

**ಯತ್ರ ಯತ್ರ ಮಾಹೇಶ್ವರರಿರ್ದ ಗ್ರಾಮ**
**ತತ್ರ ತತ್ರ ಶಿವಲೋಕ ನೋಡಾ ಎಲೆ ಅಯ್ಯಾ**

**ಸತ್ಯ ! ವಚನ ತಪ್ಪುವುದೆ ಅಯ್ಯಾ! ಕಪಿಲಸಿದ್ಧ ಮಲ್ಲಿನಾಥ**
**ನಿಮ್ಮ ಶರಣರು ಮೆಟ್ಟಿ ನಿಂದ ಧರೆ ಪಾವನವೆಂಬುದ**
**ಇಂದೆನಗೆ ಅರಿಯಬಂದಿತ್ತಯ್ಯಾ .**

ದೇಹವನ್ನು ಗ್ರಾಮ ಪುರ ಎಂದು ಕರೆದಿದ್ದಾರೆ ಜ್ಞಾನಿಗಳು. ದೇಹದಲ್ಲಿ ಮಹಾಪುರುಷನೆಂಬ ಮಹೇಶ್ವರನು ಇದ್ದಾನೆ. ದೇಹವನ್ನು ಆವರಿಸಿದ ಮನ ದೇಹದೊಳಗೇ ಇದ್ದ ದೇವರನ್ನು ಕಂಡರೆ ಅದು ಶಿವಲೋಕ. ದೇಹದೊಳಗಿದ್ದ ದೇವರನ್ನು ಕಾಣದೆ ಆ ದೇವರನ್ನು ಹಿಡಿದುಕೊಂಡೆ ದೇವರನ್ನು ಹುಡುಕುತ್ತಾ ಹೋಗುವ ದೇಹವೇ ಮರ್ತ್ಯಲೋಕ. ಮನ ದೇವರಿದ್ದ ದೇಹವನ್ನು ಹಿಡಿದು ಆ ದೇವರಿಗೆ ಶರಣಾಗತನಾಗದೆ. ಭೌತಿಕ ಸುಖಕ್ಕೆ ಈಡಾದರೆ ಅದಕ್ಕೆ ದುಃಖ ಕಟ್ಟಿಟ್ಟ ಬುತ್ತಿ .

ಶಿವನಿದ್ದ ದೇಹವು ದೇವಲೋಕವೂ ಹೌದು; ಶಿವನನ್ನು ಅರಿಯದಿದ್ದರೆ ಮರ್ತ್ಯಲೋಕವೂ ಹೌದು. ದೇಹವನ್ನು ಆವರಿಸಿದ ಮನ ದೇಹದೊಂದಿಗೆ ಮರ್ತ್ಯಲೋಕದ ಸುಖದಲ್ಲಾದರೂ ಇರಬಹುದು. ಶಿವಲೋಕದ ಪರಮಸುಖದಲ್ಲಾದರೂ ಇರಬಹುದು. ಮನ ಮತ್ತು ದೇಹ ಬೇಡಿದ ಸುಖವನ್ನು ದೇಹದಲ್ಲಿರುವ ದೇವರು ತಪ್ಪದೆ ಕೊಡುತ್ತಾನೆ. ಶರಣರು ದೇಹದಲ್ಲಿಯೇ ಇದ್ದ ದೇವರಿಗೆ ಶರಣು ಹೋಗಿ ಶರಣಾಗತರಾದರು, ಹೀಗಾಗಿ ಶರಣರು ಮೆಟ್ಟನಿಂತ ಭೂಮಿ ಪರಮ ಪಾವನ ಎಂಬುದು ಇಂದೆನಗೆ ನಿಮ್ಮ ಶರಣರಿಂದಲೇ ಅರಿಯಲು ಸಾಧ್ಯವಾಯಿತ್ತಯ್ಯಾ ಕಪಿಲಸಿದ್ಧಮಲ್ಲಿ ಕಾರ್ಜುನಾ.

**1375**

**ಜಲದಲ್ಲಿ ಉದಯಿಸಿ ಮತ್ತೆ ಜಲವು ತಾನಲ್ಲ ಜಲವೆಂದಿಪ್ಪುದೀ ಲೋಕವೆಲ್ಲಾ**
**ಪರಮಗುರು ಬಸವಣ್ಣ ಜಗವ ಪಾಲಿಸ ಬರಲು**
**ಎನ್ನ ಪರಿಭವದ ದಂದುಗ ಹರಿಯಿತ್ತಯ್ಯಾ,**
**ಆ ಸುದ್ದಿಯನರಿಯದೆ ಅನೇಕ ಜಡರುಗಳೆಲ್ಲ ಬೇಕಾದ ಪರಿಯಲ್ಲಿ ನುಡಿಯುತ್ತಿಹರು.**
**ಸತ್ತ ಪ್ರಾಣಿಯನೆತ್ತಿ ಒಪ್ಪಿಪ್ಪ ನಿಶ್ಚಯವು ಮರ್ತ್ಯದವರಿಗುಂಟೆ ಶಿವಗಲ್ಲದೆ ?**
**ಶಿವಗುರು ಬಸವಣ್ಣ ಬಸವಗುರು ಶಿವನಾಗಿ,**
**ದೆಸೆಗೆಟ್ಟ ದೇವತಾಪಶುಗಳಿಗೆ ಪಶುಪತಿಯಾದನು.**
**ಬಸವಣ್ಣನ ನೆನಹು ಸುಖ ಸಮುದ್ರವಯ್ಯಾ ! ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ,**
**ಬಸವಣ್ಣನ ತೋರಿದಿರಾಗಿ ಬದುಕಿದೆನಯ್ಯಾ ಪ್ರಭುವೇ.**

ಜಲಬಿಂದುವಿನಲ್ಲಿಯೇ ಹುಟ್ಟಿದ ದೇಹ ಮತ್ತೆ ಆ ಜಲ ತಾನಲ್ಲ. ಇದು ವಿಚಿತ್ರ. ಮುತ್ತು ಹೇಗೆ ಜಲದಲ್ಲಿ ಹುಟ್ಟಿ ಜಲ ತಾನು ಆಗಿಲ್ಲವೋ ಹಾಗೆಯೇ ಜಲಬಿಂದುವೆ ತಂದೆಯ ಮೂಲಕ ಗರ್ಭದಲ್ಲಿ ಸೇರಿ ರಕ್ತ , ಮೂಳೆ, ಮಾಂಸ, ಮಜ್ಜ, ಮೇದಸ್ಸು ಆಗಿ ಇವು ಯಾವೂ ಚೆಲ್ಲದಂತೆ ಸುಂದರವಾದ ಚರ್ಮದ ಕವಚವಾಗಿ ಗರ್ಭದಲ್ಲಿರುವ ಜಲದ ಚೀಲದಲ್ಲಿ ತೇಲಾಡುತ್ತ ಜಲವೇ ಆಗಿದೆ. ಆದರೂ ಲೋಕಕ್ಕೆ ಜಲದ ಕಲ್ಪನೆ ಇಲ್ಲ ಜಲವನ್ನು ಜಲವೆಂದೇ ತಿಳಿದಿದೆ.

ಜಗದೀಶನನ್ನು ಹೊತ್ತು ಕೊಂಡು ಜಗವ ಪಾಲಿಸಲು ಹೊರ ಬಂದ ಪರಮಗುರು ತಾನೆಂದು ಜಲ ತಿಳಿದಿಲ್ಲ. ಇಡೀ ಬ್ರಹ್ಮಾಂಡವನ್ನು ಜಲದಿಂದಲೇ ಸೃಷ್ಠಿಮಾಡಿ ಆ ಜಲವೇ

ಜಗದೀಶನನ್ನು ಹೊತ್ತುಕೊಂಡು ತನುವಾಗಿ ಹೊರಬಂದಿದೆ.

ಪರಮಗುರು ಜಗವ ಪಾಲಿಸಲು ಬಸವಣ್ಣನಾಗಿ ಬಂದು ಜಲದ ದಂದುಗವನ್ನು ಹರಿದ ಈ ಸುದ್ದಿಯನ್ನು ಜಗದಲ್ಲಿರುವ ಜಡರುಗಳೆಲ್ಲ ತನಗೆ ಬೇಕಾದ ಪರಿಯಲ್ಲಿ ನುಡಿಯುತ್ತಿರುವರು.

ಸತ್ತ ಪ್ರಾಣಿಯನೆತ್ತಿ ಒಪ್ಪಿಪ್ಪ ನಿಶ್ಚಯವು ಮರ್ತ್ಯದವರಿಗುಂಟೆ ಶಿವಗಲ್ಲದೇ? ಜಲದಲ್ಲಿ ಜೀವವಿಲ್ಲ. ಸತ್ತ ಜಲದಲ್ಲಿ ತಾನಿದ್ದು ಅದಕ್ಕೆ ಜೀವ ಕಳೆ ತುಂಬಿ ಗರ್ಭಕ್ಕೆ ಚೆಲ್ಲಿದ ಶಿವನ ಈ ನಿಶ್ಚಯವು ಮರ್ತ್ಯದವರಿಗುಂಟೆ ಶಿವಂಗಲ್ಲದೆ.ಮಶಿವಗುರು ಬಸವಣ್ಣ ಬಸವಗುರು ಶಿವನಾಗಿ ದೆಸೆಗೆಟ್ಟ ದೇಶದ ದೇವತಾಪಶುಗಳಿಗೆ ಪಶುಪತಿಯಾದನು. ಬಸವಣ್ಣನ ನೆನಹು ಪರಮಸುಖದ ಸಮುದ್ರವಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ಬಸವಣ್ಣನನ್ನು ನೀವು ಎನಗೆ ತೋರಿದಿರಾಗಿ ನಾನು ಬದುಕಿದೆನಯ್ಯಾ ಪ್ರಭುವೇ.

**1376**

**ನಿಶ್ಚಲ ಶರಣರ ಮನೆಯಂಗಳದಲ್ಲಿ**
**ಅಷ್ಟಾಷಷ್ಟಿ ತೀರ್ಥಂಗಳು ನೆಲಸಿಪ್ಪವಯ್ಯಾ**
**ನೀನು ಇನಿಸುವೆರಸಿ ಒಲಿದಲ್ಲಿ ನೆಲಸಿಪ್ಪವಯ್ಯಾ**
**ಕಪಿಲಸಿದ್ಧ ಮಲ್ಲಿನಾಥಯ್ಯಾ .**

ಮನದಿಂದಾಗಿ ಸಕಲ ದೇಹಗಳಿಗೂ ಚಲನೆಯಿದೆ. ಮನ ಗಾಳಿಯಂತೆ ತಾನಿದ್ದ ದೇಹವನು ತನಗೆ ಬೇಕಾದ ಎಡೆಗೆ ಸುತ್ತಾಡುತ್ತಾ ದೇಹದ ಮೂಲಕ ತನಗೆ ಬೇಕಾದ ಸುಖವನ್ನು ದೇಹದೊಂದಿಗೆ ತಾನೂ ಪಡೆಯುತ್ತದೆ. ದೇಹದಲ್ಲಿ ದೇವರಿರುವುದರಿಂದ ದೇಹವೇ ದೇವಾಲಯವಾಗಿದೆ. ಮನ ದೇಹದಲ್ಲಿದ್ದ ದೇವರನ್ನು ಅರಿಯದ ಕಾರಣ ದೇವರನ್ನು ಹೊತ್ತು ಕೊಂಡು ದೇಹದೊಂದಿಗೆ ಪುಣ್ಯಕ್ಷೇತ್ರಗಳಿಗೆ ಅಲೆಯುತ್ತದೆ. ಸಕಲ ತೀರ್ಥಂಗಳು ದೇವರಿದ್ದ ದೇಹದಲ್ಲಿಯೇ ನೆಲೆಸಿವೆ ಎಂದು ಮನಕ್ಕೆ ಗೊತ್ತಿಲ್ಲ.

ಸಿದ್ಧರಾಮ ಶಿವಯೋಗಿಗಳು ದೇಹದಲ್ಲಿಯೇ ಇದ್ಧ ದೇವರನ್ನು ಒಲಿಸಿಕೊಂಡವರು. ಅವರಿದ್ದ ನೆಲೆಯನ್ನೂ ಅರಿತವರು. ಹೀಗಾಗಿ ದೇಹವನ್ನು ಆವರಿಸಿದ ಮನಕ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಒಲಿದರೆ ಸಾಕು ಆ ದೇಹದಲ್ಲಿಯೇ ಸಕಲ ತೀರ್ಥಂಗಳು ನೆಲೆಸಿವೆ ಎಂದು ಮನಕ್ಕೆ ಗೊತ್ತಾಗುತ್ತದೆ ಅದು ಘನಮನವಾಗುತ್ತದೆ.

**1377**

**ಬಸವಣ್ಣನ ಮನೆಯ ಸ್ವಾನಂದ ನೋಡಿದೆಡೆ, ಎನ್ನ ಮನ ಬೇಸರವಾಗದೆ**
**ಶಿವದಾಸನೆಂದು ಜೀವನ್ಮುಕ್ತನೆಂದು ಹೊಗಳುವೆನಯ್ಯಾ**
**ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನ ಪ್ರಭುವೆ.**

ಬಸವಣ್ಣನ ಮಹಾಮನೆಯಲ್ಲಿರುವ ಶ್ವಾನವನ್ನು ನೋಡಿದರೆ ಎನ್ನ ಮನಸ್ಸು ಬೇಸರವಾಗುತ್ತದೆ. ಅದನ್ನು ನಾನು ನಾಯಿ ಎಂದು ಕರೆಯಲಾರೆ. ಏಕೆಂದರೆ ಅದು ಸಾಕ್ಷಾತ ಶಿವದಾಸನಾಗಿದೆ ಜೀವನ್ಮುಕ್ತನಾಗಿದೆ.

ಬಸವಣ್ಣನೇ ಶಿವನಾದ ಕಾರಣ ಆತನ ಮಹಾಮನೆಯಲ್ಲಿರುವ ನಾಯಿಯನ್ನು ನೋಡಿ ನನಗೆ ಸಂತೋಷವಾಗುತ್ತದೆ. ಏಕೆಂದರೆ ಅದು ಶಿವನದಾಸನಾಗಿದೆ, ಅದರ ಜೀವನ

ಮುಕ್ತಿಯಾಯಿತೆಂದು ನಾನು ಹೊಗಳುವೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನ ಪ್ರಭುವೆ.

**1378**

**ಅಯ್ಯಾ ನಿಮ್ಮ ಶರಣರಲ್ಲದವರ ಮನೆ ಕೆಮ್ಮನೆ ಕಂಡಯ್ಯಾ.**
**ನಿಮ್ಮ ಶರಣರ ಮನೆ ನೆರೆವನೆ ನೋಡಾ ಎನಗೆ .**
**ಸಿರಿಯಾಳ ಮನೆಗಟ್ಟಿ ಬೇರೂರಿಗೆ ಒಕ್ಕಲು ಹೋದ .**
**ದಾಸಿಮಯ್ಯ ಮನೆಗಟ್ಟಿ ವ್ಯವಹಾರನಾಗಿ ಹೋದ .**
**ಸಿಂಧು ಬಲ್ಲಾಳ ಮನೆಗಟ್ಟಿ ಕೈಕೂಲಿಕಾರನಾಗಿ ಹೋದ .**
**ಗಂಗೆವಾಳುಕರು ಮನೆಗಟ್ಟಿ ಲಿಂಗದ ಹೊಲಬವರಿಯದೆ ಹೋದರು .**
**ಇವರೆಲ್ಲರು ಮನೆಯಮಾಡಿ ಮಹದ್ವಸ್ತುವನರಿಯದೆ,**
**ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ವೆಂಬ ಪದವಿಗೊಳಗಾದರು .**
**ನಿಮ್ಮ ಸಂಗನಬಸವಣ್ಣ ಬಂದು ಕಲ್ಯಾಣದಲ್ಲಿ ಮನೆಯ ಕಟ್ಟಿದಡೆ ,**
**ಮರ್ತ್ಯಲೋಕವೆಲ್ಲವು ಭಕ್ತಸಾಮ್ರಾಜ್ಯವಾಯಿತ್ತು .**
**ಆ ಮನೆಗೆ ತಲೆವಾಗಿ ಹೊಕ್ಕವರೆಲ್ಲರು ನಿಜಲಿಂಗ ಫಲವ ಪಡೆದರು .**
**ಆ ಗೃಹವ ನೋಡಬೇಕೆಂದು ನಾನು ಹಲವು ಕಾಲ ತಪಿಸಿದ್ದೆನು .**
**ಕಪಿಲಸಿದ್ಧ ಮಲ್ಲಿನಾಥಾ , ನಿಮ್ಮ ಶರಣ ಸಂಗನ ಬಸವಣ್ಣನ ಮಹಾಮನೆಗೆ**
**ನಮೋ ನಮೋ ಎಂದು ಬದುಕಿದೆನು.**

ಶರಣರಲ್ಲದವರ ಮನೆ ಅದು ಮನೆಯಲ್ಲ ಕೆಮ್ಮನೆ. ಎಲ್ಲರಿಗೂ ಮನೆ ಕಟ್ಟುವ ಆಸೆ, ಶರಣರಿಗೆ ಇದ್ದ ಮನೆಯನ್ನೆ ಕೈಲಾಸವಾಗಿಸುವ ಆಸೆ. ಕಾಯವೇ ಕೈಲಾಸವೆಂದು ಶರಣರಿಗೆ ಮಾತ್ರ ತಿಳಿದಿದೆ. ಉಳಿದವರು ಕಾಯಕ್ಕೆ ಮನೆಯನ್ನು ಕಟ್ಟಲು ಹೋದರು ಕಾಯವನ್ನು ಕೈಲಾಸವಾಗಿಸುವುದನ್ನೇ ಮರೆತರು. ಇಂತಹ ಲೋಕ ಕಟ್ಟುವ ಮನೆ ಎನಗೆ ಬೇಡ; ಶರಣರ ಮನೆಯ ನೆರವನ್ನು ಎನಗೆ ಆಸರೆಯಾಗಿ ಕೊಟ್ಟು ಎನ್ನನ್ನು ಸಲಹು ತಂದೆ ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧನಲ್ಲಿಕಾರ್ಜುನನನ್ನು ಪ್ರಾರ್ಥಿಸಿದ್ದಾರೆ. ಈತ ಕಾಯದಲ್ಲಿ ಇದ್ದಾತ ಕಾಯವನ್ನು ತನ್ನಂತೆ ಮಾಡಿಕೊಳ್ಳಲು ಕಾಯಕ್ಕೆ ಜನ್ಮನೀಡಿ ಕಾಯವನ್ನು ಆವರಿಸಿದ ಮನೆಯನ್ನು ಕೈ ಹಿಡಿದು ನಡೆಸುವಾತ, ಹೀಗಾಗಿ ಮನೆಯ ದೇವರನ್ನೇ ಪ್ರಾರ್ಥಿಸಿದ್ದಾರೆ.

ಸಿರಿಯಾಳ ಮನೆ ಕಟ್ಟಿ ಬೇರೆ ಊರಿಗೆ ಒಕ್ಕಲು ಹೋದ. ದಾಸಿಮಯ್ಯ ಮನೆ ಕಟ್ಟಿ ವ್ಯವಹಾರಿಕನಾಗಿ ಹೋದ ಸಿಂಧು ಬಲ್ಲಾಳ ಮನೆಕಟ್ಟಿ ಕೈ ಕೂಲಿಕಾರನಾಗಿ ಹೋದ. ಗಂಗೆವಾಳುಕರು ಮನೆಕಟ್ಟಿ ಅಂಗದಲ್ಲಿಯೆ ಸಂಗಮವಾದ ಅರಿವಿನ ಲಿಂಗದ ಹೊಲಬನರಿಯದೆ ಹೋದರು. ಇವರೆಲ್ಲರು ಮನೆಯ ಮಾಡಿ ಕಾಯದಲ್ಲಿರುವ ಮಹತ್ವವನ್ನು ಅರಿಯದೇ ಹೋದರು ಆದರೂ ಕೂಡ ಸಾಲೋಕ್ಯ , ಸಾಮಿಪ್ಯ ಸಾರೂಪ್ಯ ಸಾಯುಜ್ಯವೆಂಬ ಪದವಿಗೆ ಒಳಗಾದರು.

ಸಂಗನ ಬಸವಣ್ಣ ಅವರಂತಲ್ಲ. ಈತ ಕಾಯವೆಂಬ ಕಲ್ಯಾಣದಲ್ಲಿ ಮನೆಯ ಕಟ್ಟಿದ ಮರ್ತ್ಯಲೋಕವೆಲ್ಲವೂ ಭಕ್ತಿ ಸಾಮ್ರಾಜ್ಯವಾಯಿತು. ಕಾಯವೆಂಬ ಮನೆಗೆ ತಲೆಬಾಗಿ ಸಂಪೂರ್ಣ ಶರಣುಹೋಗಿ ಶರಣು ಶರಣಾರ್ಥಿ ಎಂದು ಕಾಯವೆಂಬ ಮನೆಯನ್ನು ಹೊಕ್ಕು ಅಲ್ಲಿಯೇ ಸಂಗಮವಾದ ನಿಜಲಿಂಗವನ್ನು ಪಡೆದರು.

ಬಸವಣ್ಣನ ಮಹಾಮನೆಯನ್ನು ನೋಡಬೇಕೆಂದು ನಾನು ಹಲವು ಕಾಲ ತಪಸಿದ್ದೆನು. ಕಪಿಲಸಿದ್ಧ ಮಲ್ಲಿನಾಥ ನಿಮ್ಮನ್ನು ಕಂಡ ನಿಮ್ಮ ಶರಣ ಸಂಗನ ಬಸವಣ್ಣನ ಮಹಾಮನೆಗೆ ನಮೋ ನಮೋ ಎಂದು ಬದುಕಿದೆನು ತಂದೆ.

**1379**

**ಮನೆಯ ನೋಡಿ ಮನ ಹೊಗುವಂತಾಗಬೇಕು.**
**ಜನ ನೋಡಿದಡೆ ಕೀರ್ತಿವಂತರಾಗಬೇಕು.**
**ನಮ್ಮ ಸಂಗನ ಮನೆ ಹೊಕ್ಕಡೆ,**
**ಮನವಳಿದು ಮನೋರಥ ಬಸವಣ್ಣನಂತಾಗಬೇಕು ಕಾಣ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯ ಸಾಕ್ಷಾತ್ ಶಿವನು ಇದ್ದ ಕೈಲಾಸ ಇಂತಹ ಕಾಯವನ್ನು ನೋಡಿ ಆ ಕಾಯದಲ್ಲಿ ಇರುವ ಶಿವನಿಗೆ ಶರಣು ಹೋಗುವಂತೆ ಮನಕ್ಕೆ ಆಸೆಯಾಗಬೇಕು. ಇಂತಹ ಪರಿಪೂರ್ಣವಾದ ಕಾಯವನ್ನು ಜನ ನೋಡಿದಡೆ ಕೀರ್ತಿವಂತರಾಗುತ್ತಾರೆ ನಮ್ಮ ಸಂಗನ ಮನೆ ಹೊಕ್ಕಡೆ ಮನ ವಳಿದು ಮನೋಹರ ಬಸವಣ್ಣನಂತಾಗಬೇಕು ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಕಾಯದಲ್ಲಿಯೇ ಸಂಗಮವಾದ ಸಂಗಯ್ಯನ ಸಂಗಮಾಡಿದಾತ ಬಸವಣ್ಣ ಹೀಗಾಗಿ ಆತನ ಮನವಳಿದು ಘನಮನವಾಯಿತ್ತು. ಲೋಕದ ಕಾಯಗಳಿಗೆ ಕಾಯದಲ್ಲಿಯೇ ಸಂಗಮವಾದ ಅರಿವಿನ ಸಂಗಯನನ್ನು ಅರಿತರಿತು ಆ ಅರಿವೇ ತಾನಾಗುವ ಸೂತ್ರವನ್ನು ಬಸವಣ್ಣನವರು ಲೋಕದ ಕಾಯಗಳ ಒಳಿತಿಗಾಗಿ ವಚನಗಳ ಮೂಲಕ ಬರೆದಿಟ್ಟರು.

**1380**

**ಮನೆ ನೋಡಿ ಮರೆದೆನಯ್ಯ ಮಹತ್ವಗಳ ;**
**ಮನೆ ನೋಡಿ ಮರೆದೆನಯ್ಯ ಎನ್ನ ಮನೆಯ ;**
**ಮನೆ ನೋಡಿ ಮರೆದೆನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.**
**ನಡೆಸಿದ ಹೋಮನೇಮ ಕೆರೆದೋಟ ಕೆಲಸಂಗಳ.**

ಕೆರೆ ತೋಟ ಹೋಮ, ನೇಮದ ಮನೋಮಯವಾದ ಲೋಕದ ಕೆಲಸದಲ್ಲಿ ನಾನು ಭಾಗಿಯಾಗಿದ್ದೆ. ಇಂತಹ ಅಜ್ಞಾನದಲ್ಲಿ ನಾನು ಭಾಗಿಯಾಗಿದ್ದೆನಲ್ಲ ಎಂದು ನನ್ನ ತನುವೆಂಬ ಮನೆ ನೋಡಿ ನಾನು ಅರಿತೆ. ಅರಿತರಿತು ಅ ಅರಿವೇ ನಾನಾಗಿ ನನ್ನ ಅಜ್ಞಾನದ ಕೆಲಸಗಳನ್ನು ನಾನು ಮರೆತು ಹೋದೆ. ಎಂತಹ ಮಹತ್ವವಾದ ಮನೆಯಿದು ! ಹೀಗಾಗಿಯೆ ಬಸವಣ್ಣ ಮಹದೇವನಿದ್ದ ಅರಿವಿನ ಮನೆಯನ್ನು ಮಹಾ ಮನೆಯೆಂದು ಕರೆದ. ಇಂತಹ ಮಹಾಜ್ಞಾನದ ತನುವೆಂಬ ಮನೆಯನ್ನು ನೋಡಿ, ಈ ಮನೆಯಿಂದಲೇ ನಡೆಸಿದ ಹೋಮ ನೇಮ ಕೆರೆ, ತೋಟ,ಕೆಲಸಂಗಳನ್ನು ನಾನು ಮರೆತು ಹೋದೆ.

**1381**

**ನಿಮ್ಮ ಶಕ್ತಿ ಆತನಲ್ಲಿಪ್ಪುದು ಕಂಡಯ್ಯಾ,**

**ಆತನ ಪ್ರಾಣ ನಿಮ್ಮಲ್ಲಿಪ್ಪುದು.**
**ನಿಮ್ಮ ತಮ್ಮ ಭೇದವನಾರು ಬಲ್ಲರು ಹೇಳಯ್ಯಾ,**
**ಕಪಿಲಸಿದ್ಧಮಲ್ಲಿನಾಥಯ್ಯಾ,**
**ನಿಮ್ಮ ಶರಣ ಬಸವಣ್ಣನ ಅನುವ ನೀವೆ ಬಲ್ಲಿರಿ.**

ನಿಮ್ಮ ಶಕ್ತಿ ಬಸವಣ್ಣನಲ್ಲಿ ಇಪ್ಪದು ಪರಮಾತ್ಮನೇ. ಆತನ ಪ್ರಾಣ ನಿಮ್ಮಲ್ಲಿ ಇಪ್ಪುದು ಪರಮಾತ್ಮನೆ. ಹೀಗಿರುವಾಗ ನಿಮ್ಮ ಮತ್ತು ಬಸವಣ್ಣನ ಭೇದವನ್ನು ಯಾರು ಬಲ್ಲರು ಹೇಳಯ್ಯಾ? ಕಪಿಲಸಿದ್ಧಮಲ್ಲಿನಾಥಯ್ಯಾ ನೀನು ಒಡಲಲ್ಲಿಯೇ ಇದ್ದು ಒಡಲ ಸೋಂಕದೇ ಒಡಲನ್ನು ಬೆಳಗುವ ಪರಮಾತ್ಮ ನೀನು. ಹೀಗಿರುವಾಗ ನಿಮ್ಮ ಶರಣ ಬಸವಣ್ಣನ ಅನುವ ನೀವೆ ಬಲ್ಲಿರಿ.

**1382**

**ಕೇಳು ಕೇಳಾ ಎಲೆ ಅಯ್ಯಾ , ಆದಿ ಅನಾದಿ ಇಲ್ಲದಂದು ಬಸವಣ್ಣನೆ ಭಕ್ತ ;**
**ನಾದ ಬಿಂದು ಕಳೆಗಳಿಲ್ಲದಂದು ನೀನೆ ಜಂಗಮ.**
**ಶಿವ - ಶಕ್ತಿಗಳುದಯವಾಗದ ಮುನ್ನ ಬಸವಣ್ಣನೆ ಭಕ್ತ ;**
**ಸುರಾಳ - ನಿರಾಳವೆಂಬ ಶಬ್ದ ಹುಟ್ಟದ ಮುನ್ನ ನೀನೆ ಜಂಗಮ.**
**ಈ ಉಭಯ ಭಾವದಲ್ಲಿ ಬೇದವುಂಟೆ ಕಪಿಲಸಿದ್ಧಮಲ್ಲಿಕಾರ್ಜುನಾ ?**
**ಬಸವಣ್ಣನಾರೆಂಬುದ ನಿಮ್ಮಲ್ಲಿ ನೀವೆ ತಿಳಿದು ನೋಡಿ ಕೃಪೆಮಾಡಾ ಪ್ರಭುವೆ.**

ಕೇಳು ಕೇಳಾ ಎಲೆ ಅಯ್ಯಾ ಪರಮಾತ್ಮನೇ ಆದಿ - ಅನಾದಿ ಇಲ್ಲದಂದು ಅಂಗದಲ್ಲಿಯೇ ಸಂಗಮವಾದ ನಿನ್ನನ್ನು ಕಂಡುಹಿಡಿದು ನಿನಗೆ ಶರಣುಹೋದಾತ ಬಸವಣ್ಣ; ಹೀಗಾಗಿ ನಿನಗೆ ಆತ ಭಕ್ತ. ನಾದ - ಬಿಂದು - ಕಳೆಗಳು ಇಲ್ಲದಂದು ನೀನೆ ಜಂಗಮ. ನೀನು ಶಿವ ಕಾಯವನ್ನು ಸೃಷ್ಟಿಮಾಡಿ ನಿನ್ನನ್ನು ತಿಳಿಯದೆ ಮನವನ್ನು ಸೃಷ್ಟಿಮಾಡಿದೆ ಹೀಗಾಗಿ ಕಾಯವನ್ನು ಆವರಿಸಿದ ಮನವೇ ಶಕ್ತಿ .

ಈ ಶಿವ ಶಕ್ತಿ ಏನೆಂದು ತಿಳಿಯದ ಮುನ್ನ ಬಸವಣ್ಣನೆ ನಿನಗೆ ಭಕ್ತ. ಸುರಾಳ ನಿರಾಳ ಎಂಬ ಶಬ್ದ ಹುಟ್ಟದ ಮುನ್ನ ನೀನೇ ಜಂಗಮ. ಈ ಉಭಯ ಭಾವದಲ್ಲಿ ಭೇದವುಂಟೆ ಕಪಿಲಸಿದ್ಧಮಲ್ಲಿಕಾರ್ಜುನಾ? ಬಸವಣ್ಣನು ಯಾರೆಂಬುದನ್ನು ನಿಮ್ಮಲ್ಲಿ ನೀವೆ ತಿಳಿದು ನೋಡಿ ಎನಗೆ ಕೃಪೆಮಾಡು ಪ್ರಭುವೆ ಎಂದು ಸಿದ್ಧರಾಮ ಶಿವಯೋಗಿಗಳು ಕಲ್ಯಾಣಕ್ಕೆ ತಮ್ಮನ್ನ ಕರೆದುಕೊಂಡು ಬಂದ ಪ್ರಭುಗಳನ್ನು ಪ್ರಾರ್ಥಿಸಿದ್ದಾರೆ.

**1383**

**ಆದಿಯ ಮೂರ್ತಿಯಲ್ಲ, ಅನಾದಿಯ ಬಚ್ಚಬರಿಯ ಶೂನ್ಯವಲ್ಲ**
**ಅಂಗವಿದ್ದು ಅಂಗವಿಲ್ಲದ ಸಂಗ ಘನಪದದಲ್ಲಿ ವೇದ್ಯವಾದ**
**ಮರುಳಶಂಕರದೇವರ ನಿಲವ ಪ್ರಭು ಬಸವಣ್ಣನಿಂದ**
**ಕಂಡು ಬದುಕಿದೆನು ಕಾಣಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಗುರುದೇವನು ಆದಿ ಮೂರ್ತಿಯೂ ಅಲ್ಲ ಅನಾದಿಯ ಬಚ್ಚ ಬರಿಯ ಶೂನ್ಯನು ಕೂಡ ಅಲ್ಲ. ಅಂಗವಿದ್ದು ಅಂಗದೊಂದಿಗೆ ಸಂಗವನ್ನೇ ಮಾಡದ ಘನಪದನು. ಇಂತಹ ದಿವ್ಯವಾದ

ಮಾರ್ತಿಯನ್ನು ಮರುಳ ಶಂಕರ ದೇವರಲ್ಲಿ ಪ್ರಭುದೇವ ಮತ್ತು ಬಸವಣ್ಣನಿಂದಾಗಿ ಕಂಡು ಬದುಕಿದೆನು ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧಮಲ್ಲಿಕಾರ್ಜುನನಾನೊಂದಿಗೆ ಮಾತನಾಡಿದ್ದಾರೆ. ಗುರುದೇವನು ಶಬ್ದಕ್ಕೆ ನಿಲುಕುವವನಲ್ಲ. ಏಕೆಂದರೆ ಅವನಿಗೆ ಕಾಯವಿಲ್ಲ. ಹೀಗಾಗಿ ಅವನನ್ನು ಆದಿ ಅನಾದಿಯಿಂದಲೂ ಅತ್ತತ್ತ ಬಯಲು, ಶೂನ್ಯ ಎಂದು ಕೂಡ ಶಬ್ದದಿಂದ ಕರೆಯುತ್ತಾರೆ. ಆದರೆ ಅವನು ಹಾಗೆ ಕೂಡ ಅಲ್ಲ ಅಂಗವಿದ್ದರೂ ಕೂಡ ಅಂಗದಲ್ಲಿಯೆ ಇದ್ದು ಅಂಗದ ಸಂಗ ಮಾಡಿಲ್ಲ. ಅಂಗವನ್ನು ಸದಾ ಬೆಳಗಿಂಗೆ ಬೆಳಗಾಗಿ ಬೆಳಗುವ ಘನಪದನು ಆತ. ಅಂತಹ ಗುರುದೇವನನ್ನು ಕಲ್ಯಾಣದಲ್ಲಿರುವ ಮರುಳ ಶಂಕರ ದೇವರಲ್ಲಿ ಪ್ರಭುದೇವರು ಕಂಡು ಬಸವಣ್ಣನಿಗೆ ಹೇಳಿದರು. ಅವರಿಬ್ಬರ ಮೂಲಕ ಕಂಡು ನಾನು ಬದುಕಿದೆನು ಕಪಿಲಸಿದ್ಧ ಮಲ್ಲಿಕಾರ್ಜುನಾ.

**1384**

**ಜ್ಞಾನವೆಂದು ವಿವಾದಿಸುವ ಅಣ್ಣಗಳಿರಾ, ಕೇಳಿರಯ್ಯಾ**
**ಜ್ಞಾನವೆಂದಡೆ ಮಹತ್ವಗಳಮಾಡಿ ಮರೆದುದು ಜ್ಞಾನವೆ? ಅಲ್ಲ**
**ಜ್ಞಾನವೆಂದಡೆ ಸ್ವರ್ಗದ ವಾರ್ತೆಯ ಕೇಳಿ,**
**ಕೀರ್ತಿಯ ಹಬ್ಬಿದುದು ಜ್ಞಾನವೇ ? ಅಲ್ಲಲ್ಲ.**
**ಜ್ಞಾನವೆಂದಡೆ ತತ್ಕಾಲಕ್ಕಾಗುವ ಸುಖದುಃಖಗಳ**
**ಹೇಳಿದುದು ಜ್ಞಾನವೇ ? ಅಲ್ಲಲ್ಲ. ಇವೆಲ್ಲಾ ಸಾಧನೆಯ ಮಾತು**
**ಅಘೋರಮುಖದಿಂದ ಹುಟ್ಟಿದ ಮಂತ್ರಂಗಳೆಲ್ಲಾ**
**ಜಪಿಸಿದಲ್ಲಿ ಮಹತ್ವಗಳಾದವು.**
**ಸೂಕ್ಷ್ಮತಂತ್ರವ ಗಣಿಸಿದಲ್ಲಿ ಸ್ವರ್ಗದ ವಾರ್ತೆಯ ಹೇಳಿದನು.**
**ಪ್ರಸಂಗಚಿಂತಾಮಣಿಯ ನೋಡಿ ಸುಖದುಃಖಂಗಳ ಹೇಳಿದನು.**
**ಇವೆಲ್ಲಾ ಪರಸಾಧನೆಯಯ್ಯಾ, ನಿನ್ನರಿವು ಕೈಕರಣವಾಗಿರೆ ದೇಹವೇಳಿದಡೇನು**
**ದೇಹ ಧರಿಸಿ ಬಂದಡೇನು ? ಎಲೆ ಅಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜ್ಞಾನವೆಂದರೆ ಪವಾಡಗಳನ್ನು ಮೆರೆಯುವುದಲ್ಲ. ವಾದ - ವಿವಾದಗಳಿಗೆ ಆಸ್ಪದ ಕೊಡುವುದು ಜ್ಞಾನವಲ್ಲ. ಜ್ಞಾನವೆಂದರೆ ಸ್ವರ್ಗದ ಸುದ್ದಿಯನ್ನು ಹೇಳುವುದಲ್ಲಟಿ ತತ್ಕಾಲಕ್ಕೆ ಆಗುವ ಸುಖದುಃಖಗಳ ನಿವಾರಣೆಗೆ ಉಪಾಯ ಒದಗಿಸುವುದು ಕೂಡ ಜ್ಞಾನವಲ್ಲ. ಮಠ - ಪೀಠದ ಮೇಲೆ ಕುಳಿತು ಕಾವಿ ಧರಿಸಿ ಉಪನ್ಯಾಸಮಾಡುವುದು ಕೂಡ ಜ್ಞಾನವಲ್ಲ. ಅಘೋರ ಮುಖದ ಮೂಲಕ ಹುಟ್ಟಿದ ಮಂತ್ರಗಳ ಜಪಿಸುವುದು ಕೂಡ ಜ್ಞಾನವಲ್ಲ. ಸೂಕ್ಷ್ಮತಂತ್ರವ ಗಣಿಸಿ ಉಪ ಜೀವನಕ್ಕಾಗಿ ಮನುಷ್ಯ ಸ್ವರ್ಗದ ವಾರ್ತೆಯನ್ನು ಹೇಳಿದನು, ಪ್ರಸಂಗ ಚಿಂತಾಮಣಿಯ ನೋಡಿ ಸುಖದುಃಖಂಗಳನ್ನು ಹೇಳಿದನು, ಇವೆಲ್ಲಾ ಪರಸಾಧನೆಯೆ ಹೊರತು ಸ್ವಸಾಧನೆಯಲ್ಲ.

ಜ್ಞಾನವೆಂದಡೆ ಕಾಯ ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೆ ಸಂಗಮವಾದ ಜ್ಞಾನಕ್ಕಾಗಿ ಸ್ವಯಂಕೃಷಿಯಲ್ಲಿ ತೊಡಗಬೇಕು, ಜ್ಞಾನ ಕಾಯದಲ್ಲಿ ಕರಗತವಾಗಿದೆ. ಕಾಯಕ್ಕೂ ಕಾಯವನ್ನು ಆವರಿಸಿದ ಮನಕ್ಕೂ ಕಾಣದೆ ಕಾಯದಲ್ಲಿಯೇ ಕರಗತವಾಗಿದೆ.

ಕಾಯ ಉಪಜೀವನಕ್ಕಾಗಿ ಜನ್ಮ ತಳಿದಿಲ್ಲ. ಉಪ ಜೀವನದ ಸುಖ ಸುಖವೂ ಅಲ್ಲ ದುಃಖ

ದುಃಖವೂ ಅಲ್ಲ . ಆದರೂ ಮನಕ್ಕು ಕಾಯಕ್ಕು ಜ್ಞಾನದ ಸುಳಿವು ಗೊತ್ತಾಗದೆ ಕಾಯದ ಆಯುಷ್ಯವನ್ನು ವ್ಯರ್ಥವಾಗಿ ಕಳೆಯುತ್ತದೆ. ಕಾಯ ಧರಿಸಿ ಬಂದರೇನು ಜ್ಞಾನ ದೇವನು ವಾಸ ಮಾಡಿದ ಕಾಯ ಕೈಲಾಸವೆಂದು ಕಾಯ ಅರಿಯದಿದ್ದರೆ ವ್ಯರ್ಥವಲ್ಲವೇ ? ಕಾಯದ ಜೀವನವನ್ನು ಕಾಯವೇ ಕಂಡುಕೊಳ್ಳಬೇಕು ಕಾಯದಲ್ಲಿಯೆ ಸಂಗಮವಾದ ಜ್ಞಾನದೇವನು ಸದಾ ಕಾಯಕ್ಕೆ ಕಾಯವನ್ನು ಆವರಿಸಿದ ಮನಕ್ಕೆ ಸಹಕರಿಸುತ್ತಿದ್ದಾನೆ. ಕಾಯ ಮತ್ತು ಮನ ಇವೆರಡು ಕಾಯದಲ್ಲಿಯೇ ಸಂಗಮವಾದ ಜ್ಞಾನದೇವನನ್ನು ಅರಿತರಿತು ಆ ಅರಿವೇ ತಾವಾಗಬೇಕು.

**1385**

**ವಾಕ್ಸಿದ್ಧಿಯುಳ್ಳವರು ಕೋಟ್ಯಾನುಕೋಟಿ .**
**ಮನೋರಥಸಿದ್ಧಿಯುಳವರು ಕೋಟ್ಯಾನುಕೋಟಿ,**
**ಭಾವಸಿದ್ಧಿಯುಳ್ಳವರು ಕೋಟ್ಯಾನುಕೋಟಿ .**
**ನಿಮ್ಮ ಸಿದ್ಧಿಯುಳ್ಳವರು ಇಲ್ಲ ಕಂಡಯ್ಯಾ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ವಾಕ್ಸಿದ್ಧಿಯುಳವರು ಕೋಟ್ಯನುಕೋಟಿ. ಮನೋರಥ ಸಿದ್ಧಿಯುಳ್ಳವರು ಮತ್ತು ಭಾವಸಿದ್ಧಿಯುಳ್ಳವರು ಕೋಟ್ಯಾನುಕೋಟಿ ಜನ ಸಿಗುತ್ತಾರೆ. ಆದರೆ ಕಾಯದಲ್ಲಿ ಸಂಗಮವಾದ ಜ್ಞಾನವನ್ನು ಕಾಯ ಮತ್ತು ಕಾಯವನ್ನು ಆವರಿಸಿದ ಮನ ಒಲಿಸಿಕೊಳ್ಳುವ ಕೃಷಿಯಲ್ಲಿ ತೊಡಗಿದ ಕಾಯ ಸಿಕ್ಕುವುದು ವಿರಳಾತಿವಿರಳ.

ಭಾವ ಮನ ಮತ್ತು ಮಾತು ಇವು ಮೂರು ಕಾಯದಲ್ಲಿಯೇ ಸಂಗಮವಾದ ಜ್ಞಾನದೇವನಿಂದ ಜನ್ಮ ಪಡೆದು ಕಾಯದಲ್ಲಿಯೇ ವಾಸವಾಗಿವೆ. ಕಾಯ ಭಾವದಿಂದ ಮಾತಿನ ಮೂಲಕ ಮತ್ತೊಂದು ಕಾಯಕ್ಕೆ ಒಳಿತಾಗಲಿ ಎಂದು ನುಡಿದಾಗ ಆ ಕಾಯಕ್ಕೆ ಒಳಿತಾಗುತ್ತದೆ. ಇದು ಕಾಯದಲ್ಲಿದ್ದ ಕಾಯದ ಒಡೆಯ ಮತ್ತೊಂದು ಕಾಯಕ್ಕೆ ನುಡಿದ ಮಾತೇ ಹೊರತು ಅದು ತನ್ನ ಮಾತಲ್ಲ ಎಂದು ಮನ ಮತ್ತು ಕಾಯದಲ್ಲಿದ್ದ ಭಾವ ತಿಳಿಯಬೇಕು.

ನಾನು ಆಡಿದ ಮಾತಿನಿಂದ ಮತ್ತೊಂದು ಕಾಯಕ್ಕೆ ಒಳಿತಾಯಿತೆಂದು ತನ್ನ ವಾಕ್ಸಿದ್ಧಿಯೊಂದಿಗೆ ಅಹಂಕಾರ ಪಟ್ಟುಕೊಂಡರೆ ಕಾಯ ವ್ಯರ್ಥವಾಗಿ ತನ್ನ ಅಹಂಕಾರಕ್ಕೆ ತಾನೇ ತುತ್ತಾಗುತ್ತದೆ. ಜ್ಞಾನ ಕಾಯಕ್ಕೆ ಒಲಿಯದೆ ಕಾಯ ತನ್ನ ಒಂದು ಜನ್ಮವನ್ನು ವಾಕ್ಸಿದ್ಧಿ ಮನೋರಥ ಭಾವಸಿದ್ಧಿಗಾಗಿ ಕಳೆದುಕೊಳುತ್ತದೆ. ಇದನ್ನು ಕಾಯ ಮನ ಭಾವ ಸಾಕ್ಷಿಯೊಂದಿಗೆ ಸೂಕ್ಷ್ಮವಾಗಿ ಗಮನಿಸಬೇಕು.

**1386**

**ವಾಕ್ಸಿದ್ಧಿಯಿಂದ ದೋಷವುಂಟು, ವಾಕ್ಸಿದ್ಧಿಯಿಂದ ಪುಣ್ಯವುಂಟು.**
**ದೋಷದಿಂದ ಭವಕ್ಕೆ ಬೀಜ, ಪುಣ್ಯದಿಂದ ಪದಕ್ಕೆ ಬೀಜ.**
**ಇವೆಲ್ಲ ಪ್ರಳಯದಲ್ಲಿ ಅನಿತ್ಯ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ವಾಕ್ಸಿದ್ಧಿಯಿಂದ ತನಗೆ ದೋಷವುಂಟು. ತನ್ನ ವಾಕ್ಸಿದ್ಧಿಯಿಂದ ಮತ್ತೊಂದು ತನುವಿಗೆ ಪುಣ್ಯವುಂಟು. ದೋಷದಿಂದ ಭವಕ್ಕೆ ಬೀಜ, ಪುಣ್ಯದಿಂದ ಪದಕ್ಕೆ ಬೀಜ. ದೋಷ ಮತ್ತು ಪುಣ್ಯ

ಇವೆರಡೂ ಕೂಡ ಪ್ರಳಯವೇ ಆಗಿದೆ, ಅನಿತ್ಯವೂ ಆಗಿದೆ.

ಕಾಯದ ಜ್ಞಾನದಿಂದ ಕಾಯ ಜ್ಞಾನ ಕಾಯ ಎಂದು ಕರೆಯಿಸಿಕೊಳ್ಳುತ್ತದೆ. ಇಂತಹ ಕಾಯಕ್ಕೆ ಜನನವಿಲ್ಲ ಮರಣವಿಲ್ಲ. ಕಾಯಕ್ಕೆ ಜನನವೂ ಇದೆ ಮರಣವೂ ಇದೆ. ಕಾಯದಲ್ಲಿ ಸಂಗಮವಾದ ಮಹಾಜ್ಞಾನಿಗೆ ಜನನವೂ ಇಲ್ಲ ಮರಣವೂ ಇಲ್ಲ ಪಾಪವೂ ಇಲ್ಲ.

ಕಾಯವನ್ನು ಆವರಿಸಿದ ಮನ ಕಾಯದ ಜೊತೆಗೆ ಮಾಡಿದ ತನ್ನ ಗೆಳೆತನವನ್ನು ಕಳೆದುಕೊಂಡು ಕಾಯದಲ್ಲಿಯೆ ಸಂಗಮವಾದ ಮಹಾಜ್ಞಾನಿಗೆ ಶರಣು ಹೋದಾಗ ಮನ ಘನಮನವಾಗುತ್ತದೆ. ಜ್ಞಾನ ಮತ್ತು ಮನ ದೀಪ ಮತ್ತು ಬೆಳಕಿನಂತೆ ಕಾಯದಲ್ಲಿದ್ದು ಕಾಯವನ್ನು ಬೆಳಗುತ್ತದೆ. ದೀಪ ಮತ್ತು ಅದರ ಬೆಳಕು ಜ್ಞಾನದ ಬೆಳಕಾಗಿ ಕಾಯದಲ್ಲಿ ಇದೆ. ಕಾಯವೇ ಅವು ಅಲ್ಲ. ಹೀಗಾಗಿ ಕಾಯಕ್ಕೆ ಜನನ ಉಂಟು ಮರಣವುಂಟು ಕಾಯದಲ್ಲಿದ್ದ ಮಹಾಜ್ಞಾನಕ್ಕೆ ಜನನವಿಲ್ಲ, ಮರಣವಿಲ್ಲ, ಪ್ರಳಯವೂ ಇಲ್ಲ ಇದು ಅನಿತ್ಯ ಅನಿಕೇತನ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1387**

**ಚರಿತ್ರೆಗಳನೋದುವುದೇ ವಾಕ್ಸಿದ್ಧಿ ,**
**ಭವವಳಿದು ಭಾಷಣೆಯ ಮಾಡುವುದೇ ವಾಕ್ಸಿದ್ಧಿ.**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ**
**ಪಾದೋದಕ ಪ್ರಸಾದವ ಸ್ವೀಕರಿಸುವುದದೆ ವಾಕ್ಸಿದ್ಧಿ**
**ಕಂಡಯ್ಯಾ ಅಣ್ಣ ಮಡಿವಾಳ ಮಾಚಯ್ಯ.**

ಕಾಯಕ್ಕೆ ಚರಿತ್ರೆಯಿಲ್ಲ ಏಕೆಂದರೆ ಅದು ಅವನಂತ, ಅದು ಅಗಮ್ಯ ಅದರ ಚರಿತ್ರೆ ಕಥನವಲ್ಲದ ಕಥನದ ವಚನದ ಸೂತ್ರದ ಮೂಲಕ ಮಾತ್ರ ಕಳಚಿ ಬೀಳುತ್ತದೆ ಅದರ ಜನನ – ಮರಣಗಳು ನಾಶವಾಗುತ್ತವೆ. ಭಾವ ನಿರ್ಭಾವವಾಗಿ ನಿರ್ಭಾವದ ಮಾತಲ್ಲದ ಮಾತನ್ನು ಮಾತಿನ ಮೂಲಕ ಆಡಿದಾಗಲೇ ಕಾಯದ ವಾಕ್ಸಿದ್ಧಿಯಾಗುತ್ತದೆ.

ಕಾಯದಲ್ಲಿಯೇ ಸಂಗಮವಾದ ಮಹಾ ಜ್ಞಾನದೇವನ ಪಾದವನ್ನು ತೊಳೆದು, ಆತನ ಪಾದೋದಕ ಪ್ರಸಾದವನ್ನು ಕಾಯವನ್ನು, ಆವರಿಸಿದ ಮನ ಕಾಯದ ಮೂಲಕ ಸ್ವೀಕರಿಸುವುದರ ಮೂಲಕ, ಕಾಯದ ವಾಕ್ಸಿದ್ಧಿಯಾಗುತ್ತದೆ ಎಂದು ಸಿದ್ಧರಾಮ ಶಿವಯೋಗಿಗಳು ಮಡಿವಾಳ ಮಾಚಿದೇವಯ್ಯ ತಂದೆಗೆ ಕಾಯ, ಮನ, ಭಾವ ಮತ್ತು ಪಾದೋದಕ ಪ್ರಸಾದದ ಸೂತ್ರವನ್ನು ವಿವರಿಸಿದ್ದಾರೆ.

**1388**

**ಆತನ ಸುಃಖದುಃಖವೀತಗೇನು ? ಈತನ ಸುಃಖದುಃಖವಾತಗೇನು ?**
**ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ ನಿಮ್ಮ ನಿಮ್ಮ ಅರಿವ ಸಂತೈಸಿಕೊಳ್ಳಿ**
**ರಂಭೆ ಎಂದಡೆ ನಿನ್ನಂಗನೆಯಾಗಲಿಲ್ಲವು,**
**ಒಂದಿನ ಸ್ವಪ್ನದಲ್ಲಾದಡೂ ರತಿಸಲಿಲ್ಲ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ದೇವಾಲಯಕ್ಕೆ ಹೋಗಿ ಕಣ್ಣು ಮುಚ್ಚಿಕೊಂಡು ದೇವನನ್ನು ಪ್ರಾರ್ಥಿಸಿದರೆ ತನಗಾದ ದುಃಖ ನಿವಾರಣೆಯಾಯಿತೆ ? ಕಾಯದಲ್ಲಿಯೇ ಇದ್ದ ದೇವರಿಗೆ ಸುಖವಿಲ್ಲ ದುಃಖವಿಲ್ಲ.

ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ಸುಃಖಿಸಲು ಹೋಗಿ ಕಾಯಕ್ಕೆ ಸುಃಖ ದುಃಖಗಳನ್ನುಂಟು ಮಾಡುತ್ತದೆ.

ಕಾಯಕ್ಕೆ ಸುಖವಾದರೇನು ದುಃಖವಾದರೇನು ? ಕಾಯದಲ್ಲಿದ್ದಾತನಿಗೆ ಸುಖವಿಲ್ಲ ದುಃಖವಿಲ್ಲ ಕಾಯದಲ್ಲಿದ್ದಾತನ ಸುಖದ ಪರಿಚಯ ಕಾಯಕ್ಕಿಲ್ಲ . ಕಾಯದ ಸುಖದುಃಖಗಳ ಪರಿಚಯ ಕಾಯದಲ್ಲಿದ್ದಾತನಿಗಿಲ್ಲ.

ಕಾಯ ತನಗಾದ ಸುಖ ದುಃಖಗಳನ್ನು ತಾನೇ ಸಂತೈಸಿಕೊಳ್ಳಬೇಕು ಕಾಯವನ್ನು ಆವರಿಸಿದ ಮನಕ್ಕಾದ ಸುಖ ದುಃಖಗಳನ್ನು ಮನವೆ ಸಂತೈಸಿಕೊಳ್ಳಬೇಕು.

ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ರಂಭೆ ಎಂದು ಮಾತನಾಡಿದೊಡನೆ ರಂಭೆ ಕಾಯದ ಅಂಗನೆ ಆಗಲಿಲ್ಲ. ಕಾಯಕ್ಕೆ ಸ್ವಪ್ನದ ಮೂಲಕವಾದರೂ ರತಿಸುಖವನ್ನು ನೀಡಲಿಲ್ಲ.

ಕಾಯದಲ್ಲಿ ನೀನಿದ್ದರೂ ಕೂಡ ನೀನಿರುವೆಯೆಂದು ಕಾಯಕ್ಕೆ ಗೊತ್ತಿಲ್ಲ. ನಿನ್ನ ಸುಖ ಕಾಯಕ್ಕಿಲ್ಲ ಕಾಯದ ಸುಖ ದುಃಖ ನಿನಗಿಲ್ಲ. ನೀನಿದ್ದ ಕಾಯಕ್ಕೆ ಎಂತಹ ತೊಡಕನಿಪ್ಪೆ ಕಪಿಲಸಿದ್ಧ ಮಲ್ಲಿಕಾರ್ಜುನ.

**1389**

**ಕಲ್ಪವೃಕ್ಷಕ್ಕೆ ಸಮಮಾಡಿ ಹೇಳಿದೆನಯ್ಯಾ , ಕರಸ್ಥಲದ ಮಹಾಲಿಂಗಮೂರ್ತಿಗೆ**
**ಅಲ್ಲಲ್ಲ, ಕಲ್ಪಿಸಿ ಬೇಡಿದಡೆ ಕೊಡುವುದದು ಸುರಾಮೃತವ,**
**ಮೃತವ ಬೇಡಿದಡೆ ಕೊಡುವುದಯ್ಯಾ ಭವದ ಗೋಳಾಟ ಕಾಣಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿರುವ ಮಹಾಲಿಂಗಮೂರ್ತಿ ಸಾಮಾನ್ಯನಲ್ಲ ಆತನನ್ನು ಕೇಳುವವರು ಬೆರಳಣಿಕೆಯ ಜನ ಮಾತ್ರ. ಬೇಡಿದ್ದನ್ನು ಕೊಡುವ ಕಲ್ಪವೃಕ್ಷನು ಆತ. ಕಲ್ಪಿಸಿ ಬೇಡಿದರೆ ಸುರಾಮೃತವನ್ನೇ ಕೊಡುವನು.

ಕಾಯವನ್ನು ಆವರಿಸಿದ ಮನ ಕಾಯದ ಉಪಜೀವನಕ್ಕಾಗಿ ಮಾತ್ರ ಬೇಡುತ್ತದೆ ಆದರೂ ಆತ ಬೇಡಿದ್ದನ್ನೇ ಕೊಡುತ್ತಾನೆ. ಭಿಕ್ಷುಕ ಇಂದು ನನಗೆ ಎರಡು ರೊಟ್ಟಿ ಸಿಗುವಂತೆ ಮಾಡು ಎಂದು ಪರಮಾತ್ಮನಲ್ಲಿ ಬೇಡಿದಲ್ಲಿ ಆತ ತಥಾಸ್ತು ಎಂದು ಕಾಯದ ಮೂಲಕ ಕೊಡಿಸುತ್ತಾನೆ. ಬೇಡುವುದು, ಬೇಡಿದ ಕಾಯಕ್ಕೆ ನೀಡುವುದು ಇವೆರಡು ಕಾಯದಲ್ಲಿದ್ದಾತನ ಲೀಲೆ. ಆತ ಕರಸ್ಥಲದಲ್ಲಿ ವಾಸ ಮಾಡಿದ ಮಹಾಲಿಂಗಮೂರ್ತಿ. ಬೇಡುವ ನೀಡುವ ಕಾಯಗಳೆರಡು ಕಲ್ಪವೃಕ್ಷಗಳೆ ಆದರೆ ಬೇಡುವ ನೀಡುವ ತವಕದ ಭವದ ಗೋಳಾಟ ಕಾಯಗಳಿಗೆ ಗಂಟು ಬಿದ್ದಿವೆ ಇದನ್ನು ಕಾಯವೇ ಕಳೆದುಕೊಳ್ಳಬೇಕು.

**1390**

**ನುಡಿದ ನಡೆ ಸಮನಿಸಿತ್ತಯ್ಯಾ ಸಂಗನ ಬಸವಣ್ಣಂಗೆ.**
**ನುಡಿದ ನಡೆ ಸಮನಿಸಿತ್ತಯ್ಯಾ ಪ್ರಭುವಿಂಗೆ.**
**ನುಡಿದ ನಡೆ ಸಮನಿಸಿತ್ತಯ್ಯಾ ನಿಮ್ಮಾತಂಗಲ್ಲದೆ ಆತಂಗೆ ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಂಗನಬಸವಣ್ಣ ನುಡಿದಂತೆ ನಡೆದ ಧೀರನು, ಮಹಾವೀರನು, ಪ್ರಭುದೇವ ಇವರಿಬ್ಬರೂ ನುಡಿದಂತೆ ನಡೆದ ಮಹಾವೀರರು.

ಜ್ಞಾನದೇವನ ಕಾಯ ಹಾಗಲ್ಲ, ಮಹಾಜ್ಞಾನಿಯಾದ ಜ್ಞಾನದೇವನು ಕಾಯದಲ್ಲಿ ಸಂಗಮವಾಗಿದ್ದು ಆತನ ಕಾಯದ ನುಡಿಯೊಂದು ಪರಿ ಆತನಿದ್ದ ಕಾಯ ನಡೆಯುವುದೊಂದು ಪರಿ ಆತ ನುಡಿದಂತೆ ಆತನ ಕಾಯ ನಡೆಯುವುದಿಲ್ಲ. ನುಡಿದ ನುಡಿಗೂ ನಡೆದ ನಡೆಗೂ ಅಜಗಜಾಂತರ ವ್ಯತ್ಯಾಸ . ಆತನ ನುಡಿಯೊಂದು ಪರಿ ಆತನಿದ್ದ ಕಾಯದ ನಡೆಯೊಂದು ಪರಿ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ.

**1391**

**ಬ್ರಹ್ಮನ ಪೂಜಿಸಿ ಸೃಷ್ಟಿಗೊಳಗಾಗುವುದ ಬಲ್ಲೆ.**
**ವಿಷ್ಣುವಿನ ಪೂಜಿಸಿ ಸ್ಥಿತಿಗೊಳಗಾಗುವುದ ಬಲ್ಲೆ.**
**ರುದ್ರನ ಪೂಜಿಸಿ ಲಯಕ್ಕೊಳಗಾಗುವುದ ಬಲ್ಲೆ.**
**ನಮ್ಮಿಷ್ಟಲಿಂಗ ಮೂರ್ತಿಯ ಪೂಜಿಸಿ ಲಿಂಗವಾಗಿ,**
**ಸರ್ವವಳಿವುದ ಬಲ್ಲೆ ನೋಡಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬ್ರಹ್ಮ ಸೃಷ್ಟಿಕರ್ತ, ವಿಷ್ಣು ರಕ್ಷಣೆ ಮಾಡುವವ, ರುದ್ರ ಲಯ ಮಾಡುವವ. ಈ ಮೂವರ ಕಾಯಕವನ್ನು ನಾನು ಬಲ್ಲೆ. ಬ್ರಹ್ಮನ ಪೂಜಿಸಿದ ಕಾಯ ಸೃಷ್ಟಿಗೊಳಗಾಗುವುದು. ವಿಷ್ಣುವನ್ನು ಪೂಜಿಸಿದ ಕಾಯ ಸ್ಥಿತಿಗೊಳಗಾಗುವುದು. ರುದ್ರನನ್ನು ಪೂಜಿಸಿದ ಕಾಯ ಲಯಕ್ಕೊಳಗಾಗುವುದು. ಬ್ರಹ್ಮ ವಿಷ್ಣು ರುದ್ರ ಈ ಮೂವರು ಕಾಯದಲ್ಲಿಯೆ ಸಂಗಮವಾಗಿದ್ದಾರೆ. ಬ್ರಹ್ಮ ಕಾಯವನ್ನು ಸೃಷ್ಟಿ ಕಾಯಕಕ್ಕೆ ತೊಡಗಿಸಿಕೊಂಡರೆ ವಿಷ್ಣು ಕಾಯವನ್ನು ರಕ್ಷಣಾ ಕಾಯಕಕ್ಕೆ ತೊಡಗಿಸಿಕೊಂಡಿದ್ದಾನೆ. ರುದ್ರ ಕಾಯದಲ್ಲಿದ್ದು ಕಾಯವನ್ನು ಲಯಕ್ಕೆ ಒಳಗುಮಾಡುತ್ತಾನೆ.

ಬ್ರಹ್ಮ ವಿಷ್ಣು ರುದ್ರ ಈ ಮೂವರಿಗಿಂತ ಮಹಾಜ್ಞಾನಿ ಬೇರೆಯೇ ಇದ್ದಾನೆ. ಆತ ಸೃಷ್ಟಿಗೆ ಒಳಗಾಗಿಲ್ಲ, ವಿಷ್ಣುವಿನ ಸ್ಥಿತಿಗೂ ಒಳಗಾಗುವುದಿಲ್ಲ. ರುದ್ರನ ಲಯಕ್ಕೂ ಒಳಗಾಗುವುದಿಲ್ಲ. ಈತನನ್ನು ಪೂಜಿಸಿದ ಅಂಗ ಸರ್ವಾಂಗ ಲಿಂಗವಾಗಿ ಮೆರೆಯುತ್ತದೆ.

**1392**

**ನಾಲ್ಕು ಯುಗಂಗಳು ಸಹಸ್ರವೇಳೆ ತಿರುಗಿದಡೆ, ಬ್ರಹ್ಮಂಗೊಂದು ದಿನ.**
**ಬ್ರಹ್ಮನಂದು ಸಹಸ್ರವೇಳೆ ತಿರುಗಿದಡೆ, ವಿಷ್ಣುವಿಗೊಂದು ಗಳಿಗೆ**
**ವಿಷ್ಣು ತಾನು ಹನ್ನೆರಡು ಲಕ್ಷ (ವೇಳೆ) ತಿರುಗಿದಡೆ,**
**ಮಹೇಶ್ವರಂಗೊಂದು ನಿಮಿಷ.**
**ಅಂತಪ್ಪ ಮಹೇಶ್ವರನನೇಕ ಲೀಲೆ ಧರಿಸಿದಲ್ಲಿ**
**ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನ ಪೂಜೆ ಸಮಾಪ್ತಿ, ನೋಡಯ್ಯಾ ಬಾಚರಸರೆ.**

ನಾಲ್ಕು ಯುಗಂಗಳು ಸಹಸ್ರ ವೇಳೆ ತಿರುಗಿದಲ್ಲಿ ಬ್ರಹ್ಮನಿಗ ಒಂದು ದಿನವಾಗುತ್ತದೆ ಬ್ರಹ್ಮನು ಸಹಸ್ರವೇಳೆ ತಿರುಗಿದಲ್ಲಿ ಅದು ವಿಷ್ಣುಂಗೆ ಒಂದು ಗಳಿಗೆಯಾಗುತ್ತದೆ. ವಿಷ್ಣು ತಾನು

ಹನ್ನೆರಡು ಲಕ್ಷ ವೇಳೆ ತಿರುಗಿದಡೆ ಮಹೇಶ್ವರನಿಗೆ ಒಂದು ನಿಮಿಷಕ್ಕೆ ಸಮಾನವಾಗುತ್ತದೆ ಇಂತಹ ಮಹೇಶ್ವರರು ಅನೇಕ ಲೀಲೆ ಧರಿಸಿದಲ್ಲಿ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗಯ್ಯನ ಪೂಜೆ ಸಮಾಪ್ತಿಯಾಯಿತು ನೋಡಯ್ಯಾ, ಎಂದು ಸಿದ್ಧರಾಮ ಶಿವಯೋಗಿಗಳು ಬಾಚರಸಿರಗೆ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನ ಮಹತ್ವವನ್ನು ತಮ್ಮ ವಚನ ಸೂತ್ರದ ಮೂಲಕ ವಿವರಿಸಿದ್ದಾರೆ.

**1393**

**ಹಸಿವು ತೃಷೆಯಳಿದಡೇನು, ಭಕ್ತನಪ್ಪನೆ ? ಅಲ್ಲಲ್ಲ**
**ಅಷ್ಟ ಮಹಾಸಿದ್ಧಿಯುಳ್ಳಡೇನು, ಭಕ್ತನಪ್ಪನೆ ? ಅಲ್ಲಲ್ಲ**
**ತನು ಬಯಲಾಗಿ ಚತುರ್ವಿಧ ಪದಸ್ಥನಾಗಿ**
**ಕೈಲಾಸದಲ್ಲಿದ್ದಡೇನು, ಭಕ್ತನಪ್ಪನೆ ? ಅಲ್ಲಲ್ಲ**
**ಗಿಡಗಳ ತಿಂದ ಬಳಿಕ ಹಸಿವು ತೃಷೆ ತೋರದು**
**ಯೋಗವಂಗವಾದ ಬಳಿಕ ಸ್ವೇಚ್ಛಾಚಾರ ಬಿಡದು,**
**ಅಘೋರ ತಪವ ಮಾಡಿದ ಬಳಿಕ ಮಹಾಸಿದ್ಧಿಗಳು ಬಿಡವು.**
**ಒಂದೊಂದರಿಂದೊಂದು ಸಿದ್ಧಿ. ಅಂಗ ಮೂರರಲ್ಲಿ ಲಿಂಗ ಸಂಬಂಧವಾಗಿ,**
**ಲಿಂಗ ಮೂರರಲ್ಲಿ ವಸ್ತುತ್ರಯವ ಪೂಜಿಸಿ,**
**ತತ್ಪ್ರಸಾದಗ್ರಾಹದ ಭಕ್ತನಲ್ಲದೆ, ಬಾಲಬ್ರಹ್ಮಿಗೆ,**
**ಭಕ್ತನೆನ ಬಹುದೇನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಹಸಿವು ತೃಷೆಗಳನ್ನು ಕಳೆದುಕೊಳ್ಳುವವನು ಭಕ್ತನಾಗಲಾರ. ಅಷ್ಟ ಮಹಾಸಿದ್ಧಿಗಳನ್ನು ಗಳಿಕೆ ಮಾಡಿಕೊಂಡರೂ ಕೂಡ ಭಕ್ತನೆಂದು ಕರೆಸಿಕೊಳ್ಳಲು ಸಾಧ್ಯವಾಗುವುದಿಲ್ಲ. ತನು ಬಯಲಾಗಿ ಚತುರ್ವಿಧ ಪದವಿಗಳನ್ನು ಪಡೆದು ಕೈಲಾಸದಲ್ಲಿದ್ದರೂ ಭಕ್ತನೆಂದು ಕರೆಸಿಕೊಳ್ಳಲು ಸಾಧ್ಯವಾಗುವುದಿಲ್ಲ. ವನಮೂಲಿಕೆಗಳನ್ನು ತಿಂದರೆ ಹಸಿವು ತೃಷೆ ಇಲ್ಲವಾಗುವುದು.

ಯೋಗಾಂಗವಾದರೇನು ಅಂಗಕ್ಕೆ ಯೋಗಸಿದ್ಧಿಯಾದರೂ ಕೂಡ ಅದು ತನ್ನ ಸ್ವೇಚ್ಛಾಚಾರ ಬಿಡುದು. ಅಘೋರ ತಪವನ್ನು ಮಾಡಿದ ಬಳಿಕ ಮಹಾಸಿದ್ಧಿ ಲಭಿಸುವುದು. ಆದರೆ ಆ ಮಹಾ ಸಿದ್ಧಿಗಳು ಕಾಯವನ್ನು ಕಾಡದೆ ಬಿಡವು. ಒಂದೊಂದರಿಂದ ಒಂದೊಂದು ಸಿದ್ಧಿ ಮಡಿಕೊಂಡರೇನು ಅಂಗದಲ್ಲಿಯೇ ಸಂಗಮವಾದ ಮೂರು ಲಿಂಗಗಳು ಅಂಗಕ್ಕೆ ಸಂಬಂಧವಾಗಿ ಆ ಮೂರೂ ಲಿಂಗಗಳನ್ನು ಅಂಗವನ್ನು ಆವರಿಸಿದ ಮನ ಮತ್ತು ಕಾಯದ ಮೂಲಕ ಪೂಜಿಸಿ ತತ್ಪ್ರಸಾದವಾದಾಗ ಮಾತ್ರ ಭಕ್ತನಾಗುತ್ತಾನೆ.

ಭಕ್ತನಲ್ಲದವನು ಬಾಲಬ್ರಹ್ಮಿ. ಬಾಲಕನಿಗೆ ಬ್ರಹ್ಮನು ಯಾರೆಂಬುದು ಹೇಗೆ ಗೊತ್ತಿಲ್ಲವೋ ಹಾಗೆಯೇ ಕಾಯ ಮುಪ್ಪಾದರೇನು ಕಾಯವನ್ನು ಆವರಿಸಿದ ಮನ ಮತ್ತು ಕಾಯ ಬಾಲಬ್ರಹ್ಮನಾಗಿಯೇ ಉಳಿಯುತ್ತದೆ. ಇಂತಹ ಬಾಲಬ್ರಹ್ಮನನ್ನು ಭಕ್ತನೆನ್ನಲು ಬಾರದು ಎಂದು ಸಿದ್ಧರಾಮ ಶಿವಯೋಗಿಗಳು ಖಚಿತವಾಗಿ ಓದುಗರಿಗೆ ಹೇಳಿದ್ದಾರೆ.

**1394**

**ತನು ಕೊಡುವಡೆ ಗುರುವಿನದು. ಮನ ಕೊಡುವಡೆ ಲಿಂಗದದು.**
**ಧನ ಕೊಡುವಡೆ ಜಂಗಮದದು.**

**ಅವರ ಪದಾರ್ಥವನವರಿಗೆ ಕೊಟ್ಟು ಭಕ್ತನಾದೆನೆಂಬವರ**
**ಹಿರಿಯ ತನದ ಕೇಡ ನೋಡಯ್ಯಾ ಕಪಿಲಸಿದ್ಧಮಲ್ಲಿ ಕಾರ್ಜುನಾ.**

ತನು ಮನ ಧನದೊಂದಿಗೆ ಸೇವೆ ಮಾಡಲು ಮತ ಮಾನ್ಯಗಳಲ್ಲಿ ಭಕ್ತರಿಗೆ ಹೇಳುವುದು ಉಂಟು. ತನು ತನ್ನದಲ್ಲ ಮನವೂ ತನ್ನದಲ್ಲ ತನುವಿನಲ್ಲಿಯೇ ತನ್ಮಯವಾದ ಅರಿವು ಎಂಬ ಧನವೂ ಕೂಡ ತನ್ನದಲ್ಲ. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನದು ತನು. ತನುವನ್ನು ಆವರಿಸಿದ ಮನ ತನುವನ್ನು ತನ್ನದೆ ಎಂದು ಭಾವಿಸಿದೆ. ಅದು ಎಲ್ಲಿಯವರೆಗೆ ತನುಮನದ ಸಂಗವನ್ನು ಬಿಡುವುದಿಲ್ಲ ವೊ ಅಲ್ಲಿಯವರೆಗೆ ತನುವನ್ನು ತನುವಿನಲ್ಲಿಯೇ ತನ್ಮಯವಾದ ಗುರುದೇವನಿಗೆ ಅರ್ಪಿಸಲು ಬರುವುದಿಲ್ಲ.

ಮನ ಕೂಡ ತನ್ನದಲ್ಲ ತನುವಿನಲ್ಲಿಯೇ ತನ್ಮಯವಾದ ಲಿಂಗ ಮನಕ್ಕೆ ಜನ್ಮ ಕೊಟ್ಟು ತನ್ನನ್ನು ತಿಳಿಯಲೆಂದು ತನುವಿನಲ್ಲಿಯೆ ಇಟ್ಟಿದ್ದಾನೆ. ಎಲ್ಲಿಯವರೆಗೆ ಮನ ತನುವಿನಲ್ಲಿಯೇ ತನ್ಮಯವಾದ ಲಿಂಗಕ್ಕೆ ತನಗೆ ತಾನೆ ಅರ್ಪಣೆ ಮಾಡಲು ಬರುವುದಿಲ್ಲವೋ ಅಲ್ಲಿಯವರೆಗೆ ಮನದ ಮೂಲಕ ಯಾರಿಗೂ ಸೇವೆ ಮಾಡಲು ಬರುವುದಿಲ್ಲ.

ಧನವೆಂದರೆ ಸಂಪತ್ತು. ಅರಿವು ತನುವಿನ ಸಂಪತ್ತು ತನುವಿನಲ್ಲಿಯೇ ತನ್ಮಯವಾದ ಜಂಗಮನಿಗೆ ಸೇರಿದ್ದು ಈ ಸಂಪತ್ತನ್ನು ಮತ್ತೊಂದು ತನುವಿಗೆ ಕೊಡಲು ಬರುದಿಲ್ಲ. ಮತ್ತೊಂದು ತನುವಿನಲ್ಲಿರುವ ಅರಿವಿನ ಸಂಪತ್ತನ್ನು ತಾನು ಪಡೆದುಕೊಳ್ಳಲು ಬರುವುದಿಲ್ಲ. ಹೀಗಾಗಿ ತನು ಮನ ಧನ, ಗುರು ಲಿಂಗ ಜಂಗಮರದು ತನು ಈ ಸೂತ್ರ ತಿಳಿಯದ ನಿಮಿತ್ಯ ಅರಿವಿನ ಈ ಶಿಕ್ಷಣವನ್ನು ತನು ತಿಳಿಯದ ಕಾರಣ ತನಗೆ ತಿಳಿದಂತೆ ಮಾತನಾಡುತ್ತದೆ.

ತನುವಿನಲ್ಲಿಯೇ ತನ್ಮಯವಾದ ಗುರು ಲಿಂಗ ಜಂಗಮರ ಪದಾರ್ಥವನ್ನು ಕೊಟ್ಟು ಭಕ್ತನಾದೆನೆಂಬವರ ಹಿರಿಯತನದ ಕೇಡು ನೋಡಯ್ಯಾ ಎಂದು ಸಿದ್ಧರಾಮ ಶಿವಯೋಗಿಗಳು ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**1395**

**ತನು ಕೊಟ್ಟ ಬಳಿಕ ದೇಹವೆಲ್ಲಿಹದೋ ?**
**ಧನ ಕೊಟ್ಟ ಬಳಿಕ ಭೋಗಂಗಳೆಲ್ಲಿಹವೊ ?**
**ಇವೆಲ್ಲ ಬರಿಯ ಭ್ರಮೆ !**
**ಕೊಟ್ಟೆವೆಂಬವರ ಮುಖವ ನೋಡಲಾಗದು**
**ಕೊಟ್ಟು ಭಕ್ತನಾದೆನೆಂಬ ನುಡಿ ಸಮನಿಸದಯ್ಯಾ ಗುರುವೆ**
**ನಿಮ್ಮ ಶರಣರ ಬುದ್ಧಿಗೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ತನು ಕೊಟ್ಟ ಬಳಿಕ ತನು ಉಳಿಯುವುದಿಲ್ಲ. ಧನ ಕೊಟ್ಟ ಬಳಿಕ ಭೋಗಂಗಳಿಗೆ ಆಸ್ಪದವಿಲ್ಲ. ತನು ಕೊಟ್ಟೆನೆಂಬುದು, ಧನ ಕೊಟ್ಟೆನೆಂಬುದು ಬರಿಯ ಭ್ರಮೆ. ಒಂದು ದೇಹದ ಮೂಲಕ ಮತ್ತೊಂದು ದೇಹಕ್ಕೆ ಏನನ್ನೂ ತೆಗೆದುಕೊಳ್ಳಲು ಬರುವುದಿಲ್ಲ. ಏಕೆಂದರೆ ಸಕಲ ದೇಹಗಳು ಪರಿಪೂರ್ಣವಾಗಿವೆ. ಪರಿಮೂರ್ಣ ವಸ್ತು ಸಕಲ ದೇಹಗಳಲ್ಲಿಯೂ ಸಂಗಮವಾಗಿದೆ.

ಆಯಾ ದೇಹದಲ್ಲಿರುವ ಅರಿವಿನ ಸಂಪತ್ತನ್ನು ಆಯಾ ದೇಹವೇ ಕಂಡುಕೊಳ್ಳಬೇಕು.

ಅರಿವು ಎಂದರೆ ಸಾಕ್ಷಾತ್ ಗುರುದೇವನೇ ಆಗಿದ್ದಾನೆ. ಈತನನ್ನು ಮಹಾದೇವ ಸದಾಶಿವ ಸಕ್ಷಾತ್ ಪರಬ್ರಹ್ಮನೆಂದು ಕೂಡ ಕರೆಯುತ್ತಾರೆ. ಇವರು ಸಕಲ ದೇಹಗಳಲ್ಲಿಯೂ ಸಂಗಮವಾಗಿದ್ದಾರೆ. ಹೀಗಿದ್ದಾಗ ಯಾವ ದೇಹಕ್ಕಾದರೂ ಏನನ್ನಾದರೂ ಕೊಡಲು ಬರುತ್ತದೆಯೇ ? ಯಾವ ದೇಹದಿಂದಲಾದರೂ ಏನನ್ನಾದರು ಪಡೆಯಲು ಬರುತ್ತದೆಯೇ ? ಕೊಟ್ಟೆನೆಂಬುದು ಪಡೆದೆನೆಂಬುದು ಬರೀ ಭ್ರಮೆ ಕೊಟ್ಟೆನೆಂಬವರ ಮುಖವನ್ನು ನೋಡಲಾಗದು. ಕೊಟ್ಟು ಭಕ್ತನಾದೆನೆಂಬ ನುಡಿಯೂ ಕೂಡ ಸಮನಿಸದಯ್ಯಾ ಗುರುವೇ. ಶರಣರು ಮಹಾ ಜ್ಞಾನಿಗಳು. ಕೊಟ್ಟೆ ಪಡೆದೆನೆಂಬುವವರ ಮಾತುಗಳನ್ನು ಅವರು ಒಪ್ಪುವುದಿಲ್ಲ.

**1396**

**ಜಲದಲ್ಲಿ ನೊರೆ ತೆರೆ ಬುದ್ಬುದವಿದ್ದಂತೆ. ಕನಕದಲ್ಲಿ ಅಲಂಕಾರವಿದ್ದಂತೆ,**
**ಬೀಜದಲ್ಲಿ ಎಲೆ ಶಾಖೆ ಬೀಜವಿದ್ದಂತೆ,**
**ಒಂದೆ ವಸ್ತುವಿನಲ್ಲಿ ಗುಣತ್ರಯವಾದವು.**
**ಗುಣತ್ರಯದಿಂದ ಮಲತ್ರಯಂಗಳಾದವು.**
**ಮಲತ್ರಯಂಗಳಿಂದ ಲೋಕರಚನೆ ಹೆಚ್ಚಿತ್ತು,**
**ಲೋಕರಚನೆ ಹೆಚ್ಚಿದಲ್ಲಿ ಪಾಪಪುಣ್ಯಂಗಳಾದವು.**
**ಪಾಪಪುಣ್ಯಂಗಳಿಂದ ಸ್ವರ್ಗನರಕಂಗಳಾದವು.**
**ಸ್ವರ್ಗನರಕಂಗಳಿಂದ ಭೇದವಾಗಿ ಕೆಟ್ಟ ಕೇಡ ನೋಡಯ್ಯಾ**
**ತನ್ನ ಮಾಯೆಯ ಸೆಳೆದನು**
**ಮಾಯೆಯ ಸೆಳೆದಲ್ಲಿ, ಸರ್ವವು ಲಯವಾಗಿ ನೀನೊಬ್ಬನೆ ಉಳಿದೆ**
**ಉಳಿದೆ ಎಂಬುದು ಶಾಸ್ತ್ರಪ್ರಸಿದ್ಧ.**
**ಸಮುದ್ರದ ನೀರು ಮೇಘವಾಗಿ, ಮೇಘದ ನೀರು**
**ಹಳ್ಳಕೊಳ್ಳವಾಗಿ, ಮತ್ತೆ ಸಮುದ್ರವಾದಂತೆ,**
**ಅದರಂತೆ ಒಂದೆ ಸ್ಥಲದಲ್ಲಿ ನಿಂತು ನೋಡಲೊಲ್ಲದೆ**
**ಅನೇಕ ಸ್ಥಲಗಳ ಧರಿಸಿ ಹೋಗುವುದು ಉಚಿತವಲ್ಲ ಎಲೆ ಜೀವವೆ.**
**ಎಂದು ಬೋಧಿಸಿದ ಸದ್ಗುರು ಚೆನ್ನಬಸವಣ್ಣನ ಪಾದಕ್ಕೆ**
**ನಮೋ ನಮೋ ಎಂದು ಬದುಕಿದೆನಯ್ಯಾ .ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲದಲ್ಲಿ ನೊರೆ ತೆರೆ ಬುದ್ಬುದ ಹುಟ್ಟಿದಂತೆ, ಬಂಗಾರದಲ್ಲಿ ಅಲಂಕಾವಿದ್ದಂತೆ. ಬೀಜದಲ್ಲಿ ಎಲೆ ಶಾಖೆ ಬೀಜಗಳಿದ್ದಂತೆ ಕಾಯವೆಂಬ ಒಂದು ವೃಕ್ಷದಲ್ಲಿ ಗುಣತ್ರಯಗಳು ಹುಟ್ಟಿದವು. ಈ ಗುಣತ್ರಯದಿಂದ ಮಲತ್ರಯಂಗಳು ಹುಟ್ಟಿದವು ಮಲತ್ರಯಂಗಳಿಂದ ಲೋಕರಚನೆಯಾಯಿತು. ಲೋಕರಚನೆ ಹೆಚ್ಚಾದಂತೆಲ್ಲ ಪಾಪ ಪುಣ್ಯಂಗಳು ಹುಟ್ಟಿದವು ಪಾಪ ಪುಣ್ಯಂಗಳಿಂದಾಗಿ ಸ್ವರ್ಗ ನರಕಂಗಳಾದವು. ಈ ಸ್ವರ್ಗ ನರಕಗಳಿಂದಾಗಿ ಬೇಧ ಜ್ಞಾನ ಹುಟ್ಟಿ, ಕೆಟ್ಟ ಕೇಡ ನೋಡಿ ,ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನು ತನ್ನ ಮಾಯೆಯ ಸೆಳೆದನು. ಆತ ತನ್ನ ಮಾಯೆಯ ಸೆಳೆದಲ್ಲಿ ಸ್ವರ್ಗವೂ ಲಯವಾಗಿ ನೀನೊಬ್ಬನೆ ಉಳಿದೆ ಎಂಬುದು ಶಾಸ್ತ್ರ ಪ್ರಸಿದ್ಧ. ಸಮುದ್ರದ ನೀರೆ ಮೇಘವಾಯಿತ್ತು ,ಮೇಘದಿಂದ ಕೆಳಗಿಳಿದ ನೀರು ಹಳ್ಳ - ಕೊಳ್ಳವಾಗಿ

ನದಿಯಾಗಿ ಮತ್ತೆ ಸಮುದ್ರವಾಯಿತು. ಇದು ತನ್ನ ಲೀಲೆ. ಸಮುದ್ರ ಹಳ್ಳ ಕೊಳ್ಳ ನದಿಯಾಗಿ ಮತ್ತೆ ಸಮುದ್ರವಾದಂತೆ.

ತನು ಒಂದೆ, ಅದರ ಸ್ಥಲಗಳು ಕೂಡ ಒಂದೆ. ಅದರಲ್ಲಿ ಅನೇಕ ಸ್ಥಲಗಳನ್ನು ಹುಡುಕಿ ಹುಡಿಕಿ ಬೇಸತ್ತು ಆ ಎಲ್ಲಾ ಸ್ಥಲಗಳ ಮೂಲಕ ತನುವಿನಲ್ಲಿಯೇ ತನ್ಮಯವಾದ ಗುರುದೇವನಿಗೆ ಶರಣಾಗುವುದು ಉಚಿತವಲ್ಲ ಎಂದು ಬೋಧಿಸಿದ ಸದ್ಗುರು ಚೆನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯಾ ಎಂದು ಮಲ್ಲಯ್ಯನೊಂದಿಗೆ ಮಾತನಾಡಿಕೊಂಡಿದ್ದಾರೆ.

**1397**

**ನಿನ್ನ ದೇಹ ನೋಡುವಡೆ ಪಂಚ ಭೌತಿಕ, ನೀ ನೋಡುವಡೆ ಜೀವಾಂಶಿಕ,**
**ನಿನ್ನ ಧನ ನೋಡುವಡೆ ಕುಬೇರನದು,**
**ನಿನ್ನ ಮನ ನೋಡುವಡೆ ವಾಯು ಕೂಡಿದ್ದು, ವಿಚಾರಿಸಿ ನೋಡಿದಡೆ ಬ್ರಹ್ಮನದು.**
**ನಾ ಮಾಡುವೆನೆಂದಡೆ ಅದು ಆದಿಶಕ್ತಿ ಚೈತನ್ಯ ,**
**ನಾ ತಿಳಿದಿಹೆನೆಂದಡೆ ಅದು ಜ್ಞಾನದ ಬಲ,**
**ಆ ಜ್ಞಾನವು ನಾ ಎಂದಡೆ ಇದಿರಿಟ್ಟು ತೋರುತ್ತದೆ**
**ತೋರುವ ಆನಂದ ಮೂರ್ತಿ ನಾ ಎಂದಡೆ, ಅದು ಸಾಕ್ಷಿಯಾಗಿ ನಿಂದಿತ್ತು.**
**ಸಾಕ್ಷಿ ಎಂಬುದು ತಿಳಿದು ತಿಳಿಯದೆಂಬುದಕ್ಕೆ**
**ಬಯಲಾದ ನಮ್ಮ ಕಪಿಲಸಿದ್ಧಮಲ್ಲಿ ಕಾರ್ಜುನ ತಂದೆಯು.**

ದೇಹವನ್ನು ನೋಡುವಡೆ ಪಂಚಭೂತಗಳು ಅದರಲ್ಲಿ ಸಂಗಮವಾಗಿವೆ. ನೀ ಅದನ್ನು ನೋಡುವಡೆ ಅದು ಜೀವಾಂಶಿಕ ಮಾತ್ರ. ಕಾಯದಲ್ಲಿ ಸಂಗಮವಾದ ಧನವನ್ನು ನೋಡುವಡೆ ಅದು ಕುಬೇರನದ್ದು, ನಿನ್ನ ಧನ ಕುಬೇರನ ಸಂಪತ್ತು, ನಿನ್ನ ಮನ ನೋಡುವಡೆ ಅದು ವಾಯುವಿನಿಂದ ಕೂಡಿದೆ. ಮನ ತನುವಿನೊಂದಿಗೆ ಸಂಗಮಾಡಿ ವಾಯುವಿನಂತೆ ಸಂಚರಿಸುತ್ತದೆ. ಮನವನ್ನು ವಿಚಾರಿಸಿ ಮತ್ತೆ ಮತ್ತೆ ನೋಡಿದಡೆ ಅದು ಬ್ರಹ್ಮನದು. ನಾ ಮಾಡುವೆನೆಂದಡೆ ಅದು ಆದಿಶಕ್ತಿಯ ಚೈತನ್ಯ. ನನಗೆ ನಾನೆ ಅರಿವಾಗಿ ಆ ಮನವನ್ನು ತಿಳಿಯಲು ಹೋದಡೆ ಅದು ತನುವಿನ ಜ್ಞಾನದ ಸಮಗ್ರ ಬಲ, ಆ ಜ್ಞಾನವು ನಾನೆ ಆಗಿರುವೆ ಎಂದು ನೋಡಲು ಹೋದಡೆ ಅದು ಇದಿರಿಟ್ಟು ತೋರಿತ್ತದೆ. ತೋರುವ ಆನಂದ ಮೂರ್ತಿ ನಾನೆ ಎಂದು ಖಚಿತವಾಗಿ ತಿಳಿಯಲು ಹೋದಡೆ ಅದು ಸಾಕ್ಷಿಯಾಗಿ ನಿಲ್ಲುತ್ತದೆ. ಸಾಕ್ಷಿ ಎಂಬುದನ್ನು ತಿಳಿದೆ ತಿಳಿಯದೆ ಎನ್ನಲು ಹೋದರೆ ಬಯಲೊಳಗೆ ಬಯಲಾದ ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನ ತಂದೆಯು.

**1398**

**ತಿಳಿದು ತಿಳಿದು ಸಾಕ್ಷಿಯಾದಡೆ ತಾ ಉಳಿಯಲಿಲ್ಲ ನೋಡಯ್ಯಾ.**
**ಉಳಿಯಲಿಲ್ಲ ಉಳಿಯಲಿಲ್ಲವೆಂದಡೆ ಈ ಶಬ್ದವೆಲ್ಲಿ ಹದಯ್ಯಾ ?**
**ವಿಚಾರದಿಂದ ಒಳಗಾಗುವುದು, ಅವಿವೇಕದಿಂದ ದೂರಾಗುವುದು.**
**ಸರ್ವ ಜಗದ್ರೂಪು ನಿಮ್ಮದೆಂದು ನಂಬಿ,**
**ಸಕಲಲೋಕಾಲೋಕಕ್ಕೆ ಕೈಮುಗಿದೆ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತನುವಿದೆ, ತನುವಿನಲ್ಲಿ ತನ್ಮಯವಾದ ಅರಿವಿದೆ, ತನುವನ್ನು ಆವರಿಸಿದ ಮನವಿದೆ, ತನು ಮನ ಸಂಬಂಧದಿಂದಾಗಿ ನಾನು ಎನ್ನುವ ಅಜ್ಞಾನ ತನುವಿನಲ್ಲಿ ಉಳಿದಿದೆ.

ತನು ಮನ ಅರಿವನ್ನು ಸಾಕ್ಷಿಯಾಗಿ ನೋಡಿದಡೆ, ನಾನು ಎನ್ನುವ ಅಜ್ಞಾನ ಉಳಿಯಲಿಲ್ಲ. ಉಳಿಯಲಿಲ್ಲ ಎಂದಡೆ ಶಬ್ದದಲ್ಲಿ ಉಳಿಯದೆ ಉಳಿದಿಹುದು, ವಿಚಾರದಿಂದ ಒಳಗಾಗುವುದು, ಅವಿವೇಕದಿಂದ ವಿವೇಕ ದೂರಾಗುವುದು. ಸರ್ವ ಜಗತ್ತು ಹೀಗೆ ಇದೆ, ಇದಕ್ಕಿಂತ ಭಿನ್ನವಿಲ್ಲ. ಸರ್ವಾಂಗದಲ್ಲಿಯೂ ಅರಿವೆಂಬ ಗುರುದೇವನೇ ತುಂಬಿದ್ದಾನೆ. ಸರ್ವ ಜಗದ್ರೂಪು ನಿಮ್ಮದೇ ಎಂದು ನಂಬಿ, ಸಕಲ ಲೋಕಾಲೋಕಕ್ಕೆ ಕೈಮುಗಿದ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ.

**1399**

**ಉಪದೇಶ ಮಾಡುವಲ್ಲಿ ಗುರುವೆನಿಸಿದನು.**
**ಕಾಮಿತ ಫಲಂಗಳ ಕೊಟ್ಟಲ್ಲಿ ಲಿಂಗಮೂರ್ತಿ ಎನಿಸಿದನು,**
**ನಿತ್ಯನಿರ್ವಾಣದ ಸಕೀಲವ ತೋರಿದಲ್ಲಿ ಜಂಗಮನೆನಿಸಿದನಯ್ಯಾ,**
**ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಉಪದೇಶವೆ ವಿಚಿತ್ರ. ಅಂಗದಲ್ಲಿಯೇ ಸಂಗಮವಾಗಿದ್ದು. ಅಂಗಕ್ಕೆ ಅಂಗವನ್ನು ಆವರಿಸಿದ ಮನಕ್ಕೆ ಆತ ನೀಡುವ ಉಪದೇಶವನ್ನು ಅಂಗವೂ ಗಮನಿಸುವುದಿಲ್ಲ ಮನವೂ ಗಮನಿಸುವುದಿಲ್ಲ.

ಅಂಗ ಮತ್ತೊಂದು ಅಂಗವನ್ನು ಗುರುದೇವನೆಂದು ಭಾವಿಸಿದೆ. ಆ ಅಂಗಕ್ಕೆ ತಾನು ಶಿಷ್ಯನೆಂದು ಭಾವಿಸಿದೆ. ಅಂಗದಲ್ಲಿಯೇ ಸಂಗಮವಾದ ಗುರುದೇವನು ತಾನಿದ್ದ ಅಂಗಕ್ಕೆ ಕಾಮಿತ ಫಲಂಗಳ ಕೊಟ್ಟಲ್ಲಿ ಲಿಂಗಮೂರ್ತಿ ಎನಿಸುತ್ತಾನೆ. ನಿತ್ಯ ನಿರ್ವಾಣದ ಸಕೀಲವ ತೋರಿದಲ್ಲಿ ಜಂಗಮನೆಂದು ಕರೆಸಿಕೊಳ್ಳುತ್ತಾನೆ ತಾನಿದ್ದ ಅಂಗಕ್ಕೆ ತಾನೇ ಉಪದೇಶವ ಮಾಡಿದಲ್ಲಿ ಗುರು ಎಂದು ಕರೆಸಿಕೊಳ್ಳುತ್ತಾನೆ ಎಂದು ಸಿದ್ಧರಾಮ ಶಿವಯೋಗಿಗಳು ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**1400**

**ಲಿಂಗ ನೋಡುವಡೆ, ಮೈಗೊಟ್ಟುದಯ್ಯಾ, ಷೋಡಶೋಪಚಾರಗಳಿಗೆ.**
**ಜಂಗಮ ನೋಡುವಡೆ, ಮೈಗೊಟ್ಟನಯ್ಯಾ ನಿರಾಕಾರಕ್ಕೆ.**
**ಗುರು ನೋಡುವಡೆ ಭವದ ಬೇರು ಅಳಿಯಬೇಕೆಂದು**
**ಸಾಕಾರವಾಗಿ ನಿಂದ ನೋಡಯ್ಯಾ ಕಪಿಲಸಿದ್ಧಮಲ್ಲಿ ಕಾರ್ಜುನ.**

ಅಂಗದ ಸ್ವಭಾವವೆ ವಿಚಿತ್ರ ಅಂಗದಲ್ಲಿಯೆ ಸಂಗಮವಾದ ಅರಿವೆ ಲಿಂಗವೆಂದು ಅಂಗಕ್ಕೆ ಗೊತ್ತಿಲ್ಲದ ನಿಮಿತ್ಯ, ಲಿಂಗ ನೋಡುವುದೊಂದೆ ತಡ ಷೋಡಶೋಪಚಾರಂಗಳ ಮೂಲಕ ಪೂಜೆ ಮಾಡಬೇಕೆಂದು ಲಿಂಗಕ್ಕೆ ಕೈ ಮುಗಿದು ನಿಲ್ಲುತ್ತದೆ. ಅದು ಲಿಂಗವಲ್ಲ, ಅಂಗದಿಂದಲೇ ನಿರ್ಮಾಣವಾದ ಪ್ರಾಣವೆಂದು ಅಂಗಕ್ಕೆ ಗೊತ್ತಾಗುವುದಿಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವೆ ಗುರುವೆಂದು ಆ ಗುರುದೇವನೆ ಮಹಾದೇವನೆಂದು ಸದಾಶಿವನೆಂದು ಸಾಕ್ಷಾತ್ ಪರಬ್ರಹ್ಮನೆಂದು ಅಂಗಕ್ಕೆ ಗೊತ್ತಾದರೆ ಸಾಕು ಸಕಲ ಅಂಗಗಳನ್ನು ಲಿಂಗಾಂಗದಂತೆ ನೋಡಿ ಷೋಡಶೋಪಚಾರಗಳಿಂದ ಪೂಜಿಸುತ್ತದೆ. ಈ ಸೂತ್ರ ತಿಳಿದರೆ ಸಾಕು ಅಂಗದಲ್ಲಿಯೇ

ಜಂಗಮನನ್ನು ನೋಡಿ ನಿರಾಕಾರಕ್ಕೆ ಮೈಗೊಟ್ಟು ನಿಲುತ್ತದೆ. ಅಂಗದಲ್ಲಿಯೇ ಗುರುದೇವನನ್ನು ನೋಡಿ ಭವದ ಬೇರು ಕಿತ್ತಿಕೊಳ್ಳುತ್ತದೆ. ಭವದ ಬೇರು ಅಳಿಯಬೇಕೆಂದು ತನಗೆ ತಾನೆ ಲಿಂಗವಾದ. ಷೋಡಶೋಪಚಾರಗಳಿಂದ ಪೂಜಿಸಿಕೊಂಡ, ತನಗೆ ತಾನೆ ಜಂಗಮವಾದ, ನಿರಾಕಾರಕ್ಕೆ ಮೈಗೊಟ್ಟು ನಿಂದ. ತನಗೆ ತಾನೇ ಗುರುವಾಗಿ ಸಕಾರಗೊಂಡು ಭವದ ಬೇರು ಹಿಡಿದಿದ್ದಾನೆ ಕಪಿಲಸಿದ್ಧಮಲ್ಲಿಕಾರ್ಜುನ.

**1401**

**ಗುರುವಿನಿಂದ ಲಿಂಗವ ಕಂಡೆನಲ್ಲದೆ, ಲಿಂಗದಿಂದ ಲಿಂಗವ ಕಾಣಲಿಲ್ಲಯ್ಯಾ.**
**ಲಿಂಗದಿಂದ ಫಲಪದಂಗಳ ಕಂಡೆನಲ್ಲದೆ**
**ಫಲಪದಂಗಳಿಂದ ಫಲಪದಂಗಳು ಕಾಣಲಿಲ್ಲಯ್ಯಾ**
**ಜಂಗಮದಿಂದ ಮೋಕ್ಷವ ಕಂಡೆನಲ್ಲದೆ,**
**ಮೋಕ್ಷದಿಂದ ಮೋಕ್ಷವ ಕಾಣಲಿಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗವನ್ನು ಕಂಡಾತನೆ ಗುರುದೇವ. ಇಂತಹ ಗುರುದೇವನಿಂದ ಲಿಂಗವನ್ನು ಕಂಡೆನು, ಅಂಗದ ಮೇಲೆ ಕಟ್ಟಿಕೊಂಡ ಲಿಂಗದಿಂದ ಲಿಂಗವ ಕಾಣಲು ಎನಗೆ ಸಾಧ್ಯವಾಗಲಿಲ್ಲ.

ಅಂಗದ ಮೇಲೆ ಕಟ್ಟಿಕೊಂಡ ಲಿಂಗವನ್ನು ಪೂಜಿಸಿ ಫಲಪದಂಗಳನ್ನು ಕಂಡನಲ್ಲದೆ ಫಲಪದಗಳಿಂದ ಫಲಪದಂಗಳನ್ನು ಕಾಣಲಿಲ್ಲ. ಫಲಪದದಿಂದ ಸುಖ ಪ್ರಾಪ್ತಿಯಾಯಿತು ಅರಿವಿನ ಪರಸುಖ ಪ್ರಾಪ್ತಿಯಾಗಲಿಲ್ಲ. ಜಂಗಮದಿಂದ ಮೋಕ್ಷವ ಕಂಡೆನು, ಮೋಕ್ಷದಿಂದ ಮೋಕ್ಷವ ಕಾಣಲಿಲ್ಲ ಕಪಿಲಸಿದ್ಧ ಮಾಲ್ಲಿಕಾರ್ಜುನಾ.

**1402**

**ಕೆರೆಯ ನೀರು ಮರದ ಪುಷ್ಪ ಧರಿಸಿದಡೇನು ಅಯ್ಯಾ ,**
**ಆಗುವುದೆ ಆಗುವುದೆ ಲಿಂಗಾರ್ಚನೆ ?**
**ನೀರೆರೆಯಲಿಕ್ಕಾತನೇನು ಬಿಸಿಲಿಂದ ಬಳಲಿದನೆ ?**
**ಪುಷ್ಪದಿಂದ ಧರಿಸಲಿಕ್ಕಾತನೇನು ವಿಟರಾಜನೆ ?**
**ನಿನ್ನ ಮನವೆಂಬ ನೀರಿಂದ, ಜ್ಞಾನವೆಂಬ ಪುಷ್ಪದಿಂದ ಪೂಜಿಸಬಲ್ಲಡೆ.**
**ಭಕ್ತನೆಂಬೆ, ಮಹೇಶ್ವರನೆಂಬೆ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶುದ್ಧವಾದ ಕೆರೆಯ ನೀರು ತಂದು ಮರದ ಪುಷ್ಪವನ್ನು ಕೊಯ್ದು ಅಂಗದ ಮೇಲೆ ಕಟ್ಟಿಕೊಂಡ ಲಿಂಗಕ್ಕೆ ಧರಿಸಿ ಪೂಜಿಸಿದರೆ ಆಗುವುದು ಲಿಂಗಾರ್ಚನೆ. ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಎರೆದರೆ ನೆನೆಯದು ಮರೆತರೆ ಬಾಡದು. ಅದು ಪಾಶಾಣ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಪೂಜಿಸಲು ಕೆರೆಯ ನೀರು ಬೇಕಾಗಿಲ್ಲ ಮರದ ಪುಷ್ಪವೂ ಬೇಕಾಗಿಲ್ಲ.

ನೀರೆರೆಯಲಿಕ್ಕೆ ಲಿಂಗಯ್ಯ ಬಿಸಿಲಿನಿಂದ ಬಳಲಿದನೆ ? ಪುಷ್ಪ ಧರಿಸಲಿಕೆ ಆತನೇನು ವಿಟರಾಜನೆ ? ಸಾಧ್ಯವಾದರೆ ನಿನ್ನ ಮನವೆಂಬ ನೀರಿನಿಂದ ಜ್ಞಾನವೆಂಬ ಪುಷ್ಪದಿಂದ ಪೂಜಿಸ ಬಲ್ಲಡೆ ಭಕ್ತನೆಂಬೆ ಮಹೇಶ್ವರನೆಂಬೆ, ಕಪಿಲಸಿದ್ಧ ಮಲ್ಲಿಕಾರ್ಜುನ.

**1403**

**ದೇಹ ಕಂದಿದಡೇನು ? ದೇಹ ಇಂದುವಿನಂತಾದಡೇನು!**
**ದೇಹ ಬಾತು ಬಿದ್ದಡೇನು ?**
**ದೇಹ ಇದ್ದ ಯೋಗ್ಯತೆಗೆ ಮೈಗೊಟ್ಟಡೇನಯ್ಯಾ ?**
**ಅಂತರಂಗ ಶುದ್ಧವಾದ ಬಳಿಕ ಹೇಗಿದ್ದಡೇನಯ್ಯಾ ?**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹ ಕಂದಿದಡೇನು ದೇಹದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ದೇಹ ಸಂಬಂಧವಿಲ್ಲ. ಆದರೂ ಆತ ದೇಹವನ್ನು ತಾಗದೆ ದೇಹದಲ್ಲಿಯೇ ಇದ್ದು ದೇಹವನ್ನು ಬೆಳಗುತ್ತಿದ್ದಾನೆ.

ದೇಹವನ್ನು ಆವರಿಸಿದ ಮನ ದೇಹದ ಜೊತೆಗೆ ಸಂಗ ಮಾಡಿರುವುದರಿಂದ ದೇಹ ಕಂದುವುದು ಕಂದುವುದು ಬಾಯುವುದು ಮನದ ಗಮನಕ್ಕೆ ಬರುತ್ತದೆ. ಮನ ದೇಹವನ್ನು ತನ್ನ ದಾಗಿಸಿಕೊಂಡಿರುವುದರಿಂದ ದೇಹಕ್ಕೆ ಸುಖದುಃಖಗಳು ಬಂದು ತಾಗುತ್ತವೆ. ದೇಹ ತನ್ನ ಯೋಗ್ಯತೆಯನ್ನು ಪ್ರದರ್ಶಿಸುತ್ತದೆ.

ಅಂತರಂಗ ಶುದ್ಧವಾದ ಬಳಿಕ ಅದು ಜಗದಗಲ ಮುಗಿಲಗಲವಾಗುತ್ತದೆ. ಅದರ ಶ್ರೀಮುಕುಟ ಬ್ರಹ್ಮಾಂಡದಿಂದತ್ತತ್ತ ಚಿಮ್ಮುತ್ತದೆ ದೇಹದ ಶ್ರೀಪಾದ ಪಾತಾಳದಿಂದತ್ತತ್ತ ಚಾಚಾತ್ತದೆ.

**1404**

**ದೇಹವ ನಿರ್ದೇಹಿಗೊಪ್ಪಿಸಿದಲ್ಲಿ ದೇಹ ನಿರ್ದೇಹವಾಗಿತ್ತು.**
**ಮನವ ಲಿಂಗಕ್ಕೆ ಅರ್ಪಿಸಿದಲ್ಲಿ ಮನ ಲಿಂಗವಾಗಿ ಮನ ಲೀಯವಾಯಿತ್ತು.**
**ಭಾವದ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತಯ್ಯಾ,**
**ದೇಹ ಮನ ಭಾವವಳಿದಲ್ಲಿ ಕಾರಣ ಕಾಯ ಅಕಾಯವಾಯಿತ್ತು.**
**ಎನ್ನ ದೇಹದ ಸುಖವ ಲಿಂಗ ಭೋಗಿಸುವುದಾಗಿ,**
**ಶರಣಸತಿ ಲಿಂಗಪತಿ ಎಂಬ ಭಾವ ಅಳವಟ್ಟಿತ್ತಯ್ಯಾ ಎಲೆ ಕಪಿಲಸಿದ್ಧಮಲ್ಲಿ ಕಾರ್ಜುನಾ.**

ದೇಹದೊಳಗೆ ಮನೋಮಯವಾದ ಒಂದು ದೇಹವಿದೆ; ಇದು ದೇಹವನ್ನು ಆವರಿಸಿದೆ ದೇಹದಲ್ಲಿಯೇ ಅರಿವಿನ ಒಂದು ದೇಹ ಸಂಗಮವಾಗಿದೆ ಇದು ಕೂಡ ನಿರ್ದೇಹವೆ ಆಗಿದೆ ಮನೋಮಯವಾದ ನಿರ್ದೇಹವನ್ನು ಮತ್ತು ಈ ದೇಹ ಸಂಗಮಾಡಿದ ಸ್ಥೂಲದೇಹವನ್ನು ಅರಿವಿನ ನಿರ್ದೇಹಕ್ಕೆ ಒಪ್ಪಿಸಿದಲ್ಲಿ ಸ್ಥೂಲದೇಹ ನಿರ್ದೇಹವಾಗುತ್ತದೆ ನಿರಾಳವಾಗುತ್ತದೆ. ಅಂಗದಲ್ಲಿಯೆ

ಸಂಗಮವಾದ ಅರಿವಿನ ಲಿಂಗಯ್ಯನಿಗೆ ಮನ ಅರ್ಪಿಸಿದಲ್ಲಿ ಘನಮನವಾಗುತ್ತದೆ.

ಭಾವ ಭಾವದಲ್ಲಿಯೇ ಸಂಗಮವಾದ ನಿರ್ಭಾವಕ್ಕೆ ಅರ್ಪಿಸಿದಲ್ಲಿ ಭಾವ ಬಯಲಾಗುತ್ತದೆ. ದೇಹ ಮನ ಭಾವ ಅಳಿದಲ್ಲಿ ಕಾಯ ಅಕಾಯವಾಗುತ್ತದೆ. ಆಗ ದೇಹದ ಸುಖ ಲಿಂಗಭೋಗಿಸುತ್ತದೆ. ಶರಣಸತಿ ಲಿಂಗಪತಿ ಎಂಬ ಭಾವ ಅಳವಡುತ್ತದೆ.

**1405**

**ಸ್ಥೂಲವಾದರೇನು ಸೂಕ್ಷ್ಮವಿಲ್ಲದನ್ನಕ್ಕರ ?**
**ಕಳೆಯುಳ್ಳವನಾದಡೇನು ಕುಲವಿಲ್ಲದನ್ನಕ್ಕರ ?**
**ಜಲವಾದಡೇನು ಸ್ಥಲಯೋಗ್ಯವಿಲ್ಲದನ್ನಕ್ಕರ ? ಆ ಕಲಿ ಮಹಿಮನಾದಡೇನು,**
**ಕಲಾಮೂರ್ತಿ ಇಷ್ಟಲಿಂಗವಿಲ್ಲದನ್ನಕ್ಕರ, ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಸ್ಥೂಲದೇಹ ಬಲಶಾಲಿಯಾದಡೇನು ? ಸೂಕ್ಷ್ಮಾತಿಸೂಕ್ಷ್ಮವಾದ ಅರಿವನ್ನು ಬಳಕೆ ಮಾಡುವ ಸೂತ್ರ ಅದಕ್ಕೆ ಗೊತ್ತಾಗದಿದ್ದೊಡೆ ವ್ಯರ್ಥ. ಸಕಲ ಕಲಾವಲ್ಲಭನಾದಡೇನು ? ಅರಿವಿನ ಕುಲವಿಲ್ಲದ ದೇಹ ಅದು ವ್ಯರ್ಥ. ಜಲವಾದಡೇನು ಸ್ಥಲಯೋಗ್ಯವಿಲ್ಲದನ್ನಕ್ಕರ, ಆ ಕಲಿ ಸಕಲ ಕಲಾಮಹಿಮನಾದಡೇನು ಕಾಯದಲ್ಲಿಯೇ ತನ್ಮಯವಾದ ಅರಿವಿನ ಕಾಯವನ್ನು ಅರಿಯದ ಕಾಯ ವ್ಯರ್ಥ.

**1406**

**ಎಂದಿಪ್ಪೆನಯ್ಯಾ ಲಿಂಗಪೂಜೆಯ ಮಾಡುತ್ತ ?**
**ಎಂದಿಪ್ಪೆನಯ್ಯಾ ಜಂಗಮವನರ್ಪಿಸುತ್ತ ?**
**ಎಂದಿಪ್ಪೆನಯ್ಯಾ ಪ್ರಮಥ ಸಹ ಭೋಜನ ಪಂಕ್ತಿಯಲ್ಲಿ ?**
**ಎಂದಿಪ್ಪೆನಯ್ಯಾ ನಮ್ಮ ಚೆನ್ನಬಸವಣ್ಣನ**
**ಪಾದೋದಕ ಪ್ರಸಾದವ ಸೇವಿಸುತ್ತ ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನ ಪರಿಚಯವಾದ ಅಂಗವದು ಬರಿಯ ಅಂಗವಲ್ಲ ಸರ್ವಾಂಗವೂ ಲಿಂಗ. ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನ ಪೂಜೆಯ ಮಾಡುವ ತವಕ ಲಿಂಗಕ್ಕೆ, ಅಂಗದಲ್ಲಿಯೇ ಸಂಗಮವಾದ ಜಂಗಮವನು ಅರ್ಚಿಸುವ ತವಕ ಅಂಗಕ್ಕೆ. ಅರಿವನ್ನು ಕರಗತಮಾಡಿಕೊಂಡು ಆ ಅರಿವೇ ಆದ ಶರಣರ ಭೋಜನ ಪಂಕ್ತಿಯಲ್ಲಿ ಭೋಜಿಸುವ ತವಕ ಅಂಗಕ್ಕೆ, ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ಪಾದೋದಕ ಪ್ರಸಾದವ ಸೇವಿಸುತ ಸದಾ ಪರಮ ಸುಖಿಯಾಗಿ ಜೀವಿಸುವ ತವಕ ಅರಿವಿನ ಅಂಗಕ್ಕೆ.

**1407**

**ನಂಬಿದೆನಯ್ಯಾ ಲಿಂಗವ ನೋಡಿ, ನಂಬಿದೆನಯ್ಯಾ ಲಿಂಗದೊಡಗೂಡಿ**
**ನಂಬಿದೆನಯ್ಯಾ ನಾನೆ ಚೆನ್ನಬಸವಣ್ಣನೆಂದು, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರುಮುಖಾಂತರ ಅರಿವಿಗೆ ಹೋಗುವ ಸೂತ್ರವನ್ನು ಆಲಿಸಬಹುದು ಹಲವಾರು

ಉಪನ್ಯಾಸಗಳನ್ನು ಗುರುಮುಖದಿಂದ ಕೇಳಬಹುದು ಆದರೂ ಜ್ಞಾನಿಯಾಗುವುದು ದುರ್ಲಭ ಗುರುಸೂತ್ರವನ್ನು ಹಿಡಿದು ತನ್ನ ಸ್ವಾನುಭವದಿಂದ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ನೋಡಿದಾಗ, ತನಗೆ ತಾನೆ ನಂಬಿಕೆಯುಂಟಾಗುತ್ತದೆ. ಸ್ವತಃ ತಾನೇ ಲಿಂಗಯ್ಯನನ್ನು ನೋಡಿ ನಂಬಿ ಆತನೊಂದಿಗೆ ಒಂದಾಗುತ್ತಾನೆ.

ಅರಿವಿನ ಸೂತ್ರವನ್ನು ಹೇಳಿದ ಗುರುದೇವನು ಬೇರಲ್ಲ, ಅಂಗದಲ್ಲಿ ಸಂಗಮವಾದ ಗುರುದೇವನು ಬೇರಲ್ಲ. ಅಂಗವನ್ನು ಆವರಿಸಿದ ಮನವೆಂಬ ನಾನು ಕೂಡ ಬೇರಲ್ಲ ಎಂದು ಬಲವಾಗಿ ನಂಬುತ್ತಾನೆ. ನಂಬಿ ನಂಬಿ ನಂಬಿದ ಆ ಗುರುದೇವನು ತಾನು ಒಂದಾಗುತ್ತಾನೆ.

**1408**

**ಇನ್ನು ಹೊಗಳುವೆನಯ್ಯಾ ಲಿಂಗದ ಕುಲಾವಳಿಯನ್ನೆತ್ತಿ**
**ಇನ್ನು ಹೊಗಳುವೆನಯ್ಯಾ ಜಂಗಮದ ಜ್ಞಾನವ ಕಂಡು**
**ಇನ್ನು ಹೊಗಳುವೆನಯ್ಯಾ , ಚೆನ್ನಬಸವಣ್ಣನೆಂಬ ಪರಾತ್ಪರ ಗುರುಮೂರ್ತಿಯ**
**ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನು ಜಗದಗಲ ಮುಗಿಲಗಲ. ಆತನಿಗಿಂತ ದೊಡ್ಡ ಅವ್ಯಕ್ತ ವ್ಯಕ್ತಿ ಯಾರೂ ಇಲ್ಲ, ಆತ ವಿರಾಟ ಸ್ವರೂಪಿ ಹೊಗಳಿದರೆ ಆತನನ್ನು ಹೊಗಳಬೇಕು. ಆತ ಜಂಗಮನು ಹೌದು, ಲಿಂಗಯ್ಯನೂ ಹೌದು, ಗುರುದೇವನು ಹೌದು ಮಹಾದೇವನು ಹೌದು, ಸದಾಶಿವನೂ ಹೌದು, ಸಾಕ್ಷಾತ್ ಪರಬ್ರಹ್ಮನು ಹೌದು, ಹೊಗಳಿದರೆ ಪರಮಾತ್ಮನನ್ನೆ ಹೊಗಳುವೆನಯ್ಯಾ, ಚೆನ್ನಬಸವಣ್ಣನೆಂಬ ಪರಾತ್ಪರ ಗುರುವೂ ಆತನೆ ಆಗಿದ್ದಾನೆ ಕಪಿಲಸಿದ್ಧಮಲ್ಲಿಕಾರ್ಜುನಾ.

**1409**

**ಮಾಡಬೇಕು ಮಾಡಬೇಕು ಮನವೊಲಿದು ಲಿಂಗಪೂಜೆಯ.**
**ನೋಡಬೇಕು ನೋಡಬೇಕು ಮನವೊಲಿದು ಲಿಂಗ ಸಂಭ್ರಮವ.**
**ಹಾಡಬೇಕು ಹಾಡಬೇಕು ಮನವೊಲಿದು ಲಿಂಗಸ್ತೋತ್ರವ,**
**ಕೂಡಬೇಕು ಕೂಡಬೇಕು ಕಪಿಲಸಿದ್ಧಮಲ್ಲಿಕಾರ್ಜುನಾ,**
**ಎನ್ನ ಗುರು ಚೆನ್ನಬಸವಣ್ಣ ಕೊಟ್ಟ ಇಷ್ಟಲಿಂಗದಡಿಯಲ್ಲಿ.**

ಗುರುದೇವ ಕೊಟ್ಟಲಿಂಗ ಅದು ಅಂಗದ ಮೇಲೆ ಧರಿಸುವ ಲಿಂಗವಲ್ಲ, ಅಂಗದಲ್ಲಿಯೆ ಸಂಗಮವಾದ ಗುರುವಾಗಿ ಮಾತನಾಡುವ ಲಿಂಗವನ್ನು ಅಂಗದ ಕೈಯಲ್ಲಿ ಕೊಟ್ಟು ಉದ್ಧರಿಸಿದ ಗುರುದೇವ. ಗುರುದೇವ ಕೊಟ್ಟ ಲಿಂಗದ ಪೂಜೆಯನ್ನು ಮನವೊಲಿದು ಮಾಡಬೇಕು ಮಾಡಬೇಕು. ನೋಡಬೇಕು ನೋಡಬೇಕು, ಮನವೊಲಿದು ಲಿಂಗಯ್ಯನ ಸಂಭ್ರಮವನ್ನು ಹಾಡಬೇಕು ಹಾಡಬೇಕು, ಮನವೊಲಿದು ಲಿಂಗಸ್ತೋತ್ರವನ್ನು ಕೂಡಬೇಕು ಕೂಡಬೇಕು ಅಂಗದಲ್ಲಿಯೆ ಸಂಗಮವಾದ ಲಿಂಗಯ್ಯನ ಪಾದ ಕಮಲದಲ್ಲಿ.

**1410**

**ಮಾಡುವೆನಯ್ಯಾ ಪೂಜೆಗೆಂದು ದ್ರವ್ಯನಾಶವನು.**

**ನೋಡುವೆನಯ್ಯಾ ಲಿಂಗಸಂಭ್ರಮಕೆಂದು ಪೂದೋಟಗಳ.**
**ಹಾಡುವೆನಯ್ಯಾ ನಾಟ್ಯರಚನೆಗೆಂದು ಗಾನವ.**
**ಕೂಡುವೆನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನ ಇಷ್ಟಲಿಂಗದಲ್ಲಿ.**

ಮನ ತನುವನ್ನು ಆವರಿಸಿದೆ. ಅದರೊಂದಿಗೆ ಭೌತಿಕ ಸುಖಗಳನ್ನು ಪಡೆಯುತ್ತದೆ ಅದು ಎಲ್ಲಿಯವರಿಗೆ ಭೌತಿಕ ದ್ರವ್ಯಗಳನ್ನು ಅದು ಆಶಿಸುತ್ತದೆಯೊ ಅಲ್ಲಿಯವರೆಗೆ ತನುವಿನಲ್ಲಿಯೆ ತನ್ಮಯವಾದ ಆಂತರಿಕ ಸುಖ ಹತ್ತಿರವಿದ್ದರೂ ಪರಿಚಯವಿಲ್ಲದೆ ಬಹುದೂರ ಹೋಗುತ್ತದೆ.

ಮನಕ್ಕೆ ತನುವಿನಲ್ಲಿಯೆ ತನ್ಮಯವಾದ ಅರಿವೆಂಬ ಗುರುದೇವನಲ್ಲಿಯೆ ಸುಖದ ಆಸೆ ಉಂಟಾದಾಗ ಅದು ಬಾಹ್ಯ ಸುಖವನ್ನು, ತನಗೆ ಬೇಕಾದ ಬಾಹ್ಯ ದ್ರವ್ಯವನ್ನು ನಾಶಮಾಡುತ್ತದೆ. ಸಕಲ ದ್ರವ್ಯಗಳು ತೃಣವಾಗಿ ಕಂಡು ತನಗೆ ತಾನೆ ನಾಶಕ್ಕೆ ಒಳಗಾಗುತ್ತವೆ. ಇದು ಒಂದು ಲಿಂಗಯ್ಯನಿಗೆ ಮಾಡುವ ಮಹಾಪೂಜೆ. ಈ ಮಹಾಪೂಜೆ ಲೋಕಕ್ಕೆ ಅರ್ಥವಾಗುವುದಿಲ್ಲ. ಹೀಗೆ ಮಾಡಿದ ಪೂಜೆ ಲೋಕಕ್ಕೆ ಕಾಣುವುದೂ ಇಲ್ಲ. ತನಗೆ ತಾನೇ ಹೂದೋಟಗಳನ್ನು ನೋಡಿ ನೋಡುತ್ತಾ ನೋಡುತ್ತಾ ನೋಟದ ಮೂಲಕವೇ ಲಿಂಗಯ್ಯನನ್ನು ಪೂಜಿಸುತ್ತಾನೆ. ಇದು ಕೂಡ ಒಂದು ಪೂಜೆಯೇ ಆಗಿದೆ. ತೋಟದಲ್ಲಿಯ ಹೂಗಳನ್ನು ಕೀಳದೆ ನೋಡುತ್ತ ನೋಡುತ್ತ ತನಗೆ ತಾನೆ ಸಂಭ್ರಮಿಸುತ್ತಾನೆ ತನಗೆ ತಾನೆ ಹಾಡುತ್ತಾನೆ ತಾನು ಹಾಡುವ ಹಾಡು ಲಿಂಗಯ್ಯನಿಗೆ ಮಾತ್ರ ಕೇಳುತ್ತದೆ. ತನಗೆ ತಾನೇ ಇಷ್ಟಲಿಂಗದಲ್ಲಿ ಕೂಡಿ ಕೂಡದ ಅಗಲದ ಕೂಟದ ಅರಿವಿನ ಸುಖವನ್ನು ಅನುಭವಿಸುತ್ತಾನೆ.

**1411**

**ಮದ್ದುತಿಂದ ಮನುಜನಂತೆ ವ್ಯರ್ಥಹೋಗದಿರಾ ಮನವೆ.**
**ವರ್ಷದಲಾದಡೂ ಒಂದು ದಿವಸ ಶಿವರಾತ್ರಿಯ ಮಾಡು ಮನವೆ,**
**ಕಪಿಲಸಿದ್ಧ ಮಲ್ಲೇಶನೆಂಬ ಇಷ್ಟಲಿಂಗಕ್ಕೆ.**

ಮನವೆಂಬುದು ಮರ್ಕಟ. ಅದಕ್ಕೆ ತಾನು ಒಮ್ಮೆಯಾದರೂ ಶಿವನ ಅಂಶವೆ ಆದ ಆಂಜನೇಯ ನಾಗಬೇಕೆಂದು ಅನಿಸುವುದೇ ಇಲ್ಲ. ದೇಹವೆಂಬ ದೇವಾಲಯವನ್ನು ಆವರಿಸಿ ದೇಹದಲ್ಲಿದ್ದ ದೇವರನ್ನು ಒಮ್ಮೆಯೂ ನೋಡದೆ ಮರ್ಕಟವಾಗಿಯೇ ಸತ್ತರೆ ಏನು ಉಪಯೋಗವೆಂದು ಅದಕ್ಕೆ ಒಮ್ಮೆಯೂ ಅನಿಸುವುದಿಲ್ಲ.

ಸಿದ್ಧರಾಮ ಶಿವಯೋಗಿಗಳು ಈ ಲೋಕದಲ್ಲಿರುವ ತನುಗಳನ್ನು ಆವರಿಸಿದ ಮನಕ್ಕೆ ಅರಿವಿನ ಸೂತ್ರದ ಸುಂದುರವಾದ ಮಾತನ್ನೆ ಹೇಳಿದ್ದಾರೆ.

ಮನವೆ, ಮದ್ದುತಿಂದ ಮನುಜನಂತೆ ವ್ಯರ್ಥ ಹೋಗದಿರಾ ಎಲೆ ಮನವೆ, ವರ್ಷದಲ್ಲಿ ಒಂದು ದಿವಸವಾದರೂ ಶಿವರಾತ್ರಿ ಮಾಡು. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಪೂಜಿಸಿ ಆ ಲಿಂಗಯ್ಯನ ಅಂಶವೇ ಆದ ಮಹಾಜ್ಞಾನಿ ಆಂಜನೇಯನೆ ನೀನಾಗು ಮನವೆ.

**1412**

**ಲೋಕದಲ್ಲಿ ಸಾರ್ವಭೌಮರು ತಮ್ಮ ರಾಣಿಯರಿಗೆ ಮೈಗೊಟ್ಟರಲ್ಲದೆ,**
**ಮೂಲೋಕದರಸ ಎನ್ನ ಕಪಿಲಸಿದ್ಧಮಲ್ಲೇಶನೆಂಬ**

**ಇಷ್ಟಲಿಂಗಕ್ಕೆ ಮೈಗೂಡದೆ ಭವಕ್ಕೀಡಾದರು, ಮನವೆ, ತಿಳಿ ನೀನು ಕಂಡಾ.**

ಬ್ರಹ್ಮಾಂಡದಲ್ಲಿ ಏಳು ನೂರಾ ಮೂವತ್ತು ಕೋಟಿ ತನುಗಳಿವೆ. ಈ ತನುಗಳು ತನುವಿನಲ್ಲಿಯೇ ತನ್ಮಯವಾದ ಅರಿವಿನ ಅರಸನನ್ನು ಕಂಡುಕೊಳ್ಳಲಿಲ್ಲ. ಆ ಅರಸನಿಗೆ ಸ್ವತಃ ತಾವು ರಾಣಿಯರಾಗಲಿಲ್ಲ.

ಲೋಕದ ಸಾರ್ವಭೌಮರು ತಮ್ಮ ತಮ್ಮ ರಾಣಿಯರಿಗೆ ಮೈಗೊಟ್ಟ ತನು ತನುವಿನೊಂದಿಗೆ ಸಂಬಂಧ ಬೆಳೆಸಿತು. ತನುವಿನಲ್ಲಿಯೆ ತನ್ಮಯವಾದ ಮೂಲೋಕದ ಅರಸನನ್ನು ತನುವನ್ನು ಆವರಿಸಿದ ಮನ ರಾಣಿಯಾಗಿ ಕೂಡಲಿಲ್ಲ.

ಮೂಲೋಕದ ಅರಸನೆಂದರೆ ಬೇರಾರು ಅಲ್ಲ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯ. ಅಂಗವನ್ನು ಆವರಿಸಿದ ಮನ ಅರಿವಿನ ಲಿಂಗಯ್ಯನನ್ನು ಕೂಡದೆ ಅಂಗವನ್ನು ಭವಕ್ಕೆ ಈಡು ಮಾಡಿತು.

ಅಂಗ ಅಂಗದೊಂದಿಗೆ ಕೂಡುವ ಕೂಟ ಹೆಣ್ಣು ಹೆಣ್ಣು ಕೂಡುವ ಕೂಟ. ಅಂಗವನ್ನು ಆವರಿಸಿದ ಮನ ಸತಿಯಾಗಿ ಅಂಗದಲ್ಲಿಯೆ ಸಂಗವಮವಾದ ಅರಿವಿನ ಲಿಂಗವನ್ನೆ ಪತಿಯಾಗಿಸಿಕೊಂಡು ಕೂಡುವ ಕೂಟ ಸತಿ ಪತಿ ಕೂಡುವ ಕೂಡದ ಅಗಲದ ಕೂಟ. ಮನವೆ ತಿಳಿ ನೀನು ತಿಳಿತಿಳಿದು ನೀನು ಸತಿಯಾಗಿ ನಿನ್ನ ಅರಿವಿನ ಪತಿಯನ್ನು ಕೂಡು, ಈ ಕೂಟ ಬರೀ ಕೂಟವಲ್ಲ ಕೂಡದ ಅಗಲದ ಮಹಾಕೂಟ.

**1413**

**ನೋಡಯ್ಯಾ, ನೋಡಯ್ಯಾ ಲಿಂಗದ ಮಹಿಮೆಯ,**
**ತಾನು ಸೋಂಕಿ ಎನ್ನ ಕಳೆದ, ಎನ್ನ ಸೋಂಕಿ ತಾನೆ ಉಳಿದ.**
**ನೋಡಯ್ಯಾ, ನೋಡಯ್ಯಾ, ಲಿಂಗದ ಮಹಿಮೆಯ.**
**ತಾನೆಂಬುದನುಳಹದೆ ನಿಶ್ಶೂನ್ಯವಾಗಿ ನಿಂದ ನೋಡಯ್ಯಾ**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನ ಮಹಿಮೆಯನ್ನು ಏನೆಂದು ಹೇಳಲಿ? ನೋಡಯ್ಯಾ ನೋಡಯ್ಯಾ ತಾನು ನನ್ನನ್ನು ಸೋಂಕಿ, ನನ್ನ ಅಜ್ಞಾನವನ್ನೆ ಕಳೆದ ನನ್ನ ಅಹಂಕಾರವನ್ನೂ ಕಳೆದ ನನ್ನನ್ನು ಸೋಂಕಿ ಅಂಗದಲ್ಲಿ ಲಿಂಗಾಂಗವಾಗಿ ತಾನೆ ಉಳಿದ.

ನೋಡಯ್ಯಾ ನೋಡಯ್ಯಾ ಏನೆಂದು ಹೇಳಲಿ ಲಿಂಗದ ಮಹಿಮೆಯನು ನಾನೆಂಬುದನು ಅಂಗದಲ್ಲಿ ಉಳುಹದೆ ನಿಶ್ಶೂನ್ಯವಾಗಿ ವಿರಾಟಸ್ವರೂಪಿಯಾಗಿ ನಿಂದ ನೋಡಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನ.

**1414**

**ಲೋಕದಲ್ಲಿಹ ವಿಟರೆಲ್ಲ ವಾರಾಂಗನೆಯ ನೋಡಿದರಲ್ಲದೆ,**
**ನಮ್ಮ ವಾರಾಂಗನನೊಬ್ಬರೂ ನೋಡಲಿಲ್ಲಯ್ಯಾ.**
**ಲೋಕದಲ್ಲಿಹ ಕುಶಲರೆಲ್ಲ ಜಂಗಮನೊಂದಿಗೆ ನುಡಿದರಲ್ಲದೆ,**
**ಎಮ್ಮ ಲಿಂಗ ದೊಂದಿಗೊಬ್ಬರು ನುಡಿದವರಿಲ್ಲ ಕಂಡಯ್ಯಾ.**

**ಕಪಿಲಸಿದ್ಧಮಲ್ಲಿಕಾರ್ಜುನಾ ನಾನೊಬ್ಬನೆ ಪ್ರಮಥರ ಮುಂದೆ.**

ಲೋಕದಲ್ಲಿರುವ ವಿಟರುಗಳು ವಾರಾಂಗನೆಯ ನೋಡಿದರು. ಅಂಗದಲ್ಲಿಯೆ ಸಂಗಮವಾದ ಅರಿವಿನ ಲಿಂಗಯ್ಯನೆಂಬ ವಾರಾಂಗನನ್ನು ಒಬ್ಬರೂ ನೋಡಲಿಲ್ಲ.

ಲೋಕದಲ್ಲಿರುವ ಗಂಡು ಗಂಡಲ್ಲ, ಹೆಣ್ಣು ಹೆಣ್ಣಲ್ಲ. ಅಂಗವನ್ನು ಆವರಿಸಿದ ಮನ ಹೆಣ್ಣು. ಅಂಗದಲ್ಲಿಯೇ ಸಂಗಮವಾದ ಅರಿವು ಗಂಡು. ಈ ಗಂಡನನ್ನು ಸಿದ್ಧರಾಮ ಶಿವಯೋಗಿಗಳು ವಾರಾಂಗನ ಎಂದು ಕರೆದಿದ್ದಾರೆ. ಈತ ಹೊರಗಿನ ಯಾವ ಹೆಣ್ಣನ್ನು ನೋಡುವುದಿಲ್ಲ. ಅಂಗವನ್ನು ಆವರಿಸಿದ ಮನವೆಂಬ ವಾರಾಂಗನೆಯನ್ನು ಮಾತ್ರ ನೋಡುತ್ತಾನೆ. ಈಕೆ ಇನ್ನೂ ಪ್ರಬುದ್ಧಳಾಗಿಲ್ಲ. ಪ್ರಬುದ್ಧತೆ ಈಕೆಯಲ್ಲಿ ಇಲ್ಲ. ಇನ್ನೂ ಕನ್ಯಾವಸ್ಥೆಯಲ್ಲಿಯೇ ಇದ್ದಾಳೆ. ಆದರೂ ಹೊರಗಿನ ಹಾದರದ ಸುಖದಲ್ಲಿ ತಲ್ಲೀನಳಾಗಿ ಸ್ವತಃ ತನ್ನ ಗಂಡನನ್ನೆ ಮರೆತಿದ್ದಾಳೆ. ಗಂಡನ ಮೇಲೆ ಇಚ್ಛೆ ಆಗುವವರೆಗು ಅರಿವಿನ ನಲ್ಲ ಈಕೆಯನ್ನು ಕೂಡಲಾರ. ಈತ ತನ್ನ ಸತಿಗಾಗಿ ಕಾದು ಕಾದು ಎದುರು ನೋಡುತಿದ್ದಾನೆ. ಮನವೆಂಬ ಸತಿಯಾದರೂ ಪತಿಗೆ ಸತಿಯಾಗದೆ ಕನ್ಯೆಯಾಗಿ ಹಾದರದಲ್ಲಿ ತೊಡಗಿದ್ದಾಳೆ. ತನ್ನ ಹಾದರ ಬಿಟ್ಟು ಪತಿಗೆ ಸತಿಯಾಗುವವರೆಗೂ ಪತಿ ಸತಿಯನ್ನು ತನ್ನಂತೆ ಮಾಡಿಕೊಳ್ಳುವುದಿಲ್ಲ. ಹಾವು ಸಾಯುವುದಿಲ್ಲ ಕೋಲು ಮುರಿಯುವುದಿಲ್ಲ ಎನ್ನುವ ಸ್ಥಿತಿಯಲ್ಲಿ ಇಬ್ಬರೂ ಇದ್ದಾರೆ.

ಇದೊಂದು ಬೆಡಗಿನ ವಚನ. ಶರಣರ ಮಾತಗಳು ಕೂಡ ಬೆಡಗಿನ ಮಾತುಗಳೇ ಆಗಿವೆ. ಗುರು ಲಿಂಗ ಜಂಗಮವನ್ನು ಲೋಕ ವ್ಯಕ್ತಿಗಳಾಗಿ ಕಾಣುತ್ತದೆ ಆದರೆ ಗುರು ಲಿಂಗ ಜಂಗಮ ತನುವುಳ್ಳವರಲ್ಲ. ತನುವಿನಲ್ಲಿ ತನ್ಮಯರಾದವರು. ಇವರೊಂದಿಗೆ ನುಡಿದವರು ವಿರಳಾತಿ ವಿರಳ.

**1415**

**ಲಿಂಗಾರ್ಚನಾತ್ಪರಂ ಪೂಜ್ಯಂ ಎಂಬ ಶ್ರುತಿಶಾಖೆ ಇಂದನುಭವಕ್ಕೆ ಬಂದಿತ್ತಯ್ಯಾ**
**ಲಿಂಗಾಂಗೀ ಪರಮಶುಚಿಃ ಎಂಬ ಸಾಮ ವೇದ ಶಾಖೆ ಸಮನಿಸಿತ್ತಯ್ಯಾ.**
**ಮುನ್ನ ಮಾಡಿದ್ದೇ ಮಾಡಿದೆ, ಹೋಮವನಿನ್ನು ಮಾಡಿದಡೆ ತಲೆದಂಡ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗ ತನ್ನೊಳಗೆ ಲಿಂಗವನ್ನು ಬಚ್ಚಿಟ್ಟುಕೊಂಡು, ತಾನು ಸ್ವತಃ ಲಿಂಗಾಂಗಿಯೇ ಆದರು, ಅಂಗದಿಂದಲೇ ಲಿಂಗವನ್ನು ಮಾಡಿ ಆ ಲಿಂಗವನ್ನೆ ಲಿಂಗವೆಂದು ತಿಳಿದು ಪೂಜಿಸುತ್ತ, ತನ್ನಂಗದಲ್ಲಿಯೇ ಸಂಗಮವಾದ ಲಿಂಗಯ್ಯನನ್ನು ಮರೆತು ಹೋಗುತ್ತದೆ. ಲಿಂಗಾರ್ಚನಾತ್ಪರಂ ಪರ ಪೂಜ್ಯಂ ಎಂಬ ಶ್ರುತಿಯ ಮಾತನ್ನು ಕೂಡ ಅಂಗ ಮರೆತು ಹೋಗಿದೆ. ಲಿಂಗಾಂಗೀ ಪರಮ ಶುಚಿಃ ಎಂಬ ಸಾಮವೇದದ ಮಾತನ್ನು ಕೂಡ ಮರೆತುಹೋಗಿ ಮುನ್ನ ಮಾಡಿದ್ದನ್ನೆ ಮತ್ತೆ ಮತ್ತೆ ಮಾಡುತ್ತದೆ.

ಹೋಮ - ಹಯನ, ಯಜ್ಞ - ಯಾಗಾದಿಗಳನ್ನು ಮಾಡಿ ಭ್ರಮಾ ಸುಖವನ್ನು ಹೊಂದುತ್ತದೆ.

ಮುನ್ನ ಅದೆಷ್ಟೊ ಜನ್ಮಗಳ ಪರ್ಯಂತ ತಿಳಿಯದ ಕಾರಣ ಹೋಮವನ್ನು ಮಾಡಿದೆ ಅಂಗದಲ್ಲಿ ಸಂಗಮವಾದ ಲಿಂಗಯ್ಯ ಯಾರೆಂಬುದು ನನಗೆ ತಿಳಿದಿದೆ. ಹೀಗಾಗಿ ಸರ್ವಾಂಗವೂ ಲಿಂಗಾಂಗವಾಗಿದೆ. ಇನ್ನು ಹೋಮವನ್ನು ಮಾಡಿದಡೆ ತಲೆದಂಡ. ಏಕೆಂದರೆ ಅಂಗ ಬರಿ ಅಂಗವಲ್ಲ ಅದು ಲಿಂಗಾಂಗ ಪರಮಶುಚಿ ಎಂಬ ಸಾಮವೇದದ ಮಾತು ಎನಗೆ ಇಂದು ಸಮನಿಸಿತ್ತು

ಲಿಂಗಾರ್ಚನಾತ್ಪರಂ ಪೂಜ್ಯಂ ಎಂಬ ಶ್ರುತಿಯ ಮಾತು ಇಂದು ಎನ್ನ ಅನುಭವಕ್ಕೆ ಬಂದಿತ್ತು ಕಪಿಲಸಿದ್ಧಮಲ್ಲಿಕಾರ್ಜುನ.

**1416**

**ಲಿಂಗ ಬಂದು ಲಿಂಗಗಳನಳಿಯಿತ್ತಯ್ಯ ಲಿಂಗವೆ.**
**ಲಿಂಗ ಬಂದು ಲಿಂಗಗಳನೀಡಾಡಿತ್ತಯ್ಯ ಲಿಂಗವೆ. ಲಿಂಗ ಬಂದು ಉಳಿಯಿತ್ತಯ್ಯ.**
**ಲಿಂಗರೆ ಗುರು ಲಿಂಗವೆ ಜಂಗಮ ಲಿಂಗವೆ ನಾನು ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನನ್ನು ಅರಿತರಿತು ಅಂಗ ಲಿಂಗಾಂಗವಾಗಿದೆ. ಅಂಗದ ಮೂಲಕ ಲಿಂಗಗಳನ್ನು ಕೆತ್ತಿ, ಆ ಲಿಂಗಕ್ಕೆ ಆಲಯ ಕಟ್ಟಿ, ತಾನು ಮಾಡಿದ ಲಿಂಗವನ್ನೆ ಲಿಂಗ ಎಂದು ತಿಳಿದು, ಏಳು ನೂರಾ ಮೂವತ್ತು ಕೋಟಿ ಅಂಗಗಳು ಪಾಶಾಣವನ್ನೆ ಲಿಂಗವೆಂದು ತಿಳಿದು ಆರಾಧಿಸುತ್ತವೆ. ಇದು ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನ ಲೀಲೆಯೆ ಹೊರತು ಮತ್ತೇನು ಅಲ್ಲ. ಅಂಗ ಮಾಡಿದ ಲಿಂಗ ಲಿಂಗವಲ್ಲವೆಂದು ಅಂಗದಲ್ಲಿಯೆ ಸಂಗಮವಾದ ಲಿಂಗಯ್ಯನೇ ಬಂದು, ಅಂಗ ಮಾಡಿದ ಸಕಲ ಲಿಂಗಗಳನ್ನು ಒಮ್ಮಿಲ್ಲ ಒಮ್ಮೆ ಅಳಿಯುತ್ತಾನೆ. ಸಕಲ ಲಿಂಗಗಳನ್ನು ನೆಲಸಮಮಾಡುತ್ತಾನೆ.

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯ ಮಾತ್ರ ಈ ಬ್ರಹ್ಮಾಂಡದಲ್ಲಿ ಉಳಿಯುತ್ತಾನೆ ಹೊರತು ಅಜ್ಞಾನದಿಂದ ಮಾಡಿದ ಲಿಂಗಗಳು ಉಳಿಯುವುದಿಲ್ಲ. ನಾನು ಎನ್ನುವ ಅಹಂಕಾರ ನಷ್ಟವಾದರೆ ಗುರು ಲಿಂಗ ಜಂಗಮ ನಾನೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ.

**1417**

**ದರ್ಪಣದಲ್ಲಿ ಮುಖವ ನೋಡುವರಲ್ಲದೆ.**
**ದರ್ಪಹರನಲ್ಲಿ ಮುಖವ ನೋಡುವರೊಬ್ಬರು ಇಲ್ಲ, ನೋಡಯ್ಯಾ**
**ನ್ಯಾಯದಲ್ಲಿ ದ್ರವ್ಯವ ಕೊಡುವರಲ್ಲದೆ,**
**ನ್ಯಾಯತೀತನ ಪೂಜೆಗೆ ಒಬ್ಬನೂ ಭಂಡಾರವೀಡಾಡಲಿಲ್ಲ,**
**ಕಪಿಲಸಿದ್ಧಮಲ್ಲಿಕಾರ್ಜುನಗಳ್ಳರು.**

ದರ್ಪಣದಲ್ಲಿ ಭೌತಿಕ ಮುಖ ಕಾಣುತ್ತದೆ. ತಿದ್ದಿ ತೀಡಿ ಓರಣವಾಗಿಸಿಕೊಳ್ಳ ಬಹುದಾಗಿದೆ. ಆದರೆ ದರ್ಪಣದಲ್ಲಿ ನನ್ನ ಹಾದರದ ಮುಖ ಕಾಣುವುದಿಲ್ಲ. ದರ್ಪಣ ನೋಡಿ ನನ್ನ ಹಾದರದ ಮುಖವನ್ನು ತಿದ್ದಿ ತೀಡಿ ಸರಿಮಾಡಿಕೊಳ್ಳಲು ಬರುವುದಿಲ್ಲ.

ಹಾದರದ ಮುಖವಾಡವನ್ನು ಕಿತ್ತೆಸೆಯುವ ಶಕ್ತಿ ದರ್ಪಹರನಿಗೆ ಮಾತ್ರ ಇದೆ; ಆದರೆ ಹಾದರದ ಮುಖಕ್ಕೆ ದರ್ಪಹರನ ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಂಡು ತನ್ನ ಮುಖವಾಡ ಕಳಚಿಕೊಳ್ಳುವ ಉತ್ಕಟ ಬಯಕೆ ಉಂಟಾಗಬೇಕು.

ಮುಖಕ್ಕೆ ಮೆತ್ತಿಕೊಂಡ ಹಾದರವನ್ನು ಕಿತ್ತಿಕೊಳ್ಳಬೇಕು ಎಂದು ಯಾವ ಹಾದರದ ಮುಖಕ್ಕೂ ಬಯಕೆ ಆಗುವುದೇ ಇಲ್ಲ. ಇದು ದರ್ಪಹರನ ಲೀಲೆ. ಆತನ ಅಪ್ಪಣೆ ಆಗುವವರೆಗೂ

ದರ್ಪದ ಮುಖದ ಸೊಕ್ಕು ಮುರಿಯುವುದಿಲ್ಲ.

ದರ್ಪಹರನ ಪೂಜೆಗೆ ಒಬ್ಬರೂ ದ್ರವ್ಯವ ಕೊಡುವುದಿಲ್ಲ; ಆತನ ಪೂಜೆಗೆ ದ್ರವ್ಯದ ಅವಶ್ಯಕತೆಯೂ ಇಲ್ಲ; ಆತ ನ್ಯಾಯ ದೇವತೆ. ಒಮ್ಮನಕ್ಕೆ ಒಲಿಯುತ್ತಾನೆ. ಆತನ ಪೂಜೆಗೆ ಒಮ್ಮನದ ಕಾಣಿಕೆಯೇ ಸಾಕು. ಪೂಜಿಸುವ ಲೋಕದ ಪೂಜಕರು ಇಮ್ಮನಗಳ್ಳರು.

**1418**

**ಪುಣ್ಯಪಾಪವೆಂಬುದದಾರಿಗರಿಕೆ ಯುಂಟಯ್ಯಾ ?**
**ಪೂಣ್ಯವಂತಿರಲಿ ; ಪಾಪವಂತಿರಲಿ ;**
**ಪೂಜಿಸಿ ಪಡೆಯುವುದು ಪುಸಿಯಲ್ಲ ಇದು ಕಾಕು ಭಾಷೆ ಎಂದಲ್ಲಿ,**
**ಪೂಜಿಸಿದವಂಗೆ ಸಂಪದಾದಿ ಶಕ್ತಿ ಮುಕ್ತಿ ಬರುವುದೇನಿಲ್ಲ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಪುಣ್ಯ ಪಾಪವೆಂಬುದು ಇಡೀ ಲೋಕಕ್ಕೆ ಗೊತ್ತಿದೆ. ಪುಣ್ಯವಿಲ್ಲ ಪಾಪ ವೆಂಬುದು ಕೂಡಾ ಇಲ್ಲವೆಂಬುದು ಜ್ಞಾನಿಗೆ ಮಾತ್ರ ಗೊತ್ತಿದೆ. ಲೋಕ ಪುಣ್ಯವನ್ನು ಪೂಜೆಯ ಕೃಷಿಯೊಂದಿಗೆ ಪಡೆಯುತ್ತದೆ. ಜ್ಞಾನಿ ಪುಣ್ಯ ಪಾಪಗಳನ್ನು ಕೂಡಾ ಕೃಷಿಮಾಡಿಯೇ ಅಲ್ಲಗಳೆಯುತ್ತಾನೆ.

ಪುಣ್ಯ ಪಾಪವೆಂಬುದು ಲೋಕದ ಕಾಕು ಭಾಷೆ. ಪೂಜಿಸಿ ಪೂಜಿಸಿ ಪುಣ್ಯ ಸಂಪಾದನೆ ಮಾಡಿದವನಿಗೆ ಮುಕ್ತಿಯೇನೂ ದಕ್ಕುವುದಿಲ್ಲ. ಪುಣ್ಯ ಪಾಪವೆಂಬುದು ಅಜ್ಞಾನ.

ತನಗೆ ಸುಖವಾಗಲಿ ಎಂದು ಪಾಪ ಕಾರ್ಯಗಳನ್ನು ಮಾಡುತ್ತಾನೆ; ತನ್ನ ಕಾರ್ಯಗಳಿಂದ ಬಂದ ಹೇರಳವಾದ ಧನವನ್ನು ಪುನಃ ದಾನಮಾಡಿ ಪುಣ್ಯವಂತ ಎಂದು ಕರೆಯಿಸಿಕೊಳ್ಳುತ್ತಾನೆ. ಇವು ಎರಡೂ ಕಾರ್ಯಗಳನ್ನು ತನ್ನ ಅಜ್ಞಾನದ ಸುಖಕ್ಕಾಗಿಯೇ ಮಾಡುತ್ತಾನೆ.

ಇವೆರಡೂ ಕಾರ್ಯಗಳನ್ನು ಅರಿತರಿತು ಅರಿವಿನಿಂದ ನೋಡಿದಾಗ ತನಗೆ ತಾನೆ ತನ್ನ ಅನುಭಾವ ತೆರೆದುಕೊಳ್ಳುತ್ತದೆ. ತನ್ನ ಸುಖಕ್ಕಾಗಿ ಪಾಪಮಾಡಿದ ; ತನ್ನ ಸುಖಕ್ಕಾಗಿಯೇ ಪುಣ್ಯಮಾಡಿದ ಇವರೆಡೂ ಒಂದು ನಾಣ್ಯದ ಎರಡು ಮುಖಗಳಿದ್ದಂತೆ ಎಂದು ತನ್ನರಿವಿಗೆ ಬರುತ್ತದೆ.

**1419**

**ಆಗುವುದಾದಡೆ ನಿನ್ನ ಪೂಜೆ ಪೂಜೆಯದೇಕೊಲಿಂಗ, ಲಿಂಗಯ್ಯಾ ?**
**ಯಥಾ ಭಾವಸ್ತಥಾ ದೇವಃ ಎಂಬ ಭಾವವಿದ್ದೆಡೆಯಲ್ಲಿ**
**ಆದಂತಾಗಲಿ, ಹೋದಂತೆ ಹೋಗಲಿ,**
**ನಿಮ್ಮ ಪೂಜಿಸಿದವರಿಗೆ ಸಂಪದಾದಿ ಮಹದೈಶ್ವರ್ಯ**
**ತಪ್ಪದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದ ಮೇಲೆ ಕಟ್ಟಿಕೊಂಡ ಲಿಂಗಯ್ಯನನ್ನು ಪೂಜಿಸಿದರೆ ಫಲಪದ ಪ್ರಾಪ್ತಿಯಾಗುವುದು. ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನನ್ನು ಪೂಜಿಸುವುದು ಹೇಗೆ? ಪೂಜಿಸುವ ನಾನು ಪೂಜೆಗೊಳ್ಳವ ಆತ ಬೇರೆ ಬೇರೆ ಅಲ್ಲ. ಒಂದಂಗದಲ್ಲಿ ಲಿಂಗಯ್ಯನೂ ಇದ್ದಾನೆ; ಆತನನ್ನು ಪೂಜಿಸುವ ನಾನು ಕೂಡಾ ಇದ್ದೇನೆ.

ಫಲಪದವಿಗಳನ್ನು ಬೇಡಿದರೆ ನೀಡುವ ಲಿಂಗಯ್ಯನೇ ಬೇರೆ. ಅಂಗದಲ್ಲಿಯೇ

ಸಂಗಮವಾದ ಲಿಂಗಯ್ಯನೆ ಬೇರೆ. ಅಂಗದ ಮೇಲೆ ಕಟ್ಟಿಕೊಂಡ ಲಿಂಗಯ್ಯನನ್ನು ಬೇಡಿದರೆ ಅಂಗದಲ್ಲಿ ಸಂಗಮವಾದ ಲಿಂಗಯ್ಯನೇ ಬೇಡಿದ ಅಂಗವನ್ನು ತೃಪ್ತಿಪಡಿಸುತ್ತಾನೆ. ಆದರೆ ಬೇಡುವ ಅಂಗಕ್ಕೆ ಗೊತ್ತಿಲ್ಲ. ಹೀಗಾಗಿ ತೃಣ ಬೇಡಿ ತೃಪ್ತ ನಾಗುತ್ತದೆಯೇ ಹೊರತು ಘನವನ್ನು ಬೇಡುವುದಿಲ್ಲ.

ಬೇಡಿದರೆ ಎನ್ನೊಡೆಯನ ಬೇಡುವೆ, ಒಡೆಯಂಗೆ ಒಡಲ ತೋರಿ ಎನ್ನ ಅಜ್ಞಾನದ ಬಡತನವನು ಬಿನ್ನೈಸುವೆ ಎಂಬ ಭಾವದಿಂದ ಬೇಡಿದರೆ ಸಾಕು ಮಹದೈಶ್ವರ್ಯವನು ಕೊಟ್ಟು ಸಲಹುವನು.

**1420**

**ಅಂಗಕ್ಕೆ ಕೊಡುವ ಭೋಗಂಗಳ ಲಿಂಗಕ್ಕೆ ಕೊಟ್ಟು ನೋಡಿರಯ್ಯಾ.**
**ಅಂಗಕ್ಕೆ ಕೊಟ್ಟ ಭೋಗಂಗಳ ಲಿಂಗಂಗಳಾದವು.**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ,**
**ಎನ್ನ ಭೋಗಂಗಳು ಲಿಂಗಭೋಗಂಗಳು.**

ಬಯಸಿ ಬಂದುದು ಅಂಗ ಭೋಗ, ಅಂಗ ಭೋಗ ಲಿಂಗಯ್ಯನಿಗೆ ಅರ್ಪಿತವಾಗುವುದಿಲ್ಲ; ಅದು ಅನರ್ಪಿತ. ಎಂದು ಬಸವಣ್ಣನವರು ಸುಂದರವಾದ ಸೂತ್ರವನ್ನು ರಚನೆ ಮಾಡಿದ್ದಾರೆ.

ಅಂಗಕ್ಕೆ ಕೊಡುವ ಭೋಗಂಗಳು ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಕೊಟ್ಟು ನೋಡಿರಯ್ಯಾ ಎಂದು ಸಿದ್ಧರಾಮಶಿವಯೋಗಿಗಳು ಹೇಳುತ್ತಾರೆ.

ಅಂಗದ ಹಸಿವೆಗೆಂದು ತರೆತರೆದು ತಿಂದೆ ನಾನು; ಲಿಂಗಕ್ಕೆಂದು ಕೊಟ್ಟು ಧನ್ಯರಾದಿರಿ ನೀವು ಎಂದು ತರುಮರಾದಿಗಳೊಂದಿಗೆ ಅಕ್ಕಮಹಾದೇವಿ ಮಾತನಾಡಿದ್ದಾರೆ.

ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು ಕೂಡಲ ಸಂಗಮದೇವನ ನೆನೆಯುತ್ತಾ ಉಂಡರೆ ಕರಣವೃತ್ತಿಗಳು ಅಡಗುವವು. ಮೌನದಲಿ ಉಂಬುವುದು ಆಚಾರವಲ್ಲ ಎಂದು ಬಸವರಸರು ಹೇಳಿದ್ದಾರೆ. ಎನ್ನಂಗದಲ್ಲಿ ನಿನಗೆ ನಿತ್ಯ ಮಜ್ಜನ. ಎನ್ನ ಜಿಹ್ವೆಯಲ್ಲಿ ನಿನಗೆ ಶಡ್ರಸಾನ್ನ ನೈವೇದ್ಯ, ಎನ್ನ ನೇತ್ರದಲ್ಲಿ ನಿನಗೆ ನಾನಾ ವಿಧ ರೂಪಗಳ ಅರ್ಪಣೆ. ಎನ್ನ ನಾಸಿಕದಲ್ಲಿ ನಿನಗೆ ನಾನಾ ವಿಧ ಪುಷ್ಪ ಪರಿಮಳಂಗಳ ಅರ್ಪಣೆ ಎನ್ನ ತ್ವಕ್ಕಿನಲ್ಲಿ ನಿನಗೆ ಸ್ಪರ್ಶ ಸುಖದ ಅರ್ಪಣೆ ಎಂದು ಅಲ್ಲಮಪ್ರಭುದೇವರು ಹೇಳಿದ್ದಾರೆ. ಎಂತಹ ಸುಂದರವಾದ ಸೂತ್ರಗಳನ್ನು ಮನು ಕುಲಕ್ಕೆ ಕೊಟ್ಟಿದ್ದಾರೆ. ಶರಣರ ಸೂತ್ರಗಳನ್ನು ಅರಗಿಸಿಕೊಂಡು ಅನುಭವಕ್ಕೆ ಹೋಗುವ ಜವಾಬ್ದಾರಿ ಮನು ಕುಲಕ್ಕೆ ಇರಬೇಕು. ಮಠಪೀಠ ಆಶ್ರಮಗಳ ಅಧಿಕಾರಿಗಳಿಗೂ ಬರಬೇಕು ಎನ್ನುವ ಬಯಕೆ ಶರಣರದ್ದಾಗಿತ್ತು . ಮನುಕಲಕ್ಕೆ ವಚನ ಸೂತ್ರಗಳ ಹಳಸದ ಬುತ್ತಿ ಬಿಟ್ಟು ಒಳಿತಾಗಲೆಂದು ಹೋಗಿದ್ದಾರೆ ಶರಣರು.

**1421**

**ಅಂಗವೆಂದಡೆ ಅಜ್ಞಾನ, ಲಿಂಗವೆಂದರೆ ಸುಜ್ಞಾನ.**
**ಲಿಂಗವಿಡಿದು ಆಚರಿಸುವುದಲ್ಲದೆ ಅಂಗವಿಡಿದು ಆಚರಿಸಬಾರದು.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವಿನ ಬಯಲ ಬೀಜವೇ ಜಲಬಿಂದುವಿನಲ್ಲಿ ಹೊಕ್ಕು, ಜೀವ ಜಲಬಿಂದುವಾಗಿ ಅಂಗವೆಂಬ ಬೋಧೀವೃಕ್ಷಕ್ಕೆ ಜನ್ಮನೀಡಿದೆ. ಆ ಅರಿವೇ ಗುರುದೇವನಾಗಿ ಅಂಗದಲ್ಲಿಯೇ

ಸಂಗಮವಾಗಿದ್ದಾನೆ ; ಅಂಗವನ್ನು ಅಂಗವನ್ನು, ಆವರಿಸಿದ ಮನವನ್ನು ಅರಿವಿನಿಂದ ಮುನ್ನಡೆಸುವುದಕ್ಕಾಗಿ.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗ ಮವಾದ ಅರಿವೆಂಬ ಗುರುದೇವನ ಸಂಗಮಾಡಿದರೆ ಅಂಗ ಬರೀ ಅಂಗ ವಲ್ಲ ; ಲಿಂಗಾಂಗವಾಗುತ್ತದೆ.

ಅಂಗವನ್ನು ಆವರಿಸಿದ ಮನ ಅಂಗದ ಸಂಗಮಾಡಿದರೆ ಅದು ಬರೀ ಅಂಗವಾಗುತ್ತದೆ. ಅಜ್ಞಾನದ ಅಂಗವಾಗುತ್ತದೆ. ಅಂಗ ಹಿಡಿದು ಆಚರಿಸುವ ಆಚಾರಗಳೆಲ್ಲ ಗೋಚರದ ಆಚಾರಗಳು. ಭಗವದ್ಗೀತೆ ಓದಿದ ಅಂಗ ಹಿಂದುವಾಗುತ್ತದೆ, ಕುರಾನ್ ಓದಿದ ಅಂಗ ಮುಸಲ್ಮಾನನಾಗುತ್ತದೆ. ಬೈಬಲ್ ಓದಿದ ಅಂಗ ಕ್ರಿಶ್ಚಿಯನ್ನನಾಗುತ್ತದೆ. ತ್ರಿಪಿಟಿಕ, ಜೈನಗ್ರಂಥಗಳನ್ನು ಓದಿದ ಅಂಗ ಬೌದ್ಧ, ಜೈನನಾಗುತ್ತದೆ ಗ್ರಂಥ ಸಾಹೇಬ ಓದಿದ ಅಂಗ ಸಿಖ್ ಆಗುತ್ತದೆ. ವಚನಗಳನ್ನು ಓದಿದ ಅಂಗ ವೀರಶೈವನಾಗುತ್ತದೆ ; ಲಿಂಗಾಂಗವಾಗುವುದಿಲ್ಲ.

ಅಂಗವೆಂದಡೆ ಅಜ್ಞಾನ, ಲಿಂಗವೆಂದಡೆ ಸುಜ್ಞಾನ : ಅಂಗವನ್ನು ಆವರಿಸಿದ ಮನ, ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯ ಹೇಳಿದಂತೆ ಕೇಳಬೇಕಲ್ಲದೆ, ಅಂಗದೊಂದಿಗೆ ಸಂಗ ಮಾಡಿ ತನಗೆ ತಿಳಿದಂತೆ ಅಂಗದೊಂದಿಗೆ ವರ್ತಿಸಬಾರದು ಏಕೆಂದರೆ ಅಂಗ ಮನದ್ದಲ್ಲ ಅದು ಲಿಂಗಯ್ಯನ ಸಂಪತ್ತು.

**1422**

**ಲಿಂಗದಲ್ಲಿ ಬೆರೆದಲ್ಲಿ ಬಳಿಕ ಅಂಗದಲ್ಲಿ ಬೆರೆಯಲುಂಟೆ ದೇವಾ ? ಅಲ್ಲಲ್ಲ.**
**ಅಂಗದಲ್ಲಿ ಬೆರೆದ ಬಳಿಕ ಲಿಂಗದಲ್ಲಿ ಬೆರೆಯಲುಂಟೆ ದೇವಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ನಿಮ್ಮ ಪೂಜಿಸಿದ ಫಲ ಪಕ್ವವಾಗದನ್ನಕ್ಕ ?**

ಅಂಗವನ್ನು ಆವರಿಸಿದ ಮನ ಅಂಗದ ಸಂಗ ಕಳಚಿಕೊಂಡು ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಲಿಂಗದ ಸಂಗಮಾಡಿ ಆ ಲಿಂಗದಲ್ಲಿಯೇ ಬೆರೆತ ಬಳಿಕ ಮತ್ತೆ ಅಂಗದ ಸಂಗ ಮಾಡುವುದಿಲ್ಲ. ಲಿಂಗದ ಸಂಗ ಮಾಡಿದ ಮನ ಘನ ಮನವಾಗುತ್ತದೆ. ಲಿಂಗಯ್ಯನನ್ನೆ ಪತಿಯನ್ನಾಗಿಸಿಕೊಂಡು ಆ ಪತಿಗೆ ಮನ ಸತಿಯಾಗುತ್ತಾಳೆ. ಶರಣಸತಿ ಲಿಂಗಪತಿಯಾದ ಬಳಿಕ ಸತಿಪತಿಗಳಿಬ್ಬರೂ ಅಂಗವನ್ನೇ ಮನೆಯನ್ನಾಗಿಸಿಕೊಂಡು ಅಂಗದಲ್ಲಿಯೇ ಅರಿವಿನ ಸಂಸಾರ ಹೂಡುತ್ತಾರೆ.

ಶಿವ ಪಾರ್ವತಿಯರು ವಾಸ ಮಾಡಿದ ಕಾಯ ಕೈಲಾಸವಾಗುತ್ತದೆ ಇಂತಹ ಅರಿವಿನ ಲಿಂಗದಲ್ಲಿ ಬೆರೆದ ಬಳಿಕ, ಮನ ಪುನಃ ಅಂಗದಲ್ಲಿ ಬೆರೆತು ಅಜ್ಞಾನದ ಸಂಸಾರದಲ್ಲಿ ಪಾಲ್ಗೊಳ್ಳಲು ಸಾಧ್ಯವೆ ! ಇಲ್ಲ ಸಾಧ್ಯವಾಗುವುದೇ ಇಲ್ಲ.

ಅಂಗದಲ್ಲಿಯೇ ಸಂಗಮವಾದ ಲಿಂಗದಲ್ಲಿ ಬೆರೆತು ಅಂಗವನ್ನು ಮನೆಯನ್ನಾಗಿಸಿಕೊಂಡ ಬಳಿಕ ಪುನಃ ಅಂಗದ ಮೇಲೆ ಕಟ್ಟಿಕೊಂಡ ಲಿಂಗವನ್ನು ಪೂಜಿಸಲು ಸಾಧ್ಯವೇ, ಆ ಲಿಂಗದಲ್ಲಿ ಬೆರೆಯಲುಂಟೆ ದೇವಾ ? ಕಪಿಲಸಿದ್ಧ ಮಲ್ಲಿಕಾರ್ಜುನಾ ನಿಮ್ಮ ಪೂಜಿಸಿದ ಫಲ ಪಕ್ವವಾಗದನ್ನಕ್ಕ.

**1423**

**ಭೂಮಿ ಒಂದೆಂದಡೆ ಬೆಳೆವ ವೃಕ್ಷ ಹಲವು ತೆರನುಂಟು.**

**ಉದಕ ಒಂದೆಂದಡೆ ಸವಿಸಾರದ ಸಂಪದ ಬೇರುಂಟು.**

**ನಿನ್ನೊಳಗು ನಾನಾದಡೆ ತಾಮಸದ ರಾಗವಿರಾಗವಾಗದು.**

**ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೆಂಬ ಪುರುಷರತಿ ಕೂಟಸ್ಥವಿಲ್ಲ.**

ಭೂಮಿ ಒಂದೆ, ಆದರೆ ಅದರ ಮೂಲಕ ಬೆಳೆಯುವ ವೃಕ್ಷಗಳು ಹಲವು. ಸಸಿ ಒಂದು ತೆರನಾಗಿ ಕಂಡರೆ ಮರ ಒಂದು ತೆರನಾಗಿ ಕಾಣುತ್ತದೆ, ಗಿಡ ಒಂದು ತೆರನಾಗಿ ಕಾಣುತ್ತದೆ. ಅದರ ಮೊಗ್ಗು ಹೂ ಕಾಯಿ ಹಣ್ಣು ಎಲೆ ಕಾಂಡ ಅದಕ್ಕಾಗುವ ಮುಳ್ಳು ಒಂದೆ ಎರಡೇ ಹಲವಾರು ತೆರನಾಗಿ ಕಾಣುತ್ತದೆ. ಬಣ್ಣಿಸಲು ಸಾಧ್ಯವಾಗದ ಹಲವಾರು ತರದ ಗಿಡಮರ ಬಳ್ಳಿಗಳು ಭೂಮಿಯ ಮಣ್ಣನ್ನು ಹಿಡಿದುಕೊಂಡು ಅನಂತ ನಾಮಂಗಳನ್ನು ಹೊತ್ತು ಬೆಳೆದಿವೆ.

ಗಿಡ ಮರ ಬಳ್ಳಿ ಸಸಿಗಳಿಗೆ ಹರಿದ ಜಲ ಒಂದೇ, ಆದರೆ ಅದರ ರುಚಿ ಬೇರೆ ಬೇರೆ. ಕಹಿ ಸಿಹಿ ಒಗರು ಸಪ್ಪೆ ಕ್ಷಾರ ಹುಳಿ ನಾನಾ ತರದ ರುಚಿಗಳನ್ನು ಗಿಡಮರ ಬಳ್ಳಿಗಳು ಜಲ ಒಂದನ್ನೇ ಕುಡಿದು ಸೃಷ್ಟಿಮಾಡಿವೆ. ಇದೆಲ್ಲ ಪ್ರಕೃತಿಗೆ ಬೇಕು, ಆಲ ಹಲಸು ನಿಂಬೆ ಪೇರಲ ಮಾವು ಕಲ್ಲಂಗಡಿ ಕರಬೂಜು, ಕರ್ಜೂರು. ಗರ್ಭದಿಂದ ಹೊರಬಂದ ನೆಲ ಒಂದೇ, ಸೇವಿಸುವ ಜಲವೂ ಒಂದೇ, ಇವೆಲ್ಲದು ಹಾಸು ಹೊಕ್ಕಾಗಿ ಒಂದೇ ನೆಲದಲ್ಲಿ ಬೆಳೆದಿದ್ದರೂ ಒಂದಕ್ಕೊಂದು ನೋಡುವ ಕಂಗಳಿಗೆ ಅನಂತ ಸೊಬಗನ್ನುಂಟುಮಾಡಿವೆ. ಅನ್ಯೋನ್ಯವಾಗಿವೆ. ಅವುಗಳಲ್ಲಿ ಹರಿಯುವ ಜಲ ರಕ್ತವಾಗಿ ಹರಿಯುತ್ತಿಲ್ಲ, ಅದು ವಿರಕ್ತವಾಗಿ ಹರಿಯುತ್ತದೆ. ಹೀಗಾಗಿ ಗಿಡಮರಗಳು ಋತುಗಳನ್ನು ಸುಂದರವಾಗಿ ಕಳೆಯುತ್ತಾ ಇಡೀ ಪ್ರಕೃತಿಗೆ ಮೆರಗನ್ನು ತರುತ್ತವೆ.

ಭೂಮಿಯ ಮೇಲೆ ಜನ್ಮ ತಳೆದ ತನುಗಳು ಕೂಡಾ ಒಂದೇ ಆಗಿವೆ. ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ತನುವಿನೊಳಗೆ ಹರಿಯುವ ರಕ್ತ ಮಾಂಸ ಮೂಳೆ ಮಜ್ಜೆ ಮೇದಸ್ಸು ಕೂಡಾ ಒಂದೇ ಆಗಿದೆ. ಆದರೂ ಸಮಾಧಾನಿಯಾಗಿಲ್ಲ. ಬೋಧೀವೃಕ್ಷವೇ ತಾನಾಗಬೇಕಿದ್ದ ತನು ಇಡೀ ಮನುಕುಲಕ್ಕೆ ಪ್ರಕೃತಿಗೆ ಇವೆರಡರ ನಾಶಕ್ಕೆ ಕಾರಣವಾಗಿ ನಿಂತಿದೆ.

ದೇಹ ವೃಕ್ಷದಂತೆ ಜಲಬಿಂದುವಿನ ಮೂಲಕ ಜನ್ಮತಳೆದಿದ್ದರೂ ಕೂಡಾ ಆ ಜಲಬಿಂದುವೇ ಜೀವ ಜಲಬಿಂದುವಾಗಿ, ರಕ್ತವಾಗಿ, ದೇಹದಲ್ಲಿ ಹರಿಯುತ್ತಿರುವುದರಿಂದ ತಾಮಸದ ರಾಗಗಳು ಹುಟ್ಟಿಕೊಂಡು ರೋಗಗಳಾಗಿ ತನುವನ್ನು ಕಾಡುತ್ತಲಿವೆ.

ತನುವಿನಲ್ಲಿ ತನ್ಮಯವಾದ ಅರಿವನ್ನು ತನುವನ್ನು ಆವರಿಸಿದ ಮನದಿಂದ ಕಂಡುಕೊಂಡು ಆ ಅರಿವೇ ತಾನಾದಾಗ ತನುವಿನಲ್ಲಿ ಹರಿಯುವ ರಕ್ತ ವಿರಕ್ತವಾಗುತ್ತದೆ. ರಾಜಸ ತಾಮಸ ಸಾತ್ವಿಕ ಗುಣಗಳು ನಾಷವಾಗಿ ತ್ರಿಗುಣಾತೀತನಾಗುತ್ತದೆ. ಬೋಧೀವೃಕ್ಷವೇ ತಾನಾಗಿ ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ.

**1424**

**ಎಲೆ ದೇವಾ, ಒಂದು ಹೋಗಿ ಎರಡಾದುದು,**

**ಎರಡು ಹೋಗಿ ಮೂರಾದುದು,**

**ಮೂವತ್ತಾರಾಗಿ ಮೂರರಲ್ಲಿ ಆಡಿದುದು; ಆಡಿ ಆಡಿ ಅದೆ ಲಿಂಗವಾಯಿತ್ತು .**

**ನಮ್ಮ ಗುರು ಚೆನ್ನಬಸವಣ್ಣನೊಂದು ಕೊಟ್ಟಲ್ಲಿ**

**ಎಲ್ಲಾ ಒಂದೇ ಆಯಿತ್ತು , ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರುದೇವನ ಲೀಲೆಯೇ ಹೀಗೆ. ಗರ್ಭದಲ್ಲಿ ಪ್ರವೇಶ ಮಾಡಿ ತನುವಿಗೆ ಜನ್ಮ ನೀಡಿ

ಜನ್ಮ ನೀಡಿದ ತನುವಿನಲ್ಲಿ ತಾನೇ ತನ್ಮಯನಾಗಿ, ಆ ತನುವಿನಲ್ಲಿಯೇ ಮನಕ್ಕೆ ಜನ್ಮ ನೀಡಿದ. ಹೀಗೆ ಒಂದು ಹೋಗಿ ಎರಡಾಯಿತು ಆ ಎರಡೇ ಮೂರಾಯಿತು.

ಒಂದೇ ಎರಡಾಯಿತು ಮೂರಾಯಿತು ಮೂವತ್ತಾರು ಆಯಿತು ಎಂದು ಅರಿವಿನಿಂದ ಅರಿದರಿದು ಆ ಅರಿವೇ ತಾನಾಗಿ ಗುರುದೇವ ಹೇಳಿದಲ್ಲಿ ಪುನಃ ಒಂದೇ ಆಯಿತು ಒಂದೇ ಏನಲ್ಲಾ ಆಗಿದೆ. ಆ ಏನೆಲ್ಲಾ ಆದುದು ಕೂಡಾ ಒಂದೇ ಆಗಿದೆ. ಸಕಲ ಚರಾಚರ ವಸ್ತುಗಳಲ್ಲಿ ಆ ಒಂದು ಬಚ್ಚಿಟ್ಟುಕೊಂಡಿದೆ.

**1425**

**ಅಂಗ ಲಿಂಗ ಒಂದಾದಬಳಿಕ**
**ಅಂಗೇಂದ್ರಿಯಂಗಳಾಚರಿಸಲಾಗದು**
**ಅಂಗೇಂದ್ರಿಯಂಗಳು ಹೋಗಿ ಲಿಂಗೇದ್ರಿಯಂಗಳಾಗಿ ಆಚರಿಸುವುದು.**
**ಘೃತೋ ಭೂತ್ವಾ ಕಥಂ ಕ್ಷೀರಂ ಭವತ್ತೇವಂ ವರಾನನೇ**
**ಎಂಬ ಆಗಮೋಕ್ತಿ ಪುಸಿಯಾಯಿತ್ತೇ ?**
**ಆಗಿ ಆಚರಿಸಿದಡೆ ಭವ ಹಿಂಗದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗವನ್ನು ಆವರಿಸಿದ ಮನ ಅಂಗದೊಂದಿಗೆ ಒಂದಾಗಿ ಅಂಗೇಂದ್ರಿಯಗಳನ್ನು ಕಾರ್ಮೇಂದ್ರಿಯಂಗಳನ್ನಾಗಿ ಪರಿವರ್ತಿಸಿ ಕೊಂಡು ಅಂಗ ಮತ್ತೊಂದು ಅಂಗದೊಂದಿಗೆ ಕಾಮದಾಟವನ್ನು ಆಡುತ್ತಲಿದೆ.

ಅಂಗೇಂದ್ರಿಯಗಳಲ್ಲಿಯೇ ಲಿಂಗೇಂದ್ರಿಯಗಳು ಬಚ್ಚಿಟ್ಟುಕೊಂಡಿವೆ. ಈ ವಿಷಯ ಅಂಗಕ್ಕೂ ಗೊತ್ತಿಲ್ಲ, ಅಂಗೇಂದ್ರಿಯಗಳಿಗೂ ಗೊತ್ತಿಲ್ಲ, ಮನಕ್ಕೂ ಗೊತ್ತಿಲ್ಲ. ಏಕೆಂದರೆ ಮನ ತನುವಿನೊಂದಿಗೆ ಸಂಗಮಾಡಿದೆ. ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನ ಸಂಗವನ್ನು ಮನ ಮಾಡಿದರೆ ಸಾಕು ಆ ಮನ ಘನಮನವಾಗುತ್ತದೆ. ಅಂಗ ಲಿಂಗಾಂಗವಾಗುತ್ತದೆ. ಅಂಗದಲ್ಲಿರುವ ಇಂದ್ರಿಯಗಳೆಲ್ಲಾ ಜ್ಞಾನೇಂದ್ರಿಯಗಳಾಗುತ್ತವೆ ಅಂಗ ಲಿಂಗ ಒಂದಾಗುತ್ತದೆ.

ಹಾಲು ತುಪ್ಪವಾದ ಬಳಿಕ ಮತ್ತೆ ಹೇಗೆ ಹಾಲಾಗುವುದಿಲ್ಲವೋ ಹಾಗೇಯೆ ಅಂಗ ಲಿಂಗಾಂಗವಾದ ಬಳಿಕ ಮತ್ತೆ ಅಂಗವಾಗುವುದಿಲ್ಲ. ಅಂಗೇಂದ್ರಿಯಗಳೆಲ್ಲ ಲಿಂಗೇಂದ್ರಿಯಗಳಾಗುತ್ತವೆ.

**1426**

**ವೀರನಾದಡೆ ವೈರಿಗಳ ಕಾಟ ಬಹಳವಯ್ಯಾ,**
**ದಾನಶೂರನಾದಡೆ ಯಾಚಕರ ಗೋಳು ಬಹಳವಯ್ಯಾ .**
**ಅತಿರೂಪನಾದಡೆ ಅಂಗನೆಯರ ಕಾಟ ವಿಶೇಷವಯ್ಯಾ.**
**ಮೂರರಲ್ಲಿ ನಿಂತಡೆ ಮಲತ್ರಯಂಗಳ ಘೋರ ಹೆಚ್ಚಾಯಿತಯ್ಯಾ.**
**ಅಂಗದಲ್ಲಿ ಲಿಂಗಸಂಬಂಧವಾಗಬಾರದು**
**ಆದಬಳಿಕ ವೀರನಾಗಿ ವಿಷಯಂಗಳನಳಿವುದು,**
**ಬಹು ಘೋರವು ಬಹುಘೋರವು ನೋಡಯ್ಯಾ, ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ವೀರನಾಗಬಹುದು ಆದರೆ ವೈರಿಗಳ ಕಾಟ ತಪ್ಪಿದ್ದಲ್ಲ. ದಾನಶೂರನೆಂದು ಕರೆಯಿಸಿಕೊಳ್ಳಬಹುದು. ಆದರೆ ಕೇಳುವ ಯಾಚಕರ ಗೋಳು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅತಿರೂಪನಾದಡೆ ಅಂಗನೆಯರ ಕಾಟ ತಪ್ಪಿದ್ದಲ್ಲ. ಇದೆಲ್ಲ ಆಗುವುದು ಬಲು ಸುಲಭ. ಆದರೆ ಅಲ್ಲಿ ಸುಳ್ಳು ಸುಖವಿದೆ ಸುಳ್ಳು ದುಃಖವೂ ಇದೆ.

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನ ಸಂಬಂಧಿಯಾಗುವುದು ಬಲು ಕಠಿಣ ಕೆಲಸ. ಅಂಗವನ್ನು ಆವರಿಸಿದ ಮನ ಅಂಗವನ್ನು ಹಿಡಿದು ವೀರನೆಂದು ಕರೆಯಿಸಿಕೊಳ್ಳುತ್ತದೆ. ಅಂಗವನ್ನು ಹಿಡಿದು ದಾನಶೂರನೆಂದು ಕರೆಯಿಸಿಕೊಳ್ಳುತ್ತದೆ. ಅಂಗ ಹಿಡಿದ ಅಂಗನೆಯರ ಸುಖಕ್ಕಾಗಿ ವಾಲುತ್ತದೆ. ಆದರೆ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನತ್ತ ಮನ ವಾಲುವುದಿಲ್ಲ.

ಮಹಾವೀರನಾಗಿ ಸಕಲ ವಿಷಯಂಗಳನು ಅಳಿಯುವುದು ಬಹು ಕಠಿಣವಾದ ಕೆಲಸವಾಗಿದೆ. ವೈರಿಗಳನ್ನು ಗೆದ್ದು ವೀರ ಎಂದು ಕರೆಯಿಸಿಕೊಳ್ಳಬಹುದು. ಅಂಗವನ್ನು ಆವರಿಸಿದ ಅರಿಷಡ್ವರ್ಗಗಳೆಂಬ ವೈರಿಗಳೊಂದಿಗೆ ಯುದ್ಧ ಮಾಡಿ ಗೆಲ್ಲುವುದು ಮಹಾವೀರನಾದವನಿಗೆ ಮಾತ್ರ ಸಾಧ್ಯ .

**1427**

**ಇಂತೀ ಭಕ್ತಸ್ಥಲದ ವರ್ಮವನು ಲೋಕಕ್ಕೆ ನಿಶ್ಚಿಂತವ ಮಾಡಿ ತೋರಿದ.**
**ತನ್ನ ಪದದುನ್ನತವ ಏಕೈಕಸದ್ಭಾವರಿಗಿತ್ತ , ಎನ್ನಗುರು ಚೆನ್ನಬಸವಣ್ಣನು.**
**ಬಸವಣ್ಣ ಚೆನ್ನಬಸವಣ್ಣನೆಂಬ ಮಹಾಸಮುದ್ರದೊಳಗೆ**
**ಹರುಷಿತನಾದೆನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.**

ಭಕ್ತನೆಂದರೆ ಆಲಯ ಸುತ್ತುವವನಲ್ಲ. ಮೂರ್ತಿಗೆ ಭಕ್ತಿ ಮಾಡುವವನೂ ಭಕ್ತನಲ್ಲ. ಹಣೆಗೆ ತಿಲಕ ಭಸ್ಮ ಧರಿಸಿ ರುದ್ರಾಕ್ಷಿ ಮಾಲೆ ಹಾಕಿಕೊಂಡು ಲಿಂಗ ಧರಿಸಿದವನು ಕೂಡಾ ಭಕ್ತನಲ್ಲ. ಭಕ್ತನೆಂದರೆ ಒಬ್ಬ ವ್ಯಕ್ತಿಯಲ್ಲ. ವ್ಯಕ್ತಿಯೊಳಗೆ ಇದ್ದು ವ್ಯಕ್ತಿಯನ್ನು ಆವರಿಸಿದ ಮನ ವ್ಯಕ್ತಿಯೊಳಗೆ ಸಂಗಮವಾದ ಶಕ್ತಿಯೆಂಬ ಅವ್ಯಕ್ತಗೆ ಭಕ್ತಿ ಮಾಡಬೇಕು. ಇಂತಹ ಮನವೇ ಭಕ್ತಮನ. ಇದು ಶರಣರು ಲೋಕಕ್ಕೆ ತಿಳಿಹೇಳಿದ ವರ್ಮ.

ಭಕ್ತಸ್ಥಲವೆಂಬ ವರ್ಮವನು ಸರಳವಾಗಿ ಲೋಕಕ್ಕೆ ತಿಳಿ ಹೇಳಿ ನಿಶ್ಚಿಂತರನ್ನಾಗಿ ಮಾಡಿ ತೋರಿದರು. ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನೆಂಬ ಘನಕ್ಕೆ, ಮನ ಭಕ್ತನಾದ ಮೇಲೆ, ಮನವು ಕೂಡಾ ಘನಮನವಾಯಿತು. ಆಗ ಅದು ತನ್ನ ತನುವಿಗೆ ಮೆತ್ತಿಕೊಂಡ ಸಕಲ ಪದಪದವಿಗಳನ್ನೆಲ್ಲ ಲಿಂಗಯ್ಯನಿಗೆ ಅರ್ಪಿಸಿ ಧನ್ಯನಾಯಿತು.

ನಿಶ್ಚಿಂತ ಪದವಿಯನ್ನು ಕರುಣಿಸಿದ ಬಸವಣ್ಣ ಚೆನ್ನಬಸವಣ್ಣ ಇವರಿಬ್ಬರೂ ಮಹಾಸಮುದ್ರ. ಜ್ಞಾನಸಮುದ್ರ ಇಂತಹ ಸಮುದ್ರದೊಳಗೆ ಮಿಂದು ಹರುಷಿತನಾದೆನಯ್ಯಾ ಎಂದಿದ್ದಾರೆ. ಸಿದ್ಧರಾಮ ಶಿವಯೋಗಿಗಳು.

**1428**

**ಮೂರಕ್ಕೆ ಮೂರಾಗಿ ಮೂರು ತನ್ನಯ ಸೀಮೆ**
**ಮೂರೊಂದಾದನ್ನೈ ಬಸವಣ್ಣನು. ಆರು ಮನೆಯಲ್ಲಿದ್ದು ಆರಾರರಿಂ ಮೇಲೆ**

**ಮೀರಿಪ್ಪ ಭಕ್ತಿಯಲಿ ತೋರಿಪ್ಪುದೀಗ ತನ್ನ ರೂಪು**
**ರೂಪಾರೂಪು ಚೆನ್ನಬಸವಣ್ಣನಿಂದ ಆನು ನೀನಾದೆನೈ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ತನು ತನ್ನದೇ, ತನುವನ್ನು ಆವರಿಸಿದ ಮನವು ಕೂಡಾ ತನ್ನದೆ, ತನುವಿನಲ್ಲಿ ತನ್ಮಯವಾದ ಅರಿವು ಎನ್ನುವ ಗುರುದೇವನು ಕೂಡಾ ತಾನೇ ಆಗಿದ್ದಾನೆ.

ಮೂರು ಬೇರೆ ಬೇರೆ ಇಲ್ಲ, ಆದರೂ ಮೂರು ಕೂಡಾ ತಾನೇ ಅನ್ನುವುದು ಬಲವಾಗಿ ತನುವಿಗೆ ಗೊತ್ತಾಗುತ್ತಿಲ್ಲ. ಈ ಬಗ್ಗೆ ತನು ಮನ ಈ ಎರಡೂ ಚಿಂತನೆಯಲ್ಲಿ ತೊಡಗಿಲ್ಲ. ತನುವಿನಲ್ಲಿ ಈ ಮೂರು ವಸ್ತುಗಳು ಸಂಗಮವಾಗಿದ್ದರೂ ಕೂಡಾ ತನು ಈ ಮೂರನ್ನು ತಿಳಿಯಲು ತನ್ನ ಆಯುಷ್ಯ ಪರ್ಯಂತ ಅಧ್ಯಯನ ಮಾಡುತ್ತದೆ. ಆದರೂ ಈ ಮೂರೊಂದಾಗುವುದು ಬಲು ಕಷ್ಟದ ಕೆಲಸ. ಕಾಯ ಎನ್ನುವುದು ಒಂದೇ ಆದರೂ ಅದು ಮೂರು ಕಾಯಗಳೆಂದು ಹೆಸರು ಪಡದಿದೆ. ಈ ಮೂರರಿಂದಲೇ ಆರು ಮನೆಗಳಲ್ಲಿ ತನ್ನನ್ನು ತಾನೇ ಸೀಳಿಕೊಂಡಿದೆ. ತನು ಮನ ಘನ ಒಂದಾದರೆ ಸಾಕು ಆರು ಮನೆಗಳಾಗಿ ಸೀಳಿಕೊಂಡ ಕಾಯ ಕೈಲಾಸವೇ ತಾನಾಗುತ್ತದೆ.

ರೂಪು ಕಾಣುತ್ತದೆ. ಕಾಣುವ ಕಾಯದ ರೂಪು ನಿರೂಪದ ಸತ್ಯವೇ ಆಗಿದೆ. ನಿರೂಪದಿಂದಲೇ ಆದ ಕಾಯ ಕಾಯವೆಂದು ಕೈಲಾಸವೆಂದು ಕರೆಯಿಸಿಕೊಂಡಿದೆ. ನಿರೂಪದ ಬೀಜ ಮೊಳಕೆ ಒಡೆದು ರೂಪವಾಗಿದೆ. ರೂಪು ನಾನಾದರೆ ನಿರೂಪು ನೀನು. ನಿನ್ನಿಂದಲೇ ನಾನು ನೀನಾದೆ.

**1429**

**ಗುರುಲಿಂಗ ಬಸವಣ್ಣ, ಚರಲಿಂಗ ಬಸವಣ್ಣ, ಕರುಣಾಕರನು ಚೆನ್ನಬಸವಣ್ಣನು.**
**ಶರಣಸ್ಥಲದ ಕಲ್ಪ ಸುರಭೂಜ ಫಲವಿತ್ತ ಕರುಣಾಕರನು ಚೆನ್ನಬಸವಣ್ಣನು.**
**ಆ ಬಸವಣ್ಣನ ಕೃಪೆಯಿಂದ ಆದಿ ಅಕ್ಷರವರಿದು**
**ಸಾಧಿಸಿದೆ ನಿಮ್ಮುವನು ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.**

ಕೆರೆ ಕಟ್ಟಿ ಆಲಯಗಳನ್ನು ಕಟ್ಟಿಸುವ ನಾನು ನಿನ್ನನ್ನು ಅಲ್ಲಿ ಹುಡುಕುತ್ತಿದ್ದೆ ತಂದೆ. ನೀನೇನೋ ನನ್ನಲ್ಲಿಯೇ ಇದ್ದು ನನಗೆ ನಿನ್ನ ಪರಿಚಯವಿರಲಿಲ್ಲ. ನೀನು ಯಾರು ಎಂಬುದೇ ನನಗೆ ಗೊತ್ತಿರಲಿಲ್ಲ.

ಬಸವದೇವರು ನನ್ನಲ್ಲಿಯೇ ನಿನ್ನನ್ನು ತೋರಲು ಗುರುಲಿಂಗವಾಗಿ ಬಂದ; ಹುಡುಕುತ್ತಾ ಹುಡುಕುತ್ತಾ ನಾನಿದ್ದಲ್ಲಿಗೆ ಚರಲಿಂಗವಾಗಿ ಬಂದ ಬಸವಣ್ಣ ಕರುಣಾಕರನು. ಚೆನ್ನಬಸವಣ್ಣನ ಶರಣಸ್ಥಲದ ಕಲ್ಪಸುರಭೂಜ ಫಲವಿತ್ತು ಎನ್ನನ್ನು ಸಲಹಿದ ಕರುಣಾಕರನು ಚೆನ್ನಬಸವಣ್ಣನು. ಆ ಬಸವಣ್ಣನ ಕೃಪೆಯಿಂದ ಆದಿ ಅಕ್ಷರವನು ಅರಿದೆನು. ನನ್ನಲ್ಲಿಯೇ ಸಂಗಮವಾದ ನಿಮ್ಮನ್ನು ಸಾಧಿಸಿದೆನು ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ .

ಈ ಮೂವರು ನನ್ನಲ್ಲಿಯೇ ನಿಮ್ಮನ್ನು ಎನಗೆ ತೋರದಿದ್ದರೆ ಕೆಸರಿನಲ್ಲಿ ಬಿದ್ದ ಪಶುವಿನಂತೆ ಒರಲಿ ಒರಲಿ ಸಾಯುತ್ತಿದ್ದೆ. ಪಶು ನಾನು, ಪಶುಪತಿ ನೀನು . ನನ್ನಲ್ಲಿಯೇ ಇರುವ ನಿನಗೆ ನಾನು ಶರಣು ಹೋಗಿ ಶರಣಾಗತನಾಗಿ ಶರಣನಾಗುವ ಕಲ್ಪಸುರಭೂಜ ಫಲವಿತ್ತು ಸಲಹಿದರು ತಂದೆ. ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1430**

**ಯೋಗ ಭೂಷಣ , ನಿಮ್ಮ ಆದಿ ಅಕ್ಷರಭೇದ**
**ಆದಿಯಾಧಾರಂಗಳಿಲ್ಲದಂದು, ಆನಂದ ಸ್ಥಾನದಲ್ಲಿಪ್ಪ ಗುರು ಬಸವಣ್ಣ**
**ತಾನೆನ್ನ ಕರುಣದಿಂ ನಿತ್ಯನೆನ್ನಿಸಿ;**
**ಯೋಗ ಸಿದ್ಧಾಂಗದಲ್ಲಾದ ಪಂಚಬ್ರಹ್ಮದಿಂದಾಗಾದೆನ್ನೈ ಚೆನ್ನಬಸವ ತಂದೆ ;**
**ಯೋಗ ಮೂರುತಿಯೇ ನೀನೆನ್ನ ಗುರುವಾಗಿ ಶಿವಯೋಗಿನಾದೆನಯ್ಯಾ.**
**ನಿನ್ನವರ ಹೊರೆಗೈದೆ ಯೋಗಿಗುರು ಪ್ರಭುರಾಯ ನಾ ನಿಮ್ಮ ಕರುಣದಲ್ಲಿ.**
**ಶಿವಯೋಗ ಮುದ್ರೆಯನೆ ನೆನೆದು ಸುಖಿಯಾದೆನ್ನೈ**
**ಆಗಮಕ್ಕೊಳಗಾದ ಆಗಮಕೆ ಹೊರಗಾದ ಆನಂದಸ್ಥಾನದಲಿ ಸ್ವಯವಾದೆನ್ನೈ ದೇವ**
**ಯೋಗ ಜ್ಞಾನ ಕಪಿಲಸಿದ್ಧ ಮಲ್ಲಿನಾಥನ ಕರುಣ ನಿಮಗಾಯಿತ್ತು .**
**ಶ್ರೀ ಗುರು ಚೆನ್ನಬಸವಣ್ಣ ತಂದೆ.**

ಯೋಗ ಭೂಷಣನೆ, ಅಕ್ಷರೋತ್ತಮನೆ, ಆದಿ ಆಧಾರಗಳಿಲ್ಲದಂದು ಆನಂದ ಸ್ಥಾನದಲ್ಲಿದ್ದ ಗುರು ಬಸವಣ್ಣನು ನೀನು. ನಿನ್ನ ಕರುಣೆಯಿಂದಲಿ ನಾನು ನಿತ್ಯನೆನ್ನಿಸಿದೆನು ತಂದೆ.

ಯೋಗ ಸಿದ್ಧಾಂಗದಲ್ಲಾದ ಪಂಚಬ್ರಹ್ಮದಿಂದ ನಾನು ಆಗಾದೆನಯ್ಯಾ ಚೆನ್ನಬಸವತಂದೆಯೆ ಯೋಗಮೂರುತಿಯೆ ನೀನು ನನಗೆ ಗುರುವಾದುದರಿಂದ ನಾನು ನಿನ್ನಿಂದ ಶಿವಯೋಗಿ ಎಂದು ಕರೆಯಿಸಿಕೊಂಡೆನು.

ನಿನ್ನವರ ಹೊರಗೈದೆ ಯೋಗಿ ಗುರು ಪ್ರಭುರಾಯ ನಾ ನಿಮ್ಮ ಕರುಣದಲ್ಲಿ, ನೀನು ನನಗೆ ಒತ್ತಿದ ಶಿವಯೋಗ ಮುದ್ರೆಯನು ನೆನೆದು ಸುಖಿಯಾದೆನಯ್ಯಾ , ಆಗಮಕ್ಕೆ ಒಳಗಾದ ಆಗಮಕ್ಕೆ ಹೊರಗಾದ ಆನಂದ ಸ್ಥಾನದಲ್ಲಿ ನನಗೆ ನಾನು ನನ್ನಲ್ಲಿ ಸ್ವಯವಾದೆನು ದೇವಾ. ಯೋಗ ಜ್ಞಾನ ಕಪಿಲಸಿದ್ಧಮಲ್ಲಿನಾಥನ ಕರುಣ ನಿಮಗಾಯಿತ್ತು ಗುರು ಚೆನ್ನಬಸವಣ್ಣ ತಂದೆ.

**1431**

**ಸ್ಫಟಿಕದ ಘಟದೊಳಗೀಗ ನಿಠಿಲಾಕ್ಷನನು ಮಾಟ ಸ್ಫಟಿಕದಲಿ ದೀಪ್ತಿಸಿತ್ತಯ್ಯ ದೆಸೆಯು.**
**ದೆಸೆಗಾಗಿಯೂ ಶಿಶುವಿನ ಮಸ್ತಕದಲ್ಲಿ ಒಸರುತ್ತಿದ್ದುದು ಭಕ್ತಿ ದೆಸೆದೆಯಲಿ.**
**ಬಸವ ಚೆನ್ನಬಸವ ಪ್ರಭು ಶರಣೆಂದು ಇದ್ದೆಸೆಗೆಟ್ಟ ನಾನೀಗ ಕಪಿಲಸಿದ್ಧಮಲ್ಲಿಕಾರ್ಜುನಾ.**

ಜಲದಲ್ಲಿ ಹುಟ್ಟಿದ ಸ್ಫಟಿಕದ ಘಟದೊಳಗೆ ದೀಪ್ತಿ ದೆಸೆದೆಸೆಯಲಿ ಬೆಳಗುತ್ತಿದೆ. ಸ್ಫಟಿಕ ಬೆಳಗಿಂಗೆ ಬೆಳಗಾಗಿ ಬೆಳಗುವುದಕ್ಕಾಗಿಯೇ ಜಲದ ಮೂಲಕ ಜಲನಷ್ಟ ಮಾಡಿ ಸ್ಫಟಿಕವಾಗಿದೆ. ಹಾಗೆಯೇ ಪ್ರತಿ ಶಿಶುವಿನ ಮಸ್ತಕದಲ್ಲಿಯೂ ಪರಮಾತ್ಮ ಬಚ್ಚಿಟ್ಟು ಕೊಂಡಿದ್ದಾನೆ. ಆತನಿಗೆ ಭಕ್ತಿ ಮಾಡುವುದಕ್ಕಾಗಿ ದೆಸೆದೆಸೆಯಿಂದಲೂ ಭಕ್ತಿರಸ ಹರಿಯುತ್ತಲಿದೆ.

ಬಸವಣ್ಣನಿಗೆ ಶರಣು ಹೋಗಿ ನಾನು ನನ್ನ ಇದ್ದದೆಸೆಯನ್ನು ಕೆಡಿಸಿಕೊಂಡು ಶರಣನಾದೆ. ಚೆನ್ನಬಸವಣ್ಣನಿಗೆ ಶರಣು ಹೋಗಿ ನಾನು ಇದ್ದ ದೆಸೆಯನ್ನು ಕೆಡಿಸಿಕೊಂಡು ಶರಣನಾದೆ. ಪ್ರಭುದೇವರಿಗೆ ಶರಣು ಹೋಗಿ ನನ್ನ ಇದ್ದೆಸೆಯನ್ನು ಕೆಡಿಸಿಕೊಂಡು ಶರಣನಾದೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ನಾನಾದೆ.

**1432**

**ಕುಂಬಾರರೆಲ್ಲರೂ ಗುಂಡಯ್ಯನಾಗಬಲ್ಲರೆ ?**
**ಮಡಿವಾಳರೆಲ್ಲರೂ ಮಾಚಯ್ಯನಾಗಬಲ್ಲರೆ ?**
**ಜೇಡರೆಲ್ಲರೂ ದಾಸಿಮಯ್ಯನಾಗಬಲ್ಲರೆ ? ಎನ್ನ ಗುರು ಕಪಿಲಸಿದ್ಧ ಮಲ್ಲೇಶ್ವರಯ್ಯಾ**
**ಪ್ರಾಣಿಗಳ ಕೊಂದು ಪರಿಹರಿಸಬಲ್ಲಡೆ ತೆಲುಗು ಜೊಮ್ಮಯ್ಯನಾಗಬಲ್ಲರೆ ?**

ಮಡಿಕೆ ಬೆಂದಿದೆಯೋ ಇಲ್ಲವೋ ಎಂದು ತಟ್ಟಿ ಪರೀಕ್ಷಿಸುವಂತೆ ತಲೆ ತಟ್ಟಿ ತನು ಪಕ್ವವಾಗಿದೆಯೋ ಇಲ್ಲವೊ ಎಂದು ಪರೀಕ್ಷಿಸುವ ಶಕ್ತಿ ಗುಂಡಯ್ಯನವರಿಗೆ ಇತ್ತು. ಈ ಕಾಯಕವನ್ನು ಕುಂಬಾರ ಗುಂಡಯ್ಯ ಭಕ್ತಿಯಿಂದಲೆ ಮಾಡುತ್ತಿದ್ದ.

ಮಡಿವಾಳರೆಲ್ಲರೂ ವಸ್ತ್ರದ ಮೈಲಿಗೆಯನ್ನು ತೊಳೆಯುವುದರಲ್ಲಿ ನಿಪುಣರು. ಆದರೆ ಮಡಿವಾಳ ಮಾಚಿದೇವ ಮಡಿವಾಳರಂತಲ್ಲ. ಮನದ ಮೈಲಿಗೆಯನ್ನು ತೊಳೆಯುವುದರಲ್ಲಿ ನಿಪುಣ! ಜೇಡರು ಕಾಯಕ್ಕೆ ಬೇಕಾಗುವ ವಸ್ತ್ರ ನೇಯ್ದರೆ, ದಾಸಿ ಮಾರ್ಯರು ಶಿವನಿಗೆ ಬೇಕಾಗುವ ವಸ್ತ್ರವನ್ನು ನೇಯ್ದರು. ಸುಂದರವಾದ ವಸ್ತ್ರ, ಯಾರೂ ಬೆಲೆಕಟ್ಟದ ವಸ್ತ್ರವನ್ನು ಶಿವ ಪರಪರನೆ ಹರಿದು ಕಾಯದ ಮೇಲೆ ಧರಿಸಿಕೊಂಡ. ಆದರೂ ಮನದಲ್ಲಿ ಭೇದವನ್ನು ತಾಳದೆ ಪರಮಾನಂದದಿಂದ ಆ ದೃಶ್ಯವನ್ನು ನೋಡಿದರು ದಾಸಿಮಾರ್ಯರು.

ಜೊಮ್ಮಯ್ಯ ಗುಂಡಯ್ಯ ಮಾಚಿದೇವ ದಾಸಿಮಾರ್ಯನಂತೆ ಆಗಬೇಕೆಂದು ಬಯಸುವುದು ಅನುಕರಣೆ ಮಾಡುವುದು ಶುದ್ಧ ತಪ್ಪು. ಅವರವರು ಅವರ ಅಪಾರವಾದ ಶಿವಶಕ್ತಿಯನ್ನು ಕಂಡುಕೊಂಡು ಆ ಶಕ್ತಿಯೇ ತಾವಾದವರು.

ಶಿವನಿಲ್ಲದ ಕಾಯವೇ ಇಲ್ಲ. ಪ್ರತಿ ಕಾಯವನ್ನು ಶಿವ ಕೈಲಾಸವನ್ನಾಗಿಸಿಕೊಂಡು ಆ ಕೈಲಾಸದಲ್ಲಿ ವಾಸ ಮಾಡುತ್ತಿದ್ದಾನೆ. ಕಾಯವನ್ನು ಆವರಿಸಿದ ಮನ ಶಿವನನ್ನು ಕಂಡುಕೊಂಡು ಆ ಶಿವನಿಗೆ ಮನ ಶಿವೆಯಾಗಬೇಕು.

**1433**

**ಶುದ್ಧ ಗುರುಬಸವಣ್ಣ, ಸಿದ್ಧಗುರು ಚೆನ್ನಬಸವಣ್ಣ,**
**ಪ್ರಸಿದ್ಧ ಗುರು ಪ್ರಭುರಾಯನು.**
**ತನುತ್ರಯ ಮಲತ್ರಯ ಆರನತಿ-ಗಳೆದು,**
**ಲಿಂಗತ್ರಯ ಪ್ರಸಾದ ಮೂರನು ಪರಿಭವಿಸಿ ವಶ ಮಾಡಿ**
**ಎನ್ನ ರಕ್ಷಿಸಿದ ಬಸವ, ಚೆನ್ನಬಸವ, ಪ್ರಭು ಶರಣರದು**
**ಬದುಕಿದೆನಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವ ಅಂಗವನ್ನು ಆವರಿಸಿದ ಮನವನ್ನು ಅಂಗ ತಾನೇ ನಿರ್ಮಿಸಿಕೊಂಡ. ಜ್ಞಾನವೆಂಬ ಅಜ್ಞಾನವನ್ನು ಅತಿಗಳೆಯಲು ಅನಂತ ಕಾಲದಿಂದ ಅಂಗದಲ್ಲಿಯೇ ಕಾದು ನನಗಾಗಿ ಕುಳಿತಿದ್ದರೂ ಆ ಗುರುದೇವನನ್ನು ನಾನು ತಿಳಿಯಲಿಲ್ಲ. ಹೀಗಿರುವಾಗ ಶುದ್ಧ ಗುರುವಾಗಿ ಬಂದು ಬಸವಣ್ಣ ಶುದ್ಧ ಗುರುದೇವನನ್ನು ತಿಳಿಹಿದ. ಸಿದ್ಧಗುರುವಾಗಿ ಬಂದ ಚೆನ್ನಬಸವಣ್ಣ ಅಂಗದಲ್ಲಿಯೇ ಸಂಗಮವಾದ

ಸಿದ್ಧಗುರುದೇವನನ್ನು ತಿಳುಹಿಸಿದ. ಪ್ರಸಿದ್ಧ ಗುರುದೇವನೇ ತಾನಾಗಿ ಬಂದ ಪ್ರಭುರಾಯನು ಪ್ರಸಿದ್ಧ ಗುರು ದೇವನನ್ನು ನನಗೆ ನನ್ನಲ್ಲಿಯೇ ತಿಳುಹಿಸಿದ.

ನನ್ನ ತನುತ್ರಯಗಳು ನಷ್ಟವಾದವು. ನನ್ನ ಮಲತ್ರಯಗಳು ನಷ್ಟವಾದವು. ತನುತ್ರಯಗಳನ್ನೇ ಲಿಂಗತ್ರಯ ಪ್ರಸಾದವನ್ನಾಗಿ ಮಾಡಿ ಎನ್ನ ವಶಕ್ಕೆ ತಂದು ಕೊಟ್ಟರು. ಹೀಗೆ ಎನ್ನನ್ನು ರಕ್ಷಿಸಿದ ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರಿಗೆ ಶರಣೆಂದು ಬದುಕಿದೆನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1434**

**ಆದಿಯಾಧಾರದಲ್ಲಿ ಆದಿಯಿಲ್ಲದ ಮುನ್ನ,**
**ಅನಾದಿ ಸರಿಸಿದ್ಧನಯ್ಯಾ ಬಸವಣ್ಣನು.**
**ಲೋಕವೀರೇಳರ ಆಕಾರವಿಲ್ಲದಲ್ಲಿ, ಏಕೈಕ ರೂಪನಯ್ಯಾ ಚೆನ್ನಬಸವಣ್ಣನು.**
**ಸಾಕಾರದಿಂದತ್ತ ನಿರ್ಮಾಯ ಬಂದನು, ಲೋಕಪಾವನ ಮೂರ್ತಿ ಪ್ರಭುರಾಯನು.**
**ಇಂತೆನ್ನ ಭವದ ಬೇರ ಹರಿದು ಹದುಳ ಮಾಡಿ**
**ಶರಣರೊಳಗಿರಿಸಿದ ಗುರು ಇಂತು ಮೂವರಯ್ಯ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಆದಿಯಿಲ್ಲದಂದು, ಅನಾದಿಯಿಲ್ಲದಂದು. ಆದಿ ಅನಾದಿಗಳಿಗೆ ಆಧಾರ ವಿಲ್ಲದ ಮುನ್ನ ಅನಾದಿ ಸಂಸಿದ್ಧನು ಬಸವಣ್ಣನು. ಬಸವರಸನನ್ನು ಆದಿಯೂ ಸಿದ್ಧ ಮಾಡಲಿಲ್ಲ. ಅನಾದಿಯೂ ಸಿದ್ಧ ಮಾಡಲಿಲ್ಲ. ಈತ ಸ್ವಯಂಸಿದ್ಧನು. ಬ್ರಹ್ಮರಸದ ಬುಗ್ಗೆಯೀತ. ಸರ್ವರಿಗೂ ಬ್ರಹ್ಮರಸ ಪಾನ ಮಾಡಿಸಲೆಂದು ಅವತಾರ ತಾಳಿದ ಅವತಾರ ಪುರುಷನೀತ.

ಹದಿನಾಲ್ಕು ಲೋಕಗಳಿಗೆ ಆಕಾರವೇ ಇಲ್ಲದಂದು ಏಕೈಕ ರೂಪನು ಚೆನ್ನಬಸವಣ್ಣನು. ನಿರ್ಮಾಯಾಮಯವಾದ ಸಾಕಾರವೇ ಮಹಾಜ್ಞಾನ ಚಕ್ರವರ್ತಿ ಚೆನ್ನಬಸವಣ್ಣನಿಗೆ ಜನ್ಮ ನೀಡಿತು. ಈ ನಿರ್ಮಾಯರೂಪೀ ಸಾಕಾರಾಮೃತವನ್ನು ಸರ್ವರಿಗೂ ಉಣಬಡಿಸಲೆಂದು ಬಂದಾತನು ಈತ. ಲೋಕವನ್ನು, ಇಡೀ ಭ್ರಹ್ಮಾಂಡವನ್ನೇ ಪಾವನ ಮಾಡಲೆಂದು ಬಂದ ಲೋಕಪಾವನ ಮೂರ್ತಿ ಪ್ರಭುರಾಯನು, ಇಡೀ ಲೋಕಕ್ಕೆ ನೋಡುವುದನ್ನು ನೋಡುವಂತೆ ಮಾಡಿದ ಕರುಣಾ ಮೂರ್ತಿ ಪ್ರಭುರಾಯನು. ನೋಡುವುದ ನೋಡಲರಿಯದೇ ಕೆಟ್ಟಿತ್ತು ಈ ಜಗವೆಲ್ಲ ನೋಡುವುದ ನೋಡುವಡೆ ಕೂಡಲಿಲ್ಲ ಅಗಲಲಿಲ್ಲ ಎನ್ನುವ ಸೂತ್ರವನ್ನು ಲೋಕಕ್ಕೆ ದಯಪಾಲಿಸಿದ ಕರುಣಾ ಮೂರ್ತಿ ಪ್ರಭುರಾಯನು. ಹೀಗೆ ಈ ಮೂವರು ಮಹನೀಯರು ಎನ್ನ ಜನನ ಮರಣದ ಅಜ್ಞಾನದ ಬೇರನ್ನು ಹರಿದು ಹದುಳ ಮಾಡಿ ಎನ್ನನ್ನು ಶರಣರೊಳಗೆ ಇರಿಸಿದರು; ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .

ನನಗೆ ಜನ್ಮ ಕೊಟ್ಟ ನೀನು ನನ್ನ ಕೆಲಸವನ್ನು ಮಾಡಲಿಲ್ಲ. ಆದರೂ ಬಸವಣ್ಣ ನಿನ್ನನ್ನು ಕುರಿತು ತಂದೆ ನೀನು ತಾಯಿ ನೀನು ಬಂಧು ನೀನು ಬಳಗನೀನು ನೀಲ್ಲದೆ ಮಾತ್ತಾರೂ ಇಲ್ಲವಯ್ಯಾ ಕೂಡಲಸಂಗಮದೇವಾ ಹಾಲಲ್ಲಾದರೂ ಅದ್ದು ನೀರಲ್ಲಾದ್ದರೂ ಅದ್ದು ನಿನ್ನ ಧರ್ಮ ಎಂದು ಎಲ್ಲ ಜವಾಬ್ದಾರಿಯನ್ನು ನಿನ್ನ ಮೇಲೆ ಹಾಕಿದ್ದಾರೆ.

ಆದರೆ ನನಗೆ ಮಾತ್ರ ಮೂವರು ತಂದೆಯಂದಿರು. ನನ್ನ ಭವದ ಬೇರು ಹರಿದು ಹದುಳ

ಮಾಡಿ ನನ್ನನ್ನು ಶರಣರೊಳಗಿರಿಸಿದ ಗುರುದೇವರು. ಈ ಮೂವರಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .

**1435**

**ಇರುವರಯ್ಯಾ ಒಂದು ಲಕ್ಷ ಶೀಲಸಂಪನ್ನರು.**
**ಇರುವರಯ್ಯಾ ಒಂದು ಲಕ್ಷ ವ್ರತಸಂಪನ್ನರು.**
**ಇರುವರಯ್ಯಾ ಒಂದು ಲಕ್ಷ ಅರ್ಥಸಂಪನ್ನರು.**
**ಪ್ರಾಣಾಭಿಮಾನ ವೈರಾಗ್ಯದಿಂದ ಕೊಟ್ಟವರು.**
**ಇವರೆಲ್ಲರು ಫಲಸಮರ್ಥರಲ್ಲದೆ ಲಿಂಗಸಮರ್ಥರು ಒಬ್ಬರೂ ಇಲ್ಲ,**
**ನೋಡಯ್ಯಾ , ಕಪಿಲಸಿದ್ಧ ಮಲ್ಲಿಕಾರ್ಜುನ ತಂದೆ.**

ತನಗೆ ಬೇಕಾಗಿ ಶೀಲಸಂಪನ್ನರಾದವರುಂಟು. ಏಕೆಂದರೆ ಅದು ತನಗೆ ಫಲಪದವನ್ನು ತಂದುಕೊಡುವುದೆಂದು ಅವರಿಗೆ ಗೊತ್ತಿದೆ. ಅರ್ಥದಲ್ಲಿ ಶೀಲ, ವ್ರತದಲ್ಲಿಯೂ ಶೀಲ, ಶೀಲದಲ್ಲಿಯೂ ಶೀಲವನ್ನು ಆಚರಿಸುವ ಸಂಪನ್ನರುಂಟು. ಇವರು ಒಂದು ಲಕ್ಷಕ್ಕೂ ಮೇಲ್ಪಟ್ಟು ಜನ ಸಿಕ್ಕುತ್ತಾರೆ.

ಒಂದು ಲಕ್ಷಕ್ಕೂ ಹೆಚ್ಚು ಜನ ವ್ರತಸಂಪನ್ನರು ಸಿಕ್ಕುತ್ತಾರೆ. ವ್ರತ ಎಂದರೆ ಅದನ್ನು ಹೀಗೆ ಎಂದು ಹೇಳಲು ಬರುವುದಿಲ್ಲ. ಹಾಲನೇಮದ ವ್ರತ, ಬೆಲ್ಲದ ವ್ರತ್ರ , ಪೂಜಾವ್ರತ, ಪತ್ರಿ ಪುಷ್ಪ ನೈವೇದ್ಯ ವ್ರತ ಹೀಗೆ ವ್ರತಸಂಪನ್ನರ ಪಟ್ಟಿ ಬೆಳೆಯುತ್ತ ಹೋಗುತ್ತದೆ. ಇಂತಹ ವ್ರತಸಂಪನ್ನರು ಒಂದು ಲಕ್ಷ ಜನ ಸಿಕ್ಕುತ್ತಾರೆ ಎಂದು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಪ್ರಾಣಾಭಿಮಾನವನ್ನು ವೈರಾಗ್ಯದಿಂದ ಕೊಟ್ಟವರು ಕೂಡಾ ಸಿಕ್ಕುತ್ತಾರೆ. ಇವೆರಲ್ಲರೂ ಫಲಸಮರ್ಥರು ತಮಗೆ ಇಂಥದ್ದೇ ಬೇಕೆಂದು ವ್ರತನೇಮವನ್ನು ಹಿಡಿದು ದೇವರಿಗೆ ಮೊರೆ ಹೋದವರು. ಆ ದೇವರು ಯಾರು ಎಂದು ಇವರಿಗೆ ಗೊತ್ತಿಲ್ಲ, ಆದರೂ ದೇವರು ಕರುಣಾಮಯಿ. ಆತನ ಭಕ್ತ ಕೇಳಿದ್ದನ್ನು ಆತ ಕೊಡಲೇಬೇಕು, ಏಕೆಂದರೆ ದೇವರನ್ನು ಹೊತ್ತುಕೊಂಡು ದೇವರಿಗೆ ವ್ರತ ನೇಮದ ಮೂಲಕ ಆಚಾರಗಳಲ್ಲಿ ತೊಡಗಿದ್ದಾನೆ. ಬೇಡುವ ಭಕ್ತನ ದೇಹದಲ್ಲಿದ್ದ ದೇವರು ದೇಹದ ಬಯಕೆ ಈಡೇರಿಸಿದರೆ ನನ್ನ ಭಕ್ತ ನನಗೆ ಮೊರೆ ಹೋಗಬಹುದೆಂಬ ಆಸೆ ಆತನಿಗೆ.

ತನ್ನ ವ್ರತದ ಮೂಲಕ ಫಲಪದವಿಗಳನ್ನು ಪಡೆದ ದೇಹ ಅನಂತ ಕಾಲದವರೆಗೆ ತನು ಪಡೆದ ಪದವಿಗಳ ಸುಖದಲ್ಲಿ ತೇಲಾಡುತ್ತ ಆಯುಷ್ಯವನ್ನು ಕಳೆಯುತ್ತದೆ. ಇದು ದೇಹದ ನಿಯಮ ದೇಹವನ್ನು ಆವರಿಸಿದ ಮನದ ನಿಯಮ. ದೇಹ ಮತ್ತು ಮನ ಇವೆರಡು ತಮ್ಮ ತಮ್ಮ ತಪ್ಪನ್ನು ತಾವೇ ಅರಿತು ತಮ್ಮ ತನುವಿನಲ್ಲಿಯೇ ತನ್ಮಯವಾದ ದೇವರಿಗೆ ಮೊರೆ ಹೋಗಬೇಕು. ತಮ್ಮ ಅಜ್ಞಾನದ ಬಡತನವನ್ನು ಸೆರಗೊಡ್ಡಿ ಬೇಡಬೇಕು, ಬೇಡಿದರೆ ಎನ್ನೊಡಲಲ್ಲಿರುವ ಒಡೆಯ ನನ್ನೇ ಬೇಡುವೆ ಹಾಡಿದರೆ ಎನ್ನೊಡಲಲ್ಲಿರುವ ಒಡಲೊಡೆಯನನ್ನೇ ಹಾಡುವೆ ಎನ್ನ ಬಡತನವನ್ನು ಬಿನ್ನೈಸುವೆ ಎಂದು ಅಣ್ಣ ಬಸವಣ್ಣನವರು ಹೇಳಿದ ಸೂತ್ರಗಳನ್ನು ಪಾಲನೆ ಮಾಡಬೇಕು.

**ಸಿದ್ಧಾಂತಿಯ ಜ್ಞಾನ ಸಾಧನೆಯಲ್ಲಿ ಹೋಯಿತ್ತು .**
**ವೇದಾಂತಿಯ ಜ್ಞಾನ ವಾದದಲ್ಲಿ ಹೋಯಿತ್ತು .**
**ಕ್ರಿಯಾವಂತನ ಜ್ಞಾನ ನುಡಿಯಲ್ಲಿ ಹೋಯಿತ್ತು .**
**ವ್ಯವಹಾರಿಕನ ಜ್ಞಾನ ದ್ರವ್ಯಾರ್ಜನೆಯಲ್ಲಿ ಹೋಯಿತ್ತು .**
**ಇವೆಲ್ಲ ಭವಕ್ಕೆ ಕಾರಣವಲ್ಲದೆ.**
**ಭವರಹಿತ ಜ್ಞಾನವು ಸಾಧ್ಯವಾಗುವುದು ದುರ್ಲಭವಯ್ಯಾ ,**
**ಕಪಿಲಸಿದ್ಧಮಾಲ್ಲಿಕಾರ್ಜುನಾ.**

ಒಂದು ಮರ ಪರಿಪೂರ್ಣವಾಗಿ ಬೀಜದಿಂದ ಹೊರಬಂದು ತನ್ನ ಸಕಲ ಸಹಜಾನಂದವನ್ನು ಪ್ರಕೃತಿಯ ಮೂಲಕ ಹೇಗೆ ಹೊರಹಾಕುತ್ತದೆಯೋ ಹಾಗೆಯೇ ದೇಹವೆಂಬ ಬೇರಿಲ್ಲದ ವೃಕ್ಷವೂ ಕೂಡಾ ಈ ಭೂಮಿಯ ಮೇಲೆ ಅವತಾರ ಎತ್ತಿದೆ.

ಮರ ತಾನು ಮರವೆಂಬುದನ್ನೂ ಮರೆತುಹೋಗಿ ತನ್ನ ಪರಮಾನಂದವನ್ನು ಸಹಜವಾಗಿ ಪ್ರಕೃತಿಯಮೂಲಕ ಹಂಚಿಕೊಳ್ಳತ್ತಲಿದೆ. ಆದರೆ ಕಾಯ ತಾನು ಕಾಯವೆಂಬುದನ್ನು ಮರೆತಿಲ್ಲ. ಕಾಯದೊಳಗೆ ಕಾಯ ವಿದ್ದು ಕಾಯವೇ ಅಕಾಯವನ್ನು ಅರಿಯಲು ಸಾಧ್ಯವಾಗುತ್ತಿಲ್ಲ.

ಮರ ಹೇಗೆ ಮತ್ತೊಂದು ಮರದಸಹಾಯದಿಂದ ಹೂ ಹಣ್ಣು ಕಾಯಿ ಮೊಗ್ಗು ಚಿಗುರು ಬಿಡುವುದನ್ನು ಕಲಿತಿಲ್ಲವೋ ಹಾಗೆಯೇ ಕಾಯಕೂಡಾ ಮತ್ತೊಂದು ಕಾಯದ ಮೂಲಕ ಏನನ್ನೂ ಕಲಿಯಲು ಸಾಧ್ಯವಿಲ್ಲ.

ಕಾಯ ಸ್ವತಃ ತಾನು ಸಿದ್ಧವಸ್ತುವಾಗಿದ್ದರೂ ಕೂಡಾ ಕಲಿಯುವ ಸಾಧನೆಯಲ್ಲಿ ತನ್ನನ್ನು ತೊಡಗಿಸಿಕೊಂಡಿದೆ. ವೇದ ಆಗಮ ಉಪ ನಿಷತ್ತುಗಳನ್ನು ಕುಲಿತು ಸಿದ್ಧಾಂತಿ, ವೇದಾಂತಿ, ಕ್ರಿಯಾವಂತ ನಾಗಿ ವ್ಯವಹಾರದಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕೆಂದು ತಾನೇ ನಿರ್ಧರಿಸಿಯಾಗಿದೆ. ಹೀಗಾಗಿ ಮನೋಕಾಯ ಸ್ಥೂಲಕಾಯವನ್ನು ಹಿಡಿದು ತನ್ನ ಅಜ್ಞಾನದ ಕೆಲಸದಲ್ಲಿ ತನ್ನನ್ನೇ ತಾನು ತೊಡಗಿಸಿ ಕೊಂಡಿದೆ.

ಕಾಯ ಮಾಡುವ ಈ ಕಾಯಕದಿಂದಾಗಿ ಕಾಯ ತನಗೆ ತಾನೇ ಅಜ್ಞಾನಕಾಯಕದಲ್ಲಿ ತೊಡಗಿಸಿಕೊಂಡು ಸ್ವತಹ ಜನನ ಮರಣಗಳ ದುಃಖವನ್ನು ಹೇರಿಕೊಂಡು ವಿಲಿವಿಲಿ ಒದ್ದಾಡುತ್ತಲಿದೆ. ಹೀಗಾದಾಗ ಕಾಯದ ಜ್ಞಾನ ಮತ್ತು ಅದರ ಪರಮಸುಖ ಅಲ್ಲಿಯೇ ಉಳಿದು ಬಳಕೆಗೆ ಬಾರದಂತೆ ಆಗಿದೆ. ಜ್ಞಾನಕಾಯ ಸ್ಥೂಲಕಾಯವನ್ನು ಮನೋಕಾಯವನ್ನು ತನ್ನತ್ತ ಕೈಮಾಡಿಕರೆಯುತ್ತಿರುವುದು. ಈ ಎರಡೂ ಕಾಯಗಳಿಗೆ ಹೊಳೆಯದೇ ಇರುವುದರಿಂದ ಜ್ಞಾನಕಾಯ ಸದಾ ಬುದ್ಧಕಾಯವಾಗಿ ಪರಮಾನಂದದಲ್ಲಿ ಮೈಮರೆತಿದೆ ಇನ್ನೆರಡು ಕಾಯಗಳು ಬುದ್ಧನಾಗ ಹೊರಟಿವೆ.

ಯಾರೂ ಬುದ್ಧನಾಗಲು ಬರುವುದಿಲ್ಲ ಬುದ್ಧನೆನ್ನುವವನು ಕಾಯದಲ್ಲಿಯೇ ಇದ್ದಾನೆ. ಸ್ಥೂಲ ಮತ್ತು ಸೂಕ್ಷ್ಮ ಕಾಯಗಳೆರಡೂ ಬುದ್ಧ ಕಾಯಕ್ಕೆ ಶರಣುಹೋಗಿ ಶರಣಾಗತನಾಗಬೇಕು ಇದು ಬಹುಸುಲಭದ ಕೆಲಸ. ಆದರೆ ಸ್ಥೂಲ ಮತ್ತು ಸೂಕ್ಷ್ಮಕಾಯಗಳೆರಡಕ್ಕೂ ಇದು ಇಷ್ಟವಿಲ್ಲ.

ಬುದ್ಧಕಾಯ ಹೇಳಿದ ಮಾತುಗಳನ್ನೇ ಅಕ್ಷರಗಳ ಮೂಲಕ ಗ್ರಂಥದಲ್ಲಿ ದಾಖಲಿಸಿ

ಸಿದ್ಧಾಂತಿಯಾಗಲು ಹೊರಟಿವೆ. ವೇದಾಂತಿಯಾಗಿ ವಾದದಲ್ಲಿ ಮುಳಗಿವೆ. ವ್ಯವಹಾರದಲ್ಲಿ ಮುಳಗಿವೆ. ಇವೆಲ್ಲ ಭವಕ್ಕೆ ಕಾರಣ. ಭವರಹಿತಜ್ಞಾನ ಸಾಧ್ಯವಾಗುವುದು ದುರ್ಲಭವಯ್ಯ ಎಂದು ಸಿದ್ಧರಾಮ ಶಿವಯೋಗಿಗಳು ಸ್ಪಷ್ಟವಾಗಿ ಹೇಳಿದ್ದಾರೆ.

**1437**

**ಅರಿವೆನೆಂದಡೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿ ಸಾರುತ್ತದೆ.**
**ಮರೆವೆನೆಂದಡೆ 'ಸಾಕ್ಷಾತ್ ಸಚ್ಚಿದಾನಂದಂ ಬ್ರಹ್ಮ'**
**ಎಂಬ ಕೈವಲ್ಯೋಪನಿಷತ್ ಘೋಷಿಸುತ್ತಿದೆ.**
**ಅರಿವು ವಸ್ತುಸ್ವರೂಪ, ಮರವು ಮಾಯಸ್ವರೂಪವೆಂದಡೆ**
**ಆನು ನಿರ್ವಯಲ ಸ್ವರೂಪನಾದೆ ನೋಡಾ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅರಿವನು ಅರಿಯಲು ಹೋದರೆ ಅದು ಬರೀ ಅರಿವಲ್ಲ, ಅದು ಸತ್ಯವು ಹೌದು, ಜ್ಞಾನ ಹೌದು, ಅದು ಅನಂತ ಬ್ರಹ್ಮವೂ ಹೌದೆಂದು ಶ್ರುತಿ ಸಾರುತ್ತದೆ.

ಮರೆವನು ಅರಿವಿನಿಂದ ಅರಿಯಲು ಹೋದಡೆ ಮರೆವು ಎಂಬುದು ಕೂಡಾ ಅರಿವಿನಿಂದಲೇ ಜನ್ಮ ಪಡೆದುಕೊಂಡಿದೆ. ಇದು ಅರಿವಿನ ಲೀಲೆ ಎಂದು ಕೈವಲ್ಯೋ ಪನಿಷತ್ ಘೋಷಿಸುತ್ತಿದೆ .ಮರೆವು ಕೂಡಾ ಸಾಕ್ಷಾತ್ ಸತ್ಯವೂ ಹೌದು ಚಿತ್ ಕೂಡಾ ಅದೇ ಆಗಿದೆ. ಪರಮಾನಂದ ಬ್ರಹ್ಮ ಕೂಡಾ ತಾನೇ ಆಗಿದೆ. ಕಾಯದಲ್ಲಿ ಅರಿಯಲೇಬೇಕೆಂಬ ಅರಿವೂ ಇದೆ, ಅರಿತುದನು ಮರೆತು ಹೋಗುವ ಮಾಯಾಸ್ವರೂಪವಾದ ಮನವೂ ಇದೆ.

ಕಾಯ ಎಂಬ ವಸ್ತು ಕಾಣುತ್ತದೆ; ಆ ವಸ್ತುವಿನಲ್ಲಿ ಅರಿವು ಸಂಗಮವಾಗಿದೆ. ಹಾಗೆಯೇ ಕಾಯ ಎಂಬ ವಸ್ತುವನ್ನು ಮನವೆಂಬ ಮಾಯಾ ಆವರಿಸಿಕೊಂಡಿದೆ ವಸ್ತುಕೂಡಾ ಕಾಣುವುದಿಲ್ಲ.

ಅರಿವು ವಸ್ತು ಸ್ವರೂಪ, ಮರೆವು ಮಾಯಾಸ್ವರೂಪ ಎನ್ನುವಂತಿಲ್ಲ ಏಕೆಂದರೆ ಅರಿಯುವ ಅರಿವು ಇದೆ. ಅರಿತುದನು ಮರೆತು ಹೋಗುವ ಮಾಯೆ ಕೂಡಾ ಕಾಯದಲ್ಲಿಯೇ ಇದೆ, ಅರಿತರಿತು ಅರಿದ ಅರಿವನು ಮರೆಯಬೇಕು, ಏಕೆಂದರೆ ಅರಿತ ಅರಿವು ಕೂಡಾ ಮಾಯೆಯೇ ಆಗಿದೆ. ಅರಿದುದನು ಮರೆತ ಮಾಯೆ ಕೂಡಾ ಒಂದೇ ಆಗಿದೆ.

ಅಂಗದಲ್ಲಿಯೇ ಸಂಗಮವಾದ ಅರಿವು ಎನ್ನುವ ನಿರ್ವಯಲ ಸ್ವರೂಪ ಹಾಗೆಯೇ ಇದೆ.

ಅರಿತರಿತು ಅರಿವಿನ ಮಾತನಾಡಿದರೂ ಪ್ರಯೋಗಕ್ಕೆ ಹೋಗಿ ಅದು ಕ್ರಿಯೆಯಲ್ಲಿ ನಿಲ್ಲದಿದ್ದರೆ ಅದು ಅರಿವಲ್ಲ; ಅರಿತ ಅರಿವು. ಹೀಗಾಗಿ ಈ ಅರಿವಿನ ಮೂಲಕ ಮಾತನಾಡಲು ಬರುತ್ತದೆಯೇ ಹೊರತು ಮಾತನಾಡಿದಂತೆ ಇರಲು ಬರುವುದಿಲ್ಲ. ಹೀಗಾಗಿ ಅರಿತರಿತ ಅರಿವು ಕೂಡಾ ಮಾಯೆಯೇ ಆಗಿದೆ .

ಅರಿವೆಂಬ ಗುರುದೇವನೆ, ಅಂಗದಲ್ಲಿಯೇ ಸಂಗಮಾವಾದ ಪರಮಾತ್ಮನೆ, ನಾನು ನಿನ್ನನ್ನು ಅರಿಯಲು ಷ್ಟರವನು ? ನೀನು ನಿರ್ವಯಲು, ನಿನಗೆ ಶರಣು ಹೋಗಿ ಶರಣಾಗತನಾದೆ. ನಿರ್ವಯಲಲ್ಲಿ ಮುಳುಗಿ ಆ ನಿರ್ವಯಲೇ ನಾನಾದೆ. ಏಕೆಂದರೆ ನೀನು ಬಯಲು ನಿನ್ನಿಂದ ಜನ್ಮ ಪಡೆದ ನಾನು ಕೂಡಾ ಬಯಲೇ ಆಗಿದ್ದೇನೆ.

ನೀನಿದ್ದ ಕಾಯ ನನ್ನದೆಂದು ತಿಳಿದಿದ್ದೆ, ಅದು ನನ್ನದಲ್ಲ, ನಿನ್ನದೆಂದು ಇಂದೇ ತಿಳಿಯಿತು. ಹೀಗಾಗಿ ನನಗೆ ಮಾಯೆ ಆವರಿಸಿತ್ತು. ಅದನ್ನು ಕೊಡವಿಕೊಂಡು ಕಾಯದಲ್ಲಿಯೇ ಇದ್ದ ನಿರ್ಬಯಲ ಸ್ವರೂಪನಾದ ನಿನ್ನಲ್ಲಿ ನಾನು ಐಕ್ಯನಾದೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1438**

**ಒಂದೇ ವಸ್ತು ಭೇದವಾಗಿ ಕಾಡಿತ್ತಯ್ಯಾ :**
**ಎನ್ನ ದೇಹ ವಸ್ತುವೆಂದಡೆ, ಹಲವು ರೂಪಾಗಿ ತೋರಿತ್ತು.**
**ಕಾರಣ ವಸ್ತುವೆಂದಡೆ, ಸ್ಥೂಲ ಸೂಕ್ಷ್ಮ ತಿಳಿಯದೇ ಹೋಯಿತ್ತು .**
**ಕಾರಣಾತೀತವೆಂದಡೆ, ಸಾಕ್ಷಿಯಾಗಿ ಕ್ರಿಯಗಳ ಮಾಡಿಸಿತ್ತು .**
**ಸಾಕ್ಷಿಯಾಗಿ ನಿಂದರಿವ ವಸ್ತುವೆಂದಡೆ, ಚೇತನವಾಗಿ ನಿಂದಿತ್ತು .**
**ಇದರಿರದ ಬಲ್ಲಾತನೇ ಭಕ್ತ, ನೋಡಿ ಬಯಲಾದಾತನೆ ಜಂಗಮ**
**ಬಯಲಾಗಿ ರೂಪಕ್ಕೆ ಬಂದಾತನೆ ಪ್ರಾಣಲಿಂಗಿ ನೋಡಯ್ಯಾ ,**
**ಕಪಿಲಸಿದ್ಧಮಲ್ಲಿಕಾರ್ಜುನಾ .**

ದೇಹ ಒಂದೇ ಆದರೂ ಬೇಧವಾಗಿ ಕಾಣುತ್ತದೆ. ದೇಹ ವಸ್ತುವೆಂದಡೆ ಅದು ವಸ್ತುವಲ್ಲ; ಹಲವಾರು ರೂಪಾಗಿ ತೋರುತ್ತದೆ; ಕಾರಣದೇಹ ವಸ್ತುವೆಂದಡೆ ಸ್ಥೂಲದೇಹ ಸೂಕ್ಷ್ಮದೇಹ ತಿಳಿಯದೆ ಹೋಗುತ್ತದೆ. ಕಾರಣಾತೀತವೆಂದರೆ ಸಾಕ್ಷಿಯಾಗಿ ಕ್ರಿಯಂಗಳ ಮಾಡಿಸುತ್ತಿದೆ. ಸಾಕ್ಷಿಯಾಗಿ ಮಿಂದ ಅರಿವೆ ವಸ್ತುವೆಂದಡೆ ಅದು ಚೇತನವಾಗಿ ನಿಲ್ಲುತ್ತದೆ.

ಇದರ ನಿಲುವು ಬಲ್ಲಾತನೆ ಭಕ್ತ. ನೋಡಿ ಬಯಲಾದಾತನೆ ಜಂಗಮ ಬಯಲಾಗಿ ರೂಪಕ್ಕೆ ಬಂದಾತನೆ ಪ್ರಾಣಲಿಂಗಿಯೊಳಗೆ ಕಪಿಲಸಿದ್ಧಮಲ್ಲಿಕಾರ್ಜುನ.

ಬಯಲು ಬೀಜವಾಗಿ ಗರ್ಭಕ್ಕೆ ಹೊಕ್ಕು ರೂಪವಾಗಿ ಹೊರಬಂದಿದೆ. ಈ ರೂಪಕ್ಕೆ ನಿರೂಪವೆಂಬ ಬಯಲೆ ಕಾರಣ. ಈ ನಿರೂಪವನ್ನು ತಿಳಿಯಲು ಮನವೆಂಬ ಸೂಕ್ಷ್ಮ ದೇಹವನ್ನು ಸೃಷ್ಠಿಮಾಡಿದೆ ಅದು ದೇಹದಲ್ಲಿಯೇ ಸಂಗಮವಾಗಿದೆ. ಇದು ಕೂಡ ಕಾಣುವುದಿಲ್ಲ, ನಿರೂಪು. ಈ ನಿರೂಪು ಸೂಕ್ಷ್ಮದೇಹ. ಕಾರಣ ದೇಹಕ್ಕೆ ಶರಣು ಹೋದಾಗ ಅದೇ ಪ್ರಾಣಲಿಂಗಿಯಾಗುತ್ತದೆ. ಬಯಲ ರೂಪವೇ ಸೂಕ್ಷ್ಮ ನಿರೂಪವನ್ನು ಕೈ ಹಿಡಿದು ನಡೆಸಬೇಕು ಹಾಗೆಯೆ ತನ್ನಂತೆ ಮಾಡಿಕೊಳ್ಳಲು ದೇಹದಲ್ಲಿಯೇ ಸಂಗಮವಾಗಿದೆ.

ಸೂಕ್ಷ್ಮ ದೇಹ ಕಾರಣ ದೇಹವನ್ನು ತಿಳಿದುಕೊಳ್ಳಲು ಸಾಧ್ಯವಗದೇ ಇರುವುದರಿಂದ ಸೂಕ್ಷ್ಮದೇಹ ಸ್ಥೂಲದೇಹದ ಸಂಗ ಮಾಡಿ ತನಗೆ ಇಚ್ಛೆ ಬಂದಂತೆ ಸ್ಥೂಲ ದೇಹದೊಂದಿಗೆ ಸುಖಿಸಿ ಸುಖ ದುಃಖಗಳ ಜಂಜಾಟದ ಮಧ್ಯೆಯೇ ಸ್ಥೂಲದೇಹದ ಪ್ರಾಣ ಪಕ್ಷಿ ವ್ಯರ್ಥವಾಗಿ ಹಾರಿಹೋಗುತ್ತದೆ.

**1439**

**ತನು ಕೊಟ್ಟು ಭಕ್ತನಾದೆಹೆನೆಂದಡೆ, ತನು ಮಲಭಾಂಡವಯ್ಯಾ.**
**ಮನ ಕೊಟ್ಟು ಭಕ್ತನಾದೆಹೆನೆಂದಡೆ ಮನ ವಾಯುಮಿತ್ರನಯ್ಯಾ**
**ಧನ ಕೊಟ್ಟು ಭಕ್ತನಾದೆಹೆನೆಂದಡೆ, ಎನ್ನ ಬಂಧುಗಳ ಭಾವ ಅದರಲ್ಲಯ್ಯಾ.**
**ಇವೆಲ್ಲ ಅಶುದ್ಧ ಪದಾರ್ಥಂಗಳ ಕೊಟ್ಟು ಭಕ್ತನಾಗುವೆನೆ ? ಆಗಲರಿಯೆನು.**

**ಮಾಡಿ ಮಾಡಿ ಭಕ್ತನಾಗಿಹೆನೆಂಬವರಿಗೆ ಕೊಟ್ಟು**
**ಭಕ್ತನಾಗುವೆನೆಂದಡೆ, ನೀವೆಯಾಗಿ ನಿಂದಲ್ಲಿ ಕೊಡಲಿಕ್ಕಿಂಬಿಲ್ಲಾ,**
**ತೆಗದು ಕೊಂಬುವಡೆ ಹಸ್ತವಿಲ್ಲಾ, ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ ತಂದೆ.**

ಭಕ್ತನಾಗುವುದೆಂದರೆ ಗುರುಲಿಂಗ ಜಂಗಮನಿಗೆ ತನು ಮನ ಧನವನ್ನು ಕೊಡುವುದಲ್ಲ. ತನು ಎಂಬುವುದು ಮಲಭಾಂಡ, ಮನ ಎಂಬುವುದು ಇಲ್ಲದ್ದು, ಧನ ಎಂಬುವುದು ಕೂಡ ಸ್ವತಃ ತಾನೇ ಮಾಡಿದ್ದು. ಇವೆಲ್ಲವನ್ನು ಜಂಗಮನಿಗೆ ಕೊಟ್ಟು ಭಕ್ತನಾಗಲು ಬರುವುದಿಲ್ಲ.

ತನುವಿನಲ್ಲಿ ತನ್ಮಯವಾದ ಅರಿವೆಂಬ ಗುರುದೇವನಿಗೆ ತನುವನ್ನು ಆವರಿಸಿದ ಮನವನ್ನೇ ಭಕ್ತನನ್ನಾಗಿಸಿಕೊಂಡು ಆ ಗುರುದೇವನಿಗೆ ಸಂಪೂರ್ಣ ಶರಣು ಹೋದಾತನೇ ಭಕ್ತ. ಅಶುದ್ಧ ಪದಾರ್ಥಗಳನ್ನು ಕೊಟ್ಟು ಭಕ್ತನಾಗಲು ಬರುವುದಿಲ್ಲ, ಅಶುದ್ಧ ಪದಾರ್ಥಗಳನ್ನು ಕೈಯೊಡ್ಡಿ ತೆಗೆದುಕೊಳ್ಳುವವನು ಗುರುವೂ ಅಲ್ಲ, ಕೊಟ್ಟು ಧನ್ಯನಾದೆನೆಂಬುವವನು ಭಕ್ತನೂ ಅಲ್ಲ.

ಗುರುದೇವನೆಂದರೆ ಕಾಯವುಳ್ಳವನಲ್ಲ, ಭಕ್ತನೆಂದರೂ ಕೂಡ ಕಾಯವುಳ್ಳವನಲ್ಲ, ಇವರಿಬ್ಬರೂ ಕಾಯದಲ್ಲಿ ಇದ್ದವರು.

ಕಾಯವುಳ್ಳವನು ಗುರುವೂ ಅಲ್ಲ ಕಾಯವುಳ್ಳವನು ಶಿಷ್ಯನೂ ಅಲ್ಲ. ಗುರು ಶಿಷ್ಯ ಎನ್ನುವವರಿಬ್ಬರು ಕಾಯದಲ್ಲಿ ಸಂಗಮವಾಗಿದ್ದಾರೆ.

ಭಕ್ತನಾಗಿ ಕಾಯ ಉಳ್ಳ ಗುರುವಿಗೆ ಏನಾದರು ಕೊಡಲು ಹೋದರೆ ಆ ಕಾಯದಲ್ಲಿ ಶಿಷ್ಯನು ಇದ್ದಾನೆ, ಗುರುದೇವನು ಇದ್ದಾನೆ, ಶಿಷ್ಯ ಗುರುದೇವನಿಗೆ ಏನಾದರು ಕೊಡಲು ಸಾಧ್ಯವೇ ಎರಡೂ ಕಾಯಗಳಲ್ಲಿ ಗುರುದೇವನೇ ಇರುವುದರಿಂದ ತೆಗೆದುಕೊಳ್ಳಲು ಕೊಡಲು ಇವರಿಬ್ಬರಿಗೂ ಹಸ್ತವಿಲ್ಲ. ಸಿದ್ಧರಾಮ ಶಿವಯೋಗಿಗಳು ಓದುಗರಿಗೆ ತಿಳಿಯುವಂತೆ ಸುಂದರವಾದ ಸೂತ್ರವನ್ನು ರಚಿಸಿದ್ದಾರೆ.

**1440**

**ಭೂಷಣವುಳ್ಳ ಜಂಗಮವ ಭೂಪಾಲ ಪೂಜಿಸುವ,**
**ವೇಷವುಳ್ಳ ಜಂಗಮವ ವೇಶಿ ಪೂಜಿಸುವಳು,**
**ವೇಷಧಾರಿ ಜಂಗಮವ ಲೋಕವೆಲ್ಲ ಪೂಜಿಸುವುದು,**
**ಜ್ಞಾನವುಳ್ಳ ಜಂಗಮವನಾರು ಪೂಜಿಸರು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಜಂಗಮನೆಂದರೆ ಭೂಷಣವುಳ್ಳವ ವೇಷಧಾರಿ ಜಂಗಮನಲ್ಲ ಜಂಗಮನಾದವನಿಗೆ ವೇಷದ ಅವಶ್ಯಕತೆಯಿಲ್ಲ. ಜಂಗಮನೆಂದರೆ ಮಹಾಜ್ಞಾನಿ, ಅಂತಹ ಜಂಗಮನನ್ನು ತಿಳಿದಂತಹ ಮನಸ್ಸು ಪೂಜಿಸಲು ಸಾಧ್ಯವೇ ಹೊರತು ಅನ್ಯರಿಗೆ ಇದು ಸಾಧ್ಯವಾಗುವುದಿಲ್ಲ.

ಜಂಗಮನನ್ನು ಪೂಜಿಸುವುದು ಪೂಜೆ ಮಾಡುವವನಿಗೆ ಮಾತ್ರ ಆ ಜಂಗಮನ ಪರಿಚಯವಿರುತ್ತದೆ ಹೊರತು ಅನ್ಯರಿಗೆ ಜಂಗಮನ ಪರಿಚಯವಿರಲು ಸಾಧ್ಯವಿಲ್ಲ

ಜಂಗಮ ಒಬ್ಬ ವ್ಯಕ್ತಿಯಲ್ಲ ಜ್ಞಾನದ ಶಕ್ತಿ, ಅದು ಅಂಗದಲ್ಲಿಯೇ ಇದೆ, ಅಂಗವನ್ನು ಆವರಿಸಿದ ಮನದಿಂದ ಅಂಗದಲ್ಲಿಯೇ ಸಂಗಮವಾದ ಜಂಗಮಶಕ್ತಿಯನ್ನು ಕಾಣಲು ಸಾಧ್ಯ, ಶಕ್ತಿಯೇ ತಾನಾಗಲು ಸಾಧ್ಯ .

ಅಂಗದಲ್ಲಿಯೇ ಸಂಗಮವಾದ ಜಂಗಮನನ್ನು ಅರಿಯುವುದು ಒಂದು ಶಿಕ್ಷಣ. ಈ

ಶಿಕ್ಷಣವನ್ನು ಅರಿಯಲು ಇಚ್ಛೆವುಳ್ಳವನು ಮಾತ್ರ ಅರಿಯಬಲ್ಲ. ಅರಿತರಿತು ಆ ಜಂಗಮವೇ ತಾನಾಗಬಲ್ಲ.

**1441**

**ಗುಣವ ನೋಡದೆ ಹೊಗಳುವ ಜಂಗಮವು ಬ್ರಹ್ಮನ ಸಂತತಿ.**
**ಕಾಡಿ ಬೇಡುವ ಜಂಗಮವು ನಾರಾಯಣ ಸಂತತಿ.**
**ವ್ಯಾಪಾರಿಕ ಜಂಗಮವು ಈಶ್ವರನ ಸಂತತಿ.**
**ಹೊಗಳದೆ , ಕಾಡದೆ, ಬೇಡದೆ, ಬಲತ್ಕಾರದಿಂದುಣ್ಣದೆ, ವ್ಯವಹರಿಸದೆ,**
**ಭಿಕ್ಷ ಮುಖದಿಂದುಂಬ ಜಂಗಮನ ನೋಡಿ,**
**ಎನ್ನ ಮನ ನೀವೆಂದು ನಂಬಿತ್ತಯ್ಯಾ , ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುಣವ ನೋಡದೆ ಹೊಗಳುವ ಜಂಗಮವು ಬ್ರಹ್ಮನ ಸಂತತಿ, ಕಾಡಿ ಬೇಡುವ ಜಂಗಮವು ನಾರಾಯಣನ ಸಂತತಿ. ವ್ಯಾಪಾರಿಕ ಜಂಗಮವು ಈಶ್ವರನ ಸಂತತಿ. ಸಿದ್ಧರಾಮ ಶಿವಯೋಗಿಗಳು ಮೂರು ಜಂಗಮವನ್ನು ಪರಿಚಯಿಸಿದ್ದಾರೆ. ಜಂಗಮನೆಂದರೆ ಹೊಗಳುವವನಲ್ಲ. ಕಾಡಿ ಬೇಡುವವನೂ ಅಲ್ಲ. ವ್ಯಾಪಾರಿಯೂ ಅಲ್ಲ. ಜಂಗಮನೆಂದರೆ ನಿಗುರ್ಣಿ, ಹೊಗಳದೆ ಕಾಡದೆ ಬೇಡದೆ ಬಲತ್ಕಾರದಿಂದ ಉಣ್ಣದೆ. ವ್ಯವಹರಿಸದೆ ಉಣ್ಣುವವನು ಮಾತ್ರ ಜಂಗಮ, ಹಾಗೆಯೇ ನಿರ್ಗುಣಿ ಜಂಗಮನನ್ನು ಭಿಕ್ಷೆ ಮುಖದಿಂದ ಉಣ್ಣುವ ಜಂಗಮ ಎಂದು ಹೆಸರಿಸಿದ್ದಾರೆ. ಅಂತಹ ಭಿಕ್ಷೆ ಮುಖದಿಂದ ಉಣ್ಣುವ ಜಂಗಮನನ್ನು ನೋಡಿ ಎನ್ನ ಮನ ನೀವೆಂದು ನಂಬಿತ್ತಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನ.

**1442**

**ವೇಷಧಾರಿ ಜಂಗಮವನಂತರುಂಟು, ವೇಷವಳಿದವರನೊಬ್ಬರನು ಕಾಣೆ**
**ಬಿಂದು ನಿಗ್ರಹದ ಜಂಗಮರನಂತರುಂಟು, ಬಿಂದು ರಹಿತ ಜಂಗಮನೊಬ್ಬರನು ಕಾಣೆ.**
**ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ಜಂಗಮವೆನ್ನ ಬೇಕು, ಪ್ರಭುವೇ ಜಂಗಮವೆನ್ನಬೇಕು.**
**ವೇಷಧಾರಿಯೆಂದು. ಇನ್ನುಳಿದವರೊಪ್ಪಚ್ಚಿ ಅಳವಡೆಂದಡೆ,**
**ಅಳವಡದು ನೋಡಾ ನಿನ್ನ ಮುಂದೆ.**

ವೇಷಧಾರಿ ಜಂಗಮರು ಅನಂತರುಂಟು. ಮನ ಕಾಯಕ್ಕೆ ಜಂಗಮನ ವೇಷ ಹಾಕಿ ಕಾಯದೊಂದಿಗೆ ಸುಖದಿಂದಿರಲು ಮಠ , ಆಶ್ರಮವನ್ನು ಹುಟ್ಟು ಹಾಕಿ, ತಾನು ಪೀಠಾಧಿಪತಿಯಾಗಿ ಕುಳಿತು ಕೊಳ್ಳುತ್ತದೆ. ಜಗಮನೆಂದರೆ ಜಾತಿಯಲ್ಲಿ ಹುಟ್ಟಿದವನಲ್ಲ. ವೇಷದಾರಿಯೂ ಅಲ್ಲ. ಕಾಯ ಉಳ್ಳವನೂ ಜಂಗಮನಲ್ಲ ಜಂಗಮ ನೆಂದರೆ ಕಾಯದಲ್ಲಿ ಇದ್ದವನು. ಕಾಯ ಗುಣಗಳನ್ನು ಹೊಂದದವನು. ಜಂಗಮನಾದವನಿಗೆ ಜಂಗಮ ಕಾಣುತ್ತಾನೆ ಹೊರತು, ಉಳಿದವರಿಗೆ ಕಾಣುವುದಿಲ್ಲ ಬರೀ ವೇಷವುಳ್ಳ ಜಂಗಮ ಮಾತ್ರ ಕಾಣುತ್ತಾನೆ. ಕಂಡುಬರುವ ಜಂಗಮ ಬಿಂದು ನಿಗ್ರಹ ಜಂಗಮ. ಬಿಂದುವನ್ನು ನಿಗ್ರಹಿಸಿದವನು. ಕಾಯದಲ್ಲಿರುವ ಜಂಗಮ ಬಿಂದು ರಹಿತ

ಜಂಗಮ. ಆತ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನೂ ಹೌದು.

**1443**

**ಸುವರ್ಣಕ್ಕೆ ಅಲಂಕಾರಕ್ಕೆ ಭೇದವುಂಟೆ ಅಯ್ಯಾ ?**
**ಜ್ಯೋತಿಗೆ ಪ್ರಕಾಶಕ್ಕೆ ಭೇದವುಂಟೆ ಅಯ್ಯಾ**
**ನೂಲಿಂಗೆ ಪಟಕ್ಕೆ ಭೇದವುಂಟೆ ಅಯ್ಯಾ ?ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ಚೆನ್ನ ಬಸವಣ್ಣಂಗೆ ನನಗೆ ಭೇದವುಂಟೆ ಅಯ್ಯಾ?**
**ಇಲ್ಲ ನೋಡಾ ಪ್ರಭುವೆ.**

ಸುವರ್ಣಕ್ಕೆ ಸುವರ್ಣದಿಂದ ಮಾಡಿದ ಅನೇಕ ಆಭರಣಗಳಿಗೆ ಭೇದವಿಲ್ಲ. ಜ್ಯೋತಿಗೂ ಅದರ ಪ್ರಕಾಶಕ್ಕೂ ಭೇದವಿಲ್ಲ. ನೂಲಿಗೆ ಮತ್ತು ಪಟಕ್ಕೆ ಭೇದವಿಲ್ಲ ಹಾಗೆಯೇ ಕಪಿಲಸಿದ್ಧ ಮಲ್ಲಿಕಾರ್ಜುನ ಎನ್ನ ಗುರುದೇವನಾದ ಚೆನ್ನಬಸವಣ್ಣನಿಗೆ ಮತ್ತು ನನಗೆ ಕೂಡ ಭೇದವಿಲ್ಲ ಪ್ರಭುವೆ. ಎಂದು ಸಿದ್ಧರಾಮ ಶಿವಯೋಗಿಗಳು ತನಗೂ ಮತ್ತು ತನ್ನ ಗುರುದೇವನಿಗೂ ಯಾವುದೇ ಭೇದವಿಲ್ಲ ಎಂದು ಮೂರು ಉದಾಹರಣೆಗಳ ಮೂಲಕ ಪ್ರಭದೇವರ ಮುಂದೆ ಸಿದ್ಧರಾಮ ಶಿವಯೋಗಿಗಳು ಹೇಳಿಕೊಂಡಿದ್ದಾರೆ.

**1444**

**ಜನನ ಮರಣ ದೇಹಧರ್ಮವಲ್ಲದೆ ಜಂಗಮಕ್ಕೆಲ್ಲಿಹುದೋ !**
**ಕ್ಷುದಾ ತೃಷೆ ಪ್ರಾಣಧರ್ಮವಲ್ಲದೆ ಜಂಗಮಕ್ಕೆಲ್ಲಿಹುದೋ !**
**ಸುಖ - ದುಃಖ ಮನೋಧರ್ಮವಲ್ಲದೆ ಜಂಗಮಕ್ಕೆಲ್ಲಿಹುದೋ !**
**ಜ್ಞಾನಾಜ್ಞಾನಂಗಳು ಮುಮುಕ್ಷುವಿಂಗಲ್ಲದೆ,**
**ನಿಮ್ಮಲ್ಲಿ ಸಮರಸವಾದ ಸಚ್ಚಿದಾನಂದ ಶಿವಯೋಗಿ**
**ಜಂಗಮಕ್ಕೆಲ್ಲಿಹುದೋ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜನನ ಮರಣಂಗಳು ದೇಹಕ್ಕಿದೆಯೇ ಹೊರತು ದೇಹದಲ್ಲಿಯೇ ಸಂಗಮವಾದ ಜಂಗಮನಿಗೆ ಜನನವಿಲ್ಲ ಮರಣವಿಲ್ಲ.

ಕ್ಷುಧಾ - ತೃಷೆ ಪ್ರಾಣಕ್ಕಿದೆಯೇ ಹೊರತು, ದೇಹದಲ್ಲಿಯೇ ಸಂಗಮವಾದ ಜಂಗಮಕ್ಕಿಲ್ಲ, ಸುಖ ದುಃಖ ಎನ್ನುವುದು ಮನಕ್ಕಿದೆಯೇ ಹೊರತು ಜಂಗಮಕ್ಕಿಲ್ಲ.

ಜ್ಞಾನಾಜ್ಞಾನಂಗಳು ಮೋಕ್ಷವನ್ನು ಬಯಸುವ ಮುಮುಕ್ಷುವಿಗೆ ಇದೆಯಲ್ಲದೆ ಅಂಗದಲ್ಲಿಯೇ ಸಮರಸವಾದ ಸಚ್ಚಿದಾನಂದ ಶಿವಯೋಗಿ ಜಂಗಮಕ್ಕಿಲ್ಲ; ಕಪಿಲಸಿದ್ಧ ಮಲ್ಲಿಕಾರ್ಜುನ.

**1445**

**ಜಂಗಮವ ಪೂಜಿಸುವಡೆ ಜಗದ್ಭರಿತ ನೋಡಾ,**
**ನೋಡುವಡೆ ಏಕದೇಹಿ ನೋಡಯ್ಯಾ.**
**ಲಿಂಗವ ಪೂಜಿಸುವಡೆ ಲಿಂಗಮಧ್ಯೆ ಜಗತ್ಸರ್ವಂ ಎಂದು ಶ್ರುತಿ ಸಾರುತ್ತಿದೆ.**

**ಗುರುವ ಪೂಜಿಸುವಡೆ, ಗೀರಿತಿ ಜ್ಞಾನಂ ಗುರು : ಎಂದು (ಶಬ್ದೋತ್ಪತ್ತಿ) ಉಂಟು.**
**ಇವೆಲ್ಲ ನನಗೆ ಅಸಾಧ್ಯ ನೋಡಾ.**
**ನಿನ್ನ ಪೂಜಿಸೆ ನಿನ್ನ ಕೈಕೊಂಬ ಪರಿಯ ಹೇಳಾ, ಎಲೆ ಕಪಿಲಸಿದ್ಧಮಲ್ಲಿಕಾರ್ಜುನ.**

ಜಂಗಮುವ ಪೂಜಿಸುವಡೆ ಜಗದ್ಭರಿತ ನೋಡಾ, ನೋಡುವಡೆ ಏಕದೇಹಿ ನೋಡಯ್ಯ,

ದೇಹದಲ್ಲಿ ಸ್ಥೂಲ ದೇಹ ಸೂಕ್ಷ್ಮ ದೇಹ ಕಾರಣ ದೇಹ ಎಂದು ಮೂರು ದೇಹಗಳು. ಸೂಕ್ಷ್ಮ ದೇಹ ಕಾರಣ ದೇಹಕ್ಕೆ ಶರಣು ಹೋಗಿ ಶರಣಾಗತನಾದಾಗ ಅದು ಏಕದೇಹಿಯಾಗುತ್ತದೆ. ಈ ಏಕದೇಹ ಜಗದ್ಭರಿತ ದೇಹ. ಜಗದ ತುಂಬ ಏಕದೇಹಗಳೇ ತುಂಬಿವೆ. ದೇಹವೇ ಇನ್ನೆರಡು ದೇಹಗಳನ್ನು ಅರಿತು ಅಥವಾ ದೇಹವನ್ನು ಆವರಿಸಿದ ಮನ ದೇಹಕ್ಕೆ ಮೋಹಗೊಳ್ಳದೆ, ಅರಿವೆಂಬ ಗುರುದೇವನ ದೇಹದಲ್ಲಿ ಸಂಗಮುವಾದಾಗ ಏಕದೇಹ ಕಾಣುತ್ತದೆ. ದೇಹ ದೇಹವನ್ನು ಅರಿತರಿತು ಅರಿವೇ ತಾನಾಗಿ ಅರಿವಿನ ಏಕದೇಹಿ ಎಂದು ಕರೆಸಿಕೊಳ್ಳುತ್ತದೆ. ಇಂತಹ ಏಕದೇವ ಜಂಗಮನನ್ನು ಪೂಜಿಸುವ ಶಕ್ತಿ ಎಲ್ಲರಿಗೂ ಬರುವುದಿಲ್ಲ. ಆ ಜಂಗಮನನ್ನು ಅರಿತು ಆರಾಧಿಸಬೇಕು ಎಂದು ಛಲವುಳ್ಳ ಶಕ್ತಿ ಜಂಗಮನನ್ನು ಪೂಜಿಸಿದ ದೇಹಕ್ಕೆ ಬರುತ್ತದೆ.

ಲಿಂಗವನ್ನು ಪೂಜಿಸಲು ಹೋದಡೆ ಲಿಂಗಂ ಸರ್ವಪೂಜ್ಯಂ ಎಂದು ಶೃತಿ ಸಾರುತ್ತದೆ. ಗುರುವ ಪೂಜಿಸುವುಡೆ ಗೀರಿತಿ ಜ್ಞಾನಂ ಗುರು ಎಂದು ಶಬ್ದೋತ್ಪತ್ತಿ ಉಂಟು. ಇವೆಲ್ಲ ನನಗೆ ಅಸಾಧ್ಯ ನೋಡಾ ಎಂದು ಸಿದ್ಧರಾಮ ಶಿವಯೋಗಿಗಳು ಹೇಳತ್ತಾರೆ. ಮುಂದುವರಿದು ನೇರವಾಗಿ ನಿನ್ನ ಪೂಜಿಸಿ ನಿನಗೆ ಶರಣು ಹೋಗಿ ನಿನ್ನನ್ನು ಕೊಂಬ ಪರಿಯ ನನಗೆ ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**1446**

**ಉದಕದಿಂದ ಅಭಿಷೇಕಂಗೈವಡೆ ಒದರಿದವು ನೋಡಾ ನಿನ್ನುತ್ತಮಾಂಗದಲ್ಲಿ**
**ಅರವತ್ತೆಂಟು ಕೋಟಿ ನದಿಗಳು ಪುಷ್ಪವ ಧರಿಸುವಡೆ,**
**ಚಂದ್ರಕಲಾ ಪ್ರಕಾಶವುಂಟು ನೋಡಾ ಜಟಾಗ್ರದಲ್ಲಿ,**
**ನೀರಾಜನವೆತ್ತುವಡೆ ಸೂರ್ಯಚಂದ್ರಾಗ್ನಿ ನೇತ್ರ ನೋಡಾ.**
**ಸ್ತೋತ್ರವ ಮಾಡುವಡೆ, ವೇದಂಗಳು ಹೊಗಳಿ ಹೊಗಳಿ ಮೂಗುವಟ್ಟವು ನೋಡಾ.**
**ನಿನ್ನ ಮುಂಭಾಗದಲ್ಲಿ ನಾಟ್ಯವನಾಡುವಂತೆ,**
**ಅದುರಿದವು ನೋಡಾ ಅಜಾಂಡಂಗಳು ನಿನ್ನ ಪಾದಸ್ಪರ್ಶನದಿಂದ.**
**ಚಾಮರವ ಬೀಸುವಡೆ, ನೋಡಾ ಹನ್ನೊಂದು ಕೋಟಿ ರುದ್ರಕನ್ನಿಕೆಯರ ಕೈತಾಳಧ್ವನಿಯು**
**ಚಂದನವ ಧರಿಸುವಡೆ ನೋಡಾ ಮಲಯಾಚಲನಿವಾಸಿ**
**ವಸ್ತ್ರವ ಧರಿಸುವಡೆ, ನೋಡಾ ವ್ಯಾಘ್ರಾಸುರ ಗಜಾಸುರ ಚರ್ಮವಾಸಿ.**
**ಭಸ್ಮವ ಧರಿಸುವಡೆ, ನೋಡಾ ಕಾಮನ ಸುಟ್ಟ ಭಸ್ಮ ಅಂಗದಲ್ಲಿ**
**ಅಕ್ಷತೆಯ ಧರಿಸುವಡೆ, ನೋಡಾ ಅಜಾಂಡಂಗಳ ದಾಟಿದ ಮಸ್ತಕ**
**ಅಂತಪ್ಪ ವಿಗ್ರಹವ ಪೂಜಿಸುವಡೆನ್ನಳವೆ ?**

**ಶರಣನ ಮುಖದಿಂದ ಬಂದ ಪದಾರ್ಥವ ಕೈಕೊಂಡು**
**ಪೂಜಾ ಪ್ರೀತನಾಗಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ಎನ್ನ ಅಂಗದಲ್ಲಿ ನಿನಗೆ ನಿತ್ಯ ಮಜ್ಜನ ಎಂದು ಪ್ರಭುದೇವರು ಅಂಗದಲ್ಲಿಯೇ ಸಂಗಮವಾದ ಲಿಂಗಕ್ಕೆ ನಿತ್ಯ ಮಜ್ಜನ ಮಾಡುವ ಸೂತ್ರವನ್ನು ರಚಿಸಿದ್ದಾರೆ. ಹಾಗೆಯೇ ಸಿದ್ಧರಾಮ ಶಿವಯೋಗಿಗಳು ಉದಕದಿಂದ ಅಭಿಷೇಕ ಮಾಡಲು ಹೋದಡೆ. ನಿನ್ನ ಉತ್ತಮ ಅಂಗದಲ್ಲಿ ಅರವತ್ತೆಂಟು ಕೋಟಿ ನದಿಗಳು ಒದರಿದವು ನೋಡಾ ಎಂದಿದ್ದಾರೆ.

ನಿನಗೆ ಪುಷ್ಪ ಧರಿಸಲು ಹೋದಡೆ ನಿನ್ನ ಜಟಾಗ್ರದಲ್ಲಿ ಚಂದ್ರಕಲಾ ಪ್ರಕಾಶವುಂಟು ನೋಡಾ.

ನಿನಗೆ ಆರತಿಯನು ಎತ್ತಲು ಹೋದಡೆ ನಿನ್ನ ನೇತ್ರ ಸೂರ್ಯ ಚಂದ್ರಾಗ್ನಿಯಂತೆ ಫಳಫಳನೆ ಹೊಳೆಯುತ್ತಿವೆ. ನಿನಗೆ ಸ್ತೋತ್ರವ ಮಾಡಲು ಹೋದಡೆ ನಿನ್ನಿಂದಲೆ ಹುಟ್ಟಿದ ವೇದಂಗಳು ಹೊಗಳಿ ಹೊಗಳಿ ಮೂಕವಾದವು ನೋಡಾ.

ನಿನ್ನ ಪಾದಸ್ಪರ್ಶದಿಂದ ಅಜಾಂಡಗಳು ನಾಟ್ಯವಾಡುವಂತೆ ಅದರಿದವು ನೋಡಾ ನಿನ್ನ ಮುಂಭಾಗದಲ್ಲಿ. ನಿನಗೆ ಚಾಮರ ಬೀಸಲು ಹೋದರೆ ಹನ್ನೊಂದು ಕೋಟಿ ರುದ್ರಕನ್ನಿಕೆಯರ ಕೈತಾಳ ಧ್ವನಿಯು ನೋಡಾ. ನಿನಗೆ ಚಂದನವ ಧರಿಸಲು ಹೋದಡೆ ಮಲಯಾಚಲ ನಿವಾಸಿ ನೀನೆಯಾದೆ ನೋಡಾ. ನಿನಗೆ ವಸ್ತ್ರವ ಧರಿಸಲು ಹೋದಡೆ ವ್ಯಾಘ್ರಾಸುರ, ಗಜಾಸುರ ಚರ್ಮವಾಸಿ ನೀನಾದೆ ನೋಡಾ. ನಿನಗೆ ಭಸ್ಮವ ಧರಿಸಲು ಹೋದಡೆ ಕಾಮನ ಸುಟ್ಟ ಭಸ್ಮ ನಿನ್ನಂಗದಲ್ಲಿಯೇ ನೋಡಾ. ನಿನಗೆ ಅಕ್ಷತೆಯ ಧರಿಸಲು ಹೋದಡೆ ಮಸ್ತಕವು ನೀನೆ ಆದೆ ನೊಡಾ. ಇಂತಹ ವಿಗ್ರಹವ ಪೂಜಿಸುವುದು ಎನಗೆ ಸಾಧ್ಯವೆ? ಶರಣನ ಮುಖದಿಂದ ಬಂದ ಕೈಕವ ಕಂಡು ಪೂಜಾತೀರ್ಥನಾದೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನ.

**1447**

**ನೀ ಒಲಿವ ಮುಖ ತಿಳಿಯದು ನೋಡಯ್ಯಾ ಆರಿಂಗೆ :**
**ಬ್ರಾಹ್ಮಣನ ಮೃಷ್ಟಾನ್ನವ ಬಿಟ್ಟು, ಬೇಡನ ಮಾಂಸಕ್ಕೊಲಿದೆ ದೇವಾ,**
**ಸೌಂದರಚೋಳನ ನೈವೇದ್ಯವನೊಲ್ಲದೆ,**
**ಚೋಳಿಯಕ್ಕನ ಉಚ್ಚಿಷ್ಟಕ್ಕೆ ಮೈಗೊಟ್ಟೆ ದೇವಾ**
**ಚೋಳನ ಬೋನವನೊಲ್ಲದೆ, ಚೆನ್ನಯ್ಯನ ಕೂಡ ಜಾತಿಗೆಟ್ಟು ಮೈಗೊಟ್ಟು ಒಲಿದೆ ದೇವಾ.**
**ಒಲಿಸಿಹೆನೆಂದಡೆ ಅಸಾಧ್ಯ !**
**ಒಲಿಯನೆಂದಡೆ, ಒಂದರಗಳಿಗೆ ಶ್ವೇತಗೆ ಪದವ ಕೊಟ್ಟೆ ದೇವಾ ?**
**ಕಪಿಲಸಿದ್ಧಮಲ್ಲಿಕಾರ್ಜುನದೇವಾ.**

ಪರಮಾತ್ಮನೆ ಕಪಿಲಸಿದ್ಧಮಲ್ಲಿಕಾರ್ಜುನ ದೇವನೆ ನೀನು ಒಲಿಯುವ ಮುಖ ಯಾರಿಗೂ ತಿಳಿಯದು ನೋಡಯ್ಯಾ . ಹೊರಗಿದ್ದ ದೇವರನ್ನು ಜಪ-ತಪ ಮಾಡಿ ಒಲಿಸಿಕೊಳ್ಳಬಹುದು. ಆದರೆ ದೇವರು ಹೊರಗಿಲ್ಲ ಜಪ-ತಪ ಮಾಡುವ ತನುವಿನಲ್ಲಿಯೇ ತನ್ಮಯವಾಗಿದ್ದಾನೆ.

ಬ್ರಾಹ್ಮಣನ ಮೃಷ್ಟಾನ್ನವ ಬಿಟ್ಟು ಬೇಡನ ಮಾಂಸಕ್ಕೆ ಒಲಿದೆ ದೇವಾ. ಮಹಾರಾಜ

ಸೌಂದರ ಚೋಳನ ನೈವೇದ್ಯವವಲ್ಲದೆ ಚೋಳಿಯಕ್ಕನ ಉಚ್ಚಿಷ್ಟಕ್ಕೆ ಮೈಗೊಟ್ಟ ದೇವಾ ಚೋಳನ ಭೋಜನವನ್ನು ಸ್ವೀಕರಿಸಲಿಲ್ಲ. ಚೆನ್ನಯ್ಯನ ಕೂಡ ಜಾತಿಗೆಟ್ಟು ಮೈ ಗೊಟ್ಟು ಆತ ನೀಡಿದ ಅಂಬಲಿಯನ್ನು ಸೇವಿಸಿ ಆತನಿಗೊಲಿದೆ ದೇವ ನೀನು. ನಿನ್ನನ್ನು ಒಲಿಸಿಹೆನೆಂದಡೆ ಅಸಾಧ್ಯ. ಒಲಿಯನೆಂದಡೆ ಒಂದರಗಳಿಗೆಯಲ್ಲಿ ಶ್ವೇತಗೆ ಪದವಕೊಟ್ಟದೇವಾ ಎಲೆ ಕಪಿಲಸಿದ್ಧಮಲ್ಲಿಕಾರ್ಜುನದೇವಾ.

**1448**

**ಒಲಿದು ಮೋಕ್ಷವ ಕೊಡಲಿ, ಕೊಡದೆ ಭವಕ್ಕೆ ಬೀಜವ ಮಾಡಲಿ.**
**ಬಿಡೆ, ಬಿಡೆನಯ್ಯಾ ನಿಮ್ಮ ಪೂಜೆಯ, ಬಿಡೆ, ಬಿಡೆನಯ್ಯಾ ನಿಮ್ಮ ದಾಸೋಹವ.**
**ಅದರ ಮಾನಾಪಮಾನವು ನಿಮ್ಮದು ನೋಡಯ್ಯಾ,**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಪರಮ ಪವಿತ್ರ ಇಷ್ಟಲಿಂಗವೆ.**

ಪರಮಾತ್ಮನೆ ಕಪಿಲಸಿದ್ಧ ಮಲ್ಲಯ್ಯನೆ ನೀನು ಎನಗೆ ಒಲಿದು ಮೋಕ್ಷವ ಕೊಡು ಅಥವಾ ಕೊಡದೆ ಪುನಃ ಭವಕ್ಕೆ ಬೀಜವ ಮಾಡು. ನಾನು ಮಾತ್ರ ನಿನ್ನನ್ನು ಬಿಡೆನಯ್ಯಾ . ಏಕೆಂದರೆ ನೀನು ಯಾರೆಂದು ನನಗೆ ಪರಿಪೂರ್ಣ ಗೊತ್ತಾಗಿದೆ. ತನುವಿನಲ್ಲಿಯೇ ತನ್ಮಯವಾದ ನಿಮ್ಮ ಪೂಜೆಯ ಮಾಡುವುದನ್ನು ನಾನು ಬಿಡೆ ಬಿಡೆನಯ್ಯಾ . ನಿಮ್ಮ ದಾಸೋಹ ಮಾಡುವುದನ್ನು ನಾನು ಬಿಡೆನಯ್ಯಾ . ಅದರ ಮಾನಾಪಮಾನಗಳು ನಿಮ್ಮದು ನೋಡಯ್ಯಾ .

ತನು ನಿನ್ನದು ಅದರ ಮಾನಾಪಮಾನವು ನಿನ್ನದೆ ನೋಡಯ್ಯಾ . ನಾನು ನಿನ್ನ ದಾಸ ನಿಮಗೆ ಶರಣಾಗತಿಯಾಗಿ ಶರಣು ಹೋದವನು ನಾನು ನೋಡಯ್ಯಾ ಅಂಗದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಯ್ಯನೆ ಪರಮ ಪವಿತ್ರ ಇಷ್ಟಲಿಂಗವು ನೀನೆ ನೋಡಯ್ಯಾ .

**1449**

**ಮಾಡದೆ ಮೋಕ್ಷವ ಹಡೆದು ಹೋದರೆಂಬ**
**ವಾರ್ತೆಯ ಕೇಳಿಹಿರೇನಯ್ಯಾ ? ಇಲ್ಲ ಇಲ್ಲವು.**
**ಮಾಡಿದಡೆ ತಪ್ಪದು, ಮಾಡಲ್ಲೊಲದೆ ಹೋದಡೆ**
**ಬರುವುದು ದೂರಾಗದು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಹೋದವನನ್ನು ಕಳುಹಿಸಲು ಬಂದ ಇದ್ದವರು ಮೋಕ್ಷವ ಪಡೆದು ಹೋದರೆಂದು ಮಾತನಾಡುವುದು ಸಹಜ. ಮಾಡದೆ ಮಟ್ಟದೆ ಮೋಕ್ಷ ಸಿಗಲು ಸಾಧ್ಯವೇ ?ಇಲ್ಲ ಇಲ್ಲವು. ಮಾಡಿದಡೆ ಮೋಕ್ಷ ತಪ್ಪದೆ ಸಿಗುತ್ತದೆ. ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ. ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ. ಮಾಡುವ ನೀಡುವ ನಿಜಗುಣವುಳ್ಳಡೆ ಕೂಡಿಕೊಂಡನು ಕೂಡಲಸಂಗಮದೇವ ಎಂದು ಬಸವಣ್ಣನವರ ಸೂತ್ರ ಹೇಳುತ್ತದೆ. ಹೀಗೆ ಸಿದ್ಧರಾಮ ಶಿವಯೋಗಿಗಳು ಕೂಡ ಮೇಲ್ಕಂಡಂತೆ ಹೇಳಿದ್ದಾರೆ.

ಮಾಡಲೊಲ್ಲದೆ ಹೋದಡೆ ಬರುವುದು ದೂರಾಗದು ನೋಡ ಕಪಿಲಸಿದ್ಧಮಲ್ಲಿಕಾರ್ಜುನ. ಕಾಯದೊಳಗೆ ಸಂಗಮವಾದ ಕಪಿಲಸಿದ್ಧಮಲ್ಲಯ್ಯ ಮಹಾಜ್ಞಾನಿ ತನುವನ್ನು ಆವರಿಸಿದ ಮನ ಮತ್ತು ತನು ಇವರೆಡು ತನುವಿನಲ್ಲಿಯೇ ಸಂಗಮವಾದ ಮಹಾಜ್ಞಾನಿ ಮಲ್ಲಯ್ಯನನ್ನು

ತಿಳಿಯದಿದ್ದರೆ.

ತಿಳಿದು ಆತನನ್ನು ಹೊಂದುವ ಕೆಲಸ ಮಾಡದಿದ್ದರೆ. ಮನ ಮತ್ತು ಸದ್ಭಕ್ತಿ ಸಿಗುವುದಿಲ್ಲ. ಮಲ್ಲಯ್ಯ ತನ್ನತ್ತ ಸೆಳೆಯುವುದಕ್ಕಾಗಿ ತನು ಮತ್ತು ಮನದ ಬೆನ್ನು ಹತ್ತಿದ್ದಾನೆ. ತನು ಮತ್ತು ಮನಗಳೆರಡು ನೋಡಿ ಆತನ ಬೆನ್ನು ಬೀಳದಿದ್ದರೆ ತನು ಬಿಟ್ಟು ಮನದೊಂದಿಗೆ ಇಲ್ಲವಾಗುತ್ತಾನೆ. ಆಗ ತನುವಿನಲ್ಲಿದ್ದ ಚೈತನ್ಯ ಬತ್ತಿ ತನು ಶವ ಎಂದು ಕರೆಸಿಕೊಳ್ಳತ್ತದೆ. ಆಗ ಜನ ಮೋಕ್ಷವ ಹಡೆದು ಹೋದರೆಂಬ ಮಾತು ಜನರಿಂದ ಕೇಳಿ ಬರುತ್ತದೆ.

**1450**

**ವಾಯುಪುತ್ರನಾಗುವುದು ಲೇಸೆ ? ಮನವೆ, ಬೇಡ ಬೇಡ !**
**ಹೋದ ಹೋದಲ್ಲಿ ವಸ್ತುರೂಪಾಗುವುದು ಲೇಸೆ ? ಮನವೆ, ಅಲ್ಲಲ್ಲ !**
**ವಾಯು ಬಿಟ್ಟು ವಾಯು ವೈರಿಯಾದಡೆ,**
**ಮನವೆ, ನಿನ್ನ ಸಾಹಸ, ಕಪಿಲಸಿದ್ಧಮಲ್ಲಿಕಾರ್ಜುನ.**

ಸಿದ್ಧರಾಮ ಶಿವಯೋಗಿಗಳು ಮನಕ್ಕೆ ಕಿವಿಮಾತು ಹೇಳಿದ್ದಾರೆ. ಎಲೆ ಮನವೇ ತನುವನ್ನು ಆವರಿಸಿಕೊಂಡ ಮನವೆ, ನೀನು ವಾಯುಪುತ್ರನಾಗಬೇಡ, ವಾಯು ಪುತ್ರನಾಗಿ ಹೋದ-ಹೋದಲ್ಲಿ ವಸ್ತು ರೂಪಾಗಿ ಆ ವಸ್ತುವನ್ನು ಬೇಡಬೇಡ.

ಎಲೆ ಮನವೆ ನೀನು ವಾಯುಪುತ್ರ ನಾದಡೆ ಕಂಡ ಕಂಡ ವಸ್ತುಗಳನ್ನೆಲ್ಲ ಬೇಡುವುದು ನಿನಗೆ ಲೇಸೆ. ವಸ್ತುವನ್ನು ಗಮನಿಸಿ, ವಸ್ತುವಿನ ಸತ್ಯ ತಿಳಿದು ಉದಾಸೀನನಾಗುವ ಗುಣ ನಿನಗೆ ಗೊತ್ತಿಲ್ಲ.

ಮನವೆ ವಾಯು ಬಿಟ್ಟು ತನುವಿನ ವೈರಿಯಾಗು. ಏಕೆಂದರೆ, ವಾಯು ಸುಳಿದರೆ ನಿನಗೆ ಸ್ವರ್ಗವೇನೂ ದೊರೆಯುವುದಿಲ್ಲ. ಹೀಗಾಗಿ ನೀನು ಕಪಿಲಸಿದ್ಧಮಲ್ಲಿಕಾರ್ಜುನನನ್ನು ನಂಬಿ, ಆತನ ಚರಣಗಳಿಗೆ ಶರಣು ಹೋಗಿ ಶರಣಾಗತನಾಗು. ಹೀಗೆ ಶರಣು ಹೋಗಲು ನೀನು ಹರಸಾಹಸ ಮಾಡಬೇಕಾಗುತ್ತದೆ. ಆಗ ಮನವೇ ನಿನ್ನನ್ನು ಘನಮನವನ್ನಾಗಿ ಮಾಡುತ್ತಾನೆ.

**1451**

**ಸರ್ವಂ ಶಿವಮಯಂ ಜಗತ್ ಎಂಬುದ ತಿಳಿಯದೆ**
**ನುಡಿದವರ ನುಡಿಯಂತೆ ನಡೆಯದಿರಿ ಮನವೆ**
**ಸರ್ವಂ ಶಿವಮಯಂ ಜಗತ್ ಎಂದು ತಿಳಿದು ತಿಳಿದು ಸುಖಿಯಾಗಾ ಮನವೇ**
**ಪಿಂಡ ಬ್ರಹ್ಮಾಂಡಕ್ಕೆ ತಿಲಷೋಢಸಭಾಗೇನ ಭೇದೋ ನಾಸ್ತಿ ವರಾನನೇ**
**ಎಂಬುದು ಪುಸಿಯಲ್ಲ ನೋಡಾ ಮನವೇ.**
**ಈಶ್ವರನ ಪಂಚ ಮುಖದಿಂದ ಪಂಚತತ್ವಗಳುದಯಿಸಿದವು.**
**ಆ ತತ್ವಂಗಳೊಂದೊಂದು ಕೂಡಿ ತನ್ನ ಚೈತನ್ಯ ಬೆರಸಿದಲ್ಲಿ,**
**ಪಿಂಡ ಬ್ರಹ್ಮಾಂಡವೆನ್ನಿಸಿತ್ತು ನೋಡಾ ಮನವೆ.**
**ತನ್ನ ತಾನರಿದು ನೋಡಿದಡೆ 'ಸರ್ವಂ ಕಪಿಲಸಿದ್ಧಮಲ್ಲಿಕಾರ್ಜುನಮಯಂ ಜಗತ್'**
**ಎಂದರಿದು ಬಂದಿತ್ತು ನೋಡಾ ಮನವೆ.**

ಜಗದಲ್ಲಿರುವ ಸಕಲವೂ ಶಿವಮಯವಾಗಿದೆ. ಸರ್ವಂ ಶಿವಮಯಂ ಜಗತ್ ಹೀಗೆ ಹೇಳುವುದನ್ನು ಕೇಳಿ ಪುನಃ ನುಡಿದರೆ ಯಾವ ಉಪಯೋಗವೂ ಇಲ್ಲ. ನುಡಿದವರ ನುಡಿಯಂತೆ ನಡೆಸದಿರಾ ಮನವೆ ಎಂದು ಮನಕ್ಕೆ ಸಿದ್ಧರಾಮ ಶಿವಯೋಗಿಗಳು ಸೂಚಿಸಿದ್ದಾರೆ. ಹೀಗೆ ನುಡಿಯುವುದರಿಂದ ಜಗತ್ತಿನಲ್ಲಿರುವ ಸಕಲವೂ ಶಿವಮಯ ಎಂದು ತಿಳಿದಂತಾಯಿತೆ? ಸರ್ವಂ ಶಿವಮಯಂ ಎಂಬ ವಾಕ್ಯ ಅನುಭವಕ್ಕೆ ಬಾರದೆ ನುಡಿದರೆ ನುಡಿದವನು ಪಂಡಿತ ಶಾಸ್ತ್ರಿ ಎಂದು ಅನಿಸಿಕೊಳ್ಳುತ್ತಾನೆ.

ಸರ್ವಂ ಶಿವಮಯಂ ಜಗತ್ ಎಂದು ತಿಳಿಯದೆ ಹೇಳುವುದರಿಂದ ಅವನು ಜ್ಞಾನಿಯಾಗಲಾರ. ಎಲೆ ಮನವೆ ಸರ್ವಂ ಶಿವಮಯಂ ಜಗತ್ ಎಂದು ತಿಳಿದು ತಿಳಿದು ಸುಖಿಯಾದವನಿಗೆ. ಪಿಂಡ, ಬ್ರಹ್ಮಾಂಡದ ಕೆಲ ಭಾಗವೂ ತಿಳಿಯದೇ ಎಲ್ಲ ತಿಳಿ ಷೋಡಶ ಭಾಗೇನ ಭೇದೊನಾಸ್ತಿ ವರಾನನೇ? ಎಂಬುದು ಪುಸಿಯಲ್ಲ ನೋಡಾ ಮನವೆ.

ಈಶ್ವರನ ಪಂಚಮುಖದಿಂದ ಪಂಚ ತತ್ವಗಳು ಉದಯಿಸಿದವು. ಆ ತತ್ವಗಳು ಒಂದೊಂದು ಕೂಡಿ ತನ್ನ ಚೈತನ್ಯ ಪ್ರದೇಶದಲ್ಲಿ ಪಿಂಡ, ಬ್ರಹ್ಮಾಂಡವು ಎನಿಸಿತ್ತು ನೋಡಾ ಮನವೇ ?

ತನ್ನ ತಾನರಿದು ನೋಡಿದಡೆ ''ಸರ್ವಂ ಶಿವಮಯಂ ಕಪಿಲಸಿದ್ಧಮಲ್ಲಿಕಾರ್ಜುನಂ ಜಗತ್ತು'' ಎಂದರಿದುಬಂದಿತ್ತು ನೋಡಾ ಮನವೇ.

**1452**

**ಮನದಲ್ಲಿ ಸಂಕಲ್ಪ ವಿಕಲ್ಪಂಗಳು ನೋಡಯ್ಯಾ.**
**ಮನಸಿನ ಕಾರ್ಯವೆ ಪುಣ್ಯ -ಪಾಪ ನೋಡಯ್ಯಾ.**
**ಮನಃ ಕಾರ್ಯಂ ಜಗದ್ಭೇದಂ ಎಂಬುವುದು ಹುಸಿಯಲ್ಲ**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.**

ತನುವನ್ನು ಆವರಿಸಿದ ಮನದಲ್ಲಿ ಸಂಕಲ್ಪ ವಿಕಲ್ಪಂಗಳು ಉಂಟಾಗುತ್ತವೆ. ತನುವಿನಲ್ಲಿ ತನ್ಮಯವಾದ ಮಹಾಜ್ಞಾನಿ ಮನದ ಇಚ್ಛೆಯನ್ನು ಅಳಿಯಬಹುದಾಗಿದೆ.

ತನುವನ್ನು ಆವರಿಸಿದ ಮನದಿಂದಲೆ ಪುಣ್ಯ -ಪಾಪ ಎಂಬ- ಅಜ್ಞಾನ ಉಂಟಾಗುತ್ತದೆ. ಈ ಅಜ್ಞಾನವನ್ನು ತನುವಿನಲ್ಲಿಯೇ ಸಂಗಮವಾದ ಜ್ಞಾನಿಯಿಂದಲೇ ತಿಳಿಯಬಹುದಾಗಿದೆ.

''ಮನಃ ಕಾರ್ಯಂ ಜಗತ್ ಭೇದಂ'' ತನುವನ್ನು ಆವರಿಸಿದ ಮನದಿಂದ ಬೇಧಭಾವ ಲಭ್ಯವಾಗುತ್ತದೆಯೇ ಹೊರತು ಮತ್ತೇನು ಸಾಧ್ಯವಾಗುವುದಿಲ್ಲ. ಏಕೆಂದರೆ ತನುವನ್ನು ಆವರಿಸಿದ ಮನ ಇಲ್ಲದುದು. ಇಲ್ಲಾದುದು ಇಲ್ಲಾದುದು ಎಂತಿಪ್ಪುದು ಇಲ್ಲಾದುದು ಇಲ್ಲಾದುದು ಎಂದಿಪ್ಪುದು ಎಂದು ಮನವನ್ನು ಕುರಿತು ಪ್ರಭು ಹೇಳಿದ್ದಾರೆ.

**1453**

**ಮನದಲ್ಲಿ ಭೇದವಲ್ಲದೆ ಮಸ್ತುವಿನಲ್ಲಿ ಭೇದವಿಲ್ಲ ವಯ್ಯಾ,**
**ಕ್ರಿಯಾಕ್ರಿಯೆಯಲ್ಲಿ ಭೇದವಲ್ಲದೆ ಜ್ಞಾನದಲ್ಲಿ ಭೇದವಿಲ್ಲವಯ್ಯಾ,**
**ರೂಪಾರೂಪಾದಲ್ಲಿ ಭೇದವಲ್ಲದೆ ಚೈತನ್ಯದಲ್ಲಿ ಭೇದವಿಲ್ಲ,**
**ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ.**

ವಸ್ತುವು ಇದ್ದಂತೆ ಇರುತ್ತದೆ. ಯಾವುದೇ ವಸ್ತುವು ಜ್ಞಾನಿಯನ್ನು ವಿಚಲಿತಗೊಳಿಸುವುದಿಲ್ಲ. ಏಕೆಂದರೆ ಜ್ಞಾನಿ ವಸ್ತುವಿನ ಸತ್ಯ ನೋಡುತ್ತಾನೆ, ವಸ್ತುವನ್ನಲ್ಲ. ಮನ ಹಾಗಲ್ಲ ಭೇದ ದೃಷ್ಟಿಯಿಂದ ನೋಡುತ್ತದೆ ಉದಾ: ಮನ ಹಳದಿ ಲೋಹವನ್ನು ಚಿನ್ನ ಎಂದು ತಿಳಿದು ದುಡಿದು ಸಂಗ್ರಹಿಸಿ ಶ್ರೀಮಂತ ಎನಿಸಿಕೊಳ್ಳುತ್ತದೆ ಚಿನ್ನವನ್ನು ಕದ್ದು ಕಳ್ಳ ಎಂದು ಕರೆಯಿಸಿಕೊಳ್ಳುತ್ತದೆ ಯುದ್ಧ ಮಾಡಿ ಸಾವಿರಾರು ಸೈನಿಕರನ್ನು ಸೇನಾಧಿಪತಿಯನ್ನು ಕೊಂದು ಚಿನ್ನ ಪಡೆದು ರಾಜ ಎಂದು ಕರೆಯಿಸಿಕೊಳ್ಳುತ್ತದೆ. ಇದು ಮದ – ಇದು ಮದ ಭೇದ ಜ್ಞಾನವೆಂದು ಕರೆಸಿಕೊಳ್ಳತ್ತದೆ.

ಕ್ರಿಯಾ ಕ್ರಿಯೆಯಲ್ಲಿ ಭೇದವಲ್ಲದೆ ಜ್ಞಾನದಲ್ಲಿ ಭೇದವಿಲ್ಲವಯ್ಯಾ. ತನುವನ್ನು ಆವರಿಸಿದ ಮನ ಭೇದ ದೃಷ್ಟಿಯಿಂದ ಚಿನ್ನವನ್ನು ನೋಡಿದರೂ ಕೂಡ ಮನದಲ್ಲಿ ಭೇದ ಉಂಟಾಗಿ ಚಿನ್ನ ಪಡೆಯಲು ತನುವನ್ನು ಬಳಸಿಕೊಳ್ಳುತ್ತದೆ. ಆದರೆ ತನುವಿನಲ್ಲಿ ತನ್ಮಯವಾದ ಜ್ಞಾನ ವಿಚಲಿತವಾಗುವುದಿಲ್ಲ. ಆ ಮಹಾಜ್ಞಾನಕ್ಕೆ ಯಾವ ಭೇದವೂ ತಟ್ಟುವುದಿಲ್ಲ. ಭೇದ ಮತ್ತು ಅಭೇದ ತನುವಿನಲ್ಲಿ ಗೋಚರಿಸಿದರೂ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನವನ್ನು ತಿಳಿಯುವ ಶಕ್ತಿ ಮನ ಮತ್ತು ತನುವಿಗೆ ಕೂಡಲೇ ಪರಿಚಯವಾಗುವುದಿಲ್ಲ.

ರೂಪಾರೂಪದಲ್ಲಿ ಭೇದವಲ್ಲದೆ ಚೈತನ್ಯದಲ್ಲಿ ಭೇದವಿಲ್ಲ : ರೂಪ ಅರೂಪಗಳೆರಡು ತನುವಿನ ಸೃಷ್ಟಿ. ಮನ ರೂಪ ನೋಡಿ ಜೊಲ್ಲು ಸುರಿಸುತ್ತದೆಯೇ ಹೊರತು ಆ ತನುವಿನಲ್ಲಿ ಸಂಗಮವಾದ ಚೈತನ್ಯವನ್ನು ನೋಡುವುದಿಲ್ಲ. ಚೈತನ್ಯಕ್ಕೆ ರೂಪವು ಇಲ್ಲ ಕುರೂಪವು ಇಲ್ಲ. ರೂಪ ಕುರೂಪದಲ್ಲಿರುವ ಸತ್ಯ ಒಂದೆ ಆ ಸತ್ಯಕ್ಕೆ ಭೇದವಿಲ್ಲ. ಈ ಸತ್ಯವನ್ನು ತಿಳಿದು ಆ ಸತ್ಯವೇ ತಾನಾದ ಮನವೇ ಘನಮನ ಎಂದು ಜ್ಞಾನಿಗಳಿಂದ ಕರೆಯಿಸಿಕೊಳ್ಳುತ್ತದೆ.

**1454**

**ದೇಹ ನಾನೆಂದು ನಂಬಿದೆ, ಎಲೆ ಮನವೆ.**
**ದೇಹದಲ್ಲಿಹ ಗುಣಂಗಳು ನಿನ್ನಲ್ಲಿ ಕಂಡಯ್ಯಾ ಮನವೆ.**
**ಪೃಥ್ವಿಯ ಗುಣ ಶಾಂತಿ, ಉದಕದ ಗುಣ ಸ್ವಾದ,**
**ಅಗ್ನಿಯ ಗುಣ ಸರ್ವಭಕ್ಷಣ, ವಾಯುವಿನ ಗುಣ ನಿರ್ಮಲತ್ವ,**
**ಆಕಾಶದ ಗುಣ ನಿರ್ವಯಲು. ಈ ಪಂಚತತ್ವದ ಗುಣ ನಿನ್ನಲ್ಲಿರಲು,**
**ನೀನೆ ಪಂಚಮುಖ ನೋಡಾ ಮನವೆ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ದೇಹ ನಾನಲ್ಲ. ಆದರೂ ಮನ ದೇಹವೇ ನಾನು ಎಂದು, ದೇಹ ನನ್ನದೂ ಎಂದು ಬಲವಾಗಿ ನಂಬಿರುವ ಕಾರಣ, ದೇಹದಲ್ಲಿರುವ ಗುಣಂಗಳು ಮನದಲ್ಲಿ ಬಂದಿವೆ. ದೇಹಕ್ಕೆ ನೋವಾದರೆ ನನಗೆ ನೋವಾಯಿತೆಂದು ಬಲವಾಗಿ ನಂಬುತ್ತದೆ ಮನ.

ದೇಹ ಮಹದೇವನು. ಮಹದೇವ ದೇಹದಲ್ಲಿ ಸಂಗಮವಾಗಿದ್ದಾನೆ. ಹೀಗಾಗಿ ಇಡೀ ಬ್ರಹ್ಮಾಂಡಕ್ಕೆ ಜನ್ಮ ನೀಡಿದ ಮಹದೇವ ದೇಹದಲ್ಲಿಯೇ ಸಂಗಮವಾಗಿದ್ದಾನೆ. ಹೀಗಾಗಿ ದೇಹದಲ್ಲಿ ಪೃಥ್ವಿ ಉದಕ ಅಗ್ನಿ ವಾಯು ಇವುಗಳನ್ನು ಕಾಣಬಹುದಾಗಿದೆ.

ಪೃಥ್ವಿಯ ಗುಣ ಶಾಂತಿ, ಉದಕದ ಗುಣ ಸ್ವಾದ, ಅಗ್ನಿಯ ಗುಣ ಸರ್ವಭಕ್ಷಣ, ವಾಯುವಿನ ಗುಣ ನಿರ್ಮಲತ್ವ, ಆಕಾಶದ ಗುಣ ನಿರ್ವಯಲು. ಈ ಪಂಚತತ್ವದ ಗುಣ ದೇಹದಲ್ಲಿವೆ ಹೀಗಾಗಿ ಮನವೆ ನೀನು ಪಂಚಮುಖ ನೋಡಾ. ಎಲೆ ಮನವೆ ನೀನು ದೇಹವನ್ನು

ನಂಬಬೇಡ, ಅದನು ನಿನ್ನ ತಾಳಕ್ಕೆ ತಕ್ಕಂತೆ ಆಡಿಸಬೇಡ, ದೇಹದಲ್ಲಿಯೇ ಸಂಗಮವಾದ ಮಹದೇವನ ಸೇವೆ ಮಾಡು, ಆ ಮಹದೇವನಲ್ಲಿ ಒಂದಾಗು. ಆತನ ಚರಣ ಕುಮಲಗಳಿಗೆ ದಾಸನಾಗು, ಎಲೆ ಮನವೆ, ಆಗ ನೀನು ಪಂಚಮುಖನಾದ ಮಹದೇವ ನೀನೆ ನೋಡಾ.

1455

**ಅಂಗವೇ ಲಿಂಗವಾಗಿಹನೆಂಬವನ ಭಾವ ಇದರಲ್ಲೇ ನಿಶ್ಚಯ ನೋಡಾ, ಮನವೆ**
**ಸ್ತುತಿ ನಿಂದೆಗಳಲ್ಲಿ ಹರ್ಶರೋಷಗಳಿಲ್ಲ ದಿರಬೇಕು.**
**ನೀಚಾ ನೀಚ ಗುಣ ನೋಡದೆ ನಮ್ರಭಾಷಾವಂತನಾಗಬೇಕು.**
**ಸರ್ವ ಜೀವಿಗಳ ತನ್ನಂತೆ ತಿಳಿದು ನೋಡಬೇಕು.**
**ಸಂಶಯಾಸಂಶಯವಳಿದು ನಿಶ್ಚಿಂತನಾಗಬೇಕು.**
**ಆಕಾಶದ ಬೆಳಗಿನ ಬೆಳಗ ನೋಡಿ**
**ಬೆಳಗುಮಯನಾಗಬೇಕು ನೋಡಾ**
**ಎಲೆ ಮನವೆ, ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ.**

ಅಂಗ ನಾನಲ್ಲ, ಅಂಗ ನನ್ನದೂ ಅಲ್ಲ, ಅಂಗ ಅದು ಲಿಂಗಾಂಗ ಅಂಗದಲ್ಲಿ ಅರಿವು ಎನ್ನುವ ಲಿಂಗಯ್ಯ ಸಂಗಮವಾಗಿದ್ದಾನೆ ಅಂಗವನ್ನು ಮನ ಆವರಿಸಿದೆ, ಹೀಗೆ ಅಂಗವನ್ನು ಆವರಿಸಿದ ಮನ, ಅಂಗ ನನ್ನದಲ್ಲವೆಂದು ತಿಳಿದು ಲಿಂಗಯ್ಯ ಅಂಗದಲ್ಲಿ ವಾಸವಾಗಿದ್ದಾನೆ. ಹೀಗಾಗಿ ಅದು ಅಂಗವಲ್ಲ ಲಿಂಗ ಎನ್ನುವ ಭಾವ ಮನದಲ್ಲಿಯೇ ನಿಶ್ಚಿಯವಾದಾಗ, ಮನ ಘನಮನವಾಗುತ್ತದೆ. ಸ್ತುತಿ ನಿಂದೆಗಳನ್ನು ಹರ್ಪರೋಷಗಳಿಲ್ಲದೆ ಕೇಳುತ್ತದೆ ನೀಚ ಅನೀಚ ಗುಣವ ನೋಡದೆ ನಮ್ರವಾದ ಭಾಷಾವಂತನಾಗುತ್ತದೆ.

ಮನ ಸರ್ವ ಜೀವಿಗಳನ್ನು ತನ್ನಂತೆ ತಿಳಿದು ನೋಡುತ್ತದೆ. ಸಂಶಯ ಅಸಂಶಯವನ್ನು ಅಳಿದು ನಿಶ್ಚಿಂತನಾಗುತ್ತದೆ. ಆಕಾಶದ ಬೆಳಗಿನ ಬೆಳಗ ನೋಡಿ ಬೆಳಗುಮಯವಾಗುತ್ತದೆ. ಕಪಿಲಸಿದ್ಧಮಲ್ಲಿಕಾರ್ಜುನನೇ ತಾನಾಗುತ್ತದೆ.

1456

**ಲಿಂಗ ಘನವೆಂಬೆನೆ ? ಕಲ್ಲಿನ ಮಗ, ಪಾದೋದಕ ಘನವೆಂಬೆನೆ ? ಇಂದ್ರನ ಮಗ,**
**ಪ್ರಸಾದ ಘನವೆಂಬೆನೆ ? ಶೂದ್ರನ ಮಗ**
**ವಿಭೂತಿಯ ಘಬವೆಂಬೆನೆ ? ಗೋವಿನ ಮಗಳು.**
**ಇವೆಲ್ಲ ಒಂದೊಂದರಿಂದ ಜನನವಾಯಿತ್ತು.**
**ನೀವಾರಿಂದ ಜನನವಾದಿರಿ ನಿರೂಪಿಸಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಲಿಂಗ ಘನವೆನ್ನದು ಅದನ್ನು ತಿಳಿಯಲು ಹೋದಾಗ ಕಲ್ಲು ಲಿಂಗಕ್ಕೆ ಜನ್ಮ ನೀಡಿದ್ದು ಗೋಚರವಾಗುತ್ತದೆ. ಹೀಗಾಗಿ ಲಿಂಗ ಕಲ್ಲಿನ ಮಗ. ಪಾದೋದಕ ಘನವೆನ್ನಲು ಹೋದಾಗ ಅದು ಇಂದ್ರನ ಮಗ. ಅಂದರೆ ಅದು ಜಲ. ಇಂದ್ರನ ಮಗ ವರುಣ. ಪ್ರಸಾದ ಘನವೆನ್ನಲು ಹೋದರೆ ಅದು ಶೂದ್ರನ ಮಗ. ರೈತ ಅದನ್ನು ಬಿತ್ತಿ ಬೆಳೆದ. ವಿಭೂತಿಯನ್ನು ಘನವೆನ್ನಲು

ಹೋದರೆ, ಅದು ಗೋವಿನ ಸಗಣಿ, ಗೋವಿನ ಮಗಳು.

ಇವೆಲ್ಲ ಒಂದೊಂದರಿಂದ ಜನ್ಮ ತಳದಿವೆ. ಅಂಗದ ಮೇಲೆ ಕಟ್ಟಿಕೊಂಡ ಲಿಂಗ ನೀವಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯ ನೀವು. ಇವರು ಯಾರಿಂದ ಜನ್ಮ ತಳೆದರೋ ಎಂಬುದನ್ನು ನಿರೂಪಿಸು ಎಲೆ ಮನವೆ ಎಂದಿದ್ದಾರೆ.

**1457**

**ಕಲ್ಲು ಘನವೆಂದಡೆ, ಲಿಂಗದ ಪೂಜ್ಯತ್ವ ಕಲ್ಲಿಗೆ ಬಂದಿತೇನಯ್ಯಾ ?**
**ನೀರು ಘನವೆಂದಡೆ, ಪಾದೋದಕಕ್ಕೆ ಸರಿಬಂದಿತೇನಯ್ಯಾ ?**
**ಶೂದ್ರ ಘನವೆಂದಡೆ ಅಷ್ಟೈಶ್ವರ್ಯ ಕೊಟ್ಟೀತೇನಯ್ಯಾ ?**
**ಘನಕ್ಕೆ ಘನವು ನಿಮ್ಮ ಷ್ಟಾವರಣಂಗಳು ನೋಡಾ, ಕಪಿಲಿಸಿದ್ಧಮಲ್ಲಿಕಾರ್ಜುನಾ.**

ಕಲ್ಲು ಘನವೆಂದಡೆ ಲಿಂಗದ ಪೂಜ್ಯತ್ವ ಕಲ್ಲಿಗೆ ಬರುವುದಿಲ್ಲ. ಏಕೆಂದರೆ ಲಿಂಗ ಕಲ್ಲಲ್ಲ, ಅಂಗದಲ್ಲಿ ಸಂಗಮವಾದ ಅರಿವಿಗೆ ಲಿಂಗ ಎಂದು ಕರೆದಿದ್ದಾರೆ ಶರಣರು.

ನೀರು ಘನವೆಂದಡೆ ಪಾದೋದಕಕ್ಕೆ ಸರಿಬಂದೀತೇನಯ್ಯಾ: ಪಾದ ತೊಳೆದ ನೀರು ಪಾದೋದಕವಲ್ಲ . ಪಾದೋದಕವೆಂದರೆ ಸರ್ವಾಂಗದಲ್ಲಿ ಸಂಗಮವಾದ ಜ್ಞಾನ. ಅವ್ಯಕ್ತ, ಪಾದೋದಕ ಇದು ಕಾಣುವುದಿಲ್ಲ. ಜ್ಞಾನಿಗೆ ಕಾಣದೆ ಇರುವುದಿಲ್ಲ.

ಶೂದ್ರ ಘನವೆಂದಡೆ ಅಷ್ಟೈಶ್ವರ್ಯ ಕೊಟ್ಟೀತೇನಯ್ಯಾ: ಘನಕ್ಕೆ ಘನ ನಿಮ್ಮ ಅಷ್ಟಾವರಣಂಗಳು ಇವು ಯಾರವು ಕಣ್ಣಿಗೆ ಕಾಣದ ಅವ್ಯಕ್ತ ಅಷ್ಟ ಐಶ್ವರ್ಯಗಳು.

ಅಂಗವನ್ನು ಆವರಿಸಿದ ಮನ ಸರ್ವಾಂಗದಲ್ಲಿಯೇ ಸಂಗಮವಾದ ಲಿಂಗಯ್ಯನ ದರ್ಶನದಿಂದ ಭಕ್ತನಾಗುತ್ತದೆ. ಈ ಭಕ್ತನಿಗೆ ಮಾತ್ರ ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನ ಅವ್ಯಕ್ತ ಅಷ್ಟಾವರಣಂಗಳು ಕಾಣುತ್ತವೆ. ಇದು ಅಗೋಚರದ ಆಚಾರ.

**1458**

**ಕಟೆದ ಕಲ್ಲು ಲಿಂಗವೆಂದೆನಿಸಿತ್ತು, ಕಟೆಯದ ಕಲ್ಲು ಕಲ್ಲೆನಿಸಿತ್ತು**
**ಪೂಜಿಸಿದ ಮಾನವ ಭಕ್ತನೆನಿಸಿದನು; ಪೂಜಿಸಿದ ಮಾನವ ಮಾನವನೆನಸಿದನು.**
**ಕಲ್ಲಾದಡೇನು ? ಪೂಜೆಗೆ ಫಲವಾಯಿತ್ತು,**
**ಮಾನವನಾದಡೇನು ? ಭಕ್ತಿಗೆ ಕಾರಣಿಕನಾದನು**
**ಕಲ್ಲು ಲಿಂಗವಲ್ಲ, ಲಿಂಗ ಕಲ್ಲಲ್ಲ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಲ್ಲನ್ನು ಎಲ್ಲರು ಕಲ್ಲೆಂದೆ ಹೇಳುವರು. ಕಲ್ಲು ನೋಡಿ ಕಣ್ಣಿಗೆ ಮೋಸ ಆಗುವುದಿಲ್ಲ. ಏಕೆಂದರೆ ಕಲ್ಲನ್ನು ಕಲ್ಲೆಂದೆ ಹೇಳುತ್ತಾರೆ. ಕಟೆದ ಕಲ್ಲನ್ನು ಕಣ್ಣು ಲಿಂಗವೆಂದು ಹೇಳುತ್ತದೆ. ಕಲ್ಲೆಂದು ಹೇಳುವುದಿಲ್ಲ.

ಕಲ್ಲನ್ನು ಪೂಜಿಸಿದ ಮಾನವನನ್ನು ಮಾನವರು ಭಕ್ತನೆಂದು ಕರೆಯುತ್ತಾರೆ. ಮಾನವನೆಂದು ಕರೆಯುವುದಿಲ್ಲ. ಕಲ್ಲು ಕಟೆದಕ್ಕಾಗಿ ಪೂಜೆಗೆ ಕಾರಣವಾಯಿತು. ಕಟೆದ ಕಲ್ಲನ್ನು ಪೂಜಿಸುವ ಮಾನವನನ್ನು ಭಕ್ತನೆಂದು ಕರೆಯುತ್ತಾರೆ. ಪೂಜೆ ಮಾಡದವನನ್ನು ಮಾನವನೆಂದು ಕರೆಯುತ್ತಾರೆ. ಕಲ್ಲು ಕಟೆದದ್ದಕ್ಕಾಗಿ ಪೂಜೆಗೆ ಕಾರಣವಾಯಿತು. ಅದನ್ನು ಪೂಜಿಸಿದ ಕಾರಣ ಭಕ್ತನಾದ. ಕಲ್ಲು

ಕಲ್ಲೆ. ಕಟೆದರೂ ಕಲ್ಲೆ. ಕಟೆಯದಿದ್ದರೂ ಕಲ್ಲೆ. ಕಲ್ಲು ಕಟೆದದ್ದಕ್ಕಾಗಿ ದೇಹದಲ್ಲಿ ಸುಳ್ಳು ಭಕ್ತಿ ರಸ ಸೃಷ್ಟಿಯಾಯಿತು. ಕಲ್ಲು ಲಿಂಗವಲ್ಲ. ಕೆತ್ತಿದರೇನಾಯ್ತು ಅದು ಕಲ್ಲೆ.

ಅಂಗದಲ್ಲಿ ಸಂಗಮವಾದ ಅರಿವೇ ಲಿಂಗ ಹೀಗಾಗಿ ಸರ್ವಾಂಗವನ್ನು ಶರಣರು ಲಿಂಗಾಂಗವೆಂದು ಕರೆದಿದ್ದಾರೆ. ಹೀಗೆ ಬಲವಾಗಿ ತಿಳಿದ ಮನುಷ್ಯ ಕೆತ್ತಿದ ಲಿಂಗವನ್ನು ಲಿಂಗವೆನ್ನುವುದಿಲ್ಲ. ಅದಕ್ಕೆ ಕೈ ಮುಗಿದು ಭಕ್ತನೆಂದು ಕರೆಯಿಸಿಕೊಳ್ಳುವುದಿಲ್ಲ. ಅಂಗದಲ್ಲಿ ಸಂಗಮವಾದ ಲಿಂಗವನ್ನು ನೋಡಿ ಶರಣು ಶರಣಾರ್ಥಿಯೆಂದು ಅಂಗಕ್ಕೆ ತಲೆಬಾಗುತ್ತಾನೆ. ಕಲ್ಲು ಕಟ್ಟಿಗೆ ಮಣ್ಣಲ್ಲಿ ಮಾಡಿದ ಲಿಂಗಕ್ಕೆ ಶರಣ ಕೈ ಮುಗಿಯುವುದಿಲ್ಲ. ತಲೆ ಬಾಗುವುದಿಲ್ಲ, ಸರ್ವರೂ ಸತ್ಯವನ್ನು ಪಾಲಿಸಿದರೆ, ಯಾವ ಮಂದಿರಗಳ ಅವಶ್ಯಕತೆಯೇ ಇಲ್ಲ. ಮಸೀದಿ ಚರ್ಚ್‌ಗಳ ಅವಶ್ಯಕತೆಯೂ. ಇಲ್ಲ ಮಾನವ ಮಾನವನಿಗೆ ತಲೆ ಬಾಗುವುದು ಅರಿವಿನ ಸಂಕೇತ. ಅರಿವು ತಾನೇ ಆದ ಗುರುವಿನ ಸಂಕೇತ. ಆ ಗುರುದೇವನೆ ತಾನಾದ ಮಹದೇವನ ಸಂಕೇತ. ಆ ಮಹಾದೇವನು ತಾನೇ ಆದ ಸದಾಶಿವನ ಸಂಕೇತ ಆ ಸದಾಶಿವನು ತಾನೇ ಆದ ಪರಬ್ರಹ್ಮನ ಸಂಕೇತ.

**1459**

**ಅನುಭವವಾಗಲೆಂದು ಬಂದು ಘನವಾಗಿ ಒಂದು ಕಿರಿದಾಗ ಹೇಳಿದನಲ್ಲದೆ,**
**ಲಿಂಗವ ಕಿರಿದಾಗಿ ಹೇಳಿದೆನೆ ಅಯ್ಯಾ ?**
**ನೀರಲ್ಲಿದ್ದ ತೆರೆಗಳೆಲ್ಲ ನೀರಲ್ಲವೆ. 'ಲಿಂಗ ಮಧ್ಯೇ ಜಗತ್ಸರ್ವಂ' ಎಂದ ಬಳಿಕ ?**
**ಪಾಷಾಣಂಗಳೆಲ್ಲ ಲಿಂಗಗಳು, ಲಿಂಗ ಗಳೆಲ್ಲ ಪಾಷಾಣಂಗಳು.**
**'ಶ್ರೀ ಶೈಲೇ ವಸತೀ ಶಿಲಾ ಶಿವಮಯೀ ಸತ್ಯಂ ಶಿವೇ'**
**ಎಂಬ ಶಿವವಾಕ್ಯವದು ಪುಸಿಯೇನಯ್ಯಾ ? ಕಪಿಲಸಿದ್ಧಮಲ್ಲಿಕಾರ್ಜುನಾ.**

ಅನುಭವವಾಗಲೆಂದು ಅನುಭವ ಮಾಡಿಸುವ ಸಲುವಾಗಿ ಗುರುವಾದ. ಅನುಭವ ಕೇಳಲು ಬಂದವನು ಶಿಷ್ಯನಾದ. ಗುರು ಹಿರಿಯನಾದ, ಶಿಷ್ಯ ಕಿರಿಯಾನಾದ.

ಗುರುವಿನಲ್ಲಿ ತನುವಿನಲ್ಲಿ ತನ್ಮಯವಾದ ಅರಿವು ಎನ್ನುವ ಲಿಂಗ ಕಿರಿದಲ್ಲ. ಹಾಗೆಯೆ ಶಿಷ್ಯನ ತನುವಿನ ತನ್ಮಯವಾದ ಅರಿವೆಂಬ ಲಿಂಗವೂ ಕೂಡ ಕಿರಿದಲ್ಲ. ಹೀಗಿದ್ದಾಗ ಯಾರು ಗುರವು ಯಾರು ಶಿಷ್ಯ? ಹೇಳುವ ನೆಪಕ್ಕಾಗಿ ಗುರುವಾದ. ಕೇಳುವ ನೆಪಕ್ಕಾಗಿ ಶಿಷ್ಯನಾದ. ಇವರಿಬ್ಬರ ಅಂಗದಲ್ಲಿ ಸಂಗಮವಾದ ಅರಿವಿನ ಲಿಂಗಯ್ಯ ಒಬ್ಬನೇ ಆದರೆ ಲೋಕದಲ್ಲಿ ಗುರು ಶಿಷ್ಯ ಎಂಬ ಅಜ್ಞಾನ ರೋಗವಾಗಿ ಹರಡಿದೆ.

ಅಂಗದಲ್ಲಿಯೇ ಸಂಗಮವಾದ ಅರಿವಿನ ದರ್ಶನವಾದ ಮನುಷ್ಯ ಸರ್ವಾಂಗದಲ್ಲಿಯೂ ಅರಿವು ಹೀಗಿದೆಯೆಂದು ಕೈ ಮರದಂತೆ ತೋರಲು ಗುರುವಾಗಬೇಕೆ ? ಕೇಳಲು ಬಂದ ಆತನನ್ನು ಶಿಷ್ಯನನ್ನಾಗಿಸಿಕೊಳ್ಳಬೇಕೆ ?

ನೀರಲ್ಲಿದ್ದ ತೆರೆಗಳೆಲ್ಲ ನೀರಲ್ಲವೆ ? ತೆರೆ ನೀರಲ್ಲೆ ಹುಟ್ಟಿ ತೆರೆ ಎಂದು ಕರೆಸಿಕೊಂಡು ನೀರಲ್ಲಿಯೆ ಮುಳುಗಿ ಪುನಃ ನೀರಾಗುತ್ತದೆ. ಆದರೂ ತೆರೆಯನ್ನು ನೀರೆನ್ನುವುದಿಲ್ಲ. ಜ್ಞಾನಿಗೆ ನೀರು ಕಾಣುವುದಿಲ್ಲ, ಲಿಂಗ ಮಧ್ಯೇ ಜಗತ್ಸರ್ವಂ ಎಂದ ಬಳಿಕ ಕಲ್ಲುಗಳೆಲ್ಲ ಲಿಂಗಗಳು ಲಿಂಗಗಳೆಲ್ಲ

ಕಲ್ಲುಗಳು ಶ್ರೀ ಶೈಲದಲ್ಲಿ ಇದ್ದ ಲಿಂಗ ಕೂಡ ಕಲ್ಲೆ ಅದು ಶಿವಮಯವು ಸತ್ಯವು ಹೌದು ಎಂಬ ಶಿವವಾಕ್ಯವದು ಪುಸಿಯಲ್ಲ.

**1460**

**ಭಾವ ಬಲಿದಲ್ಲಿ ಲಿಂಗವೆನಿಸಿತ್ತು,**
**ಭಾವ ವಿಭಾವವಾದಲ್ಲಿ ಪಾಷಾಣವೆನಿಸಿತ್ತು,**
**ಭಾವ ನಿರ್ಭಾವವಾದಲ್ಲಿ ಏನೆಂದೆನಿಸದು ನೋಡಾ,ಕಪಿಲಸಿದ್ಧಮಲ್ಲಿಕಾರ್ಜುನಾ.**

ಭಾವ ಬಲಿತಲ್ಲಿ ಕಲ್ಲಲ್ಲಿ ಕೆತ್ತಿದ ಲಿಂಗವೆ ಲಿಂಗವೆನಿಸಿತ್ತು. ಭಾವ ದುರ್ಭಾವವಾದಲ್ಲಿ ಕಲ್ಲು ಎಂದು ಕರೆಸಿಕೊಳ್ಳುತ್ತದೆ ಭಾವ ನಿರ್ಭಾವವಾದಲ್ಲಿ ಏನೆಂದೆನಿಸಿದು.

ಭಾವ ನಿಜವಲ್ಲ, ದುರ್ಭಾವವು ನಿಜವಲ್ಲ, ಭಾವ ದುರ್ಭಾವ ಕಳೆದು ನಿರ್ಭಾವವಾದದ್ದೆ ನಿಜ. ಉದಾಹರಣೆಗೆ ಲಿಂಗವನ್ನು ದೇವರೆಂದು ಪೂಜಿಸಿ ತನ್ನ ಬೇಡಿಕೆಗಳನ್ನು ಲಿಂಗದ ಮುಂದೆ ಇಡುತ್ತಾನೆ, ಅವು ನೆರವೇರದೆ ಇದ್ದಾಗ ಭಕ್ತಿಯಿಂದ ಪೂಜಿಸಿದ ಲಿಂಗವನ್ನು ದುರ್ಭಾವದಿಂದ ಕಂಡು ಮತ್ತೆ ಬೇರೆ ದೇವರನ್ನು ಅವಲಂಬಿಸುತ್ತಾನೆ. ಕಲ್ಲಿನಿಂದ ಕೆತ್ತಿದ ದೇವರು ದೇವರಲ್ಲ, ಅದು ಬರೀ ಕಲ್ಲು. ಹೀಗೆ ಕಲ್ಲಿನ ಹಿಂದೆ ಇಟ್ಟ ಬೇಡಿಕೆಗಳು ನೆರವೇರಲು ಸಾಧ್ಯವೇ ಇಲ್ಲ. ಭಾವದಿಂದ ಲಿಂಗವೆಂದು ಪೂಜಿಸಿದ ಆತನ ಭಾವವೆ ವಿಭಾವವಾಗಿ ಕಲ್ಲೆಂದು ಕಾಣಿಸಿತು. ಭಾವ ನಿರ್ಭಾವವಾಗದಿರೆ, ಭಾವ ಒಂದು ದೇವರನ್ನು ಬಿಟ್ಟು ಮತ್ತೊಂದು ದೇವರನ್ನು ಹುಡುಕುತ್ತಿದೆ.

ಒಬ್ಬ ಗೆಳೆಯನನ್ನು ಭಾವದಿಂದ ಅಪ್ಪಿಕೊಳ್ಳುತ್ತಾನೆ. ಮತ್ತೊಬ್ಬ ಗೆಳೆಯ ನಿನ್ನ ಗೆಳೆಯ ಹೀಗೆಂದನೆಂದು ದೂರಿದಾಗ, ಗೆಳೆಯನ ಮೇಲೆ ಇಟ್ಟ ಭಾವ ದುರ್ಭಾವವಾಗುತ್ತದೆ. ಆ ಗೆಳೆಯನಿಗೆ ಏನೂ ಆಗುವುದಿಲ್ಲ, ತಾನು ಗೆಳೆಯನ ಮೇಲೆ ಇಟ್ಟ ಭಾವವೇ ದುರ್ಭಾವವಾಯಿತು ಆ ಗೆಳೆಯನೆ ವೈರಿಯಾದ. ಮತ್ತೆಂದು ಗೆಳೆಯ ಗೆಳೆಯನಾಗುವುದಿಲ್ಲ. ಹೀಗೆ ದೇಹ ಇರುವವರೆಗೆ ಗೆಳೆಯನೇ ವೈರಿಯಾಗುತ್ತಾನೆ ಆ ವೈರಿಯನ್ನು ಬಿಟ್ಟು ಮತ್ತೊಬ್ಬನನ್ನು ಭಾವದಿಂದ ಗೆಳೆಯನಾಗಿ ಮಾಡಿಕೊಳ್ಳುತ್ತಾನೆ. ಹೀಗೆ ದೇಹ ಇರುವವರೆಗೆ ಭಾವ ದುರ್ಭಾವವಾಗುತ್ತಾ ಹೋಗುತ್ತದೆ.

ಜ್ಞಾನಿಗಳ ಸಂಗ ಮಾಡಿದಾಗ ಅವರು ಭಾವವನ್ನು ದುರ್ಭಾವವಾಗದಂತೆ ನಿರ್ಭಾವವಾಗಿಸುವ ಸೂತ್ರವನ್ನು ಹೇಳಿಕೊಡುತ್ತಾರೆ. ಭಾವ ಒಮ್ಮೆ ನಿರ್ಭಾವವಾಗದಿರೆ ಸಾಕು ಅದು ಎಂದೂ ದುರ್ಭಾವವಾಗುವುದಿಲ್ಲ.

**1461**

**ಲಿಂಗ ಜಂಗಮ ಒಂದಾದ ಬಳಿಕ ಲಿಂಗಾರ್ಚನೆ ಸಲ್ಲದು ಜಂಗಮಕ್ಕೆ.**
**ಲಿಂಗಾರ್ಚನೆ ಬೇಕು ಭಕ್ತಂಗೆ.**
**ಲಿಂಗಾರ್ಚನೆ ವಿರಹಿತ ಭಕ್ತನ ಮುಖ ನೋಡಲಾಗದು, ನುಡಿಸಲಾಗುದು.**
**ಅವನ ಹೊರೆಯಲ್ಲಿರಲಾಗದಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿ ಸಂಗಮವಾದ ಲಿಂಗ ಜಂಗಮನೂ ಹೌದು, ಅಂಗವನ್ನು ಆವರಿಸಿದ ಮನ ಈ ಲಿಂಗ ಜಂಗಮರಿಗೆ ಭಕ್ತನಾದ ಬಳಿಕ ಲಿಂಗಾರ್ಚನೆ ಸಲ್ಲದು.

ಅಂಗದಲ್ಲಿಯೇ ಸಂಗಮವಾದ ಲಿಂಗಯ್ಯನಿಗೆ ಲಿಂಗಾರ್ಚನೆ ಮಾಡುವ ಭಕ್ತನೇ ಭಕ್ತ. ಇಂತಹ ಲಿಂಗಾರ್ಚನೆ ವಿರಹಿತ ಭಕ್ತನ ಮುಖ ನೋಡಲಾಗದು. ಅವನನ್ನು ನುಡಿಸಲಾಗದು. ಅವನ ಹೊರೆಯಲ್ಲಿರಲಾಗದಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.

ಅಂಗದ ಮೇಲೆ ಕಟ್ಟಿಕೊಂಡ ಲಿಂಗವನ್ನು ಪೂಜಿಸುವುದು ಎಲ್ಲರಿಗೂ ಕಂಡು ಬರುತ್ತದೆ. ಇದು ಗೋಚರದ ಆಚಾರ. ಹೀಗೆ ಪೂಜೆ ಮಾಡುವ ಭಕ್ತ ಭಕ್ತನಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಪೂಜಿಸುವ ಭಕ್ತ ಮಾತ್ರ ಭಕ್ತ. ಹೀಗೆ ಪೂಜಿಸುವ ಭಕ್ತನ ಆಚಾರ ಅಗೋಚರ ಆಚಾರ. ಇದು ಯಾರಿಗೂ ಕಾಣುವುದಿಲ್ಲ. ಪೂಜಿಸುವ ಭಕ್ತ ಮಾತ್ರ ಅರಿವಿನ ಪೂಜೆಯಲ್ಲಿ ತನ್ಮಯವಾಗಿರುತ್ತಾನೆ.

**1462**

**ಭಕ್ತಂಗೆ ಭಕ್ತಿಯೆ ಲಿಂಗಾರ್ಚನೆ, ಮಹೇಶಂಗೆ ಜ್ಞಾನ ವೈರಾಗ್ಯವೆ ಲಿಂಗಾರ್ಚನೆ.**
**ಪ್ರಸಾದಿಗೆ ಸಮದೃಷ್ಟಿಯೆ ಲಿಂಗಾರ್ಚನೆ**
**ಪ್ರಾಣಲಿಂಗಿಗೆ 'ಪಂಚಪ್ರಾಣಾ:ಎಂಬುದೆ ಲಿಂಗಾರ್ಚನೆ ನೋಡಾ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೆ ಸಂಗಮವಾದ ಅರಿವಿನ ಲಿಂಗಕ್ಕೆ ಭಕ್ತನಾಗಿ, ಮಾರ್ಪಟ್ಟ ಭಕ್ತಿನಿಗೆ ಭಕ್ತಿಯೇ ಲಿಂಗಾರ್ಚನೆ. ಇಂತಹ ಭಕ್ತ ಅಂಗದ ಮೇಲೆ ಲಿಂಗ ಕಟ್ಟಿಕೊಳ್ಳುವುದಿಲ್ಲ.

ಅಂಗದಲ್ಲಿಯೆ ಸಂಗಮವಾದ ಲಿಂಗವನ್ನು ಆರಾಧಿಸುತ್ತ ಆರಾಧಿಸುತ್ತ ಭಕ್ತನೇ ಮಹೇಶನಾಗುತ್ತಾನೆ. ಇಂತಹ ಮಹೇಶನಿಗೆ ಜ್ಞಾನ ವೈರಾಗ್ಯವೆ ಲಿಂಗಾರ್ಚನೆ.

ಭಕ್ತನೆ ಮಹೇಶನಾಗುತ್ತಾನೆ. ಮಹೇಶನೆ ಪ್ರಸಾದಿಯಾಗುತ್ತಾನೆ. ಇಂತಹ ಪ್ರಸಾದಿಯ ದೃಷ್ಟಿ ಸಮದೃಷ್ಟಿಯಾಗಿರುತ್ತದೆ. ನೋಡುವ ಕಣ್ಣಿಗೆ ಕಾಣುವ ಅಜ್ಞಾನವನ್ನು ಉಂಡು ಜೀರ್ಣಸಿಕೊಳ್ಳುತ್ತಾನೆ. ಜ್ಞಾನದಿಂದ ನೋಡುತ್ತಾನೆ. ಆಗ ಸಕಲ ಅಂಗಗಳು ಗಂಡು ಹೆಣ್ಣು ಎಂದು ಕಾಣದೆ ಸರ್ವಾಂಗಗಳು ಲಿಂಗಾಂಗಗಳಾಗಿ ಕಾಣುತ್ತವೆ. ಹೀಗೆ ಕಾಣುವ ಸಮದೃಷ್ಟಿಯೆ ಲಿಂಗಾರ್ಚನೆ ಪ್ರಾಣಲಿಂಗಿಗೆ ಪಂಚಪ್ರಾಣಃ ಎಂಬುದ ಲಿಂಗಾರ್ಚನೆ

ನೋಡುವ ಕಣ್ಣು ಕೇಳುವ ಕಿವಿ, ಸ್ಪರ್ಶಿಸುವ ಚರ್ಮ, ಮೂಸಿಸುವ ನಾಸಿಕ, ರುಚಿಸುವ ಜಿಹ್ವೆಯಲ್ಲಿ ಲಿಂಗವೆ ಇದೆ. ಲಿಂಗ ಕಾಣದ್ದಕ್ಕಾಗಿ ಆಯಾ ಜಾಗದಲ್ಲಿ ಅಜ್ಞಾನ ಗೋಚರಿಸುತ್ತದೆ. ಇಂತಹ ಐದು ಜಾಗಗಳಲ್ಲಿ ಅರಿವಿನ ಲಿಂಗವನ್ನು ಕಂಡು ಲಿಂಗಾರ್ಚನೆ ಮಾಡುವವನೆ ಪ್ರಾಣಲಿಂಗಿ. ಎಂದು ಸಿದ್ಧರಾಮ ಶಿವಯೋಗಿಗಳು ನಾಲ್ಕು ಸೂತ್ರಗಳನ್ನು ಹೇಳಿದ್ದಾರೆ.

**1463**

**ನಿಂದಿಸಿದಲ್ಲಿ ಕುಂದುವನಲ್ಲ ಜಂಗಮನು.**
**ವಂದಿಸಿದಲ್ಲಿ ಆನಂದಮಯನಲ್ಲ ಜಂಗಮನು.**
**ಒಂದುಪಚಾರದಲ್ಲಿ ಸಂದುಗೊಳ್ಳುವನಲ್ಲ ಜಂಗಮನು.**

**ಬಂದಲ್ಲಿ ನೀಡಿದರೆ ಕ್ರೋಧಿಯಲ್ಲ ಜಂಗಮನು.**
**ಇಂದುಧರ ಕಪಿಲಸಿದ್ಧಮಲ್ಲನೆಂಬೆ ಇಂತಪ್ಪ ಜಂಗಮನು.**

ಜಂಗಮ ಎನ್ನುವವನು ವ್ಯಕ್ತಿಯಲ್ಲ. ಅರಿವೇ ತಾನಾದ ಅವ್ಯಕ್ತ ಈತ ಭಕ್ತನ ಹೃದಯದಲ್ಲಿ ಸಂಗಮವಾಗಿದ್ದಾನೆ. ಭಕ್ತನೂ ಕೂಡ ಅವ್ಯಕ್ತ. ಯಾರಿಗೂ ಕಾಣುವುದಿಲ್ಲ. ಭಕ್ತ ಜಂಗಮರಿದ್ದ ಕಾಯ ಎಲ್ಲರಿಗೂ ಕಾಣುತ್ತದೆ. ಭಕ್ತ ಕಾಯ ಜಂಗಮ ಕಾಯ ಎಂದು ವೇಷಧರಿಸಿದ ಕಾಯಗಳನ್ನು ಲೋಕ ಗುರುತಿಸುತ್ತದೆ.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಲಿಂಗ ಜಂಗಮನಿಗೆ ಭಕ್ತನಾದಾಗ ಈತ ಯಾರ ಕಣ್ಣಿಗೂ ಕಾಣುವುದಿಲ್ಲ.

ಕಾಯವನ್ನು ಮನ ಬಳಕೆ ಮಾಡಬಹುದು. ಮನ ಲಿಂಗ ಜಂಗಮಕ್ಕೆ ಭಕ್ತನಾದ ಮೇಲೆ ಕಾಯವನ್ನು ಭಕ್ತ ಬಳಸಬಹುದು. ಜಂಗಮನು ಬಳಕೆ ಮಾಡಬಹುದು. ಇಂತಹ ಜಂಗಮ. ಕಾಯವನ್ನು ಮತ್ತೊಂದು ಕಾಯ ನಿಂದಿಸಿದಲ್ಲಿ ಅಂತಹ ನಿಂದೆಗೆ ಕುಂದುವವನಲ್ಲ ಜಂಗಮ ಏಕೆಂದರೆ ನಿಂದಿಸುವ ಸಕಲ ನಿಂದನೆಗಳನ್ನು ಜಂಗಮ ಪ್ರಸಾದ ಮಾಡಿಕೊಂಡು ಉಣ್ಣುತ್ತಾನೆ.

ವಂದಿಸಿದಲ್ಲಿ ಆನಂದ ಪಡುವವನೂ ಅಲ್ಲ ಜಂಗಮ, ವಂದಿಸುವ ವಂದನೆಗಳೆಲ್ಲ ಲಿಂಗಕ್ಕೆ ಸಲ್ಲುತ್ತದೆ. ನಿಂದಿಸುವ ನಿಂದನೆಗಳು ಲಿಂಗಕ್ಕೆ ಸಲ್ಲುತ್ತದೆ. ಉಪಚಾರ ಅಪಚಾರಗಳು ಕೂಡ ಲಿಂಗಕ್ಕೆ ಸಲ್ಲುತ್ತದೆ. ನೀಡದಿದ್ದರೆ ಕ್ರೋಧಿಯಲ್ಲ ನೀಡಿದರೆ ಆನಂದ ಮಯನೂ ಅಲ್ಲ ಜಂಗಮನು. ಇಂತಹ ಜಂಗಮನು ಇಂದುಧರನೂ ಹೌದು ಕಪಿಲಸಿದ್ಧಮಲ್ಲಯ್ಯನೂ ಹೌದು.

**1464**

**'ಸೋಹಂ' ಎಂಬುದು ಅಂತರಂಗದ ಮದ ನೋಡಯ್ಯಾ.**
**'ಶಿವೋಹಂ' ಎಂಬುದು ಬಹಿರಂಗದ ಮದ ನೋಡಯ್ಯಾ.**
**ಈ ದ್ವಂದ್ವವಳಿದು 'ದಾಸೋಹಂ' ಎಂದೆನಿಸಯ್ಯಾ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಹಂ ಬ್ರಹ್ಮಾಸಿ ಅಥವಾ ನಾನೇ ಬ್ರಹ್ಮ ಎನ್ನುವುದು ಅಹಂಕಾರದಿಂದ ನುಡಿಯುವ ಮಾತಲ್ಲ. ಬ್ರಹ್ಮ ಯಾರೆಂಬುದನ್ನು ಮನ ತಿಳಿದಾಗ ಅಂದರೆ ಮನ ಸಕಲ ಭ್ರಮೆಗಳನ್ನು ಕಳೆದುಕೊಂಡು ಬ್ರಹ್ಮನಾದಾಗ ಅಹಂ ಬ್ರಹ್ಮಾಸ್ಮಿ ಎನ್ನಬಹುದು. ಸಕಲ ಶಾಸ್ತ್ರ ಪಾರಂಗತನಾಗಿ ಅಹಂ ಬ್ರಹ್ಮಾಸ್ಮಿ ಎಂದರೆ ಅದು ಗರ್ವದ ಮಾತಾಗುತ್ತದೆ. ಬ್ರಹ್ಮ ಎನ್ನುವುದು ಅಂತರಂಗದ ಮಾತು. ಅದು ಅಂತರಂಗದ ಮದವಲ್ಲ. ತಾನು ಸಕಲ ಭ್ರಮೆಗಳನ್ನು ಕಳೆದುಕೊಂಡಾಗ ಬ್ರಹ್ಮನೇ ಆಗುತ್ತಾನೆ. ಅನ್ನುವುದು ಬೇಕಿಲ್ಲ ಅದು ಯಾರಿಗಾದರೂ ಹೇಳಿ ನಿರೂಪಿಸುವ ಮಾತಲ್ಲ. ಶಿವೋಹಂ ಎಂಬುದು ಕೂಡ ಬಹಿರಂಗದ ಮದ ನೋಡಯ್ಯಾ; ಶಿವ ತಾನು ದೇಹವನ್ನು ರಚಿಸಿ, ಆ ದೇಹದಲ್ಲಿ ತಾನಿದ್ದು ಆ ದೇಹವನ್ನು ತನ್ನಂತೆ ಮಾಡಿಕೊಳ್ಳುವ ಆಸೆ ಶಿವನಿಗೆ, ಅಂತಹ ಶಿವನನ್ನು ತನು ತಿಳಿಯಬೇಕು. ತನುವನ್ನು ಆವರಿಸಿದ ಮನ ಕೂಡ ತಿಳಿಯಬೇಕು. ತಿಳಿ ತಿಳಿದು ಆ ಶಿವ ತಾನು ಒಂದಾದಾಗ ಶಿವೋಹಂ ಎನ್ನಲು ಕೂಡ ಬರುವುದಿಲ್ಲ. ಈ ದ್ವಂದ್ವವನ್ನು ಅಳಿದು ದಾಸೋಹಂ ಎಂದೆನಿಸಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ನುಡಿದಿದ್ದಾರೆ.

**1465**

**ಪತ್ರೆಯ ನೇಮದವರು ಒಂದು ಕೋಟಿ.**
**ಲಿಂಗಾರ್ಚನೆಯ ನೇಮದವರು ಒಂದು ಕೋಟಿ.**
**ಜಂಗಮ ತೃಪ್ತಿಯವರು ಒಂದು ಕೋಟಿ .**
**ತನ್ನ ತಾ ತಿಳಿಯುವ ನೇಮದವರು ಒಬ್ಬರೂ ಇಲ್ಲವಯ್ಯಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಲಿಂಗಕ್ಕೆ ಪತ್ರೆಯನೇರಸಿ ಪೂಜಿಸುವವರು ಒಂದು ಕೋಟಿಗೂ ಅಧಿಕ ಜನ ಸಿಕ್ಕುತ್ತಾರೆ. ಇವರು ಪತ್ರೆಇಲ್ಲದೆ ಪೂಜಿಸುವುದಿಲ್ಲ. ಪತ್ರೆ ಪುಷ್ಪ ಧೂಪ, ದೀಪ ನೈವ್ಯೇದ್ಯದೊಂದಿಗೆ ಲಿಂಗಾರ್ಚನೆ ಮಾಡುವವರು ಒಂದು ಕೋಟಿಗೂ ಅಧಿಕ ಜನ ಸಿಗುತ್ತಾರೆ. ಜಂಗಮನನ್ನು ಕರೆದುದು ಅವರ ಪಾದ ಪೂಜೆಯನ್ನು ಮಾಡಿ. ಭೋಜನವನ್ನಿತ್ತು ತೃಪ್ತಿ ಪಡಿಸುವವರು ಒಂದು ಕೋಟಿಗೂ ಅಧಿಕ ಜನ ಸಿಗುತ್ತಾರೆ.

ತನ್ನ ತಾ ತಿಳಿಯುವ ನೇಮದವರು ಒಬ್ಬರೂ ಇಲ್ಲವಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ: ತನ್ನ ತಾ ತಿಳಿಯುವುದೆಂದರೆ ತನ್ನ ಹೆಸರು, ತನ್ನ ಮನೆತನದ ಹೆಸರು ತನಗೆ ಜನ್ಮ ನೀಡಿದವರ ಹೆಸರು ಹೇಳುವುದಲ್ಲ, ತನ್ನ ಹುದ್ದೆ ಉದ್ಯೋಗದೊಂದಿಗೆ ಪರಿಚಯಿಸಿಕೊಳ್ಳುವುದು ಕೂಡ ಅಲ್ಲವೇ ಅಲ್ಲ.

ತಾನು ನೋಡುವ ನೋಟವನ್ನು ತಿಳಿದು ಅರಿವಿನ ನೋಟವನ್ನು ಆಲಿಸುವುದು ತನ್ನ ನೋಟವನ್ನು ಅರಿವಿನ ನೋಟದಲ್ಲಿ ಸಂಗಮ ಮಾಡಿ ಅರಿವಿನಿಂದ ನೋಡುವುದೇ ತನ್ನ ತಾ ತಿಳಿಯುವುದು.

ತನ್ನ ತಾನು ಸ್ಪರ್ಶಿಸಿಕೊಂಡಾಗ ತನಗೆ ಏನೂ ಆಗುವುದಿಲ್ಲ. ಇತರರು ತನ್ನನ್ನು ಸ್ಪರ್ಶಿಸಿದಾಗ ಅಥವಾ ತಾನು ಇತರರನ್ನು ಸ್ಪರ್ಶಿಸಿದಾಗ ತೊಂದರೆ ಉಂಟಾಗುತ್ತದೆ. ಇದನ್ನು ಗಮನಿಸಿ ತನ್ನನ್ನು ತಾನು ಸ್ಪರ್ಶಿಸಿಕೊಂಡಂತೆ ಇತರರನ್ನೂ ಸ್ಪರ್ಶಿಸುವುದು. ಅಥವಾ ಇತರರು ತನ್ನನ್ನು ಸ್ಪರ್ಶಿಸಿದಾಗ ತನ್ನ ತಾ ಸ್ಪರ್ಶಿಸಿಕೊಂಡ ಅನುಭವವನ್ನು ಹೊಂದುವುದು. ಹೀಗೆ ರುಚಿಸುವಾಗಲೂ ಪದಾರ್ಥದಲ್ಲಿ ರುಚಿಯನರಸದೆ ಪ್ರಸಾದ ಮಾಡಿಕೊಂಡು ಉಣ್ಣುವುದು. ಮೂಸಿಸಿದಾಗ ಸುಗಂಧ ದುರ್ಗಂಧಗಳನ್ನು ತಿಳಿದು ಪರಿಮಳ ಮಾತ್ರ ಸ್ವೀಕರಿಸುವುದು. ಇದು ತನ್ನ ತಿಳಿಯುವ ನಿಯಮ.

**1466**

**ಪತ್ರೆಯ ನೇಮದವರು ನೋಡಯ್ಯಾ ಪಶು ಆಡುಗಳು.**
**ಲಿಂಗಾರ್ಚನೆಯ ನೇಮದವರು ನೋಡಯ್ಯಾ ಚತುರ್ವರ್ಣದವರು.**
**ಜಂಗಮ ಸಂತೃಪ್ತಿಯ ನೇಮದವರು ನೋಡಯ್ಯಾ ಭಕ್ತರು .**
**ತನ್ನ ತಾ ತಿಳಿದ ನೇಮದವರು ನೋಡಯ್ಯಾ ವೀರಶೈವಾಗ್ರಗಣ್ಯರು,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಪತ್ರೆಯ ನೇಮ ಮಾಡುವವರು ಪಶು ಮತ್ತು ಆಡುಗಳಿದ್ದಂತೆ. ಆಡುಗಳಿಗೆ ಗಿಡಮರದ

ತಪ್ಪಲುಗಳೆಂದರೆ ಬಲು ಇಷ್ಟ . ಪಶು ಮತ್ತು ಆಡು ತಿನ್ನುವ ಪದಾರ್ಥಗಳನ್ನು ಪತ್ರೆಯ ನೇಮದವರು ದುರ್ಬಳಕೆ ಮಾಡುತ್ತಿರುವುದನ್ನು ಕಂಡು ಶರಣರು ಹೀಗೆ ನೇಮ ಮಾಡುವವರಿಗೆ ಪತ್ರೆಯ ನೇಮದವರು ಎಂದು ಕರೆದಿದ್ದಾರೆ. ಲಿಂಗಾರ್ಚನೆಯ ನೇಮ ಮಾಡುವವರನ್ನು ಕಂಡು ಶರಣರು ಚತುರ್ವರ್ಣದವರು ಎಂದು ಘೋಷಣೆ ಮಾಡಿದ್ದಾರೆ.

ದೇಹ ಒಂದೇ ಆದರೂ ಇದನ್ನು ನಾಲ್ಕು ಭಾಗ ಮಾಡಿದ್ದಾರೆ. ಬ್ರಾಹ್ಮಣ, ಕ್ಷತ್ರಿಯ,ವೈಶ್ಯ ,ಶೂದ್ರ ಎಂದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ , ಉತ್ತಮ ಕುಲದವರಾದರೆ ಶೂದ್ರ ಕನಿಷ್ಟ ಕುಲದವನೆಂದು ವಿಂಗಡಿಸಿದ್ದಾರೆ. ಅಂಗದ ಮೇಲೆ ಲಿಂಗ ಕಟ್ಟಿಕೊಂಡ ಲಿಂಗಾರ್ಚನೆಯ ನೇಮವನ್ನು ಮಾಡುವವರಿಗೆ ಉತ್ತಮ ಮಧ್ಯಮ ಮತ್ತು ಕೀಳು ಕುಲದವರೆಂದು ವಿಂಗಡನೆ ಮಾಡುತ್ತಾರೆ.

ಜಂಗಮ ಎಂದರೆ ವ್ಯಕ್ತಿಯಲ್ಲ, ಅಂಗದಲ್ಲಿಯೇ ಸಂಗಮವಾದ ಅವ್ಯಕ್ತ ಶಕ್ತಿ. ಹೀಗೆ ಪ್ರತಿ ವ್ಯಕ್ತಿಯೂ ಅವ್ಯಕ್ತ ಶಕ್ತಿಯನ್ನು ಕಂಡುಕೊಂಡು ಆ ಶಕ್ತಿಗೆ ಭಕ್ತನಾಗಬೇಕು. ಇದು ತನ್ನ ಶಕ್ತಿಗೆ ತಾನೇ ಭಕ್ತನಾಗುವುದು.

ಆದರೆ ಒಬ್ಬ ವ್ಯಕ್ತಿಯೆಂಬ ಜಂಗಮನನ್ನು ಸಂತೃಪ್ತಿಪಡಿಸಿ ನಂತರ ತಾನು ಭೋಜನವನ್ನು ಸ್ವೀಕರಿಸುವವರು ಗೋಚರದ ಭಕ್ತರು . ಇವರಿಗೆ ತನ್ನ ತಾ ತಿಳಿಯುವ ಶಕ್ತಿ ಇಲ್ಲ , ಯುಕ್ತಿಯೂ ಇಲ್ಲ. ತನ್ನ ತಾ ತಿಳಿದ ನೇಮದವರು ವೀರಶೈವಾಗ್ರಗಣ್ಯರು: ವೀರ ಎಂದರೆ ರಣರಂಗದಲ್ಲಿ ಯುದ್ಧ ಮಾಡಿ ಗೆದ್ದವನು ವೀರನಲ್ಲ. ತನ್ನ ತಾ ತಿಳಿದು ತನ್ನ ಅಜ್ಞಾನಗಳೊಂದಿಗೆ ಯುದ್ಧ ಮಾಡಿ ಜಯಸಿದವನು ವೀರ. ಈತ ಶಿವನನ್ನು ಕಂಡ ಅಗ್ರಗಣ್ಯ ವ್ಯಕ್ತಿಯೂ ಹೌದು.

**1467**

**ಪತ್ರೆಯು ತಿಂದಾಡು ಮುಕ್ತವಾದುದೆಂಬುದ ಬಲ್ಲಡೆ ಹೇಳಿರಯ್ಯಾ**
**ಲಿಂಗವ ಪೂಜಿಸಿದ ವರ್ಣಕ ಲಿಂಗವಾದನೆಂಬುದ ಬಲ್ಲಡೆ ಹೇಳಿರಯ್ಯಾ.**
**ಜಂಗಮವ ಸಂತೃಪ್ತಿ ಬಡಿಸಿದ ಭಕ್ತ ಭವವಿರಹಿತನಾದುದ**
**ಬಲ್ಲಡೆ ಹೇಳಿರಯ್ಯಾ. ಇವೆಲ್ಲ ಚತುರ್ವಿಧ ಪದಕ್ಕೆ ಒಳಗು !**
**ತನ್ನ ತಾ ತಿಳಿದ ವೀರಶೈವ ಭವಕ್ಕೆ ಬಂದನೆಂಬ ದ್ವಿರುಕ್ತಿಯನು**
**ಬಲ್ಲಡೆ ಹೇಳಿರಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನ ಸಾಕ್ಷಿಯಾಗಿ.**

ಪತ್ರೆಯನು ತಿಂದ ಆಡು ಮುಕ್ತನಾಗಲು ಸಾಧ್ಯವೆ, ಬಲ್ಲಡೆ ಹೇಳಿರಯ್ಯಾ . ಲಿಂಗವ ಪೂಜಿಸಿದ ವರ್ಣಿಕ ಲಿಂಗವಾಗಲು ಸಾಧ್ಯವೆ ಬಲ್ಲಡೆ ಹೇಳಿರಯ್ಯ . ಜಂಗಮ ಸಂತೃಪ್ತಿಪಡಿಸಿದ ಭಕ್ತ ಭವವಿರಹಿತನಾಗಲು ಸಾಧ್ಯವೆ ಬಲ್ಲಡೆ ಹೇಳಿರಯ್ಯಾ . ಇವರೆಲ್ಲ ಚತುರ್ವಿಧ ಪದ ಮತ್ತು ಪದವಿಗೆ ಒಳಗಾದವರು ಇವರು ಯಾರೂ ತನ್ನ ತಾ ತಿಳಿಯದವರು. ತನ್ನ ತಾ ತಿಳಿದವನಿಗೆ ಜನನ ಮರಣಗಳಿಲ್ಲ. ಆತ ಅರಿಷಡ್ವರ್ಗಗಳನ್ನು ಸಪ್ತ ವ್ಯಸನಗಳನ್ನು, ಅಷ್ಟ ಮದಗಳನ್ನು ಜಯಸಿದವನು. ಇಂತಹ ಕಲಿಯನ್ನು ಶರಣರು ಮಹಾವೀರ ಎಂದು ಕರೆದಿದ್ದಾರೆ. ಈತನಿಗೆ ಜನನ ಮರಣಗಳಿಲ್ಲ. ಹುರಿದ ಬೀಜದಂತೆ ಕಪಿಲಸಿದ್ಧಮಲ್ಲಿಕಾರ್ಜುನಾ.

**1468**

**ತಪವ ಮಾಡಿ ಸ್ವರ್ಗವ ಪಡೆದೆಹೆನೆಂಬವನ ಮುಖವ ನೋಡಲಾಗದು.**

**ಮಾದಿಗ ಡೋಹರ ಶ್ವಪಚ ನೀಚಗುಣವುಳ್ಳವರು**
**ಹೋಹುದೆಲ್ಲ ಸ್ವರ್ಗವೇನಯ್ಯಾ ?**
**ಲಿಂಗದ ಕುರುಹು ತಿಳಿದು, ಅಂಗಗುಣಂಗಳನತಿಗಳೆದು**
**ಲಿಂಗವಾದುದು ಸ್ವರ್ಗ ನೋಡಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಜಪ ತಪಂಗಳಲ್ಲಿ ಸ್ವರ್ಗವನ್ನು ಪಡೆದುಕೊಳ್ಳುತ್ತೇನೆ ಎಂಬುವವನ ಮುಖವನ್ನು ನೋಡಲಾಗುದು. ಸ್ವರ್ಗವೆಂಬುದು ಅಂಗದಲ್ಲಿಯೇ ಇದೆ. ನರಕವೆಂಬುದು ಕೂಡ ಅಂಗದಲ್ಲಿಯೇ ಇದೆ. ಅಂಗವನ್ನು ಆವರಿಸಿದ ಮರ್ಕಟವೆಂಬ ಮನವನ್ನು ಅಂಗದಿಂದಲೇ ಹಿಡಿದು. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಅರ್ಪಿಸುವುದು. ಮನ ಅರಿವಿನ ಲಿಂಗಯ್ಯನಿಗೆ ದಾಸಾನುದಾಸನಾದಾಗ ಉಂಟಾಗುವ ಆನಂದವೇ ಮಹದಾನಂದ. ಇದಕ್ಕೆ ಯಾವ ಜಾತಿಯ ಅವಶ್ಯಕತೆಯಿಲ್ಲ. ಜಪತಪ ಮಾಡುವ ಅವಶ್ಯಕತೆಯೂ ಇಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನ ಕುರುಹು ತಿಳಿದಾಗ. ಅಂಗ ಗುಣಂಗಳು ತನಗೆ ತಾನೇ ಕಳೆದು ಹೋಗುತ್ತವೆ. ಅಂಗ ಲಿಂಗಾಂಗವಾಗುತ್ತದೆ. ಹೀಗೆ ಆಗುವುದೇ ಸ್ವರ್ಗ.

**1469**

**ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ, ಕೇಳಿರಯ್ಯಾ.**
**ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳುಬೆಟ್ಟ.**
**ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು ಅಲ್ಲಿರ್ದ ಚಂದ್ರಶೇಖರನು ಬಹು ಎಡ್ಡ**
**ಇದರಾಡಂಬರವೇಕಯ್ಯಾ ? ಎಮ್ಮ ಪುರಾತರಿಗೆ ಸದಾಚಾರದಿಂದ ವರ್ತಿಸಿ**
**ಲಿಂಗಾಂಗ ಪಾದಪದ್ಮದೊಳು ಬಯಲಾದ ಪದವೆ ಕೈಲಾಸವಯ್ಯಾ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಕೈಲಾಸವೆಂಬುದು ಇಲ್ಲ . ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿಗೆ ಸಿದ್ಧರಾಮ ಶಿವಯೋಗಿಗಳು ಕಿವಿಮಾತು ಹೇಳಿದ್ದಾರೆ. ಕೈಲಾಸವೆಂಬುದು ಒಂದು ಭೂಮಿಯಲ್ಲಿರುವ ಹಾಳು ಬೆಟ್ಟ ಅಲ್ಲಿ ವಾಸ ಮಾಡುವ ಮುನಿಗಳೆಲ್ಲ ಜೀವಗಳ್ಳರು ಅಲ್ಲಿರುವ ಚಂದ್ರಶೇಖರನು ಬಹು ಎಡ್ಡ . ಇದರ ಆಡಂಬರವೇಕಯ್ಯಾ ನಿಮಗೆ.

ನಮ್ಮ ಪುರಾತರು ಸದಾಚಾರದಿಂದ ವರ್ತಿಸಿದರು. ಅವರ ಲಿಂಗಾಂಗ ಪಾದಪದ್ಮದೊಳು ಬಯಲಾದ ಪದವೇ ಕೈಲಾಸವಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನೆ ಮಹಾದೇವನಾಗಿದ್ದಾನೆ. ಆ ಮಹಾದೇವನೇ ಸದಾಶಿವನಾಗಿದ್ದಾನೆ. ಆ ಸದಾ ಶಿವನೇ ಸಾಕ್ಷಾತ್ ಪರಬ್ರಹ್ಮ ನಾಗಿರುವಾಗ ಅನ್ಯ ಕೈಲಾಸವೇಕಯ್ಯ ಇವರುಗಳಿದ್ದ ಕಾಯವೇ ಕೈಲಾಸ. ಇವರನ್ನು ಕಂಡ ಮನವೇ ಘನಮನ.

**1470**

**ನಿಧಿ ನಿಷೇಧಂಗಳಿಲ್ಲದನಾದಿ ನೀ ನೋಡಯ್ಯಾ.**
**ಜಪ-ತಪವಿಲ್ಲದ ಮಹಾಮುನೀ ನೀ ನೋಡಯ್ಯಾ.**

**ಇಹ-ಪರ ಸುಖ-ದುಃಖಾತೀತನಯ್ಯಾ ನಿಮ್ಮ ಶರಣ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಕ್ಕೆ ಅಂಗವನ್ನು ಆವರಿಸಿದ ಮನ ಭಕ್ತನಾಗಿ ಶರಣು ಹೋಗಿ ಶರಣಾಗತನಾಗಿ ಶರಣನೆ ಆದ ಆತನಿಗೆ ಯಾವ ವಿಧಿ-ನಿಷೇಧಗಳು ಇಲ್ಲ. ಆತ ಅನಾದಿ. ಜಪ-ತಪಗಳನ್ನು ಮಾಡದ ಮಹಾಮುನಿ. ಆತ ಇಹಪರ ಸುಖ-ದುಃಖಗಳಿಗೆ ಅತೀತನು ನೋಡಯ್ಯಾ, ನಮ್ಮ ಶರಣ ಕಪಿಲಸಿದ್ಧಮಲ್ಲಿಕಾರ್ಜುನಾ.

**1471**

**ಹದಿನಾಲ್ಕು ರತ್ನವೆಂಬುದ ಸುರಾಸುರೆಲ್ಲರು ಬಲ್ಲರು**
**ಮೂರಾರು ರತ್ನವನಾರು ಅರಿಯರಯ್ಯಾ .**
**ಮೂರಾರು ರತ್ನವೆಂಬುದ ಬಲ್ಲುರು ದಿವ್ಯಮುನಿಗಳು .**
**ಮೂರೆರಡು ರತ್ನವನರಿಯರು ತ್ರಿಲೋಕದವರು,**
**ಮೂರೆರಡು ರತ್ನವ ಬಲ್ಲರು ಮಹಾಪ್ರಮಥರು.**
**ಒಂದು ರತ್ನವನಾರು ಅರಿಯರು,**
**ಒಂದು ರತ್ನವ ಬಲ್ಲವ ನಿಮ್ಮ ಶರಣ ಮಹಾಲಿಂಗಮೂರ್ತಿ**
**ಚೆನ್ನಬಸವಣ್ಣ ನೋಡಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಹದಿನಾಲ್ಕು ರತ್ನವೆಂಬುದನ್ನು ಸುರಾಸುರರೆಲ್ಲರು ಬಲ್ಲರು. ಮೂರಾರು ರತ್ನಗಳನ್ನು ಆರು ಅರಿಯರಯ್ಯಾ ಮೂರಾರು ರತ್ನವೆಂಬುದ ಬಲ್ಲರು ದಿವ್ಯ ಮುನಿಗಳು. ಮೂರೆರಡು ರತ್ನವನು ಅರಿಯರು ತ್ರಿಲೋಕದವರು. ಮೂರೆರಡು ರತ್ನವ ಬಲ್ಲವರು ಮಹಾಪ್ರಮಥರು ಒಂದು ರತ್ನವನ್ನು ಆರೂ ಅರಿಯರು. ಒಂದು ರತ್ನವನ್ನು ಬಲ್ಲಾತ ನಿಮ್ಮ ಶರಣ ಮಹಾ ಲಿಂಗಮೂರ್ತಿ ಚೆನ್ನಬಸವಣ್ಣ ನೋಡಾ ಎಂದು ಸಿದ್ಧರಾಮ ಶಿವಯೋಗಿಗಳು ನುಡಿದಿದ್ದಾರೆ.

ತನು ಹದಿನಾಲ್ಕು ರತ್ನಗಳುಳ್ಳದ್ದು ಹೌದು. ಒಂಭತ್ತು ರತ್ನಗಳುಳ್ಳದ್ದು ಹೌದು. ಆರು ರತ್ನಗಳುಳ್ಳದ್ದು ಹೌದು. ಇವೆಲ್ಲ ಶಾಸ್ತ್ರಗಳಿಗೆ ಪ್ರವಚನ ಪಟುಗಳಿಗೆ ಪಂಡಿತರಿಗೆ ತಿಳಿದ ಮಾತೇ ಆಗಿದೆ. ಇವೆಲ್ಲವನ್ನು ಕಳೆದು ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನೆಂಬ ಒಂದೇ ಒಂದು ದಿವ್ಯ ರತ್ನವನ್ನು ಹುಡುಕಿ ಅರಿವಿನಿಂದ ಬೆಳಗಿಂಗೆ ಬೆಳಗಾಗಿ ಬೆಳಗುವ ದಿವ್ಯ ರತ್ನವೇ ತಾನಾದಾತ ಚೆನ್ನಬಸವಣ್ಣನು ಒಬ್ಬನೇ ನೋಡಯ್ಯಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1472**

**ರತ್ನ ಪರೀಕ್ಷೆಯ ಮಾಡುವ ಅಣ್ಣಗಳೆಲ್ಲ ದಿಮ್ಮಿದರಯ್ಯ.**
**ಬಲ್ಲಿದ ಬೆಲೆ ಎಂದಡೆ ಹುಲ್ಲು ಕಡ್ಡಿ ಯೊಳೈತೆ,**
**ಬೆಲೆ ಇಲ್ಲದುದೆಂದಡೆ ಬಲ್ಲವರ ಮುಂದುಗೆಡಿಸುತ್ತೈತೆ.**
**ಇದರ ಬೆಲೆಯ ಬಲ್ಲ ನಮ್ಮ ಬಸವಣ್ಣನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .**

ರತ್ನ ಪರೀಕ್ಷೆಯ ಮಾಡುವವರೆಲ್ಲ ಬಲ್ಲಿದರು. ಅವರು ಸಕಲ ರತ್ನಗಳ ಬೆಲೆಯನ್ನು

ಇಂತಿಷ್ಟೇ ಎಂದು ಹೇಳಬಲ್ಲರು. ಬೆಲೆಯೇ ಕಟ್ಟದ ರತ್ನವನು ಪರೀಕ್ಷಿಸಲು ಅರಿಯರು. ಇದರ ಬೆಲೆಯನ್ನು ಕಟ್ಟಬಲ್ಲಾತ ಬಸವಣ್ಣನು ಮಾತ್ರ ಎಂದು ಸಿದ್ಧರಾಮ ಶಿವಯೋಗಿಗಳು ನುಡಿದಿದ್ದಾರೆ.

ತನುವು ಅರಿವುಳ್ಳ ಮಹಾರತ್ನ ಈ ಮಹಾರತ್ನದ ಬೆಲೆಯನ್ನು ರತ್ನವೇ ತಾನಾದ ತನು ತನ್ನನ್ನು ತಾನು ಅರಿಯದುದೇ ಒಂದು ದುರಾದೃಷ್ಟ .ಅರಿತರೆ ಸಾಕು ಅರಿತವರಿಗೆಲ್ಲ ಜಗದ ತನುಗಳೆಲ್ಲ ದಿವ್ಯರತ್ನಗಳೇ ಎಂದು ಅರಿವರು. ತನುವಿಗೆ ಬಾಹ್ಯ ರತ್ನವನ್ನು ಅರಿಯಲು ಸಾಧ್ಯವಾಗುತ್ತದೆ. ಸ್ವತಃ ತಾನೇ ಬೆಲೆ ಕಟ್ಟದ ರತ್ನವನ್ನು ಅರಿಯಲು ಸಾಧ್ಯವಾಗುವುದಿಲ್ಲ.

**1473**

**ಗುದ್ದಾಡಿ ರತ್ನವ ಕದ್ದು ಒಯ್ಯಬಲ್ಲಡೆ ಭಕ್ತನೆಂಬೆ .**
**ಮದ್ದುಳ್ಳನ್ನವ ಮೆದ್ದಬಲ್ಲಡೆ ಮಹೇಶನೆಂಬೆ . ಜಿದ್ದಿನ ಭಕ್ತಿಯ ಗೆದ್ದು ಒಯ್ದಡೆ**
**ಕಪಿಲಸಿದ್ಧಮಲ್ಲನ ಮನೆಯ ಮುದ್ದು ಕುಮಾರನೆಂಬೆ ನೋಡಾ.**
**ಮಡಿವಾಳ ಮಾಚಣ್ಣನೆ .**

ಮನ ತನುವಿನೊಂದಿಗೆ ಗುದ್ದಾಡಿ ಅಥವಾ ಮನ ಮನದಲ್ಲಿಯೇ ಬಚ್ಚಿಟ್ಟುಕೊಂಡ ಅರಿಷಡ್ವರ್ಗಗಳೊಂದಿಗೆ ಸಪ್ತ ವ್ಯಸನಗಳೊಂದಿಗೆ ಅಷ್ಟ ಮದಗಳೊಂದಿಗೆ ಗುದ್ದಾಡಿ. ತನುವಿನಲ್ಲಿಯೇ ತನ್ಮಯವಾದ ರತ್ನವನು ಕದ್ದು ಒಯ್ಯ ಬಲ್ಲಡೆ ಅಂತಹ ಮನವನ್ನು ಭಕ್ತನೆಂಬೆ ಎಂದು ಸಿದ್ಧರಾಮ ಶಿವಯೋಗಿಗಳು ನುಡಿದಿದ್ದಾರೆ.

ಮದ್ದುಳ್ಳನ್ನವ ಮೆದ್ದ ಬಲ್ಲಡೆ ಮಹೇಶನೆಂಬೆ : ಇಲ್ಲಿ ಒಂದು ಸತ್ಯ ಘಟನೆ ನೆನಪಾಗುತ್ತದೆ. ಸಾಕ್ರಟೀಸ್ ತನ್ನ ವಿಚಾರಗಳನ್ನು ತಾನು ಬಲವಾಗಿ ನಂಬುತ್ತಿದ್ದ . ಹೀಗಾಗಿ ಕಾರಾಗೃಹ ಸೇರಿದ ಆತನಿಗೆ ವಿಷಪ್ರಾಶನ ಮಾಡಿಸಿ ಕೊಲ್ಲಬೇಕೆಂದು ರಾಜಾಜ್ಞೆಯಾಯಿತು. ಕಾವಲುಗಾರರು ವಿಷಭರಿತವಾದ ಅನ್ನವನ್ನು ತಂದು ಕೊಡಲೇ ಇಲ್ಲ. ಸಾಕ್ರಟೀಸ್ ಕುತೂಹಲದಿಂದ ಅತ್ಯಂತ ಆನಂದದಿಂದ ಕಾವಲುಗಾರರನ್ನು ಕೇಳಿದ. ನನಗೆ ನೀವು ಏಕೆ ಇನ್ನೂ ವಿಷಪ್ರಾಶನ ಮಾಡಿಸಲಿಲ್ಲ. ರಾಜಾಜ್ಞೆಯನ್ನು ಪಾಲಿಸಿದಿದ್ದರೆ ನಿಮಗೆ ಶಿಕ್ಷೆಯಾಗುವುದಿಲ್ಲವೆ. ಕೂಡಲೇ ರಾಜಾಜ್ಞೆಯನ್ನು ಪಾಲಿಸಿ ಎಂದು ಕಾವಲುಗಾರರಿಗೆ ಹೇಳಿದ.

ಕಾವಲುಗಾರರು ಸಾಕ್ರಟೀಸನ ಕುರಿತು ನಿಮ್ಮಂತ ಮಹಾನುಭಾವರನ್ನು ಇನ್ನೂ ನಾಲ್ಕಾರು ದಿನಗಳವರೆಗೆಯಾದರೂ ನೋಡಿ ನಿಮ್ಮನ್ನು ಕಣ್ತುಂಬಿಕೊಳ್ಳಬೇಕು ಎಂಬ ಆಸೆ ನಮ್ಮದು. ಹೀಗಾಗಿ ನಿಮಗೆ ವಿಷಪ್ರಾಶನ ಮಾಡಿಸಲಿಲ್ಲ ಎಂದರು ಕಾವಲುಗಾರರು. ನನಗೆ ವಿಷದ ರುಚಿ ನೋಡಬೇಕೆಂದು ಆಸೆ. ಈ ಹಿರಿಯಾಸೆಗಾಗಿ ಕಾದು ಕುಳಿತಿದ್ದೇನೆ. ನಾನು ಈ ಲೋಕದಲ್ಲಿ ಎಲ್ಲಾ ರುಚಿಗಳನ್ನು ಕಂಡಿರುವೆ. ವಿಷದ ರುಚಿ ಮಾತ್ರ ಕಂಡಿರಲಿಲ್ಲ ರಾಜ. ನನಗೆ ಈ ಸೌಭಾಗ್ಯವನ್ನು ತಂದುಕೊಟ್ಟಿದ್ದಾನೆ. ಆತನಿಗೆ ನಾನು ಚಿರಋಣಿ. ಹೀಗಾಗಿ ಬೇಗ ವಿಷ ಕೊಡಿ ಪರಮಾನಂದದಿಂದ ನಾನು ಆ ರುಚಿಯನ್ನು ಪಡೆಯುವೆ ಎಂದು ಕಾವಲುಗಾರರಿಗೆ ಸಾಕ್ರಟೀಸ ಹೇಳಿದ.

ಏನೀ ಆಶ್ಚರ್ಯ ! ಸಿದ್ಧರಾಮ ಶಿವಯೋಗಿಗಳು ಮದ್ದುಳ್ಳನ್ನವ ಮೆದ್ದಡೆ ಮಹೇಶ್ವರನೆಂಬೆ . ವಿಷಭರಿತವಾದ ಅನ್ನವನ್ನು ಪರಮಾನಂದದಿಂದ ಮೆದ್ದಾತನನ್ನು ಮಹೇಶನೆಂದಿದ್ದಾರೆ. ಏಕೆಂದರೆ ಸಾಯುವುದು ತಾನಲ್ಲ. ಸಾವು ತನಗೂ ಇಲ್ಲ . ಮಹೇಶನಿಗೂ ಇಲ್ಲ. ನಾನು ಎನ್ನುವ ಮನ ಮಹೇಶನೆಂಬ ಅರಿವು ಇವರಿಬ್ಬರೂ ಅಂಗದಲ್ಲಿಯೇ ಇದ್ದಾರೆ. ಇವರಿಬ್ಬರಿಗೂ ಸಾವಿಲ್ಲ. ಇಂದು

ಇದ್ದು ನಾಳೆ ಇಲ್ಲವಾಗುವುದು ದೇಹ ಮಾತ್ರ ಅರಿವು ಎನ್ನುವ ಮಹೇಶ, ಮನ ಎನ್ನುವ ಭಕ್ತ, ಇವರಿಬ್ಬರಿಗೂ ದೇಹದಲ್ಲಿರುವುದು ಸಾಕಾದಾಗ ದೇಹ ಬಿಟ್ಟು ತಾವಾಗಿಯೆ ಹೋಗುತ್ತಾರೆ. ಶಿವ ಶಿವೆಯರು ಇಲ್ಲದ ದೇಹ ಶವ ಎಂದು ಕರೆಯಿಸಿಕೊಳ್ಳುತ್ತದೆ.

ಇದು ಜಿದ್ದಿನ ಭಕ್ತಿ ಇಂತಹ ಭಕ್ತಿಯನ್ನು ಗೆದ್ದಡೆ ಕಪಿಲಸಿದ್ಧ ಮಲ್ಲನ ಮನೆಯ ಮುದ್ದು ಕುಮಾರನೆಂಬೆ ನೋಡಾ ಎಂದು ಮಡಿವಾಳ ಮಾಚಯ್ಯನವರಿಗೆ ಸಿದ್ಧರಾಮ ಶಿವಯೋಗಿಗಳು ಮೇಲ್ಕಂಡ ಸೂತ್ರವನ್ನು ಹೇಳಿದ್ದಾರೆ.

**1474**

**ಅಯ್ಯಗಳು ಬಂದಿಹರೆಂದು 'ಅಯ್ಯಾ ಅಯ್ಯಾ' ಎಂದು ಬೆಂಬತ್ತುವನಲ್ಲ ನಾನು.**
**ಅಯ್ಯಗಳೆಂದಡೆ ಅಯ್ಯತನವೇರಿತ್ತೆ ದೇವಾ?**
**ಗೋವಿನ ಹಾಲು ಎಂದಡೆ, ಹಿಂಡಲಿಲ್ಲ, ರುಚಿಸಲಿಲ್ಲ**
**ತನ್ನ ಹಸ್ತ ಮುಟ್ಟಿದಲ್ಲಿ ರುಚಿಸಿತ್ತಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಯ್ಯಗಳು ಮನೆಗೆ ಬಂದರೆ ಅಯ್ಯ ಅಯ್ಯಾ ಎಂದು ಅವರ ಹಿಂದೆ ಬೀಳುವವನು ನಾನಲ್ಲ. ಅಯ್ಯಗಳು ಎಂದ ಮಾತ್ರಕ್ಕೆ ಅವರ ತನುವನ್ನು ಅಯ್ಯತನವೇರಲಿಲ್ಲ. ಗೋವಿನ ಹಾಲು ಎಂದಡೆ ರುಚಿಸಲು ಸಾಧ್ಯವಾಗಲಿಲ್ಲ. ಹಸುವಿಗೆ ಹುಲ್ಲು ಹಾಕಿ ಅದರ ಮೈ ನೇವರಿಸಿ ಹಾಲನ್ನು ಹಿಂಡಿ ಹಾಲಿನ ರುಚಿಯನ್ನು ಅಸ್ವಾದಿಸಿದಾಗ ಆನಂದವಾಗುತ್ತದೆ.

ಅಯ್ಯ, ಸ್ವಾಮಿ ಎನ್ನುವುದು ತನುವಿನಲ್ಲಿ ತನ್ಮಯವಾದ ಆ ಪರಮಾತ್ಮನನ್ನು ಸಂಬೋಧಿಸುವುದಾಗಿದೆ. ಹೀಗೆ ಯಾರಾದರೂ ಸಂಬೋಧಿಸಿದಾಗ ತನುವನ್ನು ಆವರಿಸಿದ ಮನ ತನುವಿನೊಂದಿಗೆ ಹಿರಿ-ಹಿರಿ ಹಿಗ್ಗಿದರೆ ತನುವಿನ ಅಜ್ಞಾನ ಹೆಚ್ಚಾಯಿತೆ ಹೊರತು, ತನುವಿನಲ್ಲಿಯೇ ತನ್ಮಯವಾದ ಅಯ್ಯನೆಂಬ ಅರಿವು ತನು ಮತ್ತು ಮನಕ್ಕೆ ಒಲಿಯಲಿಲ್ಲ.

ಯಾರಾದರೂ ಗೌರವದಿಂದ ಅಯ್ಯಾ ಎಂದು ಕರೆದಾಗ ತನು ಹಿಗ್ಗಬೇಕಾಗಿಲ್ಲ. ತನುವಿನಲ್ಲಿ ತನ್ಮಯವಾದ ತನು ಮತ್ತು ಮನಗಳೆರಡು ಅಯ್ಯನಿಗೆ ಶರಣು ಹೋಗಬೇಕು.

**1475**

**ಅಯ್ಯಗಳ ಅನುಭವಕ್ಕಲ್ಲದೆ ನಿನ್ನ ಪಾಪಕ್ಕವರು ಅಯ್ಯಗಳೆ ?**
**ಅಯ್ಯಗಳನುಭಾವ ನಿನ್ನ ಮನೋಭಾವ ಏಕವಾದಡೆ**
**ಅಯ್ಯತನವೇರಿತ್ತಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಯ್ಯತನ ಎನ್ನುವುದು ಅರಿವಿನ ಪದವಿ. ಅದು ಸುಮ್ಮನೆ ಬರುವುದಿಲ್ಲ. ತನು ಮತ್ತು ಮನಗಳೆರಡು ತನುವಿನಲ್ಲಿಯೇ ತನ್ಮಯವಾದ ಅರಿವು ಎಂಬ ಅಯ್ಯನ ದರ್ಶನ ಮಾಡಿಕೊಳ್ಳಲು ಕೃಷಿ ಮಾಡಿದಾಗ ಅಯ್ಯ, ತನು ಮತ್ತು ಮನಕ್ಕೆ ಒಲಿಯುತ್ತಾನೆ. ಇಂತಹವರನ್ನು ಅಯ್ಯ ಎಂದು ಕರೆಯುತ್ತಾರೆ. ಅಯ್ಯ ಎಂದರೆ ಮಹಾಜ್ಞಾನಿ ಅಯ್ಯಗಳು, ಪ್ರತಿ ತನುವಿಗು ಅಯ್ಯನ ದರ್ಶನ ಮಾಡಿಸಲು ಹೆಣಗುತ್ತಾರೆ. ಅಯ್ಯಗಳ ಅನುಭವಕ್ಕಲ್ಲದೆ ತನು ಮತ್ತು ಮನದ ಪಾಪಕ್ಕೆ ಅವರು ಅಯ್ಯಗಳಲ್ಲ. ಅಯ್ಯಗಳು ಮಾಡುವ ಅನುಭಾವ ತನು ಮತ್ತು ಮನಕ್ಕೆ ಮನದಟ್ಟಾದಡೆ ಮನ

ಘನಮನವಾಗುತ್ತದೆ. ತನುವಿಗೆ ಅಯ್ಯತನದ ಪದವಿ ತನಗೆ ತಾನೇ ಬರುತ್ತದೆ.

**1476**

**ಬಂದಲ್ಲುಪಚರಿಸುವುದಲ್ಲದೆ,**
**ನಿಂದ ನಿಂದಲ್ಲುಪಚರಿಸುವುದು ಭಕ್ತಿಯ ಕೊಂಕು ನೋಡಯ್ಯಾ.**
**ಉಪಚಾರಕ್ಕೆ ಬಂದಾತ ಜಂಗಮನಲ್ಲ ನೋಡಯ್ಯಾ; ಉಪಚರಿಸಿದವ ಭಕ್ತನಲ್ಲ.**
**ಅನುಭವಕ್ಕೆ ಬಂದಿಹನಯ್ಯಾ ಜಂಗಮನು.**
**ಅನುಭವಕ್ಕೆ ಮಾಡುವನಯ್ಯಾ ಉಪಚಾರವ ಭಕ್ತನು,**
**ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಂದಲ್ಲಿ, ನಿಂದಲ್ಲಿ ಉಪಚರಿಸುವುದು ಭಕ್ತಿಯ ಕೊಂಕು, ಅದು ಉಪಚಾರವಲ್ಲ. ಉಪಚಾರಕ್ಕಾಗಿ ಬಂದಾತ ಜಂಗಮನಲ್ಲ, ಅಂತಹ ಜಂಗಮನಿಗೆ ಉಪಚರಿಸಿದಾತ ಭಕ್ತನು ಅಲ್ಲ. ಜಂಗಮನು ವ್ಯಕ್ತಿಯಲ್ಲ, ಅನುಭವಕ್ಕೆ ಬರುವವನು ಜಂಗಮ. ಅಂತಹ ಅನುಭಾವ ತನಗೆ ಬೇಕೆ ಬೇಕು ಎಂದು ಹಠ ಹಿಡಿದು ಅನುಭವದ ಆಸೆಗಾಗಿ ಹಗಲಿರುಳು ಎನ್ನದೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಉಪಚಾರ ಮಾಡುವವನು ಮಾತ್ರ ಭಕ್ತ. ಇಂತಹ ಜಂಗಮನನ್ನು ತನ್ನ ಅನುಭವಕ್ಕೆ ತಂದು ಉಪಚರಿಸುವ ಭಕ್ತನೆ ಭಕ್ತನು ಹೀಗೆ ಮಾಡುವ ಉಪಚಾರ ಇದು ಯಾರ ಗೋಚರಕ್ಕೆ ಬಾರದ ನಿಲುಕದ ಮಾತು.ಅಂಗದಲ್ಲಿಯೇ ಸಂಗಮವಾದ ಅರಿವಿನ ಜಂಗಮನ ದರ್ಶನಕ್ಕಾಗಿ ಉಪಚಾರ ಮಾಡುವ ಭಕ್ತನಿಗೆ ಮಾತ್ರ ವೇದ್ಯವಾದ ಮಾತು.

**1477**

**ಬಂದ ಮಹೇಶ ಬಂದಂತೆ ಪೋಪನಲ್ಲ ನೋಡಯ್ಯಾ .**
**ಬಂದ ಬರವು ಭವಕ್ಕೆ ಆಗರ, ನಿಂದ ಬರವು ಭವಕ್ಕೆ ಆಗರ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ,**

ಅಂಗದಲ್ಲಿಯೇ ಸಂಗಮವಾದ ಅರಿವಿನ ಮಹೇಶ ಮನ ಮತ್ತು ತನುವಿಗೆ ದರ್ಶನ ನೀಡಿ ಹಾಗೆಯೇ ಹೋಗುವವನಲ್ಲ. ಅಂಗಕ್ಕೆ ಅಂಟಿದ ಜನನ ಮರಣಗಳೆಂಬ ಮಹಾರೋಗಕ್ಕೆ ಮದ್ದನ್ನು ಅರೆದು ಅಂಗವನ್ನೆ ಲಿಂಗಾಂಗವನ್ನು ಮಾಡಿಕೊಂಡು ನಿಲ್ಲುವಾತ . ಆತ ಬಂದ ಬರವು ಭವಕ್ಕೆ ಆಗರ. ಆತ ನಿಂದ ಬರವು ಭವಕ್ಕೆ ಆಗರ ಎಂದು ಓದುಗರಿಗೆ ಸಿದ್ಧರಾಮ ಶಿವಯೋಗಿಗಳು ಜನನ ಮರಣ ಗೆಲ್ಲುವ ಸೂತ್ರವನ್ನು ಹೇಳಿದ್ದಾರೆ.

**1478**

**ಕುಂಡಲಿ ಬಂದು ಕೀಡಿಯನ್ನು ಕುಂಡಲಿಯ ಮಾಡಿತ್ತಯ್ಯಾ .**
**ಅಗ್ನಿ ಬಂದು ಕಾಷ್ಠವ ಅಗ್ನಿಯ ಮಾಡಿತ್ತಯ್ಯಾ .**
**ಮಹೇಶ ಬಂದು ಭಕ್ತನ ಮಹೇಶ ಮಾಡಿ ಗಮಿಸಿದನಯ್ಯಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಬೆಳಗು ಕತ್ತಲೆಯನ್ನು ಬೆಳಗಿ ಬೆಳಗನ್ನಾಗಿಸಿಕೊಳ್ಳುವಂತೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಬೆಳಕು, ಅಂಗವನ್ನು ಆವರಿಸಿದ ಮನವೆಂಬ ಕತ್ತಲೆಯನ್ನು ಬೆಳಗಿ ಘನಮನವನ್ನಾಗಿಸುತ್ತದೆ.

ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಾ ಎನ್ನುವ ಬಸವಣ್ಣನವರ ಸೂತ್ರದಂತೆ ಅಗ್ನಿ ತಾಗಿದ ಕಟ್ಟಿಗೆ ಅಗ್ನಿಯೇ ಆದಂತೆ, ಕುಂಡಲಿ ಬಂದು ಕೀಡೆಯನ್ನು ಕುಂಡಲಿ ಮಾಡುತ್ತದೆ. ಅಂಗದಲ್ಲಿಯೇ ಸಂಗಮವಾದ ಅರಿವಿನ ಮಹೇಶ ಬಂದು ಅಂಗವನ್ನು ಆವರಿಸಿದ ಮನವನ್ನು ಭಕ್ತನನ್ನಾಗಿ ಮಾಡಿ ಭಕ್ತನನ್ನು ಮಹೇಶನನ್ನಾಗಿ ಮಾಡುತ್ತಾನೆ.

**1479**

**ಅಗ್ನಿಯ ಮುಟ್ಟಿದ ಕಾಷ್ಠ ಇದ್ದಲಿಯಾಯಿತ್ತು,ಇದ್ದಲಿಯದು ಕಾಷ್ಠವಾಗದು**
**ಭಕ್ತ ತಾನು ವಿರಕ್ತನಾದನು . ವಿರಕ್ತ ತಾನು ಭಕ್ತನಾಗನು**
**ಇದರಿರವ ಗುರು ಚೆನ್ನಬಸವಣ್ಣ ತೋರಿದನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಭಕ್ತನಾಗುವುದೆಂದರೆ ಸಣ್ಣ ಮಾತಲ್ಲ. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ದಾಸನಾದಾಗ ಆ ಮನವೇ ಅರಿವೆಂಬ ಗುರುದೇವನಿಗೆ ಭಕ್ತನಾಗುತ್ತದೆ. ಹೀಗೆ ಮನ ಭಕ್ತನಾಗುವುದೆಂದರೆ, ರಕ್ತ ವಿರಕ್ತವಾದಂತೆ, ರಕ್ತ ಕೆಂಪು ಬಣ್ಣ ಉಳ್ಳದ್ದು ವಿರಕ್ತ ಬಿಳಿ.

ಜಲಬಿಂದು ಗರ್ಭದಲ್ಲಿ ಹೋಗಿ ರಕ್ತವಾಗಿ ಮಾಂಸ, ಮಜ್ಜೆ, ಮೇದಸ್ಸು ಆಗಿ ಅದೇ ಅಸ್ತಿಯಾಗಿ ಗಟ್ಟಿಗೊಳ್ಳುತ್ತದೆ. ಅಂತಹ ಜಲಬಿಂದು ಸೋರದಂತೆ ಚರ್ಮದ ಕವಚವಾಗಿ, ತನುವಿನ ರೂಪದಲ್ಲಿ ಹೊರ ಬರುತ್ತದೆ. ಹೀಗೆ ಜಲ ಗರ್ಭಕ್ಕೆ ಹೋಗಿ ರಕ್ತವಾಗಿ ರಕ್ತದ ಸಕಲ ಗುಣಗಳನ್ನು ಪಡೆದುಕೊಂಡಿದೆ. ಜಲ ಇದಕ್ಕೆ ರುಚಿ ಇಲ್ಲ. ವಾಸನೆಯಿಲ್ಲ, ಬಣ್ಣವಿಲ್ಲ. ತನ್ನ ಮಟ್ಟವನ್ನು ತಾನು ಕಾಯ್ದುಕೊಳ್ಳುತ್ತದೆ. ಜಲ ಸಮತಟ್ಟ ಉಳ್ಳದ್ದು . ಈ ನಾಲ್ಕೂ ಗುಣಗಳುಳ್ಳ ಜಲವೇ ನಾಲ್ಕೂ ಗುಣಗಳುಳ್ಳ ರಕ್ತವಾಯಿತು. ರಕ್ತ ವಿರಕ್ತನಾಗುವುದು ಬಲುಕಠಿಣ. ಹಾಗೆಯೇ ಮನ ಭಕ್ತನಾಗುವುದು ಬಲು ಕಠಿಣ. ರಕ್ತ ವಿರಕ್ತನಾದಂತೆ. ಹೀಗೆ ವಿರಕ್ತನಾದವನು ಪುನಃ ಭಕ್ತನಾಗಲು ಬರುವುದಿಲ್ಲ. ಅಗ್ನಿ ಮುಟ್ಟಿದ ಕಟ್ಟಿಗೆ ಇದ್ದಲಿಯೇ ಆಗುತ್ತದೆ. ಪುನಃ ಕಟ್ಟಿಗೆಯಾಗದು. ಭಕ್ತನಾದವನು ವಿರಕ್ತನಾಗುತ್ತಾನೆ. ವಿರಕ್ತ ತಾನು ಭಕ್ತನಾಗಲ್ಲ. ಇದರಿರುವನು ಗುರು ಚೆನ್ನಬಸವ ಸಿದ್ಧರಾಮ ಶಿವಯೋಗಿಗಳಿಗೆ ತೋರಿದನು. ಎನಗೆ ಸದ್‌ಗುರು ಶ್ರೀ ವಿದ್ಯಾನಂದ ಶರಣರು ತೋರಿದರು.

**1480**

**ಕಾಷ್ಠದಿಂದ ಮುಟ್ಟಿದ ನೀರ ತಾ ಮುಟ್ಟನೆಂಬಂತೆ,**
**ಬಿಸಿಲಿನಿಂದ ಬಳಲಿ, ಕಾಯ ತಾನಲ್ಲೆಂಬಂತೆ,**
**ಮನ ಮುಟ್ಟದ ವಿಷಯ ತಾ ಮುಟ್ಟನೆಂಬ ವೇದಾಂತಿಯ**
**ಹಲ್ಲು ದೋರೆ ಮೂಗ ಕೊಯ್ವನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನವರ.**

ಪಂಡಿತರು, ಶಾಸ್ತ್ರಿಗಳು, ವೇದಾಂತಿಗಳು ಇವರಿಗೆ ಆಚಾರ ಉಂಟು . ಇವರ ಆಚಾರವೆಲ್ಲ ಗೋಚರದ ಆಚಾರ. ಅಂದರೆ ಸಕಲರಿಗೂ ಕಾಣುವಂಥ ಆಚಾರವನ್ನು ಇವರುಗಳು ಮಾಡುತ್ತಾರೆ. ಒಲೆಯೊಳಗೆ ಕಟ್ಟಿಗೆ ಇಟ್ಟು ಕಾಸಿದ ನೀರನ್ನು ತಾನು ಮುಟ್ಟನು ಎನ್ನುವ ಆಚಾರ ಇವರದು.

ಬಿಸಿಲಿನಿಂದ ಬಳಲಿ ಬೆಂದ ಕಾಯ ಸ್ನಾನವಾಗದ ವಿನಹ ಅದು ತನ್ನದಲ್ಲ ಎಂಬಂತೆ ವರ್ತಿಸುತ್ತಾರೆ. ಸ್ನಾನ ಮಾಡುವವರೆಗೆ ಪ್ರಸಾದ ತೆಗೆದುಕೊಳ್ಳುವುದಿಲ್ಲ. ಮನ ಮುಟ್ಟಿದ ವಿಷಯ ತಾ ಮುಟ್ಟನೆಂಬ ವೇದಾಂತಿಯ ಹಲ್ಲು ಮುರಿದು ಮೂಗ ಕೊಯ್ಯುವನಯ್ಯ ಕಪಿಲಸಿದ್ಧಮಲ್ಲಿಕಾರ್ಜುನನವರ .

ಅಂಗದಲ್ಲಿಯೇ ಸಂಗಮವಾದ ಅರಿವು ಪಂಡಿತ ಪುರೋಹಿತರು ಮಾಡುವ ಯಾವ ಆಚಾರವನ್ನು ಸೇರುವುದಿಲ್ಲ. ಮನ ಆಚಾರಕ್ಕೆ ಕಟಿಬದ್ಧನಾದರೆ ಅರಿವು ಆಚಾರ ಮಾಡುವ ಮನದ ಮೂಗು ಕೊಯ್ವುದು. ಮನ ಮತ್ತು ಅರಿವಿನ ಯುದ್ಧ ತನುವಿನಲ್ಲಿಯೇ ನಡೆಯುವುದು. ಇದನ್ನು ಗಮನಿಸಿ ಅರಿವಿನ ದರ್ಶನ ಪಡೆದ ಮನ ಘನಮನವಾಗುತ್ತದೆ. ಮನದ ಚೇಷ್ಟೆಗಳು ತನುವಿನಲ್ಲಿ ಹಾಗೆಯೇ ಇದ್ದು ಅರಿವು ಮನದ ಗಮನಕ್ಕೆ ಬಾರದಿದ್ದರೆ ಅದು ಪಂಡಿತ, ಆಚಾರ್ಯ,ಪುರೋಹಿತ ಎಂದು ಕೆರಸಿಕೊಳ್ಳುತ್ತದೆ.

**1481**

**ಸಾಕ್ಷಿಯೆಂಬುದೆಲ್ಲ ವೃತ್ತಿಯಲ್ಲಲ್ಲದೆ, ನಿವೃತ್ತಿಯಲ್ಲಿ ಹುದೇನಯ್ಯಾ ?**
**ರುಚಿಯೆಂಬುದು ಪದಾರ್ಥದಲ್ಲಲ್ಲದೆ,**
**ನಿಷ್ಪದಾರ್ಥದಲ್ಲಿಹುದೆ ಅಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ತನು, ಮನ ಅರಿವು ತ್ರಿಕೂಟ ಸಂಗಮ. ಈ ತ್ರಿಕೂಟ ಸಂಗಮವನ್ನು ಬಸವಣ್ಣನವರು ಕೂಡಲಸಂಗಮದೇವ ಎಂದು ಕರೆದರು. ಈ ಮೂರರ ವೃತ್ತಿಯನ್ನು ಸಾಕ್ಷಿಯಾಗಿ ಗಮನಿಸಿ ಮನ ಅರಿವನಲ್ಲಿ ಸಂಗಮವಾಗಿ ಘನಮನವಾಗದಿದ್ದರೆ, ತನುವಿಗೆ ಸುಖದುಃಖಗಳು ತಪ್ಪಿದ್ದಲ್ಲ. ಇವು ಯಾವನ್ನು ಗಮನಿಸದೆ ಮನ ತನುವನ್ನು ಸದಾ ಅಜ್ಞಾನದೆಡೆಗೆ ಕೆದುಕೊಂಡು ಹೋಗಿ ಸುಖ ದುಃಖಗಳನ್ನು ಅನುಭವಿಸುತ್ತದೆ. ಜ್ಞಾನದಿಂದ ಸಂಪೂರ್ಣ ನಿವೃತ್ತಿಯಾಗಿ ತನುವಿನ ಆಯುಷ್ಯವನ್ನು ವ್ಯರ್ಥ ಕಳೆಯುತ್ತದೆ.

ಮನ ಅರಿವಿನತ್ತ ಪಯಣ ಬೆಳೆಸುವ ವೃತ್ತಿಯಲ್ಲಿ ತೊಡಗದಿದ್ದರೆ ಅದು ನಿವೃತ್ತಿಯಾದಂತೆ ಕಾಯ ಇರುವವರೆಗೂ ಕಾಯದೊಂದಿಗೆ ಸಕಲ ರುಚಿಗಳನ್ನು ಅನುಭವಿಸಿ, ಕಾಯದ ಆಯುಷ್ಯವನ್ನು ಕಳೆಯುತ್ತದೆ.

**1482**

**ಕರ್ಮಸಾಕ್ಷಿ ತಾನಾದಲ್ಲಿ ,**
**ಅಸ್ತಮಾನೋದಯಕ್ಕೆ ಒಳಗಾದನಯ್ಯಾ ಸೂರ್ಯನು.**
**ಕರ್ಮಸಾಕ್ಷಿ ತಾನಾಗಿ ಆಚರಿಸಿದಲ್ಲಿ ,**
**ಜನನ ಮರಣಕ್ಕೆ ಒಳಗಾದೆ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಭೂಮಿ ತಿರುಗುವುದರಿಂದ ಬೆಳಕು ಮತ್ತು ಕತ್ತಲಿನ ಆಟ ನಡೆಯುತ್ತದೆ. ಸೂರ್ಯ ಸದಾ ಬೆಳಗುತ್ತಾನೆ. ಭೂಮಿ ತಿರುಗುವುದರಿಂದ ಒಂದು ಭಾಗ ಬೆಳಕಾಗುತ್ತದೆ, ಮತ್ತೊಂದು ಬಾಗ ಕತ್ತಲಾಗುತ್ತದೆ. ತನುವಿನಲ್ಲಿ ತನ್ಮಯವಾದ ಜ್ಞಾನ ಸೂರ್ಯ ಸದಾ ಬೆಳಗುತ್ತಾನೆ. ತನುವನ್ನು ಆವರಿಸಿದ ಮನಕ್ಕೆ ಜ್ಞಾನ ಸೂರ್ಯನ ದರ್ಶನ ಆಗದ ನಿಮಿತ್ಯ ಸದಾ ತನು ಅಜ್ಞಾನಕ್ಕೆ ತುತ್ತಾಗಿದೆ. ಜನನ ಮರಣಗಳಿಗೆ ಒಳಗಾಗಿದೆ.ಮನಕ್ಕೆ ಜ್ಞಾನ ಸೂರ್ಯನ ದರ್ಶನವಾದರೆ ಅದು ಜ್ಞಾನದಲ್ಲಿ ಒಂದಾಗಿ ಜ್ಞಾನವೆ ಆಗುತ್ತದೆ.

ಜ್ಞಾನಕ್ಕೆ ಜನನವಿಲ್ಲ ಮರಣವಿಲ್ಲ. ಆ ಜ್ಞಾನಕ್ಕೆ ಶರಣು ಹೋಗಿ ಶರಣಾಗತನಾದ ಮನ ಘನಮನವಾಗುತ್ತದೆ. ಜ್ಞಾನಕ್ಕೆ ಮನ ಭಕ್ತನಾಗುತ್ತದೆ. ಆಗ ಜ್ಞಾನಕ್ಕೆ ಜನನವಿಲ್ಲ ಮರಣವಿಲ್ಲ ಅದಕ್ಕೆ ಶರಣು ಹೋದ ಘನಮನಕ್ಕೆ ಕೂಡ ಜನನವಿಲ್ಲ ಮರಣವಿಲ್ಲ,ಜ್ಞಾನ ಮತ್ತು ಮನಗಳೆರಡು ತನುವಿನಲ್ಲಿ ಸಂಗಮವಾಗಿವೆ; ತನುವನ್ನು ಬಿಟ್ಟು ಇವೆರಡು ಹೋದಾಗ ತನು ಪಂಚಭೂತಗಳಲ್ಲಿ ಲೀನವಾಗುತ್ತದೆ.

**1483**

**ಸಾಕ್ಷಿ ತಾನೆಂದಡೆ ಶಮನ ಕಾರ್ಯಕ್ಕೆ ಶುಭದವಾಯಿತ್ತಯ್ಯಾ .**
**ಸಾಕ್ಷಿ ತಾನಲ್ಲೆಂದಡೆ ಯಮನ ಕಾರ್ಯಕ್ಕೆ ಬೀಳಾಯಿತ್ತಯ್ಯಾ**
**ಸಾಕ್ಷಿಯೆಂಬುದು ವೃತ್ತಿಯಲ್ಲಿ ! ಒಲ್ಲರೀ ಮಹಿಮರು !**
**ನಿವೃತ್ತಿಯಲ್ಲದೆಂತಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ ?**

ತಾನು ಸಾಕ್ಷಿಯಾಗಿ ತನುವಿನಲ್ಲಿಯ ಮನ ಮತ್ತು ಮಹಾಜ್ಞಾನದ ಕಾರ್ಯವನ್ನು ನೋಡಲೇಬೇಕು. ಹೀಗೆ ನೋಡುವ ಶಿಕ್ಷಣವನ್ನು ಮಹಾಜ್ಞಾನಿಗಳಿಂದ ಶರಣರಿಂದ ಪಡೆದುಕೊಳ್ಳಲೇ ಬೇಕು.ಮಹಾಜ್ಞಾನ ತಾನು ಪಡೆಯಲೇಬೇಕು ಎಂದು ತನುವನ್ನು ಆವರಿಸಿದ ಮನಕ್ಕೆ ಬಲವಾಗಿ ಬಯಕೆಯಾಗಬೇಕು.

ಮನೋಕಾಯ ಮಹಾಜ್ಞಾನ ಕಾಯದ ದರ್ಶನ ಪಡೆಯಲು ಕಾಯಕ ಮಾಡಲೇಬೇಕಾಗುತ್ತದೆ. ಹೀಗೆ ಮಾಡುವ ಕಾಯಕ ಪದಾರ್ಥವನ್ನು ಪಡೆಯುವ ಕಾಯಕವಲ್ಲ.

ಮನೋಕಾಯ ಮಹಾಜ್ಞಾನ ಕಾಯದಲ್ಲಿ ಸಂಗಮವಾಗುವ ಪರಕಾಯ ಪ್ರವೇಶದ ಕಾಯಕ. ಹೀಗೆ ಪರಕಾಯದಲ್ಲಿ ಪ್ರವೇಶವಾದ ಮನೋಕಾಯ ಸ್ಥೂಲಕಾಯದೊಂದಿಗೆ ಮಹಾಜ್ಞಾನಕಾಯ ಎಂದು ಕರೆಸಿಕೊಳ್ಳುತ್ತದೆ. ಈ ವೃತ್ತಾಂತದ ಸೂತ್ರವನ್ನು ಓದುಗರಿಗೆ ತಿಳಿ ಹೇಳಲು ಸಿದ್ಧರಾಮ ಶಿವಯೋಗಿಗಳು ಮೇಲ್ಕಂಡ ಸೂತ್ರರೂಪದ ವಚನ ದಾಖಲಿಸಿದ್ದಾರೆ.

**1484**

**ವೃತ್ತಿ ನಿವೃತ್ತಿ ಎಂಬುದು ಕಲ್ಪನಾ ರಚನೆ .**
**ವೃತ್ತಿಯಲ್ಲಿಯ ಸಾಕ್ಷಿ ವೃತ್ತಿಗೆ ಅಟ್ಟಿತ್ತು .**
**ನಿವೃತ್ತಿಯಲ್ಲಿಯ ಸಾಕ್ಷಿ ನಿವೃತ್ತಿಯಾಗದೆ ವೃತ್ತಿಗೈತಂದಿತಯ್ಯಾ .**
**ಕರ್ಮಸಾಕ್ಷಿ ಎಂಬ ವೇದಾಂತಿಯ ಪಳವಾಕ್ಯ**
**ಸಮನಿಸದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ವೃತ್ತಿ ನಿವೃತ್ತಿ ಎಂಬುದು ಕಲ್ಪನೆಯ ರಚನೆ. ಇವೆರಡೂ ಶಬ್ದಗಳು ಲೋಕಕ್ಕೆ ಸಂಬಂಧ ಪಟ್ಟವು. ವೃತ್ತಿಯಲ್ಲಿಯ ಸಾಕ್ಷಿ ಭೌತಿಕ ವೃತ್ತಿಗೆ ಕರೆದುಕೊಂಡು ಹೋಗುತ್ತದೆ. ನಿವೃತ್ತಿಯಲ್ಲಿಯ ಸಾಕ್ಷಿ ನಿವೃತ್ತಿಯಾಗದೆ ಪುನಃ ವೃತ್ತಿಗೆ ಕರೆದುಕೊಂಡು ಹೋಗುತ್ತದೆ. ಕರ್ಮಸಾಕ್ಷಿ ಎಂಬ ವೇದಾಂತಿಯ ಮಾತು ಶರಣರ ಸಾಕ್ಷಿ ಪ್ರಜ್ಞೆಗೆ ಸಮನಿಸದು.

ಮನಸ್ಸು ಭೌತಿಕ ವೃತ್ತಿಯಲ್ಲಿ ತೊಡಗಿದರೆ ಆ ವೃತ್ತಿಯನ್ನು ಎಂದಾದರೂ ಬಿಟ್ಟೇನು

ಎನ್ನುವ ಚಿಂತೆಯಲ್ಲಿ ತೊಡಗುತ್ತದೆ. ಒಂದು ಬಿಟ್ಟು ಒಂದು ಹಿಡಿ ಎನ್ನುವುದು ಮನದ ಕೆಲಸ ಮನ ಭೌತಿಕ ಕಾಯದಿಂದ ನಿವೃತ್ತಿಗೊಂಡು, ಅಂತರಂಗದಲ್ಲಿಯೇ ಇರುವ ಮಹಾಜ್ಞಾನದತ್ತ ಪ್ರಯಾಣ ಮಾಡುವ ವೃತ್ತಿಯಲ್ಲಿ ತೊಡಗುವುದು, ಅಂದರೆ ಭೌತಿಕ ವೃತ್ತಿಯಿಂದ ನಿವೃತ್ತಿಯಾಗುವುದು.

**1485**

**ಸಾಕ್ಷಿ ತಾನಾಗುವಡೆ ಕರಣಾದಿಗಳ ಮಿತ್ರತ್ವವೇನಯ್ಯಾ ?**
**ಅವರ ಮಿತ್ರತ್ವವೆಂಬುದು ಜನ್ಮತರುಲವಿತ್ರವೆ ?**
**ಆಗಬಾರದು, ಆಗಬಾರದು,ಆಗಬಾರದು !**
**ಸಾಕ್ಷಿಯು ಆಗಬೇಕು ಮಾಡೆನೆಂಬುದಕ್ಕೆ ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಸಾಕ್ಷಿ ಎಂದರೆ ಕರಣಾದಿಗಳೊಂದಿಗೆ ಗೆಳೆತನ ಮಾಡುವುದಲ್ಲ. ಕರಣಾದಿಗಳನ್ನು ಗಮನಿಸುವುದು. ಕರಣಾದಿಗಳ ಮಿತ್ರತ್ವವೆಂಬುದು ತನುವನ್ನು ಅಜ್ಞಾನಕ್ಕೆ ಕರೆದುಕೊಂಡು ಹೋಗುತ್ತದೆ. ಮಾಡಬಾರದು ಕರಣಾದಿಗಳೊಂದಿಗೆ ಗೆಳೆತನ ಮಾಡಬಾರದು. ಮನ ತನಗೆ ತಾನೇ ಸಾಕ್ಷಿಯಾಗಬೇಕು. ಕರುಣಾದಿಗಳೊಂದಿಗೆ ಮಿತ್ರತ್ವ ಮಾಡೆನೆಂಬುದಕ್ಕೆ, ಕಪಿಲಸಿದ್ಧ ಮಲ್ಲಿಕಾರ್ಜುನನು ಸಾಕ್ಷಿಯಾಗಿ ಇನ್ನು ಮುಂದೆ ಕರುಣಾದಿಗಳೊಂದಿಗೆ ಮಿತ್ರತ್ವ ಮಾಡೆನೆಂಬುದಕ್ಕೆ

**1486**

**ಸತ್ಯಕ್ಕೆ ಸಾಕ್ಷಿಯಲ್ಲದೆ ಮಿಥ್ಯಕ್ಕೆ ಸಾಕ್ಷಿಯೆ ಅಯ್ಯಾ ?**
**'ಸತ್ಪಾತ್ರೇಪ್ಯಪಿ ಯಃ ಸಾಕ್ಷೀ ಸ ನರೋಹಂ ಸದಾಶಿವೇ'**
**ಎಂಬ ನಿನ್ನ ವಾಕ್ಯ ಹುಸಿಯಲ್ಲ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಸಾಕ್ಷಿ ಎಂದರೆ ತನುವಿನಲ್ಲಿಯೇ ತನ್ಮಯವಾದ ಪರಮಾತ್ಮನ ಸಾಕ್ಷಿಯಾಗಿ ಕರಣಂಗಳನ್ನು ನೋಡಬೇಕು. ಆಗ ಆ ಕರಣಂಗಳೆ ಜ್ಞಾನ ಕಿರಣಂಗಳಾಗಿ ಥಳಥಳನೇ ಹೊಳೆಯುವವು. ಬಾಹ್ಯ ಮಾತುಗಳೆಲ್ಲ ಮಿಥ್ಯ ಸತ್ಯಕ್ಕೆ ಸಾಕ್ಷಿಯಾಗಬೇಕೆ ಹೊರತು ಮಿಥ್ಯಕ್ಕೆ ಸಾಕ್ಷಿಯಾಗಬಾರದು.

ಮನ ಇಲ್ಲದ್ದು ಹಾಗೆಯೇ ತನು ಕೂಡ ಒಮ್ಮೆ ಕಂಡು ಮತ್ತೊಮ್ಮೆ ಕಾಣದಂತಾಗುವುದು ಇಲ್ಲದ ಮನ ಇಲ್ಲವಾಗುವ ತನುವಿಗೆ ಸಾಕ್ಷಿಯಾದರೆ ಬರೀ ಅಜ್ಞಾನ ಸದಾ ಸುಖ ದುಖಃಗಳಿಂದ ತನು ಬಳಲುವಂತಾಗುತ್ತದೆ.

ಹೀಗಾಗಿ ಮನ ತನುವಿನ ಸಂಗ ಮಾಡದೆ ತನುವಿಗೆ ಸಾಕ್ಷಿಯಾಗದೆ ಮನದಿಂದಾಗಿ ತನುವಿನಲ್ಲಿ ಹುಟ್ಟಿದ ಕರಣಂಗಳಿಗೆ ಸಾಕ್ಷಿಯಾಗದೆ, ತನುವಿನಲ್ಲಿಯೆ ತನ್ಮಯವಾದ ಮಹಾಜ್ಞಾನವೆಂಬ ಸತ್ಯಕ್ಕೆ ಸಾಕ್ಷಿಯಾಗಬೇಕು. ಹೀಗೆ ಸಾಕ್ಷಿಯಾಗಿ ನುಡಿದರೆ. ಲಿಂಗ ಮೆಚ್ಚಿ ಹೌದು ಹೌದು ಎನ್ನಬೇಕು ಎಂದಿದ್ದಾರೆ. ಬಸವಣ್ಣ.

**1487**

**ಕಾಯ ಮುನ್ನವೋ, ಕಾಯದಲ್ಲಿಪ್ಪ ಮನ ಮುನ್ನವೋ ?**
**ಮನ ಮುನ್ನವೋ, ಮನದಲ್ಲಿದ್ದ ಚೈತನ್ಯ ಮುನ್ನವೋ ?**

**ಚೈತನ್ಯ ಮುನ್ನವೋ, ಚೈತನ್ಯಾತ್ಮಕ ಮಾಯೆ ಮುನ್ನವೋ ?**
**ಅವು ಮುನ್ನವಲ್ಲ, ಮುನ್ನವಲ್ಲ, ನಿನ್ನ ನಿರಾಳ ನಿಜದ ನಿರ್ವಯಲಿನ**
**ಶೂನ್ಯಾಶೂನ್ಯವೆ ಮುನ್ನ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯ ಮುನ್ನವೋ ಕಾಯದಲ್ಲಿರುವ ಮನ ಮುನ್ನವೋ ? ಮನ ಮೊದಲೋ ಮನದಲ್ಲಿದ್ದ ಚೈತನ್ಯ ಮೊದಲೋ. ಚೈತನ್ಯ ಮೊದಲೋ ಚೈತನ್ಯಾತ್ಮಕ ಮಾಯೆ ಮೊದಲೋ ಎಂದು ಸಿದ್ಧರಾಮ ಶಿವಯೋಗಿಗಳು ಪ್ರಶ್ನಿಸುತ್ತಾ ಪುನಃ ಅವುಗಳೆನ್ನೆಲ್ಲ ಅಲ್ಲಗಳೆದು ಅಲ್ಲ ಅಲ್ಲ ಅವು ನಿನ್ನವಲ್ಲ ಎಂದಿದ್ದಾರೆ.

ನಿನ್ನ ನಿರಾಳ ನಿಜದ ನಿರ್ವಯದಲ್ಲಿನ ಶೂನ್ಯಾ ಶೂನ್ಯ ಮುನ್ನ ನೋಡಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು .

ಬಯಲು ಬಯಲನೆ ಬಿತ್ತಿ ಬಯಲು ಬಯಲನೆ ಬೆಳೆದು ಬಯಲು ಬಯಲಾಗಿ ಬಯಲಾಯಿತ್ತಯ್ಯಾ ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು. ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರ ಎಂದಿದ್ದಾರೆ. ಅಲ್ಲಮಪ್ರಭುಗಳು.

ಸ್ಥೂಲಕಾಯ ಕಾಣುತ್ತದೆ. ಸೂಕ್ಷ್ಮ ಕಾಯ ಕಾಣುವುದಿಲ್ಲ ಸ್ಥೂಲಕಾಯದೊಳಗೆ ಸಂಗಮವಾದ ಮಹಾಜ್ಞಾನ ಕಾಯ ಕಾಣುವುದಿಲ್ಲ.

ಬಯಲು ತಾನು ಸೃಷ್ಟಿ ಮಾಡಿದ ಇಡೀ ಬ್ರಹ್ಮಾಂಡವನ್ನು ತಾನೆ ನೋಡಬೇಕೆಂಬ ಬಯಕೆಯಾಗಿ ಕಾಯಕ್ಕೆ ಜನ್ಮವಿತ್ತು, ಕಾಯದಲ್ಲಿ ಜ್ಞಾನಕಾಯವಾಗಿ, ಬಯಲು ಸಂಗಮವಾಗಿ ತನ್ನನ್ನು ತಾನು ತಿಳಿದು ತಾನು ಸೃಷ್ಟಿಸಿದ ಇಡೀ ಬ್ರಹ್ಮಾಂಡವನ್ನು ಪುನಃ ತಾನೆ ಪರಮಾನಂದದಿಂದ ನೋಡಲು, ಸ್ಥೂಲಕಾಯದೊಳಗೆ ಮನವನ್ನು ಸೃಷ್ಟಿ ಮಾಡಿತು. ಆ ಮನ ಮಹಾಜ್ಞಾನಕಾಯವನ್ನು ವೀಕ್ಷಿಸಿ ಅದರಲ್ಲಿ ಸಂಗಮವಾದಾಗ, ಸ್ಥೂಲ ಕಾಯ ಮಹಾಜ್ಞಾನ ಕಾಯವಾಗಿ ಪರಿವರ್ತನೆಯಾಗುತ್ತದೆ. ಈ ಮಹಾಜ್ಞಾನ ಕಾಯದಿಂದ ನೋಡಿದಾಗ ತಾನೇ ಸೃಷ್ಠಿ ಮಾಡಿದ ಬ್ರಹ್ಮಾಂಡ ತನಗೆ ಬಹುಸುಂದರವಾಗಿ ಕಾಣುತ್ತದೆ.

ಕಾಯ ಮೊದಲಲ್ಲ, ಕಾಯದಲ್ಲಿರುವ ಮನವೂ ಮೊದಲಲ್ಲ. ಮನದಲ್ಲಿರುವ ಚೈತನ್ಯವೂ ಮೊದಲಲ್ಲ. ಚೈತನ್ಯದಲ್ಲಿರುವ ಚೈತನ್ಯಾತ್ಮಕ ಮಾಯೆಯು ಮೊದಲಲ್ಲ, ಶೂನ್ಯಾ ಶೂನ್ಯ ಎಂದು ಕರೆಸಿಕೊಳ್ಳುವ ಬಯಲೇ ಮೊದಲು.

**1488**

**ತಾ ಮುನ್ನವೋ, ತನ್ನ ಮನ ಮುನ್ನವೋ ?**
**ತನ್ನ ಕಾಯ ಮುನ್ನವೋ, ತಾ ಮುನ್ನವೋ , ಅಯ್ಯಾ ?**
**ತನ್ನ ಮುನ್ನೆಂಬಲ್ಲಿ ತಿಳಿಯದೆ ಹೋಯಿತ್ತು .**
**ಮನ ಮುನ್ನೆಂಬಲ್ಲಿ ಕಾಯಕ್ಕೊಳಗಾಯಿತ್ತು .**
**ಕಾಯ ಮುನ್ನೆಂಬಲ್ಲಿ ಜಡಮಯ ಪ್ರಳಯಕ್ಕೊಳಗಾಯಿತ್ತು .**
**ತಾ ಮುನ್ನಲ್ಲ , ತನ್ನ ಮನ ಮುನ್ನಲ್ಲ ತನ್ನ ಕಾಯ ಮುನ್ನಲ್ಲ,**
**ತಿಳಿದಾಗಲೇ ಮುನ್ನ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ತಾ ಮೊದಲಲ್ಲ ತನ್ನ ಮನವೂ ಮೊದಲಲ್ಲ , ಕಾಯವೂ ಮೊದಲಲ್ಲ ಕಾಯ ಮೊದಲು ಎನ್ನಲು ಹೋದರೆ ಅದು ಜಡ, ಜನನ ಮರಣಗಳಿಗೆ ಒಳಗಾಗಿದೆ. ಹೀಗಾಗಿ ತಾನು ಮೊದಲಲ್ಲ ,ತನ್ನ ಮನ ಮೊದಲಲ್ಲ, ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಕಪಿಲಸಿದ್ಧ ಮಲ್ಲಿಕಾರ್ಜುನನೇ ಮುನ್ನ .

**1489**

**ಕಾಯ ಧರಿಸಿದವ ನವನೀತ ರೋಮದಂತಿರಬೇಕು,**
**ಮುಕುರದ ಪ್ರತಿಬಿಂಬದಂತಿರಬೇಕು, ಬೆಟ್ಟದಲ್ಲಿಯ ಕಾಡಕಿಚ್ಚಿನಂತಿರಬೇಕು,**
**ಆಷಾಢದಲ್ಲಿಯ ಚಂಡಮಾರುತನಂತಿರಬೇಕು,**
**ಸರ್ವರಲ್ಲಿ ಸರ್ವಂತರಾಗಿರಬೇಕು, ಕಪಿಲಸಿದ್ಧಮಲ್ಲಿಕಾರ್ಜುನಾ.**

ಸಕಲ ಪ್ರಾಣಿಗಳಲ್ಲಿ ಕಾಯ ಶ್ರೇಷ್ಠವಾದದ್ದು ಅರಿವುಳ್ಳದ್ದು. ಕಾಯದ ಹೊರತಾಗಿ ಮತ್ತಾವ ಪಶು,ಪ್ರಾಣಿ, ಪಕ್ಷಿಗಳು ಜಲಚರಗಳು ಜ್ಞಾನವುಳ್ಳವುಗಳಲ್ಲ. ಆದರೂ ಕಾಯಕ್ಕೆ ಜ್ಞಾನದಿಂದ ಇರಲು ಸಾಧ್ಯವಾಗುವುದಿಲ್ಲ.

ಸಿದ್ಧರಾಮ ಶಿವಯೋಗಿಗಳು ಕಾಯ ಧರಿಸಿದವ ನವನೀತ ರೋಮದಂತಿರಬೇಕು. ಮುಕುರದ ಪ್ರತಿಬಿಂಬದಂತಿರಬೇಕು ಆಷಾಢದಲ್ಲಿಯ ಚಂಡಮಾರುತದಂತಿರಬೇಕು. ಸರ್ವರಲ್ಲಿ ಸರ್ವರಂತಾನಾಗಿರಬೇಕು ಎಂದಿದ್ದಾರೆ.

ಕಾಯ ನೋಡುವಾಗ ಸರಿಯಾಗಿ ನೋಡಲು ಸಾಧ್ಯವಾಗುತ್ತಿಲ್ಲ ಎಂದು ಕಣ್ಣಿಗೆ ಗೊತ್ತಿದ್ದರೂ, ನೋಡುವ ಹಾದರದಲ್ಲಿ ಸದಾ ಮಗ್ನವಾಗಿರುತ್ತದೆ. ಕಣ್ಣಿಗೆ ಗೊತ್ತಾಗುತ್ತದೆ. ತಾನು ಸರಿಯಾಗಿ ನೋಡಲಿಲ್ಲವೆಂದು ಆದರೂ ಕಣ್ಣು ಸರಿಯಾಗಿ ನೋಡುವುದನ್ನು ಮರೆತೇ ಬಿಡುತ್ತದೆ. ಸರ್ವಕಾಯಗಳು ಒಂದೆ ಇದ್ದರೂ ಹೆಣ್ಣು ಗಂಡೆಂದು ಭೇದಿಸಿ ನೋಡಿ ಹಾದರದಲ್ಲಿ ನಿರತನಾಗುತ್ತದೆ. ನೀನು ಸರಿಯಾಗಿ ನೋಡಲಿಲ್ಲವೆಂದು. ಅಜ್ಞಾನದ ದೃಶ್ಯಕ್ಕೆ ಅರಿವಿನ ದೃಶ್ಯ ಪಾಠ ಮಾಡಿದರೂ ಅಜ್ಞಾನ ದೃಶ್ಯಕ್ಕೆ ಅರಿವಿನ ದೃಶ್ಯದಿಂದ ನೋಡಲು ಸಾಧ್ಯವಾಗುವುದೆ ಇಲ್ಲ.

ಸ್ಥೂಲ ಕಾಯದಲ್ಲಿ ಮನೋಕಾಯ ಜ್ಞಾನ ಕಾಯ ಎನ್ನುವ ಎರಡು ಕಾಯಗಳು ಸಂಗಮವಾಗಿವೆ. ಮನೋಕಾಯ ಅಜ್ಞಾನ ಕಾಯ. ಈ ಕಾಯವು ಜ್ಞಾನ ಕಾಯದಲ್ಲಿ ಪ್ರವೇಶವಾಗಿ ನೋಡಲು ಬರುತ್ತದೆ. ಅರಿವಿನಿಂದ ಮೂಸಿಸಿ ರುಚಿಸಿ ಸ್ಪರ್ಶಿಸಲು ಬರುತ್ತದೆ. ಆದರೂ ಅಜ್ಞಾನ ಕಾಯ ಜ್ಞಾನ ಕಾಯದಲ್ಲಿ ಸಂಗಮವಾಗುವುದೇ ಇಲ್ಲ. ಸ್ಥೂಲಕಾಯ ಅಜ್ಞಾನ ಮತ್ತು ಜ್ಞಾನ ಕಾಯಕ್ಕೆ ಬಳಕೆಯಾಗುವ ಉಪಕರಣ ಮಾತ್ರ .

ಮನೋಕಾಯ ಜ್ಞಾನ ಕಾಯದಲ್ಲಿ ಸಂಗಮವಾದಾಗ ಸ್ಥೂಲಕಾಯ ಸಿದ್ಧರಾಮ ಶಿವಯೋಗಿಗಳು ಹೇಳಿದಂತೆ ಸದಾ ನವನೀತನಾಗಿರುತ್ತದೆ. ಸರ್ವರನ್ನೂ ಸಮದೃಷ್ಟಿಯಿಂದ ನೋಡಲು ಬರುತ್ತದೆ.

**1490**

**ಜಲದಲ್ಲಿಯ ಚಂದ್ರನ ಚಲನೆ ಜಲದಲ್ಲಲ್ಲದೆ, ನಿಜಚಂದ್ರನಲ್ಲಿಲ್ಲವಯ್ಯಾ.**
**ಘಟದಲ್ಲಿಯ ಪ್ರತಿಬಿಂಬಿಗಳು ಘಟದಲ್ಲಲ್ಲದೆ ಬಿಂಬದಲ್ಲಿಲ್ಲ ನೋಡಯ್ಯಾ.**
**ಜಲದಲ್ಲಿಯ ಚಂದ್ರನ ಚಲನೆ ಘಟದಲ್ಲಿಯ ಪ್ರತಿಬಿಂಬ**

**ನಿಜವಲ್ಲ ನೋಡಾ,ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವನ್ನು ಆವರಿಸಿದ ಮನ ಚಾಲಕನಾಗಿ ತನುವನ್ನು ಮುಂದೆ ನಡೆಸುವುದು ಒಳ್ಳೆಯದಲ್ಲ; ಏಕೆಂದರೆ ಮನ ಇಲ್ಲದ್ದು ,ಇದಕ್ಕೆ ಡ್ರೈವಿಂಗ್ ಲೈಸನ್ಸ್ ಇಲ್ಲ, ಆದರೂ ತನುವನ್ನು ವಾಹನ ಮಾಡಿಕೊಂಡು ತನಗೆ ಬೇಕಾದ ಜಾಗಕ್ಕೆ ಕರೆದುಕೊಂಡು ಹೋಗುತ್ತದೆ. ಮನಕ್ಕೆ ರುಚಿಕರವಾದ ಜಾಗ ಎಂದರೆ ಕ್ಲಬ್, ಜೂಜಾಟದ ಕೇಂದ್ರ, ವೇಶ್ಯವಾಟಿಕೆ ಹೀಗೆ ಸಲ್ಲದ ಜಾಗಗಳಿಗೆ ಮನ ತನುವನ್ನು ಕರೆದುಕೊಂಡು ಹೋಗುತ್ತದೆ. ಇದು ಘಟದಲ್ಲಿಯ, ಪ್ರತಿಬಿಂಬ ಜಲದಲ್ಲಿಯ ಚಂದ್ರನ ಚಲನ, ಘಟಕದಲ್ಲಿಯ ಪ್ರತಿಬಿಂಬ ನಿಜವಲ್ಲ ನೋಡಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಕಾಯದಲ್ಲಿ ಸಂಗಮವಾದ ಮಹಾಜ್ಞಾನದ ಬೆಳಕಿನಿಂದ ಹುಟ್ಟಿದ ಪ್ರತಿಬಿಂಬವೇ ಮನ. ಜ್ಞಾನದ ಬೆಳಕು ಮನದ ಮೇಲೆ ಬಿದ್ದರೆ ಮನ ಇಲ್ಲವಾಗುತ್ತದೆ. ಕಾಯದಲ್ಲಿಯ ಮಹಾಜ್ಞಾನದ ಬೆಳಕು ತಾನಾಗಿಯೆ ಮನದ ಮೇಲೆ ಬೀಳುವುದಿಲ್ಲ. ಮನಕ್ಕೆ ಚಲನೆ ಇರುವುದರಿಂದ ಮನವೆ ಮಹಾಜ್ಞಾನದ ಬೆಳಕಿನಲ್ಲಿ ಸಂಗಮವಾಗಿ ಇಲ್ಲವಾಗುವುದು. ಇದು ಎಲ್ಲಾ ಕಾಯಗಳಿಗೂ ಸಾಧ್ಯವಾಗುವುದಿಲ್ಲ. ಪ್ರಯತ್ನ ಪಟ್ಟರೆ ಸಕಲ ಕಾಯಗಳಿಗೂ ಸಾಧ್ಯವಾಗುವುದು.

**1491**

**ಜಲದಲ್ಲಿ ಚಂದ್ರನಿಲ್ಲ, ಜಲವೆಲ್ಲ ಮಾಯಾತ್ಮಕ.**
**ವಸ್ತುವಲ್ಲ; ವಸ್ತ್ವಾತ್ಮಕ ಮಾಯೆಯಲ್ಲ.**
**ಉಪಾಧಿಯಿಂದ ತೋರ್ಪುದೆಲ್ಲ ನಿಜವೆ ಅಯ್ಯಾ?**
**ಸ್ಥಾಣು ಚೋರ ನ್ಯಾಯದಂತೆ ಶಕ್ತಿ ರಜತ ನ್ಯಾಯದಂತೆ, ರಜ್ಜು ಸರ್ಪ ನ್ಯಾಯದಂತೆ,**
**ಅಧ್ಯಾರೋಪವಾದ ಅವಿದ್ಯೆಯಲ್ಲಿ ಲೇಸುಂಟೆ ? ಕಪಿಲಸಿದ್ಧಮಲ್ಲಿಕಾರ್ಜುನಾ.**

ಜಲದಲ್ಲಿ ಚಂದ್ರನಿಲ್ಲ ಜಲವೆಲ್ಲ ಮಾಯಾತ್ಮಕ , ಅದು ವಸ್ತುವಲ್ಲ ವಸ್ತ್ವಾತ್ಮಕ ಮಾಯೆಯಲ್ಲ. ಜಲದಲ್ಲಿ ಚಂದ್ರನಿಲ್ಲದ್ದು ಎಲ್ಲರಿಗೂ ಅರಿವಾಗುತ್ತದೆ.ಜಲ ವಸ್ತುವಲ್ಲ ಅದು ಮಾಯಾತ್ಮಕ ಎನ್ನುವುದು ಅರಿವಾಗುವುದಿಲ್ಲ.

ಜಲ ಜಲವಲ್ಲ ಜಲಜನಕ ಆಮ್ಲಜನಕ ಕೂಡಿ ಜಲವಾಗಿದೆ.ಆಮ್ಲ ಜನಕವೂ ಕಾಣುವುದಿಲ್ಲ ಜಲಜನಕೂ ಕಾಣುವುದಿಲ್ಲ. ಬಯಲಲ್ಲಿ ಬಯಲಾಗಿದ್ದು ಕಾಣದ ಇವೆರಡು ವಸ್ತುಗಳು ಬಯಲು ತನಗೆ ಬಯಕೆಯಾದಾಗ ಆಮ್ಲ ಜನಕ ಜಲಜನಕದೊಂದಿಗೆ ತಾನು ಬೆರೆತು ಜಲವಾಗುತ್ತದೆ, ಆಗ ಜಲ ಕಂಡುಬರುತ್ತದೆ. ನದಿಯ ದಂಡೆಯಲ್ಲಿರುವ ಚಿಪ್ಪು ಬೆಳ್ಳಿಯಂತೆ ಹೊಳೆಯುತ್ತದೆ. ಆದರೆ ಅದು ಬೆಳ್ಳಿಯಲ್ಲ. ಸಂಜೆಗತ್ತಲಲ್ಲಿ ದಾರಿಯಲ್ಲಿ ಬಿದ್ದ ಹಗ್ಗ ಹಾವಾಗುತ್ತದೆ. ಅದನ್ನು ಹೊಡೆಯಲೆಂದು ಕೋಲು ಕಂದೀಲು ತಂದಾಗ ಕಂದೀಲು ಬೆಳಕಿನಲ್ಲಿ ಅದು ಹಗ್ಗವಾಗಿ ಕಂಡಿತು. ಉಪಾಧಿಯಿಂದ ತೋರುವುದೆಲ್ಲ ನಿಜವಲ್ಲ.ಅದು ಮಾಯೆ. ಕಂಡು ಕಾಣದಂತೆ ಮಾಯವಾಗುವ ಅವಿದ್ಯೆಯಲ್ಲಿ ಲೇಸುಂಟೆ? ಲೇಸಿಲ್ಲ. ಸತ್ಯ ಗೊತ್ತಾದಾಗ ಮಾಯೆಯಿಂದ ಅಂದರೆ ಅವಿದ್ಯೆಯಿಂದ ಮನುಷ್ಯ ಹೊರಗಾಗುತ್ತಾನೆ.

**1492**

**ವಸ್ತು ಒಂದರಲ್ಲಿ ಕಲ್ಪಿತದ್ವಯವಾದುವು ನೋಡಾ.**
**ಹಗ್ಗವಲ್ಲ ಸರ್ಪವೆಂಬುದೆ ಅಧ್ಯಾರೋಪ, ಸರ್ಪವಲ್ಲ ಹಗ್ಗವೆಂಬುದೆ ಅಪವಾದ.**

**ವಸ್ತುವಲ್ಲ ಮಾಯೆಯೆಂಬುದೆ ಅವಿದ್ಯೆ,**
**ಮಾಯೆಯಲ್ಲ ವಸ್ತುವೆಂಬುದು ವಿದ್ಯೆಯಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಮನವೆಂಬುದು ಮರೀಚಿಕೆಯಿದ್ದಂತೆ. ಬೇಸಿಗೆಯಲ್ಲಿ ಮರೀಚಿಕೆ ನೀರಿರುವಂತೆ ಕಂಡರೂ ಅಲ್ಲಿ ಹೋಗಿ ನೋಡಿದಾಗ ನೀರು ಇರುವುದಿಲ್ಲ. ಪುನಃ ಮುಂದೆ ಕಾಣುತ್ತದೆ. ಹಾಗೆಯೇ ಮನಸ್ಸು ಕೂಡ ಮನದಿಂದ ತನು ತೊಂದರೆ ಅನುಭವಿಸುತ್ತದೆ. ತನುವಿನಲ್ಲಿಯೆ ತನ್ಮಯವಾದ ಸತ್ಯ ಮನಕ್ಕೆ ಮತ್ತು ತನುವಿಗೆ ಕಾಣದೆ ಹೋಗುತ್ತದೆ. ಮನ ತನುವಿನೊಂದಿಗೆ ಮಾಡುವ ಕೆಲಸಗಳೆಲ್ಲ ಅವಿದ್ಯೆ ಎಂದು ಮನಕ್ಕೂ ಗೊತ್ತಾಗುವುದಿಲ್ಲ, ತನುವಿಗೂ ಗೊತ್ತಗುವುದಿಲ್ಲ. ಮನ ಮತ್ತು ತನುವಿಗೆ ತನುವಿನಲ್ಲಿಯೇ ತನ್ಮಯವಾದ ಸತ್ಯ ವಸ್ತು ಗೊತ್ತಾಗುವವರೆಗೆ ಮನವೆಂಬ ಮಾಯೆ ಹೋಗುವುದಿಲ್ಲ.

ಸಂಜೆಗತ್ತಲಲ್ಲಿ ಹಾವು ಕಂಡುಬಂದದ್ದು ನಿಜ. ಅದನ್ನು ಕೊಲ್ಲಲೆಂದು ಬ್ಯಾಟರಿ ಮತ್ತು ಕೋಲು ತಂದಾಗ ಬ್ಯಾಟರಿಯ ಬೆಳಕಿನಲ್ಲಿ ಹಗ್ಗದಲ್ಲಿ ಕಂಡು ಬಂದ ಹಾವು ಇಲ್ಲವಾಗುತ್ತದೆ. ಅದು ಸರ್ಪವಲ್ಲ, ಹಗ್ಗವೆಂಬುದು ಸತ್ಯವಾಗುತ್ತದೆ.

ಭೌತಿಕ ಮಾಯೆಯನ್ನು ಬಹುಬೇಗ ಕಂಡುಕೊಳ್ಳಬಹುದು. ಆದರೆ ತನುವಿನಲ್ಲಿದ್ದ ತನುವನ್ನು ಕಾಡುವ ಮಾಯೆಯನ್ನು ಕಂಡುಕೊಳ್ಳಲು ತನು ಇರುವವರೆಗೆ ತನುವಿಗೆ ಸಾಧ್ಯವಾಗುವುದಿಲ್ಲ. ಮನ ಮತ್ತು ತನುವಿನಿಂದ ಮಾಡುವ ಸಕಲ ಕೆಲಸಗಳು ಮಾಯೆ ಎಂದು ತಿಳಿದು ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನಕ್ಕೆ ತನು ಮತ್ತು ಮನ ಶರಣು ಹೋದಾಗ ಮನ ಘನಮನವಾಗುತ್ತದೆ.

**1493**

**ಜಡ,ಅಸತ್ಯ, ಸುಖ-ದುಃಖ, ಅನಿತ್ಯ, ಖಂಡಿತ**
**ಎಂಬೈದು ಲಕ್ಷಣ ಮಾಯಾತ್ಮಕವಯ್ಯಾ.**
**ಮೂಢಮಯ ಕಲ್ಲು ಮೊದಲಾದುವೆ ಜಡದೃಶ್ಯನೋಡಯ್ಯಾ.**
**ಮೃಗದಲ್ಲಿಲ್ಲದ ಶಶವಿಷಾಣಾಧಿಕವೆ ಅಸತ್ಯವಯ್ಯಾ**
**ರಜೋಗುಣಿಯ (ಸಹ್ಯಾ) ಸಹ್ಯ ವೃತ್ತಿಯೆ (ಸುಖ) ದುಃಖ ಕಂಡಯ್ಯಾ.**
**ತೋರಿ ಕೆಡುವ ದೇಹಾಧಿಕರೆ ಅನಿತ್ಯ ಕಂಡಯ್ಯಾ.**
**ಕಾಲಪರಿಚ್ಛೇದಾಧಿಕವೆ ಖಂಡಿತ ನೋಡಯ್ಯಾ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ತಮೊ ಗುಣದವನಿಗೆ ಜಡ, ಅಸತ್ಯ, ಸುಖ ದುಃಖ, ಅನಿತ್ಯ, ಖಂಡಿತ ಎಂಬೈದು ಲಕ್ಷಣ ಮಾಯಾತ್ಮಕ . ರಜೋಗುಣಿಯಲ್ಲಿ ಸಹ್ಯಾಸಹ್ಯ ವೃತ್ತಿಯ ಸುಖ-ದುಃಖಗಳು ಉಂಟಾಗುತ್ತವೆ. ಸಾತ್ವಿಕರು ತೋರಿಕೆಯ ಭಕ್ತರು. ಹಣೆಗೆ ತಿಲಕ ಭಸ್ಮ, ನಾಮಗಳನ್ನು ಧರಿಸಿ ಅಂಗದ ಮೇಲೆ ಲಿಂಗ ಜನಿವಾರ ಶಿಲುಬೆಗಳನ್ನು ಧರಿಸಿ ತಾನು ಸಾತ್ವಿಕನೆಂದು ದೇಹದ ತೋರಿಕೆಯ ಮೂಲಕ ತೋರಿಸಿಕೊಳ್ಳುತ್ತಾನೆ. ಶಿಷ್ಯರನ್ನಾಗಿಸಿಕೊಂಡು ಗುರುವಾಗುತ್ತಾನೆ. ಗುರುವಿನ ಮೂಲಕ ಶಿಷ್ಯತ್ವ ಸ್ವೀಕರಿಸಿ ತಾನು ಇಂತಹ ಗುರುಗಳ ಶಿಷ್ಯನೆಂದು ತೋರಿಸಿಕೊಳ್ಳುತ್ತಾನೆ . ಈ ಮೂರು ಗುಣಗಳು ನಿರ್ನಾಮ ಮಾಡಿಕೊಂಡು ನಿರ್ಗುಣಿಯಾದವನೆ ಮಹಾಜ್ಞಾನಿ.

**1494**

**ತೋರಿ ಕೆಡುವ ದೇಹ ನಾನೆಂದು ನಂಬದಿರಾ ಮನವೆ.**
**ತೋರುವ ಅರಿವು ನಾನೆಂದು ನಂಬು ಕಂಡೆಯಾ ಮನವೆ.**
**ತೋರಿ ಕೆಡುವುದು ಮಾಯಾತ್ಮಕವು ಮನವೆ.**
**ತೋರಿ ತೋರುವುದದು ನಿರುಪಾಧಿಕ, ನಿಜಾನಂದ,**
**ಕಪಿಲಸಿದ್ಧಮಲ್ಲಿಕಾರ್ಜುನ, ಕಂಡೆಯಾ ಮನವೆ.**

ಸಿದ್ಧರಾಮ ಶಿವಯೋಗಿಗಳು ಈ ವಚನದ ಮೂಲಕ ಮನಕ್ಕೆ ಕಿವಿಮಾತು ಹೇಳಿದ್ದಾರೆ. ತೋರಿ ಕೆಡುವ ದೇಹವನ್ನು ನಾನೆಂದು ನನ್ನದೆಂದು ನಂಬದಿರು.

ತೋರುವ ಅರಿವು ಮಾತ್ರ ನಾನೆಂದು ನಂಬು ತೋರಿ ಕೆಡುವುದು ಮಾಯಾತ್ಮಕವು. ತೋರುವುದದು ನಿರುಪಾಧಿಕ, ನಿಜಾನಂದ. ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ ಈತನನ್ನು ನಂಬು ಮನವೆ.

**1495**

**ಕಾಯ ನಾನೆಂದಡೆ ಕರ್ಮಕಾಂಡಿ.**
**ಸಕಲ ಕ್ರಿಯೆ ಈಶಾರ್ಪಣವೆಂದಡೆ ಭಕ್ತಿಕಾಂಡಿ.**
**ಸಕಲ ಕರ್ಮ ಸಾಕ್ಷಿಯೆಂದಡೆ ಜ್ಞಾನಕಾಂಡಿ.**
**ಕಾಂಡತ್ರಯವಿಲ್ಲದ ಅಖಂಡನ ತೋರಾ. ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯ ನಾನೆಂದು ಹೇಳುವವನು ಕಾಯ ನನ್ನದು ಎಂದು ಹೇಳುವವನು ಕರ್ಮಕಾಂಡಿ. ತಾನು ಮಾಡುವ ಸಕಲ ಕ್ರಿಯೆಗಳು ಈಶಾರ್ಪಣವೆಂದಡೆ ಭಕ್ತಿ ಕಾಂಡಿ, ಸಕಲ ಕರ್ಮ ಸಾಕ್ಷಿಯೆಂದಡೆ ಜ್ಞಾನ ಕಾಂಡಿ. ಕರ್ಮ ಕಾಂಡಿ, ಭಕ್ತಿ ಕಾಂಡಿ, ಜ್ಞಾನಕಾಂಡಿಗಳು ಸತ್ಯವಲ್ಲ. ಕಾಂಡತ್ರಯವಿಲ್ಲದ ಅಖಂಡ ಪರಮಾತ್ಮನನ್ನು ತೋರಾ ಕಪಿಲಸಿದ್ಧಮಲ್ಲಿಕಾರ್ಜುನ ಎಂದಿದ್ದಾರೆ.

**1496**

**ಕರ್ಮಿಯ ಕರ್ಮ ನಿಷ್ಕರ್ಮವಲ್ಲೆಂದು ನಂಬಬಾರದಯ್ಯಾ.**
**ಮುಮುಕ್ಷುವಿನ ಮೋಕ್ಷ ಮೂರರಲ್ಲೆಂದು ನಂಬಬಾರದಯ್ಯಾ.**
**ಅಭ್ಯಾಸಿಯ ಮೋಕ್ಷ ಜನ್ಮದ್ವಯದಲ್ಲೆಂದು ನಂಬಬಾರದಯ್ಯಾ.**
**ಅನುಭಾವಿಯ ಮೋಕ್ಷ ಜನ್ಮ ಒಂದರಲ್ಲೆಂದು ನಂಬಬಹುದೆ ಅಯ್ಯಾ ?**
**ಆರೂಢನ ಜನ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಜನ್ಮವೆಂದು ನಂಬಲೇಬೇಕು.**
**ಹಾವಿನಹಾಳ ಕಲ್ಲಯ್ಯಾ .**

ಯಾವ ರೂಢಿ ಇಲ್ಲದವನು ಆರೂಢ , ಮನ ಸಕಲವನ್ನು ರೂಢಿ ಮಾಡಿಕೊಂಡಿದೆ. ಅಭ್ಯಾಸ ಮಾಡಿಯೆ ಜ್ಞಾನ ಪಡೆಯಬೇಕೆಂಬ ಮನಕ್ಕೆ ಜ್ಞಾನದ ದರ್ಶನವಾಗುವುದು ಸುಲಭವೇನಲ್ಲ. ಸಕಲ ಶಾಸ್ತ್ರಗಳನ್ನು ಅಧ್ಯಯನ ಮಾಡಿದರೆ ಶಾಸ್ತ್ರಿಯಾಗುತ್ತಾನೆ, ಜ್ಞಾನಿಯಾಗಲಾರ. ಉಪನಿಷತ್ತುಗಳನ್ನು ವೇದಾಂತಗಳನ್ನು ಅಧ್ಯಯನ ಮಾಡಿದವನನ್ನು ವೇದಾಂತಿಯೆಂದು ಕರೆಯುತ್ತಾರೆ.

ಜ್ಞಾನಿಯಾಗಲಾರ. ಸಿದ್ದರಾಮ ಶಿವಯೋಗಿಗಳು ತಮ್ಮ ಈ ವಚನದಲ್ಲಿ ಕರ್ಮಿ,ಮುಮುಕ್ಷು, ಅಭ್ಯಾಸಿ, ಅನುಭಾವಿ, ಆರೂಢನ ಬಗ್ಗೆ ಸೂತ್ರವನ್ನು ಹೆಣೆದಿದ್ದಾರೆ. ಯಾವ ರೂಢಿಯೂ ಇಲ್ಲದವನನ್ನು ಆರೂಢಿ ಅವನು ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ ಎಂದು ನಂಬಲೇಬೇಕೆಂದು ಹಾವಿನಹಾಳ ಕಲ್ಲಯ್ಯನಿಗೆ ಹೇಳಿದ್ದಾರೆ.

**1497**

**''ಮೂರ್ಖತ್ವೇನ ಸ್ವಕೀಯಾನಿ ಕರ್ಮಾಣಿ ಚ ದಿನೇ ದಿನೇ ?**
**ಯಂಃ ಕರೋತಿ ಸ ಮೂಡಸ್ತು ಶತಜನ್ಮವಿಮೋಚಕಃ''**
**ಎಂಬವನು ಕರ್ಮಿಯಯ್ಯಾ.**
**''ಜಗತ್ಸತ್ಯಂ ಮತ್ವಾ ಜಗತಿ ನಿರತಃ ಕರ್ಮಕುಶಲಃ**
**ತೃತೀಯೇನ ಪ್ರಾಪ್ತಿಃ ಪರಮ ಸುಪದಂ ಶಾಂಕರಿ ಶಿವೇ॥''**
**ಎಂಬುವನು ಮುಮುಕ್ಷು ಕಂಡಯ್ಯಾ.**
**''ಪ್ರಪಂಚ ಸ್ವಪ್ನವನ್ಮತ್ವಾ ಧ್ಯಾನಕರ್ಮಪರಾಯಣಃ**
**ದ್ವಿಜನ್ಮತಾಂ ಸ ಮೋಕ್ಷಂ ಚ ಪ್ರಯಾತಿ ಗಿರಿನಂದನೆ''**
**ವ್ಯವಹಾರಾನ್ಸಮಾಸ್ತಾಂಶ್ಚ ಉಪೇಕ್ಷ ಪರಮೇಶ್ವರಿ**
**ವಿವೇಕತತ್ವರೋಭೋತ್ವಾ ಏಕಜನ್ಮ ವಿಮೋಚಕಃ**
**ಎಂಬವನು ಅನುಭಾವಿ ನೋಡಯ್ಯಾ.**
**''ಅದಷ್ವಾ್ಯ ವಿಶ್ವವಿಕೃತಿಂ ಸ್ವಾತ್ಮಜ್ಞಾನೇನ ಯೋನರಃ**
**ಭಾತಿ ತಸ್ಯ ಮಹಾದೇವಿ ವಿದೇಹಂ ವಪುರೀರಿತಂ''**
**ಎಂಬುವನು ಆರೂಢ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಸಿದ್ಧರಾಮ ಶಿವಯೋಗಿಗಳು,ಕರ್ಮಿ ಮುಮುಕ್ಷು ,ಅನುಭಾವಿ, ಆರೂಢನ ಲಕ್ಷಣಗಳ ಬಗ್ಗೆ ತಮ್ಮ ಈ ವಚನದಲ್ಲಿ ವಿವರಿಸಿದ್ದಾರೆ. ಓದುಗರು ವಚನವನ್ನು ನಿಧಾನವಾಗಿ ಓದಿ, ಅನುಭವಕ್ಕೆ ತಂದುಕೊಳ್ಳಬಹುದಾಗಿದೆ.

**1498**

**ಒಂದು ಮಣಿಪರೀಕ್ಷೆಗೆ ಮೂವತ್ತಾರು ಮಣಿ ನೋಡಿದೆಯ.**
**ಮೂವತ್ತಾರು ಮಣಿ ಕೂಡಿ ಒಂದು ಮಣಿ ಪರೀಕ್ಷಿಸಿದಡೆ**
**ಮುವತ್ತಾರು ಮಣಿ ಇಲ್ಲ ನೋಡಯ್ಯಾ. ಪರೀಕ್ಷೆಯಾಗದಿರೆ, ಆ ಮಣಿಗಳು**
**ಮಣಿ ಮಣಿಗೆ ಸೇರ್ಪಡೆಯಾದವಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹದಲ್ಲಿ ಮೂವತ್ತಾರು ತತ್ವಗಳಿವೆ. ಒಂದು ಅಮೂಲ್ಯವಾದ ಜ್ಞಾನಮಣಿಗಾಗಿ ಮೂವತ್ತಾರು ಮಣಿಗಳ ಬಗ್ಗೆ ಹೇಳುತ್ತಾರೆ. ಆದರೆ ಇರುವುದು ಒಂದೆ; ಅದು ಜ್ಞಾನರತ್ನ .

ನಿಮ್ಮದೆಂಬುದು ಜ್ಞಾನರತ್ನ ಕಾಣಾ ಅದನ್ನು ಕೆಡಗೊಡದೆ ಅಲಂಕರಿಸಿದೆಯಾದಡೆ ನಿನ್ನಂತ ಸಿರಿವಂತರು ಯಾರೂ ಇಲ್ಲ ಎಲೆಮನವೆ ಎಂದು ಅಲ್ಲಮಪ್ರಭುಗಳು ಹೇಳಿದ್ದಾರೆ.ಅಲ್ಲಮ ಪ್ರಭುಗಳು ಜ್ಞಾನರತ್ನವನ್ನು ಕೆಡಗೊಡದೆ ಅಲಂಕರಿಸು ಎಂದು ಹೇಳಿದರೆ ಬಸವಣ್ಣನವರು ಎಲವೋ

ಎಲವೋ ಪಾಪ ಕರ್ಮಂಗಳ ಮಾಡಿದವನೆ. ಎಲವೋ ಎಲವೋ ಬ್ರಹ್ಮ ಹತ್ಯೆ ಮಾಡಿದವನೆ. ಒಮ್ಮೆ ನೆನೆ ಕೂಡಲಸಂಗಮದೇವನ ಎಂದಿದ್ದಾರೆ.

ಜ್ಞಾನ ರತ್ನವನ್ನು ಬಳಕೆ ಮಾಡದಿದ್ದರೆ ಬ್ರಹ್ಮ ಹತ್ಯೆ ಮಾಡಿದ ಪಾಪ ತನಗೆ ಸುತ್ತುತ್ತದೆ ಎಂದಿದ್ದಾರೆ ಬಸವಣ್ಣ. ಮತ್ತೊಂದೆಡೆ ಜ್ಞಾನ ಎಂಬುದು ನಿನ್ನದೆ. ಇದನ್ನು ''ಕಳಬೇಡ'' ಬೈಬಲ್, ಕುರಾನ್, ಭಗವದ್ಗೀತೆಗಳನ್ನು ಓದುತ್ತಾ ಅವುಗಳನ್ನು ಪೂಜಿಸುತ್ತಾ ಹೋದರೆ ತನುವಿನಲ್ಲಿ ತನ್ಮಯವಾದ ಜ್ಞಾನ ಸತ್ತು ಹೋಗುತ್ತದೆ. ಹೀಗಾಗಿ ಅದನ್ನು ''ಕೊಲ್ಲಬೇಡ'' ಎಂದಿದ್ದಾರೆ.

**1499**

**ಭಕ್ತನಾಗಿ ಭಕ್ತಿಯ ಮಾಡುವುದದು ಲೇಸಯ್ಯಾ;**
**ಶಕ್ತಿಯಿಲ್ಲದಿರೆ ತಮ್ಮ ಪಾದರಕ್ಷಣೆ ಇಷ್ಟವೆಂಬುದದು ಬಹುಲೇಸಯ್ಯಾ.**
**ಮಹೇಶನ ಮಲತ್ರಯವಳಿವುದು ದುರ್ಲಭ ಕಂಡಯ್ಯಾ.**
**ಚರಿಸಿ ಚರಿಸಿ ಜಗವನ್ನು ಧರಿಸುವುದು ಬಹು ದುರ್ಲಭ ಕಂಡಯ್ಯಾ.**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಭಕ್ತನಾಗುವುದು ಸರಳವಾದ ಕೆಲಸವಲ್ಲ. ಬಹಳ ಕಠಿಣವಾದ ವಿದ್ಯೆ ಅದು. ದೇವಾಲಯದ ದೇವರಿಗೆ ಭಕ್ತನಾಗುವುದು ಸುಲಭ. ಒಬ್ಬ ಗುರುದೇವನಿಗೆ ಭಕ್ತಿ ಮಾಡಿ ಶಿಷ್ಯನಾಗುವುದು ಸುಲಭ. ತನುವಿನಲ್ಲಿಯ ತನ್ಮಯವಾದ ಅರಿವು ಎನ್ನುವ ಗುರುದೇವನಿಗೆ ಭಕ್ತಿ ಮಾಡಿ ಭಕ್ತನಾಗುವುದು ಬಹಳ ಕಷ್ಟದ ಕೆಲಸ.

ಅರಿವು ಎನ್ನುವ ಗುರುದೇವ ಪ್ರತಿ ಅಂಗದಲ್ಲಿಯೂ ಸಂಗಮವಾಗಿದ್ದಾನೆ ಎಂದು ತಿಳಿ ಹೇಳುವ ಗುರುವಿಗೆ ಭಕ್ತಿಯ ಮಾಡುವುದಾದರು ಕಲಿತುಕೊಳ್ಳಬೇಕು. ಅಂತಹ ಶಕ್ತಿ ಇಲ್ಲದಿದ್ದರೆ ಅವರ ಪಾದ ಕೃಪೆ ಇಷ್ಟವೆಂಬುದದು ಬಹು ಲೇಸು.

ಮಹೇಶನ ಕಾಣುವುದು ಬಲು ದುರ್ಲಭ, ಮಲತ್ರಯಗಳನ್ನು ಕಳೆದುಕೊಂಡಾಗ ಸಾಧ್ಯವಾಗುವುದು. ಚರಿಸಿ ಚರಿಸಿ ಜಗವನ್ನುದ್ಧರಿಸಲು ಯಾರಿಗೂ ಬರುವುದಿಲ್ಲ, ಏಕೆಂದರೆ ಸಕಲ ಹೃದಯಗಳಲ್ಲಿ ಗುರುದೇವ ಸಂಗಮವಾಗಿದ್ದಾನೆ. ತನುವನ್ನು ಆವರಿಸಿದ ಮನದಿಂದ ತನುವಿನಲ್ಲಿಯೇ ಸಂಗಮವಾದ ಗುರುದೇವನನ್ನು ಕಂಡುಕೊಂಡು ತನಗೆ ತಾನೇ ಉದ್ಧರಿಸಿಕೊಳ್ಳುವುದು ಸುಲಭ.

**1500**

**ಜಗವಾಧರಿಸಿದ ಕಣ್ಣು ತನ್ನ ತಗುಳ್ವ ಕಾಯವ ಕಾಣದು.**
**ತಿಳಿವ ಅರಿವು ತನ್ನ ತಗುಳ್ವ ಭವದ ಮೊನೆಯ ಕಾಣದು.**
**ವಿವೇಕಪರನಾದಡೆ ಕಾಣದುದು ಕಾಂಬುದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಜಗವನ್ನು ಆದರಿಸಿದ ಕಣ್ಣು ತನ್ನನ್ನು ಹೇಗೆ ನೋಡುತ್ತದೆ ಎಂದು ತನಗೆ ಕಾಣದು. ತನುವಿನಲ್ಲಿಯೆ ತನ್ಮಯವಾದ ಅರಿವು ತನ್ನನ್ನು ತೆಗಳುವ ಯಾವ ಕಾಯವನ್ನು ಕಾಣದು. ತೆಗಳುವ ಹೊಗಳುವ ಕಾಯಗಳಿಗೆ ಅರಿವುಳ್ಳ ಕಾಯ ಸಹಜವಾಗಿಯೆ ಸ್ವೀಕರಿಸುವದು. ತೆಗಳುವ ಹೊಗಳುವ ಸಕಲ-ಶಬ್ದಗಳಿಂದ ಅರಿವನ್ನು ಮಾತ್ರ ಗಮನಿಸುವುದು.

ತನ್ನರಿವು ತನಗೆ ಕರಿಗೊಂಡ ವಿವೇಕ ಪರವಾದ ಕಾಯ ಕಾಯದಲ್ಲಿಯೆ ಸಂಗಮವಾದ ಕಾರಣ ಕಾಣಬಾರದ ಅರಿವೆಂಬ ಗುರುದೇವನನ್ನು ಕಾಣುವುದು.

**1501**

**ಕುಲಮದ ಪೊತ್ತಲ್ಲಿ ಚಂಡಾಲಗಿತ್ತಿಯಾಗಿ ಕೆಡಿಸಿತ್ತು ಮಾಯೆ, ಮಯೂರನೃಪಗೆ.**
**ಛಲಮದ ಪೊತ್ತಲ್ಲಿ ಮಾಂಸ ಭೋಗಿಸಿತ್ತು ಮಾಯೆ, ವೀರ ವಿಕ್ರಮಗೆ.**
**ಧನಮದ ಪೊತ್ತಲ್ಲಿ ದರಿದ್ರವಾಗಿ ಕಾಡಿತ್ತು ಮಾಯೆ, ಹರಿಶ್ಚಂದ್ರಂಗೆ.**
**ರೂಪಮದ ಪೊತ್ತಲ್ಲಿ ಕುರೂಪನ ಮಾಡಿತ್ತು ರೂಪೆ, ನಳಂಗೆ.**
**ಯೌವನಮದ ಪೊತ್ತಲ್ಲಿ ಹಿಡಿಂಬಿಯಾಗಿ ಕಾಡಿತ್ತು ಮಾಯೆ, ಭೀಮಂಗೆ.**
**ವಿದ್ಯಾಮದ ಪೊತ್ತಲ್ಲಿ ಅಜ್ಞಾನವಾಗಿ ಕಾಡಿತ್ತು ಮಾಯೆ,**
**ಅಂದು ಪರ್ವತದಲ್ಲಿ ಕವಿ ವಾದಿಶೇಖರಂಗೆ.**
**ರಾಜಮದ ಪೊತ್ತಲ್ಲಿ ರಾಕ್ಷಸನ ಮಾಡಿತ್ತು ಮಾಯೆ, ಮುಮ್ಮಡಿ ಸಿಂಗನೃಪಂಗೆ.**
**ತಪೋವನವ ಪೊತ್ತಲ್ಲಿ ಹಲವು ಆಗಿ ಕಾಡಿತ್ತು ಮಾಯೆ, ವಿಶ್ವಾಮಿತ್ರಂಗೆ.**
**ಇಂತೀ ಅಷ್ಟಮದವಳಿದು ಅಷ್ಟಾವರಣ ಧರಿಸಿಪ್ಪ**
**ಮಹಾಗಣಂಗಳು ಲಯವಿಲ್ಲದ ರಾಜಯೋಗವ ಪಡೆದಿಹರಯ್ಯಾ ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

'ಅಷ್ಟಮದಗಳಿವು ಅಷ್ಟಾವರಣ ನೆಲೆಸಿದ ಮಹಾಜ್ಞಾನಿಗಳು, ಲಯವಿಲ್ಲದ ರಾಜಯೋಗ ಪಡೆದರು. ಕುಲಮದ ಹೊತ್ತ ಮಯೂರನೃಪನಿಗೆ ಚಾಂಡಾಲಗಿತ್ತಿಯಾಗಿ ಕಾಡಿದಳು ಮಾಯೆ. ಛಲಮದ ಹೊತ್ತ ವೀರ ವಿಕ್ರಮನಿಗೆ ಮಾಂಸ ಭೋಗಿಸಿತ್ತು ಮಾಯೆ.

ಧನಮದ ಹೊತ್ತ ಹರಿಶ್ಚಂದ್ರನಿಗೆ ದರಿದ್ರರೂಪದಲ್ಲಿ ಕಾಡಿತ್ತು ಮಾಯೆ. ರೂಪ ಮದ ಹೊತ್ತ ನಳನಿಗೆ ಕುರೂಪನ ಮಾಡಿ ಕಾದಿತ್ತು ಮಾಯೆ. ಯೌವನ ಮದ ಹೊತ್ತ ಭೀಮನಿಗೆ ಹಿಡಿಂಬೆಯಾಗಿ ಕಾಡಿತ್ತು ಮಾಯೆ. ವಿದ್ಯಾಮದ ಹೊತ್ತ ಕವಿ ವಾದಿಶೇಖರನಿಗೆ ಅಜ್ಞಾನವಾಗಿ ಕಾಡಿತ್ತು ಮಾಯೆ. ರಾಜ ಮದ ಹೊತ್ತ ಮುಮ್ಮಡಿಸಿಂಗನೃಪನಿಗೆ ರಾಕ್ಷಸ ನಾಗಿ ಕಾಡಿತ್ತು ಮಾಯೆ. ತಪೋಮದ ಹೊತ್ತ ವಿಶ್ವಾಮಿತ್ರನಿಗೆ ಹಲವಾರು ರೀತಿಯಲ್ಲಿ ಕಾಡಿತ್ತು ಮಾಯೆ.

**1502**

**ಸತ್ಕುಲ ದುಷ್ಕುಲವೆಂಬುದದು ಜಗತ್ಪ್ರಸಿದ್ಧವಯ್ಯಾ.**
**ಕುಲ ಸತ್ಕುಲ ನಡೆ ವಿಪರೀತವಾದಡೆ ದುಷ್ಕುಲ ನೋಡಯ್ಯಾ**
**ಮಧು ಮಕ್ಷಿಕ ಎಂಜಲು ಕುಲ ರುಚಿಯಾದ (ಲ್ಲಿಯೆ)**
**ಚಂದ್ರಧರ ಕಪಿಲಸಿದ್ಧಮಲ್ಲಿಕಾರ್ಜುನ**
**ತನ್ನ ಪೂಜೆಗೆಂದು ನೇಮಿಸಿದ ಬೊಮ್ಮಣ್ಣ.**

ಸತ್ಕುಲ ವೆಂದು ಹೇಳಿಕೊಳ್ಳುವ ತನು ಮತ್ತು ತನುವನ್ನು ಆವರಿಸಿದ ಮನ ದುಷ್ಕುಲವಾಗುತ್ತದೆ.

ಕುಲ ಸತ್ಕುಲ ಇದರ ನಡೆ ವಿಪರೀತವಾದರೂ ತನುವನ್ನು ಆವರಿಸಿದ ಮನ ತನುವನ್ನು

ದುಷ್ಕಲ ಮಾಡುತ್ತದೆ. ನಾನಾ ಜಾತಿಯ ಪುಷ್ಪಗಳ ಎಂಜಲು ಸವಿದು ರುಚಿಯಾದ ಜೇನು ತಟ್ಟೆಯನ್ನು ತಯಾರಿಸುವ ಜೇನು ರುಚಿಯಾದಲ್ಲಿಯೇ ಚಂದ್ರನನ್ನು ಧರಿಸಿದ ಚಂದ್ರಧರನೆ ತಾನಾದ, ಕಪಿಲಸಿದ್ಧಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ಬೊಮ್ಮಣ್ಣನಿಗೆ ಹೇಳಿದ್ದಾರೆ.

**1503**

**ಕುಲವೆಂದು ಹೋರಾಡುವ ಅಣ್ಣಗಳಿರಾ, ಕೇಳಿರೋ:**
**ಕುಲವೇ ಡೋಹರನ ? ಕುಲವೇ ಮಾದಾರನ ? ಕುಲವೇ ದೂರ್ವಾಸನ ?**
**ಕುಲವೇ ವ್ಯಾಸನ ?ಕುಲವೇ ವಾಲ್ಮೀಕನ ?ಕುಲವೇ ಕೌಂಡಿಲ್ಯನ**
**ಕುಲವ ನೋಳ್ಪಡೆ ಹುರಳಿಲ್ಲ, ಅವರ ನಡೆಯ ನೋಳ್ಪಡೆ ನಡೆಯುವವರು,**
**ತ್ರಿಲೋಕದಲ್ಲಿಲ್ಲ ನೋಡಾ. ಕಪಿಲಸಿದ್ಧಮಲ್ಲಿಕಾರ್ಜುನೆ.**

ಡೋಹರ ಕಕ್ಕಯ್ಯ , ಮಾದಾರ ಚೆನ್ನಯ್ಯ ಮತ್ತು ದೂರ್ವಾಸ, ವ್ಯಾಸ, ವಾಲ್ಮೀಕಿ, ಕೌಂಡಿಲ್ಯ ಮುಂತಾದ ಮಹನೀಯರನ್ನು ಕುಲದಿಂದ ಅಳೆಯಲು ಸಾಧ್ಯವೇ. ಅವರನ್ನು ನೋಡುವಡೆ ಹಾಗೆ ನಡೆಯುವವರು ತ್ರಿಲೋಕದಲ್ಲಿಲ್ಲ.

ತನುವನ್ನು ಆವರಿಸಿದ ಮನ ತನುವಿನ ಕಣಕಣದಲ್ಲಿ ಸಂಗಮವಾದ ಪರಮಾತ್ಮನನ್ನು ಅರಿಯದ ಮನ ಕುಲವನ್ನು ಎಣಿಸುತ್ತದೆ. ತನುವಿನಲ್ಲಿ ತನ್ಮಯವಾದ ಪರಮಾತ್ಮನು ಯಾವ ಕುಲದವನು. ಅವನಿಗೆ ತಂದೆ ತಾಯಿಗಳಿಲ್ಲ, ಬಂಧು –ಬಳಗ ಇಲ್ಲ ಅವನನ್ನು ಯಾರೂ ಹಡೆದಿಲ್ಲ. ಅವನು ಸಾವಿಲ್ಲದ –ಕೇಡಿಲ್ಲದ ರೂಹಿಲ್ಲದ ಚೆಲುವ. ಮನ ಅವನನ್ನು ಅರಿಯದಿದ್ದಕ್ಕಾಗಿ ತನುವಿಗೆ ಕುಲದ ಪಟ್ಟ ಕಟ್ಟಿ ಜಂಬ ಕಟ್ಟಿಕೊಂಡು ಪರಮಾತ್ಮನನ್ನು ನೆನೆಯದೆ ಒಮ್ಮೆ ಇಲ್ಲವಾಗುತ್ತದೆ.

**1504**

**ವಾಲ್ಮೀಕನ ಶೇಷಪ್ರಸಾದವೆಲ್ಲ ಸಂಸ್ಕೃತಮಯವಾಯಿತ್ತು ಮರ್ತ್ಯಕ್ಕೆ.**
**ದೂರ್ವಾಸನ ಉಪದೇಶವೆಲ್ಲ ಚಂಡಾಲರ ಮುನಿಗಳ ಮಾಡಿತ್ತು ಸ್ವರ್ಗಕ್ಕೆ.**
**ಕುಲವೆಂದಡೆ ಮಲತ್ರಯವು ಬಿಡವು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ವಾಲ್ಮೀಕಿ ಮಹರ್ಷಿಯ ಶೇಷಪ್ರಸಾದವೆಲ್ಲಸಂಸ್ಕೃತಮಯವಾಯಿತ್ತು ಮರ್ತ್ಯಕ್ಕೆ ದೂರ್ವಾಸ ಮುನಿಯ ಉಪದೇಶ ಚಂಡಾಲರನ್ನು ಮುನಿಗಳನ್ನಾಗಿ ಮಾಡಿತ್ತು. ಸ್ವರ್ಗಕ್ಕೆ ಕುಲವೆಂದಡೆ ಮಲತ್ರಯವು ಬಿಡವು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ. ಈ ವಚನದಲ್ಲಿಯೆ ಅನುಭಾವ ಅಡಗಿದೆ.

**1505**

**ಕುಲಾಕುಲ ಅನುಭವಕ್ಕಲ್ಲದೆ ಸಮರಸಕ್ಕೇನೋ ಅಯ್ಯಾ ?**
**ವಾದವಿವಾದವೆಂಬುದು ಶಾಸ್ತ್ರದಲ್ಲ ಲ್ಲದೆ ಸಭೆಯಲ್ಲೇನೋ ಅಯ್ಯಾ ?**
**ಹಾಸ್ಯಾಹಾಸ್ಯಾ ನುಡಿಗಡಣದಲ್ಲಲ್ಲದೆ**
**ನುಡಿಯುವ ಕಾಯದಲ್ಲೆನೋ ಅಯ್ಯಾ ? ಕಪಿಲಸಿದ್ಧಮಲ್ಲಿಕಾರ್ಜುನಾ.**

ಈ ವಚನ ಓದುಗರ ಅನುಭವಕ್ಕೆ ಸರಳವಾಗಿ ಅರ್ಥವಾಗುವುದರಿಂದ ಅನುಭಾವ ಮಾಡಲಾಗಿಲ್ಲ.

**1506**

**ಕಟೆದ ಕಲ್ಲ ಲಿಂಗವ ಮಾಡಿಕೊಟ್ಟಾತ ಗುರುವೆಂಬರು,**
**ಆ ಲಿಂಗವ ಧರಿಸಿದಾತ ಶಿಷ್ಯನೆಂಬರು.**
**ಕೊಟ್ಟ ಗುರು ದೇಶಪಾರಾದ, ಕೊಟ್ಟ ಕಲ್ಲು ಲಿಂಗವೊ ?**
**ಕಲ್ಲಿನ ಕಲ್ಲು ಕಲ್ಲೆಂಬಡೆ, ಲಿಂಗವ ಮಾಡಿ ಕೊಟ್ಟ,**
**ಲಿಂಗವೆಂದಡೆ ಪೂಜಾವಿರಹಿತವಾಯಿತ್ತು. ಪೂಜೆಯಿಲ್ಲದ ಲಿಂಗ ಪಾಷಾಣ.**
**ಹೋದ ಗುರುವಿನ ಲಿಂಗ ಪಾಷಾಣ ಭೇದಿ ಭೇದಿಸಿದಡೆ ಹುರುಳಿಲ್ಲ**
**ನದಿಯ ದಾಟುವಲ್ಲಿ ಬೈತ್ರವ ಹಿಡಿದು, ದಾಟಿದಂತ್ಯದಲ್ಲಿ ಬಿಟ್ಟು ಹೋದರು,**
**ಬಿಟ್ಟ ನಾವೆ ಮತ್ತೊಬ್ಬರಿಗೆ ಲೇಸು, ಈ ಲಿಂಗ ಬರದು ಆರಿಗೆ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಟೆದ ಕಲ್ಲು ಲಿಂಗವಲ್ಲ ಅದನ್ನು ; ಲಿಂಗವೆಂದು ಕೊಟ್ಟಾತ ಗುರುವು ಅಲ್ಲ, ಅದನ್ನು ಸ್ವೀರಿಸಿದಾತ ಶಿಷ್ಯನು ಅಲ್ಲ. ವಸ್ತುವಿನ ಸತ್ಯ ನೋಡಲು ಬಾರದ ಕಣ್ಣು ಕುರುಡಗಣ್ಣು. ವಸ್ತುವಿನ ಸತ್ಯ ಗೋಚರಕ್ಕೆ ಬಂದೆಡೆ ಮಾಡುವ ಪೂಜೆ ತನಗೆ ತಾನೇ ನಿಲ್ಲುತ್ತದೆ. ಪೂಜೆ ಇಲ್ಲದ ಲಿಂಗ ಕಲ್ಲುಬಂಡೆ. ನದಿಯ ದಾಟುವಲ್ಲಿ ಅದಕ್ಕೆ ಕಟ್ಟಿದ ಹಗ್ಗವ ಹಿಡಿದರೆ ನಾವೆ ಮತ್ತೊಬ್ಬರಿಗೆ ದಕ್ಕುತ್ತದೆ. ಹಾಗೆಯೆ ಅಂಗದ ಮೇಲೆ ಧರಿಸಿದ ಲಿಂಗ ಯಾವ ಕೆಲಸಕ್ಕೂ ಬಾರದು . ಅದು ತನಗೆ ಯಾವ ಪಾಠವೂ ಮಾಡುವುದಿಲ್ಲ. ಮಾಡಿದ ಪೂಜೆ ಸ್ವೀಕರಿಸಲು ಲಿಂಗಕ್ಕೆ ಸಾಧ್ಯವಾಗುವುದಿಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವು ಎಂಬ ಲಿಂಗವನ್ನು ಆರಾಧಿಸಿದಾಗ, ಆರಾಧಿಸಿದ ಮನ ಭಕ್ತನಾಗುತ್ತದೆ. ಇದು ಲಿಂಗಾಂಗ ಸಾಮರಸ್ಯ

**1507**

**ಅಂಗ ಲಿಂಗ ಒಂದೆಂದ ಬಳಿಕ ಅಂಗ ಕೆಟ್ಟು ಲಿಂಗ ಉಳಿಯಿತ್ತು, ನೋಡಾ.**
**ಅಂಗ ನಿರ್ವಯಲಾದಲ್ಲಿ ಲಿಂಗ ಭವಿಯಾದುದು ನೋಡಾ.**
**ಅಂಗ ಲಿಂಗ ನಿರ್ವಯಲಲಲ್ಲಡಗಿಸಬಲ್ಲಡೆ , ಭಕ್ತನೆಂಬೆ ಮಹೇಶನೆಂಬೆ.**
**ಕಪಿಲಸಿದ್ಧಮಲ್ಲಿಕಾರ್ಜುನನವನೆ ಎಂಬೆ ನೋಡಾ, ಅಮುಗಿದೇವಾ.**

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೆ ಸಂಗಮವಾದ ಅರಿವಿನ ಲಿಂಗದಲ್ಲಿ ಲೀನವಾದಡೆ ಅಂಗ ಕೆಟ್ಟು ನಿರ್ವಯಲಾದಾಗ ಅಂಗದಲ್ಲಿಯೆ ಸಂಗಮವಾದ ಲಿಂಗ ಭವಿಯಾಗುತ್ತದೆ.

ಅಂಗ ಲಿಂಗ ಇವೆರಡನ್ನು ನಿರ್ಬಯಲಲ್ಲಿ ಅಡಗಿಸಬಲ್ಲಾತನನ್ನು ಭಕ್ತನೆಂದು ಕರೆಯುತ್ತಾರೆ. ಆತ ಮಹೇಶನೂ ಹೌದು. ಬ್ರಹ್ಮ ಹುಡುಕಲು ಹೋದ ಮನ ತನ್ನ ಭ್ರಮೆ ಕಳೆದುಕೊಂಡು ಬ್ರಹ್ಮನಲ್ಲಿ ಲೀನವಾಗಿ ''ಅಹಂ ಬ್ರಹ್ಮಾಸಿ'' ಎಂದಂತೆ.

1508

**ಲಿಂಗ ಹೋಯಿತ್ತೆಂದು ಅಂಗವ ಬಿಡುವವನ ನೋಡಿ, ಎನ್ನಂಗ ನಡುಗಿತ್ತಯ್ಯಾ.**
**ಲಿಂಗ ಹೋದಡೆ ನಿನ್ನ ಪ್ರಾಣಂಗಳುಳಿವವೆ ?**
**ಲಿಂಗ ಪ್ರಾಣಿ ಪ್ರಾಣಲಿಂಗಿ ಎಂಬುದದು ಹುಸಿಯೆ,**
**ಅಯ್ಯಾ ,ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಭಿನ್ನವಾಯಿತ್ತು . ಅಥವಾ ಕಳೆದು ಹೋದಾಗ, ಅದನ್ನು ಕಟ್ಟಿಕೊಂಡ ಭಕ್ತ ಲಿಂಗ ಹೋಯಿತ್ತೆಂದು ತನ್ನ ಪ್ರಾಣ ಕಳೆದುಕೊಂಡನು ಎಂದರೆ ಎನಗೆ ನಡುಕ.

ಅಂಗದಲ್ಲಿಯೆ ಸಂಗಮವಾದ ಅರಿವು ಎನ್ನುವ ಲಿಂಗವನ್ನು ಯಾರೂ ಕಟ್ಟಲು ಬರುವುದಿಲ್ಲ, ಕಳೆದುಕೊಳ್ಳಲು ಬರುವುದಿಲ್ಲ. ಅದು ಭಿನ್ನವಾಗಲೂ ಸಾಧ್ಯವಿಲ್ಲ. ಅಂಗದಲ್ಲಿ ಸಂಗಮವಾದ ಲಿಂಗ ಹೋದಾಗ ಅಂಗದ ಪ್ರಾಣ ಉಳಿಯುವುದಿಲ್ಲ. ಲೋಕ ಲಿಂಗಪ್ರಾಣಿ, ಪ್ರಾಣಲಿಂಗಿ ಎಂದು ಸಂಪ್ರದಾಯದ ಮಾತಾಡುತ್ತದೆ. ಇದು ಹುಸಿ.

1509

**ಸೂತ್ರವ ಬಿಟ್ಟಿತೆಂದು ಸಂದೇಹಗೊಳ್ಳದಿರಾ,ಮನುಜರಿರಾ**
**ಸೂತ್ರವಿದ್ದಲ್ಲಿ ನಿಮ್ಮಂಗಕ್ಕೆ ಸೂತ್ರವಾದನಯ್ಯಾ ಲಿಂಗಮೂರ್ತಿ.**
**ಸೂತ್ರ ತಪ್ಪಿತೆಂಬಲ್ಲಿ ಸೂತ್ರ ತಪ್ಪಿಲ್ಲ,**
**ನಿಮ್ಮ ಮನಸೂತ್ರವೆ ಭಿನ್ನವಾಯಿತ್ತಯ್ಯಾ,**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ತನು, ಮನ, ಅರಿವು ಇವು ಒಂದನ್ನು ಬಿಟ್ಟು ಒಂದು ಇರಲು ಸಾಧ್ಯವಿಲ್ಲ, ಇವು ಮೂರು ತ್ರಿಕೋನದ ಸೂತ್ರಗಳು, ಮನ ಎಂಬ ಸೂತ್ರವಿದ್ದಲ್ಲಿ ಅರಿವು ಎನ್ನುವ ಲಿಂಗ ಅಂಗಕ್ಕೆ ಸಂಬಂಧವಾಗುತ್ತದೆ ಸೂತ್ರವಾಗುತ್ತದೆ. ಮನವೆಂಬ ಸೂತ್ರದಾರಿ ಲಿಂಗದಲ್ಲಿ ಸಂಗಮವಾದ ಅಂಗ ಲಿಂಗಾಂಗವೆಂದು ಕರೆಸಿಕೊಳ್ಳುತ್ತದೆ. ಮನ ಅದರ ವೇಷಗಳು ಭಿನ್ನವಾಗಿ ಅರಿವಿನಲ್ಲಿ ಸಂಗಮವಾದಾಗ ಘನಮನವಾಗುತ್ತದೆ. ಆಗ ಮನದ ಸೂತ್ರವು ಭಿನ್ನವಾಗುತ್ತದೆ.

1510

**ಗುರುವಿಂಗೆ ಗುರುವಿಲ್ಲ, ಲಿಂಗಕ್ಕೆ ಲಿಂಗವಿಲ್ಲ, ಜಂಗಮಕ್ಕೆ ಜಂಗಮವಿಲ್ಲ, ನನಗೆ ನಾನಿಲ್ಲ.**
**ಕಣ್ದೆರೆದು ನೋಡುವಡೆ ಆರಿಗೆ ಆರೂ ಇಲ್ಲ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿ ಸಂಗಮವಾದ ಗುರುವಿಗೆ ಗುರುವಿನ ಅವಶ್ಯಕತೆ ಇಲ್ಲ. ಗುರುದೇವ ಒಬ್ಬ ವ್ಯಕ್ತಿಯಲ್ಲ,ಅನಂತ ಶಕ್ತಿ. ವ್ಯಕ್ತಿಯಲ್ಲಿರುವ ಅಲ್ಲದ ಅವ್ಯಕ್ತ ಶಕ್ತಿಯೇ ವ್ಯಕ್ತಿಯಾಗಿ ಗುರುವಾಗಿ ಬೋಧಿಸುವಂತಿಲ್ಲ. ಒಬ್ಬ ವ್ಯಕ್ತಿ ಗುರುವಲ್ಲ ಮತ್ತೊಬ್ಬ ವ್ಯಕ್ತಿ ಶಿಷ್ಯನಲ್ಲ.

ಲಿಂಗದ ಮೇಲೆ ಪುನಃ ಲಿಂಗ ಹಾಕುವ ಅವಶ್ಯಕತೆಯಿಲ್ಲ. ಕೆತ್ತಿದ ಲಿಂಗ ಲಿಂಗವಲ್ಲ. ಅದನ್ನು ಅಂಗದ ಮೇಲೆ ಕಟ್ಟಿಕೊಳ್ಳುವುದಲ್ಲ . ಏಕೆಂದರೆ ಪ್ರತಿ ಅಂಗದಲ್ಲಿಯೂ ಅರಿವಿನ ಲಿಂಗ

ಸಂಗಮವಾಗಿದೆ. ಹೀಗಾಗಿ ಲಿಂಗಕ್ಕೆ ಲಿಂಗವಿಲ್ಲ.

ಅಂಗದಲ್ಲಿ ಸಂಗಮವಾದ ಅರಿವೆ ಜಂಗಮ ಈತ ಅಜ್ಞಾನವನ್ನು ಕತ್ತರಿಸಿ ಹಾಕುತ್ತಾನೆ. ಜಂಗಮ ಒಬ್ಬ ವ್ಯಕ್ತಿಯಲ್ಲ, ಅಂಗದಲ್ಲಿಯೇ ಸಂಗಮವಾದ ಅಪಾರ ಶಕ್ತಿ. ಹೀಗಾಗಿ ಜಂಗಮಕ್ಕೆ ಜಂಗಮವಿಲ್ಲ. ಅಂಗವನ್ನು ಆವರಿಸಿದ ಅಂಹಕಾರವೆ ಮನ, ಈ ಮನ ಅಂಗದಲ್ಲಿಯೆ ಸಂಗಮವಾದ ಅರಿವಿನ ಲಿಂಗಯ್ಯನಲ್ಲಿ ಲೀನಾವಾದಾಗ ಮನ ಘನಮನವಾಗುತ್ತದೆ. ಇಂತಹ ಮನಕ್ಕೆ ಮತ್ತೊಂದು ಮನವಿಲ್ಲ.

ನಾನು ಎನ್ನುವ ಅಹಂಕಾರ ಸುಟ್ಟು ಹೋಗಿರುವುದರಿಂದ ನನಗೆ ನಾನಿಲ್ಲ, ಇಂತಹ ಒಬ್ಬ ಜ್ಞಾನಿ ಕಣ್ತೆರೆದು ನೋಡಿದಡೆ ಸಕಲ ಅಂಗಗಳೂ ಗುರುಸ್ವರೂಪವಾಗಿ ಕಾಣುತ್ತವೆ. ಶಿವ ಸ್ವರೂಪ ವಾಗಿ ಕಾಣುತ್ತವೆ. ಹೀಗಾಗಿ ಆರಿಗೂ ಆರಿಲ್ಲ.

**1511**

**ತನುವಿಗೊಳಗಾದಾತ ಗುರುವೆ ? ಮನಕ್ಕೊಳಗಾದಾತ ಗುರುವೆ ?**
**ಧನಕ್ಕೊಳಗಾದಾತ ಜಂಗಮವೆ ? ತನು,ಮನ,ಧನ ತನ್ನ ಮನಕ್ಕಲ್ಲದೆ**
**ಗುರು -ಲಿಂಗ ಜಂಗಮದಲ್ಲುಂಟೆ ? ಕಪಿಲಸಿದ್ಧಮಲ್ಲಿಕಾರ್ಜನಾ.**

ಗುರುವು ಎಂಬಾತ ತನು ಚೇಷ್ಠೆಗೆ ಒಳಗಾದಾತನಲ್ಲ .ಅಂಗದಲ್ಲಿ ಸಂಗಮವಾದ ಲಿಂಗಯ್ಯ ಕೂಡ ಮನದ ಚೇಷ್ಠೆಗೆ ಒಳಗಾದಾತನಲ್ಲ.

ಅಂಗದಲ್ಲಿಯೇ ಸಂಗಮವಾದ ಜಂಗಮ ಕೂಡ ಧನಕ್ಕೆ ಒಳಗಾದಾತನಲ್ಲ. ತನು, ಮನ, ಧನ ಎನ್ನುವುದು ಮನಕ್ಕೆ ಅಲ್ಲದೆ ಗುರು, ಲಿಂಗ, ಜಂಗಮಕ್ಕಲ್ಲ. ತನುವುಳ್ಳಾತ ಗುರುವಲ್ಲ, ಗುರುದೇವ ತನುವಿಗೆ ಅಂಟದೆ ತನುವಿನೊಂದಿಗೆ ಇದ್ದಾತ ತನುವನ್ನು ಸೋಂಕದೆ ಬೆಳಗಿಂಗೆ ಬೆಳಗಾಗಿ ಬೆಳಗುವಾತ.

ಲಿಂಗದಲ್ಲಿ ಮನವಿಲ್ಲ,ಮನ ಲಿಂಗದಲ್ಲಿ ಸಂಗಮವಾದ ಅಂಗ ಲಿಂಗಾಂಗವಾಗುತ್ತದೆ. ಅಂಗವುಳ್ಳಾತ ಜಂಗಮನಲ್ಲ. ಜಂಗಮ ಎನ್ನುವವನು ವ್ಯಕ್ತಿಯೂ ಅಲ್ಲ, ಅಂಗದಲ್ಲಿ ಸಂಗಮವಾದ ಅವ್ಯಕ್ತ ಶಕ್ತಿ .

**1512**

**ಹಣ್ಣ ಹಿಡಿದ ಬಾಲಕಂಗೆ ಬೆಲ್ಲವ ಕೊಟ್ಟೇನು ಹಣ್ಣ ತಾ ಎಂಬಂತೆ,**
**ಮಣ್ಣು ಮೂರನು ಹಿಡಿದ ಭಕ್ತಂಗೆ ಮುಕ್ಕಣ್ಣನ ಪದವಿ ಕೊಟ್ಟೇವೆಂಬ ತೆರನಂತೆ,**
**ಗುರು-ಲಿಂಗ-ಜಂಗಮರು ಬೇಡುವವರಲ್ಲದೆ,**
**ತಮ್ಮಿಚ್ಛೆಗೆ ಕೈಯಾನುವರೆ ಕಪಿಲಸಿದ್ಧಮಲ್ಲಿಕಾರ್ಜುನಾ ?**

ಹಣ್ಣ ಹಿಡಿದ ಬಾಲಕನಿಗೆ ಬೆಲ್ಲ ಕೊಟ್ಟು ಹಣ್ಣು ತಾ ಎಂದರೆ ಬಾಲಕ ಹಣ್ಣು ಕೊಡಲಾರ. ಹೆಣ್ಣು, ಹೊನ್ನು, ಮಣ್ಣು ಮೂರನ್ನು ಹಿಡಿದ ಭಕ್ತನಿಗೆ ಮುಕ್ಕಣ್ಣನ ಪದವಿ ಕೊಡುತ್ತೇನೆ. ಬಾ ಎಂದರೆ ಬರಲಾರ. ಗುರು- ಲಿಂಗ-ಜಂಗಮರು ಭಕ್ತನ ಅಜ್ಞಾನ ಬೇಡುವರಲ್ಲದೆ ತನುವಿನ ಹಸಿವೆಗಾಗಿ ಕೈ ಚಾಚಲಾರರು.

ಬೇಡುವವನು ಜಂಗಮನೆ ಕೊಡುವವನು ಭಕ್ತನೆ ? ತನ್ನ ಅಜ್ಞಾನವನ್ನು ಕಳೆದುಕೊಳ್ಳುವುದು ಹೇಗೆ ಎಂದು ಚಿಂತಿತನಾಗಿ ಭಕ್ತ ಗುರುವಿನಲ್ಲಿ ಬಂದು ಬೇಡುತ್ತಾನೆ.ಭಕ್ತನ ಅಜ್ಞಾನವನ್ನು ತನಗೆ ತಾನೆ ಹೇಗೆ ಕಳೆದುಕೊಳ್ಳಬೇಕೆಂಬ ಸೂತ್ರವನ್ನು ಗುರು ಹೇಳುತ್ತಾನೆ.

ಈಗಿನ ಗುರುಗಳು ಶಿಷ್ಯರನ್ನು ಬೇಡಲು ಬಂದವರು, ಶಿಷ್ಯಂದಿರು ಗುರುವಿಗೆ ಏನಾದರು ಅಂದರೆ

ಭೂಮಿ,ಹೇಮ ,ಹಣ ಕೊಟ್ಟು ಗುರುದೇವನನ್ನು ತಮ್ಮಂತೆ ಮಾಡಿಕೊಳ್ಳುವರು. ಬೇಡಲು ಬಂದ ಗುರುವು ಶಿಷ್ಯನ ಬಾಗಿಲು ಕಾಯುತ್ತಾನೆ. ಗುರು-ಲಿಂಗ-ಜಂಗಮರು ತಮಗಾಗಿ ಏನನ್ನು ಬೇಡುವುದಿಲ್ಲ.

**1513**

**ಹಣ್ಣ ಹಿಡಿದ ಬಾಲಕಂಗಲ್ಲದೆ ಪಿತಂಗೇನೋ ಅಯ್ಯಾ ? ಭಕ್ತನ ಸೊಮ್ಮು ಭಕ್ತಂಗಲ್ಲದೆ**
**ನಿರವಯ ನಿರಾಳ ಗುರು-ಲಿಂಗ-ಜಂಗಮಕ್ಕೇನೋ ಅಯ್ಯಾ ?**
**ತನು-ಮನ-ಧನದೊಳಗಾ (ದೆನೆಂ) ಬವನ**
**ಬೆನ್ನ ಬಾರನೆತ್ತದೆ ಬಿಡುವನೆ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಬಾಲಕನ ಹಣ್ಣು ಬಾಲಕಂಗೆ ಮಾತ್ರ ಸಿಗುತ್ತದೆ. ಆತನನ್ನು ಹಡೆದ ತಂದೆಗೆ ಸಿಗುವುದಿಲ್ಲ.

ಭಕ್ತನ ಅಜ್ಞಾನ ಭಕ್ತಂಗಲ್ಲದೆ, ನಿರವಯ ನಿರಾಳ ಜಂಗಮಗೆ ಹೋಗುವುದಿಲ್ಲ. ತನು,ಮನ,ಧನದಿಂದ ಗುರುಲಿಂಗ ಜಂಗಮನ ಸೇವೆ ಮಾಡಿದೆನೆಂಬ ಭಕ್ತನ ಬೆನ್ನ ಬಾರನೆತ್ತದೆ ಬಿಡುವುದಿಲ್ಲ. ಭಕ್ತನ ಅಂಗದಲ್ಲಿಯೆ ಸಂಗಮವಾದ ಅರಿವೆಂಬ ಗುರುದೇವ ಈತ ಸಕಲ ಕಲಾ ವಲ್ಲಭ.

**1514**

**ಲಗ್ನಕ್ಕೆ ವಿಘ್ನ ಬಾರದೆಂದು ಜ್ಯೋತಿಷ್ಯ ಕೇಳುವ ಅಣ್ಣಗಳಿರಾ, ಕೇಳಿರಯ್ಯಾ:**
**ಅಂದೇಕೆ ವೀರಭದ್ರನ ಸೆರಗು ಸುಟಿತ್ತು ?**
**ಅಂದೇಕೆ ಮಹಾದೇವಿಯರ ಬಲಭುಜ ಹಾರಿತ್ತು ?**
**ಇಂದೇಕೆ ಎನ್ನ, ವಾಮನೇತ್ರ ಚರಿಸಿತ್ತು ? ಕಪಿಲಸಿದ್ಧಮಲ್ಲಿಕಾರ್ಜುನಾ.**

ಲಗ್ನಕ್ಕೆ ವಿಘ್ನ ಬರಬಾರದೆಂದು ತನ್ನ ಸಮಾಧಾನಕ್ಕಾಗಿ ಜ್ಯೋತಿಷ್ಯ ಕೇಳುವರು, ಈತನ ಅಜ್ಞಾನದಿಂದ ಜ್ಯೋತಿಷಿಗೆ ಅನ್ನ ಸಿಗುತ್ತದೆ. ಕೇಳಲು ಬಂದವನನ್ನು ಪಂಚಾಂಗ ತೆಗೆದು ಅಳೆದು ಕಳೆದು ನೋಡಿ ಸಮಯ ನಿರ್ಧರಿಸಿ ಸಮಾಧಾನ ಮಾಡಿ ಕಳಿಸುತ್ತಾನೆ.

ಸಕಲ ಪಂಡಿತರು ಜ್ಯೋತಿಷ್ಯರು ಸೇರಿ ಶ್ರೀ ರಾಮನ ಮದುವೆ ಸೀತೆಯೊಂದಿಗೆ ಮಾಡಿದರೂ ರಾಮ ಹದಿನಾಲ್ಕು ವರ್ಷ ವನವಾಸಕ್ಕೆ ಹೋಗಬೇಕಾಯಿತು. ಅಂದೇಕೆ ವೀರಭದ್ರನ ಸೆರಗು ಸುಟ್ಟಿತ್ತು? ಅಂದೇಕೆ ಮಹಾದೇವಿಯವರ ಬಲಭುಜ ಹಾರಿತ್ತು ? ಇಂದೇಕೆ ಎನ್ನ ವಾಮನೇತ್ರ ಚದುರಿತ್ತು. ಅಜ್ಞಾನ ನಾಶ ಆಗುವವರೆಗೆ ಅಂಗದಲ್ಲಿಯ ಸಂಗಮವಾದ ಅರಿವಿನ ಲಿಂಗಯ್ಯ ದರ್ಶನ ಕೊಡಲು ಸಾಧ್ಯವಿಲ್ಲ.

**1515**

**ಶುಭಕ್ಕೆ ವಿಘ್ನವಲ್ಲದೆ ಅಶುಭಕ್ಕೆ ವಿಘ್ನವೆ ಅಯ್ಯಾ ?**
**ಅಭಿಮಾನಿಗೆ ಅಂಜಿಕೆಯಲ್ಲದೆ ಅಪಮಾನಿಗೆ ಅಂಜಿಕೆ ಅಯ್ಯಾ ?**
**ಶುಭಾ ಶುಭ ಶಿವಾರ್ಪಣವೆಂದು ನಂಬು ಮನವೆ,**
**ಕಪಿಲಸಿದ್ಧಮಲ್ಲೇಂದ್ರನಾಲಯದಲ್ಲಿ.**

ಶುಭ ಕಾರ್ಯ ಮಾಡಲು ಹೋದಾಗ ಮನುಷ್ಯ ಯಾವ ವಿಘ್ನವು ಬರಬಾರದೆಂದು ಯೋಚನೆ ಮಾಡುತ್ತಾನೆ. ಅಶುಭ ಕಾರ್ಯದಲ್ಲಿ ತೊಡಗಿದ ಮನುಷ್ಯ ವಿಘ್ನ ಬಂದೀತೆಂದು

ಯೋಚಿಸುವುದಿಲ್ಲ. ಸ್ವಾಭಿಮಾನವುಳ್ಳವರಿಗೆ ಅಂಜಿಕೆಯಲ್ಲದೆ, ದುರಾಭಿಮಾನವುಳ್ಳವನಿಗೆ ಅಂಜಿಕೆಯಿರುವುದಿಲ್ಲ. ಶುಭಾಶುಭವನ್ನು ಶಿವಾರ್ಪಣವೆಂದು ಯಾರು ನಂಬುತ್ತಾರೊ ಅವರು ಘನಮನವುಳ್ಳವರು. ಅಂಥವರು ಮಾತ್ರ ಶುಭಾಶುಭವನ್ನು ನಂಬುವುದಿಲ್ಲ. ಅವರು ತಮ್ಮ ಅಂಗವನ್ನೇ ಲಿಂಗಾಂಗವನ್ನಾಗಿ ಮಾಡಿಕೊಂಡವರು.

**1516**

**ಜ್ಯೋತಿಷ್ಯವದು ಜ್ಯೋತಿಯಂತಯ್ಯಾ: ಕೂಡುವ ಕಾಲಕ್ಕೆ ಪ್ರಕಾಶಮಯವು:**
**ಕೂಡದ ಕಾಲಕ್ಕೆ ದಗ್ಧಮಯವು. ಇದರಂತುವನರಿದವ ವರರುಚಿಯಲ್ಲದೆ,**
**ಮತ್ತೋರ್ವನ ಕಾಣೆ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಜ್ಯೋತಿಷ್ಯವು ಉರಿಯುವ ಜ್ಯೋತಿಯಂತೆ ಕೂಡುವ ಕಾಲಕ್ಕೆ ಪ್ರಕಾಶಮಯವು. ಕೂಡದ ಕಾಲಕ್ಕೆ ದಗ್ಧಮಯವು.

ಕೆಲಸ ಆಗುತ್ತದೊ ಇಲ್ಲವೋ ಎಂದು ಜ್ಯೋತಿಷಿಯನ್ನು ಕೇಳುತ್ತಾರೆ. ಆಗುತ್ತದೆಯೆಂದಾದರು ಹೇಳುತ್ತಾನೆ, ಆಗುವುದಿಲ್ಲವೆಂದಾದರೂ ಹೇಳುತ್ತಾನೆ. ಕೆಲಸ ಆದರೆ ಕೇಳಲು ಹೋಗುವವರು ಹೆಚ್ಚಾಗುತ್ತಾರೆ. ಕೆಲಸ ಆಗದವನು ಮತ್ತೊಬ್ಬ ಜ್ಯೋತಿಷಿಯನ್ನು ಹುಡುಕುತ್ತಾನೆ. ಮೂಕೊರತಿ ಮೂಕೊರೆಯ ಇವನ ಕೈಯಲ್ಲಿ ಹಾವು. ಖಣಿ ಕೇಳಲು ಹೋದಾಗ ಮೂಕೊರತಿ ಮೂಕೊರೆಯ ಅಡ್ಡ ಬಂದರೆಂದು ಖಣಿ ಕೇಳುವುದನ್ನು ಬಿಟ್ಟು ಮನೆಗೆ ಹೋಗುತ್ತಾರೆ. ಅವರು ಕೂಡ ನಮ್ಮಂಥ ಕಾಯಕದಲ್ಲಿ ಇದ್ದವರು ಎನ್ನುವ ಸಣ್ಣ ಸುಳಿವು ಕೂಡ ಮೂಕೊರತಿ ಮೂಕೊರೆಯರ ಗಮನಕ್ಕೆಬಾರದೆ ಹೋಗುತ್ತದೆ. ಇದು ತನುವಿನ ಮನದ ಚೇಷ್ಠೆ ದರಂತುವನ್ನು ಅರಿದವ ಮಹಾಜ್ಞಾನವನ್ನು ರುಚಿಸಿದವನು. ಶರಣನನ್ನು ಬಿಟ್ಟು ಮತ್ತೊಬ್ಬರನ್ನು ಕಾಣೆ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1517**

**ನೋಡುವುದದು, ನೋಡಲೇಬೇಕು, ಮಾಡುವುದದು, ಮಾಡಲೇಬೇಕು**
**ನೋಡಿ ಮಾಡಿ ಮನದಲ್ಲಿ ಲೀನವಾಗಿರಬಾರದು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ನೋಡುವುದ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ, ನೋಡುವುದ ನೋಡುವಡೆ ಕೂಡಲಿಲ್ಲ ಅಗಲಲಿಲ್ಲ. ಕೂಡದ ಅಗಲದ ಕೂಟದ ಸುಖವನ್ನು ಗುಹೇಶ್ವರಾ ನಿಮ್ಮ ಶರಣ ಮಾತ್ರ ಬಲ್ಲ ಎಂದು ಅಲ್ಲಮ ಪ್ರಭು ಹೇಳಿದ್ದಾರೆ.

ಶರಣ ಮಾತ್ರ ನೋಡುವುದನ್ನು ನೋಡುತ್ತಾನೆ. ಮಾಡುವುದನ್ನು ಮಾಡುತ್ತಾನೆ. ನೋಡಿ ಮಾಡಿ ಮನದಲ್ಲಿ ಲೀನವಾಗುವುದಿಲ್ಲ. ಆದರೆ ಲೋಕ ಹಾಗಲ್ಲ, ನೋಡುವುದನ್ನು ನೋಡದೆ ಕೈ ಮುಗಿದು ಭಕ್ತಿ ಮಾಡುತ್ತಾನೆ. ಕಲ್ಲು ಕಟೆಯುವುದನ್ನು ನೋಡಿದ, ಆ ಕಲ್ಲಿಗೆ ಪ್ರಾಣ ಪ್ರತಿಷ್ಠಾನ ಮಾಡುವುದನ್ನು ನೋಡಿದ, ಅದನ್ನು ದೇವಾಲಯದಲ್ಲಿ ಸ್ಥಾಪಿಸುವುದನ್ನು ನೋಡಿದ, ಕಟೆದ ಕಲ್ಲಿಗೆ ಕಲ್ಲೆಂದು ನೋಡದೆ ದೇವರೆಂದು ನೋಡಿ ಕೈ ಮುಗಿದ. ಕಲ್ಲು ಕಟೆದರೇನು ಅದು ದೇವರಾಯಿತೆ ? ಕಟೆದ ಕಲ್ಲು ಕೂಡ ಕಲ್ಲೆಂದು ತಿಳಿದರೆ ಕೈ ಮುಗಿಯಲಿಲ್ಲ ಪ್ರಾರ್ಥಿಸಲಿಲ್ಲ, ಪ್ರದಕ್ಷಿಣೆ ಹಾಕಲಿಲ್ಲ.

ನೋಡುವುದನ್ನೇ ನೋಡಿದ, ನೋಡಿ ಮಾಡಿ ಮನದಲ್ಲಿ ದಾಖಲಿಸಲಿಲ್ಲ, ಇದು ಶರಣರಿಗೆ ಮಾತ್ರ ಸಾಧ್ಯವಾಗುತ್ತದೆ.

**1518**

**ಭಕ್ತಂಗೆ ಲಿಂಗಪೂಜೆ ಜಂಗಮದಾಸೋಹ ವಿಘ್ನವಯ್ಯಾ.**
**ಮಹೇಶಂಗೆ ವಿಷಯಂಗಳಳಿವುದೆ ವಿಘ್ನವಯ್ಯಾ.**
**ಪ್ರಸಾದಿಗೆ ನಿರ್ಮಲ ಮನಸ್ಸಾಗುವುದೆ ವಿಘ್ನವಯ್ಯಾ.**
**ನಿರ್ವಿಘ್ನರಾದವರನೋರ್ವರನು ಕಾಣೆ.**
**ನಿರ್ವಯಲ ನಿಜಾನಂದದರುಹಿನ ಕುರುಹ ಬಿಟ್ಟು,**
**ಕಪಿಲಸಿದ್ಧಮಲ್ಲಿಕಾರ್ಜುನಾ ಮಹದೇವನಲ್ಲಿ.**

ಲೋಕದ ಭಕ್ತ ಭಕ್ತನಲ್ಲ, ಆತ ಲಿಂಗಪೂಜೆ ಜಂಗಮ ದಾಸೋಹ ಇವುಗಳಲ್ಲಿಯೇ ಮಗ್ನನಾಗಿರುತ್ತಾನೆ. ದಾಸೋಹ ಇವುಗಳಿಂದ ಹೊರಬರಲು ಆತನಿಗೆ ಬಲುಕಷ್ಟ . ಲಿಂಗಪೂಜೆ ಜಂಗಮ ದಾಸೋಹ ಭಕ್ತನಿಗೆ ವಿಘ್ನವಾಗಿ ಕಾಣುತ್ತದೆ. ನಿಜಭಕ್ತನಾಗಬೇಕೆಂದರೆ ಅಂಗದ ಮೇಲೆ ಕಟ್ಟಿಕೊಂಡ ಲಿಂಗಪೂಜೆ ಮಾಡದೆ, ಅಂಗದಲ್ಲಿಯೇ ಸಂಗಮವಾದ ಲಿಂಗ ಪೂಜೆ ಮಾಡಬೇಕು. ಹಾಗೆಯೇ ಅಂಗದಲ್ಲಿಯ ಸಂಗಮವಾದ ಜಂಗಮ ದಾಸೋಹವನ್ನು ಮಾಡಬೇಕು.

ಲೋಕದ ಮಹೇಶ ಮಹೇಶನಲ್ಲ. ಈತ ವಿಷಯಾದಿಗಳ ಸುಖ ಉಣ್ಣುವಾತ. ವಿಷಯಂಗಳು ಈತನಿಗೆ ಸದಾ ವಿಘ್ನವಾಗಿ ಕಾಡುತ್ತವೆ. ಪ್ರಸಾದಿಗೆ ನಿರ್ಮಲ ಮನಸ್ಸಾಗುವುದೇ ವಿಘ್ನ . ನೋಡುವ ಕಣ್ಣಿನಲ್ಲಿ ಅಜ್ಞಾನ ಇಣಕಿದಾಗ ಆ ಅಜ್ಞಾನವನ್ನು ಉಣ್ಣುವ ಶಕ್ತಿ ಪ್ರಸಾದಿಗೆ ಮಾತ್ರ ಇರುತ್ತದೆ. ಆತನ ಮನ ಘನಮನವಾಗಿರುತ್ತದೆ. ಮನಕ್ಕೆ ಅಜ್ಞಾನ ಕಾಣುವುದೇ ಇಲ್ಲ.

ನಿರ್ವಿವಿಘ್ನರಾದವರು ಶರಣರು ಮಾತ್ರ. ಲೋಕದ ಬಹುತೇಕ ಜನರಿಗೆ ಹಲವಾರು ವಿಷಯಂಗಳು ವಿಘ್ನವಾಗಿ ಅಡ್ಡಿಪಡಿಸುವವು. ಶರಣ ನಿರ್ವಯಲ ನಿಜಾನಂದದರುಹಿನ ಕುರುಹ ಬಿಟ್ಟು ಮಹದೇವನಲ್ಲಿ ಲೀನವಾಗುತ್ತಾನೆ.

**1519**

**ಶಾಸ್ತ್ರವೆಂಬುದು ಮನ್ಮಥಶಸ್ತ್ರವಯ್ಯಾ.**
**ವೇದಾಂತವೆಂಬುದು ಮೂಲ ಮನೋವ್ಯಾಧಿಯಯ್ಯಾ.**
**ಪುರಾಣವೆಂಬುದು ಮೃತವಾದವರ ಗಿರಾಣವಯ್ಯಾ.**
**ತರ್ಕವೆಂಬುದು ಮರ್ಕಟಾಟವಯ್ಯಾ.**
**ಆಗಮವೆಂಬುದು ರಾಜರ ಕಥಾಭಾಗವಯ್ಯಾ .**
**ಇತಿಹಾಸವೆಂಬುದು ಯೋಗದ ಘೋರವಯ್ಯಾ,**
**ಸ್ಮೃತಿಯೆಂಬುದು ಪಾಪಪುಣ್ಯವಿಚಾರವಯ್ಯಾ.**
**ಆದ್ಯರ ವಚನವೆಂಬುದು ಬಹುವೇದ್ಯವಯ್ಯಾ.**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ತಿಳಿಯಲಿಕ್ಕೆ.**

ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನ ತಿಳಿಯದು, ಶಾಸ್ತ್ರ,ಪುರಾಣ, ವೇದಾಂತ, ತರ್ಕ ಆಗಮಗಳ ಅವಶ್ಯಕತೆಯಿಲ್ಲ. ಇವುಗಳನ್ನು ಓದಿಕೊಂಡವನು, ವೇದಾಂತಿ ಶಾಸ್ತ್ರಿ, ಪುರಾಣಿಕ , ತಾರ್ಕಿಕ ಎಂದು ಕರೆಯಿಸಿಕೊಳ್ಳುತ್ತಾನೆ. ಸ್ವತಃ ಮಹಾಜ್ಞಾನಿಯಾಗಲಾರ. ಮಹಾಜ್ಞಾನ ಅಂಗದಲ್ಲಿಯೆ ಸಂಗಮವಾಗಿದೆ. ಅಂಗವನ್ನು ಆವರಿಸಿದ ಮನದಿಂದ ಮಹಾಜ್ಞಾನವನ್ನು ತಿಳಿಯಬಹುದಾಗಿದೆ.

ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಇವುಗಳಲ್ಲಿ ಮಹಾಜ್ಞಾನವೆ ಭರಿತವಾಗಿದೆ. ಈ ಐದೂ ಬಾಗಗಳನ್ನು ಮನ ಆವರಿಸಿರುವುದರಿಂದ ಅಜ್ಞಾನದ ದುರ್ಬಳಕೆಗೆ ಒಳಗಾಗಿದೆ.

ಆಯಾ ಭಾಗಗಳಲ್ಲಿರುವ ಮಹಾಜ್ಞಾನವನ್ನು ಆಯಾ ಬಾಗಗಳ ಮೂಲಕವೇ ತಿಳಿದು ಮಹಾಜ್ಞಾನಿಯಾಗಬುಹುದಾಗಿದೆ. ಆದ್ಯರ ವಚನಗಳು ಮಹಾಜ್ಞಾನದ ಸೂತ್ರಗಳು, ಮಹಾಜ್ಞಾನವನ್ನು ತಿಳಿಯಲಿಕ್ಕೆ ವಚನಗಳು, ಉಪಕಾರಿಯಾಗಿ ಕೆಲಸ ಮಾಡುತ್ತವೆ.

**1520**

**ಕಟ್ಟಿದ ಲಿಂಗವ ಬಿಟ್ಟು ನಟ್ಟಿದ ಲಿಂಗವನಟ್ಟಿ ,**
**ಮೊಟ್ಟೆ ಮೊಟ್ಟೆ ತಾವರೆ ಮೊದಲಾದ ಪುಷ್ಪವ ಧರಿಸುವಾತನಿರವು**
**ಚಾಂಡಾಲನ ಇರುವು ನೋಡಾ, ಆತನ ಸಂಗ ಮಾದಿಗರ ಸಂಗ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗವುವಾದ ಅರಿವಿನ ಲಿಂಗಯ್ಯ ಅಂಗವನ್ನು ತನ್ನ ಒಡವೆಯನ್ನಾಗಿಸಿಕೊಂಡು ಭುವಿಗೆ ಬಂದಿದ್ದಾನೆ.

ಅಂಗ ಅರಿವಿನ ಒಡವೆ, ಅರಿವೇ ಗುರುವು. ಆ ಗುರುದೇವನೇ ಮಹಾದೇವ ಇಂತಹ ಮಹಾದೇವನ ಒಡವೆಗೆ, ಪುನಃ ಲಿಂಗ ಕಟ್ಟುವುದು ಅಥವಾ ಶಿಲುಬೆ ಜನಿವಾರ ಹಾಕುವುದು. ಈ ಕೃತ್ಯ ಮನವೆಂಬ ಚಾಂಡಾಲನ ಕೆಲಸ. ಆತನ ಸಂಗ ಮನವೆಂಬ ಅಜ್ಞಾನಿಯ ಸಂಗ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1521**

**ಧರಿಸಿದ ಲಿಂಗವ ವರಿಸಬಲ್ಲಡೆ ಗಿರಿಜೆಯ ಅರಸನೆಂಬೆ**
**ಸ್ಥಾವರವ ಪೂಜಿಸಿದವನ ಉಮಾವರನೆಂಬವನ**
**ಗಾವಿಲನೆಂಬೆನಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿ ಸಂಗಮವಾದ ಲಿಂಗಯ್ಯನನ್ನು ಧಾರಣೆ ಮಾಡಿಕೊಂಡ ಮನವೆ ಘನಮನ ಮನವೆಂದರೆ ಸಾಮಾನ್ಯವಲ್ಲ. ಮಹದೇವನ ಅರಸಿ, ಉಮಾಪತಿಯ ರಾಣಿ ಗಿರಿಜೆ. ಅರಿವಿನ ಲಿಂಗವನ್ನು ಧರಿಸಿ, ಆತನನ್ನು ವರಿಸಬಲ್ಲ ಮನ ಗಿರಿಜೆಯಾಗುತ್ತಾಳೆ.

ಸ್ಥಾವರ ಪೂಜಿಸಿದವನನ್ನು ಗಾವಿಲನೆಂಬೆನಯ್ಯಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು. ಧರಿಸಿದ ಲಿಂಗವನ್ನು ವರಿಸುವದು ಸುಲಭದ ಮಾತಲ್ಲ.ಮನಕ್ಕೆ ಧರಿಸಿದ ಲಿಂಗವನ್ನು ವರಿಸಲೇಬೇಕೆಂಬ ಬಲವಾದ ಇಚ್ಛೆಯಾಗಬೇಕು. ಮನ ತನುವನ್ನು ಕರೆದುಕೊಂಡು ಹೋಗಿ ಸ್ಥಾವರವನ್ನು ಪೂಜಿಸುವ ಕೆಲಸದಲ್ಲಿ ನಿರತವಾಗಿದೆ. ಹೀಗಾಗಿ ಧರಿಸಿದ ಲಿಂಗವನ್ನೆ ವರಿಸಿಕೊಳ್ಳಲಿ ಕ್ಕೆ ಮನಕ್ಕೆ ಕಠಿಣವಾಗುತ್ತದೆ.

**1522**

**ಸಂತೆಯೊಳಿದ್ದ ಕಲ್ಲುಗಳೆಲ್ಲಾ ಲಿಂಗವೇನೊ ಅಯ್ಯಾ ?**
**ಪರ್ವತ ವಾರಣಾಸಿ ಬದರಿಕಾ ಕ್ಷೇತ್ರಂಗಳಲ್ಲಿದ್ದ**
**ಕಲ್ಲುಗಳೆಲ್ಲಾ ಲಿಂಗವೇನೋ ಅಯ್ಯಾ ?**
**ಅಂತಕಾಂತಕ ಶ್ರೀ ಗುರುಮೂರ್ತಿ ತನ್ನರುಹಿನ ರೂಪವಿಂತೆಂದು**
**ತೋರಿದ ಕಲ್ಲೇ ನಿಜಲಿಂಗ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಲ್ಲೊಳಗೆ ಲಿಂಗವನು ಕೆತ್ತಿ ಸಂತೆಯೊಳಗೆ ಮಾರುವ ಲಿಂಗಗಳೆಲ್ಲ ಲಿಂಗಗಳಲ್ಲ. ಅವೆಲ್ಲ ಕಲ್ಲುಗಳೇ, ಪರ್ವತ ವಾರಾಣಾಸಿ, ಬದರಿಕಾ ಕ್ಷೇತ್ರಗಳಲ್ಲಿದ್ದ ಲಿಂಗಗಳೆಲ್ಲ ಲಿಂಗಗಳಲ್ಲ. ಕಲ್ಲುಗಳೇ.

ಗುರುದೇವ ಮನವನ್ನು ಹಿಡಿದು ಲಿಂಗದೊಳಡಗಿದ ಸತ್ಯ ಕಲ್ಲು ಎಂದು ಶಿಷ್ಯನಿಗೆ ತೋರಿದ. ತನ್ನ ಅರುವಿನ ನಿಜರೂಪದ ಲಿಂಗ ಎಂದು ಹೇಳಿದ.

ಲಿಂಗದಲ್ಲಿ ಬಚ್ಚಿಟ್ಟುಕೊಂಡ ಕಲ್ಲನ್ನು ಗುರುದೇವ ಮಾತ್ರ ತೋರಬಲ್ಲ. ತೋರಿದ ಆ ಕಲ್ಲೇ ನಿಜಲಿಂಗ  ನೋಡಾ.

**1523**

**ದುಡ್ಡಿನ ಲಿಂಗವು ಮೋಕ್ಷವ ಕೊಡಬಲ್ಲಡೆ,**
**ಅಡ್ಡ ಬೀಳುವುದೇಕಯ್ಯಾ ಗುರುವಿಗೆ ?**
**ಜಡ್ಡಳಿದ ಭಕ್ತಂಗೆ ಭಕ್ತಿಯ ಜಡ್ಡು ಏಕಯ್ಯಾ ಗುರುವೆ,**
**ಮಡ್ಡು ಡಿಂಡಿಮನಾದ ಪ್ರಿಯ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಲ್ಲು ಕಟೆದು ಆ ಕಲ್ಲಿನ ಲಿಂಗವನ್ನೆ ಹಣ ಕೊಟ್ಟು ಖರೀದಿಸಿ ಮೋಕ್ಷವ ಪಡೆದೆನೆಂದು ಹಿಗ್ಗಬಲ್ಲಡೆ ಗುರುವಿಗೆ ಅಡ್ಡ ಬೀಳುವುದಾದರು ಏಕೆ.

ಅಜ್ಞಾನದ ಜಡ್ಡು ಕಳೆದುಕೊಂಡ ಭಕ್ತನಿಗೆ ಭಕ್ತಿಯ ಜಡ್ಡು ಏಕಾದರೂ ಬರುತ್ತದೆ. ಅಂಗದಲ್ಲಿಯೆ ಸಂಗಮವಾದ ಅರಿವನ್ನು ತಿಳಿಹೇಳುವ ಲಿಂಗಕ್ಕೆ ಭಕ್ತನಾಗುತ್ತಾನೆ. ಹೊರತು ಗುರುವಿಗೆ ಭಕ್ತನಾಗಲಾರ.

**1524**

**ಲಿಂಗವ ಧರಿಸಿ ಭವಿಯಂಗನೆಯ ನೆರೆಯಬಲ್ಲಡೆ, ಷಟ್‌ಸ್ಥಲದವರೆಂಬೆನೆ ?**
**ಲಿಂಗವ ಧರಿಸಿ ಅಂಗಜನ ಸ್ನೇಹವ ಕಟ್ಟಬಲ್ಲೆಡೆ,**
**ಜಂಗಮಮರ್ದಕ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವೆಂದು ಕಾಂಬೆ.**

ಅಂಗದಲ್ಲಿಯೇ ಸಂಗಮವಾದ. ಪ್ರತಿ ಅಂಗವನ್ನು ಲಿಂಗವೆಂದೆ ತಿಳಿಯುತ್ತಾನೆ. ಅಂಗ ಹೆಣ್ಣೂ ಅಲ್ಲ. ಅದು ಗಂಡೂ ಅಲ್ಲ. ಅರಿವಿನ ಲಿಂಗಯ್ಯ ವಾಸ ಮಾಡಿದ ಪುಣ್ಯಕ್ಷೇತ್ರ. ಹೀಗೆಂದು ತಿಳಿದು ಅರಿವಿನ ಲಿಂಗವನ್ನು ಧರಿಸಿದಾತ ಭವಿಯಂಗನೆಯನ್ನು ನೆರೆಯಲಾರ.

ಅರಿವಿನ ಲಿಂಗವನ್ನು ಧರಿಸಿದಾತ ಅಂಗವುಳ್ಳವನ ಸ್ನೇಹ ಮಾಡಲಾರ. ಈತ ಜಂಗಮ ಮರ್ದಕ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ.

**1525**

**ಮಾಡಿ ಮಾಡದವ ಭಕ್ತನೆ ಅಯ್ಯಾ.**
**ಮುಟ್ಟಿ ಮುಟ್ಟದವ ಮಹೇಶನೆ ಅಯ್ಯಾ.**
**ಗೆಲವು ಸೋಲು ಒಂದು ವೇಳೆ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಮಾಡಿ ಮಾಡದವ ಭಕ್ತನಲ್ಲ, ಮುಟ್ಟಿ ಮುಟ್ಟದವ ಮಹೇಶನೇ ಅಲ್ಲ ಗೆಲವು ಸೋಲು ಒಂದು ನಾಣ್ಯದ ಎರಡು ಮುಖಗಳು. ಅಂಗದಲ್ಲಿಯೆ ಸಂಗಮವಾದ ಲಿಂಗಯ್ಯನ ಪೂಜೆ ಮಾಡಿ ಹೊರಗಣ ಲಿಂಗವನ್ನು ಪೂಜಿಸದವನು ಭಕ್ತ .

ಅರಿವೆಂಬ ಗುರುದೇವನನ್ನು ಮುಟ್ಟಿ ಪೂಜಿಸಿ ವ್ಯಕ್ತಗೊಂಡವನು ಮಹೇಶ. ಇಂತಹ ಭಕ್ತನಿಗೆ ಗೆಲವು ಇಲ್ಲ ಸೋಲು ಇಲ್ಲ. ಈತ ಕಪಿಲಸಿದ್ಧಮಲ್ಲಿಕಾರ್ಜುನನಿಗೆ ಭಕ್ತನಾದವನು.

**1526**

**ಗೆದ್ದವ ಗರಡಿಕಾರನಲ್ಲದೆ ಬಿದ್ದು ಎದ್ದವ ಗರಡಿಕಾರನೆ ಅಯ್ಯಾ ?**
**ಎದ್ದವ ಜಂಗಮವಲ್ಲದೆ ಬಿದ್ದು ಎದ್ದವ ಜಂಗಮವೆ ಅಯ್ಯಾ?**
**ಬೀಳಲಾಗದು ಜಂಗಮ, ಬೀಳಲಾಗದು ಜಗದ ಹಿರಿಯರು ?**
**ಅಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಗೆದ್ದವನು ಗರಡಿಕಾರನಲ್ಲದೆ ಬಿದ್ದು ಎದ್ದವ ಗರಡಿಕಾರನಲ್ಲ.ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನನ್ನು ಗೆದ್ದವನನ್ನು ಗರಡಿಕಾರನೆನ್ನು ಬಹುದು. ಏಕೆಂದರೆ ಇವನು ಬೀಳಲಿಲ್ಲ ಏಳಲಿಲ್ಲ.

ಕಲ್ಲನ್ನು ಕೆತ್ತಿ ಸ್ಥಾವರ ಲಿಂಗವನ್ನು ಮಾಡಿ ಆ ಲಿಂಗದ ಮುಂದೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾ ಬಿದ್ದವನು ಇವನು ಗರಡಿಕಾರನಲ್ಲ, ಎದ್ದವ ಜಂಗಮವಲ್ಲದೆ ವ್ಯಕ್ತಿಯನ್ನು ಜಂಗಮನೆಂದು ತಿಳಿದು ಆತನ ಪಾದಕ್ಕೆ ಬಿದ್ದು ಎದ್ದವ ಜಂಗಮನಾಗಲಾರ. ಜಂಗಮ ಬೀಳಲರಿಯ ಜಗದ ಹಿರಿಯರು ಕೂಡ ಬೀಳಲರಿಯರು. ಏಕೆಂದರೆ ಇವರು ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನ ಮುಂದೆ ಬಿದ್ದವರು. ಹೀಗೆ ಬೀಳುವಿಕೆ ಅಂಗದಲ್ಲಿಯೆ ನಡೆಯುತ್ತದೆ ಹೊರತು ಅಂಗ ಬೀಳುವುದಿಲ್ಲ. ಶರಣರ ಈ ಕೆಲಸ ಶರಣರ ಹೊರತು ಯಾರಿಗೂ ಕಾಣುವುದಿಲ್ಲ.

**1527**

**ಭಕ್ತರಿಪ್ಪರು ಮೂಲೋಕದಲ್ಲಿ, ಮಹೇಶರಿಲ್ಲ ಲೋಕ ಲೋಕದಲ್ಲಿ ,**
**ಮಹೇಶರಿಪ್ಪರು ಎಮ್ಮ ಪ್ರಮಥರಲ್ಲಿ,**
**ಮಹಾಶಾಂತರಿಲ್ಲ ನೋಡಾ, ಕಲಿಕಿಲ್ಮಿಷದಲ್ಲಿ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಶರಣ ಮಹಾಶಾಂತ ಆತನಿಗೆ ಏಳು ಬೀಳುಗಳಿಲ್ಲ . ಶರಣ ತಾನು ಸತಿಯಾಗಿ ಲಿಂಗಯ್ಯನನ್ನು ಪತಿಯನ್ನಾಗಿಸಿಕೊಂಡಾತ. ಈತ ಮೂರು ಲೋಕವನ್ನು ಸಂಚರಿಸಿದಾತ. ಮೂರು

ಲೋಕಗಳನ್ನು ಸೋಲಿಸಿ ಕಾಯವನ್ನೇ ಕೈಲಾಸವನ್ನಾಗಿಸಿಕೊಂಡಾತ. ತನುವನ್ನು ಆವರಿಸಿದ ಮನ ತನುವನ್ನು ಸಾತ್ವಿಕ ಲೋಕ, ರಾಜಸಲೋಕ, ತಾಮಸಲೋಕವನ್ನಾಗಿಸಿಕೊಂಡು ಮೂರು ಲೋಕ ಸಂಚರಿಸುತ್ತದೆ.

ಅರಿವನ್ನೆ ಗುರುವಾಗಿಸಿಕೊಂಡು ಭಕ್ತನಾಗಿ ಪರಿವರ್ತಿನೆಯಾದ ಮನ ಮೂರೂ ಲೋಕದಲ್ಲಿ ಸಂಚರಿಸುತ್ತದೆ. ಆದರೆ ಯಾವ ಲೋಕವನ್ನು ಅಂಟಿಸಿಕೊಳ್ಳುವುದಿಲ್ಲ. ಈ ಮೂರೂ ಲೋಕಗಳನ್ನು ಸುಟ್ಟು ಕೈಲಾಸವನ್ನಾಗಿಸಿಕೊಂಡ ಕಾಯದಲ್ಲಿ ಮಹೇಶನು ಇರುವನು. ಭಕ್ತನೂ ಇರುವನು. ಇವರೆಲ್ಲರೂ ಮಹಾಶಾಂತರು ಇಲ್ಲಿ ಕಿಲ್ಮಿಷವೆಂಬುದು ಇಲ್ಲವೇ ಇಲ್ಲ.

**1528**

**ಬೇಡಿ ಉಂಡವ ಬೇಡದುದ ಬೇಡನೆ ಅಯ್ಯಾ ?**
**ಬೇಡಲಾರದವ ಬೇಡದುದ ಬೇಡನಯ್ಯಾ .**
**ಕಾಡಿದ ಜಂಗಮ ಈಡಾಡಿದನಯ್ಯಾ ಭಕ್ತನ.**
**ಬೇಡದ ಜಂಗಮ ಭಕ್ತನ ಕೂಡಿಕೊಂಡ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗವನ್ನು ಆವರಿಸಿದ ಮನ ಬೇಡುವ ಜಾತಿಗೆ ಸೇರಿದ್ದು. ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವ ಏನನ್ನು ಹೇಳದಾತ. ಮನ ಗುರುದೇವನನ್ನು ಬೇಡಿದರೆ ಇನ್ನು ಯಾರನ್ನೂ ಬೇಡುವುದಿಲ್ಲ. ಮನವೂ ಅವ್ಯಕ್ತ , ಗುರುದೇವನೂ ಅವ್ಯಕ್ತ . ಈ ಗುರುದೇವನು ಬೇಡುವ ಮನಕ್ಕೆ ಬೇಡಿದ್ದೆಲ್ಲ ಕೊಡುವನು.

ಮನ ಕಾಯಕ್ಕೆ ಜಂಗಮ ವೇಷ ಧರಿಸಿ ಕಾಯವುಳ್ಳ ಭಕ್ತನನ್ನು ಬೇಡುತ್ತದೆ. ಕಾಯದಲ್ಲಿ ಸಂಗಮವಾದ ಜಂಗಮವೇ ನಿಜವಾದ ಜಂಗಮ; ಈತ ಮನವನ್ನು ಭಕ್ತನನ್ನಾಗಿಸಿ ಕೂಡಿಕೊಳ್ಳುತ್ತದೆ.

**1529**

**ಬೇಡಲಾಗದು ಜಂಗಮ, ಬೇಡಿಸಲಾಗದು ಭಕ್ತ**
**ಬೇಡಿದವ ನೋಡದಿರೆ, ಬೇಡ ಬೇಡ ಭಕ್ತಿಯ ಆಡಂಬರವ,**
**ಮೃಡಮೂರ್ತಿ ಕಪಿಲಸಿದ್ಧಮಲ್ಲಿಕಾರ್ಜುನ.**

ಅಂಗದಲ್ಲಿಯೇ ಸಂಗಮವಾದ ಜಂಗಮ ಬೇಡುವವನಲ್ಲ ಇವನು ಅವ್ಯಕ್ತ ಯಾರಿಗೂ ಕಾಣುವುದಿಲ್ಲ. ತನುವನ್ನು ಆವರಿಸಿದ ಮನ ಜಂಗಮನಿಗೆ ಭಕ್ತನಾದಾಗ ಈತ ಕೂಡ ಯಾರನ್ನೂ ಬೇಡುವುದಿಲ್ಲ.

ಮನ ಅಂಗಕ್ಕೆ ಜಂಗಮನ ವೇಷ ಧರಿಸಿ ಕಾಯವುಳ್ಳ ಭಕ್ತನನ್ನು ಬೇಡುತ್ತದೆ. ಈ ಜಂಗಮ ಭಕ್ತನಿಗೆ ಏನನ್ನೂ ಕೊಡುವುದಿಲ್ಲ. ಅಜ್ಞಾನದಿಂದ ಜಂಗಮನಲ್ಲಿಗೆ ಬೇಡಲು ಬಂದ ಭಕ್ತನನ್ನು ವೇಷಧಾರಿ ಜಂಗಮ ಬೇಡುತ್ತಾನೆ ಹೊರತು, ಅಂಗದಲ್ಲಿಯೇ ಜ್ಞಾನ ಸಂಗಮವಾಗಿದೆ ಎಂದು ಹೇಳಲಾರ. ಇವರಿಬ್ಬರದ್ದೂ ಆಡಂಬರದ ಭಕ್ತಿ ; ಮೃಡಮೂರ್ತಿ ಕಪಿಲಸಿದ್ಧಮಲ್ಲಿಕಾರ್ಜುನ ಇವರಿಗೆ ಒಲಿಯಲಾರ.

**1530**

**ಲಿಂಗವ ಪೂಜಿಸಿ ಅಂಗವ ನಿರ್ವಯಲ ಮಾಡೆಹೆನೆಂಬವನ**
**ಮುಖವ ನೋಡಲಾಗದು.**
**ಕುರುಹಿಟ್ಟು ಪೂಜಿಸುವ ಲಿಂಗ ತಾನುಳಿದವು ಭೂಮಿಯಲ್ಲಿ.**
**ಲಿಂಗವ ಧರಿಸಿದ ದೇಹ ನಿರ್ವಯಲಹುದು.**
**ಲಿಂಗಪೂಜೆಯಲ್ಲಿ ಹುರುಳಿಲ್ಲ, ಹುರುಳಿಲ್ಲ, ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಸ್ಥಾವರ ಲಿಂಗವನ್ನು ಪೂಜಿಸಿ ಅಂಗವನ್ನು ನಿರ್ಬಯಲಾಗಿ ಮಾಡುವೆನೆಂಬವನ ಮುಖವನ್ನು ನೋಡಲಾಗದು. ಏಕೆಂದರೆ ಪ್ರತಿ ಅಂಗದಲ್ಲಿಯೂ ಅರಿವು ಎನ್ನುವ ನಿರ್ಬಯಲ ಲಿಂಗವು ಸಂಗಮವಾಗಿರುವಾಗ ಅಂತಹ ಅಂಗವನ್ನು ಸ್ಥಾವರ ಲಿಂಗ ಪೂಜಿಸಿ ನಿರ್ಬಯಲು ಮಾಡಲು ಸಾಧ್ಯವಿಲ್ಲ.

ಸ್ಥಾವರ ಲಿಂಗ ಕುರುಹುಳ್ಳದ್ದು ಅದು ಸಕಲರಿಗೂ ಕಾಣುತ್ತದೆ. ಕಲ್ಲಿನಿಂದ ಕಟೆದು ಲಿಂಗವನ್ನಾಗಿ ಮಾಡಲಾಗಿದೆ. ಇದು ಭೂಮಿಯಲ್ಲಿ ಉಳಿಯುತ್ತದೆ. ಬಯಲಲ್ಲಿ ನಿರ್ಬಯಲಾಗುವುದಿಲ್ಲ. ಲಿಂಗವ ಧರಿಸಿದ ದೇಹ ನಿರ್ಬಯಲಾಗುವುದು. ಏಕೆಂದರೆ ಅಂಗದಲ್ಲಿ ನಿರ್ಬಯಲ ಲಿಂಗ ಸಂಗಮವಾಗಿದೆ. ಅಂಗದ ಮೇಲೆ ಲಿಂಗ ಕಟ್ಟಿಕೊಂಡು ಅದನ್ನು ಪೂಜಿಸುವುದರಲ್ಲಿ ಹುರುಳಿಲ್ಲ, ಹುರುಳಿಲ್ಲ. ಇಂತಹ ಅಂಗವನ್ನು ಅಂಗದಲ್ಲಿಯೇ ಸಂಗಮವಾದ ಗುರುದೇವ ಅಪ್ಪಿಕೊಳ್ಳುವುದಿಲ್ಲ.

**1531**

**ಮುನ್ನ ಮಾಡಿದ ದೇಹ ನಿರ್ವಯಲಾದಡೆ,**
**ಧರಿಸುವುದೇಕೋ ಕಲ್ಲುಲಿಂಗವ, ಎಲೆ ಆಯ್ಯಾ ?**
**ಅಂಗಗುಣ ಲಿಂಗಕ್ಕಾಯಿತ್ತು , ಲಿಂಗಗುಣ ಅಂಗಕ್ಕಾಯಿತ್ತು .**
**ಇವೆಲ್ಲ ಭವಸಂಕಲ್ಪವಿಕಲ್ಪವು. ಅಂಗ ಲಿಂಗವೆಂಬುದು ಪಳಮಾತು**
**ಲಿಂಗಮಧ್ಯೇ ಜಗತ್ಸರ್ವಂ ಎಂಬುದು ಅಖಂಡಲಿಂಗ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹ ನಿರ್ವಯಲೆಂದು ಮಾತನಾಡಿ ಅಂಗದ ಮೇಲೆ ಲಿಂಗ ಧರಿಸುವುದು ಸರಿಯೆ. ಅಂಗದ ಪರಿಚಯ ಲಿಂಗಕ್ಕಿಲ್ಲ, ಆ ಲಿಂಗದ ಪರಿಚಯ ಅದನ್ನು ಧರಿಸಿದ ಅಂಗಕ್ಕೂ ಇಲ್ಲ. ಅಂಗಗುಣ ಲಿಂಗಕ್ಕಾಯಿತ್ತು , ಲಿಂಗಗುಣ ಅಂಗಕ್ಕಾಯಿತ್ತು .

ದೇಹ ನಿರ್ಬಯಲೆಂದು ಶರಣರಿಂದ ಕೇಳಿದ ಮಾತು ಆಡಬಹುದು. ಮಾತನಾಡಿದ ಮಟ್ಟಿಗೆ ಅಂಗ ನಿರ್ಬಯಲಾಯಿತ್ತೆ ? ಇದೆಲ್ಲ ಭವಿ ಸಂಕಲ್ಪವಿಕಲ್ಪವು. ಅಂಗವೇ ಲಿಂಗವೆಂಬುದು ಬರೀ ಮಾತು. ಲಿಂಗ ಮಧ್ಯೇ ಜಗತ್ಸರ್ವಂ ಅಖಂಡ ಲಿಂಗ ನೋಡಾ ಎಂದಿದ್ದಾರೆ ಸಿದ್ಧರಾಮಶಿವಯೋಗಿಗಳು. ಜಗದಲ್ಲಿರುವ ತನುಗಳ ತುಂಬ ಅರಿವು ಎನ್ನುವ ಲಿಂಗಯ್ಯ ಗುರುದೇವನಾಗಿ ವ್ಯಾಪಿಸಿಕೊಂಡಿದ್ದಾನೆ. ಹೀಗಾಗಿ ಬಸವಣ್ಣನವರು, ಜಗದಗಲ ಮುಗಿಲಗಲ

ಮಿಗೆಯಗಲ ನಿಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮ ಲಿಂಗವೆ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ ಎಂದಿದ್ದಾರೆ ಅಣ್ಣ ಬಸವಣ್ಣ.

ಇಡೀ ವಿಶ್ವವನ್ನು ವ್ಯಾಪಿಸಿಕೊಂಡ ಅರಿವೆಂಬ ಲಿಂಗಯ್ಯ ಗುರುದೇವನಾಗಿ ಅಂಗದಲ್ಲಿ ಬಂದು ಚುಳುಕಾಗಿದ್ದಾನೆ.

**1532**

**ಗಟ್ಟಿ ಹಿಡಿದು ಗೊತ್ತ ಮುಟ್ಟಬಾರದಯ್ಯಾ ನೀರಲ್ಲಿಯ ಕ್ರೀಡೆ ಕುಂಬಳಕಾಯಿಗಲ್ಲದೆ,**
**ದೊಡ್ಡ ಬಂಡೆಗುಂಟೇನಯ್ಯಾ ?**
**ಚರಿಸುವ ಜೀವಿಗೆ, ನಿರ್ವಯಲ ಪರವಸ್ತು ಲಿಂಗವಲ್ಲದೆ,**
**ಪಾಷಾಣಮಯ ಲಿಂಗವೆ ಅಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿ ಅರಿವು ಲಿಂಗವಾಗಿ ಸಂಗಮವಾಗಿರುವಾಗ ಪುನಃ ಅಂಗದ ಮೇಲೆ ಪಾಷಾಣಮಯವಾದ ಲಿಂಗವನ್ನು ಧರಿಸುವುದು ತರವಲ್ಲ ಅರಿವು ಎನ್ನುವ ಗಟ್ಟಿ ವಸ್ತುವನ್ನು ಮನ ಹಿಡಿದು ಮತ್ತೆ ಅಜ್ಞಾನದ ಕೆಲಸವನ್ನು ಮಾಡಬಹುದೆ ? ನೀರಲ್ಲಿ ತೇಲುವ ಶಕ್ತಿ ಕುಂಬಳಕಾಯಿಗಿದೆ. ದೊಡ್ಡ ಬಂಡೆಗೆ ಇಲ್ಲ.

ದೇಹವೆಂಬುದು ಬೋಧೀವೃಕ್ಷ, ನಡೆದಾಡುವ ಬೇರಿಲ್ಲದ ಮರ. ಇದಕ್ಕೆ ನಿರ್ಬಯಲು ನಿರಾಕಾರ ನಿರ್ಗುಣಿ ಲಿಂಗವೆ ಸಂಗಮವಾಗಿರುವಾಗ ಪುನಃ ಅಂಗದ ಮೇಲೆ ಪಾಷಾಣಮಯವಾದ ಲಿಂಗವನ್ನು ಧರಿಸುವುದು ಸೂಕ್ತವೆ ? ಎಂದಿದ್ದಾರೆ ಸಿದ್ಧರಾಮಶಿವಯೋಗಿಗಳು.

**1533**

**ಕಲ್ಲು ಹಿಡಿದು ಅಲ್ಲಮನ ನೋಡುವೆವೆಂಬವರ**
**ಖುಲ್ಲಮನುಜರೆಂಬೆ. ಕಲ್ಲುಹಿಡಿದವರೆಲ್ಲ ಅಲ್ಲಮನಾಗಲು,**
**ಭವ ಬೀಜ ಇನ್ನೆಲ್ಲಿಯದಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಲ್ಲು ಹಿಡಿದವರೆಲ್ಲ ಅಲ್ಲಮಪ್ರಭು ಆಗಲಾರರು. ಅವರೆಲ್ಲ ಖುಲ್ಲ ಮನುಜರು. ಅಂಗದಲ್ಲಿಯೇ ಸಂಗಮವಾದ ಅರಿವನ್ನು ಒಲಿಸಿಕೊಳ್ಳಲು ಜಗದಲ್ಲಿರುವ ಸಕಲ ತನುಗಳ ಮನಗಳಿಗೆ ಸಾಧ್ಯವಾಗುವುದಿಲ್ಲ.

ಕಲ್ಲು ಹಿಡಿದವರೆಲ್ಲ ಅಲ್ಲಮ ಪ್ರಭುಗಳೆ ಆದರೆ ಭವಬೀಜ ಇನ್ನೆಲ್ಲಿಯದಯ್ಯಾ ಎಂದು ಪ್ರಶ್ನಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1534**

**ಗುಣ ನೋಡುವಡೆ ಕೀಳು ಗುಣವಯ್ಯಾ ಧೇನುವಿನಲ್ಲಿ.**
**ನಿಂದಿಸುವ, ಬಂದ ಭಕ್ತರ ಹಾದು ಹೋಗುವ ಕುಂದುವಡೆಯದೆ,**

**ಮಲತ್ರಯ ಪೊಂದದ ಸಚ್ಚಿದಾನಂದ ಗುಣವುಂಟಯ್ಯಾ**
**ಮಹೇಶನಲ್ಲಿ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಮಹೇಶ ಎಂದರೆ ಬರಿ ಹೆಸರಲ್ಲ. ಹೆಸರೇ ಇಲ್ಲದ ಹೆಸರು. ಅಂಗಕ್ಕೆ ಹೆಸರಿದೆ. ಇಟ್ಟುಕೊಂಡ ಹೆಸರೆ ತನುವನ್ನು ಪ್ರಪಾತಕ್ಕೆ ತಳ್ಳುತ್ತದೆ. ಅಂಗದಲ್ಲಿ ಎಲ್ಲಿ ನೋಡಿದರೂ ಹೆಸರಿಲ್ಲ ಆದರೂ ಹೆಸರು ಎನ್ನುವ ಅಜ್ಞಾನ ತನುವನ್ನು ಹಗಲಿರುಳು ಕಾಡುತ್ತದೆ. ಸತ್, ಚಿತ್ ಆನಂದದ ನಿರ್ಗುಣವುಳ್ಳವನು ಪ್ರತಿ ಅಂಗದಲ್ಲಿಯೂ ಸಂಗಮವಾಗಿದ್ದಾನೆ. ಆತನನ್ನು ಮಹೇಶ ಎಂದು ಪುರಾತನರು ಹೆಸರಿಟ್ಟು ಕರೆದಿದ್ದಾರೆ. ಆತನಿಗೆ ಯಾವ ಹೆಸರು ಇಲ್ಲ ಆತ ಒಡಲೊಡೆಯ. ಒಡಲನ್ನು ಸೋಂಕದೆ ಒಡಲನ್ನು ಬೆಳಗುತ್ತ ಒಡಲೊಳಗೆ ಇದ್ದಾನೆ. ಮಲತ್ರಯವನ್ನು ಹೊಂದದಾತ.

ಮನ ತನುವನ್ನು ಹಿಡಿದು ನಿಂದನೆಗೆ ಒಳಗಾಗುವ ನಿಂದಿಸುವ ಕುತಂತ್ರ ಶಕ್ತಿಯನ್ನು ಹೊಂದಿದೆ. ಮಹೇಶನಿರುವ ಒಡಲನ್ನು ತನ್ನದೇ ಎಂದು ಬೀಗುತ್ತಿದೆ. ಹಸು ಕೀಳಾದರೂ ಅದರ ಹಾಲು ಕೀಳಲ್ಲ. ತನುವನ್ನು ಆವರಿಸಿದ ಪ್ರತಿ ಮನವೂ ಮಲತ್ರಯಗಳೇ ಇಲ್ಲದ ಸಚ್ಚಿದಾನಂದವುಳ್ಳ ನಿರ್ಗುಣಿ ಮಹೇಶನ ದರ್ಶನ ಆಗುವುದು ಬಲು ಕಠಿಣದ ಕೆಲಸ.

**1535**

**ಗುಣ ನೋಡಿ ಬಿಟ್ಟವ ಕ್ಷೀರಘೃತವ ಕಾಣದೆ ಹೋದನಯ್ಯಾ.**
**ಗುಣ ನೋಡಿ ಹಳಿದವ ಅರುಹಿನ ಕುರುಹ ಅರಿಯದೆ ಹೋದನಯ್ಯಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವಿನಲ್ಲಿ ರಜೋ ಗುಣ, ತಾಮಸಗುಣ ಸಾತ್ವಿಕ ಗುಣಗಳೆಂದು ಮೂರು ಗುಣಗಳಿವೆ. ತನುವಿನಲ್ಲಿ ತನ್ಮಯವಾದ ಪರಮಾತ್ಮನಿಗೆ ಯಾವ ಗುಣವೂ ಇಲ್ಲ ಆತ ಗುಣಾತೀತ.

ಒಂದು ತನುವಿನಲ್ಲಿ ಈ ಮೂರರಲ್ಲಿ ಯಾವ ಗುಣವನ್ನು ನೋಡಿದರೂ ಆ ತನು ಗುಣವುಳ್ಳ ತನುವಲ್ಲ. ಗುಣ ನೋಡಿಯೆ ತನುವು ತನುವಿನ ಗೆಳೆತನ ಮಾಡುತ್ತದೆ. ತನುವಿನಲ್ಲಿ ಕೀಳುತನ ಕಂಡರೆ ಸಾಕು ಗೆಳೆತನ ಮಾಡಿದ ತನು ವೈರಿಯಾಗುತ್ತದೆ. ಆ ತನುವಿನಲ್ಲಿ ತನ್ಮಯವಾದ ಅಮೃತ ಕಾಣದೆ ಹೋಗುತ್ತದೆ.

ಅರಿವಿನ ದರ್ಶನ ಮಾಡಿಕೊಂಡ ತನು ತನುವಿನಲ್ಲಿ ತನ್ಮಯವಾದ ಗುರುದೇವನನ್ನೇ ನೋಡುತ್ತದೆ. ಗುಣ ನೋಡಿ ದೂರ ಹೋಗುವುದಿಲ್ಲ. ಸಕಲ ತನುಗಳನ್ನು ಗುರುವಿದ್ದ ತನುಗಳೇ ಎಂದು ನೋಡಿ ಆ ತನುಗಳಿಗೆ ಶರಣು ಶರಣಾರ್ಥಿ ಎಂದು ತಲೆಬಾಗುತ್ತದೆ.

ಪ್ರತಿ ತನುವು ಅರಿವಿನ ಕುರುಹುಳ್ಳ ತನು. ತನು ಅರಿವಿನ ಒಡವೆ. ಅರಿವಿನ ಒಡವೆಯನ್ನು ಅರಿಯದೆ ಹೋದರೆ ಗುಣ ನೋಡಿ ಹಾಲು-ತುಪ್ಪವ ಬಿಟ್ಟಂತೆ ಆಗುತ್ತದೆ.

**1536**

**ಕೀಳಾಗಿ ಹೋದಂತೆ ಆಳ್ದಂಗೆ ಅಮೃತ ಕೊಟ್ಟಿತ್ತಯ್ಯಾ (ಅವು)**
**ಆಳಾಗಿ ನಡೆದಂತೆ ಮೋಕ್ಷವ ಕೊಟ್ಟನಯ್ಯಾ ,ಮಹೇಶನು.**
**ಕೀಳಾಳು ಬಹು ಲೇಸು ಕಂಡಯ್ಯಾ , ಲೋಕದ ಪ್ರಾಣಿಗಳಿಗೆ**

**ಕಪಿಲಸಿದ್ಧಮಲ್ಲಿಕಾರ್ಜುನಾ.**

ಕೀಳಾಗಿ ಹೋದವನಿಗೆ ಹಸು ಅಮೃತದನ್ನು ಕೊಡುತ್ತದೆ. ಕಿಳಿಂಗೆ ಕೀಳಾಗಿ ಆಳಾಗಿ ನಡೆದವನಿಗೆ ಮಹೇಶನು ಮೋಕ್ಷವನ್ನೇ ಕೊಡುತ್ತಾನೆ. ಕೀಳಾಗಿ ಆಳಾಗುವುದು ಬಹು ಲೇಸು. ಕಂಡಯ್ಯಾ ಲೋಕದ ಪ್ರಾಣಿಗಳಿಗೆ.

ತನುವಿನಲ್ಲಿ ತನ್ಮಯವಾದ ಅರಿವು ಕಾಣುವುದಿಲ್ಲ ಅದು ಸಕಲ ತನುಗಳಲ್ಲಿಯೂ ಇದೆ. ಅರಿವು ಎಂದರೆ ಸಾಮಾನ್ಯವಲ್ಲ ಸಾಕ್ಷಾತ್ ಗುರುದೇವನು. ಮಹಾದೇವ ಸದಾಶಿವನು ಹೌದು. ಸಾಕ್ಷಾತ್ ಪರಬ್ರಹ್ಮನು ಹೌದು. ಪ್ರತಿ ತನುವಿನಲ್ಲಿ ತನ್ಮಯವಾದ ಗುರುದೇವರನ್ನು ನೋಡಿದ ತನು ಕೀಳಾಗಿ ಆಳಾಗಿ ಬಾಗಲೇಬೇಕು. ಆಗ ತನ್ನಲ್ಲಿರುವ ಅಹಂಕಾರವನ್ನು ತನುವಿನಲ್ಲಿ ತನ್ಮಯವಾದಾಗ ಮಹೇಶನಿಗೆ ಒಪ್ಪಿಸಿದಂತಾಗುತ್ತದೆ.

ಒಂದು ತನು ಕೀಳಾಗಿ ಆಳಾಗಿ ಭೌತಿಕ ಕಾಯಕದಲ್ಲಿ ತೊಡಗಿದರೂ ಸಹ ಅಂತಹ ತನುವಿನಲ್ಲಿ ಮಹೇಶನು ಸಂಗಮವಾಗಿದ್ದಾನೆ. ಆ ಮಹೇಶನಿದ್ದ ತನುವಿಗೆ ಕೀಳಾಗಿ ಆಳಾಗಿ ನಡೆದುಕೊಳ್ಳುವುದು ಎಂತಹ ಸುಂದರವಾದ ಮಾತು. ವಿಶ್ವದ ಸಕಲ ತನುಗಳಿಗೆ ಈ ಶಿಕ್ಷಣ ಆಯಾ ಸರ್ಕಾರಗಳು ನೀಡಿದರೆ ವಿಶ್ವವೇ ಶಿವಮಯವಾಗುತ್ತದೆ.

**1537**

**'ತತ್ಪೂಜಾಲ್ಲಭತೇ ಮುಕ್ತಿ ಸತ್ಪೂಜಲ್ಲಭತೇ ಧನಂ'**
**ಎಂಬಾಗಮ ಪುಸಿಯಲ್ಲ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಸದಾ ಅರಿವಿನ ಪೂಜೆಯಲ್ಲಿ ತೊಡಗಿದ ಮನಕ್ಕೆ ಇಂದಿಲ್ಲ ನಾಳೆ ಮುಕ್ತಿ ಸಿಕ್ಕೇ ಸಿಗುತ್ತದೆ. ಹಾಗೆಯೇ ಸತ್ಪೂಜೆಯಲ್ಲಿ ತೊಡಗಿದ ಮನಕ್ಕೆ ಧನ ಕನಕಾದಿಗಳು ಸಿಕ್ಕೇ ಸಿಗುತ್ತವೆ ಎಂಬ ಆಗಮದ ಮಾತು ಸುಳ್ಳಲ್ಲ.

ವೇದ ಆಗಮಗಳನ್ನು ನೋಡಿ ಅರಿವೆಗೆ ಹೋಗುವ ಅವಶ್ಯಕತೆಯಿಲ್ಲ. ಸಕಲ ವೇದ ಆಗಮಗಳು ತನುವಿನಿಂದಲೆ ಹೊರಗೆ ಬಂದಿವೆ. ತನುವಿನಿಂದಲೆ ಹೊರಗೆ ಬಂದ ವೇದ ಆಗಮಗಳು ತನುವಿಗೆ ಪಾಠ ಮಾಡಲು ಸಾಧ್ಯವೆ ? ಅವು ಸತ್ತವರು ರದಿಟ್ಟು ಹೋದ ಪತ್ರಗಳು ಅದರಿಂದ ತನುವಿಗೆ ಮುಕ್ತಿ ಸಿಗುವುದಿಲ್ಲ.

**1538**

**ಭಕ್ತಿಯ ಮಾಡುವುದು ಮಲತ್ರಯದೊಳಗಲ್ಲ**
**ಮುಕ್ತಿಯ ಪಡೆವಡೆ ಜಡಜೀವಿಯಲ್ಲ ನೋಡಾ ಭಕ್ತನು.**
**ಭಕ್ತನಿಗೆ ಭಕ್ತಿಮುಕ್ತಿ ಎಂಬ ಯುಕ್ತಿ ಸೊಗಸದಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಭಕ್ತನೆಂದರೆ ತೋರಿಕೆಯ ಭಕ್ತನಲ್ಲ. ಭಕ್ತನಿಗೆ ಯಾವ ವೇಷಗಳೂ ಇಲ್ಲ .ಮಲತ್ರಯಗಳು ಅವನಿಗೆ ಇಲ್ಲ . ಮನ ಅರಿವಿಗೆ ಭಕ್ತಿ ಮಾಡಿ ಭಕ್ತನಾದವನಿಗೆ ಮೂರು ಗುಣಗಳೂ ಇಲ್ಲ ಮಲತ್ರಯಗಳೂ ಇಲ್ಲ. ಇವೆಲ್ಲವುಗಳನ್ನು ದಾಟಿದವನೆ ಮಹೇಶನು. ಆತ ತಾನು ಕಟ್ಟಿಕೊಂಡ ಬಂಧನಗಳನ್ನು ತಾನೇ ಕಿತ್ತೊಗೆದು ಅವುಗಳಿಂದ ಮುಕ್ತನಾದಾತ. ಭಕ್ತ ಜಡ ಜೀವಿಯೂ ಅಲ್ಲ. ಅಂತಹ ಭಕ್ತನಿಗೆ ಭಕ್ತಿಮುಕ್ತಿ ಎಂಬ ಮಾತು ಅನ್ವಯವಾಗುವುದಿಲ್ಲ. ಈತ ಅರಿವು ಎನ್ನುವ ಗುರುದೇವ ನೊಂದಿಗೆ ಶಿಷ್ಯನಾಗಿ ಮಾತನಾಡುತ್ತಿರುತ್ತಾನೆ.

**1539**

**ಚರ್ಮವ ಧರಿಸಿಪ್ಪೆನೆಂಬವರು, ಅದು ಪುಸಿಯೇನಯ್ಯಾ?**
**ಪಂಚ ದೇಹಾಂತರ್ಯಾಮಿಯೆಂಬುದು ಶ್ರುತಿಸಿದ್ಧ.**
**'ಕೃತ್ತಿ ವಾಸನೇ ನಮಃ ಜಗದಂತರ್ಯಾಮಿನೇ ನಮಃ'**
**ಬ್ರಹ್ಮ ಕಪಾಲವ ಧರಿಸಿ ತೃಪ್ತಿಯಪ್ಪೆನೆಂಬರು,**
**ಅದು ಪುಸಿಯೇನಯ್ಯಾ ? ಸರ್ವಮುಖದಲ್ಲಿ ಭೋಜಿಸುವುದಾಗಿ**
**''ಮಹಾದೇವಿ ಚರಣಂ ಚ ಮುಖೇನಾಸ್ವಾದನಂ ಚಿರಂ**
**ಕರೋಮಿ ಪ್ರಮುದಾ ಲೇಹ್ಯಂ ಚೋಹ್ಯಂ ಭಿಕ್ಷಾದಿಕಂ ಮಹಾತ್''**
**ಎಂಬುದು ಆಗಮಸಿದ್ಧ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಚರ್ಮವನ್ನು ಧಾರಣೆ ಮಾಡಿದರೆ ಚರ್ಮದಲ್ಲಿರುವ ಕಾಮದ ಬಾಧೆಗಳು ಹೋಗುವುದಿಲ್ಲ. ಅದು ಶುದ್ಧ ಸುಳ್ಳು.

ಚರ್ಮದಲ್ಲಿ ಕಾಣುವ ಚರ್ಮ ಒಂದೆ. ಅದರಲ್ಲಿ ಮನೋಮಯವಾದ ಚರ್ಮ ಕಾಣುವ ಚರ್ಮದಲ್ಲಿ ಆವರಿಸಿಕೊಂಡಿದೆ. ಚರ್ಮವನ್ನು ಧಾರಣೆ ಮಾಡಿದ ಅರಿವಿನ ಶಿವ ಚರ್ಮದಲ್ಲಿಯೇ ಸಂಗಮವಾಗಿದ್ದಾನೆ. ಈತನಿಗೆ ಮುಟ್ಟು ತಟ್ಟುಗಳ ಬಾಧೆಗಳಿಲ್ಲ. ಸಕಲ ಕಾಮಗಳನ್ನು ಸುಟ್ಟವನು. ಈತನನ್ನು ಚರ್ಮಾಂಬರಿ ಎಂದು ಕರೆಯುತ್ತಾರೆ. ಈ ಚರ್ಮವನ್ನು ಧಾರಣೆ ಮಾಡಿದವನು ಶರಣ.

ದೇಹದಲ್ಲಿಯೆ ಪಂಚದೇಹಗಳನ್ನು ಮಾಡಿಕೊಂಡು ಐದೂ ದಿಕ್ಕಿನಲ್ಲಿ ಅರಿವಿನಿಂದ ನೋಡುವವನು. ಇವನು ಜಗದಂತರ್ಯಾಮಿ. ಈತ ಬ್ರಹ್ಮ ಕಪಾಲವನ್ನು ಧರಿಸಿದಾತ. ಸರ್ವ ಮುಖದಲ್ಲಿ ಅರಿವಿನ ಭೋಜನವನ್ನು ಮಾಡುವಾತ. ಮಹಾದೇವಿಯನ್ನು ಅರಿವಿನ ಮುಖದಿಂದಲೇ ಭೋಗಿಸಿದಾತ ಎಂಬುವುದು ಆಗಮಸಿದ್ಧಿ. ಶರಣನಿಗೆ ಇದು ಸ್ವತಃ ಸಿದ್ಧಿ.

**1540**

**ಒಂದಿಲ್ಲಡೆ ಪರ್ವತ ಸಂದಿಯದೇಕಯ್ಯಾ ಯತಿಗೆ ?**
**ಅಂದಾಶ್ರಯಿಸಿ ಮಯೂರ ಚಂದವಾಯಿತ್ತೇನಯ್ಯಾ.**
**ಇವೆಲ್ಲ ಬರಿಯ ಭ್ರಮೆ !**
**ಸಂದಳಿದು ಇಂದುಧರ ತಾನಾಗಬಲ್ಲಡೆ.**
**ಗಿರಿ ಗ್ರಾಮ ವನವಾಸದ ಗೊಂದಿ ಏಕಯ್ಯಾ ?**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವಿನಲ್ಲಿ ತನ್ಮಯವಾದ ಮಹಾಜ್ಞಾನವನ್ನು ತನುವನ್ನು ಆಶ್ರಯಿಸಿದ ಮನದಿಂದ ಪಡೆದು ಆ ಮನವೇ ಘನಮನವಾಗಬೇಕಾದರೆ, ಆ ಮನವೇ ಮಹದೇವನೆಂದು ಕರೆಸಿಕೊಳ್ಳಲು ಸಾಧ್ಯವಾದಾಗ ಅಂತಹ ಮನ ತನುವನ್ನು ಹಿಡಿದು ವನವಾಸಕ್ಕಾದರೂ ಏಕೆ ಹೋಗುತ್ತದೆ. ಗಿರಿ ಗ್ರಾಮವಾದರೂ ಏಕೆ ಸುತ್ತಲು ಹೋಗುತ್ತದೆ. ಜಪತಪವನ್ನಾದರೂ ಏಕೆ ಮಾಡಲು ಹೋಗುತ್ತದೆ. ಇವೆಲ್ಲ ಬರಿಯ ಭ್ರಮೆಯೆಂದು ಭ್ರಮೆಯನ್ನು ಆವರಿಸಿಕೊಂಡ ಮನ ಪರಬ್ರಹ್ಮವೇ ತಾನಾಗುತ್ತದೆ.

**1541**

**ಊರಲ್ಲಿರುವ ವಸ್ತು ಅದೆ ನೋಡಯ್ಯಾ. ವನದಲ್ಲಿರುವ ವಸ್ತು ಅದೆ ನೋಡಯ್ಯಾ.**
**ಚರಿಸಿ ಚರಿಸಿ ಜಗವನುದ್ಧರಿಸುವ ವಸ್ತು ಅದೆ ನೋಡಯ್ಯಾ.**
**ಮೂಲೋಕದೊಡೆಯ ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಪರವಸ್ತು ಅದೆ ನೋಡಯ್ಯಾ.**

ಸಾತ್ವಿಕ, ರಾಜಸ, ತಾಮಸ ಲೋಕವೆಂಬ ಮೂರು ಲೋಕವನ್ನು ಸಂಚರಿಸಿ ಅದರ ಅಜ್ಞಾನವನ್ನು ಸುಟ್ಟು ಭಸ್ಮ ಮಾಡಿ ಮೂರು ಲೋಕದ ಒಡೆಯನೆಂದು ಕರೆಸಿಯಿಕೊಂಡಾತ ಮಹಾಜ್ಞಾನಿ. ಪರಮಪಿತಾ ಪರಮೇಶ್ವರನು ಈತ. ಜಗವನುದ್ಧರಿಸುವ ಮಹಾದೇವನು. ಊರು, ವನವನ್ನು ಉದ್ಧರಿಸುವ ಮಹಾಜ್ಞಾನಿಯು ಈತನೆ. ಈತ ತನುವಿನ ಒಡೆಯ. ತನುವಿನಲ್ಲಿಯೇ ತನ್ಮಯವಾದಾತ. ಈತನನ್ನು ಹುಡುಕಲು ಮನ ತನುವಿನೊಂದಿಗೆ ಊರು,ವನ, ಗಿರಿ ಗಹ್ವರಗಳನ್ನು ಸಂಚರಿಸುತ್ತದೆ. ತಿಳಿದರೆ ತನುವಿನಲ್ಲಿಯೇ ಹುಡುಕುತ್ತದೆ.

**1542**

**ಒಂದಾದವಂಗೆ ಬಂದ ಸುಖದುಃಖಗಳ ಭಂಗವೇನಯ್ಯಾ?**
**ಒಂದಾದವಂಗೆ ಇಂದುಧರನೊಲವೇನಯ್ಯಾ ?**
**ಒಂದಾದವಂಗೆ ಕನಕಲೋಷ್ಠವೆಂಬುದೇನಯ್ಯಾ ? ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವಿನಲ್ಲಿಯೆ ತನ್ಮಯವಾದ ಪರಮಾತ್ಮನಿಗೆ ತನುವನ್ನು ಆವರಿಸಿದ ಮನ ಶರಣು ಹೋದರೆ ಸಾಕು ಆ ಪರಮಾತ್ಮನಲ್ಲಿಯೇ ಐಕ್ಯವಾಗಿ ಒಂದಾಗುತ್ತದೆ,

ಒಂದಾದ ಕಾಯಕ್ಕೆ ಸುಖದುಃಖಗಳ ಭಂಗವಿಲ್ಲ. ಒಂದಾದ ವಸ್ತುವಿಗೆ ಸಂಸಾರದ ದಂದುಗವಿಲ್ಲ. ಮನ ಘನ ಒಂದೇ ಆದ ಮೇಲೆ ಸದಾ ಪರಮಸುಖವನ್ನು ಹೊಂದುತ್ತಾ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನೇ ತಾನಾಗುತ್ತದೆ.

**1543**

**ಅಂದಿನ ಪರಿ ಇಂದಿನ ಪರಿ ಬೇರೆ ಕಂಡೆಯಾ, ಮನವೆ.**
**ಅಂದಿನ ವಿಷ ಇಂದಮೃತವಾಯಿತ್ತು ಕಂಡೆಯಾ, ಮನವೆ.**
**ಅಂದಿನ ದೇವಾಂಗನೆ ಇಂದು ನಿಮಗೆ ಚಿಚ್ಛಕ್ತಿಯಾಯಿತ್ತು ಕಂಡೆಯಾ, ಮನವೆ**
**ಅಂದಿನವ ನೀನಿಂದು ಕಪಿಲಸಿದ್ಧಮಲ್ಲಿಕಾರ್ಜನನೆಂದು**
**ನಂಬು ಕಂಡೆಯಾ, ಮನವೆ**

ತನುವಿನಲ್ಲಿ ತನ್ಮಯವಾದ ಪರಮಾತ್ಮನ ಪಾದ ಕಮಲಗಳಿಗೆ ತನುವನ್ನು ಆವರಿಸಿದ ಮನ ಎರಗಿ ಆ ಪರಮಾತ್ಮನಿಗೆ ಚಿಚ್ಛಕ್ತಿಯಾದಳು, ಸಾಕ್ಷಾತ್ ಪರಮಾತ್ಮನಿಗೆ ಸತಿಯಾದಳು. ಸಾತಿಯಾಗಿ ಸಾಕ್ಷಾತ್ ಶಿವೆಯಾದಳು.

ಹೀಗೆ ಪರಮಾತ್ಮನೊಂದಿಗೆ ಒಂದಾಗಿ ಶಿವೆಯಾದ ಮನದ ಇಂದಿನ ಪರಿಯೇ ಬೇರೆ ಅಂದಿನ ಪರಿಯೆ ಬೇರೆ. ಮನ ಅಂದು ವಿಷವಾದಳು, ಇಂದು ಅಮೃತಾತ್ಮವಾದಳು. ಅಂದಿನ

ದೇವಾಂಗನೆ ಇಂದು ನಿಮಗೆ ಚಿಚ್ಛಕ್ತಿಯಾದಳು. ಇದನ್ನು ಕಂಡೆಯಾ ಮನವೆ. ಅಂದಿನ ಮನವೆ ನೀನಿಂದು ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನೆಂದು ನಂಬು ಮನವೆ.

**1544**

**ಅಂದಿನವರು ನಡೆದ ದಾರಿ ಇಂದಿನವರುನ ಡೆಯರು.**
**ಇಂದಿನವರು ನಡೆದ ದಾರಿ ಅಂದಿನವರು ಕಾಣರು.**
**ಅಂದಿಂದೆಂಬದ್ವಂದ್ವ ಬೇಧವನೆಂದು ಕಾಣೆ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂದಿನವರು ನಡೆದ ದಾರಿ ಬಲು ಕಠಿಣ, ಇಂದಿನವರು ನಡೆಯರು. ಇಂದಿನವರು ನಡೆಯುವ ದಾರಿ ಅಂದಿನವರು ಕಾಣರು.

ಅಂದು ಇಂದು ಎನ್ನುವ ದ್ವಂದ್ವದ ಅವಶ್ಯಕತೆಯಿಲ್ಲ. ಅದರ ಬೇಧವೂ ಬೇಡ ಏಕೆಂದರೆ ಅಂದು ಇರುವ ತನುವು ಇಂದು ಇರುವ ತನುವೆ ಬೇರೆಯಾಗಿದೆಯೆ? ತನುವಿನಲ್ಲಿ ತನ್ಮಯವಾದ ಗುರುದೇವನೂ ಕೂಡ ಒಬ್ಬನೇ ಆಗಿದ್ದಾನೆ ಹಾಗೂ ದೇವನಿಗೆ ಶಿಷ್ಯನಾಗಬೇಕಾದ ಮನ ಕೂಡ ಒಂದೇ ಆಗಿದೆ ಹೀಗಿದ್ದಾಗ ಅಂದು ಇಂದು ಎಂದು ದಿನವ ಎಣಿಸಲೇಕೆ. ಕಪಿಲಸಿದ್ಧಮಲ್ಲಿಕಾರ್ಜುನನೊಂದಿಗೆ ಒಂದಾಗುವ ದಿನ ಕೂಡ ಒಂದೇ.

**1545**

**ಅಲ್ಲದಯ್ಯಗಳು ಇಲ್ಲದಾಟಕ್ಕೆ ಮೈಗೊಟ್ಟ ಕೇಡ ನೋಡಾ,**
**ಇಲ್ಲದಯ್ಯಗಳು ಅಲ್ಲದಾಟಕ್ಕೆ ಮೈಗೊಡರು ನೋಡಾ,**
**ಇದೆಲ್ಲ ಅಲ್ಲಮನ ಬಲ್ಲ ಬೋಧೆಯಿಂದ ಸಲ್ಲೀಲೆಯಾಯಿತ್ತು .**
**ವಲ್ಲಭೆ ಶಿವ ಕಪಿಲಸಿದ್ಧಮಲ್ಲಿಕಾರ್ಜುನ ದೇವಾ.**

ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನವನ್ನು ಅಂಗವನ್ನು ಆವರಿಸಿದ ಮನ ತಿಳಿದುಕೊಂಡು ಆ ಮಹಾಜ್ಞಾನದಲ್ಲಿ ಒಂದಾಗುವ ಕೆಲಸಕ್ಕೆ ತನ್ನ ಕೃಷಿಯ ಅವಶ್ಯಕತೆ ಇದೆಯೇ ಹೊರತು ಬೇರೊಬ್ಬರ ಅವಶ್ಯಕತೆಯಿಲ್ಲ.

ಜಂಗಮಯ್ಯಗಳು, ಅಯ್ಯಾ ಎನ್ನುವವರು, ಗುರಪೀಠದ ಒಡೆಯರು, ಆಶ್ರಮದ ಒಡೆಯರು, ಮಠಾಧಿಪತಿಗಳು, ಪೀಠಾಧಿಪತಿಗಳು ಇವರೆಲ್ಲ ಅಲ್ಲದ ಅಯ್ಯಗಳು. ಇಲ್ಲದ ಆಟಕ್ಕೆ ಮೈಗೊಟ್ಟು ತಮಗೆ ತಾವೆ ಕೇಡನ್ನು ತಂದುಕೊಂಡಿದ್ದಾರೆ. ಇಲ್ಲದಯ್ಯಗಳು ಅಲ್ಲದ ಆಟ ಆಡುವುದಿಲ್ಲ. ಇವರು ಮಹಾಜ್ಞಾನಿಗಳು. ತನುವಿನಲ್ಲಿ ತನ್ಮಯವಾದ ಗುರುದೇವನನ್ನು ಕಂಡುಕೊಂಡು ಆ ಗುರದೇವನಿಗೆ ತಾವೇ ಶಿಷ್ಯರಾದರು. ಕಾಯವನ್ನೇ ಕೈಲಾಸ ಮಾಡಿಕೊಂಡವರು. ಆ ಕೈಲಾಸದಲ್ಲಿ ಶಿವಾಶಿವೆಯರನ್ನು ಕಂಡವರು.

ಇದು ಅಲ್ಲಮನು ಬಲ್ಲ ಬೋಧೆ. ಇದರಿಂದ ಸಲ್ಲೀಲೆಯಾಯಿತ್ತು . ವಲ್ಲಭೆ ಶಿವಾ ಎಂದು ಕರೆಯಿಸಿಕೊಂಡ ಕಾಯ ಕಪಿಲಸಿದ್ಧಮಲ್ಲಿಕಾರ್ಜುನನೇ ತಾನಾಯಿತ್ತು .

**1546**

**ವಿಟ ಬಂದಾನೆಂದು ನಟಗಾರ್ತಿ ತಾ ವಿಟ ಸಂಪನ್ನೆಯಾದಳವ್ವಾ.**

**ವಿಟ ಬಾರದಿದ್ದಡೆ, ಸಿಡಿಮಿಡಿಗೊಂಡಬ್ಬರ ನೋಡವ್ವಾ.**
**ಇದರ ತೋಟಿಯು ಕಳೆಯ ಬಂದಡೆ ನಿನ್ನ ತೋಟಿ ಕೆಟ್ಟಿತ್ತೆಲಗವ್ವಾ**
**ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಜಾರನಲ್ಲಿ.**

ವಿಟ ಬಂದಾನೆಂದು ನಟಗಾರ್ತಿ ತಾ ವಿಟ ಸಂಪನ್ನೆಯಾಗುತ್ತಾಳೆ. ವಿಟ ಬರದಿದ್ದಡೆ ಸಿಡಿಮಿಡಿಗೊಂಡಬ್ಬರ ನೋಡವ್ವಾ.

ಕಾಯದಲ್ಲಿಯೆ ಸಂಗಮವಾದ ವಿಟ ಬಂದಾನೆಂದು ಕಾಯವನ್ನು ಆವರಿಸಿದ ಮನವೆಂಬ ನಟನೆಗಾರ್ತಿ ತಾನು ಆ ವಿಟನಿಗೆ ಸಂಪನ್ನೆಯಾಗಿ ಕಾಣಬೇಕು. ಅರಿಷಡ್ವರ್ಗಗಳು, ಸಪ್ತ ವ್ಯಸನಗಳನ್ನು, ಅಷ್ಟ ಮದಗಳನ್ನು ಬಿಟ್ಟು ನಿರಹಂಕಾರಿಯಾಗಿ ಒನಪು- ವಯ್ಯಾರ ಮಾಡುತ್ತ ವಿಟನಿಗೆ ಕಂಡರೆ ಆಕೆಯ ರೂಪು ಇಲ್ಲದ ನಿರೂಪನ್ನು ಕಂಡು ರೂಪೇ ಇಲ್ಲದ ನಿರೂಪ ನಿರಂಜನನೆಂಬ ವಿಟ ವಿಟೆಯನ್ನು ಬರಸೆಳೆದು ಅಪ್ಪಿಕೊಳ್ಳುತ್ತಾನೆ. ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಜಾರನಲ್ಲಿ ಶಿವೆಯೆಂದು ಕರೆಯಿಸಿಕೊಳ್ಳುತ್ತಾಳೆ.

**1547**

**ಜಾರನೆಂಬುವ ನಾಮ ಮಾರಹರಂಗೆ ಸಲುವಳಿಯಯ್ಯಾ !ಜಾರನು-ಜಾರನು**
**ಕಪಿಲಸಿದ್ಧಮಲ್ಲಿಕಾರ್ಜುನನ ಶರಣರ ಮನದ ಮನೆಯ ಕೊನೆಯಲ್ಲಿ.**

ಜಾರನೆಂಬುವ ನಾಮ ಮಾರಹರಂಗೆ ಸಲುವಳಿಯಯ್ಯಾ . ಮಾರಹರನೆಂದರೆ ಸಾಕ್ಷಾತ್ ಶಿವ, ಪರಮಪಿತ ಪರಮೇಶ್ವರ. ಈತನನ್ನು ಸಿದ್ಧರಾಮ ಶಿವಯೋಗಿಗಳು ಜಾರನೆಂದು ಹೆಸರಿಟ್ಟು ಕರೆದಿದ್ದಾರೆ. ಏಕೆಂದರೆ ಕಾಯವನ್ನು ಆವರಿಸಿದ ಮನವನ್ನು ಜಾರಿಣಿ, ವಿಟೆ, ಸೂಳೆ ಎಂದು ಕರೆದಿದ್ದಾರೆ.

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಪರಮಾತ್ಮನಲ್ಲಿಯೆ ಒಂದಾಗದಿದ್ದರೆ ಅದು ಸದಾ ತನುವಿನೊಂದಿಗೆ ಹಾದರದಲ್ಲಿಯೇ ಮಗ್ನವಾಗಿರುತ್ತದೆ. ಕಣ್ಣಿನಲ್ಲಿ ಆವರಿಸಿದ ಮನ ಹೆಣ್ಣನ್ನು ನೋಡಿ ಹಾದರದಲ್ಲಿ ತೊಡಗುತ್ತದೆ. ಪುನಃ ಬಾಯಿಗೆ ಹರಿದು ಧ್ವನಿಯ ಮೂಲಕ ಅಕ್ಕ, ತಂಗಿ,ಸೊಸೆ, ಎಂದು ಸುಂದರವಾಗಿ ಮಾತನಾಡುತ್ತದೆ. ಇಂತಹ ಮನವೆಂಬ ಜಾರಿಣಿಯನ್ನು ವರಿಸುವ ಪರಮಾತ್ಮನನ್ನು ಜಾರ ಎಂದು ಕರೆದಿದ್ದಾರೆ. ಸಿದ್ಧರಾಮ ಶಿವಯೋಗಿಗಳು ಇಂತಹ ಪರಮಾತ್ಮನನ್ನು ಜಾರನು ಜಾರನು ಕಪಿಲಸಿದ್ಧಮಲ್ಲಿಕಾರ್ಜುನನ ಶರಣರ ಮನದ ಮನೆಯ ಕೊನೆಯಲ್ಲಿ.

ಶರಣರ ಮನದ ಮೊನೆಯ ಕೊನೆಯಲ್ಲಿ ಮನೆ ಮಾಡಿಕೊಂಡಿದ್ದಾನೆ. ಇಂತಹ ಪರಮಾತ್ಮನು ಜಾರನು ಜಾರನು ಶರಣರ ಮನದ ಮೊನೆಯ ಕೊನೆಯಲ್ಲಿ ಮನೆ ಮಾಡಿಕೊಂಡಿರುವನು.

**1548**

**ಜಾರನು ಜಾರನು ಭವದಲ್ಲಿ ನೋಡಾ ಮನವೆ.**
**ಜಾರನು ಜಾರನು ಸತ್ಯದಲ್ಲಿ ನೋಡಾ ಮನವೆ.**
**ಜಾರನು ಜಾರನು ನಿನ್ನಲ್ಲಿ ನೋಡಾ ಮನವೆ.**
**ಜಾರನು ಜಾರನು ಕಪಿಲಸಿದ್ಧಮಲ್ಲಿಕಾರ್ಜುನ ಪಾದಯುಗವ ನೋಡಾ, ಮನವೆ.**

ತನುವಿನಲ್ಲಿ ಮನವೂ ಇದೆ. ತನುವಿನೊಡೆಯ ಪರಮಾತ್ಮನೂ ಇದ್ದಾನೆ. ಮನ ತನುವಿನೊಂದಿಗೆ ಜಾರಿದಂತೆ ಪರಮಾತ್ಮನು ಜಾರನು ಜಾರನು. ಈತನಿಗೆ ಜನನವಿಲ್ಲ ಮರಣವಿಲ್ಲ. ತನುವಿಗೆ ಜನನವಿದೆ ಮರಣವಿದೆ. ಅದು ಮನದೊಂದಿಗೆ ಕೂಡಿಕೊಂಡು ಸದಾಸುಖದುಃಖಗಳಿಗೆ ಈಡಾಗಿದೆ.

ತನುವಿನಲ್ಲಿ ತನ್ಮಯವಾದ ಅರಿವು ಸದಾ ಸತ್ಯವನ್ನು ಪಾಲಿಸುತ್ತದೆ. ತನು ಮತ್ತು ಮನಕ್ಕೆ ಸದಾ ಸತ್ಯವನ್ನೇ ಬೋಧಿಸುತ್ತದೆ. ಆ ಸತ್ಯವನ್ನು ಪಾಲಿಸುವ ಮಹಾಜ್ಞಾನಿಯು ಸತ್ಯದಿಂದ ಅಸತ್ಯದೆಡೆಗೆ ಜಾರನು ಜಾರನು ನೋಡಾ ಮನವೆ. ಜಾರನು ಜಾರನು ಕಪಿಲಸಿದ್ಧಮಲ್ಲಿಕಾರ್ಜುನನ ಪಾದಯುಗವ ನೋಡಾ ಮನವೆ.

**1549**

**ಜಾರನಾದಡೆ ಗೋಪಾಲಮೂರ್ತಿಯಂತಿರಬೇಕು**
**ಜಾರನಾದಡೆ ಹಾದರದ ಬೊಮ್ಮಯ್ಯನಂತಿರಬೆಕು.**
**ಜಾರನಾದಡೆ ಕಪಿಲಸಿದ್ದಮಲ್ಲಿಕಾರ್ಜುನ ಯೋಗಿಯಂತಿರಬೇಕು**
**ನೋಡಿರೆ, ಕಿರಿಯರಿರಾ.**

ಗೋಪಾಲ ಗೋವುಗಳನ್ನು ಕಾಯುವವ. ಈತನನ್ನು ಶ್ರೀಕೃಷ್ಣ ಎಂದು ಕರೆದಿದ್ದಾರೆ. ಈತನಿಗೆ ಹದಿನಾರು ಸಾವಿರದ ಎಂಟು ನೂರು ಜನ ಹೆಂಡತಿಯರು. ಆದರೂ ಈತ ಬ್ರಹ್ಮಚಾರಿ. ಬ್ರಹ್ಮನ ಆಚಾರದಲ್ಲಿರುವ ಬ್ರಹ್ಮಜ್ಞಾನಿ. ಜಾರನಾದಡೆ ಬ್ರಹ್ಮಜ್ಞಾನಿ ಗೋಪಾಲಮೂರ್ತಿಯಂತಿರಬೇಕು ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

ಬೊಮ್ಮಯ್ಯ ಮಹಾ ಶರಣ ಹಾದರ ಮಾಡುವ ಮನವನ್ನು ಪಳಗಿಸಿ ಗರತಿಯನ್ನಾಗಿಸಿದವರು. ಜಾರನಾದಡೆ ಹಾದರದ ಬೊಮ್ಮಯ್ಯನಂತಿರಬೇಕು. ತನುವಿಲ್ಲಿಯೇ ತನ್ಮಯವಾದ ಕಪಿಲಸಿದ್ಧಮಲ್ಲಿಕಾರ್ಜುನ ತನುವನ್ನು ಆವರಿಸಿದ ಹಾದರ ಮಾಡುವ ಮನವನ್ನು ಪಳಗಿಸಿ ತನ್ನಂತೆ ಮಾಡಿಕೊಂಡಾತ. ಸಿದ್ಧರಾಮ ಶಿವಯೋಗಿಗಳು ಜಾರನಾದಡೆ ಕಪಿಲಸಿದ್ಧಮಲ್ಲಿಕಾರ್ಜುನ ಯೋಗಿಯಂತಿರಬೇಕು ನೋಡಿರೆ, ಕಿರಿಯರಿರಾ ಎಂದು ಹಾದರ ಮಾಡುವ ಮನಕ್ಕೆ ಹೇಳಿದ್ದಾರೆ ಸಿದ್ಧರಾಮಶಿವಯೋಗಿಗಳು.

**1550**

**ಜಾರಜಾರನಲ್ಲವೆ ಭವಭವದಲ್ಲಿ ಸೌಂದರನಂಬಿ ?**
**ಜಾರೆಯಲ್ಲವೆ ಭವಭವದಲ್ಲಿ ಸೂಳೆ ಪದ್ಮಲದೇವಿ ?**
**ಜಾರನಾಗಿ, ಜಾರೆಯಾಗಿ ಜಾರಿದರಂದು**
**ಜನನ ಬವಣೆಯಲ್ಲಿ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಸೌಂದರನಂಬಿ ಶಿವನನ್ನು ಒಲಿಸಿಕೊಂಡಾತ. ಸೂಳೆ ಪದ್ಮಲದೇವಿ ಶಿವನನ್ನು ಒಲಿಸಿಕೊಂಡಾಕೆ. ಇವರು ಜಾರ ಜಾರಣಿಯರಾದರೂ ಅಂಗದಲ್ಲಿಯೇ ಸಂಗಮವಾದ ಪರಶಿವನನ್ನು ಒಲಿಸಿಕೊಂಡು ಆ ಶಿವನ ಸೇವೆಯಲ್ಲಿ ನಿರತರಾದರು.

ಜಾರನಾಗಿ ಜಾರೆಯಾಗಿ ಜಾರಿದರು ಅಂದು ಜನನ ಬವಣೆಯಲ್ಲಿ ಆದರೂ ಅಂಗದಲ್ಲಿಯೆ ಸಂಗಮವಾದ ಆ ಪರಶಿವನನ್ನು ಒಲಿಸಿಕೊಂಡು ಆತನಿಗೆ ಶರಣು ಹೋಗಿ ಶರಣರಾದರು. ಸಾಕ್ಷಾತ ಕಪಿಲಸಿದ್ಧಮಲ್ಲಿಕಾರ್ಜುನನೇ ತಾವಾದರು.

**1551**

**ಕಲ್ಕುಡಿಗನ ಕೈಯಲ್ಲಿ ಕಲ್ಲುಳಿ ಕೊಟ್ಟಡೆ,**
**ಕೊಟ್ಟಂತಲ್ಲದೆ ಕಲ್ಲು ರೂಪಾಗಿ ಬಾರದಯ್ಯಾ .**
**ಆದ್ಯರ ವಚನ ಅವಿದ್ಯಾವಂತನ ಜಿಹ್ವೆಯಲ್ಲಿದ್ದಡೆ.**
**ಇದ್ದಂತಲ್ಲದೆ ವಿದ್ಯಾಮಯಕೀರ್ತಿಯಾಗನಯ್ಯಾ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಟೆಯಲು ಬಾರದವನ ಕೈಯಲ್ಲಿ ಕಲ್ಲುಳಿ ಕೊಟ್ಟರೆ ಕೊಟ್ಟಂತಲ್ಲದೆ ಕಲ್ಲು ಸುಂದರವಾದ ರೂಪಾಗಿ ಬರಲು ಸಾಧ್ಯವಾಗುವುದಿಲ್ಲ. ಆದ್ಯರ ವಚನ ಜಿಹ್ವೆಯಲ್ಲಿದ್ದಡೇನು ಅದು ಸೂತ್ರವಾಗಿ ಅಂತರಂಗಕ್ಕೆ ಪಯಣಿಸಿ ಅಲ್ಲಿರುವ ಪರಮಾತ್ಮನ ಪಾದಗಳಿಗೆ ಶರಣು ಹೋಗದೆ ಇದ್ದರೆ ಆತ ಒಲಿಯುವುದು ಸಾಧ್ಯವಾಗುವುದಿಲ್ಲ.

ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಪರಮಾತ್ಮನಡೆಗೆ ಹೋಗುವುದು ಒಂದು ಶಿಕ್ಷಣ. ಈ ಬಲ್ಲ ಶರಣರಿಂದಲೇ ಅರಿವಿನ ಶಿಕ್ಷಣ ಕಲಿತು ಮನ ಘನಮನವಾಗಲೇಬೇಕು.

**1552**

**ಕುಳಿಗ್ರಾಳಿಯೊಳು ಕುಳಿತಂತಲ್ಲದೆ.**
**ಉದರದ ಕುಳಿ ತಂಪಾಗುವುದೆ ಅಯ್ಯಾ ?**
**ಕುಳಿರ್ವಶವಿದ್ಯೆಯ ನೋಡಿದಂತಲ್ಲದೆ,**
**ಭವದ ಕುಳಿತಪ್ಪುವುದೆ ಅಯ್ಯಾ ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಮನ ತನುವಿಗೆ ಅಜ್ಞಾನದ ಸುಖ ದುಃಖಗಳನ್ನು ಉಣ್ಣಿಸುತ್ತಾ ಜನನ-ಮರಣಗಳ ಬಾಧೆಗೆ ಈಡು ಮಾಡುತ್ತದೆ. ''ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೇ ಜಠರೇ ಶಯನಂ'' ಎನ್ನವಂತೆ ಮನ ತನುವನ್ನು ಸುಖ ದುಃಖಗಳಿಗೆ ಕರೆದುಕೊಂಡು ಹೋಗುತ್ತದೆ. ತನುವನ್ನು ಕೊಲ್ಲುವುದಕ್ಕೂ ಹೇಸುವುದಿಲ್ಲ. ಮನದ ಮಾತನ್ನು ಚಾಚು ತಪ್ಪದೆ ಕೇಳಿದರೂ ಕೂಡ ತನುವಿಗೆ ಪರಮಶಾಂತಿ ದಕ್ಕುವುದೇ ಇಲ್ಲ ಮನಕ್ಕೆ ತನುವಿನಲ್ಲಿಯೇ ತನ್ಮಯವಾದ ಪರಮಾತ್ಮನ ಪಾದಗಳಿಗೆ ದಾಸಾನುದಾಸನಾಗಿ ಸಂಪೂರ್ಣ ಶರಣು ಹೋಗುವ ಇಚ್ಛೆಯಾದಾಗ ಮಾತ್ರ ಜನನ ಮರಣಗಳ ಬಾಧೆ ಹುಟ್ಟು ಸಾವುಗಳಿಲ್ಲದ ಪರಮಾತ್ಮನ ಪಾದ ಕಮಲಗಳಿಗೆ ಎರಗಿ ಮನ ಘನಮನವಾಗುವುದು. ಆದರೆ ಮನಕ್ಕೆ ಬಲವಾದ ಇಚ್ಛೆಯಾಗಬೇಕು.

**1553**

**ಕೃಸರ ಪದಾರ್ಥ ಕೃಷೀವಲರುಂಡರೆಂದಡೆ ಆಶ್ಚರ್ಯವೇನಯ್ಯಾ ?**
**ನೃಪನುಂಡನೆಂದಡೆ ಆಶ್ಚರ್ಯ.**
**ಚರ್ಯಾತೀತ ಉಂಡನೆಂದಡೆ ಬಹು ಆಶ್ಚರ್ಯ.**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ರೈತ ಬೆಳೆದದ್ದನ್ನು ರೈತನೇ ಉಂಡನೆಂದಡೆ ಆಶ್ಚರ್ಯ ಪಡುವ ಅವಶ್ಯಕತೆಯಿಲ್ಲ. ಅರಸನುಂಡನೆಂದಡೆ ಆಶ್ಚರ್ಯ. ಚರ್ಯಾತೀತ ಉಂಡನೆಂದಡೆ ಬಹು ಆಶ್ಚರ್ಯ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1554**

**ಭೂಪಾಲನೇರುವ ಕುದುರೆಯ ಗೋಪಾಲನೇರಬಹುದೆ ಅಯ್ಯಾ ?**
**ಗೋಪಾಲನೇರುವ ಕುದುರೆಯ ಭೂಪಾಲನೇರಬಹುದೆ ಅಯ್ಯಾ ?**
**ಗೋಪಾಲಂಗೆ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹವೆಂಬ ಕುದುರೆಯನ್ನು ದೇಹದ ಒಡೆಯ ಭೂಪಾಲ ಮಾತ್ರ ಏರಬಹುದು. ಮನವೆಂಬ ಗೋಪಾಲನಿಗೆ ದೇಹವೆಂಬ ಕುದುರೆಯನ್ನು ಓಡಿಸಲು ಬುರುವುದಿಲ್ಲ.

ಮನ ತನುವನ್ನು ನಡೆಸಿದರೆ ಮನಬಂದತ್ತ ತನುವನ್ನು ಚಲಾಯಿಸುವುದು. ಮನ ತನುವನ್ನು ಕ್ಲಬ್, ಜೂಜಾಟ, ಸೆರೆ ಅಂಗಡಿಯತ್ತ ಕರೆದೊಯ್ಯುತ್ತದೆ. ಹಾಗೆಯೆ ದೇವಸ್ಥಾನ, ಪುಣ್ಯಕ್ಷೇತ್ರಗಳಿಗೆ ಕರೆದೊಯ್ಯುತ್ತದೆ. ತನುವಿನ ಆಯುಷ್ಯ ಮುಗಿಯುತ್ತ ಬಂದರೂ ತನು ಮತ್ತು ಮನ ಪರಮಶಾಂತಿಯನ್ನು ಕಂಡುಕೊಳ್ಳಲು ಸಾಧ್ಯವಿಲ್ಲ. ತನುವಿನಲ್ಲಿಯೇ ತನ್ಮಯವಾದ ಪಶುಪತಿಗೆ ಕುದುರೆ ಎಂಬ ಪಶುವನ್ನು ಒಪ್ಪಿಸಿದಾಗ ಮನವನ್ನೇ ಲಗಾಮು ಮಾಡಿಕೊಂಡು ಕುದುರೆಯ ಸವಾರಿ ಮಾಡುತ್ತಾನೆ. ಆಗ ತನು ಮತ್ತು ಮನ ಪರಮಶಾಂತಿಯನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ.

**1555**

**ಭೂಪಾಲನ ಕುದುರೆಯ ಗೋಪಾಲನೇರಿದಡೆ,**
**ಮನ್ನಣೆಯಲ್ಲದೆ ಅಮನ್ನಣೆಯೇನಯ್ಯಾ ?**
**ಗೋಪಾಲನ ಕುದುರೆಯ ಭೂಪಾಲನೇರಿದಡೆ,**
**ಅಮನ್ನಣೆಯಲ್ಲದೆ ಮನ್ನಣೆಯೇನಯ್ಯಾ ?**
**ಭೂಪನ ವೇಷ ಗೋಪಂಗಾದುದು,**
**ಗೋಪನ ವೇಷ ಭೂಪಂಗಾಗದು ಪಾಪದ ಕೇಡು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಒಡಲು ಒಡಲೊಡೆಯನದು. ಒಡಲನ್ನು ಆವರಿಸಿದ ಮನಕ್ಕೆ ಒಡಲೊಡೆಯನ ಪರಿಚಯವಿಲ್ಲ. ಒಡಲೊಡೆಯನ ಒಡಲನ್ನು ಮನ ಸವಾರಿ ಮಾಡಿದರೆ ಅದು ಅಜ್ಞಾನಕ್ಕೆ ಕರೆದುಕೊಂಡು ಹೋಗುತ್ತದೆ. ಮನ ಒಡಲೊಡೆಯನಿಗೆ ದಾಸಾನುದಾಸನಾದಾಗ ಒಡಲ

ಒಡೆಯನ ಒಡವೆ ಎಂ ದೇಹವನ್ನು ಮನ ಸವಾರಿ ಮಾಡಬಹುದಾಗಿದೆ. ಅದಕ್ಕೆ ಶರಣರು ಮನ್ನಣೆಯನ್ನೂ ಕೊಡುತ್ತಾರೆ.

ಭೂಪನ ಲಾಂಛನ ಗೋಪಾಲನದಾಗಿದೆ ಗೋಪಾಲನ ಲಾಂಛನ ಭೂಪನಿಗೆ ಆಗಿದೆ. ಇದು ಪಾಪದ ಕೇಡು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1556**

**ಭೂಪಾಲನ ಡೊಂಕು ಗೋಪಾಲಂಗಲ್ಲದೆ ಗೋಪಾಳಿಗೆಲ್ಲಿಹುದಯ್ಯಾ ?**
**ಗೋಕುಲದ ಡೊಂಕು ಗೋಪಾಲಂಗಲ್ಲದೆ**
**ಗೋಪಾಳಿಗೆಲ್ಲಿಹುದಯ್ಯಾ ?ಕಪಿಲಸಿದ್ಧಮಲ್ಲಿಕಾರ್ಜುನಾ.**

ಈ ವಚನಕ್ಕೆ ಅನುಭಾವ ಮಾಡಿರುವುದಿಲ್ಲ.

**1557**

**ಆದ್ಯರ ನುಡಿ ಆದ್ಯರ್ರಿಗಲ್ಲದೆ,**
**ವೇದ್ಯರಿಗೆ ಸಾಧ್ಯವಾಗದೆಂಬ ನುಡಿ ಹೊಲ್ಲ.**
**ಈತ ಆದ್ಯನೊ, ಮಧ್ಯದಲ್ಲಿಂದ ಬಂದಾತನೋ ಅಯ್ಯಾ ?**
**ತಿಳಿದು ನೋಡುವಡೆ ಸ್ವಯಂವೇದ್ಯ ನೋಡಾ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಈ ವಚನಕ್ಕೆ ಅನುಭಾವ ಮಾಡಿರುವುದಿಲ್ಲ.

**1558**

**ವಾಗ್ರಚನೆಯೆಂಬುದು ಕಾರ್ಣಾಟವಯ್ಯಾ,**
**ಆದ್ಯರಾಜ್ಞೆ ಎಂಬುದು ಈಶ್ವರಗೆ ಜ್ಯೋತಿಯಯ್ಯಾ .**
**ಅಗಿದಗಿದು ನೋಡುವುದದು ಶುಕ ತೆಂಗು ತಿಂದಂತೆ ನೋಡಾ.**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಈ ವಚನಕ್ಕೆ ಅನುಭಾವ ಮಾಡಿರುವುದಿಲ್ಲ.

**1559**

**ಆದಿ ಉತ್ಪತ್ತಿ ಅಹಂಕಾರದಿಂದ,**
**ಅಹಂಕಾರದ ಕೇಡು ಅರುಹಿನಿಂದ,**
**ಅರುಹಿನ ಕೇಡು ತಾ ಬಯಲಾದಿಂದ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಈ ವಚನಕ್ಕೆ ಅನುಭಾವ ಮಾಡಿರುವುದಿಲ್ಲ.

**1560**

**ದೇಹದ ಗುಣ ಇರುವಂದಿಗೆ ತಪ್ಪದು ನೋಡಾ ಎಂಬಲ್ಲಿ,**
**ಕ್ಷುಧೆ ತೃಷೆಗಳಿಲ್ಲದೆ ದುರ್ಗುಣಕ್ಕುಂಟೇನೋ ಅಯ್ಯಾ ,**
**ಕ್ಷುಧೆ ತೃಷೆ ಇಲ್ಲದಿರೆ ದೇಹ ಬೀಹವಾಗುವುದು,**
**ದುರ್ಗುಣವಿಲ್ಲದಡೆ ಬೀಹವಾಗದು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹ ಗುಣ ಎಂದರೆ ಹಸಿವು, ಬಾಯಾರಿಕೆ ಅಲ್ಲ. ಹಸಿವು ಬಾಯಾರಿಕೆಯನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳದಿದ್ದರೆ ದೇಹ ಕೃಷವಾಗಿ ಇಲ್ಲವಾಗುವುದು,

ದೇಹದಲ್ಲಿ ದುರ್ಗುಣವಿಲ್ಲದಿದ್ದರೆ ಅದಕ್ಕೆ ಜನನವಿಲ್ಲ ಮರಣವಿಲ್ಲ. ಏಕೆಂದರೆ ದುರ್ಗುಣವಿಲ್ಲದ ನಿರ್ಗುಣಿಗೆ ಸಾತ್ವಿಕ, ರಾಜಸ, ತಾಮಸ ಎಂಬ ಗುಣಗಳನ್ನು ಸುಟ್ಟುಕೊಂಡು ನಿರ್ಗುಣಿಯಾಗುತ್ತಾನೆ. ಹೀಗಾಗಿ ಪರಮಾತ್ಮನನ್ನು ತ್ರಿಗುಣಾತೀತಂ ಮೂರು ಗುಣಗಳಿಗೆ ಅತೀತನಾದವನು ಎಂದು ಕರಯುತ್ತಾರೆ.

**1561**

**ಮರದೆಲೆಯ ತಂದು, ಕುರುಹಿಡಬಾರದ ಪರಮ ಅರುಹ ಪೂಜಿಸಿದ**
**ಮರುಳರ ನೋಡಿ ಬೆರಗಾದೆನಯ್ಯಾ**
**ಕುರುಹ ಪೂಜೆ ಅರುಹು ಆದಾಗಲೇ ಮರಹಿನ ಕೇಡು**
**ಮರವೆಯ ಮುಂದಿಟ್ಟಡೆ ಸಿರಿಗರ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಬಿಲ್ವ ಪತ್ರೆಯ ತಂದು ಅಂಗದ ಮೇಲೆ ಧರಿಸಿದ ಲಿಂಗವನ್ನು ಪೂಜಿಸುವ ಮರುಳರ ನೋಡಿ ಬೆರಗಾದೆನಯ್ಯಾ ಎಂದಿದ್ದಾರೆ ಸಿದ್ಧರಾಮಶಿವಯೋಗಿಗಳು.

ಸುಮಾರು ವರ್ಷಗಳ ವರೆಗೆ ಕುರುಹ ಪೂಜೆಯಲ್ಲಿ ತೊಡಗಿದರೂ ಅರಿವು ಆಗಲಿಲ್ಲ. ಕುರುಹನ್ನು ನೋಡಿ ಅರಿವಾದಾಗಲೇ ಮರಹಿನ ಕೇಡು ಆಗುತ್ತದೆ.

ಮರವೆಯನ್ನೇ ಮುಂದಿಟ್ಟರೆ ಸಿರಿಗರಾ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1562**

**ಅಂಗೈಯೊಳಗಣ ಲಿಂಗಮೂರ್ತಿಯ ಕಂಗಳಲ್ಲಿಂಗಗೊಟ್ಟಡೆ,**
**ತಿಂಗಳ ಸೂಡನಾದೆ ನೋಡಾ ಅಯ್ಯಾ .**
**ಮಂಗಳಮೂರ್ತಿ ಗಂಗಾಜೂಟಾಂಗಮಯ,**
**ಕಪಿಲಸಿದ್ಧಮಲ್ಲಿಕಾರ್ಜುನಲಿಂಗ ಬೇರೆಯೆಂದರಿಯಲಿಲ್ಲ ನೋಡಾ**
**ನಿಜದ ನಿರ್ವಯಲಲ್ಲಯ್ಯನೆ.**

ಅಂಗದಲ್ಲಿಯೇ ಸಂಗಮವಾದ ಲಿಂಗಮೂರ್ತಿಯೆ ಅರಿವಿನ ದೇವರು. ಈತನನ್ನು ಮಂಗಳಮೂರ್ತಿ, ಗಂಗಾಜೂಟಾಂಗಮಯ, ಕಪಿಲಸಿದ್ಧಮಲ್ಲಿಕಾರ್ಜುನ ಎಂದು ಕರೆದಿದ್ದಾರೆ

ಸಿದ್ಧರಾಮಶಿವಯೋಗಿಗಳು.

ದೇವರು ಎಂದರೆ ಸಾಕು ಕೈ ಮೇಲೆ ಮಾಡಿ ನೋಡುವ ಲೋಕವೆ ಬೇರೆ, ಪರಮಾತ್ಮನಿಗೆ ಶರಣು ಹೋಗಿ ಶರಣನೇ ತಾನಾದ ಶರಣರ ಮಾತೇ ಬೇರೆ.

ದೇವರು ಅಂಗೈಯೊಳಗೆ ಇದ್ದಾನೆ. ಅಂದರೆ ಅಂಗದ ಐದೂ ಭಾಗಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮದಲ್ಲಿ ಸಂಗಮವಾಗಿದ್ದಾನೆ. ಈ ದೇವರೆ ನಿಜದ ನಿರ್ವಯಲು ಎಂದು ಅಲ್ಲಮ ಪ್ರಭುಗಳಿಗೆ ಹೇಳಿದ್ದಾರೆ ಸಿದ್ಧರಾಮಶಿವಯೋಗಿಗಳು.

**1563**

**ಭೂಪ ಗೋಪನ ನೆನೆದಡೆ ಗೋಪಾಲನಾಗಬಲ್ಲನೇ?**
**ಅಂದಿನ ಗುಣಂಗಳ ಕಂಡು, ಇಂದಿನ ಜೀವಿಗಳು ನೆನೆನೆನೆದು,**
**ಧನ್ಯರಾದೆವೆಂಬ ಪರಿಯ ನೋಡಾ.**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಕೆಂಚ ಕರಿಕನ ನೆನೆದಡೆ ಕರಿಕನಾಗಬಲ್ಲನೇ ? ಕರಿಕ ಕೆಂಚನ ನೆನೆದಡೆ ಕೆಂಚನಾಗಲ್ಲನೇ ? ನೆನದರಾಗದು ಎನ್ನುವ ಬಸವಣ್ಣನವರ ವಚನ ಸಿದ್ಧರಾಮ ಶಿವಯೋಗಿಗಳ ಮೇಲ್ಕಂಡ ವಚನ ಹಿಡಿದು ಕಾಯ ಕೃಷಿಯಲ್ಲಿ ತೊಡಗಬೇಕು. ನೆನದು ಧನ್ಯರಾದೆವೆಂಬ ಭ್ರಮೆಯನ್ನು ಬಿಟ್ಟು ಅಂಗದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಅಂಗವನ್ನು ಆವರಿಸಿದ ಮನ ಒಂದಾಗಬೇಕು.

**1564**

**ನೆನದಡಾಗದು ಸಾಧಿಸದನ್ನಕ್ಕ ಸಾಧಿಸಿದಡಾಗದು ತಿಳಿಯದನ್ನಕ್ಕ,**
**ತಿಳಿಯದಡಾಗದು ಎಳೆ ಬಾಲಚಂದ್ರಧರ,**
**ಕಪಿಲಸಿದ್ಧಮಲ್ಲಿಕಾರ್ಜುನನ ಅಮಳ ಕೈವಲ್ಯಪದವು.**

ನೆನೆದರಾಗದು ಶರಣರಿಂದ ತಿಳಿತಿಳಿದು ಕೃಷಿಯಲ್ಲಿ ತೊಡಗಿ ಸಾಧಿಸಲೇಬೇಕು.

ಸಾಧಿಸದಡಾಗದು ತಿಳಿಯದನ್ನಕ್ಕ ಶರಣರ ಅನುಭಾವದ ಮೂಲಕ ತಿಳಿದು ಕೃಷಿಯಲ್ಲಿ ತೊಡಗಿ ಅರಿವನ್ನು ಪಡೆದು ಪ್ರಯೋಗಕ್ಕೆ ಒಳಗಾಗದಿದ್ದರೆ ಕೈವಶವಾಗದು ಕಪಿಲಸಿದ್ಧಮಲ್ಲಿಕಾರ್ಜುನನ ಅಮಳ ಕೈವಲ್ಯಪದವು.

**1565**

**ಹುಟ್ಟಿ ಹುಟ್ಟಿ ಹೋಗುವುದದು ಬಹುಕಷ್ಟವಯ್ಯಾ .**
**ಕೆಟ್ಟು ಕೆಟ್ಟು ಹೋಗುವುದದು ಬೆಟ್ಟದ ಸಾಮರ್ಥ್ಯವಯ್ಯಾ**
**ಹುಟ್ಟಿ ಹೋದವರು ಕೋಟಾನುಕೋಟಿ.**
**ಕೆಟ್ಟು ಹೋದವರು ಒಬ್ಬರೂ ಇಲ್ಲ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಮಹಾಜ್ಞಾನವನ್ನು ಹೊಂದದೆ ಹುಟ್ಟಿ ಹುಟ್ಟಿ ಹೋಗುವವರು ಕೋಟ್ಯಾನುಕೋಟಿ ಜನರು. ತನುವನ್ನು ಆವರಿಸಿದ ಮನವೆಂಬ ಅಜ್ಞಾನವನ್ನು ತನುವಿನಲ್ಲಿ ತನ್ಮಯವಾದ ಜ್ಞಾನಿಯೇ ತಾನಾಗುವ ಸೂತ್ರವನ್ನು ತಿಳಿದುಕೊಂಡು ಕೆಟ್ಟು ಹೋದವರು ಒಬ್ಬರೂ ಇಲ್ಲ.

ಹುಟ್ಟಿ ಹುಟ್ಟಿ ಹೋಗುವುದು ಬಹು ಕಷ್ಟವೆಂದು ಮನ ತಿಳಿಯುವುದಿಲ್ಲ. ಏಕೆಂದರೆ ತನುವನ್ನು ಸದಾ ಕಷ್ಟದಲ್ಲಿ ನೂಕುವುದು. ತನುವಿನ ಕಷ್ಟದೊಂದಿಗೆ ಸುಖಿಸುವುದು ಮನಕ್ಕೆ ಬೆಟ್ಟದಷ್ಟು ಇಷ್ಟ. ಕೆಟ್ಟು ಕೆಟ್ಟು ಹೋಗುವುದೇ ಮನದ ಗುಣ. ಮನವನ್ನು ಕೆಡಿಸಿ ಜ್ಞಾನಕ್ಕೆ ಹೋದವರನ್ನು ಒಬ್ಬರನ್ನೂ ಕಾಣೆ ಕಪಿಲಸಿದ್ಧಮಲ್ಲಿಕಾರ್ಜುನಾ.

**1566**

**ಹುಟ್ಟಿದ ಕಲ್ಲು ಲಿಂಗವಾಯಿತ್ತು,**
**ಹುಟ್ಟಿದ ಕಲ್ಲು ದೇವಾಲಯವಾಯಿತ್ತು,**
**ಹುಟ್ಟಿದ ಪಶು ಹೊಲಕ್ಕೆ ಬಂದಿತ್ತು,**
**ಹುಟ್ಟಿದ ಮರ ಕಟ್ಟಳೆಯಾದವು.**
**ಹುಟ್ಟಿ ಕೀರ್ತಿಯ ಮೆಟ್ಟದವ ಇಟ್ಟ ಇಟ್ಟ ಹುಳಿಯನ್ನದಂತೆ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಹುಟ್ಟಿದ ಕಲ್ಲು ಲೋಕದ ಪೂಜೆಗಾಗಿ ಲಿಂಗವಾಯಿತ್ತು. ಹುಟ್ಟಿದ ಕಲ್ಲು ದೇವಾಲಯವಾಯಿತ್ತು. ಕಂಭ, ಪವಳಿ, ರಂಗ ಶಿಖರವಾಯಿತ್ತು. ಹುಟ್ಟಿದ ಪಶು ಹೊಲಕ್ಕೆ ಬಂದು ಹುತ್ತಿ ಬಿತ್ತಿತ್ತು. ಹುಟ್ಟಿದ ಮರ ಕಟ್ಟಿಗೆಯಾಗಿ ತೊಲೆ, ಕಂಭ, ರಥವಾಯಿತ್ತು. ಹುಟ್ಟಿಯೂ ಜ್ಞಾನಕೀರ್ತಿಯನ್ನು ಮೆಟ್ಟದವನು ಮಾಡಿಟ್ಟ ಹುಳಿಯನ್ನದಂತೆ ನೋಡಾ. ಅದು ಉಣ್ಣಲೂ ಬಾರದಂತೆ, ಚೆಲ್ಲಲೂ ಬಾರದಂತೆ ಕಪಿಲಸಿದ್ಧಮಲ್ಲಿಕಾರ್ಜುನಾ.

**1567**

**ಕಸವಿದ್ದು ಕೃಷೀವಲನಿಲ್ಲದೆ, ಅಸಮಾಕ್ಷವಲನಿಲ್ಲದೆ, ಅಸಮಾಕ್ಷಗುಣವಿರೆ,**
**ಈ ಕಸ ಗುಣದ ಕೇಡು ಕಾಣಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಹೊಲದಲ್ಲಿ ಕಸವಿದ್ದು ಕೃಷಿ ಮಾಡುವವನು ಇಲ್ಲದಿದ್ದರೆ. ಅಸಮಾಕ್ಷವಲನ ಪರಿಚಯವಿಲ್ಲದಿದ್ದರೆ. ಅಸಮಾಕ್ಷ ಗುಣವಿದ್ದರೂ ಅದು ಕಸವಿದ್ದ ಹೊಲದಂತೆ ಕೇಡು ನೋಡಾ.

ತನುವಿನಲ್ಲಿ ತನ್ಮಯವಾದ ಪರಮಾತ್ಮನ ಪರಿಚಯ ತನುವನ್ನು ಆವರಿಸಿದ ಮನಕ್ಕೆ ಇಲ್ಲದೆ ಹೋದರೆ ಅದು ಪರಮಾತ್ಮನನ್ನು ನೆನೆದರೂ ಕೂಡ ನಿಷ್ಫಲ. ಪರಮಾತ್ಮ ಯಾರೆಂದು ಮನಕ್ಕೆ ಗೊತ್ತಾಗಿ ತನುವಿನಲ್ಲಿಯೇ ತನ್ಮಯವಾದ ಪರಮಾತ್ಮನನ್ನು ನೆನೆದರೆ ಮನ ಘನಮನವಾಗುತ್ತದೆ ಕಪಿಲಸಿದ್ಧಮಲ್ಲಿಕಾರ್ಜುನಾ.

**1568**

**ಒಂದು ಮುಳ್ಳು ಮೂರುಲೋಕದ ಜನರಿಗೆ ನಟ್ಟಿತ್ತು.**

**ಆ ನಟ್ಟ ಮುಳ್ಳು ಮುರಿಯಬೇಕೆಂದಾರರಿಯರು**
**ಆ ಮುಳ್ಳು ಮುರಿದವ ಮೂಲೋಕದರಸು.**
**ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ,**
**ಹಾವಿನಹಾಳ ಕಲ್ಲಿನಾಥಾ.**

ಒಂದೇ ಒಂದು ಅಜ್ಞಾನದ ಮುಳ್ಳು ಸಾತ್ವಿಕ, ರಾಜಸ, ತಾಮಸವೆಂಬ ಮೂರು ಲೋಕದ ಜನರಿಗೆ ನಟ್ಟಿತ್ತು . ನಟ್ಟ ಮುಳ್ಳು ಹೇಗೆ ಕಿತ್ತಿಕೊಳ್ಳಬೇಕೆಂದು ಈ ಮೂರು ಲೋಕದ ಜನ ಅರಿಯರು. ಅಜ್ಞಾನದ ಮುಳ್ಳನ್ನು ಮೂರು ಲೋಕದ ಜನರಿಗೆ ನಡುವಂತೆ ಮಾಡಿದಾತ ಬೇರೆ ಯಾರೂ ಅಲ್ಲ ಮೂಲೋಕದ ಅರಸ; ಹುಟ್ಟು ಸಾವು ಕೇಡುಗಳಿಲ್ಲದ ರೂಹಿಲ್ಲದ ಚೆಲುವ.

ಮುಳ್ಳು ನಟ್ಟವರು ಈ ಚೆಲುವನನ್ನು ನೋಡಿದರೆ ಸಾಕು ನಟ್ಟ ಮುಳ್ಳನ್ನು ಮುರಿದು ತನ್ನ ಬಾಹುವಿನಲ್ಲಿ ಅಪ್ಪಿಕೊಳ್ಳುತ್ತಾನೆ. ಈ ಮಾತನ್ನು ಸಿದ್ಧರಾಮ ಶಿವಯೋಗಿಗಳು ಹಾವಿನಹಾಳ ಕಲ್ಲಿನಾಥ ಶರಣರಿಗೆ ಹೇಳಿದ್ದಾರೆ. ಹಾಗೆಯೇ ಇದನ್ನು ಓದುವ ಓದುಗರಿಗೂ ಈ ಸೂತ್ರ ಲಭ್ಯವಾಗಲೆಂದು ವಚನದ ಮೂಲಕ ದಾಖಲಿಸಿದ್ದಾರೆ.

**1569**

**ಮುಳ್ಳು ಮೂರರ ಮೇಲೆ ಕಳ್ಳ ಮೂರುತಿ ತಿರುಗುತ್ತಿಹ ನೋಡಾ.**
**ಒಳ್ಳೆ ಗುಣಗಳ್ಳರಿಗೆ ತನ್ನ ತಳ್ಳಿ ತೋರಿಸುವ ನೋಡಾ.**
**ಜಳ್ಳು ಜೀವಗಳ್ಳರಿಗೆ ಸಾಧ್ಯವದು ಎಳ್ಳನಿತಿಲ್ಲ ನೋಡಾ.**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಸಾತ್ವಿಕ, ರಾಜಸ,ತಾಮಸ ಎಂಬ ಮೂರು ಗುಣಗಳು ಮುಳ್ಳು ಇದ್ದಂತೆ. ಈ ಮೂರೂ ಮುಳ್ಳುಗಳ ಮೇಲೆ ಸೃಷ್ಟಿಮಾಡಿದ ಲಿಂಗಮೂರುತಿ ತಿರುಗುತ್ತಿದೆ.

ಈ ಮೂರೂ ಗುಣಗಳುಳ್ಳವರು ತಮಗೆನೆಟ್ಟ ಅಜ್ಞಾನದ ಮುಳ್ಳನ್ನು ತಾವೇ ಕಿತ್ತಿಕೊಳ್ಳುವ ಶಕ್ತಿಗೆ ತಾನೆ ದಾರಿತೋರಿಸುವ ಪರಮಾತ್ಮನು ಜಳ್ಳು ಜೀವಗಳ್ಳರಿಗೆ ಮುಳ್ಳು ಕಿತ್ತಿಕೊಳ್ಳಲು ಸಾಧ್ಯವಾಗುವುದು ಬಲು ಕಠಿಣ. ಕಪಿಲಸಿದ್ಧಮಲ್ಲಿಕಾರ್ಜುನಾ.

**1570**

**ನಿತ್ಯ ನಿತ್ಯ ಕೋಣವ ತಿನ್ನಬಲ್ಲಡೆ,**
**ಸದಾಚಾರಿ ಜಂಗಮವೆಂಬೆ .**
**ನಿತ್ಯ ನಿತ್ಯ ಕೋಡಗನ ಹಿಡಿದು ಆಡುಗಳ ತಿನ್ನಬಲ್ಲಡೆ**
**ಪ್ರಾಣಲಿಂಗಿ ಎಂಬೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕೋಡಗನ ಕೋಳಿ ನುಂಗಿತ್ತಾ ಎನ್ನುವ ಶಿಶುನಾಳ ಶರೀಫರ ತತ್ವದಂತೆ ಇದೆ. ಈ ವಚನ. ಯಾರು ಹೇಳಿದರೇನು ತತ್ವ ಒಂದೇ. ಅಜ್ಞಾನವೆಂಬ ಕೋಣ ಸಕಲ ಅಂಗಗಳನ್ನೂ ಆವರಿಸಿದೆ. ಈ ಕೋಣವನ್ನು ಕಡಿದು ತಿನ್ನಬಲ್ಲ ಸಮರ್ಥರೆಂದರೆ ಶರಣರು ಮಾತ್ರ .

ತನುವಿಗೆ ಅಂಟಿದ ಅಜ್ಞಾನದ ಕೋಣವನ್ನು ಜ್ಞಾನದ ಖಡ್ಗದಿಂದ ಕಡಿದು ಹೇಗೆ ಪ್ರಸಾದ ಮಾಡಿಕೊಳ್ಳಬೇಕು ಎಂಬ ಸೂತ್ರವನ್ನು ಅಜ್ಞಾನಿ ಮನಕ್ಕೆ ತಿಳಿ ಹೇಳುವ ಮಹಾಜ್ಞಾನಿಗಳನ್ನು ಮಾತ್ರ ಪ್ರಾಣಲಿಂಗಿ

ಎಂಬೆ ಕಪಿಲಸಿದ್ಧಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಈ ವಚನದ ಮೂಲಕ ಹೇಳಿದ್ದಾರೆ.

**1571**

**ಬಂದ ದಾರಿ ಬಿಟ್ಟವನೆ ಜೀವನ್ಮುಕ್ತ ;**
**ಬಂದ ದಾರಿ ಮೆಟ್ಟದವನೆ ಜೀವನ್ಮುಕ್ತ ;**
**ಬಂದ ದಾರಿಯನರಿಯದವನೆ ಸಕಲ ಸಾಮ್ರಾಜ್ಯದಸ್ಥ ;**
**ಕಪಿಲಸಿದ್ಧಮಲ್ಲಿಕಾರ್ಜುನನವನು.**

ತನುವು ಬಂದ ದಾರಿ ಬಲು ಕಷ್ಟಕರವಾದುದು ಅಲ್ಲ ಬರೀ ದುಃಖ ಅದು ರಹದಾರಿಯಲ್ಲ. ಅಜ್ಞಾನವೆಂಬ ಕಲ್ಲು ಮುಳ್ಳುಗಳಿಂದ ಕೂಡಿದ ದಾರಿಯನ್ನು ಸವೆಯಿಸಿಯಾಗಿದೆ.

ತನುವಿನಲ್ಲಿ ತನ್ಮಯವಾದ ಪರಮಾತ್ಮನ ದರ್ಶನ ತನುವನ್ನು ಆವರಿಸಿದ ಮನಕ್ಕೆ ಲಭ್ಯವಾದಾಗ ಅದು ಸಕಲ ಬಂಧನಗಳಿಂದ ಮುಕ್ತ, ಬಂದದಾರಿ ಮೆಟ್ಟಿ ಜೀವನ್ಮುಕ್ತ. ಅಜ್ಞಾನದ ದಾರಿಯ ಸಕಲ ನೆನಪುಗಳನ್ನು ಕಳೆದುಕೊಂಡವನು. ಅರಿವಿನ ಸಾಮ್ರಾಜ್ಯದ ಒಡೆಯ ಅವನು ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನಾ.

**1572**

**ವಚನಾನುಭಾವ ವಾಗ್ರಚನೆಯಲ್ಲ ಮನವೆ, ವಚನಾನುಭವ ವಾಗ್ರಚನೆಯಲ್ಲ.**
**'ವಚನಾನುಭವೋ ವಚೋನ' ಎಂಬುದು ಶ್ರುತಿಸಿದ್ಧ ನೋಡಾ.**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಶರಣರ ವಚನಗಳು ವಾಗ್ರಚನೆಯಲ್ಲ. ಅವು ತನುವಿನಲ್ಲಿಯೇ ತನ್ಮಯವಾದ ಪರಮಾತ್ಮನು ನುಡಿದ ನುಡಿಗಳು. ಅವುಗಳನ್ನು ಓದಿದ ತನುವು ಮನದೊಂದಿಗೆ ತನುವಿನ ಅಂತರಾಳಕ್ಕೆ ಹೋಗಿ ಪರಮಾತ್ಮನ ದರ್ಶನ ಮಾಡಿಸುವ ರಹದಾರಿ.

ವಚನಗಳನ್ನು ಓದುಗರು ವೇದಿಕೆಗೆ ಬಳಸುವಂತಿಲ್ಲ. ವಚನದ ಹೊರಾವರ್ಣ ಲೌಕಿಕ ಜಾಗೃತಿಯನ್ನು ತೋರುತ್ತಿದ್ದರೂ ಅದು ಅಲ್ಲವೇ ಅಲ್ಲ ಶರಣರ ವಚನಗಳು ಅಂತರಾಳಕ್ಕೆ ಕೊಂಡೊಯ್ಯುವುದಕ್ಕಾಗಿ ಮಾತ್ರ ಬಳಸಬೇಕು.

**1573**

**ಪ್ರಸಾದ ಪ್ರಸಾದವೆಂದು ಆಡಂಬರಿಸುವ**
**ಅಣ್ಣಗಳ ಪಥ ನೋಡಿ ಕೈಬಡಿದು ನಕ್ಕಂತಾಯಿತ್ತಯ್ಯಾ .**
**ಪ್ರಸಾದವಿಲ್ಲದಿರೆ ಲೋಕರಂಜನೆಯೊ ಪ್ರಸಾದವೋ ?**
**'ಬಹು ವರ್ತಂತೇ ಪ್ರಾಣಿನೋ ಬಹುಶಃ ಶಿವೇ'**
**ಎಂಬ ವೀರತಂತ್ರ ಪುಸಿಯೇನಯ್ಯಾ ?**
**ಪ್ರಸಾದ ಪ್ರಸಾದವೆಂದು ಮುಖದೋರದ ಮೂಗ ಮುಚ್ಚಿ**
**ನುಂಗುವರ ಕಂಡು ಹೊಟ್ಟೆ ಜೋಲಾಡುವಂತೆ ನಕ್ಕ ಕರುಣಾಕರ**
**ಕಪಿಲಸಿದ್ಧಮಲ್ಲಿಕಾರ್ಜುನದೇವನು.**

ಪ್ರಸಾದವೆಂದರೆ ಒಂದು ಅಗಳು ಚೆಲ್ಲದಂತೆ ಹೊಟ್ಟೆ ಬಿರಿಯುವ ಹಾಗೆ ಉಣ್ಣುವುದು ಪ್ರಸಾದವಲ್ಲ. ಪ್ರಸಾದವೆಂದರೆ ಚೆಲ್ಲದಂತೆ ಸ್ವೀಕರಿಸುವುದು ನೋಡುವ ಕಣ್ಣಿನಲ್ಲಿ ಹಾದರದ ದೃಶ್ಯವನ್ನು ಚೆಲ್ಲದಂತೆ ಸ್ವತಃ ತಾನೆ ಸ್ವೀಕರಿಸಬೇಕು ತನ್ನ ದೃಶ್ಯದಿಂದ ಹೊರಚೆಲ್ಲಿದ ಅಜ್ಞಾನವನ್ನು ಸ್ವತಃ ತಾನೆ ಸ್ವೀಕರಿಸುವುದು ಸಾಮಾನ್ಯವಲ್ಲ. ಪರಮಾತ್ಮನ ದರ್ಶನ ಹೊಂದಿದ ಶರಣನಿಗೆ ಮಾತ್ರ ಇದು ಸಾಧ್ಯವಾಗುತ್ತದೆ.

ಇತರ ತನುಗಳಿಂದ ಕಿವಿಗೆ ಬಡಿದ ಶಬ್ದಗಳು ತನಗೆ ಘಾಸಿಯಾಗದಂತೆ ಆ ಶಬ್ದಗಳನ್ನು ನಿಃಶ್ಯಬ್ದ ಮಾಡಿ ಮಹಾಜ್ಞಾನದಿಂದ ತಾನೇ ಸ್ವೀಕರಿಸುವುದು. ತನಗೆ ಬಿರು ನುಡಿಗಳಿಂದ ಬೈದ ತನುವನ್ನು ಅತ್ಯಂತ ಆದರದಿಂದ ಹಸನ್ಮುಖಿಯಾಗಿ ನೋಡುವುದು ಪ್ರಸಾದಿಗೆ ಮಾತ್ರ ಸಾಧ್ಯವಾಗುತ್ತದೆ.

ತನುವಿಗೆ ತಾಗಿದ ಚರ್ಮದ ಸ್ಪರ್ಶವನ್ನು ವಿಕೃತನಾಗದಂತೆ ಉದ್ರೇಕಕ್ಕೆ ಒಳಗಾಗದಂತೆ ಪರಮಾನಂದದಿಂದ ಸ್ವೀಕರಿಸುವವನೇ ಪ್ರಸಾದಿ.

ಪ್ರಸಾದದಲ್ಲಿ ರುಚಿ ಅರುಚಿಯನ್ನು ಎಣಿಸದೆ ಅತ್ಯಂತ ಆಹ್ಲಾದದಿಂದ ಸ್ವೀಕರಿಸುವವನೇ ಪ್ರಸಾದಿ. ನಾಸಿಕ ಸ್ವೀಕರಿಸುವ ಸುಗಂಧ ದುರ್ಗಂಧಗಳನ್ನು ಪರಿಮಳದಂತೆ ಸ್ವೀಕರಿಸುವ ಮಾಹಾಜ್ಞಾನಿಯನ್ನು ಪ್ರಸಾದಿಯೆಂದು ಕರೆಯುತ್ತಾರೆ.

ಇದರ ಹೊರತಾಗಿ ಪ್ರಸಾದ ಪ್ರಸಾದವೆಂದು ಮುಖದೋರದೆ ಮೂಗ ಮುಚ್ಚಿ ನುಂಗುವರ ಕಂಡು ಹೊಟ್ಟೆ ಜೋಲಾಡುವಂತೆ ಗಹಗಹಿಸಿ ನಗುತ್ತಾನೆ ಕರುಣಾಕರ ಕಪಿಲಸಿದ್ಧಮಲ್ಲಿಕಾರ್ಜುನಾ.

**1574**

**ಅಟ್ಟುಂಬುವುದದು ಜೀವಕ್ಕೆ ಪ್ರಸಾದವಲ್ಲದೆ,**
**ನಿರ್ಜೀವಕ್ಕೇನೋ ಅಯ್ಯಾ ?**
**ಜೀವಭಾವವಳಿದು, ಜನನಭಾವವಡಗಿ,**
**ಜಗದಂತರ್ಯಾಮಿಯೆಂಬುದು ಮಹಾಪ್ರಸಾದ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹದ ಹಸಿವಿಗಾಗಿ ತೆಗೆದುಕೊಳ್ಳುವುದು ಪ್ರಸಾದವಲ್ಲ. ಪ್ರಸಾದಿಯಾದಾತ ಜೀವಭಾವವು ಅಡಗಿ ಜಗದಂತರ್ಯಾಮಿಯಾದಾತ ಮಹಾಪ್ರಸಾದಿ. ಈತ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನಾ.

ಪ್ರಸಾದಿಯಾದಾತನಿಗೆ ಪಂಚೇಂದ್ರಿಯಗಳ ಅಜ್ಞಾನ ಅಡಗಿ ಮಹಾಜ್ಞಾನೇಂದ್ರಿಯಗಳಾಗಿ ಐದು ಮಹಾಜ್ಞಾನದ ದ್ವಾರ ಬಾಗಿಲುಗಳೇ ಆಗಿ ತನುವಿಗೆ ಸಹಕರಿಸುತ್ತದೆ. ಅಜ್ಞಾನದ ನೇತ್ರವಡಗಿ ಮಹಾಜ್ಞಾನ ನೇತ್ರದ ದೃಶ್ಯ ಮಾತ್ರ ಜಗವನ್ನು ಬೆಳಗುತ್ತಿರುತ್ತದೆ.

**1575**

**ಅಟ್ಟುಂಬುದು ಪ್ರಸಾದವಾದಡೆ ,**
**ಇದ್ದ ಪ್ರಾಣಿಗಳೆಲ್ಲ ಮೋಕ್ಷವಂತರಾಗಬಾರದೇನೋ ಅಯ್ಯಾ ?**
**ಅಟ್ಟುಂಬುದದು ಭೂತ !**
**ಅಡದೆ ಉಣದ ನಿಜವಡಗಿದ ರೂಹ ಅರಿಯಬಲ್ಲಡೆ,**
**ಅದು ಮಹಾಪ್ರಸಾದ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಯಥೇಚ್ಛವಾಗಿ ನಾನಾ ಭಕ್ಷಗಳನ್ನು ಉಣ್ಣುವುದೇ ಪ್ರಸಾದವಲ್ಲ. ಉಣ್ಣುವ ಪದಾರ್ಥವೆ ಪ್ರಸಾದವಾಗಿದ್ದರೆ ಇಡೀ ಬ್ರಹ್ಮಾಂಡದಲ್ಲಿರುವ ಪ್ರಾಣಿಗಳೆಲ್ಲ ಮೋಕ್ಷ ಪಡೆಯುತ್ತಿದ್ದವು. ಹೊಟ್ಟೆ ತುಂಬ ಉಂಡು ಮತ್ತೆ ಉಣ್ಣುವುದಕ್ಕಾಗಿ ಬದುಕುವಂತೆ ಮಾಡುವುದು ಅದೊಂದು ಭೂತ. ಭೂತ ಎಂದ ಮಟ್ಟಿಗೆ ರಕ್ಕಸವಲ್ಲ. ಕಾಯದಲ್ಲಿ ಸಂಗಮವಾದ ಪಂಚಭೂತಗಳಲ್ಲಿ ಒಂದಾದ ಅಗ್ನಿಯ ಹಸಿವು ಇಂಗಿಸಿಕೊಳ್ಳುವುದಕ್ಕಾಗಿ ಮತ್ತೆ ಮತ್ತೆ ಉಣ್ಣುವ ಕೆಲಸದಲ್ಲಿ ತೊಡಗಿದೆ ತನು.

ಪ್ರಸಾದಿಯೆಂದರೆ ಉಣ್ಣುವಾತನಲ್ಲ ನೋಡಿ ಹಾದರ ಮಾಡುವ ಕಣ್ಣಿನ ಅಜ್ಞಾನದ ದೃಶ್ಯವನ್ನು ಅದೇ ಕಣ್ಣಿನ ಮಹಾಜ್ಞಾನದ ದೃಶ್ಯದ ಮೂಲಕ ಉಂಡು ಪರಮಾತ್ಮ ಪ್ರಸಾದಿಯೆಂದು ಕರೆಯಿಸಿಕೊಂಡಿದ್ದಾನೆ. ಈತ ಉಣ್ಣುವಾತನಲ್ಲ. ಕಣ್ಣಿಗೆ ಕಾಣದ ಕಣ್ಣಿನಲ್ಲಿಯೇ ಬಚ್ಚಿಟ್ಟುಕೊಂಡಿದ್ದಾನೆ. ಚರ್ಮಕ್ಕೆ ಕಾಣದೆ ಚರ್ಮದಲ್ಲಿಯೇ ಬಚ್ಚಿಟ್ಟುಕೊಂಡು ಚರ್ಮದ ಅಜ್ಞಾನವನ್ನು ಉಣ್ಣುತ್ತಾನೆ. ಕಿವಿಗೆ ಕಾಣದೆ ಕಿವಿಯಲ್ಲಿಯೇ ಬಚ್ಚಿಟ್ಟುಕೊಂಡು ಕಿವಿಗೆ ಬಡಿಯುವ ಶಬ್ದಗಳನ್ನು ಉಣ್ಣುತ್ತಾನೆ. ಮೂಗಿನಲ್ಲಿ ಬಚ್ಚಿಟ್ಟುಕೊಂಡು ಸುಗಂಧ ದುರ್ಗಂಧಗಳನ್ನು ತಾನುಂಡು ಪರಿಮಳ ಹೊರ ಸೂಸುವ ಮಹಾಪ್ರಸಾದಿ ಈತ. ನಾಲಿಗೆಯಲ್ಲಿ ಬಚ್ಚಿಟ್ಟುಕೊಂಡು ರುಚಿ-ಅರುಚಿಗಳನ್ನು ಮೆದ್ದು ಪ್ರಸಾದ ಮಾಡಿಕೊಳ್ಳುವ ಶಕ್ತಿ ಪ್ರಸಾದಿಗೆ ಮಾತ್ರ ಇದೆ. ಈತನ ನಿಜವಡಗಿದ ರೂಹ ಅರಿಯಬಲ್ಲಡೆ ಅದು ಮಹಾಪ್ರಸಾದ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1576**

**ಗುರು ಮುಟ್ಟಿ ಬಂದ ಶುದ್ಧ ಪ್ರಸಾದಿಯಾದಡೆ,**
**ವಾತ ಪಿತ್ತ ಶ್ಲೇಷವಳಿದಿರಬೇಕು.**
**ಲಿಂಗ ಮುಟ್ಟಿ ಬಂದ ಸಿದ್ಧ ಪ್ರಸಾದಿಯಾದಡೆ,**
**ಆದಿವ್ಯಾಧಿಗಳಿಲ್ಲದಿರಬೇಕು.**
**(ಜಂಗಮ ಮುಟ್ಟಿ ಬಂದ ಪ್ರಸಿದ್ಧ ಪ್ರಸಾದಿಯಾದಡೆ,**
**ಅಜ್ಞಾನ ರೋಗವಿಲ್ಲದಿರಬೇಕು)**
**ಮೂರರ ಅರುಹು ಗಟ್ಟಿಗೊಳ್ಳುವ ಮಹಾ ಪ್ರಸಾದಿಯಾದಡೆ**
**ಮರಣವಿಲ್ಲದಿರಬೇಕು.**
**ಪ್ರಸಾದ ಪ್ರಸಾದವೆಂದು ತ್ರಿವಿಧ ಪ್ರಸಾದವ ಸೇವಿಸಿ,**
**ಸರ್ವರಂತೆ ಮಲತ್ರಯಕ್ಕೊಳಗಾಗುವರ**
**ಪ್ರಸಾದಿಗಳೆಂದು ನಂಬದಿರಾ,**
**ಕಪಿಲಸಿದ್ದಮಲ್ಲಿಕಾರ್ಜುನ ಸಾಕ್ಷಿಯಾಗಿ ಕಬ್ಬಿಲರಿರಾ.**

ಭಕ್ತಸ್ಥಲ, ಮಹೇಶ್ವರ ಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿ ಸ್ಥಲ, ಶರಣ ಸ್ಥಲ, ಐಕ್ಯಸ್ಥಲ ಈ ಆರೂ ಸ್ಥಲಗಳು ಪ್ರಮುಖವಾದವುಗಳೇ ಆಗಿವೆ. ಯಾವುದೇ ಒಂದು ಸ್ಥಲ ಸಿದ್ಧಿಮಾಡಿಕೊಂಡ ಶರಣ ಸಕಲ ಸ್ಥಲಗಳಿಗೂ ಕೃಷಿ ಮಾಡದ ಹೊರತು ಯಾವ ಸ್ಥಲಕ್ಕೂ ಹೋಗಲು ಸಾಧ್ಯವಿಲ್ಲ.

ಗುರು ಮುಟ್ಟಿ ಬಂದ ಶುದ್ಧಿ ಪ್ರಸಾದಿಯಾದಡೆ ಆದಿವ್ಯಾಧಿಗಳಿಲ್ಲದಂತೆ ಬದುಕುತ್ತಾನೆ. ಜಂಗಮ ಮುಟ್ಟಿ ಬಂದ ಪ್ರಸಿದ್ಧ ಪ್ರಸಾದಿಯಾದಡೆ ಅಜ್ಞಾನದ ರೋಗ ಇಲ್ಲದಂತೆ ಆಗುತ್ತಾನೆ.

ಗುರು,ಲಿಂಗ,ಜಂಗಮ ಎಂಬ ಮೂರರ ಅರುಹು ಗಟ್ಟಿಗೊಳ್ಳುವ ಮಹಾಪ್ರಸಾದಿಯಾದರೆ

ಮರಣವಿಲ್ಲದಂತೆ ಇರುತ್ತಾನೆ. ಇವರನ್ನು ಹೊರತು ಪಡಿಸಿ ಪ್ರಸಾದ ಪ್ರಸಾದ ಎಂದು ತ್ರಿವಿಧ ಪ್ರಸಾದ ಸೇವಿಸಿ ಸರ್ವರಂತೆ ಮಲತ್ರಯಕ್ಕೆ ಒಳಾಗಾಗುವವರನ್ನು ಪ್ರಸಾದಿಯೆಂದು ನಂಬುವಂತಿಲ್ಲ ಕಪಿಲಸಿದ್ಧಮಲ್ಲಿಕಾರ್ಜುನ ಸಾಕ್ಷಿ ಯಾಗಿ.

**1577**

**ಕರಣಾದಿಗಳೆಲ್ಲ ಪರಶಿವನೆಂದ ಬಳಿಕ ,**
**ಆ ಕರಣಾದಿಗಳ 'ಭೋಜನ ಕೊಳ್ಳು' ಎನಬಾರದೆಂದು ,**
**'ಪರಶಿವ ಪ್ರಸಾದ' ಎಂಬ ನಾಮವಿಟ್ಟನಯ್ಯಾ ಶ್ರೀಗುರು.**
**ಆ ಕರಾಣ ಬಂದ ಪ್ರಸಾದವೆಲ್ಲ ಶಿವಪ್ರಸಾದವೆಂದು ಭುಂಜಿಸಬೇಕಲ್ಲದೆ,**
**ಕಟು ಆಮ್ಲ ತಿಕ್ತವೆಂದು ಭೋಗಿಸಿದಡೆ ,**
**ಭವ ತಪ್ಪದು ನೋಡಾ, ಕಪಿಲಸಿದ್ದಮಲ್ಲಿಕಾರ್ಜುನಾ.**

ಕಾಯದಲ್ಲಿ ಶಿವ ಸಂಗಮವಾಗಿದ್ದಾನೆ ಎಂದ ಬಳಿಕ ಕಾಯದಲ್ಲಿ ಇರುವ ಕರಣಾದಿಗಳು ಭೋಜನ ಕೊಳ್ಳು ಎನಬಾರದೆಂದು ಪರಶಿವ ಪ್ರಸಾದವೆಂಬ ನಾಮವಿಟ್ಟನಯ್ಯಾ ಶ್ರೀಗುರು. ಶ್ರೀಗುರುವಿನ ಲೀಲೆ ಅನಂತ. ಕಾಯದಲ್ಲಿ ಶ್ರೀಗುರು ಇದ್ದಾನೆ. ಕಾಯವನ್ನು ಕರಣಾಧಿಗಳು ಆವರಿಸಿವೆ. ಇವುಗಳ ಭೋಜನವೆಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಇವುಗಳನ್ನು ಉಣ್ಣಲು ಅಣಿಯಾದ ಕರಣಾಧಿಗಳನ್ನು ಇವುಗಳು ಕೊಂಡು ಭುಂಜಿಸುವ ಭೋಜನವನ್ನು ಶ್ರೀಗುರು ಶಿವಪ್ರಸಾದವೆಂದು ಭುಂಜಿಸುತ್ತಾನೆ.

ಇವು ಕಟು ಆಮ್ಲತಿಕ್ತವೆಂದು ಭೋಗಿಸಿದಡೆ ಕರಣಾಧಿಗಳಿಗೆ ಜನನ ಮರಣ ತಪ್ಪದು. ಕಾಯದಲ್ಲಿದ್ದ ಕರಣಾದಿಗಳ ಭೋಜನ ಬೇರೆ, ಇದನ್ನು ಅರಿತು ಪ್ರಯೋಗಕ್ಕೆ ಇಳಿದವನೇ ಶರಣ.

**1578**

**ಮಜ್ಜಿಗೆ ಹುಳಿ ಎಂದಡೆ ಅದು ಗೊಜ್ಜಿನ ಹಾದಿ ನೋಡಾ, ಮನವೆ.**
**ಸಜ್ಜಿಕ ಸ್ವಾದವೆಂದಡೆ, ಕಜ್ಜಿಯ ತಿಂಡಿಯಂತೆ ಕಾಣಾ, ಮನವೆ.**
**ಸ್ವಾದ ಹುಳಿ ಶಿವಸ್ವರೂಪವೆಂದಡೆ ಮಹಾಪ್ರಸಾದವಾಯಿತ್ತು ,**
**ಎನ್ನ ಗುರು ಚೆನ್ನಬಸವಣ್ಣಂಗೆ ಕಾಣಾ ಮನವೆ.**
**ಕಪಿಲಸಿದ್ದಮಲ್ಲಿಕಾರ್ಜುನಾ.**

ನಾಲಿಗೆಯ ಮೇಲೆ ಮನ ನರ್ತನ ಮಾಡುವುದರಿಂದ ರುಚಿಯನ್ನು ಮೂಗು ಅರಳಿಸುತ್ತಾ ಸ್ವೀಕರಿಸುತ್ತದೆ. ಅರುಚಿಯನ್ನು ಮನಸ್ಸು ಮೂಗು ಮುರಿಯುತ್ತಾ ಸ್ವೀಕರಿಸುತ್ತದೆ. ಇದು ನಾಲಿಗೆಯ ಮೇಲೆ ಇರುವ ಮನದ ಚೇಷ್ಠೆ. ನಾಲಿಗೆಯಲ್ಲಿಯೇ ಸಂಗಮವಾದ ಪ್ರಸಾದಿ ಸ್ವೀಕರಿಸುವ ಹುಳಿ,ಸಿಹಿ,ಕಾರ,ಉಪ್ಪು ಇವೆಲ್ಲವೂ ಮಹಾ ಪ್ರಸಾದವೆಂದು ಸ್ವೀಕರಿಸುತ್ತಾನೆ..

ಈ ಬ್ರಹ್ಮಾಂಡದಲ್ಲಿರುವ ತನು ಕುಲಗಳಲ್ಲಿರುವ ನಾಲಿಗೆಯ ಮೇಲೆ ಮನ ನರ್ತನೆ ಮಾಡುತ್ತಿದ್ದರೆ. ಸಕಲ ನಾಲಿಗೆಗಳಲ್ಲಿಯೂ ಕೂಡ ಪ್ರಸಾದಿ ಸಂಗಮವಾಗಿದ್ದಾನೆ.

ರುಚಿ ಅರುಚಿಗಳನ್ನು ಸ್ವೀಕರಿಸುತ್ತ ನಾಲಿಗೆಯ ಮೇಲೆ ನರ್ತನೆ ಮಾಡುವ ಮನವೆ

ನಾಲಿಗೆಯಲ್ಲಿ ಸಂಗಮವಾದ ಪ್ರಸಾದಿಯನ್ನು ಕಂಡುಕೊಂಡು ಆ ಪ್ರಸಾದಿಗೆ ಮನ ಶರಣು ಹೊಗಬೇಕು. ಆಗ ನಾಲಿಗೆಯ ಮೇಲೆ ಇದ್ದ ಮನವನ್ನು ಪ್ರಸಾದಿ ಘನಮನವನ್ನಾಗಿ ಮಾಡುತ್ತಾನೆ. ಇದು ಗುರುಚೆನ್ನಬಸವಣ್ಣನಿಗೆ ಸಾಧ್ಯವಾಯಿತೆಂದು ಸಿದ್ಧರಾಮಶಿವಯೋಗಿಗಳು ನುಡಿದಿದ್ದಾರೆ.

**1579**

**ಜ್ಞಾನವಿದು ದುರ್ಲಭವಲ್ಲ, ಅದರ ಭಾವ ದುರ್ಲಭವಯ್ಯಾ .**
**ಭಾವವದು ದುರ್ಲಭವಲ್ಲ, ಅದರ ಏಕತ್ವವದು ದುರ್ಲಭ ನೋಡಾ,**
**ಕಪಿಲಸಿದ್ದಮಲ್ಲಿಕಾರ್ಜುನಾ.**

ತನುವಿನಲ್ಲಿಯೇ ತನ್ಮಯವಾದ ಜ್ಞಾನವನ್ನು ತನುವನ್ನು ಆವರಿಸಿದ ಮನ ಇಚ್ಛಿಸಿದರೆ ಸಾಕು ಮನ ಮಹಾಜ್ಞಾನಕ್ಕೆ ಶರಣುಹೋಗುತ್ತದೆ. ಜ್ಞಾನ ಹೇಳಿದಂತೆ ತನು ಕೇಳುತ್ತದೆ.

ತನು ತನುವನ್ನು ಆವರಿಸಿದ ಮನಕ್ಕೆ ಸೋತಿದೆ. ಆ ಮನಕ್ಕೆ ತನು ಉಪಕರಣವಾಗಿ ಬಳಕೆಯಾಗುತ್ತಿದೆ. ಮನಕ್ಕೆ ಅರಿವಾದಾಗ ತನುವಿನ ಸಂಘವನ್ನು ಬಿಡಿಸಿಕೊಂಡು ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನಕ್ಕೆ ಶರಣು ಹೋದರೆ ಜ್ಞಾನವದು ಬಲು ಸುಲಭ. ಆಗ ಅದರ ಭಾವ ನಿರ್ಭಾವವಾಗುತ್ತದೆ ಹೀಗಾಗಿ ಭಾವಕ್ಕೆ ನಿಲುಕುತ್ತದೆ.

ಹೀಗೆ ಮನ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನದೊಂದಿಗೆ ಏಕತ್ವವಾಗಿ ಸಂಗಮವಾದಾಗ ಜ್ಞಾನ ಬಹಳ ಸುಲಭವಾಗುತ್ತದೆ.

**1580**

**ನೆಲೆಗೊಳ್ಳದು ಎಂದು ಬಿಡಬಾರದಯ್ಯಾ.**
**ನೆಲೆಯದು ನೆಲೆಯದು ಎಂದು ಅನುಭವಿಸಬೇಕಯ್ಯಾ.**
**ನೆಲೆಯಿಲ್ಲದದು ನೆಲೆಯೆಲ್ಲಿಹುದಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ತನುವಿನಲ್ಲಿ ತನ್ಮಯವಾದ ಮಹಾಜ್ಞಾನವನ್ನು ಮನ ತನುವಿನ ಮೂಲಕ ಅನುಭವಿಸಲೇಬೇಕು. ಅಥವಾ ತನುವನ್ನು ಆವರಿಸಿದ ಮನದ ಮೂಲಕ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನವನ್ನು ಪಡೆಯಲೇಬೇಕು. ಇದಕ್ಕೆ ಛಲ ಬೇಕು. ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ, ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ, ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ, ಛಲಬೇಕು ಶರಣಂಗೆ ಲಿಂಗಜಂಗಮರೊಂದೇ ಎಂಬ, ಛಲಬೇಕು ಶರಣಂಗೆ ಪ್ರಸಾದಿ ದಿಟವೆಂಬ. ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವಾ ಎಂದು ಬಸವಣ್ಣನವರು ಓದುಗರಿಗಾಗಿ ಕೊಟ್ಟಿದ್ದಾರೆ. ಸಿದ್ಧರಾಮ ಶಿವಯೋಗಿಗಳು ನೆಲೆಗೊಳ್ಳದು ಎಂದು ಮಹಾಜ್ಞಾನವನ್ನು ಬಿಡಬಾರದಯ್ಯಾ  ಎಂದು ಓದುಗರಿಗೆ ಕಿವಿಮಾತು ಹೇಳಿದ್ದಾರೆ. ನೆಲೆಯದು ನೆಲೆಯದು ಎಂದು ಆ ಮಹಾಜ್ಞಾನವನ್ನು ಅನುಭವಿಸಲೇಬೇಕು ನೆಲೆಯಿಲ್ಲದದು ನೆಲೆಯೆಲ್ಲಿಹುದಯ್ಯಾ .

ಛಲಬೇಕು ಶರಣಂಗೆ ಪರರಿಂದ ಬಂದ ಜ್ಞಾನವನ್ನು ಒಲ್ಲೆನೆಂಬ. ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನವನ್ನು ತನುವನ್ನು ಆವರಿಸಿದ ಮನ ಪಡೆಯದಿದ್ದರೆ ಒಮ್ಮೆ ತನುವಿನೊಂದಿಗೆ ಇಲ್ಲವಾಗುತ್ತದೆ. ಅಲ್ಲಮ ಪ್ರಭುಗಳು ನಿನ್ನದೆಂಬುದು ಜ್ಞಾನರತ್ನ ಅದನ್ನು ಕೆಡಗೊಡದೆ ಅನುಭವಿಸಿಯಾದಡೆ ನಿನ್ನಂತ ಸಿರಿವಂತರು ಯಾರೂ ಇಲ್ಲ ಎಲೆ ಮನವೆ ಎಂದಿದ್ದಾರೆ.

ನೆಲೆಗೊಳ್ಳದು ಎಂದು ಮನ ಬೇಸರ ಬಂದು ಬಿಡಬಾರದು ನೆಲೆಯಲ್ಲೇ ಅಡಗಿದ ಜ್ಞಾನವನ್ನು ಮನ ಪಡೆಯಲೇಬೇಕು.

**1581**

**ಕಲ್ಲು ನೀರಲ್ಲಿದ್ದಂತೆ ಅಲ್ಲದೆ. ನೀರ ನುಂಗಿ ನೀರಾಗಬಹುದೆ ಅಯ್ಯಾ ?**
**ಅಗ್ನಿ ನೀರಲ್ಲಿದ್ದಂತಲ್ಲದೆ, ನೀರ ನುಂಗಿ ನೀರಾಗಬಹುದೆ ಅಯ್ಯಾ ?**
**ಪ್ರಸಾದಿ ಭವದಲ್ಲಿದ್ದಂತಲ್ಲದೆ, ಭವನುಂಗಿ ಭವಿಯಾಗಬಹುದೆ ಅಯ್ಯಾ ?**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಸಿದ್ಧರಾಮಶಿವಯೋಗಿಗಳು ಜ್ಞಾನಕ್ಕೆ ಹೋಗಿ ಆ ಮಹಾಜ್ಞಾನ ಸರಳ ಸೂತ್ರವನ್ನು ಈ ವಚನದಲ್ಲಿ ಬಂಧಿಸಿದ್ದಾರೆ. ಕಲ್ಲು ಜಲದಿಂದ ಹುಟ್ಟಿದ್ದರೂ ಪುನಃ ಜಲನುಂಗಿ ಜಲವಾಗಬಹುದೆ ಅಯ್ಯಾ . ಅಗ್ನಿ ಜಲದಲ್ಲಿ ಇದೆ. ಪುನಃ ಜಲನುಂಗಿ ಅಗ್ನಿ ಜಲವಾಗಬಹುದೆ?

ಜಲ ಜಲವಲ್ಲ ಜಲದಲ್ಲಿ ಜಲಜನಕ ಇದೆ, ಆಮ್ಲ ಜನಕವೂ ಇದೆ. ಜಲಜನಕಕ್ಕೆ ಉರಿಯುವ ಶಕ್ತಿ ಇದ್ದರೆ ಆಮ್ಲಜನಕಕ್ಕೆ ಜಲಜನಕವನ್ನು ಉರಿಸುವ ಶಕ್ತಿ ಇದೆ. ಉರಿಯುವ ಜಲಜನಕ ಉರಿಸುವ ಆಮ್ಲಜನಕದೊಂದಿಗೆ ಬೆರೆತು ಜಲವಾಗಿದೆ.

ಪ್ರಸಾದಿ ಪ್ರಸಾದಿಯಾಗುವ ಮುನ್ನ ಈತನಿಗೆ ಜನನ ಮರಣಗಳ ಬಾಧೆಯಿತ್ತು . ಹೀಗಾಗಿ ಭವಿಯೆಂದು ಕರೆದರು. ಈ ಭವಿಯ ತನುವಿನಲ್ಲಿ ತನ್ಮಯವಾದ ಅರಿವು ಎಂಬ ಮಹಾಜ್ಞಾನಕ್ಕೆ ಶರಣು ಹೋಗಿ ಶರಣನಾದ, ಪ್ರಸಾದಿಯಾದ. ಪ್ರಸಾದಿ ಸ್ಥಾನದಲ್ಲಿದ್ದ ಶರಣ ಪುನಃ ಭವ ನುಂಗಿ ಭವಿಯಾಗಬುಹುದೆ, ಸಾಧ್ಯವಿಲ್ಲ ಎಂದು ಹೇಳಿದ್ದಾರೆ ಸಿದ್ಧರಾಮಶಿವಯೋಗಿಗಳು.

**1582**

**'ವಿಕಾರಣ್ಯಂ ತಸ್ಯಾಂ' ಎಂಬ ಶ್ರುತಿ ಪ್ರಸಿದ್ಧವು.**
**ವಿಕಾರ ಪ್ರಕೃತಿಯಲ್ಲಲ್ಲದೆ ಪುರುಷನಲ್ಲಿಲ್ಲವಯ್ಯಾ.**
**ಪುರುಷನಿಲ್ಲದಿರೆ ಪ್ರಕೃತಿಯ ಕರ್ಮ ನಡೆಯದಯ್ಯಾ.**
**ಸೂರ್ಯ ಕಿರಣದಿಂದಾದ ಜಲದಲ್ಲಿ ಸೂರ್ಯಬಿಂಬವಿರೆ,**
**ನಿಜ ಸೂರ್ಯನ ರೂಹು ಕೆಡದಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಪ್ರಕೃತಿಯಲ್ಲಿ ವಿಕಾರ ಗುಣವಿದೆ. ಪ್ರಕೃತಿಯಲ್ಲಿಯೇ ಇರುವ ಪುರುಷನಲ್ಲಿ ನಿರ್ಗುಣವಿದೆ. ಇಲ್ಲಿ ಪುರುಷನೆಂದರೆ ಗಂಡಲ್ಲ ಹೆಣ್ಣೂ ಅಲ್ಲ. ಅಂಗ ಎನ್ನುವ ಪ್ರಕೃತಿ ಸ್ವರೂಪದಲ್ಲಿ ಸಂಗಮವಾದ ಅರಿವೇ ಮಹಾಪುರುಷ, ಅಂಗವನ್ನು ಆವರಿಸಿದ ಮನವೆ ಸ್ತ್ರೀ. ಅಂಗ ಸ್ತ್ರೀ ಪುರುಷರಿಬ್ಬರೂ ಇದ್ದ ಸಂಗಮ ಅದು ಕೈಲಾಸವೂ ಹೌದು.

ಅಂಗದಲ್ಲಿ ಸಂಗಮವಾದ ಮಹಾಪುರುಷನಿಂದಲೇ ಬ್ರಹ್ಮಾಂಡ ಸೃಷ್ಠಿಯಾಗಿದೆ. ಪ್ರಕೃತಿಯೂ ಸೃಷ್ಠಿಯಾಗಿದೆ. ಈ ಮಹಾಪುರುಷನಿಲ್ಲದಿದ್ದರೆ ಪ್ರಕೃತಿಯ ಕರ್ಮ ನಡೆಯದು.

ಸೂರ್ಯನ ಕಿರಣಗಳಿಂದಾಗಿ ಜಲದಲ್ಲಿ ಸೂರ್ಯನ ಬಿಂಬ ಬೀಳುತ್ತದೆ, ಜಲದ ಅಲೆಗಳಿಂದಾಗಿ ಸೂರ್ಯ ಬಿಂಬ ಹೊಯ್‌ದಾಡಿದರೆ ನಿಜಸೂರ್ಯನ ರೂಪ ಕೆಡುವುದಿಲ್ಲ. ಎನ್ನುವ ಉದಾಹರಣೆಯನ್ನು ಸಿದ್ಧರಾಮ ಶಿವಯೋಗಿಗಳು ಈ ವಚನದ ಮೂಲಕ ನೀಡಿದ್ದಾರೆ.

**1583**

**ಒಂದೆ ವಸ್ತು ಅವಸ್ಥಾತ್ರಯ ಕಿಂಚಿಜ್ಞತ್ವ ಹೊಂದಿ ಜೀವವೆನಿಸಿತ್ತಯ್ಯಾ ,**
**ಆ ಜೀವ ಕರ್ತೃಭೋಕ್ತೃತ್ವಕ್ಕೆ ಒಳಗಾಗಿ 'ದೇಹ ನಾನು' ಎಂದಿತ್ತಯ್ಯಾ,**
**'ದೇಹ ನಾನು' ಎಂಬುವ ವಾಸನೆಯೊಳಗಾಗಿ,ಕಾಲತ್ರಯಕ್ಕೊಳಗಾಗಿ,**
**ಅಸ್ವತಂತ್ರನಾಗಿ ನೆಲೆಸಿತ್ತು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಬಯಲು ಎನ್ನುವ ಒಂದೇ ವಸ್ತು ಆಮ್ಲಜನಕ ಜಲಜನಕಕ್ಕೆ ಜನ್ಮ ನೀಡಿ ಅವೆರಡರಲ್ಲಿ ತಾನೂ ಸಂಗಮವಾಗಿ ಜೀವ ಜಲವಾಯಿತ್ತು . ಆ ಜಲಬಿಂದುವೇ ಗರ್ಭಕ್ಕೆ ಹೋಗಿ ರಕ್ತ , ಮೂಳೆ, ಮಾಂಸ, ಮಜ್ಜೆ, ಮೇದಸ್ಸು ಆಗಿ ಇವು ಸೋರದಂತೆ ಆ ವಸ್ತುವಿಗೆ ಚರ್ಮದ ಕವಚವಾಗಿ ಜೀವವೆನಿಸಿ ಭುವಿಗೆ ಬಂದಿತ್ತು . ಆ ಜೀವವೆ ಕತೃತ್ವ ಭೋಕ್ತೃತ್ವಕ್ಕೆ ಒಳಗಾಗಿ ದೇಹ ನಾನು ಎಂದಿತ್ತು . ದೇಹ ನಾನು ಎನ್ನುವ ವಾಸನೆಗೆ ಒಳಗಾಗಿ ಮನಸ್ಸು ಕಾಲತ್ರಯಕ್ಕೆ ಒಳಗಾಗಿ ಮಹಾಜ್ಞಾನ ಸ್ವಾತಂತ್ರವನ್ನೇ ಕಳೆದುಕೊಂಡು ಕಿಂಚಿತ್ತು ಪ್ರಾಣಿಯಾಗಿ ನೆಲೆಸಿತ್ತು ನೋಡಾ ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧಮಲ್ಲಿಕಾರ್ಜುನಯ್ಯನೊಂದಿಗೆ ಮಾತನಾಡಿದ್ದಾರೆ.

ತನಗೆ ತಾನೆ ಹೇರಿಕೊಂಡ ಎಲ್ಲಾ ಅಜ್ಞಾನವನ್ನು ಮನ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನವೆಂಬ ಖಡ್ಗದಿಂದ ತನಗೆ ತಾನೇ ಕತ್ತರಿಸಿಕೊಳ್ಳಬಹುದಾಗಿದೆ.

**1584**

**ದೇಹ ನಾನಲ್ಲ, ಜೀವ ನಾನಲ್ಲವೆಂಬುದು ಶಿವನೆನಿಸಿತ್ತು.**
**ಶಿವ- ಶಿವಂಗೆ ಭೇದವೆಂಬುದು ಇಲ್ಲ ಕಾಣಾ.**
**ಉದಕವಿದ್ದಡೆಯಲ್ಲಿ ಗಗನಪರಿಪೂರ್ಣದಲ್ಲಿ,**
**ರವಿ ತಾರೆ ಮೇಘವಾದಂತೆ**
**ಪರಿಪೂರ್ಣ ವಸ್ತುವೆ ಚಿದಾಕಾಶದಲ್ಲಿ ಶಿವ ಜೀವ ಮಾಯಾ**
**ಪ್ರಕೃತಿ ಎನಿಸಿತ್ತಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹ ನಾನಲ್ಲ, ಜೀವವೂ ನಾನಲ್ಲ ಎಂಬುದು ಸತ್ಯ ಆದರೂ ಶಿವ ಮತ್ತು ಜೀವಕ್ಕೆ ಭೇದವೇ ಇಲ್ಲ. ಶಿವ ಎಂದರೆ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನ. ಈ ಜ್ಞಾನವೇ ಶಿವ ಎಂದು ಕರೆಯಿಸಿಕೊಂಡಿದೆ. ಅಂಗಕ್ಕೆ ಜನ್ಮ ನೀಡಿ ಅಂಗದಲ್ಲಿಯೇ ಸಂಗಮವಾದ ಈ ಶಿವನ ಬೆಳಕಿನಿಂದಾಗಿ ಮನವೆಂಬ ಕತ್ತಲು ಹುಟ್ಟಿದೆ. ಆ ಕತ್ತಲೆಯೇ ಜೀವ ನನ್ನದು, ದೇಹ ನನ್ನದು ಎಂದು ಹೇಳುತ್ತದೆ. ಈ ಕತ್ತಲು ಎನ್ನುವ ಮನ ಶಿವ ಎನ್ನುವ ಬೆಳಕಿನಲ್ಲಿ ಸಂಗಮವಾದರೆ ಅದು ಸಾಕ್ಷಾತ್ ಶಿವನೇ ಆಗುತ್ತದೆ. ಆಗ ದೇಹ ಮತ್ತು ಜೀವಕ್ಕೆ ಭೇದವಿಲ್ಲ. ಶಿವನಿಂದಲೇ ದೇಹ, ಶಿವನಿಂದಲೇ ಜೀವ. ದೇಹ ಮತ್ತು ಜೀವಕ್ಕೆ ಜನ್ಮ ನೀಡಿ ದೇಹದಲ್ಲಿಯೇ ಸಂಗಮವಾದ ಶಿವನನ್ನು ಮನ ಕಂಡುಕೊಂಡು ಆ ಶಿವನೇ ತಾನಾದರೆ ಸಾಕು ದೇಹಕ್ಕೆ, ಜೀವಕ್ಕೆ, ಶಿವನಿಗೆ ಭೇದವಿಲ್ಲ.

ಉದಕ ಎಂದರೆ ಗಗನದಲ್ಲಿ ರವಿ, ತಾರೆ, ಮೇಘಗಳು ಹುಟ್ಟಿದವು. ಪರಿಪೂರ್ಣಶಿವಮಯ ವಸ್ತುವೇ ಚಿದಾಕಾಶದಲ್ಲಿ ಶಿವ,ಜೀವ, ಮಾಯಾಪ್ರಕೃತಿ ಎನಿಸಿತ್ತು ಎಂದಿದ್ದಾರೆ ಸಿದ್ಧರಾಮಶಿವಯೋಗಿಗಳು.

**1585**

**ಗಣಿತ ಒಂದಕ್ಕೆ ಪೂಜೆ ಒಂದೆರಡು ಮೂರಾದಲ್ಲಿ ಹತ್ತು ಶತ ಸಹಸ್ರವೆನಿಸಿತ್ತಯ್ಯಾ.**
**ಪರಾತ್ಪರವಸ್ತು ಉಪಾಧಿವಶದಿಂದ,**
**ಈಶತ್ವ ಜೀವತ್ವ ಪ್ರಕೃತಿ ಮೊದಲಾದ ಇಂದ್ರಜಾಲವಾಯಿತ್ತು.**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಶೂನ್ಯಕ್ಕೆ ಆಧ್ಯಾತ್ಮದಲ್ಲಿ ಅಧಿಕ ಬೆಲೆ. ಗಣಿತದಲ್ಲಿ ಬರೀ ಶೂನ್ಯ ನಗಣ್ಯ . ಅದೇ ಒಂದರ ಮುಂದೆ ಒಂದು, ಎರಡು, ಮೂರು, ನಾಲ್ಕು ಶೂನ್ಯವಾದಷ್ಟು ಹತ್ತು , ನೂರ , ಸಾವಿರ, ಲಕ್ಷವಾಗುತ್ತದೆ. ಹೀಗೆಯೇ ಶೂನ್ಯದಿಂದಲೇ ಜಗತ್ತು ನಿರ್ಮಾಣವಾಗಿದೆ. ದೇಹವು ನಿರ್ಮಾಣವಾಗಿದೆ.

ಒಂದರ ಮುಂದೆ ಹಲವಾರು ಶೂನ್ಯಗಳಿದ್ದಂತೆ ಈಶತ್ವ, ಜೀವತ್ವ, ಪ್ರಕೃತಿ ಮೊದಲಾದ ಇಂದ್ರಜಾಲವಾಗಿ ತೋರುತ್ತದೆ. ಶೂನ್ಯಕ್ಕೆ ಯಾವ ಬೆಲೆಯೂ ಇಲ್ಲ. ಒಂದರ ಮುಂದಿರುವ ಶೂನ್ಯಕ್ಕೆ ಗಣಿತದಲ್ಲಿ ಹೇಗೆ ಬೆಲೆಯಿದೆಯೋ ಲೌಕಿಕದಲ್ಲಿ ಕಾಯಕ್ಕೂ ಹಾಗೆಯೇ ಬೆಲೆ ಬಂದಿದೆ.

ಕಾಯ ಜನ್ಮ ತಳೆದಿರುವುದು ಶೂನ್ಯದಿಂದಲೇ ಶೂನ್ಯವೆಂಬ ಪರಾತ್ಪರ ವಸ್ತು ಉಪಾಧಿ ವಶದಿಂದಾಗಿ ಈಶ ಜೀವ ಪ್ರಕೃತಿಯಾಗಿ ತೋರುತ್ತದೆ. ಶೂನ್ಯದಿಂದ ಜನ್ಮ ತಳೆದ ಕಾಯ ಕಾಣುತ್ತದೆ. ಕಾಯವನ್ನು ಉಪಕರಣವನ್ನಾಗಿಸಿಕೊಂಡ ಮಹಾಜ್ಞಾನವೆಂಬ ಅರಿವು (ಶೂನ್ಯ) ಕಾಣುವುದಿಲ್ಲ.

ಒಂದರ ಪರಿಚಯ ಒಂದಕ್ಕೆ ಆದರೆ ಸಾಕು ಶೂನ್ಯವೇ ಆಗುತ್ತದೆ. ಪಂಚಭೂತಗಳಿಂದ ಜನ್ಮ ತಳೆದ ಕಾಯವು ಶೂನ್ಯವಾಗುತ್ತದೆ. ಬಯಲು ಬಯಲನೆ ಬಿತ್ತಿ ಬಯಲನ್ನೇ ಬೆಳೆದಂತೆ.

**1586**

**ಎಲ್ಲಾ ಪುರಾಣಕ್ಕೆ ಹೆಸರುಂಟು, ನಮ್ಮ ಪುರಾಣಕ್ಕೆ ಹೆಸರಿಲ್ಲ ನೋಡಯ್ಯಾ .**
**ಲಿಂಗದ ಮಹತ್ವವ ಹೇಳಿದಲ್ಲಿ ಲಿಂಗಪುರಾಣವೆನಿಸಿತ್ತು.**
**ಷಣ್ಮುಖನ ಮಹಾತ್ಮ್ಯವ ಹೇಳಿದಲ್ಲಿ ಸ್ಕಂದಪುರಾಣವೆನಿಸಿತ್ತು.**
**ವೀರಭದ್ರ ಮಹಾತ್ಮ್ಯವ ಹೇಳಿದಲ್ಲಿ ದಕ್ಷಖಂಡವೆನಿಸಿತ್ತು.**
**ಶಿವನ ಮಹಿಮೆ, ಕಾಶಿಮಹಿಮೆ ಹೇಳಿದಲ್ಲಿ**
**ಶಿವಪುರಾಣ ಕಾಶೀಖಂಡವೆನಿಸಿತ್ತು .**
**ಪಾರ್ವತಿಯ ಮಹಾತ್ಮ್ಯವ ಹೇಳಿದಲ್ಲಿ ಕಾಳೀಪುರಾಣವೆನಿಸಿತ್ತು .**
**ನಮ್ಮ ಪುರಾಣ ಹೆಸರಿಡಬೇಕೆಂದಡೆ,**
**ನಿಶಬ್ದ ನಿರವಯಲ ಪುರಾಣ ತಾನೆಯಾಯಿತ್ತು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಸಕಲ ಪುರಾಣಗಳಿಗೂ ಹೆಸರುಂಟು. ದೇಹವೆಂಬ ಪುರಾಣಕ್ಕೆ ಹೆಸರಿಲ್ಲ. ಏಕೆಂದರೆ ದೇಹವನ್ನು ದೇವಾಲಯವನ್ನಾಗಿಸಿಕೊಂಡು ಹೆಸರಿಲ್ಲದ ದೇವರು ದೇಹವೆಂಬ ದೇವಾಲಯದಲ್ಲಿ ಸಂಗಮವಾಗಿದ್ದಾನೆ. ಈ ದೇವರನ್ನು ಆರಾಧಿಸುವ ದೇಹಗಳಿಗೂ ಹೆಸರಿಲ್ಲ. ದೇಹವನ್ನು ಆವರಿಸಿದ ಮನ ದೇಹದಲ್ಲಿಯೇ ಸಂಗಮವಾದ ದೇವರನ್ನು ಪೂಜಿಸಿದಾಗ ಈ ಮನಕ್ಕೂ ಹೆಸರಿಲ್ಲದಾಗುತ್ತದೆ.

ಹೆಸರಿಲ್ಲದ ಭಕ್ತ ಹೆಸರಿಲ್ಲದ ದೇವರನ್ನು ಆರಾಧಿಸುತ್ತ ಇವರಿಬ್ಬರೂ ದೇಹವನ್ನೇ ದೇವಾಲಯವಾಗಿಸಿಕೊಂಡು ಅಲ್ಲಿಯೇ ವಾಸ ಮಾಡುತ್ತಾರೆ.

ಇಂತಹ ದೇವರನ್ನು ಕಂಡವರು ಹೆಸರಿಲ್ಲದ ದೇವರನ್ನು ದೇಹಗಳಿಗೆ ಪರಿಚಯಿಸುವುದಕ್ಕಾಗಿ ಪುರಾಣಗಳನ್ನು ರಚಿಸಿದರು.

ಷಣ್ಮುಖ ಹೆಸರಿಲ್ಲದ ದೇವನ ಸಂತಾನ. ಈತನ ಚರಿತೆಯನ್ನು ಹೇಳುವ ಪುರಾಣವೇ ಪುರಾಣಸ್ಕಂದವೆನಿಸಿತ್ತು. ವೀರಭದ್ರ ಕೂಡ ಹೆಸರಿಲ್ಲದ ದೇವರ ಪುತ್ರ ಅಜ್ಞಾನವನ್ನು ಕೊಲ್ಲುವುದಕ್ಕಾಗಿ ಪುರಾಣಿಕರು ಈತನ ಕಥೆಯನ್ನು ಹೆಣೆದರು. ವೀರಭದ್ರನ ಕಥೆಯ ದಕ್ಷಖಂಡವೆನಿಸಿತ್ತು. ಹೀಗೆ ಶಿವಪುರಾಣ ಕಾಳಿಪುರಾಣ ಹುಟ್ಟಿಕೊಂಡವು. ಇವೆಲ್ಲವಕ್ಕೂ ಮಿಗಿಲಾದದ್ದು ನಿರ್ಬಯಲ ಪುರಾಣ.

**1587**

**ಪುರಾಣವ ಹೇಳಿದವರೆಲ್ಲ ಪುರಾಣಿಕರು ನೋಡಾ.**
**ಭವಭವದ ಶಾಸ್ತ್ರವ ಹೇಳಿದವರೆಲ್ಲ ಶಾಸ್ತ್ರಿಕರು ನೋಡಾ.**
**ವೇದಾಂತವ ಹೇಳಿದವರೆಲ್ಲ ವೇದಾಂತಿಗಳು ನೋಡಾ ಭವಭವದಲ್ಲಿ.**
**ಆದ್ಯರ ವಚನವ ಹೇಳಿದವರೆಲ್ಲ ಪುರಾತರು ನೋಡಾ ಭವಭವದಲ್ಲಿ.**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಪುರಾಣವ ಹೇಳಿದವರೆಲ್ಲರನ್ನು ಪುರಾಣಿಕರು ಎಂದು ಕರೆಯುತ್ತಾರೆ. ಜನನ ಮರಣಕ್ಕೆ ಕಾರಣವಾದ ಭವಭವದ ಶಾಸ್ತ್ರವ ಹೇಳಿದವರೆಲ್ಲ ಶಾಸ್ತ್ರಿಗಳು ಎಂದು ಹೇಳಿಸಿಕೊಳ್ಳುತ್ತಾರೆ. ವೇದಾಂತವ ಹೇಳಿದವರೆಲ್ಲ ವೇದಾಂತಿಗಳು ಎಂದು ಕರೆಯಿಸಿಕೊಳ್ಳುತ್ತಾರೆ. ಭವಭವದಲ್ಲಿ ಪುರಾಣ ಶಾಸ್ತ್ರ ವೇದಾಂತ ಜ್ಞಾನಕ್ಕೆ ಸಂಬಂಧಪಟ್ಟ ಗ್ರಂಥಕ್ಕೆ ಸೂತ್ರಗಳಾದರೂ ಕೂಡ ಇವುಗಳನ್ನು ಕಥೆ ಮಾಡಿ ಹೇಳುವ ಪುರಾಣಿಕರು, ಶಾಸ್ತ್ರಿಗಳು, ವೇದಾಂತಿಗಳು ಮಹಾಜ್ಞಾನಿಗಳಾಗುವುದು ಸಾಧ್ಯವಿಲ್ಲ ಏಕೆಂದರೆ ಒನಪು, ವಯ್ಯಾರಗಳಿಂದ ಕಥೆ ಹೇಳಿ ಕೇಳುಗರಿಂದ ಹಣ ಪಡೆಯುತ್ತಾರೆ ಹೊರತು ಜ್ಞಾನಿ ಎನಿಸಿಕೊಳ್ಳುವುದಿಲ್ಲ.

ಆದ್ಯರ ವಚನಗಳು ಹಾಗಲ್ಲ ಇಂತಹ ವಚನಗಳನ್ನೆಲ್ಲ ಹೇಳಿದವರು ಪುರಾತರು. ಈ ವಚನ ಹೇಳಿದವರು ಕೂಡ ಭವಭವಕ್ಕೆ ಭಾಜನರಾಗುತ್ತಾರೆ. ಆದ್ಯರ ವಚನಗಳನ್ನು ಸೂತ್ರ ರೂಪಕ್ಕೆ ಕೊಂಡೊಯ್ಯುವವ ಜ್ಞಾನಿ ಎಂದು ಕರೆಯಿಸಿಕೊಳ್ಳತ್ತಾನೆ ಕಪಿಲಸಿದ್ಧಮಲ್ಲಿಕಾರ್ಜುನಾ.

**1588**

**ಅಲ್ಲಯ್ಯಗಳ ವಚನ ಎರಡೆಂಭತ್ತು ಕೋಟಿ.**
**ಅಪ್ಪಯ್ಯಗಳ ವಚನ ನಾಲ್ಕು ಲಕ್ಷದ ಮೂವತ್ತಾರು ಸಾಸಿರ.**
**ಎಮ್ಮಯ್ಯಗಳ ವಚನ ವಚನಕ್ಕೊಂದು.**
**ನೀಲಮ್ಮನ ವಚನ ಲಕ್ಷದ ಹನ್ನೊಂದು ಸಾಸಿರ.**
**ಗಂಗಾಂಬಿಕೆಯ ವಚನ ಲಕ್ಷದ ಎರಡು ಸಾಸಿರ.**
**ಎಮ್ಮಕ್ಕ ನಾಗಾಯಿ ವಚನ**
**ಮೂರುಲಕ್ಷದ ತೊಂಭತ್ತಾರು ಸಾಸಿರ.**

ಮಡಿವಾಳಣ್ಣನ ವಚನ ಮೂರುಕೋಟಿ ಮುನ್ನೂರು.
ಹಡಪದಯ್ಯಗಳ ವಚನ ಹನ್ನೊಂದು ಸಾಸಿರ.
ಮರುಳಸಿದ್ಧನ ವಚನ ಅರವತ್ತೆಂಟು ಸಾಸಿರ.
ಇಂತಪ್ಪ ವಚನದ ರಚನೆಯ ಬಿಟ್ಟು,
ಹುಡಿಮಣ್ಣ ಹೊಯ್ಯದೆ ಮಾಬನೆ,
ಕುತ್ಸಿತ ಕಾವ್ಯಾಲಂಕಾರ ನೋಡುವರ ನೋಡಿ,
ಮಹದೇವ ಕಪಿಲಸಿದ್ದಮಲ್ಲಿಕಾರ್ಜುನಾ.

ಸಿದ್ಧರಾಮ ಶಿವಯೋಗಿಗಳು ಶರಣರು ರಚಿಸಿದ ವಚನಗಳೂ ಕೂಡ ಏನೆಲ್ಲ ಅಲ್ಲ. ಅವು ತನುವನ್ನು ಆವರಿಸಿದ ಮನವನ್ನು ತನುವಿನಲ್ಲಿಯೇ ಸಂಗಮವಾದ ಮಹಾಜ್ಞಾನಕ್ಕೆ ಕರೆದುಕೊಂಡು ಹೋಗಲು ಅರಿಯವು.

ಮನಕ್ಕೆ ಜ್ಞಾನಕ್ಕೆ ಹೋಗುವ ಇಚ್ಛೆಯಾದರೆ ಮಾತ್ರ ಅದು ತನಗೆ ತಾನೇ ಹೋಗುತ್ತದೆ ಹೊರತು, ವೇದಾಂತಕ್ಕೆ ಭಗವದ್ಗೀತೆಗೆ, ಬೈಬಲ್‌ಗೆ ವಚನಗಳಿಗೆ ಆ ಶಕ್ತಿ ಇಲ್ಲ. ಇದು ಮನವನ್ನು ರಂಜಿಸುತ್ತವೆ ಹೊರತು ರಂಜನೆಗೆ ಒಳಗಾದ ಮನವನ್ನು ನಿರಂಜನವಾಗಿಸಲು ಅರಿಯದು.

ಅಲ್ಲಯ್ಯ , ಅಪ್ಪಯ್ಯ , ಎಮ್ಮಯ್ಯ , ನೀಲಮ್ಮ, ಗಂಗಾಂಬಿಕೆ, ನಾಗಾಯಿ, ಮಡಿವಾಳಯ್ಯ, ಹಡಪದಯ್ಯಗಳು, ಮರುಳಸಿದ್ದರು ಬರೆದ ಇಂತಪ್ಪ ವಚನ ರಚನೆಯ ಬಿಟ್ಟು ಕುತ್ಸಿತ ಕಾವ್ಯಾಲಂಕಾರ ನೋಡುವರನ್ನು ನೋಡಿ ಮಹಾದೇವ ಕಪಿಲಸಿದ್ದಮಲ್ಲಿಕಾರ್ಜುನ ಹುಡಿಮಣ್ಣ ಹೊಯ್ಯದೆ ಮಾಬನೆ.

**1589**

ಎಮ್ಮ ವಚನದೊಂದು ಪಾರಾಯಣಕ್ಕೆ
ವ್ಯಾಸನದೊಂದು ಪುರಾಣ ಸಮ ಬಾರದಯ್ಯ.
ಎಮ್ಮ ವಚನದ ನೂರೆಂಟರಧ್ಯಯನಕ್ಕೆ
ಶತರುದ್ರೀ(ಯಾಗ)ಸಮ ಬಾರದಯ್ಯ.
ಎಮ್ಮ ವಚನದ ಸಾಸಿರ ಪಾರಾಯಣಕ್ಕೆ
ಗಾಯತ್ರೀ ಲಕ್ಷ ಜಪ ಸಮ ಬಾರದಯ್ಯ.
ಕಪಿಲಸಿದ್ಧಮಲ್ಲಿಕರ್ಜುನಾ.

ಎಮ್ಮ ವಚನದ ಒಂದು ಪಾರಾಯಣಕ್ಕೆ ವ್ಯಾಸನದೊಂದು ಪುರಾಣ ಸಮಬಾರದಯ್ಯ ಎಂದು ಸಿದ್ಧರಾಮಶಿವಯೋಗಿಗಳು ಹೇಳುತ್ತಾ ಶತರುದ್ರೀಯಾಗ, ಗಾಯತ್ರೀಮಂತ್ರದ ಲಕ್ಷ ಜಪಗಳು ಎಮ್ಮ ವಚನಕ್ಕೆ ಸರಿಬಾರದಯ್ಯಾ ಎಂದಿದ್ದಾರೆ.

ಪುರಾಣ ಜ್ಞಾನಕ್ಕೆ ಹೋಗುವ ಮಾರ್ಗಕ್ಕಾಗಿ ಬರೆದರೂ ಕೂಡ ಮನ ರಂಜನೆಯಿಂದ ಕೇಳಿ ಪುರಾಣದ ಸಾರವನ್ನು ಕಾಯದಲ್ಲಿ ಬಚ್ಚಿಡುತ್ತದೆ. ಕಾಯ ಆಪತ್ಕಾಲದಲ್ಲಿ ತೊಡಗಿದಾಗಿ ಅದಕ್ಕೆ ಪುರಾಣ ನೆರವು ನೀಡುವುದಿಲ್ಲ. ಅದು ದೇಹದಲ್ಲಿಯೇ ಉಳಿದು ದೇಹ ಅಜ್ಞಾನ ಸುಖಕ್ಕೆ ಬಲಿಯಾಗುತ್ತದೆ.ವಚನಗಳು ಕಥೆಗಳಲ್ಲ. ಕಥನವಲ್ಲದ ಕಥನಗಳು. ಮನ ಕಾಯವನ್ನು ಹಿಡಿದು ಮಾಡುವ ಅಜ್ಞಾನದ ಕೆಲಸಗಳಿಗೆ ವಚನವೆಂಬ ಜ್ಞಾನ ಖಡ್ಗದಿಂದ ಅಜ್ಞಾನವನ್ನು ಕತ್ತರಿಸುವುದು.

ವಚನಗಳು ಮನಸ್ಸನ್ನು ನೇರವಾಗಿ ಜ್ಞಾನಕ್ಕೆ ಕರೆದುಕೊಂಡು ಹೋಗಿ ಮಹಾಜ್ಞಾನಿಯನ್ನಾಗಿಸುತ್ತದೆ. ಹೀಗಾಗಿ ಸಿದ್ಧರಾಮಶಿವಯೋಗಿಗಳು ಶತರುದ್ರೀಯಾಗ, ಸಾಸಿರ ಪುರಾಣ, ಗಾಯತ್ರಿ ಮಂತ್ರ, ಲಕ್ಷ ಜಪ ವಚನಕ್ಕೆ ಸರಿಬಾರದಯ್ಯ ಎಂದಿದ್ದಾರೆ.

**1590**

**ನಮ್ಮ ನಡಾವಳಿಗೆ ನಮ್ಮ ಪುರಾತರ ನುಡಿಯೆ ಇಷ್ಟವಯ್ಯಾ.**
**ಸ್ಮೃತಿಗಳು ಸಮುದ್ರವ ಪಾಲಾಗಲಿ; ಶ್ರುತಿಗಳು ವೈಕುಂಠವ ಸೇರಲಿ;**
**ಪುರಾಣಗಳು ಅಗ್ನಿಯ ಸೇರಲಿ; ಆಗಮುಗಳು ವಾಯುವ ಹೊಂದಲಿ.**
**ಎಮ್ಮ ನುಡಿ, ಕಪಿಲಸಿದ್ಧಮಲ್ಲಿಕಾರ್ಜುನ ಮಹಾಲಿಂಗದ**
**ಹೃದಯದೊಳು ಗ್ರಂಥಿಯಾಗಿರಲಿ.**

ಪುರಾತರು ನುಡಿದಂತೆ ನಡೆದಿದ್ದಾರೆ. ನಡೆದಂತೆ ನುಡಿದಿದ್ದಾರೆ. ಹೀಗಾಗಿ ಕಾಯಗಳ ಸಕಲ ನಡಾವಳಿಗಳಿಗೆ ಪುರಾತರ ನುಡಿ ಬಹಳ ಇಷ್ಟವಾಗುತ್ತದೆ ಎಂದು ಸಿದ್ಧರಾಮಶಿವಯೋಗಿಗಳು ಹೇಳುತ್ತಾರೆ.

ಸ್ಮೃತಿಗಳು ಸಮುದ್ರದ ಪಾಲಾಗಲಿ. ಸ್ಮೃತಿಗಳು ವೈಕುಂಠವ ಸೇರಲಿ, ಆಗಮುಗಳು ವಾಯುವ ಹೊಂದಲಿ ಎಮ್ಮ ನುಡಿ ಕಪಿಲಸಿದ್ಧಮಲ್ಲಿಕಾರ್ಜುನ ಮಹಾಲಿಂಗದ ಹೃದಯದೊಳು ಗ್ರಂಥಿಯಾಗಲಿ ಎಂದಿದ್ದಾರೆ.

**1591**

**ವಚಿಸಿ ಅನುಭಾವಿಯಾಗದವ ಪಿಶಾಚಿಯಯ್ಯಾ.**
**ವಚಿಸಿ ಅನುಭಾವಿಯಾದವ ಪಂಡಿತನಯ್ಯಾ.**
**ಅವಿದ್ಯೆಯೆಂಬುದು ಅಭ್ಯಾಸಿಕನ ಕೈವಶ.**
**ಅವಿದ್ಯೆಯೆಂಬುದು ಸರ್ವರಲ್ಲಿ ವಶ.**
**ವಿದ್ಯಾವಿದ್ಯೆಯನರಿತು ಜಗದ್ವೇದ್ಯನಾಗಬಲ್ಲಡೆ,**
**ಮಹಾಪಂಡಿತ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಓದಿ ಕೆಟ್ಟ ಕೂಚು ಭಟ್ಟ ಎನ್ನುವಂತೆ ಎಷ್ಟು ಓದಿದರೇನು ಅಂಗದಲ್ಲಿಯೆ ಸಂಗಮವಾದ ಮಹಾಜ್ಞಾನವನ್ನು ಅಂಗವನು ಆವರಿಸಿದ ಮನ ಅನುವಿನೊಂದಿಗೆ ಪಡೆಯದಿದ್ದರೆ ಅವನು ಅನುಭಾವಿಯಾಗಲು ಸಾಧ್ಯವಿಲ್ಲ ಬದಲಾಗಿ ಪಿಶಾಚಿಯಾಗುತ್ತಾನೆ.

ಅನುಭಾವಿಯೆಂದರೆ ಮಹಾಜ್ಞಾನಿ. ಸತ್ಯವನ್ನೇ ನೋಡುತ್ತಾನೆ, ಸತ್ಯವನ್ನೇ ಕೇಳುತ್ತಾನೆ. ಸ್ವಲ್ಪವೂ ವಿಚಲಿತನಾಗದೆ, ವಿಕೃತವಾಗದೆ ಸತ್ಯವಸ್ತುವನ್ನೇ ಸ್ಪರ್ಶಿಸುತ್ತಾನೆ. ಇಂತಹ ಮಹಾಜ್ಞಾನಿಯನ್ನು ಅನುಭಾವಿ ಎಂದು ಕರೆಯುತ್ತಾರೆ. ತನುವಿನಲ್ಲಿ ತನ್ಮಯವಾದ ಮಹಾಜ್ಞಾನವನು ಪಡೆಯದವನು ಪಿಶಾಚಿಯು ಹೌದು ಪಂಡಿತನೂ ಹೌದು.

ವಿದ್ಯೆಯೆಂಬುದು ಅಭ್ಯಾಸಿಕನ ಕೈವಶ. ಅವಿದ್ಯೆಯೆಂಬುದು ವಿದ್ಯಾವಂತನನ್ನು ಸೇರಿಸಿ ಸರ್ವರಲ್ಲಿಯೂ ಇದೆ. ವಿದ್ಯೆ ವಿದ್ಯೆಯನು ಅರಿತು ಜಗದ್ವೇದ್ಯನಾಗಬಲ್ಲಡೆ ಮಹಾಪಂಡಿತ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

1592

**ಓದಿದ ಫಲ ಶಿವಲೆಂಕ ಮಂಚಣ್ಣಂಗಾಯಿತ್ತು .**
**ಓದಿದ ಫಲ ಹಲಾಯುಧಂಗಾಯಿತ್ತು . ಓದಿದ ಫಲ ಮಲಯರಾಜಂಗಾಯಿತ್ತು .**
**ಓದಿದ ಫಲ ಜನ್ಮವಳಿದವಂಗಾಯಿತ್ತು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಓದಿದ ಫಲ ಶಿವಲೆಂಕ ಮಂಚಣ್ಣಂಗಾಯಿತ್ತು . ಇವರು ಓದಲಿಲ್ಲ. ತಮ್ಮನ್ನು ತಾವು ಓದಿಕೊಂಡರು. ತಮ್ಮ ಅಜ್ಞಾನವನ್ನು ತಾವೇ ಕಳೆದುಕೊಂಡರು. ತಮ್ಮ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನವನ್ನು ತಾವೆ ಪಡೆದುಕೊಂಡು ಮಹಾಜ್ಞಾನಿಗಳಾದರು. ಹೀಗೆ ಓದಿದ ಫಲ ಹಲಾಯುಧಂಗೆ ಆಯಿತು.

ಓದಿದ ಫಲ ಮಲಯರಾಜಂಗಾಯಿತ್ತು . ತಮ್ಮನ್ನು ತಾವು ಓದಿದ ಫಲ ಅಜ್ಞಾನದ ಜನ್ಮವನ್ನು ಹಡೆದವನಿಗೆ ಆಯಿತು ನೋಡಾ ಎಂದಿದ್ದಾರೆ ಸಿದ್ಧರಾಮಶಿವಯೋಗಿಗಳು.

1593

**ಓದಿದ ಫಲ ಕೂಚಭಟ್ಟನಂತಾಗಬಾರದು. ಓದಿದ ಫಲ ಪರಾಶರನಂತಾಗಬಾರದು.**
**ಓದಿದ ಫಲ ಮಯೂರನಂತಾಗಬಾರದು. ಓದಿದ ಫಲ ನಮ್ಮ ಹಾವಿನಾಳ ಕಲ್ಲಯ್ಯನ**
**ಮನೆಯ ಶ್ವಾನದಂತಾಗಬೇಕು ಕಾಣಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಓದಿಯೂ ಕೆಟ್ಟ ಕೂಚು ಭಟ್ಟ. ಓದಿದ ಫಲ ಕೂಚು ಭಟ್ಟನಂತಾಗಬಾರದು. ಓದಿದ ಫಲ ಪರಾಶರನಂತೆ ಆಗಬಾರದು.ಓದಿದ ಫಲ ಮಯೂರನಂತಾಗಬಾರದು. ಹಾವಿನಹಾಳ ಕಲ್ಲಯ್ಯ ಶರಣರು ಓದಲಿಲ್ಲ ತಮ್ಮ ಅಜ್ಞಾನವನ್ನು ತಾವೆ ಓದಿ ತಮ್ಮ ಜ್ಞಾನದಾಯುಧದಿಂದಲೇ ಅಜ್ಞಾನ ಕತ್ತರಿಸಿ ಮಹಾಜ್ಞಾನಿಗಳಾದರು. ಆದರೆ ಅವರ ಮನೆಯ ನಾಯಿಯಂತಾಗಬೇಕು ಕಾಣಾ ಕಪಿಲಸಿದ್ದಮಲ್ಲಿಕಾರ್ಜುನಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

1594

**ಓದುವುದು ಸದ್ಗುಣಕ್ಕಲ್ಲದೆ ಕಿವಿಯನೂದುವುದಕ್ಕೇನೋ, ಅಯ್ಯಾ ?**
**ಮಾಡುವ ಭಕ್ತಿ ಮೋಕ್ಷಕ್ಕಲ್ಲದೆ ಢಂಬಾಚಾರಕ್ಕೇನೋ, ಅಯ್ಯಾ ?**
**ಆಡುವ ವೇಷ ದ್ರವ್ಯಕ್ಕಲ್ಲದೆ ಜನರಾಡಂಬರಕ್ಕೇನೋ, ಅಯ್ಯಾ ?**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಓದುವುದು, ತನ್ನ ದುರ್ಗುಣಗಳನ್ನು ತಾನೆ ಕತ್ತರಿಸಿಕೊಂಡು ನಿರ್ಗುಣಿಯಾಗುವುದಕ್ಕಾಗಿ ಇದನ್ನು ಬಿಟ್ಟು ಅನ್ಯರ ಕಿವಿಯನೂದುವುದಕ್ಕಲ್ಲ. ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನಕ್ಕೆ ಅಂಗವನ್ನು ಆವರಿಸಿದ ಮನದಿಂದಲೇ ಭಕ್ತಿ ಮಾಡಬೇಕು. ಹೀಗೆ ಮಾಡುವ ಭಕ್ತಿ ಮುಕ್ತಿಗಲ್ಲದೆ ಢಂಬಾಚಾರಕ್ಕಲ್ಲ.

ತಾನು ಆಡುವ ವೇಷ ದ್ರವ್ಯಕ್ಕಲ್ಲದೆ ಜನರ ಆಡಂಬರಕ್ಕಲ್ಲ ಕಪಿಲಸಿದ್ಧಮಲ್ಲಿಕಾರ್ಜುನಾ.

**1595**

**ಲೋಕ ತನ್ನೊಳಗಾದ ಬಳಿಕ ಲೋಕದ ಸೊಮ್ಮು ತನಗೇಕಯ್ಯಾ ?**
**ಪರುಷ ತಾನಾದ ಬಳಿಕ ಸುವರ್ಣದ ಸೊಮ್ಮು ತನಗೇಕಯ್ಯಾ ?**
**ಧೇನು ತಾನಾದ ಬಳಿಕ ಅನ್ಯಗೋವಿನ ಸೊಮ್ಮು ತನಗೇಕಯ್ಯಾ ?**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಲೋಕಬೃಹದಾಕಾರವಾದದ್ದು. ಅಂತಹ ಲೋಕದಲ್ಲಿ ತಾನೂ ಒಬ್ಬ. ಆದರೆ ಸಿದ್ಧರಾಮ ಶಿವಯೋಗಿಗಳು ಲೋಕ ತನ್ನೊಳಗಾದ ಬಳಿಕ ಲೋಕದ ಸೊಮ್ಮು ತನಗೇಕಯ್ಯಾ? ಎಂದು ಪ್ರಶ್ನಿಸಿದ್ದಾರೆ. ಇದೊಂದು ವಿಚಿತ್ರ ಆದರೂ ಸತ್ಯ. ಮಹಾ ಜ್ಞಾನಿಮಾತ್ರ ಇಡೀ ಲೋಕವನ್ನು ತನ್ನೊಳಗೆ ಮಾಡಿಕೊಳ್ಳಬಲ್ಲ.

ಅಂಗದಲ್ಲಿ ಸಂಗಮವಾದ ಮಹಾಜ್ಞಾನವೇ ತಾನಾದ ಜ್ಞಾನೇಶ್ವರನು ಸಾಮಾನ್ಯನಲ್ಲ. ಅಣ್ಣ ಬಸವಣ್ಣ ''ಜಗದಗಲ, ಮುಗಿಲಗಲ, ಮಿಗೆಯಗಲ, ಎಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ. ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮ ಲಿಂಗವೆ ಎನ್ನ ಕರಸ್ಥಲವೆಂಬ ದೇಹದಲ್ಲಿ ಬಂದು ಚುಳುಕಾದಿರಯ್ಯಾ ಕೂಡಲಸಂಗಮದೇವಾ''

ಲೋಕದ ವ್ಯವಹಾರದಲ್ಲಿ ತಾನಿರುವವರೆಗೆ ಲೋಕ ಬೇರೆ ತಾನು ಬೇರೆ. ಅಂಗದಲ್ಲಿಯೆ ಸಂಗಮವಾದ ಮಹಾಜ್ಞಾನವಾದ ಲೋಕೇಶ್ವರನನ್ನು ಮನದಿಂದ ಕಂಡುಕೊಂಡ ಮೇಲೆ ಲೋಕ ಲೋಕೇಶ್ವರನೊಳಗೆ ಆಗ ಲೋಕದ ಸೊಮ್ಮು ತನಗೇಕೆ ?

ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನವದು ಪರುಷ. ಪರುಷ ಮುಟ್ಟಿದ್ದೆಲ್ಲ ಚಿನ್ನವಾಗುತ್ತದೆ. ಹೀಗಿದ್ದಾಗ ಸುವರ್ಣದ ಸೊಮ್ಮು ತನಗೇಕೆ ? ಕಾಮಧೇನು ಬೇಡಿದ್ದನ್ನು ಕೊಡುತ್ತದೆ. ಅದು ಕಾಯದಲ್ಲಿಯೇ ಸಂಗಮವಾಗಿದೆ. ಅಂತಹ ಕಾಮಧೇನುವೇ ತಾನಾದಾಗ ಗೋವಿನ ಸೊಮ್ಮು ತನಗೇಕೆ ? ಎಂದು ಪ್ರಶ್ನಿಸಿದ್ದಾರೆ.

**1596**

**ದರಿದ್ರ ಧನಾಢ್ಯಂಗಂಜುವನಲ್ಲದೆ ದರಿದ್ರಗಂಜುವನೆ ?**
**ದೊರೆ ಮಹಾದೊರೆಗಂಜುವನಲ್ಲದೆ ದೊರೆತನಕ್ಕಂಜುವನೆ ?**
**ಪರಶಿವಯೋಗಿ ಅಂತರ್ಯಾಮಿಗಂಜುವನಲ್ಲದೆ,**
**ಲೋಕದ ಜಂಗುಳಿಗಂಜುವನೆ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಧನಾಢ್ಯ ಮತ್ತು ದರಿದ್ರ ಇವರಿಬ್ಬರೂ ಭೌತಿಕ ಸಂಪತ್ತಿಗೆ ಮರುಳಾದವರು. ಒಬ್ಬ ಹೇರಳವಾಗಿ ಸಂಪಾದಿಸಿ ಧನಾಢ್ಯನೆಂದು ಕರೆಯಿಸಿಕೊಂಡ. ಮತ್ತೊಬ್ಬ ಭೌತಿಕ ಸಂಪತ್ತನ್ನು ಸಂಗ್ರಹ ಮಾಡುವ ಕೆಲಸ ಗೊತ್ತಾಗದ್ದರಿಂದ ದರಿದ್ರ ಎನಿಸಿಕೊಂಡಿದ್ದಾನೆ. ಇವರಿಬ್ಬರ ಕಣ್ಣು, ಕಿವಿ, ಮೂಗು, ನಾಲಿಗೆ ಇವುಗಳಲ್ಲಿ ವ್ಯತ್ಯಾಸವೆ ಇಲ್ಲ. ಇವರಿಬ್ಬರಿಗೆ ಇವು ಜ್ಞಾನೇಂದ್ರಿಯಗಳು ಹೌದು ಕರ್ಮೇಂದ್ರಿಯಗಳು ಹೌದು.

ಭೌತಿಕ ಸಂಪತ್ತಿಗೆ ಮರುಳಾಗಿ ಸಂಗ್ರಹ ಮಾಡಿದವನು ಸಿರಿವಂತನಾಗಿದ್ದಾನೆ. ಮತ್ತೊಬ್ಬ ದರಿದ್ರನಾಗಿದ್ದಾನೆ. ಜ್ಞಾನಿಗೆ ಇವರಿಬ್ಬರ ಚಿಂತೆಯೂ ಇಲ್ಲ. ಈತ ಆಂತರಿಕ ಮಹಾಜ್ಞಾನವೆಂಬ

ದೇಹದ ಸಂಪತ್ತಿಗಾಗಿ ಹಗಲಿರುಳೆನ್ನದೆ ಕೃಷಿಯಲ್ಲಿ ತೊಡಗಿದ್ದಾನೆ ಹಾಗೆಯೇ ಆ ಮಹಾಜ್ಞಾನಿಯ ದೃಷ್ಟಿಯಲ್ಲಿ ದರಿದ್ರ, ಧನಾಢ್ಯರಿಬ್ಬರೂ ಅತ್ಯಂತ ದರಿದ್ರರೇ ಆಗಿದ್ದಾರೆ.

ಜ್ಞಾನಿ ಅಂತರ್ಯಾಮಿಗೆ ಅಂಜುತ್ತಾನೆ. ಲೋಕದ ಜಂಗುಳಿಗಳಿಗೆ ಅಂಜುವುದಿಲ್ಲ. ಜ್ಞಾನಕ್ಕೆ ಹೋಗಿ ಮಹಾಜ್ಞಾನಿಗಳಾಗುವ ಶರಣರ ಸಂಖ್ಯೆ ವಿರಳಾತಿವಿರಳ.

**1597**

**ಭಾವಕ್ಕಂತರ್ಯಾಮಿಯಲ್ಲದೆ,**
**ನಡೆವ ಆಚಾರಕ್ಕೆ ಅಂತರ್ಯಾಮಿಯೇನಯ್ಯಾ ?**
**ಭಾವ ಹಾವಭಾವಕ್ಕನುಕೂಲೆಯಲ್ಲದೆ,**
**ನಿರ್ಭಾವಂಗನುಕೂಲೆಯೇನಯ್ಯಾ ?**
**ಭಾವ ಭಕ್ತಿಯಲ್ಲಿಲ್ಲದೆ ವೀರಭಕ್ತಿಯಲ್ಲೇನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ ?**

ಸಕಲ ತನುಗಳಲ್ಲಿಯೂ ಭಾವವಿದೆ. ಈ ಭಾವ ಗೆಳೆಯನನ್ನು ಕಂಡು ಅರಳುತ್ತದೆ. ಗೆಳೆಯನ ಗುಣಗಾನ ಮಾಡುತ್ತದೆ. ಈ ಗೆಳೆಯನ ಬಗ್ಗೆ ಮತ್ತೊಬ್ಬ ಗೆಳೆಯ ಅಲ್ಲವಾದ ಶಬ್ದಗಳನ್ನು ನಿನ್ನ ಗೆಳೆಯ ನಿನಗೆ ನುಡಿದನೆಂದು ಹೇಳಿದರೆ ಗೆಳೆಯನ ಮೇಲೆ ಇಟ್ಟ ಭಾವ ದುರ್ಭಾವಕ್ಕೆ ಒಳಗಾಗಿ ಕೆರಳುತ್ತದೆ.

ಭಾವಕ್ಕೆ ಅರಳುವ ಗುಣವೂ ಇದೆ, ಕೆರಳುವ ಗುಣವೂ ಇದೆ. ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನ ಮನಕ್ಕೆ ಪರಿಚಯವಾದ ಮೇಲೆ ಭಾವ ನಿರ್ಭಾವವಾಗುತ್ತದೆ. ಇದು ಶರಣನಿಗೆ ಮಾತ್ರ ಸಾಧ್ಯವಾಗುತ್ತದೆ. ಆಂತರಿಕ ಕೆಲಸದಲ್ಲಿ ನಿರತರಾದ ಕೃಷಿಕರಿಗೂ ಇದು ಸಾಧ್ಯವಾಗುತ್ತದೆ.

ಭಾವವನ್ನು ನಿರ್ಭಾವವಾಗಿ ಪರಿವರ್ತನೆ ಮಾಡಿಕೊಳ್ಳಬೇಕು ಎಂದು ಯಾವ ತನುವಿಗೂ ಅನಿಸುವುದೇ ಇಲ್ಲ. ಹೀಗಾಗಿ ಸಿದ್ಧರಾಮಶಿವಯೋಗಿಗಳು ಭಾವಕ್ಕೆ ಅಂತರ್ಯಾಮಿಯಲ್ಲದೆ ನಡೆವ ಆಚಾರಕ್ಕೆ ಅಂತರ್ಯಾಮಿಯಲ್ಲ. ಭಾವವುಳ್ಳ ಹಾವಭಾವಕ್ಕೆ ಅನುಕೂಲವಾಗಲು ನಿರ್ಭಾವನಿಗೆ ಅನುಕೂಲೆಯಲ್ಲ ಎಂದು ಸ್ಪಷ್ಟವಾಗಿ ಹೇಳಿದ್ದಾರೆ.

ಭಾವಕ್ಕೆ ಭಕ್ತಿ ಮಾಡುವರೆ ಹೊರತು ವೀರತನಕ್ಕೆ ಭಕ್ತಿ ಮಾಡುವುದು ಮಹಾವೀರನಲ್ಲದೆ ಸಕಲರಿಗೂ ಸಾಧ್ಯವಲ್ಲ.

**1598**

**ಆಕಾಶ ಪಾಷಾಣ ಮಾಡಬಲ್ಲಡೆ ಯೋಗಿ.**
**ಪಾಷಾಣ ಆಕಾಶ ಮಾಡಬಲ್ಲಡೆ ಯೋಗಿ.**
**ಆಕಾಶದಲ್ಲಿಯ ಬಯಲು ಪಾಷಾಣದಲ್ಲಿಪ್ಪುದು**
**ಏಕೀಯವಾಗಬಲ್ಲಡೆ ಶಿವಯೋಗಿ;**
**ಕಪಿಲಸಿದ್ಧಮಲ್ಲಿಕಾರ್ಜುನ ಆತನೆ ನೋಡಾ.**

ಬಯಲ ರೂಪು ಮಾಡಬಲ್ಲಾತನೆ ಶರಣನು. ಆ ರೂಪ ಬಯಲುಮಾಡಬಲ್ಲಾತನೆ ಲಿಂಗಾನುಭಾವಿ. ಬಯಲ ರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ? ಆ ರೂಪ ಬಯಲ ಮಾಡಲರಿಯದಿದ್ದಡೆ ಎಂತು ಲಿಂಗಾನುಭಾವಿಯೆಂಬೆ? ಈ ಉಭಯ ಒಂದಾದಡೆ ನಿಮ್ಮಲ್ಲಿ

ತೆರಹುಂಟೆ ಕೂಡಲಸಂಗಮದೇವಾ ಎಂದಿದ್ದಾರೆ ಬಸವಣ್ಣ.

ಬಸವಣ್ಣನವರ ಈ ವಚನ ಸಿದ್ಧರಾಮ ಶಿವಯೋಗಿಗಳ ವಚನ ಒಂದೇ ಅರ್ಥ ಕೊಡುತ್ತದೆ.

ಬಯಲು ಇಡೀ ಬ್ರಹ್ಮಾಂಡದ ಸೃಷ್ಟಿಗೆ ಬೀಜವಾಗಿದೆ ಅಂದ ಮೇಲೆ ಆಕಾಶವೆಂಬ ಬಯಲ ಬೀಜದಿಂದಲೇ ಪಾಷಾಣವಾಗಿದೆ. ಅಂದರೆ ಕಲ್ಲು ಆಗಿದೆ. ಆ ಪಾಷಾಣ ಪುನಃ ಕರಗಿ ಬಯಲಲ್ಲಿ ಸೇರಿ ಬಯಲಾಗುತ್ತದೆ. ಆಕಾಶದಲ್ಲಿಯ ಬಯಲು ಪಾಷಾಣದಲ್ಲಿದೆ ಆ ಪಾಷಾಣ ಪುನಃ ಬಯಲಲ್ಲಿ ಸೇರುತ್ತದೆ ಎಂದಾಗ ಬಯಲೇ ಬ್ರಹ್ಮಾಂಡ ಸೃಷ್ಟಿಗೆ ಬೀಜವಾಗಲಿಲ್ಲವೆ ಇದನ್ನು ಶರಣ ಮಾತ್ರ ಬಲ್ಲ.

**1599**

**ನೀರಿಲ್ಲದ ಭೂಮಿಯಲ್ಲಿ ಮೂರು ಹೇರು ನವಣೆಯ ಬೆಳೆದುದು ಕಂಡೆ.**
**ಆ ನವಣೆ ಅಳೆದುಕೊಡುವಡೆ ಇಮ್ಮಡಿ ಮುಮ್ಮಡಿಯಾದುದು ಕಂಡೆ.**
**ಕೊಂಡವಂಗೆ ಜನ್ಮಜನ್ಮದಲ್ಲಿ ಭೋಗಿಸುವುದಕ್ಕೆ ಕಣಜಗಳಾದುದು ಕಂಡೆ.**
**ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ನೀರಿಲ್ಲದ ಭೂಮಿ ಎಂದರೆ ತನು ಜಲಬಿಂದುವೇ ಜೀವಜಲಬಿಂದುವಾಗಿ ಗರ್ಭದಲ್ಲಿ ಹೊಕ್ಕು ರಕ್ತ, ಮೂಳೆ. ಮಾಂಸ, ಮಜ್ಜೆ, ಮೇದಸ್ಸು ಆಗಿ ಚರ್ಮದ ಕವಚವೂ ಆಗಿ ತನುವಾಗಿ ಭೂಮಿಗೆ ಬಂದಿದೆ. ಇದು ಜಲದಿಂದ ತಯಾರಾಗಿ ಜಲದ ಮುದ್ದೆಯಾದರೂ ಇದರಲ್ಲಿ ಎಳ್ಳು ಹನಿಯಷ್ಟು ಜಲವಿಲ್ಲ. ಇಂತಹ ಜಲವಿಲ್ಲದ ಭೂಮಿಯಲ್ಲಿ ಮೂರು ಹೇರು ನವಣೆ ಬೀಜವನ್ನು ಬೆಳೆದುದು ಕಂಡೆ. ಇದರಲ್ಲಿ ಹೊರಬರುವ ಅಜ್ಞಾನ ಮೂರು ಹೇರು ನವಣೆಗಳಿಗಿಂತ ಇಮ್ಮಡಿಯಾಗಿದೆ ಮುಮ್ಮಡಿಯಾಗಿಯೂ ಇದೆ. ಇದನ್ನು ಕೊಂಡವನು ಜನ್ಮಜನ್ಮದಲ್ಲಿ ಭೋಗಿಸುವುದಕ್ಕೆ ಕಣಜಗಳಾದದ್ದನ್ನು ಕಂಡೆ. ತನುವಿನಲ್ಲಿಯೇ ತನ್ಮಯವಾದ ಜ್ಞಾನೇಶ್ವರನ ದರುಶನ ಮನಕ್ಕೆ ಆದರೆ ನವಣೆ ಬೀಜಗಳೆನ್ನೆಲ್ಲ ಹುರಿದು ಬಿಡುವನು ಮತ್ತೆ ಬೆಳೆಯದಂತೆ.

**1600**

**ಸೊಲ್ಲಗೆ ಒಂದು ಖಂಡುಗ ನವಣೆ ನುಂಗಿತ್ತಯ್ಯಾ.**
**ಆ ನವಣೆಯ ಹೊಯ್ದುಳೆಯಬೇಕೆಂದಡೆ ಸ್ಥಲ ಸಾಲದಯ್ಯಾ**
**ಹಲಬರು ಛಲವಿಡಿದುವಿಡಿದು ಹೊಲಬುಗೇಡಿಯಾದರು**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗವನ್ನು ಅಜ್ಞಾನವೆಂಬ ಖಂಡುಗ ನವಣೆ ನುಂಗಿತ್ತು. ನುಂಗಿದ ಆ ನವಣೆಯನ್ನು ಹೊರಗೆ ಚೆಲ್ಲಬೇಕೆಂದರೆ ಸ್ಥಳವೇ ಸಾಲದು. ಹಲಬರು ಫಲವಿಡಿದು ಹೊಲಬಗೇಡಿಯಾದರು ಎಂದು ಸಿದ್ಧರಾಮ ಶಿವಯೋಗಿಗಳು ಬೆಡಗಿನ ನುಡಿಗಳ ಮೂಲಕ ಈ ವಚನವನ್ನು ಬಂಧಿಸಿದ್ದಾರೆ.

ಜ್ಞಾನದ ಮೇರು ಪರ್ವತವೇ ಆಗಬೇಕಾದ ಕಾಯ ಖಂಡುಗದ ಮೇಲೆ ಅಜ್ಞಾನದ ಕಾಳುಗಳೆಂಬ ನವಣೆ ಬೀಜ ನುಂಗಿತ್ತು. ಅದನ್ನು ಹೊರಗೆ ಹಾಕಲು ಅತಿರಥಮಹಾರಥರು ಎನಿಸಿಕೊಂಡವರಿಗೂ ಸಾಧ್ಯವಾಗಿಲ್ಲ.

ಕಾಯ ತಾನು ಜ್ಞಾನಿಯಾಗಬೇಕೆಂದು ಕಾಯಗಳಿಂದಲೇ ಹೊರಬಂದ ಪುಸ್ತಕಗಳನ್ನು ಓದುತ್ತದೆ. ಅವು ಕಾಯಗಳಿಂದಲೇ ಹೊರಬಂದಿವೆ. ಇಂತಹ ಪುಸ್ತಕಗಳಾದರು ಕಾಯಕ್ಕೆ ಏನು

ಹೇಳಬಲ್ಲವು ಎಂದು ಕಾಯಗಳಿಗೆ ತಿಳಿಯಲು ಸಾಧ್ಯವಾಗುತ್ತಿಲ್ಲ. ಕಾಯವನ್ನು ಆವರಿಸಿದ ಮನ ಜ್ಞಾನಕ್ಕಾಗಿ ಕಾಯವನ್ನು ಹೊರಗೆ ಕರೆದುಕೊಂಡು ಹೋಗುತ್ತದೆಯೇ ಹೊರತು ಕಾಯದ ಅಂತರಾಳಕ್ಕೆ ಹೋಗುವುದು ಮನಕ್ಕೆ ಗೊತ್ತಿಲ್ಲ. ಛಲವಿಡಿದ ಶರಣ ಮಾತ್ರ ಕಾಯದಲ್ಲಿಯೇ ಸಂಗಮವಾದ ಮಹಾಜ್ಞಾನಕ್ಕೆ ಶರಣು ಹೋಗಿ ಆ ಜ್ಞಾನವನ್ನೇ ಉಂಡು ಆ ಜ್ಞಾನವನ್ನೇ ಬೆಳಗುತ್ತಾನೆ.

**1601**

**ಒಂದಾಕಳು ಒಂಬತ್ತೂರ ಸೋದು ಸವಿಯ ಹೋದಡೆ,**
**ಕೈವಲ್ಯ ಸೂರೆಯಲ್ಲಿಹುದಯ್ಯಾ ?**
**ಒಂಬತ್ತು ಆಕಳು ಒಬ್ಬ ಸೋದ ಸವಿಗಾರಂಗೆ ಬೇಹುದೇನಯ್ಯಾ ?**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಮಹಾಜ್ಞಾನ ಕಾಯಕ್ಕೆ ಕೈವಲ್ಯದಂತೆ ಬಳಕೆಯಾಗಬೇಕು ಅದರ ಸವಿಯನು ಸವಿ ಸವಿದು ಆ ಜ್ಞಾನದ ಸವಿಯ ಡೇಗನ್ನು ಕಾಯ ಡೇಗಬೇಕು. ಜ್ಞಾನಾರ್ಜನೆಗಾಗಿ ಕಾಯ ಪರ್ಯಟನೆ ಮಾಡಿದರೆ ಆಕಳು ತನ್ನ ನಾಲಿಗೆಯ ಸವಿಗಾಗಿ ಒಂಬತ್ತೂರನ್ನು ಸುತ್ತಿದಂತಾಗುತ್ತದೆ. ಪದಾರ್ಥದಲ್ಲಿ ರುಚಿಯಿಲ್ಲ ಅದನ್ನು ಸವಿಯುವ ನಾಲಿಗೆಯಲ್ಲಿ ರುಚಿಯಿಲ್ಲ ಏನು ಗೊತ್ತು ಹಾಗೆಯೇ ಮನುಷ್ಯನು ಕೂಡ ಜ್ಞಾನಾರ್ಜನೆಗಾಗಿ ಬೈಬಲ್, ಕುರಾನ, ಭಗವದ್ಗೀತೆ, ಗ್ರಂಥ ಸಾಯಿಬ, ತ್ರಿಪಿಟಕಗಳನ್ನು ಓದಿ ಸವಿದರೂ ಮನದ ಅಜ್ಞಾನದ ಹೊಟ್ಟೆ ತುಂಬುವುದೇ ಇಲ್ಲ. ಮನಕ್ಕೆ ಇನ್ನೂ ಓದಬೇಕು ಅನಿಸುತ್ತದೆ.

ನಿತ್ಯ ನಿರಂಜನ ತಾನೆಂದು ಅರಿಯದೆ ತತ್ವಮಸಿ ಎಂದು ಹೊರಗನೆ ಹಾಡಿ ಸತ್ತಿತ್ತಲ್ಲ ನಾಯಿ ಸಾವ. ಎಂದು ಅಲ್ಲಮಪ್ರಭುಗಳು ಸುಂದರವಾದ ಸೂತ್ರವನ್ನು ಹೇಳಿದ್ದಾರೆ. ಪ್ರತಿ ತನುವಿನಲ್ಲಿ ತತ್ವ ತನ್ಮಯವಾಗಿದೆ. ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ತತ್ವಕ್ಕೆ ಶರಣು ಹೋದರೆ ಸಾಕು. ತನುವಿನ ಮೂಲಕ ತನುವಿನಲ್ಲಿದ್ದ ತತ್ವವೇ ಅಮೃತದ ಬುಗ್ಗೆಯಾಗಿ ತನಗೆ ತಾನೆ ಹೊರಬರುತ್ತದೆ.

**1602**

**ಅರುಹು ತಲೆದೋರಿದಲ್ಲಿ ಅರಿವಿನ ವಿಷ ಬೆಲ್ಲವು ಇಕ್ಷುರಸವಾಯಿತ್ತು .**
**ಅರುಹು ತಲೆದೋರಿದಲ್ಲಿ ಅಂಬರ ಅವಯವಕ್ಕೆ ಹೊಂದಿತ್ತಯ್ಯಾ.**
**ಅರುಹು ತಲೆದೋರಿದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನ ಕುರುಹು**
**ನಾನೆಂದು ತಿಳಿಯಬಂದಿತ್ತಯ್ಯಾ ಯೋಗಿನಾಥಾ.**

ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗ ಅಂಗವನ್ನು ಆವರಿಸಿದ ಮನಕ್ಕೆ ದರ್ಶನವಿತ್ತರೆ ಸಾಕು ವಿಷಭರಿತ ಬೆಲ್ಲ ಕೂಡ ಇಕ್ಷುರಸವಾಯಿತ್ತು . ಮನಕ್ಕೆ ಅರಿವಿನ ಲಿಂಗದ ದರ್ಶನವಾಗುವುದೊಂದೆ ತಡ ಕಾಯವೇ ಕೈಲಾಸವಾಯಿತು.

ಅರುಹು ಕಾಯದಲ್ಲಿ ಕಾಯವನ್ನು ಆವರಿಸಿದ ಮನಕ್ಕೆ ಪ್ರಕಟವಾಗುವುದೇ ತಡ ಕಾಯ ಕಪಿಲಸಿದ್ಧ ಮಲ್ಲಿಕಾರ್ಜುನನ ಕುರುಹು ತಾನೆ ಎಂದು ತಿಳಿಯಬಂದಿತ್ತಯ್ಯಾ, ಎಂದು ಸಿದ್ಧರಾಮಶಿವಯೋಗಿಗಳು ಯೋಗಿನಾಥ ಶರಣರಿಗೆ ಅರುಹಿನ ಸುಳಿವು ನೀಡಿದ್ದಾರೆ.

**1603**

**ಯೋಗಿನಾಥನ ಒಲುಮೆ ಯೋಗಿಯಾದವಂಗಲ್ಲದೆ,**
**ಭೋಗಿಯಾದಾತಂಗೆಲ್ಲಿಹುದಯ್ಯಾ?**
**ಪಂಚಮಸ್ವರದಾಯತ ಕೋಗಿಲೆಗಲ್ಲದೆ ಕಾಗೆಗೆಲ್ಲಿಹುದೋ ?**
**ಕಪಿಲಸಿದ್ಧಮಲ್ಲಿಕಾರ್ಜುನ ಯೋಗಿನಾಥಾ.**

ಭೋಗಿಯಾದಾತನಿಗೆ ಯೋಗಿನಾಥನ ಒಲುವೆು ಆಗಲು ಸಾಧ್ಯವಿಲ್ಲ. ಯೋಗಿಯಾದವನಿಗೆ ಮಾತ್ರ ಯೋಗಿನಾಥನ ಒಲುಮೆಯಾಗುತ್ತದೆ.

ಯೋಗ ಯೆಂದರೆ ಕೂಡುವಿಕೆ ಮನ ಮತ್ತು ಅರಿವು ಒಂದನ್ನೊಂದು ಕೂಡಿ ಒಂದೇ ಆಗುವಿಕೆ. ಯೋಗಿ ಎಂದರೆ ಹೆಸರಲ್ಲ. ಹೆಸರು ಕಳೆದುಕೊಂಡವನು. ಕಾಯವನ್ನು ಮನ ಆವರಿಸಿದೆ ಕಾಯದಲ್ಲಿ ಅರಿವು ಸಂಗಮವಾಗಿದೆ, ಆದರೂ ಕಾಯಕ್ಕೆ ಅರಿವು ತಾಗದೆ ಕಾಯವನ್ನು ಬೆಳಗುತ್ತಲಿದೆ. ಕಾಯ, ಮನ, ಅರಿವು ಒಂದೇ ಜಾಗದಲ್ಲಿದ್ದರೂ ಕಾಯದ ಸಂಗವನ್ನು ಮನ ಮಾಡಿದೆ. ರಿವು ಕಾಯವನ್ನೂ ತಾಗಿಲ್ಲ ಮನವನ್ನು ತಾಗಿಲ್ಲ.

ಆದರೂ ಕೂಡ ಕಾಯ ಮತ್ತು ಮನಕ್ಕೆ ಅರಿವು ಗುರುದೇವನಾಗಿ ಬೋಧಿಸುವುದನ್ನು ನಿಲ್ಲಿಸಿಲ್ಲ. ಮನ ಗುರುದೇವನನ್ನು ಅರಿತು ಆ ಗುರುದೇವನ ಚರಣ ಕಮಲಗಳಿಗೆ ಶರಣು ಹೋಗಿ ಶರಣ ತಾನಾದವನನ್ನೇ ಯೋಗಿ ಎಂದು ಕರೆದಿದ್ದಾರೆ. ಈತ ಸಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನೇ ಆಗಿದ್ದಾನೆಂದು ಹೇಳಿದ್ದಾರೆ.

**1604**

**ಪ್ರಪಂಚದಲ್ಲಿ ಭೂಭಾರಿಯಲ್ಲದೆ**
**ಪಾರಮಾರ್ಥದಲ್ಲಿ ಭೂಭಾರಿಯೇನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ಬೆರೆತರೆ ಅದು ಪ್ರಪಂಚ. ಮನಕ್ಕೆ ಪ್ರಪಂಚ ಎಂದರೆ ಬಲು ಸುಖ. ಹಾಗೆಯೇ ಕಾಯಕ್ಕೆ ಬಲುಭಾರ. ಕಾಯದಲ್ಲಿಯೇ ಗುರುದೇವ ಸಂಗಮವಾಗಿದ್ದಾನೆ. ಮನ ಗುರುದೇವನ ಸಂಗ ಮಾಡಿದರೆ ಅದು ಪಾರಮಾರ್ಥ. ಮನ ಹೀಗೆ ಮಾಡುವುದರಿಂದ ಘನಮನವಾಗುತ್ತದೆ. ಪಾರಮಾರ್ಥದ ಪರಮಸುಖವನ್ನು ಅನುಭವಿಸುತ್ತದೆ.

ಪಾರಮಾರ್ಥ ಮನಕ್ಕೂ ಹಗುರ ಕಾಯಕ್ಕೂ ಹಗುರ. ಪ್ರಪಂಚದಲ್ಲಿ ಕೂಡಲೇ ಸುಖ ಸಿಗುತ್ತದೆ. ಹಾಗೆಯೇ ದುಃಖವೂ ಸಿಗುತ್ತದೆ. ಈ ಸುಖ ಮನಕ್ಕೆ ಸುಖ, ದುಃಖವೂ ಮನಕ್ಕೆ ಸುಖ. ಕಾಯಕ್ಕೆ ದುಃಖ ಭೂಮಿಯಷ್ಟೇ ಭಾರ.

**1605**

**ವಿದ್ಯೆಯನರಿಯದವ ಗುದ್ದಾಟಕ್ಕೊಳಗಾದ.**
**ಅವಿದ್ಯೆಯನರಿಯದವ ಪ್ರಪಂಚವ ಒದ್ದುಬಿಟ್ಟ ನೋಡಾ,**
**ಕಪಿಲ ಸಿದ್ಧ ಮಲ್ಲಿಕಾರ್ಜುನಾ.**

ಬ್ರಹ್ಮವಿದ್ಯೆಯನ್ನು ಅರಿಯದವನು ಗುದ್ದಾಟಕ್ಕೊಳಗಾಗುತ್ತಾನೆ. ಕಾಯಕ್ಕಂಟಿದ ಭ್ರಮೆಯನ್ನು ಕಳೆದುಕೊಂಡು ಕಾಯದಲ್ಲಿಯೇ ಸಂಗಮವಾದ ಬ್ರಹ್ಮನನ್ನು ಅರಿತು ಆ ಬ್ರಹ್ಮನೇ ತಾನಾದವನು ಅಜ್ಞಾನದ ಪ್ರಪಂಚವನ್ನು ಒದ್ದು ಬಿಡುತ್ತಾನೆ.

ಬ್ರಹ್ಮವನ್ನು ಅರಿತು ಕಾಯಕ್ಕೆ ಅಂಟಿದ ಅವಿದ್ಯೆಯನ್ನು ಕಳೆದುಕೊಂಡವರ ಸಂಖ್ಯೆ ಕೋಟಿಗೆ ಒಬ್ಬರೋ ಇಬ್ಬರೋ ಎಂದರೆ ತಪ್ಪಾಗಲಿಕ್ಕಿಲ್ಲ.

ಕಾಯದಲ್ಲಿ ಅವಿದ್ಯೆಯೂ ಇದೆ ಬ್ರಹ್ಮವಿದ್ಯೆಯೂ ಇದೆ. ಬ್ರಹ್ಮವಿದ್ಯೆ ಕಲಿತು ಬ್ರಹ್ಮನೇ ತಾನಾದ ಮನಕ್ಕೆ ಯಾವ ವಿದ್ಯೆಯ ಅವಶ್ಯಕತೆಯೂ ಇಲ್ಲ. ಬ್ರಹ್ಮನಿಗೆ ಪ್ರಪಂಚ ಸೋಲುತ್ತದೆ. ಪ್ರಪಂಚವನ್ನು ಬ್ರಹ್ಮ ತನ್ನಂತೆ ಮಾಡಿಕೊಳ್ಳುತ್ತಾನೆ.

**1606**

**ವಿದ್ಯೆ ಎಂದಡೆ ಭಾರತ - ರಾಮಾಯಣವಲ್ಲ.**
**ಭಾರತವೆಂದಡೆ ಭಾರತದೇಶದಲ್ಲಿ ಜನಿಸಿ,**
**ಕಾಮಿನಿಯರ ಸೋಗು ಹಾಕಿ ಆ ದೇಶಕ್ಕಧಿಪತಿಯಾದ**
**ಕಥೆಯ ಭಾರತವಯ್ಯಾ.**
**ರಾಮಾಯಣ ವೆಂದಡೆ, ಆದಿನಾರಾಯಣನು ಪೃಥ್ವಿಯೊಳು ಹುಟ್ಟಿ ,**
**ರಾಮನೆಂಬಭಿಧಾನವ ಧರಿಸಿ, ಸರ್ವರಂತೆ ಪ್ರಪಂಚವ ಮಾಡಿ ,**
**ರಾಕ್ಷಸರ ಗರ್ವವಳಿದುದೆ ರಾಮಾಯಣ .**
**ಮಾಡಿ ಉದ್ಧಟವಾದಲ್ಲಿ ಕಾಲಾಂತರದಲ್ಲಾದರೂ**
**ಕುರುಹನೊಳಗಂದವಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ**

ವಿದ್ಯೆ ಎಂದಡೆ ಭಾರತ ರಾಮಾಯಣ ಕಲಿಯುವುದಲ್ಲ. ಭಾರತವೆಂದಡೆ ಭಾರತ ದೇಶದಲ್ಲಿ ಜನಿಸಿ ಕಾಮಿನಿಯರ ಸೋಗು ಹಾಕಿ ಆ ದೇಶಕ್ಕೆ ಅಧಿಪತಿಯಾದ ಕಥೆಯೇ ಭಾರತ ರಾಮಾಯಣವೆಂದಡೆ ಆದಿನಾರಾಯಣನು ಪೃಥ್ವಿಯಿಂದ ಹುಟ್ಟಿ ರಾಮನೆಂಬ ಹೆಸರಿನಿಂದ ಪ್ರಪಂಚವ ಮಾಡಿ ರಾಕ್ಷಸರ ಗರ್ವವನ್ನು ಅಳೆದುದೆ ರಾಮಾಯಣ. ಕಾಲಾಂತರದಲ್ಲಿ ರಾಮಾಯಣ ಮಹಾಭಾರತಗಳೆರಡು ಕುರುಹಿನೊಳಗಾದವು.

ಶರಣರು ಕುರುಹಿಡಿದು ಜನ್ಮ ತಳೆದರೂ ಕುರುಹಿನೊಳಗಾಗಲಿಲ್ಲ. ಸಿದ್ಧಾರ್ಥನೆಂಬ ರಾಜ ಕುರುಹಿಡಿದು ಜನ್ಮ ತಳೆದರೂ ಕಾಯದಲ್ಲಿ ಸಂಗಮವಾದ ಬುದ್ಧನಿಗೆ ಶರಣು ಹೋಗಿ ಆ ಬುದ್ಧನೇ ತಾವಾದರು. ವರ್ಧಮಾನ ಮಹಾವೀರನಾದ.ಹೀಗೆಯೇ ಬಸವಾದಿಶರಣರು ಕೂಡ ಅಕಾಯ ಮಹಾಪುರುಷರು.

**1607**

**ಅವು ಬಯಲಾದಂದಿಗೆ ಎಮ್ಮಪುರಾಣ ಸಾಗವೇನಯ್ಯಾ ?**
**ಎಮ್ಮ ಪುರಾಣವಾದಂದಿಗೆ ಜನರು ನಾಮವ ಹೊತ್ತು ನಡೆಯರೇನಯ್ಯಾ ?**
**ಎಮ್ಮ ಪುರಾಣ ಶಿವಪುರಾಣ ಎಮಗೆ ಗುರುಲಿಂಗ ಜಂಗಮತ್ರಯ ಒಂದೆ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ರಾಮಾಯಣ ಮಹಾಭಾರತ ಬಯಲಾಗಿ ಎಮ್ಮ ಪುರಾಣ ಸಾಗವೇನಯ್ಯಾ . ಎಮ್ಮ ಪುರಾಣ ವೆಂದರೆ ತನುವಿನಲ್ಲಿಯೇ ತನ್ಮಯವಾದ ಶಿವಪುರಾಣ. ಶಿವನನ್ನು ಹೊತ್ತ ಕಾಯ ಕೈಲಾಸದಂತೆ ಬಯಲಲ್ಲಿಯೇ ನಡೆಯುತ್ತದೆ. ಆಗ ಗುರು, ಲಿಂಗ, ಜಂಗಮತ್ರಯಗಳು ಒಂದೇ ಆಗಿ ಬೆಳಗುತ್ತವೆ. ಅಂಗದಲ್ಲಿಯೇ ಗುರುವು ಇದ್ದಾನೆ. ಲಿಂಗಯ್ಯನು ಇದ್ದಾನೆ. ಜಂಗಮನು ಇದ್ದಾನೆ. ಈ ತ್ರಿಮೂರ್ತಿಗಳು ಕಾಯವನ್ನು ಕೈಲಾಸ ಮಾಡಿಕೊಂಡು ಕಾಯದಲ್ಲಿಯೇ ವಾಸವಾಗಿದ್ದಾರೆ. ಇಂತಹ ಸುಂದರವಾದ ಪ್ರಪಂಚವನ್ನು ಹೊತ್ತು ಕಾಯ ನಡೆಯಬಲ್ಲದು ಎಂಬ ಆಶಯವನ್ನು ಹೊಂದಿದ್ದಾರೆ.

**1608**

**ಕೆರೆಯ ಅಗಳುವ ಅಣ್ಣಂಗಳೆಲ್ಲ,**
**ಮೂರುಲೋಕದೊಡೆಯನ ಪಾದದಲ್ಲಿ ಬಿದ್ದು ಹೊರಳಾಡುತ್ತಾರೆ ನೋಡಾ .**
**ದೊರೆಯ ಮುರಾರಿಯನರಿದು ತ್ರಿಪುರಾರಿ ತಾವಾಗರು ನೋಡಾ.**
**ಕಪಿಲಸಿದ್ಧಮಲ್ಲಿಕಾರ್ಜುನಾ ಯೋಗಿನಾಥಾ.**

ಕೆರೆಯ ತೋಡಿ ಕಟ್ಟೆಯನು ಕಟ್ಟಿ ಅರವಟ್ಟಿಗೆಗಳನ್ನು ಇಡುವವರೆಲ್ಲ ಮೂರು ಲೋಕದ ಒಡೆಯನ ಪಾದದಲ್ಲಿ ಬಿದ್ದು ಹೊರಳಾಡುತ್ತಾರೆ.

ಮೂರು ಲೋಕದ ಒಡೆಯನೆಂದು ಕರೆಯಿಸಿಕೊಳ್ಳುವಾತ ಸಾಕ್ಷಾತ್ ಶಿವನೇ ಆಗಿದ್ದಾನೆ. ಆತನನ್ನು ತ್ರಿಪುರಾರಿ ಎಂದು ಕೂಡ ಕರೆಯುತ್ತಾರೆ. ಕೆರೆಯ ಕಟ್ಟುವವರು ಅರವಟ್ಟಿಗೆಗಳನ್ನು ಇಟ್ಟು ಪುಣ್ಯವಂತರು ಎಂದು ಕರೆಯಿಸಿಕೊಳ್ಳುವರು. ಇವರು ತ್ರಿಪುರಾರಿ ತಾವಾಗಲು ಒಲ್ಲರು.

ಮನಕ್ಕೆ ಎರಡು ಆಯ್ಕೆಗಳಿವೆ. ಒಂದು ಸಂಸಾರಿಯಾಗುವುದು. ಮತ್ತೊಂದು ಗುರುದೇವನ ಚರಣಕಮಲಗಳಿಗೆ ಶರಣು ಹೋಗಿ ಶರಣನೇ ತಾನಾಗುವುದು.

**1609**

**ಹಬ್ಬಗಳೆಲ್ಲ ಉಬ್ಬುಬ್ಬಿ ಲಿಂಗದ ಹಬ್ಬಕ್ಕೆ ಬಂದಬ್ಬರವ ನೋಡಾ !**
**ಲಿಂಗದ ಹಬ್ಬ ನಿಮ್ಮ ಬಾಯಿಗೆ ಒಬ್ಬಿಯಲ್ಲದೆ**
**ನಿಮ್ಮ ಜನನಕ್ಕೆ ಹಬ್ಬವೇನೋ ಕಟ್ಟ ಮಬ್ಬುಳ್ಳಿ ಕೊಬ್ಬಿಗರಿರಾ,**
**ಕಪಿಲಸಿದ್ಧ ಮಲ್ಲಿಕಾರ್ಜುನನೊಬ್ಬನರಿಯದಿರ್ದಡೆ ?**

ಹಬ್ಬ ಬಂದರೆ ಸಾಕು ಉಬ್ಬುಬ್ಬಿ ಹಬ್ಬವನ್ನು ಆಚರಿಸುತ್ತಾರೆ. ಬಾಯಿಯಲ್ಲಿ ಲಿಂಗಯ್ಯನ ಮಾತು ಕುಣಿದಾಡುತ್ತದೆ. ಅದು ಹಬ್ಬ, ಹಬ್ಬ ಮಾಡುವವರ ಬಾಯಿಗೆ ಲಿಂಗ ಎನ್ನುವುದು ಒಬ್ಬಿಯಲ್ಲದೆ ಅರಿವಿನ ಹಬ್ಬ ಅಲ್ಲ ನೋಡಾ ನಿಮ್ಮ ಜನನಕ್ಕೇನಾದರೂ ಹಬ್ಬವಿದೆಯೇನು ಮಬ್ಬುಳ್ಳ ಕೊಬ್ಬಗರಿರಾ ಹುಟ್ಟಿನಿಂದ ಜಾತಿಯನ್ನು ಹೊತ್ತು ಕೊಂಡೇ ಹುಟ್ಟುವವರಿಗೆ ಜಾತಿಯನ್ನು ಅಲ್ಲಗಳೆದು ಹಬ್ಬ ಮಾಡುವ ಶಕ್ತಿ ಇದೆಯೇ. ಕಾಯದಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕಂಡು ಹಬ್ಬ ಆಚರಿಸಿಕೊಳ್ಳದಿದ್ದರೆ ಅದು ಅಬ್ಬರದ ಹಬ್ಬ ನೋಡಾ.

**1610**

**ಜ್ಞಾನಾಭ್ಯಾಸದಲ್ಲಿ ವಟಮೂಲಿಕೆಯ ಬೀಜದಂತಿರ ಬಲ್ಲಡೆ ಭಕ್ತನಯ್ಯಾ .**
**ಆ ಅಜ್ಞಾನದಲ್ಲಿ ಅಗ್ನಿಯಂತಿರಬಲ್ಲಡೆ ಭಕ್ತನಯ್ಯಾ.**
**ಭಕ್ತನು ಭಕ್ತನು ಎಂದು ಬೆಳೆದ ಧ್ಯಾನಂಗಳನಟ್ಟು**
**ಬೆಟ್ಟಬಿಲ್ಲಯ್ಯನ ರೂಹಕ್ಕೆ ಒಟ್ಟಿ ಭಕ್ತನಾದೆನೆಂಬವನೆ ಯುಕ್ತಿ**
**ಲೊಳಲೊಟ್ಟೆಯಂತೆ ನೋಡಾ, ಕಪಿಲ ಸಿದ್ಧಮಲ್ಲಿಕಾರ್ಜುನಾ.**

ಕಾಯದಲ್ಲಿ ಮಹಾಜ್ಞಾನ ಸಂಗಮವಾಗಿದೆ. ಕಾಯದಿಂದ ಆವರಿಸಿದ ಮನದಿಂದಲೇ ಆ ಜ್ಞಾನವನ್ನು ಪಡೆಯಬೇಕು. ಇದೊಂದು ಶಿಕ್ಷಣ, ಈ ಶಿಕ್ಷಣದಲ್ಲಿ ಭಕ್ತನಾದವನು ಬೀಜದೊಳಗೆ ಬಚ್ಚಿಟ್ಟುಕೊಂಡ ವಟವೃಕ್ಷದಂತಿರಬೇಕು. ಕಾಷ್ಟದಲ್ಲಿ ಬಚ್ಚಿಟ್ಟುಕೊಂಡ ಅಗ್ನಿಯಂತಿರಬೇಕು.

ಭಕ್ತ ಭಕ್ತ ಎಂದು ಬೆಳೆದ ಧಾನ್ಯಗಳನ್ನು ನೆಟ್ಟು ಬೆಟ್ಟದ ದೇವರಿಗೆ ಒಟ್ಟಿ ನಾನು ಭಕ್ತನಾದೆನೆಂಬವನ ಯುಕ್ತಿ ಅದು ಯುಕ್ತಿಯಲ್ಲ. ಲೊಳಲೊಟ್ಟೆ ಎಂದಿದ್ದಾರೆ, ಸಿದ್ಧರಾಮ ಶಿವಯೋಗಿಗಳು.

**1611**

**ಅಟ್ಟು ನೀಡುವ ಭಕ್ತನ ಬಟ್ಟೆಯ(ಇ)ಚ್ಚೆಗೆ ಬಂದಾತನಲ್ಲ ನೋಡಾ ಮಹೇಶನು.**
**ನೆಟ್ಟನೆ ನೀ ಪರವಸ್ತುವೆಂಬ ಜ್ಞಾನವಟ್ಟುವುದಕ್ಕೆ ಬಂದಾತ**
**ಮಹೇಶನು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ನೀಡುವ ದಾನಿಗೆ ಒಲಿಯುವಾತನಲ್ಲ ಮಹೇಶನು. ನೀಡುವ ವಸ್ತು ಅದು ತನ್ನದಲ್ಲ ಎಂದು ನೀಡುವವನು ತಿಳಿದಿಲ್ಲ. ಬೇಡುವವನು ಕೂಡ ಅದು ನೀಡುವವನ ವಸ್ತು ಅಲ್ಲ ಎಂದು ತಿಳಿದಿಲ್ಲ. ನೀಡುವವನು ದಾನಿಯಲ್ಲ. ಬೇಡುವವನು ಭಿಕ್ಷುಕನಲ್ಲ ಆದರೂ ಅಜ್ಞಾನದ ಕತ್ತಲು ಇಬ್ಬರನ್ನೂ ಮುಸುಕಿರುವುದರಿಂದಾಗಿ ನೀಡುವವನಾಗಿದ್ದಾನೆ. ಬೇಡುವವನಾಗಿದ್ದಾನೆ. ಇವರಿಬ್ಬರ ಒಡಲ ಒಡೆಯ ಒಬ್ಬನೇ. ನೀಡುವವನನ್ನು ದಾನಿಯೆನ್ನುವ ಸಂಕಟಕ್ಕೆ ಒಡ್ಡಿದ್ದಾನೆ. ಬೇಡುವವನನ್ನು ಭಿಕ್ಷುಕ ಎನ್ನುವ ಸಂಕಟಕ್ಕೆ ಒಡ್ಡಿದ್ದಾನೆ. ಇವರಿಬ್ಬರಲ್ಲಿರುವ ಮಹಾಜ್ಞಾನಿ ಮಲ್ಲಯ್ಯನನ್ನು ಇಬ್ಬರೂ ಅರಿಯರು.

**1612**

**ಮಹೇಶನಾದೆನೆಂಬ ಬಿಂಕವು ಮನದರುಹಿನಲ್ಲಿ ಅಡಗಿರಬೇಕು.**
**ಭಕ್ತನಾದೆನೆಂಬ ಬಿಂಕವು ಸೈರಣೆಯ ರೂಹಿನಲ್ಲಿ ಮನೆ ಮಾಡಿಕೊಂಡಿರಬೇಕು.**
**ಮಹೇಶನಾದವ ಒಬ್ಬನು ತೋರಲಿಲ್ಲ.**
**ಭಕ್ತನಾದವನ ಅಂದಂದಿಗೆ ನೋಡಲಿಲ್ಲ ಕಂಡೆಯಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮಹೇಶನು ತಾನೆ ಆದಾಗ ಆ ಕಾಯದಲ್ಲಿ ಬಿಂಕ ಇರುವುದಿಲ್ಲ. ಮನ ಘನಮನವಾಗಿ ಆ ಘನದಲ್ಲಿಯೇ ಮನ ಅಡಗುತ್ತದೆ.

ಭಕ್ತನು ತಾನೆ ಆದಾಗ ಭಕ್ತನ ಮೂಲ ಮನವು ಕಾಯದಲ್ಲಿ ಸಂಗಮವಾದ ಮಹೇಶನಿಗೆ ಶರಣು ಹೋಗಿರುತ್ತದೆ. ಮನದ ಬಿಂಕವು ಸೈರಣೆಯ ನಿರೂಪದಲ್ಲಿ ಮನೆ ಮಾಡಿಕೊಂಡಿರುತ್ತದೆ.

ಮಹೇಶ ತಾನೆ ಆದವನು ಒಬ್ಬನೂ ತೋರಲಿಲ್ಲ. ಭಕ್ತನಾದವನನ್ನು ಅಂದಂದಿಗೆ

ನೋಡಲಿಲ್ಲ ಕಪಿಲಸಿದ್ಧಮಲ್ಲಿಕಾರ್ಜುನಾ ಇದು ನಿನ್ನ ಲೀಲೆ.

**1613**

**ಬಹಿರಂಗದಲ್ಲಿ ಬಿಟ್ಟು ಮಹೇಶನು ಬ್ರಹ್ಮನ ವಂಶದವರು.**
**ಅಂತರಂಗದಲ್ಲಿ ಬಿಟ್ಟು ಮಹೇಶರು ವಿಷ್ಣುವಿನ ವಂಶದವರು.**
**ಎರಡರಲ್ಲಿ ಒಬ್ಬ ಮಹೇಶರು ಕಪಿಲಸಿದ್ಧ ಮಲ್ಲಿಕಾರ್ಜುನ ,**
**ಮಹಾದೇವಿಯ ಸಂಗದಿಂದ ಹುಟ್ಟಿದವರು ಕಾಣಾ, ಯೋಗಿನಾಥಾ.**

ಕಾಯ ಮಹೇಶ್ವರನ ಸಂಪತ್ತು. ಮನ ಕಾಯದಲ್ಲಿಯೇ ಸಂಗಮವಾದ ಮಹೇಶ್ವರನ ಸಂಗ ಮಾಡಿದ್ದರಿಂದ ಬ್ರಹ್ಮ ಹುಟ್ಟಿದ . ಮನ ಮಹೇಶ್ವರನ ಸಂಗ ಮಾಡಿದ್ದರಿಂದ ವಿಷ್ಣು ಹುಟ್ಟಿದ. ಇವರಿಬ್ಬರನ್ನು ಬಿಟ್ಟು ಮಹೇಶ ಕಾಯದಲ್ಲಿಯೇ ಸಂಗಮವಾದ.

ಕಾಯವೆಂದರೆ ಸಾಮಾನ್ಯವಲ್ಲ. ಮಹೇಶ ಮನದ ಸಂಗ ಮಾಡಿ ವಿಷ್ಣುವಿಗೆ ಜನ್ಮಕೊಟ್ಟ ಆ ವಿಷ್ಣುವೇ ಕಾಯ. ಮಹೇಶ ಮನದ ಸಂಗ ಮಾಡಿದ್ದಕ್ಕಾಗಿ ಆ ಮನದಲ್ಲಿಯೇ ಬ್ರಹ್ಮನಿಗೆ ಜನ್ಮ ನೀಡಿದ. ಮನ ಮಹೇಶನ ಸಂಗ ಮಾಡಿದ್ದರಿಂದ ಮಹಾದೇವಿ ಎಂದು ಕರೆಯಿಸಿಕೊಂಡಳು. ಈ ಮಹಾದೇವಿಗೆ ಹುಟ್ಟಿದವರೇ ಬ್ರಹ್ಮ, ವಿಷ್ಣು, ಹೀಗಾಗಿ ಕಾಯ ತ್ರಿಕೂಟ ಸಂಗಮ ಎಂದು ಕರೆಯಿಸಿಕೊಂಡಿತು.

**1614**

**ಬಿಟ್ಟು ಮಹೇಶನಾದೆನೆಂಬುದು ಅರುಹಿನ ಕೇಡು.**
**ಹಿಡಿದು ಭಕ್ತನಾದೆನೆಂಬುದು ನಿಜದ ಕೇಡು. ಬಿಡುವುದು ಹಿಡಿವುದು**
**ಮನಃಕಲ್ಪಿತವಲ್ಲದೆ, ಕಲ್ಪನಾರಹಿತ ಭಕ್ತ- ಮಹೇಶರಲ್ಲಿಪ್ಪುದೇನಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನಾನು ಮಹೇಶನಾದೆ ಎನ್ನುವುದು ಅರಿವಿನ ಕೇಡು. ನಾನು ಭಕ್ತನಾದೆನೆಂಬುದು ಕೂಡ ನಿಜದ ಕೇಡು. ನಾನು ಎನ್ನುವ ಅಹಂಕಾರ ಮಹೇಶನಲ್ಲಿ ಕಳೆದು ಹೋದಾಗ ಪುನಃ ನಾನು ಬಿಟ್ಟು ಮಹೇಶನಾದೆನೆಂದು ಹೇಳಲು ಬರುತ್ತದೆಯೇ.

ನಾನು ಎನ್ನುವುದನ್ನು ಮಹೇಶನಲ್ಲಿ ಬಿಟ್ಟು ಆ ನಾನೇ ಭಕ್ತನಾದಾಗ ನಾನು ಭಕ್ತನಾದೆನೆಂಬುದನ್ನು ಹೇಳಲು ಬರುವುದಿಲ್ಲ.

ಬೆಳಕಿನಲ್ಲಿ ಕತ್ತಲು ಲೀನವಾಗಿ ಪುನಃ ನಾನು ಬೆಳಕು ಆದೆ ಎನ್ನುವುದು ಕತ್ತಲಿಗೆ ಹೇಗೆ ಬರುವುದಿಲ್ಲವೋ ಹಾಗೆ ಮಹೇಶನಿಗೆ ಭಕ್ತನಾದೆ ಎನ್ನಲು ಬರುವುದಿಲ್ಲ. ಮಹಾ ಬೆಳಕಿನಲ್ಲಿ ಲೀನವಾದ ಕತ್ತಲು ಬೆಳಕಾಗಿದೆ. ಹೀಗೆ ಬೆಳಕಾದ ಬೆಳಕು ನಾನು ಬೆಳಕಾದೆ ಎಂದು ಕತ್ತಲಿಗೆ ಹೇಳಲು ಬರುವುದಿಲ್ಲ. ಇದು ಕಲ್ಪನಾರಹಿತ.

**1615**

**ಹಲವರಿಪ್ಪರು ನೋಡಾ ಮೂಲೋಕದಲ್ಲಿ ಲಿಂಗಭಕ್ತರು**
**ಕೆಲವರಿಪ್ಪರು ನೋಡಾ ಮೂಲೋಕದಲ್ಲಿ ಸ್ಥಾವರ ಭಕ್ತರು**
**ಸಲುಗೆಯುಳ್ಳವರಿಪ್ಪರು ನೋಡಾ ಅನೇಕ ಕೋಟಿ ಭಕ್ತರು**
**ಒಬ್ಬರೂ ಇಲ್ಲ ನೋಡಾ ಅಜಾಂಡಕಾಂಡದಲ್ಲಿ ಜಂಗಮಭಕ್ತರು**

**ಕಪಿಲಸಿದ್ಧಮಲ್ಲಿಕಾರ್ಜುನಾ.**

ಲೋಕದಲ್ಲಿ ಕಲ್ಲನ್ನೇ ಲಿಂಗ ಮಾಡಿ ಆ ಲಿಂಗಕ್ಕೆ ಅರ್ಚಕರಿಂದ ಪ್ರಾಣ ಪ್ರತಿಷ್ಠಾನ ಮಾಡಿಸಿ ಅದನ್ನು ಪೂಜಿಸುವ ಭಕ್ತರು ಕೋಟಿ ಕೋಟಿ. ಕಲ್ಲು ಕಟೆದು ತನಗೆ ಬೇಕಾದ ಸ್ಥಾವರ ದೇವರನ್ನು ಮಾಡಿ ಅದನ್ನು ಪೂಜಿಸುವ ಭಕ್ತರು ಕೂಡ ಕೋಟಿ ಕೋಟಿ.

ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನೆ ಸದಾಶಿವನು. ಮಹಾದೇವನು ಆಗಿದ್ದಾನೆ. ಅಂಗವನ್ನು ಆವರಿಸಿದ ಮನ ಈತನ ಚರಣ ಕಮಲಗಳಿಗೆ ಶರಣು ಹೋಗಿ ಶರಣಾಗತನಾಗಿ, ಆರಾಧಿಸುವ ಭಕ್ತರು ಒಬ್ಬರೂ ಇಲ್ಲ ಈ ಬ್ರಹ್ಮಾಂಡದಲ್ಲಿ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1616**

**ಇಂದ್ರಿಯ ನಿಗ್ರಹವ ಮಾಡಿದಡೇನಯ್ಯಾ , ಚಂದ್ರಧಾರಿಯಾಗಬಲ್ಲನೆ ?**
**ಇಂದ್ರಿಯ ಕಟ್ಟಿದ ಕುದುರೆ ಇಂದ್ರನ ಉಚ್ಚೈಶ್ರವ ವಹುದೆ ಅಯ್ಯಾ ?**
**ಇಂದ್ರಿಯಂಗಳೆಂಬುದು ಮಾಯಾಜಾಲವು ತಾನೆ.**
**'ನ ಸತೀ' ಎಂಬ ಶೃತಿಯದು ಪ್ರಸಿದ್ಧ.**
**ಲಿಂಗವೆಂಬುದ ತಿಳಿಯಬಲ್ಲಾತನೆ ಜಗದ್ವಂದ್ಯ ಜಂಗಮವೆಂಬೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಇಂದ್ರಿಯ ನಿಗ್ರಹ ಮಾಡಿದಡೆ ಚಂದ್ರಧಾರಿ ಚಂದ್ರಶೇಖರನಾಗಲಾರ. ಇಂದ್ರಿಯಗಳು ಕಟ್ಟಿದ ಕುದುರೆಗಳನ್ನು ಬಿಟ್ಟಂತೆ. ಅವು ಮಾಯಾಜಾಲವು ತನುವನ್ನು ಆವರಿಸಿದ ಮನದಲ್ಲಿ ಸೃಷ್ಠಿಯಾದವುಗಳು. ಅವುಗಳನ್ನು ನಿಗ್ರಹ ಮಾಡಿದರೆ ಶಂಕರನಿಗೆ ಮನವೆಂಬ ಸತಿ ಗಿರಿಜೆಯಾಗಳು.

ಇಂದ್ರಿಯಗಳನ್ನು ಯಾರು ನಿಗ್ರಹ ಮಾಡಬೇಕು. ಜನ್ಮ ಕೊಟ್ಟ ತಾಯಿಗೆ ಕಾಯಲು ಇಟ್ಟಂತಾಗುತ್ತದೆ. ಇಂದ್ರಿಯಗಳಿಗೆ ಜನ್ಮ ಕೊಟ್ಟ ತಾಯಿ ಮನ. ಈಕೆಯ ಗರ್ಭದಿಂದ ಹೊರಬಂದವು ಇಂದ್ರಿಯಗಳು ಎಂದು ಕರೆಯಲ್ಪಟ್ಟಿವೆ. ಈ ಮನವೆಂಬ ಗಿರಿಜೆ ಶಂಕರನಿಗೆ ಸತಿಯಾದಾಗ ಇಂದ್ರಿಯಗಳು ತಂತಾನೆ ಇಲ್ಲವಾಗುತ್ತವೆ.

**1617**

**ಕುಲಸೂತಕವಿಲ್ಲದ ಜಂಗಮು ಕೋಟ್ಯಾನುಕೋಟಿ.**
**ಮಲಮುಟ್ಟಿದ ಜಂಗಮು ಕೋಟ್ಯಾನುಕೋಟಿ .**
**ಶೀಲ ಸತ್ಯಸದಾಚಾರಿ ಜಂಗಮು ಕೋಟ್ಯಾನುಕೋಟಿ.**
**ಹಲವು ಹೊಳೆಯಬಾರದ ಜಂಗಮು ಸುಳುಹಿನ ಕಳದೋರಿಸ ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನ ಮಹಾಮಹಿಮನು.**

ಜಂಗಮು ಎನ್ನುವವ ವ್ಯಕ್ತಿಯಲ್ಲ. ಪ್ರತಿ ವ್ಯಕ್ತಿಯಲ್ಲಿ ಸಂಗಮವಾದ ಅನಂತ ಶಕ್ತಿ . ಇವನಿಗೆ ಯಾವ ವೇಷವೂ ಇಲ್ಲ. ಇವನು ಕಾಯವುಳ್ಳವನೂ ಅಲ್ಲ. ಪ್ರತಿಕಾಯದಲ್ಲಿ ಇದ್ದವನು. ಜಾತಿ, ಕುಲ, ಮತ ಪಂಥಗಳು ಇವನಿಗೆ ಇಲ್ಲವೇ ಇಲ್ಲ. ಕಾಯದಲ್ಲಿ ಸಂಗಮವಾದ ಜಂಗಮನ ಪರಿಚಯ ಕಾಯವನ್ನು ಆವರಿಸಿದ ಮನಕ್ಕೆ ಆದರೆ ಸಾಕು ಕಾಯದ ಮುಂದೆ ಸುಳಿಯುವ ಪ್ರತಿ ಅಜ್ಞಾನವನ್ನು ತನ್ನ ಅರಿವಿನ ಖಡ್ಗದಿಂದ ಕಡೆದು ಹಾಕುತ್ತಾನೆ.

ಮನ ಕಾಯಕ್ಕೆ ಜಂಗಮ ವೇಷ ಹಾಕಿ ಪ್ರತಿ ಕಾಯದ ಮುಂದೆ ಪ್ರಕಟವಾಗಿ ತನಗೆ ಬೇಕಾದ ಕಾಯಗಳನ್ನು ಶಿಷ್ಯನನ್ನಾಗಿ ಮಾಡಿ ಕೊಳ್ಳುತ್ತದೆ. ಆ ಶಿಷ್ಯಂದಿರಿಗೆಲ್ಲ ಜಂಗಮ ಗುರುವಾಗುತ್ತಾನೆ. ಇಂತ ವೇಷದ ಜಂಗಮ ಜಂಗಮನಲ್ಲ. ಜಂಗಮನೆಂದರೆ ಮಹಾಮಹಿಮನು ಮಹಾದೇವನು ಸಾಕ್ಷಾತ್ ಕಪಿಲ ಸಿದ್ಧ ಮಲ್ಲಿಕಾರ್ಜುನನು ಆಗಿದ್ದಾನೆ.

**1618**

**ಆಡಂಬರದಯ್ಯಗಳ ಕಂಡಡೆ**
**ಆಡಬೇಡ ಅವರ ಪಾದೋದಕ ಪ್ರಸಾದ ಸ್ವೀಕಾರದಲ್ಲಿ**
**ಆಡು ಆಡುವರ ಕುಲಛಲ ಶೀಲ ಜ್ಞಾನವಿಡಿದಾಡಿ,**
**ಆಡದೆ ಆಡಿದಡೆ ಆಡಿಸುವ ಭವದ ಕುಳಿಯಲ್ಲಿ ಕಡುಜಾಣ**
**ಕಪಿಲಸಿದ್ಧಮಲ್ಲಿಕಾರ್ಜುನ ಯೋಗಿನಾಥಾ.**

ಕಾಯಕ್ಕೆ ಮನ ಜಂಗಮನ ವೇಷ ಧರಿಸಿದರೆ ಆ ಕಾಯದಲ್ಲಿ ಕಾಮ, ಕ್ರೋಧ, ಲೋಭ, ಮದ, ಮತ್ಸರಗಳು, ಅಳಿಯುವುದಿಲ್ಲ. ಸಪ್ತ ವ್ಯಸನಗಳು ಕೆಡುವುದಿಲ್ಲ. ಅಷ್ಟಮದಗಳು ಕರಗುವುದಿಲ್ಲ.

ಮನ ಕಾಯಕ್ಕೆ ಜಂಗಮನ ಆಡಂಬರದ ವೇಷ ಹಾಕಿ ಶಿಷ್ಯರನ್ನು ಮಾಡಿಕೊಳ್ಳುತ್ತದೆ. ಆಡಂಬರದ ವೇಷ ಕಂಡ ಶಿಷ್ಯರು ನಿಜಜಂಗಮನೆಂದು ತಿಳಿದು ಪಾದೋದಕ ಪ್ರಸಾದ ಸ್ವೀಕರಿಸುತ್ತಾರೆ. ಜಂಗಮನೆಂದರೆ ಯಾರು ಎಂದು ಜಂಗಮನಿಗೂ ಗೊತ್ತಿಲ್ಲ, ಶಿಷ್ಯರಿಗೂ ಗೊತ್ತಿಲ್ಲ.

ಗುರು ಶಿಷ್ಯರಿಬ್ಬರೂ ಕಾಯವುಳ್ಳವರಲ್ಲ. ಕಯದಲ್ಲಿದ್ದವರು. ಹೀಗೆ ಕಾಯದಲ್ಲಿದ್ದವರು ಜಂಗಮನಿಗೂ ಕಾಣುವುದಿಲ್ಲ. ಶಿಷ್ಯರಿಗೂ ಕಾಣುವುದಿಲ್ಲ.

ಕಾಯವುಳ್ಳ ಗುರು ಶಿಷ್ಯರಿಬ್ಬರಿಗೂ ಜನನ ಮರಣದ ಬಾಧೆಯು ತಪ್ಪುವುದಿಲ್ಲ. ಅಜ್ಞಾನದ ಕುಳಿಯಲ್ಲಿ ಬಿದ್ದು ಒದ್ದಾಡುವ ಶಿಷ್ಯನನ್ನು ಜಂಗಮ ಕೈ ಹಿಡಿದು ಎತ್ತುವುದಿಲ್ಲ. ಸ್ವತಃ ಜಂಗಮನೇ ಅಜ್ಞಾನದ ಕುಳಿಯಲ್ಲಿ ಬಿದ್ದಿರುವುದು ಕಾಣುವುದಿಲ್ಲ. ಇವರಿಬ್ಬರೂ ಭವಕ್ಕೆ ಕಾರಣವಾದವರು.

**1619**

**ಅಂಗೈಯೊಳಗಣ ಅಂಗ ಜಾರಿಗೆ,**
**ಅಂಗಜನ ಸ್ನೇಹಿತರ ಪಾದಂಬುವ ನೆರೆವನ ಅಂಗ ಚಾಂಡಾಲನಂಗ.**
**ಆತನ ಗೃಹ ಶ್ವಪಚನ ಮನೆ, ಆತನ ಸಂಗ ಮದ್ಯಪಾನ ಸಂಗ,**
**ಆತನ ವಾಕ್ಯ ನಿಶಿತಾಸ್ತ್ರ, ಆತನ ಹೊದ್ದರುವೆ ಸತ್ತ ನಾಯಕೊಳೆದೊಗಲು**
**ಆತನ ಗುರುನರ, ಆತನ ಲಿಂಗ ಶಿಲೆ**
**ಆತನ ಅಧಿದೈವ ಪಿಶಾಚಿ, ಆತನ ವಿದ್ಯೆ ರಾಕ್ಷಸವಿದ್ಯೆ !**
**ಇದು ತಪ್ಪದು, ಇದು ತಪ್ಪದು ! ಇದು ತಪ್ಪೆನ್ನದು**
**ಇದು ಪುಸಿಯಾದಡೆ, ಮೂಗ ಕೊಯ್ ಬಾರಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಂಗದೊಳಗೆ ಅಂಗಜನು ಇದ್ದಾನೆ ಆತ ಗುರುದೇವ ಮಹಾದೇವನೂ ಹೌದು. ಹಾಗೆಯೇ ಅಂಗದೊಳಗೆ ಐದು ಭಾಗಗಳಿವೆ. ಅವು ಕೈಲಾಸಕ್ಕೆ ಹೋಗುವ ಮಹಾದ್ವಾರಗಳೂ ಹೌದು. ಇಡೀ ಅಂಗವನ್ನು ಜಾರಿಣಿಯನ್ನಾಗಿಸುವ ಚಾಂಡಾಲನ ಅಂಗವು ಹೌದು. ಕಣ್ಣು, ಕಿವಿ, ಮೂಗು, ನಾಲಿಗೆ

ಚರ್ಮವನ್ನು ವೇಶ್ಯಾಕೇಂದ್ರವನ್ನಾಗಿ ಮಾಡಿಕೊಂಡ ಜಾರಿಣಿಯ ವಾಸಸ್ಥಾನವೂ ಹೌದು. ಅಂಗದ ಐದು ಭಾಗಗಳನ್ನು ಒಳಗೊಂಡ ಅಂಗವನ್ನು ಶರಣರು ಅಂಗೈ ಎಂದು ಕರೆದಿದ್ದಾರೆ. ಈ ಐದೂ ಭಾಗಗಳಲ್ಲಿ ಅಲೆದಾಡುವ ಮನವೆಂಬ ಜಾರಿಣಿ ಇಡೀ ಅಂಗವನ್ನು ಚಾಂಡಾಲನ ಅಂಗವನ್ನಾಗಿಸಿಕೊಂಡಿದೆ. ಶ್ವಪಚನ ಮನೆಯನ್ನಾಗಿಸಿಕೊಂಡಿದೆ. ಮದ್ಯಪಾನ ಸಂಗವೆಂದರೆ ಜಾರಿಗೆ ಬಲು ಇಷ್ಟ. ಈ ಜಾರಣಿಯ ಶಿಲೆಯನ್ನೇ ಲಿಂಗವನ್ನಾಗಿ ಮಾಡಿಕೊಂಡು ಅಂಗದ ಮೇಲೆ ಧರಿಸಿದ್ದಾಳೆ. ಈಕೆಯ ಅಧಿದೈವ ಪಿಶಾಚಿ, ವಿದ್ಯೆ ರಾಕ್ಷಸ ವಿದ್ಯೆ .

ಅಂಗೈ ಗುರುದೇವ ವಾಸ ಮಾಡುವ ವಾಸಸ್ಥಾನವೂ ಹೌದು ಜಾರಿಣಿ ವಾಸ ಮಾಡುವ ನರಕವೂ ಹೌದು. ಜಾರಿಣಿಗೆ ಗುರುದೇವನ ಮೇಲೆ ಆಸೆಯಾದರೆ ಜಾರಣಿಗೆ ಭೌತಿಕ ವ್ಯಸನ ಅತಿಯಾದಡೆ ಆ ಅಂಗೈಯನ್ನೇ ನರಕವನ್ನಾಗಿಸಿ ಅದರಲ್ಲಿ ವಾಸ ಮಾಡುತ್ತಾಳೆ.

**1620**

**ಮುಳುಗುವಾತ ಮುಳುಗುವವನೆತ್ತಬಲ್ಲನೆ ?**
**ತಾ ಮಾಯೆಯೊಳಗಾದ.**
**ಮಾಯಿಕರ ತನ್ನ ಪಾದಾಂಬುವಿಂ ಪರಿಹರನೆಂಬವ ತೆಗೆದುಕೊಂಬವ,**
**ಇವರಿರ್ವರೂ ಮುಳುಗಿ ಯಮಪಾಶಾಕ್ಕೊಳಗಾದರು ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪ್ರಪಂಚವೆಂಬ ಅಜ್ಞಾನದ ನರಕದಲ್ಲಿ ಮುಳುಗುವವನನ್ನು ಎತ್ತ ಬಲ್ಲನು. ಕಾಯ ಗುರುವೇಷ ಧರಿಸಿ ಶಿಷ್ಯನ ಅಜ್ಞಾನವನ್ನು ಕಳೆಯುವೆನು ಎಂದು ಹೇಳುವ ಗುರು ಸ್ವತಃ ತಾನು ಮಾಯೆಯೊಳಗಾಗಿದ್ದಾನೆ. ಕಾಯ ಕಾಯದ ಅಜ್ಞಾನವನ್ನು ಕಳೆಯಲು ಅರಿಯದು. ಸಾಧ್ಯವಾದರೆ ಕಾಯದ ಅಜ್ಞಾನವನ್ನು ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಜ್ಞಾನದೊಂದಿಗೆ ಬೆರೆತು ಕಾಯದ ಅಜ್ಞಾನವನ್ನು ಕಳೆದುಕೊಳ್ಳಬಹುದಾಗಿದೆ.

ತನ್ನ ಅಜ್ಞಾನ ಸಾಧ್ಯವಾದರೆ ತನ್ನದೇ ಆದ ಜ್ಞಾನದಿಂದ ಕಳೆದುಕೊಳ್ಳಲು ಬರುತ್ತದೆ ಹೊರತು ಮತ್ತೊಂದು ಕಾಯದ ಅಜ್ಞಾನವನ್ನು ಅದರ ಮಾಯಿಕವನ್ನು ಕಳೆಯಲು ಸಾಧ್ಯವಾಗುವುದಿಲ್ಲ.

ಶಿಷ್ಯನ ಅಜ್ಞಾನವನ್ನು ಕಳೆಯುವೆನೆಂದು ಹೇಳುವ ಗುರುವಿಗೂ ಶಿಷ್ಯನಿಗೂ ಯಮಪಾಶ ತಪ್ಪದು ಎಂದು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1621**

**'ಪಾಕಾರಂ ಪಾವನಂ ಜ್ಞಾನಂ ದೋಕಾರಂ ದೋಷನಾಶನಂ**
**ದಕಾರಂ ತು ದಯಾಕಾರಂ ಕಕಾರಂ ಕರ್ಮನಾಶನಂ॥'**
**ಎಂಬುದು ಪುಸಿಯೇನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಪಾದೋದಕವೆಂದರೆ ಗುರುದೇವನ ಪಾದ ತೊಳೆದ ನೀರಲ್ಲ. ಇಡೀ ಕಾಯದ ಜ್ಞಾನವೇ ಪಾದೋದಕ. ಕಾಯದ ಜ್ಞಾನದಿಂದ ಕಾಯವನ್ನು ಆವರಿಸಿದ ಮನ ಪಾವನವಾಗುತ್ತದೆ. ಜ್ಞಾನಿ ಎಂದು ಕರೆಯಿಸಿಕೊಳ್ಳುತ್ತದೆ. ಮನದ ದೋಷ ನಾಶವಾಗುತ್ತದೆ. ಕಾಯ ದಯೆಯಿಂದ

ಭರಿತವಾಗುತ್ತದೆ. ಅನಂತ ಜನ್ಮದಿಂದಲೂ ಮಾಡಿದ ಕಾಯದ ಕರ್ಮ ನಾಶವಾಗುತ್ತದೆ. ಇದು ಪುಸಿಯಲ್ಲ. ಜ್ಞಾನೋದಕಕ್ಕೆ ಅದ್ಭುತವಾದ ಶಕ್ತಿ ಇದೆ ಎಂದು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1622**

**ಅಂತಹರಂಘ್ರಿಸಲಿಲ ಇಂತಹಂಗೆ ನೋಡಾ. ಅಂತರಿ ತಿಂತು ಕಾಂತಿಸಿದಡೆ,**
**ಕಂತುಹರ ಕಪಿಲಸಿದ್ಧ ಮಲ್ಲಿಕಾರ್ಜುನ, ಅಂತರಿಗಾಜ್ಞೆಯ ಮಾಡನೆ, ಕಲ್ಲಯ್ಯಾ.**

ಜ್ಞಾನೋದಕ ಎಲ್ಲರಿಗೂ ಸಿಕ್ಕುವುದಿಲ್ಲ. ಹೀಗಾಗಿ ಜ್ಞಾನೋದಕಕ್ಕೆ ಪಾದೋದಕ ಎಂದು ಹೆಸರಿಟ್ಟಿದ್ದಾರೆ ಶರಣರು. ಜ್ಞಾನ ಬೇಕು ಎಂದು ಆಸೆ ಮಾಡಿಬಂದಂತಹ ಕಾಯಕ್ಕೆ ಮಾತ್ರ ಕಾಯದಲ್ಲಿಯೆ ಸಂಗಮವಾದ ಜ್ಞಾನೋದಕ ಸಿಗುತ್ತದೆ. ಅರಿತರಿತು ಆ ಅರಿವೇ ತಾನಾದ ಕಾಯಕ್ಕೆ ಜ್ಞಾನ ಕಾಂತಿಯಂತೆ ಥಳ ಥಳನೆ ಹೊಳೆಯುತ್ತದೆ. ಕಂತುಹರ ಕಪಿಲಸಿದ್ಧ ಮಲ್ಲಿಕಾರ್ಜುನ ಕಾಯವನ್ನು ಆವರಿಸಿದ ಮನಕ್ಕೆ ತನ್ನ ಆದೇಶ ನೀಡಿ ಮನವನ್ನು ಘನ ಮನವನ್ನಾಗಿಸಿಕೊಂಡು ಅಪ್ಪಿಕೊಳ್ಳುತ್ತಾನೆ ಎಂದು ಸಿದ್ಧರಾಮ ಶಿವಯೋಗಿಗಳು ಕಲ್ಲಯ್ಯ ಶರಣರಿಗೆ ಹೇಳಿದ್ದಾರೆ.

**1623**

**ಸರ್ವರೂ ದ್ರವ್ಯವಂತರು, ಅವರು ಅವರಲ್ಲಿ ಆಸೆಯೆ ಅಯ್ಯಾ ?**
**ಮಾಯಾವಿರಹಿತ, ಮಾಯಾಕೋಲಾಹಲ.ಪಾದವಿತ್ತುದಕವೆ ಪಾದೋದಕ,**
**ಮೋಕ್ಷಕಾಯಕ ನೋಡಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ಸರ್ವರಲ್ಲಿಯೂ ಜ್ಞಾನವಿದೆ. ಸರ್ವರೂ ದ್ರವ್ಯವುಳ್ಳವರು. ಅದನ್ನು ಅಂಜನ ಹಾಕಿ ಕೃಷಿ ಮಾಡಿದವನಿಗೆ ತನುವಿನಲ್ಲಿ ತನ್ಮಯವಾದ ದ್ರವ್ಯ ತನುವಿಗೆ ಲಭ್ಯವಾಗುತ್ತದೆ.

ತನು ತನುವಿನಲ್ಲಿಯೇ ತನ್ಮಯವಾದ ದ್ರವ್ಯವನ್ನು ಪಡೆಯಲು ತನುವನ್ನು ಆವರಿಸಿದ ಮನ ಹಾಗೂ ತನು ಇವೆರಡೂ ಆಸೆ ಮಾಡಬೇಕು. ಸಕಲ ತನುಗಳಿಗೆ ಹೀಗೆ ಆಸೆ ಮಾಡುವುದು ಸಾಧ್ಯವಿಲ್ಲ. ಅನ್ಯ ತನುವಿನ ದ್ರವ್ಯ ತನ್ನದಾಗಬೇಕೆಂಬ ಆಸೆ ತನು ಮತ್ತು ತನುವಿನ ಮನಕ್ಕೆ ಇರುತ್ತದೆ. ಹೊರತು ತನ್ನ ದ್ರವ್ಯ ಪಡೆಯುವುದಕ್ಕಾಗಿ ಅಂಜನ ಹಾಕಿ ನೋಡಿ ಕೃಷಿ ಮಾಡಬೇಕು ಎನ್ನುವ ಅರಿವು ಇರುವುದಿಲ್ಲ. ತನುವನ್ನು ಆವರಿಸಿದ ಮನ ಮಾಯಮಯವಾದದ್ದು ಅದು ಮಾಯ ಕೋಲಾಹಲ ಮನಕ್ಕೆ ಅನ್ಯರ ದ್ರವ್ಯ ಪಡೆಯಬೇಕೆನ್ನುವ ಆಸೆಯೇ ಹೊರತು ತನುವಿನಲ್ಲಿ ತನ್ಮಯವಾದ ಪರಮಾತ್ಮನ ಚರಣ ಕಮಲಗಳಿಗೆ ದಾಸನಾಗಿ ಪಾದೋದಕ ಪಡೆದು ಮೋಕ್ಷ ಹೊಂದಬೇಕು ಎನ್ನುವ ಆಸೆ ಬಲವಾದಾಗಲೇ ತನುವಿನಲ್ಲಿ ತನ್ಮಯವಾದ ಪರಮಾತ್ಮ ತನು ಮತ್ತು ಮನಕ್ಕೆ ಒಲಿಯುತ್ತಾನೆ.

**1624**

**ಭಕ್ತರು ಭಕ್ತಿವಿಡಿದು ಆಚರಿಸಲಿ, ಅವು ಬಲ್ಲೆವಯ್ಯ.**
**ಆತನ ಭಕ್ತಿ ನಿಷ್ಠೆ. ಆತ ನಡೆದುದು ಜಗತ್ಪಾವನ.**
**ಆತ ನಡೆಸಿದುದು ಜಗಜ್ಜನನ ನೋಡಾ,ಇದು ಪುಸಿಯಾದಡೆ,**
**ಹಲ್ಲುದೋರಿ ಮೂಗ ಕೊಯ್ವ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಭಕ್ತರೆಂದರೆ ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಭಕ್ತರಾದವರು. ಇಂತಹ ಭಕ್ತರು ಭಕ್ತಿವಿಡಿದು ಆಚರಿಸಿದಾಗ ಆತನ ಭಕ್ತಿ ಮತ್ತು ನಿಷ್ಠೆಗೆ ಮೆಚ್ಚಿ ಪರಮಾತ್ಮ ಆತನಿಗೆ ಒಲಿಯುತ್ತಾನೆ. ಇಂತಹ ಭಕ್ತ ನಡೆದುದು ಜಗತ್ಪಾವನ ಆತ ನಡೆಸಿದುದು ಕೂಡ ಜಗತ್ಪಾವನ ನೋಡಾ.

ಇದು ಪುಸಿಯೆಂದವನ ಹಲ್ಲು ಮುರಿದು ಮೂಗ ಕೊಯ್ವ ಕಪಿಲಸಿದ್ಧಮಲ್ಲಿಕಾರ್ಜುನ.

**1625**

**ಬಂಜೆಯ ಪಶು ತಿಂದಂತಂತಲ್ಲದೆ, ತಿಂದು ದಂದುಗ ಮಾಡದು ನೋಡಾ.**
**ಮನೆಯ ಮಂದಿಯ ಅಂದವರಿಯದಯ್ಯಗಳು ಉಂಡಂತಲ್ಲದೆ,**
**ಉಂಡು ಪರಮರ ಮಾಡಿ ಪರೋಪಕಾರ ತೀರ್ಚರು,**
**ನೋಡಾ ಜಗದ ಜೀವಿಗಳು. ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನ ಬಂಜೆಯ ಪಶುವಿದ್ದಂತೆ ಅದಕ್ಕೆ ತಾನಾಗೆ ಹೊರಕ್ಕೆ ಹೋಗುವ ಶಕ್ತಿ ಇಲ್ಲ. ತಿಂದು ದಂದುಗ ಮಾಡಲು ಅರಿಯದು. ಮನೆಯ ಮಂದಿಯ ಅಂದವನ್ನು ಅರಿಯದ ಅಯ್ಯಗಳು ಆ ಮನೆಯಲ್ಲಿಯೇ ಉಂಡು ಉಂಡ ಮನೆಗೆ ಪರೋಪಕಾರ ಮಾಡಲು ಅರಿಯರು. ಇದು ಜಗದ ನಿಯಮ. ಸಾಧ್ಯವಾದರೆ ಮನ ತನ್ನ ಪಶು ತನವನ್ನು ಕಳೆದುಕೊಳ್ಳಲು ತನುವಿನಲ್ಲಿಯೇ ತನ್ಮಯವಾದ ಪರಮಾತ್ಮನಿಗೆ ವಾಹನವಾದರೆ ತನ್ನ ಪಶುತನವನ್ನು ಕಳೆದುಕೊಂಡು ದಂದುಗ ಮಾಡುವುದನ್ನು ಬಿಡುತ್ತದೆ.

**1626**

**ಆ ಪಶುವೆಂದಡೆ ಪಶುವಲ್ಲ ನೋಡಾ, ಪಶುಪತಿ ಸಲೆ ಅಯ್ಯಾ.**
**ಆ ಅಯ್ಯ ಹೇಳಿದನೆಂದಡೆ ಅಯ್ಯ ಅಲ್ಲ ನೋಡಾ**
**ಜಗದಯ್ಯ ಕಪಿಲಸಿದ್ಧಮಲ್ಲಿಕಾರ್ಜುನಯ್ಯನಹುದು.**

**ಪಶುವೆಂದಡೆ ಪಶುವೇ ಅಲ್ಲ ಅದು ಪಶುಪತಿಯ ವಾಹನ.** ಪಶುವಿಗೆ ಪಶುವಿನ ಮಾಲಿಕ ಪಶುಪತಿ ಆತ ಹೋಗೆಂದಲ್ಲಿಗೆ ಹೋಗುತ್ತದೆ.

ಪಶುಪತಿಯನ್ನು ಕಂಡುಕೊಳ್ಳದ ಮನ ಪಶುವಾಗಿ ತುಡುಗುಣಿಯಾಗಿ ಎಲ್ಲೆಂದರಲ್ಲಿ ಅಲೆದಾಡುತ್ತದೆ. ಪಶುವಿನ ಅಯ್ಯ ಎಂದರೆ ಅಯ್ಯ ಅಲ್ಲ. ಆತ ಜಗದೀಶ ಜಗದಯ್ಯ ಸಾಕ್ಷಾತ್ ಕಪಿಲ ಸಿದ್ಧಮಲ್ಲಿಕಾರ್ಜುನ . ಈತನಿಗೆ ವಾಹನವಾದ ಪಶುವೇ ಧನ್ಯ .

**1627**

**ಆವನಾದಡೇನು, ಮೂರಳಿದವನೆ, ಮೂರು ಕೋಣೆಯ ದಾಟುವನಯ್ಯ.**
**ಆಸೆ ಇಹುದೋ ಇಲ್ಲವೋ ಎಂದು ಮನ ಸೆಳೆವುದಕ್ಕೆ,**
**ಗುರು ಚೆನ್ನಬಸವಣ್ಣನಾದನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನನು.**

ಆವನ ಕಾಯವಾದಡೇನು ಮೂರಳಿದವನು ಮಾತ್ರ ಅಂದರೆ ಸಾತ್ವಿಕ. ರಾಜಸ ತಾಮಸ ಗುಣಗಳನ್ನು ಅಳಿದು ನಿರ್ಗುಣಿಯಾದವನು ಪ್ರತಿ ತನುವಿನಲ್ಲಿಯೂ ತನ್ಮಯನಾಗಿದ್ದಾನೆ.

ಈತ ಅಂದರೆ ಪರಮೇಶ್ವರ, ಆಸೆ ಇದೆಯೋ ಇಲ್ಲವೋ ಎಂದು ಕಾಯದ ಮನ

ಸೆಳೆಯುವುದಕ್ಕಾಗಿ ಗುರು ಚೆನ್ನಬಸವಣ್ಣನೆ ಆದನು. ಕಪಿಲಸಿದ್ಧ ಮಲ್ಲಿಕಾರ್ಜುನನು ಪ್ರತಿ ತನುವಿನಲ್ಲಿಯೂ ತನ್ಮಯವಾಗಿ ಆಸೆ ಇದೆಯೋ ಇಲ್ಲವೋ ಎಂದು ಪರೀಕ್ಷಿಸುತ್ತಿದ್ದಾನೆ.

**1628**

**'' ಗೃಹಸ್ನಾನಂ ಕನಿಷ್ಠಂ ಚ ಕೂಪಸ್ನಾನಂತು ಮಧ್ಯಮಂ**
**ಉತ್ತಮ ತುನದೀಸ್ನಾನಂ ಸತ್ಯಂ ಪರ್ವತನಂದನೇ '' ಎಂಬುದಂತಿರಲಿ.**
**ಎಮ್ಮ ಮನಸಿನ ಕಲ್ಮಷಗಳಳಿದಂದೆ ಮಹಾಸ್ನಾನ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಮನೆಯಲ್ಲಿಯೇ ಮಾಡುವ ಸ್ನಾನ ಕನಿಷ್ಠ, ಬಾವಿಯಲ್ಲಿ ಮಾಡಿದ ಸ್ನಾನ ಮಧ್ಯಮ ನದಿಯಲ್ಲಿ ಮಾಡುವ ಸ್ನಾನ ಉತ್ತಮ ಈ ಮೂರರಲ್ಲಿ ಸ್ನಾನ ಮಾಡಿದರೂ ತನುವನ್ನು ಆವರಿಸಿದ ಮನದ ಕಲ್ಮಷಗಳು ಅಳಿಯುವುದಿಲ್ಲ. ಯಾವ ಸಾಬೂನಿನಿಂದ ತೊಳೆದರೂ ಮನದ ಕೊಳೆ ಹೋಗುವುದಿಲ್ಲ. ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನದಲ್ಲಿ ಮಿಂದು ಸ್ನಾನ ಮಾಡುವವನು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1629**

**ಮನವೆಂಬುದು ಬೇರಿಲ್ಲ, ಮಹಾದೇವನ ಮಹಾ ಅರುಹು ನೋಡಾ.**
**ಸಂಕಲ್ಪ ವಿಕಲ್ಪಂಗಳ ಧರಿಸಿದಲ್ಲಿ ಮನವೆನಿಸಿತ್ತು. ಅದು ಅಳಿದಲ್ಲಿ ಮಹಾಜ್ಞಾನವೆನಿಸಿತ್ತು.**
**ಅಳಿದ ಭಾವ ತಲೆದೋರಿದಲ್ಲಿ, ಕಪಿಲಸಿದ್ಧ ಮಲ್ಲಿಕಾರ್ಜುನನೆನಿಸಿತ್ತು.**

ಮನವೆಂಬುದು ಬೇರಲ್ಲ ತನುವಿನಲ್ಲಿಯೇ ತನ್ಮಯವಾದ ಮಹಾದೇವನ ಮಹಾಜ್ಞಾನದ ಬೆಳಕಿನಿಂದ ಹುಟ್ಟಿದ ನರೆಳು. ಹೀಗಾಗಿ ಮನ ಮಹಾದೇವನ ಅಂಶ . ಮನ ಮಹಾದೇವನ ಹತ್ತಿರ ಸುಳಿದರೆ ಸಾಕು ಮನವನ್ನು ಮಹಾಜ್ಞಾನದ ಬೆಳಕಿನಿಂದ ಬೆಳಗಿ ಮಹಾದೇವಿಯನ್ನಾಗಿಸಿ ಕೊಳ್ಳುತ್ತಾನೆ.

ಮನ ಮಹಾದೇವನ ಪರಿಚಯವಿಲ್ಲದ್ದಕ್ಕಾಗಿ ಸಂಕಲ್ಪ ವಿಕಲ್ಪಗಳನ್ನು ಧರಿಸಿ ಮನವೆನಿಸಿತ್ತು . ಅದು ಅಳಿದಲ್ಲಿ ಮಹಾಜ್ಞಾನವೆನಿಸಿತ್ತು . ಅಳಿದ ಭಾವ ತಲೆದೋರಿದಲ್ಲಿ ಕಪಿಲ ಸಿದ್ಧ ಮಲ್ಲಿಕಾರ್ಜುನ ಎನಿಸಿತ್ತು .

**1630**

**ಮನ ಬುದ್ಧಿ ಚಿತ್ತ ಅಹಂಕಾರ ಜ್ಞಾನವೆಂಬ ಪಂಚಕರಣಂಗಳಿರವ**
**ಹೇಳಿಹೆ ಕೇಳಿರಯ್ಯಾ. ಮನವೆಂಬುದು ಸಂಕಲ್ಪ ವಿಕಲ್ಪಕ್ಕೊಳಗಾಯಿತ್ತು.**
**ಇಲ್ಲದುದ ಕಲ್ಪಿಸುವುದೇ ಸಂಕಲ್ಪ, ಇದ್ದುದನರಿಯದುದೆ ವಿಕಲ್ಪ.**
**ಕಲ್ಪಿಸಿ ರಚಿಸುವುದೇ ಬುದ್ಧಿಯಯ್ಯಾ. ಕಲ್ಪಿಸಿ ಮಾಡುವುದದು ಚಿತ್ತವಯ್ಯ.**
**ಮಾಡಿದುದಕ್ಕೆ ನಾನೆಂಬುದು ಅಹಂಕಾರವಯ್ಯಾ.**
**ಮಾಡುವ ನೀಡುವ ಭಾವ ಶಿವಕೃತ್ಯವೆಂದಡೆ, ಜ್ಞಾನವೈರಾಗ್ಯವಯ್ಯಾ.**
**ಅರಿಯದ ಅರಿವು ಮಹಾಜ್ಞಾನ, ಮೋಕ್ಷದ ಇರುವು ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನ ಬುದ್ದಿ ಚಿತ್ತ ಅಹಂಕಾರ ಜ್ಞಾನ ಇವು ಪಂಚ ಕರಣಂಗಳು ಇವುಗಳ ಇರುವು ತನುವಿನಲ್ಲಿ ಬುದ್ದಿ ಚಿತ್ತ ಅಹಂಕಾರ ಮನದಿಂದಲೆ ಜನ್ಮ ಪಡೆದಿವೆ. ಮನ ಜ್ಞಾನದಿಂದ ಜನ್ಮ ಪಡೆದಿದೆ.

ತನುವನ್ನು ಸಂಕಲ್ಪ ವಿಕಲ್ಪಕ್ಕೆ ಒಳಗು ಮಾಡುವುದರಿಂದ ಮನವೆಂದು ಇದಕ್ಕೆ ಹೆಸರು ಬಂದಿದೆ. ಇಲ್ಲದುದನ್ನು ಕಲ್ಪಿಸಿ ತನುವನ್ನು ವಿಕಾರಗೊಳಿಸುತ್ತದೆ. ಇದನ್ನೇ ಸಂಕಲ್ಪವೆಂದು ಕರೆಯುತ್ತಾರೆ. ತನುವಿನಲ್ಲಿ ತನ್ಮಯುವಾದ ಮಹಾಜ್ಞಾನವನ್ನು ಅರಿಯಲು ಮನಕ್ಕೆ ಸಾಧ್ಯವಾಗುವುದಿಲ್ಲ. ಮಹಾಜ್ಞಾನವೆಂದರೆ ಇದ್ದುದು ಇದ್ದ ಸತ್ಯವನ್ನು ಅರಿಯದೆ ಇರುವುದೇ ವಿಕಲ್ಪ ಕಲ್ಪಿಸಿ ರಚಿಸುವುದು ಬುದ್ದಿ. ಕಲ್ಪಿಸಿ ಮಾಡುವುದದು ಚಿತ್ತ. ಮಾಡಿದುದಕ್ಕೆ ನಾನೆಂಬುದು ಅಹಂಕಾರ. ಮಾಡುವ ನೀಡುವ ಭಾವ ಶಿವಕೃತ್ಯವೆಂದಡೆ ಜ್ಞಾನ ವೈರಾಗ್ಯ.

ಅರಿಯದ ಅರಿವು ಮಹಾಜ್ಞಾನ. ಇದು ಮೋಕ್ಷದ ಇರುವು. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ.

**1631**

**ಒಂದನೇಯ ಬೀಜ ಬಿತ್ತಿ ಬೆಳೆಯದಲೆ ಬೆಳೆಯಿತ್ತು.**
**ಎರಡನೇಯ ಬೀಜ ಸೃಷ್ಟ್ಯನ್ಮುಖವಾಯಿತ್ತು. ಮೂರನೇಯ ಬೀಜ ಅಲ್ಲಲ್ಲಿ ಜನಿಸಿತ್ತು.**
**ನಾಲ್ಕನೇಯ ಬೀಜ ಮರ್ತ್ಯದಲ್ಲಿ ಜನಿಸಿ ಅಂಕುರಿಸಿತ್ತು .ಐದನೇಯ ಬೀಜ**
**ಇದ್ದು ಇದ್ದು ಅಂಕುರಿಸದು ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನವೆಂಬ ಬೀಜ ತನುವನ್ನು ಆವರಿಸಿ ಜಾತಿ ಮತ ಪಂಥ, ಧರ್ಮ, ಹೆಣ್ಣು , ಗಂಡು ಎನ್ನುವ ಅಜ್ಞಾನದತ್ತ ತನುವನ್ನು ಕರೆದು ಕೊಂಡು ಹೋಗಿ ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ಮರೆಯಿಸುತ್ತದೆ. ಮನ ತನುವಿನಲ್ಲಿ ಬಿತ್ತಿದ ಈ ಅಜ್ಞಾನದ ಬೀಜ ಟಿಸಿಲೊಡೆದು ಬೆಳೆದದ್ದು ಯಾರಿಗೂ ಕಾಣುವುದಿಲ್ಲ. ಹೀಗಾಗಿ ಅಜ್ಞಾನದ ಹೆಮ್ಮರ ಬೆಳೆಯದಲೆ ಬೆಳೆದಿದೆ. ಇದು ಒಂದನೇಯ ಬೀಜ. ಎರಡನೇಯ ಬೀಜ ಬುದ್ದಿ . ತನುವಿನಲ್ಲಿ ಸೃಷ್ಠಿಯಾದ ಬುದ್ದಿ ಮನದಿಂದ ವಿಕಾಸವಾಗಿದೆ. ತನು ಬುದ್ಧಿವಂತ ಎಂದು ಕರೆಯಿಸಿಕೊಳ್ಳಬಹುದು. ಆದರೂ ಅದು ಸಹಜ ಜ್ಞಾನವಲ್ಲ. ಮೂರನೇಯ ಬೀಜವೇ ಚಿತ್ತ . ವಸ್ತುವಿನ ಮೇಲೆ ಚಿತ್ತ ನೆಟ್ಟಗೆ ಆ ವಸ್ತುವನ್ನು ಪಡೆಯುವವರೆಗೂ ತನು ವಿರಮಿಸುವುದಿಲ್ಲ. ವಸ್ತುವಿನ ಸತ್ಯ ಚಿತ್ತಕ್ಕೆ ಗೊತ್ತಾಗುವುದಿಲ್ಲ. ನಾಲ್ಕನೇಯ ಬೀಜ ಅಹಂಕಾರ ಕಾಯ ಕೈಲಾಸ. ಈ ಕೈಲಾಸದಲ್ಲಿ ಅರಿವು ಎನ್ನುವ ಶಿವ ವಾಸವಾಗಿದ್ದಾನೆ. ಮನ ಎನ್ನುವ ಶಿವೆ ವಾಸವಾಗಿದ್ದಾಳೆ.

ಶಿವಾ ಶಿವೆಯರನ್ನು ಮರೆತ ಮನದಲ್ಲಿ ಅಹಂಕಾರ : ಹುಟ್ಟಿ ಇಡೀ ತನು ವಿಕೃತವಾಗಿ ಅಗ್ನಿಯಿಲ್ಲದೆ ಕತಕತನೇ ಕುದಿಯುತ್ತದೆ. ಐದನೇಯ ಬೀಜ ಜ್ಞಾನ: ಇದು ಇದ್ದಂತೆ ಇರುವ ವಸ್ತು . ಇದಕ್ಕೆ ಹುಟ್ಟಿಲ್ಲ ಸಾವಿಲ್ಲ. ರೂಪವೂ ಇಲ್ಲ. ಕೇಡು ಇಲ್ಲ, ಇದು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ.

**1632**

**ಮೂರನೇಯ ಬೀಜ ಐದನೇಯ ಬೀಜ ಒಂದೇ ನೋಡಯ್ಯಾ .**
**ಅದೇನು ಕಾರಣ ತಂದೆಯೆಂದಡೆ,**
**ಅರಿಯದೆ ಬೆರೆದುದು ಉಭಯ ಕರ್ಮದಲ್ಲಿ ಇದರನುಭವ.**
**ಅರಿದು ಬೆರೆಯದವ ಬರಿಯ ಅರುಹಿನ ಕುರುಹು,**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂದು ಕಾಂಬೆ.**

ಮೂರನೇಯ ಬೀಜ ಚಿತ್ತ , ಐದನೇಯ ಬೀಜ ಮಹಾಜ್ಞಾನ ಇವೆರಡೂ ಒಂದೇ ನೋಡಯ್ಯಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಚಿತ್ತಕ್ಕೆ ಸ್ವಾತಂತ್ರ್ಯವಿಲ್ಲ. ಅದರ ಚಿತ್ತ ಚಿನ್ನದ ಮೇಲೆ ಬಿದ್ದರೆ ಅದನ್ನು ಪಡೆಯುವವರೆಗೆ ತನುವನ್ನು ನಿದ್ರೆ ಮಾಡಲು ಬಿಡುವುದಿಲ್ಲ. ಚಿತ್ತದ ಚಿತ್ತ ಜ್ಞಾನದಲ್ಲಿ ಸಂಗಮವಾಗಿ ಜ್ಞಾನದ ಮೂಲಕ ಚಿನ್ನವನ್ನು ನೋಡಿದರೆ ಅದೊಂದು ಹಳದಿ ಲೋಹ. ಬಣ್ಣ ವಿದ್ದರೆ ಏನಾಯಿತು. ಅದು ಲೋಹವೆ ಎಂದು ಚಿನ್ನವನ್ನು ನೋಡಿದ ಚಿತ್ತ ತನ್ನಗೆ ತಾನೇ ಹೇಳುತ್ತಾ ಉದಾಸೀನ ಮಾಡುತ್ತದೆ.

ಅರಿಯದೆ ಬೆರೆದುದು ಉಭಯ ಕರ್ಮದಲ್ಲಿ ಇದರ ಅನುಭವ. ಅರಿದರಿದು ಬೆರೆಯದಿದ್ದರೆ ಬರಿಯ ಅರುಹಿನ ಕುರುಹು. ಕಪಿಲಸಿದ್ಧಮಲ್ಲಿಕಾರ್ಜುನನೆಂದು ಕಾಂಬೆ.

**1633**

**ಬೀಜವೊಂದರಲ್ಲಿ ಐದು ಬೀಜಂಗಳ ಕಂಡೆ.**
**ಐದನೇಯ ಬೀಜದಿಂದಾರಯ್ಯಲು ಬೀಜವೊಂದೆ ಕಂಡೆ.**
**ಮತ್ತೈದನೇಯ ಬೀಜದಿಂದಾರಯ್ಯಲು ಐದು ಬೀಜವ ಕಂಡೆ.**
**ಇದರಂದವನರುಹಾ, ಕಪಿಲಸಿದ್ಧಮಲ್ಲಿಕಾರ್ಜುನಾ. ||**

ನೋಡಲು ಹೋದರೆ ತನು ಒಂದೇ ಆಗಿ ಕಾಣುತ್ತದೆ. ಒಂದು ತನುವಿನಲ್ಲಿಯೇ ಐದು ಮುಖಗಳು ಇವೆ. ಅವು ಕಣ್ಣು,ಕಿವಿ, ಮೂಗು, ನಾಲಿಗೆ, ಚರ್ಮ ಇವು ಐದೂ ಜ್ಞಾನ ಮುಖಗಳೇ. ಆದರೂ ಐದರ ಕೆಲಸಗಳು ಬೇರೆ ಬೇರೆಯೇ ಆಗಿವೆ. ಈ ಐದು ಮುಖಗಳಿಂದ ಹುಡುಕಲು ಹೋದರೆ ಬೀಜ ಒಂದೇ ಅದು ಬಯಲು. ಆ ಒಂದು ಬೀಜದಿಂದಲೇ ಐದು ಜ್ಞಾನದ ಮುಖಗಳು ಜನ್ಮ ತಳೆದಿವೆ. ಈ ಐದೂ ಜ್ಞಾನಮುಖಗಳು ಬಯಲ ಬೀಜದಿಂದಲೆ ಜನ್ಮ ತೆಳೆದಿವೆ.

ಬಯಲು ಬಯಲನೆ ಬಿತ್ತಿ ಬಯಲು ಬಯಲನೆ ಬೆಳೆದು ಬಯಲು ಬಯಲಾಗಿ ಬಯಲಾಯಿತಯ್ಯಾ ಎನ್ನುತ್ತಾರೆ ಅಲ್ಲಮ ಪ್ರಭುಗಳು.

ಕಾಣಬಾರದ ಬಯಲ ಬೀಜದಿಂದಲೇ ಕಂಡು ಬರುವ ತನು ಹುಟ್ಟಿ ಅದರಲ್ಲಿ ಕಾಣಲು ಬಾರದ ಐದು ಜ್ಞಾನ ಮುಖಗಳಾಗಿ ಜನ್ಮ ತಳೆದಿವೆ. ಕಣ್ಣು ಕಂಡರೂ ಅದರಲ್ಲಿ ಹರಿಯುವ ಅಜ್ಞಾನದ ದೃಶ್ಯವೊಂದು ಕಾಣುವುದಿಲ್ಲ. ಕಣ್ಣಿನಲ್ಲಿಯೇ ಹರಿಯುವ ಮತ್ತೊಂದು ಜ್ಞಾನದೃಶ್ಯ ಕೂಡ ಕಾಣುವುದಿಲ್ಲ. ಹೀಗೆ ಕಿವಿ ಮೂಗು ಚರ್ಮ ನಾಲಿಗೆಯಲ್ಲಿ ಜ್ಞಾನ ಮತ್ತು ಅಜ್ಞಾನದ ಶಬ್ದ, ಸ್ಪರ್ಶ, ರುಚಿ, ವಾಸನೆ ದೃಶ್ಯ ಇವು ಕೂಡ ಕಂಡು ಬರುವುದಿಲ್ಲ.

ಐದು ಮುಖದಲ್ಲಿ ಮತ್ತೈದು ಮಹಾಜ್ಞಾನದ ಮುಖ ಹುಡುಕಿದವನೇ ಬಲು ಜಾಣ. ಇವುಗಳ ಅಂದವನ್ನು ಅರಿತವನು ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ.

**1634**

**ನಾನಾ ಕೃತ್ಯನೇಮಂಗಳಾದವು. ಸತ್ಯ ಶುದ್ಧ ಕಾಯಕ ನೇಮಂಗಳಾದವು.**
**ಖಂಡಿತ ಕಾಯಕ ಅಖಂಡಿತ ಕಾಯಕದವರ ಕಂಡೆವು.**
**ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರಲ್ಲಿ,**
**ಅಂದಿಗೆ ನೂರು ತುಂಬಲು ಒಮ್ಮೆ ಪುರಾತನ ಕಂಡೆವು.**

ಕಾಯದಲ್ಲಿ ಕೃತ್ಯ ಅಕೃತ್ಯ ಎನ್ನುವುದಿಲ್ಲ. ಬರೀ ಜ್ಞಾನ ಮತ್ತು ಆ ಜ್ಞಾನವನ್ನು ತಿಳಿಯುವ ಮನ ಮಾತ್ರ ಇದೆ. ಮನ ಮಹಾಜ್ಞಾನಿಯ ಸಂಬಂಧಿಯಾಗಲಾರದೆ. ಕಾಯದ ಸಂಬಂಧಿಯಾದ ಕಾರಣ ಕಾಯದಲ್ಲಿ ನಾನಾ ಕೃತ್ಯನೇಮಂಗಳಾಗಿವೆ. ಸತ್ಯ ಶುದ್ಧ ಕಾಯಕದ ನೇಮಂಗಳಾದವು.

ಕಾಯ ಒಂದೇ ಆದರೂ ಅದನ್ನು ಖಂಡಿತ ಕಾಯಕ ಅಖಂಡಿತ ಕಾಯಕದ ಮೂಲಕ ಗುರುತಿಸಿದೆವು. ಕಾಯ ಹೀಗೆ ಅಜ್ಞಾನದ ಹಾದಿಯನ್ನು ಹಿಡಿದು ಕಾಯಕ್ಕೆ ನೂರು ವರ್ಷ ತುಂಬಿದಾಗ ಕಾಯದೊಳಗಿದ್ದ ಅರಿವಿನ ದೇವರು ಕಾಯವನ್ನು ಬಿಟ್ಟು ಕೈಲಾಸ ಸೇರುವನು. ಕಾಯದ ಅವಧಿ ಪೂರ್ಣಗೊಂಡು ಅದನ್ನು ಪುರಾತರ ಕಾಯ ಎಂದು ಕಾಯಗಳಿಂದ ಕಾಯ ಕರೆಯಲ್ಪಟ್ಟಿತ್ತು . ಇದೆಲ್ಲ ಕಾಯದಲ್ಲಿಯೇ ಭರಿತವಾದ ಅರಿವಿನ ಮಲ್ಲಯ್ಯನ ಆಟ.

**1635**

**ಹೇಮಾಭಿಧಾನವದು ಮಂದರಾದ್ರಿಯಯ್ಯಾ. ಸಿದ್ಧರವರು ಪರಿಚಾರಕರಯ್ಯಾ.**
**ನಿಮ್ಮ ರಾಣಿ ವಾಸದ ಜನನವಯ್ಯಾ ಈತ ಲೋಕದಲ್ಲಿ.**
**ಅಂದಿಗಯ್ಯ ಸಮಾಧಿಯ ಬಿಡುಗಡೆ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವೆಂಬ ಲೋಕದಲ್ಲಿ ಅರಿವಿನ ದೇವರು ಇದ್ದಾನೆ. ಮನವೆಂಬ ಮಹಾರಾಣಿಯೂ ಇದ್ದಾಳೆ. ಮನವೆಂಬ ಮಹಾರಾಣಿ ಅರಿವಿನ ದೇವರ ಸಂಗ ಮಾಡಿದಾಗ ಕಾಯ ಅರಿವಿನ ರಾಣಿವಾಸ ಎಂದು ಕರೆಯಿಸಿಕೊಳ್ಳುತ್ತದೆ. ಮನ ಅರಿವಿನ ದೇವರಿಗೆ ಮಹಾರಾಣಿಯಾಗುವುದನ್ನು ಬಿಟ್ಟು ಹೇಮ ಮತ್ತು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು ಕಾಯದಲ್ಲಿ ಸೃಷ್ಠಿ ಮಾಡಿಕೊಂಡು ಮಂದರಾದ್ರಿಯಾಗಿ ಮಂದಗತಿಯಲ್ಲಿ ಕಾಯದ ಆಯುಷ್ಯವನ್ನು ನುಂಗಿ ಹಾಕುತ್ತದೆ.

ಕಾಯದಲ್ಲಿ ಸಿದ್ಧರನ್ನು ಸೃಷ್ಠಿ ಮಾಡಿ ಪರಿಚಾರಕರನ್ನು ಸೃಷ್ಠಿ ಮಾಡಿ ಮನವೆಂಬ ಮಹಾರಾಣಿ ಕಾಯದಲ್ಲಿ ವಾಸ ಮಾಡಿದ ತನ್ನ ಅರಿವಿನ ಅರಸನನ್ನೇ ಮರೆತು ಹೋಗಿ ಸಪ್ತ ವ್ಯಸನಗಳಿಗೆ, ಅಷ್ಟಮದಗಳಿಗೆ ಜನ್ಮ ನೀಡಿ ಕೈಲಾಸವನ್ನೇ ಮರೆತು ಹೋಗಿದೆ.

**1636**

**ಬಸವ ಬಾರನು ಬಯಲಳಿದು ಬಯಲಿಗೆ.**
**ಚೆನ್ನ ಬಸವ ಬಾರನು ಬಯಲಳಿದು ಬಯಲಿಗೆ.**
**ನಾ ಬಾರದೆ ಅಯ್ಯಾ , ನಾನೇ ಜಂಗಮ, ನನ್ನ ಗುರುವೆ ಭಕ್ತ**
**ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಮಹಾಜ್ಞಾನವನ್ನು ಸಕಲ ಶರಣರಿಗೂ ತೋರಿದ ಬಸವಣ್ಣ ಚೆನ್ನ ಬಸವಣ್ಣ ಇವರು ಪ್ರಮುಖರಾಗಿದ್ದಾರೆ. ಸಿದ್ಧರಾಮ ಶಿವಯೋಗಿಗಳು . ಕಾಯದಲ್ಲಿ ಸಂಗಮವಾದ ಮಹಾಜ್ಞಾನ ವನ್ನು ಬಸವ, ಚನ್ನಬಸವ ಎಂದು ಕರೆದಿದ್ದಾರೆ. ಇವರು ಬಯಲಳಿದು ಬಯಲಿಗೆ ಬಂದವರು. ನನಗೆ ಶರಣ ಗಣಕ್ಕೆ ಬಯಲನ್ನು ತೋರಿ ಬಯಲಾದವರು.

ಬಸವ ಚೆನ್ನಬಸವ ತೋರಿದ ಬಯಲಿಗೆ ನಾನು ಜಂಗಮವಾದೆ ನನ್ನ ಗುರುವೆ ಭಕ್ತನಾದ. ಇದು ಸತ್ಯ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1637**

**ಕಾಮಿಯ ಕಾಮಿನಿಯ ನೋಡಿದಳೆಂಬಂತೆ,**
**ಉಪಾಧಿಯ ನಿರುಪಾಧಿಲಿಂಗದ ಕೃಪೆಯಾಯಿತೆಂಬಂತೆ ನುಡಿವರಯ್ಯಾ .**
**ಕಾಮಿನಿಯ ದೃಷ್ಠಿ ಕಾಮಿಯಲ್ಲಿರಲು ಕಾಮಿಯೆ ಅಯ್ಯಾ?**
**ಲಿಂಗದ ದೃಷ್ಟಿ ಅಂಗಗುಣದವನಲ್ಲಿರಲು ಆತ ಲಿಂಗಗುಣಿಯೇ,**
**ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯದಲ್ಲಿ ಕಾಮಿನಿಯು ಇದ್ದಾಳೆ. ಕಾಮಿನಿಯ ದೃಷ್ಟಿ ಕಾಮಿನಿ ವಾಸ ಮಾಡಿದ ಕಾಯದ ಮೇಲೆ ; ಅಂದರೆ ಕಾಮಿನಿ ಕಾಮಿನಿಯನ್ನೇ ಮೋಹಿಸಿದಂತೆ ಕಾಮಿನಿ ಕಾಮಿನಿಯನ್ನು ನೋಡಿದರೆ ಕಾಯ ಕೆರಳುವ ಅಗತ್ಯವಿಲ್ಲ. ಕಾಮಿನಿಯ ದೃಷ್ಠಿ ಕಾಮಿನಿಯ ಮೇಲಿರಲು ಆ ಕಾಯವನ್ನು ಕಾಮಿನಿ ಕಾಯ ಎಂದು ಕರೆಯಲು ಬರುತ್ತದೆಯೇ ?

ಉಪಾಧಿಗೆ ನಿರುಪಾಧಿ ಲಿಂಗದ ಕೃಪೆಯಾಯಿತ್ತು ಎಂದು ನಂಬಲು ಸಾಧ್ಯವೇ ? ಲಿಂಗದ ದೃಷ್ಟಿ ಅಂಗ ಗುಣದವನಲ್ಲಿರಲು ಆತನನ್ನು ಲಿಂಗ ಗುಣಿ ಎಂದು ಕರೆಯಲು ಸಾಧ್ಯವೇ. ಸಕಲ ಅಂಗಗಳಲ್ಲಿ ಅರಿವಿನ ಲಿಂಗವಿದೆ. ಅಂಗವನ್ನು ಆವರಿಸಿದ ಮನದ ಅರಿಷಡ್ವರ್ಗಗಳು ಸಪ್ತ ವ್ಯಸನಗಳು ಅಷ್ಟಮದಗಳು, ಕೆಡಬೇಕಾದರೆ ಮನದ ದೃಷ್ಟಿ ಅರಿವಿನ ಲಿಂಗಯ್ಯನ ಮೇಲೆ ಬೀಳಬೇಕು. ಆಗ ಮನವೆ ಘನಮನವಾಗುತ್ತದೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತದೆ.

**1638**

**ಮನ ಮುಂದಿಟ್ಟು ಮಹಾದೇವ ಒಲಿಯನೆಂಬುದು ಪುಸಿಯಯ್ಯಾ .**
**ಮನವಿಲ್ಲದಿರೆ ಮಹಿಮನ ಒಲುಮೆ ನೋಡಯ್ಯಾ .**
**ಮನದಲ್ಲಿಹ ಮಹಾದೇವನ ಮುಂದಿಟ್ಟು ತೋರುವ ಉಭಯಭ್ರಷ್ಟರ ಮೆಚ್ಚುವನೆ,**
**ಮಹಾದೇವ ಕಪಿಲಸಿದ್ಧ ಮಲ್ಲಿಕಾರ್ಜುನಾ ?**

ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ಕಾಯಕ್ಕೆ ಹೇಳುವ ಮಾತಿದು. ನನಗೆ ಮಹಾದೇವ ಒಲಿದನೆಂದು ಮನ ಕಾಯದೊಂದಿಗೆ ಕಾಯಕ್ಕೆ ಹೇಳಿದರೆ ಕಾಯ ಅದನ್ನು ನಂಬಲಾದೀತೆ. ಮೂರ್ಖನೆಂದು ತಿಳಿದು ಉದಾಸೀನ ಮಾಡುತ್ತದೆ.

ಮನ ಮಹಾದೇವನಿಗೆ ಶರಣಾಗತನಾದಾಗ ಮನವನ್ನು ಮಹಾದೇವ ತನ್ನಂತೆ ಮಾಡಿಕೊಳ್ಳುತ್ತಾನೆ. ಇದು ಮನ ಕಾಯ ಮಹಾದೇವನ ಒಳಗೆ ನಡೆಯುವ ಕಾಯಕ ಇಂತಹ ಸುಂದರವಾದ ಅರಿವಿನ ಕಾಯದ ಸುದ್ದಿಯನ್ನು ಮತ್ತೊಂದು ಕಾಯದ ಮುಂದೆ ಹೇಳಿದರೆ ಕಾಯ ನಂಬುವುದಿಲ್ಲ. ಪುಸಿ ಎಂದು ತಿಳಿದು ಉದಾಸೀನ ಮಾಡುತ್ತದೆ. ಮನಕ್ಕೆ ಮಹಾದೇವನ ಪರಿಚಯವಾದರೆ ಅದು ಮನವಾಗಿ ಉಳಿಯುವುದಿಲ್ಲ. ಹೀಗಾಗಿ ಈ ಸುದ್ದಿಯನ್ನು ಮತ್ತೊಂದು ಕಾಯಕ್ಕೆ ಹೇಳಲು ಬರುವುದಿಲ್ಲ. ಹೇಳು ವಡೆ ಮನವಿಲ್ಲದಂತೆ ಆಗುತ್ತದೆ.

ಮನದಲ್ಲಿರುವ ಮಹಾದೇವನನ್ನು ಮನ ಮುಂದಿಟ್ಟು ತೋರುವ ಉಭಯ ಭ್ರಷ್ಟರನ್ನು ಮೆಚ್ಚುವುದಿಲ್ಲ.

**1639**

**ಮನವಿದ್ದಲ್ಲಿ ಮಹಾದೇವನಿಪ್ಪ. ಮನವಿದ್ದಲ್ಲಿ ಮಹಾದೇವನಿಲ್ಲವೋ ಅಯ್ಯಾ ?**
**ಯದ್ರಾರ್ಥವಾಗಿ ಬಂದವರು ಬಯಲಲ್ಲಿ ಬಯಲ ಬಿಟ್ಟು ಬಯಲಾರಿಸುವಂತೆ,**
**ಮನೋವ್ಯಾಪಾರಕ್ಕದರಂತೆ ಇಪ್ಪ ನೋಡಾ. ಕಪಿಲಸಿದ್ಧ ಮಲ್ಲಿಕಾರ್ಜುನ.**

ಮನದಲ್ಲಿ ಮಹಾದೇವನಿದ್ದಾನೆ. ಮನದಲ್ಲಿ ಮಹಾದೇವನಿಲ್ಲ. ಮನ ತನುವಿನೊಳಗೆ ತನ್ಮಯವಾದ ಅರಿವು ಎನ್ನುವ ಗುರುದೇವನನ್ನು ಕಂಡುಕೊಂಡಾಗ ಆ ಗುರುದೇವನೇ ಮಹಾದೇವನಾಗಿ ಮನಕ್ಕೆ ದರುಶನವನ್ನು ನೀಡುತ್ತಾನೆ. ಹೀಗಾಗಿ ಮನವಿದ್ದಲ್ಲಿ ಮಹಾದೇವನಿದ್ದಾನೆ. ಮನವಿದ್ದಲ್ಲಿ ಮಹಾದೇವನಿಲ್ಲ ಎಂದು ಸಿದ್ಧರಾಮ ಶಿವಯೋಗಿಗಳು ಬೆಡಗಿನಿಂದ ಮಾತನಾಡಿದ್ದಾರೆ.

ಯತಾರ್ಥವಾಗಿ ನೋಡಿದರೆ ಮನ ಬಯಲು; ಮಹಾದೇವನೂ ಬಯಲು. ಬಯಲು ಬಯಲ ಬಿಟ್ಟು ಬಯಲಾರಿಸುವಂತೆ.

ಮನೋವ್ಯಾಪಾರಕ್ಕೆ ಮಹಾದೇವ ವ್ಯಾಪಾರಿಯಾಗಿರುವನು. ಕಾಣಿ ಗೆಲ್ಲ ಅದ್ದ ಗಾಣಿಗೆ ಸೋಲ ನೋಡಾ ನಮ್ಮ ಮಹಾದೇವಶೆಟ್ಟಿ ಎನ್ನುವ ಅಣ್ಣ ಬಸವಣ್ಣನ ಸೂತ್ರದಂತೆ ತನುವಿನಲ್ಲಿ ತನ್ಮಯವಾದ ಮಹಾದೇವ ಮನವೆಂಬ ವ್ಯಾಪಾರಿಗೆ ಸೋಲನು. ಆ ವ್ಯಾಪಾರಿಯನ್ನು ಗೆಲ್ಲನು.

**1640**

**ಘಟವ ಮಾಡಿದವ ಘಟದಲ್ಲಿರದಂತೆ,**
**ಭೂಷಣವ ಮಾಡಿದವ ಭೂಷಣದಲ್ಲಿರುವಂತೆ,**
**ಕೃಷಿಯ ಮಾಡಿದವ ಕೃಷಿಯಲ್ಲಿರದಂತೆ, ತೈಲವ ತೆಗೆದವ ತೈಲದಲ್ಲಿರದಂತೆ,**
**ಮನೆಯ ಕಟ್ಟಿದವ ಮನೆಯಲ್ಲಿರದಂತೆ,**
**ಪಿಂಡವ ಮಾಡಿದವ ಪಿಂಡದೊಳಿರದಂತೆ,**
**ಬ್ರಹ್ಮಾಂಡವ ರಚಿಸಿದವ ಬ್ರಹ್ಮಾಂಡದೊಳಿರದಂತೆ,**
**ಅರಿಯದ ಮನುಜರ ಅರುಹಿನ ಮನೆಯೊಳಪ್ಪ ನೋಡಾ,**
**ಕಪಿಲಸಿದ್ಧಮಲ್ಲೇಂದ್ರನೆಲೆ ಮಲ್ಲಶೆಟ್ಟಿ.**

ಕಾಯವ ಮಾಡಿದವನು ಕಾಯದೊಳಇದ್ದರೂ ಕಾಯಕ್ಕೆ ಕಾಯ ಮಾಡಿದವನ ಅರಿವಿಲ್ಲ. ಕಾಯವನ್ನು ಆವರಿಸಿದ ಮನ ಕಾಯ ಮಾಡಿ ಕಾಯ ಮಾಡಿದವನನ್ನು ಕಂಡು ಆ ಕಾಯದಲ್ಲಿಯೇ ಸಂಗಮವಾದ ಸುಳುಹು ಪಡೆಯುವುದಕ್ಕಾಗಿ ಮನವನ್ನು ಸೃಷ್ಠಿ ಮಾಡಿ ಕಾಯದಲ್ಲಿಯೇ ಇಟ್ಟ. ಕಾಯದೊಳಗೆ ಸಂಗಮವಾದ ಅರಿವಿನ ಮಲ್ಲಯ್ಯನನ್ನು ಮನ ಒಮ್ಮೆಯೂ ನೋಡಲಿಲ್ಲ.

ಕಾಯವೆಂಬ ಮನೆಯನ್ನು ಕಟ್ಟಿದ ಮನೆಯೊಡೆಯ ಮನೆಯಲ್ಲಿದ್ದರೂ ಕಾಯವನ್ನು ಆವರಿಸಿದ ಮನ ಮನೆಯೊಡೆಯನನ್ನು ಒಮ್ಮೆಯೂ ನೋಡದಿದ್ದರೆ ಅಂತಹ ಮನವನ್ನು ಮಹಾದೇವನ ದಾಸ ಎಂದು ಕರೆಯಲು ಸಾಧ್ಯವೇ ?

ಅರಿಯದ ಮನವುಳ್ಳ ಮನುಜರು ಅರುಹಿನ ಮನೆಯೊಳಗೆ ಇರುವ ಮನೆಯೊಡೆಯನನ್ನು ಒಮ್ಮೆಯೂ ನೋಡರು ನೋಡಾ ಕಪಿಲಸಿದ್ಧ ಮಲ್ಲೇಂದ್ರ . ಬ್ರಹ್ಮಾಂಡವನ್ನು ರಚಿಸಿದ ಮಹಾದೇವ ಇಡೀ ಬ್ರಹಾಮಂಡವನ್ನು ಕಾಯದೊಳಗಿಟ್ಟು ಹೊಲಿದು ಆ ಕಾಯದೊಳಗೆ ಸಂಗಮವಾಗಿದ್ದಾನೆ.

ಅರಿವಿನ ಮನುಜರಾದರೆ ಈತನನ್ನು ಅರಿತೇ ಅರಿಯುತ್ತಾರೆ.

**1641**

**ಜಲದಲ್ಲಿಪ್ಪ ಜಲವ ನೋಡಾ. ಮನೆಯಲ್ಲಿಪ್ಪ ಮನೆಯ ನೋಡಾ.**
**ಅಹಂಕಾರದಲ್ಲಿಪ್ಪ ಅಹಂಕಾರವ ನೋಡಾ. ಇವೆಲ್ಲ ಬಯಲಲ್ಲಿ ನಿಂದಡೆ ತೋರ್ಪವು.**
**ಬಯಲಲ್ಲಿ ನಿಂದು ಬಯಲ ಬಯಲ ಮಹಾ ಬೆಳಗಿನ ಬೆಳಗ ನೋಡಬಲ್ಲಡೆ,**
**ಶರಣ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲದಲ್ಲಿ ಮತ್ತೊಂದು ಜಲವಿದೆ. ಅದನ್ನು ನೋಡುವುದಕ್ಕೆ ಅರಿವಿನ ಕಣ್ಣುಗಳು ಬೇಕು. ಒಡಲೆನ್ನುವ ಒಡಲಲ್ಲಿ ಮತ್ತೊಂದು ಒಡಲಿದೆ. ಅದನ್ನು ನೋಡಲು ಒಡಲನ್ನು ಆವರಿಸಿದ ಮನಕ್ಕೆ ಶಕ್ತಿ ಬೇಕು. ಒಡಲಲ್ಲಿ ಅಹಂಕಾರವಿದೆ. ಅದನ್ನು ಬಳಕೆ ಮಾಡುವ ಅಹಂಕಾರದ ಮನವಿದೆ. ಆ ಮನವೇ ಘನಮನವಾಗಿ ಅಹಂಕಾರವನ್ನು ನೋಡದೆ, ಇವೆಲ್ಲ ಬಯಲಲ್ಲಿ ನಿಂತು ನೋಡಿದಡೆ ಕಾಣುವವು.

ಬಯಲಲ್ಲಿ ನಿಂತು ಮಹಾಬೆಳಗಿನ ಬಯಲನ್ನು ಬೆಳಗಿಂಗೆ ಬೆಳಗಾಗಿ, ಒಡಲು ತಾಗದೆ ಒಡಲೊಳಗೆ ಇದ್ದು ಒಡಲನ್ನು ಬೆಳಗುವ ಬೆಳಗ ನೋಡಬಲ್ಲಡೆ ಆತ ಶರಣ ಆತ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1642**

**ರೂಪಾದನುಭವಃ ಎಂಬುದು ಸಟೆಯೇನಯ್ಯಾ ?**
**ಸಗುಣಂ ನಿರ್ಗುಣಾತ್ತನ್ನ ಎಂಬುದು ಸಟೆಯೆ?**
**ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವೆ.**

ನಿರೂಪ ಚುಳುಕಾಗಿ ರೂಪವಾಗಿದೆ. ಈ ರೂಪದಲ್ಲಿ ಅರುವನ್ನು ಅರಿಯದ ಮನವೆಂಬ ನಿರೂಪ ಒಂದು ರೂಪವನ್ನು ಆವರಿಸಿಕೊಂಡಿದೆ. ರೂಪಕ್ಕೆ ಕಾರಣವಾಗಿ ರೂಪವನ್ನು ಬೆಳಗಿಂಗೆ ಬೆಳಗಾಗಿ ಬೆಳಗುವ ನಿರೂಪದ ಮಹಾಜ್ಯೋತಿಯೊಂದು ರೂಪದಲ್ಲಿಯೇ ಸಂಗಮವಾಗಿದೆ.

ರೂಪದಲ್ಲಿ ಸಂಗಮವಾದ ಬೆಳಗುವ ನಿರೂಪ ಜ್ಯೋತಿಯನ್ನು ರೂಪವನ್ನು ಆವರಿಸಿದ ಮನವೆಂಬ ನಿರೂಪದಿಂದಲೇ ಕಂಡುಕೊಳ್ಳಬೇಕು ಎಂಬುದು ದಿಟ. ಸಟೆಯಲ್ಲ!

ರೂಪದಲ್ಲಿ ಸಗುಣವು ಇದೆ. ನಿರ್ಗುಣವೂ ಇದೆ. ರಾಜಸ, ತಾಮಸ ಗುಣವೂ ಇದೆ. ಸಗುಣ ಎಂದರೆ ಸಾತ್ವಿಕ ಗುಣ. ಈ ಮೂರು ಗುಣಗಳು ಅಂದರೆ ಸಾತ್ವಿಕ, ರಾಜಸ, ತಾಮಸ . ಈ ಮೂರೂ ಗುಣಗಳಿಗೆ ಅತೀತನಾದವನೆ ನಿಗುರ್ಣಿಯು. ಇದು ಸತ್ಯ . ಈ ನಿರ್ಗುಣಿ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ . ಈತ ಪ್ರತಿರೂಪದಲ್ಲಿ ನಿರೂಪನಾಗಿ ಸಂಗಮವಾಗಿದ್ದು ರೂಪಕ್ಕೆ ತಾಗದಂತೆ ರೂಪವನ್ನು ಬೆಳಗುತ್ತಿದ್ದಾನೆ.

**1643**

**ಅನುಭವತ್ರಯ ಒಂದಾದುದು ಅನುಭವವಯ್ಯಾ.**
**ಒಂದಕ್ಕೆ ಮೂರೆಂಬುದು ಶೃತಿಸಿದ್ಧ. ''ತ್ರಯೋ ಗುಣಾಸ್ತ್ರೀಣಿ ವಿಪೂಂಷಿ''**
**ಕಪಿಲಸಿದ್ಧ ಮಲ್ಲಿಕಾರ್ಜುನನ ಮಹಾಕೀಲಿನಲ್ಲಿ.**

ಪ್ರತಿ ಕಾಯದಲ್ಲಿ ಸಾತ್ವಿಕ , ರಾಜಸ, ತಾಮಸ ಎಂಬ ಮೂರು ಗುಣಗಳಿವೆ. ಪ್ರತಿ

ಕಾಯವನ್ನು ಆವರಿಸಿದ ಮನಕ್ಕೆ ಈ ಅನುಭವ ಆಗುತ್ತದೆ.

ಕಾಯವನ್ನು ಆವರಿಸಿದ ಮನದಿಂದ ಈ ಮೂರೂ ಗುಣಗಳನ್ನು ಅರಿತರಿತು. ಮೂರೂ ಗುಣಗಳಿಗೆ ಅತೀತವಾದ ನಿರ್ಗುಣದಲ್ಲಿ ಕಾಯವನ್ನು ಆವರಿಸಿದ ಮನ ಸಂಗಮವಾಗುವುದನ್ನು ಮನದಿಂದಲೇ ಅರಿಯಬೇಕು. ಇದು ಮನ ನಿರ್ಗುಣಕ್ಕೆ ಹೋಗುವ ಮಹಾ ಸೂತ್ರ . ನಿರ್ಗುಣವಾದ ಮನವೇ ಮಹಾದೇವ ಎಂದು ಕರೆಯಿಸಿಕೊಳ್ಳುತ್ತದೆ.

**1644**

**ಸೂಕ್ಷ್ಮವದು ಮೊದಲಲ್ಲೆ ನಿರ್ವಯಲವಯ್ಯಾ.**
**ಸ್ಥೂಲವದು ಅಂದಂದಿಗೆ ನಿರ್ಮಲ ನೋಡಯ್ಯಾ.**
**ಅರವೇಷಿ ತಿರುಗುವ ಊರ ತೊಳೆಯಲೆ ಬೇಕು. ಅಂತರಂಗ ಬಹಿರಂಗದಲ್ಲಿ,**
**ನಿರ್ಮಲ ಸದಾಚಾರಣೆಯೆ ಬೇಕು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನುವೆಂಬ ಸೂಕ್ಷ್ಮ ಕಾಯ ಬಯಲು. ಸ್ಥೂಲ ಕಾಯ ಅಂದಂದಿಗೆ ನಿರ್ಮಲ ನೋಡಯ್ಯಾ. ಕಾಯವನ್ನು ಆವರಿಸಿದ ಸೂಕ್ಷ್ಮಕಾಯ ಕಾಯವನ್ನು ಊರೂರು ಅಲೆಯಿಸುವ ಅಲೆಮಾರಿಯದು. ಈ ಮನವೆಂಬ ಮಹಾಮಾರಿಯನ್ನು ಕಾಯದಲ್ಲಿಯೇ ಸಂಗಮವಾದ ಅರಿವಿನ ಜಲದಿಂದ ತೊಳೆಯಲೇಬೇಕು.

ಅಂತರಂಗ ಬಹಿರಂಗದಲ್ಲಿ ಸದಾಚಾರಣೆಯೇ ಬೇಕು. ಮನ ಅರಿವಿನಲ್ಲಿ ನಿರ್ಮಲವಾಗುತ್ತದೆ. ಕಪಿಲಸಿದ್ಧ ಮಲ್ಲಿಕಾರ್ಜುನನಾಗುತ್ತದೆ.

**1645**

**ನಿರ್ಮಲ ಕಮಲವದು ಸದ್ಗತಿಗೆ ಸಾಧನ ನೋಡಾ.**
**ನಿರ್ಮಲ ಕರ್ಮವನು ಜ್ಞಾನಕ್ಕೆ ವರ್ಧನ ನೋಡಾ.**
**ನಿರ್ಮಲ ಕರ್ಮವದು ಕಪಿಲಸಿದ್ಧ ಮಲ್ಲಿಕಾರ್ಜುನನ, ಕೂಡುವ ಕೂಟ ನೋಡಾ.**

ಕಾಯದಲ್ಲಿ ಒಂದು ನಿರ್ಮಲ ಕಾಯವಿದೆ. ಕಾಯವನ್ನು ಸದಾ ಕರ್ಮದಲ್ಲಿ ತೊಡಗಿಸುವ ಅಕಾಯವೊಂದು ಸ್ಥೂಲ ಕಾಯವನ್ನು ಆವರಿಸಿದೆ.

ನಿರ್ಮಲ ಕಾಯ ಸದ್ಗತಿಗೆ ಸಾಧನವಾದರೆ ಸದಾ ಕರ್ಮದಲ್ಲಿ ತೊಡಗಿಸಿರುವ ಸ್ಥೂಲ ಕಾಯವನ್ನು ತನಗಾಗಿ ಬಳಕೆ ಮಾಡಿಕೊಳ್ಳುವ ಕರ್ಮ ಮಾಡುವ ಅಕಾಯ ನಿರ್ಮಲ ಅಕಾಯದಲ್ಲಿ ಸಂಗಮವಾದರೆ ಅದು ಪರಿಪೂರ್ಣ ಕಾಯವೆಂದು; ನಿರ್ಮಲ ಕಾಯವೆಂದು ಮಹಾಜ್ಞಾನ ಕಾಯವೆಂದು ಕರೆಯಿಸಿಕೊಳ್ಳುತ್ತದೆ. ನಿರ್ಮಲ ಕರ್ಮವದು ಕಪಿಲಸಿದ್ಧಮಲ್ಲಿಕಾರ್ಜುನನ ಕೂಡುವ ಕೂಡದ ಅಗಲದ ಕೂಟ.

**1646**

**''ಸರ್ವಂ ಶಿವಮಯಂ ಜಗತ್'' ಎಂಬ ವಾಕ್ಯನರಿಯದೆ ಹೋಗದಿರಾ ಮನವೇ.**
**''ಪಂಚತತ್ವರೂಪಾಯ'' ಎಂಬ ಶೃತಿವಾಕ್ಯವ ಮರೆದೆಯಲ್ಲಾ ಮನವೆ.**
**''ಲಿಂಗಮಧ್ಯೆ ಜಗತ್ಸರ್ವಂ'' ಎಂಬ ಮಹಾವಾಕ್ಯಂವ ಮರೆದೆಯಲ್ಲಾ ಮನವೆ.**

**ರಜ್ಜು ಸರ್ಪ ನ್ಯಾಯ- ರಜ್ಜುವ ಸರ್ಪವೆಂದು ನಂಬಿ,**
**ಕಪಿಲಸಿದ್ಧ ಮಲ್ಲಿಕಾರ್ಜುನಂಗೆ ಬೇರೆಯಾದೆಯಲ್ಲಾ ಮನವೆ.**

ಕಾಯವನ್ನು ಆವರಿಸಿದ ಎಲೆ ಮನವೆ ಹಗ್ಗವನ್ನು ನೋಡಿ ಹಾವೆಂದು ತಿಳಿದು ಕಾಯಕ್ಕೆ ನಡುಕವುಂಟು ಮಾಡಿದೆಯಲ್ಲ ಎಲೆ ಮನವೆ, ಕಾಯ ಪಂಚತತ್ವರೂಪದಿಂದ ಕೂಡಿದೆ ಎಂದು ಹೇಳುವ ಶೃತಿವಾಕ್ಯವನ್ನು ಮರೆದೆಯಲ್ಲ ಮನವೆ. ಕಾಯದಲ್ಲಿ ಬಯಲೆ ಅರಿವಾಗಿ ಸಂಗಮವಾಗಿ ಗುರುವೆಂದು ಕರೆಯಿಸಿಕೊಂಡಿದೆ. ಸಾಕ್ಷಾತ್ ಅರಿವಿನ ಲಿಂಗಯ್ಯನೆಂದೆ ಕರೆಯಿಸಿಕೊಂಡಿದೆ. ಇಂತಹ ಲಿಂಗದ ಗರ್ಭದಲ್ಲಿ ಸರ್ವ ಜಗತ್ತು ಅಡಗಿದೆ ಎಂಬ ಮಹಾವಾಕ್ಯವನ್ನೇ ಮರೆತೆಯಲ್ಲಾ ಮನವೆ. ಸರ್ವಂ ಶಿವಮಯಂ ಜಗತ್ತು ಎಂಬ ವಾಕ್ಯವನ್ನು ಅರಿಯದೆ ಹೋಗದಿರಾ ಮನವೇ. ಕಾಯದಲ್ಲಿಯೆ ಸಂಗಮವಾದ ಅರಿವು ಎನ್ನುವ ಕಪಿಲಸಿದ್ಧ ಮಲ್ಲಿಕಾರ್ಜುನಂಗೆ ಬೇರೆ ಯಾದೆಯಲ್ಲ ಮನವೆ.

**1647**

**ನಿರ್ಮಲ ಕರ್ಮವದು ನವರಂಧ್ರ ಪ್ರಕ್ಷಾಲನಂ. ನಿರ್ಮಲ ಕರ್ಮವದು ವಸ್ತ್ರನಿರ್ಮಲತ್ವಂ.**
**ನಿರ್ಮಲ ಕರ್ಮವದು ಕಪಿಲಸಿದ್ಧ ಮಲ್ಲಿಕಾರ್ಜುನನ ಮನದಿಷ್ಟಂ .**

ನಿರ್ಮಲ ಕರ್ಮವೆಂದರೆ ಕಾಯವನ್ನು ಕಾಯದಿಂದಲೇ ತೊಳೆದು ಕಾಯದ ನವರಂಧ್ರಗಳ ಅಜ್ಞಾನವನ್ನು ಸುಟ್ಟು ಅದರ ಭಸ್ಮವನು ಕಾಯವೇ ಧಾರಣೆ ಮಾಡಿಕೊಂಡು ಕಾಯದಲ್ಲಿಯೇ ಸಂಗಮವಾದ ಅಕಾಯಕ್ಕೆ ನಿರ್ಮಲ ವಸ್ತ್ರವನ್ನು ಧರಿಸಿ ಸಂಗಮವಾಗುವುದು.

ಕಾಯವನ್ನು ಆವರಿಸಿದ ಮನವೆಂಬ ಅಕಾಯವನ್ನು ಕಾಯದಲ್ಲಿಯೇ ಸಂಗಮವಾದ ಅರಿವಿನ ಅಕಾಯದಲ್ಲಿ ಸಂಗಮಗೊಳಿಸುವ ಕಾಯಕವೇ ನಿರ್ಮಲವಾದ ಕರ್ಮ. ಈ ಕಾಯಕ ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನ ಮನದಿಷ್ಟದಿಂದ ನೆರವೇರುವುದು.

**1648**

**ಎಲ್ಲರಿಗೆರಡು ಕಣ್ಣೆಂಬುದ ಲೋಕವೆಲ್ಲ ಬಲ್ಲದು. ಎನಗೆ ಮೂರು ಕಣ್ಣೆಂಬುದ**
**ಲೋಕವೆಲ್ಲ ಬಲ್ಲದು. ಎರಡು ಕಣ್ಣಿನವನಲ್ಲ, ಮೂರು ಕಣ್ಣಿನವನಲ್ಲ.**
**ಒಂದೆ ಕಣ್ಣು ನೋಡಾ, ಅಲ್ಲಮ ಕಪಿಲಸಿದ್ಧ ಮಲ್ಲಿಕಾರ್ಜುನ.**

ಸಿದ್ಧರಾಮ ಶಿವಯೋಗಿಗಳು ಅಲ್ಲಮ ಪ್ರಭುಗಳಿಗೆ ಕೆಳಗಿನ ಸೂತ್ರವನ್ನು ವಿವರಿಸಿ ಹೇಳಿದ್ದಾರೆ. ಎಲ್ಲರಿಗೆ ಇರುವುದು ಎರಡು ಕಣ್ಣು. ಇದನ್ನು ಲೋಕವೂ ಬಲ್ಲದು. ಹಾಗೆಯೇ ಸಿದ್ಧರಾಮ ಶಿವಯೋಗಿಗಳಿಗೆ ಇರುವುದು ಮೂರು ಕಣ್ಣು ಎಂಬುದನ್ನು ಲೋಕವೆಲ್ಲ ಬಲ್ಲುದು.

ಎರಡು ಕಣ್ಣಿನವನಲ್ಲ ಲೋಕಬಲ್ಲಂತೆ ನಾನು ಮೂರು ಕಣ್ಣಿನವನೂ ಅಲ್ಲ. ನನಗೆ ಇರುವುದು ಒಂದೇ ಕಣ್ಣು ನೋಡಾ ಎಂದು ಬೆಡಗಿನಿಂದ ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು ಅಲ್ಲಮರಿಗೆ.

ಎಲ್ಲರಿಗೂ ಎರಡು ಕಣ್ಣುಂಟು ಆದರೆ ಎರಡೂ ಕಣ್ಣುಗಳ ದೃಶ್ಯ ಒಂದೇ. ಇದು ಲೋಕಕ್ಕೆ ಗೊತ್ತಿರುವ ಅನುಭವದ ಮಾತು. ಅಂದರೆ ಎರಡು ಕಣ್ಣುಗಳಿದ್ದರೂ ಎರಡೂ ಕಣ್ಣುಗಳಿಂದ ನೋಡುವ ದೃಶ್ಯ ಒಂದೇ ಆದಂತಾಯುತ್ತಲ್ಲವೆ. ಹೀಗಾಗಿ ಒಂದೇ ಕಣ್ಣು.

ಕಣ್ಣು ಒಂದೇ ಆದರೂ ಅದರಲ್ಲಿ ಎರಡು ದೃಶ್ಯಗಳಿವೆ. ಒಂದು ನಾನು ಎನ್ನುವ ಮನದ

ದೃಶ್ಯ ಇನ್ನೊಂದು ಅರಿವು ಎನ್ನುವ ಮಹಾಜ್ಞಾನದ ದೃಶ್ಯ .

ನಾನು ಎನ್ನುವ ಮನದ ಅಜ್ಞಾನದ ದೃಶ್ಯವನ್ನು ಅರಿವು ಎನ್ನುವ ಜ್ಞಾನ ದೃಶ್ಯದಲ್ಲಿ ಬೆರೆಸಿ ಸುಟ್ಟಿದ್ದಾರೆ ಸಿದ್ಧರಾಮ ಶಿವಯೋಗಿಗಳು ಹೀಗಾಗಿ ಇವರು ಖಚಿತವಾಗಿ ಅಲ್ಲಮರಿಗೆ ಹೇಳಿದ್ದಾರೆ. ನನಗಿರುವುದು ಒಂದೇ ಕಣ್ಣು ಒಂದೇ ಜ್ಞಾನದ ದೃಶ್ಯ . ಇದು ಅದ್ಭುತವಾದ ಅರಿವಿನ ಸೂತ್ರ . ಜಗದ ಸಕಲ ಕಣ್ಣುಗಳು ಈ ಕಾಯಕವನ್ನು ಮಾಡಲೇಬೇಕಾಗಿದೆ.

### 1649

**ಕಣ್ಣೊಂದರಲ್ಲಿ ಮುಕ್ಕಣ್ಣನ ಬಣ್ಣವಡಗಿಹುದು. ಆ ಬಣ್ಣದಲ್ಲಿ ಚಿದ್ಬಣ್ಣ ಚಿತ್ರಗಳಾದವು.**
**ಆ ಚಿತ್ರಗಳಿರುವ ಚೆನ್ನಬಸವಣ್ಣನೇ ಬಲ್ಲನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಣ್ಣೊಂದರಲ್ಲಿ ಮುಕ್ಕಣ್ಣನ ಅರಿವಿನ ಮಹಾಜ್ಞಾನದ ಬಣ್ಣವು ಅಡಗಿದೆ. ಆ ಬಣ್ಣದಲ್ಲಿ ಚಿದ್ಬಣ್ಣ ಚಿತ್ರಗಳಾದವು. ಆ ಚಿತ್ರಗಳ ಇರುವನ್ನು ಚೆನ್ನಬಸವಣ್ಣನೆ ಬಲ್ಲನಯ್ಯಾ ಎಂದು ಹೇಳಿದ್ದಾರೆ. ಸಿದ್ಧರಾಮ ಶಿವಯೋಗಿಗಳು. ಕಣ್ಣುಗಳು ಎರಡಾದರೂ ಕಂಡು ಬರುವ ಅಜ್ಞಾನದ ದೃಶ್ಯ ಒಂದೆ. ಈ ದೃಶ್ಯಕ್ಕೆ ವಸ್ತುವಿನ ಸತ್ಯವನ್ನು ನೋಡಲು ಬರುವುದಿಲ್ಲ. ಹೀಗಾಗಿ ಅಲ್ಲಮ ಪ್ರಭುಗಳು ನೋಡುವುದನ್ನು ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ ನೋಡುವುದನ್ನು ನೋಡುವಡೆ ಕೂಡಲಿಲ್ಲ ಅಗಲಲಿಲ್ಲ ಕೂಡದ ಅಗಲದ ಕೂಟದ ಸುಖ ವನ್ನು ಗುಹೇಶ್ವರ ನಿಮ್ಮ ಶರಣ ಮಾತ್ರ ಬಲ್ಲ.

ಕಲ್ಲಲ್ಲಿ ಗಂಡು ದೇವರನ್ನು ಕೆತ್ತಿದರೇನು ಹೆಣ್ಣು ದೇವರನ್ನು ಕೆತ್ತಿದರೇನು; ಅದು ಕಲ್ಲು ಎಂದು ನೋಡುವ ಶಕ್ತಿ ಕಣ್ಣಿಂದ ಹೊರ ಸೂಸುವ ಅಜ್ಞಾನದ ದೃಶ್ಯ ಕಳೆದುಕೊಂಡಿದೆ. ಹೀಗಾಗಿ ಆ ಕಣ್ಣು ಕಲ್ಲಲ್ಲಿರುವ ಚಿತ್ರವನ್ನು ನೋಡಿ ದೇವರೆಂದು ದೇಹಕ್ಕೆ ಆದೇಶ ನೀಡಿ ಕೈ ಮುಗಿಯುವಂತೆ ಮಾಡುತ್ತದೆ.

ಹಳದಿ ಲೋಹದ ಆಭರಣಗಳನ್ನು ಚಿನ್ನವೆಂದು ಭ್ರಮಿಸಿ ಹೆಸರಿಟ್ಟು ಅದಕ್ಕೆ ಮೋಹಗೊಂಡು ದೇಹವನ್ನು ಹಗಲಿರುಳು ದುಡಿದು ಖರೀದಿಸಿ ಶ್ರೀಮಂತನ ಹಣೆಪಟ್ಟಿ ದೇಹಕ್ಕೆ ಕಟ್ಟುತ್ತದೆ. ಕಳುವು ಮಾಡಲು ಸೂಚನೆ ನೀಡಿ ದೇಹಕ್ಕೆ ಕಳ್ಳನ ಹಣೆಪಟ್ಟಿಯನ್ನು ಕಟ್ಟುತ್ತದೆ. ಚಿನ್ನದ ಆಭರಣಗಳಿಗಾಗಿ ಕೊಲೆ ಮಾಡಿ ದೇಹಕ್ಕೆ ಕೊಲೆಗಡುಕನ ಪಟ್ಟ ಕಟ್ಟುತ್ತದೆ. ಯುದ್ಧ ಮಾಡಿ ರಾಜ ಪ್ರಧಾನಿ ಸೈನಿಕರನ್ನು ಕೊಂದು ಆಭರಣ ಪಡೆದು ದೇಹಕ್ಕೆ ಅರಸನ ಪಟ್ಟ ಕಟ್ಟುತ್ತದೆ. ಇದು ನೋಡುವುದನ್ನು ನೋಡಲು ಬಾರದ ಅಜ್ಞಾನದ ಕುರುಡು ಕಣ್ಣಿನ ಕೆಲಸ.

ಕಣ್ಣಲ್ಲಿಯೆ ಇರುವ ಅರಿವು ಎನ್ನುವ ಗುರುದೇವನ ಕಣ್ಣೊಂದಿದೆ. ಈ ಕಣ್ಣನ್ನು ಶರಣರು ಮುಕ್ಕಣ್ಣನ ಕಣ್ಣು ಎಂದು ಕರೆದಿದ್ದಾರೆ. ಈ ಕಣ್ಣಿನ ದೃಶ್ಯ ನೋಡುವುದನ್ನೇ ನೋಡುತ್ತದೆ. ಕಲ್ಲಲ್ಲಿ ಯಾವ ದೇವರನ್ನು ಕೆತ್ತಿದರೇನು ಅದು ಕಲ್ಲೆಂದೆ ನೋಡಿ ಉದಾಸೀನ ಮಾಡಿ ಕೈ ಮುಗಿಯುವುದಿಲ್ಲ. ಆಭರಣಗಳನ್ನು ನೋಡಿ ಹಳದಿ ಬಣ್ಣವುಳ್ಳ ಲೋಹವೆಂದು ತಿಳಿದು ಉದಾಸೀನ ಮಾಡುತ್ತದೆ. ಖರೀದಿ ಮಾಡುವುದಿಲ್ಲ. ಕಳುವೂ ಮಾಡುವುದಿಲ್ಲ. ಇದು ಕಣ್ಣಲ್ಲಿಯೇ ಇರುವ ಅರಿವಿನ ದೃಶ್ಯದ ಕಾಯಕ. ಈ ಕಾಯಕವನ್ನು ಶರಣರು ಮಾತ್ರ ಬಲ್ಲರು.ತಿಳಿದು ಪ್ರಯೋಗಕ್ಕೆ ಹೋಗುವ ಜಗದ ಸಕಲ ಕಣ್ಣುಗಳಿಗೂ ಜ್ಞಾನದ ಈ ಕಾಯಕ ಸಾಧ್ಯವಾಗುತ್ತದೆ.

### 1650

**ಗುರು ಮುಖದಿಂದಾಗಲಿ, ಶಾಸ್ತ್ರ ಮುಖದಿಂದಾಗಲಿ ,**

**ಮತ್ತಾವ ಮುಖದಿಂದಾಗಲಿ, ತಿಳಿದನುಭಾವಿಯೆ ಸಂಸ್ಕಾರಿ ನೋಡಾ.**
**ಆತ ಕಪಿಲಸಿದ್ಧ ಮಲ್ಲಿಕಾರ್ಜುನಾ ನೋಡಾ, ಕಲ್ಲಯ್ಯಾ .**

ಕಾಯದಲ್ಲಿ ಅರಿವು ಎಂಬ ಗುರುದೇವನ ಕಾಯವೊಂದು ಸಂಗಮವಾಗಿದೆ. ಆ ಗುರುದೇವನಿಗೆ ಶಿಷ್ಯನಾಗುವ ಮನೋಕಾಯವೊಂದು ಕಾಯವನ್ನು ಆವರಿಸಿದೆ.

ಮನೋಕಾಯ ಕಾಯದಲ್ಲಿಯ ಸಂಗಮವಾದ ಗುರುಕಾಯಕ್ಕೆ ಭಕ್ತಿ ಮಾಡಿ ಆ ಗುರುದೇವನಿಗೆ ಭಕ್ತನಾದವನೆ ನಿಜಭಕ್ತ. ಈ ಕಾಯಕವನ್ನು ಅರಿತರಿತು ಆ ಅರಿವೇ ಆದ ಗುರುಮುಖದಿಂದಾಗಲಿ ಅಥವಾ ಆತ ಬರೆದ ಶಾಸ್ತ್ರ ಮುಖದಿಂದಾಗಲಿ ಆತ ಹೇಳುವ ಪ್ರವಚನದಿಂದಾಗಲಿ ತಿಳಿದು ಅನುಭವಿಸಿದವನೇ ಸಂಸ್ಕಾರಿ. ಆತ ಪರಮ ವೀರಶೈವ ಆತನೇ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ ಎಂದು ಸಿದ್ಧರಾಮ ಶಿವಯೋಗಿಗಳು ಕಲ್ಲಯ್ಯ ಶರಣರಿಗೆ ಹೇಳಿದ್ದಾರೆ.

**1651**

**ತಿಳಿದು ತಿಳಿದು ವಿಷಯಕ್ಕೆ ಮೈಗೊಟ್ಟಡೆ ಅನುಭಾವಿಯೆ ಅಯ್ಯಾ?**
**ಅಳಿದು ಅಳಿದು ಆನಂದಕ್ಕೆ ಮೈಗೊಟ್ಟಡೆ ಅಜ್ಞಾನಿಯೆ ಅಯ್ಯಾ?**
**ತಿಳಿದ ಬಳಿಕ ವಿಷಯಂಗಳಳಿಯಬೇಕು. ತಿಳಿದ ಬಳಿಕ ಎಳೆಯ ಚಂದ್ರಧರ,**
**ಕಪಿಲಸಿದ್ಧ ಮಲ್ಲಿಕಾರ್ಜುನನಾಗಲೇಬೇಕು.**

ತಿಳಿದು ತಿಳಿದು ವಿಷಯಕ್ಕೆ ಮೈಗೊಟ್ಟವನು ಅನುಭಾವಿಯಲ್ಲ. ಅಳಿದು ಅಳಿದು ಆನಂದಕ್ಕೆ ಮೈಗೊಟ್ಟಾತ ಅಜ್ಞಾನಿಯಲ್ಲ. ತಿಳಿದ ಬಳಿಕ ವಿಷಯಗಳನ್ನು ಅಳಿಯಲೇಬೇಕು. ವಿಷಯಾದಿಗಳನ್ನು ಅಳಿದು ಮಹಾಜ್ಞಾನವನ್ನು ಬಳಕೆ ಮಾಡಿದಾತ ಎಳೆಯ ಚಂದ್ರಧರ ಅಂತಹ ಕಾಯವೆ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಕರೆಯಿಸಿಕೊಳ್ಳುತ್ತದೆ.

**1652**

**ಉಟ್ಟಡೇನು ತೊಟ್ಟಡೇನು ಮಲಮೂರು ಮುಟ್ಟದನ್ನಕ್ಕ? ಉಟ್ಟು ತೊಟ್ಟು ಬೆಟ್ಟುಣಿಗೆ**
**ಕಟ್ಟಳೆ ಷಟ್‌ಸ್ಥಲಗುರುವರ್ಯ ಚೆನ್ನಬಸವಣ್ಣ ಮರೆಯಲಿಲ್ಲವೇ?**
**ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೇ.**

ಉಡುವಲ್ಲಿ ತೊಡುವಲ್ಲಿ ಸಂಪ್ರದಾಯದ ಅವಶ್ಯಕತೆ ಇಲ್ಲ. ತನುವನ್ನು ಆವರಿಸಿದ ಮನ ತನುವನ್ನು ಅಜ್ಞಾನದ ಕಡೆಗೆ ಕರೆದುಕೊಂಡು ಹೋಗುವುದಕ್ಕೆ ಉಡುವ ತೊಡುವ ಉಣ್ಣುವ ಕ್ರಿಯೆಗಳು ಅಡ್ಡಿಪಡಿಸುವುದಿಲ್ಲ. ಜ್ಞಾನಿಯಾದವನು ಕಾವಿಯನ್ನೇ ಉಡಬೇಕು. ಆವಿಗೆಯನ್ನೇ ತೊಡಬೇಕು. ಉಪ್ಪು ಕಾರ, ಹುಳಿ ಉಣ್ಣುವ ಪದಾರ್ಥದಲ್ಲಿ ಇರಬಾರದು ಎಂಬ ಆಚಾರ ಗೋಚರದ ಪೂಜೆಯನ್ನು ಮಾಡುವ ಪೂಜ್ಯರಿಗೆ ಸಲ್ಲುತ್ತದೆ.

ಶರಣರು ಗೋಚರದ ಆಚಾರವನ್ನು ಮಾಡುವವರಲ್ಲ. ಅವರು ಅಗೋಚರದ ಆಚಾರದವರು. ಶರಣರ ಆಚಾರ ಯಾರಿಗೂ ಕಾಣುವುದಿಲ್ಲ. ಅರಿವಿನ ಆಚಾರದಲ್ಲಿ ಇದ್ದ ಶರಣನಿಗೆ ಮಾತ್ರ ಕಾಣುತ್ತದೆ. ಏಕೆಂದರೆ ಶರಣ ಕಣ್ಣಿನ ಮೂಲಕ ಯಾವ ಅಜ್ಞಾನದ ಕೆಲಸವನ್ನೂ ಮಾಡುವುದಿಲ್ಲ. ಆತನಿಗೆ ವಸ್ತುವಿನ ಸತ್ಯ ಮಾತ್ರ ಕಾಣುತ್ತದೆ. ಸತ್ಯದ ಹೊರತು ಏನೂ

ಕಾಣುವುದಿಲ್ಲ. ಹೀಗಾಗಿ ತನಗೆ ತೋಚಿದ ವಸ್ತ್ರ ತೊಡುತ್ತಾನೆ. ಉಡುತ್ತಾನೆ. ಅಂದಂದಿಗೆ ಬಂದ ಪ್ರಸಾದವನ್ನು ರುಚಿ ಅರುಚಿ ಎನ್ನದೆ ಪರಮಾನಂದದಿಂದ ಸ್ವೀಕರಿಸುತ್ತಾನೆ. ಬಸವಣ್ಣ ಅರ್ಥ ಸಚಿವನಾಗಿ ಕಾರ್ಯ ನಿರ್ವಹಿಸಿದರೆ ಚೆನ್ನಬಸವಣ್ಣ ಚಿಕ್ಕದಣ್ಣಾಯಕರಾಗಿ ಮೆರೆದರು.

**1653**

**ಎನ್ನಪಾದವಿಡಿದು ಮಧ್ಯತನಕ ಪ್ರಭುವು ನೋಡಾ.**
**ಮಧ್ಯವಿಡಿದು ಹೃದಯ ಪರಿಯಂತರ ಬಸವಣ್ಣ ನೋಡಾ.**
**ಹೃದಯ ವಿಡಿದು ಕಂಠಪರಿಯಂತರ ಮಡಿವಾಳ ನೋಡಾ.**
**ಕಂಠವಿಡಿದು ಕೇಶಾಂತತನಕ ಬಸವಣ್ಣ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅಲ್ಲಮ ಪ್ರಭು, ಬಸವಣ್ಣ ಮಡಿವಾಳ ಮಾಚಿದೇವರು ಚೆನ್ನಬಸವಣ್ಣ ಇವರು ಮಹಾಜ್ಞಾನಿಗಳು ಸಿದ್ಧರಾಮ ಶಿವಯೋಗಿಗಳು ಈ ಮಹಾಜ್ಞಾನಿಗಳನ್ನು ತಮ್ಮ ಲಿಂಗಾಂಗದಲ್ಲಿ ಸಂಗಮಗೊಳಿಸಿದ್ದಾರೆ. ಇದು ಇವರು ಮಾಡಿದ ಜ್ಞಾನದ ಮಹಾಪ್ರಯೋಗವೇ ಆಗಿದೆ.

ಎನ್ನ ಪಾದವಿಡಿದು ಮಧ್ಯಭಾಗದ ತನಕ ಅಲ್ಲಮ ಪ್ರಭು ದೇವರು ಸಂಗಮವಾಗಿದ್ದಾನೆ. ಎನ್ನ ಅಂಗದ ಮಧ್ಯದಿಂದ ಹೃದಯಪರಿಯಂತರ ಬಸವಣ್ಣ ಮಹಾ ಲಿಂಗವಾಗಿ ಸಂಗಮವಾಗಿದ್ದಾನೆ. ಎನ್ನ ಹೃದಯ ವಿಡಿದು ಕಂಠದವರೆಗೆ ಮಹಾಜ್ಞಾನಿ ಮಡಿವಾಳ ಮಾಚಿದೇವರು ಸಂಗಮವಾಗಿದ್ದಾರೆ. ಕಂಠದಿಂದ ಎನ್ನ ಕೇಶರಾಶಿಯವರೆಗೆ ಚೆನ್ನಬಸವಣ್ಣ ಸಂಗಮವಾಗಿದ್ದಾರೆ. ಇನ್ನು ಎನ್ನ ಅಂಗವೆಂಬುದಿಲ್ಲ ಸರ್ವಾಂಗವೂ ಲಿಂಗಾಂಗವಾಗಿದೆ. ಇದಕ್ಕೆ ಸಾಕ್ಷಿ ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ಈ ನಾಲ್ಕೂ ಶರಣರನ್ನು ಸರ್ವಾಂಗದಲ್ಲಿ ಸ್ಥಾಪಿಸಿಕೊಂಡು ಮಹಾಜ್ಞಾನಾಂಗವನ್ನಾಗಿ ಮಾಡಿಕೊಂಡಿದ್ದಾರೆ.

**1654**

**ಹಸ್ತವದು ಬಸವಣ್ಣ, ಜಿಹ್ವೆಯದು ಚೆನ್ನಬಸವಣ್ಣ,**
**ಉದರ ತೃಪ್ತಿಯದು ಅಲ್ಲಮ ನೋಡಾ. ಎನ್ನ ನಲ್ಲ ಕಪಿಲ ಸಿದ್ಧಮಲ್ಲೇಶನೆ.**

ಎನ್ನ ಹಸ್ತವದು ಬಸವಣ್ಣ ಹೀಗಾಗಿ ಹಸ್ತದಿಂದ ಅಜ್ಞಾನದ ಸ್ಪರ್ಶವನ್ನು ಮಾಡಲಾಗದು ಏಕೆಂದರೆ ಹಸ್ತದಲ್ಲಿ ಬಸವಣ್ಣ ನೆಲೆಸಿದ್ದಾನೆ.

ಜಿಹ್ವೆಯದು ಚೆನ್ನಬಸವಣ್ಣ ಹೀಗಾಗಿ ಎನ್ನ ನಾಲಿಗೆ ರುಚಿ ಅರುಚಿಯನ್ನು ಅರಿಯದು. ಏಕೆಂದರೆ ಎನ್ನ ಜಿಹ್ವೆಯ ಜಿಹ್ವೆಯಲ್ಲಿ ಗುರುದೇವನಾದ ಚೆನ್ನಬಸವಣ್ಣನೆ ಸಂಗಮವಾಗಿದ್ದಾನೆ. ಉದರದಲ್ಲಿ ಅಲ್ಲಮ ನೆಲೆಸಿರುವುದರಿಂದ ಸದಾ ಮಹಾ ತೃಪ್ತಿಯಿಂದ ಇರಲು ಎನಗೆ ಸಾಧ್ಯವಾಗಿದೆ ನೋಡಾ ಎನ್ನ ನಲ್ಲನಾದ ಕಪಿಲಸಿದ್ಧ ಮಲ್ಲೇಶನೆ, ನಾನು ನಲ್ಲೆಯಾಗಿ, ನನ್ನ ಸರ್ವಾಂಗವನ್ನು ಸರ್ವಾಂಗದಲ್ಲಿಯೇ ಸಂಗಮವಾದ ಎನ್ನ ನಲ್ಲ ಕಪಿಲ ಸಿದ್ಧ ಮಲ್ಲೇಶನಿಗೆ ಒಪ್ಪಿಸಿದ್ದೇನೆ.

**1655**

**ಕ್ರೀಯದು ಚೆನ್ನಬಸವಣ್ಣ ಎಡಪಾದ, ಜ್ಞಾನವದು ಚೆನ್ನಬಸವಣ್ಣ ಬಲಪಾದ,**
**ನಾನವರ ಚಮ್ಮಾವುಗೆ, ನೀನವರ ಮನದಾಸ ನೋಡಯ್ಯ.**

**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಎನ್ನ ಕಾಯದಲ್ಲಿ ತೊಡಗಿಸಿರುವ ಕ್ರಿಯೆಯೇ ಚೆನ್ನಬಸವಣ್ಣ ಎಡಪಾದ. ಎನ್ನ ಸರ್ವಾಂಗದ ಮಹಾಜ್ಞಾನವದು ಬಸವಣ್ಣ ಬಲಪಾದ. ನಾನು ಮಹಾಜ್ಞಾನಿ ಚೆನ್ನಬಸವಣ್ಣನಿಗೆ ಚಮ್ಮಾವುಗೆಯಾಗಿದ್ದೇನೆ. ಕಾಯದಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನೆ ನೀನು ಅವರ ಮನೆದಾಸ ನೋಡಯ್ಯ.

ಚೆನ್ನ ಬಸವಣ್ಣ ಗಟ್ಟಿಗರು ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕಾಯದಲ್ಲಿ ಸಂಗಮವಾದ ಮಹಾಜ್ಞಾನಕ್ಕೆ ದಾಸನಾಗಿದ್ದಾರೆ. ಈ ಬೆಡಗು ಶರಣರಿಗೆ ಮಾತ್ರ ಅರ್ಥವಾಗುತ್ತದೆ.

**1656**

**ಕ್ರಿಯೆ ಎಂಬುದು ಪಿಪೀಲಕನ ಗುಣ. ಜ್ಞಾನವೆಂಬುದು ವಿಹಂಗದ ಗುಣ.**
**ಮೆಲ್ಲಮೆಲ್ಲನೆ ತಿಳಿದಲ್ಲಿ ಕ್ರಿಯೆ ಎನಿಸಿತ್ತು . ಏಕ ಕಾಲಕ್ಕಳವಟ್ಟಲ್ಲಿ**
**ಕಪಿಲಸಿದ್ಧ ಮಲ್ಲಿಕಾರ್ಜುನನ ಮನೆಯ,**
**ಸೂರೆಗೊಂಬ ತಸ್ಕರಿ ಜ್ಞಾನವೆನಿಸಿತ್ತು ಮರಳ ಶಂಕರಯ್ಯ.**

ಜ್ಞಾನದ ವೇಗ ಬಹಳ ದೊಡ್ಡದು. ಹೀಗಾಗಿ ಜ್ಞಾನಕ್ಕೆ ಪಕ್ಷವಿದೆ ಎಂದು ಕರೆಯುತ್ತಾರೆ. ಏಕೆಂದರೆ ವಸ್ತುವಿನ ಸತ್ಯವನ್ನು ಬಹುವೇಗ ಅರಿತು ಕ್ಷಣಾರ್ಧದಲ್ಲಿ ಅದರ ಸಿಹಿಫಲವನ್ನು ಮೆಲ್ಲುತ್ತದೆ.

ಕ್ರಿಯೆಗೆ ಪಿಪೀಲಿಕನ ಗುಣವಿದೆ. ಮರದ ಮೇಲೆ ಇರುವ ಸಿಹಿ ಹಣ್ಣನ್ನು ತಿನ್ನುಲು ಇರುವೆ ತೆವಳುತ್ತಾ ತೆವಳುತ್ತಾ ಮರದ ಸಿಹಿ ಪದಾರ್ಥದ ವರೆಗೆ ಚಲಿಸುತ್ತದೆ. ಹಾದಿಯಲ್ಲಿ ಸುಳಿವ ಶತೃಗಳನ್ನು ಕಣ್ ತಪ್ಪಿಸಿ ಗಾಳಿಗೆ ಕೆಳ ಬಿದ್ದು ಮತ್ತೆ ಚಲಿಸಬೇಕಾದರೆ ಸಾಕಷ್ಟು ಸಮಯವೇ ಹಿಡಿಯುತ್ತದೆ. ಆದರೆ ವಿಹಂಗದ ಗುಣ ಇರುವ ಜ್ಞಾನ ಹಾಗಲ್ಲ. ಅದರ ವಾಸನೆ ಹಿಡಿದು ಪಕ್ಷಿಯಾಗಿ ಸಿಹಿಫಲವಿದ್ದಲ್ಲಿಗೆ ಹಾರುತ್ತದೆ. ಮೆಲ್ಲ ಮೆಲ್ಲನೆ ಮಹಾಜ್ಞಾನವನ್ನು ತಿಳಿದಲ್ಲಿ ಪಿಪೀಲಿಕನ ಕ್ರಿಯೆ ಎನಿಸಿತ್ತು . ಏಕ ಕಾಲಕ್ಕೆ ಜ್ಞಾನ ಅಳವಟ್ಟಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನ ಮನೆಯ ಸೂರೆಗೊಂಬ ತಸ್ಕರಜ್ಞಾನವೆಂದೆನಿಸಿತ್ತು ಎಂದು ಸಿದ್ಧರಾಮ ಶಿವಯೋಗಿಗಳು ಮರಳ ಶಂಕಯ್ಯನಿಗೆ ಪಿಪೀಲಿಕ ಮತ್ತು ವಿಹಂಗದ ಮಾರ್ಗವನ್ನು ಹೇಳಿದ್ದಾರೆ.

**1657**

**ಕ್ರಿಯೆಗಳಲ್ಲಿ ಭೇದವಲ್ಲದೆ ಜ್ಞಾನದಲ್ಲಿ ಭೇದವಿಲ್ಲವಯ್ಯಾ.**
**'ಕ್ರಿಯಾಸು ಶತಶೋಭೆದಾ ಜ್ಞಾನಮೇಶ ವಿರಾಜತೇ ।**
**ಸುರುಬೇನಿ ಪದಾರ್ಥನಿ ಜಿಹ್ವೈಕ್ಯವ ವಿರಾಜತೇ' ॥**
**ಎಂಬುದುಪನಿಷತ್ತು ಹುಸಿಯಲ್ಲ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜ್ಞಾನದಲ್ಲಿ ಭೇದ ಇಲ್ಲವೇ ಇಲ್ಲ. ಜ್ಞಾನವೆಂದರೆ ಸಾಮಾನ್ಯವಲ್ಲ. ಜ್ಞಾನವನ್ನು ಜ್ಞಾನೇಶ್ವರ ಎಂದು ಕೂಡ ಕರೆಯತ್ತಾರೆ. ಈತ ಪಂಚಾನನನು ಹೌದು. ಹೀಗಾಗಿ ಮಹಾಜ್ಞಾನವನ್ನು ಪಕ್ಷಿಗುಣಕ್ಕೆ ಹೋಲಿಸಿದರೆ ಕ್ರಿಯೆಯನ್ನು ಪಿಪೀಲಿಕ ಗುಣಕ್ಕೆ ಅಂದರೆ ಇರುವೆ ಗುಣಕ್ಕೆ ಹೋಲಿಸಿದ್ದಾರೆ. ಇರುವೆ ತಾನು ವಾಸನೆಯಿಂದ ಕಂಡು ಕೊಂಡ ವಸ್ತುವನ್ನು ತೆವಳುತ್ತಾ ನಾನಾ ತೊಂದರೆಗಳನ್ನು

ಅನುಭವಿಸುತ್ತಾ ವಸ್ತುವಿದ್ದಲ್ಲಿಗೆ ಹೋಗಬೇಕಾದರೆ ಇರುವೆಗೆ ಬಹಳಷ್ಟು ಸಮಯಬೇಕಾಗುತ್ತದೆ. ಹೀಗಾಗಿ ಕ್ರಿಯೆಗಳಲ್ಲಿ ಭೇದವಿದೆ. ಜ್ಞಾನದಲ್ಲಿ ಭೇದವಿಲ್ಲ.

**1658**

**ಕ್ರಿಯಾ ಜ್ಞಾನ ಎಂಬುದಕ್ಕೆ ಭೇದ ತಿಲಾಂಶವಿಲ್ಲ. ನೋಡಾ**
**ದ್ವಂದ್ವೈನ ಭೇದ ಃ ಎಂಬ ಅರ್ಥವಧಿಶಾಖೆಯದು ಸಟೆಯೆ ?**
**ಸೂಕ್ಷ್ಮೇಂದ್ರಿಯ ನಿಗ್ರಹದಲ್ಲಿ ಜ್ಞಾನವೆನಿಸಿತ್ತು .**
**''ಜ್ಞಾನಂ ವಿನಾ ಕ್ರಿಯಾ ನೋ ಭಾತಿ ಕ್ರಿಯಾ ವಿನಾ ಕ್ರಿಯಾ ನೋ ಭಾತಿ ತತ್''**
**ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕ್ರಿಯಾ ಜ್ಞಾನ ಎಂಬುದಕ್ಕೆ ಎಳ್ಳಷ್ಟು ಭೇದವಿಲ್ಲ. ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ತನುವನ್ನ ಆವರಿಸಿದ ಮನದ ಮೂಲಕ ತಿಳಿದು ಆ ಜ್ಞಾನದಲ್ಲಿ ಸಂಗಮವಾಗುವುದೇ ಕ್ರಿಯಾಜ್ಞಾನ.

ಜ್ಞಾನದಿಂದ ಸಕಲವನ್ನು ತಿಳಿಯಬಹುದು. ಮನ ಜ್ಞಾನವನ್ನು ಏನೆಂದು ತಿಳಿಯದಿದ್ದರೆ ಪುಸ್ತಕದ ಮೂಲಕ, ಪ್ರವಚನ , ಶಾಸ್ತ್ರದ ಮೂಲಕ, ಕಥೆಗಳ ಮೂಲಕ ತಿಳಿಯುವ ಜ್ಞಾನ ಮನಕ್ಕೆ ಮನರಂಜನೆ ಎನಿಸತ್ತದೆ. ಜ್ಞಾನ ತಿಳಿದರೆ ಸಾಲದು ಮನ ಜ್ಞಾನ ಹೇಳಿದ ಕಾಯಕದಲ್ಲಿ ತೊಡಗಿ ಮನ ಇಲ್ಲವಾಗಬೇಕು. ಮಹಾಜ್ಞಾನವನ್ನು ಕೇಳಿ ಮನ ಅದರಲ್ಲಿ ತೊಡಗದಿದ್ದರೆ ಮನ ಹೆಳವನಾಗೋದಿಲ್ಲ. ಅದಕ್ಕೆ ಮತ್ತಷ್ಟು ಅಜ್ಞಾನದ ಬಲ ಪ್ರಾಪ್ತಿಯಾಗಿ ಅಜ್ಞಾನದ ಕಾಯಕದಲ್ಲಿ ಕಾಯವನ್ನು ತೊಡಗಿಸುತ್ತದೆ. ಹೀಗಾಗಿ ಕ್ರಿಯೆಯಿಲ್ಲದ ಜ್ಞಾನ ಜ್ಞಾನವಲ್ಲ. ಜ್ಞಾನವಿಲ್ಲದೆ ಮನ ಕ್ರಿಯೆಯಲ್ಲಿ ತೊಡಗುವುದಿಲ್ಲ.

**1659**

**ದೇಹವೆಂಬುದು ಅವಿದ್ಯೆ ಎಂಬುವರು, ಅದೆಂತಯ್ಯಾ ?**
**ದೇಹ ತಾನಿಲ್ಲದಿರೆ ಆಶ್ರಯಿಸುವ ಪರಿ ಎಂತಯ್ಯಾ ?**
**ಅರಿದಡೆ ಆಶ್ರಿಯಿಸಿ, ಮರೆದಡೆ ಆಶ್ರಯಿಸುವ,**
**ಅಜ್ಞಾನದ ಧಶ್ವಂತಿ ಎಂಬುದ ಅರಿದೆ ನೋಡಯ್ಯಾ.**
**ದೇಹವದು ಜಡಸಾಕ್ಷಿ, ಅಜಡವೆಂಬ ಭಾವ ವಚನದಲಲ್ಲದೆ,**
**ಅನುಭಾವದಲ್ಲಿಲ್ಲ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹ ಇಲ್ಲದಿರೆ ಜ್ಞಾನವನ್ನು ಮನ ಬಳಕೆ ಮಾಡಲು ಬರುವುದೇ ಇಲ್ಲ. ಜ್ಞಾನ ದೇವರು; ದೇಹವನ್ನು ಸೃಷ್ಠಿ ಮಾಡಿ ದೇಹದಲ್ಲಿಯೇ ತಾನು ವೈದೇಹಿಯಾಗಿದ್ದು ತನ್ನನ್ನು ತಿಳಿಯಲು ಮನವನ್ನು ದೇಹದಲ್ಲಿಯೇ ಸೃಷ್ಠಿ ಮಾಡಿದ.

ದೇಹವೆಂಬುದು ಒಂದೇ ಅಲ್ಲ. ದೇಹದಲ್ಲಿ ಜ್ಞಾನದೇವರು ಇದ್ದಾನೆ. ಈತನನ್ನು ತಿಳಿಯುವ ಮನ ಈತನಿಂದಲೇ ಸೃಷ್ಠಿಯಾಗಿ ದೇಹದಲ್ಲಿಯೆ ಉಳಿದಿದೆ. ದೇಹ ಮನಕ್ಕೂ ಜ್ಞಾನಕ್ಕೂ ಬಳಕೆಯಾಗಿದೆ. ದೇಹ ಜಡವಲ್ಲ. ದೇಹದಲ್ಲಿ ಮನವಿದ್ದದ್ದು ದೇಹಕ್ಕೆ ಗೊತ್ತಾಗುತ್ತದೆ. ದೇಹದಲ್ಲಿ ಜ್ಞಾನವಿದ್ದದ್ದು ದೇಹಕ್ಕೆ ಗೊತ್ತಾಗುತ್ತದೆ. ದೇಹ ಜ್ಞಾನಕ್ಕೆ ಮಾತ್ರ ಉಪಯೋಗವಾಗಬೇಕಾಗಿತ್ತು . ಆದರೆ ಮನಕ್ಕೆ ಉಪಯೋಗವಾಗಿದೆ. ಮನ ದೇಹದಲ್ಲಿದ್ದ ಜ್ಞಾನಕ್ಕೆ ಭಕ್ತಿ ಮಾಡಿ ಭಕ್ತನಾಗಬೇಕು.

ಇದು ಮನದ ಅನುಭವಕ್ಕೆ ಬಂದಾಗ ಮನ ಘನಮನವಾಗುತ್ತದೆ.

ದೇಹ ಜಡವಲ್ಲ; ದೇಹ ಜಡವೆಂಬುದು ಶಾಸ್ತ್ರದಲ್ಲಿ ದಾಖಲಾಗಿದೆ. ಆದರೆ ದೇಹವೂ ಚೇತನವಾಗಿದೆ. ಮನದ ಎಷ್ಟೋ ಅಜ್ಞಾನದ ಕೆಲಸಗಳಿಗೆ ದೇಹ ಒಪ್ಪುವುದಿಲ್ಲ ಎಂಬುದು ಮನಕ್ಕೆ ಗೊತ್ತಾಗುತ್ತದೆ. ಅಂದ ಮೇಲೆ ಅನುಭಾವಕ್ಕೆ ಹೋದಾಗ ದೇಹ ಚೇತನವೆಂದು ಗಮನಕ್ಕೆ ಬರುತ್ತದೆ.

**1660**

**ಶರಣಸತಿ ಲಿಂಗಪತಿ ಎಂದ ಬಳಿಕ, ಲಿಂಗದ ರಾಣಿವಾಸ ನೋಡಾ ಅವರು.**
**ಎಮ್ಮಕ್ಕ ಮಹಾದೇವಿ, ಎಮ್ಮಕ್ಕ ಗಂಗಾದೇವಿ, ಹಿರಿಯಕ್ಕ ಚಿಕ್ಕಕ್ಕ ಎಂದಡೆ ವಿರೋಧ,**
**ವಿರೋಧಿಸಿದಡೇನು? ನಾನು ಚಿಕ್ಕಾಕೆ ಕಪಿಲಸಿದ್ಧಮಲ್ಲಿಕಾರ್ಜುನಂಗೆ.**

ಶರಣಸತಿ ಲಿಂಗಪತಿ ಎಂದ ಬಳಿಕ ಮನ ಲಿಂಗದ ರಾಣಿವಾಸ ನೋಡಾ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಕ್ಕೆ ಮನ ಶರಣು ಹೋಗಿ ಶರಣನಾದ ಬಳಿಕ ಶರಣ ಅರಿವಿನ ಲಿಂಗಯ್ಯನಿಗೆ ಸತಿ. ಲಿಂಗಯ್ಯ ಈಕೆಗೆ ಪತಿ, ಎಂದ ಬಳಿಕ ದೇಹ ಸತಿ ಪತಿಗಳ ರಾಣಿವಾಸ ನೋಡಾ.

ಹೀಗಿದ್ದು ಎಮ್ಮಕ್ಕ ಮಹಾದೇವಿ, ಎಮ್ಮಕ್ಕ ಗಂಗಾದೇವಿ ಹಿರಿಯಕ್ಕ ಚಿಕ್ಕಕ್ಕ ಎಂದರೆ ವಿರೋಧ ಆದರೂ ಹೀಗೆ ಹೇಳುವ ಶರಣರಲ್ಲಿ ದೋಷವಿಲ್ಲ. ಹೀಗೆ ಮುಂದುವರೆದ ಶರಣ ನಾನು ಕಪಿಲಸಿದ್ಧ ಮಲ್ಲಿಕಾರ್ಜುನಂಗೆ ಚಿಕ್ಕಾಕೆ ಅಂದರೆ ಚಿಕ್ಕ ಹೆಂಡತಿ, ಚಿಕ್ಕ ಸತಿ ಅರಿವಿನ ಲಿಂಗಯ್ಯ ಎನಗೆ ಪತಿ ಎಂದು ಬೆಡಗಿನ ಮಾತಿನ ಮೂಲಕ ಸಿದ್ಧರಾಮ ಶಿವಯೋಗಿಗಳು ಈ ಸೂತ್ರವನ್ನು ರಚಿಸಿದ್ದಾರೆ. ಇದು ಜ್ಞಾನಕ್ಕೆ ಹೋಗುವ ಓದುಗನಿಗೆ ರಹದಾರಿ.

**1661**

**ಅಯ್ಯಾ ನಿಮ್ಮನರಿದವನ ಮಂದಿರ,ಮಹಾದೇವಿಯರಮನೆಯಯ್ಯಾ.**
**ಅಯ್ಯಾ ನಿಮ್ಮನರಿದವನ ನಿರೀಕ್ಷಣೆಯಯ್ಯಾ.ಕಪಿಲಸಿದ್ಧಮಲ್ಲಿಕಾರ್ಜುನಾ.**

ಲೋಕ ಪೂಜಿಸುವ ದೇವರು ಬೇರೆ, ಅವರು ಹೋಗುವ ಮಂದಿರವು ಬೇರೆ. ಅದು ಕಲ್ಲು ಕಟ್ಟಿಗೆ ಮಣ್ಣಿನಿಂದ ನಿರ್ಮಾಣವಾಗಿದೆ. ಶರಣ ದೇವರನ್ನು ಅರಿತವನು. ಸದಾ ದೇವರನ್ನು ಹಾಗೂ ಆತನಿದ್ದ ಮಂದಿರವನ್ನು ಪೂಜಿಸುತ್ತಾನೆ. ಶರಣರು ಪೂಜಿಸುವ ಕಾಯವೆ ಮಹಾದೇವಿಯು ಇದ್ದ ಅರಮನೆ. ಅವರಿಗೆ ಈ ಮಂದಿರದಲ್ಲಿ ಮಹಾದೇವನೂ ಇದ್ದಾನೆ. ಹೀಗಾಗಿ ಶರಣರು ಕಾಯವನ್ನು ಕೈಲಾಸ ಎಂದು ಕೂಗಿ ಕರೆದರು.

ಎನ್ನಂಗದಲ್ಲಿ ನಿನಗೆ ನಿತ್ಯ ಮಜ್ಜನ ಎಂದು ಉರಿಲಿಂಗಪೆದ್ದಿಗಳು ಹೇಳಿದ ಮಾತುಗಳಿವೆ. ಅದೆಷ್ಟು ಸುಂದರ. ನಿಮ್ಮನರಿದವನೆ ಧನ್ಯ, ಅವನು ಸಮಾನ್ಯನಲ್ಲ, ಸಕಲರೂ ಇದ್ದಂತೆ ಶರಣನು ಇರುವನು. ಹೀಗಿದ್ದ ಶರಣನನ್ನು ಗುರುತಿಸುವ ಕಾಯವೇ ಧನ್ಯ. ಶರಣರು ನಿಮ್ಮನರಿದವರು ಅವರ ಮಂದಿರ ಮಹಾದೇವಿಯ ಅರಮನೆಯಯ್ಯ ಅಯ್ಯಾ ನಿಮ್ಮನರಿದವನ ನಿರೀಕ್ಷಣೆಯಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1662**

**'ಸರ್ವಂ ಶಿವಮಯಂ ಜಗತ್' ಎಂದ ಬಳಿಕ**
**ತನ್ನ ದೇಹ ನಿರ್ಮಲಕ್ಕಿಕ್ಕಬಹುದೇ ಅಯ್ಯಾ ? 'ಸರ್ವಂ ಖಲ್ವಿದಂ ಬ್ರಹ್ಮ' ಎಂದ ಬಳಿಕ,**

**ಕರಣಗಳಾವರಣಕ್ಕೆ ಸಿಲಿಕಿಸಬಹುದೇ ? ಕಪಿಲಸಿದ್ಧಮಲ್ಲಿಕಾರ್ಜುನಾ.**

ಸರ್ವ ಜಗತ್ತು ಶಿವಮಯವಾಗಿದೆ ಎಂದ ಬಳಿಕ ತನ್ನ ದೇಹವು ಶಿವಮಯವಾಗಿದೆ ಎಂದು ಅರ್ಥವಲ್ಲವೆ. ಹೀಗೆಂದ ಬಳಿಕವೂ ತನ್ನ ದೇಹವನ್ನು ನಿರ್ಮಲ ಮಾಡಿಕೊಳ್ಳಲು ತೊಡಗಬಹುದೇ? ಸರ್ವ ಜಗತ್ತು ಶಿವಮಯ ಎನ್ನವುದು ಬಹುಸರಳ. ತನ್ನ ದೇಹ ಕೂಡ ಹೇಗೆ ಶಿವಮಯವಾಗಿದೆ. ಎಂದು ತಿಳಿದುಕೊಳ್ಳದಿದ್ದರೆ ಈ ಮಾತು ತನ್ನ ಅನುಭವಕ್ಕೆ ಬಾರದಿದ್ದರೆ ಸರ್ವ ಜಗತ್ತು ಶಿವಮಯ ಎಂಬುದು ಬರಿ ಮಾತಿನಲ್ಲೇ ಉಳಿಯುತ್ತದೆ. ಅರಿಯದೆ ಅನುಭವಕ್ಕೆ ಬಾರದ ಹೊರತು ಯಾವ ಮಾತನ್ನು ಆಡಬಾರದು. ಸರ್ವಂ ಖಲ್ವಿದಂ ಬ್ರಹ್ಮಂ ಎಂದ ಬಳಿಕ ತನ್ನ ಕರಣಂಗಳನ್ನು ಅಜ್ಞಾನಕ್ಕೆ ಸಿಲುಕಿಸಬಹುದೆ.

ಮೊದಲು ತನಗೆ ಆವರಿಸಿದ ಭ್ರಮೆಯನ್ನು ಕಳೆದುಕೊಂಡು ತಾನು ಬ್ರಹ್ಮ ಹೇಗೆ ಎಂದು ತನಗೆ ತಾನೆ ತಿಳಿದುಕೊಂಡ ಬಳಿಕ, ಅಹಂ ಬ್ರಹ್ಮಾಸ್ಮಿ ಎಂದು ತನಗೆ ತಾನೇ ಅತ್ಯಂತ ಆನಂದದಿಂದ ಖಚಿತವಾಗಿ ಹೇಳಲು ಬಂದಾಗ ಸರ್ವಂ ಖಲ್ವಿದಂ ಬ್ರಹ್ಮ ಎಂದು ಹೇಳಲು ಬರುತ್ತದೆ.

ತನಗೆ ತಾನೇ ಬ್ರಹ್ಮ ಹೇಗೆ ಎಂದು ಅನುಭವಕ್ಕೆ ಬಾರದಿದ್ದರೆ ಸರ್ವಂ ಖಲ್ವಿದಂ ಬ್ರಹ್ಮ ಎನ್ನುವದು ಬರಿ ಮಾತಿನಲ್ಲಿ ಉಳಿಯುತ್ತದೆ.

**1663**

**ಜಡಕ್ಕೆ ಜಡವ ಕಟ್ಟಿ ಅಜಡನಾದೆನೆಂಬ ಜಡ ನಾನಲ್ಲವೆ ದೇವಾ?**
**ಜಡ ಪೂಜೆ ಸಂಪದಾದಿ ಜಡಕ್ಕೆ ಒಳಗು ಅಲ್ಲವೆ ದೇವಾ?**
**ಅಜಡ ಪೂಜೆ ಮೋಕ್ಷಕ್ಕೆ ಒಳಗು ಅಲ್ಲವೆ ದೇವಾ?**
**ಜಡ ಅಜಡವೆಂದೆನಿಸದು ನೋಡಾ. ಕಪಿಲಸಿದ್ಧಮಲ್ಲಿಕಾಜುನ ದೇವಾ.**

ಕಾಯ ಜಡ, ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವಿನ ದೇವರನ್ನು ಮರೆತು ಜಡ ದೇಹವನ್ನು ಕರೆದುಕೊಂಡು ಹೋಗಿ ಜಡ ದೇವರನ್ನು ಪೂಜಿಸುತ್ತದೆ. ಜಡ ದೇವರನ್ನು ಪೂಜಿಸಿ ಅಜಡನಾದೆನೆಂದು ಹೇಳುವ ಜಡ ನಾನಲ್ಲವೆ ದೇವಾ. ಜಡಪೂಜೆ ಅಜ್ಞಾನದ ಜಾಡ್ಯಕ್ಕೆ ಒಳಗು; ಅಜಡ ಪೂಜೆ ಎನ್ನುವುದು ಮೋಕ್ಷಕ್ಕೆ ಒಳಗು.

ಕಾಯವನ್ನು ಆವರಿಸಿದ ಮನಕ್ಕೆ ಕಾಯದಲ್ಲಿಯೆ ಸಂಗಮವಾದ ಅರಿವಿನ ದೇವರ ಪರಿಚಯವಾದರೆ ಸಾಕು ಜಡವೂ ಇಲ್ಲ . ಅಜಡವೂ ಇಲ್ಲ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ ತಾನೇ ನೋಡಾ

**1664**

**ಪೂಜೆಯ ಪರಿಯನೊರೆವೆ ಆಲಿಸಾ ದೇವಾ।**
**'ಮನೋ ನಿರ್ಮಲಭಿಪೇಕಂ ತಸ್ಯನಾಹಂಜಡ ಇತಿ ಭಸ್ಮಧಾರಣಂ**
**ನಾಹಂ ಸಾಕ್ಷಿತ್ಯಮಲಬಿಲ್ವಂ ತನ್ಮಸ್ತಕೇ' ॥**
**ಇಂತಪ್ಪ ಪೂಜೆಯ ಮಾಡದೆ ಮರೆದೆ.**
**ಎಲೆಮರೆಯ ನೀರಸುಟ್ಟ ಬೂದಿಯದಂ ಪೂಜಿಸಿ,**
**ಸಿದ್ದಿಗಳ ಗುದ್ದಾಟಕ್ಕೊಳಗಾದವರ ಕೆಡೆ ಮೆಟ್ಟಿ ಬಿಟ್ಟಪ್ಪನೆ,**
**ಬೆಟ್ಟಜೆಪತಿ ದಿಟ್ಟ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನ ಕಾಯದೊಳಗೆ ಸಂಗಮವಾದ ಅರಿವಿನ ದೇವರ ಪೂಜೆ ಮಾಡಿದಾಗಲೇ ಅದು ನಿರ್ಮಲವಾಗುತ್ತದೆ. ಸಕಲ ಕಲ್ಮಶಗಳನ್ನು ಸುಟ್ಟುಕೊಂಡು ಭಸ್ಮಧಾರಣೆಯನ್ನು ಮಾಡಿಕೊಳ್ಳುತ್ತದೆ. ನಾನು ಎನ್ನುವ ಅಜ್ಞಾನವನ್ನು ಕಳೆದುಕೊಂಡು ಅದನ್ನೇ ಸಾಕ್ಷಿಯಾಗಿ ಮಾಡಿ ಅರಿವಿನ ದೇವರಿಗೆ ಬಿಲ್ವವನ್ನು ಧರಿಸುತ್ತದೆ. ಇಂತಪ್ಪ ಪೂಜೆಯ ಮಾಡದೆ ಮರೆದೆ.

ಮನ ಎಲೆ ಮರೆಯಲ್ಲಿದ್ದ ನೀರ ಸುಟ್ಟ ಆ ಬೂದಿಯಿಂದ ಪೂಜಿಸಿ ಸಿದ್ದಿಗಳ ಗುದ್ದಾಟಕ್ಕೆ ಒಳಗಾದವರ ಕಡೆ ಮೆಟ್ಟಿ ಬಿಟ್ಟಿಪ್ಪನೆ ಕಾಯದಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನ ಬಲು ದಿಟ್ಟ ನೋಡಾ.

**1665**

**ನಾನಿಲ್ಲದಿರೆ ನೀನೆಯಲ್ಲಿಯವನಯ್ಯಾ ?**
**ಬಾಣನ ಮನದಲ್ಲಿ ಸಿಲ್ಕಿ ಬಾಗಿಲ ಕಾಯಿದ್ದಿರಿ ಅಣ್ಣಾ.**
**ಸಿಂಧು ಬಲ್ಲಾಳನ ವಧುವಿನಲ್ಲಿ ಸಿಲ್ಕಿಸ್ವಯಂಭು ಆಳಿದಿರಿ,**
**ಚೋಳಿಯಕ್ಕನ ಭಕ್ತಿಯಲ್ಲಿ ಸಿಲ್ಕಿ ಮಾಡಿದಿರಿ ಅಮ್ಮನವರಿಗೆ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಸಂಗಮವಾದ ಪರಮಾತ್ಮನೆ ನನ್ನನ್ನು ಸೃಷ್ಠಿ ಮಾಡಿ ನಿನ್ನನ್ನು ಅರಿಯಲು ನನಗೆ ಮನವೆಂಬ ಹೆಸರು ಇಟ್ಟು ಕಾಯದಲ್ಲಿಯೆ ನನ್ನನ್ನು ಇಟ್ಟಿರಿ. ನಿಮ್ಮನ್ನು ತಿಳಿಯಲೆಂದು. ನನ್ನ ಹೊರತಾಗಿ ನಿನ್ನನ್ನು ಯಾರೂ ಅರಿಯರಯ್ಯಾ. ಬಾಣ ತನ್ನ ಪೂಜೆಗೆ ಯಾರೂ ಅಡ್ಡಿ ಬರಬಾರದೆಂದು ನಿಮ್ಮನ್ನು ಬಾಗಿಲ ಬಳಿ ಕಾವಲಿಟ್ಟ. ನೀವು ಬಾಣ ಹೇಳಿದಂತೆ ಬಾಗಿಲ ಬಳಿ ಇದ್ದು ಕಾವಲು ಕಾಯ್ದಿರಿ ಅಣ್ಣಾ.

ಸಿಂಧು ಬಲ್ಲಾಳನ ವಧುವನ್ನು ಕೇಳಿ ಸ್ವತಃ ನೀವು ಅಲ್ಲಿಯೇ ಸಿಲುಕಿ ಸ್ವಯಂಭುವಾಗಿ ಆಳಿದಿರಿ ಅಣ್ಣಾ. ಚೋಳಿಯಕ್ಕನ ಭಕ್ತಿಯಲ್ಲಿ ಸಿಲುಕಿದಿರಿ ಕಪಿಲಸಿದ್ಧ ಮಲ್ಲಿಕಾರ್ಜುನಾ ನಾನಿಲ್ಲದಿರೆ ನೀನು ಎಲ್ಲಿಯವನಯ್ಯಾ ? ನಾನು ನಿನ್ನನ್ನು ಗುರುತಿಸದಿದ್ದರೆ ನೀನೇ ನನ್ನ ತಂದೆ ಎಂದು ಅಪ್ಪಿಕೊಳ್ಳದಿದ್ದರೆ ನೀನು ಎಲ್ಲಿಯವನಯ್ಯಾ ?

**1666**

**ಇಕ್ಷುವಿನ ಮನದಲ್ಲಿಪ್ಪ ಕುಟಿಲ ಕೇಸರಿಯ ರೂಪಕ್ಕಂಜುವರಲ್ಲದೆ**
**ರಾಗರಂಜನೆಗಂಜುವರೇನಯ್ಯಾ ? ಸ್ಥಲದಲ್ಲಿಪ್ಪ ವೇಷಧಾರಿಯ ರೂಪಕ್ಕಂಜುವರಲ್ಲದೆ**
**ವಿಷಯಗುಣ ರಂಜನೆಗಂಜುವರೇನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ**
**ನಿಮ್ಮ ಶರಣರೆಂಬ ಮದದಾನೆಗಳು ?**

ಮನವೆಂಬುದು ಮದ ತುಂಬಿದ ಆನೆ . ಇದು ಸಿಂಹದ ಘರ್ಜನೆಗೆ ಅಂಜುತ್ತದೆಯೇ ಹೊರತು ತನುವನ್ನು ತಳಮಳಕ್ಕೆ ಈಡು ಮಾಡುವ ರಾಗರಂಜನೆಗೆ ಅಂಜುವುದಿಲ್ಲ.

ವೇಷಧಾರಿಯ ರೂಪಕ್ಕೆ ಅಂಜುವರಲ್ಲದೆ ತನುವಿನಲ್ಲಿ ಉಂಟಾಗುವ ವಿಷಯಗುಣ ರಂಜನೆಗೆ ಅಂಜುವುದಿಲ್ಲ, ತನುವಿನಲ್ಲಿ ತನ್ಮಯವಾದ ಅರಿವು ಎನ್ನುವ ಗುರುದೇವನಿಗೆ ಮನ ಎನ್ನುವ ಮದ್ದಾನೆ ಶರಣು ಹೋಗಿ ಶರಣಾಗತನಾದರೆ. ಇಡೀ ತನುವೆ ನಿರ್ಭಯ ತನುವಾಗುವುದು.

**1667**

**ಅರಿಷಡ್ವರ್ಗಂಗಳಳಿದವ ಶರಣನೆಂಬರು, ಅದೆಂತಯ್ಯ ?**
**ಕಾಮವದು ಲಿಂಗಾರ್ಚನೆಯಲ್ಲಿ. ಕ್ರೋಧವದು ಷಣ್ಮತನಾಶದಲ್ಲಿ.**
**ಲೋಭವದು ಸಮ್ಯಗ್‌ಜ್ಞಾನದಲ್ಲಿ. ಮೋಹವದು ಮುಕ್ತಂಗನೆಯಲ್ಲಿ.**
**ಮದವದು ಮನದಲ್ಲಿ. ಮತ್ಸರವದು ಶಮನದಲ್ಲಿ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವನ್ನು ಅಳಿದವನನ್ನು ಶರಣನೆಂಬರು. ಇವು ಆರು ಅರಿಷಡ್ವರ್ಗಗಳು ತನುವನ್ನು ಬಿಟ್ಟು ಹೋಗುವುದಿಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಪೂಜಿಸುವ ಅರ್ಚಿಸುವ ಕಾಯಕದಲ್ಲಿ ಕಾಮ ತೊಡಗುತ್ತದೆ. ಶಣ್ಮತನಾಶದಲ್ಲಿ ಕ್ರೋಧ ತೊಡಗುತ್ತದೆ. ಸಮ್ಯಜ್ಞಾನದಲ್ಲಿ ಲೋಭ ಸೇರುತ್ತದೆ. ಮುಕ್ತ್ಯಂಗನೆಯಲ್ಲಿ ಮೋಹ ತೊಡಗುತ್ತದೆ.

ಮನದ ಮದವನ್ನು ಮುರಿಯುವ ಕೇಶದಲ್ಲಿ ಮದ ತೊಡಗುತ್ತದೆ. ಶಮನವು ಕಾಯಕದಲ್ಲಿ: ಕಾಯದಲ್ಲಿದ್ದ ಮತ್ಸರವನ್ನು ಶಮನ ಕಾಯಕದಲ್ಲಿ ತೊಡಗುತ್ತದೆ. ಅರಿಷಡ್ವರ್ಗಗಳು ಹೀಗೆ ಸದಾ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಪೂಜಿಸುತ್ತ ಅರ್ಚಿಸುತ್ತ ಆರಾಧಿಸುತ್ತ ಆತನ ಪಾದ ಕಮಲದಲ್ಲಿ ವಿರಮಿಸುತ್ತದೆ.

**1668**

**ಶಿಶುವಿನ ಕ್ರೀಡೆಯದು ತಾಯಿಗಲ್ಲದೆ ಅನ್ಯರಿಗುಂಟೆ ?**
**ಪಶುವಿನ ತಪ್ಪು ಪಶುಪತಿಯಾದವಂಗಲ್ಲದೆ ಅನ್ಯರಿಗುಂಟೆ**
**ಎನ್ನಹಂಕಾರ ನಿಮಗಲ್ಲದೆ ಜಗದ ಜಡರಿಗುಂಟೆ ? ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮಗುವಿನ ಕ್ರೀಡೆಯಲ್ಲಿ ಸದಾ ತಾಯಿ ಸುಖಿಸುವಂತೆ, ಕಾಯವೆಂಬ ಪಶುವಿನ ತಪ್ಪು ಕಾಯದಲ್ಲಿಯೇ ಸಂಗಮವಾದ ಪಶುಪತಿಯಾದವನಿಗಲ್ಲದೆ ಅನ್ಯರಿಗುಂಟೆ ?

ಎನ್ನ ತಪ್ಪು ಅನಂತ ಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲ ಎನ್ನುತ್ತಾರೆ ಬಸವಣ್ಣ. ಪಶು ನಾನು ಪಶುಪತಿ ನೀನು ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ ನಿಮ್ಮ ಬಯ್ಯದಂತೆ ಮಾಡು ಎಂದು ಬಸವಣ್ಣ ಕಾಯದಲ್ಲಿಯೇ ಇದ್ದ ಪಶುಪತಿಯೊಂದಿಗೆ ಮಾತನಾಡಿದ್ದಾರೆ. ಹಾಗೆಯೇ ಸಿದ್ಧರಾಮ ಶಿವಯೋಗಿಗಳು ಎನ್ನ ಅಹಂಕಾರವನ್ನು ನೀವು ಮಾತ್ರ ಸೈರಿಸಬಲ್ಲಿರಿ ಅದು ಜಗದ ಜಡರಿಗುಂಟೆ? ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದಿದ್ದಾರೆ.

**1669**

**ಜಗಕ್ಕೆ ಜಂಗಮನಲ್ಲದೆ ಎನ್ನಮನಕ್ಕೆ ಜಂಗಮನಲ್ಲ ನೋಡಾ.**
**ಎನ್ನ ಮನಕ್ಕೆ ಜಂಗಮನಲ್ಲದೆ, ಎಮ್ಮ ಪುರಾತರಿಗೆ ಜಂಗಮನಲ್ಲ ನೋಡಾ.**
**ಎಮ್ಮ ಪುರಾತರಿಗೆ ಜಂಗಮನಲ್ಲದೆ, ಚೆನ್ನಬಸವಣ್ಣಂಗೆ ಜಂಗಮನಲ್ಲ ನೋಡಾ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಗದ ಜನ ವ್ಯಕ್ತಿಯನ್ನು ಜಂಗಮನೆಂದು ಪೂಜಿಸುತ್ತಾರೆ. ಜಂಗಮ ವ್ಯಕ್ತಿಯಲ್ಲ. ವ್ಯಕ್ತಿಯಲ್ಲೇ ಸಂಗಮವಾದ ಅನಂತ ಶಕ್ತಿ . ಈತ ತನ್ನ ಖಡ್ಗದಿಂದ ಕಾಯಕ್ಕೆ ಬಂದ ಅಜ್ಞಾನದ ವಿಪತ್ತುಗಳನ್ನು ಕತ್ತರಿಸುತ್ತಾನೆ. ಮನ ಜಾಗ್ರತವಾಗಿ ತನ್ನ ಬಾಹ್ಯ ಕೆಲಸಗಳನ್ನು ಬಿಟ್ಟು ಅಂಗದಲ್ಲಿಯೇ

ಸಂಗಮವಾದ ಜಂಗಮನನ್ನು ಹುಡುಕಿ ಆತನ ಚರಣ ಕಮಲಗಳಿಗೆ ಎರಗಬೇಕು.

ಇದನ್ನು ಕರಗತ ಮಾಡಿಕೊಂಡವರು ಪುರಾತರು ಹಾಗೂ ಶರಣ ಚೆನ್ನ ಬಸವಣ್ಣ ಬಸವಾದಿ ಶರಣರು ಇವರಿಗೆ ಜಂಗಮರಿಲ್ಲ ಇವರು ಜಂಗಮರನ್ನು ಪೂಜಿಸರು. ಪ್ರತಿ ಅಂಗದಲ್ಲಿ ಸಂಗಮವಾದ ಜಂಗಮನನ್ನು ಪೂಜಿಸಿ ಆ ಜಂಗಮನೇ ತಾವಾದ ಮಹಾಂತರು ಅವರು.

**1670**

**ಜಂಗಮೋ ಹಿ ಜಗತ್ಪೂಜ್ಯೋಜಂಗಮೋಹಿ ಸದಾಶಿವಃ !**
**ಕ್ರೋಧಾನ್ಯಶಯತೇ ಲೋಕಂ ಮೋಹಾಲ್ಲೋಕಂ ವಿವರ್ಧತೇ**
**ಇಂತಪ್ಪ ಪರಮ ಜಂಗಮದ ಪಾದಕ್ಕೆ ನಮೋ ನಮೋ ಎಂಬೆನಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಂಗಮನು ಜಗತ್ಪೂಜ್ಯನು. ಮನೆತನದಿಂದ ಬಂದ ಜಂಗಮ ಜಂಗಮನಲ್ಲ. ಜಾತಿ ಜಂಗಮನು ಜಂಗಮನಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿನ ಮಹಾಶಕ್ತಿಯೆ ಜಂಗಮ . ಇಂತಹ ಜಂಗಮನನ್ನು ಅಂಗವನ್ನು ಆವರಿಸಿದ ಮನ ದರ್ಶನ ಮಾಡಿಕೊಂಡು ಆತನ ಪಾದಕ್ಕೆ ಎರಗಿದರೆ ಸಾಕು ಮನ ಘನ ಮನವಾಗುತ್ತದೆ. ಈ ಸರ್ವಶಕ್ತಿಯನ್ನು ಒಲಿಸಿಕೊಂಡ ಅಂಗವೇ ಜಂಗಮ, ಈತ ಸದಾಶಿವ. ಕಾಯದ ಕ್ರೋಧವನ್ನು ನಾಶ ಮಾಡಿಕೊಂಡವ ಇಂತಹ ಪರಮ ಜಂಗಮದ ಪಾದಕ್ಕೆ ನಮೋ ನಮೋ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1671**

**ಕರಿಕೆಯ ಕಂಡು ಪಶುಗಳಾಶ್ರಯಿಸುವವು. ಔತಣ ಕಂಡು ದ್ವಿಜರಾಶ್ರಯಿಸುವರು.**
**ಯುದ್ಧವ ಕಂಡು ಶೂರರಾಶ್ರಿಯಿಸುವರು. ಸಭೆಯ ಕಂಡು ವಿದ್ವಾಂಸರಾಶ್ರಯಿಸುವರು.**
**ಇವರೆಲ್ಲ ಮಾಯಾಮೂಕರಲ್ಲದೆ ಮಾಯಾರಹಿತರಲ್ಲಯ್ಯ,**
**ಕಂಡು ಕಂಡು ಕಣ್ದೆರೆದು ನೋಡದ, ಮಹಾಮಹಿಮ ಜಂಗಮನ ಪಾದಕ್ಕೆ,**
**ನಮೋ ನಮೋ ಎಂಬೆನಯ್ಯಾ , ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕರಿಕೆಯ ಕಂಡು ಪಶುಗಳು ಮೇಯಲು ಹೋಗುವವು. ಔತಣ ಕಂಡು ಬ್ರಾಹ್ಮಣರು ಉಣ್ಣಲು ಹೋಗುವರು. ಯುದ್ಧವ ಕಂಡು ಶೂರರು ತಮ್ಮ ಖಡ್ಗವ ಜಳಪಿಸುವರು. ಸಭೆಯ ಕಂಡು ವಿಧ್ವಂಸರು ಆಶ್ರಯಿಸುವರು ಇವರೆಲ್ಲ ಮಾಯೆಗೆ ಒಳಗಾದವರು. ಮಾಯಾರಹಿತರಲ್ಲ.

ಕಂಡೂ ಕಂಡೂ ಕಣ್ತೆರದು ನೋಡದ ಅಂಗದೊಳಗೆ ಸಂಗಮವಾದ ಮಹಾಮಹಿಮ ಜಂಗಮದ ಪಾದಕ್ಕೆ ನಾನು ನಮೋ ನಮೋ ಎಂಬೆನು ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1672**

**ಜಲಪ್ರಳಯದಲ್ಲಿ ಸುಳಿಯಬಹುದು ಅನೇಕ ಯುಗ ಜುಗಂಗಳಲ್ಲಿ.**
**ನಿಮ್ಮ ಶರಣರ ಚಿತ್ತ ಬೇಸರವಾದಲ್ಲಿ,**
**ಸುಳಿಯಬಾರದೊಂದು ನಿಮಿಷ ನೋಡಯ್ಯಾ. ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಜಲಪ್ರಳಯದಲ್ಲಿ ಸುಳಿಯಬಹುದು. ಆದರೆ ಶರಣರ ಚಿತ್ತ ಬೇಸರವಾದಲ್ಲಿ ಸುಳಿಯಬಾರದು ಒಂದು ನಿಮಿಷ ನೋಡಯ್ಯ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಶರಣರನ್ನು ಕಂಡು ಹಿಡಿಯಲು ಸಿದ್ಧರಾಮ ಶಿವಯೋಗಿಗಳಂತಹ ಮಹಾಯೋಗಿಗಳಿಗೆ ಮಾತ್ರ ಸಾಧ್ಯವಾಗುತ್ತದೆ. ಶರಣರ ಸಂಗದಲ್ಲಿ ಸದಾ ಇದ್ದು ಅವರ ಚಿತ್ತ ಬೇಸರವಾಗದಂತೆ ನಡೆದುಕೊಂಡು ಮಹಾಶಿವಯೋಗಿಗಳೆ ತಾವಾದರು. ಸದಾ ಕಪಿಲಸಿದ್ಧಿ ಮಲ್ಲಿಕಾರ್ಜುನನನ್ನು ನೆನೆಯುತ್ತಾ ನೆನೆಯುತ್ತಾ ಸಾಕ್ಷಾತ್ ಕಪಿಲಸಿದ್ಧ ಮಲ್ಲಯ್ಯನೆ ತಾವಾದರು.

**1673**

**ಬಿಟ್ಟ ಪದವಿಯ ಬಟ್ಟೆಗೆ ಪೋಪಾತನಲ್ಲ ನೋಡಾ, ಶರಣನು.**
**ಬಿಟ್ಟು ಬಿಟ್ಟು ಬಯಲಿಟ್ಟು ಅಟ್ಟೆ ಬಟ್ಟೆಗೊಂಡರು ಭವಕ್ಕೆ .**
**ಹಿಡಿದು ಹಿಡಿದು ಭವಕ್ಕೆ ಬಾರದೆ ಭವವಿರಹಿತರಾದರು ಕಂಡೆಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ, ನಿಮ್ಮ ಮಹಾಮಹಿಮ ಶರಣರು.**

ಶರಣರಿಗೆ ಯಾವ ಪದವಿಯ ಆಸೆಯೂ ಇಲ್ಲ, ಪದವಿ ಪಡೆಯುವ ಯಾವ ಕಾಯಕವನ್ನೂ ಅವರು ಮಾಡರು. ಶರಣರು ಜೋಳವಾಳಿಗರಲ್ಲ ವೇಳೆಯ ವಾಳಿಗರು.

ಕಾಯದಲ್ಲಿ ಸಂಗಮವಾದ ಅರಿವು ಎನ್ನುವ ಗುರುದೇವನ ಪಾದಕ್ಕೆ ಶರಣು ಹೋದ ಮನವೇ ಶರಣ. ಕಾಯವನ್ನು ಆವರಿಸಿದ ಮನ ಕಾಯದಲ್ಲೇ ಸಂಗಮವಾದ ಮಹಾದೇವನಿಗೆ ಶರಣು ಹೋಗಿ ಆ ಮನವೇ ಶರಣನಾಗಿದೆ. ಹೀಗಾಗಿ ಈತನಿಗೆ ಜನನ ಮರಣಗಳಿಲ್ಲ. ಕಪಿಲಸಿದ್ಧ ಮಲ್ಲಿಕಾರ್ಜುನಾ ನಿಮ್ಮ ಮಹಾಮಹಿಮರು ಶರಣರು.

**1674**

**ಮನುಜರ ಮನ್ನಣೆಯದು ಮಸೆದಲಗಿನ ಗಾಯ ನೋಡಾ.**
**ಮನುಜರ ಮನ್ನಣೆಯದು ಪರಿಮಳಪುಷ್ಪದ ಸೋಂಕು ನೋಡಾ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಮನುಜರು ಎಂದರೆ ಮನವುಳ್ಳವರು. ಇವರು ಮನ್ನಣೆಯು ಮಸೆದ ಅಲಗಿನ ಗಾಯದಂತೆ. ಇವರು ಮತ್ತೊಬ್ಬ ಮನುಷ್ಯನ ಮೇಲೆ ಭಾವ ಮಾಡಿ ಗೆಳೆತನ ಮಾಡುವುದು ತಡವಿಲ್ಲ, ಆ ಭಾವ ದುರ್ಭಾವಕ್ಕೊಳಗಾಗಿ ಮಸೆದ ಅಲಗಿನೊಂದಿಗೆ ಗಾಯ ಮಾಡುವುದು ತಡವಿಲ್ಲ. ಅವರು ಪರಿಮಳ ಪುಷ್ಪದೊಂದಿಗೆ ಮನ್ನಣೆ ಮಾಡುವುದು ತಡವಿಲ್ಲ. ಅವರ ಭಾವ ದುರ್ಭಾವವಾಗಿ ಹಗೆತನ ಮಾಡುವುದು ತಡವಿಲ್ಲ.

ಶರಣ ಮನುಜರೊಂದಿಗೆ ಮಾತನಾಡುವುದಿಲ್ಲ. ಅವರ ಅಂಗದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ಮಾತನಾಡುತ್ತಾರೆ. ಹೀಗಾಗಿ ಮನುಜರ ಸೋಂಕು ಶರಣರಿಗೆ ತಾಕುವುದಿಲ್ಲ.

**1675**

**ತಿಳಿದು ನುಡಿ ಕೊಡಬೇಕಲ್ಲದೆ. ತಿಳಿಯದ ನುಡಿಯದು ಅಪಭ್ರಂಶವಯ್ಯಾ.**
**ತಿಳಿನುಡಿ ಎರಡೊಂದಾದಡೆ, ಮೃಡಮೂರ್ತಿ ಕಪಿಲಸಿದ್ಧ ಮಲ್ಲಿಕಾರ್ಜುನ**

**ನುಡಿಗೊಮ್ಮೆ ನುಡಿವ ನೋಡಾ, ಬೊಮ್ಮಣ್ಣಾ.**

ಶರಣರು ಸದಾ ಸಿಹಿ ನುಡಿಯನ್ನೇ ನುಡಿಯುತ್ತಾರೆ. ಅವರು ನುಡಿದ ನುಡಿಯಲ್ಲಿ ಅಪಭ್ರಂಶವಿರುವುದಿಲ್ಲ. ಜನ ಭಾವದಿಂದ ನುಡಿಯಲಿ ಅಥವಾ ದುರ್ಭಾವದಿಂದ ನುಡಿಯಲಿ, ಎರಡೂ ನುಡಿಗಳನ್ನು ನಿರ್ಭಾವ ಮಾಡಿ ತಿಳಿಗೊಳಿಸಿ ಪರಮಾನಂದದಿಂದ ಕೇಳುತ್ತಾರೆ.

ಮೃಡಮೂರ್ತಿ ಕಪಿಲಸಿದ್ಧ ಮಲ್ಲಿಕಾರ್ಜುನ ನುಡಿಯುವ ನುಡಿಯನ್ನು ಪಾಲಿಸಿ ತಿಳಿ ಮಾಡಿ ನುಡಿಯಲು ಹೇಳುವ ಆ ಧ್ವನಿಯನ್ನು ಆಲಿಸುವಂತೆ ಸಿದ್ಧರಾಮ ಶಿವಯೋಗಿಗಳು ಬೊಮ್ಮಣ್ಣ ಶರಣರಿಗೆ ಹೇಳಿದ್ದಾರೆ.

**1676**

**ಮಾನವಿಲ್ಲದ ಭೋಜನವದು ಶ್ವಾನನ ಮಾಂಸವಯ್ಯಾ.**
**ಜ್ಞಾನವಿಲ್ಲದ ಕ್ರಿಯೆಯದು ಸಿದ್ದಿಗಳಿಗೀಡಯ್ಯಾ.**
**ಧ್ಯಾನವಿಲ್ಲದ ಪೂಜೆಯದು ಕಾನನ ಜ್ಯೋತಿಯಯ್ಯಾ.**
**ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಾ,**
**ನೀನಿಲ್ಲದೆ ಭಕ್ತಿಯದು ಚಾಂಡಾಲ ಪಾಕವಯ್ಯಾ.**

ಭಕ್ತಿಯೆಂದರೆ ಕಲ್ಲು ಮೂರ್ತಿಗಳನ್ನು ಪೂಜಿಸುವುದು ಅಲ್ಲ. ಇದನ್ನು ಶರಣರು ಭಕ್ತಿ ಎಂದು ಕರೆದಿಲ್ಲ. ಶರಣರು ಮಾಡುವ ಭಕ್ತಿಯೇ ಬೇರೆ. ಲೋಕ ಮಾಡುವ ಭಕ್ತಿಯೇ ಬೇರೆ. ಲೋಕಕ್ಕೆ ಶರಣರ ಭಕ್ತಿ ತಿಳಿಯದು. ಲೋಕದ ಭಕ್ತಿ ಮಾನವಿಲ್ಲದ ಶ್ವಾನ ಮಾಂಸದ ಭೋಜನದಂತೆ, ಜ್ಞಾನವಿಲ್ಲದ ಕ್ರಿಯೆಯಂತೆ. ಈ ಭಕ್ತಿ ಸಿದ್ಧಿಗಳಿಗೆ ಈಡಾಗುತ್ತದೆ. ಇದು ಧ್ಯಾನವಿಲ್ಲದ ಪೂಜೆಯ ಕಾನನ ಜ್ಯೋತಿಯಂತೆ; ಶರಣರು ಮಾಡುವ ಭಕ್ತಿಯೆ ಬೇರೆ. ಕಾಯದಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಿಕಾಜುನನನ್ನು ಕಾಯವನ್ನು ಆವರಿಸಿದ ಮನದಿಂದ ಭಕ್ತಿ ಮಾಡುವರು.

**1677**

**ಚತುರ್ವರ್ಣಿಯಾದಡೇನು, ಚತುರ್ವರ್ಣಾತೀತನೆ ವೀರಶೈವ ನೋಡಾ.**
**ಚತುರ್ವೇದಿಯಾದಡೇನು, ಚರಮ ದೇಹವಳಿಯದವನೆ ಚಾಂಡಾಲ ನೋಡಾ**
**ಚತುರಂಗಬಲಯುಕ್ತನಾದಡೇನು.**
**ಚತುರಗುಣವಿಲ್ಲದಿದ್ದಡೆ ದೇಶವನಾಳ್ವ ಪರಿಯ ನೋಡಾ**
**ಚರಮ ದೇಹಿಯಾದಡೇನು, ಗಜಚರ್ಮಧರ ಕಪಿಲಸಿದ್ಧ ಮಲ್ಲಿಕಾರ್ಜನ**
**ಪ್ರಸನ್ನವಾಗದನ್ನಕ್ಕ ಬಾಳುವೆ ನೋಡಾ.**

ಅರಿವು ಎನ್ನುವುದು ವೇದ ಆಗಮ , ಉಪನಿಷತ್ತುಗಳಲ್ಲಿ ಇಲ್ಲ. ಭಗವದ್ಗೀತೆ, ಬೈಬಲ್, ಕುರಾನ್‌ಗಳಲ್ಲಿಯೂ ಇಲ್ಲ. ಪ್ರತಿ ಕಾಯದಲ್ಲಿಯೂ ಅರಿವು ಇದೆ. ಆ ಅರಿವನ್ನೇ ಪುರಾತರು ಗುರದೇವನೆಂದು ಕರೆದರು. ಕಾಯವನ್ನು ಆವರಿಸಿದ ಅಜ್ಞಾನಿ ಮನವನ್ನು ಗುರುದೇವನಿಗೆ ಭಕ್ತನಾಗಲು ಹೇಳಿದರು. ಹೀಗೆ ಅರಿವಿನ ಕಾಯದಲ್ಲಿ ತೊಡಗಿದವರು ವರ್ಣಾತೀತರು. ದೇಹಭಾವ ಅಳಿದವರು. ಇವರು ಸಾಕ್ಷಾತ್ ಗಜ ಚರ್ಮಧರ ಕಪಿಲಸಿದ್ಧಮಲ್ಲಿಕಾರ್ಜುನ ದೇವರು. ಇಂತಹ

ದೇವರು ಕಾಯಗಳಿಗೆ ಪ್ರಸನ್ನವಾಗದಿದ್ದರೆ ಅವರ ಬಾಳುವೆ ಚಾಂಡಾಲ ಬಾಳುವೆ. ಗುಣವಿಲ್ಲದ ದೇಶವನಾಳ್ವ ರಾಜನಂತೆ ಈತ ಯಾರಿಗೂ ಒಳಿತನ್ನು ಮಾಡಲಾರ.

**1678**

**ಸಂಪಿಗೆಗಂಧವ ಸೇವಿಸಿದಲ್ಲಿ ಭ್ರಮರ ಜನ್ಮ ಈಡಾಡಿತ್ತು.**
**ಕೇಸರಿ ತನ್ನ ಗಂಧಕ್ಕಾಗಿ ತನ್ನ ಜನ್ಮ ಈಡಾಡಿತ್ತು**
**ಶರಣನ ಬೋಧೆ ಸೇವಿಸಿದಲ್ಲಿ ಎನ್ನ ಜನ್ಮ ಈಡಾಡಿತ್ತು ನೋಡಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಶರಣನ ಬೋಧೆ ಅಗಾಧವಾದದ್ದು. ಅದನ್ನು ಸೇವಿಸಿದವನೇ ಧನ್ಯ. ಅವನ ಇಡೀ ಅಜ್ಞಾನದ ಜನ್ಮ ತನ್ನದೇ ಆದ ತನುವಿನಲ್ಲಿ ತನ್ಮಯವಾದ ಮಹಾಜ್ಞಾನದಲ್ಲಿ ಕಳೆದು ಹೋಗುತ್ತದೆ.

ತನ್ನ ತನುವಿನಲ್ಲಿ ತನ್ಮಯವಾದ ಮಹಾಜ್ಞಾನ ಪಡೆಯುವುದಕ್ಕೆ ಯಾವ ತನುವಿಗೂ ಸಾಧ್ಯವಾಗುವುದಿಲ್ಲ. ಶರಣನಿಗೆ ಮಾತ್ರ ಸಾಧ್ಯವಾಗುತ್ತದೆ. ಹೀಗಾಗಿ ಸಕಲ ತನುಗಳಿಗೂ ಶರಣನ ಬೋಧೆಯ ಅವಶ್ಯಕತೆಯಿದೆ.

ಲೋಕದಲ್ಲಿರುವ ಗುರುದೇವ ತನ್ನನ್ನು ಮೇಲೆ ಮಾಡಿಕೊಂಡು ಶಿಷ್ಯನನ್ನು ಕೆಳಗೆ ಮಾಡಿ ಬೋಧಿಸುತ್ತಾನೆ. ಶಿಷ್ಯ ಸದಾ ಶಿಷ್ಯನಾಗಿಯೇ ಇರುತ್ತಾನೆ. ಗುರುದೇವ ಸದಾ ಗುರುದೇವನಾಗಿ ಮುಂದುವರಿಯುತ್ತಾನೆ. ಶರಣ ಹಾಗಲ್ಲ. ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ ಎಂದು ಹೇಳುತ್ತ ತಾನು ಹೇಳಿದ ಬೋಧೆ ಆಲಿಸಲು ಬಂದ ತನುವನ್ನು ಹಿರಿದನ್ನಾಗಿಸಿ ಆ ತನುವಿನಲ್ಲಿರುವ ಮಹಾಜ್ಞಾನದ ವೃತ್ತಾಂತವನ್ನು ಹೇಳುತ್ತಾನೆ. ಹೀಗೆ ಹೇಳುವ ಶರಣರು ವಿರಳಾತಿವಿರಳ

ತನುವಿನಲ್ಲಿ ತನ್ಮಯವಾದ ಮಹಾಜ್ಞಾನವನ್ನು ತನುವನ್ನು ಆವರಿಸಿದ ಮನ ಸ್ವೀಕರಿಸಿ ಆ ಮಹಾಜ್ಞಾನದಲ್ಲಿ ತನ್ನ ಅಜ್ಞಾನವನ್ನು ಕಳೆದುಕೊಂಡು ಘನಮನವಾಗುತ್ತದೆ. ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನನೆ ತಾನಾಗುತ್ತದೆ.

**1679**

**ಬೋಧವೆಂದಡೆ, ಕರ್ಣವನೂದಿ ಮಂತ್ರವ ಹೇಳಿದುದು ಬೋಧವೆ? ಅಲ್ಲಲ್ಲ!**
**ಬೋಧವೆಂದಡೆ, ತನುತ್ರಯ ಸಾಕ್ಷಿ ನೀನೇ ಪರವಸ್ತು ಎಂಬುದೆ ನಿಜಬೋಧ**
**ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಲೋಕದ ಗುರುಗಳು ಶಿಷ್ಯರಿಗೆ ಬೋಧೆ ಮಾಡುವುದೇ ಬೇರೆ, ನಿಜ ಗುರು ಶಿಷ್ಯನಿಗೆ ಬೋಧೆ ಮಾಡುವುದೆ ಬೇರೆ. ಲೋಕದ ಗುರು ಶಿಷ್ಯನ ಕಡೆಯಿಂದ ವಸ್ತ್ರ ಭೂರಿ ಭೋಜನ ಮಾಡಿ, ದವಸ-ಧಾನ್ಯಗಳನ್ನು ಪಡೆದು ತಾನು ಗುರುವಾಗಿ, ಬೋಧೆ ಪಡೆವವನನ್ನು ಶಿಷ್ಯನನ್ನಾಗಿಸಿಕೊಂಡು ತಾನು ಗದ್ದಿಗೆಯ ಮೇಲೆ ಕುಳಿತು ಬೋಧೆ ಪಡೆಯುವ ಶಿಷ್ಯನನ್ನು ಕರೆದು ಕಿವಿಯಲ್ಲಿ ಷಡಕ್ಷರಿ ಮಂತ್ರ ಅಥವಾ ಪಂಚಾಕ್ಷರಿ ಮಂತ್ರವನ್ನು ಊದುತ್ತಾನೆ. ಶಿಷ್ಯ ಧನ್ಯನಾದೆನೆಂದು ತಿಳಿದು ಗುರುವಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಅಧಿಕೃತ ಶಿಷ್ಯನಾಗುತ್ತಾನೆ.

ವರ್ಷಕ್ಕೊಂದು ಬಾರಿಯೋ ಎಡು ಬಾರಿಯೋ ಗುರುದೇವ ಶಿಷ್ಯನ ಮನೆಗೆ ಬಂದು ಅವನ

ಯೋಗ ಕ್ಷೇಮ ವಿಚಾರಿಸಿ ಭೂರಿ ಭೋಜನ ಸ್ವೀಕರಿಸಿ ದಕ್ಷಿಣೆ ಪಡೆದು ಮತ್ತೊಬ್ಬ ಶಿಷ್ಯನ ಮನೆಗೆ ಗುರುದೇವ ಹೋಗುತ್ತಾನೆ. ಇದು ಲೋಕದ ಗುರುದೇವ ಲೋಕದ ಶಿಷ್ಯನಿಗೆ, ಬೋಧೆ ಮಾಡಿದ ವಿವರ.

ನಿಜ ಗುರುದೇವ ಹಾಗಲ್ಲ. ಶಿಷ್ಯನನ್ನು ಕರೆದು ನೀನು ನನಗೆ ಶಿಷ್ಯನಲ್ಲ ನಿನ್ನೊಳಗೆ ಒಬ್ಬ ಗುರುದೇವನಿದ್ದಾನೆ. ಆತನಿಗೆ ನೀನು ಎನ್ನುವ ಮನ ಶಿಷ್ಯನಾಗಬೇಕು. ನಾನು ನಿನ್ನೊಳಗಿದ್ದ ಗುರುದೇವನನ್ನು ಶಿಷ್ಯನನ್ನಾಗಿಸಿಕೊಳ್ಳಲು ಬರುವುದಿಲ್ಲ ಮತ್ತು ನಿನ್ನ ತನುವನ್ನು ಆವರಿಸಿದ ಮನಕ್ಕೆ ನಾನು ಬೋಧೆ ಮಾಡಲು ಸಾಧ್ಯವಿಲ್ಲ. ಹೀಗಾಗಿ ಶಿಷ್ಯನಿಗೆ ಬೋಧೆ ನಿಲ್ಲುವುದಿಲ್ಲ. ನಿನ್ನೊಳಗಿನ ಗುರುವಿಗೆ ಬೋಧೆ ಬೇಕಾಗಿಲ್ಲ. ಕಾಣುವ ತನು ಸ್ಥೂಲ ತನು, ನಿನ್ನ ತನುವನ್ನು ಮನ ಆವರಿಸಿಕೊಂಡಿದೆ. ನಿನ್ನ ತನುವಿನಲ್ಲಿಯೇ ಮಹಾಜ್ಞಾನ ತನ್ಮಯವಾಗಿದೆ.

ಸ್ಥೂಲ ತನು, ಸೂಕ್ಷ್ಮತನುವನ್ನು; ಮಹಾಜ್ಞಾನ ತನುವನ್ನು ತನುವಿನಲ್ಲಿಯೇ ಸಂಗಮಗೊಳಿಸಿಕೊಂಡಿದೆ. ನಿನ್ನ ತನುವನ್ನು ಆವರಿಸಿದ ಮನವೆಂಬ ಸೂಕ್ಷ್ಮ ತನುವನ್ನು ನಿನ್ನ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನವೆಂಬ ಕಾರಣ ತನುವಿನಲ್ಲಿ ಸಂಗಮಗೊಳಿಸಿದಾಗ ತನುತ್ರಯ ಸಾಕ್ಷಿಯಾಗಿ ನೀನೆ ಪರವಸ್ತು ಆಗುವೆ ಎಂದು ಗುರುದೇವ ಮಹಾಜ್ಞಾನವನ್ನು ತಿಳಿಯಲು ಬಂದ ಆಸಕ್ತ ತನುವಿಗೆ ನಿಜ ಬೋಧ ಮಾಡಿಸುತ್ತಾನೆ. ಗುರುಮುಟ್ಟಿ ಗುರುವನ್ನಾಗಿಸಿಕೊಳ್ಳುವ ಶಕ್ತಿ ನಿಜಗುರುವಿಗೆ ಇದೆ. ಈತ ಗುರುದೇವನನ್ನು ತೋರಿಸುವ ನಿಜಗುರು.

**1680**

**ಹೇಳಿದ ಬೋಧೆ ಶಿಲಾಲಿಪಿಯಂತಾದಡೆ, ಶಿಲಾಸದೃಶ ನೋಡಾ ಭವಕ್ಕೆ.**
**ಹೇಳಿದ ಬೋಧೆ ಜಲಲಿಪಿಯಾದಡೆ, ಜಲ ಸದೃಶ ನೋಡಾ ಭವಕ್ಕೆ.**
**ಹೇಳಿದ ಬೋಧೆ ಗಟ್ಟಿಗೊಂಡಡೆ, ಆಳುವುದೆತ್ತ ನಿನ್ನ ಮಾಯಾಜಾಲವ,**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಗುರುದೇವ ಶಿಷ್ಯನಿಗೆ ಮಾಡಿದ ಬೋಧೆಯನ್ನು ಆಲಿಸಿ ಅದನ್ನು ಹುರು ಹೊಡೆದು ಮತ್ತೊಂದು ತನುವಿನ ಮುಂದೆ ಉಪನ್ಯಾಸ ಮಾಡಿದಡೆ ಅದು ಮನಕ್ಕೆ ಮನರಂಜನೆಯಾಯಿತ್ತೆ ಹೊರತು ಮನ ಘನಮನವಾಗಲಿಲ್ಲ ಹೀಗಾಗಿ ಶಿಷ್ಯನಿಗೆ ಜನನ ಮರಣಗಳ ಬಾಧೆ ತಪ್ಪಲಿಲ್ಲ.

ಗುರುದೇವ ಶಿಷ್ಯನಿಗೆ ಮಾಡಿದ ಬೋಧೆ ಶಿಷ್ಯ ಶೌಚಾಚ ಮನ ಮಾಡಿ ಪೂಜೆಗಾಗಿ ಗುರದೇವನ ಬೋಧೆ ಬಳಸಿದಡೆ ಅದು ಜಲದಲ್ಲಿ ಬೆರೆಸಿದಂತೆ. ಶಿಷ್ಯನಿಗೆ ಜನನ ಮರಣಗಳ ಬಾಧೆ ತಪ್ಪುವುದಿಲ್ಲ. ಗುರುದೇವ ಹೇಳಿದ ಬೋಧೆ ಗಟ್ಟಿಗೊಂಡು ಲೀಲಾಜಾಲವಾಗಿ ವೇದಿಕೆಗೆ ಬಳಸಿದಡೆ ಬೋಧಿಸಿದ ಬೋಧೆ ಮಾಯೆಯಲ್ಲಿ ಸೇರಿಕೊಂಡು ತನ್ನ ಅಜ್ಞಾನಕ್ಕೆ ಬಲಬಂದು ಶಿಷ್ಯನಿಗೆ ಜನನ ಮರಣಗಳ ಬಾಧೆ ತಪ್ಪಲಿಲ್ಲ. ಗುರುದೇವನ ಬೋಧೆಯನ್ನು ಮನ ತನ್ನ ಅಜ್ಞಾನವನ್ನು ಮುರಿದುಕೊಳ್ಳಲು ಸೂತ್ರರೂಪವಾಗಿ ಬಳಕೆಮಾಡಿಕೊಳ್ಳಬೇಕು. ಆ ಸೂತ್ರರೂಪದ ರಹದಾರಿಯನ್ನು ಹಿಡಿದುಕೊಂಡು ತನ್ನ ತನುವಿನಲ್ಲಿಯೇ ತನ್ಮಯವಾದ ಮಹಾಜ್ಞಾನದಲ್ಲಿ ಸಂಗಮವಾಗಬೇಕು. ಮಹಾಜ್ಞಾನವೆಂದರೆ ತನುವಿನಲ್ಲಿಯೇ ತನ್ಮಯವಾದ ಅರಿವು. ಆ ಅರಿವನ್ನೆ ಗುರುದೇವನೆಂದು ತಿಳಿ ಹೇಳಿದ ಶಿಷ್ಯನಿಗೆ ಬೋಧೆ ಮಾಡಿದ ನಿಜಗುರು.

ನನಗೆ ಶಿಷ್ಯನಾದ ನೀನು ನಿನ್ನ ತನುವಿನಲ್ಲಿಯೇ ತನ್ಮಯವಾದ ಅರಿವು ಎನ್ನುವ ಗುರುದೇವನಿಗೆ ಶಿಷ್ಯನಾಗು. ಇನ್ನು ಮುಂದೆ ಆತನೇ ನಿನಗೆ ಗುರದೇವ. ನಾನು ನಿನಗೆ ಗುರುವಲ್ಲ.

ನೀನು ನನಗೆ ಶಿಷ್ಯನಲ್ಲ. ನಿನ್ನ ನಿಜ ಗುರು ನಿನ್ನ ತನುವಿನಲ್ಲಿಯೇ ಇದ್ದಾನೆ. ಆ ನಿಜ ಗುರುದೇವನಿಗೆ ನಿಜ ಶಿಷ್ಯ ನೀನು. ಆತ ನೀನು ತಪ್ಪಿದಾಗ ನಿನ್ನ ಕೈ ಹಿಡಿದು ನಡೆಸುತ್ತಾನೆ. ಆತ ನಿನ್ನನ್ನು ತನ್ನಂತೆ ಮಾಡಿಕೊಳ್ಳುತ್ತಾನೆ. ಆತನ ಬೋಧೆಯನ್ನು ಸದಾ ನೀನು ಆಲಿಸಿ ಆ ಗುರುದೇವನೇ ನೀನಾಗು ಎಂದು ಹೇಳುತ್ತಾ ಗುರುದೇವ ಶಿಷ್ಯನಿಂದ ದೂರ ಸರಿಯುತ್ತಾನೆ; ಆತನಿಗೆ ನಿಜಗುರುದೇವನನ್ನು ತೋರಿಸಿ.

**1681**

**ಮಂತ್ರವ ಜಪಿಸಿ ಫಲವೇನಯ್ಯಾ ಮಂತ್ರಮೂರ್ತಿ ಕಾಣದನ್ನಕ್ಕ?**
**ಯಂತ್ರವ ಧರಿಸಿ ಫಲವೇನಯ್ಯಾ , ಅಂತರ ರೋಗ ಪರಿಹಾರವಾಗದನ್ನಕ್ಕ?**
**ತಂತ್ರವನೋದಿ ಫಲವೇನಯ್ಯಾ , ಅದರಂತರ ಮೈಗೂಡದನ್ನಕ್ಕ?**
**ಶರಣನಾಗಿ ಫಲವೇನಯ್ಯಾ , ಲಿಂಗ ಜಂಗಮವ ಪೂಜಿಸಿ ಮೋಕ್ಷವಡೆಯದನ್ನಕ್ಕ?**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಮಂತ್ರವ ಜಪಿಸಿದರೆ ತನುವನ್ನು ಆವರಿಸಿದ ಮನಕ್ಕೆ ತನುವಿನಲ್ಲಿಯೇ ತನ್ಮಯವಾದ ಮಂತ್ರಮೂರ್ತಿ ಕಾಣುವುದಿಲ್ಲ. ರಟ್ಟೆಗೆ ಯಂತ್ರವ ಧರಿಸಿದರೂ ಫಲವಿಲ್ಲ. ತನುವಿನ ಅಂತರಂಗದ ರೋಗ ಪರಿಹಾರವಾಗದೆ ತಂತ್ರವನೋದಿದರೂ ಫಲವಿಲ್ಲ ಅದರಂತರ ಮೈಗೂಡದನ್ನಕ್ಕ.

ಶರಣನಾಗಿಯೂ ಫಲವಿಲ್ಲ. ಶರಣತ್ವ, ಶರಣ ಎಂದು ಹೆಸರಿಟ್ಟುಕೊಂಡರೆ ಸಿಗುವುದಿಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವು ಎನ್ನುವ ಲಿಂಗ ಜಂಗಮರೊಳಗೆ ಅಂಗವನ್ನು ಆವರಿಸಿದ ಮನ ಸಂಗಮವಾಗದ ವಿನಹ ಲಿಂಗ ಜಂಗಮರನ್ನು ಪೂಜಿಸಿಯೂ ಫಲವಿಲ್ಲ.

ಲಿಂಗ ಜಂಮುಗಮರೆಂದರೆ ವ್ಯಕ್ತಿಗಳಲ್ಲ ಪ್ರತಿ ವ್ಯಕ್ತಿಯಲ್ಲಿ ಸಂಗಮವಾದ ಮಹಾಜ್ಞಾನ ಶಕ್ತಿ .

**1682**

**ಲಿಂಗವ ಪೂಜಿಸಿದ ಫಲ ನೀಲಲೋಚನೆಗಾಯಿತ್ತು.**
**ಜಂಗಮವ ಪೂಜಿಸಿದ ಫಲ ಬಸವಣ್ಣಂಗಾಯಿತ್ತು .**
**ಮಂತ್ರವ ಪೂಜಿಸಿದ ಫಲ ಅಜಗಣ್ಣಂಗಾಯಿತ್ತು .**
**ಯೋಗವ ಪೂಜಿಸಿದ ಫಲ ಸಿದ್ಧರಾಮಂಗಾಯಿತ್ತು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಲಿಂಗವ ಪೂಜಿಸಿದ ಫಲ ನೀಲಾಲೋಚನೆಗಾಯಿತ್ತು .'' ಪತಿಯೆನ್ನಬಹುದೆ ಆನು ಬಸವಂಗೆ. ಸತಿಯೆನ್ನಬಹುದೆ ಬಸವನು ಎನಗೆ. ಆನು ಬಸವಂಗೆ ಶಿಶುವಾದೆ, ಬಸವನು ಎನಗೆ ಶಿಶುವಾದ'' ಇದು ನೀಲಾಲೋಚನೆ ಲಿಂಗವ ಪೂಜಿಸಿದ ಫಲ.

ಜಂಗಮವ ಪೂಜಿಸಿದ ಫಲ ಬಸವಣ್ಣಂಗಾಯಿತ್ತು: ಸಕಲ ತನುಗಳಲ್ಲಿಯೂ ಬಸವ ಣ್ಣ ಜಂಗಮನನ್ನು ಕಂಡು ಆ ಜಂಗಮನಿಗೆ ಶರಣು ಶರಣಾರ್ಥಿ ಎಂದು ತಲೆಬಾಗಿದ. '' ಎಡದ ಕೈಯಲ್ಲಿ ಕತ್ತಿ , ಬಲದ ಕೈಯಲ್ಲಿ ಮಾಂಸ, ಬಾಯಲ್ಲಿ ಸುರೆಯ ಗಡಿಗೆ ಇರಲು ಅವರನ್ನು ಲಿಂಗವೆಂಬೆ, ಜಂಗಮವೆಂಬೆ ಕೂಡಲಸಂಗಮದೇವಾ ಅವರ ಮುಖ ಲಿಂಗಿಗಳೆಂಬೆ'' ಬಸವಣ ಪೂಜಿಸಿದ ಜಂಗಮ ಫಲ ಇದು. ಮಂತ್ರವ ಪೂಜಿಸಿದ ಫಲ ಅಜಗಣ್ಣಂಗಾಯಿತ್ತು : ಗುರುಲಿಂಗದ ಕೃಪೆಯಿಂದ ಸಜ್ಜನರ ಸಂಗ ಸುಖವ ಕಂಡೆ. ಏನೆಂದುಪಮಿಸುವೆನಯ್ಯಾ ಗುರುಲಿಂಗದ

ಮಹಿಮೆಯನು. ಮಹಾಘನವೆಂಬ ಸೋಮೇಶ್ವರನು ಗುರುಲಿಂಗವ ತೋರಿದನಾಗಿ'' ಇದು ಅಜಗಣ್ಣ ಗುರುದೇವನನ್ನು ಪೂಜಿಸಿದ ಫಲ.

ಯೋಗವ ಪೂಜಿಸಿದ ಫಲ ಸಿದ್ಧರಾಮಂಗಾಯಿತ್ತು : ಯೋಗವೆಂದರೆ ಮೈ ಮುರಿದು ದಣಿಯುವುದಲ್ಲ. ಉಸಿರಾಟದ ಕ್ರಿಯೆಯು ಅಲ್ಲ. ತನುವಿಗೆ ಯಾರೂ ಉಸಿರಾಡುವುದನ್ನು ಕಲಿಸುವ ಅಗತ್ಯವಿಲ್ಲ. ಯೋಗವೆಂದರೆ ಕೂಡುವುದು. ತನು, ಮನ, ಅರಿವು ಒಂದಾಗುವುದು. ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಲ್ಲಿ ಸಂಗಮವಾಗುವುದೇ ಯೋಗ.

**1683**

**ಪೂಜಾಫಲವಂತಿಂತಲ್ಲ 'ಪೂಜಾಫಲಂ ಫಲಂ ಮನ್ಯೇ ತವ ಪಾಣಿಗ್ರಹಂ ಶಿವೇ'**
**ಪೂಜಾಫಲವಂತಿಂತಲ್ಲ 'ಪೂಜಾಫಲಂ ಫಲಂ ಮನ್ಯೇ ಮದ್ಧ್ಯಾನಾಸಕ್ತ ಪೂರುಷ'**
**ಎಂದು ನೀ ಹೇಳಿದ ವಾಕ್ಯ ಹುಸಿಯೇನಯ್ಯಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ?**

ಕಾಯದಲ್ಲಿ ಸಂಗಮವಾದ ಗುರುದೇವನನ್ನು ಮನ ಪೂಜಿಸಲು ಬಂದರೆ ಸಾಕು ಪೂಜಿಸಿದ ಫಲಕ್ಕೆ ಸಾಕ್ಷಾತ್ ಶಿವ ಒಲಿಯುವನು. ಶಿವನೆಂದರೆ ಹೊರಗಿನ ದೇವರಲ್ಲ ಅಂತರಂಗದಲ್ಲಿಯೇ ಸಂಗಮವಾದ ಗುರುದೇವ, ಆ ಗುರುದೇವನೆ ಮಹಾದೇವ, ಆ ಮಹಾದೇವನೇ ಸದಾಶಿವನು ಹೌದು, ಸಾಕ್ಷಾತ್ ಪರಬ್ರಹ್ಮನೂ ಹೌದು. ಈತನನ್ನು ಪೂಜಿಸಿದ ಫಲ ಹುಸಿಯಾಗುವುದಿಲ್ಲ.

**1684**

**ಲಿಂಗಾಂಗಿಯಾದ ಬಳಿಕ ಭವಿಸಂಗ ಮಾಡಲಾಗದು**
**ಭವಿಗೆ ದಾನವ ಕೊಡಲಾಗದು ಭವವಿರಹಿತ ಕಾರ್ಯವನ್ನೈದಿ**
**ಭವಬೀಜದ ನೆಲೆಯನಾಶ್ರಯಿಸಿದಡೆ,**
**ಭವ ತಪ್ಪದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಲಿಂಗಾಂಗಿಯಾದ ಬಳಿಕ ಭವಿ ಸಂಗ ಮಾಡಲಾಗದು: ಭವಿ ಎಂದರೆ ವ್ಯಕ್ತಿಯಲ್ಲ. ತನುವನ್ನು ಆವರಿಸಿದ ಮನ ತನುವಿನಲ್ಲಿ ತನ್ಮಯವಾದ ಅರಿವು ಎನ್ನುವ ಗುರುದೇವನಿಗೆ ಭಕ್ತನಾಗದ ಮನವೆ ಭವಿ. ಇಂತಹ ಮನವುಳ್ಳ ತನುವಿಗೆ ಜನನ ಮರಣಗಳ ಬಾಧೆ ತಪ್ಪದು.

ಭವಿ ಮನ ಲಿಂಗಾಂಗಿಯಾದ ಬಳಿಕ ಅಂದರೆ ಗುರವಿನ ಸಂಗ ಮಾಡಿದ ಬಳಿಕ ಪುನಃ ಭವಿ ಸಂಗ ಮಾಡಲಾಗದು. ಅಂದರೆ ತನುವನ್ನು ಮನ ತನ್ನ ಅಜ್ಞಾನದ ದಾರಿಗೆ ಕರೆದುಕೊಂಡು ಹೋಗುವಂತಿಲ್ಲ. ಭವವಿರಹಿತ ಕಾಯಕದಲ್ಲಿ ತೊಡಗಿದ ಮನ ಪುನಃ ಭವಬೀಜದ ನೆಲೆಯನು ಆಶ್ರಯಿಸಿದಡೆ ಜನನ ಮರಣಗಳ ಬಾಧೆ ತಪ್ಪದು.

ಭವಿ ಮನ ಅರಿವಿಗೆ ಹೋಗಿ ಆ ಅರಿವೆಂಬ ಗುರುದೇವನಲ್ಲಿ ಸಂಗಮವಾಗಿ ಆ ಗುರದೇವನೇ ತಾನಾದ ಬಳಿಕ ಸಕಲ ತನುಗಳಲ್ಲಿ ಗುರುದೇವನನ್ನೇ ಕಾಣುತ್ತಾನೆ. ಇಂತಹ ವ್ಯಕ್ತಿ ಮತ್ತೊಬ್ಬ ವ್ಯಕ್ತಿಗೆ ಭವಿ ಎನ್ನುವುದಿಲ್ಲ ಶರಣು ಶರಾಣಾರ್ಥಿ ಎಂದು ಆ ವ್ಯಕ್ತಿಯ ತನುವಿನಲ್ಲಿ

ತನ್ಮಯವಾದ ಗುರುದೇವನನ್ನು ನಮಿಸುತ್ತಾನೆ.

**1685**

**ಭವಿಯೆಂದಡೆ ಲಿಂಗವಿಲ್ಲದವ ಭವಿಯೇ? ಅಲ್ಲಲ್ಲ.**
**ಭವಿಯೆಂದಡೆ ವೇದವೇದಾಂತವನೋದಿ, ಲಿಂಗವ ಧರಿಸಿದವ ಭವಿಯೇ? ಅಲ್ಲಲ್ಲ.**
**ಅಂಗದ ಸ್ಥಿತಿಯನರಿಯದಡೇನಾಯಿತ್ತು ? ಗುಣ ತಿಳಿದು ಲಿಂಗವ ಕೊಡುವ ಗುರುವಿಲ್ಲ.**
**ಬಹಿರಂಗದಲ್ಲಿ ಲಿಂಗವಿರಹಿತ, ಅಂತರಂಗದಲ್ಲಿ ಲಿಂಗಲೋಲುಪ್ತ .**
**ಹೊಲಬುಳ್ಳವನಾದಡೇನು, ತಿಳಿಯದವರಿಲ್ಲನ್ನಕ್ಕ ?**
**ಸತ್ಕ್ರಿಯಾಸಾಮರಸ್ಯಕ್ಕೆ ಭವಿಯಲ್ಲದೆ. ಅನುಭವಗೋಷ್ಠಿಗೆ ಭವಿಯೇ? ಅಲ್ಲಲ್ಲ.**
**ಭವಿಯೆಂದಡೆ ಮದ್ಯಪಾನ ಮಾಂಸಭಕ್ಷಣ ಪರ ಸ್ತ್ರೀ ಸಂಗ**
**ಪರಧನ ಚೋರತ್ವ ನಿಜವಸ್ತು ಅಂತರತ್ವವಿದ್ದವನೆ ಭವಿಯಯ್ಯಾ.**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಭವಿಯೆಂದಡೆ ಅಂಗದ ಮೇಲೆ ಲಿಂಗವಿಲ್ಲದವನು ಭವಿಯಲ್ಲ. ವೇದವೇದಾಂತವನೋದಿ ಲಿಂಗವನ್ನು ಧರಿಸದವ ಭವಿಯಲ್ಲ. ಅಂಗದ ಸ್ಥಿತಿಯನ್ನು ಅರಿತರೇನಾಯಿತು ಗುಣ ತಿಳಿದು ಅಂಗದಲ್ಲಿಯೇ ಸಂಗಮವಾದ ಲಿಂಗವನ್ನು ತೋರುವ ಗುರುವಿಲ್ಲದಿದ್ದರೆ. ಬಹಿರಂಗದಲ್ಲಿ ಲಿಂಗಲೋಲುಪ್ತ. ಫಲವುಳ್ಳವನಾದಡೇನು ತಿಳಿಯಲು ಸಾಧ್ಯವಾಗದಿದ್ದರೆ ಸತ್ಕ್ರಿಯಾಸಾಮರಸ್ಯಕ್ಕೆ ಭವಿಯಲ್ಲದೆ ಅನುಭವ ಗೋಷ್ಟಿಗೆ ಭವಿಯಲ್ಲ.

ಭವಿ ಎಂದರೆ ಮನ ತನುವನ್ನು ಮದ್ಯಪಾನ ಮಾಡಲು, ಮಾಂಸ ಭಕ್ಷಣ ಮಾಡಲು, ಪರಸ್ತ್ರೀ ಸಂಗ ಮಾಡಲು, ಪರದನ ಚೋರತ್ವ ಮಾಡಲು ಕರೆದುಕೊಂಡು ಹೋಗುವ ಮನವೇ ಭವಿ. ಇಂತಹ ಮನಕ್ಕೆ ತನುವಿಲ್ಲಿಯೆ ತನ್ಮಯವಾದ ನಿಜವಸ್ತುವನ್ನು ತಿಳಿಯಲು ಸಾಧ್ಯವಾಗುವುದಿಲ್ಲ.

ಅಜ್ಞಾನದಲ್ಲಿರುವ ಆಸಕ್ತಿಯನ್ನು ತ್ಯಜಿಸಿ ಮನ ತನ್ನನ್ನು ತನುವಿನಲ್ಲಿಯೇ ತನ್ಮಯವಾದ ಜ್ಞಾನದೆಡೆಗೆ ಆಸಕ್ತಿ ತೋರಿದರೆ ಮನದ ಭವಿತನ ನಷ್ಟವಾಗುತ್ತದೆ.

**1686**

**ಎಲ್ಲ ದೇವರಂತಲ್ಲ ನೋಡವ್ವಾ ಈ ದೇವ :**
**ಮೊಲೆಯ ನಂಬಿದ ನಂಬಿಯಣ್ಣ ಮುದ್ದು ಕುಂಟಣಿಗನಾದ.**
**ಎಲ್ಲ ದೇವರಂತಲ್ಲ ನೋಡವ್ವಾ ಈ ದೇವ :**
**ಸರಳಿಲೆ ಹೊಯ್ದ ಪಾಂಡವಂಗೆ ಪಾಶುಪತಾಸ್ತ್ರವನಿತ್ತ .**
**ಎಲ್ಲ ದೇವರಂತಲ್ಲ ನೋಡವ್ವಾ ಈ ದೇವ :**
**ಕಲ್ಲಿಲಿಟ್ಟ ಶಂಖಿಯಂಗೆ ಕೈವಲ್ಯ ಪದವಿಯ ಕೊಟ್ಟನಂದು .**
**ಎಲ್ಲ ದೇವರಂತಲ್ಲ ನೋಡವ್ವಾ ಈ ದೇವ :**
**ಒಬ್ಬ ಬಿಲ್ಲೇಶಯ್ಯನಿಂದ ಸಹಸ್ರ ಕಂಡುಗ**
**ಕಪಿಲೆಯಮೃತವ ಕೊಂಡ ನೋಡವ್ವಾ. ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಲಿಂಗದೇವರು ಎಲ್ಲ ದೇವರಂತಲ್ಲ. ಮೊಲೆಯನ್ನು ನೋಡಿ ಲಿಂಗವೆಂದು ನಂಬಿ ಪೂಜಿಸಿದ ನಂಬಿಯಣ್ಣನಿಗೆ ಮುದ್ದುಕುಂಟಣಿಗನಾದ.

ಹರಿತವಾದ ಸರಳನ್ನು ತೆಗೆದುಕೊಂಡು ಶಿವನಿಗೆ ಹೊಡೆದ ಅರ್ಜುನನಿಗೆ ಪಾಶುಪತಾಸ್ತ್ರವನ್ನು ನೀಡಿದ. ಕಲ್ಲಲಿಟ್ಟ ಶಂಖಿಯಣ್ಣಗೆ ಕೈವಲ್ಯಪದವಿಯ ಕೊಟ್ಟ. ಎಲ್ಲ ದೇವರಂತಲ್ಲ ಲಿಂಗದೇವರು ನೋಡವ್ವಾ ಬಿಲ್ಲೇಶಯ್ಯನಿಂದ ಸಹಸ್ರ ಕಂಡುಗ ಕಪಿಲೆಯ ಅಮೃತವು ಕೊಂಡ ನೋಡವ್ವಾ. ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನಾ.

**1687**

**ಲಿಂಗ ಹೋದಡೇನು, ಗುರುವುಂಟೆಂಬ ಬಾಲಭಾಷೆಯ ಕೇಳಲಾಗದ ;**
**ಕೇಳಿದವನ ಸಂಗ ಸಿಂಗಿ ಕಾಳಕೂಟ ವಿಷವು ;**
**ಆತನ ಸಂಗದಲ್ಲಿರಲು ಚಂಡಮಹಾಪಾತಕ ತಪ್ಪದು, ಕಪಿಲಸಿದ್ಧಮಲ್ಲಿಕಾರ್ಜುನಾ.**

ಲಿಂಗ ಹೋದಡೇನು ಗುರುವುಂಟೆಂಬ ಬಾಲಭಾಷೆಯ ಕೇಳಲಾಗದು: ಅಂಗದ ಮೇಲೆ ಲಿಂಗ ಕಟ್ಟುವ ಗುರುದೇವನನ್ನು ಕುರಿತು ಹೇಳಿದ ಮಾತು ಇದು.

ಲಿಂಗ ಅಂಗಕ್ಕೆ ಕಟ್ಟಲು ಬರುವುದಿಲ್ಲವೆಂದು ಲೋಕದ ಗುರುವಿಗೆ ತಿಳಿಯುವುದಿಲ್ಲ. ಹೀಗಾಗಿ ಕಟ್ಟಿಕೊಂಡ ಲಿಂಗ ಕಳೆದು ಹೋದರೇನಾಯಿತು ಕಟ್ಟಿದ ಗುರು ಇದ್ದಾನಲ್ಲ ಎಂಬ ಲೋಕದ ಭಕ್ತನ ಮಾತು ಸರಿಯಲ್ಲ. ಲಿಂಗ ಎಂದರೆ ಸಾಮಾನ್ಯವಲ್ಲ. ಪ್ರತಿ ಅಂಗದ ಸರ್ವಾಂಗದಲ್ಲಿ ಸಂಗಮವಾದ ಮಹಾಜ್ಞಾನ. ಇಂತಹ ಜ್ಞಾನವನ್ನು ಜ್ಞಾನೇಶ್ವರ, ಪಂಚಾನನ, ಅರಿವಿನ ಲಿಂಗಯ್ಯ , ಗುರುದೇವ, ಮಾಹಾದೇವ, ಸದಾಶಿವ, ಸಾಕ್ಷಾತ್ ಪರಬ್ರಹ್ಮ ಎಂದು ಕರೆದಿದ್ದಾರೆ. ಇಂತಹ ಲಿಂಗ ಸರ್ವಾಂಗದಲ್ಲಿಯೂ ಸಂಗಮವಾಗಿದೆ. ಇದನ್ನು ಯಾರೂ ಕಟ್ಟಲು ಬರುವುದಿಲ್ಲ, ಕೆಡುವಲು ಬರುವುದಿಲ್ಲ. ಹೀಗಾಗಿ ಸಿದ್ಧರಾಮಶಿವಯೋಗಿಗಳು ಲಿಂಗ ಹೋದಡೇನು ಗುರುವುಂಟೆಂಬ ಬಾಲ ಭಾಷೆಯ ಕೇಳಲಾಗದು, ಕೇಳಿದವನ ಸಂಗ ಸಿಂಗಿ ಕಾಳಕೂಟ ವಿಷವಿದ್ದಂತೆ ಆತನ ಸಂಗದಲ್ಲಿರಲು ಪಂಚಮಹಾಪಾತಕ ತಪ್ಪದು ಎಂದಿದ್ದಾರೆ ಸಿದ್ಧರಾಮಶಿವಯೋಗಿಗಳು.

**1688**

**ಲಿಂಗವ ಧರಿಸಿದ ಯೋಗಿಗೆ ಅಂಗನೆಯರು ಲಿಂಗದ ರಾಣಿವಾಸ.**
**ಲಿಂಗವ ಧರಿಸಿದ ಭೋಗಿಗೆ ಕಾಷಾಯಂಬರಧಾರಿಗಳು ರುದ್ರಗುಣಂಗಳು .**
**ಲಿಂಗವ ಧರಿಸಿದ ಜೀವಜಾಲವು ಕಪಿಲಸಿದ್ಧಮಲ್ಲಿಕಾರ್ಜುನನೆಂದು**
**ನಂಬಿದೆ ನೋಡಾ, ಗುರುವೆ ಚೆನ್ನಬಸವಣ್ಣನೆ.**

ಲಿಂಗ ಧಾರಣೆ ಮಾಡಿಕೊಂಡ ಯೋಗಿಗೆ ಅಂಗನೆಯರು ಲಿಂಗದ ರಾಣಿವಾಸ.

ಅಂಗನೆಯರು ಎಂದರೆ ಅಂಗದಲ್ಲಿಯೇ ಹುಟ್ಟಿದ ಅರಿಷಡ್ವರ್ಗಗಳು, ಸಪ್ತ ವ್ಯಸನಗಳು, ಅಷ್ಟ ಮದಗಳು ಈ ಅಂಗನೆಯರು ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನಿಗೆ ರಾಣಿಯರು ಆದಾಗ ಅಂಗದಲ್ಲಿಯ ಅಂಗನೆಯರ ಉಪಟಳ ಕಡಿಮೆಯಾಗುತ್ತದೆ. ಇದು ಲಿಂಗ ಧಾರಣೆ ಮಾಡಿಕೊಂಡ ಯೋಗಿಗೆ ಮಾತ್ರ ಸಾಧ್ಯ .

ಅಂಗದ ಮೇಲೆ ಲಿಂಗ ಧರಿಸಿದ ಭೋಗಿಗೆ ಕಾಷಾಯಾಂಬರಧಾರಿಗಳು ರುದ್ರಗಣಂಗಳು ಲಿಂಗವ ಧರಿಸಿದ ಜೀವ ಜಾಲವು ಕಪಿಲಸಿದ್ಧಮಲ್ಲಿಕಾರ್ಜುನನೆಂದು ನಂಬಿದೆ ನೋಡಾ ಗುರುದೇವನಾದ ಚೆನ್ನಬಸವಣ್ಣನೆ ಎಂದಿದ್ದಾರೆ ಸಿದ್ಧರಾಮಶಿವಯೋಗಿಗಳು.

**1689**

**ಉದಕವೆಲ್ಲ ಒಂದೆ ಈಚಲವ ಆಶ್ರಯಿಸಿ ಮದ್ಯಪಾನವೆನಿಸಿತ್ತು**
**ದೇಹವೆಲ್ಲ ಒಂದೆ ಅಂಗನೆಯರ ಆಶ್ರಯಿಸಿ ಭವಕ್ಕೆ ಬೀಜವಾಯಿತ್ತು**
**ಲಿಂಗವ ಆಶ್ರಯಿಸಿ ಭವಾರಣ್ಯಕ್ಕೆ ದಾವಾಲನಿವೆನಿಸಿತ್ತು ನೋಡಾ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಈಚಲವ ಆಶ್ರಯಿಸಿದ ಉದಕ ಮದ್ಯಪಾನವಾಗಿ ಮಾರ್ಪಟ್ಟಿತ್ತು . ದೇಹವನ್ನು ಆಶ್ರಯಿಸಿ ಮಹಾಜ್ಞಾನಿ ಎನಿಸಿಕೊಂಡಿತ್ತು ಉದಕ. ಹೀಗಾಗಿ ಬಸವಣ್ಣನವರು ಉದಕದಲ್ಲಿ ಬಯಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು . ಸಸಿಯೊಳಗಣ ರಸದ ರುಚಿಯಂತಿದ್ದಿತ್ತು . ನನೆಯೊಳಗಣ ಪರಿಮಳದಂತಿದ್ದಿತ್ತು . ಕೂಡಲಸಂಗಮದೇವಾ ನಿಮ್ಮ ನಿಲುವು ಕನ್ಯೆಯೊಳಗಣ ಸ್ನೇಹದಂತಿದ್ದಿತ್ತು . ಇದು ಸುಂದರವಾದ ಸೂತ್ರ . ಈ ಉದಕವೆ ಅಂಗನೆಯರ ಆಶ್ರಯಿಸಿ ಭವಕ್ಕೆ ಬೀಜವಾಯಿತ್ತು . ಲಿಂಗವ ಆಶ್ರಯಿಸಿ ಭವಾರಾಣ್ಯಕ್ಕೆ ದಾವಾನಿಲ ಎನಿಸಿತ್ತು .

**1690**

**ಬಂದ ಪದಾರ್ಥವ ನೋಡಿ ಹಿಗ್ಗುವನಲ್ಲ ಶರಣ ;**
**ಬಾರದ ಪದಾರ್ಥವನಿಚ್ಛೈಸಿ ಕುಗ್ಗುವನಲ್ಲ ಶರಣ.**
**ಶರಣನ ನಡೆಯೆ ಲಿಂಗರೂಪು; ಶರಣನ ನಡೆಯೆ ಲಿಂಗಪ್ರಸಾದ.**
**ಪೂಜಿಸಿದಡೆ ಹರ್ಷಿಯಾಗನು, ಪೂಜಿಸದಿರೆ ಕ್ರೋಧಿಯಾಗನು.**
**ಬೆಳೆಯುವ ಹೊಲ ಪ್ರಾಣಿ ಮಾತ್ರಕ್ಕಲ್ಲದೆ ತನ್ನೊಳಗಿಲ್ಲ.**
**ಪೂಜಿಸಿದ ಫಲ ಭಕ್ತಂಗಲ್ಲದೆ ಲಿಂಗಕ್ಕಿಲ್ಲ.**
**ಬಂದ ಪದಾರ್ಥ ಲಿಂಗವೆಂದನಲ್ಲದೆ ಪದಾರ್ಥವೆಂದು ಭಾವಿಸಲಿಲ್ಲ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ, ನಿಮ್ಮ ಶರಣನು.**

ಬಂದ ಪದಾರ್ಥವ ನೋಡಿ ಶರಣ ಹಿಗ್ಗುವುದಿಲ್ಲ. ಏಕೆಂದರೆ ಶರಣ ಪದಾರ್ಥವನ್ನು ನೋಡುವುದಿಲ್ಲ ಬದಲಾಗಿ ಪದಾರ್ಥದ ಸತ್ಯವನ್ನು ನೋಡಿ ಉದಾಸೀನ ಮಾಡುತ್ತಾನೆ. ಹಾಗೆಯೇ ಬಾರದ ಪದಾರ್ಥವನ್ನು ಇಚ್ಛೆಮಾಡಿ ಕುಗ್ಗುವವನಲ್ಲ ಶರಣ. ಶರಣನಿಗೆ ಸತ್ಯದರ್ಶನ ಆಗಿರುವುದರಿಂದ ಆತನ ನಡೆಯೇ ಲಿಂಗರೂಪ. ಶರಣನ ನಡೆಯೇ ಲಿಂಗಪ್ರಸಾದ. ಪೂಜಿಸಿದಡೆ ಹರ್ಷಿಯಾಗನು, ಪೂಜಿಸದಿರೆ ಕ್ರೋಧಿಯಾಗನು. ಬೆಳೆಯುವ ಹೊಲ ಪ್ರಾಣಿ ಮಾತ್ರಕ್ಕಲ್ಲದೆ ತನ್ನೊಳಗಿಲ್ಲ. ಪೂಜಿಸಿದ ಫಲ ಭಕ್ತನಿಗಲ್ಲದೆ ಅಂಗದ ಮೇಲೆ ಕಟ್ಟಿಕೊಂಡ ಲಿಂಗಕ್ಕಿಲ್ಲ. ಬಂದ ಸಕಲ ಪದಾರ್ಥವನ್ನು ಲಿಂಗವೆಂದು ನೋಡಿ ಸಹಜನಾಗುತ್ತಾನೆ. ಪದಾರ್ಥವೆಂದು ಭಾವಿಸುವುದಿಲ್ಲ. ಪದಾರ್ಥವೆಂದರೆ ಆಭರಣ. ಆಭರಣ ಸತ್ಯ ಲೋಹವೆಂದು ನೋಡುತ್ತಾನೆ. ಹೀಗಾಗಿ

ಸಹಜನಾಗುತ್ತಾನೆ. ಪದಾರ್ಥ ಬೇಕು ಎನ್ನುವ ಭಾವ ಶರಣನಿಗೆ ಇರುವುದಿಲ್ಲ.

**1691**

**ಶರಣ ಎಂಬ ಶಬ್ದವಂತಿಂತಲ್ಲ. ನೋಣಃ ಎಂಬ ಸೂತ್ರದಿಂದ ಶರಣನೆನಿಸಿದನು**
**ಶರ ಎಂದರೆ ಬಾಣ, ನ ಎಂದರೆ ಅಂಥ ಮನ್ಮಥ ಬಾಣವಿಲ್ಲದವ.**
**ಅವನೇ ಶರಣ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಶರಣ ಎನ್ನುವ ಶಬ್ದ ಅಂತಿಂತಲ್ಲ. ಕಾಯವನ್ನು ಆವರಿಸಿದ ಮನ ಸದಾ ಬೇಕು ಬೇಕು ಎನ್ನುವ ಮನ್ಮಥನನ್ನು ಶರಣ ತನ್ನ ಅರಿವಿನ ಕಣ್ಣಿನಿಂದ ಸುಟ್ಟು ಭಸ್ಮ ಮಾಡಿ ತಾನು ಆ ಭಸ್ಮವನ್ನು ಧರಿಸಿರುತ್ತಾನೆ. ಹೀಗಾಗಿ ಶರಣನ ಕಾಯ ಭಸ್ಮಕಾಯ.

ಶರಣನ ಕಾಯಕ್ಕೆ ಬೇಕು ಬೇಡ ಎನ್ನುವ ಆಸೆಗಳೆ ಇಲ್ಲ. ಸಕಲ ಪದಾರ್ಥಗಳ ಸತ್ಯವನ್ನು ಅರಿತು ಆ ಸತ್ಯವನ್ನೆ ನೋಡುವುದರಿಂದ ತಾನು ಸಹಜ. ಸುಖ ಸಂತೋಷಗಳಿಲ್ಲ ದುಃಖ ದುಮ್ಮಾನಗಳಿಲ್ಲ, ಸದಾ ಪರಮಸುಖದಲ್ಲಿ ಸಹಜನಾಗಿರುತ್ತಾನೆ ಶರಣ.

**1692**

**ಭಸ್ಮವ ಹೂಸಿದಲ್ಲಿ ಶರಣನೆ ? ಅಲ್ಲಲ್ಲ. ಮಾಡುವ ಕ್ರಿಯೆ ಭಸ್ಮವಾದಡೆ ಶರಣ.**
**ನೋಡುವ ಕೃತ್ಯ ರುದ್ರಾಕ್ಷಿಯಾದಡೆ ಶರಣ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಭಸ್ಮವ ಹೂಸಿದರೆ ಮಾತ್ರ ಶರಣನಾಗಲಾರ. ಇಡೀ ಕಾಯದ ಅಜ್ಞಾನವನ್ನು ಸುಟ್ಟುಕೊಂಡು ಭಸ್ಮ ಕಾಯ ಮಾಡಿಕೊಂಡವನೇ ಶರಣ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಸಪ್ತವ್ಯಸನಗಳು, ಅಷ್ಟಮದಗಳು ಇವು ಕಾಯದ ವೈರಿಗಳು. ಕಾಯದಲ್ಲಿಯೇ ಇದ್ದು ಕಾಯವನ್ನು ಹಂತ ಹಂತವಾಗಿ ಕೊಲ್ಲುವುದು. ಇವು ಕಾಯದಲ್ಲಿಯೇ ಸಂಗಮವಾದ ಜ್ಞಾನಾಗ್ನಿಯಿಂದ ಮಾತ್ರ ಸುಟ್ಟು ಹೋಗುತ್ತವೆ. ಇಂತಹ ಅಜ್ಞಾನವನ್ನು ಸುಟ್ಟು ಇಡೀ ಕಾಯವನ್ನು ಭಸ್ಮಕಾಯವಾಗಿ ಮಾಡಿಕೊಂಡವನೆ ಶರಣ.

ಅಂಗದ ಮೇಲೆ ರುದ್ರಾಕ್ಷಿಯನ್ನು ಧರಿಸಿದರೆ ಮಾತ್ರ ಶರಣನಾಗಲಾರ. ಅಂಗವನ್ನು ಆವರಿಸಿದ ಅಜ್ಞಾನವನ್ನು, ಅಂಗದಲ್ಲಿಯೇ ಸಂಗಮವಾದ ಮಹಾಜ್ಞಾನವನ್ನು, ಇಡೀ ಸರ್ವಾಂಗವನ್ನು ಜ್ಞಾನದ ಕಣ್ಣುಗಳಾಗಿ ಮಾಡಿಕೊಂಡವನೇ ಶರಣ. ತನ್ನ ಅಂಗವನ್ನು ಆವರಿಸಿದ ಅಜ್ಞಾನವನ್ನು ರುದ್ರನ ಕಣ್ಣುಗಳಿಂದ ಸುಟ್ಟುಕೊಂಡವನೇ ರುದ್ರಾಕ್ಷಿ ಧರಿಸಿದ ಶರಣ ಎಂದು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1693**

**ಶರಣನ ಸಂಭ್ರಮ ಲಿಂಗಪೂಜೆ, ಜಂಗಮ ದಾಸೋಹ ನೋಡಯ್ಯಾ.**
**ಶರಣನ ಸಂಭ್ರಮ ಅನುಭವ ಓದಿ ಭವ ಗೆಲಿಯುವುದು.**
**ಅದೇ ಸಂಭ್ರಮ ಕಾರ್ಯ ನೋಡಯ್ಯಾ. ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.**

ಅಂಗದಲ್ಲಿ ಸಂಗಮವಾದ ಅರಿವು ಎನ್ನುವ ಲಿಂಗಯ್ಯನನ್ನು ಸದಾ ಪೂಜಿಸುವ ಸಂಭ್ರಮ ಶರಣನಿಗೆ. ಅದೇ ಜಂಗಮ ದಾಸೋಹ ಆತನಿಗೆ. ಗುರುದೇವನಿಂದ ಹೊರಬಂದ ಅನುಭವವನ್ನು ಓದಿ ಜನನ ಮರಣವನ್ನು ಗೆಲ್ಲುವ ಸಂಭ್ರಮ ಶರಣನಿಗೆ.

ಶರಣ ಹಲವರ ಸಂಭ್ರಮಗಳಲ್ಲಿ ಭಾಗಿಯಾಗಲಾರ. ಆತನಿಗೆ ತನ್ನದೇ ಆದ ಸಡಗರ ಸಂಭ್ರಮ ಕಾರ್ಯದಲ್ಲಿ ಸದಾ ಮಗ್ನನಾಗಿರುತ್ತಾನೆ.

ಶರಣ ತಾನು ಲಿಂಗಯ್ಯನಿಗೆ ಸತಿಯಾಗಿ ಆತನನ್ನು ಪತಿಯಾಗಿ ಸ್ವೀಕರಿಸಿ ಸತಿಪತಿಗಳು ಕೂಡಿಕೊಂಡು ಸಂಭ್ರಮದಿಂದ ಮಾತನಾಡಿಕೊಳ್ಳುತ್ತಿದ್ದಾರೆ.

**1694**

**ಶರಣನ ಜಾಗ್ರತಿಯೆ ಶಿವರಾತ್ರಿ ಕಂಡಾ ಮನವೆ.**
**ಶರಣನ ನಿದ್ರೆಯೆ ಶಿವಯೋಗ ಸಮಾಧಿ ಕಂಡಾ ಮನವೆ.**
**ಶರಣನ ನುಡಿಯೆ ಶ್ರೀ ರುದ್ರ ಪಂಚಬ್ರಹ್ಮೋಪನಿಷತ್ತು ಕಂಡಾ ಮನವೆ.**
**ಶರಣನ ನಡೆಯೆ ಮುಕ್ತಿ ಸೋಪಾನ ಕಂಡಾ ಮನವೆ.**
**ಶರಣನ ಭೋಜನವೆ ಕಪಿಲಸಿದ್ಧಮಲ್ಲಿಕಾರ್ಜುನನರ್ಪಣ ಕಂಡಾ ಮನವೇ?**

ಶರಣ ತನುವಿನಲ್ಲಿ ತನ್ಮಯವಾದ ಅರಿವಿನ ಗುರುವಿಗೆ ಶರಣು ಹೋಗಿ ಆ ಗುರುದೇವನಿಗೆ ಸತಿಯಾದಾತ ಆ ಗುರುವನ್ನೇ ಪತಿಯಾಗಿಸಿಕೊಂಡಾತ. ಹೀಗಾಗಿ ಅವರಿಬ್ಬರ ಸಂಭಾಷಣೆಯ ಜಾಗ್ರತಿಯೆ ಶರಣನಿಗೆ ಶರಣಾರ್ಥಿ. ಆ ಗುರುವಿನೊಂದಿಗೆ ನಿದ್ರೆಗೈಯುವುದೇ ಶರಣನಿಗೆ ಶಿವಯೋಗದ ಸಮಾಧಿ, ಆ ಗುರುವಿನೊಂದಿಗೆ ಏಕವಾಗಿ ನುಡಿಯುವ ನುಡಿಯೇ ಶರಣನಿಗೆ ಶ್ರೀ ರುದ್ರ ಪಂಚಬ್ರಹ್ಮೋಪನಿಷತ್ತು . ಶರಣನ ನಡೆಯೆ ಮುಕ್ತಿಗೆ ಸೋಪಾನ. ಶರಣ ತನುವಿನಲ್ಲಿ ತನ್ಮಯವಾದ ಅರಿವು ಎನ್ನುವ ಗುರುದೇವನಿಗೆ ವಂದಿಸುತ್ತಾ ತಾನು ಉಣ್ಣುವ ಊಟವೆ ಮಹಾಪ್ರಸಾದ.

**1695**

**ಶರಣನ ಇರವ ನೆನೆನೆನೆದು ಶರಣನಾದೆನಯ್ಯಾ .**
**ಇನ್ನು ಮರೆದಡೆ ನಿಮ್ಮ ಶರಣ ಚೆನ್ನಬಸವಣ್ಣನಾಣೆ.**
**ಇನ್ನು ಈ ಭವಕ್ಕೆ ಬಂದೆನಾದಡೆ, ಹಲ್ಲುದೋರೆ ಮೂಗ ಕೊಯ್ಯಯ್ಯಾ ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಸಿದ್ಧರಾಮ ಶಿವಯೋಗಿಗಳು ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಯ್ಯನೊಂದಿಗೆ ಮಾತನಾಡುತ್ತಾ, ಅಯ್ಯಾ ಪರಮಾತ್ಮನೆ ನಾನು ನಿಮ್ಮ ಶರಣನ ನೆನೆನೆನೆದು ಶರಣನಾದೆನು ತಂದೆ. ಇನ್ನು ಮರೆದಡೆ ನಿಮ್ಮ ಶರಣ ನನಗೆ ಅರಿವಿನ ದಾರಿ ತೋರಿದ ತಂದೆ ಚೆನ್ನಬಸವಣ್ಣನಾಣೆ.

ಇನ್ನು ನಾನು ಈ ಭವಕ್ಕೆ ಬಂದೆನಾದಡೆ ನನ್ನ ಹಲ್ಲು ಮುರಿದು ಮೂಗ ಕೊಯ್ಯಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.

1696

**ಆಕಾಶದಲ್ಲಿಯ ಕಪ್ಪು ಅಂಗೈ ತಿನ್ನೆಂದಡೆ ತಿಂಬುವುದೆ ಅಯ್ಯಾ ?**
**ಮರೀಚಿಯ ನೀರು ಮಡಿಯ ಕ್ರೀಯಕ್ಕೆ ಬಾ ಎಂದಡೆ.**
**ಬರುವುದೇನೊ ಅಯ್ಯಾ ? ಎಲೆ ಲಿಂಗಮೂರ್ತಿ ಕಪಿಲಸಿದ್ಧಮಲ್ಲಿಕಾರ್ಜುನಾ.**

ಆಕಾಶದಲ್ಲಿಯ ಕಪ್ಪು ಅಂಗೈ ತಿನ್ನಲು ಸಾಧ್ಯವಿಲ್ಲ. ಆದರೆ ಸರ್ವಾಂಗವನ್ನು ಆವರಿಸಿದ ಅಜ್ಞಾನವೆಂಬ ಕತ್ತಲೆಯನ್ನು ಅಂಗದಲ್ಲಿಯೇ ಸಂಗಮವಾದ ಜ್ಞಾನ ನುಂಗಿ, ನುಂಗಿದ ಆ ಕತ್ತಲನ್ನು ಬೆಳಗಿಂಗೆ ಬೆಳಗಾಗಿ ಬೆಳಗುವುದು ಮತ್ತೆ ಎಂದೂ ಕತ್ತಲು ಆವರಿಸದಂತೆ.

ಮರೀಚಿಯ ನೀರು ಮಡಿ ಮಾಡಲು ಬರುವುದಿಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿನ ಜಲದಿಂದ ಅಂಗವನ್ನು ತೊಳೆದು ಮಡಿಮಾಡಿ ಲಿಂಗಯ್ಯನನ್ನು ಪೂಜಿಸಲು ಬರುವುದಿಲ್ಲ.

1697

**ಶರಣನ ನೋಟ ಭವಕ್ಕೆ ಓಟ ನೋಡಯ್ಯಾ .**
**ಶರಣನ ದೃಷ್ಟಿ ಶಿವದೃಷ್ಟಿ ನೋಡಯ್ಯಾ . ಶರಣನ ದೇಹ ಶಿವದೇಹ ನೋಡಯ್ಯಾ .**
**ಶರಣನ ಪಾದುಕೆ ಎಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಚಮ್ಮಾವುಗೆ,**
**ನೋಡಾ, ಮಡಿವಾಳ ಮಾಚಣ್ಣಾ.**

ಶರಣನ ದಿವ್ಯ ದೃಷ್ಟಿಗೆ ಜನನ ಮರಣಗಳು ದಿಕ್ಕೆಟ್ಟು ಓಡುವವು. ಶರಣನ ದೃಷ್ಟಿ ಸಾಮಾನ್ಯವಲ್ಲ. ಕಣ್ಣ ದೃಶ್ಯದಲ್ಲಿ ಸಂಗಮವಾದ ಅರಿವಿನ ದೃಶ್ಯದಿಂದ ಕಣ್ಣಿನ ಅಜ್ಞಾನದ ದೃಷ್ಟಿಯನ್ನು ಸುಟ್ಟುಕೊಂಡು ಶಿವದೃಷ್ಟಿಯಾಗುವುದು.

ಅಜ್ಞಾನದ ದೇಹವನ್ನು ಜ್ಞಾನದೇಹದಿಂದ ಭಸ್ಮ ಮಾಡಿಕೊಂಡು ಶಿವದೇಹವನ್ನಾಗಿಸಿಕೊಂಡವರು. ಶರಣನ ಪಾದುಕೆ ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಯ್ಯನ ಚಮ್ಮಾವುಗೆ ಎಂದು ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು; ಮಡಿವಾಳ ಮಾಚಯ್ಯ ಶರಣರಿಗೆ.

1698

**ಶರಣನ ನಡೆ ಅಂತಿಂತೆನಬೇಡ .**
**ಶರಣ ಮಾದಾರ ಚೆನ್ನಯ್ಯನ ನಡೆ ಯಾವ ಆಗಮನದಲ್ಲಿ ಹೇಳಿತ್ತು?**
**ಶರಣ ಡೋಹರ ಕಕ್ಕಯ್ಯ ನಡೆ ಯಾವ ವೇದದಲ್ಲಿ ಹೇಳಿತ್ತು ?**
**ನಡೆದ ಆಚರಣೆಯೆ ಸಚ್ಛೀಲ; ನುಡಿದ ವಾಕ್ಯವೆ ನಡೆ ಮೋಕ್ಷ ಪ್ರದಾಯಿಕ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಶರಣನ ನಡೆ ಅರಿವಿನ ನಡೆ ಅದು ವೇದ, ಆಗಮ, ಉಪನಿಷತ್ತು , ಭಗವದ್ಗೀತೆ, ಬೈಬಲ್, ಖುರಾನ್‌ಗೂ ಅಧಿಕವಾದದ್ದು. ಮಾದಾರ ಚೆನ್ನಯ್ಯ , ಡೋಹರ ಕಕ್ಕಯ್ಯ ಶರಣರ ನಡೆ ಯಾವ ಆಗಮದಲ್ಲಿ ಹೇಳಿತ್ತು. ಯಾವ ವೇದದಲ್ಲಿ ಹೇಳಿತ್ತು . ಇವರು ನಡೆದ ನಡೆಯೇ ಸಚ್ಛೀಲ. ನುಡಿದ ವಾಕ್ಯವೆ ನಡೆ ಮೋಕ್ಷಪ್ರದಾಯಿಕ ನೋಡಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

1699

**ಸ್ಥಲವಿಡಿದಾಚರಿಸಬೇಕೆಂಬವನ ಭಾಷೆ ಬಾಲಭಾಷೆ.**
**ಭಕ್ತನಾಗಿ, ಭಕ್ತಸ್ಥಲವಾವರಿಸುವುದದು ಯೋಗ್ಯವಯ್ಯಾ ?**
**ಭಕ್ತವಾಗಿ ಮಹೇಶಸ್ಥಲ ಅಳವಡಬಾರದೇನಯ್ಯಾ ?**
**ಭಕ್ತನಾಗಿ, ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯಸ್ಥಲ**
**ಅಳವಡಬಾರದೇನಯ್ಯಾ ? ಮನೆಯಲ್ಲಿದ್ದ ಲೆತ್ತಗಳು ಮನೆಯ ಮೀರಿ ಮೀರಿ**
**ಹಾರಬಾರದೇನಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ಸ್ಥಲವಿಡಿದು ಕಾಯದಲ್ಲಿಯೂ ಮಹಾಜ್ಞಾನವನ್ನು ಕಂಡುಕೊಳ್ಳಬಹುದು ಎಂಬುದು ಬಾಲಭಾಷೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿ ಸಂಗಮವಾದ ಅರಿವಿನ ಲಿಂಗಯ್ಯನಿಗೆ ಭಕ್ತಿ ಮಾಡಿ ಭಕ್ತನಾಗುವುದೇ ಭಕ್ತಸ್ಥಲ. ಈ ಭಕ್ತ ಮಹೇಶನು ಹೌದು. ಮಹೇಶನಾಗಿ ಭಕ್ತನೇ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯಸ್ಥಲನೂ ಹೌದು.

ಭಕ್ತನಾಗಿ ಭಕ್ತ ಮಹೇಶ ಸ್ಥಲಕ್ಕೂ ಹಾರಬಹುದು, ಪ್ರಸಾದಿ ಸ್ಥಲಕ್ಕೂ ಹಾರಬಹುದು. ಪ್ರಾಣಲಿಂಗಿಯಾಗಿ ಶರಣ ಸ್ಥಲಕ್ಕೂ ಹಾರಬಹುದು, ಭಕ್ತನಾಗಿ ಒಮ್ಮೆಲೆ ಐಕ್ಯಸ್ಥಲಕ್ಕೂ ಹಾರಬಹುದು.

1700

**ಷಟ್‌ಸ್ಥಲವೆಂಬ ಷಣ್ಮುಖ ಮುದ್ರೆಯೊಳು,**
**ನವವಿಧಭಕ್ತಿ ಎಂಬ ನವನಾದ ಕೇಳದವ ಶರಣನೆ ಅಯ್ಯಾ ?**
**ಷಟ್‌ಸ್ಥಲವೆಂಬ ಷಣ್ಮುಖಮುದ್ರೆಯೊಳು, ಷಡಕ್ಷರವೆಂಬ ಮಂತ್ರವ ಜಪಿಸಿ,**
**ಷಡ್ವಿಧಲಿಂಗವ ಪೂಜಿಸದವ ಶರಣನೆ ಅಯ್ಯಾ?**
**ಷಟ್‌ಸ್ಥಲವೆಂಬ ಷಣ್ಮುಖಮುದ್ರೆಯೊಳು**
**ಬೀಜಾಕ್ಷರತ್ರಯಂಗಳನೋದಿ ಷಡಕ್ಷರಂಗಳ ಸಾಧಿಸಿ**
**ಷಣ್ಮುಖಶಿವನಾಗದವ ನಿಮ್ಮ ಶರಣನೆ ಅಯ್ಯಾ ? ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯ ಒಂದೆ, ಆದರೂ ಕಾಯಕ್ಕೆ ಆರು ಅರಿವಿನ ಮುಖಗಳಿವೆ. ಭಕ್ತಸ್ಥಲ, ಮಹೇಶ ಸ್ಥಲ, ಪ್ರಸಾದಿ ಸ್ಥಲ, ಪಾಣಲಿಂಗಿ ಸ್ಥಲ, ಶರಣ ಸ್ಥಲ, ಐಕ್ಯ ಸ್ಥಲ ಇವು ಆರು ಅರಿವಿನ ಮುಖಗಳು. ಯಾವ ಸ್ಥಲದ ಮೂಲಕವಾದರೂ ಮನ ಅರಿವೆಂಬ ಗುರುದೇವನನ್ನು ಪೂಜಿಸಿ ಆ ಗುರುದೇವನೆ ತಾನಾಗಬಹುದು. ಇವುಗಳನ್ನು ಷಟ್‌ಸ್ಥಲ, ಷಣ್ಮುಖಮುದ್ರೆ ಎಂದು ಕೂಡ ಕರೆಯುತ್ತಾರೆ.

ಷಟ್‌ಸ್ಥಲವೆಂಬ ಷಣ್ಮುಖಮುದ್ರೆಗಳು ಕಾಯದಲ್ಲಿ ಬಚ್ಚಿಟ್ಟುಕೊಂಡಿವೆ. ಕಾಯವನ್ನು ಆವರಿಸಿದ ಮನದಿಂದ 'ಓಂ ನಮಃ ಶಿವಾಯ' ಷಡಕ್ಷರ ಮಂತ್ರವನ್ನು ಜಪಿಸಿ ಕಾಯದಲ್ಲಿಯೇ ಇರುವ ಷಡ್ವಿಧಲಿಂಗವನ್ನು ಪೂಜಿಸಿದವನೇ ಶರಣ.

ತ್ವಂಗ್ಮಯವಾಗಿಹುದು 'ಓಂ'ಕಾರ. ರುಧಿರಮಯವಾಗಿಹುದು 'ನ'ಕಾರ. ಅಸ್ಥಿಮಯವಾಗಿಹುದು 'ಮ'ಕಾರ. ಮಾಂಸಮಯವಾಗಿಹುದು 'ಶಿ'ಕಾರ. ಮಜ್ಜಾಮಯವಾಗಿಹುದು 'ವಾ'ಕಾರ. ಮೇದೋಮಯವಾಗಿಹುದು 'ಯ' ಕಾರ. ಇದು ಕಾಯದ ಷಡಕ್ಷರ ಮಂತ್ರ . ಅಲ್ಲಲ್ಲಿ ಆರು ವಿಧದ

ಅರಿವಿನ ಲಿಂಗಗಳು ಸಂಗಮವಾಗಿವೆ. ಇದನ್ನು ಸಾಧಿಸಿ ಷಣ್ಮುಖಶಿವನಾದವನೆ ಶರಣ.

**1701**

**ಶರಣಸ್ಥಲ ನೋಡುವಡೆ ಬಹು ಸುಲಭ ನೋಡಯ್ಯಾ .**
**ಶರಣನು ತಿಳಿದು ತಿಳಿದು ಆಚರಿಪನು, ಮರೆದು ಮರೆದು ಆಚರಿಸುವನು.**
**ಜ್ಞಾನದಿಂದ ಭೇದವಲ್ಲದೆ, ದೇಹದಿಂದ ಭೇದವಿಲ್ಲ ನೋಡಯ್ಯಾ**
**ಶರಣ ತನ್ನ ದೇಹವಲ್ಲದೆ, ಹ ಕಾರ ಪ್ರಣವ ಮಾಡಿಟ್ಟ**
**ನರನು ತನ್ನ ದೇಹವನೆ ದೇಹವೆಂದು ಜಡವೆಂದು ಪ್ರಳಯಕ್ಕೊಳಗು ಮಾಡಿಟ್ಟ**
**ಶರಣನ ದೇಹವೆಲ್ಲ ಪಂಚಾಕ್ಷರಮಯ ನೋಡಾ.**
**ನ ಕಾರವೆ ಅಸ್ಥಿ, ಮ ಕಾರವೆ ಮಾಂಸ, ಶಿ ಕಾರವೆ ತ್ವಕ್ಕು.**
**ಮ ಕಾರವೆ ನಾಡಿ, ಯ ಕಾರವೆ ರೋಮ.**
**ನ ಕಾರವೆ ರಸ, ಮ ಕಾರವೆ ರುಧಿರ, ಶಿ ಕಾರವೆ ಶುಕ್ಲ.**
**ವ ಕಾರವೆ ಪಿತ್ತ , ಯ ಕಾರವೆ ಶ್ಲೇಷ್ಮ.**
**ನ ಕಾರವೆ ಕ್ಷುಧೆ, ಮ ಕಾರವೆ ತೃಷ್ಣೆ, ಶಿ ಕಾರವೆ ನಿದ್ರೆ .**
**ವ ಕಾರವೆ ಆಲಸ್ಯ , ಯ ಕಾರವೆ ಸಂಗ.**
**ನ ಕಾರವೆ ಪರಿವ, ಮ ಕಾರವೆ ಪಾರುವ, ಶಿ ಕಾರವೆ ಸುಳಿವ,**
**ವ ಕಾರವೆ ಹಬ್ಬುವ, ಯ ಕಾರವೆ ಅಗಲುವ ಗುಣಂಗಳು**
**ನ ಕಾರವೆ ರಾಗ, ಮ ಕಾರವೆ ದ್ವೇಷ, ಶಿ ಕಾರವೆ ಭಯ,**
**ವ ಕಾರವೆ ಲಜ್ಜೆ, ಯ ಕಾರವೆ ಮೋಹ.**
**ಕ್ಲಂ ಕ್ಲೀ ಎಂಬುದ ಎಚ್ಚು ಕಠಿಣ ಮೃದುವಿಗೆ ಇಟ್ಟ ನೋಡಾ,**
**ಕ್ಲಂ ಕ್ಲೀಂ ಎಂಬುದ ಉಷ್ಣಚಲನೆಗೆ ಸೇರಿಸಿದ ನೋಡಾ.**
**ನಮಃ ಶಿವಾಯ ಎಂಬುದ ಗಂಧ ರಸ ರೂಪು ಸ್ಪರ್ಶ ಶಬ್ದಕ್ಕೆ ಸಂಬಂಧಿಸಿದ ನೋಡಾ.**
**ನಮಃ ಶಿವಾಯ ಎಂಬುದ  ಪಾಯು ಗುಹ್ಯ ಪಾದ ಪಾಣಿ ವಾಕ್ಕಿಗೆ ಸಂಬಂಧಿಸಿದ ನೋಡಾ.**
**ನಮಃ ಶಿವಾಯ ಎಂಬುದ ನಾಸಿಕ ಜಿಹ್ವೆ ನೇತ್ರ ತ್ವಕ್ಕು ಶ್ರೋತ್ರಕ್ಕೆ ಸಂಬಂಧಿಸಿದ ನೋಡಾ.**
**ನಮಃ ಶಿವಾಯ ಎಂಬುದ ಪ್ರಾಣ ಅಪಾನ ವ್ಯಾನ ಸಮಾನಕ್ಕೆ ಸಂಬಂಧಿಸಿದ ನೋಡಾ,**
**ನಮಃ ಶಿವಾಯ ಎಂಬುದ ಚಿತ್ತ ಬುದ್ಧಿ ಅಹಂಕಾರ ಮನ ಜ್ಞಾನಕ್ಕೆ ಸಂಬಂಧಿಸಿದ ನೋಡಾ**
**ಈ ರೀತಿಯಿಂದರಿದ ಶಿವತತ್ವ ತಾನಾಗಿ ನಿಂದ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಶರಣ ಸ್ಥಲ ನೋಡುವಡೆ ಬಹು ಸುಲಭ. ತಾ ತಿಳಿ ತಿಳಿದು ಅಗೋಚರದ ಆಚಾರವನ್ನು ಆಚರಿಸುತ್ತಾನೆ. ತನುವನ್ನು ಆವರಿಸಿದ ಅಜ್ಞಾನವನ್ನು ಮರೆ ಮರೆದು ಜ್ಞಾನಾಚರಣೆಯಲ್ಲಿ ತೊಡಗುತ್ತಾನೆ. ನರನಿಗೆ ಶರಣನಿಗೂ ಜ್ಞಾನದಿಂದ ಭೇದವಲ್ಲದೆ ದೇಹದಿಂದ ಭೇದವಿಲ್ಲ. ಶರಣ ದೇಹವನ್ನು ಪ್ರಣವವನ್ನಾಗಿ ಮಾಡಿಕೊಂಡಿದ್ದಾನೆ. ನರನು ದೇಹವನ್ನು ಜಡವೆಂದು ತಿಳಿದು ಪ್ರಳಯಕ್ಕೊಳಗಾಗಿದ್ದಾನೆ.

ಶರಣನ ದೇಹ ಪಂಚಾಕ್ಷರಮಯ. ನಕಾರವೆ ಅಸ್ಥಿ, ಮಕಾರವೆ ಮಾಂಸ, ಶಿಕಾರವೆ ತ್ವಕ್ಕು,

ವಕಾರವೆ ನಾಡಿ, ಯಕಾರವೆ ರೋಮ ಹೀಗೆ ರಸ, ರುಧಿರ, ಶುಕ್ಲ, ಪಿತ್ತ , ಶ್ಲೇಷ. ಹಾಗೆಯೇ ಪಿತ್ತ , ಶ್ಲೇಷ್ಮ, ಕ್ಷುಧೇ,ತೃಷ್ಣ, ನಿದ್ರ , ಆಲಸ್ಯ , ಸಂಗ ಕೂಡ ಆಗಿವೆ.

ಪರಿವ, ಪಾರ್ವ, ಸುಳಿವ, ಹಬ್ಬುವ, ಅಗಲುವ ಗುಣಂಗಳು ಪಂಚಾಕ್ಷರದಲ್ಲಿ ಪಂಚಾಕ್ಷರಮಯವಾಗಿವೆ.ರಾಗ, ದ್ವೇಷ, ಭಯ, ಲಜ್ಜೆ, ಮೋಹ ಕಾಯವನ್ನು ಆವರಿಸಿವೆ.

ಹಾಗೆಯೇ ನಮಃ ಶಿವಾಯ ಎಂಬುದು ಗಂಧ, ರಸ, ರೂಪು, ಸ್ಪರ್ಶ, ಶಬ್ದಕ್ಕೆ ಸಂಬಂಧಿಸಿದೆ.ಅಲ್ಲದೆ ನಮಃ ಶಿವಾಯ ಎಂಬುದು ಪಾಯು, ಗುಹ್ಯ , ಪಾದ, ಪಾಣಿ, ವಾಕ್ಕಿಗೂ ಸಂಬಂಧಿಸಿದೆ ಹಾಗು ನಾಸಿಕ, ಜಿಹ್ವೆ, ನೇತ್ರ , ತ್ವಕ್ಕು, ಶ್ರೋತ್ರಕ್ಕೆ ಸಂಬಂಧಿಸಿದೆ.

ಪ್ರಾಣ, ಅಪಾನ, ವ್ಯಾನ ಉದಾನ ಸಮಾನಕ್ಕೆ ಸಂಬಂಧಿಸಿದೆ. ನಮಃ ಶಿವಾಯ ಎಂಬ ಐದಕ್ಷರಗಳು ಚಿತ್ತ, ಬುದ್ಧಿ, ಅಹಂಕಾರ, ಮನ, ಜ್ಞಾನಕ್ಕೆ ಸಂಬಂಧಿಸಿದೆ. ಹೀಗೆ ತಿಳಿತಿಳಿದು ಶಿವತತ್ವವೆ ತಾನಾಗಬೇಕು.

**1702**

**ಬಂದು ಬಂದು ಹೋಗದಿರಾ ಮನವೆ. ನಿಂದು ನಿಂದು ನಡೆಯದಿರಾ ಮನವೆ.**
**ಬಂದು ಬಂದು ನೀನಿಂಧುದರ, ಕಪಿಲಸಿದ್ಧಮಲ್ಲಿಕಾರ್ಜುನನ ಪೂಜಿಸು, ಮನವೆ.**

ಮನವೆ ಇಂದೂಧರನ ಕೃಪೆಯಿಂದ ನೀನು ಮನವಾಗಿ ಕಾಯದಲ್ಲಿ ಬಂದಿರುವೆ. ಬಂದು ಬಂದು ನೀನು ಅಜ್ಞಾನದಿಂದ ಹಾಗೆಯೇ ಹೋಗದಿರು ಮನವೆ.

ತನುವಿನಲ್ಲಿ ನಿಂದು  ನಿಂದು ಎಲೆ ಮನವೆ ಇಂದೂಧರನ ತನುವೆಂದು ತಿಳಿದು ತಿಳಿದು ಅದನ್ನು ನಿನ್ನಂತೆ ನಡೆಸದಿರಾ ಮನವೆ. ಎಲೆ ಮನವೆ ಬಂದು ಬಂದು ನೀನು ಅಂಗದಲ್ಲಿ ನಿಂದುದು ಇಂದೂಧರನ ಪೂಜಿಸುವದಕ್ಕಾಗಿ ಎಂದು ಮರೆಯದಿರಾ ಮನವೆ ಕಪಿಲಸಿದ್ಧಮಲ್ಲಿಕಾರ್ಜುನನನ್ನು ಪೂಜಿಸು ಎಲೆ ಮನವೆ.

**1703**

**ಬಂದುದದು ಇರಲಿ, ಬಾರದುದದು ಬರಲಿ, ದೇವ ಬರಬಹುದು ಬರಬಹುದೆ?**
**ಬಲ್ಲವನಾದ ಬಳಿಕ ಬರಬಾರದು ಬರಬಾರದು .**
**ಬರಬಾರದು ಬಲ್ಲವನಾದ ಬಳಿಕ. ಕಪಿಲಸಿದ್ಧಮಲ್ಲನ ಮಾಯೆಯ ಎಡೆಯೂಟಕ್ಕೆ .**

ಬಂದದು ಬರಲಿ  ಬಾರದುದದು ಬರಲಿ, ದೇವ ಬರಬಹುದೆ. ಇದು ಬಲ್ಲವನು ಹೇಳುವ ಮಾತಲ್ಲ. ಬಲ್ಲವನಾದ ಬಳಿಕ ಅಜ್ಞಾನ ತನುವಿಗೆ ಬಡೆಯಲಾರದು. ಏಕೆಂದರೆ  ಬಲ್ಲ ಜ್ಞಾನಿಗೆ ಅಜ್ಞಾನ ಸಮೀಪ ಸುಳಿಯುವುದಿಲ್ಲ. ಕಾಯಕ್ಕೆ ಯಾವ ಕಾಯಿಲೆ ಬಂದರೂ ಜ್ಞಾನಿ ನರಳುವುದಿಲ್ಲ.

ಶರಣ ಮಹಾಜ್ಞಾನಿ. ಈತ ಕಾಯಲ್ಲಿದಲ್ಲಿದ್ದವನೇ ಹೊರತು ಕಾಯವೆ ತಾನೆಂದು ಇದ್ದವನಲ್ಲ. ಶರಣ ಸತಿ ಲಿಂಗ ಪತಿಯನ್ನಾಗಿಸಿಕೊಂಡು ಇವರಿಬ್ಬರೂ ಕಾಯವನ್ನು ಮನೆಯನ್ನಾಗಿಸಿಕೊಂಡು ಕಾಯದಲ್ಲಿಯೇ ಇರುತ್ತಾರೆ.

ಇವರಿಬ್ಬರಿಗೆ ತಾವು ವಾಸ ಮಾಡಿದ ಮನೆ ಎಂಬ ಕಾಯ ಸಾಕಾದಾಗ ಅದನ್ನು ಬಿಟ್ಟು ಹೋಗುತ್ತಾರೆ. ಏಕೆಂದರೆ ಇವರು ಬಲ್ಲವರು. ಕಪಿಲಸಿದ್ಧಮಲ್ಲಯ್ಯನ ಮಾಯೆಯ ಎಡೆಯೂಟಕ್ಕೆ ಸಿಲುಕದವನು ಶರಣ. ಈತ ಬಲ್ಲವನು, ಮತ್ತೆ ಕಾಯಕ್ಕೆ ಮರಳಿ ಬರಲಾರ. ಮಲ್ಲಯ್ಯನ

ಎಡೆಯೂಟಕ್ಕೆ ಸಿಲುಕಲಾರ.

**1704**

**ಅನುಭವವೆಂಬುದದು ಅನುಭಾವಿಗಲ್ಲದೆ ಹೊತ್ತಗೆಯಲಿಲ್ಲ ನೋಡಾ ಮಾನವಾ.**
**ರತ್ನಂಗಳು ಸಮುದ್ರದಲ್ಲಲ್ಲದೆ, ಕೀಳು ಕುಲ್ಯಾದಿಗಳಲ್ಲಿಲ್ಲ ನೋಡಾ, ಮಾನವಾ.**
**ನವಮಂತ್ರಂಗಳ ಮರ್ಮವದು ಗುರುಮುಖದಲ್ಲಲ್ಲದೆ.**
**ಬರಿಯ ಪುರಾಣಂಗಳಲ್ಲಿಲ್ಲ ನೋಡಾ, ಮಾನವಾ.**
**ಇಂದಿನ ಪ್ರಮಥರು ಮುಂದೆಬಂದಹರೆಂಬ ಭ್ರಮೆ ಬೇಡ ನೋಡಾ, ಮಾನವಾ.**
**ನೀನಂದಿಗೆನ್ನದೆ ಕಪಿಲಸಿದ್ಧಮಲ್ಲಿಕಾರ್ಜುನನ ನಂಬು ನೋಡಾ, ಮಾನವಾ.**

ಅನುಭವವೆಂಬುದು ಶರಣನ ಕಾಯದಿಂದ ಹೊರಬಂದು ಅದೇ ಹೊತ್ತಿಗೆಯಾಗಿ ಮುದ್ರಣಗೊಂಡಿದೆ. ಹೊತ್ತಿಗೆಯ ಅಭ್ಯಾಸದಿಂದಲೆ ಕಾಯ ಕಾಯವನ್ನು ಅನುಭಾವಿ ಎಂದು ಗುರುತಿಸುವುದಿಲ್ಲ. ಆದರೆ ಲೋಕ ಹೊತ್ತಿಗೆಗಳನ್ನು ಪೂಜಿಸುತ್ತದೆ. ಬೈಬಲ್, ಭಗವದ್ಗೀತೆ, ಕುರಾನ್ ಶ್ರೇಷ್ಠವೆಂದು ತಿಳಿದಿದೆ.

ದೇಹದಲ್ಲಿ ಜ್ಞಾನರತ್ನ ಅಡಗಿದೆ. ಅದನ್ನು ಕೆಡಗೊಡದೆ ಅಲಂಕರಿಸಿದವನೇ ಮಹಾಜ್ಞಾನಿ.

ಸಮುದ್ರದ ಚಿಪ್ಪುಗಳಲ್ಲಿ ಬಚ್ಚಿಟ್ಟುಕೊಂಡ ಮುತ್ತುಗಳನ್ನು ತೆಗೆದಂತೆ ಕಾಯದಲ್ಲಿ ಬಚ್ಚಿಟ್ಟುಕೊಂಡ ಜ್ಞಾನರತ್ನವನ್ನು ಕಾಯವನ್ನು ಆವರಿಸಿದ ಮನವೆ ಹುಡುಕಿ ಹೊರ ತೆಗೆಯಬೇಕು. ಈ ಜ್ಞಾನ ಇದರ ಮರ್ಮವನ್ನು ಗುರು ಮುಖದ ಮೂಲಕ ಕಲಿಯಬೇಕಲ್ಲದೆ, ಬರೀ ಪುರಾಣಂಗಳ ಓದಿನಲ್ಲಿ ಜ್ಞಾನ ಸಾಧ್ಯವಾಗುವುದಿಲ್ಲ.

ಪ್ರಮಥರು ಮುಂದೆ ಬಂದರು ಎಂಬ ಭ್ರಮೆ ನಿನಗೆ ಬೇಡ ಎಲೆ ಮನವೆ, ನೀನು ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ದಮಲ್ಲಿಕಾರ್ಜುನನನ್ನು ನಂಬು ಎಲೆ ಮನವೆ.

**1705**

**ಮಣ್ಣೆಲ್ಲ ಮಹಾದೇವನ ಸದ್ಯೋಜಾತಮುಖ ನೋಡಾ.**
**ನೀರೆಲ್ಲ ಮಹಾದೇವನ ವಾಮದೇವಮುಖ ನೋಡಾ.**
**ಪ್ರಳಯಾಗ್ನಿಯೆಲ್ಲ ಮಹಾದೇವನ ಅಘೋರಮುಖ ನೋಡಾ.**
**ಮಾರುತವೆಲ್ಲ ಮಹಾದೇವನ ತತ್ಪುರುಷಮುಖ ನೋಡಾ.**
**ಆಕಾಶವೆಲ್ಲ ಮಹಾದೇವನ ಈಶಾನ್ಯಮುಖ ನೋಡಾ.**
**ಆತ್ಮವೆಲ್ಲ ಮಹಾದೇವನ ಗೋಪ್ಯಮುಖ ನೋಡಾ. ಸರ್ವಂ ಶಿವಮಯಂ**
**ಜಗತ್ತೆಂಬ ಶ್ರುತಿಶಾಖೆ ಪುಸಿಯಲ್ಲ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯದಲ್ಲಿ ಪಂಚಭೂತಗಳು ಸಂಗಮವಾಗಿವೆ. ಹೇಗೆ ವಿಶ್ವ ಪಂಚಭೂತಗಳಿಂದ ನಿರ್ಮಾಣವಾಗಿದೆಯೋ ಹಾಗೆಯೇ ಕಾಯದಲ್ಲಿ ಪಂಚಭೂತಗಳು ಐಕ್ಯವಾಗಿ ಇಡೀ ಕಾಯವೆ ಬ್ರಹ್ಮಾಂಡದಲ್ಲಿ ಬಚ್ಚಿಟ್ಟುಕೊಂಡಿದೆ. ಇದನ್ನು ತಿಳಿದುಕೊಂಡು ಆಚರಣೆಯಲ್ಲಿ-ತೊಡಗಿದ ಕಾಯವೆ ಮಹಾದೇವನ ಕಾಯ. ಆತನನ್ನು ಸದ್ಯೋಜಾತನೆಂದು ಕರೆಯುತ್ತಾರೆ.

ನೀರಿನಿಂದ ಮಣ್ಣು ಹೇಗೆ ಗಟ್ಟಿಗೊಂಡಿದೆಯೋ ಹಾಗೆಯೇ ಕಾಯ ಜಲದಿಂದ ಗಟ್ಟಿಗೊಂಡು ಮಣ್ಣಿನ ಅಂಶ ಎನಿಸಿಕೊಂಡಿದೆ. ಇದನ್ನು ಸಿದ್ಧರಾಮ ಶಿವಯೋಗಿಗಳು ಮಹಾದೇವನ ಸದ್ಯೋಜಾತಮುಖ ಎಂದಿದ್ದಾರೆ. ಜಲಬಿಂದುವೇ ಗರ್ಭದಲ್ಲಿ ಹೋಗಿ ರಕ್ತ, ಮೂಳೆ, ಮಾಂಸ, ಮಜ್ಜೆ, ಮೇದಸ್ಸು ಆಗಿವೆ. ಚರ್ಮದ ಕವಚವಾಗಿ ಕಾಯವೆಂದು ಕರೆಯಿಸಿಕೊಂಡಿದೆ. ಇದೆ ಮಹಾದೇವನ ವಾಮದೇವಮುಖ.

ಪ್ರಳಯಾಗ್ನಿಯೇ ಮಹಾದೇವನ ಅಘೋರಮುಖ, ಗಾಳಿಯೇ ಮಹಾದೇವನ ತತ್ಪುರುಷ ಮುಖ, ಆತ್ಮವೇ ಮಹಾದೇವನ ಗೌಪ್ಯಮುಖ. ಹೀಗೆ ಸರ್ವ ಕಾಯಗಳು ಶಿವಮಯವಾಗಿ ಜಗತ್ತನ್ನು ವ್ಯಾಪಿಸಿವೆ.

**1706**

**'ಯದೃಷ್ಟಂತನ್ನಷ್ಟಂ' ಎಂಬ ಶ್ರುತಿವಾಕ್ಯವ(ನ)ನರ್ಥವ ಮಾಡಿ ಮುಳುಗದಿರಾ, ಮನವೆ.**
**ಭೇದಬುದ್ಧಿಯಿಂದರಿಯುವುದದೆ ನಷ್ಟ ನೋಡಾ, ಮನವೆ.**
**ಭೇದವಳಿದು ಭವವಿರಹಿತಮೂರ್ತಿಯ ಪಂಚತತ್ವವೆಂದು ನಂಬು ಕಂಡಾ, ಮನವೆ.**
**'ಸರ್ವಂ ಕಪಿಲಸಿದ್ಧಮಲ್ಲಿಕಾರ್ಜುನಮಯಂ ಜಗತ್' ಎಂಬುದು ಪುಸಿಯೆ ಮನವೆ?**

ಎಲೆ ಮನವೆ ಭೇದ ಬುದ್ಧಿಯಿಂದ ಅರಿಯುವುದು ನಿನಗೆ ಬಹಳ ನಷ್ಟ. ನಿನ್ನ ಸಕಲ ಭೇದವನು ಅಳಿದು ಜನನ ಮರಣಗಳಿಲ್ಲದ, ಹುಟ್ಟು ಸಾವುಗಳಿಲ್ಲದ, ರೂಹಿಲ್ಲದ ಚೆಲುವ ಚೆನ್ನಿಗನನ್ನು ಕಾಯದಲ್ಲಿಯೇ ನೋಡು.

ಕಾಯವನ್ನು ಪಂಚತತ್ವವೆಂದು ನಂಬು ಎಲೆ ಮನವೆ. ಕಾಯದಲ್ಲಿ ಕಪಿಲಸಿದ್ಧಮಲ್ಲಯ್ಯನಿದ್ದಾನೆ. ಆತನಿಂದ ಜನ್ಮ ತಳೆದ ಮನ ನೀನು. ಆತನನ್ನು ನಂಬಿ ಘನಮನವಾಗು ಎಲೆ ಮನವೆ.

**1707**

**''ತದನುಸರಣಾತ್ ಜನ್ಮ ಜನ್ಮ'' ಎಂಬುದು ಹುಸಿಯಲ್ಲ, ಹುಸಿಯಲ್ಲ ನೋಡಯ್ಯಾ.**
**ಭೇದಬುದ್ಧಿಯಿಂದಲ್ಲದೆ ಅಭೇದಬುದ್ಧಿಗೆ ತೋರಬಾರದು.**
**'ಸರ್ವಂ ಕಪಿಲಸಿದ್ಧಮಲ್ಲಿಕಾರ್ಜುನಮಯಂ ಜಗತ್' ಎಂಬುದು**
**ನಿಶ್ಚಯ ನೋಡಯ್ಯಾ, ಎಲೆ ಲಿಂಗವೆ.**

ಜಗತ್ತಿನ ಸರ್ವ ಕಾಯಗಳಲ್ಲಿ ಅರಿವು ಎನ್ನುವ ಗುರುದೇವನಾದ ಕಪಿಲಸಿದ್ದಮಲ್ಲಿಕಾರ್ಜುನ ಸಂಗಮವಾಗಿದ್ದಾನೆ. ಇದು ಭೇದ ಬುದ್ಧಿಯುಳ್ಳ ಕಾಯಗಳಿಗೆ ತಿಳಿಯದು.

ಕಾಯವನ್ನು ಆವರಿಸಿದ ಮನದಿಂದಲೆ ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ಜನ್ಮ ತಳೆದಿವೆ. ಇವು ತಮಗೆ ಬೇಕಾದ ಭೋಜನವನ್ನು ಕಾಯದ ಮೂಲಕ ಮಾಡಿ ಏನೂ ಅರಿಯದ ಕಾಯವನ್ನು ಆಪತ್ಕಾಲಕ್ಕೆ ತಳ್ಳುತ್ತದೆ. ಕಾಯವನ್ನು ಆವರಿಸಿದ ಮನದಿಂದಲೇ ಕಾಯದಲ್ಲಿ ಸಂಗಮವಾದ ಕಪಿಲಸಿದ್ಧಮಲ್ಲಯ್ಯನನ್ನು ಅರಿತು ಆ ಮಲ್ಲಯ್ಯನೆ ತಾನಾದಾಗಲೆ ಮನದಿಂದ ಜನ್ಮ ತಳೆದ ಸಕಲ ಭೇದಬುದ್ಧಿಗಳು ನಷ್ಟವಾಗಿ ಮನ ಘನಮನವಾಗುತ್ತದೆ. ಆಗ ಇಡೀ

ಜಗತ್ತಿನಲ್ಲಿ ಇರುವ ಕಾಯಗಳೆಲ್ಲ ಕಪಿಲಸಿದ್ಧಮಲ್ಲಯ್ಯನ ವಾಸಸ್ಥಾನ ಎಂದು ಮನಕ್ಕೆ ಮನವರಿಕೆಯಾಗುತ್ತದೆ.

**1708**

**ತರ್ಕಿಸಿದಲ್ಲಿ ವಾದಿಸಿ ಶಿಖಾಮುದ್ರೆ ಸಾಧಿಸುವವರೊಂದು ಕೋಟಿ.**
**ವೇದಾಂತದಲ್ಲಿ ವಾದಿಸಿ ಶಿಖಾಮುದ್ರ ಸಾಧಿಸುವವರೊಂದು ಕೋಟಿ.**
**ಶರಣನ ವಾದಿಸಿ ಶಿಖಾಮುದ್ರೆಸಾಧಿಸುವದದು**
**ಶರಣನ ಬಿಟ್ಟು ಶರ ತಾಗಿದವರಲ್ಲೋರ್ವರಿಲ್ಲ ನೋಡಾ.**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ತರ್ಕಿಸಿ ವಾದಿಸಿ ಶಿಖಾಮುದ್ರ ಸಾಧಿಸುವವರು ಒಂದು ಕೋಟಿ ಜನರಿದ್ದಾರೆ. ವೇದಾಂತದಲ್ಲಿ ವಾದಿಸಿ ಶಿಖಾಮುದ್ರ ಸಾಧಿಸುವವರು ಒಂದು ಕೋಟಿ ಜನರಿದ್ದಾರೆ. ಇವರೆಲ್ಲ ಗ್ರಂಥಗಳನ್ನು ಓದಿಕೊಂಡವರೆ ಹೊರತು ಅನುಭಾವಿಗಳಲ್ಲ.

ಶರಣನನ್ನು ವಾದಿಸಿ ಸೋಲಿಸುವ ಶಕ್ತಿ ಗ್ರಂಥಗಳನ್ನು ಓದಿಕೊಂಡು ಪಂಡಿತರಾದವರಿಗೆ ಸಾಧ್ಯವಿಲ್ಲ. ಶರಣ ಅನುಭಾವಿ. ಅನುಭಾವಿಯೊಂದಿಗೆ ಅನುಭಾವಿ ಮಾತ್ರ ಮಾತನಾಡಬಲ್ಲ. ಪಂಡಿತರಿಗೆ ಅನುಭಾವಿಯನ್ನು ಎದುರಿಸಿ ಸೋಲಿಸಲು ಸಾಧ್ಯವಿಲ್ಲ.

**1709**

**ತಿಳಿಯದ ಜನರು ಆವು ಶಿವನಲ್ಲ, ಜಡ ಜೀವಿಗಳು ಎಂಬುವರು.**
**ಅದೆಂತಯ್ಯಾ ಪಂಚತತ್ವಂ ಮುಖೋದ್ಭೂತಂ, ಎಂಬಾಗಮವಾಕ್ಯಸಿದ್ಧಿ?**
**ಪಂಚತತ್ವಂಗಳೆಲ್ಲ ಶಿವನ ಪಂಚಮುಖದಿಂದಾದವು.**
**ಆ ಪಂಚತತ್ವದಿಂದ ಸಕಲ ಚರಾಚರಬ್ರಹ್ಮಾಂಡವಾಯಿತ್ತಯ್ಯಾ,**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯನ ಲೀಲೆಯಿಂದ ಕಲ್ಲಯ್ಯಾ.**

ಕಾಯ ಪಂಚತತ್ವದಿಂದ ನಿರ್ಮಾಣವಾಗಿದೆ. ಶಿವನ ಐದು ಮುಖಗಳು ಕಾಯದಲ್ಲಿ ಬಚ್ಚಿಟ್ಟುಕೊಂಡಿದೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೆ ಸಂಗಮವಾದ ಶಿವನಿಗೆ ಭಕ್ತನಾದಾಗ ಕಾಯ ಆ ಶಿವನನ್ನು ಭಕ್ತಿಯಿಂದ ನಮಿಸಿ ಕುಣಿಕುಣಿದಾಡುವುದು.

ಪಂಚತತ್ವದಿಂದ ಶಿವ ಸಕಲ ಚರಾಚರಬ್ರಹ್ಮಾಂಡವನ್ನು ಸೃಷ್ಟಿಮಾಡಿದ್ದು ಸ್ಪಷ್ಟವಾಗಿ ಅರಿವಾಗುವುದು. ತಿಳಿಯದ ಕಾಯಗಳು ಅವು ಶಿವನಲ್ಲ ಜಡಜೀವಿಗಳು ಎನ್ನುತ್ತವೆ. ಪಂಚತತ್ವಗಳೆಲ್ಲ ಶಿವನ ಪಂಚಮುಖದಿಂದಲೇ ಆಗಿವೆ, ಎಂಬುದು ಕಾಯವನ್ನು ಆವರಿಸಿದ ಮನಕ್ಕೆ ಅಂಗದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನ ದರ್ಶನವಾದಾಗ ಮಾತ್ರ ಕಾಯಕ್ಕೆ ತಿಳಿಯುತ್ತದೆ.

**1710**

**ಲೀಲೆಯದು ಪರಬೊಮ್ಮದ ಇಚ್ಛೆ. ಇಚ್ಛೆಯದು ಸಕಲ ಜೀವಜಾಲೋತ್ಪತ್ತಿ.**

**ಸಕಲ ಜೀವಜಾಲೋತ್ಪತ್ತಿಯದು ಜಗದ್ರಚನೆ.**
**ಜಗದ್ರಚನೆಯದು ಜಗತ್ಪ್ರಳಯ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಬ್ರಹ್ಮಾಂಡದ ಸೃಷ್ಟಿಯಾಗಿರುವುದು ಬ್ರಹ್ಮನ ಲೀಲೆ. ಈ ಬ್ರಹ್ಮಾಂಡದ ಮೇಲೆ ಆತನ ಇಚ್ಛೆಯಂತೆ ಸಕಲ ಜೀವಿಗಳ ಸೃಷ್ಟಿಯಾಗಿದೆ. ಸಕಲ ಜೀವಜಾಲೋತ್ಪತ್ತಿಯನ್ನು ಜಗತ್ತಿನ ರಚನೆಗಾಗಿ ಮಾಡಿದ್ದಾರೆ. ಜಗತ್ತಿನ ರಚನೆಯು ಜಗತ್ತಿನ ಪ್ರಳಯಕ್ಕೂ ಕಾರಣವಾಗಿದೆ.

**1711**

**ಶಿವಂಗೆ ಪಂಚಮುಖವೆಂಬುದ ಮೂಲೋಕವೆಲ್ಲ ಬಲ್ಲದು.**
**ನರಂಗೆ ಪಂಚಮುಖವೆಂಬುದ ಆರೂ ಅರಿಯರು.**
**ಮುಂಭಾಗವದು ಸದ್ಯೋಜಾತ, ಬಲಭಾಗವದು ತತ್ಪುರುಷ,**
**ಎಡಭಾಗವದು ಅಘೋರ, ಹಿಂಭಾಗವದು ವಾಮದೇವ,**
**ಮಧ್ಯಭಾಗವದು ಕಪಿಲಸಿದ್ಧಮಲ್ಲಿಕಾರ್ಜುನನ ಈಶಾನ್ಯಮುಖ, ನೋಡಾ, ಕಲ್ಲಯ್ಯಾ .**

ಸಿದ್ಧರಾಮ ಶಿವಯೋಗಿಗಳು ಕಲ್ಲಯ್ಯ ಶರಣನಿಗೆ ಶಿವನ ಪರಿಚಯ ಮಾಡಿಸಿದ್ದಾರೆ.

ಶಿವನಿಗೆ ಐದು ಮುಖಗಳಿವೆ ಎನ್ನುವುದನ್ನು ಮೂರು ಲೋಕವೂ ಬಲ್ಲದು. ಆದರೆ ನರನಿಗೆ ಕೂಡ ಐದು ಮುಖಗಳಿವೆ. ಎನ್ನುವುದು ಯಾರೂ ಕೂಡ ಅರಿಯರು. ಪ್ರತಿ ಕಾಯಕ್ಕೆ ಐದು ಮುಖಗಳಿವೆ. ಕಾಯವನ್ನು ಆವರಿಸಿದ ಮನ ಕಾಯದ ಸಂಗ ಮಾಡಿರುವುದರಿಂದ ಕಾಯಕ್ಕೂ ಐದು ಮುಖಗಳಿವೆ ಎನ್ನುವುದನ್ನು ಮನ ಮರೆತು ಹೋಗಿದೆ.

ಕಾಯದೊಳಗೆ ಸಂಗಮವಾದ ಅರಿವು ಎನ್ನುವ ಗುರುದೇವನ ಪರಿಚಯ ಮನಕ್ಕೆ ಆದರೆ ಸಾಕು ಅದು ಘನಮನವಾಗುತ್ತದೆ. ಆಗ ಗುರುದೇವ ಘನಮನಕ್ಕೆ ಹೇಳುತ್ತಾನೆ, ತಾನೆ ಮಹಾದೇವನೆಂದು, ತಾನೆ ಸದಾಶಿವನೆಂದು. ಆಗ ಮನ ಸದಾಶಿವನಿಗೆ ಶಿವೆಯಾಗಿ ಮಾರ್ಪಡುತ್ತಾಳೆ. ಈ ವೃತ್ತಾಂತವನ್ನು ಸೂತ್ರ ರೂಪದಲ್ಲಿ ಹೇಳುವ ಗುರುದೇವನ ಅವಶ್ಯಕತೆ ಇದೆ. ಆ ಗುರುದೇವನ ಮೇಲೆ ಆಸಕ್ತಿ ಹೊಂದಿದ ಮನ ಕ್ರಮೇಣ ಘನಮನವಾಗಿ ಕಾಯ ಹೇಗೆ ಪಂಚಮುಖವನ್ನು ಹೊಂದಿದೆ ಎಂದು ಅರಿಯುತ್ತದೆ.

ಇದನ್ನು ತಿಳಿಯುವ ಆಸಕ್ತಿಯುಳ್ಳ ಕಲ್ಲಯ್ಯ ಶರಣರು ಸಿದ್ಧರಾಮರಾಮ ಶಿವಯೋಗಿಗಳಿಗೆ ಅತ್ಯಂತ ವಿನಯದಿಂದ ಭಕ್ತಿ ಮಾಡಿ ಕೇಳಿದ್ದಾರೆ. ಆಗ ಸಿದ್ಧರಾಮಶಿವಯೋಗಿಗಳು ಈ ಕೆಳಕಂಡಂತೆ ಹೇಳಿದ್ದಾರೆ. ಕಾಯದ ಮುಂಭಾಗವದು ಸದ್ಯೋಜಾತ, ಬಲಭಾಗವದು ತತ್ಪುರುಷ, ಎಡಭಾಗವದು ಅಘೋರ, ಹಿಂಭಾಗವದು ವಾಮದೇವ, ಮಧ್ಯಭಾಗವದು ಕಪಿಲಸಿದ್ಧಮಲ್ಲಿಕಾರ್ಜುನನ ಈಶಾನ್ಯ ಮುಖ ನೋಡಾ ಎಂದು ಸವಿನಯದಿಂದ ಭಕ್ತಿಮಾಡಿದ ಕಲ್ಲಯ್ಯ ಶರಣರಿಗೆ ಸಿದ್ಧರಾಮಶಿವಯೋಗಿಗಳು ಹೇಳಿದ್ದಾರೆ.

**1712**

**ಬ್ರಾಹ್ಮಣ ಉತ್ಪತ್ತಿ ಸದ್ಯೋಜಾತ ಮುಖದಿಂದಾಯಿತ್ತು .**

**ಕ್ಷತ್ರಿಯನ ಉತ್ಪತ್ತಿ ವಾಮದೇವ ಮುಖದಿಂದಾಯಿತ್ತು.**
**ವೈಶ್ಯನ ಉತ್ಪತ್ತಿ ಅಘೋರಮುಖದಿಂದಾಯಿತ್ತು .**
**ಶೂದ್ರನ ಉತ್ಪತ್ತಿ ತತ್ಪುರುಷ ಮುಖದಿಂದಾಯಿತ್ತು .**
**ಲಿಂಗಾಂಗಿ ಉತ್ಪತ್ತಿ ಈಶಾನ್ಯ ಮುಖದಿಂದಾಯಿತ್ತು .**
**ಪ್ರಮಥರ ಉತ್ಪತ್ತಿ ನಿರಂಜನ ಪ್ರಣವದ ಘೋಷವುಳ್ಳ,**
**ಕಪಿಲಸಿದ್ಧಮಲ್ಲಿಕಾರ್ಜುನನ ಗೋಪ್ಯಮುಖದಿಂದಾಯಿತ್ತು, ನೋಡಾ, ಕಲ್ಲಯ್ಯಾ .**

ಸಿದ್ಧರಾಮ ಶಿವಯೋಗಿಗಳು ಕಾಯ ಬೇರೆ ಬೇರೆ ಕಾಯಕಗಳಲ್ಲಿ ತೊಡಗಿಕೊಳ್ಳುವುದು ಕಾಯದಲ್ಲಿ ಸಂಗಮವಾದ ಪಂಚಾನನ ಆದೇಶದಿಂದಲೇ ಸಾಧ್ಯವಾಯಿತ್ತು . ಎಂದು ಕಲ್ಲಯ್ಯ ಶರಣರಿಗೆ ಕಾಯದ ವಿವಿಧ ಆಯಾಮಗಳನ್ನು ವಿವರಿಸಿದ್ದಾರೆ.

ಸದ್ಯೋಜಾತಮುಖದಿಂದ ಬ್ರಾಹ್ಮಣನ ಉತ್ಪತ್ತಿ ಆಯಿತು. ವಾಮದೇವ ಮುಖದಿಂದ ಕ್ಷತ್ರಿಯ ಉತ್ಪತ್ತಿ ಆಯಿತು. ಅಘೋರನ ಮುಖದಿಂದ ವೈಶ್ಯನ ಉತ್ಪತ್ತಿ ಆಯಿತು. ತತ್ಪುರುಷ ಮುಖದಿಂದ ಸೂದ್ರನ ಉತ್ಪತ್ತಿ ಆಯಿತು. ಈಶಾನ್ಯದ ಮುಖದಿಂದ ಲಿಂಗಾಂಗಿಯ ಉತ್ಪತ್ತಿ ಆಯಿತು. ನಿರಂಜನ ಪ್ರಣವದ ಘೋಷವುಳ್ಳ ಕಪಿಲಸಿದ್ಧಮಲ್ಲಿಕಾರ್ಜುನನ ಗೌಪ್ಯಮುಖದಿಂದ ಪ್ರಮಥರ ಉತ್ಪತ್ತಿಯಾಯಿತ್ತು ಎಂದಿದ್ದಾರೆ ಸಿದ್ಧರಾಮಶಿವಯೋಗಿಗಳು.

**1713**

**ಜನ್ಮಕ್ಕೊಮ್ಮೆ ಬಂದು ಶಿವಾಯ ನಮಃ ಎಂದಡೆ ಸಾಲದೆ?**
**ಜನ್ಮಕ್ಕೊಮ್ಮೆ ಬಂದು 'ಹರಾಯನಮಃ'ಎಂದಡೆ ಸಾಲದೆ?**
**ಜನ್ಮಕ್ಕೊಮ್ಮೆ ಬಂದು ಬಸವನ ಪ್ರಸಾದವ ತೆಗೆದುಕೊಂಡಡೆ ಸಾಲದೆ?**
**ಜನ್ಮಕ್ಕೊಮ್ಮೆ ಬಂದು ಚೆನ್ನಬಸವಣ್ಣನ ಪಾದೋದಕವ ತೆಗೆದುಕೊಂಡಡೆ ಸಾಲದೆ?**
**ಜನ್ಮಕ್ಕೊಮ್ಮೆ ಬಂದು ಪ್ರಭುವಿನ ಪಾದಕ್ಕೆ ವಂದಿಸಿದಡೆ ಸಾಲದೆ?**
**ಜನ್ಮಕ್ಕೊಮ್ಮೆ ಬಂದು ಮಡಿವಾಳಣ್ಣನ ಅನುಭವದಲ್ಲಿದ್ದಡೆ ಸಾಲದೆ?**
**ಜನ್ಮಕ್ಕೊಮ್ಮೆ ಬಂದು ಕಪಿಲಸಿದ್ಧಮಲ್ಲಿಕಾರ್ಜುನನ ಪೂಜಿಸಿದಡೆ ಸಾಲದೇನೋ ಕಲ್ಲಯ್ಯಾ.**

ಸಿದ್ಧರಾಮ ಶಿವಯೋಗಿಗಳು ಕಲ್ಲಯ್ಯ ಶರಣರಿಗೆ ಈ ಕೆಳಗಿನಂತೆ ಹೇಳಿದ್ದಾರೆ. ಜನ್ಮಕ್ಕೊಮ್ಮೆ ಬಂದು ಶಿವಾಯ ನಮಃ ಎಂದರೆ ಸಾಲದೆ. ಜನ್ಮಕ್ಕೊಮ್ಮೆ ಬಂದು ಹರಾಯ ನಮಃ ಎಂದರೆ ಸಾಲದೆ. ಜನ್ಮಕ್ಕೊಮ್ಮೆ ಬಂದು ಬಸವನ ಪ್ರಸಾದವ ತೆಗೆದುಕೊಂಡರೆ ಸಾಲದೆ. ಜನ್ಮಕ್ಕೊಮ್ಮೆ ಬಂದು ಚೆನ್ನಬಸವಣ್ಣನ ಪಾದೋದಕವ ತೆಗೆದುಕೊಂಡಡೆ ಸಾಲದೆ. ಜನ್ಮಕ್ಕೊಮ್ಮೆ ಬಂದು ಪ್ರಭುವಿನ ಪಾದಕ್ಕೆ ವಂದಿಸಿದರೆ ಸಾಲದೆ. ಜನ್ಮಕ್ಕೊಮ್ಮೆ ಬಂದು ಮಡಿವಾಳ ಮಾಚಿದೇವಣ್ಣನ ಅನುಭವದಲ್ಲಿದ್ದರೆ ಸಾಲದೆ. ಜನ್ಮಕ್ಕೊಮ್ಮೆ ಬಂದು ನಮ್ಮ ಶರಣ ಕಪಿಲಸಿದ್ಧಮಲ್ಲಿಕಾರ್ಜುನನನ್ನು ಪೂಜಿಸಿದರೆ ಸಾಲದೆ ಎಂದು ಕಲ್ಲಯ್ಯ ಶರಣರಿಗೆ ಹೇಳಿದ್ದಾರೆ ಸಿದ್ಧರಾಮ ಶಿವಯೋಗಿಗಳು

ಸೂಚನೆ: ಹಿಂದಿನ ವಚನಗಳಲ್ಲಿ ಪ್ರಸಾದ, ಪಾದೋದಕದ, ಪಾದದ ಅನುಭಾವದ ವಿವರಗಳು ಬಂದಿವೆ.

**1714**

**ಗುರು ಏರಿದ ಮಂಚವನೇರಿದೆನಾದಡೆ, ಕಾಲ್ಗಗಳು ಹರಿದು ಹೋಗಲಿ ದೇವಾ.**

**ಗುರು ಹೊದ್ದ ವಸ್ತ್ರವ ಹೊದ್ದೆನಾದಡೆ, ಚರ್ಮವು ಸುಲಿದು ಹೋಗಲಿ ದೇವಾ.**
**ಗುರು ಮುಟ್ಟಿದ ಪದಾರ್ಥವ ಮುಟ್ಟಿದೆನಾದಡೆ,**
**ಪುಳಗೊಂಡವ ಮಾಡಲಿ ಕಪಿಲಸಿದ್ಧಮಲ್ಲಿಕಾರ್ಜುನದೇವ.**

ಗುರುದೇವನೆಂದರೆ ಸಾಮಾನ್ಯನಲ್ಲ. ಪ್ರತಿ ಕಾಯದಲ್ಲಿ ಸಂಗಮವಾದ ಗುರುದೇವನನ್ನು ತೋರಿದ ಗುರುದೇವ. ಇಂತಹ ಗುರುದೇವ ಏರಿದ ಮಂಚವನ್ನು ನಾನು ಏರಿದೆನಾದಡೆ ನನ್ನ ಕಾಲುಗಳು ಹರಿದು ಹೋಗಲಿ ದೇವಾ.

ಗುರುದೇವನು ಹೊದ್ದುಕೊಂಡ ವಸ್ತ್ರವನ್ನು ನಾನು ಹೊದ್ದಡೆ ನನ್ನ ಚರ್ಮ ಸುಲಿದು ಹೋಗಲಿ ದೇವಾ. ಗುರುದೇವನು ಮುಟ್ಟಿದ ಪದಾರ್ಥವನು ನಾನು ಮುಟ್ಟಿದೆನಾದಡೆ ಪುಳಗೊಂಡವ ಮಾಡಲಿ ಎಂದು ಸಿದ್ಧರಾಮ ಶಿವಯೋಗಿಗಳು ಅತ್ಯಂತ ಭಕ್ತಿಯಿಂದ ಈ ಸಾಲುಗಳನ್ನು ನುಡಿದಿದ್ದಾರೆ. ಏಕೆಂದರೆ ತಾನು ಎಂದಿಗೂ ಕಪಿಲಸಿದ್ಧಮಲ್ಲಯ್ಯನ ಪಾದಸೇವಕನೇ ಹೊರತು ಆತನಿಗೆ ಸಮನಾಗಿ ನಾನು ಏನನ್ನು ಬಯಸುವುದಿಲ್ಲ. ಹಾಗೇನಾದರು ನಾನು ಬಯಸಿದರೆ ನನಗೆ ತಕ್ಕ ಶಿಕ್ಷೆಯಾಗಲಿ ಎಂದು ಈ ವಚನದಲ್ಲಿ ಹೇಳಿದ್ದಾರೆ.

**1715**

**ಹೊನ್ನು ಬಿಡದನ್ನಕ್ಕ ಗುರುಪಾದೋದಕ ಸಲ್ಲದು.**
**ಮಣ್ಣು ಬಿಡದನ್ನಕ್ಕ ಲಿಂಗಪಾದೋದಕ ಸಲ್ಲದು. ಹೆಣ್ಣು ಬಿಡದನ್ನಕ್ಕ**
**ಜಂಗಮಪಾದೋದಕ ಸಲ್ಲದು. ಈ ಮಾತು ಸರ್ವವು ಅಳಿಯದನ್ನಕ್ಕ,**
**ಕಪಿಲಸಿದ್ಧಮಲ್ಲಿಕಾರ್ಜುನನಿಂಬುಗೊಡನು ಮಹಾಬಯಲಲ್ಲಿ ಕಲ್ಲಯ್ಯಾ .**

ಹೊನ್ನು, ಹೆಣ್ಣು, ಮಣ್ಣು ಬಿಡದಿದ್ದರೆ ಗುರು ಪಾದೋದಕ, ಲಿಂಗಪಾದೋದಕ, ಜಂಗಮ ಪಾದೋದಕ ಸಲ್ಲದು. ಇವು ಮೂರು ಅಳಿಯದಿದ್ದರೆ ಕಾಯದಲ್ಲಿ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನ ಒಲಿಯುವುದಿಲ್ಲವೆಂದು ಸಿದ್ಧರಾಮಶಿವಯೋಗಿಗಳು ಕಲ್ಲಯ್ಯ ಶರಣರಿಗೆ ಹೇಳಿದ್ದಾರೆ.

ಹೊನ್ನು : ಇದೊಂದು ಹಳದಿ ಲೋಹ. ಲೋಹಕ್ಕೆ ಹಳದಿ ಬಣ್ಣ ಮೆತ್ತಿಕೊಂಡಿದೆ.

ಮಣ್ಣು : ಜಲಬಿಂದುವೆ ಗಟ್ಟಿಗೊಂಡು ಮಣ್ಣು ಆಗಿದೆ. ಜಲಬಿಂದುವೆ ಕಲ್ಲು, ಖನಿಜ ಪದಾರ್ಥಗಳಿಗೆ ಜನ್ಮ ನೀಡಿದೆ. ಹಾಗೆಯೇ ಜಲ ಗರ್ಭಕ್ಕೆ ಹೋಗಿ ರಕ್ತ , ಮೂಳೆ, ಮಾಂಸ, ಮಜ್ಜೆ, ಮೇದಸ್ಸು ಆಗಿ ಇವು ಸೋರದಂತೆ ಚರ್ಮದ ಕವಚವಾಗಿ ತನು ಜನ್ಮ ತಳೆದಿದೆ.

ತನುವಿನ ಸಂತಾನ ವೃದ್ಧಿಯಾಗಲೆಂದು ತನುವೆ ಹೆಣ್ಣಾಗಿ ಅದರಲ್ಲಿ ವಿಷಯಾಸಕ್ತಿ ಹುಟ್ಟಿಕೊಂಡಿದೆ. ಇದು ಹುಟ್ಟಿಕೊಂಡಿರುವುದು ಮತ್ತೊಂದು ತನುವಿನ ಜನ್ಮಕ್ಕಾಗಿ ಮಾತ್ರ . ಇವುಗಳನ್ನು ತನುವನ್ನು ಆವರಿಸಿದ ಮನ ಅರಿತರಿತು ಆ ಅರಿವೇ ತಾನಾದಾಗ ಹೊನ್ನು , ಹೆಣ್ಣು, ಮಣ್ಣಿನ ಮೇಲೆ ಇರುವ ಅಜ್ಞಾನ ತನುವಿನಿಂದ ತಂತಾನೆ ಕಳಚಿ ಬೀಳುತ್ತದೆ.

**1716**

**ಶರಣನ ಕೂಡ ವಾದ ಸಲ್ಲದು ನೋಡಾ, ಆತನ ನಡೆ ಬೇರೆ, ಆತನ ನುಡಿಗಡಣ ಬೇರೆ.**
**ಕ್ರಿಯೆವಿಡಿದು ಆಚರಿಸಿದಲ್ಲಿ (ಜ್ಞಾನವಿಡಿದು ವಾದಿಸುವ)**

**ಜ್ಞಾನವಿಡಿದು ಆಚರಿಸಿದಲ್ಲಿ ಕ್ರಿಯೆವಿಡಿದು ವಾದಿಸುವ. ನಿರ್ದ್ವಂದ್ವನಾಗಿ ನಿಂದಲ್ಲಿತೋರಿದ.**
**ಕಪಿಲಸಿದ್ಧಮಲ್ಲಿಕಾರ್ಜುನನೆಂದು ಡಂಗುರಹೊಯ್ದು ನಾಟ್ಯವಾಡುವ.**

ಶರಣನ ಕೂಡ ವಾದ ಸಲ್ಲದು ಸಲ್ಲದು. ಶರಣನ ಸಂಗ ಮಾಡುವುದು ಎಂದರೆ ಹುಲಿಯ ಮೀಸೆ ಹಿಡಿದು ಉಯ್ಯಾಲೆಯಾಡಿದಂತೆ. ಹರಿಯುವ ನಾಗರ ಹಿಡಿದುಕೊಂಡು ಕೆನ್ನೆಯ ತುರಿಸಿಕೊಂಡಂತೆ, ಸುಣ್ಣದ ಕಲ್ಲು ಕಟ್ಟಿಕೊಂಡು ಮಡುವಿನಲ್ಲಿ ಬಿದ್ದಂತೆ ಎಂದಿದ್ದಾರೆ ಬಸವಣ್ಣ.

ಶರಣನ ನುಡಿಗಡಣವೆ ಬೇರೆ ಆತನ ನಡೆ ಬೇರೆ. ಕ್ರಿಯೆ ಹಿಡಿದು ಮಾತನಾಡಿದರೆ, ಜ್ಞಾನ ಹಿಡಿದು ಮಾತನಾಡುತ್ತಾನೆ. ಜ್ಞಾನ ಹಿಡಿದು ವಾದಿಸಲು ಹೋದಾಗ ಶರಣ ಕ್ರಿಯೆ ಹಿಡಿದು ಮಾತನಾಡುತ್ತಾನೆ. ಶರಣ ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ದಮಲ್ಲಿಕಾರ್ಜುನನೆ ನಾನೆಂದು ಡಂಗುರ ಹೊಡೆದು ಹೇಳುತ್ತಾನೆ.

**1717**

**ಜಂಗಮವಾಗಿ ಫಲವೇನು. ನೋಡಿ ಮನದೆರೆದು ಮಾತನಾಡಿಸಿ,**
**ಜನಜನನವಿಪಿನದಾವಾನಲವಾಗದನ್ನಕ್ಕ? ಜಂಗಮವಾಗಿ ಫಲವೇನು.**
**ಭಕ್ತನ ತನುತಾಪತ್ರಯವ ನೋಡಿ ಮನದೆರೆದು ಮಾತನಾಡಿಸಿ ಮರುಗದನ್ನಕ್ಕ?**
**ಜಂಗಮವಾಗಿ ಫಲವೇನು, ಭಕ್ತವಾಂಛಿತಾರ್ಥಂಗಳನರಿದು,**
**ಪೂಜಾಮುಖದಿಂ ಭೂತಿಯ ಕೊಟ್ಟು ಆತನ ಪ್ರಪಂಚ ಸಂಭ್ರಮವ ನೋಡದನ್ನಕ್ಕ?**
**ಜಂಗಮವಾಗಿ ಫಲವೇನು. ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಕೂಡಿ**
**ಸುಭಕ್ತರ ಹಸ್ತದಲ್ಲಿ ಕೊಟ್ಟು ಮೋಹ ಮಾಡದನ್ನಕ್ಕ?**

ಜಂಗಮ ವ್ಯಕ್ತಿಯಲ್ಲ, ವ್ಯಕ್ತಿಯೊಳಗಣ ಅವ್ಯಕ್ತ ಶಕ್ತಿ. ಆ ಶಕ್ತಿ ದರ್ಶನ ಪಡೆದ ವ್ಯಕ್ತಿಯ ಗರ್ಭದಲ್ಲಿ ಜನಿಸಿದ ವ್ಯಕ್ತಿ ಜಂಗಮನಾಗಲಾರ. ಇಂತಹ ಜಂಗಮನಿಗೆ ವ್ಯಕ್ತಿಯನ್ನು ನೋಡಿ ಮನದೆರೆದು ಮಾತನಾಡಿಸಿ ಆ ವ್ಯಕ್ತಿಯಲ್ಲಿಯ ಅಜ್ಞಾನದ ಶಕ್ತಿಯ ಅಳಿಸಿ ಜಾತಿ ಜಂಗಮನಿಗೆ ಇರಲು ಸಾಧ್ಯವಿಲ್ಲ.

ಭಕ್ತನ ತನುವಿನಲ್ಲಿ ಉಂಟಾದ ತಾಪತ್ರಯವನ್ನು ನೋಡಿ ಆತನನ್ನು ಮಾತನಾಡಿಸಿ ತಾಪತ್ರಯ ಕಳೆಯಲು ಕೂಡ ಸಾಧ್ಯವಾಗುವುದಿಲ್ಲ. ಭಕ್ತನ ಮನದ ಆಳವನ್ನು ಅರಿತು ಆತನ ಪ್ರಪಂಚ ಸಂಭ್ರಮವನ್ನು ನೋಡಲು ಕೂಡ ಸಾಧ್ಯವಾಗುವುದಿಲ್ಲ. ಕಾಯದಲ್ಲಿ ಸಂಗಮವಾದ ಅರಿವೆಂಬ ಗುರುದೇವನ ಚರಣ ಕಮಲಗಳಿಗೆ ಎರಗಿ ಆ ಗುರುದೇವನೇ ತಾನಾಗದ ವಿನಹ ಮತ್ತೊಬ್ಬರನ್ನು ನೋಡಿ ಅವರ ಸಂಕಟ ಪರಿಹರಿಸಲು ಬರುವುದಿಲ್ಲ.

**1718**

**ಆ ದೇವ ಬಂದಡೆ ಈ ದೇವಿಯ ಸಂಭ್ರಮ ನೋಡಾ?**
**ಈ ದೇವಿ ಹೋದಡೆ ಆ ದೇವನ ಮನೋವ್ಯಾಕುಲ ನೋಡಾ.**
**ಈ ದೇವಿಯಿಲ್ಲದಿರ್ದಡೆ ಆ ದೇವ ಸೈರಿಸನು ಆ ದೇವನಿಲ್ಲದಿರೆ ಈ ದೇವಿ ಸೈರಿಸಳು**
**ಒಂದರಲ್ಲಲ್ಲದೆ ಎರಡರ್ಥದಲ್ಲಿ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ,**

ಕಾಯ ಮಹಾದೇವನಿದ್ದ ಮನೆ. ಮನವೆ ಮಹಾದೇವನಿಗೆ ಮಹಾದೇವಿಯಾಗಿ ಪರಿವರ್ತನೆಯಾಗಬೇಕು ಅಲ್ಲಿಯವರೆಗೆ ಕಾಯದೊಳಗೆ ಸಂಗಮವಾದ ಮಹಾದೇವ ಮನೋವ್ಯಾಕುಲನಾಗಿ ಇರುತ್ತಾನೆ. ಏಕೆಂದರೆ ಮನ ಮಹಾದೇವಿಯಾಗದೆ ಕಾಯದೊಂದಿಗೆ ಸಂಗಮಾಡಿ ಇಡೀ ಕಾಯವನ್ನು ಅಜ್ಞಾನಕ್ಕೆ ಕರೆದುಕೊಂಡು ಹೋಗುತ್ತಿರುವುದರಿಂದ ಮಹಾದೇವಿಯ ಈ ವರ್ತನೆಯನ್ನು ಮಹಾದೇವ ಸೈರಿಸಲು ಸಾಧ್ಯವಾಗುವುದಿಲ್ಲ.

ಮಹಾದೇವನೊಂದಿಗೆ ಕೂಡಿ ಮನ ಮಹಾದೇವಿಯಾಗದಿದ್ದರೆ ಈಕೆಗೆ ಕೂಡ ಸೈರಣೆ ಇರುವುದಿಲ್ಲ. ಕಾಯ ಒಂದರಲ್ಲಲ್ಲದೆ ಎರಡರ್ಥದಲ್ಲಿದೆ. ಇದನ್ನು ಕಾಯವೇ ಕಂಡುಹಿಡಿದುಕೊಂಡು ಮಹಾದೇವ ಮಹಾದೇವಿಯ ಪ್ರೀತಿಗೆ ಪಾತ್ರವಾನಾಗಬೇಕು.

**1719**

**ಮುಟ್ಟಿಹರೆಂದು ಬಟ್ಟೆಯನ್ನುಲ್ಲಂಘಿಸುವರ ನೋಡಾ !**
**ನೋಡಿ ನೋಡಿ ನಾಚಿತ್ತಯ್ಯಾ ಎನ್ನ ಮನ.**
**ಮುಟ್ಟಿದ ಪುರುಷ ಪಾಷಾಣವಾಗುವುದೆ ಅಯ್ಯಾ?**
**ಮಾಡಬಾರದೆಂದು ಸಂದೇಹವುಳ್ಳಡೆ ಮಹೇಶಸ್ಥಲವೆಂತಯ್ಯಾ ?**
**ಮುಟ್ಟಬಾರದು ಮುಟ್ಟಬಾರದು ಮಲತ್ರಯಂಗಳ.**
**ಮುಟ್ಟದ ಬಟ್ಟಬಯಲು ಗಟ್ಟಿಗೊಂಡಚ್ಚ ಮಹೇಶನ ತೋರಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಮುಟ್ಟಲು ಬಾರದ ಬಟ್ಟ ಬಯಲು ಗಟ್ಟಿಗೊಂಡು ಅಚ್ಚಾಗಿ ಅಚ್ಚಿನಲ್ಲಿ ಕಾಯ ಜನ್ಮ ತಳೆದಿದೆ. ಇದರಲ್ಲಿ ಮಹೇಶ ಸಂಗಮವಾಗಿದ್ದಾನೆ. ಹೀಗಾಗಿ ಶರಣರು ಕಾಯವನ್ನು ಕೈಲಾಸ ಎಂದು ಕರೆದರು.

ಕಾಯವನ್ನು ಕಾಯವೆ ಮುಟ್ಟಿತೆಂದು ಬಂದ ದಾರಿಯನ್ನು ಹಾರುವವರನ್ನು ನೋಡಿ ನೋಡಿ ನಾಚಿತ್ತಯ್ಯಾ ಎನ್ನ ಮನ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು. ಮುಟ್ಟಿದ ಪುರುಷ ಪಾಷಾಣವಾಗಲು ಸಾಧ್ಯವೆ. ಮುಟ್ಟುವ ಕಾಯ ಮುಟ್ಟಿಸಿಕೊಳ್ಳುವ ಕಾಯ ಬೇರೆ ಬೇರೆ ಇದೆಯೆ ? ಮುಟ್ಟಬಾರದೆಂಬ ಸಂದೇಹ ಕಾಯಕ್ಕೆ ಬಂದರೆ ಆ ಕಾಯ ಕೈಲಾಸವಾಗುವುದೆಂತು. ಕಾಯದಲ್ಲಿಯೇ ಸಂಗಮವಾದ ಮಹೇಶನನ್ನು ಕಾಯ ತಿಳಿದುಕೊಳ್ಳುವ ಬಗೆ ಆದರೂ ಹೇಗೆ ?

ಇಂತಹ ಕಾಯವನ್ನು ಮುಟ್ಟಬಾರದು ಮುಟ್ಟಬಾರದು ಇದು ಮಲತ್ರಯಂಗಳುಳ್ಳ ಕಾಯ. ಮುಟ್ಟಲು ಬಾರದ ಬಟ್ಟ ಬಯಲು ಗಟ್ಟಿಗೊಂಡು ಅಚ್ಚಾಗಿ ಕಾಯವೆಂದು ಹೆಸರು ಪಡೆದ ಕೈಲಾಸದಲ್ಲಿ ಮಹೇಶನಿದ್ದಾನೆ. ಈತ ಸಕಲ ಕಾಯಗಳಿಗೆ ಸಿಕ್ಕುವುದು ದರ್ಲಭ.

**1720**

**ಮುಟ್ಟಿದರೆಂದು ಶಿರಮುಟ್ಟಿ, ನೀರು ಮುಟ್ಟಿದರೆಂದ ಬಳಿಕ**
**ಬಟ್ಟಬಯಲಾದೆಯೆನಯ್ಯಾ , ಮನವೆ ? ಮುಟ್ಟಬಾರದೆಂದು ಸಂಶಯ ತೋರ್ಪಡೆ,**
**ಮುಟ್ಟಿದ ಎಲ್ಲಾ ದುರ್ಮಲ ಭಾಂಡ, ಮನವೆ. ಸಂಕಲ್ಪ ವಿಕಲ್ಪಂಗಳಳಿದು,**
**ಬೆಟ್ಟಜಾಪತಿ ಕಪಿಲಸಿದ್ಧಮಲ್ಲಿಕಾರ್ಜುನನಾಗಿ ಬದುಕು, ಮನವೆ.**

ಕಾಯ ಕಾಯವನ್ನು ಮುಟ್ಟಿಕೊಳ್ಳಲಾರದಷ್ಟು ಅಜ್ಞಾನ ಕಾಯವನ್ನು ಆವರಿಸಿದೆ.

ಮುಟ್ಟಿದರೆಂದು ಶಿರದ ಮೇಲೆ ಹಂಡೆ ನೀರು ಸುರಿದುಕೊಂಡ ಬಳಿಕ ಮುಟ್ಟಿದ ಮುಟ್ಟು ಬಯಲಾಯಿತೆ. ಇದು ಕಾಯವನ್ನು ಆವರಿಸಿದ ಮನದ ಕೆಲಸ ಮುಟ್ಟಿಸಿಕೊಳ್ಳಬಾರದೆಂಬ ಸಂಶಯವನ್ನು ಮನ ಕಾಯದಲ್ಲಿ ಸೇರ್ಪಡೆ ಮಾಡಿದೆ.

ಮುಟ್ಟಿದರೇನು ಮುಟ್ಟದಿದ್ದರೇನು ಮುಟ್ಟಿಸಿಕೊಳ್ಳುವ ಮುಟ್ಟುವ ಎರಡು ಕಾಯಗಳು ದುರ್ಮಲವನ್ನು ಹೊತ್ತುಕೊಂಡ ಭಾಂಡಗಳೆ ಆಗಿವೆ. ಕಾಯವನ್ನು ಆವರಿಸಿದ ಎಲೆ ಮನವೆ ನಿನ್ನ ಸಂಕಲ್ಪ ವಿಕಲ್ಪಂಗಳನ್ನು ಅಳಿದುಕೊಂಡು ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನನ್ನು ಮುಟ್ಟಿ ಅವನೇ ನೀನಾಗಿ ಬದುಕು ಮನವೆ.

**1721**

**ಶಿಷ್ಯನಿಲ್ಲದಡೆ ಗುರು ಎಲ್ಲಿಹನಯ್ಯಾ? ಪೂಜಕನಿಲ್ಲದಡೆ ಲಿಂಗವೆಲ್ಲಿಹುದಯ್ಯಾ?**
**ಭಕ್ತನಿಲ್ಲದಡೆ ಜಂಗಮನೆಲ್ಲಿಹನಯ್ಯಾ ? ಜಲವಿಲ್ಲದಡೆ ಪಾದೋದಕವೆಲ್ಲಿಹುದಯ್ಯಾ?**
**ಧೇನುವಿಲ್ಲದಡೆ ಭೂತಿಯೆಲ್ಲಿಹುದಯ್ಯಾ? ತ್ರೈಪುರವಿಲ್ಲದಡೆ ರುದ್ರಾಕ್ಷಿಗಳೆಲ್ಲಿಹವಯ್ಯಾ ?**
**ವರ್ಣಂಗಳಿಲ್ಲದಡೆ ಮಂತ್ರಂಗಳೆಲ್ಲಿಹವಯ್ಯಾ ? ನಾನಿಲ್ಲದಡೆ ನೀನೆಲ್ಲಿಯವನಯ್ಯಾ ?**
**ಇವೆಲ್ಲ ಭಾವಭ್ರಮೆಯಲ್ಲದೆ,**
**ನಿರ್ಭಾವ ನಿಜಾನಂದ ತೂರ್ಯಾತೀತ ಪರವಸ್ತುವಿನ ಕೂಟದಲ್ಲಿ**
**ನು ನೀನೆಂಬುಭಯ ಭಾವ ಇದ್ದಡೆ ತೋರಬಾರ,**
**ಮಾರಹರ ಧೀರ ಗಂಭೀರ ಕಪಿಲಸಿದ್ಧಮಲ್ಲಿಕಾರ್ಜುನ ವೀರ.**

ಕಾಯದಲ್ಲಿ ಸಂಗಮವಾದ ಅರಿವೆ ಗುರುವಾಗಬೇಕಿತ್ತು . ಕಾಯವನ್ನು ಆವರಿಸಿದ ಮನ ಗುರುದೇವನಿಗೆ ಶರಣು ಹೋಗಿ ಶಿಷ್ಯನಾಗಬೇಕಿತ್ತು . ಇದು ನಿಜವಾದ ಗುರುಶಿಷ್ಯರ ಪರಂಪರೆ ಒಂದು ಕಾಯದಲ್ಲಿ ಗುರು ಶಿಷ್ಯರಿಬ್ಬರೂ ನೆಲೆಸಿದ ಒಂದೇ ಕಾಯದ ಪರಂಪರೆ ಈ ಬ್ರಹ್ಮಾಂಡದಲ್ಲಿ ಮುಂದೆ ಸಾಗಬೇಕಾಗಿತ್ತು.

ಇಲ್ಲಿ ತಿರುವು ಮರುವಾಗಿದೆ. ಗುರುವಿನದು ಒಂದು ಕಾಯ; ಶಿಷ್ಯನದು ಒಂದು ಕಾಯ ಎಂದು ಎರಡು ಕಾಯಗಳಾಗಿವೆ. ಶಿಷ್ಯನಿಲ್ಲದಿದ್ದರೆ ಗುರವಿಲ್ಲ ಎನ್ನುವಂತಾಗಿದೆ. ನಿಜಸ್ಥಿತಿಯನ್ನು ನೋಡಲು ಹೋದರೆ ಗುರು ಶಿಷ್ಯರಿಲ್ಲದಿದ್ದರೆ ಕಾಯ ಎನ್ನುವ ಪ್ರಾಣಿ ಹುಟ್ಟುತ್ತಿರಲಿಲ್ಲ.

ಗುರುಶಿಷ್ಯರು ಎಂದು ಕಾಯವನ್ನು ಬೇರೆ ಬೇರೆ ಮಾಡಿಕೊಂಡಿರುವುದರಿಂದ ಶಿಷ್ಯ ಕಾಯಕ್ಕೆ ಗುರುಕಾಯ ಲಿಂಗ ತೋರಲಿಲ್ಲ. ಅಂಗದ ಮೇಲೆ ಲಿಂಗ ಕಟ್ಟಿ ಗುರುವಾದ.

ಹೀಗಾಗಿ ಲಿಂಗವನ್ನು ಪೂಜಿಸುವ ಪೂಜಕನ ಅರಿವಾಯಿತ್ತು , ಜಂಗಮನ ಪೂಜಿಸುವ ಭಕ್ತನ ಅರಿವಾಯಿತ್ತು, ಜಲದಲ್ಲಿ ಪಾದೋದಕ ಸೃಷ್ಠಿಯಾಯಿತ್ತು ,ರುದ್ರಾಕ್ಷಿ ಮಂತ್ರಂಗಳು ಸೃಷ್ಠಿಯಾದವು. ಇವೆಲ್ಲಾ ಭಾವಭ್ರಮೆಯಲ್ಲದೆ ಮತ್ತೇನೂ ಅಲ್ಲ. ಭಾವ ನಿರ್ಭಾವಕ್ಕೆ ಮರಳಿ ನಿಜಾನಂದವನ್ನು ಕಂಡುಕೊಂಡು ತೂರ್ಯಾತೀತಪರವಸ್ತುವಿನ ಕೂಟದಲ್ಲಿ ಕೂಡಿ ಕೂಡದ ಅಗಲದ ಕೂಟದ ನಿಜಸುಖವನ್ನು ಕಂಡುಕೊಂಡಾಗ ನಾನು ನೀನು ಎಂಬ ಉಭಯ ಭಾವವಿಲ್ಲವಾಗುತ್ತದೆ. ಆಗ ಮಾರಹರ, ಧೀರ, ಗಂಭೀರ ಕಪಿಕಸಿದ್ಧಮಲ್ಲಿಕಾರ್ಜುನನೆಂಬ ಮಹಾವೀರನೇ ತಾನಾಗುತ್ತಾನೆ.

## 1722

**ಬಲ್ಲಿದ ಬಾಣನ ಬಾಗಿಲ ಕಾಯ್ವರವರು ಭೂತಗಳೇನಯ್ಯಾ?**
**ಅಪ್ಪ ರೇವಣಸಿದ್ಧ ನೀರುಹೊತ್ತನೆಂಬರು,**
**ನಮ್ಮ ನೀರು ಹೊರುವವರವರು ಕೂಲಿಕಾರರೇನಯ್ಯಾ ?**
**'ಸರ್ವೇಷಾಂ ಹೃದಿ ಸ್ಥಿತಶ್ಚಚಂದ್ರಮೌಳೀ' ಎಂಬ ಶ್ರುತಿ ವಾಕ್ಯವ ನಂಬು ನಂಬು,**
**ಕಪಿಲಸಿದ್ಧಮಲ್ಲಿಕಾರ್ಜುನನ ಮುಂದೆ ಎಲೆ ಮನವೆ.**

ಬಾಣನ ಬಾಗಿಲು ಕಾಯ್ದ ಪರಮಾತ್ಮನನ್ನು ದೂತ ಎನ್ನಲು ಸಾಧ್ಯವೇ. ಅಪ್ಪ ರೇವಣ್ಣಸಿದ್ಧ ನೀರು ಹೊತ್ತನೆಂಬರು. ಶರಣರ ಸತ್ಸಂಗ ಗೋಷ್ಠಿಯಲ್ಲಿ ನೀರು ಹೊರುವ ಕಾಯಕವನ್ನು ಕೈಗೊಂಡವರನ್ನು ಕೂಲಿಕಾರರು ಎನ್ನಲು ಸಾಧ್ಯವೆ.' ಸರ್ವೇಷಾಂ ಹೃದಿ ಸ್ಥಿತಶ್ಚಂದ್ರಮೌಳೀ'ಎಂಬ ಶ್ರುತಿವಾಕ್ಯವಾದರು ನಂಬು ನಂಬು ಎಲೆ ಮನವೆ ಅಂದರೆ ಮಾತ್ರ ನೀನು ಘನಮನವಾಗುವಿ.

## 1723

**ಮಾಡಬಾರದು ಮಾಡಬಾರದು ಪರಸ್ತ್ರೀ ಸಂಗವ.**
**ನೋಡಬಾರದು ನೋಡಬಾರದು ದೃಷ್ಟಿಯನೆತ್ತಿ ಪರದ್ರವ್ಯವ.**
**ಕೂಡಬಾರದು ಕೂಡಬಾರದು ಕುಲವಿಲ್ಲದವನಲ್ಲಿ.**
**ಆಡಬಾರದು ಆಡಬಾರದು ದುರ್ವಿಷಯಗಳಲ್ಲಿ.**
**ಮಾಡಿ ನೋಡಿ ಕೂಡಿ ಆಡಿದರೆ ಈಡು ನೋಡಾ.**
**ಯಮ ಮಾಡಿದ ಪುಳಗೊಂಡಕ್ಕೆ , ಎಲೆ ಬಿಲ್ಲೇಶಾ,**
**ಕಪಿಲಸಿದ್ಧಮಲ್ಲಿಕಾರ್ಜುನಾರ್ಯ ಸಾನಿಧ್ಯದಲ್ಲಿ ಕೇದಾರ ಗುರು ಸಾಕ್ಷಿಯಾಗಿ.**

ಮಾಡಬಾರದು ಮಾಡಬಾರದು ಪರಸ್ತ್ರೀ ಸಂಗವ: ಕಾಯವನ್ನು ಆವರಿಸಿದ ಮನವೇ ಸ್ತ್ರೀ. ಕಾಯದೊಳಗೆ ಸಂಗಮವಾದ ಅರಿವು ಎನ್ನುವ ಶಿವನೆ ಪುರುಷ. ಕಾಯದೊಳಗೆ ಸ್ತ್ರೀಯೂ ಇದ್ದಾಳೆ ಹಾಗೂ ಪುರುಷನೂ ಇದ್ದಾನೆ. ಕಾಯವು ಸ್ತ್ರೀ ಪುರುಷರಿರುವ ಮಹಾಮನೆ.

ಲೋಕದ ಅಜ್ಞಾನದಿಂದಾಗಿ ಕಾಯವನ್ನು ಸ್ತ್ರೀ ಎಂದು ಪುರುಷನೆಂದು ವಿಂಗಡಿಸಲಾಗಿದೆ. ಪರಸ್ತ್ರೀ ಎಂದರೆ ಪರಮಾತ್ಮನ ಸ್ತ್ರೀ ಎಂದು ಅರ್ಥ. ಮನವೆಂಬ ಸ್ತ್ರೀ ಶಿವನಿಗೆ ಸತಿಯಾಗಿದ್ದಾಳೆ. ಇಂತಹ ಸ್ತ್ರೀ ಮತ್ತೊಂದು ಕಾಯದಲ್ಲಿರುವ ಮನವೆಂಬ ಸ್ತ್ರೀಯನ್ನು ನೋಡಬಹುದೆ. ಆ ಸ್ತ್ರೀಯ ಸಂಗ ಸ್ತ್ರೀ ಮಾಡಬಹುದೆ ? ಒಂದು ವೇಳೆ ಮಾಡಿದರೆ ಸ್ತ್ರೀ ಸ್ತ್ರೀಯೊಂದಿಗೆ ಸಂಗ ಮಾಡುವುದು ಸಮಾಜ ಬಾಹಿರವಲ್ಲವೆ ?

ಕಾಯ ಒಂದೆ. ಈ ಕಾಯವೆಂಬ ಕೈಲಾಸದಲ್ಲಿಯೇ ಶಿವೆ ಎಂಬ ಸ್ತ್ರೀ ಶಿವ ಎಂಬ ಮಹಾಪುರುಷ ವಾಸವಾಗಿರುವುದನ್ನು ಮನ ಬಲವಾಗಿ ತಿಳಿದರೆ ಪರಸ್ತ್ರೀಯೊಂದಿಗೆ ಸಂಗ ಮಾಡಲು ಹಿಂಜರಿಯುತ್ತದೆ.

ಆಗ ಮನಕ್ಕೆ ದೃಷ್ಟಿಯನೆತ್ತಿ ಪರದ್ರವ್ಯ ನೋಡಬಾರದೆಂದು ತಿಳಿಯುತ್ತದೆ. ಅರಿವಿನ ಕುಲವಿಲ್ಲದವನೊಂದಿಗೆ ಕೂಡಬಾರದೆಂದು ತಿಳಿಯುತ್ತದೆ. ದುರ್ವಿಷಯಗಳಲ್ಲಿ ಆಡಬಾರದು ಎಂದು ತಿಳಿಯುತ್ತದೆ. ಮಾಡಿಯೂ, ನೋಡಿಯೂ, ಕೂಡಿಯೂ ಆಡಿದರೆ ಯಮ ಮಾಡಿದ

ಪುಳುಗೊಂಡಕ್ಕೆ ಕಾಯ ಈಡಾಗುವುದು ಎಂದು ಸಿದ್ಧರಾಮಶಿವಯೋಗಿಗಳು ಬಿಲ್ಲೇಶ ಶರಣರಿಗೆ ಬೋಧೆ ಮಾಡಿದ್ದಾರೆ. ಇದು ಗುರುಸಾನಿಧ್ಯದಲ್ಲಿರುವ ಶಿಷ್ಯನ ಅರಿವಿನ ಸವಿಯೂಟ.

**1724**

**ನಿನ್ನ ನೀ ತಿಳಿದು ನೋಡಿದಡೆ ಶಿವಮಯ ಜಗತ್ತು ನೋಡಾ.**
**ಓಂ ಕಾರ ಪ್ರಣವವೆ ಪ್ರಕೃತಿಯಾಗಿ ನಿಂದಿತ್ತು ; ನ ಕಾರ ಪ್ರಣವವೆ ಪೃಥ್ವಿಯಾಗಿ ನಿಂದಿತ್ತು ;**
**ಮ ಕಾರ ಪ್ರಣವವೆ ಉದಕವಾಗಿ ನಿಂದಿತ್ತು ; ಶಿ ಕಾರ ಪ್ರಣವವೆ ಅಗ್ನಿಯಾಗಿ ನಿಂದಿತ್ತು ;**
**ವ ಕಾರ ಪ್ರಣವವೆ ವಾಯುವಾಗಿ ನಿಂದಿತ್ತು ;**
**ಯ ಕಾರ ಪ್ರಣವವೆ ಸರ್ವವಸ್ತು ಆಚರಿಸುವುದಕ್ಕೆ ಆಕಾಶವಾಗಿ ನಿಂದಿತ್ತು .**
**ನೆನೆನೆನೆದು ಸುಖಿಯಾದೆ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೆ.**

ನಿನ್ನ ನೀನು ತಿಳಿದು ನೋಡಿದಡೆ ಇಡೀ ಜಗತ್ತು ಶಿವಮಯವಾಗಿ ಕಾಣುತ್ತದೆ. ತಾನು ಕೂಡ ಓಂ ನಮಃ ಶಿವಾಯ. ಇಡೀ ಭೂಮಂಡಲದಲ್ಲಿರುವ ಪ್ರಾಣಿ, ಪಕ್ಷಿ , ಕೀಟ, ಜಲಚರಗಳೆಲ್ಲ ಓಂ ನಮಃ ಶಿವಾಯವೇ ಆಗಿವೆ.

'ಓಂ' ಕಾರ ಎಂಬ ಪ್ರಣವವೆ ಪ್ರಕೃತಿಯಾಗಿ ನಿಂತಿದೆ. 'ನ'ಕಾರ ಎಂಬ ಪ್ರಣವವೆ ಪೃಥ್ವಿಯಾಗಿ ನಿಂತಿದೆ. 'ಮ'ಕಾರ ಎಂಬ ಪ್ರಣವವು ಉದಕವಾಗಿ ನಿಂತಿದೆ.'ಶಿ'ಕಾರ ಎಂಬ ಪ್ರಣವವು ಅಗ್ನಿಯಾಗಿ ನಿಂತಿದೆ.'ವ'ಕಾರ ಎಂಬ ಪ್ರಣವವೆ ವಾಯುವಾಗಿ ನಿಂತಿದೆ.'ಯ'ಕಾರ ಎಂಬ ಪ್ರಣವವೆ ಸರ್ವವಸ್ತು ಆಚರಿಸುವುದಕ್ಕೆ ಆಕಾಶವಾಗಿ ನಿಂತಿದೆ.

ಸಕಲ ಕಾಯಗಳಲ್ಲಿ ಪಂಚಭೂತಗಳು ಸಂಗಮವಾಗಿವೆ. ಕಾಯ ಪ್ರಕೃತಿಯಲ್ಲಿಯ ಸೊಬಗನ್ನು ಸವಿಯುತ್ತಾ ಸಕಲ ಪ್ರಾಣಿಗಳಲ್ಲಿ ಅರಿವಿನ ಕಾಯ ಎಂದು ಕರೆಯಿಸಿಕೊಂಡಿದೆ. ಇದನ್ನು ನೆನೆನೆನೆದು ಸುಖಿಯಾಗಬೇಕಾಗಿದೆ.

**1725**

**ಅನಿರ್ವಾಚ್ಯವೆ ವಾಚ್ಯವಾದಲ್ಲಿ ಹಕಾರವೆನಿಸಿತ್ತು .**
**ಆ ಹಕಾರವೆ(ನಿರಂಜನ) ಪ್ರಣವವೆನಿಸಿತ್ತು ;**
**ಆ ನಿರಂಜನ ಜಂಗಮಾಕೃತಿ, ಜಗದಾಧಾರ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಪ್ರಣವ ಎನ್ನುವುದು ವೇಷಧಾರಿ ಜಂಗಮನಿಗೆ ಅದು ರಂಜನೆಯ ಅಕ್ಷರ. ಅಂಗದ ಕಣ ಕಣದಲ್ಲಿ ಸಂಗಮವಾದ ನಿರಂಜನ ಮೂರ್ತಿ ಜಂಗಮ ವೇಷಧಾರಿಯಲ್ಲ. ವೇಷಧರಿಸಲು ಆತನಿಗೆ ತನುವು ಕೂಡ ಇಲ್ಲ. ಆದರೂ ತನುವನ್ನು ಮನೆಯನ್ನಾಗಿಸಿಕೊಂಡು ತನುವಿನ ಕಣ ಕಣದಲ್ಲಿ ಸಂಗಮವಾಗಿ ಓಂ ಕಾರವೆಂಬ ಪ್ರಣವ ಶಕ್ತಿಯುಳ್ಳ ಜಂಗಮ ನಿರಂಜನ ಮೂರ್ತಿ ಎಂದು ಕರೆಯಿಸಿಕೊಂಡಿದ್ದಾನೆ. ಆ ನಿರಂಜನ ಜಂಗಮಾಕೃತಿ ಜಗದ ಸರ್ವ ತನುಗಳಿಗೆ ಆಧಾರಾವಾಗಿ ನಿಂತಿದೆ.

**1726**

**ಬಗೆಬಗೆದು ನೋಡಿದಡೆ ದೇಹವೆಲ್ಲ ಮೂರುಮಾತ್ರೆಯಿಂದಾದುವಯ್ಯಾ.**
**ಸ್ಥೂಲ ದೇಹ ಅಕಾರ ಪ್ರಣವ, ಸೂಕ್ಷ್ಮ ದೇಹ ಉಕಾರ ಪ್ರಣವ,**
**ಕಾರಣ ದೇಹ ಮಕಾರ ಪ್ರಣವ. ಮೂರು ಮಾತ್ರೆ ಏಕಕಾಲದಲ್ಲಿ ಓಂಕಾರವಾಯಿತ್ತು**
**ತತ್ಪ್ರಣವಕ್ಕೆ ಸಾಕ್ಷಿಯಾಗಿ ನಿಂದೆ ; ನಿಂದೆನೆಂಬುದಕ್ಕೆ ಅನಿರ್ವಾಚ್ಯ ಪ್ರಣವವಾದೆ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹವನ್ನು ಅನುಭಾವಿ ಬಗೆಬಗೆಯಿಂದ ಬಗೆದು ನೋಡುತ್ತಾನೆ. ಅದರ ಕಣ ಕಣದಲ್ಲಿ ಸಂಗಮವಾದ ಓಂ ಕಾರವೆಂಬ ಪ್ರಣವದ ಸವಿಜೇನು ಸವಿಯುತ್ತಾನೆ. ದೇಹ ಮೂರು ಮಾತ್ರೆಯಿಂದ ಆಗಿದೆ. ಸ್ಥೂಲ ದೇಹ, ಸೂಕ್ಷ್ಮ ದೇಹ, ಕಾರಣ ದೇಹ ಎಂದು ವಿಂಗಡಿಸಬಹುದಾಗಿದೆ.

ಪ್ರಣವದಲ್ಲಿ ಕೂಡ ಅಕಾರ, ಉಕಾರ, ಮಕಾರಗಳು ಸಂಗಮವಾಗಿ ಓಂ ಕಾರವಾಗಿದೆ. ಓಂಕಾರ ಹೇಗೆ ಏಕವಾಗಿದೆಯೋ ದೇಹವೂ ಹಾಗೆಯೇ ಏಕವಾಗಿದೆ. ದೇಹವುಳ್ಳ ಅನೇಕರಿಗೆ ಓಂ ಕಾರ ವಾಚ್ಯವಾದರೆ ದೇಹದಲ್ಲಿಯೇ ಏನೆಲ್ಲ ಹುಡುಕಿ ಶಿವನನ್ನು ಎಕ್ಕಿತಂದ ಅನುಭಾವಿಗೆ ಓಂ ಕಾರ ಅನಿರ್ವಾಚ್ಯ ಪ್ರಣವವಾಗಿದೆ.

ಅನುಭಾವಿ ಸ್ಥೂಲ ದೇಹವನ್ನು ಬದಿಗಿಟ್ಟು ಸೂಕ್ಷ್ಮ ದೇಹದ ಮೂಲಕ ಕಾರಣ ದೇಹಕ್ಕೆ ಜಿಗಿದು ಅದರಲ್ಲಿ ಒಂದಾಗಿ ನಂತರ ದೇಹದ ಮೂಲಕ ಪ್ರಣವ ಎಂಬ ಓಂ ಕಾರದಿಂದ ತನಗೆ ತಾನೆ ಕರೆದುಕೊಂಡು ತಾನೆ ಶಿವಸ್ವರೂಪನಾಗಿದ್ದಾನೆ.

**1727**

**ಮಣ್ಣ ಕೊಟ್ಟು ಪುಣ್ಯವ ಪಡೆವೆನೆಂಬವನ ಭಾಷೆ ಹೊಲ್ಲ ಹೊಲ್ಲ,**
**ಮಣ್ಣಿನ ಪುಣ್ಯ ಮುಕ್ಕಣ್ಣನ ಮುಖಕ್ಕೆ ಬಂದಿತ್ತು .**
**ನೀರನೆರೆದು ಪುಣ್ಯವ ಪಡೆವೆನೆಂಬವನ ಭಾಷೆ ಹೊಲ್ಲ ಹೊಲ್ಲ,**
**ನೀರಿನ ಪುಣ್ಯ ನಿರಂಜನನ ಮುಖಕ್ಕೆ ನಿಮಿರಿತ್ತು .**
**ಜ್ಯೋತಿಯ ಬೆಳಗಿ ಪಾಪವ ಕಳೆವೆನೆಂಬವನ ಭಾಷೆ ಹೊಲ್ಲ ಹೊಲ್ಲ,**
**(ಜ್ಯೋತಿಯ ಪುಣ್ಯ ...ದೀಪದ....ಮುಖಕ್ಕೆ ಹೋಯಿತ್ತು)**
**ಚಾಮರವ ಬೀಸಿ ಪಾಪವ ಕಳೆವೆನೆಂಬವನ ಭಾಷೆ ಹೊಲ್ಲ ಹೊಲ್ಲ,**
**ಚಾಮರದ ಪುಣ್ಯ ಚಾಮರಾಧೀಶನ ಮುಖಕ್ಕೆ ಅಮರಗೊಂಡಿತ್ತು .**
**ದೇವಾಲಯವ ಕಟ್ಟಿ ದೇವತ್ವವ ಪಡೆವೆನೆಂಬವನ ಭಾಷೆ ಹೊಲ್ಲ ಹೊಲ್ಲ,**
**ದೇವಾಲಯದ ಪುಣ್ಯ ಅಧೋಮುಖಂಗೆ ಸೇರಿತ್ತು .**
**ಕೊಟ್ಟ ಭಕ್ತನಾದರೂ ಕಾಣೆ, ಕೈಗೊಂಡ ಜಂಗಮನಾದರೂ ಕಾಣೆ.**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಮಣ್ಣು ಕೊಟ್ಟು ಪುಣ್ಯವ ಪಡೆವೆನೆಂಬವನ ಭಾಷೆಯನ್ನು ಅನುಭಾವಿ ಅದನ್ನು ಹೊಲ್ಲ ಹೊಲ್ಲ ಎನ್ನುತ್ತಾನೆ. ಏಕೆಂದರೆ ತನು ಮಣ್ಣಿನ ಅಂಶದಿಂದಲೇ ಗಟ್ಟಿಗೊಂಡಿದೆ. ಇದು ಮುಕ್ಕಣ್ಣನ ಅಪರಾವಾತಾರ. ನೀರನೆರೆದು ಪುಣ್ಯವನು ಪಡೆಯುವನೆಂಬವನ ಭಾಷೆಯನ್ನು ಹೊಲ್ಲ ಹೊಲ್ಲ.

ನಿರಂಜನ ಜಲಬಿಂದುವಿನಿದಿಂದಲೇ ಗಟ್ಟಿಗೊಂಡವನು ಹೀಗಾಗಿ ಅವನನ್ನು ಜಲಜಾಕ್ಷ ಎಂದು ಕರೆಯುವರು.

ಜ್ಯೋತಿಯ ಬೆಳಗಿ ಪಾಪವನು ಕಳೆಯುವನೆಂಬವನ ಭಾಷೆಯನು ಹೊಲ್ಲ ಹೊಲ್ಲ. ಏಕೆಂದರೆ ಇಡೀ ತನು ಮಹಾಜ್ಞಾನದ ಜ್ಯೋತಿಯಿಂದ ಬೆಳಗಿಂಗೆ ಬೆಳಗಾಗಿ ಬೆಳಗುತ್ತಿದೆ. ಚಾಮರವ ಬೀಸಿ ಪಾಪವನು ಕಳೆಯುವೆನೆಂಬವನ ಭಾಷೆಯನು ಹೊಲ್ಲ ಹೊಲ್ಲ. ಏಕೆಂದರೆ ಇಡೀ ಭೂಮಂಡಲದಲ್ಲಿ ವ್ಯಾಪಿಸಿಕೊಂಡ ವಾಯು ತನುವಿನಲ್ಲಿ ಚುಳುಕಾಗಿದೆ.

ದೇವಾಲಯ ಕಟ್ಟಿ ದೇವತ್ವವ ಪಡೆಯುವೆನೆಂಬವನ ಭಾಷೆಯ ಹೊಲ್ಲ ಹೊಲ್ಲ. ಏಕೆಂದರೆ ಇಡೀ ದೇಹವೆ ಮುಕ್ಕಣ್ಣನಿಗೆ ದೇವಾಲಯವಾಗಿದೆ. ದೇಹವನ್ನು ಆವರಿಸಿದ ಮನ ಆ ಮುಕ್ಕಣ್ಣನಿಗೆ ಮಹಾದೇವಿಯಾಗಿದ್ದಾಳೆ. ಇಂತಹ ದಿವ್ಯ ದೇವರಿದ್ದ ದೇಹವೆಂಬ ದೇವಾಲಯಕ್ಕೆ ನಾನು ಕೊಟ್ಟೆನೆಂಬ ಭಕ್ತರನ್ನು ಯಾರನ್ನೂ ಕಾಣೆ ಕಪಿಲಸಿದ್ಧಮಲ್ಲಿಕಾರ್ಜುನಾ.

**1728**

**ಮಗನ ಕೊಟ್ಟು ಮನೆಯ ಸೇರಿದೆನೆಂಬ ಬಿಂಕ ಬೇಡ ಬೇಡ.**
**ಸ್ತ್ರೀಯ ಕೊಟ್ಟು ತ್ರಿಣೇತ್ರನಾದೆನೆಂಬ ಬಿಂಕ ಬೇಡ ಬೇಡ.**
**ರುಂಡವ ಕೊಟ್ಟು ಬ್ರಹ್ಮಾಂಡ ಶೇಖರನಾದೆನೆಂಬ ಬಿಂಕ ಬೇಡ ಬೇಡ.**
**'ಶಿವೋ ದಾತಾ ಶಿವೋ ಭೋಕ್ತಾ' ಎಂಬ ಶ್ರುತಿವಾಕ್ಯವ**
**ನಂಬಿ ನಂಬಿ ನಡೆಯಿರಾ, ಕಪಿಲಸಿದ್ಧಮಲ್ಲಿಕಾರ್ಜುನನ ಮಂದಿರದಲ್ಲಿ.**

ಕಾಯ ಕಪಿಲಸಿದ್ಧಮಲ್ಲಿಕಾರ್ಜುನನಿದ್ದ ಮಂದಿರ ಈತನಿಗೆ ಮಗನ ಕೊಟ್ಟು ಮನೆಯ : ಸೇರಿದೆನೆಂಬ ಬಿಂಕ ಬೇಡ : ಭಕ್ತ ಸಿರಿಯಾಳ ಚಂಗಳೆಯರು ಮಗನನ್ನು ಕೊಡಲಿಲ್ಲ . ಕುಟ್ಟಿ ಊಟವನ್ನು ಮಾಡಿಸಲಿಲ್ಲ. ಮಗನ ಮೇಲಿನ ಮೋಹವನ್ನು ಕೊಟ್ಟು ಧನ್ಯರಾದರು.

ಸ್ತ್ರೀಯ ಕೊಟ್ಟು ತ್ರಿನೇತ್ರನಾದೆನೆಂಬ ಬಿಂಕ ಬೇಡ ಬೇಡ. ಪುರಾತರು ತನುವನ್ನು ಆವರಿಸಿದ ಮನವೆಂಬ ಹೆಂಡತಿಯನ್ನು ತನುವಿನಲ್ಲಿ ತನ್ಮಯವಾದ ಶಿವನಿಗೆ ಕೊಟ್ಟು ಅವರಿಬ್ಬರ ಕೂಡದ ಅಗಲದ ಕೂಟದ ಸುಖವನ್ನು ಉಂಡು ಧನ್ಯರಾದರು.

ರುಂಡವ ಕೊಟ್ಟು ಬ್ರಹ್ಮಾಂಡ ಶಿಖರವನಾದೆನೆಂಬ ಬಿಂಕ ಬೇಡ ಬೇಡ : ಎಲೆ ಮನವೆ ಅಂಗದಲ್ಲಿಯೇ ಸಂಗವುವಾದ ಅರಿವಿನ ಲಿಂಗಯ್ಯನನ್ನು ನಂಬಿ ನಡೆ. ಕಾಯವನ್ನು ವ್ಯರ್ಥಕೆಡಗೊಡಬೇಡ ಎಲೆ ಮನವೆ. ಕಾಯದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನಿದ್ದಾನೆ. ಕಾಯವದು ಮಲ್ಲಯ್ಯನಿದ್ದ ಮಂದಿರ.

**1729**

**ಬಂದಯ್ಯಗಳಿಗನ್ನವ ಕೊಟ್ಟೆನೆಂಬವನ ಮುಖವ ನೋಡಲಾಗದು.**
**ಕೊಡಲಿಕ್ಕಾತನೇನು ಅನಾದಿ ಬಸವನೋ ?**
**ತೆಗೆದುಕೊಳ್ಳಲಿಕ್ಕಾತನೇನು ಅನಾದಿ ಪ್ರಭುವೋ ?**
**ಒಲಿದು ಬರುವುದೆಲ್ಲ ಹೊಲೆಪದಾರ್ಥ.**
**ನಿರುಪಾಧಿಯಿಂದ ಬಂದ ಪದಾರ್ಥ ಶಿವಪ್ರಸಾದ**
**ಆ ಪ್ರಸಾದವೆ ಎನ್ನ ಕಪಿಲಸಿದ್ಧಮಲ್ಲಿಕಾರ್ಜುನಂಗೆ ಮಹಾ ಆರೋಗಣೆಯಾಯಿತ್ತು.**

ಬಂದ ಅಯ್ಯಗಳಿಗೆ ಅನ್ನವ ಕೊಟ್ಟೆನೆಂಬ ಅಜ್ಞಾನಿಯ ಮುಖ ನೋಡಲಾಗದು. ಭೂಮಿಯಿಂದ ಬೆಳೆದ ನೆಲ್ಲು ಅದು ಭೂಮಿಯದೆ ಹೊರತು ತನ್ನದಲ್ಲ ಅದನ್ನು ತೆಗೆದುಕೊಳ್ಳುವವನದೂ ಅಲ್ಲ.

ಒಲಿದು ಬರುವುದೆಲ್ಲ ಹೊಲೆ ಪದಾರ್ಥ. ನಿರುಪಾಧಿಯಿಂದ ಬಂದ ಪದಾರ್ಥ ಶಿವಪ್ರಸಾದ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು. ಆ ಪ್ರಸಾದವೇ ಕಪಿಲಸಿದ್ಧಮಲ್ಲಿಕಾರ್ಜುನನಿಗೆ ಮಹಾ ಆರೋಗಣೆಯಾಯಿತ್ತು .

**1730**

**ಪಶುಗಳಿಗೆಲ್ಲ ಪೃಷ್ಠದಲ್ಲಿ ಬಾಲವಿದ್ದಡೆ. ಮಾಡುವೆನೆಂಬವನ ಮುಖದಲ್ಲಿ ಬಾಲ ನೋಡಾ,**
**ಪಶುಗಳಿಗೆಲ್ಲ ಮಸ್ತಕದಲ್ಲಿ ಶೃಂಗವಿದ್ದಡೆ, ಮಾಡಿದ ಪೂಜೆ ಕೈ ಕೊಂಡೆನೆಂಬವನ**
**ಮನದ ಕೊನೆಯ ಮೇಲೆ ಶೃಂಗ ನೋಡಾ.**
**ಮಾಡಿದೆನೆಂಬುದುಳ್ಳನ್ನಕ್ಕ ಭಕ್ತನೆಂಬೆನೆ ಅಯ್ಯಾ ? ಮಾಡಿಸಿಕೊಂಡೆನೆಂಬುದುಳ್ಳನ್ನಕ್ಕ,**
**ನಿರುಪಾಧಿ ನಿರಂಜನ ಜಂಗಮನೆಂಬೆನೆ ಅಯ್ಯಾ , ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.**

''ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತು ಶಿವನ ಡಂಗುರ. ಮಾಡಿದೆನೆನ್ನದಿರ ಲಿಂಗಕ್ಕೆ, ಮಾಡಿದೆನೆನ್ನದಿರ ಜಂಗಮಕ್ಕೆ. ಮಾಡಿದೆನೆಂಬುದು ಮನದಲ್ಲಿ ಇಲ್ಲದಿದ್ದಡೆ ಬೇಡಿದುದನ್ನು ಈವ ಕೂಡಲಸಂಗಮದೇವಾ''. ಇದು ಬಸವಣ್ಣನವರ ಸೂತ್ರವಾದರೆ ಈ ವಚನದ ಸಿದ್ಧರಾಮ ಶಿವಯೋಗಿಗಳ ಸೂತ್ರವೂ ಕೂಡ ಹೀಗೆಯೇ ಇದೆ.

ಪಶುಗಳಿಗೆ ಪುಷ್ಠದಲ್ಲಿ ಬಾಲವಿದ್ದರೆ ನಾನು ಮಾಡಿದೆ , ನೀಡಿದೆ ಎಂಬುವವನ ಮುಖದಲ್ಲಿ ಬಾಲವಿದೆ. ಪಶುಗಳಿಗೆ ಹಣೆಯಲ್ಲಿ ಕೋಡು ಇದ್ದರೆ ಮಾಡಿದ ಪೂಜೆ ಕೈಕೊಂಡೆನು ಎನ್ನುವವನ ಮನದ ಕೊನೆಯ ಮೇಲೆ ಕೋಡು ಇದೆ.

ಮಾಡಿದೆನು ಎನ್ನುವ ಅಜ್ಞಾನ ಇರುವವರೆಗೂ ಅವನು ಭಕ್ತನಾಗಲಾರ. ಮಾಡಿಸಿಕೊಂಡೆನು ಎಂಬ ಅಜ್ಞಾನ ಇರುವವರೆಗೆ ಅವನು ನಿರುಪಾಧಿ ನಿರಂಜನ ಜಂಗಮನಾಗಲಾರ.

**1731**

**ದೇಹವ ಮುಟ್ಟಿದವರು ನಿರ್ದೇಹಿಯ ಮುಟ್ಟುವುದದು ದುರ್ಲಭವಯ್ಯಾ .**
**ನಿರ್ದೇಹಿಯ ಮುಟ್ಟಿದವರು ದೇಹಿಯ ಮುಟ್ಟರು ನೋಡಯ್ಯಾ .**
**ಮುಟ್ಟಿದವ ಕ್ಷಣಿಕ ಸುಖ ಕಂಡ, ಮುಟ್ಟದವ ನಿಜಾನಂದ ಸುಖ ಕಂಡ.**
**ನೋಡಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .**

ದೇಹ ದೇಹವನ್ನು ಮುಟ್ಟಬಹುದು. ದೇಹದಲ್ಲಿಯೇ ಸಂಗಮವಾದ ನಿರ್ದೇಹವನ್ನು ದೇಹ ಮುಟ್ಟಲು ಸಾಧ್ಯವಿಲ್ಲ. ನಿರ್ದೇಹಿಯ ಮುಟ್ಟಿದ ದೇಹ ಮತ್ತೊಂದು ದೇಹವನ್ನು ಮುಟ್ಟಲು ಸಾಧ್ಯವಿಲ್ಲ. ಒಂದು ವೇಳೆ ಮುಟ್ಟಿದರೂ ಕೂಡ ದೇಹದಲ್ಲಿ ಸಂಗಮವಾದ ನಿರ್ದೇಹಿಯನ್ನು ಮುಟ್ಟುತ್ತಾರೆ ಹೊರತು ದೇಹಿಯನ್ನು ಮುಟ್ಟಲಾರ. ದೇಹದಿಂದ ದೇಹ ಮುಟ್ಟಿದವನು ಕ್ಷಣಿಕ ಸುಖ ಕಂಡ. ದೇಹದಿಂದ ನಿರ್ದೇಹ ಮುಟ್ಟಿದವನು ಕೂಡದ ಅಗಲದ ಕೂಟದ ನಿಜಾನಂದ

ಸುಖವನ್ನು ಕಾಣುತ್ತಾನೆ. ಈ ನಿಜ ನಿರ್ದೇಹಿಯಾಗುವ ಆಸಕ್ತಿಯುಳ್ಳ ಓದುಗನಿಗೆ ಅರ್ಥವಾಗುತ್ತದೆ ಹೊರತು ಉಳಿದ ದೇಹಗಳಿಗೆ ಸಾಧ್ಯವಾಗುವುದಿಲ್ಲ.

**1732**

**ಮಾನಾಪಮಾನವೆಂಬುದು ಮನದ ಭ್ರಮೆ ನೋಡಯ್ಯಾ .**
**ಮೇಲಕ್ಕೆ ಕರೆದಡೆ ಮಾನವೆಂಬುದೀ ಲೋಕ;**
**ಮೂಗುವಟ್ಟಡೆ ಅಪಮಾನವೆಂಬುದೀ ಲೋಕ,**
**ತಿರುಗುವ ಭೂಮಿಯೆಲ್ಲ ನಕಾರ ಪ್ರಣವವಾಯಿತ್ತು .**
**ಏಕೈಕವಾದ ಭೂಮಿಯಲ್ಲಿ ಪೀಠವ ಕೊಟ್ಟು ಮನ್ನಿಸುವ**
**ಅಣ್ಣಗಳ ಬಾಯಲ್ಲಿ ಹುಡಿಮಣ್ಣ ಹೊಯ್ಯದೆ ಮಾಬನೆ. ಕಪಿಲಸಿದ್ಧಮಲ್ಲಿಕಾರ್ಜುನ ?**

ಕಾಯವನ್ನು ಆವರಿಸಿದ ಮನಕ್ಕೆ ಮಾನವುಂಟು ಅಪಮಾನವುಂಟು. ಇವೆರಡು ಮನದ ಭ್ರಮೆ. ಮನ ತನ್ನ ಮೂಗಿನ ನೇರಕ್ಕೆ ಕರೆದೊಡೆ ಹಿರಿ ಹಿರಿ ಹಿಗ್ಗುತ್ತದೆ. ತನ್ನ ಮೂಗಿನ ನೇರಕ್ಕೆ ಕರೆಯದಿದ್ದಡೆ ಅಪಮಾನವೆಂದು ಕುಗ್ಗುತ್ತದೆ. ಇದು ಲೋಕದ ನಿಯಮ. ಹೀಗೆ ಭೂಮಿಯ ಮೇಲೆ ಇರುವ ಕಾಯಗಳೆಲ್ಲ ನಕಾರ ಪ್ರಣವವಾಗಿವೆ. ಕಾಯ ಎನ್ನುವುದೇ ಒಂದು ಭೂಮಿ, ಇದು ಬ್ರಹ್ಮಪೀಠ. ಅಲ್ಲಿ ಕಪಿಲಸಿದ್ಧಮಲ್ಲಯ್ಯ ಪವಡಿಸಿದ್ದಾನೆ. ಈತ ಮಾನಾಪಮಾನಗಳನ್ನು ಅರಿವಿನಿಂದ ಸ್ವೀಕರಿಸುತ್ತಾನೆ.

**1733**

**ಮಾಡಬಾರದ ನೇಮವ ಮಾಡಿ ಕೆಡದಿರಾ, ಮನವೆ.**
**ಮಾಡುವ ನೇಮ, ಮಾಡಬಾರದ ನೇಮಂಗಳವು,**
**ಭೂತ ಭವಿಷ್ಯ ವರ್ತಮಾನಂಗಳವು. ಮಾಡುವ ನೇಮಂಗಳು**
**ನಿತ್ಯ ಲಿಂಗಾರ್ಚನೆ ಜಂಗಮದಾಸೋಹವೆಂದು.**
**ಕಪಿಲಸಿದ್ಧಮಲ್ಲಿಕಾರ್ಜುನನ ವಚನ, ಮನವೆ.**

ಮಾನವ ಮಾಡಬಾರದ ನೇಮಂಗಳನ್ನೆಲ್ಲ ಮಾಡಿ ಮಾಡಿ ಒಮ್ಮೆ ದೇಹ ಕೃಷವಾಗಿ ಇಲ್ಲವಾಗುತ್ತಾನೆ. ತುಪ್ಪದ ನೇಮ, ಸಕ್ಕರೆ ನೇಮ, ಹಾಲಿನ ನೇಮ, ಬಿಲ್ವಪತ್ರೆಯ ನೇಮ, ನಾನಾಜಾತಿ ಪರಿಮಳ ಬೀರುವ ಹೂಗಳ ನೇಮಗಳಿಂದ ಪೂಜಿಸಿ ನೇಮವ ಮಾಡಿ ಅರಿವಿನ ಮಲ್ಲಯ್ಯನಿದ್ದ ಕಾಯವನ್ನು ವ್ಯರ್ಥ ಕೆಡಿಸುತ್ತಾನೆ. ಇದು ಕಾಯದ ತಪ್ಪಲ್ಲ ಕಾಯವನ್ನು ಆವರಿಸಿದ ಮನದ ತಪ್ಪು. ಹೀಗೆ ನೇಮ ಮಡುವ ಮನದ ಕಾಯ ಭೂತ, ಭವಿಷ್ಯತ್, ವರ್ತಮಾನ ಕಾಲಗಳಲ್ಲಿಯೂ ಸಾಯದೆ ಬದುಕದೆ ಬದುಕುತ್ತದೆ.

ಕಾಯದಲ್ಲಿ ಸಂಗಮವಾದ ಅರಿವಿನ ಮಲ್ಲಯ್ಯನನ್ನು ಶರಣರು ಲಿಂಗಯ್ಯ ಎಂದು ಕರೆದಿದ್ದಾರೆ. ಕಾಯವನ್ನು ಆವರಿಸಿದ ಮನ ಈ ಲಿಂಗಯ್ಯನನ್ನು ಅರಿತು ಪೂಜಿಸಿದಾಗಲೇ ಘನಮನವಾಗುವುದು. ಆಗ ಮಾಡಬಾರದ ನೇಮಕ್ಕೆ ಕಡಿವಾಣ ಬೀಳುತ್ತದೆ.

**1734**

**ಭೂತ ಭವಿಷದ್ವರ್ತಮಾನಗಳಿರುವಿಕೆಯದು**

**ಭೂತ ಪ್ರಾಣಿಗಳಿಗೆ ರಂಜನೆಯಲ್ಲದೆ.**
**ಭೂತೇಶನ ಮನೋರಂಜನೆಯಾಗದು ನೋಡಾ ಮನವೆ.**
**ನಿತ್ಯ ಲಿಂಗಾರ್ಚನೆ, ನಿತ್ಯಾನುಷ್ಠಾನ, ನಿತ್ಯ ಮಂತ್ರ ವಿಚಾರ,**
**ನಿತ್ಯ ಪಾದೋದಕ-ಪ್ರಸಾದ ಸ್ವೀಕಾರವದು**
**ಕಪಿಲಸಿದ್ಧಮಲ್ಲಿಕಾರ್ಜುನನ ಮನಃಕಿಂಜಲ್ಕ ವಿಕಸನ ನೋಡಾ, ಮನೋಭ್ರಮರವೆ.**

ಭೂತ, ಭವಿಷ್ಯತ್, ವರ್ತಮಾನ ಕಾಲಗಳು ಭೂತ ಪ್ರಾಣಿಗಳಿಗೆ ರಂಜನೆಯನ್ನುಂಟುಮಾಡುತ್ತದೆ. ಮನವೆ ನೀನು ಭೂತ ಪ್ರಾಣಿ ಹೀಗಾಗಿ ಈ ಮೂರೂ ಕಾಲಗಳು ನಿನ್ನಿಂದ ಸೃಷ್ಟಿಯಾಗಿವೆ ಹೊರತು ಭೂತೇಶನಿಂದಲ್ಲ.

ಭೂತೇಶನ ದರುಶನ ಮನವೆಂಬ ನಿನಗೆ ಇದೆಯೇ ಹೊರತು ನೀನಿದ್ದ ಜಾಗದಲ್ಲಿಯೇ ಇದ್ದ ಭೂತೇಶನಿಗೆ ಮನ ರಂಜನೆಯಾಗದು. ಏಕೆಂದರೆ ಆತ ನಿರಂಜನ ಮೂರ್ತಿ. ಕಾಯದಲ್ಲಿಯೇ ಸಂಗಮವಾದ ಭೂತೇಶ ಸರ್ವಭೂತಗಳನ್ನು ತನ್ನ ಗರ್ಭದಲ್ಲಿ ಇಟ್ಟುಕೊಂಡಾತ, ಸರ್ವ ಭೂತಗಳ ಛೇಷ್ಠೆಯೂ ಆತನಿಗೆ ಆನಂದವನ್ನುಂಟುಮಾಡುತ್ತದೆ. ಮನವೇ ಭೂತೇಶನ ಪಾದಕ್ಕೆರಗಿ ನಿನ್ನ ವಿಕಸನವನ್ನು ನೀನೆ ನೋಡಿಕೋ ಮನೋಭ್ರಮರವೆ.

**1735**

**ದೇವರಿಗೆ ಕೃಷಿಯ ನೇಮಕವ ಮಾಡುವರಲ್ಲದೆ,**
**ದೇವರ ಪ್ರಥಮ ಮುಖ ಭೂಮಿ ಎಂದರಿಯರೀ ಲೋಕ.**
**ದೇವರಿಗೆ ನದಿಯ ಜಲವೆರಿಯಬೇಕೆಂಬ ನೇಮಕವ ಮಾಡುವರಲ್ಲದೆ,**
**ದೇವರ ದ್ವಿತೀಯ ಮುಖ ಎಂದರಿಯರೀ ಲೋಕ.**
**ದೇವರಿಗೆ ದೀವಿಗೆಯ ನೇಮಕವ ಮಾಡುವರಲ್ಲದೆ.**
**ದೇವರಿಗೆ ತೃತೀಯ ಮುಖ ಜ್ಯೋತಿಯೆಂದರಿಯರೀ ಲೋಕ.**
**ದೇವರಿಗೆ ತಾಲವೃಂತದ ನೇಮಕವ ಮಾಡುವರಲ್ಲದೆ.**
**ದೇವರ ಚತುರ್ಥಮುಖ ವಾಯುವೆಂದರಿಯರೀ ಲೋಕ.**
**ದೇವರಿಗೆ ಆಶ್ರಯವ ಮಾಡಬೇಕೆಂಬ ನೇಮಕವ ಮಾಡುವರಲ್ಲದೆ.**
**ದೇವರಿಗೆ ಪಂಚಮುಖ ಆಕಾಶವೆಂದರಿಯರೀ ಲೋಕ.**
**ದೇವರಿಗೆ ಪ್ರಾಣಪ್ರತಿಷ್ಠೆಯ ಮಂತ್ರ ಹೇಳುವರಲ್ಲದೆ,**
**ದೇವರ ಆರನೆಯ ಮುಖ ಆತ್ಮಪ್ರಾಣವೆಂದರಿಯದೀ ಲೋಕ,**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇವರಿಗೆ ಮನ ಕೃಷಿಯ ನೇಮವನ್ನು ಮಾಡುತ್ತದೆ. ಬೆಳೆ ಬೆಳೆಯುವ ಭೂಮಿ ಕೂಡ ದೇವರ ದೇವನಾದ ಈಶ್ವರನ ಮುಖವೆಂದು ಅರಿಯದೀ ಲೋಕ. ಲೋಕದ ತನುಗಳೆಲ್ಲ ಮನವನ್ನು ಆಶ್ರಯ ಮಾಡಿಕೊಂಡಿವೆ ಹೀಗಾಗಿ ಮನ ದೇಹದಲ್ಲಿದ್ದ ದೇವರನ್ನು ಅರಿಯದು. ದೇವರನ್ನು ಜಲದಿಂದ, ಜ್ಯೋತಿಯಿಂದ, ಧೂಪ-ದೀಪಗಳಿಂದ ಲೋಕ ಆರಾಧಿಸುತ್ತದೆ. ದೇಹವನ್ನು ಆವರಿಸಿದ ಮನ ದೇಹದಲ್ಲಿಯೇ ಇವೆಲ್ಲವುಗಳು ಇವೆಯೆಂದು ಅರಿಯದು. ದೇಹದ

ಪಂಚಮುಖವೇ ದೇಹದ ಒಳಗೆ, ಹೊರಗೆ ಸಂಗಮವಾದ ಆಕಾಶ (ಬಯಲು) ಎಂದರಿಯದು ಈ ಲೋಕ. ದೇವರಿಗೆ ಪ್ರಾಣ ಪ್ರತಿಷ್ಠೆಯ ಮಂತ್ರ ದೇಹದೊಂದಿಗೆ ಹೇಳುವುದಲ್ಲದೆ. ದೇಹದೊಳಗಿದ್ದ ಆರನೇಯ ಮುಖವೇ ಆತ್ಮಪ್ರಾಣವೆಂದರಿಯದು ಈ ಲೋಕ.

**1736**

**ತಮ್ಮಿಚ್ಛೆಗೆ ಬಂದ ಪದಾರ್ಥ ಲಿಂಗದೀಕ್ಷೆ ಎಂಬರು,**
**ತಮ್ಮಿಚ್ಛೆಗೆ ಬರದ ಪದಾರ್ಥ ಲಿಂಗದಿಚ್ಛೆ ಇಲ್ಲವೆಂಬರು,**
**ಹೋದ ವಾಕ್ಕು ಶಿವಾಜ್ಞೆ ಎಂಬರು.**
**ಇದ್ದ ಮಾತು ತನ್ನಾಜ್ಞೆ ಎಂಬರು, ಅದೆಂತಯ್ಯಾ ?**
**ಇಚ್ಛೆಗೆ ಒಳಗಾಗುವನಲ್ಲಯ್ಯಾ ಲಿಂಗವು.**
**'ಶಿವೋ ದಾತಾ ಶಿವೋ ಭೋಕ್ತಾ' ಎಂಬುದ ತಿಳಿದು,**
**ಲಿಂಗಮುಖದಿಂದ ಬಂದ ಪದಾರ್ಥವ ಕೈಕೊಂಬಡೆ,**
**ಅಚ್ಚ ಲಿಂಗೈಕ್ಯನೆಂಬೆ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ನಾನಾ ರೀತಿಯ ಪಾತ್ರಗಳನ್ನು ಹಾಕುತ್ತದೆ. ತನ್ನಿಚ್ಛೆಗೆ ಬಂದ ಪದಾರ್ಥವನ್ನು ಲಿಂಗದಿಚ್ಛೆ ಎಂದು ಸ್ವೀಕರಿಸುತ್ತದೆ. ತನ್ನಿಚ್ಛೆಗೆ ಬಾರದ ಪದಾರ್ಥವನ್ನು ಲಿಂಗದಿಚ್ಛೆ ಇಲ್ಲವೆಂದು ನಿರಾಕರಿಸುತ್ತದೆ. ತನುವಿನಿಂದ ಹೋದ ಮಾತು ಶಿವಾಜ್ಞೆ ಎಂದು ಹೇಳುತ್ತದೆ. ತನುವಿನಿಂದ ಹೊರ ಬರದೆ ತನುವಿನಲ್ಲಿಯೇ ಇದ್ದ ಮಾತನ್ನು ತನ್ನಾಜ್ಞೆ ಎನ್ನತ್ತದೆ. ಕಾಯದ ಕಣ ಕಣದಲ್ಲಿ ಸಂಗಮವಾದ ಅರಿವಿನ ಮಲ್ಲಯ್ಯನು ಇಚ್ಛೆಗೆ ಒಳಗಾಗುವವನಲ್ಲ.

ಇಚ್ಛೆ ಅಇಚ್ಛೆಗಳನ್ನು ಮೀರಿ ಲಿಂಗ ಮುಖದಿಂದ ಬಂದ ಪದಾರ್ಥವ ಕೈಕೊಂಬಡೆ ಅಚ್ಚ ಲಿಂಗೈಕ್ಯನೆಂಬೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1737**

**'ಕರ್ಮತ್ರಯಂಗಳು ಭೋಗಿಸಿದಲ್ಲದೆ ಬಿಡದು ' ಎಂಬ**
**ಶ್ರುತಿಗೇಳಿ ಮನದೆರೆದು ಮಾತನಾಡಯ್ಯಾ .**
**ದುಃಖದಿಂ ಭೋಗಿಸಿದ ಕರ್ಮತ್ರಯದೊಳಗಯ್ಯಾ .**
**ಆದ ಭೋಗ ಸುಖವಾದಡೆ ಮುಂದೆ ಭವಕ್ಕೆ ಈಡಯ್ಯಾ .**
**ಸುಖದುಃಖಗಳ ಸಮಾನಗೊಂಡವಂಗೆ**
**ವಿಧಿತ್ರಯಂಗಳೆಲ್ಲಿಹವಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ಸ್ಥೂಲ ತನು, ಮನೋಮಯವಾದ ತನು, ಕಾರಣ ತನು ಇವು ಮೂರೂ ತನುಗಳ ಕೆಲಸ ಬೇರೆ ಬೇರೆಯೆ ಆಗಿವೆ. ಆಯಾ ಕಾಯಗಳ ಕರ್ಮಫಲವನ್ನು ಭೋಗಿಸಲೇಬೇಕು. ದುಃಖದಿಂದ ಭೋಗಿಸಿದ ಕರ್ಮತ್ರಯದೊಳಗೆ ಸುಖವಾದಡೆ ಮುಂದೆ ಭವಕ್ಕೆ ಈಡಾಗುತ್ತದೆ.

ಸುಖ ದುಃಖಗಳು ಸಮಾನತೆಯಿಂದ ಸ್ವೀಕರಿಸುವ ಯೋಗವೊಂದು ಕಾಯಕ್ಕೆ ಬಂದೇ ಬರುತ್ತದೆ. ಮನ ಅರಿವಿನ ಕೃಷಿಯಲ್ಲಿ ಕಾಯದೊಂದಿಗೆ ನಿರತವಾದಡೆ ಕಾಯದಲ್ಲಿಯೇ ಇದ್ದ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಕಾಯ ಮತ್ತು ಮನಕ್ಕೆ ತಪ್ಪದೆ ಒಲಿಯುತ್ತಾನೆ. ಅಂದಿನಿಂದ

ಕಾಯಕ್ಕೆ ಅಂಟಿದ ವಿಧಿತ್ರಯಂಗಳು ನಿರ್ನಾಮವಾಗುತ್ತವೆ. ಕಾಯ ಕಪಿಲಸಿದ್ಧಮಲ್ಲಿಕಾರ್ಜುನನ ವಾಸಸ್ಥಾನವೆಂದು ಮನಕ್ಕೆ ಗೊತ್ತಾದ ಬಳಿಕ ಕಾಯಕ್ಕೆ ಒದಗುವ ಸುಖ ದುಃಖಗಳನ್ನು ಕಾಯ ಮತ್ತು ಮನ ಸಮಾನತೆಯಿಂದ ಸ್ವೀಕರಿಸುವವು.

**1738**

**ಕ್ಷೀರ ಶರಧಿಯೊಳಗಿರುವ ಹಂಸೆಗೆ, ಅನ್ಯ ಕ್ಷೀರದ ಹಂಗುಂಟೇನಯ್ಯಾ?**
**ಸುಗಂಧಮಯ ಪುಷ್ಪದಲ್ಲಿರುವ ಭೃಂಗಂಗೆ, ಅನ್ಯ ಪರಿಮಳದ ಹಂಗುಂಟೇನಯ್ಯಾ ?**
**ಸಮುದ್ರದೊಳಿರುವ ಮಂಡೂಕಂಗೆ,ಅನ್ಯ ಕ್ಷೀರ ನೀರಿನ ಹಂಗುಂಟೇನಯ್ಯಾ?**
**ಮೊಲೆಯನುಣ್ಣುವ ಶಿಶುವಿಂಗೆ,ಅನ್ಯ ಕ್ಷೀರ ನೀರಿನ ಹಂಗುಂಟೇನಯ್ಯಾ ?**
**ಸಕಲ ಪ್ರದಾಯಕ ಲಿಂಗದೊಳಿದ್ದ ಶರಣಂಗೆ.ಅನ್ಯ ಪದದಾಶೆಯ ಹಂಗುಂಟೆ ?**
**ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕ್ಷೀರ ಸಾಗರದಲ್ಲಿರುವ ಹಂಸೆಗೆ ಅನ್ಯ ಕ್ಷೀರದ ಹಂಗಿರುವುದಿಲ್ಲ. ಸದಾ ಸುಗಂಧಮಯ ಪುಷ್ಪದಲ್ಲಿರುವ ಭೃಂಗೆಗ ಅನ್ಯ ಪುಷ್ಪಗಳ ಪರಿಮಳದ ಹಂಗಿರುವುದಿಲ್ಲ. ಸಮುದ್ರದೊಳಗೆ ಇರುವ ಕಪ್ಪೆಗೆ ಅನ್ಯ ಜಲರಾಶಿಯ ಹಂಗಿರುವುದಿಲ್ಲ ಮೊಲೆಯನುಣ್ಣುವ ಶಿಶುವಿಗೆ ಅನ್ಯ ಕ್ಷೀರ ನೀರಿನ ಹಂಗಿರುವುದಿಲ್ಲ. ಸದಾ ಕಾಯದಲ್ಲಿ ಸಂಗಮವಾದ ಅರಿವಿನ ಲಿಂಗಯ್ಯನೊಂದಿಗೆ ಇದ್ದ ಶರಣನಿಗೆ ಅನ್ಯ ಪದವಿಯ ಹಂಗು ಇರುವುದಿಲ್ಲ.

ಸಕಲ ಕಾಯಗಳೂ ಸಿದ್ಧರಾಮ ಶಿವಯೋಗಿಗಳ ಈ ಸೂತ್ರವನ್ನು ಅರಿತರಿತು ಅರಿವೇ ತಾವಾಗಬೇಕಾಗಿದೆ.

**1739**

**ಸಮತೆಯ ಕಂಥೆಯ ಧರಿಸಿಪ್ಪ ನೋಡಾ ಜಂಗಮನು.**
**ಅಮಿತವೆಂಬ ಭಸ್ಮವ ಧರಿಸಿಪ್ಪ ನೋಡಾ ಜಂಗಮನು.**
**ಲಿಂಗವೆಂಬ ಕರ್ಪುರವ ಕರಸ್ಥಲದಲ್ಲಿ ಧರಿಸಿಪ್ಪ ನೋಡಾ ಜಂಗಮನು.**
**ಸರ್ವಜೀವ ದಯೋಪಾರಿಯೆಂಬ ವಿಮಲ ರುದ್ರಾಕ್ಷಿಯ,**
**ಧರಿಸಿಪ್ಪ ನೋಡಾ ಜಂಗಮನು.**
**ನಿರ್ಮೋಹವೆಂಬ ಕೌಪೀನವ ಧರಿಸಿಪ್ಪ ನೋಡಾ ಜಂಗಮನು.**
**ನಿಸ್ಸಂಗವೆಂಬ ಮೇಖಲಾಪರಿಪೂರ್ಣ ನೋಡಾ ಜಂಗಮನು.**
**ಸುಮ್ಮಾನವೆ ಕಿರೀಟವಾಗಿ, ಶುದ್ಧಜ್ಞಪ್ತಿಯ ಮುಕುಟವಾಗಿ,**
**ನಿರಹಂಕಾರವೆ ಬಹಿರ್ವಾಸವಾಗಿ.**
**ದುರ್ವ್ಯಸನ ದುರ್ಭ್ರಮೆ ಹೃಷೀಕೋತ್ಪಾತವಿಜಯ ಶಿವಯೋಗವಾಗಿ,**
**ಚರಿಸುವನು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಮಹಾಜಂಗಮನು.**

ಈ ವಚನದಲ್ಲಿ ಸಿದ್ಧರಾಮ ಶಿವಯೋಗಿಗಳು ವಿವರಿಸಿದಂತಹ ಕಂಥೆಯನ್ನು ಲೋಕದ ಜಂಗಮನು ಧರಿಸಿ ಭಸ್ಮವ ಹೂಸಿಕೊಂಡು ಕರ್ಪೂರವ ಕರಸ್ಥಲದಲ್ಲಿ ಧರಿಸಿ, ಕೊರಳಲ್ಲಿ ರುದ್ರಾಕ್ಷಿ

ಧರಿಸಿ, ಕಾಯಕ್ಕೆ ಕೌಪೀನವ ಹೊಂದಿಸಿ ಜಂಗಮ ಎಂದು ಕರೆಯಿಸಿಕೊಂಡಿದ್ದಾನೆ. ಹೀಗೆ ಕಾಯಕ್ಕೆ ಧರಿಸಿದ ವೇಷಧಾರಿ ಜಂಗಮ ಜಂಗಮನಲ್ಲ.

ಜಂಗಮನೆಂದರೆ ಕಾಯವುಳ್ಳವನಲ್ಲ ಕಾಯದಲ್ಲಿದ್ದವನು. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಗುರುದೇವನಿಗೆ ಭಕ್ತನಾದಾಗ ಕಾಯದಲ್ಲಿಯೇ ಸಂಗಮವಾದ ನಿಜಜಂಗಮ ಮನಕ್ಕೆ ಮಾತ್ರ ಕಾಣುತ್ತಾನೆ. ಆಗ ಕಾಯ ಸರ್ವಸಂಗ ಪರಿತ್ಯಾಗಿಯಾಗುತ್ತದೆ. ಜಂಗಮನೊಂದಿಗೆ ಮಾತ್ರ ಸಂಗಮಾಡಿ ನಿರಹಂಕಾರಿಯಾಗುತ್ತದೆ. ವಿಜಯ ಸಾಧಿಸಿ ಮಹಾಜಂಗಮವಾಗಿ ಚರಿಸುತ್ತದೆ.

**1740**

**ಪರರಾಣಿಯ ನೋಡುವಲ್ಲಿ, ಅಂಧನಾಗಿಪ್ಪ ನೋಡಾ ಜಂಗಮನು.**
**ಪರಧನ ಕಂಡಲ್ಲಿ, ಹುಲಿಯ ಕಂಡ ಹುಲ್ಲೆಯಂತೆ,**
**ಭೀತಿ ಬಿಡುವ ನೋಡಾ ಜಂಗಮನು.**
**ದುರ್ಜನರ ಸಂಭಾಷಣೆಯ ಕೇಳುವಲ್ಲಿ**
**ಅತಿಮೂರ್ಖನಾಗಿಪ್ಪ ನೋಡಾ ಜಂಗಮನು.**
**ದುಷ್ಕರ್ಮಪಥದೊಳರಸುವಲ್ಲಿ, ಕಡುಜಡ ಹೇಳುವ ನೋಡಾ ಜಂಗಮನು.**
**ಅಷ್ಟಾಂಗ ವಿಷಯಗಳೊಳು, ನಿಷ್ಕರುಣಿಯಾಗಿಪ್ಪ ನೋಡಾ ಜಂಗಮನು.**
**ಶಿವನಿಂದಕರ ಸ್ವರಗೇಳುವಲ್ಲಿ, ಬಧಿರನಾಗಿಪ್ಪ ನೋಡಾ ಜಂಗಮನು.**
**ದುರಾತ್ಮರಿಗೆ ಜ್ಞಾನದ್ರವ್ಯ ಕೊಡುವಲ್ಲಿ ಲೋಭಿಯಾಗಿಪ್ಪ ನೋಡಾ ಜಂಗಮನು,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಸಂಗಮವಾದ ಜಂಗಮನನ್ನು ಕಾಯ ಒಲಿಸಿಕೊಂಡರೆ ಸಾಕು ವ್ಯಕ್ತ ಕಾಯ ಅವ್ಯಕ್ತ ಜಂಗಮನ ತೋಳ್‌ತೆಕ್ಕೆಗೆ ಬರುವುದು. ಇಂತಹ ಕಾಯಕ್ಕೆ ಪರ ರಾಣಿಯರು ಕಾಣುವುದಿಲ್ಲ, ಪರಧನವೂ ಕಾಣುವುದಿಲ್ಲ. ದುರ್ಜನರ ಸಂಭಾಷಣೆಯ ಕೇಳುವಲ್ಲಿ ಅತೀ ಮೂರ್ಖತನವನ್ನು ವ್ಯಕ್ತ ಪಡಿಸುವನು ಜಂಗಮನು. ದುಷ್ಕರ್ಮ ಮಾಡುವ ಕಾಯಗಳೊಂದಿಗೆ ಬೆರೆಯುವುದಿಲ್ಲ ಜಂಗಮ. ಕಾಯ ಸಕಲ ವಿಷಯಗಳಲ್ಲಿ ಭಾಗಿಯಾಗುವುದಕ್ಕೆ ಬಿಡಲು ಒಪ್ಪದ ನಿಷ್ಕರುಣಿ ಜಂಗಮನು. ಶಿವನಿಂದಕರಸ್ವರ ವಿರೋಧಿಯಾಗಿಪ್ಪ ಜಂಗಮನು. ದುರಾತ್ಮರಿಗೆ ಜ್ಞಾನದ್ರವ್ಯ ಕೊಡುವಲ್ಲಿ ಅತ್ಯಂತ ಲೋಭಿಯಾಗಿರುವವನನ್ನು ಜಂಗಮನೆಂದು ಕರೆಯಬಹುದಾಗಿದೆ.

**1741**

**ಸಕಲ ಪರಿಪೂರ್ಣನಾದುದರಿಂದ ಬಾಲಕನಂತೆ ತೋರುವನಯ್ಯಾ.**
**ವಿಧಿ- ನಿಷೇಧಂಗಳಿಲ್ಲದರಿಂದ ಉನ್ಮತ್ತನಂತೆ ತೋರುವನಯ್ಯಾ .**
**ನಿರಂಜನ ಲಾಂಛನವಿಲ್ಲದರಿಂದ ಪೈಶಾಚಿಯಂತೆ ತೋರುವನಯ್ಯಾ .**
**ನಿಶ್ಯಬ್ದಬ್ರಹ್ಮ ವೇದ್ಯನಾದುದರಿಂದ ಮೂಕನಂತೆ ತೋರುವನಯ್ಯಾ .**
**ಸಕಲಾಗಮದ ಮೂರ್ತಿ ತಾನಾದುದರಿಂದ ವಿಧ್ವಾಂಸರೊಳ್ ಬೆರೆಸುವ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಮಹಾಮೂರ್ತಿ ಜಂಗಮನು.**

ಜಂಗಮನು ಅವ್ಯಕ್ತ. ಈತ ವ್ಯಕ್ತ ಕಾಯದೊಳಗೆ ಇದ್ದು ಪರಿಪೂರ್ಣನಾದುದರಿಂದ ಬಾಲಕನಂತೆ ಕಾಣುತ್ತಾನೆ. ಲೋಕದ ವಿಧಿ-ನಿಷೇಧಂಗಳು ಜಂಗಮನಿಗೆ ಇಲ್ಲದ್ದರಿಂದ ಉನ್ಮತ್ತನಂತೆ ಕಾಣುತ್ತಾನೆ. ನಿರಂಜನ ಲಾಂಛನವಿಲ್ಲದ್ದರಿಂದ ಜಂಗಮ ಸಾಮಾನ್ಯ ಕಾಯದಂತೆ ಕಾಣುತ್ತಾನೆ. ಜಂಗಮ ಸಕಲ ಶಬ್ದಗಳನ್ನೂ ನಿಶ್ಯಬ್ದ ಮಾಡಿ ಸ್ವೀಕರಿಸುವ ನಿಶ್ಯಬ್ದಬ್ರಹ್ಮನಾದುದರಿಂದ ಮೂಕನಂತೆ ಕಾಣುತ್ತಾನೆ. ಸಕಲ ವೇದ, ಶಾಸ್ತ್ರ, ಉಪನಿಷತ್ತುಗಳ ಮೂರ್ತಿ ತಾನೆ ಆದುದರಿಂದ ವಿಧ್ವಾಂಸರೊಳ್ ಬೆರೆಯನು ಜಂಗಮ. ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಮಹಾಮೂರ್ತಿ ಜಂಗಮನು.

**1742**

**ಒಂದೇ ವಸ್ತು, ತನ್ನ ವಿಚಿತ್ರಮಹಿಮೆಯ ಕೇಳುವಲ್ಲಿ ಕರ್ಣವಾಗಿ**
**ಸ್ಪರ್ಶಿಸುವಲ್ಲಿ ತ್ವಕ್ಕಾಗಿ, ನೋಡುವಲ್ಲಿ ನೇತ್ರವಾಗಿ,**
**ರುಚಿಸುವಲ್ಲಿ ರಸನೆಯಾಗಿ, ಪರಿಮ(ಳವ ಘ್ರಾಣಿ)ಸುವಲ್ಲಿ ಘ್ರಾಣವಾಗಿ,**
**ನಿಂದೆ ನೀ ನೋಡಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ಕಾಯದಲ್ಲಿರುವ ಸತ್ಯ ಒಂದೆ. ಆ ಸತ್ಯದಿಂದಲೇ ಕಾಯದ ಮೂಲಕ ತನ್ನ ವಿಚಿತ್ರ ಮಹಿಮೆಯನ್ನು ಕೇಳುವಲ್ಲಿ ಕಿವಿಯಾಗಿದೆ, ಮುಟ್ಟುವಲ್ಲಿ ಚರ್ಮವಾಗಿದೆ, ನೋಡುವಲ್ಲಿ ಕಣ್ಣಾಗಿದೆ, ರುಚಿಸುವಲ್ಲಿ ರಸನೆಯಾಗಿದೆ, ಪರಿಮಳ ಆಸ್ವಾದಿಸುವಲ್ಲಿ ಮೂಗು ಆಗಿದೆ. ಈ ಪರಿಯಲ್ಲಿ ನಿಂತ ಕಾಯದ ತಂದೆ ನೀನು ನೋಡಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನ. ಕಾಯದಿಂದಲೇ ಪ್ರಕಟಿಸಿ ಕಾಯವನ್ನು ಮಂತ್ರಮುಗ್ಧನಾಗಿ ಮಾಡುವ ಮಹಾಮಹಿಮನು ನೀನು ನೋಡಯ್ಯಾ.

**1743**

**ಪೂಜಾರ್ಥವಾಗಿ ಎನ್ನ ಹಸ್ತಕ್ಕೆ ಇಷ್ಟಲಿಂಗವಾಗಿ ಬಂದೆಯಯ್ಯಾ.**
**ಪೂಜಿಸುವಲ್ಲಿ ಭಕ್ತನಾಗಿ ನಿಂದೆಯಯ್ಯಾ. ಜನ್ಮವಳಿವಲ್ಲಿ ಜಂಗಮವಾಗಿ ಬಂದು,**
**ಪಾದೋದಕ ಪ್ರಸಾದವ ಕೊಟ್ಟೆ. ಪೂಜಾಫಲ ತೀರ್ಗಡೆ ಮಾಡಬೇಕೆಂದು,**
**ಎನ್ನಮನ ಭಾಂಡಾರವ ನೋಡಬಂದೆಯಯ್ಯಾ, ಎಲೆ ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೆ.**

ಸರ್ವಾಂಗಗಳಲ್ಲಿ ಸಂಗಮವಾದ ಅರಿವಿನ ಲಿಂಗಯ್ಯನೆ ಎನ್ನ ಅಂಗಕ್ಕೆ ಇಷ್ಟಲಿಂಗವಾಗಿ ಬಂದು ಆ ಅಂಗದಲ್ಲಿಯೇ ಲಿಂಗಯ್ಯನಾಗಿ ನಿಂದೆ ನೋಡಯ್ಯಾ.

ಪೂಜಿಸುವಲ್ಲಿ ಭಕ್ತನಾದವನೂ ನೀನೆ, ಕಾಯದ ಕರ್ಮದ ಜನ್ಮವಳಿದಲ್ಲಿ ಜಂಗಮವಾಗಿ ಬಂದು ಪಾದೋದಕ ಪ್ರಸಾದವನ್ನು ಕೊಟ್ಟೆ ನೀನು. ನಾನು ಮಾಡಿದ ಪೂಜಾ ಫಲಕ್ಕೆ ಪ್ರತಿಫಲ ನೀಡಬೇಕೆಂಬ ಇಚ್ಛೆಯಿಂದ ಎನ್ನ ಮನ ಭಾಂಡಾರವ ನೋಡಲು ಬಂದ ಕಪಿಲಸಿದ್ಧಮಲ್ಲಯ್ಯ ನೀನು.

**1744**

**ಕೆರೆಯಲ್ಲಿಯ ತೀರ್ಥ, ಮನದಲ್ಲಿಯ ಸರ್ವ ಜೀವದಯಾಪರತ್ವ,**
**ಮೈದೆಗೆದಡೆ, ನಿಮ್ಮ ಪಾದಸಾಕ್ಷಿ ಎನ್ನ ಮನ ಸಾಕ್ಷಿ,**
**ನಮ್ಮೀರ್ವರ ಮುಂದೆ ಕೇದಾರ ಗುರುಗಳೆ ಸಾಕ್ಷಿ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಜಲ ಕಾಯವಾಗಿ ನೋಡುವ, ಕೇಳುವ, ಮುಟ್ಟುವ, ಮೂಸಿಸುವ ಕಾಯವನ್ನು ಹೊಂದಿದೆ. ಕಾಯವೆಂಬ ಕೆರೆಯಲ್ಲಿಯ ತೀರ್ಥವಿದು. ಕಾಯದಲ್ಲಿ ಮನಹುಟ್ಟಿ ಸರ್ವಜೀವ ಪರಾತತ್ವ ಮೈದೆಗೆದಿದೆ. ಇದೊಂದು ವಿಚಿತ್ರ ಘಟನೆ. ಕಾಯ ಜೀವವಾಗಿ ಮತ್ತೊಂದು ಕಾಯದ ಮೇಲೆ ಜೀವದಯಾಪರತ್ವವನ್ನು ಹೊಂದಿದೆ ಎಂದರೆ ಇದು ಸುಳ್ಳಲ್ಲ. ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ. ಗುರುದೇವನೆ, ಕೇದಾರೇಶ್ವರನೆ ನಮ್ಮೀರ್ವರ ಸಾಕ್ಷಿ. ಈ ಸತ್ಯ ನನಗೆ ಮತ್ತು ನಿನಗೆ ಮಾತ್ರ ಗೊತ್ತಿದೆ. ಕಪಿಲಸಿದ್ಧಮಲ್ಲಿಕಾರ್ಜುನನ ಸಾಕ್ಷಿಯಾಗಿ.

**1745**

**ನಾ ಮಾಡಿದ ಪೂಜಾಫಲ ಅಂತಿಂತಲ್ಲ**
**ಬಾಣ ಪೂಜಿಸಿದ ಫಲ ಬಾಗಿಲ ಕಾಯ್ದಲ್ಲಿ ಹೋಯಿತ್ತು .**
**ಮಯೂರ ಪೂಜಿಸಿದ ಫಲ ವಿದ್ಯಾದಾನದಲ್ಲಿ ಹೋಯಿತ್ತು .**
**ಹನುಮಂತ ಪೂಜಿಸಿದ ಫಲ ವಜ್ರ ದೇಹದಲ್ಲಿ ಹೋಯಿತ್ತು .**
**ನಾ ಪೂಜಿಸಿದ ಫಲ ಕೊಟ್ಟು ಕೊಟ್ಟು ತೀರದೆ ನಿಂದಿತ್ತು ,**
**ನೋಡಾ ಕಪಿಲಸಿದ್ಧನಲ್ಲಿಕಾರ್ಜುನಾ.**

ಬಾಣ ಪೂಜಿಸಿದ ಫಲ ಬಾಗಿಲು ಕಾಯಿದಾಗಳೆ ಹೋಯಿತ್ತು . ಮಯೂರ ಪೂಜಿಸಿದ ಫಲ ವಿದ್ಯಾದಾನದಲ್ಲಿ ಹೋಯಿತ್ತು . ಹನುಮಂತ ಪೂಜಿಸದ ಫಲ ಆತನ ಕಾಯ ವಜ್ರ ದೇಹವಾದಾಗಲೇ ಹೋಯಿತ್ತು . ನಾ ಪೂಜಿಸಿದ ಫಲ ಅಂತಿಂತಲ್ಲ. ಅದು ಕೊಟ್ಟು ಕೊಟ್ಟು ತೀರದೆ ನಿಂದಿತ್ತು .

ಅವರು ಪೂಜಿಸಿದ ಫಲ ಪೂಜಿಸಿಕೊಂಡಾತ ಪೂಜೆ ಮಾಡಿದವರಿಗೆ ಫಲ ಕೊಟ್ಟಾಗಲೇ ಹೊಯಿತ್ತು . ನಾ ಪೂಜಿಸಿದ ಫಲ ಹಾಗಲ್ಲ. ಅದು ಕೊಟ್ಟು ಕೊಟ್ಟು ತೀರದೆ ನಿಂತಿದೆ.

**1746**

**ಶರಣನ ಪೂಜೆಯದು ಮರಣದ ಕೇಡು ನೋಡಯ್ಯಾ .**
**ಶರಣನ ಪೂಜೆಯದು ಶಿವನ ಕರುಣಾರಸ ನೋಡಯ್ಯಾ .**
**ಶರಣನ ಪೂಜೆಯದು ಕಪಿಲಸಿದ್ಧಮಲ್ಲಿಕಾರ್ಜುನನ ಪೂಜೆ ನೋಡಿರಯ್ಯಾ .**

ಶರಣನ ಪೂಜೆಯು ಲೋಕದ ಜನ ಪೂಜಿಸುವ ಪೂಜೆಯಂತಲ್ಲ. ಅದು ಮರಣದ ಕೇಡು. ಕಾಯವನ್ನು ಆವರಿಸಿದ ಮನದ ಅಜ್ಞಾನದ ಕೇಡು ಶರಣನ ಪೂಜೆಯದು ಸಾಕ್ಷಾತ್ ಶಿವ ತನ್ನ ಕರುಣಾರಸ ಕೋಡಿಯನ್ನೆ ಹರಿಸುವ ಮಹಾಪೂಜೆ ನೋಡಿರಯ್ಯಾ . ಶರಣನ ಪೂಜೆಯದು ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನ ಪೂಜೆ ನೋಡಿರಯ್ಯಾ.

**1747**

**ಅಲ್ಲಮನ ಲಕ್ಷ್ಯ ವೈರಾಗ್ಯದಲ್ಲಿ. ಚೆನ್ನಬಸವಣ್ಣನ ಲಕ್ಷ್ಯ ಕ್ರಿಯಾಜ್ಞಾನದಲ್ಲಿ.**
**ಬಸವಣ್ಣನ ಲಕ್ಷ್ಯ ಭಕ್ತಿಯಲ್ಲಿ. ಮಡಿವಾಳನ ಲಕ್ಷ್ಯ ಸಮತೆಯಲ್ಲಿ.**
**ಶಿವಯೋಗಿ ಸಿದ್ಧರಾಮನೆಂಬ ಬಾಲಕನ ಲಕ್ಷ್ಯ ಲಿಂಗಪೂಜೆಯಲ್ಲಿ.**

ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

ಅಲ್ಲಮಪ್ರಭು ದೇವರ ಲಕ್ಷ್ಯ ವೈರಾಗ್ಯದಲ್ಲಿ. ಚೆನ್ನಬಸವಣ್ಣನ ಲಕ್ಷ್ಯ ಕ್ರಿಯಾಜ್ಞಾನದಲ್ಲಿ. ಬಸವಣ್ಣನ ಲಕ್ಷ್ಯ ಭಕ್ತಿಯಲ್ಲಿ. ಅಹಂಕಾರ ನಾಶಕ್ಕಾಗಿ ಮಡಿವಾಳ ಮಾಚಿದೇವರು ತನ್ನ ಲಕ್ಷ್ಯದಲ್ಲಿ ಇರಿಸಿದರು. ಸಕಳೇಶರು ಸಮತೆಯ ಲಭ್ಯತೆಗಾಗಿ ತಮ್ಮ ಲಕ್ಷ್ಯವನ್ನು ಇರಿಸಿದರು. ಸಿದ್ಧರಾಮಶಿವಯೋಗಿಗಳು ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಕ್ಕಾಗಿ ತಮ್ಮ ಲಕ್ಷ್ಯವನ್ನು ಇರಿಸಿದರು. ಕೆಲಸ ಬೇರೆಯಾದರೂ ಆಯಾ ಶರಣರ ಕಾಯಕ ಒಂದೇ ಆಗಿದೆ.

**1748**

**ಅವರವರ ಲಕ್ಷ್ಯ ಭಿನ್ನವಾದಲ್ಲಿ ಫಲವೇನಯ್ಯಾ ?**
**ತ್ರಿಷು ಲೋಕೇಶು ದೇವೇಶಿ ವೈರಾಗ್ಯಂ ಪುಜ್ಯಮೇವ**
**ತದ್ವೈರಾಗ್ಯಂ ಪ್ರೋಕ್ತಂ ಹಿ ಲಿಂಗ ಪೂಜಾ ಚ ಪಾವನೀ**
**ಜ್ಞಾನಲಿಂಗ ಮಿತಿ ಪ್ರೋಕ್ತಂ ಕ್ರಿಯಾಯಾ ವಿಧಿರುಚ್ಯತೇ**
**ದ್ವಯೋಃ ಸಂಯೋಗಮಾಪ್ನೋತಿ ಲಿಂಗಪೂಜಾ ಪ್ರಕೀರ್ತತಾ.**
**ಅನೇಕ ಜನ್ಮನಃ ಪುಣ್ಯಾರ್ವಸ್ಮಿನ್ ಭಕ್ತಿರಚ್ಯತೇ.**
**ಸಾ ಭಕ್ತಿಃ ಪ್ರಥಮಾ ಪೂಜಾ ಲಿಂಗಾರ್ಚನಮಥ್ಯೋಚ್ಯತೆ.**
**ಯೋ ರುಗ್ಣತ್ಯರಿಷಡ್ವರ್ಗಂ ಸ ಏವ ಲಿಂಗಸಂಭ್ರಮಃ.**
**ಸಮಭಾವ ವಸ್ತು ಪೂಜಾ ಯಾ ವದಂತಿ ಮಮ ಕಿಂಕರಾಃ**
**ಲಿಂಗಾರ್ಚನಂ ತು ದೇವೇಶಿ ತ್ವಂ ಕರೋಷಿ ದಿನೇ ದಿನೇ**
**ಎಂಬುದದು ಸುಪ್ರಭೇದ ಪುಸಿಯೇನಯ್ಯಾ .**
**ಕಪಿಲಸಿದ್ಧಮಲ್ಲಿಕಾರ್ಜುನಾ?**

ಈ ವಚನಕ್ಕೆ ಅನುಭಾವ ಮಾಡಲಾಗಿಲ್ಲ.

**1749**

**ಲಿಂಗಲೀಲೆ ಹೇಳುವಡೆನಗಸಾಧ್ಯ ನೋಡಾ, ಅಯ್ಯಾ .**
**ಭಕ್ತನ ಹಸ್ತದಲ್ಲಿ ಜಂಗಮವಾಗಿ ನೆಲೆಸಿದನಯ್ಯಾ ಲಿಂಗಮೂರ್ತಿ.**
**ಜಂಗಮದ ಹಸ್ತದಲ್ಲಿ ಭಕ್ತನಾಗಿ ನೆಲೆಸಿದನಯ್ಯಾ ಲಿಂಗಮೂರ್ತಿ.**
**ಜಂಗಮ ಪೂಜಿಸಿದ ಫಲ ಸಂಪದಾದಿ ಮೋಕ್ಷ ಕೊಟ್ಟಿತ್ತು ಭಕ್ತಂಗೆ,**
**ಭಕ್ತ ಪೂಜಿಸಿದ ಫಲ ಜ್ಞಾನಸಂಪದಾದಿ ವೈರಾಗ್ಯ ಕೊಟ್ಟಿತ್ತು ಜಂಗಮಂಗೆ.**
**ಇಂತಪ್ಪ ಲಿಂಗಮೂರ್ತಿ ನೋಡಿ ನೋಡಿ,**
**ರೋಮಂಗಳೆಲ್ಲ ನಯನಂಗಳಾದವು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಲಿಂಗಲೀಲೆ ಹೇಳುವುದು ಸಾಧ್ಯವಾಗದ ಮಾತು. ಭಕ್ತನ ಅಂಗದಲ್ಲಿ ಜಂಗಮವಾಗಿ ನೆಲೆಸಿದನು ಲಿಂಗಮೂರ್ತಿ. ಜಂಗಮದ ಹಸ್ತದಲ್ಲಿ ಭಕ್ತನಾಗಿ ನೆಲೆಸಿದನು ಲಿಂಗಮೂರ್ತಿ.

ಅಂಗದಲ್ಲಿಯೇ ಸಂಗಮವಾದ ಜಂಗಮ ಅಲ್ಲಿಯೇ ನೆಲೆಸಿದ ಲಿಂಗಯ್ಯನನ್ನು ಪೂಜಿಸಿದ ಫಲ ಮತ್ತು ಸಂಪದಾದಿ ಮೋಕ್ಷ ಭಕ್ತನಿಗೆ ದೊರಕಿತು. ಭಕ್ತ ಪೂಜಿಸಿದ ಫಲ ಜ್ಞಾನಸಂಪದಾದಿ ವೈರಾಗ್ಯವು ಜಂಗಮನಿಗೆ ದೊರೆಯಿತು. ಜ್ಞಾನಿಗಳಿಗೆ ಮಾತ್ರ ಒಬ್ಬರೆ ಆಗಿ ತೋರುವರು. ಇಂತಪ್ಪ ಲಿಂಗಮೂರ್ತಿಯ ನೋಡಿ ನೋಡಿ ರೋಮಂಗಳೆಲ್ಲ ನಯನಗಳಾದವು.

**1750**

**ಚರಿಸಿ ಜಂಗಮವೆನಿಸಿತ್ತಯ್ಯಾ ಲಿಂಗವು. ನೆಲಸಿ ಲಿಂಗವೆನಿಸಿತ್ತಯ್ಯಾ ಲಿಂಗವು.**
**ಇದರರಿವ ಅರುಹಿನಲ್ಲಿ ಗುರುವೆನಿಸಿತ್ತಯ್ಯಾ ಲಿಂಗವು.**
**ಗುರು-ಲಿಂಗ-ಜಂಗಮಕ್ಕೆ ತಿಲಾಂಶ ಭೇದವಿಲ್ಲ ನೋಡಾ, ಎಲೆ ದೇವಾ**
**ಭೇದಿಸಿದವನಿಗೆ ಭವಭಾಧೆ ತಪ್ಪುವದೆ? ದೇವರ ದೇವ ಕಪಿಲಸಿದ್ಧಮಲ್ಲಿಕಾರ್ಜುನದೇವಾ?**

ಚರಿಸಿ ಜಂಗಮವೆನಿಸಿತ್ತು ಲಿಂಗವು. ನೆಲೆಸಿ ಲಿಂಗವೆನಿಸಿತ್ತು ಲಿಂಗವು. ಜಂಗಮ ಮತ್ತು ಲಿಂಗದ ಇರುವು ಅರಿಯ ಹೋದಲ್ಲಿ ಆ ಲಿಂಗವೇ ಗುರುವೆನಿಸಿತ್ತು .

ಗುರು, ಲಿಂಗ, ಜಂಗಮಕ್ಕೆ ಎಳ್ಳಷ್ಟು ಭೇದವಿಲ್ಲ. ಗುರು ಬೇರೆ ಲಿಂಗ ಬೇರೆ ಜಂಗಮ ಬೇರೆ ಎಂದು ಭೇದ ಮಾಡಿ ನೋಡುವವನಿಗೆ ಜನನ ಮರಣಗಳ ಭಾದೆ ತಪ್ಪುವುದಿಲ್ಲ. ಕಪಿಲಸಿದ್ಧಮಲ್ಲಿಕಾರ್ಜುನನು ಸಾಕ್ಷಿಯಾಗಿ.

**1751**

**ಗೃಹಸ್ಯರತ್ನ ಪ್ರಾಯಸ್ತು ಬಾಲಕೋ ಹಿ ವರಾನನೆ, ಎಂಬಾಗಮವಾಕ್ಯವಂತಿರಲಿ.**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನೆ ಶರಣರ ಮಹಾಮಂದಿರಕ್ಕೆ,**
**ಲಿಂಗಪೂಜೆಯ ರತ್ನಪ್ರಾಯ ನೋಡಾ, ಹಾವಿನಹಾಳ ಕಲ್ಲಯ್ಯಾ .**

ಸಿದ್ಧರಾಮ ಶಿವಯೋಗಿಗಳು ಹಾವಿನಾಳ ಕಲ್ಲಯ್ಯ ಶರಣರಿಗೆ ಲಿಂಗಪೂಜೆಯೆ ರತ್ನಪ್ರಾಯ ನೋಡಾ ಎಂದು ಲಿಂಗಪೂಜೆಯ ಮಹತ್ವವನ್ನು ತಿಳಿ ಹೇಳಿದ್ದಾರೆ.

ಲಿಂಗಪೂಜೆ ಎಂದರೆ ಅಂಗದ ಮೇಲೆ ಕಟ್ಟಿಕೊಂಡ ಲಿಂಗವನ್ನು ಮೂರು ವೇಳೆ ಪೂಜಿಸುವುದು ಅಲ್ಲ. ಈ ಲಿಂಗ ಅಂಗಕ್ಕೆ ಯಾವ ಸಂದೇಶವನ್ನು ಕೊಡದು. ಪೂಜಿಸಿ ಪೂಜಿಸಿ ಅಂಗದ ಆಯುಷ್ಯ ಮುಗಿಯುತ್ತದೆ ಹೊರತು ಲಿಂಗ ಅಂಗಕ್ಕೆ ಏನನ್ನು ಹೇಳುವುದಿಲ್ಲ. ಕಾಯದಲ್ಲಿ ಸಂಗಮವಾದ ಅರಿವಿನ ಲಿಂಗಯ್ಯನ ಪೂಜೆಯೆ ರತ್ನ ಪ್ರಾಯ.

**1752**

**'ಏಕಜನ್ಮನ್ಯೇವ ವಿದ್ಯಾಪ್ರಾಪ್ತಿರ್ಭವಿಷ್ಯತಿ' ಎಂಬ ವಾಕ್ಯವದು ಪುಸಿಯೇನಯ್ಯಾ .**
**ಶಾಸ್ತ್ರವನೋದಿ ಓದಿ ಪಿಶಾಚಿಯಾಗನೆ ಅಂದು ಕಾಶಿಯಲ್ಲಿ ಹರಿದತ್ತನು?**
**ವಾದಿಸಿದಲ್ಲಿ ಫಲವೇನಯ್ಯಾ , ವಾದಿಸಬೇಡ.**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನಲಿಂಗವ ಪೂಜಿಸದೆ ವ್ಯರ್ಥದಿನಗಳೆಯಬೇಡ.**

ಶಾಸ್ತ್ರವನೋದಿ ಶಾಸ್ತ್ರದ ಮಾತುಗಳನ್ನು ಆಡುತ್ತಾನೆ ಹೊರತು ಶಾಸ್ತ್ರಿ ತನ್ನ ತನುವಿನಲ್ಲಿಯೇ

ತನ್ಮಯವಾದ ಅರಿವೆಂಬ ಗುರುದೇವನ ಸುದ್ದಿಯನ್ನು ಮಾತನಾಡಲು ಸಾಧ್ಯವೇ ಇಲ್ಲ.

ಶಾಸ್ತ್ರವನ್ನು ಓದಿ ಓದಿ ಮಹಾಜ್ಞಾನಿಯೆಂದು ಕರೆಯಿಸಿಕೊಳ್ಳದೆ ಪಿಶಾಚಿಯೆಂದು ಅಂದು ಕಾಶಿಯಲ್ಲಿ ಕರೆಯಿಸಿಕೊಂಡನು ಹರಿದತ್ತನು.

ಇದೇ ಜನ್ಮದಲ್ಲಿ ಅಂಗದಲ್ಲಿಯೇ ಸಂಗವುವಾದ ಗುರುದೇವನನ್ನು ಪ್ರಾಪ್ತಿ ಮಾಡಿಕೊಳ್ಳಬೇಕು. ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವ ಪೂಜಿಸದೆ ವ್ಯರ್ಥದಿನ ಕಳೆಯಬೇಡ ಎಲೆ ಮನವೆ ನಿನಗೆ ಮುಂದೆ ಒಂದು ಜನ್ಮ ಇದೆ ಎಂದು ನಂಬಬೇಡ ಈ ಜನ್ಮದಲ್ಲಿಯೇ ಗುರುವಿನ ದರ್ಶನ ಪಡೆದು ಧನ್ಯನಾಗಿ ಹುರಿದ ಬೀಜದಂತಾಗು.

**1753**

**ಆಗುವ ಭೋಗಂಗಳಿಗೆ ಮೈಗೊಟ್ಟದು ಎಂದಡೆ,**
**ಮೈಗೊಡದು ನೋಡಾ, ಲಿಂಗಾರ್ಚನಾಫಲ. ಆಗಬಾರದ ಕಾರ್ಯ ಮಾಡೆನೆಂದರೆ,**
**ಮೈಗೊಡುವುದು ನೋಡಾ, ಲಿಂಗಾರ್ಚನಾಫಲ. ದೃಢವಿರಬೇಕು ಲಿಂಗಾರ್ಚನೆಯಲ್ಲಿ.**
**ದೃಢವಿಲ್ಲದವನ ಹೆಡಗುಡಿಯ ಕಟ್ಟಿ ಎಡಹಿಬಿಡುವ ಭವದಡಿಗೆ?**
**ಎಮ್ಮ ಮೃಢಮೂರ್ತಿ ಕಪಿಲಸಿದ್ಧಮಲ್ಲಿಕಾರ್ಜುನಲಿಂಗವು.**

ಮನಸ್ಸು ಕಾಯದಲ್ಲಿಯೇ ಸಂಗಮವಾದ ಗುರುದೇವನನ್ನು ಅರ್ಚಿಸಿ ಪೂಜಿಸಿದ ಫಲ ಆಗುವ ಭೋಗಂಗಳಿಗೆ ಮೈಗೊಡದು. ಆಗಬಾರದ ಕಾರ್ಯ ಮಾಡಿದೆನೆಂದಡೆ ಮೈಗೊಡುವುದು ಲಿಂಗಾರ್ಚನಾಫಲ. ಭಕ್ತನಾದವನು ಲಿಂಗಾರ್ಚನೆ ಮಾಡುವಲ್ಲಿ ದೃಢವಿರಬೇಕು. ದೃಢವಿಲ್ಲದವನ ಹೆಡಗುಡಿಯ ಕಟ್ಟಿ ಎಡಹಿಬಿಡುವ ಪುನಃ ಜನನ ಮರಣದೆಡೆಗೆ ಕಪಿಲಸಿದ್ಧಮಲ್ಲಯ್ಯ .

**1754**

**ಪೂಜಾಫಲದಿಂದ ಅರ್ಜುನ ಬಾಣಂಗಳೆಲ್ಲ ಅರಳ್ಗಳಾದವಯ್ಯಾ ನಿನ್ನಂಗಕ್ಕೆ.**
**ಪೂಜಾಫಲದಿಂದ ಕನ್ನಯ್ಯನ ಮಾಂಸವೆಲ್ಲ,**
**ಪರಮ ಷಡ್ರುಚಿಯಾಯಿತ್ತಯ್ಯಾ , ನಿನ್ನ ರಸನೆಗೆ**
**ಪೂಜಾಫಲದಿಂದ ಚೋಳಿಯ ರತಿ**
**ಪರಮಲೀಲಾನಂದವಾಯಿತ್ತಯ್ಯಾ ದೃಷ್ಟಿಗೆ.**
**ಪೂಜಾಫಲದಿಂದ ಅಮ್ಮನವರ ಅಶಬ್ದಗಳೆಲ್ಲ**
**ಸಾಮಗಾನವ ತಿರಸ್ಕರಿಸುವುದಯ್ಯಾ ನಿನ್ನ ಶ್ರೋತ್ರಕ್ಕೆ**
**ಪೂಜಾಫಲದಿಂದದು ಚಂದ್ರಚೂಡಿಯ ಕೈಯ ಮದುಗಿಣಿಯ ಪುಷ್ಪ,**
**ಗಂಧಮಯವಾಗಿ ಮಸ್ತಕಕ್ಕಲಂಕಾರವಾಯಿತ್ತಯ್ಯಾ .**
**ಪೂಜಾಫಲ ಅಂತಿಂತಲ್ಲ ಸ್ವಾಧೀನವಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಪೂಜೆ ಮಾಡುವುದು ತಿಳಿಯಬೇಕು. ಭೌತಿಕ ಪೂಜೆಯಲ್ಲಿ ಅಂತರಂಗದ ಅರಿವಿನ ಪೂಜೆಯ ಫಲದಿಂದಾಗಿ ಅರ್ಜುನನ ಬಾಣಗಳು ಅರಳಿದ ಹೂಗಳಾಗಿ ಅಂಗಕ್ಕೆ ಬಡಿದವು. ಪೂಜಾಫಲದಿಂದಾಗಿ ಕನ್ನಯ್ಯನ ನೈವೇದ್ಯಕ್ಕೆಂದು ಇಟ್ಟ ಮಾಂಸ ಪರಮ ಷಡ್ರುಚಿಯಾಯಿತ್ತು ನಿನ್ನ

ರಸನೆಗೆ. ಪೂಜಾಫಲದಿಂದಾಗಿ ಚೋಳಿಯ ರತಿ ಪರಮಲೀಲಾನಂದವಾಯಿತ್ತಯ್ಯಾ ನಿನ್ನ ದೃಷ್ಟಿಗೆ. ಪೂಜಾಫಲದಿಂದಾಗಿ ಅಮ್ಮನವರ ಅಪಶಬ್ದಗಳೆಲ್ಲ ನಿಃಶ್ಯಬ್ದವಾಗಿ ಅರಿವಿನ ಹೂವಾಗಿ ಸ್ವೀಕರಿಸಿದವಯ್ಯಾ ನಿನ್ನ ಕಿವಿ.

ಪೂಜಾಫಲದಿಂದಾಗಿ ಚಂದ್ರಚೂಡಿಯ ಮದುಗಿಣಿಯ ಪುಷ್ಪ ಸುಗಂಧಮಯವಾಗಿ ನಿನ್ನ ಮಸ್ತಕಕ್ಕೆ ಅಲಂಕಾರವಾಯಿತ್ತು . ಪೂಜಾಫಲ ಅಂತಿಂತಲ್ಲ, ಪೂಜಾಫಲ ಸ್ವಾಧೀನವಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1755**

**ಅಗ್ನಿಯ ಸೋಂಕಿದಲ್ಲಿ ಕನಕದ ಕಲಂಕ ಹೋಯಿತ್ತು .**
**ಜಲವ ಸೋಂಕಿದಲ್ಲಿ ದೇಹದ ಕಲಂಕ ಹೋಯಿತ್ತು .**
**ಭಾಗೀರಥಿಯ ಸೋಂಕಿದ ದೋಷ ದಗ್ಧವಾಗಿ ಹೋಯಿತ್ತು.**
**ನಮ್ಮ ಮಲ್ಲಿಕಾರ್ಜುನನೆಂಬ ಲಿಂಗವ ಸೋಂಕಿದಲ್ಲಿ**
**ಪ್ರಾರಬ್ಧತ್ರಯ ನಿವಾರಣವಾಗಿ ಹೋಯಿತ್ತು ಕಂಡೆಯಾ ಬಾಚರಸಯ್ಯಾ .**

ಕಾಯದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯ ಎಂಬ ಲಿಂಗವ ಸೋಂಕಿದಲ್ಲಿ ಪ್ರಾರಬ್ಧತ್ರಯಗಳ ನಿವಾರಣವಾಗಿಹೋದವು ಎಂದು ಸಿದ್ಧರಾಮಶಿವಯೋಗಿಗಳು ಬಾಚರಸ ಶರಣರಿಗೆ ಅತ್ಯಂತ ಸುಂದರವಾದ ಸೂತ್ರವನ್ನು ಹೇಳಿದ್ದಾರೆ.

ಅಗ್ನಿ ಸೋಂಕಿದರೆ ಕನಕದ ಕಲಂಕ ಹೋಗುತ್ತದೆ. ಜಲವ ಸೋಂಕಿದರೆ ದೇಹದ ಕಲ್ಮಶ ಹೋಗುತ್ತದೆ. ಹಾಗೆಯೆ ಕಪಿಲಸಿದ್ಧಮಲ್ಲಯ್ಯನನ್ನು ಸೋಂಕಿದವನ ಸಕಲ ಪ್ರಾರಬ್ಧಗಳೂ ನಿವಾರಣೆಯಾಗುತ್ತವೆ.

**1756**

**ಶ್ವಾನನ ಗುಣ ನೋಡದು ನೋಡಾ ಮದಗಜವು**
**ಕಾನನದ ಗುಣ ನೋಡದು ನೋಡಾ ಮಹದಗ್ನಿಯು**
**ಕಾವಳದ ಗುಣ ನೋಡದು ನೋಡಾ ಮಹತ್ಪ್ರಕಾಶವು.**
**ಜನನದ ಗುಣ ನೋಡದು ನೋಡಾ ಶಿವಾನುಭಾವಜ್ಞಾನವು.**
**ಎನ್ನ ಗುಣ ನೋಡದು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನನ ಪೂಜಿಸಿದ ಫಲವು.**

ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಯ್ಯ ಜನನದ ಗುಣವನ್ನು ನೋಡದೆ ಕಾಯವನ್ನು ಆವರಿಸಿದ ಮನಕ್ಕೆ ಮತ್ತು ಕಾಯಕ್ಕೆ ದರುಶನ ನೀಡಿ ನಿರ್ಗುಣಿಯನ್ನಾಗಿಸಿದ.

ಶ್ವಾನದ ಗುಣ ಮದಗಜವು ಹೇಗೆ ನೋಡುವುದಿಲ್ಲವೋ ಹಾಗೆಯೆ ಕೆನ್ನಾಲಿಗೆಯ ಚಾಚಿ ಉರಿಯುವ ಅಗ್ನಿಯು ಕಾನನ ಗುಣವನ್ನು ನೋಡದು. ಬೆಳಗುವ ಪ್ರಕಾಶವು ಕತ್ತಲೆಯ ಗುಣ ನೋಡದು ಹಾಗೆಯೆ ಕಾನನದ ಕತ್ತಲೆಯನು ಕಪಿಲಸಿದ್ಧಮಲ್ಲಯ್ಯನು ಬೆಳಗಿ ತನ್ನಂತೆ ಮಾಡಿಕೊಂಡನು.

1757

**ಅಂಗೈಯಲ್ಲಿ ಪೂಜಿಸಿದ ಫಲ ಲಿಂಗಯ್ಯ ಕೊಡನೆಂದು ಮರುಗದಿರಾ ಮನವೆ.**
**ಅಂಗೈಯಲ್ಲಿ ಫಲ ಅಂಗ ಲಿಂಗ ನೋಡಿದಂತೆ ನೋಡಾ ಮನವೆ.**
**ಅಂಗೈಯ ಫಲ ಲಿಂಗಯ್ಯನಾಗದಿರೆ ಪೂಜಿಸುವರೆ ಪ್ರಮಥರು ನೋಡಾ ಮನವೆ.**
**ಕಪಿಲಸಿದ್ಧಮಲ್ಲಿಕಾರ್ಜುನನ ಪೂಜಿಸಿ ಬದುಕು ಮನವೆ.**

ಅಂಗದ ಐದು ಭಾಗಗಳಾದ ಕಣ್ಣು,ಕಿವಿ.ಮೂಗು, ನಾಲಿಗೆ, ಚರ್ಮ ಇವುಗಳಲ್ಲಿ ಅರಿವು ಎನ್ನುವ ಲಿಂಗ ಸಂಗಮವಾಗಿದೆ. ಇವೆಲ್ಲವುಗಳಿಗೆ ಮನ ಆವರಿಸಿರುವುದರಿಂದ ಅಂಗ ಮನದ ದುರ್ಬಳಕೆಗೆ ಬಲಿಯಾಗಿ ಅಜ್ಞಾನಿ ಎಂದು ಕರೆಯಿಸಿಕೊಂಡಿದೆ.

ಅಂಗದ ಜ್ಞನೇಂದ್ರಿಯಗಳಾದ ಐದು ಭಾಗಗಳಲ್ಲಿ ಲಿಂಗಯ್ಯನಿರುವುದರಿಂದ ಪ್ರಮಥರು ಅಂಗವನ್ನು ಅಂಗೈ ಎಂದು ಕರೆದಿದ್ದಾರೆ. ಇಂತಹ ಅಂಗೈಯಲ್ಲಿ ಸಂಗಮವಾದ ಲಿಂಗಯ್ಯನನ್ನು ಆರಾಧಿಸಿದ ಮನ ಘನಮನವಾಗುವುದು.

ಎಲೆ ಮನವೆ ಸರ್ವಾಂಗವನ್ನು ಲಿಂಗ ಎಂದು ಪೂಜಿಸಿ ಲಿಂಗದಂತೆಯೇ ನೋಡು ಮನವೆ. ಅಂಗೈಯಲ್ಲಿರುವ ಲಿಂಗಯ್ಯನನ್ನು ಪೂಜಿಸಿದವರು ಪ್ರಮಥರೆಂದು ಕರೆಯಿಸಿಕೊಂಡರು ನೋಡಾ ಮನವೆ ಕಪಿಲಿಸಿದ್ಧಮಲ್ಲಿಕಾರ್ಜುನನ್ನು ಪೂಜಿಸಿ ಬದುಕು ಮನವೆ.

1758

**ಆರಾಧನೆಯ ಮಾಡಿ ಫಲವೇನಯ್ಯಾ ಸಂತೃಪ್ತಿವಡೆಯದನ್ನಕ್ಕ?**
**ಮದುವೆಯಾಗಿ ಫಲವೇನಯ್ಯಾ , ಮೋಹವ ವಿಘ್ನಂಗಳಾಗದನ್ನಕ್ಕ?**
**ಭಕ್ತನಾಗಿ ಫಲವೇನಯ್ಯಾ , ಲಿಂಗಪೂಜೆ ಮಾಡದನ್ನಕ್ಕ?**
**ಲಿಂಗವ ಪೂಜಿಸಿ ಫಲವೇನಯ್ಯಾ , ಮೋಕ್ಷವ ಹಡೆಯದನ್ನಕ್ಕ?**
**ಮೋಕ್ಷವಾದ ಫಲವೇನಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನನೆಂಬ**
**ನಾಮಧೇಯವಳಿಯದನ್ನಕ್ಕ, ಕೇದಾರ ಗುರುವೆ.**

ಲೋಕದ ಭಕ್ತ ಭಕ್ತನಲ್ಲ. ಏಕೆಂದರೆ ಕಟೆದ ಕಲ್ಲನ್ನೇ ದೇವರೆಂದು ತಿಳಿದು ಆರಾಧಿಸಿ ಭಕ್ತನೆಂದು ಕರೆಯಿಸಿಕೊಳ್ಳುತ್ತಾನೆ. ಈತನಿಗೆ ದೇಹದಲ್ಲಿಯೇ ಸಂಗಮವಾದ ಅರಿವಿನ ದೇವರ ಪರಿಚಯ ಇರುವುದಿಲ್ಲ. ಇಂತಹ ಭಕ್ತ ಅಂಗದ ಮೇಲೆ ಲಿಂಗಧರಿಸಿಕೊಂಡು ಪೂಜಿಸಿದರೆ ಫಲವೇನು? ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಅರಿಯದಿದ್ದಡೆ.

ಇಂತಹ ಭಕ್ತ ಅಂಗದ ಮೇಲೆ ಕಟ್ಟಿಕೊಂಡ ಲಿಂಗವನ್ನು ಪೂಜಿಸಿದರೂ ಅಂಗದ ಹೆಸರು ನಿರ್ನಾಮವಾಗುವುದಿಲ್ಲ. ಲಿಂಗಯ್ಯನಿಗೆ ಹೆಸರಿಲ್ಲ. ಹೆಸರಿಲ್ಲದವನನ್ನು ಆರಾಧಿಸಿದರೆ ಹೆಸರು ಕಳೆದುಕೊಳ್ಳಲು ಸಾಧ್ಯವಾಗುವುದು. ಮೋಕ್ಷದ ಫಲವು ಸಿಗುವುದು ಎಂದು ಸಿದ್ಧರಾಮಶಿವಯೋಗಿಗಳು ಕೇದಾರ ಗುರುಗಳಿಗೆ ಹೇಳಿದ್ದಾರೆ.

1759

**ಇಲ್ಲಿರುವ ಕೋಟೆಂಗಳೆಲ್ಲ ಅಲ್ಲಿಹ ರುದ್ರಗಣಂಳ ಮಂದಿರವಯ್ಯಾ .**

**ಇಲ್ಲಿರುವ ಗುಡ್ಡರೆಲ್ಲ ಅಲ್ಲಿಹ ಮಹಾಗುಣಂಗಳಯ್ಯಾ .**
**ಇಲ್ಲಿರುವ ಭಾಮಿನಿಯರೆಲ್ಲ ಅಲ್ಲಿಹ ರುದ್ರಕನ್ನಿಕೆರಯ್ಯಾ .**
**ಇಲ್ಲಿರುವ ತಟಾಕೆಂಗಳೆಲ್ಲ ಅಲ್ಲಿಹ ದೇವಗಂಗೆಯಯ್ಯಾ .**
**ಇಲ್ಲಿರುವ ಕಪಿಲಸಿದ್ಧಮಲ್ಲಿಕಾರ್ಜುನ**
**ಅಲ್ಲಿಹ ಪಂಚಮುಖ, ಶತಮುಖ, ಸಹಸ್ರಮುಖ, ಅನಂತಮುಖ,**
**ಪಾರ್ವತಿಪ್ರಿಯ ಮಹಾದೇವಾ ನೋಡಾ,**
**ಕೇದಾರ ಗುರುದೇವಾ.**

ಸ್ವರ್ಗ ಲೋಕ ಮರ್ತ್ಯ ಲೋಕವೆಂಬುದು ಬೇರೆಯಲ್ಲ. ಇಹ ಲೋಕದಲ್ಲಿರುವ ಕೋಟೆಗಳು ಪರ ಲೋಕದ ರುದ್ರಗಣಂಗಳ ಮಂದಿರ. ಇಹ ಲೋಕದಲ್ಲಿರುವ ಗುಡ್ಡರೆಲ್ಲ ಪರಲೋಕದ ಮಹಾಗಣಂಗಳು. ಇಹ ಲೋಕದಲ್ಲಿರುವ ಭಾಮಿನಿಯರು ಪರಲೋಕದಲ್ಲಿಯ ರುದ್ರಕನ್ನಿಕೆಯರು. ಇಹ ಲೋಕದಲ್ಲಿಯ ಜಲವೆ ಪರಲೋಕದಲ್ಲಿಯ ದೇವಗಂಗೆ. ಇಹ ಲೋಕದ ಕಪಿಲಸಿದ್ಧಮಲ್ಲಿಕಾರ್ಜುನ ಪರಲೋಕದಲ್ಲಿಯ ಪಂಚಮುಖ, ಶತಮುಖ, ಸಹಸ್ರಮುಖ, ಅನಂತಮುಖದ ಪಾರ್ವತಿಪ್ರಿಯ ಮಹಾದೇವನು ನೋಡಾ ಎಂದು ಸಿದ್ಧರಾಮಶಿವಯೋಗಿಗಳು ಕೇದಾರ ಗುರುದೇವನಿಗೆ ಹೇಳಿದ್ದಾರೆ.

**1760**

**ಇಂದ್ರ ನೋಡುವಡೆ ಭಗದೇಹಿ. ಚಂದ್ರ ನೋಡುವಡೆ ಗುರುಪತ್ನೀಗಮನಿ.**
**ಉಪೇಂದ್ರ ನೋಡುವಡೆ ಬಾರದ ಭವದಲ್ಲಿ ಬಂದ ಅವತಾರಿ.**
**ಬ್ರಹ್ಮ ನೊಡುವಡೆ ಸ್ವಪುತ್ರೀಪತಿ. ಮಿನಿಗಣ ನೋಡುವಡೆ ಕುಲಹೀನರು.**
**ಗಣಪತಿ ನೋಡುವಡೆ ಗಜಾನನ.**
**ವೀರಭದ್ರ  ನೋಡುವಡೆ ಮಹತ್ಪ್ರಳಯಾಗ್ನಿ ಸಮಕ್ರೋಧಿ.**
**ಷಣ್ಮುಖ ನೋಡುವಡೆ ತಾರಕಧ್ವಂಸಿ. ಇವರೆಲ್ಲರು ಎಮ್ಮ ಪೂಜೆಗೆ ಬಾರರು.**
**ನೀ ನೋಡುವಡೆ ಸ್ಮಶಾನವಾಸಿ, ರುಂಡ ಮಾಲಾದ್ಯಲಂಕಾರ.**
**ನಿನ್ನ ವಾಹನ ಚಿದಂಗ ಆದಿವೃಷಭ. ನಿರೂಪಿಸಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಇಂದ್ರ ಭಗದೇಹಿ, ಚಂದ್ರ ಗುರಪತ್ನೀಗಮನಿ, ಉಪೇಂದ್ರ ಬಾರದ ಭವದಲ್ಲಿ ಬಂದ ಅವತಾರಿ, ಬ್ರಹ್ಮ ಮಗಳನ್ನೇ ಸತಿಯಾನ್ನಾಗಿ ಸ್ವೀಕರಿಸಿದಾತ ಮುನಿ ಗಣಂಗಳೆಲ್ಲ ಕುಲಹೀನರು. ಗಣಪತಿ ಆನೆ ಮುಖದವನು, ವೀರಭದ್ರ ಮಹಾಪ್ರಳಯಾಗ್ನಿ ಕ್ರೋಧಿ, ಷಣ್ಮುಖ ತಾರಕಧ್ವಂಸಿ, ಆರುಮುಖ ಹೊಂದಿದವನು. ಇವರೆಲ್ಲರು ಶರಣರು ಮಾಡುವ ಪೂಜೆಗೆ ಬಾರರು. ಶಿವ ಸ್ಮಶಾನವಾಸಿ ರುಂಡಮಾಲೆಗಳನ್ನು ಅಲಂಕರಿಸಿಕೊಂಡವ. ಆತನ ವಾಹನ ಚಿದಂಗ ಆದಿವೃಷಭ.

ಶಿವ, ಕಾಯದಲ್ಲಿ ಸಂಗಮವಾದವನು. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯ ಅರಿಷಡ್ವರ್ಗಗಳನ್ನು , ಸಪ್ತವ್ಯಸನಗಳನ್ನು , ಅಷ್ಟಮದಗಳನ್ನು ಸೃಷ್ಟಿಮಾಡಿ ಕೈಲಾಸವೇ ಆಗಬೇಕಾದ ಕಾಯವನ್ನು ಸ್ಮಶಾನವನ್ನಾಗಿಸಿದೆ. ಆ ಸ್ಮಶಾನವನ್ನೇ ಶಿವ ನಂದನವವವನ್ನಾಗಿಸಿಕೊಂಡು ಪವಡಿಸಿದ್ದಾನೆ.

ರುಂಡಮಾಲಾಧರನನ್ನು ಕಲಾವಿದ ಬಹುಸುಂದರವಾಗಿ ಚಿತ್ರಿಸಿದ್ದಾನೆ. ಇದು ಸುಂದರವಾದ ಅರಿವಿನ ಚಿತ್ರ. ಕೊರಳಲ್ಲಿ ದೇವತೆಗಳ ರುಂಡ, ಋಷಿಮುನಿಗಳ ರುಂಡ, ರಕ್ಕಸರ ರುಂಡ, ಆದಿಮಾನವರ ರುಂಡವುಳ್ಳ ಮಾಲೆಯನ್ನು ಕಲಾವಿದ ಕೊರಳಲ್ಲಿ ಹಾಕಿ ಚಿತ್ರಬಿಡಿಸಿದ್ದಾನೆ. ಈತನಿಗೆ ರುಂಡಮಾಲಾಧರ ಎಂದು ಹೆಸರು ಕೊಟ್ಟಿದ್ದಾರೆ. ಇದೆಂತಹ ಸುಂದರ ಚಿತ್ರ. ಕಾಯ ಹೊಂದಿದ ಮನ ಇಚ್ಛಿಸಿದರೆ ಸಾಕ್ಷಾತ್ ಶಿವನಾಗಬಹುದು, ಪಶುಪತಿಯಾಗಬಹುದು, ರಕ್ಕಸನಾಗಬಹುದು, ಋಷಿಯಾಗಬಹುದು, ರಾಜನಾಗಬಹುದು, ಕಳ್ಳನಾಗಬಹುದು, ಕೊಲೆಗಡುಕ ಅತ್ಯಾಚಾರಿಯಾಗಬಹುದು, ಬುದ್ಧನಾಗಬಹುದು, ಮಹಾವೀರನಾಗಬಹುದು, ಬಸವಾದಿ ಶರಣನಾಗಬಹುದು, ದಾಸವರಣ್ಯನಾಗಬಹುದು ಇದು ಮನದ ಇಚ್ಛೆ.

**1761**

**ಆಕಾಶದಲ್ಲಿಯ ತಾರೆಗಳು ಕಾಣಬಾರದೆಂಬ,**
**ಯೋಚನೆಯುಳ್ಳಡೆ ಸೂರ್ಯೋದಯಕ್ಕಯ್ಯಾ.**
**ಆಕಾಶದಲ್ಲಿಯ ತಾರೆಗಳು ಕಾಣಬೇಕೆಂಬ,**
**ಯೋಚನೆಯುಳ್ಳಡೆ ಸೂರ್ಯಾಸ್ತಮಾನಕ್ಕಯ್ಯಾ.**
**ಕಾಣಬಾರದು, ಕಾಣಬಾರದು, ಜ್ಞಾನದಲ್ಲಿ ಆನಂದ ಅನಾಸಿಂದವ?**
**ಕಾಣಬಹುದು ಕಾಣಬಹುದು, ಅಜ್ಞಾನದಲ್ಲಿ**
**ಸುಖದುಃಖೋ ಭಯದ್ವಂದ್ವವ ಭೋ ಭೋ ಕಪಿಲಸಿದ್ಧಮಲ್ಲಿಕಾರ್ಜುನಾ ಭೋ.**

ತನಗೆ ಅಜ್ಞಾನದ ಬದುಕು ಇಷ್ಟವೋ ಅರಿವಿನ ಬದುಕು ಇಷ್ಟವೋ? ತನಗೆ ಕತ್ತಲೆ ಇಷ್ಟವೋ ಬೆಳಕು ಇಷ್ಟವೋ ಎಂಬುದನ್ನು ತಾನೆ ನಿರ್ಣಯಿಸಬಹುದು. ಮನ ತನ್ನ ನಿರ್ಣಯದ ಮೂಲಕ ಕಾಯವನ್ನು ಬುದ್ಧನಂತೆ ಮಹಾಜ್ಞಾನ ಕಾಯ ಎಂದು ಕರೆಯಿಸಿಕೊಳ್ಳಬಹುದು ಅಥವಾ ಅಂಗುಲೀಮಾಲನಂತೆ ರಕ್ಕಸ ಕಾಯವೆಂದು ಕರೆಯಿಸಿಕೊಳ್ಳಬಹುದು.

ಕಾಯ ಕೈಲಾಸವೆ ಹೊರತು ಕೈಲಾಸವೆಂಬುದು ಇಲ್ಲವೇ ಇಲ್ಲ. ಕಾಯದಲ್ಲಿ ಶಿವ ಎಂಬ ಅರಿವಿನ ಮಹಾಪುರುಷನಿದ್ದಾನೆ. ಈತನ ಚರಣ ಕಮಲಗಳಿಗೆ ಹಣೆಮಣೆದು ಭಕ್ತನೇ ಆಗಬೇಕಾದ ಮನವೂ ಇದೆ. ಇಂತಹ ಮಹಾಕಾಯದಲ್ಲಿ ಕಾಣಬಾರದು ಕಾಣಬಾರದು ಅಜ್ಞಾನವನು. ಅಜ್ಞಾನದಲ್ಲಿ ಸುಖವೂ ಇದೆ, ದುಃಖವೂ ಕಾಯದಲ್ಲಿಯೇ ಇದೆ. ಜ್ಞಾನದಲ್ಲಿ ಪರಮಾನಂದವಿದೆ. ಪರಮಸುಖವಿದೆ; ಆಯ್ಕೆ ಮನಕ್ಕೆ ಸಂಬಂಧಪಟ್ಟದ್ದು.

**1762**

**ಶಿವಾಂಶಿಕಭಕ್ತನ ಸೊಮ್ಮು ಶಿವಜಂಗಮರಿಗೆ ಸಲ್ಲುವುದಲ್ಲದೆ**
**ಶಿವೆಬಸವೆಯರೆಂಬ ವಾರಾಂಗನೆಯರಿಗೆ, ಸಲ್ಲುವುದೇ ಅಯ್ಯಾ ?**
**ಢಾಂಬಿಕ ಭಕನ್ತ ಸೊಮ್ಮು ಢಾಂಬಿಕಯ್ಯಗಳಿಗೆ ಸಲ್ಲುತ್ತದೆ,**
**ಢಾಂಬವಿರಹಿತರಿಗೆ ಸಲ್ಲುವುದೇ ಅಯ್ಯಾ ?**
**ಎಮ್ಮ ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಷಟ್‌ಸ್ಥಲಬ್ರಹ್ಮಿ**
**ಚೆನ್ನಬಸವ ಜಿಹ್ವಾಶೇಷದ ಸೊಮ್ಮು ಎನಗೆ ಸಲ್ಲುವುದಲ್ಲದೆ,**

**ಜಗದ ಭಂಡಯ್ಯಗಳಿಗೆ ಸಲ್ಲುವುದೇನಯ್ಯಾ ?**

ಭಕ್ತನ ಸಂಪತ್ತು ಶಿವ ಜಂಗಮರಿಗೆ ಸಲ್ಲುವುದು ವಾರಾಂಗನೆಯರಿಗೆ ಸಲ್ಲುವುದಿಲ್ಲ. ಲೋಕದ ಢಾಂಬಿಕ ಭಕ್ತನ ಸಂಪತ್ತು ಢಾಂಬಿಕ ಜಂಗಮಂಗಲ್ಲದೆ ನಿಜ ಜಂಗಮನಿಗೆ ಸಲ್ಲುವುದಿಲ್ಲ.

ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಷಟ್‌ಸ್ಥಲ ಬ್ರಹ್ಮ ಚೆನ್ನಬಸವನ ಜಿಹ್ವೆಯಲ್ಲಿ ಉಳಿದ ಸಂಪತ್ತು ಎನಗೆ ಸಲ್ಲುವುದಲ್ಲದೆ ಲೋಕದ ಜಂಗಮರಿಗೆ ಸಲ್ಲದು. ಏಕೆಂದರೆ ನಾನು ಕಪಿಲಸಿದ್ಧಮಲ್ಲಯ್ಯನ ವಾರಸುದಾರ. ಹೀಗಾಗಿ ಶೇಷಪ್ರಸಾದ ನನಗೆ ಮಾತ್ರ ಸಲ್ಲುವುದು ಎಂದಿದ್ದಾರೆ.

**1763**

**ಭಕ್ತನಾದ ಬಳಿಕ ವಿರಕ್ತಿಯ ನೋಡಿ ಆಚರಿಸುವುದಲ್ಲದೆ,**
**ಭಕ್ತಿ ಲಕ್ಷ್ಯಕ್ಕೆ ಮೈಗೊಡುವುದೆಂತಯ್ಯಾ ?**
**ಭಕ್ತನಾದಡೆ ವಸ್ತ್ರಾನ್ನಕ್ಕೆ ಭಕ್ತನಲ್ಲದೆ, ಸಾಮರಸ್ಯಕ್ಕೆ ಭಕ್ತನೆ ಅಯ್ಯಾ ?**
**''ಭಕ್ತಸಂಪನ್ನಭಕ್ತೋಪಿ ದೃಷ್ಟ್ವಾ ಗುಣಗಣಾನಿವೈ**
**ಸ್ವೀಕಾರಯೇಜ್ಜಂಗಮಸ್ಯ ಪಾದೋದಕ ಮಹರ್ನಿಶಂ''**
**ಎಂಬವಾಕ್ಯವದು ಅಬದ್ಧವೇನಯ್ಯಾ . ಕಪಿಲಿಸಿದ್ಧಮಲ್ಲಿಕಾರ್ಜುನಾ.**

ವಸ್ತ್ರಾನ್ನಗಳಿಗಾಗಿ ಭಕ್ತರಾದವರು ಬಹಳ ಸಿಕ್ಕುತ್ತಾರೆ. ಭಕ್ತನೆಂದಡೆ ವ್ಯಕ್ತಿಯಲ್ಲ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಕಪಿಲಿಸಿದ್ಧ ಮಲ್ಲಿಕಾರ್ಜುನನನ್ನು ಆರಾಧಿಸಿ ಆತನ ಚರಣ ಕಮಲಗಳಿಗೆ ಎರಗಿ ಭಕ್ತನಾಗಬೇಕು. ಈ ಭಕ್ತ ವಸ್ತ್ರಾನ್ನಗಳನ್ನು ಕೇಳುವುದಿಲ್ಲ. ಸದಾ ಗುರುದೇವನ ಪೂಜೆಯಲ್ಲಿಯೇ ನಿರತನಾಗಿರುತ್ತಾನೆ.

**1764**

**ಭಕ್ತೇಷ್ವಸ್ತು ಚರಶ್ಯ ಷ್ಠತೇಭ್ಯಸ್ತು(ಸ್ಯಾತ್)ಪರಾತ್ಪರಂ.**
**ವಸ್ತು ನೋ ಭಾತಿ ದೇವೇಶಿತಂ ತ್ಯಕ್ತ್ವಾ ಚಾಲ್ಲಮಪ್ರಭು**
**ಎಂಬ ಮಕುಟಾಗಮವು ವಾಕ್ಯ ವಿಚಾರಿಸಿದಲ್ಲಿಂದಚ್ಚೊತ್ತಿಹದಯ್ಯ**
**ಎನ್ನ ಮನಕ್ಕೆ ಕಪಿಲಸಿದ್ಧಮಲ್ಲಿಕಾರ್ಜುನಾ.**

ಈ ವಚನಕ್ಕೆ ಅನುಭಾವ ಮಾಡಲಾಗಿಲ್ಲ.

**1765**

**ಭಕ್ತನಾಗಿ ಮಲತ್ರಯಂಗಳೊಳಗಾಗುವುದು ಲೇಸು ಕಂಡೆಯಾ, ಮನವೆ.**
**ಜಂಗಮವಾಗಿ ಮಲತ್ರಯಂಗಳಳಿರುವುದು ದುರ್ಲಭ ಕಂಡೆಯಾ ಮನವೆ.**
**ಭಕ್ತ ಮಹೇಶ ಪ್ರಸಾದಿಸ್ಥಲತ್ರಯಂಗಳ ಮೀರಿ ಪ್ರಾಣಲಿಂಗಸ್ಥಲದಲ್ಲಿ ನಿಂದೆಯಲ್ಲಾಮನವೆ.**
**ಇನ್ನು ಮೈದೆಗೆದು ತಿರಿದುಂಡಡೆ, ಬೆನ್ನ ಬಾರನೆತ್ತುವ ನೋಡಾ ಮನವೆ,**

**ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಭೂಪಾಲನು.**

ಲೋಕದ ಭಕ್ತನಿಗೆ ಮಲತ್ರಯಂಗಳು ತಪ್ಪಿದ್ದಲ್ಲ. ಲೋಕದ ಜಂಗಮ ಕೂಡ ಮಲತ್ರಯಂಗಳನ್ನು ಕಳೆದುಕೊಳ್ಳುವುದು ದುರ್ಲಭ. ಲೋಕದ ಭಕ್ತನು ಮಹೇಶ ಪ್ರಸಾದಿಸ್ಥಲತ್ರಯಂಗಳನ್ನು ಮೀರಿ ನಿಂದು. ಇನ್ನು ತಿರಿದುಂಡಡೆ ಬೆನ್ನ ಬಾರನೆತ್ತುವ ನೋಡಾ ಮನವೆ. ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಭೂಪಾಲನು.

**1766**

**ಒಂದು ಜೋಳಿಗೆಯೊಳಗೆರಡು ಗೋವುಗಳಾಡುತ್ತೈದಾವೆ,ನೋಡಾ**
**ಒಂದು ಗೋವದು ಬಹು ಮೋಹನದು,**
**ಒಂದು ಗೋವದು ಬಹು ಕ್ರೂರ ಸ್ವಭಾವದು,**
**ಒಂದು ಗೋವಿನ ಸಾಧನೆಯದು ಕೀಳಭವಕ್ಕೆ ಲೇಸು,**
**ಒಂದು ಗೋವಿನ ಸಾಧನೆಯದು ಕಪಿಲಸಿದ್ಧಮಲ್ಲಿಕಾರ್ಜುನನ**
**ಮಂದಿರದ ಸಾಧನೆ ಲೇಸು ನೋಡಾ, ಕೇದಾರ ಗುರುದೇವಾ.**

ದೇಹವೊಂದರಲ್ಲಿ ಎರಡು ಕೋಶಗಳಿವೆ. ಒಂದು ಮನವೆಂಬ ಕ್ರೂರ ಸ್ವಭಾವದ ಕೋಶ ಮತ್ತೊಂದು ಅರಿವೆಂಬ ಗುರದೇವನಿದ್ದ ಕೋಶ. ಇದು ಸದಾ ಸಮಾಧಾನದಿಂದಿರುವ ಗೋವಾಗಿದೆ.

ಮನ ಕ್ರೂರ ಕೋಶದಲ್ಲಿದ್ದು ಇಡೀ ತನುವನ್ನು ತನ್ನ ಸ್ವಭಾವಕ್ಕನುಗುಣವಾಗಿ ಬಳಕೆ ಮಾಡುತ್ತದೆ. ಇದಕ್ಕೆ ಸಾಕಾದಾಗ ಅರಿವೆಂಬ ಗುರುದೇವನು ಇದ್ದ ಕೋಶಕ್ಕೆ ಹೋಗಿ ಸದಾ ಸಮಾಧಾನದ ಮಹಾರುಚಿಯನ್ನು ಅನುಭವಿಸಬಹುದಾಗಿದೆ. ಆದರೆ ಮನಕ್ಕೆ ತಾನು ಸೃಷ್ಟಿ ಮಾಡಿದ ಸಕಲ ಅಜ್ಞಾನದ ಸುಖವು ತನಗೆ ಬೇಸರವಾದಾಗ ಗುರುದೇವನ ಕಡೆಗೆ ಹೆಜ್ಜೆ ಹಾಕುತ್ತದೆ.

ಮನ ಸದಾ ಸಮಾಧಾನದ ಅರಿವಿನ ಕೋಶದತ್ತ ಹೆಜ್ಜೆ ಹಾಕಬೇಕಾದರೆ ಸಾಕಷ್ಟು ಕೃಷಿ ಮಾಡಬೇಕಾಗುತ್ತದೆ. ತಾನು ಮಾಡುವ ಕೃಷಿ ಯಾರಿಗೂ ಕಾಣುವುದಿಲ್ಲ. ಅಗೋಚರದ ಕೃಷಿ ತನಗೆ ಮಾತ್ರ ಕಾಣುತ್ತದೆ. ಆಗ ಕಾಯದಲ್ಲಿ ತಾನಿದ್ದು ತನ್ನ ಸುಖಕ್ಕಾಗಿ ತಾನೇ ದುರ್ಬಳಕೆ ಮಾಡಿಕೊಂಡ ಬಗ್ಗೆ ತನಗೆ ತಾನೆ ನಾಚಿಕೆ ಪಡುತ್ತದೆ. ಆಗ ಕಾಯ ಕೈಲಾಸದಂತೆ ಥಳಥಳನೆ ಹೊಳೆಯುತ್ತದೆ ಎಂದು ಸಿದ್ಧರಾಮಶಿವಯೋಗಿಗಳು ಕೇದಾರ ಗುರುದೇವನೊಂದಿಗೆ ಮಾತನಾಡಿದ್ದಾರೆ.

**1767**

**ಶ್ರುತಿಯಲ್ಲಿ ಕೂಗಿಡುವುದು ಪರಾತ್ಪರ ಪಂಚಾಕ್ಷರ ಎಂಬುದಾಲಿಸಯ್ಯಾ .**
**ಎನ್ನ ಮತಿಯಲ್ಲಿ ತೋರುವುದದು ಪರಾತ್ಪರ ಪದಮಾಷ್ಟವರ್ಣಂ**
**'ಓಂ ಚೆನ್ನಬಸವಾಯ ನಮಃ' ಎಂಬುದಾಲಿಸಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ಶ್ರುತಿಯಲ್ಲಿ ಪಂಚಾಕ್ಷರ ಮತಿಯಲ್ಲಿ ತೋರಿ ಪ್ರಸಾದವಾಗದಿದ್ದರೆ ಅದು ಉಪಯೋಗವಿಲ್ಲ. ವೇದ, ಆಗಮ, ಉಪನಿಷತ್ತುಗಳು, ಶ್ರುತಿ ಸ್ಮೃತಿಯಲ್ಲಿರುವ ಸಕಲ ತತ್ವಗಳು ತನುವಿನ ಮೂಲಕ ಹೊರ ಬಂದವುಗಳೇ ಆಗಿವೆ.

ಪುರಾತರು, ಜ್ಞಾನಿಗಳು ಸರ್ವಕಾಯಗಳಿಗೂ ಜ್ಞಾನ ಮಾರ್ಗ ಸುಲಭವಾಗಲೆಂದು ಅನೇಕ ಬರಹಗಳನ್ನು ತಾಳೋಲೆಯಲ್ಲಿ ಅಕ್ಷರಗಳ ಮೂಲಕ ದಾಖಲಿಸಿದ್ದಾರೆ.

ಕಾಯಕ್ಕೆ ತಾಳೋಲೆ ಮುಖ್ಯವಾಗಬಾರದು. ಬೈಬಲ್, ಭಗವದ್ಗೀತೆ ಪುರಾಣಗಳು ಮುಖ್ಯವಾಗಬಾರದು. ಮೇಲ್ಕಂಡ ಈ ಎಲ್ಲಾ ಪುಸ್ತಕಗಳಾದರೂ ಕಾಯದತ್ತ ಕೈಮಾಡಿ ತೋರಿಸುತ್ತವೆ. ಜ್ಞಾನಿಗಳು ಬರೆದ ಬರಹಗಳನ್ನೇ ಕಾಯದ ಮೂಲಕ ಪಠಿಸಿದರೆ ಕಾಯ ತನಗೆ ತಾನೆ ಜ್ಞಾನಿ ಎಂದು ಕರೆಯಿಸಿಕೊಳ್ಳುತ್ತದೆ. ಕಾಯ ಸಾಕ್ಷಾತ್ ಷಡಕ್ಷರ ಮಂತ್ರ . ಇದು ಕಾಯದಲ್ಲಿಯೇ ಸಂಗಮವಾಗಿದೆ. ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ಈ ಮಂತ್ರವನ್ನು ಪಠಿಸದೆ ಈ ಮಂತ್ರವೇ ತಾನು ಹೇಗೆ ಎಂಬುದನ್ನು ಗಮನವಿಟ್ಟು ಆಲಿಸಬೇಕಾಗಿದೆ.

**1768**

**ತಿಳಿಯದೆ ಜಪಿಸಿದ ಮಂತ್ರ ನಿಷ್ಫಲವಾದುದು ನೋಡಾ, ಗುರುವೆ,**
**ಪ್ರಣವಪಲ್ಲವಗಳರಿದು ಜಪಿಸುವುದದು ಸಫಲ ನೋಡಾ, ಗುರುವೆ.**
**ಇದರಂದವ ತೋರಿದ ಎನ್ನ ಗುರು ಚೆನ್ನಬಸವ ನೋಡಾ ಗುರುವೆ.**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಮಹಾಜ್ಞಾನವನ್ನು ಕಾಯದಲ್ಲಿಯೆ ಕಂಡುಕೊಂಡು ಆ ಜ್ಞಾನಿಯೇ ತಾನಾದ ಗುರುದೇವನಿಂದ ಕಾಯದಲ್ಲಿಯೇ ಇರುವ ಅರಿವು ಎನ್ನುವ ಗುರುದೇವನನ್ನು ಕಂಡುಕೊಳ್ಳಲಿಲ್ಲ. ಜ್ಞಾನದ ಸೌಂದರ್ಯವನ್ನು ತೋರಿ ಮರೆಯಾದ ಗರುದೇವನನ್ನು ತೋರದ ವಿನಹ ತಿಳಿಯದೆ ಜಪಿಸಿದ ಪಂಚಾಕ್ಷರ ಮಂತ್ರ ಷಡಕ್ಷರ ಮಂತ್ರವದು ನಿಷ್ಫಲ.

ಇಂತಹ ನಿಷ್ಫಲ ಕಾಯದಲ್ಲಿ ವಿಶ್ವದ ಕಾಯಗಳೆಲ್ಲ ತೊಡಗಿವೆ. ಹೀಗೆ ಮಂತ್ರವನ್ನು ಜಪಿಸಿ ಕಾಯದ ಆಯುಷ್ಯ ಮುಗಿದೇ ಹೋಗುತ್ತದೆ. ಜಪಿಸಿದ ಮಂತ್ರದ ಫಲ ಕಾಯಕ್ಕೆ ದೊರೆಯುವುದಿಲ್ಲ.

**1769**

**ಜಪವೆಂಬುದು ಪಾಪಕ್ಕೆ ಬಹು ತಾಪ ನೋಡಯ್ಯಾ .**
**ಜಪವೆಂಬುದು ಪುಣ್ಯದ ನಾಣ್ಯ ನೋಡಯ್ಯಾ .**
**ಜಪವೆಂಬುದು ಚೆನ್ನಬಸವಣ್ಣನ ಪಾದದಲ್ಲಿಯೇ ಐಕ್ಯ**
**ನೋಡಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ಮಹಾಜ್ಞಾನವನ್ನು ಕುರಿತು ಚರ್ಚೆಯನ್ನು ಸಹ ಮಾಡದ ಕಾಯ ಪಾಪಕ್ಕೆ ಗುರಿಯಾಗಿ ತನಗೆ ತಾನೆ ತಾಪವನ್ನು ಅನುಭವಿಸುತ್ತದೆ.

''ಎಲವೋ ಎಲವೋ ಬ್ರಹ್ಮ ಹತ್ಯವ ಮಾಡಿದವನೇ. ಎಲವೋ ಎಲವೋ ಪಾಪ ಕರ್ಮಂಗಳ ಮಾಡಿದವನೆ ಒಮ್ಮೆ ನೆನೆ ಕೂಡಲಸಂಗಮದೇವನ''ಎಂದು ಬಸವಣ್ಣನವರು ಸಕಲ ಕಾಯಗಳಿಗೆ ಬ್ರಹ್ಮ ಸೂತ್ರವನ್ನು ನೀಡಿದ್ದಾರೆ.

ಕಾಯದಲ್ಲಿಯೇ ಸಂಗಮವಾದ ಬ್ರಹ್ಮನನ್ನು ಕಾಯವನ್ನು ಆವರಿಸಿದ ಮನ ನೆನೆಯದಿದ್ದರೆ

ಆ ಬ್ರಹ್ಮನ ಸಮೀಪ ಹೋಗದಿದ್ದರೆ ಮನ ಬ್ರಹ್ಮ ಹತ್ಯೆ ಮಾಡಿದ ಪಾಪಕ್ಕೆ ಗುರಿಯಾಗುತ್ತದೆ. ಪಾಪ ಕರ್ಮಗಳಿಗೆ ಗುರಿಯಾಗುತ್ತದೆ. ಅರಿಯದೇ ಮಾಡಿದ ಜಪವು ಜಪವಲ್ಲ. ಅರಿತರಿತು ಆ ಅರಿವೇ ತಾನಾಗಿ ಗುರುದೇವನನ್ನು ನೆನೆಯುವುದೇ ಜಪ. ಇದು ಪುಣ್ಯದ ನಾಣ್ಯ .

ಜಪವೆಂಬುದು ಗುರುಚೆನ್ನಬಸವಣ್ಣನ ಪಾದದಲ್ಲಿಯೇ ಐಕ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.

**1770**

**ಜಪಿಸಬಾರದು ಜಪಿಸಬಾರದು ಕುಮಂತ್ರಂಗಳ.**
**ಜಪಿಸಬಾರದು ಜಪಿಸಬಾರದು ಮೋಹನದ ಮಂತ್ರಂಗಳ.**
**ಜಪಿಸಬಾರದು ಜಪಿಸಬಾರದು ಮಾರಣಮಂತ್ರಂಗಳ.**
**ಜಪಿಸಬೇಕು ಜಪಿಸಬೇಕು, ಕಪಿಲಸಿದ್ಧಮಲ್ಲಿರ್ಕಾನಾಯ ನಮಃ**
**ಎಂದು ಕೇಳಾ ಕೇದಾರ ಗುರುದೇವಾ.**

ಸಿದ್ಧರಾಮ ಶಿವಯೋಗಿಗಳು ಕೇದಾರ ಗುರುದೇವನಿಗೆ ಸುಂದರವಾದ ಸೂತ್ರವನ್ನೇ ನೀಡಿದ್ದಾರೆ. ಕುಮಂತ್ರಗಳನ್ನು ಮೋಹನದ ಮಂತ್ರಗಳನ್ನು ಮಾರಣ ಮಂತ್ರಗಳನ್ನು ಜಪಿಸಬಾರದು.

ಮಂತ್ರಗಳ ತಿರುಳು ಗೊತ್ತಾಗದಿದ್ದರೆ ಜಪಿಸಿದ ಸಕಲ ಮಂತ್ರಗಳೂ ತನಗೆ ಕುಮಂತ್ರಗಳೇ ಆಗುತ್ತವೆ. ಮಹಾಜ್ಞಾನಿ ಗುರುದೇವನಿಂದ ಕಾಯದಲ್ಲಿಯೇ ಸಂಗಮವಾದ ಅರಿವು ಎನ್ನುವ ಗುರುದೇವನನ್ನು ಕಂಡಕೊಳ್ಳುವ ಮಂತ್ರವನ್ನು ಸದಾ ಜಪಿಸಬೇಕು.

**1771**

**ಜಪಿಸಬೇಕು ಜಪಿಸಬೇಕು ಸತ್ಯಶೀಲವ. ಜಪಿಸಬೇಕು ಜಪಿಸಬೇಕು ಪರಹಿತವ.**
**ಜಪಿಸಬೇಕು ಜಪಿಸಬೇಕು ಪರಸ್ತ್ರೀ ಪರಧನವನೊಲ್ಲೆನೆಂಬುದ**
**ಜಪಿಸಬೇಕು ಜಪಿಸಬೇಕು ಗರು-ಲಿಂಗ-ಜಂಗಮ ದಾಸೋಹವ**
**ಜಪಿಸಬೇಕು ಜಪಿಸಬೇಕು 'ಕಪಿಲಸಿದ್ಧಮಲ್ಲಿಕಾರ್ಜುನಾಯ ನಮಃ'**
**ಎಂದು, ಕೇಳಾ ಗುರುದೇವಾ.**

ಪರಸ್ತ್ರೀ ಪರಧನವನ್ನು ಒಲ್ಲೆನೆಂಬುದನ್ನು ಜಪಿಸಬೇಕು. ಇದು ನಿಜವಾದ ಜಪ. ಕಾಯದಲ್ಲಿ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನನ್ನು ಕಾಯವನ್ನು ಆವರಿಸಿದ ಮನ ಕಂಡು ಧನ್ಯನಾಗಬೇಕು; ಏಕೆಂದರೆ ಕಾಯದಲ್ಲಿದ್ದಾತನೇ ಸ್ವದೈವ. ಈ ಸ್ವದೈವವನ್ನು ಕಂಡು ಮನ ಘನಮನವಾದಾಗ ಪರಸ್ತ್ರೀ, ಪರಧನವನ್ನು, ಪರದೈವವನ್ನು ನೋಡುವುದಿಲ್ಲ. ಇಂತಹ ಘನಮನಕ್ಕೆ ಪ್ರತಿಕಾಯದಲ್ಲಿ ಗುರು, ಲಿಂಗ, ಜಂಗಮರೇ ಕಾಣುತ್ತಾರೆ.

ಮನ ತನಗೆ ತಾನೇ ಸತ್ಯಶೀಲನಾಗುತ್ತದೆ. ಸದಾ ಪರಹಿತವನ್ನು ಬಯಸುತ್ತದೆ. ಪ್ರತಿ ಕಾಯದಲ್ಲಿ ಗುರು, ಲಿಂಗ, ಜಂಗಮರನ್ನು ಕಂಡು ಕಾಯದ ಸೇವೆ ಮಾಡುತ್ತ ದಾಸೋಹಿಯಾಗುತ್ತದೆ. ಪ್ರತಿಕಾಯದಲ್ಲಿ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನನ್ನು ಜಪಿಸುತ್ತಾ ಜಪಿಸುತ್ತಾ ಪರಮಸುಖಿಯಾಗುತ್ತದೆಂದು ಸಿದ್ಧರಾಮ ಶಿವಯೋಗಿಗಳು ಕೇದಾರ ಗುರುಗಳಿಗೆ ಹೇಳಿದ್ದಾರೆ.

**1773**

**ಮಂತ್ರದೇಹಿ ತಾನಾದ ಬಳಿಕ ಮಲತ್ರಯಕ್ಕೊಳಗಾಗಬಹುದೇನಯ್ಯಾ ?**
**ಸರ್ವದೇಹಿ ಅಂತರ್ಯಾಮಿ ತಾನೆಂದರಿದ ಬಳಿಕ**
**ಕೊಲ್ಲುವುದಕ್ಕೆ ಒಳಗಾಗಬಹುದೇನಯ್ಯಾ ? ಕೇದಾರ ಗುರುದೇವಾ.**

ಗುರುದೇವ ಒಬ್ಬ ವ್ಯಕ್ತಿಯಲ್ಲ. ಕಾಯದಲ್ಲಿ ಸಂಗಮವಾದ ಅವ್ಯಕ್ತ ಶಕ್ತಿ. ಗುರುದೇವನನ್ನು ತಿಳಿಯಬೇಕಾದ ಭಕ್ತನೂ ವ್ಯಕ್ತಿಯಲ್ಲ. ಕಾಯದಲ್ಲಿ ಇವರಿಬ್ಬರೂ ಇದ್ದಾರೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಗುರುದೇವನನ್ನು ಕಂಡುಕೊಂಡು ಆ ಗುರುದೇವನೇ ತಾನಾದಾಗ ಕಾಯ ಮಾಂಸಪಿಂಡವಲ್ಲ. ಅದು ಮಂತ್ರಪಿಂಡವಾಗುತ್ತದೆ. ಆ ಮಂತ್ರಪಿಂಡವೇ ತಾನಾದ ಬಳಿಕ ಕಾಯ ಮಲತ್ರಯಗಳಿಗೆ ಒಳಗಾಗುವುದಿಲ್ಲ. ಸರ್ವದೇಹಗಳಲ್ಲಿಯೂ ಗುರುದೇವನು ಇದ್ದಾನೆಂದು ಆ ಗುರುದೇವನೆ ತಾನು ಎಂದು ತಿಳಿದಬಳಿಕ ಕೊಲ್ಲುವುದಕ್ಕೆ ಹಿಂಜರಿಯುತ್ತದೆ. ಸತ್ಯದ ಅರಿವಾಗುತ್ತದೆ ಎಂದು ಸಿದ್ಧರಾಮಶಿವಯೋಗಿಗಳು ಕೇದಾರ ಗುರುದೇವನಿಗೆ ಹೇಳಿದ್ದಾರೆ.

**1774**

**ನರಜನ್ಮಕ್ಕೊಮ್ಮೆ ಬಂದ ಬಳಿಕ. ಗುರುವಿನ ಕುರುಹು ಕಾಣಬೇಕು.**
**ಗುರುವಿನ ಕುರುಹ ತಾ ಕಂಡ ಬಳಿಕ, ಶಿಷ್ಯನಾಗಿ ಗುರುಕರಜಾತನಾಗಬೇಕು**
**ಗುರುಜಾತನಾದ ಬಳಿಕ, ಗುರುಸ್ವರೂಪಾಗಿ,**
**ಕಪಿಲಸಿದ್ಧಮಲ್ಲಿರ್ಕಾನನ ಪಾದಪದ್ಮದಲ್ಲಿ ಐಕ್ಯವ ಗಳಿಸಬೇಕು, ಘಟ್ಟಿವಾಳಯ್ಯ .**

ನರಜನ್ಮಕ್ಕೊಮ್ಮೆ ಬಂದ ಬಳಿಕ ಗುರುದೇವನ ಕುರುಹ ಕಾಣಬೇಕು. ಗುರುದೇವನೆಂದರೆ ಕುರುಹು ಉಳ್ಳವನಲ್ಲ. ಕಾಯವೆಂಬ ಕುರುಹಿನಲ್ಲಿ ಇದ್ದವನು. ಸಕಲ ಕಾಯಗಳೂ ಗುರುದೇವನು ವಾಸ ಮಾಡಿದ ಕಾಯಗಳೇ ಆಗಿವೆ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಗುರುದೇವನಿಗೆ ಶಿಷ್ಯನಾಗಿ ಗುರುಕರಜಾತನಾಗಬೇಕು.

ಗುರುಕರಜಾತನಾದ ಬಳಿಕ ಆ ಗುರುವೇ ತಾನಾಗಿ ಗುರುಸ್ವರೂಪನಾಗಬೇಕು. ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನ ಪಾದಪದ್ಮದಲ್ಲಿ ಐಕ್ಯವ ಗಳಿಸಬೇಕು ಎಂದು ಸಿದ್ಧರಾಮ ಶಿವಯೋಗಿಗಳು ಘಟ್ಟಿವಾಳಯ್ಯ ಶರಣರಿಗೆ ಈ ವಚನದ ಮೂಲಕ ತಿಳಿಸಿದ್ದಾರೆ.

**1775**

**ಜನರಿಲ್ಲದ ಘಟ್ಟದೊಳು ಘನವಿಲ್ಲದೊಂದು ಪಟ್ಟಣವಿದೆ ನೋಡಾ.**
**ಪಟ್ಟಣವೊಂದರೊಳು ಮೂರು ಕಟ್ಟಿಗೆಯಿವೆ ನೋಡಾ.**
**ಮೂರರಲ್ಲಿ ಮೂಲೋಕ ಮುಟ್ಟಿ, ಮುಟ್ಟಿ.**
**ಕಪಿಲಸಿದ್ಧಮಲ್ಲಿಕಾರ್ಜುನನ ನೆಟ್ಟನೆ ಘಟ್ಟಿಗೊಳ್ಳವು ನೋಡಾ ದಿಟ್ಟ ನಿಜ ನಟ್ಟ ಘಟ್ಟಿವಾಳಾ.**

ಕಾಯವನ್ನು ಪುರಾತರು ಪುರ ಪಟ್ಟಣವೆಂದು ಕರೆದಿದ್ದಾರೆ. ಈ ಪಟ್ಟಣದೊಳಗೆ ಹುಡುಕಲು

ಹೋದರೆ ಜನರಿಲ್ಲ. ಕಾಯ ಜನರಿಲ್ಲದ ಪಟ್ಟಣ. ಇದರಲ್ಲಿ ಸಾತ್ವಿಕ, ರಾಜಸ, ತಾಮಸ ಎಂದು ಮೂರು ಭಾಗಗಳಿವೆ. ಇವು ಮೂರೂ ಮೂಲೋಕಗಳು ಇವುಗಳನ್ನು ದಾಟಿಹೋದ ಮನವೆ ಘನಮನ. ಕಪಿಲಸಿದ್ಧಮಲ್ಲಿಕಾರ್ಜುನನನ್ನು ನೆಟ್ಟನೆ ಕಂಡೊಕೊಂಡ ಘಟ್ಟಿಮನ. ಇದು ದಿಟ್ಟ ಹಾಗೂ ನಿಜ ನೋಡಾ ಎಂದು ಸಿದ್ಧರಾಮಶಿವಯೋಗಿಗಳು ಘಟ್ಟಿವಾಳ ಶರಣರಿಗೆ ಹೇಳಿದ್ದಾರೆ.

**1776**

**ವನವೊಂದರಲ್ಲಿ ಘನಕಾಸಾರ ಬೆಳೆದುದ ಕಂಡೆ.**
**ಆ ಘನಕಾಸಾರದಲ್ಲಿ ಮೂರು ಹೂಗಳ ಕಂಡೆ.**
**ಆ ಮೂರು ಹೂಗಳಲ್ಲಿ ಮೂರ್ತಿಗಳ ಕಂಡೆ.**
**ಆ ಮೂರು ಮೂರ್ತಿಗಳಲ್ಲಿ ಮೂಲೋಕದರಸ,**
**ಕಪಿಲಸಿದ್ಧಮಲ್ಲಿಕಾರ್ಜುನನ ಕಂಡು ಕಣ್ದೆರೆದು ಕಂಡೆ, ಕಂಡೆ, ಕಂಡೆಯಾ ಕೇದಾರ ಗುರುವೆ.**

ವನವೊಂದರಲ್ಲಿ ಬೇರಿಲ್ಲದ ಮರವೊಂದು ಬೆಳೆದು ನಿಂತಿದೆ. ಆ ಮರದಲ್ಲಿ ಸ್ಥೂಲ, ಸೂಕ್ಷ, ಕಾರಣ ಎಂಬ ಮೂರು ಸುಂದರವಾದ ಹೂಗಳು ಬಿಟ್ಟಿವೆ. ಆ ಮೂರೂ ಹೂಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ಮಹಾಜ್ಞಾನಿಗಳು ಪವಡಿಸಿದ್ದಾರೆ.

ಮೂರು ಮೂರ್ತಿಗಳಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನನ್ನು ಕಂಡು ಕಣ್ದೆರೆದು ಕಂಡೆ ಕಂಡೆ ಕಂಡೆಯಾ ಕೇದಾರ ಗುರುವೆ ಎಂದು ಸಿದ್ಧರಾಮಶಿವಯೋಗಿಗಳು ಹೇಳಿದ್ದಾರೆ.

**1777**

**ಅರಿದ ಬಳಿಕ ಬ್ರಹ್ಮವೆಂಬುದು ಮೃಗಜಲ ನೋಡಾ.**
**ಅರಿದ ಬಳಿಕ ಬ್ರಹ್ಮವೆಂಬುದು ವಂಧ್ಯಾಪುತ್ರ ನೋಡಾ.**
**ಅರಿದ ಬಳಿಕ ಬ್ರಹ್ಮವೆಂಬುದು ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ**
**ಶಬ್ದಮುಗ್ಧ ನೋಡಾ, ಕಲ್ಲಯ್ಯಾ .**

ಸಿದ್ಧರಾಮ ಶಿವಯೋಗಿಗಳು ಕಲ್ಲಯ್ಯ ಶರಣರಿಗೆ ಕಾಯದಲ್ಲಿ ಇದ್ದ ನಿಜಸ್ಥಿತಿಯನ್ನು ತಿಳಿ ಹೇಳಿದ್ದಾರೆ. ಅರಿದ ಬಳಿಕ ಬ್ರಹ್ಮವೆಂಬುದು ಮೃಗಜಲ ನೋಡಾ: ಕಾಯವನ್ನು ಆವರಿಸಿದ ಮನವನ್ನು ಶರಣರು ಮೃಗಜಲವೆಂದು ಕರೆದಿದ್ದಾರೆ. ಬಾಯಾರಿಕೆಯಾದ ಪ್ರಾಣಿಗೆ ಬಹುದೂರದಲ್ಲಿ ಜಲವಿದ್ದಂತೆ ಕಾಣುತ್ತದೆ. ಅಲ್ಲಿ ಹೋಗಿ ನೋಡಿದಾಗ ಜಲವಿರುವುದಿಲ್ಲ. ಅದು ಪುನಃ ಬಹುದೂರದಲ್ಲಿ ಜಲದಂತೆ ಕಾಣುತ್ತದೆ. ಹೀಗೆ ಮನ ಕಾಯಕ್ಕೆ ಮತ್ತೆ ಮತ್ತೆ ಮೋಸ ಮಾಡುತ್ತಲೇ ಇರುತ್ತದೆ. ಕಾಯದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನ ಮಾತನ್ನೂ ಪಾಲಿಸದೆ ದೂರ ತಳ್ಳುತ್ತದೆ. ಕಾಯ ತನ್ನದೇ ಎಂದು ತಿಳಿದು ತನಗೆ ತೋಚಿದಂತೆ ಕಾಯವನ್ನು ಹಿಡಿದು ಕಾಯದ ಮೂಲಕ ರಾಜ್ಯಭಾರ ಮಾಡುತ್ತದೆ. ಕಾಯದಲ್ಲಿ ತನ್ನದೇ ಆದ ಭ್ರಮೆಯನ್ನು ಮೃಗಜಲದಂತೆ ಸೃಷ್ಟಿ ಮಾಡುತ್ತದೆ.

ಮನವೆಂಬ ಭ್ರಮೆಯಲ್ಲಿ ಬ್ರಹ್ಮ ಬಚ್ಚಿಟ್ಟುಕೊಂಡಿದ್ದಾನೆಂಬುದು ಮನಕ್ಕೆ ತಿಳಿಯದೆ ಮೃಗಜಲದಂತೆ ಸದಾ ಓಡುತ್ತದೆ.

ಬ್ರಹ್ಮನಿಗೆ ಚಲನೆಯಿಲ್ಲ ಮನಕ್ಕೆ ಚಲನೆವುಂಟು. ಮನ ತನಗೆ ತಾನೆ ಅರಿತ ಬಳಿಕ ಅದು ಮೃಗಜಲ, ವಂಧ್ಯಾಪುತ್ರ ಎಂದು ತನಗೆ ಗೊತ್ತಾಗಿ ತನ್ನೊಳಗೆ ತಾನೆ ಅರಿತ ಬಳಿಕ ಬ್ರಹ್ಮವೆಂಬ ಶಬ್ದ ಕೂಡ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಮುಗ್ಧವಾಗುತ್ತದೆ. ಎಂದು ಕಲ್ಲಯ್ಯ ಶರಣರಿಗೆ ಸಿದ್ಧರಾಮಶಿವಯೋಗಿಗಳು ಹೇಳಿದ್ದಾರೆ.

**1778**

**ಅರಿಯಲಿ, ಅರಿಯದೆ ತಾ ಸಹಜ ಇರಲಿ,**
**ಕಡೆಯಲ್ಲಿ ಪರಾತ್ಪರವಸ್ತು ತಾನೆಂಬುದು ದಿಟ ನೋಡಾ.**
**ಅರಿಯದ ದಾರಿಯದು ಆರನು ಕೇಳದು. ಅರಿಯದ ದಾರಿಯದು ನೂರಾರನು ಕೇಳಿ,**
**ಕಡೆಗೆ ಕಪಿಲಸಿದ್ಧಮಲ್ಲಿಕಾರ್ಜುನ ನಗರ ಸೇರುವುದು ಓರೆಯಾಗದು, ಕೇದಾರ ಗುರುವೆ.**

ಪ್ರತಿ ಅಂಗದಲ್ಲಿಯೂ ಅರಿವಿದೆ. ಆ ಅರಿವೆ ಗುರು. ಅಂಗವನ್ನು ಆವರಿಸಿದ ಮನ ಅಂಗದಲ್ಲಿಯೇ ಸಂಗಮವಾದ ಗುರುದೇವನನ್ನು ಅರಿತು ಆ ಗುರುದೇವನೇ ತಾನಾದಾಗ ಅದು ಸಹಜ ಅಂಗವಾಗುತ್ತದೆ. ಸಕಲ ಅಂಗಗಳಲ್ಲಿಯೂ ಗುರುದೇವನು ಇದ್ದುದನ್ನು ಕಾಣುತ್ತದೆ.

ಅಂಗ ಸಹಜ ಇರಲಿ ಇರದೆ ಇರಲಿ ಸಹಜತೆಯಲ್ಲಿ ಇದ್ದ ಅಂಗಕ್ಕೆ ಸಕಲ ಅಂಗಗಳು ಲಿಂಗಾಂಗವಾಗಿ ಕಾಣುತ್ತದೆ. ಅರಿಯದ ಅಂಗವೂ ಕೂಡ ಕೊನೆಗೆ ಲಿಂಗದಲ್ಲಿಯೇ ಸೇರುವುದು ದಿಟ.

**1779**

**ಆಕಾಶದಲ್ಲಿಯ ಮೇಘದಂತೆ, ಜಲದಲ್ಲಿಯ ತೆರೆಯಂತೆ**
**ಬರುತ್ತಿದೆ ನೋಡಾ ಈ ಘಟ ಬಂದುದರಿಯೆ, ಹೋದುದರಿಯೆ**
**ನಿಂದ ವಸ್ತುವದು ನಿಜವೆಂದರಿದೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯ ಬಯಲು ಬೀಜದಿಂದ ಜನ್ಮ ತಳೆದಿದೆ. ಜಲವೂ ಕೂಡ ಬಯಲ ಬೀಜದಿಂದಲೇ ಜನ್ಮ ತಳೆದಿದೆ. ಬ್ರಹ್ಮಾಂಡದಲ್ಲಿಯ ಸಕಲ ಜೀವರಾಶಿಗಳೂ ಕೂಡ ಬ್ರಹ್ಮಾಂಡದ ಬಯಲದಿಂದಲೇ ಜನ್ಮ ತಳೆದಿವೆ.

ಇಡೀ ಬ್ರಹ್ಮಾಂಡಕ್ಕೆ ಜನ್ಮ ನೀಡಿ ತಾನು ಆ ಬ್ರಹ್ಮಾಂಡವನ್ನು ನೋಡಿ ಆನಂದಪಡುವ ಉದ್ದೇಶದಿಂದಾಗಿ ಬಯಲ ಬೀಜ ಕಾಯಕ್ಕೆ ಜನ್ಮ ನೀಡಿದೆ. ಕಾಯದಲ್ಲಿಯೇ ಅರಿವು ಎನ್ನುವ ಗುರುದೇವನ ನಿರೂಪ ಕಾಯದಲ್ಲಿಯೇ ಸಂಗಮವಾಗಿದೆ. ಕಾಯವನ್ನು ಆವರಿಸಿದ ಮನಕ್ಕೆ ಪಾಠ ಮಾಡುತ್ತ ಕಾಯವನ್ನು, ಮನವನ್ನು ತನ್ನಂತೆ ಮಾಡಿಕೊಳ್ಳುವ ಹಿರಿಯ ಉದ್ದೇಶವನ್ನಿಟ್ಟುಕೊಂಡು ಕಾಯದಲ್ಲಿಯೇ ಇದೆ.

ಈ ವೃತ್ತಾಂತವನ್ನು ಕಾಯ ತಿಳಿಯದು, ಮನವೂ ತಿಳಿಯದು. ಗುರುದೇವ ಮನಕ್ಕೆ ಕಾಯಕ್ಕೆ ಪಾಠ ಮಾಡುವುದನ್ನು ಬಿಡನು. ಎಷ್ಟೋ ಕಾಯಗಳು ಮತ್ತು ಮನ ಅವು ಬಂದುದನ್ನು ಅರಿಯವು ಮತ್ತು ಹೋದುದನ್ನು ಅರಿಯವು. ಅರಿತರಿತು ಆ ಅರಿವೇ ತಾನಾಗಿ ನಿಂದ ವಸ್ತು ಮಾತ್ರ ನಿಜವನ್ನು ಅರಿತು ಕಪಿಲಸಿದ್ಧಮಲ್ಲಿಕಾರ್ಜುನನೇ ತಾನಾಗಿದೆ.

**1780**

**ಆದಿಯಲ್ಲಿ ಬಯಲು, ಅಂತ್ಯದಲ್ಲಿ ಬಯಲು**

**ಮಧ್ಯದಲ್ಲಿ ತೋರಿ ಕೆಡುವುದದು ನೋಡಾ, ಈ ಘಟವು. ತೋರಿ ತೋರಿ ಕೆಡುವುದಕ್ಕೆ,**
**ಈ ಜಗದಲ್ಲಿ ಇದೆ ದೃಷ್ಟ ನೋಡಾ. ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯ ಗರ್ಭದಿಂದ ಭೂಮಿಗೆ ಬರುವ ಮುನ್ನ ಅದು ಬಯಲ ಬೀಜವೆ ಆಗಿತ್ತು . ಅಂತ್ಯದಲ್ಲಿ ಕೂಡ ಬಯಲು ಬಯಲಲ್ಲಿ ಸೇರಿ ಬಯಲಾಗುತ್ತದೆ. ಮಧ್ಯದಲ್ಲಿ ತೋರಿ ಕೆಡುವುದು ಕಾಯ.

ತೋರಿ ತೋರಿ ಕೆಡುವುದಕ್ಕೆ ಈ ಜಗದಲ್ಲಿ ಕಾಯವೆ ಒಂದು ಉದಾಹರಣೆಯಾಗಿದೆ. ಕಾಯ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನ ಆಲಯ. ಕಾಯವನ್ನು ಆವರಿಸಿದ ಮನದಿಂದಲೆ ಕಾಯದಲ್ಲಿದ್ದ ಅರಿವಿನ ಮಲ್ಲಯ್ಯನನ್ನು ತಿಳಿದ ಕಾಯವೆ ಧನ್ಯ .

**1781**

**ಪಂಚಮುಖ ವರ್ಣಂಗಳವು ಪಂಚಮುಖನಂಘ್ರಿರೇಣುವಿಗೆ**
**ಯೋಗ್ಯ ನೋಡಾ. ಷಣ್ಮುಖವರ್ಣಂಗಳವು ಅಷ್ಟಮೂರ್ತಿಯ**
**ಪದಪದ್ಮದೈಕ್ಯಕ್ಕೆ ಯೋಗ್ಯ ನೋಡಾ.**
**ಷಡ್ಚಕ್ರವರ್ಣಂಗಳು ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಐಕ್ಯ ನೋಡಾ.**
**ಎಂದರುಹಿದ ಗುರು ಚೆನ್ನಬಸವಣ್ಣನ ಪಾದವ ನೆನೆನೆನೆದು ಮುಕ್ತನಾದೆ ನೋಡಾ.**

ಕಾಯಕ್ಕೆ ಪಂಚ ಮುಖಗಳಿವೆ. ಆ ಪಂಚಮುಖಕ್ಕೆ ಕೇಳಿ ತಿಳಿಯುವ, ಮುಟ್ಟಿ ತಿಳಿಯುವ, ನೋಡಿ ತಿಳಿಯುವ, ಮೂಸಿಸಿ, ರುಚಿಸಿ ತಿಳಿಯುವ ಜೀವಿಗಳು ಅಲ್ಲಿ ವಾಸಿಸಿವೆ.

ಕಾಯಕ್ಕೆ ಷಣ್ಮುಖಗಳು ಇವೆ. ಅದು ಅಷ್ಟ ಮೂರ್ತಿಯ ಪದಪದ್ಮದೈಕ್ಯಕ್ಕೆ ಯೋಗ್ಯ ಕಾಯದಲ್ಲಿರುವ ಷಡ್ಚಕ್ರವರ್ಣಂಗಳು ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಐಕ್ಯ ನೋಡಾ ಎಂದರುಹಿದ ಗುರು ಚೆನ್ನಬಸವಣ್ಣನ ಪಾದವ ನೆನೆನೆನೆದು ಮುಕ್ತನಾದೆ ಎಂದಿದ್ದಾರೆ ಸಿದ್ಧರಾಮಶಿವಯೋಗಿಗಳು.

**1782**

**ಮೂರಕ್ಷರದಲ್ಲಿ ಏಳು ಭುವನ ಓಲಾಡುತ್ತಿದೆ.**
**ಮೂರಕ್ಷರದಲ್ಲೀರಾರು ಪ್ರಣವಂಗಳಾಡುತ್ತಿವೆ.**
**ಮೂರಕ್ಷರ ಮೂರು ಮೂರ್ತಿಯ ಕ್ರಿಯೆಯಾಚರಿಸುತ್ತಿದೆ.**
**ಮೂರಕ್ಷರದಲ್ಲಿ ಮಾರಹರ ಕಪಿಲಸಿದ್ಧಮಲ್ಲಿಕಾರ್ಜುನನ ರೂಹು ತೋರುತ್ತಿದೆ.**

ಬಯಲು ಎನ್ನವ ಮೂರಕ್ಷರದಲ್ಲಿಯೇ ಇಡೀ ಬ್ರಹ್ಮಾಂಡ ಬಚ್ಚಿಟ್ಟುಕೊಂಡಿದೆ. ಮೂರಕ್ಷರದಲ್ಲಿಯೇ ಪ್ರಣವಂಗಳು ಜನ್ಮ ತಳದಿವೆ. ಬಯಲು ಎನ್ನುವ ಮೂರಕ್ಷರದಲ್ಲಿಯೇ ಬ್ರಹ್ಮ, ವಿಷ್ಣು, ಮಹೇಶ್ವರರು ತಮ್ಮ ಕ್ರಿಯೆಯಲ್ಲಿ ತೊಡಗಿದ್ದಾರೆ.

ಬಯಲು ಎನ್ನುವ ಮೂರಕ್ಷರದಲ್ಲಿಯೇ ಮಾರಹರ ಕಪಿಲಸಿದ್ಧಮಲ್ಲಿಕಾರ್ಜುನನ ರೂಪು ತೋರುತ್ತದೆ. ಮೂರಕ್ಷರದ ಬಯಲನ್ನು ಅಲ್ಲಮಪ್ರಭುಗಳು ಈ ಕೆಳಕಂಡಂತೆ ಬಣ್ಣಿಸಿದ್ದಾರೆ.

''ಬಯಲು ಬಯಲನೆ ಬಿತ್ತಿ ಬಯಲು ಬಯಲನೆ ಬೆಳೆದು ಬಯಲು ಬಯಲಾಗಿ ಬಯಲಾಯಿತ್ತಯ್ಯಾ . ಬಯಲು ಜೀವನ, ಬಯಲು ಭಾವನೆ ಬಯಲು ಬಯಲಾಗಿ ಬಯಲಾಯಿತ್ತಯ್ಯಾ . ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು; ನಾ ನಿಮ್ಮ ನಂಬಿ

ಬಯಲಾದೆ ಗುಹೇಶ್ವರ'' ಎಂದಿದ್ದಾರೆ.

**1783**

**ಆರು ಪ್ರಣವದ ಕಡೆಯಕ್ಷರ ಚಿದಾಕಾಶದ ಅಂಗ ನೋಡಾ.**
**ಆರು ಪ್ರಣವದ ಮೂಲಾಕ್ಷರ ಚಿನ್ಮಯ ಮಂದಿರ ನೋಡಾ.**
**ಆರು ಪ್ರಣವದ ಮಧ್ಯ ನಾಲ್ಕಕ್ಷರ ಶಿವಶಕ್ತಿ ರೂಪು ನೋಡಾ.**
**ಆರು ಪ್ರಣವದ ಜಪವದು ಕಪಿಲಸಿದ್ಧಮಲ್ಲಿಕಾರ್ಜುನನ, ಒಲುಮೆ ನೋಡಾ.**

'ಓಂ ನಮಃ ಶಿವಾಯ' ಪ್ರಣವದಲ್ಲಿರುವ ಆರಕ್ಷರಗಳು. 'ಯ' ಕಾರ ಚಿದಾಕಾಶದ ಅಂಗವಾದರೆ, ಆರು ಪ್ರಣವದ ಮೂಲಾಕ್ಷರ ಚಿನ್ಮಯ ಮಂದಿರ. ಅಂದರೆ 'ಓಂ' ಕಾರ. ಆರು ಪ್ರಣವದ ಮಧ್ಯ ನಾಲ್ಕಕ್ಷರ 'ನಮಃ ಶಿವಾ' ಇದು ಶಿವಶಕ್ತಿ ರೂಪು. ಆರು ಪ್ರಣವದ ಜಪವದು ಸಾಕ್ಷತ್ ಕಪಿಲಸಿದ್ಧಮಲ್ಲಿಕಾರ್ಜುನನ ಒಲುಮೆಯೇ ಆಗಿದೆ.

ಸಕಲ ಕಾಯಗಳು ಪ್ರಣವವೇ ಆಗಿವೆ. ಅಂದರೆ ನಾನು 'ಓಂ ನಮಃ ಶಿವಾಯ' ಆಗಿದ್ದೇನೆ. ಹಾಗೆಯೇ ಇತರ ಕಾಯಗಳು 'ಓಂ ನಮಃ ಶಿವಾಯ' ಆಗಿವೆ. ಆಯಾ ಕಾಯಗಳು ತಾನು 'ಓಂ ನಮಃ ಶಿವಾಯ' ಹೇಗೆ ? ಎಂದು ಕಂಡುಕೊಳ್ಳುವ ಅವಶ್ಯಕತೆಯಿದೆ.

**1784**

**ನವಗ್ರಹ ವರ್ಣಂಗಳ ಧ್ಯಾನವೆಂಬುವುದು,**
**ನವಸಹಸ್ರ ಕರ್ಣಿಕೆಯಲ್ಲಿರುವ ಪರಂಜ್ಯೋತಿ ರೂಪು ಪ್ರಾಪ್ತಿ ನೋಡಾ.**
**ದ್ವಾದಶಾದಿತ್ಯವರ್ಣಂಗಳ ಧ್ಯಾನವೆಂಬುದು ದ್ವಾದಶಾದಿತ್ಯರ ಪ್ರಭೆಯ ನುಂಗಿದ**
**ಮಹಾಲಿಂಗಮೂರುತಿ ಪ್ರಾಪ್ತಿ ನೋಡಾ.**
**ಷೋಡಷಕಲಾವರ್ಣಂಗಳ ಧ್ಯಾನವೆಂಬುವುದು,ಷೋಡಷಕಲಾಚಂದ್ರಧರ**
**ಕಪಿಲಸಿದ್ಧಮಲ್ಲಿಕಾರ್ಜುನ ತಾನೆ ನೋಡಾ. ಕೇದಾರ ಗುರುದೇವಾ.**

ಈ ವಚನಕ್ಕೆ ಅನುಭಾವ ಮಾಡಿರುವುದಿಲ್ಲ.

**1785**

**ಅಕಾರವದು ಸತ್ವ, ಉಕಾರವದು ರಜ, ಮಕಾರವದು ತಮ**
**ಅಕಾರವದು ಬ್ರಹ್ಮಜನಕ, ಉಕಾರವದು ವಿಷ್ಣುಜನಕ, ಮಕಾರವದು ರುದ್ರಜನಕ.**
**ಅಕಾರವದು ಸೃಷ್ಟಿ; ಉಕಾರವದು ಸ್ಥಿತಿ, ಮಕಾರವದು ಲಯ.**
**ಅಕಾರವದು ಪೀತ, ಉಕಾರವದು ಶ್ಯಾಮ, ಮಕಾರವದು ಶುಕ್ಲ.**
**ಅಕಾರವದು ವಿಧಿ, ಉಕಾರವದು ವಿಧಾನ, ಮಕಾರವದು ಧ್ಯಾನ.**
**ಅಕಾರವದು ಪಾತಾಳ, ಉಕಾರವದು ಮರ್ತ್ಯ, ಮಕಾರವದು ಸ್ವರ್ಗ.**
**ಅಕಾರ ಎಂಬುದು ಉಕಾರ, ಮಕಾರ ಮೂರರ ಏಕತ್ವವೆ ಓಂಕಾರ**
**ಓಂಕಾರವೆ ಆದಿಶಕ್ತಿಯ ಗದ್ದಗೆ.**

**ಆ ಗದ್ದಗೆಯೆ ಕಪಿಲಸಿದ್ಧಮಲ್ಲಿಕಾರ್ಜುನನ ಅರಮನೆ ನೋಡಾ.**

ಓಂಕಾರವೆಂದರೆ ಸಾಮಾನ್ಯವಲ್ಲ. ಅದು ಆದಿಶಕ್ತಿಯ ಗದ್ದುಗೆ. ಅಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನು ನೆಲೆಸಿದ್ದಾನೆ. ಅದು ಆತನ ಅರಮನೆ. ಹೀಗಾಗಿ ಕಾಯವನ್ನು ಶರಣರು ಕೈಲಾಸ ಎಂದಿದ್ದಾರೆ.

ಕಾಯದಲ್ಲಿ ಸಾತ್ವಿಕ, ರಾಜಸ, ತಾಮಸ ಗುಣಗಳು ಇವೆ. 'ಅ'ಕಾರ ಸತ್ವ ಗುಣವಾದರೆ 'ಉ'ಕಾರ ರಜೋಗುಣ, 'ಮ'ಕಾರ ತಮಗುಣ. ಅಕಾರ, ಉಕಾರ, ಮಕಾರಗಳ ಸಂಗಮವೇ 'ಓಂ'ಕಾರ. ಈ ಮೂರಕ್ಷಗಳಲ್ಲಿ ಬ್ರಹ್ಮ, ವಿಷ್ಣು, ರುದ್ರ ಸಂಗಮವಾಗಿದ್ದಾರೆ.

ಸೃಷ್ಟಿ, ಸ್ಥಿತಿ, ಲಯಗಳು ಈ ಮೂರಕ್ಷರಗಳು 'ಓಂ' ಕಾರದ ಮೂಲಕವೇ ಜರುಗುತ್ತದೆ.

**1786**

**ಅನಿರ್ವಾಚ್ಯವೆ ವಾಚ್ಯಪ್ರಣವವಾಗಿ ನಿಂದಿತ್ತು .**
**ವಾಚ್ಯವೆ ವಚಿಸುವುದಕ್ಕೆ ಮೂಲ ಪ್ರಣವವಾಯಿತ್ತು .**
**ಮೂಲವೆ ಭೂತಾಂಶ ಪಂಚಾಕ್ಷರವಾಯಿತ್ತು .**
**ಪಂಚಾಕ್ಷರವೇ ಪಂಚಮುಖವಾಯಿತ್ತು . ಪಂಚಮುಖಂಗಳೆ ಪಂಚಕರಣಂಗಳಾಯಿತ್ತು .**
**ಪಂಚಕರಣಂಗಳೆ ಪಂಚವರ್ಣವಾಯಿತ್ತು . ಪಂಚವರ್ಣವೆ ಪ್ರಪಂಚ ರಚನೆ ಮಾಡಿ**
**ಎನ್ನ ಚಿತ್ತ ಚಂಚಲವಾಯಿತ್ತಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನ.**

ಈ ವಚನದಲ್ಲಿ ಸಂಪೂರ್ಣ ವಿವರ ಇರುವುದರಿಂದ ಈ ವಚನವನ್ನು ಅನುಭಾವ ಮಾಡಲಾಗಿಲ್ಲ.

**1787**

**ಭಕ್ತ ತಾನಾದ ಬಳಿಕ ಪಂಚಮುದ್ರೆಗಳಿಂದಲಂಕರೀಕೃತನಾಗಿರಬೇಕು.**
**ಅಲಂಕಾರಿ ತಾನಾದ ಬಳಿಕ ಶಿವಮುದ್ರೆ ಶಿವಭಾವ ಅಚ್ಚೊತ್ತಿರಬೇಕು.**
**''ಗುರೌ ಲಿಂಗೇಶ್ವರಮಾಲಾಯಾಂ ಮಂತ್ರ ಭಸ್ಮನಿ ಪಂಚಸು,**
**ಏತಾಸು ಶಿವಮುದ್ರಾಸು ಶಿವಸದ್ಭಕ್ತಮಾಚರೇತ್'' ಎಂದು ವಾತುಲಾಗಮದಲ್ಲಿ**
**ಕಪಿಲಸಿದ್ಧಮಲ್ಲಿಕಾರ್ಜುನನ ವಚನವುಂಟು, ನೋಡಾ ಕೇದಾರಯ್ಯಾ .**

ಕಾಯ ಮಹಾಜ್ಞಾನದ ಐದು ಮುದ್ರೆಗಳಿಂದ ಅಲಂಕೃತವಾಗಿದೆ. ಹೀಗೆ ಅಲಂಕೃತಗೊಂಡ ಶಿವಮುದ್ರೆ ಶಿವಭಾವದಿಂದ ಹೊಳೆಯುತ್ತಲಿದೆ.

ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಈ ಐದೂ ಮುದ್ರೆಗಳಲ್ಲಿ ಶಿವ ಸಂಗಮವಾಗಿದ್ದಾನೆ. ಶಿವನನ್ನು ತಿಳಿಯಬೇಕಾದ ಮನ ಈ ಐದೂ ಜ್ಞಾನ ಮುದ್ರೆಗಳನು ಅಲಂಕರಿಸಿದೆಯೆಂದು ಕೇದಾರ ಶರಣರಿಗೆ ಹೇಳಿದ್ದಾರೆ ಸಿದ್ಧರಾಮಶಿಯೋಗಿಗಳು.

**1788**

**ತಾ ಶಿವಭಕ್ತನಾಗಿ ತನ್ನ ಬಂಧುಗಳ ಭವಿತನದಲ್ಲಿರಿಸಬಾರದಯ್ಯಾ**

**ಮಾತಿನಿಂದಾಗಾಲಿ ಮನದಿಂದಾಗಲಿ ಭೀತಿಯಿಂದಾಗಲಿ,**
**ಶಿವಭಕ್ತಿಯ ಪೂರೈಸುವುದಯ್ಯಾ.**
**''ಆತ್ಮೀಯಾನ್ವಿವಿಧಾನ್ ಭೋಗಾಂ ಸ್ತ್ರೀಪುತ್ರಪ್ರಮುಖಾನಪಿ.**
**ಸ್ವಾತ್ಮನೋಪಿ ವಿಶೇಷಣ ತೇಷಾಂ ಚೈವ ಮಾನಯೇತ್,**
**ಎಂಬ ನುಡಿಯ ನೋಡಿದೆ ನೋಡಾ.**
**ಕಪಿಲಸಿದ್ಧಮಲ್ಲಿಕಾರ್ಜುನದೇವಾ, ವಾತುಲದಲ್ಲಿ ಕಲ್ಲಯ್ಯಾ.**

ಈ ವಚನಕ್ಕೆ ಅನುಭಾವ ಮಾಡಲಾಗಿಲ್ಲ.

**1789**

**ಭಕ್ತನಾಗಿ ಭಕ್ತಯಿಲ್ಲದವ ಶಿವದ್ರೋಹಿ ನೋಡಾ, ಮನವೆ.**
**'ಯೋ ಭಕ್ತೋ ಭಕ್ತಿಮಾನ್ ಲೋಕೇ ಭೇದಂ ಮೋಹಾತ್ಕರೋತಿ ಹಿ.**
**ಶಿವದ್ರೋಹೀ ಸ ವಿಜ್ಞೇಯಸ್ಸರ್ವಕರ್ಮ ಬಹಿಷ್ಕೃತಃ''**
**ಎಂಬ ವಾಕ್ಯ ಪಾಲಿಸದೆ ನೋಡಾ, ಮನವೆ.**
**ಎನ್ನ ಗುರು ಚೆನ್ನ ಬಸವ**
**ಕಪಿಲಸಿದ್ಧಮಲ್ಲಿಕಾರ್ಜುನನಿಂದ ಮನವೆ.**

ಭಕ್ತನಾಗಿ ಭಕ್ತಿಯಿಲ್ಲದವ ಶಿವದ್ರೋಹಿ: ಕಾಯವನ್ನು ಆವರಿಸಿದ ಮನ ಕಾಯಕ್ಕೆ ಭಕ್ತನ ವೇಷ ಧರಿಸಿ ತೋರಿಕೆಯ ಭಕ್ತನಾಗಿ ಬದುಕುತ್ತದೆ. ವ್ಯಕ್ತಿಗೆ ಭಕ್ತಿ ಮಾಡುವವ ಭಕ್ತನಲ್ಲ. ದೇವಾಲಯಗಳಿಗೆ ಭಕ್ತಿ ಮಾಡುವವನು ಭಕ್ತನಲ್ಲ. ಕಾಯದೊಳಗೆ ಸಂಗಮವಾದ ಅರಿವಿನ ಮಲ್ಲಯ್ಯನಿಗೆ ಭಕ್ತಿ ಮಾಡುವುದು ಮನಕ್ಕೆ ಗೊತ್ತಾದಾಗ ಮನ ಶುದ್ಧ ಭಕ್ತನಾಗುತ್ತದೆ. ಲೋಕದ ಭಕ್ತ ಭಕ್ತನಲ್ಲವೆಂದು ಮನಕ್ಕೆ ತಿಳಿಯುತ್ತದೆ. ಅರಿವು ಎನ್ನುವ ಗುರುದೇವನಿಗೆ ಭಕ್ತಿ ಮಾಡಿ ತಾನು ಆ ಗುರುದೇವನಿಗೆ ಶಿಷ್ಯನಾಗುತ್ತಾನೆ.

**1790**

**ಕುಲದಲ್ಲಿ ಶೂದ್ರನಾದೇನು.**
**ಮನದಲ್ಲಿ ಮಹಾದೇವ ನೆಲೆಗೊಂಡವನೆ ವೀರಶೈವ ನೋಡಾ.**
**''ಕಾಂಚನಂ ರಜತಂ ತಾಮ್ರಂ ರಸಯೋಗಾತ್ಸುವರ್ಣತಾಂ**
**ತಥಾ ಶಿವಜ್ಞಾನರಸಾಚ್ಛೂದ್ರಃ ಸದ್ಯಃ ಶಿವತಾಂ ವ್ರಜೇತ್''**
**ಎಂಬುದು ಸಟೆಯೇನಯ್ಯಾ**
**ಕಪಿಲಸಿದ್ಧಮಲ್ಲಿಕಾರ್ಜುಲಿಂಗವೆ.**

ಹುಟ್ಟಿನಿಂದ ಯಾವ ವ್ಯಕ್ತಿಯೂ ಶೂದ್ರನೂ ಅಲ್ಲ, ಕುಲಜನೂ ಅಲ್ಲ. ಕಾಯವನ್ನು ಆವರಿಸಿ ಕಾಯದಲ್ಲಿಯೆ ಸಂಗಮವಾದ ಮಹಾದೇವನ ದರ್ಶನ ಪಡೆದ ಮನವೆ ಘನಮನ. ತನ್ನ ವೈರಿಗಳಾದ ಅರಿಷಡ್ವರ್ಗಗಳನ್ನು ಅಷ್ಟಮದಗಳನ್ನು ಗೆದ್ದ ಮನವೇ ವೀರಮನ ಮಹಾವೀರನ ಮನ

ಎನ್ನುವುದು ಸುಳ್ಳಲ್ಲವೆಂದು ಹೇಳಿದ್ದಾರೆ ಸಿದ್ಧರಾಮಶಿವಯೋಗಿಗಳು.

**1791**

**ಜನನವಿಲ್ಲದ ಮೂರ್ತಿ ಮನದ ಮನೆಯಲ್ಲಿ ಚರಿಸುತ್ತಿದೆ ನೋಡವ್ವಾ.**
**ಘನಕ್ಕೆ ನಿಲುಕದ ಮೂರ್ತಿ ಅಣುರೇಣುವಿನಲ್ಲಿ,**
**ಮನೆ ಮಾಡಿ ಚರಿಸುತ್ತಿದೆ ನೋಡವ್ವಾ.**
**ತಿಳಿದಿಹೆ ನಾನೆಂದಡೆ ತಿಳಿಯದೆ ದೂರವಾಗಿ ಚರಿಸುತ್ತಿದೆ ನೋಡವ್ವಾ.**
**ಇದರಂದವನರಿದರಿದು ಬೇಸತ್ತು ಬೆಂಬಿದ್ದೆನವ್ವಾ. ಕಪಿಲಸಿದ್ಧಮಲ್ಲಿಕಾರ್ಜುನಂಗೆ.**

ಜನನ ಮರಣಕ್ಕೆ ಈಡಾಗುವ ಕಾಯದಲ್ಲಿ ಮರಣವಿಲ್ಲದ, ಜನನವೇ ಇಲ್ಲದ ಮಹಾ ಅರಿವಿನ ಮೂರ್ತಿಯೊಬ್ಬ ಕಾಯದಲ್ಲಿ ಸಂಗಮವಾಗಿದ್ದಾನೆ. ಸದಾ ಮನದ ಮನೆಯಲ್ಲಿ ಚರಿಸುತ್ತಾನೆ. ಆದರೂ ಮನದ ಹಿಡಿತಕ್ಕೆ ಸಿಕ್ಕುವುದಿಲ್ಲ. ಅಣು ರೇಣನುವಿನಲ್ಲಿಯೂ ಆತನೆ ಇದ್ದಾನೆ. ಆತನನ್ನು ತಿಳಿಯಲು ಹೋದಂತೆಲ್ಲ ಕೈಗೆ ಸಿಗದೆ ಬಹುದೂರ ಚರಿಸುತ್ತಾನೆ. ಇದರಂದವನು ಅರಿತರಿತು ಬೇಸತ್ತು ಬೆನ್ನು ಬಿದ್ದೆನವ್ವಾ.

**1792**

**ಕರಡಿಗೆಯೊಳೊಬ್ಬ ಕುರುಡ ಮೂರುತಿ ತೋರುತ್ತಾನೆ.**
**ಒಡನೊಡನೆ ನಡೆದಡೆ ಮೈಯೆಲ್ಲಾ ಚಕ್ಷುವಾಗಿ ತೋರುತ್ತಾನೆ.**
**ನಡೆಯದಿರ್ದಡೆ ಕಪಿಲಸಿದ್ಧಮಲ್ಲಿಕಾರ್ಜುನನು ಕುರುಡ,**
**ಇವನೂ ಕುರುಡ ನೋಡಾ, ಕೇದಾರ ಗುರುದೇವಾ.**

ಕಾಯವೆಂಬುದು ಕರಡಿಗೆ ಇದ್ದಂತೆ. ಅದರಲ್ಲಿ ಅರಿವಿನ ಮಲ್ಲಯ್ಯ ಕುಳಿತಿದ್ದಾನೆ. ಕಾಯವನ್ನು ಆವರಿಸಿದ ಮನಕ್ಕೆ ದರುಶನ ಮಾಡಲು ಸಾಧ್ಯವಾಗದಿದ್ದರೆ ಅದು ಕುರುಡ ಮನ. ಆತನ ಒಡನೊಡನೆ ನಡೆದರೆ ಮೈಯೆಲ್ಲಾ ಕಣ್ಣಾಗಿ ತೋರುತ್ತಾನೆ. ಮನ ಆತನೊಡನೆ ನಡೆಯದಿದ್ದರೆ ಕಪಿಲಸಿದ್ಧಮಲ್ಲಿಕಾರ್ಜುನನು, ನೋಡಲು ಬಾರದ ಮನವೂ ಕುರುಡ ನೋಡಾ ಎಂದು ಸಿದ್ಧರಾಮ ಶಿವಯೋಗಿಗಳು ಕೇದಾರ ಗುರುಗಳೊಂದಿಗೆ ಮಾತನಾಡಿದ್ದಾರೆ.

**1793**

**ಕಣ್ಣೊಳಗೆ ಮೂರು ಬಣ್ಣದ ಚಿತ್ರದಲ್ಲಿ,**
**ಚಿನ್ಮರೂಪು ಹೊಳೆಯುತ್ತಿದೆ ನೋಡಾ.**
**ಕಣ್ಣಾರ ನೋಡಿದರೆ ಮುಕ್ಕಣ್ಣನ ರೂಪು ಅದೆ ನೋಡಾ.**
**ನೋಡಿದರೆ ಅವ ಹಾಳು ಮಣ್ಣು ನೋಡಾ.**
**ಮೂಲೋಕದೆರೆಯ ಕಪಿಲಸಿದ್ಧಮಲ್ಲಿಕಾರ್ಜುನನು.**

ಕಣ್ಣುಗಳು ಎರಡಾದರು ಕಾಣುವ ದೃಶ್ಯ ಒಂದೆ. ಇಂತಹ ಕಣ್ಣೊಂದರಲ್ಲಿ ಮೂರು ಬಣ್ಣದ ಚಿತ್ರದಲ್ಲಿ ಚಿನ್ಮಯ ರೂಪು ಹೊಳೆಯುತ್ತಿದೆ.

ಕಣ್ಣೊಂದರಲ್ಲಿ ಎರಡು ದೃಶ್ಯಗಳಿವೆ. ಕಣ್ಣು ಎರಡೂ ದೃಶ್ಯಗಳಿಗೂ ಉಪಕರಣವಾಗಿದೆ. ಒಂದು ಮನೋಮಯವಾದ ದೃಶ್ಯ ಮತ್ತೊಂದು ಮೂರು ಲೋಕದ ಒಡೆಯ ಅರಿವಿನ ಮಲ್ಲಯ್ಯನ ದೃಶ್ಯ . ಈ ಎರಡು ದೃಶ್ಯಗಳಿಗೆ ಕಣ್ಣು ಉಪಕರಣವಾಗಿದೆ. ಹೀಗಾಗಿ ಕಾಯಕ್ಕೆ ಮೂರು ಕಣ್ಣುಗಳಿವೆ.

ಮೂರು ಕಣ್ಣುಗಳುಳ್ಳವನನ್ನು ಮುಕ್ಕಣ್ಣ ಎಂದು ಕರೆಯುತ್ತಾನೆ. ಮನೋಮಯವಾದ ಕಣ್ಣು ಎಂದರೆ ಇದು ಕುರುಡುಗಣ್ಣು. ಕಾಣುತ್ತದೆ ಆದರೆ ಅರಿವಿನಿಂದ ನೋಡುವ ಶಕ್ತಿ ಇದಕ್ಕಿಲ್ಲ. ಹಳದಿ ಲೋಹವನ್ನು ನೋಡಿ ಬಂಗಾರ ಎನ್ನುತ್ತದೆ. ಹೆಣ್ಣು ಗಂಡು ಎಂದು ನೋಡಿ ಕಾಯವನ್ನು ಕಾಮಕ್ಕೆ ಬಲಿಕೊಡುತ್ತದೆ. ಇಂತಹ ಮನೋಮಯವಾದ ಕಣ್ಣು ಅರಿವಿನ ಮಲ್ಲಯ್ಯನ ಕಣ್ಣಲ್ಲಿ ಸಂಗಮವಾದರೆ ಸುಟ್ಟು ಬೂದಿಯಾಗುತ್ತದೆ. ಇದು ಮುಕ್ಕಣ್ಣನ ಕಣ್ಣು.

**1794**

**ಗುರು ತೋರಿದ ಕೀಲು ಇಂದರಿದು ಬಂದಿತ್ತೆಲಗವ್ವಾ.**
**ನಾರೀಪರನೆಂಬಲ್ಲಿ ನಾರಿಯಾದೆನೆಲಗವ್ವಾ, ಇನ್ನಾರೆ.**
**ನೆರೆಯಬೇಕಾದಡೆ, ಗಂಡ ಕಪಿಲಸಿದ್ಧಮಲ್ಲಿಕಾರ್ಜುನ,**
**ಬಯಲಿಗೆ ಬಯಲಾಗಿ ಏಕವಾದೆನೆಲಗವ್ವಾ.**

ಪ್ರತಿ ಕಾಯದಲ್ಲಿ ಅರಿವು ಎನ್ನವ ಗುರುದೇವನು ಸಂಗಮವಾಗಿದ್ದಾನೆ. ತಾನಿದ್ದ ಕಾಯವನ್ನು ಹಾಗೂ ಮನವನ್ನು ಕೈಹಿಡಿದು ನಡೆಸುತ್ತಾ ತನ್ನಂತೆ ಮಾಡಿಕೊಳ್ಳುವುದಕ್ಕಾಗಿ ಕಾತುರನಾಗಿದ್ದಾನೆ. ಆದರೂ ಈ ಸಂಗತಿಯನ್ನು ಮನ ಅರಿಯುತ್ತಿಲ್ಲ. ಈ ಮನಕ್ಕೆ ಅರಿವಾಗಬೇಕಾದರೆ ಅರಿತರಿತು ಆ ಅರಿವೆ ತಾನಾದ ಗುರುದೇವನು ಅರಿವಿನತ್ತ ಹೋಗುವ ಸೂತ್ರವನ್ನು ಮನಕ್ಕೆ ನೀಡಬೇಕು.

ಮನ ಇಂತಹ ಗುರುದೇವನನ್ನು ಹುಡುಕಬೇಕು ಇಂತಹ ಗುರುದೇವ ಮನಕ್ಕೆ ಸಿಕ್ಕರೆ ಮನವನ್ನೇ ಸಂಗಾತಿಯನ್ನಾಗಿಸಿ ಅರಿವೆಂಬ ಗುರುದೇವನನ್ನು ಪತಿಯನ್ನಾಗಿ ಮಾಡಿ ಸತಿ–ಪತಿಗಳನ್ನು ಒಂದಾಗಿಸಿ ಬಯಲಾಗುತ್ತಾನೆ.

**1795**

**ಎಲ್ಲರ ಬಣ್ಣಿಸಬಹುದು, ಎನ್ನ ಗುರುದೇವನ ಬಣ್ಣಿಸಬಾರದು.**
**ಅಲ್ಲನ ನುಡಿಸಬಹುದು, ಎನ್ನನಲ್ಲ ಕಪಿಲಸಿದ್ಧಮಲ್ಲೇಂದ್ರನ ರೂಹು,**
**ಚೆನ್ನಬಸವನ ನುಡಿಸಿ ಗೆಲಬಾರದು, ಖುಲ್ಲತನದಿಂದಾದಡೂ ಕಲ್ಲಯ್ಯಾ .**

ಅಂಗದಲ್ಲಿಯೆ ಸಂಗಮವಾದ ಮನದ ಬಣ್ಣನೆಗೆ ನಿಲುಕಲಾರ ಗುರುದೇವ. ಅಂಗವುಳ್ಳವರನ್ನು ಬಣ್ಣಿಸಬಹುದು ಅವರು ಬಣ್ಣನೆಗೆ ಸಿಕ್ಕುವರು. ಗುರುದೇವನಿಗೆ ಅಂಗವಿಲ್ಲ. ಅಂಗದಲ್ಲಿಯೇ ಇದ್ದು ಅಂಗದ ಹೌದು ಅಲ್ಲಗಳನ್ನು ಗಮನಿಸುವನು, ಬಣ್ಣಿಸುವ ಮನಕ್ಕೆ ಪೆಟ್ಟು ಕೊಟ್ಟು ತನ್ನಂತೆ ಆಗಲು ಕೈಹಿಡಿದು ನಡೆಸುವನು.

ಅಂಗದಲ್ಲಿಯೇ ಸಂಗಮವಾದ ಗುರುದೇವನನ್ನೇ ನಲ್ಲನನ್ನಾಗಿಸಿಕೊಂಡು ಮನ ಆತನಿಗೆ ನಲ್ಲೆಯಾದರೆ ಆ ನಲ್ಲೆಯನ್ನು ಬಿಗಿದಪ್ಪಿಕೊಂಡು ತನ್ನಂತೆ ಮಾಡಿಕೊಳ್ಳುವನು. ಅಂತಹ ನಲ್ಲನನ್ನು ಗೆಲ್ಲಬಾರದೆಂದು ಕಲ್ಲಯ್ಯ ಶರಣರಿಗೆ ಹೇಳಿದ್ದಾರೆ ಸಿದ್ಧರಾಮಶಿವಯೋಗಿಗಳು.

**1796**

**ಬಂದೆಹೆನೆಂದು ಹೇಳಿದ ಬಳಿಕ ಬಾರದೆ ಇಪ್ಪನೆ ಹೇಳಾ, ಭಾಳಲೋಚನನು ?**
**ನಿಂದೆಹೆನೆಂದು ನಿರೂಪಿಸಿದ ಬಳಿಕ ನಿಲ್ಲದಿಪ್ಪನೆ ?**
**ಇಂದುಧರ ಬಂದಡೆ ಬಹು ಲೇಸು,ನಿಂದಡೆ ಎರಡು ಲೇಸು.**
**ಬಂದೆಹೆನೆಂದು ಬಾರದಿದ್ದಡೆ, ನಿಂದೆಹೆನೆಂದು ನಿಂದಿರದಿದ್ದಡೆ,**
**ಇಂದು ಈ ಪೂಜೆ ಸಮಾಪ್ತಿ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಭಾಳಲೋಚನನು ಒಮ್ಮಿಲ್ಲ ಒಮ್ಮೆ ಬಂದು ತನ್ನಂತೆ ಮಾಡಿಕೊಳ್ಳವನು. ಆತ ಬರುವ ಹಾದಿಯನ್ನು ಕಾಯಬೇಕು. ಇಂದು ಬಂದಾನೋ ನಾಳೆ ಬಂದಾನೋ ನನ್ನ ಸರ್ವ ಅಜ್ಞಾನವನ್ನು ಎಂದು ಕಳೆದಾನೋ ಎಂದು ಆತನಿಗಾಗಿ ಕಾಯುವ ಭಕ್ತನ ಹಾದಿ ಕಾಯುತ್ತಲೆ ನಿಂದಿರುವನು. ಇಂದುಧರ ಬಂದಡೆ ಬಹುಲೇಸು, ನಿಂದಡೆ ಅತಿ ಲೇಸು. ಬಂದೆಹೆನೆಂದು ಬರಾದಿದ್ದಡೆ ನಿಂದೆಹೆನೆಂದು ನಿಂದಿರದಿದ್ದಡೆ ಇಂದು ಈ ಪೂಜೆ ಸಮಾಪ್ತಿ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ.

**1797**

**ಸಾಕುವವರು ತಾವಾದ ಬಳಿಕ, ನೂಕುವವರು ತಾವಾಗಬಾರದಯ್ಯ.**
**ಹೇಳುವವರು ತಾವಾದ ಬಳಿಕ, ಈ ಪ್ರಪಂಚದಲ್ಲೆನ್ನ ಗೋಳಿಡಿಸಬಾರದಯ್ಯ .**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ನನ್ನನ್ನು ಸಾಕುವವನು ನನ್ನ ಹಡೆದ ತಂದೆಯೇ ಆಗಿದ್ದಾನೆ. ನಾನು ಆತನಿಗೆ ಕಂದನಾಗಿದ್ದೇನೆ. ಈತ ನನ್ನ ಅಂಗದಲ್ಲಿಯೇ ಇದ್ದು ನಾನು ಎಡವದಂತೆ ಸದಾ ನನ್ನನ್ನು ಕಾಯುತ್ತಿರುವನು.

ಸಾಕುವವನೆ ನನ್ನನ್ನು ನೂಕಬಾರದು. ಹಾಗೆಯೇ ಈ ಪ್ರಪಂಚದಲ್ಲಿ ತನ್ನ ಹೊರತು ನನಗೆ ಯಾರೂ ಇಲ್ಲ. ಬೇಡಿದರೆ ನಾನು ಆತನನ್ನೇ ಬೇಡುವೆನು. ಬೇಡುವ ನನ್ನನ್ನು ಈ ಪರಿ ಗೋಳಿಡಿಸಬಾರದು ನೋಡಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.

**1798**

**ಅಲ್ಲಿರುವಾತನ ರೂಹು ನೀವಲ್ಲೆಂಬಡೆ.**
**ಅಲ್ಲಿರುವಾತನ ರೂಹು ದೇವಾಲಯವ ತೆಗೆಸಯ್ಯಾ .**
**ಅಲ್ಲಿಯ ರೂಹು ಇಲ್ಲಿಯ ರೂಹು ಕಪಿಲಸಿದ್ಧಮಲ್ಲಿಕಾರ್ಜುನನೆಂದು ಕಂಡೆನು.**
**ಅಲ್ಲಮದೇವಾ,ಇನ್ನಾದರೂ ಕರುಣಿಸಯ್ಯಾ .**

ದೇವಾಲಯದಲ್ಲಿರುವ ದೇವರು ದೇವರಲ್ಲ ಎಂದು ಹೇಳಿದರೆ ನಾನು ಆ ದೇವಾಲಯವನ್ನು ಕಟ್ಟಿಸಲು ಹೋದರೆ ನೀನು ಏಕೆ ಪ್ರೇರಣೆ ನೀಡಿದೆ. ಆ ದೇವಾಲಯವನ್ನು ತೆಗೆಸಯ್ಯಾ ನೀನೆ ಅವರಿಗೆ ಪ್ರೇರಣೆ ನೀಡಯ್ಯಾ .

ದೇವಾಲಯ ಒಂದೆ ಅದರೊಳಗಿದ್ದ ದೇವರು ಒಂದೆ. ಪೌಳಿ, ಕಂಭ, ಪ್ರಾಂಗಣ ಒಂದೇ ಎಂದು ಅವರಿಗೆ ನೀನೆ ತಿಳಿಸಯ್ಯಾ . ಅಲ್ಲಿಯ ರೂಪ ಇಲ್ಲಿಯ ರೂಪ

ಕಪಿಲಸಿದ್ಧಮಲ್ಲಿಕಾರ್ಜುನನೆಂದು ಕಂಡೆ ನೋಡಾ ಅಲ್ಲಮದೇವಾ ಇನ್ನಾದರೂ ನನಗೆ ಕರುಣಿಸು.

**1799**

**ನಿರಾಕಾರ ಮೂರ್ತಿ ನೀನಾಕಾರಕ್ಕೆ ಬಂದೆ ಎನ್ನಲಾರೆ,**
**ಆಕಾರ ಮುರ್ತಿ ನಿರಾಕಾರಕ್ಕೆ ಹೋಹುದೆಂದೆನಲಾರೆ,**
**ನಿಂದಡೆ ನೆರಳಿಲ್ಲ, ನೊಡಿದರೆ ರೂಹಿಲ್ಲ.**
**ಮುಟ್ಟಿದಡೆ ಸ್ಪರ್ಶವಿಲ್ಲ, ನಡೆದಡೆ ಹೆಜ್ಜೆಯಿಲ್ಲ,**
**ನೀನೊಡೆಯ ಕಪಿಲಸಿದ್ಧಮಲ್ಲಿಕಾರ್ಜುನನಲ್ಲೆನ್ನಬಹುದು ?**

ಅಯ್ಯಾ ಕಪಿಲಸಿದ್ದಮಲ್ಲಿಕಾರ್ಜುನನೆ ನೀನು ಒಡಲೊಳಗಿದ್ದು ಒಡಲಿಂಗೆ ಆಧಾರವಾಗಿ ಒಡಲು ಸೋಂಕದೆ ಒಡಲು ಬೆಳಗುವ ನಿನ್ನನ್ನು ಸಾಕಾರ ಮೂರ್ತಿ ಎಂದು ಹೇಗೆ ಹೇಳಲಿ?

ನಿನ್ನನ್ನು ಆಕಾರ ಮೂರ್ತಿ ಎಂದು ಹೇಗೆ ಹೇಳಲಿ. ನೀನು ನಿರಾಕಾಕ್ಕೆ ಹೋಗಿರುವೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ನೀನು ಆಕಾರದಲ್ಲಿರುವೆ. ಆಕಾರದಲ್ಲಿ ನಿಂತ ನಿನಗೆ ನೆರಳಿಲ್ಲ. ನೋಡಲು ಸ್ಪರ್ಶವಿಲ್ಲ, ನಡೆಯಲು ಹೋದರೆ ನಿನಗೆ ಹೆಜ್ಜೆಯಿಲ್ಲ. ಆದರೂ ನೀನು ಒಡಲೊಡೆಯ. ಒಡಲೊಳಗೆ ಇದ್ದು ಇಲ್ಲದಂತಿರುವ ಕಪಿಲಸಿದ್ಧಮಲ್ಲಿಕಾರ್ಜುನನು ನೀನು ಅಲ್ಲ ಎನ್ನಬಹುದೆ?

**1800**

**ಬಾಣವನೊಬ್ಬ ಲಿಂಗಪೂಜಕ. ಮಾದಾರ ಚೆನ್ನಯ್ಯನೊಬ್ಬ ಲಿಂಗಪೂಜಕ.**
**ಈ ಕಪಿಲಸಿದ್ಧಮಲ್ಲಿಕಾರ್ಜುನನ ಮಹಾಮಂದಿರದಲ್ಲಿ, ನಾನೊಬ್ಬ ಲಿಂಗಪೂಜಕ.**

ಅಂಗದಲ್ಲಿಯೆ ಸಂಗಮವಾದ ಲಿಂಗಯ್ಯನನ್ನು ಕಂಡು ಆ ಲಿಂಗಯ್ಯನನ್ನು ನಿರಂತರ ಪೂಜಿಸಿದ ಬಾಣನು ಅವನೊಬ್ಬ ಲಿಂಗಪೂಜಕ. ಮಾದಾರ ಚೆನ್ನಯ್ಯನ ಅಂಬಲಿಗೆ ಆಸೆಪಟ್ಟು ಆ ಅಂಬಲಿಯನ್ನು ಸವಿದ ಲಿಂಗಯ್ಯನನ್ನು ಪೂಜಿಸಿದ ಮಾದಾರ ಚೆನ್ನಯ್ಯನೊಬ್ಬ ಲಿಂಗ ಪೂಜಕ.

ಕಾಯ ಕಪಿಲಸಿದ್ಧಮಲ್ಲಿಕಾರ್ಜುನನಿದ್ದ ಮಹಾಮಂದಿರ ಆ ಮಂದಿರದಲ್ಲಿದ್ದ ನಿನ್ನನ್ನು ಪೂಜಿಸಿದ ನಾನೊಬ್ಬ ಲಿಂಗಪೂಜಕ.

**1801**

**ಎಲ್ಲರು ಲಿಂಗವ ಪೂಜಿಸಿ ಮಹಾಪದಸ್ಥರಾದಪರಿಯನೊರವೆ ನೋಡಾ.**
**ಸ್ಫಟಿಕ ಶಿಲಾಮಯ ಲಿಂಗವ ಪೂಜಿಸಿ,**
**ಸತ್ಯ ಲೋಕವ ಪಡೆದ ನೋಡಾ, ವಿಧಾತನು.**
**ಇಂದ್ರನೀಲಮಣಿಲಿಂಗವ ಪೂಜಿಸಿ,**
**ವೈಕುಂಠವ ಪಡೆದ ನೋಡಾ, ನಾರಾಯಣನು.**
**ಮರಕತಲಿಂಗವ ಪೂಜಿಸಿ ಅಮರಾವತಿಯ ಪಡೆದ ನೋಡಾ, ಉಪೇಂದ್ರನು.**
**ಚಿಂತಾಮಣಿ ಲಿಂಗವ ಪೂಜಿಸಿ,**
**ಅನಂತ ಸ್ತ್ರೀಯರ ಪಡೆದ ನೋಡಾ ಇಂದ್ರನು.**

ಸುವರ್ಣ ಲಿಂಗವ ಪೂಜಿಸಿ ಅಳಕಾವತಿ ನವನಿಧಿ ಉಚ್ಚೈಶ್ರವ,
ಪರಮಾತ್ಮಮಿತ್ರತ್ವ ಪಡೆದ ನೋಡಾ, ಕುಬೇರನು. ಹಿತ್ತಾಳೆಯ ಲಿಂಗವ ಪೂಜಿಸಿ,
ಸರ್ವಸುಖಿತ್ವ ಸರ್ವ ದ್ರವ್ಯತ್ವ ಶಿವಕರುಣತ್ವ ಪಡೆದ ನೋಡಾ ಪವನನು.
ಕಾಂಸ್ಯಮಯ ಲಿಂಗವ ಪೂಜಿಸಿ, ಅಷ್ಟದಿಕ್ಕುಗಳ ಪಡೆದರು ನೋಡಾ, ವಸುಗಳು.
ಮೃಣ್ಮಯಲಿಂಗವ ಪೂಜಿಸಿ,
ಸಂಜೀವಿನಿ ಮೊದಲಾದೌಷಧಿಗಳ ಪಡೆದರು ನೋಡಾ ಅಶ್ವಿನೀಕುಮಾರರು.
ಶ್ವೇತ ಶಿಲಾಮಯ ಲಿಂಗವ ಪೂಜಿಸಿ,
ಮಹತ್ಪ್ರಭೆ ಸಹಸ್ರಕಿರಣ ಪಡೆದ ನೋಡಾ ಸೂರ್ಯನು. ಮೌಕ್ತಿಕ ಲಿಂಗವ ಪೂಜಿಸಿ,
ಸವರಸಸಿ ಅಂಕುರತ್ವ ಶಿವಮೌಳಿಧಾರಣತ್ವ ಪಡೆದ ನೋಡಾ ಚಂದ್ರನು.
ವಿಚಿತ್ರವರ್ಣದ ಲಿಂಗವ ಪೂಜಿಸಿ,
ತಮ್ಮ ತಮ್ಮ ಜನನ ಮಹತ್ವ ಪಡೆದವು ನೋಡಾ ನಕ್ಷತ್ರಗಳು.
ಮಚ್ಚಮಯಲಿಂಗವ ಪೂಜಿಸಿ,
ಸರ್ವಶಾಸ್ತ್ರಧುರೀಣತ್ವವ ಪಡೆದ ನೋಡಾ ಬುಧನು.
ಕಬ್ಬಿಣ ಲಿಂಗವ ಪೂಜಿಸಿ ದೈತ್ಯಾಚಾರತ್ವವ ಪಡೆದ ನೋಡಾ ಶುಕ್ರನು.
ವಿದ್ರುಮಲಿಂಗವ ಪೂಜಿಸಿ, ರಸಿಕತ್ವ ಪಡೆದ ನೋಡಾ ಮಂಗಳನು.
ಮಾಣಿಕ್ಯಲಿಂಗವ ಪೂಜಿಸಿ, ಸರ್ವಮಂತ್ರ ಕುಶಲತ್ವ ಪಡೆದ ನೋಡಾ ಬೃಹಸ್ಪತಿಯು.
ಅಧೋಮಯಲಿಂಗವ ಪೂಜಿಸಿ,
ಸರ್ವರಲ್ಲಿ ಕಷ್ಟತ್ವ ತನ್ನುಪಾಸಕರಲ್ಲಿ ಸಖಿತ್ವ ಪಡೆದ ನೋಡಾ, ಶನಿಯು.
ಧೂಮ್ರಮಯ ಲಿಂಗವ ಪೂಜಿಸಿ, ಅಮೃತವ ಪಡೆದರು ನೋಡಾ, ರಾಹು ಕೇತುಗಳು.
ಗೋಮಯಲಿಂಗವ ಪೂಜಿಸಿ, ಕಲ್ಪತರುಗಳ ಪಡೆದರು ನೋಡಾ, ನಿರುತಿಯರು.
ಕುಶಲಿಂಗವ ಪೂಜಿಸಿ, ಅನೇಕ ಸಿದ್ಧಿಗಳ ಪಡೆದರು ನೋಡಾ, ಸಿದ್ಧರು.
ಮೂಲಿಕೆಯ ಲಿಂಗವ ಪೂಜಿಸಿ,
ಮರಣದೂರತ್ವ ದುಃಖಸಮೀಪತ್ವ ಪಡೆದರು ನೋಡಾ- ಧನ್ವಂತರಿಗಳು.
ಶಂಖಲಿಂಗವ ಪೂಜಿಸಿ, ಶಿವಪ್ರಸನ್ನತ್ವ ಪಡೆದ ನೋಡಾ, ಮಾರ್ಕಂಡೇಯನು.
ಪವಿತ್ರ ಲಿಂಗವ ಪೂಜಿಸಿ, ಅಂತಃಕರಣತ್ವ ಪಡೆದ ನೋಡಾ, ಸರ್ವರಲ್ಲಿ ವಸಿಷ್ಠನು.
ದರ್ಭಸ್ತಂಭ ಲಿಂಗವ ಪೂಜಿಸಿ, ಅರ್ಧಬ್ರಹ್ಮತ್ವ ಪಡೆದ ನೋಡಾ, ವಿಶ್ವಾಮಿತ್ರನು.
ಕೂರ್ಚಲಿಂಗವ ಪೂಜಿಸಿ, ಸರ್ವದೇವತಾಶಿಕ್ಷತ್ವ ಪಡೆದ ನೋಡಾ, ವಾಮದೇವನು.
ತಮ್ಮ ಜ್ಞಾನಸ್ವರೂಪಲಿಂಗವ ಪೂಜಿಸಿ,
ಜ್ಞಾನವ ಪಡೆದರು ನೋಡಾ, ಸನಕಾದಿ ಮಹಾಮುನಿಗಳು.
ಶಿರೋರತ್ನ ಲಿಂಗವ ಪೂಜಿಸಿ, ದಿವ್ಯ ಸುಂದರತ್ವ,
ದಿವ್ಯ ಬುದ್ಧಿಶಕ್ತಿತ್ವ ಅನೇಕ ವರ್ಷ ನಿರ್ಜರಕತ್ವ ಪಡೆದರು ನೋಡಾ, ನಾಗರ್ಕಳು.
ಕೀಟಾಕೃತಿಲಿಂಗವ ಪೂಜಿಸಿ, ಶಿವಸಭಾಪ್ರಸನ್ನತ್ವ ಪಡೆದರು ನೋಡಾ, ರಾಕ್ಷಸರು.
ತ್ರಿಪುರಲಿಂಗವ ಪೂಜಿಸಿ, ಅನೇಕ ಪುರಗಮನತ್ವ ಕಿಂಚಿತ್ ಕಿಂಚಿತ್
ಕುಟಿಲತ್ವ ಪಡೆದರು ನೋಡಾ, ಬ್ರಹ್ಮರಾಕ್ಷಸ ಪಿಶಾಚಿಗಳು.

**ತ್ರಿಲೋಹಲಿಂಗವ ಪೂಜಿಸಿ, ಅದೃಶ್ಯತ್ವ ಗೋಪನೀಯ ಕಾರ್ಯತ್ವ ಪಡೆದರು ನೋಡಾ,**
**ಗುಹ್ಯಕದೇವತೆಗಳು. ಪಂಚಲೋಹಲಿಂಗವ ಪೂಜಿಸಿ,**
**ಅನೇಕ ಮಂತ್ರಸಿದ್ಧಿತ್ವ ಪಡೆದರು ನೋಡಾ, ಶಾಬರಾದಿ ಮಾಂತ್ರಿಕರು.**
**ವಜ್ರಲಿಂಗವ ಪೂಜಿಸಿ, ನಿತ್ಯ ಶಿವಾಭಿಷೇಕ ಮಾಡುವರು ನೋಡಾ, ಸಪ್ತ ಮಾತೃಕೆಯರು.**
**ಪ್ರಸೂನವ ಲಿಂಗವ ಪೂಜಿಸಿ, ಮೂರೂಲೋಕವ ತನ್ನೊಳ್ಮಾಡಿದ ನೋಡಾ, ಮನ್ಮಥರು.**
**ಇಚ್ಛಾಲಿಂಗವ ಪೂಜಿಸಿ, ಆದಿನಾರಾಯಣನ ಪಡೆದಳು ನೋಡಾ, ಲಕ್ಷ್ಮೀಯು.**
**ಕ್ರಿಯಾಲಿಂಗವ ಪೂಜಿಸಿ, ಬ್ರಹ್ಮನ ಪಡೆದಳು ನೋಡಾ, ಸರಸ್ವತಿಯು.**
**ಪತಿಯೆಂಬ ಲಿಂಗವ ಪೂಜಿಸಿ, ಪತಿವ್ರತತ್ವ ಪಡೆದರು ನೋಡಾ, ಅರುಂಧತಿ ಅನುಸೂಯೆ,**
**ಅನಲಾಯಿ ಸಾವಿತ್ರಿಯರು. ಬಿಲ್ವಫಲ ಲಿಂಗವ ಪೂಜಿಸಿ,**
**ನಮ್ಮ ಪ್ರಥಮಪಾದವ ಪಡೆದರು ನೋಡಾ,ಧರ್ಮದೇವತೆಗಳು.**
**ಜಂಬೂಫಲ ಲಿಂಗವ ಪೂಜಿಸಿ, ಸರ್ವರ ಪ್ರಾಣಾಕರ್ಷಣವ ಪಡೆದಳು ನೋಡಾ,**
**ಮೃತ್ಯುದೇವತೆ. ನಿಂಬಫಲ ಲಿಂಗವ ಪೂಜಿಸಿ,**
**ಆರೋಗ್ಯ ಪಡೆದಳು ನೋಡಾ ಆರೋಗ್ಯ ದೇವತೆ.**
**ಆಕಾಶ ಲಿಂಗವ ಪೂಜಿಸಿ ಬಯಲ ಪಡೆದರು ನೋಡಾ, ದಿಗಂಬರರು.**
**ಧ್ವಜಲಿಂಗವ ಪೂಜಿಸಿ, ಖೇಚರತ್ವ ಪಡೆದರು ನೋಡಾ, ಗಗನಚಾರಿಗಳು.**
**ಮೋಹನ ಲಿಂಗವ ಪೂಜಿಸಿ, ಸರ್ವಜನವಶ್ಯತ್ವ ಪಡೆದವು ನೋಡಾ, ಪಶುಪ್ರಾಣಿಗಳು.**
**ಬೀಜಧಾನ್ಯ ಲಿಂಗವ ಪೂಜಿಸಿ, ಸರ್ವಧಾನ್ಯವ ಪಡೆದರು ನೋಡಾ, ಕರ್ಷಕರು.**
**ಇಂತಪ್ಪ ನಾನಾಕೃತಿ ಲಿಂಗವ ಪೂಜಿಸಿ, ಕಲಕೆಲವು ಪದಸ್ಥರಾದರು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಲಿಂಗದಲ್ಲಿ.**

ವಿಧಾತನು ಸ್ಫಟಿಕ ಶಿಲೆಯ ಲಿಂಗ ಪೂಜಿಸಿ ಸತ್ಯ ಲೋಕವನ್ನು ಪಡೆದ. ನಾರಾಯಣನು ಇಂದ್ರನೀಲ ಮಣಿಲಿಂಗವ ಪೂಜಿಸಿ ವೈಕುಂಠವನ್ನು ಪಡೆದ, ಉಪೇಂದ್ರನು ಮರಕತ ಲಿಂಗವನು ಪೂಜಿಸಿ ಅಮರಾವತಿಯನ್ನು ಪಡೆದ. ಇಂದ್ರನು ಚಿಂತಾಮಣಿ ಲಿಂಗವ ಪೂಜಿಸಿ ಅನಂತ ಸ್ತ್ರೀಯರನ್ನು ಪಡೆದ. ಕುಬೇರನು ಸುವರ್ಣ ಲಿಂಗವ ಪೂಜಿಸಿ ನವನಿಧಿ ಹಾಗೂ ಪರಮಾತ್ಮನ ಮಿತ್ರತ್ವ ಪಡೆದನು. ಪವನನು ಹಿತ್ತಾಳೆಯ ಲಿಂಗವ ಪೂಜಿಸಿ ಸರ್ವಸುಖ ಸರ್ವ ದ್ರವ್ಯ ಶಿವಕರುಣೆಯನ್ನು ಪಡೆದ. ವಸುಗಳು ಕಾಂಸ್ಯಮಯಲಿಂಗವ ಪೂಜಿಸಿ ಅಷ್ಟದಿಕ್ಕುಗಳನ್ನು ಪಡೆದರು. ಅಶ್ವಿನೀ ಕುಮಾರರು ಮೃಣ್ಮಯಲಿಂಗವನ್ನು ಪೂಜಿಸಿ ಸಂಜೀವಿನಿ ಮೊದಲಾದ ಔಷಧಿಗಳನ್ನು ಪಡೆದರು. ಸೂರ್ಯನು ಶ್ವೇತ ಶಿಲಾಮಯ ಲಿಂಗವನ್ನು ಪೂಜಿಸಿ ಮಹಾಪ್ರಭೆಯ ಸಹಸ್ರ ಕಿರಣಗಳನ್ನು ಪಡೆದ.

ಚಂದ್ರನು ಮೌಕ್ತಿಕ ಲಿಂಗವನ್ನು ಪೂಜಿಸಿ ಸರ್ವಸಸಿ ಅಂಕುರತ್ವ ಶಿವಮುರಳಿ ಧಾರಳತ್ವ ಪಡೆದರು. ನಕ್ಷತ್ರಗಳು ವಿಚಿತ್ರ ವರ್ಣದ ಲಿಂಗವನ್ನು ಪೂಜಿಸಿ ತಮ್ಮ ತಮ್ಮ ಜನನದ ಮಹತ್ವವನ್ನು ಪಡೆದವು. ಬುಧನು ಪಚ್ಚಮಯ ಲಿಂಗವನ್ನು ಪೂಜಿಸಿ ಸರ್ವಶಾಸ್ತ್ರತ್ವ ದುರೀಣತ್ವ ಪಡೆದ. ಶುಕ್ರನು ಕಬ್ಬಿಣದ ಲಿಂಗವನ್ನು ಪೂಜಿಸಿ ದೈತ್ಯಾಚಾರತ್ವವನ್ನು ಪಡೆದ. ಮಂಗಳನು ವಿದ್ರುಮ ಲಿಂಗವನ್ನು ಪೂಜಿಸಿ ಮನುಷ್ಯತ್ವವನ್ನು ಪಡೆದನು. ಬೃಹಸ್ಪತಿಯು ಮಾಣಿಕ್ಯ ಲಿಂಗವ ಪೂಜಿಸಿ ಸರ್ವಮಂತ್ರ ಕುಶಲತ್ವ ಪಡೆದನು, ಶನಿಯು ಅಧೋಮಯ ಲಿಂಗವ ಪೂಜಿಸಿ ಸರ್ವರಲ್ಲಿ ಕಷ್ಟತ್ವ ತನ್ನ ಉಪಾಸಕರಲ್ಲಿ ಸಕಲತ್ವ ಪಡೆದನು. ರಾಹು ಕೇತುಗಳು ಧೂಮ್ರಮಯ ಲಿಂಗವನ್ನು ಪೂಜಿಸಿ

ಅಮೃತವ ಪಡೆದರು. ನಿರುತಿಯರು ಗೋಮಯ ಲಿಂಗವ ಪೂಜಿಸಿ ಕಲ್ಪತರುಮಯ ಲಿಂಗವನ್ನು ಪಡೆದರು.

ಸಿದ್ಧರು ಕುಶಲ ಲಿಂಗವ ಪೂಜಿಸಿ ಅನೇಕ ಸಿದ್ಧಿಗಳ ಪಡೆದರು. ಧನ್ವಂತರಿಗಳು ಮೂಲಿಕೆ ಲಿಂಗವನ್ನು ಪೂಜಿಸಿ ದೂರತ್ವ ದುಃಖ ಸುಮಿೀತ್ರ ಪಡೆದರು. ಮಾರ್ಕಂಡೇಯನು ಶಂಖ ಲಿಂಗವ ಪೂಜಿಸಿ ಶಿವಪ್ರಸನ್ನತ್ವ ಪಡೆದನು. ವಸಿಷ್ಠನು ಪವಿತ್ರ ಲಿಂಗವನ್ನು ಪೂಜಿಸಿ ಅಂತಃಕರಣತ್ವ ಪಡೆದರು. ವಿಶ್ವಾಮಿತ್ರ ದರ್ಭಸ್ಥ ಲಿಂಗವ ಪೂಜಿಸಿ ಅರ್ಧ ಬ್ರಹ್ಮತ್ವ ಪಡೆದನು. ವಾಮದೇವನು ಕೂರ್ಚಲಿಂಗವ ಪೂಜಿಸಿ ಸರ್ವದೇವತಾ ಶಿಕ್ಷತ್ವವನ್ನು ಪಡೆದನು.

ಸನಕಾದಿ ಮಹಾಮುನಿಗಳು ತಮ್ಮದೇ ಆದ ಜ್ಞಾನಸ್ವರೂಪದ ಲಿಂಗವನ್ನು ಪೂಜಿಸಿ ಜ್ಞಾನವನ್ನು ಪಡೆದರು. ನಾಗರ್ಕಳು ಶಿರೋರತ್ನಲಿಂಗಗಳನ್ನು ಪೂಜಿಸಿ ದಿವ್ಯಸುಂದರತ್ವ ನಿರ್ಜರತ್ವ ಪಡೆದರು. ರಾಕ್ಷಸರು ಕೀಟಾಕೃತಿಯ ಲಿಂಗವ ಪೂಜಿಸಿ ಶಿವಸಬಾ ಪ್ರಸನ್ನತ್ವ ಪಡೆದರು, ಬ್ರಹ್ಮರಾಕ್ಷಸ ಪಿಶಾಚಿಗಳು ತ್ರಿಪುರಲಿಂಗವ ಪೂಜಿಸಿ ಕುಟೀಲತ್ವ ಪಡೆದರು.

ಗುಹ್ಯಕ ದೇವತೆಗಳು ತ್ರಿಲೋಹ ಲಿಂಗವ ಪೂಜಿಸಿ ಅದೃಶ್ಯತ್ವ ಗೌಪ್ಯನೀಯ ಕಾಯವ ಪಡೆದರು. ಮಾಂತ್ರಿಕರು ಪಂಚಲೋಹ ಲಿಂಗವನ್ನು ಪೂಜಿಸಿ ಮಂತ್ರಸಿದ್ಧಿಯನ್ನು ಪಡೆದರು. ಸಪ್ತ ಮಾತೃಕೆಯರು ವಜ್ರಲಿಂಗವನ್ನು ಪೂಜಿಸಿ ನಿತ್ಯ ಶಿವಾಭಿಷೇಕ ಮಾಡಿದರು. ಮನ್ಮಥನು ಪ್ರಸೂವ ಲಿಂಗವನ್ನು ಪೂಜಿಸಿ ಮೂರೂ ಲೋಕ ವಶ ಮಾಡಿಕೊಂಡನು. ಲಕ್ಷ್ಮೀಯು ಇಚ್ಛಾಲಿಂಗವನ್ನು ಪೂಜಿಸಿ ಆದಿ ನಾರಾಯಣನನ್ನು ಪಡೆದಳು. ಸರಸ್ವತಿ ಕ್ರಿಯಾಲಿಂಗವನ್ನು ಪೂಜಿಸಿ ಬ್ರಹ್ಮನ ಪಡೆದಳು. ಅರುಂಧತಿ, ಅನುಸೂಯೆ, ಅನಲಾಯಿ, ಸಾವಿತ್ರಿಯು ಪತಿಯೆಂಬ ಲಿಂಗವನ್ನು ಪೂಜಿಸಿ ಪತೀವೃತತ್ವ ಪಡೆದರು. ಧರ್ಮದೇವತೆಗಳು ಬಿಲ್ವ ಫಲಾ ಲಿಂಗವನ್ನು ಪೂಜಿಸಿ ಪಥಮ ಪಾದವ ಪಡೆದರು. ಮೃತ್ಯುದೇವತೆ ಜಂಬೂಫಲ ಲಿಂಗವ ಪೂಜಿಸಿ ಪ್ರಾಣಾಕಾರ್ಷಣವ ಪಡೆದಳು. ಆರೋಗ್ಯ ದೇವತೆ ನಿಂಬುಫಲ ಲಿಂಗವ ಪೂಜಿಸಿ ನಿರೋಗ್ಯ ಆರೋಗ್ಯ ಪಡೆದಳು. ದಿಗಂಬರರು ಆಕಾಶ ಲಿಂಗವನ್ನು ಪೂಜಿಸಿ ಬಯಲ ಪಡೆದರು. ಗಗನಚಾರಿಗಳು ಧ್ವಜಲಿಂಗವ ಪೂಜಿಸಿ ಕೇತರತ್ವ ಪಡೆದರು. ಪಶು ಪ್ರಾಣಿಗಳು ಮೋಹ ಲಿಂಗವ ಪೂಜಿಸಿ ಸರ್ವಜನವಶತ್ವ ಪಡೆದರು. ಕರ್ಷಕರು ಬೀಜಧಾನ್ಯ ಲಿಂಗವ ಪೂಜಿಸಿ ಸರ್ವಧಾನ್ಯವ ಪಡೆದರು. ಹೀಗೆ ನಾನಾ ಆಕೃತಿಯ ಲಿಂಗವನ್ನು ಪೂಜಿಸಿ ಹಲ ಕೆಲವರು ಪದಸ್ಥರಾದರು ಕಪಿಲಸಿದ್ಧಮಲ್ಲಿಕಾರ್ಜುನನ ಲಿಂಗದಲ್ಲಿ.

**1802**

**ಅಗ್ನಿಲಿಂಗವು ಬ್ರಾಹ್ಮಣ ಪೂಜಿಸಿದ. ಧನುರ್ಲಿಂಗವ ಕ್ಷತ್ರಿಯ ಪೂಜಿಸಿದ.**
**ಧನ ಲಿಂಗವ ವೈಶ್ಯ ಪೂಜಿಸಿದ. ಖಡ್ಗಲಿಂಗವ ರಾಜ ಪೂಜಿಸಿದ.**
**ಧಾನ್ಯಲಿಂಗವ ಶೂದ್ರ ಪೂಜಿಸಿದ. ಪರ್ವತ ಲಿಂಗವ ಶೈವ ಪೂಜಿಸಿದ.**
**ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವ ಸಿದ್ಧರಾಮ ಪೂಜಿಸಿದ ನೋಡಾ,**
**ಕೇದಾರ ಗುರುದೇವ.**

ಬ್ರಾಹ್ಮಣ ಅಗ್ನಿ ಲಿಂಗವನ್ನು ಪೂಜಿಸಿದ. ಕ್ಷತ್ರಿಯ ಧನುರ್ಲಿಂಗವನ್ನು ಪೂಜಿಸಿದ. ವೈಶ್ಯ ಧನಲಿಂಗವನ್ನು ಪೂಜಿಸಿದ. ಶೂದ್ರ ಧಾನ್ಯ ಲಿಂಗವನ್ನು ಪೂಜಿಸಿದ. ಶೈವ ಪರ್ವತ ಲಿಂಗವನು

ಪೂಜಿಸಿದ. ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಯ್ಯನನ್ನು ಸಿದ್ಧರಾಮ ಶಿವಯೋಗಿಗಳು ಪೂಜಿಸಿದುದನ್ನು ಕೇದಾರ ಗುರುಗಳಿಗೆ ಹೇಳಿದ್ದಾರೆ.

**1803**

**ಧರ್ಮವ ಧರಿಸಿದ ಬಳಿಕ, ಲಿಂಗಾರ್ಚನೆಯ ಮಾಡಿ ಸಾಯಬಹುದಯ್ಯಾ.**
**ಸತ್ತಡೆ ಸಾಯಬಹುದು, ಹೊತ್ತಿಗೊಮ್ಮೆ ಸೂರ್ಯನಂತೆ ಬರಬಾರದಯ್ಯಾ.**
**ಬಂದಡೆ ಬರಬಹುದು, ತನ್ನಯತನ ಮರೆದಿರಬಾರದಯ್ಯಾ.**
**ಮಹಾದೇವ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯದಲ್ಲಿ ಕಾಯದ ಧರ್ಮವೊಂದಿದೆ. ಅದನ್ನು ಶರಣರು ಅರಿವಿನ ಧರ್ಮ ಎಂದು ಕರೆದಿದ್ದಾರೆ. ಅರಿವನ್ನೆ ಲಿಂಗ ಎಂದು ಕರೆದಿದ್ದಾರೆ. ಅರಿವಿನ ಧರ್ಮವನ್ನು ಮನಬಳಿಸಿದ ಬಳಿಕ ಅರಿವು ಎಂದರೆ ಏನೆಂದು ತಿಳಿದುಕೊಂಡು ಆ ಅರಿವನ್ನೆ ಲಿಂಗವೆಂದು ತಿಳಿದು ಕ್ಷಣ ಕ್ಷಣಕ್ಕೂ ಲಿಂಗಾರ್ಚನೆಯ ಮಾಡುತ್ತ ಸಾಯುತ್ತದೆ. ಸತ್ತರೆ ಸಾಯಬಹುದು, ಆದರೆ ಸೂರ್ಯನಂತೆ ಹೊತ್ತಿಗೊಮ್ಮೆ ಬರಬಾರದು. ಬಂದರೆ ಬರಬಹುದು ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನನ್ನು ಮರೆಯಬಾರದು ಏಕೆಂದರೆ ಆತ ಮಹಾದೇವನು ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನೂ ಆಗಿದ್ದಾನೆ.

**1804**

**ಲಿಂಗಾರ್ಚಕನಾದ ಬಳಿಕ, ಲಿಂಗ ವಿಧಿವಿಧಾನಂಗಳನರಿದರಿದು ಮಾಡಬೇಕು.**
**ಲಿಂಗದೇಹಿ ತಾನಾದ ಬಳಿಕ, ಅಲಿಂಗಿಗಳ ಸಂಗವಳಿದಿರಬೇಕು.**
**ಲಿಂಗಧ್ಯಾನಿ ತಾನಾದ ಬಳಿಕ, ಅಂಗನೆಯರ ನೋಡದಿರಬೇಕು.**
**ಲಿಂಗೈಕ್ಯ ತಾನಾದ ಬಳಿಕ, ಕರುಣಾಕರ ಅಭಯಕರ ಕಪಿಲಸಿದ್ಧಮಲ್ಲಿಕಾರ್ಜುನನ,**
**ಕಾರ್ಯದಲ್ಲಿ ಅಭೇದವಿರಬೇಕು ಕಾಣಾ, ಕೇದಾರಯ್ಯಾ.**

ಅಂಗದಲ್ಲಿಯೆ ಸಂಗಮವಾದ ಅರಿವೆ ಲಿಂಗ. ಅಂಗವನ್ನು ಆವರಿಸಿದ ಮನ ಲಿಂಗಯ್ಯನಿಗೆ ಭಕ್ತನಾಗಿ ಗುರುದೇವನ ಮೂಲಕ ವಿಧಿವಿಧಾನಂಗಳನ್ನು ಅರಿತರಿತು ಲಿಂಗಾರ್ಚನೆ ಮಾಡಲೇಬೇಕು. ಲಿಂಗದೇಹಿಯೆ ತಾನಾಗಬೇಕು. ಲಿಂಗ ಎಂದರೆ ಏನೆಂದು ಗೊತ್ತಾಗದವರ ಸಂಗ ಬಿಡಬೇಕು. ಲಿಂಗಯ್ಯನಿಗೆ ಶರಣು ಹೋಗಿ ಶರಣನೆ ತಾನಾಗಿ ಲಿಂಗಯ್ಯನನ್ನು ಪತಿಯನ್ನಾಗಿಸಿಕೊಂಡು ಶರಣ ಆತನಿಗೆ ಸತಿಯನ್ನಾಗಿಸಿಕೊಳ್ಳಬೇಕು. ಆಗ ಸರ್ವ ಅಂಗನೆಯರು ಲಿಂಗಯ್ಯನ ರಾಣಿವಾಸದಂತೆ ಕಾಣುತ್ತಾರೆ.

ಲಿಂಗಯ್ಯನನ್ನು ಅರ್ಚಿಸುತ್ತಾ ಅರ್ಚಿಸುತ್ತಾ ಆ ಲಿಂಗಯ್ಯನಲ್ಲೇ ತಾನು ಐಕ್ಯನಾದ ಬಳಿಕ ಕರುಣಾಕರ ಅಭಯಕರ ಕಪಿಲಸಿದ್ಧಮಲ್ಲಿಕಾರ್ಜುನನ ಕಾರ್ಯದಲ್ಲಿ ಅಭೇದ ಇರಬೇಕೆಂದು ಕೇದಾರ ಶರಣರಿಗೆ ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

**1805**

**ಲಿಂಗವ ಪೂಜಿಸಿ ಪಡೆದರು ಫಲಪದವನೆಂದು  ಹೇಳದಿರಾ.**

**ಅಂದಿನ ವೃತ್ತಾಂತವ ನೀನಿಂದರಿವಡೆ ಮಾಡಿ ಮಾಡಿ ನೋಡಾ, ಲಿಂಗಾರ್ಚನೆಯ.**
**ಮಾಡದೆ ನೋಡದೆ ನೀಡಾಡದೆ ಅರಿಯಬಾರದು.**
**ಕಪಿಲಸಿದ್ಧಮಲ್ಲಿಕಾರ್ಜುನನ ಲೀಲೆಯ ಎಲೆ ಕಲ್ಲಯ್ಯಾ .**

ಲಿಂಗವ ಪೂಜಿಸಿ ಫಲಪದವನ್ನು ಪಡೆದರು ಎಂದು ಹೇಳುವುದು ಸಲ್ಲದು. ಫಲಪದವಿಯನ್ನು ಪಡೆಯುವುದಕ್ಕಾಗಿ ಲಿಂಗಾರ್ಚನೆ ಮಾಡುವುದು ಘೋರ ಅಪರಾಧ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನನ್ನು ಅಂಗವನ್ನು ಆವರಿಸಿದ ಮನ ಅರಿತರಿತು ಅರ್ಚಿಸಿ, ಆರಾಧಿಸಿ ಆ ಲಿಂಗವೇ ತಾನಾಗಬೇಕು ಆಗ ಅಂಗ ಲಿಂಗಾಂಗವಾಗುತ್ತದೆ.

ಮಾಡದೆ ನೋಡದೆ ನೀಡಾಡದೆ ಅರಿಯಬಾರದು. ಅರಿತರಿತು ಆ ಅರಿವೆ ಆಗುವುದಕ್ಕಾಗಿ ಮಾಡಬೇಕು ಇದು ಲಿಂಗಯ್ಯನ ಲೀಲೆ ಕಲ್ಲಯ್ಯಾ ಎಂದು ಹೇಳಿದ್ದಾರೆ.

**1806**

**ಶಿವ ಶಿವಾ, ಶಿವ ಶಿವಾ, ಶಿವ ಶಿವಾ, ಎಂದೊಮ್ಮೆ ಶಿವನಾಗಿ ಶಿವನ ಪೂಜಿಸು ಮನವೆ.**
**ಹರ ಹರಾ, ಹರ ಹರಾ, ಹರ ಹರಾ, ಎಂದೊಮ್ಮೆ ಹರನಾಗಿ ಶಿವನ ಪೂಜಿಸು ಮನವೆ.**
**ಲಿಂಗವೇ ಲಿಂಗವೇ ಲಿಂಗವೇ ಎಂದೊಮ್ಮೆ, ಕಪಿಲಸಿದ್ಧಮಲ್ಲಿಕಾರ್ಜುನಲಿಂಗವ**
**ಪೂಜಿಸಿ ಲಿಂಗವಾಗು ಮನವೆ.**

ಅಂಗವನ್ನು ಆವರಿಸಿದ ಎಲೆ ಮನವೆ ಅಂಗವನ್ನು ಹಿಡಿದು ಶಿವಾಲಯಕ್ಕೆ ಹೋಗಿ ಆ ಶಿವನನ್ನು ಆರಾಧಿಸಬೇಡ. ಆತ ನಿನಗೆ ಮತ್ತು ನಿನ್ನ ಅಂಗಕ್ಕೆ ಏನನ್ನು ಹೇಳಲಾರ. ನೀನು ಮಾಡಿದ ಪೂಜೆ ವ್ಯರ್ಥ. ಅಂಗದಲ್ಲಿಯೇ ಸಂಗಮವಾದ ಅರಿವಿನ ಶಿವಯ್ಯನಿಗೆ ನೀನು ಭಕ್ತನಾಗಿ ಆ ಶಿವಯ್ಯನನ್ನು ಶಿವ ಶಿವಾ, ಶಿವ ಶಿವಾ, ಶಿವ ಶಿವಾ, ಎಂದೊಮ್ಮೆ ಶಿವನೆ ನೀನಾಗಿ ಶಿವನ ಪೂಜಿಸು ಮನವೆ. ಹರ ಹರಾ, ಹರ ಹರಾ, ಹರ ಹರಾ, ಎಂದೊಮ್ಮೆ ಹರನು ನೀನಾಗಿ ಶಿವನ ಪೂಜಿಸು ಮನವೆ. ಲಿಂಗವೆ ಲಿಂಗವೆ ಎಂದೊಮ್ಮೆ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವ ಪೂಜಿಸಿ ಆ ಲಿಂಗವೆ ನೀನಾಗು ಮನವೆ.

**1807**

**ಕಾಮಾರಿ ರೂಪು ಬಂದಾನೆಂದು, ಕಾಮಾದ್ಯರಿಷಡ್ವರ್ಗಂಗಳ ಮಾಡದಿರು ಮನವೆ,**
**ಕಪಿಲಸಿದ್ಧಮಲ್ಲಿಕಾರ್ಜುನ ಸಾಕ್ಷಿಯಾಗಿ.**

ಕಾಯದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನಿದ್ದಾನೆ. ಕಾಯವನ್ನು ಆವರಿಸಿದ ಮನ ತನಗೆ ಬೇಕಾದ ಕಾಮಾದಿ ಅರಿಷಡ್ವರ್ಗಂಗಳನ್ನು ಕೂಡ ಕಾಯದಲ್ಲಿಯೆ ಇಟ್ಟಿದೆ.

ಕಾಯವನ್ನು ಆವರಿಸಿದ ಎಲೆ ಮನವೆ ಕಾಮಕ್ಕಾಗಿ ಕಾಯವನ್ನು ಬಳಸಬೇಡ. ಎಲೆ ಮನವೆ. ಮೋಹ, ಮದ, ಮತ್ಸರಗಳಿಗಾಗಿ ಕಾಯವನ್ನು ಬಳಸಬೇಡ. ಏಕೆಂದರೆ ಕಾಯ ನಿನ್ನದಲ್ಲ. ಕಾಯ ಕಪಿಲಸಿದ್ಧಮಲ್ಲಿಕಾರ್ಜುನನದು ಎಲೆ ಮನವೆ. ನೀನು ಕಾಯದೊಂದಿಗೆ ಮಾಡಿದ ಸಕಲ

ಕೆಲಸಗಳೂ ಆತನಿಗೆ ತಿಳಿಯುತ್ತವೆ. ಆತನಿಗೆ ಸಾಕ್ಷಿಯಾಗಿ ಬದುಕು ಮನವೆ.

**18083**

**ಒಬ್ಬ ಮೂರ್ತಿ ಹಲವು ರೂಪಾಗಿ ಪೂಜಿಸಿಕೊಂಡ ನೋಡಾ, ಮನವೆ.**
**ಆದಿಲಿಂಗವಾಗಿ ತುಪ್ಪದ ಅಭಿಷೇಕ ಕೈಕೊಂಡ.**
**ಅಮೃತಲಿಂಗವಾಗಿ ಅಮೃತಾಭಿಷೇಕ ಕೈಕೊಂಡ.**
**ಕಪಿಲಸಿದ್ಧಮಲ್ಲಿಕಾರ್ಜುನಲಿಂಗವಾಗಿ, ಸರ್ವಾಭಿಷೇಕ ಕೈಕೊಂಡ ನೋಡಾ ಮನವೆ.**

ಎಲೆ ಮನವೆ ನಿನ್ನ ಬೆನ್ನ ಹಿಂದೆ ಇದ್ದ ಒಬ್ಬ ಮಹಾಮೂರ್ತಿ ಹಲವಾರು ರೂಪಾಗಿ ಪೂಜಿಸಿಕೊಂಡದ್ದನ್ನು ಅರಿವಿನಿಂದ ಒಮ್ಮೆಯಾದರೂ ನೋಡು ಮನವೆ.

ಆದಿಲಿಂಗವಾಗಿ ತುಪ್ಪದ ಅಭಿಷೇಕವನ್ನು ಮಾಡಿಸಿಕೊಂಡ. ನಿನ್ನಿಂದ ಅಮೃತಲಿಂಗವಾಗಿ ಅಮೃತ ಅಭಿಷೇಕ ಮಾಡಿಸಿಕೊಂಡ. ನಿನ್ನಿಂದ ಕಾಯದಲ್ಲಿ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವನೆಕೊಂಡು ಸರ್ವಾಭಿಷೇಕವನ್ನು ಮಾಡಿಸಿಕೊಂಡ ನೋಡಾ ಎಲೆ ಮನವೆ.

**1809**

**ವಿಷ ಉಂಡು ದಣಿಯಲಾರದೆ, ವಿಷ ನೈವೇದ್ಯವ ಮಾಡಿಕೊಂಡ ನೋಡಾ, ಈ ದೇವಾ.**
**ತ್ರಿಪುರಾಂತಕ ಕೆರೆಯಗುಳಿ ದಣಿಯಲಾರದೆ,**
**ಹಲವು ಗುಡ್ಡ ರೂಪವಾಗಿ ಕೆರೆಯಗುಳಿಸಿಕೊಂಡ**
**ನೋಡಾ ಈ ದೇವ. ಇದ್ದ ದೇವಾಲಯವಲ್ಲದೆ ಮತ್ತೆ**
**ದೇವಾಲಯವ ಮಾಡಿಸಿಕೊಂಡ ನೋಡಾ, ಈ ದೇವಾ.**
**ತಾನಖಂಡಮೂರ್ತಿಯ ರೂಪು ಧರಿಸದೆ,**
**ಇಲ್ಲಿ ಲಕ್ಷ ತೊಂಭತ್ತಾರು ಸಾಸಿರವಾಗಿ ನೆಲಸಿಪ್ಪ**
**ನೋಡಾ, ಈ ದೇವ, ಕಪಿಲಸಿದ್ಧಮಲ್ಲಿಕಾರ್ಜುನದೇವ.**

ಲಿಂಗಯ್ಯ ನೀಲಕಂಠನಾಗಿ ವಿಷವುಂಡು ಅಮೃತವನ್ನು ಲೋಕಕ್ಕೆ ನೀಡಿ ತಾನು ದಣಿಯಲಾರದೆ ವಿಷವನ್ನೆ ನೈವೇದ್ಯವಾಗಿಸಿಕೊಂಡ ಈ ದೇವ. ಇವನು ತ್ರಿಪುರಾಂತಕ ಕೆರೆಯುಗುಳಿಯ ದಣಿಯಲಾರದೆ ಹಲವು ಗುಡ್ಡ ರೂಪಾಗಿ ಕೆರೆಯಗುಳಿಸಿಕೊಂಡ ನೋಡಾ ಈ ದೇವ.

ದೇಹವೆಂಬ ದೇವಾಲಯದಲ್ಲಿದ್ದು ಆ ದೇಹವನ್ನು ಆವರಿಸಿದ ಮನವನ್ನು ತನ್ನ ಭಕ್ತನನ್ನಾಗಿಸಿಕೊಂಡು ಪುನಃ ಹಲವಾರು ದೇವಾಲಯಗಳನ್ನು ಮಾಡಿಸಿಕೊಂಡ ನೋಡಾ ಈ ದೇವ.

ಲಕ್ಷ ತೊಂಭತ್ತಾರು ಸಾವಿರ ದೇಹಗಳಲ್ಲಿ ನೆಲೆಸಿದ ತಾನು ಅಖಂಡ ಮೂರ್ತಿಯ ರೂಪು ಧರಿಸಲಿಲ್ಲ ಈ ದೇವ, ಕಾಯದಲ್ಲಿದ್ದ ಕಪಿಲಸಿದ್ಧಮಲ್ಲಿಕಾರ್ಜುನ ದೇವ.

**1810**

**ಇಷ್ಟಲಿಂಗ ಪೂಜೆಯದು ಅಷ್ಟೈಶ್ವರ್ಯಪ್ರದವಾಯಿತ್ತು.**
**ಪ್ರಾಣಲಿಂಗ ಪೂಜೆಯದು ಅಖಂಡಚಿದೈಶ್ವರ್ಯಪ್ರದವಾಯಿತ್ತು.**

**ಭಾವಲಿಂಗ ಪೂಜೆಯದು ನಿರ್ಭಾವ ನಿಜಾನಂದ**
**ವಸ್ತು ಸ್ವರೂಪವಾಯಿತ್ತು . ಕೇಳಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅಂಗದಲ್ಲಿಯೇ ಇದ್ದ ಲಿಂಗ ದೇವರು ಅಂಗವನ್ನು ಆವರಿಸಿದ ಮನ ಅಂಗದೊಂದಿಗೆ ಅಂಗದ ಮೇಲೆ ಧರಿಸಿದ ಲಿಂಗ ಪೂಜೆಯ ಮಾಡಿ ಅಷ್ಟೈಶ್ವರ್ಯದ ಬೇಡಿಕೆ ಇಟ್ಟೊಡೆ ತಥಾಸ್ತು ಎಂದು ವರ ಕೊಡುತ್ತಾನೆ.

ಅಂಗದಲ್ಲಿಯೇ ಸಂಗಮವಾದ ಪ್ರಾಣಲಿಂಗಯ್ಯನನ್ನು ಮನ ಅಂಗದೊಂದಿಗೆ ಪೂಜೆ ಮಾಡಿದರೆ ಅಖಂಡ ಚಿದೈಶ್ವರ್ಯವನ್ನೇ ಕರುಣಿಸುತ್ತಾನೆ. ಮನ ಭಾವಲಿಂಗ ಪೂಜೆಯನ್ನು ಮಾಡಿದರೆ ನಿರ್ಭಾವ ನಿಜಾನಂದದ ಸ್ವಸ್ವರೂಪ ದರ್ಶನವಾಗುತ್ತದೆ.

**1811**

**ಅಕಾರವದು ಇಷ್ಟಲಿಂಗ, ಉಕಾರವದು ಪ್ರಾಣಲಿಂಗ,**
**ಮಕಾರವದು ಭಾವಲಿಂಗ. ಭಕ್ತಂಗಾಗಲಿ ಷಟ್‌ಸ್ಥಲಬ್ರಹ್ಮಿಯಾದವಂಗಾಗಲಿ.**
**ಲಿಂಗತ್ರಯ ಪೂಜೆಯ ಬೇಕು. ಲಿಂಗತ್ರಯ ಪೂಜೆಯರಿತು ಮಾಡುವರ ಮನದೆರೆದು,**
**ಮಾತಾಡೆನಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೆ.**

ಓಕಾರದ ಮೂರಕ್ಷರಗಳು ಅಕಾರ, ಉಕಾರ, ಮಕಾರಗಳಾಗಿವೆ. ಅಕಾರ ಇಷ್ಟಲಿಂಗವಾದರೆ ಉಕಾರ ಪ್ರಾಣಲಿಂಗವಾಗಿದೆ. ಮಕಾರ ಭಾವಲಿಂಗವಾಗಿ ಪ್ರತಿ ಅಂಗದಲ್ಲಿಯೂ ಸಂಗಮವಾಗಿದೆ. ಭಕ್ತನಿಗಾಗಲಿ ಷಟ್‌ಸ್ಥಲ ಬ್ರಹ್ಮಿಯಾದವಂಗಾಗಲಿ ಲಿಂಗತ್ರಯ ಪೂಜೆಯು ಬೇಕೆ ಬೇಕು.

ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಕಾಣುತ್ತದೆ. ಅದನ್ನು ಪೂಜೆ ಮಾಡಬಹುದು ಆದರೆ ಈ ಮೂರೂ ಲಿಂಗಗಳು ಕಾಣುವುದಿಲ್ಲ. ಈ ಪೂಜೆಯನ್ನು ಬಲ್ಲ ಗುರುದೇವನಿಂದ ಅರಿತು ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ ಪೂಜೆಯನ್ನು ಮಾಡಬೇಕು. ಲಿಂಗತ್ರಯ ಪೂಜೆಯನ್ನು ಅರಿತು ಕೂಡ ಮಾಡದವರ ಮನದೆರೆದು ಮಾತನಾಡನು ಕಪಿಲಸಿದ್ಧಮಲ್ಲಿಕಾರ್ಜುನ.

**1812**

**ಎಲ್ಲರಿಗಿಂತಲೂ ಶಿವಭಕ್ತರಧಿಕಧಿರೆಂಬ ಕಾರಣವೇನಯ್ಯಾ ?**
**ನಿತ್ಯ ಲಿಂಗಾರ್ಚನೆ ಮೂರು ವೇಳೆ. ಲಿಂಗಾರ್ಚನೆಗೊಮ್ಮೆ ಲಿಂಗತ್ರಯಪೂಜೆ.**
**ಪೂಜೆಗೊಮ್ಮೆ ಮಹಾಪ್ರಣವ ಜಪ, ಜಪಕ್ಕೊಮ್ಮೆ ನಿಜಧ್ಯಾನ.**
**ನಿಜಧ್ಯಾನಕ್ಕೊಮ್ಮೆ ಚಿತ್ತಿನ ಲಯ ನೋಡಾ. ಕಪಿಲಸಿದ್ಧಮಲ್ಲಿಕಾರ್ಜುನಾ.**

ಎಲ್ಲರಿಗಿಂತಲೂ ಶಿವಭಕ್ತರು ಅಧಿಕರು. ಕಾಯದಲ್ಲಿ ಸಂಗಮವಾದ ಅರಿವು ಎನ್ನುವ ಲಿಂಗವನ್ನು ಕಾಯವನ್ನು ಆವರಿಸಿದ ಮನ ಕಂಡುಕೊಂಡು ಆ ಶಿವನಿಗೆ ಭಕ್ತನಾಗಿದೆ. ಹೀಗಾಗಿ ಎಲ್ಲರಿಗಿಂತ ಶಿವಭಕ್ತರು ಅಧಿಕರು.

ಶಿವಭಕ್ತರು ನಿತ್ಯ ಮೂರು ವೇಳೆ ಲಿಂಗಾರ್ಚನೆ ಮಾಡುವರು. ಪ್ರತಿ ಬಾರಿಯ ಲಿಂಗಾರ್ಚನೆಯಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗವನ್ನು ಪೂಜಿಸುವರು. ಪ್ರತಿ ಪೂಜೆಗೊಮ್ಮೆ ಓಂಕಾರವೆಂಬ ಮಹಾಪ್ರಣವವನ್ನು ಜಪಿಸುವರು.

ಶಿವಭಕ್ತರು ಮಾಡುವ ಪೂಜೆ ಲೋಕದ ಯಾವ ಭಕ್ತರಿಗೂ ಕಾಣುವುದಿಲ್ಲ. ಶಿವಭಕ್ತರ ಪೂಜೆ ಅಗೋಚರ ಪೂಜೆ. ಶಿವಭಕ್ತರು ಜಪಕ್ಕೊಮ್ಮೆ ನಿಜಧ್ಯಾನ ಮಾಡುವರು. ಇವರು ಮಾಡುವ ನಿಜಧ್ಯಾನದಲ್ಲಿ ಚಿತ್ತ ಲಯವೆ ಧ್ಯಾನವಾಗುವುದು.

**1813**

**'ಅ'ಕಾರಪ್ರಣವದಿಂದ ಸ್ಥೂಲದೇಹ ದಗ್ಧವಾಯಿತ್ತು .**
**'ಉ'ಕಾರಪ್ರಣವದಿಂದ ಸೂಕ್ಷ್ಮದೇಹ ನಿರ್ಮಲವಾಯಿತ್ತು .**
**'ಮ'ಕಾರಪ್ರಣವದಿಂದ ಕಾರಣದೇಹ ಕರ್ಮ(ಬೀಜ)ವಳಿಯಿತ್ತು .**
**'ಅ' ಕಾರದಲ್ಲಿ ಜಾಗ್ರತಿ, ಉಕಾರದಲ್ಲಿ ಸ್ವಪ್ನ ಮಕಾರದಲ್ಲಿ ಸುಷುಪ್ತಿ**
**(ಜಾಗ್ರ) ಸ್ವಪ್ನದಲ್ಲಿ ರೂಹು ಸುಷುಪ್ತಿಯಲ್ಲಿಲ್ಲ.**
**ತ್ರಿವಿಧಾವಸೆಯಲ್ಲೊಂದಾಗದ ಮಾತ್ರ ಪ್ರಾಣಲಿಂಗ**
**ಆತನಲ್ಲ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹವನ್ನು ಸ್ಥೂಲ, ಸೂಕ್ಷ್ಮ, ಕಾರಣವೆಂದು ವಿಂಗಡಿಸಲಾಗಿದೆ. ಸ್ಥೂಲ ದೇಹದ ಅಜ್ಞಾನವು'ಅ'ಕಾರ ಪ್ರಣವದಿಂದ ಭಸ್ಮವಾಗುವುದು. 'ಉ'ಕಾರ ಪ್ರಣವದಿಂದ ಸ್ಥೂಲ ದೇಹ ನಿರ್ಮಲವಾಗುತ್ತದೆ. 'ಮ'ಕಾರ ಪ್ರಣವದಿಂದ ಕಾರಣದೇಹದ ಕರ್ಮ ಅಳಿಯುವುದು.'ಅ' ಕಾರದಲ್ಲಿ ಜಾಗ್ರತಿ, 'ಉ'ಕಾರದಲ್ಲಿ ಸ್ವಪ್ನ, 'ಮ'ಕಾರದಲ್ಲಿ ಸುಷುಪ್ತಿ .

ಸ್ವಪ್ನದಲ್ಲಿಯ ರೂಪ ಸುಷುಪ್ತಿಯಲ್ಲಿಲ್ಲ. ಈ ತ್ರಿವಿಧಾವಸ್ಥತೆಯಲ್ಲಿ ಒಂದಾಗದಿದ್ದರೆ ಪ್ರಾಣಲಿಂಗಿ ಆತನಲ್ಲ ನೋಡಾ ಎಂದು ಸಿದ್ಧರಾಮ ಶಿವಯೋಗಿಗಳು ಖಚಿತವಾಗಿ ಹೇಳಿದ್ದಾರೆ.

**1814**

**ದೇಹ ಎರಡರಲ್ಲಿ ಬಾವ ಒಂದಾಗದವ ಪ್ರಾಣಲಿಂಗಿಯಲ್ಲ.**
**ದೇಹ ಮೂರರಲ್ಲಿ ಸಾಕ್ಷಿ ತಾನಾಗದವ ಪ್ರಾಣಲಿಂಗಿಯಲ್ಲ.**
**ದೇಹ ನಾಲ್ಕರಲ್ಲಿ ನಿರ್ದ್ವಂದ್ವ ಅಸಾಕ್ಷಿ ತಾನಾಗದವ ಪ್ರಾಣಲಿಂಗಿಯಲ್ಲ.**
**ಈ ಛಂದವ(ನು ಅ) ನಿಂದೆಯೆಂದೆನಾಗಿ, ಚೆನ್ನ ಬಸವನ ಗುರುಮೂರ್ತಿಯಿಂದ,**
**ಆತನ ಒಕ್ಕುದ ಮಿಕ್ಕುದ ಕಾಯ್ದುಕೊಂಡಿಪ್ಪಾತನ ಪಾದಕ್ಕೆ,**
**ನಮೋ ನಮೋ ಎಂಬೆನಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .**

ಸೂಕ್ಷ್ಮ ದೇಹ, ಕಾರಣ ದೇಹ ಎಂಬ ಎರಡು ದೇಹಳಗಲ್ಲಿ ಭಾವ ಒಂದಾಗದಿದ್ದರೆ ಅವನು ಪ್ರಾಣಲಿಂಗಿಯಲ್ಲ. ಸ್ಥೂಲ ದೇಹ, ಸೂಕ್ಷ್ಮ ದೇಹ, ಕಾರಣ ದೇಹ ಎಂಬ ಮೂರೂ ದೇಹಗಳಲ್ಲಿ ಸಾಕ್ಷಿ ತಾನಾಗದಿದ್ದರೆ ಅವನು ಪ್ರಾಣಲಿಂಗಿಯಾಗುವುದಿಲ್ಲ. ಈ ಮೂರು ದೇಹಗಳನ್ನು ನೋಡುವ ತಾನು, ನಾಲ್ಕನೇಯ ದೇಹ ಸಾಕ್ಷಿಯಾಗಿ ತಾನಾಗದವನು ಪ್ರಾಣಲಿಂಗಿಯಲ್ಲ. ಈ ಛಂದವನ್ನು ಚೆನ್ನಬಸವಣ್ಣ ಗುರುಮೂರ್ತಿಯಿಂದ ಆತನ ಒಕ್ಕುದ ಮಿಕ್ಕುದ ಕಾಯ್ದುಕೊಂಡಿಪ್ಪಾತನ ಪಾದಕ್ಕೆ ನಮೋ ನಮೋ ಎಂಬೆನಯ್ಯಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1815**

**ನಿರಾಕಾರದ ಮೂರ್ತಿ ಆಕಾರಕ್ಕೆ ತಂದೆಯಲ್ಲಾ ಬಸವ?**
**ಆಕಾರದ ಮೂರ್ತಿಯನ್ನು ಹೃದಯದಲ್ಲಿ ವಾಸಗೊಂಡು,**
**ತೋರಿದೆಯಲ್ಲಾ ಮನವೆ. ಈ ಆಕಾರಕ್ಕೆ ತಂದು, ಭಕ್ತಿಯನುಗ್ರೈದು,**
**ದಿವಸದಲ್ಲಿ ಬೆಳೆದೆಯಲ್ಲಾ ಬಸವಾ? ಇನ್ನಾಕಾರವ ನಿರಾಕಾರದಲ್ಲಿ ಅನುಗೊಳಿಸಬೇಕೆಂದು,**
**ಕಪಿಲಸಿದ್ಧಮಲ್ಲಿಕಾರ್ಜುನನ ಹೃದಯದಲ್ಲಿ ಮರೆಯಾದೆಯಲ್ಲಾ ಬಸವಾ.**

ದೇಹ ನಿರಾಕಾರದ ಬೀಜದ ಮೂಲಕ ಜನ್ಮ ತಳೆದಿದ್ದು ಆಕಾರಕ್ಕೆ ಬಂದುದನ್ನು ಬಸವಣ್ಣನವರು ಸ್ಪಷ್ಟಪಡಿಸಿದ್ದಾರೆ.''ಬಯಲರೂಪ ಮಾಡಬಲ್ಲಾತನೆ ಶರಣ ಆ ರೂಪ ಪುನಃ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ. ಬಯಲ ರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ? ಆ ರೂಪ ಬಯಲು ಮಾಡಲರಿಯದಿದ್ದಡೆ ಎಂತು ಲಿಂಗಾನುಭಾವಿಯೆಂಬೆ? ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರಹುಂಟೆ ಕೂಡಲಸಂಗಮದೇವಾ'' ಎಂದಿದ್ದಾರೆ ಬಸವಣ್ಣನವರು.

ಆಕಾರದ ಮೂರ್ತಿಯ ಹೃದಯಕಂಜದಲ್ಲಿ ತೋರಿದೆಯಲ್ಲಾ ಬಸವ. ನಿರಾಕಾರದ ಮೂರ್ತಿಯನ್ನು ಆಕಾರಕ್ಕೆ ತಂದು ಆ ಆಕಾರದಲ್ಲಿ ತಾನೂ ವಾಸಗೊಂಡು ತೋರಿದ ಬಸವಣ್ಣನನ್ನು ಸಿದ್ಧರಾಮ ಶಿವಯೋಗಿಗಳು ಹೃದಯತುಂಬಿ ನೆನೆದಿದ್ದಾರೆ.

ಕಂಡುಬರುವ ಆಕಾರದ ಕಾಯದಲ್ಲಿ ಭಕ್ತಿಯನ್ನು ಬೆಳೆದು ಆಕಾರವನ್ನೇ ನಿರಾಕಾರದಲ್ಲಿ ಅನುಗೊಳಿಸಬೇಕೆಂದು ಕಪಿಲಸಿದ್ಧಮಲ್ಲಿಕಾರ್ಜುನನ ಹೃದಯದಲ್ಲಿ ಮರೆಯಾದೆಯಲ್ಲಾ ಬಸವಾ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1816**

**ಮೂರ್ತಿ ಮೂರರಲ್ಲಿ ಅಮೂರ್ತಿಲೆಂದು ಬಂದೆಯಲ್ಲಾ ಮಡಿವಾಳಾ.**
**ದೇಹ ಮೂರರಲ್ಲಿ ನಿರ್ದೇಹಿಯಾಗಿ ಬಂದಾಚರಿಸಿದೆಯಲ್ಲಾ ಮಡಿವಾಳಾ.**
**ವಾಣಿ ನಾಲ್ಕರಲ್ಲಿ ಆನು ನಾನಲ್ಲೆಂದ ಭಾವವಳಿದು ಶಬ್ದ ಮುಗ್ಧವಾಗಿ,**
**ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಚಿದಾಕಾಶವಾಗಿ ಪೋದೆಯಲ್ಲಾ ಮಡಿವಾಳಾ.**

ಸ್ಥೂಲ, ಸೂಕ್ಷ್ಮ, ಕಾರಣವೆಂಬ ಮೂರು ಕಾಯಗಳಲ್ಲಿ ಅಮೂರ್ತಿಯಾಗಿ ಬಂದೆಯಲ್ಲಾ ಮಡಿವಾಳ ಎಂದು ಸಿದ್ಧರಾಮ ಶಿವಯೋಗಿಗಳು ಮಾಡಿವಾಳ ಮಾಚಿದೇವರ ಸ್ಮರಣೆ ಮಾಡಿದ್ದಾರೆ. ದೇಹ ಮೂರರಲ್ಲಿ ನಿರ್ದೇಹಿಯಾಗಿ ನೀನು ನಿಂದು ಆ ದೇಹದೊಂದಿಗೆ ಅಗೋಚರದ ಆಚರಣೆಯಲ್ಲಿ ನೀನು ಬಂದು ಸರ್ವರಿಗೂ ನಿರ್ದೇಹಿಯಾಗಿ ತೋರಿದೆಯಲ್ಲಾ ಮಡಿವಾಳ. ವಾಣಿ ನಾಲ್ಕರಲ್ಲಿ ಆನು ನಾನಲ್ಲ ಎಂಬ ಭಾವವನ್ನು ಅಳಿದು ಶಬ್ದವುಗ್ಧವಾಗಿ ನಿಶಬ್ದವೇದಿಯೇ ನೀನಾಗಿ ಕಾಯವೆಂಬ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಚಿದಾಕಾಶವಾಗಿ ಹೋದೆಯಲ್ಲಾ ತಂದೆ ಎಂದು ಸಿದ್ಧರಾಮಶಿವಯೋಗಿಗಳು ಮಡಿವಾಳ ಮಾಚಿದೇವರನ್ನು ಸ್ಮರಿಸಿದ್ದಾರೆ. ಅವರು ಸಾವಿಲ್ಲದ ಸರದಾರರು.

**1817**

**ಘನಕ್ಕೆ ಘನವೆಂಬವರ ಮನಕ್ಕೆ ತಂದು ಅನುಗೊಳಿಸಿದೆಯಲ್ಲಾ, ಅಲ್ಲಮದೇವಾ.**

**'ಸರ್ವಂ ಖಲ್ವಿದಂ ಬ್ರಹ್ಮ' ಎಂದು ವಾದಿಸಿದಲ್ಲಿ,**
**ಲಿಂಗತ್ರಯದಲ್ಲಿ ಭೋದಗೊಳಿಸಿದೆಯಲ್ಲಾ, ಅಲ್ಲಮದೇವಾ.**
**ಮಾಡಿ ನೀಡುವೆನೆಂಬವರ ರೂಹು, ಮೂಡದಂತೆ ಮಾಡಿದೆಯಲ್ಲಾ, ಅಲ್ಲಮದೇವಾ.**
**ದೃಷ್ಟಿಗೆ ಬಿದ್ದವರ ಮಹದೈಶ್ವರ್ಯಕ್ಕಿಟ್ಟು, ನೀ ನೆಟ್ಟನೆ ಬೆಟ್ಟದಲ್ಲಿಯ ಬಟ್ಟಬಯಲ**
**ಕದಳಿಯಲಿ ಹೋಗಿ ಬಟ್ಟಬಯಲಾಗಿ,ಜಗದಂತರ್ಯಾಮಿ**
**ಕಪಿಲಸಿದ್ಧಮಲ್ಲಿಕಾರ್ಜುನನಾಗಿ ನಿಂದೆಯಲ್ಲಾ ಅಲ್ಲಮದೇವಾ.**

ಸಿದ್ಧರಾಮ ಶಿವಯೋಗಿಗಳು ಅಲ್ಲಮ ಪ್ರಭುಗಳು ಮಾಡಿಹೋದ ಕಾಯಕವನ್ನು ಅತ್ಯಂತ ಭಕ್ತಯಿಂದ ಸ್ಮರಿಸಿದ್ದಾರೆ.

ಘನಕ್ಕೆ ಘನವೆಂಬವರ ಮನಕ್ಕೆ ತಂದು ಅನುಗೊಳಿಸಿದ ತಂದೆ ನೀನು''ಸರ್ವಂ ಖಲ್ವಿದಂ ಬ್ರಹ್ಮ'' ಎಂದು ವಾದ ಮಾಡಿದವರಿಗೆ ಲಿಂಗತ್ರಯವನ್ನು ಬೋಧೆಮಾಡಿ ಪುನೀತರನ್ನಾಗಿಸಿದ ತಂದೆ ನೀನು. ಮಾಡಿದೆ ನೀಡಿದೆ ಎಂಬುವವರ ರೂಪದಲ್ಲಿ ಅಹಂಕಾರ ಮೂಡದಂತೆ ಮಾಡಿದ ತಂದೆ ನೀನು. ದೃಷ್ಟಿಗೆ ಬಿದ್ದವರನ್ನು ಮಹದಾಶ್ಚರ್ಯ ಪಡುವಂತೆ ಮಾಡಿ ನೆಟ್ಟನೆ ಬೆಟ್ಟದಲ್ಲಿಯ ಬಟ್ಟಬಯಲಲ್ಲಿ ಬಯಲಾಗಿ ಹೋದ ತಂದೆ ನೀನು. ಕದಳಿಗೆ ಹೋಗಿ ಜಗದ ಅಂತರ್ಯಾಮಿ ಕಪಿಲಸಿದ್ಧಮಲ್ಲಿಕಾರ್ಜುನನೆ ನೀನಾಗಿ ನಿಂದೆಯಲ್ಲ ಅಲ್ಲಮದೇವಾ ಎಂದು ಹಾಡಿ ಸ್ಮರಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1818**

**ನಾಗೇಶನ ತಿಳಿದೆವೆಂಬರು ಆನಾಗದೆ ಹೋದರು, ನಾಗಾಯಿ.**
**ನಾಗಕುಂಡಲನರಿದೆವೆಂಬರು ನಾಗದೇವತೆಗಳಾದರು, ನಾಗಾಯಿ.**
**ನಾಗಾಂಕನ ಅರಿದು ತಾನಾಗದೆ ನಾಗಕಂಕಣನಾದ, ನಾಗಾಯಿ.**
**ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ.**

ಸಿದ್ಧರಾಮ ಶಿವಯೋಗಿಗಳು ಬಸವಣ್ಣ ಮಡಿವಾಳ ಮಾಚಿದೇವ ಅಲ್ಲಮಪ್ರಭುದೇವರನ್ನು ಸ್ಮರಿಸಿದಂತೆ, ಜ್ಞಾನಚಕ್ರವರ್ತಿ ಚೆನ್ನಬಸವಣ್ಣನ ತಾಯಿ ಅಕ್ಕ ನಾಗಮ್ಮಳನ್ನು ಕೂಡ ಸ್ಮರಿಸಿದ್ದಾರೆ.

ನಾಗೇಶನ ತಿಳಿದೆವೆಂಬರು ಆನಾಗದೆ ಹೋದರು ನಾಗಾಯಿ. ಕಾಯವನ್ನು ಆವರಿಸಿದ ಮನವನ್ನು ನಾಗೇಶ ಎಂದು ಕರೆದಿದ್ದಾರೆ. ಸಿದ್ಧರಾಮ ಶಿವಯೋಗಿಗಳು ಕಾಯದಲ್ಲಿಯೇ ಇದ್ದ ಅರಿಷಡ್ವರ್ಗಗಳು ಕಾಯವನ್ನೇ ಹಾವಿನಂತೆ ಕಚ್ಚಿ ಕಚ್ಚಿ ತಿಂದು ಹಾಕುತ್ತವೆ. ಇಂತಹ ವಿಷಭರಿತ ಹಾವಿನ ಹಲ್ಲು ಕಿತ್ತಿ ಅದನ್ನು ಪಳಗಿಸಿ ಆಭರಣದಂತೆ ಧರಿಸಿಕೊಂಡಾತನೆ ಶಿವ. ಹೀಗೆ ಕಾಯವುಳ್ಳ ಸಕಲರಿಗೂ ಶಿವನಾಗುವ ಅವಶ್ಯಕತೆ ಇದೆ. ಹೀಗೆ ಅರಿತರಿತು ಶಿವನಾಗದೆ ಪುನಃ ನಾಗದೇವತೆಗಳೇ ಆಗಿ ಹೋದರು ನಾಗಾಯಿ.

ನಾಗಾಂಕನ ಅರಿದು ಅದು ತಾನಾಗದೆ ನಾಗಕ್ಕೆ ಕಂಕಣವನ್ನು ಕಟ್ಟಿದ ತಾಯಿ ನಾಗಾಯಿ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಒಂದಾದಳು ಎಂದು ಸಿದ್ಧರಾಮಶಿವಯೋಗಿಗಳು ನಾಗಾಯಿ ತಾಯಿಯನ್ನು ಸ್ಮರಿಸಿದ್ದಾರೆ.

**1819**

**ಎನ್ನ ಘ್ರಾಣದಲ್ಲಿ ಆಚಾರಲಿಂಗವಾಗಿ ಬಂದ ಗುರು ಚೆನ್ನಬಸವಣ್ಣ.**

ಎನ್ನ ಜಿಹ್ವೆಯಲ್ಲಿ ಗುರುಲಿಂಗವಾಗಿ ಬಂದ ಗುರು ಚೆನ್ನಬಸವಣ್ಣ.
ಎನ್ನ ನೇತ್ರದಲ್ಲಿ ಶಿವಲಿಂಗವಾಗಿ ಬಂದ ಗುರು ಚೆನ್ನಬಸವಣ್ಣ.
ಎನ್ನ ತ್ವಕ್ಕಿನಲ್ಲಿ ಜಂಗಮಲಿಂಗವಾಗಿ ಬಂದ ಗುರು ಚೆನ್ನಬಸವಣ್ಣ.
ಎನ್ನ ಶ್ರೋತ್ರದಲ್ಲಿ ಪ್ರಸಾದಲಿಂಗವಾಗಿ ಬಂದ ಗುರು ಚೆನ್ನಬಸವಣ್ಣ.
ಎನ್ನ ಹೃದಯದಲ್ಲಿ ಮಹಾಲಿಂಗವಾಗಿ ಬಂದ ಗುರು ಚೆನ್ನಬಸವಣ್ಣ.
ಎನ್ನ ಸ್ಥೂಲದೇಹದಲ್ಲಿ ಇಷ್ಟಲಿಂಗವಾಗಿ ಬಂದ ಗುರು ಚೆನ್ನಬಸವಣ್ಣ.
ಎನ್ನ ಸೂಕ್ಷ್ಮ ದೇಹದಲ್ಲಿ ಪ್ರಾಣಲಿಂಗವಾಗಿ ಬಂದ ಗುರು ಚೆನ್ನಬಸವಣ್ಣ.
ಎನ್ನ ಕಾರಣದೇಹದಲ್ಲಿ ಭಾವಲಿಂಗವಾಗಿ ಬಂದ ಗುರು ಚೆನ್ನಬಸವಣ್ಣ.
ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಚೆನ್ನಬಸವಣ್ಣ.

ಸಿದ್ಧರಾಮ ಶಿವಯೋಗಿಗಳು ಗುರು ಚೆನ್ನಬಸವಣ್ಣನನ್ನು ಈ ವಚನದಲ್ಲಿ ಸ್ಮರಿಸಿದ್ದಾರೆ.

ಗುರು ಚೆನ್ನಬಸವಣ್ಣನವರು ಆಚಾರ ಲಿಂಗವಾಗಿ ಬಂದು ಮೂಗಿನಲ್ಲಿ ಸಂಗಮವಾಗಿ ಮೂಗಿನ ಸುಗಂಧ ದುರ್ಗಂಧವನ್ನು ಅಳಿದು ಪರಿಮಳದ ದರುಶನವನ್ನು ಮಾಡಿಸಿದರು.

ನಾಲಿಗೆಯಲ್ಲಿ ಗುರುಲಿಂಗವಾಗಿ ಬಂದ ಗುರು ಚೆನ್ನಬಸವಣ್ಣನವರು ನಾಲಿಗೆಯ ರುಚಿ ಅರುಚಿಯನ್ನು ಕಳೆದು ಪ್ರಸಾದದ ದರುಶನ ಮಾಡಿಸಿದರು.

ನೇತ್ರದಲ್ಲಿ ಶಿವಲಿಂಗವಾಗಿ ಬಂದ ಗುರುಚೆನ್ನಬಸವಣ್ಣನವರು. ಕಣ್ಣೊಳಗಿರುವ ಮುಕ್ಕಣ್ಣನ ಕಣ್ಣಿನ ದರುಶನವನ್ನು ಮಾಡಿಸಿದರು.

ತ್ವಕ್ಕಿನಲ್ಲಿ ಜಂಗಮಲಿಂಗವಾಗಿ ಬಂದ ಗುರು ಚೆನ್ನಬಸವಣ್ಣನವರು ಅಜ್ಞಾನದ ಸ್ಪರ್ಶವನ್ನು ಸುಟ್ಟು ಮಹಾಜ್ಞಾನದ ಸ್ಪರ್ಶವನ್ನು ಮಾಡಿಸಿದರು.

ಶ್ರೋತ್ರದಲ್ಲಿ ಪ್ರಸಾದ ಲಿಂಗವಾಗಿ ಬಂದ ಗುರು ಚೆನ್ನಬಸವಣ್ಣನವರು. ಕಿವಿಯೊಳಗಿರುವ ಮಹಾಜ್ಞಾನದ ಕಿವಿಯ ದರುಶನ ಮಾಡಿಸಿದರು.

ಹೃದಯದಲ್ಲಿ ಮಹಾಲಿಂಗವಾಗಿ ಬಂದ ಗರುಚೆನ್ನಬಸವಣ್ಣನವರು ಸರ್ವಾಂಗದಲ್ಲಿರುವ ಮಹಾಜ್ಞಾನದ ದರುಶನವನ್ನು ಮಾಡಿಸಿದರು.

ಸ್ಥೂಲ, ಸೂಕ್ಷ್ಮ, ಕಾರಣ ದೇಹದಲ್ಲಿ ಇಷ್ಟಲಿಂಗ ಪ್ರಾಣ ಲಿಂಗ, ಭಾವಲಿಂಗದ ದರುಶನ ಮಾಡಿಸಿದರೂ. ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಗುರು ಚೆನ್ನಬಸವಣ್ಣನವರು.

**1820**

ಇಂದ್ರಿಯ ಕಟ್ಟಿದ ದೇಹವು ಚಂದ್ರನ ಲಕ್ಷಣ ಧರಿಸಿತ್ತು ನೋಡಾ
ಚಂದ್ರನ ಲಕ್ಷಣವದು ಇಂದ್ರಪದ (ವನೀ)ಡಾಡಿತ್ತು ನೋಡಾ
ಇಂದ್ರಪದವದು ಸಾಂದ್ರವ ಆಗಿ ಭೋಗಿಸುವುದಕ್ಕೆ ಮೈಗೊಟ್ಟಿತ್ತು ನೋಡಾ
ಸಾಂದ್ರವಾದುದಕ್ಕೆ ಮಹೇಂದ್ರಜಾಲವನೊಡ್ಡಿ ಕಪಿಲಸಿದ್ಧಮಲ್ಲೇಂದ್ರನ
ಇಂದ್ರಿಯಂಗಳಲ್ಲಿ ತದಿಟ್ಟಿತ್ತು ನೋಡಾ ಬಾಚರಸಯ್ಯಾ.

ಇಂದ್ರಿಯಗಳನ್ನು ನಿಗ್ರಹ ಮಾಡಿಕೊಂಡ ದೇಹವು ಒಮ್ಮೆ ಪೂರ್ಣ ಚಂದ್ರನಾಗಿ ಕಂಡರೆ ಮತ್ತೊಮ್ಮೆ ಅಮಾವಾಸ್ಯೆಯ ಕತ್ತಲಂತೆ ಕ್ಷೀಣಿಸುವುದು. ಚಂದ್ರನ ಲಕ್ಷಣವು ಇಂದ್ರಪದವನು

ಈಡಾಡಿತ್ತು . ಇಂದ್ರಪದವಿಯದು ಭೋಗಿಸುವುದಕ್ಕೆ ಮೈಗೊಡುತ್ತದೆ. ಇಂದ್ರಿಯಗಳಿಗೆ ಮಹೇಂದ್ರ ಜಾಲವನೊಡ್ಡಿ ಕಪಿಲಸಿದ್ಧಮಲ್ಲೇಂದ್ರನ ಮಹಾಜ್ಞಾನೇಂದ್ರಿಯಗಳಲ್ಲಿ ಸಂಗ ಮಾಡುವುದೆ ಮಹಾಜ್ಞಾನ ನೋಡಾ ಎಂದು ಸಿದ್ಧರಾಮ ಶಿವಯೋಗಿಗಳು ಶರಣ ಬಾಚರಸಯ್ಯನಿಗೆ ಹೇಳಿದ್ದಾರೆ.

**1821**

**ಗರ್ಭವಿದ್ದಂಗನೆಗೆ ಒಮ್ಮೆ ಸಂಭ್ರಮವಲ್ಲದೆ**
**ಗರ್ಭಗರ್ಭಕ್ಕೊಮ್ಮೆ ಸಂಭ್ರಮವಿಲ್ಲ ನೋಡಾ, ಗುರುವೆ**
**ನೀನಿದ್ದ ಭಕ್ತಿಗೊಮ್ಮೆ ಒರೆದು ನೋಡಬಾರದು ನೋಡಾ,ಗುರುವೇ**
**ನಾನಿದ್ದ ಕೇರಿಯವರೆಲ್ಲರ ಒಮ್ಮೆ ಲಜ್ಜಿಸಬಹುದಲ್ಲದೆ,**
**ಮತ್ತೆ ಮತ್ತೆ ಲಜ್ಜಿಸುವುದು ಬೇಡ, ಕಪಿಲಸಿದ್ಧಮಲ್ಲಿಕಾರ್ಜುನ ಗುರುವೆ**

ಕಾಯದಲ್ಲಿ ನೀನು ಇರುವೆ ನಿನ್ನೊಂದಿಗೆ ಮನವೂ ಇದೆ. ಈ ಮನ ಕಾಯದಲ್ಲಿ ಲಜ್ಜೆಗೇಡಿ ಅರಿಷಡ್ವರ್ಗಗಳನ್ನು ಸೃಷ್ಟಿ ಮಾಡಿದೆ.

ಗರ್ಭವಿದ್ದ ಹೆಣ್ಣು ತಾನು ಗರ್ಭಧರಿಸಿದ್ದಕ್ಕಾಗಿ ಒಮ್ಮೆ ಮಾತ್ರ ಸಂಭ್ರಮ ಪಡುತ್ತಾಳೆ. ಮತ್ತೆ ಮತ್ತೆ ಗರ್ಭಧರಿಸಿದಾಗ ಮತ್ತೆ ಮತ್ತೆ ಸಂಭ್ರಮಪಡಳು. ಗುರುದೇವನೆ ನೀನಿದ್ದ ಜಾಗದಲ್ಲಿ ನಾನಿದ್ದ ಕೇರಿಯವರೆಲ್ಲರು ಒಮ್ಮೆ ನನ್ನ ಅಜ್ಞಾನಕ್ಕಾಗಿ ಲಜ್ಜಿಸಬಹುದಲ್ಲದೆ ಮತ್ತೆ ಮತ್ತೆ ಲಜ್ಜೆ ಪಡುವಂತೆ ಮಾಡಬೇಡ ನನ್ನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನ ಗುರುವೆ ನೀನಿದ್ದ ಕಾಯದಲ್ಲಿ ನನ್ನ ಬಳಗದ ಅನ್ಯ ಕೇರಿಯವರು ವಾಸ ಮಾಡುವುದನ್ನು ನಿಷೇಧಿಸು ತಂದೆ.

**1822**

**ಸಾಕಾರದ ಲಕ್ಷ್ಯವದು ನಿರಾಕಾರದಲ್ಲಿ ಲೀನವಲ್ಲದೆ,**
**ಸಾಕಾರದಲ್ಲಿ ಲೀನವಾಗಬಾರದು. ಕೀಟ-ಭ್ರಮರ ನ್ಯಾಯದಂತೆ ಚರಿಸಬಲ್ಲಡವನೆ**
**ನಿರ್ದೇಹ ಜೀವನ್ಮುಕ್ತನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯ ಸಾಕಾರ. ಮನ ನಿರಾಕಾರ . ನಿರಾಕಾರವುಳ್ಳ ಮನ ಸಾಕಾರ ಕಾಯದೊಂದಿಗೆ ಕಾಮಾದಿ ಅರಿಷಡ್ವರ್ಗಗಳಲ್ಲಿ ಭಾಗಿಯಾಗುತ್ತದೆ. ಇದು ಸಾಕಾರದಲ್ಲಿ ಲೀನವಾಗದೆ ನಿರಾಕಾರವೆಂಬ ಮಹಾಜ್ಞಾನವೆಂಬ ನಿರಾಕಾರದಲ್ಲಿ ಲೀನವಾದರೆ ಅಜ್ಞಾನ ಸುಟ್ಟು ಭಸ್ಮವಾಗುತ್ತದೆ.

ಕೀಟ-ಭ್ರಮರ ನ್ಯಾಯದಂತೆ ಚರಿಸಬಲ್ಲಡೆ ಅವನೆ ಜೀವನ್ಮುಕ್ತನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಾ. ಭ್ರಮರ ಕೀಟವನ್ನು ತೆಗೆದುಕೊಂಡು ಬಂದ ತನ್ನಗೂಡಿನಲ್ಲಿಟ್ಟು ತನ್ನಂತೆ ಮಾಡಿದಂತೆ.

**1823**

**ವಾಙ್ಮನಕ್ಕಗೋಚರ ವಸ್ತುವೆಂದರಿದ ಬಳಿಕ**
**ವಾಕ್ಯದಿಂದಾಗದು ಮನದಿಂದಾಗದು**
**ಅರಿದ ಅರಿವಿನಿಂದ ನೆನೆದು,**
**ನಿರಾಕಾರ ನಿಜವಸ್ತು ನಿರ್ಮಲ ಶುದ್ಧ ಶಬಲಾಂಶ**

**ತಾನಾಗಬಾರದೇನಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.**

ವಾಕ್ಕಿಗೂ ಮನಕ್ಕೂ ನಿಲುಕದ ಅಗೋಚರ ವಸ್ತುವೊಂದು ಕಾಯದಲ್ಲಿ ಸಂಗಮವಾಗಿದೆ.ಅದನ್ನು ಮಹಾಜ್ಞಾನ ಅರಿವು, ಗುರುವು, ಮಹಾದೇವ, ಸದಾಶಿವ, ಸಾಕ್ಷಾತ್ ಪರಬ್ರಹ್ಮ ಎಂದು ಹೆಸರಿಟ್ಟು ಕರೆದಿದ್ದಾರೆ. ಶರಣರು ಈ ವಸ್ತು ವಾಕ್ಕಿನಿಂದ ಆಗಿಲ್ಲ, ಮನದಿಂದಲೂ ಆಗಿಲ್ಲ, ಈತನಿಗೆ ಜನನವಿಲ್ಲ ಮರಣವಿಲ್ಲ. ಕಣ್ಣಿಗೆ ಕಾಣುವುದಿಲ್ಲ. ಅನುಭವಕ್ಕೆ ಮಾತ್ರ ನಿಲುಕುತ್ತಾನೆ. ಇಂತಹ ನಿರಾಕಾರ ನಿಜವಸ್ತುವನ್ನು ಅರಿತರಿತು ಆ ಅರಿವಿನಿಂದಲೇ ನೆನೆದು ನಿರ್ಮಲ ಶುದ್ಧ ಸುಂದರ ಶಿವ ತಾನಾಗಬಾರದೇನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .

**1824**

**ಪುಣ್ಯದ ಬಲಿಯದು ಪಾಪದಲ್ಲಿ ಪುಣ್ಯ ಬಲಿಯೆ ನೋಡಯ್ಯಾ**
**ಪಾಪದ ಬಲಿಯದು ಪುಣ್ಯದಲ್ಲಿ ಪಾಪ ಬಲಿಯೆ ನೋಡಯ್ಯಾ**
**ನಾಗನ ಸ್ವಭಾವವೆ ವಿಷ ; ಮಧ್ಯಕ್ಷೀರ ಕ್ಷೀರವಾಗದು**
**ವಿಷವೆ ಸಹಜ ನೋಡಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನವೆಂಬ ನಾಗರ ಹಾವು ಅದರ ಸ್ವಭಾವವೆ ವಿಷ. ಅದು ಎಂದೂ ಮಧುರ ಕ್ಷೀರವಾಗದು ವಿಷವೆ ಅದರ ಸ್ವಭಾವ.

ಪುಣ್ಯ ಪಾಪಗಳೆಂಬವು ಒಂದು ನಾಣ್ಯದ ಎರಡು ಮುಖಗಳು ಪುಣ್ಯದ ಬಲಿಯದು, ಪಾಪದಲ್ಲಿ ಪುಣ್ಯ ಬಲಿಯದು ನೋಡಯ್ಯಾ . ಪಾಪದ ಬಲಿಯದು, ಪುಣ್ಯದಲ್ಲಿ ಪಾಪ ಬಲಿಯು ನೋಡಯ್ಯಾ , ಪಾಪ ಪುಣ್ಯ ಎಂಬುದು ಮನೆಯು ನಾಗರಹಾವು ಚೆಲ್ಲಿದ ವಿಷ ಕಾಯದಲ್ಲಿ ತುಂಬಿದೆ. ಹಾವನ್ನು ಫಳಗಿಸಿ ಕೊರಳಲ್ಲಿ ಧರಿಸಿಕೊಳ್ಳುವ ಶಕ್ತಿ ನಾಗಭೂಷಣನಿಗೆ ಮಾತ್ರ ಇದೆ. ಈತ ಕೂಡ ಕಾಯದಲ್ಲಿಯೇ ಸಂಗಮವಾಗಿದ್ದಾನೆ.

**1825**

**ಯಾವದಾದರೂ ತೀರ್ಗಡೆಯಂತ್ಯದಲ್ಲಿ ಜಪ ತಪ ಶಿವಾರಾಧನೆ ಫಲಪದವು.**
**ತೀರ್ಗಡೆಯಾಗದಲ್ಲಿ ಫಲಿಸದು ಫಲಿಸದು ಪುಣ್ಯಪಾಪಗಳವು.**
**ದೇಹ ಶುದ್ಧವಾದವಂಗೆ ದೇಹಶುದ್ಧಿ, ರಸಸಿದ್ಧಿಯಾದವಂಗೆ ದೇಹಶುದ್ಧಿ.**
**ದೇಹಶುದ್ಧವಿಲ್ಲದವಂಗೆ ರಸಸಿದ್ಧಯಾಗದು ;**
**ರೋಗ ಪರಿಹಾರವಾಗದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹದಲ್ಲಿಯ ದೇವರು ದೇಹದಲ್ಲಿರುವ ರೋಗ-ರುಜುನೆಗಳು ಹೋಗದಿದ್ದರೆ ಈತ ದೇಹಕ್ಕೆ ಒಲಿಯನು. ದೇಹದಲ್ಲಿರುವ ದೇವರು ದೇಹಕ್ಕೆ ಒಲಿಯುವವರಿಗೆ ದೇಹದಲ್ಲಿರುವ ರೋಗಗಳು ತೊಲಗುವುದಿಲ್ಲ. ದೇಹದಲ್ಲಿ ಕಾಮ ಕ್ರೋಧಾದಿ ಅಡಿಷಡ್ವರ್ಗಗಳು ಸಪ್ತ ವ್ಯಸನಗಳು ಅಷ್ಟ ಮದಗಳು ಜಪ ತಪಗಳಿಂದ ಹೋಗುವುದಿಲ್ಲ. ದೇಹವನ್ನು ಆವರಿಸಿದ ಮನಕ್ಕೆ ದೇವರ ದರ್ಶನವಾಗಿ ಮನ ಆತನಿಗೆ ಭಕ್ತನಾದ ಮೇಲೆ ಮನ ದೇಹವನ್ನು ಹಿಡಿದು ಮಾಡಿದ ಬೆಟ್ಟದನಿ ತಪರಾಧವನ್ನು ದೇವರು ಒಂದು ಬೊಟ್ಟಲೆ ತೊಡವ

ದೇಹದಲ್ಲಿಯ ಅಜ್ಞಾನವನ್ನು ದೇಹವೆ ಕಾಯ್ದುಕೊಳ್ಳಲು ಬರುವುದಿಲ್ಲ ಮನದಿಂದಾದ ಅಜ್ಞಾನ ಘನಮನದಿಂದ ತೊಲಗುವುದು. ದೇಹ ಪರಿಶುದ್ಧವಾಗಿ ರಸಸಿದ್ಧಿಯಾಗುವುದು.

**1826**

**ಪುಣ್ಯಪಾಪಗಳಿಗೆ ದೂರ ಹೇಳುವವರಲ್ಲದೆ ಸಮೀಪ ಹೇಳುವರನಾರನು ಕಾಣೆ**
**ಪುಣ್ಯ ಪಾಪ ಸಂಕೀರ್ತವಾದಲ್ಲಿ ಕುಲಹೀನ ಕೀರ್ತವಂತ, ಸತ್ಕುಲ ಅಕೀರ್ತವಂತ ಇದೆ**
**ಕೀರ್ತಿ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪುಣ್ಯ ಪಾಪಗಳಿಂದ ಕಾಯ ಬಹುದೂರ ಇರಬೇಕೆಂದು ಬಯಸುತ್ತದೆ. ಆದರೆ ಮನವೆಂಬ ಮಾಯೆ ಕಾಯವನ್ನು ಆವರಿಸಿ ಕಾಯಕ್ಕೆ ಗೊತ್ತಿಲ್ಲದಂತೆ ಪುಣ್ಯ ಪಾಪದಲ್ಲಿ ತೊಡಗುತ್ತದೆ. ಬರಬರುತ್ತಾ ಪುಣ್ಯ ಪಾಪಗಳೆ ಕಾಯಕ್ಕೆ ಮತ್ತು ಮನಕ್ಕೆ ಹಿತವಾಗುತ್ತದೆ.

ಕಾಯ ಮತ್ತು ಮನ ಪಾಪಕಾರ್ಯಗಳಲ್ಲಿ ಭಾಗವಹಿಸಿ ಅಜ್ಞಾನದ ಸುಖ ಅನುಭವಿಸುತ್ತ ಅದರಿಂದ ಹೆಚ್ಚಾದ ಧನವನ್ನು ಪುಣ್ಯ ಕಾರ್ಯಗಳಲ್ಲಿ ವಿನಿಯೋಗಿಸುತ್ತದೆ. ಈ ಕಾಯಕದಲ್ಲಿ ಕಾಯ ಕುಲಹೀನ ಮತ್ತು ಕುಲಜನೆಂದು ಕಾಯಗಳಿಂದ ಕರೆಸಿಕೊಳ್ಳುತ್ತದೆ.

ಕುಲಹೀನ ಕಾರ್ಯದಲ್ಲಿ ಕಾಯ ಮತ್ತು ಮನಕ್ಕೆ ಸುಖವಾಗುತ್ತದೆ. ಅದರಿಂದ ಬಂದ ಉತ್ಪನ್ನವನ್ನು ಪುಣ್ಯ ಕಾರ್ಯಗಳಿಗೆ ಬಳಕೆ ಮಾಡಿ ಕಾಯ ಮತ್ತು ಮನ ಸುಖವನ್ನು ಅನುಭವಿಸುತ್ತದೆ. ಇವೆರಡು ಕಾಯಕಗಳನ್ನು ಕಾಯದಲ್ಲಿಯೆ ಸಂಗಮವಾದ ಕಪಿಲಸಿದ್ಧಮಲ್ಲಯ್ಯ ಮೆಚ್ಚುವುದಿಲ್ಲ.

**1827**

**ಮಾಡಿದ ಪೂಜೆಯದು ಮಹಾದೇವಂಗಲ್ಲದೆ, ಅನ್ಯ ದೇವತವೆಂಬುದು ಹೊಲ್ಲ ನೋಡಾ.**
**ಬೇಡುವ ಕಾಟವದು ದಾನಶೂರಂಗಲ್ಲದೆ, ಅನ್ಯ ಲೋಭಿಗಳು ಹೊಲ್ಲ ನೋಡಾ.**
**ನೋಡುವ ನೋಟವದು ತನ್ನ ಸ್ತ್ರೀಯಲ್ಲಲ್ಲದೆ ಪರಸ್ತ್ರೀಯಲ್ಲಿ ಹೊಲ್ಲ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನ.**

ಜ್ಞಾನಿ ಮಹಾದೇವನ ಪೂಜೆಯನ್ನು ಮಾತ್ರ ಮಾಡುತ್ತಾನೆ. ಈತ ಮಾಡುವ ಪೂಜೆಯನ್ನು ಮಾತ್ರ ಮಾಡುತ್ತಾನೆ. ಈತ ಮಾಡುವ ಪೂಜೆ ಯಾರಿಗೂ ಕಾಣುವುದಿಲ್ಲ. ಅನ್ಯ ದೇವತೆಗಳ ಒತ್ತಡವೂ ಈತನಿಗಿಲ್ಲ. ಮಹಾದೇವ ಜ್ಞಾನಿಗೆ ಕಾಡುತ್ತಾನೆ. ಜ್ಞಾನಿ ಮಹಾದೇವನೊಂದಿಗೆ ವಾಸ ಮಾಡುತ್ತಾನೆ.

ದಾನಶೂರನಿಗೆ ಬೇಡುವ ಕಾಟ ತಪ್ಪುವುದಿಲ್ಲ. ಲೋಭಿಗೆ ದಾನ ಎನ್ನುವ ಶಬ್ಧವೆ ವೈರಿ ಹಾಗೆಯೇ ನೋಡುವ ನೋಟವು ತನ್ನ ಸ್ತ್ರೀಯಲ್ಲಲ್ಲದೆ ಪರ ಸ್ತ್ರೀಯಲ್ಲಿ ಹೊಲ್ಲ. ಮನವೆಂಬ ಸ್ತ್ರೀ ತಾನು ಎಂದು ಮನಕ್ಕೆ ಅರಿವಾದಾಗ ಈ ಸ್ತ್ರೀ ತನುವಿನಲ್ಲಿಯೇ ತನ್ಮಯವಾದ ತನ್ನ ಪುರುಷನನ್ನು ನೋಡುವುದಲ್ಲದೆ ಅನ್ಯರನ್ನು ನೋಡುವುದಿಲ್ಲ ತನ್ನ ಪರುಷನೊಬ್ಬನೆ ಪುರುಷ ಎಂಬುದು ಮನವೆಂಬ ಸ್ತ್ರೀಗೆ ಗೊತ್ತಾಗುತ್ತದೆ.

**1828**

**ಕಾಮಧೇನುವಿನ ವಂಶವಿವು ಎಂದಡೆ, ಹಿಂಡಲರಿಯವು ನೋಡಾ, ಆವುಗಳು**
**ಕಾಮಾರಿಯ ರೂಪಗಳಿವರೆಂದಡೆ, ಅರಿಷಡ್ವರ್ಗಂಗಳೆಳಿಯಪಡೆಯವು**

**ನೋಡಾ ತ್ರಿಶಕ್ತಿಗಳು. ನಾ ನಿನ್ನವನೆಂದಡೆ ನಿಮ್ಮ ಮಹಿಮೆಯಗಳನರಿಯಬಾರದು**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ನಾನು ನಿನ್ನವನೆ ಆದರೂ ನಿಮ್ಮ ಮಹಿಮೆಯನ್ನು ಅರಿಯಲು ಸಾಧ್ಯವಾಗುವುದಿಲ್ಲ. ನಾನು ನಿನ್ನ ಬೆನ್ನಿಗೆ ಇದ್ದರೂ ಕೂಡ ನೀನು ನನ್ನನ್ನು ಅರಿತರಿತು ನಿನ್ನಂತೆ ಮಾಡಿಕೊಳ್ಳುವ ಚಪಲ ನಿನಗೆ ಆದರೂ ನಾನು ನಿನ್ನತ್ತ ತಿರುಗಿಯೂ ನೋಡುತ್ತಿಲ್ಲ.

ಬಳ್ಳಂಗೆ ಆವೆಂದೊಡೆ ಬಳ್ಳ ಹಾಲ ಕರೆಯುವುದೆ ಎಂದು ಬಸವಣ್ಣನವರು ಹೇಳಿದಂತೆ ಕಾಮಧೇನುವಿನ ವಂಶವಿದು ಎಂದು ಹೇಳಿದರೆ, ಹಿಂಡಲರಿಯದು ನೋಡಾ ಹಾವುಗಳು. ಅಂತೆಯೆ ಕಾಮಾರಿಯ ರೂಪುಗಳು ಇವರೆಂದಡೆ ಕಾಯದಲ್ಲಿಯ ಕಾಮಾದಿ ಅರಿಷಡ್ವರ್ಗಗಳು ಅಳಿಯುವುದಿಲ್ಲ. ಹಾಗೆಯೇ ನಾನು ನಿಮ್ಮವನು ಎಂದು ಪರಿಚಯಸಿದಂತೆ ನಿಮ್ಮ ಮಹಿಮೆಗಳನ್ನು ಅರಿಯಲು ನನಗೆ ಸಾಧ್ಯವಾಗುವುದಿಲ್ಲ. ಆದರೂ ನಾನು ನಿನ್ನವನೆ.

**1829**

**ಎಲ್ಲರೂ ಜಪಿಸುವ ಜಪವ ಜಪಿಸಲಾರೆನಯ್ಯಾ.**
**ಕ್ಷಣಕ್ಕೆ ಒಮ್ಮೆ ನಮಃ ಶಿವಾಯ ಎಂದೆ. ಕ್ಷಣಕ್ಕೆ ಒಮ್ಮೆ ನಮಃ ಶಿವಾಯ ಎಂಬೆ,**
**ಕ್ಷಣಕ್ಕೊಮ್ಮೆ ಇದೆ ಮಂತ್ರಘನವೆಂದುಸುವ ನೋಡಾ. ಕಪಿಲಸಿದ್ಧಮಲ್ಲಿಕಾರ್ಜುನ ದೇವಾ.**

ಕ್ಷಣಕ್ಕೊಮ್ಮೆ ನಮಃ ಶಿವಾಯ ಎಂಬೆ. ಎಲ್ಲರೂ ಜಪಿಸುವ ಜಪ ನಾನು ಜಪಿಸಲಾರೆನಯ್ಯಾ ಕ್ಷಣಕ್ಕೊಮ್ಮೆ ನಮಃ ಶಿವಾಯ ಎಂಬೆ. ಇದು ಪಂಚಾಕ್ಷರಿ ಮಂತ್ರ ರುದಿರಮಯವಾಗಿರುವುದು 'ಮಕಾರ' ಮಾಂಸಮಾಯವಾಗಿರುವುದು 'ಮಕಾರ'. ಅಸ್ಥಿ ಮಯವಾಗಿಹುದು 'ಶಿಕಾರ' ಮಜ್ಜಾಮಯವಾಗಿಹುದು 'ವಕಾರ'. ಮೇದೋಮಯವಾಗಿಹುದು 'ಯಕಾರ'.

ನಾನು ನಮಃ ಶಿವಾಯ. ಈ ಪ್ರಪಂಚದಲ್ಲಿ ನನ್ನಂತೆ ಇರುವವರು ನಮಃ ಶಿವಾಯ, ಕ್ಷಣಕ್ಕೊಮ್ಮೆ ಇದೇ ಮಂತ್ರ ಘನವೆಂದು ಉಸುರುವೆ. ಏಕೆಂದರೆ ಸಕಲ ಕಾಯಗಳು ಕಪಿಲಸಿದ್ಧ ಮಲ್ಲಯ್ಯನ ಮಂದಿರದಲ್ಲಿರುತ್ತವೆ.

**1830**

**ಮಂತ್ರಗಳ ಭೇದ ಬೃಹಸ್ಪತಿಯೋರ್ವಂಗಲ್ಲದೆ,**
**ಉಳಿದ ದೇವ ದೇವತೆಗಳಿಗದು ದುರ್ಘಟ ನೋಡಾ**
**ಮಂತ್ರ ಮನ ಒಂದಾದಡೆ ಮಂತ್ರಮೂರ್ತಿಯಪ್ಪ ಮಹಾದೇವಿಯರ**
**ಅಷ್ಟೈಶ್ವರ್ಯಕ್ಕಧಿಕಾರಿ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಮಂತ್ರಗಳ ಭೇದ ದೇವತೆಗಳ ಗುರು ಬೃಹಸ್ಪತಿಗೆ ಮಾತ್ರ ಗೊತ್ತು . ಉಳಿದ ದೇವಾನುದೇವತೆಗಳಿಗದು ತಿಳಿಯದು.

ಮಂತ್ರವೆಂದರೆ ಕಾಯದಿಂದ ಹೊರಬಂದದ್ದು. ಕಾಯವನ್ನು ಮನ ಮಂತ್ರದಿಂದ ಆವರಿಸಿದೆ ಮಹಾದೇವನ ದರ್ಶನ ಮಾಡಿಕೊಳ್ಳಲು ಸಾಧ್ಯವಾಗುತ್ತದೆ.

ಮಂತ್ರವೆಂದರೆ ಕಾಯವೂ ಹೌದು ಮನವೂ ಹೌದು ಮಹಾದೇವನೂ ಹೌದು. ಮಂತ್ರದ ಮೂಲಕ ಈ ಮೂರು ಒಂದಾದಾಗ ಮನವೆ ಮಹಾದೇವಿಯಾಗಿ ಕಾಯ ಅಷ್ಟೈಶ್ವರ್ಯಕ್ಕೆ ಅಧಿ ಕಾರಿಯಾಗುತ್ತದೆ. ಎಂದು ಸಿದ್ಧರಾಮ ಶಿವಯೋಗಿಗಳು ಕಪಿಲಸಿದ್ಧಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**1831**

**ತಿಳಿದೊಮ್ಮೆ ಜಪಿಸಿದ ಜಪವನು ಜಪ**
**ಜಪಮಾಲಿಕೆಯ ಪಿಡಿಯನು ನೋಡಾ.**
**ತಿಳಿದೊಮ್ಮೆ ಜಪಿಸಿದ ಜಪವದು ಜಪ**
**ಜಪದ ರೀತಿಯನರುಹುವ ಜಪಮಾಲಿಕೆಯಪಡಿಯನು ನೋಡಾ.**
**ಕಪಿಲಸಿದ್ಧಮಲ್ಲಿಕಾರ್ಜುನನ ಶರಣ.**

ಜಪ ಜಪಮಾಲಿಕೆಯನ್ನು ಹಿಡಿದು ನೂರೆಂಟು ಬಾರಿ ಮಣಿಯನ್ನು ಎಣಿಸುತ್ತ ಮಂತ್ರ ಜಪಿಸುವ ಜಪವನ್ನೆ ಲೋಕ ಜಪವೆಂದು ತಿಳಿದಿದೆ. ತಿಳಿದು ಜಪಿಸುವ ಜಪಕ್ಕೆ ಜಪಮಾಲಿಕೆಯ ಅವಶ್ಯಕತೆಯಿಲ್ಲ. ದೇಹದಲ್ಲಿಯೇ ಇದ್ದ ದೇವರನ್ನು ದೇಹವನ್ನು ಆವರಿಸಿದ ಮನ ಜಪಮಾಲೆ ಹಿಡಿದು ಜಪಿಸಬೇಕೆ.ಅಂತರಿತು ಆ ಅರಿವೆ ತಾನಾಗಿ ಗುರುದೇವನನ್ನು ಜಪಿಸುವನು ಜಪಮಾಲೆಯನ್ನು ಹಿಡಿಯುವುದಿಲ್ಲ. ಆತ ನಿಜಶರಣ.

**1832**

**ಭಕ್ತನಾದಡೇನು ಮಹೇಶನಾದಡೇನು ?**
**ಮೊದಲಿಲ್ಲ ಶಕ್ತಿಯ ಜಪವೇ ಜಪ ನೋಡಾ**
**ಭಕ್ತನಾದಡೇನು, ಮಹೇಶನಾದಡೇನು ?**
**ಕಡೆಯಲ್ಲಿ ಶಿವನ ಜಪವೆ ಜಪ ನೋಡಾ**
**ಜಪ ರೀತಿ, ಜಪಲಕ್ಷಣ, ಜಪ ಪ್ರಣವಂಗಳರಿಯದೆ**
**ತಾಪತ್ರಯಕ್ಕೊಳಗಾಗಿ ಭವಕ್ಕೀಡಾದರು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ದೇಹದಲ್ಲಿ ಇರುವ ದೇವರಿಗೆ ದೇಹವನ್ನು ಆವರಿಸಿದ ಮನ ಆರಾಧಿಸಿ ಭಕ್ತನಾಗಬೇಕು. ಮುಂದೆ ಆ ಭಕ್ತನೆ ಮಹೇಶನಾಗುತ್ತಾನೆ.

ಕಾಯದಲ್ಲಿ ಅನಂತ ಶಕ್ತಿಯಿದೆ. ಕಾಯವನ್ನು ಆವರಿಸಿದ ಮನವೆ ಈ ಅನಂತ ಶಕ್ತಿ . ಮನವೆ ಸಾಕ್ಷಿಯಾಗಿ ಮೊದಲಲ್ಲಿ ಶಕ್ತಿಯ ಜಪ ಮಾಡಬೇಕು. ಭಕ್ತನಾದಡೇನು ಮಹೇಶನಾದಡೇನು ಮೊದಲ ಜಪ ಶಕ್ತಿಯ ಕುರಿತಾಗಿರಬೇಕು. ಭಕ್ತನಾದಡೇನು ಮಹೇಶನಾದಡೇನು ನಂತರ ಶಿವನ ಜಪ ಮಾಡಬೇಕು. ಹೀಗೆ ಜಪದ ರೀತಿ, ಜಪದ ಲಕ್ಷಣ, ಜಪದ ಪ್ರಣವಂಗಳನ್ನು ಅರಿಯದೆ ತಾಪತ್ರಯಕ್ಕೊಳಗಾಗಿ ಲೋಕ ಜನನ ಮರಣಕ್ಕೀಡಾಯಿತು. ಎಂದು ಸಿದ್ಧರಾಮ ಶಿವಯೋಗಿಗಳು ಸ್ವಗತದಲ್ಲಿ ಹೇಳಿದ್ದಾರೆ.

1833

**ಆವನಾದಡೇನು ಭಾವದಲ್ಲಿ ಪ್ರತೀತನಲ್ಲದೆ ನಡೆ ನುಡಿ ಗಡಣದಲ್ಲಿ**
**ಪ್ರೀತಿಯುಂಟೆ ದೇವಾ ? ಅರಸನಾದಡೇನು.**
**ಆಳುವಲ್ಲಿ ಅಧಿಕಾರಿಯಲ್ಲದೆ ಅಳಿವಲ್ಲಿ ಅಧಿಕಾರಿಯುಂಟೆ ದೇವಾ ? ಭಕ್ತನಾದಡೇನು,**
**ಭಕ್ತನಲ್ಲಿ ಸಲುಗೆಯಲ್ಲದೆ ಮಹೇಶನಲ್ಲಿ ಸಲುಗೆಯುಂಟೇನಯ್ಯಾ ?**
**ಕಪಿಲಸಿದ್ಧಮಲ್ಲಿಕಾರ್ಜುನದೇವಾ.**

ಭಾವ ಎರಡು ಮುಖದ ಹಾವಾಗಿ ಎರಡೂ ಮುಖಗಳ ಮೂಲಕ ಕಚ್ಚುತ್ತದೆ. ಮನ ತನುವಿನಲ್ಲಿ ಭಾವ ಸೃಷ್ಠಿ ಮಾಡಿ ಮತ್ತೊಂದು ತನುವನ್ನು ಪ್ರೀತಿಸುತ್ತದೆ. ಆ ತನುವಿನ ನುಡಿಯಲ್ಲಿ ವ್ಯತ್ಯಾಸವಾದಾಗ ಆ ತನುವಿನ ಮೇಲೆ ಇಟ್ಟ ಭಾವ ದುರ್ಭಾವಕ್ಕೆ ಒಳಗಾಗಿ ತನುವನ್ನೆ ಕಚ್ಚುತ್ತದೆ. ಭಾವ ತನುವಿನ ಮೂಲಕ ಅರಳಿತು. ಅದೇ ಭಾವವೆ ತನುವಿನ ಮೂಲಕ ಕೆರಳಿತು

ಅರಸನಾದಡೇನು ಆಳುವಲ್ಲಿ ಅಧಿಕಾರಿಯಲ್ಲದೆ ಆತ ನಿರ್ಗಮಿಸಿದಲ್ಲಿ ಅಧಿಕಾರ ಉಂಟೆ ? ಭಕ್ತನಲ್ಲಿ ಸಲುಗೆಯಲ್ಲದೆ ಮಹೇಶನಲ್ಲಿ ಸಲುಗೆಯಿಲ್ಲ. ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .

1834

**ಭಕ್ತನಾದ ಬಳಿಕ ಭಕ್ತವಿಡಿ**
**ಭಕ್ತ ತಾನಾದ ಬಳಿಕ ಭಕ್ತಿಯ ಹೊಲಬನರಿಯಬೇಕು.**
**ಭಕ್ತ ತಾನಾದ ಬಳಿಕ ಜ್ಞಾನಕ್ರಿಯಾವಿವರವ ವಿಚಾರಿಸಿ ನೋಡಬೇಕು.**
**ಭಕ್ತ ತಾನಾದ ಬಳಿಕ ಅರುಹಿನ ಕುರುಹುವಿಡಿದಾಚರಿಸಬೇಕು**
**ಭಕ್ತ ತಾನಾದ ಬಳಿಕ ತಾಪತ್ರಯಕ್ಕೊಳಗಾಗದೆ,**
**ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಐಕ್ಯ ಹೊಂದಲೇಬೇಕು.**

ತನುವನ್ನು ಆವರಿಸಿದ ಮನ ತನುವಿನಲ್ಲಿಯೇ ತನ್ಮಯವಾದ ಅರಿವೆಂಬ ಗುರುದೇವನಿಗೆ ಶರಣಾಗತನಾಗಿ ಭಕ್ತನಾದ ಬಳಿಕ ಆ ಭಕ್ತಿವಿಡಿದು ಆಚರಿಸುವ ಕಲೆಯನ್ನು ಗುರುದೇವನೆ ಭಕ್ತನಿಗೆ ಹೇಳತ್ತಾನೆ. ಆ ಭಕ್ತಿಯೆಂದರೆ ಏನು ಎನ್ನುವ ಕೀಲನ್ನು ಅರಿಯಬೇಕು.

ಭಕ್ತ ತಾನಾದ ಬಳಿಕ ಅರಿವಿನಿಂದ ನೋಡುತ್ತಾನೆ. ಭಕ್ತ ತಾನು ನೋಡುವಾಗ ಗುರುದೇವನ ಅರಿವಿನ ಕಣ್ಣನ್ನು ಬಳಕೆ ಮಾಡಿ ಭಕ್ತ ನೋಡುತ್ತಾನೆ. ಕಣ್ಣಿನಲ್ಲಿ ಎರಡು ದೃಶ್ಯಗಳಿವೆ. ಒಂದು ಅಜ್ಞಾನದ ದೃಶ್ಯ ಇದು ನನ್ನ ದೃಶ್ಯ ಮತ್ತೊಂದು ಗುರುದೇವನ ದೃಶ್ಯ .

ನಾನು ಎನ್ನುವ ಮನ ಭಕ್ತನಾದ ಬಳಿಕ ನನ್ನ ಅಜ್ಞಾನದ ಕಣ್ಣು ಗುರುದೇವನ ಅರಿವಿನ ಕಣ್ಣೊಳಗೆ ಲೀನವಾಗಿ ನನ್ನ ಕಣ್ಣು ಮುಕ್ಕಣ್ಣನ ಅರಿವಿನ ಕಣ್ಣಾಗುತ್ತದೆ. ಆ ಅರಿವಿನ ಕಣ್ಣಿನಿಂದ ನೋಡುವ ಶಕ್ತಿ ಭಕ್ತನಾದ ಬಳಿಕ ಭಕ್ತನಿಗೆ ಮಾತ್ರ ಬರುತ್ತದೆ.

ನಾನು ಎನ್ನುವ ಅಜ್ಞಾನದ ಅಂಗ ನಷ್ಟವಾಗಿ ಅಂಗ ಲಿಂಗಾಂಗವಾಗುತ್ತದೆ. ಆಗ ಭಕ್ತ ಯಾವ ತಾಪತ್ರಯಕ್ಕೂ ಒಳಗಾಗುವುದಿಲ್ಲ. ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನ ಕಾಯದಲ್ಲಿ ಭಕ್ತ ಐಕ್ಯ ಹೊಂದುತ್ತಾನೆ.

**1835**

**ಕುರಿಯ ಹೆಸರು ಒಂದೆ, ಅಗ್ನಿಯ ಹೆಸರು ಒಂದೆ ಆದಲ್ಲಿ**
**ಅಗ್ನಿಯ ಸಾಮರ್ಥ್ಯ ಕುರಿಗೆ ಬಂದೀತೇನಯ್ಯಾ ?**
**ಕಪ್ಪೆಯ ಹೆಸರು ಹಾವಿನ ಹೆಸರು ಒಂದೇ ಆದಲ್ಲಿ**
**ಹಾವಿನ ಸಾಮರ್ಥ್ಯ ಕಪ್ಪೆಗೆ ಬಂದೀತೇನಯ್ಯಾ ?**
**ನನ್ನ ಹೆಸರು, ನಮ್ಮ ಶಿವಶರಣರ ಹೆಸರು ಒಂದೆ ಆದಲ್ಲಿ**
**ಅವರ ಸಾಮರ್ಥ್ಯ ಎನಗೆ ಬಂದೀತೇನಯ್ಯಾ ?**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .**

ಕಾಯದಲ್ಲಿಯೂ ಅಗ್ನಿಯಿದೆ ಕುರಿಯಲ್ಲಿಯೂ ಅಗ್ನಿಯಿದೆ. ಅಗ್ನಿ ಹೆಸರು ಒಂದೆ. ಆದರೂ ಕಾಯದಂತೆ ಕುರಿ ಆಗಲಾರದು. ಅಗ್ನಿಯ ಸಾಮರ್ಥ್ಯ ಕುರಿಗೆ ಬರುವುದಿಲ್ಲ. ಅದರಂತೆಯೇ ಹಾವಿನ ಸಾಮರ್ಥ್ಯ ಕಪ್ಪೆಗೆ ಬರುವುದಿಲ್ಲ.

ಶಿವಶರಣರ ಹೆಸರು ನನ್ನ ಹೆಸರು ಒಂದೇ ಆದರೂ ಕೂಡ ಶರಣರ ಸಾಮರ್ಥ್ಯ ನನಗೆ ಬರುವುದಿಲ್ಲ ಏಕೆಂದರೆ ಶರಣ ಜ್ಞಾನಕೃಷಿಯಲ್ಲಿ ಪಳಗಿ ಆ ಜ್ಞಾನಿಯೇ ತಾನಾದಾತ.

**1836**

**ಪರ್ವತದ ಮಹಿಮೆಯದು ಘನವೆಂದಡೆ,**
**ಪರ್ವತದಲ್ಲಲ್ಲದೆ ವೇಶ್ಯಾಕೋಶಕ್ಕೆ ಹರಿದು**
**ಹರನೆಂದೆನಿಸದಿರಯ್ಯಾ.**
**ಶರಣರ ಮಹಿಮೆಯದು ಘನವೆಂದಡೆ**
**ಶಿವಶರಣನಲ್ಲಲ್ಲದೆ ಕಿಂಚಿಜ್ಞ ಮಾನವನಲ್ಲಿ ಹರಿಯದು ನೋಡಯ್ಯಾ ,**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .**

ಶರಣರ ಮಹಿಮೆ ಘನವಾದದ್ದು ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಯ್ಯನಿಗೆ ಶರಣು ಹೋಗಿ ಶರಣಾಗತನಾಗಿ ಶರಣನಾಗಿದ್ದಾನೆ. ಇದು ತನಗೆ ತಾನೆ ತೆಗೆದುಕೊಳ್ಳುವ ಪ್ರಮಾಣಪತ್ರವಾಗಿದೆ. ಇದು ವಿಶ್ವವಿದ್ಯಾಲಯ ನೀಡುವ ಸ್ನಾತಕ ಪದವಿ ಪ್ರಮಾಣಕ್ಕಿಂತ ಬಹಳ ದೊಡ್ಡದು. ಈ ಪತ್ರ ಶರಣನ ಪ್ರಮಾಣಪತ್ರಕ್ಕೆ ಸರಿಬಾರದು. ಮಾನವನನ್ನು ಶರಣನಿಗೆ ಹೋಲಿಸುವುದು ಸಲ್ಲದು.

**1837**

**ಶಿವನಿರ್ಮಿತ ಮಂತ್ರಂಗಳು ಕೋಟ್ಯಾನುಕೋಟಿ**
**ಶಿವನಿರ್ಮಿತ ಯಂತ್ರಗಳು ಕೋಟ್ಯಾನುಕೋಟಿ**
**ಶಿವನಿರ್ಮಿತ ಮಹಾಮೂಲಿಕೆಗಳು ಕೋಟ್ಯಾನಿಕೋಟಿ**
**ಶಿವನಿರ್ಮಿತ ವಿದ್ಯಾದಿಗಳು ಕೋಟ್ಯಾನುಕೋಟಿ**
**ಇದರಂದವನರಿಯಬೇಕೆಂಬವರು ಕೋಟ್ಯಾನುಕೋಟಿ**
**ಸಿದ್ಧಿಯ ಹೊಂದಿ ಪ್ರಸಿದ್ದಿಗೆ ಬಂದವರು,**

**ಕೋಟ್ಯಾನುಕೋಟಿಯೊಳಗೆ ಕೋಟಿಯಿಲ್ಲಿ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವೆ.**

ಶಿವನಿರ್ಮಿತ ಮಂತ್ರಂಗಳು ಕೋಟ್ಯಾನುಕೋಟಿ,ಶಿವನಿರ್ಮಿತ ಯಂತ್ರಗಳು ಕೋಟ್ಯಾನುಕೋಟಿ,ಶಿವನಿರ್ಮಿತ ಮಹಾಮೂಲಿಕೆಗಳು ಹಾಗೂ ವಿದ್ಯಾದಿಗಳು ಕೋಟ್ಯಾನುಕೋಟಿ ಇದರಂದವನರಿಯಬೇಕೆಂಬ ಆಸೆ ಉಳ್ಳವರು ಕೂಡ ಕೋಟ್ಯಾನುಕೋಟಿ.

ಕೋಟಿಗೊಬ್ಬ ಶರಣ ಎಂದು ಶರಣನೇ ಹೇಳಿದ್ದಾನೆ. ಹಾಗೆಯೇ ಇದರ ಸಿದ್ಧಿಯನ್ನು ಹೊಂದಿ ಪ್ರಸಿದ್ದಿಗೆ ಬಂದವರು ಕೋಟ್ಯಾನು ಕೋಟಿಯಲ್ಲಿ ಕೋಟಿಯೂ ಇಲ್ಲ.

**1838**

**ಮಂತ್ರ ಮೂರರಲ್ಲಿ ಮಂತ್ರವೆ ಮಂತ್ರ ನೋಡಾ,**
**ಶಕ್ತಿಯ ಮೂರರಲ್ಲಿ ಮಂತ್ರವೆ ಮಂತ್ರ ನೋಡಾ,**
**ಶಿವನ ಮೂರರಲ್ಲಿ ಮಂತ್ರವೆ ಮಂತ್ರ ನೋಡಾ**
**ನವಲಿಂಗದ ಮಂತ್ರ ಮೂರರಲ್ಲಿ ಮಂತ್ರವೆಂಬುದು ತ್ರಿಲೋಕದಲ್ಲಿಲ್ಲ ನೋಡಾ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಸ್ಥೂಲಕಾಯ, ಸೂಕ್ಷ್ಮ ಕಾಯ, ಕಾರಣಕಾಯ ಹೀಗೆ ಮೂರು ಕಾಯಗಳು ಮೂರು ಮಂತ್ರಗಳಿಂದ ಭರಿತವಾಗಿವೆ. ಸೂಕ್ಷ್ಮ ಕಾಯದಲ್ಲಿ ಶಕ್ತಿಯ ಮಂತ್ರ ಭರಿತವಾಗಿದ್ದರೆ ಕಾರಣ ಕಾಯದಲ್ಲಿ ಶಿವನ ಮಂತ್ರ ಭರಿತವಾಗಿದೆ.

ಕಾಯದಲ್ಲಿ ನವಲಿಂಗಗಳು ಸಂಗಮವಾಗಿವೆ. ಹೀಗಾಗಿ ಕಾಯವನ್ನು ನವಲಿಂಗದ ಮಂತ್ರ ಎಂದು ಕರೆದಿದ್ದಾರೆ ಶರಣರು ಮೂರು ಮಂತ್ರಗಳಿಂದ ಭರಿತವಾದ ಕಾಯ ತ್ರಿಲೋಕದಲ್ಲಿ ಇಲ್ಲ ಎಂದಿದ್ದಾರೆ. ಸಿದ್ಧರಾಮ ಶಿವಯೋಗಿಗಳು.

**1839**

**ಒಂದೊಮ್ಮೆ ಜಪಿಸುವುದಾಗದಿರೆ,**
**ನಿಂದೊಮ್ಮೆ ನೆನೆಯಬೇಕು ನೋಡಾ, ಮಂತ್ರ ಮೂರನೂ**
**ಒಂದೊಮ್ಮೆ ಜಪಿಸುವುದಾಗದಿರೆ,**
**ನಿಂದೊಮ್ಮೆ ನೋಡಬೇಕು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವ.**

ಕಾಯದಲ್ಲಿ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವನ್ನು ಕಾಯವನ್ನು ಆವರಿಸಿದ ಮನ ಆತನಿಗೆ ಭಕ್ತನಾಗಿ ಆತನಿಗೆ ಶರಣು ಹೋಗಿ ಕಾಯ ಇರುವುದರೊಳಗೆ ಒಮ್ಮೆಯಾದರೂ ಆತನನ್ನು ನೋಡಬೇಕು.

ಜಪಿಸುವುದಾದರೆ ಒಮ್ಮೆಯಾದರೂ ಆತನನ್ನು ಜಪಿಸಬೇಕು.ಒಮ್ಮೆಯಾದರೂ ಕಾಯದಲ್ಲಿಯೆ ನಿಂತವನನ್ನು ನೆನೆಯಬೇಕು. ಒಮ್ಮೆಯಾದರೂ ನೂರು ಮಂತ್ರಗಳ ಕಾಯವನ್ನು ಜಪಿಸಬೇಕು. ಮೂರು ಕಾಯಗಳನ್ನು ಏಕಕಾಯವನ್ನಾಗಿಸಿಕೊಂಡ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವೆ.

**1840**

**ಆ ಶರಣನ ರೂಪು ಈ ಶರಣನ ಹಸ್ತಕಮಲದಲ್ಲಿ ತೋರುತ್ತಿದೆ.**
**ಈ ಶರಣನ ರೂಹು ಆ ಶರಣನ ಪಾದದಲ್ಲಿ ತೋರುತ್ತಿದೆ.**
**ಆ ಶರಣನ ಪಾದ ಈ ಶರಣನ ಮಹಾಹೃದಯದಲ್ಲಿ ಮಹಾಲಿಂಗ**
**ನೇತ್ರದಲ್ಲಿ ಶಿವಲಿಂಗವಾಗಿ, ತೋರಿದ ಜಗತ್ತಿಗೆ ವಿಶ್ವೋದರಿಯಾಗಿ,**
**ತೋರಿತ್ತು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಶರಣನ ರೂಪು ಶರಣನ ಹಸ್ತ ಕಮಲದಲ್ಲಿ ಕಾಣುತ್ತದೆ. ಶರಣನ ರೂಪು ಆತನ ಪಾದದಲ್ಲಿ ತೋರುತ್ತದೆ. ಶರಣನ ಕಾಯದಲ್ಲಿ ಮಹಾಲಿಂಗವೆ ಸಂಗಮವಾಗಿದೆ. ಆತನ ನೇತ್ರದಲ್ಲಿ ಶಿವಲಿಂಗ ಸಂಗಮವಾಗಿದೆ.

ಶರಣ ನೋಡುವ ನೋಟ ಆತನಿಗೆ ಕಾಣುತ್ತದೆ. ಆತ ಕೇಳುವ ಶಬ್ದ ನಿಶ್ಯಬ್ದವಾಗಿ ಕಿವಿಯಲ್ಲಿ ಅರಿವಿನ ನಿಶ್ಯಬ್ದ ಕಮಲವಾಗಿ ಅರಳುತ್ತದೆ. ಶರಣನ ನೇತ್ರದಲ್ಲಿ ಇಡೀ ಬ್ರಹ್ಮಾಂಡವೇ ಚುಳುಕಾಗಿದೆ.

**1841**

**ನೋಡುವ ನರರಿಗೆ ನಿನ್ನ ರೂಹು ತೋರದಯ್ಯಾ .**
**ನುಡಿಸುವ ನರರಿಗೆ ನೀ ನುಡಿದುದು ಮಾಡುವುದಲ್ಲಯ್ಯಾ .**
**ಹಾಡುವನರರಿಗೆ ನೀ ಮನವ ನೀಡು ಮಾಡುವನಲ್ಲಯ್ಯಾ .**
**ತೋರುವ ತೋರ್ಪು, ನುಡಿದನುಡಿಸುವ ಪ್ರಮಥರ**
**ಏಕೆ ಒಳಗೊಂಡೆ ಹೇಳಾ, ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .**

ಕಾಯದಲ್ಲಿ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನಯ್ಯನೆ ನೀನು ಕಾಯದಲ್ಲಿದ್ದರೂ ನಿನ್ನನ್ನು ನೋಡುವ ಶಕ್ತಿ ನರರಿಗೆ ಇಲ್ಲ. ಕಾಯದಲ್ಲಿದ್ದು ನೀನು ನುಡಿದು ಹೇಳುವ ನುಡಿಮುತ್ತು ನರರು ಕೇಳುರು ನೋಡಯ್ಯಾ .

ನಿನ್ನ ಕುರಿತೇ ಹಾಡುವರು ಆದರೂ ನಿನ್ನ ಪರಿಚಯ ಅವರಿಗೆ ಇಲ್ಲ ನೋಡಯ್ಯಾ . ಮನವನ್ನು ಈಡು ಮಾಡಿ ಸಕಲ ಮನಗಳನ್ನು ನಿನ್ನಂತೆ ಮಾಡಿಕೊಳ್ಳುವವ ನೀನಲ್ಲಯ್ಯ . ತೋರುವ ತೋರ್ಪು ನುಡಿದು ನುಡಿಸುವ ಪ್ರಮಥರನ್ನು ಮಾತ್ರ ಏಕೆ ಒಳಕೊಂಡೆ ಹೇಳಾ.

**1842**

**ಒಲಿಯದ ಮೂರ್ತಿ; ಒಲಿಸಿಕೊಟ್ಟ ನಮ್ಮ ಚೆನ್ನಬಸವ,**
**ಉಲಿಯುವ ಮೂರ್ತಿ; ಬಲೆಯ ಹಾಕಿಕೊಟ್ಟ ನಮ್ಮ ಚೆನ್ನಬಸವ.**
**ಕಲಿಯುಗದ ಕಲಿಯಹ ಕಾಲಾಧರಧರ ಗುರುವಐಕ್ಯವನರಿದು,**
**ಇನ್ನರುಹಿನ ಮನೆಯಲ್ಲಿರಲಾರೆ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನದೇವಾ.**

ಕಾಯದಲ್ಲಿ ನನಗೆ ತಿಳಿ ಹೇಳುವ ಅರಿವಿನ ಮೂರ್ತಿಯೊಬ್ಬ ಇದ್ದಾನೆ. ಅವನು ಯಾರಿಗೂ

ಒಲಿಯದವ. ಇಂತಹ ಒಲಿಯದ ಅರಿವಿನ ಮೂರ್ತಿಯನ್ನು ಒಲಿಸಿ ನನ್ನ ಕೈಯೊಳಗೆ ಕೊಟ್ಟ ನನ್ನ ಗುರುದೇವಾ ಚೆನ್ನಬಸವನೆ. ಉಲಿಯುವ ಮೂರ್ತಿ ಈತ. ಆದರೂ ತನ್ನ ಅರಿವಿನ ಬಲೆಯನ್ನು ಬೀಸಿ ಹಿಡಿದು ನನ್ನ ಕೈಯೊಳಗೆ ಕೊಟ್ಟ ನನ್ನ ಗುರು ಚೆನ್ನಬಸವ. ಕಲಿಯುಗದ ಕಲಿ ಆತ ಕಾಲಾಧರ ಗುರು ಆತನ ಐಕ್ಯವನ್ನು ಅರಿದು ಇನ್ನು ನಾನು ಅರುಹಿನ ಮನೆಯಲ್ಲಿ ಇರಲಾರೆ ನೋಡಾ ಎಂದು ಗುರುದೇವನನ್ನು ನೆನೆದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1843**

**ಲಿಂಗಪೂಜೆಯಿಂದೊಬ್ಬ ಜೀವನ್ಮುಕ್ತ,**
**ಜನಪ್ರವಾಹದಿಂದೊಬ್ಬ ಜೀನನ್ಮುಕ್ತ ನೋಡಾ,ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯದ ಅಜ್ಞಾನ, ಕಾಯವನ್ನು ಆವರಿಸಿದ ಮನವನ್ನೇ ಸಾಕ್ಷಿ ಮಾಡಿಕೊಂಡು ತಿಳಿದು ತನ್ನ ಅಜ್ಞಾದೊಂದಿಗೆ ತಾನೇ ಹೋರಾಟ ಮಾಡಿ ಜಯಗಳಿಸಿದವನೇ ಮಹಾವೀರ. ಆತನನ್ನು ಜೀವನ್ಮುಕ್ತ ಎಂದು ಕರೆದಿದ್ದಾರೆ. ಕಾಯದಲ್ಲಿ ಜ್ಞಾನವೂ ಇದೆ ಅಜ್ಞಾನವೂ ಇದೆ. ಅರಿಷಡ್ವರ್ಗಗಳು, ಸಪ್ತ ವ್ಯಸನಗಳು, ಅಷ್ಟಮದಗಳೂ ಕೂಡ ಇವೆ. ಈ ಕಾಯದಲ್ಲಿ ಸುಖವೂ ಇದೆ ದುಃಖವೂ ಇದೆ ಹಾಗೆಯೇ ಪರಮ ಸುಖವೂ ಇದೆ. ಸುಖದ ಆಸೆಗಾಗಿ ದುಃಖವನ್ನು ಹೆಗಲಿಗೆ ಹಾಕಿಕೊಂಡು ಈಜಿ ಈಜಿ ಪರಮ ಸುಖವನ್ನು ಹೊಂದಿದವನು ಕೂಡ ಜೀವನ್ಮುಕ್ತನಾಗುತ್ತಾನೆ.

**1844**

**ಆರಿಗೆ ನಿಲುಕದ ಬ್ರಹ್ಮವ,**
**ನೀನಾರಿಸಿ ನೋಡಿದಡೆ ಹುರುಳಿಲ್ಲ ನೋಡಾ ಮರುಳು ಮಾನವಾ.**
**ಆರಿಗೆಂಬಲ್ಲಿ ಜೀವಭಾವ ಆರಿಸಿದೆನೆಂಬಲ್ಲಿ ಅಹಂಭಾವ,**
**ಆರಿಗೆಂಬುದು, ಆರಿಸಿದೆನೆಂಬುದು ಅಳಿದಡೆ,**
**ಅದೇ ಪರಬ್ರಹ್ಮ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಆರಿಗೂ ನಿಲುಕದ ಬ್ರಹ್ಮವನ್ನು ನೀನು ಆರಿಸಿ ನೋಡಿದಡೆ ಹುರುಳಿಲ್ಲ ನೋಡಾ ಮರುಳು ಮಾನವಾ. ಬ್ರಹ್ಮನನ್ನು ಪುಸ್ತಕಗಳಲ್ಲಿ ಹುಡುಕುವುದುದಕ್ಕೆ ಬರುವುದಿಲ್ಲ. ಭ್ರಮೆ ಬ್ರಹ್ಮನನ್ನು ಹುಡುಕಿದಂತೆ ಭ್ರಮೆಗೆ ಬ್ರಹ್ಮ ಎಂದೂ ಸಿಗುವುದಿಲ್ಲ ಆದರೆ ಬ್ರಹ್ಮಾಧೀನನಾದ ಅಹಂಕಾರಿ ಮನ ತಾನು ಶಾಸ್ತ್ರಿಯಾಗಿ ಕೇಳುಗರಿಗೆ ಬ್ರಹ್ಮನ ಪರಿಚಯ ಮಾಡಿಸುತ್ತದೆ. ಹೇಳುವವನೂ ಬ್ರಹ್ಮಾಧೀನ ಕೇಳುವವನೂ ಬ್ರಹ್ಮಾಧೀನರು. ಯಾರು ಯಾರಿಗೆ ಬ್ರಹ್ಮನ ಪರಿಚಯ ಮಾಡಿದರು ? ಬ್ರಹ್ಮ ಬೇಕಾದದ್ದು ತನಗೋ ಅಥವಾ ಕೇಳುಗರಿಗೋ ? ಆದರೂ ಕಾಯ ಇಲ್ಲವಾಗುವವರೆಗೆ ಕೇಳುವ ಕಾಯಗಳಿಗೆ ಬ್ರಹ್ಮನ ಕುರಿತು ಹೇಳಿದ್ದೆ ಹೇಳಿದ್ದು. ಭಗವದ್ಗೀತೆ, ಬೈಬಲ್, ಖುರಾನ್‌ಗಳ ಸಾರವನ್ನು ಆರಿಸಿ ಆರಿಸಿ ಹೇಳಿದ್ದೆ ಹೇಳಿದ್ದು.

ಬ್ರಹ್ಮಾಧೀನವಾದ ಕಾಯಕ್ಕೂ ಬ್ರಹ್ಮ ಒಲಿಯಲಿಲ್ಲ. ಭ್ರಮೆಯನ್ನು ಆವರಿಸಿದ ಕೇಳೂಗರಿಗೂ ಬ್ರಹ್ಮ ಒಲಿಯಲಿಲ್ಲ. ಹೇಳುವುದನ್ನು ಕೇಳುವುದನ್ನು ಅಳಿದು ತನಗಾಗಿ ಎಂದು ತನ್ನನ್ನೇ ತಾನು ನೋಡಿಕೊಳ್ಳಲು ಹೋದಾಗ ಅಹಂ ಭಾವ ನಷ್ಟವಾಗಿ ತನ್ನ ಅಹಂಕಾರ ತನ್ನ

ತನುವಿನಿಂದಲೇ ಉದುರಿಬಿದ್ದು ಹೇಳುವ ಮನದ ಭ್ರಮೆ ಭಸ್ಮವಾಗಿ ಪರಬ್ರಹ್ಮನೇ ತಾನಾಗುತ್ತಾನೆ.

**1845**

**ಯೋಗಿಯ ಹೊಲಬು ಯೋಗಿಯಾದವಂಗಲ್ಲದೆ,**
**ಇತರ ನರಂಗೆ ಸಾಧಿಸಬಾರದು ಕೇಳಯ್ಯಾ.**
**ಧಾತುವಾದವದು ರಸವಾದಿಯಾದವಂಗಲ್ಲದೆ,**
**ಇತರ ನರಂಗದು ಸಾಧಿಸಬಾರದು ಕೇಳಯ್ಯಾ.**
**ನೋಡಿ ಮಾಡುವುದಾದಡೆ ಭವವೆಲ್ಲಿಹುದು,**
**ದರಿದ್ರವೆಲ್ಲಿಹುದು ಹೇಳಯ್ಯಾ, ಕಪಿಲಸಿದ್ಧಯ್ಯಾ.**

ಯೋಗಿಯನ್ನು ತಿಳಿದುಕೊಳ್ಳಲು ಲೋಕದ ಜನರಿಗೆ ಸಾಧ್ಯವಾಗುವುದಿಲ್ಲ. ಯೋಗಿಯನ್ನು ಯೋಗಿಯಾದವನೇ ತಿಳಿಯಬಲ್ಲ. ಆತನೊಂದಿಗೆ ಮಾತನಾಡುತ್ತಾ ಬ್ರಹ್ಮರಸವನ್ನು ಆಸ್ವಾದಿಸಬಲ್ಲ.

ಧಾತುವಾದವನು ರಸವಾದಿಯಾದವನು ಮಾತ್ರ ಹೇಗೆ ತಿಳಿಯಬಲ್ಲನೋ ಹಾಗೆಯೇ ಯೋಗಿಯ ಹೊಲಬು ಯೋಗಿಯಾದವನು ಮಾತ್ರ ಅರಿಯಬಲ್ಲ. ನೋಡಿ ತಿಳಿದು ಅರಿವಿನ ಕೃಷಿಯಲ್ಲಿ ತೊಡಗಿದವನಿಗೆ ಜನನ ಮರಣ ಬಾಧೆಯಿಲ್ಲ ಆತ ಅರಿವಿನ ಶ್ರೀಮಂತ.

**1846**

**ಯೋಗವ ಸಾಧಿಸಿದವನೊಬ್ಬ ನಿಜಗುಣ.**
**ಯೋಗವ ಸಾಧಿಸಿದವನೊಬ್ಬ ವೃಷಭಯೋಗೀಶ್ವರ.**
**ಯೋಗವ ಸಾಧಿಸಿದವನೊಬ್ಬ ಶಿವನಾಗಮಯ್ಯ.**
**ಯೋಗವ ಸಾಧಿಸಿದೆ ನಾನೊಬ್ಬ.**
**ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಕೂಡುವ ಯೋಗವ.**

ಯೋಗ ಎಂದರೆ ಕೂಡುವುದು. ಮನ ಕಾಯದ ಸಂಗಮಾಡಿ ಕಾಯದಲ್ಲಿ ಕೂಡಿ ಭವಿ ಎನಿಸಿಕೊಂಡಿದೆ. ಕಾಯದಲ್ಲಿ ಕೂಡಿದ ಮನ ಕಾಯದಿಂದ ಹಿಂದಕ್ಕೆ ಸರಿದು ಕಾಯದಲ್ಲಿಯೇ ಸಂಗಮವಾದ ಅರಿವೆಂಬ ಗುರುದೇವನಿಗೆ ಶರಣಾಗತನಾವುದೆ ಸಾಧನೆ. ಹೀಗೆ ಗುರುದೇವನೊಂದಿಗೆ ಕೂಡಿದವನೆ ಸಾಧಿಸಿದವನು. ಹೀಗೆ ಸಾಧನೆ ಮಾಡಿದವನನ್ನೇ ಯೋಗಿ ಎಂದು ಕರೆಯುತ್ತಾರೆ. ಹೀಗೆ ಸಾಧಿಸಿದವರಲ್ಲಿ ನಿಜಗುಣ, ವೃಷಭಯೋಗೇಶ್ವರ, ಶಿವನಾಗಮಯ್ಯ ಮತ್ತು ಸಿದ್ಧರಾಮ ಶಿವಯೋಗಿಗಳು ಕೂಡ ಯೋಗಿಯೆಂದು ಸ್ವತಃ ಸಿದ್ಧರಾಮ ಶಿವಯೋಗಿಗಳೇ ಹೇಳಿದ್ದಾರೆ.

**1847**

**ಮೂರು ಗುಂಡಿನ ಒಲೆಯಲ್ಲ,**
**ಮಾರಾರಿ ಮೂರುತಿಯ ಪಾಕವ ಮಾಡುತ್ತಾನೆ ನೋಡಾ.**
**ಆ ಪಾಕವ ಪಕ್ವವಾಗದು.**
**ಈ ವಿಚಿತ್ರವ ನೋಡಿ ನಿಬ್ಬೆರಗಾದೆ ನೋಡಾ,**

**ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯ ಎನ್ನುವುದು ಮೂರು ಗುಂಡಿನ ಒಲೆ. ಸ್ಥೂಲ ಕಾಯ, ಸೂಕ್ಷ್ಮ ಕಾಯ, ಕಾರಣ ಕಾಯಿಗಳನ್ನೇ ಮೂರು ಗುಂಡಿನ ಒಲೆಯನ್ನಾಗಿ ಮಾಡಿ ಮಾರಾರಿ ಮೂರುತಿ ಇವುಗಳ ಭ್ರಮೆಯನ್ನು ಕಳೆದು ಪಾಕವ ಮಾಡುತ್ತಾನೆ. ಆ ಪಾಕ ಪಕ್ವವಾಗದು. ಅದು ಪಕ್ವವಾದಾಗಲೆ ಬ್ರಹ್ಮ ಪಾಕವೆಂದು ಕರೆಯಿಸಿಕೊಳ್ಳುತ್ತದೆ. ಈ ವಿಚಿತ್ರವ ನೋಡಿ ನಿಬ್ಬೆರಗಾದೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

**1848**

**ಅಯ್ಯಗಳು ರುದ್ರಾಕ್ಷಿಯಕೊಟ್ಟಲ್ಲಿ ಫಲವಲ್ಲದೆ. ಸುಮ್ಮನೆ ಧರಿಸಿದಲ್ಲಿ ಫಲವಿಲ್ಲ ನೋಡಾ.**
**ಭಕ್ತನು ಪದಾರ್ಥ ನೀಡಿದಲ್ಲಿ ಫಲವಲ್ಲದೆ, ಬೇಡಿ ರುಚಿಸಿದಲ್ಲಿ ಫಲವಿಲ್ಲ ನೋಡಾ.**
**ನಿನ್ನರಿವ ನನ್ನರಿತಲ್ಲಿ ಫಲವಲ್ಲದೆ, ಅರುಹಿಸಿದಲ್ಲಿ ಫಲವಿಲ್ಲ.**
**ಅಹುದೆಂಬುದು ನೀತಿ, ಬಲ್ಲೆ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯದೊಳಗಿದ್ದ ನಿನ್ನನ್ನು ಕಾಯವನ್ನು ಆವರಿಸಿದ ಮನವೆಂಬ ನಾನು ನಿನ್ನನ್ನು ಅರಿತಲ್ಲಿ ಫಲ. ಅರಿತರಿತು ಆ ಅರಿವೇ ನಾನಾದಲ್ಲಿ ಫಲ. ಯಾರಾದರೂ ನಿನ್ನನ್ನು ಅರುಹಿಸಿದಲ್ಲಿ ಫಲವಿಲ್ಲ. ಅವರು ಅರುಹಿಸಿದ ಫಲ ನನ್ನ ಅನುಭಾವದಿಂದ ಹೊರಬಂದಾಗಲೆ ಫಲವಲ್ಲದೆ ನೀನು ನನಗೆ ಅರುಹಿಸಿದಾಗ ನಾನು ಅರಿಯದಿದ್ದರೆ, ಅನುಭಾವಕ್ಕೆ ಇಳಿಯದಿದ್ದರೆ ಫಲವಿಲ್ಲ.

**1849**

**ಇದ್ದೊಂದು ಕಲ್ಲೊಳು ಪ್ರಸಿದ್ಧವಾಗಿಹ ಮುಗ್ಧನ ಕಂಡೆ.**
**ಆ ಮುಗ್ಧ ಮಾತಾಡನು, ಮಾತಾಡದೆ ಸುಮ್ಮನಿರನು.**
**ಆತನ ಸೊಮ್ಮು ಅರಿಯದು.**
**ಅರಿಯಬೇಕೆಂದಡೆ ಕರಣಂಗಳ ಒಡನಾಟ ಆಗಬಾರದು.**
**ನೋಡೈ ಕಪಿಲಸಿದ್ಧಮಲ್ಲಿಕಾರ್ಜುನಾ.**

ಶರಣನೆಂದರೆ ಕಲ್ಲೊಳಗಣ ಬೆಲ್ಲವನು ಮೆದ್ದನು. ಲೋಕ ಕಲ್ಲನ್ನು ಕೆತ್ತಿ ದೇವರೆಂದು ತಿಳಿದು ಅದಕ್ಕೆ ಪ್ರಾಣಪ್ರತಿಷ್ಠಾನ ಮಾಡಿಸಿ ಗರ್ಭಗುಡಿಯಲ್ಲಿ ಕೂಡಿಸಿದಾಗ ಲೋಕಕ್ಕೆ ಕಲ್ಲು ದೇವರಾಗುತ್ತದೆ. ಅದು ಮಾತನಾಡುವುದಿಲ್ಲ. ಆದರೂ ಲೋಕ ಕಾಯದೊಂದಿಗೆ ಬಾಗಿ ಉರುಳು ಸೇವೆ ಮಾಡಿ, ದೇವರಿಗೆ ಮದುವೆ ಮಾಡಿ, ಛತ್ರಿ ಚಾಮರಗಳನ್ನು ಬೀಸಿ, ಶಯನ ಗ್ರಹಕ್ಕೆ ಕಳುಹಿಸಿ ಸೋಬಾನೆ ಪದಗಳನ್ನು ಹಾಡುತ್ತಾರೆ. ಲೋಕ ಪೂಜಿಸುವ ದೇವರನ್ನು ಅರಿತರೆ ಅದು ಕಲ್ಲು; ಆದರೆ ಲೋಕಕ್ಕೆ ದೇವರು ಕಾಣುತ್ತಾನೆಯೆ ಹೊರತು ಕಲ್ಲು ಕಾಣುವುದಿಲ್ಲ. ಲೋಕದ ದೇವರು ಮುಗ್ಧ ಮಾತನಾಡುವುದಿಲ್ಲ.

ಶರಣ ದೇವರೊಳಗಣ ಕಲ್ಲನ್ನು ನೋಡುತ್ತಾನೆ. ಕೈ ಮುಗಿಯದೆ, ಮಾತನಾಡದೆ ಸುಮ್ಮನಿರುತ್ತಾನೆ. ಕಲ್ಲನ್ನು ಕಲ್ಲು ಎಂದು ತಿಳಿಯಬೇಕಾದರೆ ಕರಣಂಗಳ ಒಡನಾಡಿ ಆಗಬಾರದು. ಅಂದರೆ ಮಾತ್ರ ದೇವರ ಆಕಾರದಲ್ಲಿದ್ದ ಕಲ್ಲು, ಕಲ್ಲು ತಾನು ಎಂದು ಮಾತನಾಡಿ ಹೇಳುತ್ತದೆ.

1850

**ಕಲ್ಲು ದೇವರಲ್ಲಿ ವಲ್ಲಭನಿದ್ದಾನೆಂದು ಲಲ್ಲೆಗರೆಯಬೇಡ ಖುಲ್ಲತನದಿಂದ.**
**ಒಮ್ಮೆ ಅರಿಯಬಲ್ಲಡೆ, ಕಪಿಲಸಿದ್ಧಮಲ್ಲಿಕಾರ್ಜುನನ ಶರಣರ,**
**ಪಾದದಲ್ಲಿ ತಲ್ಲೀಯವಾಗಾ, ಕಲ್ಲಯ್ಯಾ .**

ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಗುಣಗಳು ಕಾಯದಲ್ಲಿ ಇರುವುದರಿಂದ ಲಿಂಗಯ್ಯ ಇದ್ದ ಅಂಗವನ್ನೇ ಈ ಮೂರು ಗುಣಗಳು ಮುರಿದಿಕ್ಕಿವೆ.

ಸಾತ್ವಿಕನಾಗಿ ಸ್ನಾನ ಮಾಡಿ ಗಂಧ-ತಿಲಕಾದಿಗಳನ್ನು ಬಳಸಿ ಸಕಲ ಕಾಯಗಳಿಗೂ ಕಾಣುವಂತೆ ಆಲಯಕ್ಕೆ ಹೋಗಿ ಪೂಜಿಸುತ್ತಾನೆ. ಕಾರ್ಯಲಯಕ್ಕೆ ಹೋಗಿ ರಾಜಸಗುಣ ಪ್ರದರ್ಶಿಸುತ್ತಾನೆ. ಸಂಜೆ ಕ್ಲಬ್‌ಗೆ ಹೋಗಿ ಮನೆ ಮಂದಿಗೆಲ್ಲ ತಾಮಸಗುಣ ಪ್ರದರ್ಶಿಸುತ್ತಾನೆ ಈ ಮೂರೂ ಗುಣಗಳನ್ನು ದಾಟಿ ಕಾರಣ ಕಾಯದಲ್ಲಿ ಐಕ್ಯವಾದವನೇ ಪುರಾರಿ ಪರಮಾತ್ಮ ತಾನೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

1851

**ಮಣಿ ಮೂರರಲ್ಲಿ ಗುಣಾತ್ರಯಾತೀತನ ಕಂಡೆ,**
**ಗುಣತ್ರಯಾತೀತನಲ್ಲಿ ಹವಣಿಸಬಾರದ ಆನಂದಯೋಗವ ಕಂಡೆ.**
**ಆ ಆನಂದ ಯೋಗವ ಸಾಧಿಸಬಾರದು, ಸಾಧಿಸಬಾರದು,**
**ಮತ್ತೆ ಭವಭವದ ದಾವಾನಲ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯವೆಂಬ ಮೂರು ಮಣಿಗಳಲ್ಲಿ ಮೂರೂ ಗುಣಗಳಿಗೆ ಅತೀತನಾದವನು ಇದ್ದಾನೆ. ಈತನಲ್ಲಿ ಹವಣಿಸಬಾರದ ಆನಂದ ಯೋಗವು ಭರಿತವಾಗಿದೆ. ಕಾಯವನ್ನು ಆವರಿಸಿದ ಮನ ಅದನ್ನು ಸಾಧಿಸಬಾರದು. ಸಾಧಿಸಿದರೆ ಭವಭವದ ದಾವಾನಲ ತಪ್ಪದು. ಆ ಆನಂದ ಯೋಗದಲ್ಲಿ ತಾನೂ ಕೂಡ ಲೀನವಾಗಿ ಕಪಿಲಸಿದ್ಧಮಲ್ಲಿಕಾರ್ಜುನನೇ ತಾನಾಗಬೇಕು.

1852

**ಮೂರು ಗುಣ ಮುರಿಮುರಿದು ಮೂರಕ್ಕೆ, ತಂದು ಮುರಿದಿಟ್ಟು ನೋಡಾ,**
**ಮಾರಹರ ಪಾದಪದ್ಮಭ್ರಮರ, ಮೂರು ಗುಣದಂತಾಚರಿಸಬಾರದು,**
**ಮೂರು ಗುಣ ಬಿಡಬಾರದು ನೋಡಾ,**
**ಮೂರರಿಂದಾದ ಲಿಂಗವ ದಾಟಿ, ಮೂರಲ್ಲಿ ಐಕ್ಯನ ನೋಡೆ.**
**ಪುರಾರಿ ಪರಮಾತ್ಮ ಕಪಿಲಸಿದ್ಧಮಲ್ಲಿಕಾರ್ಜುನ ತಾನೆ ನೋಡಾ, ಮಾರಯ್ಯಾ .**

ಸಾತ್ವಿಕ ಗುಣ, ರಾಜಸ ಗುಣ, ತಾಮಸ ಗುಣ ಈ ಮೂರೂ ಗುಣಗಳು ಕಾಯವನ್ನು ಹಂತ ಹಂತವಾಗಿ ಮುರಿದಿಕ್ಕುತ್ತವೆ.

ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನನ್ನು ಸಾತ್ವಿಕ ಗುಣದಿಂದ ಪೂಜಿಸಬಾರದು, ರಾಜಸ ಗುಣದಿಂದಲೂ ಪೂಜಿಸಬಾರದು, ತಾಮಸ ಗುಣದಿಂದಲೂ ಪೂಜಿಸಬಾರದು.

ಮೂರು ಗುಣಗಳನ್ನು ಮುರಿದಿಕ್ಕಿ ನಿರ್ಗುಣದಿಂದ ಪೂಜಿಸಬೇಕು. ಈ ಮೂರೂ

ಗುಣಗಳನ್ನು ನಿರ್ಗುಣದಲ್ಲಿ ಐಕ್ಯ ಮಾಡಬಲ್ಲವನೆ ಪುರಾರಿ, ಪರಮಾತ್ಮ, ಕಪಿಲಸಿದ್ಧಮಲ್ಲಿಕಾರ್ಜುನ ತಾನೆ ನೋಡಾ ಎಂದು ಸಿದ್ಧರಾಮ ಶಿವಯೋಗಿಗಳು ಮಾರಯ್ಯ ಶರಣರಿಗೆ ಹೇಳಿದ್ದಾರೆ.

**1853**

**ಮಂಚವೊಂದರಲ್ಲಿ ಕಂಚುಕಿ ಸಹ ಮೂರ್ತವ ಮಾಡಿದ್ದಾನೆ.**
**ಆ ಮೂರ್ತಿಯ ಹಂಚು ಹಂಚಿನಲ್ಲಿ ಕಂಚುಕಿಯಾಗಿದ್ದಾನೆ.**
**ಆ ಮಂಚ, ಈ ಹಂಚು ಕಂಚುಕಿಯರರಿಯಬಲ್ಲಡೆ,**
**ಸಂಚಿತತ್ರಯ ಒಡಕ ಹಂಚು ನೋಡಾ,**
**ಪ್ರಪಂಚಹರ ಪಂಚಮುಖ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯವೆಂಬುದು ಕಂಚುಕಿ ವಾಸಮಾಡಿದ ಮಂಚ. ಆ ಮೂರ್ತಿಯ ಹಂಚು ಹಂಚಿನಲ್ಲಿ ಕಂಚುಕಿಯಿದ್ದಾನೆ. ಮಂಚ, ಹಂಚು ಕಂಚುಕಿಯರನ್ನು ಅರಿಯಬಲ್ಲಡೆ ಸಂಚಿತತ್ರಯ ಒಡಕು ಹಂಚು ನೋಡಾ ಪ್ರಪಂಚ ಹರ ಪಂಚಮುಖ ಕಪಿಲಸಿದ್ಧಮಲ್ಲಿಕಾರ್ಜುನ.

**1854**

**ಕುಂಬಾರನ ಆವಿಗೆಯಲ್ಲಿ ಕುಂಬಾರನಿಲ್ಲ.**
**ಕಂಬಾರನ ಕಲಶಂಗಳಲ್ಲಿ ಕಂಬಾರನಿಲ್ಲ,**
**ಆವಿಗೆ ಕಲಶಂಗಳಲ್ಲಿ ಅಸ್ತಿತ್ವ ಉಂಟಾಗಿಹ**
**ಕುಂಬಾರ ಕುಂಬಾರನಂತಿಪ್ಪ ನೋಡಾ,**
**ಈ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನ ದೇವರು ಸಂಗಮವಾಗಿದ್ದಾನೆ. ಈತ ಕಾಯಕ್ಕೆ ಜನ್ಮ ಕೊಟ್ಟು ಕಾಯದಲ್ಲಿಯೇ ಇದ್ದಾನೆ. ತನ್ನನ್ನು ತಿಳಿಯಲು ಮನವೆಂಬ ನನಗೆ ಜನ್ಮ ಕೊಟ್ಟು ನನ್ನನ್ನು ಕೂಡ ಕಾಯದಲ್ಲಿಯೇ ಇಟ್ಟಿದ್ದಾನೆ. ಕಾಯ ಮತ್ತು ನಾನು ಕೂಡಿಯೇ ಕಪಿಲಸಿದ್ಧಮಲ್ಲಿಕಾರ್ಜುನನ್ನು ತಿಳಿಯಬೇಕಾಗಿದೆ. ನಾನು ಕಾಯದೊಂದಿಗೆ ಗೆಳೆತನ ಮಾಡಿರುವುದರಿಂದ ಮಲ್ಲಯ್ಯನನ್ನು ತಿಳಿಯಲು ನನಗೆ ಸಾಧ್ಯವಾಗುತ್ತಿಲ್ಲ ಆದರೂ ಆತ ಮಾಡಿದ ಕಾಯದಲ್ಲಿಯೇ ನಾನಿದ್ದೇನೆ.

ಕುಂಬಾರನ ಆವಿಗೆಯಲ್ಲಿ ಕುಂಬಾರನಿಲ್ಲ. ಕುಂಬಾರನ ಕಲಶಂಗಳಲ್ಲಿ ಕಂಬಾರನಿಲ್ಲ. ಕುಂಬಾರ ತಾನು ಮಣ್ಣಿನಿಂದ ಮಾಡಿದ ಮಡಿಕೆ, ಮುಚ್ಚಳ, ಊಜಿ ಮುಂತಾದ ಪರಿಕರಗಳನ್ನು ಆವಿಗೆಯಲ್ಲಿಟ್ಟು ಸುಡುತ್ತಾನೆ. ಅವು ಬೆಂದು ಬಳಕೆಗೆ ಬಂದು ಕುಂಬಾರನ ಹೆಸರಿನಿಂದ ಕರೆಯಲ್ಪಡುತ್ತವೆ ಆದರೂ ಬೆಂದ ಆವಿಗೆಯಲ್ಲಿಯೂ ತಾನಿಲ್ಲ ಮಾಡಿದ ಮಡಿಕೆ ಕುಡಿಕೆಯಲ್ಲಿಯೂ ತಾನಿಲ್ಲ.

ಕುಂಬಾರನನ್ನು ಕಾಣಬೇಕಾದರೆ ಆ ಪರಿಕರಗಳ ಮೂಲಕ್ಕೆ ಹೋಗಬೇಕು. ಕಾಯದಲ್ಲಿಯೇ ಸಂಗಮವಾದ ಕಾಯಮಾಡಿದ ಕುಂಬಾರನನ್ನು ಕಾಣಬೇಕಾದರೆ ಕುಂಬಾರ ಮಾಡಿದ ಆವಿಗೆಯಲ್ಲಿ ಕಾಯ ಬೆಂದು ಬೆಂದು ತನ್ನ ಅಜ್ಞಾನ ಕಳೆದುಕೊಂಡು ತನ್ನದೇ ಆದ ಜ್ಞಾನಕ್ಕೆ ಹೋಗುವ ಆಸೆಯಾದಾಗ ಕಾಯಮಾಡಿದ ಕುಂಬಾರನ ಸುಳಿವು ದೊರೆಯುತ್ತದೆ.

1855

**ಬೀಜವೊಂದರಲ್ಲಿ ಸೂಜಿಗದ ಮೂರುತಿ.**
**ಮಾಡುವ ಬುದ್ಧಿಯೊಳೈದಾನೆ ನೋಡವ್ವಾ.**
**ಬೀಜವ ನೋಡಿದಡೆ ತಾನು ಬೀಜ.**
**ಅದರಲ್ಲಿಯ ಸೂಜಿಗನು ತಾನು ಮಾಚುವ ಬುದ್ಧಿ.**
**ತಾ ಎನಬಾರದು, ಮಾಯೆ ಎನಬಾರದು.**
**ಇವರಿರ್ವರಲ್ಲಿ ಜೂಜು ಇಟ್ಟು ಚಲಿಸುತ್ತದೆ ನೋಡವ್ವಾ,**
**ಕಪಿಲಸಿದ್ಧಮಲ್ಲಿಕಾರ್ಜುನನೆಂಬೆ ಮಹಾವಸ್ತುವವ್ವಾ.**

ಬಯಲ ಬೀಜವೊಂದರಲ್ಲಿ ಸೂಜಿಗದ ಶಿವ ಮೂರುತಿ ಬಚ್ಚಿಟ್ಟುಕೊಂಡಿದ್ದಾನೆ. ಮಾಡುವ ಬುದ್ಧಿಯೊಳ್ ತಾನಿದ್ದಾನೆ. ಬೀಜವ ನೋಡಲು ಹೋದರೆ ತಾನು ಬೀಜ. ಬೀಜದಲ್ಲಿಯ ಸೊಬಗನ್ನು ನೋಡಲು ಹೋದರೆ ಅದು ಮಹಾವೃಕ್ಷ. ಬೀಜವೃಕ್ಷ ನ್ಯಾಯವೆನ್ನುವಂತೆ ಆತ ಬೀಜದಲ್ಲಿ ಪವಡಿಸಿದ್ದಾನೆ. ಅದನ್ನು ಮಾಯೆಯನ್ನುವಂತಿಲ್ಲ. ಬೀಜ, ವೃಕ್ಷ ಇವೆರಡು ವಸ್ತುಗಳಲ್ಲಿ ಚಲಿಸುವ ಮಹಾವಸ್ತು ಕಪಿಲಸಿದ್ಧಮಲ್ಲಿಕಾರ್ಜುನಾ.

1856

**ಸಾಧಿಸಲಸಾಧ್ಯ, ನೋಡಾ, ಸಾಧಿಸಬಾರದ ವಸ್ತುವ.**
**ಸಾಧಿಸಲಸಾಧ್ಯ, ನೋಡಾ, ಸಾಧಿಸಬಾರದ ಮಹಾಜ್ಞಾನವ.**
**ಸಾಧಿಸಲಸಾಧ್ಯವ ನೋಡಾ,**
**ಸಾಧಿಸಬಾರದ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ, ನಿರ್ವಂಚಕತ್ವ.**

ಸಾಧಿಸಬಾರದ ವಸ್ತುವನ್ನು ಸಾಧಿಸುವುದು ಬಲು ಜಟಿಲ. ಜ್ಞಾನ ಪುಸ್ತಕದಲ್ಲಿಲ್ಲ. ಕಾಯದಿಂದ ಪುಸ್ತಕದಲ್ಲಿ ಬಂದ ಜ್ಞಾನ ಜ್ಞಾನವಲ್ಲ. ಪುಸ್ತಕ ಜ್ಞಾನ ಕಾಯದತ್ತ ಬೆಟ್ಟು ಮಾಡಿ ತೋರುವ ದಿಕ್ಸೂಚಿ ಅಂದಮೇಲೆ ಕಾಯದಲ್ಲಿದ್ದ ಜ್ಞಾನವನ್ನು ಯಾವುದರಿಂದ ಪಡೆಯಬೇಕು.

ಪ್ರತಿಕಾಯದಲ್ಲಿ ಜ್ಞಾನವಿದೆ. ಅಂದಮೇಲೆ ಕಾಯ ಮತ್ತೊಂದು ಕಾಯಕ್ಕೆ ಕೊಡಲು ಬರುತ್ತದೆಯೇ ಅಥವಾ ತೆಗೆದುಕೊಳ್ಳಲು ಬರುತ್ತದೆಯೇ, ತಾನು ಸಾಧಿಸಿದ್ದು ತನಗೆ ಮಾತ್ರ ಗೊತ್ತಾಗುತ್ತದೆ ಹೊರತು ಮತ್ತೊಂದು ಕಾಯಕ್ಕೆ ತಿಳಿಹೇಳಲು ಬರುವುದಿಲ್ಲ. ತಿಳಿಹೇಳಿದರೆ ಆ ಕಾಯಕ್ಕೆ ಜ್ಞಾನ ಸಾಧಿಸಲು ಬರುತ್ತದೆ ಎನ್ನುವಂತೆಯೂ ಇಲ್ಲ. ಕಾಯದೊಳಗಿದ್ದ ಜ್ಞಾನವನ್ನು ಕಾಯ ಮತ್ತು ಕಾಯವನ್ನು ಆವರಿಸಿದ ಜ್ಞಾನವನ್ನು ಮಾರಾಟ ಮಾಡುವ, ಕೊಳ್ಳುವ, ಸಾಧಿಸುವ ಕೆಲಸವೂ ಈ ನೆಲದಲ್ಲಿ ನಡೆಯುತ್ತಲಿದೆ. ಸಾಧಿಸಬಾರದ ಮಹಾಜ್ಞಾನವು ನಿರ್ವಂಚಕನಿಗೆ ಮಾತ್ರ ಒಲಿಯುತ್ತದೆ.

1857

**ಅವಸ್ಥಾತ್ರಯ ಜೀವಂಗಾದ ಬಳಿಕ,ಜೀವವೆಂಬುದು ಪರಮಾತ್ಮ,**
**ಪರಮಾತ್ಮಂಗವಸ್ಥಾತ್ರಯವೆಂದ ಬಳಿಕ,**
**ಜನನ ಮರಣಕ್ಕೊಳಗಾಯಿತ್ತು.**

**ಜೀವಂಗಲ್ಲ ಪರಮಾತ್ಮಂಗಲ್ಲ, ಅಂತರಂಗಾತ್ಮಂಗಲ್ಲ,**
**ಆಗುವ ಅವಸ್ಥೆ ಮಾಯಾಶಕ್ತಿಗೆ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಅವಸ್ಥಾತ್ರಯಗಳು ಜೀವನಿಗೆ ಜೀವವೆಂಬುದು ಪರಮಾತ್ಮ. ಕಾಯ ಜನನ ಮರಣಗಳಿಗೆ ತುತ್ತಾಗುತ್ತದೆ. ಕಾಯದೊಳಿದ್ದ ಜೀವ ಪರಮಾತ್ಮ ಮತ್ತು ಅಂತರಾತ್ಮಕ್ಕೆ ಜನನ ಮರಣಗಳಿಲ್ಲ. ಇದೆಲ್ಲಾ ಪರಮಾತ್ಮನ ಸಂಪತ್ತು . ಆಗುವ ಅವಸ್ಥೆಗಳು ಮಾಯಾಶಕ್ತಿಗೆ ಸಂಬಂಧಪಡುತ್ತವೆ ಹೊರತು ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನಿಗಲ್ಲ.

**1858**

**ಪಂಚವರ್ಣ ಗಿಳಿಯೊಂದು ಪ್ರಪಂಚರಚೆನೆಗೆ ಬಂದು,**
**ಭವ ಬ್ರಹ್ಮ, ಭವ ಬ್ರಹ್ಮ ಎಂಬುತ್ತಿದೆ.**
**ಆ ಗಿಳಿಯು ಮೂರು ಮನೆಯ ಪಂಜರದಲ್ಲಿ ಕೂತು,**
**ಕುರುಷ್ವ ಲಿಂಗಪೂಜಾಂ, ಲಿಂಗಪೂಜಾಂ ಎಂಬುತ್ತಿದೆ.**
**ಆ ಗಿಳಿಯ ವಚನವ ಕೇಳಿದಾತಂಗೆ ಸುಖ, ಗಿಳಿಗೆ ಸುಖ**
**ಕೇಳದವಂಗೆ ಸುಖವಿಲ್ಲ, ಹೇಳಿದವಂಗೆಯು ಸುಖವಿಲ್ಲ.**
**ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾಯವೆಂಬುದು ಪಂಚಜ್ಞಾನೇಂದ್ರಿಯಗಳನ್ನು ಒಳಗೊಂಡ ಸುಂದರ ಗಿಳಿ. ಇದು ಪ್ರಪಂಚದ ರಚನೆಗೆ ಬಂದಿದೆ. ಜನನ ಮರಣಗಳನ್ನು ಒಳಗೊಂಡು ಸುಖ ದುಃಖಗಳನ್ನು ಅನುಭವಿಸುತ್ತ ಇದು ಸಾಕಾದ ಮೇಲೆ ನಾನೆ ಬ್ರಹ್ಮ ಎನ್ನುತ್ತದೆ.

ಕಾಯದಲ್ಲಿರುವ ಗಿಳಿ ಸ್ಥೂಲ ಕಾಯ, ಸೂಕ್ಷ್ಮ ಕಾಯ, ಕಾರಣ ಕಾಯವೆಂಬ ಮೂರೂ ಮನೆಗಳ ಪಂಜರದಲ್ಲಿ ಕುಳಿತು ಲಿಂಗಪೂಜೆಯಲ್ಲಿ ನಿರತನಾಗಿದೆ. ಕಾಯದ ಮಾತು ಕಾಯಕ್ಕೆ ಸುಖ. ಕೇಳಿದ ಕಾಯಕ್ಕೂ ಸುಖ. ಕೇಳದವನಿಗೆ ಹೇಳಿದವನಿಗೆ ಸುಖವಿಲ್ಲ. ಇದು ಕಾಯದ ರಹಸ್ಯ . ಇಂತಹ ರಹಸ್ಯಮಯವಾದ ಕಾಯದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನ ಸಂಗಮವಾಗಿದ್ದಾನೆ.

**1859**

**ಒಣಗಿದ ಮರವದು ಭೂಮಿಯಲ್ಲೇ ಲೀನ ನೋಡಾ,**
**ಒಣಗದ ಮರವದು ಭೂಮಿಯಲ್ಲೇ ಲೀನ ನೋಡಾ,**
**ತಿಳಿದ ಯೋಗಿಯ ಲಯವಿಲ್ಲೆ!**
**ಸ್ವರ್ಗಕ್ಕೆ ಹೋದೆನೆಂಬುದು ಗೊಡ್ಡು-ಹುಸಿ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಪಂಚಭೂತಗಳಿಂದ ನಿರ್ಮಾಣವಾದ ಕಾಯವನ್ನು ಬುದ್ಧ ಬೋಧಿವೃಕ್ಷ ಎಂದು ಕರೆದಿದ್ದಾರೆ. ಶರಣರು ಬೇರಿಲ್ಲದಮರವೆಂದು ಕರೆದಿದ್ದಾರೆ. ಮರದ ಆಯುಷ್ಯ ಮುಗಿದು ವೃಕ್ಷ ಭೂಮಿಯಲ್ಲೆ ಲೀನವಾಗುತ್ತದೆ. ಒಣಗದ ಮರ ಕೂಡ ಭೂಮಿಯಲ್ಲೆ ಲೀನವಾಗುತ್ತದೆ.

ತಿಳಿದ ಯೋಗಿಯ ಲಯವು ಕೂಡ ಇಲ್ಲಿಯೇ ತಿಳಿಯದ ಭೋಗಿಯ ಲಯವು ಕೂಡ

ಇಲ್ಲಿಯೆ. ಸ್ವರ್ಗವೆಂಬುದಿಲ್ಲ, ಸ್ವರ್ಗಕ್ಕೆ ಹೋದೆನೆಂಬುದು ದೊಡ್ಡ ಹುಸಿ.

**1860**

**ಮನದಲ್ಲಿಲ್ಲದ ಮಹಾಂತರು ಮನದಲ್ಲಿ ಘನಗೊಳಿಸಬಾರದು, ಅಂಗನೆಯಲ್ಲಿ.**
**ಮನದಲ್ಲಿಲ್ಲದ, ಕಾಯದಲ್ಲಿಲ್ಲದ ಮಹಾಂತರ ಕಂಡಡೆ,**
**ಎನ್ನ ಮನ ಮನೋಹರವಾಯಿತ್ತಯ್ಯಾ .**
**ಮಹಾದೇವ ಮದನಮರ್ತನ ಮಹಾಂತ ಮಹಾಶಾಲಿ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಕಾವಿ ಧರಿಸಿದಾತ ಮಹಾಂತನಲ್ಲ. ಹಾಗೂ ಈತ ವೇಷಧಾರಿ. ಮಹಾಂತನಿಗೆ ವೇಷ ಸಲ್ಲದು. ಏಕೆಂದರೆ ವೇಷ ಹಾಕುವ ಹೇಸಿ ಮನ ಕಾಯದಲ್ಲಿಯೆ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನಿಗೆ ಶರಣು ಹೋಗಿ ಶರಣನೇ ತಾನಾಗಿದೆ. ಈತನೇ ಮಹಾಂತನೆಂದು ಕರೆಯಿಸಿಕೊಂಡಿದ್ದಾನೆ. ಇಂತಹ ಮಹಾಂತರನ್ನು ನೋಡಿ ಎನ್ನ ಮನ ಮನೋಹರವಾಯಿತ್ತು . ಇಂತಹ ಮಹಾಂತನೆ ಮಹಾದೇವ. ಮದನಮರ್ದನ, ಮಹಾಂತ, ಮಹಾಬಲಶಾಲಿ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1861**

**ತಾನೊಮ್ಮೆ ಸ್ಥೂಲಕ್ಕೆ ಬಂದ ಬಳಿಕ,**
**ಆತನ ನಾನು ಒಮ್ಮೆ ಸೊಮ್ಮುಗೊಳಿಸಬೇಕು.**
**ಕಪಿಲಸಿದ್ಧಮಲ್ಲಿಕಾರ್ಜುನನ ಕೀಲ ತಿಳಿಸಬೇಕು ಕೇದಾರಯ್ಯಾ .**

ಸಿದ್ಧರಾಮಶಿವಯೋಗಿಗಳು ಕಾಯದ ರಹಸ್ಯವನ್ನು ತಿಳಿಸಿದ್ದಾರೆ.

ತಾನೊಮ್ಮೆ ಸ್ಥೂಲಕಾಯಕ್ಕೆ ಬಂದ ಬಳಿಕ ಕಾಯದೊಳಗೆ ಸಂಗವುವಾದ ಕಪಿಲಸಿದ್ಧಮಲ್ಲಿಕಾರ್ಜುನನನ್ನು ಒಮ್ಮೆ ಸಾಕ್ಷತ್ಕಾರ ಮಾಡಿಕೊಳ್ಳಲೇಬೇಕು.

ಕಾಯವನ್ನು ಆವರಿಸಿದ ಸೂಕ್ಷ್ಮ ಕಾಯವೆ ನೀನಾಗಿರುವಿ ಕೇದರಾಯ್ಯ . ಈ ಸೂಕ್ಷ್ಮ ಕಾಯದಿಂದಲೇ ನೀನು ಕಾರಣ ಕಾಯವೆಂಬ ಮಹಾಜ್ಞಾನ ಕಾಯಕ್ಕೆ ಶರಣು ಹೋಗಿ ಶರಣಾಗತನಾಗಬೇಕು ಕೇದಾರಯ್ಯ ಏಕೆಂದರೆ ಆತನೆ ಸಾಕ್ಷತ್ ಕಪಿಲಸಿದ್ಧಮಲ್ಲಿಕಾರ್ಜುನ ದೇವಾ.

**1862**

**ಆವ ಜ್ಞಾನಿಯಾದಡೇನು,**
**ದೇಹಾವಸಾನದಲ್ಲಿಯ ಭಾವದಂತೆ ತಪ್ಪಲರಿಯದು ನೋಡಾ.**
**ಆವ ಜ್ಞಾನಿಯಾದಡೇನು,**
**ಭಾವವೆಂಬುದು ಜನ್ಮಕ್ಕೆ ಈಡು, ನಿರ್ಭಾವವೆಂಬುದು,**
**ಜನ್ಮಕ್ಕೆ ಕಾಡುಗಿಚ್ಚು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಆವ ಜ್ಞಾನಿಯಾದಡೇನು ದೇಹಾವಸಾನದಲ್ಲಿದ್ದಾಗ. ದೇಹದಲ್ಲಿಯೇ ಸಂಗಮವಾದ

ದೇವರ ಮೇಲೆ ಇಟ್ಟ ಸದ್ಭಾವ ಆತನನ್ನು ವಿಚಲಿತಗೊಳಿಸುವುದಿಲ್ಲ.

ಭವಾವೆಂಬುದು ಜನ್ಮಕ್ಕೆ ಈಡು ಅದು ಕೇಡು ಕೂಡ. ಭಾವಕ್ಕೆ ಎರಡು ಮುಖಗಳು. ಒಂದು ಭವಾ ಮತ್ತೊಂದು ದುರ್ಭಾವ. ನಿರ್ಭಾವವೆಂಬುದು ಜನ್ಮಕ್ಕೆ ಕಾಡುಗಿಚ್ಚು. ಜನನ ಮರಣಗಳನ್ನು ಸುಟ್ಟುಹಾಕಿ ಮಹಾದೇವನನ್ನಾಗಿಸುವ ಶಕ್ತಿ ನಿರ್ಭಾವಕ್ಕಿದೆ. ಹೀಗಾಗಿ ಜ್ಞಾನಿಯನ್ನು ತ್ರಿಗುಣಾತೀತ ಎಂದು ಕರೆಯುತ್ತಾರೆ. ಈತ ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನ.

**1863**

**'ಯಥಾ ಭಾವಸ್ತಥಾ' ಎಂದ ಬಳಿಕ,**
**ದೇವರ ಬಯಲ ಭಾವತನ್ನಲ್ಲಿ ಇಂಬುಗೊಂಡಡೆ ಮುಕ್ತಿ .**
**ದೇವನ ರೀತಿಯೊಂದು ತನ್ನ ರೀತಿಯೊಂದಾದ ಬಳಿಕ,**
**ಘಟಿಸದು ಕಪಿಲಸಿದ್ಧಮಲ್ಲಿಕಾರ್ಜುನನ ಐಕ್ಯವು.**

ಬಯಲು ಎನ್ನುವುದು ನಿರ್ಭಾವ. ಅದಕ್ಕೆ ಯಾವ ಭಾವನೆಯೂ ಇಲ್ಲ. ಕಾಯದಲ್ಲಿ ಸಂಗಮವಾದ ಬಯಲು ಕಾಯವನ್ನು ಆವರಿಸಿದ ಮನಕ್ಕೆ ದರ್ಶನವಾದಾಗಲೆ ಮನ ಘನಮನವಾಗಿ ಮುಕ್ತಿ ಪಡೆಯುತ್ತದೆ.

ಕಾಯದಲ್ಲಿ ಸಂಗಮವಾದ ಮಹಾಜ್ಞಾನ ಬಯಲು. ಆ ಮಹಾಜ್ಞಾನವನ್ನು ದರ್ಶನ ಪಡೆದು ಆ ಜ್ಞಾನವೆ ತಾನಾದ ಮನವೂ ಕೂಡ ಬಯಲು. ಬಯಲು ಕಾಯದಲ್ಲಿಯೇ ಒಂದಾದ ಬಳಿಕ ಆ ಕಾಯವೆ ಕೈಲಾಸವಾಗುವುದು, ಕಪಿಲಸಿದ್ಧಮಲ್ಲಿಕಾರ್ಜುನನ ಐಕ್ಯವು ಘಟಿಸುವುದು.

**1864**

**ಆಕಾರವಿಲ್ಲದ ಮೂರ್ತಿಯ ಆಕಾರಕ್ಕೆ ತಂದು,**
**ಪೂಜಿಸಿದೆ ನೋಡಾ ಮನವೆ.**
**ಆಕಾರದ ಮೂರ್ತಿಯ ನಿರಾಕಾರಕ್ಕೆ ಬಂದು,**
**ಪೂಜಿಸಲರಿಯೆ ನೋಡಾ, ಮನವೆ.**
**'ಯದ್ದೃಷ್ಟಂ ತನ್ನಷ್ಟಂ' ಎಂದ ಬಳಿಕ,**
**ನಿರಾಕಾರ ನಿಜನಿರ್ವಯಲವೆ ಸ್ಥಿರವೆಂದುನಂಬು**
**ಮನವೆ, ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ.**

ನಿರಾಕಾರವೆಂಬ ಬಯಲು ಕಾಯಕ್ಕೆ ಜನ್ಮನೀಡಿ ಕಾಯದಲ್ಲಿಯೇ ಇದೆ. ತನ್ನನ್ನು ತಿಳಿಯುವುದಕ್ಕಾಗಿ ಬಯಲು ಎನ್ನುವ ಮನಕ್ಕೆ ಜನ್ಮ ನೀಡಿ ಕಾಯದಲ್ಲಿಯೇ ಇಟ್ಟಿದೆ. ಮನ ತನಗೆ ಜನ್ಮ ನೀಡಿ ಬಯಲ ಮೂರ್ತಿಯನ್ನು ತಿಳಿಯದೆ ತಾನು ಸೃಷ್ಟಿ ಮಾಡಿದ ದೇವರನ್ನು ದೇವರೆಂದು ತಿಳಿದು ಪೂಜಿಸುತ್ತಿದೆ. ನಿರಾಕಾರ ನಿಜ ನಿರ್ಬಯಲೆ ಸ್ಥಿರವೆಂದು ನಂಬಿ ಪೂಜಿಸಿ ಘನಮನವಾಗು ಮನವೆ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ.

**1865**

**ಆಚಾರವಿಲ್ಲದವನ ಗುರು ಕಂಡಡೆ,**

**ವಿಚಾರಿಸಿ ನೋಡನು ಜ್ಞಾನಾಜ್ಞಾನದಲ್ಲಿ.**
**ಆಚಾರವಿಲ್ಲದ ಗುರು, ಆಚಾರವಿಲ್ಲದ ಶಿಷ್ಯ ,**
**ಇವರೀರ್ವರು ಚರಿಸಿ ಬೆಡಗಿನ ಭವಕ್ಕೆ ಗುರಿಯಾದರು,**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೆ.**

ಕಾಯದಲ್ಲಿ ಸಂಗಮವಾದ ಅರಿವೆ ಗುರು. ಈ ಗುರುದೇವನನ್ನು ಕಂಡ ಮನವೆ ಘನಮನ. ಪ್ರತಿಕಾಯದಲ್ಲಿಯೂ ಗುರುದೇವ ಸಂಗಮವಾಗಿದ್ದಾನೆ. ಆ ಗುರುದೇವನಿಗೆ ಮನವೆ ಶಿಷ್ಯನಾಗಬೇಕು. ಕಾಯದಲ್ಲಿಯೇ ಗುರು ಶಿಷ್ಯರು ಸಂಗಮವಾಗಿದ್ದಾರೆ.

ಗುರುವಿದ್ದ ಕಾಯಕ್ಕೆ ಗುರುವಿನ ಅವಶ್ಯಕತೆಯಿಲ್ಲ. ಆದರೂ ಮನ ಅರಿವೆಂಬ ಗುರುದೇವನಿಗೆ ಶಿಷ್ಯನಾಗದೆ ಕಾಯಕ್ಕೆ ಕಾವಿ ಹಾಕಿ ಕಾಯವನ್ನೇ ಗುರುವನ್ನಾಗಿಸಿದೆ. ಕಾಯವುಳ್ಳ ಅನೇಕ ಶಿಷ್ಯರನ್ನು ಮಾಡಿಕೊಂಡು ಗುರುವಾದ ಕಾಯ ಆಚಾರವಿಲ್ಲದ ಕಾಯ, ಆಚಾರವಿಲ್ಲದ ಶಿಷ್ಯಕಾಯ. ಇವರಿಬ್ಬರೂ ಅಜ್ಞಾನದಲ್ಲಿ ಚರಿಸಿ ಜನನ-ಮರಣಗಳಿಗೆ ಗುರಿಯಾದರು. ಗುರುವಿಗೆ ಶಿಷ್ಯನಲ್ಲಿದ್ದ ಗುರುವಿನ ಪರಿಚಯವಿಲ್ಲ. ಗರುವಿಗೆ ಗುರುವಿನಲ್ಲಿಯೇ ಇದ್ದ ಗುರುವಿನ ಪರಿಚಯ ಇಲ್ಲ. ವೇಷದ ಗುರು ವೇಷದ ಶಿಷ್ಯ ಇವರಿಬ್ಬರೂ ಕಾಯದಲ್ಲಿ ಸಂಗಮವಾದ ಗುರುದೇವನನ್ನು ಕಂಡುಕೊಳ್ಳಲೇಬೇಕೆಂಬ ಪರಿಜ್ಞಾನವಿಲ್ಲದೆ ಇವರಿಬ್ಬರ ಕಾಯಗಳು ಅವಸಾನಕ್ಕೆ ಗುರಿಯಾಗುತ್ತವೆ.

**1866**

**ಲಿಂಗವಂತರು ತಾವಾದ ಬಳಿಕ, ಅಂಗನೆಯರ ನಡೆನುಡಿಗೊಮ್ಮೆ**
**ಲಿಂಗದ ರಾಣಿಯರೆಂದು ಭಾವಿಸಬೇಕು. ಲಿಂಗವಂತರು ತಾವಾದ ಬಳಿಕ,**
**ಅನುಭವ ವಚನಗಳ ಹಾಡಿ ಸುಖದುಃಖಗಳಿಗಬೇದ್ಯನಾಗಿರಬೇಕು.**
**ಲಿಂಗವಂತರು ತಾವಾದ ಬಳಿಕ,**
**ಜಂಗಮವ ಪೂಜಿಸಿ ಸದಾ ಲಿಂಗೈಕ್ಯಸುಖಿಗಳಾಗಿರಬೇಕು.**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಲಿಂಗವಂತರು ಎಂದರೆ ಅಂಗದ ಮೇಲೆ ಲಿಂಗ ಕಟ್ಟಿಕೊಂಡವರು ಲಿಂಗವಂತರಲ್ಲ. ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನ ಶ್ರೀ ಚರಣಗಳಿಗೆ ಅಂಗವನ್ನು ಆವರಿಸಿದ ಮನ ಶರಣು ಹೋಗಿ ಆ ಲಿಂಗಯ್ಯನನ್ನು ಪೂಜಿಸುವ ಮನವುಳ್ಳ ಕಾಯವೆ ಲಿಂಗಕಾಯ.

ಸಕಲ ಮನಗಳೂ ಲಿಂಗಯ್ಯನ ರಾಣಿವಾಸ. ಮನ ಹೆಣ್ಣು ಅರಿವಿನ ಲಿಂಗಯ್ಯ ಮಾತ್ರ ಗಂಡು. ಇವರಿಬ್ಬರು ಇದ್ದ ಕಾಯವೆ ರಾಣಿವಾಸ.

ಹೀಗೆ ತಿಳಿದವರು ಅನುಭಾವಿಗಳು. ಅವರು ಸುಖದುಃಖಗಳಿಗೆ ಅಭೇದ್ಯರು. ಅಂಗದಲ್ಲಿಯೇ ಇರುವ ಲಿಂಗಜಂಗಮರ ಸದಾ ಪೂಜಿಸಿ ಲಿಂಗೈಕ್ಯ ಸುಖಿಗಳಾದವರು. ಕಾಯದಲ್ಲಿಯೇ ಇದ್ದ ಕಪಿಲಸಿದ್ಧಮಲ್ಲಿಕಾಜುನನನ್ನು ಕಂಡವರು.

**1867**

**ಸರ್ವರು ಲಿಂಗವಂತರೆಂದು ಮನದಲ್ಲಿ ಭಾವಿಸಿ ನಡೆಯಬೇಕಲ್ಲದೆ,**

**ನಡೆನುಡಿಯಲ್ಲಿ ಭಾವಿಸಿ ನಡೆಯಬಾರದು ನೋಡಯ್ಯಾ .**
**ಸರ್ವರು ಲಿಂಗವಂತರೆಂದು ಭಾವಿಸಿದಲ್ಲಿ ಪೂರೈಸಿಕೊಳ್ಳಬೇಕಲ್ಲದೆ,**
**ಪುರಹರ ಕಪಿಲಸಿದ್ಧಮಲ್ಲಿಕಾರ್ಜುನನ ಮಂದಿರವಾಸಿಗಳೆಂದು**
**ಭಾವಿಸಬಾರದು ನೋಡಯ್ಯಾ .**

ಅಂಗದಲ್ಲಿ ಸಂಗಮವಾದ ಅರಿವಿನ ಲಿಂಗಯ್ಯ ಸಕಲ ಅಂಗಗಳಲ್ಲಿಯೂ ಇದ್ದಾನೆ. ಹೀಗಾಗಿ ಸರ್ವ ಅಂಗಗಳು ಲಿಂಗಾಂಗಗಳೆ. ಅಂಗದ ಮೇಲೆ ಲಿಂಗ ಧರಿಸಿದ ಅಂಗಗಳೊಂದೆ ಲಿಂಗವಂತರಲ್ಲ. ಲಿಂಗವಿಲ್ಲದ ಅಂಗವು ಈ ಬ್ರಹ್ಮಾಂಡದಲ್ಲಿ ಯಾವುದೂ ಇಲ್ಲ. ಸಕಲ ಅಂಗಗಳು ಲಿಂಗಾಂಗಗಳೇ ಆಗಿರುವುದರಿಂದ ಸರ್ವರೂ ಲಿಂಗವಂತರೆಂದು ಭಾವಿಸಬೇಕು. ನಡೆನುಡಿಯಲ್ಲಿ ಮಾತ್ರ ಭಾವಿಸಿ ನಡೆಯಬಾರದು.

**1868**

**ಶ್ರೀಶೈಲದ ಮಹಿಮೆಯದು ಕರ್ಣಾಭರಣ.**
**ಶ್ರೀಶೈಲದ ಮಹಿಮೆಯದು ಸಾಧಿಸುವಡೆ ಬಹುವೈವರ್ಣ್ಯ .**
**ಶ್ರೀಶೈಲದ ಮಹಿಮೆಯದು ಶ್ರೀಶೈಲದಲ್ಲಿ.**
**ನಿಮ್ಮ ಮಹಿಮೆ ಮೂಲೋಕವೆಲ್ಲ ಇಂಬುಗೊಂಡಿತ್ತು**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಶ್ರೀಶೈಲದ ಮಹಿಮೆಯನು ಬಣ್ಣಿಸಿ ಕರ್ಣವನು ಆನಂದಗೊಳಿಸಬಹುದು. ಶ್ರೀಶೈಲದ ಮಹಿಮೆ ಏನಿದ್ದರು ಅದು ಶ್ರೀಶೈಲದಲ್ಲಿ ಮಾತ್ರ .

ಕಾಯದಲ್ಲಿ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನೆ ನಿಮ್ಮ ಮಹಿಮೆ ಏನಿದ್ದರೂ ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲದಲ್ಲೆ ಬಂದು ನಿಂತಿದೆ. ನಿಮ್ಮ ಶ್ರೀಪಾದವದು ಪಾತಾಳದಿಂದತ್ತತ್ತ, ನಿಮ್ಮ ಶ್ರೀಮುಕುಟವು ಬ್ರಹ್ಮಾಂಡದಿಂದತ್ತತ್ತ ವ್ಯಾಪಿಸಿಕೊಂಡಿದೆ. ನೀವು ಗಮನಕ್ಕೆ ನಿಲುಕಲಾರದವರು ಅಪ್ರಮಾಣರು, ಅಪ್ರತಿಮರು ಮಲ್ಲಯ್ಯ .

**1869**

**ಎಲ್ಲರು ತಪವ ಮಾಡಿದರು, ನಮ್ಮ ಶ್ರೀಶೈಲನ ತಪದಂತೆ ತಪದ ಓರ್ವರನು ಕಾಣೆ.**
**ಎಲ್ಲರು ಲಿಂಗವ ಪೂಜಿಸಿದರು,**
**ನಮ್ಮನಮ್ಮವರ ಪೂಜೆಯಂತೆ (ಪೂಜೆಯ) ಓರ್ವರನು ಕಾಣೆ,**
**ಎಲ್ಲರು ಮಹಿಮೆಯ ಮಾಡಿದರು.**
**ನಮ್ಮ ಶ್ರೀಶೈಲವಲ್ಲಭ ಕಪಿಲಸಿದ್ಧಮಲ್ಲನಂತೆ ಒರ್ವರನು ಕಾಣೆ, ಬೊಮ್ಮಣ್ಣಾ.**

ಕಾಯವಿಡಿದು ಜಪ ತಪವ ಮಾಡುವುದು ಜಪವೂ ಅಲ್ಲ ತಪವೂ ಅಲ್ಲ. ಕಾಯದಲ್ಲಿ ಸಂಗಮವಾದ ಅರಿವಿನ ಮಲ್ಲಯ್ಯನ ಎದುರು ಕುಳಿತು ಕಾಯವನ್ನು ಆವರಿಸಿದ ಮನ ಜಪ ತಪ ಮಾಡುವುದು ಉಚಿತ. ತನ್ನಪೂಜೆಯೆ ಪೂಜೆ.

ಮನವೆಂಬ ಮಹಾದೇವಿ ಆಕೆ ನಮ್ಮಮ್ಮ ಮಲ್ಲಯ್ಯ ನಮ್ಮಯ್ಯ . ನಮ್ಮಮ್ಮ ನಮ್ಮಯ್ಯನಿಗೆ

ಪೂಜೆ ಸಲ್ಲಿಸುವಂತಹ ಪೂಜೆಯ ಮಾಡುವವರನ್ನು ಒಬ್ಬರನ್ನೂ ಕಾಣೆ. ಎಲ್ಲರೂ ಮಹಿಮೆಯ ಮಾಡಿದರು ಆದರೆ ನಮ್ಮಯ್ಯ ಶ್ರೀಶೈಲ ವಲ್ಲಭ ಕಪಿಲಸಿದ್ಧಮಲ್ಲಯ್ಯನಂತೆ ಮಹಿಮೆಯ ಮಾಡಿದವರನ್ನು ಒಬ್ಬರನ್ನೂ ಕಾಣೆ ಎಂದು ಸಿದ್ಧರಾಮಶಿವಯೋಗಿಗಳು ಬೊಮ್ಮಯ್ಯ ಶರಣರಿಗೆ ಹೇಳಿದ್ದಾರೆ.

**1870**

**ಜನ್ಮವನೊಮ್ಮೆ ಧರಿಸಿದ ಬಳಿಕ,**
**ಜನನವಿನಾಶ ವಿಗ್ರಹ ಮೂರ್ತಿಯ ಪೂಜಿಸಲೇಬೇಕು.**
**ಜನ್ಮವನೊಮ್ಮೆ ಧರಿಸಿದ ಬಳಿಕ,**
**ಶ್ರೀಶೈಲ ಮಹಿಮೆಯ ಸಾಧಿಸಿ ನೋಡಲೇಬೇಕು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಜನ್ಮವನ್ನು ಒಮ್ಮೆ ಧರಿಸಿದ ಬಳಿಕ ಹುಟ್ಟು ಸಾವುಗಳನ್ನು ನಾಶ ಮಾಡುವ ಅರಿವಿನ ಶಿವಯ್ಯನನ್ನು ಒಮ್ಮೆ ಪೂಜಿಸಲೇಬೇಕು.

ಒಮ್ಮೆ ಜನ್ಮ ಧರಿಸಿದ ಬಳಿಕ ಕಾಯವೆಂಬ ಶ್ರೀಶೈಲ ಮಲ್ಲಿಕಾರ್ಜುನನ ಮಹಿಮೆಯನ್ನು ಸಾಧಿಸಿ ನೋಡಲೇಬೇಕು. ಆತ ಸಾಮಾನ್ಯನಲ್ಲ. ಮನ ಸಂಗ ಮಾಡಿದರೆ ಆ ಮಲ್ಲಯ್ಯನನ್ನು ಭ್ರಮರಾಂಬೆಯಾಗಿ ಕೂಡಲೇಬೇಕು.

**1871**

**ಭಕ್ತಿಯೆ ಲಿಂಗಪೂಜೆಯಾಗಿ ಅಳವಡಿಸಿಕೊಂಡ ಬಸವೇಶ.**
**ಜ್ಞಾನಕ್ರಿಯೆ ಲಿಂಗಪೂಜೆಯಾಗಿ ಅಳವಡಿಸಿಕೊಂಡ ಚೆನ್ನಬಸವೇಶ.**
**ವೈರಾಗ್ಯವೆ ಲಿಂಗಪೂಜೆಯಾಗಿ ಅಳವಡಿಸಿಕೊಂಡ ಅಲ್ಲಮೇಶ.**
**ಅನುಭಾವವೆ ಲಿಂಗಪೂಜೆಯಾಗಿ ಅಳವಡಿಸಿಕೊಂಡ ಬಾಲಕೇಶ.**
**ಕಪಿಲಸಿದ್ಧ ಮಲ್ಲೇಶ, ವ್ಯೋಮಕೇಶ, ನಾಶಪಾಶಾ.**

ಕಾಯವನ್ನು ಆವರಿಸಿದ ಮನವನ್ನು ಕಾಯದಲ್ಲಿಯೇ ಸಂಗಮವಾದ ಲಿಂಗಯ್ಯನಿಗೆ ಭಕ್ತನನ್ನಾಗಿಸಿ ಭಕ್ತಿಯೆ ಅರಿವಿನ ಲಿಂಗಪೂಜೆಯನ್ನಾಗಿ ಅಳವಡಿಸಿಕೊಂಡರು ಬಸವೇಶ್ವರರು

ಅಂಗದಲ್ಲಿಯೇ ಸಂಗಮವಾದ ಮನದ ಅಜ್ಞಾನವನ್ನು ತೊಡೆಯುವ ವೈರಾಗ್ಯವನ್ನು ಲಿಂಗಪೂಜೆಯಾಗಿ ಅಳವಡಿಸಿಕೊಂಡರು ಪ್ರಭು ಅಲ್ಲಮದೇವರು.

ಅನುಭವದಿಂದ ಹೊರ ಬರುವ ಅರಿವಿನ ಅನುಭಾವವನ್ನೇ ಲಿಂಗಪೂಜೆಯಾಗಿ ಅಳವಡಿಕೊಂಡ ಬಾಲಕೇಶ. ಕಪಿಲಸಿದ್ಧಮಲ್ಲೇಶ, ವ್ಯೋಮಕೇಶ, ನಾಶಪಾಶಾ ಎಂದು ಕರೆಯಿಸಿಕೊಂಡ ಸಿದ್ಧರಾಮ ಶಿವಯೋಗಿ.

**1872**

**'ಭವಭರ್ಗ ಭೀಮ ನೀಲಲೋಹಿತ ವಿರೂಪಾಕ್ಷ' ಎನ್ನು ಮನವೆ.**

**‘ನೀಲಕಂಠ ಉಮಾಪತಿ ದಯಾಳು ದಯಾಸಾಗರ’ ಎನ್ನು ಮನವೆ.**
**‘ಉಗ್ರ ಕಪರ್ದಿ ಕೈಲಾಸನಿವಾಸಿ ಸಿತಕಂಠ ಭಾಳ ಲೋಚನ’ ಎನ್ನು ಮನವೆ.**
**‘ಕಾಲಾರಿ ಕಾಮಾರಿ ತ್ರಿಪುರಾರಿ ಪಾಪಾರಿ**
**‘ಕಪಿಲಸಿದ್ಧಮಲ್ಲಿಕಾರ್ಜುನ’ ಎನ್ನು ಮನವೆ.**

ಎಲೆ ಮನವೆ ಕಾಯದಲ್ಲಿ ಸಂಗಮವಾದ ಜನನಮರಣಗಳಿಲ್ಲದ ಭೀಮ ಬಲದ ನೀಲಲೋಹಿತ ವಿರೂಪಾಕ್ಷನನ್ನು ನೆನೆನೆನೆದು ಪಾವನವಾಗು ಮನವೆ.

ವಿಷ ಸೇವಿಸಿ ತನ್ನ ಕಂಠದಲ್ಲಿಟ್ಟುಕೊಂಡ ನೀಲಕಂಠ, ಉಮಾಪತಿ, ದಯಾಳು, ದಯಾಸಾಗರ ಎಂದು ನಿತ್ಯ ನಿತ್ಯ ಮನನ ಮಾಡುತ್ತ ಬದುಕು ಮನವೆ.

ಉಗ್ರ ಕಪರ್ದಿ ಕೈಲಾಸವಾಸಿ , ಸಿತಕಂಠ, ಬಾಳಲೋಚನ ಎಂದು ನಿತ್ಯ ನಿತ್ಯ ನೆನೆನೆನೆದು ಬದುಕು ಮನವೆ. ಕಾಲಾರಿ, ಕಾಮಾರಿ, ತ್ರಿಪುರಾರಿ, ಪಾಪಾರಿ ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನ ನೆನೆನೆನೆದು ಬದುಕು ಮನವೆ.

**1873**

**ವೇದ ವೇದಂಗಳೆಲ್ಲ ಶಿವನ ಹೊಗಳಿ ನಿರ್ಮಲವಾದವು ನೋಡಾ.**
**ಓಂ ನಮಃ ಸೋಮಾಯ ಚ ರುದ್ರಾಯ ಚ ಎಂದು ವೇದವಾಕ್ಯ ನೋಡಾ.**
**ನಮಸ್ತಾಮ್ರಾಯ ಚಾರಂಆಯ ಚ ಎಂದು, ಪಂಡಿತ ಪ್ರಮುಖಸಿದ್ಧಿ ನೋಡಾ.**
**ನಮಃ ಶೃಂಗಾಯಚ ಪಶುಪತೇಯಚ ಎಂದು**
**ವೇದಾಧ್ಯಾಯಿಗಳರಿಕೆ ನೋಡಾ.**
**ನಮಃ ಶಿವಾಯಚ ಶಿವತರಾಯಚ ಎಂದು**
**ಕಪಿಲಸಿದ್ಧಮಲ್ಲಿಕಾರ್ಜುನನ ಪಂಚಮುಖದಲ್ಲಿ**
**ನಿತ್ಯ ನಿತ್ಯ ಘೋಷ ನೋಡಾ, ಕೇದಾರಯ್ಯ .**

ಸಕಲ ವೇದಗಳು ಶಿವನಿಂದಲೇ ಹುಟ್ಟಿದವು. ಅವು ಶಿವನನ್ನು ಹೊಗಳಿ ನಿರ್ಮಲವಾದವು. ಓಂ ನಮಃ ಸೋಮಾಯಚ ರುದ್ರಾಯ ಚ ಎಂದಿತು ವೇದ ವಾಕ್ಯ . ನಮಸ್ತಾಮ್ರಾಯ ಚಾರಣಾಯ ಚ ಎಂದು ಪಂಡಿತ ಪ್ರಮುಖ ಸಿದ್ಧಿ ನೋಡಾ. ನಮಃ ಶೃಂಗಾಯ ಚ ಪಶುಪತೇಯ ಚ ಎಂಬುದು ವೇದಾಧ್ಯಾಯಿಗಳ ಅರಿಕೆ ನೋಡಾ. ನಮಃ ಶಿವಾಯ ಚ ಶಿವತರಾಯ ಚ ಎನ್ನುವುದು ಕಪಿಲಸಿದ್ಧಮಲ್ಲಿಕಾರ್ಜುನನ ಪಂಚಮುಖದಲ್ಲಿ ನಿತ್ಯ ನಿತ್ಯ ಘೋಷ ನೋಡಾ ಎಂದು ಸಿದ್ಧರಾಮಶಿವಯೋಗಿಗಳು ಕೇದಾರಯ್ಯನಿಗೆ ಹೇಳಿದ್ದಾರೆ.

**1874**

**ನೀಲಲೋಹಿತ ಗಣೇಶ್ವರಾಯ, ಕಾಲಲೋಹಿತ ಗಣೇಶ್ವರಾಯ,**
**ಕಪಾಲ ಮೂಲಾಧಾರ ಗಣೇಶ್ವರಾಯ, ಮಾರಹರ ಗಣೇಶ್ವರಾಯ,**
**ವೃಷಾಂಕವಾಹನ ಗಣೇಶ್ವರಾಯ,**
**ಜಗದಂಬಾಸ್ವರೂಪ ಗಣೇಶ್ವರಾಯ,**

**ಕಾಲಕಂಠ ಗಣೇಶ್ವರಾಯ, ಪಾರ್ವತಿ ಧ್ಯಾನಾಸಕ್ತ ಗಣೇಶ್ವರಾಯ,**
**ಸೋಮವಿಭೂಷಣ ಗಣೇಶ್ವರಾಯ, ವ್ಯಾಲಭೂಷಣ ಗಣೇಶ್ವರಾಯ,**
**ಶಾಂಭವಮುನೀಶ್ವರ ಗಣೇಶ್ವರಾಯ,**
**ನಮೋ ನಮಃ ಶಂಕರ ಗಣೇಶ್ವರಾಯ,**
**ನಮೋ ನಮಃ ಕಪಿಲಸಿದ್ಧಮಲ್ಲಿಕಾರ್ಜುನಾಯ,**
**ಮಹಾದೇವಾಯ ನಮೋ ನಮಃ.**

ವಚನದಲ್ಲಿಯೇ ಅನುಭಾವವಿದೆ ನಿಧಾನವಾಗಿ ಓದಿ.

**1875**

**ಎಲ್ಲರು ಶಿವಮಂತ್ರವ ಜಪಿಸುವುದಕ್ಕಿಂತ,**
**ಎಮ್ಮಮ್ಮನವರ ಮಂತ್ರವ ಜಪಿಸಿ ಸೇವೆಯಲ್ಲಿರಲಾರರು, ನೋಡಾ ಮುನೀಶ್ವರರು.**
**ಎಲ್ಲರು ಶಿವಮಂತ್ರವ ಜಪಿಸುವುದಕ್ಕಿಂತ ಎಮ್ಮಮ್ಮನವರಮಂತ್ರ**
**ಸರ್ವಮಂಗಳಾಯೈ ಶವಾಯೈ ಜಗದಾಂಬಾಯೈ**
**ಜಗದ್ವಂದ್ಯಜಗದಾಧಾರಯೈ ನಮೋ ನಮಃ ಎನ್ನರು ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ, ಮಹಾಪ್ರಮಥರು.**

ಎಲ್ಲರು ಶಿವಂತ್ರವನ್ನು ಜಪಿಸುವರು ಎಮ್ಮಮ್ಮ ಶಿವೆಯ ಮಂತ್ರವ ಜಪಿಸಿ ಆಕೆಯ ಸೇವೆಯಲ್ಲಿರಲು ಒಪ್ಪರು ನೋಡಾ ಮನುಮುನೀಶ್ವರರು.

ಕಾಯದಲ್ಲಿ ಶಿವ ಸಂಗಮವಾಗಿದ್ದಾನೆ ಅರಿವಿನ ರೂಪದಲ್ಲಿ. ಆ ಅರಿವನ್ನು ಪಾಲಿಸುವ ನಿಯಮದಲ್ಲಿ ಶಿವೆ ಕೂಡ ಸಂಗಮವಾಗಿದ್ದಾಳೆ. ಕಾಯ ಶಿವಾ ಮತ್ತು ಶಿವೆಯರ ಸಂಗಮ. ಶಿವ ನಮ್ಮಯ್ಯನಾದರೆ ಮನವೆಂಬ ಶಿವೆ ನಮ್ಮಮ್ಮ. ಎಲ್ಲರೂ ಶಿವ ಮಂತ್ರವ ಜಪಿಸುವುದಕ್ಕಿಂತ ನಮ್ಮಮ್ಮ ಶಿವೆಯ ಮಂತ್ರ ಸರ್ವಮಂಗಳಾಯೈ, ಶಿವಾಯೈ, ಜಗದಂಬಾಯೈ, ಜಗದ್ವಂದ್ಯಜಗದಾಧಾರೈ ನಮೋ ನಮಃ ಎನ್ನರು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ ಮಹಾಪ್ರಮಥರು.

**1876**

**ಐದಕ್ಷರವದು ಎಮ್ಮಮ್ಮನದು.**
**ಮುಂದಣ ಅಕ್ಕವರದು ಜಗಜ್ಜನಕನದು.**
**ಮುಂದೊಂದು ತಾರೆ, ಮುಂದೊಂದು ತಾರೆ,**
**ಇಡಲದು ತೋರುವಳು ಈ ಸ್ಥಾನಮೀಸಂಪದದ್ಭವ**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಐದಕ್ಷರಗಳು ನಮ್ಮಮ್ಮ ಶಿವೆಯವು ಆದರೆ ಮುಂದಣ ಅಕ್ಷರವೆ ಜಗಜ್ಜನಕನದು. ರಾಮಕೃಷ್ಣ ಪರಮಹಂಸರು ಜಗಜನನಿಯನ್ನು ಸಾಕ್ಷತ್ಕರಿಸಿಕೊಂಡು ಮಹಾಂತರಾದರು.

ಅಗಲಿರುಳೆನ್ನದೆ ಕಾಯವನ್ನು ಕಾಡುವತಾಯಿಯನ್ನು ಕಾಯದಿಂದ ನೆನೆಯುವುದು

ಇದೊಂದು ಜ್ಞಾನಕ್ಕೆ ಹೋಗುವ ಕಲೆ, ಸೂತ್ರವೂ ಹೌದು. ಅರಿವಿನ ಶಿವಯ್ಯನನ್ನು ನೆನೆದು ಮಾಹಾಂತರಾದವರೂ ಇದ್ದಾರೆ. ಹಾಗೆಯೇ ಶಿವಯ್ಯನ ಸತಿ ಶಿವೆಯನ್ನು ನೆನೆದು ಮಹಾಂತರಾದವರೂ ಇದ್ದಾರೆ. ಈಕೆ ಕಾಯದಲ್ಲಿಯೇ ಶಿವಸಂಪದ ವೈಭವವನ್ನು ತೋರಿ ತನ್ನಂತೆ ಮಾಡಿಕೊಳ್ಳುತ್ತಾಳೆ:

**1877**

**ಎನ್ನ ರೋಮಂಗಳೆಲ್ಲವು ನಯನಂಗಳಾದಡೆ ಸಾಲ್ವವು ನೋಡಾ,**
**ಜಗದಂಬೆಯ ಪಾದಪಂಕಜದರ್ಶನಕ್ಕೆ.**
**ಎನ್ನ ನಯನಂಗಳೆಲ್ಲ ಜ್ಞಾನಚಕ್ಷುಗಳಾದಡೆ ಸಾಲ್ವವು ನೋಡಾ,**
**ಎನ್ನ ಜ್ಞಾನಚಕ್ಷಗಳೆಲ್ಲ ಅಖಂಡಾದ್ವಯ ಏಕೋನೇತ್ರವಾದಡೆ**
**ಕೂಡುವುದು ನೋಡಾ, ಜಗದಂಬೆಯ ಪಾದಪಂಕಜದಲ್ಲಿ ಭಾವವು,**
**ಭವಹರ ಪುರಹರ ಕಪಿಲಸಿದ್ಧಮಲ್ಲೇಂದ್ರಾ .**

ಜಗದಂಬೆ ಮಾಹಾತಾಯಿಯ ಚರಣಕಮಲಗಳ ದರುಶನಕ್ಕೆ ನನ್ನ ರೋಮಂಗಳೆಲ್ಲ ನಯನಂಗಳಾದರೂ ಸಾಲದು ನೋಡಾ. ಎನ್ನ ನಯನಂಗಳೆಲ್ಲ ಜ್ಞಾನಚಕ್ಷುಂಗಳಾದರೂ ಸಾಲದು ನೋಡಾ. ಜಗದಂಬೆಯ ಪಾದಪಂಕಜಧ್ಯಾನಕ್ಕೆ ಈಕೆ ನನ್ನ ಹಡೆದವ್ವ ಈಕೆಯನ್ನು ನೋಡಲು ನನ್ನ ಜ್ಞಾನಚಕ್ಷುಂಗಳೆಲ್ಲ ಅಖಂಡಾದ್ವಯ ಏಕೋನೇತ್ರವಾದಡೆ ಆ ತಾಯಿಯನ್ನು ಕೂಡಲು ಸಾಧ್ಯವಾಗುತ್ತದೆ. ಜಗದಂಬೆಯ ಪಾದ ಪಂಕಜದಲ್ಲಿ ಎನ್ನ ಭಾವವು ಭವಹರ ಪುರಹರ ಕಪಿಲಸಿದ್ಧಮಲ್ಲೇಂದ್ರ.

**1878**

**ತಾನು ಧನವಂತನಾಗಬೇಕೆಂಬಾಶೆಯುಳ್ಳಡೆ,**
**ಜಪಿಸಿ ನೋಡಾ ಶ್ರೀಮಂತ್ರವ.**
**ತಾನುಪೇಂದ್ರನಾಗಬೇಕೆಂಬಾಶೆಯುಳ್ಳಡೆ,**
**ಜಪಿಸಿ ನೋಡಾ ಶಕ್ತಿಮಂತ್ರವ.**
**ತಾನು ಬ್ರಹ್ಮನಾಗಬೇಕೆಂಬಿಚ್ಛೆಯುಳ್ಳಡೆ, ಜಪಿಸಿ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನ ಮಹಾದೇವಿಯ ಮಹಾಮಂತ್ರವ.**

ಕಾಯ ಮನದಿಂದ ಶ್ರೀಮಂತವಾಗಿದೆ. ಹೀಗಾಗಿ ಒಮ್ಮೆ ಅಜ್ಞಾನದಲ್ಲಿ ಮತ್ತೊಮ್ಮೆ ಜ್ಞಾನದಲ್ಲಿ ಇರುತ್ತದೆ. ಜ್ಞಾನವೆಂದರೆ ಕಾಯದ ಮೂಲ ಜ್ಞಾನವಲ್ಲ. ಮನ ಸಂಗ್ರಹ ಮಾಡಿದ ಮೂಲ ಜ್ಞಾನದಲ್ಲಿ ಬದುಕುತ್ತದೆ. ಕಾಯದಲ್ಲಿಯೇ ಸಂಗಮವಾದ ಜ್ಞಾನ ಬಳಕೆ ಮಾಡುವ ಶಕ್ತಿ ಮನಕ್ಕೆ ಬರಬೇಕು. ಆಗ ಕಾಯ ತನಗೆ ತಾನೆ ಶ್ರೀಮಂತವಾಗುತ್ತದೆ, ಧನವಂತವಾಗುತ್ತದೆ.

ಕಾಯ ಧನವಂತವಾಗಬೇಕಾದರೆ ಕಾಯದಲ್ಲಿಯೇ ಸಂಗಮವಾದ ಅರಿವಿನ ಶ್ರೀಮಂತ್ರವ ಜಪಿಸಿ ನೋಡು ಎಂದಿದ್ದಾರೆ ಶಿದ್ಧರಾಮಶಿವಯೋಗಿಗಳು. ತಾನು ಉಪೇಂದ್ರನಾಗಬೇಕೆಂಬ ಆಶೆ ಹೊಂದಿದ್ದರೆ ಶಕ್ತಿ ಮಂತ್ರವ ಜಪಿಸಬೇಕು. ತಾನು ಬ್ರಹ್ಮನಾಗಬೇಕು ಎಂಬ ಇಚ್ಛೆಯನ್ನು ಹೊಂದಿದ್ದರೆ

ಕಪಿಲಸಿದ್ಧಮಲ್ಲಿಕಾರ್ಜುನ ಮಹಾದೇವಿಯ ಮಂತ್ರವನ್ನು ಜಪಿಸಬೇಕು.

**1879**

**ಭೋ ಜಗದಂಬಾ, ಭೋ ಜಗದಂಬಾ, ಮಮಾಂಬಾ ಎಂದು ನಂಬಿದೆ.**
**ಭೋ ಸರ್ವಮಂಗಳಾ ಸರ್ವಮಂಗಳಾ ಎಂದು ನಂಬಿದೆ.**
**ಭೋ ಅಂಬಾ, ಮಮಾಂಬಾ ಎಂದು ನಂಬಿದೆ.**
**ಭೋ ಕಪಿಲಸಿದ್ಧಮಲ್ಲಿಕಾರ್ಜುನಾ, ಭೋ.**
**ನಿಮ್ಮ ಶಕ್ತಿ ನಿಮಗಾಧಾರವೆಂದು ನಂಬಿದೆ.**

ಕಾಯದ ಶಕ್ತಿಯೇ ಕಾಯಕ್ಕೆ ಆದಾರ. ಕಾಯದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನು ಸಂಗಮವಾಗಿದ್ದಾನೆ. ಹಾಗೆಯೇ ಕಾಯವನ್ನು ಜಗದಂಬೆ ಮಹಾದೇವಿ ಆವರಿಸಿದ್ದಾಳೆ. ಇವರಿಬ್ಬರೂ ಕಾಯದಲ್ಲಿ ಸಂಗಮವಾಗಿದ್ದುದು ಕಾಯ ತಿಳಿಯುವುದರ ಮೂಲಕ ಇವರಿಬ್ಬರನ್ನೂ ಆರಾಧಿಸುತ್ತ ಕಾಯ ಅವರ ಶಕ್ತಿಯನ್ನು ಪಡೆದು ಕೈಲಾಸವೆ ತಾನಾಗಬೇಕು. ನಿಮ್ಮ ಶಕ್ತಿ ನನಗೆ ಆಧಾರವೆಂದು ಕಾಯ ಬಲವಾಗಿ ನಂಬಬೇಕು.

**1880**

**''ಯಥಾ ಷಡಕ್ಷರಂ ಮಂತ್ರಂ ದೇವ್ಯೈ ದೇವಸಮೀರತಂ'' ಎಂದ ಬಳಿಕ**
**ಷಡಕ್ಷರವೆಂಬುದು ಶಿವಮಂತ್ರ, ಪಂಚಾಕ್ಷರವು ಶಿವಮಂತ್ರ.**
**ಇದರಂತುವನರಿಯ ಬಲ್ಲಡೆ ಗುರುವಿನಿಂದಲ್ಲದೆ,**
**ಪರ ನರರಿಂದಾಗದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಓಂ ನಮಃ ಶಿವಾಯ ಎಂಬುದು ಶಿವಮಂತ್ರ ನಮಃ ಶಿವಾಯ ಎಂಬುದು ಪಂಚಾಕ್ಷರ ಮಂತ್ರ. ಇದು ಶಕ್ತಿ ಮಂತ್ರ. ಷಡಕ್ಷರ ಮಂತ್ರ ಮತ್ತು ಪಂಚಾಕ್ಷರ ಮಂತ್ರದ ಶಕ್ತಿಯನ್ನು ಗುರುವಿನಿಂದಲೇ ತಿಳಿಯಬೇಕು. ಇದು ನರರಿಂದಾಗದ ಕೆಲಸ ಎಂದಿದ್ದಾರೆ ಸಿದ್ಧರಾಮಶಿವಯೋಗಿಗಳು.

**1881**

**ಪಂಚಾಕ್ಷರವೆಂಬುದು ಪಂಚಮುಖ ಪ್ರಸಾದ ನೋಡಾ ಬಸವಂಗೆ.**
**ಪಂಚಾಕ್ಷರವೆಂಬುದು ಮಹಾದೇವಿಯ ಪ್ರಸನ್ನತೆ ನೋಡಾ ಚೆನ್ನಬಸವಂಗೆ.**
**ಪಂಚಾಕ್ಷರವೆಂಬುದು ಪಂಚಾವಸ್ಥಾತೀತ.**
**ಪರವಸ್ತುವಿನಲ್ಲಿ ಮೇಳನ ನೋಡಾ, ಪ್ರಭುದೇವಂಗೆ.**
**ಪಂಚಾಕ್ಷರವೆಂಬುದು ಪಂಚವರ್ಷದ ಕುಮಾರಾವಸ್ಥೆ ನೋಡಾ,**
**ಸನತ್ಕುಮಾರಂಗೆ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಬಸವರಸರಿಗೆ ಪಂಚಾಕ್ಷರ ಮಂತ್ರವೆಂಬುದು ಪಂಚಮುಖದ ಪ್ರಸಾದವಾಯಿತ್ತು. ಪಂಚ ಕರ್ಮೇಂದ್ರಿಯಗಳು ಪಂಚಮುಖದ ಪಂಚಾನನ ಪವಡಿಸಿದ ಜ್ಞಾನೇಂದ್ರಿಯಗಳಾಗಿ ಫಳಫಳನೆ

ಹೊಳೆದು ಮಹಾಬೆಳಗಿಂಗೆ ಬೆಳಗಾಗಿ ಬೆಳಗಿದವು. ಬಸವರಸರು ಪಂಚಾಕ್ಷರವನ್ನು ಹೀಗೆ ಬಳಸಿಕೊಂಡರು.

ಚೆನ್ನಬಸವಣ್ಣನವರು ಮಹಾದೇವಿಯ ಪ್ರಸನ್ನತೆಯ ಶಕ್ತಿ ಮಂತ್ರವಾಗಿ ಬಳಕೆಮಾಡಿಕೊಂಡರು

ಪ್ರಭುದೇವರು ಪಂಚಾಕ್ಷರ ಮಂತ್ರವನ್ನು ಪಂಚಾವಸ್ಥೆಯ ಅತೀತ ಪರವಸ್ತುವಿನಲ್ಲಿ ಮೇಳೈಸಿ ನೋಡಿದರು. ಪಂಚಾಕ್ಷರಿ ಮಂತ್ರವನ್ನು ಸನತ್ಕುಮಾರ ತನ್ನ ಐದು ವರ್ಷದ ಕುಮಾರಾವಸ್ಥೆಯಲ್ಲಿ ಮಹಾಜ್ಞಾನಕ್ಕೆ ಹೋಗುವ ಶಕ್ತಿಯನ್ನಾಗಿ ಮಾಡಿಕೊಂಡರು.

**1882**

**ಕೋಟಿ ಕೋಟಿ ಜನ್ಮವ ತಾಳಿ ಕೋಟಲೆಗೊಳ್ಳುವುದೇಕಯ್ಯಾ ?**
**ಕೋಟಿಯೊಳಗರ್ಧ, ಅರ್ಧದೊಳಗರ್ಧ ನಾಟಿಸಿದೆ**
**ನಮಃ ಶಿವಾಯ ಎಂದಡೆ ಕೋಟಿ ಕೋಟಿ ನರಕಂಗಳನೀಡಾಡಿ,**
**ಮಹಾದೇವಿಯರ ಮಂದಿರದ ಕೋಟೆಯನ್ನೇರಿತ್ತು ನೋಡಾ,**
**ಕಪಿಲಿಸಿದ್ಧಮಲ್ಲಿನಾಥನಾ.**

ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ಕೋಟಿ ಕೋಟಿ ಅಜ್ಞಾನದ ಜನ್ಮವ ತಳೆದು ಕೋಟಲೆಗೊಳ್ಳುತ್ತದೆ. ಜ್ಞಾನ ಜನ್ಮಕ್ಕೆ ಬರುವುದು ದುರ್ಲಭ. ಎಲೆ ಮನವೆ ನಮಃ ಶಿವಾಯ ಎನ್ನುವ ಮಂತ್ರವನ್ನು ಜಪಿಸಿ ಈ ಮಂತ್ರ ಕೋಟಿ ಕೋಟಿ ನರಕಂಗಳನ್ನು ಈಡಾಡಿ ನಿನ್ನನ್ನು ಮಹಾದೇವನ ಮಂದಿರದ ಕೋಟೆಯನ್ನು ಹತ್ತಿಸುತ್ತಿದೆ. ಈ ಮಹಾಮಂತ್ರವನ್ನು ಬಲ್ಲ ಜ್ಞಾನಿಗಳಿಂದ ತಿಳಿದು ಪಠಿಸಿ ನಮಃ ಶಿವಾಯವೆ ನೀನಾಗು.

**1883**

**ಎಂಟು ಮಣಿಯ ಮನೆಯಲ್ಲಿ ಕಂಟಕವಿಲ್ಲದ ಮೂರ್ತಿ.**
**ತಾ ನಾಟ್ಯವ ಮಾಡುತ್ತಿದೆ ನೋಡಾ.**
**ಆ ಎಂಟು ಮಣಿಯಲ್ಲಿ ತನ್ನಂಟು ಇಲ್ಲದೆ,**
**ತಾ ಸ್ವತಂತ್ರ ನಾಟ್ಯನಾಗಿ ಆಡುತ್ತಿಹ ನೋಡಾ,**
**ಕಪಿಲಸಿದ್ಧಮಲ್ಲಿಕಾರ್ಜುನನ ಮೂರ್ತಿಯ.**

ಕಾಯವೆಂಬುದು ಅಷ್ಟ ಮದಗಳುಳ್ಳ ಮಣಿಯ ಮನೆ. ಅಷ್ಟ ಮದ ತುಂಬಿದ ಮನೆ. ಇದರಲ್ಲಿ ಕಂಟಕವಿಲ್ಲದ ಮಹಾಮೂರ್ತಿ ತಾನು ನಾಟ್ಯವ ಮಾಡುತ್ತಿದ್ದಾನೆ. ಆ ಎಂಟು ಮಣಿಯಲ್ಲಿ ತನ್ನ ನಂಟು ಇಲ್ಲದೆ ತಾನು ಸ್ವತಂತ್ರ ನಟರಾಜನಾಗಿ ನಾಟ್ಯವನು ಮಾಡುತ್ತಿದ್ದಾನೆ.

ಕಾಯವನ್ನು ಸೋಂಕಿಲ್ಲ. ಆದರೂ ಕಾಯದಲ್ಲಿಯೇ ಕಾಯಕ್ಕೆ ಆದಾರವಾಗಿ ಇದ್ದಾನೆ. ಕಾಯವನ್ನು ಸೋಂಕದೆ ಬೆಳಗಿಂಗೆ ಬೆಳಗಾಗಿ ಬೆಳಗುತ್ತಿದ್ದಾನೆ ಕಪಿಲಿಸಿದ್ಧಮಲ್ಲಿಕಾರ್ಜುನ ಮೂರ್ತಿಯು.

**1884**

**ಜಾಗ್ರದಲ್ಲಿಹ ಮನುಷ್ಯಂಗೆ,**

**ಸ್ವಪ್ನ ಸುಷುಪ್ತಿ ಮಿಥ್ಯವೆಂಬುದು ಪ್ರಸಿದ್ಧ.**
**ಸ್ವಪ್ನದಲ್ಲಿಹ ಮನುಷ್ಯಂಗೆ(ಜಾಗ್ರ)ಸುಷುಪ್ತಿ ,**
**ಎಂಬುದು ತೋರಬಾರದು.**
**ಸುಷುಪ್ತಿಯಲ್ಲಿ ಜಾಗ್ರ ಸ್ವಪ್ನವೆಂಬುದು ತಿಲಮಾತ್ರ ತಿಳಿಯಬಾರದು,**
**ನೋಡಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .**

ಕಾಯಕ್ಕೆ ಮೂರು ಅವಸ್ಥೆಗಳು. ಅವು ಜಾಗ್ರ , ಸ್ವಪ್ನ , ಸುಷುಪ್ತಿ . ಜಾಗ್ರದಲ್ಲಿರುವ ಮನುಷ್ಯನಿಗೆ ಸ್ವಪ್ನ, ಸುಷುಪ್ತಿ, ಮಿಥ್ಯವೆಂಬುದು ಗೊತ್ತಾಗುತ್ತದೆ. ಸ್ವಪ್ನದಲ್ಲಿರುವ ಮನುಷ್ಯನಿಗೆ ಜಾಗ್ರ , ಸುಷುಪ್ತಿ ಎನ್ನುವುದು ತೋರುವುದಿಲ್ಲ.

**1885**

**ಪಂಚೀಕರಣ ಕ್ರಿಯದಿಂದಲ್ಲದೆ ದೇಹದಿಂದರಿಯಬಾರದು.**
**ಪಂಚೇಂದ್ರಿಯ ಪಂಚಮುಖದಿಂದಲ್ಲದೆ ಸ್ವತಂತ್ರ ,**
**ತಿಳಿಯಬಾರದು ನೋಡಾ ಕಲ್ಲಯ್ಯಾ .**

ಪಂಚೀಕರಣ ಕ್ರಿಯೆಯಿಂದ ದೇಹದ ಸಂಪತ್ತು ಆದ ಮಹಾಜ್ಞಾನವನ್ನು ತಿಳಿಯಬಹುದು. ಪಂಚೇಂದ್ರಿಯಗಳ ಪಂಚಮುಖಗಳಿಂದಲೂ ಮನದ ಮೂಲಕ ಮಹಾಜ್ಞಾನವನ್ನು ತಿಳಿದು ಸ್ವತಂತ್ರನಾಗಬಹುದು.

ಕಾಯ ಮನದ ಸ್ವಾಧೀನದಲ್ಲಿದೆ. ಮನ ಕಾಯದ ಮೂಲಕ ಅರಿಷಡ್ವರ್ಗಗಳ ಸುಖವನ್ನು ಸಪ್ತ ವ್ಯಸನಗಳ, ಅಷ್ಟಮದಗಳ ಸುಖವನ್ನು ಉಣ್ಣುತ್ತದೆ. ಇದು ಕಾಯಕ್ಕೆ ಸಲ್ಲದ ಕ್ರಿಯೆಗಳು. ಆದರೂ ಕೂಡ ಕಾಯ ಮನದ ಸ್ವಾಧೀನವಾಗಿರುವುದರಿಂದ ಅನಿವಾರ್ಯವಾಗಿದೆ. ಮನ ಮತ್ತು ಕಾಯದಲ್ಲಿ ನಡೆಯುವ ಸಾತ್ವಿಕ, ರಾಜಸ, ತಾಮಸ ಗುಣಗಳು ಕಾಯದಲ್ಲಿಯೇ ಸಂಗಮವಾದ ಪರಮಾತ್ಮನಿಂದ ಕಾಯಕ್ಕೆ ತಿಳಿಯುತ್ತದೆ ಎಂದು ಕಲ್ಲಯ್ಯ ಶರಣರಿಗೆ ಹೇಳಿದ್ದಾರೆ ಸಿದ್ಧರಾಮಶಿವಯೋಗಿಗಳು.

**1886**

**ಮೀರಿದ ಮಹಾಮಂತ್ರವೆಂದು ಕೂಗುವ,**
**ಅಷ್ಟಾದಶ ಪುರಾಣ ನೋಡಿ ನೀ ಕೂಗದಿರು ಮರುಳೆ.**
**ಕಡೆಯಕ್ಷರದ ಅರ್ಥವದು ಕಾರಣಾತೀತ ವಸ್ತು ನೋಡಾ ಮರುಳೆ!**
**ಆ ವಸ್ತುವಿಗೆ ನೀನಾಗಬೇಕೆಂಬುದಕ್ಕೆ ನಮಃ ಎನ್ನು ಮರುಳೆ!**
**ಕಪಿಲಸಿದ್ಧಮಲ್ಲಿಕಾರ್ಜುನ ಮಹಾಲಿಂಗದಲ್ಲಿ.**

ಹದಿನೆಂಟು ಪುರಾಣಗಳಿಗೂ ಮೀರಿದ ಮಂತ್ರವು ನಮಃ ಶಿವಾಯ ಎಂದು ಕೂಗುವುದನ್ನು ನೋಡಿ ನೀನು ಕೂಗದಿರು ಮರುಳೆ. ಏಕೆಂದರೆ ಆ ಮಹಾಮಂತ್ರವೆ ನೀನಿರುವಿ.

ಕಡೆಯಕ್ಷರದ ಅರ್ಥವದು ಕಾರಣಾತೀತ ವಸ್ತು ನೋಡಾ ಮರುಳೆ ಆ ವಸ್ತುವೇ

ನೀನಾಗಬೇಕೆಂಬುವ ಇಚ್ಛೆಯಿಂದಾಗಿ ನಮಃ ಶಿವಾಯ ಎನ್ನು ಮರುಳೆ. ಕಾಯ ಕಪಿಲಸಿದ್ಧಮಲ್ಲಿಕಾರ್ಜುನನ ಸಂಪತ್ತು ಎಂದ ಮೇಲೆ ಅದು ನೀನೆ ಆಗಿರುವಿ ಎಂದು ತಿಳಿ ಮರುಳೆ.

**1887**

**ಮನನ ಮಾಡಿದ ಮಂತ್ರ ಮಹಾಪದವಿಯ ಕೊಟ್ಟಿತ್ತಯ್ಯಾ .**
**ಮನನವರಿಯದ ಮಂತ್ರ ಮಂತ್ರದಲ್ಲಿಯ ವಸ್ತುವ ಕೊಟ್ಟಿತ್ತಯ್ಯಾ .**
**ಮಂತ್ರವೇನು ಮನವೆ? ಕಪಿಲಸಿದ್ಧಮಲ್ಲಿಕಾರ್ಜುನನ ಫಲವೇನು ?**
**ವಿಚಾರದಿಂದ, ವಿಶ್ವಾಸದಿಂದಗಣಿತ ಫಲವ ಕೊಟ್ಟಿತ್ತಯ್ಯಾ .**

ಮಂತ್ರವೆ ತಾನೆಂದು ತಿಳಿಯದ ಕಾಯ ಎಷ್ಟು ಬಾರಿ ಮಹಾ ಮಂತ್ರವನ್ನು ಪಠಿಸಿದರೇನು ಫಲ ? ಮಂತ್ರದ ಮಹಿಮೆ ಕಾಯಕ್ಕೆ ಗೊತ್ತಿಲ್ಲ. ಕಾಯದ ಮಹಿಮೆ ಮಂತ್ರ ತಿಳಿದಿಲ್ಲ. ಮನನವರಿಯದ ಮಂತ್ರ ಮಂತ್ರದಲ್ಲಿಯ ವಸ್ತುವ ಕೊಟ್ಟಿತ್ತು ಕಾಯಕ್ಕೆ ಫಲ ಪದವಿಯ ತಂದಿತ್ತು .

ಮಂತ್ರವೆಂಬುದು ಮನವಲ್ಲ. ಸಾಕ್ಷಾತ್ ಕಪಿಲಸಿದ್ಧಮಲ್ಲಿಕಾರ್ಜುನನ ಫಲ. ಅರಿತವರಿಂದ ಅರಿತರಿತು ಪಠಿಸಿದರೆ ಆ ಮಂತ್ರವೆ ತಾನಾಗಿತ್ತು .

**1888**

**ಜಪವೇನು, ತಪವೇನು, ಸಾಧಿಸುವಾತಂಗದು ದುರ್ಲಭವಲ್ಲವೆ, ಮನವೆ ?**
**ನೇಮವೇನು, ನಿತ್ಯವೇನು, ಸಾಧಿಸುವಾತಂಗದು ದುರ್ಲಭ ದೇವಾ.**
**ಪೂಜೆಯ ಸೂಜಿಗತನದ ಮಹಾಮಹತ್ವವೇನು ?**
**ಸಾಧಿಸುವಾತಂಗದು ದುರ್ಲಭವಲ್ಲವೆ ? ಹೇ ದೇವಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಯಾರ ಕುರಿತು ಜಪ ಮಾಡಬೇಕು ? ಯಾರ ಕುರಿತು ತಪ ಮಾಡಬೇಕು ? ಆತನನ್ನು ಹೇಗೆ ಸಾಕ್ಷಾತ್ಕರಿಸಿಕೊಳ್ಳಬೇಕು ? ಆತ ಎಲ್ಲಿದ್ದಾನೆ ? ಎಂದು ತಿಳಿಯದೆ ಮನ ಕಾಯ ಹೇಳಿದ ಜಪ ಮಾಡಿದರೆ, ತಪ ಮಾಡಿದರೆ ಅದು ವ್ಯರ್ಥ.

ಅಹಂ ಬ್ರಹ್ಮಾಸ್ಮಿ, ಅಹಂ ಬ್ರಹ್ಮಾಸ್ಮಿ ಎಂದು ಯೋಗಿಯೊಬ್ಬ ಕಲ್ಲು ಬಂಡೆಯ ಮೇಲೆ ಕುಳಿತು ಜಪ ಮಾಡುತ್ತಿದ್ದ. ಅದನ್ನು ಕೇಳಿ ದನಕಾಯುವ ಹುಡುಗನೊಬ್ಬ ಆತನಿಗಿಂತ ಗಟ್ಟಿಯಾಗಿ ನಾನು ದನಕಾಯುವವನು, ನಾನು ದನಕಾಯುವವನು ಎಂದು ಚೀರಿದ. ಯೋಗಿ ಎಚ್ಚರಗೊಂಡು ನೀನು ದನಕಾಯುವವನು ಅಲ್ಲ ಎಂದು ಹೇಳಿದವರು ಯಾರು ? ಎಂದು ಹುಡುಗನನ್ನು ಗದರಿದ. ಆಗ ಹುಡುಗ ನೀವು ಬ್ರಹ್ಮ ಅಲ್ಲವೆಂದು ಹೇಳಿದವರು ಯಾರು ಎಂದು ಹುಡುಗ ಉತ್ತರಿಸಿದ.

ತಾನು ಸ್ವತಃ ಬ್ರಹ್ಮ ಸ್ವರೂಪಿಯಾಗಿದ್ದರೂ ಅದನ್ನು ತಿಳಿಯದೆ ಅಹಂ ಬ್ರಹ್ಮಾಸ್ಮಿ ಎಂದು ಪಠಿಸುವ ಯೋಗಿಗಳು ಬಹಳಷ್ಟಿದ್ದಾರೆ. ಅದು ತಾನೆ ಎಂದು ಗೊತ್ತಾಗುವವರೆಗೂ ಪಠಿಸುವಾತನಿಗೆ ದುರ್ಲಭ.

**1889**

**ತಾ ಜಿತೇಂದ್ರಿಯನಾಗಿ ಹಲಕೆಲವು ತಪಸ್ಸಿನಾಸೆ ತನಗೇಕಯ್ಯಾ ?**
**ತಾ ಅನ್ನ ರಜತ ತಾಮ್ರ ಚಿನ್ನದಾಸೆ ತನಗೇಕಯ್ಯಾ ?**
**ತಾ ಜೀವನ್ಮುಕ್ತನಾಗಿ ಭವದ ನಿಬಿಡದಾಸೆ ತನಗೇಕಯ್ಯಾ ?**

**ತಾ ಕಪಿಲಸಿದ್ಧಮಲ್ಲಿಕಾರ್ಜುನನಾಗಿ,**

**ಮೋಲೋಕದ ಸುದ್ದಿಯಾಸೆ ತನಗೇಕಯ್ಯಾ , ಕೇದಾರಯ್ಯಾ ?**

ತನುವಿನಲ್ಲಿರುವ ಇಂದ್ರಿಯಗಳನ್ನು ನಷ್ಟ ಮಾಡಿಕೊಂಡು ಜಿತೇಂದ್ರಿಯನಾದ ಬಳಿಕ ಪುನಃ ಜಪ ತಪಗಳನ್ನು ಮಾಡುವ ಆಸೆ ತನುವಿನಲ್ಲಿ ಹುಟ್ಟುವುದಿಲ್ಲ. ಬೆಳ್ಳಿ, ತಾಮ್ರ , ಚಿನ್ನದ ಆಸೆ ಕೂಡ ಹುಟ್ಟುವುದಿಲ್ಲ. ಜೀವನ್ಮುಕ್ತನಾದ ಬಳಿಕ ಜನನ ಮರಣಗಳ ದುಃಖವೂ ತನಗಿಲ್ಲ.

ಮೂರು ಲೋಕದ ಸುದ್ದಿಯ ಆಸೆಯೂ ತನಗೆ ಇರುವುದಿಲ್ಲ. ಏಕೆಂದರೆ ಕಾಯದಲ್ಲಿ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನನೆ ತಾನಾದ ಬಳಿಕ.

**1890**

**ಲಿಂಗದ ಅಂಗವದು ಅಳವಡದಿರೆ.**

**ಸಂಗವ ಮಾಡುವ ಪುರಾತರ, ಮನವೆ.**

**ಕಂಗಳವರಿಯದಿರೆ ತಿಂಗಳಧರನ ಪೂಜಿಸು ಮನವೆ.**

**ಲಿಂಗಾಂಗ ಸಮರಸವಾಗದಿರೆ.**

**ಗಂಗಾದರ ಕಪಿಲಸಿದ್ಧಮಲ್ಲಿಕಾರ್ಜುನ ಎನ್ನು ಮನವೆ.**

ಎಲೆ ಮನವೆ ನಿನ್ನ ಅಂಗದಲ್ಲಿ ಸಂಗಮವಾದ ಲಿಂಗಯ್ಯನು ನಿನಗೆ ದರುಶನ ನೀಡದಿದ್ದರೆ ನೀನು ಪುರಾತರ ಸಂಗವನ್ನು ಮಾಡಲೇಬೇಕು.

ಎಲೆ ಮನವೆ ನಿನ್ನ ಕಂಗಳ ದೃಶ್ಯದಲ್ಲಿ ಹಾದರದ ಆಸಕ್ತಿ ಹುಟ್ಟಿದರೆ ಮಹಾಜ್ಞಾನ ಪೂರ್ಣ ಚಂದಿರನನ್ನು ಪೂಜಿಸು. ಎಲೆ ಮನವೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನ ದರುಶನ ಮಾಡಿಕೊಂಡರೂ ಅಂಗ ಲಿಂಗ ಸಮರಸವಾಗಿ ಬೆರೆಯದಿದ್ದರೆ ಗಂಗಾಧರ ಕಪಿಲಸಿದ್ಧಮಲ್ಲಿಕಾರ್ಜು ಎಂದು ನಿತ್ಯ ನಿತ್ಯ ಜಪಿಸು ಮನವೆ.

**1891**

**ಹುಣಚಿಯ ಮರದಲ್ಲೊಂದು ಹಣಚಿಯ ಬೆರಳಿಟ್ಟು ಹೋದಲ್ಲಿ,**

**ಆ ಹುಣಚಿಯ ಮರ ಹಣಚಿಯ ಮರವಾಗಿ ತಾ ಕಣಚಿ ಹೋದುದ ಕಂಡೆ.**

**ಈ ಹುಣಚಿಯ ಹಣಚಿಯ ಹವಣವ ತಿಳಿದು ಅರಿಯಬಲ್ಲಡೆ,**

**ಹಣೆಯ ಕಣ್ಣಿನ ಶರಣನೆಂಬೆ ನೋಡಾ,**

**ತ್ರಿನಯನ ಕಪಿಲಸಿದ್ಧಮಲ್ಲಿಕಾರ್ಜುನಾ.**

ಹುಣಚಿಯ ಮರದಲ್ಲೊಂದು ಹಣಚಿಯ ಬೆರಳಿಟ್ಟು ಹೋದಲ್ಲಿ ಆ ಹುಣಚಿಯ ಮರ ಹಣಚಿಯ ಮರವಾಗಿ ತಾ ಕಣಚಿ ಹೋದುದ ಕಂಡೆ. ಇದೊಂದು ಅದ್ಭುತವಾದ ಸೂತ್ರ . ಅಜ್ಞಾನ ಕಾಯ ಜ್ಞಾನ ಕಾಯದಲ್ಲಿ ಸಂಗಮವಾಗಿ ತಾನು ಆ ಜ್ಞಾನ ಕಾಯವೇ ಆಗುವ ಬಗೆಯನ್ನು ಸಿದ್ಧರಾಮಶಿವಯೋಗಿಗಳು ಬೆಡಗಿನ ಮೂಲಕ ಹೇಳಿದ್ದಾರೆ. ಕಾಯ ಪರಕಾಯ ಪ್ರವೇಶವಾಗುವುದು. ಇದರ ಸೂತ್ರ ಅರಿಯಬಲ್ಲವನನ್ನು ಹಣೆಗಣ್ಣಿನ ಶರಣನೆಂಬೆ ಎಂದಿದ್ದಾರೆ. ಈತ ಸ್ವತಃ ಮೂರು ಕಣ್ಣುಳ್ಳ ಮುಕ್ಕಣ್ಣನೇ ತಾನಾಗುವನು.

ಎಲ್ಲರಿಗೂ ಮೂರು ಕಣ್ಣುಗಳಿವೆ. ಒಂದು ಸ್ಥೂಲ ಕಣ್ಣು ಆ ಕಣ್ಣಿನಲ್ಲಿಯ ಅಜ್ಞಾನ ದೃಶ್ಯ ಮನಸ್ಸಿನದ್ದಾದರೆ ಮತ್ತೊಂದು ಜ್ಞಾನ ದೃಶ್ಯ ಮುಕ್ಕಣ್ಣನದು. ಕಣ್ಣು ಎರಡಾದರೂ ಕಾಯಕ್ಕೆ ದೃಶ್ಯ ಒಂದೇ ಕಾಣುವುದು. ಹೀಗಾಗಿ ಅರಿವಿನ ದೃಶ್ಯವೊಂದು ಮತ್ತೊಂದು ಅಜ್ಞಾನದ ದೃಶ್ಯ . ಹೀಗೆ ಕಣ್ಣುಗಳು ಮೂರು. ಅಜ್ಞಾನ ದೃಶ್ಯಕ್ಕೆ ಅರಿವಿನ ದೃಶ್ಯವೊಂದಿದೆ ಎಂದು ಗೊತ್ತಾದರೆ ತನಗೆ ಮೂರು ಕಣ್ಣಿವೆ ಎಂದು ಗೊತ್ತಾಗುತ್ತದೆ. ಅಜ್ಞಾನ ದೃಶ್ಯ ಅರಿವಿನ ದೃಶ್ಯದಲ್ಲಿ ಲೀನವಾದಾಗ ಈ ಅರಿವಿನ ಕಣ್ಣು ಹಣೆಗಣ್ಣಾಗಿ ಮಾರ್ಪಡುತ್ತದೆ.

**1892**

**ಕಾದುವರೆ ಕೈಯರಡುಂಟೆ ? ಬೇಡುವಡೆ ಬಾರಿ ಹರಿಯುಂಟೆ ?**
**ಕಾದಬಾರದು, ಬೇಡಬಾರದು.**
**ಕೊಡುವ ಕಾಲಕ್ಕೆ ಕೂಡಲಿಡಬಾರದು ಕಾಣಾ,**
**ಗುರುಚೆನ್ನಬಸವಣ್ಣನಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನಾ.**

ಬೇಡಿದರೆ ಎನ್ನ ಒಡೆಯನ ಬೇಡುವೆ ಎಂದು ಬಸವಣ್ಣನವರು ಲೋಕಕ್ಕೆ ಅದ್ಭುತವಾದ ಸೂತ್ರವನ್ನು ನೀಡಿದ್ದಾರೆ.

ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ಹಸಿವಿಗಾಗಿ ಮತ್ತೊಂದು ಕಾಯವನ್ನು ಬೇಡುತ್ತದೆ. ಬೇಡಿ ಪಡೆಯುವ ಕಾಯ ಒಂದಾದರೆ ಯುದ್ಧ ಮಾಡಿ ಪಡೆಯುವ ಕಾಯ ಮತ್ತೊಂದು. ಇವೆರಡೂ ಕಾಯಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಒಂದು ಕಾದು ಪಡೆಯುತ್ತದೆ ಮತ್ತೊಂದು ಬೇಡಿ ಪಡೆಯುತ್ತದೆ. ಕಾಯವನ್ನು ಆವರಿಸಿದ ಮನ ಒಂದು ಕಾಯ, ಇದು ಕಾಯದೊಂದಿಗೆ ಬೇಡುವ ಕೆಲಸವನ್ನು ಮಾಡುತ್ತದೆ. ಕಾದುವ ಕೆಲಸವನ್ನೂ ಮಾಡುತ್ತದೆ.

ಕಾಯದೊಳಗೆ ಮತ್ತೊಂದು ಕಾಯ ಸಂಗಮವಾಗಿದೆ. ಇದು ಕಾಯದ ಒಡೆಯ ಕಪಿಲಸಿದ್ಧಮಲ್ಲಿಕಾರ್ಜುನನ ಕಾಯ. ಈ ಕಾಯ ಬೇಡುವುದಿಲ್ಲ ಕಾದುವುದೂ ಇಲ್ಲ.

ಒಡಲನ್ನು ಆವರಿಸಿದ ಮನ ಒಡಲಿನೊಂದಿಗೆ ಒಡಲಲ್ಲಿಯೇ ಸಂಗಮವಾದ ಒಡಲೊಡೆಯನನ್ನು ಬೇಡುವ ಶಕ್ತಿ ಬರಬೇಕು, ಆಗ ಒಡಲೊಡೆಯ ಬೇಡಿದ್ದನ್ನು ಕೊಡುವನು.

**1893**

**ವ್ಯಾಕರಣವನೋದಿದಲ್ಲಿ ಶಬ್ದ ಶುದ್ಧಿಯಲ್ಲದೆ,**
**ಮನ ಶುದ್ಧವಾಗಿ ಜ್ಞಾನಶುದ್ಧಿಯಾಗದು.**
**ಛಂದಸ್ಸು ಸಾಧಿಸಿದಲ್ಲಿ ಕವಿತಾ ಶುದ್ಧಿಯಲ್ಲದೆ,**
**ಕವಿತೆಯ ಸಾಧಿಸಿ, ವ್ಯಾಸನಂತೆ ಚಿರಂಜೀವಿಯಾಗನು.**
**ಅಷ್ಟಾದಶಪುರಾಣವ ಸಾಧಿಸಿದಲ್ಲಿ ವಾಕ್‌ಶುದ್ಧಿಯಲ್ಲದೆ,**
**ಕಪಿಲಸಿದ್ಧಮಲ್ಲಿಕಾರ್ಜುನ ಮಹಾದೇವಾ,**
**ದೇಹ ಸ್ವಭಾವ ಶುದ್ಧಿಯಾಗದು ನೋಡಾ, ಮಡಿವಾಳ ಮಾಚಯ್ಯಾ .**

ವ್ಯಾಕರಣವನೋದಿದಲ್ಲಿ ಶಬ್ದ ಶುದ್ಧಿಯಾಗುವುದು ಮನಶುದ್ಧಿಯಾಗದು. ಛಂದಸ್ಸು ಸಾಧಿ

ಸಿದಲ್ಲಿ ಕವಿತಾ ಶುದ್ಧಿಯಾಗುವುದು ವಾಸನಂತೆ ಚಿರಂಜೀವಿಯಾಗನು. ಹದಿನೆಂಟು ಪುರಾಣವ ಸಾಧಿಸಿದಲ್ಲಿ ವಾಕ್‌ಶುದ್ಧಿಯಲ್ಲದೆ ಕಪಿಲಸಿದ್ಧಮಲ್ಲಿಕಾರ್ಜುನನು ತಾನೆ ಆಗನು ಎಂದು ಸಿದ್ಧರಾಮ ಶಿವಯೋಗಿಗಳು ಮಡಿವಾಳ ಮಾಚಯ್ಯ ಶರಣರಿಗೆ ಹೇಳಿದ್ದಾರೆ.

**1894**

**ರೇಖೆ ರೇಖೆ ಕೂಡಿದಲ್ಲಿ ಅಕ್ಷರವಾದುವು.**
**ಅಕ್ಷರಾಕ್ಷರ ಕೂಡಿದಲ್ಲಿ ಶಬ್ದವಾಯಿತ್ತು .**
**ಶಬ್ದ ಶಬ್ದ ಕೂಡಿದಲ್ಲಿ ಗ್ರಂಥಾಲಯದಲ್ಲಿಲ್ಲ,**
**ಅಕ್ಷರದಲ್ಲಿಲ್ಲ, ಶಬ್ದಲ್ಲಿಲ್ಲ, ಗ್ರಂಥಾನ್ವಯದಲ್ಲಿಲ್ಲ.**
**ಏನೆಂಬುದಿಲ್ಲ, ಮೊದಲೆ ಇಲ್ಲ.**
**ಇಲ್ಲೆಂಬುವ ಅಹುದೆಂಬುವ ಉಭಯ ಶಬ್ದಕ್ಕೆ ಲೋಪವಿಲ್ಲ.**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನ ಮಹಾಮಹಿಮನು.**

ರೇಖೆ ರೇಖೆ ಕೂಡಿದಲ್ಲಿ ಅಕ್ಷರವಾಯಿತ್ತು . ಅಕ್ಷರಾಕ್ಷರ ಕೂಡಿದಲ್ಲಿ ಶಬ್ದವಾಯಿತ್ತು . ಶಬ್ದ ಶಬ್ದ ಕೂಡಿದಲ್ಲಿ ಗ್ರಂತವಾಯಿತ್ತು . ಕಪಿಲಸಿದ್ಧಮಲ್ಲಿಕಾರ್ಜುನ ಅಕ್ಷರದಲ್ಲಿಲ್ಲ, ಶಬ್ದದಲ್ಲಿಲ್ಲ, ಗ್ರಂಥದಲ್ಲಿಲ್ಲ ಏಕೆಂದರೆ ಈತ ಅಕ್ಷರೋತ್ತಮ. ಕಪಿಲಸಿದ್ಧಮಲ್ಲಿಕಾರ್ಜುನನು ಮಹಾಮಹಿಮನು ಕಾಯದಲ್ಲಿದ್ದವನನ್ನು ಕಾಯದಿಂದಲೇ ತಿಳಿಯಬೇಕು.

**1895**

**ದೀಪದಂತಿಹ ಜನ್ಮ, ಬಂದುದು ತಿಳಿಯಬಾರದು, ಹೋಹುದು ತಿಳಿಯಬಾರದು.**
**ಮೇಘದಂತಿಹ ಜನ್ಮ, ಬಂದುದು ತಿಳಿಯಬಾರದು, ಹೋಹುದು ತಿಳಿಯಬಾರದು.**
**ಶಿಶುವಿನಂತಹ ಜನ್ಮ, ಬದುಕುವುದು ತಿಳಿಯದು, ಬದುಕಿ ಬಾಳೀತೆಂಬುದು**
**ತಿಳಿಯಬಾರದು ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಈ ವಚನ ಪ್ರಕ್ಷಿಪ್ತವಾಗಿರುವುದರಿಂದ ಅನುಭಾವ ಮಾಡಿರುವುದಿಲ್ಲ.

**1896**

**ಸ್ವಪ್ನದಲ್ಲಿ ಪಾಶಬದ್ಧತ್ವಕ್ಕೆ ಸ್ವಪ್ನದಲ್ಲಿ ಬೇರ್ಪಡಿಸು ಕಂಡಾ ಗುರುವೆ,**
**ಕಪಿಲಸಿದ್ಧಮಲ್ಲಿಕಾರ್ಜುನ ಗುರುವೆ.**

ಈ ವಚನ ಪ್ರಕ್ಷಿಪ್ತವಾಗಿರುವುದರಿಂದ ಅನುಭಾವ ಮಾಡಿರುದಿಲ್ಲ.

**1897**

**ದಿನ ಒಂದರಲ್ಲಿ ವಾರ ಏಳು ನೋಡಾ.**
**ಆ ಏಳು ವಾರಗಳೆಂಬುದು ಕಲ್ಪಿತವಲ್ಲದೆ.**

**ದೃಷ್ಟಿಯನ್ನಿಟ್ಟು ನೋಡಬಾರದು ನೋಡಾ,**
**ದೇವರೆಂಬುದೊಂದು ನೋಡಾ.**
**ಆ ದೇವರೆಂಬುದೊಂದರಲ್ಲಿ,**
**ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ವಿರಾಟ್ಪುರುಷರೆಂಬುವುದು ನೋಡಯ್ಯಾ**
**ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ .**

ಸ್ಥೂಲ ಕಾಯ, ಸೂಕ್ಷ್ಮ ಕಾಯ, ಕಾರಣ ಕಾಯ. ಸ್ಥೂಲ ಕಾಯದಲ್ಲಿ ವಿಷ್ಣು ಸಂಗಮವಾಗಿದ್ದಾನೆ, ಸೂಕ್ಷ್ಮ ಕಾಯದಲ್ಲಿ ಬ್ರಹ್ಮ ಸಂಗಮವಾಗಿದ್ದಾನೆ, ಕಾರಣ ಕಾಯದಲ್ಲಿ ಮಹೇಶ್ವರನು ಸಂಗಮವಾಗಿದ್ದಾನೆ. ಅರಿತರಿತು ನೋಡಲು ಹೋದರೆ ಕಾಯವೆಂಬುದು ಕಪಿಲಸಿದ್ಧಮಲ್ಲಿಕಾರ್ಜುನಯ್ಯನು ಇರುವ ಕೈಲಾಸ.

**1898**

**ಚೌಕೋಣೆಯ ಮಂಟಪದಲ್ಲಿ ಪಂಚಕೋಣೆಯ ದೇವ,**
**ತ್ರಿಕೋಣೆಯಲ್ಲಿ ನಿಂತು ಸುಳಿಯುತ್ತಿರ್ಪ.**
**ಆ ತ್ರಿಕೋಣೆಗಳಿದ್ದಂತಿರ್ಪವೆಂಬುದ ಅರಿಯಬಾರದು.**
**ಹೊತ್ತಿಗೊಮ್ಮೆ ಪರಿಪರಿಯಾಗಿ ಕೇಡುಗೊಂಡವು ನೋಡಾ.**
**ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ.**

ಬಯಲು ಎನ್ನುವ ಭೂತದಿಂದ ಭೂಮಿ, ಜಲ, ಅಗ್ನಿ , ವಾಯು ಎಂಬ ನಾಲ್ಕು ಭೂತಗಳು ಸೃಷ್ಟಿಯಾದವು. ಬಯಲ ಗರ್ಭದಲ್ಲಿಯೇ ಈ ನಾಲ್ಕು ಭೂತಗಳು ಸುಳಿಯುತ್ತಿವೆ. ಅಗ್ನಿ ಹೊತ್ತಿ ಉರಿದರೂ ಬಯಲು ಸುಡುವುದಿಲ್ಲ. ಜಲ ಭೋರ್ಗರೆದು ಸುರಿದರೂ ಬಯಲು ತೋಯುವುದಿಲ್ಲ. ಗಾಳಿ ಜೋರಾಗಿ ಬೀಸಿದರೂ ಬಯಲಿಗೆ ಏನೂ ಆಗುವುದಿಲ್ಲ. ಭೂಮಿ ಬಿರಿದು ತನ್ನ ಲಾವಾರಸ ಚಿಮ್ಮಿದರೂ ಗರ್ಭಧರಿಸಿದ ಹೆಣ್ಣುಮಗಳ ಗರ್ಭದಲ್ಲಿದ್ದ ಮಕ್ಕಳು ಒದ್ದು ತಾಯಿಗೆ ತೊಂದರೆ ಕೊಟ್ಟಾಗ ಶಿಶುಗಳನ್ನು ಹೊತ್ತ ತಾಯಿ ಅವುಗಳ ತುಂಟಾದಿಂದ ಪರಮಾನದಿಂದ ಹಸನ್ಮುಖಿಯಾಗುತ್ತಾಳೆ. ಹಾಗೆಯೇ ಬಯಲ ಗರ್ಭದಲ್ಲಿದ್ದ ನಾಲ್ಕು ಭೂತಗಳ ತುಂಟಾಟದಿಂದ ಬಯಲಿಗೆ ಆನಂದವಾಗುತ್ತದೆ.

ಬಯಲು ಜಲಬಿಂದುವಾಗಿ ಗರ್ಭ ಹೊಕ್ಕು ತಾನು ಸೃಷ್ಟಿಮಾಡಿದ ಬ್ರಹ್ಮಾಂಡವನ್ನು ನೋಡಲು ಕಾಯವಾಗಿ ಜನ್ಮ ತಳೆದಿದೆ. ಸ್ಥೂಲ, ಸೂಕ್ಷ್ಮ, ಕಾರಣ ಎಂಬ ಮೂರು ಕೋಣೆಗಳು ನಿರ್ಮಾಣವಾಗಿವೆ. ಇದರಲ್ಲಿಯೇ ಸಾತ್ವಿಕ, ರಾಜಸ, ತಾಮಸ ಗುಣಗಳು ಪರಿಪರಿಯಾಗಿ ಕೇಡುಗೊಂಡು ಕಪಿಲಸಿದ್ಧಮಲ್ಲಿಕಾರ್ಜುನ ದೇವರು ತ್ರಿಗುಣಾತೀತನಾಗಿ ಬಯಲ ಬ್ರಹ್ಮಾಂಡವನ್ನು ಪರಿಪರಿಯಿಂದ ನೋಡುತ್ತಿದ್ದಾನೆ.

**1899**

**ತಾನು ಮಾನವಂತನಾದಡೆ,**
**ಅಹಂಕಾರದ ನಾಶದಲ್ಲಿ ಮರೆಯ ಮಾಡಿಕೊಂಡಿರ್ಪದು.**
**ಬಹುಕರ ಲೇಸಯ್ಯಾ , ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ.**

ಈ ವಚನ ಪ್ರಕ್ಷಿಪ್ತವಾಗಿರುವುದರಿಂದ ಅನುಭಾವ ಮಾಡಿರುದಿಲ್ಲ.

**1900**

**ಘಟವೆಂಬುದು ದಿಟವಲ್ಲ ನೋಡಾ, ಕೇದಾರಯ್ಯಾ.**
**ಘಟವೆಂಬುದು ದಿಟವಲ್ಲ ನೋಡಾ, ಕಲ್ಲಯ್ಯಾ.**
**ಮಾಡಿದ ಘಟ, ನೆಯ್ದ ವಸ್ತ್ರಪಟ ಕಡೆ ಕಾಣಬಲ್ಲಡೆ,**
**ಲಯವೆಂಬುದೆಲ್ಲಿಹುದು ಹೇಳಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನನ ಸಾನಿಧ್ಯದಲ್ಲಿ ?**

ಕಾಯ ದಿಟವಲ್ಲ. ಕಾಯವನ್ನು ಆವರಿಸಿದ ಮನ ಕಾಯದೊಳಗೆ ಸಂಗಮವಾದ ಕಪಿಲಸಿದ್ಧಮಲ್ಲಿಕಾರ್ಜುನ ದೇವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಕಾಯದಲ್ಲಿ ಜನ್ಮ ತಳೆದಿದೆ. ಅರಿವಿನ ಮಲ್ಲಯ್ಯ ಮನ ತನಗೆ ಶರಣು ಹೋಗಿ ತನ್ನ ಮೂಲಕ ತಾನೇ ಸೃಷ್ಟಿ ಮಾಡಿದ ಬ್ರಹ್ಮಾಂಡವನ್ನು ನೋಡುವ ಕಾರಣಕ್ಕಾಗಿ ಮನಕ್ಕೆ ಜನ್ಮ ನೀಡಿ, ಕಾಯಕ್ಕೆ ಜನ್ಮ ನೀಡಿ ಕಾಯದಲ್ಲಿಯೇ ತಾನಿದ್ದಾನೆ. ಹೀಗಾಗಿ ಕಾಯ ಮನಕ್ಕೆ ಮತ್ತು ಅರಿವಿನ ಮಲ್ಲಯ್ಯನಿಗೆ ಉಪಕರಣವಾಗಿದೆ.

**1901**

**ಜೀವಾತ್ಮವೆಂಬುದು ಪಂಚಭೂತಮಯ,**
**ದೇಹವನಾಶ್ರಯಿಸಿತ್ತು ನೋಡಾ.**
**ಪರಮಾತ್ಮವೆಂಬುದು ಅಜಾಂಡ ನೂರಾರಳೊಗುಮಾಡಿ,**
**'ಅತ್ಯತಿಷ್ಠದ್ದಶಾಂಗುಲಂ' ಎನಿಸಿತ್ತು ನೋಡಾ.**
**ಅಂತರಾತ್ಮವೆಂಬುದು ಜೀವಾತ್ಮರನಳಿದು,**
**ಪರಮಾತ್ಮನಲ್ಲಿ ಕೂಡುವ ಕೂಟವೆನಿಸಿತ್ತು.**
**ಆ ಆತ್ಮತ್ರಯ ಕಡೆಗೆ ಕಪಿಲಿಸಿದ್ಧಮಲ್ಲಿಕಾರ್ಜುನನ ರೂಪು,**
**ಪ್ರಸಿದ್ಧ ನೋಡಾ ಕೇದಾರಯ್ಯಾ.**

ಪಂಚಭೂತಮಯ ದೇಹವನ್ನು ಆಶ್ರಯಿಸಿ ಜೀವಾತ್ಮವೆಂದು ಕರೆಯಿಸಿಕೊಂಡಿದೆ. ಪರಮಾತ್ಮನ ಅಂಶವೇ ಜೀವಾತ್ಮ. ಅಂತರಾತ್ಮವೆಂಬುದು ಕೂಡಾ ಪರಮಾತ್ಮವೇ ಆಗಿದೆ.

ಸ್ಥೂಲ ಸೂಕ್ಷ್ಮ ಕಾರಣಗಳಲ್ಲಿಯೂ ಪರಮಾತ್ಮ ಸಂಗಮವಾಗಿದ್ದಾನೆ. ಸ್ಥೂಲ, ಸೂಕ್ಷ್ಮ ತನುಗಳೆರಡು ತಮ್ಮಲ್ಲಿಯೇ ಸಂಗಮವಾದ ಪರಮಾತ್ಮನನ್ನು ಕಂಡುಕೊಳ್ಳಬೇಕಾಗಿದೆ.

**1902**

**''ಶಿವಾ ಭವಾನಿ ರುದ್ರಾಣೀ ಶಿವೊ ಮಹೇಶ್ವರಃ ಶಂಭುಃ'' ಎಂಬಲ್ಲಿ,**
**ನಮ್ಮಮ್ಮನ ಶಿವನ ನಾಮ ಒಂದೆ ನೋಡಾ.**
**ವಿವೇಕದೃಷ್ಟಿಯಿಂದ ನೋಡಿದಡೆ,**
**ಅದು ಶಿವನ ಶಕ್ತಿಮಂತ್ರವಾಗಿ ಅರಿಯ ಬಂದಿತ್ತು ನೋಡಾ.**

**‘ಓಂ ನಮಃ ಶಿವಾಯ, ನಮಃ ಶಿವಾಯೈ’**
**ಎಂಬುಭಯ ಮಂತ್ರ ಒಂದೆ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ.**

ಒಂದಂಗದಲ್ಲಿ ಶಿವನು ಇದ್ದಾನೆ ಶಿವೆಯು ಇದ್ದಾಳೆ. ಹೀಗಾಗಿ ಅಂಗವನ್ನು ಅರ್ಧನಾರೀಶ್ವರ ಎಂದು ಕರೆದಿದ್ದಾರೆ. ಸಿದ್ಧರಾಮಶಿವಯೋಗಿಗಳು ಈ ವಚನದಲ್ಲಿ ಮನ ಟಿಸಿಲೊಡೆದು ಮಗನಾಗಿ ಹೊರಗೆ ಬಂದು ನಮ್ಮಮ್ಮನ ಮತ್ತು ನಮ್ಮಪ್ಪನಾದ ಶಿವನಾಮ ಒಂದೇ ನೋಡಾ ವಿವೇಕ ದೃಷ್ಟಿಯಿಂದ ನೋಡಿದಡೆ ಎಂದಿದ್ದಾರೆ.

ಸರ್ವ ಅಂಗಗಳಲ್ಲಿಯೂ ತನ್ನಂಗವನ್ನು ಪರಿಶೀಲನೆ ಮಾಡುವ ವಿವೇಕ ದೃಷ್ಟಿಯೊಂದು ಇದೆ. ಪರಿಶೀಲನೆ ಮಾಡಿ ನೋಡಿದಾಗ ಓಂ ನಮಃ ಶಿವಾಯ ಎಂಬುದು ನಮ್ಮಪ್ಪ ಶಿವನ ಮಂತ್ರವಾದರೆ ನಮಃ ಶಿವಾಯ ಎಂಬುದು ನಮ್ಮಮ್ಮ ಶಿವೆಯ ಮಂತ್ರ. ಅರಿತರಿತು ಅರಿವಿನಿಂದ ನೋಡಿದರೆ ಉಭಯ ಮಂತ್ರಗಳು ಒಂದೆ ಆಗಿ ಕೇಳುತ್ತವೆ. ತಾನು ಆ ಮಂತ್ರದಲ್ಲಿ ಸಂಗಮವಾಗಿ ಆ ಮಂತ್ರವೆ ತಾನಾಗುವ ಶಕ್ತಿಯೂ ಇದೆ.

**1903**

**ಪಂಚಾಕ್ಷರವೆಂಬುದು ಶಿವ ಪಂಚಾವಸ್ಥೆ ನೋಡಾ.**
**ಪಂಚಾಕ್ಷರವೆಂಬುದು ಪಂಚಾಚಾರದಫಲದಾಯಕ ನೋಡಾ.**
**ಪಂಚಾಚಾರವೆಂಬುದು ಪಂಚಮುಖ ಪಂಚಮುಖಿ ಮಹಾದೇವಿ.**
**ಕಪಿಲಸಿದ್ಧಮಲ್ಲಿಕಾರ್ಜುನನ ಪ್ರಸನ್ನತೆ ನೋಡಾ,**
**ಎಂದು ತಿಳಿದಿಹ ಚೆನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂದೆ ನೋಡಾ.**
**ಮಡಿವಾಳ ಮಾಚಯ್ಯಾ .**

ಪಂಚಾಕ್ಷರವೆಂಬುದು ಶಿವನ ಪಂಚಾವಸ್ಥೆ. ಪಂಚಮುಖೀ ಮಹಾದೇವಿಯ ಪ್ರಸನ್ನತೆಯೂ ಆಗಿದೆ. ಕಾಯದ ಪಂಚಾವಸ್ಥೆಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಈ ಐದೂ ಭಾಗಗಳಲ್ಲಿ ಮಹಾದೇವ ಮಹಾದೇವಿಯರಿಬ್ಬರೂ ಸಂಗಮವಾಗಿದ್ದಾರೆ.

ಅವರಿಬ್ಬರೂ ಸಂಗಮವಾದ ಕಣ್ಣು, ಕಿವಿ, ಮೂಗು, ನಾಲಿಗೆ ಹಾಗೂ ಚರ್ಮವೇ ಧನ್ಯ .

ಈ ಪಂಚಾಚಾರದ ಫಲ ಕಾಯಕ್ಕೆ ಲಭ್ಯವಾಗಿ ಕಾಯ ಪರಿಪೂರ್ಣ ಕೈಲಾಸವೆಂದು ಕರೆಯಿಸಿಕೊಂಡಿದೆ. ಕಾಯದ ಈ ಸೂತ್ರವನ್ನು ನನಗೆ ತಿಳುಹಿದ ಚೆನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂದು ತಿಳಿಸುತ್ತಾ ಮಾಡಿವಾಳ ಮಾಚಯ್ಯನವರಿಗೆ ಸಿದ್ಧರಾಮಶಿವಯೋಗಿಗಳು ಈ ಮಹಾಸೂತ್ರವನ್ನು ಹೇಳಿದ್ದಾರೆ.

**1904**

**ಕಾಯ್ದ ಕರ್ಬುನ ನಿನನೊಳಕೊಂಬಂತೆ,**
**ಬಿದ್ದ ಬಿಂದುವ ಭೂಮಿಯೊಳಕೊಂಬಂತೆ,**
**ನವನೀತ ಘೃತವನೊಳಕೊಂಬಂತೆ, ವೀಳ್ಯ ರಸವನೊಳಕೊಂಬಂತೆ,**
**ಎನ್ನ ಕಾಯವ ತನ್ನ ಕಾಯದಲ್ಲಿ ಒಳಕೊಂಬ ನೋಡಾ,**

**ಕಪಿಲಸಿದ್ಧ ಮಲ್ಲಿಕಾರ್ಜುನ ಮಹಾಶರಣನ.**

ಕಾಯಗಳು ಮೂರು. ನಾನು ಎನ್ನುವ ಮನದ ಕಾಯ ಒಂದು, ಜ್ಞಾನ ಕಾಯವೆಂಬ ಕಪಿಲಸಿದ್ಧ ಮಲ್ಲಿಕಾರ್ಜುನನ ಕಾಯ ಒಂದು, ಇವೆರಡನ್ನೂ ತನ್ನ ಗರ್ಭದಲ್ಲಿ ಸಂಗಮ ಮಾಡಿಕೊಂಡ ಸ್ಥೂಲ ಕಾಯ ಒಂದು. ನೋಡಲು ಒಂದೆ ಕಾಯ ಕಂಡರೆ, ಆ ಕಾಯದಲ್ಲಿ ಇನ್ನೆರಡು ಕಾಯಗಳಿವೆ ಅವು ಇತರರಿಗೆ ಕಾಣುವುದಿಲ್ಲ. ಜ್ಞಾನ ಕ್ರಿಯೆಯಲ್ಲಿ ತೊಡಗಿದವರ ಅನುಭವಕ್ಕೆ ಬರುತ್ತದೆ.

ನನ್ನ ಮನೋಕಾಯವು, ಮಹಾಜ್ಞಾನ ಜ್ಞಾನ ಕಾಯಕ್ಕೆ ಶರಣು ಹೋದಾಗ ಆತ ತನ್ನ ಕಾಯದಲ್ಲಿ ಕೂಡಲೇ ನನ್ನನ್ನು ಒಳಕೊಂಬ. ಆಗ ನನ್ನ ಅಹಂಕಾರ ಸುಟ್ಟು ಬೂದಿಯಾಗಿ ಆತನ ಕಾಯವೇ ಆಗುವುದು. ಕಾದ ಕಬ್ಬಿಣ ನೀರನ್ನು ಒಳಕೊಂಬಂತೆ, ಬಿದ್ದ ಜಲಬಿಂದುಗಳನ್ನು ನೀರು ಒಳಕೊಂಬಂತೆ, ಬೆಣ್ಣೆ ತುಪ್ಪವನ್ನು ಒಳಗಿಟ್ಟುಕೊಂಡಂತೆ, ವೀಳ್ಯದ ಎಲೆ ರಸವನ್ನು ಒಳಕೊಂಡಂತೆ ಎನ್ನ ಕಾಯವನ್ನು ಕಪಿಲಸಿದ್ಧ ಮಲ್ಲಿಕಾರ್ಜುನ ತನ್ನ ಕಾಯದಲ್ಲಿ ಒಳಕೊಂಬನು.

**1905**

**ಕಾಲು ಮೇಲು ಮಾಡಿ, ಕೋಲು ಕೆಳಯಿಕೆ ಊರಿ,**
**ಕಾಲಕಾಲ ತಪಶ್ಚರ್ಯ ಮಾಡಿದಡೆ ಕಾಲಾಂತಕ ನೋಡಾ.**
**ದೇಶ ಕಾಲವಸ್ತುತ್ರಯುವನರಿದಲ್ಲಿ,**
**ಕಾಲಾರಿ ಕಾಲಕಾಲದಲ್ಲಿ ಕಾಲ್ದೊಡಕಾಗಿರುವ ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಲು ಮೇಲೆ ಮಾಡಿ ತಲೆ ಕೆಳಗೆ ಮಾಡಿ ಹಲವಾರು ಕಾಲಗಳವರೆಗೆ ತಪವ ಮಾಡಿದರೂ ಕೂಡ ಕಪಿಲಸಿದ್ಧ ಮಲ್ಲಿಕಾರ್ಜುನ ಒಲಿಯುವುದಿಲ್ಲ.

ದೇಶ, ಕಾಲ, ವಸ್ತುತ್ರಯವನ್ನು ಅರಿಯುತ್ತ ಹೋದಲ್ಲಿ ಕಾಲಾರಿ ಕಪಿಲಸಿದ್ಧ ಮಲ್ಲಿಕಾರ್ಜುನ ಕಾಲ್ದೊಡಕಾಗಿರುವನು. ಹುಡುಕುವ ಬಳ್ಳಿ ಕಾಲಿಗೆ ಸುತ್ತಿಕೊಂಡಂತೆ.

**1906**

**ವೇದವನೋದಿ ವೇದಾಧ್ಯಯನ ಮಾಡಿದಡೇನು, ಬ್ರಾಹ್ಮಣನಾಗಬಲ್ಲನೆ ?**
**ಬ್ರಹ್ಮವೇತ್ತುಗಳ ಶುಕ್ಲಶೋಣಿತದಿಂದ ಜನಿಸಿದಡೇನು, ಬ್ರಾಹ್ಮಣನಾಗಬಲ್ಲನೇ ?**
**ಯಜನಾದಿಷ್ಟ ಷಟ್ಕರ್ಮಂಗಳ ಬಿಡದೆ ಮಾಡಿದಡೇನು, ಬ್ರಾಹ್ಮಣನಾಗಬಲ್ಲನೇ ?**
**'ಬ್ರಹ್ಮ ಜಾನಾತಿ ಇತಿ ಬ್ರಾಹ್ಮಣಃ' ಎಂಬ ವೇದವಾಕ್ಯವನರಿದು**
**ಬ್ರಹ್ಮ ಭೂತನಾದಾತನೆ ಬ್ರಾಹ್ಮಣ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ವೇದ ಆಗಮ ಉನಿಷತ್ತುಗಳನ್ನು ಓದಿದರೆ ಬ್ರಹ್ಮನಾಗಲು ಸಾಧ್ಯವಿಲ್ಲ. ಬ್ರಹ್ಮವೇತ್ತುಗಳ ಉದರದಲ್ಲಿ ಜನಿಸಿದರೂ ಕೂಡ ಬ್ರಹ್ಮನಾಗಲು ಸಾಧ್ಯವಿಲ್ಲ. ಯಜನಾದಿಷ್ಟ ಷಟ್ಕರ್ಮಂಗಳ ಬಿಡದೆ ಮಾಡಿದರೂ ಕೂಡ ಬ್ರಹ್ಮನಾಗಲು ಸಾಧ್ಯವಿಲ್ಲ. ಮನದಲ್ಲಿಯೇ ಸಂಗ್ನಮವಾದ ಬ್ರಹ್ಮನನ್ನು ಮನವೆಂಬ ಭ್ರಮೆ ಅರಿಯಲು ಹೋದಾಗ ಮನವೆ ಘನಮನವಾಗುವುದು, ಬ್ರಹ್ಮನಾಗುವುದು.

ಕಾಯದಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುವನು.

ಸಕಲ ವೇದ ಆಗಮ ಉಪನಿಷತ್ತುಗಳು ಕಾಯದ ಮೂಲಕ ಜನ್ಮ ತಳೆದಿವೆ. ಹೀಗಾಗಿ ಇವು ಕಾಯದೊಳಗೆ ಸಂಗಮವಾದ ಬ್ರಹ್ಮನೆಡೆಗೆ ಬೊಟ್ಟು ಮಾಡಿ ತೋರುವವು. ತನುವಿನಲ್ಲಿ ತನ್ಮಯವಾದ ಬ್ರಹ್ಮನನ್ನು ಕಾಯವನ್ನು ಆವರಿಸಿದ ಮನದ ಮೂಲಕ ಅರಿತರಿತು ಆ ಅರಿವೆ ತಾನಾದ ಶಂಕರರು ಇಡೀ ಬ್ರಹ್ಮಾಂಡಕ್ಕೆ ಕೇಳುವಂತೆ ಅಹಂ ಬ್ರಹ್ಮಾಸ್ಮಿ ಎಂದು ಗಟ್ಟಿಯಾಗಿ ಕೂಗಿದರು.

**1907**

**ಗುಣದಿಂದ ಹಾರುವನಲ್ಲದೆ, ಅಗಣಿತ ವಿದ್ಯಾಭ್ಯಾಸದಿಂದ ಹಾರುವನಲ್ಲ.**
**ಹಾರಬೇಕು ಮಲತ್ರಯಂಗಳ ಹಾರಬೇಕು ಸೃಷ್ಟಿ-ಸ್ಥಿತಿಲಯವ,**
**ಹಾರಬೇಕು, ಸರ್ಪಹಾರ ಕಪಿಲಸಿದ್ಧ ಮಲ್ಲಿಕಾರ್ಜುನನ ಆಹಾರದಲ್ಲಿ.**

ಬ್ರಾಹ್ಮಣ ಗುಣದಿಂದ ಹಾರುವನಲ್ಲದೆ ಅಗಣಿತ ವಿದ್ಯಾಭ್ಯಾಸದಿಂದ ಹಾರುವನಲ್ಲ.

ಕಾಯ ಯಾವುದಾದರೇನು ಪವಿತ್ರವೇ ಆಗಿದೆ. ಅರಿಯದವನು ಕಾಯವನ್ನು ನೋಡಿ ಹಾರುತ್ತಾನೆ. ತನ್ನ ಕಾಯವನ್ನು ಆವರಿಸಿದ ಮಲತ್ರಯಗಳಿಗೆ, ಅರಿಷಡ್ವರ್ಗಗಳಿಗೆ, ಸಪ್ತವ್ಯಸನಗಳಿಗೆ ಹಾರಬೇಕು.

ಅಜ್ಞಾನವೆಂಬುದು ಕಾಯದಲ್ಲಿ ಹುಟ್ಟಿ ಕಾಯವನ್ನೆ ಸರ್ಪದಂತೆ ಕಚ್ಚುತ್ತದೆ. ಇಂತಹ ಅಜ್ಞಾನದ ಸರ್ಪದ ಹಲ್ಲು ಕಿತ್ತಿ ಪಳಗಿಸಿ ಕೊರಳಲ್ಲಿ ಹಾರವಾಗಿ ಧರಿಸಿಕೊಂಡವನೆ ಕಪಿಲಸಿದ್ಧ ಮಲ್ಲಿಕಾರ್ಜುನ.

**1908**

**ಶಿಷ್ಯನೆಂಬ ವನಕ್ಕೆ ವಸಂತ ನೋಡಾ ಗುರು.**
**ಶಿಷ್ಯನೆಂಬ ತಿಮಿರಕ್ಕೆ ಜ್ಯೋತಿ ನೋಡಾ ಗುರು.**
**ಶಿಷ್ಯನೆಂಬ ರಾತ್ರಿಗೆ ಸೂರ್ಯನೋಡಾ ಗುರು.**
**ಶಿಷ್ಯನೆಂಬ ನನಗೆ ಪ್ರಕೃಷ್ಟ ಪ್ರಥಮ ಚಿಂತಾಮಣಿ ಗುರು.**
**ಚೆನ್ನಬಸವ ಗುರು, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗುರುದೇವನು ಶಿಷ್ಯನೆಂಬ ಮಹಾವನಕ್ಕೆ ವಸಂತ ಋತು ಇದ್ದಂತೆ. ಶಿಷ್ಯನೆಂಬ ತಿಮಿರಕ್ಕೆ ಮಹಾಜ್ಯೋತಿ ಇದ್ದಂತೆ ಗುರು ದೇವಾ. ಶಿಷ್ಯನೆಂಬ ರಾತ್ರಿಗೆ ಮಹಾಸೂರ್ಯನಿದ್ದಂತೆ ಗುರು ದೇವ.

ಶಿಷ್ಯನೆಂಬ ನನಗೆ ಪ್ರಕೃಷ್ಟ ಪ್ರಥಮ ಚಿಂತಾಮಣಿ ಚೆನ್ನಬಸವ ಗುರು ಕಪಿಲಸಿದ್ಧ ಮಲ್ಲಿಕಾರ್ಜುನಾ ಎಂದು ಕಾಯದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನನ್ನು ಸ್ಮರಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1909**

**ಕುಲದಿಂದಧಿಕವೆಂದು ಹೋರಾಡುವ ಅಣ್ಣಗಳಿರಾ, ಕೇಳಿರಯ್ಯಾ.**
**ಬ್ರಾಹ್ಮಣನವಮಧುವಯ್ಯ, ಚಂಡಾಲನವ ಹರಳಯ್ಯ,**
**ದೂರ್ವಾಸನವ ಮಚ್ಚಿಗ, ಊರ್ವಶಿಯಾಕೆ ದೇವಾಂಗನೆ,**

**ಚಂಡಾಲನವ ಪರಾಶರ, ಕುಸಮ ಗಂಧಿಯಾಕೆ ಕಬ್ಬಿಲಗಿತ್ತಿ.**
**ಜಪತಸ್ತೆಪತೋ ಗುಣತಃ ಕಪಿಲಸಿದ್ಧ ಮಲ್ಲಿಕಾರ್ಜುನಾ ಕೇಳಾ, ಕೇದಾರಯ್ಯಾ.**

ಕಾಯದಲ್ಲಿ ಜಾತಿ ಮತ ಧರ್ಮ ಎಂಬ ಅಜ್ಞಾನ ಹುಟ್ಟಿದ್ದು ಕಾಯದ ಅಜ್ಞಾನವೆ ಸರಿ. ಯಾವ ಕಾಯವಾದರೇನು ಅದು ಕೈಲಾಸ. ಶಿವ ಶಿವೆಯರು ವಾಸ ಮಾಡಿದ ಮನೆ. ಹೀಗೆಂದು ಖಚಿತವಾಗಿ ತಿಳಿದು ಬ್ರಾಹ್ಮಣನಾದವನು ಮಧುವಯ್ಯ. ಹರಳಯ್ಯನೆಂಬ ಚಾಂಡಾಲನ ಮಗನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದ.

ದುರ್ವಾಸ ಮಚ್ಚಿಗನಾದರೆ ದೇವಾಂಗನೆ ಊರ್ವಸಿಯಾಗಿ ದೇವೇಂದ್ರನ ಸಭೆ ಸೇರಿದಳು. ಪರಾಶರ ಮುನಿ ಚಾಂಡಾಲ, ಕುಸುಮಗಂಧಿ ಕಬ್ಬಿಲಗಿತ್ತಿ. ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಯ್ಯನನ್ನು ದರುಶನ ಮಾಡಿಕೊಂಡ ಕಾಯವೆ ಅರಿವಿನ ಕಾಯ ಎಂದು ಸಿದ್ಧರಾಮ ಶಿವಯೋಗಿ ಕೇದಾರಯ್ಯ ಶರಣರಿಗೆ ಹೇಳಿದ್ದಾರೆ.

**1910**

**ಜೀವಾತ್ಮ ಜೀವನಲ್ಲ, ಜೀವಾತ್ಮ ಶಿವನಲ್ಲ,**
**ಶಿವನಂತುವನರಿಯದೆ ಹೋದವು ವೇದಗಳು,**
**ಜೀವನಂತುವನರಿಯದೆ ಹೋದರು ಮಹಾಮುನಿಗಳು.**
**ಶಿವ ಜೀವಕ್ಕೆ ಭೇದವಿಲ್ಲೆಂಬುವರ ನಾ ನೋಡಲಾರೆನು,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ವೇದಗಳು ಕಾಯದಿಂದ ಹೊರಬಂದು ಕಾಯದಲ್ಲಿ ಸಂಗಮವಾದ ಶಿವನನ್ನು ಅರಿಯದೆ ಹೋದರು. ವೇದವನ್ನು ಓದಿದ ಮಹಾಮುನಿಗಳು ಕೂಡ ಹಲವಾರು ಕಾಲಂಗಳವರೆಗೆ ಜಪವ ಮಾಡಿದರೂ ಶಿವನನ್ನು ಅರಿಯದೆ ಹೋದರು.

ಶಿವನಿಗೂ, ಕಾಯಕ್ಕೂ, ಜೀವಕ್ಕೂ ಭೇದವಿಲ್ಲ ಎಂದು ಅರಿಯುವವರು ಬೆರಳೆಣಿಕೆಯಲ್ಲಿದ್ದಾರೆ. ಇದು ಕಾಯದಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಯ್ಯನ ಲೀಲೆ. ಎಲ್ಲರೂ ಎಲ್ಲವನ್ನೂ ತಿಳಿಯುತ್ತಾರೆ. ಶಿವಜ್ಞಾನವನ್ನು ತಿಳಿಯಲು ಒಲ್ಲರು.

**1911**

**ಈ ರಚನೆಯೆಂಬುದು**
**ಇಮ್ಮಡಿ ಮುಮ್ಮಡಿಯಿಂದಲ್ಲದೆ ಒಮ್ಮಡಿಯಿಂದಾಗದು.**
**ಆದಿಯಲ್ಲಿ ಬ್ರಹ್ಮ, ಅನಾದಿಯಲ್ಲಿ ಏನೆಂಬುದಿಲ್ಲ.**
**ಇತ್ತಲದು ಮಾಯಾಶಕ್ತಿಯಿಂ ಮಾಧವನ ಉತ್ಪತ್ತಿ ,**
**ಮಾಧವನ ಉತ್ಪತ್ತಿಯಿಂ ಮೂಲೋಕ ನಿಮಿರಿತ್ತು ನೋಡಾ , ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸೃಷ್ಠಿಯ ರಚನೆ ಇಮ್ಮಡಿ ಮುಮ್ಮಡಿಯಿಂದಲ್ಲದೆ ಒಮ್ಮಡಿಯಿಂದಾಗದು. ಆದಿಯಲ್ಲಿ ಬ್ರಹ್ಮ, ಅನಾದಿಯಲ್ಲಿ ಏನೆಂಬುದಿಲ್ಲ. ಇತ್ತಲದು ಮಾಯಾ ಶಕ್ತಿಯಿಂದ ಮಾಧವನ ಉತ್ಪತ್ತಿ.

ಮಾಧವನ ಉತ್ಪತ್ತಿಯಿಂದ ಮೂಲೋಕ ಸೃಷ್ಟಿಯಾಗಿತ್ತು ಕಪಿಲಸಿದ್ಧ ಮಲ್ಲಿಕಾರ್ಜುನ.

**1912**

**ಕಾಜಿನ ಮಣಿ ಪಚ್ಚದಂದವಿದೆ, ಕಾಜಿನ ಮಣಿಯೆ ಪ್ರಸಿದ್ಧ.**
**ಲೋಕದ ಮಾನವ ಯೋಗಿಯಂತಿರೆ.**
**ಲೋಕದ ಮಾನವನೆ ಪ್ರಸಿದ್ಧ . ಬಾಹ್ಯವರ್ಣ ಜನಪ್ರಸಿದ್ಧವಲ್ಲದೆ,**
**ಕಪಿಲಸಿದ್ಧ ಮಲ್ಲಿಕಾರ್ಜುನನ ಚಿತ್ತಕ್ಕೆ ಪ್ರಸಿದ್ಧವಲ್ಲ.**

ಕಾಜಿನ ಮಣಿ ಲೋಕಕ್ಕೆ ಪ್ರಸಿದ್ಧವಾದರೆ, ಕಾಯದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನ ಚಿತ್ತಕ್ಕೆ ಅದು ಪ್ರಸಿದ್ಧವಲ್ಲ. ಲೋಕದ ಮಾನವರೆಲ್ಲ ಯೋಗಿಗಳಾಗಬಹುದು ಆದರೆ ಅವರಿಗೆ ಅರಿವಿನ ಕೃಷಿ ಮಾಡುವ ಶಿಕ್ಷಣ ಲಭ್ಯವಿಲ್ಲ. ಕೃಷಿ ಮಾಡಿದರೆ ಅವನು ಪ್ರಸಿದ್ಧನೂ ಆಗ ಬಲ್ಲನು.

**1913**

**ಆಂದೋಲನದಲ್ಲಿಹ ರಾಜಶಿಶುವಿನಂತಿರಬಲ್ಲಡೆ, ಅದು ಯೋಗಿಗೆ ಭೂಷಣ.**
**ಸಂಧ್ಯಾಕಾಲದಲ್ಲಿಹ ಪ್ರಕಾಶದಂತೆ ವಿಷಯಸುಖವಿರಬಲ್ಲಡೆ, ಅದು ಯೋಗಿಗೆ ಭೂಷಣ.**
**ವಾರಾಂಗನೆಯಲ್ಲಿಹ ಪ್ರೀತಿಯಂತಿರಬಲ್ಲಡೆ, ಅದು ಯೋಗಿಗೆ ಭೂಷಣ.**
**ಪತಿವ್ರತೆಯಲ್ಲಿಹ ಭಕ್ತಿಯಂತಿರಬಲ್ಲಡೆ. ಅದು ಯೋಗಿಗೆ ಭೂಷಣ.**
**ಕಪಿಲಸಿದ್ಧ ಮಲ್ಲಿಕಾರ್ಜುನಂಗದು ಬಹು ತೋಷಣ ಕೇಳಾ, ಮನವೆ**

ಈ ವಚನಕ್ಕೆ ಅನುಭಾವ ಮಾಡಿರುವುದಿಲ್ಲ. .

**1914**

**ಸಂಯೋಗವೆಂಬುದು ಪರಮೇಶ್ವರನ ಲೀಲೆಯದು**
**ಅಲ್ಲ ಅಲ್ಲವೆಂದಡೆ, ಆ ಸಂಯೋಗದಿಂದವೆ ಜಗದುತ್ಪನ್ನ**
**ಉತ್ಪತ್ತಿನಾಶನಕ್ಕೆಯೂ ಸಂಯೋಗವೇ ಬೇಕು.**
**ಆ ಸಂಯೋಗ ಸರಿಯೆ ಪ್ರಾರಬ್ಧವಳಿಯಿತ್ತೆಂಬರು ನೋಡಾ.**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯ ಕಾಯದೊಂದಿಗೆ ಸಂಯೋಗಮಾಡುವುದು ಮತ್ತೊಂದು ಕಾಯದ ಸೃಷ್ಟಿಗಾಗಿ. ಇದು ಕಾಯದಲ್ಲಿಯೆ ಸಂಗಮವಾದ ಪರಮೇಶ್ವರನ ಲೀಲೆ. ಈ ಸಂಯೋಗದಿಂದಲೆ ಬ್ರಹ್ಮಾಂಡದ ಸೃಷ್ಟಿಯಾಯಿತ್ತು. ಉತ್ಪತ್ತಿ ಮತ್ತು ನಾಶಕ್ಕೆ ಸಂಯೋಗವೆ ಬೇಕು. ಕಾಯ ಕಾಯದೊಂದಿಗೆ ಸಂಯೋಗವಾದರೆ ಅದು ಸಂಸಾರವೆಂದು ಕರೆಯಿಸಿಕೊಳ್ಳುತ್ತದೆ. ಲೋಕದ ಸೃಷ್ಟಿಗೆ ಕಾರಣವಾಗುತ್ತದೆ.

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೆ ಸಂಗಮವಾದ ಅರಿವಿನ ಮಲ್ಲಯ್ಯನೊಂದಿಗೆ ಸಂಯೋಗವಾದರೆ ಸಂಸಾರ ನಷ್ಟವಾಗಿ ಮಹಾಜ್ಞಾನ ಸಂಸಾರಕ್ಕೆ ನಾಂದಿಯಾಗುತ್ತದೆ.

**1915**

ದೇಶವ ತಿರುಗಿದಡೇನು, ಕಾಶೀ ರಾಮೇಶ್ವರ ಯಾತ್ರೆಯ ಮಾಡಿದಡೇನು,
ಕೋಶತ್ರಯವನರಿದು ದಾಂಟದನ್ನಕ್ಕ ?
ದೇಶವ ತಿರುಗಿದಲ್ಲಿ ಲಕ್ಷಣಲಕ್ಷಣಾವಲೋನವೆ ಪ್ರಾಪ್ತಿ,
ಯಾತ್ರೆಯ ಮಾಡಿದಲ್ಲಿ ಮೂಢಜನಕ್ಕೆ ಸಾಧುದೃಷ್ಟತ್ವವೆ ಪ್ರಾಪಿ.
ಕೋಶತ್ರಯವ ದಾಂಟಿದಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನ
ಸ್ವಭಾವವೆ ಪ್ರಾಪ್ತಿ ನೋಡಾ, ಕೇದಾರಯ್ಯ.

ದೇಶವ ತಿರುಗಿದರೇನು, ಕಾಶಿರಾಮೇಶ್ವರ ಯಾತ್ರೆಯ ಮಾಡಿದರೇನು? ಕಾಯವೆಂಬ ಕೋಶತ್ರಯವನ್ನು ಕಾಯವನ್ನು ಆವರಿಸಿದ ಮನ ದಾಟದಿದ್ದರೆ ಅದರ ಜನ್ಮ ವ್ಯರ್ಥ.

ದೇಶವ ತಿರುಗಿದಲ್ಲಿ ಲಕ್ಷಣ ಅವಲಕ್ಷಣ ಲೋಕ ಕಾಣುತ್ತದೆ. ಯಾತ್ರೆಯ ಮಾಡಿದಲ್ಲಿ ಸಾದು ಸತ್ಪುರುಷರ ದರ್ಶನ ಪ್ರಾಪ್ತಿಯಾಗುತ್ತದೆ. ಇದು ಮೂಢ ಜನರ ಲಕ್ಷಣ ಸಾತ್ವಿಕ, ರಾಜಸ, ತಾಮಸ ಗುಣಗಳನ್ನು ದಾಟಿದರೆ ಕಪಿಲಸಿದ್ಧ ಮಲ್ಲಯ್ಯನ ಸ್ವಭಾವವೆ ಪ್ರಾಪ್ತಿಯಾಗುತ್ತದೆ ಕೇದಾರಯ್ಯಾ .

**1916**

ಏಕಪಙ್ತಯಲ್ಲಿ ತಾ ಭೋಜನಭೇದ ಮಾಡಬಾರದು
ಭೋಜನಭೇದ ಮಾಡಿದಡೆಯು ತಾನೆಣಿಸಬಾರದು.
ತಾನೆಣಿಸಿದಲ್ಲಿಯೂ ಅನ್ಯರಿಗೆ ತಿಳಿಯಬಾರದು.
ಅನ್ಯರಿಗೆ ತಿಳಿದಡೆಯು ಮನ ಬೇರಾಗಬಾರದು
ಮನೆ ಬೇರಾದಡೆಯು ಮನ ಬೇರಾಗಬಾರದು
ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ

ಈ ವಚನಕ್ಕೆ ಅನುಭಾವ ಮಾಡಿರುವುದಿಲ್ಲ.

**1917**

ಗುರುಸಾಹಿತ್ಯ ಚೆನ್ನಬಸವಂಗಾಯಿತ್ತು. ಲಿಂಗಸಾಹಿತ್ಯ ಬಸವಂಗಾಯಿತ್ತು.
ಜಂಗಮಸಾಹಿತ್ಯ ಅಲ್ಲಮದೇವಂಗಾಯಿತ್ತು.
ಪ್ರಸಾದಸಾಹಿತ್ಯ ಬಿಬ್ಬಿಬಾಚರಸಂಗಾಯಿತ್ತು
ಪಾದೋದಕ ಸಾಹಿತ್ಯ ಹೊಡೆಹುಲ್ಲ ಬಂಕಯ್ಯಂಗಾಯಿತ್ತು.
ಭಸ್ಮ ಸಾಹಿತ್ಯ ಅಕ್ಕನಾಗಮ್ಮಂಗಾಯಿತ್ತು.
ರುದ್ರಾಕ್ಷಿಸಾಹಿತ್ಯ ಸರ್ವಪ್ರಮಥರಿಗಾಯಿತ್ತು. ಮಂತ್ರಸಾಹಿತ್ಯದವರ ಕಂಡಡೆ,
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಿವರೆ ಎಂದು
ಎನ್ನ ಮನ ನಂಬಿತ್ತು ನೋಡಾ, ಮಡಿವಾಳ ಮಾಚಯ್ಯಾ.

ಗುರು, ಲಿಂಗ, ಜಂಗಮ, ಪ್ರಸಾದ, ಪಾದೋದಕ, ಭಸ್ಮ, ರುದ್ರಾಕ್ಷಿ ಇವೆಲ್ಲ ಕಾಯದಲ್ಲಿ

ಸಂಗಮವಾದ ಮಹಾಜ್ಞಾನದ ಮಾಹಿತಿ ಕಾಯವನ್ನು ಆವರಿಸಿದ ಮನ ಈ ಸಕಲ ಅರಿವಿನ ಮಾಹಿತಿಗಳಿಗೆ ಶರಣು ಹೋಗಿ ಶರಣಾಗತನಾದ ಕಾಯವೆ ಮಂತ್ರಕಾಯ. ಮಹಜ್ಞಾನಿ ಕಪಿಲಸಿದ್ಧ ಮಲ್ಲಿಕಾರ್ಜುನನಿದ್ದ ಮಹಾಕಾಯ.

ಗುರುವಿನ ಸಾಕ್ಷಾತ್ಕಾರ ಚೆನ್ನಬಸವಣ್ಣ ಮಾಡಿಕೊಂಡ. ಲಿಂಗಯ್ಯನ ಸಾಕ್ಷಾತ್ಕಾರವನ್ನು ಬಸವಣ್ಣ ಮಾಡಿಕೊಂಡ. ಜಂಗಮ ಸಾಕ್ಷಾತ್ಕಾರವನ್ನು ಅಲ್ಲಮ ಪ್ರಭುಗಳು ಮಾಡಿಕೊಂಡರು. ಪ್ರಸಾದದ ಸಾಕ್ಷಾತ್ಕಾರ ಗಬ್ಬೂರಿನ ಬಿಬ್ಬಿ ಬಾಚರಸರು ಮಾಡಿಕೊಂಡರು. ಪಾದೋದಕದ ಸಾಕ್ಷಾತ್ಕಾರವನ್ನು ಹೊಡೆಹುಲ್ಲ ಬಂಕಯ್ಯನವರು ಮಾಡಿಕೊಂಡರು. ಭಸ್ಮ ಸಾಕ್ಷಾತ್ಕಾರವನ್ನು ಅಕ್ಕನಾಗಾಯಿ ಮಾಡಿಕೊಂಡಳು.

ರುದ್ರಾಕ್ಷಿ ಸಾಕ್ಷಾತ್ಕಾರವು ಸರ್ವ ಪ್ರಮಥರಿಗಾಯಿತ್ತು. ಇವರೆಲ್ಲರೂ ಕಪಿಲಸಿದ್ಧ ಮಲ್ಲಯ್ಯನ ವಂಶಜರು ಎಂದು ಎನ್ನ ಮನ ನಂಬಿತ್ತು. ಮಡಿವಾಳ ಮಾಚಯ್ಯಾ ಎಂದು ಸಿದ್ಧರಾಮ ಶಿವಯೋಗಿಗಳು ಹೇಳಿದ್ದಾರೆ.

**1918**

**ಸರ್ವರು ಜ್ಞಾನದಿಂದಲ್ಲದೆ,**
**ಗೋತ್ರಾಭಿಮಾನದಿಂದ ಮೋಕ್ಷವಂತರಲ್ಲಿ ಕೇಳಾ.**
**''ತಪಸಾ ಬ್ರಾಹ್ಮಣೋ ಜಾತೋ ವಿಶ್ವಾಮಿತ್ರೋ ಮಹಾಮುನಿಃ**
**ತಪಸಾ ಬ್ರಾಹ್ಮಣೋ ಜಾತೋ ನಾರದೋ ಹಿ ಮಹಾಮುನಿಃ**
**ತಪಸಾ ಬ್ರಾಹ್ಮಣೋ ಜಾತಿ ಶ್ವಾಗಸ್ತ್ಯೋ ಮುನಿಪುಂಗವಃ**
**ತಪಸಾ ಬ್ರಾಹ್ಮಣೋ ಜಾತಃ ಪರಾಶರ ಮಹಾಮುನಿಃ**
**ತಪಸಾ ಬ್ರಾಹ್ಮಣೋ ಜಾತೋ ದುರ್ವಾಸಸ್ತು ಮಹಾಮುನಿಃ**
**ತಪಸಾ ಬ್ರಾಹ್ಮಣೋ ಜಾತೋ ಭೃಗುರ್ವ್ಯಾಸಶ್ಚ ಮಾಂಡವಃ ॥''**
**ಎಂಬುದು ಹುಸಿಯಲ್ಲ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಗೋತ್ರ, ಜಾತಿ, ಮತ, ಧರ್ಮ, ಪಂಗಡಗಳ ಮೂಲಕ ಮೋಕ್ಷವನ್ನು ಸಾಧಿಸುವುದು ಸುಲಭವಲ್ಲ. ವಿಶ್ವಾಮಿತ್ರ, ನಾರದ, ಅಗಸ್ತ್ಯ, ಪರಾಶರ, ದೂರ್ವಾಸ, ಭೃಗು ಇವರೆಲ್ಲರು ಬ್ರಹ್ಮಜ್ಞಾನಿಗಳು ಎಂಬುದು ಹುಸಿಯಲ್ಲ. ಎಂದು ಸಿದ್ಧರಾಮ ಶಿವಯೋಗಿಗಳು ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**1919**

**ಕುಲದಲ್ಲಿಯೂ ಅಧಿಕ ಜ್ಞಾನದಲ್ಲಿಯೂ ಅಧಿಕನೆಂದು ಬೀಗುವ**
**ಆ ಕುಲೀನ ಜ್ಞಾನವಂತನಲ್ಲಿ ಸಮರಸ ಸಲ್ಲದು ನೋಡಾ ಗುರುವೆ.**
**ಶಿವಭಕ್ತಿಯೆ ಸತ್ಕುಲ, ಶಿವಧ್ಯಾನವೆ ಸತ್ಕುಲ**
**ಶಿವಪೂಜೆಯೆ ಸತ್ಕುಲ ನೋಡಾ ಗುರುವೆ ಶಿವಕಥಾವರ್ಣನವೆ ಸತ್ಕುಲ,**
**ಶಿವಗೋಷ್ಠಿಯೆ ಸತ್ಕುಲ ನೋಡಾ, ಗುರುವೆ ಕಪಿಲಸಿದ್ಧ ಮಲ್ಲಿಕಾರ್ಜುನ ಗುರುವೆ.**

ಕುಲದಲ್ಲಿ ಜಾತಿ ಮತದಲ್ಲಿ ಶ್ರೀಮಂತಿಕೆಯಲ್ಲಿ ಅಧಿಕನೆಂದು ಬೀಗುವ ಕುಲೀನನು

ಜ್ಞಾನಿಯಲ್ಲಿ ಸಮರಸದಿಂದಿರಲು ಸಲ್ಲುವುದಿಲ್ಲ. ಏಕೆಂದರೆ ಇವನಿಗೆ ಜ್ಞಾನಿಯೆಂದರೆ ಯಾರು ಅವನು ಎಲ್ಲಿರುತ್ತಾನೆ ಹೇಗಿರುತ್ತಾನೆ ಎಂಬುದು ಕೂಡ ತಿಳಿದಿರುವುದಿಲ್ಲ.

ಕಾಯದಲ್ಲಿ ಸಂಗಮವಾದ ಅರಿವಿನ ಶಿವನಿಗೆ ಕಾಯವನ್ನು ಆವರಿಸಿದ ಮನ ಭಕ್ತನಾಗಿ ಭಕ್ತಿ ಮಾಡುವವನೆ ಶಿವಭಕ್ತ. ಇವನು ಸತ್ಕುಲಜನು. ಶಿವಧ್ಯಾನವೆ ಸತ್ಕುಲ. ಶಿವಪೂಜೆಯೇ ಸತ್ಕುಲ. ಶಿವಕಥಾವರ್ಣನವೆ ಸತ್ಕುಲ, ಶಿವ ಗೋಷ್ಠಿಯೆ ಸತ್ಕುಲ ಈತ ಕಪಿಲಸಿದ್ಧ ಮಲ್ಲಿಕಾರ್ಜುನನ ನಿಜ ಭಕ್ತ.

**1920**

**ಆಕಾರದ ಮೂರ್ತಿ ವರ್ಣಿಸಿಹೆನೆಂದಡೆ ತೀರದು.**
**ನಿರಾಕಾರದ ಮೂರ್ತಿ ವರ್ಣಿಸಿಹೆನೆಂದಡೆ ಮೊದಲಿಗೆ ತೀರದು.**
**ತೀರದು ಎಂದು ಶಬ್ದಮುಗ್ಧವಾಗಿರಬಾರದು, ಬಾರದು.**
**ಕಪಿಲಸಿದ್ಧ ಮಲ್ಲಿಕಾರ್ಜುನ ಎನ್ನಬಹುದು ಎನ್ನಬಹುದು ಮನವೆ.**

ಕಾಯದ ಆಕಾರ ಬಣ್ಣಿಸಲು ಸಾಧ್ಯವಾಗದು ಕಾಯದ ಆಕಾರದಲ್ಲಿ ನಿರಾಕಾರವನ್ನು ಕೂಡ ಬಣ್ಣಿಸಲು ಮೊದಲಿಗೆ ಸಾಧ್ಯವಾಗದು. ಬಣ್ಣಿಸಲು ಸಾಧ್ಯವಿಲ್ಲವೆಂದು ಶಬ್ದಮುಗ್ಧವಾಗಿರಲು ಬಾರದು. ಏಕೆಂದರೆ ಕಪಿಲಸಿದ್ಧ ಮಲ್ಲಿಕಾರ್ಜುನನ ಬಗ್ಗೆ ಆಡುವ ಮಾತು ಮಾತಲ್ಲ ಅವು ಮಾತನ್ನು ಅಳಿಯುವ ಮಾತು ಎನ್ನಬಹುದು ಮನವೆ.

**1921**

**ಅಕ್ಷರತ್ರಯದ ಗುಂಡಿನಲ್ಲಿ ಸಕಲಾಕ್ಷರ ಮೂರ್ತಿ ಮನೆಯ ಮಾಡಿಕೊಂಡಿದೆ.**
**ಅಕ್ಷರವರಿಯ ಬಾರದು, ಅರಿದ ಬಳಿಕ ಜನನ ಮರೆಯಬಾರದು.**
**ಮರೆದ ಬಳಿಕ ಅಕ್ಷರ ಧ್ಯಾನ ನೆಲೆಗೊಳಿಸಬಾರದು ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪರಮಾತ್ಮನನ್ನು ಅಕ್ಷರಗಳ ಮೂಲಕ ಅರಿಯಲು ಸಾಧ್ಯವಿಲ್ಲ. ಕಾಯವನ್ನು ಆವರಿಸಿದ ಮನದ ಮೂಲಕ ಅರಿವಿನ ಮಲ್ಲಯ್ಯನನ್ನು ಅರಿತು ಅರಿತು ಆ ಅರಿವೆ ತಾನಾಗಬೇಕು. ಈತ ಅಕ್ಷರೋತ್ತಮ ಈತನನ್ನು ಅಕ್ಷರಗಳ ಮೂಲಕ ಧ್ಯಾನ ಮಾಡಿದರೂ ಈತನ ದರುಶನ ಸಾಧ್ಯವಾಗುವುದಿಲ್ಲ.

**1922**

**ಸಾಂಬನಾಗಲಿ, ಶಿವನೆ ತಾನಾಗಲಿ,**
**ಪಂಚಭೌತಿಕಕ್ಕೆ ಬಂದ ಬಳಿಕ ಕೇಡೆಂಬುದು ನಿಶ್ಚಯ.**
**ಭೌತಿಕದಲ್ಲಿ ಕೇಡು ನಿಶ್ಚಯವಲ್ಲದೆ, ಮಹಾ ಅರುಹುನಲ್ಲಿ ಕೇಡಿಲ್ಲ**
**'ತತ್ತ್ವಾತ್ಮಕಂ ವಪುರ್ದೇವಿನಾಶಾರ್ಥಂ ಕಾರಣಂ ದೃಢಂ'**
**ಎಂಬುದು ಪುಸಿಯಲ್ಲ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯ ಪಂಚಭೂತಗಳಿಂದ ಬಂದಿದೆ. ಕಾಯಕ್ಕೆ ಕೇಡುಂಟು ಅದಕ್ಕೆ ಜನ್ಮವೂ ಉಂಟು. ಕಾಯದಲ್ಲಿಯೇ ಸಂಗಮವಾದ ಬಯಲ ಮಲ್ಲಯ್ಯನಿಗೆ ಕೇಡಿಲ್ಲ. ಅವನಿಗೆ ಮರಣವೂ ಇಲ್ಲ.

ಜನನವೂ ಇಲ್ಲ. ಎನ್ನುವುದು ಹುಸಿಯಲ್ಲ ಎಂದು ಸಿದ್ಧರಾಮ ಶಿವಯೋಗಿಗಳು ಬಯಲ ಮಲ್ಲಯ್ಯನೊಂದಿಗೆ ಮಾತನಾಡಿದ್ದಾರೆ.

**1923**

**ಅಲಿಂಗಿಗಳ ಸಂಗ ಸಲ್ಲದೆಂದಡೆ, ಉದರದಲ್ಲಿಹ ಲಿಂಗ ಲಿಂಗವಲ್ಲವೆ, ಲಿಂಗಯ್ಯಾ?**
**ಅಲಿಂಗಿಗಳ ಭೋಜನ ಸಲ್ಲದೆಂದಡೆ, ಪಶು ಪೃಥ್ವಿಗಳು ಅಂಗವಲ್ಲವೇ ಲಿಂಗಯ್ಯಾ?**
**'ಲಿಂಗಮಧ್ಯೇ ಜಗತ್ ಸರ್ವಂ' ಎಂದ ಬಳಿಕ ಲಿಂಗವಲ್ಲವೆ,**
**ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಯ್ಯಾ?**

ಅಂಗದ ಮೇಲೆ ಲಿಂಗ ಕಟ್ಟಿಕೊಳ್ಳದವರ ಸಂಗ ಸಲ್ಲದು ಎಂದಡೆ ಇದು ಸಲ್ಲದ ಮಾತು. ಈ ಬ್ರಹ್ಮಾಂಡದಲ್ಲಿರುವ ಸಕಲ ಅಂಗಗಳಲ್ಲಿಯೂ ಅರಿವಿನ ಲಿಂಗಯ್ಯ ಸಂಗಮವಾಗಿದ್ದಾನೆ. ಆ ಲಿಂಗ ಲಿಂಗವಲ್ಲವೆ? ಲಿಂಗಯ್ಯ ಅಲಿಂಗಿಗಳೊಂದಿಗೆ ಭೋಜನ ಮಾಡುವುದು ಸಲ್ಲದು ಎಂದಡೆ ಪೃಥ್ವಿಯ ಮೇಲೆ ಇರುವ ಸಕಲ ಪಶುಗಳೂ ಕೂಡ ಅಂಗವಲ್ಲವೆ ಲಿಂಗಯ್ಯ. ಲಿಂಗ ಮಧ್ಯೆ ಜಗತ್ ಸರ್ವಂ ಎಂದ ಬಳಿಕ ಇಡೀ ಬ್ರಹ್ಮಾಂಡವೆ ಲಿಂಗದಲ್ಲಿ ಬಚ್ಚಿಟ್ಟುಕೊಂಡಿದೆ.

**1924**

**ಮೇಲು ಮಾಡಿದ ನುಡಿಯಂತೆ ನಡೆಯಬೇಡ, ಮೃದಭಾವವಡಗಿರಬೇಕು.**
**ಪ್ರಾಣದಲ್ಲಿ ಅಡಗಿದ ಭಾವ(ವ)ನಡಹಿಕೊಳಬೇಕಾದಡೆ,**
**ದೃಢಲಿಂಗಮೂರ್ತಿಯ ಧರಿಸಬಹುದೆ ದೇಹದಲ್ಲಿ?**
**ಅರಿದು ಧರಿಸದೆ, ಧರಿಸಿ ಅರಿಯದೆ ಇದ್ದವನ ಭಾವ**
**ಬಯಲಲ್ಲಿಹ ದೀಪದಂತೆ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಅರಿವಿನಿಂದ ನುಡಿಯನ್ನು ನುಡಿಯಬಹುದು. ನಡೆಯಲು ಗೊತ್ತಿರದಿದ್ದರೆ ನುಡಿದ ನುಡಿಯೆ ಹಾವಿನ ಹೆಡೆಯಾಗಿ ನುಡಿದಾತನನ್ನು ಕಚ್ಚುತ್ತದೆ. ಕಾಯದಲ್ಲಿ ಅಡಗಿದ ನಿರ್ಭಾವವನ್ನು ಕಾಯವೆ ಬಳಕೆ ಮಾಡುವಾಗ ಕಾಯದ ಮೇಲೆ ಲಿಂಗ ಧರಿಸಬಹುದು.

ಅರಿದರೆ ಸಕಲರ ಕಾಯಗಳಲ್ಲಿಯೂ ಅರಿಯುವ ಅರಿವು ಲಿಂಗವಾಗಿ ಸಂಗಮವಾಗಿದೆ ಧರಿಸದವನು ಅರಿಯಲು ಆಗುವುದಿಲ್ಲ. ಧರಿಸದೆ ಧರಿಸಿ ಧಾರಣೆಯಾದ ಅರಿವು ಅದು ಮಹಾಜ್ಞಾನ. ಅಂಗದ ಮೇಲೆ ಲಿಂಗ ಧರಿಸಿಯೂ ಅಂಗದಲ್ಲಿಯೇ ಸಂಗಮವಾದ ಲಿಂಗವನ್ನು ಅರಿಯದೆ ಇದ್ದವನ ಭಾವ ಬಯಲಲ್ಲಿರುವ ದೀಪದಂತೆ ಕಪಿಲಸಿದ್ಧ ಮಲ್ಲಿಕಾರ್ಜುನ.

**1925**

**ವಸ್ತು ನಿರಾಕಾರವೆಂದಡೆ. ಆಕಾರಕ್ಕೆ ಬರುವುದೇ?**
**ವಸ್ತು ನಿರಾಕಾರವೆಂದಡೆ ವಿಕಾರಕ್ಕೆ ಬರುವುದೆ?**
**ವಸ್ತು ಉಭಯವೆಂದಡೆ ಉಭಯ ಸಂದೇಹತ್ವದಿಂದ ಬಳಿವುದೆ?**
**ವಸ್ತುವಿನ ವ್ಯವಹಾರ ಆರಿಗೂ ತಿಳಿಯಬಾರದು.**

**ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗ ಉಭಯಾತೀತ ನೋಡಾ, ಪ್ರಭುವೆ.**

ವಸ್ತು ಆಕಾರದಿಂದ ಇದ್ದರೂ ವಸ್ತುವಿನ ಸತ್ಯ ನಿರಾಕಾರವೆ ಆಗಿದೆ. ವಸ್ತು ನಿರಾಕಾರವಿದ್ದರೂ ತನ್ನ ನಿರಾಕಾರವನ್ನು ತನ್ನದೆ ಆಕಾರದಲ್ಲಿ ಬಚ್ಚಿಟ್ಟು ಕೊಂಡು ವಿಕಾರದಿಂದ ತೋರುವುದು ವಸ್ತು ಆಕಾರವು ಹೌದು ನಿರಾಕಾರವು ಹೌದು ಎಂದು ಹೇಳಲು ಹೋದರೆ ಯಾವುದು ಸತ್ಯ ಎನ್ನುವ ಸಂದೇಹವು ತನ್ನಲ್ಲಿ ಉಂಟಾಗುತ್ತದೆ. ವಸ್ತುವಿನ ವ್ಯವಹಾರ ಲೋಕಕ್ಕೆ ಅರಿಯಲು ಸಾಧ್ಯವಾಗುತ್ತದೆ. ವಸ್ತುವಿನ ಸತ್ಯ ಆಕಾರವೂ ಅಲ್ಲ ನಿರಾಕಾರವೂ ಅಲ್ಲ ಅದು ಉಭಯಾತೀತ.

**1926**

**ತೋರುವ ಜಗತ್ತು ಬ್ರಹ್ಮವೆಂದೊಮ್ಮೆ ವಾದಿಸುವೆ**
**ತೋರುವ ಜಗತ್ತು ಮಾಯೆಯೆಂದೊಮ್ಮೆ ವಾದಿಸುವೆ**
**ತೋರಿಯಡಗಿದಲ್ಲಿ ಮಾಯೆ ಎನಿಸಿತ್ತು. ತೋರಿ ತೋರದಲ್ಲಿ ಬ್ರಹ್ಮವೆನಿಸಿತ್ತು.**
**ತೋರಿದಲ್ಲಿ ತೋರಿ ಕೆಡದಲ್ಲಿ ಏನೆಂದೆನಿಸದು ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ತೋರುವ ಜಗತ್ತನ್ನು ಲೋಕ ಒಮ್ಮೆ ಬ್ರಹ್ಮವೆಂದು ವಾದಿಸಿದರೆ ಮತ್ತೊಮ್ಮೆ ಮಾಯೆ ಎಂದು ವಾದಿಸುತ್ತದೆ. ಲೋಕದ ದೃಷ್ಟಿಯಲ್ಲಿ ಬ್ರಹ್ಮವೆಂದು ಮಾಯೆ ಎಂದು ಎರಡು ಶಬ್ದಗಳು ಲೋಕಕ್ಕೆ ಗೊತ್ತಿದೆ. ಅನುಭವಕ್ಕೆ ಬಂದಿಲ್ಲ. ಹೀಗಾಗಿ ತೋರಿ ಅಡಗಿದಲ್ಲಿ ಮಾಯೆ ಎನಿಸಿತ್ತು ತೋರಿ ತೋರದಲ್ಲಿ ಬ್ರಹ್ಮವೆನಿಸಿತ್ತು.

ಪಂಚಭೂತಗಳಿಂದ ಹುಟ್ಟಿದ ಕಾಯ ತೋರುತ್ತದೆ ಹಾಗೂ ಒಮ್ಮೆ ಅಡಗುತ್ತದೆ. ಕಾಯದಲ್ಲಿ ಸಂಗಮವಾದ ಮನ ತೋರುವುದಿಲ್ಲ, ಅಡಗುವುದಿಲ್ಲ. ಕಾಯದಲ್ಲಿಯೇ ಸಂಗಮವಾದ ಅರಿವು ಎನ್ನುವ ಗುರುದೇವ ತೋರುವುದಿಲ್ಲ ಕೆಡುವುದಿಲ್ಲ .ಆತನಿಗೆ ಜನನವೂ ಇಲ್ಲ ಮರಣವೂ ಇಲ್ಲ, ಕೇಡೂ ಇಲ್ಲ. ಗುರುದೇವನನ್ನು ತಿಳಿದು ಗುರುದೇವನಿಗೆ ಶರಣು ಹೋದ ಮನಕ್ಕೂ ಕೂಡ ಜನನವೂ ಇಲ್ಲ, ಮರಣವೂ ಇಲ್ಲ ಹಾಗೆಯೇ ಅದು ಕೆಡುವುದೂ ಇಲ್ಲ.

ಕಾಯದಲ್ಲಿ ಸಂಗಮವಾದ ಅರಿವು ಎಂಬ ಗುರುದೇವ ಕಾಯದಲ್ಲಿಯೇ ಸಂಗಮವಾದ ಮನವೆಂಬ ಶಿಷ್ಯ ಇವರಿಬ್ಬರೂ ತಮ್ಮ ಲೀಲೆಗಾಗಿ ಕಾಯಕ್ಕೆ ಜನ್ಮ ನೀಡಿ ಕಾಯದಲ್ಲಿಯೇ ಸಂಗಮವಾಗಿದ್ದಾರೆ. ಕಾಯ ಇವರಿಬ್ಬರ ಉಪಕರಣವಾಗಿ ತೋರುವುದು. ಇವರಿಬ್ಬರಿಗೆ ಕಾಯದಲ್ಲಿ ವಾಸ ಮಾಡುವುದು ಸಾಕಾಗಿ ಕಾಯವನ್ನು ಬಿಟ್ಟು ಹೋದಾಗ ಕಾಯ ಕೆಟ್ಟಂತೆ ಕಾಣುವುದು ಆದರೆ ಗುರುಶಿಷ್ಯರಿಬ್ಬರಿಗೆ ಏನೆಂದೆನಿಸದು.

**1927**

**ನಿರ್ಗುಣ ಮಹಾದೇವನೆಂದ ಬಳಿಕ ಗುಣಹೀನನಲ್ಲವೆ?**
**ಸಗುಣನವನು ತನ್ನರಿವಿಗೆ, ನಿರ್ಗುಣನವನು ಜಗಜ್ಜೀವಿಗಳಿಗೆ.**
**ಅರಿದಡೆ ನಿರ್ಗುಣನಲ್ಲ, ಸಗುಣ ಗುಣಾಗ್ರಗಣ್ಯ ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಸಾತ್ವಿಕ, ರಾಜಸ, ತಾಮಸ ಗುಣಗಳು ಇವೆ. ಮಹಾದೇವ ಕಾಯದಲ್ಲಿಯೇ

ಸಂಗಮವಾಗಿದ್ದು ಕಾಯಕ್ಕೆ ಅಂಟಿಕೊಂಡಿಲ್ಲ. ಕಾಯದ ಈ ಮೂರೂ ಗುಣಗಳನ್ನು ಕಾಯದ ಮೂಲಕ ಮಹಾದೇವ ಬಳಕೆ ಮಾಡುವುದಿಲ್ಲ. ಏಕೆಂದರೆ ಮಹಾದೇವ ನಿರ್ಗುಣಿ. ಮೂರು ಗುಣಗಳಿಗೂ ಅತೀತನಾದವನು. ಕಾಯವನ್ನು ಆವರಿಸಿದ ಮನ ಒಮ್ಮೆ ಜಗತ್ತು ಬ್ರಹ್ಮವೆಂದು ಸಾರಿದರೆ ಮತ್ತೊಮ್ಮೆ ಜಗತ್ತು ಮಾಯೆ ಎಂದು ಸಾರುವುದು ಕಾಯವನ್ನು ಆವರಿಸಿದ ಮನಕ್ಕೆ ಮಹಾದೇವನ ದರುಶನವಾದರೆ ತೋರುವುದೂ ಇಲ್ಲ ಅಡಗುವುದೂ ಇಲ್ಲ.

**1928**

**ಕನಕ ಒಂದರಲ್ಲಿ ಕಡಗ ಕಂಠಿಯಾದಂತೆ, ಶಕುನವೊಂದರಲ್ಲಿ ಶಕುನ ಬೇರಾದಂತೆ,**
**ಘನಕ್ಕೆ ಘನವಾದ ಪರವಸ್ತುವಿನಲ್ಲಿ ಜನನವಾಯಿತ್ತು.**
**ಮೂಲೋಕದ ಮಹಾಲಿಂಗ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕನಕ ಒಂದರಲ್ಲಿ ಕಡಗ ಕಂಠಿಯಾದಂತೆ. ಬಳೆ ನೆಕ್ಲೆಸ್, ಬೋರ್ಮಳ, ಬೆಂಡೋಲೆ ಆದಂತೆ. ಕನಕಕ್ಕೆ ಎಷ್ಟೊಂದು ಹೆಸರುಗಳು. ಅರಿವಿನಿಂದ ನೋಡಲು ಹೋದರೆ ಕನಕ ಹಳದಿ ಬಣ್ಣದ ಲೋಹ.

ಮನ ಘನಮನವಾದಾಗ ಪರವಸ್ತುವಿನಲ್ಲಿ ಇದರ ಜನನವಾಯಿತ್ತು. ಇದು ಮೂಲೋಕದ ಮಹಾಲಿಂಗ ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ.

**1929**

**ಮೃತ್ತಿಕೆಯೊಂದರಲ್ಲಿ ಮಡಕೆಗಳು ನೂರಾರು.**
**ಮನವೊಂದರಲ್ಲಿ ಕ್ರಿಯಾದಿಗಳು ನೂರಾರು.**
**ಜನಕನೊಬ್ಬನಲ್ಲಿ ಸಂತತಿಗಳು ನೂರಾರು.**
**ಘನಕ್ಕೆ ಘನವಾದ ಚಿನ್ಮಯಿ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಜಗತ್ತುಗಳು ನೂರಾರು,**

ಮಣ್ಣೊಂದರಲ್ಲಿ ಕುಂಬಾರ ನೂರಾರು ವಿಧದ ಮಡಿಕೆಗಳನ್ನು ಮಾಡುತ್ತಾನೆ. ನೂರಾರು ವಿಧದ ಮಡಿಕೆಗಳಿಗೆ ಹೆಸರು ಬೇರೆ ಬೇರೆ ಗಡಿಗೆ, ಮುಚ್ಚಳ, ಕೊಡ, ಊಜಿ, ಹೀಗೆ ಮಣ್ಣೊಂದರಲ್ಲಿ ಮಾಡಿದ ಮಡಕೆಗಳಿಗೆ ನೂರಾರು ಹೆಸರಿನಿಂದ ಕರೆಯುತ್ತೇವೆ.

ಮಣ್ಣಿನಲ್ಲಿ ಶಿವ ಪಾರ್ವತಿ, ಗಣೇಶನನ್ನು ಮಾಡಿದ ಕಲಾವಿದ. ಭಕ್ತಿಗಾಗಿ ಅಲ್ಲ ಹೊಟ್ಟೆಪಾಡಿಗಾಗಿ ಆದರೆ ಲೋಕ ಅದನ್ನು ದೇವರೆಂದು ಹೆಸರಿಸಿ ಅವುಗಳಿಗೆ ಆಲಯ ನಿರ್ಮಿಸುತ್ತಾರೆ.

ಮಡಕೆಯ ಮಾಡುವಡೆ ಮಣ್ಣೆ ಮೊದಲು, ತೊಡಗೆಯ ಮಾಡುವಡೆ ಹೊನ್ನೆ ಮೊದಲು, ಶಿವಪಥವನ್ನು ಅರಿಯುವಡೆ ಗುರುಪಥ ಮೊದಲು ಎಂದು ಬಸವಣ್ಣನವರು ಸೂಕ್ಷ್ಮಾತಿಸೂಕ್ಷ್ಮವಾದ ಸೂತ್ರವನ್ನು ಲೋಕಕ್ಕೆ ನೀಡಿದ್ದಾರೆ. ಆದರೆ, ಲೋಕದ ಬಾಯಲ್ಲಿ ಈ ವಚನವಿದೆ. ದೇವರಿಗಾಗಿ ಆಲಯಗನ್ನು ಕಟ್ಟಿ ಪೂಜೆ ಮಾಡುವ ಅಜ್ಞಾನವು ಇದೆ.

ಮಡಕೆ ಕುಡಿಕೆ ಪಾರ್ವತಿ ಪರಮೇಶ್ವರ ಗಣಪತಿ ಎನ್ನುವುದು ಸ್ಮೃತಿಯಲ್ಲಿ ಉಳಿದು ಮಣ್ಣು ಮರೆತು ಹೋಯಿತು. ಮಣ್ಣನ್ನು ಮಣ್ಣೆ ಎಂದು ನೋಡಿದರೆ ಮಾಡುವ ಪೂಜೆ ಮರೆತೆ ಹೋಯಿತು.

ಕಾಯದಲ್ಲಿ ಅರಿವಿನ ಕೋಶವೊಂದಿದೆ ಮನವೆಂಬ ಮರೆವಿನ ಮತ್ತೊಂದು ಕೋಶವು ಇದೆ. ಬಳಕೆ ಮಾಡುವುದು ಕಾಯಕ್ಕೆ ಬಿಟ್ಟ ಸಂಗತಿ.

**1930**

**'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದ ಅರಿದ ಬಳಿಕ,**
**ಲಿಂಗದಲ್ಲಿ ಶಿಲೆಯು ಭಾವವನರಸಲುಂಟೆ ?**
**'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದ ಅರಿದ ಬಳಿಕ**
**ಗುರಿವಿನಲ್ಲಿ ನರನ ಭಾವವನರಸಲುಂಟೆ ?**
**'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದ ಅರಿದ ಬಳಿಕ**
**ಮಯಾಮಯ ಸಂಸಾರವೆಂದರಿಸಲು ಉಂಟೆ ?**
**'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದ ಅರಿದ ಬಳಿಕ**
**ನಾನು ಜೀವಿ, ನಾನು ಜಡ, ನಾನು ಬದ್ಧನೆಂದರಸಲುಂಟೆ ?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

'ಸರ್ವಂ ಖಲ್ವಿದಂ ಬ್ರಹ್ಮ' ಲಿಂಗದಲ್ಲಿ ಶಿಲೆಯ ಭಾವನೆಯನ್ನು ಹುಡುಕಲು ಸಾಧ್ಯವಿಲ್ಲ. ಏಕೆಂದರೆ ಅದು ಲಿಂಗವಲ್ಲ, ಶಿಲೆಯೆ ಆಗಿದೆ. 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಅರಿದ ಬಳಿಕ ಈ ಲೋಕದಲ್ಲಿ ಕಾಣುವ ಅಂಗಗಳೆಲ್ಲ ಲಿಂಗಜಂಗಮವೆ ಆಗಿವೆ. ನರನೆಂಬುವವನು ಯಾರೂ ಇಲ್ಲ. ಸಕಲರ ಅಂಗಗಳಲ್ಲಿ ಅರಿವು ಎನ್ನುವ ಗುರುದೇವನೆ ಸಂಗಮವಾಗಿದ್ದಾನೆ.

'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಅರಿದ ಬಳಿಕ ಮಾಯಾಮಯವಾದ ಸಂಸಾರವನ್ನು ಅರಿವಿನ ಮೂಲಕ ನೋಡುತ್ತಾನೆ. 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಅರಿದ ಬಳಿಕ ನಾನು ಜೀವಿ, ನಾನು ಜಡ, ನಾನು ಬದ್ಧನೆಂದು ಹುಡುಕಲು ಹೋಗುವುದಿಲ್ಲ ಸಕಲ ಕಾಯಗಳಲ್ಲಿಯೂ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನನ್ನೇ ಕಾಣುತ್ತಾನೆ.

**1931**

**ಅರಿದಾಚರಿಸುವವನಾಚರಣೆ ಬ್ರಹ್ಮಮಯ**
**ಅರಿಯದವನಾಚರಣೆ ಮಾಯಾಮಯ**
**ಅರಿಯಬೇಕು, ಅರಿಯಬೇಕು ಗುರುಮುಖದಿಂದ**
**ಆರು ಪರಶಿವನೆಂಬುದನರಿಯದವನರಿವು,**
**ಸ್ವಪ್ನದಲ್ಲಿಯ ರತಿಯಂತೆ, ರತಿಯಲ್ಲಿಯ ರಾಜಸುತನಂತೆ**
**ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ**

ಅರಿದು ಆಚರಿಸುವವನ ಆಚರಣೆಯು ಅದು ಆಚಾರವಲ್ಲ. ಅಗೋಚರದ ಆಚಾರ. ತಾನು ಮಾಡುವ ಅಗೋಚರದ ಆಚಾರ ಯಾರಿಗೂ ಕಾಣುವುದಿಲ್ಲ. ಅದು ಬ್ರಹ್ಮಮಯ ತನಗೆ ಮಾತ್ರ ಕಾಣುತ್ತದೆ. ಅರಿಯದವನ ಆಚರಣೆ ಗೋಚರದ ಆಚರಣೆ. ಬೆಳಗ್ಗೆ ಎದ್ದು ಸ್ನಾನ ಮಾಡಿ ಮಡಿಯನ್ನುಟ್ಟು ಹಣೆಗೆ ವಿಭೂತಿ, ಕುಂಕುಮ, ಗಂಧ, ನಾಮವನ್ನು ಧರಿಸಿ, ಕೊರಳಲ್ಲಿ ರುದ್ರಾಕ್ಷಿ, ಅಂಗದ ಮೇಲೆ ಲಿಂಗ, ಜನಿವಾರ, ಶಿಲುಬೆಯನ್ನು ಧರಿಸಿ, ಗಡ್ಡ ಬಿಟ್ಟು ಆಲಯ, ಚರ್ಚ್, ಮಸೀದಿಗೆ ಹೋಗಿ ಪ್ರಾರ್ಥಿಸುವುದು ಗೋಚರದ ಆಚಾರ ಇದು ಮಾಯಾಮಯ.

ಮನವೆಂಬ ಮಾಯ ಕಾಯವನ್ನು ಸುತ್ತಿಕೊಂಡು ದೇವರನ್ನು ಒಲಿಸಿಕೊಳ್ಳುವುದಕ್ಕಾಗಿ

ಗೋಚರದ ಆಚಾರವನ್ನು ಮಾಡುತ್ತದೆ. ಕಾಯ ಕಾಯದಿಂದಲೆ ಹೊಗಳಿಸಿಕೊಂಡು ಹಿರಿ ಹಿರಿ ಹಿಗ್ಗುವ ಗೋಚರದ ಆಚಾರವನ್ನು ಮಾಡುತ್ತಾ ಸದಾ ಹಿಗ್ಗುತ್ತದೆ.

**ಅರಿಯಬೇಕು ಅರಿಯಬೇಕು ಅರಿತ ಅರಿವಿನ ಪರಿಣಿತರಿಂದ ಅರಿತು ಆರು ಪರಶಿವನೆಂಬುದನ್ನು ಅರಿಯದವನ ಅರಿವು ಸ್ವಪ್ನದಲ್ಲಿಯ ರತಿ ಸುಖದಂತೆ, ರತಿಯಲ್ಲಿಯ ರಾಜಸುತನಂತೆ ಸದಾ ಸುಳ್ಳು ಕೆಲಸದಲ್ಲಿಯೇ ನಿರತನಾಗಿ ಕಾಯವನ್ನು ಕಾಯದ ಮೂಲಕ ಹೌದುಹೌದು ಎನಿಸಿಕೊಂಡು ವ್ಯರ್ಥ ಜೀವ ಕಳೆದುಕೊಳ್ಳುತ್ತದೆ.**

**1932**

**ಲೋಕದಲ್ಲಿಹ ನೂರಾರು ಗುರುಗಳ ನೋಡಿ ನೋಡಿ**
**ನಾನು ಬೇಸರಗೊಂಡೆನಯ್ಯಾ.**
**ವಿತ್ತಾಪಹಾರಿ ಗುರುಗಳು ನೂರಾರು,**
**ಶಾಸ್ತ್ರಾರ್ಥ ಹೇಳುವ ಗುರುಗಳು ನೂರಾರು**
**ಮಂತ್ರತಂತ್ರದಿಂದುಭಯ ಲೋಕದಲ್ಲಿ**
**ಸುಖದುಃಖವೀವ ಗುರುಗಳ ನೂರಾರು**
**ಸತ್ಕರ್ಮೋಪದೇಶವನರುಹಿ**
**ಸ್ವರ್ಗಮರ್ತ್ಯದಲ್ಲಿ ಸುಖವೀವ ಗುರುಗಳು ನೂರಾರು,**
**ವಿಚಾರ ಮುಖದಿಂದ ಷಟ್ಸಾಧನೆಯನರುಹುವ ಗುರುಗಳು ನೂರಾರು.**
**ವಿಷಯಗಳೆಲ್ಲ ಮಿಥ್ಯಂಗಳೆಂದರುಹಿ**
**ಆತ್ಮಾನುರಾಗತ್ವವನೀವ ಗುರುಗಳು ನೂರಾರು,**
**ಶಿವಜೀವರ ಏಕತ್ವವನರುಹಿ**
**ನಿರ್ಮಲ ಜ್ಞಾನವೀವ ಗುರುಗಳು ನೂರಾರು,**
**ಸಂಶಯಾದಿಗಳೆನ್ನಲ್ಲ ಜ್ಞಾನಾಗ್ನಿಯಿಂದ ದಹಿಸಿ.**
**ಮುಕ್ತಿಯ ಹಂಗೆಂಬುದ ಅರುಹಿನ ಬಂಧದಲ್ಲಿರಿಸಿದ**
**ಗುರು ಚೆನ್ನಬಸವಣ್ಣನಲ್ಲದೆ ಮತ್ತೋರ್ವನ ಕಾಣೆ**
**ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಪ್ರಪಂಚದಲ್ಲಿ ಸಾವಿರಾರು ಗುರುಗಳು ಲಕ್ಷಗಟ್ಟಲೆ ಶಿಷ್ಯರನ್ನು ಮಾಡಿಕೊಂಡು ಶಾಸ್ತ್ರ ಹೇಳುತ್ತಾರೆ. ಮಂತ್ರಪಠಿಸಿ ತಾಮ್ರದ ತಗಡದ ತಾಯತ ಕಟ್ಟುವ ಗುರುಗಳೂ ಇದ್ದಾರೆ. ಸುಖದುಃಖವನ್ನು ಉಪದೇಶವನ್ನು ಮಾಡುವ ಗುರುಗಳು ಕೂಡ ನೂರಾರು ಇದ್ದಾರೆ. ಸ್ವರ್ಗಮರ್ತ್ಯದ ಸುಖವನ್ನು ತಿಳಿ ಹೇಳುವ ಗುರುಗಳು ಕೂಡ ನೂರಾರು ಜನ ಇದ್ದಾರೆ. ವಿಚಾರ ಮುಖದಿಂದ ಷಟ್ಸಾಧನೆಯನ್ನರುಹುವ ಗುರುಗಳು ಕೂಡ ನೂರಾರು ಇದ್ದಾರೆ.

ನಿರ್ಮಲ ಜ್ಞಾನವನ್ನು ಹೇಳುವ ಗುರುಗಳು ನೂರಾರು ಇದ್ದಾರೆ. ಇವರೆಲ್ಲ ತಮಗೆ ತಾವೆ ಅಜ್ಞಾನದಲ್ಲಿದ್ದು ಆ ಜ್ಞಾನವನ್ನೆ ಬೋಧಿಸುವ ಗುರುಗಳು. ಸುಳ್ಳು ಮೊದಲು ತನಗೆ ತೊಂದರೆ ಕೊಡುತ್ತದೆ ನಂತರ ಕೇಳಿಸಿಕೊಂಡವರಿಗೂ ತೊಂದರೆ ಕೊಡುತ್ತದೆ, ಇದನ್ನು ಅರಿತರೆ ತಾನು ಗುರುವಾಗುವುದಕ್ಕೆ ಹಿಂದೇಟು ಹಾಕುತ್ತಾನೆ. ಏಕೆಂದರೆ ವ್ಯಕ್ತಿ ಗುರುವಲ್ಲ, ವ್ಯಕ್ತಿ ಶಿಷ್ಯನೂ ಅಲ್ಲ.

ಪ್ರತಿ ಅವ್ಯಕ್ತ ವ್ಯಕ್ತಿಯೊಳಗಣ ಜ್ಞಾನವೆ ಗುರು. ವ್ಯಕ್ತಿಯನ್ನು ಆವರಿಸುವ ಅವ್ಯಕ್ತ ಮನವೆ ಶಿಷ್ಯ . ಶಿಷ್ಯ ಅಂತರಾಳದ ಗುರುದೇವನ ಮಾತನ್ನು ಕಾಯದ ಮೂಲಕ ಪಾಲಿಸಬೇಕು.

ತನ್ನ ಸಕಲ ಸಂಶಯಗಳನ್ನು ತನ್ನ ಜ್ಞಾನದಿಂದಲೆ ದಹಿಸಿ ಮುಕ್ತಿಯ ಹಂಗೆಂಬುದನ್ನು ಅರುಹಿನ ಬಂಧನದಲ್ಲಿ ಇರಿಸಿದ ಗುರು ಚನ್ನಬಸವಣ್ಣನಲ್ಲದೆ ಮತ್ತೋರ್ವನ ಕಾಣೆ ಎಂದು ಕಾಯದಲ್ಲಿಯೇ ಸಂಗಮವಾದ ಗುರು ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ಮಾತನಾಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1933**

**ನಿರಾಕಾರ ಪರವಸ್ತು ತಾನೆಂದರಿದಡೆಯು ಕಿರಿದಾಗಿ ನುಡಿಯಲೇಬೇಕು, ಗುರುದೇವಾ.**
**ಜಡದೇಹಿ ನಾನೆಂಬರುಹು ಉಳ್ಳವಂಗಾದಡೆಯು ಅರುಹಿಕೊಡಲೆಬೇಕು,**
**ಸಜ್ಜನರವರು ಗುರುದೇವಾ, ಮಹಾಮಹಿಮ ಕಪಿಲಸಿದ್ಧ ಮಲ್ಲಿಕಾರ್ಜುನದೇವಾ.**

ಸಾಕಾರದ ಕಾಯದಲ್ಲಿ ನಿರಾಕಾರ ವಸ್ತುಗಳೆರಡು ಸಂಗಮವಾಗಿವೆ. ಕಾಯವನ್ನು ಆವರಿಸಿದ ಮನವೆಂಬ ನಿರಾಕಾರ ವಸ್ತು ಕಾಯದೊಳಗೆ ಸಂಗಮವಾದ ಮಹಾಮಹಿಮ ಕಪಿಲಸಿದ್ಧ ಮಲ್ಲಯ್ಯನೆಂಬ ನಿರಾಕಾರ ವಸ್ತುವಿಗೆ ಶರಣು ಹೋಗಿ ಶರಣಾಗತನಾದಡೆ ಶರಣನೆ ತಾನಾಗುತ್ತಾನೆ. ಆಗ ಸಕಲ ಕಾಯಗಳೂ ಗುರು ಕಾಯಗಳಾಗಿ ಕಂಡು ತನಗೆ ತಾನೆ ಕಿರಿದಾಗಿ ಬಾಗುತ್ತದೆ. ಹೀಗಾಗಿ ಬಸವಣ್ಣನವರು ಎನಗಿಂತ ಕಿರಿಯರಿಲ್ಲ ಶಿವ ಭಕ್ತರಿಗಿಂತ ಹಿರಿಯರಿಲ್ಲ ಎಂದು ಕಾಯದಲ್ಲಿ ಸಂಗಮವಾದ ವಿರಾಟ ಸ್ವರೂಪವನ್ನು ನೋಡಿ ಕಿರಿಯರಾಗಿ ತಲೆಬಾಗಿದರು.

ಈ ಸೂತ್ರ ಗೊತ್ತಿಲ್ಲದ ಕಾಯಕ್ಕೆ ತಿಳಿದವರು ತಿಳುಹಿ ಕೊಡಲೇಬೇಕು. ಮಹಾಮಹಿಮ ಕಪಿಲಸಿದ್ಧ ಮಲ್ಲಿಕಾರ್ಜುನನ ಮಹಿಮೆಯನ್ನು .

**1934**

**ಆನು ಆರೆಂಬುದಕ್ಕೆ ಅಷ್ಟ ಪ್ರಮಾಣಂಗಳಂತಿರಲಿ, ದೇವಾ**
**ಆರು ಆರೆಂಬುದಕ್ಕೆ ಪ್ರತ್ಯಕ್ಷ ಪ್ರಮಾಣದಿಂದರಿಯಬಹುದು ದೇವಾ.**
**ಅವಸ್ಥೆ ಮೂರರ ತೂರ್ಯ ತಿಳಿಯಿತ್ತು .**
**ತೂರ್ಯವೆರಡರ ಚಿನ್ಮಯಮೂರ್ತಿ ಅರಿಯಿತ್ತು, ದೇವಾ.**
**ಆನು ಆರೆಂದನಲುಬಾರದು ಘನಗುರು ಚೆನ್ನಬಸವನರುಹಿದ ಬಳಿಕ**
**ಕಪಿಲಸಿದ್ಧ ಮಲ್ಲಿಕಾರ್ಜುನದೇವಾ.**

ನಾನು ಯಾರು ಎಂಬುದಕ್ಕೆ ಭಗವದ್ಗೀತೆ, ಬೈಬಲ್‌ಗಳನ್ನು ಓದಿ ಅರಿಯಬೇಕಿಲ್ಲ. ಹಾಗೆ ತಿಳಿಯಲು ಹೋದರೆ ಅದು ಅನುಭವಕ್ಕೆ ಬರುವುದೂ ಇಲ್ಲ. ನಾನು ಯಾರು ಎನ್ನುವುದಕ್ಕೆ ಪ್ರತ್ಯಕ್ಷ ಪ್ರಮಾಣದಿಂದಲೆ ಅರಿಯಬಹುದು.

ಕಾಯಗಳು ಮೂರು. ಸ್ಥೂಲ ಕಾಯ, ಸೂಕ್ಷ್ಮ ಕಾಯ ,ಕಾರಣ ಕಾಯ. ಕಾರಣ ಕಾಯದಲ್ಲಿ ಸಾಕ್ಷಾತ್ ಅರಿವಿನ ಮಲ್ಲಯ್ಯನೆ ಸಂಗಮವಾಗಿದ್ದಾನೆ, ಸೂಕ್ಷ್ಮ ಕಾಯದಲ್ಲಿ ಆ ಮಲ್ಲಯ್ಯನನ್ನು ತಿಳಿಯಬೇಕಾದ ನಾನೂ ಇದ್ದೇನೆ. ನಾನು ಎನ್ನುವ ಸೂಕ್ಷ್ಮ ಕಾಯ ಅರಿವಿನ ಮಲ್ಲಯ್ಯನಿದ್ದ ಕಾಯಕ್ಕೆ

ಶರಣು ಹೋದರೆ ಸಾಕು. ಮಲ್ಲಯ್ಯನೆ ನಾನಾಗುವೆನು ಹೀಗೆಂದು ಘನಗುರು ಚನ್ನಬಸವಣ್ಣನು ಅರುಹಿದ ಬಳಿಕ ನಾನು ಯಾರೆಂದು ಅನ್ನಲುಬಾರದು.

**1935**

**ಮಾಡುವ ಕ್ರಿಯಾಕ್ರಿಯೆಗಳು ಸುಖದಃಖಗಳಲ್ಲದೆ.**
**ಭವವೀಡಾಡವು. ಮೃಡನ ಪದ ದೊರೆಯದು ನೋಡಾ.**
**ಮಾಡುವ ಕ್ರಿಯೆ ಮನೋಧರ್ಮ, ಮಾಡದ ಕ್ರಿಯೆ ಚಿತ್ತಿನ ಧೈರ್ಯ.**
**ತಾನರಿದ ಮನೋತೀತ ಮಾಡುವನಲ್ಲ.**
**ಇದ್ದು ಬಿಡುವನಲ್ಲ, ಬಿಟ್ಟು ಭವಭಾರಿಯಲ್ಲ, ಕಪಿಲಸಿದ್ಧಮಲ್ಲಿಕಾರ್ಜುನ ಗುರುವೆ.**

ಕಾಯ ಯಾವ ಕ್ರಿಯೆಯಲ್ಲಿ ತೊಡಗಿದರೂ ಕೂಡ ಅದು ಸುಖದುಃಖಗಳನ್ನು ಹೇರುತ್ತದೆ. ಜನನ ಮರಣಗಳಿಂದ ದೂರವಾಗಲು ಸಾಧ್ಯವಾಗುವುದಿಲ್ಲ. ಕಾಯ ಮಾಡುವ ಕ್ರಿಯೆಯಿಂದ ಮೃಡನ ಪದ ದೊರೆಯುವುದಿಲ್ಲ.

ಮನೋಧರ್ಮದಿಂದಾಗಿ ಕಾಯ ಕ್ರಿಯೆಗಳಲ್ಲಿ ತೊಡಗುತ್ತದೆ. ಚಿತ್ತದ ಧೈರ್ಯದಿಂದ ಕಾಯ ಕ್ರಿಯೆಗಳಲ್ಲಿ ತೊಡಗುವುದಿಲ್ಲ. ಮನಕ್ಕೆ ಅತೀತನಾದ ಮನೋತೀತನನ್ನು ತಾನು ಅರಿದರೆ ಆತ ಯಾವ ಕ್ರಿಯೆಗಳನ್ನೂ ಮಾಡುವವನಲ್ಲ. ಇದ್ದು ಬಿಡುವವನೂ ಅಲ್ಲ, ಬಿಟ್ಟು ಭವಬಾರಿಯೂ ತಾನಲ್ಲ ಕಪಿಲಸಿದ್ಧಮಲ್ಲಿಕಾರ್ಜುನ ಗುರುವೆ ಇದು ನಿನ್ನ ಲೀಲೆ.

**1936**

**ಆಗದಯ್ಯಾ, ಆಗದಯ್ಯಾ ಇಲ್ಲದವಂಗೆ, ಆಗದಯ್ಯಾ ಅಲ್ಲದವಂಗೆ,**
**ಆಗದಯ್ಯಾ ಇಲ್ಲದವಂಗೆ, ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ.**

ನಾನು ಯಾರು ಎನ್ನುವ ಅರಿವು ಇಲ್ಲದ ಮನಕ್ಕೆ ಅರಿವು ಆಗದಯ್ಯಾ. ಜ್ಞಾನದ ಸುಳಿವು ಇಲ್ಲದ ಮನಕ್ಕೆ ಆಗದಯ್ಯಾ ಆಗದಯ್ಯಾ ಅರಿವಿನ ಕೃಷಿ ಇಲ್ಲದ ಮನಕ್ಕೆ.

ಆಗದಯ್ಯಾ ಆಗದಯ್ಯಾ ಜ್ಞಾನದತ್ತ ಹೋಗದ ಮನಕ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ದರುಶನ ಮನಕ್ಕೆ ಆಗದಯ್ಯಾ .

**1937**

**ಆಗದು, ಆಗದು, ಕಾಯದ ಗುಣವಳಿಯದವಂಗೆ ಜೀವನ್ಮುಕ್ತಿ.**
**ಆಗಬೇಕು ಇದಿರಿಟ್ಟು, ಆಗಬೇಕು ಪಶ್ಚಾತ್ತಾಪ.**
**ಆಗದೆ ಆದೆನೆಂಬ ಮನುಜನ ಅರಿವು**
**ಶ್ವಾನನರಿವು ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಾತ್ವಿಕ, ರಾಜಸ, ತಾಮಸ ಇವು ಮೂರು ಕಾಯದ ಗುಣಗಳು ಮನ ಕಾಯದೊಂದಿಗೆ ಹೊತ್ತಿಗೊಮ್ಮೆ ಆಯಾ ಪಾತ್ರದಲ್ಲಿ ತೋರುತ್ತದೆ. ಮನ ತಾನು ಹಾಕುವ ಪಾತ್ರವನ್ನು ತಾನೇ

ಕಳಚಿಕೊಂಡು ನಿರ್ಗುಣಿಯಾದರೆ ಆಗದು ಆಗದು ತನಗೆ ಜೀವನ್ಮುಕ್ತಿ .

ಕಾಯಕ್ಕೆ ಮನ ಸಾತ್ವಿಕ ಪಾತ್ರದ ವೇಷವನ್ನು ಹಾಕಿ ರಾಜಸ, ತಾಮಸದ ಸುಖದುಃಖಗಳನ್ನು ಉಣ್ಣುತ್ತದೆ. ತನಗೆ ತಾನೆ ತನ್ನ ಅಜ್ಞಾನವನ್ನು ತಾನೆ ಇದಿರಿಟ್ಟು ನೋಡಿ ಪಶ್ಚಾತ್ತಾಪ ಪಟ್ಟು ಅಜ್ಞಾನದಿಂದ ಹಿಂದಡೆ ಇಡದಿದ್ದರೆ ಜ್ಞಾನ ಆಗದು .

ತನಗೆ ಜ್ಞಾನ ಆಗದೆ ಆದೆನೆಂಬ ಮನುಜನ ಅರಿವು ಶ್ವಾನನ ಅರಿವು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1938**

**ಇಲ್ಲದ ಮಾಯೆಯ ಇಲ್ಲನಿಸುವುದದೆ ಅಲ್ಲನ ಅರುಹುಕಂಡಯ್ಯಾ.**
**ಇಲ್ಲದ ಮಾಯೆ ಅಹುದೊ ಅಲ್ಲವೊ ಎಂಬುಭಯ ಭಾವ ಜಲ್ಲರಿಯ ಕಳಂಕು ಕಂಡಯ್ಯಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ನೋಡಲು ಹೋದರೆ ಕಾಯ ತ್ರಿಕೂಟ ಸಂಗಮ ಪರಮಾತ್ಮನು ಇದ್ದ ಕೈಲಾಸ ಮಾಯ ಎನ್ನುವುದು ಇಲ್ಲವೇ ಇಲ್ಲ ಇಲ್ಲದ ಮಾಯೆ ಇಲ್ಲವೇ ಇಲ್ಲ. ಇಲ್ಲದ ಮಾಯೆಯನ್ನು ಇಲ್ಲೆನಿಸುವುದೆ ಮಲ್ಲಯ್ಯನ ಅರುಹು ಕಂಡಯ್ಯಾ. ಇಲ್ಲದ ಮಾಯೆ ಇದೆಯೋ ಇಲ್ಲವೋ ಎಂಬ ಉಭಯ ಭಾವ ಜಲ್ಲರಿಯ ಕಳಂಕು ಕಂಡಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1939**

**ಅರುವಿನ ಆಚರಣೆಯಿದು**
**ಕುರುಹಿನ ಕರುಮಾಡ ನೋಡಾ, ಲಿಂಗಯ್ಯ.**
**' ಕ್ರಿಯಾ ಪಿ. ಜ್ಞಾನೇನ ವರ್ತತೇ ಎಂದ ಬಳಿಕ;**
**ಅರುಹು ಬೇಕು ಆಚರಣೆಯಲ್ಲಿ, ಮರುಹು ಬೇಕು ವಿಷಯಂಗಳಲ್ಲಿ.**
**ಈ ಅರುಹಿನ ಮರವೆಯ ಶರಣನ ಕಂಡು ಕಣ್ದೆರಹುವ**
**ಕಪಿಲಸಿದ್ಧ ಮಲ್ಲಿಕಾರ್ಜುನನು.**

ಅರುಹಿನ ಆಚರಣೆಯು ಕಾಯದ ಕರುಮಾಡ ನೋಡಾ, ಲಿಂಗಯ್ಯಾ. ಕಾಯದಲ್ಲಿ ಜ್ಞಾನವಿದೆ. ಮನ ಕಾಯವನ್ನು ಆವರಿಸಿದೆ. ಈ ಮನದಿಂದಲೆ ಕಾಯದಲ್ಲಿನದ್ದ ಜ್ಞಾನವನ್ನು ಪಡೆಯಬೇಕು. ಕಾಯವನ್ನು ಆವರಿಸಿದ ಮನ ಕಾಯದಲ್ಲಿದ್ದ ಜ್ಞಾನವನ್ನು ಪಡೆಯಬೇಕಾದರೆ ಕೃಷಿ ಮಾಡಲೇಬೇಕಾಗುತ್ತದೆ.

ಅರಿವು ಆಚರಣೆಯಲ್ಲಿ ತಂದುಕೊಳ್ಳುತ್ತಾ ಹೋದಂತೆಲ್ಲ ಕಾಮಾದಿ ಅರಿಷಡ್ವರ್ಗಗಳನ್ನು ಮಣಿಯಬೇಕಾಗುತ್ತದೆ. ನೆನಪಾದಂತೆಲ್ಲ ಮನ ಮತ್ತು ಕಾಯ ವಿಷಯಂಗಳತ್ತ ವಾಲುತ್ತದೆ. ಅರಿತರಿತು ಅರಿವನ್ನು ಆಚರಣೆಯಲ್ಲಿ ತಂದು ವಿಷಯಂಗಳನ್ನು ಮರೆಯುತ್ತ ಸದಾ ಈ ಕೃಷಿಯಲ್ಲಿರುವ ಶರಣನ ಕಂಡು ಕಾಯದಲ್ಲಿಯೇ ಸಂಗಮವಾದ ಕಪಿಲಸಿದ್ಧಿ ಮಲ್ಲಿಕಾರ್ಜುನನು ಕಣ್ದೆರೆವನು.

**1940**

**ತಾನು ಪ್ರಾಪಂಚಿಕವಾಗಿ ಪರಮಾರ್ಥವ**
**ಪಡೆಯಬೇಕೆಂಬಾಶೆಯುಳ್ಳಡೆ,**
**ಪರಧನ ಪರಸ್ತ್ರೀಯರ ವಿವರ್ಜಿಸಿ ಪೂಜಿಸುವ ಪರಶಿವನ**
**ತಾನು ಪ್ರಪಂಚಿಯಾಗಿ ಕೀರ್ತಿಯ ಪಡೆಯಬೇಕೆಂಬಾಶೆಯುಳ್ಳಡೆ.**
**ಜೀವದಯಾ ಪರತ್ವ, ಮೃಷಾಭಾಷಾನಿರಾಕರಣತ್ವ,**
**ಯಾಚಕರೊಳ್ಧಾತೃತ್ವವ ಮಾಡಿ (ಪೂಜಿಸುವ ) ನೋಡಾ ಪರಶಿವನ.**
**ಇದೆ ಅಂತರಂಗದ ವಿಚಾರ, ಇದೆ ಬಹಿರಂಗದಲ್ಲಿ ಭೂಷಣ.**
**ಇದೆ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಮಹಾಬೊಮ್ಮ ತಾನು,**
**ಕಂಡೆಯಾ ಬೊಮ್ಮಯ್ಯಾ.**

ಪ್ರಾಪಂಚಿಕ ಪರಮಾರ್ಥಿಕ ಎಂಬ ಎರಡು ಮಾರ್ಗಗಳಿವೆ. ತಾನು ಪ್ರಾಪಂಚಿಕನಾಗಿ ಪರಮಾರ್ಥವ ಪಡೆಯಬೇಕೆಂಬ ಆಶೆಯುಳ್ಳಡೆ ಪರಧನ ಪರಸ್ತ್ರೀಯರ ವಿವರ್ಜಿಸಿ ಪರಶಿವನನ್ನು ಪೂಜಿಸುವನು. ಇದಕ್ಕೆ ತನ್ನದೇ ಆದ ಸೂತ್ರಗಳಿವೆ. ಜ್ಞಾನಕ್ಕೆ ಪ್ರಯಾಣಿಸುವ ಬಯಕೆವುಳ್ಳಾತನು ಬಲ್ಲ ಜ್ಞಾನಿಯಿಂದ ಅರಿವನರಿತು ಪರಮಾರ್ಥದೆಡೆಗೆ ಹೋಗಬಹುದು.

ತಾನು ಪ್ರಪಂಚಿಯಾಗಿ ಕೀರ್ತಿ ಪಡೆಯಬೇಕೆಂಬ ಆಸೆಯುಳ್ಳಡೆ ಜೀವದಯಾಪರತ್ವವನ್ನು ಹೊಂದಿ ಕಠಿಣ ನುಡಿಯನ್ನು ನುಡಿಯದೆ ಮೃದು ಭಾಷಿಯಾಗಿರಬೇಕು.

ಸಕಲ ಕಾಯಗಳನ್ನು ತನ್ನ ಕಾಯದಂತೆ ಕಂಡು ಪರಮಶಿವನನ್ನು ಆರಾಧಿಸಬೇಕು ಇದೆ ಅಂತರಂಗದ ವಿಚಾರ, ಇದೆ ಬಹಿರಂಗದ ಭೂಷಣ, ಇದೆ ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಮಹಾ ಬೊಮ್ಮ ತಾನು ಎಂದು ಸಿದ್ಧರಾಮಶಿವಯೋಗಿಗಳು ಬೊಮ್ಮಯ್ಯ ಶರಣರಿಗೆ ಹೇಳಿದ್ದಾರೆ.

**1941**

**ಕರದಲ್ಲಿಯ ಅರುಹು ಕರಕರಿಸಿ ಬೆರಸಿದಂತಾದಡೆ ,**
**ಕರಕಂಜದ ಪರವಸ್ತು ತಾನೆ ನೋಡಾ .**
**ಕರದಲ್ಲಿಯ ಅರುಹು ಕರಂದಂತಾಗಬಾರದಯ್ಯ .**
**'ಕರಾಭ್ಯಾ ರಹಿತಸ್ಯ ಕುತಃ ಕರ್ಮ ಕುತ ಆನಂದಃ**
**ಎಂಬುದು ಸಿದ್ಧ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿಯೇ ಅರಿವು ಭರಿತವಾಗಿದೆ. ಕಾಯವೇ ಕಾಯದಲ್ಲಿದ್ದ ಅರಿವನ್ನು ಕಣಕಣದಲ್ಲಿ ಸಂಗಮ ಮಾಡಿಕೊಂಡು ಕಣ್ದೆರದು ನೋಡಿದಾಗ ಆ ಪರವಸ್ತು ತಾನೆ ಆಗಿರುವನು. ಕಾಯದಲ್ಲಿರುವ ಅರಿವು ಕಾಯವೆ ಬಳಸದಿದ್ದರೆ ಕಾಯದಲ್ಲಿಯೇ ಇದ್ದು ಕಾಯ ಕರಗಿಹೋದಂತೆ ಕರಗಿ ಹೋಗುವುದು. ಕಾಯದ ಮೂರು ಗುಣಗಳನ್ನು ಅರಿತರಿತು ನಿರ್ಗುಣಿಯಾಗಿ ಕಾಯದ ಅರಿವನ್ನು ಕಾಯವೆ ಬಳಸಬೇಕು. ಕಾಯ ಕಪಿಲಸಿದ್ಧ ಮಲ್ಲಿಕಾರ್ಜುನ ಇದ್ದ ಪ್ರಸಾದ ಕಾಯ.

**1942**

**ಹರಿ ನಾನೆಂದಲ್ಲಿ ಭವಮದಗಜಕ್ಕೆ ಹರಿಯಲ್ಲದೆ ,**
**ದಶಾವತಾರದ ಹರಿಯಲ್ಲ ನೋಡಾ .**
**ಹರ ನಾನೆಂದಲ್ಲಿ ಸರ್ವಭಾವನಾವಿರಹಿತ ತಾನಲ್ಲದೆ,**
**ಪಂಚಕೃತ್ಯಾಧಿಕಾರಿ ಹರನಲ್ಲ ನೋಡಾ .**
**ನರ ನಾನೆಂದಲ್ಲಿ ಉತ್ಪತ್ತಿವಿರಹಿತ ನಾನಲ್ಲದೆ ,**
**ಉತ್ಪತ್ತಾಧಿಕಾರಿ ನರ ನಾನಲ್ಲ ನೋಡಾ .**
**ತೋರುವ ಸಚರಾಚರ ನಾನೆಂದಲ್ಲಿ ಜಡಾಜಟನಾನಲ್ಲವೆ ,**
**ಜನನ ಮರಣ ಪೊದ್ದಿದ ಸಚರಾಚರ ನಾನಲ್ಲ ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ಹರಿ ನಾನೆಂದಲ್ಲಿ ಸ್ಥೂಲ ಕಾಯದ ಮದವನ್ನು ಅರಿಯುವ ಹರಿ ನಾನು. ದಶಾವತಾರವನು ಅರಿಯುವ ಹರಿಯು ನಾನಲ್ಲ . ಅಂತಹ ಹರಿ ಎನ್ನುವವರು ಯಾರೂ ಇಲ್ಲ. ಕಾಯದಲ್ಲಿ ಸಂಗಮವಾದ ಹರನ ಕಾಯವದು ಭಾವನೆಗಳೆ ಇಲ್ಲದ ನಿರ್ಭಾವದ ಕಾಯ. ಹರನ ಕಾಯ. ಈ ಕಾಯವು ನಾನಲ್ಲದೆ ಪಂಚ ಕೃತ್ಯಾಧಿಕಾರಿ ಹರನು ನಾನಲ್ಲ ನೋಡಾ.

ನರನು ನಾನೆಂದಲ್ಲಿ ಉತ್ಪತ್ತಿವಿರಹಿತ ನಾನು ಉತ್ಪತ್ತಿ ಅಧಿಕಾರಿ ನರ ನಾನಲ್ಲ ನೋಡಾ. ತೋರುವ ಸಚರಾಚರ ನಾನೆಂದಲ್ಲಿ ಜಡಾಜಡ ನಾನಲ್ಲದೆ ಜನನ ಮರಣ ಪೊದ್ದಿದ ಸಚರಾಚರ ಜಡನು ನಾನಲ್ಲ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

**1943**

**ಸ್ವರ್ಗವೆಂದಡೆ ಸುಖಕ್ಕೆ ನಾಮ, ನರಕವೆಂದಡೆ ಬಾಧೆಗೆ ನಾಮ .**
**ಸುಖವೆಂದಡೆ ಪುಣ್ಯ , ನೋವೆಂದಡೆ ದುಃಖ. ಸುಖವಿಯೋಗವಾದಲ್ಲಿ ದುಃಖವೆನಿಸಿತ್ತು ,**
**ದುಃಖವಿಯೋಗವಾದಲ್ಲಿ ಸುಖವೆನಿಸಿತ್ತು . ಸುಖಾಸುಖವೆಂದರಿಯಬಾರದು ,**
**ಮೊದಲ ಹಿಡಿದ ಸಂಗತಿಯಿಂದ , ಸುಖಸಂಗದಿಂದ ದುಃಖ ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ .**

ಕಾಯವನ್ನು ಆವರಿಸಿದ ಮನ ಕಾಯದೊಂದಿಗೆ ಸುಖ ಹುಡುಕುತ್ತ ಹೋಗಿ ದುಃಖವನ್ನು ಕಾಯದ ಮೇಲೆ ಎಳೆಯುತ್ತದೆ.

ಸುಖವೆಂದಡೆ ಪುಣ್ಯ, ನೋವೆಂದಡೆ ದುಃಖ. ಸುಖ ವಿಯೋಗದಲ್ಲಿ ದುಃಖವೆನಿಸಿತ್ತು . ದುಃಖ ತಪ್ಪಿದ್ದಲ್ಲಿ ಸುಖವೆನಿಸಿತ್ತು . ಇದು ಮನದ ಕೆಲಸ ಸುಖವೂ ಸುಖವಲ್ಲ ದುಃಖವೂ ದುಃಖವಲ್ಲ ಸುಖ ದುಃಖಗಳನ್ನು ಕಳೆದುಕೊಂಡು ಅರಿವಿನ ಪರಮಸುಖದೆಡೆಗೆ ಹೋಗುವುದೆ ನಿಜವಾದ ಸುಖ.

**1944**

**ಸುಖಕ್ಕೆ ದೈವವೆಂದು, ಸುಖಕ್ಕೆ ವಿಧಿಲಿಪಿಯೆಂದು,**

**ಸುಖಕ್ಕೆ ಪುಣ್ಯವೆಂದು, ಸುಖಕ್ಕೆ ಪ್ರಾರಬ್ಧವೆಂದು, ನುಡಿವರಯ್ಯಾ ಸಿದ್ಧಾಂತಿಗಳು.**
**ಸುಖವೆ ದೈವವೆನಲಾಗಿ ಮಾಡುವ ಕ್ರಿಯೆಯಲ್ಲರಿಯಬಂದಿತ್ತು . ಸುಖವು ದೈವವಲ್ಲ.**
**ದೈವವದು ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಕೂಡುವ ಕೂಟವು.**

ಸುಖ ಎನ್ನುವುದು ದೈವವೂ ಅಲ್ಲ, ವಿಧಿಲಿಪಿಯೂ ಅಲ್ಲ. ಅದು ಪುಣ್ಯವೂ ಅಲ್ಲ ಪ್ರಾರಬ್ಧವೂ ಅಲ್ಲ. ಮಾಡುವ ಕಾಯಕದಲ್ಲಿ ಸುಖವೂ ಇದೆ ದುಃಖವೂ ಇದೆ. ಇವೆರಡು ಅಜ್ಞಾನ.

ಕಾಯವನ್ನು ಆವರಿಸಿದ ಮನೋ ಕಾಯದ ಮೂಲಕ ಕಾಯದಲ್ಲಿಯೇ ಸಂಗಮವಾದ ಜ್ಞಾನ ಕಾಯಕ್ಕೆ ಹೋಗುವ ಕೃಷಿಯೇ ನಿಜವಾದ ಜ್ಞಾನಕಾಯಕ. ಇದು ಸತ್ಯ ಶುದ್ಧ ಕಾಯಕ. ಈ ಕಾಯಕದಿಂದ ಕಪಿಲಸಿದ್ಧಮಲ್ಲಿಕಾರ್ಜುನನನ್ನು ಕೂಡಬಹುದು ಹೀಗೆ ಕೂಡುವ ಕೂಟವು ಕೂಡದ ಅಗಲದ ಕೂಟ. ಕಪಿಲಸಿದ್ಧಮಲ್ಲಿಕಾರ್ಜುನನನ್ನು ಕಾಣುವ ನಿಜ ಕಾಯಕ.

**1945**

**ಹುಟ್ಟಿದ ಮಗನ ರಚನೆ ಹುಟ್ಟಲಿಕ್ಕೆ ಯೋಗ್ಯವಾದಂತೆ**
**ಹುಟ್ಟಿದ ಮಾಯೆ ಬೆಟ್ಟ ಜನ ಅರಿವ ಪರಿಯಂತೆ**
**ನೀನಿಪ್ಪ ಜೀವಭಾವದಲ್ಲಿ, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯದಲ್ಲಿ ಹುಟ್ಟಿದ ಮಾಯೆ ಕಾಯದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನನ್ನು ಆತನಿದ್ದ ಕಾಯವನ್ನು ಆವರಿಸಿ ಇಡೀ ಕಾಯವನ್ನು ಕುರುಡು ಕಾಯವನ್ನಾಗಿ ಮಾಡಿದೆ. ಈ ಕಾಯಕ್ಕೆ ಕಣ್ಣಿದ್ದರೂ ಕಾಣುವುದಿಲ್ಲ. ಕಿವಿ ಇದ್ದರೂ ಕೇಳುವುದಿಲ್ಲ, ಮೂಗು, ನಾಲಿಗೆ, ಚರ್ಮ ಇದ್ದರೂ ಕೂಡ ಜ್ಞಾನದ ಬಳಕೆಗೆ ಬಾರದ ಇಂದ್ರಿಯಗಳಾಗಿವೆ. ಕಾಮಾದಿ ಅರಿಷಡ್ವರ್ಗಗಳಿಗೆ ಬಳಕೆಯಾಗುವ ಮಾಯೆಯನ್ನು ಇಡೀ ಲೋಕವೆ ಅರಿಯಲು ಸಾಧ್ಯವಾಗುತ್ತಿಲ್ಲ.

ಹುಟ್ಟಿದ ಮಗನ ರಚನೆ ಹುಟ್ಟಲಿಕ್ಕೆ ಮಾತ್ರ ಯೋಗ್ಯವಾದಂತೆ ಅರಿವಿನ ಮಲ್ಲಯ್ಯನೆ ನೀನಿರುವ ಕಾಯವನ್ನು ನಿನಗಾಗಿ ಬಳಕೆ ಮಾಡದಿದ್ದರೆ ಅದು ವ್ಯರ್ಥ.

**1946**

**ಬಸವನವ ಎರಡನೆಯ ಶಂಭುವೆನ್ನುವರು .**
**ನಾವು ಮೂರನೆಯ ಶಂಭುವೇನಯ್ಯಾ ?**
**ತನ್ನ ತಾ ತಿಳಿದಲ್ಲಿ ಎರಡನೆಯ ಶಂಭುವೆನಿಸಿದ ,**
**ತನ್ನ ತಾ ಮರೆದಲ್ಲಿ ಮಹೀತಳದ ಮಾನವನೆನಿಸಿದ ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಬಸವರಸರನ್ನು ಎರಡನೆಯ ಶಂಭುವೆನ್ನುವರು ಹಾಗಾದರೆ ನಾವು ಮೂರನೆಯ ಶಂಭುವೇನಯ್ಯಾ? ತನ್ನ ತಾ ತಿಳಿವಲ್ಲಿ ಎರಡನೆಯ ಶಂಭುವೆನಿಸಿದ. ತನ್ನ ತಾ ಮರೆದಲ್ಲಿ ಮಹೀತಳ ಮಾನವನೆನಿಸಿದ. ತನ್ನ ತಾ ಅರಿಯದ ಮುನ್ನ ತನ್ಮಯವಾದ ಅರಿವು ತನ್ನ ತಾನರಿದ ಬಳಿಕ ಅರಿವು ತನ್ಮಯವೆಂದು ಅರಿತ ಅರಿವು. ಆ ಅರಿವೆ ಕರಿಗೊಂಡ ಬಳಿಕ ತಾನೆ ಸೌರಾಷ್ಟ್ರ ಸೋಮೇಶ್ವರ ಎಂದು ಗುಜರಾತಿನ ಆದಯ್ಯ ಶರಣರು ಹೇಳಿದ್ದಾರೆ.

**1947**

**ತಿಳಿದೆ ನಾ ತಿಳಿದೆ ನಾ ಎಂದು ಹಲಬರು ಹೋದರು ಅಹಂಕಾರದಲ್ಲಿ .**
**ತಿಳಿಯೆ ನಾ ತಿಳಿಯೆ ನಾ ಎಂದು ಹಲಬರು ಹೋದರು ಮರವೆಯಲ್ಲಿ .**
**ತಿಳಿದೆನೆಂಬುದು ತಿಳಿಯೆನೆಂಬುದು ಜ್ಞಾನದ ಮೈದೊಡಕು .**
**ತಿಳಿಯೆ ಅರಿವು ಮರವೆಯೆಂಬುಭಯವ ತಿಳಿದು ತಿಳಿಯದಂತಿದೆ .**
**ತಿಳಿನೀರ ನಳಿನಾಕ್ಷನುತ ಕಪಿಲಸಿದ್ಧ ಮಲ್ಲಿಕಾರ್ಜುನ ತಾನೆ**

ನಾನು ತಿಳಿದೆ ನಾನು ತಿಳಿದೆ ಎಂದು ಹಲುಬಿ ಹೋದರು ಅಹಂಕಾರದಲ್ಲಿ ಕೆಲವರು. ನಾ ತಿಳಿಯೆ ನಾ ತಿಳಿಯೆ ಎಂದು ಹಲುಬಿ ಹೋದರು ಮರವೆಯಲ್ಲಿ ಕೆಲವರು. ತಿಳಿದೆನೆಂಬುದು ತಿಳಿಯನೆಂಬುದು ಜ್ಞಾನದ ಮೈದೊಡಕು. ಅರಿವು ಮರವೆಯೆಂಬುಭಯವನ್ನು ತಿಳಿದು ತಿಳಿಯದಂತಿದೆ ತಿಳಿನೀರ ನಳಿನಾಕ್ಷನು ತಾನೆ ಕಪಿಲಸಿದ್ಧ ಮಲ್ಲಿಕಾರ್ಜುನ

**1948**

**ಚರಿಸುವ ಚರನಿಗೆ ಚರ್ಚೆಯೆ ಭೂಷಣ .**
**ಸುಂದರ ನಾರಿಗೆ ಗಂಭೀರ ಪುರುಷನೆ ಭೂಷಣ .**
**ಕೊಳನಲ್ಲಿಯ ನೀರಿಗೆ ಕಲಹಂಸೆಯೆ ಭೂಷಣ .**
**ವನದಲ್ಲಿಯ ವಸಂತಕ್ಕೆ ಕೋಕಿಲನಾದವೆ ಭೂಷಣ.**
**ನಮ್ಮ ಕಪಿಲಸಿದ್ಧ ಮಲ್ಲಿಕಾರ್ಜುನನ ಶರಣರಿಗೆ ನಿರ್ಮಲ ನಿಜಾನಂದವೆ ಭೂಷಣ .**

ಸರ್ವ ಕಾಯಗಳಲ್ಲಿಯೂ ಅರಿವಿನ ಮಲ್ಲಯ್ಯ ಸಂಗಮವಾಗಿದ್ದಾನೆ. ಕಾಯಕ್ಕೆ ಅರಿವು ಭೂಷಣ ಮನದಿಂದಲೆ ಅರಿವಿನ ದರ್ಶನ ಮಾಡಿಕೊಂಡು ಮನ ಕಾಯಕ್ಕೆ ಭೂಷಣನಾಗಬೇಕು ಆಗ ಮನ ನಿರ್ಮಲ ನಿಜಾನಂದವನು ಪಡೆದು ಕಾಯದಲ್ಲಿಯೇ ಲೀನವಾಗಿ ಮುಕ್ತಿಯನ್ನು ಪಡೆಯುತ್ತದೆ.

ಸುಂದರ ನಾರಿಗೆ ಗಂಭೀರ ಪುರುಷನೆ ಭೂಷಣ, ಕೊಳದಲ್ಲಿಯ ನೀರಿಗೆ ಹಂಸವೇ ಭೂಷಣ, ವನದಲ್ಲಿಯ ವಸಂತಕ್ಕೆ ಕೋಗಿಲೆಯ ನಾದವೆ ಭೂಷಣ ಹಾಗೆಯೇ ಕಾಯಕ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನನೆ ಭೂಷಣ.

**1949**

**ಕಲ್ಲಿನಲ್ಲಿ ವಲ್ಲಭನಿದ್ದಾನೆಂದು ಅಲ್ಲಾಡುತ್ತಾರೆ ನೋಡಾ ,**
**ಅಲ್ಲಯ್ಯಾ ಈ ಖುಲ್ಲಮನುಜರು .**
**ಕಲ್ಲಿನಲ್ಲಿ ವಲ್ಲಭನ ಕಂಡೆವೆಂದು ಬಡಿದಾಡುತ್ತಾರೆ ನೋಡಾ ,**
**ಅಲ್ಲಯ್ಯಾ, ಈ ಹೊಲ್ಲ ಮನುಜರು .**
**ಕಲ್ಲಿನಲ್ಲುಂಟು ಮಣ್ಣಿನಲ್ಲಿಲ್ಲವೆಂದೆಂಬಡೆ,**
**ಅಂತರ್ಯಾಮಿ ಪರಿಪೂರ್ಣತ್ವ ಭಂಗವಹುದಯ್ಯಾ ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .**

ಕಲ್ಲನ್ನು ಕೆತ್ತಿ ಮೂರ್ತಿಯನ್ನಾಗಿ ಮಾಡಿ ಅದನ್ನೆ ದೇವರೆಂದು ಆರಾಧಿಸುತ್ತಾರೆ. ಲೋಕದ ಮನುಜರು. ಕಲ್ಲಿನಲ್ಲಿದ್ದ ದೇವರು ಮಣ್ಣಿನಲ್ಲಿ ಇಲ್ಲವೆಂದರೆ ಜಗದಗಲ ಮುಗಿಲಗಲ ಎನ್ನುವ ಮಾತು ಸುಳ್ಳಾಗುವುದಿಲ್ಲವೆ. ಅಣು ರೇಣು ತೃಣಕಾಷ್ಟದಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಸಂಗಮವಾಗಿದ್ದಾನೆ. ಕಣ್ಣನ್ನು ಆವರಿಸಿದ ಮನ ಕಣ್ಣಲ್ಲಿಯೆ ಇದ್ದ ಮುಕ್ಕಣ್ಣನ ಕಣ್ಣಿನಲ್ಲಿ ಲೀನವಾದ ತನಗೆ ತಾನೆ ಎಲ್ಲೆಡೆ ಇದ್ದ ಭಗವಂತ ಕಾಣುತ್ತಾನೆ.

**1950**

**ಚರಿಸುವ ಜನರೆಲ್ಲ ದೇವರಲ್ಲ, ಚರಿಸಿ ಚರಿಸಿ ಭ್ರಮೆಗೊಂಡರು ಮತ್ತ .**
**ದೇವರು ದೇವರು ಎಂದು ನೋಡಾ.**
**ಚರಿಸುವ ಜನರು ದೇವರು, ಚರಿಸದ ವಸ್ತು ದೇವರು,**
**ನಾ ನೀನೆಂಬುಭಯ ದೇವರು, ಕಪಿಲಿಸಿದ್ಧಮಲ್ಲಿಕಾರ್ಜುನ ದೇವರು ದೇವರು.**

ಸಕಲ ಕಾಯಗಳಲ್ಲಿ ಅರಿವಿನ ದೇವರು ಸಂಗಮವಾಗಿದ್ದಾನೆ. ಹೀಗಾಗಿ ಬುದ್ಧ ,ಕಾಯವನ್ನು ಬೋಧೀವೃಕ್ಷ ಎಂದು ಕರೆದ. ಶರಣರು ನಡೆದಾಡುವ ಮರ ಎಂದು ಕರೆದರು.

ನಡೆದಾಡುವ ಸಕಲ ಕಾಯಗಳಲ್ಲಿ ಅರಿವಿನ ದೇವರು ಕಾಯದೊಂದಿಗೆ ನಡೆಯದೆ ಕಾಯದಲ್ಲಿಯೇ ಇದ್ದಾನೆ. ವಾಹನದ ಚಕ್ರಗಳು ಚಲಿಸುತ್ತವೆ. ಚಕ್ರಗಳಿಗೆ ಆಧಾರವಾದ ಕಂಬ ಚಲಿಸುವುದಿಲ್ಲ. ಹಾಗೆಯೇ ಕಾಯದಲ್ಲಿದ್ದ ದೇವರು ಜಗದಗಲ ಮುಗಿಲಗಲ ವ್ಯಾಪಿಸಿಕೊಂಡಿದ್ದಾನೆ.

**1951**

**ಆಗದಾಗದು ಮಾಡದವಂಗೆ ಬ್ರಹ್ಮಪದವಿ.**
**ಆಗದಾಗದು ಮಾಡದವಂಗೆ ವಿಷ್ಣುಪದವಿ.**
**ಆಗದಾಗದು ಮಾಡದವಂಗೆ ಶಿವಪದವಿ.**
**ಆಗದಾಗದು ಮಾಡದವಂಗೆ ತೂರ್ಯಾತೀತ ನಿರ್ಮಲ ನಿಜಾನಂದ,**
**ಕಪಿಲಿಸದ್ಧಮಲ್ಲಿಕಾರ್ಜುನನ ಅರಿವು.**

ಕಾಯದಲ್ಲಿ ಮೂವರು ಮಹಾಜ್ಞಾನಿಗಳು ಸಂಗಮವಾಗಿದ್ದಾರೆ. ಸ್ಥೂಲಕಾಯದಲ್ಲಿ ವಿಷ್ಣು, ಸೂಕ್ಷ್ಮ ಕಾಯದಲ್ಲಿ ಬ್ರಹ್ಮ, ಕಾರಣ ಕಾಯದಲ್ಲಿ ಶಿವ ಸಂಗಮವಾಗಿದ್ದಾರೆ. ನಾನು ಸಾಕ್ಷಿಯಾಗಿ ಕೃಷಿ ಮಾಡದಿದ್ದರೆ ಬ್ರಹ್ಮ ಪದವಿಯು ದೊರಕದು, ಕೃಷಿ ಮಾಡದಿದ್ದರೆ ವಿಷ್ಣು ಪದವಿಯು ದೊರಕದು. ಕಾರಣ ಕಾಯದಲ್ಲಿ ಕೆಲಸ ಮಾಡದಿದ್ದರೆ ಶಿವ ಪದವಿಯೂ ದೊರಕದು. ಆಗದಾಗದು ಮಾಡದವನಿಗೆ ತೂರ್ಯಾತೀತ ನಿರ್ಮಲ ನಿಜಾನಂದನ ಕಪಿಲಸಿದ್ಧಮಲ್ಲಿಕಾರ್ಜುನನ ಅರಿವು.

**1952**

**ಮಾಡಬೇಕು, ಮಾಡಬೇಕು, ಮಹಾನುಭಾವರ ಸಂಗವ.**
**ನೋಡಬೇಕು ನೋಡಬೇಕು, ಸಿದ್ಧಾಂತ ವೇದಾಂತಂಗಳ.**
**ಹಾಡಬೇಕು ಹಾಡಬೇಕು, ಪರಶಿವಲಿಂಗವ.**

**ಕೂಡಬೇಕು ಕೂಡಬೇಕು, ಕಪಿಲಿಸಿದ್ಧಮಲ್ಲಿಕಾರ್ಜುನಲಿಂಗವ.**

ಕಾಯದೊಂದಿಗೆ ಸಂಗಮಾಡಿದ ಮನಕ್ಕೆ ಮಹಾನುಭವಾರ ಸಂಗವನ್ನು ಮಾಡಿ ಸತ್ಸಂಗದಲ್ಲಿ ಭಾಗಿಯಾಗಬೇಕು ಎನ್ನುವ ಇಚ್ಛೆ ಬಲವಾಗಿ ಮೂಡಿದರೆ ಅನುಭಾವಿಗಳ ಸಂಗ ಮಾಡುತ್ತದೆ. ಸಿದ್ಧಾಂತಿ ವೇದಾಂತಿಗಳು ರಚಿಸಿದ ಪುಸ್ತಕಗಳನ್ನು ಓದುವ ಒಲವು ಮೂಡುತ್ತದೆ.

ಅಂಗದಲ್ಲಿಯೇ ಸಂಗಮವಾದ ಪರಶಿವ ಲಿಂಗವನ್ನು ಕೂಡಿ ಮನ ಅರಿವಿನ ಹಾಡನ್ನೇ ಹಾಡುತ್ತದೆ. ಕಾಯದಲ್ಲಿ ಸಂಗಮವಾದ ಕಪಿಲಿಸದ್ಧಮಲ್ಲಿಕಾರ್ಜುನ ಲಿಂಗವನ್ನು ಕೂಡಿ ಮನ ಆ ಲಿಂಗವೆ ತಾನಾಗುತ್ತದೆ.

**1953**

**ನನ್ನಿಚ್ಛೆ ತನ್ನ ತಂದೀತೆಂದರಿಯೆ, ಆತನಿಚ್ಛೆಯಿಂದ ನಾ ಬಂದೆನೆಂಬುದ ಅರಿಯೆ**
**ನನ್ನಿಚ್ಛೆಯಾಗಲಿ, ಶಿವನಿಚ್ಛೆಯಾಗಲಿ, ಬಂದುದು ನೀನಾನೆಂದೆ.**
**ಇದಕ್ಕೆ ಇನ್ನು ಬರಬಾರದ ಚೆನ್ನ ಮಾರ್ಗ ತೋರಾ,**
**ಚೆನ್ನಬಸವ ಕಪಿಲ ಸಿದ್ಧಮಲ್ಲಿಕಾರ್ಜುನಾ.**

ನಾನು ಎನ್ನುವ ಮನ ತನ್ನಿಚ್ಛೆಯಿಂದ ಕಾಯದೊಂದಿಗೆ ಬಂದಿರುವುದೆಂದು ಅರಿಯದು ಆ ಪರಮಾತ್ಮನ ಇಚ್ಛೆಯಿಂದ ತಾನು ಬಂದಿರುವೆನೆಂದು ಅರಿಯದು.

ತನ್ನಿಚ್ಛೆಯಿಂದಲಿ ಬರಲಿ ಅಥವಾ ಶಿವನಿಚ್ಛೆಯಿಂದಾಗಲಿ ಬರಲಿ, ಬಂದು ಕಾಯದಲ್ಲಿ ನಿಂತಿರುವುದಂತು ಸತ್ಯ. ಪುನಃ ಕಾಯ ಧರಿಸಿ ಬರಬಾರದಂತಹ ಸುಂದರವಾದ ಮಾರ್ಗವನ್ನು ತೋರಾ ಚೆನ್ನಬಸವ ಕಪಿಲಸಿದ್ಧ ಮಲ್ಲಿಕಾರ್ಜುನ.

**1954**

**ಪರತರವ ಸಾಧಿಸುವಡೆ ಪ್ರಪಂಚದ ವಿಷಯ ಅಳಿದಿರಬೇಕು.**
**ರಾಜ್ಯವ ಸಾಧಿಸುವಡೆ ಪ್ರಾಣದಾಸೆಯ ಮರೆದಿರಬೇಕು.**
**ವಿದ್ಯೆಯ ಸಾಧಿಸುವಡೆ ಅನ್ಯ ಆಸೆಯ ಮರೆದಿರಬೇಕು.**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡುವಡೆ**
**ಸಂಶಯವಳಿದು ನಿಶ್ಚಿಂತನಾಗಬೇಕು.**

ಪರಮಾತ್ಮನ ದರುಶನ ಮಾಡಿಕೊಳ್ಳುವ ಆಸೆ ಹುಟ್ಟಿದಡೆ ಅರಿಷಡ್ವರ್ಗಗಳನ್ನು ಕಳೆದುಕೊಳ್ಳಬೇಕು. ರಾಜ್ಯವನ್ನು ಸಾಧಿಸುವ ಆಸೆ ಹುಟ್ಟಿದರೆ ಪ್ರಾಣದಾಸೆಯನ್ನು ಮರೆಯಬೇಕು. ವಿದ್ಯೆ ಸಾಧಿಸುವ ಆಸೆ ಹುಟ್ಟಿದರೆ ಅನ್ಯ ಆಸೆಯನ್ನು ಮರೆಯಬೇಕು. ಕಾಯಕದಲ್ಲಿಯೇ ಸಂಗಮವಾದ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಕೂಡುವ ಆಸೆ ಹುಟ್ಟಿದರೆ ಮನೆ ನಿಶ್ಚಿಂತನಾಗಬೇಕು.

**1955**

**ಬಡವರ ಭೋಜನ ಭೋಗಿಸಿದವ ಭವಾನೀಪುತ್ರ ನೋಡಯ್ಯಾ.**

**ಕಡವರನ ಎಡೆಗೊಂಡವ ವಿಷ್ಣುವಿನ ವಂಶದವ ನೋಡಯ್ಯಾ.**
**ಬಡವರ ಭೋಜನ ಅಮೃತ ಸೇವನೆ,**
**ಕಡವರನಮೃತ ಸುರಾಪಾನ ನೋಡಾ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ**

ಈ ವಚನಕ್ಕೆ ಅನುಭಾವ ಮಾಡಲಾಗಿರುವುದಿಲ್ಲ.

**1956**

**ಅಂತರ್ಲಿಂಗ ಬಾಯಿ ತೆರೆದ ಬಳಿಕ,**
**ಬಹಿರ್ಲಿಂಗದ ಪೂಜೆ ಮೋಟನ ಮೌಳಿಯಂತೆ,**
**ಅಂತರ್ಲಿಂಗ ಬಹಿರ್ಲಿಂಗ ಬೇರಾದ ಬಳಿಕ**
**ಕಪಿಲಸಿದ್ಧ ಮಲ್ಲಿಕಾರ್ಜುನ ಒಲಿಯನಂತೆ !**

ಈಜು ಕಲಿಯುವುದಕ್ಕಾಗಿ ಈಜುವ ಕಾಯಿ ಬೆನ್ನಿಗೆ ಕಟ್ಟಿಕೊಂಡು ಈಜು ಕಲಿಯುತ್ತೇವೆ. ಈಜು ಕಲಿತ ಬಳಿಕ ಈಜು ಕಾಯಿಯನ್ನು ಪುನಃ ಬೆನ್ನಿಗೆ ಕಟ್ಟಿಕೊಳ್ಳುವುದಿಲ್ಲ ಅಂತೆಯೇ,

ಅಂಗದ ಮೇಲೆ ಕಟ್ಟಿಕೊಂಡ ಲಿಂಗ ಅಂಗೈ ಮೇಲೆ ಇಟ್ಟುಕೊಂಡು ಅತ್ತ ಇತ್ತ ಸುಳಿದಾಡುವ ಕಣ್ಣ ಆಲಿ ನಿಲ್ಲುವುದಕ್ಕಾಗಿ ಲಿಂಗ ನೋಡುತ್ತೇವೆ. ಲಿಂಗ ನೋಡಿ ನೋಡಿ ಕಣ್ಣ ಆಲಿ ನಿಂತ ಬಳಿಕ ಲಿಂಗದ ಅವಶ್ಯಕತೆ ಇಲ್ಲ. ಅಂತರ್ಲಿಂಗ ತನಗೆ ದೊರೆತ ಬಳಿಕ ಬಹಿರ್ಲಿಂಗದ ಅವಶ್ಯಕತೆ ತನಗೆ ಇರುವುದಿಲ್ಲ.

**1957**

**ಹಸಿವುದೋರದ ಮುನ್ನ, ತೃಷೆದೋರದ ಮುನ್ನ,**
**ವ್ಯಾಧಿ ವಿಪತ್ತುಗಳು ಬಂದಡಸದ ಮುನ್ನ,**
**ಕಪಿಲಸಿದ್ಧ ಮಲ್ಲಿಕಾರ್ಜುನಲಿಂಗವ ಪೂಜಿಸೋ ಮುನ್ನ ಮುನ್ನ !**

ಕಾಯದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನನ್ನು , ಕಾಯವನ್ನು ಆವರಿಸಿದ ಮನ ಪೂಜಿಸಲೇಬೇಕು. ಎಲೆ ಮನವೆ, ನಿನಗೆ ಹಸಿವುದೋರದ ಮುನ್ನ , ತೃಷೆಯಾಗದ ಮುನ್ನ ವ್ಯಾಧಿ ವಿಪತ್ತುಗಳು ಬಂದೊರಗದ ಮುನ್ನ ಕೈಯನ್ನು ಊರಿ ಬೆನ್ನು ಬಾಗದ ಮುನ್ನ ಒಮ್ಮೆ ಪೂಜಿಸು ಕಪಿಲಸಿದ್ಧ ಮಲ್ಲಿಕಾರ್ಜುನನನ್ನು .

**1958**

**ತನ್ನವರೆಯನ್ನಬಾರದು ತನ್ನ ಬಂಧುಗಳೆನ್ನಬಾರದು,**
**ತನಗನ್ಯರೆನ್ನಬಾರದು ತಮ್ಮ ತಮ್ಮ ಮನಕ್ಕೆ ಮನವೆ ಸಾಕ್ಷಿ**
**ಮನಕ್ಕೆ ಮಹಾದೇವ ಕಪಿಲಸಿದ್ಧ ಮಲ್ಲಿಕಾರ್ಜುನನೆ ಸಾಕ್ಷಿ ಬಿಲ್ಲೇಶಯ್ಯಾ**

ತನಗೆ ಜ್ಞಾನ ಸಾಕ್ಷಾತ್ಕಾರವಾದ ಮೇಲೆ ತನ್ನವರೆನ್ನಬಾರದು. ತನ್ನ ಬಂಧುಗಳೆನ್ನಬಾರದು.

ಹಾಗೆಯೇ ತನಗೆ ಅನ್ಯರೆನ್ನುವವರು ಕೂಡ ಯಾರೂ ಇಲ್ಲ.

ಇಡೀ ಬ್ರಹ್ಮಾಂಡದಲ್ಲಿ ಕಾಯವುಳ್ಳವರೆಲ್ಲರು ತನ್ನವರೆ ಆಗಿದ್ದಾರೆ. ತಮ್ಮ ತಮ್ಮ ಮನಕ್ಕೆ ಮನವೆ ಸಾಕ್ಷಿ ಮನಕ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನನೆ ಸಾಕ್ಷಿ, ಎಂದು ಸಿದ್ಧರಾಮ ಶಿವಯೋಗಿಗಳು ಬಿಲ್ಲೇಶಯ್ಯ ಶರಣರಿಗೆ ಜ್ಞಾನದ ಮಹಾಸೂತ್ರವನ್ನು ಹೇಳಿದ್ದಾರೆ.

**1959**

**ನ್ಯಾಯಿ ತಾನಾದಡೆ ಅನ್ಯಾಯ ಮಾಡಬಾರದು,**
**ಲಿಂಗ ತಾನಾದಡೆ ಅಂಗ ತಾನಾಗಬಾರದು,**
**ಭೋಗಿ ತಾನಾದಡೆ ತಾ ಯೋಗಿಯಾಗಬಾರದು, ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನ ಕಾಯದಲ್ಲಿಯೇ ಸಂಗಮವಾದ ಅರಿವಿನ ಮಲ್ಲಯ್ಯನೊಂದಿಗೆ ಸಂಗಮಾಡುವುದೊಂದೆ ತಡ ಅನ್ಯಾಯದಲ್ಲಿ ತೊಡಗಿದ ಮನ ಹೆಳವನಾಗುತ್ತದೆ. ಎಲ್ಲವನ್ನೂ ಅರಿವಿನ ದೃಷ್ಟಿಯಿಂದ ನೋಡಿ ನ್ಯಾಯಿ ತಾನಾಗುತ್ತದೆ. ಅಂಗ ಲಿಂಗಾಂಗವಾಗುತ್ತದೆ. ಮನ ಮತ್ತು ಜ್ಞಾನ ಸಂಗಮವಾಗಿ ಅಂಗಯೋಗಿಯೆಂದು ಕರೆಯಿಸಿಕೊಳ್ಳುತ್ತದೆ. ಭೋಗಕ್ಕೆ ಕಾರಣವಾದ ಅರಿಷಡ್ವರ್ಗಗಳು ಉದರಿ ಬೀಳುತ್ತವೆ. ಕಪಿಲಸಿದ್ಧ ಮಲ್ಲಿಕಾರ್ಜುನನೆ ತಾನಾಗುತ್ತದೆ.

**1960**

**ಮಾಡಿದವನ ಹೆಸರು ಮಣ್ಣಿನಲ್ಲಿ, ಮಣ್ಣು ಮಾಡಿದವನ ಹೆಸರು ಮೂಲೋಕದಲ್ಲಿ.**
**ಮಾಡಿನೆಂಬುದು ಮನದ ಗುಣ, ಮಾಡಿದವನೆಂಬುದು ಮಹಾದೇವ,**
**ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡುವ ಗುಣ, ಮಡಿವಾಳಯ್ಯ ಸಾಕ್ಷಿಯಾಗಿ.**

ಮಾಡಿದೆನೆಂಬುದು ಮನದ ಗುಣ, ಕಾಯದಿಂದ ಕಾಯಕ್ಕೆ ಒಳಿತು ಮಾಡುವ ಕೆಡಕು ಮಾಡುವ ಗುಣವನ್ನು ಮನ ಹೊಂದಿದೆ. ತನ್ನಂತೆ ಇರುವ ಕಾಯಕ್ಕೆ ಒಳಿತು ಮಾಡುವುದಾದರು ಏನಿದೆ? ಕೆಡಕು ಮಾಡುವುದಾದರು ಏನಿದೆ ? ಸಕಲ ಕಾಯಗಳಲ್ಲಿ ಅರಿವಿನ ದೇವರು ಸಂಗಮವಾಗಿದ್ದಾನೆ. ಆ ದೇವರಿಗೆ ಏನಾದರೂ ಒಳ್ಳೆಯದನ್ನು ಮಾಡಬಹುದೆ ? ಆ ದೇವರಿಗೆ ಏನಾದರೂ ಕೆಟ್ಟದನ್ನು ಮಾಡಬಹುದೆ ? ಎಂದು ತಿಳಿದರೆ ಸಾಕು ನಾಚಿ ನೀರಾಗುತ್ತಾನೆ.

ಏನಾದರು ಮಾಡುವುದಿದ್ದರೆ ಅಂಗದಲ್ಲಿಯೇ ಸಂಗಮವಾದ ಅರಿವಿನ ಲಿಂಗಯ್ಯನೇ ಮಾಡುತ್ತಾನೆ ಹೊರತು ಕಾಯ ಕಾಯಕ್ಕೆ ಏನನ್ನು ಮಾಡಲು ಸಾಧ್ಯವಿಲ್ಲ. ಕಾಯದಲ್ಲಿ ಸಂಗಮವಾದ ಕಪಿಲಸಿದ್ಧ ಮಲ್ಲಯ್ಯನನ್ನು ಕೂಡುವ ಮನ ಮನಕ್ಕೆ ಇದ್ದರೆ ಸಾಕು, ಮಡಿವಾಳಯ್ಯ ಸಾಕ್ಷಿಯಾಗಿ ಎಂದಿದ್ದಾರೆ ಸಿದ್ದರಾಮ ಶಿವಯೋಗಿಗಳು.

**1961**

**ಎನ್ನ ಮಸ್ತಕದಲ್ಲಿ 'ಹ ' ಕಾರವಾಗಿದ್ದಾತ ಪ್ರಭುದೇವ.**

ಎನ್ನ ಲಲಾಟದಲ್ಲಿ ಓಂಕಾರವಾಗಿದ್ದಾತ ಚನ್ನಬಸವ.
ಎನ್ನ ಘ್ರಾಣದಲ್ಲಿ ನಕರವಾಗಿದ್ದಾತ ಮಡಿವಾಳಯ್ಯ.
ಎನ್ನ ಬಾಯಿಯಲ್ಲಿ ಮಕಾರವಾಗಿದ್ದಾತ ಮರುಳುಶಂಕರಯ್ಯ.
ಎನ್ನ ನೇತ್ರದಲ್ಲಿ ಶಿಕಾರವಾಗಿದ್ದಾತ ಬಸವ.
ಎನ್ನ ಕಪೋಲದಲ್ಲಿ ವಕಾರವಾಗಿದ್ದಾತ ಪಡಿಹಾರಿ ಬಸವಯ್ಯ.
ಎನ್ನ ಶ್ರೋತದಲ್ಲಿ ಯಕಾರವಾಗಿದ್ದಾತ ಹಡಪದಪ್ಪಣ್ಣ.
ಎನ್ನ ಜಿಹ್ವೆಯಲ್ಲಿ ಹ್ರೀಕಾರವಾಗಿದ್ದಾಕೆ ಅಕ್ಕ ನಾಗಮ್ಮ.
ಎನ್ನ ಸರ್ವಾಂಗದಲ್ಲಿ ಸಕಲ ಪ್ರಣವರೂಪಾಗಿದ್ದಾತ
ಗುರುವಿನ ಗುರು ಚೆನ್ನಬಸವನ ಪಾದಕ್ಕೆ ನಮೋ ನಮೋ
ಎಂಬೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಎನ್ನ ಸರ್ವಾಂಗದಲ್ಲಿ ಪ್ರಣವರೂಪವಾಗಿ ಗುರುವಿನ ಗುರುದೇವನಾದ ಚೆನ್ನಬಸವಣ್ಣ ಸಂಗಮವಾಗಿದ್ದಾನೆ. ಆತನ ಪಾದಕ್ಕೆ ನಮೋ ನಮೋ ಎಂಬೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನ ನೊಂದಿಗೆಎಂದು ಗುರುದೇವನನ್ನು ನೆನೆಯುತ್ತಾ, ಕಾಯದಲ್ಲಿ ಸಂಗಮವಾಗಿದ್ದ ಕಪಿಲಸಿದ್ಧ ಮಲ್ಲಿಕಾರ್ಜುನನೊಂದಿಗೆ ಮಾತನಾಡಿದ್ದಾರೆ ಸಿದ್ಧರಾಮ ಶಿವಯೋಗಿಗಳು. ಗುರುದೇವನೆ ಎನ್ನ ಮಸ್ತಕದಲ್ಲಿ 'ಹ' ಕಾರವಾಗಿ ನೆಲೆಸಿದಾತ ಪ್ರಭುದೇವ ಎನ್ನ ಲಲಾಟದಲ್ಲಿ 'ಓಂ' ಕಾರವಾಗಿ ನೆಲೆಸಿದಾತ ಚೆನ್ನಬಸವ. ಎನ್ನ ಘ್ರಾಣದಲ್ಲಿ ನಕಾರವಾಗಿ ನೆಲೆಸಿದಾತ ಮಡಿವಾಳಯ್ಯ ಎನ್ನ ಬಾಯಿಯಲ್ಲಿ ಮಕರವಾಗಿ ಚುಳುಕಾದಾತ ಮರುಳ ಶಂಕರದೇವ ಎನ್ನ ನೇತ್ರದಲ್ಲಿ 'ಶಿ' ಕಾರವಾಗಿ ಸಂಗಮವಾದಾತ ಬಸವರಸ ಎನ್ನ ಕಪೋಲದಲ್ಲಿ ಪಡಿಹಾರವಾದಾತ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ. ಎನ್ನ ಶ್ರೋತ್ರದಲ್ಲಿ ಯಕಾರವಾಗಿ ಚಳುಕಾದಾತ ಹಡಪದಪ್ಪಣ್ಣ.

ಎನ್ನ ಜಿಹ್ವೆಯಲ್ಲಿ 'ಹ್ರೀಂ' ಕಾರವಾಗಿ ಇದ್ದಾಕೆ ಅಕ್ಕನಾಗಮ್ಮ . ಹೀಗೆ ಸ್ಥೂಲಕಾಯ ಸೂಕ್ಷ್ಮಕಾಯ ಕಾರಣ ಕಾಯಗಳನ್ನು ಒಂದಾಗಿಸಿಕೊಂಡಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**1962**

ಎಲ್ಲರ ಮರೆಯಬಹುದು,
ಎನ್ನ ವಲ್ಲಭ ಗುರುಮೂರ್ತಿಯ ಮರೆಯಬಾರದು.
ಎಲ್ಲರ ಕೀರ್ತಿಸಬಹುದು,
ಎನ್ನ ಗುರುಮೂರ್ತಿಯ ಕೀರ್ತಿಸಬಾರದು.
ಎಲ್ಲರ ಹೋಗಲಾಡಿದರೆಂದು ಎನ್ನ ನಲ್ಲನು ಹೋಗಲಾಡನು.
ನೀ ಹೋಗಲಾಡನೆ ಕಪಿಲಸಿದ್ಧ ಮಲ್ಲಿಕಾರ್ಜುನಾ, ನಿಮ್ಮ ಪಾದಸಾಕ್ಷಿಯಾಗಿ.

ಎಲ್ಲರನ್ನು ಮರೆಯಬಹುದು ಎನ್ನ ವಲ್ಲಭ ಎನ್ನಂಗದಲ್ಲಿಯೇ ಸಂಗಮವಾದ ಗುರುಮೂರ್ತಿಯನ್ನು ಮರೆಯಬಾರದು. ಎಲ್ಲರನ್ನು ಕೀರ್ತಿಸಬಹುದು ಎನ್ನ ಗುರುಮೂರ್ತಿಯನ್ನು ಕೀರ್ತಿಸಬಾರದು ಏಕೆಂದರೆ ಆತ ಹೊಗಳಿಕೆಗೆ ನಿಲುಕದಾತ.

ಎಲ್ಲರು ಹೋಗಲಾಡಿದರೆಂದು ಎನ್ನ ನಲ್ಲದು ಹೋಗಲಾಡನು. ಏಕೆಂದರೆ ಎಲ್ಲರೂ

ಹೊರಗಿನವರು ಎನ್ನ ನಲ್ಲನು ಒಬ್ಬನೆ ಎನ್ನ ಅಂಗದಲ್ಲಿ ಸಂಗಮವಾದಾತನು.

ಎಮ್ಮ ನಲ್ಲನು ಏಕಾಂತಂಬೊಕ್ಕನು ಬೇಗಬೇಗ ಹೊರನಡಿಯಿರಣ್ಣಗಳಿರಾ ಒಬ್ಬನಿದ್ದಡೂ ಸೈರಿಸನು ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ಸಿದ್ದರಾಮ ಶಿವಯೋಗಿಗಳು ತಮ್ಮ ವಚನದಲ್ಲಿ ಈ ಸೂತ್ರವನ್ನು ಹಣೆದಿದ್ದಾರೆ.

ಕಾಯದಲ್ಲಿ ಅರಿಷಡ್ವರ್ಗಗಳಿವೆ. ಸಪ್ತ ವ್ಯಸನಗಳಿವೆ ಅಷ್ಟಮದಗಳು ಇವೆ. ಹಾಗೆಯೇ ಮಲ್ಲಯ್ಯನೆಂಬ ನಲ್ಲನು ಸಂಗಮವಾಗಿದ್ದಾನೆ. ಕಾಯವನ್ನು ಆವರಿಸಿದ ಮನ ಸತಿಯಾಗಿ ತನ್ನನಲ್ಲ ಮಲ್ಲಯ್ಯನನ್ನು ಕೂಡಲು ಹೋದರೆ ಕಾಮಾದಿ ಅರಿಷಡ್ವರ್ಗಗಳು, ಸಪ್ತವ್ಯಸನಗಳು, ಅಷ್ಟಮದಗಳು ಕೂಡಲೆ ಹೋಗುತ್ತವೆ. ಅಣ್ಣಗಳಿರಾ ನೀವು ಹೊರ ಹೋಗದಿದ್ದರೆ ಎನ್ನ ನಲ್ಲ ಎನ್ನೊಂದಿಗೆ ಕೂಡಲಾರನು. ಬೇಗ ಬೇಗ ಹೊರ ನಡೆಯಿರಿ ಅಣ್ಣಗಳಿರಾ ಎಂದು ಅವರನ್ನು ಹೊರ ಹಾಕಿ ಅರಿವಿನ ನಲ್ಲ ಮಲ್ಲಯ್ಯನೊಂದಿಗೆ ಕೂಡುವ ಕೂಟದ ಸೊಬಗನ್ನು ಬಹಳ ಸುಂದರವಾಗಿ ವಿವರಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು

**1963**

**ಅಂತರಂಗದಲ್ಲಿಹ ಲಿಂಗ ಬಹಿರಂಗದಲ್ಲಿ ಲಿಂಗವಾಯಿತ್ತೆಂಬುದರಿಯೆ.**
**ಬಹಿರಂಗದಲ್ಲಿಯ ಲಿಂಗ ಅಂತರಂಗದಲ್ಲಿ, ಲೀಯವಾಗುವ ಕಾರಣವರಿಯೆ.**
**ಅಂತರಂಗ ಬಹಿರಂಗವೆಂಬೆರಡರ ಸಂಗ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನೆಂಬುದರಿಯೆ ಏನೆಂದರಿಯೆ.**

ಅಂತರಂಗದಲ್ಲಿ ಇರುವ ಅರಿವಿನ ಲಿಂಗವೆ ಅಂಗದ ಮೇಲೆ ಕಟ್ಟಿಕೊಂಡ ಬಹಿರಂಗ ಲಿಂಗವಾಗಿದೆ ಎಂಬುದು ಹೇಗೆ ಅರಿತರೂ ಅರಿವಿಗೆ ನಿಲುಕದೆ ಸುಳ್ಳಾಗುವುದು. ಹಾಗೆಯೆ ಅಂಗದ ಮೇಲೆ ಕಟ್ಟಿಕೊಂಡ ಬಹಿರ್ಲಿಂಗವೆ ಅಂತರಂಗದಲ್ಲಿ ಲೀಯವಾಗಿ ಲಿಂಗವಾಗಿದೆಂಬುದನ್ನು ನಾನರಿಯೆ ಇದು ಕೂಡ ಅರಿವಿಗೆ ನಿಲುಕದ ಮಾತು. ಅಂತರಂಗ ಬಹಿರಂಗ ವೆಂಬೆರಡರ ಸಂಗವೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು ಎಂಬುದನ್ನು ಕೂಡ ನಾನರಿಯೆ.

**1964**

**ಆಕಾಶದಲ್ಲಿಯ ಮಿಂಚಿನಂತೆ,**
**ಯೋಗಿಯಲ್ಲಿಯ ಕೋಪದಂತೆ,**
**ವೇಶಿಯಲ್ಲಿಯ ಅನುರಾಗದಂತೆ,**
**ಗಾಳಿಯಲ್ಲಿಯ ದೀಪದಂತೆ,**
**ಓಗರದಲ್ಲಿಯ ಪ್ರಸಾದದಂತೆ,**
**ಗುರುಮೂರ್ತಿಯಲ್ಲಿಯ ಪಾದೋದಕದಂತೆ,**
**ಕಪಿಲಸಿದ್ಧಮಲ್ಲಿಕಾರ್ಜುನನ ಲೀಲೆಯಂತೆ ಎನ್ನ ಪ್ರಾಣಲಿಂಗದ ಐಕ್ಯ.**
**ಅದರಂತೆ ಶಬ್ದಮುಗ್ಧವಾಯಿತ್ತಯ್ಯಾ,**
**ಶಿವ ಶಿವಾ, ಶಿವಶಿವಾ, ಶಿವಶಿವಾ, ಶಿವಶಿವಾ, ಶಿವಶಿವಾ.**

ಕಾಯದಲ್ಲಿ ಸಂಗಮವಾದ ಅರಿವಿನ ಮಲ್ಲಯ್ಯ ಕಾಯವನ್ನು ಆವರಿಸಿದ ಮನಕ್ಕೆ ಆಕಾಶದಲ್ಲಿಯ ಮಿಂಚಿನಂತೆ ಹೊಳೆದು ಮಾಯವಾಗುತ್ತಾನೆ. ಯೋಗಿಯಲ್ಲಿಯ ಕೋಪದಂತೆ ಇದ್ದಾನೆ. ವೇಶಿಯಲ್ಲಿಯ ಅನುರಾಗದಂತೆ ಇದ್ದಾನೆ. ಗಾಳಿಯಲ್ಲಿಯ ದೀಪದಂತೆ ಓಗರದಲ್ಲಿಯ ಪ್ರಸಾದದಂತೆ ಗುರುಮೂರ್ತಿಯಲ್ಲಿಯ ಪಾದೋಪಕದಂತೆ ಅರಿವಿನ ಮಲ್ಲಯ್ಯನ ಲೀಲೆಯು ಎನ್ನ ಪ್ರಾಣ ಲಿಂಗದ ಐಕ್ಯ . ಅದರಂತೆ ಶಬ್ದಮುಗ್ದವಾಯಿತ್ತು ಮಲ್ಲಯ್ಯ ಶಿವಾಶಿವಾ, ಶಿವಶಿವಾ.

**1965**

**ಮಲತ್ರಯವನತಿಗಳೆದು ಮದವಿದಾರಣಪ್ಪವರ ಎನಗೆ ತೋರಾ,**
**ಶುದ್ಧದಲ್ಲಿ ಪ್ರವೇಶಿಸಿ, ಸಿದ್ಧದಲ್ಲಿ ಪ್ರಕಟಿಸಿ,**
**ಶುದ್ಧ ಪ್ರಸಿದ್ಧದಲ್ಲಿ ಪರಿಣಾಮದವರ ಎನಗೆ ತೋರಾ,**
**ನೆನಹೆ ಮನೆಯಾಗಿ, ಆ ಮನೆಯ ತಮಗೆ ಮಾತೆಯಾಗಿ**
**ಆ ಮಾತೆಯ ಮಹಾಬೆಳಗಿನ ಕೂಟವಾಗಿ ಇಪ್ಪವರ ಎನಗೆ ತೋರಾ,**
**ಆನಂದವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಕಾಯವನ್ನು ಆವರಿಸಿದ ಮನವೆ ಮಹಾದೇವಿ ಈಕೆಯನ್ನು ಮಾತೆಯನ್ನಾಗಿಸಿಕೊಂಡು ಮಹಾದೇವನತ್ತ ಪ್ರಯಾಣ ಮಾಡುವುದು ಸುಲಭವಾಗುತ್ತದೆ.

ಮಲತ್ರಯಗಳನ್ನು ಕಳೆದುಕೊಂಡು ಅರಿವಿನ ಮಲ್ಲಯ್ಯನೊಂದಿಗೆ ಒಂದಾಗಲು ಸುಲಭ ಸಾಧ್ಯವಾಗುತ್ತದೆ. ಹೀಗೆ ಸರಳ ಸೂತ್ರವನ್ನು ಹಿಡಿದುಕೊಂಡು ಶುದ್ಧದಲ್ಲಿ ಪ್ರವೇಶ ಮಾಡಿ, ಸಿದ್ಧದಲ್ಲಿ ಪ್ರಕಟಿಸಿ ಶುದ್ಧ ಸಿದ್ಧ ಪ್ರಸಿದ್ಧವಾಗಿ ಪರಿಣಾಮ ಮಾಡಿಕೊಂಡವರ ಎನಗೆ ತೋರಾ.

ನೆನೆಹೆ ಮನೆಯಾಗಿ ಆ ಮನೆಯೆ ತಮಗೆ ಮಾತೆಯಾಗಿ ಆ ಮಾತೆಯ ಮಹಾ ಬೆಳಗಿನ ಕೂಟವಾಗಿ ಇಪ್ಪವರ ಎನಗೆ ತೋರಾ ಆನಂದ ವಿದಾರಣ ಕಪಿಲಸಿದ್ಧ ಮಲ್ಲಿಕಾರ್ಜುನ.

**ಇತಿ ಸಮಾಪ್ತಿ**

## ಶುಭಮಂಗಳ



ಮನ ಎಂದರೆ ಇಲ್ಲದ್ದು. ಇಲ್ಲವಾಗುವ ವಸ್ತುಗಳನ್ನು ಇದ್ದಂತೆ ಇರುವ ಶಾಶ್ವತ ವಸ್ತುಗಳೆನ್ನುವಂತೆ ತನುವಿಗೆ ಆಸೆ ಹುಟ್ಟಿಸಿ, ತನು ಮನಗಳೆರಡೂ ಅನಂತಕಾಲ ತನುವಿನಲ್ಲಿಯೇ ತನ್ಮಯವಾದ ಅರಿವನ್ನು ಮರೆತು ಅರಿವಿನ ಜಪ ಜಪಿಸುತ್ತವೆ !

ಸೀತೆಯನ್ನು ನೋಡಿದ ರಾವಣನ ಕಣ್ಣಲ್ಲಿ ಕುಳಿತ ಮನವೆಂಬ ಕ್ರೂರಮೃಗ, ರಾವಣನನ್ನೇ ಕೊಂದು ರಾವಣನನ್ನೇ ತಿಂದು ತೇಗಿತು. ರಾಮನ ಕಿವಿಯಲ್ಲಿ ಕುಳಿತು ಮಡಿವಾಳನ ಮಾತು ಕೇಳಿದ ಮನವೆಂಬ ಕ್ರೂರಮೃಗ ಶ್ರೀರಾಮನನ್ನು ಚಿತ್ರಹಿಂಸೆಗೆ ಗುರಿ ಮಾಡಿತು. ದ್ರೌಪದಿಯನ್ನು ಮುಟ್ಟಲು ಹೋದ ಕೀಚಕನ ಚರ್ಮದಲ್ಲಿ ಬಚ್ಚಿಟ್ಟುಕೊಂಡ ಮನವೆಂಬ ಕ್ರೂರಮೃಗ ಜಗಜಟ್ಟಿ ಕೀಚಕನನ್ನೇ ಕೊಂದು ತಿಂದು ಹಾಕಿತು.

ತನುವಿನಲ್ಲಿದ್ದ ಪಂಚೇಂದ್ರಿಯಗಳು ತನುವಿನ ಮೃತ್ಯುವಿಗಾಗಿ ತನುವಿನಲ್ಲಿಯೇ ಕಾದು ಕುಳಿತಿವೆ. ತನುವನ್ನು ಆವರಿಸಿದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಆರು ಮೃಗಗಳು ತನುವನ್ನು ಪೋಷಣೆ ಮಾಡುತ್ತಿಲ್ಲ. ಬದಲಾಗಿ ಆಶ್ರಯ ನೀಡಿದ ತನುವನ್ನೇ ನುಂಗಲು ತನುವಿನಲ್ಲಿಯೇ ಕಾದು ಕುಳಿತಿವೆ.

ತನುವಿನಲ್ಲಿಯೇ ಇದ್ದ ಕುಲಮದ, ಛಲಮದ, ಧನಮದ, ರೂಪಮದ, ಯೌವ್ವನಮದ, ವಿದ್ಯಾಮದ, ರಾಜಮದ, ತಪೋಮದವೆಂಬ ಎಂಟು ಮೃಗಗಳು ತನುವಿನಲ್ಲಿಯೇ ಆಶ್ರಯ ಪಡೆದು ತನುವನ್ನು ಮೃತ್ಯುಕೂಪಕ್ಕೆ ಕರೆದುಕೊಂಡು ಹೋಗುವ ಕ್ರೂರಮೃಗಗಳಾಗಿ ಮಾರ್ಪಟ್ಟಿವೆ.

ಬಸವರಾಜ ಸ್ವಾಮಿ